ಶ್ರೀಃ

ಗುರುರಾಜ ಕವಿಕೃತ

ಶ್ರೀಮಲ್ಲಿಕಾರ್ಜುನ

# ಪಂಡಿತಾರಾಧ್ಯಚರಿತಂ

———— :o: ————

ಆಸ್ಥಾನ ವಿದ್ವಾನ್

ಎನ್. ಆರ್. ಕರಿಬಸವಶಾಸ್ತ್ರಿ ರಚಿತ

“ ಭಾವಮಂಜರೀ ” ನಾಮಕ

ಕರ್ಣಾಟಕ ಟಿಪ್ಪಣಿ ಸಹಿತಂ

ಮೈಸೂರು

ಶ್ರೀಮತ್ಸನ್ಯಕಾಪರಮೇಶ್ವರೀ ಮುದ್ರಾಲಯ ಮುದ್ರಾಪಿತಂ.

1921

## ಮುನ್ನುಡಿ.

ಶ್ರೀರೇಣುಕವಂಶೀಯಂ | ವೀರಣಮಾಹೇಶಪೌತ್ರಕಂ
ಜ್ಯೋತಿರ್ವಿ || ದ್ಯಾರಸಿಕ ರುದ್ರಶಾಸ್ತ್ರಿಕು | ಮಾರಂ ಕರಿ
ಬಸವಶಾಸ್ತ್ರಿಯಾಂ ಪಡಪಿಂದಂ || .... ||೧||

ರುಚಿರತರ ಪಂಡಿತಾರಾ | ಧ್ಯಚರಿತ್ರಕ್ಕಿದಕೆ ಭಾವಮಂ
ಜರಿವೆಸರಿಂ || ರಚಿಸಿರ್ಪೆಂ ಟಿಪ್ಪಣಮಂ | ಪ್ರಚಲಿತ
ಕರ್ಣಾಟಭಾಷೆಯಿಂ ಸೊಂಪೆಸೆಯಲ್ || .... ||೨||

ದರೆಯ ಜನರ್ ಭಕ್ತಿಧುರಂ | ಧರ ರೊಲ್ದಿದನೋದಿ ಕೇ
ಳ್ ಪಸರಿಸಿ ಪರಮೇ || ಶ್ವರಕೃಪೆಯಿಂ ಸನ್ಮತಿಯಂ ಪರತರ
ಸುಶ್ರೇಯಮಂ ಪಡೆಗೆ ಮಿಗೆ ಸತತಂ || .... ||೩||

ವಿಜಯಿಕೆ ಶಿವಸಮಯಂ ಮೇಣ್ | ವಿಜಯಿಕೆ ಶಿವಧ
ರ್ಮಭಕ್ತಿಸುಜ್ಞಾನಂಗಳ್ || ವಿಜಯಿಕೆ ಪಂಚಾಚಾರ್ಯರ್ |
ವಿಜಿತಾಖಿಲವಾದಿವಾದ ರಾದ್ಯತವೇದರ್ || .... ||೪||

ನೆಲದಾಣ್ಮಂ ಕೃಷ್ಣೇಂದ್ರಂ | ಗೆಲವೊಂದುಗೆ ರಾಜ್ಯಕಾ
ರ್ಯದೊಳ್ ನಾಡೆಲ್ಲಂ || ನಲಿದಾಡುಗೆ ಮಳೆಬೆಳೆಯಿಂ | ನಲ
ವೊಂದುಗೆ ಪ್ರಕೃತಿನಿಚಯಮೆಲ್ಲಂ ಸತತಂ || .... ||೫||

—— :0: ——

## ಪ್ರಸ್ತಾವನೆ

ಈಶ್ವರ ನಿರ್ಮಿತವಾದೀ ಚರಾಚರಾತ್ಮಕ ಪ್ರಪಂಚದಲ್ಲಿ ಸಕಲ ಪ್ರಾಣಿಗಳೊಳಗೂ ಜ್ಞಾನೇಂದ್ರಿಯಾಧಿಕ್ಯವುಳ್ಳ ಮನುಷ್ಯಪ್ರಾಣಿಯೇ ಶ್ರೇಷ್ಠನು. ಅಂಥ ಮನುಷ್ಯವರ್ಗದಲ್ಲಿ ಪ್ರಜ್ಞಾವಿಶೇಷಮಂಡಿತರಾದ ಮಹನೀಯರು ಮಾನವರ ಭೋಗಮೋಕ್ಷಲಾಭಾರ್ಥವಾಗಿ ನಿರ್ಣಯಿಸಿದ ಬೇರೆಬೇರೆ ತೆರದ ಅಭಿಪ್ರಾಯಗಳೇ ಮತಗಳೆಂದು ವ್ಯವಹರಿಸಲ್ಪಡುತ್ತಿರುವುವು. ಆ ಮತಗಳಲ್ಲಿ ಮುಖ್ಯವಾಗಿ ಆಸ್ತಿಕ ನಾಸ್ತಿಕ ಎಂದು ೨ ಭೇದಗಳುಂಟು. ಪರಲೋಕವೂ ದೈವವೂ ಉಂಟೆಂದು ನಂಬುವವರೇ ಆಸ್ತಿಕರು. ಅವುಗಳಿಲ್ಲವೆಂದು ನಂಬುವವರೇ ನಾಸ್ತಿಕರು. ಆಸ್ತಿಕರಲ್ಲಿ ಆರ್ಯರು ಅನಾರ್ಯರು ಎಂದು ೨ ವಿಧ. ವೇದಶಾಸ್ತ್ರಪುರಾಣಾದಿಗಳನ್ನು ನಂಬುವವರೇ ಆರ್ಯರು. ಅವುಗಳನ್ನು ನಿರಾಕರಿಸತಕ್ಕವರೇ ಅನಾರ್ಯರು. ದ್ವೈತಾದ್ವೈತಾದಿ ಮತಗಳು ಹೇಗೋ ಹಾಗೆ ಶಕ್ತಿವಿಶಿಷ್ಟಾದ್ವೈತವನ್ನವಲಂಬಿಸಿರುವ ವೀರಶೈವಮತವುಕೂಡ ವೇದಶಾಸ್ತ್ರ ಪುರಾಣ ಬ್ರಹ್ಮಸೂತ್ರಾವಲಂಬನೆಯುಳ್ಳುದಾಗಿರುವಕಾರಣ ಆರ್ಯಮತಕೋಟಿ ಸಮಾವಿಷ್ಟವಾಗಿರುತ್ತದೆ. ತತ್ರಾಪಿ ಇದು ವೇದಾವಿರುದ್ಧಗಳಾದ ಆಗಮೋಕ್ತ ಲಿಂಗಧಾರಣಾದಿ ಧರ್ಮಗಳನ್ನು ಅನುಷ್ಠಿಸುವುದರಿಂದ, ಕೇವಲ ತಾಂತ್ರಿಕವೂ ಕೇವಲ ವೈದಿಕವೂ ಆಗಿರದೆ ಉಭಯಾತ್ಮಕವಾಗಿ ಎಂದರೆ ತಾಂತ್ರಿಕ ವೈದಿಕ ಮತವಾಗಿರುತ್ತದೆ.

ಪರಬ್ರಹ್ಮಪದವಾಚ್ಯನಾದ ಪರಶಿವನು ಕೇವಲನಲ್ಲ; ಅವನು ಶಕ್ತಿವಿಶಿಷ್ಟನು. ಶಕ್ತಿಯು ಪರಶಿವನಂತೆಯೇ ನಿತ್ಯವೂ ನಿರ್ಮಲವೂ ಸ್ವಾಭಾವಿಕವೂ ಆಗಿರುವುದು. ಆ ಶಕ್ತಿಯ ಸಂಕೋಚ ವಿಕಾಸಾವಸ್ಥೆಗಳೇ ಜಗತ್ತಿನ ಲಯೋದಯ ಕಾರಣಗಳು. ಆ ಪರಬ್ರಹ್ಮನಿಗೆ ಲಿಂಗವೆಂತಲೂ ಜೀವನಿಗೆ ಅಂಗವೆಂತಲೂ ಸಂಜ್ಞೆ. ಜೀವಬ್ರಹ್ಮರಿಗೆ ಸಾಹಜಿಕವಾದ ಅಭೇದವಿಲ್ಲ. ಅವರೀರ್ವರ ಮಧ್ಯದ ಅಭೇದವು ಆರೋಪಮಾತ್ರವು. ಜೀವನು ಪ್ರತಿಶರೀರದಲ್ಲೂ ಭಿನ್ನನು. ಅಂಗಶಬ್ದವಾಚ್ಯನಾದ ಜೀವನಿಗೂ ಲಿಂಗಶಬ್ದವಾಚ್ಯನಾದ ಪರಶಿವನಿಗೂ ಉಪಾಸಕೋಪಾಸ್ಯಭಾವವಿರುವುದು. ಅಂಗನು ಏಕೋತ್ತರ ಶತಸ್ಥಲಾಚರಣದಿಂದ ಅವಿಭಾಜ್ಯ ಶಾಶ್ವತ ಶಿವಸಾಯುಜ್ಯರೂಪ ಮುಕ್ತಿಯನ್ನು ಪಡೆಯುವನು. ವೇದಾಗಮ ಸಂಮತಗಳಾದ ವಿಭೂತಿಧಾರಣ, ರುದ್ರಾಕ್ಷಧಾರಣ, ಇಷ್ಟಲಿಂಗಧಾರಣ, ಶಿವಮಂತ್ರಾನು

ಷ್ಠಾನ, ಗುರುಸೇವೆ, ಜಂಗಮಪೂಜೆ, ಪ್ರಸಾದಸೇವನೆ, ಪಾದೋದಕಸ್ವೀಕಾರ ಎಂಬ ಅಷ್ಟಾವರಣಗಳಿಂದ ಕೂಡಿರುವುದು, ಕಾಮ್ಯಕರ್ಮನಿರಸನಪೂರ್ವಕ ನಿತ್ಯ ಕರ್ಮಾನುಷ್ಠಾನ, ಶಿವೈಕಾಯತ್ತಭಕ್ತಿ, ಶಿವಜ್ಞಾನ, ಶಿವಾಚಾರನಿಷ್ಠೆ—ಇವುಗಳೇ ವೀರಶೈವಮತಸಿದ್ಧಾಂತದ ಮತ್ತು ಧರ್ಮದ ಮುಖ್ಯ ಲಕ್ಷಣಗಳು.

ಈ ವೀರಶೈವಮತವನ್ನು ಭೂತಲದಲ್ಲಿ ಸ್ಥಾಪಿಸಿದವರು ರೇಣುಕಾದಿ ಪಂಚಾಚಾರ್ಯರುಗಳು. ಯುಗಚತುಷ್ಟಯದಲ್ಲೂ ಈ ಆಚಾರ್ಯರುಗಳು ಬೇರೆಬೇರೆ ಹೆಸರಿನಿಂದ ಅವತರಿಸಿದ್ದರೆಂದು ಶಿವಾಗಮ ವಚನವಿದೆ. ಈ ಕಲಿಯುಗದಲ್ಲಿ ಆ ಆಚಾರ್ಯ ಪಂಚಕಕ್ಕೆ ಕ್ರಮವಾಗಿ ರೇವಣಸಿದ್ಧಾಚಾರ್ಯ, ಮರುಳಸಿದ್ಧಾಚಾರ್ಯ, ಏಕೋರಾಮಾಚಾರ್ಯ, ಪಂಡಿತಾಚಾರ್ಯ, ವಿಶ್ವಾಚಾರ್ಯ ಎಂಬುದಾಗಿ ಹೆಸರು. ಇವರಲ್ಲಿ "ಸುಧಾಕುಂಡಾಖ್ಯಸುಕ್ಷೇತ್ರೇ ಲಿಂಗೇ ಶ್ರೀಮಲ್ಲಿಕಾರ್ಜುನೇ| ಜನನಂ ಪಂಡಿತಾರ್ಯಸ್ಯ ನಿವಾಸಶ್ಶ್ರೀಗಿರೌ ಶಿವೇ" (ಪಂಡಿತಾಚಾರ್ಯರು ಸುಧಾಕುಂಡ ವೆಂಬ ಸುಕ್ಷೇತ್ರದಲ್ಲಿರುವ ಮಲ್ಲಿಕಾರ್ಜುನ ಲಿಂಗದಿಂದ ಅವತರಿಸಿ, ಶ್ರೀಶೈಲದಲ್ಲಿ ಮಠವನ್ನು ಸ್ಥಾಪಿಸಿ ವಾಸಮಾಡುವರು) ಎಂಬುದಾಗಿ ಸ್ವಾಯಂಭುವ ಸುಪ್ರಭೇದಾಗಮಗಳಲ್ಲಿ ಹೇಳಲ್ಪಟ್ಟಿರುವುದು. ಈ ಆಚಾರ್ಯ ಸಂಪ್ರದಾಯಕ್ಕೆ ಸೇರಿದವರೇ ಈ ಗ್ರಂಥದಲ್ಲಿ ಪ್ರತಿಪಾದಿತರಾಗಿರುವ ಪಂಡಿತಾರಾಧ್ಯರಾಗಿರುತ್ತಾರೆ.

ಇವರು ಕಲ್ಯಾಣದ ಬಸವೇಶ್ವರನ ಸಮಕಾಲೀನರೆಂಬುದು ಈ ಗ್ರಂಥದ ೪ನೆ ಪ್ರಕರಣದಲ್ಲಿ-ಬಸವೇಶ್ವರನು ಪಂಡಿತಾರಾಧ್ಯರ ಬಳಿಗೆ ಕಳುಹಿಸಿಕೊಟ್ಟ ಭಸಿತವನ್ನು ಇವರು ಧಾರಣೆಮಾಡಿಕೊಂಡುದರಿಂದ ಇವರಿಗೆ ಕನ್ನಡ ಬಾಸೆಯು ಬಂದಿತೆಂದೂ, ಅದೇ ಭಾಷೆಯಲ್ಲಿ ಇಷ್ಟಲಿಂಗಸ್ತುತಿರೂಪಗಳಾದ ನೀತಿಗಳನ್ನು ಇವರು ರಚಿಸಿ ಹಾಡಿದರೆಂದೂ, ಬಳಿಕ ಬಸವೇಶ್ವರನ ಸಂದರ್ಶನವನ್ನು ಮಾಡಬೇಕೆಂದು ಕುತೂಹಲಗೊಂಡು ಕಲ್ಯಾಣಪಟ್ಟಣವನ್ನು ಕುರಿತು ಹೊರಟು, ಪಾಸುಗಲ್ಲನ್ನು ದಾಂಟಿ, ವನಿಪುರಕ್ಕೆ ಹೋದಾಗ್ಗೆ ಬಸವೇಶ್ವರನು ಮುಕ್ತನಾದನೆಂಬ ಸುದ್ದಿಯು ಇವರಿಗೆ ಅಲ್ಲೇ ತಿಳಿಯಿತೆಂದೂ, ಹೇಳಲ್ಪಟ್ಟಿರುವ ಸಂಗತಿಗಳಿಂದ ಸ್ಪಷ್ಟವಾಗಿರುತ್ತದೆ. ಬಸವೇಶ್ವರನ ಕಾಲವು ಕ್ರಿ. ಶ. ೧೧೩೩-೧೧೬೮ ಎಂಬುದು ವ್ಯಕ್ತವೇ. ಶಿವಸರ್ವೋತ್ತಮತ್ವವನ್ನು ಕ್ರಿಯಾಸಿದ್ಧಿ ಪ್ರಭಾವದಿಂದಲೂ ಶಾಸ್ತ್ರಬಲದಿಂದಲೂ ಜಗತ್ತಿನಲ್ಲಿ ಸ್ಥಾಪಿಸಿ, ವೀರಶೈವರಲ್ಲಿ ಪ್ರಸಿದ್ಧರಾಗಿರುವ ಶ್ರೀಪತಿಪಂಡಿತ, ಮಂಚಣಪಂಡಿತ, ಮಲ್ಲಿಕಾರ್ಜುನಪಂಡಿತ ಎಂಬ ಪಂಡಿತತ್ರಯದಲ್ಲಿ ಇವರೂ ಒಬ್ಬರಾಗಿರತಕ್ಕವರು. ಈ ಮೂವರು ಪಂಡಿತರೂ ಸಮಕಾಲೀನರೇ. ಅನೇಕ

ಶಿವಕವಿಗಳು ಈ ಪಂಡಿತತ್ರಯವನ್ನೂ ತಂತಮ್ಮ ಗ್ರಂಥಾದಿ ಭಾಗಗಳಲ್ಲಿ ಸ್ತುತಿಸಿರುತ್ತಾರೆ.

ಈ ಮಲ್ಲಿಕಾರ್ಜುನ ಪಂಡಿತಾಚಾರ್ಯರ ಜನನಾದಿ ವಿಷಯಗಳು ಈ ಗ್ರಂಥದ ಮೊದಲನೆ ಪ್ರಕರಣದಲ್ಲಿ ನಿರೂಪಿತವಾಗಿವೆ. ಪರಶಿವನು ತನ್ನ ಸಂಕಲ್ಪಮಾತ್ರದಿಂದ ಒಂದು ಮೂರ್ತಿಯನ್ನು ಕಲ್ಪಿಸಿ, ಅದನ್ನು ಕುರಿತು—"ಭೂತಲದಲ್ಲಿ ಬಸವೇಶನು ಅವತರಿಸಿ ಭಕ್ತಪರಿಪಾಲನೆ ಮಾಡಿಕೊಂಡಿರುವಂತೆ ನೀನೂ ಅವತರಿಸಿ ಶಿವಮತ ಪರಿಪಾಲನೆ ಮಾಡಿಕೊಂಡಿರು. ಆಂಧ್ರಮಂಡಲದಲ್ಲಿರುವ ವೆಂಗಿದೇಶಕ್ಕೆ ಸೇರಿದ ದ್ರಾಕ್ಷಾರಾಮ ಎಂಬ ಪಟ್ಟಣದಲ್ಲಿರುವ ಭೀಮೇಶ್ವರನ ಅರ್ಚಕನಾಗಿರುವ ಭೀಮನ ಪಂಡಿತನು ಪುತ್ರಾಪೇಕ್ಷೆಯಿಂದ ಶ್ರೀಶೈಲದ ಮಲ್ಲಿಕಾರ್ಜುನನ ಬಳಿಯಲ್ಲಿ ಪಂಚಾಕ್ಷರ ಜಪಾನುಷ್ಠಾನ ಮಾಡಿಕೊಂಡಿರುತ್ತಾನಾದ ಕಾರಣ, ನೀನು ಅವನಿಗೆ ಮಗನಾಗಿ ಹುಟ್ಟು" ಎಂದು ಅಪ್ಪಣೆಮಾಡಿದಪ್ರಕಾರ, ಆತನ ಧರ್ಮಪತ್ನಿ ಗೌರಾಂಬಿಕೆಯ ಉದರದಲ್ಲಿ ಇವರು ಜನಿಸಿದರು. ವೀರಶೈವಾಚಾರ್ಯಸಂಪ್ರದಾಯದ ಅವಾಂತರಾರ್ಯರ ಶಿಷ್ಯರಾದ ಕೋಟಿಪಲ್ಲ್ಯಾರಾಧ್ಯರಿಂದ ಇವರಿಗೆ ಶಿವದೀಕ್ಷಾಸಂಸ್ಕಾರವಾಯಿತು. ಬಳಿಕ ಇವರು ಗುರುಲಿಂಗಜಂಗಮಾರಾಧನನಿಷ್ಠಾಗರಿಷ್ಠರಾಗಿ, ನಿಶಿತ ವೀರಶೈವಾಚಾರಸಂಪನ್ನರಾಗಿ, ಶಿವಾಜ್ಞಾಸಿದ್ಧವಾಗಿದ್ದ ಮತಾಚಾರ್ಯ ಪಟ್ಟವನ್ನು ವಹಿಸಿದರು ಎಂದು ಗೊತ್ತಾಗುತ್ತದೆ. "ಶಿವಮತರಕ್ಷಣೆಯಲ್ಲಿ ನೀನು ಜಗದ್ಗುರುತ್ವವನ್ನು ವಹಿಸಿ, ಪರವಾದಿ ಭಂಜನವನ್ನು ಮಾಡಿ, ಶಿವಮಹತ್ತ್ವವನ್ನೂ ಭಕ್ತ್ಯತಿಶಯವನ್ನೂ ಭೂತಲದಲ್ಲಿ ಪ್ರತಿಷ್ಠಾಪಿಸು" ಎಂದು ಪರಶಿವನು ಅಪ್ಪಣೆಮಾಡಿ ಕಳುಹಿಸಿದ್ದಪ್ರಕಾರವೇ ಇವರು ಭೂಮಿಯಲ್ಲಿ ಶಿವಶಾಸ್ತ್ರಪ್ರಸಾರವನ್ನು ಮಾಡಿ, ವಾದಮುಖದಲ್ಲಿ ನಾನಾ ಮತವಾದಿಗಳನ್ನು ಅನೇಕವಾಗಿ ಜಯಿಸಿ, ಶಿವಮಹತ್ತ್ವಾತಿಶಯವನ್ನು ವಿಶೇಷವಾಗಿ ಪ್ರಕಟಿಸಿ, ಶಿವಮತ ಶಿವಭಕ್ತಿ ಶಿವಧರ್ಮ ಶಿವಜ್ಞಾನಗಳ ಆಧಿಕ್ಯವನ್ನು ಸುಪ್ರತಿಷ್ಠಿಸಿ, ಶಾಸ್ತ್ರೋಕ್ತಾಚರಣೆಗಳನ್ನು ತಮ್ಮಲ್ಲಿಯೂ ಇಟ್ಟುಕೊಂಡು, ಅದರಂತೆ ತಮ್ಮ ಶಿಷ್ಯಮಂಡಲಿಯೆಲ್ಲಾ ಆಚರಿಸುವಂತೆ ಮಾಡಿ, "ಆಚಿನೋತಿಹಿಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ| ಸ್ವಯಮಾಚರತೀತ್ಯೇವಮಾಚಾರ್ಯಃ ಪರಿಕೀರ್ತಿತಃ" ಎಂಬ ವಚನಾರ್ಥಕ್ಕೆ ಅನುಗುಣವಾಗಿ ಜಗದಾಚಾರ್ಯತ್ವವನ್ನು ನಿರ್ವಹಿಸಿದರೆಂಬುದು ಈ ಚರಿತ್ರವನ್ನು ಆದ್ಯಂತವಾಗಿ ಓದುವವರಿಗೆಲ್ಲಾ ಕರತಲಾಮಲಕವಾಗಿ ತೋರುವುದು.

ಈ ಗ್ರಂಥವು ದೀಕ್ಷಾಪ್ರಕರಣ, ಪುರಾತನಪ್ರಕರಣ, ವಾದಪ್ರಕರಣ, ಮಹಿಮಪ್ರಕರಣ, ಪರ್ವತಪ್ರಕರಣ ಎಂದು ೫ ಪ್ರಕರಣಗಳಾಗಿ ವಿಂಗಡಿಸಲ್ಪಟ್ಟಿದೆ. ೧ನೆಯ ದೀಕ್ಷಾಪ್ರಕರಣದಲ್ಲಿ—ಗ್ರಂಥಕರ್ತರ ವಂಶಾವಳಿ, ಮಲ್ಲಿಕಾರ್ಜುನ ಪಂಡಿತಾರಾಧ್ಯರ ಜನನ, ಅವರಿಗೆ ವೀರಶೈವ ದೀಕ್ಷೆಯಾದುದು, ಅವರು ಅನುಸರಿಸಿದ್ದ ಭಸಿತ ರುದ್ರಾಕ್ಷ ಶಿವಲಿಂಗಧಾರಣ ಪ್ರಸಾದ ಪಾದೋದಕ ಸ್ವೀಕಾರಾದಿ ಅಷ್ಟಾವರಣ ಧರ್ಮಗಳನ್ನು ಕುರಿತು ಪ್ರಾಕೃತವಿಪ್ರರು ಮಾಡಿದ ಆಕ್ಷೇಪಗಳಿಗೆಲ್ಲಾ ಪಂಡಿತಾಚಾರ್ಯಪಾದರು ಅವೆಲ್ಲಾ ವೇದಸಮ್ಮತಾಚಾರಗಳೆಂದು ಸಪ್ರಮಾಣವಾಗಿ ಉತ್ತರಕೊಟ್ಟು ಸ್ಥಾಪಿಸಿದ ವಿಷಯವೂ, ಅವರ ಗುರುಲಿಂಗಜಂಗಮ ಭಕ್ತಿತತ್ಪರತೆಯೂ ವಿವರಿಸಲ್ಪಟ್ಟಿವೆ.

೨ನೆ ಪುರಾತನ ಪ್ರಕರಣದಲ್ಲಿ-ಶ್ರೀಪಂಡಿತಾಚಾರ್ಯರು ತಮ್ಮ ಶಿಷ್ಯನಾದ ವೆಲ್ಲಗೊಂಡದ ಮಹಾದೇವಯ್ಯನಿಗೆ ಪಾದಪ್ರದಾನ ಮಾಡಿದ ಪ್ರಭಾವದ ವರ್ಣನೆಯ ಜತೆಗೆ ಸಂದರ್ಭೋಚಿತಗಳಾದ ಅನೇಕ ಪುರಾತನ ಶಿವಶರಣರ ಚರಿತ್ರಗಳು ಹೃದಯಂಗಮವಾಗಿ ವರ್ಣಿಸಲ್ಪಟ್ಟಿವೆ.

೩ನೆ ವಾದಪ್ರಕರಣದಲ್ಲಿ-ಬೌದ್ಧಮತಾಂಗೀಕಾರವನ್ನು ಮಾಡಿದ್ದ ವೆಲ್ನಾಡಚೋಳನ ಸಭೆಯಲ್ಲಿ ಶ್ರೀಪಂಡಿತಾಚಾರ್ಯರು ಬೌದ್ಧ ಜೈನಚಾರ್ವಾಕಾದಿ ನಾನಾಮತವಾದಗಳನ್ನು ಶಾಸ್ತ್ರಯುಕ್ತಿವಾದಗಳಿಂದ ಖಂಡಿಸಿ ಶಿವಸಿದ್ಧಾಂತವನ್ನು ಸ್ಥಾಪಿಸಿದ ವಿಷಯವು ಅನೇಕ ಪ್ರಮಾಣ ವಚನ ಚರಿತ್ರೋದಾಹರಣಗಳೊಡನೆ ನಿರೂಪಿತವಾಗಿದೆ.

೪ನೆ ಮಹಿಮಪ್ರಕರಣದಲ್ಲಿ—ಬೌದ್ಧಗುರುವು ಆಚರಿಸಿದ ಶಿವದ್ರೋಹವೂ, ಅದಕ್ಕಾಗಿ ನಡೆದ ಅವನ ವಧೆಯೂ, ಅದರ ಮೇಲೆ ವೆಲ್ನಾಡಚೋಳನು ಶ್ರೀಪಂಡಿತಾಚಾರ್ಯಸ್ವಾಮಿಯವರ ಕಣ್ಣುಗಳನ್ನು ಮೂರುಸಲ ಕೀಳಿಸಿದುದೂ, ಪಂಡಿತಾರಾಧ್ಯರು ಶಿವಗಣ ಸಹಸ್ರನಾಮ ಸಂಕೀರ್ತನವನ್ನು ಮಾಡಿ ತತ್ಪ್ರಭಾವದಿಂದ ಊರ್ಧ್ವನೇತ್ರಗಳನ್ನು ಪಡೆದುದೂ, ಪಂಡಿತಾರಾಧ್ಯರ ಶಾಪದಿಂದ ವೆಲ್ನಾಡಚೋಳನು ನಿರ್ವಂಶನಾಗಿ ಅವನ ದೇಶಕೋಶಗಳೆಲ್ಲಾ ಹಾಳಾದುದೂ, ಇವೇ ಮೊದಲಾದ ಅಸಾಧಾರಣ ಪಂಡಿತಾಚಾರ್ಯ ಮಹಿಮೆಗಳೂ, ಮತ್ತು ಬಸವೇಶ್ವರ ಸಂದರ್ಶನಕ್ಕಾಗಿ ಪಂಡಿತಾಚಾರ್ಯರು ಕಲ್ಯಾಣಪಟ್ಟಣಕ್ಕೆ ಹೋಗುತ್ತಿದ್ದ ಮಧ್ಯಮಾರ್ಗದಲ್ಲಿ ಬಸವೇಶ್ವರನ ಶಿವೈಕ್ಯವನ್ನು ಕೇಳಿ ಅತಿಶಯವಾಗಿ ಹಂಬಲಿಸಿ ದುಃಖಪಟ್ಟುದೂ ವರ್ಣಿತವಾಗಿವೆ

೫ನೆ ಪರ್ವತಪ್ರಕರಣದಲ್ಲಿ—ಶ್ರೀಪಂಡಿತಾರಾಧ್ಯರು ಶ್ರೀಶೈಲದರ್ಶನವನ್ನು ಮಾಡಿ, ತನ್ನ ಶಿಷ್ಯ ದೋನಮಾರ್ಯನನ್ನು ಶ್ರೀಗಿರಿ ಯಾತ್ರೆಗಾಗಿ ಕಳುಹಿಸಿಕೊಟ್ಟುದು, ಆ ಶ್ರೀಶೈಲದ ಅನುಪಮ ಮಹಾಮಹಿಮೆಗಳು, ಅದರ ಯಾತ್ರಾಸ್ವರೂಪ, ಅದರಲ್ಲಿರುವ ಮಹಾಸ್ಥಲಗಳು, ಅಲ್ಲಿ ಕೂಡುವ ನಾನಾ ದೇಶಗಳ ಪರಿಸೆಯ ವೈಚಿತ್ರ್ಯಗಳು, ಅವರು ನಡೆಯಿಸುವ ಶಿವರಾತ್ರಿಯ ಸೇವಾವೈಭವ, ಇತ್ಯಾದಿಗಳೆಲ್ಲಾ ಬಹು ವಿಸ್ತಾರವಾಗಿ ಕಣ್ಣಮುಂಧಿರಿಸಿದಂತೆ ವರ್ಣಿಸಲ್ಪಟ್ಟು, ಅದನ್ನೋದಿದ ಕೇಳಿದವರಿಗೆಲ್ಲಾ ಜೀವಿತಕಾಲದಲ್ಲಿ 'ಒಂದಾವೃತ್ತಿಯಾದರೂ ಶ್ರೀಶೈಲಯಾತ್ರೆಯನ್ನು ಮಾಡದವನ ಜನ್ಮವು ವ್ಯರ್ಥವೆಂದು ತಿಳಿಯುವಷ್ಟು ಭಕ್ತಿಭಾವವನ್ನು ಹುಟ್ಟಿಸತಕ್ಕುದಾಗಿದೆ. ಮತ್ತು ಇದೇ ಪ್ರಕರಣದ ಕೊನೆಯಲ್ಲಿ ಶ್ರೀಪಂಡಿತಾರಾಧ್ಯರು ಸತೀಸುತರ ಸಮೇತ ಶಿವೈಕ್ಯರಾದುದೂ, ಅವರ ಹಿರಿಯ ಕುಮಾರ ಕೇದಾರಾರ್ಯನಿಗೂ, ಮುಖ್ಯ ಶಿಷ್ಯ ದೋನಮಾರ್ಯನಿಗೂ ಗುರುಪಟ್ಟವಾದುದೇ ಮೊದಲಾದ ವಿಷಯಗಳೂ ಹೇಳಲ್ಪಟ್ಟಿವೆ.

ಈ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ಶ್ರೀ ಪಂಡಿತಾರಾಧ್ಯ ಚರಿತ್ರದ ಮುಖ್ಯ ವಿಷಯಗಳು ಇಷ್ಟಾಗಿದ್ದರೂ ಸಂದರ್ಭೋಚಿತವಾಗಿ ಉದಾಹೃತಗಳಾಗಿರುವ ವೇದಾಗಮ ಪುರಾಣಾದಿ ಪ್ರಮಾಣ ವಚನಗಳೂ, ಅನೇಕಾನೇಕ ಪುರಾತನ ಭಕ್ತರ ಚರಿತ್ರಗಳೂ ಸಹ ಈ ಚರಿತ್ರೋದಧಿಯಲ್ಲಿ ತುಂಬಿರುವ ಅನರ್ಘ್ಯರತ್ನಗಳಂತೆ ಇರುತ್ತಿವೆ. ಅದುಕಾರಣ ಈ ಗ್ರಂಥವನ್ನು ಆದ್ಯಂತವಾಗಿ ಓದುವವರಿಗೆ ವೇದಾಗಮ ಸಂಮತವಾದ ವೀರಶೈವಸಿದ್ಧಾಂತಸ್ವರೂಪವೂ, ಅದರ ಧರ್ಮಕರ್ಮಗಳ ಪ್ರಾಶಸ್ತ್ಯವೂ ಶಿವಭಕ್ತಿಮಹತ್ತ್ವವೂ ಸಹ ಸ್ಪಷ್ಟವಾಗಿ ಗೋಚರಿಸುವುದರಲ್ಲಿ ಸಂಶಯವಿಲ್ಲ.

ನೈಜಾಂ ರಾಷ್ಟ್ರದ ಕವಿಗಳಲ್ಲೆಲ್ಲಾ ಮೊದಲಿಗರಾಗಿಯೂ, ಆಂಧ್ರದೇಶದಲ್ಲಿ ವೀರಶೈವಮತವನ್ನು ಪ್ರಚಾರಗೊಳಿಸಿದವರಲ್ಲಿ ಪ್ರಮುಖರಾಗಿಯೂ, ಸಂಸ್ಕೃತಾಂಧ್ರ ಕರ್ಣಾಟಕ ಭಾಷಾತ್ರಯದಲ್ಲೂ ಅನೇಕ ಗ್ರಂಥಗಳನ್ನು ರಚಿಸಿದವರಾಗಿಯೂ, ನಿಶಿತ ಶಿವಭಕ್ತಿ ಶಿವಾಚಾರ ಸಾಮ್ರಾಜ್ಯ ಧುರಂಧರರಾಗಿಯೂ, ನಿಜಾಂಸೀಮೆಯ ಓರುಗಂಟಿಗೆ ಸಮೀಪದಲ್ಲಿರುವ ಪಾಲಕುರಿಕಿ ಎಂಬ ಗ್ರಾಮದಲ್ಲಿ ಜನಿಸಿದವರಾಗಿಯೂ, ೧೨ನೆ ಶತಮಾನದ ಕಡೆಯಲ್ಲಿ ಎಂದರೆ ಬಸವೇಶ್ವರನಿದ್ದ ಕಾಲದಿಂದ ಸ್ವಲ್ಪ ಈಚೆಗೆ ಇದ್ದವರಾಗಿಯೂ, ಸುಪ್ರಥಿತರಾದ ಶ್ರೀ ಪಾಲ್ಕುರಿಕಿ ಸೋಮಾರಾಧ್ಯರು ಮೊಟ್ಟಮೊದಲು ಈ ಪಂಡಿತಾರಾಧ್ಯ ಚರಿತ್ರವನ್ನು

ಆಂಧ್ರಭಾಷೆಯಲ್ಲಿ ಬರೆದರು. ಇದಕ್ಕೆ ಮೊದಲು ಇವರು ಬಸವೇಶ್ವರ ಪುರಾಣವನ್ನು ತೆಲುಗಿನಲ್ಲಿ ರಚಿಸಿದ್ದುದನ್ನು ಶ್ರೀಶೈಲದಲ್ಲಿ ವಾಸವಾಗಿದ್ದ ವೀರಮಾಹೇಶ್ವರರು ಕಂಡು, ಬಸವಪುರಾಣದಂತೆಯೇ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರವನ್ನೂ ರಚಿಸಿ ಬಸವ ಪುರಾಣದಲ್ಲಿ ಹೇಳದೆ ಬಿಟ್ಟಿರುವ ಶಿವಶರಣರ ಚರಿತ್ರೆಗಳನ್ನು ಇದರಲ್ಲಿ ಸೇರಿಸಿ ಹೇಳೆಂದು ಇವರಿಗೆ ಅಪ್ಪಣೆ ಕೊಡಿಸಲಾಗಿ, ಅವರಾಜ್ಞೆಯನ್ನು ಶಿರಸಾವಹಿಸಿ ಆ ಗ್ರಂಥವನ್ನು ತಮ್ಮ ಮೈದುನನಾದ ಸೋಮನಾಥನನ್ನುದ್ದೇಶಿಸಿ ಲೋಕಹಿತಾರ್ಥವಾಗಿ ಇವರು ರಚಿಸಿದರು. ಅದು ದೇಶಭಾಷೆಯಲ್ಲಿ ರಚಿತವಾಗಿದ್ದುದರಿಂದ ಆಂಧ್ರದೇಶದವರಿಗೇ ಹೊರತು ಇತರರಿಗೆ ಉಪಯೋಗಿಸಲಾರದೆಂಬುದನ್ನರಿತು ಸರ್ವದೇಶೀಯೋಪಯೋಗ್ಯವಾಗುವಂತೆ ಸಂಸ್ಕೃತಭಾಷೆಯಿಂದ ಶ್ರೀಗುರುರಾಜಕವಿಗಳು ಇದನ್ನು ರಚಿಸಿದರು. "ಶ್ರೀಮತ್ಪಾಲ್ಕುರಿಸೋಮೇಶಗುರುಣಾ ಯೋಽರ್ಥಈರಿತಃ | ಸಏವಭಣ್ಯತೇಽತ್ರಾರ್ಥೋನಾನ್ಯಾರ್ಥಸ್ಸ್ವಮನೀಷಯಾ" ಎಂದು ಈ ಗ್ರಂಥದ ಪೀಠಿಕಾಧ್ಯಾಯದ ೪೯ನೆ ಶ್ಲೋಕದಲ್ಲಿ ಗುರುರಾಜಕವಿಗಳು— "ಇದರಲ್ಲಿ ಪಾಲ್ಕುರಿಕೆ ಸೋಮಾರಾಧ್ಯ ಗುರುಗಳು ಉಸುರಿದ ಅಭಿಪ್ರಾಯವೇ ಹೊರತು ಸ್ವಬುದ್ಧಿ ಕಲ್ಪಿತಾರ್ಥವೇನೂ ಇರುವುದಿಲ್ಲ" ವೆಂದು ಹೇಳಿಕೊಂಡಿರುವರು.

ಈ ಗ್ರಂಥಕರ್ತರಾದ ಗುರುರಾಜಕವಿವರ್ಯರು ಶ್ರೀ ಪಂಡಿತಾಚಾರ್ಯ ಸಂಪ್ರದಾಯದ ವೀರಮಾಹೇಶ್ವರರು. ಇವರು ಹುಲಿಯೂರು ನಿರಾಳಯ್ಯನವರ ಮೊಮ್ಮಕ್ಕಳೂ ಮಲ್ಲಪ್ಪಯ್ಯನವರ ಮಕ್ಕಳೂ ಆಗಿದ್ದರೆಂದು ಪೀಠಿಕಾಧ್ಯಾಯದಲ್ಲಿ ಇವರೇ ಹೇಳಿಕೊಂಡಿರುವ ಶ್ಲೋಕಗಳಿಂದ ಗೊತ್ತಾಗುತ್ತದೆ. ಇವರು ಕ್ರಿ. ಶ. ೧೫ನೇ ಶತಮಾನದ ಮಧ್ಯಭಾಗದಲ್ಲಿದ್ದರೆಂದು ಗೊತ್ತಾಗಿದೆ. ಇವರ ಕವಿತಾಧಾಟಿಯು ನಿರರ್ಗಳವಾದುದು. ನಾರಿಕೇಳಪಾಕವು. ಶಬ್ದಸೌಂದರ್ಯವು ಮಂಜುಳವಾಗಿರುವುದು. ಶಯ್ಯೆಯು ಲಲಿತವಾದುದು. ಸ್ವಲ್ಪ ಹೆಚ್ಚು ಕಡಿಮೆ ಗುರುರಾಜಕವಿಗಳ ಕಾಲದಲ್ಲೇ ಇದ್ದ ನೀಲಕಂಠಾಚಾರ್ಯರೆಂಬುವವರು ತೆಲುಗಿನಲ್ಲಿದ್ದ ಪಂಡಿತಾರಾಧ್ಯ ಚರಿತ್ರವನ್ನೇ "ಆರಾಧ್ಯಚರಿತ್ರ" ವೆಂಬ ಹೆಸರಿನಿಂದ ಕನ್ನಡದಲ್ಲಿ ವಾರ್ಧಕಷಟ್ಪದಿಯ ರೂಪವಾಗಿ ರಚಿಸಿದ್ದಾರೆ. ಅದರ ಒಂದು ತಾಳಪತ್ರಪ್ರತಿಯು ಶಾ. ಶ. ೧೫೪೫ರಲ್ಲಿ ಎಂದರೆ ಇಲ್ಲಿಗೆ ೩೦೦ ವರ್ಷಗಳ ಹಿಂದೆ ಬರೆಯಲ್ಪಟ್ಟುದು ನಮ್ಮಲ್ಲಿರುವುದರಿಂದ ಅದಕ್ಕೆ ಒಂದು ಶತಮಾನದ ಹಿಂದೆಯೇ ಆರಾಧ್ಯಚರಿತ್ರವು ರಚಿತವಾಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ಆ ನೀಲಕಂಠಾ

ಚಾರ್ಯರ ಕಾಲವು ಕ್ರಿ.ಶ. ೧೪೪೫ ಎಂದು ಕರ್ನಾಟಕ ಕವಿಚರಿತ್ರಕಾರರು ಹೇಳಿರುತ್ತಾರೆ. ಈ ಗುರುರಾಜ ಕವಿಗಳ ಸಂಸ್ಕೃತ ಗ್ರಂಥಕ್ಕೆ ಮಲ್ಲಿಕಾರ್ಜುನ ಕವಿಯೆಂಬುವವರು ಕನ್ನಡದ ಟೀಕೆಯೊಂದನ್ನು ಬರೆದಿದ್ದಾರಂತೆ. ಆ ಗ್ರಂಥವು ನಮಗೆ ದೊರೆದಿಲ್ಲ.

ವೀರಶೈವಮತ ಸಂಪ್ರದಾಯ ಜಿಜ್ಞಾಸುಗಳಿಗೂ ಭಕ್ತಿಯಿಂದ ಮತಾಚಾರ್ಯ ಚರಿತ್ರನನ್ನು ಕಾಣಿಸಬೇಕೆನ್ನುವ ಭಾವಕಜನರಿಗೂ ಇದು ಉಪಯೋಗಕರವೆಂದು ತಿಳಿದು "ವೀರಶೈವಗ್ರಂಥಪ್ರಕಾಶಿಕಾ" ಮಾಸಪತ್ರದಲ್ಲಿ ಇದನ್ನು ಪ್ರಥಮ ಪುಸ್ತಕವನ್ನಾಗಿ ಮುದ್ರಿಸಲು ಆರಂಭಿಸಿದೆವು. ಕನ್ನಡದಲ್ಲಿ ಟಿಪ್ಪಣಿಯಿಲ್ಲದಿದ್ದರೆ ಈ ನಾಡಿನ ಬಹುಜನರಿಗೆ ಪ್ರಯೋಜನವಾಗುವುದಿಲ್ಲವೆಂದು ಯೋಚಿಸಿ, ಸುಸ್ಪಷ್ಟವಾಗಿ ಭಾವಾರ್ಥವನ್ನು "ಭಾವಮಂಜರಿ" ಎಂಬ ಹೆಸರಿನಿಂದ ನೂತನವಾಗಿ ಬರೆದು, ಮೂಲವನ್ನೇ ಪಾರಾಯಣಮಾಡಬೇಕೆನ್ನುವವರಿಗೂ, ಕಥಾರೂಪವಾಗಿ ಶ್ರವಣ ಮಾಡಬೇಕೆನ್ನುವವರಿಗೂ ಸಹ ಅನುಕೂಲಿಸುವಂತೆ ಮೇಲ್ಗಡೆಯಲ್ಲಿ ಮೂಲಗ್ರಂಥವನ್ನೂ ಕೆಳಗಡೆ ಟಿಪ್ಪಣವನ್ನೂ ಬೇರೆಬೇರೆಯಾಗಿರುವಂತೆ ಮುದ್ರಿಸಿ ಪ್ರಕಟಿಸಲು ಉಪಕ್ರಮಿಸಿದೆವು. ನಮ್ಮಲ್ಲಿ ಒಂದೇಪ್ರತಿ ಇದ್ದುದರಿಂದಲೂ, ಮೈಸೂರು ಅರಮನೆಯ ಸರಸ್ವತೀಭಂಡಾರ, ಪ್ರಭುತ್ವ ಪ್ರಾಚ್ಯ ಪುಸ್ತಕಭಂಡಾರ, ಮದರಾಸುಪ್ರಭುತ್ವ ಪ್ರಾಚ್ಯಪುಸ್ತಕಾಲಯ- ಇವುಗಳಲ್ಲೆಲ್ಲೂ ಮತ್ತೊಂದು ಪ್ರತಿಯು ದೊರೆಯದೆ ಹೋದುದರಿಂದಲೂ ಒಂದೇಪ್ರತಿಯನ್ನಿಟ್ಟುಕೊಂಡು ಅಲ್ಲಲ್ಲಿ ಕಂಡುಬಂದ ಲೇಖನ ದೋಷಾದಿಗಳನ್ನು ಪ್ರಯಾಸದಿಂದ ಪರಿಷ್ಕರಿಸಿಕೊಳ್ಳಬೇಕಾಯಿತು. ೧ನೆ ಪ್ರಕರಣದಲ್ಲೊಂದುಕಡೆ ಉಂಟಾಗಿದ್ದ ಗ್ರಂಥಪಾತವನ್ನು ಸರಿಮಾಡಲಿಕ್ಕೆ ಉಪಾಯಾಂತರವೇ ಇಲ್ಲದೆ ಹೊಸದಾಗಿ ಕೆಲಶ್ಲೋಕಗಳನ್ನೇ ರಚಿಸಿ ಅಲ್ಲಿಗೆ ಸೇರಿಸಬೇಕಾಯಿತು. ಈ ಗ್ರಂಥದ ೧ನೆ ಪ್ರಕರಣವು ಅಚ್ಚಾಗಿ ಮುಗಿಯುವುದರೊಳಗಾಗಿ ಮಾಸಪತ್ರವು ಕಾರಣಾಂತರಗಳಿಂದ ಸ್ತಬ್ಧವಾಗಲು, ಈ ಗ್ರಂಥದ ಮುದ್ರಣವೂ ಅರ್ಧಾಂತವಾಗಿ ನಿಂತಿತು. ಇಂಥ ಉದ್ಗ್ರಂಥದ ಮುದ್ರಣ ಕಾರ್ಯವು ಪೂರ್ಣವಾಗದೆ ಹೋಯಿತಲ್ಲಾ! ಎಂಬ ಚಿಂತೆಯು ಹಗಲಿರುಳೂ ನಮ್ಮನ್ನು ಬಾಧಿಸುತ್ತಿದ್ದಿತು. ಆದರೆ ಶಿವಕೃಪೆಯಿಂದಲೂ ಪೂರ್ವಾಚಾರ್ಯಾನುಗ್ರಹದಿಂದಲೂ ನಮ್ಮ ಸತ್ಸಂಕಲ್ಪವು ಪೂರ್ಣವಾಗುವ ಕಾಲವೊದಗಿತು. ಇದೇ ಜಗದ್ಗುರು ಪಂಡಿತಾಚಾರ್ಯ ಪೀಠವನ್ನು ಈಗ ಅಲಂಕರಿಸಿರುವ ಚರಪಟ್ಟಾಧ್ಯಕ್ಷ ಶ್ರೀ|| ವೀರಭಿಕ್ಷಾವರ್ತಿರಾಜ ದೇಶಿಕೇಂದ್ರ ಮ

ಹೊಸಸ್ವಾಮಿಗಳವರು ತಮ್ಮ ಸಂಪ್ರದಾಯದ ಪೂರ್ವಾಚಾರ್ಯರ ಈ ಚರಿತ್ರದ ಮುದ್ರಣ ಕಾರ್ಯವನ್ನು ಸಂಪೂರ್ಣಗೊಳಿಸದೆ ನಿಲ್ಲಿಸುವುದು ಸರಿಯಲ್ಲವೆಂದು ತಾವಾಗಿ ನಮಗೆ ಪ್ರಬೋಧಿಸಿದರು. ಯುದ್ಧಸಂಬಂಧದಿಂದ ಕಾಗದದ ಬೆಲೆಯು ಏರಿಹೋಗಿದ್ದರೂ ಉಳಿದೆರಡು ಪ್ರಕರಣಗಳ ಮುದ್ರಣಕ್ಕೆ ತಕ್ಕಂತೆ ಧನಸಾಹಾಯ್ಯವನ್ನು, ತಮ್ಮ ಅನುಗ್ರಹದಿಂದ ಸ್ಥಾಪಿತವಾಗಿರುವ ಹಿರಿಯೂರು ತಾ|| ಮೇಟಿಕುರಿಕೆ ಕಟ್ಟಿಮನೆಯ ಶ್ರೀಗಿರೀಶ ವೀರಶೈವ ಹಿತೋಪದೇಶಕ ಸಂಘದವರ ಕಡೆಯಿಂದ ಕೊಡಿಸಿದರು. ಆ ಶ್ರೀಗಳವರು ಮಾಡಿದ ಕೃಪೆಯಿಂದಲೂ, ಸಂಘದವರು ತೋರಿಸಿದ ಔದಾರ್ಯದಿಂದಲೂ ಈ ಗ್ರಂಥಮುದ್ರಣವು ಸಂಪೂರ್ಣವಾಗಲವಕಾಶವಾಯಿತು. ಉಚಿತ ಸಮಯದಲ್ಲಿ ಆ ಮಹಾ ಶ್ರೀಗಳವರೂ, ಅವರ ಆಜ್ಞಾನುವರ್ತಿಗಳಾದ ಮೇಲೆ ಕಂಡ ಸಂಘದವರೂ ತೋರಿಸಿದ ಅಭಿಮಾನೌದಾರ್ಯಗಳು ಕೃತಜ್ಞತಾಪೂರ್ವಕ ಚಿರಸ್ಮರಣೀಯಗಳಾಗಿರುವುವು. ಹೀಗೆ ನಮ್ಮ ಮತದ ಆಚಾರ್ಯ ಪೀಠಾಧಿಪತಿಗಳು ಒಬ್ಬೊಬ್ಬರು ಒಂದೊಂದು ಧಾರ್ಮಿಕ ಗ್ರಂಥಗಳನ್ನು ಮುದ್ರಿಸುವುದಕ್ಕೆ ಮನಸ್ಸು ಮಾಡಿದರೂ ಎಷ್ಟೋ ಪ್ರಾಚೀನ ಗ್ರಂಥಗಳ ಸಮುದ್ಧಾರವಾಗುವುದು. ಸ್ವತಃ ಮಾಡಿಸದಿದ್ದರೆ ಮುದ್ರಣ ಮಾಡಿಸಲು ಯತ್ನಿಸುವವರಿಗೆ ಉಚಿತ ಸಾಹಾಯ್ಯವನ್ನು ಮಾಡಿದರೂ ಎಷ್ಟೋ ಕೆಲಸವಾಗುವುದು.

ಸಾಧ್ಯವಾದಮಟ್ಟಿಗೂ ಎಚ್ಚರಿಕೆಯಿಂದ ಪರಿಶೋಧಿಸಿ, ಸುಲಭವಾದ ಬಿಡಿಗನ್ನಡನುಡಿಯಿಂದ ಟಿಪ್ಪಣವನ್ನು ಬರೆದು ಈಗ್ರಂಥವನ್ನು ಮುದ್ರಿಸಲಾಗಿದೆ. ಪ್ರಮಾದವಶಾತ್ ಸ್ಖಾಲಿತ್ಯಗಳೇನಾದರೂ ಸಂಭವಿಸಿದ್ದರೆ ಗುಣಗ್ರಹಣೈಕಧುರೀಣರಾದ ಮಹಾಜನರು ಅದನ್ನು ಪರಿಗಣಿಸದೆ ಗುಣಾಂಶವನ್ನು ಅಂಗೀಕರಿಸುವವರಾಗಲಿ.

ಶ್ರೀಪಂಡಿತಾರಾಧ್ಯ ಪೀಠಚರಿತೆಯನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರ ಮಾಡುವುದು ಅಪ್ರಾಸಂಗಿಕವಾಗಲಾರದು. ಆ ಪೀಠಪಾರಂಪರ್ಯವನ್ನು ನಿಷ್ಕೃಷ್ಟವಾಗಿ ಹೇಳುವುದಕ್ಕೆ ತಕ್ಕ ಸಾಧನಗಳು ಕಡಿಮೆಯಾಗಿದ್ದರೂ ತಿಳಿದಿರುವ ಮಟ್ಟಿಗೆ ಕೆಲ ಸಂಗತಿಗಳನ್ನು ಹೇಳಬಹುದಾಗಿದೆ. ಪಂಚಪೀಠಗಳಲ್ಲಿ ಒಂದಾದ ಶ್ರೀಶೈಲದ ಸೂರ್ಯಸಿಂಹಾಸನ ಪೀಠಕ್ಕೇ ಈ ಪಂಡಿತಾಚಾರ್ಯರು ಸಂಬಂಧಪಟ್ಟವರಾದರೂ, ಆ ಪೀಠವು ಇವರ ಕಾಲಕ್ಕಿಂತಲೂ ಪ್ರಾಚೀನವೂ ಇವರಿಂದ ಆರೋಹಿಸಲ್ಪಟ್ಟದ್ದೂ ಆಗಿರಬೇಕೆಂದು ಊಹಿಸಲ್ಪಡುತ್ತಿದೆ. ಈ ಪೀಠದ ಮೂಲಾಚಾ

ರ್ಯರು ಈ ಗ್ರಂಥ ಪ್ರತಿಪಾದಿತರಾದ ಪಂಡಿತಾಚಾರ್ಯರಲ್ಲದೆ ಬೇರೊಬ್ಬರಾಗಿದ್ದರೆ ಅವರ ಚರಿತ್ರವು ಇದಕ್ಕಿಂತಲೂ ಪ್ರಬಲವಾಗಿಯೋ ಸಾಧಾರಣವಾಗಿಯೋ ಬೇರೊಂದು ಇರಬೇಕು. ಅಂಥ ಗ್ರಂಥವಾವುದೂ ನಮಗೆ ದೊರೆದಿಲ್ಲ. ಶಿವಾಗಮಗಳಲ್ಲಿ ಹೇಳಲ್ಪಟ್ಟಿರುವ ಪಂಡಿತಾಚಾರ್ಯರ ಜನನಸ್ಥಲ ಮೊದಲಾದುವುಗಳಿಗೂ, ಇವರ ಜನನ ಸ್ಥಲಾದಿಗಳಿಗೂ ವ್ಯತ್ಯಾಸ ತೋರುವುದೆಂಬ ಕಾರಣವು ಅಷ್ಟು ದೃಢವಾದುದಲ್ಲ. ಸಂಪಾದನೆಯ ಸಿದ್ಧನಂಜೇಶರಿಂದ ರಚಿತವಾಗಿರುವ ಗುರುರಾಜಚಾರಿತ್ರದಲ್ಲಿ—ಆಚಾರ್ಯ ಪಂಚಕದ ಚರಿತ್ರವನ್ನು ಹೇಳುವಾಗ್ಗೆ ರೇವಣಸಿದ್ಧಾದಿಗಳ ಚರಿತ್ರವನ್ನು ಹೇಳಿದ ಬಳಿಕ ಈ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಚರಿತ್ರೆಯೇ ಐನೆ ಆಚಾರ್ಯರ ಸ್ಥಾನದಲ್ಲಿ ನಿರೂಪಿತವಾಗಿದೆ. ಸಂಪಾದನೆಯ ಸರ್ವಜ್ಞೇಶಕವಿಯಿಂದ ರಚಿತವಾಗಿರುವ ಚತುರಾಚಾರ್ಯ ಪುರಾಣವೆಂಬ ಗ್ರಂಥದಲ್ಲಾದರೊ ರೇವಣಸಿದ್ಧಾದಿಗಳ ಚರಿತ್ರಗಳನ್ನು ಹೇಳಿದ ಬಳಿಕ ಪಂಡಿತಾರಾಧ್ಯ ಚರಿತ್ರಸ್ಥಾನದಲ್ಲಿ ಮಂಚಣ ಪಂಡಿತರ ಚರಿತ್ರೆಯು ಹೇಳಲ್ಪಟ್ಟಿದೆ. ಇದಕ್ಕೇನು ಕಾರಣವೋ ತಿಳಿಯಲಿಲ್ಲ. ಮೂಲಪಂಡಿತಾಚಾರ್ಯರ ಜನನವು ಸುಧಾಕುಂಡ (ಅಮೃತಕುಂಡ) ವೆಂಬ ಕ್ಷೇತ್ರದಲ್ಲಿ ಆಯಿತೆಂದು ಆಗಮದಲ್ಲಿದೆ. ಈ ಪಂಡಿತಾಚಾರ್ಯರಿಗೆ ಅಮರಗುಂಡದ ಮಲ್ಲಿಕಾರ್ಜುನ ಪಂಡಿತಾಚಾರ್ಯರೆಂದೂ ರೂಢಿಯುಂಟು. ಗುಬ್ಬಿ ಮಲ್ಲಣಾರ್ಯರೂ ಹಾಗೆ ಹೇಳಿದ್ದಾರೆ. ಅಮೃತಕುಂಡವೆಂಬ ಶಬ್ದದ ತದ್ಭವ ರೂಪವು ಅಮರ್ದುಗುಂಡವೆಂದಾಗಿ, ಕಡೆಗೆ ಅದೇ ಅಮರಗುಂಡವೆಂದು ರೂಢಿಯಲ್ಲಿ ಬಂದಿರಬೇಕು. ಅಥವಾ ಈ ಪಂಡಿತಾಚಾರ್ಯರು ವೆಲ್ನಾಡಚೋಳನಿಗೆ ಶಾಪವನ್ನು ಕೊಟ್ಟ ಬಳಿಕ ಅಮರಾರಾಮವೆಂಬ ನಗರಕ್ಕೆ ಬಂದು ವಾಸಮಾಡಿದ ಕಾರಣದಿಂದ ಅಮರಗುಂಡದ ಮಲ್ಲಿಕಾರ್ಜುನರೆಂಬ ಹೆಸರು ರೂಢವಾಗಿರಬೇಕು. ಆಗಮದಲ್ಲಿ ಉಕ್ತವಾಗಿರುವ ಸುಧಾಕುಂಡವೆಂಬ ನಾಮವು ಇದೇ ಸ್ಥಲಪರ್ಯಾಯವಾಗಿದ್ದೀತು. ಮಲ್ಲಿಕಾರ್ಜುನ ಲಿಂಗದಲ್ಲಿ ಪಂಡಿತಾಚಾರ್ಯರು ಅವತರಿಸಿದರೆಂದು ಹೇಳಲ್ಪಟ್ಟಿರುವುದು ಅರ್ಥವಾದ ರೂಪವಾಗಿ ಮಹನೀಯರ ಅತಿಶಯತ್ವ ಬೋಧನ ಸಾಧಕವಾಗಿ ಭಾವಕರ ಭಕ್ತಿದೃಷ್ಟಿಗೆ ಸಂಮತವಾಗಿದ್ದರೂ, ಇತಿಹಾಸಜ್ಞರು ಅದಕ್ಕೆ ಕೊಡುವ ಘನತೆಗಿಂತಲೂ ಮಲ್ಲಿಕಾರ್ಜುನ ಲಿಂಗಾರ್ಚಕ ಭೀಮನ ಪಂಡಿತನಲ್ಲಿ ಪಂಡಿತಾರಾಧ್ಯರು ಅವತರಿಸಿದರೆಂಬ ವಿಷಯಕ್ಕೇ ಹೆಚ್ಚು ಮಹತ್ವವನ್ನು ಕೊಡುವರು. ಮಹನೀಯರ ಪ್ರಭಾವವು ಅವರ ಜನನಸ್ಥಲಕ್ಕಿಂತಲೂ ಅವರ ಕರ್ತೃತ್ವ ಶಕ್ತಿಯಿಂದಲೇ ವಿಸ್ಪಷ್ಟವಾಗುವುದು.

ಈ ಪಂಡಿತಾಚಾರ್ಯರು ಭೀಮನಪಂಡಿತನ ಪತ್ನಿಯ ಗರ್ಭದಲ್ಲಿ ಜನಿಸುವಾಗ ವೀರಶೈವರಾಗಿರಲಿಲ್ಲ. ತದನಂತರ ಕೆಲಕಾಲದಮೇಲೆ ಕೋಟಿಪಲ್ಲಾರ್ಯಾರಾಧ್ಯ ರಿಂದ ಇವರು ವೀರಶೈವ ದೀಕ್ಷೆಯನ್ನು ಪಡೆದು ಲಿಂಗಾಂಗಸಂಗಿಗಳಾದರು. ಇವರು ತಮ್ಮ ಪಿತೃಪರಂಪರೆಯಿಂದಲೂ ಲಿಂಗಧಾರಣಾದಿ ಅಷ್ಟಾವರಣಸಂಪ ನ್ನರಾಗಿ ಬಂದಿದ್ದರೆ, ಶಿವದೀಕ್ಷಾನಂತರ ಇತರವಿಪ್ರರು ಇವರ ಲಿಂಗಧಾರ ಣಾದಿ ಧರ್ಮಗಳನ್ನು ಕುರಿತು ಆಗ ಆಕ್ಷೇಪಿಸುತ್ತಿರಲಿಲ್ಲ. ಸಂಪಾದನೆಯ ಸಿದ್ಧ ಸಂಜೇಶರ ಗುರುರಾಜ ಚಾರಿತ್ರದಲ್ಲಿರುವ

ಮತ್ತೊರೆವೆವಾಕೇಳು ಶ್ರೀಗಿರಿಗೆ ಪೂರ್ವದಿ |
ಕ್ಕುತ್ತಮವೆನಿಪ್ಪ ದ್ರಾಕ್ಷಾರಾಮದಲ್ಲಿ ಶುಭ |
ಚಿತ್ತಭೀಮಣ್ಣಪಂಡಿತವರರ್ಗೆ ಗೌರಾಂಬೆಯರ ಗರ್ಭದಲ್ಲಿ ಜನಿಸಿ ||
ಉತ್ತಮ ಶಿವಾರ್ಚಕರು ಕೋಟಿಪಲ್ಲ್ಯಾರಾಧ್ಯ |
ರತ್ತಣಿಂ ದೀಕ್ಷೆಯಂ ಪಡೆದು ಲಿಂಗವ ಧರಿಸು|
ದಾತ್ತಮಹಿಮೆಯ ಪಡೆದು ಮಲ್ಲಿಕಾರ್ಜುನಪಂಡಿತಾರಾಧ್ಯ ನೊಪ್ಪಿರ್ದನು ||

ಎಂಬ ಪದ್ಯದಿಂದ ಈ ವಿಷಯವು ಮತ್ತಷ್ಟು ದೃಢಪಡುತ್ತದೆ. ಏತೇಸ ಈ ಮಲ್ಲಿಕಾರ್ಜುನ ಪಂಡಿತಾಚಾರ್ಯರು ತಮ್ಮ ಉದಯಕಾಲಕ್ಕಿಂತ ಮುಂಚೆ ಯೇ ಪ್ರಸರಿಸಿದ್ದ ವೀರಶೈವಮತದಲ್ಲಿ ಪ್ರವರ್ತಿಸಿ ಬಸವೇಶನಂತೆ ಶಿವಮತೋ ದ್ಧಾರ ಕಾರ್ಯವನ್ನು ಮಾಡಿದರೆಂದೂ, ಆ ಬಳಿಕವೇ ಈ ಆಚಾರ್ಯ ಪೀಠಾರೋ ಹಣವನ್ನು ಮಾಡಿ ಜಗದ್ಗುರುಗಳೆನಿಸಿಕೊಂಡರೆಂದೂ ಹೇಳಬೇಕಾಗುತ್ತದೆ. ಈ ಪಂಡಿತಾಚಾರ್ಯರು ಶಿವೈಕ್ಯರಾದಕೂಡಲೇ ಇವರ ಸತೀಸುತರೂ ಇವರ ಸಂಗ ಡಲೇ ಮುಕ್ತರಾದರು. ಬಳಿಕ ಭಕ್ತಜನರು ಆ ಪಂಡಿತಾಚಾರ್ಯರ ಹಿರಿಯ ಕು ಮಾರನಾದ ಕೇದಾರಾರ್ಯನಿಗೂ, ಪಂಡಿತಾಚಾರ್ಯರ ಪ್ರಿಯ ಶಿಷ್ಯನಾದ ದೋ ಸಮಾರ್ಯನಿಗೂ ಸಹ ಎರಡು ಪಟ್ಟಗಳನ್ನು ಕಟ್ಟಿದರೆಂದೂ, ಇವರಿಬ್ಬರ ಸಂತಾ ನಗಳೂ ವೃದ್ಧಿಗೊಂಡು ಜಗದಾರಾಧ್ಯ ಪಟ್ಟವನ್ನು ಅನುಭವಿಸಿಕೊಂಡು ಹೋ ದುವೆಂದೂ, ಈ ಗ್ರಂಥದ ಕೊನೆಯ ಅಧ್ಯಾಯದಲ್ಲಿ ಕಂಡಿರುವ ಸಂಗತಿಗಳಿಂದ ವಿದಿತವಾಗುತ್ತದೆ. ಈ ಪಂಡಿತಾಚಾರ್ಯರು ಸಂಸ್ಕೃತಾಂಧ್ರಭಾಷೆಗಳಲ್ಲಿ ಪಾಂಡಿ ತ್ಯವನ್ನೂ ಕರ್ಣಾಟಭಾಷಾಜ್ಞಾನವನ್ನೂ ಸಹ ಪಡೆದಿದ್ದರು. ಸಂಸ್ಕೃತದಲ್ಲಿ ಇವರು ಬರೆದಿರುವ ಗ್ರಂಥಗಳಾವುವೂ ಉಪಲಬ್ಧವಾಗಿಲ್ಲ. ಅಮರೇಶ್ವರಾಷ್ಟಕ ರುದ್ರಮಹಿಮಶತಕ, ಮಾಯಾಮೋಹನಸ್ತವ ಮೊದಲಾದ ಕೆಲ ಸ್ತೋತ್ರಗಳ ನ್ನೂ, ನೀರಾಜನಪದ, ಆನಂದಪದ, ಶಂಕರಪದ, ಗದ್ಯಪಂಚಕ ಇತ್ಯಾದಿ ಸ್ತುತಿ

ಪದ್ಯಗಳನ್ನೂ, ಶಿವತತ್ತ್ವಸಾರ ಎಂಬ ಗ್ರಂಥವನ್ನೂ ಸಹ ತೆಲುಗಿನಲ್ಲಿಯೂ, ಇಷ್ಟಲಿಂಗಸ್ತೋತ್ರವೆಂಬುದನ್ನು ಕನ್ನಡದಲ್ಲಿಯೂ ರಚಿಸಿರುವರೆಂದು ಇದೇ ಗ್ರಂಥದಲ್ಲಿ ಉಕ್ತವಾಗಿರುವ ಸಂಗತಿಗಳಿಂದ ಗೊತ್ತಾಗುತ್ತದೆ.

ಈ ಪಂಡಿತಾರಾಧ್ಯರ ಕಾಲದಲ್ಲೂ ಅವರಿಂದ ಸ್ವಲ್ಪ ಈಚೆಗೆ ಇದ್ದ ಪಾಲ್ಕುರಿಕೆ ಸೋಮಾರಾಧ್ಯರ ಕಾಲದಲ್ಲೂ ಮತಮತಗಳ ಪರಸ್ಪರ ವಾದ ವಿವಾದಗಳು ವಿಶೇಷವಾಗಿ ನಡೆಯುತ್ತಿದ್ದುವು- ಆದರಿಂದಲೇ ಇವರುಗಳ ಗ್ರಂಥಗಳಲ್ಲಿ ಅನ್ಯಮತಗಳ ಖಂಡನೆಯು ವಿಶೇಷವಾಗಿರುತ್ತಿದೆ. ಇವರುಗಳ ಸ್ವಮತವಾದ ವೀರಶೈವವು ಕೇವಲಾದ್ವೈತವನ್ನೂ ಕೇವಲದ್ವೈತವನ್ನೂ ಸಹ ನಿಷೇಧಿಸತಕ್ಕದು. ಕೇವಲಾದ್ವೈತದಲ್ಲಿ ಉಪಾಸ್ಯೋಪಾಸಕಭಾವಕ್ಕೂ ದಾಸೋಽಹಂಭಾವಕ್ಕೂ ಎಡೆಯಿಲ್ಲ. ಅದುಕಾರಣ ಅದು ಸ್ವೀಕಾರ್ಯವಲ್ಲ. ಕೇವಲದ್ವೈತದಲ್ಲಿ ಸಾಮೀಪ್ಯಮುಕ್ತಿಯೇ ಹೊರತು ಸಾಯುಜ್ಯ ಮುಕ್ತಿಯಿಲ್ಲ. ಅದುಕಾರಣ ಅದೂ ಉಪಾದೇಯವಲ್ಲವೆಂದು, ವೀರಶೈವರಲ್ಲಿ ಭೇದಾಭೇದ ಸ್ವೀಕಾರವು ಮಾಡಲ್ಪಟ್ಟಿದೆ. ಈ ಮತದಲ್ಲಿ ಕ್ರಿಯಾಜ್ಞಾನಗಳೆರಡಕ್ಕೂ ಪ್ರಾಧಾನ್ಯವಿರುತ್ತದೆ. ಆ ಕ್ರಿಯಾಜ್ಞಾನಗಳಿಗೆ ಭಕ್ತಿಯು ಚೈತನ್ಯವಾಗಿರುತ್ತದೆ. ಅದುಕಾರಣವೇ

ಭಕ್ತಿರೇವಪರಮಾರ್ಥದಾಯಿನೀ ಭಕ್ತಿರೇವಪರತತ್ತ್ವವೇದಿನೀ ।
ಭಕ್ತಿರೇವಭವರೋಗಹಾರಿಣೀ ಭಕ್ತಿರೇವಶಿವಭಾವಕಾರಿಣೀ ॥

ಎಂಬುದೇ ಮೊದಲಾದ ಭಕ್ತಿಪ್ರಾಶಸ್ತ್ಯ ಬೋಧಕ ವಚನಗಳು ಹುಟ್ಟಿರುತ್ತವೆ. ಆ ಭಕ್ತಿಯು ದ್ವೈತಭಕ್ತಿ ಅದ್ವೈತಭಕ್ತಿಯೆಂದು ಎರಡು ತೆರವು. ಮೊದಲು ದ್ವೈತಭಕ್ತಿಯನ್ನಾಚರಿಸಿ ತತ್ಪರಿಪಾಕಾವಸ್ಥೆಯಿಂದ ನಿರ್ವಿಕಲ್ಪವೂ ನಿಜನಿರ್ವಾಣರೂಪವೂ ಆದ ಅದ್ವೈತಭಕ್ತಿ ಸಿದ್ಧಿಯನ್ನು ಪಡೆಯಬೇಕು. ತಾದೃಶನಿರ್ವಿಕಲ್ಪಭಕ್ತಿಯೇ ಮುಕ್ತಿಗಿಂತಲೂ ಉತ್ಕೃಷ್ಟವಾದುದೆಂದು ಪೂರ್ವಾಚಾರ್ಯರಿಂದಲೂ ಶಿವಶರಣರಿಂದಲೂ ಉಪದಿಷ್ಟವಾಗಿಯೂ ಆಚರಿತವಾಗಿಯೂ ಬಂದಿರುವುದು. ಆದರಿಂದಲೇ ಶ್ರೀಮುಗ್ಗೆಯ ಮಾಯಿದೇವಪ್ರಭುಗಳು ಅನುಭವಸೂತ್ರದಲ್ಲಿ

ಶ್ಲೋ॥ ಜ್ಞಾನಾದೇವಹಿಮೋಕ್ಷಸ್ಸ್ಯಾನ್ಮೋಕ್ಷಾದುಪರಿಶಾಂಭವೀ ।
ಭಕ್ತಿರ್ಗುರುತರಾಭಾತಿಸ್ವತಂತ್ರಾ ನಿಜಲೀಲಯಾ ॥

ಎಂಬುದಾಗಿ ಮೋಕ್ಷಕ್ಕಿಂತಲೂ ಭಕ್ತಿಯು ಮಿಗಿಲಾದುದೆಂದೂ, ಇದು ಪಂಚಮಪುರುಷಾರ್ಥವೆಂದೂ ಹೇಳಿರುವರು. ಇಂತಹ ಭಕ್ತಿಭಾವವೂ ಅದ್ವೈತಾದಿಮತ ನಿರಸನವೂ ಇವರುಗಳ ಗ್ರಂಥದಲ್ಲಿ ಸಂದರ್ಭೋಚಿತವಾಗಿ ಹಲವು

ಕಡೆ ಹೇಳಲ್ಪಟ್ಟಿರುವವು. ಒಂದೆರಡು ಉದಾಹರಣೆಗಳನ್ನು ಕೊಡುತ್ತೇವೆ—ಈ ಗ್ರಂಥದ ೫ನೆಯ ಪ್ರಕರಣದ ೧ನೆ ಅಧ್ಯಾಯದಲ್ಲಿ ಶಿಲಾದಮಹರ್ಷಿಯು ತಪಸ್ಸಿನಮೂಲಕ ಶಿವನನ್ನು ಮೆಚ್ಚಿಸಿ ಪುತ್ರವರ ಪ್ರಾರ್ಥನೆಯನ್ನು ಮಾಡುವಾಗ್ಗೆ

ಶ್ಲೋ || ಶಿವ ತ್ವಯಾದೀಯಮಾನಸ್ತು ತ್ರೀಷ್ವೇಕೋಪಿವಾ ತ್ರಿಷು |
ಅದ್ವೈತಬುದ್ಧಿಸ್ಸತಕಂ ಭವ ತ್ವದ್ಭಕ್ತಿವರ್ಜಿತಃ
ಜಾಯತೇಯದಿ ತಂಹನ್ಮಿ ನಿಷೇಧತಿ ಭವತ್ಯಪಿ ||

ಎಂದರೆ—ಶಿವನೆ, ನೀನು ಅನುಗ್ರಹಿಸುವ ಮೂವರು ಮಕ್ಕಳಲ್ಲಿ ಯಾವನೊಬ್ಬನಾದರೂ ನಿನ್ನ ಪದಭಕ್ತಿಯನ್ನು ಬಿಟ್ಟು ಅದ್ವೈತಬುದ್ಧಿ ಸಂಪನ್ನನಾಗಿದ್ದುದೇ ಆದರೆ, ನೀನು ಅಡ್ಡಿಮಾಡಿದರೂ ಅಂಥ ಮಗನನ್ನು ಕೊಂದುಬಿಡುತ್ತೇನೆ ಎಂಬುದಾಗಿಯೂ, ಅದರ ಮುಂದೆ ಅದೇ ಅಧ್ಯಾಯದಲ್ಲಿ ಪರ್ವತಮುನಿಯು ಶಿವನನ್ನು ಪ್ರಾರ್ಥಿಸುವಾಗ್ಗೆ

ಶ್ಲೋ|| ತ್ವದ್ದಾಸೋಹಮಿತಿಪ್ರಜ್ಞಾಂ ದತ್ವಾಜಾದ್ವೈತವಾರಿಧೌ |
ಅಮಜ್ಜಯಿತ್ವಾ ಸದ್ಭಕ್ತಿಂ ದೇಹಿಮೇ ಪರಮೇಶ್ವರ ||

ಎಂದರೆ—ಎಲೈ ಶಂಕರನೆ! ಅದ್ವೈತವೆಂಬ ಸಮುದ್ರದಲ್ಲಿ ನನ್ನನ್ನು ಮುಳುಗಿಸದೆ, ನಿನಗೆ ನಾನು ಭೃತ್ಯನೆಂಬ ಭಾವನೆಯನ್ನು ಕೊಟ್ಟು, ನಿನ್ನ ಭಕ್ತಿಯನ್ನಿತ್ತು ಕಾಪಾಡು ಎಂಬುದಾಗಿಯೂ, ಇವುಗಳ ಮೂಲಕ ಕೇವಲಾದ್ವೈತ ನಿಷೇಧವನ್ನು ಸುಸ್ಪಷ್ಟವಾಗಿ ನಿರೂಪಿಸಿರುವರು. ಮಲ್ಲಿಕಾರ್ಜುನ ಪಂಡಿತಾರಾಧ್ಯರು ಕೂಡ ತಮ್ಮ "ಶಿವತತ್ವಸಾರ" ಎಂಬ ಆಂಧ್ರಗ್ರಂಥದಲ್ಲಿ ಹೀಗೆಯೇ ಅದ್ವೈತ ನಿರಸನವನ್ನು ಮಾಡಿರುವರು. ಉದಾಹರಣೆ—

ಕಂ|| ತನಕಂಟೆವೇರೆಯೀಶ್ವರು | ಡನಲೇಡನಿಪಲುಕುನಟ್ಟಿಯದ್ವೈತವಿಮೂ ||
ಢುನಕುನು ಲೋಕಾಯತುನಕು|ವಿನಗಾಭೇದಂಬುಗಲದೆವಿಬುಧವರೇಣ್ಯಾ||
ಆರಾಧ್ಯುಂಡಾರಾಧಕು | ಡಾರಾಧನಮನಗಲೇನಿಯದ್ವೈತದುರಾ ||
ಚಾರಕೃತಸರ್ವಶೂನ್ಯಾ|ಕಾರಸ್ಥಿತಿನೇಮಿನೇಯುಗಾವಜ್ಞು ಶಿವಾ|| ಇತ್ಯಾದಿ

ಈ ಪಂಡಿತಾರಾಧ್ಯರಿಂದ ಅಲಂಕೃತವಾಗಿದ್ದ ಮಠಾಚಾರ್ಯ ಪೀಠವು ಶ್ರೀಶೈಲದಲ್ಲಿ ಸುಪ್ರಸಿದ್ಧವಾಗಿ ಅತ್ಯಂತ ಆರಾಧ್ಯ ತೇಜೋಭೂಯಿಷ್ಠವಾಗಿ ವಿರಾಜಿಸುತ್ತಿದ್ದಿತು. ಆ ಪೀಠಮಠವು ಶ್ರೀಮಲ್ಲಿಕಾರ್ಜುನಸ್ವಾಮಿ ಭ್ರಮರಾಂಬಿಕೆಯರ ದೇವಾಲಯಗಳೆರಡರ ಮಧ್ಯದಲ್ಲಿ ಈಗಲೂ ಇದೆ. ಕಲ್ಯಾಣದಲ್ಲಿ ಬಸವೇಶ ಚೆನ್ನಬಸವೇಶಾದಿ ಪ್ರಮಥರುಗಳು ಮುಕ್ತರಾದಬಳಿಕ ಉಳಿದ ಚರಪತಿಗ

ಳು ದಕ್ಷಿಣಾದಿ ದೇಶಗಳಿಗೆ ತೆರಳಿ ಬಂದರು. ಅವರೊಳಗೆ ರುದ್ರಮುನಿಸ್ವಾಮಿಯವರು ತಮ್ಮ ಶಿಷ್ಯರಾದ ಮುಕ್ತಿಮುನಿಯವರನ್ನು ಶಿವಮತ ಪರಿಪಾಲನೆಗಾಗಿ ದೇಶಗಳ ಮೇಲೆ ಕಳುಹಿಸಲು, ಅವರು ಸಂಚರಿಸಿಕೊಂಡು ಶ್ರೀಶೈಲ ಸಿಹ್ಮಾಸನಕ್ಕೆ ಬಂದು ನಿಂತು ಶಿಕ್ಷಾರಕ್ಷೆಯಮೂಲಕ ಮತ ಪರಿಪಾಲನೆ ಮಾಡಿದರೆಂದು ವಿರೂಪಾಕ್ಷ ಪಂಡಿತರು ತಮ್ಮ ಚೆನ್ನಬಸವ ಪುರಾಣದಲ್ಲಿ ಹೇಳಿರುವ

ಬಂದನಿಬ ರತಿಗೋಷ್ಠದಿಂದಿರುತೆ ರುದ್ರಮುನಿ | ತಂದೆ ತನ್ನಯ ಶಿಷ್ಯ ಮುಕ್ತಿಮುನಿಯೊಡನೆ ನೀ | ನಿಂದ್ಯೈದಿ ಸಕಲದೇಶಂಗಳಂ ಚರಿಸುತುಂ ದುಷ್ಟಪರವಾದಿಗಳಸು || ಕೊಂದು ಶರಣರ ಪೊರೆವು ದೆಂದುಸಿರಿ ಕಳುಹಲಾ | ನಂದದಿಂ ದಖಿಳದೇಶಂಗಳಂ ಚರಿಸಿ ತಾಂ | ನಿಂದು ಸಿರಿಗಿರಿಯ ಸಿಹ್ಮಾಸನದಿ ಸಕಲ ಸದ್ಭಕ್ತರಂ ಸಾಲಿಸುವಸು || ಇರುತಲ್ಯೆವತ್ತಾರುದೇಶಕ್ಕೆ ತಾವು ಸ | ದ್ವರಗಣಾಚಾರಿಗಳ ಕಳುಹಿ ತಮ್ಮಾಜ್ಞೆಯಿಂ | ದಿರದೆ ವಿಾರಿದರ ಕೈಯಿಂ ದಲಪರಾಧಕಾಣ್ಕೆಗಳ ತಾವ್ ತರಿಸಿಕೊಳುತೆ ||

ಎಂಬುದಾಗಿರುವ ಪದ್ಯಗಳಿಂದ ಗೊತ್ತಾಗುತ್ತದೆ. ಹೀಗೆ ಸಾವಿರಾರು ವರ್ಷಗಳ ಹಿಂದಣಿಂದಲೂ ಶ್ರೀಶೈಲಕ್ಷೇತ್ರದಲ್ಲಿ ಲಿಂಗಧಾರಿಗಳಾದ ವೀರಶೈವರ ಮತಾಚಾರ್ಯಪೀಠವು ಅಧಿಕಾರ ವೈಭವಯುಕ್ತವಾಗಿ ನಡೆದುಕೊಂಡು ಬಂದಿತಲ್ಲದೆ, ಅದೇ ಕ್ಷೇತ್ರದಲ್ಲಿ ಆಗ್ಗೆ ನಂದಸಮಠ, ಘಂಟಾಮಠ, ಮೂಲೆಮಠ, ತೀರ್ಥಮಠ, ಸಾರಂಗಮಠ ಇತ್ಯಾದಿ ನಾಮಗಳಿಂದ ಇನ್ನೂ ಅನೇಕ ಮಠಗಳಿದ್ದುವು. ಶ್ರೀ ಪರ್ವತಪೀಠಾಧಿಪತಿಗಳು ತಮ್ಮ ಆಜ್ಞಾಧಾರಕರಾದ ಗಣಾಚಾರಿಗಳನ್ನು ಮತರಕ್ಷಣೆಗಾಗಿ ನಿಯಮಿಸಿ ದೇಶದೇಶಗಳಿಗೆ ಕಳುಹಿಸಿದರು ಶ್ರೀಗಿರಿಯ ಮಲ್ಲಿಕಾರ್ಜುನೇಶ್ವರ ದೇವಾಲಯದ ಮೇಲಣ ಧರ್ಮಕರ್ತೃತ್ವವೂ, ಆ ದೇವಾಲಯದ ಮೇಲಣ ಯಾವದ್ವಿಶಿಷ್ಟಾಧಿಕಾರಪದವಿಗಳೂ ಈ ಪೀಠಕ್ಕೆ ಅನೂಚಾನವಾಗಿ ಬಂದಿವೆ. ಈ ವಿಷಯವನ್ನು ಮದ್ರಾಸು ಮುಖ್ಯನ್ಯಾಯಸ್ಥಾನದವರೂ ಒಪ್ಪಿ ತೀರ್ಮಾನಿಸಿದ್ದಾರೆ. ಮುಕ್ತಿಮುನಿಸ್ವಾಮಿಗಳಿಂದೀಚೆಗೆ ಈ ಪೀಠವನ್ನಲಂಕರಿಸಿದ ಆಚಾರ್ಯರುಗಳಲ್ಲಿ ಅರುಣಾಚಲಸ್ವಾಮಿಗಳು, ಅಜಾತ ಭಿಕ್ಷಾವರ್ತಿಗಳು, ಭೇರುಂಡಭಿಕ್ಷಾವರ್ತಿಗಳು, ವೀರಭಿಕ್ಷಾವರ್ತಿ ಶಿವಾಚಾರ್ಯರು, ಮುಮ್ಮಡಿ ಶಾಂತಭಿಕ್ಷಾವರ್ತಿ ಶಿವಾಚಾರ್ಯರು, ಮಾರ್ತಾಂಡಭಿಕ್ಷಾವರ್ತಿ

ಶಿವಾಚಾರ್ಯರು ಮೊದಲಾದವರನೇಕರು ವಿದ್ಯಾವೈದುಷ್ಯದಿಂದಲೂ, ತಪಃ
ಪ್ರಭಾವದಿಂದಲೂ, ಅಧಿಕಾರ ತೇಜಸ್ಸಿನಿಂದಲೂ ವಿಖ್ಯಾತರಾಗಿ, ಅನೇಕ ರಾಜಾ
ಧಿರಾಜರುಗಳಿಂದಲೂ, ಮೈಸೂರು ಮಹಾರಾಜ ವಂಶೀಯರಿಂದಲೂ, ಪರ್ವ
ತದ ಸುಲ್ತಾನರು ನವಾಬರುಗಳಿಂದಲೂ ಸಹ ಸತ್ಕಾರಿತರಾಗಿ ಜಹಗೀರು ಮೊ
ದಲಾದುವುಗಳನ್ನು ಪಡೆದು, ವೈಭವಸಂಪನ್ನರಾಗಿ, ಮತರಕ್ಷಣೆಯನ್ನು ಮಾಡಿ
ಕೊಂಡು ಬಂದಿರುವ ಸಂಗತಿಯು ಲಿಪಿಶಾಧಾರಗಳಿಂದ ಗೊತ್ತಾಗುತ್ತದೆ. ಸ್ವ
ಮತದವರೇ ಅಲ್ಲದೆ ಶ್ರೀಶೈಲದ ಸುತ್ತಿನ ಮತ್ತೂ ದೂರದ ನಾಡುಗಳ ಪರಮ
ದವರೆಲ್ಲಾ ಈ ಪೀಠಕ್ಕೆ ಶಿಷ್ಯರಾಗಿ ಬಂದಿರುವರು. ರಡ್ಡಿಜನರು ಈ ಪೀಠಕ್ಕೂ
ಮಲ್ಲಿಕಾರ್ಜುನಸ್ವಾಮಿಗೂ ಪರಮ ಶಿಷ್ಯರು. ಮತ್ತು ಭಕ್ತರು. ಇವರಲ್ಲಿ ಒಬ್ಬಾ
ಕೆಯಾದ ಹೇಮರಡ್ಡಿ ಮಲ್ಲಮ್ಮನೆಂಬ ಶರಣೆಯು ತನ್ನ ಭಕ್ತಿಸಿದ್ಧಿಯಿಂದ ಮಳ
ಲನ್ನು ಬಿತ್ತಿ ಸುವರ್ಣವನ್ನು ಬೆಳೆದು ಶ್ರೀಮಲ್ಲಿಕಾರ್ಜುನ ದೇವಾಲಯಕ್ಕೆ ಭಂ
ಗಾರದ ತಗಡಿನ ಹೊದ್ದಿಕೆಯನ್ನು ಹಾಕಿಸಿ ಆ ಕ್ಷೇತ್ರದಲ್ಲಿ ಯಾತ್ರಾರ್ಥಿಗಳ
ಸೌಕರ್ಯಕ್ಕಾಗಿ ಹಲವು ಏರ್ಪಾಟುಗಳನ್ನು ಮಾಡಿಸಿ, ಶಾಶ್ವತ ಪುಣ್ಯಕೀರ್ತಿ
ಗಳನ್ನು ಪಡೆದಳು.

ಒಂದಾನೊಂದು ಕಾಲದಲ್ಲಿ ಶಿವಭಕ್ತಿಗೆ ಜನ್ಮಭೂಮಿಯಾಗಿ, ಸಕಲ ದಿಕ್ತ
ಟಗಳಿಗೂ ಶಿವಭಕ್ತಿಲಹರಿಯನ್ನು ಹರಿಯಿಸುತ್ತಿದ್ದು, ಸುವರ್ಣ ಶಿಖರ ಪ್ರಾಸಾ
ದಾದಿಗಳಿಂದ ಮೆರೆಯುತ್ತ, ದೇಶೈಕವಿಖ್ಯಾತವಾಗಿದ್ದ ಮತ್ತು ಪುರಾಣಾಗಮೇ
ತಿಹಾಸಗಳಲ್ಲೆಲ್ಲಾ ಹೊಗಳಲ್ಪಟ್ಟ ಮಹತ್ವವುಳ್ಳುದಾಗಿದ್ದ, ಹುಯೆನ್ ಚಾಂಗ್
ಮೊದಲಾದ ವಿದೇಶೀಯ ಪ್ರವಾಸಿಗಳನೇಕರಿಂದ ಸಾಶ್ಚರ್ಯವಾಗಿ ವರ್ಣಿತವಾದ
ಪ್ರಾಶಸ್ತ್ಯವುಳ್ಳುದಾಗಿದ್ದ ಶ್ರೀಶೈಲದ ಆಧಿಕ್ಯವು ಕಾಲಚಕ್ರದ ತೀಕ್ಷ್ಣಧಾರೆಗೆ
ಸಿಕ್ಕಿ ಹ್ರಾಸಗೊಳ್ಳುತ್ತಿರುವಂತೆಯೇ ಅಲ್ಲಿರುವ ಪ್ರಾಚೀನ ವೀರಶೈವ ಪೀಠದ
ಪ್ರಭಾವವಾದರೂ ಕ್ಷೀಣಿಸುತ್ತ ಬಂದುದರಲ್ಲಿ ಆಶ್ಚರ್ಯವಿಲ್ಲ. ಮೊಗಲರ ಪ್ರಾಬ
ಲ್ಯದಲ್ಲಿ ಶ್ರೀಪ್ರಸನ್ನ ಭಿಕ್ಷಾವರ್ತಿ ಶಿವಾಚಾರ್ಯ ಸ್ವಾಮಿಗಳ ಕಾಲಕ್ಕೆ ಅವರು
ಶ್ರೀಶೈಲವನ್ನು ಬಿಟ್ಟು ಕರ್ನೂಲ್ ಜಿಲ್ಲೆಗೆ ಸೇರಿದ ಆತ್ಮಕೂರು ಎಂಬ ಸ್ಥಲದಲ್ಲಿ
ಮಠವನ್ನು ಕಟ್ಟಿಸಿ, ಅಲ್ಲೇ ನಿಂತು, ವರ್ಷಕ್ಕೊಂದುಸಲ ಶ್ರೀಶೈಲಕ್ಕೆ ಹೋಗಿ,
ಮಹೋತ್ಸವಾದಿಗಳ ಮೇಲ್ವಿಚಾರಣೆಯ ಧರ್ಮಕರ್ತೃತ್ವವನ್ನು ನಿರ್ವಹಿಸಿಕೊಂ
ಡು ಬರುವಂತೆ ಏರ್ಪಡಿಸಿದರು. ಈಗಣ ಈ ಪೀಠಾಧಿಪತಿಗಳು ಗುತ್ತಿ ತಾ||
ಗುಂತಕಲ್ಲು ಎಂಬ ಸ್ಥಲದಲ್ಲಿ ಸ್ಥಾಪಿತವಾಗಿರುವ ಮಠದಲ್ಲಿ ನೆಲಸಿದ್ದಾರೆ. ಈ

ಜಗದ್ಗುರು ಪಂಡಿತಾಚಾರ್ಯಪೀಠದ ಸ್ಥಿರಪಟ್ಟಾಧ್ಯಕ್ಷತೆಯಲ್ಲಿ ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವರ್ತಿ ರಾಜದೇಶಿಕೇಂದ್ರ ಮಹಾಸ್ವಾಮಿಗಳೂ, ಚರಪಟ್ಟಾಧ್ಯಕ್ಷತೆಯಲ್ಲಿ ಶ್ರೀ ಜಗದ್ಗುರು ವೀರಭಿಕ್ಷಾವರ್ತಿ ರಾಜದೇಶಿಕೇಂದ್ರ ಮಹಾಸ್ವಾಮಿಗಳೂ ಈಗ ವಿರಾಜಿಸಿದ್ದಾರೆ. ಹಾನಿವೃದ್ಧಿಗಳು ರಾತ್ರಿ ಹಗಲುಗಳಂತೆ ಒಂದರಹಿಂದೊಂದು ಬರುವುದು ಸಹಜವಾಗಿರುವುದರಿಂದ, ಕ್ಷೀಣವೈಭವದಲ್ಲಿರುವ ಈ ಪೀಠವು ಶ್ರೀ ಜಗದೀಶನ ಕೃಪೆಯಿಂದಲೂ, ಪೀಠಾಧಿಪತಿಗಳ ತಪಃಪ್ರಭಾವದಿಂದಲೂ, ಭಕ್ತಮಂಡಲಿಯ ಅಭಿಮಾನಾತಿಶಯದಿಂದಲೂ ತನ್ನ ಪ್ರಾಚೀನ ಯಶೋವೈಭವವನ್ನು ಮರಳಿ ಪಡೆದುಕೊಂಡು ವಿರಾಜಿಸುವಂತಾಗಲಿ.

ರೌದ್ರಿ ಮಾಘಶುದ್ಧ ೧೩ }
ಮೈಸೂರು. }

ಯಮ್. ಆರ್. ಕರಿಬಸವಶಾಸ್ತ್ರಿ,
ಪ್ರಕಾಶಕ.



ಶ್ರೀಶೈಲಪಂಡಿತಾರಾಧ್ಯ ಪೀಠಾಸೀನಶ್ಚರಾಧಿಪಃ ।
ಸೋಽಯಂವಿರಾಜತೇ ವೀರಭಿಕ್ಷಾವರ್ತಿ ಮಹಾಗುರುಃ ॥

ಕ್ರೌನ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

# ವಿಷಯಸೂಚಿಕೆ.

## (ದೀಕ್ಷಾಪ್ರಕರಣಂ)



## ಪುರಾತನಪ್ರಕರಣಂ.

ವಾದಪ್ರಕರಣಂ.



ಮಹಿಮಪ್ರಕರಣಂ.

---

## ಪರ್ವತ ಪ್ರಕರಣಂ.

ಓಂ.

ಶ್ರೀಗುರು ದಕ್ಷಿಣಾಮೂರ್ತಯೇನಮಃ.

# ಪಂಡಿತಾರಾಧ್ಯಚರಿತಂ.

## ದೀಕ್ಷಾಪ್ರಕರಣಂ.

ಶ್ರೀಲಿಂಗರೂಪಂ ವೇದಾನಾಂಕರ್ತಾರಂ ಚಿತ್ಕ್ರಿಯಾತ್ಮಕಂ । ಜಗತ್ಪತಿಂ ಚೆನ್ನಮಲ್ಲಿಕಾರ್ಜುನಂ ಪ್ರಣಮಾಮ್ಯಹಂ ॥೧॥ ಅಷ್ಟಾದಶಾನಾಮೇತಾಸಾಂವಿದ್ಯಾನಾಂ ಭಿನ್ನವರ್ತ್ಮನಾಂ । ಆದಿಕರ್ತಾ ಕವಿಸ್ಸಾಕ್ಷಾ ಚ್ಛೂಲ

---

ಶ್ರೀಃ.

## ಭಾ ವ ಮಂ ಜ ರಿ.

ಕಂ॥ ಮಂಗಳಮ ನೀಗೆ ವೃಷಭಕೇತು ।
ರಂಗಂ ಗುರುಲಿಂಗಜಂಗಮಾಂಗಂ ಕರುಣಾ ॥
ಪಾಂಗಂ ಭಸಿತಾಭ್ಯಂಗಂ ।
ಗಾಂಗೆಪರಂಗೋತ್ತಮಾಂಗ ನಾಶಿವಲಿಂಗಂ ॥

## ಮಂಗಳಾಚರಣವು.

ಶ್ರೀಮನ್ನಿಖಿಲಭುವನಜನನವಿಲೀನಸ್ಥಾನ ಮಹಾಲಿಂಗಸ್ವರೂಪನಾಗಿಯೂ, ಚತುರ್ವೇದಪ್ರತಿಪಾದ್ಯನಾಗಿಯೂ, ಜ್ಞಾನಕ್ರಿಯಾಸ್ವರೂಪನಾಗಿಯೂ, ಜಗದೇಕಸ್ವಾಮಿಯಾಗಿಯೂ, ಇರುವ ಶ್ರೀಚೆನ್ನಮಲ್ಲಿಕಾರ್ಜುನೇಶ್ವರನನ್ನು ನಮಸ್ಕರಿಸುವೆನು. ॥೧॥ ಋಕ್, ಯಜುಸ್ಸು, ಸಾಮ, ಅಥರ್ವಣವೆಂಬ ನಾಲ್ಕು ವೇದಗಳು; ಆಯುರ್ವೇದ, ಅರ್ಥವೇದ, ಧನುರ್ವೇದ, ಗಾಂಧರ್ವವೇದವೆಂಬ ಉಪಚತುರ್ವೇದಗಳು; ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತಿ, ಜ್ಯೋತಿಷ, ಕಲ್ಪವೆಂಬ ವೇದಷಡಂಗಗಳು; ಮೀಮಾಂಸ, ನ್ಯಾಯ, ಧರ್ಮಶಾಸ್ತ್ರ, ಪುರಾಣ, ವೆಂಬ ಈ ೧೮ ತೆರದ ವಿದ್ಯೆಗಳಿಗೆಲ್ಲ ಪರಶಿವನೇ ರಚಯಿತೃವಾಗಿ ಮೂಲಕರ್ತನಾಗಿರುವನೆಂದು ವೇದವು ಸಾರುತ್ತಿರುವುದು. ಅದುಕಾರಣ, ಗ್ರಂಥಾದಿಯಲ್ಲಿ

ಪ್ರಾಣಿ ರಿತಿ ಶ್ರುತಿಃ ॥ ೨॥ ಮಲಧ್ವಾಂತಾವೃತದೃಶೋ ಭ್ರಮತೋಭವಕಾನನೇ । ದರ್ಶಿತೋಯೇನಸನ್ಮಾರ್ಗಸ್ತಸ್ಮೈ ಶ್ರೀಗುರವೇನಮಃ ॥ ೩॥ ಪ್ರಾಣಲಿಂಗೈಕ್ಯವಿಜ್ಞಾನರಹಸ್ಯಂ ಯೇನದರ್ಶಿತಂ । ಜಗದ್ಧಿತಾರ್ಥಂ ತಸ್ಮೈನಮತ್ಪ್ರಭವೇಪ್ರಭವೇನಮಃ ॥ ೪ ॥ ಕೃಪಯಾಶಿವಸದ್ಭಕ್ತಿರ್ಭುವಿಯೇನ ಪ್ರಕಾಶಿತಾ। ದ್ವಿತೀಯಶಂಭುಂ ಭಕ್ತ್ಯಾತಂ ನಮಾಮಿ ಬಸವೇಶ್ವರಂ ॥೫॥ ದರ್ಶಿತಂ ಷಟ್ಸ್ಥಲಜ್ಞಾನಂ ಶಿವತ್ವಪ್ರತಿಪಾದಕಂ । ಯೇನತಸ್ಮೈನಮಶ್ಚೆನ್ನಬಸವಾಯಕರೋಮ್ಯಹಂ॥ ೬॥ ಶ್ರೀನಂದಿಕೇಶ ಭೃಂಗೀಶ ವೀರಭದ್ರಾದಿಕಾನಹಂ । ನಮಾಮಿ ಪ್ರಮಥಾಧೀಶಾಂ ತ್ಸಮಸ್ತಾನಮಿತೌಜಸಃ॥ ೭॥ ಜ್ಞಾನವೈರಾಗ್ಯಸಂಪನ್ನಾನ್ರುದ್ರತುಲ್ಯಪರಾಕ್ರಮಾನ್ । ಅಸಂಖ್ಯಾತಾನ್ರುದ್ರಗಣಾನ್ನಮಾಮಿ ಪ್ರೀತಿಪೂರ್ವಕಂ ॥ ೮॥ ನಿರ್ವಂಚಕೇಭ್ಯಃ ಪ್ರಾಣಾದಾನಿಸ್ಪೃಹೇಭ್ಯಃ ಫಲೇಪುನಃ । ಮಹಾಭಕ್ತಗಣೇಭ್ಯೋಹಂ ನಮಸ್ಕುರ್ವೇತಿಭಕ್ತಿತಃ ॥ ೯॥ ಬಸವೇಶಾಯಾಪಿದದೌಯಃ ಪ್ರಾಣಾನ್ಭಕ್ತಿವೈಭವಾತ್ । ತಂ ಮಾಚಿದೇವಂ

---

ಸರ್ವವಿದ್ಯಾಮೂಲಪುರುಷನಾದ ಆ ಪರಶಿವನನ್ನು ಪ್ರತ್ಯೇಕ ಅಭಿವಂದಿಸುವೆನು. ॥೨॥ ಆಣವ ಮಾಯಾ ಕಾರ್ಮಿಕ ಮಲಗಳೆಂಬ ಕತ್ತಲೆಯಿಂದ ಕಂಗೆಟ್ಟು ಜನನಮರಣಾತ್ಮಕ ಸಂಸಾರಮಹಾರಣ್ಯದಲ್ಲಿ ಸುತ್ತುತ್ತಿದ್ದ ನನಗೆ ಯಾರಿಂದ ಸನ್ಮಾರ್ಗವು ತೋರಿಸಲ್ಪಟ್ಟಿತೋ ಅಂಥ ಶ್ರೀಗುರುಮೂರ್ತಿಗೆ ನಮಸ್ಕರಿಸುವೆನು. ॥೩॥ ಲಿಂಗಾಂಗಸಾಮರಸ್ಯಪರಿಜ್ಞಾನದ ಮರ್ಮವನ್ನು ಲೋಕಹಿತಾರ್ಥವಾಗಿ ಪ್ರಕಾಶಪಡಿಸಿದ ನನ್ನ ಸ್ವಾಮಿಯಾದ ಅಲ್ಲಮಪ್ರಭುವಿಗೆ ಪೊಡಮಡುವೆನು. ॥೪॥ ಜಗತ್ತನ್ನುದ್ಧರಿಸುವ ಮಹಾಕೃಪೆಯಿಂದ ಭೂಮಿಯಲ್ಲವತರಿಸಿ ಶಿವಭಕ್ತಿಯನ್ನು ಪ್ರಕಾಶಗೊಳಿಸಿದ ದ್ವಿತೀಯಶಂಭುವಾದ ಬಸವೇಶ್ವರನನ್ನು ಭಕ್ತಿಯಿಂದಭಿವಂದಿಸುವೆನು. ॥೫॥ ಲಿಂಗಾಂಗಸಾಮರಸ್ಯಬೋಧಕವಾದ ಷಟ್ಸ್ಥಲತತ್ತ್ವರಹಸ್ಯವನ್ನು ಜಗತ್ತಿಗೆ ಬಿತ್ತರಿಸಿದ ಚೆನ್ನಬಸವೇಶನನ್ನು ನಮಸ್ಕರಿಸುವೆನು. ॥೬॥ ನಂದೀಶ, ಭೃಂಗೀಶ, ವೀರೇಶ ಮೊದಲಾದ ಮಹಾಸತ್ವಶಾಲಿಗಳಾದ ಪ್ರಮಥಾಧಿಪತಿಗಳನ್ನೆಲ್ಲ ವಂದಿಸುವೆನು. ॥೭॥ ಜ್ಞಾನ ವೈರಾಗ್ಯ ಸಂಪೂರ್ಣರಾಗಿಯೂ, ರುದ್ರಸಮಾನ ಪರಾಕ್ರಮಶಾಲಿಗಳಾಗಿಯೂ ಇರುವ ಅಪರಿಮಿತರಾದ ರುದ್ರಗಣರನ್ನು ವಿಶ್ವಾಸದಿಂದಭಿವಂದಿಸುವೆನು. ॥೮॥ ದೇಹಪ್ರಾಣಾದಿಗಳನ್ನು ಶಿವನಿಗೆ ಸಮರ್ಪಿಸುವುದರಲ್ಲಿ ವಂಚಿಸದವರಾಗಿಯೂ, ಫಲಪ್ರಾಪ್ತಿಯಲ್ಲಿ ಆಸೆಯಿಲ್ಲದವರಾಗಿಯೂ ಮೆರೆದ ಮಹಾಭಕ್ತಗಣರನ್ನು ಅತ್ಯಂತ ಭಕ್ತಿಯಿಂದ ನಮಿಸುವೆನು. ॥೯॥ ಭಕ್ತಿವೈಭವದಿಂದ ಅಳಿದುಹೋಗಿದ್ದ ಬಸವೇಶ್ವರನ ಪ್ರಾಣವನ್ನು ಕೂಡ ದಾನಮಾಡಿದ ಮಡಿವಾಳಮಾಚಿದೇವನನ್ನು ಹಲವುಬಾರಿ ನ

ಮಹಿತಂ ಶತಕೃತ್ವೋನಮಾಮ್ಯಹಂ ॥೧೦॥ ಯಃಪುತ್ರವಚಸಾಪ್ರೀತಃ ಪಿತ್ರೇ
ಪ್ರಾಣಾನ್ದದೌಗುರುಃ। ತಸ್ಯಶ್ರೀಮಾದಿರಾಜಸ್ಯಕುರ್ವೇಹಂ ಪ್ರಣತಿಂಮುದಾ
॥೧೧॥ ಸ್ವರ್ಣಂಕೃತ್ವಾಕಾಷ್ಠಭಾರಂ ಭಕ್ತೃವೃಂದಾಯಯೋದದೌ।
ತಸ್ಮೈಮೋಳಿಗಮಾರಾಯ ಸಾಕ್ಷಾನ್ಮಾರಾರಯೇನಮಃ॥೧೨॥ ಅಪಾದಯ
ಚ್ಛಿವಂಸಾಕ್ಷಿವಚನಂ ಯಸ್ಸಭಕ್ತಿತಃ। ಆಶ್ರಿತಾಭಯದಾಯಾಸ್ಮೈ ಕಿನ್ನರ
ಬ್ರಹ್ಮಣೇನಮಃ ॥೧೩॥ ಅರ್ಚಯನ್ಯೇಪೂರ್ವಮೀಶಮಿದಾನೀಮರ್ಚಯಂತಿ
ಯೇ। ಯೇಗ್ರೇರ್ಚಯಿಷ್ಯಂತಿಭಕ್ತಾಸ್ತಾಂತ್ಸರ್ವಾನ್ಪ್ರಣಮಾಮ್ಯಹಂ॥೧೪॥

ಆಸೀಜ್ಜಗತಿವಿಖ್ಯಾತೋವೀರಶೈವಾಧ್ವದೇಶಿಕಃ। ಷಟ್ಸ್ಥಲಜ್ಞಾನನಿ
ರ್ಧೂತಸಾಂಸಾರಿಕಮಹಾಭ್ರಮಃ ॥೧೫॥ ಶ್ರೀಮತ್ಷಡಕ್ಷರೀಮಂತ್ರಪ
ರಿಶೀಲನತತ್ಪರಃ । ಶ್ರುತ್ಯಾಗಮಪುರಾಣೋಕ್ತಭೂತಿರುದ್ರಾಕ್ಷಭೂಷಣಃ
॥೧೬॥ ವೇದವ್ಯಾಖ್ಯಾನಚತುರಃ ಪುರಾಣೇಷುವಿಶಾರದಃ। ಕ್ರಿಯಾಪಾದೇ ಕು
ಶಲಧೀಶ್ಚರ್ಯಾಪಾದೇ ವಿಚಕ್ಷಣಃ॥ ೧೭॥ ಯೋಗಪಾದೇಯುಕ್ತಚಿತ್ತೋಜ್ಞಾನ

---

ಮಸ್ಕರಿಸುವೆನು. ॥೧೦॥ ಮಗನ ಮುದ್ದುಮಾತಿಗೆ ಮೆಚ್ಚಿ ಅವನ ತಂದೆಯಾದ ಚಿಕ್ಕ
ಮಾದಣ್ಣನ ಪ್ರಾಣವನ್ನು ಬರಮಾಡಿದ ಸಕಳೇಶ ಮಾದರಸಂಗೆ ಸಂತೋಷದಿಂದ ಪ್ರಣಾ
ಮವನ್ನು ಮಾಡುವೆನು. ॥೧೧॥ ಕಟ್ಟಿಗೆಯ ಹೊರೆಯನ್ನು ಚಿನ್ನವನ್ನು ಮಾಡಿ ಭಕ್ತರಿ
ಗೆ ದಾನಮಾಡಿದ ಪ್ರತ್ಯಕ್ಷ ಪರಶಿವನಾದ ಮೋಳಿಗೆಮಾರಯ್ಯನಿಗೆ ಪೊಡಮಡುವೆನು. ॥೧೨॥
ಮರೆಹೊಕ್ಕ ಪ್ರಾಣಿಗೆ ಅಭಯದಾನಮಾಡಿ ರಕ್ಷಿಸಿ, ಶಿವಲಿಂಗದಿಂದಲೇ ಸಾಕ್ಷ್ಯವನ್ನುಡಿಸಿ
ದ ಕಿನ್ನರಬ್ರಹ್ಮಯ್ಯನನ್ನಭಿವಂದಿಸುವೆನು. ॥೧೩॥ ಈಶ್ವರನನ್ನು ಯಾರು ಪೂರ್ವದಲ್ಲಿ ಅ
ರ್ಚಿಸಿದರೊ, ಈಗ ಯಾರು ಪೂಜಿಸುತ್ತಿರುವರೊ, ಮುಂದೆ ಯಾರು ಆರಾಧಿಸುವರೊ
ಅಂತಹ ಭಕ್ತರೆಲ್ಲರನ್ನೂ ನಮಸ್ಕರಿಸುವೆನು. ॥೧೪॥

ಹೀಗೆ ಗ್ರಂಥಕರ್ತನು ತಾನಾರಂಭಿಸಿದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಗೊ
ಳ್ಳುವುದಕ್ಕಾಗಿ ನಮಸ್ಕಾರಾತ್ಮಕವಾದ ಮಂಗಳವನ್ನು ಗ್ರಂಥಾದಿಯಲ್ಲಿ ಆಚರಿಸಿ, ಮುಂ
ದೆ ತನ್ನ ವಂಶಾನುಕ್ರಮವನ್ನು ವಿವರಿಸುವನು. ಹೇಗೆಂದರೆ—ಶ್ರೀಮತ್ಪಂಡಿತಾಚಾ
ರ್ಯವರ್ಯರ ಸಂಪ್ರದಾಯಾನುಗತನಾದ ಹುಲಿಯೂರ ನಿರಾಳಾರ್ಯನೆಂಬ ವೀರಶೈವ ಗುರುವ
ರ್ಯನು ಜಗದ್ವಿಖ್ಯಾತನಾಗಿದ್ದನು. ಆತನು, ಷಟ್ಸ್ಥಲಜ್ಞಾನಸಂಪತ್ತಿನಿಂದ ಸಂಸಾರ
ಭ್ರಾಂತಿಯನ್ನು ದೂರೀಕರಿಸಿದವನಾಗಿಯೂ, ಷಡಕ್ಷರೀಮಂತ್ರಾರ್ಥ ವಿಚಾರತತ್ಪರನಾ
ಗಿಯೂ, ಶ್ರುತ್ಯಾಗಮಪುರಾಣಾದಿ ವಿಹಿತವಾದ ವಿಭೂತಿ ರುದ್ರಾಕ್ಷಗಳನ್ನು ಧರಿಸಿದವ
ನಾಗಿಯೂ, ವೇದಾರ್ಥವಿಸ್ತರಣದಲ್ಲಿ ಪಂಡಿತನಾಗಿಯೂ, ಪುರಾಣಾರ್ಥವಿವೇಚನದಲ್ಲಿ ಸ
ಮರ್ಥನಾಗಿಯೂ, ಕ್ರಿಯಾ ಚರ್ಯಾ ಯೋಗ ಜ್ಞಾನವೆಂಬ ಪಾದಚತುಷ್ಟಯದ ಪರಿ

ಕ್ರೀಡನೋತ್ಸುಕಃ ॥೩೫॥ ವೀರಮಾಹೆಶ್ವರಪದವನಜಾಂಚಿತಮಾನಸಃ । ವೀರಮಾಹೇಶ್ವರಪದಪಾಂಸುಪೂತಾಳಿಕಸ್ಥಳಃ ॥೩೬॥ ವೀರಮಾಹೇಶ್ವ ರೋಚ್ಛಿಷ್ಟಪವಿತ್ರಿತಕಳೆಬರಃ । ವೀರಮಾಹೇಶ್ವರವರಶ್ರೀಪಾದೋತ್ತಂಸಮಸ್ತಕಃ ॥೩೭॥ ಶಿವಲಿಂಗಾರ್ಚನಾಸಕ್ತೋ ಗುರುಶುಶ್ರೂಷಣೇರತಃ । ಜಂಗಮಾನಾಂ ಕೃಪಾಪಾತ್ರಂ ಭವಿಪಾಕಪರಾಙ್ಮುಖಃ ॥೩೮॥ ಬಸವೇಶಪರಾಸಕ್ತಚಿತ್ತೋ ಬಸವಕಿಂಕರಃ । ಬಸವಾರಾಧ್ಯನಾಮಾಂಕಪರಿರಂಜಿತಪುತ್ರಕಃ ॥೩೯॥ ರಾಜೋ ಗುರೂಣಾಂಸರ್ವೇಷಾಂ ನಾಮವತ್ತ್ವೇನ ಸದ್ಗುರೋಃ । ಗುರುರಾಜಾರ್ಯನಾಮಾಸನ್ವರ್ತಮಾನೋಹಮಾದರಾತ್ ॥೪೦॥ ಸಾಕ್ಷಾತ್ಸೋಮೇನಸೋಮಾರ್ಧಜೂಟೇನ ಶುಭಮೂರ್ತಿನಾ । ಶ್ರೀಮತ್ಪಾಲ್ಕುರಿಕಿಸೋಮೇಶವ್ರತೀಂದ್ರೇಣಾತಿಭಕ್ತಿತಃ ॥೪೧॥ ಮದೀಯಪರಮಾರಾಧ್ಯಪಂಡಿತಾರಾಧ್ಯ ಸದ್ಗುರೋಃ । ಚರಿತಂ ಪಾವನಕರಂ ಶ್ರೋತೄಣಾಂ ಲೋಕವಿಶ್ರುತಂ ॥೪೨॥ ಭಾಷಯಾಂಧ್ರ್ಯಾವಿರಚಿತಂ ಲೋಕಾನಾಂ ಹಿತಕಾಂಕ್ಷಯಾ । ಆಂಧ್ರಭಾಷಾನಿರ್ಮಿತತ್ವಾಚ್ಚರಿತ್ರಮಿದಮುತ್ತಮಂ ॥೪೩॥ ಖ್ಯಾತಮಾಸೀದಾಂಧ್ರದೇಶಏವ ನಾನ್ಯತ್ರಕುತ್ರಚಿತ್ । ಸರ್ವಾಸಾಂ ದೇಶಭಾಷಾಣಾಂ ತತ್ತದ್ದೇಶೀಯಮಾನವೈಃ ॥೪೪॥ ಜ್ಞಾತತ್ವಾದಿತರೈ

---

ಣೆಯುಳ್ಳವನೂ, ವೀರಮಾಹೇಶ್ವರರ ಪ್ರಸಾದವನ್ನು ಸೇವಿಸುವುದರಿಂದ ಪವಿತ್ರವಾದ ಶರೀರವುಳ್ಳವನೂ, ವೀರಮಾಹೇಶ್ವರರ ಚರಣವೇ ತಲೆಗೆ ಕಿರೀಟವಾಗುಳ್ಳವನೂ, ಶಿವಲಿಂಗ ಪೂಜೆಯಲ್ಲಿ ಎಡೆಬಿಡದ ಮನಸ್ಸುಳ್ಳವನೂ, ಗುರುಸೇವಾನಿರತನೂ, ಜಂಗಮಕೃಪಾಪಾತ್ರನೂ, ಭವಿಗಳ ಪಾಕಕ್ಕೆ ಮನಸ್ಸಿಕ್ಕದವನೂ, ಬಸವೇಶ್ವರನಲ್ಲಿ ಅತ್ಯಾಸಕ್ತವಾದ ಮನಸ್ಸುಳ್ಳವನೂ, ಬಸವೇಶನ ಸೇವಕನೂ, ಬಸವಾರಾಧ್ಯನೆಂಬ ಮಗನನ್ನು ಪಡೆದವನೂ ಆದ ನಾನು, ಸಕಲ ಗುರುಗಳಿಗೂ ರಾಜನಾಗಿದ್ದ ಮದ್ಗುರುವಿನ ನಾಮವನ್ನೇ ಪಡೆದವನಾದುದರಿಂದ, "ಗುರುರಾಜ" ನೆಂಬ ಹೆಸರುಳ್ಳವನಾಗಿರುತಿದ್ದೆನು. ॥೩೫॥—॥೪೦॥ ಪ್ರತ್ಯಕ್ಷ ಪರಶಿವಮೂರ್ತಿಯೂ, ಪರಮಶೀಲಸಂಪನ್ನನೂ, ಆದ ಶ್ರೀಪಾಲ್ಕುರಿಕೆ ಸೋಮಾರಾಧ್ಯನು, ನನ್ನ ಪರಮಾಚಾರ್ಯರಾದ ಪಂಡಿತಾರಾಧ್ಯರ ಲೋಕಪ್ರಖ್ಯಾತವಾದ ಮತ್ತು ಕೇಳಿದವರನ್ನು ಪರಿಶುದ್ಧರನ್ನಾಗಿ ಮಾಡುವ ಚರಿತ್ರವನ್ನು ಲೋಕಹಿತಾರ್ಥವಾಗಿ ತೆನುಗಿನಲ್ಲಿ ವಿರಚಿಸಿದ್ದುದನ್ನು ನಾನು ನೋಡಿ, ಈ ಉತ್ತಮಚರಿತ್ರವು ಆಂಧ್ರಭಾಷೆಯಲ್ಲಿ ರಚಿತವಾಗಿರುವುದರಿಂದ, ಆ ದೇಶದಲ್ಲಿಮಾತ್ರವೇ ಪ್ರಖ್ಯಾತವಾಗಿರುವುದಲ್ಲದೆ ಅನ್ಯದೇಶದಲ್ಲಿಲ್ಲವೆಂತಲೂ, ಅದರಂತೆಯೇ ಇನ್ನಾವ ದೇಶಭಾಷೆಗಳಾದರೂ ಆಯಾ ದೇಶದ

ಸ್ಸರ್ವೈರಜ್ಞಾತತ್ವಾದ್ವಿಶೇಷತಃ । ತತ್ತದ್ದೇಶೀಯಭಾಷಾಭಿ ರ್ನಿರ್ಮಿತಂಕಾವ್ಯ ಮಪ್ಯಲಂ ॥೪೫॥ ತತ್ತದ್ದೇಶೀಯಮನುಜೈ ರ್ಜ್ಞಾಯತೇನಾನ್ಯದೇಶಿಭಿಃ । ತಸ್ಮಾದಸ್ಮತ್ಪಂಡಿತೇಂದ್ರಚರಿತಂ ಪಾವನಂಪರಂ ॥೪೬॥ ಖ್ಯಾತಂಸತ್ಸರ್ವ ದೇಶೇಷು ತತ್ರತ್ಯಮನುಜಾನ್ಯಥಾ । ಪವಿತ್ರಾನ್ಕುರುತೆ ತದ್ವತ್ಕರೋಮೀತಿ ಮನೀಷಯಾ ॥೪೭॥ ರಚಯಾಮಿ ಚರಿತ್ರಂ ತದೇನ ಸಂಸ್ಕೃತಭಾಷ ಯಾ । ಏತಸ್ಯಾಃಖಲುಭಾಷಾಯಾಃ ಖ್ಯಾತತ್ವಾತ್ಸರ್ವದೇಶತಃ ॥೪೮॥ ಶ್ರೀಮತ್ಪಾಲ್ಕುರ್ಕಿಸೋಮೇಶಗುರುಣಾ ಯೋರ್ಥ ಈರಿತಃ । ಸಏವಭ ಣ್ಯತೇತ್ರಾರ್ಥೋ ನಾನ್ಯಾರ್ಥಸ್ಸ್ವಮನೀಷಯಾ ॥೪೯॥ ಮಾಹೇಶ್ವರಾಸ್ಸ ರ್ವವಿದಸ್ತ್ವದೀಯೋಹಂಯತಸ್ತತಃ । ಅತ್ರಸ್ಥಿತಾಂಛಬ್ದದೋಷಾನ್ಮಯಾ ಪ್ರೋಕ್ತಾನ್ಪ್ರಮಾದತಃ ॥೫೦॥ ಯೂಯಂ ಕುರುತಸಂಶುದ್ಧಾನ್ಕೃಪಯೈ ವಮಮೋಪರಿ । ಶ್ರೀಗುರೋರ್ಮೂರ್ತಿ ಮುತ್ಕೃಷ್ಟಪುಣ್ಯಕೀರ್ತಿ ಮನ ಶ್ವರಂ ॥೫೧॥ ಆಗಮಾಭ್ಯಂತರಸ್ಫೂರ್ತಿಂ ಪರಮಾನಂದವರ್ತಿನಂ । ವೃ ಷಸ್ವರೂಪ ಮಜ್ಞಾನದುರಾಪಂ ವಿಜಿತೇಂದ್ರಿಯಂ ॥೫೨॥ ಚಂಡಪ್ರತಾಪ ಮುತ್ಸೃಷ್ಟವಿಷಯಾದಿಕಲಾಪಕಂ । ಉತ್ತರೋತ್ತರಕಲ್ಯಾಣಮಂಗ

---

ವರಿಗೆ ಮಾತ್ರವೇ ತಿಳಿಯುತ್ತ ಇತರರಿಗೆಲ್ಲ ತಿಳಿಯದೆ ಇರುವುದರಿಂದ, ಇನ್ನಾವ ದೇಶಭಾ ಷೆಯಲ್ಲಿ ಇದನ್ನು ಮತ್ತೆ ರಚಿಸಿದರೂ ಅದು ಸಕಲ ದೇಶೀಯರಿಗೂ ಉಪಯುಕ್ತವಾಗ ಲಾರದೆಂತಲೂ ಯೋಚಿಸಿ, ನಮ್ಮ ಪಂಡಿತಾರಾಧ್ಯರ ಚರಿತ್ರವು ಎಲ್ಲದೇಶದಲ್ಲೂ ವಿಖ್ಯಾತ ವಾಗಿ ಇದನ್ನು ಓದಿದ ಕೇಳಿದ ಅಲ್ಲಲ್ಲಿನ ಜನರನ್ನೆಲ್ಲ ಪವಿತ್ರಗೊಳಿಸುವಂತೆ ಮಾಡಬೇಕೆಂ ಬ ಬುದ್ಧಿಯಿಂದ ಸಕಲ ದೇಶದಲ್ಲೂ ವಿಖ್ಯಾತವಾಗಿರುವ ಸಂಸ್ಕೃತಭಾಷೆಯಿಂದ ಇದ ನ್ನು ರಚಿಸುವೆನು. ॥೪೫॥—॥೪೮॥ ಶ್ರೀಮತ್ಪಾಲ್ಕುರ್ಕೆ ಸೋಮಾರಾಧ್ಯರಿಂದ ಹೇಳಲ್ಪ ಟ್ಟಿರುವ ಅಭಿಪ್ರಾಯವೇ ಈ ಗ್ರಂಥದಲ್ಲೂ ಹೇಳಲ್ಪಟ್ಟಿರುವುದಲ್ಲದೆ, ಸ್ವಬುದ್ಧಿಕಲ್ಪಿತ ವಿಷಯವೇನೂ ಇರುವುದಿಲ್ಲ. ॥೪೯॥ ಎಲೈ ಸರ್ವಜ್ಞರಾದ ವೀರಮಾಹೇಶ್ವರರೇ! ನಾನು ನಿಮ್ಮವನಾದುದರಿಂದ ಈ ಗ್ರಂಥದಲ್ಲಿ ಪ್ರಮಾದವಶಾತ್ ಬಿದ್ದಿರಬಹುದಾದ ಶಬ್ದದ ತ ಪ್ಪುಗಳನ್ನು ನನ್ನಮೇಲೆ ಕೃಪೆಯಿಟ್ಟು ತಿದ್ದಿ ಶುದ್ಧಿಗೊಳಿಸಿರಿ. ॥೫೦॥ ಶಿವಾಗಮರಹ ಸ್ಯಗೋಚರನಾಗಿಯೂ, ಪರಮಾನಂದಮಯನಾಗಿಯೂ, ವೃಷಭಾಕಾರನಾಗಿಯೂ, ಅಜ್ಞಾನಕ್ಕೆ ದುರ್ಲಭನಾಗಿಯೂ, ಇಂದ್ರಿಯಗಳನ್ನು ಜೈಸಿದವನಾಗಿಯೂ, ತೀವ್ರವಾದ ಪರಾಕ್ರಮವುಳ್ಳವನಾಗಿಯೂ, ಸ್ವಚ್ಛಂದನಾದಿ ವಿಷಯಗಳನ್ನು ದೂರೀಕರಿಸಿದವನಾಗಿ ಯೂ, ಶಿವಭಕ್ತರಿಗೆ ಶುಭಪರಂಪರಾಭಿವೃದ್ಧಿಯನ್ನುಂಟುಮಾಡತಕ್ಕವನಾಗಿಯೂ, ಸತ್ಪ

ಳಂ ಭಕ್ತಸಂತತಿಃ ॥೫೩॥ ಸಜ್ಜನಾನಾಂ ಪರಿತ್ರಾಣಂ ಶರಣಪ್ರಾಣಮು ತ್ತಮಂ । ಸುಪ್ರಸನ್ನೋದ್ಯೈಕವಿಶ್ರಾಮಂ ಭೂತ್ಯಾಕೃತಲಲಾಮಕಂ ॥೫೪॥ ಪ್ರಮಥಾನಾಂ ಸಾರ್ವಭೌಮಂ ಸದ್ಗುಣಸ್ತೋಮಮೂರ್ಜಿತಂ । ನೀತ ಜಂಗಮಸಿದ್ಧಾಸ್ಯಂ ನಿಗಮಾನಾಂ ವಿಚಕ್ಷಣಂ ॥೫೫॥ ಬುಧೋಪಾಸ್ಯಂ ಭೂ ತಳೈಕನಮಸ್ಯಂ ಚಿತ್ಸಮಾಶ್ರಯಂ । ಮಹೇಶಸದ್ಭಕ್ತಸಿಹ್ಮಂ ಭವಶೈ ಲಮಹಾಶನಿಂ ॥೫೬॥ ಮತ್ಸ್ವಾಮಿವಿಲಸಚ್ಚೆನ್ನಮಲ್ಲಿಕಾರ್ಜುನರೂಪಿಣಂ। ಅಹಂ ಶ್ರೀಬಸವಾಮಾತ್ಯಂ ಕೃತ್ವಾಸ್ಮತ್ಕೃತಿನಾಯಕಂ ॥೫೭॥ ಶಿವ ಪ್ರಸಾದವಿಸರದ್ಭಕ್ತಿಯುಕ್ತೇನಚೇತಸಾ । ಗಣಾಂಸ್ತಸ್ಕೃತ್ಯಸಕಳನಿಷ್ಕ ಳೇಶ್ವರವಿಗ್ರಹಾನ್ ॥೫೮॥ ಪ್ರಮಥಾನ್ಭುವನಾಭೋಗಮಥನೋರ್ಜಿತ ವಿ ಕ್ರಮಾನ್ । ಪ್ರಾಕ್ತನಾದ್ಯತನೋದಾರ ಶಿವಭಕ್ತಕದಂಬಕಂ ॥೫೯॥ ಲಿಂಗ ಮೇವೇತಿ ಸಂಚಿಂತ್ಯ ಸಮುಪಾಸ್ಯ ಸಗೌರವಂ । ಶ್ರೀಮಲ್ಲಿಕಾರ್ಜುನಾರಾಧ್ಯ ಚರಿತಂ ಪರಮೋಜ್ವಲಂ ॥೬೦॥ ವರ್ಣಯಾಮಿ ರಸೋದೀರ್ಣವರ್ಣಕರ್ಣ ರಸಾಯನಂ । ಪಂಡಿತಾರಾಧ್ಯವಿನುತಾಕೃತಾಯಾಮತಿಭಕ್ತಿತಃ ॥೬೧॥ ನಿ

---

ರುಷರಿಗೆ ರಕ್ಷಕನಾಗಿಯೂ, ಶಿವಶರಣರೇ ಪ್ರಾಣವಾಗುಳ್ಳವನಾಗಿಯೂ, ಸತ್ಸಂತೋಷಪ ರಿಪೂರ್ಣನಾಗಿಯೂ, ವಿಭೂತಿಭೂಷಿತನಾಗಿಯೂ, ಪ್ರಮಥರಿಗೆ ಚಕ್ರವರ್ತಿಯಾಗಿ ಯೂ, ಸುಗುಣಸಮೂಹನಾಗಿಯೂ, ಜಂಗಮಪ್ರಸಾದಸೇವನೆಯಿಂದ ಸಿದ್ಧಿಯೊಂದಿ ದ ಮುಖಮಂಡಲವುಳ್ಳವನಾಗಿಯೂ, ವೇದಕೋವಿದನಾಗಿಯೂ, ವಿದ್ವನ್ಮಾನ್ಯನಾಗಿ ಯೂ, ಲೋಕೈಕವಂದ್ಯನಾಗಿಯೂ, ಜ್ಞಾನಾಶ್ರಯನಾಗಿಯೂ, ಶಿವಭಕ್ತಶ್ರೇಷ್ಠನಾಗಿ ಯೂ, ಸಂಸಾರಪರ್ವತಕ್ಕೆ ವಜ್ರಾಯುಧನಾಗಿಯೂ, ನನ್ನ ಪರಮಸ್ವಾಮಿಯಾದ ಶ್ರೀ ಚೆನ್ನಮಲ್ಲಿಕಾರ್ಜುನನ ಸ್ವರೂಪನಾಗಿಯೂ, ಇರುವ ಶ್ರೀ ಬಸವಮಂತ್ರೀಶನನ್ನು ಈ ನನ್ನ ಕಾವ್ಯಕ್ಕೆ ಅಧಿಪತಿಯನ್ನಾಗಿ ಮಾಡಿ, ಸಕಲ ನಿಷ್ಕಲಸ್ವರೂಪರಾದ ಶಿವಗಣರ ಸ ಮೂಹವನ್ನೂ, ಜಗದ್ವಲಯವನ್ನೆಲ್ಲ ಜರ್ಝರಗೊಳಿಸುವ ಪ್ರಬಲಪರಾಕ್ರಮವುಳ್ಳ ಪ್ರ ಮಥರುಗಳನ್ನೂ, ಶಿವಾನುಗ್ರಹಸಂಪ್ರಾಪ್ತ ಸದ್ಭಕ್ತಿಯುಕ್ತವಾದ ಮನಸ್ಸಿನಿಂದ ಸ್ಮ ರಿಸಿ, ಹಿಂದಿನ ಮತ್ತು ಈಗಿನ ಶಿವಭಕ್ತೋತ್ತಮರನ್ನೆಲ್ಲ ಶಿವಲಿಂಗವನ್ನಾಗಿಯೇ ಭಾವಿಸಿ ಗೌರವಪೂರ್ವಕವಾಗಿ ಸೇವಿಸಿ, ಉತ್ಕೃಷ್ಟವಾದ ಶ್ರೀಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತ್ರವನ್ನು, ನವರಸಪರಿಪ್ಲುತವಾಗಿರುವಂತೆಯೂ, ವರ್ಣಲಾಲಿತ್ಯದಿಂದ ಕಿವಿಗಿಂಪಾ ಗಿರುವಂತೆಯೂ ವರ್ಣಿಸುವೆನು. ॥೫೦॥—॥೬೦॥ ಅತಿಭಕ್ತಿಯಿಂದ ಶ್ರೀಮತ್ಪಂಡಿತಾರಾ ಧ್ಯರ ಸ್ತೋತ್ರವನ್ನು ಮಾಡಿದರೆ, ಶ್ಲಾಘ್ಯವಾದ ಶಿವಧರ್ಮಸೌಭಾಗ್ಯವು ತಾನಾಗಿ ದೊರೆ

ಯಾತಿಸ್ಸ್ವಯಮಾಯಾತಿ ಶಿವಧರ್ಮಸ್ಯಸನ್ಮತಾ । ಅಶೇಷಾಸಹ್ಯದುರಿತರಾಶಿರಾಶು ವಿನಶ್ಯತಿ ॥೬೨॥ ಪ್ರಾಪ್ಯತೆ ಭಕ್ತಿಸೌಭಾಗ್ಯಂಪರಿಪಕ್ವಂ ದ್ರುತಂಜನೈಃ । ಚಂಡೋರಗಾದಿಕವಿಷಂ ವಿಲಯಂಯಾತಿ ತತ್ಕ್ಷಣಾತ್ ॥೬೩॥ ಜ್ವಲತ್ತೀವ್ರತರೋದಗ್ರ ದವಾಗ್ನಿಸ್ತುಹಿನಾಯತೆ । ದುರ್ದಮಾ ವಿಷಯಕ್ಲೇಶಾ ಶ್ಶಾಂತಿಮಾಯಾಂತಿಸತ್ವರಂ ॥೬೪॥ ಭೀಷಣಶ್ಶೋಷಮಭ್ಯೆತಿ ನಿಶ್ಶೇಷಂ ಭವವಾರಿಧಿಃ । ಅಖಂಡಿತಸದೈಶ್ವರ್ಯಜಾತಂ ಸಮ್ಯಕ್ಪ್ರಕಾಶತೆ ॥೬೫॥ ತಸ್ಮಾಚ್ಛ್ರೀಪಂಡಿತಾರಾಧ್ಯಮಹಿಮಾತಿಮಹೇಶ್ವರಃ । ತಮೋಗುಣಪರಿಸ್ಫೀತಸ್ಸುಧಾಕರಶೇಖರಃ॥೬೬॥ ಅಯಂ ಶ್ರೀಪಂಡಿತಾರಾಧ್ಯಸ್ಸ್ಥಿರಸತ್ವಗುಣೋಜ್ವಲಃ । ಸಮಹೇಶೋಽಚರಂಲಿಂಗಂ ಚರಲಿಂಗಮಯಂಗುರುಃ॥೬೭॥ ಲೋಕಾಧಿನಾಥಸ್ಸಶಿವೋ ಲೋಕಾರಾಧ್ಯಸ್ತ್ವಯಂಗುರುಃ । ಸರ್ವಲೋಕಮಯಃ ಪ್ರೋಕ್ತಸ್ಸಶೈಲದುಹಿತುಃಪತಿಃ ॥೬೮॥ ಅಸೌಶ್ರೀಪಂಡಿತಾರಾಧ್ಯೋ ಲೋಕಾತೀತಃಪ್ರಕೀರ್ತಿತಃ । ಲೋಕಾನುಸಾರೀ ಸತತ ಮಭೂತ್ಸವಿಷಮೇಕ್ಷಣಃ ॥೬೯॥ ಪರಿವರ್ಜಿತಲೋಕಾನುಸಾರಿಶೀಲಸ್ತ್ವಯಂಗುರುಃ । ಲೋಕ

---

ಕೊಳ್ಳುವುದು. ದುಸ್ಸಹವಾದ ಸಕಲ ಪಾಪರಾಶಿಯೂ ಬೇಗನೆ ಹಾಳಾಗುವುದು. ಪರಿಪಕ್ವವಾದ ಶಿವಭಕ್ತಿ ಭಾಗ್ಯವು ಲಭಿಸುವುದು. ಸರ್ಪಾದಿ ಕ್ರೂರಜಂತುಗಳ ವಿಷವು ಥಟ್ಟನೆ ನಿವೃತ್ತಿಗೊಳ್ಳುವುದು. ಅತಿವೇಗವಾಗಿ ಹೊತ್ತಿ ಉರಿಯುವ ಕಾಳ್ಗಿಚ್ಚು ಮಂಜಿನಂತಾಗುವುದು. ದುಷ್ಟೇಂದ್ರಿಯ ವ್ಯಾಪಾರಗಳೂ, ಸ್ರಕ್ಚಂದನವನಿತಾದಿ ವಿಷಯಕ್ಲೇಶಗಳೂ ಬೇಗನೆ ಶಾಂತವಾಗುವುವು. ಭಯಂಕರವಾದ ಜನನಮರಣರೂಪ ಸಂಸಾರಸಾಗರವು ನಿಶ್ಶೇಷವಾಗಿ ಬತ್ತಿಹೋಗುವುದು. ಅಖಂಡೈಶ್ವರ್ಯವು ಲಭಿಸುವುದು. ॥೬೫॥ ಅದುಕಾರಣ, ಶ್ರೀಮತ್ಪಂಡಿತಾರಾಧ್ಯನ ಮಹಿಮೆಯು ಅತ್ಯುತ್ಕೃಷ್ಟವಾದದ್ದು. ಶಿವನು ತಮೋಗುಣಾಧಿಕನಾಗಿರುವನು. ಈ ಪಂಡಿತಾರಾಧ್ಯನಾದರೋ— ಸ್ಥಿರವಾದ ಸತ್ವಗುಣಾತಿಶಯದಿಂದ ಶೋಭಿಸುತಿಹನು. ಆ ಪರಶಿವನು ಅಚರ (ಚಲಿಸದಿರುವ) ಲಿಂಗಸ್ವರೂಪನು; ಈ ಗುರುವಾದರೋ— ಚರಿಸುವ (ಜಂಗಮ) ಲಿಂಗವು. ಆ ಶಂಕರನು ಲೋಕಾಧಿಪತಿಯು; ಈ ಗುರುವಾದರೋ ಲೋಕಪೂಜ್ಯನು. ಆ ಪಾರ್ವತೀಪತಿಯು ಸರ್ವಲೋಕಸ್ವರೂಪನೆಂದು ಹೇಳಲ್ಪಡುತ್ತಾನೆ; ಈ ಪಂಡಿತಾರಾಧ್ಯನಾದರೋ ಲೋಕಾತೀತನೆಂದು ಹೊಗಳಲ್ಪಟ್ಟವನು. ಆ ತ್ರಿಲೋಚನನು ಲೋಕವನ್ನನುಸರಿಸುವವ (ಭಕ್ತಜನಾನುಗಾಮಿ) ನೆಂದು ಹೇಳಲ್ಪಡುವನು; ಈ ಗುರುವಾದರೋ ಲೌಕಿಕವಾದ ನಡೆಯನ್ನು ತಿರಸ್ಕರಿಸಿ ನಡೆಯುತ್ತಲಿದ್ದವನು. ಶಿವನು ಲೋಕಸಂಹಾರಕರ್ತ

ಹರ್ತಾಸಶೂಲೀಸ್ಯಾಲ್ಲೋಕಕರ್ತಾತ್ವಯಂಗುರುಃ ॥೨೦॥ ಸಶಿವೋ ಶಿತಿಕಂಠಸ್ತ್ವ್ಯದಯಂ ಭಸಿತಕಂಧರಃ । ಊರ್ಧ್ವೈಕನೇತ್ರಸ್ಸಶಿವೋಹ್ಯಯಂತೂರ್ಧ್ವದ್ವಿಲೋಚನಃ ॥೨೧॥ ಸಶೂಲಪಾಣಿಸ್ಸದ್ಭಕ್ತಶರೀರೀಪರಿಕೀರ್ತಿತಃ । ಭಕ್ತಪ್ರಾಣಿಸಮಾಖ್ಯಾತೋ ಗುರುರೇಷಗುರೂತ್ತಮಃ ।೨೨॥ ಶ್ರೀಮಲ್ಲಿಕಾರ್ಜುನಸ್ವಾಮೀ ಸೋಽಭವನ್ಮಲ್ಲಿಕಾರ್ಜುನಃ । ಮಲ್ಲಿಕಾರ್ಜುನಸತ್ಕೀರ್ತಿರ್ಮಲ್ಲಿಕಾರ್ಜುನದೇಶಿಕಃ ॥೨೩॥ ಮನುಜೈರಲ್ಪಮತಿಭಿರವಾಙ್ಮನಸಗೋಚರಃ । ಪಂಡಿತಾರಾಧ್ಯಮಹಿಮಾ ಶಕ್ಯೋವರ್ಣಯಿತುಂಕಥಂ ॥೨೪॥ ಜಗದುತ್ಪತ್ತಿಕರ್ತಾರಂ ಚತುರಾನನಮಾದರಾತ್ । ಪರಬ್ರಹ್ಮೇತಿಜಲ್ಪಂತಿಯೇಕೇಚಿತ್ಪರಿಮೋಹಿತಾಃ ॥೨೫॥ ತಜ್ಜೇತಾಶಿವಸದ್ಭಕ್ತಿ ಜನಿಕರ್ತ್ರೀತಿ ಭೂಜನೈಃ। ಪೂಜ್ಯಮಾನಃಪ್ರಸಿದ್ಧೋಭೂ ತ್ಪುರಾಶ್ರೀಪತಿಪಂಡಿತಃ ॥೨೬॥ ಕೇಶವಂ ಸ್ಥಿತಿಕರ್ತಾರಂ ಪ್ರಣಮಯ್ಯಕಪರ್ದಿನೇ । ನಿರ್ಧೂತವೈಷ್ಣವೋಭಕ್ತಿಸ್ಥಿತಿಕರ್ತ್ರೀತಿಭೂಜನೈಃ ॥೨೭॥ ಸ್ತುತಶ್ಶಿವಾಚಾರ್ಯವರೋಲೆಂಕಮಂಚನ ಪಂಡಿತಃ । ಸಂಹಾರಕರ್ತ್ರೈವ ಮಹಾದೇವ ಇತ್ಯಸಮಂಜಸಂ॥೨೮॥ ವಚಶ್ಯಾ

---

ನು; ಈ ಗುರುವಾದರೂ ಲೋಕರಕ್ಷಣಕರ್ತನು. ಶಿವನು ಕಪ್ಪುಗೊರಳುಳ್ಳವನು; ಈ ಗುರುವು ಭಸ್ಮದಿಂದ ಶುಭ್ರವಾದ ಕಂಠವುಳ್ಳವನು. ಶಿವನು ಒಂದು ಮೇಲ್ಗಣ್ಣುಳ್ಳವನು; ಈ ಗುರುವಾದರೂ ಎರಡು ಮೇಲ್ಗಣ್ಣುಗಳುಳ್ಳವನು (ಎಂದರೆ—ಯೋಗಸಾಧನದಿಂದ ಊರ್ಧ್ವದೃಷ್ಟಿಗಳುಳ್ಳವನಾಗಿದ್ದನು.) ಶಿವನು ಭಕ್ತದೇಹಿಯು; ಈ ಗುರೂತ್ತಮನಾದರೂ— ಭಕ್ತಪ್ರಾಣಿಯೆನಿಸಿಕೊಂಡವನು. ಶಿವನು ಮಲ್ಲಿಗೆಯ ಹೂವಿನಂತೆ ಶುಭ್ರನಾದವನು; ಮಲ್ಲಿಕಾರ್ಜುನಪಂಡಿತಾರಾಧ್ಯನಾದರೂ— ಮಲ್ಲಿಗೆಯಂತೆ ಧವಳವಾದ ಕೀರ್ತಿಯನ್ನು ಪಡೆದವನು. ಹೀಗೆ ಶಿವನಿಗಿಂತಲೂ ಅಧಿಕನಾಗಿ ಮೆರೆದ ಆ ಪಂಡಿತಾರಾಧ್ಯನ ವಾಙ್ಮನಗಳಿಗತೀತವಾದ ಮಹಿಮೆಯು ಅಲ್ಪಜ್ಞರಾದ ಮನುಜರಿಂದ ಹೇಗೆ ವರ್ಣಿಸುವುದಕ್ಕೆ ಸಾಧ್ಯವಾದೀತು ? ॥೨೪॥ ಅಜ್ಞಾನಿಗಳಾದ ಕೆಲವರು ಚತುರ್ಮುಖ ಬ್ರಹ್ಮನನ್ನು ಜಗದುತ್ಪತ್ತಿ ಕರ್ತನನ್ನಾಗಿಯೂ, ಪರಬ್ರಹ್ಮನನ್ನಾಗಿಯೂ ಹೇಳುತ್ತಾರೆ. ಅಂಥವರ ವಿವಾದವನ್ನು ಶ್ರೀಪತಿಪಂಡಿತನು ಗೆದ್ದು, ಶಿವಭಕ್ತಿಯು ಸೃಷ್ಟಿಕರ್ತನೆಂದು ಪ್ರಸಿದ್ಧನಾಗಿ ಜಗತ್ಪೂಜ್ಯನಾದನು. ಶಿವಾಚಾರ್ಯನಾದ ಶಿವಲೆಂಕಮಂಚನ ಪಂಡಿತನು ಸ್ಥಿತಿಕರ್ತನೆನಿಸಿಕೊಳ್ಳುವ ವಿಷ್ಣುವನ್ನು ಶಿವನಿಗೆ ನಮಸ್ಕಾರ ಮಾಡುವಂತೆ ಮಾಡಿ, ವೈಷ್ಣವರನ್ನು ಭಂಗಗೊಳಿಸಿ, ಶಿವಭಕ್ತಿಯು ಸ್ಥಿತಿಕರ್ತೃ (ಸ್ಥಿರಗೊಳಿಸಿದವ) ನೆಂದು ಭೂಜನರಿಂದ ಹೊಗಳಿಸಿಕೊಂಡನು. ಮಹಾದೇವನು ಸಂಹಾರಕ್ಕೆ ಮಾತ್ರ ಕರ್ತೃವೆಂದು

ಸ್ತ್ರಪರಿಜ್ಞಾನ ಮವಿಜ್ಞಾಯವದಂತಿಯೇ । ಭಕ್ತಿದೂರಾನ್ಸಮಯಾಂಸ್ತಾಂ
ಸ್ತ್ರಸರ್ವಾನ್ಸ್ವಭುವಿಸತ್ವರಂ ॥ ೭೯॥ ಸಂಹೃತ್ಯ ಶುಶುಭೆಶೂರೋ ಮಲ್ಲಿಕಾರ್ಜು
ನಪಂಡಿತಃ । ಏತನ್ಮಹೇಶಸದ್ಭಕ್ತೇಃ ಕಾರಣಂ ಪಂಡಿತತ್ರಯಂ ॥೮೦॥
ಅಭೂನ್ಮಾನ್ಯತಮಸ್ತತ್ರ ಮಲ್ಲಿಕಾರ್ಜುನಪಂಡಿತಃ । ಶಿವಭಕ್ತಿ ಪ್ರತಿಷ್ಠಾ
ರ್ಥಂ ಜನ್ಮಲಬ್ಧವತೋಭುವಿ ॥೮೧॥

ತಸ್ಯಶ್ರೀ ಪಂಡಿತೇಂದ್ರಸ್ಯ ಕಥೋಪೋದ್ಘಾತಉಚ್ಯತೆ । ಅನೂನ
ಯಾಶೇಷಶೈಲಸಾರ್ವಭೌಮತಯಾವನಾ ॥೮೨॥ ವಿರಾಜತೆ ಶ್ರೀಗಿರೀಂದ್ರಃ
ಕೈಲಾಸಃ ಖಲುದಕ್ಷಿಣಃ । ಅವಿದ್ಯಮಾನಸಾದೃಶ್ಯಃ ಪ್ರಮಥಾಸ್ಥಾನವೇದಿ
ಕಾ ॥೮೩॥ ಮುಮುಕ್ಷುಮುನಿ ಶಾರ್ದೂಲಕೋಶಾಗಾರಂ ಸಮೃದ್ಧಿಮತ್।
ಶ್ರೀಪರ್ವತಮುನೀಂದ್ರಸ್ಯ ಪರಿಪಕ್ವಂ ತಪಃಫಲಂ ॥೮೪॥ ಸಂಕ್ಷಿಪ್ತಮೂ
ರ್ತಿರೇಕತ್ರ ಯಶೋರಾಶೇರುಮಾಪತೇಃ । ರೂಪಾನ್ವಿತಮಹಾಕಾಶಸ್ಸಕ
ಲಾಮ್ನಾಯಮಸ್ತಕಂ ॥೮೫॥ ಘನೀಭೂತಂ ಪರಂಜ್ಯೋತಿಃ ಪುಣ್ಯಸ್ಯನಿಧಿ
ರಕ್ಷಯಃ। ಸ್ತುತೀನಾಂ ಲಕ್ಷ್ಯಮಸಮಲೋಚನಸ್ಯನವಾಂಕುರಃ ॥೮೬॥

---

ಶಾಸ್ತ್ರಪರಿಜ್ಞಾನವಿಲ್ಲದೆ ಅಸಮಂಜಸವಾಗಿ ನುಡಿಯುತ್ತಾರೆ. ಅಂಥ ಶಿವಭಕ್ತಿ ದೂರರಾ
ದ ಪರಸಮಯದವರನ್ನೆಲ್ಲ ಶೂರನಾದ ಈ ಮಲ್ಲಿಕಾರ್ಜುನಪಂಡಿತನು ಭೂಲೋಕದಲ್ಲಿ
ಸಂಹರಿಸಿ ವಿರಾಜಿಸಿದನು. ಹೀಗೆ ಈ ಮೂವರು ಪಂಡಿತರೂ ಶಿವಭಕ್ತಿಗೆ ಮೂಲಭೂತರು.
॥೮೦॥ ಅವರಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅತ್ಯಂತ ಮಾನ್ಯನಾಗಿದ್ದನು. ಭೂ
ಲೋಕದಲ್ಲಿ ಶಿವಭಕ್ತಿಯನ್ನು ಸ್ಥಿರಗೊಳಿಸುವುದಕ್ಕಾಗಿಯೇ ಜನ್ಮವನ್ನೆತ್ತಿದ ಆ ಮಲ್ಲಿ
ಕಾರ್ಜುನ ಪಂಡಿತಾರಾಧ್ಯನ ಚರಿತೆಯ ಉಪೋದ್ಘಾತವನ್ನು ಮೊದಲು ಹೇಳುತ್ತೇನೆ.—

ಭೂಲೋಕದಲ್ಲಿ ಸಕಲಪರ್ವತಗಳಿಗೂ ಚಕ್ರವರ್ತಿಯಾಗಿ ಮೆರೆಯುತ್ತಿರುವ
ಶ್ರೀಶೈಲವು ದಕ್ಷಿಣಕೈಲಾಸವೆಂದು ಪ್ರಸಿದ್ಧವಾಗಿರುವುದು. ಅದಕ್ಕೆ ಸಮಾನವೆನಿಸು
ವ ಮತ್ತೊಂದು ಪರ್ವತವೇ ಇರುವುದಿಲ್ಲ. ಅದು ಪ್ರಮಥರುಗಳು ಸಭೆಗೂಡುವ ಜ
ಗತಿಯಾಗಿಯೂ, ಮುಕ್ತಿಕಾಂಕ್ಷಿಗಳಾಗಿ ತಪಸ್ಸನ್ನಾಚರಿಸುವ ಋಷೀಶ್ವರರ ಬೊಕ್ಕಸ
ವಾಗಿಯೂ, ಶ್ರೀ ಪರ್ವತೇಂದ್ರಮುನಿನಾಥನ ಪರಿಪಕ್ವತಪಃಫಲರೂಪವಾಗಿಯೂ, ಪಾ
ರ್ವತೀಪತಿಯ ಕೀರ್ತಿರಾಶಿಯು ಒಟ್ಟುಗೂಡಿ ಆಕಾರವನ್ನು ಧರಿಸಿದಂತೆಯೂ, ರೂಪ
ನ್ನು ಧರಿಸಿದ ಮಹಾಕಾಶದಂತೆಯೂ ಸಕಲವೇದಗಳ ಶಿರಸ್ಸಿನಂತೆಯೂ, ಗಟ್ಟಿಗೊಂಡು
ನಿಂತ ಪರಂಜ್ಯೋತಿಯಂತೆಯೂ, ಅಳಿವಿಲ್ಲದ ಪುಣ್ಯದ ನಿಕ್ಷೇಪದಂತೆಯೂ, ಸಕಲ
ಸ್ತೋತ್ರಗಳಿಗೂ ಈಡಾಗಿಯೂ, ಪರಶಿವನ ಅಂಕುರದಂತೆಯೂ, ಪಾರ್ವತಿಯ ಒಲವ

ಗಿರಿಜಾದಕ್ಷಿಣೋಭಾಗ ಸ್ಸದ್ಭಕ್ತಗೃಹದೇವತಾ । ದಿವ್ಯಾಮೃತಂಘನೀಭೂ
ತನುಚಲೋರ್ಮಿಶ್ಚಿದಂಬುಧೇಃ ॥೮೭॥ ಮನೋಹರಲತಾಶ್ಲಿಷ್ಟ ಮೂ
ಲಸ್ತಂಭೋತಿಭಾಸುರಃ । ಏತಸ್ಯಶಿಖರೇರಮ್ಯೇ ತ್ರಿಲೋಕವಿಸರದ್ಯಶಾಃ
॥೮೮॥ ಶ್ರೀಸ್ವಯಂಭೂ ಮಹಾಲಿಂಗ ಚಕ್ರವರ್ತೀನಿರಂತರಂ । ನತಾರ್ತಿ
ವಾರಣ ಶ್ರೀಮನ್ಮಲ್ಲಿಕಾರ್ಜುನನಾಮತಃ ॥೮೯॥ ಅನಂತಮಹಿಮಾತತ್ರ
ಭಾತಿ ಫಾಲವಿಲೋಚನಃ । ತದ್ಭಕ್ತಿಪಟ್ಟಬದ್ಧ ಶ್ರೀಪರ್ವತಕ್ಷೇತ್ರವಾಸಿನಃ
॥೯೦॥ ಯಾಮ್ಯಕೈಲಾಸ ಚೂಡಾಗ್ರಭಾಸಿಮಾಣಿಕ್ಯಸನ್ನಿಭಾಃ । ಭುಕ್ತಿ
ಮುಕ್ತಿಪ್ರದೋನೇಶ ಭಕ್ತಿವರ್ಧನತತ್ಪರಾಃ ॥೯೧॥ ನರಚರ್ಮಧರಾಃ ಕ
ರ್ಮಹರಾಧರ್ಮಪರಾಯಣಾಃ । ಕೃತಕೃತ್ಯೇಷ್ಟಸತ್ಕೃತ್ಯಾ ಧೃತಸತ್ಯಸ
ಮುತ್ಸುಕಾಃ ॥೯೨॥ ವ್ರತಿನೋ ಭೃತಸೇವಾನೋಜಿತಕಾಮಾಮಹೋ
ನ್ನತಾಃ । ಚಿರಕೋಪಾನ್ಯಸಂತಾಪಖರಪಾಪಹರಾಃ ಪರಾಃ ॥೯೩॥ ಹರ
ತಂತ್ರಾಚಾರ್ಯಮಂತ್ರ ಪರತಂತ್ರಪ್ರಚಾರಿಣಃ । ಧನ್ಯಾವದಾನ್ಯಾವಿಗತದೈ
ನ್ಯಾನಿರ್ಜಿತಮನ್ಯವಃ ॥೯೪॥ ಲೋಕೈಕಮಾನ್ಯಾಃ ಪರಮಪಾತ್ರಭೂ

---

ಕ್ಕದಂತೆಯೂ ಶಿವಭಕ್ತರ ಮನೆಯದೇವತೆಯಂತೆಯೂ, ಗಟ್ಟಿಗೊಂಡ ಅಮೃತದಂತೆ
ಯೂ, ಜ್ಞಾನಸಮುದ್ರದ ನಿಂತ ತೆರೆಯಂತೆಯೂ, ಸುಂದರಗಳಾದ ಬಳ್ಳಿಗಳು ಸುತ್ತುವ
ರಿದಿರುವ ಮೂಲಸ್ತಂಭದಂತೆಯೂ ಪ್ರಕಾಶಿಸುತ್ತಿರುವುದು. ॥೮೭॥ ಈ ಪರ್ವತದ ಶಿಖ
ರದಮೇಲೆ ಪರಶಿವನು ಮಲ್ಲಿಕಾರ್ಜುನನೆಂಬ ಹೆಸರಿನಿಂದ ಸ್ವಯಂಭು ಮಹಾಲಿಂಗವಾಗಿ
ನೆಲಸಿ, ತನ್ನನ್ನು ನಮಸ್ಕರಿಸಿದ ಭಕ್ತರ ಕಷ್ಟಗಳನ್ನೆಲ್ಲ ನಿವಾರಿಸುತ್ತ ತ್ರಿಲೋಕವಿ
ಖ್ಯಾತವಾದ ಕೀರ್ತಿಯುಳ್ಳವನಾಗಿ, ಅಪರಿಮಿತವಾದ ಮಹಿಮೆಯಿಂದ ಒಪ್ಪುತ್ತಿರುವ
ನು. ಆ ಮಹಾ ಶ್ರೀಶೈಲಕ್ಷೇತ್ರದಲ್ಲಿ ಸುಖವಾಗಿ ವಾಸಮಾಡುತ್ತಿರುವ ಶಿವಭಕ್ತಿ ಪಟ್ಟ
ಬದ್ಧರಾದ ವೀರಮಾಹೇಶ್ವರಮಹಾಜನಗಳು- ದಕ್ಷಿಣ ಕೈಲಾಸಶಿಖರದ ತುದಿಯಲ್ಲಿ
ಹೊಳೆಯುತ್ತಿರುವ ರತ್ನಗಳಿಗೆ ಸಮಾನರಾಗಿಯೂ, ಭುಕ್ತಿಮುಕ್ತಿಗಳನ್ನು ಕೊಡುವ
ಶಿವಭಕ್ತಿಯನ್ನು ಹರಡುವುದರಲ್ಲಿ ತತ್ಪರರಾಗಿಯೂ, ಭೂಲೋಕದವರ ಕರ್ಮವನ್ನು
ಪರಿಹರಿಸುವುದಕ್ಕಾಗಿ ಮಾನವ ದೇಹವನ್ನು ಧರಿಸಿ ಸದ್ಧರ್ಮಪರಾಯಣರಾಗಿಯೂ, ವ್ರ
ತತತ್ಪರರಾಗಿಯೂ, ಶಾಸ್ತ್ರವಚನ ಮರ್ಯಾದೆಯನ್ನತಿಕ್ರಮಿಸದವರಾಗಿಯೂ, ಕಾಮ
ವ್ಯಾಪಾರವನ್ನುಗೆದ್ದು ಮಹೋತ್ಕೃಷ್ಟರಾಗಿಯೂ, ದೀರ್ಘಕೋಪ ಪರರ ತಾಪ ಘೋ
ರಪಾಪಗಳನ್ನು ಪರಿಹರಿಸಿದವರಾಗಿಯೂ, ಶಿವಾಗಮ ಶಿವಮಂತ್ರಗಳಲ್ಲಿ ತತ್ಪರರಾಗಿ
ಅವುಗಳನ್ನು ಪ್ರಕಟಪಡಿಸುವವರಾಗಿಯೂ, ಕೃತಾರ್ಥರು ದಾತೃಗಳು ಬಡತನವಿಲ್ಲದ

ತಾತ್ಮವಮೂರ್ತಯಃ । ಪ್ರಸಾದಗಾತ್ರಾ ದುಷ್ಟರ್ಮಜೈತ್ರಾ ಭವಲತಾಚ್ಛಿದಃ ॥೯೫॥ ಶುಭಾಕಾರಾನಿರ್ವಿಕಾರಾ ಭವದೂರಾಮಲಾಶಯಾಃ । ರಕ್ಷಾವಿನಿದಾಃ ಕರುಣಾಸಮುದ್ರಾಶ್ಚ ಕಲಾಯುಗೇ ॥೯೬॥ ರುದ್ರಾಸ್ಫುರದ್ವೀರಭದ್ರಾ ಮನೋಜ್ಞಾಃ ಪ್ರಾಜ್ಞಸಂಮತಾಃ । ಶ್ರುತಿಜ್ಞಾನುತದ್ವೈವಜ್ಞಾ ನಿರಸ್ತಾಜ್ಞಾಸ್ಸುಲಕ್ಷಣಾಃ ॥೯೭॥ ಅವಾರ್ಯವೀರ್ಯಾಶ್ಶಿವಸತ್ಪಥಾಚಾರ್ಯಾಃ ಪ್ರಿಯಂವದಾಃ । ನಮಿತಾರ್ಯಾಸ್ತ್ರಿಭುವನವರ್ಯಾ ಮಹಿಮಶೋಭಿನಃ ॥೯೮॥ ಶ್ರುತಿಸಿದ್ಧಮಹಾವೀರಭಕ್ತಿರಾಜ್ಯಾನುರಕ್ತಯಃ । ಸಂತಃಪರಮಸಂಖ್ಯಾತಾ ವೀರಮಾಹೇಶ್ವರಾಸ್ಸುಖಂ ॥೯೯॥ ವಸಂತಃ ಪ್ರಥಿತಾನಂದ ನಿಲಯಾ ಜಾತುಸರ್ವಶಃ । ಮಲ್ಲಿಕಾರ್ಜುನದೇವಸ್ಯ ಮಂಟಪಸ್ಥಲಸಂಸ್ಥಿತಾಃ ॥೧೦೦॥ ಮಹೇಶಸದ್ಭಕ್ತಕೋಟ್ಯಾಂ ಪ್ರಾಕ್ತನಾದ್ಯತನಾಸ್ವಹಂ । ಪ್ರಸ್ತುವಂತೋ ಮಹಾಭಕ್ತಾನ್ಸ್ಫೀತಾನಂದಾಶ್ರುಬಿಂದುಕಂ ॥೧೦೧॥ ಕೃಪಾದ್ರ್ದೃಷ್ಟ್ಯಾ ಮಾಂವೀಕ್ಷ್ಯ ಪ್ರೋಚುರ್ವಾಚಮಿಮಾಂಶುಭಾಂ । ಪಂಡಿತೇಂದ್ರಗಣಶ್ರೇಷ್ಠಸ್ಸತತಂ ಪಂಡಿತಾಧಯಃ ॥೧೦೨॥ ಪಂಡಿತಾರಾಧ್ಯಬಸವ

---

ವರು ಕೋಪವನ್ನು ಜೈಸಿದವರುಗಳಾಗಿಯೂ, ಲೋಕೈಕಮಾನ್ಯರಾಗಿಯೂ, ಅತ್ಯಂತ ಪರಿಶುದ್ಧವಾದ ಕಳೇವರವುಳ್ಳವರಾಗಿಯೂ, ಶಿವಪ್ರಸಾದವೇ ದೇಹವಾಗುಳ್ಳವರಾಗಿಯೂ, ದುಷ್ಕೃತ್ಯಗಳನ್ನು ಗೆದ್ದವರಾಗಿಯೂ, ಜನನ ಮರಣವೆಂಬ ಬಳ್ಳಿಯನ್ನು ಕತ್ತರಿಸಿದವರಾಗಿಯೂ, ಮಂಗಳಾಕಾರರು ನಿರ್ವಿಕಾರರು ಮಲತ್ರಯ ದೂರರುಗಳಾಗಿಯೂ, ದೀನರಕ್ಷಣಚತುರರು ದಯಾಸಾಗರರುಗಳಾಗಿಯೂ, ಆಶ್ರಿತರ ದುಃಖವನ್ನು ಪರಿಹರಿಸುವವರು ವೀರಭದ್ರನಂತೆ ಒಪ್ಪುತ್ತಿರುವವರು ವಿದ್ವತ್ಸಮ್ಮತರುಗಳಾಗಿಯೂ, ವೇದಗಳನ್ನೂ ಜ್ಯೋತಿಶ್ಶಾಸ್ತ್ರವನ್ನೂ ಬಲ್ಲವರಾಗಿಯೂ, ಮೂಢರನ್ನು ತಿರಸ್ಕರಿಸಿದವರಾಗಿಯೂ, ಸಲ್ಲಕ್ಷಣಸಮೇತರಾಗಿಯೂ, ಇತರರಿಂದ ಜಯಿಸಲ್ಪಡದ ಶೌರ್ಯವುಳ್ಳವರಾಗಿಯೂ, ಶೈವಸನ್ಮಾರ್ಗಾಚರಣವುಳ್ಳವರಾಗಿಯೂ, ಹಿತಭಾಷಿಗಳಾಗಿಯೂ, ಆರ್ಯಜನವಂದಿತರಾಗಿಯೂ, ತ್ರಿಲೋಕಶ್ರೇಷ್ಠರಾಗಿಯೂ, ಮಹತ್ತ್ವಶಾಲಿಗಳಾಗಿಯೂ, ವೇದಸಿದ್ಧವಾದ ವೀರಶೈವಭಕ್ತಿರಾಜ್ಯದಲ್ಲಿ ಆಸಕ್ತರಾಗಿಯೂ, ಸತ್ಪುರುಷರಾಗಿಯೂ, ಅಗಣಿತರಾಗಿಯೂ, ಸದಾನಂದಾಶ್ರಯರಾಗಿಯೂ, ಮೆರೆಯುತ್ತಿದ್ದರು. ॥೯೯॥ ಆವರುಗಳೆಲ್ಲರೂ ಒಂದು ದಿವಸ ಮಲ್ಲಿಕಾರ್ಜುನದೇವಾಲಯದ ಸಭಾಮಂಟಪದಲ್ಲಿ ಕೂಡಿ, ಪುರಾತನ ಮತ್ತು ಆಧುನಿಕ ಶಿವಭಕ್ತಸಮೂಹವನ್ನು ಸ್ತೋತ್ರಮಾಡುತ್ತ, ಆನಂದಪರವಶರಾಗಿ ಕಣ್ಣುಗಳಿಂದ ಸಂತೋಷಾಶ್ರುಗಳನ್ನು ಸುರಿಸುತ್ತ, ಕರುಣಾಕಟಾಕ್ಷದಿಂದ ನನ್ನನ್ನು ನೋಡಿ, ಈ ಶುಭವಚನವನ್ನು ಆಡಿದರು. ಏನೆಂದರೆ—"ಎಲೈ ವಿದ್ವಜ್ಜನಶ್ರೇಷ್ಠನೆ! ಪಂಡಿತಾರಾಧ್ಯ

ದಂಡನಾಥಾದಯಃಪುರಾ । ಶ್ರೀವೀರಮಾಹೇಶ್ವರಾಣಾಂ ವರ್ತನಾನಿಮಹೀತ ಳೇ ॥೧೦೩॥ ತೇಷಾಂದೃಷ್ಟಾದೃಷ್ಟಮಹಾವೈಭವಾನಿ ವಿಶೇಷತಃ । ಅವರ್ಣ ಯ ನ್ಯಥಾಕರ್ಣಮಧುರೈರ್ವಚನಾಮೃತೈಃ ॥೧೦೪॥ ತಥಾತ್ವಯಾಪಿ ತ ದ್ಭಕ್ತ ಪ್ರಸಾದಾಧಿಕ್ಯವತ್ತಯಾ । ಸರ್ವಲೋಕನುತಂನೂತ್ನಂ ಸದ್ಭಾ ಕ್ತ ಜನಲಾಲಿತಂ ॥೧೦೫॥ ಸಮ್ಯಗ್ವ್ಯಧಾಯಿ ಬಸವಪುರಾಣಂ ಪಾವನಂಪ ರಂ । ಇತಿಹಾಸತಯಾತತ್ರ ಭಕ್ತಾನಾದ್ಯಾನವರ್ಣಯಃ ॥೧೦೬॥ ಉಕ್ತಾ ಚತುರ್ವೇದಸಾರೇ ವೀರಭಕ್ತಿಶ್ಚವೈದಿಕೀ । ಪುನರ್ಬಸವಸದ್ಭಕ್ತಿಸ್ತ್ವಯಾ ಸಮ್ಯಕ್ಪ್ರಪಂಚಿತಾ ॥೧೦೭॥ ಗದ್ಯಪದ್ಯಾದಿಕೃತಿಷು ನಿರವದ್ಯಪದೋಜ್ಜ್ವ ಲಾ । ಜಗದದ್ಭುತಮುಕ್ತಂ ತದ್ಯಥಾಬಸವವರ್ಣನಂ ॥೧೦೮॥ ತಥಾಸ್ಮ ತ್ಪಂಡಿತಾರಾಧ್ಯಚರಿತ್ರಂ ಮುಪವರ್ಣಯ । ಪರಿಶಿಷ್ಟಾದ್ಯ ಸದ್ಭಕ್ತ ವೃತ್ತಾ ನ್ಯೇತತ್ಕಥಾಂತರೇ ॥೧೦೯॥ ಇತಿಹಾಸತಯಾಸಮ್ಯಗ್ನಿಯೋಜ್ಯ ಕಥಯಾಧು ನಾ । ಸದ್ಭಕ್ತಾನಾಂ ಮಹತ್ವಾನಿ ವಿಸ್ತಾರಯಮಹೀತಳೇ ॥೧೧೦॥ ಅಸ ಮಂವಾಕ್ಪಟುತ್ವಂತೇ ಯಚ್ಛ್ವಾವೋವಯಮಾದರಾತ್ । ಇತಿಪ್ರಸಾದಿತೋ

---

ಬಸವದಂಡಾಧೀಶ ಮೊದಲಾದಗಣಾಧೀಶರು ಪೂರ್ವದಲ್ಲಿ ವೀರಮಾಹೇಶ್ವರರ ಕಂಡ ಕಾಣ ದ ಮಹಾವೈಭವಗಳುಳ್ಳ ಚರಿತ್ರಗಳನ್ನು ಕಿವಿಗಿಂಪಾಗಿರುವ ನುಡಿಗಳಿಂದ ವಿಶೇಷವಾಗಿ ವ ರ್ಣಿಸಿರುವರು. ॥೧೦೪॥ ನೀನುಕೂಡ ಆ ವೀರಮಾಹೇಶ್ವರರ ಅನುಗ್ರಹವನ್ನು ಪಡೆದವನಾ ದಕಾರಣ, ಸರ್ವಲೋಕಶ್ಲಾಘ್ಯವೂ ಭಕ್ತಜನಾದರಣೀಯವೂ ಪರಿಶುದ್ಧವೂ ಆದ ಬಸ ವಪುರಾಣವನ್ನು ವಿರಚಿಸಿರುವೆ. ಅದರೊಳಗೆ ಅಲ್ಲಲ್ಲಿ ಇತಿಹಾಸರೂಪವಾಗಿ ಪುರಾತನ ಭಕ್ತ ಚರಿತವನ್ನೂ ವರ್ಣಿಸಿರುವೆ. ಮತ್ತು ಚತುರ್ವೇದಸಾರಸಂಗ್ರಹ ವೆಂಬ ಗ್ರಂಥದಲ್ಲಿ ವೈದಿ ಕ ವೀರಶೈವಭಕ್ತಿಕ್ರಮವನ್ನು ನೀನು ನಿರೂಪಿಸಿರುವೆಯಲ್ಲದೆ, ಗದ್ಯಪದ್ಯಾತ್ಮಕವಾದ ನಿನ್ನ ಕಾವ್ಯಗಳಲ್ಲಿ ಬಸವೇಶನ ಸದ್ಭಕ್ತಿಯು ನೆಲೆಮನ್ನು ನಿರ್ದುಷ್ಟವಾದ ಪದಪಙ್ಕ್ತಿ ಯಿಂದ ಚೆನ್ನಾಗಿ ವಿಶದೀಕರಿಸಿರುತ್ತೀಯೆ. ಆ ಗ್ರಂಥಗಳಲ್ಲಿ ಬಸವೇಶ್ವರನ ವರ್ಣನವ ನ್ನು ಜಗದಾಶ್ಚರ್ಯಕರವಾಗುವಂತೆ ನೀನು ಹೇಗೆ ಮಾಡಿರುವೆಯೋ ಹಾಗೆಯೇ ನಮ್ಮ ಪಂ ಡಿತಾರಾಧ್ಯರ ಚರಿತ್ರವನ್ನೂ ವರ್ಣಿಸು. ಮತ್ತು ಹಿಂದೆ ಬಸವಪುರಾಣಕೃತಿಯಲ್ಲಿ ನಿ ಯೋಜಿಸದೆ ಬಿಟ್ಟಿರುವ ಪುರಾತನಭಕ್ತರ ಚರಿತ್ರಗಳನ್ನು ಕೂಡ ಈ ಚರಿತ್ರದ ಮಧ್ಯದ ಲ್ಲಿ ಇತಿಹಾಸರೂಪವಾಗಿ ಸೇರಿಸಿ ಹೇಳು. ಈ ವಿಧವಾಗಿ ಭೂಲೋಕದಲ್ಲಿ ಭಕ್ತಮಹತ್ವ ವನ್ನು ಪ್ರಕಾಶಪಡಿಸು, ನಿನ್ನ ವಾಗ್ಮಿತ್ವವು ಅಸದೃಶವಾದದ್ದೆಂದು ನಾವು ಬಲ್ಲೆವಾದುದ ರಿಂದ, ಈ ಕಾರ್ಯವನ್ನು ನೀನು ನೆರವೇರಿಸಬೇಕೆಂದು ನಾವು ಪ್ರೀತಿಪೂರ್ವಕವಾಗಿ ಹೇಳು ತ್ತೇವೆ'' ॥೧೧೦॥ ಹೀಗೆ ಆ ವೀರಮಾಹೇಶ್ವರರಿಂದ ಆಜ್ಞಪ್ತನಾಗಿ ಅನುಗೃಹಿತನಾದ ನಾನು

ಭಕ್ತ್ಯಾಃ ಪ್ರೀತ್ಯಾನಿರ್ಭರಯಾನ್ವಿತಃ ॥೧೧೧॥ ನಮಸ್ಕೃತಿತ್ರಯಂ ಸ
ಮ್ಯಕ್ಕೃತ್ವಾತೇಭ್ಯಸ್ಸಮಾಹಿತಃ। ತದ್ಭಕ್ತಕರುಣಾಪಾಂಗ ವೀಕ್ಷಣಾಮೃ
ತವಾರಿಧೌ ॥೧೧೨॥ ಕೇಳಿಸೌಖ್ಯೇ ಭಕ್ತಪಾದಾಂಭೋಜಸೌರಭಶೇಖರೇ ।
ಭಕ್ತಪಾದಾಂಬುಜರಜಃಪುಂಜಫಾಲವಿಭೂಷಣೇ ॥೧೧೩॥ ಭಕ್ತಾಂಘ್ರಿನಖ
ರಾದರ್ಶಭಾಸಮಾನಾಂಗವಿಗ್ರಹೇ । ಚಕಾಸತಿನಿಕಾಮಂತದಗ್ರತಸ್ಸೋಽಹ
ಮಬ್ರುವಂ ॥೧೧೪॥ ಜಾತೋಽಭವತ್ಕೃಪಾಪಾತ್ರಂಧನ್ಯಃ ಪುಣ್ಯೋಽಸ್ಮ್ಯ
ಹಂಕ್ಷಿತೌ । ಮದ್ವೀರಭಕ್ತಿಸ್ಥಲಸತ್ಕರ್ಮಾಣಿ ಫಲಿತಾನ್ಯಹೋ ॥೧೧೫॥ ಮ
ದ್ವಕ್ತ್ರಸ್ಯೈವ ಸದ್ಭಕ್ತಾನ್ಯಥೇಷ್ಟಂಸ್ತೌಮಿಯತ್ತತಃ । ನಿತಾಂತಂ ಮಮ
ಜಿಹ್ವಾಪಿಯಾತಾಭುವಿಪವಿತ್ರತಾಂ ॥೧೧೬॥ ಜಾತಂಮೇಜನ್ಮಸಫಲಮಿದಾ
ನೀಂಜೀವಿತೋಽಸ್ಮ್ಯಹಂ । ಶಿವಭಕ್ತಗಣಸ್ಯಾಜ್ಞಾಂಧೃತ್ವಾಶಿರಸಿಸನ್ನತಾಂ
॥೧೧೭॥ ಪ್ರೀತಿರ್ಯಥಾಶಿವಕವಿಹೃದಯೇಷು ಪ್ರಜಾಯತೇ । ತಥಾತತ್ಪಂಡಿ
ತಾರಾಧ್ಯಚರಿತ್ರಂವರ್ಣಯಾಮ್ಯಹಂ ॥೧೧೮॥

ಉಮಾಮಾತಾ ಪಿತಾರುದ್ರ, ಇತಿ ಪೌರಾಣವಾಕ್ಯತಃ । ಪ್ರಸಿದ್ಧೇಶ್ವ
ರಸದ್ವಂಶಪ್ರಸಿದ್ಧೋ ಜಗತೀತಲೇ ॥೧೧೯॥ ಬೆಲ್ದೇವಿ ವೇಮನಾರಾಧ್ಯ ಪ್ರ
ಶಿಷ್ಯಸ್ಯಕೃಪಾನಿಧೇಃ । ಗುರುಲಿಂಗಾರ್ಯಸ್ಯ ದಯಾಹಸ್ತ ಗರ್ಭಸಮುದ್ಭ

---

ಅತ್ಯಂತಾದರಪೂರ್ವಕವಾಗಿ ನಿಶ್ಚಲಚಿತ್ತದಿಂದ ಅವರುಗಳ ಪಾದಕ್ಕೆ ನಮಸ್ಕಾರತ್ರಯುವ
ನ್ನು ಮಾಡಿ, ಅವರ ಕರುಣಾಮೃತಸಮುದ್ರದಲ್ಲಿ ಕ್ರೀಡಿಸಿ ಸುಖಿಸಿ, ಅವರ ಪಾದಕಮ
ಲದ ಪರಿಮಳವನ್ನು ಶಿರಸ್ಸಿನಲ್ಲಾಂತು, ಅವರ ಪಾದಧೂಳಿಯನ್ನು ನನ್ನ ಹಣೆಗೆ ತಿಲಕ
ವನ್ನಾಗಿ ಧರಿಸಿ, ಅವರ ಪಾದ ನಖವೆಂಬ ಕನ್ನಡಿಯಲ್ಲಿ ನನ್ನ ದೇಹಸೌಂದರ್ಯವನ್ನು
ಚೆನ್ನಾಗಿ ನೋಡಿ, ಅವರಮುಂದೆ ಕೈಜೋಡಿಸಿ " ಈಗ ನಾನು ತಮ್ಮ ದಯೆಗೆ ಪಾ
ತ್ರನಾದುದರಿಂದ ಭೂಮಿಯಲ್ಲಿ ಧನ್ಯನೂ ಪರಿಶುದ್ಧನೂ ಆದೆನು. ನನ್ನ ವೀರಶೈವ
ಭಕ್ತಿಸ್ಥಲದ ಕರ್ಮಗಳೆಲ್ಲ ಫಲಿಸಿದುವು. ನನ್ನ ಈ ಬಾಯಿಂದಲೇ ಪುರಾತನ ಸದ್ಭ
ಕ್ತರನ್ನು ಯಥೇಷ್ಟವಾಗಿ ಸ್ತೋತ್ರ ಮಾಡುವೆನಾದುದರಿಂದ ನನ್ನ ನಾಲಿಗೆಯು ಕೂಡ
ಪವಿತ್ರವಾಯಿತು. ನನ್ನ ಈ ಜನ್ಮವೂ ಸಫಲವಾಯಿತು. ಈಗ ನಾನು ಬದುಕಿದೆ
ನು. ಮಹಾಶಿವಗಣರ ಅಪ್ಪಣೆಯನ್ನು ತಲೆಯಲ್ಲಾಂತು, ಶಿವಕವಿಗಳ ಚಿತ್ತವು ಸಂ
ತೋಷಗೊಳ್ಳುವಂತೆ ಪಂಡಿತಾರಾಧ್ಯಚರಿತವನ್ನು ನಾನು ವರ್ಣಿಸುವೆನು. ॥೧೧೮॥

ಪಾರ್ವತಿಯೇ ತಾಯಿ, ಪರಶಿವನೇ ತಂದೆ, ಯೆಂಬ ಪುರಾಣವಚನದಿಂದ ಪ್ರಸಿದ್ಧ
ವಾದ ಶಿವವಂಶದಲ್ಲಿ ಹುಟ್ಟಿದವನೂ, ಬೆಲ್ದೇವಿ ವೇಮನಾರಾಧ್ಯನ ಶಿಷ್ಯರ ಶಿಷ್ಯನಾದ

ವಃ ॥೧೨೦॥ ಬಸವಾಖ್ಯಪುರಾಣೋಕ್ತ ಭಕ್ತವರ್ಧಿತನಂದನಃ । ಮಹೀವಿಖ್ಯಾತಬಸವಪುರಾಣಾಹ್ವಯಪುತ್ರವಾನ್ ॥೧೨೧॥ ಬಸವೇಶಸ್ಯ ತನಯೋ ಬಸವೇಶ್ವರಗೋತ್ರಕಃ । ಬಸವಶ್ರೀಪದಾಂಭೋಜಯುಗಳಾಂಚಿತ ಮಸ್ತಕಃ ॥೧೨೨॥ ಬಸವಸ್ತುತಿನಿರ್ಮಾಣವಿನಿಯುಕ್ತಃ ಕವೀಶ್ವರಃ । ಪಾತಕೋ ಬಸವೇಶಸ್ಯ ಬಸವೇಶ್ವರಲಾಂಛನಃ ॥೧೨೩॥ ಬಸವೇಶಭುಜಿಷ್ಯಾತ್ಮಭವೋ ಬಸವಕಿಂಕರಃ । ಬಸವಪುತ್ರಭೃತ್ಯತ್ವಾನ್ನಾಮತಸ್ಯ ಜಗತ್ಪ್ರಭೋಃ ॥೧೨೪॥ ಅರ್ಹಃ ಕರ್ತುಮಹಂ ಚೆನ್ನಮಲ್ಲಿಕಾರ್ಜುನಮೇವತತ್ । ಬಸವೇಶ್ವರನಾಮಾನಂ ಕೃತ್ವಾ ಮತ್ಪ್ರಾಣನಾಯಕಂ ॥೧೨೫॥ ಪ್ರಸ್ತೂಯಮಾನೋ ಬಸವಲಿಂಗಮಿತ್ಯೇವ ಭಕ್ತಿತಃ । ಭವಿನಿರ್ಮಿತಸಸ್ಯಾದಿಧಾನ್ಯಜಾತವಿವರ್ಜಿತಃ ॥೧೨೬॥ ಭವಿದೃಷ್ಟರಸವ್ಯೂಹಪಾಕಪ್ರಭೃತಿದೂರಗಃ । ಭವಿಹಸ್ತತಳಾನೀತಶಾಕಪತ್ರಪರಾಙ್ಮುಖಃ ॥೧೨೭॥ ಭವಿನಾಂ ಭವನಕ್ಷೇತ್ರದ್ರುಮಾರ್ಥಚಯನಿಸ್ಪೃಹಃ । ಮುಕ್ತೋ ಭವಿಜನಾಲಾಪ ದರ್ಶನಸ್ಪರ್ಶನಾದಿಭಿಃ ॥೧೨೮॥ ತ್ಯಕ್ತೋ ಭವಿಜನಾದಾನದಾನಾಭ್ಯಾಂಚ ನಿರಂತರಂ । ಶುದ್ಧಭಕ್ತಿಸ್ಥಲೇವೇದ

---

ಗುರುಲಿಂಗಾರ್ಯನ ದಯಾಹಸ್ತಗರ್ಭಸಮುದ್ಭೂತನೂ, ಬಸವಪುರಾಣದಲ್ಲಿ ಉಕ್ತರಾಗಿರುವ ಪುರಾತನಭಕ್ತರ ಪಾಲನೆಯಿಂದ ಅಭಿವೃದ್ಧಿಯೊಂದಿದ ಬಸವಪುರಾಣವೆಂಬ ಹೆಸರಿನ ಮಗನುಳ್ಳವನೂ, ಬಸವೇಶ್ವರನ ಮಗನೂ, ಬಸವೇಶನ ಗೋತ್ರದವನೂ, ಬಸವೇಶನ ಸ್ತುತಿರಚನೆಯ ಉದ್ಯೋಗದಲ್ಲಿಂಸಲ್ಪಟ್ಟ ಕವೀಶ್ವರನೂ, ಬಸವರಾಜನನ್ನು ಹೊಗಳುವ ಬಂಟನೂ, ಬಸವೇಶನ ಸೇವಾಚಿಹ್ನವನ್ನು ಧರಿಸಿದವನೂ, ಬಸವಸ್ವಾಮಿಯ ಜೀತಗಾರನ ಮಗನೂ, ಬಸವದೇವನ ಸೇವಕನೂ, ಆದ ನಾನು, ಆ ಬಸವರಾಜನಿಗೆ ಬಲು ಹಳಬನಾದ ಭೃತ್ಯನಾದುದರಿಂದ, ಆ ಜಗತ್ಪ್ರಭುವಾದ ಬಸವೇಶನ ಹೆಸರನ್ನೇ ಶ್ರೀಮಲ್ಲಿಕಾರ್ಜುನನಿಗೂ ಕರೆಯುವುದಕ್ಕೆ ಅರ್ಹನಾಗಿ, ಅಂಥ ಚೆನ್ನಮಲ್ಲಿಕಾರ್ಜುನಾಭಿನ್ನನಾದ ಬಸವೇಶ್ವರನನ್ನೇ ನನ್ನ ಪ್ರಾಣನಾಯಕನನ್ನಾಗಿ ಮಾಡಿ ಆತನನ್ನು ಬಸವಲಿಂಗನೆಂಬುದಾಗಿಯೇ ಭಕ್ತಿಯಿಂದ ಹೊಗಳಿ, ಭವಿಗಳು ಬೆಳೆದ ಪೈರನ್ನೂ ಧಾನ್ಯವನ್ನೂ ತ್ಯಜಿಸಿ, ಭವಿಗಳು ನೋಡಿದ ಷಡ್ರಸಪಾಕಗಳನ್ನು ದೂರೀಕರಿಸಿ, ಭವಿಗಳ ಕೈಯಿಂದ ತಂದ ಕಾಯಿಸೊಪ್ಪುಗಳನ್ನು ಪರಿಗ್ರಹಿಸದೆ, ಭವಿಗಳ ಮನೆಯನ್ನೂ ಭೂಮಿಯನ್ನೂ ಅವರ ಮರಗಳನ್ನೂ ಅವರ ದ್ರವ್ಯವನ್ನೂ ಮುಟ್ಟದೆ, ಭವಿಗಳೊಡನೆ ಮಾತು ನೋಟ ಸ್ಪರ್ಶಗಳನ್ನು ಮಾಡದೆ, ಭವಿಜನರಿಗೆ ಕೊಡುವುದನ್ನೂ ಅವರಿಂದ ತೆಗೆದುಕೊಳ್ಳುವುದನ್ನೂ ಸಹ ಸದಾ ಬಿಟ್ಟು, ಶುದ್ಧವಾದ ವೇದೋಕ್ತ ಭಕ್ತಿಸ್ಥಲಾಚರಣೆಯಿಂದಲೂ, ವೇದಾಗಮ

ಸಂಮತಾಚಾರಸಂಚಯ್ಯೈಃ ॥೧೯॥ ಸಿದ್ಧವೀರವ್ರತಮಹಾಶೀಲಾದಿಭಿರು ದಂಚಿತಃ । ಶ್ರೀಮತ್ಪಾಲ್ಕುರ್ಕಿಸೋಮೇಶನಾಮಾಹಂ ಸರ್ವವಿತ್ತಮಃ ॥೧೩೦॥ ತಥಾಚ ಮತ್ಕೃತಿಂಶ್ರೋತುಂ ಭಾವ್ಯಮರ್ಹೇಣ ಕೇನಚಿತ್ । ತತಶ್ಶೃಣು ನತಾಮಾತ್ಯ ಶೂರಣಾಮಾತ್ಯಶೇಖರ ॥೧೩೧॥ ಸ್ತುತಾಪಾಂಗಸ್ಥಲೀಶೈತ್ಯದುಷ್ಟಸಾಂಗತ್ಯವರ್ಜಿತ । ಪ್ರಖ್ಯಾತಾಪಸ್ತಂಬಸೂತ್ರ ಸ್ಫುರದ್ಧಾರಿತಗೋತ್ರಜ ॥೧೩೨॥ ಶಿವವಿದ್ಯಾಪುಣ್ಯಯಾತ್ರಾಪವಿತ್ರನಿಜವರ್ತನ। ಬಸವೇಶಾಭ್ಯಂತರಂಗಕೃತಾರ್ಯಾಸಂಗ ಸುವ್ರತ ॥೧೩೩॥ ಅನಾಪವ್ಯವಿಲಾಸಾಂಗ ಗುಣೋತ್ತುಂಗಾತಿಮಂಗಲ । ವೀರಭಕ್ತಿಸ್ಥೈರ್ಯಧೈರ್ಯದೋರ್ವೀರ್ಯೌದಾರ್ಯ ಸುವ್ರತ ॥೧೩೪॥ ವೀರಪೂಜೇಶ್ವರಾಚಾರ್ಯಹಸ್ತಗರ್ಭಸಮುದ್ಭವ । ಚರೆಲಿಂಗೆ ಗುರೌಲಿಂಗೆ ಲಿಂಗಸಾಹಿತ್ಯನಾಮನಿ ॥೧೩೫॥ ಸಮೈಕನಿಷ್ಠಾಸಂಯುಕ್ತ ಸಚ್ಛೀಲವಿಹಿತಾದರ । ಅತಿಪ್ರೀತ್ಯಾ ಮಹೇಶಾಯ ಸಮರ್ಪ್ಯನಯನದ್ವಯಂ ॥೧೩೬॥ ತಸ್ಮಾತ್ಪುನಃ ಪ್ರಾಪ್ತನೇತ್ರ ವೀರಭಕ್ತಿವಿವರ್ಧನ । ದೃಗ್ದಾನಪುನರಾದಾನರತೆ ಸ್ತವಗುಣೋನ್ನತ ॥೧೩೭॥ ಸದ್ದಾನಧರ್ಮನಿಯತೆ ರಹಂಸಂತುಷ್ಟಮಾನಸಃ । ಅಪಿತ್ವಂ ಬಸವೇಶಸ್ಯ

---

ಸಮ್ಮತವಾದ ವೀರಶೈವಾಚಾರಗಳಿಂದಲೂ, ಪ್ರಸಿದ್ಧವಾದ ೬೪ ಶೀಲಗಳಿಂದಲೂ, ಶಿವೇತರ ದೇವತೋಪಾಸನೆಯನ್ನು ಮಾಡದ ಮಹಾವೀರವ್ರತದಿಂದಲೂ ಕೂಡಿದ ಶ್ರೀಪಾಲ್ಕುರ್ಕಿ ಸೋಮಾರಾಧ್ಯನಾಮಕನಾದ ವಿದ್ವದಗ್ರೇಸರನಾದ ನಾನು ॥೧೩೦॥ ಹೇಳುವ ಈ ಗ್ರಂಥವನ್ನು ಕೇಳುವವನು ತಕ್ಕ ಯೋಗ್ಯತಾಸಂಪನ್ನನಾಗಿರಬೇಕು. ಮಂತ್ರಿವರ್ಯ ವಂದಿತನೂ ತಂಪಾದ ಕರುಣಾಕಟಾಕ್ಷವುಳ್ಳವನೂ, ದುರ್ಜನಸಂಗ ದೂರನೂ, ಹಾರಿತ ಗೋತ್ರೋದ್ಭವನೂ, ಆಪಸ್ತಂಬಸೂತ್ರಾನುಗತನೂ, ಶೈವವಿದ್ಯಾವ್ಯಾಸಂಗವೆಂಬ ಪುಣ್ಯಯಾತ್ರೆಯಿಂದ ಪವಿತ್ರವಾದ ನಡೆಯುಳ್ಳವನೂ, ಬಸವೇಶ ಧ್ಯಾನಸಂಪನ್ನನೂ, ಆರ್ಯಜನಸಹವಾಸಿಯೂ, ಅಸದೃಶವಾದ ಲೀಲೆಗಳಿಂದಲೂ ಸದ್ಗುಣಗಳಿಂದಲೂ ಕೂಡಿದ ಮಂಗಳಮಯನೂ, ವೀರಶಿವಭಕ್ತಿ ಚಿತ್ತಸ್ಥೈರ್ಯ ಧೈರ್ಯ ಶೌರ್ಯ ಔದಾರ್ಯಗಳೇ ನಿಯಮವಾಗುಳ್ಳವನೂ, ವೀರಪೂಜೇಶ್ವರಾಚಾರ್ಯರ ಶಿಷ್ಯನೂ, ಗುರುಲಿಂಗಜಂಗಮರಲ್ಲಿ ಸಮಾನಬುದ್ಧಿಯುಳ್ಳವನೂ, ಸದಾಚಾರಾನುರಕ್ತನೂ, ಶಿವನಿಗೆ ಎರಡು ಕಣ್ಣುಗಳನ್ನೂ ಕಳೆದರ್ಪಿಸಿ ಮತ್ತೆ ಆವನಿಂದ ಪಡೆದುಕೊಂಡು ವೀರಭಕ್ತಿಯನ್ನು ತೋರ್ಪಡಿಸಿದವನೂ ಆದ ಎಲೈಶೂರಣಮಂತ್ರಿಯೆ ! ನೀನು ಶಿವನಿಗಾಗಿ ಕಣ್ಣನ್ನು ಕಳೆದು ಅರ್ಪಿಸಿ, ಮತ್ತೆ ಅದನ್ನು ಪಡೆದುಕೊಂಡುದನ್ನೂ, ನಿನ್ನ ದಾನಧರ್ಮಭಾಗ್ಯಗಳನ್ನೂ ನೋಡಿ ನಾನು ಸಂತುಷ್ಟಚಿತ್ತನಾಗಿರುವೆನು. ಮತ್ತು ನೀನು ಸದಾ ಬಸವೇಶನಿಗೆ ಸದ್ಭಕ್ತ

ಸದ್ಭಕ್ತ ಇತಿ ಸಂತತಂ ॥೧೩೮॥ ಮಮಾಪಿಸನ್ಮಿತ್ರಮಿತಿ ಮಚ್ಛಾಲಕಇತಿಪ್ರಿಯಃ । ವಿಖ್ಯಾತಶಿವಸದ್ಭಕ್ತಿಸ್ಸದ್ಬುದ್ಧಿಶ್ಶುದ್ಧಿರಾತ್ಮನಃ ॥೧೩೯॥ ಪುತ್ರಪೌತ್ರಾಭಿವೃದ್ಧಿಶ್ಚ ಪ್ರಸಿದ್ಧಿರ್ಜಗತೀತಳೇ । ಸಂಪತ್ಸಮೃದ್ಧಿ ರಿಷ್ಟಾರ್ಥಸಂಸಿದ್ಧಿಃ ಪರಮೋನ್ನತಾ ॥೧೪೦॥ ಆಯುರಾರೋಗ್ಯಸತ್ಸೌಖ್ಯಭಾಗ್ಯವೃದ್ಧಿ ರನಶ್ವರಾ । ತೇಭೂಯಾದಿತಿ ಸಂತೋಷಾದ್ವಿಧಾಯಾಶಿಷಮುತ್ತಮಾಂ ॥೧೪೧॥ ಸಂಭಾವ್ಯಚ ತ್ವಾಂ ಶ್ರೋತಾರಂ ಕೃತ್ವಾಸ್ಯಾಸ್ಸತ್ಕೃತೇರ್ಮಮ । ಪಂಡಿತಾರಾಧ್ಯಚರಿತಾಲಂಕೃತಾಂ ಕೃತಿಮಾರಭೇ ॥೧೪೨॥

ಇತ್ಯಸಂಖ್ಯಾತಮಾಹೇಶ್ವರ ದಿವ್ಯಶ್ರೀಪಾದಪದ್ಮನಿರಂತರ ಭಾವನಾ
ಪರಿರಂಜಿತ ಹೃದಯಸರೋಜಸ್ಯ ಭವ್ಯಪಶುಪಾಶಪತಿ
ಜ್ಞಾನಾನಲಭಸ್ಮೀಕೃತಾಖಿಲಭವಬೀಜಸ್ಯ
ಶ್ರೀವೀರಶೈವಮತಾಚಾರ್ಯಗುರುರಾಜಸ್ಯ
ಕೃತೌ ಶ್ರೀಮಲ್ಲಿಕಾರ್ಜುನಪಂಡಿತಾ
ರಾಧ್ಯಚರಿತೇ, ದೀಕ್ಷಾಪ್ರಕರಣೇ
ಪೀಠಿಕಾಕಥನಂನಾಮ
ಪ್ರಥಮೋಽಧ್ಯಾಯಃ.

---

ನಾಗಿರುವುದರಿಂದ ನನಗೆ ಸ್ನೇಹಿತನೂ, ನನಗೆ ಮೈದುನನಾದುದರಿಂದ ಪ್ರೀತಿಪಾತ್ರನೂ ಆಗಿರುವೆ ; ಅದುಕಾರಣ, ಈ ನನ್ನ ಕಾವ್ಯವನ್ನು ನೀನು ಕೇಳು. ' ಪ್ರಸಿದ್ಧವಾದ ಶಿವಭಕ್ತಿಯೂ, ಸನ್ಮತಿಯೂ, ಆತ್ಮಶುದ್ಧಿಯೂ, ಪುತ್ರಪೌತ್ರಾಭಿವೃದ್ಧಿಯೂ, ಜಗತ್ಪ್ರಸಿದ್ಧಿಯೂ, ಅಧಿಕವಾದಸಂಪತ್ತೂ, ಇಷ್ಟಾರ್ಥಪ್ರಾಪ್ತಿಯೂ, ಸ್ಥಿರಾಯುರಾರೋಗ್ಯ ಸೌಖ್ಯಭಾಗ್ಯಗಳೂ, ನಿನಗೆ ಲಭಿಸಲಿ; ಎಂದು ಸಂತೋಷದಿಂದ ಉತ್ತಮಾಶೀರ್ವಾದವನ್ನು ಮಾಡಿ, ನಿನ್ನನ್ನು ಈ ನನ್ನ ಉತ್ತಮ ಗ್ರಂಥವನ್ನು ಕೇಳತಕ್ಕವನನ್ನಾಗಿ ಮಾಡಿ ಸನ್ಮಾನಿಸಿ, ಪಂಡಿತಾರಾಧ್ಯ ಚರಿತ್ರದಿಂದಲಂಕೃತವಾದ ಈ ಕಾವ್ಯವನ್ನಾರಂಭಿಸುವೆನು. ||೧೪ ||

ಎಂಬಲ್ಲಿಗೆ ಶ್ರೀಗುರುರಾಜಕೃತ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ
ಎಂ. ಆರ್. ಕರಿಬಸವಶಾಸ್ತ್ರಿ ರಚಿತವಾದ ಭಾವಮಂಜರಿ
ಯೆಂಬ ಕನ್ನಡ ಟಿಪ್ಪಣದಲ್ಲಿ ಪೀಠಿಕಾ ವಿವರಣ
ರೂಪವಾದ ೧ ನೆಯ ಅಧ್ಯಾಯವು.
ಮುಗಿದುದು.

# ದ್ವಿತೀಯೋಽಧ್ಯಾಯಃ.

---

(ಪಂಡಿತಾರಾಧ್ಯೋತ್ಪತ್ತಿ ದೀಕ್ಷಾಪ್ರಾಪ್ತಿ ಕಥನಂ).

ವೀರಶೈವಮತಾಚಾರ್ಯಚಕ್ರವರ್ತೀ ನಿರಂತರಂ । ಪಾಶಸಂಮೋಚನ ಕಲಾಪಾರೀಣಃ ಸ್ವಜ್ಞಾತಿಪಃ ॥೧॥ ಸಮಸ್ತದಿಕ್ತಟವ್ಯಾಪ್ತಶುಭಕೀರ್ತಿ ಮರ್ಹೋದಯಃ । ಶಿವದೀಕ್ಷಾಭಿಜಾತಾನಾಮನುವರ್ತೀ ಮಹಾತ್ಮನಾಂ ॥೨॥ ವೀರಭಕ್ತಿಕ್ರಿಯಾನಿಷ್ಠಶ್ಚತುರ್ವೇದಾರ್ಥಪಾರಗಃ । ಸಂಸಾರವಸ್ತಕಛೇದಹೇತುಪಂಚಾಕ್ಷರೀಮನೌ ॥೩॥ ಸುಪ್ರಸಿದ್ಧಶ್ಯಮದಮಾದ್ಯುತ್ಕೃಷ್ಟೋ ವಿಜಿತೇಂದ್ರಿಯಃ । ಯಮಾದಿವ್ರತಸಂಪನ್ನ ಸ್ಸತ್ಯವಾಗುತ್ತಮೋತ್ತಮಃ ॥೪॥ ವೇದಾಗಮಪುರಾಣೇತಿಹಾಸಶಾಸ್ತ್ರೇಷುಸಂಸ್ತುತೈಃ । ಭಸ್ಮತ್ರಿಪುಂಡ್ರರುದ್ರಾಕ್ಷೈ ಸ್ಸದಾಭೂಷಿತವಿಗ್ರಹಃ ॥೫॥ ಅಂತರ್ಬಹಿರ್ದ್ವಯ ನಪೂಜಾರತಃ ಪರಮಪಾವನಃ । ಅವಾಂತರಾರ್ಯನಾಮಾಸೀನ್ಮಹೇಶ್ವರಗಣಾಗ್ರಣೀಃ ॥೬॥ ತಚ್ಛಿಷ್ಯೋಘೋರಸಂಸಾರದೂರೋ ವೀರವ್ರತೋದ್ಧ

---

## ೨ ನೆಯ ಅಧ್ಯಾಯವು.

---

ಪಂಡಿತಾರಾಧ್ಯರ ಉತ್ಪತ್ತಿ ಮತ್ತು ದೀಕ್ಷೆ.

ವೀರಶೈವಮತಾಚಾರ್ಯರಿಗೆ ಸಾರ್ವಭೌಮನಾಗಿಯೂ, ಭವಪಾಶನಿವಾರಣ ಪಂಡಿತನಾಗಿಯೂ, ಸಜ್ಜನದುಃಖಮೋಚಕನಾಗಿಯೂ, ಸರ್ವದಿಗ್ವ್ಯಾಪಿಯಶಸ್ಕನಾಗಿಯೂ, ಮಹೋನ್ನತನಾಗಿಯೂ, ಶಿವದೀಕ್ಷಾಸಂಸ್ಕೃತರಾದ ಮಹಾತ್ಮರನ್ನನುಸರಿಸಿ ನಡೆಯುವವನಾಗಿಯೂ, ವೀರಶೈವ ಭಕ್ತಿಕ್ರಿಯಾನಿಷ್ಠನಾಗಿಯೂ, ಚತುರ್ವೇದಾರ್ಥವಿದನಾಗಿಯೂ, ಜನನ ಮರಣದ ಕುಡಿಯನ್ನು ಕತ್ತರಿಸುವ ಮಹಾ ಪಂಚಾಕ್ಷರ ಮಂತ್ರದ ಅನುಷ್ಠಾನದಲ್ಲಿ ಪ್ರಸಿದ್ಧನಾಗಿಯೂ, ಅಂತರಿಂದ್ರಿಯ ಬಹಿರಿಂದ್ರಿಯ ನಿಗ್ರಹವುಳ್ಳವನಾಗಿಯೂ, ಯಮನಿಯಮಾದಿ ಅಷ್ಟಾಂಗಯೋಗ ಸಂಪನ್ನನಾಗಿಯೂ, ಸತ್ಯವಚಸ್ಕನಾಗಿಯೂ, ಸಜ್ಜನಶೇಖರನಾಗಿಯೂ, ವೇದಾಗಮಪುರಾಣಶಾಸ್ತ್ರಾದಿಗಳಿಂದ ಶ್ಲಾಘ್ಯವಾದ ಭಸ್ಮ ತ್ರಿಪುಂಡ್ರರುದ್ರಾಕ್ಷಿಗಳಿಂದ ಅಲಂಕೃತನಾಗಿಯೂ, ಅಂತರ್ಲಿಂಗ ಬಹಿರ್ಲಿಂಗಾರ್ಚನಾನುರಕ್ತನಾಗಿಯೂ, ಪರಿಶುದ್ಧನಾಗಿಯೂ, ಅವಾಂತರಾರ್ಯನೆಂಬ ಮಾಹೇಶ್ವರ ಶ್ರೇಷ್ಠನಿದ್ದನು. ॥೬॥ ಆತನ ಶಿಷ್ಯನಾಗಿಯೂ, ಭೀಕರಸಂಸಾರದೂರನಾಗಿಯೂ, ವೀರ

ರತಃ । ವೀರಶೈವಮತಾಚಾರ್ಯೋ ನಮ್ರಾರ್ಯೋಽದ್ವೈತತತ್ತ್ವವಿತ್ ॥೭॥ ನ್ಯಾಯವೈಶೇಷಿಕೋದಾತ್ತಶಾಸ್ತ್ರಚಿದ್ರಕ್ಷಣಕ್ಷಮಃ । ಕೃಪಾವಲೋಕನಾಪಾಸ್ತನಿಜಶಿಷ್ಯಮಲತ್ರಯಃ ॥೮॥ ಲಂಭಾಧಿಗತಸದ್ವೀರತಂತ್ರಸ್ವಾತಂತ್ರ್ಯಶಾಲಿಷು । ಮಂತ್ರೇಷ್ವಧಿಗತೇ ರಾಜಮಂತ್ರೇ ಸಿದ್ಧಿಮುಪಾಗತಃ ॥೯॥ ವೇದವೇದಾಂತಸಿದ್ಧಾಂತಪುರಾಣೇಷು ಸವಿಸ್ತರಂ । ಉಪಪಾದಿತಸದ್ಭಕ್ತಿರ್ವರ್ಧನೋ ವಿಜಿತೇಂದ್ರಿಯಃ ॥೧೦॥ ಅಖಂಡಕೀರ್ತಿ ರುದ್ದಂಡವಾದಿಖಂಡನಪಂಡಿತಃ । ಪಂಡಿತಾನತಪಾದಾಬ್ಜಃ ಕವಿಮಂಡಲಪೂಜಿತಃ ॥೧೧॥ ಅಭಿನವಕೋಟಿಪಲ್ಯಾಖ್ಯಗುರು ರ್ಗುರುವರೋತ್ತಮಃ । ತಚ್ಛಿಷ್ಯವರ್ಯಾಗ್ರಗಣ್ಯಃ ಶಿವಭಕ್ತಿಪರಾಯಣಃ ॥೧೨॥ ಸರ್ವಲೋಕಾರಾಧ್ಯಮೂರ್ತಿಃ ಶ್ರೀವೀರವ್ರತತತ್ಪರಃ । ಲೋಕಸಂರಕ್ಷಣಧಿಯಾ ಸರುದ್ರೋಽನಾತ್ರಸಂಶಯಃ ॥೧೩॥ ಇತ್ಯಾಗಮೋಕ್ತ್ಯಾ ಜಗತಿ ಜಾತಸ್ಸಾಕ್ಷಾನ್ಮಹೇಶ್ವರಃ । ಪಶುಯೋಗಾದ್ಯಸದ್ವಾದಚಣವಾದಿಪ್ರಭಂಜನಃ ॥೧೪॥ ಸಾಕ್ಷಾತ್ಕೃತೋವೀರಭದ್ರಃ ಪಾಶಧ್ವಂಸನಕೋವಿದಃ । ಅಭ್ರಂಕಷೋಜ್ಜ್ವಲಾದಭ್ರಶುಭ್ರಸತ್ಕೀರ್ತಿವಿಭ್ರಮಃ

---

ಶೈವಮತಾಚರಣಧುರೀಣನಾಗಿಯೂ, ವೀರಶೈವಸಮಯಾಚಾರ್ಯನಾಗಿಯೂ, ಆರ್ಯಜನಗಳಿಂದ ವಿನತನಾಗಿಯೂ, ಅದ್ವೈತರಹಸ್ಯವನ್ನು ಬಲ್ಲವನಾಗಿಯೂ, ತರ್ಕ ವೈಶೇಷಿಕ ಶಾಸ್ತ್ರಜ್ಞಾನಪರಿಪಾಲಕನಾಗಿಯೂ, ಕೃಪಾದೃಷ್ಟಿಯಿಂದ ತನ್ನ ಶಿಷ್ಯರ ಆಣವಾದಿ ಮಲತ್ರಯವನ್ನು ನಾಶಗೊಳಿಸಿದವನಾಗಿಯೂ, ವೇದವಿಹಿತವಾದ ವೀರಶೈವಸಿದ್ಧಾಂತದಲ್ಲಿ ಸ್ವಾತಂತ್ರ್ಯವನ್ನು ಪಡೆದಿರುವ ಸಕಲ ಮಂತ್ರಗಳಿಗೂ ಅರಸಾದ ಷಡಕ್ಷರ ಮಂತ್ರದ ಸಿದ್ಧಿಯನ್ನು ಪಡೆದವನಾಗಿಯೂ, ವೇದವೇದಾಂತ ಸಿದ್ಧಾಂತ ಪುರಾಣಪ್ರತಿಪಾದಿತವಾದ ಶಿವಭಕ್ತಿಯನ್ನು ಅಭಿವೃದ್ಧಿಗೊಳಿಸುವವನಾಗಿಯೂ, ಇಂದ್ರಿಯಗಳನ್ನು ಜೈಸಿದವನಾಗಿಯೂ, ಪರಿಪೂರ್ಣಯಶಸ್ಕನಾಗಿಯೂ, ಸಮರ್ಥರಾದ ಪರವಾದಿಗಳನ್ನು ಭಂಗಿಸಿದವನಾಗಿಯೂ, ವಿದ್ವಜ್ಜನವಂದಿತ ಪಾದವುಳ್ಳವನಾಗಿಯೂ, ಕವಿಸಮೂಹದಿಂದಪೂಜ್ಯನಾಗಿಯೂ, ಒಪ್ಪುವ ಕೋಟಿಪಲ್ಯನೆಂಬ ಗುರುವರನಿದ್ದನು. ॥೧೧॥ ಆತನ ಶಿಷ್ಯರೆಲ್ಲೆಲ್ಲ ಪ್ರಮುಖನಾದವನೇ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನು. ಆತನು ಶಿವಭಕ್ತಿತತ್ಪರನೂ, ಸರ್ವಲೋಕಪೂಜ್ಯನೂ, ವೀರಶೈವವ್ರತನಿರತನೂ, ಲೋಕರಕ್ಷಣಾರ್ಥವಾಗಿ ಆಗಾಗ್ಗೆ ನಾನೇ ಭೂಮಿಯಲ್ಲಿ ಅವತರಿಸುವೆನೆಂದು ಶಿವನು ಆಗಮಗಳಲ್ಲಿ ಹೇಳಿರುವಂತೆಯೇ ಭೂತಲದಲ್ಲಿ ಹುಟ್ಟಿರುವ ಸಾಕ್ಷಾತ್ಪರಶಿವನೂ, ಕರ್ಮಯೋಗಾದಿ ದುರ್ವಾದಿಗಳನ್ನು ಧ್ವಂಸಮಾಡುವುದರಲ್ಲಿ ಪ್ರತ್ಯಕ್ಷವೀರಭದ್ರನೂ, ಮಾಯಾಪಾಶವನ್ನು ಕತ್ತರಿಸಿಡುವನೂ, ಮೇಘಮಂಡಲದವರೆಗೂ ವ್ಯಾಪಿಸಿರುವ ಕೀರ್ತಿ

॥೧೫॥ ಶಾಪಾನುಗ್ರಹದಕ್ಷೋಽಘವಿಧ್ವಂಸನವಿಚಕ್ಷಣಃ । ಪಂಚಾಕ್ಷರೀಮಂತ್ರರಾಜಪರಿಶೀಲನತತ್ಪರಃ ॥೧೬॥ ವಾವದೂಕಾನ್ಯಸಮಯವಾಗ್ಬಂಧನವಿಶಾರದಃ । ಶಿವಭಕ್ತಾನನಮ್ರಾತಜಲಜಾತನವಾತಪಃ ॥೧೭॥ ಶೈವೇ ದಶಪ್ರತ್ಯಯಾ ಇತ್ಯೇತದ್ವಾಕ್ಯಾನುಸಾರತಃ । ದಶಪ್ರತ್ಯಯಯುಗ್ಧನ್ಯೋ ಮಾನ್ಯೋಽಭೂದ್ದೇಶಿಕೋತ್ತಮಃ ॥೧೮॥ ಶ್ರೀಮಲ್ಲಿಕಾರ್ಜುನಾರಾಧ್ಯನಾಮೇಹ ಜಗತೀತಳೇ । ಮಜ್ಜಿಹ್ವಾಂ ಪಾವನೀಕರ್ತುಂ ವಕ್ಷ್ಯತೇತಜ್ಜನಿಕ್ರಮಃ ॥೧೯॥ ಕೃತ್ವಾ ಬಸವನಾಮಾನಂ ವೃಷಾಧೀಶಮುಮಾಪತಿಃ । ಸದ್ಭಕ್ತಿವರ್ಧನಾರ್ಥಾಯ ಪ್ರಮಥಾನುಮತೇರಥ ॥೨೦॥ ಭುವಂ ಪ್ರತಿಪ್ರೇಷಣಸ್ಯ ಸಮಯೇ ಮುಕ್ತಿದಾಯಿನೀಂ । ಸ್ವಕೀಯಪಾದಯೋರ್ಭಕ್ತಿಂ ಸರ್ವಜ್ಞತ್ವಂ ಚ ನಂದಿನಃ ॥೨೧॥ ದುರ್ವಾಸಸಶ್ಶಾಪಶಕ್ತಿಂ ನಿಷ್ಠಾಂ ಭೃಂಗೀಶಿತುಸ್ಸ್ಥಿರಾಂ । ವಾಗ್ವೈಖರೀಮಸದೃಶೀಂ ಮಕ್ಷಪಾದಮಹಾಮುನೇಃ ॥೨೨॥ ರುದ್ರಪ್ರಮಥ

---

ವೈಭವವುಳ್ಳವನೂ, ಶಾಪಾನುಗ್ರಹಸಮರ್ಥನೂ, ಪಾಪವಿನಾಶಕನೂ, ಪಂಚಾಕ್ಷರೀಮಹಾಮಂತ್ರ ರಹಸ್ಯವಿಚಾರಕನೂ, ಸಭಾಮುಖದಲ್ಲಿ ಅತ್ಯಂತವಾಗ್ಮಿಗಳಾದ ಪರವಾದಿಗಳನ್ನೆಲ್ಲ ಮೂಕಾಡಗೊಳಿಸಿದವನೂ, ಶಿವಭಕ್ತರಿಗೆ ಉಲ್ಲಾಸಪ್ರದನೂ ಜ್ಞಾನರೂಪದಿಂದ ಅಣಿಮಾದ್ಯಷ್ಟಸಿದ್ಧಿಗಳಿ ಸೈದಿರುವುದು, ನಿರ್ಬೀಜಕರಣ (ಸಕಲವಸ್ತುಸತ್ವವನ್ನು ಮುರಿಯುವುದು) ವಿಷವನ್ನು ನಿವಾರಿಸುವುದು, ಜಾಠರಾಗ್ನಿಯನ್ನು ಬೆಳಸುವುದು, ನಾಡಿಯಲ್ಲಿ ವಾಯುಗತಿಯನ್ನು ತಡೆದುಕೊಂಡಿರುವುದು, ಬಿಂದುನಾದಗಳಸಿದ್ಧಿ, ಪರಕಾಯಪ್ರವೇಶ, ಹೊಗೆಯಂತೆ ಕಾಣಿಸಿಕೊಳ್ಳುವುದು. ಬೆಳಕಿನಂತೆ ತೋರ್ಪಡುವುದು, ಮೃತ್ಯುವು ತನ್ನಧೀನವಾಗಿರುವಂತೆ ಮಾಡಿಕೊಂಡಿರುವುದು. ಎಂಬ * ಹತ್ತು ತೆರದ ಪ್ರತ್ಯಯಗಳಿಂದ ಕೂಡಿದವನೂ, ಕೃತಾರ್ಥನೂ, ಪೂಜ್ಯನೂ ಆಗಿದ್ದನು. ॥೧೮॥ ನನ್ನ ನಾಲಿಗೆಯನ್ನು ಪವಿತ್ರಮಾಡಿಕೊಳ್ಳುವುದಕ್ಕಾಗಿ ಆ ಆಚಾರ್ಯವರ್ಯನ ಉತ್ಪತ್ತಿಕ್ರಮವನ್ನು ಹೇಳುವೆನು— ಪೂರ್ವದಲ್ಲಿ ಪರಶಿವನು ಭೂಲೋಕದಲ್ಲಿ ಶಿವಭಕ್ತಿಯನ್ನು ವೃದ್ಧಿಗೊಳಿಸುವುದಕ್ಕಾಗಿ ಪ್ರಮಥರ ಸಮ್ಮತಿಯಿಂದ ವೃಷಭೇಶ್ವರನನ್ನು ಬಸವನೆಂಬ ಹೆಸರುಳ್ಳವನನ್ನಾಗಿ ಮಾಡಿ ಕಳಿಸಿಕೊಡುವ ಸಮಯದಲ್ಲಿ, ನಂದೀಶ್ವರನ ಮುಕ್ತಿಪ್ರದವಾದ ಶಿವಭಕ್ತಿಯನ್ನೂ, ಸರ್ವಜ್ಞತೆಯನ್ನೂ, ದುರ್ವಾಸನ ಶಾಪಶಕ್ತಿಯನ್ನೂ, ಭೃಂಗೀಶ್ವರನ ಶ್ರದ್ಧೆಯನ್ನೂ, ಗೌತಮಮಹರ್ಷಿಯ ಅಸಾಧಾರಣವಾದ

---

* ಅಣಿಮಾದ್ಯಷ್ಟಸಿದ್ಧಿಶ್ಚ ಜ್ಞಾನರೂಪೇಣ ಸಿದ್ಧ್ಯತಿ । ನಿರ್ಬೀಜಕರಣಂ ಚೈವ ವಿಷಾಪಹರಣಂ ತಥಾ ॥ ವಹ್ನೇರುಜ್ಜ್ವಲನಂ ಚೈವ ನಾಡ್ಯಾಂ ವಾಯೋರ್ಜಯಸ್ತಥಾ । ಸದ್ಬಿಂದುನಾದಮತುಳಂ ದೇಹಸಂಕ್ರಮಣಂ ತಥಾ ॥ ಧೂಮಜ್ಯೋತಿರ್ದರ್ಶನಂ ಚ ಸ್ವಚ್ಛಂದಂ ಮೃತ್ಯುಕಾರ್ಯಕಂ । ದಶಪ್ರತ್ಯಯಮೇವಂ ಚ (ಪರಾಪರಪ್ರಕಾಶಿಕಾಯಾಂ)

ಸಂದೋಹಸ್ಯಪ್ರಸಾದೈಕರತಿಂ ಪರಾಂ । ಪುರಾತನಾನಾಂ ನೂತ್ನಾನಾಂ ಭಕ್ತಾನಾಮತಿಮಾನುಷಂ ॥ ೨೩॥ ದೃಷ್ಟಪ್ರತ್ಯಯಮಾಹಾತ್ಮ್ಯಂ ಭುವನತ್ರಯವಿಶ್ರುತಂ । ಉಪಮನ್ಯೋಸ್ಸದ್ಗುರುತ್ವಂ ವೀರಭದ್ರಸ್ಯಶೂರತಾಂ ॥ ೨೪॥ ಆದಾಯಮೂರ್ತಿಂನಿರ್ಮಾತುಮೇಕಾಂ ಚಿಂತಯತೀಶ್ವರೇ । ಪ್ರಣಿಪತ್ಯಸ್ಥಿತಾಂಮೂರ್ತಿಂ ತಾಂದೃಷ್ಟ್ವಾಥಮುದಾಶಿವಃ ॥ ೨೫॥ ವೇದಾಗಮಾದಿವಿಜ್ಞಾನಂ ತಸ್ಯೈದತ್ವೇದಮಬ್ರವೀತ್ । ಪ್ರಮಥಾನನಪಾಥೋಜಸಮೂಹೇಷು ಸಮಂತತಃ ॥ ೨೬॥ ವಿಕಾಸಮುಪಯಾತೇಷು ಪ್ರಕಾಮಮತಿಹರ್ಷತಃ । ಅನುಗಚ್ಛತ್ವಮಪ್ಯೇನಂ ಕುಮಾರಂಬಸವೇಶ್ವರಂ ॥ ೨೭॥ ತ್ವಯಾನಿರಂತರಂಕಾರ್ಯಂ ಮದ್ಭಕ್ತಪರಿಪಾಲನಂ । ಅಂಗೀಕೃತ್ಯತನುಂಲೋಕಪೂಜ್ಯಾಂ ಪ್ರಾಪ್ಯಧರಾಮಹಂ ॥ ೨೮॥ ಕೃತ್ವಾಭವಂತಂಸಚ್ಛಿಷ್ಯಂ ಸುಶಿಕ್ಷ್ಯಪರಿರಕ್ಷ್ಯಚ । ಶಿಷ್ಯಪ್ರಶಿಷ್ಯೈರ್ವಿಖ್ಯಾತಂ ವಿಧಾಯಜಗತೀತಳೇ ॥ ೨೯॥ ಜಗದ್ಗುರುತ್ವಮಕ್ಷೀಣವೈಭವಂ ಸ್ವಮತಾವನೇ । ಪರಪಕ್ಷಪ್ರತಿಕ್ಷೇಪೇ ಪಾಂಡಿತ್ಯಮತಿಮಾನುಷಂ ॥ ೩೦॥ ವೀರಭಕ್ತಿಸ್ಥಲಾಚಾರವ್ರತಾನುಷ್ಠಾನನಿಷ್ಠತಾಂ। ಶಿವಮಾಹಾತ್ಮ್ಯಸಂಸ್ಥಾಪಿವಚಸ್ಸಿದ್ಧಿಮಪಿ ಸ್ಥಿರಾಂ ॥ ೩೧॥ ವೇದವೇ:

---

ವಾಗ್ವೈಖರಿಯನ್ನೂ, ರುದ್ರರುಗಳ ಮತ್ತು ಪ್ರಮಥರುಗಳ ಶಿವಪ್ರಸಾದಾಸಕ್ತಿಯನ್ನೂ, ಪುರಾತನರೂ ನವೀನರೂ ಆದ ಭಕ್ತರುಗಳ ದೃಷ್ಟಾಂತಸಿದ್ಧವಾದ ಸಕಲಲೋಕವಿಖ್ಯಾತವಾದ ಅಮಾನುಷ ಮಹಿಮೆಯನ್ನೂ, ಉಪಮನ್ಯುವಿನ ಗುರುತ್ವವನ್ನೂ, ವೀರಭದ್ರನ ಪರಾಕ್ರಮವನ್ನೂ ತೆಗೆದುಕೊಂಡು, ಬಂದು ಆಕಾರವನ್ನು ಮಾಡಬೇಕೆಂದು ಯೋಚಿಸಲು, ಆ ಸಂಕಲ್ಪಮಾತ್ರದಿಂದಲೇ ಸಿದ್ಧವಾಗಿ ಮುಂದೆ ಬಂದು ನಮಸ್ಕರಿಸಿ ನಿಂತಿದ್ದ ಮೂರ್ತಿಯನ್ನು ಶಿವನು ನೋಡಿ, ಸಂತೋಷಿಸಿ, ವೇದಾಗಮಾದಿ ರಹಸ್ಯವನ್ನೆಲ್ಲಾ ಅದಕ್ಕೆ ಬೋಧಿಸಿ, "ಎಲೆ ಮೂರ್ತಿಯೆ! ಬಸವೇಶನು ಭೂಲೋಕದಲ್ಲವತರಿಸಿ, ಪ್ರಮಥ ಸಮೂಹಕ್ಕೆ ಬೇಡಿದುದನ್ನು ಕೊಡುತ್ತ ಸಂತೋಷಪಡಿಸಿಕೊಂಡಿರುವನು. ನೀನೂ ಕೂಡ ಅವನಂತೆಯೇ ಭೂಲೋಕದಲ್ಲಿ ನನ್ನ ಭಕ್ತರ ಪರಿಪಾಲನವನ್ನು ಮಾಡಬೇಕು. ॥ ೨೭ ॥ ನಾನು ಲೋಕಪೂಜ್ಯವಾದ ದೇಹವನ್ನು ಧರಿಸಿ ಭೂಮಿಗೆ ಬಂದು, ನಿನ್ನನ್ನು ಶಿಷ್ಯನನ್ನಾಗಿ ಮಾಡಿಕೊಂಡು, ಶಿಕ್ಷೆರಕ್ಷೆಗಳನ್ನು ಮಾಡಿ ಶಿಷ್ಯಪ್ರಶಿಷ್ಯರ ಸಮೂಹದಿಂದ ಪ್ರಸಿದ್ಧನಾಗುವಂತೆಸಗಿ, ಸ್ವಮತಪರಿಪಾಲನದಲ್ಲಿ ಸ್ಥಿರಪ್ರಭಾವವುಳ್ಳ ಜಗದ್ಗುರುತ್ವವನ್ನೂ. ಪರವಾದವನ್ನು ಖಂಡಿಸುವಲ್ಲಿ ಮಾನುಷಶಕ್ತಿಗೆ ಮೀರಿದ ಪಾಂಡಿತ್ಯವನ್ನೂ, ವೀರಶೈವಭಕ್ತಿಸ್ಥಲಾಚರಣನಿಷ್ಠೆಯನ್ನೂ, ಶಿವಮಾಹಾತ್ಮ್ಯವನ್ನುಸಿದ್ಧಾಂತಗೊಳಿಸುವುದರಲ್ಲಿಅಳಿವಿಲ್ಲದ·ವಾಕ್ಸಿದ್ಧಿಯನ್ನೂ, ವೇದವೇದಾಂತಾ

ದಾಂತಸಿದ್ಧಾಂತಸಮರ್ಥಿತಮಹೋನ್ನತೇಃ । ಮತ್ಪ್ರಸಾದವಿಶೇಷಸ್ಯ ಪ್ರತಿಪಾದನಶೇಮುಷೀಂ॥ ೩೨॥ ಕಲಾಪ್ರಾಪ್ತಿಂ ಭುವಿ ಶಿವತತ್ವಸಾರಸಮಂಚಿತಾಂ । ದೃಷ್ಟಪ್ರತ್ಯಯಮಾಹಾತ್ಮ್ಯಂ ಶಿವಯೋಗಸ್ಯಸಂಪದಂ ॥೩೩॥ ಶಾಪಾನುಗ ಹಸಾಮರ್ಥ್ಯಂ ವಿಷಯಾದಿವಿರಾಗತಾಂ । ಘೋರನಿಸ್ಸಾರಸಂಸಾರವಾರಾಶಿತರಣಿಂಮತಿಂ ॥ ೩೪॥ ಅದಾಶಿಷಂತನಸವ ರಾಧಿತೆ ಧರಣೀತಲೆ । ವ್ಯಂಗಿನಾಮಕದೇಶಸ್ಯ ತಿಲಕಂಸಮುದಂಚಿತಂ ॥ ೩೫॥ ಅಕ್ಷೀಣಲಕ್ಷ್ಮೀವಿಭವಂ ದ್ರಾಕ್ಷಾರಾಮಾಭಿಧಂಪುರಂ । ತತ್ರಲಿಂಗಂಪ್ರವಸತಿ ಶ್ರೀಭೀಮೇಶ್ವರಸಂಜ್ಞಿತಂ॥ ೩೬॥ಪುರೋಧಾಸ್ತಸ್ಯದೇವಸ್ಯ ಜ್ಞಾನವಾನ್ಭಕ್ತಸತ್ತಮಃ। ಪಾಣಸಾನ್ವಯಜೋವಿಪ್ರೋ ನಾಮ್ನಾಭೀಮನಪಂಡಿತಃ ॥ ೩೭॥ ಸೇವಮಾನಸ್ಸುತಾರ್ಥೀ ಮಾಂ ದಿವ್ಯಪಂಚಾಕ್ಷರೀಮನೋಃ । ಪುರಶ್ಚರಣಸಂದೋಹಂ ವಿಧಾಯಾಸಕೃದದ್ಯಹಿ ॥೩೮॥ ಪುರಶ್ಚರಣಮೇಕಂ ಶ್ರೀಮಲ್ಲಿಕಾರ್ಜುನಸನ್ನಿಧೌ।ಕುರ್ವನ್ನಾಸ್ತೆ ಶ್ರೀಗಿರೀಂದ್ರೆ ತಸ್ಯ ತ್ವಂ ತನಯೋಭವ॥ ೩೯॥ ಏವಮುಕ್ತೆ ಪುರಭಿದಾ ಪ್ರಣಮ್ಯತಮಥಾಗತಃ । ಗೌರಾಂಬಾಯಾ ಭೀಮನಾರ್ಯಭಾರ್ಯಾಯಾ ಗರ್ಭತೋಽಜನಿ॥ ೪೦॥ಕತೋರನಾತ್ಮಜಗಪಿತರಪ್ರ

---

ದಿಗಳಿಂದ ಸಾಧಿಸಲ್ಪಟ್ಟ ಔತ್ಕೃಷ್ಟ್ಯವುಳ್ಳ ನನ್ನ ಪ್ರಸಾದದ ಮಹತ್ವವನ್ನು ವಿಸ್ತರಿಸುವ ಬುದ್ಧಿಯನ್ನೂ, ಶಿವಜೀವೈಕ್ಯಬೋಧಕವಿದ್ಯಾಪಾಂಡಿತ್ಯವನ್ನೂ, ಪ್ರತ್ಯಕ್ಷಗೋಚರವಾದ ದಶಪ್ರತ್ಯಯರೂಪಮಹಿಮೆಯನ್ನೂ, ಶಿವಯೋಗಸಂಪತ್ತನ್ನೂ. ಶಾಪಾನುಗ್ರಹಸಾಮರ್ಥ್ಯವನ್ನೂ, ಸ್ರಕ್ಚಂದನವನಿತಾದಿಗಳಲ್ಲಿ ವೈರಾಗ್ಯವನ್ನೂ, ಭೀಕರಸಂಸಾರಸಾಗರವನ್ನು ದಾಟಿಸುವ ಬುದ್ಧಿಯನ್ನೂ. ನಿನಗೆ ಅನುಗ್ರಹಿಸುವೆನು ॥೩೪॥ ಭೂಲೋಕದಲ್ಲಿ ದ್ರಾಕ್ಷಾರಾಮವೆಂಬ ಪಟ್ಟಣವು ವ್ಯಂಗಿ ಎಂಬ ದೇಶಕ್ಕೆ ತಿಲಕಪ್ರಾಯವಾಗಿಯೂ, ಸಂಪದ್ವೈಭವಪೂರ್ಣವಾಗಿಯೂ, ಇರುವುದು. ಅಲ್ಲಿ ಭೀಮೇಶ್ವರನೆಂಬ ಲಿಂಗವಿರುವುದು. ಆ ದೇವನ ಪುರೋಹಿತನಾದ ಭೀಮನಪಂಡಿತನೆಂಬ ಬ್ರಾಹ್ಮಣನು ಭಕ್ತಾಗ್ರಗಣ್ಯನಾಗಿಯೂ, ಪಾಣಸವಂಶೋದ್ಭೂತನಾಗಿಯೂ ಇರುವನು. ಆತನು ಶ್ರೀಶೈಲದಮಲ್ಲಿಕಾರ್ಜುನ ಲಿಂಗದ ಸನ್ನಿಧಿಯಲ್ಲಿ ಪುತ್ರಾಪೇಕ್ಷೆಯಿಂದ ನನ್ನನ್ನು ಸೇವಿಸುತ್ತ ಅನೇಕಾವೃತ್ತಿ ಪಂಚಾಕ್ಷರೀಮಂತ್ರಪುರಶ್ಚರಣವನ್ನು ಮಾಡಿ ಈಗಲೂ ಪುನಶ್ಚರಣಮಾಡುತ್ತಿರುವನು. ನೀನು ಅವನಿಗೆ ಮಗನಾಗಿ ಹುಟ್ಟು "ಎಂದು ನುಡಿಯಲು, ಆ ಮೂರ್ತಿಯು ಪರಶಿವನಿಗೆ ನಮಸ್ಕರಿಸಿ, ಅಲ್ಲಿಂದ ಹೊರಟು, ಆ ಭೀಮನಪಂಡಿತನ ಪತ್ನಿಯಾದ ಗೌರಾಂಬಿಕೆಯ ಹೊಟ್ಟೆಯಲ್ಲಿ ಜನಿಸಿದನು. ॥೪೦॥ ತನ್ನನ್ನಾಶ್ರಯಿಸಿದವರಿಗೆ ಶರಣನಾದ ಮಾ

ಷಿಕರ್ಮಹೃತ್ । ಮಲ್ಲಿಕಾರ್ಜುನಕೀರ್ತೇಶ್ಶ್ರೀಗಿರೀಶಸ್ಯ ಜಗತ್ಪ್ರಭೋಃ ॥೪೧॥ ಮಲ್ಲಿಕಾರ್ಜುನದೇವಸ್ಯ ನಾಮ ಪಿತ್ರಾಸ್ಯಯತ್ಕೃತಂ । ತಸ್ಮಿನ್ಮಹೀತಲೇಖ್ಯಾತೋ ಮಲ್ಲಿಕಾರ್ಜುನಇತ್ಯಯಂ ॥೪೨॥ ಅಪಾಸ್ತಾಘತತೇಃ ಕೋಟಿಪಲ್ಯಾರಾಧ್ಯಸ್ಯ ಸದ್ಗುರೋಃ । ದಯಾವಲೋಕನಸುಧಾವಾರ್ಧಿಮಧ್ಯನಿಮಜ್ಜನಾತ್ ॥೪೩॥ ಕ್ಷಾಳಯಿತ್ವಾಪೂರ್ವಜನ್ಮಮಲಪಂಕ ಮಶೇಷತಃ । ಶ್ರೀವೀರಭಕ್ತಿದೀಕ್ಷಾದಿವಿಧಿನಾ ಮೋಕ್ಷದಾಯಿನಾ ॥೪೪॥ ಧೃತ್ವಾ ಸಮ್ಯಕ್ಸಮಸ್ತಾನಾಂ ಕ್ರಿಯಾಣಾಂ ಶುದ್ಧಿಮುತ್ತಮಾಂ । ಹಿರಣ್ಯಗರ್ಭಲಿಖಿತಾಳಿಕದುರ್ವರ್ಣಹಾರಿಣಾ ॥೪೫॥ ಭೂತ್ವಾಭಸ್ಮಾಭಿಷೇಕೇಣ ಪಟ್ಟಬದ್ಧೋಽತಿಶೋಭಿನಾ । ಶಸ್ತಸದ್ಗುರುಹಸ್ತಸ್ವಮಸ್ತಕಖ್ಯಾತಯೋಗತಃ ॥೪೬॥ ಪಾಂಚಭೌತಿಕಸಂಶುದ್ಧಿಂ ಭಾವಶುದ್ಧಿಮವಾಪ್ಯಚ । ಗುರುಕಾರುಣ್ಯಸಂಪ್ರಾಪ್ತಮೂಲಮಂತ್ರಾಮೃತೈರ್ನವೈಃ ॥೪೭॥ ಪೂರ್ಣಸ್ವಕರ್ಣಕಲಶಸಂಗತೇ ರೂಪಜಾತಯಾ । ಪಶುಪಾಶಪತಿಜ್ಞಾನದೃಷ್ಟ್ಯಾ ಚೇತಸಿಸುಸ್ಥಿತಂ ॥೪೮॥ ಮಾಯಾತಮಸ್ಸಮುತ್ಸಾರ್ಯ ನಿವಾರಯಿತುಮಕ್ಷಮಂ । ಶ್ರೀದೇಶಿಕದಯಾಪ್ರಾಪ್ತಜ್ಞಾನೋದ್ಯನ್ಮಂತ್ರಹೃದ್ಗತೇ ॥೪೯। ಲಿಂಗೇನಿಯುಕ್ತಾಂಗಲಿಂಗೆ ಮಿಶ್ರಿತಾನಾಂವಿಶೇಷತಃ । ಪ್ರಾಣಾನಾಂ ಖ್ಯಾತಸಂಬಂಧವಿಜ್ಞಾನಾ

---

ತೃಗರ್ಭಕುಂಭವನ್ನು ಮತ್ತೆ ಹುಗದಂತೆ ಮಾಡುವ (ಜನ್ಮೋತ್ತಾರಕ) ಈ ಕುಮಾರನಿಗೆ ತಂದೆಯು ಶ್ರೀಶೈಲನಾಥನಾದ ಮಲ್ಲಿಕಾರ್ಜುನಸ್ವಾಮಿಯ ಹೆಸರನ್ನೇ ಕರೆದುದರಿಂದ "ಮಲ್ಲಿಕಾರ್ಜುನ" ಎಂದು ಲೋಕದಲ್ಲಿ ವಿಖ್ಯಾತನಾದನು. ಈತನು ಪಾಪದೂರನಾದ ಕೋಟಪಲ್ಯನೆಂಬ ಗುರುವನ್ನಾಶ್ರಯಿಸಲು, ಆತನ ಕೃಪಾಲೋಕನಾಮೃತಸಮುದ್ರದಲ್ಲಿ ಮುಳುಗಿ, ತನ್ನ ಪೂರ್ವಜನ್ಮಸಿದ್ಧವಾದ ಮಲತ್ರಯ ವೆಂಬ ಕೆಸರನ್ನು ತೊಳೆದುಕೊಂಡು, ಮೋಕ್ಷಪ್ರದವಾದ ವೀರಶೈವ ದೀಕ್ಷಾಸಂಸ್ಕಾರದಿಂದ ಸಕಲ ಕ್ರಿಯಾಶುದ್ಧಿಯನ್ನುತಾಳಿ, ಕೆಟ್ಟ ಹಣೆಯಬರಹವನ್ನು ತೊಡೆಯುವ ಭಸ್ಮಸ್ನಾನವನ್ನಾಚರಿಸಿ ಪಟ್ಟಬದ್ಧನಾಗಿ, ಗುರುವು ಹಸ್ತಮಸ್ತಕಸಂಯೋಗವನ್ನು ಮಾಡಿದುದರಿಂದ ಪಾಂಚಭೌತಿಕ ದೇಹಶುದ್ಧಿಯನ್ನೂ ಭಾವಶುದ್ಧಿಯನ್ನೂ ಪಡೆದು, ಗುರುಕಾರುಣ್ಯದಿಂದ ಪಡೆದ ಮೂಲಮಂತ್ರವೆಂಬ ಅಮೃತದಿಂದ ತನ್ನ ಕರ್ಣವೆಂಬ ಕಲಶವನ್ನು ತುಂಬಿ, ಅದರಿಂದ ಪಶುಪಾಶಪತಿಯೆಂಬ ಮೂರು ಪದಾರ್ಥಗಳ ಅರಿವು ಹುಟ್ಟಲು, ಆ ಜ್ಞಾನದೃಷ್ಟಿಯಿಂದ ತನ್ನ ಮನಸ್ಸಿನಲ್ಲಿ ಆವರಿಸಿದ್ದ ದುರ್ನಿವಾರವಾದ ಅಜ್ಞಾನನೆಂಬ ಕತ್ತಲೆಯನ್ನು ತೊಲಗಿಸಿ, ಶ್ರೀಗುರುಕರುಣಾ ಪ್ರಾಪ್ತವಾದ ಜ್ಞಾನಮಂತ್ರಗಳ ಹೃದಯಗತವಾದ ಲಿಂಗವು ದೇಹದಲ್ಲಿ ಧರಿಸಲ್ಪಡಲು, ಲಿಂಗಾಂಗಸಂಯೋಗರಹಸ್ಯವನ್ನರಿತು, ಲಿಂಗದಲ್ಲಿ ಪ್ರಾ

ತ್ವಾ ಪ್ರಪ್ತಜನ್ಮಸಃ ॥೫೦॥ ಲಿಂಗಪ್ರಾಣಪ್ರಾಣಲಿಂಗಮಥನಾದುಪಶೋಭಿನಃ। ಪ್ರಸಾದಾನುಭವೇನೋಽಚ್ಛಿನ್ನೈಃ ಪ್ರಮತ್ತೇಂದ್ರಿಯಸಂಹತೇಃ ॥೫೧॥ ಅವಧಾನಂಚ ವಿಷಯೇತರಸೌಖ್ಯಾನ್ಯದುತ್ತಮಂ । ಅವಧಾನಂಚ ತಚ್ಛಕ್ತಿಂಲಬ್ಧ್ವಾ ಸರ್ವಾತಿಶಾಯಿನೀಂ॥೫೨॥ ಗಳದ್ವಿಧಿನಿಷೇಧೇನ ವೀರಶೈವೋಕ್ತವರ್ತ್ಮನಾ । ಶರೀರಮರ್ಥಂಪ್ರಾಣಾಂಶ್ಚ ಸದ್ಗುರುಭ್ಯೋನಿವೇದಯೇತ. ॥೫೩॥ ಇತ್ಯಾಗಮೋಕ್ತವಿಧಿನಾ ಸ್ವಸ್ಯದೇಹಂ ಧನಾನ್ಯಸೂನ್। ಕೃಪಾಲೋಕನಮಾತ್ರೇಣ ಸ್ವಸ್ಯಪ್ರಗ್ಘನನಾಶಿನಃ ॥ ೫೪ ॥ ಭವಿಷ್ಯದ್ಭವಸಂಹರ್ತು ರಶೇಷಭವಹಾರಿಣಃ । ಸಾಕ್ಷಾದ್ಭವಸ್ಯವಿಜಿತಭಾವಜಸ್ಯಾಭವಸ್ಯಚ ॥ ೫೫ ॥ ಕೋಟಿಪಲ್ಯಾರಾಧ್ಯಗುರೋ ಶ್ರೀಪಾದಾಭ್ಯಾಂಪ್ರಮೋದತಃ।ಸಮರ್ಪ್ಯಾಲಭತ ಶ್ರೀಮಾನ್ಪಂಡಿತಾರಾಧ್ಯಸದ್ಗುರುಃ ॥೫೬॥ ಪ್ರಸಾದಂ ಶ್ರೀಜಂಗಮಂಚ ಪ್ರಾಣಲಿಂಗಂ ಯಥಾಕ್ರಮಾತ್ ॥

ಇತ್ಯಸಂಖ್ಯಾತಮಾಹೇಶ್ವರ ದಿವ್ಯಶ್ರೀಪಾದಪದ್ಮನಿರಂತರ ಭಾವನಾ
ಪರಿರಂಜಿತ ಹೃದಯಸರೋಜಸ್ಯ ಭವ್ಯಪಶುಪಾಶಪತಿ ಜ್ಞಾನಾ
ನಲಭಸ್ಮೀಕೃತಾಖಿಲಭವಬೀಜಸ್ಯ ಶ್ರೀವೀರಶೈವಮತಾ
ಚಾರ್ಯಗುರುರಾಜಸ್ಯ ಕೃತೌ ಶ್ರೀಮಲ್ಲೋಕಾ
ರಾಧ್ಯಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೆ

---

ಣಗಳನ್ನೂ, ಪ್ರಾಣದಲ್ಲಿ ಲಿಂಗವನ್ನೂ ನಿಯೋಜಿಸಿ, ಪ್ರಾಣಲಿಂಗಿಯಾಗಿ, ಪ್ರತಿಯೊಂದು ಇಂದ್ರಿಯಮುಖಗಳಿಂದಲೂ ಆಯಾಯ ಪದಾರ್ಥಗಳನ್ನು ಅರ್ಪಣಾನುಸಂಧಾನಕ್ರಮವನ್ನರಿತು ಆಯಾಯಾಲಿಂಗಗಳಿಗೆ ಸಮರ್ಪಿಸಿ, ತತ್ಪ್ರಸಾದವನ್ನನುಭೋಗಿಸುವ ಅತಿಶಯವಾದ ಶಕ್ತಿಯನ್ನು ಪಡೆದು, ತೃಪ್ತನಾಗಿ, ವಿಧಿನಿಷೇಧಗಳಳಿದು, ವೀರಶೈವಸನ್ಮಾರ್ಗದಲ್ಲಿ ನಡೆಯುತ್ತಾ, ತನ್ನ ತನುಧನಪ್ರಾಣಗಳನ್ನು ಸದ್ಗುರುವಿಗೆ ಸಮರ್ಪಿಸಬೇಕು ಎಂದು ಹೇಳುವ ಆಗಮವಚನವನನುಸರಿಸಿ, ಕರುಣಾಕಟಾಕ್ಷಮಾತ್ರದಿಂದ ಭೂತಭವಿಷ್ಯದ್ವರ್ತಮಾನದ ಭವಗಳನೆಲ್ಲ ಪರಿಹರಿಸುವ, ಕಾಮವನ್ನೂ ಜನ್ಮವನ್ನೂ ಗೆದ್ದ, ಪ್ರತ್ಯಕ್ಷಪರಶಿವನಾದ|ಕೋಟಿಪಲ್ಯಾರಾಧ್ಯನೆಂಬ ತನ್ನಶ್ರೀಗುರುವಿನಪಾದಕ್ಕೆ ತನ್ನ ತನುವನ್ನು ಸಮರ್ಪಿಸಿ ಪ್ರಸಾದವನ್ನೂ ಧನಗಳನ್ನೂಪ್ರಾಣಗಳನ್ನೂ ಸಮರ್ಪಿಸಿ ಜಂಗಮಲಿಂಗವನ್ನೂ, ಪ್ರಾಣಲಿಂಗವನ್ನೂ ಪಡೆದನು ॥ ೫೬ ॥

ಎಂಬಲ್ಲಿಗೆ ಶ್ರೀಗುರುರಾಜಕೃತ ಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತ್ರಕ್ಕೆ
ಎಲ್. ಆರ್. ಕರಿಬಸವಶಾಸ್ತ್ರಿರಚಿತವಾದ 'ಭಾವಮಂಜರಿ' ಎಂಬ

ದೀಕ್ಷಾಪ್ರಕರಣೇ ತದೀಯೋತ್ಪತ್ತಿ
ತದ್ದೀಕ್ಷಾಪ್ರಾಪ್ತಿಕಥನಂನಾಮ
ದ್ವಿತೀಯೋಽಧ್ಯಾಯಃ.

---

## ತೃತೀಯೋಽಧ್ಯಾಯಃ.

( ವಿ ಭೂ ತಿ ರು ದ್ರಾ ಕ್ಷ ಧಾ ರ ಣ ಮ ಹಿ ಮಾ. )

ಇತ್ಥಂಶ್ರೀಪಂಡಿತಾರಾಧ್ಯೇ ವೀರಭಕ್ತ್ಯೈಕಚರಸ್ಯಥ । ಅಸಹ್ಯಾಜ್ಞಾತುಚಿತ್ಪೋಚುರ್ಬ್ರಾಹ್ಮಣಾಶ್ಚೇತರೇಜನಾಃ ॥ ೧ ॥ ಪಂಡಿತಾರಾಧ್ಯ ವೇದಜ್ಞೋ ಭನಕಲ್ಪೋ ಭವಾನ್ಭುವಿ। ದ್ವಿಜೋತ್ತಮಸ್ಸಚ್ಚರಿತ್ರೋ ವಿದ್ವಾನ್ಪೌರಾಣಿಕೋತ್ತಮಃ ॥ ೨ ॥ ತಥಾಪಿಭೂತಿರುದ್ರಾಕ್ಷಧಾರಣಂ ಕಿಂತವೋಚಿತಂ । ಪಾದೋದಕಪ್ರಸಾದೋಪಭೋಗೋರ್ಹಃ ಕಿಂ ದ್ವಿಜನ್ಮನಾಂ ॥ ೩ ॥ ಕಿಂಲಿಂಗಧಾರಣಂಯುಕ್ತಂ ಕಿಮೇತದ್ವೈದಿಕಂಮತಂ। ಕಿಂಲಿಂಗಧಾರಣಾದೀನಿ ಚಕ್ರುರ್ಬ್ರಹ್ಮಾದಯಸ್ಸುರಾಃ ॥ ೪ ॥ ಮುನಯೋವೇತಿತದ್ವಾಕ್ಯಂ ಮಲ್ಲಿಕಾರ್ಜುನದೇಶಿಕಃ। ಶ್ರುತ್ವಾಕಿಂಚಿದ್ವಿಹಸ್ಯಾಥತಾನವಾದೀದಿದಂವಚಃ

---

ಕನ್ನಡ ಟಪ್ಪಣದಲ್ಲಿ ಪಂಡಿತಾರಾಧ್ಯೋತ್ಪತ್ತಿ ದೀಕ್ಷಾವಿವರಣವುಳ್ಳ,
೨ ನೆಯ ಅಧ್ಯಾಯವು ಮುಗಿದುದು.

---

## ೩ ನೆಯ ಅಧ್ಯಾಯವು.

ವಿ ಭೂ ತಿ ರು ದ್ರಾ ಕ್ಷ ಧಾ ರ ಣ ಮಾ ಹಾ ತ್ಮ್ಯ ವು.

ಶ್ರೀಪಂಡಿತಾರಾಧ್ಯನು ಹೀಗೆ ವೀರಶೈವಭಕ್ತಿಸ್ಥಲಾಚರಣೆಯುಳ್ಳಿರಲು, ಅದನ್ನು ಬ್ರಾಹ್ಮಣರೂ ಇತರಜನರೂ ನೋಡಿ ಸೈರಿಸಲಾರದೆ, ಒಂದುದಿವಸ— ' ಎಲೈ ಪಂಡಿತಾರಾಧ್ಯನೇ! ಭೂತಲದಲ್ಲಿ ನೀನು ವೇದವನ್ನು ತಿಳಿದವನೂ, ಶಿವಸಮಾನನೂ, ದ್ವಿಜಶ್ರೇಷ್ಠನೂ, ಸಚ್ಚರಿತನೂ, ವಿದ್ವಾಂಸನೂ, ಪುರಾಣಜ್ಞನೂ ಆಗಿರುವೆ. ಹೀಗಿದ್ದರೂ ವಿಭೂತಿರುದ್ರಾಕ್ಷಗಳನ್ನು ಧರಿಸಿಕೊಳ್ಳುವುದು ನಿನಗೆ ಯೋಗ್ಯವೇ? ಪಾದೋದಕಪ್ರಸಾದಗಳನ್ನು ಸ್ವೀಕರಿಸುವುದು ಬ್ರಾಹ್ಮಣರಿಗೆ ಉಚಿತವೆ ? ಲಿಂಗಧಾರಣವನ್ನು ಮಾಡಿಕೊಳ್ಳಬಹುದೇ ಈ ಸಂಪ್ರದಾಯಗಳುಳ್ಳದ್ದು ವೈದಿಕಮತವೇ? ಬ್ರಹ್ಮಾದಿದೇವತೆಗಳೂ ಮುನಿಗಳೂ ಈ ಲಿಂಗಧಾರಣ ಮೊದಲಾದುವುಗಳನ್ನು ಮಾಡಿಕೊಂಡಿರುವರೆ? ಎಂದು ಕೇಳಿದರು. ಇದನ್ನು ಪಂಡಿತಾರಾಧ್ಯನು ಕೇಳಿ, ಮುಗುಳ್ನಗೆನಕ್ಕು ಹೇಳಿದುದೇನಂದರೆ;—ಎಲೆ ಭೂಸುರರೆ!

॥೫॥ ದೃಷ್ಟ್ವಾನಾದ್ಯಭವದ್ಭಿಃ ಕಿಂನಶ್ರುತಾಃ ಕಿಂನುಹೇದ್ವಿಜಾಃ। ವೇದಾನಪಠಿತಾಃ ಕಿಂ ತದರ್ಥೋನವಿದಿತಃ ಕಿಮು ॥೬॥ ಭವಂತೋನೀಚಮತಯಃ ಕಿಂಪ್ರಾಕೃತಜನಾಇವ। ಶ್ರುತಿಸ್ಮೃತಿಪುರಾಣೋಪನಿಷಚ್ಛೈವಾಗಮಾದಿಷು ॥೭॥ ವಿಭೂತಿಧಾರಣಾದೀನಾಂ ಕಥಕಾನಿ ವಚಾಂಸಿವಃ। ವಕ್ಷ್ಯಾಮಿತಾವದತ್ರಾದ್ಯ ಯೂಯಂಶೃಣುತಹೇದ್ವಿಜಾಃ॥ ೮ ॥ ಭೂತಿಧಾರಣಶಂಸೀನಿ ವಾಕ್ಯಾನಿ ಪ್ರಥಿತಾನಿಚ । ಭೂತ್ಯೈನಪ್ರಮದಿತವ್ಯಮಿತೀದಂ ಯಜುಷೋವಚಃ॥೯॥ ಅಗ್ನೇಸ್ಸಮುತ್ಥಯಾ ಭೂತ್ಯಾತಯಾದೇಹಾವಕುಂಠನಂ। ಲಲಾಟೇಹೃದಿದೋರ್ದ್ವಂದ್ವೇ ತ್ರಿಪುಂಡ್ರಸ್ಯಚಧಾರಣಂ॥ ೧೦॥ ಉದ್ಧೂಳನಂತ್ರಿಪುಂಡ್ರಂಚಯೈಸ್ಸಮಾಚರಿತಂಮುದಾ। ತಏವಶಿಷ್ಟಾವಿದ್ವಾಂಸೋ ನೇತರೇಮುನಿಪುಂಗವಾಃ ॥ ೧೧ ॥ ನೈವಪ್ರಮದಿತವ್ಯಂವೈ ಭ್ರಮಾದಪಿಕದಾಚನ । ಇತಿತದ್ಯಜುಷೋಽಪ್ಯರ್ಥೇ ಪುರಾಣೇಮಾನವೇವಚಃ ॥ ೧೨ ॥ ಯಚ್ಚಾಥರ್ವಶಿರೋವಾಕ್ಯಂ ವಿಮೃಜ್ಯಾಂಗಾನಿ ಸಂಸ್ಪೃಶೇತ್ । ಇತ್ಯಂತಮಸ್ತಿ ತದ್ವಾಕ್ಯಂ ಶ್ರೂಯತಾಮತ್ರಹೇದ್ವಿಜಾಃ ॥ ೧೩ ॥ ಯಚ್ಚ ಕಾತ್ಯಾಯನೇಗೃಹ್ಯೇ ಯದ್ದೇವಾನಾಂತ್ರಿಯಾಯುಷಂ । ಇತ್ಯಸ್ತಿ ವಾಕ್ಯಂ ತತ್ಸರ್ವಂ ವಕ್ಷ್ಯಾಮಿಶೃಣುತದ್ವಿಜಾಃ ॥ ೧೪ ॥ ತ್ರಿಯಾಯುಷಾಣಿಕುರುತೇ ಲಲಾಟೇಚಭುಜದ್ವಯೇ । ನಾ

---

ನೀವು ಪೂರ್ವಿಕರನ್ನು ನೋಡಿ ಕೇಳಿಲ್ಲವೊ ? ವೇದಗಳನ್ನು ಓದಿಲ್ಲವೊ ? ಅಥವಾ ಅದರರ್ಥವನ್ನು ತಿಳಿದಿಲ್ಲವೊ ? ನೀವು ಅಜ್ಞಜನರಂತೆ ನೀಚಬುದ್ಧಿಗಳಾಗಿರುವಿರೂ ಹೇಗೆ? ಶ್ರುತಿಸ್ಮೃತಿಪುರಾಣೋಪನಿಷಚ್ಛೈವಾಗಮಾದಿಗಳಲ್ಲಿ ವಿಭೂತಿಧಾರಣಾದಿಗಳನ್ನು ಪ್ರತಿಪಾದಿಸುವ ವಚನಗಳನ್ನು ಹೇಳುತ್ತೇನೆ ಕೇಳಿರಿ ॥ ೮ ॥ ವಿಭೂತಿಧಾರಣವನ್ನು ವಿಧಿಸುವ ವಾಕ್ಯಗಳು ಪ್ರಸಿದ್ಧವಾಗಿವೆ. "ಭೂತ್ಯೈನಪ್ರಮದಿತವ್ಯಂ" ಎಂಬುದು ಯಜುರ್ವೇದವಚನವು. ಇದೇವಚನದ ಅರ್ಥವನ್ನೇ ಮಾನವ ಪುರಾಣದಲ್ಲಿ ಹೇಳುವಾಗ, 'ಅಗ್ನಿಯಿಂದಹುಟ್ಟಿದ ಭೂತಿಯಿಂದ ದೇಹವನ್ನು ಉದ್ಧೂಳಿಸಿ, ಹಣೆ ಎದೆ ತೋಳುಗಳಲ್ಲಿ ಭಸಿತತ್ರಿಪುಂಡ್ರವನ್ನು ಧರಿಸಬೇಕು. ಯಾರು ಈ ಉದ್ಧೂಳನತ್ರಿಪುಂಡ್ರಧಾರಣಗಳನ್ನು ಮಾಡಿಕೊಳ್ಳುವರೋ ಅವರೇ ವಿದ್ವಚ್ಛ್ರೇಷ್ಠರು, ಇತರರಲ್ಲ, ಪ್ರಮಾದದಿಂದಾಗಲಿ ಅಜ್ಞಾನದಿಂದಲಾಗಲಿ, ಇದನ್ನು ಯಾವಾಗಲೂ ಬಿಡಕೂಡದು, ಎಂದು ಸಾರಿರುವುದು. ಅಥರ್ವಶಿರೋಪನಿಷತ್ತು ಕೂಡ, ಅಗ್ನಿರಿತಿಭಸ್ಮ, ಎಂದಾರಂಭಿಸಿ, 'ವಿಮೃಜ್ಯಾಂಗಾನಿಸಂಸ್ಪೃಶೇತ್' ಎಂಬುವವರೆಗೂ ಭಸ್ಮಪ್ರಶಂಸೆಯನ್ನು ಮಾಡಿರುವುದು. ॥ ೧೩ ॥ ಕಾತ್ಯಾಯನಗೃಹ್ಯಸೂತ್ರದಲ್ಲಿ ಯದ್ದೇವಾನಾಂತ್ರಿಯಾಯುಷಂ, ಎಂಬವಾಕ್ಯವಿರುವುದು. ಅದನ್ನೆಲ್ಲಾ ಹೇಳುತ್ತೇನೆ ಕೇಳಿರಿ ॥ ೧೪ ॥ "ಹಣೆ ಭುಜಗಳು ಹೊಕ್ಕುಳು ತಲೆ ತೋಳು ಈ ಸ್ಥಲಗಳಲ್ಲಿ

ಭಾಶಿರಸಿದೋಃಪಾರ್ಶ್ವೇ ಬ್ರಾಹ್ಮಣೋ ವೈದಿಕಸ್ಸದಾ ॥೧೫॥ ಇತಿ॥ ನಸಪು
ನರಾವರ್ತತ ಇತಿ ಯಚ್ಚಾಸ್ತಿ ಭಾಷಿತಂ। ಏತತ್ಕಾಲಾಗ್ನಿರುದ್ರೋಪನಿಷದ್ವಚನ
ಮುತ್ತಮಂ ॥೧೬॥ ತದ್ವ್ಯಾಖ್ಯಾಮುಚ್ಯತೇ ಕೃತ್ಸ್ನಂ ಶೃಣುತಾಮತ್ರ
ಹೇ ದ್ವಿಜಾಃ । ಅಥ ಕಾಲಾಗ್ನಿರುದ್ರಂ ಭಗವಂತಂ ಸನತ್ಕುಮಾರಃ ಪಪ್ರಚ್ಛ
ಅಧೀಹಿ ಭಗವಂಸ್ತ್ರಿಪುಂಡ್ರವಿಧಿಂ ಸತತ್ತ್ವಂ ಕಿಂ ದ್ರವ್ಯಂ ಕಿಂ ಪ್ರಮಾಣಂ ಕಾ ರೇ
ಖಾಃ ಕಿಂ ದೈವತಂ ಕಾ ಶಕ್ತಿಃ ಕಿಂ ಫಲಮಿತಿ। ತಂ ಪ್ರೋವಾಚ ಭಗವಾನ್ ಯ
ದ್ದ್ರವ್ಯಂ ತದಾಗ್ನೇಯಂ ಭಸ್ಮ ಸದ್ಯೋಜಾತಾದಿಪಂಚಬ್ರಹ್ಮಮಂತ್ರೈಃ
ಪರಿಗೃಹ್ಯ ಮಾನಸ್ತೋಕೇತಿ ಸಮುದ್ಧೃತ್ಯ ತ್ರಿಯಾಯುಷಂ ಜಮದಗ್ನೇರಿತಿ
ಶಿರೋಲಲಾಟಸ್ಕಂಧೇಷು ತ್ರಿಯಾಯುಷೈಸ್ತ್ರ್ಯಂಬಕೈಸ್ತಿಸ್ರೋರೇಖಾಃ
ಪ್ರಕುರ್ವೀತ ವ್ರತಮೇತಚ್ಛಾಂಭವಂ ಸರ್ವವೇದೇಷು ವೇದವಾದಿಭಿರು
ಕ್ತಂ ತತ್ಸಮಾಚರೇನ್ಮುಮುಕ್ಷುರಪುನರ್ಭವಾಯ ಆಲಲಾಟಾದಾಚಕ್ಷುಷೋ
ಭ್ರೂರ್ಮಧ್ಯತೋ ಯಾಚಾಸ್ಯ ಪ್ರಥಮಾರೇಖಾ ಸಾಹವನೀಯ ಅಕಾರೋ
ರಜೋ ಭೂಲೋಕ ಆತ್ಮಾ ಕ್ರಿಯಾಶಕ್ತಿಃ ಋಗ್ವೇದಃ ಪ್ರಾತಸ್ಸವನಂ ರು
ದ್ರೋದೇವತಾ । ಯಾಚಾಸ್ಯ ದ್ವಿತೀಯಾರೇಖಾ ಸಾ ಗಾರ್ಹಪತ್ಯ ಉಕಾರ

---

ವೈದಿಕನಾದ ಬ್ರಾಹ್ಮಣನು ತ್ರಿಪುಂಡ್ರಧಾರಣವನ್ನು ಮಾಡಬೇಕು'' ಎಂದು ಹೇಳಲ್ಪಟ್ಟಿ
ರುವುದು.॥೧೫॥ ಕಾಲಾಗ್ನಿರುದ್ರೋಪನಿಷತ್ತಿನಲ್ಲಿ ''ನಸಪುನರಾವರ್ತತೆ'' ಎಂದು ಹೇಳಲ್ಪ
ಟ್ಟಿರುವುದು ಆ ವಾಕ್ಯವನ್ನೆಲ್ಲ ವಿವರಿಸುತ್ತೇನೆ ಕೇಳಿರಿ.—''ಸನತ್ಕುಮಾರನು ಕಾಲಾಗ್ನಿರು
ದ್ರನನ್ನು ಕುರಿತು ಎಲೆ ಭಗವಂತನೆ! ನನಗೆ ತ್ರಿಪುಂಡ್ರಧಾರಣವಿಧಿಯನ್ನು ಉಪದೇಶಿಸು,
ಭಸ್ಮವೆಂದರೇನು? ಅದರ ಪ್ರಮಾಣವೇನು ? ರೇಖೆಗಳೆಷ್ಟು ? ದೇವತೆಯಾರು ? ಶಕ್ತಿ
ಯಾವುದು ? ಭಸ್ಮಧಾರಣದ ಫಲವೇನು ? ಎಂದು ಕೇಳಿದನು. ಅದಕ್ಕೆ ಕಾಲಾಗ್ನಿರು
ದ್ರನು—ಅಗ್ನಿಯಿಂದ ಹುಟ್ಟಿದ ಭಸ್ಮವೇ ಧರಿಸಲ್ಪಡತಕ್ಕ ದ್ರವ್ಯವು. ಸದ್ಯೋಜಾತಾದಿ
ಪಂಚಬ್ರಹ್ಮಮಂತ್ರಗಳಿಂದ ಭಸ್ಮವನ್ನು ಹಿಡಿದು, ಮಾನಸ್ತೋಕೆ ಎಂಬ ಮಂತ್ರದಿಂದೆತ್ತಿ ತ್ರಿ
ಯಾಯುಷಂ ಜಮದಗ್ನೇಃ'' ಎಂಬ ಮಂತ್ರದಿಂದ ತಲೆ ಹಣೆ, ಭುಜ, ಶಿರಸ್ಸು ಈ ಸ್ಥಾನ
ಗಳಲ್ಲಿ ತ್ರಿಯಾಯುಷ ಮಂತ್ರದಿಂದಲೂ ತ್ರಿಯಂಬಕಮಂತ್ರದಿಂದಲೂ ಮೂರು ರೇಖೆಗಳ
ನ್ನು ಧರಿಸಬೇಕು, ಇದು ವೇದವಿಹಿತವಾದ ಶಿವತತ್ವವು. ಮೋಕ್ಷಾಪೇಕ್ಷಿಯಾದವನು ತ
ನ್ನ ಜನ್ಮನಿವಾರಣೆಗಾಗಿ ಈ ವ್ರತವನ್ನು ಆಚರಿಸಬೇಕು. ಇವುಗಳಲ್ಲಿ ಮೊದಲರೇಖೆಯು
ಆಹವನೀಯಾಗ್ನಿ, ಆಕಾರ, ರಜೋಗುಣ, ಭೂಲೋಕ, ಆತ್ಮ, ಕ್ರಿಯಾಶಕ್ತಿ, ಋಗ್ವೇ
ದ, ಪ್ರಾತಸ್ಸವನ, ರುದ್ರದೇವತಾಸಂಬಂಧವುಳ್ಳದ್ದು. ೨ನೆಯ ರೇಖೆಯು—ಗಾ

ಸ್ತಮೊ ದ್ಯೌಃ ಪರಮಾತ್ಮಾ ಜ್ಞಾನಶಕ್ತಿ ರ್ಯಜುರ್ವೇದೋ ಮಾಧ್ಯಂದಿನಂ ಸವನಂ ಮಹೇಶ್ವರೋದೇವತಾ । ಯಾಚಾಸ್ಯತೃತೀಯಾರೇಖಾ ಸಾ ದಕ್ಷಿಣಾಗ್ನಿ ರ್ಮಕಾರ ಸ್ಸತ್ವ ಮಂತರಿಕ್ಷಂ ಅಂತರಾತ್ಮಾ ಇಚ್ಛಾಶಕ್ತಿ ಸ್ಸಾಮವೇದ ಸ್ತೃತೀಯಂತನಂಸವನಂ ಸದಾಶಿವೋದೇವತೇತಿ ತ್ರಿಪುಂಡ್ರಂ ಭಸ್ಮನಾಕರೋತಿ ಯೋವಿದ್ವಾನ್ಗೃಹಸ್ಥೊ ಬ್ರಹ್ಮಚಾರೀ ವಾನಪ್ರಸ್ಥೊ ಯತಿರ್ವಾ ಸಸಮಸ್ತಪಾತಕೋಪಪಾತಕೇಭ್ಯಃ ಪೂತೋಭವತಿ । ತೇನೇತಿಹಾಸಪುರಾಣಾನಾಂ ರುದ್ರಾಣಾಂ ಶತಸಹಸ್ರಾಣಿಜಪ್ತಾನಿಭವಂತಿ। ಪ್ರಾಣಾಯಾಮಾನಾಮಯುತಂ ಜಪ್ತಂಭವತಿ । ರೂಪೇರೂಪೇದಶಪೂರ್ವಾಂ ದಶೋತ್ತರಾಂಚ ಪಜ್ತಿಂಪುನಾತಿ । ಸಮಸ್ತತೀರ್ಥೇಷು ಸ್ನಾತೋಭವತಿ ಸರ್ವಕರ್ಮಸು ಸದಾಯೋಗ್ಯೋ ಭವತಿ । ಶರೀರಂತ್ಯಕ್ತ್ವಾ ಶಿವಸಾಯುಜ್ಯಮೇತಿ ನಸಪುನರಾವರ್ತತ ಇತ್ಯಾಹ ಭಗವಾನ್ಕಾಲಾಗ್ನಿರುದ್ರಃ। ಯುಚ್ಚವಾಕ್ಯಂ ಜ್ಯೋತಿರಹಂವಿರಜಾಇತಿಪೂರ್ವಕಂ । ನಾರಾಯಣೋಪನಿಷದೋವಾಕ್ಯಮೇತತ್ಪ್ರವಿಶ್ರುತಂ । ಆಕರ್ಣಯತಹೇವಿಪ್ರಾವಕ್ಷ್ಯೆತದಾಭಪ್ಯಮುತ್ತಮಂ। ಜ್ಯೋತಿರಹಂವಿರಜಾವಿಪಾಪ್ಮಾಭೂಯಾಸಮಿತಿ॥ ಅಸ್ಯಾರ್ಥಃ ಕಥ್ಯತೆಸಮ್ಯಜ್ಮಯಾಭಾಷ್ಯಾನುಸಾರತಃ ॥ ೧೭॥ ಜಾಬಾಲೋಪನಿಷತ್ಪ್ರೋಕ್ತಂ ಶಿವಾಖ್ಯಾಮತಿ

---

ರ್ಹಪತ್ಯಾಗ್ನಿ, ಉಕಾರ, ತಮೋಗುಣ, ಸ್ವರ್ಲೋಕ, ಪರಮಾತ್ಮ, ಜ್ಞಾನಶಕ್ತಿ, ಯಜುರ್ವೇದ, ಮಧ್ಯಾಹ್ನಯಜನ, ಮಹೇಶ್ವರದೇವತಾ ಸಂಬಂಧವುಳ್ಳದ್ದು. ಮೂರನೆ ಯರೇಖೆಯು–ದಕ್ಷಿಣಾಗ್ನಿ, ಮಕಾರ, ಸತ್ವಗುಣ, ಅಂತರಿಕ್ಷ, ಅಂತರಾತ್ಮ, ಇಚ್ಛಾಶಕ್ತಿ, ಸಾಮವೇದ, ಸಾಯಂತನಯಜನ, ಸದಾಶಿವದೇವತಾಸಂಬಂಧವುಳ್ಳದ್ದು. ಇಂತಹ ತ್ರಿಪುಂಡ್ರವನ್ನು ಭಸ್ಮದಿಂದ ಯಾವ ವಿದ್ವಾಂಸನಾದ ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ, ಯತಿಯಾಗಲಿ ಧರಿಸಿದರೆ, ಅವನು ಸಕಲಪಾತಕಗಳಿಂದಲೂ, ಉಪಪಾತಕಗಳಿಂದಲೂ ಬಿಡಲ್ಪಟ್ಟವನಾಗಿ ಪರಿಶುದ್ಧನಾಗುತ್ತಾನೆ. ಸಾವಿರಾರು ಇತಿಹಾಸಗಳನ್ನೂ ಪುರಾಣಗಳನ್ನೂ ರುದ್ರಗಳನ್ನೂ ಪಠಿಸಿದವನಾಗುತ್ತಾನೆ. ದಶಸಹಸ್ರಪ್ರಾಣಾಯಾಮಗಳನ್ನು ಮಾಡಿದವನಾಗುತ್ತಾನೆ. ಅವನಹಿಂದೆ ಹತ್ತು ಮುಂದೆಹತ್ತು ತಲೆಯವರೆಲ್ಲ ಪವಿತ್ರರಾಗುತ್ತಾರೆ. ಅವನು ಸಕಲತೀರ್ಥಗಳಲ್ಲಿ ಸ್ನಾನ ಮಾಡಿದವನೂ, ಸಕಲಕರ್ಮಾಚರಣಕ್ಕೆ ಸದಾ ಅರ್ಹನೂ ಆಗುತ್ತಾನೆ. ದೇಹವನ್ನು ಬಿಟ್ಟನಂತರ ಶಿವಸಾಯುಜ್ಯವನ್ನು ಪಡೆಯುತ್ತಾನೆ. ಅವನು ಪುನಃ ಭವಕ್ಕೆ ಬರುವುದಿಲ್ಲ'' ಎಂದು ಕಾಲಾಗ್ನಿರುದ್ರನು ಹೇಳಿದನು. ನಾರಾಯಣೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುವ ''ಜ್ಯೋತಿರಹಂವಿರಜಾ ವಿಪಾಪ್ಮಾಭೂಯಾಸಂ'' ಎಂಬ ವಾಕ್ಯದ ಅರ್ಥವನ್ನು ಭಾಷ್ಯಾನುಸಾರವಾಗಿ ವಿವರಿಸುತ್ತೇನೆ ಕೇಳಿರಿ ॥೧೮॥ ಜ್ಯೋತಿಃ ಅಂದರೆ, ಜಾ

ಪಾವನಂ । ಭಸ್ಮಜ್ಯೋತಿರಹಂಯಸ್ಮಾ ದ್ವಿಪಾಪ್ಮಾವಿರಜಾಸ್ತತಃ ॥೧೮॥ ಯದಸ್ಯ್ವಾಕ್ಯಂ ಸವಿಷಭಸ್ಮಜ್ಯೋತಿರಿತಿ ಸ್ಫುಟಂ । ಏತೆಜ್ಜಾಬಾಲೋಪನಿಷದ್ವಚನಂ ಖಲುವಿಶ್ರುತಂ ॥೧೯॥ ಅಸ್ಮಿನ್ನರ್ಥೆ ಮಾನವಾಖ್ಯಪುರಾಣಂ ವಚನಂ ಪರಂ। ಪ್ರದರ್ಶ್ಯತೆಸ್ಮಾಭಿರತ್ರ ವಿಲೋಕಯತ ಹೇದ್ವಿಜಾಃ ॥೨೦॥ ಭಸ್ಮಜ್ಯೋತಿರ್ಭವತ್ಯೇವ ಶಿವಾಖ್ಯಂ ನಹಿಸಂಶಯಃ । ಜಾಬಾಲೋಪನಿಷತ್ಸರ್ವಂ ಪ್ರಾಹೇದಂಪರಯಾಮುದಾ ॥೨೧॥ ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷುಯತ್ಫಲಂ । ತತ್ಫಲಂಕೋಟಿಗುಣಿತಂಭಸ್ಮಸ್ನಾನಾನ್ನಸಂಶಯಃ ॥೨೨॥ ಇತ್ಯೇತದಾಕರ್ಣ್ಯಯತಭೀಮಾಗಮವಚಃಪರಂ । ಮಾನಸ್ತೋಕೇತಿಮಂತ್ರೇಣ ಮಂತ್ರಿತಂಭಸ್ಮಧಾರಯೆತ್ ॥೨೩॥ ಊರ್ಧ್ವಪುಂಡ್ರಂಭವೇತ್ಸಾಮ ಮಧ್ಯಪುಂಡ್ರಂಯಜೂಂಷಿಚ । ಅಧಃಪುಂಡ್ರಮೃಚಸ್ಸಾಕ್ಷಾತ್ತಸ್ಮಾತ್ಪುಂಡ್ರಂತ್ರಿಯಾಯುಷಂ ॥೨೪॥ ಇತೀದಂಶ್ವೇತಾಶ್ವತರೋಪನಿಷತ್ಕಥಿತಂವಚಃ। ಮಾತ್ವಾಹವಾಮುಹ ಇತಿವಚೊಬೋಧಾಯನಸ್ಮೃತಂ॥೨೫॥ಸುರಾಂಪೀತ್ವಾಗುರುದಾರಾಂಶ್ಚಗತ್ವಾಸ್ತೆಯಂಕೃತ್ವಾ ಬ್ರಹ್ಮಹತ್ಯಾಂಚಕೃತ್ವಾ। ಭಸ್ಮಛನ್ನೊ ಭಸ್ಮಶಯ್ಯಾಶಯಾನೊರುದ್ರಾಧ್ಯಾಯಿ

---

ಬಾಲೋಪನಿತ್ತಿನಲ್ಲಿ ಹೇಳಲ್ಪಟ್ಟಿರುವ ಶಿವನೆಂಬ ಹೆಸರುಳ್ಳ ಅತಿಪವಿತ್ರವಾದ ಭಸ್ಮವು. ಆ ಭಸ್ಮವೇ ನಾನಾಗಿರುವುದರಿಂದ ಪಾಪರಹಿತನೂ, ಕಾಮಾದಿಗಳಿಲ್ಲದವನೂ ಆಗಿದ್ದೇನೆ. "ಸವಿಷಭಸ್ಮಜ್ಯೋತಿಃ" ಎಂಬೀ ವಾಕ್ಯವು ಜಾಬಾಲೋಪನಿಷತ್ತಿನಲ್ಲಿ ಪ್ರಸಿದ್ಧವಾಗಿರುವುದಲ್ಲವೆ? ಈ ಅರ್ಥದಲ್ಲಿ ಮಾನವಪುರಾಣವಚನವನ್ನು ತೋರಿಸುತ್ತೇನೆ ನೋಡಿರಿ. ಶಿವನೆಂಬ ಹೆಸರುಳ್ಳ ತೇಜಸ್ಸೇ ಭಸ್ಮವು. ಈ ವಿಷಯದಲ್ಲಿ ಸಂದೇಹವಿಲ್ಲ. ಇದರ ವಿಷಯವೆಲ್ಲವನ್ನೂ ಜಾಬಾಲೋಪನಿಷತ್ತು ಸಂತೋಷದಿಂದ ಹೇಳಿರುವುದು. ॥೨೧॥ ಸರ್ವತೀರ್ಥಸ್ನಾನದಿಂದಲೂ, ಸಕಲಯಜ್ಞಾಚರಣದಿಂದಲೂ ಯಾವ ಪುಣ್ಯಫಲವು ಲಭಿಸುವುದೊ ಅದಕ್ಕೆ ಕೋಟಿಯಷ್ಟು ಫಲವು ಭಸ್ಮಸ್ನಾನದಿಂದ ಲಭಿಸುವುದು. ಹೀಗೆಂಬ ಭೀಮಾಗಮ ವಚನವನ್ನು ಕೇಳಿರಿ—"ಮಾನಸ್ತೋಕೆ" ಎಂಬ ಮಂತ್ರದಿಂದಭಿಮಂತ್ರಿಸಿದ ಭಸ್ಮವನ್ನು ಧರಿಸಬೇಕು. ತ್ರಿಪುಂಡ್ರದಲ್ಲಿ ಮೇಲಣರೇಖೆಯು ಸಾಮವೇದವಾಗಿಯೂ, ಮಧ್ಯರೇಖೆಯು ಯಜುರ್ವೇದವಾಗಿಯೂ, ಕೆಳಗಣರೇಖೆಯು ಋಗ್ವೇದವಾಗಿಯೂ, ಇರುವುದರಿಂದ ತ್ರಿಪುಂಡ್ರವು ವೇದತ್ರಯರೂಪವು ಎಂದು ಶ್ವೇತಾಶ್ವತರೋಪನಿಷತ್ತು ಹೇಳಿರುವುದು. "ಮಾತ್ವಾಹವಾಮುಹೆ" ಎಂಬುದು ಬೋಧಾಯನ ಸ್ಮೃತಿವಚನವು. ಮದ್ಯಪಾನಮಾಡಿ, ಗುರುಪತ್ನಿಯನ್ನು ಗಮಿಸಿ, ಕದ್ದು, ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಭಸ್ಮಲಿಪ್ತನೂ ಭಸ್ಮದ ಹಾಸುಗೆಯಲ್ಲಿ ಮಲಗಿದವನೂ ಪು

ಮುಚ್ಯತೆ ಸರ್ವಪಾಪೈಃ। ಇತ್ಯೇತದ್ಭಾಷಿತಂಭವ್ಯಂಪ್ರೋಕ್ತಂಶಾತಾತಪಸ್ಮೃ
ತೌ । ಸ್ನಾನೇದಾನೇಜಪೇ ಹೋಮೇ ವೈಶ್ವದೇವೇ ಸುರಾರ್ಚನೇ ॥೨೬॥
ಧೃತತ್ರಿಪುಂಡ್ರಃ ಪೂತಾತ್ಮಾಮೃತ್ಯುಂಜಯತಿಮಾನವಃ । ಇತಿವಾಕ್ಯಂವೃ
ದ್ಧಶಾತಾತಪಸ್ಮೃತ್ಯುಕ್ತಮುನ್ನತಂ ॥೨೭॥ ತ್ರಿಪುಂಡ್ರಂಬ್ರಾಹ್ಮಣೋವಿ
ದ್ವಾನ್ಮನಸಾಪಿನಲಂಘಯೇತ್। ಶ್ರುತ್ಯಾವಿಧೀಯತೇಯಸ್ಮಾತ್ತತ್ತ್ಯಾಗೀ ಪತಿ
ತೋಭವೇತ್ ॥೨೮॥ ತ್ರಿಪುಂಡ್ರಂಸುರವಿಪ್ರಾಣಾಂವರ್ತುಳಂನೃಪವೈಶ್ಯ
ಯೋಃ। ಅರ್ಧಚಂದ್ರಂತುಶೂದ್ರಾಣಾಮನ್ಯೇಷಾಂತೂರ್ಧ್ವಪುಂಡ್ರಕಂ॥೨೯॥
ಇತಿಲೋಕಾಕ್ಷಿಕಸ್ಮೃತ್ಯಾವಾಕ್ಯಮೇತದನುತ್ತಮಂ । ಅಗ್ನಿದಗ್ಧಮಿತಿ
ಶ್ರುತ್ಯಾಹ್ಯಗ್ನಿದಗ್ಧಸ್ಯ ಭಸ್ಮನಃ ॥೩೦॥ ಅಭಾವೇವಾತಥಾವಿಪ್ರಾಲೌ
ಕಿಕಾಗ್ನೇರಥಾಹರೇತ್ । ಭಸ್ಮನೈವಪ್ರಕುರ್ವೀತನಕುರ್ಯಾನ್ಮೃತ್ತಿಕಾದಿ
ಭಿಃ ॥೩೧॥ ಗೋಪೀಮಲಿನಧಾರೀತುಶಿವಂಸ್ಪೃಶತಿಯೋದ್ವಿಜಃ। ತಸ್ಯೈ
ಕವಿಂಶತಿಕುಲಮಕ್ಷಯಂನರಕಂವ್ರಜೇತ್ ॥೩೨॥ ಸ್ರಷ್ಟಾಸೃಷ್ಟಿಭ್ಯಾಲೇ
ನಾಹತ್ರಿಪುಂಡ್ರಸ್ಯಪ್ರಶಸ್ತತಾಂ । ಸಸರ್ಜಸಲಲಾಟಂಹಿತಿರ್ಯಗೂರ್ಧ್ವಂನವ

---

ರ್ದ್ವೋಕ್ತಪಾಪಫಲದಿಂದೆಲ್ಲ ಮುಕ್ತನಾಗುವನು, ಎಂಬದಾಗಿ ಶಾತಾತಪಸ್ಮೃತಿಯು
ಹೇಳಿರುವುದು. “ಸ್ನಾನದಾನಜಪಹೋಮ ವೈಶ್ವದೇವ, ದೇವತಾರ್ಚನ ಈಕಾರ್ಯ
ಗಳೆಲ್ಲಲ್ಲಿ ತ್ರಿಪುಂಡ್ರಧಾರಣವನ್ನು ಮಾಡಿಕೊಂಡಿದ್ದವನು ಪರಿಶುದ್ಧಾತ್ಮನಾಗಿ ಮೃತ್ಯು
ವನ್ನು ಗೆಲ್ಲುವನು. ಎಂದು ಅದೇ ಶಾತಾತಪಸ್ಮೃತಿಯು ಹೇಳಿರುವುದು. ॥ ೨೭ ॥
ವಿದ್ವಾಂಸನಾದ ಬ್ರಾಹ್ಮಣನು ತ್ರಿಪುಂಡ್ರಧಾರಣವನ್ನು ಮನಸ್ಸಿನಲ್ಲುಕೂಡ ಮೀರಬಾರ
ದು. ತ್ರಿಪುಂಡ್ರಧಾರಣವು ವೇದವಿಧಿತವಾಗಿರುವುದರಿಂದ, ಅದನ್ನು ಬಿಟ್ಟವನು ಪತಿ
ತನಾಗುತ್ತಾನೆ. ‘ತ್ರಿಪುಂಡ್ರಧಾರಣವು ದೇವತೆಗಳಿಗೂ ಬ್ರಾಹ್ಮಣರಿಗೂ; ಗುಂಡಾದ
ತಿಲಕದಧಾರಣವು ಕ್ಷತ್ರಿಯವೈಶ್ಯರಿಗೂ; ಅರ್ಧಚಂದ್ರಾಕಾರತಿಲಕವು ಶೂದ್ರರಿಗೂ;
ಇತರರಿಗೆಲ್ಲಾ ಊರ್ಧ್ವಪುಂಡ್ರವೂ (ನಾಮ) ಧಾರ್ಯವಾದದ್ದು; ಎಂಬದಾಗಿ ಲೋಕಾ
ಕ್ಷಿಕಸ್ಮೃತಿಯು ಹೇಳಿರುವುದು. “ಅಗ್ನಿದಗ್ಧಂ” ಎಂಬ ವೇದವಚನವನನುಸರಿಸಿ,
ಕ್ರಮಹುತವಾದ ಅಗ್ನಿಯಿಂದ ಭಸ್ಮವನ್ನು ಪರಿಗ್ರಹಿಸಬೇಕು. ಅದು ದೊರೆಯದಿದ್ದ
ರೆ ಲೌಕಿಕವಾದ ಸಾಮಾನ್ಯಾಗ್ನಿಯಿಂದಲಾದರೂ ಭಸ್ಮವನ್ನು ಗ್ರಹಿಸಿ ಧರಿಸಿಕೊಳ್ಳಬೇ
ಕು. ಅದುಹೊರತು ಮಣ್ಣುಮೊದಲಾದವುಗಳಿಂದ ಯಾವಾಲೂ ತ್ರಿಪುಂಡ್ರವನ್ನು ಧರಿ
ಸಬಾರದು. ॥ ೩೧ ॥ ಗೋಪಿಚಂದನವನ್ನು ಧರಿಸಿದ ದ್ವಿಜನು ಶಿವನನ್ನು ಮುಟ್ಟಿದರೆ
ಆವನ ೨೧ ತಲೆಮಾರಿನವರೆಗೆ ಅಳಿವಿಲ್ಲದ ನರಕವನ್ನು ಹೊಂದುವನು. ಅಷ್ಟಲ್ಲಾಗಿಯೇ

ರ್ತ್ತುಳಂ ॥ ೩೩ ॥ ಇತ್ಯೇತಾನಿ ನಿಜವಾಕ್ಯಾನಿ ಪುರಾಣೇಗಾರುಡೇಶುಭೇ । ಪಿತಾ
ನಿತಾನಿಶಿವಮಂತ್ರಪವಿತ್ರಿತಾನಿಭಸ್ಮಾನಿಕಾಮದಹನಾಂಗವಿಭೂಷಿತಾನಿ । ತ್ರೈ
ಪುಂಡ್ರಕಾನಿ ರಚಿತಾನಿ ಲಲಾಟಪಟ್ಟೇಲುಂಪಂತಿದೈವಲಿಖಿತಾನಿದುರಕ್ಷರಾಣಿ
॥ ೩೪ ॥ ಇತಿಕೂರ್ಮಪುರಾಣಸ್ಯಪುರಾಣವಚನಂತ್ವಿದಂ । ತೇನಾಧೀತಂಶ್ರುತಂ
ತೇನತೇನಸರ್ವಮನುಷ್ಠಿತಂ ॥ ೩೫ ॥ ಯೇನವಿಪ್ರೇಣಶಿರಸಿತ್ರಿಪುಂಡ್ರಂಭಸ್ಮನಾ
ಕೃತಂ । ಕೃತಂಸ್ಯಾದಕೃತಂತೇನಶ್ರುತಮಪ್ಯಶ್ರುತಂಭವೇತ್ ॥ ೩೬ ॥ ಅ
ಧೀತಮನಧೀತಂಚತ್ರಿಪುಂಡ್ರಂಯೋನಧಾರಯೇತ್ । ಇತಿದ್ವೇವಚನೇಸ್ಕಂದ
ಪುರಾಣಪ್ರತಿಪಾದಿತೇ ॥ ೩೭ ॥ ನದೀಕ್ಷಾನತಪೋಮಂತ್ರಾನಯಜ್ಞಾನದೇ
ವತಾ ನ ಚ । ಜಡಂವೇದಾಗಮಜ್ಞಾನಂಭಸ್ಮಮಾಹಾತ್ಮ್ಯವರ್ಜಿತಂ ॥ ೩೮ ॥ ನಾ
ಸ್ತಿ ಭಸ್ಮವಿನಾಸ್ನಾನಮಿತ್ಯೇತದಪಿಭಾಷಿತಂ । ಸರ್ವಾಗಮೋತ್ತಮಪ್ರೋಕ್ತಂ
ಸಮಾಕರ್ಣಯತದ್ವಿಜಾಃ ॥ ೩೯ ॥ ಅಹೋನುಚಿತ್ರಂಯತ್ಸತ್ಯಂ ಭಸ್ಮ
ತದ್ವಿಸ್ಮೃತಂಧನಂ । ಯದಸತ್ಯಂಮೃದಾಧಾರ್ಯಂತತ್ಪರಂಪರಿವಲ್ಗತಃ ॥ ೪೦ ॥

---

ತ್ರಿಪುಂಡ್ರವನ್ನು ಧರಿಸಬೇಕೆಂದು ಬ್ರಹ್ಮನು ಆದರಪ್ರಾಶಸ್ತ್ಯವನ್ನು ತನ್ನ ಸೃಷ್ಟಿಯ
ನೆವದಿಂದಲೇ ತೋರ್ಪಡಿಸಿರುವನು. (ಎಂದರೆ— ಬ್ರಹ್ಮಸೃಷ್ಟಿಯಲ್ಲಿ ಮನುಷ್ಯ
ನ ಹಣೆಯು ಅಡ್ಡಲಾಗಿರುವದೇ ಹೊರತು ಉದ್ದನಾಗಿಯಾಗಲಿ ಗುಂಡಾಗಿಯಾಗಲಿ ಇ
ರುವುದಿಲ್ಲ. ಈ ವಚನಗಳು ಗಾರುಡಪುರಾಣದಲ್ಲಿ ಹೇಳಲ್ಪಟ್ಟಿರುವುವು. ಕಾಮನ
ನ್ನು ಸುಟ್ಟ ಪರಶಿವನ ದೇಹಕ್ಕೆ ಅಲಂಕಾರವಾಗಿರುವ ಶಿವಮಂತ್ರದಿಂದ ಪವಿತ್ರವಾಗಿ
ರುವ ಭಸ್ಮದ ತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿದರೆ, ವಿಧಿಲಿಖಿತವಾದ ಕೆಟ್ಟಹಣೆಯ
ಬರಹಗಳು ತೊಡೆದುಹೋಗುವವು'' ಎಂದು ಕೂರ್ಮಪುರಾಣವಚನವಿರುವುದು. ಯಾ
ವನು ತಲೆಯಮೇಲೆ ಭಸ್ಮತ್ರಿಪುಂಡ್ರವನ್ನು ಧರಿಸುವನೋ ಅವನು ಹೆಚ್ಚಾಗಿ ತಿಳಿದವ
ನೂ, ಸರ್ವವನ್ನೂ ಅನುಷ್ಠಾನಮಾಡಿದವನೂ, ಆಗುತ್ತಾನೆ. ಯಾವನು ಆ ತ್ರಿಪುಂ
ಡ್ರಧಾರಣವನ್ನು ಮಾಡಿಲ್ಲವೊ ಅವನು ಸತ್ಕರ್ಮವನ್ನಾಚರಿಸಿದ್ದರೂ ಆಚರಿಸದಂತೆಯೇ;
ಅವನು ತಿಳಿದುದೆಲ್ಲಾ ತಿಳಿಯದಿದ್ದಂತೆಯೇ; ಓದಿದುದು ಓದದೇಇದ್ದಂತೆಯೇ ಆಗುವು
ದು, ಎಂದು ಸ್ಕಾಂದಪುರಾಣವು ಹೇಳಿರುತ್ತಿರಲಾಗಿ, ಭಸ್ಮಧಾರಣಪ್ರಭಾವದಿಂದ ಕೂಡ
ದೆ ಇರುವವನ ದೀಕ್ಷೆಯೂ ತಪಸ್ಸೂ ಮಂತ್ರವೂ ಪೂಜೆಯೂ ದೇವತೆಯೂ, ವೇದಾಗ
ಮಜ್ಞಾನಗಳೂ ಕೂಡ ಜಡವಾದವುಗಳು ॥ ೩೮ ॥ ಎಲೆ ಬ್ರಾಹ್ಮಣರ ಕೇಳಿರಿ— ಭಸ್ಮವಿ
ಲ್ಲದೆ ಸ್ನಾನವೂಕೂಡ ಅಸಿದ್ಧವೆಂದು ಸರ್ವಾಗಮಗಳೂ ಇದನ್ನು ಉತ್ತಮೋತ್ತಮವ
ನ್ನಾಗಿ ನುಡಿದಿರುವುವು. ಅಯ್ಯೋ! ಭಸ್ಮವೆಂಬ ಸತ್ಯವಾದ ಆ ಮಹಾದ್ರವ್ಯವನ್ನು
ಮರೆಯುವುದೂ ಅಸತ್ಯವಾದ ಮಣ್ಣನ್ನು ಧರಿಸುವುದೂ (ಗೋಪಿಚಂದನಧಾರಣವು) ಆ

ಇತ್ಯೇತದಪಿವಾಸಿಷ್ಠರಾಮಾಯಣವಚಶ್ಶುಭಂ। ಅಹೋಮೋಹಸ್ಯಮಾಹಾ
ತ್ಮ್ಯಂಮಯಾವಕ್ತುಂನಶಕ್ಯತೇ ॥೪೧॥ ತ್ರಿಪುಂಡ್ರಂ ಮೋಕ್ಷದಂತ್ಯಕ್ತ್ವಾ
ಹ್ಯನ್ಯತ್ರರಮತೇಜನಃ । ಇತಿಬ್ರಹ್ಮಾಂಡಾಭಿಧಸ್ಯಪುರಾಣಸ್ಯವಚಶ್ಶುಭಂ
॥೪೨॥ ಅಹೋಮೋಹಸ್ಯಮಾಹಾತ್ಮ್ಯಂಮಯಾವಕ್ತುಂನಶಕ್ಯತೇ । ಮು
ಕ್ತಿದಂಭಸ್ಮಸಂತ್ಯಜ್ಯನರೋಽನ್ಯತ್ರವಿಚೇಷ್ಟತೇ ॥೪೩॥ ಇತಿವಾಸಿಷ್ಠಲೈಂ
ಗ್ಯಸ್ಯವಚನಂತ್ವಿದಮುತ್ತಮಂ । ಅಹೋಮೋಹಸ್ಯ ಮಾಹಾತ್ಮ್ಯಂಮು
ನೀಂದ್ರಾಬ್ರಹ್ಮವಾದಿನಃ ॥೪೪॥ ಯೇನರಾಭಸ್ಮಸಂತ್ಯಜ್ಯಕುರ್ವಂತ್ಯನ್ಯತ್ಸ
ಮಾಹಿತಾಃ । ಇತ್ಯೇತದ್ವಚನಂಸೂತಸಂಹಿತಾಯಾಂಪ್ರವಿಶ್ರುತಂ ॥೪೫॥
ಶುದ್ಧ್ಯತೇ ಸರ್ವಪಾಪೈಶ್ಚ ತ್ರಿಪುಂಡ್ರಂಸಿತಭಸ್ಮನಾ । ರಕ್ಷಾರ್ಥಂ ಮಂಗಳಾ
ರ್ಥಂಚ ಪವಿತ್ರಾರ್ಥಂಚ ಸತ್ತಮ ॥೪೬॥ ಲಿಂಗಾರ್ಥಂಚಾಪಿಭಕ್ತಾನಾಂ
ಭಸ್ಮದತ್ತಂಮಯಾಪುರಾ । ಇತೀಯಂವಾಕ್ಪುರಾಣಸ್ಯ ಭವಿಷ್ಯನ್ನಾಮ
ಕಸ್ಯಹಿ ॥೪೭॥ ಭಸ್ಮವಾಮಕರೇಸ್ಥಾಪ್ಯ ದಕ್ಷಿಣೇನಾಭಿಮಂತ್ರಿತಂ । ಇ
ತ್ಯಾಗಮಸ್ಯಪ್ರಥಿತಾಕಾರಣಾಖ್ಯಸ್ಯವಾಗಿಯಂ ॥೪೮॥ ಭಸ್ಮಸ್ನಾನಂ ಜಲ
ಸ್ನಾನಾದಸಂಖ್ಯೇಯಗುಣಾಧಿಕಂ । ತಸ್ಮಾದ್ವಾರುಣಮುತ್ಸೃಜ್ಯ ಸ್ನಾನ

---

ಶ್ರೇಷ್ಠವು ! ಎಂಬ ವಾಕ್ಯವು ಕೂಡ ವಾಸಿಷ್ಠರಾಮಾಯಣದಲ್ಲಿ ಹೇಳಲ್ಪಟ್ಟಿರುವುದು.
ಆಹಾ ! ಅಜ್ಞಾನದ ಪ್ರಭಾವವನ್ನು ನಾನು ಹೇಳಲಾರೆ ॥ ೪೧ ॥ ಜನಗಳು ಮು
ಕ್ತಿದಾಯಕವಾದ ಭಸ್ಮತ್ರಿಪುಂಡ್ರವನ್ನು ಬಿಟ್ಟು ಬೇರೆವಸ್ತುಗಳಲ್ಲಿ ಆಸಕ್ತರಾಗಿರುವರು
ಎಂಬ ಬ್ರಹ್ಮಾಂಡಪುರಾಣವಚನವಿರುವುದು. ॥ ೪೨ ॥ ಮನುಷ್ಯರು ಮೋಕ್ಷವನ್ನು
ಕೊಡುವ ಭಸ್ಮವನ್ನು ಬಿಟ್ಟು ಅನ್ಯವಸ್ತುಗಳಲ್ಲಿ ಇಷ್ಟಗೊಳ್ಳುವರು. ಅಜ್ಞಾನದ
ಪ್ರಭಾವವನ್ನು ನಾನು ಹೇಳಲಾರೆ. ಎಂದು ವಾಸಿಷ್ಠ ಲೈಂಗ್ಯಪುರಾಣದ ವಚನವಿ
ರುವುದು. ಬ್ರಹ್ಮವಾದಿಗಳಾದ ಎಲೈ ಮುನಿಶ್ರೇಷ್ಠರ ! ಮನುಷ್ಯರು ಭಸ್ಮ
ವನ್ನು ಬಿಟ್ಟು ಇತರವಸ್ತುವನ್ನು ಇಚ್ಛೆಯಿಂದ ಧರಿಸಿಕೊಳ್ಳುವರು ಅಜ್ಞಾನದ
ಮಾಹತ್ಮ್ಯವು ಎಂಬ ಸೂತಸಂಹಿತಾವಚನವು ಪ್ರಸಿದ್ಧವಾಗಿರುವುದು. ॥ ೪೫ ॥
ಶುಭ್ರವಾದ ಭಸ್ಮದಿಂದ ಮಾಡಿಕೊಂಡ ತ್ರಿಪುಂಡ್ರಧಾರಣವು ಸಕಲ ಪಾಪಗಳಿಂದಲೂ ಬಿ
ಡುಗಡೆಯನ್ನುಂಟುಮಾಡುವುದು. ಭಕ್ತರುಗಳ ಪರಿಪಾಲನೆಗಾಗಿಯೂ ಶುಭಕ್ಕಾಗಿ
ಯೂ, ಪರಿಶುದ್ಧಿಗಾಗಿಯೂ, ಚಿಹ್ನಕ್ಕಾಗಿಯೂ ಸಹ ನಾನು ಪೂರ್ವದಲ್ಲಿ ಭಸ್ಮವನ್ನು
ಕೊಟ್ಟೆನು, ಎಂಬುದು ಭವಿಷ್ಯತ್ಪುರಾಣದ ವಚನವು ॥ ೪೭ ॥ ಭಸ್ಮವನ್ನು ಎಡಗೈ
ಯ್ಯಲ್ಲಿಟ್ಟು ಬಲಗೈಯಿಂದಭಿಮಂತ್ರಿಸಬೇಕು ಎಂಬುದು ಕಾರಣಾಗಮದ ಪ್ರಸಿದ್ಧ
ವಾಕ್ಯವು. ಭಸ್ಮಸ್ನಾನವು ಜಲಸ್ನಾನಕ್ಕಿಂತಲೂ ಲೆಕ್ಕವಿಲ್ಲದಷ್ಟು ಹೆಚ್ಚುಗುಣವು

ಪಹತಾಜನಾಃ । ಇತ್ಯೇತದ್ವಚನಂ ಸೂತಸಂಹಿತಾಯಾಮುದೀರಿತಂ ॥೭॥ ಊರ್ಧ್ವಪುಂಡ್ರಂ ತ್ರಿಶೂಲಂಚ ವರ್ತುಳಂಚಾರ್ಧಚಂದ್ರಕಂ । ತಂತ್ರನಿಷ್ಠೈರ್ನಧಾರ್ಯಂಚ ನಧಾರ್ಯಂವೈದಿಕೈರ್ಜನೈಃ ॥೮॥ ಇತಿವಾಕ್ಯಂವಾಮನಾಖ್ಯೆಪುರಾಣೆ ಪ್ರತಿಪಾದಿತಂ । ಸೋರ್ಧ್ವಪುಂಡ್ರಮುಖಂದೃಷ್ಟ್ವಾವ್ರತಂ ಚಾಂದ್ರಾಯಣಂಚರೇತ್ ॥೯॥ ಇತ್ಯೇತದ್ವಚನಂಸ್ಪಷ್ಟಂ ಮನುಸ್ಮೃತ್ಯಾಂಪ್ರಭಾಷಿತಂ । ತಸ್ಮಾನ್ನದೃಶ್ಯಾನಸ್ಪೃಶ್ಯಾನ ಸಾಭಾಷ್ಯಾದ್ವಿಜಾತಯಃ ॥೧೦॥ ಊರ್ಧ್ವಪುಂಡ್ರಧರಾ ಸ್ಸರ್ವೆವ ನುಜಾಃ ಪುಣ್ಯಕೃಜ್ಜನೈಃ । ತಥೈವಶಂಖಚಕ್ರಾದಿ ಲಾಂಛನಾನ್ಯಪಿಭೂಸುರಾಃ ॥೧೧॥ ನಿಷಿದ್ಧಾನ್ಯತ್ರಮಾನಾರ್ಥಂ ವಕ್ಷ್ಯೆಸ್ಮೃತಿವಚಾಂಸಿವಃ । ನಾಂಕಯೆನ್ನದಹೆದ್ದೇಹಂ ದಹೆಚ್ಚೇತ್ಸ್ವಾನುಚಾರತಃ ॥೧೨॥ ನಾಧಿಕುರ್ವಂತಿದಗ್ಧಾಂಗಾಃ ಶ್ರೌತಸ್ಮಾರ್ತೇಷುಕರ್ಮಸು । ಇತಿ ಬೋಧಾಯನಸ್ಮೃತ್ಯಾಂ ವಚನಂ ಸರ್ವಸಂಮತಂ ॥೧೩॥ ಅಂಗೇಷುನಾಂಕಯೆದ್ವಿಪ್ರೋದೇವತಾಯುಧಲಾಂಛನೈಃ ।

---

ಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು. ॥೭॥ ಒಂಟನಾಮ ಮೂರುನಾಮ ಗುಂಡಾದ ಅಥವಾ ಅರ್ಧಚಂದ್ರಾಕಾರದತಿಲಕ ಇವುಗಳನ್ನುತಾಂತ್ರಿಕರೂ(ಆಗಮೋಕ್ತಾಚಾರನಿಷ್ಠರೂ) ಧರಿಸಬಾರದು. ವೈದಿಕರೂ ಅವನ್ನು ಧರಿಸಬಾರದು. ಎಂಬ ವಚನವನ್ನು ವಾಮನಪುರಾಣವು ಹೇಳಿರುವುದು. ಊರ್ಧ್ವಪುಂಡ್ರದಿಂದ ಕೂಡಿದ ಮುಖವನ್ನು ನೋಡಿದರೆ ಚಾಂದ್ರಾಯಣವ್ರತವನ್ನು ಮಾಡಬೇಕು, ಎಂಬವಾಕ್ಯವು ಮನುಸ್ಮೃತಿಯಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು. ಆದುದರಿಂದ ಊರ್ಧ್ವಪುಂಡ್ರವನ್ನು ಧರಿಸಿದ ದ್ವಿಜರನ್ನೆಲ್ಲ ಪುಣ್ಯಶಾಲಿಗಳಾದವರು ನೋಡಲೂಕೂಡದು, ಮುಟ್ಟಲೂಕೂಡದು, ಮಾತನಾಡಿಸಲೂಕೂಡದು. ಎಲೆ ಬ್ರಾಹ್ಮಣರೆ ! ಅದರಂತೆಯೇ ಶಂಖಚಕ್ರಾದಿಗಳ ಅಂಕನಗಳೂ ಕೂಡ ನಿಷಿದ್ಧಗಳು; ಪ್ರಮಾಣಕ್ಕಾಗಿ ಧರ್ಮಶಾಸ್ತ್ರವಚನವನ್ನು ನಿಮಗೆ ಹೇಳುತ್ತೇನೆ:—ಶರೀರವನ್ನು ಗುರುತುಮಾಡಕೂಡದು, ಸುಡಕೂಡದು, ಸ್ವೇಚ್ಛಾಚಾರದಿಂದ ಸುಡಿಸಿಕೊಂಡರೆ, ಅಂತಹದಗ್ಧಾಂಗರು ಶ್ರುತಿ ಸ್ಮೃತ್ಯುಕ್ತ ಕರ್ಮಗಳಿಗೆ ಅನಧಿಕಾರಿಗಳಾಗುವರು, ಎಂಬುದಾಗಿ ಬೋಧಾಯನಸ್ಮೃತಿಯಲ್ಲಿ ಸರ್ವ ಸಮ್ಮತವಾದ ವಚನವಿರುವುದು. ॥೧೩॥ ಬ್ರಾಹ್ಮಣನು ತನ್ನ ಅಂಗಗಳಲ್ಲಿ ದೇವತೆಗಳ ಆಯುಧಗಳ ಗುರುತುಗಳನ್ನು (ಶಂಖಚಕ್ರಾಂಕನಗಳನ್ನು) ಮಾಡಿಸಿಕೊಳ್ಳಬಾರದು. ಅಜ್ಞಾನದಿಂದೊಂದುವೇಳೆ ಮಾಡಿಸಿಕೊಂಡರೆ, ಪತಿತನೇ ಆಗುತ್ತಾನೆ, ಸಂಶಯವಿಲ್ಲ; ಎಂಬುದಾಗಿ ಶಾತಾತಪ ಸ್ಮೃತಿವಚನವು ವೇದಸಮ್ಮತವಾಗಿರುವುದು. ಚೆನ್ನಾಗಿ ಕಾಸಿದ ಕಬ್ಬಿಣದ ದೊಣ್ಣೆಯಿಂದ ದೇಹವನ್ನು ಸುಡಬಾರದು, ಎಂಬ ಸ್ಪಷ್ಟವಾದ ವಾಕ್ಯವು ಗೌತಮಸ್ಮೃತಿಯಲ್ಲಿ ಉನ್ನತವಾಗಿ ಹೇಳಲ್ಪಟ್ಟ

ಅಂಕಯೇದ್ಯದಿವಾಮೋಹಾತ್ಪತತ್ಯೇವ ನಸಂಶಯಃ ॥೧೪॥ ಇತಿಶಾತಾತಪ
ಸ್ಮೃತ್ಯಾವಚನಂ ಶ್ರುತಿಸಂಮತಂ । ಉತ್ತಪ್ತಲೋಹದಂಡೇನ ದಹೇನ್ನಾಂ
ಗಮಿತಿಸ್ಫುಟಂ ॥೧೫॥ ಏತದ್ವಾಕ್ಯಂ ಗೌತಮಸ್ಯಸ್ಮೃತೌಕೀರ್ತಿತಮುನ್ನ
ತಂ । ನಾಂಕಯೇನ್ನದಹೇದ್ಗಾತ್ರಂ ದೇವತಾಯುಧಲಾಂಛನೈಃ ॥೧೬॥
ದಹನಾಲ್ಲೇಖನಾದ್ವಿಪ್ರಃ ಪಾತಿತ್ಯಂಯಾತಿ ತತ್ಕ್ಷಣಾತ್ । ಇತ್ಯೇತದ್ವಚನಂ
ದೃಷ್ಟಂ ಯಮಸ್ಮೃತ್ಯಾಮನಿಂದಿತಂ ॥೧೭॥ ಸ್ವದೇಹೇ ಪರದೇಹೇವಾನಕು
ರ್ಯಾದಂಕನಂನರಃ । ಯದಿಕುರ್ಯಾಚ್ಚ ಚಕ್ರಾದ್ಯೈಃ ಪತತ್ಯೇವನಸಂಶ
ಯಃ ॥೧೮॥ ಇತ್ಯೇತದ್ವಚನಂ ಸೂತಸಂಹಿತಾಯಾಂ ಸಮೀರಿತಂ । ಆ
ಯುಧೈಶ್ಶಂಖಚಕ್ರಾದ್ಯೈರ್ನದಹೇಚ್ಚ ಕದಾಚನ ॥೧೯॥ ಮನುಷ್ಯಾ
ಣಾಂಚ ನಾಮ್ನಾತುನಲಿಖೇಚ್ಚೋರಸಿಭ್ರಮಾತ್ । ದಗ್ಧಾಂಗಾಶ್ಚಾಯು
ಧೈರ್ದಿವ್ಯೈರ್ಲಿಖಿತಾನರನಾಮತಃ ॥೨೦॥ ಶ್ರೌತಸ್ಮಾರ್ತೇ ಸದಾಚಾರೇ ನಾ
ಧಿಕಾರ್ಯಾಃ ಕದಾಚನ । ದಗ್ಧಾಂಗಾಲಿಖಿತಾಂಗಾಶ್ಚ ನಸಂಭಾಷ್ಯಾ ದ್ವಿಜಾತ
ಯಃ ॥೨೧॥ ನದರ್ಶನೀಯಾಸ್ತಾನ್ರಾಜಾದೇಶಾಚ್ಛೀಘ್ರಂ ಪ್ರವಾಸ
ಯೇತ್ । ಇತ್ಯೇತನ್ಮಾನವಾಖ್ಯಸ್ಯ ಪುರಾಣಸ್ಯ ವಚಶ್ಶುಭಂ ॥೨೨॥ ನ
ದಾಹಯೇದ್ದ್ವಿಜಶ್ರೇಷ್ಠೋ ನದಹೇಚ್ಚಕ್ರಪೂರ್ವಕೈಃ । ಅಂಕಿತೋಯ

---

ರುವುದು. ದೇವತಾಯುಧ ಚಿಹ್ನೆಗಳಿಂದ ಬರೆದು ದೇಹವನ್ನು ಗುರುತು ಮಾಡಕೂ
ಡದು, ಸುಡಕೂಡದು, ಒಂದುವೇಳೆ ಅವುಗಳಿಂದ ಬರೆಯಿಸಿಕೊಂಡರೆ ಅಥವಾ ಸು
ಡಿಸಿಕೊಂಡರೆ, ಕೂಡಲೇ ಆವನು ಪತಿತನಾಗುತ್ತಾನೆ, ಹೀಗೆಂಬ ನಿರ್ದುಷ್ಟವಾದ ವಾ
ಕ್ಯವು ಯಮಸ್ಮೃತಿಯಲ್ಲಿ ತೋರುವುದು ॥೧೭॥ ಮನುಷ್ಯನು ತನ್ನ ಶರೀರದಲ್ಲಾಗ
ಲಿ ಇತರರ ಶರೀರದಲ್ಲಾಗಲಿ ಚಕ್ರಾದಿಗಳ ಅಂಕನವನ್ನು ಮಾಡಬಾರದು, ಮಾಡಿದುದೇ
ಆದರೆ ಪತಿತನಾಗುತ್ತಾನೆ, ಸಂಶಯವಿಲ್ಲ, ಎಂಬೀವಚನವು ಸೂತಸಂಹಿತೆಯಲ್ಲಿ ಹೇಳ
ಲ್ಪಟ್ಟಿರುವುದು. ಶಂಖಚಕ್ರಾದ್ಯಾಯುಧಗಳಿಂದ ಯಾವಾಗಲೂ ಸುಡಬಾರದು. ಮನು
ಷ್ಯರ ಹೆಸರನ್ನಾದರೂ ಎದೆಯಮೇಲೆ ಅಜ್ಞಾನದಿಂದ ಬರೆಯಬಾರದು, ದೇವತಾಯು
ಧಗಳಿಂದ ದೇಹವನ್ನು ಸುಡಿಸಿಕೊಂಡಿರುವವರೂ, ಮನುಷ್ಯರ ಹೆಸರನ್ನು ದೇಹದ
ಮೇಲೆ ಬರಿಸಿಕೊಂಡಿರುವವರೂ ಸಹ ಶ್ರೌತಸ್ಮಾರ್ತ ಕರ್ಮಗಳನ್ನಾಚರಿಸುವಾಗ್ಗೆ ಯಾ
ವಾಗಲೂ ಅನಧಿಕಾರಿಗಳಾಗಿರುವರು. ಸುಡಿಸಿಕೊಂಡ ಅಥವಾ ಬರಿಸಿಕೊಂಡದೇಹವುಳ್ಳ
ದ್ವಿಜರುಗಳು ಸಂಭಾಷಣೆಗೆ ಅಯೋಗ್ಯರು. ನೋಡುವುದಕ್ಕೂ ಅಯೋಗ್ಯರು. ಅ
ದುಕಾರಣ ಅಂಥವರನ್ನು ದೊರೆಯು ಬೇಗನೆ ದೇಶದಿಂದ ಹೊರಪಡಿಸಬೇಕು. ಎಂ
ಬೀಶುಭವಚನವು ಮಾನವಪುರಾಣದಲ್ಲಿರುವುದು. ॥೨೨॥ ಬ್ರಾಹ್ಮಣಶ್ರೇಷ್ಠನು ದೇ

ಸ್ವದೇಶಾತ್ತಂ ರಾಜಾಶೀಘ್ರಂ ಪ್ರವಾಸಯೇತ್ ॥ ೧೩॥ ಇತಿ ಪಾರಾಶರಾ ಖ್ಯಸ್ಯಪುರಾಣಸ್ಯವಚಸ್ತ್ವಿದಂ । ಕೇನಚಿಲ್ಲಾಂಛಿತೋವಮತೋಽಯೇನ ಸಾಕ್ಷೀಸರ್ವದಾಭವೇತ್ ॥ ೧೪॥ ಶ್ರೌತಸ್ಮಾರ್ತ ಸದಾಚಾರೇನಾಧಿಕಾರೀಚಲಾಂಛಿತಃ । ಲಾಂಛಿತಾಶ್ಚನಸಂಭಾಷ್ಯಾ ನಸ್ಪೃಶ್ಯಾಶ್ಚ ತಥೈವಚ ॥ ೧೫ ॥ ನದರ್ಶನೀಯಾಸ್ತಾನ್ರಾಜಾದೇಶಾಚ್ಛೀಘ್ರಂ ಪ್ರವಾಸಯೇತ್ । ಇತಿವಾಕ್ಯಂ ಶ್ರುತಮಿದಂ ಯಜ್ಞವೈಭವಖಂಡಕೆ ॥ ೧೬॥ ಅಂಕಿತಾಶ್ಶಂಖಚಕ್ರಾದ್ಯೈರೂರ್ಧ್ವಪುಂಡ್ರಧರಾಸ್ತಥಾ । ನದೃಶ್ಯಾನ್ನೈವಸಂಸ್ಪೃಶ್ಯಾ ನಸಂಭಾಷ್ಯಾದ್ವಿಜಾತಯಃ ॥ ೧೭॥ ಇತಿಸ್ಮೃತ್ಯಾದಿವಾಕ್ಯೇಷುಸತ್ಸುಚಕ್ರಾದಿಲಾಂಛನಂ । ಊರ್ಧ್ವಪುಂಡ್ರಂ ದ್ವಿಜಾಧರ್ತುಂಭವದ್ಭಿರ್ಯುಜ್ಯತೆಕಥಂ ।

ಇತಿ ಶ್ರೀವೀರಶೈವಮತಾಚಾರ್ಯಗುರುರಾಜಸ್ಯಕೃತೌ ಶ್ರೀಪಂಡಿತಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೆ ದೀಕ್ಷಾಪ್ರಕರಣೆ ಊರ್ಧ್ವಪುಂಡ್ರ ಶಂಖಚಕ್ರಾಂಕನ ದಿ ನಿರಸನಂ ನಾಮ ಚತುರ್ಥೋಽಧ್ಯಾಯಃ.

---

ಹವನ್ನು ಚಕ್ರಾದ್ಯಾಯುಧಗಳಿಂದ ಸುಡಬಾರದು. ಬಂದುವೇಳೆ ಸುಟ್ಟಗುರುತನ್ನು ಮಾಡಿಕೊಂಡಿದ್ದರೆ ಅಂಥವನನ್ನು ದೊರೆಯು ತನ್ನ ದೇಶದಿಂದ ಬೇಗನೆ ಹೊರಕ್ಕೆ ಕಳುಹಿಸಬೇಕು, ಎಂಬಿದು ಪಾರಾಶರಪುರಾಣದ ವಾಕ್ಯವು. ಯಾವುದೊಂದರಿಂದ ಸುಡಿಸಿಕೊಂಡ ಗುರುತನ್ನು ದೇಹದಲ್ಲಿ ಹೊಂದಿರುವವನು ಯಾವಕಾರ್ಯದಲ್ಲೂ ಸಾಕ್ಷಿಯಾಗಿರುವುದಕ್ಕೆ ಅನರ್ಹನು. ಅಂಥ ಚಕ್ರಾದಿಲಾಂಛಿತನು ಶ್ರೌತಸ್ಮಾರ್ತ ಕರ್ಮಾಚರಣದಲ್ಲಿ ಅನಧಿಕಾರಿಯು. ಚಕ್ರಾದಿಲಾಂಛಿತರಾದವರು ಮಾತನಾಡುವುದಕ್ಕೂ ಮುಟ್ಟುವುದಕ್ಕೂ ನೋಡುವುದಕ್ಕೂ ಅನರ್ಹರು. ಅವರನ್ನು ರಾಜನು ತನ್ನದೇಶದಿಂದ ಬೇಗನೆ ಹೊರಡಿಸಬೇಕು, ಎಂಬೀವಾಕ್ಯವು ಯಜ್ಞವೈಭವಖಂಡದಲ್ಲಿ ಹೇಳಲ್ಪಟ್ಟಿರುವುದು. ‖ ೧೬ ‖ ಶಂಖಚಕ್ರಾಂಕನಗಳನ್ನು ಹೊಂದಿದವರೂ ಊರ್ಧ್ವಪುಂಡ್ರಧಾರಿಗಳೂ ಆದ ದ್ವಿಜರು ನೋಡಲೂ ಮುಟ್ಟಲೂ ಮಾತನಾಡಲೂ ಸಹ ಅಯೋಗ್ಯರೆಂದು ಸ್ಮೃತ್ಯಾದಿವಚನಗಳಲ್ಲಿ ತೋರುತ್ತಿರುವಾಗ, ಚಕ್ರಾದಿಲಾಂಛನವನ್ನೂ ತ್ರಿಪುಂಡ್ರವನ್ನೂ ಬ್ರಾಹ್ಮಣರು ಧರಿಸಿಕೊಳ್ಳುವುದನ್ನು ನೀವು ಹೇಗೆ ಅನುಮೋದಿಸುವಿರಿ?‖೧೮‖

ಎಂಬಲ್ಲಿಗೆ.........ಊರ್ಧ್ವಪುಂಡ್ರತಿರಸ್ಕಾರವನ್ನು ನಿರೂಪಿಸುವ ನಾಲ್ಕನೆಯ ಅಧ್ಯಾಯವು ಮುಗಿದುದು.

---

## ಪಂಚಮೋಽಧ್ಯಾಯಃ.

### ( ರು ದ್ರಾ ಕ್ಷ ಮಾ ಹಾ ತ್ಮ್ಯ ಂ . )

ಅಥ ಶ್ರುತಿಸ್ಮೃತಿ ಪುರಾಣಾಗಮಾದಿವಚಾಂಸಿವಃ । ವಕ್ಷ್ಯೇರುದ್ರಾಕ್ಷಧಾರಣಪರಾಣಿ ಶೃಣುತದ್ವಿಜಾಃ ॥೧॥ ಬೋಧಾಯನಸ್ಯ ಶಾಖಾಯಾಂ ವಿಖ್ಯಾತಾಯಾಂ ಮಹೀತಳೇ। ಯಜುರ್ವೇದೇತಾನಿಹವಾ ರುದ್ರಾಕ್ಷಾಣೀತಿ ಪೂರ್ವಕಂ॥೨॥ಯದ್ವಾಕ್ಯಮಸ್ತ್ಯತ್ರಮಯಾವಕ್ಷ್ಯತೆ ತದ್ವಿಚಾರ್ಯತಾಂ। "ತಾನಿಹವಾರುದ್ರಾಕ್ಷಾಣಿಯತ್ರ್ಯೋವೇದಾ ಧಾರಯಂತಿ ತಸ್ಮಾದ್ದೇವಧಾರಯಂತಿ ಯಸ್ತಾನಿಧಾರಯನ್ಗಚ್ಛಂಸ್ತಿಷ್ಠನ್ಸ್ವಾದಂತ್ಸ್ವಪನ್ನಿಷನ್ನಿಮಿಷಂತ್ಸಸರ್ವಾಣ್ಯೇನಾಂಸಿತರತಿರುದ್ರೋ ಭೂತ್ವಾರುದ್ರೀಭವತಿ" ಇತಿ. ತ್ರಿಪುಂಡ್ರಧೃಗ್ವಿಪ್ರವರೋಯೋರುದ್ರಾಕ್ಷಧರಶ್ಶುಚಿಃ ॥೩॥ ಸಃಪಙ್ಕ್ತಿಪಾವನಶ್ಶ್ರಾದ್ಧೇಪೂಜ್ಯೋವಿಪ್ರೈಸ್ಸುರೈರಪಿ । ಖಾದನ್ಮಾಂಸಂಪಿಬನ್ಮದ್ಯಂ ಸಂಗಚ್ಛನ್ನಂತ್ಯಜಾಮಪಿ ॥೪॥ ಸದ್ಯೋಭವತಿಪೂತಾತ್ಮಾ ರುದ್ರಾಕ್ಷೇ ಶಿರ

---

### ೫ ನೆಯ ಅಧ್ಯಾಯವು.

### ( ರುದ್ರಾಕ್ಷ ಧಾರಣ ಮಹತ್ತ್ವವು. )

ಎಲೆ ಬ್ರಾಹ್ಮಣರೆ ! ಇನ್ನು ರುದ್ರಾಕ್ಷಧಾರಣ ವಿಷಯಕಗಳಾದ ವೇದಶಾಸ್ತ್ರ ಪುರಾಣಾಗಮಾದಿಗಳ ವಚನಗಳನ್ನು ಹೇಳುತ್ತೇನೆ, ಕೇಳಿರಿ:—ಯಜುರ್ವೇದದಲ್ಲಿ ಜಗತ್ಪ್ರಖ್ಯಾತವಾದ ಬೋಧಾಯನ ಶಾಖೆಯಲ್ಲಿ "ತಾನಿಹವಾರುದ್ರಾಕ್ಷಾಣಿ" ಎಂದು ಮೊದಲಾಗಿ ಯಾವ ವಾಕ್ಯವಿದೆಯೋ, ಅದರ ವಿಷಯದಲ್ಲಿ ಹೇಳುತ್ತೇನೆ, ವಿಚಾರಮಾಡಿರಿ. ಪ್ರಸಿದ್ಧವಾದ ರುದ್ರಾಕ್ಷಗಳನ್ನು ಯಾವಕಾರಣದಿಂದ ಮೂರುವೇದಗಳೂ ಧರಿಸುತ್ತವೆಯೊ, ಅದುಕಾರಣವೇ ಅಂಥ ರುದ್ರಾಕ್ಷಗಳನ್ನು ಯಾವ ಮನುಷ್ಯನು ತಿರುಗುವಾಗ, ನಿಂತುಕೊಂಡಿರುವಾಗ, ತಿನ್ನುತ್ತಿರುವಾಗ, ಮಲಗಿರುವಾಗ, ಎಚ್ಚರುಗೊಂಡಿರುವಾಗಲೂಸಹ ಧರಿಸಿಕೊಂಡಿರುವನೊ, ಅವನು ಸಕಲ ಪಾಪಗಳನ್ನು ದಾಟುತ್ತಾನೆ. ರುದ್ರನೇ ತಾನಾಗಿ ರುದ್ರನಂತೆ ಆಚರಿಸುವವನೂ ಆಗುತ್ತಾನೆ, ಎಂದು ಹೇಳಲ್ಪಟ್ಟಿರುವುದು. ಯಾವ ಬ್ರಾಹ್ಮಣನು ತ್ರಿಪುಂಡ್ರವನ್ನು ಧರಿಸಿದವನಾಗಿ, ರುದ್ರಾಕ್ಷಗಳನ್ನು ಧರಿಸಿ ಶುದ್ಧನಾಗಿರುತ್ತಾನೊ, ಅವನು ಶ್ರಾದ್ಧಕರ್ಮದಲ್ಲಿ ಪಙ್ಕ್ತಿಗೆ ಪರಿಶುದ್ಧನೂ ಬ್ರಾಹ್ಮಣರಿಗೂ ದೇವತೆಗಳಿಗೂ ಕೂಡ ಪೂಜ್ಯನೂ ಆಗಿರುವನು. ಮಾಂಸವನ್ನು ತಿಂದು, ಮದ್ಯವನ್ನು ಕುಡಿದು, ಹೊಲತಿಯಸಂಗವನ್ನು ಮಾಡಿದ್ದವ

ಸಿಸ್ಥಿತೆ । ಇತಿ ಲಿಂಗಪುರಾಣಸ್ಯ ವಾಕ್ಯಮೇತದನುತ್ತಮಂ ॥೫॥ ರುದ್ರಾ
ಕ್ಷಂ ಧಾರಯನ್ಪಾಪಂ ಕುರ್ವನ್ನಪಿ ಚ ಮಾನವಃ । ಸರ್ವಂ ತರತಿ ಪಾಪ್ಮಾನಂ
ಜಾಬಾಲಶ್ರುತಿರಾಹ ಹಿ ॥೬॥ ಸ್ನಾನೇ ದಾನೇ ಜಪೇ ಹೋಮೇ ವೈಶ್ವದೇವೇ ಸು
ರಾರ್ಚನೇ । ಪ್ರಾಯಶ್ಚಿತ್ತೇ ತಥಾ ಶ್ರಾದ್ಧೇ ದೀಕ್ಷಾಕಾಲೇ ವಿಶೇಷತಃ ॥೭॥
ಅರುದ್ರಾಕ್ಷಧರೋ ಭೂತ್ವಾ ಯತ್ಕಿಂಚಿತ್ಕರ್ಮ ವೈದಿಕಂ । ಕುರ್ಯಾದ್ವಿಪ್ರ
ಸ್ತು ಯೋ ಮೋಹಾನ್ನಾಸಾವಾಪ್ನೋತಿ ತತ್ಫಲಂ ॥೮॥ ಮೃಣ್ಮಯಂ ವಾಪಿ
ರುದ್ರಾಕ್ಷಂ ಕೃತ್ವಾ ಯತ್ನೇನ ಧಾರಯೇತ್ । ಅಪಿ ದುಷ್ಕೃತಕರ್ಮಾಣಸ್ತೇ
ಪಿ ಯಾಂತಿ ಪರಾಂ ಗತಿಂ ॥೯॥ ಇತಿ ಕೂರ್ಮಪುರಾಣಸ್ಯ ವಾಕ್ಯಾನಿ ಶುಭದಾ
ನಿ ಹಿ । ರುದ್ರಾಕ್ಷಂ ಧಾರಯೇದ್ವಿಪ್ರಸ್ಸಂಧ್ಯಾದಿಷು ಚ ಕರ್ಮಸು ॥೧೦॥ ತ
ತ್ಸರ್ವಂ ಸಮವಾಪ್ನೋತಿ ಕೋಟಿಕೋಟಿಗುಣಂ ತಥಾ । ಇತಿ ಶೈವಪುರಾಣ
ಸ್ಯ ವಚನಂ ಶ್ರುತಿಸಂಮತಂ ॥೧೧॥ ಕಂಠೇ ರುದ್ರಾಕ್ಷಮಾಶ್ರಿತ್ಯ ಶ್ವಾಪಿ ವಾ ಮ್ರಿ
ಯತೇ ಯದಿ । ಸೋಪಿ ರುದ್ರತ್ವಮಾಪ್ನೋತಿ ಕಿಂ ಪುನರ್ಮಾನವಾದಯಃ ॥೧೨॥

---

ನು ಕೂಡ, ರುದ್ರಾಕ್ಷವನ್ನು ಶಿರಸ್ಸಿನಲ್ಲಿ ಧರಿಸಿಕೊಂಡುದೇ ಆದರೆ ತತ್ಕ್ಷಣದಲ್ಲೇ ಪಂ
ಶುದ್ಧಾತ್ಮನಾಗುತ್ತಾನೆ, ಎಂಬುದಾಗಿ ಶ್ರೇಷ್ಠವಾದ ವಚನವು ಲಿಂಗಪುರಾಣದಲ್ಲಿರುವು
ದು ॥೫॥ ರುದ್ರಾಕ್ಷವನ್ನು ಧರಿಸಿಕೊಂಡಿರುವ ಮನುಷ್ಯನು ಯಾವ ಪಾಪಗಳನ್ನೇ
ನ್ನು ಮಾಡಿದರೂ, ಅದೆಲ್ಲವನ್ನೂ ಅವನು ದಾಟುತ್ತಾನೆ ಎಂದು ಜಾಬಾಲಶ್ರುತಿಯು
ಹೇಳಿರುವುದಲ್ಲವೆ ? ಸ್ನಾನ, ದಾನ, ಜಪ, ಹೋಮ, ವೈಶ್ವದೇವ, ದೇವತಾರ್ಚನೆ,
ಪ್ರಾಯಶ್ಚಿತ್ತ ಶ್ರಾದ್ಧ, ದೀಕ್ಷೆ, ಈ ಕರ್ಮಗಳನ್ನಾಚರಿಸುವ ಸಮಯದಲ್ಲಿ ಯಾವ ಬ್ರಾ
ಹ್ಮಣನು ಅಜ್ಞಾನದಿಂದ ರುದ್ರಾಕ್ಷವನ್ನು ಧರಿಸಿಕೊಳ್ಳದೆ ವೈದಿಕವಾದ ಯಾವುದೊಂದು
ಸ್ವಲ್ಪ ಕರ್ಮವನ್ನು ಆಚರಿಸಿದರೂ, ಇವನು ತಾನಾಚರಿಸಿದ ಕರ್ಮದ ಫಲವನ್ನು ಹೊಂ
ದುವುದಿಲ್ಲ. ॥೮॥ (ರುದ್ರಾಕ್ಷವು ದೊರೆಯದಿದ್ದರೆ) ಪ್ರಯತ್ನ ಪೂರ್ವಕವಾಗಿ ಮಣ್ಣಿನ ರು
ದ್ರಾಕ್ಷವನ್ನಾದರೂ ಮಾಡಿ ಧರಿಸಿಕೊಳ್ಳಬೇಕು, ಅಂಥವರು ಪಾಪವನ್ನಾಚರಿಸಿದವರಾಗಿದ್ದ
ರೂ ಉತ್ತಮಗತಿಯನ್ನು ಹೊಂದುವರು. ಎಂಬಿವು ಕೂರ್ಮಪುರಾಣದ ಶುಭದಾಯಕ ವ
ಚನಗಳಲ್ಲವೆ?. ಬ್ರಾಹ್ಮಣನು ಸಂಧ್ಯಾವಂದನಾದಿ ಕರ್ಮಗಳನ್ನಾಚರಿಸುವಾಗ್ಗೆ ರುದ್ರಾ
ಕ್ಷವನ್ನು ಧರಿಸಿಕೊಂಡಿದ್ದರೆ, ಅವನಾಚರಿಸಿದ ಕರ್ಮವೆಲ್ಲವೂ ಕೋಟಿಕೋಟಿಭಾಗದ
ಷ್ಟು ಹೆಚ್ಚು ಗುಣವುಳ್ಳದ್ದಾಗುವುದು, ಎಂದು ಶೈವಪುರಾಣದ ವೇದಸಮ್ಮತ ವಚನ ವಿ
ರುವುದು. ಕೊರಳಿನಲ್ಲಿ ರುದ್ರಾಕ್ಷವನ್ನು ಹೊಂದಿ ನಾಯಿಯು ಸತ್ತರೆ ಅದು ಕೂಡ ರು
ದ್ರತ್ವವನ್ನು ಹೊಂದುತ್ತದೆನ್ನುವಾಗ, ಮನುಷ್ಯಾದಿಗಳ ವಿಷಯವನ್ನೇನು ಹೇಳುವು
ದು ? ಎಂಬೀವಚನವು ಸೂತಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು. ಎಲೆ ಬ್ರಾಹ್ಮಣರೆ !

ಇತ್ಯೇತದ್ವಚನಂ ಸೂತಸಂಹಿತಾಯಾಂ ಸವಿಸ್ತಾರಿತಂ । ಇತಿ ಶ್ರುತಿಷು ರುದ್ರಾಕ್ಷಧಾರಣಸ್ಯ ದ್ವಿಜನ್ಮನಾಂ ॥೧೩॥ ಪ್ರೋಕ್ತತ್ವಾದ್ವೈದಿಕೈಸ್ತಾನಿ ಧಾರ್ಯಾಣ್ಯೇವಮಹಿಂಸುರಾಃ ॥

ಇತಿ ಶ್ರೀಮ......ದೀಕ್ಷಾಪ್ರಕರಣೇ ರುದ್ರಾಕ್ಷಮಾಹಾತ್ಮ್ಯಕಥನಂನಾಮ ಪಂಚಮೋಽಧ್ಯಾಯಃ.

---

## ಷಷ್ಠೋಽಧ್ಯಾಯಃ.

### (ಶಿವ ಲಾಂ ಛ ನ ಧಾ ರ ಣ ಕ ಥ ನಂ.)

ಅಥವಿಷ್ಣ್ವಾದಯೋದೇವಾವ್ಯಾಸಾದ್ಯಾಮುನಿಪುಂಗವಾಃ । ಭೂತಿರುದ್ರಾಕ್ಷಾದಿಭವ್ಯಶೈವಲಾಂಛನಧಾರಿಣಃ ॥೧॥ ಇತ್ಯುಚ್ಚೈರ್ಘೋಷ್ಯಮಾಣಾನಿ ಶ್ರುತ್ಯಾದೀನಾಂವಚಾಂಸ್ಯಹಂ । ಕಥಯಾಮಿ ದ್ವಿಜಾಯೂಯಂ ತಾನ್ಯಾಕರ್ಣಯತಾಧುನಾ ॥೨॥ ಬೋಧಾಯನಸ್ಯ ಶಾಖಾಯಾಂ ಖ್ಯಾತಾಯಾಂ ಭುವನತ್ರಯೇ । ಯದ್ವಿದ್ಯತೇ ತಾನಿಹವೇತ್ಯಾದಿಕಂ ವಚನಂಶ್ರುತ ॥೩॥ ಸರ್ವದೇವಾಧಾರಯಂತಿ ರುದ್ರಾಕ್ಷಾಣೀತಿ ಶಂಸಕಂ । ರುದ್ರಾಕ್ಷ

---

ಹೀಗೆ ವೇದಗಳಲ್ಲಿ ದ್ವಿಜರುಗಳಿಗೆ ರುದ್ರಾಕ್ಷಧಾರಣವು ಉಕ್ತವಾಗಿರುವುದರಿಂದ ವೈದಿಕರಾದವರುಗಳು ಅವುಗಳನ್ನು ಧರಿಸಲೇಬೇಕಲ್ಲವೆ?

ಎಂಬಲ್ಲಿಗೆ.........ದೀಕ್ಷಾಪ್ರಕರಣದಲ್ಲಿ ರುದ್ರಾಕ್ಷಮಹಿಮೆಯನ್ನು ವರ್ಣಿಸಿರುವ ೫ ನೆಯ ಅಧ್ಯಾಯವು ಮುಗಿದುದು.

---

## ೬ ನೆಯ ಅಧ್ಯಾಯವು

### (ಶಿವಲಾಂಛನಧಾರಣಕಥನವು.)

ಎಲೈಬ್ರಾಹ್ಮಣರ! ಏಳಿಕ ವಿಷ್ಣುವೊದಲಾದ ದೇವತೆಗಳು, ವ್ಯಾಸಮೊದಲಾದ ಋಷಿ ಶ್ರೇಷ್ಠರುಗಳು ವಿಭೂತಿರುದ್ರಾಕ್ಷ ಮೊದಲಾದ ಶುಭಪ್ರದಗಳಾದ ಶಿವಲಾಂಛನಗಳನ್ನುಧರಿಸಿಕೊಂಡಿರುವರು ಎಂದು ಗಟ್ಟಿಯಾಗಿಕೂಗಿ ಹೇಳುತ್ತಿರುವ ವೇದಾದಿಗಳ ವಚನವನ್ನು ಈಗ ಹೇಳುತ್ತೇನೆ, ಅವುಗಳನ್ನುನೀವುಕೇಳಿರಿ ॥೨॥ ಮೂರುಲೋಕದಲ್ಲೂ ಪ್ರಸಿದ್ಧವಾದ ಬೋಧಾಯನಶಾಖೆಯಲ್ಲಿ "ತಾನಿಹವಾ" ಎಂಬ ಮೊದಲಾದ ಯಾವ ವಚನವಿರುವುದೋ ಅದು ಸಕಲ ದೇವತೆಗಳೂ ರುದ್ರಾಕ್ಷಗಳನ್ನುಧರಿಸುತ್ತಾರೆಂದು ಹೇಳತಕ್ಕದು.

ವಲಯೀಶುಭ್ರೋ ಜಟಾಜೂಟವಿರಾಜಿತಃ ॥೪॥ ಭಸ್ಮಾವಲಿಪ್ತಸರ್ವಾಂಗಃ ಕಮಂಡಲುಕರಾನ್ವಿತಃ । ಕೃಷ್ಣಾಜಿನೋಪವೀತಾಂಗ ಆಷಾಢೀ ಪುಣ್ಯಕೀರ್ತನಃ ॥೫॥ ಆಸೇವತೆಮಹಾದೇವಂ ಯೋಗಿನಾಂ ಹೃದಯಾಲಯಂ । ಇತಿ ಬ್ರಹ್ಮಾಂಡಾಭಿಧಸ್ಯ ಪುರಾಣಸ್ಯ ವಚಶ್ಶುಭಂ ॥೬॥ ಸ್ವರೂಪವರ್ಣನಪರಂ ಪ್ರಣವಸ್ಯಮಹೀಯಸಃ । ರುದ್ರಾಕ್ಷಭೂಷಣಾ ಶುಭ್ರಾ ಜಟಾಮಂಡಲಧಾರಿಣೀ ॥೭॥ ಅಕ್ಷಮಾಲಾರ್ಪಿತಕರಾ ಕಮಂಡಲುಕರಾನ್ವಿತಾ । ತ್ರಿಪುಂಡ್ರಾವಳಿಯುಕ್ತಾಂಗೀ ಚಾಷಾಢೇನವಿರಾಜಿತಾ ॥೮॥ ಋಗ್ಯಜುಸ್ಸಾಮರೂಪೇಣ ಸೇವತೇಸ್ಮ ಮಹೇಶ್ವರಂ । ಇತ್ಯೇತದಪಿಗಾಯತ್ರೀಸ್ವರೂಪಪ್ರತಿಪಾದಕಂ ॥೯॥ ಬ್ರಹ್ಮಾಂಡಸ್ಯ ಪುರಾಣಸ್ಯ ಪೂರ್ವೋಕ್ತಸ್ಯೈವಭಾಷಿತಂ । ರುದ್ರಾಕ್ಷವಲಯೋಶುಭ್ರಸ್ತ್ರಿಪುಂಡ್ರೇಣವಿರಾಜಿತಃ ॥೧೦॥ ಇತಿತತ್ರೈವಯಜ್ಞಸ್ಯ ಸ್ವರೂಪಖ್ಯಾಪಕಂವಚಃ । ತ್ರಿಪುಂಡ್ರೋದ್ಭಾಸಿಸರ್ವಾಂಗೋಯುಕ್ತೋ ರುದ್ರಾಕ್ಷಮಂಡನೈಃ ॥೧೧॥ ಇತೀಯಂವಾಯವೀಯಾಖ್ಯಸಂಹಿತಾಪ್ರತಿಪಾದಿತಾ । ವಾಣೀಸವಿದ್ದೇವತಾಯಾ ರೂಪವರ್ಣನ ತತ್ಪರಾ ॥೧೨॥ ತ್ರಿಪುಂಡ್ರಾಂಕಿತಸರ್ವಾಂಗೀ ಶುದ್ಧಾರುದ್ರಾಕ್ಷ

---

“ ಸರ್ವಾಂಗದಲ್ಲೂ ಭಸ್ಮವನ್ನು ಲೇಪಿಸಿಕೊಂಡು, ಕೈಯಲ್ಲಿ ಜಲಪಾತ್ರವನ್ನು ಹಿಡಿದು, ಕೃಷ್ಣಾಜಿನ ಮತ್ತು ಉಪವೀತಗಳನ್ನು ಧರಿಸಿ ದಂಡವನ್ನು ಹಿಡಿದು, ಪರಿಶುದ್ಧಗಳಾದ ಸಂಕೀರ್ತನಗಳನ್ನು ಹಾಡುತ್ತ, ಯೋಗಿಗಳ ಹೃದಯ ನಿವಾಸಿಯಾದ ಮಹಾದೇವನನ್ನು ಸೇವಿಸುತ್ತಾನೆ” ಎಂಬ ಬ್ರಹ್ಮಾಂಡಪುರಾಣದ ಶುಭವಚನವು ಘನತರವಾದ ಓಂಕಾರದಸ್ವರೂಪವನ್ನು ವರ್ಣಿಸತಕ್ಕದು. ॥೬॥ ರುದ್ರಾಕ್ಷಗಳ ಆಭರಣವುಳ್ಳವಳಾಗಿ, ಗೌರಾಂಗಿಯಾಗಿ, ಜಟಾಸಮೂಹವನ್ನು ಧರಿಸಿ, ಜಪಮಾಲೆ ಮತ್ತು ಕಮಂಡಲುಗಳನ್ನು ಕೈಯಲ್ಲಿ ಹಿಡಿದು, ತ್ರಿಪುಂಡ್ರದಸಾಲುಗಳನ್ನು ದೇಹದಲ್ಲಿ ಧರಿಸಿ, ಕೈಗೊಣ್ಣೆಯನ್ನುಹಿಡಿದು, ಋಕ್ಕು, ಯಜುಸ್ಸು, ಸಾಮವೆಂಬ, ವೇದತ್ರಯರೂಪದಿಂದ ಪರಮೇಶನನ್ನು ಸೇವಿಸಿದಳು.” ಎಂಬೀವಚನವು ಕೂಡ ಪೂರ್ವೋಕ್ತಬ್ರಹ್ಮಾಂಡ ಪುರಾಣದಲ್ಲಿರುವ ಗಾಯತ್ರೀ ಸ್ವರೂಪನಿರೂಪಕವಾದದ್ದು. ॥೯॥ “ ರುದ್ರಾಕ್ಷಹಾರವನ್ನು ಧರಿಸಿ, ಶುಭ್ರವರ್ಣನಾಗಿ, ತ್ರಿಪುಂಡ್ರದಿಂದ ಶೋಭಿಸುತ್ತಲಿರುವನು ” ಎಂದು ಅದೇಪುರಾಣದಲ್ಲಿರುವ ವಚನವು ಯಜ್ಞಪುರುಷನ ಸ್ವರೂಪವನ್ನು ವರ್ಣಿಸತಕ್ಕದು. “ ಭಸ್ಮತ್ರಿಪುಂಡ್ರದಿಂದೊಪ್ಪುವ ಸರ್ವಾಂಗವುಳ್ಳವನಾಗಿ ರುದ್ರಾಕ್ಷಾಭರಣಗಳಿಂದ ಕೂಡಿರುವನು ” ಎಂದು ವಾಯುವೀಯ ಸಂಹಿತೆಯಲ್ಲಿ ಹೇಳಲ್ಪಟ್ಟಿರುವವಾಕ್ಯವು ಸವಿದ್ದೇವತೆಯ ರೂಪವನ್ನು ವರ್ಣಿಸತಕ್ಕದು. ॥೧೨॥ ಸರ್ವಾಂಗದಲ್ಲೂ ತ್ರಿಪುಂಡ್ರವನ್ನು ಧರಿಸಿ, ಶುಭ್ರಳಾಗಿ, ರುದ್ರಾಕ್ಷಾಭರಣವ

ಮಂಡನಾ । ಇತಿ ಸರ್ವಪುರಾಣೇಷು ಸಾಧಾರಣತಯಾಸ್ಥಿತಾ ॥೧೩॥ ವಾಣೀವಷಡ್ದೇವತಾಯಾವ್ಯಾವರ್ಣನಪರಾಶುಭಾ । ಸಂಸ್ತೂಯಮಾನೋದೀಪ್ತಾಂಗೈರ್ದೇವೈರ್ಮುನಿಗಣೈಸ್ತಥಾ ॥೧೪॥ ಧೃತತ್ರಿಪುಂಡ್ರಕೋದಿವ್ಯೈರುದ್ರಾಕ್ಷೈಶ್ಚ ವಿಭೂಷಿತಃ । ಶುಶುಭೇಸತತಂವಿಷ್ಣುರ್ಭಸ್ಮದಿಗ್ಧತನೂರುಹಃ ॥೧೫॥ ಇತಿ ವಿಷ್ಣೋಸ್ಸ್ವರೂಪಸ್ಯ ವ್ಯಾವರ್ಣನಪರಂವಚಃ । ಉದೀರಿತಂವಾಯುವೀಯಸಂಹಿತಾಯಾಮನಿಂದಿತಂ ॥೧೬॥ ಭೂತಿತ್ರಿಪುಂಡ್ರರುದ್ರಾಕ್ಷಜಟಾಪಟಲಮಂಡಿತಃ । ಅಕ್ಷಮಾಲಾರ್ಪಿತಕರಶ್ಚತುರ್ವಕ್ತ್ರಃಪಿತಾಮಹಃ ॥೧೭॥ ಇತ್ಯುಕ್ತಿರಪಿತತ್ರೋಕ್ತಾಬ್ರಹ್ಮವರ್ಣನ ತತ್ಪರಾ । ಶುಭ್ರತ್ರಿಪುಂಡ್ರಾಣಿ ಶುಭಾನಿತಿರ್ಯಗ್ರೇಖಾಭಿರುದ್ಧೂಳಿತಸರ್ವಗಾತ್ರಃ ॥ ರುದ್ರಾಕ್ಷಮಾಲಾವಿಮಲಾಶ್ಚ ಬಿಭ್ರತ್ತಾದೃಗ್ವಿಧೈಶ್ಶಿಷ್ಯಗಣೈರ್ಮುನೀಂದ್ರೈಃ ॥೧೮॥ ರುದ್ರಾಂಶ್ಚ ಪಂಚಬ್ರಹ್ಮಾಣಿ ಚಾಥರ್ವಣಶಿರಶ್ಶಿಖಾಂ । ಜಪನ್ಪಂಚಾಕ್ಷರೀಂವಿದ್ಯಾಂ ಪೂಜಯನ್ಪರಮೇಶ್ವರಂ ॥೧೯॥ ಇತಿ ಸ್ಕಂದಪುರಾಣಸ್ಯ ಕಾಶೀಖಂಡೇಸಮೀರಿತಂ । ವ್ಯಾಸಾದಿ ಮುನಿವರ್ಯಾ

---

ಳ್ಳವಳು" ಎಂಬ ಪುರಾಣಗಳಲ್ಲೆಲ್ಲ ಸಾಮಾನ್ಯವಾಗಿರುವ ವಾಕ್ಯ ವಷಟ್ ದೇವತೆಯ ಸ್ವರೂಪವನ್ನು ವರ್ಣಿಸತಕ್ಕದು ॥೧೩॥ "ಉಜ್ವಲದೇಹಿಗಳಾದ ದೇವತೆಗಳಿಂದಲೂ ಋಷಿಸಮೂಹದಿಂದಲೂ ಸ್ತೋತ್ರಮಾಡಿಸಿಕೊಳ್ಳುವವನಾಗಿ, ತ್ರಿಪುಂಡ್ರವನ್ನು ಧರಿಸಿ ರುದ್ರಾಕ್ಷಿಗಳಿಂದಲಂಕೃತನಾಗಿ, ಯಾವಾಗಲೂ ಭಸ್ಮದಿಂದಲಿಪ್ತವಾದ ರೋಮವುಳ್ಳವನಾಗಿರುವನು" ಎಂದು ವಿಷ್ಣುವಿನ ಸ್ವರೂಪವನ್ನು ವರ್ಣಿಸುವ ವಚನವು ವಾಯುವೀಯಸಂಹಿತೆಯಲ್ಲಿ ನಿರ್ದುಷ್ಟನಾಗಿ ಹೇಳಲ್ಪಟ್ಟಿರುವುದು ॥೧೬॥ "ಬ್ರಹ್ಮನು ಭಸ್ಮತ್ರಿಪುಂಡ್ರದಿಂದಲೂ ರುದ್ರಾಕ್ಷಗಳಿಂದಲೂ ಜಟಾಸಮೂಹದಿಂದಲೂ ಅಲಂಕೃತನಾಗಿ ಕೈಯಲ್ಲಿ ಜಪಮಾಲಿಕೆಯನ್ನು ಹಿಡಿದು, ನಾಲ್ಕು ಮುಖಗಳುಳ್ಳವನಾಗಿರುವನು" ಎಂಬ ವಚನವುಕೂಡ ಬ್ರಹ್ಮಸ್ವರೂಪ ವರ್ಣನಪರವಾಗಿ ಅದೇ ವಾಯುವೀಯಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು ॥೧೭॥ ದೇಹದಲ್ಲೆಲ್ಲ ಭಸ್ಮವನ್ನುದ್ಧೂಳಿಸಿ, ಶುಭ್ರವಾದ ತ್ರಿಪುಂಡ್ರಗಳನ್ನು ಅಡ್ಡಲಾಗಿಧರಿಸಿ, ನಿರ್ಮಲವಾದ ರುದ್ರಾಕ್ಷಮಾಲಿಕೆಯನ್ನು ತಾಳಿ, ಅದೇರೀತಿಯಿಂದಿರುವ ಋಷಿಶ್ರೇಷ್ಠರಾದ ಶಿಷ್ಯರ ಸಮೂಹದಿಂದಕೂಡಿ, ರುದ್ರಾನುವಾಕಗಳನ್ನೂ, ಪಂಚಬ್ರಹ್ಮ ಮಂತ್ರಗಳನ್ನೂ, ಅಥರ್ವಣಶಿಖೋಪನಿಷತ್ತನ್ನೂ, ಪಂಚಾಕ್ಷರಿಯನ್ನೂ ಜಪಿಸುತ್ತಿರುವವನಾಗಿ, ಪರಶಿವನನ್ನು ಪೂಜಿಸುವವನಾಗಿ" ಎಂದು ಸ್ಕಂದಪುರಾಣದ ಕಾಶೀಖಂಡದಲ್ಲಿ ಹೇಳಲ್ಪಟ್ಟಿರುವ ವಚನವು ವ್ಯಾಸಾದಿಮಹರ್ಷಿಗಳ ಸ್ವರೂಪವನ್ನು ವರ್ಣಿಸತಕ್ಕದು ॥೨೦॥ "ತ್ರಿಪುಂಡ್ರದಿಂದಲಂಕರಿಸಿದ ಸರ್ವದೇಹವುಳ್ಳವರಾಗಿ, ಸದಾ

ಣಾಂ ವ್ಯಾವರ್ಣನಪರಂವಚಃ ॥೨೦॥ ತ್ರಿಪುಂಡ್ರಾಲಂಕೃತಾಂಗಾಶ್ಚ ನಿತ್ಯಂ ರುದ್ರಾಕ್ಷಭೂಷಣಾಃ। ಇತಿತತ್ರೈವ ವಚನಂಮುನುವರ್ಣನತತ್ಪರಂ॥೨೧॥ ಸರ್ವೆತಪಸ್ವಿನಃಪ್ರೋಕ್ತಾ ಸ್ಸರ್ವೆಯಜ್ಞೇಷುಭಾಗಿನಃ । ರುದ್ರಭಕ್ತಾ ಸ್ಸತ್ರಿಪುಂಡ್ರಾಂಕಿತಮಸ್ತಕಾಃ ॥೨೨॥ ಇತಿ ಕೂರ್ಮಪುರಾಣಸ್ಯವಚನಂ ಲೋಕವಿಶ್ರುತಂ । ತಸ್ಮಾದ್ವಿಷ್ಣ್ವಾದಯೋದೇವಾಸ್ಸರ್ವೇಪಿಮುನಿಪುಂಗವಾಃ ॥೨೩॥ ಪರಮೇಶ್ವರಸದ್ಭಕ್ತಾ ಶ್ಶಿವಲಾಂಛನ ಧಾರಿಣಃ । ತದನ್ಯಲಾಂಛನಧರಾಲೋಕೇಕಿಂಸಂತಿಭೋದ್ವಿಜ ॥ ॥೨೪॥

ಇತಿ... .....ದೀಕ್ಷಾಪ್ರಕರಣೆ ಸರ್ವಸ್ತದೇವಮುನುಮುನ್ಯಾದಯ
ಶ್ಶಿವಲಾಂಛನಧಾರಿಣಇತಿಕಥನಂನಾಮ
ಷಷ್ಠೋಽಧ್ಯಾಯಃ.

---

## ಸಪ್ತಮೋಽಧ್ಯಾಯಃ.

### (ಶಿವಲಿಂಗಾರ್ಚನ ವಿಧಿಃ.)

ಅಥ ಶ್ರುತಿಪುರಾಣೇಷುಪ್ರೋಕ್ತಂ ಲಿಂಗಾರ್ಚನಾವಿಧಿಂ । ಕಥಯಾಮಿದ್ವಿಜಾಯೂಯಂ ಸಮಾಕರ್ಣಯತಾಧುನಾ ॥೧॥ ಲಿಂಗಮಧ್ಯೆ ಮಹಾ

---

ರುದ್ರಾಕ್ಷಾಭರಣವುಳ್ಳವರಾಗಿ " ಎಂದು ಆ ಕಾಶೀಖಂಡ ಲ್ಲೇ ಹೇಳಲ್ಪಟ್ಟಿರುವ ವಚನವು ಮುನಿಗಳ ಸ್ವರೂಪವನ್ನು ವರ್ಣಿಸುವ ವಿಷಯುಕವಾದುದು ॥೨೧॥ "ತಪಸ್ವಿಗಳೆನಿಸಿಕೊಳ್ಳುವ ಸರ್ವರೂ, ಯಜ್ಞಭಾಗವನ್ನು ಪಹಿಸುವ ಸರ್ವರೂ, ಸಕಲ ರುದ್ರಭಕ್ತರೂ ಸಹ ತ್ರಿಪುಂಡ್ರಲಾಂಛನವನ್ನು ವಹಿಸಿದ ತಲೆಯುಳ್ಳವರು " ಎಂದು ಕೂರ್ಮಪುರಾಣದ ವಚನವು ಲೋಕಪ್ರಸಿದ್ಧವಾಗಿರುವುದು. ಅದುಕಾರಣ ವಿಷ್ಣು ಮೊದಲಾದ ದೇವತೆಗಳೂ, ಸಕಲಮಹರ್ಷಿಗಳೂ ಕೂಡ ಪರಮಶಿವನ ಸದ್ಭಕ್ತರು, ಮತ್ತು ಶಿವಲಾಂಛನವನ್ನು ಧರಿಸಿದವರು. ಎಲೆಬ್ರಾಹ್ಮಣರೆ ! ಆ ಶಿವಚಿಹ್ನವನ್ನು ಹೊರತು ಇತರ ಚಿಹ್ನವನ್ನು ಧರಿಸಿದವರು ಲೋಕದಲ್ಲಿರುವರೆ ?

ಎಂಬಿಲ್ಲಿಗೆ.........ಸಕಲ ದೇವಮುನುಮುನಿಗಳೆಲ್ಲ ಶಿವಲಾಂಛನ ಧಾರಿಗಳೆಂಬುದನ್ನು ಪ್ರತಿಪಾದಿಸುವ ಆರನೆಯ ಅಧ್ಯಾಯವು ಮುಗಿದುದು.

---

## ೭ ನೆಯ ಅಧ್ಯಾಯವು

### ( ಶಿವಲಿಂಗ ಪೂಜಾ ವಿಧಾನವು. )

ಎಲೆ ಬ್ರಾಹ್ಮಣರೆ ! ಇನ್ನು ವೇದ ಪುರಾಣಗಳಲ್ಲಿ ಉಕ್ತವಾಗಿರುವ ಶಿವಲಿಂಗ ಪೂಜಾವಿಧಾನವನ್ನು ಹೇಳುತ್ತೇನೆ, ಕೇಳಿರಿ, ಜಗತ್ತನ್ನು ಅನುಗ್ರಹಿಸುವುದಕ್ಕಾಗಿ

ದೇವಸ್ಸಾಕ್ಷಾದೇವ ವ್ಯವಸ್ಥಿತಃ । ಅನುಗ್ರಹಾಯ ಲೋಕಾನಾಂ ತಸ್ಮಾಲ್ಲಿಂ
ಗಂ ಪ್ರಪೂಜಯೇತ್ ॥೨॥ ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚ
ರಾಚರಂ । ಲಿಂಗಾದ್ಬಾಹ್ಯಂಪರಂ ನಾಸ್ತಿ ತಸ್ಮಾಲ್ಲಿಂಗಂಪ್ರಪೂಜಯೇತ್ ॥೩॥
ಪೃಥಿವ್ಯಾಂಯಾನಿತೀರ್ಥಾನಿ ಪುಣ್ಯಾನ್ಯಾಯತನಾನಿ ಚ । ಲೀಯಂತೇ ಲಿಂಗ
ಮೂಲೇ ಹಿ ತಸ್ಮಾಲ್ಲಿಂಗಂಪ್ರಪೂಜಯೇತ್ ॥೪॥ ಲಿಂಗಾರ್ಚನಂತು ದ್ವಿವಿ
ಧಂ ನಿತ್ಯಕಾಮ್ಯವಿಭೇದತಃ । ತಥೈವಹರದತ್ತಾರ್ಯೈರುಕ್ತಂ ತಾತ್ಪರ್ಯಸಂ
ಗ್ರಹೇ ॥೫॥ ದ್ವೇಧಾತದಾರ್ಚನವಿಧಿಸ್ತರುಣೇಂದುಮೌಳೇ ಕಾಮಾಯಕ
ಶ್ಚಿದಪರೋ ದುರಿತಕ್ಷಯಾಯ । ಅಪ್ಯಗ್ನಿಹೋತ್ರಮುಭಯಂವಯ ಮಾ
ಮನಾಮಸ್ಸ್ವರ್ಗಾಯ ಯದ್ಭವತಿ ಯದ್ದುರಿತಂಕ್ಷಿಣೋತಿ ॥೬॥ ಇತಿ
ವಾಕ್ಯಾದಗ್ನಿಹೋತ್ರಮೇಕಂ ಸ್ವರ್ಗಾಪವರ್ಗಯೋಃ । ಯಥೈವಕಾರ
ಣಮಭೂತ್ತಥೈಕಂಲಿಂಗಪೂಜನಂ ॥೭॥ ಪ್ರಕೃಷ್ಟಂಕಾರಣಂಜಾತಂ ಸ
ತತಂ ಬಂಧಮೋಕ್ಷಯೋಃ । ಬೋಧಾಯನೈರಪ್ಯೇಷೋರ್ಥಸ್ಸ್ವಸೂತ್ರೇ
ಪ್ರತಿಪಾದಿತಃ ॥೮॥ ವಾಕ್ಯೇಽಥಾತೋ ಮಹಾದೇವಸ್ಯೇತ್ಯಾದಾಸಂಸ್ಥಿತೇಽನ

---

ಲಿಂಗದ ಮಧ್ಯದಲ್ಲಿ ಈಶ್ವರನು ಪ್ರತ್ಯಕ್ಷವಾಗಿಯೇ ಇರುವನು. ಆದುದರಿಂದ ಲಿಂಗವ
ನ್ನು ಪೂಜಿಸಬೇಕು. ಚರಾಚರಾತ್ಮಕವಾದ ಜಗತ್ತೆಲ್ಲವೂ ( ಮೂರುಲೋಕವೂ )
ಲಿಂಗದ ಮಧ್ಯದಲ್ಲಿರುವುದು. ಶಿವಲಿಂಗಕ್ಕಿಂತಲೂ ಹೊರಗಾದ ವಸ್ತುವು ಮತ್ತೊಂದಿಲ್ಲ.
ಅದುಕಾರಣ ಲಿಂಗವನ್ನಾರಾಧಿಸಬೇಕು. ಭೂಮಿಯಲ್ಲಿ ಯಾವತೀರ್ಥಗಳಿರುವುವೋ
ಪುಣ್ಯಕ್ಷೇತ್ರಗಳಿರುವುವೋ, ಅವೆಲ್ಲವೂ ಲಿಂಗದ ಬುಡದಲ್ಲಿ ಅಡಗಿರುವುವು. ಆದುದರಿಂ
ದ ಲಿಂಗವನ್ನರ್ಚಿಸಬೇಕು. ಲಿಂಗಪೂಜೆಯು ನಿತ್ಯ ಕಾಮವೆಂದು ಎರಡು ಪ್ರಕಾರವಾ
ಗಿರುವುದು. ಹಾಗೆಯೇ ಹರದತ್ತಾಚಾರ್ಯರು ತಾತ್ಪರ್ಯಸಂಗ್ರಹವೆಂಬ ಗ್ರಂಥದಲ್ಲಿ ಹೇ
ಳಿರುವರು ॥೫॥ ಎಲೈ ಬಾಲಚಂದ್ರಶೇಖರನೆ ! ಅಗ್ನಿಹೋತ್ರವನ್ನು ಕೂಡ ಸ್ವರ್ಗ ಸಾ
ಧಕವಾದುದು, ಪಾಪನಿವಾರಕವಾದುದು ಎಂದು ಎರಡು ತೆರನನ್ನಾಗಿ ತಿಳಿಯುವಂತೆಯೇ
ನಿನ್ನ ಪೂಜಾವಿಧಾನವು ಎರಡು ಪ್ರಕಾರವಾಗಿರುವುದು. ಅವುಗಳಲ್ಲಿ ಒಂದು ಇಷ್ಟಾರ್ಥ
ಪರಿಪೂರಣಕ್ಕಾಗಿ, ಮತ್ತೊಂದು ಪಾಪವಿನಾಶಕ್ಕಾಗಿ, ಎಂಬ ವಾಕ್ಯದಿಂದ ಅಗ್ನಿಹೋ
ತ್ರವೊಂದೇ ಸ್ವರ್ಗಮೋಕ್ಷಗಳೆರಡಕ್ಕೂ ಹೇಗೆ ಕಾರಣವಾಯಿತೋ, ಹಾಗೆಯೇ ಉತ್ತ
ಮವಾದ ಲಿಂಗಪೂಜನವೊಂದೇ ಯಾವಾಗಲೂ ಬಂಧಮೋಕ್ಷಗಳೆರಡಕ್ಕೂ ಕಾರಣವಾ
ಗಿರುವುದು ॥೭॥ ಬೋಧಾಯನರಿಂದಲೂ ಕೂಡ ಅವರ ಸೂತ್ರದಲ್ಲಿ ಇದೇ ಅಭಿಪ್ರಾ
ಯವು ಹೇಳಲ್ಪಟ್ಟಿರುವುದು. ಹೇಗೆಂದರೆ— " ಅಥಾತೋ ಮಹಾದೇವಸ್ಯ " ಎಂದು
ಮೊದಲಾಗಿರುವ ನಿರ್ದಿಷ್ಟವಾದ ವಾಕ್ಯದಲ್ಲಿ " ಪ್ರತಿದಿನವೂ " ಎಂಬ ಪದಪ್ರಯೋ

ಷೇ। ಜ್ಞಾತಾಹರಹರಿತ್ಯೇತತ್ಪದೇನಾಸ್ಯಹಿನಿತ್ಯತಾ ॥೯॥ ಶಾಂತಿಕಾಮಃ ಪು
ಷ್ಟಿಕಾಮ ಇತಿ ಕಾಮಸ್ಯಯೋಗತಃ । ಕಾಮ್ಯತಾಚ ಪರಿಜ್ಞಾತಾ ತಸ್ಯ
ಲಿಂಗಾರ್ಚನಸ್ಯಹಿ ॥೧೦॥ ತದ್ಬೋಧಾಯನಸೂತ್ರಸ್ಯ ವಾಕ್ಯಮತ್ರಪ್ರ
ಕಾಶ್ಯತೇ । "ಅಥಾತೋಽಹರಹರ್ಮಹಾದೇವಸ್ಯ ಪರಿಚರ್ಯಾವಿಧಿಂ ವ್ಯಾ
ಖ್ಯಾಸ್ಯಾಮ ಇತಿ ಪಾಪಕ್ಷಯಾರ್ಥೀ ವ್ಯಾಧಿವಿಮೋಚನಾರ್ಥೀ ಶ್ರೀಕಾಮ
ಶ್ಶಾಂತಿಕಾಮಃ ಪುಷ್ಟಿಕಾಮ ಆಯುಃಕಾಮ ಆರೋಗ್ಯಕಾಮಶ್ಚ ಕು
ರ್ಯಾದಿತಿ" ತಸ್ಮಾಲ್ಲಿಂಗಾರ್ಚನಂ ಭೋಗಮೋಕ್ಷಯೋಃಕಾರಣಂಪರಂ
॥೧೧॥ ತತ್ರಸ್ವರ್ಗಾದಿಭೋಗಸ್ಯಸಾಧನಂ ಲಿಂಗಪೂಜನಂ । ಇತ್ಯತ್ರಕ
ಥ್ಯತೇಮಾನಂಯಜುರ್ವೇದಸ್ಯಭಾಷಿತಂ ॥೧೨॥ ಯಜುರ್ವೇದಸ್ಯ ಸುಯು
ಜಾಯುಜಾಮೇತಿಚತದ್ವಚಃ । ಅಸ್ತಿತಲ್ಲಿಂಗಪೂಜೈವ ಸ್ವರ್ಗಭೋಗಸ್ಯ
ಸಾಧನಂ ॥೧೩॥ ಇತಿ ಪ್ರವಕ್ತಿ ವಚಸಸ್ತಸ್ಯಾರ್ಥಃ ಪರಿಕಥ್ಯತೇ । ಯಜ್ವಾ
ನೋಹಿಸ್ವರ್ಗಕಾಮೋಯಜೇತೇತಿಶ್ರುತೇರ್ಗಿರಾ ॥೧೪॥ ಸ್ವರ್ಗಭೋ
ಗೇಚ್ಛಯೇಶಾನಂ ಯಜಂತೀತಿನಿರಂತರಂ । ತವಶ್ರಿಯೇಮರುತ ಇತ್ಯಾದ್ಯ

---

ಗ ಏರುವುದರಿಂದ ಆ ಶಿವಾರ್ಚನೆಯು ನಿತ್ಯತ್ವವು ತಿಳಿಯಲ್ಪಟ್ಟಿತು. "ಶಾಂತಿಯನ್ನ
ಪೇಕ್ಷಿಸುವವನು ಪುಷ್ಟಿಯನ್ನಪೇಕ್ಷಿಸುವವನು ಎಂಬುದಾಗಿ ಇಚ್ಛಾವಾಚಕ ಪದವನ್ನು
ನಿಯೋಜಿಸಿರುವುದರಿಂದ ಆ ಲಿಂಗಪೂಜೆಯು ಕಾಮ್ಯತ್ವವೂ ತಿಳಿಯಲ್ಪಟ್ಟಿತಲ್ಲವೆ ? ॥೧೦॥
ಆ ಬೋಧಾಯನ ಸೂತ್ರದ ವಾಕ್ಯವನ್ನೇ ಇಲ್ಲಿ ವಿಸ್ತರಿಸುತ್ತೇನೆ. "ಬಳಿಕ ಈ ವಾ
ಕ್ಯದಿಂದ ಪರಶಿವನ ಪ್ರತಿದಿನ ಪೂಜಾವಿಧಾನವನ್ನು ವಿಸ್ತರಿಸುವೆವು ಎಂದು, ಪಾಪನಾಶವ
ನ್ನಪೇಕ್ಷಿಸುವವನೂ, ರೋಗನಿವಾರಣವನ್ನಿಚ್ಛಿಸುವವನೂ, ಸಂಪತ್ತನ್ನು ಬಯಸುವ
ವನೂ ಶಾಂತಿಯನ್ನು ಕೋರುವವನೂ, ಪುಷ್ಟಿಯನ್ನು ಕಾಂಕ್ಷಿಸುವವನೂ, ಆಯು
ಸ್ಸನ್ನು ಅಭಿಲಾಷಿಸುವವನೂ, ಆರೋಗ್ಯಕಾಮಿಯೂ ಸಹ (ಶಿವಾರ್ಚನವನ್ನು)
ಮಾಡಬೇಕು" ಎಂದು ಹೇಳಲ್ಪಟ್ಟಿರುವುದು. ಆದುದರಿಂದ ಉತ್ಕೃಷ್ಟವಾದ ಲಿಂ
ಗಪೂಜೆಯು ಭೋಗಮೋಕ್ಷಗಳೆರಡಕ್ಕೂ ಕಾರಣವು ॥೧೧॥ ಲಿಂಗಪೂಜೆಯು ಸ್ವರ್ಗಾದಿ
ಸುಖ ಸಾಧಕವಾದುದೆಂಬ ವಿಷಯದಲ್ಲಿ ವೇದವಚನವನ್ನು ಪ್ರಮಾಣರೂಪವಾಗಿ ಇ
ಲ್ಲಿ ಹೇಳುವೆನು. ಯಜುರ್ವೇದದ "ಸುಯುಜಾಯುಜಾಮ" ಎಂಬ ವಾಕ್ಯವಿರುವು
ದು. ಆ ಲಿಂಗಪೂಜೆಯೇ ಸ್ವರ್ಗಸುಖ ಸಾಧಕವೆಂದು ಹೇಳುತ್ತಿರುವುದು. ಮತ್ತು
"ಸ್ವರ್ಗಕಾಮೋಯಜೇತ" ಎಂಬ ವೇದವಾಕ್ಯದಿಂದ ಪೂಜಕರು ಸ್ವರ್ಗ ಸುಖಾಪೇಕ್ಷೆ
ಯಿಂದ ಶಿವನನ್ನು ಸದಾ ಪೂಜಿಸುವರು, ಎಂದು ಸಿದ್ಧವಾಗುವುದು ॥ ೧೪ ॥ "ತವ
ಶ್ರಿಯೇಮರುತಃ" ಎಂದಾರಂಭಿಸುವ ಋಗ್ವೇದವಚನವುಂಟಷ್ಟೆ. ಅದು ಶಿವಲಿಂಗಪೂ

ವ್ಯೃಗ್ವಾಕ್ಯಮಸ್ತಿ ಯತ್ ॥೧೫॥ ಬ್ರೂತೇಲಿಂಗಾರ್ಚನಂಭೋಗನಿಮಿತ್ತ ಮಿತಿತದ್ಧ್ರುವಂ । ಅಸ್ಮಾಭಿರ್ವಕ್ಷ್ಯತೇ ಸಮ್ಯಕ್ತದ್ವಾಕ್ಯಂ ಶ್ರೂಯತಾಂ ದ್ವಿಜಾಃ ॥೧೬॥ "ತವಶ್ರಿಯೆಮರುತೊಮರ್ಜಯಂತ ರುದ್ರಯತ್ತೇ ಜನಿ ಮಚಾರುಚಿತ್ರಂ" ಇತಿ. ಅಸ್ಯಾರ್ಥಃ ಕಥ್ಯತೇಽಸ್ಮಾಭಿರ್ಭಾಷ್ಯವಾ ಕ್ಯಾನುಸಾರತಃ । ಹೇರುದ್ರಪರಮೇಶಾನ ಚಾರ್ವತ್ಯಂತಮನೋಹರಂ ॥೧೭॥ ತಥಾಚಿತ್ರಂಚಾಯುಸೀಯಂ ಪೂಜನೀಯಮಿತಿಸ್ಮೃತಂ । ಯತ್ತೇ ಜನಿಮಲಿಂಗಂ ಯತ್ತವತನ್ಮರುತಸ್ಸುರಾಃ ॥೧೮॥ ವಿಷ್ಣ್ವಾದಯಶ್ಶ್ರಿಯೆ ಸ್ವಸ್ವಪದಪ್ರಾಪ್ತ್ಯರ್ಥಮಾದರಾತ್ । ಮರ್ಜಯಂತಸ್ವೀಯ ಹಸ್ತಸ್ಪರ್ಶ ಪೂರ್ವಂ ಜಯಂತಿಹಿ ॥೧೯॥ ಏತದ್ವಾಕ್ಯಸ್ಥ ಜನಿಮಪದಂ ಲಿಂಗಸ್ಯನಾಮ ಕಂ । ಏತದರ್ಥಂವಕ್ತಿ ಶಿವಧರ್ಮಶಾಸ್ತ್ರಮಪಿಸ್ಫುಟಂ ॥೨೦॥ ಇಂದ್ರ ನೀಲಮಯಂಲಿಂಗಂ ವಿಷ್ಣುಃ ಪೂಜಯತೇಸದಾ । ವಿಷ್ಣುತ್ವಂಪ್ರಾಪ್ತವಾಂ ಸ್ತೇನಸಾದ್ಭುತೈಕಂಸನಾತನಂ ॥೨೧॥ ಬ್ರಹ್ಮಾಪೂಜಯತೇನಿತ್ಯಂಲಿಂಗಂ ಶೈಲಮಯಂಶುಭಂ । ತಸ್ಯಸಂಪೂಜನಾತ್ತೇನಪ್ರಾಪ್ತಂ ಬ್ರಹ್ಮತ್ವಮುತ್ತ ಮಂ ॥೨೨॥ ಶಕ್ರೋಪಿದೇವರಾಜೇಂದ್ರೋಲಿಂಗಂ ಮಣಿಮಯಂ ಶುಭಂ।

---

ಜೆಯ ಸೌಖ್ಯಕ್ಕೆ ಹೇತುವೆಂದು ಹೇಳುತ್ತಿರುವುದು. ಅದು ನಿಜವು. ಎಲೆ ಬ್ರಾಹ್ಮ ಣರೆ ! ಆ ವೇದವಚನವನ್ನು ನಾವು ಹೇಳುತ್ತೇವೆ ಕೇಳಿರಿ— "ತವಶ್ರಿಯ......ಚಿ ತ್ರಂ" ಎಂದು. ಇದರ ಅರ್ಥವನ್ನು ಭಾಷ್ಯವಚನಾನುಸಾರವಾಗಿ ಹೇಳುತ್ತೇನೆ— ಹೇರುದ್ರ—ಎಲೈ ಪರಶಿವನೆ ! ಚಾರು—ಅತ್ಯಂತ ಮನೋಹರವಾದ, ಚಿತ್ರಂ—ಪೂಜಾ ಯೋಗ್ಯವಾದ, ತೆ—ನಿನ್ನ, ಯತ್ ಜನಿಮ—ಯಾವಲಿಂಗವುಂಟೋ, ತವ—ನಿನ್ನ, ತತ್—ಆ ಲಿಂಗವನ್ನು, ಮರುತಃ—ವಿಷ್ಣ್ವಾದಿ ದೇವತೆಗಳು, ಶ್ರಿಯೆ—ತಮ್ಮ ತಮ್ಮ ಅಧಿಕಾರಸ್ಥಾ ನಗಳನ್ನು ಹೊಂದುವುದಕ್ಕಾಗಿ, ಮರ್ಜಯಂತ—ತಮ್ಮ ಹಸ್ತಗಳಿಂದ ಮುಟ್ಟುವುದರ ಮೂಲಕ ಜಯಶೀಲರಾಗುತ್ತಾರೆ. ಮೇಲ್ಕಂಡ ವಾಕ್ಯದಲ್ಲಿರುವ "ಜನಿಮ" ಎಂ ಬ ಪದವು ಲಿಂಗವಾಚಕವು. ಈ ವಾಕ್ಯದಭಿಪ್ರಾಯವನ್ನು ಶಿವಧರ್ಮ ಶಾಸ್ತ್ರವುಕೂ ಡ ಸ್ಪಷ್ಟವಾಗಿ ಹೇಳುತ್ತದೆ ॥೨೦॥ ಹೇಗೆಂದರೆ—ವಿಷ್ಣುವು ಇಂದ್ರನೀಲರತ್ನಮಯವಾ ದ ಲಿಂಗವನ್ನು ಯಾವಾಗಲೂ ಪೂಜಿಸುತ್ತಾನೆ. ಆದರಿಂದ ಆಶ್ಚರ್ಯಕ್ಕೆ ಮುಖ್ಯ ಸ್ಥಾನವಾಗಿಯೂ, ಪ್ರಾಚೀನವಾಗಿಯೂ ಇರುವ ವಿಷ್ಣುತ್ವವನ್ನು ಪಡೆದನು ॥೨೧॥ ಬ್ರ ಹ್ಮನು ಶಿಲಾಮಯವಾದ ಶುಭಲಿಂಗವನ್ನು ಸದಾ ಪೂಜಿಸುವನು. ಅದರ ಪೂಜೆಯಿಂ ದವನು ಉತ್ತಮವಾದ ಬ್ರಹ್ಮತ್ವವನ್ನು ಹೊಂದಿದನು ॥೨೨॥ ದೇವತೆಗಳರಸನಾದ

ಭಕ್ತ್ಯಾಪೂಜಯತೆನಿತ್ಯಂ ತೇನಶಕ್ರತ್ವಮಾಪ್ತವಾನ್ ॥೨೩॥ ಲಿಂಗಮ
ನ್ನಮಯಂಪುಣ್ಯ ಮಗ್ನಿರ್ಯಜತಿಭಾವತಃ । ಅಗ್ನಿತ್ವಂಪ್ರಾಪ್ತವಾಂಸ್ತೇನ
ತೇಜೋರೂಪಮನಿಂದಿತಂ ॥೨೪॥ ಸ್ಫಟಿಕಂನಿರ್ಮಲಂಲಿಂಗಂ ವರುಣೋಽ
ರ್ಚಯತೆಸದಾ। ತೇನತದ್ವರುಣತ್ವಂಹಿ ಪ್ರಾಪ್ತಂಬುದ್ಧಿಬಲಾನ್ವಿತಂ ॥೨೫॥
ವಾಯುಃಪೂಜಯತೆಲಿಂಗಂ ಮಾರಕತಮಯಂಶುಭಂ । ವಾಯುತ್ವಂ
ತೇನಸಂಪ್ರಾಪ್ತಮನೌಪಮ್ಯಗುಣಾನ್ವಿತಂ ॥೨೬॥ ಲಿಂಗಂಹೇಮಮಯಂ
ಕಾಂತಂ ಧನದೋಽರ್ಚಯತೇಸದಾ । ತೇನಾಸೌಧನದೋದೇವೋಧನ
ದತ್ವಮವಾಪ್ತವಾನ್ ॥೨೭॥ ತಾಮ್ರಂಲಿಂಗಂ ಸದಾಕಾಲಂ ಭಕ್ತ್ಯಾದೇವೋ
ದಿವಾಕರಃ॥ಯಜತೇವಿಧಿನತ್ತೇನಪ್ರಾಪ್ತಂ ಸೂರ್ಯತ್ವಮುತ್ತಮಂ ॥೨೮॥
ಮುಕ್ತಾಫಲಮಯಂಲಿಂಗಂ ಸೋಮಃಪೂಜಯತೆಸದಾ। ತೇನಸೋಮೇನ
ಸಂಪ್ರಾಪ್ತಂಸೋಮತ್ವಂಸತತೋಜ್ವಲಂ ॥೨೯॥ ವಿಶ್ವೇದೇವಾಮಹಾತ್ಮಾ
ನೋ ರೌಪ್ಯಂಲಿಂಗಂಮನೋಹರಂ । ಯಜಂತೆವಿಧಿವದ್ಭಕ್ತ್ಯಾ ತೇನವಿ
ಶ್ವತ್ವಮಾಪ್ನುಯುಃ ॥೩೦॥ ವಸವಃಕಾಂಸ್ಯಕಂಲಿಂಗಂ ಪೂಜಯಂತಿ ವಿ

---

ಇಂದ್ರನು ಕೂಡ ರತ್ನಮಯವಾದ ಲಿಂಗವನ್ನು ಪ್ರತಿದಿನವೂ ಭಕ್ತಿಯಿಂದಾರಾಧಿಸುವ
ನು. ಆದರಿಂದ ಇಂದ್ರತ್ವವನ್ನು ಪಡೆದನು ॥೨೩॥ ಅಗ್ನಿಯು ಪರಿಶುದ್ಧವಾದ ಅ
ನ್ನಮಯ ಲಿಂಗವನ್ನು ಮನಃಪೂರ್ವಕವಾಗಿ ಪೂಜಿಸುವನು. ಅದರಿಂದ ತೇಜೋಮ
ಯವೂ ನಿರ್ದುಷ್ಟವೂ ಆದ ಅಗ್ನಿತ್ವವನ್ನು ಪಡೆದನು ॥೨೪॥ ವರುಣನು ನಿರ್ಮಲವಾದ
ಸ್ಫಟಿಕಲಿಂಗವನ್ನು ನಿತ್ಯವೂ ಪೂಜಿಸುವನು. ಅದರಿಂದವನು ಬುದ್ಧಿಶಕ್ತಿಯಿಂದ ಕೂ
ಡಿದ ವರುಣತ್ವವನ್ನು ಹೊಂದಿದನು ॥೨೫॥ ವಾಯುವು ಮರಕತ ಲಿಂಗವನ್ನು
ಪೂಜಿಸುವನು. ಅದರಿಂದ ಅಸದೃಶ ಗುಣಯುಕ್ತವಾದ ವಾಯುತ್ವವನ್ನು
ಪಡೆದನು ॥೨೬॥ ಕುಬೇರನು ಸದಾ ಸುವರ್ಣಮಯವಾದ ಮನೋಹರ ಲಿಂಗವನ
ರ್ಚಿಸುವನು. ಆದರಿಂದೀ ಕುಬೇರನು ಧನಪ್ರದತ್ವವನ್ನು ಪಡೆದನು ॥೨೭॥
ಸೂರ್ಯದೇವನು ಯಾವಾಗಲೂ ತಾಮ್ರಲಿಂಗವನ್ನು ಭಕ್ತಿಯಿಂದ ವಿಧಿಪೂರ್ವಕವಾ
ಗಿ ಆರಾಧಿಸುವನು. ಅದರಿಂದವನು ಸೂರ್ಯತ್ವವನ್ನು ಹೊಂದಿದನು ॥೨೮॥
ಚಂದ್ರನು ನಿರಂತರವೂ ಮುತ್ತಿನ ಲಿಂಗವನ್ನು ಪೂಜಿಸುತ್ತಾನೆ. ಆದರಿಂದವನು ಯಾ
ವಾಗಲೂ ಪ್ರಕಾಶಮಾನವಾದ ಚಂದ್ರತ್ವವನ್ನು ಪಡೆದನು ॥೨೯॥ ಮಹಿಮರಾದ ವಿ
ಶ್ವೇದೇವತೆಗಳು ಮನೋಹರವಾದ ಬೆಳ್ಳಿಯ ಲಿಂಗವನ್ನು ಭಕ್ತಿಯಿಂದ ವಿಧ್ಯನುಸಾರವಾ
ಗಿ ಪೂಜಿಸುತ್ತಾರೆ. ಆದರಿಂದವರು ವಿಶ್ವೇದೇವತ್ವವನ್ನು ಹೊಂದಿದರು ॥೩೦॥ ವಸು
ಗಳು ಕಂಚಿನಲಿಂಗವನ್ನು ವಿಧ್ಯುಕ್ತವಾಗಿ ಪೂಜಿಸುವರು. ಅದರಿಂದಾಮಹಿಮರು

ಧಾನತಃ । ಪ್ರಾಪ್ತವಂತೋಮಹಾತ್ಮಾನೋವಸುತ್ವಂ ಸುಮಹೋದಯಂ ॥ ೩೧॥ ಅಶ್ವಿನೌಪಾರ್ಥಿವಂಲಿಂಗಂ ಪೂಜಯಂತೌವಿಧಾನತಃ । ತೇನತಾವಶ್ವಿನೌದೇವೌದಿವ್ಯದೇಹಂಸಮಾಗತೌ ॥ ೩೦॥ ಸರ್ವಲೋಹಮಯಂ ಲಿಂಗಂ ಯಜಂತೆಸ್ಮಾತರಸ್ಸದಾ । ಮಾತೃತ್ವಂಪ್ರಾಪ್ನುಯುಸ್ತೇನಸರ್ವಲೋಕೇಷುದುರ್ಲಭಂ ॥ ೩೩॥ ಕೃಷ್ಣಾಯಸಮಯಂಲಿಂಗಂ ಪೂಜಯಂತಿಸುರೋತ್ತಮಾಃ । ರಾಕ್ಷಸಾಶ್ಚಮಹಾತ್ಮಾನಸ್ತೇನತೇಽಮಿತವಿಕ್ರಮಾಃ ॥ ೩೪॥ ತ್ರಪುಸೀಸಮಯಂಲಿಂಗಂಪಿಶಾಚಾಃ ಪೂಜಯಂತಿತೆ । ದಿವ್ಯೈಶ್ವರ್ಯಸಮಾಯುಕ್ತಾಃ ಪ್ರಯಾಂತಿಪರಮಂಪದಂ ॥ ೩೫॥ ತ್ರೈಲೋಹಕಮಯಂಲಿಂಗಂ ಯಜಂತೆಗುಹ್ಯಕಾದಯಃ । ತೇನಭೋಗಫಲೋಪೇತಾಃ ಪ್ರಯಾಂತಿಪರಮಂಪದಂ ॥ ೩೬ ॥ ಪ್ರವಾಳಕಮಯಂಲಿಂಗಂಯಜಂತೆಪನ್ನಗೋತ್ತಮಾಃ । ತೇನನಾಗಾಸ್ಸುಭೋಗಾಢ್ಯಾಃ ಪ್ರಾಪ್ತಾಸ್ತೆ ಪರಮಂಪದಂ ॥ ೩೭॥ ಏವಂದೇವಾಸ್ಸಗಂಧರ್ವಾಸ್ಸಯಕ್ಷೋರಗರಾಕ್ಷಸಾಃ । ಪೂಜಯಂತಿಸದಾಕಾಲಮೀಶ್ವರಂಸುರನಾಯಕಂ ॥ ಇತಿ ॥ ೩೮॥ ಅಥಮೋಕ್ಷಸ್ಯಾಪಿಲಿಂಗಪೂಜೈವವರಸಾಧನಂ । ಇತ್ಯತ್ರಾಮ್ನಾಯವಚನಂ ಮಾನತ್ವೇನ

---

ಅತ್ಯುನ್ನತಿಯುಳ್ಳ ವಸುತ್ವವನ್ನು ಪಡೆದರು. ಅಶ್ವಿನಿದೇವತೆಗಳು ಮೃಣ್ಮಯಲಿಂಗವನ್ನು ವಿಧ್ಯನುಸಾರವಾಗಿ ಪೂಜಿಸುವರಾಗಿ, ಅದರಿಂದವರು ದಿವ್ಯಶರೀರವನ್ನು ಪಡೆದರು ॥೩೦॥ ಸಕಲ ಲೋಹಮಯವಾದ ಲಿಂಗವನ್ನು ಸಪ್ತಮಾತೃಕೆಯರು ಸರ್ವದಾಪೂಜಿಸುವರು. ಅದರಿಂದವರು ಸಕಲ ಜಗತ್ತಿನಲ್ಲೂ ಹೊಂದುವುದಕ್ಕೆಶಕ್ಯವಾದ ಮಾತೃತ್ವವನ್ನು ಪಡೆದರು. ದೇವತಾಶ್ರೇಷ್ಠರುಗಳೂ, ಮಹಿಮರಾದ ರಾಕ್ಷಸರೂ ಕೂಡ ಕರಿಯಕಬ್ಬಿಣದ ಲಿಂಗವನ್ನು ಆರಾಧಿಸುತ್ತಾರೆ. ಅದರಿಂದವರು ಅಪಾರ ಪರಾಕ್ರಮಿಗಳಾದರು. ಪಿಶಾಚರುಗಳು ತವರದ ಮತ್ತು ಸೀಸದ ಲಿಂಗವನ್ನು ಪೂಜಿಸುತ್ತಾರೆ. ಅದರಿಂದವರು ದಿವ್ಯಸಂಪತ್ತಿನಿಂದಕೂಡಿ ಉತ್ಕೃಷ್ಟಪದವಿಯನ್ನು ಹೊಂದುತ್ತಾರೆ. ಗುಹ್ಯಕರುಮೊದಲಾದವರುಗಳು ಮೂರುಲೋಹಗಳ ಮಯವಾದ ಲಿಂಗವನ್ನು ಅರ್ಚಿಸುತ್ತಾರೆ. ಅದರಿಂದವರು ಸೌಖ್ಯಫಲದಿಂದಕೂಡಿ ಸದ್ಗತಿಯನ್ನು ಹೊಂದುತ್ತಾರೆ. ಸರ್ಪಶ್ರೇಷ್ಠರುಗಳು ಹವಳದಲಿಂಗವನ್ನು ಪೂಜಿಸುತ್ತಾರೆ. ಅದರಿಂದವರು ಒಳ್ಳೆಯಸಂಪತ್ತಿನಿಂದಕೂಡಿ ಸತ್ಪದವಿಯನ್ನು ಹೊಂದಿರುವರು. ॥೩೭॥ ಹೀಗೆ ಗಂಧರ್ವಯಕ್ಷರಾಕ್ಷಸೋರಗರಿಂಗಕೂಡಿದ ದೇವತೆಗಳು ದೇವೇಶ್ವರನಾದ ಪರಶಿವನನ್ನು ಯಾವಾಗಲೂ ಪೂಜಿಸುತ್ತಾರೆ. ॥೩೮॥ ಇನ್ನು ಮೋಕ್ಷಪ್ರಾಪ್ತಿಗೂ ಶಿವಲಿಂಗಾರಾಧನೆಯೇ ಉತ್ತಮಸಾಧನವೆಂಬ ವಿಷಯದಲ್ಲಿ ವೇ

ವದಾಮ್ಯಹಂ ॥ ೩೯ ॥ " ತ್ರಿಯಂಬಕಂಯಜಾಮಹೆಸುಗಂಧಿಂಪುಷ್ಟಿವರ್ಧನಂ । ಉರ್ವಾರುಕಮಿವಬಂಧನಾನ್ಮೃತ್ಯೋರ್ಮುಕ್ಷೀಯಮಾಮೃತಾತ್ " ಇತೀದಂವಚನಂಪುಣ್ಯಮೃಗ್ವೇದೇಸುಪ್ರತಿಷ್ಠಿತಂ । ಏತಲ್ಲಿಂಗಾರ್ಚನಂ ಸತ್ಯಂಮೋಕ್ಷಸಾಧನಮಿತ್ಯಲಂ ॥ ೪೦ ॥ ಅಸ್ಯವಾಕ್ಯಸ್ಯಾರ್ಥಮಹಂಪ್ರವಕ್ಷ್ಯಾಮಿಯಥಾಮತಿ । ಲೋಕತ್ರಯಸ್ಯತತ್ವಾನಾಂಮಂಡಲಾನಾಂತ್ರಯಸ್ಯಚ ॥ ೪೧ ॥ ಗುಣತ್ರಯಸ್ಯವೇದಾನಾಂವಹ್ನೀನಾಂತ್ರಿತಯಸ್ಯಚ । ತ್ರಿಧಾಭೂತಸ್ಯಸರ್ವಸ್ಯಪಿತೃಭೂತಂತ್ರಿಯಂಬಕಂ ॥ ೪೨ ॥ ಸುಗಂಧಿಂಸರ್ವಭೂತೇಷುಪ್ರಕೃತೌಚಗುಣತ್ರಯೆ । ಇಂದ್ರಿಯೇಷುಚಸರ್ವೇಷುದ್ರವ್ಯೇಷುಚಗುಣೇಷುಚ ॥ ೪೩ ॥ ಪುಷ್ಪೇಷುಗಂಧವತ್ಸೂಕ್ಷ್ಮಂವ್ಯಾವರ್ತಮಾನಂಮಹೇಶ್ವರಂ । ಪ್ರಕೃತೇಃ ಪುರುಷಸ್ಯಾಪಿವಿಷ್ಣೋಸ್ತದ್ವಚ್ಚವೇಧಸಃ ॥ ೪೪ ॥ ಮಹದಾದಿವಿಶೇಷಾಂತವಿಕಲ್ಪಸ್ಯಶಚೀಪತೇಃ । ಮುನೀನಾಮಪಿದೇವಾನಾಂಯಃ ಪುಷ್ಟಿಂಕುರುತೇಸದಾ ॥ ೪೫ ॥ ತಂಪುಷ್ಟಿವರ್ಧನಂರುದ್ರಂಕರ್ಮಣಾಮನಸಾಗಿರಾ । ಸ್ವಾಧ್ಯಾಯೇನಜಪೇನಾಪಿಧ್ಯಾನೇನಚಯಜಾಮಹೆ ॥ ೪೬ ॥

---

ದವಚನವನ್ನು ಪ್ರಮಾಣವಾಗಿ ನಾನು ಹೇಳುವೆನು. " ತ್ರಿಯಂಬಕಂ...... ಮಾಮೃತಾತ್ " ಎಂಬ ವಚನವು ಋಗ್ವೇದದಲ್ಲಿರುವುದು. ಲಿಂಗಾರ್ಚನವು ಮೋಕ್ಷಕ್ಕೆ ಸಾಧಕವಾದದ್ದು, ಅದು ಸತ್ಯವು, ಎಂದು ಈ ವಚನವು ಹೇಳುತ್ತಿರುವುದು. ಈ ವಾಕ್ಯಕ್ಕೆ ನನ್ನ ಬುದ್ಧಿಯಿದ್ದ ಮಟ್ಟಿಗೆ ಅರ್ಥವನ್ನು ಹೇಳುತ್ತೇನೆ. ತ್ರಿಯಂಬಕಂ—ಮೂರು ಲೋಕಕ್ಕೂ, ತತ್ವಗಳ ಶುದ್ಧ ಅಶುದ್ಧ ಮಿಶ್ರವೆಂಬ ಮೂರುಮಂಡಲಗಳಿಗೂ, ಸತ್ವ ರಜಸ್ಸು ತಮಸ್ಸು ಎಂಬ ಮೂರುಗುಣಗಳಿಗೂ, ಋಗ್ಯಜುಸ್ಸಾಮವೆಂಬ ವೇದತ್ರಯಕ್ಕೂ, ದಕ್ಷಿಣಗಾರ್ಹಪತ್ಯಆಹವನೀಯವೆಂಬ ಅಗ್ನಿತ್ರಯಕ್ಕೂ ಹೀಗೆ ಮೂರು ಮೂರಾಗಿರುವ ಸರ್ವಕ್ಕೂ ಜನಕನಾಗಿರುವ; ಸುಗಂಧಿಂ—ಸಕಲಭೂತಗಳಲ್ಲೂ ಪ್ರಕೃತಿಯಲ್ಲೂ, ತ್ರಿಗುಣಗಳಲ್ಲೂ, ಸರ್ವೇಂದ್ರಿಯಗಳಲ್ಲೂ, ಸಮಸ್ತದ್ರವ್ಯಗಳಲ್ಲೂ, ಗುಣಗಳಲ್ಲೂಕೂಡ, ಹೂವಿನಲ್ಲಿ ಪರಿಮಳವಿರುವಂತೆ ಸೂಕ್ಷ್ಮರೀತಿಯಿಂದಿರುತ್ತಿರುವ; ಪುಷ್ಟಿವರ್ಧನಂ—ಪ್ರಕೃತಿಗೂ, ಪುರುಷನಿಗೂ, ವಿಷ್ಣುವಿಗೂ, ಬ್ರಹ್ಮನಿಗೂ, ಮಹತ್ತುಮೊದಲಾಗಿ ವಿಶೇಷಕೊನೆಯಾದ ಸಕಲಪ್ರಪಂಚಕ್ಕೂ, ಇಂದ್ರನಿಗೂ, ಋಷಿಗಳಿಗೂ, ದೇವತೆಗಳಿಗೂ ಪೋಷಣೆಯನ್ನುಂಟುಮಾಡುವ ರುದ್ರನನ್ನು; ಯಜಾಮಹೆ—ಕೆಲಸದಿಂದಲೂ, ಮನಸ್ಸಿನಿಂದಲೂ, ವಾಕ್ಕಿನಿಂದಲೂ, ವೇದಾಧ್ಯಯನ ಮಾಡುವುದರಿಂದಲೂ, ಮಂತ್ರಜಪದಿಂದಲೂ, ಮೂರ್ತಿಧ್ಯಾನದಿಂದಲೂ ಸಹ ಪೂಜಿಸುವೆವು. ಅಹಂ—ನಾನು (ಅಧ್ಯಾಹಾರಃ) ಋತಾತ್—ಈ ಶಿವಸೇವಾರೂಪವಾದ ಸತ್ಯಕಾರ್ಯದಿಂದ, ಉರ್ವಾರುಕಂ ಬಂಧ

ಮಿತಾದಸ್ಮಾಚ್ಛಂಭುಸೇವಾಯಾತಾತ್ಸತ್ಯಾದಹಂ ದ್ರುತಂ । ಮೃತ್ಯೋರ್ಮು
ಕ್ಷೀಯಮಾಮಂ ಮುಕ್ತಂಸ್ವಂಕರಿಷ್ಯಾಮಿಸಂಸೃತೇಃ ॥೪೭॥ ಬಂಧನಾದ್ವೃಂ
ತತೋಯದ್ವತ್ಪಕ್ವಮುರ್ವಾರುಕಂಸ್ವಯಂ । ಮುಚ್ಯತೇ ತದ್ವದಿತ್ಯರ್ಥವಿಷಃ
ಕ್ಷುಪದಧೀಚಯೋಃ ॥೪೮॥ ವಾದೇಶುಕ್ರೇಣಕಥಿತಃ ಪುರಾಣೇಲೈಂಗ್ಯನಾ
ಮನಿ । ಅಮುಮರ್ಥಂವಕ್ತಿ ಲಿಂಗಪುರಾಣಂ ತನ್ನಿರೂಪ್ಯತೇ ॥೪೯॥ ತ್ರ್ಯಂ
ಬಕಂಯಜೇದೇವಂ ಸುಗಂಧಿಂಪುಷ್ಟಿವರ್ಧನಂ । ಕಿಂಕರಿಷ್ಯತಿಮಾಂಮೃ
ತ್ಯುರ್ಮೃತ್ಯೋರ್ಮೃತ್ಯುರಹಂತಥಾ ॥ಇತಿ। ॥೫೦॥ಓಂಕಾರಂರಥಮಾರುಹ್ಯ
ವಿಷ್ಣುಂಕೃತ್ವಾಚಸಾರಥಿಂ। ಬ್ರಹ್ಮಲೋಕಪದಾನ್ವೇಷೀರುದ್ರಾರಾಧನತತ್ಪ
ರಃ ॥೫೧॥ ಯಾವದ್ರಥೇನಗಂತವ್ಯಂತಾವದ್ರಥಪಥಸ್ಥಿತಃ । ಸ್ಥಿತ್ವಾರಥಪ
ಥಸ್ಥಾನೇರಥಮುತ್ಸೃಜ್ಯಗಚ್ಛತಿ ॥೫೨॥ ಇತಿಯದ್ಬ್ರಹ್ಮಬಿಂದೂಪನಿಷ
ದೋವಾಕ್ಯಮಸ್ತಿತತ್ । ಮೋಕ್ಷಾರ್ಥಿನೋಯೇಬ್ರಹ್ಮತ್ವಂಸಮಾಕಾಂಕ್ಷಂ
ತಿತತ್ಪದಂ ॥೫೩॥ ತೇರುದ್ರಾರ್ಚನತತ್ಪರಾಶ್ಚೈತತ್ಪ್ರಾಪ್ನುವಂತೀತಿವಕ್ತಿಹಿ।
ನಾನಾಯೋನಿಸಹಸ್ರಾಣಿಗತ್ವಾಚೈವತುಜನ್ಮಯಾ ॥೫೪॥ ಆಹಾರಾವಿವಿ
ಧಾಭುಕ್ತಾಃ ಪೀತಾಶ್ಚವಿವಿಧಾಸ್ತನಾಃ । ಯದಿಯೋನ್ಯಾಃ ಪ್ರಮುಂಚಾಮಿ

---

ನಾದಿವ—ಪಕ್ವವಾದ ಸೌತೆಕಾಯಿಯು ತೊಟ್ಟಿನಿಂದ ಕಳದು ಕೊಳ್ಳುವೋಪಾದಿಯಲ್ಲಿ,
ಮೃತ್ಯೋಃ—ಜನನ ಮರಣಾತ್ಮಕವಾದ ಸಂಸಾರದಿಂದ, ಮುಕ್ಷೀಯಮಾಂ—ತನ್ನ
ನ್ನು ಬಿಡಲ್ಪಟ್ಟವನನ್ನಾಗಿ ಮಾಡಿಕೊಳ್ಳುವೆನು. ಈ ಪ್ರಕಾರವಾದ ಅರ್ಥವು ಲಿಂಗ
ಪುರಾಣದೊಳಗೆ ಕ್ಷುಪರಾಜನಿಗೂ ದಧೀಚಿ ಮಹರ್ಷಿಗೂ ನಡೆದಿರುವ ಸಂವಾದಸಮ
ಯದಲ್ಲಿ ಶುಕ್ರಾಚಾರ್ಯನಿಂದ ಹೇಳಲ್ಪಟ್ಟಿರುವುದು. ಅದನ್ನು ಹೇಳುತ್ತೇನೆ—ತ್ರ್ಯಂ
ಬಕನೂ, ಸುಗಂಧಿಯೂ, ಪುಷ್ಟಿವರ್ಧಕನೂ ಆದ ದೇವನನ್ನು ಪೂಜಿಸುವೆನು. ನ
ನ್ನನ್ನು ಮೃತ್ಯುವು ಏನುಮಾಡುತ್ತದೆ ? ನಾನೇ ಮೃತ್ಯುವಿಗೆ ಮೃತ್ಯುವಾಗಿರುವೆ
ನು ” ಎಂದು ಹೇಳಲ್ಪಟ್ಟಿರುವುದು. ॥೫೧॥ ಬ್ರಹ್ಮಲೋಕಪದವಿಯನ್ನು ಹುಡುಕುವ
ವನು, ರುದ್ರನನ್ನು ಪೂಜಿಸುವುದರಲ್ಲಿ ನಿರತನಾಗಿ, ಪ್ರಣವವನ್ನು ರಥವನ್ನಾಗಿಮಾಡಿ
ಹತ್ತಿ, ವಿಷ್ಣುವನ್ನು ಸಾರಥಿಯನ್ನಾಗಿ ಮಾಡಿಕೊಂಡು, ಎದುವರಗೆ ರಥದಮೇಲಿಂದ
ಪ್ರಯಾಣಮಾಡಿಕೊಂಡು ಹೋಗಬಹುದೋ ಅಲ್ಲಿಯುವರಗೂ ಹೋಗಿ, ಅಲ್ಲಿ ರಥವನ್ನು
ಬಿಟ್ಟು ಇಳಿದು ತಾನು ಮುಂದೆ ಹೊರಟುಹೋಗುತ್ತಾನೆ. ಎಂದು ಯಾವ ಬ್ರಹ್ಮಬಿಂ
ದೂಪನಿಷತ್ತಿನ ವಾಕ್ಯವಿರುವುದೋ, ಅದು, ಬ್ರಹ್ಮಪದವನ್ನಪೇಕ್ಷಿಸತಕ್ಕ ಮುಕ್ತಿಕಾಂ
ಕ್ಷಿಗಳು ರುದ್ರಪೂಜಾತತ್ಪರರಾದರೆ ಅದನ್ನವರು ಪಡೆಯುವರೆಂದು ಹೇಳುತ್ತಿದೆಯಲ್ಲ
ವೆ ? ॥೫೪॥ ನಾನು ಅನೇಕ ಸಹಸ್ರಯೋನಿಗಳನ್ನು ನುಗ್ಗಿಬಂದೆನು, ಬಗೆಬಗೆಯ ಆ

ತ್ರಂಪ್ರಪದ್ಯೇಮಹೇಶ್ವರಂ ॥ ೫೫॥ ಇತ್ಯೇತದ್ವಚನಂಗರ್ಭೋಪನಿಷತ್ಪ್ರ ತಿಪಾದಿತಂ । ಗರ್ಭಸ್ಥಾಶ್ಚಜರಾಜನ್ಮಮೃತಿದುಃಖೋಪಶಾಂತಯೆ ॥೫೬॥ ಸಂಸಾರಸ್ಯಾತಿಘೋರಸ್ಯನಿವೃತ್ತ್ಯರ್ಥಂತದಾಪುನಃ। ಯೋನ್ಯಾಃಝಡಿತಿನಿಷ್ಕ್ರ ಮ್ಯಾರ್ಚಯಿಷ್ಯಾಮೋಮಹೇಶ್ವರಂ ॥ ೫೭॥ ಇತಿಸ್ಮರಂತೀತಿಸದಾಸುವ್ಯ ಕ್ತಂ ಪರಿಚಕ್ಷತೆ । ಇಮಮರ್ಥಂ ಪುನಸ್ಸೂತಸಂಹಿತಾಪಿಪ್ರಭಾಷತೆ॥೫೮॥ ಯದಿಯೋನ್ಯಾಃ ಪ್ರಮುಂಚಾಮಿತಂ ಪ್ರಪದ್ಯೇಮಹೇಶ್ವರಂ । ವಿರಜಾನಲ ಜಂಭಸ್ಮಗೃಹೀತ್ವಾಚಾಗ್ನಿಹೋತ್ರಜಂ ॥೫೯॥ ಸಮುದ್ಧೂಳ್ಯಸದಾಚಾ ರ್ಯಂಪ್ರಣಿಪತ್ಯಾತ್ಮವಿದ್ಯಯಾ । ಸಂಸಾರಸಾಗರಂ ಘೋರಂಲಂಘಯಾಮ್ಯ ಹಮಾತ್ಮನಃ ॥ಇತಿ॥ ತಸ್ಮಾಲ್ಲಿಂಗಾರ್ಚನಂಸರ್ವೈಃ ಕರ್ತವ್ಯಂಭೋಗಮೋ ಕ್ಷದಂ । ಏತಲ್ಲಿಂಗಾರ್ಚನಂ ಗೃಹ್ಯಕಾರೈರನ್ಯೈರಭಾಷಿತಂ ॥೬೦॥ ತತ್ಕರ್ತ ವ್ಯಂಕಥಮಿತಿನವಾಚ್ಯಂಬುಧೈರ್ಜನೈಃ । ಬೋಧಾಯನಾರ್ಯೇದಿತಂತ ದಾಪಸ್ತಂಬೋರರೀಕೃತಂ ॥ ೬೧॥ಇತಿವಿಜ್ಞಾಯಮಾನತ್ವಂಸ್ವಯಂವಿಸ್ತ್ರ

---

ಹಾರಗಳನ್ನು ಭುಂಜಿಸಿದೆನು, ಪರಪರಿಯ ಮೂಲೆಗಳನ್ನುಂಡೆನು; ಯೋನಿನಿರ್ಗಮನದಿಂ ದ ತಪ್ಪಿಸಿಕೊಳ್ಳಬೇಕಾಗಿದ್ದರೆ ( ಸಂಸಾರದಿಂದ ಮುಕ್ತನಾಗಬೇಕಾದರೆ ) ಆ ಶಿವನನ್ನು ಮರೆಹುಗುವೆನು. ಎಂಬೀವಚನವು ಗರ್ಭೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುವುದು॥೫೬॥ ಗರ್ಭದೊಳಗಿರತಕ್ಕವರು " ನಾವು ಮುಪ್ಪು ಹುಟ್ಟು ಸಾವುಗಳ ಮೂಲಕವಾದ ದುಃ ಖವನ್ನು ತಪ್ಪಿಸಿಕೊಳ್ಳುವುದಕ್ಕೂ, ಭೀಕರವಾದ ಸಂಸಾರದಿಂದ ನಿವೃತ್ತರಾಗುವುದಕ್ಕೂ ಸಹ ಯೋನಿಮಾರ್ಗದಿಂದ ಥಟ್ಟನೆ ಹೊರಕ್ಕೆ ಹೋಗಿ ಪರಮೇಶ್ವರನನ್ನು ಅರ್ಚಿಸೋ ಣ " ವೆಂದು ಯೋಚಿಸುತ್ತಿರುವರು. ಎಂದು ಸಹ ಅದೇ ಉಪನಿಷತ್ತು ಹೇಳಿರುವು ದು. ಇದೇ ಅರ್ಥವನ್ನೇ ಸೂತಸಂಹಿತೆಯು ಹೇಳಿರುತ್ತದೆ. ಹೇಗೆಂದರೆ—' ನಾನ್ ಯೋನಿಯಿಂದ ಹೊರಕ್ಕೆಹೋದರೆ, ಆ ಪರಶಿವನನ್ನು ಮರೆಹುಗುವೆನು, ವಿರಜಾಗ್ನಿ ಯಿಂದಲೂ, ಅಗ್ನಿಹೋತ್ರದಿಂದಲೂ ಹುಟ್ಟಿದ ಭಸ್ಮವನ್ನು ತೆಗೆದು ಮೈಗೆ ತೊಡೆದು ಕೊಂಡು, ಉತ್ತಮಾಚಾರ್ಯನನ್ನು ನಮಸ್ಕರಿಸಿ, ಅವನಿಂದುಪದಿಷ್ಟವಾದ ಅಧ್ಯಾತ್ಮವಿ ದ್ಯೆಯಿಂದ ಭಯಂಕರವಾದ ಸಂಸಾರಸಮುದ್ರವನ್ನು ದಾಟುವೆನು " ಎಂಬದಾಗಿ. ಆ ದಕಾರಣ, ಐಹಿಕಸೌಖ್ಯವನ್ನೂ ಮುಕ್ತಿಯನ್ನೂ ಕೊಡುವ ಶಿವಲಿಂಗಾರಾಧನೆಯ ನ್ನು ಸರ್ವರೂ ಆಚರಿಸಬೇಕು ॥೬೦॥ ಈ ಶಿವಲಿಂಗಾರ್ಚನೆಯನ್ನು ಮಾಡಬೇಕೆಂದು ಇತರ ಗೃಹ್ಯಸೂತ್ರಕಾರರು ಹೇಳಿರುವುದಿಲ್ಲವಾದುದರಿಂದ ಅದನ್ನು ಮಾಡುವುದು ಹೇ ಗೆಂದು ವಿದ್ವಜ್ಜನರು ಹೇಳಬಾರದು. ಏಕೆಂದರೆ—ಅದು ಬೋಧಾಯನಾಚಾರ್ಯರಿಂದ ಹೇಳಲ್ಪಟ್ಟಿರುವುದು, ಆಪಸ್ತಂಬರಿಂದ ಅಂಗೀಕರಿಸಲ್ಪಟ್ಟಿರುವುದು. ಇತರ ಗೃಹ್ಯಸೂ

ತ್ಯವಾಪುನಃ । ಯಜ್ಞೋಪವೀತಧರಣಕಾಲವತ್ತ್ರೈರ್ನದರ್ಶಿತಂ॥ ೬೩ ॥ ಯಜ್ಞೋಪವೀತಕಾಲಸ್ಯೋದ್ವಾಚನೈಕ್ಯತಆಶಿಷಂ । ಪುರಸ್ತಾತ್ಸಮಿದಾಧಾನಾಚ್ಛಿವಸ್ವಾಮಿಮುಖೇನತು ॥೬೪॥ ಇತ್ಯಾಪಸ್ತಂಬಕಥಿತೋಯಜ್ಞಸೂತ್ರ ಧೃತಿಕ್ಷಣಃ । ಸ್ವೈರನುಕ್ತೋಪಿಬೋಧಾಯ ನಾರ್ಯೈರಂಗೀಕೃತೋಯಥಾ॥ ೬೫॥ ತಥಾಬೋಧಾಯನಾಚಾರ್ಯೈಃಕಥಿತಂಲಿಂಗಪೂಜನಂ। ಆಪಸ್ತಂಬಾದ್ಯನುಮತಂಭವೇದೇವನಸಂಶಯಃ ॥೬೬॥ ಯಜ್ಞಸೂತ್ರಧೃತಿರ್ಯದ್ವತ್ಪ್ರತ್ಯಕ್ಷಶ್ರುತಿಚೋದಿತಾ। ಯಜ್ಞೋಪವೀತ್ಯೇವಾದೀಯೇತೇತಿತದ್ವದಿದಂಪುನಃ ॥ ೬೭ ॥ ಶಿವಲಿಂಗಾರ್ಚನಮಪಿಪ್ರತ್ಯಕ್ಷಾಮ್ನಾಯಚೋದಿತಂ । ಯಕ್ಷ್ವಾಮಹೇಸೌಮನಸಾಯೇತ್ಯಾದ್ಯೈಶ್ಶ್ರುತಯಸ್ತಥಾ॥ ಸಾಕ್ಷಾದ್ವದಂತಿಸತತಂ ಶ್ರೀಮಹಾದೇವಪೂಜನಂ। "ಯಕ್ಷ್ವಾಮಹೇಸೌಮನಸಾಯ ರುದ್ರಂನಮೋಭಿರ್ದೇವಮಸುರಂದುವಸ್ಯ" ॥ ೬೯॥ ಹರದತ್ತಾಚಾರ್ಯವರ್ಯಸ್ಸಾಕ್ಷಾದೀಶ್ವರಮೂರ್ತಯಃ । ತಾತ್ಪರ್ಯಸಂಗ್ರಹೇಪ್ರೋಚುರಿಮಮೇವಾರ್ಥಮುತ್ತಮಂ॥೭೦॥ "ಪ್ರತ್ಯಕ್ಷವೇದವಿಹಿತಂಪ್ರಥಿತಂಪುರಾಣೆ

---

ತ್ರಗಾರರು ಆ ಲಿಂಗಪೂಜೆಯನ್ನು ಹೇಳಿರುವುದಿಲ್ಲ. ಆದರೇನು ? ಸಮಿದಾಧಾನಂತರವೂ ಗುರುವಿನಿಂದ ಆಶೀರ್ವಾದವನ್ನು ಪಡೆಯುವುದಕ್ಕೆ ಮುಂಚೆಯೂ ಯಜ್ಞೋಪವೀತವನ್ನು ಧರಿಸಿಕೊಳ್ಳತಕ್ಕದೆಂದು ಆದರ ಕಾಲವನ್ನು ಶಿವಸ್ವಾಮಿ ಮತವನ್ನನುಸರಿಸಿ, ಆಪಸ್ತಂಬರು ಹೇಳಿರುವರು. ಬೋಧಾಯನ ಮೊದಲಾದವರು ಈ ಯಜ್ಞೋಪವೀತ ಧಾರಣಕಾಲವನ್ನು ತಾವು ಹೇಳದಿದ್ದರೂ, ಕೃತ್ಯತಃ ಅದನ್ನು ಅಂಗೀಕರಿಸಿರುವರು. ಆದರಂತೆಯೇ ಈ ಶಿವಲಿಂಗಪೂಜೆಯು ಬೋಧಾಯನರಿಂದುಕ್ತವಾಗಿ ಆಪಸ್ತಂಬರಿಂದ ಅಂಗೀಕೃತವಾಗಿರುವುದೆಂದು ಯೋಚಿಸಿಯೇ ಅದನ್ನು ಮರತೊ ಇತರ ಗೃಹ್ಯಸೂತ್ರಕಾರರು ಶಿವಲಿಂಗಪೂಜೆಯನ್ನು ಹೇಳಿರುವುದಿಲ್ಲ. ಅದುಕಾರಣ, ಬೋಧಾಯನಾಚಾರ್ಯರಿಂದ ಹೇಳಲ್ಪಟ್ಟಿರುವ ಲಿಂಗಪೂಜೆಯು ಆಪಸ್ತಂಬಾದಿ ಸೂತ್ರಕಾರರಿಗೆ ಅಭಿಮತವಾಗಿಯೇ ಇರುವುದೆಂಬುದರಲ್ಲಿ ಸಂಶಯವಿಲ್ಲ. "ಯಜ್ಞೋಪವೀತ್ಯೇವಾದೀಯೇತ" ಎಂಬುದಾಗಿ ಯಜ್ಞೋಪವೀತಧಾರಣವು ಪ್ರತ್ಯಕ್ಷ ವೇದವಚನದಿಂದಲೇ ಹೇಗೆ ಹೇಳಲ್ಪಟ್ಟಿರುವುದೋ ಆದರಹಾಗೆ ಈ ಶಿವಲಿಂಗಾರಾಧನೆಯುಕೂಡ ಪ್ರತ್ಯಕ್ಷವೇದವಚನೋಕ್ತವಾದದ್ದು. "ಯಕ್ಷ್ವಾಮಹೇಸೌಮನಸಾಯ ರುದ್ರಂನಮೋಭಿರ್ದೇವಮಸುರಂದುವಸ್ಯ" ಎಂಬುದು ಮೊದಲಾದ ಶ್ರುತಿವಚನಗಳು ಶ್ರೀಮತ್ಪರಮೇಶ್ವರನ ಆರಾಧನೆಯನ್ನು ಪ್ರತ್ಯಕ್ಷವಾಗಿಯೇ ಸದಾ ಹೇಳುತ್ತಿವೆ. ಪ್ರತ್ಯಕ್ಷ ಪರಶಿವ ಸ್ವರೂಪರಾದ ಹರದತ್ತಾಚಾರ್ಯಶ್ರೇಷ್ಠರು ತಮ್ಮ ಚತುರ್ವೇದ ತಾತ್ಪ

ಬೋಧಾಯನೇನಮುನಿನಾಬಹುಶಃ ಪ್ರಣೀತಂ। ಸರ್ವಾರ್ಥದರ್ಶನಪರೈರಪಿ ಗೃಹ್ಯಕಾರೈರ್ಯಜ್ಞೋಪವೀತಮಿವವಿಸ್ಮೃತಮರ್ಚನಂತೇ'' ॥೭೧॥ಶಿವಾರ್ಚಕಾನಾಮನ್ನಂಯದ್ದೇಹಧಾರಣಕಾರಣಂ । ತದಂತರಿತಿಮಂತ್ರೇಣಾಮೋಘಮಾರ್ಗ್ವೇದಿಕಾಜಗುಃ ॥ ೭೨ ॥ ಹರದತ್ತಾಚಾರ್ಯವರ್ಯೈರಯಮರ್ಥಃ ಪ್ರಕಾಶಿತಃ । "ಮಂತ್ರೇಣಾಂತರಿತಿಯುಷ್ಮದುಪಾಸಕಾನಾಂ। ಮಾರ್ಗ್ವೇದಿಕಾಯದಶನಂ ತದಮೋಘಮಾಹುಃ " ಇತಿ. ಅಗ್ವೇದಿಕಾಸ್ತ್ವೃಗ್ವೇದಮಧೀಯಾನಾದ್ವಿಜೋತ್ತಮಾಃ ॥೭೩॥ ರುದ್ರತ್ವದೀಯಭಕ್ತಾನಾಂ ಯದ್ಭಕ್ಷ್ಯಾದ್ಯನ್ನಮಸ್ತಿ ತತ್ । ಅಮೋಘಮಿತ್ಯಾಹುರಂತರಿತಿಮಂತ್ರೇಣತತ್ವತಃ ॥ ೭೪॥ ಸಚಮಂತ್ರಸ್ಸಂಹಿತಾಯಾಮೇವಮಾಮ್ನಾತಉನ್ನತಃ । "ಅಂತರಿಚ್ಛಂತಿತಂಜನೇರುದ್ರಂಪರೋಮನೀಷಯಾಗೃಭ್ಣಂತಿಜಿಹ್ವಯಾಸಸಂ." ಇತಿ. ಅಸ್ಯಾರ್ಥಃಕಥ್ಯತೇಽಸ್ಮಾಭಿಃ ಪೂರ್ವಾಚಾರ್ಯಾನುಸಾರತಃ॥೭೫॥ ಜನೇಜಾತ್ಯೇಕವಚನಂಜನೇಷ್ವೇತೇಷು ಮಧ್ಯತಃ। ಯೇಽಂತಸ್ಸ್ವಹೃದಯಾ

---

ರ್ಯಸಂಗ್ರಹವೆಂಬ ಗ್ರಂಥದಲ್ಲಿ ಇದೇ ಅರ್ಥವನ್ನೇ ಹೇಳಿರುವರು. ॥೭೧॥ ಹೇಗೆಂದರೆ— ಶಿವನೆ ! ನಿನ್ನ ಪೂಜೆಯು ಪ್ರತ್ಯಕ್ಷವಾಗಿ ವೇದದಿಂದ ಹೇಳಲ್ಪಟ್ಟಿದ್ದರೂ ಪುರಾಣಗಳಲ್ಲಿ ಪ್ರಸಿದ್ಧವಾಗಿದ್ದರೂ ಬೋಧಾಯನಾಚಾರ್ಯರಿಂದ ಅನೇಕಪ್ರಕಾರವಾಗಿ ಹೇಳಲ್ಪಟ್ಟಿದ್ದರೂಕೂಡ, ಗೃಹ್ಯಸೂತ್ರಕಾರರುಗಳು ಸಕಲ ಶಾಸ್ತ್ರಾರ್ಥ ವಿಚಾರಿಗಳಾಗಿದ್ದರೂ ಯಜ್ಞೋಪವೀತಧಾರಣ ಕಾಲವನ್ನು ವಿವರಿಸದೆ ಹೇಗೆ ಮರೆತುಬಿಟ್ಟಿರೋ ಹಾಗೆ ನಿನ್ನ ಪೂಜೆಯನ್ನೂ ಹೇಳದೆ ಮರೆತು ಬಿಟ್ಟರು. ಎಂಬುದಾಗಿ. " ಅಂತರಿಚ್ಛಂತಿ" ಎಂಬ ಮಂತ್ರದಿಂದ " ಶಿವಾರ್ಚಕರಿಗೆ ಅನ್ನಭೋಜನವು ದೇಹಧಾರಣಕ್ಕೆ ಹೇತುವಾದ್ದು" ಎಂಬರ್ಥವನ್ನು ಋಗ್ವೇದಿಗಳು ಹೇಳುವರು. ಹರದತ್ತಾಚಾರ್ಯರು " ಮಂತ್ರೇಣ............ಮಾಹುಃ ' ಎಂಬ ವಚನದಲ್ಲಿ ಇದೇ ಅಭಿಪ್ರಾಯವನ್ನು ಪ್ರಕಟಿಸಿರುವರು. ಹೇಗೆಂದರೆ—ಆಗ್ವೇದಿಕಾಃ—ಋಗ್ವೇದಾಧ್ಯಾಯಿಗಳಾದ ಬ್ರಾಹ್ಮಣರುಗಳು, ಅಂತರಿತಿಮಂತ್ರೇಣ—' ಅಂತರಿಚ್ಛಂತಿ' ಎಂಬ ಮಂತ್ರದಿಂದ (ರುದ್ರ)—ಎಲೈ ಪರಶಿವನೆ! ) ಯುಷ್ಮದುಪಾಸಕಾನಾಂ—ನಿನ್ನ ಭಕ್ತರುಗಳ, ಯತ್ಅಶನಂ—ಯಾವ ಭಕ್ಷ್ಯಭೋಜ್ಯಾದಿ ಅನ್ನವುಂಟೋ, ತತ್—ಇದನ್ನು, ಅಮೋಘಂಇತಿ—ಸಾರ್ಥಕವಾದ್ದೆಂದು ಆಹುಃ—ಹೇಳುವರು. ಆ ಮಂತ್ರವು ಸಂಹಿತೆಯಲ್ಲಿ ' ಅಂತರಿಚ್ಛಂತಿ...... ಜಿಹ್ವಯಾಸಸಂ' ಎಂಬುದಾಗಿ ಹೇಳಲ್ಪಟ್ಟಿರುವುದು. ಪೂರ್ವಾಚಾರ್ಯರನ್ನನುಸರಿಸಿ, ನಾವು ಈ ಮಂತ್ರದರ್ಥವನ್ನು ಹೇಳುತ್ತೇವೆ. —ಜನೆ (ಜಾತ್ಯೇಕವಚನವು.) ಜನಗಳ

ಕಾಶೇಸ್ಥಿತಂತಮಿಃ ವಿಶ್ರುತಂ ॥ ೭೬ ॥ ರುದ್ರಂಸ್ವಕೀಯಭಕ್ತಾಘಸಂಹಾರಂ
ಪರಮಂಶಿವಂ । ಪರಸ್ತ್ವತಃ ಪರೇಽಬಾಹ್ಯಪೂಜನಂಪರಿಕಥ್ಯತೇ । ೭೭ ॥ ಮು
ನೀಷಯಾತಸ್ಯಬಾಹ್ಯಪೂಜನಸ್ಯಧಿಯಾಸದಾ । ಇಚ್ಛಂತಿಪೂಜಾಂಕುರ್ವಂತಿ
ಜಿಹ್ವಯಾತೇರಸಜ್ಞಯಾ ॥ ೭೮ ॥ ಸಸಂವಿಕಾರಂಸಸ್ವಾನಾಮನ್ನಂಗೃಭ್ಣಂ
ತಿಭುಂಜತೇ । ಪದಾರ್ಥವಿಷಯುದ್ದಿಷ್ಟಸ್ತಾತ್ಪರ್ಯಾರ್ಥೋಽಥಕಥ್ಯತೇ ॥ ೭೯ ॥
ಇಷ್ಟಲಿಂಗಾರ್ಚನಂಬಾಹ್ಯೇನಕೃತಂಚೇನ್ಮುದಾನಿಶಂ । ನಭವೇದೇವಾಂತರಂ
ಗೇಪ್ರಾಣಲಿಂಗಸಮರ್ಚನಂ ॥ ೮೦ ॥ ಬಾಹ್ಯೇಜಾಗ್ರದವಸ್ಥಾಯಾಮನುಭೂತಾ
ರ್ಥವಿವಹಿ । ಅಂತಸ್ಸ್ವಪ್ನದಶಾಯಾಂತುಯಥೇಹಪರಿದೃಶ್ಯತೇ ॥ ೮೧ ॥ ತ
ಥಾಂತರ್ಯಜನಂನಿತ್ಯಂಬಹಿರ್ಯಜನಪೂರ್ವಕಂ । ಬಹಿರ್ಯಜನಹೀನಶ್ಚೇದಂತ
ರ್ಯಾಗೋನಸಿದ್ಧ್ಯತಿ ॥ ೮೨ ॥ ತದ್ಬಾಹ್ಯಾಂಗೇಚಾಂತರಂಗೇಪರಮಪ್ರೇ
ಮಪೂರ್ವಕಂ । ವಿಧಾಯಸ್ವೇಷ್ಟಲಿಂಗಸ್ಯಪ್ರಾಣಲಿಂಗಸ್ಯಚಾರ್ಚನಂ
॥ ೮೩ ॥ ರೂಪಂಸಮರ್ಪ್ಯದ್ರವ್ಯಸ್ಯರುಚಿಮಪ್ಯರ್ಪಯೇತ್ತತಃ
ಉಭಯಾರ್ಪಣಹೀನಶ್ಚೇತ್ಪ್ರಸಾದೋನಿಷ್ಫಲೋಭವೇತ್ ॥ ೮೪ ॥ ಇ
ತ್ಯುಕ್ತಾಂವಸ್ವೇಷ್ಟಲಿಂಗಾಯಪ್ರಾಣಲಿಂಗಾಯಚಾಪಿಯೆ । ರೂಪಂರು

---

ಮಧ್ಯದಲ್ಲಿ (ಯಾ–ಯಾರು) ಅಂತಃ–ತಮ್ಮ ಹೃದಯಾಕಾಶಮಧ್ಯದಲ್ಲಿರುವ, ತಂ–ಈ
ಪ್ರಸಿದ್ಧನಾದ, ರುದ್ರಂ–ತನ್ನ ಭಕ್ತರ ಪಾಪವನ್ನು ಸಂಹರಿಸುವ ಶಿವನನ್ನು, ಪರಃ
ಮುನೀಷಯಾ–ಬಾಹ್ಯಪೂಜೆಯನ್ನು ಮಾಡಬೇಕೆಂಬ ಬುದ್ಧಿಯಿಂದ, ಇಚ್ಛಂತಿ–
ಪೂಜಿಸುವರೊ, (ತೇ–ಅವರು) ಜಿಹ್ವಯಾ–ನಾಲಿಗೆಯಿಂದ, ಸಸಂ–ಪೈರುಗಳಿಂದಾದ ಅ
ನ್ನವನ್ನು, ಗೃಭ್ಣಂತಿ–ಭುಂಜಿಸುವರು. ॥೭೮॥ ಹೀಗೆ ಶಬ್ದಾರ್ಥವನ್ನು ಹೇಳಿರುವೆ
ವು. ಇನ್ನು ಇದರ ತಾತ್ಪರ್ಯವನ್ನು ಹೇಳುತ್ತೇವೆ. ಸಂತೋಷದಿಂದ ಯಾವಾ
ಗಲೂ ಹೊರಗೆ ಇಷ್ಟಲಿಂಗ ಪೂಜೆಯನ್ನು ಮಾಡದಿದ್ದರೆ, ಒಳಗೆ ಪ್ರಾಣಲಿಂಗ
ಪೂಜೆಯೂ ಆಗುವುದೇ ಇಲ್ಲ. ಹೊರಗೆ ಜಾಗ್ರದವಸ್ಥೆಯಲ್ಲಿ ಅನುಭವಿಸಿದ ವಿಷ
ಯುವೇ ಸ್ವಪ್ನಾವಸ್ಥೆಯಲ್ಲಿ ಒಳಗೆ ಹೇಗೆ ಕಾಣಿಸಿಕೊಳ್ಳುವುದೋ, ಹಾಗೆ ಅಂತರ್ಲಿಂಗಾ
ರ್ಚನವು ಬಹಿರ್ಲಿಂಗಾರಾಧನ ಪೂರ್ವಕವಾಗಿಯೇ ಸಂಘಟಿಸಬೇಕು. ॥೮೧॥ ಹೊರಗೆ
ಲಿಂಗಪೂಜೆಯಿಲ್ಲದವನಿಗೆ ಅಂತರ್ಲಿಂಗಾರ್ಚನೆಯೂ ಸಿದ್ಧಿಸುವುದಿಲ್ಲ. ಆದುದರಿಂದ
ಹೊರಗೆ ಇಷ್ಟಲಿಂಗವನ್ನೂ, ಒಳಗೆ ಪ್ರಾಣಲಿಂಗವನ್ನೂ, ಪ್ರೀತಿಪುರಸ್ಸರವಾಗಿ ಪೂ
ಜಿಸಿ, ಮೊದಲು ಪ್ರತಿಯೊಂದು ವಸ್ತುವಿನ ರೂಪವನ್ನು ಸಮರ್ಪಿಸಿ, ಬಳಿಕ ರುಚಿ
ಯನ್ನರ್ಪಿಸಬೇಕು. ಹೀಗೆ ರೂಪರುಚಿಗಳ ಅರ್ಪಣವನ್ನು ಮಾಡದಿದ್ದರೆ ಪ್ರಸಾದವು
ವ್ಯರ್ಥವಾಗುವುದು. ॥೮೪॥ ತನ್ನ ಇಷ್ಟಲಿಂಗಕ್ಕೂ ಪ್ರಾಣಲಿಂಗಕ್ಕೂ ಯಾರು ಅವ

ಚೆಂಚಾರ್ಪಯಿತ್ವಾಭುಂಜತೆಸಾವಧಾನಕಾಃ ॥ ೮೫ ॥ ಶುದ್ಧಾತ್ಮಾನಸ್ತ
ಏವಾನ್ನಂಭುಂಜತೆಸುತರಾಮಿತಿ । ಅಮುಮರ್ಥಂವಕ್ತುಂಕಾಮೈರ್ಹರ
ದತ್ತಾರ್ಯದೇಶಿಕೈಃ ॥ ೮೬ ॥ ವರಂಪ್ರಾಣಪರಿತ್ಯಾಗಶ್ಛೇದನಂಶಿರಸೋ
ಽಪಿವಾ । ನತ್ವನಭ್ಯರ್ಚ್ಯಭುಂಜೀಯಾದ್ಭಗವಂತಂತ್ರಿಲೋಚನಂ ॥ ೮೭ ॥
ಇತೀಶ್ವರಾರ್ಚನಾತ್ಪೂರ್ವಂಮನುಜಾನಾಂಹಿಸರ್ವದಾ । ಭುಕ್ತ್ಯಭಾವಪ್ರತಿ
ಜ್ಞಾತಾಂಕಥಯಂತ್ಯಾಃ ಪರಿಸ್ಫುಟಂ ॥೮೮॥ ಸೂಕ್ತೇರ್ಹಿ ಶಿವಧರ್ಮಸ್ಯ ಶ್ರು
ತಿರೇಷೈವಸಾಧನಂ । ಇತಿಸಮ್ಯಕ್ಪ್ರಕಥಿತಂಭವೇತ್ತಾತ್ಪರ್ಯಸಂಗ್ರಹೇ॥೮೯॥
"ಭಾವೋಪಪನ್ನಮನಸಾಂತ್ವದುಪಾಸಕಾನಾಂಪುಂಸಾಮಮೋಘವಚಸಂ
ಭಗವನ್ಬ್ರುವಾಣಃ। ಮಂತ್ರೇಯಮಂತರಿತಿನಃ ಪ್ರತಿಭಾತಿಮೂಲಂಪ್ರಾ
ಗ್ಭುಕ್ತಮರ್ಚನವಿಧೇರನುಪಾಸರಂತೇ"॥ಇತಿ॥ಕಥಿತೋಹ್ಯಯಮೇವಾರ್ಥೋ
ಬ್ರಹ್ಮಾಂಡಾಖ್ಯಪುರಾಣಕೇ । ಬಹುಭಿರ್ವಚನೈಸ್ತಾನಿಪ್ರವಕ್ಷ್ಯೇವ್ಯಹಮಾ
ದರಾತ್ ॥೯೦॥ ಅನಾರಾಧ್ಯಮಹಾದೇವಂನಭುಂಜೀಯಾತ್ಕದಾಚನ । ವಿ
ಷಧರ್ಮಃ ಪರೋಜ್ಞೇಯಶ್ಶೇಷೋಭವತುವಾನವಾ ॥೯೧॥ ಅಸಂಪೂಜ್ಯನ
ಭುಂಜೀತಶಿವಮಾಪ್ರಾಣಸಂಚರಾತ್ । ಯದಿಪಾಪೇನಭುಂಜೀತಸ್ವೈರಂತ

---

ಧಾನಪೂರ್ವಕವಾಗಿ ರೂಪರುಚಿಗಳನ್ನು ಸಮರ್ಪಿಸಿ ಆನಂತರ ಭುಂಜಿಸುತ್ತಾರೋ, ಪರಿಶುದ್ಧಾತ್ಮರಾದ ಅವರೇ ಅನ್ನ ಭೋಜನವನ್ನು ಮಾಡಿದವರಾಗುತ್ತಾರೆ. ಹರದತ್ತಾಚಾರ್ಯರು ಈ ಅಭಿಪ್ರಾಯವನ್ನು ಹೇಳುವ ಇಚ್ಛೆಯಿಂದಲೇ "ಪ್ರಾಣವನ್ನು ಬಿಡುವುದಾದರೂ ಲೇಸು, ಕತ್ತನ್ನು ಕತ್ತರಿಸಿಕೊಳ್ಳುವುದಾದರೂ ಉತ್ತಮವು. ಮುಕ್ಕಣ್ಣನಾದ ಭಗವಂತನನ್ನು ಪೂಜಿಸದೆ ಭೋಜನವನ್ನು ಮಾತ್ರ ಮಾಡಬಾರದು" ಎಂದು ಮನುಷ್ಯರು ಯಾವಾಗಲೂ ಶಿವಾರ್ಚನೆಗಿಂತ ಮುಂಚೆ ಭೋಜನವನ್ನು ಮಾಡಕೂಡದೆಂಬ ಶಪಥವುಳ್ಳವರಾಗಿರಬೇಕೆಂಬುದನ್ನು ಸ್ಪಷ್ಟವಾಗಿ ಹೇಳಿರುವ ಶಿವಧರ್ಮಶಾಸ್ತ್ರವಚನಕ್ಕೆ ಮೇಲ್ಕಂಡ ವೇದವಚನವೇ ಸಾಧನವು, ಎಂದು ತಮ್ಮ ತಾತ್ಪರ್ಯಸಂಗ್ರಹದಲ್ಲಿ "ಭಾವೋಪಪನ್ನಮನಸಾಂ......ಮೂಲಂ" ಎಂಬ ಶ್ಲೋಕದಲ್ಲಿ ಹೇಳಿರುವರು. ಇದೇ ಅರ್ಥವೇ ಬ್ರಹ್ಮಾಂಡಪುರಾಣದಲ್ಲಿ ಅನೇಕವಾಕ್ಯಗಳಿಂದ ಹೇಳಲ್ಪಟ್ಟಿರುವುದು. ಅವುಗಳನ್ನು ನಾನು ಪ್ರೀತಿಯಿಂದ ಹೇಳುತ್ತೇನೆ.—ಪರಶಿವನನ್ನು ಪೂಜಿಸದೆ ಯಾವಾಗಲೂ ಭುಂಜಿಸಕೂಡದು. ಈ ಧರ್ಮವನ್ನು ಉತ್ತಮವಾದುದನ್ನಾಗಿ ತಿಳಿಯಬೇಕು. ಉಳಿದ ಧರ್ಮವು ಉತ್ತಮವಾದುದಾಗಲಿ ಅಥವಾ ಹೋಗಲಿ. ಪ್ರಾಣವಿರುವವರೆಗೂ ಶಿವಾರಾಧನೆಯನ್ನು ಮಾಡದೆ ಭೋಜನ ಮಾಡಬಾರದು. ಪಾಪದಿಂದ ಬಂ

ಸ್ಯನನಿಷ್ಕೃತಿಃ॥೯೨॥ ಅಪೂಜಯಿತ್ವಾ ಚೇಶಾನಂ ಯೋ ಹಿ ಭುಂಕ್ತೇ ನರಾಧಮಃ
ಪಾಪಾನಾನನ್ನರೂಪಾಣಾಂ ತಸ್ಯ ಭೋಜನಮುಚ್ಯತೇ॥೯೩॥ ಯಸ್ತು ಲಿಂಗಾ
ರ್ಚನಂ ತ್ಯಕ್ತ್ವಾ ಭುಂಕ್ತೇ ವಿಟ್ಕ್ರಿಮಿಕೀಟಭುಕ್। ನರೋ ನರಕಗಾಮೀ ಸ್ಯಾತ್ಸ
ರ್ವಲೋಕಬಹಿಷ್ಕೃತಃ॥೯೪॥ ಅಕೃತ್ವಾ ಪೂಜನಂ ಶಂಭೋರ್ಯೋ ಭುಂಕ್ತೇ ಪಾ
ಪಕೃದ್ದ್ವಿಜಃ। ಕುಣಪಂ ಚ ಮಲಂ ಚೈವ ಸಮಶ್ನಾತಿ ದಿನೇ ದಿನೇ ॥೯೫॥ ಆವೋ
ರಾಜಾನಮಿತ್ಯೇಷ ಮಂತ್ರೋ ಯಾಜುಷಿ ವಿಶ್ರುತಃ । ಪ್ರವಕ್ತಿ ಶಂಕರಸ್ಯಾ
ರ್ಚಾಕರ್ತವ್ಯೇತಿ ಮನೀಷಿಭಿಃ ॥೯೬॥ ಅಯಂ ಮಂತ್ರಸ್ಸಂಹಿತಾಯಾಮೇ
ವಮಾಮ್ನಾಯತೇ ಸ್ಫುಟಂ। "ಆವೋ ರಾಜಾನಮಧ್ವರಸ್ಯ ರುದ್ರಗ್ಂ ಸತ್ಯಯ
ಜಗ್ಂ ರೋದಸ್ಯೋಃ ಅಗ್ನಿಂ ಪುರಾ ತನಯಿತ್ನೋರಚಿತ್ತಾದ್ಧಿರಣ್ಯರೂಪಮ
ವಸೇ ಕೃಣುಧ್ವಂ" ಇತಿ॥ ಅಸ್ಯಾರ್ಥಃ ಕಥ್ಯತೇ ಸಮ್ಯಕ್ಪೂರ್ವಾಚಾರ್ಯಾನು
ಸಾರತಃ॥೯೭॥ ರೋದಸ್ಯೋರಧ್ವರಸ್ಯಾಪಿ ದ್ಯಾವಾಭೂಮ್ಯೋರ್ಮಖಸ್ಯ ಚ ।
ರಾಜಾನಮಧಿಪಂ ಸತ್ಯಯಜಂ ಸಫಲಪೂಜನಂ ॥೯೮॥ ಹೋತಾರಂ ಮೋಕ್ಷ
ದಾತಾರಮಗ್ನಿಂ ವಹ್ನಿಸ್ವರೂಪಕಂ । ಹಿರಣ್ಯರೂಪಂ ಕನಕಮಯಾಂಗಂ
ರುದ್ರಮೀಶ್ವರಂ ॥೯೯॥ ತನಯಿತ್ನೋರ್ಮೇಘತುಲ್ಯಾದಚಿತ್ತಾನ್ಮರಣಾ

---

ದಾವೇಳೆ ಯಥೇಚ್ಛವಾಗಿ ಭುಂಜಿಸಿದರೆ, ಅವನಿಗೆ ಪ್ರಾಯಶ್ಚಿತ್ತವೇ ಇಲ್ಲ. ॥೯೨॥
ಯಾವ ನೀಚಮನುಷ್ಯನು ಶಿವನನ್ನು ಪೂಜಿಸದೆ ಊಟಮಾಡುತ್ತಾನೋ, ಅವನು ಅ
ನ್ನಸ್ವರೂಪವಾದ ಪಾಪದ ಭೋಜನವನ್ನೇ ಮಾಡಿದವನಾಗುತ್ತಾನೆ. ಯಾವನು ಲಿಂ
ಗಪೂಜೆಯನ್ನು ಬಿಟ್ಟು ಊಟಮಾಡುತ್ತಾನೋ; ಅವನು ಅಮೇಧ್ಯವನ್ನೂ ಹುಳುಹು
ಪ್ಪಟೆಯನ್ನೂ ತಿಂದವನಾಗಿ, ಸಕಲ ಜನರಿಂದ ಬಹಿಷ್ಕರಿಸಲ್ಪಟ್ಟು ನರಕವನ್ನೈದು
ತ್ತಾನೆ. ಪಾಪಿಯಾದ ಯಾವ ದ್ವಿಜನು ಶಿವಪೂಜೆಯನ್ನು ಮಾಡದೆ ಭುಂಜಿಸುತ್ತಾ
ನೋ, ಅವನು ಪ್ರತಿದಿನವೂ ಹೆಣವನ್ನೂ ಅಮೇಧ್ಯವನ್ನೂ ತಿನ್ನುತ್ತಾನೆ. ॥೯೫॥ "ಆ
ವೋ ರಾಜಾನಂ" ಎಂದು ಯಜುರ್ವೇದದಲ್ಲಿ ಪ್ರಸಿದ್ಧವಾಗಿರುವ ಮಂತ್ರವು, "ಶಿವಪೂ
ಜೆಯು ವಿದ್ವಾಂಸರಿಂದ ಮಾಡಲ್ಪಡುವುದಕ್ಕೆ ಯೋಗ್ಯವು ಎಂದು ಹೇಳುತ್ತದೆ. ಈ
ಮಂತ್ರವು ಸಂಹಿತೆಯಲ್ಲಿ ಸ್ಫುಟವಾಗಿ ಹೀಗೆ ಹೇಳಲ್ಪಟ್ಟಿರುವುದು:—" ಆವೋರಾ
ಜಾನ..........ಕೃಣುಧ್ವಂ" ಎಂಬುದಾಗಿ. ಇದರರ್ಥವನ್ನು ಪೂರ್ವಾಚಾರ್ಯರಭಿ
ಪ್ರಾಯವನ್ನನುಸರಿಸಿ ಚೆನ್ನಾಗಿ ಹೇಳುತ್ತೇನೆ. ॥೯೭॥ ( ಎಲೈ ಮನುಷ್ಯರ! ) ರೋ
ದಸ್ಯೋಃ—ಆಕಾಶ ಭೂಮಿಗಳಿಗೆ, ಅಧ್ವರಸ್ಯಾಪಿ–ಯಜ್ಞಕ್ಕೆ ಸಹ, ರಾಜಾನಂ–ಅಧಿ
ಪತಿಯಾದ, ಸತ್ಯಯಜಗ್ಂ–ಸಾರ್ಥಕವಾದ ಪೂಜೆಯುಳ್ಳ, ಹೋತಾರಗ್ಂ–ಮೋಕ್ಷವ

ತ್ಪುರಾ । ಮೋಽಯುಷ್ಮಾಕಂಹೇಮನುಜಾ ಅವಸೇರಕ್ಷಣಾಯಹಿ ॥೧೦೦॥
ಆಕೃಣಧ್ವಂಪ್ರಾಹ್ವಯತಸಮರ್ಚ್ಯಯತಸತ್ವರಂ । ತನಯಿತ್ನೋರಿತಿಪದೇ
ಸ ಲೋಪಶ್ಛಾಂದಸಸ್ಸ್ಮೃತಃ ॥೧೦೧॥ ಇಮಮರ್ಥಂವಕ್ತುಕಾಮಾ ಹರದ
ತ್ತಾರ್ಯದೇಶಿಕಾಃ । ಮಂತ್ರೋಯಮೇವಹಿ ಮಹಾದೇವಪೂಜಾವಿಧಾಯಿ
ನಃ ॥೧೦೨॥ ಶಿವಧರ್ಮಸ್ಯ ವಚಸೋಮೂಲಮಾಸೀದಿತಿಸ್ಫುಟಂ । ಜಗದುಃಪರ
ಮಪ್ರೀತ್ಯಾಭವ್ಯೈತಾತ್ಪರ್ಯಸಂಗ್ರಹೇ ॥೧೦೩॥ 'ತ್ವತ್ಕಂಪುರಾಮರಣತಸ್ತನಯಿ
ತ್ನುಕಲ್ಪಾದಾಕಾರಣಂ ಪರಮಕಾರುಣಿಕಬ್ರುವಾಣಃ । ಮಂತ್ರೋಯಮಾವ
ಇತಿ ಯಾವದುಪಕ್ರಮಾಯಾ ಮೂಲಂ ಮಹೇಶವಿದಿತಂಶಿವಧರ್ಮಸೂಕ್ತೇಃ"
ಇತಿ ಸಾಶಿವಧರ್ಮಸ್ಯಸೂಕ್ತಿರಪ್ಯತ್ರಕಥ್ಯತೇ । ಯಾವನ್ನಾಯಾತಿ ಮರಣಂ
ಯಾವನ್ನಾಕ್ರಮತೇಜರಾ ॥೧೦೪॥ ಯಾವನ್ನೇಂದ್ರಿಯವೈಕಲ್ಯಂ ತಾವತ್ಪೂಜ
ಯಶಂಕರಂ । ತ್ವರಿತಂ ಜೀವಿತಂಯಾತಿ ತ್ವರಿತಂಯಾತಿಯೌವನಂ ॥೧೦೫॥
ತ್ವರಿತಂವ್ಯಾಧಿರಭ್ಯೇತಿ ತಸ್ಮಾತ್ಪೂಜಯಶಂಕರಂ । ಇತಿ । ಕಿಂಚಾನ್ಯೇಷಾಂ
ಪುರಾಣಾನಾಂವಾಕ್ಯಾನಿ ಶುಭದಾನಿಚ ॥೧೦೬॥ ಶಿವಪೂಜಾಭ್ಯಾಸಕಾನಿವ

---

ನ್ನು ಕೊಡುವ, ಅಗ್ನಿಂ-ಅಗ್ನಿಯಸ್ವರೂಪನಾದ, ಹಿರಣ್ಯರೂಪಂ-ಸುವರ್ಣಮಯ
ದೇಹನಾದ, ರುದ್ರಂ-ಶಿವನನ್ನು, ತನಯಿತ್ನೋಃ-ಮೇಘಸಮಾನವಾದ, ಆಚತ್ತಾತ್-
ಮರಣಕ್ಕಿಂತಲೂ, ಪುರಾ-ಮುಂಚೆಯೇ, ವಃ-ನಿಮ್ಮಗಳ, ಅವಸೇ-ರಕ್ಷಣಾರ್ಥವಾಗಿ,
ಆಕೃಣಧ್ವಂ-ಕರೆಯಿರಿ ಪೂಜಿಸಿರಿ. (ತನಯಿತ್ನೋಃ ಎಂಬ ಪದಕ್ಕೆ ಮೇಘಸಮಾನವೆಂಬ
ರ್ಥ ಮಾಡುವಲ್ಲಿ ಅದು ಸಕಾರ ಸಮೇತವಾಗಿರಬೇಕು. ಅದು ಲುಪ್ತವಾಗಿರುವುದು
ವೇದ ಮರ್ಯಾದೆಯು.) ॥೧೦೧॥ ಹರದತ್ತಾಚಾರ್ಯರು ಈ ಮಂತ್ರಕ್ಕೆ ಇದೇ ಅರ್ಥವನ್ನೇ
ಹೇಳಲಿಚ್ಛೈಸಿ, "ಶಿವಪೂಜೆಯನ್ನು ವಿಧಿಸುವ ಶಿವಧರ್ಮಶಾಸ್ತ್ರ ವಚನಕ್ಕೆ ಈ ಮಂ
ತ್ರವೇ ಮೂಲವಾಗಿರುವುದು" ಎಂದು ತಮ್ಮ ತಾತ್ಪರ್ಯ ಸಂಗ್ರಹ ಗ್ರಂಥದಲ್ಲಿ ಅತ್ಯಂ
ತ ಪ್ರೀತಿಯಿಂದ ॥೧೦೩॥ "ತ್ವತ್ಕಂ............ಧರ್ಮಸೂಕ್ತೇಃ" ಎಂಬ ಶ್ಲೋಕ
ದಲ್ಲಿ ಹೇಳಿರುವರು. ಶಿವಧರ್ಮಪುರಾಣದ ವಚನವನ್ನು ಕೂಡ ಇಲ್ಲಿ ಹೇಳುತ್ತೇನೆ.
"ಎದುವರೆಗೆ ಮರಣವು ಬಂದಿರುವುದಿಲ್ಲವೋ, ಎಲ್ಲಿಯವರೆಗೆ ಮುಪ್ಪು ದೊರಕೊಂ
ಡಿರುವುದಿಲ್ಲವೋ, ಆವಪರ್ಯಂತ ಇಂದ್ರಿಯಗಳು ವಿಕಾರವಾಗಿರುವುದಿಲ್ಲವೋ, ಅದುವರೆ
ಗೂ ಶಿವನನ್ನು ಆರಾಧಿಸು. ಜೀವವು ಬೇಗನೆ ಹೋಗಿಬಿಡುತ್ತದೆ. ಯೌವನವು
ಬೇಗನೆ ನಾಶವಾಗುತ್ತದೆ. ರೋಗವು ಶೀಘ್ರವಾಗಿ ಸಮೀಪಕ್ಕೆ ಬರುತ್ತದೆ. ಆದು
ದರಿಂದ ಶಿವನನ್ನು ಪೂಜಿಸು" ಎಂಬುದಾಗಿ. ಎಲೆ ಬ್ರಾಹ್ಮಣರೆ ಶಿವಪೂಜೆಯನ್ನು
ವಿಧಿಸುವ ಇತರ ಪುರಾಣಗಳ ಮಂಗಳವಚನಗಳನ್ನೂ ನಾನು ಹೇಳುತ್ತೇನೆ. [illegible]

ಚ್ಮ್ಯಹಂಶೃಣುತದ್ವಿಜಾಃ । ಯೇನರಾಸ್ಸಕೃದಪ್ಯತ್ರಪೂಜಯಂತಿ ತ್ರಿಲೋಚನಂ ॥೧೦೭॥ ತೇಧನ್ಯಾಸ್ತೇಮಹಾತ್ಮಾನಸ್ತೇಕೃತಾರ್ಥಾಶ್ಚ ಪಂಡಿತಾಃ । ಮೋಹನಿದ್ರಾಪ್ರಸುಪ್ತೇಽಸ್ಮಿನ್ಪಶುಪಾಶಸಮಾಕುಲೇ ॥೧೦೮॥ ಪುರುಷಾಃಕೃತಕೃತ್ಯಾಸ್ತೇಯೇಶಿವಂಶರಣಂಗತಾಃ । ದೇಶಸ್ಸಏವತಾನದ್ಯಸ್ತೇಚತೇಚಮಹಾಯನಾಃ ॥೧೦೯ ತಾಏವತಿಥಯಶ್ಶಸ್ತಾಯತ್ರ ಸಂಪೂಜ್ಯತೇ ಶಿವಃ । ಕೀರ್ತಿರ್ಜನೇಗತಿಸ್ಸ್ವರ್ಗೇರತಿರ್ಮನಸಿಚೋತ್ತಮಾ ॥೧೧೦॥ ಇತಿ ಸರ್ವಾರ್ಥಕೃನ್ನೂನಂ ಶಿವಃ ಕಸ್ಮಾನ್ನಸೇವ್ಯತೇ । ಕೇವಲೇನಾಂಬುನಾಯೋಽತ್ರತೃಷ್ಣಾತುರಇವೇಶ್ವರಃ ॥೧೧೧॥ ತುಷ್ಟ್ಯತ್ಯೈಶ್ವರ್ಯದಸ್ತುಷ್ಟಸ್ಸಕಸ್ಮಾನ್ನಾರ್ಚ್ಯತೇನೃಭಿಃ । ಅಕ್ರುದ್ಧೆಸರ್ವಸಾಮಾನ್ಯೇಸ್ವಾರಾಧ್ಯೇಸರ್ವಕಾಮದೇ ॥೧೧೨॥ ಭವೇಪಿಸತಿಖೀದಂತಿ ಭವಿನೋಯತ್ತದದ್ಭುತಂ । ಇತ್ಥಂಸರ್ವಾತ್ಮಕಂಲಿಂಗಂ ಧರ್ಮಕಾಮಾರ್ಥಮೋಕ್ಷದಂ ॥೧೧೩॥ ನಯಜಂತೀಹಯೇಮರ್ತ್ಯಾಜ್ಞೇಯಾಸ್ತೇನರರಾಸಭಾಃ । ಯೇಯಜಂತಿನದೇ

---

ಟೀ:—ಯಾವ ಮನುಷ್ಯರು ಮುಕ್ಕಣ್ಣನನ್ನು ಒಂದುಬಾರಿಯಾದರೂ ಪೂಜಿಸುವರೋ ಅವರು ಧನ್ಯರು, ಅವರು ಮಹಾತ್ಮರು, ಅವರು ಕೃತಕೃತ್ಯರು, ಅವರು ಪಂಡಿತರು. ಪಶುಗಳಿಂದ ಮತ್ತು ಮಾಯಾಪಾಶದಿಂದ ವ್ಯಾಕುಲಿತವಾಗಿರುವ, ಅಜ್ಞಾನ ನಿದ್ರೆಯಿಂದೊರಗಿರುವ ಈ ಜಗತ್ತಿನಲ್ಲಿ ಯಾರು ಶಿವನನ್ನು ಮರೆಹೊಕ್ಕಿರುವರೋ ಅವರೇ ಧನ್ಯರು. ಎಲ್ಲಿ ಶಿವನು ಪೂಜಿಸಲ್ಪಡುವನೋ ಅಂತಹ ದೇಶವೇ, ಅಂಥ ಹೊಳೆಗಳೇ, ಅಂತಹ ಅಯನಗಳೇ, ಅಂಥ ತಿಥಿಗಳೇ ಪ್ರಶಸ್ತವಾದುವುಗಳು. ಶಿವನು ಜನರಲ್ಲಿ ಕೀರ್ತಿಯನ್ನೂ, ಸ್ವರ್ಗದಲ್ಲಿ ಸದ್ಗತಿಯನ್ನೂ, ಮನಸ್ಸಿನಲ್ಲಿ ಅನುರಾಗವನ್ನೂ, ಹೀಗೆ ಸಕಲೇಷ್ಟಾರ್ಥವನ್ನೂ ನಿಜವಾಗಿ ಉಂಟುಮಾಡಿಕೊಡುವನು. ಅಂಥ ಶಿವನನ್ನು ಯಾವ ಕಾರಣದಿಂದ ಸೇವಿಸುವುದಿಲ್ಲ ? ಬರಿಯನೀರನ್ನೇ ಶಿವನಿಗೆ ಸಮರ್ಪಿಸಿದರೂ, ಆತನು ಬಾಯಾರಿಕೆಗೊಂಡಿರುವವನಂತೆ ಆ ನೀರಿನಿಂದಲೇ ತೃಪ್ತಿಪಟ್ಟು ತನ್ನ ಸೇವಕರಿಗೆ ಸಂಪತ್ತನ್ನು ಕೊಡುವನು. ಅಂಥ ಶಿವನನ್ನು ಮನುಷ್ಯರು ಅದೇಕೆ ಪೂಜಿಸುವುದಿಲ್ಲ? ಶಿವನು ಕೋಪರಹಿತನು, ಸರ್ವಸಾಮಾನ್ಯನು, ಸುಲಭವಾಗಿ ಪೂಜಿಸಲ್ಪಡಲು ಯೋಗ್ಯನು, ಸಕಲೇಷ್ಟಾರ್ಥಗಳನ್ನು ಕೊಡುವವನು ಆಗಿದ್ದರೂ, ಭವಿಗಳು ಕ್ಲೇಶಪಡುತ್ತಿರುವರೆಂಬುದುಆಶ್ಚರ್ಯವೇ ಸರಿ. ॥೧೧೨॥ ಹೀಗೆ ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳನ್ನೀಯುವ ಸರ್ವರ ಆತ್ಮಸ್ವರೂಪವಾದ ಶಿವಲಿಂಗವನ್ನು ಯಾವ ಮನುಷ್ಯರು ಪೂಜಿಸುವುದಿಲ್ಲವೋ, ಅವರನ್ನು ಮನುಷ್ಯರೂಪದ ಕತ್ತೆಗಳನ್ನಾಗಿ ತಿಳಿಯಬೇಕು. ಸ್ರಕ್ಚಂದನವನಿತಾದಿವ್ಯಾಮೋಹಿತರಾದ ಯಾವ ಮನು

ವೇಶಂ ವಿಷಯೈಶ್ಚ ವಿಮೋಹಿತಾಃ ||೧೧೪|| ಶೋಚಂತೇತೇ ಮೃತಾಃ ಪಂಕೇ
ಮಗ್ನಾ ವನಗಜಾ ಇವ | ಕರ್ಮಭೂಮೌ ಹಿ ಮಾನುಷ್ಯಂ ಜನ್ಮನಾಂ ನಿ
ಯುತೈರಪಿ ||೧೧೫|| ಸ್ವರ್ಗಾಪವರ್ಗಫಲದಂ ಕದಾಚಿತ್ಪ್ರಾಪ್ಯತೇ ನರೈಃ |
ತದೀದೃಗ್ದುರ್ಲಭಂ ಪ್ರಾಪ್ಯ ನಾರ್ಚಯಂತೀಹ ಯೇ ಶಿವಂ ||೧೧೬|| ತೇಷಾಂ
ಹಿ ಹಸ್ತಿ ಮೂರ್ಖಾಣಾಂ ವಿವೇಕಃ ಕುತ್ರ ತಿಷ್ಠತಿ | ತಸ್ಮಾತ್ತಟಿಲ್ಲತಾಲೋಲಂ
ಮಾನುಷ್ಯಂ ಪ್ರಾಪ್ಯ ದುರ್ಲಭಂ ||೧೧೭|| ಶಿವಂ ಸಂಪೂಜಯೇನ್ನಿತ್ಯಂ ಭ
ಕ್ತಿಮಾನ್ಮುಕ್ತಿಲಬ್ಧಯೆ | ವಿಪಾಕಕಟುಕಾನ್ರಮ್ಯಾನ್ವಿಷಯಾನ್ವಿಷಸನ್ನಿ
ಭಾನ್ ||೧೧೮|| ಸಂತ್ಯಜ್ಯಾರಾಧಯೇದ್ದೇವಂ ಶಂಕರಂ ಲೋಕಶಂಕರಂ |
ವ್ಯಾಪಾರಾಂತ್ಸಕಲಾಂಸ್ತ್ಯಕ್ತ್ವಾ ಪೂಜಯಧ್ವಂ ಸದಾಶಿವಂ ||೧೧೯|| ನಿಕ
ಟಾ ಇವ ದೃಶ್ಯಂತೇ ಕೃತಾಂತನಗರದ್ರುಮಾಃ | ಕಿಮತ್ರ ಗ್ರಂಥಮಾಲಾಭಿಸ್ಸಂ
ಕ್ಷೇಪಾದುಪದಿಶ್ಯತೇ ||೧೨೦|| ವಿಮುಕ್ತಸರ್ವವ್ಯಾಪಾರಾ ಜನಾಃ ಪೂಜಯ
ತೇಶ್ವರಂ | ಯೇ ವಾಮದೇವಂ ಹಿ ಯಜಂತಿ ನಿತ್ಯಂ ಸದ್ವೃತ್ತಶೀಲಾಃ ಕಿಲ

---

ಯಾರು ದೇವಾಧಿಪತಿಯಾದ ಪರಶಿವನನ್ನು ಆರಾಧಿಸುವುದಿಲ್ಲವೋ: ಅವರು ಕೆಸರಿನಲ್ಲಿ ಮು
ಳುಗಿಕೊಂಡ ಕಾಡಾನೆಗಳೋಪಾದಿಯಲ್ಲಿ ದುಃಖಿಸುತ್ತಾರೆ. ||೧೧೪|| ಕರ್ಮಭೂಮಿಯ
ಲ್ಲಿ ಅನೇಕ ಸಹಸ್ರ ಇತರ ಜನ್ಮಗಳನ್ನೆತ್ತಿ, ಬಳಿಕ, ಸ್ವರ್ಗಮೋಕ್ಷಗಳನ್ನು ಪಡೆಯಲು
ಅರ್ಹವಾದ ಮಾನವಜನ್ಮವನ್ನು ಯಾವಾಗಲೋ ಪಡೆಯುವನು. ಇಂತಹ ದುರ್ಲ
ಭವಾದ ನರಜನ್ಮವನ್ನು ಹೊಂದಿಯೂ ಕೂಡ ಯಾರು ಶಿವನನ್ನು ಪೂಜಿಸುವುದಿಲ್ಲವೋ,
ಆನೆಯಂತೆ ದಪ್ಪವಾದ ಬುದ್ಧಿಯುಳ್ಳ ಆ ಮೂರ್ಖರಿಗೆ ವಿವೇಕವೆಲ್ಲಿರುವುದು ? ಆದು
ಕಾರಣ, ವಿದ್ಯುಲ್ಲತೆಯಂತೆ ಅತಿಚಪಲವಾದ ದುರ್ಲಭ ಮನುಷ್ಯಜನ್ಮವನ್ನು ಪಡೆ
ದು, ಮುಕ್ತಿಪ್ರಾಪ್ತಿಗಾಗಿ ಪ್ರತಿದಿನವೂ ಭಕ್ತಿಯುಳ್ಳವನಾಗಿ ಶಿವನನ್ನು ಪೂಜಿಸಬೇಕು
||೧೧೭|| ಮೊದಲು ಮನೋಹರವಾಗಿ ತೋರಿ ಕೊನೆಗೆ ಕೇಡನ್ನುಂಟುಮಾಡುವ ವಿ
ಷಸಮಾನವಾದ ಸ್ರಕ್ಚಂದನಾದಿ ವಿಷಯಗಳನ್ನು ದೂರೀಕರಿಸಿ, ಜಗತ್ತಿಗೆ ಸುಖವ
ನ್ನುಂಟುಮಾಡುವ ಶಂಕರನನ್ನು ಪೂಜಿಸಬೇಕು. ಯಮಪಟ್ಟಣದ ಮರಗಳು ಸ
ಮೀಪಸ್ಥವಾದಂತೆ ಕಾಣುತ್ತಿವೆ. ಆದುಕಾರಣ ಸಕಲ ಬಾಹ್ಯ ವ್ಯಾಪಾರಗಳನ್ನೂ
ಬಿಟ್ಟು ಪರಶಿವನನ್ನು ಪೂಜಿಸಿರಿ ||೧೧೯|| ಇಲ್ಲಿ ಹೆಚ್ಚಾಗಿ ಗ್ರಂಥಗಳನ್ನು ಹೇಳುವುದೇ
ಕೆ? ಸಂಕ್ಷೇಪವಾಗಿ ಹೇಳುತ್ತೇನೆ:—ಎಲೈ ಬ್ರಾಹ್ಮಣರೆ! ಸಕಲ ಬಹಿರ್ವ್ಯಾಪಾರಗಳನ್ನೂ
ಬಿಟ್ಟು ಶಿವನನ್ನು ಪೂಜಿಸಿರಿ. ಯಾರು ಒಳ್ಳೆಯ ನಡತೆಯುಳ್ಳವರಾಗಿ ಪ್ರತಿದಿನವೂ ಲಿಂ
ಗಸ್ವರೂಪನಾದ ಶಿವನನ್ನು ಪೂಜಿಸುವರೋ, ಆ ಮನುಷ್ಯರು ಸಕಲ ದುಃಖಗಳ

ಲಿಂಗಮೂರ್ತಿಂ ॥ ತೇಧ್ವಸ್ತದುಃಖಾಹಿಭವಂತಿ ಮರ್ತ್ಯಾಭವಾಂಬುರಾಶಿಂ ವಿಷಮುತ್ತರಂತಿ ॥೧೨೧॥ ತಸ್ಮಾತ್ಸರ್ವೇಷಣಾಸ್ತ್ಯಕ್ತ್ವಾ ಶಿವೈಕಗತಮಾನಸೈಃ । ಧರ್ಮಾರ್ಥಕಾಮಮೋಕ್ಷಾರ್ಥಂ ಪೂಜ್ಯೋಧ್ಯೇಯಶ್ಚ ಶಂಕರಃ ॥೧೨೨॥ ಇತಿ ವಾಕ್ಯಾನಿಚ ಶಿವರಹಸ್ಯಕಥಿತಾನಿಹಿ । ಸಕೃದಭ್ಯರ್ಚಿತೇಲಿಂಗೇ ಗರ್ಭಜನ್ಮನವಿದ್ಯತೇ ॥೧೨೩॥ ಸದಾಸಮರ್ಚಯೇದ್ಯಸ್ತು ಸಯಾತಿಪರಮಾಂಗತಿಂ । ಗಾಣಪತ್ಯಂತಥಾಮೋಕ್ಷೋನತುಪ್ರಾತ್ರಾದಿನಾಭವೇತ್ ॥೧೨೪॥ ಲಿಂಗಾರ್ಚನರತಾನಾಂತುಗರ್ಭಜನ್ಮನವಿದ್ಯತೇ । ಇತ್ಯೇಕಪಾದಾಭಿಧಾನಪುರಾಣವಚನಂತ್ವಿದಂ ॥೧೨೫॥ ಅಗ್ನಿಹೋತ್ರಾಣಿವೇದಾಶ್ಚ ಯಜ್ಞಾಶ್ಚಬಹುದಕ್ಷಿಣಾಃ । ಶಿವಲಿಂಗಾರ್ಚನಸ್ಯೈತೇ ಕೋಟ್ಯಂಶೇನಾಪಿನೋಸಮಾಃ ॥೧೨೬॥ ಗವಾಂಕೋಟಿಪ್ರದಾನೇನ ವಿಧಿದತ್ತೇನಯತ್ಫಲಂ । ಲಿಂಗನ್ಯಸ್ತೈಕಪುಷ್ಪಸ್ಯಸಹಸ್ರಾಂಶಂ ನಪೂರಯೇತ್ ॥೧೨೭॥ ಯೋದದ್ಯಾತ್ಕಾಂಚನಂಮೇರುಂ ಸಸ್ಯಪೂರ್ಣಾಂವಸುಂಧರಾಂ । ಲಿಂಗನ್ಯಸ್ತೈಕಪುಷ್ಪಸ್ಯಸಹಸ್ರಾಂಶಂನಪೂರಯೇತ್ ॥೧೨೮॥ ಕಿಂಚಾಬ್ಜೇನೇಶಮಭ್ಯರ್ಚ್ಯವಿಷ್ಣುಸ್ಸ್ವಪದಮಾಪ್ತವಾನ್ । ದ್ರುಹಿಣೋದ್ರೋಣಪುಷ್ಪೇಣಬ್ರ

---

ನ್ನೂ ಕಳೆದುಕೊಂಡು ಭವಸಾಗರವನ್ನು ದಾಟುತ್ತಾರೆ. ॥೧೨೧॥ ಆದುದರಿಂದ ಜನರು ಧರ್ಮಾರ್ಥಕಾಮಮೋಕ್ಷಗಳನ್ನು ಪಡೆಯುವುದಕ್ಕಾಗಿ ಅರ್ಥೇಷಣ ದಾರೇಷಣ ಪುತ್ರೇಷಣಗಳನ್ನು ಬಿಟ್ಟು, ಶಿವನೊಬ್ಬನಲ್ಲಿ ಮನಸ್ಸನ್ನಿಟ್ಟು, ಆ ಶಂಕರನನ್ನು ಪೂಜಿಸಬೇಕು. ಧ್ಯಾನಿಸಬೇಕು ॥೧೨೨॥ ಎಂಬೀ ವಾಕ್ಯಗಳು ಕೂಡ ಶಿವರಹಸ್ಯದಲ್ಲಿ ಹೇಳಲ್ಪಟ್ಟವುಗಳು. ಲಿಂಗವನ್ನು ಒಂದುಬಾರಿ ಪೂಜಿಸಿದರೆ ಗರ್ಭದಿಂದ ಹುಟ್ಟುವಿಕೆಯು ತಪ್ಪಿಹೋಗುವುದು. ಯಾವನು ಯಾವಾಗಲೂ ಶಿವಲಿಂಗವನ್ನಾರಾಧಿಸುವನೋ ಅವನು ಉತ್ತಮಗತಿಯನ್ನು ಪಡೆಯುತ್ತಾನೆ. ಬಾವಿ ಕೆರೆ ತೋಪು ಸತ್ರ ಮೊದಲಾದುವುಗಳನ್ನು ನಿರ್ಮಿಸುವುದರಿಂದ ಶಿವಗಣಾಧಿಪತ್ಯವೂ ಮೋಕ್ಷವೂ ಕೂಡ ಲಭಿಸುವುದಿಲ್ಲ. ಲಿಂಗಪೂಜೆಯಲ್ಲಿ ಆಸಕ್ತರಾದವರಿಗಾದರೂ ಪುನರ್ಜನ್ಮವೇ ಇರುವುದಿಲ್ಲ. ಎಂಬಿದು ಏಕಪಾದವೆಂಬ ಪುರಾಣದ ವಚನವು. ಅಗ್ನಿಹೋತ್ರಗಳೂ, ವೇದಾಧ್ಯಯನವೂ, ಬಹು ದಕ್ಷಿಣೆಯನ್ನು ಕೊಟ್ಟು ಮಾಡಿದ ಯಜ್ಞಗಳೂ, ಕೂಡ, ಶಿವಪೂಜೆಯ ಕೋಟಿಯಲ್ಲೊಂದಂಶಕ್ಕೂ ಸಮನಾಗವು. ಒಂದು ಕೋಟಿ ಗೋವುಗಳ ದಾನವನ್ನು ಮಾಡಿದರೆ ಯಾವಫಲವು ವಿಧಿಸಲ್ಪಟ್ಟದೆಯೋ ಅದು ಶಿವಲಿಂಗದಮೇಲೆ ಒಂದುಹೂವನ್ನಿಟ್ಟು ಪೂಜಿಸಿದ ಫಲದಲ್ಲಿ ಸಾವಿರದ ಒಂದು ಭಾಗವನ್ನೂ ತುಂಬಿಸಲಾರದು. ಯಾವನು ಸ್ವರ್ಣಮೇರುದಾನವನ್ನೂ ಬೆಳಸಿನಿಂದ ತುಂಬಿದ ಭೂಮಿಯ ದಾನವನ್ನೂ ಮಾಡುವನೋ,

ಹ್ಮತ್ವಮಗಮತ್ಪರಂ ‖೧೩೯‖ ಶ್ವೇತಃ ಕಯಾಪಿಯುಕ್ತ್ಯೈಶಂ ಸಂಪೂಜ್ಯಾಪ ಸುರೇಂದ್ರತಾಂ । ಪ್ರಾಪಾರ್ಯಮಾರ್ಕವೇದವೀಂ ಮರ್ಕಪುಷ್ಪ ಸಮರ್ಪಣಾತ್ ‖೧೪೦‖ ಅಕ್ಷತೈರರ್ಚಯಿತ್ವೇಂದುರ್ನಕ್ಷತ್ರಾಧೀಶತಾಮಗಾತ್ । ಶ್ರೀಪರ್ಣೇನಾರ್ಚಯಿತ್ವಾ ಶ್ರೀಶ್ಶೈತ್ವಮಾಪ್ತವತೀಪರಂ‖೧೪೧‖ ಕಿಮತ್ರ ಬಹುನೋಕ್ತೇನ ಚತುರ್ವರ್ಗಫಲೇಪ್ಸುಭಿಃ । ಕರ್ತವ್ಯಮರ್ಚನಂಸರ್ವೈಶ್ಶಿವಸ್ಯಪರಮಾತ್ಮನಃ ‖೧೪೨‖

ಇತಿ.. ...ಪಂಡಿತಾರಾಧ್ಯಚರಿತೆ ದೀಕ್ಷಾಪ್ರಕರಣೆ ಲಿಂಗಾರ್ಚನವಿಧಿ ಕಥನಂನಾಮ ಸಪ್ತಮೋಽಧ್ಯಾಯಃ.

---

ಆವನು ಲಿಂಗದಮೇಲೆ ಒಂದು ಹೂವನ್ನು ಧರಿಸಿದ ಫಲದಲ್ಲಿ ಸಾವಿರದೊಂದು ಭಾಗವನ್ನು ಸಹ ತುಂಬಿಸಲಾರನು ‖೧೩೮‖ ಮತ್ತು ವಿಷ್ಣುವು ಕಮಲದಿಂದ ಶಿವನನ್ನಾರಾಧಿಸಿ ತನ್ನ ಪದವಿಯನ್ನು ಪಡೆದನು. ಬ್ರಹ್ಮನು ತುಂಬೆಹೂವಿನಿಂದರ್ಚಿಸಿ ಉತ್ತಮವಾದ ಬ್ರಹ್ಮತ್ವವನ್ನು ಪಡೆಕೊಂಡನು ‖೧೩೯‖ ಶ್ವೇತನು ಒಂದಾನೊಂದು ಯುಕ್ತಿಯಿಂದ ಶಿವನನ್ನಾರಾಧಿಸಿ ದೇವೇಂದ್ರ ಪದವಿಯನ್ನು ಹೊಂದಿದನು. ಆರ್ಯಮನು ಯಕ್ಕದ ಹೂವಿನಿಂದ ಪೂಜಿಸಿ, ಸೂರ್ಯಪದವಿಯನ್ನು ಪಡೆದನು. ಚಂದ್ರನು ಅಕ್ಷತೆಗಳಿಂದ ಪೂಜಿಸಿ, ನಕ್ಷತ್ರಾಧಿಪತ್ಯವನ್ನು ಹೊಂದಿದನು. ಲಕ್ಷ್ಮಿಯು ತಾವರೆಯಿಂದ (ಅಥವಾ ಬಿಲ್ವದಿಂದ) ಅರ್ಚಿಸಿ, ಉತ್ತಮವಾದ ಸಂಪದ್ದೇವತಾತ್ವವನ್ನು ಪಡೆದಳು ‖೧೪೧‖ ಹೆಚ್ಚಾಗಿ ಹೇಳುವುದರಿಂದ ಫಲವೇನು ? ಚತುರ್ವಿಧ ಪುರುಷಾರ್ಥಗಳನ್ನಪೇಕ್ಷಿಸುವ ಸರ್ವರೂ ಪರಮಾತ್ಮನಾದ ಶಿವನ ಪೂಜೆಯನ್ನು ಮಾಡಬೇಕು. ‖೧೪೨‖

ಎಂಬಲ್ಲಿಗೆ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಎಂಬ ಕನ್ನಡ ಟಿಪ್ಪಣಿದಲ್ಲಿ ಲಿಂಗಾರ್ಚನ ವಿಧಿಯನ್ನು ವಿವರಿಸಿರುವ ೭ ನೆಯ ಅಧ್ಯಾಯವು ಮುಗಿದುದು.

---

# ಅಷ್ಟಮೋಽಧ್ಯಾಯಃ.

---

## (ಲಿಂಗಧಾರಣ ವಿಧಿಃ.)

ಅತಃಪರಂಪ್ರವಕ್ಷ್ಯಾಮಿ ಲಿಂಗಧಾರಣಮುತ್ತಮಂ.। ವೇದಾಗಮಪು ರಾಣೇಷುಕಥಿತಂ ಶ್ರುಣುತದ್ವಿಜಾಃ ॥೧॥ ಆದೌತಾವಚ್ಛ್ರುತಿಗಿರಃ ಪ್ರದ ರ್ಶ್ಯಂತೇಮಹೋನ್ನತಾಃ । ಯಾತೇರುದ್ರಶಿವಾತನೂ ರಘೋರಾಪಾಪಕಾಶಿ ನೀ ॥೨॥ ಇತೀಯಂವಾಗ್ಯಜುರ್ವೇದೆ ಶ್ರೀರುದ್ರೇದೃಶ್ಯತೆಸ್ಫುಟಂ । ಅ ರ್ಥೋಽಸ್ಯಾಃ ಕಥ್ಯತೇಽಸ್ಮಾಭಿಃ ಪೂರ್ವಾಚಾರ್ಯಾನುಸಾರತಃ ॥೩॥ ರು ದ್ದುಃಖಂದುಃಖಹೇತುರ್ವಾತಂದ್ರಾವಯುತಿನಃ ಪ್ರಭುಃ । ರುದ್ರಇತ್ಯುಚ್ಯತೆ ಸದ್ಭಿಃಶಿವತತ್ತ್ವಾರ್ಥವೇದಿಭಿಃ ॥೪॥ ಇತ್ಯುಕ್ತ್ಯಾಽಸಹದುಃಖೌಘಹೇತು ಸಂಸಾರನಾಶಕಃ । ಮಹಾದೇವಃ ಕೃಪಾಸಿಂಧೂ ರುದ್ರಶಬ್ದೇನಕಥ್ಯತೆ ॥೫॥ ಹೇರುದ್ರನತಸಂಸಾರ ವಿದ್ರಾವಣಮಹೇಶ್ವರ । ಅಘೋರಾಘೋರ

---

## ೮ ನೆಯ ಅಧ್ಯಾಯವು.

---

## ( ಲಿಂಗಧಾರಣವಿಧಾನವು. )

ಎಲೈ ದ್ವಿಜರೆ ! ಇನ್ನು ಮುಂದೆ ವೇದಾಗಮ ಪುರಾಣಗಳಲ್ಲಿ ಹೇಳಲ್ಪಟ್ಟಿರುವ ಉತ್ತಮವಾದ ಲಿಂಗಧಾರಣ ವಿಷಯುವನ್ನು ಹೇಳುತ್ತೇನೆ ಕೇಳಿರಿ:—ಮೊದಲು ಅ ತ್ಯುತ್ಕೃಷ್ಟಗಳಾದ ವೇದವಚನಗಳನ್ನು ತೋರಿಸುತ್ತೇನೆ— " ಯಾತೆ......... ಕಾಶಿನೀ " ಎಂಬ ಈ ವಚನವು ಯಜುರ್ವೇದದಲ್ಲಿ ಶ್ರೀರುದ್ರದೊಳಗೆ ಕಾಣಲ್ಪಡುತ್ತಿದೆ. ಇದಕ್ಕೆ ನಾವು ಪೂರ್ವಾಚಾರ್ಯ ಕ್ರಮವನ್ನನುಸರಿಸಿ ಅರ್ಥವನ್ನು ಹೇಳುತ್ತೇವೆ. ನ ಮ್ಮ ಸ್ವಾಮಿಯು, ರುತ್-ದುಃಖವನ್ನು ಅಥವಾ ದುಃಖಕಾರಣವನ್ನು, ದ್ರಾವಯತಿ- ಓಡಿಸುತ್ತಾನೆ. ಆದುಕಾರಣ, ಶಿವತತ್ತ್ವವೇತೃಗಳು ಆತನನ್ನು ರುದ್ರನೆಂದು ಹೇಳು ತ್ತಾರೆ ॥೪॥ ಎಂಬೀವಚನದಿಂದ ದುಸ್ಸಹವಾದ ದುಃಖಕ್ಕೆ ಬೀಜವಾದ ಸಂಸಾರವನ್ನು ನಾಶಪಡಿಸುವ ಕೃಪಾಸಮುದ್ರನಾದ ಮಹಾದೇವನೇ ರುದ್ರನೆಂದು ಕರೆಯಲ್ಪಡುತ್ತಾ ನೆ ॥೫॥ ಹೇರುದ್ರ-ನಮಸ್ಕರಿಸಿದವರ ಜನನ ಮರಣಾತ್ಮಕ ಸಂಸಾರವನ್ನು ಓಡಿಸು

ರೂಪಾಯಾಸ್ತನೋರನ್ಯಾತಿಶೋಭನಾ ॥೬॥ ರುದ್ರೋವಾವಿಷಯಾದಿತಿ
ಶ್ರುತೌಸಮ್ಯಗುದೀರಿತಾ । ಸಾಹಿಶ್ರುತಿಸ್ಸಂಹಿತಾಯಾಮೇವಮಾಮ್ನಾಯತಿ
ಸ್ಫುಟಂ ॥೭॥ “ರುದ್ರೋವಾವಿಷಯದಗ್ನಿಸ್ತಸ್ಯೈತೇತನುವಾಘೋರಾ
ನ್ಯಾಶಿವಾನ್ಯೇತಿ” ಶಿವಾಶಾಂತಾಸ್ವಭಕ್ತಾನಾಂ ಶಿವತ್ವಪ್ರತಿಪಾದಿಕಾ । ಅ
ರ್ಥೋಯಂಹರದತ್ತಾರ್ಯೈರುಕ್ತಸ್ತಾತ್ಪರ್ಯಸಂಗ್ರಹೇ ॥೮॥ “ಘೋರಾ
ಶಿವಾಚಭಗವನ್ನುಭಯೀತನುಸ್ತೇ ಘೋರಾಭಿಷಜ್ಯತಿ ಭವಾರ್ತಸಮುಪಾಸ್ಯ
ಮಾನಾ । ಅನ್ಯಾಭಿಷಗ್ಜನಕೃತಾಂ ರುಜಮೀಕ್ಷಮಾಣಾ ದೃಷ್ಟ್ವೈವದದಾತಿ
ಶಿವತಾಮಶಿವಾತ್ಮನೋಪಿ” ಇತಿ. ಯೈವಂವಿಶಿಷ್ಟಾತನೂಸ್ತೇತವಲಿಂಗ
ಸ್ವರೂಪಿಣೀ। ಮೂರ್ತಿಶ್ಶಿವಾಽಮೂರ್ತಮೂರ್ತಕರ್ತೃ ಕರ್ಮಾತ್ಮಿಕಾ
ಸ್ತಿಸಾ ॥೯॥ ಯಥಾಪುರತ್ರಯಂದಗ್ಧಂ ಯುಗಪತ್ಪುರವೈರಿಣಾ । ತಥಾ
ಮಲತ್ರಯಂದಗ್ಧಂಯುಗಪದ್ದೇಶಿಕಾತ್ಮನಾ ॥೧೦॥ ಇತಿ ವಾಕ್ಯಾದ್ವೀರಶೈ
ವದೀಕ್ಷಾದಗ್ಧಮಲಾದಿಷು । ಅಪಾಪೇಷುವಿಶುದ್ಧೇಷು ನಿತ್ಯಾನಿತ್ಯವಿವೇಕಿ
ಷು ॥೧೧॥ ಶಮಾದಿಗುಣಯುಕ್ತೇಷು ತ್ವದ್ಭಕ್ತೇಷ್ವೇವಕಾಶಿನೀ । ಪ್ರ
ಕಾಶಿನ್ಯವಿನಾಭಾವಸಂಬಂಧಾತ್ಸರ್ವದೇತಿಹಿ ॥೧೨॥ ಪ್ರೋಕ್ತಃ ಪದಾರ್ಥೋಽ
ಭಿಪ್ರಾಯಃ ಪ್ರವ್ಯಕ್ತಮಧುನೋಚ್ಯತೇ । ತ್ವದ್ಭಕ್ತಾಭುವಿಯೇಸಂತಿ

---

ವ ಮಹೇಶ್ವರನೇ ! ಅಘೋರಾ—ಭೀಕರರೂಪಿನದಲ್ಲದೆ ಮತ್ತೊಂದು ಮಂಗಳಮಯವಾ
ದ, ( ಎಂದರೆ “ರುದ್ರೋವಾ............ಶಿವಾನ್ಯಾ” ಎಂಬ ಸಂಹಿತಾವಚನದಲ್ಲಿ ಶಿ
ವನಿಗೆ—ಭೀಕರರೂಪ ಮತ್ತು ಭಕ್ತರಿಗೆ ಮಂಗಳವನ್ನುಂಟುಮಾಡುವ ಶಾಂತರೂಪ
ವೆಂದು ಎರಡು ತೆರದ ರೂಪಿನ ಶರೀರಗಳಿರುವುವೆಂದು ಹೇಳಲ್ಪಟ್ಟಿರುವುದು ) ಇದೇ ಅ
ಭಿಪ್ರಾಯವನ್ನೇ ಹರದತ್ತಾಚಾರ್ಯರು ತಮ್ಮ ತಾತ್ಪರ್ಯಸಂಗ್ರಹದಲ್ಲಿ “ಘೋರಾ......
.........ಶಿವಾತ್ಮನೋಪಿ” ಎಂಬ ಶ್ಲೋಕದೊಳಗೆ ಪ್ರತಿಪಾದಿಸಿರುವರು. ) ಇಂತಹ,
ತೇ—ನಿನ್ನ, ಶಿವಾ—ಅಮೂರ್ತ ಮೂರ್ತ ಕರ್ತೃ ಕರ್ಮ ಸಾದಾಖ್ಯಮಯವಾದ, ತನೂಃ—
ಲಿಂಗರೂಪವಾದ ಶರೀರವು ॥೯॥ ಅಪಾಪಕಾಶಿನೀ—ಅಪಾಪ—ಪರಶಿವನಿಂದ ಏಕಕಾಲ
ದಲ್ಲಿ ತ್ರಿಪುರಗಳು ಹೇಗೆ ಸುಡಲ್ಪಟ್ಟುವೋ; ಹಾಗೆ ಗುರೂತ್ತಮನಿಂದ ಮಾಡಲ್ಪಟ್ಟ ಶಿ
ವದೀಕ್ಷಾಸಂಸ್ಕಾರದಿಂದ ದಗ್ಧವಾದ ಮಲತ್ರಯವುಳ್ಳವರಾದ ಕಾರಣವೇ ವಿಶುದ್ಧರೂ ನಿ
ತ್ಯಾನಿತ್ಯ ಪರಿಜ್ಞಾನವುಳ್ಳವರೂ ಶಮದಮಾದಿಗುಣಸಂಪನ್ನರೂ ಆದ ನಿನ್ನ ಭಕ್ತರುಗಳಲ್ಲಿ
ಯೇ, ಕಾಶಿನೀ—ಸದಾ ಎಡೆಬಿಡದೆ ಪ್ರಕಾಶಿಸುತ್ತಿರುವುದು. ॥೧೨॥ ಹೀಗೆ ಆ ವಚನದ
ಪ್ರತಿಪದಾರ್ಥವನ್ನು ಹೇಳಿದೆವು. ಇನ್ನು ಅದರ ತಾತ್ಪರ್ಯವನ್ನು ಸ್ಪಷ್ಟವಾಗಿ ಹೇಳುತ್ತೇನೆ.

ಸರ್ವದಾಲಿಂಗಧಾರಿಣಃ ||೧೩|| ತಏವಶಿಷ್ಟಾಃಪ್ರಸಿದ್ಧಾಃಅಪಾಪಾಶ್ಚೇತಿ ಕೀರ್ತಿತಾಃ | ಅಶಿಷ್ಟಾಅಪ್ರಸಿದ್ಧಾಶ್ಚಸಪಾಪಾಇತರೇಸ್ಮೃತಾಃ ||೧೪|| ಇಮಮರ್ಥಂಶ್ರುತಿಸ್ಮೃತ್ಯೋಸ್ಸಾರಭೂತೋಮಹಾಂಸ್ತವಃ | ಅತಿಸ್ಪಷ್ಟಂಕಥಯತಿತದ್ವಾಕ್ಯಂಚಪ್ರದರ್ಶ್ಯತೇ ||೧೫|| ,, ಅಪಾಪಕಾಶೀತಿವಪುಶ್ಶ್ರುತಂತೇಶಿಷ್ಟಾಃ ಪ್ರಸಿದ್ಧಾಭಗವನ್ನಪಾಪಾಃ| ಅತಸ್ತ್ವದೀಯಾನಪಹಾಯಭಕ್ತಾನನ್ಯಾನಶಿಷ್ಟಾಇತಿನಿಶ್ಚಿನೋಮಿ ,, ಇತಿ. ಅಯಂಮೇಹಸ್ತೋಭಗವಾನಯಂಮೇಭಗವತ್ತರಃ | ಅಯಂಮೇವಿಶ್ವಭೇಷಜೋಅಯಂಶಿವಾಭಿಮರ್ಶನಃ ||೧೬|| ಇತಿಋಗ್ವೇದವಾಕ್ಯಾನಿಸಂತಿಖ್ಯಾತಾನಿಯಾನಿಹಿ | ಅಯಂಮಾತಾಅಯಂಪಿತಾಅಯಂಜೀವಾತುರಾಗಮತ್ ||೧೭|| ಇದಂತವಪ್ರಸರ್ಪಣಂಸುಬಂಧವೇಹಿನಿರೇಹಿ|ಇತ್ಯನ್ಯಾನಿತದೀಯಾನಿಸಂತಿವಾಕ್ಯಾನಿಯಾನಿಹಿ ||೧೮|| ತೈಸ್ಸರ್ವೈರುಭಯೈರ್ವಾಕ್ಯೈಃಕಥ್ಯತೇ ಲಿಂಗಧಾರಣಂ | ಕರ್ತವ್ಯಮುಖಿಲೈರ್ನಿತ್ಯಂಮುಕ್ತಿಕಾಮೈರಿತಿಸ್ಫುಟಂ ||೧೯|| ವಾಕ್ಯಾನಾಮರ್ಥಏತೇಷಾಂಕಥ್ಯತೇಹ್ಯಾದ್ಯಸಮ್ಮತಃ | ಅಯಂಮೇಹಸ್ತೋಭಗವಾನಸೌಮಮಕರಶ್ಶುಭಃ ||೨೦|| ಭಗ

---

ಸದಾಲಿಂಗವನ್ನು ಧರಿಸಿಕೊಂಡಿರುವ ನಿನ್ನ ಭಕ್ತರು ಭೂಮಿಯಲ್ಲಿ ಯಾರಿರುವರೂ ಅವರೇ ಸತ್ಪುರುಷರು, ಪ್ರಖ್ಯಾತರು, ಪಾಪರಹಿತರು, ಎಂದು ಹೇಳಲ್ಪಟ್ಟವರು. ಉಳಿದವರುಗಳು ಅಸಾಧುಗಳು, ಅಪ್ರಸಿದ್ಧರು, ಪಾಪಸಹಿತರು, ಎಂದು ಸ್ಮರಿಸಲ್ಪಟ್ಟಿರುವರು || ೧೪ || ಶ್ರುತಿಸ್ಮೃತಿಗಳ ಸಾರವಾಗಿರುವ ಮಹಾಸ್ತವವು " ಅಪಾಪ... ನಿಶ್ಚಿನೋಮಿ,, ಎಂಬುವ ಶ್ಲೋಕದಲ್ಲಿ (ನಿನ್ನ ಶರೀರವು (ಲಿಂಗವು) ಪಾಪರಹಿತರಾದ ಭಕ್ತರಲ್ಲಿ ಪ್ರಕಾಶಿಸುವುದು, ಅದನ್ನು ಧರಿಸಿದವರು ಸಜ್ಜನರು, ಪ್ರಸಿದ್ಧರು, ಪಾಪರಹಿತರು, ಈ ಕಾರಣದಿಂದ ನಿನ್ನ ಭಕ್ತರನ್ನು ಹೊರತು ಉಳಿದವರನ್ನು ಅಸತ್ಪುರುಷರೆಂದು ನಿಶ್ಚೈಸುವೆನು) ಎಂಬಭಿಪ್ರಾಯವನ್ನು ಸ್ಫುಟವಾಗಿ ಹೇಳಿರುತ್ತದೆ. ಅಯಂಮೇಹಸ್ತೋಭಗವಾನ್......ಅಯಂಶಿವಾಭಿಮರ್ಶನಃ, ಎಂತಲೂ, ಅಯಂಮಾತಾ.........ನಿರೇಹಿ, ಎಂತಲೂ ಯಾವಋಗ್ವೇದ ವಾಕ್ಯಗಳಿರುವುವೋ, ಆ ಎರಡುವಚನಗಳಿಂದೆಲ್ಲಾ ಮೋಕ್ಷಾಪೇಕ್ಷಿಗಳು ಲಿಂಗಧಾರಣವನ್ನು ಮಾಡಿಕೊಳ್ಳಬೇಕೆಂಬುದು ಸ್ಪಷ್ಟವಾಗಿ ಹೇಳಲ್ಪಡುತ್ತದೆ || ೧೯ || ಈ ವೇದವಚನಗಳಿಗೆ ಪೂರ್ವಾಚಾರ್ಯರ ಅಭಿಪ್ರಾಯವನ್ನನುಸರಿಸಿ ಅರ್ಥವನ್ನು ಹೇಳುತ್ತೇನೆ.—ಮೇ-ನನ್ನ, ಅಯಂಹಸ್ತಃ-ಈ ಕರವು, ಭಗವಾನ್-ಐಶ್ವರ್ಯ ಬಲಮೊದಲಾದಗುಣಗಳಿಂದ ಕೂಡಿರುವ ಕಾರಣ, ಪೂಜ್ಯವಾದದ್ದು. (ಸಂಪೂರ್ಣವಾದ ಐಶ್ವರ್ಯ, ಪರಾಕ್ರಮ, ಕೀರ್ತಿ, ಲಕ್ಷ್ಮಿ, ಜ್ಞಾ

ರೂಪಾಯಾಸ್ತನೇಃಶರೀರನ್ಯಾತಿಶೋಭನಾ ॥೬॥ ರುದ್ರೋ(ವಾಪಿಷಯದಿತಿ ಶ್ರುತಾಸಮ್ಯಗುದೀರಿತಾ । ಸಾಹಿಶ್ರುತಿಸ್ಸಂಹಿತಾಯಾಮೇವಮಾಮ್ನಾಯತಿ ಸ್ಫುಟಂ ॥೭॥ "ರುದ್ರೋ(ವಾಪಿಷಯದಗ್ನಿಸ್ತಸ್ಯೈತೇತನುವಾಘೋರಾ ನ್ಯಾಶಿವಾನ್ಯೇತಿ" ಶಿವಾಶಾಂತಾಸ್ವಭಕ್ತಾನಾಂ ಶಿವತ್ವಪ್ರತಿಪಾದಿಕಾ । ಅ ರ್ಥೋ(ಯಂಹರದತ್ತಾರ್ಯೈರುಕ್ತಸ್ತಾತ್ಪರ್ಯಸಂಗ್ರಹೇ ॥೮॥ "ಘೋರಾ ಶಿವಾಚಭಗವನ್ನುಭಯಿತಾತನುಸ್ತೇ ಘೋರಾಭಿಷಜ್ಯತಿ ಭವಾರ್ತಿಮುಪಾಸ್ಯ ಮಾನಾ । ಅನ್ಯಾಭಿಷಗ್ಜನಕೃತಾಂ ರುಜಮೀಕ್ಷಮಾಣಾ ದೃಷ್ಟ್ಯೈವದದಾತಿ ಶಿವತಾಮಶಿವಾತ್ಮನೋಪಿ" ಇತಿ. ಯ್ಯೈವಂವಿಶಿಷ್ಟಾತೇನಾಸ್ತೇ(ತನುಲಿಂಗ ಸ್ವರೂಪಿಣೀ। ಮೂರ್ತಿಶ್ಶಿವಾಽಮೂರ್ತಮೂರ್ತ ಕರ್ತೃ ಕರ್ಮಾತ್ಮಿಕಾ ಸ್ತಿಸಾ ॥೯॥ ಯಥಾಪುರತ್ರಯಂದಗ್ಧಂ ಯುಗಪತ್ತ್ವರವೈರಿಣಾ । ತಥಾ ಮಲತ್ರಯಂದಗ್ಧಂಯುಗನದ್ದೇಶಿಕಾತ್ಮನಾ ॥೧೦॥ ಇತಿ ವಾಕ್ಯಾದ್ವೀರಶೈ ವದೀಕ್ಷಾದಗ್ಧಮಲಾದಿಷು । ಅಪಾಪೇಷುವಿಶುದ್ಧೇಷು ನಿತ್ಯಾನಿತ್ಯವಿವೇಕಿ ಷು ॥೧೧॥ ಶಮಾದಿಗುಣಯುಕ್ತೇಷು ತ್ವದ್ಭಕ್ತೇಷ್ವೇವಕಾಶಿನೀ । ಪ್ರ ಕಾಶಿನ್ಯವಿನಾಭಾವಸಂಬಂಧಾತ್ಸರ್ವದೇತಿಹಿ॥೧೨॥ಪ್ರೋಕ್ತಃ ಪದಾರ್ಥೋಽ ಭಿಪ್ರಾಯಃ ಪ್ರವ್ಯಕ್ತಮಧುನೋಚ್ಯತೇ । ತ್ವದ್ಭಕ್ತಾಭುವಿಯೇಸಂತಿ

---

ವ ಮಹೇಶ್ವರನೇ ! ಅಘೋರಾ–ಭೀಕರರೂಪವಲ್ಲದ ಮತ್ತೊಂದು ಮಂಗಳಮಯವಾದ, ( ಎಂದರೆ "ರುದ್ರೋ(ವಾ............ಶಿವಾನ್ಯಾ" ಎಂಬ ಸಂಹಿತಾವಚನದಲ್ಲಿ ಶಿವನಿಗೆ–ಭೀಕರರೂಪ ಮತ್ತು ಭಕ್ತರಿಗೆ ಮಂಗಳವನ್ನುಂಟುಮಾಡುವ ಶಾಂತರೂಪವೆಂದು ಎರಡು ತೆರದ ರೂಪಿನ ಶರೀರಗಳಿರುವುವೆಂದು ಹೇಳಲ್ಪಟ್ಟಿರುವುದು ) ಇದೇ ಅಭಿಪ್ರಾಯವನ್ನೇ ಹರದತ್ತಾಚಾರ್ಯರು ತಮ್ಮ ತಾತ್ಪರ್ಯಸಂಗ್ರಹದಲ್ಲಿ "ಘೋರಾ.............ಶಿವಾತ್ಮನೋಪಿ" ಎಂಬ ಶ್ಲೋಕದೊಳಗೆ ಪ್ರತಿಪಾದಿಸಿರುವರು. ) ಇಂತಹ, ತೆ–ನಿನ್ನ, ಶಿವಾ–ಅಮೂರ್ತ ಮೂರ್ತ ಕರ್ತೃ ಕರ್ಮ ಸಾದಾಖ್ಯರೂಪವಾದ, ತನೂಃ–ಲಿಂಗರೂಪವಾದ ಶರೀರವು ॥೯॥ ಅಪಾಪಕಾಶಿನೀ—ಅಪಾಪ–ಪರಶಿವನಿಂದ ಏಕಕಾಲದಲ್ಲಿ ತ್ರಿಪುರಗಳು ಹೇಗೆ ಸುಡಲ್ಪಟ್ಟುವೋ; ಹಾಗೆ ಗುರೂತ್ತಮನಿಂದ ಮಾಡಲ್ಪಟ್ಟ ಶಿವದೀಕ್ಷಾಸಂಸ್ಕಾರದಿಂದ ದಗ್ಧವಾದ ಮಲತ್ರಯವುಳ್ಳವರಾದ ಕಾರಣವೇ ವಿಶುದ್ಧರೂ ನಿತ್ಯಾನಿತ್ಯ ಪರಿಜ್ಞಾನವುಳ್ಳವರೂ ಶಮದಮಾದಿಗುಣಸಂಪನ್ನರೂ ಆದ ನಿನ್ನ ಭಕ್ತರುಗಳಲ್ಲಿಯೇ, ಕಾಶಿನೀ–ಸದಾ ಎಡೆಬಿಡದೆ ಪ್ರಕಾಶಿಸುತ್ತಿರುವುದು. ॥೧೨॥ ಹೀಗೆ ಆ ವಚನದ ಪ್ರತಿಪದಾರ್ಥವನ್ನು ಹೇಳಿದೆವು, ಇನ್ನು ಅದರ ತಾತ್ಪರ್ಯವನ್ನು ಸ್ಪಷ್ಟವಾಗಿ ಹೇಳುತ್ತೇನೆ.

ಸರ್ವದಾಲಿಂಗಧಾರಿಣಃ ||೧೩|| ತಏವಶಿಷ್ಟಾಃಪ್ರಸಿದ್ಧಾಃಅಪಾಪಾಶ್ಚೇತಿ ಕೀರ್ತಿತಾಃ | ಅಶಿಷ್ಟಾಅಪ್ರಸಿದ್ಧಾಶ್ಚಸಪಾಪಾಇತರೇಸ್ಮೃತಾಃ ||೧೪|| ಇಮಮರ್ಥಂಶ್ರುತಿಸ್ಮೃತ್ಯೋಸ್ಸಾರಭೂತೋಮಹಾಂಸ್ತವಃ | ಅತಿಸ್ಪಷ್ಟಂಕಥಯತಿತದ್ವಾಕ್ಯಂಚಪ್ರದರ್ಶ್ಯತೇ ||೧೫|| ,, ಅಪಾಪಕಾಶೀತಿವಪುಶ್ಶ್ರುತಂತೇಶಿಷ್ಟಾಃ ಪ್ರಸಿದ್ಧಾಭಗವನ್ನಪಾಪಾಃ| ಅತಸ್ತ್ವದೀಯಾನಪಹಾಯಭಕ್ತಾನನ್ಯಾನಶಿಷ್ಟಾಇತಿನಿಶ್ಚಿನೋಮಿ ,, ಇತಿ. ಅಯಂಮೇಹಸ್ತೋಭಗವಾನಯಂಮೇಭಗವತ್ತರಃ | ಅಯಂಮೇವಿಶ್ವಭೇಷಜೋಅಯಂಶಿವಾಭಿಮರ್ಶನಃ ||೧೬|| ಇತಿಋಗ್ವೇದವಾಕ್ಯಾನಿಸಂತಿಖ್ಯಾತಾನಿಯಾನಿಹಿ | ಅಯಂಮಾತಾಅಯಂಪಿತಾಅಯಂಜೀವಾತುರಾಗಮತ್ ||೧೭|| ಇದಂತವಪ್ರಸರ್ಪಣಂಸುಬಂಧವೇಹಿನಿರೇಹಿ|ಇತ್ಯನ್ಯಾನಿತದೀಯಾನಿಸಂತಿವಾಕ್ಯಾನಿಯಾನಿಹಿ ||೧೮|| ತೈಸ್ಸರ್ವೈರುಭಯೈರ್ವಾಕ್ಯೈಃಕಥ್ಯತೇ ಲಿಂಗಧಾರಣಂ | ಕರ್ತವ್ಯಮಖಿಲೈರ್ನಿತ್ಯಂಮುಕ್ತಿಕಾಮೈರಿತಿಸ್ಫುಟಂ ||೧೯|| ವಾಕ್ಯಾನಾಮರ್ಥಏತೇಷಾಂಕಥ್ಯತೇಹ್ಯಾದ್ಯಸಂಮತಃ | ಅಯಂಮೇಹಸ್ತೋಭಗವಾನಸೌಮಮಕರಶ್ಯಭಃ ||೨೦|| ಭಗ

---

ಸದಾಲಿಂಗವನ್ನು ಧರಿಸಿಕೊಂಡಿರುವ ನಿನ್ನ ಭಕ್ತರು ಭೂಮಿಯಲ್ಲಿ ಯಾರಿರುವರೋ ಅವರೇ ಸತ್ಪುರುಷರು, ಪ್ರಖ್ಯಾತರು, ಪಾಪರಹಿತರು, ಎಂದು ಹೇಳಲ್ಪಟ್ಟವರು. ಉಳಿದವರುಗಳು ಅಸಾಧುಗಳು, ಅಪ್ರಸಿದ್ಧರು, ಪಾಪಸಹಿತರು, ಎಂದು ಸ್ಮರಿಸಲ್ಪಟ್ಟಿರುವರು || ೧೪ || ಶ್ರುತಿಸ್ಮೃತಿಗಳ ಸಾರವಾಗಿರುವ ಮಹಾಸ್ತವವು " ಅಪಾಪ... ನಿಶ್ಚಿನೋಮಿ,, ಎಂಬುವ ಶ್ಲೋಕದಲ್ಲಿ (ನಿನ್ನ ಶರೀರವು (ಲಿಂಗವು) ಪಾಪರಹಿತರಾದ ಭಕ್ತರಲ್ಲಿ ಪ್ರಕಾಶಿಸುವುದು, ಅದನ್ನು ಧರಿಸಿದವರು ಸಜ್ಜನರು, ಪ್ರಸಿದ್ಧರು, ಪಾಪರಹಿತರು, ಈ ಕಾರಣದಿಂದ ನಿನ್ನ ಭಕ್ತರನ್ನು ಹೊರತು ಉಳಿದವರನ್ನು ಅಸತ್ಪುರುಷರೆಂದು ನಿಶ್ಚೈಸುವೆನು) ಎಂಬಭಿಪ್ರಾಯವನ್ನು ಸ್ಫುಟವಾಗಿ ಹೇಳಿರುತ್ತದೆ. ಅಯಂಮೇಹಸ್ತೋಭಗವಾನ್......ಅಯಂಶಿವಾಭಿಮರ್ಶನಃ, ಎಂತಲೂ, ಅಯಂಮಾತಾ........ನಿರೇಹಿ, ಎಂತಲೂ ಯಾವಋಗ್ವೇದ ವಾಕ್ಯಗಳಿರುವುವೋ, ಆ ಎರಡುವಚನಗಳಿಂದೆಲ್ಲಾ ಮೋಕ್ಷಾಪೇಕ್ಷಿಗಳು ಲಿಂಗಧಾರಣವನ್ನು ಮಾಡಿಕೊಳ್ಳಬೇಕೆಂಬುದು ಸ್ಪಷ್ಟವಾಗಿ ಹೇಳಲ್ಪಡುತ್ತದೆ || ೧೯ || ಈ ವೇದವಚನಗಳಿಗೆ ಪೂರ್ವಾಚಾರ್ಯರ ಅಭಿಪ್ರಾಯವನ್ನನುಸರಿಸಿ ಅರ್ಥವನ್ನು ಹೇಳುತ್ತೇನೆ.—ಮೇ-ನನ್ನ, ಅಯಂಹಸ್ತಃ-ಈ ಕರವು, ಭಗವಾನ್-ಐಶ್ವರ್ಯ ಬಲವೊದಲಾದಗುಣಗಳಿಂದ ಕೂಡಿರುವ ಕಾರಣ, ಪೂಜ್ಯವಾದದ್ದು. (ಸಂಪೂರ್ಣವಾದ ಐಶ್ವರ್ಯ, ಪರಾಕ್ರಮ, ಕೀರ್ತಿ, ಲಕ್ಷ್ಮಿ, ಜ್ಞಾ

ಸ್ಥಾಸುಸರ್ವದಾ । ಶ್ರೀಲಿಂಗಧಾರಣಂಕುರ್ಯಾದ್ದೇವಿನಿತ್ಯಂಮಮಪ್ರಿಯಃ ॥೩೮॥ ಕಾಯಶುದ್ಧಿಶ್ಚಾತ್ಮಶುದ್ಧಿಶ್ಚಾಂಗನ್ಯಾಸಃಕರಸ್ಯಚ । ಸರ್ವಶುದ್ಧಿರ್ಭವೇನ್ನಿತ್ಯಂಲಿಂಗಧಾರಣಮಾತ್ರತಃ॥೩೯॥ ನಾಭೇರಧೋಲಿಂಗಧಾರೀಪಾಪೇನಾಥಸಯುಜ್ಯತೆ । ನಾಭ್ಯೂರ್ಧ್ವೇಲಿಂಗಧಾರೀತುಸೌಭಾಗ್ಯಜ್ಞಾನವರ್ಧನಃ ॥೪೦॥ ಅಪವರ್ಗೇಚ್ಛುರೀಶಾನಂಗಳೇಭಕ್ತಿಪರಾಯಣಃ । ಈಶ್ವರೇಣಾವಿನಾಭಾವಸಂಬಂಧಂಕರ್ತುಮಾತ್ಮನಃ ॥೪೧॥ ಮೂರ್ಧ್ನಿವಾಥಾರಯೇಲ್ಲಿಂಗಂನಕದಾಚಿದ್ವಿಯೋಜಯೇತ್ । ಈಶಾನನಿತ್ಯಸಂಯೋಗಪರಯಾನಿಜನಿಷ್ಠಯಾ ॥೪೨॥ ವಕ್ತ್ರಾದಾಧಾರಯೇಲ್ಲಿಂಗಂಮತ್ಪ್ರಭಾವಂವಿಭಾವಯೇತ್ । ತಸ್ಮಿಂತ್ಸನ್ನಿಹಿತೆಕಿಂಚಿನ್ನೋಚ್ಛಿಷ್ಟಮಿತಿನಿಶ್ಚಿತಂ ॥೪೩॥ ಅಧಮಾಧಮಯುಕ್ತಾನಾಂಪಾಪಿನಾಂವ್ಯಭಿಚಾರಿಣಾಂ । ಯಮಲೋಕೋನವಿದ್ಯೇತಸದಾವೈಲಿಂಗಧಾರಿಣಾಂ ॥೪೪॥ ಭಕ್ತಸ್ಯಾಬಿಭ್ರತೋಲಿಂಗಂಯಾವತ್ಪ್ರಾಣವಿಧಾರಣಂ । ಶ್ವಮಾಂಸಭಕ್ಷಣಂತಾವದನ್ನೇನರಚಿತಂಭವೇತ್ ॥೪೫॥ ಪ್ರಾಣೇಶಂಲಿಂಗಮಾಕಲ್ಪ್ಯಯೋಭುಂಕ್ತೇಲಿಂಗವರ್ಜಿತಃ । ಸಶ್ವಮಾಂಸಂಸರುಧಿರಂಸಾದರಂಭಕ್ಷಿತೋಭವೇತ್ ॥೪೬॥ ಯಥಾ

---

ಯಲ್ಲಿ, ಶಿವಲಿಂಗವನ್ನು ಸಕಲಾವಸ್ಥೆಗಳಲ್ಲೂ ಸದಾಧರಿಸಿರಬೇಕು ॥೩೮॥ ಲಿಂಗಧಾರಣವನ್ನು ಮಾಡಿಕೊಂಡಮಾತ್ರದಿಂದ ದೇಹಶುದ್ಧಿ, ಆತ್ಮಶುದ್ಧಿ, ಮೊದಲಾದ ಸರ್ವಶುದ್ಧಿಗಳೂ ಕರನ್ಯಾಸಗಳೂ ಸಹ ಆಗುವುವು ॥ ೩೯ ॥ ಹೊಕ್ಕುಳಿಂದ ಕೆಳಗೆ ಲಿಂಗವನ್ನು ಧರಿಸಿದವನು ಪಾಪಯುಕ್ತನಾಗುತ್ತಾನೆ. ಹೊಕ್ಕುಳಿಂದ ಮೇಲೆ ಲಿಂಗವನ್ನು ಧರಿಸಿದವನು ಐಶ್ವರ್ಯಜ್ಞಾನಗಳ ಅಭಿವೃದ್ಧಿಯುಳ್ಳವನಾಗುವನು ॥ ೪೦ ॥ ಮುಕ್ತಿಯನ್ನಪೇಕ್ಷಿಸುವವನು ತನಗೆ ಈಶ್ವರನೊಡನೆ ಎಡೆಬಿಡದ ಸಂಬಂಧವನ್ನು ಕಲ್ಪಿಸುವುದಕ್ಕಾಗಿ, ಭಕ್ತಿಯುಕ್ತನಾಗಿ, ಲಿಂಗವನ್ನು ಕೊರಳಿನಲ್ಲಿ ಅಥವಾ ಮಸ್ತಕದಲ್ಲಿ ಧರಿಸಬೇಕು. ಅದನ್ನು ಯಾವಾಗಲೂ ಅಗಲಿಸಬಾರದು. ಶಿವೈಕಾಂತಿಕವಾದ ನಿಜಭಕ್ತಿಯಿಂದ ನನ್ನ ಲಿಂಗವನ್ನು ಮುಖದಲ್ಲಾಗಲಿ ಧರಿಸಬೇಕು. ನನ್ನ ಮಹಿಮೆಯನ್ನು ಪರಿಭಾವಿಸಬೇಕು. ಆ ಲಿಂಗವು ತನ್ನಬಳಿಯುಲ್ಲಿರುವಾಗ ಎಂಜಲು ಸ್ವಲ್ಪವೂ ಇಲ್ಲವೆಂಬುದು ನಿಶ್ಚಯವು ॥ ೪೩ ॥ ಪರಮನೀಚರೊಡನೆ ಕೂಡಿರುವ ವ್ಯಭಿಚಾರಿಗಳಾದ ಪಾಪಿಗಳು ಸದಾ ಲಿಂಗಧಾರಿಗಳಾಗಿದ್ದರೆ ಅವರಿಗೆ ಯಮಲೋಕವಿಲ್ಲ ॥ ೪೪ ॥ ಪ್ರಾಣವಿಯೋಗವಾಗುವವರೆಗೂ ಲಿಂಗವನ್ನು ಧರಿಸಿಕೊಳ್ಳದಿರುವ ಭಕ್ತನು ಅನ್ನರೂಪದಿಂದ ನಾಯಿಮಾಂಸಭಕ್ಷಣವನ್ನು ಮಾಡಿದವನಾಗುವನು ॥ ೪೫ ॥ ಪ್ರಾಣಸ್ವರೂಪನಾದ ಶಿವನನ್ನೇ ಲಿಂಗವನ್ನಾಗಿಕಲ್ಪಿಸಿ ಬಹಿರ್ಲಿಂಗಧಾರಣವಿಲ್ಲದೆ, ಯಾ

ಯೋಽಗ್ನಿಸಮಾವೇಶಾನ್ನಾಯೋಽಭವತಿಕೇವಲಂ। ತಥೈವಮುಮಸಾನ್ನಿಧ್ಯಾನ್ನತೇಪ್ರಕೃತಿಮಾನುಷಾಃ ॥೪೭॥ ಬ್ರಹ್ಮವಿಷ್ಣುಸುರೇಶಾದಿದೇವತಾಃ ಪರಯಾಮುದಾ । ಧಾರಯಂತ್ಯಳಿಕಾಗ್ರೇಷುಶಿವಲಿಂಗಂತುಸಾದರಂ॥೪೮ ವಿನಿರ್ಭಿದ್ಯತಥಾಗಾತ್ರೇವಿವರೇಲೋಹಪಾತ್ರಕೇ । ಶಿವಲಿಂಗಂವಿನಿಕ್ಷಿಪ್ಯ ಪೂಜಯಂತಿಹಿರಾಕ್ಷಸಾಃ ॥೪೯॥ ಕಂಠೇಷುಹರಕಂಠಾದಿಮುನಯೋಮನವಸ್ತಥಾ । ಸರ್ವದಾಶಿವಲಿಂಗಂತುಧಾರಯಂತಿಯಜಂತಿಚ ॥೫೦॥ ಇತಿ ವಾತುಲತಂತ್ರಾದ್ಯೈಃಕಥಿತಂಲಿಂಗಧಾರಣಂ । ಅತಃಕರ್ತವ್ಯಮೇವೈತದ್ವಿಜಾಃಸುರಾಲಿಂಗಧಾರಣಂ ॥೫೧॥ ಗರ್ಭಜನ್ಮಜರಾಮೃತ್ಯುಪ್ರಹಾಣಾಯಮುಮುಕ್ಷುಭಿಃ ।

ಇತಿ ಶ್ರೀಮಚ್ಛ್ಲೋಕಾರಾಧ್ಯಪಂಡಿತಾರಾಧ್ಯಚರಿತೇದೀಕ್ಷಾಪ್ರಕರಣೇ
ಲಿಂಗಧಾರಣಕಥನಂ ನಾಮಾಽಷ್ಟಮೋಽಧ್ಯಾಯಃ

---

ವನು ಭುಂಜಿಸುವನೋ ಅವನು ನಾಯುಮಾಂಸವನ್ನೂ ರಕ್ತವನ್ನೂ ಭುಂಜಿಸಿದವನಾಗುವನು ॥ ೪೬ ॥ ಕಬ್ಬಿಣವು ಬೆಂಕಿಯೊಡನೆ ಬೆರೆದನಂತರ ತಾನು ಸಾಮಾನ್ಯವಾದ ಕಬ್ಬಿಣಮಾತ್ರವಾಗಿ ಇಲ್ಲದಿರುವಂತೆ, ಮನುಷ್ಯರು ನನ್ನ ಸಾಮೀಪ್ಯವುಳ್ಳವರಾಗುವುದರಿಂದ ಸಾಮಾನ್ಯಪ್ರಾಕೃತ ಮನುಜರಾಗಿರುವುದಿಲ್ಲ, (ಎಂದರೆ ಲಿಂಗಸಾನ್ನಿಧ್ಯದಿಂದ ಅಪ್ರಾಕೃತರಾಗುವರು.) ॥ ೪೭ ॥ ಬ್ರಹ್ಮ ವಿಷ್ಣು ಇಂದ್ರ ಮೊದಲಾದ ದೇವತೆಗಳು ಸಂತೋಷದಿಂದ ಶಿವಲಿಂಗವನ್ನು ಹಣೆಯಮೇಲೆ ಪ್ರೀತಿಪೂರ್ವಕವಾಗಿ ಧರಿಸುತ್ತಾರೆ. ॥ ೪೮ ॥ ರಾಕ್ಷಸರು ತಮ್ಮ ದೇಹವನ್ನು ಸೀಳಿ ಆ ರಂಧ್ರದಲ್ಲಿ ಲೋಹದ ಪಾತ್ರೆಯನ್ನಿಟ್ಟು, ಅದರೊಳಗೆ ಶಿವಲಿಂಗವನ್ನಿರಿಸಿ ಪೂಜಿಸುವರು ॥ ೪೯ ॥ ಹರಕಂಠಮೊದಲಾದ ಋಷಿಗಳು ಮನುಗಳು ಸಹ ತಮ್ಮ ಕತ್ತುಗಳಲ್ಲಿ ಶಿವಲಿಂಗವನ್ನು ಸದಾ ಧರಿಸುತ್ತಾರೆ. ಮತ್ತು ಪೂಜಿಸುತ್ತಾರೆ ॥ ೫೦ ॥ ಹೀಗೆಂಬುದಾಗಿ ವಾತುಲಾಗಮ ಮೊದಲಾದುವುಗಳಿಂದ ಲಿಂಗಧಾರಣವು ಹೇಳಲ್ಪಟ್ಟಿರುವುದು. ಈ ಕಾರಣದಿಂದ ಎಲೆ ಬ್ರಾಹ್ಮಣರೆ ! ಮೋಕ್ಷಾಪೇಕ್ಷಿಗಳಾದವರು ಜನ್ಮಜರಾಮರಣಗಳನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಈ ಲಿಂಗಧಾರಣವನ್ನು ಮಾಡಿಕೊಳ್ಳಲೇಬೇಕು ॥ ೫೧ ॥

ಎಂದು ಪಂಡಿತಾರಾಧ್ಯರು ಹೇಳಿದರೆಂಬಲ್ಲಿಗೆ ಶ್ರೀಮಲ್ಲಿಕಾರ್ಜುನ
ಪಂಡಿತಾರಾಧ್ಯ ಚರಿತ್ರಕ್ಕೆ ಎಸ್, ಆರ್, ಕರಿಬಸವಶಾಸ್ತ್ರಿ
ರಚಿತವಾದ '' ಭಾವಮಂಜರಿ,, ಎಂಬ ಕನ್ನಡ ಟಿಪ್ಪ
ಣದಲ್ಲಿ ಲಿಂಗಧಾರಣವನ್ನು ವಿವರಿಸುವ
೮ ನೆಯ ಅಧ್ಯಾಯವು ಮುಗಿದುದು.

---

## ನವಮೋಽಧ್ಯಾಯಃ.

—o—

### ( ಪಾ ದ ತೀ ರ್ಥ ಮಾ ಹಾ ತ್ಮ್ಯ ಂ )

ಕಿಂಚ ಸರ್ವೇಷು ವೇದೇಷು ಮುಖ್ಯತ್ವೇನೋಪಪಾದಿತಂ। ಮಹೇಶ
ಪಾದತೀರ್ಥಸ್ಯ ವೈಭವಂ ಶೃಣುತ ದ್ವಿಜಾಃ ॥೧॥ ಯದಥಾತೋ ಮಹಾದೇ
ವಸ್ಯೇತ್ಯಾದ್ಯಂ ವಾಕ್ಯಮಸ್ತಿ ಯತ್ । ಸೂತ್ರೇ ಬೋಧಾಯನೇ ಶಂಭುತೀ
ರ್ಥಸೇವಾವಿಧಾಯಕಂ ॥೨॥ ಅಹಂ ವಕ್ಷ್ಯಾಮಿ ತದ್ವಾಕ್ಯಮಾಕರ್ಣಯ
ತ ಹೇ ದ್ವಿಜಾಃ। " ಅಥಾತೋ ಮಹಾದೇವಸ್ಯ ಪಾದೋದಕನಿಧಿಂ ವ್ಯಾಖ್ಯಾ
ಸ್ಯಾಮಃ, ಶ್ರೀರುದ್ರೇಣ ಪವಿತ್ರೇಣ ಶತಧಾರೇಣ ಸಹಸ್ರಧಾರೇಣಾಥ ದ್ರು
ಮನಂತಮುಪರಿಮಿತಮವಿಘ್ನಮಕ್ಷಯಮಭೀಷ್ಟದಮಚ್ಯುತಂ ಪರಮಂ
ಪವಿತ್ರಂ ಭಗವಂತಮೇವಂ ತಮೇವಂ ಮಹಾದೇವಂ ಸ್ನಾಪಯಿತ್ವಾ ಸರ್ವೋ
ವೈ ರುದ್ರ ಇತಿ ದ್ವಾಭ್ಯಾಂ ಋತಂ ಸತ್ಯಂ ಪರಂ ಬ್ರಹ್ಮೇತಿ ಪ್ರಾಶಯೇತ್ ,, ಇ
ತಿ. ಯಚ್ಚ ವಾಕ್ಯಂ ಭಗವತಃ ಪಾದಾವಿತ್ಯೇತದಾದಿಕಂ ॥ ೩ ॥ ಅಸ್ತಿ ಜಾ
ಬಾಲಶಾಖಾಯಾಂ ಶಿವಪಾದೋದಕಸ್ಯ ಹಿ । ಸೇವಾವಿಧಾನಕಥಕಂ ತದ್ವಾ

---

## ೯ ನೆಯ ಅಧ್ಯಾಯವು.

### ( ಪಾ ದ ತೀ ರ್ಥ ಮ ಹಿ ಮೆ ಯು . )

ಎಲೆ ಬ್ರಾಹ್ಮಣರೆ ! ಇನ್ನು ಸಕಲವೇದಗಳಲ್ಲೂ ಮುಖ್ಯವಾಗಿ ಹೇಳಲ್ಪಟ್ಟಿ
ರುವ ಪಾದತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳಿರಿ;—ಬೋಧಾಯನಸೂ
ತ್ರದಲ್ಲಿ " ಅಥಾತೋಮಹಾದೇವಸ್ಯ ,, ಎಂದಾರಂಭಿಸಿರುವ ಯಾವ ವಾಕ್ಯವುಂಟೋ
ಅದು ಶಿವತೀರ್ಥಸೇವೆಯನ್ನು ಮಾಡಬೇಕೆಂದು ವಿಧಿಸತಕ್ಕದ್ದು ॥೨॥ ನಾನು ಆ ವಾ
ಕ್ಯವನ್ನು ಹೇಳುತ್ತೇನೆ ಕೇಳಿರಿ-, ಬಳಿಕ ಮಹಾದೇವನ ಪಾದತೀರ್ಥವಿಧಾನವನ್ನು
ವಿವರಿಸುತ್ತೇವೆ. ಪವಿತ್ರವಾದ ಶ್ರೀ ರುದ್ರಸೂಕ್ತದಿಂದ ಮತ್ತು ಸರ್ವೋವೈರುದ್ರಃ
ಎಂಬ ಮಂತ್ರದಿಂದ ಅನಂತನೂ..........ಭಗವಂತನೂ ಆದ ಮಹಾದೇವನನ್ನು
ಶತಧಾರೆ ಅಥವಾ ಸಹಸ್ರ ಧಾರೆಗಳಿಂದ ಜಲಾಭಿಷೇಕವನ್ನು ಮಾಡಿ, ಋತಂಸತ್ಯಂ
ಎಂಬ ಮಂತ್ರವನ್ನು ಪಠಿಸುತ್ತಾ ತೀರ್ಥವನ್ನು ಪಾನಮಾಡಬೇಕು) ಎಂದು ಹೇಳಿ
ರುವುದು. ಭಗವತಃಪಾದೌ ಎಂದಾರಂಭಿಸಿ, ಥಾರಯೇತ್ ಎಂಬುವವರೆಗೆ ಜಾಬಾ
ಲಶಾಖೆಯಲ್ಲಿ ಹೇಳಲ್ಪಟ್ಟಿರುವ ವಾಕ್ಯವು ಶಿವಪಾದೋದಕ ಸೇವನೆಯನ್ನು ವಿಧಿಸತ
ಕ್ಕದು. ಅದನ್ನು ನಾನು ಹೇಳುತ್ತೇನೆ:—॥ ೩ ॥ ಭಗವಂತನಪಾದವನ್ನು ತೊ

ಕ್ಯಮುಪಿಕಥ್ಯತೇ ॥ ೪ ॥ ,,ಭಗವತಶ್ಶಿವಾಪಾದೌಪ್ರಕ್ಷಾಳ್ಯಶಂಖಂಪ್ರಪೂರ್ಯ ಗಂಧಪುಷ್ಪಾಕ್ಷತಾದಿಭಿರಭ್ಯರ್ಚ್ಯಚರುಂನಿವೇದ್ಯ ಇಮುಂಮೇಗಂಗೇತ್ಯ ಭಿಮಂತ್ರ್ಯಕದ್ರುದ್ರಾಯೇತಿ ಮಾತ್ವಾರುದ್ರೇತಿ ಸಂಮಾರ್ಜನಂಕೃತ್ವಾ ಋತಂಸತ್ಯಂಪರಂಬ್ರಹ್ಮೇತಿಪ್ರಾಶಯೇತ್, ಯಏವಂಕುರ್ಯಾತ್ಸಕುಲಜಾ ದಶಪೂರ್ವಾನ್ದಶಾಪರಾನಾತ್ಮಾನಂಚತಾರಯೇತ್ ,, ಇತಿ. ಕುರುಕ್ಷೇತ್ರಂ ನೈಮಿಶಂಚಭೂಮಿಭಾಗಾಶ್ಚಯೇಶುಭಾಃ । ಶಿವತೀರ್ಥೋದಕಸ್ಯೈತೇ ಕಳಾಂನಾರ್ಹಂತಿಷೋಡಶೀಂ ॥ ೫ ॥ ಅಕಾಲಮೃತ್ಯುಮಥನಂಸರ್ವವ್ಯಾ ಧಿವಿನಾಶನಂ । ಸರ್ವಪಾಪೌಘಶಮನಂಶಂಭೋಃಪಾದೋದಕಂ ಶುಭಂ ॥ ೬ ॥ ಸರ್ವೋತ್ಪಾತಪ್ರಶಮನಂಸರ್ವರೋಗಪ್ರಭೇದನಂ। ದುಷ್ಟಗ್ರ ಹೋಪಶಮನಮಿಷ್ಟಸಿದ್ಧಿಪ್ರದಾಯಕಂ ॥ ೭ ॥ ಸರ್ವಮಂಗಳಮಾಂ ಗಲ್ಯಂಸರ್ವಪಾವನಪಾವನಂ । ಸರ್ವತೀರ್ಥಫಲಂ ಸದ್ಯಃಪ್ರಾಪ್ಯತೇಮೂ ರ್ಧ್ನಿಧಾರಣಾತ್ ॥ ೮ ॥ ಅಗಮ್ಯಗಾಮಿನಶ್ಚೈವ ಪಾಪಾಚಾರಾಶ್ಚಯೇನ ರಾಃ । ತೇಪಿಪೂತಾಭವಂತ್ಯಾಶುಸದ್ಯಃ ಪಾದಾಂಬುಧಾರಣಾತ್ ॥ ೯ ॥

---

ಳೆದು, ತೀರ್ಥವನ್ನು ಶಂಖಕ್ಕೆ ತುಂಬಿ, ಗಂಧಪುಷ್ಪಾಕ್ಷತಾದಿಗಳಿಂದ ಪೂಜಿಸಿ, ಅ ನ್ನವನ್ನು ನಿವೇದಿಸಿ, ಇಮುಂಮೆಗಂಗೆ ಎಂಬ ಮಂತ್ರದಿಂದಭಿಮಂತ್ರಿಸಿ, ಕದ್ರು ದ್ರಾಯ ಎಂಬ ಮಂತ್ರದಿಂದಲೂ, ಮಾತ್ವಾರುದ್ರ ಎಂಬಮಂತ್ರದಿಂದಲೂ, ದೇಹಕ್ಕೆ ಸಮ್ಮಾರ್ಜನೆಯನ್ನುಮಾಡಿ, ಋತಂಸತ್ಯಂ ಎಂಬ ಮಂತ್ರದಿಂದ ಪಾನಮಾಡಬೇಕು. ಯಾವನು ಹೀಗೆ ಮಾಡುತ್ತಾನೊ ಅವನು ತನ್ನ ಕುಲದಲ್ಲಿ ಹಿಂದೆ ಹುಟ್ಟಿದ ಹತ್ತು ತಲೆಯುವರನ್ನೂ ಮುಂದೆ ಹುಟ್ಟುವ ಹತ್ತುತಲೆಯುವರನ್ನೂ ತನ್ನನ್ನೂ ಭವಸಾ ಗರದಿಂದ ದಾಟಿಸುವನು) ಕುರುಕ್ಷೇತ್ರ ನೈಮಿಶಾರಣ್ಯ ಮೊದಲಾದ ಮಂಗಳಪ್ರದ ವಾದ ಯಾವಭೂಭಾಗಗಳುಂಟೋ ಅವೆಲ್ಲವೂ ಶಿವಪಾದತೀರ್ಥದ ಹದಿನಾರನೆ ಒಂದು ಭಾಗವನ್ನೂ ಹೋಲಲಾರವು ॥ ೫ ॥ ಮಂಗಳಪ್ರದವಾದ ಶಿವಪಾದೋದಕವು ಅ ಕಾಲಮೃತ್ಯುವನ್ನು ತಪ್ಪಿಸುವುದು. ಸಕಲ ರೋಗಗಳನ್ನೂ ನಾಶಮಾಡುವುದು. ಸಮಸ್ತಪಾಪಗಳನ್ನು ಹೋಗಲಾಡಿಸುವುದು ॥ ೬ ॥ ಅನಿಷ್ಟಸೂಚಕಗಳಾದ ಉ ತ್ಪಾತಗಳನ್ನೆಲ್ಲ ಅಣಗಿಸುವುದು, ಮನೋರೋಗಗಳನ್ನೆಲ್ಲ ಹಾಳ್ಮಾಡುವುದು. ದು ಷ್ಟಗ್ರಹ ಪೀಡೆಯನ್ನು ತಪ್ಪಿಸುವುದು. ಇಷ್ಟಾರ್ಥಸಿದ್ಧಿಯನ್ನು ಮಾಡುವುದು. ॥ ೭ ॥ ಎಲ್ಲತೆರದ ಮಂಗಳಗಳಲ್ಲೂ ಇದು ಮಂಗಳತರವಾದದ್ದು. ಪರಿಶುದ್ಧವಾದ ವ ಸ್ತುಗಳಲ್ಲೆಲ್ಲ ಪವಿತ್ರವಾದದ್ದು. ಶಿರಸ್ಸಿನಲ್ಲಿ ಈ ಲಿಂಗವನ್ನು ಧರಿಸಿದಮಾತ್ರದಿಂದ ಸ ರ್ವತೀರ್ಥಸೇವಾಫಲವು ಕೂಡಲೇ ಸಿದ್ಧಿಸುವುದು ॥ ೮ ॥ ಹೊಂದಬಾರದುದನ್ನು ಹೊಂದಿದವರೂ ಪಾಪಕರ್ಮವನ್ನಾಚರಿಸಿದ ಮನುಷ್ಯರೂಕೂಡ ಶಿವಪಾದೋದಕ ವನ್ನು ಧರಿಸಿದಕೂಡಲೇ ಪವಿತ್ರರಾಗುತ್ತಾರೆ ॥ ೯ ॥ ಶಿವಪಾದೋದಕವನ್ನು ಧರಿಸಿ

ಆಶೌಚಂನ್ನೈವವಿದ್ಯೇತಜಾತಕಂಮೃತಕಂತಥಾ । ಗೃಹೇಯಸ್ಮಿನ್ಪ್ರಸೂತಾಸ್ತ್ರೀಸೂತಕಂನ್ನೈವವಿದ್ಯತೆ ॥ ೧೦ ॥ ಶಿವಪಾದಾಂಬುಸಂಸ್ಪರ್ಶಾತ್ಸರ್ವಪಾಪಂಪ್ರಣಶ್ಯತಿ । ದೂಷಿತಶ್ಚಾಪಿಪಾದಾಂಬುಬಿಭ್ರಚ್ಛುದ್ಧಿಮವಾಪ್ನುಯಾತ್ ॥ ೧೧ ॥ ಪಾದೋದಕಂಪುರಭಿದಃಪಾಶಜಾಲಹರಂಪರಂ ಪಾಣಿಶುಕ್ತಿಭಿರಾದಾಯಪಪುಃಕಾಮಂಗಣೇಶ್ವರಾಃ ॥ ೧೨ ॥ ಶುಭೋಪಾದೋದಕಂಪೀತ್ವಾಪಶ್ಚಾದಶುಚಿಶಂಕಯಾ । ಯಆಚಾಮತಿಮೋಹೇನತಂವಿಂದ್ಯಾದ್ಬ್ರಹ್ಮಘಾತಕಂ ॥ ೧೩ ॥ ಇತಿಬ್ರಹ್ಮಾಂಡಪುರಾಣೇಪ್ರೋಕ್ತವಾಚಇಮಾಶ್ಶುಭಾಃ । ಪಾದೌಪ್ರಕ್ಷಾಳ್ಯದೇವಸ್ಯಕರಾಭ್ಯಾಂಕವುರೇಕ್ಷಣಃ ॥ ೧೪ ॥ ಅಭ್ಯುಕ್ಷೇದಾತ್ಮನೋಮೂರ್ಧನ್ಯತಿಥೇಶ್ಚಗುರೋಸ್ತಥಾ । ಇತ್ಯಾದಿತ್ಯಪುರಾಣಸ್ಯವಾಕ್ಯಮೇತದ್ವಿನಿಶ್ಚಿತಂ ॥೧೫॥ ಪ್ರಮಥಪ್ರವರೈಃಪೀತಂಸುರಮುಖ್ಯೈಶ್ಶಿರೋಧೃತಂ । ಶುದ್ಧಂ ತತ್ತ್ವತಯಾದಿಷ್ಟಂವಲ್ಮೀಕಪ್ರಭವೇನಚ ॥ ೧೬ ॥ ತತ್ರದೇವರ್ಷಿಗಂಧರ್ವಾವಸುಧಾತಳವಾಸಿನಃ । ಭವಾಂಗಪತಿತಂತೋಯಂ ಪವಿತ್ರಮಿತಿಪಸ್ಪೃಶುಃ

---

ದನಂತರ ಜನನಸೂತಕ ಮರಣಸೂತಕಗಳಿರುವುದಿಲ್ಲ. ಯಾವಮನೆಯಲ್ಲಿ ಹೆತ್ತಬಾಣಂತಿಯಿದ್ದರೂ ಅಲ್ಲಿಗೆ ಸೂತಕವಿಲ್ಲ. ಶಿವಪಾದೋದಕವನ್ನು ಸೋಂಕಿಸಿದಕೂಡಲೆ ಸಕಲಪಾಪವೂ ನಾಶಗೊಳ್ಳುತ್ತದೆ. ದೋಷವಿಶಿಷ್ಟನಾಗಿದ್ದವನುಕೂಡಾ ಶಿವಪಾದೋದಕವನ್ನಾಂತರೆ ಶುದ್ಧನಾಗುತ್ತಾನೆ ॥ ೧೧ ॥ ಮಲಮಾಯಾ ಕರ್ಮಪಾಶವೆಂಬ ಬಲೆಯನ್ನು ನಾಶಮಾಡುವ ಉತ್ತಮವಾದ ಶಿವಪಾದತೀರ್ಥವನ್ನು ಗಣಾಧೀಶ್ವರರು ಕೈದುಸಂಬದಿಂದ ತೆಗೆದು ಯಥೇಚ್ಛವಾಗಿ ಪಾನಮಾಡಿದರು. ॥ ೧೨ । ಯಾವನು ಶಿವಪಾದೋದಕವನ್ನು ಪಾನಮಾಡಿದನಂತರ ಅಜ್ಞಾನವಶಾತ್ ಅಪವಿತ್ರವೆಂಬ ಸಂಶಯದಿಂದ ಆಚಮನವನ್ನು ಮಾಡುತ್ತಾನೋ ಅವನನ್ನು ಬ್ರಹ್ಮಹತ್ಯೆಯನ್ನು ಮಾಡಿದವನನ್ನಾಗಿ ತಿಳಿಯಬೇಕು ॥ ೧೩ ॥ ಎಂಬುದಾಗಿ ಈ ಮಂಗಳ ವಚನಗಳು ಬ್ರಹ್ಮಾಂಡಪುರಾಣದಲ್ಲಿ ಹೇಳಲ್ಪಟ್ಟಿರುವುವು. ಎಲೆ ? ವಿಷ್ಣುವು ಪರಶಿವನ ಪಾದಗಳನ್ನು ತನ್ನಕೈಯಿಂದ ತೊಳೆದು ತನ್ನ ತಲೆಯಮೇಲೆ ಪ್ರೋಕ್ಷಿಸಿಕೊಳ್ಳುವನು. ಅತಿಥಿಯ ಮತ್ತು ಗುರುವಿನ ಪಾದತೀರ್ಥವನ್ನು ಹೀಗೆಯೇ ಸೇವಿಸಿಕೊಳ್ಳುವನು ಎಂಬುದು ಆದಿತ್ಯಪುರಾಣದ ವಚನವು ! ೧೫ ॥ ಶಿವಪಾದತೀರ್ಥವನ್ನು ಪ್ರಮಥಶ್ರೇಷ್ಠರು ಪಾನಮಾಡಿರುವರು. ದೇವಶ್ರೇಷ್ಠರು ಶಿರಸ್ಸಿನಲ್ಲಿ ಧರಿಸಿರುವರು. ವಾಲ್ಮೀಕಿಯು ಆ ಪವಿತ್ರವನ್ನು ಪರತತ್ವವೆಂಬದಾಗಿ ಹೇಳಿರುವನು ॥ ೧೬ ॥ ಭೂಮಿಯಲ್ಲಿ ವಾಸಿಸುವ ದೇವತೆಗಳು ಋಷಿಗಳು ಗಂಧರ್ವರುಗಳೆಲ್ಲ ಶಿವದೇಹದಿಂದಭಿಷೇಕಿಸಿಸುರಿದ ಜಲವನ್ನು ಪವಿತ್ರವಾದುದೆಂದು ಸ್ಪರ್ಶಮಾಡುವರು॥ ೧೭ ॥ ಎಂದು ರಾಮಾಯ

|| ೧೭ || ಇತಿರಾಮಾಯಣವಚಃಪ್ರಸಿದ್ಧಮವನೀತಳೇ । ನಿರ್ಮಾಲ್ಯಸಲಿಲಂಪ್ರಾಸ್ಯದೇವದೇವಸ್ಯಶೂಲಿನಃ || ೧೮ || ಕ್ಷಯಕುಷ್ಠಜ್ವರಶ್ವಾಸೈರ್ಮುಚ್ಯತೆಸರ್ವಕಿಲ್ಬಿಷೈಃ || ಇತಿ || ಅಭಿಷಿಕ್ತಜಲಂಪ್ರಾತಃ ಪಿಬೇನ್ನಿತ್ಯಂದಿನೇದಿನೇ || ೧೯ || ಶೂಲಕುಷ್ಠಾಧ್ಯಪಸ್ಮಾರಜ್ವರಾಣಾಂಭೇಷಜಂಪ್ರಿಯೆ|ಇತೀದಂವೈದ್ಯಶಾಸ್ತ್ರಸ್ಯವಚನಂಲೋಕವಿಶ್ರುತಂ|| ೨೦|| ಇತಿ ಶ್ರುತಿಪುರಾಣೇಷುಶಿವಸ್ಯಚತಥಾಗುರೋಃ । ಅತಿಥೇಃ ಪಾದತೀರ್ಥಸ್ಯಮಹಿಮಾನಂನಿರಂತರಂ || ೨೧ || ಕಥಯತ್ಸು ದ್ವಿಜಾತೀನಾಂ ತದನರ್ಹಂಕಥಂದ್ವಿಜಾಃ||

ಇತಿ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನಪಂಡಿತಾರಾಧ್ಯಚ
ರಿತೆ ದೀಕ್ಷಾಪ್ರಕರಣೆ ಪಾದೋದಕಮಾಹಾತ್ಮ್ಯ
ಕಥನಂ ನಾಮ ನವಮೋಽಧ್ಯಾಯಃ.

---

ಇದ ವಚನವು ಭೂತಲದಲ್ಲಿ ಪ್ರಸಿದ್ಧವಾಗಿರುವುದು: ದೇವಾಧಿದೇವನಾದ ಪರಶಿವನಿಗೆ ಅಭಿಷೇಕಿಸಿದ ತೀರ್ಥವನ್ನು ಸೇವಿಸಿದರೆ. ಕ್ಷಯ, ಕುಷ್ಠ, ಜ್ವರ, ಶ್ವಾಸ ಮೊದಲಾದ ರೋಗಗಳಿಂದೆಲ್ಲ ಬಿಡುಗಡೆಯಾಗುತ್ತದೆ. ಎಂಬುದಾಗಿಯೂ, ಎಲೆ ಪಾರ್ವತಿಯೆ ? ಶಿವಾಭಿಷಿಕ್ತವಾದ ಜಲವನ್ನು ಪ್ರತಿದಿನವೂ ಬೆಳಿಗ್ಗೆ ಪಾನಮಾಡಿದರೆ, ಶೂಲ ಕುಷ್ಠ, ಅಪಸ್ಮಾರ, ಜ್ವರ ಮೊದಲಾದ ರೋಗಗಳಿಗೆಲ್ಲ ಅದು ಔಷಧವಾಗುವುದು ಎಂಬದಾಗಿಯೂ, ಜಗತ್ಪ್ರಸಿದ್ಧವಾದ ವೈದ್ಯಶಾಸ್ತ್ರ ವಚನವಿರುವುದು || ೨೦ || ಎಲೆ ಬ್ರಾಹ್ಮಣರೆ ! ವೇದಪುರಾಣಾದಿಗಳು ಶಿವನ ಗುರುವಿನ ಅತಿಥಿಯ ಪಾದತೀರ್ಥದ ಮಹಿಮೆಯನ್ನು ಹೀಗೆ ಸದಾ ಹೇಳುತ್ತಿರುವಲ್ಲಿ, ಬ್ರಾಹ್ಮಣರಿಗೆ ಅದು ಸ್ವೀಕಾರಾನರ್ಹವಾಗುವುದು ಹೇಗೇ ?

ಎಂಬಲ್ಲಿಗೆ ಪಂಡಿತಾರಾಧ್ಯಚರಿತ್ರಕ್ಕೆ ಎಮ್, ಆರ್, ಕರಿಬಸವಶಾಸ್ತ್ರಿ
ವಿರಚಿತವಾದ ‘‘ ಭಾವಮಂಜರಿ ,, ಎಂಬ ಕನ್ನಡ ಟಿಪ್ಪ
ಣದಲ್ಲಿ ಪಾದೋದಕ ಮಹಿಮೆಯನ್ನು ಹೇಳುವ
೯ ನೆಯ ಅಧ್ಯಾಯವು ಮುಗಿದುದು.

---

## ದಶಮೋಽಧ್ಯಾಯಃ.

### (ಪ್ರ ಸಾ ದ ಮಾ ಹಾ ತ್ಮ್ಯಂ.)

ಇತಿ ಶ್ರುತಿಪುರಾಣಾಗಮೇತಿಹಾಸವರೋಕ್ತಿಭಿಃ । ವಿಭೂತಿಧಾರಣಾದೀನಿಸುಪ್ರತಿಷ್ಠಾಪ್ಯಧೀಮತಾ ॥ ೧ ॥ ಪಂಡಿತಾರಾಧ್ಯವರ್ಯೇಣ ಸ್ವಪ್ರಶ್ನೇಷ್ವಖಿಲೇಷುಚ । ಖಂಡಿತೇಷ್ವಸಹಾವಿಪ್ರಾಃಪುನರೇವಂ ಬಭಾಷಿರೇ ॥ ೨ ॥ ಸರ್ವಂಭವತುನಾಮೈವಂಪ್ರಸಾದಃಪರಮೇಶಿತುಃ । ಅರ್ಹಃಕಿಂಬ್ರಾಹ್ಮಣೈರ್ಭೋಕ್ತುಂವಿಪರೀತಮಿದಂಭುವಿ ॥ ೩ ॥ ಇಯಾಪಾತ್ಯುದ್ಧತಿರ್ಲೋಕವಿರುದ್ಧಮಿದಮೇವಹಿ । ನಿಷಿದ್ಧಮಪ್ರಸಿದ್ಧಂಚಕುತ್ರನಾಶ್ರುಣುಮೋವಯಂ ॥ ೪ ॥ ಶ್ರುತಿಸ್ಮೃತಿಪುರಾಣಾಗಮೇತಿಹಾಸಾದಿಷುಸ್ಫುಟಃ । ಆದ್ಯಾಃಕಇಹವಿದ್ಯಂತೇಶಿವಭುಕ್ತೋಪಭೋಗಿನಃ ॥ ೫ ॥ ಅನರ್ಹಂಮಮನೈವೇದ್ಯಮಿತಿಶಂಕರಭಾಷಿತಂ । ಭವದ್ಭಿರ್ನಶ್ರುತಂಕಿಂವಾಪುರಾಣೇಷುಪರಿಸ್ಫುಟಂ ॥ ೬ ॥ ಭಕ್ತ್ಯುದ್ರೇಕಾದೀಶಶೇಷೋಭುಕ್ತಶ್ಚೇದಿತರೈರ್ಜನೈಃ। ಭುಜ್ಯತಾಂನಾಮವೇದಾಢ್ಯೈರ್ಭೂ

---

## ೧೦ ನೆಯ ಅಧ್ಯಾಯವು.

### (ಪ್ರ ಸಾ ದ ಮ ಹಿ ಮೆ ಯು.)

ಹೀಗೆ ವಿದ್ವಾಂಸರಾದ ಪಂಡಿತಾರಾಧ್ಯರು ವೇದಾಗಮಪುರಾಣೇತಿಹಾಸವಚನ ಪ್ರಮಾಣಗಳಿಂದ ವಿಭೂತಿಧಾರಣ ಮೊದಲಾದುವುಗಳನ್ನು ಕರ್ತವ್ಯವೆಂದು ಸಿದ್ಧಾಂತ ಮಾಡಿ, ತಮ್ಮ ಪ್ರಶ್ನೆಗಳನ್ನೆಲ್ಲ ಖಂಡಿಸಿಬಿಡಲಾಗಿ, ಬ್ರಾಹ್ಮಣರು ಅದನ್ನು ಸೈರಿಸದೆ ಮತ್ತೆ ಹೀಗೆ ಹೇಳಿದರು ॥ ೨ ॥ —ಎಲ್ಲವೂ ಹೀಗಾದಗೂ ಆಗಲಿ, ಆದರೆ ಪರಶಿವನ ಪ್ರಸಾದವು ಬ್ರಾಹ್ಮಣರಿಂದ ಭುಂಜಿಸಲರ್ಹವಾದದ್ದೆ ? ಇದು ಭೂಮಿಯಲ್ಲಿ ವಿಪರೀತವಾದದ್ದು, ಇದು ಬಲುಹೆಮ್ಮೆ, ಇದೇ ಲೋಕವಿರುದ್ಧವಾದ ಕೃತ್ಯ. ಇದು ಶಾಸ್ತ್ರನಿಷಿದ್ಧವಾದದ್ದು, ಮತ್ತು ಅಪ್ರಸಿದ್ಧವಾದದ್ದು. ವೇದಶಾಸ್ತ್ರಪುರಾಣಾಗಮೇತಿಹಾಸಗಳಲ್ಲಿ ಎಲ್ಲಿತಾನೇ ಇದನ್ನು ನಾವು ಕೇಳಿದ್ದೇವೆ ? ಶಿವಪ್ರಸಾದವನ್ನು ಭುಂಜಿಸಿದ ಪೂರ್ವಿಕರು ಈ ಲೋಕದಲ್ಲಿ ಯಾರಿದ್ದಾರೆ ॥ ೫ ॥ ಪುರಾಣಗಳಲ್ಲಿ "ನನ್ನ ನೈವೇದ್ಯವು ಅನರ್ಹವಾದದ್ದು, ಎಂದು ಶಿವನು ಸ್ಪಷ್ಟವಾಗಿನುಡಿದಿರುವುದನ್ನು ನೀವು ಕೇಳಲಿಲ್ಲವೇನು ? ॥ ೬ ॥ ಇತರಜನಗಳು ಭಕ್ತ್ಯತಿಶಯದಿಂದಶಿವಪ್ರಸಾದವನ್ನು ಉಂಡರೂ ಉಣಲಿ, ವೇದಸಂಪನ್ನರಾದ ಬ್ರಾಹ್ಮಣರು ಹೇಗೆಭುಂಜಿಸಲಾದೀತು ?

ಜ್ಯತೇಬ್ರಾಹ್ಮಣೈಃಕಥಂ ‖ ೭ ‖ ಅರ್ಹಃಪ್ರಾಣಾಗ್ನಿಹೋತ್ರಸ್ಯಕಿಂಪ್ರಸಾದೋಮಹೇಶಿತುಃ । ಶ್ರಾದ್ಧೇಪಿತೄಣಾಮರ್ಹಃಕಿಂಪ್ರಸಾದಃಪರಮೇಶಿತುಃ ‖ ೮ ‖ ಶಿವಪ್ರಸಾದೋಯೋಗ್ಯಃಕಿಂಪಂಚಯಜ್ಞಾದಿಕರ್ಮಸು । ತದ್ವಿಪ್ರಾಣಾಮಿಶಶೇಷೋನಯೋಗ್ಯೋಭವನೇಷ್ವಿತಿ ‖ ೯ ‖ ತಚ್ಛ್ರುತ್ವಾವಚನಂತೇಷಾಂಪಂಡಿತಾರಾಧ್ಯದೇಶಿಕಃ । ಶುದ್ಧಸಿದ್ಧಪ್ರಸಿದ್ಧಾಖ್ಯಪ್ರಸಾದಾನಾಂಹಿವೈಭವಂ ‖೧೦‖ ಅನರ್ಹಂಮಮನೈವೇದ್ಯಮಿತಿವಾಕ್ಯಸ್ಯಚೋಚಿತಂ । ಅರ್ಥಂವ್ಯಾಖ್ಯಾತುಕಾಮಸ್ಸನ್ನೇವಂಪ್ರೋವಾಚಭೂಸುರಾನ್ ‖ ೧೧ ‖ ನೈವೇದ್ಯಶಬ್ದಃಕಿಮಭಿಧೀಯತೇಹೇದ್ವಿಜಾತಯಃ । ತಸ್ಮಾನ್ನೈವೇದ್ಯಶಬ್ದೋಯಂ ದೇವಸ್ವಾದ್ಯಭಿಧಾಯಕಃ ‖ ೧೨ ‖ ಅತೋನಾನಾರ್ಥಕಃಕಿಂಚಗೌಣಮುಖ್ಯಾರ್ಥವಾನಪಿ । ತಸ್ಮಾತ್ತದ್ಗೌಣಮುಖ್ಯಾರ್ಥಾವಿತ್ಥಮೇವೇತಿಶಾಸ್ತ್ರತಃ ‖ ೧೩ ‖ ಅವಿದಿತ್ವಾರಹಸ್ಯಾರ್ಥಂಪ್ರವಕ್ತುಂಪಾರ್ಯತೇಕಥಂ। ದೇವಸ್ವಂದೇವತಾದ್ರವ್ಯಂನೈವೇದ್ಯಂಚನಿವೇದಿತಂ ‖ ೧೪ ‖ ಚಂಡದ್ರವ್ಯಂಬಹಿಃಕ್ಷಿಪ್ತಂನಿರ್ಮಾಲ್ಯಂ ಷಡ್ವಿಧಂತಥಾ । ಇತ್ಯಾಗಮವಚೋರೀತ್ಯಾನೈವೇದ್ಯಂಷಡ್ವಿಧಂಸ್ಮೃತಂ ‖೧೫‖ ದೇವಸ್ವಂಗ್ರಾಮಭೂಮ್ಯಾದಿದಾಸೀದಾಸಚತುಷ್ಟಯಂ । ಹೇಮರ

---

೭ ‖ ಶಿವಪ್ರಸಾದವು ಪ್ರಾಣಾಗ್ನಿಹೋತ್ರಕರ್ಮಕ್ಕೆ ಯೋಗ್ಯವಾದದ್ದೆ ? ಶಿವಪ್ರಸಾದವು ಪಿತೃಶ್ರಾದ್ಧಕ್ಕೆ ಅರ್ಹವಾದದ್ದೇ ? ಪಂಚಯಜ್ಞಾದಿಕರ್ಮಗಳಿಗೆ ಶಿವಪ್ರಸಾದವು ಉಚಿತವಾದದ್ದೆ? ಅದುಕಾರಣ, ಲೋಕಗಳಲ್ಲಿ ಬ್ರಾಹ್ಮಣರುಗಳಿಗೆ ಶಿವಪ್ರಸಾದವು ಅನರ್ಹವಾದದ್ದು. ಎಂದುಹೇಳಿದರು. ‖ ೯ ‖ ಪಂಡಿತಾರಾಧ್ಯಗುರೂತ್ತಮನು ಅವರಮಾತನ್ನುಕೇಳಿ, ಶುದ್ಧ ಸಿದ್ಧ ಪ್ರಸಿದ್ಧ ಎಂಬ ತ್ರಿವಿಧಪ್ರಸಾದಗಳ ಮಹಿಮೆಯನ್ನೂ, " ನನ್ನ ನೈವೇದ್ಯವು ಅನರ್ಹವಾದದ್ದು " ಎಂದು ಹೇಳಿರುವವಾಕ್ಯದ ಅಭಿಪ್ರಾಯವನ್ನೂ ವಿವರಿಸಲಿಚ್ಛೆಯುಳ್ಳವನಾಗಿ, ಬ್ರಾಹ್ಮಣರನ್ನುಕುರಿತು ಹೀಗೆ ಹೇಳಿದನು ‖ ೧೧ ‖ —ಎಲೆ ದ್ವಿಜರೆ ! ನೈವೇದ್ಯವೆಂದು ಯಾತಕ್ಕೆ ಹೆಸರು ? ಈ ನೈವೇದ್ಯಶಬ್ದವು ದೈವದಸೊತ್ತು ಮೊದಲಾದುದನ್ನು ಹೇಳತಕ್ಕದು ‖ ೧೨ ‖ ಅದುಕಾರಣ ಇದು ಅನೇಕಾರ್ಥವುಳ್ಳ ಶಬ್ದವೂ, ಗೌಣ ಮುಖ್ಯವೆಂಬ ದ್ವಿವಿಧಾರ್ಥವುಳ್ಳದ್ದೂ ಆಗಿದೆ. ಆಶಬ್ದಕ್ಕೆ ಇದು ಗೌಣಾರ್ಥ, ಇದು ಮುಖ್ಯಾರ್ಥವೆಂಬುದನ್ನು ಶಾಸ್ತ್ರಮುಖದಿಂದ ತಿಳಿಯದೆ, ಅದರ ಒಳತಾತ್ಪರ್ಯವನ್ನು ಹೇಳುವುದಕ್ಕೆ ಹೇಗಾದೀತು ? ದೇವಸ್ವ, ದೇವತಾದ್ರವ್ಯ, ನೈವೇದ್ಯ, ನಿವೇದಿತ, ಚಂಡದ್ರವ್ಯ, ಬಹಿಃಕ್ಷಿಪ್ತ, ಎಂದು ನಿರ್ಮಾಲ್ಯವು ಆರುತೆರನಾಗಿ ಆಗಮವಚನದಿಂದ ಹೇಳಲ್ಪಟ್ಟಿರುವುದು ‖ ೧೫ ‖ ದೇವರಿಗಾಗಿಬಿಟ್ಟಿರುವ ಗ್ರಾಮ, ಭೂಮಿ ಮೊದಲಾದುವುಗಳು, ಗೌಡಿಯರು, ಆ

ಪ್ಯಂಚರತ್ನಾದಿದೇವದ್ರವ್ಯಮಿತಿಸ್ಮೃತಂ ॥ ೧೬ ॥ ಯತ್ಸಂಕಲ್ಪಿತಮೀಶಾಯಪತ್ರಂಪುಷ್ಪಫಲಾದಿಕಂ । ಅನ್ನಪಾನಾದಿತತ್ಸರ್ವಂನೈವೇದ್ಯಮಿತಿಕಥ್ಯತೇ ॥ ೧೭ ॥ ಏತತ್ತ್ರಿವಿಧನಿರ್ಮಾಲ್ಯಮನರ್ಹಮಿತಿಕಥ್ಯತೇ। ಪ್ರಮಾದಾದ್ಭೋಜನಂ ಕುರ್ಯಾದ್ಭೂಮೇರಪ್ಯೇಕ ಮಂಗುಲಂ ॥ ೧೮ ॥ ಕಿಂಚಿದ್ದ್ರವ್ಯಾಪಹಾರೇಣರೌರವಂನರಕಂವ್ರಜೇತ್ । ಯದ್ವಾತದ್ವಾಶಿವದ್ರವ್ಯಮಪಿಸರ್ಷಪಮಾತ್ರಕಂ ॥ ೧೯ ॥ ಅಪಹೃತ್ಯನರೋಯಾತಿನರಕೇಕಾಲಮಕ್ಷಯಂ । ಇತ್ಯಾಗಮೋಕ್ತಿತೋಽನರ್ಹಮೇತನ್ನಿರ್ಮಾಲ್ಯಕತ್ರಯಂ ॥ ೨೦ ॥ ಲೋಭೇನೈತದ್ಯೇಹರಂತಿತೇಗಚ್ಛಂತ್ಯೇವ ರೌರವಂ । ಶಿವೋಪಭುಕ್ತಸ್ರಗ್ಗಂಧಮನ್ನಪಾನಾದಿಕಂತಥಾ ॥ ೨೧ ॥ ನಿವೇದಿತಮಿತಿಪ್ರೋಕ್ತಂಸರ್ವಪಾಪಹರಂಪರಂ। ಇತಿವಾಕ್ಯಾತ್ತಚ್ಛಿವೋಪಭುಕ್ತಂತತ್ಸ್ಯಾನ್ನಿವೇದಿತಂ ॥ ೨೨ ॥ ತದ್ಭೋಜ್ಯಂಸತತಂಭಕ್ತೈಃಶಿವದೀಕ್ಷಾಸಮನ್ವಿತೈಃ । ಬಾಣಲಿಂಗೇಚರೇಲೋಹೇರತ್ನಲಿಂಗೇಸ್ವಯಂಭುವಿ ॥ ೨೩ ॥ ಪ್ರತಿಮಾಸುಚಸರ್ವಾಸುನಚಂಡೋಧಿಕೃತೋಭವೇತ್ । ಸ್ಥಾಪಿತೇ ವಿಧಿ

---

ಲುಗಳು, ಈ ನಾಲ್ಕು ದೇವಸ್ವವು. ಚಿನ್ನ ಬೆಳ್ಳಿ ರತ್ನ ಮೊದಲಾದುವುಗಳು ದೇವದ್ರವ್ಯವು ॥ ೧೬ ॥ ಶಿವನಿಗೋಸ್ಕರವೆಂದು ಸಂಕಲ್ಪಿಸಿಟ್ಟ ಹೂವು ಪತ್ರೆ ಹಣ್ಣು ಅನ್ನಪಾನ ಮೊದಲಾದುವುಗಳೆಲ್ಲ ನೈವೇದ್ಯವೆಂದು ಹೇಳಲ್ಪಟ್ಟಿರುವುವು ॥ ೧೭ ॥ ಈ ಮೂರುತೆರದ ನಿರ್ಮಾಲ್ಯವೂ ಅನರ್ಹವೆಂದು ಹೇಳಲ್ಪಡುತ್ತದೆ. ನೈವೇದ್ಯದಲ್ಲಿ ಪ್ರಮಾದವಶದಿಂದಲಾದರೂ ಸ್ವಲ್ಪವನ್ನುಂಡರೂ, ದೇವರಭೂಮಿಯಲ್ಲಿ ಒಂದಂಗುಲವನ್ನಪಹರಿಸಿದರೂ, ದೇವದ್ರವ್ಯದಲ್ಲಿ ಸ್ವಲ್ಪವನ್ನಪಹರಿಸಿದರೂ ರೌರವನರಕವನ್ನು ಹೊಂದುವನು. ಮನುಷ್ಯನು ಸಾಸಿವೆಯಷ್ಟು ಶಿವದ್ರವ್ಯವನ್ನು ಅಪಹರಿಸಿದರೂ ಅಳಿವಿಲ್ಲದಷ್ಟುಕಾಲನರಕವನ್ನನುಭವಿಸುವನು: ಎಂದು ಆಗಮವಚನವಿರುವುದರಿಂದ ಈಮೂರುತೆರದನಿರ್ಮಾಲ್ಯವೂ ಅನರ್ಹವಾದದ್ದು. ॥ ೨೦ ॥ ಯಾರು ಆಸೆಯಿಂದ ಇವನ್ನು ಅಪಹರಿಸುವರೋ ಅವರು ನರಕವನ್ನು ಹೊಂದಿಯೇ ಹೊಂದುತ್ತಾರೆ. ಶಿವನುಸೇವಿಸಿದ ಹೂವು ಗಂಧ ಅನ್ನಪಾನ ಮೊದಲಾದುದು " ನಿವೇದಿತ ,, ವೆಂದು ಹೇಳಲ್ಪಡುವುದು. ಇದು ಸಕಲಪಾಪವನ್ನೂ ಹೋಗಲಾಡಿಸುವ ಉತ್ಕೃಷ್ಟವಸ್ತುವು ಎಂಬ ವಚನವಿರುವುದರಿಂದ ಶಿವನು ಸೇವಿಸಿದವಸ್ತು " ನಿವೇದಿತ ,, ವೆನಿಸಿಕೊಳ್ಳುವುದು ॥ ೨೨ ॥ ಎಲೌ ಪಾರ್ವತಿಯೆ ! ಶಿವದೀಕ್ಷಾಸಂಪನ್ನರಾದ ಭಕ್ತರಿಗೆ ಅದು ಭುಂಜಿಸಲು ಯೋಗ್ಯವಾದದ್ದು. ಬಾಣಲಿಂಗ, ಜಂಗಮಲಿಂಗ, ಲೋಹಲಿಂಗ, ರತ್ನಲಿಂಗ, ಮೂಡಿದಲಿಂಗ, ಸಕಲ ವಿಧದ ದೇವಬಿಂಬ— ಇವುಗಳ ಪ್ರಸಾದಕ್ಕೆ ಚಂಡೇಶನು ಅಧಿಕಾರಿಯಲ್ಲ. ದೇವತೆಗಳಿಂದ ಮುನಿಗಳಿಂದ ಮನುಷ್ಯರುಗಳಿಂದ ವಿಧಿ

ನಾಲಿಂಗೇ ಸುರೈರ್ವಾಪಿಮುನಿಭಿರ್ನರೈಃ ॥ ೬೬ ॥ ಏತತ್ತ್ರಿವಿಧನಿರ್ಮಾಲ್ಯೇ ಚಂಡೇಶೋಽಧಿಕೃತಶ್ಶಿವೇ । ಇತ್ಯುಕ್ತೇರ್ಬಾಣಲಿಂಗಾದಿನಿಹಾಯಮುನಿಭಿಸ್ಸುರೈಃ ॥ ೬೭ ॥ ನರೈಸ್ಸ್ಥಾಪಿತಲಿಂಗಾನಾಂನಿರ್ಮಾಲ್ಯಂಧರಣೀತಲೇ । ಚಂಡದ್ರವ್ಯಮಿತಿಪ್ರೋಕ್ತಮಾಗಮೇಷುವಿಶೇಷತಃ ॥ ೬೮ ॥ ತ್ಯಾಜಿತಂ ಪೂರ್ವಸಂಧ್ಯಾಯಾಮರ್ಚ್ಚನಾವಸರೇಪುನಃ । ನಿರ್ಮಾಲ್ಯಂ ತತ್ತು ವಿಜ್ಞೇಯಂಬಹಿಃಕ್ಷಿಪ್ತಮಿತಿಸ್ಫುಟಂ ॥ ೬೯ ॥ ಬಹಿಃಕ್ಷಿಪ್ತಮನರ್ಹಂಸ್ಯಾದನ್ಯದ್ರವ್ಯತ್ವಕಾರಣಾತ್ । ಪಿಶಾಚಾನಾಂಹಿಸರ್ವೇಷಾಮಧಿಕಾರೋಹಿಸರ್ವದಾ ॥ ೭೦ ॥ ಅಸ್ಮಿಂತ್ಷಡ್ವಿಧನಿರ್ಮಾಲ್ಯೇಭಕ್ತಾರ್ಹಂಸ್ಯಾನ್ನಿವೇದಿತಂ । ತಸ್ಮಾದ್ಭಕ್ತೇತರೈರ್ಭೋಗ್ಯಭವೇನಾನಸ್ಯೈರ್ಮಲದೇಹಿಭಿಃ ॥ ೭೧ ॥ ನಿರ್ಮಾಲ್ಯಧಾರಣಸ್ಪರ್ಶದರ್ಶನೋಲ್ಲಂಘನಾದಿಕಂ । ನಕಾರ್ಯಮೇವಗುದಿಚ ಕೃತಂಪಾಪಾಯತದ್ಭವೇತ್ ॥ ೭೨ ॥ ಧಾರಯೇಚ್ಛಿವನಿರ್ಮಾಲ್ಯಮಿತಿವಾಕ್ಯಪ್ರಮಾಣತಃ । ಶಿವದೀಕ್ಷಾವತಾಂಶಂಭೋರ್ನಿರ್ಮಾಲ್ಯಸ್ಯಚ ಧಾರಣಂ ॥ ೭೩ ॥ ದರ್ಶನಸ್ಪರ್ಶನಾದೀನಿವೀರಸದ್ಭಕ್ತಿಹೇತವಃ । ಅನರ್ಹಾಣಾಂ ಭವೇನ್ನಾಮಪ್ರಸಾದೋಽನರ್ಹಏವಹಿ ॥ ೭೪ ॥ ಶುದ್ಧಾನಾಂಶಿವಭಕ್ತಾನಾ

---

ಪ್ರಕಾರವಾಗಿ ಸ್ಥಾಪಿಸಲ್ಪಟ್ಟ ಈ ತ್ರಿವಿಧಲಿಂಗಗಳ ಪ್ರಸಾದಕ್ಕೆ ಮಾತ್ರ ಚಂಡೇಶನು ಅಧಿಕಾರಿಯು. ಎಂಬ ವಚನವಿರುವುದರಿಂದ ಬಾಣಲಿಂಗಾದಿಗಳನ್ನು ಬಿಟ್ಟು ಭೂಮಿಯಲ್ಲಿ ಸುರಮುನಿ ನರರುಗಳಿಂದ ಸ್ಥಾಪಿಸಲ್ಪಟ್ಟ ತ್ರಿಲಿಂಗಗಳ ನಿರ್ಮಾಲ್ಯವು ಚಂಡದ್ರವ್ಯವೆಂದು ಆಗಮಗಳಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುವುದು ॥ ೬೮ ॥ ಹಿಂದಣ ಸಂಧ್ಯಾಕಾಲದಲ್ಲಿ ಪೂಜೆಮಾಡುವಾಗ ಸ್ವೀಕರಿಸದೆ ಬಿಟ್ಟುಬಿಟ್ಟಿರುವ ದ್ರವ್ಯವನ್ನು “ ಬಹಿಃಕ್ಷಿಪ್ತನಿರ್ಮಾಲ್ಯ „ ವೆಂದು ಸ್ಪಷ್ಟವಾಗಿ ತಿಳಿಯಬೇಕು ॥ ೬೯ ॥ ಹೀಗೆ ಇಟ್ಟುಬಿಟ್ಟುದು ಅನ್ಯದ್ರವ್ಯವಾದುದರಿಂದ ಸ್ವೀಕಾರಕ್ಕೆ ಅನರ್ಹವಾದುದು. ಸಕಲ ಪಿಶಾಚಗಳಿಗೂ ಇದನ್ನು ಪರಿಗ್ರಹಿಸುವುದಕ್ಕೆ ಸದಾ ಅಧಿಕಾರವಿರುವುದು ॥ ೭೦ ॥ ಹೀಗೆ ಆರುತರನಾಗಿರುವ ನಿರ್ಮಾಲ್ಯಗಳಲ್ಲಿ ನಿವೇದಿತವೆಂಬ ನಿರ್ಮಾಲ್ಯವುಮಾತ್ರ ಭಕ್ತರಿಂದ ಪರಿಗ್ರಹಿಸಲ್ಪಡುವುದಕ್ಕೆ ಅರ್ಹವಾದುದು. ಆದುದರಿಂದ ಭಕ್ತರಹೊರತು ಉಳಿದ ದುರಾಶೆಯ ಮನಸ್ಸಿನ ಪಾಪದೇಹಿಗಳು. ನಿರ್ಮಾಲ್ಯದ ಧಾರಣ ಸ್ಪರ್ಶನ ದರ್ಶನ ಉಲ್ಲಂಘನ ಮೊದಲಾದುವುಗಳನ್ನು ಮಾಡಲೇಕೂಡದು. ಬಂದುವೇಳೆ ಮಾಡಿದರೆ ಅದು ಪಾಪಕ್ಕೆ ಕಾರಣವಾಗುವುದು ॥ ೭೨ ॥ “ ಶಿವನಿರ್ಮಾಲ್ಯವನ್ನು ಧರಿಸಬೇಕು „ ಎಂಬ ವಚನಪ್ರಮಾಣವಿರುವುದರಿಂದ, ಶಿವದೀಕ್ಷಾವಂತರುಗಳು ಶಿವನಿರ್ಮಾಲ್ಯದ ಧಾರಣ ದರ್ಶನಸ್ಪರ್ಶನಾದಿಗಳನ್ನು ಮಾಡಿದರೆ, ಅವು ವೀರಭಕ್ತಿಯನ್ನು ಹುಟ್ಟಿಸಲು ಕಾರಣವಾಗುವುವು. ಶಿವದೀಕ್ಷಾಸಂಸ್ಕಾರವಿಲ್ಲದೆ ಅನರ್ಹರಾಗಿರುವವರಿಗೆ ಶಿವಪ್ರಸಾದವು

ಮನರ್ಹಾಃಕಿಂಮಹಾತ್ಮನಾಂ । ಅಸ್ಮಿನ್ನರ್ಥೇವ್ಯಾಸವಚಸ್ಸಂಪ್ರದಾಯಃ
ಪ್ರದರ್ಶ್ಯತೇ ॥ ೩೫ ॥ ವೇದಾನಾಂಸಂಮತೇಶೈವಸಂಪ್ರದಾಯಪ್ರತಿಷ್ಠಿ
ತೇ । ವ್ಯಾಸಜೈಮಿನಿಸಂವಾದೇಗ್ರಂಥೇಲೋಕೇಷುವಿಶ್ರುತೇ ॥ ೩೬ ॥
ಅನರ್ಹಂಮಮನೈವೇದ್ಯಂಪಾದಾಂಬುಕುಸುಮಂದಳಂ। ಇತೀಶ್ವರೇಣಕ
ಥಿತಮಿತಿಕೇಚಿನ್ಮಹರ್ಷಯಃ ॥ ೩೭ ॥ ವದಂತಿತತ್ಕಥಂಸ್ವಾಮಿನ್ಯಥಾರ್ಥಂ
ಕಥಯಸ್ವಮೇ । ಇತಿ ಜೈಮಿನಿನಾಪೃಷ್ಟೋವೇದವ್ಯಾಸೋಮಹಾಮು
ನಿಃ ॥ ೩೮ ॥ ಏವಂಹಿಕಥಯಾಮಾಸಜೈಮಿನೇಸ್ಸಮ್ಯಗುತ್ತರಂ । ದೇವ
ದೇವಸ್ಯವಚಸೋವಿಷಯೋಯಂಹಿಜೈಮಿನೇ ॥ ೩೯ ॥ ಯೇವೀರಭದ್ರ
ಶಪ್ತಾಶ್ಶಿವಭಕ್ತಿಪರಾಙ್ಮುಖಾಃ । ಶಂಭೋರನ್ಯತ್ರದೇವೇಷುಯೇಭಕ್ತಾ
ಯೇನದೀಕ್ಷಿತಾಃ ॥ ೪೦ ॥ ಯೇದುಶ್ಶಬ್ದಕರ್ಮಾಣಶ್ಶಂಭೋರನ್ಯತ್ರಸಮಬು
ದ್ಧಯಃ। ತೇಷಾಮನರ್ಹಮಿತ್ಯುಕ್ತಸ್ತತ್ಪ್ರಸಾದಚತುಷ್ಟಯಂ ॥ಇತಿ॥
ಅಪಿಚಾನ್ಯತ್ರಚೋವಾಚಭಗವಾನ್ಪರಮೇಶ್ವರಃ।ಮದೀಯಭುಕ್ತನಿರ್ಮಾ
ಲ್ಯಂಪಾದಾಂಬುಕುಸುಮಂದಳಂ ॥೪೧॥ ಧರ್ಮಮರ್ಥಂಚಕಾಮಂಚಮೋ
ಕ್ಷಂಚದದತೇಕ್ರಮಾತ್ । ಮಲ್ಲಿಂಗಧಾರಿಣೋಲೋಕೇದೇಶಿಕಾಮತ್ಪರಾ

---

ಅನರ್ಹವೇಸರಿ. ॥ ೩೪ ॥ ಆದರೆ ಶುದ್ಧರೂ ಮಹಾತ್ಮರೂ ಆದ ಶಿವಭಕ್ತರಿಗೆ ಅದು ಅನರ್ಹವಾಗವುದೆ ? ಈ ವಿಷಯದಲ್ಲಿ ವೇದವ್ಯಾಸರ ವಚನಪರಂಪರೆಯನ್ನು ತೋರಿಸುತ್ತೇನೆ ॥ ೩೫ ॥—ವೇದಸಮ್ಮತವಾಗಿರುವ ಶೈವಸಂಪ್ರದಾಯವನ್ನು ಸಿದ್ಧಾಂತಪಡಿಸಿರುವ, ಲೋಕವಿಖ್ಯಾತವಾದ ವ್ಯಾಸಜೈಮಿನಿಸಂವಾದವೆಂಬ ಗ್ರಂಥದಲ್ಲಿ,—" ನನ್ನನೈವೇದ್ಯವಾದ ಪಾದತೀರ್ಥ ಹೂವುಪತ್ರಗಳು ಅನರ್ಹವಾದುವುಗಳು, ಎಂದು ಶಿವನು ಹೇಳಿರುವನೆಂಬುದಾಗಿ ಕೆಲಮಹರ್ಷಿಗಳು ನುಡಿಯುವರು. ಆದರೆ ನಿಜಸ್ಥಿತಿಯು ಹೀಗೆಂಬುದನ್ನು ನನಗೆ ಹೇಳು, ಎಂಬುದಾಗಿ ಜೈಮಿನಿಯು ಪ್ರಶ್ನೆಮಾಡಲು ವೇದವ್ಯಾಸನು ಜೈಮಿನಿಗೆ ಹೀಗೆ ಚೆನ್ನಾಗಿ ಉತ್ತರವನ್ನು ಹೇಳಿರುವನು—ಎಲೈಮುನಿಯೆ ! ಪರಶಿವನವಚನಕ್ಕೆ ಇದೀಗಅಭಿಪ್ರಾಯ : ಏನೆಂದರೆ—॥ ೩೯ ॥ ಯಾರು ದಕ್ಷಯಾಗದಲ್ಲಿ ವೀರಭದ್ರೇಶನಿಂದ ಶಾಪವನ್ನು ಹೊಂದಿ ಶಿವಭಕ್ತಿವಿಮುಖರಾಗಿರುವರೊ, ಯಾರು ಶಿವನನ್ನು ಬಿಟ್ಟು ಇತರದೇವತೆಗಳಲ್ಲಿ ಭಕ್ತಿಯುಳ್ಳವರಾಗಿರುವರೊ, ಯಾರು ದೀಕ್ಷಾರಹಿತರಾಗಿರುವರೊ, ಯಾರು ದುಷ್ಕರ್ಮಿಗಳೊ, ಯಾರು ಶಿವನಲ್ಲೂ ತದಿತರರಲ್ಲೂ ಸಮಾನಬುದ್ಧಿಯುಳ್ಳವರೊ ಅವರುಗಳಿಗೆ ೪ ತೆರದ ಪ್ರಸಾದಗಳೂ ಅನರ್ಹವಾದುದು, ಎಂಬುವುದು ॥ ೪೧ ॥ ಮತ್ತು ಪರಶಿವನೇ ಮತ್ತೊಂದು ಕಡೆಯಲ್ಲಿ " ನಾನು ಭುಂಜಿಸಿದ ನಿರ್ಮಾಲ್ಯವೂ, ಪಾದತೀರ್ಥವೂ, ಪುಷ್ಪವೂ ಪತ್ರಗಳೂ ಕ್ರಮವಾಗಿ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕೊಡುವುವು. ಲೋಕದಲ್ಲಿ

ಯಃ ಣಾಃ॥ಮದೇಕಶರಣಾಸ್ತೇಷುಯೋಗ್ಯಂನೈವಾನ್ಯಜಂತುಷು ॥ಇತಿ॥ ಅಮುಮರ್ಥಂಮನುಃಪ್ರಾಹತದ್ವಚಶ್ಚಪ್ರದರ್ಶ್ಯತೆ ॥೪೪॥ ಶೂದ್ರಾನ್ನಂ ಸೂತಕಸ್ಯಾನ್ನಂನೈವೇದ್ಯಂಶ್ರಾದ್ಧಮೇವಚ । ಪತಿತಾನ್ನಂಸಮೂಹಾನ್ನಂರಾಜಾನ್ನಂಚೈವವರ್ಜಯೇತ್ ॥ಇತಿ ॥೪೫॥ ಅಸ್ಯಾರ್ಥಃಕಥ್ಯತೇಽ ಸ್ಮಾಭಿಃಪೂರ್ವಾಚಾರ್ಯಾನುಸಾರತಃ । ಶೂದ್ರಾನ್ನಂಕ್ಷತ್ರಿಯೈರ್ವಿಪ್ರೈ ರ್ವೈಶ್ಯೈಸ್ತ್ಯಾಜ್ಯಂನಚೇತರೈಃ ॥ ೪೬ ॥ ಪರಿತ್ಯಾಜ್ಯಂಸೂತಕಾನ್ನಂ ಜ್ಞಾತ್ಯನ್ಯೈರ್ನಜ್ಞಾತಿಭಿಸ್ಸದಾ । ನೈವೇದ್ಯಶಬ್ದಸ್ತ್ರಿವಿಧಂನೈವೇದ್ಯಂ ಪರಿಚಕ್ಷತೆ ॥ ೪೭ ॥ ನೈವೇದ್ಯಂವಿಷ್ಣುನಾಭುಕ್ತಮಿತಿಸ್ಕಾಂದಸ್ಯಭಾಷಿ ತಾತ್ । ನಿಷೇಧೋವಿಷ್ಣುಭುಕ್ತಸ್ಯನೈವೇದ್ಯಸ್ಯಪ್ರಕೀರ್ತಿತಃ॥೪೮॥ ಶ್ರೌತಾನುವರ್ತಿನಾಮೇವ ತಥಾಸ್ಮಾರ್ತಾನುವರ್ತಿನಾಂ । ಯತ್ಸಂಕಲ್ಪಿತ ಮೀಶಾಯತನ್ನೈವೇದ್ಯಮಿತೀರಣಾತ್ ॥ ೪೯ ॥ ನೈವೇದ್ಯಂಪುರತೋ ನ್ಯಸ್ತಮಿತಿವಾಕ್ಯಾದಪಿಸ್ಫುಟಾತ್ । ನಿಷೇಧಸ್ಸರ್ವಜಾತೀನಾಮುದ್ದಿಷ್ಟ ಸ್ಯಪ್ರತೀಶ್ವರಂ ॥ ೫೦ ॥ ನೈವೇದ್ಯಸ್ಯಪ್ರಕಥಿತಶ್ಶಾಸ್ತ್ರೇಷುನಿಖಿಲೇ ಷ್ವಪಿ । ನಿರ್ಮಾಲ್ಯಂ ಧಾರಯೇನ್ಮೂರ್ಧ್ನಿನೈವೇದ್ಯಂ ಚಾಪಿಭಕ್ಷಯೇತ್

---

ಯಾರು ಲಿಂಗವನ್ನು ಧರಿಸಿ, ನನ್ನಲ್ಲೇ ಆಸಕ್ತರಾಗಿ, ನನ್ನೊಬ್ಬನನ್ನೇ ಸಂರಕ್ಷಕ ನನ್ನಾಗಿ ಹೊಂದಿರುವರೊ, ಅಂಥಾ ಗುರೂತ್ತಮರಿಗೆ ಮಾತ್ರ ನಿರ್ಮಾಲ್ಯಪಾದತೀರ್ಥ ಮೊದಲಾದುವುಗಳು ಅರ್ಹವು, ಇತರಪ್ರಾಣಿಗಳಿಗೆ ಅವು ಅರ್ಹವಲ್ಲ,, ಎಂದು ಹೇಳಿರುವನು. ಈ ಅಭಿಪ್ರಾಯವನ್ನೂ ಮನುವು ಹೇಳಿರುವನು, ಆವಾಕ್ಯವ ನ್ನು ಉದಹರಿಸುತ್ತೇನೆ ॥ ೪೪ ॥ ಶೂದ್ರನ ಅನ್ನವನ್ನು ಸೂತಕಿಯ ಅನ್ನವನ್ನು, ನೈವೇದ್ಯವನ್ನು, ಶ್ರಾದ್ಧಾನ್ನವನ್ನು, ಪತಿತನ ಅನ್ನವನ್ನು, ಸಂಘದಅನ್ನವನ್ನು, ರಾ ಜನ ಅನ್ನವನ್ನು ಕೂಡ ಬಿಡಬೇಕು, ಎಂಬುದಾಗಿ ॥೪೫॥ ಇದರ ಅಭಿಪ್ರಾಯವನ್ನು ಪೂರ್ವಾಚಾರ್ಯರನ್ನನುಸರಿಸಿ ನಾವು ಹೇಳುತ್ತೇವೆ:—ಶೂದ್ರನಅನ್ನವನ್ನು ಬ್ರಾಹ್ಮ ಣ ಕ್ಷತ್ರಿಯ ವೈಶ್ಯರು ಬಿಡಬೇಕು. ಇತರರಲ್ಲ. ಸೂತಕಿಯ ಅನ್ನವನ್ನು ಅವನ ಜ್ಞಾತಿಗಳಲ್ಲದ ಇತರ ಜನರು ಬಿಡಬೇಕೇಹೊರತು, ಜ್ಞಾತಿಗಳು ಬಿಡಬೇಕೆಂದಲ್ಲ ನೈವೇದ್ಯವು ಮೂರುಪ್ರಕಾರವು ॥ ೪೭ ॥ ವಿಷ್ಣುವಿನಿಂದ ಭುಂಜಿಸಲ್ಪಟ್ಟಿದ್ದುದು ನೈ ವೇದ್ಯವೆಂಬುದಾಗಿ ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿರುವುದರಿಂದ, ಶ್ರೌತಸ್ಮಾರ್ತಾನು ವರ್ತಿಗಳಾದವರಿಗೇ ಅಂತಹ ನೈವೇದ್ಯನಿಷೇಧವು ಹೇಳಲ್ಪಟ್ಟಿರುವುದು. ಮತ್ತು ಶಿ ವನಿಗೋಸ್ಕರವೆಂದು ಮನಸ್ಸಿನಲ್ಲಿ ನಿಶ್ಚೈಸಲ್ಪಟ್ಟಿದ್ದುದೂ ಶಿವನಮುಂದೆ ಇಡಲ್ಪಟ್ಟಿ ದ್ದೂಕೂಡ ನೈವೇದ್ಯವೆಂದು ಹೇಳಲ್ಪಟ್ಟಿರುವುದರಿಂದ ಈಶ್ವರನನ್ನುದ್ದೇಶಿಸಿಟ್ಟದ್ದ ಅಂ ತಹ ಸಕಲಜಾತಿಯ ನೈವೇದ್ಯದ ನಿಷೇಧವೇ ಸಕಲಶಾಸ್ತ್ರಗಳಲ್ಲೂ ಮಾಡಲ್ಪಟ್ಟಿರು

॥ ೫೧ ॥ ಇತ್ಯುಕ್ತ್ವಾಶಂಭುನೈವೇದ್ಯನಿಷೇಧಃಪರಿಕೀರ್ತಿತಃ । ಶಿವ ಸಂಸ್ಕಾರಹೀನಾನಾಂಪ್ರಾಕೃತಾನಾಂನಸಂಶಯಃ ॥ ೫೨ ॥ ಶ್ರಾದ್ಧಾನ್ನ ಸ್ಯನಿಷೇಧಸ್ತುಸರ್ವಶಾಸ್ತ್ರೇಷುಕೀರ್ತಿತಃ । ಶ್ರೌತಸ್ಮಾರ್ತ ಸದಾ ಚಾರರಹಿತಾನಾಂದುರಾತ್ಮನಾಂ ॥೫೩॥ ಪತಿತಾನ್ನಸಮೂಹಾನ್ನರಾಜಾ ನ್ನಾನಾಂಮಹೀತಳೇ। ನಿಷೇಧಃಕಥಿತಸ್ಸಮ್ಯಕ್ಸದಾಚಾರಾನುವರ್ತಿನಾಂ ॥ ೫೪ ॥ ನಿರ್ಮಾಲ್ಯಲಂಘನೇದೋಷೋಧಾರಣೇಚವಿಶೇಷತಃ । ಇತ್ಯೇ ತದ್ವಚನಂಶೈವಪುರಾಣೇಪರಿಕೀರ್ತಿತಂ॥೫೫॥ ನಧಾರಯೇತ್ಕ್ವಚಿಚ್ಛಂ ಭೋರ್ನಿರ್ಮಾಲ್ಯಂಚನಭಕ್ಷಯೇತ್ । ಇತೀಯಂವಾಗಪಿಶಿವರಹಸ್ಯೇಸ ಮುದೀರಿತಾ ॥ ೫೬ ॥ ನಿರ್ಮಾಲ್ಯಂಚನಿವೇದ್ಯಂಚವಿಶೇಷೇಣ ವಿವರ್ಜ ಯೇತ್ । ರುದ್ರೇಣಭುಕ್ತಂನಿರ್ಮಾಲ್ಯಂತಥಾನ್ಯೈರ್ದೇವತಾಂತರೈಃ ॥೫೭॥ ನೈವೇದ್ಯಂವಿಷ್ಣುನಾಭುಕ್ತಮಮೃತಂ ಚಾನ್ಯದೈವತೈಃ। ನಿರ್ಮಾಲ್ಯಂಚ ನಿವೇದ್ಯಂಚಭುಕ್ತ್ವಾಚಾಂದ್ರಾಯಣಂಚರೇತ್ ॥೫೮॥ ಇತೀದಂವಚನಂ ಸ್ಕಂದಪುರಾಣೇಕಥಿತಂಶುಭಂ।ಏಷಾಂಪುರಾಣವಚಸಾಮರ್ಥಂಸಮ್ಯಗ್ವಿ ನಿಶ್ಚಿತಂ ॥೫೯॥ ವಕ್ಷ್ಯೇಶಿವಪುರಾಣಸ್ಯ ವಚಸಾಶ್ರುಣುತದ್ವಿಜಾಃ। ನಿ

---

ವುದು. ನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಬೇಕು, ನೈವೇದ್ಯವನ್ನು ಭಕ್ಷಿಸಬೇಕು. ಎಂದುಹೇಳಿ, ಬಳಿಕ ಶಿವನಿರ್ಮಾಲ್ಯದ ನಿಷೇಧವು ಹೇಳಲ್ಪಟ್ಟಿರುವುದು. ಈ ನಿಷೇ ಧವು ಶಿವದೀಕ್ಷಾಹೀನರಾದ ಪ್ರಾಕೃತರಿಗೆ ಹೇಳಲ್ಪಟ್ಟಿರುವುದೆಂಬುದು ನಿಸ್ಸಂಶಯವು ॥ ೫೨ ॥ ಶ್ರಾದ್ಧಾನ್ನದ ನಿಷೇಧವು ಸಕಲಶಾಸ್ತ್ರಗಳಲ್ಲೂ ಹೇಳಲ್ಪಟ್ಟದೆ. ಯಾರಿ ಗೆ ? ಶ್ರೌತಸ್ಮಾರ್ತಸದಾಚಾರ ರಹಿತರಾದ ದುರಾತ್ಮರಿಗೆ ॥ ೫೩ ॥ ಪತಿತಾನ್ನ ಸಂ ಘಾನ್ನ ರಾಜಾನ್ನಗಳ ನಿಷೇಧವು ಹೇಳಲ್ಪಟ್ಟದೆ. ಯಾರಿಗೆ ? ಸದಾಚಾರಸಂಪನ್ನರಿಗೆ ॥ ೫೪ ॥ ನಿರ್ಮಾಲ್ಯವನ್ನು ದಾಟದರೆ ದೋಷವೆಂತಲೂ, ಅದನ್ನು ಧರಿಸಿದರೆ ಇನ್ನೂ ಹೆಚ್ಚುದೋಷವೆಂತಲೂ, ಶೈವಪುರಾಣ ವಚನವಿರುವುದು ॥ ೫೫ ॥ ಶಿವನ ನಿರ್ಮಾ ಲ್ಯವನ್ನು ಎಲ್ಲಾದರೂ ಧರಿಸಕೂಡದು, ನಿರ್ಮಾಲ್ಯವನ್ನೂಕೂಡ ಭುಂಜಿಸಬಾರದು. ಎಂಬ ಈ ವಚನವೂಕೂಡ ಶಿವರಹಸ್ಯದಲ್ಲಿ ಹೇಳಲ್ಪಟ್ಟಿರುವುದು. ॥ ೫೬ ॥ ನಿ ರ್ಮಾಲ್ಯವನ್ನೂ ನೈವೇದ್ಯವನ್ನೂ ಪೂರ್ಣವಾಗಿ ಬಿಟ್ಟುಬಿಡಬೇಕು. ರುದ್ರನು ಭುಂ ಜಿಸಿದುದೇ ನಿರ್ಮಾಲ್ಯವು. ಇತರದೇವತೆಗಳು ಭುಂಜಿಸಿದುದು ನೈವೇದ್ಯವು. ವಿಷ್ಣು ವು ಭುಂಜಿಸಿದ ಅಮೃತವು ನಿರ್ಮಾಲ್ಯವು, ಇತರದೇವತೆಗಳು ಭುಂಜಿಸಿದುದು ನೈವೇ ದ್ಯವು. ಇಂತಹ ನಿರ್ಮಾಲ್ಯನೈವೇದ್ಯಗಳನ್ನು ಭುಂಜಿಸಿದವನು ಚಾಂದ್ರಾಯಣವ್ರತ ವನ್ನಾಚರಿಸಬೇಕು ॥ ೫೮ ॥ ಈ ಮಂಗಳವಾಕ್ಯವು ಸ್ಕಾಂದಪುರಾಣದಲ್ಲಿ ಹೇಳಲ್ಪ ಟ್ಟಿರುವುದು, ಎಲೆ ಬ್ರಾಹ್ಮಣರೆ ! ಈ ಪುರಾಣವಾಕ್ಯಗಳೆಗೆಲ್ಲಾ ಚೆನ್ನಾಗಿ ಗೊತ್ತಾ

ರ್ಮಾಲ್ಯಂನಿರ್ಮಲಂಶುದ್ಧಂನಿರ್ಮಲತ್ವಾದನಿಂದಿತಂ ॥ ೬೦ ॥ ತಸ್ಮಾದಭೋಜ್ಯಂ ನಿರ್ಮಾಲ್ಯಂಮಾ ಪ್ರಾಕೃತೈರಶಿವಾತ್ಮಭಿಃ । ಲೋಭಾನ್ನಧಾರಯೇಚ್ಛಂಭೋರ್ನಿರ್ಮಾಲ್ಯಂನಚಭಕ್ಷಯೇತ್ ॥ ೬೧ ॥ ನಿರ್ಮಾಲ್ಯಲಂಘನಾಚ್ಛಂಭೋರ್ಬುದ್ಧಿಭ್ರಂಶೋಽಭಿಜಾಯತೇ । ಜಿಹ್ವಾಚಾಪಲಸಂಯುಕ್ತಶ್ಶಿವ ಸಂಸ್ಕಾರವರ್ಜಿತಃ ॥ ೬೨ ॥ ಶಿವನಿರ್ಮಾಲ್ಯಭೋಗೀಚೇದ್ಘೋರವಂನರಕಂವ್ರಜೇತ್ । ಇತಿಶೈವಪುರಾಣಸ್ಯವಚಸಾಪರಮೇಶಿತುಃ ॥ ೬೩ ॥ನಿರ್ಮಾಲ್ಯಸ್ಯಾತಿಶುದ್ಧಸ್ಯನಿಷೇಧಃಪರಿಕೀರ್ತಿತಃ । ಪ್ರಾಕೃತಾನಾಮಶಿವಪೂಜಾಹೀನಾನಾಮೇವಸರ್ವತಃ ॥ ೬೪ ॥ ನಿಷೇಧಾಯೇಶಭಕ್ತಾನಾಂನ ಭವೇತ್ಯೇವಸರ್ವದಾ । ಇತ್ಯಾದಿಶಂಭುನಿರ್ಮಾಲ್ಯನಿಷೇಧವಚಸಾಂಪರಂ॥ ತಾತ್ಪರ್ಯಾರ್ಥಮಜಾನಂತಶ್ಶೈವಾಃಕೇಚಿದವೈದಿಕಾಃ । ಮಹೇಶ್ವರಸ್ಯ ನೈವೇದ್ಯಮಭೋಜ್ಯಂತದ್ವದೇವಹಿ ॥ ೬೬ ॥ ಅಧಾರ್ಯಮಸ್ಪೃಶ್ಯಮಿತಿವದಂತಿಪರಿಮೋಹಿತಾಃ । ವಚನಾತ್ಸಾಮಾನ್ಯನಿರ್ದಿಷ್ಟಾದ್ವಿಶೇಷೋ ಬಲವಾನಿತಿ ॥ ೬೭ ॥ ಪ್ರವೃತ್ತಿರ್ವಚನಾತ್ತದ್ವನ್ನಿವೃತ್ತಿರ್ವಚನಾದಿತಿ । ವಾಕ್ಯಪ್ರಮಾಣಾದಪಿತನ್ನಿಷೇಧವಚನಾನಿಹಿ ॥ ೬೮ ॥ ಪಾತಕಾ

---

ಗಿರುವ ಅರ್ಥವನ್ನು ಶಿವಪುರಾಣದ ವಾಕ್ಯದಿಂದ ಹೇಳುತ್ತೇನೆ ಕೇಳಿರಿ. ನಿರ್ಮಾಲ್ಯವು ನಿರ್ಮಲವಾಗಿರುವುದರಿಂದ ಅದು ಪರಿಶುದ್ಧವಾದುದು. ಮತ್ತು ನಿರ್ದುಷ್ಟವಾದುದು ॥೬೦॥ ಆದುದರಿಂದ ಶಿವಸ್ವರೂಪರಲ್ಲದ ಪ್ರಾಕೃತರಿಂದ ನಿರ್ಮಾಲ್ಯವು ಭುಂಜಿಸಲ್ಪಡುತಕ್ಕುದಲ್ಲ. ದುರಾಸೆಯಿಂದ ಶಿವನಿರ್ಮಾಲ್ಯವನ್ನು ಧರಿಸಬಾರದು. ಮತ್ತು ಭಕ್ಷಿಸಲು ಬಾರದು ॥೬೧॥ ಶಿವನಿರ್ಮಾಲ್ಯವನ್ನು ದಾಟುವುದರಿಂದ ಬುದ್ಧಿಯು ಗಳಿತವಾಗಿಹೋಗುವುದು. ಶಿವಸಂಸ್ಕಾರ ವಿಲ್ಲದವನು ನಾಲಿಗೆಯ ತೀಂಟೆಯುಳ್ಳವನಾಗಿ ಶಿವನಿರ್ಮಾಲ್ಯವನ್ನು ಭುಂಜಿಸಿದರೆ ಭೀಕರ ನರಕವನ್ನು ಹೊಂದುವನು. ಎಂಬುದಾಗಿ ಶಿವಪುರಾಣದ ವಾಕ್ಯದಿಂದ ಅತ್ಯಂತ ಪರಿಶುದ್ಧವಾದ ಶಿವನ ನಿರ್ಮಾಲ್ಯ ನಿಷೇಧವು ಎಲ್ಲಾ ಕಡೆಯಲ್ಲೂ ಶಿವಪೂಜಾರಹಿತರಾದ ಪ್ರಾಕೃತರಿಗೆ ಹೇಳಲ್ಪಟ್ಟಿರುವುದೇಹೊರತು ಶಿವಭಕ್ತರಿಗೆ ಅಂತಹ ನಿರ್ಮಾಲ್ಯದ ನಿಷೇಧಕ್ಕಾಗಿ ಅಲ್ಲ. ಶಿವನಿರ್ಮಾಲ್ಯವನ್ನು ನಿಷೇಧಿಸುವ ಇದು ಮೊದಲಾದ ವಚನಗಳ ತಾತ್ಪರ್ಯಾರ್ಥವನ್ನು ತಿಳಿಯದಿರುವ ಅವೈದಿಕರಾದ ಕೆಲವು ಶೈವರು "ಶಿವನ ನೈವೇದ್ಯವು ಭುಂಜಿಸತಕ್ಕುದಲ್ಲ ಹಾಗೆಯೆ ಧರಿಸಲ್ಪಡುತಕ್ಕುದೂ ಅಲ್ಲ. ಮುಟ್ಟತಕ್ಕುದೂಅಲ್ಲ" ಎಂದು ಅಜ್ಞಾನಮೋಹಿತರಾಗಿ ನುಡಿಯುತ್ತಾರೆ. ಸಾಮಾನ್ಯವಿಧಿ ವಚನಕ್ಕಿಂತಲೂ ವಿಶೇಷವಿಧಿ ವಚನವು ಬಲವುಳ್ಳದ್ದೆಂಬುದಾಗಿಯೂ, ಸಾಮಾನ್ಯವಚನದಿಂದ ಪ್ರವೃತ್ತಿ. ವಿಶೇಷ ವಚನದಿಂದ ನಿವೃತ್ತಿಯೆಂಬುದಾಗಿಯೂ ಇರುವ ಪ್ರಮಾಣವಾಕ್ಯಗಳಿಂದ ನಿಷೇಧಪರವಾದ ವಚನಗಳು ಅಸಂಸ್ಕಾ

ನಿವಚಾಂಸೀತಿಕಥ್ಯಂತೇನಾತ್ರಸಂಶಯಃ । ಶಿವಪ್ರಸಾದಸ್ಸತತಮಭೋ
ಜ್ಯೋಭೋಜ್ಯಇತ್ಯಯಂ ॥ ೧೯ ॥ ಆಕ್ರೋಶಂತ್ಯಾಗಮಜ್ಞಾನಾಂ
ವಿಷಯೊಕುರುತೇಽಶುಚೀನ್ । ತೇಷಾಮನಧಿಕಾರಿತ್ವಾದುಪಯೋಗೇಹಿತ
ಸ್ಯತು ॥ ೨೦ ॥ ತಸ್ಮಾತ್ತಚ್ಛಿವನಿರ್ಮಾಲ್ಯಮಭೋಜ್ಯಂಶುದ್ಧಿವರ್ಜಿತೈಃ ।
ಅಮುಮರ್ಥಂಕಾಮಿಕಾಖ್ಯೋವಕ್ತಿಶೈವಾಗಮೋಮಹಾನ್ ॥ ೨೧ ॥ ಅ
ಶುದ್ಧಾತ್ಮಾಽಶುಚಿರ್ಲೋಭಾನ್ಮದ್ಭುಕ್ತಂಪಾವನಂಪರಂ । ಭಕ್ಷಯೇನ್ನಾಶ
ಮಾಪ್ನೋತಿಶೂದ್ರೋಽಹ್ಯಧ್ಯಯನಾದಿವ ॥ ೨೨ ॥ ಕಥಯತ್ಯಮುಮೇ
ವಾರ್ಥಂಶಿವಧರ್ಮೋಪಿನಿಶ್ಚಿತಂ । ನಿರ್ಮಾಲ್ಯಂಧಾರಯೇನ್ಮೂರ್ಧ್ನಿಭಕ್ತ್ಯಾ
ಲೋಭಾನ್ನಧಾರಯೇತ್ ॥ ೨೩ ॥ ನಿರ್ಮಲತ್ವಾಚ್ಚನಿರ್ಮಾಲ್ಯಂಮಲದೇ
ಹೀನಧಾರಯೇತ್ । ಇತಿ । ಶುಚಿಭಿಶ್ಶಿವನಿರ್ಮಾಲ್ಯಂಭೋಜ್ಯಂಶುದ್ಧಾ
ತ್ಮಭಿಸ್ಸ್ಮೃತಃ ॥ ೨೪ ॥ ಶುದ್ಧವಸ್ತೂಪಭೋಗೇಹಿಶುದ್ಧಾಏವಾಧಿಕಾರಿ
ಣಃ । ಅಯಮರ್ಥೋನಿಗದಿತೋಹರದತ್ತಾರ್ಯ ದೇಶಿಕೈಃ ॥ ೨೫ ॥ ಯ
ದ್ಬ್ರಾಹ್ಮಣಸ್ತ್ವಮಸಿನಾಕಸದಾಂನಿಕಾಯೇತುಭ್ಯಂನಿವೇದಿತಮಭೋ
ಜ್ಯಮತಸ್ಸ್ಮರಂತಿ । ಉಚ್ಛಿಷ್ಟಮೀಶ್ವರನಿಶಿಷ್ಟಮಪಿದ್ವಿಜಾನಾಂಭೋ

---

ರಿಗಳಾದ ಪಾತಕಿಗಳ ವಿಷಯಕವಾದುದೆಂದು ಹೇಳಲ್ಪಡುತ್ತವೆ. ಸಂಶಯವಿಲ್ಲ. ಭುಂಜಿಸಲರ್ಹವಾದ ಶಿವಪ್ರಸಾದವನ್ನು ಭುಂಜಿಸಕೂಡದೆಂದು ಆಗಮಜ್ಞರು ಅಶುದ್ಧರಾದವರವಿಷಯವಾಗಿ, ಆಕ್ರೋಶಪಡುವರು. ಏಕೆಂದರೆ ಅದನ್ನು ಪಯೋಗಿಸುವುದಕ್ಕೆ ಮಲಿನಾತ್ಮರಿಗೆ ಅಧಿಕಾರವಿಲ್ಲ ॥೨೦॥ ಆದುದರಿಂದ ಆ ಶಿವನಿರ್ಮಾಲ್ಯವು ಅಶುದ್ಧರಾದವರಿಂದಭುಂಜಿಸಲ್ಪಡುತಕ್ಕುದಲ್ಲ. ಈ ಅರ್ಥವನ್ನು ಕಾಮಿಕವೆಂಬ ದೊಡ್ಡ ಶಿವಾಗಮವು ಹೇಳುತ್ತದೆ.—ಶುದ್ಧಾತ್ಮನಲ್ಲದ ಕೊಳಕನು ನನ್ನಿಂದ ಭುಂಜಿಸಲ್ಪಟ್ಟ ಪರಿಶುದ್ಧವಾದ ನಿರ್ಮಾಲ್ಯವನ್ನು ದುರಾಶೆಯಿಂದ ತಿಂದುದೇಆದರೆ ವೇದಾಧ್ಯಯನದಿಂದ ಶೂದ್ರನಾದವನು ಕೆಡುವಹಾಗೆ ಕೆಟ್ಟುಹೋಗುತ್ತಾನೆ ॥೨೨॥ ಶಿವಧರ್ಮಪುರಾಣವು ನಿಶ್ಚಿತವಾದ ಇದೇ ಅರ್ಥವನ್ನೇ ಹೇಳುತ್ತದೆ, ಹೇಗೆಂದರೆ—ನಿರ್ಮಾಲ್ಯವನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಬೇಕು. ದುರಾಶೆಯಿಂದ ಧರಿಸಬಾರದು. ನಿರ್ಮಾಲ್ಯವು ನಿರ್ಮಲವಾದುದರಿಂದ ಅದನ್ನು ಪಾಪದೇಹಿಯು ಧರಿಸಬಾರದು. ಎಂಬುದಾಗಿ ನಿರ್ಮಲರಾಗಿರತಕ್ಕ ಪುಣ್ಯಾತ್ಮರು ಶಿವನಿರ್ಮಾಲ್ಯವನ್ನು ಭುಂಜಿಸಬೇಕು. ಶುದ್ಧ ವಸ್ತುಗಳನ್ನು ಸೇವಿಸುವುದಕ್ಕೆ ಪರಿಶುದ್ಧರೇ ಅಧಿಕಾರಿಗಳಲ್ಲವೆ ? ಈ ಅರ್ಥವನ್ನೇ ಹರದತ್ತಾಚಾರ್ಯರು ಹೇಳಿರುವರು. ಹೇಗೆಂದರೆ—ಎಲಾ ಪರಶಿವನೆ ! ನೀನು ಯಾವಕಾರಣದಿಂದ ದೇವತೆಗಳ ಸಮೂಹದಲ್ಲಿ ಬ್ರಾಹ್ಮಣನಾಗಿರುವೆಯೊ ಅದುಕಾರಣದಿಂದ ನಿನಗೆ ನಿವೇದಿಸಲ್ಪಟ್ಟವಸ್ತುವು ಬ್ರಾಹ್ಮಣೇತರರಿಂದ ಭುಂಜಿಸಲ್ಪಡತಕ್ಕುದಲ್ಲ. ಈ ಕಾರಣದಿಂ

ಮೌನಿಖೇಯಮಥವಾಂಭಸಿಮಜ್ಜನೀಯಂ ॥ ಇತಿ ॥ ತಥಾಚಾರ್ಥಮಿ
ಮಂಕಲ್ಪಸೂತ್ರಂಕಥಯತಿಸ್ಫುಟಂ ( ಬ್ರಾಹ್ಮಣಸ್ಸ್ವಕೀಯಮುಚ್ಛಿ
ಷ್ಟಮಪ್ಸ್ವವಾನಿಕ್ಷಿಪೇದ್ಭೂಮೌವಾನಿಖನೇತ್ಕಸ್ಮೈಚಿನ್ನದದ್ಯಾದ್ಯದಿ
ವಾದದ್ಯಾತ್ಪುತ್ರಾಯಶಿಷ್ಯಾಯವಾನಸೂಯವೇಧಾರ್ಮಿಕಾಯ ) ಇತಿ. ಅ
ಯಮರ್ಥೋನಿಗದಿತಃಕಾಮಿಕಾಖ್ಯೇಶಿವಾಗಮೇ ॥ ೭೬ ॥ ನೈವೇದ್ಯಂಮ
ಮತೂಚ್ಛಿಷ್ಟಂಭುಂಗ್ತೇಪ್ರತ್ಯಹಮಾದರಾತ್ । ಸೋಪಿಮತ್ಸದೃಶಃ
ಪ್ರೋಕ್ತಶ್ಚರುಭುಗ್ಯಸ್ತಥಾಭವೇತ್ ॥ ೭೭ ॥ ಇತಿ. ಅಶುದ್ಧಾನಾಂಶು
ದ್ಧವಸ್ತುಭೋಗೋದೋಷಾಯಸರ್ವದಾ । ಭವತೀತ್ಯಯಮೇವಾರ್ಥ
ಶ್ಶ್ರುತಿಸ್ಮೃತಿಷುಕಥ್ಯತೇ ॥ ೭೮ ॥ ಅಮುಮರ್ಥಂವಕ್ತಿಪುನರಾದಿ
ತ್ಯಾಖ್ಯಂಪುರಾಣಕಂ । ಶೂದ್ರಸ್ಯವೇದಾಧ್ಯಯನಮುಗ್ರಾದ್ಗ್ರಹಣಂ
ಯಥಾ ॥೭೯॥ ಇತಿ. ಮಾನವಾಖ್ಯಂಪುರಾಣಂಚಪ್ರವಕ್ತ್ಯರ್ಥಮಿಮಂ
ತಥಾ । ನಸ್ಪೃಶೇತಾಪ್ಣಿನೋಚ್ಛಿಷ್ಟಂವಿಪ್ರೋಗೋಬ್ರಾಹ್ಮಣಾನ
ಲಾನ್ ॥ ೮೦ ॥ ನಚಾಪಿಪಶ್ಯೇದಶುಚಿಸ್ಸ್ವಸ್ಥೋಜ್ಯೋತಿರ್ಗಣಾನ್ದಿವಿ ।
ವಟಾಶ್ವತ್ಥಾರ್ಕಪತ್ರೇಷುಕುಂಭೀತಿಂದುಕಪರ್ಣಯೋಃ ॥೮೧॥ ಪಲಾಶ

---

ದಲೇ ದ್ವಿಜರ ಉಚ್ಛಿಷ್ಟವು ಶ್ರೇಷ್ಠವಾದುದಾದರೂ ಅದನ್ನು ಭೂಮಿಯಲ್ಲಿ ಹೂಳ
ಬೇಕು ಅಥವಾ ನೀರಿನಲ್ಲಿ ಮುಳುಗಿಸಬೇಕು ಎಂದು ನೆನಸುತ್ತಾರೆ. ಎಂಬುದಾಗಿ.
ಹಾಗೆಯೇ ಇದೇ ಅರ್ಥವನ್ನು ಕಲ್ಪಸೂತ್ರವುಕೂಡ ಸ್ಪಷ್ಟವಾಗಿ ಹೇಳುತ್ತದೆ. ಹೇ
ಗೆಂದರೆ—ಬ್ರಾಹ್ಮಣನು ತನ್ನ ಎಂಜಲನ್ನು ನೀರಿನಲ್ಲಾಗಲಿ ಮುಳುಗಿಸಬೇಕು. ಭೂ
ಮಿಯಲ್ಲಾದರೂ ಹೂಳಬೇಕು. ಯಾರಿಗೂ ಕೊಡಬಾರದು. ಒಂದುವೇಳೆ ಕೊಡ
ಬೇಕಾಗಿಬಂದರೆ, ಮಗನಿಗೆ ಶಿಷ್ಯನಿಗೆ ಅಥವಾ ಅಸೂಯಾರಹಿತನಾದ ಧರ್ಮಾತ್ಮನಿಗೆ
ಕೊಡಬೇಕು. ಎಂಬುದಾಗಿ. ಇದೇ ಅಭಿಪ್ರಾಯವೇ ಕಾಮಿಕ ಎಂಬ ಶಿವಾಗಮದಲ್ಲಿ
ಹೇಳಲ್ಪಟ್ಟಿರುವುದು ॥೭೬॥ ನನ್ನ ನೈವೇದ್ಯವನ್ನು ಪ್ರತಿದಿನವೂ ಪ್ರೀತಿಯಿಂದ ಯಾವನು
ಭುಂಜಿಸುವನೋ ಅವನುಕೂಡ ಚರುಭೋಜನವನ್ನು ಮಾಡಿದವನಂತೆ ನನಗೆ ಸಮಾ
ನನೆಂದು ಹೇಳಲ್ಪಟ್ಟವನಾಗುತ್ತಾನೆ. ಎಂಬುದಾಗಿ. ॥೭೭॥ ಮಲಿನಾತ್ಮರಿಗೆ ಶುದ್ಧ
ವಸ್ತುವಿನ ಸೇವನೆಯು ಪಾಪಕ್ಕೆ ಸಾಧಕವಾಗುವುದು. ಎಂಬುದಾಗಿ. ಇದೇ ಅರ್ಥವೇ
ವೇದದಲ್ಲೂ ಧರ್ಮಶಾಸ್ತ್ರಗಳಲ್ಲೂ ಹೇಳಲ್ಪಡುತ್ತದೆ. ॥೭೮॥ ಆದಿತ್ಯಪುರಾಣವು ಇದೇ
ಅರ್ಥವನ್ನು ಹೇಳುತ್ತದೆ. ಶೂದ್ರನಿಗೆ ವೇದಾಧ್ಯಯನವೂ ಬ್ರಾಹ್ಮಣನಿಂದ ದಾನಸ್ವೀ
ಕಾರವೂ ಹೇಗೋಹಾಗೆ (ಅಶುದ್ಧರಿಗೆ ಶಿವನಿರ್ಮಾಲ್ಯಸ್ವೀಕಾರವು ಅನುಚಿತವು) ಎಂಬು
ದಾಗಿ ॥೭೯॥ ಮಾನವಪುರಾಣವೂ ಇದೇ ಅಭಿಪ್ರಾಯವನ್ನೇ ಹೇಳುತ್ತದೆ. ಹೇಗೆಂದರೆ–
ಅಶುಚಿಯಾದ ಬ್ರಾಹ್ಮಣನು ತನ್ನ ಕೈಯಿಂದ ಶಿವೋಚ್ಛಿಷ್ಟವನ್ನೂ ಗೋವನ್ನೂ ಬ್ರಾ

ಪದ್ಮಪತ್ರೇಷು ಭುಕ್ತ್ವಾ ಚಾಂದ್ರಾಯಣಂ ಚರೇತ್ । ಆಪಸ್ತಂಬೋಽಪ್ಯರ್ಥಮೇನಂ ಸ್ವಸೂತ್ರೇ ಕಥಯಂತ್ಸ್ಫುಟಂ ॥ ೧೨ ॥ ಅಗ್ನಿರ್ವೈ ದೀಕ್ಷಿತಸ್ತಸ್ಮಾದೇನಂ ನೋಪಸ್ಪೃಶೇದಿತಿ । ವಚನಾನಾಂ ಸಮಸ್ತಾನಾಂ ನ್ಯಾಯಾದಸ್ಮಾನ್ಮಹೇಶಿತುಃ ॥ ೧೩ ॥ ನಿರ್ಮಾಲ್ಯಸ್ಯ ಪವಿತ್ರತ್ವೇ ಸಿದ್ಧಿಸ್ಸರ್ವತ್ರ ಸಂಮತಾ । ದೀಕ್ಷಿತಾದಿಸ್ಪರ್ಶನವಜ್ಜ್ಯೋತಿಸ್ಪರ್ಶನವತ್ತಥಾ ॥ ೧೪ ॥ ಪಲಾಶಪದ್ಮಾದಿಪತ್ರಭುಕ್ತಿವಚ್ಛುದ್ಧಿವರ್ಜಿತೈಃ । ಶಿವಪ್ರಸಾದೋಪಭೋಗನಿಷೇಧೋ ನನಿರುಧ್ಯತೇ ॥ ೧೫ ॥ ತಸ್ಮಾಚ್ಛುದ್ಧತಯಾ ಶಂಭೋರ್ನಿರ್ಮಾಲ್ಯಂ ಶುಚಿಭಿಸ್ಸದಾ । ಭೋಜ್ಯಮೇವೇತಿ ಸಕಲಂ ಹೃದ್ಯಂ ಚ ನಿರವದ್ಯಕಂ ॥ ೧೬ ॥ ಮುಖ್ಯಾರ್ಥಮಿಮಮುತ್ಸೃಜ್ಯ ನ ಭೋಜ್ಯಂ ಸಕಲೈರಿತಿ । ಗೌಣಾರ್ಥಮಮುಮಾಶ್ರಿತ್ಯ ನಿರ್ಮಾಲ್ಯಂ ಪರಮೇಶಿತುಃ ॥ ೧೭ ॥ ಅನರ್ಹಮಿತಿ ಹೇ ವಿಪ್ರಾ ಭವದ್ಭಿಃ ಕಥ್ಯತೇ ಯದಿ । ಮಂತ್ರೇಣ ರುದ್ರಃ ಪಶೂನಾಮಿತ್ಯಾದ್ಯೇನ ಹುತಂ ಹವಿಃ ॥ ೧೮ ॥ ಯದ್ಯಾದದೀತ ಭಗವಾನಗ್ನಿಸ್ಸ್ಯಾದಶುಚಿರ್ಧ್ರುವಂ । ಪ್ರೋಕ್ತಃ ಪುರಾತನೈರರ್ಥ ಏಷ ಏವ ಮಹಾತ್ಮಭಿಃ ॥ ೧೯ ॥ ಪ್ರಕ್ಷಿಪ್ತೋ ರುದ್ರದೈವತ್ಯೇ ಹವಿಷಿ ಶ್ರುತಿಶಾ

---

ಹ್ಮಣನನ್ನೂ ಬೆಂಕಿಯನ್ನೂ ಮುಟ್ಟಕೂಡದು. ಮತ್ತು ಆಕಾಶದಲ್ಲಿ ನಕ್ಷತ್ರಾದಿ ಸಮೂಹವನ್ನೂ ನೋಡಕೂಡದು. ಆಲ ಅರಳಿ ಎಕ್ಕ ಮುತ್ತುಗ ತೇಗ ಮುತ್ತುಗ ತಾವರೆ ಈ ಜಾತಿಯ ಎಲೆಗಳಲ್ಲಿ ಉಂಜಿಸಿದರೆ ಚಾಂದ್ರಾಯಣವ್ರತವನ್ನಾಚರಿಸಬೇಕು. ಆಪಸ್ತಂಬನೂಕೂಡ ತನ್ನ ಸೂತ್ರದಲ್ಲಿ ಇದೇ ಅರ್ಥವನ್ನು ವ್ಯಕ್ತವಾಗಿ ಹೇಳಿ, ದೀಕ್ಷಾಸಂಸ್ಕಾರವನ್ನು ಪಡೆದವನು ಅಗ್ನಿಸಮಾನನು. ಅದುಕಾರಣ ಇವನನ್ನು ಮುಟ್ಟಬಾರದು, ಎಂದು ನುಡಿದಿರುವನು. ಈ ಸಕಲವಾಕ್ಯಗಳ ನ್ಯಾಯದಿಂದ ಶಿವನಿರ್ಮಾಲ್ಯವು ಪವಿತ್ರವೆಂಬುದಕ್ಕೆ ಸರ್ವಸಮ್ಮತವಾದ ಸಿದ್ಧಿಯುಂಟಾಗಿರುವುದು. ದೀಕ್ಷಿತಮೊದಲಾದವರನ್ನು ಮುಟ್ಟುವಹಾಗೂ ದೀಪವನ್ನು ಮುಟ್ಟುವಹಾಗೂ ಶುದ್ಧಾತ್ಮರಲ್ಲದವರಿಂದ ಶಿವಪ್ರಸಾದಸೇವನೆಯು ನಿಷೇಧಿಸಲ್ಪಟ್ಟಿರುವುದೇಹೊರತು, ಮುತ್ತುಗ ತಾವರೆ ಮೊದಲಾದ ಎಲೆಗಳ ಊಟದಹಾಗೆ ಶಿವಪ್ರಸಾದಸೇವನೆಯು ನಿಷೇಧಿಸಲ್ಪಟ್ಟಿರುವದಿಲ್ಲ॥೧೫॥ ಆ ಕಾರಣದಿಂದ ಶಿವನಿರ್ಮಾಲ್ಯವು ಪರಿಶುದ್ಧವಾಗಿರುವುದರಿಂದ ಪರಿಶುದ್ಧರಾದವರು ಅದನ್ನು ಯಾವಾಗಲೂ ಉಂಜಿಸಲೇಬಹುದು ಎಂದು ಸರ್ವವೂ ಮನೋಹರವೂ ನಿರ್ದುಷ್ಟವೂ ಆಗಿರುವುದು ॥೧೬॥ ಎಲೈ ಬ್ರಾಹ್ಮಣರೆ ! ಹೀಗಿರುವ ಮುಖ್ಯಾರ್ಥವನ್ನು ಬಿಟ್ಟು ಸರ್ವರೂ ಅದನ್ನು ಉಂಜಿಸಬಾರದೆಂಬ ಗೌಣಾರ್ಥವನ್ನು ಹಿಡಿದುಕೊಂಡು ಶಿವನ ನಿರ್ಮಾಲ್ಯವು ಅನರ್ಹವಾದುದೆಂದು ನೀವು ಹೇಳುವಿರಾದರೆ, "ರುದ್ರಃ ಪಶೂನಾಂ,, ಎಂಬುದು ಮೊದಲಾದ ಮಂತ್ರದಿಂದ ಹೋಮಮಾಡಲ್ಪಟ್ಟ ಹವಿಸ್ಸನ್ನು ಅಗ್ನಿ

ಲಿಭಿಃ । ನಿರ್ಮಾಲ್ಯಾದಾನದೋಷೇಣವಹ್ನಿರಪ್ಯಶುಚಿರ್ಭವೇತ್ ॥ ೯೦ ॥
ಇತಿ. ಸ್ಕಾಂದಂಪುರಾಣಮಪ್ಯೇನಮರ್ಥಂಕಥಯತಿಸ್ಫುಟಂ । ಅಶು
ಚಿದ್ರವ್ಯಸಂಸ್ಪರ್ಶಾತ್ಸ್ವಯಮಪ್ಯಶುಚಿರ್ಭವೇತ್ ॥ ೯೧ ॥ ಇತಿ.
ಕಿಂಚಸರ್ವಂಹವಿಶ್ಶಂಭೋರುಚ್ಛಿಷ್ಟಂನಹಿಸಂಶಯಃ । ಅಯಂಸೋ
ಮಃಕಪರ್ದಿನಇತಿಮಂತ್ರೇಣಚಾಧ್ವರೇ ॥ ೯೨ ॥ ಸೋಮಸ್ಯಸೂಯ
ಮಾನಸ್ಯಶಂಭುಶೇಷತ್ವಮುಚ್ಯತೇ । ರೌದ್ರಂಗವೀತಿಶ್ರುತಿತೋರೌ
ದ್ರೀವೈಗೌರಿತಿಶ್ರುತೇಃ ॥ ೯೩ ॥ ರುದ್ರಾಯಗಾಮಿತ್ಯತಶ್ಚಶ್ರುತೇರ್ಗ
ವ್ಯಸ್ಯಶೂಲಿನಃ । ಶೇಷತ್ವಮುಚ್ಯತೇತದ್ವದ್ಯಜ್ಞಕರ್ಮವಿಶಾರದೈಃ ॥
೯೪ ॥ ಇಮಂಪಶುಂಪಶುಪತೇತಇತ್ಯಾದೇಶ್ಶ್ರುತೇರಥ । ಪಶೂನಾಮೀ
ಶಶೇಷತ್ವಂಸುವ್ಯಕ್ತಂಪರಿಕೀರ್ತ್ಯತೇ ॥ ೯೫ ॥ ಅರ್ಥೋಽಯಂಹರದ
ತ್ತಾರ್ಯೈರುಕ್ತಸ್ತಾತ್ಪರ್ಯಸಂಗ್ರಹೇ। (ಸೋಮಂತ್ವದರ್ಥಮನುಶುಶ್ರ
ಮಸೂಯಮಾನಮಾಲಂಭನಂಪಶುಪತೇನಿಯತಂಪಶೂನಾಂ । ಗವ್ಯಂಚ
ತೇಗವಿಸಸೇವತದಧ್ವರೇಷುಚಂಡೇಶ್ವರೇಣಸಹನಾಕಸದಾಂವಿವಾದಃ ॥
ಉತ್ಪತ್ತಿತಶ್ಶಿವಗೃಹೀತಸಮನ್ವಯಾಸ್ತೇಸೋಮಃಪಶುರ್ಗವಿಚಸಂತಿಹ

---

ಯು ಸ್ವೀಕರಿಸಿದರೆ ಆತನೂ ಅಶುಚಿಯಾಗಬೇಕಾಯಿತು. ಇದೇ ಅಭಿಪ್ರಾಯವ
ನ್ನೇ ಪೂರ್ವದ ಮಹನೀಯರು ಹೇಳಿರುವರು. ಹೇಗೆಂದರೆ—ವೇದಸಂಪನ್ನರಾದವರು
ರುದ್ರದೇವತಾಕವಾದ ಹವಿಸ್ಸನ್ನು ಕೊಟ್ಟಾಗ, ರುದ್ರಸಮರ್ಪಿತವಾದ ಆ ನಿರ್ಮಾಲ್ಯ
ದ ಹವಿಸ್ಸನ್ನು ಸ್ವೀಕರಿಸುವುದರಿಂದ ಅಗ್ನಿಯು ಅಶುಚಿಯಾಗಲಿ ,, ಎಂಬುದಾಗಿ॥೯೦॥
ಸ್ಕಾಂದಪುರಾಣವು ಕೂಡ ಇದೇ ಅಭಿಪ್ರಾಯವನ್ನೇ ಅಪರಿಶುದ್ಧವಾದ ದ್ರವ್ಯವನ್ನು
ಮುಟ್ಟುವುದರಿಂದ ತಾನು ಅಶುಚಿಯೇ ಆಗುವನು, ಎಂಬದಾಗಿ ಸ್ಪಷ್ಟವಾಗಿಹೇಳು
ತ್ತದೆ ॥ ೯೧ ॥ ಮತ್ತು ಸಕಲ ಹವಿಸ್ಸುಶಿವನ ಉಚ್ಛಿಷ್ಟವೇ. ಅದರಲ್ಲಿ ಸಂಶಯವಿಲ್ಲ
'' ಅಯಂಸೋಮಃ ಕಪರ್ದಿನೆ ,, ಎಂಬಮಂತ್ರದಿಂದ ಯಾಗದಲ್ಲಿ ಹೋಮಮಾಡಿದ
ಸೋಮರಸವು ಶಿವನಪ್ರಸಾದವೆಂಬದಾಗಿ ಹೇಳಲ್ಪಡುತ್ತದೆ. '' ರೌದ್ರಂಗವಿ ,, ಎಂಬ
ಮತ್ತು ''ರೌದ್ರೀವೈಗೌಃ,, ಎಂಬ ''ರೌದ್ರಾಯಗಾಂ,, ಎಂಬ ವೇದವಚನಗಳಿಂದ
ಪಂಚಗವ್ಯವು ಶಿವನ ಪ್ರಸಾದವೆಂಬದಾಗಿ ಯಜ್ಞಕರ್ಮಾಭಿಜ್ಞರಿಂದ ಹೇಳಲ್ಪಡುತ್ತ
ದೆ. ॥ ೯೪ ॥ '' ಇಮಂಪಶುಂಪಶುಪತೆತೆ ,, ಎಂಬ ಮಂತ್ರದಿಂದ ಪಶುವುಕೂಡ ಈ
ಶನ ಪ್ರಸಾದವೆಂಬುದು ಸ್ಫುಟವಾಗಿ ಹೇಳಲ್ಪಡುತ್ತದೆ ॥ ೯೫ ॥ ಇದೇ ಅಭಿಪ್ರಾಯ
ವನ್ನು ಹರದತ್ತಾಚಾರ್ಯರು ತಾತ್ಪರ್ಯಸಂಗ್ರಹದಲ್ಲಿ ಎಲಾ ಪಶುಪತಿಯೆ ! ಯಾಗಗಳ
ಲ್ಲಿ ನಿನಗಾಗಿ ಹೋಮಮಾಡಿದ ಸೋಮರಸವನ್ನು ಪಶ್ವಾಲಂಭನವನ್ನು ಗವ್ಯಘೃತವ
ನ್ನೂ ಕುರಿತು ( ನಮಗೆ ತಮಗೆಂದು ದೇವತೆಗಳು ಚಂಡೇಶನೊಡನೆ ವಿವಾದಿಸುವರಂ

ನೀಂಷಿಯಾನಿ । ದೇವಾಃಪಶೌಹವಿಷಿಭಾಗಮನುಜ್ಞಯಾತೇಗೃಹ್ಣಂತಿ
ತದ್ವದಿತರೇಷ್ವಪಿಕಲ್ಪನೀಯಂ ॥ ) ಇತಿ. ಜುಷ್ಟಂದೇವಾನಾಮಿದ
ಮಸ್ತುಹವ್ಯಮಿತಿಚಶ್ರುತಿಃ ॥ ೯೬ ॥ ಅಸ್ಮಿನ್ನರ್ಥೇಸತ್ಪ್ರಮಾಣಾವಿ
ದ್ಯತೇಹೇದ್ವಿಜಾತಯಃ । ಕಿಂಚಾವ್ರೋರಾಜಾನಮಧ್ವರಸ್ಯರುದ್ರಮಿತಿಶ್ರು
ತೇಃ ॥ ೯೭ ॥ ಗಾಥಪತಿಂಮೇಧಪತಿಂರುದ್ರಮಿತ್ಯಪಿಚಶ್ರುತೇಃ । ರು
ದ್ರಸ್ಯಾಧ್ವರರಾಜಸ್ಯಪ್ರಸಾದಂಸೇವಿತುಂಪರಂ ॥ ೯೮ ॥ ತಥಾಚಾಹ
ವನೀಯಾಗ್ನೇರ್ಹವಿರ್ಭಾಗಾಭಿಲಾಷಯಾ । ಪ್ರಾಪ್ತವಿಷ್ಣ್ವಾದಿದೇವಾ
ನಾಮಶುಚಿತ್ವಂಭವೇನ್ನುಕಿಂ ॥ ೯೯ ॥ ಅಪಿಚೇಶ್ವರಏವೈಕಸ್ಸರ್ವಾನ್ನ
ಸ್ಯಪತಿಸ್ಸ್ಮೃತಃ । ತಥೈವಾಭಿಹಿತಸ್ಸಮ್ಯಗಯಮರ್ಥಶ್ಶಿವಾಗಮೇ ॥
೧೦೦ ॥ ಸರ್ವಮನ್ನಂಹಿರುದ್ರಸ್ಯಸಏವಾಧಿಪತಿರ್ಯತಃ । ತನ್ನಿಷೇಧಧಿಯಾ
ನಿತ್ಯಮಭುಕ್ತಿರವಶಿಷ್ಯತೇ ॥೧೦೧॥ ಅಸ್ಮಿನ್ನರ್ಥೇಶ್ರುತಿರಪಿಪ್ರಮಾಣ
ತ್ವೇನಕಥ್ಯತೇ । ಬಭ್ರುಕೇಶಾಯವಿವ್ಯಾಧಿನೇಽನ್ನಾನಾಂಪತಯೇನಮಃ ॥
೧೦೨॥ ಅಂಧಸಃಪತಯೇಚಾನ್ನಪತಯೇಚೇತಿವಿಶ್ರುತಾ । ಅಪಿಚಶ್ರೀ
ಮಹಾದೇವೋಽನಿಶ್ವಾತ್ಮಾಪರಿಕೀರ್ತಿತಃ ॥೧೦೩॥ ಅಸ್ಮಿನ್ನರ್ಥೇಃಶ್ರುತಿ

---

ದುಕೇಳುತ್ತೇವೆ. ) ಜನ್ಮತಃ. ಶಿವವಂಶಸಮುದ್ಭೂತರಿಂದ ಆ ದೇವತೆಗಳು ನಿನ್ನಪ್ಪಣೆ
ಯಿಂದ ಯಜ್ಞಗಳಲ್ಲಿನ ಸೋಮರಸ ಪಶು ಗೋಘೃತಗಳರೂಪವಾದ ಹವಿಸ್ಸಿನಲ್ಲಿ
ಭಾಗವನ್ನು ಪಡೆದುಕೊಳ್ಳುತ್ತಾರೆ. ಅದರಂತೆ ಇತರರಿಗೂ ನೀನು ಕಲ್ಪಿಸಿಕೊಡಬೇ
ಕು ,, ಎಂಬದಾಗಿಹೇಳುವರು. ‘‘ ಜುಷ್ಟಂ...ಹವ್ಯಂ,, ಎಂದು ಶ್ರುತಿಯುಕೂಡಹೇ
ಳುವದು. ಎಲೆ ದ್ವಿಜರ! ಈ ಅಭಿಪ್ರಾಯದಲ್ಲಿ ಉತ್ತಮ ಪ್ರಮಾಣವಿದೆ ಕೇಳಿರಿ–‘‘ ಆ
ವೋರಾಜಾನಂ ಎಂಬ ಶ್ರುತಿವಚನದಿಂದಲೂ. ‘‘ ಗಾಥಪತಿಂ ಮೇಧಪತಿಂ ,, ಎಂಬ
ವೇದವಚನದಿಂದಲೂ. ರುದ್ರನು ಯಜ್ಞಾಧಿಪತಿಯಾಗಿರುವನು, ಅಂತಹ ರುದ್ರನ
ಉತ್ಕೃಷ್ಟವಾದ ಪ್ರಸಾದವನ್ನು ಸೇವಿಸುವುದಕ್ಕೆ ಪ್ರಮಾಣವಿರುವುದು. ಆಹವನೀ
ಯಾಗ್ನಿಯಮುಖದಿಂದ ಅಂತಹ ಹವಿಸ್ಸುಗಳಲ್ಲಿ ಭಾಗವನ್ನು ಪಡೆಯುವ ವಿಷ್ಣ್ವಾದಿಗ
ಳಿಗೆಲ್ಲ ಅಶುಚಿತ್ವ ಪ್ರಂಟಾದೀತೇನೋ ! ॥ ೯೯ ॥ ಮತ್ತು ಶಿವನೊಬ್ಬನೇ ಸಕಲವಿಧ
ವಾದ ಅನ್ನಗಳಿಗೂ ಪತಿಯೆಂದು ಹೇಳಲ್ಪಟ್ಟಿರುವನು. ಈ ಅಭಿಪ್ರಾಯವು ಶಿವಾಗ
ಮದಲ್ಲಿ ಉಕ್ತವಾಗಿದೆ ॥ ೧೦೦ ॥ ಹೇಗೆಂದರೆ—ಸಕಲವಿಧವಾದ ಅನ್ನವೂ ಶಿವನಿಗಾಗಿ
ರುವುದು ಏಕೆಂದರೆ, ಎಲ್ಲಕ್ಕೂ ಅವನೇ ಅಧಿಪತಿ. ಅಂತಹ ಅನ್ನವನ್ನು ನಿಷೇಧಿಸು
ವುದರಿಂದ ಸದಾ ಉಪವಾಸವೇ ಗತಿಯಾಗುವುದು ಎಂಬುದಾಗಿ ॥ ೧೦೧ ॥ ಈ ಅರ್ಥದ
ಲ್ಲಿ ‘‘ ಬಭ್ರುಕೆಶಾಯ ವಿವ್ಯಾಧಿನೇಽನ್ನಾನಾಂಪತಯೆ ,, ‘‘ ಅಂಧಸಃ ಪತಯೆ ,,
‘‘ ಅನ್ನಪತಯೆ ,, ಎಂಬಪ್ರಸಿದ್ಧವಾದ ವೇದವಚನವು ಪ್ರಮಾಣವಾಗಿರುವುದು. ಮ

ರಿಯುಂಯಜುರಾಖ್ಯಾಪ್ರದರ್ಶ್ಯತೇ । ಯದೇಕಮವ್ಯಕ್ತಮನಂತರೂಪಂ ವಿಶ್ವಂಪುರಾಣಂತಮಸಃಪರಸ್ತಾತ್ ॥೧೦೪॥ ಇತಿ. ಅನ್ಯಾಪ್ಯಸ್ತಿಶ್ರುತಿರಿಯುಂವಿಶ್ವರೂಪಾಯವೈನಮಃ ॥ಇತಿ॥ ತದ್ವಿಶ್ವರೂಪಿಣಶ್ಶಂಭೋಸ್ಸಂಭೂತಾಷ್ಷಡ್ರಸಾನ್ವಿತಾಃ ॥೧೦೫॥ ಸಮಸ್ತಾಷ್ಷಡ್ವಿಧಾಹಾರಾಜಲಪುಷ್ಪಾದಯಸ್ತಥಾ । ಈಶಪ್ರಸಾದಸಂಲಬ್ಧಾಭವೇಯುರ್ನಾತ್ರಸಂಶಯಃ ೧೦೬॥ ಅಪಾರಮೇಶ್ವರಂತಸ್ಮಾದಿಹಕಿಂಚಿನ್ನವಿದ್ಯತೇ । ಲೋಕೇಽಸ್ತಿವಸ್ತುಯೋಗ್ಯಂಯತ್ತದ್ದೇವೇಭ್ಯೋಹಿದೀಯತೇ ॥೧೦೭॥ ಅತೋಮಹೇಶನೈವೇದ್ಯಮನರ್ಹಮಿತಿವಾಗ್ವೃಥಾ । ಶಿವಪ್ರಸಾದೋನಿಖಿಲಮಿತಿಚೇತ್ಸರ್ವಮಾನುಷಾಃ ॥೧೦೮॥ ಶಿವಪ್ರಸಾದಿನಇತಿವಚೋವಕ್ತುಂನಪಾರ್ಯತೇ । ಶಿವದೀಕ್ಷಾಮಂತರೇಣನತೇಲಿಂಗಪ್ರಸಾದಿನಃ ॥೧೦೯॥ ಮಹೇಶ್ವರಕೃತಂಸರ್ವಂಯೇನಭಕ್ತಾಮಹೇಶ್ವರೇ । ತೇಕೃತಘ್ನಾಭವಿಷ್ಯಂತಿಕೃತಘ್ನೇಪಿನಮುಚ್ಯತೇ ॥೧೧೦॥ ಏತದ್ವಾಕ್ಯೈನಭಕ್ತೇಭ್ಯಇತರೇಪಾಪಕಾರಿಣಃ । ನರೋಯಥಾಕುತ್ಸಯತಿಸ್ವದೇಹಂಮಲದೂಷಿತಂ॥೧೧೧॥ ಸ್ಥಲಂಗಂತುಂಮಹೇಶೋಪಿಸ್ಪೃಷ್ಟಸ್ಸನ್ಮಲದೇಹಿನಾ।

---

ತ್ತು ಮಹಾದೇವನು ಪ್ರಪಂಚಸ್ವರೂಪನೆಂದು ಹೇಳಲ್ಪಟ್ಟಿರುತ್ತಾನೆ ॥ ೧೦೪ ॥ ಈ ಅರ್ಥದಲ್ಲಿ " ಯದೇಕಮವ್ಯಕ್ತಂ ,, ಎಂಬ ಯಜುರ್ವೇದ ವಚನವು ಪ್ರಮಾಣವು. ಮತ್ತು " ವಿಶ್ವರೂಪಾಯವೈನಮಃ ,, ಎಂಬ ಮತ್ತೊಂದು ವಚನವೂ ಇರುವುದು. ಆದುಕಾರಣಪ್ರಪಂಚಸ್ವರೂಪನಾದ ಶಿವನಿಂದಲೇ ಷಡ್ರಸ ವಿಶಿಷ್ಟವಾದ ಸಕಲಾಹಾರಗಳು ಹುಟ್ಟಿದುವುಗಳು. ಹೂವು ನೀರು ಮೊದಲಾದವುಗಳೆಲ್ಲ ಶಿವ ಪ್ರಸಾದದಿಂದಲೇ ಪ್ರಾಪ್ತವಾದುವುಗಳು. ಇದಕ್ಕೆ ಸಂಶಯವಿಲ್ಲ ॥ ೧೦೬ ॥ ಶಿವ ಸಂಬಂಧವಿಲ್ಲದುದು ಈ ಲೋಕದಲ್ಲಿ ಯಾವುದೊಂದು ಲೇಶವೂ ಇಲ್ಲ. ಲೋಕದಲ್ಲಿ ಯೋಗ್ಯವಾದ ವಸ್ತುವೆಂಬುದಾವುದಿದೆಯೋ ಅದು ದೇವತೆಗಳಿಗೆ ಕೊಡಲ್ಪಡುತ್ತದೆ. ಅದುಕಾರಣ ಶಿವನೈವೇದ್ಯವನ್ನು ಅನರ್ಹವೆಂಬುದಾಗಿ ಹೇಳುವ ವಚನವು ವ್ಯರ್ಥವಾದುದು. ಸಕಲವೂ ಶಿವಪ್ರಸಾದವೆಂದಾದರೆ ಸಕಲ ಮನುಷ್ಯರನ್ನೂ ಶಿವಪ್ರಸಾದಿಗಳೆಂಬು ಹೇಳುತ್ತೇನೆನ್ನುವುದಕ್ಕಾಗದು. ಶಿವದೀಕ್ಷೆಯನ್ನು ಪಡೆದಲ್ಲದೆ ಲಿಂಗಪ್ರಸಾದಗಳಾಗುವುದಿಲ್ಲ ॥ ೧೦೯ ॥ ಸರ್ವವೂ ಶಿವನಿಂದಮಾಡಲ್ಪಟ್ಟಿರುವುದು. ಹೀಗಿದ್ದರೂ ಯಾರು ಅಂತಹ ಶಿವನಲ್ಲಿ ಭಕ್ತಿಸಂಪನ್ನರಾಗಿರುವುದಿಲ್ಲವೋ ಅವರು ಕೃತಘ್ನರಾಗುತ್ತಾರೆ. ಅಂತಹ ಕೃತಘ್ನನು ಮುಕ್ತನಾಗಲಾರನು ॥ ೧೧೦ ॥ ಎಂಬೀ ವಚನಾಧಾರದಿಂದ ಭಕ್ತರ ಹೊರತು ಉಳಿದವರೆಲ್ಲ ಪಾಪಿಗಳೆನಲ್ಪಡುತ್ತಾರೆ. ಮನುಷ್ಯನು ಹೊಲಸಿನಸ್ಥಲಕ್ಕೆ ಹೋಗುವುದಕ್ಕೆ ದೇಹವನ್ನು ಹೇಗೆ ಕೋಡೈಸಿಕೊಳ್ಳುವನೋ ಹಾಗೆ ಶಿವನು ಕೂಡ

ನಿರ್ಮಾಲ್ಯಧಾರಣಾತ್ತದ್ವಜ್ಜುಗುಪ್ಸಾಂಕುರುತೇಸನಾ ॥೧೧೨॥ ತಸ್ಮಾ
ನ್ನಿರ್ಮಾಲ್ಯಧರಣಸ್ಪರ್ಶನಾದೀನಿಪಾಪಿಭಿಃ । ನಕರ್ತವ್ಯಾನಿಪಾಪಾಯಭ
ವಂತ್ಯೇವಕೃತಾನಿಚೇತ್ ॥೧೧೩॥ ಶುದ್ಧಾನಾಂಶಿವಭಕ್ತಾನಾಂಶಂಭೋ
ರ್ನಿರ್ಮಾಲ್ಯಧಾರಣಂ । ದರ್ಶನಸ್ಪರ್ಶನಾದೀನಿವೀರಸದ್ಭಕ್ತಿಹೇತವಃ ॥
೧೧೪॥ ಅನರ್ಹಾಣಾಂಭವೇನ್ನಾಮಪ್ರಸಾದೋಽನರ್ಹಈಶಿತುಃ । ಶು
ದ್ಧಾನಾಂಶಿವಭಕ್ತಾನಾಮನರ್ಹಃಕಿಂಮಹಾತ್ಮನಾಂ ॥೧೧೫॥ ತಥಾನಚೇ
ದೀಶಶಿರೋನಿರ್ಮಾಲ್ಯಸ್ಯಕಲಾನಿಧೇಃ । ಕಲಾಃಕಥಂನಿಲೀಯಂತೇವಿಬುಧೈ
ರ್ವಾಸವಾದಿಭಿಃ ॥೧೧೬॥ ತತ್ಕಲಾಪಾನತೋಲೋಕೇಪೂಜ್ಯತಾಂಕಥ
ಮಾಪ್ನುಯುಃ । ತತ್ಪ್ರಸಾದಕಲಾಸಾರಸುಧಾರಸಪರಿಪ್ಲುತಾಃ ॥೧೧೭॥
ವ್ರೀಹ್ಯಾದ್ಯಾದೇವತಾಯೋಗ್ಯಾಆಸನ್ನೋಷಧಯಃಕಥಂ । ಕಥಂಕಾರಂ
ಮುನಿಜನಾನಿಷೇವಂತೇಽನ್ವಹಂಮುದಾ ॥೧೧೮॥ ಕಿಂಚೈತಸ್ಮಾಚ್ಛಿ
ವೋಮೇಮೇಪಿತರಾವಿತಿವಾಕ್ಯತಃ । ಛಂದಾಂಸಿಜಜ್ಞಿರೇತಸ್ಮಾದಿತ್ಯೇ
ತಸ್ಯಾಶ್ಶ್ರುತೇರಪಿ ॥೧೧೯॥ ಈಶಾಸ್ಯನಿರ್ಗತೈಸ್ತತ್ರವಿಘಸತ್ವಮುಪಾ
ಗತೈಃ । ವೇದಾಗಮೈಶ್ಶಬ್ದರೂಪೈರ್ಜಗದೇತತ್ಪ್ರಮೀಯತೇ ॥೧೨೦॥

---

ಮಲಿನಾತ್ಮರಿಂದ ಮುಟ್ಟಲ್ಪಟ್ಟರೆ ಕೋಡ್ಯೈಸಿ ಕೊಳ್ಳುತ್ತಾನೆ. ಮತ್ತು ತನ್ನ ನಿರ್ಮಾ
ಲ್ಯವನ್ನು ಮಲಿನಾತ್ಮನು ಧರಿಸಿಕೊಂಡರು ಹಾಗೆಯೇ ಯಾವಾಗಲೂ ಜುಗುಪ್ಸೆಗೊ
ಳ್ಳುತ್ತಾನೆ. ॥ ೧೧೨ ॥ ಅದುಕಾರಣ ಪಾಪಾತ್ಮರು ನಿರ್ಮಾಲ್ಯಧಾರಣ ಸ್ಪರ್ಶನಗಳನ್ನು
ಮಾಡಲೇಕೂಡದು. ಒಂದುವೇಳೆ ಮಾಡಿದರೆ ಪಾಪಕ್ಕೆ ಹೇತುವಾಗುವುದು ॥ ೧೧೩॥
ಪರಿಶುದ್ಧರಾದ ಶಿವಭಕ್ತರು ಶಿವನಿರ್ಮಾಲ್ಯದ ಧಾರಣ ಸ್ಪರ್ಶನಾದಿಗಳನ್ನುಮಾಡಿದರೆ ಅ
ವರಲ್ಲಿ ವೀರಭಕ್ತಿ ಹೆಚ್ಚುವುದಕ್ಕೆ ಕಾರಣವಾಗುವುದು ॥ ೧೧೪ ॥ ಅಯೋಗ್ಯರಿಗೆ ಶಿವ
ಪ್ರಸಾದವೂ ಅನರ್ಹವೇ ಹೊರತು ಶುದ್ಧರಾದ ಮಹಾಶಿವಭಕ್ತರಿಗೆ ಅನರ್ಹವಾದೀ
ತೂ ॥೧೧೫ ॥ ಹಾಗಲ್ಲದಪಕ್ಷದಲ್ಲಿ ಶಿವನ ಶಿರಸ್ಸಿನಲ್ಲಿ ಧರಿಸಲ್ಪಟ್ಟಿರುವುದರಿಂದ ನಿರ್ಮಾಲ್ಯ
ನಾದ ಚಂದ್ರನ ಕಲೆಗಳನ್ನು ಇಂದ್ರ ಮೊದಲಾದ ದೇವತೆಗಳು ಹೇಗೆ ಪಾನಮಾಡುವ
ರು ॥೧೧೬॥ ಅಂಥಚಂದ್ರನ ಕಲೆಯು ಪಾನದಿಂದ ಲೋಕದಲ್ಲಿ ಅವರು ಪೂಜ್ಯತ್ವವನ್ನು
ಹೇಗೆ ಹೊಂದುವರು ? ಶಿವಪ್ರಸಾದವಾದ ಚಂದ್ರ ಕಲಾಮೃತ ರಸದಿಂದ ನೆನದು ಬೆ
ಳೆದ ಬತ್ತಮೊದಲಾದ ದವಸಗಳೂ ಮೂಲಿಕೆಗಳೂ ಹೇಗೆ ದೇವತಾ ಯೋಗ್ಯಗಳಾದು
ವು ? ಅವನ್ನು ಋಷಿ ಜನಗಳು ಪ್ರತಿದಿನವೂ ಅದು ಹೇಗೆ ಸಂತೋಷದಿಂದ ತಿನ್ನು
ತ್ತಾರೋ ॥ ೧೧೮ ॥ ಮತ್ತು “ ಶಿವೋಮೇಮೇಪಿತರಾ ,, ಎಂಬ ವಾಕ್ಯದಿಂದಲೂ,
“ ಛಂದಾಂಸಿ ಜಜ್ಞಿರೇತಸ್ಮಾತ್ ,, ಎಂಬ ಶ್ರುತಿವಾಕ್ಯದಿಂದಲು ಕೂಡ ಶಿವನ ಮು
ಖದಿಂದ ಹೊರಟು ಉಚ್ಛಿಷ್ಟವಾಗಿರತಕ್ಕ ಶಬ್ದರೂಪವಾದ ವೇದಾಗಮಗಳಿಂದ ಈ ಪ್ರ

ವೇದಾಂತೇಪ್ಯೇವಮೇವೋಕ್ತಂಜಗಚ್ಛಬ್ದವಿವರ್ತಕಂ। ಇತ್ಯತಶ್ಶಂಭು
ವದನಜಾತಶಬ್ದಾತ್ಮಕಸ್ಯಹಿ ॥೧೦೧॥ ಜಗತಸ್ಸ್ಯಾದನರ್ಹತ್ವಂಸಮ
ಸ್ತೇಷ್ವಪಿಕರ್ಮಸು । ಕಿಂಚವಾಕ್ಯಾದ್ಭಾಸ್ಕರಸ್ಯೇಶ್ವರೋದೇವಇತೀರಿ
ತಾತ್ ॥೧೦೨॥ ತದುತ್ತರಾದ್ಭಾಷಿತಾದ್ಯೋಮಂಡಲಂತಪತೀತಿಚ ।
ಯಏಷಅಂತರಾದಿತ್ಯೇಹಿರಣ್ಮಯಇತಿಶ್ರುತೇಃ ॥೧೦೩॥ ಸೂರ್ಯಸ್ಯಾಂ
ತಸ್ಥಿತಃಪ್ರೋಕ್ತಃಪರಮೇಶಸ್ಸದೈವಹಿ । ಸಶಂಭೂರಸಮಾದತ್ತೇಪ
ದಾರ್ಥೇಭ್ಯಸ್ಸಕಲಾತ್ಸ್ವಯಂ ॥೧೦೪॥ ಯೋಽಸೌತಪನ್ನುದೇತೀತಿಪ್ರ
ಕ್ರಮಾಶ್ರುತಿರತ್ರಹಿ । ಪ್ರಮಾಣಂಸಾಸಂಹಿತಾಯಾಮೇವಮಾಮ್ನಾಯ
ತೇಶ್ರುತಿಃ॥೧೦೫॥ (ಯೋಽಸೌತಪನ್ನುದೇತಿಸಸರ್ವೇಷಾಂಭೂತಾನಾಂ
ಪ್ರಾಣಾನಾದಾಯೋದೇತೀತಿ) ಅರ್ಥೋಽಸ್ಯಾಃಕಥ್ಯತೇಸ್ಮಾಭಿರ್ಭಾ
ಷ್ಯಕಾರಾನುಸಾರತಃ। ಯಸ್ತಿಷ್ಠತ್ಯಂತರಾದಿತ್ಯೇಪುರುಷೋಽಸೌಹಿರ
ಣ್ಮಯಃ ॥೧೦೬॥ ತಪನ್ನುದೇತಿಭೂತಾನಾಂಪದಾರ್ಥಾನಾಂಸಶಂಕರಃ।
ಪ್ರಾಣಾಂಸ್ತಾನ್ಸಪ್ತಧಾತ್ಪ್ರಾಣಭೂತಾನ್ಸಮಾದಾಯಸರ್ವದಾ ॥೧೦೭॥ ಉ
ದೇತಿಪ್ರಾಣಿನಾಂಪ್ರಾಣಾಪಾಯಾಭಾವಾನ್ನಸಂಶಯಃ । ತದೀಶಭುಕ್ತಶಿ

---

ಪಂಚವು ತಿಳಿಯಲ್ಪಡುತ್ತದೆ ॥ ೧೦೦ ॥ ವೇದಾಂತದಲ್ಲಿಯೂ ಕೂಡ ಹೀಗೆಯೇ ಜ
ಗತ್ತು ಶಬ್ದಮಯವಾದುದೆಂದು ಹೇಳಲ್ಪಟ್ಟಿದೆ. ಈ ಕಾರಣದಿಂದ ಶಿವಮುಖ ಜಾತ
ಶಬ್ದಾತ್ಮಕವಾದ ಪ್ರಪಂಚಕ್ಕೇ ಸಕಲ ಕರ್ಮಗಳಲ್ಲೂ ಅನರ್ಹತ್ವವುಂಟಾಗಲಿ, ಮ
ತ್ತು “ ಭಾಸ್ಕರಸ್ಯೇಶ್ವರೋದೇವಃ ” ಎಂಬ ವಚನದಿಂದಲೂ, “ ಯೋಮಂಡ
ಲಂತಪತಿ ” ಎಂಬ ಅದರ ಮುಂದಣವಾಕ್ಯದಿಂದಲೂ, “ ಯಏಷಅಂತರಾದಿತ್ಯೇಹಿ
ರಣ್ಮಯಃ ” ಎಂಬ ಶ್ರುತಿವಚನದಿಂದಲೂ ಕೂಡ ಶಿವನು ಸದಾ ಸೂರ್ಯಾಂತರ್ವರ್ತಿ
ಯೆಂದು ಹೇಳಲ್ಪಟ್ಟಿರುವನು. ಆ ಶಿವನು ಸರ್ವ ಪದಾರ್ಥಗಳಿಂದಲೂ ತಾನು ರಸಾ
ಸ್ವಾದನವನ್ನು ಮಾಡುವನು ॥೧೦೪ ॥ ಸಂಹಿತೆಯಲ್ಲಿ ಹೇಳಲ್ಪಟ್ಟಿರುವ “ ಯೋ
ಸೌತಪನ್ನುದೇತಿ ” ಎಂದಾರಂಭಗೊಂಡಿರುವ ಶ್ರುತಿ ವಚನವು ಈವಿಷಯದಲ್ಲಿ ಪ್ರ
ಮಾಣವು. ಈವಚನಕ್ಕೆ ಭಾಷ್ಯಕಾರಾಭಿಪ್ರಾಯಾನುಸಾರವಾಗಿ ನಾವು ಅರ್ಥವನ್ನು ಹೇ
ಳುತ್ತೇವೆ.—ಸೂರ್ಯನಮಧ್ಯದಲ್ಲಿ ಸುವರ್ಣಸ್ವರೂಪನಾಗಿ ಯಾವಪರಬ್ರಹ್ಮನು ಇರುತ್ತಿ
ರುವನೋ ಅಂಥ ಈ ಶಂಕರನು ಸಕಲ ಪದಾರ್ಥಗಳ ಪ್ರಾಣಭೂತವಾದ ರಸವನ್ನು
ಆಕರ್ಷಿಸಿ ಪ್ರಾಣಿಗಳಿಗೆ ಪ್ರಾಣಾಪಾಯಗೊಳಿಸದಿರುವುದರಿಂದ ಉದಿಸುತ್ತಾನೆ. ಸಂಶ
ಯವಿಲ್ಲ. ಎಂಬುದಾಗಿ, ಅದುಕಾರಣ ಹೀಗೆ ಶಿವನು ಭುಂಜಿಸಿ ಉಳಿದ ಅಂತರ ಪದಾರ್ಥ
ಗಳು ನಿಂದಿತಗಳಾಗಿರುವುವೇನು ? ॥ ೧೦೮ ॥ ಮತ್ತು ಮಹೋಪನಿಷತ್ತಿನಲ್ಲಿ “ ಆ
ಪಏವಸಸರ್ಜಾದೌತಾಸುವೀರ್ಯಮಪಾಸೃಜತ್ ” ಎಂಬ ವಚನದಿಂದ ಮೊದಲು ಜಲ

ಷ್ಟಾನಿಕಥಂಸ್ಯುರ್ನಿಂದಿತಾನಿಹಿ||೧೨೮|| ಕಿಂಚೈಷಾಶ್ರೂಯತೇವಾಣೀಮ
ಹೋಪನಿಷದಿಸ್ಫುಟಂ । ಅಪಏವಸಸರ್ಜಾದೌತಾಸುವೀರ್ಯಮಪಾಸೃಜ
ತ್ । ಇತಿ ||೧೨೯|| ಆಪೋನಾರಾನರೋರುದ್ರಃಪುರುಷಃಕೃಷ್ಣಪಿಂ
ಗಳಃ । ಇತಿವಾಣೀಶುಭಾಕಾರಣಾಗಮೇಶ್ರೂಯತೇಸ್ಫುಟಂ ||೧೩೦||
ತಸ್ಮಾದಶೇಷಂಸಲಿಲಂಶಿವಾಜ್ಜಾತಂನಸಂಶಯಃ। ತಜ್ಜಲಾದ್ವಿಶ್ವಮುತ್ಪ
ನ್ನಂಜಂಗಮಸ್ಥಾವರಾತ್ಮಕಂ ||೧೩೧|| ಅತ್ರೋಚ್ಯತೇಪ್ರಮಾಣಾರ್ಥ
ಮಾಪೋವೇತ್ಯಾದಿಕಾಶ್ರುತಿಃ । ಸಾಸಂಹಿತಾಯಾಮುನಿಶಮೇವಮಾ
ಮ್ನಾಯತೇಶ್ರುತಿಃ ||೧೩೨|| ( ಆಪೋವಾಇದಂಸರ್ವಂವಿಶ್ವಾಭೂತಾ
ನ್ಯಾಪಃಪ್ರಾಣಾವಾಆಪಃಪಶವಆಪೋಽನ್ನಮಾಪೋಽಮೃತಮಾಪಸ್ಸ
ಮ್ರಾಡಾಪೋವಿರಾಡಾಪಸ್ಸ್ವರಾಡಾಪಶ್ಛಂದಾಗ್ಂಸ್ಯಾಪೋಜ್ಯೋತೀ
ಗ್ಂಷ್ಯಾಪಃ ) ಇತಿ|| ಅತೋಜಲಂಪಾದತೀರ್ಥಮೇವಸರ್ವಂಕಪರ್ದಿ
ನಃ । ತತಃಪೂತಾನಿಭೂಭಾಗೇಸ್ಥಿತಾನಿಸಕಲಾನ್ಯಪಿ ||೧೩೩|| ತೀ
ರ್ಥೋದಕಾನ್ಯಸೇವ್ಯಾನಿಭವೇಯುರ್ನಾತ್ರಸಂಶಯಃ । ತತ್ತೀರ್ಥೇ
ಸ್ನಾತಿತೀರ್ಥೇಹಿತೇಷಾಂಮಾನ್ಯೇಶಯನ್ನಿತಿ ||೧೩೪|| ಶ್ರುತಿಮಾರ್ಗ

---

ವನ್ನು ಸೃಜಿಸಿ, ಅದರಲ್ಲಿ ವೀರ್ಯವನ್ನು ಬಿಟ್ಟನು ಎಂದು ಹೇಳಲ್ಪಟ್ಟಿರುವುದು. ಆಪಃ ಎಂದರೆ ನಾರ ಎಂತಲೂ ನರ ಎಂದರೆ ಪರಬ್ರಹ್ಮನಾದ ರುದ್ರನೆಂತಲೂ, ಅಂತಹ ನರ ಸಬಂಧವಾದುದೇ ನಾರ ( ಜಲ ) ವೆಂತಲೂ ಕಾರಣಾಗಮದಲ್ಲಿ ವ್ಯಕ್ತವಾಗಿ ಹೇಳಲ್ಪಡುವುದು ॥ ೧೩೦ ॥ ಅದುಕಾರಣ ನೀರೆಲ್ಲವೂ ಶಿವನಿಂದ ಹುಟ್ಟಿದುದೆಂಬುದು ನಿಸ್ಸಂಶಯವು. ಅಂತಹ ನೀರಿನಿಂದ ಸ್ಥಾವರ ಜಂಗಮಾತ್ಮಕವಾದ ಜಗತ್ತು ಹುಟ್ಟಿತು ॥ ೧೩೧ ॥ ಈ ವಿಷಯದಲ್ಲಿ “ ಆಪೋವಾ ಎಂಬ ಶ್ರುತಿವಚನವು ಪ್ರಮಾಣವಾಗಿ ಹೇಳಲ್ಪಡುತ್ತದೆ. ಆ ಮಂತ್ರವು ಸಂಹಿತೆಯಲ್ಲಿ “ ಆಪೋವಾ-ಜ್ಯೋತಿಗ್ಂಷ್ಯಾಪಃ ” ಎಂದಿದೆ. ಇದರಲ್ಲಿ-ಈ ಸಕಲ ಪ್ರಪಂಚವೂ ನೀರೇ. ಸಕಲ ಪದಾರ್ಥಗಳೂ ರಸಗಳೂ ಪಶುಗಳೂ ಅನ್ನವೂ ಅಮೃತವೂ ಸಾರ್ವಭೌಮನೂ, ವಿರಾಟ್ಪುರುಷನೂ, ಸ್ವರಾಜನೂ ವೇದವೂ ತೇಜಸ್ಸುಗಳೂ ಜಲವೇ ಎಂದು ಹೇಳಲ್ಪಟ್ಟಿದೆ. ಈ ಕಾರಣದಿಂದ ನೀರೆಲ್ಲವೂ ಶಿವನ ಪಾದತೀರ್ಥವೇ ಆಯಿತು. ಆದುದರಿಂದ ಭೂತಲದಲ್ಲಿರುವ ಸರ್ವ ತೀರ್ಥೋದಕಗಳೂ ಉಪಯೋಗಾನರ್ಹಗಳೇ ಆಗಬೇಕಾಯಿತು. ಹಾಗಾದರೆ ಎಲೆ ಬ್ರಾಹ್ಮಣರೆ, “ ತತ್ತೀರ್ಥೇಸ್ನಾತಿ ” ಎಂದು ತೀರ್ಥಸ್ನಾನವನ್ನು ವಿಧಿಸಿರುವ ಶ್ರುತಿ ವಚನವು ಕೂಡ ಅತಿಕ್ರಮಿಸಲ್ಪಡಬೇಕಾಯಿತು. ಮತ್ತು “ ಮುಖಾದ್ವಾಚೋಽಗ್ನಿಃ ” ಎಂಬುದು ಮೊದಲಾದ ಶ್ರುತಿ ವಚನಗಳಿಂದ ಅಗ್ನಿಯೂ ಈಶ್ವರನಿಂದ ಹುಟ್ಟಿದುದೆಂದು ಸಿದ್ಧವಾಗುವುದು. ಅಂತಹ ಅಗ್ನಿಯಿಂದ ಪಕ್ವವಾದ ಸಕಲವಸ್ತು

ತ್ರಿಕ ಪ್ರಮುಶ್ಚ ಭವೇದೇವಹಿಭೋದ್ವಿಜಾಃ । ಕಿಂಚಶು ತೇರುತ್ರಖಾದ್ವಾ
ಚೋಽಗ್ನಿರಿತಿಪ್ರಭೃತೇಸ್ತಥಾ ॥೧೩೫॥ ಜಾತೋಽಗ್ನಿರೀಶ್ವರಾತ್ತ
ಸ್ಮಾತ್ತತ್ಪಾಕಪರಿವರ್ತಿತಃ । ಸರ್ವಂಮಹೇಶೋಪಭುಕ್ತಮೇವಸ್ಯಾಜ್ಜ
ಗತ್ರೀತಲೇ ॥೧೩೬॥ ತತಶ್ಚತತ್ಪಕ್ವಾನ್ನೇನಾತಿಥಿಸಂತರ್ಪಣಂತಥಾ ।
ದೇವ್ಯೋಪಹಾರಪ್ರಾಣಾಗ್ನಿಹೋತ್ರಹೋಮಾಮಹೋನ್ನತಾಃ ॥೧೩೭॥
ವೈಶ್ವದೇವಾದಯೊಧರ್ಮಾಸ್ಸಂಭವೇಯುರ್ನಕುತ್ರಚಿತ್ । ಅಪಿಚಾಸ್ಯಾ
ನಾಸಿಕಾಭ್ಯಾಂ ಪ್ರಾಣಾದ್ವಾಯುರಿತಿಶ್ರುತೇಃ ॥೧೩೮॥ ವಾತಃಪ್ರಾಣೇ
ನೇಷಿರೋಮಗೋಭೂರಿತ್ರಿಪುನಶ್ಶ್ರುತೇಃ । ಚೈತನ್ಯರೂಪಿಣಾತಸ್ಯ
ವಾಯೋರೀಶೇನಶಂಭುನಾ ॥೧೩೯॥ ಗೃಹೀತಗಂಧಾನಿಸರ್ವಪುಷ್ಪಪ
ತ್ರಾಣಿಭೂತಲೇ । ಪ್ರೂಜನಾರ್ಥಮನರ್ಹಾಣಿಸಂಘಟೇರನ್ವಿಶೇಷತಃ ॥
ಕಿಂಚಪ್ರಾಣಾಧ್ಯಾತ್ಮನೈವವಿಶ್ವಚೈತನ್ಯರೂಪಿಣೆ । ಮಹೇಶ್ವರಾಯಶ್ರ
ದ್ಧಾಯಾಂಪ್ರಾಣಾಇತ್ಯಾದಿಭಿಶ್ಯಭೈಃ ॥೧೪೧॥ ಪಂಚಮಂತ್ರೈರ್ಹವಿ
ರ್ದತ್ತಂಸಮ್ಯಕ್ಪ್ರಾಣಾಗ್ನಿಹೋತ್ರಕೆ । ಪ್ರಸಾದೋನಭವೇತ್ಕಿಂವಾಶಿವ
ಸ್ಯಪರಮಾತ್ಮನಃ ॥೧೪೨॥ ಬ್ರಾಹ್ಮಣೈಸ್ತತ್ಪ್ರಸಾದಾನ್ನಂಸರ್ವೈಃಕಿಂ

---

ವೂ ಜಗತ್ತಿನಲ್ಲಿ ಶಿವನಿಂದ ಬುಂಜಿಸಲ್ಪಟ್ಟುದೇ ಆಗುವುದು. ॥ ೧೩೬ ॥ ಅಂಥ ಪಕ್ವಾ
ನ್ನದಿಂದ ಅತಿಥಿಗಳ ಸಂತರ್ಪಣೆಯು ದೇವತಾ ನೈವೇದ್ಯವೂ ಪ್ರಾಣಾಗ್ನಿಹೋತ್ರ
ಹೋಮಗಳೂ, ವೈಶ್ವ ದೇವಾದಿಧರ್ಮಗಳೂ ಕೂಡ ಎಲ್ಲೂ ನಡೆಯಲೇ ಬಾರದಾ
ಯಿತು. ಮತ್ತು "ನಾಸಿಕಾಭ್ಯಾಂಪ್ರಾಣಾದ್ವಾಯುಃ" ಎಂಬ ಶ್ರುತಿ ವಚನದಿಂದ
ಲೂ, "ವಾತಂಪ್ರಾಣೇನೇಷಿರೋ" ಎಂಬ ವೇದವಚನದಿಂದಲೂ ಕೂಡ ವಾಯು
ವಿಗೆ ಶಿವನು ಚೈತನ್ಯ ರೂಪನಾಗಿರುವನು. ಅಂತಹ ಶಿವನಿಂದ ಜಗತ್ತಿನಲ್ಲಿರುವ ಪ
ತ್ರ ಪುಷ್ಪಗಳ ಪರಿಮಳವೆಲ್ಲ ಆಘ್ರಾಣಿಸಲ್ಪಟ್ಟಿರುವುದು. ಹೀಗಿರುವಲ್ಲಿ ಅಂತಹ ಪತ್ರ
ಪುಷ್ಪಗಳೂ ನಿರ್ಮಾಲ್ಯಗಳಾಗಿ ಪೂಜಾನರ್ಹಗಳೇ ಅಗಬೇಕಾಯಿತು. ॥ ೧೪೦ ॥ ಮ
ತ್ತು ಜಗಚ್ಚೈತನ್ಯ ಸ್ವರೂಪನಾದ ಪರಶಿವನಿಗೆ "ಶ್ರದ್ಧಾಯಾಂಪ್ರಾಣಾಃ" ಎಂಬು
ದು ಮೊದಲಾದ ೫ ಮಂತ್ರಗಳಿಂದ ಪ್ರಾಣಾಗ್ನಿಹೋತ್ರದಲ್ಲಿ ಕೊಡಲ್ಪಟ್ಟಹವಿಸ್ಸು ಶಿ
ವನ ಪ್ರಸಾದವಾಗುವುದಿಲ್ಲವೇನು ? ಸಕಲ ಬ್ರಾಹ್ಮಣರು ಆ ಪ್ರಸಾದಾನ್ನವನ್ನು ಭುಂ
ಜಿಸುವುದಿಲ್ಲವೇನು ? ಆ ೫ ಮಂತ್ರಗಳು ಸಂಹಿತೆಯಲ್ಲಿ ಕ್ರಮವಾಗಿ "ಶ್ರದ್ಧಾಯಾಂ
ಪ್ರಾಣೆ ......... ಸಮಾನಾಯಸ್ವಾಹಾ" ಎಂದು ಹೇಳಲ್ಪಟ್ಟವೆ. ಈ ಮಂತ್ರಗಳ
ಗೆ ಪೂರ್ವಾಚಾರ್ಯರ ಅಭಿಪ್ರಾಯವನ್ನನುಸರಿಸಿ ನಾನು ಅರ್ಥವನ್ನು ಹೇಳುತ್ತೇನೆ—
ಶ್ರದ್ಧಾಯಾಂ, ಆಸ್ತಿಕಬುದ್ಧಿಯಿರುತ್ತಿರಲಾಗಿ ( ಎಂದರೆ ವಿಶ್ವಾಸಪೂರ್ವಕವಾಗಿ ಪ್ರಾಣೆ
ಪ್ರಾಣಲಿಂಗದಲ್ಲಿ, ನಿವಿಷ್ಟಃ-ಕುಳಿತುಕೊಂಡವನಾಗಿ ( ಎಂದರೆ ಲಿಂಗ ಮಧ್ಯದಲ್ಲಿ ಸಕ

ನೋಪಭುಜ್ಯತೇ । ತೇಮಂತ್ರಾ ಏವಮಾಖ್ಯಾತಾಸ್ಸಂಹಿತಾಯಾಮನು
ಕ್ರಮಾತ್ ॥೧೪೩॥ ( ಶ್ರದ್ಧಾಯಾಂಪ್ರಾಣೇನಿವಿಷ್ಟೋಽಮೃತಂಜು
ಹೋಮಿಶಿವೋಮಾವಿಶಾಪ್ರದಾಹಾಯುಪ್ರಾಣಾಯಸ್ವಾಹಾ । ಶ್ರದ್ಧಾ
ಯಾಮಪಾನೇನಿವಿಷ್ಟೋಽಮೃತಂಜುಹೋಮಿ ಶಿವೋಮಾವಿಶಾಪ್ರದಾ
ಹಾಯಾಪಾನಾಯಸ್ವಾಹಾ । ಶ್ರದ್ಧಾಯಾಂವ್ಯಾನೇನಿವಿಷ್ಟೋಽಮೃತಂ
ಜುಹೋಮಿ ಶಿವೋಮಾವಿಶಾಪ್ರದಾಹಾಯುವ್ಯಾನಾಯಸ್ವಾಹಾ । ಶ್ರ
ದ್ಧಾಯಾಮುದಾನೇನಿವಿಷ್ಟೋಽಮೃತಂಜುಹೋಮಿ ಶಿವೋಮಾವಿಶಾ
ಪ್ರದಾಹಾಯೋದಾನಾಯಸ್ವಾಹಾ । ಶ್ರದ್ಧಾಯಾಂಸಮಾನೇನಿವಿ
ಷ್ಟೋಽಮೃತಂಜುಹೋಮಿಶಿವೋಮಾವಿಶಾಪ್ರದಾಹಾಯುಸಮಾನಾ
ಯಸ್ವಾಹಾ ) ಇತಿ ॥ ಕಥಯಾಮ್ಯರ್ಥಮೇತೇಷಾಂಪೂರ್ವಾಚಾರ್ಯಾನು
ಸಾರತಃ । ಶ್ರದ್ಧಾಯಾಮಾಸ್ತಿಕಮತೌಸತ್ಯಾಂವಿಶ್ವಾಸಬುದ್ಧಿತಃ ॥
೧೪೪॥ ಪ್ರಾಣೇಪ್ರಾಣಾತ್ಮಕೇಲಿಂಗೇನಿವಿಷ್ಟಸ್ತತ್ರಸಂಸ್ಥಿತಃ । ಲಿಂ
ಗಮಧ್ಯೇಜಗತ್ಸರ್ವಮಿತ್ಯುಕ್ತೇರ್ಲಿಂಗಮಧ್ಯಗಃ ॥೧೪೫॥ ಅಮೃತಂಪರಿ
ಶುದ್ಧಾನ್ನಂತತ್ಪ್ರಾಣಾತ್ಮಕಶಂಭವೇ । ಜುಹೋಮಿಪ್ರೀತ್ಯಾಪರ್ಯಾಯಾ

---

ಲ ಜಗತ್ತು ಇರುವುದೆಂಬ ಪ್ರಮಾಣದಿಂದ ನಾನು ಲಿಂಗಮಧ್ಯವರ್ತಿಯಾಗಿದ್ದುಕೊಂ
ಡು ) ಅಮೃತಂ-ಪರಿಶುದ್ಧವಾದ ಅನ್ನವನ್ನು, ಪ್ರಾಣಾಯ-ಪ್ರಾಣಸ್ವರೂಪನಾದ ಶಿ
ವನಿಗೋಸುಗ, ಜುಹೋಮಿ-ಪ್ರೀತಿಯಿಂದ ಸಮರ್ಪಿಸುವೆನು, ಅದುಕಾರಣ ಎಲೈ
ಅನ್ನವೇ ನೀನು ಶಿವಃ-ಶಿವನಿಂದಸ್ವೀಕರಿಸಲ್ಪಟ್ಟುದಾಗಿ, ( ಇಲ್ಲಿ ಪುಲ್ಲಿಂಗ ಪ್ರಯೋಗ
ವು ಛಾಂದಸವು ) ಮಾ-ನನ್ನನ್ನು, ಪ್ರದಾಹಾಯ-ರೋಗಗಳಿಂದ ಸಂತಾಪವನ್ನುಂ
ಟು ಮಾಡದೇಇರುವುದಕ್ಕೋಸುಗ, ವಿಶ-ಬೇಗನೆ ಪ್ರವೇಶಿಸು ॥ ೧೪೬ ॥ ಹೀಗೆಯೇ
ಅಪಾನದಿಗಳ ವಿಷಯದಲ್ಲಿಯೂ ಅರ್ಥವು ಹೇಳಲ್ಪಟ್ಟಿರುವುದು. ನೋಡಿಕೊಳ್ಳಿರಿ.
ಅದುಕಾರಣ, ಶಿವಪ್ರಸಾದವು ಪ್ರಾಣಾಗ್ನಿಹೋತ್ರಕ್ಕೆ ಹೇಗೆ ಅನರ್ಹವಾಗುವುದು ? ॥
೧೪೭ ॥ ಮತ್ತು ಆಹಿತಾಗ್ನಿಗಳಾದ ಬ್ರಾಹ್ಮಣರು ಶ್ರಾದ್ಧಗಳಲ್ಲಿ ಪರಮೇಶ್ವರ ಪ್ರೀತ್ಯ
ರ್ಥ ,, ಎಂಬವಚನವನ್ನು ಹೇಳಿ, ,, ಅಗ್ನೌಕರಣಂಪಾಣೌಕರಣಮುಪಕರಿಷ್ಯೇ ,,
ಎಂದು ಸಂಕಲ್ಪಿಸಿ. ಅಗ್ನೌಕರಣವನ್ನುಮಾಡಿ ಉಳಿದ ಅನ್ನವನ್ನು ಹೋಮಮಾಡಿ,
ಪಾಣೌಕರಣಮಾಡಿ ಉಳಿದನ್ನವನ್ನು ಪರಿವೇಷಣಕ್ಕಿಂತ ಮುಂಚೆ ಪಿತೃಗಳನ್ನುದ್ದೇ
ಶಿಸಿ ,, ಯಾವಕಾರಣದಿಂದ ದಾನಮಾಡುತ್ತಾರೆಯೋ ಆ ಕಾರಣದಿಂದ ಎಲೆ ಬ್ರಾ
ಹ್ಮಣರೆ: ಆ ಅನ್ನವು ಪ್ರಾಣಾಹುತಿಗಳಿಗೆ ಯೋಗ್ಯವೇ ಅದಂತಾಯಿತಲ್ಲವೋ ? ಹೀ
ಗಿರುವಲ್ಲಿ ಪರಮಪರಿಶುದ್ಧವಾದ ಶಿವ ನಿರ್ಮಾಲ್ಯವು ಅದು ಹೇಗೆ ಅನರ್ಹವಾಗುವುದು
॥ ೧೪೮ ॥ ಚರುಭಕ್ಷಣವಲ್ಲಿ ಹೇಗೆ ಪ್ರಾಣಾಹುತಿಗಳಿಲ್ಲವೋ ಹಾಗೆ ಶ್ರಾದ್ಧ ಭೋಜನ

ಮಿತತೋಽನ್ನಶ್ವಂಶಿವಶ್ಶೈವಂ ॥೧೪೬॥ ಶಿವಸಂಬಂಧಿಸಚ್ಛಂಭುಸ್ವೀ
ಕೃತಂಸತ್ಪ್ರಮೋದತಃ । ಅಯಂಲಿಂಗವ್ಯತ್ಯಯೋಽತ್ರಛಾಂದಸಃ
ಪರಿದೃಶ್ಯತಾಂ ॥೧೪೭॥ ಮಾಮಪಾಂಸದಾಪ್ರದಾಹಾಯಸಂತಾಪಾಕರಣಾ
ಯಹಿ । ಅಕರುತ್ತಂವ್ಯಾಧಿಭಿಸ್ತಾಪಂವಿಶಪ್ರನಿಶಸತ್ವರಂ ॥೧೪೮॥ ಇ
ತ್ಯರ್ಥಃಕಥಿತೋಹ್ಯೇವಮಪಾನಾದಿಷುಲಕ್ಷ್ಯತಾಂ । ತಸ್ಮಾತ್ಪ್ರಸಾದಃ
ಪ್ರಾಣಾಗ್ನಿಹೋತ್ರಾನರ್ಹಃಕಥಂಭವೇತ್ ॥೧೪೯॥ ಕಿಂಚದ್ವಿಜಾಹಿಪಿತ
ಮೇಶ್ವರಪ್ರೀತ್ಯರ್ಥಇತ್ಯದಃ । ವಾಕ್ಯಮುಕ್ತ್ವಾಗ್ನೌಕರಣಂಪಾಣೌಕ
ರಣಮಪ್ಯಹಂ ॥೧೫೦॥ ಕರಿಷ್ಯಇತಿಸಂಕಲ್ಪಪೂರ್ವಮುಚ್ಛಿನ್ನವಹ್ನಯಃ
ಹುತ್ವಾಗ್ನೌಕರಣಾಚ್ಛಿಷ್ಟಂತದ್ವಿಚ್ಛಿನ್ನವಹ್ನಯಃ ॥೧೫೧॥ ಪಾ
ಣೌಕರಣಶಿಷ್ಟಂತುಪರಿವೇಷಣಕಃಪುರಾ । ಪಿತೄನುದ್ದಿಶ್ಯಯಚ್ಛಂ
ತಿಶ್ರಾದ್ಧೇಷ್ವನ್ನಂಯಮಾದರಾತ್ ॥೧೫೨॥ ಪ್ರಾಣಾಹುತೀನಾಂಯೋ
ಗ್ಯಂಸ್ಯಾತ್ತದನ್ನಂಕಿಲಭೂಸುರಾಃ । ಈಶಭುಕ್ತಮನರ್ಹಂಸ್ಯಾತ್ಕಥಂ
ಪರಮಪಾವನಂ ॥೧೫೩॥ ನವಿದ್ಯಂತೇಯಥಾಪ್ರಾಣಾಹುತಯಶ್ಚರುಭಕ್ಷ
ಣೇ । ತಥಾನಸಂತಿವಾಪ್ರಾಣಾಹುತಯಃಶ್ರಾದ್ಧಭೋಜಿನಾಂ ॥೧೫೪
ಅನರ್ಹಂವಾಬ್ರಾಹ್ಮಣಾನಾಮರ್ಹಂವಾಶ್ರಾದ್ಧಭೋಜನಂ ॥ ಸ್ವಲ್ಪಮ
ನ್ನಂಸ್ವಾಲಯಾದ್ವಾನೀಯತೇಶ್ರಾದ್ಧಭೋಜಿಭಿಃ॥೧೫೫॥ ಗೃಹ್ಣಂತಿವಾ

---

ವನ್ನು ಮಾಡುವವರಿಗೆ ಪ್ರಾಣಾಹುತಿಗಳಿಲ್ಲವೇನು ? ॥ ೧೫೪ ॥ ಶ್ರಾದ್ಧಭೋಜನವು
ಬ್ರಾಹ್ಮಣರಿಗೆ ಅನರ್ಹವೋ ? ಅಥವಾ ಅರ್ಹವಾದುದೋ ? ಅಂಥ ಶ್ರಾದ್ಧಭೋಜಿಗ
ಳು ತಮ್ಮ ಮನೆಯಿಂದ ಸ್ವಲ್ಪ ಅನ್ನವನ್ನೇನಾದರೂ ತೆಗೆದುಕೊಂಡು ಹೋಗುತ್ತಾ
ರೋ ? ಅಥವಾ ಶ್ರಾದ್ಧದ ಯಜಮಾನನ ಮನೆಯಲ್ಲಿ ಮೊದಲೇ ಅನ್ನವನ್ನು ತೆಗೆದಿ
ಟ್ಟುಕೊಂಡಿರುತ್ತಾರೋ ? ಇಲ್ಲವೆ ಪಿತೃದತ್ತಾನ್ನವನ್ನು ಬೇರೆಇಟ್ಟು ಪ್ರಾಣಾಹುತಿಗೆ
ಬೇರೆ ಅನ್ನವನ್ನು ಉಪಯೋಗಿಸುತ್ತಾರೋ ? ॥೧೫೬॥ ಪಿತೃಗಳಿಗರ್ಪಿತವಾದ ಅನ್ನ
ವು ಪ್ರಾಣಾಗ್ನಿಹೋತ್ರಕ್ಕೆ ಅರ್ಹವಾದುದಾಗಿದ್ದರೆ, ಮತ್ತು, ವಿಶ್ವೇ ದೇವತಗಳಿಗೆ ಅ
ರ್ಪಿತವಾದ ಅನ್ನವು ಪ್ರಾಣಾಗ್ನಿಹೋತ್ರಕ್ಕೆ ಯೋಗ್ಯವಾದುದಾಗಿದ್ದರೆ, ಪಿತೃರೂಪ
ವಸುದೇವತೆಯುದ್ದೇಶಿಸಿಯೂ, ಪಿತಾಮಹರೂಪ ರುದ್ರನನ್ನುದ್ದೇಶಿಸಿಯೂ, ಪ್ರಪಿ
ತಾಮಹರೂಪ ಆದಿತ್ಯನನ್ನುದ್ದೇಶಿಸಿಯೂ, ಅರ್ಪಿಸಲ್ಪಟ್ಟ ಅನ್ನವು ಪ್ರಾಣಾಗ್ನಿಹೋ
ತ್ರಕ್ಕೆ ಅರ್ಹವಾದುದಾಗಿದ್ದರೆ, ಶಿವನ ಪ್ರಸಾದವು ಪ್ರಾಣಾಗ್ನಿಹೋತ್ರಕ್ಕೆ ಹೇಗೆ
ಅನರ್ಹವಾಗುವುದು ? ॥೧೫೯॥ ಇದೇ ಅರ್ಥವನ್ನು ಕೂರ್ಮ ಪುರಾಣವು ವಿಸ್ತರಿಸುತ್ತ
ದೆ. ಹೇಗೆಂದರೆ—ಯಾವನು ಶ್ರಾದ್ಧಕಾಲದಲ್ಲಿ ಶಿವಭುಕ್ತ ಪ್ರಸಾದವನ್ನು ಪಿತೃದೇ
ವತೆಗಳಿಗೆ ಭಕ್ತಿಯಿಂದ ಸಮರ್ಪಿಸುತ್ತಾನೋ, ಅವನಿಂದಲೇ ಎಳ್ಳಿನಿಂದಕೂಡಿ ಕೊ

ನ್ನಂಪ್ರಾಗೇವಯಜಮಾನಸ್ಯಸದ್ಮನಿ । ವಿಭಜ್ಯಪಿತೃದತ್ತಾನ್ನಂಪ್ರಾ ಣಾದೀನಾಂನಯಂತಿವಾ ॥೧೫೬॥ ಪಿತ್ರರ್ಪಿತಾನ್ನಂಪ್ರಾಣಾಗ್ನಿಹೋತ್ರಾ ಯಾರ್ಹಂಭವೇದ್ಯದಿ । ವಿಶ್ವೇದೇವಾರ್ಪಿತಂಪ್ರಾಣಾಹುತಿಯೋಗ್ಯಂಭ ವೇದ್ಯದಿ ॥೧೫೭॥ ಪಿತೃರೂಪವಸೂದ್ದಿಷ್ಟಂಯತ್ಪಿತಾಮಹರೂಪಿಣೇ। ರುದ್ರಾಯಾಪಿಸಮುದ್ದಿಷ್ಟಂಪ್ರಪಿತಾಮಹರೂಪಿಣೇ ॥೧೫೮॥ ಆದಿ ತ್ಯಾಯಾರ್ಪಿತಂಪ್ರಾಣಾಗ್ನಿಹೋತ್ರಾರ್ಹಂಭವೇದ್ಯದಿ । ಶಿವಪ್ರಸಾದಃ ಪ್ರಾಣಾಗ್ನಿಹೋತ್ರಾರ್ಹೋನಭವೇತ್ಕಥಂ ॥೧೫೯॥ ಪ್ರಪಂಚಯತ್ಯ ರ್ಥಮಿಮಂಪುರಾಣಂಕೂರ್ಮಸಂಜ್ಞಿತಂ । ( ಯಶ್ಶ್ರಾದ್ಧಕಾಲೇಹರಭು ಕ್ತಶೇಷಂದದಾತಿಭಕ್ತ್ಯಾಪಿತೃದೇವತಾನಾಂ । ತೇನೈವಪಿಂಡೈಶ್ಚತಿಲೈ ರ್ವಿಮಿಶ್ರೈರಾಕಲ್ಪಕೋಟ್ಯಾಂಪಿತರಸ್ಸುತೃಪ್ತಾಃ) ಶ್ರೀಲೈಂಗ್ಯೇಪ್ಯಯ ಮೇವಾರ್ಥೋಘುಷ್ಯತೇಶೃಣುತದ್ವಿಜಾಃ ॥೧೬೦॥ ಪತ್ರಂಪುಷ್ಪಂಫ ಲಂತೋಯಮನ್ನಪಾನಾದ್ಯಮೌಷಧಂ । ಅನಿವೇದ್ಯನಭುಂಜೀತಯ ದಾಹಾರಾಯಕಲ್ಪಿತಂ ॥೧೬೧॥ ತತಸ್ಸ್ವಯಂಚಭುಂಜೀಯಾಚ್ಛುದ್ಧ ಮನ್ನಂಯಥಾಸುಖಂ । ನಿವೇದಿತಂಚದೇವಾಯತಚ್ಛೇಷಂಚಾತ್ಮಶುದ್ಧ ಯೆ ॥೧೬೨॥ ಪ್ರಶಂಸತೀಮಮೇವಾರ್ಥಂವ್ಯಾಸಸ್ಮೃತಿರನಿಂದಿತಾ । ಯದ್ಭುಕ್ತಂಪರಮಾಗಚ್ಛೇತ್ತದ್ಬೋಧೀಮಿಯಮಿತಿಸ್ಫುಟಂ ॥ ೧೬೩ ॥

---

ಡಲ್ಪಡುವ ಪಿಂಡಗಳಿಂದ ಪಿತೃದೇವತೆಗಳು ಕಲ್ಪಕೋಟಿ ಪರ್ಯಂತವಾಗಿ ತೃಪ್ತರಾಗು ತ್ತಾರೆ, ಎಂಬುದಾಗಿ. ಲೈಂಗ್ಯಪುರಾಣದಲ್ಲೂ ಇದೇ ಅರ್ಥವೇ ಸಾರಲ್ಪಡುತ್ತದೆ. ಎಲೆ ಬ್ರಾಹ್ಮಣರೆ ! ಅದನ್ನು ಕೇಳಿರಿ:—ಆಹಾರಕ್ಕಾಗಿ ಇಟ್ಟುಕೊಂಡ ಎಲೆ ಹೂವು ಹಣ್ಣು ನೀರು ಅನ್ನ ಪಾನ ಔಷಧ ಮೊದಲಾದಯಾವುದನ್ನೂ ನೈವೇದ್ಯಮಾಡದೆ ಭುಂಜಿಸ ಬಾರದು ॥ ೧೬೧ ॥ ಅದುಕಾರಣ ಶಿವನಿಗೆ ನಿವೇದಿಸಿದ ಶುದ್ಧವಾದ ಪ್ರಸಾದಾನ್ನವನ್ನು ತನ್ನ ಶುದ್ಧಿಗೋಸುಗ ಸೌಖ್ಯವಾಗಿ ಭುಂಜಿಸಬೇಕು ॥ ೧೬೨ ॥ ಇದೇ ಅರ್ಥವನ್ನು ನಿರ್ದುಷ್ಟವಾದ ವ್ಯಾಸಸ್ಮೃತಿಯು, ಯಾವುದು ಭುಂಜಿಸಲ್ಪಡುವುದಕ್ಕಿರುವುದೋ ಅದು ಹೋಮಮಾಡಲ್ಪಡಬೇಕು,, ಎಂದು ಸ್ಪಷ್ಟವಾಗಿ ಉದ್ಘೋಷಿಸುತ್ತದೆ ॥೧೬೩ ಬೋಧಾಯನಸ್ಮೃತಿಯುಕೂಡ ಅದರಂತೆಯೇ "ಯಾವುದು ಆಹಾರಾರ್ಥವಾದ ಅನ್ನ ವೋ ಅದನ್ನು ಹೋಮಮಾಡಬೇಕು ,, ಎಂದು ಇದೇ ಅರ್ಥವನ್ನೇ ಹೇಳುತ್ತದೆ. । ಶೈವಪುರಾಣದಲ್ಲುಕೂಡ " ಯಾವನು ಶಿವನ ಪ್ರಸಾದದಿಂದಲೇ ಪ್ರಾಣಾಗ್ನಿಹೋತ್ರ ವನ್ನು ಮಾಡುತ್ತಾನೋ, ಅವನು ಅಂತಹ ಅನ್ನದ ಪ್ರತಿಯೊಂದು ಅಗುಳಿನಿಂದಲೂ ಹತ್ತುಸಾವಿರ ಅಶ್ವಮೇಧದ ಪುಣ್ಯವನ್ನು ಪಡೆಯುತ್ತಾನೆ ,, ಎಂಬುದಾಗಿ ಮನೋಹ ರವಾದ ಇದೇ ಅರ್ಥವೇ ಹೇಳಲ್ಪಟ್ಟಿರುವುದು. ಹೀಗೆ ಶ್ರುತಿ ಸ್ಮೃತಿ ಪುರಾಣಾದಿಗಳ

ಬೋಧಾಯನಸ್ಮೃತಿಸ್ತದ್ವದೇನಮರ್ಥಂಪ್ರಚಕ್ಷತೇ । ಯದನ್ನಮಾ ಪಾರತ್ವೇನಪ್ರಾಪ್ತಂತದ್ಧೋಮೀಯಮಿತಿ॥೧೬೪॥ ಶೈವೇಪುರಾಣೇಪ್ಯೇ ಷೋಽರ್ಥಃಕಥ್ಯತೇಹೃದಯಂಗಮಃ । ಪ್ರಾಣಾಗ್ನಿಹೋತ್ರಂಯಃಕುರ್ಯಾ ಚ್ಛಿವಸ್ಯೈವಪ್ರಸಾದತಃ ॥೧೬೫॥ ಅಶ್ವಮೇಧಾಯುತಂಪುಣ್ಯಂಸಿಕ್ಥೇ ಸಿಕ್ಥೇಲಭೇನ್ನರಃ । ಇತಿಶ್ರುತಿಸ್ಮೃತಿಪುರಾಣಾದಿಷ್ವೇವಂಪದತ್ಸ್ವಪಿ॥ ಪಿತೃಶೇಷಂತುಯೋದದ್ಯಾಚ್ಛಿವಾಯಪರಮಾತ್ಮನೇ। ರೇತೋಂಧಾಃಪಿತರ ಸ್ತಸ್ಯಭವಂತಿಕ್ಲೇಶಭಾಜಿನಃ ॥೧೬೭॥ ತಸ್ಮಾತ್ಪ್ರಸಾದೋರುದ್ರಸ್ಯ ಶ್ರಾದ್ಧಾದಿಷುಚಕರ್ಮಸು । ಪ್ರಾಣಾಗ್ನಿಹೋತ್ರೇಚತಥಾಪವಿತ್ರಃಪರಿ ಕೀರ್ತಿತಃ ॥೧೬೮॥ ಅತಸ್ಸರ್ವಂಶಿವವ್ಯಾಪ್ತಮುಪಭುಕ್ತಂಶಿವೇನಹಿ । ಶಿವಸಂಬಂಧರಾಹಿತ್ಯಾದ್ಭೋಗ್ಯಂವಸ್ತ್ವಸ್ತಿಯದ್ಭುವಿ ॥೧೬೯॥ ತನ್ನಾ ಸ್ತಿತಸ್ಮಾದೀಶಸ್ಯನೈವೇದ್ಯಂಚಪದೋದಕಂ । ನಿರ್ಮಾಲ್ಯಂನೋಪ ಭೋಕ್ತವ್ಯಮಿತಿವಾಕ್ಯಂಯದಸ್ತಿತತ್ ॥೧೭೦॥ ಶ್ರವಣಾರ್ಹಂನಭ ವತಿಸರ್ವದೈವಮನೀಷಿಣಾಂ। ನನುಯುಷ್ಮನ್ಮತೇಪ್ಯೇತಚ್ಛೈವಮನ್ನಂ ಶಿವಾಯಕಿಂ ॥೧೭೧॥ ಸಮರ್ಪ್ಯತಇತಿಬ್ರೂಥತದಾಕರ್ಣಯತೋತ್ತ ರಂ । ಶೈವೇಪುರಾಣೇಕಥಿತಂಪ್ರವಕ್ಷ್ಯೇವೇದಸಮ್ಮತೇ ॥೧೭೨॥ ಶಿವ ಸ್ವಾಮಿಕಮೇವಾನ್ನಂಶಿವಾಯವಿನಿಯುಜ್ಯತೇ । ವಿನಿಯೋಗೋಪಚಾರೇ

---

ಲ್ಲೆಲ್ಲಾ ಹೇಳುತ್ತಿದ್ದರೂ ಪಿತೃಶೇಷವನ್ನು ಯಾವನು ಪರಮಾತ್ಮನಾದ ಶಿವನಿಗೆಕೊಡು ತ್ತಾನೋ ಅವನ ಪಿತೃಗಳು ರಕ್ತವನ್ನು ಕುಡಿದು ಕ್ಲೇಶವನ್ನು ಹೊಂದುತ್ತಾರೆ ॥೧೬೭॥ ಅದುಕಾರಣ, ರುದ್ರಪ್ರಸಾದವನ್ನು ಶ್ರಾದ್ಧಾದಿ ಕರ್ಮಗಳಲ್ಲೂ, ಪ್ರಾಣಾಗ್ನಿಹೋತ್ರ ಕ ರ್ಮದಲ್ಲೂ ಪವಿತ್ರವಾದುದೆಂದು ಹೇಳಲ್ಪಟ್ಟಿದೆ ॥೧೬೮॥ ಇದರಿಂದ ಸಕಲವೂ ಶಿವನಿಂದ ವ್ಯಾಪ್ತವಾದದ್ದು ಶಿವನಿಂದ ಭುಕ್ತವಾದದ್ದು ಆಗಲಿಲ್ಲವೇ? ಲೋಕದಲ್ಲಿ ಶಿವನ ಸಂಬಂ ಧವಿಲ್ಲದಿರತಕ್ಕ ಭೋಗ್ಯವಸ್ತುವಿದ್ದರಂತೂಸರಿ, ಅದೇ ಇಲ್ಲದಿರುವಾಗ ಶಿವನ ನೈವೇದ್ಯ ವನ್ನೂ ಪಾದತೀರ್ಥವನ್ನೂ ನಿರ್ಮಾಲ್ಯವೆಂತಲೂ, ಅದನ್ನು ಭುಂಜಿಸಬಾರದೆಂತಲೂ ಹೇಳುವವಾಕ್ಯವು ವಿದ್ವಾಂಸರಿಂದ ಯಾವಾಗಲೂ ಕೇಳಲ್ಪಡಲು ಯೋಗ್ಯವಾದುದೇ ಅಲ್ಲ, “ ನಿಮ್ಮಮತದಲ್ಲಿ ಕೂಡ ಶಿವನುಂಡ ಅನ್ನವನ್ನು ಶಿವನಿಗೆ ಸಮರ್ಪಿಸುತ್ತೀ ರೇನು ? ,, ಎಂದು ಕೇಳುವಿರೇನೋ ? ಅದಕ್ಕೆ ಉತ್ತರವು ವೇದಸಮ್ಮತವಾದಶೈ ವಪುರಾಣದಲ್ಲಿದೆ; ಅದನ್ನು ಹೇಳುತ್ತೇನೆ ಕೇಳಿರಿ:—॥ ೧೭೨ ॥ ಸ್ವಾಮಿಯಾದ ಶಿವ ನ ಅನ್ನವೇ ಶಿವನಿಗೆ ಸಮರ್ಪಿಸಲ್ಪಡುತ್ತದೆ. ಸಮರ್ಪಣರೂಪವಾದ ಉಪಚಾರದಿಂ ದಲೇ ಶಿವನು ಸಂತುಷ್ಟನಾಗುತ್ತಾನೆ ॥ ೧೭೩ ॥ ರಾಜನ ಕೈ ಕೆಳಗಣ ಉದ್ಯೋಗ ಸ್ಥನು ರಾಜನು-ತನಗೆಕೊಟ್ಟಿದ್ದ ದ್ರವ್ಯವನ್ನೆ ಆತನಿಗೆ ಸಮರ್ಪಿಸಿ, ಅದರಿಂದ ಸಂತ

ಣಸಂತುಷ್ಯತಿಸದಾಶಿವಃ ॥೧೭೩॥ ಯಥಾಹಿರಾಜಪುರುಷಸ್ತ್ವದೀಯಂ
ದ್ರವ್ಯಮೇವಹಿ । ತಸ್ಮೈಸಮರ್ಪ್ಯತುಷ್ಟೇನತೇನತುಷ್ಟೋಭವತ್ಯ
ಲಂ ॥೧೭೪॥ ತಥಾಶಿವಸ್ಯಾನ್ನಮೇವಶಿವಾಯೈವಸಮರ್ಪ್ಯಚ । ತತ್ರಶ್ಚಿ
ವೇನತುಷ್ಟೇನಭವಾಮಃಪರಿಪಾಲಿತಾಃ ॥೧೭೫॥ ವಸ್ತುಕಿಂಚಿಚ್ಛಿವಾ
ದನ್ಯದಸ್ಮಾಭಿರ್ನಸಮರ್ಪ್ಯತೆ । ಪ್ರೋಕ್ತಃಪುರಾಣೇಬ್ರಹ್ಮಾಂಡನಾ
ಮ್ನ್ಯರ್ಥೋಯಮನಿಂದಿತಃ ॥೧೭೬॥ ಸರ್ವಲೋಕೈಕನಾಥಸ್ಯಶಂ
ಭೋಃಕಃಕಿಂಪ್ರಯಚ್ಛತಿ । ಉಪಚಾರಪ್ರಿಯಶ್ಶಂಭುಸ್ತೇನೈವಾಯಂ
ಪ್ರಸೀದತಿ ॥೧೭೭॥ ಕಿಂಚಪ್ರಮಥಗೀರ್ವಾಣಪೂರ್ವದೇವಮುನೀಶ್ವರಾಃ ।
ಸರ್ವೇಪ್ರಸಾದಮೀಶಸ್ಯಸೇವಂತೇಭೋಗಮೋಕ್ಷದಂ ॥೧೭೮॥ ಪುರಾ
ಣಂಮಾನಮತ್ರಾರ್ಥೇಭವಿಷ್ಯದಭಿಧಾನಕಂ । ತಥಾಗಸ್ತ್ಯಾದಿಮುನಯೋ
ದೂರ್ವಾಸಾನಂದಿಕೇಶ್ವರಃ ॥೧೭೯॥ ಮಹಾಕಾಳೋದಧೀಚಶ್ಚಪಾಣಿನಿಶ್ಚ
ಕಣಾದಕಃ । ಸ್ಕಂದೋಭೃಂಗಿರಿಟಿರ್ವೀರಭದ್ರಸ್ತುಪ್ರಮಥಾದಯಃ ॥
೧೮೦॥ ಅಜೋಹರಿಸ್ಸಹಸಾಕ್ಷೋಬಾಣಾಸುರದಶಾನನೌ । ವಸಿಷ್ಠ
ರುರುವಾಲ್ಮೀಕಿಭರದ್ವಾಜಾತ್ರಿಗೌತಮಾಃ ॥೧೮೧॥ ಏತೇಪರಮಶೈವಾ
ಶ್ಚಭಜಂತಿಪರಯಾಮುದಾ । ಪ್ರಸಾದಸೇವನಾದ್ಧ್ಯಾನಾದರ್ಚನಾದ್ಧಾ
ರಣಾದಪಿ ॥೧೮೨॥ ಜಾತಾದರ್ಶನಕರ್ತಾರಸ್ತ್ರಾಯಂತಿಜಗತ್ರಯಂ ।

---

ಷ್ಟನಾದ ದೊರೆಯಿಂದ ತಾನು ಸಂತುಷ್ಟನಾಗುವಂತೆ ಶಿವನ ಅನ್ನವನ್ನೆ ಶಿವನಿಗೆ ಸಮ
ರ್ಪಿಸಿ, ಅದರಿಂದ ಸಂತುಷ್ಟನಾದ ಶಿವನಿಂದ ನಾವು ಕಾಪಾಡಲ್ಪಡುವೆವು ಎಂದು ಹೇಳಲ್ಪ
ಟ್ಟಿರುವುದು ॥೧೭೫॥ ಶಿವನಿಗೆ ಭಿನ್ನವಾದ ವಸ್ತುವೊಂದನ್ನೂ ನಾವು ಶಿವನಿಗೆ ಸಮರ್ಪಿ
ಸುವುದಿಲ್ಲ. ಬ್ರಹ್ಮಾಂಡ ಪುರಾಣದಲ್ಲಿ ನಿರ್ದುಷ್ಟವಾದ ಇದೇ ಅಭಿಪ್ರಾಯವು ಹೇಳಲ್ಪ
ಟ್ಟಿದೆ ॥ ೧೭೬ ॥ ಹೇಗೆಂದರೆ:—ಸಕಲ ಜಗತ್ತಿಗೂ ಒಬ್ಬನೇ ಒಡೆಯನಾದ ಶಿವನಿಗೆ
ಯಾವನು ಏನನ್ನು ಕೊಡಬಲ್ಲನು ? ಶಿವನು ಉಪಚಾರದಲ್ಲಿ ಪ್ರೀತಿಯುಳ್ಳವನು. ಅದ
ರಿಂದಲೇ ಅವನು ಭಕ್ತರಿಗೆ ಪ್ರಸನ್ನನಾಗುತ್ತಾನೆ,, ಎಂಬುದಾಗಿ ॥ ೧೭೭ ॥ ಮತ್ತು
ಪ್ರಮಥರು ದೇವತೆಗಳು ರಾಕ್ಷಸರು ಮುನಿಗಳು ಮೊದಲಾದವರೆಲ್ಲರೂ ಭೋಗ
ಮೋಕ್ಷಗಳನ್ನು ಕೊಡುವ ಶಿವ ಪ್ರಸಾದವನ್ನು ಸೇವಿಸುತ್ತಾರೆ. ॥ ೧೭೮ ॥ ಈ ವಿಷ
ಯದಲ್ಲಿ ಭವಿಷ್ಯತ್ಪುರಾಣ ವಚನವು ಪ್ರಮಾಣವು. “ ಅಗಸ್ತ್ಯ ಮೊದಲಾದ ಮುನಿ
ಗಳೂ, ದೂರ್ವಾಸ ನಂದಿಕೇಶ್ವರ, ಮಹಾಕಾಳ, ದಧೀಚ, ಪಾಣಿನಿ, ಕಣಾದ, ಷ
ಣ್ಮುಖ, ಭೃಂಗೀಶ, ವೀರಭದ್ರ, ಪ್ರಮಥರು ಮೊದಲಾದವರು, ಬ್ರಹ್ಮ ವಿಷ್ಣು,
ದೇವೇಂದ್ರ, ಬಾಣಾಸುರ, ರಾವಣ, ವಸಿಷ್ಠ, ರುರು, ವಾಲ್ಮೀಕಿ, ಭರದ್ವಾಜ, ಅ
ತ್ರಿ, ಗೌತಮ, ಈ ಉತ್ತಮರಾದ ಶೈವರೆಲ್ಲರೂ ಅತ್ಯಂತ ಪ್ರೀತಿಯಿಂದ ಶಿವನ ಪ್ರ

ಇತಿವಾಕ್ಯಾತ್ಸ್ಕಂದನಂದಿಭೃಂಗ್ಯಾದ್ಯಾಃಪ್ರಮಥೇಶ್ವರಾಃ ‖ ೧೯೩ ‖ ಬ್ರಹ್ಮವಿಷ್ಣ್ವಾದಯೋದೇವಾಬಾಣಾದ್ಯಾಅಪಿರಾಕ್ಷಸಾಃ । ವಸಿಷ್ಠರುರುವಾಲ್ಮೀಕಿಪ್ರಮುಖಾಶ್ಚಮುನೀಶ್ವರಾಃ ‖ ೧೯೪ ‖ ಲಿಂಗಪ್ರಸಾದಂಸದ್ಭಕ್ತ್ಯಾಭುಂಜಂತೆಮುಕ್ತಿಕಾರಣಂ । ತೇವೈದಿಕಾಚಾರಯುತಾಭವಂತಿನಭವಂತಿವಾ ‖ ೧೯೫ ‖ ವೇದಭಾರಭರಾಕ್ರಾಂತಸ್ಸವೈಬ್ರಾಹ್ಮಣಗಾರ್ದಭಃ । ಇತ್ಯುಕ್ತಿತೋವೇದಭಾರೈರಾಕ್ರಾಂತೇಭ್ಯೋಮಹೇಶಿತುಃ ‖ ೧೯೬ ‖ ನಿಂದಾಪರೇಭ್ಯಶ್ಚಕರ್ಮಚಂಡಾಲೇಭ್ಯೋಧರಾತಳೆ । ಭವದ್ಭ್ಯೋಹೇದ್ವಿಜಾನಿಪ್ರಾಗಾರ್ದಭೇಭ್ಯಶ್ಯ್ರತಿಕ್ರಮಂ ‖ ೧೯೭ ‖ ಯಥಾರ್ಥತೋನಜಾನಂತಿಕಿಂಚೈತೇವದತಾಧುನಾ । ಪುರಾದ್ಯೈಸ್ಸ್ವೀಕೃತಶ್ಯಂಭುಪ್ರಸಾದೋವೇದಚೋದಿತಃ ‖ ೧೯೮ ‖ ಕಿಮನರ್ಹಃಕಿಂತುಶಾಪದಗ್ಧಾನಾಂಕಲುಷಾತ್ಮನಾಂ । ನೀಚಾನಾಮೇವಚಾಯೋಗ್ಯೋವೇದವಿದ್ವಿಷ್ಟವರ್ತಿನಾಂ ‖ ೧೯೯ ‖ ಪುರಾತನಾಂತ್ಸುರಾನ್ಪ್ರತಾನುಕ್ತ್ವಾಲಮಿಹದೃಶ್ಯತಾಂ । ವಸುರುದ್ರಾರ್ಕರೂಪೇಷುತ್ರಿಷುಪಿಂಡೇಷುಪಾರ್ವಣೆ‖ ಕಲ್ಪಸೂತ್ರೇಮಧ್ಯಪಿಂಡಂಪತ್ನೀಂಚಪ್ರಾಶಯೇದಿತಿ । ವಾಕ್ಯಾನ್ಮಧ್ಯಮ

---

ಸಾದವನ್ನು ಸೇವಿಸುವುದರಿಂದಲೂ ಅವನ ಧ್ಯಾನಮಾಡುವುದರಿಂದಲೂ ಪೂಜಿಸುವುದರಿಂದಲೂ, ಧಾರಣಮಾಡಿಕೊಳ್ಳುವುದರಿಂದಲೂ ಶಾಸ್ತ್ರಕರ್ತೃಗಳಾಗಿ, ಮೂರು ಲೋಕವನ್ನೂ ಕೇಳುವಂತೆ ಮಾಡಿರುತ್ತಾರೆ ‘‘ ಎಂಬ ವಚನದಿಂದ ಷಣ್ಮುಖ ಭೃಂಗಿ ಮೊದಲಾದ ಪ್ರಮಥಾಧಿಪತಿಗಳೂ ‖ ೧೯೩ ‖ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ, ಬಾಣಾಸುರ ಮೊದಲಾದರಾಕ್ಷಸರೂ, ವಸಿಷ್ಠ ವಾಲ್ಮೀಕಿ ಮೊದಲಾದ ಋಷೀಶ್ವರರೂಕೂಡ ಮೋಕ್ಷಕ್ಕೆ ಕಾರಣವಾದ ಶಿವಲಿಂಗಪ್ರಸಾದವನ್ನು ಸೇವಿಸುತ್ತಾರೆ. ಅವರು ವೈದಿಕಾಚಾರ ಸಂಪನ್ನರಹುದೋ ? ಅಲ್ಲವೋ ? ‖ ೧೯೫ ‖ ಎಲೆ ವೇದಾಢ್ಯರಾದ ದ್ವಿಜರೆ ! ‘‘ ಅವನು ವೇದದಹೊರೆಯನ್ನು ಹೊತ್ತಿರುವ ಹಾರ್ವಕತ್ತೆಯಲ್ಲವೇ,, ಎಂಬಿರುವ ಪ್ರಮಾಣ ವಚನದಿಂದ ವೇದದಹೊರೆಯನ್ನು ಹೊತ್ತಿರುವ ಕತ್ತೆಗಳಾಗಿಯೂ, ಶಿವದೂಷಣಾ ಸಕ್ತರಾಗಿಯೂ ಭೂತಲದಲ್ಲಿ ಕರ್ಮತಃ ಚಂಡಾಲರಾಗಿಯೂ, ಇರುವ ನೀವುಗಳು ವೇದಶಬ್ದಯಸಹಜವಾದ ಅರ್ಥವನ್ನು ತಿಳಿದಿಲ್ಲವೇನು ? ಹೇಳಿರಿ. ವೇದೋಕ್ತವಾಗಿರುವ ಶಿವಪ್ರಸಾದವನ್ನು ಪೂರ್ವಿಕರೆಲ್ಲರೂ ಹಿಂದೆ ಅಂಗೀಕರಿಸಿರುವರು. ಅದು ಶಾಪದಗ್ಧರಾದ ಪಾಪಿಗಳಿಗೆ ಮಾತ್ರ ಅನರ್ಹವಾಗಿರಬಹುದೇನೋ ! ವೇದ ವಿರುದ್ಧವಾಗಿ ಆಚರಿಸುವ ನೀಚರಿಗೆ ಮಾತ್ರವೇ ಅದು ಅಯೋಗ್ಯವಾದುದು ‖ ೧೯೯ ‖ ಪ್ರಾಚೀನರ ಮತ್ತು ದೇವತೆಗಳ ದೃಷ್ಟಾಂತವುಸಾಕು. ಈಗ ಪ್ರತ್ಯಕ್ಷದಲ್ಲಿ ನೋಡಿರಿ—ಪರ್ವಕಾಲದಲ್ಲಿ ಕೊಡಲ್ಪಡುವ ವಸು, ರುದ್ರ, ಆದಿತ್ಯ, ಈ ದೇವತಾತ್ರಯಾ

ಪಿಂಡಸ್ಯರೌದ್ರಸ್ಯಬ್ರಾಹ್ಮಣೇನಹಿ ॥ ೯೧ ॥ ದತ್ತಸ್ಯಪ್ರಾಶನಾತ್ಸುಧೀಃ
ಪತ್ನ್ಯಾಸ್ಸಲ್ಲಕ್ಷಣಾನ್ವಿತಃ । ಆದತ್ತೇತ್ಯಾದಿನಾನೇನಮಂತ್ರಲಿಂಗಬಲೇನ
ಹಿ ॥ ೯೨ ॥ ಪುತ್ರೋಭವಿಷ್ಯತ್ಯಚಿರಾದಿತ್ಯೇವಮವಗಮ್ಯತೇ । ಏವ
ಮಾಮ್ನಾಯತೇಮಂತ್ರಸ್ಸೋಪಿವೇದವಿಶಾರದೈಃ ॥ ೯೩ ॥ ಆದತ್ತ
ಪಿತರೋಗರ್ಭಂಕುಮಾರಂಪುಷ್ಕರಸ್ರಜಂ । ಇತಿ । ಅಸ್ಯಾರ್ಥಃಕಥ್ಯ
ತೇಽಸ್ಮಾಭಿಃಪೂರ್ವಾಚಾರ್ಯಾನುಸಾರತಃ ॥೯೪॥ ಅಸ್ಯಾಃಪತ್ನ್ಯಾಹೇ
ಪಿತರೋಭವಂತಃಪುಷ್ಕರಸ್ರಜಂ । ಸರ್ವಲಕ್ಷಣಸಂಯುಕ್ತಂಕುಮಾ
ರಂಸತ್ಕುಮಾರಕಂ ॥ ೯೫ ॥ ಗರ್ಭಂದೌಹೃದಮಾದತ್ತಸಂಪಾದಯ
ತಸತ್ವರಂ । ಪದಾರ್ಥಏಷಕಥಿತೋಭಾವಾರ್ಥಃಕಥ್ಯತೇಸ್ಫುಟಂ ॥ ೯೬
ಏಷ್ಟವ್ಯಾಬಹವಃಪುತ್ರಾಶ್ಶಿವತಂತ್ರಾನುಸಾರಿಣಃ । ಸಮುದ್ಧರಂತಿತೇ
ಗೋತ್ರಂರಜ್ಜುಃಕೂಪಾದ್ಘಟಂಯಥಾ ॥ ೯೭ ॥ ಇತಿಲಿಂಗಪುರಾಣೋ
ಕ್ತ್ಯಾಶಿವತಂತ್ರಾನುಸಾರಿಣಃ । ಪುತ್ರಸ್ಯಸರ್ವವೈಶಿಷ್ಟ್ಯಕಥನಾದಿಯ
ಮಂಗನಾ ॥ ೯೮ ॥ ಸಚ್ಛಿವಾಚಾರಸಂಪನ್ನಂಶಿವತಂತ್ರಾನುಸಾರಿಣಂ ।
ತನೂಜಂಸ್ವಕುಲೋದ್ಧಾರಮಚಿರಾಲ್ಲಭತೇಯಥಾ ॥ ೯೯ ॥ ತಥಾತ

---

ತ್ಮಕವಾದ ಮೂರು ಪಿಂಡಗಳಲ್ಲಿ ಮಧ್ಯದರುದ್ರದೇವತಾ ಸಂಬಂಧವಾದ ಪಿಂಡವನ್ನು ಪತ್ನಿಗೆ ತಿನ್ನಿಸಬೇಕೆಂದು ಕಲ್ಪಸೂತ್ರದಲ್ಲಿ ಹೇಳಲ್ಪಟ್ಟಿರುವುದರಿಂದ, ರುದ್ರ ಸಂಬಂಧವಾದ ಮಧ್ಯದಪಿಂಡವನ್ನು ಬ್ರಾಹ್ಮಣನು ಕೊಟ್ಟರೆ ಅದನ್ನು ಪತ್ನಿಯು ಸೇವಿಸುವುದರಿಂದ, ಆಕೆಗೆ ಸುಲಕ್ಷಣ ಯುಕ್ತನಾದ ಪುತ್ರನು ಬೇಗನೆ ಜನಿಸುವನೆಂದು " ಆದತ್ತ....ಸ್ರಜಂ " ಎಂಬ ಮಂತ್ರದಿಂದ ಗೊತ್ತಾಗುತ್ತದೆ. ಈ ಮಂತ್ರಕ್ಕೆ ಪೂರ್ವಾಚಾರ್ಯರನ್ನನುಸರಿಸಿ ನಾವು ಅರ್ಥವನ್ನು ಹೇಳುತ್ತೇವೆ ॥ ೯೪ ॥ ಪಿತರಃ—ಎಲೌ ಪಿತೃದೇವತೆಗಳಿ ! (ಭವಂತಃ-ನೀವು, ಅಸ್ಯಾಃ—ಈ ಪತ್ನಿಗೆ,) ಪುಷ್ಕರಸ್ರಜಂ-ಸರ್ವಲಕ್ಷಣ ಸಂಪನ್ನನಾದ, ಕುಮಾರಂ—ಮಗನುಳ್ಳ, ಗರ್ಭಂ-ಬಸುರನ್ನು, ಆದತ್ತ-ಉಂಟುಮಾಡಿರಿ, ಎಂಬುದಾಗಿ, ಇದು ಪದಶಃ ಅರ್ಥವು. ಇದರ ತಾತ್ಪರ್ಯಾರ್ಥವನ್ನು ಸ್ಪಷ್ಟವಾಗಿ ಹೇಳುತ್ತೇನೆ ॥ ೯೬ ॥ " ಶಿವಾಗಮಾನುಸಾರಿಗಳಾದ ಹಲವು ಪುತ್ರರನ್ನು ಅಪೇಕ್ಷಿಸಬೇಕು. ಅವರು ಬಾವಿಯಿಂದ ಹಗ್ಗವು ಕೊಡವನ್ನು ಹೇಗೆ ಮೇಲಕ್ಕೆತ್ತುವುದೋ ಹಾಗೆ ವಂಶವನ್ನುದ್ಧರಿಸುವರು ॥ ೯೭ ॥ ಎಂಬ ಲೈಂಗ್ಯಪುರಾಣದವಚನವನ್ನನುಸರಿಸಿ, ಶಿವಾಗಮಾನುಸಾರಿಯಾದ ಮಗನಿಗೆ ಎಲ್ಲರಿಗಿಂತಲೂ ಆಧಿಕ್ಯವನ್ನು ಹೇಳಿರುವಕಾರಣ, ಈ ಪತ್ನಿಯು ಶಿವಾಗಮೋಕ್ತ ಶಿವಾಚಾರ ಸಂಪನ್ನನಾದ ಸತ್ಪುತ್ರನನ್ನು ತನ್ನ ವಂಶೋದ್ಧಾರಾರ್ಥವಾಗಿ ಪಡೆಯುವಂತೆ ಅಂತಹ ಸತ್ಕುಮಾರನುಳ್ಳ ಗರ್ಭವನ್ನು ಉಂಟುಮಾಡಿಕೊಡಿರಿ, ಎಂಬುದಾಗಿ. ಆದುದರಿಂದ ರುದ್ರ

ತ್ಪುತ್ರಸಂಯುಕ್ತಂಗರ್ಭಂವಿದಧತೇತಿಹಿ । ತಸ್ಮಾದ್ರುದ್ರಪ್ರಸಾದೋಽ
ಪಭೋಗಾತ್ಪುತ್ರಸ್ಸುಲಕ್ಷಣಃ ॥ ೨೦೦ ॥ ಭವತೀತಿಶ್ರುತೇರಸ್ಯಾಭಿ
ಪ್ರಾಯಃಪ್ರಕೀರ್ತಿತಃ। ಅರ್ಥೋಽಯಂಕಥಿತಸ್ಸವ್ಯಕ್ಪುರಾಣೇಲೈಂಗ್ಯ
ನಾಮನಿ ॥ ೨೦೧ ॥ ವಸುರುದ್ರಾರ್ಕರೂಪೇಭ್ಯೋಽಮಧ್ಯಪಿಂಡಸ್ತುಪು
ತ್ರದಃ । ವೇದೋಕ್ತಂರುದ್ರನಿರ್ಮಾಲ್ಯಂಕಿಂಪುನರ್ಬಹುಭಾಷಣೈಃ ।
ಇತಿ ॥ ೨೦೨ ॥ ಇತ್ಯಾದಿವಾಕ್ಯಾತ್ಪುತ್ರಾದಿಕಾಮಿನಾಮಪಿಭಕ್ತಿತಃ ।
ವೇದೋಕ್ತಸ್ಯಮಹಾದೇವಪ್ರಸಾದಸ್ಯೋಪಭೋಗತಃ ॥ ೨೦೩ ॥
ಸರ್ವೈಹಿಕಫಲಾವಾಪ್ತಿಸ್ಸಿಧ್ಯತ್ಯತ್ರನಸಂಶಯಃ । ನಿರ್ಮಾಲ್ಯಂದೇವದೇ
ವಸ್ಯಚಾಂದ್ರಾಯಣಶತಾತ್ಪರಂ ॥ ೨೦೪ ॥ ತಸ್ಮಾತ್ಪಾದೋದಕಂಪೇ
ಯಂಪ್ರಸಾದಾನ್ನಂಚಭುಜ್ಯತೆ । ಕಾಮಿಕೋಽಪ್ಯೇನಮೇವಾರ್ಥಮಾಹ
ಲೋಕೇತ್ರವಿಶ್ರುತಃ ॥ ೨೦೫ ॥ ಭಕ್ಷಯೇದ್ಯೋನರೋಭಕ್ತ್ಯಾಪವಿ
ತ್ರಮತಿಶುದ್ಧಿದಂ । ಶುದ್ಧಾತ್ಮಾಬ್ರಾಹ್ಮಣಸ್ತಸ್ಯಪಾಪಂಕ್ಷಿಪ್ರಂವಿನಶ್ಯ
ತಿ ॥ ೨೦೬ ॥ ಮಲ್ಲಿಂಗಧಾರಿಣೋಲೋಕೇದೇಶಿಕಾಮತ್ಪರಾಯಣಾಃ ।
ಮದೇಕಶರಣಾಸ್ತೇಷುಯೋಗ್ಯಂನೈವಾನ್ಯಜಂತುಷು । ಇತಿ ॥ ೨೦೭ ॥

---

ಪ್ರಸಾದ ಸೇವನೆಯಿಂದ ಸಲಕ್ಷಣನಾದ ಪುತ್ರನು ಉದಿಸುವನೆಂಬ ಶ್ರುತಿವಚನಕ್ಕೆ
ಇದೇ ಅಭಿಪ್ರಾಯವು. ಲೈಂಗ್ಯಪುರಾಣದಲ್ಲಿ–ವಸು ರುದ್ರ ಆದಿತ್ಯ ದೇವತಾತ್ಮಕ
ವಾದ ಪಿಂಡಗಳಲ್ಲಿ ಮಧ್ಯದಪಿಂಡವು ಮಗನನ್ನು ಕೊಡತಕ್ಕದು. ಎನ್ನುವಲ್ಲಿ ವೇ
ದೋಕ್ತವಾದ ರುದ್ರ ನಿರ್ಮಾಲ್ಯದ ಪ್ರಭಾವವನ್ನು ಹೆಚ್ಚುಮಾತಿನಿಂದ ಹೇಳುವುದೇನು
ಎಂಬುದಾಗಿ ಇದೇ ಅಭಿಪ್ರಾಯವು ಚೆನ್ನಾಗಿ ಹೇಳಲ್ಪಟ್ಟದೆ ॥ ೨೦೨ ॥ ಇದೇ
ಮೊದಲಾದ ವಚನದಿಂದ ಪುತ್ರಾದಿ ಫಲಗಳನ್ನಪೇಕ್ಷಿಸುವವರುಕೂಡ ಭಕ್ತಿಯಿಂದ
ವೇದೋಕ್ತವಾದ ಶಿವಪ್ರಸಾದವನ್ನುಪಭೋಗಿಸಿದರೆ, ಇಹಲೋಕದ ಸಕಲಫಲಗಳೂ
ನಿಸ್ಸಂಶಯವಾಗಿ ಸಿದ್ಧಿಸುವುವು. ಮಹಾದೇವನ ನಿರ್ಮಾಲ್ಯವು ಸೇವನವು ನೂರುಚಾಂ
ದ್ರಾಯಣ ವ್ರತಾಚರಣಕ್ಕಿಂತಲೂ ಅಧಿಕವಾದುದು. ॥ ೨೦೪ ॥ ಆದುದರಿಂದ ಶಿವಪಾ
ದೋದಕವು ಪಾನಕ್ಕೆ ಯೋಗ್ಯವಾಗಿಯೂ ಶಿವಪ್ರಸಾದವು ಭುಂಜಿಸಲ್ಪಡುವುದಕ್ಕೆ
ಯೋಗ್ಯವಾಗಿಯೂ ಇವೆ. ಜಗತ್ಪ್ರಸಿದ್ಧವಾದ ಕಾಮಿಕಾಗಮವು ಕೂಡ ಇದೇ ಅ
ಭಿಪ್ರಾಯವನ್ನೇಹೇಳುತ್ತದೆ ॥ ೨೦೫ ॥ ಹೇಗೆಂದರೆ –“ ಯಾವಮನುಷ್ಯನು ಭಕ್ತಿ
ಯಿಂದ ಪರಿಶುದ್ಧವಾಗಿಯೂ ಅತ್ಯಂತ ಶುದ್ಧಿಯನ್ನು ಕೊಡತಕ್ಕದಾಗಿಯೂ ಇರುವ
ನಿರ್ಮಾಲ್ಯವನ್ನು ಭುಂಜಿಸುವನೋ ಅವನು ಪರಿಶುದ್ಧಾತ್ಮನಾದ ಬ್ರಾಹ್ಮಣನು. ಅವ
ನ ಪಾಪವು ಬೇಗನೆನಾಶಗೊಳ್ಳುವುದು ॥ ೨೦೬ ॥ ಲೋಕದಲ್ಲಿ ನನ್ನ ಲಿಂಗವನ್ನು ಧರಿ
ಸಿಕೊಂಡು ನನ್ನೊಬ್ಬನಲ್ಲೇ ಆಸಕ್ತಿಯುಳ್ಳವರಾಗಿ, ನನ್ನೊಬ್ಬನನ್ನೇ ಮರೆಹೊಕ್ಕಿ

ಶ್ರುತಯೋಃ ಸ್ಮಿನ್ನರ್ಥಏವಸಂತಿಬಹ್ವ್ಯಃಪರಿಶ್ರುತಾಃ । ಯತ್ವಾದತ್ತೇ ಭಿರಿತ್ಯಾದ್ಯಮೃಗ್ವೇದೇಶ್ರೂಯತೇವಚಃ ॥ ೧೦೮ ॥ ತತ್ಪ್ರಸಾದಸ್ಯ ಸೇವ್ಯತ್ವೇತಾವನ್ಮಾನತಯೋಚ್ಯತೆ । ಏವಮಾಪಸ್ನಾಯತೇಸಂಹಿತಾ ಯಾಂತದ್ವಾಕ್ಯಮುನ್ನತಂ॥೧೦೯॥(ತ್ವಾದತ್ತೇಭಿರುದ್ರಶಂತಮೇಭಿಶ್ಯತಂ ಹಿಮಾಅಶೀಯಭೇಷಜೇಭಿರ್ವ್ಯಅಸ್ಮದ್ವೇಷೋಃನಿತರಂವ್ಯಂಹೋ ವ್ಯಮೀವಾಚಾತಯಸ್ವಾವಿಷೂಚಿಃ) ಇತಿ । ಅರ್ಥೋಽಭಿಯುಕ್ತಾನು ಮತಃಕಥ್ಯತೇಽದ್ಯಸಮುನ್ನತಃ । ಹೇರುದ್ರತ್ವಾತ್ವಯಾಶೀಯಪ್ರಾಶ್ಯದ ತ್ತೇಭಿರಾದರಾತ್ ॥ ೧೧೦ ॥ ದತ್ತೈಃಪ್ರಸಾದಿತೈಶ್ಯಂತಮೇಭಿಸ್ಸುಖಿ ತಮೈಸ್ತಥಾ। ವ್ಯಾಸ್ಸಂಸಾರಾಖ್ಯರೋಗಸ್ಯಭೇಷಜೆಭಿಸ್ತದೌಷಧೈಃ॥ ೧೧೧ ॥ ಸಂಸಾರಸ್ಯವಿರೋಧಿತ್ವಾತ್ಪ್ರೋಕ್ತೈಸ್ಸಂಸಾರಭೇಷಜೈಃ । ಇತ್ಥಂಭೂತೈಸ್ತ್ವತ್ಪ್ರಸಾದೈರತಿಶುದ್ಧೈಶ್ಯತಂಹಿಮಾಃ ॥ ೧೧೨ ॥ ಶ ತಂಸಮಾಅನಿತರಮನನ್ಯಂಸ್ವಯಮುನ್ನತಂ । ವೀರಶೈವಂಭಕ್ತಜನಂ ಚಾತಯಸ್ವಾತ್ಮನಾಸಹ ॥ ೧೧೩ ॥ ಯೋಜಯಾಯಂಯದ್ವದಸ್ಮದ್ವೇ ಷೋಹಂಕೃತಿವರ್ಜಿತಃ। ವ್ಯಂಹೋವಿಗತದುಃಪಾಪೌಘೋವ್ಯಮೀವಾ

---

ರುವವರುಗಳು ಗುರೂತ್ತಮರಾಗಿರುವರು. ಅವರಿಗೆ ಸಮನಾದ ಯೋಗ್ಯತೆಯುಳ್ಳ ಪ್ರಾಣಿಯು ಮತ್ತೊಂದಿಲ್ಲ ,, ಎಂಬುದಾಗಿ. ॥ ೧೦೭ ॥ ಈ ಅಭಿಪ್ರಾಯಕ್ಕೆ ಹಲವು ವೇದವಚನಗಳು ಪ್ರಸಿದ್ಧವಾಗಿವೆ. ಋಗ್ವೇದ ಸಂಹಿತೆಯಲ್ಲಿ ‘‘ ತ್ವಾದತ್ತೆ........ವಿ ಷೂಚಿಃ ,, ಎಂದುಹೇಳಲ್ಪಟ್ಟಿರುವ ವಚನವು, ಶಿವಪ್ರಸಾದವು ಸೇವ್ಯವೆಂಬದಾಗಿ ಹೇ ಳುವುದರಲ್ಲಿ ಪ್ರಮಾಣವು. ಈ ವಾಕ್ಯಕ್ಕೆ ಪೂರ್ವಾಚಾರ್ಯರ ಅಭಿಪ್ರಾಯವನ್ನನು ಸರಿಸಿ ಅರ್ಥವನ್ನು ಹೇಳುತ್ತೇವೆ.—ಹೇ ರುದ್ರ —ಎಲೈಪರಶಿವನೆ ! ತ್ವಾ- ನಿನ್ನಿಂ ದ. ಅಶೀಯ-ಭುಂಜಿಸಿ, ದತ್ತೇಭಿಃ-ಪ್ರೀತಿಯಿಂದ ಪ್ರಸಾದವಾಗಿಕೊಡಲ್ಪಟ್ಟ, ಶಂತ ಮೇಭಿಃ-ಅತ್ಯಂತ ಸುಖಪ್ರಳಯಗಳಾದ, ವ್ಯಾಃ-ಸಂಸಾರರೋಗಕ್ಕೆ, ಭೇಷಜೇಭಿಃ- ಔಷಧಗಳಾದ, ( ಜನನ ಮರಣಾತ್ಮಕ ಸಂಸಾರಕ್ಕೆ ಈ ಪ್ರಸಾದವು ಶತ್ರುವಾದುದರಿಂ ದ ಇದು ಸಂಸಾರರೋಗಕ್ಕೆ ಔಷಧವೆಂದು ಹೇಳಲ್ಪಟ್ಟದೆ ) ಇಂತಹ ಅತ್ಯಂತ ಶುದ್ಧ ವಾದ ನಿನ್ನ ಪ್ರಸಾದಗಳಿಂದ, ಶತಂಹಿಮಾಃ-ಅನೇಕವರ್ಷಗಳವರೆಗೆ, ಅನಿತರಂ-ಅನ್ಯ ನಲ್ಲದೆಇರುವವನನ್ನು ( ಎಂದರೆ ಸ್ವಕೀಯಭಕ್ತನಾದ ವೀರಶೈವನನ್ನು ) ಚಾತಯಸ್ವ -ತನ್ನೊಡನೆ ಹೊಂದಿಸು- ಅಯಂ-ಈತನು, ಅಸ್ಮದ್ವೇಷಃ-ಅಹಂಕಾರರಹಿತನು, ವ್ಯಂಹಃ-ಪಾಪರಹಿತನೂ, ವ್ಯಮೀವಾ-ಭಕ್ತಿಸಂಪನ್ನನೂ, ಅವಿಷೂಚಿಃ-ಬಳ್ಳಿಯ ಬು ದ್ಧಿಶಾಲಿಯೂ ( ಆಗುವಹಾಗೆ ಹೊಂದಿಸು. ) ಎಂಬುದಾಗಿ. ಯಜುರ್ವೇದದಲ್ಲಿಯೂ ಕೂಡ ಶತರುದ್ರೀಯದ ಮಧ್ಯದಲ್ಲಿ ‘‘ ಯಚ್ಛಂಚಯೋಶ್ಚ...ಪ್ರಣೀತಾ ,, ಎಂಬ

ಭಕ್ತಿಸಂಯುತಃ ॥ ೨೧೪ ॥ ಅಪಿಷೂಚಿಸ್ಸ್ನಮೇಧಾವೀಭವೇತ್ತದ್ವತ್ಕಲ
ಪಾನಿಧೇ। ಯಜುರ್ವೇದೇಪಿಯದ್ವಾಕ್ಯಂಶತರುದ್ರೀಯಮಧ್ಯಗಂ ॥ ೨೧೫ ॥
ಯಚ್ಛಂಚಯೋಶ್ಚಮನುರಿತ್ಯಾದ್ಯಸ್ತಿತದಪೀಶಿತುಃ । ಪ್ರಸಾದಸ್ಯೋ
ಪಭೋಗ್ಯತ್ವೇಮಾನಂತದ್ದರ್ಶ್ಯತೇಮಯಾ ॥ ೨೧೬ ॥ ( ಯಚ್ಛಂಚ
ಯೋಶ್ಚಮನುರಾಯಜೇಪಿತಾತದಶ್ನಾಮಿತವರುದ್ರಪ್ರಣೀತೌ ) ಇತಿ।
ಅಸ್ಯಾರ್ಥಃಕಥ್ಯತೇಸಮ್ಯಗ್ಭಾಷ್ಯಕಾರಾನುಸಾರತಃ । ಹೇರುದ್ರಶಂಕ
ರತವಪ್ರಣೀತೌತವಪೂಜನೇ ॥ ೨೧೭ ॥ ಯೋಮನುಃಕಥಿತೋಮಂ
ತ್ರೋಭಣಂತಂತೇನಭಕ್ತಿತಃ । ಆಯಜೇಪೂಜಯಾಮಿತ್ಯಾಂತ್ವಂಯ
ಸ್ಮಾಜ್ಜಗತಃಪಿತಾ ॥ ೨೧೮ ॥ ಅತಸ್ತವಪ್ರಸಾದಾನ್ನಮಶ್ನಾಮಿಸ್ವೀಕ
ರೋಮ್ಯಹಂ । ತೇನವೈಷಯಿಕಂಸೌಖ್ಯಂಪರಬ್ರಹ್ಮಾಪಿಶಾಶ್ವತಂ ॥
ಪ್ರಾಪ್ನೋಮೀತ್ಯರ್ಥಏಷೋತ್ರಕಥಿತೋಬುಧಸಮ್ಮತಃ । ಕಿಂಚಪ್ರ
ದೇಶಾಂತರೇಽಸ್ಯಯಜುರ್ವೇದಸ್ಯವಿದ್ಯತೇ ॥ ೨೨೦ ॥ ಯದ್ರುದ್ರೇ
ಣಾನ್ನಮಿತ್ಯಾದಿವಾಕ್ಯಂತಚ್ಚಮಹೇಶಿತುಃ । ಪ್ರಸಾದಸ್ಯೋಪಭೋ
ಗ್ಯತ್ವೇಪ್ರಮಾಣಂಪರಮೋನ್ನತಂ ॥ ೨೨೧ ॥ ಯಜುರ್ವೇದೇತದ್ಧಿವಾ

---

ಯಾವ ವಚನ ವಿರುವುದೋ ಅದುಕೂಡ ಶಿವಪ್ರಸಾದವು ಸೇವ್ಯವೆಂಬುದಾಗಿ ಹೇಳುವು
ದರಲ್ಲಿ ಪ್ರಮಾಣವೆಂಬುದನ್ನು ನಾನು ತೋರಿಸುತ್ತೇನೆ. ॥ ೨೧೬ ॥ ಈ ಮಂತ್ರ
ಕ್ಕೆ ಭಾಷ್ಯಕಾರರ ಅಭಿಪ್ರಾಯವನ್ನನುಸರಿಸಿ ಚೆನ್ನಾಗಿಅರ್ಥವನ್ನು ಹೇಳುತ್ತೇನೆ:—
ಹೇ ರುದ್ರ-ಎಲೌ ಪರಶಿವನೆ ! ತವ-ನಿನ್ನ, ಪ್ರಣೀತೌ-ಪೂಜೆಯಲ್ಲಿ, ಯಃ—
ಮನುಃ-ಯಾವ ಮಂತ್ರವು, ( ಹೇಳಲ್ಪಟ್ಟದೆಯೋ ಆ ಮಂತ್ರದಿಂದ ನಿನ್ನನ್ನು )
ಆಯಜೆ-ಪೂಜಿಸುವೆನು, ಯತ್-ಯಾವಕಾರಣದ ದೆಸೆಯಿಂದ, ( ನೀನು ) ಪಿತಾ-
(ಜಗತ್ತಿಗೆ) ತಂದೆಯೋ, ( ಅದುಕಾರಣದಿಂದ ) ತತ್-ಆ ನಿನ್ನ ಪ್ರಸಾದಾನ್ನವನ್ನು,
ಅಶ್ನಾಮಿ-ತಿನ್ನುವೆನು. ( ಅದರಿಂದ ) ಶಂಚ-ಐಹಿಕ ವಿಷಯ ಸುಖವನ್ನೂ ಶಾಶ್ವ
ತ ಪರ ಬ್ರಹ್ಮವನ್ನು ಕೂಡ, ( ಹೊಂದುವೆನು ) ಎಂಬುದಾಗಿ. ಈ ಪ್ರಕಾರವಾದ ಅ
ರ್ಥವು ವಿದ್ವತ್ಸಮ್ಮತವಾದುದು. ಮತ್ತು ಇದೇ ಯಜುರ್ವೇದದ ಮತ್ತೊಂದು ಕಡೆ
ಯಲ್ಲಿ ‘‘ ರುದ್ರೇಣಾನ್ನ ......... ಕಾಮಯಂತೆ ,, ಎಂದು ಯಾವ ವಚನವಿರುವು
ದೋ, ಅದುಕೂಡ ಶಿವಪ್ರಸಾದವನ್ನು ಸೇವ್ಯವೆಂದು ಹೇಳುವ ವಿಷಯದಲ್ಲಿ ಘನತರ
ವಾದ ಪ್ರಮಾಣವು ॥ ೨೨೧ ॥ ಈ ವಚನಕ್ಕೆ ವಿದ್ವಜ್ಜನ ಸಮ್ಮತವಾದ ಅರ್ಥವನ್ನು
ನಾವು ಹೇಳುತ್ತೇವೆ ॥ ೨೨೨ ॥ ಈ ವಾಕ್ಯದಲ್ಲಿರುವ ಅನ್ನಶಬ್ದಕ್ಕೆ ‘‘ ಅದಭಕ್ಷಣೆ ,,
ಎಂದು ಭಕ್ಷಣಾರ್ಥಕವಾದ ಅದಧಾತುವಿನಮೇಲೆ ಕರ್ಮಾರ್ಥದಲ್ಲಿ ಕ್ತಪ್ರತ್ಯಯ ಬಂ
ದು ಅನ್ನಂಎಂಬ ರೂಪವು ನಿಷ್ಪನ್ನವಾಯಿತು ಈ ರೂಪವು ವೈಯ್ಯಾಕರಣಸಂಮತ

ಕ್ಯಮೇವಸಮಾಮ್ನಾಯತೇಸ್ಫುಟಂ । (ರುದ್ರೇಣಾನ್ನಮಮೃತಂದೇವಾವೈ ಭೋಕ್ತುಕಾಮಾವೇದಾಶ್ಚ ಕಾಮಯಂತಇತಿ) ಅರ್ಥೋಽಸ್ಯಭಣ್ಯತೇಽಸ್ಮಾಭಿಸ್ಸೂರಿಸಂದೋಹಸಮ್ಮತಃ ॥ ೨೨ ॥ ಅತ್ರಸ್ಥಿತೋಽನ್ನಶಬ್ದೋಽಯಂನಿಷ್ಪನ್ನಃಕರ್ಮಣೀರಿತಃ। ಅದಭಕ್ಷಣಇತ್ಯಸ್ಯಧಾತೋಶ್ಶಾಬ್ದಿಕಸಮ್ಮತಃ ॥ ೨೩ ॥ ತದ್ರೂಪಮನ್ನಂವ್ಯುತ್ಪತ್ತ್ಯಾಹ್ಯದ್ಯತೇಽನ್ನಮಿತಿಸ್ಫುಟಂ। ರುದ್ರೇಣಾನ್ನಂರುದ್ರಭುಕ್ತಂತನ್ಮೃತಂಮರಣಂಸದಾ॥ ನವಿದ್ಯತೇಯೇನತಚ್ಚಾಮೃತಮಿತ್ಯಭಿಧೀಯತೇ । ತಸ್ಮಾದ್ಧೇತೋಸ್ತತ್ಪ್ರಸಾದಂದೇವಾವೈನಿಖಿಲಾಸ್ಸುರಾಃ ॥ ೨೪ ॥ ಭೋಕ್ತುಕಾಮಾಃ ಪರಂಪ್ರೀತ್ಯಾಸ್ವೀಕರ್ತುಮನಸಸ್ತಥಾ । ವೇದಾಶ್ಚವೇದಪುರುಷಾಃಕಾಮಯಂತೇತದೀದೃಶಂ ॥ ೨೫ ॥ ಅಮೃತಂಸೇವಿತುಂನಿತ್ಯಂವಾಂಛಂತೀತ್ಯರ್ಥಏವಹಿ । ಕಿಂಚವಿಷ್ಣ್ವಾದಿದೇವೇಷುಶಿವಸ್ಯೈವಜಗತ್ಪ್ರಭೋಃ ॥ ೨೬ ॥ ಬ್ರಾಹ್ಮಣೈರಪ್ಯುಪಾಸ್ಯತ್ವಂಬ್ರಾಹ್ಮಣತ್ವಂಚಕೀರ್ತಿತಂ । ಏವಂಹಿಹರದತ್ತಾರ್ಯೈರುಕ್ತಂತಾತ್ಪರ್ಯಸಂಗ್ರಹೇ ॥ ೨೭ ॥ (ತ್ವಂಬ್ರಾಹ್ಮಣಸ್ತ್ವದುಪಧಾವನಮೇವಕಾರ್ಯಂತದ್ಬ್ರಾಹ್ಮಣೈಸ್ತ್ವದಿ

---

ವಾದದ್ದು. ಅದುಕಾರಣ, ರುದ್ರೇಣ-ಶಿವನಿಂದ, ಅನ್ನಂ-ಭುಂಜಿಸಲ್ಪಟ್ಟ ನಿರ್ಮಾಲ್ಯವು, ಅಮೃತಂ-ಮೃತಂಅಂದರೆ ಮರಣವು. ಯಾವದರಿಂದ ಮರಣವಿಲ್ಲವೊ ಅದು ಅಮೃತವೆಂದು ಹೇಳಲ್ಪಡುತ್ತೆ ಆದಕಾರಣದಿಂದ ಆ ಶಿವಪ್ರಸಾದವನ್ನು ಸಮಸ್ತ ದೇವತೆಗಳು ಬಹುಪ್ರೀತಿಯಿಂದಸ್ವೀಕರಿಸುವದಕ್ಕೆ ಅಪೇಕ್ಷೆಯುಳ್ಳವರಾಗಿದಾರೆ ಇಂತಹ ಪ್ರಸಾದವನ್ನು ವೇದಪುರುಷರು ಸಹ ನಿತ್ಯವೂ ಸೇವಿಸುವದಕ್ಕೆ ಅಪೇಕ್ಷಿಸುತ್ತಾರೆ. ಎಂಬುದಾಗಿ ॥೨೫॥ ಮತ್ತು ವಿಷ್ಣು ಮೊದಲಾದ ದೇವತೆಗಳ ಮಧ್ಯದಲ್ಲಿ ಜಗದೀಶನಾದ ಶಿವನೊಬ್ಬನಿಗೆ ಮಾತ್ರವೇ ಬ್ರಾಹ್ಮಣರಿಂದ ಸೇವಿಸಲ್ಪಡುವಿಕೆಯು ಬ್ರಾಹ್ಮಣ್ಯವು ಹೇಳಲ್ಪಟ್ಟಿತು. ಈ ಅರ್ಥವೇ ಹರದತ್ತಾಚಾರ್ಯನಿರ್ಮಿತವಾದ ತಾತ್ಪರ್ಯಸಂಗ್ರಹದಲ್ಲಿ ಹೇಳಲ್ಪಟ್ಟದೆ. ಏನೆಂದರೆ-ಎಲೈ ಶಿವನೆ ನೀನು ಬ್ರಾಹ್ಮಣನು ಆದ್ದರಿಂದ ಬ್ರಾಹ್ಮಣರಾದವರು ನಿನ್ನನ್ನೇ ಸೇವಿಸಬೇಕು, ನಿನಗಿಂತಲೂ ಅನ್ಯರಾದ ದೇವತೆಗಳು ಬ್ರಾಹ್ಮಣರಿಂದ ಸೇವಿಸಲ್ಪಡುವುದಕ್ಕೆ ಯೋಗ್ಯರಲ್ಲ. ಸಾಮವೇದದ ಪ್ರಪದಮಂತ್ರವನ್ನು ಪ್ರಮಾಣವೆಂದು ನಾವು ತಿಳಿಯುವದಾದರೆ ಬ್ರಾಹ್ಮಣೇತರರನ್ನು ಸೇವಿಸತಕ್ಕವರು ಬ್ರಾಹ್ಮಣರಲ್ಲ.

ಪರಾಶರ ಪುರಾಣದಿಂದಲೂ ಕೂಡ ಇದೇ ಅಭಿಪ್ರಾಯವೇ ಹೇಳಲ್ಪಟ್ಟಿರುವುದು ॥ ೨೯ ॥ ಹೇಗೆಂದರೆ-“ ಸಕಲ ದೇವತೆಗಳೂ ಸಂಕರರು ; ಇಂದ್ರನು ಶೂದ್ರನು. ಬ್ರಹ್ಮನು ವೈಶ್ಯನು, ವಿಷ್ಣುವು ಕ್ಷತ್ರಿಯನು, ಭಗವಂತನಾದ ರುದ್ರನು ಸರ್ವೋತ್ತ

ಆರೇನಭವಂತ್ಯಪಾಸ್ಯಾಃ । ನಬ್ರಾಹ್ಮಣಾನವರವರ್ಣನಿಷೇವಣೇನಸಂ ಭಾವಯೇಮುಯದಿನಃಪ್ರಪದಂಪ್ರವಾಣಂ) ಏನಮಾಮ್ನಾಯತೇಮಂತ್ರ ಸ್ಸಾವಿನ್ನಿಸಪ್ರಪದಾಭಿಧಃ । (ತ್ವಂದೇವೇಷುಬ್ರಾಹ್ಮಣೋಸ್ಯಹಂಮನು ಷ್ಯೇಷುಬ್ರಾಹ್ಮಣೋವೈಬ್ರಾಹ್ಮಣಮುಪಧಾವತ್ಯುಪಧಾವಾಮಿಇತಿ ) ಪರಾಶರಪುರಾಣೇನಾಪ್ಯರ್ಥೋಯಂಪ್ರತಿಪಾದಿತಃ ॥ ೨೯ ॥ ತತೋ ವಿಪ್ರಸ್ಯಸಂಬಂಧಶ್ಶಿವೇನೈವಹಿಯುಜ್ಯತೇ । ಸಂಕರಾಸ್ಸರ್ವದೇವಾಶ್ಚವೃ ಷಲಸ್ತುಪುರಂದರಃ ॥೩೦॥ ಪ್ರಜಾಪತಿಸ್ತುವೈಶ್ಯಸ್ಸ್ಯಾತ್‌ಕ್ಷತ್ರಿಯಃ ಪರಮೋಹರಿಃ । ಬ್ರಾಹ್ಮಣೋಭಗವಾನ್ರುದ್ರಸ್ಸರ್ವೇಷಾಮುತ್ತಮೋ ತ್ತಮಃ ॥ ೩೧ ॥ ಬ್ರಾಹ್ಮಣೋವೈಸದಾಲೋಕೇಬ್ರಾಹ್ಮಣಂಚೋಪ ಧಾವತಿ । ಮಹಾಬ್ರಾಹ್ಮಣಮೀಶಾನಮುಪಧಾವೇನ್ನಚೇತರಂ, ಇತಿ ॥ ಯಜುರ್ವೇದೇಪಿಕಥಿತಏಷೋರ್ಥೋನನುವೈದಿಕಃ । ,, ಯೋವೈಸ್ವಾಂ ದೇವತಾಮತಿಯಜತೇಪ್ರಸ್ವಾಯೈದೇವತಾಯೈಚ್ಯವತೇನಪರಾಂಪ್ರಾ ಪ್ನೋತಿಪಾಪೀಯಾನ್ಭವತಿ ,, ಅಸ್ಯಾರ್ಥಃಕಥ್ಯತೇವಿಪ್ರೋಯಸ್ತು ಸ್ವಾಂದೇವತಾಂಶಿವಂ ॥೩೨॥ ಅತ್ಯತಿಕ್ರಮ್ಯಯಜತೇಪೂಜಯತ್ಯನ್ಯ

---

ಮನಾದ ಬ್ರಾಹ್ಮಣನು. ಲೋಕದಲ್ಲಿ ಯಾವಾಗಲೂ ಬ್ರಾಹ್ಮಣನಾದವನು ಬ್ರಾಹ್ಮಣ ನನ್ನು ತಾನೇ ಅನುವರ್ತಿಸುತ್ತಾನೆ ? ಆದುದರಿಂದ ಮಹಾ ಬ್ರಾಹ್ಮಣನಾದ ಶಿವನನ್ನು ಅನುಸರಿಸಬೇಕೇ ಹೊರತು ಇತರರನ್ನು ಅನುಸರಿಸಬಾರದು. ಆದುದರಿಂದ ಬ್ರಾಹ್ಮ ಣನಿಗೆ ಶಿವನೊಬ್ಬನೊಡನೆಯೇ ಸಂಬಂಧವು ಕೂಡುತ್ತದೆ , ಎಂಬುದಾಗಿ ॥೩೧॥ ಯಜುರ್ವೇದದಲ್ಲಿಯುಕೂಡ ,' ಯೋವೈ.........ಭವತಿ, ಎಂಬ ಮಂತ್ರದಲ್ಲಿ ಹೇಳ ಲ್ಪಟ್ಟಿರುವ ಇದೇ ಅಭಿಪ್ರಾಯವು ವೈದಿಕವಾದುದಲ್ಲವೇ ? ಈ ವಚನದ ಅರ್ಥವನ್ನು ಹೇಳುತ್ತೇವೆ—ಯಃ—ಯಾವ ಬ್ರಾಹ್ಮಣನು, ಸ್ವಾಂದೇವತಾಂ—ತನ್ನ ದೈವವಾದ ಶಿವನನ್ನು, ಅತಿ-ಅತಿಕ್ರಮಿಸಿ, ಯಜತೆ-ಅನ್ಯದೈವವನ್ನು ಪೂಜಿಸುತ್ತಾನೋ, ಸಃ- ಆತನು, ಸ್ವಾಯೈ ದೇವತಾಯೈ-ತನ್ನ ದೇವತೆಗೋಸುಗ, ಪ್ರಚ್ಯವತೆ-ತಪ್ಪಿ ಅ ಪರಾಧಿಯಾಗುತ್ತಾನೆ. ಮತ್ತು, ಪರಾಂನಪ್ರಾಪ್ನೋತಿ—ಉತ್ತಮ ಗತಿಯನ್ನು ಹೊಂ ದುವುದಿಲ್ಲ, ಪಾಪಿಯಾನ್-ಅತ್ಯಂತಪಾಪಿಷ್ಠನೂ, ಭವತಿ-ಆಗುತ್ತಾನೆ ॥ ೩೨ ॥ ಭೂ ಮಿಯಲ್ಲಿ ಮನುಷ್ಯರಲ್ಲೆಲ್ಲ ಬ್ರಾಹ್ಮಣನು ಹೇಗೆ ಶ್ರೇಷ್ಠನೋ ಹಾಗೆ ದೇವತೆಗಳಲ್ಲಿ ಮಹಾಬ್ರಾಹ್ಮಣನಾದ ಈಶ್ವರನು ಶ್ರೇಷ್ಠನು ॥ ೩೬ ॥ ಆದುಕಾರಣದಿಂದ, ಅನ್ಯ ದೇವತೆಗಳಿಗೆ ಸಮರ್ಪಿಸಲ್ಪಟ್ಟ ಪ್ರಸಾದವು ಬ್ರಾಹ್ಮಣರಿಗೆ ಸರ್ವದಾ ಅಯೋಗ್ಯವಾಗು ವುದೆಂಬುದರಲ್ಲಿ ಸಂಶಯವೇ ಇಲ್ಲ ॥ ೩೭ ॥ ಈ ಅಭಿಪ್ರಾಯವು ಶೈವಸಂಹಿತೆಯಲ್ಲಿ ಹೀಗೆ ಹೇಳಲ್ಪಡುತ್ತದೆ. ಹೇಗೆಂದರೆ—,, ಬ್ರಾಹ್ಮಣನು ಪರಿಶುದ್ಧವಾದ ಶಿವ ನಿರ್ಮಾ

ದೇವತಾಂ । ಸಹಿಪ್ರತ್ಯವತೇಸ್ವೀಯದೇವತಾಯೈನರಾಧಮಃ ॥ ೨೩೪ ॥
ಭೂತ್ವಾಪರಾಧೀನಪರಾಂಪ್ರಾಪ್ನೋತಿಗತಿಮುತ್ತಮಾಂ । ನಗಚ್ಛತ್ಯಥ
ಪಾಪೀಯಾನತಿಪಾಪೀಭವೇದ್ಧ್ರುವಂ ॥ ೨೩೫ ॥ ಮನುಷ್ಯೇಷುಯಥಾವಿ
ಪ್ರೋವಿಶಿಷ್ಟೋಭವತಿಕ್ಷಿತೌ । ತಥಾವಿಶಿಷ್ಟೋದೇವೇಷುಮಹಾಬ್ರಾ
ಹ್ಮಣಈಶ್ವರಃ ॥ ೨೩೬ ॥ ತಸ್ಮಾದ್ಧೇತೋರ್ಬ್ರಾಹ್ಮಣಾನಾಮನ್ಯದೇವ
ಸಮರ್ಪಿತಃ । ಪ್ರಸಾದಸ್ಸರ್ವದಾನರ್ಹೋಭವತ್ಯತ್ರನಸಂಶಯಃ ॥
ಅಯಮರ್ಥಶ್ಶೈವಸಂಹಿತಾಯಾಮುದ್ಘುಷ್ಯತೇಧ್ರುವಂ । ಶಂಭೋರ್ನಿ
ರ್ಮಾಲ್ಯಕಂಶುದ್ಧಂಭುಂಜೀಯಾತ್ಸರ್ವತೋದ್ವಿಜಃ ॥ ೨೩೮ ॥ ಅನ್ಯದೇ
ವಸ್ಯನಿರ್ಮಾಲ್ಯಂಭುಕ್ತ್ವಾಚಾಂದ್ರಾಯಣಂಚರೇತ್ । ಇತಿ । ಸ್ಕಾಂದೇಽ
ಯಮರ್ಥಏವೋಕ್ತಃಪುರಾಣೇಪಿಶಿವೋದಿತೇ ॥ ೨೩೯ ॥ ನಿರ್ಮಾಲ್ಯಮ
ನ್ಯದೇವಸ್ಯಭುಕ್ತಂತತ್ಕಿಲ್ಬಿಷಂಭವೇತ್ । ಶಿವಸ್ಯೈವತುನಿರ್ಮಾಲ್ಯಂಭ
ಕ್ತ್ಯಾಧಾರ್ಯಂದ್ವಿಜಾತಿಭಿಃ ॥ ೨೪೦ ॥ ಇತ್ಯಾದ್ಯನೇಕವಚನಪ್ರಾಮಾ
ಣ್ಯಾದ್ಬ್ರಾಹ್ಮಣೈಸ್ಸದಾ । ಪ್ರಸಾದಏವಶರ್ವಸ್ಯಭೋಕ್ತವ್ಯೋಭೋ
ಗಮೋಕ್ಷದಃ ॥ ೨೪೧ ॥ ಜಾಬಾಲಶ್ರುತಿರಪ್ಯೇನಮರ್ಥಂವದತಿಸೋಚ್ಯ

---

ಲ್ಯವನ್ನು ಯಾವಾಗಲೂ ಭುಂಜಿಸಬೇಕು. ಇತರ ದೇವತೆಗಳ ನಿರ್ಮಾಲ್ಯವನ್ನು ತಿಂದರೆ
ಚಾಂದ್ರಾಯಣ ವ್ರತವನ್ನಾಚರಿಸಬೇಕು ,, ಎಂಬುದಾಗಿ. ಶಿವೋಕ್ತವಾದ ಸ್ಕಾಂದಪು
ರಾಣದಲ್ಲಿಯೂ ಕೂಡ ಇದೇ ಅಭಿಪ್ರಾಯವು ಹೇಳಲ್ಪಟ್ಟದೆ ॥ ೨೩೯ ॥ ಹೇಗೆಂದರೆ—
“ ಬ್ರಾಹ್ಮಣರು ಶಿವೇತರ ದೇವತೆಗಳ ನಿರ್ಮಾಲ್ಯವನ್ನು ಭುಂಜಿಸಿದರೆ ಪಾಪವುಂಟಾಗು
ವುದು. ಶಿವನೊಬ್ಬನ ನಿರ್ಮಾಲ್ಯವನ್ನು ಮಾತ್ರ ಭಕ್ತಿಯಿಂದ ಧರಿಸಬೇಕು ,, ಎಂಬು
ದಾಗಿ ॥ ೨೪೦ ॥ ಇವು ಮೊದಲಾದ ಅನೇಕ ವಚನಗಳ ಪ್ರಾಮಾಣ್ಯವಿರುವುದರಿಂದ,
ಬ್ರಾಹ್ಮಣರು ಯಾವಾಗಲೂ ಭುಕ್ತಿ ಮುಕ್ತಿಯನ್ನು ಕೊಡುವ ಶಿವಪ್ರಸಾದವನ್ನು
ಮಾತ್ರವೇ ಭುಂಜಿಸಬೇಕು ॥ ೨೪೧ ॥ ಜಾಬಾಲಶ್ರುತಿಯು ಕೂಡ ಇದೇ ಅಭಿಪ್ರಾಯ
ವನ್ನು “ ರುದ್ರೇಣಾತ್ತಂ..................ಅಶ್ನೀಯಾತ್ ,, ಎಂಬ ವಚನದ
ಲ್ಲಿ ಹೇಳುತ್ತದೆ. ಇದಕ್ಕೆ ವೇದಸಂಪನ್ನರು ಅಂಗೀಕರಿಸಿರುವ ಅರ್ಥವನ್ನು ನಾವು
ಹೇಳುತ್ತೇವೆ. ಹೇಗೆಂದರೆ—ವಿದ್ವಾಂಸಃ-ಜ್ಞಾನಿಗಳಾದ, ಪ್ರಶಾಂತಮನಸಃ-ಶಾಂತ
ಚಿತ್ತರಾದ ಬ್ರಾಹ್ಮಣರು, ರುದ್ರೇಣ-ದುಃಖನಿವಾರಕನಾದ ಶಿವನಿಂದ, ಅತ್ತಂ-ಭುಂ
ಜಿಸಲ್ಪಟ್ಟ ನಿರ್ಮಾಲ್ಯವನ್ನು, ಅಶ್ನಂತಿ-ಭುಂಜಿಸುತ್ತಾರೆ, ರುದ್ರೇಣ-ಶಿವನಿಂದ, ಪೀತಂ
-ಕುಡಿಯಲ್ಪಟ್ಟುದನ್ನೇ, ಪಿಬಂತಿ-ಪಾನಮಾಡುತ್ತಾರೆ, ರುದ್ರೇಣ-ಶಿವನಿಂದ, ಆಘ್ರಾ
ತಂ-ಮೂಸಿನೋಡಲ್ಪಟ್ಟುದನ್ನು, ಜಿಘ್ರಂತಿ-ಮೂಸುತ್ತಾರೆ, ತಸ್ಮಾತ್-ಅದುಕಾರ
ಣದಿಂದ, ನಿರ್ಮಾಲ್ಯಮೇವ-ನಿರ್ಮಾಲ್ಯವನ್ನೇ, ನಿಷೇವೇತ-ಸೇವಿಸಬೇಕು, ನಿರ್ಮಾಲ್ಯ

ತೇ । ರುದ್ರೇಣಾತ್ತಮಶ್ನಂತಿರುದ್ರೇಣಪೀತಂಪಿಬಂತಿರುದ್ರೇಣಾಘ್ರಾ ತಂಜಿಘ್ರಂತಿತಸ್ಮಾದ್ಬ್ರಹ್ಮಣಾಃಪ್ರಶಾಂತಮನಸೋವಿದ್ವಾಂಸೋನಿ ರ್ಮಾಲ್ಯಮೇವಭಕ್ಷಯಂತಿನಿರ್ಮಾಲ್ಯಮೇವನಿಷೇವೇತನಿರ್ಮಾಲ್ಯಮೇವಾ ಶ್ನೀಯಾತ್ ,, ಇತಿ ॥ ಅರ್ಥೋಸ್ಯಾಃಕಥ್ಯತೇಸಮ್ಯಗ್ವೇದಾರ್ಥೈರುರ ರೀಕೃತಃ। ವಿದ್ವಾಂಸಃಪರಮಾರ್ಥಜ್ಞಾಃಪ್ರಶಾಂತಮನಸೋಽನ್ವಹಂ । ಶಾಂತಚಿತ್ತಾಬ್ರಾಹ್ಮಣಾಹಿರುದ್ರೇಣಾರ್ತಿಪ್ರಹಾರಿಣಾ ॥೨೪೩॥ ಶಿವೇ ನಾತ್ತಂತೇನಭುಕ್ತಮೇವಾಶ್ನಂತ್ಯುಪಭುಂಜತೇ । ಅದಭಕ್ಷಣಇತ್ಯತ್ರಶ ಬ್ದೋಧಾತೋರುದೀರಿತಃ ॥೨೪೪॥ ರುದ್ರೇಣಪೀತಂಪಿಬಂತಿರುದ್ರೇಣಾ ಘ್ರಾತಮೇವಹಿ । ಜಿಘ್ರಂತಿನಿರ್ಮಾಲ್ಯಮೇವಭಕ್ಷಯಂತ್ಯವಧಾನತಃ ॥ ತಸ್ಮಾಚ್ಛ್ರೇತೋರ್ಹಿನಿರ್ಮಾಲ್ಯಮೇವಾಶ್ನೀಯಾದಿತಿಸ್ಫುಟಂ। ತಸ್ಮಾಚ್ಛಿ ವಪ್ರಸಾದೋಪಭೋಗಾದೇವಾಶುಲಭ್ಯತೆ ॥ ೨೪೫ ॥ ಸಾಮಗ್ರೀಪು ರುಷಾರ್ಥಾನಾಂಸಕಲಾನಾಂನಸಂಶಯಃ । ಅಯಮರ್ಥೋನಿಗದಿತಃಪು ರಾಣೆಸ್ಕಾಂದನಾಮಕೇ ॥ ೨೪೬ ॥ ಶಿಷ್ಟಾಶ್ಶಾಂತಾಶ್ಚರುದ್ರೇಣಭುಕ್ತ ಮೇವಹಿಭುಂಜತೇ । ಘ್ರಾತಮೇವಹಿಜಿಘ್ರಂತಿಪೀತಮೇವಪಿಬಂತಿಚ

---

ಮೇವ-ನಿರ್ಮಾಲ್ಯವನ್ನೇ, ಅಶ್ನೀಯಾತ್-ತಿನ್ನಬೇಕು ,, ಎಂಬುದಾಗಿ. ಆದುದರಿಂ ದ ಆ ಶಿವಪ್ರಸಾದ ಸೇವನೆಯಿಂದ ಸರ್ವರಿಗೂ ಸಕಲ ಪುರುಷಾರ್ಥಸಾಧನೆಗೆ ತಕ್ಕ ಸಾಮಗ್ರಿಯೂ ಪ್ರಾಪ್ತವಾಗುತ್ತದೆ. ಸಂದೇಹವಿಲ್ಲ. ಈ ಅಭಿಪ್ರಾಯವು ಸ್ಕಾಂದಪುರಾ ಣದಲ್ಲಿ ಹೇಳಲ್ಪಟ್ಟಿದೆ ॥ ೨೪೬ ॥ ಹೇಗೆಂದರೆ—" ಶಾಂತರಾದ ಸತ್ಪುರುಷರು ಶಿವನು ಭುಂಜಿಸಿದುದನ್ನೇ ಊಟಮಾಡುತ್ತಾರೆ. ಆತನು ಮೂಸಿದುದನ್ನೇ ಆಘ್ರಾಣಿಸು ತ್ತಾರೆ. ಆತನು ಕುಡಿದುದನ್ನೇ ಪಾನಮಾಡುತ್ತಾರೆ ,, ಎಂಬುದಾಗಿ ॥ ೨೪೭ ॥ ಈ ಅರ್ಥದಲ್ಲೇ ಕಠವಲ್ಲ್ಯುಪನಿಷತ್ತಿನಲ್ಲಿ " ತ್ರಿಗುಪ್ಸಾತ ...... ಗಚ್ಛ ,, ಎಂಬ ವಚನವು ಹೇಳಲ್ಪಟ್ಟಿರುವುದು. ಪುರಾಣಾಭಿಪ್ರಾಯವನ್ನನುಸರಿಸಿ ಇದಕ್ಕೆ ನಾವು ಅ ರ್ಥವನ್ನು ಹೇಳುತ್ತೇವೆ. ॥ ೨೪೮ ॥ ಗೋ ಶಬ್ದಕ್ಕೆ ನಿಘಂಟುಗಳಲ್ಲಿ ಕಣ್ಣು ಮೊದ ಲಾದ ಅರ್ಥಗಳು ಹೇಳಲ್ಪಟ್ಟಿರುವುವು. ಆದುದರಿಂದ, ತ್ರಿಗುಶಬ್ದಕ್ಕೆ " ತಿಸ್ರಃಗಾವಃ ಯಸ್ಯ ,, ಎಂಬ ವ್ಯುತ್ಪತ್ತಿಯಿಂದ ಮುಕ್ಕಣ್ಣನಾದ ಶಿವನೆಂದರ್ಥ. ತ್ರಿಗುಪ್ಸಾತಂ- ತ್ರಿಗು-ಶಿವನಿಂದ,ಪ್ಸಾತಂ-ಭಕ್ಷಿಸಲ್ಪಟ್ಟುದನ್ನು,ಅಶ್ನೀಯಾತ್-ತಿನ್ನಬೇಕು, ಪಾಪ್ಮ ಯದಿ-ನೀನು ಪಾಪಮಾಡಿದವನಾಗಿದ್ದರೆ, ಶಿವಾನರ್ಪಿತಾತ್-ಶಿವನಿಗೆ ಸಮರ್ಪಿಸಲ್ಪಡದೆ ಇದ್ದುದನ್ನು, ಭುಂಕ್ಷ್ವ ತಿನ್ನು- ತತ್-ಆಕಾರಣದಿಂದ, ಏನಃ-ಬಹಳ ಪಾಪವನ್ನು, ಭುಂಕ್ಷ್ವ-ಭುಂಜಿಸು, ಕ್ರಿಮಿಂ-ಹುಳುವನ್ನು, ಭುಂಕ್ಷ್ವ-ಭುಂಜಿಸು, ಮಲಂ- ಮಲವನ್ನು, ಭುಂಕ್ಷ್ವ-ಭುಂಜಿಸು, ಅಘಂ-ವ್ಯಸನವನ್ನು, ಭುಂಕ್ಷ್ವ-ಭುಂಜಿಸು,

। ಇತಿ । ॥ ೨೪೮ ॥ ಅಪಿಚಾಸ್ಮಿನ್ನರ್ಥೇವಿವೇಕತರಶಾಖಾಪ್ರಕೀರ್ತಿತಾ । „ ತ್ರಿಗುಪ್ತಾನ್ನಮಶ್ನೀಯಾದ್ಯದಿಪಾಪ್ಮಾ ಶಿವಾನರ್ಪಿತಂಭುಂಕ್ಷ್ವತದೇನೋಭುಂಕ್ಷ್ವಕ್ರಿಮಿಂಭುಂಕ್ಷ್ವ ಮಲಂ ಭುಂಕ್ಷ್ವಾಘಂಭುಂಕ್ಷ್ವಅಧೋಗಚ್ಛಾಧೋಗಚ್ಛೇತಿ,, ಅಥೋರ್ಥಸ್ಯಾಪಿಕಥ್ಯತೇಽಸ್ಮಾಭಿಃಪುರಾಣಾರ್ಥಾನುಸಾರತಃ ॥೨೪೯॥ ಗೋಶಬ್ದಸ್ಯದೃಗಾದೀನಾಂವಾಚಕತ್ವಾನ್ನಿಘಂಟುಷು । ಗೋಶಬ್ದೇನಾತ್ರಸಂಸ್ಥೇನಚಕ್ಷುರಿಂದ್ರಿಯಮುಚ್ಯತೇ ॥೨೫೦॥ ತ್ರಿಸ್ರೋಗಾವೋಲೋಚನಾನಿಯಸ್ಯೇತ್ಯಸ್ಮಾದ್ಧಿವಿಗ್ರಹಾತ್ । ತ್ರಿಗುಸ್ತ್ರಿಲೋಚನಃಪ್ರೋಕ್ತಸ್ತೇನಪ್ರಾಪ್ತಂಚಭಕ್ಷಿತಂ ॥ ೨೫೧ ॥ ತತ್ಪ್ರಸಾದಾನ್ನಮಶ್ನೀಯಾದ್ಯದಿಪಾಪ್ಮಾತಿಪಾಪವಾನ್ । ಶಿವಾನರ್ಪಿತಮನ್ನಾದಿಭುಂಕ್ಷ್ವತದ್ಧ್ಯತಿಗರ್ಹಿತಂ ॥೨೫೨॥ ಏನೋಭುಂಕ್ಷ್ವಮಹತ್ಪಾಪಮೇನಶ್ಶಬ್ದೇನಕಥ್ಯತೇ । ಅತೋಮಹತ್ಪಾತಕಿನೋಯತ್ಪಾಪಂಭವತಿಕ್ಷಿತಂ ॥ ೨೫೩ ॥ ತದನರ್ಪಿತಭೋಗೇನಭವತೀತ್ಯವಗಮ್ಯತೇ । ತಥಾಕ್ರಿಮೀಣಾಮಘಸ್ಯಮಲಸ್ಯಾಪಿಚಭಕ್ಷಣೇ ॥ ೨೫೪ ॥ ಪಾಪಂಯದುಪಪಾಪಾದಿತದಾಪ್ನೋತೀತಿನಿಶ್ಚಿತಂ । ನಿರಂತರಮಧೋಗಚ್ಛಾಧೋ

---

ಅಧೋಗಚ್ಛಾಧೋಗಚ್ಛ-ಕೆಳಗಹೋಗು ಕೆಳಗೆಹೋಗು. (ಎಂದರೆ ಶಿವಾನರ್ಪಿತವಾದ ಪದಾರ್ಥವನ್ನು ಭುಂಜಿಸಿದರೆ, ಕ್ರಿಮಿ ಮಲ ಮೊದಲಾದುವುಗಳನ್ನು ಭಕ್ಷಿಸುವುದರಿಂದ ಎಂತಹ ಪಾಪವು ಸಂಭವಿಸುವುದೋ, ಅಂತಹ ಪಾಪವನ್ನುಹೊಂದಿ ಕಡೆಗೆ ದೀರ್ಘಕಾಲ ನರಕ ಯಾತನೆಯನ್ನನುಭವಿಸುವೆ ಯೆಂದು ತಾತ್ಪರ್ಯ) ಪದ್ಮ ಪುರಾಣದಲ್ಲಿರುವ ವಚನವನ್ನು ಈ ವಿಷಯದಲ್ಲಿ ಪ್ರಮಾಣವಾಗಿ ಹೇಳುತ್ತೇವೆ ॥ ೨೫೬ ॥ ಹೇಗೆಂದರೆ-ಯಾವ ವಸ್ತುವನ್ನಾದರೂ ಶಿವನಿಗೆ ಸಮರ್ಪಿಸದೆ ಉಂಡರೆ ತಿಂದರೆ ಕುಡಿದರೆ, ನಾಯಮಾಂಸವನ್ನು ಉಂಡವನೂ, ಮಾಳೆಯನ್ನು ತಿಂದವನೂ, ಉಚ್ಚೆಯನ್ನು ಕುಡಿದವನೂ, ಆಗುತ್ತಾನೆ ॥ ೨೫೭ ॥ ಯಾವನು ಪ್ರತಿಜ್ಞೆ ಮಾಡಿ ತನ್ನ ಜೀವಿತಾವಧಿ ಶಿವಪ್ರಸಾದವಾದ ಅನ್ನಪಾನವನ್ನು ನಿಶ್ಚಲಬುದ್ಧಿಯಿಂದ ಸೇವಿಸುವನೋ ಅವನು ಪ್ರಮಥಗಣಗಳಿಗೆ ಅಧಿಪತಿಯಾಗುವನು ॥ ೨೫೮ ॥ ಆದುದರಿಂದ ತಾನು ಶಿವನಿಗೆ ಸಮರ್ಪಿಸಿ ಉಳಿದ ಶುದ್ಧಪ್ರಸಾದವನ್ನು ಆತ್ಮ ಶುದ್ಧಿಗೋಸ್ಕರ ಸುಖವಾಗಿ ಭುಂಜಿಸಬೇಕು ॥ ೨೫೯ ॥ ಈ ಅಭಿಪ್ರಾಯದಲ್ಲಿ ಸಮ್ಮತವಾದ ಸೂತ ಸಂಹಿತೆಯ ವಚನವು ಹೀಗಿರುವುದು-“ತನ್ನ ಇಷ್ಟಲಿಂಗಕ್ಕೆ ಸಮರ್ಪಿಸಿದುದು ಚರುವು (ಹೋಮಯೋಗ್ಯ ಪಕ್ವಾನ್ನವು) ಸಂಶಯವಿಲ್ಲ ॥ ೨೬೦ ॥ ಬುದ್ಧಿಶಾಲಿಯು ಅದನ್ನು ತಾನು ಸೇವಿಸಬೇಕು., ಇತರರಿಗೆ ಕೊಡಬಾರದು. ಮತ್ತು ಗೋವು ನೀರು ಮೊದಲಾದವುಗಳಿಗೂ ಅದನ್ನು ವಿನಿಯೋಗಿಸಬಾರದು. ಒಂದುವೇಳೆ ವಿನಿಯೋಗಿಸಿದರೆ ನರಕವನು

ಗಚ್ಛೇತೀಹವೀಪ್ಸಯಾ ॥ ೨೫೫ ॥ ಬಹುಕಾಲಿಕಮುತ್ಸೃಗ್ಯ ನರಕಂಗ
ಚ್ಛತಿಧ್ರುವಂ । ಪಾದ್ಮೇಪುರಾಣೇವಚನಮತ್ರಾರ್ಥೇಮಾನಮುಚ್ಯತೇ॥
ಅಸಮರ್ಪ್ಯಪದಂಶಂಭೋರ್ಭುಂಗ್ತೇಖಾದತಿಪಾತಿಯಃ । ಶ್ವಮಾಂಸಮ
ಸ್ಥಿಮೂತ್ರಂಚಭುಂಗ್ತೇಖಾದತ್ರಿಪಾತಿಸಃ ॥೨೫೬॥ ನಿರ್ವಿಕಲ್ಪಧಿಯಾಶಂ
ಭುಭುಕ್ತೋಚ್ಛಿಷ್ಟಾನ್ನಪಾನಕಂ। ಯೋಭುಂಗ್ತೇಸಗಣಾಧೀಶೋಯಾ
ವಜ್ಜೀವಂಪ್ರತಿಜ್ಞಯಾ ॥೨೫೭॥ ತತಸ್ಸ್ವಯಂಚಭುಂಜೀಯಾಚ್ಛು
ದ್ಧಮನ್ನಂಯಥಾಸುಖಂ । ನಿವೇದಿತಂಚದೇವಾಯತಚ್ಛೇಷಂಚಾತ್ಮಶು
ದ್ಧಯೇ ॥ ೨೫೯ ॥ ಶ್ರೀಸೂತಸಂಹಿತಾವಾಕ್ಯಮರ್ಥೇಸ್ಮಿಂತ್ಸಂಮತಂ
ತ್ವಿದಂ । ಸ್ವೇಷ್ಟಲಿಂಗಸ್ಯಯದ್ದತ್ತಂಚರುಕಂತನ್ನಸಂಶಯಃ ॥೨೬೦॥
ತತ್ಪ್ರಾಶಯೇತ್ಸ್ವಯಂಪ್ರಾಜ್ಞೋಹ್ಯನ್ಯಸ್ಮೈನತುಪಾಯಯೇತ್ ।
ನವನ್ಯಾದ್ಭೋಜಲಾದಿಭ್ಯೋದದ್ಯಾಚ್ಚೇನ್ನರಕಂವ್ರಜೇತ್ ॥೨೬೧॥
ಶಿವಧರ್ಮೇಪಿಕಥಿತಏಷೋಽರ್ಥಸ್ಸರ್ವಸಂಮತಃ । ನಿರ್ಮಾಲ್ಯಂಧಾರಯೇ
ನ್ಮೂರ್ಧ್ನಿನೈವೇದ್ಯಂಚಾಪಿಭಕ್ಷಯೇತ್ ॥ ೨೬೨ ॥ ತತ್ಪ್ರಸಾದೋ
ದಕಂಪೀತ್ವಾಗಣಾಪತ್ಯಮವಾಪ್ನುಯಾತ್ । ಸ್ವಚ್ಛಂದಪೂರ್ವೇಲಲಿತ

---

ಹೊಂದುತ್ತಾನೆ ,, ॥ ೨೬೧ ॥ ಶಿವಧರ್ಮ ಪುರಾಣದಲ್ಲಿ ಕೂಡ ಸಕಲ ಸಮ್ಮತವಾದ
ಇದೇ ಅಭಿಪ್ರಾಯವಿರುವುದು. “ ನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ಧರಿಸಬೇಕು. ನೈ
ವೇದ್ಯವನ್ನು ಭುಂಜಿಸಬೇಕು. ಶಿವಪ್ರಸಾದ ತೀರ್ಥವನ್ನು ಪಾನಮಾಡಿ ಗಣಾಧಿ ಪ
ತಿತ್ವವನ್ನು ಹೊಂದುವನು ,, ಎಂಬುದಾಗಿ. ಸ್ವಚ್ಛಂದಲಲಿತ ಭೈರವವೆಂಬ ಶಿವಾಗ
ಮದ ಈಶ್ವರ ಷಣ್ಮುಖ ಸಂವಾದದಲ್ಲಿಯೂ ಕೂಡ ಇದೇ ಅಭಿಪ್ರಾಯವು ಹೇಳಲ್ಪ
ಟ್ಟಿರುವುದು:—“ ಎಲೆ ಮಗನೆ ! ಮನುಷ್ಯನು ನಿರ್ಮಾಲ್ಯವನ್ನು ಧರಿಸುವುದರಿಂದ
ಸಾಲೋಕ್ಯ ಪದವಿಯನ್ನು ಪಡೆಯುತ್ತಾನೆ ॥ ೨೬೪ ॥ ಪಾದೋದಕವನ್ನು ಪಾನಮಾ
ಡುವುದರಿಂದ ಯಾವಾಗಲೂ ಸಾಮೀಪ್ಯ ಪದವಿಯನ್ನೈದುತ್ತಾನೆ. ನನ್ನ ಪ್ರಸಾದವ
ನ್ನು ಸೇವಿಸುವುದರಿಂದ ಸಾರೂಪ್ಯ ಪದವನ್ನುಹೊಂದುತ್ತಾನೆ. ॥ ೨೬೫ ॥ ಬಾಲಕ
ನಾದ ನಿನಗೆ ಇಷ್ಟಾವತಪಸ್ಸಿನ ಶಕ್ತಿಯೂ ಇರುವುದಿಲ್ಲ. ನಾನು ಹೇಳಿದ ಆ ಈ ವಚನ
ವು ಗುಟ್ಟಾದುದು. ಮತ್ತೂ ನಿನಗೆ ಸುಲಭವಾದುದು. ಮಗನೆ ! ಇದನ್ನು ನೀನಾ
ಚರಿಸು ಎಂದು ಶಿವನು ಷಣ್ಮುಖನಿಗೆ ಹೇಳಿರುವನು. ॥ ೨೬೬ ॥ ಪ್ರಖ್ಯಾತವಾದ ಹರಿ
ವಂಶ ಪುರಾಣದ ಇಂದ್ರ ನಾರದ ಸಂವಾದದಲ್ಲಿ ಇದೇ ಅಭಿಪ್ರಾಯವೇ ಕೂಗಿ ಹೇಳಲ್ಪ
ಟ್ಟಿರುವುದು. ಎಲೈ ಬ್ರಾಹ್ಮಣರೇ ! ನೀವು ಕೇಳಿರಿ ॥ ೨೬೭ ॥ ಎಲೈ ದೇವೇಂದ್ರನೆ !
ಒಂದು ಕಾಲದಲ್ಲಿ ಪುಣ್ಯಶಾಲಿಯಾದ ಆದಿಶೇಷನು ಶಿವ ಪಾದೋದಕ ಸಮ್ಮಿಶ್ರವಾದ ವಾ
ಯುವನ್ನು ಸೇವಿಸಿದನು. ಅದರಿಂದ ಅವನಿಗೆ ಭೂಭಾರವನ್ನು ಹೊರುವ ಯೋಗ್ಯ

ಭೈರವಾಖ್ಯೇಶಿವಾಗಮೇ ॥ ೨೬೩ ॥ ಈಶಷಣ್ಮುಖಸಂವಾದೇಪ್ಯಯ
ಮರ್ಥೋನಿರೂಪಿತಃ । ನಿರ್ಮಾಲ್ಯಧಾರಣಾತ್ಪುತ್ರ ಸಾಲೋಕ್ಯಂಲಭತೇ
ನರಃ ॥ ೨೬೪ ॥ ಪಾದೋದಕಸ್ಯಪಾನೇನಸಾಮೀಪ್ಯಂಭಜತೇಸದಾ ।
ಮತ್ಪ್ರಸಾದೋಪಭೋಗೇನಸಾರೂಪ್ಯಂಪ್ರತಿಪದ್ಯತೇ ॥ ೨೬೫ ॥
ನಾನ್ಯಸ್ಯತಪಸಶ್ಶಕ್ತಿಸ್ತವಬಾಲಸ್ಯವಿದ್ಯತೇ । ರಹಸ್ಯಂತದಿದಂಪುತ್ರ
ಸುಲಭಂಕುರುವತ್ಸತೇ ॥ ೨೬೬ ॥ ಇಂದ್ರನಾರದಸಂವಾದೇಹರಿವಂಶೇಽ
ತಿವಿಶ್ರುತೇ । ಉದ್ಘುಷ್ಯತೇಽಯಮೇವಾರ್ಥೋಯೂಯಂಶೃಣುತ
ಹೇದ್ವಿಜಾಃ ॥ ೨೬೭ ॥ ಕದಾಚಿದೀಶಪಾದಾಂಬುನಿರ್ಮಾಲ್ಯಪರಿಮೇಳಿ
ತಃ । ಪವನಃಪನ್ನಗೇಶೇನನಿಪೀತಃಪುಣ್ಯಕಾರಿಣಾ ॥ ೨೬೮ ॥ ತೇನ
ವಿಶ್ವಂಭರಾಭಾರಧುರೀಣತ್ವಮವಾಪ್ಯತೇ । ಭೋಗೀಶ್ವರತ್ವಮಚಲವಿಭೂ
ಶಭೂಷಣತಾಪಿಚ ॥೨೬೯॥ ಸರ್ವಜ್ಞತಾಚಸಂಜಾತಾದೇವೇಂದ್ರನಹಿ
ಸಂಶಯಃ । ಸಾಕ್ಷಾತ್ಪ್ರಸಾದಭೋಗೇನಭಕ್ತೋಯಲ್ಲಭತೇಫಲಂ ॥
ತದ್ವಕ್ತುಂನಹಿಮೇಶಕ್ತಿರ್ನಗಿರೋನಗಿರಾಂಪತೇಃ । ಉಮಾಮಹೇಶ
ಸಂವಾದೇದೀಕ್ಷಾಪ್ರಕರಣೇಶುಭೇ ॥೨೭೦॥ ಈಶಾನಸಂಹಿತಾಯಾಮ

---

ತೆಯು ಲಭಿಸಿತು. ಮತ್ತೂ ಸ್ಥಿರವಾದ ಸರ್ಪ ರಾಜತ್ವವೂ, ಶಿವನ ಆಭರಣತ್ವವೂ, ಸರ್ವಜ್ಞತ್ವವೂ ದೊರೆಕೊಂಡುವು. ಇದರಲ್ಲಿ ಸಂಶಯವಿಲ್ಲ, ಭಕ್ತನು ಪ್ರತ್ಯಕ್ಷವಾಗಿ ಶಿವ ಪ್ರಸಾದವನ್ನು ಸೇವಿಸುವುದರಿಂದ ಯಾವ ಫಲವನ್ನು ಹೊಂದುತ್ತಾನೋ ಅದನ್ನು ಹೇಳುವುದಕ್ಕೆ ನನಗೆ ಶಕ್ತಿಯಿಲ್ಲ. ಸರಸ್ವತೀದೇವಿಗೂ ಇಲ್ಲ. ಬೃಹಸ್ಪತ್ಯಾಚಾರ್ಯ ನಿಗೂ ಇಲ್ಲ. ॥ ೨೭೦ ॥ ಈಶಾನ ಸಂಹಿತೆಯೊಳಗೆ ಉಮಾಮಹೇಶ ಸಂವಾದದ ದೀಕ್ಷಾ ಪ್ರಕರಣದಲ್ಲಿಯೂ ಕೂಡ ಇದೇ ಅರ್ಥವೇ ಉಕ್ತವಾಗಿರುವುದು. ಹೇಗೆಂದರೆ— "ದೀಕ್ಷೆಯಿಂದೇನು ಪ್ರಯೋಜನ ? ತಪಸ್ಸಿನಿಂದೇನು? ಧ್ಯಾನದಿಂದೇನು ? ಜಪದಿಂದೇನು ? ॥ ೨೭೦ ॥ ಎಲೌ ಪಾರ್ವತಿಯೆ ! ಕೇಳು——ಯಾವನು ನಾನು ಉಂಡಿಸಿದುದನ್ನು ತಿಂದರೆ, ನನ್ನ ನಿರ್ಮಾಲ್ಯವನ್ನು ಆಶೆಯಿಂದಲ್ಲದೆ ಭಕ್ತಿಯಿಂದ ತಲೆಯಲ್ಲಿ ಧರಿಸಿಕೊಂಡರೆ, ಅವನು ಚಂದ್ರಶೇಖರನಾದ ನನ್ನನ್ನೇ ಧರಿಸಿಕೊಂಡವನಾಗುವನು ,, ಎಂಬುದಾಗಿ ॥ ೨೭೩ ॥ ಮತ್ತೂ ಎಲೆ ನಾರದನೆ ! ಪರಮೇಶ್ವರ ನಿರ್ಮಾಲ್ಯವನ್ನು ಭಕ್ತಿಯಿಂದ ತಲೆಯಲ್ಲಿ ಧರಿಸಿಕೊಂಡರೆ, ಸಹಸ್ರ ರಾಜಸೂಯ ಯಾಗಗಳನ್ನು ಮಾಡಿದಷ್ಟು ಫಲವು ಲಭಿಸುತ್ತದೆ. ಯಾವನು ಅಶುಚಿಯಾಗಿದ್ದರೂ, ವೇದಶಾಸ್ತ್ರಾಚಾರ ಮರ್ಯಾದೆಯನ್ನತಿಕ್ರಮಿಸಿದವನಾಗಿದ್ದರೂ, ಯಾವಪಸ್ಥೆಯಲ್ಲಿದ್ದರೂಗೊತ್ತುಗುರಿಯಿಲ್ಲದೆ ಎಲ್ಲಾ ದೇವತೆಗಳಲ್ಲೂ ನಂಬುಗೆಯುಳ್ಳವನಾಗಿದ್ದರೂ, ಯಾವುದೊಂದು ನಿಯಮವಿಲ್ಲದವನಾಗಿದ್ದರೂ ಕೂಡ, ಅಂಥವನು ಭಕ್ತಿಯಿಂದ ಶಿವನ ನಿರ್ಮಾಲ್ಯವ

ಪ್ಯೇವಮೇವನಿರೂಪಿತಂ| ಕಿಂದೀಕ್ಷಯಾಕಿಂತಪಸಾಕಿಂಧ್ಯಾನೇನಜಪೇನ ಕಿಂ ||೨೨೦|| ಶೃಣುದೇವಿವರಾರೋಹೇಮದ್ಭುಕ್ತಂಯದಿಭುಜ್ಯತೇ| ಶಿರಸಾಧಾರಯೇದ್ಭಕ್ತ್ಯಾಯೋನಿರ್ಮಾಲ್ಯಮಲೋಭತಃ ‖ ೨೨೨ ‖ ಅಹಮೇವಧೃತಸ್ತೇನಸೋಮಸ್ಸೋಮಕಲಾಧರಃ | ನಿರ್ಮಾಲ್ಯಂಧಾರಯೇದ್ಭಕ್ತ್ಯಾಶಿರಸಾಪಾರ್ವತೀಪತೇಃ ‖೨೨೪‖ ರಾಜಸೂಯಸಹಸ್ರಸ್ಯಫಲಂಭವತಿನಾರದ | ಶಿರಸಾಶಿವನಿರ್ಮಾಲ್ಯಂಭಕ್ತ್ಯಾಯೋಧಾರಯೇದ್ಯದಿ ‖ ೨೨೫ ‖ ಅಶುಚಿರ್ಭಿನ್ನಮರ್ಯಾದಸ್ಸರ್ವಾವಸ್ಥಾಗತೋಪಿವಾ | ಸರ್ವದೇವಪ್ರಯುಕ್ತಾತ್ಮಾನಿಯಮೈಶ್ಚಬಹಿಷ್ಕೃತಃ ‖ ತಸ್ಯಪಾಪಾನಿಘೋರಾಣಿನಾಶಯತ್ಯೇವಶಂಕರಃ | ಮತ್ಪ್ರಸಾದೋದಕಂಪುಷ್ಪಂಸದಾಧಾರ್ಯಂಮಾಶ್ರಿತೈಃ ‖ ೨೨೭ ‖ ರೋಗಿಭಿಶ್ಚವಿಶೇಷೇಣವಿಷದಗ್ಧೈಶ್ಚಯತ್ನತಃ | ಪೃಥಿವ್ಯಾಂಯಾನಿತೀರ್ಥಾನಿಯಾನದ್ಯಃ ಪುಣ್ಯದಾಶ್ಶುಭಾಃ ‖ ೨೨೮ ‖ ಮತ್ಪಾದಸ್ಥಾಪಿತಾನಿತ್ಯಂತಸ್ಮಾದ್ಧಾರ್ಯಂಪ್ರಸಾದಕಂ | ಪಾದೋದಕಂಚನಿರ್ಮಾಲ್ಯಂಭಕ್ತೈರ್ಧಾರ್ಯಂಪ್ರಯತ್ನತಃ ‖ ೨೨೯ ‖ ನತಾನ್ಸ್ಪೃಶಂತಿಪಾಪಾನಿಮನೋವಾಕ್ಕಾಯಜಾನಿ

---

ನ್ನು ಧರಸಿಕೊಂಡುದೇ ಆದರೆ, ಅವನ ಎಲ್ಲ ಪಾಪಗಳನ್ನೂ ಶಿವನು ಪರಿಹಾರಮಾಡಿಯೇ ಮಾಡುತ್ತಾನೆ. ‖ ೨೨೬ ‖ ರೋಗಿಗಳೂ, ವಿಷ ಪ್ರಾಣಿಗಳಿಂದ ಕಚ್ಚಲ್ಪಟ್ಟವರೂ ಆದ ನನ್ನಾಶ್ರಿತರು ನನ್ನ ಪ್ರಸಾದ ತೀರ್ಥೋದಕ ನಿರ್ಮಾಲ್ಯ ಪುಷ್ಪಗಳನ್ನು ಯಾವಾಗಲೂ ಧರಿಸಬೇಕು ‖ ೨೨೭ ‖ ಭೂಮಿಯಲ್ಲಿ ಯಾವ ತೀರ್ಥಗಳೂ ಪುಣ್ಯಪ್ರದಗಳಾದ ಹೊಳೆಗಳೂ ಯಾವುವಿರುವುವೋ ಅವೆಲ್ಲವೂ ಯಾವಾಗಲೂ ನನ್ನ ಪಾದದಲ್ಲಿಯೇ ಇಡಲ್ಪಟ್ಟಿರುವುವು. ಆದುದರಿಂದ ಭಕ್ತರು ನನ್ನ ಪಾದೋದಕ ಪ್ರಸಾದ ನಿರ್ಮಾಲ್ಯಗಳನ್ನು ಪ್ರಯತ್ನ ಪೂರ್ವಕವಾಗಿ ಧರಿಸಬೇಕು ‖ ೨೨೯ ‖ ಅಂಥವರನ್ನು ಮನಸ್ಸು ವಾಕ್ಕು ದೇಹ ಈ ತ್ರಿಕರಣಗಳ ಮೂಲಕವಾಗಿ ಹುಟ್ಟುವ ಯಾವ ಪಾಪವೂ ಸೋಂಕುವುದಿಲ್ಲ. ಶಿವನ ನಿರ್ಮಾಲ್ಯವನ್ನು ಧರಿಸಿಕೊಳ್ಳುವುದು, ಪಾದೋದಕವನ್ನು ಸೇವಿಸುವುದು, ಪ್ರಸಾದವನ್ನು ಭುಂಜಿಸುವುದು, ಎಂಬುದಾಗಿ ಈ ಪ್ರತಿಯೊಂದೂ ಪಾಪ ಪರಿಹಾರವನ್ನು ಮಾಡತಕ್ಕುದು. ಹೀಗಿರುವಲ್ಲಿ ನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಿ, ನೈವೇದ್ಯವನ್ನು ಬುಂಜಿಸಿ, ಪ್ರಸಾದ ತೀರ್ಥದ ಪಾನವನ್ನು ಮಾಡಿದರೆ ಅವನಿಗೆ ಗಣಾಧಿಪತಿತ್ವವು ನಿಜವಾಗಿಯೂ ದೊರೆಯುವುದು ‖ ೨೩೧ ‖ ನಿರ್ಮಾಲ್ಯವು ಅತ್ಯಂತ ಪರಿಶುದ್ಧವಾದುದು. ನೈವೇದ್ಯವು ಪಾಪನಾಶಕವಾದುದು ‖ ೨೩೦ ‖ ಬ್ರಹ್ಮಚಾರಿಗಳಿಗೂ ಗೃಹಸ್ಥರಿಗೂ ಸನ್ಯಾಸಿಗಳಿಗೂ ಕೂಡ ಇದು ಭೋಗಮೋಕ್ಷವನ್ನು ಕೊಡತಕ್ಕುದು. ನಿರ್ಮಾಲ್ಯವು ಪರಮಾನಂದವನ್ನೂ ಶುದ್ಧ ಶೈವ ವರ್ತನವನ್ನೂ ಉಂಟು

ಚ । ನಿರ್ಮಾಲ್ಯಧಾರಣಂಶಂಭೋಃಶಿಪಾದೋದಕನಿಷೇವಣಂ ॥೨೪೦॥ ಪ್ರಸಾದಭೋಜನಂಚೇತಿಪ್ರತ್ಯೇಕಂಪಾತಕಾಪಹಂ । ನಿರ್ಮಾಲ್ಯಂಶಿರಸಾಧೃತ್ವಾಭುಕ್ತ್ವಾನ್ನೈವೇದ್ಯಮೇವಚ ॥ ೨೪೧ ॥ ತತ್ಪ್ರಸಾದೋದಕಂಪೀತ್ವಾಗಾಣಾಪತ್ಯಂಲಭೇದ್ಧ್ರುವಂ । ನಿರ್ಮಾಲ್ಯಂಪರಮಂಪುಣ್ಯಂನೈವೇದ್ಯಂಪಾಪನಾಶನಂ ॥೨೪೨॥ ಬ್ರಹ್ಮಚಾರಿಗೃಹಸ್ಥಾನಾಂಯತೀನಾಂಭುಕ್ತಿಮುಕ್ತಿದಂ । ನಿರ್ಮಾಲ್ಯಂಪರಮಾನಂದಂನಿರ್ಮಾಲ್ಯಂಶುದ್ಧಶೈವಪದಂ ॥ ನಿರ್ಮಾಲ್ಯಂಪರಮಂಜ್ಞಾನಂನಿರ್ಮಾಲ್ಯಂಪರಮಾಮೃತಂ । ನಿರ್ಮಲತ್ವಾಚ್ಚನಿರ್ಮಾಲ್ಯಂನೃಣಾಂನೈರ್ಮಲ್ಯಕಾರಣಂ ॥ ೨೪೪ ॥ ಅನಿವೇದ್ಯಚಭುಂಜಾನೋನರೋಭವತಿಕಿಲ್ಬಿಷೀ । ಪತ್ರಂಪುಷ್ಪಂಫಲಂತೋಯಮನ್ನಪಾನಾದ್ಯಮೌಷಧಂ ॥೨೪೫॥ ಶಿವಾರ್ಪಿತಂವಿನಾಭುಂಕ್ತೇಭುಂಕ್ತೇಸದ್ಯೋಹಿಕಿಲ್ಬಿಷಂ । ಯದ್ಯದಾತ್ಮಹಿತಂಲೋಕೇತತ್ತದ್ದ್ರವ್ಯಮವಂಚಯರ್ಯ॥ ಶಿವಲಿಂಗಾರ್ಪಿತಂಕುರ್ಯಾತ್ತತ್ರತುಷ್ಯಾಮಿಪಾರ್ವತಿ । ಶಿವೋಪಭುಕ್ತಂನಿರ್ಮಾಲ್ಯಂಪವಿತ್ರಂಪಾಪನಾಶನಂ ॥ ೨೪೬ ॥ ತಸ್ಮಾದ್ಭುಕ್ತ್ವಾಚಪೀತ್ವಾಚಶಿವೇನಸಹಮೋದತೆ । ವೇದಾಗಮಪುರಾಣೇತಿಹಾಸಸ್ಮೃತಿಷ

---

ಮಾಡತಕ್ಕದು. ॥ ೨೪೩ ॥ ನಿರ್ಮಾಲ್ಯವು ಉತ್ತಮ ಜ್ಞಾನವನ್ನೂ, ಪರತರವಾದ ಮೋಕ್ಷವನ್ನೂ ಕೊಡತಕ್ಕದು. ಅದು ನಿರ್ಮಲವಾದುದರಿಂದ ಅದಕ್ಕೆ ನಿರ್ಮಾಲ್ಯವೆಂದು ಹೆಸರು, ಅದು ಮನುಷ್ಯರ ಪರಿಶುದ್ಧಿಗೆ ಕಾರಣವಾದುದು ॥ ೨೪೪ ॥ ಮನುಷ್ಯನು ಶಿವನಿಗೆ ನೈವೇದ್ಯವನ್ನು ಮಾಡದೆ, ಎಲೆ ಹೂವು ಹಣ್ಣು ನೀರು ಅನ್ನ ಪಾನ ಔಷಧ ಮೊದಲಾದ ಯಾವುದನ್ನು ಸ್ವೀಕರಿಸಿದರೂ ಕೂಡಲೇ ಪಾಪಿಯಾಗುತ್ತಾನೆ ॥೨೪೫॥ ಶಿವನಿಗೆ ಸಮರ್ಪಿತವಾದುದನ್ನು ಬಿಟ್ಟು ಉಳಿದ ಯಾವುದನ್ನು ಭುಂಜಿಸಿದರೂ ಕೂಡಲೇ ಪಾಪವನ್ನು ಭುಂಜಿಸಿದವನಾಗುತ್ತಾನೆ, ಎಲೌ ಪಾರ್ವತಿಯೆ ! ಯಾವುದು ತನಗೆ ಬೇಕಾದುದೋ ಅದನ್ನೆಲ್ಲ ಶಿವಲಿಂಗಕ್ಕೆ ವಂಚನೆಯಿಲ್ಲದೆ ಸಮರ್ಪಿಸಬೇಕು. ನಾನು ಆ ಲಿಂಗದಲ್ಲಿದ್ದು ಅವನ್ನೆಲ್ಲ ಸ್ವೀಕರಿಸಿ ಆನಂದಿಸುವೆನು. ಶಿವನು ಬುಂಜಿಸಿದ ನಿರ್ಮಾಲ್ಯವು ಪರಿಶುದ್ಧವಾದುದು ಮತ್ತು ಪಾಪನಾಶಕವಾದುದು ॥ ೨೪೬ ॥ ಆದುದರಿಂದ ಅದನ್ನು ಬುಂಜಿಸಿಯೂ ಪಾನಮಾಡಿಯೂ ಸಹ ಶಿವನೊಡನೆ ಸಂತೋಷಪಡುತ್ತಾನೆ, ಎಂಬುದಾಗಿ ವೇದಾಗಮಪುರಾಣ ಇತಿಹಾಸ ಧರ್ಮಶಾಸ್ತ್ರಗಳ ವಚನಗಳಿಂದ ಶಿವಪ್ರಸಾದವು ಸೇವ್ಯವೆಂಬುದಾಗಿ ಹೇಳಲ್ಪಟ್ಟಿರುವುದು ॥ ೨೪೭ ॥ ಆ ಶಿವ ಪ್ರಸಾದವು ಮೂರು ಪ್ರಕಾರವಾಗಿರುವುದೆಂದು ಆಗಮವನ್ನು ತಿಳಿದವರು ಹೇಳುತ್ತಾರೆ ॥೨೪೮॥ ಅದರ ಒಳಭೇದವನ್ನು ಲಕ್ಷಣ ವಿವರಣಪೂರ್ವಕವಾಗಿ ಆಗ ಮೋಕ್ತರೀತಿಯಿಂದ ನನ್ನ ತಿಳಿವಿಕೆ ಯಿದ್ದಮಟ್ಟಿಗೆ ಹೇಳುತ್ತೇನೆ ॥ ೨೪೯ ॥ ಪ್ರಸಾದವು ಶುದ್ಧ ಸಿದ್ಧ ಪ್ರಸಿದ್ಧ

ರೋಕ್ತಿಭಿಃ ॥ ೨೮೭ ॥ ಏವಮೀಶಪ್ರಸಾದಸ್ಯಸೇವ್ಯತ್ವಂಪ್ರತಿಪಾದಿ
ತಂ । ಆಗಮಜ್ಞೈಸ್ಸಪ್ರಸಾದಸ್ತ್ರಿಧಾಪರಿಕೀರ್ತ್ಯತೆ ॥ ೨೮೮ ॥
ತಸ್ಯತ್ವವಾಂತರಂಭೇದಂಲಕ್ಷಣಾಖ್ಯಾಪುರಸ್ಸರಂ । ಆಗಮೋಕ್ತಪ್ರಕಾ
ರೇಣಕಥಯಾಮಿಯಥಾಮತಿ ॥ ೨೮೯ ॥ ಪ್ರಸಾದಸ್ತ್ರಿವಿಧಃಪ್ರೋಕ್ತ
ಶ್ಶುದ್ಧಸ್ಸಿದ್ಧಃಪ್ರಸಿದ್ಧಕಃ । ಶುದ್ಧೋಲಿಂಗಮುಖಾತ್ತ್ಯಕ್ತಸ್ಸಿದ್ಧಶ್ಚರ
ವಿವರ್ಜಿತಃ ॥ ೨೯೦ ॥ ಪ್ರಸಿದ್ಧಶ್ಚಗುರೋರ್ಭುಕ್ತಇತ್ಯೇವಂತ್ರಿವಿಧ
ಸ್ಸ್ಮೃತಃ । ನಿತ್ಯಂವೈದಿಕಶ್ಶೈವೇನಸೇವ್ಯತೆಲಿಂಗಸೇವಿತಃ ॥ ೨೯೧ ॥
ತತ್ರಾಪ್ಯರ್ಘಂವೀರಶೈವೇನಸೇವ್ಯತೇಚರಸೇವಿತಃ । ತಥೈವೋಭಯಶ್ಶೈ
ವೇನಸೇವ್ಯತೇಗುರುಸೇವಿತಃ ॥ ೨೯೨ ॥ ನಿರ್ಮಾಲ್ಯಸೇವನಂತದ್ವತ್ಪಾ
ದೋದಕನಿಷೇವಣಂ । ಪ್ರಸಾದಭೋಜನಂಚೇತಿಪ್ರತ್ಯೇಕಂಪಾತಕಾ
ಪಹಂ ॥ ೨೯೩ ॥ ಬೋಧಾಯನೇನಕಥಿತೋಯಃಪ್ರಸಾದಃ ಪ್ರಸಿದ್ಧ
ಕಃ । ದೀಕ್ಷಾನ್ಯಾಯಮುಖೇನಾತ್ರಸಇದಾನೀಂಪ್ರದರ್ಶ್ಯತೇ ॥೨೯೪॥
ಪಾದೋದಕಂಪಾಶಹರಂನಿರ್ಮಾಲ್ಯಂಚೈಹಿಕಪ್ರದಂ । ಗುರೋರ್ಭುಕ್ತಂ
ಸದಾಕಾಲಮಾಮುಷ್ಮಿಕಫಲಪ್ರದಂ ॥೨೯೫॥ ಯದ್ಯದಾತ್ಮೋಪಭೋ

---

ವೆಂದು ಮೂರು ತರನಾಗಿ ಹೇಳಲ್ಪಟ್ಟಿರುವುದು. ಲಿಂಗ ಮುಖದಿಂದ ಬಿಡಲ್ಪಟ್ಟುದೇ
ಶುದ್ಧವು. ಜಂಗಮ ಮುಖದಿಂದ ಬಿಡಲ್ಪಟ್ಟುದೇ ಸಿದ್ಧವು. ಗುರುವು ಉಂಜಿಸಿ
ಮಿಕ್ಕುದೇ ಪ್ರಸಿದ್ಧವು. ವೈದಿಕನಾದ ಶೈವನು ಪ್ರತಿದಿನವೂ ಶಿವಲಿಂಗ ಭುಕ್ತವಾದ
ಶುದ್ಧ ಪ್ರಸಾದವನ್ನು ಭುಂಜಿಸುತ್ತಾನೆ. ॥ ೨೯೧ ॥ ವೀರಶೈವನು ಜಂಗಮ ಪ್ರಸಾ
ದವನ್ನು ಸೇವಿಸುತ್ತಾನೆ. ಈ ಉಭಯ ಶೈವರೂ ಗುರು ಪ್ರಸಾದವನ್ನು ಸೇವಿಸು
ತ್ತಾರೆ ॥ ೨೯೨ ॥ ನಿರ್ಮಾಲ್ಯಸೇವನೆ, ಪಾದೋದಕ ಸ್ವೀಕಾರ, ಪ್ರಸಾದ ಭೋಜನ
ವೆಂಬ ಈ ಪ್ರತಿಯೊಂದೂ ಪ್ರತ್ಯೇಕವಾಗಿ ಪಾಪವನ್ನು ಪರಿಹರಿಸತಕ್ಕುದು ॥೨೯೩॥
ಬೋಧಾಯನಾರ್ಯರು ದೀಕ್ಷಾಕಾಲದಲ್ಲಿ ಯಾವ ಪ್ರಸಿದ್ಧವೆಂಬ ಗುರು ಪ್ರಸಾದವನ್ನು
ನ್ಯಾಯವಾಗಿ ಸೇವ್ಯವೆಂದು ಹೇಳಿರುವರೋ ಅದನ್ನು ಈಗ ನಾನು ದೃಷ್ಟಾಂತವಾಗಿ
ತೋರಿಸುತ್ತೇನೆ ॥ ೨೯೪ ॥ ಪಾದೋದಕವು ಮಾಯಾಪಾಶ ನಿವಾರಕವು. ನಿರ್ಮಾಲ್ಯ
ವು ಇಹಲೋಕ ಸೌಖ್ಯವನ್ನು ಕೊಡತಕ್ಕುದು. ಗುರುಭುಕ್ತವಾದ ಪ್ರಸಾದವು ಪಾರ
ಲೌಕಿಕ ಫಲವನ್ನು ಕೊಡತಕ್ಕುದು ॥ ೨೯೫ ॥ ಯಾವುದು ತನ್ನ ಸುಖಕ್ಕೆ ಬೇಕಾಗಿ
ರುವುದೋ ಅಂತಹ ವಸ್ತುವನ್ನೆಲ್ಲ ವಂಚನೆಮಾಡದೆ ಗುರುವಿಗೆ ಭಕ್ತಿಯಿಂದ ಸಮ
ರ್ಪಿಸಿದರೆ, ಆವನಸ್ಪೃಹೆಯಂತೆ ನಡೆದವನಾಗುವನು. ॥ ೨೯೬ ॥ ಗುರುಭಕ್ತಿ ಸಂಪ
ನ್ನನು ತ್ರಿಕರಣ ಪೂರ್ವಕವಾಗಿ ತನ್ನ ತನು ಧನ ಪ್ರಾಣಗಳನ್ನು ಸದ್ಗುರುಗಳಿಗೆ ಸ
ಮರ್ಪಿಸಬೇಕು ಎಂಬುದಾಗಿ. ॥೨೯೭॥ ಇವು ಮೂರನ್ನೂ ಸಮರ್ಪಿಸಿದರೆ ದೊರೆಯು

ಗ್ಯಂಸ್ಯಾತ್ತತ್ತದ್ದ್ರವ್ಯಮವಂಚಯನ್ | ನಿವೇದ್ಯಗುರವೇಭಕ್ತ್ಯಾತದಾ
ಜ್ಞಾಪಾಲಕೋಭವೇತ್ ||೯೬|| ಕರ್ಮಣಾಮನಸಾವಾಚಾಗುರೂಣಾಂ
ಭಕ್ತಿವತ್ಸಲಃ | ಶರೀರಮರ್ಥಂಪ್ರಾಣಾಂಶ್ಚಸದ್ಗುರುಭ್ಯೋನಿವೇದಯೇ
ತ್ || ೯೭ || ತ್ರಯಾಣಾಮರ್ಪಣೇನೈಷಾಂಕಿಂಲಭ್ಯತಇತಿಸ್ವಯಂ |
ಚೋದ್ಯತೇಚೇದ್ದೇಹದಾನಾತ್ಪ್ರಸಾದಂಪರಿಲಬ್ಧವಾನ್ ||೯೮|| ಪ್ರಾ
ಣಾರ್ಪಣೇನಲಿಂಗಸ್ಯಸಂಬಂಧಂಲಬ್ಧವಾನ್ಪರಂ | ಅರ್ಥಾರ್ಪಣಾಜ್ಜಂಗ
ಮಾನಾಂಸದ್ಭಕ್ತಿಂಲಬ್ಧವಾಂಚ್ಛುಭಾಂ ||೯೯|| ತಥಾನಚೇದ್ಗುರೋಃ
ಕಾಯವಂಚಕಸ್ಯದುರಾತ್ಮನಃ | ಪ್ರಸಾದಸೇವನಾಸೌಖ್ಯಂನಭವತ್ಯೇ
ವಸಂತತಂ || ೨೦೦ || ನಪ್ರಾಣವಂಚಕಸ್ಯಾಸ್ತಿತಲ್ಲಿಂಗೇನಸಹೈಕತಾ|
ತದ್ದ್ವೇಶಿಕಾವತಾರಾಣಾಂಜಂಗಮಾನಾಂಮಹಾತ್ಮನಾಂ || ೨೦೧ || ಪರಿಚ
ರ್ಯಾಫಲಂಚಾರ್ಥವಂಚಕಸ್ಯನಸಿದ್ಧ್ಯತಿ | ಘುಷ್ಯತೇಹ್ಯಯಮೇವಾ
ರ್ಥೋಪುರಾಣೇಶೈವನಾಮನಿ || ೨೦೨ || ಮತ್ಪ್ರಸಾದೋಪಭೋಗೀ
ಯೋಮದ್ಭಕ್ತಾನಾಂಚವಂಚಕಃ | ಕುಂಭೀಪಾಕೇಷುಘೋರೇಷುಪಚ್ಯ
ತೇಸನಸಂಶಯಃ | ಇತಿ || ೨೦೩ || ಅತಏವಾವಂಚಕಸ್ಯಭಕ್ತಸ್ಯೋ

---

ವುದೇನು ? ಎಂದು ಆಕ್ಷೇಪಿಸುವುದಾದರೆ, ಕೇಳಿರಿ—ತನುವನ್ನು ಗುರುವಿಗೆ ಸಮ
ರ್ಪಿಸುವುದರಿಂದ ಆತನ ಅನುಗ್ರಹವನ್ನು ಪಡೆದವನಾಗುತ್ತಾನೆ || ೯೮ || ಪ್ರಾಣವ
ನ್ನು ಲಿಂಗಕ್ಕೆ ಸಮರ್ಪಿಸುವುದರಿಂದ ಉತ್ತಮವಾದ ಲಿಂಗಾಂಗ ಸಾಮರಸ್ಯವನ್ನು
ಹೊಂದುತ್ತಾನೆ. ದ್ರವ್ಯವನ್ನು ಜಂಗಮರಿಗೆ ಸಮರ್ಪಿಸುವುದರಿಂದ ಮಂಗಳಪ್ರದ
ವಾದ ಭಕ್ತಿಯನ್ನು ಪಡೆಯುತ್ತಾನೆ || ೯೯ || ಹಾಗೆ ಗುರುವಿಗೆ ದೇಹವನ್ನರ್ಪಿಸದೆ
ವಂಚಿಸತಕ್ಕ ದುರಾತ್ಮನಿಗೆ ಪ್ರಸಾದ ಸೇವನೆಯಿಂದ ಲಭಿಸತಕ್ಕ ಸೌಖ್ಯವು ಯಾವಾ
ಗಲೂ ದೊರೆಯುವುದೇ ಇಲ್ಲ || ೨೦೦ || ಲಿಂಗಕ್ಕೆ ಪ್ರಾಣವನ್ನು ಕೊಡದೆ ವಂಚಿಸು
ವವನಿಗೆ ಆ ಲಿಂಗದ ಐಕ್ಯವು ಸಮನಿಸುವುದಿಲ್ಲ. ಮಹಾತ್ಮರಾದ ಜಂಗಮರಿಗೆ ದ್ರವ್ಯ
ವನ್ನು ಕೊಡದೆ ವಂಚಿಸುವವರಿಗೆ ಅವರ ಸೇವಾಲಭ್ಯವಾದ ಭಕ್ತಿಯು ಸಿದ್ಧಿಸುವುದಿಲ್ಲ.
ಇದೇ ಅಭಿಪ್ರಾಯವು ಶೈವಪುರಾಣದಲ್ಲಿ ಹೇಳಲ್ಪಟ್ಟಿದೆ ||೨೦೨|| ಹೇಗೆಂದರೆ—ನನ್ನ
ಪ್ರಸಾದವನ್ನು ಸೇವಿಸುವ ಯಾವನು ನನ್ನ ಭಕ್ತರಿಗೆ ವಂಚನೆಯನ್ನು ಮಾಡುತ್ತಾ
ನೋ ಅವನು ಭೀಕರವಾದ ಕುಂಭೀ ಪಾಕನರಕಗಳಲ್ಲಿ ಬೇಯುತ್ತಾನೆ, ಸಂಶಯವಿ
ಲ್ಲ ಎಂಬುದಾಗಿ ||೨೦೩|| ಈ ಕಾರಣದಿಂದಲೇ ಮೇಲೆ ಹೇಳಿದ ಪ್ರಕಾರವಾಗಿ ವಂಚಿ
ಸದೆ ಸಮರ್ಪಣೆ ಮಾಡುವ ಭಕ್ತನಿಗೆ ಯಾವಾಗಲೂ ದುರ್ಗತಿಯು ಲಭಿಸುವುದೇಇಲ್ಲ;
ಇದಕ್ಕೆ ಸಂದೇಹವೇ ಇಲ್ಲ. || ೨೦೪ || ಈ ವಿಷಯದಲ್ಲಿ ಮಹನೀಯರ ವಚನವನ್ನು
ದೃಷ್ಟಾಂತವಾಗಿ ಹೇಳುತ್ತೇನೆ:—ತತ್ಕಾಲದಲ್ಲಿ ದೊರೆದಹಣವು ಹೆರರಿಗೆ ಉಪಕಾರ

ಕ್ತಿಪ್ರಕಾಶತಃ । ಕದಾಚಿದಪಿದೌರ್ಗತ್ಯಂನಾಯಾತಿನಹಿಸಂಶಯಃ ॥ ಅಭಿಯುಕ್ತವಚೋಽಪ್ಯತ್ರದೃಷ್ಟಾಂತತ್ವೇನಕಥ್ಯತೇ । ನೋಪಕರ್ತುಸ್ಥಿತಂದ್ರವ್ಯಂಕಿಂತುತತ್ಕಾಲಸಂಭವಂ ॥ ೩೦೫ ॥ ಕಿಮಸ್ತಿತಾಲವೃಂತಸ್ಯಮಂದಮಾರುತಸಂಗ್ರಹಃ । ತಸ್ಮಾದ್ಧೇತೋಸ್ಸದಾಕಾರ್ಯಾಭಕ್ತಿಸ್ತ್ರಿವಿಧಾತ್ಮಿಕಾ ॥ ೩೦೬ ॥ ಅಮಂಚಕತಯಾಭಕ್ತೈಸ್ಸಂಸಾರವಿಜಿಗೀಷುಭಿಃ । ಸ್ಪರ್ಶಾದಪ್ಯಧಿಕಂಮನ್ಯೇಗುರುಪಾದಸರೋರುಹಂ ॥ ಸ್ಪರ್ಶಂನಕುರುತೇಸ್ಪರ್ಶಂಗುರೋರಾತ್ಮಸಮಂಹಿತತ್ । ಲೌಕಿಕಾನಾಂತಥಾನ್ಯೇಷಾಮಪಿಮುಕ್ತಿರ್ನವಿದ್ಯತೇ ॥ ೩೦೭ ॥ ಪಾಷಂಡಿನೋಽಪಿಮುಚ್ಯಂತೆಗುರೋಶ್ಶೈವಪ್ರಸಾದತಃ । ಅಥಸಿದ್ಧಪ್ರಸಾದೋಯಮಾಗಮೋಕ್ತಃಪ್ರಕಾಶ್ಯತೆ ॥ ೩೦೮ ॥ ಯದ್ವಚೋಽಸ್ತಿಯಜುಷ್ಯೈಲಬ್ರಧಾಯವ್ಯಧಇತ್ಯದಃ । ಸಿದ್ಧಾಖ್ಯಸ್ಯಪ್ರಸಾದಸ್ಯಭೋಜ್ಯತ್ವೇಮಾನಮುಚ್ಯತೆ ॥ ೩೧೦ ॥ ಅಸ್ಯಾರ್ಥಃಕಥ್ಯತೇಽಸ್ಮಾಭಿರ್ವೇದಭಾಷ್ಯಾನುಸಾರತಃ। ಇಲೇತ್ಯನ್ನಂಕಥ್ಯತೇಽಸ್ಯಸಂಘಃಐಲಮುದೀರ್ಯತೇ ॥೩೧೧॥ ದೇಯಂತದಿರಾಭಕ್ತೆಭ್ಯೋಯೇಬಿಭ್ರತ್ಯತದಿವತೆ । ಉಕ್ತಾಐಲಭೃತೋ

---

ಮಾಡುವವನಿಗೆ ಇರುವುದಲ್ಲವೆ ? " ಬಚ್ಚಣಿಗೆಯು ಹೆರರಿಗೆ ಬೀಸಿ ಉಪಕರಿಸಬಲ್ಲುದಲ್ಲದೆ ಮಂದಮಾರುತವನ್ನು ತಾನು ಸಂಗ್ರಹಿಸಿರುವುದೆ ? ಅದುಕಾರಣ, ಸಂಸಾರವನ್ನು ಗೆಲ್ಲಬೇಕೆನ್ನುವ ಭಕ್ತರುಗಳು ಯಾವಾಗಲೂ ನಿರ್ವಂಚನೆಯಿಂದ ಮೂರುಪ್ರಕಾರವ ಭಕ್ತಿ ( ಗುರುಲಿಂಗ ಜಂಗಮಭಕ್ತಿ ) ಯನ್ನು ಆಚರಿಸಬೇಕು ॥ ೩೦೬ ॥ ಗುರುಪಾದಕಮಲವನ್ನು ಪರುಸಕ್ಕಿಂತಲೂ ಮಿಗಿಲಾದುದೆಂದು ತಿಳಿಯುತ್ತೇನೆ ॥ ೩೦೭ ॥ ಏಕೆಂದರೆ-ಪರುಸವು ತನ್ನನ್ನು ಸೋಂಕಿದವಸ್ತುವನ್ನು ತನ್ನಂತೆ ಪರುಸವನ್ನಾಗಿಯೇ ಮಾಡಿಕೊಳ್ಳುವುದಿಲ್ಲ. ಗುರುವಿನ ಪಾದಕಮಲವಾದರೋ ತನ್ನನ್ನು ಸೋಂಕಿದವರನ್ನೆಲ್ಲ ಗುರುಸಮಾನರನ್ನಾಗಿಯೇ ಮಾಡುತ್ತದೆ ಲೌಕಿಕರಿಗೂ ಇತರರಿಗೂ ಮುಕ್ತಿಯಿಲ್ಲ ॥ ೩೦೮ ॥ ಆದರೆ ಪಾಷಂಡಿಗಳಾದರೂ ಕೂಡ ಗುರುವಿನ ಅನುಗ್ರಹವನ್ನು ಪಡೆದರೆ ಮುಕ್ತರಾಗುತ್ತಾರೆ. ಇನ್ನು ಆಗಮೋಕ್ತವಾದ ಸಿದ್ಧಪ್ರಸಾದದ ವಿಷಯವು ವಿಸ್ತರಿಸಲ್ಪಡುತ್ತದೆ ॥ ೩೦೯ ॥ ಯಜುರ್ವೇದದಲ್ಲಿ " ಐಲಬೃದಾಯವ್ಯಧಃ " ಎಂದು ಯಾವ ವಚನವಿಧೆಯೋ ಅದು ಸಿದ್ಧಪ್ರಸಾದವನ್ನು ಸೇವ್ಯವೆಂಬುದಾಗಿ ಹೇಳುವುದರಲ್ಲಿ ಪ್ರಮಾಣವು ॥ ೩೧೦ ॥ ಇದಕ್ಕೆ ನಾವು ವೇದಭಾಷ್ಯಾನುಸಾರವಾಗಿ ಅರ್ಥವನ್ನು ಹೇಳುತ್ತೇವೆ. ಇಲ ಶಬ್ದಕ್ಕೆ ಅನ್ನವೆಂದರ್ಥ. ಅನ್ನದ ಸಮೂಹವು ಐಲವೆಂದು ಹೇಳಲ್ಪಡುವುದು, ( ಆ ಅನ್ನದ ಸಮೂಹವು ಭಕ್ತರಿಗೆ ಕೊಡಲ್ಪಡತಕ್ಕದು. ) ಅಂತಹ ಅನ್ನ ಸಮೂಹವನ್ನು ಹೊಂದಿದವರು ( ಐಲಂ-ಬಿಭ್ರತೀತಿ- ) ಐಲಭೃತಃ ಎನ್ನ

ವರ್ಣವ್ಯತ್ಯಯೋನಪದೇಽತ್ರಹಿ ॥ ೩೧೩ ॥ ಭಕಾರಸ್ಯತಕಾರಸ್ಯಬ
ತ್ವಾದತ್ವೇಸಮಾಗತೇ । ಅತೋವಾಕ್ಯವಿದಂಚೈಲಬೃದಾ ಇತಿಹಿಪಠ್ಯತೇ ॥
ಯಾವತ್ಕಿಂಚಿದಪಿದ್ರವ್ಯಂಶಿವಾಯವಿನಿವೇದಿತಂ । ತತ್ಸಮಸ್ತಂವ್ಯೃಧಂ
ತ್ಯಶ್ನಂತೀತಿತೇಯುವ್ಯೃಧಸ್ಸ್ಮೃತಾಃ ॥ ೩೧೪ ॥ ಏವಂಪದಾರ್ಥಃಕಥಿತ
ಸ್ತಾತ್ಪರ್ಯಾರ್ಥೋನಿಗದ್ಯತೇ । ಸರ್ವಭಕ್ತಗಣೈಃಪ್ರೀತ್ಯಾಭುಕ್ತಶಿಷ್ಟಂ
ಪ್ರಸಾದಕಂ ॥ ೩೧೫ ॥ ಗಣಪ್ರಸಾದಿಕಸ್ಸೋಯಂಭುಂಜೀತಸುಖಲೀ
ಲಯಾ । ತತ್ಪ್ರಸಾದಂಸ್ವಯಂಪ್ರಾಜ್ಞೋಹ್ಯನ್ಯಸ್ಮೈನತುದಾಪಯೇ
ತ್ ॥ ೩೧೬ ॥ ನದದ್ಯಾದ್ಗೋಜಲಾದಿಭ್ಯೋದದ್ಯಾಚ್ಚೇನ್ನರಕಂವ್ರ
ಜೇತ್ । ಇತ್ಯುಕ್ತ್ಯಾತತ್ಪ್ರಸಾದಾನ್ನಮತ್ಯಕ್ತ್ವಾಸ್ವಯೇಪಿಕಿಂಚನ ॥
ಸರ್ವಂಪ್ರೀತ್ಯಾಭಕ್ಷಯಂತೋಭಕ್ತಾಯುವ್ಯೃಧಏವತೇ ।ಇತಿ।,, ಯೇರು
ದ್ರಲೋಕಾದವತೀರ್ಯರೂಪಾನ್ಮಾನುಷ್ಯಮಾಶ್ರಿತ್ಯಜಗದ್ಧಿತಾಯ । ಚ
ರಂತಿನಾನಾವಿಧಚಾರುಚೇಷ್ಟಾಸ್ತೇಭ್ಯೋನಮಸ್ತ್ರ್ಯಂಬಕಪೂಜಕೇ
ಭ್ಯಃ ॥ ವ್ಯಾಳಾಕಲ್ಪಾವಿಷಮನಯನಾವಿದ್ರುಮಾತಾಮ್ರಭಾಸೋಜಾ
ಯಾಮಿಶ್ರಾಜಟಿಲಶಿರಸಶ್ಚಂದ್ರಲೇಖಾವತಂಸಾಃ । ನಿತ್ಯಾನಂದಾನಿಯತ

---

ಳ್ಪಡುವರು. ಇಲ್ಲಿ ಭಕಾರಕ್ಕೆ ಬಕಾರವೂ, ತಕಾರಕ್ಕೆ ದಕಾರವೂ ವ್ಯತ್ಯಸ್ತವಾಗಿ
ಛಾಂದಸ ಮರ್ಯಾದೆಯಿಂದ " ಇಲಬೃದಾಃ ,, ಎಂದು ಹೇಳಲ್ಪಟ್ಟಿದೆ ॥೩೧೩॥ ಶಿವನಿಗೆ
ಯಾವ ಸ್ವಲ್ಪವಸ್ತುವನ್ನು ಸಮರ್ಪಿಸಿದರೂ, ಅದೆಲ್ಲವನ್ನೂ ಇವರು ವ್ಯೃಧಂತಿ–ತಿನ್ನು
ತ್ತಾರೆ, ಅದುಕಾರಣ ಅವರು " ಯುವ್ಯೃಧಃ ,, ಎಂದು ಹೇಳಲ್ಪಡುವರು ॥ ೩೧೪ ॥
ಹೀಗೆ ಪದಶಃ ಅರ್ಥವು ಹೇಳಲ್ಪಟ್ಟಿತು. ಇನ್ನು ತಾತ್ಪರ್ಯಾರ್ಥವನ್ನು ಹೇಳುತ್ತೇ
ವೆ. ಸಕಲಭಕ್ತರು ಪ್ರೀತಿಯಿಂದ ಬುಂಜಿಸಿ ಉಳಿದ ಪ್ರಸಾದವನ್ನು ಗಣಪ್ರಸಾದಿಕ
ನಾದವನು ತಾನೇ ಸುಖವಾಗಿಬುಂಜಿಸಬೇಕು, ಇತರರಿಗೆ ಅದನ್ನು ಕೊಡಬಾರದು ।
ಹಸು ನೀರು ಮೊದಲಾದ ಯಾವುದಕ್ಕೂ ಅದನ್ನು ವಿನಿಯೋಗಿಸಬಾರದು. ಒಂದು
ವೇಳೆ ಕೊಟ್ಟರೆ ನರಕವನ್ನೈದುವನು. ಎಂಬ ವಚನವಿರುವುದರಿಂದ ಗಣ ಪ್ರಸಾದಾ
ನ್ನವನ್ನು ಸ್ವಲ್ಪವೂ ಬಿಡದೆ ಯಾರು ಪ್ರೀತಿಯಿಂದ ಭುಂಜಿಸುತ್ತಾರೋ ಅಂತಹ ಭ
ಕ್ತರೇ " ಯುವ್ಯೃಧರು ,, ಎಂಬುದಾಗಿ. " ಯಾವರುದ್ರರು ಲೋಕಹಿತಾರ್ಥವಾಗಿ
ರುದ್ರಲೋಕದಿಂದಿಳಿದು ಮನುಷ್ಯಾವತಾರವನ್ನು ತಾಳಿ, ಭೂಮಿಯಲ್ಲಿ ಮನೋಹರಗ
ಳಾದ ನಾನಾ ವ್ಯಾಪಾರಗಳುಳ್ಳವರಾಗಿರುತ್ತಾರೋ ಅಂತಹ ಶಿವಪೂಜಕರಾದ ಭಕ್ತರಿ
ಗೋಸುಗ ನಮಸ್ಕಾರವು. ಸರ್ಪಾಭರಣವುಳ್ಳವರಾಗಿ, ತ್ರಿನೇತ್ರರಾಗಿ, ಹವಳದಂ
ತೆ ಕೆಂಪಾದ ದೇಹಕಾಂತಿಯುಳ್ಳವರಾಗಿ, ಪತ್ನೀಸಮೇತರಾಗಿ, ಜಡೆಯನ್ನು ಧರಿಸಿದ
ವರಾಗಿ, ಚಂದ್ರಶೇಖರರಾಗಿ ಸದಾನಂದಮಯರಾಗಿ, ನಿಯಮಯುಕ್ತವಾದ ವಿಲಾಸ

ಲಲಿತಾಸ್ಸ್ನಿಗ್ಧಕಲ್ಮಾಷಕಂಠಾದೇವಾರುದ್ರಾಧೃತಪರಶವಸ್ತೇಭವಿಷ್ಯಂ
ತಿಭಕ್ತಾಃ ॥ ,, ತಸ್ಮಾದ್ಭಕ್ತಜನಾಸ್ಸರ್ವೇಸಾಕ್ಷಾದೀಶ್ವರಮೂರ್ತಯಃ ॥
ಅತಃಪ್ರಸಾದೋಭೋಕ್ತವ್ಯೋಭಕ್ತಾನಾಂಚಶಿವಸ್ಯಚ । ಅಸ್ಮಿನ್ನರ್ಥೇ
ಪುರಾಣಾನಾಂಪ್ರಮಾಣವಾಕ್ಯಾನಿವಚ್ಮ್ಯಹಂ ॥ ೩೧೯ ॥ ಶಿವೋಪಭುಕ್ತ
ಸ್ರಗ್ಗಂಧವಸ್ತ್ರಾಲಂಕರಣಾದಿಕಂ। ಅನುಭುಂಗ್ತೇಗಣೋಚ್ಛಿಷ್ಟಂಸೋ
ಪಿಮಾಯಾಂತರಿಷ್ಯತಿ ॥೩೨೦॥ ಲಿಂಗದ್ವಯಪ್ರಸಾದಂಯೋಭುಂಗ್ತೇ
ಶ್ರದ್ಧಯಾನ್ವಿತಃ । ತದೀಯೋಚ್ಛಿಷ್ಟಮಾಸಾದ್ಯಸರ್ವೇಯಾಂತಿಪರಾಂ
ಗತಿಂ ॥ ೩೨೧ ॥ ಚರಾಚರಪ್ರಸಾದಾನ್ನಂಭುಕ್ತಂತಚ್ಛೇಷಧಾರಿಣಾಂ ।
ಚರಾಚರಾಣಾಂಭೂತಾನಾಮಪಿಭುಕ್ತಿರ್ಭವೇತ್ಪ್ರಿಯೇ ॥೩೨೨॥ ಸಕ್ಕೃ
ಲ್ಲಿಂಗಾರ್ಚಕೋಚ್ಛಿಷ್ಟಂಸ್ವದೇಹೇಯಸ್ತುಲೇಪಯೇತ್। ವಜ್ರಕಾಯ
ಸ್ಸಭವತಿಶಿವೇನಸಹಮೋದತೇ ॥ ೩೨೩॥ ತನ್ಮಹಾಭಾರತೇಪ್ರೋಕ್ತ
ಮಾನುಶಾಸಿಕಪರ್ವಣಿ । ದುರ್ವಾಸೋಚ್ಛಿಷ್ಟಲೇಪಸ್ಯಪಾದಬಾಹ್ಯಾಂಗ
ಲೇಪನಾತ್ ॥ ೩೨೪ ॥ ಸಹಸಾವಜ್ರಕಾಯತ್ವಂಪ್ರಾಪ್ತವಾನ್ವಿಷ್ಣು

---

ವುಳ್ಳವರಾಗಿ, ನುಣುಪಾದ ಕರಿಗೊರಲುಳ್ಳವರಾಗಿ, ಕೊಡಲಿಯನ್ನು ಹಿಡಿದವರಾಗಿ
ಇರುವ ರುದ್ರನಾಮಕರಾದ ದೇವತೆಗಳೇ ಭೂಮಿಯಲ್ಲಿ ಭಕ್ತಜನರಾಗುತ್ತಾರೆ ,,
ಎಂದು ಹೇಳಲ್ಪಟ್ಟಿರುವ ವಚನಾನುಸಾರವಾಗಿ ಭಕ್ತಜನರೆಲ್ಲರೂ ಶಿವಸ್ವರೂಪರೇ
॥ ೩೧೯ ॥ ಈ ಕಾರಣದಿಂದ ಶಿವಭಕ್ತರ ಪ್ರಸಾದವೂ ಮತ್ತು ಶಿವನ ಪ್ರಸಾದವೂ
ಕೂಡ ಭುಂಜಿಸಲ್ಪಡಲು ಯೋಗ್ಯವಾದುವು. ಈ ಅಭಿಪ್ರಾಯದಲ್ಲಿ ಪುರಾಣಗಣ ಪ್ರ
ಮಾಣವಚನವನ್ನು ನಾನು ಹೇಳುತ್ತೇನೆ ॥ ೩೧೯ ॥ ಶಿವನು ಉಪಭೋಗಿಸಿದ ಹೂವು
ಗಂಧ ವಸ್ತ್ರ ಆಭರಣ ಮೊದಲಾದವುಗಳನ್ನೂ, ಶಿವಗಣರು ಸೇವಿಸಿ ಮಿಕ್ಕ ಮಾಲ್ಯ
ಗಂಧಾದಿಗಳನ್ನೂ ಕೂಡ ಯಾವನು ಸ್ವೀಕರಿಸುತ್ತಾನೋ ಅವನು ಮಾಯೆಯನ್ನು
ದಾಟುತ್ತಾನೆ ॥ ೩೨೦ ॥ ಲಿಂಗ ಜಂಗಮರ ಪ್ರಸಾದವನ್ನು ಯಾವನು ಶ್ರದ್ಧೆಯಿಂದ
ಭುಂಜಿಸುತ್ತಾನೋ ಅಂಥವನ ಪ್ರಸಾದವನ್ನು ತಿಂದವರೆಲ್ಲರೂ ಉತ್ತಮಗತಿಯನ್ನು
ಪಡೆಯುತ್ತಾರೆ ॥೩೨೧॥ ಎಲೌ ಪಾರ್ವತಿಯೇ ! ಚರಾಚರ ಲಿಂಗಗಳ ಪ್ರಸಾದವನ್ನುಂ
ಡು ದೇಹದಲ್ಲಿ ಧರಿಸಿಕೊಂಡ ಚರಾಚರ ಪ್ರಾಣಿಗಳಿಗೆಲ್ಲ ಸುಖಭೋಜನವು ಲಭಿಸುವು
ದು. ॥ ೩೨೨ ॥ ಲಿಂಗ ಪೂಜಕನ ಪ್ರಸಾದವನ್ನು ಒಂದುಬಾರಿ ಯಾವನು ತನ್ನ ದೇಹ
ದಲ್ಲಿ ಲೇಪಿಸಿಕೊಳ್ಳುತ್ತಾನೋ ಅವನು ವಜ್ರ ದೇಹಿಯಾಗುತ್ತಾನೆ. ಮತ್ತು ಶಿವನೊ
ಡನೆ ಬೆರೆದು ಸಂತೋಷಿಸುತ್ತಾನೆ ॥ ೩೨೩ ॥ ಮತ್ತು ಆ ಮಹಾಭಾರತದಲ್ಲಿ ಆನುಶಾ
ಸನಿಕ ಪರ್ವದೊಳಗೆ ವಿಷ್ಣುವು ದೂರ್ವಾಸ ಮಹರ್ಷಿಯ ಪ್ರಸಾದವನ್ನು ಶರೀರಕ್ಕೆಲ್ಲ ಬ
ಳಿದುಕೊಂಡುದರಿಂದ ವಜ್ರದೇಹತ್ವವನ್ನು ಪಡೆದನೆಂದು ಹೇಳಲ್ಪಟ್ಟಿರುವುದು. ಮುಂ

ರವ್ಯಯಃ । ಮುಂಡಕೋಪನಿಷದ್ಯೇವಮೇವಪ್ರೋಕ್ತಂಪರಿಸ್ಫುಟಂ ॥ ,, ತೇನಸಹಭುಂಜೀತತೇನಸಹಭುಂಜೀತ ॥ ಇತಿ ॥ ಅಥಶುದ್ಧಪ್ರಸಾದೋಽಭಿಕಥ್ಯತೇಽನುಕ್ರಮೇಣಹಿ । ಶಿವಾನುಭುಕ್ತಮಖಿಲಂನಿರ್ಮಾಲ್ಯಮತಿಪಾವನಂ ॥ ೩೬ ॥ ಭೋಜ್ಯಂಧಾರ್ಯಮಿತಿದ್ವೇಧಾಶಿವಾಚಾರ್ಯೈಃಪ್ರಕೀರ್ತ್ಯತೇ । ತತ್ರಭೋಜ್ಯಂಭಕ್ಷ್ಯಲೇಹ್ಯಪೇಯಾದೇರುಪಲಕ್ಷಣಂ ॥ ಧಾರ್ಯಂವಾಸೋವಿಭೂಷಾದೇರುಪಲಕ್ಷಣಮುಚ್ಯತೇ । ತಥಾಸ್ಕಾಂದಪುರಾಣೇಽಪಿಸುವ್ಯಕ್ತಂಪ್ರತಿಪಾದಿತಂ ॥೩೮॥ ನಿರ್ಮಾಲ್ಯಂದ್ವಿವಿಧಂಪ್ರೋಕ್ತಮನ್ನಪಾನಾದಿಭೂಷಣಂ । ಇತಿ । ಶ್ರೀಲೈಂಗ್ಯೇಪ್ಯೇವಮೇವೋಕ್ತಂಪುರಾಣೇಶ್ರುತಿಸಂಮತೇ ॥ ೩೯ ॥ ಫಲಂಪುಷ್ಪಂಸುಗಂಧಂಚವಸ್ತ್ರಾಣ್ಯಾಭರಣಾನಿಚ।ಲಿಂಗೇಽರ್ಪಯಿತ್ವಾಸ್ವೀಕುರ್ಯಾದನ್ಯಥಾಕಿಲ್ಬಿಷಂಭವೇತ್ ॥೩೦॥ ಭೋಜ್ಯಂಲೇಹ್ಯಂಚಚೋಹ್ಯಂಚಯತ್ಲಿಂಗಾರ್ಪಿತಂಶುಭಂ । ಸೋಚೇಚ್ಛಿಷ್ಟಾನ್ನಮಿಶ್ರಸ್ತುಪ್ರಸಾದೋನಿಷ್ಫಲೋಭವೇತ್ ॥ ೩೧ ॥ ಬಹ್ವಪಿಸ್ತೋಕಮೇವಾಪಿಶಿಷ್ಟಾನ್ನೇನವಿಮಿಶ್ರಿತಂ । ಅನರ್ಪಿತಂಚಭುಂಜಾನಸ್ತದೇವ್ನೋನ್ನತಕಿಲ್ಬಿಷಂ ॥ ೩೨ ॥ ಅಸ್ಮಿನ್ನರ್ಥೇಶ್ರುತಿರಪಿಪ್ರಮಾಣತ್ವೇನಕಥ್ಯತೇ । ,, ನಿರ್ಮಾಲ್ಯಮೇವಭ

---

ಡಕೋಪನಿಷತ್ತಿನಲ್ಲಿ ಕೂಡ '' ತೇನಸಹ ಭುಂಜೀತತೇನ ಸಹಭುಂಜೀತ ,, ಎಂದು ಹೀಗೆಯೇ ಸ್ಪಷ್ಟವಾಗಿ ಹೇಳಲ್ಪಟ್ಟಿರುವುದು ॥ ೩೬ ॥ ಇನ್ನು ಕ್ರಮವಾಗಿ ಶುದ್ಧ ಪ್ರಸಾದದ ವಿಷಯವನ್ನು ಹೇಳುತ್ತೇನೆ. ಶಿವನು ಭುಂಜಿಸಿದ ಅತ್ಯಂತ ಪರಿಶುದ್ಧವಾದ ಸರ್ವ ನಿರ್ಮಾಲ್ಯವನ್ನೂ ಭೋಜ್ಯ ( ಭುಂಜಿಸಲು ಯೋಗ್ಯವಾದುದು, ) ಧಾರ್ಯ ( ಧರಿಸಿಕೊಳ್ಳಲು ಯೋಗ್ಯವಾದುದು ) ಎಂಬ ಎರಡು ಪ್ರಕಾರವಾದುದನ್ನಾಗಿ ಶಿವಾಚಾರ್ಯರುಗಳು ಹೇಳುತ್ತಾರೆ. ಅವುಗಳಲ್ಲಿ ಮೊದಲನೆಯು ಭೋಜ್ಯಕ್ಕೆ ಭಕ್ಷ್ಯ ಲೇಹ್ಯ ಪೇಯಮೊದಲಾದ ಭೇದಗಳೆಲ್ಲ ಸೇರುತ್ತವೆ. ॥ ೩೭ ॥ ಧಾರ್ಯಕ್ಕೆ ವಸ್ತ್ರಾಭರಣಾದಿಗಳೆಲ್ಲ ಸೇರುತ್ತವೆ. ಹಾಗೆಯೇ ಸ್ಕಾಂದಪುರಾಣದಲ್ಲಿಯೂ ಸ್ಪಷ್ಟವಾಗಿ ನಿರ್ಮಾಲ್ಯವು ಅನ್ನಪಾನಾದಿ ರೂಪವಾದುದೆಂತಲೂ, ಆಭರಣಾದಿರೂಪವೆಂತಲೂ, ಎರಡುತರನಾಗಿ ಹೇಳಲ್ಪಟ್ಟಿರುವುದು. ವೇದ ಸಮ್ಮತವಾದ ಲೈಂಗ್ಯಪುರಾಣದಲ್ಲಿಯೂ ಕೂಡ ಹೀಗೆಯೇ ಹೇಳಲ್ಪಟ್ಟದೆ ॥ ೩೯ ॥ ಹೇಗೆಂದರೆ—ಹಣ್ಣು ಹೂವು ಗಂಧ ವಸ್ತ್ರ ಆಭರಣಗಳನ್ನೆಲ್ಲ ಶಿವಲಿಂಗಕ್ಕೆ ಸಮರ್ಪಿಸಿ ಸ್ವೀಕರಿಸಬೇಕು. ಹಾಗಲ್ಲದಿದ್ದರೆ ಪಾಪವುಂಟಾಗುವುದು ॥ ೩೦ ॥ ಭೋಜ್ಯ ಲೇಹ್ಯ ಚೋಷ್ಯವೆಂಬಿವೆಲ್ಲ ಲಿಂಗಾರ್ಪಿತವಾದರೆ ಮಂಗಳಪ್ರದವು. ಹಾಗಲ್ಲದೆ ಪ್ರಸಾದವನ್ನು ಲಿಂಗಾರ್ಪಿತವಲ್ಲದ ಭಾಂಡದಲ್ಲುಳಿದಿರುವ ಅನ್ನದೊಡನೆ ಕೂಡಿಸಿದರೆ ನಿಷ್ಪ್ರಯೋಜಕವಾಗುವುದು ॥ ೩೧ ॥ ಭಾಂಡದಲ್ಲಿ ಮಿಕ್ಕ

ಕ್ಷಯಂತಿನಿರ್ಮಾಲ್ಯಮೇವಾಶ್ನೀಯಾನ್ನಿರ್ಮಾಲ್ಯಮೇವನಿಷೇವೇತ ,, ಇತಿ॥ ಇತಿಶ್ರುತ್ಯಾಗಮಾದೀನಾಂವಚನಾನಾಂಪ್ರಮಾಣತಃ ॥ ೩೩೩ ॥ ಭಾಂಡೆ ಶಿಷ್ಟಾನ್ನಪಾನಾದಿಪದಾರ್ಥನಿಚಯಸ್ಸದಾ । ವರ್ಜನೀಯಸ್ಸಾವಧಾನೈರ್ಭಕ್ತಿಮದ್ಭಿಃಪ್ರಸಾದಿಭಿಃ ॥೩೩೪॥ ಖಾದ್ಯಾನಿಚಾದನೀಯಾನಿಪೇಯಾನ್ಯನ್ನಾನಿಯಾನಿಚ । ದೇಯಾನಿತಾನಿವೈಶಂಭೋಃರಶ್ನೀಯಾದ್ದಾಸಭಾವತಃ॥ ಶ್ರೀಲೈಂಗ್ಯೇಪ್ಯಯಮೇವಾರ್ಥಃಪುರಾಣೇಕಥಿತಶ್ಶುಭೇ।ಭೋಜ್ಯಾಲೇಹ್ಯಾಶ್ಚಚೋಷ್ಯಾಶ್ಚಯೇಚಲಿಂಗಾರ್ಪಿತಾಃಪರೆ ॥೩೩೬॥ ಲಿಂಗೋಚ್ಛಿಷ್ಟಂತುಭುಂಜೀತಪ್ರಸಾದಾಪ್ತಿರುದಾಹೃತಾ । ಇಕ್ಷುದಂಡಫಲಾಪೂಪಖಾದ್ಯಾನಿವ್ಯಂಜನಾನಿಚ ॥ ೩೩೭ ॥ ಪ್ರಸಾದಮೇವಭೋಕ್ತವ್ಯಮನ್ಯದ್ಗೋಮಾಂಸವಿಟ್ಸಮಂ । ಇಕ್ಷೂರಂಭಾಫಲಾದೀನಿಖಂಡಿತಾನಿನಿವೇದಯೇತ್ ॥ ೩೩೮ ॥ ದ್ರಾಕ್ಷಾಖರ್ಜೂರಚೂತಾದೀನ್ಯಖಂಡಾನಿನಿವೇದಯೇತ್ । ಇತಿ । ಇತ್ಯಾದಿಭಕ್ಷ್ಯಪಾನೀಯಭೋಜ್ಯಚೋಷ್ಯಾದಿಕಾನ್ಯಪಿ ॥ ೩೩೯ ॥ ಅನ್ಯಾನಿಸಕಲದ್ರವ್ಯಜಾತಾನಿಚಶಿವಾಯಹಿ । ದತ್ವೈ

---

ಅನ್ನದೊಡನೆ ಮಿಶ್ರವಾದಪ್ರಸಾದವನ್ನೂ, ಶಿವನಿಗೆ ಅರ್ಪಿತವಾಗದಿದ್ದುದನ್ನೂ ಕೂಡ ಹೆಚ್ಚಾಗಿಯಾಗಲಿ ಸ್ವಲ್ಪವಾಗಿಯಾಗಲಿ ಬುಂಜಿಸಿದರೆ ಅದೇ ಮಹಾಪಾಪವೆನಿಸುವುದು ॥ ೩೩೨ ॥ ಈ ವಿಷಯದಲ್ಲಿ ನಿರ್ಮಾಲ್ಯವನ್ನೇ ಬುಂಜಿಸುತ್ತಾರೆ, ನಿರ್ಮಾಲ್ಯವನ್ನೇ ಸೇವಿಸಬೇಕು ಯೆಂಬ ವೇದವಚನವುಕೂಡ ಪ್ರಮಾಣವಾಗಿ ಹೇಳಲ್ಪಡುತ್ತದೆ. ಹೀಗೆ ವೇದಾಗಮ ಮೊದಲಾದುವುಗಳ ವಚನ ಪ್ರಮಾಣವಿರುವುದರಿಂದ, ಭಾಂಡದಲ್ಲುಳಿದಿರುವ ಅನ್ನಪಾನಮೊದಲಾದ ಪದಾರ್ಥಗಳ ಸಮೂಹವನ್ನೆಲ್ಲ ಅರ್ಪಣಾವಧಾನವನ್ನರಿತ ಭಕ್ತಿವಂತರಾದ ಪ್ರಸಾದಿಗಳು ತ್ಯಜಿಸಬೇಕು ॥ ೩೩೪ ॥ ಅಗಿಯುವ, ತಿನ್ನುವ ಕುಡಿಯುವ ಉಣ್ಣುವ ಪದಾರ್ಥಗಳನ್ನೆಲ್ಲ ಶಿವನಿಗೆ ಸಮರ್ಪಿಸಿ, ಬಳಿಕ ಕೈಂಕರ್ಯದಿಂದ ಪ್ರಸಾದವನ್ನು ಸೇವಿಸಬೇಕು ॥ ೩೩೫ ॥ ಮಂಗಳಕರವಾದ ಲೈಂಗ್ಯಪುರಾಣದಲ್ಲೂ ಇದೇ ಅಭಿಪ್ರಾಯವು ಹೇಳಲ್ಪಟ್ಟಿದೆ. ಭೋಜ್ಯ ಲೇಹ್ಯ ಚೋಷ್ಯ ಮೊದಲಾದ ಯಾವ ಪದಾರ್ಥಗಳುಂಟೋ ಅವೆಲ್ಲ ಲಿಂಗಾರ್ಪಿತಗಳಾದ ಬಳಿಕ, ಆ ಲಿಂಗೋಚ್ಛಿಷ್ಟವನ್ನು ಸೇವಿಸಿದರೆ, ಪ್ರಸಾದ ಸಿದ್ಧಿಯಾಗುವುದು. ಕಬ್ಬು ಹಣ್ಣು ಪೂರಿ ಮೊದಲಾದ ಅಗಿಯುವ ವಸ್ತುಗಳನ್ನೂ, ನಂಜುವ ವಸ್ತುಗಳನ್ನೂ ಶಿವಾರ್ಪಿತವಾದುವುಗಳನ್ನೇ ಸೇವಿಸಬೇಕು, ಶಿವಾರ್ಪಿತವಲ್ಲದ ವಸ್ತುವು ಗೋ ಮಾಂಸಕ್ಕೂ ಅಮೇಧ್ಯಕ್ಕೂ ಸಮಾನವಾದುದು. ಕಬ್ಬು ಬಾಳೆಹಣ್ಣು ಮೊದಲಾದುವನ್ನು ತುಂಡುಮಾಡಿಯೇ ನಿವೇದಿಸಬೇಕು ॥ ೩೩೮ ॥ ದ್ರಾಕ್ಷಿ ಖರ್ಜೂರ ಮಾವು ಮೊದಲಾದುವುಗಳನ್ನು ತುಂಡುಮಾಡದೆಯೇ ನಿವೇದಿಸಬಹುದು. ಎಂಬುದಾಗಿ. ಭಕ್ತಿತತ್ಪರರಾದ ಶರಣರು ಭಕ್ಷ್ಯ ಭೊ

ಕವಾರಮೇವಾಥಶರಣೈರ್ಭಕ್ತಿತತ್ಪರೈಃ ॥ ೩೪೦ ॥ ಪ್ರಸಾದಸ್ಯೈವ ಸ್ವೀಕಾರೋ ವೀರಶೈವೋಕ್ತಮಾರ್ಗತಃ । ಆತ್ಮಾಪೇಕ್ಷಾಸಮಿತಾನ್ನಮೇಕದಾಲಿಂಗಭಾಜನೇ ॥ ೩೪೧ ॥ ನಿಕ್ಷಿಪ್ಯಸ್ವೇಷ್ಟಲಿಂಗಾಯ ಕರ್ತುಂ ಯುಕ್ತಂ ಸಮರ್ಪಣಂ । ಇತಿಕೇಚಿದ್ವದಂತ್ಯೇತತ್ತಥಾನಭವತಿ ಧ್ರುವಂ ॥ ಸ್ವಕೀಯಗುರುಲಿಂಗಸ್ಯಾಭ್ಯವಹಾರಮಿತೋದನಂ । ಏಕದೈವ ವಿನಿಕ್ಷಿಪ್ಯ ಲಿಂಗಪಾತ್ರೇ ಶಿವಾಯಹಿ ॥ ೩೪೩ ॥ ಪೃಥಕ್ಪದಾರ್ಥೈರ್ದತ್ತಂ ಚೇನ್ನವಿರೋಧಾಯಕಲ್ಪ್ಯತೇ । ತತ್ತತ್ಪದಾರ್ಥಾರ್ಪಣಸ್ಯ ಭೇದಸ್ಸುವ್ಯಕ್ತಮುಚ್ಯತೇ ॥ ೩೪೪ ॥ ಭಕ್ಷ್ಯಾದ್ಯಾಹಾರಷಟ್ಕಂ ಚ ಪಯೋದಧ್ಯಾದಿಕಾನ್ರಸಾನ್ । ಕಂದಮೂಲಫಲಾದೀನಿ ವಿವಿಧವ್ಯಂಜನಾನಿ ಚ ॥ ೩೪೫ ॥ ಮಂಡಕಾಪೂಪಮುಖ್ಯಾನಿ ಪಕ್ವಾನ್ನಾನಿ ತಥಾ ಪುನಃ । ಅನೇಕಾನ್ನಾನಿ ಮುದ್ಗಾನ್ನಕ್ಷೀರಾನ್ನಾದೀನಿ ಚ ಕ್ರಮಾತ್ ॥ ೩೪೬ ॥ ಅನ್ಯಾಂಶ್ಚ ಷಡ್ರಸೋಪೇತಪದಾರ್ಥನಿವಹಾನಪಿ । ಪದಾರ್ಥಜಾತಾನಿ ಯಥಾಸಂಭವಾನ್ಯುಚಿತಾನಿ ಚ ॥ ಪರಿವೇಷಣಕಾಲೇ ಹಿ ಸ್ವೇಷ್ಟಲಿಂಗಸ್ಯ ಭಾಜನೇ । ತತ್ತತ್ಪದಾರ್ಥನಾಮಾನಿ ಶ್ರುತ್ವಾ ಪಾಚಕವಕ್ತ್ರತಃ ॥ ೩೪೮ ॥ ಕಟುತಿಕ್ತಕಷಾಯಾಮ್ಲಮಧುರಕ್ಷಾರಸಂಯುತೈಃ । ವ್ಯಂಜನೈಸ್ಸಂಮಿಶ್ರಿತೋಪರಸನಾಮಾನಿ ಸಾ

---

ಜ್ಯ ಮೊದಲಾದ ಸಕಲ ದ್ರವ್ಯಗಳನ್ನೂ ಶಿವನಿಗೆ ಒಂದೇ ಆವೃತ್ತಿ ಸಮರ್ಪಿಸಿ, ಬಳಿಕ ಆ ಪ್ರಸಾದವನ್ನೇ ವೀರಶೈವೋಕ್ತ ಮಾರ್ಗಾನುಸಾರವಾಗಿ ಸ್ವೀಕರಿಸಬೇಕು ॥ ೩೪೦ ಒಂದೇ ಆವೃತ್ತಿ ಲಿಂಗಪಾತ್ರೆಯುಲ್ಲಿ ತನಗೆ ಬೇಕಾದಷ್ಟು ಅನ್ನವನ್ನು ಬಡಿಸಿಕೊಂಡು ಶಿವಲಿಂಗಕ್ಕೆ ಸಮರ್ಪಿಸುವುದು ಯುಕ್ತವೆಂಬುದಾಗಿ ಕೆಲವರು ಹೇಳುತ್ತಾರೆ. ಇದು ನಿಜವಾಗಿಯೂ ಹಾಗಾಗುವುದಿಲ್ಲ ॥ ೩೪೨ ॥ ತನ್ನ ಗುರುಲಿಂಗದ ಭೋಜನಕ್ಕೆ ತಕ್ಕಷ್ಟು ಅನ್ನವನ್ನು ಒಂದೇ ಆವೃತ್ತಿ ಲಿಂಗಪಾತ್ರೆಯುಲ್ಲಿ ನೀಡಿಸಿಕೊಂಡು, ಬೇರೆ ಪಾತ್ರೆಯುಲ್ಲಿರುವ ಪದಾರ್ಥಗಳೊಡನೆ ಶಿವನಿಗೆ ಸಮರ್ಪಣೆ ಮಾಡಿದರೂ ಅದು ವಿರುದ್ಧವಾಗುವುದಿಲ್ಲ. ಆಯಾ ಪದಾರ್ಥಗಳನ್ನು ಅರ್ಪಿಸುವ ಭೇದವನ್ನು ಸ್ಪಷ್ಟವಾಗಿ ಹೇಳುತ್ತೇನೆ ॥ ೩೪೪ ॥ ಭಕ್ಷ್ಯ ಮೊದಲಾದ ಆರು ತೆರದ ಆಹಾರಗಳನ್ನೂ, ಹಾಲು ಮೊಸರು ಮೊದಲಾದ ರಸದ್ರವ್ಯಗಳನ್ನೂ, ಗೆಡ್ಡೆ ಗೆಣಸು ಹಣ್ಣು ಮೊದಲಾದುವುಗಳನ್ನೂ, ಹಲವುತೆರದ ನಂಜುವ ಪದಾರ್ಥಗಳನ್ನೂ, ಮಂಡಿಗೆ ಪೂರಿ ಮೊದಲಾದ ಪಕ್ವಾಹಾರಗಳನ್ನೂ, ಚಿತ್ರಾನ್ನ ಕ್ಷೀರಾನ್ನ ಮೊದಲಾದ ಅನ್ನಗಳನ್ನೂ ಇನ್ನೂ ಸ್ವೀಕಾರಯೋಗ್ಯವಾದ ಷಡ್ರಸದ ನಾನಾ ಪದಾರ್ಥಗಳನ್ನೂ ಕೂಡ ತಕ್ಕಷ್ಟನ್ನು, ಲಿಂಗನಿವೇದನ ಪಾತ್ರೆಯುಲ್ಲಿ ಬಡಿಸುವಾಗ ಅಡಿಗೆಯುವನ ಮುಖದಿಂದ ಆಯಾ ಪದಾರ್ಥಗಳ ಹೆಸರನ್ನೂ ಕಾರ, ಕಹಿ, ಒಗರು, ಹುಳಿ, ಸೀ, ಉಪ್ಪು ಎಂಬ ಷಡ್ರಸಗಳಿಂದ ಕೂಡಿದ

ದರಂ ‖ ೩೪೯ ‖ ಸ್ವಶ್ರೋತ್ರೇಂದ್ರಿಯಹಸ್ತಾಭ್ಯಾಂಲಿಂಗಶ್ರೋತ್ರೇಂ
ದ್ರಿಯಾಯಹಿ ‖ ಸಮರ್ಪ್ಯತತ್ತತ್ಪ್ರಸಾದಶಬ್ದಂಸಂಶ್ರೋತುಮರ್ಹತಿ
‖ ೩೫೦ ‖ ತತ್ತತ್ಪದಾರ್ಥಗಂಧಾನುಗತಗಂಧಾನ್ನಿಜೇನತು । ಘ್ರಾಣೇಂ
ದ್ರಿಯಕರೇಣೇಷ್ಟಲಿಂಗಘ್ರಾಣೇಂದ್ರಿಯಸಾಯಚ ‖ ೩೫೧ ‖ ಸಮರ್ಪ್ಯ
ತತ್ತತ್ಪದಾರ್ಥಗಂಧಸೌಖ್ಯಮನಿಂದಿತಂ । ಪ್ರಸಾದೀಸಮ್ಯಗಾಘ್ರಾತು
ಮರ್ಹೋಭವತಿಸರ್ವದಾ ‖ ೩೫೨ ‖ ಸ್ವನೇತ್ರೇಂದ್ರಿಯಹಸ್ತಾಭ್ಯಾ
ಮಿಷ್ಟಲಿಂಗಸ್ಯಚಕ್ಷುಷೇ । ತತ್ತತ್ಪದಾರ್ಥರೂಪಾಣಿಕೃತ್ವಾಸಮ್ಯಕ್ಸ
ಮರ್ಪಣಂ ‖ ೩೫೩ ‖ ತತ್ತತ್ಪ್ರಸಾದರೂಪಾವಲೋಕನಂಕರ್ತುಮ
ರ್ಹತಿ । ಭಾವನಾಸಮಯೇತತ್ತತ್ಪದಾರ್ಥಾನಾಂಶುಭಂಯುನಾ‖೩೫೪‖
ಸ್ವಮಾನಸಕರೇಣೇಷ್ಟಲಿಂಗಸ್ಯಮನಸೇಽನ್ವಹಂ । ಕೃತ್ವಾತತ್ತತ್ಪ
ದಾರ್ಥಾನಾಂಭಾವನಾಸುಖಮರ್ಪಣಂ ‖ ೩೫೫ ‖ ಅನುಭೋಕ್ತುಂಭ
ವತ್ಯರ್ಹಃಪ್ರಸಾದೀವಿಜಿತೇಂದ್ರಿಯಃ । ತತ್ತತ್ಪದಾರ್ಥಶೀತೋಷ್ಣಮೃ
ದ್ವಾದಿಸ್ಪರ್ಶನಂಸದಾ ‖ ೩೫೬ ‖ ಸ್ವಕರೇಣೇಷ್ಟಲಿಂಗಸ್ಯಕರಾಯವಿನಿ
ವೇದ್ಯಚ । ತತ್ತತ್ಪ್ರಸಾದಸಂಸ್ಪರ್ಶಸುಖಂಸ್ವೀಕರ್ತುಮರ್ಹತಿ‖೩೫೭

---

ಉಪರಸಗಳ ಹೆಸರನ್ನೂ ಕೇಳಿ, ಅವುಗಳನ್ನು ತನ್ನ ಕರ್ಣೇಂದ್ರಿಯ ಮೂಲಕವಾದ ಹಸ್ತದಿಂದ ಲಿಂಗದಕರ್ಣೇಂದ್ರಿಯಕ್ಕೆ ಸಮರ್ಪಿಸಿ, ಬಳಿಕ ಆ ಲಿಂಗ ಪ್ರಸಾದದ ಶಬ್ದ ವನ್ನು ತಾನು ಕೇಳಲರ್ಹನಾಗುತ್ತಾನೆ ‖ ೩೫೦ ‖ ಆಯಾ ಪದಾರ್ಥಗಳ ವಾಸನೆಯ ನ್ನು ತನ್ನ ಘ್ರಾಣೇಂದ್ರಿಯ ಹಸ್ತದಿಂದ ಲಿಂಗದನಾಸಿಕೇಂದ್ರಿಯಕ್ಕೆ ಸಮರ್ಪಿಸಿ, ತ ದ್ಗಂಧ ಪ್ರಸಾದವನ್ನು ತಾನು ಮೂಸುವುದಕ್ಕೆ ಅರ್ಹನಾಗುತ್ತಾನೆ ‖ ೩೫೨ ‖ ಆಯಾ ಪದಾರ್ಥಗಳ ಸ್ವರೂಪವನ್ನು ತನ್ನ ನೇತ್ರೇಂದ್ರಿಯ ಮೂಲಕವಾಗಿ ಇಷ್ಟ ಲಿಂಗದ ನ ಯನೇಂದ್ರಿಯಕ್ಕೆ ಸಮರ್ಪಿಸಿ, ಆ ರೂಪ ಪ್ರಸಾದವನ್ನು ತಾನು ನೋಡುವುದಕ್ಕೆ ಅ ರ್ಹನಾಗುತ್ತಾನೆ ‖೩೫೩‖ ಮಂಗಳಾನ್ವಿತನಾದ ವೀರಶೈವನು ಆಯಾ ಪದಾರ್ಥಗಳನ್ನು ಮನಸ್ಸಿನಲ್ಲಿ ಪರಿಭಾವಿಸುವಕಾಲದಲ್ಲಿ ತನ್ನಮಾನಸ ಹಸ್ತದಿಂದ ಆಭಾವನಾ ಸುಖವ ನ್ನರ್ಪಿಸಿ, ಬಳಿಕ ಆ ಸುಖವನ್ನು ಜಿತೇಂದ್ರಿಯನೂ ಪ್ರಸಾದಿಯೂ ಆದ ತಾನು ಅನು ಭವಿಸುವುದಕ್ಕೆ ಅರ್ಹನಾಗುತ್ತಾನೆ ‖೩೫೫‖ ಆಯಾ ಪದಾರ್ಥದ ಶೀತ ಉಷ್ಣ ಮೃದು ಕಠಿನ ಮೊದಲಾದ ಸ್ಪರ್ಶನಗಳನ್ನು ತನ್ನ ಹಸ್ತದಿಂದ ಲಿಂಗ ಹಸ್ತಕ್ಕೆ ಸಮರ್ಪಿಸಿ ಆ ಸ್ಪರ್ಶ ಸುಖಪ್ರಸಾದವನ್ನು ತಾನು ಸ್ವೀಕರಿಸುವುದಕ್ಕರ್ಹನಾಗುತ್ತಾನೆ‖೩೫೭‖ಆಯಾ ಪದಾರ್ಥಗಳನ್ನರ್ಪಿಸುವಕಾಲದಲ್ಲಿ ಕರ್ಮದಿಂದಲೂ ಮನಸ್ಸಿನಿಂದಲೂ ವಾಕ್ಕಿನಿಂದ ಲೂ ಸಹ ಅರ್ಪಣೆಮಾಡುವುದು ಶುಭಕರವು ‖ ೩೫೮ ‖ ಹಾಗಲ್ಲದಪಕ್ಷದಲ್ಲಿ ಅವನು ಶಿ ವಾನರ್ಪಿತವನ್ನು ಭುಂಜಿಸಿದವನಾಗುತ್ತಾನೆ. ಆ ಪ್ರಸಾದವು ನಿಷ್ಫಲವಾಗುತ್ತದೆ. ಇ

ತೇಷಾಂಶೇಷಾಂಪದಾರ್ಥಾನಾಮರ್ಪಣಾವಸರೇಪುನಃ । ಕರ್ಮಣಾಮನ ಸಾಪಾಚಾತ್ರಿವಿಧೇನಾರ್ಪಿತಂಶುಭಂ ॥ ೩೫೮ ॥ ನೋಚೇದನರ್ಪಿತಂ ಭುಂಕ್ತೇಸಪ್ರಸಾದೋನಿಷ್ಫಲೋಭವೇತ್।ಇತ್ಯಾದಿವಾಕ್ಯಪ್ರಾಮಾಣ್ಯಾ ತ್ಸದ್ವಿದಾತ್ರಿವಿಧಾರ್ಪಣಂ ॥ ೩೫೯ ॥ ಕರ್ತವ್ಯಮೇವಸದ್ಭಕ್ತೈಃತ್ರಸ್ವಾನ ಧಾನ್ಯೈಃಪ್ರಸಾದಿಭಿಃ । ನಿರೂಪ್ಯತೇಸತ್ರಿವಿಧಾರ್ಪಣಭೇದೋಽಪಿತತ್ವತಃ ॥ ೩೬೦ ॥ ಪಂಚಭಕ್ಷ್ಯಾಣಿಚಾನ್ನಾನಿಕಂದಮೂಲಾನಿಕಾನ್ಯಪಿ । ವ್ಯಂಜ ನಾನಿಘೃತಾದೀನಿರಸದ್ರವ್ಯಾಣಿಸರ್ವಶಃ ॥ ೩೬೧ ॥ ಲಿಂಗಭಾಜನಸಂ ಸ್ಥಾನಿಸ್ವಕರೇಣಪುನಃಪುನಃ। ಸಂಸ್ಪರ್ಶಪೂರ್ವಕಂಸ್ವೇಷ್ಟಲಿಂಗಂಪ್ರ ತ್ಯರ್ಪಿತಾನಿಚೇತ್ ॥ ೩೬೨ ॥ ಕರ್ಮಕ್ರಿಯಾಕೃತಂಜ್ಞೇಯಂತದ್ಭವತ್ಯತ್ರನ ಸಂಶಯಃ । ತತ್ತದ್ಭಕ್ಷ್ಯಾದಿವಿವಿಧಪದಾರ್ಥಾಂತರ್ವಿಮಿಶ್ರಿತಾಃ ॥ ೩೬೩॥ ನಾನೋಪರಸಭೇದಾಶ್ಚವ್ಯಂಜನಾನಿಬಹೂನಿಚ। ಪಕ್ವಾನ್ನಾನಿಸಮಸ್ತಾ ನಿತತ್ತತ್ಕಬಳಮಧ್ಯಗಾಃ ॥ ೩೬೪ ॥ ಸಿಕ್ಥವ್ಯೂಹಾಮುದ್ಗಲಾನಿವ್ಯಂ ಜನೈಃಪಿಂಡಿತಾನಿಚ । ಫಲಾಂತರ್ಬೀಜವೃಂತಾಗ್ರತ್ವಗಾದೀನಾಂವಿಧಾನ ತಃ ॥ ೩೬೫ ॥ ಸ್ವೀಕಾರಭೇದಾಶ್ಚತಥಾವಿಸರ್ಜನಭಿದಾಅಪಿ । ದೀಪಿ

---

ವೇ ಮೊದಲಾದ ವಚನಗಳ ಪ್ರಾಮಾಣ್ಯದಿಂದ ಅರ್ಪಣಾವಧಾನಕ್ರಮವನ್ನರಿತ ಸ ದ್ಭಕ್ತರಾದ ಪ್ರಸಾದಿಗಳು ತ್ರಿವಿಧಾರ್ಪಣ ಭಾವಗಳನ್ನು ಮಾಡಬೇಕು ಆ ತ್ರಿವಿಧಾರ್ಪ ಣ ರೀತಿಯೂ ಕೂಡ ಹೇಳಲ್ಪಡುತ್ತಲಿದೆ ॥ ೩೬೦ ॥ ಹೇಗೆಂದರೆ-ಲಿಂಗದ ಬಟ್ಟಲಿನಲ್ಲಿ ನೀಡಿರುವ ಪಂಚಭಕ್ಷ್ಯಗಳನ್ನೂ, ಹಲವುತರದ ಅನ್ನಗಳನ್ನೂ ಗೆಡ್ಡೆ ಗೆಣಸು ಮೊದ ಲಾದುವುಗಳನ್ನೂ, ನಂಜುವಪದಾರ್ಥಗಳನ್ನೂ, ತುಪ್ಪ ಮೊದಲಾದ ರಸದ್ರವ್ಯಗಳ ನ್ನೂ, ಕೂಡ ತನ್ನ ಕೈಯಿಂದ ಮತ್ತೆಮತ್ತೆ ಮುಟ್ಟಿ ತನ್ನ ಇಷ್ಟಲಿಂಗಕ್ಕೆ ಸ ಮರ್ಪಿಸಿದರೆ, ಇದು ಕ್ರಿಯಾರ್ಪಣ ವೆನಿಸಿಕೊಳ್ಳುವುದು ಸಂಶಯವಿಲ್ಲ ॥೩೬೨॥ ಭಕ್ಷ್ಯಮೊದಲಾದ ಆಯಾ ಪದಾರ್ಥಗಳೊಳಗೆ ಮಿಶ್ರವಾಗಿರುವ ನಾನಾ ರಸೋಪ ರಸ ಗಳನ್ನೂ, ಬಹುತರದ ನಂಜುವ ಪದಾರ್ಥಗಳನ್ನೂ, ಎಲ್ಲಾ ತರದ ಪಕ್ವಾಹಾರಗಳ ನ್ನೂ, ಆಯಾ ತುತ್ತುಗಳ ಮಧ್ಯದಲ್ಲಿರುವ ಅಗುಳುಗಳ ಸಮೂಹವನ್ನೂ, ನಂಜುವಪ ದಾರ್ಥಗಳನ್ನೂ, ಹಣ್ಣು ಒಳಬೀಜ, ತೊಟ್ಟು, ಸಿಪ್ಪೆ, ಮೊದಲಾದವುಗಳನ್ನೂ ವಿಧಿ ಪ್ರಕಾರ ಸ್ವೀಕರಿಸುವ ಮತ್ತು ತ್ಯಜಿಸುವ, ಭೇದಗಳನ್ನೂ, ದೀವಿಗೆ ಗಾಳಿ, ಸೂರ್ಯ ಚಂದ್ರರ ಕಿರಣಗಳು, ಬೆಂಕಿ ಬಿಸಿಲು, ಬೆಳ್ದಿಂಗಳು ಇವುಗಳಿಂದ ಕೂಡಿದ ನೆಳಲು ಇವುಗಳನ್ನೂ, ವಾಯು ಸಂಬಂಧವಾದ ಅಗ್ನಿಸಂಬಂಧವಾದ ಭೂ ಸಂಬಂಧವಾದ ಪ ರಮಾಣುಗಳಿಂದ ಕೂಡಿದ ಅವಕಾಶವನ್ನೂ, ಹೊರಗಣ ದೊಡ್ಡ ಗಾಳಿಯಿಂದ ಸಣ್ಣ ಗಾಳಿಯಿಂದ ಸದಾ ಬೀಸಿಬಂದ ಮಿಶ್ರ ಪರಿಮಳವನ್ನೂ, ಮಿಶ್ರ ಪುಷ್ಪ ಫಲಗಳನ್ನೂ,

ಕಾನಿಲಮಾರ್ತ್ತಾಂಡಚಂದ್ರಾತಪವರಪ್ರಭಾಃ ॥ ೩೬೬ ॥ ಛಾಯಾಶ್ಚಾ
ನಲಮಾರ್ತ್ತಾಂಡಚಂದ್ರಾತಪವಿಮಿಶ್ರಿತಾಃ । ವಾಯವ್ಯೈಸ್ತೈಜಸೈಶ್ಚಾ
ನ್ಯೈಃಪಾರ್ಥಿವೈಃಪರಮಾಣುಭಿಃ ॥ ೩೬೭ ॥ ಮಿಶ್ರಾವಕಾಶೋಽಮಿ
ಶ್ರೇಣಮಾರುತೇನತಥೈವಹಿ । ಬಾಹ್ಯೇನಮಾರುತೇನೋಪಮಾರುತೆ
ನಾಪಿಸರ್ವದಾ॥೩೬೮॥ ಮಿಶ್ರಗಂಧೋಮಿಶ್ರಫಲಂಮಿಶ್ರಪುಷ್ಪಂತಥಾಪು
ನಃ । ಮಿಶ್ರಧೂಪಸ್ತದ್ವದೇವಮಿಶ್ರಿತಂಸೌರಭಂಪುನಃ ॥೩೬೯॥ ಧೂಪ
ಧೂಮ್ರೇಣಸಂಮಿಶ್ರಪಾಕೋಬಾಷ್ಪಜಲೇನಹಿ । ಮಿಶ್ರಪಾಕೋಮಿಶ್ರರ
ಸೋಮಿಶ್ರರಾಗೋಮನೋಹರಃ ॥೩೭೦॥ ಮಿಶ್ರರೂಪಂಮಿಶ್ರರುಚಿಮಿ
ತ್ಯಾದ್ಯಾಮಿಶ್ರಿತಾಭಿಧಾಃ । ಲಿಂಗಭೋಗಾನುಸಂಧಾನಪೂರ್ವಂಸರ್ವಮಿ
ದಂಕ್ರಮಾತ್ ॥೩೭೧॥ ಸ್ವೇಷ್ಟಲಿಂಗಾಯಾರ್ಪಿತಂಚೇನ್ಮಾನಸಕ್ರಿಯ
ಯಾರ್ಪಣಂ । ಭವತ್ಯೇವನಸಂದೇಹೋವೀರಶೈವೋಕ್ತಮಾರ್ಗತಃ ॥
೩೭೨॥ ಯಾನಿಶಾಲ್ಯೋದನಾದ್ಯನ್ನಾನ್ಯಪೂಪಾನಿಚಯಾನಿಹಿ । ಪಕ್ವಾ
ನ್ನಾನಿಚಮುದ್ಗಾದಿಸೂಪಾಬಹುವಿಧಾಅಪಿ ॥೩೭೩ ॥ ಮಧ್ಯೇತತ್ತದ್ವ್ಯಂ
ಜನಾನಾಂವಿನಿಕ್ಷಿಪ್ತಂಪ್ರಮಾಣತಃ । ಸಮುದ್ರಲವಣಾದ್ಯಂಯಲ್ಲವಣಂ
ಶರ್ಕರಾದಿಕಂ ॥ ೩೭೪ ॥ ರಸಶ್ಚಮಧುರಕ್ಷಾರೋಮರೀಚಾದಿಸ್ತಥಾಪು
ನಃ । ತಿಂತ್ರಿಣೀರಸಮುಖ್ಯಾಮ್ಲಾಃಕರ್ಪೂರೈಲಾದಿಕಾನಿಚ ॥ ೩೭೫॥
ಸುಗಂಧದ್ರವ್ಯಬೃಂದಾನಿಪುನಃಪಾಕಾನ್ವಿತಾನಿಚ । ವಾಸನಾದ್ರವ್ಯಜಾ
ತಾನಿಪಯೋದಧಿಘೃತಾದಿಕಾಃ ॥ ೩೭೬ ॥ ರಸಾಯಥಾಸಂಭವಾನಿತತ್ತ

---

ಮಿಶ್ರವಾದ ಧೂಪವನ್ನೂ, ಧೂಪದಹೊಗೆಯಿಂದ ಕೂಡಿದ ಅಡಿಗೆಯನ್ನೂ, ನೀರಾವಿ
ಯಿಂದ ಬೆರೆದ ಅಡಿಗೆಯನ್ನೂ, ಮಿಶ್ರವಾದ ರಸಗಳ ಮಿಶ್ರ ರೂಪನ್ನೂ, ಮಿಶ್ರ ರು
ಚಿಯನ್ನೂ, ಇವು ಮೊದಲಾದ ಮಿಶ್ರ ವಸ್ತುಗಳನ್ನೆಲ್ಲ ಮನಸ್ಸಿನಲ್ಲಿ ಲಿಂಗಭೋಗಾನು
ಸಂಧಾನ ಪೂರ್ವಕವಾಗಿ ಲಿಂಗೋಪ ಭೋಗಗೊಳಿಸಿ ತನ್ನ ಇಷ್ಟಲಿಂಗಕ್ಕೆ ಕ್ರಮವಾಗಿ
ಸಮರ್ಪಿಸಿದರೆ ಇದು ವೀರಶೈವ ಮಾರ್ಗಾನುಸಾರವಾಗಿ ಮಾನಸ ಕ್ರಿಯಾರ್ಪಣವೆನಿಸಿ
ಕೊಳ್ಳುವುದು. ಸಂಶಯವಿಲ್ಲ ॥ ೩೭೨ ॥ ನೆಲ್ಲಕ್ಕಿಯ ಅನ್ನಗಳನ್ನೂ, ಘೃತಪಕ್ವ
ವಾದ ಪೂರಿಗಳನ್ನೂ, ಹೆಸರು ತೊವೆ ಮೊದಲಾದುವುಗಳನ್ನೂ, ಉಪ್ಪಿನಕಾಯಿಮೊ
ದಲಾದ ನಂಜುವ ಪದಾರ್ಥಗಳೊಳಗೆ ತಕ್ಕಳತೆಯಿಂದ ಸೇರಿಸಿದ ಸಮುದ್ರದುಪ್ಪು
ಮೊದಲಾದುಪ್ಪುಗಳನ್ನೂ, ಸಕ್ಕರೆ ಮೊದಲಾದುವುಗಳನ್ನೂ, ಸೀ ಉಪ್ಪು ಕಾರ ಮೊದ
ಲಾದ ರಸಗಳನ್ನೂ, ಹುಣಿಸೆಹಣ್ಣು ಮೊದಲಾದುವುಗಳ ಹುಳಿಯನ್ನೂ, ಅಡಿಗೆಯ
ಪದಾರ್ಥಗಳಲ್ಲಿ ಬೆರೆದ ಪಚ್ಚಕರ್ಪೂರ ಯಾಲಕ್ಕಿ ಮೊದಲಾದ ಸುಗಂಧವಸ್ತುಗಳನ್ನೂ,

ತ್ಕಾಲೋಚಿತಾನಿ ಹಿ। ಫಲಾನಿಯಾನಿಚಾನ್ಯಾನಿದ್ರವ್ಯಜಾತಾನಿತಾನಿಹಿ ॥ ಲಿಂಗಾರ್ಪಿತಾನಿಚೇತ್ತತ್ತನ್ನಾಮೋಚ್ಚಾರಣಪೂರ್ವಕಂ। ತಥಾಕ್ರಿಯಾಕ್ಯ ತಂಕರ್ಮ್ರಭವತ್ಯೇವನಸಂಶಯಃ ॥ ೩೭೮ ॥ ತತ್ರ್ಯನಿಧ್ಯಾರ್ಪಣಾದೂರ್ಧ್ವಂಪ್ರಸಾದಾದಾನಕಾಲತಃ । ರೂಪಂಸಮರ್ಪ್ಯದ್ರವ್ಯಸ್ಯರುಚಿಮಪ್ಯರ್ಪಯೇತ್ತತಃ ॥ ೩೭೯ ॥ ಉಭಯಾರ್ಪಣಹೀನಶ್ಚೇತ್ಪ್ರಸಾದೋನಿಷ್ಫಲೋಭವೇತ್ । ಇತಿವಾಕ್ಯಾತ್ಸ್ವೀಯಜಿಹ್ವೇಂದ್ರಿಯಪಾತ್ರೇಽತಿಪಾವನೇ ॥ ೩೮೦ ॥ ತತ್ತತ್ಪದಾರ್ಥಾಂತರಸ್ಥಾಂರುಚಿಂನಿಕ್ಷಿಪ್ಯಗುತ್ನತಃ ನಾನಸಾಖ್ಯಕರೇಣೇಷ್ಟಲಿಂಗಜಿಹ್ವೇಂದ್ರಿಯಾಯಹಿ ॥ ೩೮೧॥ ದತ್ವಾನುಭವಿತುಂತತ್ತತ್ಪ್ರಸಾದರುಚಿಮರ್ಹತಿ। ಅಯಮರ್ಥೋಽನಿಗದಿತಃಪುರಾಣೇಬ್ರಹ್ಮಸಂಜ್ಞಿಕೇ॥೩೮೨॥ ಮಹೇಶ್ವರಚತುರ್ವಕ್ತ್ರಸಂವಾದೇಪರಮೋನ್ನತೇ । ನೈವೇದ್ಯಂಪುರತೋನ್ಯಸ್ತಂದರ್ಶನಾತ್ಸ್ವೀಕೃತಂಮಯಾ ॥ ೩೮೩ ॥ ರಸಾನ್ಭಕ್ತಸ್ಯಜಿಹ್ವಾಗ್ರಾದಶ್ನಾಮಿಕಮಲೋದ್ಭವ। ಇತ್ಯುಕ್ತೇಶ್ಶಿವಲಿಂಗೈಕನಿಷ್ಠೈರ್ವೀರವ್ರತಾನ್ವಿತೈಃ ॥ ೩೮೪ ॥ ಶಿವಭಕ್ತೈಸ್ಸ್ವಜಿಹ್ವಾಗ್ರಪ್ರಾಣಲಿಂಗಾಯಕರ್ಮಣಾ । ಮನಸಾವಚಸಾಸಮ್ಯ

---

ಹಾಲು ಮೊಸರು ತುಪ್ಪ ಮೊದಲಾದ ರಸದ್ರವ್ಯಗಳನ್ನೂ, ಆಯಾ ಕಾಲಗಳಲ್ಲಿ ದೊರೆದ ಮತ್ತು ಸ್ವೀಕಾರಯೋಗ್ಯವಾದ ಹಣ್ಣುಗಳನ್ನೂ ಇತರ ದ್ರವ್ಯಗಳು ಇನ್ನಾವುಗಳಾವರೂ ಇದ್ದರೆ ಅವನ್ನೂ ॥ ೩೭೭ ॥ ಅವವುಗಳ ಹೆಸರನ್ನು ಹೇಳುತ್ತ ಇಷ್ಟಲಿಂಗಕ್ಕೆ ಸಮರ್ಪಣೆಯನ್ನು ಮಾಡಿದರೆ, ಇದು ವಾಕ್ಕ್ರಿಯಾರ್ಪಣವೆನಿಸಿ ಕೊಳ್ಳುವುದು ಸಂಶಯವಿಲ್ಲ ॥ ೩೭೮ ॥ ಈ ಮೂರು ತರದ ಅರ್ಪಣವಾದ ಬಳಿಕ ತಾನು ಪ್ರಸಾದವನ್ನು ಸ್ವೀಕರಿಸುವಾಗ ಮೊದಲು ದ್ರವ್ಯದ ರೂಪವನ್ನು ಸಮರ್ಪಿಸಿ, ಅನಂತರ ರುಚಿಯನ್ನರ್ಪಿಸಬೇಕು. ॥ ೩೭೯ ॥ ಈ ಎರಡು ತರದ ಅರ್ಪಣಗಳಾಗದಿದ್ದರೆ ಪ್ರಸಾದವು ನಿರರ್ಥಕವಾಗುವುದು, ಎಂಬ ವಚನ ಪ್ರಮಾಣವಿರುವುದರಿಂದ ತನ್ನ ನಾಲಿಗೆಯೆಂಬ ಅತ್ಯಂತ ಪರಿಶುದ್ಧವಾದ ಪಾತ್ರದಲ್ಲಿ ಆಯಾ ಪದಾರ್ಥನಿಷ್ಠವಾದ ರುಚಿಯನ್ನು ಪ್ರಯತ್ನ ಪೂರ್ವಕವಾಗಿ ನಿಲ್ಲಿಸಿ, ಆ ರುಚಿಯನ್ನು ತನ್ನ ಮನೋಹಸ್ತದಿಂದ ಇಷ್ಟಲಿಂಗದ ಜಿಹ್ವೇಂದ್ರಿಯಕ್ಕೆ ಸಮರ್ಪಿಸಿ, ಲಿಂಗ ಪ್ರಸಾದವಾದ ರುಚಿಯನ್ನು ತಾನು ಸ್ವೀಕರಿಸಲು ಅರ್ಹನಾಗುತ್ತಾನೆ. ಈ ಅಭಿಪ್ರಾಯವು ಬ್ರಹ್ಮ ಪುರಾಣದಲ್ಲಿ ಹೇಳಲ್ಪಟ್ಟಿದೆ. ॥ ೩೮೨ ॥ ಆ ಪುರಾಣದ ಶಿವ ಬ್ರಹ್ಮ ಸಂವಾದದೊಳಗೆ ,, ಎಲೆ ಬ್ರಹ್ಮನೆ ! ಮುಂದುಗಡೆ ಮಡಗಿದ ನೈವೇದ್ಯ ವಸ್ತುವನ್ನು ನೋಡಿದ ಮಾತ್ರದಿಂದ ನಾನು ಸ್ವೀಕರಿಸುವೆನು. ಆ ಪದಾರ್ಥದ ರುಚಿಯನ್ನು ಭಕ್ತರ ನಾಲಿಗೆಯ ತುದಿಯ ಮೂಲಕವಾಗಿ ನಾನು ಸವಿಯುವೆನು ,, ಎಂದು ಶಿವನು ಹೇಳಿರುವುದರಿಂದ ಲಿಂಗೈಕ ನಿಷ್ಠರಾದ ವೀ

ಗರ್ವಣದ್ರವ್ಯಸಂಹತೇಃ ‖ ೩೯೫ ‖ ಅಂತರ್ಗತಾರುಚಿಸ್ಸ್ವೀಯಜಿಹ್ವಾ
ಪೇಕ್ಷಾಂ ಽನಾದರಾತ್ | ಅರ್ಪ್ಯತೇಚೇತ್ತಾಸ್ಶಿವಾಯಾರ್ಪಿತೈವಭವತಿ
ಧ್ರುವಂ ‖ ೩೯೬ ‖ ದರ್ಶನಸ್ಪರ್ಶನಾಘ್ರಾಣೈರ್ನಿಷಿದ್ಧಸ್ಸ್ವೇಸಮಾಗತೇ |
ಪಾಕಕಾಲೇಪರಿಜನೈಸ್ತ್ವಥಾಕೃತಮನೀಹಯಾ ‖ ೩೯೭ ‖ ಮಹಾದೇ
ವಾರ್ಹನೇವಸ್ಯಾದ್ದ್ರವ್ಯಜಾತಂನಸಂಶಯಃ | ತಥಾಸ್ಕಾಂದಪುರಾಣೇ
ಪಿಕಥಿತಂಶಿವಭಾಷಿತೇ ‖ ೩೯೮ ‖ ಸಮಾಘ್ರಾತಂಪರಿಸ್ಪೃಷ್ಟಂಯಥಾ
ಕೃತಮನೀಹಯಾ | ಶಿವಾಯಕಲ್ಪಿತಂವಸ್ತುನಕಿಂಚಿದಪಿದೂಷ್ಯತೇ ‖
ಇತಿತತ್ತ್ವಾರ್ಥೇಷುಸ್ವಾನಪೇಕ್ಷಾರ್ಪಣಕೃತಃ | ತತ್ತದ್ರುಚ್ಯರ್ಪ
ಣಂಶಂಭೋರ್ವಿರೋಧಾಯಭವೇನ್ನಹಿ ‖ ೪೦೦ ‖ ಅರ್ಥೋಯಮೇವ
ಗದಿತಃಶ್ರೀಕ್ರಿಯಾತಿಲಕೇಪಿಚ | ಶುದ್ಧಶೈವಪ್ರಸಾದೇಚಶುಚಿತ್ವಂಯೋ
ನಭಾವಯೇತ್ ‖ ೪೦೧ ‖ ಸೋಪಿಯಾತಿನರೋಘೋರಂನರಕಂಕಾಲ
ಮಕ್ಷಯಂ | ಸುಪ್ರತಿಷ್ಠಿತಲಿಂಗಸ್ಯನಯಥಾಪೂರ್ವಭಾವನಾ ‖ ೪೦೨ ‖

---

ರಶೈವವ್ರತಾಚಾರಿಗಳು ತಮ್ಮ ನಾಲಿಗೆಯು ಮೇಲಿಡಲ್ಪಟ್ಟ ಅರ್ಪಣ ಪದಾರ್ಥಗಳ ರು
ಚಿಯನ್ನು ತಾವು ಆಶಿಸದೆ ಮೊದಲು ಪ್ರಾಣಲಿಂಗಕ್ಕೆ ತಮ್ಮ ಮನೋವಾಕ್ಕುಗಳಿಂದ
ಸಮರ್ಪಿಸಿದರೆ ಅದು ನಿಜವಾಗಿಯೂ ಶಿವಾರ್ಪಿತವಾಗುವುದು ‖ ೩೯೬ ‖ ಅಡಿಗೆಮಾಡು
ವಕಾಲದಲ್ಲಿ ಪರಿಚಾರಕರು ಪದಾರ್ಥಗಳನ್ನು ನೋಡುವುದರಿಂದಲೂ ಮುಟ್ಟುವುದ
ರಿಂದಲೂ ಮೂಸಿನೋಡುವುದರಿಂದಲೂ ಅವುಗಳು ಲಿಂಗಾರ್ಪಣ ಯೋಗ್ಯಗಳಾಗದೆ
ನಿಷಿದ್ಧಗಳಾಗುವುವೆಂದು ತಿಳಿಯಕೂಡದು. ಏಕೆಂದರೆ-ಅವರು ಪದಾರ್ಥಗಳನ್ನು
ತಾವು ತಿನ್ನಬೇಕೆಂಬ ದುರಾಸೆಯಿಂದ ನೋಡಿ ಮುಟ್ಟಿ ಮೂಸಿನೋಡುವುದಿಲ್ಲ. ಅದು
ಕಾರಣ, ಅವುಗಳು ಶಿವಾರ್ಪಣ ಯೋಗ್ಯಗಳೇ ಸರಿ. ಸಂಶಯವಿಲ್ಲ. ಸ್ಕಾಂದಪುರಾಣದ
ಲ್ಲಿಯೂ ಹಾಗೆಯೇ ಶಿವನಿಂದ ಹೇಳಲ್ಪಟ್ಟಿರುವುದು ‖೩೯೮‖ ಹೇಗೆಂದರೆ-ಶಿವನಿಗೋ
ಸುಗ ಮಾಡಲ್ಪಡುವ ಅಡಿಗೆಯನ್ನು ಪರಿಚಾರಕರು ದುರಾಸೆಯಿಲ್ಲದೆ ಮೂಸಿನೋಡಿದ
ರೂ ಮುಟ್ಟಿದರೂ ಅದು ಸ್ವಲ್ಪವೂ ದೂಷ್ಯವಾಗುವುದಿಲ್ಲ. ಎಂಬುದಾಗಿ ‖ ೩೯೯ ‖
ಹೀಗಿರುವುದರಿಂದ ಆಯಾ ಪದಾರ್ಥಗಳಲ್ಲಿರುವ ರುಚಿಗಳನ್ನು ತಾನು ಬಯಸದೆ
ಶಿವನಿಗೆ ಸಮರ್ಪಿಸಿದರೆ ಅದು ವಿರುದ್ಧವಾಗುವುದಿಲ್ಲ ‖ ೪೦೦ ‖ ಇದೇ ಅಭಿಪ್ರಾ
ಯವು ಕ್ರಿಯಾತಿಲಕವೆಂಬ ಗ್ರಂಥದಲ್ಲಿಯೂ ಹೇಳಲ್ಪಟ್ಟಿದೆ. ಶಿವಸಂಬಂಧವಾದ
ಶುದ್ಧ ಪ್ರಸಾದವನ್ನು ಪರಿಶುದ್ಧವಾದುದನ್ನಾಗಿ ಯಾರು ತಿಳಿಯುವುದಿಲ್ಲವೋ, ಅಂತಹ
ಮನುಷ್ಯನು ಅನಂತಕಾಲ ನರಕವನ್ನನುಭವಿಸುತ್ತಾನೆ. ಕ್ರಮವಾಗಿ ಪ್ರತಿಷ್ಠಿಸಲ್ಪ
ಟ್ಟ ಲಿಂಗದಲ್ಲಿ ಪೂರ್ವದ ಶಿಲಾದಿಭಾವನೆಯು ಹೇಗಿಲ್ಲವೋ ಹಾಗೆ ಶಿವ ಪ್ರಸಾದದಲ್ಲಿ
ಪೂರ್ವನಾಮವನ್ನು ಭಾವಿಸಕೂಡದು. ‖ ೪೦೨ ‖ ಹಸುಗಳ ದೇಹದಲ್ಲಿರುವ

ತಥಾಶಿವಪ್ರಸಾದಸ್ಯಪ್ರೋಕ್ಷಣಾಮನಸಂಸ್ಮರೇತ್ । ಗವಾಂಸರ್ಪಿಶ್ಶರೀರ ಸ್ಥಂನಕರೋತ್ಯಾತ್ಮಪೋಷಣಂ ॥ ೩೯೩ ॥ ವಿಕೃತಂಕರ್ಮರಚಿತಂಪು ನಸ್ತಾಸಾಂತುಭೇಷಜಂ । ಏವಮಂತಶ್ಶರೀರಸ್ಥಸ್ಸರ್ಪಿವತ್ಪರಮೇಶ್ವ ರಃ ॥ ೩೯೪ ॥ ವಿನಾಚೋಪಾಸನಾಂದೇವೋನಕರೋತಿಹಿತಂನೃಷು। ಇತ್ಯುಕ್ತ್ಯಾಬಾಹ್ಯಮೇವಾಲಮರ್ಪಣಂತ್ವಿತಿಕೇಚನ ॥ ೩೯೫ ॥ ವ ದಂತ್ಯರ್ಪಣಸದ್ಭಾವಮಜಾನಂತೋಯಥಾರ್ಥತಃ । ಮನಏವಮನು ಷ್ಯಾಣಾಂಕಾರಣಂಬಂಧಮೋಕ್ಷಯೋಃ ॥ ೩೯೬ ॥ ಯಥಾಚಾಲಿಂಗ್ಯ ತೇಪುತ್ರೋನತಥಾಲಿಂಗ್ಯತೇಪತಿಃ । ಇತಿವಾಕ್ಯಪ್ರಮಾಣೇನಪ್ರ್ರ ಷಾಃಕೇಚನಕ್ಷಿತೌ ॥೩೯೭॥ ಅಂತರರ್ಪಣಮೇವಾಲಮಿತಿಶಂಸಂತಿಮೋ ಗತಃ । ಸತಥಾನಭವತ್ಯೇವಲಿಂಗಾರ್ಪಣವಿಧಿಕ್ರಮಃ ॥ ೩೯೮ ॥ ವಾ ಚಾನಿಜ್ಞಾಪನಂತದ್ವನ್ಮನಸಾಭಾವನಂತಥಾ । ಸಮರ್ಪಣಂಚಕ್ರಿಯ ಯಾಪ್ಯೇವಂತ್ರಿಕರಣಾನ್ವಿತಂ ॥ ೩೯೯ ॥ ಶುದ್ಧಂಬಾಹ್ಯಾಭ್ಯಂತರತಃ ಕೃತಮೇವಾರ್ಪಣಂತ್ವಿದಂ । ಮಹಾದೇವಾರ್ಪಣಂಸಾಧುಭವತ್ಯತ್ರನಸಂ ಶಯಃ ॥ ೪೦೦ ॥ ಅಯಮರ್ಥೋಯಜುರ್ವೇದೆಸುವ್ಯಕ್ತಃಪರಿಕೀರ್ತ್ಯ

---

ತುಪ್ಪವು ( ಹಾಲಿನೊಳಗಿರುವುದು ) ಅವುಗಳನ್ನು ಹೇಗೆ ಪೋಷಿಸಲಾರದೋ, ಅದೆ ಹಾಲನ್ನು ಕರೆದು ಬೆಣ್ಣೆಯನ್ನು ತೆಗೆದು ಕಾಸಿ ಇಳಿಸಿದ ತುಪ್ಪವನ್ನು ಹಸುಗಳಿಗೆ ಕು ಡಿಸಿದರೆ, ಆಗ ಅದು ಔಷಧರೂಪವಾಗಿ ಹಸುಗಳನ್ನು ಹೇಗೆ ಪುಷ್ಟಿಗೊಳಿಸುವ ದೋ, ಅದರಂತೆಯೇ ದೇಹಾಂತರ್ವರ್ತಿಯಾದ ಪರಮೇಶ್ವರನು ತನ್ನನ್ನುಪಾಸನೆಮಾ ಡಿವಲ್ಲದೆ ಮನುಷ್ಯರಿಗೆ ಹಿತವನ್ನಾಚರಿಸುವುದಿಲ್ಲ. ಎಂಬ ಪ್ರಮಾಣ ವಚನವಿರುವು ದರಿಂದ ಶಿವನಿಗೆ ಹೊರಗೆ ನೈವೇದ್ಯವನ್ನು ಮಾಡುವುದೇ ಸಾಕೆಂದು ಕೆಲರು ಹೇಳು ತ್ತಾರೆ ॥ ೩೯೫ ॥ ಇವರು ಅರ್ಪಣ ಸದ್ಭಾವಕ್ರಮವನ್ನು ಯಥಾರ್ಥವಾಗಿ ತಿಳಿಯದವರು. ಮನಸ್ಸೇ ಮನುಷ್ಯರ ಬಂಧ ಮೋಕ್ಷಗಳಿಗೆ ಕಾರಣವಾದುದು. ಸ್ತ್ರೀಯು ತನ್ನ ಮಗನನ್ನು ಆಲಂಗಿಸುವಾಗ ಯಾವ ಭಾವದಲ್ಲಿರುವಳೋ ಅಂತಹ ಭಾವದಿಂದಲೇ ತನ್ನ ಪತಿಯನ್ನು ಆಲಿಂಗಿಸುವುದಿಲ್ಲ. ಎಂಬ ಪ್ರಮಾಣವನ್ನನುಸರಿಸಿ ಮತ್ತೆ ಕೆಲರು ಶಿವನಿಗೆ ಅಂತರರ್ಪಣವೇ ಸಾಕೆಂದು ಅಜ್ಞಾನದಿಂದ ನುಡಿಯುತ್ತಾರೆ. ಲಿಂಗಾರ್ಪಣ ವಿಧಿಯುರೀತಿ ಹಾಗೆ ಅಲ್ಲವೇ ಅಲ್ಲ. ॥ ೩೯೮ ॥ ಪದಾರ್ಥಗಳ ಹೆಸರನ್ನು ಬಾಯಿಂದ ಜಜ್ಞಾಪಿಸಬೇಕು. ಮನಸ್ಸಿನಿಂದ ಪರಿಭಾವಿಸಬೇಕು. ಕ್ರಿಯೆಯಿಂದ ಅರ್ಪಿಸಬೇಕು ಹೀಗೆ ತ್ರಿಕರಣ ಪೂರ್ವಕವಾಗಿ ಹೊರಗೂ ಒಳಗೂ ಮಾಡಿದ ಅರ್ಪಣವೇ ಶುದ್ಧವಾ ದುದೂ- ಉತ್ತಮವಾದ ಶಿವಾರ್ಪಿತವೂ ಆಗುವುದು. ಸಂಶಯವಿಲ್ಲ ॥ ೪೦೦ ॥ ಈ ಅ ಭಿಪ್ರಾಯವು ಯಜುರ್ವೇದದಲ್ಲಿ ಸ್ಪಷ್ಟವಾಗಿ ಹೇಳಲ್ಪಡುತ್ತದೆ. ಹೇಗೆಂದರೆ-ಯಾವ

ಶೇ । ,, ಯದ್ಧಿಮನಸಾಧ್ಯಾಯತಿತದ್ವಾಚಾವದತಿತತ್ಕರ್ಮಣಾಕರೋತಿ .,
ಇತಿ । ತಥಾಕಾತ್ಯಾಯನೇಗೃಹ್ಯೇಽಪ್ಯಯಮರ್ಥೋನಿರೂಪಿತಃ ॥ ೪೦೧॥
,, ಪಂಥಾನಂಗಚ್ಛನ್ನಭಿಮಂತ್ರಯತೇನಮೋರುದ್ರಾಯ ಪಥಿಷದೇಸ್ವ
ಸ್ತಿಮಾಸಂಪಾರಯವನಂಗಚ್ಛನ್ನಭಿಮಂತ್ರಯತೇನಮೋರುದ್ರಾಯವನ
ಸದೇಸ್ವಸ್ತಿಮಾಸಂಪಾರಯಅಪೋಗಚ್ಛನ್ನಭಿಮಂತ್ರಯತೇನಮೋರು
ದ್ರಾಯಅಪ್ಸುಷದೇಸ್ವಸ್ತಿಮಾಸಂಪಾರಯತಸ್ಮಾದ್ಯತ್ಕಿಂಚನಕರ್ಮಕು
ರ್ವಂಸ್ತತ್ಸರ್ವಂನಮೋರುದ್ರಾಯೇತ್ಯೇವಂಕುರ್ಯಾತ್ ,, ಇತಿ ॥ ಅಸ್ಯಾ
ರ್ಥಃಕಥ್ಯತೇಸಮ್ಯಕ್ಪೂರ್ವಾಚಾರ್ಯೋಕ್ತಮಾರ್ಗತಃ । ಪಂಥಾನಂಪಾದು
ಕಾಭ್ಯಾಂಚಸಂಯುಕ್ತೋವಾತಥಾಪುನಃ ॥ ೪೦೨ ॥ ಪ್ರಸಾದರಥವಾ
ಜ್ಯಾದಿವಾಹನಾರೂಢಏವವಾ । ಗಚ್ಛಞ್ಜನೋನಮೋರುದ್ರಾಯೇತಿಮಂ
ತ್ರೇಣತತ್ವತಃ ॥ ೪೦೩॥ ಅಭಿಮಂತ್ರಣಪೂರ್ವಂತತ್ಪಥಾಗಮಗಮಾರ್ಪ
ಣಂ । ಕೃತ್ವಾಮಹೇಶಮಾಸ್ವಸ್ತಿಸಂಪಾರಯಜಗದ್ಗುರೋ ॥ ೪೦೪ ॥
ತದ್ಗಮಾಗಮಜಂಸೌಖ್ಯಂಪರಿಪೂರಯಮಾಮಿತಿ । ವಿಜ್ಞಾಪ್ಯತತ್ಪ್ರ
ಸಾದೇನಪ್ರಸಾದಾಧ್ವಸುಗಚ್ಛತಿ ॥ ೪೦೫ ॥ ಪದೇಪದೇಸಮರ್ಪ್ಯೈವಂ
ಪುನರಾಗಚ್ಛತಿಧ್ರುವಂ । ವನಂಗಚ್ಛನ್ನಪಿವನಪ್ರವೇಶೇನಿರ್ಗಮೇಽಪಿಚ॥
ತದ್ವನಾಂತರ್ಗತಚ್ಛಾಯಾತಪಶೀತೋಷ್ಣಜಂಸುಖಂ । ಅಂಕುರೈಃಪಲ್ಲವೈ

---

ದನ್ನು ಮನಸ್ಸಿನಲ್ಲಿ ಯೋಚಿಸುವನೋ, ಅದನ್ನು ವಾಕ್ಕಿನಿಂದ ಹೇಳುತ್ತಾನೆ. ಕಾ
ರ್ಯದಿಂದ ಮಾಡುತ್ತಾನೆ ಎಂಬುದಾಗಿ. ಹಾಗೆಯೇ ಕಾತ್ಯಾಯನ ಗೃಹ್ಯಸೂತ್ರದಲ್ಲಿ
ಯೂ '' ಪಂಥಾನಂ...ಕುರ್ಯಾತ್ ,, ಎಂಬವಚನದಲ್ಲಿ ಹೇಳಲ್ಪಟ್ಟಿದೆ ॥ ೪೦೧ ॥ ಈ
ವಾಕ್ಯದ ಅಭಿಪ್ರಾಯವನ್ನು ಪೂರ್ವಾಚಾರ್ಯರು ಹೇಳಿರುವ ಮಾರ್ಗವನ್ನನುಸರಿಸಿ ನಾವು
ಹೇಳುತ್ತೇವೆ. ಮನುಷ್ಯನು ಹಾವುಗೆಯನ್ನು ಮೆಟ್ಟಿಕೊಂಡೋ ಅಥವಾ ಶಿವಪ್ರಸಾ
ದವಾದ ರಥ ಕುದುರೆ ಮೊದಲಾದ ವಾಹನಗಳನ್ನು ಹತ್ತಿಕೊಂಡೋ " ನಮೋರುದ್ರಾ
ಯ ,, ಎಂಬ ಮಂತ್ರವನ್ನಭಿಮಂತ್ರಿಸುತ್ತ ಮಾರ್ಗಗಾಮಿಯಾಗಿ, ಗಮನಾಗಮನಗ
ಳನ್ನು ಶಿವನಿಗೆ ಸಮರ್ಪಿಸಿ, ಜಗದ್ಗುರುವಾದ ಎಲೈ ಶಿವನೆ ! ನನಗೆ ಮಂಗಳವನ್ನುಂ
ಟು ಮಾಡು ಈ ಹೋಗುಬರುವಿಕೆಗಳಿಂದ ಹುಟ್ಟುವ ಸೌಖ್ಯವನ್ನು ನೀನು ಸ್ವೀಕರಿ
ಸಿ ನನಗದನ್ನು ಅನುಗ್ರಹಿಸು ಎಂದು ವಿಜ್ಞಾಪಿಸಿ. ಆ ಶಿವಪ್ರಸಾದದ ಮಾರ್ಗಗಳಲ್ಲಿ
ತಾನು ನಡೆಯುತ್ತಾನೆ. ॥ ೪೦೫ ॥ ಹಜ್ಜೆ ಹಜ್ಜೆಗೂ ಹೀಗೆ ವನಕ್ಕೆ ಹೋಗು
ವಾಗಲೂ ಬರುವಾಗಲೂ ಕೂಡ ಶಿವಾರ್ಪಣವನ್ನು ಮಾಡಿ ಹೋಗಿಬರುತ್ತಾನೆ॥೪೦೬॥
ಅರಣ್ಯದಲ್ಲಿರುವ ನೆಳಲಿನ ತಂಪಿನಿಂದಾದ ಸೌಖ್ಯವನ್ನೂ, ಬಿಸಿಲಿನಿಂದಾದ ಉಷ್ಣದ
ಸೌಖ್ಯವನ್ನೂ, ಮೊಳಕೆ, ಚಿಗುರು, ಮೊಗ್ಗೆ, ಹೂವು, ಹಣ್ಣು ಇವುಗಳಿಂದ ಕೂಡಿದ

ಸ್ತದ್ವತ್ಕೋರಕೈಃಕುಸುಮೈಃಫಲೈಃ ‖ ೪೦೭ ‖ ಅನ್ವಿತಾನೇಕವೃಕ್ಷಾ ಣಾಮವಲೋಕನಜಂಸುಖಂ । ತತ್ಪತ್ರಪುಷ್ಪಸೌರಭ್ಯಫಲಾನುಭವಜಂ ಸುಖಂ ‖ ೪೦೮ ‖ ಶುಕಕೋಕಪಿಕಕ್ರೌಂಚಮರಾಳಾದಿವಿಹಾಯಸಾಂ। ಮೃದುಮಾಧುರ್ಯಲಲಿತನಿನಾದಶ್ರುತಿಜಂಸುಖಂ ‖ ೪೦೯ ‖ ಅರ್ಪಯಿತ್ವಾ ವನಸದೇವೃಕ್ಷಾಣಾಂಪತಯೇನಮಃ। ಇತ್ಯಾದಿಮಂತ್ರೈರ್ಮಾಸ್ವಸ್ತಿಸಂ ಹಾರಯವನಾಧಿಪ ‖ ೪೧೦ ‖ ತತ್ತತ್ಪ್ರಸಾದಸುಖಮಾಪ್ರೂರಯಾದ್ಯೈತ ನಮಾಮಿತಿ । ವಿಜ್ಞಾಪ್ಯತತ್ತತ್ಪ್ರಸಾದವನಮಧ್ಯೇವಿಲಾಸತಃ ‖೩೧೧‖ ಗಮಾಗಮನಜಂಸೌಖ್ಯಂಭೋಕ್ತುಮರ್ಹೋಭವೇದ್ಧ್ರುವಂ । ನಮೋ ರುದ್ರಾಯೇತಿಮಂತ್ರೇಣಾಭಿಮಂತ್ರಣಪೂರ್ವಕಂ ‖೪೧೨‖ ಜಲಪ್ರವೇ ಶಸಮಯೇಪ್ರಸಾದೀಸಾವಧಾನತಃ । ತತ್ತತ್ಪಾಥಃಪ್ರವೇಶೋತ್ಥಂತನ್ನಿ ರ್ಗಮನಜಂಸುಖಂ ‖ ೪೧೩ ‖ ತತ್ತಚ್ಛೀತೋಷ್ಣಜಸುಖಂಸಮರ್ಪ್ಯಾ ಪ್ಸುಷದೇನಮಃ । ಅಪಾಮಧಿಪತೇಸ್ವಸ್ತಿಮಾಸಂಹಾರಯಶಂಕರ ‖ ತತ್ತತ್ಪ್ರಸಾದಜಂಸೌಖ್ಯಂಸಮಾಪ್ರೂರಯಮಾಮಿತಿ। ವಿಜ್ಞಾಪ್ಯತತ್ತ ತ್ಪ್ರಸಾದಜನ್ಯಂಸ್ವೀಕರ್ತುಮರ್ಹತಿ‖೪೧೪‖ ತಸ್ಮಾತ್ಪ್ರಸಾದೀಯತ್ಕಿಂ

---

ಹಲವು ಮರಗಳನ್ನು ನೋಡುವುದರಿಂದುಂಟಾಗುವ ಸೌಖ್ಯವನ್ನೂ ಆ ಮರಗಳ ಎ ಲೆಗಳನ್ನೂ ಹೂವಿನಪರಿಮಳವನ್ನೂ, ಹಣ್ಣುಗಳನ್ನೂ ಸೇವಿಸುವುದರಿಂದುಂಟಾಗುವ ಸೌಖ್ಯವನ್ನೂ ‖ ೪೦೮ ‖ ಗಿಳಿ ಚಕ್ರವಾಕ ಕೋಗಿಲೆ ನೀರುಕೊಕ್ಕರೆ ಹಂಸ ಮೊದ ಲಾದ ಹಕ್ಕಿಗಳ ಇಂಪಾದ ಮೆಲ್ಲುಲಿಗಳನ್ನು ಕೇಳುವುದರಿಂದುಂಟಾಗುವ ಸೌಖ್ಯವ ನ್ನೂ ಕೂಡ ‖ ೪೦೯ ‖ ವನವಾಸಿಯಾದ ಶಿವನಿಗೆ ನಮಸ್ಕಾರ, ವೃಕ್ಷಾಧಿ ಪತಿಯಾದ ನಿನಗೆ ಮಂಗಳವು. ನನ್ನನ್ನು ಕಡೆಗಾಣಿಸು. ಎಂಬುದು, ಮೊದಲಾದ ಮಂತ್ರಗ ಳಿಂದ ಸಮರ್ಪಿಸಿ, " ನನಗೆ ಮಂಳವನ್ನುಂಟುಮಾಡು, ನಿನ್ನ ಪ್ರಸಾದ ಸುಖವನ್ನು ಪರಿಪೂರಣಮಾಡಿ ಕೊಡು ,, ಎಂದು ವಿಜ್ಞಾಪಿಸಿ, ಆ ಶಿವ ಪ್ರಸಾದವಾದ ವನ ಮಧ್ಯ ದಲ್ಲಿ ಲೀಲೆಯಿಂದ ಸಂಚರಿಸಿ ಆದರಿಂದುಂಟಾದ ಶಿವ ಪ್ರಸಾದ ಸೌಖ್ಯವನ್ನು ತಾನುಅ ನುಭವಿಸಲರ್ಹನಾಗುತ್ತಾನೆ. ಪ್ರಸಾದಿಯಾದವನು ನೀರಿಗಿಳಿಯುವಾಗ " ನಮೋರು ದ್ರಾಯ ,, ಎಂಬ ಮಂತ್ರವನ್ನಭಿಮಂತ್ರಿಸುತ್ತ, ಆ ಜಲ ಪ್ರವೇಶದಿಂದ ಹುಟ್ಟುವ ಶೀತೋಷ್ಣ ಸೌಖ್ಯವನ್ನು ಅವಧಾನ ಪೂರ್ವಕವಾಗಿ " ಜಲವಾಸಿಯಾಗಿರುವ ಶಿವನಿಗೆ ನಮಸ್ಕಾರ ಜಲಾಧಿಪತಿಯಾಗಿರುವ ಶಿವನಿಗೆ ಮಂಗಳವು ,, ಎಂದು ಹೇಳಿ ಸಮರ್ಪಿಸಿ, ನಿನ್ನ ಪ್ರಸಾದಸೌಖ್ಯವನ್ನು ನನಗೆ ಪರಿಪೂರಣಮಾಡು ಎಂದು ಪ್ರಾರ್ಥಿಸಿ, ಅದನ್ನು ಸ್ವೀಕರಿಸಲು ಅರ್ಹನಾಗುತ್ತಾನೆ ‖ ೪೧೪ ‖ ಅದುಕಾರಣ, ಪ್ರಸಾದಿಯಾದವನು ಯಾ ವುದೊಂದು ಕರ್ಮವನ್ನು ಮಾಡುವಾಗಲೂ ' ನಮೋ ರುದ್ರಾಯ ,, ಎಂಬ ಮಂತ್ರ

ಚಿತ್ಕರ್ಮಕುರ್ವನ್ನಿರಂತರಂ । ನಮೋರುದ್ರಾಯೇತಿಮಂತ್ರಪೂರ್ವಂಕು
ರ್ಯಾದವಶ್ಯತಃ॥೪೧೬॥ ಲಿಂಗಾರ್ಪಿತಂಚಸರ್ವತ್ರಬಾಹ್ಯಾಭ್ಯಂತರಮೇವ
ಚ।ರೂಪಂದ್ರವ್ಯಸ್ಯಬಾಹ್ಯೇಷುನೀರೂಪಂಚಾಂತರೇಷುಚ ॥ ಬೃಹತ್ಕಾ
ಲೋತ್ತರೇಗ್ರಂಥೇಪ್ಯೇವಮೇವನಿರೂಪಿತಂ । ಗಚ್ಛನ್ತಿಷ್ಠಂತ್ಸ್ವ
ಪನ್ಜಾಗ್ರದ್ಭುಂಜಾನೋಮೈಥುನೇರತೇ ॥೪೧೮॥ ಯಶ್ಶಿವಾರ್ಪಿತಚೇತ
ಸ್ಕೋಭಕ್ತ್ಯಾವರ್ತ್ತತೇನಾನ್ಯಥಾ । ಸಂಯೋಗೇಷುವಿಯೋಗೇಷುಚಾ
ಣುಮಾತ್ರಸುಖಾನಿಚ ॥೪೧೯॥ ಯಃಕುರ್ಯಾದಿಷ್ಟಲಿಂಗೇತುಸೋವಧಾ
ನೀನಿರಂತರಂ। ವಾತೂಲತಂತ್ರೇಪ್ಯರ್ಥೋಯಂವಿಸ್ತರಾತ್ಪರಿಕೀರ್ತ್ತಿತಃ
॥ ೪೨೦ ॥ ಯಾಯಾಕ್ರಿಯಾವಿಧಾತವ್ಯಾಪ್ರಸ್ತುತಾಜಾಯತೇಪುರಾ ।
ತಾಂತಾಂಕುರ್ಯಾನ್ಮಹಾದೇವಸಮರ್ಪಣಧಿಯಾಸುಧೀಃ ॥ ೪೨೧ ॥ ಉ
ಪಭೋಗಾಯಪುರತೋವಸ್ತುಯದ್ಯದುಪಸ್ಥಿತಂ । ತತ್ತತ್ಸಮರ್ಪ್ಯ
ದೇವಾಯವಿದಧೀತಾತ್ಮಸಾತ್ತತಃ ॥ ೪೨೨ ॥ ಇಂದ್ರಿಯಾವಾಗತಂಕಿಂ
ಚಿದ್ಯತ್ಸುಖಂತಚ್ಛಿವಾರ್ಪಿತಂ । ತತ್ಪ್ರಸಾದೋಪಭೋಕ್ತವ್ಯಸ್ತ್ವಿದಂ

---

ಪುನಶ್ಚರಣ ಪೂರ್ವಕವಾಗಿಯೇ ಅವಶ್ಯವಾಗಿ ಮಾಡಬೇಕು ॥ ೪೧೬ ॥ ಮತ್ತು ಲಿಂ
ಗಾರ್ಪಣ ಮಾಡುವಾಗ ಹೊರಗೆ ದ್ರವ್ಯದ ರೂಪವನ್ನೂ, ಒಳಗೆ ದ್ರವ್ಯದನೀರೂಪವ
ನ್ನೂ ಕೂಡ ಅರ್ಪಿಸಬೇಕು ॥ ೪೧೭ ॥ ಬೃಹತ್ಕಾಲೋತ್ತರವೆಂಬ ಗ್ರಂಥದಲ್ಲಿಯೂ
ಕೂಡ ಹೀಗೆಯೇ ಹೇಳಲ್ಪಟ್ಟಿದೆ. ಹೇಗೆಂದರೆ-ನಡೆಯುವಾಗಲೂ, ಕುಳಿತಿರುವಾಗ
ಲೂ, ಮಲಗಿರವಾಗಲೂ, ಎಚ್ಚರಗೊಂಡಿರುವಾಗಲೂ, ಊಟಮಾಡುವಾಗಲೂ, ರ
ತಿಕ್ರೀಡೆಯಲ್ಲಿರುವಾಗಲೂ, ಯಾವನು ಬೇರೆಕಡೆ ಮನಸ್ಸಿಲ್ಲದೆ ಭಕ್ತಿಯಿಂದ ಶಿವಾರ್ಪಿ
ತವಾದ ಮನಸ್ಸುಳ್ಳವನಾಗಿರುವನೋ, ಯಾವುದೊಂದು ವಸ್ತುವಿನ ಸಂಬಂಧದ ಮ
ತ್ತು ಬಿಡುಗಡೆಯ ಸಮಯಗಳಲ್ಲಿ ಹುಟ್ಟುವ ಯಾವುದೊಂದು ಲೇಶಮಾತ್ರದ ಸೌಖ್ಯ
ವನ್ನೂ ಇಷ್ಟಲಿಂಗಕ್ಕೆ ಸಮರ್ಪಿಸುತ್ತಾನೋ. ಅವನೇ ಅವಧಾನಿಯೆನಿಸಿಕೊಳ್ಳುವನು
ವಾತುಲಾಗಮದಲ್ಲಿಯೂ ಇದೇ ಅಭಿಪ್ರಾಯವು ವಿಸ್ತರವಾಗಿ ಹೇಳಲ್ಪಟ್ಟಿದೆ ॥೪೨೦॥
ಬುದ್ಧಿಶಾಲಿಯು ಯಾವಯಾವ ಕೆಲಸವನ್ನು ತಾನು ಮಾಡಬೇಕಾಗುತ್ತದೋ ಅದನ್ನೆ
ಲ್ಲ ಮುಂದಾಗಿಯೇ ಶಿವನಿಗೆ ಸಮರ್ಪಿಸುವ ಬುದ್ಧಿಯಿಂದ ಆಚರಿಸಬೇಕು ॥ ೪೨೧ ॥
ತಾನು ಭೋಗಿಸುವುದಕ್ಕಾಗಿ ಯಾವಯಾವ ವಸ್ತುವು ತನ್ನ ಮುಂದುಗಡೆಗೆ ಸಿದ್ಧವಾ
ಗಿರುವುದೋ ಅದನ್ನೆಲ್ಲ ಶಿವನಿಗೆ ಸಮರ್ಪಿಸಿ, ಬಳಿಕ ತನ್ನಧೀನ ಮಾಡಿಕೊಳ್ಳಬೇಕು
॥ ೪೨೨ ॥ ಇಂದ್ರಿಯ ಮುಖದಿಂದ ಯಾವುದೊಂದು ಸುಖವು ಪ್ರಾಪ್ತವಾಗುವುದೋ
ಅಂತಹ ಸುಖವನ್ನೆಲ್ಲ ಮುಂದಾಗಿಯೇ ಆ ಆ ಇಂದ್ರಿಯಮುಖದಿಂದ ಶಿವನಿಗೆ ಸಮ
ರ್ಪಿಸಿ, ಅವನ ಪ್ರಸಾದ ಸೌಖ್ಯವನ್ನು ತಾನನುಭವಿಸಬೇಕು. ॥ ೪೨೩ ॥ ಭಕ್ತಿವಂ

ದ್ರಿಯಮುಖೇನತು ॥೪೨೩॥ ಶ್ರೋತ್ರತ್ವಂಗ್ನೇತ್ರರಸನಘ್ರಾಣೇಭ್ಯ
ಉದಿತಾಸ್ತಥಾ । ಶಬ್ದಸ್ಪರ್ಶರೂಪರಸಗಂಧಾಯೇವಿಷಯಾಶ್ಶುಭಾಃ
॥ ೪೨೪ ॥ ತತ್ಸರ್ವಾಣೀಷ್ಟಲಿಂಗಸ್ಯಸಾವಧಾನೇನಚೇತಸಾ । ಆತ್ಮ
ನೋಽನಿಚ್ಛಯಾಸಮ್ಯಕ್ಸಮರ್ಪ್ಯತದನಂತರಂ ॥ ೪೨೫ ॥ ತತ್ಪ್ರಸಾ
ದಸುಖಂಭೋಕ್ತುಮರ್ಹೋಭವತಿಭಕ್ತಿಮಾನ್ । ಕಿಂಚಯೋವಿಷ
ಯೋದೇಯೋಯೇನೇಂದ್ರಿಯಮುಖೇನಸಃ ॥ ೪೨೬ ॥ ವಿಷಯಸ್ತೇ
ನೇಂದ್ರಿಯಮುಖೇನೈವದೇಯೋನಸಂಶಯಃ । ಅಯಮರ್ಥೋವಾ
ತೂಲತಂತ್ರೇಸಮ್ಯಗುದೀರಿತಃ ॥ ೪೨೭ ॥ ಯದಿಂದ್ರಿಯಮುಖಾದ್ದೇ
ಯಂತನಿಂದ್ರಿಯಮುಖಾಚ್ಚರೇತ್ । ಅನ್ಯೇಂದ್ರಿಯೋಪಭುಕ್ತಂಚೇದ
ನರ್ಹಂಭೂಷಣಾದಿವತ್ ॥ ೪೨೮ ॥ ಅಸ್ಮಿನ್ನರ್ಥೇಶ್ರುತಿರಪಿಪ್ರಮಾಣಂ
ವಿದ್ಯತೇಶುಭಾ । „ ರುದ್ರೇಣಾತ್ತಮಶ್ನಂತಿರುದ್ರೇಣಪೀತಂಪಿಬಂತಿರು
ದ್ರೇಣಾಘ್ರಾತಂಜಿಘ್ರಂತಿ ,, ಇತಿ ॥ ತಸ್ಮಾಲ್ಲಿಂಗಸ್ಯಾವಯವಾಃಕಲ್ಪ
ನೀಯಾಃಪ್ರಸಾದಿಭಿಃ ॥ ೪೨೯ ॥ ಉಪಹಾರೇಪಿಕರ್ತವ್ಯಾಪ್ರಸಾದಇತ
ಭಾವನಾ । ಪ್ರಕೀರ್ತಿತೋಽಯಮೇವಾರ್ಥಶ್ಶ್ರೀಕ್ರಿಯಾತಿಲಕೇಶುಭೇ॥

---

ತನು ಶ್ರೋತ್ರಾದಿಂದ್ರಿಯಗಳಿಂದ ಹುಟ್ಟಿದ ಶಬ್ದಾದಿ ವಿಷಯಗಳ ಸೌಖ್ಯವನ್ನು ತಾ
ನು ಮುಂದಾಗಿ ಆಶಿಸದೆ ಅವುಗಳನ್ನೆಲ್ಲ ಇಷ್ಟಲಿಂಗಕ್ಕೆ ಅವಧಾನ ಪೂರ್ವಕವಾದ ಚಿತ್ತ
ದಿಂದ ಅರ್ಪಿಸಿ, ಬಳಿಕ ತಾನು ಆ ಪ್ರಸಾದ ಸೌಖ್ಯವನ್ನನುಭವಿಸುವುದಕ್ಕೆ ಅರ್ಹನಾ
ಗುತ್ತಾನೆ ॥೪೨೫॥ ಮತ್ತು ಯಾವ ಇಂದ್ರಿಯದಿಂದ ಯಾವ ವಿಷಯಸೌಖ್ಯವು ಲಭಿಸು
ವುದೋ ಆ ಇಂದ್ರಿಯ ಮುಖದಿಂದಲೇ ಆ ವಿಷಯವನ್ನು ಶಿವನಿಗೆ ಸಮರ್ಪಿಸಬೇಕು
ಈ ಅಭಿಪ್ರಾಯವು ವಾತುಲಾಗಮದಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ ॥೪೨೭॥ ಹೇಗೆಂದರೆ-
ಯಾವ ಇಂದ್ರಿಯದಿಂದ ಯಾವ ವಿಷಯವನ್ನು ಕೊಡಬೇಕೋ ಆ ಇಂದ್ರಿಯ ಮು
ಖದಿಂದಲೇ ಆ ವಿಷಯವನ್ನು ಸಲ್ಲಿಸಬೇಕು. ಹಾಗಲ್ಲದೆ ಇತರೇಂದ್ರಿಯಗಳಿಂದ ಸ
ಮರ್ಪಿಸಿದರೆ ಒಂದಂಗದ ಆಭರಣವನ್ನು ಮತ್ತೊಂದಂಗಕ್ಕೆ ಇಕ್ಕುವಂತೆ ಅಯೋ
ಗ್ಯವಾಗುವುದು ॥ ೪೨೮ ॥ ಈ ಅರ್ಥದಲ್ಲಿ „ ರುದ್ರೇಣಾತ್ತಂ ,, ಎಂಬ ವೇದವಚನ
ವೂ ಪ್ರಮಾಣವಾಗಿದೆ. ಆದುದರಿಂದ ಪ್ರಸಾದಿಗಳು ವಸ್ತುಸಮರ್ಪಣ ಮಾಡುವಕಾ
ಲದಲ್ಲಿ ಶಿವಲಿಂಗಕ್ಕೆ ಆ ಅವಯವಗಳನ್ನು ಭಾವನಾ ಪೂರ್ವಕವಾಗಿ ಕಲ್ಪಿಸಬೇಕು ॥
೪೨೯ ॥ ಶಿವಾರ್ಪಿತವಾದ ಆಹಾರದಲ್ಲಿಯೂ ಕೂಡ ಪ್ರಸಾದವೆಂಬ ಭಾವನೆಯನ್ನು
ಮಾಡಬೇಕು. ಇದೇ ಅಭಿಪ್ರಾಯವೇ ಕ್ರಿಯಾತಿಲಕವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿ
ದೆ ॥ ೪೩೦ ॥ ಇಲ್ಲದುದರಲ್ಲಿ ಇರುವಿಕೆಯನ್ನು ಕಲ್ಪಿಸಿ, ಸ್ಥಾನವಿಲ್ಲದುದರಲ್ಲಿ ಸ್ಥಾನವ
ನ್ನು ಆಚರಿಸಬೇಕು. ಇವೆರಡನ್ನು ಬಲ್ಲವನೇ ಅರ್ಪಣಾವಧಾನವನ್ನರಿತ ಪ್ರಸಾದಿ

ಅಭಾವೇಭಾವನಾಸಾಧ್ಯೇಹ್ಯಸ್ಥಾನೇಸ್ಥಾನಮಾಚರೇತ್ । ಏತದ್ದ್ರವ್ಯ
ಪರಿಜ್ಞಾನೀಪ್ರಸಾದೀಸಾವಧಾನತಃ॥೪೩೧॥ ಅಯಂಶ್ಲೋಕಃಕರಾದ್ಯಂ
ಗಭಾವನಾಂಲಿಂಗವಿಗ್ರಹೇ । ಪ್ರಸಾದಭಾವನಾಂತದ್ವದುಪಹಾರೇಪಿಶಂಸತಿ
॥ ೪೩೨ ॥ ಕಿಂಚೈವಮೇವಕಥಿತಂತಂತ್ರೇವಾತುಲನಾಮನಿ । ಅಸಮ
ರ್ಪ್ಯಯಮೀಶಾಯವಸ್ತುಕಿಂಚಿತ್ಕದಾಚನ ॥ ೪೩೩ ॥ ಕಥಂಚಿನ್ನೋಪ
ಭುಂಜೀತಶಿವಭಕ್ತಿಪರೋನರಃ । ದೀಪಾಂತಮುಪಚಾರಂಸ್ಯಾನ್ನೈವೇ
ದ್ಯಾಂತಂತುಪೂಜನಂ ॥ ೪೩೪ ॥ ತಸ್ಮಾನ್ನೈವೇದ್ಯಹೀನಂಚೇತ್ಪೂ
ಜಾಲೋಪೋಭವೇತ್ತದಾ । ತತ್ತತ್ಪ್ರಸಾದಭೋಗಾಂತಂನೈವೇದ್ಯಾ
ರ್ಪಣಮುಚ್ಯತ ॥ ೪೩೫ ॥ ಪ್ರಸಾದಾಪಾನಹೀನಂಚೇದರ್ಪಿತಂಚಾಪಿ
ನಿಷ್ಫಲಂ । ವ್ರತೋಪವಾಸನಿಯಮೈರ್ಯೇನಕೇನಾಪಿಹೇತುನಾ ॥
ಪೂಜಾಪ್ರಸಾದಲೋಪಶ್ಚೇನ್ನಾಸಾವಾಪ್ನೋತಿತತ್ಫಲಂ । ಉಪವಾಸಸಹ
ಸ್ರಾಣಿಪ್ರಾಜಾಪತ್ಯಾಯುತಾನಿಚ ॥ ೪೩೬ ॥ ಶಿವಪ್ರಸಾದಸಿಕ್ಥಸ್ಯ
ಕೋಟ್ಯಂಶೇನಾಪಿನೋಸಮಾಃ । ಪ್ರಸಾದಮಹಿಮಾದಿತ್ಯಪುರಾಣೇಪಿ
ಪ್ರದರ್ಶ್ಯತ ॥ ೪೩೭ ॥ ಏಕಏವೇಶ್ವರೋರುದ್ರಸ್ಸರ್ವವೇದೇಷುಗೀ

---

ಯಿಸಿಕೊಳ್ಳುವನು ॥ ೪೩೧ ॥ ಈ ಶ್ಲೋಕವು ಲಿಂಗ ಮೂರ್ತಿಯಲ್ಲಿ ಹಸ್ತಾದ್ಯವಯ
ವಗಳನ್ನು ಭಾವಿಸಿಕೊಳ್ಳಬೇಕೆಂತಲೂ, ಶಿವಾರ್ಪಿತವಾದ ಪದಾರ್ಥಗಳಲ್ಲಿ ಪ್ರಸಾದಭಾ
ವನೆಯನ್ನು ಹೊಂದಬೇಕೆಂತಲೂ ಹೇಳುತ್ತದೆ ॥ ೪೩೨ ॥ ಮತ್ತು ವಾತುಳಾಗಮ
ದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ. ಹೇಗೆಂದರೆ-ಶಿವಭಕ್ತಿ ತತ್ಪರನಾದ ಮನುಷ್ಯ
ನು ಯಾವುದೊಂದು ಸ್ವಲ್ಪವಸ್ತುವನ್ನೂ ಶಿವನಿಗೆ ಸಮರ್ಪಿಸದೆ ಯಾವಾಗಲೂ ಯಾ
ವ ಪ್ರಕಾರದಿಂದಲೂ ಭುಂಜಿಸಬಾರದು ॥ ೪೩೩ ॥ ಉಪಚಾರಗಳಿಗೆಲ್ಲ ದೀಪೋಪಚಾರ
ವೇ ಕೊನೆ, ಪೂಜೆಗೆಲ್ಲ ನೈವೇದ್ಯವೇ ಕೊನೆ. ಆದುದರಿಂದ ನೈವೇದ್ಯವನ್ನು ಮಾ
ಡದೆಬಿಟ್ಟರೆ ಪೂಜೆಯಲ್ಲಿ ಲೋಪವಿದ್ದಂತಾಗುವುದು. ಅಂತಹ ಶಿವಾರ್ಪಿತ ಪ್ರಸಾದ
ವನ್ನು ತಾನು ಸೇವಿಸಿದರೆ ಅದು ನೈವೇದ್ಯಾರ್ಪಣವೆಂದು ಹೇಳಲ್ಪಡುತ್ತದೆ ॥೪೩೫॥
ಶಿವಾರ್ಪಿತವಾದ ಪ್ರಸಾದವನ್ನು ತಾನು ಭುಂಜಿಸದಿದ್ದರೆ, ತಾನು ಶಿವನಿಗೆ ಅರ್ಪಿಸಿದು
ದು ವ್ಯರ್ಥವಾಗುವದು. ವ್ರತ, ಉಪವಾಸ, ನಿಯಮ ಎಂಬ ಯಾವಕಾರಣದಿಂದ
ಲಾದರೂ ಪೂಜೆಯಾದನಂತರ ಶಿವಾರ್ಪಿತಪ್ರಸಾದವನ್ನು ಸೇವಿಸದಿದ್ದರೆ ಆ ಪೂಜಾಫ
ಲವನ್ನು ಈ ಪೂಜಕನು ಹೊಂದುವುದಿಲ್ಲ ॥೪೩೬॥ ಸಾವಿರ ಉಪವಾಸಗಳು, ೧೦
ಸಾವಿರಪ್ರಾಜಾಪತ್ಯ ಕರ್ಮಗಳು ಶಿವಪ್ರಸಾದದ ಒಂದಗುಳಿನ ಕೋಟಿಭಾಗಕ್ಕೂ ಸಮಾ
ನವಾಗಲಾರವು. ಪ್ರಸಾದದ ಮಹತ್ವವು ಆದಿತ್ಯ ಪುರಾಣದಲ್ಲಿಯೂ ತೋರಿಸಲ್ಪಡುತ್ತದೆ.
॥೪೩೭॥ ಎಲೈ ಪಾರ್ವತಿಯೆ ! ರುದ್ರನೊಬ್ಬನೇ ಈಶನವನೆಂದು ಯಾವನು ಸಕಲ

ಯತೇ । ತಸ್ಯಪ್ರಸಾದಲೇಶೇನಮುಕ್ತಿರ್ಭವತಿಶಂಕರಿ ॥ ೪೩೯ ॥ ತಿಲ
ಷೋಡಶಭಾಗಂವಾತೃಣಾಗ್ರಾಂಬುಕಣೋಪಮಂ । ಪಾದೋದಕಪ್ರಸಾ
ದಾನ್ನಸೇವಯಾಮೋಕ್ಷಮಾಪ್ನುಯಾತ್ ॥ ೪೪೦ ॥ ಪಾಂಸವಃಪರ್ವತಾ
ಯಾಂತಿಪಾಂಸೂಯಾಂತಿಚಪರ್ವತಾಃ । ಶಿವಪ್ರಸಾದಯುಕ್ತಾನಾಮಾಜ್ಞಾ
ಯೈವತುಕೇವಲಂ ॥ ೪೪೧ ॥ ಪ್ರಾಣಲಿಂಗಪ್ರಸಾದೀಸ್ಯಾನ್ನೋಪವಾ
ಸಾದಿಕಂ ಚರೇತ್ । ಮೋಹಾದ್ವ್ಯಾಚರೇತ್ತಸ್ಯಪ್ರತ್ಯವಾಯೋಮಹಾ
ನ್ಭವೇತ್ ॥ ೪೪೨ ॥ ಪೂಜಕಾಬಹವಸ್ಸಂತಿಭಕ್ತಾಶ್ಶತಸಹಸ್ರಶಃ ।
ತತ್ರಪ್ರಸಾದಪಾತ್ರಂತು ದ್ವೌವಾತ್ರಯೋನೈವಪಂಚಷಟ್ ॥ ೪೪೩ ॥
ಪ್ರಸಾದಭೋಕ್ತ್ರೂನ್ನಿಂದಂತಿಯೇಜನಾಭಕ್ತಿ ಸಂಯುತಾನ್ । ತೇ
ಯಾಂತಿಪಿತೃಭಿಸ್ಸಾರ್ಧಂನರಕಂನಾತ್ರಸಂಶಯಃ ॥ ೪೪೪ ॥ ಶಿವಪ್ರಸಾ
ದಮಾಹಾತ್ಮ್ಯಂಸಿದ್ಧಕಿನ್ನರಗುಹ್ಯಕಾಃ । ವಿಷ್ಣುಪ್ರಮುಖದೇವಾಶ್ಚ
ತೇನಜಾನಂತಿಕಿನ್ನರಾಃ ॥ ೪೪೫ ॥ ಇತ್ಯಸ್ಮಾದ್ವಚನಾತ್ಸ್ವಲ್ಪಬುದ್ಧಿಭಿ
ರ್ಮನುಜಾಧಮೈಃ । ತಾಮಸೈಃಕರ್ಮಚಂಡಾಲೈಸ್ಸಾಮಾನ್ಯೈಶ್ಶಾಪದೂಷಿ
ತೈಃ ॥ ೪೪೬ ॥ ಶಿವಪ್ರಸಾದಮಹಿಮಾವಿಜ್ಞಾತುಂಶಕ್ಯತೇಕಥಂ । ಶಿವ

---

ವೇದಗಳಲ್ಲೂ ಗಾನ ಮಾಡಲ್ಪಡುತ್ತಾನೋ ಅಂಥ ಶಿವನ ಪ್ರಸಾದದಲ್ಲಿ ಸ್ವಲ್ಪವನ್ನು
ಸೇವಿಸಿದರೂ ಮುಕ್ತಿಯುಂಟಾಗುತ್ತದೆ॥೪೩೯॥ ಶಿವಪಾದೋದಕ ಪ್ರಸಾದಗಳಲ್ಲಿ ಎಳ್ಳಿ
ನ ಹದಿನಾರನೆಯೊಂದುಭಾಗವಷ್ಟನ್ನಾಗಲಿ ಹುಲ್ಲಿನ ಕೊನೆಯಲ್ಲಿ ನಿಂತಿರುವ ನೀರಿನ
ಹನಿಯಷ್ಟನ್ನಾಗಲಿ ಸೇವಿಸಿದರೂ ಮುಕ್ತಿಯನ್ನೈದುತ್ತಾನೆ ॥ ೪೪೦ ॥ ಶಿವಪ್ರಸಾದವ
ನ್ನು ಹೊಂದಿರುವವರು ಅಪ್ಪಣೆ ಮಾಡಿದ ಮಾತ್ರದಿಂದಲೇ ರೇಣುಗಳು ಬೆಟ್ಟದಂತಾ
ಗುತ್ತವೆ. ಬೆಟ್ಟಗಳು ರೇಣುವಿನಂತಾಗುತ್ತವೆ ॥೪೪೧॥ ಪ್ರಾಣಲಿಂಗ ಪ್ರಸಾದಿಯು
ಉಪವಾಸ ಮೊದಲಾದವುಗಳನ್ನು ಮಾಡಕೂಡದು. ಅಜ್ಞಾನದಿಂದೊಂದುವೇಳೆ ಮಾ
ಡಿದರೆ ಮಹಾದೋಷವುಂಟಾಗುವುದು ॥೪೪೨॥ ಶಿವನ ಪೂಜಕರು ಬಹುಮಂದಿ ಇರು
ತ್ತಾರೆ. ಭಕ್ತರು ಸಾವಿರಾರು ಮಂದಿಗಳಿರುತ್ತಾರೆ. ಶಿವಪ್ರಸಾ
ದಕ್ಕೆ ಪಾತ್ರರಾದವರು ಇಬ್ಬರು ಮೂವರಿರಬಹುದು. ಐದಾರು
ಮಂದಿಗಳು ಇಲ್ಲವೇ ಇಲ್ಲ ॥೪೪೩॥ ಶಿವಪ್ರಸಾದವನ್ನು, ಭುಂಜಿಸುವ ಭಕ್ತಿವಂತರನ್ನು
ಯಾರು ದೂಷಿಸುತ್ತಾರೋ ಅವರು ತಮ್ಮತಾಯ್ತಂದೆಗಳೊಡನೆ ನರಕವನ್ನೈದುತ್ತಾ
ರೆ ಸಂಶಯವಿಲ್ಲ ॥೪೪೪॥ ಶಿವಪ್ರಸಾದದ ಮಹಿಮೆಯನ್ನು ಸಿದ್ಧರು ಕಿನ್ನರರು ಗುಹ್ಯ
ಕರು ವಿಷ್ಣು ಮೊದಲಾದ ದೇವತೆಗಳು ಕೂಡ ತಿಳಿಯಲಾರರು. ಇನ್ನು ಮನುಷ್ಯ
ರು ತಿಳಿಯಬಲ್ಲರೆ! ॥೪೪೫॥ ಹೀಗೆಂಬ ಈ ವಚನವಿರುವುದರಿಂದ ಅಲ್ಪಬುದ್ಧಿಗಳಾ
ಗಿಯೂ ನೀಚ ಮನುಷ್ಯರಾಗಿಯೂ ತಾಮಸಾತ್ಮಕರಾಗಿಯೂ ಕರ್ಮತಃ ಚಂಡಾಲ

ಪ್ರಸಾದಸ್ತು ಶಿವಪ್ರಸಾದಾವಿತಿ ವಾಕ್ಯತಃ । ಮಹಾದೇವಪ್ರಸಾದೇನ ನಾನ್ಯೇಷಾಂ ನ ಸಿಧ್ಯತಿ ॥೪೪॥ ಏವಂ ಹಿ ವಿಧಿವಾಕ್ಯಾನಾಂ ನಿಷೇಧವಚಸಾಂ ತಥಾ । ಸರ್ವತ್ರ ಸಮ್ಯಗ್ವಿಷಯವಿಭಾಗೋ ದರ್ಶಿತಸ್ಸ್ಫುಟಂ ॥೪೮॥ ಇತಿ ಶ್ರುತಿಸ್ಮೃತಿಪುರಾಣಾಗಮಾದಿಪ್ರಮಾಣತಃ । ಬ್ರಹ್ಮವಿಷ್ಣ್ವಾದಿಭಿರ್ದೇವೈಸ್ಸೇವಿತತ್ವಾತ್ತಥಾ ಪುನಃ ॥ ೪೯ ॥ ವಸಿಷ್ಠಗೌತಮಭೃಗುಪಾಣಿನ್ಯಾದಿಮುನೀಶ್ವರೈಃ । ನಿಷೇವಿತತ್ವಾಚ್ಛೈವಸ್ಯ ತತ್ಪ್ರಸಾದಃ ಪರೋನ್ನತಃ ॥೫೦॥ ವರ್ಣಾನಾಂ ಬ್ರಾಹ್ಮಣಾದೀನಾಂ ಭೋಗಮೋಕ್ಷಾರ್ಥಿನಾಂ ಸದಾ । ಸೇವ್ಯ ಏವ ಭವತ್ಯಸ್ಮಾತ್ಕಾರಣಾತ್ಪರಮೇಶಿತುಃ ॥ ಪ್ರಸಾದರಹಿತಾಸ್ಸಂತಿ ಯೇ ಕೇಚನ ನರಾಧಮಾಃ । ನ ದರ್ಶನೀಯಾಸ್ತೇ ಶಿಷ್ಟೈರ್ನ ಸಂಭಾಷ್ಯಾಶ್ಚ ವಾತ್ಮಭಿಃ ॥ ೫೨ ॥

ಇತಿ ಶ್ರೀವೀರಶೈವ ಮತಾಚಾರ್ಯಗುರುರಾಜಸ್ಯ ಕೃತೌ ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತೇ ದೀಕ್ಷಾಪ್ರಕರಣೇ ಪ್ರಸಾದಮಾಹಾತ್ಮ್ಯ ಕಥನಂ ನಾಮ ದಶಮೋಽಧ್ಯಾಯಃ.

---

ರಾಗಿಯೂ ಶಾಪವಿಂತ ನಿರ್ದ್ಧಾರಿಯೂ ಇರುವ ಸಾಮಾನ್ಯರಿಂದ ಶಿವಪ್ರಸಾದದ ಮಹತ್ವವು ತಿಳಿಯುವಡಕ್ಕೆ ಹೇಗೆ ಶಕ್ಯವಾದೀತು ! ॥೪೬॥ ಶಿವಾನುಗ್ರಹದಿಂದಲೇ ಶಿವಪ್ರಸಾದವು ಲಭಿಸಬೇಕೆಂದು ವಚನ ವಿರುವುದರಿಂದ ಅದು ಪರಶಿವನ ಅನುಗ್ರಹವಿಲ್ಲದವರಿಗೆ ಸಿದ್ಧಿಸುವುದಿಲ್ಲ ॥೪೭॥ ಹೀಗೆ ವಿಧಿವಚನಗಳಿಗೂ ನಿಷೇಧವಚನಗಳಿಗೂ ಎಲ್ಲಾ ಕಡೆಯೂ ಚನ್ನಾಗಿ ವಿಷಯ ವಿಭಾಗವನ್ನು ಮಾಡಿ ತೋರಿಸಿರುವೆವು. ಇದುವರೆಗೆ ಹೇಳಿದಂತೆ ವೇದಶಾಸ್ತ್ರ ಪುರಾಣಾಗಮಾದಿಗಳ ಪ್ರಮಾಣ ವಿರುವುದರಿಂದಲೂ, ಬ್ರಹ್ಮವಿಷ್ಣು ಮೊದಲಾದದೇವತೆಗಳೆಲ್ಲರೂ ಶಿವಪ್ರಸಾದವನ್ನು ಸೇವಿಸಿರುವುದರಿಂದಲೂ, ವಸಿಷ್ಠ ಗೌತಮ ಭೃಗು ಪಾಣಿನಿಮೊದಲಾದ ಋಷೀಶ್ವರರೆಲ್ಲರೂ ಅದನ್ನು ಸೇವಿಸಿರುವುದರಿಂದಲೂ ಶಿವಪ್ರಸಾದವು ಅತ್ಯುತ್ಕೃಷ್ಟವಾದುದು॥೫೦॥ಭುಕ್ತಿ,ಮುಕ್ತಿಗಳನ್ನು ಅಪೇಕ್ಷಿಸುವ ಬ್ರಾಹ್ಮಣಾದಿ ಚತುರ್ವರ್ಣದವರಿಗೂ ಆ ಶಿವಪ್ರಸಾದವು ಸೇವಿಸಲು ಯೋಗ್ಯವಾದುದು. ಈ ಕಾರಣದಿಂದ ಶಿವಪ್ರಸಾದವನ್ನು ಯಾರು ಸ್ವೀಕರಿಸುವುದಿಲ್ಲವೋ ಅಂಥ ಅಧಮ ಮನುಷ್ಯರನ್ನು ಶಿವಸ್ವರೂಪರಾದ ಸತ್ಪುರುಷರು ನೋಡಲುಕೂಡದು ಮಾತನಾಡಿಸಲು ಕೂಡದು ॥೫೨॥

ಎಂಬಲ್ಲಿಗೆ ಶ್ರೀಮತ್ಪಂಡಿತಾರಾಧ್ಯ ಚರಿತ್ರಕ್ಕೆ ಎಮ್. ಆರ್. ಕರಿಬಸವಶಾಸ್ತ್ರಿ ರಚಿತವಾದ " ಭಾವಮಂಜರಿ ,, ಎಂಬ ಕನ್ನಡ ಟಿಪ್ಪಣಿದಲ್ಲಿ ಪ್ರಸಾದಮಹಿಮೆಯನ್ನು ವರ್ಣಿಸಿರುವ ಹತ್ತನೆಯ ಅಧ್ಯಾಯವು

## ಏಕಾದಶೋಽಧ್ಯಾಯಃ.

---

### ( ಘಂಟಾಕರ್ಣಚರಿತಂ ).

ಘಂಟಾಕರ್ಣ ಇತಿಖ್ಯಾತಕೀರ್ತಿಃಪ್ರಮಥಪುಂಗವಃ ।ಸಾಕ್ಷಾನ್ಮಹಾದೇವಮೂರ್ತಿರಾಸೀಪ್ರಾಜ್ಞಾನನಿಧಿಃಪುರಾ ॥ ೧ ॥ ಸಕದಾಚಿತ್ಸ್ವೇಷ್ಟಲಿಂಗನಿರ್ಮಾಲ್ಯಕುಸುಮಾನ್ವಿತಂ । ಮಕರಂದಮಾಕೃಷ್ಟವತಿಸೂರ್ಯೇ ದೃಷ್ಟ್ವೇದಮಬ್ರವೀತ್ ॥ ೨ ॥ ನಿರ್ಮಾಲ್ಯಂಧರ್ತುಮರ್ಹಃಕಿಂಭವದಂಗೀಕೃತಂರವೇ । ಅಣುರೇಣ್ವನಲಾರ್ಕೇಂದುಜಲವಾತಾದಿದೂಷಿತಂ ॥ ೩ ॥ ಶಿವಪ್ರಸಾದಂಸದ್ಭಕ್ತಾಃಭುಂಜತೇಕಿಂಮಹೌಜಸಃ । ಅನರ್ಹಂಚೈವೇತಿ ಶಿವಾಗಮೇಷುಪರಿಶಂಸಿಷು ॥ ೪ ॥ಮತ್ಪ್ರಾಣಲಿಂಗನಿರ್ಮಾಲ್ಯಕುಸುಮಾನ್ವಿತಯಾರವೇ । ದೃಷ್ಟಂಸ್ಪೃಷ್ಟಂರಸೋಽಸ್ತೀಷಾಮೋಕುಷ್ಟಂ ಯುಜ್ಯತೇಕಥಂ ॥ ೫ ॥ ಅಮೋಘಂಕುಷ್ಠರೋಗಾರ್ತೋಭವೇತ್ಯಾಶುಶಶಾಪತಂ । ಮಾರ್ತಾಂಡಭಾನೋಃಕುಷ್ಠಂಚೇತ್ಯಾಗಮೋಕ್ತ್ಯಾಸಭಾಸ್ಕರಃ ॥ ೬ ॥ ಕುಷ್ಠಂಪ್ರಾಪ್ಯಭಯಾಕ್ರಾಂತಸ್ಸಾಷ್ಟಾಂಗಂಪ್ರಣಿಪ

---

ಮುಗಿದುದು.

---

### ಹನ್ನೊಂದನೆಯ ಅಧ್ಯಾಯವು.

### ( ಘಂಟಾಕರ್ಣ ಚರಿತ್ರವು ).

ಇನ್ನು ಶ್ರೀಮತ್ಪಂಡಿತಾಚಾರ್ಯರು ಶಿವಪ್ರಸಾದವನ್ನು ಸೇವಿಸಿ ಧನ್ಯರಾದ ಪೂರ್ವ
ಪ ಮಹಿಮರ ಚರಿತ್ರವನ್ನುದಾಹರಿಸಿ, ಶಿವಪ್ರಸಾದ ಸೇವ್ಯತ್ವವನ್ನು ಸ್ಥಾಪಿಸುತ್ತಾರೆ
ಹೇಗೆಂದರೆ—ಪೂರ್ವದಲ್ಲಿ ಘಂಟಾಕರ್ಣನೆಂದು ಪ್ರಸಿದ್ಧನಾದ ಪ್ರಮಥ ಶ್ರೇಷ್ಠನು
ಪ್ರತ್ಯಕ್ಷ ಪರಶಿವನಾಗಿಯೂ ಶಿವಜ್ಞಾನಕ್ಕೆ ನಿಕ್ಷೇಪನಾಗಿಯೂ ಇದ್ದನು. ॥ ೧ ॥ ಆ
ತನು ಒಂದು ದಿವಸ ತನ್ನ ಇಷ್ಟಲಿಂಗಕ್ಕೆ ಅರ್ಪಿಸಿದ ನಿರ್ಮಾಲ್ಯ ಪುಷ್ಪದಲ್ಲಿದ್ದ ಮಕ
ರಂದವನ್ನು ಸೂರ್ಯನು ಪರಿಗ್ರಹಿಸಿಕೊಳ್ಳುತ್ತಿರುವುದನ್ನು ಕಂಡು, ಎಲೆ ಸೂರ್ಯನೆ !
ಹೀಗೆ ಶಿವನಿರ್ಮಾಲ್ಯವನ್ನು ನೀನು ಸ್ವೀಕರಿಸಿಬಿಟ್ಟಬಳಿಕ, ಅದನ್ನು ಭಕ್ತರು ಧರಿಸುವ
ಪಶ್ಚಾತ್ ಪೀಠೋ, ಅಣು, ರೇಣು, ಬೆಂಕಿ, ಸೂರ್ಯ, ಚಂದ್ರ, ನೀರು, ಗಾಳಿ ಇವುಗಳಿಂದ ಕಲೆತು
ಅಥವಾ ಸೇವಿಸಿ ಕೆಟ್ಟುಹೋದ ಶಿವಪ್ರಸಾದವನ್ನು ಮಹಾಜ್ಞಾನಿಗಳಾದ ಶಿವಭಕ್ತರು ಸೇ
ವಿಸುವರೋ? ಇತರರು ಆ ಶಿವಪ್ರಸಾದವನ್ನು ಸೇವಿಸುವುದಕ್ಕಾಗದೆಂದು ಶಿವಾಗಮ
ಗಳು ಹೇಳುತ್ತಿರಲಾಗಿ, ನೀನು ನನ್ನ ಪ್ರಾಣಲಿಂಗದ ಪ್ರಸಾದ ಪುಷ್ಪವನ್ನು ನೋ
ಡುವುದಕ್ಕೂ ಮುಟ್ಟುವುದಕ್ಕೂ ಅವುಗಳ ಮಕರಂದವನ್ನು ಪ

ತ್ಯತಂ । ಸ್ವಾಮಿನ್ಮಯ್ಯಪರಾಧೋಸ್ತಿ ಪಾಲಯಸ್ವಕೃಪಾನಿಧೇ ‖ ೭ ‖ ಯಥಾಭುವಿಪದಾರ್ಥಾನಾಮಾಕರ್ಷಾಮಿರಸಾನಹಂ। ತಥಾದಥಾನೋನಿಪ್ರಾಮ್ರಲ್ಯಕುಸುಮಾನಾಮಹಂರಸಾನ್ ‖ ೮ ‖ ಲಕ್ಷ್ಯಮಾಸಂಶಾಪವಹ್ನೇಸ್ತ್ವಮೇವಶರಣಂಮಮ । ನಾನ್ಯಾಗತೀರಕ್ಷಯೇಃಶಿಕ್ಷಯೇತಿವದನ್ಪುನಃ ‖ ೯ ‖ ಸಾಷ್ಟಾಂಗಂಪ್ರಣಿಪತ್ಯೋರ್ವ್ಯಾಂಅತಿಷ್ಠದ್ಭಕ್ತಿಸಂಯುತಃ । ತತಃಕೃಪಾದೃಶಾವೀಕ್ಷ್ಯಘಂಟಾಕರ್ಣೋಽವದದ್ರವಿಂ ‖ ೧೦‖ ಮನೋಹರಾಖ್ಯಸ್ಯ ಗಣನಾಥಸ್ಯ ಚರಣಾಂಬುನಾ।ದೇಹಶುದ್ಧಿಂ ಲಭಸ್ವೇತಿ ತದಾಭಾನುರ್ಮನೋಹರಂ ‖೧೧‖ ಗಣೇಂದ್ರಂ ಸೇವಯಿತ್ವಾ ತತ್ಪಾದೋದಕಮವಾಪ್ಯಚ । ಪ್ರೋತತತ್ವಾ ಗತ್ರೋಯೇನಸ್ವಾಂಗಕುಷ್ಠಮಮಾರ್ಜಯತ್ ‖೧೨‖ ತಸ್ಮಾತ್ಪ್ರಸಾದಿನಶ್ಶಂಭೋಃ ಪಾಪಸಂಹರಣಕ್ಷಮಾಃ । ಶಾಪಾನುಗ್ರಹಯೋಶ್ಶಕ್ತಾ ಲೋಕಾರಾಧ್ಯಾನಸಂಶಯಃ ‖೧೩‖

ಇತಿ ಶ್ರೀ ವೀರಶೈವ..........ಗುರುರಾಜಸ್ಯಕೃತೌ ಶ್ರೀ ಮಲ್ಲೋಕಾರಾಧ್ಯಚರಿತೇದೀಕ್ಷಾಪ್ರಕರಣೇ ಪ್ರಸಾದಿನಾಂ

---

ಗ್ರಹಿಸುವುದಕ್ಕೆ ಹೇಗೆ ಯೋಗ್ಯನಾಗುವೆ? ‖ ೬ ‖ ಆದುದರಿಂದ ನೀನು ಆವಿಲ್ಲದ ಕುಷ್ಠರೋಗದಿಂದ ಪೀಡಿತನಾಗು ಎಂದು ಥಟ್ಟನೆ ಆ ಸೂರ್ಯನನ್ನು ಶಪಿಸಿದನು. ಸೂರ್ಯನಿಗೆ ಕುಷ್ಠರೋಗ ಬರುವುದು ಎಂದು ಆಗಮದಲ್ಲಿ ಹೇಳಲ್ಪಟ್ಟಿರುವ ಪ್ರಕಾರ, ಕೂಡಲೇ ರವಿಯು ಕುಷ್ಠರೋಗವನ್ನು ಹೊಂದಿ, ಭೀತಿಯಿಂದ ಘಂಟಾಕರ್ಣನಿಗೆ ದೀರ್ಘದಂಡನಮಸ್ಕಾರವನ್ನು ಮಾಡಿ, ಸ್ವಾಮಿ ! ದಯಾನಿಧೆ ! ನನ್ನಿಂದ ತಪ್ಪಾಯಿತು ಕ್ಷಮಿಸಿ ಕಾಪಾಡು ‖ ೭ ‖ ನಾನು ಭೂಮಿಯಲ್ಲಿರುವ ಸಕಲ ಪದಾರ್ಥಗಳ ರಸವನ್ನು ಆಕರ್ಷಿಸಿಕೊಳ್ಳುವಂತೆಯೇ ಎಂದು ತಿಳಿದು, ಈ ಪ್ರಕಾರದ ಪುಷ್ಪದಮಕರಂದವನ್ನು ಆಕರ್ಷಿಸಿ, ನಿನ್ನ ಶಾಪಕ್ಕಿಗೆ ಗುರಿಯಾದೆನು. ನೀನೆ ನನ್ನನ್ನು ಕಾಪಾಡಬೇಕು. ಮತ್ತೆ ಬೇರೆ ರಕ್ಷಕರಿಲ್ಲ. ನನ್ನ ತಪ್ಪಿಗೆ ತಕ್ಕ ಶಿಕ್ಷೆಯನ್ನು ಮಾಡು ಎಂದು ಹೇಳಿ ‖ ೯ ‖ ಮತ್ತೆ ಭೂಮಿಯ ಮೇಲೆ ಮಲಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ನಿಂತುಕೊಂಡನು. ಆಗ ಘಂಟಾಕರ್ಣನು ಕೃಪಾದೃಷ್ಟಿಯಿಂದ ಸೂರ್ಯನನ್ನು ನೋಡಿ, ನೀನು ಮನೋಹರನೆಂಬ ಗಣೇಶನ ಪಾದತೀರ್ಥವನ್ನು ಸೇವಿಸಿ, ದೇಹದ ರೋಗವನ್ನು ಹೋಗಲಾಡಿಸಿಕೊಳ್ಳೆಂದು ಶಾಪವಿಮೋಚನವನ್ನು ನುಡಿದನು. ಸೂರ್ಯನಾದರೂ ಅದರಂತೆಯೇ ಮನೋಹರ ಗಣೇಶನನ್ನು ಸೇವಿಸಿ ಅವನ ಪಾದೋದಕವನ್ನು ಪಡೆದು ತನ್ನ ಕುಷ್ಠರೋಗವನ್ನು ಹೋಗಲಾಡಿಸಿ ಕೊಂಡನು. ‖ ೧೦ ‖ ಅದುಕಾರಣ, ಶಿವಪ್ರಸಾದಿಗಳು

॥ ಮಾಹಾತ್ಮ್ಯಕಥನೇ ಘಂಟಾಕರ್ಣಚರಿತ್ರಕಥನಂನಾಮ ಏಕಾದಶೋಽಧ್ಯಾಯಃ.

---

## ದ್ವಾದಶೋಽಧ್ಯಾಯಃ.

### (ಭೀರುಕಥನಂ.)

ಕಿಂಚಾಜಸ್ರಂಭಯಸಾಕ್ರಾಂತ ಚಿತ್ತತ್ವಾದ್ಭೀರುನಾಮವಾನ್ । ಮುನಿಪುತ್ರಃ ಕಶ್ಚಿದಾಸೀನ್ನೇಕೇಽಚಿದ್ವಾತವಂತಿಕಃ ॥೧॥ ಗಚ್ಛೇಯು ಷ್ಟಾಂತ್ಸಮುದ್ವಿಗ್ನ್ಯರುದನ್ನೀಪಾಪತಿಷ್ಠ ತ । ಜನಕಸ್ತನಯಂ ವೀಕ್ಷ್ಯ ವಿಸ್ಮಯಾವಿಷ್ಟಮಾನಸಃ ॥೨॥ ದುಷ್ಕರ್ಮಣಃ ಕಸ್ಯಚೈತತ್ಫಲಂ ನಾನ್ಯೇನಶಾಮ್ಯತಿ । ಯೇನಕೇನಾಪ್ಯುಪಾಯೇನವಿನಾಸದ್ಭಕ್ತಿಮಿತಿ ಶಿತುಃ ॥೩॥ ಇತಿ ನಿಶ್ಚಿತ್ಯಮನಸಾ ವೀರ ಶೈವೋಕ್ತ ದೀಕ್ಷಯಾ । ತಂ ಪ್ರಾಣಲಿಂಗಿನಂಚಕ್ರೇ ತತೋಽಭೇಯಮವಾಪ್ಯಸಃ ॥೪॥ ಲೋಕಾತಿ ಕ್ರಾಂತಚರಿತೋ ವೀರಸದ್ಭಕ್ತಿಲೋಭತಃ । ಲಿಂಗಪ್ರಸಾದ ಲೀಲಾನ ಧಾನಸಂಗತಸೌಖ್ಯತಃ ॥೫॥ ಸದಾನಿರ್ಮಾಲ್ಯಕುಸುಮಧಾರಣಭಾಸುರ

---

ಮಾದಸಾಶಿಕಃ - ಶಾಪಾನುಗ್ರಹಕ್ಕೂ ಶಕ್ತರಾಗಿ ಲೋಕಪೂಜ್ಯರಾಗಿರುವರು. ಸಂಶಯವಿಲ್ಲ.

ಎಂಬಲ್ಲಿಗೆ ಹನ್ನೊಂದನೆಯ ಅಧ್ಯಾಯವು.

---

## ಹನ್ನೆರಡನೆಯ ಅಧ್ಯಾಯವು.

### ( ಭೀರುವಿನ ಕಥೆ )

ಒಬ್ಬ ಋಷಿಗೆ ಭೀರುವೆಂಬ ಮಗನಿದ್ದನು ಯಾವಾಗಲೂ ಹೆದರುವ ಮನಸ್ಸುಳ್ಳವನಾದುದರಿಂದ ಅವನಿಗೆ ಭೀರುವೆಂಬ ಹೆಸರುಂಟಾಗಿತ್ತು. ಯಾರು ಅವನ ಬಳಿಗೆ ಬಂದರೂ ಅವರ ಮುಂದೆ ಅಳುತ್ತಿರುವುದೇ ಇವನ ಸ್ವಭಾವವಾಗಿತ್ತು. ತಂದೆಯು ಮಗನ ಸ್ವಭಾವವನ್ನು ನೋಡಿ ಆಶ್ಚರ್ಯಚಿತ್ತನಾಗಿ ॥ ೨ ॥ ಅವನದುಷ್ಕರ್ಮದ ಫಲವು ಶಿವಭಕ್ತಿಯೊಂದರಿಂದಲ್ಲದೆ ಇನ್ನಾವ ಉಪಾಯದಿಂದಲೂ ಶಾಂತವಾಗಲಾರದೆಂದು ವಿಚಾರ ಮಾಡಿ ತಿಳಿದು ನಿಶ್ಚಯಿಸಿ, ವೀರಶೈವಮತರೀತಿಯಾಗಿ ಲಿಂಗಧಾರಣ ದೀಕ್ಷೆಯಿಂದ ಆ ಮಗನನ್ನು ಪ್ರಾಣಲಿಂಗಿಯನ್ನಾಗಿ ಮಾಡಿದನು. ಅದರಿಂದ ಆ ಮಗನು ಆಮುಂಚೆಯ ಸ್ವಭಾವವನ್ನು ಬಿಟ್ಟು ॥೪॥ ವೀರಭಕ್ತಿಯ ಆಸಕ್ತಿಯಿಂದಲೂ, ಶಿವಲಿಂಗ ಪ್ರಸಾದಸೇವಾಸಂಜಾತ ಸೌಖ್ಯದಿಂದಲೂ ನಿರ್ಮಾಲ್ಯ ಪುಷ್ಪವನ್ನು ಶಿರಸ್ಸಿನಲ್ಲಿ ಧರಿಸುವುದರಿಂದ ಲೋಕವನ್ನು ಮೀರಿದ ನಡತೆಯುಳ್ಳವನಾಗಿರುತ್ತಿದ್ದನು.

ಮಸ್ತಕೇ | ಅಥ ಸ ತ್ರ್ಯಂಬಕಸ್ತಸ್ಯ ಪ್ರಸಾದನಿಯತಿಂ ಪರಾಂ ||೬||
ಪರೀಕ್ಷಿತುಂ ಸೂಕ್ಷ್ಮಭೂತ್ವಾ ಪ್ರಸಾದಕುಸುಮೋದರೇ | ಅಕಲ್ಪಯತ್ಕೀಟ
ಮೇಕಂ ತಂ ದೃಷ್ಟ್ವಾ ಸ ತು ಭಕ್ತಿಮಾನ್ ||೭|| ಧಾರಯಾಮಾಸ ಶಿರಸಿ ಪ್ರ
ಸಾದ ಇತಿ ಭಾವತಃ | ತತೋ ವಿಜೃಂಭಿತಃ ಕೀಟೋ ವಿಹಾಯಾಸ್ಥೀನಿ ಮ
ಸ್ತಕೇ ||೮|| ರಕ್ತಮಾಂಸಸ್ನಾಯುಚರ್ಮತ್ವಾಘಿತ್ವಾ ತೂರ್ಣಮಭಕ್ಷಯತ್ |
ಪ್ರಸಾದನಿಷ್ಠಯಾ ತಿಷ್ಠತ್ತದವ್ಯವಿಗಣಯ್ಯ ಸಃ ||೯|| ತತಃ ಪ್ರಸ
ನ್ನೋ ಗಿರಿಶಸ್ತಮುವಾಚ ಕೃಪಾನಿಧಿಃ | ತುಭ್ಯಂ ದಾಸ್ಯಾಮಿ ಮೃತ್ಯು
ತ್ವಮಿತ್ಯಾಕರ್ಣ್ಯ ಸ ತದ್ವಚಃ ||೧೦|| ಸ್ವಾಮಿನ್ಮೃತ್ಯುತದರ್ಹಾಂ ಕಿಂ ಹಿಂ
ಸಾಂ ಕರ್ತುಮಹಂ ಸದಾ | ಶಕ್ನೋಮಿ ಕಿಮಿದಂ ಕರ್ಮ ದಾತುಂ ತೇ ಯು
ಜ್ಯತೇ ಕಥಂ ||೧೧|| ಇತ್ಯಪ್ರೋಚಚ್ಛಿವಶ್ಶ್ರುತ್ವಾ ತದ್ವಚಃ ಪುನರಬ್ರ
ವೀತ್ | ಭೂತ್ವಾ ಪ್ರಸಿದ್ಧಪ್ರಸಾದೀ ಮತ್ಪ್ರಸಾದಾವಧಾನತಃ ||೧೨||
ಶಿವಾರ್ಪಿತಾನ್ನನಿಷ್ಠಸ್ಯ ನಿಯತಃ ಕಿಮರ್ಹಃ ಪುಣ್ಯಪಾಪಯೋಃ | ಸತ್ಯಂ
ನಕರ್ಮಾರ್ಹ ಇತಿ ವಚನೇ ಸುಸ್ಥಿತೇ ತತಃ ||೧೩|| ನಾಸ್ಪೃಶತಃ ಪುಣ್ಯ
ಪಾಪೇ ತ್ವಾಂ ಶುದ್ಧಲಿಂಗಪ್ರಸಾದಿನಂ | ಭೂಜಲಾದಿಷು ಭೂತೇಷು ಜಾ

---

ಅವನ ಪ್ರಸಾದ ವಿಷಯಕವಾದ ನಿಶ್ಚಯಜ್ಞಾನವನ್ನು ಪರೀಕ್ಷಿಸಬೇಕೆಂದು ಸಂಕಲ್ಪಿಸಿ, ಶಿವಪ್ರಸಾದ ಕುಸುಮದಲ್ಲಿ ಒಂದು ಸಣ್ಣ ಹುಳುವನ್ನು ಕಲ್ಪಿಸಿದನು. ಆ ಹುಳುವನ್ನು ಭಕ್ತನು ನೋಡಿ, ಪ್ರಸಾದಭಾವನೆಯಿಂದಲೇ ಅದನ್ನು ತಲೆಯಲ್ಲಿ ಧರಿಸಿಕೊಂಡನು. ಹುಳುವು ತಲೆಯಲ್ಲಿ ದೊಡ್ಡದಾಗಿ ಬೆಳೆದು, ತಲೆಯಲ್ಲಿ ಮೂಳೆಗಳನ್ನು ಮಾತ್ರ ಬಿಟ್ಟು, ರಕ್ತ ಮಾಂಸ ಚರ್ಮಗಳನ್ನೆಲ್ಲ ಕೊರೆದು ತಿಂದುಬಿಟ್ಟಿತು. ಆ ಭಕ್ತನಾದರೊ ಪ್ರಸಾದದ ಭಕ್ತಿಯಿಂದ ಅದರ ಹಿಂಸೆಯನ್ನು ಗಣಿಸದೆ ಸುಮ್ಮನಿದ್ದನು ||೯|| ಬಳಿಕ ದಯಾನಿಧಿಯಾದ ಪರಶಿವನು ಪ್ರತ್ಯಕ್ಷನಾಗಿ, ಎಲೈ ಭಕ್ತನೇ ನಿನಗೆ ನಾನು ಮೃತ್ಯುತ್ವವನ್ನು ಕೊಡುತ್ತೇನೆ ಎಂದು ಅಪ್ಪಣೆ ಮಾಡಿದನು. ಅದನ್ನು ಭಕ್ತನು ಕೇಳಿ, ಸ್ವಾಮಿ! ನನಗೆ ಇದು ಯೋಗ್ಯವೇ ? ನಾನು ಮೃತ್ಯುರೂಪನಾಗಿ ಸದಾ ಹಿಂಸೆ ಮಾಡಬಲ್ಲೆನೆ ? ಈ ಕೆಲಸವನ್ನು ತಾವು ನನಗೊಪ್ಪಿಸಬಹುದೊ ? ಎಂದು ಬಿನ್ನೈಸಿದನು. ಶಿವನು ಆ ಮಾತನ್ನು ಕೇಳಿ, ಮತ್ತೆ ಹೇಳಿದ್ದೇನೆಂದರೆ—ನೀನು ನನ್ನ ಪ್ರಸಾದದ ಅವಧಾನದಿಂದ ಪ್ರಸಿದ್ಧ ಪ್ರಸಾದಿಯಾಗಿರುವಾಗ ಪಾಪಪುಣ್ಯಗಳನ್ನು ಹೊಂದುವುದಕ್ಕೆ ನೀನು ಅರ್ಹನೊ ? ಪ್ರಸಾದಿಯು ಕರ್ಮಫಲವನ್ನು ಸತ್ಯವಾಗಿಯೂ ಹೊಂದುವುದಿಲ್ಲವೆಂಬ ಪ್ರಮಾಣವಚನ ವಿರುವುದರಿಂದ ||೧೩||
ಶುದ್ಧಲಿಂಗಪ್ರಸಾದಿಯಾದ ನಿನ್ನನ್ನು ಪುಣ್ಯಪಾಪಗಳು ಹೊಂದಲಾರವು. ಪೃಥಿವಿ ಅಪ್ಪುವೊದಲಾದ ಪಂಚ ಭೂತಗಳಲ್ಲಿ ಅನೇಕ ಜಂತುಗಳು ಹುಟ್ಟುತ್ತವೆ. ಅವು

ಯುಂತೇತೇಪಿಜಂತವಃ ॥೧೪॥ ನಿರ್ಮಾಲ್ಯಯುಂತೇತಾನಿಭೂತಾನಿ ನಸ್ಪೃ
ಶಂತ್ರಿಯಥಾಭುವಿ । ತತ್ತತ್ಪುಣ್ಯಾನಿಪಾಪಾನಿ ತಥೈವಾಸ್ಮತ್ಪ್ರಸಾದಿ
ನಂ ॥೧೫॥ ಸ್ಪೃಶಂತಿ ಪುಣ್ಯಪಾಪಾನಿನೈವೇತ್ಯುಕ್ತ್ವಾಮಹೇಶ್ವರಃ।
ಮೃತ್ಯುತ್ವಂಪ್ರದದೌತಸ್ಮೈಮುನಿಪುತ್ರಾಯನೀರವೆ ॥೧೬॥
ತಸ್ಮಾದುಭಯಕರ್ಮಾತಿದೂರಾಲಿಂಗಪ್ರಸಾದಿನಃ ।
ಇತಿ.........ಗುರುರಾಜಸ್ವಕೃತೌ ಶ್ರೀಮಲ್ಲಿಕಾರ್ಜುನ
ಪಂಡಿತಾರಾಧ್ಯಚರಿತ ದೀಕ್ಷಾಪ್ರಕರಣೇ
ಪ್ರಸಾದಿನಾಂಮಾಹಾತ್ಮ್ಯ ಸಂಕೀರ್ತನೇಭೀರವೆ
ಮೃತ್ಯುತ್ವಕಥನಂನಾಮ
ದ್ವಾದಶೋಽಧ್ಯಾಯಃ.

---

## ತ್ರಯೋದಶೋಽಧ್ಯಾಯಃ.

(ಕೃಷ್ಣದೂರ್ವಾಸಶ್ಯಾಪಪ್ರದಾನಂ)

ಶ್ರೀರುದ್ರಮೂರ್ತಿರ್ದೂರ್ವಾಸಾಸ್ಸಾರ್ವಭೌಮಸ್ತಪಸ್ವಿನಾಂ॥

---

ಸಾಯುತ್ತವೆ. ಆದರೂ ಆವುಗಳ ಪಾಪಪುಣ್ಯಗಳು ಭೂತಗಳನ್ನು ಹೇಗೆ ಸೋಂ
ಕಲಾರವೋ ಹಾಗೆಯೇ ಭೂಮಿಯಲ್ಲಿ ಪುಣ್ಯಪಾಪಗಳು ನನ್ನ
ಪ್ರಸಾದಿಯನ್ನು ಸೋಂಕಲಾರವು. ಎಂದು ಹೇಳಿ, ಋಷಿಪುತ್ರನಾದ ಭೀರುವಿಗೆ
ಮೃತ್ಯುತ್ವವನ್ನು ಕೊಟ್ಟನು ॥ ೧೬ ॥ ಆದುದರಿಂದ ಲಿಂಗಪ್ರಸಾದಿಗಳು ಪಾಪಪುಣ್ಯ
ಕರ್ಮಗಳೆರಡಕ್ಕೂ ಅತ್ಯಂತದೂರಸ್ಥರು.

ಎಂಬಲ್ಲಿಗೆ.....ಹನ್ನೆರಡನೆಯ ಅಧ್ಯಾಯವು ಮುಗಿದುದು.

---

## ಹದಿಮೂರನೆಯ ಅಧ್ಯಾಯವು.

( ಕೃಷ್ಣನಿಗೆ ದೂರ್ವಾಸ ಶಾಪವು ಬಾಧಕಥೆ ).

ರುದ್ರಸ್ವರೂಪನಾದ ದೂರ್ವಾಸ ಮಹರ್ಷಿಯು ತಪಸ್ವಿಗಳಲ್ಲಿ ಚಕ್ರವರ್ತಿಯಾ
ಗಿಯೂ, ಪ್ರಸಾದಸೇವನ ಧ್ಯಾನಗಳಿಂದ ಶಿವಜ್ಞಾನ ಸಿದ್ಧಿಯಾಗುವುದೆಂಬ ಪುರಾಣ
ವಾಕ್ಯವನ್ನನುಸರಿಸಿ ಶಿವಪ್ರಸಾದ ಸೇವನಾಸಕ್ತನಾಗಿಯೂ, ಕೋಪದಿಂದ ಖಿಳಿದು
ಹೋಗದ ತಪಸ್ಸಿನಿಂದ ಕೂಡಿದವನಾಗಿಯೂ, ಇಚ್ಛೆಬಂದಂತೆ ನಡೆಯುವುದರಲ್ಲಿ ಸ್ವ
ತಂತ್ರನಾಗಿಯೂ, ಶಿವಜ್ಞಾನಕ್ಕೆ ನಿಕ್ಷೇಪನಾಗಿಯೂ ಇದ್ದನು ॥ ೧ ॥ ಆತನು ಬ
ದುಕಾಲದಲ್ಲಿ ದ್ವಾರಕೆಗೆ ಹೋದನು. ಸದ್ಭಕ್ತರಾದ ರುಕ್ಮಿಣಿಯೂ ಕೃಷ್ಣನೂ ಆ
ಮಹರ್ಷಿಯನ್ನು ಕಂಡು, ಸಡಗರಗೊಂಡು, ತಮ್ಮ ತಲೆಗಳ ಕಿರೀಟವೂ ಹೊಸೆದ

ಪ್ರಸಾದಸೇವನಾದ್ಧ್ಯನಾದಿತಿ ಪೌರಾಣವಾಕ್ಯತಃ ॥೧॥ ಶಿವಪ್ರಸಾದ ನಿರತಃ ಕ್ರೋಧಾವೃತತಪ್ತೋಽನ್ವಿತಃ । ಸ್ವೇಚ್ಛಾವಿಹರಣೋದ್ಯು ಕ್ತಶ್ಶಿವಜ್ಞಾನಮಹೋದಧಿಃ ॥೨॥ ಯಯೌ ದ್ವಾರವತೀಂಜಾತುತಂ ದೃಷ್ಟ್ವಾಜಾತಸಂಭ್ರಮೌ । ಉತ್ಥಿತೌ ಶೋರೋಜಾಂಶುಕಯೋಸ್ಸಹ ಸಾಚಲಸಾಸ್ಸತೋಃ ॥ ೩ ॥ ಸದ್ಭಕ್ತ್ಯಾ ರುಕ್ಮಿಣೀ ಕೃಷ್ಣೌ ಪ್ರಣಾ ಮಂಚಕ್ರತುಸ್ತದಾ । ವಿಧಾಯಾತಿಥಿಸತ್ಕಾರಂ ಪಾಯಸಾಹಾರಮಾದರಾತ್ ॥ ೪ ॥ ಅರ್ಪಯಾಮಾಸತುಸ್ತಸ್ಮೈ ಸಕೃತ್ವಾ ಶಂಕರಾರ್ಪಣಂ । ಆ ನಂದತಃ ಪ್ರಸಾದಾಂಶಂ ಬುಭುಜೇಪ್ರೀತಮಾನಸಃ ॥ ೫ ॥ ಅವಶಿಷ್ಟ ಪ್ರಸಾದಾಂಶಮಿದಂಕೃಷ್ಣಾಯ ಹರ್ಷತಃ । ಭುಕ್ತ್ವಾಽಂಗಳಂ ಶಿಷ್ಟ ಮನ್ನಂ ಸರ್ವಾಂಗಂ ಲೇಪನಂಕುರು ॥೬॥ ಇತ್ಯವೋಚತ್ಸ ಕೃಷ್ಣೋಽ ಪಿ ತಂಪ್ರಸಾದಂ ಮಹಾಮುನೇಃ । ಭುಕ್ತ್ವಾ ಶಿಷ್ಟಂ ಪಾದತಲಂ ವಿಹಾ ಯಾಂಗೇಷ್ವಲೇಪಯತ್ ॥ ೭ ॥ ತದೃಷ್ಟ್ವಾಸಮುನಿಃಕೃಷ್ಣಾಯ ಸ್ಮಾತ್ತ್ವಾಪ್ಪದತಲಂ ತ್ವಯಾ ॥ ನಲೇಪಿತಂ ಪ್ರಸಾದೇನ ತಸ್ಮಾತ್ತತ್ರೈವ ಕಸ್ಯಚಿತ್॥ ೮ ॥ ವ್ಯಾಧಸ್ಯಬಾಣಾಪಹತ್ಯಾವಿದ್ಧಸ್ತ್ವಂ ಮೃತಿಮಾ

---

ವಸ್ತ್ರವೂ ಚಲಿಸಾಡುವಂತೆ ಧುಗ್ಗನೆದ್ದು ಬಂದು ನಮಸ್ಕಾರನ್ನು ಮಾಡಿದರು. ಅ ರ್ಘ್ಯಪಾದ್ಯಾದಿಗಳಿಂದ ಅತಿಥಿಸತ್ಕಾರವನ್ನು ಮಾಡಿ ಪ್ರೀತಿಯಿಂದ ಪಾಯಸವನ್ನುಣ ಣಬಡಿಸಿದರು. ಋಷಿಯು ಅದನ್ನು ಶಿವನಿಗೆ ಅರ್ಪಿಸಿ, ಶಿವಪ್ರಸಾದವನ್ನುಂಡು, ಸ್ವ ಲ್ಪ ಪ್ರಸಾದವನ್ನು ಸಂತೋಷದಿಂದ ಕೃಷ್ಣನಿಗೆ ಕೊಟ್ಟು ಇದನ್ನು ಆ ಕಂಠಪೂರ್ತಿ ಯಾಗಿ ಭುಂಜಿಸಿ, ಉಳಿದುದನ್ನು ದೇಹಕ್ಕೆಲ್ಲ ಲೇಪನವನ್ನು ಮಾಡಿಕೊಳ್ಳೆಂದು ನುಡಿ ದನು. ಕೃಷ್ಣನು ಕೂಡ ಆದರಂತೆಯೇ ಮಹರ್ಷಿಯ ಪ್ರಸಾದವನ್ನು ಭುಂಜಿಸಿ, ಉಳಿದುದನ್ನು ಕಾಲೊಂದನ್ನು ಹೊರತು ಉಳಿದ ತನ್ನ ಅಂಗಕ್ಕೆಲ್ಲ ಲೇಪಿಸಿಕೊಂಡನು ॥ ೭ ॥ ಅದನ್ನು ಋಷೀಶ್ವರನು ಕಂಡು, ಎಲೈ ಕೃಷ್ಣನೇ ನೀನು ಯಾವ ಕಾರಣದಿಂ ದ ಕಾಲಿಗೆ ಪ್ರಸಾದಲೇಪವನ್ನು ಮಾಡಿಕೊಳ್ಳದೆ ಬಿಟ್ಟೆಯೊ? ಆದಕಾರಣದಿಂದ, ಆ ಕಾಲಿನಲ್ಲೇ ಒಬ್ಬ ಬೇಡನಿಂದ ಬಾಣದ ಏಟನ್ನು ಹೊಂದಿ, ನೀನು ಮರಣವನ್ನೈದು! ಎಂದು ಕೋಪಯುಕ್ತನಾಗಿ ಬೇಗನೆ ಶಪಿಸಿದನು. ಕಡೆಗೆ ಕೃಷ್ಣನು ಅದರಂತೆಯೇ ಮೃತನಾದನು ॥ ೮ ॥ ಆದುದರಿಂದ ಶಿವಪ್ರಸಾದಿಗಳ ಮಹತ್ವವನ್ನು ಯಾರು ತಾನೆ ಬಲ್ಲರು?

ಎಂಬಲ್ಲಿಗೆ ಹದಿಮೂರನೆಯ ಅಧ್ಯಾಯವು ಸಂಪೂರ್ಣವು.

---

## ಹದಿನಾಲ್ಕನೆಯ ಅಧ್ಯಾಯವು.

ರ್ತುಂ ನಶಕ್ಯೇತೇ ಕ್ಷಿತಾವಿವ । ವಿಭಜ್ಯಲಿಂಗಸಂಸ್ಕಾರಂಕೃತ್ವಾಪಿ
ಪಾಗ್ನಯೋಃ ಯಥಾ ॥ ೧೩ ॥ ದೀಯಂತೇತದ್ವದೇತಾಭಿಹಿನಶಕ್ಯಾಕ
ರ್ತುಮರ್ಪಣಂ । ಯಥಾಸ್ವಗೋಚರೋವಾಯುರರ್ಪ್ಯತೇಸೌನಥಾತ್ಮನಃ
॥ ೧೪ ॥ ತಥೈನೇವಮಾವರ್ಪಯಿತುಂನಶಕ್ಯೇತೇ ನಿರಂತರಂ । ಯಥಾ
ರ್ಪಯಿತ್ವಾವಕಾಶಮಾಶ್ರಯತ್ಯಾಂಬರಾಂತರಂ ॥ ೧೫ ॥ ತಥಾನಯೋಃ
ಗ್ಯೌಸುಸ್ಪೃಷ್ಟನಿಮೌಭಕ್ತಿಪರೈರರ್ಪ್ಯೈಃ। ಗೃಹಭೂಮಹಾವೃಕ್ಷಾದಿ
ಛಾಯಾಇವಶಿವಾರ್ಚಕೈಃ ॥ ೧೬ ॥ ಸಮರ್ಪ್ಯೇತಾವಾಶ್ರಯಿತುಂನಯೋ
ಗ್ಯೌಭವತಃಪುನಃ। ಅಕಾಮಕೃತಗಂಧಾದಿನ್ಯಾಯೋಽಪ್ಯತ್ರ ನಯುಜ್ಯತ
॥೧೭॥ ಅನಯೋರ್ಜ್ಯೋತ್ಸ್ನಾತಪಯೋರನಯೋರ್ವಿಷಯತ್ವತಃ। ಶಬ್ದಾದಿ
ಪಂಚವಿಷಯಮಧ್ಯೇಚತ್ವಾರಆಂತರಾಃ॥೧೮॥ ವಿಷಯಾಸ್ಸ್ಯುರ್ಬಾಹ್ಯ
ಏಕಸ್ಸ್ಯಾತ್ಸ್ಪರ್ಶ ವಿಷಯಸ್ಸಚ । ಬಾಹ್ಯಾಂಗಂ ಸ್ಪೃಶತಿದ್ರವ್ಯಂಸ್ಪರ್ಶ
ವತ್ತತ್ಸುಖಂಪುನಃ ॥ ೧೯ ॥ ಯಸ್ಮಾದಾತ್ಮಾನ ಮಾಪ್ನೋತಿ ತಸ್ಮಾ
ಜ್ಜ್ಯೋತ್ಸ್ನಾತಪಾವಿಮೌ । ಅಂಗೇನಾರ್ಪಯಿತುಂಯೋಗ್ಯೌನರೂಪಿ
ದ್ರವ್ಯಸಂಘವತ್ ॥ ೨೦ ॥ ದಾತುಂಯೋಗ್ಯೌ ನಮನಸಾನೀರೂಪ

---

ಗಳನ್ನು ಶಿವಭಕ್ತಿತತ್ಪರರು ಮುಟ್ಟಲೂ ಅರ್ಹಗಳಲ್ಲ. ಮತ್ತು ಶಿವಪೂಜಾಧುರೀ
ಣರು ಹೇಗೆ ಮನೆವೃಕ್ಷ ಮೇಘವೇಮೊದಲಾದವುಗಳ ಛಾಯೆಗಳನ್ನು ಶಿವನಿಗೆಸಮರ್ಪಿ
ಸಿ ಛಾಯೆಗಳನ್ನು ಆಶ್ರಯಿಸುವರೋ? ಅದರಂತೆಯು ಈ ಬಿಸಿಲುಬೆಳ್ದಿಂಗಳುಗಳನ್ನು
ಶಿವಾರ್ಪಿತಗಳಾಗಿ ಮಾಡಿ ಅವುಗಳನ್ನಾಶ್ರಯಿಸಲು ಯೋಗ್ಯಗಳಾಗುವದಿಲ್ಲ. ಆತ್ಮನು
ಶಬ್ದ ಸ್ಪರ್ಶ ರೂಪ ರಸ ಗಂಧಗಳನ್ನು ತಾನಾಗಿಬಯಸದಿದ್ದರೂ ಅವುಗಳು ತಮ್ಮ
ಷ್ಟಕ್ಕೆ ತಾವೇ ಆತ್ಮನಿಗೆ ವೇದ್ಯವಾಗುವ (ಅಕಾಮಕೃತಗಂಧಾದಿ) ನ್ಯಾಯವೂ ಈ ಬಿ
ಸಿಲು ಬೆಳ್ದಿಂಗಳ ವಿಷಯದಲ್ಲಿ ಸಂಭವಿಸುವದಿಲ್ಲ. ಮತ್ತು ಶಬ್ದ ರೂಪ ರಸ ಗಂಧ
ಈ ನಾಲ್ಕು ವಿಷಯಗಳು ಅಂತರಗಳು. ಸ್ಪರ್ಶವಿಷಯ ಒಂದು ಮಾತ್ರ ಬಾಹ್ಯವು
ಆದರೆ ಲೋಕದಲ್ಲಿ ಬಾಹ್ಯಾಂಗವು ದ್ರವ್ಯವನ್ನು ಮುಟ್ಟುತ್ತದೆ ಅನಂತರ ಅಂತರಂಗವು
ಹೇಗೆ ಆ ದ್ರವ್ಯದಿಂದುಂಟಾದ ಸುಖವನ್ನು ಆತ್ಮನಿಗೆ ವೇದ್ಯಮಾಡುತ್ತದೆಯೊ? ಅದರಂ
ತೆಯೂ ಈ ಬಿಸಿಲು ಬೆಳ್ದಿಂಗಳುಗಳು ಅಂಗದಿಂದ ರೂಪ ದ್ರವ್ಯದಂತೆ ಶಿವನಿಗರ್ಪಿಸು
ವದಕ್ಕಾಗುವದಿಲ್ಲ. ನೀರೂಪದ್ರವ್ಯಗಳಂತೆಯೂ ಮನಸ್ಸಿನಿಂದಲೂ ಅರ್ಪಿಸುವದ
ಕ್ಕಾಗುವದಿಲ್ಲ. ಆದರೆ ಈ ಬಿಸಿಲು ಬೆಳ್ದಿಂಗಳುಗಳು ಅರ್ಪಿಸುವದಕ್ಕೆ ಅಗೋಚರ
ವಾದಕಾರಣ ಮುಟ್ಟುವದಕ್ಕೂ ಯೋಗ್ಯಗಳಲ್ಲ. ಮತ್ತು ಯಾವ ಉಪಾಯಾಂತರ
ಗಳಿಂದಲೂ ಇವುಗಳನ್ನು ಶಿವಾರ್ಪಿತಗಳಾಗಿ ಮಾಡುವದಕ್ಕಾಗುವದಿಲ್ಲ. ಆದ್ದರಿಂದ
ಪರವ್ಯವಹಾರಿಕಗಳನ್ನೂ ಮುಟ್ಟುವಿಕೆ ಸಮರ್ಪಿಸುವಿಕೆಗಳೆರಡೂ ಕೂಡ ಶಿವನಿ

ದ್ರನ್ಯಸಂಘವತ್ । ಅಗೋಚರತ್ವಾದರ್ಪಯಿತುಂ ಸ್ಪ್ರಷ್ಟುಂಸಾ ಹೋರ್ಲೀಕಥಂಚನ ॥ ೨೧ ॥ ನಶಕ್ಯತೇರ್ಪಯಿತುಂಕೇನಾಪ್ಯುಪಾಯೇನ ತಿಜೇತಸ್ಪನಃ । ಪರದ್ಯೈನಸ್ಯಕಿರಣಸಂಸ್ಪರ್ಶನಸಮರ್ಪಣೆ ॥ ೨೨ ॥ ದುರ್ಗಂಧಾದ್ಯರ್ಪಣಸನೋವೇದಿತವ್ಯೈವಿವೇಕಿಭಿಃ । ಮನಏವಮನುಷ್ಯಾ ಣಾಂ ಕಾರಣಂ ಬಂಧನೋಕ್ಷಯೋಃ॥ ೨೩॥ಯಥಾಚಾಲಿಂಗ್ಯತೆಪುತ್ರೋ ನತಥಾಲಿಂಗ್ಯತಪತಿಃ। ಇತಿವಾಕ್ಯಾದ್ಬಾಹ್ಯವಸ್ತುಚಯಾರ್ಪಣವಿಧಾನಪಿ ॥೨೪॥ಪದಾರ್ಥಾನಾಂಸರಹಿತಾಂತಸ್ಸ್ವಯಮೇವಾಗತಾನ್ಪುನಃ।ಮನಸಾ ೭ರ್ಪಯಿತುಂಶಕ್ಯವಾಗನೋಕ್ತವಿಧಾನತಃ॥ ೨೫॥ ಕಾಮಯಿಶ್ವಾತ್ಮನಾ ಲಬ್ಧಾನ್ಪದಾರ್ಥನಾಂಪಸಂಯುತಾರ್ । ಸಮರ್ಪ[illegible]ತುವಿಶಾಯಾಯುಮನ ಸಾಶಕ್ಯತ ಕಥಂ ॥ ೨೬ ॥ ಗವಾಂಸರ್ಪಿಃಶ್ಯರೀರಸ್ಥಂ ನಕರೋತ್ಯಾತ್ರ ಪೋಷಣಂ । ಪಿಕೃತಂ ಕರ್ಮಚಿತಂಪುನಸ್ತಾಸಾಂಚಭೇಷಜಂ॥ ೨೭॥ ಇತಿವಾಕ್ಯಾದಾಗಮೋಕ್ತಂ ಕಿಮಿದಂ ಮನಸಾರ್ಪಣಂ । ಏವಮಂತಸ್ಯ ರೀರಸ್ಥಸ್ಸರ್ಪಿರ್ವತ್ಪರಮೇಶ್ವರಃ ॥ ೨೮ ॥ ವಿನಾಚೋಪಾಸನಾಂದೇ ವೋನಕರೋತಿಹಿತಂಸೃಷು । ಇತಿವಾಕ್ಯಾಚ್ಚಿನಸ್ತೇಭ್ಯೋ ನಹಿತಂ

---

ದುರ್ಗಂಧವನ್ನಪಿ ಸಿದುದಕ್ಕೆ ಸಮಾನವಾಗುವದೆಂದು ವಿವೇಕಶಾಲಿಗಳುಹೇಳುವರು ಆದತೆ ಲೋಕದಲ್ಲಿ ಮನುಷ್ಯರ ಬಂಧ ಮೋಕ್ಷಗಳಿಗೆ ಮನಸ್ಸೇ ಕಾರಣವಾಗಿರುವದು ಹೇಗೆಂದರೆ ಸ್ತ್ರೀಯರಿಗೆ ತಮ್ಮ ಮಕ್ಕಳನ್ನು ಆಲಿಂಗಿಸಿಕೊಂಡಾಗ ಇದ್ದ ಮನಸ್ಸಿ ನಂತೆ ತಮ್ಮ ತಮ್ಮ ಪತಿಗಳನ್ನು ಆಲಿಂಗಿಸಿಕೊಂಡಾಗ ಅದೇ ಮನಸ್ಸು ಇರುವದಿಲ್ಲ ಆದ್ದರಿಂದ ಶಿವನಿಗೆ ಬಾಹ್ಯದಲ್ಲಿ ರೂಪ ಪದಾರ್ಥಗಳನ್ನು ವಿಧಿವತ್ತಾಗಿ ಹಸ್ತದಿಂ ದ ಅರ್ಪಣೆ ಮಾಡುವುದಕ್ಕೂ, ಅಂತರಂಗದಲ್ಲಿ ತಾನಾಗಿ ಬಂದ ನೀರೂಪ ಪದಾರ್ಥ ಗಳನ್ನು ಮನಸ್ಸಿನಿಂದ ಆಗಮೋಕ್ತ ವಿಧಾನದಂತೆ ಸಮರ್ಪಿಸುವುದಕ್ಕೂ ಕೂಡ ಸಾಧ್ಯವಾಗುವದು. ಆದುದರಿಂದ ರೂಪಸಹಿತಗಳಾಗಿರುವ ಪದಾರ್ಥಗಳನ್ನು ಅತ್ಮ ನು ತಾನು ಮನಸ್ಸಿನಿಂದ ಅಪೇಕ್ಷಿಸಿಕೊಂಡು ಅನಂತರ ಅವುಗಳನ್ನು ಶಿವಾರ್ಪಿತಗ ಳಾಗಿ ಮಾಡುವದು. ಹೇಗ ಸಾಧ್ಯವು? ಆದರೆ ಹಸುವಿನ ಕೆಚ್ಚಲಿನಲ್ಲಿರುವ ಹಾಲಿ ನಲ್ಲಿ ತುಪ್ಪವಿದ್ದರೂ ಆ ಹಸುವಿನ ವ್ಯಾಧಿಯಿಂದಾದ ಹುಣ್ಣನ್ನು ವಾಸಿಮಾಡುವ ದಿಲ್ಲ. ಆಗ ಅದೇ ಹಸುವಿನ ಕೆಚ್ಚಲಿನಿಂದ ಆ ಹಾಲನ್ನು ಕರೆದು ಮೊಸರುಮಾಡಿ ಆ ಮೊಸರ ಕಡೆದು ಬೆಣ್ಣೆ ತೆಗೆದು ತುಪ್ಪ ಕಾಸಿ ಆ ತುಪ್ಪವನ್ನು ಆ ಹಸುವಿನ ಹು ಣ್ಣಿಗೆ ಹಚ್ಚಲು ಅದು ವಾಸಿಯಾಗುವದು. ಹೀಗೆಂಬ ಪ್ರಮಾಣವಚನವಿರುವದರಿಂದ ಹಸುವಿನ ಕೆಚ್ಚಲಿನಲ್ಲಿರುವ ತುಪ್ಪದಂತೆ ಅಂತಶ್ಶರೀರದಲ್ಲಿರುವ ಶಿವನಿಗೆ ಮನಸ್ಸಿನಿಂ ದ ಪದಾರ್ಥಗಳನ್ನು ಸಮರ್ಪಣೆ ಮಾಡದಿದ್ದರೂ, ಬಾಹ್ಯಾಂಗದಲ್ಲಿರುವ ಇಷ್ಟಲಿಂಗ

ಕುರುಶೇಖರ ॥ ೨೯ ॥ ತಸ್ಮಾಜ್ಜ್ಯೋತ್ಸ್ನಾ ಸ್ತವಾನಿತ್ಯಂ ಶುದ್ಧಸೂಕ್ಷ್ಮಪ್ರಸಾದಿನಃ । ನಕದಾಚಿದಪಿಸ್ಪೃಷ್ಟುಂಯೋಗ್ಯಾ ಇತಿ ಮನೀಷಯಾ ॥೩೦॥ ಯಥಾತ್ಮಾನಂ ನಸ್ಪೃಶಂತಸ್ಸೂರ್ಯಚಂದ್ರಾ ತವಾ ತಥಾ । ಮಂದರಾದ್ರೇಃ ಕಂದರಾಂತರ್ಬಿಲಮಾಗಿರಗೋ ಭವನ್ ॥ ೩೧ ॥ ಆತ್ಮಸೇವಾಲಂಘನಾಖ್ಯ ವ್ರತಸ್ಥಿತ್ಯಾ ಮುದಾನ್ವಿತಃ । ವೀರಮಾಹೇಶ್ವರೈಸ್ಸಾಕಮವಸದ್ಗಣಪುಂಗವಃ ॥ ೩೨ ॥ ಏಕದಾನಾರದೋಗತ್ವಾ ದ್ವಾರಪಾಲೈರ್ನಿವಾರಿತಃ । ನಿವೃತ್ಯ ಭಾಸ್ವತೋಲೋಕಂ ಅದ್ವೈವಾಗತ್ಯಭಾಸ್ಕರ ॥ ೩೩ ॥ ಶೃಣುಭೂಮೌಸುಕೇಶಾಖ್ಯೋ ಭಕ್ತಃ ಕಶ್ಚನಮೂಢಧೀಃ । ಮಂದರಾದ್ರೇಃ ಕಂದರಾಂತರ್ಬಿಲಮಾದಿರವಾಶ್ರಿತಃ ॥ ೩೪ ॥ ಅಯುಕ್ತಂತ್ವಾಂದೃಷ್ಟು ಮಿತಿಕಿರಣಾಂಸ್ತವ ಸರ್ವಥಾ । ನಸ್ಪೃಶಾಮಿತಿಚವದಂಸ್ತಿಷ್ಠತ್ಯಂತಗರ್ವಿತಃ । ೩೫ । ಸುರಶ್ರೇಷ್ಠಸ್ಯಭವತಃ ಪುಂಸೈಕೇ ಸಾಧ್ಯಹೀನತಾಂ । ಪ್ರಾಪ್ಯಜೀವನಮಪ್ಯೇತಜ್ಜೀವನಂ ಕಿಂದಿವಾಕರ ॥೩೬ ॥ಇತ್ಯವೋಚತ್ತತಚ್ಛ್ರುತ್ವಾ ಗವಿಃ ಕ ಪಿತಮಾನಸಃ । ಯಥಾಚಲೋದ್ವಿಧಾಭೂತಸ್ಸಪತೀತ್ಪುಟಪಟಾರವೈಃ ॥ ೩೭ ॥ಶ

ವನ್ನು ವಿಧಿವತ್ತಾಗಿ ಉಪಾಸನ ಮಾಡದಿದ್ದರೂ, ಕೂಡ ಶಿವನು ಮನುಷ್ಯರಿಗೆ ಆ ಹಳುವಿನ ಕೆಚ್ಚಲಿನಲ್ಲಿರುವ ತುಪ್ಪವು ಆ ಹಸುವಿನ ಮೈಪುಷ್ಟಿ ಪುಣ್ಣನ್ನು ಹೇಗೆ ವಾಸಿಮಾಡುವದಿಲ್ಲವೋ? ಅದರಂತೆ ಹಿತವನ್ನುಂಟು ಮಾಡುವದಿಲ್ಲ ಅದುಕಾರಣ ಶುದ್ಧಸೂಕ್ಷ್ಮ ಪ್ರಸಾದಿಗಳಿಗೆ ಈ ಬಿಸಿಲು ಬೆಳದಿಂಗಳುಗಳ ಒಂದು ಕಳೆಯಾದರೂ ಮುಟ್ಟಲು ಯೋಗ್ಯವಾದವುಗಳಲ್ಲವೆಂಬ ಬುದ್ಧಿಯಿಂದ ತನಗೆ ಅವುಗಳು ಸೋಂಕದಿರುವಂತೆ ಮಾಡಿಕೊಳ್ಳುವದಕ್ಕಾಗಿ ಮಂದರ ಪರ್ವತದ ಗುಹೆಯ ಬಳಗಬೆಯಲ್ಲಿ ಮನೆ ಮಾಡಿಕೊಂಡು ಹೊರಗೆಲ್ಲೂ ಹೋಗದೆ ಸವಾಲಂಘನ ವೆಂಬ ಶೀಲದಿಂದ ಕೂಡಿ. ವೀರಮಾಹೇಶ್ವರರೊಡನೆ ಅತ್ಯಂತ ಸಂತೋಷದಿಂದ ವಾಸಮಾಡುತ್ತಿದ್ದನು ॥ ೩೦॥ಬಂದು ವೇಳೆ ಅಲ್ಲಿಗೆ ನಾರದ ಮಹರ್ಷಿಯು ಬಂದು, ದ್ವಾರಪಾಲಕರಿಂದ ತಡೆಯಲ್ಪಟ್ಟು ಆಗಲೇ ಹಿಂತಿರುಗಿ ಸೂರ್ಯಲೋಕಕ್ಕೆ ಹೋಗಿ, ಎಲೈ ಸೂರ್ಯನೇ ಕೇಳು ಭೂಮಿಯಲ್ಲಿ ಸುಕೇಶನೆಂಬ ಮೂಢಬುದ್ಧಿಯು ಳ್ಳ ಭಕ್ತನೊಬ್ಬನಿರುವನು. ಅವನು ನಿನ್ನನ್ನು ನೋಡುವುದು ಅಯೋಗ್ಯವೆಂತಲೂ, ನಿನ್ನ ಕಿರಣವನ್ನು ಮುಟ್ಟುವದಿಲ್ಲವೆಂತಲೂ, ಹೇಳುತ್ತ, ಮಂದರಪರ್ವತದ ಬಳಗವಿಲೊಳಗೆ ಬಲುಹೆಮ್ಮೆಯಿಂದ ವಾಸಮಾಡಿಕೊಂಡಿರುವನು ॥ ೩೫ ॥ ದೇವಶ್ರೇಷ್ಠನಾದ ನೀನು ಒಬ್ಬ ಮಾನವನಿಂದ ಇಷ್ಟುಹೀನತ್ವವನ್ನು ಪಡೆದು ಬಾಳುವುದೊಂದುಬಾಳೋ ಎಂದು ಹೀಯಾಳಿಸಿದನು. ॥ ೩೬ ॥ ಅದನ್ನು ಸೂರ್ಯನು ಕೇಳಿ ಕೋಪಗೊಂಡು ಎಲೈ ಋಷಿಶ್ವರನೆ! ಈಗಳೆ

ಘಾತಂ ಮಂದರಗಿರಿಂ ಪ್ರವಾಹ್ಯಾದ್ಯೈವತಂಮುನಿಂ । ಸಟಜಟಟನಿಧ್ವಾ
ನಂದಹಿಷ್ಯಾಮಿಮುನೀಶ್ವರ ॥ ೩೮ ॥ ಪಶ್ಯೇತ್ಯುಕ್ತ್ವಾ ರವಿಸ್ಸ್ವಾಂಶು
ಸಹಸ್ರಜನಿತಾಗ್ನಿಭಿಃ । ತಮದ್ರಿಮುದಹದ್ದ್ವಾಹೇತ್ಯನುಚ್ಚಾರ್ಯಸತಾಸು
ಸಃ ॥ ೩೯ ॥ ನಮೋಭವಾಯ ಶರ್ವಾಯಶಿವಾಯೇತಿಶುಭೈರವೆ । ಮು
ಹುರ್ಮುಹುರ್ವರ್ತಮಾನೇ ಕೀರ್ತ್ತಯಾನಾಮಶಂಕರಂ ॥ ೪೦ ॥ ಶ್ರುತ್ವಾ
ತಮಾರವಂ ರುದ್ರೇಕೋಧಸಂದೀಪ್ತಲೋಚನೆ । ಪಶ್ಯತಿಷ್ಮಾತ್ತಲೇಭಾ
ನುಃ ಪತಿತ್ವಾತ್ಯಂತಭಕ್ತಿತಃ ॥ ೪೧ ॥ ಭಕ್ತಯೋಗಕ್ಷೇಮಕರಪಾಹಿ
ಮಾಂ ಕರುಣಾಕರ । ಇತಿಸಂಸ್ತುತ್ಯ ಬಹುಶಃ ಕೃತ್ವಾಸಪ್ರದಕ್ಷಿ
ಣಂ ॥ ೪೨ ॥ ಪ್ರಣಾಮಮಕರೋತ್ತಸ್ಮೈ ಶಂಕರಾಯ ಕೃಪಾಬ್ಧಯೆ ।
ಶಂಕರೋಪ್ಯೇತಮಾಲೋಕ್ಯಭಾನೋ ಜ್ಞಾನಸ್ವರೂಪಿಣಾಂ ॥ ೪೩ ॥ ಲಿಂ
ಗಾರ್ಚನಾನಾಂಸಚ್ಛೀಲಸಂಪನ್ನಾನಾಂ ಮಹಾತ್ಮನಾಂ । ಅನಘಾನಾಮ
ಶರಣಶರಣಾನಾಂನಿರಂತರಂ ॥ ೪೪ ॥ ತ್ವಂ ಶುದ್ಧಾನಾಮಸ್ಮದೀಯ ಭ
ಕ್ತಾನಾಮಪರಾಧ್ಯಭೂಃ । ಅವಮತ್ಯಪುರಾಘಂಟಾಕರ್ಣಂತ್ವಕಳೇಬ
ರಂ ॥ ೪೫ ॥ ಆಸೀತ್ಕುಷ್ಠಾನ್ವಿತಂಭೂಯೋಮನೋಹರಗಣೇಶಿತುಃ ।

---

ನೀನು ಆ ಪರ್ವತವು ಪಟಪಟನೆ ಇಬ್ಭಾಗವಾಗಿ ಹೋಗುವಂತೆ ಸುಟ್ಟು, ಆ ಮುನಿ
ಯನ್ನು ಛಟಛಟನೆ ಸುಟ್ಟುಬಿಡುತ್ತೇನೆ ನೋಡು ಎಂದು ಹೇಳಿ, ತನ್ನ ಸಹಸ್ರ ಕಿರ
ಣಗಳಿಂದಲೂ, ಹುಟ್ಟಿದ ಬೆಂಕಿಯಿಂದ ಆ ಬೆಟ್ಟವನ್ನು ಸುಟ್ಟನು, ಗುಹೆಯಲ್ಲಿದ್ದ
ತಪಸ್ವಿಯಾದರೋ ಉರಿ ಎಂಬಮಾತನ್ನೇ ಎತ್ತದೆ, ಶಿವನಿಗೆ ನಮಸ್ಕಾರ, ಭವನಿಗೆ ನಮ
ಸ್ಕಾರ ಶರ್ವನಿಗೆ ನಮಸ್ಕಾರ ಎಂದು ಮೊದಲಾಗಿ ಹೇಳುತ್ತ ಪದೆಪದೆ. ಶಿವನಾಮಸಂಕೀ
ರ್ತನವನ್ನು ಮಾಡಿದನು. ॥ ೪೦ ॥ ಆ ಧ್ವನಿಯನ್ನು ಶಿವನು ಕೇಳಿ ಕೋಪದಿಂದ ಕಾ
ಡ ಕಣ್ಣುಗಳುಳ್ಳವನಾಗಿ ನೋಡಿದ ಕೂಡಲೇ ಸೂರ್ಯನು ಭೂಮಿಯ ಮೇಲೆ ಬಿ
ದ್ದು, ಅತ್ಯಂತ ಭಕ್ತಿಯಿಂದ ಶಿವನೆ! ಕೃಪಾಮಯನೆ! ಭಕ್ತ ಕ್ಷೇಮದಾಯಕನೆ!
ರಕ್ಷಿಸು ಎಂದು ಬಹು ವಿಧವಾಗಿ ಹೊಗಳಿ, ಪ್ರದಕ್ಷಿಣವನ್ನು ಮಾಡಿ ನಮಸ್ಕರಿಸಿದನು.
ಆಗ ಪರಮೇಶ್ವರನು ಆತನನ್ನು ನೋಡಿ, ಎಲೈ ಸೂರ್ಯನೆ! ಶೀಲಸಂಪನ್ನರಾಗಿ
ಯೂ, ಜ್ಞಾನಸ್ವರೂಪರಾಗಿಯೂ, ಶಿವಲಿಂಗಾರಾಧಕರಾಗಿಯೂ, ಮಹಿಮರಾಗಿ
ಯೂ, ನಿರ್ದುಷ್ಟರಾಗಿಯೂ, ಅನಾಥರಕ್ಷಕರಾಗಿಯೂ, ಪರಿಶುದ್ಧರಾಗಿಯೂ
ಇರುವ ನನ್ನ ಭಕ್ತರಿಗೆ ನೀನು ಅಪರಾಧಿಯಾಗಿರುತ್ತೀಯೆ. ಪೂರ್ವದಲ್ಲೂ ನೀನು
ಘಂಟಾಕರ್ಣ ಗಣೇಶ್ವರನನ್ನು ಅವಮಾನಗೊಳಿಸಿದುದರಿಂದ ನಿನ್ನ ದೇಹವು ಕುಷ್ಠ
ಪೀಡಿತವಾಯಿತು. ಮತ್ತೆ ಮನೋಹರ ಗಣೇಶನ ಪಾದೋದಕದಿಂದ ದೇಹವು ಶು
ದ್ಧವಾಯಿತು. ಅದನ್ನು ನೀನು ಮರೆತುಬಿಟ್ಟೆಯೊ? ॥ ೪೫ ॥ ಮತ್ತು ದಕ್ಷಬ್ರಹ್ಮನ

ಪಾದೋದಕೇನ ತಚ್ಛುದ್ಧಮಭೂತ್ತದ್ವಿಸ್ಮೃತಂನು ಕಿಂ ॥ ೪೬॥ ದಕ್ಷಸುಯೋಗತೋ ಭಗ್ನದಂತಸ್ಸ್ವಂತ್ಸ್ವಪದಾಚ್ಚ್ಯುತಃ । ಶಿಲಾಭೂ ವಾಂಗುಳೀರಾಖ್ಯೇಸ್ಥಾನೇಮೇಸ್ವಾಂಗುಳೀರ್ದಶ ॥ ೪೭ ॥ ಸಮರ್ಪ್ಯ ಲಭಥಾಸ್ತ್ಯಶ್ಚಸ್ವಪದಂ ಕಿಂನು ವಿಸ್ಮೃತಂ। ಕಷ್ಟಸ್ಯನಾರದಮುನೇಃಕ ಲಹಪ್ರೀತಚೇತಸಃ ॥ ೪೮ ॥ ವಚಾಂಸಿತ್ವಾಂಪದಭ್ರಷ್ಟಂಚಕ್ರುಸ್ತ್ವ ದವಿಲಂಬಿತಂ। ವಾರಾಣಸೀಮಿದಾನೀಂತ್ವಂಗತ್ವಾತತ್ರಯಥಾವಿಧಿ॥೪೯॥ ಸ್ಥಾಪಯಿತ್ವಾಲಿಂಗಮೇಕಂ ಬಾಲಾರ್ಕೇಶ್ವರನಾಮಕಂ । ಸ್ವಕಂಪದಂ ಲಭಸ್ವೇತಿತಮೂಚೇಕರುಣಾನಿಧಿಃ ॥ ೫೦ ॥ ವಾರಾಣಸೀಂತತಸ್ಸೂರ್ಯಃ ಪ್ರವಿಲುಠ್ಯವಿಲುಠ್ಯಚ। ಗತ್ವಾಬಾಲಾರ್ಕೇಶಮುರ್ವ್ಯಾಂ ಪ್ರತಿಷ್ಠಾಪ್ಯಾತಿ ಭಕ್ತಿತಃ॥ ೫೧ ॥ ಸ್ವಕೀಯಾಂ ಪದವೀಂಲೇಭೇತಸ್ಮಾಲ್ಲಿಂಗಪ್ರಸಾದಿ ನಾಂ । ಅನೂನೋಲೋಕವಿಖ್ಯಾತೋಮಹಿಮಾವರ್ಣ್ಯತೇಕಥಂ॥೫೨॥ ಇತಿಶಂಸಂಶ್ಚಂಭುಮೂರ್ತಿರ್ಮಲ್ಲಿಕಾರ್ಜುನ ದೇಶಿಕಃ । ಪ್ರಸಾದಿನಾಂಪ್ರ ಸಾದಸ್ಯಚಾಪಸನ್ಮಹಿಮೋನ್ನತಿಂ ॥ ೫೩ ॥ ತಚ್ಛ್ರುತ್ವಾತಚ್ಛಭೂ ದೇವಾಃ ಪಂಡಿತಾರಾಧ್ಯಮುನ್ನತಂ। ಸಂಸ್ತುವಂತೋಯಯುರ್ಹರ್ಷಾತ್ ಕೃತಾಂಜಲಿಪುಟಾಸ್ತದಾ ॥ ೫೪ ॥

---

ಸ್ನೇಹದಿಂದ ಅವನ ಯಜ್ಞಕ್ಕೆ ನೀನು ಹೋಗಿ ವೀರಭದ್ರಗಣೇಶನಿಂದ ಹಲ್ಲು ಮು ರಿಯಿಸಿಕೊಂಡು ಸ್ಥಾನಭ್ರಷ್ಟನಾಗಿ ಆಗ "ಶಿಲಾಭವಾಂಗುಳೀರ,, ವೆಂಬ ಕ್ಷೇ ತ್ರವನ್ನು ಹೊಂದಿ ನನ್ನನ್ನು ಪೂಜಿಸಿ ನಿನ್ನ ಹತ್ತು ಬೆರಳುಗಳನ್ನು ನನಗೆ ಸಮರ್ಪಿ ಸಿ ಪ್ರಸನ್ನನಾದ ನನ್ನಿಂದ ಆ ಹತ್ತು ಬೆರಳುಗಳನ್ನೂ ನಿನ್ನಸ್ವಸ್ಥಾನವನ್ನೂ ಹೊಂ ದಿದುದನ್ನುಮರತೆಯಾ?ವಿನುಃಜಗಳಗಂಟಿಗನಾದ ಕೆಟ್ಟನಾರದಋಷಿಯಮಾತುಗಳು ನಿನ್ನ ನ್ನು ಪದಭ್ರಷ್ಟನನ್ನು ಮಾಡಿದುವು. ಆದುದರಿಂದ ನೀನು ಬೇಗನೆ ಕಾಶಿಗೆ ಹೋಗಿ ಅಲ್ಲಿ ಬಾಲಾರ್ಕೇಶ್ವರನೆಂಬ ಹೆಸರುಳ್ಳ ಒಂದು ಲಿಂಗವನ್ನುವಿಧ್ಯುಕ್ತಪ್ರಕಾರವಾಗಿಸ್ಥಾ ಪಿಸಿ,ನಿನ್ನ ಪದವಿಯನ್ನು ಪಡದುಕೊಳ್ಳೆಂದು ದಯಾನಿಧಿಯಾದ ಪರಶಿವನು ಅಪ್ಪಣೆ ಮಾಡಿದನು. ಬಳಿಕ ಸೂರ್ಯನು ಉರುಳುರುಳಿಕೊಂಡು ಕಾಶಿಗೆಹೋಗಿ,ಬಾಲಾರ್ಕೇಶ್ವ ರನನ್ನು ಅತ್ಯಂತ ಭಕ್ತಿಯಿಂದ ಭೂಮಿಯಲ್ಲಿ ಪ್ರತಿಷ್ಠೆ ಮಾಡಿ, ತನ್ನಪದವಿಯನ್ನು ಪಡೆದುಕೊಂಡನು. ಆದುದರಿಂದ ಶಿವಲಿಂಗಪ್ರಸಾದಿಗಳ ಜಗತ್ಪ್ರಸಿದ್ಧವಾದ ಮಹಾ ಮಹಿಮೆಯನ್ನು ವರ್ಣಿಸುವುದು ಹೇಗೆ? ॥ ೫೦ ॥ ಎಂಬುದಾಗಿ ಶಿವಸ್ವರೂಪನಾದ ಮಲ್ಲಿಕಾರ್ಜುನ ಗುರೂತ್ತಮನು ಶಿವಪ್ರಸಾದಿಗಳ ಮತ್ತು ಪ್ರಸಾದದ ಮಹಿಮಾತಿಶ ಯವನ್ನು ನಿರೂಪಿಸಿದನು ॥೫೩ ॥ ಆ ಮಾತನ್ನು ಆ ಬ್ರಾಹ್ಮಣರು ಕೇಳಿ ಭಕ್ತಿಯಿಂದ ಕೈಮುಗಿದು ಶ್ರೇಷ್ಠನಾದ ಪಂಡಿತಾರಾಧ್ಯನನ್ನು ಹೊಗಳುವವರಾದರು. ಎಂಬಲ್ಲಿಗೆ

ಇತಿ......ದೀಕ್ಷಾಪ್ರಕರಣೇ ಪ್ರಸಾದಿನಾಂಮಾಹಾತ್ಮ್ಯ ಸಂಕೀರ್ತನೇ ಸುಕೇಶಿ ಚರಿತ್ರಕಥನಂ ನಾಮ ಚತುರ್ದಶೋಽಧ್ಯಾಯಃ.

---

## ಪಂಚದಶೋಽಧ್ಯಾಯಃ.

---

(ಸೂರಾಂಬಾ ಕಥನಂ.)

ಸದಾಶ್ರೀವೀರಸದ್ಭಕ್ತಿಸ್ಥಲಾಚಾರಾನುವರ್ತಿನೀ । ಪೋರಂಡಸೂರಸಾನಾಂಬೇತ್ಯಂಗನಾಭುವಿಶೋಭತೆ ॥ ೧ ॥ ತಸ್ಯಾಶ್ಚರಿತ್ರಮತ್ಯಂತವಿಚಿತ್ರಂತದಿಹೋಚ್ಯತೆ । ಪೋರಂಡನಾಮಾಗ್ರಹಾರೇಸ್ವಭರ್ತರಿಮೃತೇಪಿಸಾ ॥ ೨ ॥ ಜಂಗಮಾರಾಧನಂಪ್ರಾಗ್ವತ್ಕುರ್ವತೀಸಮವರ್ತತ । ತತ್ರತ್ಯಾಬ್ರಾಹ್ಮಣಾಸ್ಸರ್ವೇಜನಾಶ್ಚಾತ್ಯಂತಮೋಹಿತಾಃ ॥ ೩ ॥ ಧರಣೀಪತಿಮಭ್ಯೇತ್ಯಪ್ರೋಚುಃಕೋಪಸಂಪೀಡಿತಾಃ । ಗ್ರಾಮೇಽಸ್ಮಾಕಂಜನಾಧೀಶಮಹೋತ್ಪಾತೋಽದ್ಯವರ್ತತೆ ॥ ೪ ॥ ತಮದ್ಯವಕ್ತುಂನೃಪತೆವಯಂತ್ವಾಂಸಮುಪಾಗತಾಃ । ಸೂ

---

ಪಂಡಿತಾರಾಧ್ಯಚರಿತ್ರದಲ್ಲಿ ಪ್ರಸಾದಿ ಮಾಹಾತ್ಮ್ಯವನ್ನು ವರ್ಣಿಸುವೆಡೆಯಲ್ಲಿ ಸುಕೇಶಿ ಗಣನಾಥಚರಿತ್ರವನ್ನು ಹೇಳುವ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

## ಹದಿನೈದನೆಯ ಅಧ್ಯಾಯವು.

---

(ಸೂರಾಂಬೆಯ ಕಥೆ.)

ಯಾವಾಗಲೂ ವೀರಭಕ್ತಿಸ್ಥಲದ ಆಚಾರವನ್ನು ಹಿಡಿದು ನಡೆಯುತ್ತಿರುವ ಸೂರಾಂಬೆಯೆಂಬ ಒಬ್ಬ ಸ್ತ್ರೀಯು ಇರುವಳು. ಆಕೆಯ ಚರಿತ್ರವು ಅತ್ಯಾಶ್ಚರ್ಯಕರವಾದುದು. ಅದನ್ನು ನಾನೀಗ ಹೇಳುತ್ತೇನೆ. ಆಕೆಯು ಪೋರಂಡವೆಂಬ ಹೆಸರಿನ ಅಗ್ರಹಾರದಲ್ಲಿ ವಾಸಮಾಡಿಕೊಂಡಿರುತ್ತಾ ತನ್ನ ಗಂಡನು ಮೃತನಾಗಿಹೋದರೂ, ಮೊದಲಿನಂತೆಯೇ ಜಂಗಮಾರ್ಚನೆಯನ್ನು ಮಾಡಿಕೊಂಡಿರುತಿದ್ದಳು. ಆ ಅಗ್ರಹಾರದಲ್ಲಿದ್ದ ಬ್ರಾಹ್ಮಣರೂ ಇತರರೂ ಸಹ ಅಜ್ಞಾನಾವಿಷ್ಟರಾಗಿ ಆಕೆಯಮೇಲೆ ಕೋಪಗೊಂಡು ದೊರೆಯಬಳಿಗೆ ಹೋಗಿ, ದೊರೆಯೆ ! ನಮ್ಮ ಗ್ರಾಮದಲ್ಲಿ ಈಗ ಬಂದು ಅನಿಷ್ಟಕಾರಿಯಾದ ಉತ್ಪಾತವು ಜರಗುತ್ತಿದೆ, ಅದನ್ನು ನಿಮ್ಮಲ್ಲಿ ಶ್ರುತಪಡಿಸುವುದಕ್ಕಾಗಿ ನಾವು ಬಂದಿರುತ್ತೇವೆ. ನಮ್ಮ ಊರಿನಲ್ಲಿ ಸೂರಾಂಬೆಯೆಂದು ಹೆಸರಾಂತ ಒಬ್ಬ ಬ್ರಾಹ್ಮಣ

ರಾಂಬೇತಿಪ್ರಸಿದ್ಧಾಸ್ಮದ್ಗ್ರಾಮೇಕಾಚಿದ್ದ್ವಿಜಾಂಗನಾ ॥ ೫ ॥ ಸ್ಥಿತ್ವಾಪಿಸ್ಥಿತ್ವಾ ಸಾಧುಮಾರ್ಗೇಸ್ವವೈಧವ್ಯೋಚಿತಾಂಕ್ರಿಯಾಂ । ವಿಸೃಜ್ಯಾಭಕ್ಷಯತ್ಕಿಂವಾ ದುತ್ತೂರಫಲಮದ್ಯಹಿ ॥ ೬ ॥ ಭ್ರಾಂತಿಂಸಮಾಗಮತ್ಕಿಂವಾಲಲಾಟೇಗಂಡ ಯೋಸ್ತಥಾ । ಅಖಿಲಾಂಗೇಷುಚಾರಿಷ್ಯವಿಭೂತಿಮತಿಸಾಂದ್ರತಾಂ ॥ ೭ ॥ ಕಂಠಶ್ರುತಿಶಿರೋಹಸ್ತೈರ್ಧೃತ್ವಾರುದ್ರಾಕ್ಷಮಾಲಿಕಾಃ । ಶುದ್ಧಭಕ್ತಿಪರಾ ಸ್ತ್ರೀವಭುವಿಭಿಕ್ಷಾರ್ಥಿನಶ್ಚರಾನ್ ॥ ೮ ॥ ದೃಷ್ಟ್ವೈತಏವಸತ್ಪಾತ್ರಂಸ ತ್ಪಾತ್ರಮಿತಿಭಾವತಃ । ಸೇವತೇತತ್ಪದಜಲಂತದುಚ್ಛಿಷ್ಟಂಚನಿತ್ಯಶಃ ॥ ೯ ॥ ಕಿಂಚಸಾಪಾಪನಿರತಾಸ್ವಾತ್ಮನ್ಯೇವನಕೇವಲಂ । ಯೋಜಯಾಮಾಸಾಂತ್ಯ ಜತ್ವಮಸ್ಮದ್ಗ್ರಾಮೇಪಿಸರ್ವತಃ ॥ ೧೦ ॥ ವಸತಿಂದರ್ಶಯಿಷ್ಯಾಮಶ್ಚಂಡಾಲೈ ಸ್ಸಹತಾಂಮುದಾ । ತದಾತ್ವಂದಂಡಯಸಿಕಿಂನೃಪೇತ್ಯೂಚುರ್ದ್ವಿಜಾತಯಃ ॥ ೧೧ ತತೋಬಭಾಷೇತಾನ್ವಿಪ್ರಾಂತ್ಸರಾಜಾಕೋಪದೀಪಿತಃ । ಕರಿಷ್ಯಾಮಿತಥಾ ಮಪ್ಯಂಸಕಾಲೋಜ್ಞಾಪ್ಯತಾಮಿತಿ ॥ ೧೨ ॥ ರಾಜ್ಞಾನಿಯುಕ್ತಾಸ್ತತ್ಕಾಲಂ ವಿನ್ಯುಶಂತೋಽವಸನ್ದ್ವಿಜಾಃ । ತತಃಖಚೂರ್ಣನವದನಸ್ಸ್ಥೂಲಬಾಹುಃ ಕೃಶಾಧರಃ ॥ ೧೩ ॥ ಅತಿಬರ್ಬರಪಾಶ್ವಾಂತಃಕಿರ್ಣೈಃಪಾರ್ಶ್ವಾತಳೈರ್ಯುತಃ।

---

ಸ್ತ್ರೀಯಿರುವಳು ॥೫॥ ಅವಳು ಬಳ್ಳಿಯ ನಡೆಯಲ್ಲಿರುತ್ತಿದ್ದು, ತನ್ನ ಮುಂಡೆತನಕ್ಕೆ ಯೋಗ್ಯವಾದ ಕ್ರಿಯೆಗಳನ್ನು ಬಿಟ್ಟುಬಿಟ್ಟು, (ಅವಳು ಉನ್ಮತ್ತದ ಕಾಯನ್ನು ತಿಂದಳೋ! ಅಥವಾ ಬುದ್ಧಿಭ್ರಮಣೆಯುಂಟಾಯಿತೋ? ಏನೋ?) ಈಗ ತನ್ನ ಹಣೆಯಲ್ಲೂ ಕಪೋಲಗಳಮೇಲೂ ಸರ್ವಾಂಗದಲ್ಲೂ ಬಲವಾಗಿ ಬೂದಿಯನ್ನು ಬಳಿದು ಕೊಂಡು, ಕೊರಳು ಕಿವಿ ತಲೆ ಕೈಗಳಲ್ಲಿ ರುದ್ರಾಕ್ಷಿಗಳಸರವನ್ನು ಧರಿಸಿ, ಪರಿಶುದ್ಧಭಕ್ತಿ ಸಂಪನ್ನಳಾದ ಸ್ತ್ರೀಯಂತೆ ಭಿಕ್ಷೆಗಾಗಿ ಬಂದ ಜಂಗಮರನ್ನು ಕಂಡಕೂಡಲೇ ಇವರೇ ಪರಮ ಸತ್ಪಾತ್ರವೆಂದು ಭಾವಿಸಿ, ಅವರ ಪಾದೋದಕವನ್ನೂ ಎಂಜಲನ್ನೂ ಪ್ರತಿದಿನವೂ ಸೇವಿಸುತ್ತಾಳೆ ॥ ೯ ॥ ಮತ್ತು ಆ ಪಾಪಿಷ್ಠೆಯು ಇದರಿಂದ ತಾನು ಮಾತ್ರವೇ ಚಂಡಾಲೆ ಯಾಗಿರದೆ, ನಮ್ಮ ಗ್ರಾಮದಲ್ಲೆಲ್ಲಾ ಹೊಲೆಗೆಲಸಿರುವಳು ॥ ೧೦ ॥ ಅವಳು ತನ್ನಮನೆ ಯಲ್ಲಿ ಆ ಚಂಡಾಲರನ್ನು ಸೇರಿಸಿಕೊಂಡಿರುವ ಸಮಯವನ್ನು ತಿಳಿದು ಬಂದು ನಿನ್ನೊ ಡನೆ ಅರುಹುತ್ತೇವೆ. ಆಗ ನೀನು ಬಂದು ಅವಳನ್ನು ಶಿಕ್ಷಿಸುವೆಯಾ? ಎಂದು ಕೇಳಿ ದರು ॥ ೧೧ ॥ ದೊರೆಯು ಅದನ್ನೆಲ್ಲ ಕೇಳಿ, ಕೋಪದಿಂದ ಕೆರಳಿ, ಹಾಗೆಯೇ ಆಗಲಿ: ತಕ್ಕ ಸಮಯವನ್ನು ಕಾದು ತಿಳಿಸಿರಿ, ನಾನು ಶಿಕ್ಷಿಸುತ್ತೇನೆ ; ಎಂದು ಉತ್ತರ ಕೊಟ್ಟನು ॥೧೨॥ ಹೀಗೆ ದೊರೆಯಪ್ಪಣೆಯನ್ನು ಪಡೆದ ಬ್ರಾಹ್ಮಣರುಗಳು ತಕ್ಕಸಮಯವನ್ನು ಹೊಂಚು ಹಾಕುತ್ತಿದ್ದರು. ಕೆಲಕಾಲದಮೇಲೆ ಪರಶಿವನು ಚಂಡಾಲವೇಷವನ್ನು ಧರಿಸಿ ಆ ಗ್ರಾ ಮಕ್ಕೆ ಬಂದನು. ಅವನು ಬಾತುಗೊಂಡ ಮುಖವುಳ್ಳವನಾಗಿಯೂ, ದಪ್ಪನಾದ

ಕೃತ್ತಿಭೇದನತಃಕ್ಲಿಷ್ಟಕರಭೇಣೋಪಲಕ್ಷಿತಃ ॥ ೧೪ ॥ ಉಚ್ಚಾಳಿಕಃಕುಬ್ಜಕಂಠಃಖಂಜೋಮಲಿನವಿಗ್ರಹಃ । ಹೇಯದಂತಮಲೋವಕ್ರಪೃಷ್ಠಃಕುಂಭಸನೋದರಃ ॥ ೧೫ ॥ ಅಕ್ಷ್ಣಾಕಾಣೋಘುಕುಟನಾಸ್ಲಂಬಮಾನಶ್ರುತಿದ್ವಯಃ । ವಕ್ರೋರುನಾಸೋವಿಕಟಾಂಗುಳಿಕಃಕುನಖಃಖರಃ ॥ ೧೬ ॥ ಅಂತರ್ವಕ್ರಪದದ್ವಂದ್ವೋಮಲಿನಸ್ವಕಟೀಪಟಃ । ಅಚ್ಛಸ್ಫಟಿಕರುದ್ರಾಕ್ಷಧರೋಭೂತಿವಿಭೂಷಣಃ ॥ ೧೭ ॥ ನೀಚಕೇಶಾಂತರೆಧೃತ್ವಾಪ್ರಮೋದಾಚ್ಛಿವಸಜ್ಜಿಕಾಂ । ಗ್ರಥಿತಾಂಶಿವಸೂತ್ರೇಣವಿಶೀರ್ಣಮಲಿನಾಂಶುಕಃ ॥ ೧೮ ॥ ಚರ್ಮರಾಶ್ಯಸ್ಥಿಭಾರಂಚನಿಧಾಯಾಸೇತಿಕುಂಚಿತಃ । ಚರ್ಮರಜ್ಜ್ವಗ್ರಜಂಯುಷ್ಟಿಂಗೃಹೀತ್ವಾನಿಜಬಾಹುನಾ ॥ ೧೯ ॥ ಶಿವಷ್ಠಂಡಾಲವೇಷೇಣತಂಗ್ರಾಮಂಪ್ರಾಪಸತ್ವರಂ । ಆಗಚ್ಛತ್ಸುಬ್ರಾಹ್ಮಣೇಷುದೂರತೋಽಪಸರನ್ಮುಹುಃ॥೨೦ ವಿಪ್ರಾನ್ವಿಮೃಶತಸ್ಸರ್ವಾನಜಾನಾನಇವಸ್ವಯಂ । ವಿವೇಶಸೂರವಾಂಬಾಯಾನಿಕೇತನಮಕಂಪಿತಃ ॥ ೨೧ ॥ ಸಾಸಮಾಗತ್ಯಸಪಸಾಪ್ರಣಿಪತ್ಯಚಪಾದಯೋಃ । ತಚ್ಚರ್ಮರಜ್ಜುನಿಚಯಂಸಂಸ್ಥಾಪ್ಯಾಧಾರದಾರುಣಿ ॥ ೨೨ ॥ ನಿಕೇತನವಲೀಕೇಚಯಷ್ಟಿಂತಾಮಾದರಾನ್ವಿತಾ । ಸಂಸ್ಥಾಪ್ಯವೇದಿಕಾಮಧ್ಯೇಶ

---

ತೋಳುಗಳುಳ್ಳವನಾಗಿಯೂ, ಬಣಗಿ ಸಣ್ಣಾದಾದ ತುಟಿಯುಳ್ಳವನಾಗಿಯೂ ಮೂಳೆ ಬಿಟ್ಟುಕೊಂಡಿರುವ ಪಕ್ಕೆಗಳಲ್ಲಿ ಜಿಡ್ಡುಗಟ್ಟಿರುವವನಾಗಿಯೂ, ಕತ್ತಿಯಿಂದ ಚರ್ಮವನ್ನು ಕುಯ್ಯುವುದರಿಂದೊರಟಾದ ಕೈಮುಗ್ಗುಲುಳ್ಳವನಾಗಿಯೂ, ಉಬ್ಬುಹಣೆ ಕುಗ್ಗಿದ ಕತ್ತು ಕುಂಟುಗಾಲು ಕೊಳಕು ಮೈಗಳುಳ್ಳವನಾಗಿಯೂ, ಅಸಹ್ಯಕರವಾದ ಹಲ್ಲಿನ ಕೊಳೆಯುಳ್ಳವನಾಗಿಯೂ, ಡೊಂಕಾದ ಬೆನ್ನುಳ್ಳವನಾಗಿಯೂ, ಗಡಿಗೆಯಂತೆ ಹೊಟ್ಟೆಯುಳ್ಳವನಾಗಿಯೂ ಕಿರುಗಣ್ಣು ಕೂಡಿದಹುಬ್ಬು ಜೋಲುಗಿವಿ ಡೊಂಕಾದ ಮತ್ತು ದಪ್ಪನಾದ ಮೂಗು ಸೊಟರುಬೆರಲು ಕೆಟ್ಟುಗುರು ಬಳಕ್ಕೆ ತಿರುಗಿಕೊಂಡಿರುವಕಾಲು ಇವುಗಳುಳ್ಳವನಾಗಿಯೂ, ಕೊಳಕಾದ ಉಡುಪಾವಡೆಯುಳ್ಳವನಾಗಿಯೂ, ನಿರ್ಮಲವಾದ ಸ್ಫಟಿಕದಮಣಿಗಳ ರುದ್ರಾಕ್ಷಿಗಳ ಸರವನ್ನೂ ವಿಭೂತಿಯನ್ನೂ ಧರಿಸಿದವನಾಗಿಯೂ, ತರಟುದಲೆಯು ಕೂದಲಿನೊಳಗೆ ಶಿವದಾರದಿಂದ ಕಟ್ಟಿದ ಲಿಂಗದ ಕರಡಿಗೆಯನ್ನು ಸಂತೋಷದಿಂದ ಧರಿಸಿದವನಾಗಿಯೂ, ಹರಿದು ಕೊಳಕಾದ ಬಟ್ಟೆಯನ್ನು ಹೊದೆದವನಾಗಿಯೂ, ಹೆಗಲಮೇಲೆ ಚಕ್ಕಳದ ಪಿಂಡಿಯನ್ನೂ ಮೂಳೆಯ ಹೊರೆಯನ್ನೂ ಹೊತ್ತು ಕೈಯಲ್ಲಿ ಮಿಳಿಯನ್ನೂ ದೊಣ್ಣೆಯನ್ನೂ ಹಿಡಿದವನಾಗಿಯೂ ಇದ್ದನು. ಬಂದಬಂದ ಬ್ರಾಹ್ಮಣರೆಲ್ಲ ಇವನನ್ನು ಕಂಡಕೂಡಲೇ ದೂರದೂರವಾಗಿಯೇ ಹೊರಟು ಹೋಗುತ್ತಿದ್ದರು ॥ ೨೦ ॥ ಈತನಾದರೋ ತನ್ನನ್ನು ಬ್ರಾಹ್ಮಣರೆಲ್ಲರೂ ಗಮನವಿಟ್ಟು ನೋಡುತ್ತಿರುವರೆಂಬುದನ್ನು ತಿಳಿದಿದ್ದರೂ ತಿಳಿಯದಿದ್ದವನಂತೆಯೇ ಧೈರ್ಯವಾಗಿ ಸೂ

ಸ್ತ್ರೀಮಾರಾಂನಿಧಾಯಚ ॥ ೨೪ ॥ ಪ್ರಕ್ಷಾಳ್ಯಪಾದೌತತ್ತೀರ್ಥಂಸಿಪೀ
ಯಾತಿಪ್ರಮೋದತಃ । ಗೃಹಸ್ಯಾಭ್ಯಂತರಂನೀತ್ವಾಪೀಠೇಸಮ್ಯಜ್ನಿವೇಶ್ಯತಂ ॥
ತೂರ್ಣಂಕವಾಟಮಾಛಾದ್ಯಸಮ್ಯಕ್ಸಂಬಧ್ಯಚಾರ್ಗಳಂ । ಲಿಂಗಪೂಜಾಸಾ
ಧನಾನಿದತ್ವಾಭಕ್ತಿಪುರಸ್ಸರಂ ॥ ೨೫ ॥ ನಾನಾಪಕ್ವಾನ್ನಸಂಯುಕ್ತಂನೈವೇ
ದ್ಯಂನಯುನಪ್ರಿಯಂ । ವಿಸ್ತೀರ್ಣೇಕದಳೀಪತ್ರೇಚಕಾರಪರಿವೇಷಣಂ ॥ ೨೬ ॥
ಭೋಜನಂಕುರ್ವತಿಶಿವೇತಸ್ಮಿಂತ್ಸಂಭೂಯಭೂಸುರಾಃ । ಏತಾವತ್ಕಾಲಮ
ಸ್ಮಾಕಂಗ್ರಾಮೇಚಂಡಾಲಸಂಕರಂ ॥ ೨೭ ॥ ಕುರ್ವತೀತ್ವಂಗೃಹೀತಾಸಿ
ಕಥಂಸೂರಾಂಬಿಕೇಮನಾಕ್ । ಕ್ವಗಚ್ಛಸೀತೋಭಿಕ್ಷೂಣಾಂಚರಾಣಾಂ
ಭಜನೇಫಲಂ ॥ ೨೮ ॥ ಪ್ರಾಪ್ತಾಸಿತಿಷ್ಠತಿಷ್ಠೇತಿಭರ್ತ್ಸಯಂತಃಪರಸ್ಪರಂ ।
ಕವಾಟಮಾಛಾದ್ಯಶೀಘ್ರಂದೃಢಂಬದ್ಧ್ವಾರ್ಗಳಂತಥಾ ॥ ೨೯ ॥ ಗೃಹಸ್ಯಪರಿತಃ
ಕಾಂಶ್ಚಿದ್ದ್ವಾರಿಸಂಸ್ಥಾಪ್ಯಕಾಂಶ್ಚನ । ರೇರೇಯಜ್ಞಮಹಾಜಂನಮಾಲಾರಾ
ಯ್ಯೈಹಿರೇಇತಃ ॥ ೩೦ ॥ ಅಸ್ಮಿನ್ಮಹೀಸುರಾಸ್ಸರ್ವೇಜನಾಶ್ಚಗ್ರಾಮಪಾಲಕಾಃ ॥
ಆನೇತವ್ಯಾಃಕ್ಷಿಪ್ರಮಿತಿಪ್ರೇಷಯಾಮಾಸುರುದ್ಧತಾಃ ॥ ೩೧ ॥ ತತೋ
ದಾಮೋದರಸ್ಸೋಮಯಾಜೀಪೆದ್ದಿಶ್ಚಮಂಚನಃ । ತಥಾವಾಮನಭಟ್ಟಾಖ್ಯೋ

---

ರಾಂಬೆಯ ಮನೆಗೆ ಹೋದನು ॥ ೨೩ ॥ ಆಕೆಯು ಥಟ್ಟನೆ ಬಂದು ಅತಿಥಿಯ ಪಾದಗ
ಳಿಗೆ ನಮಸ್ಕರಿಸಿ, ಏಳಿಯ ಸೀಬಿಯನ್ನು ಹೊಸ್ತಿಲಮೇಲಿಟ್ಟು ಪ್ರೀತಿಯಿಂದ ಕೈದೊ
ಣ್ಣೆಯನ್ನಿಸಿಕೊಂಡು ಗೂರಿನಮೇಲಿಟ್ಟು, ಚಕ್ಕಳವನ್ನು ಜುಚ್ಚುವ ಶಸ್ತ್ರವನ್ನೂ
ಕತ್ತಿಯನ್ನೂ ಜಗತಿಯಮೇಲಿರಿಸಿ, ॥ ೨೪ ॥ ಪಾದಗಳನ್ನು ತೊಳೆದು, ಅತ್ಯಾನಂದ
ದಿಂದ ತೀರ್ಥವನ್ನು ಪಾನಮಾಡಿ, ಆತನನ್ನು ಮನೆಯೊಳಕ್ಕೆ ಕರೆದುಕೊಂಡು ಹೋಗಿ.
ಪೀಠದಮೇಲೆ ಚೆನ್ನಾಗಿ ಕುಳ್ಳಿರಿಸಿ, ಬೇಗನೆ ಕದವನ್ನು ಮುಚ್ಚಿ, ಅಗಣಿಯನ್ನು ಹಾಕಿ,
ಭಕ್ತಿಯಿಂದ ಲಿಂಗಪೂಜಾಸಾಮಗ್ರಿಗಳನ್ನು ತಂದಿಟ್ಟು, ದೊಡ್ಡ ಬಾಳೆಲೆಯಮೇಲೆ
ನಾನಾವಿಧದ ಪಕ್ವಾನ್ನಗಳನ್ನೆಲ್ಲ ನೈವೇದ್ಯಕ್ಕಾಗಿ ಅಂದವಾಗಿ ನೀಡಿ, ಪರಿವೇಷಣವನ್ನು
ಹಾಕಿದಳು ॥ ೨೬ ॥ ವೇಷಧಾರಿಯಾದ ಶಿವನು ಭೋಜನವನ್ನು ಮಾಡುತ್ತಿದ್ದನು.
ಇತ್ತ ಬ್ರಾಹ್ಮಣರೆಲ್ಲರೂ ಒಟ್ಟುಗೂಡಿದರು. ,, ಎಲೆ ಸೂರಾಂಬೆ! ನೀನು ಇದುವ
ರೆಗೂ ನಮ್ಮ ಗ್ರಾಮದಲ್ಲಿ ಚಂಡಾಲಸಾಂಕರ್ಯವನ್ನುಂಟುಮಾಡುತ್ತಿದ್ದೆ. ಈಗ ನಮಗೆ
ಹೇಗೆ ಸಿಕ್ಕಿಬಿದ್ದೆ ನೋಡಿದೆಯಾ ? ಇನ್ನೆಲ್ಲಿಗೆ ತಪ್ಪಿಸಿಕೊಂಡು ಹೋಗುತ್ತೀಯೆ ?
ಭಿಕ್ಷುಕರಾದ ಜಂಗಮರನ್ನು ಸೇವಿಸಿದುದಕ್ಕೆ ತಕ್ಕಫಲವನ್ನು ಹೊಂದಿದೆ ; ತಡೆ ತಡೆ"
ಎಂದು ಒಬ್ಬರಿಗೊಬ್ಬರು ಗರ್ಜಿಸಿ ನುಡಿದು ಭಯಪಡಿಸುತ್ತ, ಹೊರಗೆ ಬಾಗಿಲನ್ನು ಬಿಗಿ
ಯಾಗೆಳೆದು ಅಗಣಿಯನ್ನು ಹಾಕಿ ಬದ್ರಮಾಡಿ, ಮನೆಯಸುತ್ತಲೂ ಬಾಗಿಲಲ್ಲೂ ಕೆಲ
ರನ್ನು ಕಾವಲಿಟ್ಟು, ,, ಎಲೊ ಯಜ್ಞಮಹಾಜನ್ನ ! ಮಾಲಾರಾಯ ! ಇತ್ತ ಬಾ ; ॥೩೦

ಪುಟಶಾಸ್ತ್ರೀಚಕೇಶವಃ ॥ ೩೧ ॥ ವಾಮನಾಹ್ವಯಕೂಚಿಶ್ಚ ತತಃಪಾಯಸ
ಮಲ್ಲಯಃ । ಚಪ್ಪಟ್ಲಪೆದ್ದಿಶ್ಚ ಪುನಃಪಪ್ಪುಕೇಶವಸಂಜ್ಞಕಃ ॥ ೩೨ ॥ ಮೌನ
ಮಾದನಮಂಚಿಶ್ಚ ದೂಸಯೋಧೂರ್ತವಿಟ್ಠಲಃ । ಉಷ್ಣಪಿನ್ನೊಜ್ಝನಾಮಾಚ
ಕಪ್ಪಕೃಷ್ಣಮಪಿನಚ ॥ ೩೪ ॥ ವಾರ್ತಾಕಯಜ್ವನೋಗ್ರಂಥಿಭಾಸ್ಕರೋ
ಮಿಂಡಮಲ್ಲಭಃ । ಕಂಡಿಗಂಜಾಯಿತ್ತಭಟ್ಟಃಕಾಮಯಜ್ವೋಮುಕುಂ
ದನಃ ॥ ೩೫ ॥ ತಥಾದಕ್ಷಿಣಗೋಪಾಲಮಂಚಿರ್ಮೇಡುನಚಟ್ಟನಃ । ಸದುಷ್ಟ
ರಾಘವೋಮಾಡಕಡುಪಪ್ಪಯ್ಯಯರ್ರನೌ ॥ ೩೬ ॥ ಸಾರ್ಧಮೀಶ್ವರ
ಭಟ್ಟೇನಯುತ್ತುಂಗೋಲಾದನಸ್ತಥಾ । ಇತ್ಯಾದ್ಯಾಬ್ರಾಹ್ಮಣಾಸ್ಸರ್ವೇಜನಾ
ಶ್ಚಗ್ರಾಮಪಾಲಕಾಃ ॥ ೩೭ ॥ ಆಗತಾಸ್ತದನುಕ್ಷಿಪ್ರಮಾಹೂಯಾನೀಯ
ಭೂಪತಿಂ । ತದ್ದ್ವಿಜಾನಾಂಮುಖ್ಯತಮಃಕಶ್ಚಿದಾಹನರೇಶ್ವರಂ ॥೩೮॥ ಪರಿ
ಪಕ್ವಮಿದಾನೀಂತತೂರಾಂಬಾತಪಸಃಫಲಂ । ನಕಿಮೇವಂವಿಧಾತವ್ಯಂ
ಸ್ತ್ರೀಭಿಃಪತ್ಯೌಮೃತೇಪರಂ ॥ ೩೯ ॥ ಉಪಾನಚ್ಚರ್ಮರಜ್ಜೂನಾಂವಿಕ್ರ
ಯಾರ್ಥಮಿಹಾಗತಃ । ಯಃಕಶ್ಚನಾಂತ್ಯಜಸ್ಸಮ್ಯಕ್ತಂಸಮಾರಾಧಯ
ತ್ಯಸೌ ॥ ೪೦ ॥ ಪಶ್ಯವೇದ್ಯಾಂತದಾರಾಂಚಶಸ್ತ್ರಂಚರ್ಮಾಣಿಭೂಪತೇ । ಏವಂ

---

ಈ ಊರಿನಲ್ಲಿರುವ ಮುಖ್ಯಬ್ರಾಹ್ಮಣರನ್ನೂ ಇತರರನ್ನೂ ತಳಾರಿಗಳನ್ನೂ ಇಲ್ಲಿಗೆ ಬೇಗನೆ ಕರೆದುಕೊಂಡುಬಾ" ಎಂದು ಹೇಳಿಕಳುಹಿದರು ॥ ೩೧ ॥ ಬಳಿಕ ದಾಮೋದರ ಸೋಮಯಾಜಿ, ಪೆದ್ದಿ, ಮಂಚನ, ವಾಮನಭಟ್ಟ, ಪುಟ್ಟಶಾಸ್ತ್ರಿ, ಕೇಶವ, ವಾಮನ ಕೂಚಿ, ಪಾಯಸಮಲ್ಲಯ್ಯ............ಮುಕುಂದ, ದಕ್ಷಿಣಗೋಪಾಲಮಂಚಿ, ಮೇಡುನಚಟ್ಟಣ್ಣ, ದುಷ್ಟರಾಘವ, ಮಾಡಕಡುಪಪ್ಪಯ್ಯ, ಯರ್ರಣ್ಣ, ಈಶ್ವರಭಟ್ಟ, ಯುತ್ತುಂಗೋಲಾದನ ಮೊದಲಾದ ಬ್ರಾಹ್ಮಣರೂ, ಊರಿನ ಸಕಲಜನರೂ ತಳಾರಿಗಳೂ ಕೂಡ ಬಂದರು ॥ ೩೭ ॥ ಬಳಿಕ ರಾಜನನ್ನು ಕರೆತಂದು, ಬ್ರಾಹ್ಮಣರಲ್ಲಿ ಮುಖ್ಯನಾದವನೊಬ್ಬನು ದೊರೆಯನ್ನು ಕುರಿತು—"ಸೂರಾಂಬೆಯು ಮಾಡಿದ ತಪಸ್ಸಿನಫಲವು ಈಗ ಪರಿಪಕ್ವವಾಯಿತು. ಗಂಡನು ಸತ್ತರೆ ಹೆಂಗುಸರು ಹೀಗಲ್ಲವೆ ಮಾಡುವುದು! ಯಾವನೊ ಒಬ್ಬ ಮಾದಿಗನು ಎಕ್ಕಡವನ್ನೂ ಮಿಳಿಯನ್ನೂ ಮಾರುವುದಕ್ಕೆ ಇಲ್ಲಿಗೆ ಬಂದಿದ್ದನು. ಇವಳು ಅವನನ್ನು ಚೆನ್ನಾಗಿ ಪೂಜಿಸುತ್ತಾಳೆ! ॥ ೪೦ ॥ ದೊರೆಯೇ ಜಗತಿಯಮೇಲೆ ಅವನ ಕುಯ್ಗತ್ತಿಯನ್ನೂ ಶಸ್ತ್ರವನ್ನೂ ಚಕ್ಕಳಗಳನ್ನೂ ನೋಡು." ಎಂದು ಬ್ರಾಹ್ಮಣನು ಹೇಳುತ್ತಿರಲಾಗಿ, ಮನೆಯೊಳಗಿರುವ ಪರಶಿವನು ॥ ೪೧ ॥ ಅಗಿಯುವ ತಿನ್ನುವ ಪದಾರ್ಥಗಳನ್ನೆಲ್ಲ ಝುರುಝುರು ಕಟುಂ ಎಂದು ಮೊದಲಾಗಿ ಶಬ್ದವಾಗುವಂತೆ ತಿಂದು, ಪಾಯಸ ಪಾನಕ ಮೊದಲಾದ ಪದಾರ್ಥಗಳನ್ನು ಸೊರ್ರನೆ ಸೊರೆದು ಶಬ್ದವಾಗುವಂತೆ ಬಾಯ್ಮುಕ್ಕಳಿಸಿ, ಈ ರೀತಿಯಲ್ಲಿ ಭೋಜನವನ್ನು ಮಾಡಿದನು. ಆ

ದ್ವಿಜೇಕಥಯತಿಮಹಾದೇವೋಽಂತರಸ್ಥಿತಃ || ೪೧ || ಜುರ್ಝುರುಧ್ವನಿದಾರ್ಢ್ಯ
ಚೋಷ್ಯಾಸ್ವಾದ್ಯಾನಪಿಸನಿಸ್ವನಂ | ಪಾನೀಯಮುಪಸಂಗೃಹ್ಯಂತ್ಸಶಬ್ದಂ
ಸ್ವಾದುಶೀತಳಂ || ೪೨ || ಗಂಡೂಷಧ್ವನಿನಾಕುರ್ವನ್ನಕರೋದ್ಭೋಜನಂ
ಶಿವಃ | ತಚ್ಛ್ರೋತುಮಕ್ಷಮಾವಿಪ್ರಾಧರಣೀಪತಿಮಬ್ರುವನ್ || ೪೩ ||
ಆಲೋಕಯಮಹೀಪಾಲಮೂಢೋಯಂಸದನಾಂತರೇ | ವೇಷಧಾರೀಸಮಾ
ಸೀನಃಕಶ್ಚಿದಾರ್ಯಇವಸ್ವಯಂ || ೪೪ || ಅಗ್ರಹಾರೋಽಯಮಿತಿಚದ್ವಿಜ
ಗೇಹಮಿದಂತ್ವಿತಿ | ಗೃಹೀತುಮೇತೇತಿಷ್ಠಂತಿಮಾಮಿತ್ಯೇವಾವಿಚಾರಯನ್ ||
ನಿಶ್ಚಿಂತಮಧುನಾಭುಙ್ತೇತಸ್ಯಾಸೀನ್ಮರಣಂಧ್ರುವಂ | ಇಮಾಂಪಶ್ಯದುರಾ
ಚಾರಾಂಸತುತಿಷ್ಠತುಸಾಹಸೀ || ೪೬ || ಕುಲಶೀಲಗುಣಾಚಾರಧರ್ಮನಾಶೋ
ಭವೇದಿತಿ | ಅಸೌದುರ್ಜಾತಿರಿತಿವಾಬಂಧೂನಾಂಹಾಸ್ಯತೇತಿವಾ || ೪೭ ||
ಅವಿಚಾರ್ಯಕುಲಾಚಾರಮಾತ್ಮನೋಽಪ್ಯಕ್ಷಿಪದ್ಬಿಲೇ | ಇತಿಸಂಭ್ರಮತೋ
ವಿಪ್ರಾಸ್ಸರ್ವೇಽಪಶ್ಯತಪಶ್ಯತ || ೪೮ || ಭಿತ್ತ್ಯೋವಿನಿಪಾತ್ಯಂತಾಂಕವಾಟಂ
ಭಿದ್ಯತಾಂದೃಢಂ | ಆನೀಯತಾಮುಭೌಶೀಘ್ರಂಪಸ್ಯತಾಮಿತಿದುದ್ರುವುಃ || ೪೯
ಏವಂಬಾಹ್ಯೇಸಮಾಕೀರ್ಣೇಜನ್ಯೇಸೂರಾಂಬಿಕಾತತಃ | ನಿಷ್ಕ್ರಮ್ಯಭವನಾ

---

ಶಬ್ದವನ್ನು ಬ್ರಾಹ್ಮಣರು ಕೇಳಿ ಸೈರಿಸಲಾರದೆ, ದೊರೆಯನ್ನು ಕುರಿತು ಹೇಳಿದರೇನೆಂ
ದರೆ-- || ೪೩ || ಪ್ರಭುವೆ ! ನೋಡು, ದಡ್ಡನು ಮನೆಯೊಳಗೆ ಒಬ್ಬ ಪೂಜ್ಯನಂತೆ
ವೇಷವನ್ನು ಧರಿಸಿ ಕುಳಿತುಕೊಂಡು, "ಇದು ಅಗ್ರಹಾರವೆನುತಲಾಗಲಿ, ಇದು ಬ್ರಾ
ಹ್ಮಣರ ಮನೆಯೆನುತಲಾಗಲಿ, ಇವರೆಲ್ಲರೂ ನನ್ನನ್ನು ಹಿಡಿದುಕೊಳ್ಳುವುದಕ್ಕಾಗಿ ನಿಂತಿ
ರುವರೆಂದಾಗಲಿ, ಯೋಚಿಸದೆ || ೪೫ || ನಿಶ್ಚಿಂತೆಯಾಗಿ ಈಗ ಭೋಜನಮಾಡುತ್ತಿದ್ದಾನೆ.
ಅವನಿಗೆ ನಿಜವಾಗಿ ಮರಣವು ಒದಗಿರಬೇಕು. ಆ ಸಾಹಸಶಾಲಿಯು ಹಾಗಿರಲಿ; ಈ
ದುರಾಚಾರಿಣಿಯನ್ನು ನೋಡು ||೪೬|| ಕುಲ ಶೀಲ ಗುಣ ಆಚಾರ ಧರ್ಮ ಇವುಗಳು ಕೆಡು
ವುವೆಂದಾಗಲಿ, ಇವನು ನೀಚಜಾತಿಯವನೆಂದಾಗಲಿ, ನಂಟರುಗಳು ಪರಿಹಾಸಮಾಡುವರೆಂ
ದಾಗಲಿ, ಆಲೋಚನೆಮಾಡದೆ, ತನ್ನ ಕುಲಾಚಾರವನ್ನೆಲ್ಲಾ ಪಾತಾಳಕ್ಕೆ ಹಾಕಿಬಿಟ್ಟಳು."
ಎಂದು ಹೇಳಿ, ಎಲ್ಲ ಬ್ರಾಹ್ಮಣರೂ—ನೋಡಿರಿ ನೋಡಿರಿ, || ೪೮ || ಗೋಡೆಗಳನ್ನು
ಕೆಡಹಿರಿ. ಗಟ್ಟಿಯಾಗಿರುವ ಕದವನ್ನು ಒಡೆಯಿರಿ, ಒಳಗಿರುವವರಿಬ್ಬರನ್ನೂ ಬೇಗನೆ
ಎಳೆದುತನ್ನಿರಿ. ಸಾಯಿಸಿ, ಎಂದು ಸಡಗರದಿಂದ ನುಡಿಯುತ್ತ ಮುತ್ತಿದರು || ೪೯ ||
ಹೀಗೆ ಜನರೆಲ್ಲರೂ ಹೊರಗೆ ಮುತ್ತಿಕೊಳ್ಳಲು, ಬಳಿಕ ಸೂರಾಂಬಿಕೆಯು ತಾನೇ ಮನೆ
ಯಿಂದ ಹೊರಕ್ಕೆ ಬಂದು, ಭಕ್ತಿಸಂಪತ್ತಿನಿಂದ ಹೆದರದೆ ನುಡಿದಳು, ಏನೆಂದರೆ—||೫೦||
ಏನು ? ನೀವು ಚಂಡಾಲ ಚಂಡಾಲ ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತೀರಿ ? ನಿಮ್ಮಂ
ತಹ ಬ್ರಾಹ್ಮಣರುಗಳು ಕೂಡ ಪ್ರವೇಶಿಸುವುದಕ್ಕಸಾಧ್ಯವಾದ ಸದ್ಭಕ್ತರುಗಳ ಮನೆ

ದ್ವಿಪ್ರಾಸವದದ್ಭಕ್ತಿನಿಶ್ಚಲಾ ‖ ೫೦ ‖ ಅಂತ್ಯಜೋಽಂತ್ಯಜಇತ್ಯುಚ್ಚೈರ್ಯುರ್ಘ
ಷ್ಯಾಭಿಃಕಿಂಪ್ರಜಲ್ಪ್ಯತೇ । ದುಷ್ಪ್ರವೇಶಾನಿವಿಪ್ರಾಣಾಮಪಿನಿತ್ಯಂಭವಾ
ದೃಶಾಂ ‖ ೫೧ ‖ ಸದ್ಭಕ್ತಗೇಹಾನಿಕಿಲಪ್ರವಿಶೇದಂತ್ಯಜಃಕಥಂ । ಗೃಹೇಷು
ರುದ್ರಭಕ್ತಾನಾಂಪಾವನೇಷುವಿಶೇಷತಃ ‖ ೫೨ ‖ ಕ್ಷುದ್ರಾವಸಂತಿಕಿಂಸಾ
ಕ್ಷಾದ್ರುದ್ರಾಏವವಸಂತಿಹಿ । ಮಹೇಶಭಕ್ತಗೇಹೇಷುಸಂತಿಮಾಹೇಶ್ವರಾ
ಸ್ಸದಾ ‖ ೫೩ ‖ ಮಾನುಷಾಸ್ಸಂತಿಕಿಂಯೂಯಂನಪಶ್ಯಥವಿಮೋಹಿತಾಃ ।
ಪ್ರಮಥಾನ್ವಯವಾಸೇಷುಪ್ರಮಥಾಃಪ್ರಥಿತೌಜಸಃ ‖ ೫೪ ‖ ವಸಂತಿಪಾ
ವನಾನಿತ್ಯಂದುಷ್ಪಾತ್ರಾಣಿವಸಂತಿಕಿಂ । ನಾಕಿಸಂಸ್ತುತಶೀಲಾನಾಂಲೋಕ
ವಂದ್ಯೇಶಸೇವಿನಾಂ ‖ ೫೫ ‖ ಲೋಕವಂದ್ಯಾಸ್ಸಂತಿಸದಾಲೋಕಾಃಕಿಂಸಂತಿ
ವೇಶ್ಮಸು । ಪ್ರಾಪ್ತಾನಾಂಶರಣಪ್ರಾಣಂಶರಣಂಭವ್ಯಸದ್ಮಸು ‖ ೫೬ ‖
ವಿದ್ಯಂತೇಶರಣಾಏವಸಂತಿಸಂಸಾರಿಣಃಕಿಮು । ಭವನೇಷುಪರಂಭವ್ಯೇಷ್ವಭ
ವಸ್ಯಾನುಜೀವಿನಾಂ ‖ ೫೭ ‖ ಭವನಾಶನದಕ್ಷಾಣಾಂಭವಿನಸ್ಸಂತಿಕಿಂಸದಾ ।
ಕುಲಾಗ್ರಗಣ್ಯದಾಸಾನಾಂ ನಿಲಯೇಷುಸಮಂತತಃ ‖ ೫೮ ‖ ಕುಲಜಾಏವ
ಸತತ ಮಾಸತೇನಹಿದುಷ್ಕುಲಃ । ಲಿಂಗಾಂಗಿನಾಂಪ್ರಾಂಗಣೇಷುಮಂಗಳೇಷು

---

ಗಳನ್ನು ಚಂಡಾಲನು ಹೇಗೆ ಪ್ರವೇಶಿಸುವನು ? ಪರಿಶುದ್ಧಗಳಾದ ಶಿವಭಕ್ತರ ಮನೆ
ಗಳಲ್ಲಿ ನೀಚಜನರು ವಾಸಮಾಡುವರೆ ? ಅಲ್ಲಿ ಪ್ರತ್ಯಕ್ಷ ಪರಶಿವಮೂರ್ತಿಗಳೇ ವಾ
ಸಮಾಡುವರಲ್ಲವೆ ? ಶಿವಭಕ್ತರಮನೆಯಲ್ಲಿ ಯಾವಾಗಲೂ ಮಾಹೇಶ್ವರರೇ ವಾಸಮಾ
ಡುತ್ತಾರೆ ‖ ೫೩ ‖ ಅಲ್ಲದೆ ಸಾಧಾರಣ ಮನುಷ್ಯರು ವಾಸಮಾಡುವರೆ ? ಅಜ್ಞಾನಿಗ
ಳಾದ ನೀವು ಕಾಣಿರಿ. ಪ್ರಮಥವಂಶೋತ್ಪನ್ನರಾದವರ ಮನೆಯಲ್ಲಿ ಪ್ರಸಿದ್ಧಮಹಿಮಾ
ಶಾಲಿಗಳಾದ ಪ್ರಮಥರೇ ಯಾವಾಗಲೂ ವಾಸಮಾಡುತ್ತಾರೆಯಲ್ಲದೆ, ಅಯೋಗ್ಯರು ವಾಸ
ಮಾಡುವರೆ ? ದೇವತೆಗಳಿಂದಲೂ ಹೊಗಳಲ್ಪಡುವ ಸದಾಚಾರವುಳ್ಳ, ಜಗದ್ವಂದ್ಯನಾದ
ಪರಶಿವನ ಸೇವಕರ- ಮನೆಗಳಲ್ಲಿ ಜಗದ್ವಂದ್ಯರಾದ ಜನಗಳು ಸದಾ ವಾಸಮಾಡುತ್ತಾರೆ
ಯಲ್ಲದೆ, ಸಾಮಾನ್ಯ ಜನರು ವಾಸಮಾಡುವರೆ ? ಶಿವಶರಣರೇ ಪ್ರಾಣವಾಗುಳ್ಳ ಪರ
ಶಿವನನ್ನು ಮರೆಹೊಕ್ಕವರ ಮಂಗಳಕರವಾದ ಮನೆಗಳಲ್ಲಿ ಶಿವಶರಣರುಗಳು ಇರು
ತ್ತಾರೆಯಲ್ಲದೆ ಸಂಸಾರಿಗಳು ಇರುತ್ತಾರೆಯೆ ? ‖ ೫೬ ‖ ಭವವನ್ನು ನಾಶಮಾಡಲು ಸಮ
ರ್ಥರಾದ ಶಿವಾನುಗಾಮಿಗಳಾದವರ ಮಂಗಳಗೃಹಗಳಲ್ಲಿ ಭವಿಗಳು ವಾಸಮಾಡುತ್ತಾರೆ
ಯೆ ? ದೇವಕುಲದಲ್ಲಿ ಶ್ರೇಷ್ಠನಾದ ಪರಶಿವನ ಸೇವಕರಾದವರ ಮನೆಗಳಲ್ಲಿ ಯಾವಾ
ಗಲೂ ಸತ್ಕುಲಪ್ರಸೂತರೇ ವಾಸಮಾಡುತ್ತಾರೆಯಲ್ಲದೆ, ದುಷ್ಕುಲಜಾತರು ವಾಸಮಾ
ಡರು ‖ ೫೮ ‖ ಲಿಂಗಾಂಗಿಗಳ ಮನೆಯ ಅಂಗಳದಲ್ಲಿ ಯಾವಾಗಲೂ ಲಿಂಗಸ್ವರೂಪರೇ
ವಾಸಮಾಡುತ್ತಾರಲ್ಲದೆ, ಅಮಂಗಲಶರೀರಿಗಳಾದ ಚಂಡಾಲರು ವಾಸಮಾಡುವರೆ ? ಎಲೆ

ನಿರಂತರಂ ॥ ೪೯ ॥ ಸಂತಿಲಿಂಗಾನ್ಯೇವಸಂತ್ಯಮಂಗಲಾಂಗಾಃಕಿಮಂತ್ಯಜಾಃ ।
ಪರಮೇಶ್ವರಸದ್ಭಕ್ತಿಪರನಿಂದಾಪರಾಯಣಾಃ ॥ ೬೦ ॥ ನರಕಾಗ್ನಿಷುತೀವ್ರೇ
ಷುಯೂಯಂಪತಿತುಮುದ್ಯತಾಃ।ನಿಟಿಲೇಕ್ಷಣಸದ್ಭಕ್ತಾನುಕ್ತ್ವಾಕಿಂಕುಟಿಲಂ
ದ್ವಿಜಾಃ ॥ ೬೧ ॥ ಚಟುಲೋತ್ಕಟಸಂಸಾರವಾರ್ಧೌಮಗ್ನಾಭವಿಷ್ಯಥ । ಅಂತ
ಕಾಂತಕಭಕ್ತಾನಾಮಂತತಃಪರಿದೂಷಣಾತ್ ॥ ೬೨ ॥ ಪ್ರಾಂತಮಂತಕ
ವಾಸಸ್ಯಗಂತುಮಿಚ್ಛಥಕಿಂದ್ವಿಜಾಃ । ಜಂಗಮಾನ್ಕರ್ಮಸಂಹಾರಸಂಗಮಾ
ಲ್ಲಿಂಗಭಾವತಃ ॥ ೬೩ ॥ ಅನಂಗೀಕೃತ್ಯದುಷ್ಕರ್ಮಸಂಗತಾಃಕಿಂಗತಾಯುಷಃ।
ಫಲಂವಾಬ್ರಾಹ್ಮಣತ್ವಸ್ಯಶಿವಭಕ್ತ್ಯೈಕಭೂಷಣಂ ॥೬೪॥ ಆಸ್ತೇಗೃಹೇಶಿವೋ
ವಿದ್ಧನಯೂಯಂಭಕ್ತಿಕಂಟಕಾಃ । ಭವಿನಾಂವಃಕಥಂದೃಶ್ಯೋಭವೋಽಯಂ
ಭವನಾಂತರೇ ॥ ೬೫ ॥ ಆಸ್ತೇಽಂತರ್ಲೋಕನಾಥೋಽಯಂಕಥಂಪಶ್ಯಂತಿ
ಲೌಕಿಕಾಃ । ಅಯಂಪರಶಿವೋಽತ್ರಾಸ್ತೇವಃಪ್ರಾಪ್ಯಃಪಾಪಿನಾಂಕಥಂ ॥೬೬॥
ಆಸ್ತೇತ್ರಿಲೋಚನೋಽತ್ರಾಂತರ್ನೀಚಾವಃಕಿಮುಗೋಚರಃ । ಲಿಂಗರೂಪೀ
ಸರ್ವಕರ್ಮಚಂಡಾಲೈರ್ಲಭ್ಯತೇಕಥಂ ॥ ೬೭ ॥ ಸಮಿದ್ಧಕೀರ್ತಿರೀಶೋಽಯಂ
ನಶಕ್ಯೋವಸ್ಸಮೀಕ್ಷಿತುಂ । ಗೃಹೀತುಮಪ್ಯನುಚಿತಂಸಾಮರ್ಥ್ಯಸ್ಯಾಪ್ಯ

---

ಬ್ರಾಹ್ಮಣರೆ ! ಪರಶಿವ ಭಕ್ತಿಸಂಪನ್ನರಾದವರನ್ನು ದೂಷಿಸುವುದರಲ್ಲಿ ಆಸಕ್ತರಾದ ನೀವು ತೀಕ್ಷ್ಣಗಳಾದ ನರಕಾಗ್ನಿಯಲ್ಲಿ ಬೀಳುವುದಕ್ಕೆ ಸಿದ್ಧರಾಗಿದ್ದೀರೇನು ? ಶಿವಭಕ್ತರನ್ನು ಕುರಿತು ವಕ್ರವಾಗಿ ಮಾತನಾಡಿ ಚಪಲವಾದ ಮಹಾ ಸಂಸಾರಸಾಗರದಲ್ಲಿ ಮುಳುಗುವಿರೇನು ? ಯಮನಾಶಕನಾದ ಶಿವನ ಭಕ್ತರನ್ನು ಮನಃಪೂರ್ವಕವಾಗಿ ದೂಷಿಸುವುದರಿಂದ ಯಮನಮನೆಯ ಸಮೀಪವನ್ನು ಹೊಂದುವುದಕ್ಕೆ ಇಚ್ಛೈಸುವಿರೇನು ? ॥೬೨॥ ದುಷ್ಕರ್ಮವಿನಾಶಕನಾದ ಪರಶಿವನೊಡನೆ ಸೇರಿದ ಜಂಗಮರನ್ನು ಲಿಂಗಸ್ವರೂಪದಿಂದ ನೋಡಿ ಪುರಸ್ಕರಿಸದೆ ದುಷ್ಕರ್ಮಯುಕ್ತರಾದ ನೀವು ಆಯುಸ್ಸನ್ನು ಕಳೆದುಕೊಂಡಿರುವಿರೇನು ? ಬ್ರಾಹ್ಮಣತ್ವಕ್ಕೆ ಇದೇ ಫಲವೇ ? ಬ್ರಾಹ್ಮಣ್ಯವು ಶಿವಭಕ್ತಿಯೊಂದೇ ಅಲಂಕಾರವಾಗುಳ್ಳದಾಗಿರಬೇಕು ॥೬೪॥ ನನ್ನ ಮನೆಯೊಳಗೆ ಪರಶಿವನು ಇರುತ್ತಾನೆ. ಭಕ್ತಿಗೆ ವಿಘ್ನಕಾರಿಗಳಾದ ನೀವು ಅವನನ್ನು ತಿಳಿಯಲಾರಿರಿ. ಮನೆಯೊಳಗಿರುವ ಪರಶಿವನು ಭವಿಗಳಾದ ನಿಮಗೆ ಹೇಗೆ ಗೋಚರನಾಗುವನು? ॥೬೫॥ ಜಗದೀಶ್ವರನು ಒಳಗಿರುತ್ತಾನೆ. ಲೌಕಿಕರು ಅವನನ್ನು ಹೇಗೆ ನೋಡುತ್ತಾರೆ ? ಪರಮೇಶ್ವರನು ಇಲ್ಲಿರುತ್ತಾನೆ. ಇವನು ಪಾಪಿಗಳಾದ ನಿಮಗೆ ಹೇಗೆ ಲಭ್ಯನಾಗುವನು ? ॥ ೬೬ ॥ ಎಲೆ ನೀಚರೇ ಒಳಗೆ ಮುಕ್ಕಣ್ಣನಿರುವನು. ನಿಮಗೆ ಕಾಣಿಸಿಕೊಳ್ಳುವನೆ ? ಲಿಂಗಸ್ವರೂಪಿಯಾದ ಶಿವನು ಕರ್ಮತಃ ಚಂಡಾಲರಾದವರಿಗೆ ಹೇಗೆ ದೊರೆಯುವನು ? ॥ ೬೭ ॥ ಜಗತ್ತಿನಲ್ಲೆಲ್ಲ ಹಬ್ಬಿದ ಕೀರ್ತಿಯುಳ್ಳ ಶಿವನನ್ನು ನೋಡುವುದಕ್ಕೆ ನೀವು ಶಕ್ತರಲ್ಲ, ನೀವು ಅವನನ್ನು ಹಿಡಿದು

ದರ್ಶನಂ ॥ ೬೮ ॥ ಭವತಾಂದರ್ಶಯಿಷ್ಯಾಮಿತದಹಂಪಶ್ಯತೇಶ್ವರಂ । ಇತ್ಯು
ಕ್ತ್ವಾದ್ರಾಗ್ವಿಘಟಿತೇಕವಾಟೇಽಥದ್ವಿಜಾತಯಃ ॥ ೬೯ ॥ ಪ್ರವಿಷ್ಟಾಶ್ಶಂಭು
ರಪ್ಯಾಸೀನ್ನಿರಾಕಾರಸ್ತತೋದ್ವಿಜಾಃ । ಶಿವಾರ್ಚಾಯಮಾನಸ್ಯೋಪರಿಪೇ
ಟೀಸಮೀಪತಃ ॥ ೭೦ ॥ ಮಧ್ಯೇಕುಸೂಲಕಂಡೋಲಭಾಂಡಾಳೀನಾಂಪುನಃ
ಪುನಃ । ಉಪಕಂಠೇಕವಾಟಸ್ಯಪಶ್ಚಾದ್ಭಾಗೇಚವೇಶ್ಮನಃ ॥ ೭೧ ॥ ಗೃಹಾಂತ
ರೇಚತತ್ಕೋಣದೇಶೇಷುಸ್ತಂಭಸನ್ನಿಧೌ । ಅನ್ವಿಷ್ಯಸರ್ವತಸ್ತೇತಮದೃಷ್ಟ್ವಾ
ವಿಸ್ಮಯಂಯಯುಃ ॥೭೨॥ ಪತಿತಾಭಿತ್ತಯೋನೈವವೀರಂಧ್ರಾಭದಿರಪ್ಯಸೌ ।
ನದೃಶ್ಯತೇದ್ವಾರಿವಯಂತಿಷ್ಠಾಮಃಕ್ವಗತೋಹ್ಯಸೌ ॥ ೭೩ । ಮಾಯಯಾಂ
ತರ್ದಧೇವಾಥಮಾಯಾಮರ್ತ್ಯಸ್ಯಚಾಸ್ತಿಕಿಂ । ಅಹೋಚಿತ್ರಮಿಮಾಮೇವ
ಪೃಚ್ಛಾಮಇತಿಸತ್ವರಂ ॥ ೭೪ ॥ ತಾಂಗೃಹೀತ್ವಾಥನಿರ್ಭರ್ತ್ಸ್ಯಪರ್ಯಪೃಚ್ಛ
ನ್ದ್ವಿಜಾತಯಃ । ಪ್ರಸ್ಥಾಪಿತಃಕ್ವವಾಕುತ್ರನ್ಯಸ್ತಶ್ಚಂಡಾಲಕಸ್ತ್ವಯಾ॥೭೫॥
ಇತಿನಿರ್ಭರ್ತ್ಸಿತಾಸಾತೈಸ್ಸರೋಷಮವದದ್ದ್ವಿಜಾನ್ । ನನುದ್ವಿಜಾಧರ್ಮ
ದೂರಾಶ್ಚಂಡಾಲಇತಿಜಲ್ಪ್ಯತೇ ॥ ೭೬ ॥ ವೃಥಾಭವದ್ಭಿಸ್ಸಕಿಮುಚಂಡಾಲ
ಶ್ಶ್ರೀಮಹೇಶ್ವರಃ । ಪೂರ್ವಮಂತ್ಯಜವೇಷೇಣಪರಾಸುಂಪಶುತರ್ಣಕಂ॥೭೭॥

---

ಕೊಳ್ಳಲೂ ಶಕ್ತರಲ್ಲ. ನಿಮ್ಮ ಸಾಮರ್ಥ್ಯಕ್ಕೆ ಅವನು ಅಗೋಚರನು ॥೬೮॥ ಆದುದ
ರಿಂದ ಅಂತಹ ಶಿವನನ್ನು ನಾನು ನಿಮಗೆ ತೋರಿಸುತ್ತೇನೆ ನೋಡಿರಿ" ಎಂದು ಹೇಳಿ,
ಥಟ್ಟನೆ ಕದವನ್ನು ತೆರೆದಳು ॥ ೬೯ ॥ ಬ್ರಾಹ್ಮಣರುಗಳು ಒಳಕ್ಕೆ ನುಗ್ಗಿದರು.
ಶಿವನು ಒಳಗೆ ನಿರಾಕಾರನಾಗಿದ್ದನು. ಬಳಿಕ ದ್ವಿಜರು ಶಿವಪೂಜೆಯ ಮಂಟಪದ
ಮೇಲೂ ಪೆಟ್ಟಿಗೆಯ ಬಳಿಯಲ್ಲೂ ॥ ೭೦ ॥ ಕುಂದಣಿ ಹಡಗೆ ಮಡಕೆ ಮೊದಲಾದು
ವುಗಳ ಮಧ್ಯದಲ್ಲೂ, ಕದದ ಸಮೀಪದಲ್ಲೂ ಮನೆಯ ಹಿಂದಣ ಹಿತ್ತಲಲ್ಲೂ ಮನೆಯೊ
ಳಗೂ, ಒಳಕೋಣೆಗಳೊಳಗೂ, ಕಂಬಗಳ ಹತ್ತಿರವೂ, ಎಲ್ಲಕಡೆಯೂ ಮತ್ತೆಮತ್ತೆ
ಹುಡುಕಿ, ಎಲ್ಲೂ ಆತನನ್ನು ಕಾಣದೆ, ಆಶ್ಚರ್ಯವನ್ನು ಹೊಂದಿದರು ॥ ೭೨ ॥ "ಗೋಡೆ
ಗಳು ಬಿದ್ದಿಲ್ಲ ! ಮೇಲಣ ಹಂದರವು ತೂತಾಗಿಯೂ ಕಾಣುವುದಿಲ್ಲ ! ನಾವೆಲ್ಲ ಬಾಗಿ
ಲಲ್ಲೇ ನಿಂತಿದ್ದೇವೆ! ಇವನೆಲ್ಲಿಹೋದ ? ಮಾಯೆಯಿಂದ ಒಳಗೇ ಕಾಣಿಸಿಕೊಳ್ಳದಂತಾ
ಗಿರುವನೋ ? ದೇವತೆಯ ಮಾಯೆಯೇನಾದರೂ ಉಂಟೊ ? ಆಶ್ಚರ್ಯ ! ಆಶ್ಚರ್ಯ !
ಇವಳನ್ನೇ ಕೇಳುವ" ಎಂದು ಮಾತನಾಡಿಕೊಂಡು, ಬೇಗನೆ ಆ ನೂರಾಂಬೆಯನ್ನು ಹಿಡಿ
ದುಕೊಂಡು, ಬೆದರಿಸಿ, "ನೀನು ಆ ಚಂಡಾಲನನ್ನು ಎಲ್ಲಿಗೆ ಹೊರಡಿಸಿಬಿಟ್ಟೆ ? ಎಲ್ಲಿ
ಬಚ್ಚಿಟ್ಟಿರುವೆ ? ಹೇಳು" ಎಂದು ಕೇಳಲು, ಆಕೆಯು ದ್ವಿಜರನ್ನು ಕುರಿತು, ಕೋಪ
ಗೊಂಡು — ಎಲೈ ಧರ್ಮಭ್ರಷ್ಟರಾದ ದ್ವಿಜರೆ ! ನೀವು ವ್ಯರ್ಥವಾಗಿ ಆತನನ್ನು ಚಂಡಾ
ಲನೆಂದು ಬೊಗಳುವಿರಲ್ಲವೆ ? ಆತನು ಚಂಡಾಲನೇನು ? ಪೂರ್ವದಲ್ಲಿ ಪರಶಿವನು

ಅಂಸೇನಿಧಾಯಕೆಂಬಾವಿಭೋಗಾರ್ಯಂಗೃಹಮಾಗತಃ । ಸೋಽತ್ಯಂತವಿನಯಂ ತಸ್ಮೈಕೃತ್ವಾಪೂಜಾಂಸಮಾಹಿತಃ ॥ ೭೮ ॥ ಗೋವತ್ಸಂತಂಪರಿಚ್ಛಿದ್ಯಪಕ್ತ್ವೇಶಾಯನ್ಯವೇದಯತ್ । ಅಥಾಗತೇಷುವಿಪ್ರೇಷುಗದಾಪಾಷಾಣಪಾಣಿಷು ॥೭೯॥ ರೋಷಾವೇಶೇನಸರ್ವೇಷುಭರ್ತ್ಸಯಂತ್ಸ್ವತಿನಿಷ್ಠುರಂ । ಶಿವೋಽಪ್ಯಂತರ್ದಧೇ ಭೋಗಿದೇವೋಪಿನಿರಗಾತ್ಪುರಾತ್ ॥ ೮೦ ॥ ತದಾಗ್ರಮಶಿವಲಿಂಗಾನಿತೇನೈವ ಸಹನಿರ್ಯಯುಃ । ವಿಪ್ರೇಷ್ವಥಸಮಸ್ತೇಷುಪ್ರಣತೇಷುಕೃಪಾನ್ವಿತಃ ॥ ೮೧ ॥ ಲಿಂಗೈಸ್ಸಾಕಂತಮೇವಾಯಮಗ್ರಹಾರಂಸಮಾಗಮತ್ । ತದ್ಭಕ್ತಿಸ್ಥೈರ್ಯ ಲಿಂಗಾನಿಭೂತ್ವಾಲಿಂಗಾನಿಸರ್ವತಃ ॥ ೮೨ ॥ ವಿಪರ್ಯಸ್ತೇಷುಪೀಠೇಷುನಿಷೇದು ರತಿವಿಸ್ಮಯಂ । ಯಂಕಂಚಿತ್ಸ್ವೇಷಮಾಸ್ಥಾಯಭಕ್ತಾಸ್ತಿಷ್ಠಂತಿಭೂತಳೇ ॥ ನಹಿನಿಂದಯಿತುಂಯೋಗ್ಯಮವಿಜ್ಞಾಯತದುನ್ನತಿಂ ॥

ಇತಿಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತೇ
ದೀಕ್ಷಾಪ್ರಕರಣೇ ಸೂರಾಂಬೋಪಾಖ್ಯಾನೇ ಕೆಂಬಾವಿ
ಭೋಗಾರ್ಯ ಮಾಹಾತ್ಮ್ಯ ಕಥನಂ ನಾಮ
ಪಂಚದಶೋಽಧ್ಯಾಯಃ.

---

ಚಂಡಾಲವೇಷವನ್ನು ಧರಿಸಿ, ಹಸುವಿನ ಸತ್ತ ಕರುವನ್ನು ಹೆಗಲಮೇಲೆ ಹೊತ್ತು ಕೆಂಬಾವಿ ಬೋಗಯ್ಯನ ಮನೆಗೆ ಬಂದನು. ಆತನು ನಿಶ್ಚಲಚಿತ್ತನಾಗಿ ಅತ್ಯಂತ ನಮ್ರತೆಯಿಂದ ಆತನ ಪೂಜೆಯನ್ನು ಮಾಡಿ, ಆ ಹಸುವಿನ ಕರುವನ್ನು ಕತ್ತರಿಸಿ ಅಡಿಗೆ ಮಾಡಿ ಶಿವನಿಗೆ ಸಮರ್ಪಣೆ ಮಾಡಿದನು. ಬಳಿಕ ಆ ಊರಿನ ಬ್ರಾಹ್ಮಣರೆಲ್ಲರೂ ದೊಣ್ಣೆಗಳನ್ನೂ, ಕಲ್ಲುಗಳನ್ನೂ ಕೈಗಳಲ್ಲಿ ಹಿಡಿದುಕೊಂಡು ಕೋಪಾವೇಶದಿಂದ ಬಂದು ಅತ್ಯಂತ ಕಠಿಣವಾಗಿ ಭಯಪಡಿಸುತ್ತಿರಲು, ಶಿವನು ಮಾಯವಾದನು. ಬೋಗಯ್ಯನು ಕೂಡ ಪಟ್ಟಣವನ್ನು ಬಿಟ್ಟು ಹೊರಟು ಹೋದನು. ॥ ೮೦ ॥ ಆಗ ಆ ಅಗ್ರಹಾರದಲ್ಲಿದ್ದ ಶಿವಲಿಂಗಗಳೆಲ್ಲವೂ ಆ ಬೋಗಯ್ಯನೊಡನೆಯೇ ಹೊರಟವು. ಬಳಿಕ ಬ್ರಾಹ್ಮಣರೆಲ್ಲರೂ ಹೋಗಿ ಬೋಗಯ್ಯನಿಗೆ ಅಡ್ಡಬಿದ್ದು ಬೇಡಿಕೊಳ್ಳಲು, ಆತನು ದಯಾಯುಕ್ತನಾಗಿ, ಎಲ್ಲಾ ಲಿಂಗಗಳೊಡನೆ ಆ ಅಗ್ರಹಾರಕ್ಕೆ ಬಂದನು. ಆ ಲಿಂಗಗಳೆಲ್ಲವೂ ಆ ಬೋಗಯ್ಯನ ಭಕ್ತಿ ಸ್ಥಿರತೆಯನ್ನು ತೋರ್ಪಡಿಸುವ ಗುರುತುಗಳಾಗಿ ಎಲ್ಲಾ ದೇವಾಲಯಗಳಲ್ಲೂ ಬಂದರ ಪೀಠದಲ್ಲಿ ಮತ್ತೊಂದು ಲಿಂಗದಂತೆ ವ್ಯತ್ಯಸ್ತವಾಗಿ ಕುಳಿತುಕೊಂಡವು.

## ಅಥಷೋಡಶೋಽಧ್ಯಾಯಃ.

(ಸಾಮವೇದಿಕಥಾ.)

ಪುನಸ್ಸಏವಚಮಹಾದೇವಸ್ತ್ರಿಜಗತಾಂಪತಿಃ । ಮೃತಂಪಶುಶಿಶುಂ ಧೃತ್ವಾಚಂಡಾಲಾಕೃತಿಮುದ್ವಹನ್ ॥೧॥ ಕ್ರತುಶಾಲಾಂದ್ವಿಜಾಕೀರ್ಣಾ ಮವಿಶತ್ಸಾಮವೇದಿನಃ । ಕೃಶಾವಲಗ್ನಭಾಗೇನ ಗುರುಣಾಜಘನೇನಚ ॥೨॥ ತಿರ್ಯಗ್ಗತೇನ ವಿಲಸನ್ನಾಸಿಕಾವಮೌಕ್ತಿಕೇನಚ । ಸಮಂಜಿತೇನಾಳಿಕೇನ ವಿಭೂತಿತಿಲಕೇನಚ ॥ ೩ ॥ ಚಂದ್ರವಮೌಳೇಸ್ಸಜ್ಜಿಕಯಾ ವಕ್ರಸೀಮಂತರೇಖಯಾ । ಲೋಹಿತಾಧರಬಿಂಬೇನ ದಂತಪಙ್ಕ್ತ್ಯತಿಶುಭ್ರಯಾ ॥ ೪ ॥ ಸವಿಲಾಸಾಕ್ಷಿಯುಗ್ಮೇನ ಲಸದ್ಭ್ರೂಯುಗಳೇನಚ । ಪೀನೋನ್ನತಕುಚ

---

ಭೂಮಿಯಲ್ಲಿ ಭಕ್ತರು ಯಾವುದಾದರೊಂದು ವೇಷವನ್ನು ಧರಿಸಿರುತ್ತಾರೆ. ॥೮೩॥ ಅವರ ಮಹತ್ತ್ವವನ್ನು ತಿಳಿಯದೆ ನಿಂದಿಸುವುದು ಯುಕ್ತವಲ್ಲ.

ಎಂದು ಸೂರಾಂಬೆಯು ಹೇಳಿದಳೆಂಬಲ್ಲಿಗೆ ಪಂಡಿತಾರಾಧ್ಯ ಚರಿತ್ರಕ್ಕೆ ಎನ್. ಆರ್. ಕರಿಬಸವಶಾಸ್ತ್ರಿ ವಿರಚಿತವಾದ " ಭಾವಮಂಜರಿ " ಯೆಂಬ ಕನ್ನಡ ಟಿಪ್ಪಣದಲ್ಲಿ ೧೫ ನೆಯ ಅಧ್ಯಾಯವು ಮುಗಿದುದು.

## ೧೬ ನೆಯ ಅಧ್ಯಾಯವು.

( ಸಾಮವೇದಿಯ ಕಥೆ. )

ಸೂರಾಂಬೆಯು ಬ್ರಾಹ್ಮಣರನ್ನು ಕುರಿತು ಇನ್ನೂ ಹೇಳುತ್ತಾಳೆ. ಏನೆಂದರೆ—ಮತ್ತೊಂದುಬಾರಿ ಜಗದೀಶ್ವರನಾದ ಶ್ರೀ ಮಹಾದೇವನೇ ಚಂಡಾಲವೇಷವನ್ನು ಧರಿಸಿ ಸತ್ತ ಹಸುವಿನ ಕರುವನ್ನು ಹೊತ್ತು ಸಾಮವೇದಿಯೆಂಬುವನ ಬ್ರಾಹ್ಮಣರಿಂದ ಪರಿಪೂರ್ಣವಾದ ಯಜ್ಞಶಾಲೆಗೆ ಬಂದನು. ಪಾರ್ವತಿಯು ತೆಳ್ಳಗೆ ಬಗ್ಗಿದ ಶರೀರದಿಂದಲೂ, ದಪ್ಪನಾದ ಕಟಿಪುರೋಭಾಗದಿಂದಲೂ, ಅಡ್ಡಲಾಗಿ ಸಿಕ್ಕಿರುವ ಮೂಗಿನ ಗಾಡೀನತ್ತಿನಿಂದಲೂ, ವಿಭೂತಿ ತಿಲಕದಿಂದೊಪ್ಪುವ ಹಣೆಯಿಂದಲೂ ॥ ೩ ॥ ಶಿವಲಿಂಗದ ಕರಡಿಗೆಯಿಂದಲೂ, ಡೊಂಕಾದ ಬೈತಲೆಯ ಗೆರೆಯಿಂದಲೂ, ತೊಂಡೆಹಣ್ಣಿನಂತೆ ಕೆಂಪಾದ ತುಟಿಯಿಂದಲೂ, ಬಲುಬೆಳ್ಳಗಿರುವ ಹಲ್ಲುಗಳ ಸಾಲಿನಿಂದಲೂ, ಲೀಲಾವಿಶಿಷ್ಟವಾದ ಕಣ್ಣುಗಳಿಂದಲೂ, ಅಂದವಾಗಿರುವ ಹುಬ್ಬುಗಳಿಂದಲೂ, ದಪ್ಪವಾಗಿಯೂ ನಿಡಿದಾಗಿಯೂ ಇರುವ ಸ್ತನಗಳಿಂದಲೂ, ಗಟ್ಟವಾದ ಕೇಶಪಾಶದಿಂದಲೂ, ಕೆಂಪುಬಣ್ಣದ ಚಿತ್ರದ ಸೀರೆಯಿಂದಲೂ, ಕಪ್ಪುಗಾಜಿನ ಬಳೆಗಳಿಂದಲೂ, ಕಂಚಿನ ಕಾಲುಂಗುರಗಳಿಂದಲೂ, ಗಾಜಿ

ದ್ವಂದ್ವ ಭರೇಣಸಮುದಂಚಿತಾ ‖ ೫ ‖ ಆಸಾಂದ್ರಕೇಶಪಾಶೇನ ರಕ್ತಚೇತ್ರಾಂಬರೇಣಚ । ಅಸಿತೈಃಕಾಚವಲಯೈಃ ಕಾಂಸ್ಯಪಾದಾಂಗುಳೀಯಕೈಃ ‖ ೬ ‖ ಕಾಚಾಕ್ಷಕೃತಹಾರೇಣ ಕಾಂತ್ಯಾಚಪರಿನೀಲಯಾ । ತ್ರಪುಣಾನಿರ್ಮಿತಸ್ವಚ್ಛಕಟಕಾಭ್ಯಾಂಸಮನ್ವಿತಾ ‖ ೭ ‖ ಕಕ್ಷವಿನ್ಯಸ್ತಕಂಡೋಲಾ ಯಯೌತಮನುಪಾರ್ವತೀ । ಪ್ರತ್ಯುದ್ಯಯೌಸಮುದ್ವೀಕ್ಷ್ಯ ಜಾಯಯಾಸಹಿತಸ್ತದಾ‖ ಪ್ರಣಮ್ಯದಂಡವದ್ಭೂಮೌ ಸಾಮವೇದೀಸಸಂಭ್ರಮಂ । ಪಶೋರ್ವತ್ಸಂತಮಾದಾಯ ಸ್ವಯಂ ತೌಯಜ್ಞಮಂದಿರಂ ‖ ೯ ‖ ನಿನಾಯಹರ್ಷೇಣತದಾ ನಿರ್ಜಗ್ಮುರಖಿಲಾದ್ವಿಜಾಃ । ಸಾಮವೇದಿನಿತತ್ಪಾದಸರೋಜೇಕ್ಷಾಳಯತ್ಯಥ ‖ ಗಿರಿಜಾಮೇಕಹಸ್ತೇನ ಸ್ವಕಟೀಮನ್ಯಪಾಣಿನಾ । ಸಮಾಲಂಬ್ಯಾಗತೇ ತಸ್ಮಿಂಸ್ತದಾನೀಂಪರಮೇಶ್ವರೆ ‖ ೧೧ ‖ ಪಾದೆ ತ್ರಿಲೋಚನಸ್ಫಾರಕಾಂತಿಪೂರೆಪ್ರಸರ್ಪತಿ । ಸಿಂಚಂತೀಪದಯೋರ್ಹೇಮಕಲಶಾಂತರ್ಗತಂಜಲಂ ‖೧೨‖ ಸಾಮವೇದಿವಧೂರ್ದೇವಂ ವಿದಿತ್ವಾಸಂಭ್ರಮಾನ್ವಿತಾ । ಪ್ರಜಲ್ಪಂತಿಚದೇವೋಯಂ ದೇವೋಯಮಿತಿಸಂಭ್ರಮಾತ್ ‖ ೧೩ ‖ ನತ್ವಾತುಷ್ಟಾವಹಸ್ತಾಗ್ರಾದ್ವಿಸೃಜ್ಯ ಕಲಶಂತತಃ । ಏತಾವತ್ಕಾಲಮಿಶಾನಂ ನವೇತ್ಸಿಕಿಮುಸಾನರಃ ‖ ೧೪ ‖

---

ನ ಮಣಿಯ ಹಾರದಿಂದಲೂ, ಕಪ್ಪುಬಣ್ಣದ ದೇಹದಕಾಂತಿಯಿಂದಲೂ, ಸೀಸದಿಂದ ಮಾಡಿದ ಬಿಳಿಯ ಕಡಗಗಳಿಂದಲೂ ಕೂಡಿ, ಸೊಂಟದಮೇಲೆ ಹೆಡಗೆಯನ್ನು ಹೊತ್ತು ಶಿವನ ಜತೆಯಲ್ಲಿಯೇ ಬಂದಳು. ‖ ೭‖ ಸಾಮವೇದಿಯು ಇವರನ್ನು ಕಂಡು ಪತ್ನೀ ಸಮೇತನಾಗಿ ಎದ್ದು, ಸಡಗರದಿಂದ ಭೂಮಿಯಮೇಲೆ ದಂಡದಂತೆ ಅಡ್ಡಬಿದ್ದು, ಶಿವನ ಹೆಗಲಮೇಲಿದ್ದ ಕರುವನ್ನು ತಾನು ಈಸಿಕೊಂಡು ಆ ದಂಪತಿಗಳನ್ನು ಯಜ್ಞಶಾಲೆಯೊಳಕ್ಕೆ ಸಂತೋಷದಿಂದ ಕರೆದುಕೊಂಡು ಹೋಗಿ, ಅವನ ಪಾದಕಮಲನ್ನು ತೊಳೆಯಲು, ಆಗ ಒಳಗಿದ್ದ ಬ್ರಾಹ್ಮಣರೆಲ್ಲರೂ ಎದ್ದು ಹೊರಟುಹೋದರು. ‖ ೧೦‖ ಶಿವನು ಪಾರ್ವತಿಯನ್ನು ಒಂದು ಕೈಯಲ್ಲಿ ಹಿಡಿದು, ಮತ್ತೊಂದು ಕೈಯನ್ನು ಸೊಂಟದಮೇಲಿಟ್ಟು ಬರಲಾಗಿ, ಸಾಮವೇದಿಯ ಹೆಂಡಿತಿಯು ಚಿನ್ನದ ಕಲಶದ ಜಲದಿಂದ ಆತನ ಪಾದವನ್ನು ತೊಳೆಯುವಾಗ್ಗೆ, ಅದರಲ್ಲಿ ಮುಕ್ಕಣ್ಣಿನ ಕಾಂತಿ ಪ್ರವಾಹವು ಹೊಳೆಯುತ್ತಿರಲಾಗಿ, ಈತನು ಸಾಕ್ಷಾತ್ಪರಶಿವನೇ ಸರಿಯೆಂದು ತಿಳಿದು, ಸಡಗರದಿಂದ ಈತನೇ ಮಹಾದೇವ! ಮಹಾದೇವ! ಎಂದು ಕೂಗಿಕೊಂಡು ‖ ೧೩‖ ಕೈತಂಬಿಗೆಯನ್ನು ಇಟ್ಟು, ಶಿವಪಾದಕ್ಕೆ ನಮಸ್ಕರಿಸಿ, ಸ್ತೋತ್ರವನ್ನು ಮಾಡಿದಳು. ಸಾಮವೇದಿಯಾದರೋ— ನೀನು ಇದುವರೆಗೂ ಈ ಸ್ವಾಮಿಯನ್ನು ಪರಮೇಶ್ವರನೆಂದು ತಿಳಿದಿರಲಿಲ್ಲವೆ! ಈತನೇನು ಮನುಷ್ಯನೇ? ‖ ೧೪‖ ಎಂದು ಹೇಳುತ್ತ, ಸಂತೋಷದಿಂದ ಶಿವನ

ಇತ್ಯಾಲಪಂತ್ಸಾಮವೇದೀ ಪಾದೌಕ್ಷಾಳಿತವಾನ್ಮುದಾ | ಪಾದೋದಕಮಭೂ
ಚ್ಛಂಭೋಸ್ತಜ್ಜಲಂಪದಸೇಚನಾತ್ ‖ ೧೫ ‖ ಲಿಂಗೋದಕಮಭೂತ್ತಸ್ಯ
ತದೇವಪ್ರತಿಬಿಂಬನಾತ್ | ಪ್ರಸನ್ನದೃಷ್ಟ್ಯಾತದ್ದೃಷ್ಟಂ ಯಸ್ಮಾದಿಂದುಕಲಾ
ಭೃತಾ ‖ ೧೬ ‖ ಆಸೀತ್ಪ್ರಸಾದೋದಕಂ ತದಿತಿಸಂಪ್ರೀತಮಾನಸಃ |
ದಗ್ಧುಂದುರಿತದಾರೂಣಿ ತವಪಾದೋದಕಂವಿನಾ ‖ ೧೭ ‖ ಭಕ್ತವತ್ಸಲಗೌ
ರೀಶ ಕಿಂಶಕ್ಯಂಜಾತವೇದಸಃ | ತತ್ಪ್ರಸಾದೋದಕಂಮಾತ್ಯಸ್ತನ್ಯಹಾರಿನಕಿಂ
ನೃಣಾಂ ‖೧೮‖ ವಿನಾಲಿಂಗೋದಕಂಸ್ಯಾತ್ಕಿಂ ತೀರ್ಥೈರನ್ಯೈಃಕೃತಾರ್ಥತಾ|
ಸ್ಪಷ್ಟಂವೇದೇಹಿಪಶವ ಆಪಇತ್ಯನುಭಾಷಿತಾತ್ ‖ ೧೯ ‖ ಪಶುಪಾಶಭೇದ
ನಾಯ ಸಮರ್ಥಂತ್ರಿವಿಧೋದಕಂ | ಇತಿತ್ರಿವಿಧತೋಯಾಂಬುನಿಧೌ ಕ್ರೀ
ಡಾಂವಿಧಾಯಸಃ ‖ ೨೦ ‖ ಪಕ್ವಂಕೃತ್ವಾಪಶೋರ್ವತ್ಸಂ ತಮಭ್ಯರ್ಚ್ಯಶಿವಂ
ಮುದಾ | ಸಂಪಾದಿತೈಸ್ಸಯಜ್ಞಾರ್ಥಂ ಪದಾರ್ಥೈರಖಿಲೈಸ್ಸಹ ‖ ೨೧ ‖
ಅರ್ಪಯಾಮಾಸಸದ್ಭಕ್ತ್ಯಾ ಶಿವೋಪ್ಯಾವಿರ್ಬಭೂವಸಃ | ಸೋಽವದತ್ಪರ
ಯಾಭಕ್ತ್ಯಾ ಪ್ರಹರ್ಷಪುಳಕಾಂಕಿತಃ ‖ ೨೨ ‖ ಸಂಗೃಹ್ಯದಾಸಾರ್ಯವಸ್ತ್ರ

---

ಪಾದವನ್ನು ತೊಳೆದನು. ಶಿವನ ಪಾದಕ್ಕೆ ಸೇಚನ ಮಾಡಿದುದರಿಂದ ಆ ಜಲವು
ಪಾದೋದಕವಾಯಿತು ॥ ೧೫ ॥ ಆ ಉದಕವೇ ಶಿವಪ್ರತಿಬಿಂಬವು ಬಿದ್ದುದರಿಂದ
ಲಿಂಗೋದಕವಾಯಿತು. ಶಿವನು ತನ್ನ ನಿರ್ಮಲದೃಷ್ಟಿಯಿಂದ ಆ ಉದಕವನ್ನು
ನೋಡಿದ ಕಾರಣದಿಂದ ಅದು ಪ್ರಸಾದೋದಕವಾಯಿತು. ಎಂದು ಭಾವಿಸಿ, ಸಂ
ತುಷ್ಟಮನಸ್ಕನಾಗಿ, ಎಲೌ ಭಕ್ತವತ್ಸಲನಾದ ಪಾರ್ವತೀಪತಿಯೇ! ಪಾಪವೆಂಬ
ಮರವನ್ನು ಸುಡುವುದಕ್ಕೆ ನಿನ್ನ ಪಾದೋದಕವು ಸಮರ್ಥವೇ ಹೊರತು, ಅದು
ಬೆಂಕಿಗೆ ಶಕ್ಯವೆ? ಆ ಪ್ರಸಾದೋದಕವು ಮನುಷ್ಯರಿಗೆ ತಾಯ ಮೊಲೆಹಾಲನ್ನು
ಕುಡಿಸದಂತೆ ಮಾಡುವು (ಪುನರ್ಜನ್ಮವಿಲ್ಲದಂತೆ ಮಾಡುವು) ದಲ್ಲವೇ? ॥ ೧೮ ॥
ಲಿಂಗೋದಕವು ಹೊರತು ಉಳಿದ ತೀರ್ಥಗಳಿಂದ ಧನ್ಯತ್ವವುಂಟಾದೀತೆ? ವೇದ
ದಲ್ಲೂ ಕೂಡ " ಪಶವಆಪಃ " ಎಂಬುದಾಗಿ ಹೇಳಲ್ಪಟ್ಟಿರುವುದರಿಂದ ಇಂತಹ
ಅಭಿಪ್ರಾಯವು ಸ್ಪಷ್ಟವಾಗಿರುವುದು ॥ ೧೯ ॥ ಮೇಲ್ಕಂಡ ತ್ರಿವಿಧೋದ
ಕವು ಪಶುಪಾಶಗಳನ್ನು ಕತ್ತರಿಸುವುದಕ್ಕೆ ಸಮರ್ಥವಾದುದು, ಎಂದು ಹೇಳಿ,
ಪಾದೋದಕ ಲಿಂಗೋದಕ ಪ್ರಸಾದೋದಕಗಳೆಂಬ ಸಮುದ್ರದಲ್ಲಿ ವಿಹ
ರಿಸಿ ॥ ೨೦ ॥ ಹಸುವಿನ ಕರುವನ್ನು ಪಾಕಮಾಡಿ, ಯಜ್ಞಕ್ಕಾಗಿ ಕೂಡಿಸಿಟ್ಟಿದ್ದ ಸಕಲ
ದ್ರವ್ಯಗಳಿಂದಲೂ, ಆ ಪರಶಿವನನ್ನು ಸಂತೋಷದಿಂದರ್ಚಿಸಿ, ಭಕ್ತಿಸಮೇತನಾಗಿ
ಸಮರ್ಪಿಸಿದನು. ಶಿವನಾದರೋ ತನ್ನ ನಿಜರೂಪದಿಂದ ಪ್ರತ್ಯಕ್ಷನಾದನು. ಆದ
ನ್ನು ಸಾಮವೇದಿಯು ಕಂಡು ಸಂತೋಷದಿಂದ ರೋಮಾಂಚವನ್ನೈದಿ, ನುಡಿದ

ಮಭುಕ್ತ್ವಾನಿರ್ಗತೋಯಥಾ | ಚಿರತೊಂಡತನೂಜಸ್ಯ ಕಾರಯಿತ್ವಾಮೃತಿಂ ಯಥಾ ॥ ೨೩ ॥ ಬಲ್ಲಹಂಧರಣೀಪಾಲಂ ವಂಚಯಿತ್ವಾಕ್ಷಿತೌಯಥಾ | ತಿರ್ನೀಲಕಂಠಂಸಲಿಲೆ ಮಜ್ಜಯಿತ್ವಾಪುರಾಯಥಾ ॥ ೨೪ ॥ ತನೂಭವಇತಿ ಪ್ರೇಮ್ಣಾ ಗೃಹೀತ್ವಾನಂಬ್ಯಣ್ಣಂಯಥಾ | ನೃತ್ಯಂಕೃತ್ವಾಚೇರಮಾಗ್ರೇ ಸಲೀಲಾಘಟನಂಯಥಾ ॥ ೨೫ ॥ ಆಲಿಪ್ಯಚಾಣುಮೂರ್ತೇಶ್ಶ್ರೀಚಂದನಂಲಲಿತಂಯಥಾ | ಓಹಿಲಾರ್ಪಿತಧೂಪೇನ ಪ್ರಹರ್ಷಿತಮನಾಯಥಾ ॥ ೨೬ ॥ ಯಥಾವೃಷ್ಟ್ವಾಲಸದ್ದೀಪಾ ನ್ನಮಿನಂದಿಸಮರ್ಪಿತಾನ್ | ಗೃಹೀತ್ವಾಪಿಳ್ಳೈಭಕ್ತೇನ ವಿಭೂತಿಂತ್ವಂಯಥಾರ್ಪಿತಾಂ ॥೨೭॥ ಅಭುಕ್ತ್ವೈವಗತೋಽಸಿತ್ವಂ ತಥಾಗಂತುಂನಶಕ್ಯತೆ | ತ್ವದ್ಭೃತ್ಯಸ್ತ್ವದಸಂಖ್ಯಾತ ರುದ್ರದಾಸೋಽಸ್ಮ್ಯಹಂ ಶಿವ ॥ ೨೮ ॥ ಪ್ರಮಥಾನಾಂಪ್ರಾಕ್ತನಾನಾಂ ನೂತನಾನಾಂಚಕಿಂಕರಃ | ಮಾಹೇಶ್ವರಾಣಾಮನ್ಯೇಷಾಂ ಸದ್ಭಕ್ತಾನಾಂಮಹಾತ್ಮನಾಂ ॥ ೨೯ ॥ ಭೃತ್ಯಭೃತ್ಯೋಽಸ್ಮಿಕೃಪಯಾ ಭುಜ್ಯತಾಂವೀಕ್ಷ್ಯಮಾಂಶಿವ | ಭುಕ್ತಂಚೆನ್ನಗಣಾ

---

ನೇನೆಂದರೆ ॥೨೨॥ ಎಲೌ ಸ್ವಾಮಿಯೇ! ನೀನು ಹಿಂದೆ ಜೇಡರ ದಾಸಯ್ಯನಿಂದ ವಸ್ತ್ರವನ್ನೀಸಿಕೊಂಡು ಆವನ ಮನೆಯಲ್ಲಿ ಊಟವನ್ನು ಮಾಡದೆ ಹೇಗೆ ಹೊರಟುಹೋದೆಯೋ, ಸಿರಿಯಾಳನ ಮಗನನ್ನು ಕೊಲ್ಲಿಸಿಬಿಟ್ಟು ಹೇಗೆ ಹೊರಟು ಹೋದೆಯೋ ॥ ೨೩ ॥ ಬಲ್ಲಹ ಭೂಪಾಲನನ್ನು ಹೇಗೆ ವಂಚಿಸಿ ಹೋದೆಯೋ, ಪೂರ್ವದಲ್ಲಿ ತಿರುನೀಲಕಂಠನನ್ನು ನೀರಿನಲ್ಲಿ ಮುಳುಗಿಸಿಬಿಟ್ಟು ಹೇಗೆ ಮಾಯವಾದೆಯೋ, ॥ ೨೪ ॥ ನಂಬ್ಯಣ್ಣನನ್ನು ಮಗನೆಂಬ ಪ್ರೀತಿಯಿಂದ ಕರೆದುಕೊಂಡು ಹೇಗೆ ಹೋದೆಯೋ, ಚೇರಮರಾಜನಿದಿರಿಗೆ ವಿಲಾಸದಿಂದ ಕೂಡಿ ಕುಣಿದಾಡಿ ಹೇಗೆ ಹೊರಟುಹೋದೆಯೋ, ಅಣುಮೂರ್ತಿಯೊಪ್ಪಿಸಿದ ಶ್ರೀಗಂಧವನ್ನು ಲೇಪಿಸಿಕೊಂಡು ಹೇಗೆ ಹೊರಟುಹೋದೆಯೋ, ಓಹಿಲಯ್ಯನು ಸಮರ್ಪಿಸಿದ ಧೂಪದಿಂದ ಮನಸ್ಸಂತೋಷಗೊಂಡು ಹೇಗೆ ತಪ್ಪಿಸಿಕೊಂಡೆಯೋ, ॥ ೨೬ ॥ ನಮಿನಂದಿ ಭಕ್ತನು ಸಮರ್ಪಿಸಿದ ಹೊಳೆಯುವ ದೀಪಗಳನ್ನು ನೋಡಿ ಹೇಗೆ ಮರೆಯಾದೆಯೋ? ಪಿಳ್ಳೈನೈನಾರನಿಂದ ಸಮರ್ಪಿಸಲ್ಪಟ್ಟ ವಿಭೂತಿಯನ್ನು ಗ್ರಹಿಸಿ ಹೇಗೆ ಹೊರಟುಹೋದೆಯೋ, ಹಾಗೆ ಇಲ್ಲಿಂದ ತಪ್ಪಸಿಕೊಂಡು ಹೋಗಲಾರೆ. ಎಲೌ ಸ್ವಾಮಿಯೇ, ನಾನು ನಿನ್ನ ಆಳು; ನಿನ್ನ ಅಸಂಖ್ಯಾತ ಮಹಾರುದ್ರರ ಸೇವಕ ॥ ೨೮ ॥ ಹಳಬರಾದ ಮತ್ತು ಹೊಸಬರಾದ ಪ್ರಮಥರಿಗೆ ನಾನು ಕಿಂಕರ. ವೀರಮಾಹೇಶ್ವರರಿಗೂ ಮಹಾತ್ಮರಾದ ಇತರ ಸದ್ಭಕ್ತರಿಗೂ ನಾನು ಆಳಿನ ಆಳು. ಆದುಕಾರಣ, ಪರಶಿವನೆ! ನನ್ನನ್ನು ದಯೆಯಿಂದ ನೋಡಿ ಉಂಡಿಸು. ॥ ೨೯ ॥ ಹಿಂದೆ ನೀನು ಚೆನ್ನಯ್ಯ ಭಕ್ತನ ನಾಲಿಗೆಯ ಮೇಲಿಂದಲೇ ಹೇಗೆ

ಧೀಶ ಜೆಹ್ವಾಗ್ರಾದ್ಭವತಾಯಥಾ ‖ ೩೦ ‖ ಕರಿಕಾಲಾಂಬಯಾದತ್ತ ಮಭೋ ಜೆಭವತಾಯಥಾ । ಪುರಾಸುರಗಿಚೌಡಾರ್ಯೆ ಕಬಳಾನಾಂಪ್ರದಾತರಿ ‖ ೩೧ ‖ ಹಸ್ತಂಪ್ರಸಾರ್ಯಭವತಾ ಯಥಾಭುಕ್ತಂಮಹೇಶ್ವರ । ಯಥಾಭುಕ್ತಂತ್ವಯಾ ಸನ್ಯ ಕ್ಕಣ್ಣಪ್ಪೇನಸಮರ್ಪಿತಂ ‖ ೩೨ ‖ ನಿವೇದಿತಂಯಥಾಭುಕ್ತಂ ಪಿಷ್ಟಂ ಪಿಷ್ಟಾಂಬಯಾತ್ವಯಾ । ಅರಿವಾಳಸ್ಯಶಾಲ್ಯನ್ನಂ ಯಥಾಭುಕ್ತಂತ್ವಯಾಶಿವ ‖ ವೀರಚೋಳಾಂಬಯಾದತ್ತಂ ತ್ವಯಾಭುಕ್ತಂಯಥಾಶಿವ । ಭುಕ್ತಂತ್ವಯಾ ಮಹಾದೇವ ನಿಂಬಾಂಬಾಸದನೇಯಥಾ ‖ ೩೪ ‖ ಭುಕ್ತಂತ್ವಯಾಯಿಳೆ ಯಾಂಡಗುಡಿಯಾರಗೃಹೆ ಯಥಾ । ಪರಾತ್ಪರೇಶಪರಮ ಭಟ್ಟಾರಕಸದಾ ಶಿವ ‖ ೩೫ ‖ ಪರಮೇಶ್ವರಚಿದ್ರೂಪ ಪರಮಾತ್ಮನ್ಮಹೇಶ್ವರ । ಕ್ರತುಸ್ವ ರೂಪ ಪರಮಸ್ವತಂತ್ರಪರಮೋನ್ನತ ‖ ೩೬ ‖ ಯಜ್ಞಮಸ್ತಕವಿಭೇದ ಯಜ್ಞಸಹ್ಮಾರಕಾರಕ । ಯಜ್ಞೇಶಯಜ್ಞಫಲದ ಗಿರಿಜಾಜೇಯಶಂಕರ‖೩೭ ರುದ್ರಾಂಶ್ಚಪ್ರಮಥಾಧೀಶಾ ನ್ಪ್ರಾಕ್ತನಾದ್ಯತನಾನ್ಗಣಾನ್ । ಉದ್ದಿಶ್ಯಭಕ್ಷ್ಯ ಭೋಜ್ಯಾದಿ ಸ್ವೀಕೃತ್ಯಪರಮೇಶ್ವರ ‖ ೩೮ ‖ ಮಹಾಪ್ರಸಾದೋದಾತವ್ಯ ಇತಿಸಾಷ್ಟಾಂಗಮಾನತಃ । ಭಾರ್ಯಯಾಸಹಸದ್ಭಕ್ತ್ಯಾ ಸಾಮವೇದೀಪ್ರಪ ಷನ್ವಾನ್ ‖ ೩೯ ‖ ತತೋಭಕ್ತಶರೀರೋಯಂ ಮಹೇಶೋಭಕ್ತವತ್ಸಲಃ।

---

ಊಟಮಾಡಿದೆಯೋ, ಕರಿಕಾಲಪ್ವೆಯು ಕಳುಹಿಸಿಕೊಟ್ಟ ಪದಾರ್ಥವನ್ನು ನೀನು ಹೇಗೆ ಬುಂಜಿಸಿದೆಯೋ, ಸುರಗಿಚೌಡಯ್ಯನು ತುತ್ತುಗಳನ್ನು ಕಟ್ಟಿಕೊಡಲು, ನೀನು ಕೈನೀಡೀಸಿಕೊಂಡು ಹೇಗೆ ಬುಂಜಿಸಿದೆಯೋ, ಕಣ್ಣಪ್ಪನು ಅರ್ಪಿಸಿದುದನ್ನು ನೀನು ಹೇಗೆ ಉಂಡೆಯೋ ‖ ೩೨ ‖ ಪಿಟ್ಟವ್ವೆಯು ಕೊಟ್ಟ ಹಿಟ್ಟನ್ನು ನೀನು ಹೇಗೆ ಉಂಡೆಯೋ, ಅರಿವಾಳಯ್ಯನು ಕೊಟ್ಟ ಸಣ್ಣಕ್ಕಿಯನ್ನವನ್ನು ನೀನು ಹೇಗೆ ಊಟಮಾಡಿದೆಯೋ, ‖ ೩೩ ‖ ವೀರಚೋಳವ್ವೆಯು ಕೊಟ್ಟ ಪದಾರ್ಥವನ್ನು ಹೇಗೆ ಬುಂಜಿಸಿದೆಯೋ, ಎಲೌ ಮಹಾದೇವನೇ! ನಿಂಬ್ಯವ್ವನ ಮನೆಯಲ್ಲಿ ಹೇಗೆ ಊಟಮಾಡಿದೆಯೋ, ‖ ೩೪ ‖ ಇಳೆಯೊಂಡಗುಡಿಯಾರ ಮನೆಯಲ್ಲಿ ನೀನು ಹೇಗೆ ಬುಂಜಿಸಿದೆಯೋ, ಹಾಗೆ, ಎಲೌ ಪರಮೇಶ್ವರನೇ! ಜ್ಞಾನಸ್ವರೂಪನೆ !......... ಶಂಕರನೇ! ಮಹಾರುದ್ರರುಗಳನ್ನೂ, ಪ್ರಮಥರುಗಳನ್ನೂ, ಪುರಾತನ ನೂತನ ಶಿವಗಣರನ್ನೂ ಉದ್ದೇಶಿಸಿ ನನ್ನ ಮನೆಯಲ್ಲೂ ಭಕ್ಷ್ಯಭೋಜ್ಯಾದಿ ವಸ್ತುಗಳನ್ನು ಸ್ವೀಕರಿಸಿ, ಪ್ರಸಾದವನ್ನೀಯಬೇಕು, ಎಂದು ಹೇಳಿ ಸಾಮವೇದಿಯು ಪತ್ನೀಸ ಮೇತನಾಗಿ ಸಂತೋಷದಿಂದ ಸಾಷ್ಟಾಂಗವಾಗಿ ನಮಸ್ಕರಿಸಿದನು. ‖ ೩೯ ‖ ಬಳಿಕ ಭಕ್ತದೇಹಿಯೂ ಭಕ್ತವತ್ಸಲನೂ ಭಕ್ತಾಧೀನಶರೀರಿಯೂ ಭಕ್ತಪ್ರಿಯ

ಭಕ್ತಾಧೀನತನುರ್ಭಕ್ತಪ್ರಿಯೋ ಭಕ್ತಾನುಪಾಲಕಃ ॥ ೪೦ ॥ ಗಿರಿಜಾ ರಮಣಃ ಕಂಠೇಕಾಲಃಕಾಲವಿದಾರಣಃ । ತಥೇತಿಭುಕ್ತ್ವಾಕೃಪಯಾ ಪ್ರಸಾದ ಮಪಿದತ್ತವಾನ್ ॥ ೪೧ ॥ ಪ್ರಮಥೇಷುಸರುದ್ರೇಷು ಸೇವ್ಯಮಾನೇಷುಪಾ ರ್ಶ್ವಯೋಃ । ಪುರತೋಭಕ್ತನಿವಹೆ ಪರಿತೋಷಂಪ್ರಯಾತಿಚ ॥ ೪೨ ॥ ಸ್ತುವತ್ಸುಚಂಡಕೀರ್ತ್ಯಾದಿ ಗಣೇಷ್ವತಿಮನೋಹರಂ । ಶಿವದುಂದುಭಿನಿಧ್ವಾನೆ ಚಕಾಸತಿಸಕಾಮಹೃತ್ ॥ ೪೩ ॥ ಸಹಾಧ್ವರಾಯಾತವಿಪ್ರೈಃ ಷಷ್ಟಿಗ್ರಾಂ ಶದ್ಗ್ರಾಮಮುತ್ತಮಂ । ತತ್ರತ್ಯಜನಸಂದೋಹಂ ಸಭಾರ್ಯಂಸಾಮವೇ ದಿನಂ ॥ ೪೪ ॥ ವಿಮಾನವರಮಾರೋಪ್ಯ ಕೈಲಾಸಮನಯಚ್ಛಿವಃ । ಕೃತೋ ವಿನಾಶಿವೇನಾಶ್ವಮೇಧೋದಕ್ಷಸ್ಯನಿಷ್ಫಲಃ ॥ ೪೫ ॥ ಅಭೂತ್ಸವಶ್ಯೆವೋಪೇ ತಸ್ಸಫಲಸ್ಸಾಮವೇದಿನಃ । ಕಿಮರ್ಹಾಸ್ಸ್ಯುರ್ಭಕ್ತಿಹೀನಕೃತಾ ಯಜ್ಞಾ ವಿಗರ್ಹಿತಾಃ ॥ ೪೬ ॥ ಭುವಿಮಾದರಚೆನ್ನಾಖ್ಯ ಭಕ್ತಸ್ಯೇವದ್ವಿಜನ್ಮನಾಂ । ವಿದ್ಯತೇಕಿಂದೇವಯಜ್ಞಃಷಟ್ಕರ್ಮನಿರತಾತ್ಮನಾಂ ॥ ೪೭ ॥ ಪಿತೃಯಜ್ಞೋ ಯಥೋತ್ತುಂಗ ಚೋಳಾಖ್ಯಸ್ಯಮಹೀಭೃತಃ । ಭೂತಯಜ್ಞಃಪುನಶ್ಚೆನ್ನ ಬಸವಸ್ಯೇವಸನ್ನುತಃ ॥ ೪೮ ॥ ಮನುಷ್ಯಯಜ್ಞಶ್ರೀಸಿದ್ಧರಾಮಸ್ಯೇವನು

---

ನೂ ಭಕ್ತರಕ್ಷಕನೂ ಗಿರಿಜಾಪತಿಯೂ ಕಪ್ಪುಗೊರಲನೂ ಯಮಭೇದಕನೂ ಆದ ಪರಮೇಶ್ವರನು " ಹಾಗೆಯೇ ಆಗಲಿ " ಎಂದು ಹೇಳಿ, ಭೋಜನಮಾಡಿ ಕೃಪೆಯಿಂದ ಪ್ರಸಾದವನ್ನು ಕೊಟ್ಟನು. ॥ ೪೧ ॥ ಬಳಿಕ ತನ್ನ ಪಕ್ಕಗಳಲ್ಲಿ ರುದ್ರರ ಸಮೇತರಾದ ಪ್ರಮಥರುಗಳು ಸೇವಿಸುತ್ತಿರಲು, ಮುಂಗಡೆಯಲ್ಲಿ ಭಕ್ತಸಮೂ ಹವು ಸಂತೋಷದಿಂದ ನಡೆಯುತ್ತಿರಲು, ಚಂಡಕೀರ್ತಿ ಮೊದಲಾದ ಶಿವಗಣರು ಅತ್ಯಂತ ಮನೋಹರವಾಗಿ ಹೊಗಳುತ್ತಿರಲು, ಮಂಗಳಕರವಾದ ನಗಾರಿಯ ಶಬ್ದವು ಆಗುತ್ತಿರಲು, ಮದನಾಂತಕನಾದ ಪರಶಿವನು ಆ ಯಜ್ಞಕ್ಕೆ ಬಂದಿದ್ದ ಸಕಲ ಬ್ರಾಹ್ಮಣರೊಡನೆಯೂ ಸುತ್ತಣ ೧೬ ಗ್ರಾಮಗಳನ್ನೂ. ಅವುಗಳ ಜನ ರನ್ನೂ, ಪತ್ನೀಸಮೇತನಾದ ಸಾಮವೇದಿಯನ್ನೂ ಸಹ ದೇವಯಾನದಲ್ಲಿ ಕುಳ್ಳಿ ರಿಸಿಕೊಂಡು ಕೈಲಾಸಕ್ಕೆ ಕರೆದುಕೊಂಡು ಹೋದನು. ॥ ೪೪ ॥ ದಕ್ಷಬ್ರಹ್ಮನು ಶಿವನನ್ನು ಬಿಟ್ಟು ಮಾಡಿದ ಯಜ್ಞವು ವ್ಯರ್ಥವಾಯಿತು. ಈ ಸಾಮವೇದಿಯ ಯಜ್ಞವು ಶಿವನನ್ನು ಕೂಡಿಕೊಂಡಿದ್ದುದರಿಂದ ಸಾರ್ಥಕವಾಯಿತು. ಭಕ್ತಿಹೀ ನರು ಮಾಡಿದ ದುಷ್ಟಯಜ್ಞಗಳು ಯೋಗ್ಯಗಳೆನಿಸಿಕೊಳ್ಳುವುವೆ? ॥ ೪೬ ॥ ಭೂ ಮಿಯಲ್ಲಿ ಮಾದರಚನ್ನಯ್ಯನ ದೇವಯಜ್ಞದೋಪಾದಿಯಲ್ಲಿ ಷಟ್ಕರ್ಮನಿರತರಾದ ಬ್ರಾಹ್ಮಣರ ದೇವಯಜ್ಞವಿರುವುದೆ? ಉತ್ತುಂಗ ಚೋಳಭೂಪತಿಯ ಪಿತೃಯಜ್ಞ ದಂತೆಯೂ, ಚೆನ್ನಬಸವೇಶನ ಭೂತಯಜ್ಞದಂತೆಯೂ, ಶ್ರೀಸಿದ್ಧರಾಮೇಶನ ಉನ್ನ

ಹೋನ್ನತಃ | ಜ್ಞಾನಿನೋಜಂಗಮಸ್ಯೇವಬ್ರಹ್ಮಯಜ್ಞೋನಿರಂತರಂ ||೪೯||
ಧರಣ್ಯಾಮುನ್ನತಫಲಂ ರಾಜಸೂಯಸಹಸ್ರಕಂ | ಏಶಾಧಿನಾಥಸತ್ಕರ್ಮ
ಸದೃಶಂಕಿಂ ವಿಚಾರಿತೇ ||೫೦|| ಕೃತಗೋಮೇಧಯಾಗಾನಾಂಲಕ್ಷಾಣ್ಯಪಿವಿಧಾ
ನತಃ | ಶ್ರೀಭೋಗಿದೇವಾರ್ಯಕೃತಕ್ರಿಯಾಸಾಮ್ಯಂಭಜಂತಿಕಿಂ||೫೧|| ಕ್ರತೂ
ನಾಂಪೌಂಡರೀಕಾಣಾಂಕೋಟಯೋಬಹುದಕ್ಷಿಣಾಃ || ಇರುವೋತಸ್ಯಸದ್ಭ
ಕ್ತೇಷೋಡಶಾಂಶೇನಕಿಂಸಮಾಃ ||೫೨|| ಅಸುರಂನರಯಾಗಾನಾಮುರ್ಬುದಂವಿ
ಧಿವತ್ಕೃತಂ | ಸಿರಿಯಾಳಚರಿತ್ರಸ್ಯ ಲೇಶೇನಾಪಿಸಮಂನುಕಿಂ ||೫೩|| ಪದ್ಮಾ
ನ್ಯಪಿಬಹುಸ್ವರ್ಣ ಯಜ್ಞಾನಾಂಸದೃಶಾನಿಕಿಂ| ಮಹಿಮ್ನಾಬಸವಾರ್ಯಸ್ಯ ಭುವ
ನಾದ್ಭುತಕರ್ಮಣಃ ||೫೪|| ಸದ್ಭಕ್ತಿಫಲಮಾಹಾತ್ಮ್ಯಂ ಮಗಣ್ಯಂಭವತೀತ್ಯಥ|
ಶತಕ್ರತುಫಲಂಶ್ವೇತಃ ಪ್ರಾಪ್ಯೈಕಸ್ಮಾತ್ಪ್ರಸೂನತಃ || ೫೫ || ದಕ್ಷಯಜ್ಞ
ಫಲಂಶೀರ್ಷಂ ಹೃತ್ವಾಮೇಷಶಿರೋದದೌ | ಸಗರಸ್ಯಾಧ್ವರಫಲಂ ಮುನಿ
ಕೋಪಾನಲೇಂಕ್ಷಿಪತ್ || ೫೬ || ನಹುಷಸ್ಯಕ್ರತುಫಲ ಮದಾತ್ಸನ್ನಗರೂ

---

ತನಾದ ಮನುಷ್ಯಯಜ್ಞದಂತೆಯೂ, ಶಿವಜ್ಞಾನಿಯಾದ ಜಂಗಮನ ಬ್ರಹ್ಮಯಜ್ಞ
ದಂತೆಯೂ, ಬ್ರಾಹ್ಮಣರ ಪಿತೃಯಜ್ಞಾದಿಗಳಿರುವುವೆ? ||೪೯|| ವಿಚಾರಮಾಡಿದರೆ
ಭೂಲೋಕದಲ್ಲಿ ಹೆಚ್ಚುಫಲವನ್ನು ಕೊಡತಕ್ಕವೆಂದು ಹೇಳಲ್ಪಡುವ ರಾಜಸೂ
ಯ ಯಜ್ಞಸಹಸ್ರವು ಶಿವಪೂಜಾಕರ್ಮಕ್ಕೆ ಸಮಾನವಾಗುವುವೆ? ||೫೦|| ವಿಧ್ಯ
ನುಸಾರವಾಗಿ ಮಾಡಿದ ಲಕ್ಷಾಂತರ ಗೋಮೇಧ ಯಾಗಗಳು ಕೂಡ ಕೆಂಬಾವಿ
ಭೋಗಯ್ಯನು ಮಾಡಿದ ಕ್ರಿಯೆಗೆ ಸಮನಾಗುವುವೆ ? ||೫೧|| ಬಹು ದಕ್ಷಿಣೆಯನ್ನು
ಕೊಟ್ಟು ನಡಸಿದ ಕೋಟ್ಯಂತರ ಪೌಂಡರೀಕ ಯಜ್ಞಗಳು ಇರುವೋತಭಕ್ತನು
ಆಚರಿಸಿದ ಭಕ್ತಿಯ ಹದಿನಾರನೇ ಒಂದು ಭಾಗದೊಡನೆ ಸಮನಾಗುವುವೆ? ||೫೨||
ಅನೇಕದೇವತೆಗಳನ್ನು ಕೂಡಿಕೊಂಡು ವಿಧಿವತ್ತಾಗಿ ಮಾಡಿದ ಒಂದರ್ಬುದ ನರ
ಯಜ್ಞಗಳು ಸಿರಿಯಾಳನ ಚರಿತ್ರದ ಸ್ವಲ್ಪಭಾಗದೊಡನಾದರೂ ಸಮನಾಗುವುವೆ? ||೫೩||
ಅಧಿಕವಾಗಿ ಸುವರ್ಣದಾನ ಮಾಡಿದ ಪದ್ಮಾಂತರ ಯಜ್ಞಗಳು ಲೋಕಾಶ್ಚರ್ಯಕರವಾದ
ಕೆಲಸವನ್ನು ಮಾಡಿದ ಬಸವೇಶನ ಮಹಿಮೆಯೊಡನೆ ಸಮನಾಗುವುವೆ? ||೫೪|| ಸದ್ಭ
ಕ್ತಿಯಿಂದುಂಟಾಗುವ ಪ್ರಯೋಜನವೂ ಮಹಿಮೆಯೂ ಗಣನಾತೀತವಾದುವು. ಹೇಗೆಂ
ದರೆ—ಶ್ವೇತನು ಒಂದು ಹೂವಿನ ಮೂಲಕದಿಂದ ನೂರು ಯಜ್ಞಗಳನ್ನು ಮಾಡುವುದ
ರಿಂದ ಪಡೆಯುವ ಫಲವನ್ನು ಹೊಂದಿದನು. ದಕ್ಷಬ್ರಹ್ಮನು ಮಾಡಿದ ಯಜ್ಞದ ಫಲ
ವಾದರೂ ಅವನ ತಲೆಯನ್ನು ತೆಗೆದು ಕುರಿತಲೆಯನ್ನು ಕೊಟ್ಟಿತು. ಸಗರಚಕ್ರ
ವರ್ತಿಯ ಯಜ್ಞದ ಫಲವು ಋಷಿಯ ಕೋಪಾಗ್ನಿಗೀಡುಮಾಡಿತು. ||೫೬|| ನಹುಷನ

ಪತಾಂ | ಧರ್ಮಪುತ್ರಕ್ರತುಫಲಂ ಸರ್ವಬಂಧುಕ್ಷಯಂವ್ಯಧಾತ್ ‖ ೫೭ ‖ ಸಾಮವೇದಿಕ್ರತುಫಲಂ ಭಕ್ತಿರೇವಾತ್ರಕಾರಣಂ | ಇತಿವಾಕ್ಯಾದ್ವ್ಯಧಾತ್ಸದ್ಯಃಪ್ರತ್ಯಕ್ಷಂಪರಮೇಶ್ವರಂ ‖ ೫೮ ‖

ಇತಿಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೆ
ದೀಕ್ಷಾಪ್ರಕರಣೇ ಸೂರಾಂಬೋಪಾಖ್ಯಾನೇ
ಸಾಮವೇದಿ ಚರಿತ್ರಕಥನಂನಾಮ
ಷೋಡಶೋಧ್ಯಾಯಃ

———:o:———

## ಅಥ ಸಪ್ತದಶೋಽಧ್ಯಾಯಃ.

(ತಿರುನಾಳ್ವೋವಚರಿತಂ)

ಕಿಂಚಸ್ವಭಕ್ತಮಾಹಾತ್ಮ್ಯಂ ಜಾನಾತಿಶಿವಏವಸಃ | ತಏವಜಾನತೇ ಕೃತ್ಯ ಮನ್ಯಾಕೃತ್ಯಾಪಿಶಾಂಕರಂ ‖ ೧ ‖ ಬಹುರೂಪಾವೃತಮಪಿ ರಂಗಮ

---

ಯಜ್ಞದ ಫಲವು ಅವನಿಗೆ ಸರ್ವಸಾರವನ್ನುಂಟುಮಾಡಿತು. ಧರ್ಮರಾಜನ ಯಜ್ಞದ ಫಲವು ಅವನ ಎಲ್ಲಾ ನಂಟರ ನಾಶವನ್ನೂ ಉಂಟುಮಾಡಿಕೊಟ್ಟಿತು. ‖ ೫೭ ‖ ಸಾಮವೇದಿ ಮಾಡಿದ ಯಜ್ಞದ ಫಲವಾದರೊ ತತಕ್ಷಣದಲ್ಲೇ ಪರಶಿವನನ್ನು ಪ್ರತ್ಯಕ್ಷನನ್ನಾಗಿ ಮಾಡಿಕೊಟ್ಟಿತು.ಹೀಗೆಂಬುದರಿಂದ ಇಲ್ಲಿ ಇದಕ್ಕೆ ಭಕ್ತಿಯೇ ಕಾರಣವಾಗಿರುವುದು. ‖ ೫೮ ‖

ಎಂಬಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ
ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ „ ಭಾವಮಂಜರಿ " ಎಂಬ
ಕನ್ನಡ ಟಿಪ್ಪಣದಲ್ಲಿ ಸೂರಾಂಬೆಯ ಕಥೆಯೊಳಗೆ ಸಾಮವೇದಿ
ಚರಿತ್ರವನ್ನು ವಿವರಿಸುವ
ಹದಿನಾರನೆಯ ಅಧ್ಯಾಯವು ಮುಗಿದುದು.

---

## ಹದಿನೇಳನೆಯ ಅಧ್ಯಾಯವು.

(ತಿರುನಾಳ್ವೋವರ ಚರಿತ್ರವು.)

ಮತ್ತೂ ಆ ಪರಶಿವನೊಬ್ಬನೇ ತನ್ನ ಭಕ್ತರ ಮಹಿಮೆಯನ್ನು ತಿಳಿಯುತ್ತಾನೆ. ಬೇರೆ ವೇಷದಿಂದಿದ್ದರೂ ಆ ಪರಶಿವನ ಕೆಲಸವನ್ನು ಅವನ ಭಕ್ತರು ಮಾತ್ರವೇ ತಿಳಿಯುತ್ತಾರೆ ‖೧‖ ಲೋಕದೊಳಗೆ ನಾಟ್ಯರಂಗದಲ್ಲಿ ನಟನು ಅನೇಕ ವೇಷಗಳನ್ನು ಧರಿ

ಧ್ಯೆಯಥಾನಟಂ | ನಟೇಸ್ಸ್ವಪತಿಮೇವಾಶು ಮನುತೇಭುವನೇತಥಾ ‖ ೨ ‖
ಭಕ್ತವೃಂದಸ್ಯವಿಜ್ಞಾತುಂ ಪುನಶ್ಚಂದ್ರಾರ್ಧಶೇಖರಃ | ಆಶ್ರಿತ್ಯವಿಕೃತಂರೂಪ
ಮಾಗಚ್ಛತಿಯದಾತದಾ ‖ ೩ ‖ ವಿದಿತ್ವಾಭಕ್ತಸಂದೋಹಃ ಪ್ರಸ್ತೌತಿ
ಪರಮೇಶ್ವರಂ | ಅಥಮುಂವೇಷಮಾಶ್ರಿತ್ಯ ಲೀಲಯಾಪರಮೇಶ್ವರಃ ‖ ೪ ‖
ಪುನಸ್ಸ್ವಂರೂಪಮಾಯಾತೀ ತ್ಯೇತದತ್ರಕಿಮದ್ಭುತಂ | ಶಿವಲಾಂಛನಧಾ
ರ್ಯೇವ ಶಿವಸ್ಸಾಕ್ಷಾನ್ನಸಂಶಯಃ ‖ ೫ ‖ ತಥಾಹಿದ್ರಮಿಡೇದೇಶೆ ಭಕ್ತವ
ರ್ಯೋಸ್ತಿಕಶ್ಚನ | ತಿರುನಾಳ್ಪೋವಾಭಿಧಾನ ಸ್ಸತ್ವೇಕಸ್ಯದ್ವಿಜನ್ಮನಃ ‖೬‖
ಸದನೇವೇತನಂಕೃತ್ವಾ ತದಾರ್ಜಿತಧನೇನಚ | ಜಂಗಮಾರಾಧನಂಕುರ್ವನ್ಸ
ರ್ತಾತೇಭಕ್ತಿತತ್ಪರಃ ‖ ೭ ‖ ಪೆರುಮುಟ್ಟಪುರಗ್ರಾಮೆ ಶ್ರೀಪತೀಶಮಹೋ
ತ್ಸವಂ | ದ್ರಷ್ಟುಂಗಚ್ಛಾಮಿಗಚ್ಛಾಮಿ ತ್ಯನಯದ್ದ್ವಾದಶಾಸ್ಸಮಾಃ ‖ ೮ ‖
ಏತದ್ಭಾಗ್ಯವಶಾದ್ರಾಜದಿಷ್ಟ್ಯಾತಸ್ಯಾಗ್ರಜನ್ಮನಃ | ಅವಶ್ಯಂತತ್ಪುರಂಗಂತು
ಮಥಾಯಾತಂಪ್ರಯೋಜನಂ ‖ ೯ ‖ ದ್ವಿಜಾರ್ಥಂಸಸ್ವಯಂ ಭಕ್ತ್ಯಾ
ಯಯೌತದ್ದೇವತಾಪುರಂ | ಸ್ವಸ್ಯೇಶದರ್ಶನಮಭೂದ್ದ್ವಿಜಾರ್ಥಶ್ಚೇತಿಹ

---

ಸಿಕೊಂಡಿದ್ದರೂ ನಟಿಯು ತನ್ನ ಪತಿಯಿವನೇ ಸರಿಯೆಂದು ನಟನನ್ನು ಹೇಗೆ ತಿಳಿಯಬ
ಲ್ಲಳೋ ಹಾಗೆ ‖ ೨ ‖ ಶಿವನು ಭಕ್ತರನ್ನು ಪರೀಕ್ಷಿಸಿ ತಿಳಿಯುವುದಕ್ಕಾಗಿ ವಿಕಾರವಾದ
ರೂಪವನ್ನು ಧರಿಸಿ ಯಾವಾಗ ಬರುತ್ತಾನೋ ಆಗ ಭಕ್ತರು ಇವನೇ ಪರಶಿವನೆಂಬುದನ್ನು
ತಿಳಿದುಕೊಂಡು ಸ್ತೋತ್ರಮಾಡುತ್ತಾರೆ. ಈ ಕಾರಣದಿಂದಲೇ ಶಿವನು ವಿಲಾಸದಿಂದ
ನೀಚವೇಷವನ್ನು ಧರಿಸಿದ್ದು ಮತ್ತೆ ನಿಜರೂಪವನ್ನು ತಾಳುತ್ತಾನೆ. ಇದರಲ್ಲಿ ಆಶ್ಚ
ರ್ಯವೇನಿರುವುದು ? ಮತ್ತೂ ಆ ಶಿವಚಿಹ್ನೆಯನ್ನು ಧರಿಸಿದವನೇ ಪ್ರತ್ಯಕ್ಷಪರಶಿವನು
ಅದಕೆ ಸಂಶಯವಿಲ್ಲವೆಂದು ಸೂರಾಂಬೆಯು ಹೇಳಿ, ಅದಕ್ಕೆ ಒಂದು ದೃಷ್ಟಾಂತದ ಕಥೆ
ಯನ್ನು ನಿರೂಪಿಸುತ್ತಾಳೆ ‖ ೫ ‖ ಹೇಗೆಂದರೆ—ದ್ರವಿಡದೇಶದಲ್ಲಿ ತಿರುನಾಳ್ಪೋವರೆಂಬ
ಒಬ್ಬ ಭಕ್ತಶ್ರೇಷ್ಠನಿರುತ್ತಾನೆ. ಅವನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಜೀತ
ವನ್ನು ಮಾಡಿಕೊಂಡು ಸಂಪಾದಿಸಿದ ಹಣದಿಂದ ಜಂಗಮಾರ್ಚನೆಯನ್ನು ಮಾಡಿಕೊಂಡು
ಭಕ್ತಿಸಂಪನ್ನನಾಗಿರುತ್ತಾನೆ ‖ ೭ ‖ ಆತನು ಪೆರುಮುಟ್ಟಪುರವೆಂಬೂರಿನಲ್ಲಿ ಶ್ರೀ ಪತೀಶ್ವ
ರನ ಮಹೋತ್ಸವವನ್ನು ನೋಡುವುದಕ್ಕಾಗಿ ಹೋಗಬೇಕು ಹೋಗಬೇಕು ಎನ್ನು
ತ್ತಲೇ ೧೨ ವರ್ಷಗಳನ್ನು ಕಳೆದನು ‖ ೮ ‖ ಹೀಗಿರುವಲ್ಲಿ ಇವನ ಭಾಗ್ಯದಿಂದ ಇವನ
ಯಜಮಾನನಾದ ಬ್ರಾಹ್ಮಣನು ಆ ಶ್ರೀಪತೀಶ್ವರನಿರುವ ಊರಿಗೆ ಅವಶ್ಯಕವಾಗಿ ವರ್ಗ
ವಾಗಿ ಹೋಗಬೇಕೆಂದು ರಾಜಪ್ಪಣೆಯಾಯಿತು ‖ ೯ ‖ ತನ್ನ ಯಜಮಾನನಾದ ಬ್ರಾಹ್ಮ
ಣನಿಗೋಸ್ಕರ ತಿರುನಾಳ್ಪೋವರೂ ಹೋಗಬೇಕಾಯಿತು. ಈತನು—ತನಗೆ ಶಿವನದರ್ಶ

ಕ್ಷಿತಃ ‖ ೧೦ ‖ ಶೀರ್ಷೇತಸ್ಮಿಂಸ್ತೃಣಭರಂ ಧೃತ್ವಾಗಚ್ಛದ್ಯಥಾಧ್ವನಿ |
ಪಪಾತವೃಷ್ಟಿರ್ಮಹತೀ ಕುಂಭಾದಂಭಇವಸೃತಂ ‖ ೧೧ ‖ ಗಚ್ಛನ್ನಶಕ್ತ್ಯಾ
ತಿಷ್ಠಂಶ್ಚ ಕಥಂಚಿದ್ಗ್ರಾಮಮಾಗತಃ | ಸಹಾಯೇಷುಪುರೋಯಾತೇ ಷ್ವಂಧ
ಕಾರೇಪ್ರಸರ್ಪತಿ ‖ ೧೨ ‖ ತಸ್ಯಾಂರಾತ್ರಾವೇಕಏವಭಿತ್ತ್ಯಾಃ ಕಸ್ಯಾಶ್ಚಿದಂ
ತಿಕೇ | ಶ್ರೀಪತೀಶೋತ್ಸವಂಪ್ರೇಕ್ಷ್ಯೇ ಕದಾವೇತಿವಿಚಿಂತಯನ್ ‖ ೧೩ ‖
ಜಾನುದಘ್ನೇಪಯಃಪೂರೇ ತಸ್ಥೌತೃಣಭರಂವಹನ್ | ಶಿವಸ್ತದಾನೀಂತತ್ರತ್ಯ
ಭಕ್ತಾನಾಂಸ್ವಪ್ನಿಯೋಗಿನಾಂ ‖ ೧೪ ‖ ಸ್ವಪ್ನೇಷ್ವಕಥಯತ್ತಸ್ಯ ಸ್ಥಿತಿಮತ್ಯಂ
ತದುಸ್ಸಹಂ | ಆಖಂಡಲದಿಶೋಭಾಗೇ ಪುರಸ್ಯಾಸ್ಯಮಹೀಯಸಃ ‖ ೧೫ ‖
ಮದೀಯಗೋಪುರದ್ವಾರ ಪ್ರಾಕಾರ್ಯೈಶಾನಸೀಮನಿ | ಮಹಾತೃಣಭರಂಶೀ
ರ್ಷೇಧೃತ್ವಾವೃಷ್ಟ್ಯಾಮಹತ್ತರೇ ‖ ೧೬ ‖ ಅಧಃಪ್ರವಾಹೇಬಹುಳೇ ಪ್ರಸರ್ಪ
ತ್ಯತಿವೇಗತಃ | ತತ್ಪ್ರವಾಹಂಸಮಾಗಚ್ಛತ್ತೃಣಪುಂಜಸಮಾವೃತಃ ‖೧೭‖
ಆಧ್ಮಾತಕುಕ್ಷಿರುದಯ ದ್ರೋಮಾಂಚವ್ಯಾಪ್ತವಿಗ್ರಹಃ | ಸಮುದ್ಗತಸಿರಾ

---

ನವೂ ಆಯಿತು, ಬ್ರಾಹ್ಮಣನ ಕಾರ್ಯವೂ ಆಯಿತು, ಎಂಬ ಸಂತೋಷದಿಂದ ಕೂಡಿ ದವನಾಗಿ ಭಕ್ತಿಯಿಂದ ಆ ಪಟ್ಟಣಕ್ಕೆ ಹೊರಟನು ‖ ೧೦ ‖ ತಲೆಯ ಮೇಲೆ ಹುಲ್ಲಿನ ಹೊರೆಯನ್ನು ಹೊತ್ತು ಮಾರ್ಗದಲ್ಲಿ ಹೋಗುತ್ತಿರಲು, ದೊಡ್ಡಮಳೆಯು ಬಂದಿತು. ಬಿಂದಿಗೆಯಿಂದ ಸುರಿದಂತೆ ದಪ್ಪನಾದ ಧಾರೆಯಾಗಿ ನೀರು ಸುರಿಯುತ್ತಿದ್ದಿತು ‖ ೧೧ ‖ ಈತನು ನಡೆಯಲಾರದೆ ನಿಂತುಕೊಂಡನು. ಬಳಿಕ ಬಂದು ಹಳ್ಳಿಗೆ ಬಂದನು. ಜತೆ ಯಲ್ಲಿದ್ದವರು ಮುಂದಕ್ಕೆ ಹೊರಟುಹೋಗಲಾಗಿ, ಕತ್ತಲೆಯು ಕವಿದುಕೊಳ್ಳಲಾಗಿ, ಆ ರಾತ್ರಿಯಲ್ಲಿ ಅವನೊಬ್ಬನೇ ಬಂದು ಗೋಡೆಯ ಬಳಿಯಲ್ಲಿ ಶ್ರೀಪತೀಶ್ವರನನ್ನು ಯಾವಾಗ ನೋಡುವೆನೊ ಎಂಬದಾಗಿ ಚಿಂತಿಸುತ್ತ ‖ ೧೩ ‖ ಹುಲ್ಲ ಹೊರೆಯನ್ನು ಹೊತ್ತು ಕೊಂಡೇ ಮೊಣಕಾಲುದ್ದದ ನೀರಿನ ಪ್ರವಾಹದಲ್ಲಿ ಕುಳಿತುಕೊಂಡಿದ್ದನು. ಆಗ ಪರ ಶಿವನು ಆ ಹಳ್ಳಿಯಲ್ಲಿನ್ನ ತನ್ನ ಊಳಿಗದ ಭಕ್ತರುಗಳ ಸ್ವಪ್ನದಲ್ಲಿ ಹೋಗಿ, ಆ ತಿರು ನಾಳ್ಪೋವರ ಸಹಿಸುವುದಕ್ಕಶಕ್ಯವಾದ ಸ್ಥಿತಿಯನ್ನು ಹೇಳಿದನು. ಹೇಗೆಂದರೆ—ಮಹ ತ್ತರವಾದ ಈ ಪಟ್ಟಣದ ಇಂದ್ರದಿಕ್ಕಿನ ಭಾಗದಲ್ಲಿ ನನ್ನ ಆಲಯದ ಹೊರಬಾಗಿಲ ಪೌಳಿಗೋಡೆಯ ಈಶಾನ್ಯದ ಎಲ್ಲೆಯಲ್ಲಿ ದೊಡ್ಡಹುಲ್ಲಿನ ಹೊರೆಯನ್ನು ತಲೆಯ ಮೇಲೆ ಹೊತ್ತು, ಮಳೆಯಿಂದ ನೀರು ದೊಡ್ಡ ಪ್ರವಾಹವಾಗಿ ಕೆಳಗೆ ವೇಗದಿಂದ ಹರಿಯುತ್ತಿ ರಲು, ಅದರಲ್ಲಿ ಕೊಚ್ಚಿಬಂದ ಹುಲ್ಲಿನ ಸಮೂಹದಿಂದ ಆವರಿಸಲ್ಪಟ್ಟ ನನ್ನ ಬಬ್ಬ ಭಕ್ತನು ‖ ೧೭ ‖ ಹತ್ತಿಹೋದ ಹೊಟ್ಟೆಯುಳ್ಳವನಾಗಿ, ರೋಮಾಂಚನಗೊಂಡ ಶರೀರ ವುಳ್ಳವನಾಗಿ, ನರಗಳೆಲ್ಲ ಮೇಲಕ್ಕೆ ಎದ್ದುಕೊಂಡಿರುವನಾಗಿ, ಬಿಸುವಿಲ್ಲದೆ ನಡುಗುತ್ತಿರು

ಜಾಲಃ ಕಂಪಮಾನೋನಿರಂತರಂ ‖ ೧೮ ‖ ಅನ್ಯೋನ್ಯಂಘಟಯನ್ದಂತಾನ್ಜಲಸ್ರೀಕಾತ್ಸಿತಾಧರಃ । ತಿರ್ಯಕ್ಪಾದಾಂಗುಳೀಸಂಧಿರುಜಾ ನಚರಣದ್ವಯಃ‖೧೯ ಆಸ್ತೇಕಶ್ಚನಭಕ್ತೋಮೇ ತಸ್ಯಾಭಿಮುಖಮಾದರಾತ್ । ಗತ್ವಾಹಂಪ್ರೀತಿಸಂಯುಕ್ತ ಇದಾನೀಂತಸ್ಯಸನ್ನಿಧೌ ‖ ೨೦ ‖ ಯೂಯಮಿಗಜಮಾದಾಯ ನಯತಾಮಾಂಪುರೀಮಿತಿ । ಪ್ರಗೇಸಮುತ್ಥಿತೈಸ್ಸರ್ವೈ ರ್ಭಕ್ತಸಂಘೈಸ್ಸಸಂಭ್ರಮಂ ‖೨೧‖ ಶಂಸದ್ಭಿಃಪುರವೀಥೀಷು ಸ್ವಪ್ನವೃತ್ತಂಸಮಂತತಃ । ಸಮೀಪಮಾಗತ್ಯತಸ್ಯಮಹಿತಾಶ್ಚರ್ಯನಿರ್ಭರೈಃ ‖ ೨೨ ‖ ನಿರೀಕ್ಷ್ಯಗಜಮಾರೋಪ್ಯಮಿನಿನ್ಯುಸ್ತಂಶಿವಾಲಯಂ । ಪ್ರವಿಶ್ಯಶಂಭುಭವನಂ ಸಲೀನೋಭೂನ್ಮಹೇಶ್ವರೇ ‖ ೨೩ ‖ ಕಥಮಂತ್ಯಜಇತ್ಯೇವಂಪ್ರವಕ್ತುಮುಪಪದ್ಯತೇ ।

ಇತಿ ಶ್ರೀಮಲ್ಲೋಕಾರಾಧ್ಯ ಪಂಡಿತಾರಾಧ್ಯಚರಿತೇ ದೀಕ್ಷಾಪ್ರಕರಣೇ
ಸೂರಾಂಬೋಪಾಖ್ಯಾನೇ ತಿರುನಾಳ್ವೋವಚರಿತ್ರಕಥನಂನಾಮ
ಸಪ್ತದಶೋಽಧ್ಯಾಯಃ.

---

ವನಾಗಿ ‖ ೧೮ ‖ ಹಲ್ಲುಗಳನ್ನು ಬಂದಕೊಂಡನ್ನು ತಗಲಿಸುತ್ತಲಿರುವನಾಗಿ, ನೀರಿನಲ್ಲಿ ನೆನಸು ಬೆಳ್ಳಗಾದ ತುಟಿಯುಳ್ಳವನಾಗಿ, ಅಡ್ಡಲಾಗಿ ತಿರುಗಿಕೊಂಡಿರುವ ಕಾಲು ಬೆರಲ ಸಂದಿಯುಳ್ಳವನಾಗಿ, ಊನುಕೊಂಡ ಕಾಲ್ಗಳುಳ್ಳವನಾಗಿ ‖ ೧೯ ‖ ಇರುತ್ತಾನೆ. ನಾನು ಈಗ ಅವನಿಗಿದಿರಾಗಿ ಹೋಗಿ ಪ್ರೀತಿಯಿಂದ ಅವನ ಬಳಿಯಲ್ಲಿ ಕುಳಿತುಕೊಂಡಿರುತ್ತೇನೆ. ನೀವು ನಮ್ಮಿಬ್ಬರನ್ನೂ ಆನೆಯಮೇಲೆ ಹತ್ತಿಸಿಕೊಂಡು ಊರಿಗೆ ಕರೆದುಕೊಂಡು ಬನ್ನಿರಿ, ಎಂದು ಹೇಳಿ ಹೊರಟುಹೋದನು. ಆ ಭಕ್ತರೆಲ್ಲರೂ ಸಡಗರದಿಂದೆದ್ದು ಪಟ್ಟಣದ ಬೀದಿಗಳಲ್ಲಿ ಎಲ್ಲ ಕಡೆಯೂ ಸ್ವಪ್ನದಲ್ಲಿ ಕಂಡ ವೃತ್ತಾಂತವನ್ನು ಹೇಳಿಕೊಳ್ಳುತ್ತ, ಆ ಭಕ್ತನ ಸಮೀಪಕ್ಕೆ ಬಂದು ನೋಡಿ, ಅತ್ಯಾಶ್ಚರ್ಯಪಟ್ಟವರಾಗಿ, ಆತನನ್ನು ಆನೆಯಮೇಲೆ ಹತ್ತಿಸಿ ಶಿವದೇವಾಲಯಕ್ಕೆ ಕರೆದುಕೊಂಡು ಬಂದರು. ಆ ಭಕ್ತನು ದೇವಾಲಯವನ್ನು ಹೊಕ್ಕು ಶಿವನಲ್ಲಿ ಲೀನವಾಗಿಹೋದನು ‖ ೨೩ ‖ ಈ ಪ್ರಕಾರವಾದ ನಡೆಯುಳ್ಳ ಈ ಭಕ್ತನನ್ನು ಚಂಡಾಲನೆಂಬುದಾಗಿ ಹೇಳುವುದಕ್ಕೆ ಹೇಗಾಗುತ್ತದೆ ?

ಎಂದು ಸೂರಾಂಬೆಯು ಹೇಳಿದಳೆಂಬಲ್ಲಿಗೆ............ಹದಿನೇಳನೆಯ
ಅಧ್ಯಾಯವು ಮುಗಿದುದು.

## ಅಷ್ಟಾದಶೋಽಧ್ಯಾಯಃ.

(ಕಕ್ಕಯ್ಯಮಾದರದೂಡಯ್ಯಕಥಾ.)

ಕಿಂಚಾಸೀದ್ದೀಶಸದ್ಭಕ್ತಃ ಕಕ್ಕಯ್ಯ ಇತಿವಿಶ್ರುತಃ | ಶೃಣುತಪ್ರಥಿತಂ ತಸ್ಯ ಮಹಿಮಾನಂಮಹೀತಳೆ ‖ ೧ ‖ ಉದ್ಘೋಷ್ಯಂತ್ಯಾಂಶ್ರುತಾವೇಕ ಏವ ರುದ್ರಇತಿಸ್ಫುಟಂ | ಪೌರಾಣಿಕಂಕಂಚಿದನ್ಯದೇವತಾಸ್ತುತಿಕಾರಕಂ ‖ ೨ ‖ ಜಘಾನತದ್ವಿಪ್ರದೇಹಃ ಕ್ರಿಮಿರಾಶಿರಜಾಯತ | ಪ್ರವಕ್ತುಂಹೀನಜನ್ಮೇತಿ ಸದ್ಭಕ್ತಶ್ಶಕ್ಯತೇಕಥಂ ‖ ೩ ‖ ಅಥಮಾದರದೂಡಯ್ಯ ಮಾಹಾತ್ಮ್ಯಂಲೋಕವಿಶ್ರುತಂ | ಸದ್ಭಕ್ತಪಾದಸಲಿಲ ಜಾತಕರ್ದಮಮಧ್ಯತಃ ‖ ೪ ‖ ಆಸನ್ ದ್ವಿಜಾಸ್ಸಪ್ತಶತಂ ವಿಮುಕ್ತಾಃಕುಷ್ಠರೋಗತಃ | ಕಿಂಚಶೃಣುತಗುಡ್ಡವ್ವಾ ಭಕ್ತಿಮತ್ಯಂತವಿಶ್ರುತಾಂ ‖ ೫ ‖ ಯಾಯಾಚನಾರ್ಥಂಸಾಜಾತು ಗತಾನಾವಟಿಕಾಂಪುರೀಂ | ಕುಷ್ಠಾನ್ವಿತೇಕಿಮತ್ರತ್ವಂ ಪ್ರಾಪ್ತಾಸಿಸದಿಗರ್ಹಿತೆ ‖ ೬ ‖

---

## ಹದಿನೆಂಟನೆಯ ಅಧ್ಯಾಯವು.

(ಕಕ್ಕಯ್ಯ ಮಾದರದೂಡಯ್ಯಗಳ ಕಥೆ.)

ಮತ್ತೂ ಕಕ್ಕಯ್ಯನೆಂದು ಪ್ರಸಿದ್ಧನಾದ ಸದ್ಭಕ್ತನೊಬ್ಬನಿದ್ದನು. ಆತನ ಲೋಕಪ್ರಸಿದ್ಧವಾದ ಮಹಿಮೆಯನ್ನು ಕೇಳಿರಿ. ‖ ೧ ‖ ರುದ್ರನೊಬ್ಬನೇ ದೈವವೆಂದು ವೇದವು ಸ್ಪಷ್ಟವಾಗಿ ಕೂಗಿ ಹೇಳುತ್ತಿರಲಾಗಿ, ಇತರ ದೇವತೆಗಳನ್ನು ಸ್ತೋತ್ರಮಾಡುತ್ತಿದ್ದ ಒಬ್ಬ ಪುರಾಣಿಕನನ್ನು ಈತನು ಕೊಂದುಹಾಕಿದನು. ಆ ಬ್ರಾಹ್ಮಣನ ಶರೀರವು ಹುಳುಗಳ ರಾಶಿಯಾಗಿದ್ದಿತು. ಈ ಸದ್ಭಕ್ತನನ್ನು ನೀಚಜಾತಿಯಲ್ಲಿ ಹುಟ್ಟಿದವನೆಂದು ಹೇಗೆ ಹೇಳುವುದಕ್ಕಾದೀತು? ‖ ೩ ‖ ಇನ್ನು ಮಾದರ ದೂಡಯ್ಯನ ಮಹಿಮೆಯು ಲೋಕಪ್ರಸಿದ್ಧವಾದುದು. ಆ ಭಕ್ತನ ಪಾದವನ್ನು ತೊಳೆದ ನೀರಿನ ಕೆಸರಿನ ಮಧ್ಯದಿಂದ ಕುಷ್ಠರೋಗದ ಬಿಡುಗಡೆಯನ್ನು ಹೊಂದಿದ ಏಳುನೂರುಮಂದಿ ಬ್ರಾಹ್ಮಣರಿದ್ದರು. ಮತ್ತೂ ಮಹಾಪ್ರಸಿದ್ಧವಾದ ಗುಡ್ಡವ್ವನ ಭಕ್ತಿಯನ್ನು ಕೇಳಿರಿ ‖ ೫ ‖ ಅವಳು ಒಂದಾನೊಂದು ಕಾಲದಲ್ಲಿ ಯಾಚನಾರ್ಥವಾಗಿ ನಾವಟಿಕೆಯೆಂಬ ಪಟ್ಟಣಕ್ಕೆ ಹೋದಳು. ಅಲ್ಲಿದ್ದ ಬ್ರಾಹ್ಮಣರೆಲ್ಲರೂ ಕಲ್ಲು, ದೊಣ್ಣೆಗಳನ್ನು ತೆಗೆದುಕೊಂಡು ಕುಷ್ಠರೋಗ ಪೀಡಿತೆಯಾದ ಎಲೆ ನೀಚೆ! ನೀನು ಇಲ್ಲಿಗೇಕೆ ಬಂದೆ? ‖ ೬ ‖ ನಿಜಭಕ್ತೆ

ಸತ್ಯಭಕ್ತ್ಯೇವರುದ್ರಾಕ್ಷಾಂ ಸ್ತ್ವಂಧಾರಯಸಿಭಸ್ಮಚ | ಪಂಚಾಕ್ಷರೀಮುಚ್ಚ ರಸಿ ಕಿಂಜಾನಾಸಿಮಹೇಶ್ವರಂ ‖ ೭ ‖ ಶ್ರದ್ಧಯಾಕಿಮುಚಂಡಾಲ್ಯಾ ಇತಿ ವಾದಿಭಿರುದ್ಧತಂ| ಪಾಷಾಣಪಾಣಿಭಿರ್ದಂಡಹಸ್ತೈಸ್ಸರ್ವೈರ್ದ್ವಿಜನ್ಮಭಿಃ ‖೮‖ ನಿಷ್ಕಾಸಿತೌಪುರಾತ್ತಸ್ಮಾತ್ಸಾಚಿತ್ತೇಽತ್ಯಂತದುಃಖಿತಾ | ಅಪ್ರಾಪ್ಯದೇಹಂನಿ ರ್ದುಷ್ಟಂ ನೈಷ್ಯಾಮ್ಯೇತಾಂಪುರೀಮಿತಿ ‖ ೯ ‖ ಸೌರಾಷ್ಟ್ರಂಪ್ರತಿಗಚ್ಛಂತೀ ಪಥಿಭಿನ್ನಪದಾಂಗುಳಿಃ | ಅಸಮರ್ಥಾಸತೀಗಂತುಂ ಪಾದಾಭ್ಯಾಂಧರಣೀ ತಲೆ ‖ ೧೦ ‖ ಲುಠಂತೀಶೀರ್ಣಸರ್ವಾಂಗಾ ಯಯೌಧೈರ್ಯಸಮನ್ವಿತಾ | ತಸ್ಯಾಸ್ಸೌರಾಷ್ಟ್ರಸೋಮೇಶೋ ಗತ್ವಾಭಿಮುಖಮಾದರಾತ್ ‖ ೧೧ ‖ ದರ್ಶನೀಯಮುದಾದ್ದೇಹಂ ನಿರ್ದುಷ್ಟಂಶ್ರೀಮಹೇಶ್ವರಃ ‖ ತೇತುನಾವಟಕಾ ವಿಪ್ರಾಸ್ತತ್ಕ್ರೋಧಾತ್ಪಿತ್ರಿಣೋಽಭವನ್ ‖ ೧೨ ‖ ಗುಡ್ಡವ್ಯಾತದಿದಂನೀಚ ಜನ್ಮೇತಿಕಥಮಿರ್ಯತೆ | ಅಪಿಚೇಶ್ವರಸದ್ಭಕ್ತಃ ಶ್ಯಿವನಾಗಾರ್ಯನಾಮಕಃ ‖೧೩‖ ಆಸೀತ್ತನ್ಮಹಿಮಾಲೋಕೆ ಬಭೂವಾಶ್ಚರ್ಯಸಂಯುತಃ | ತಸ್ಮಿಂಛ್ರೀಬಸವೇ ಶೇನ ಸಹಸೌಖ್ಯೇನತಿಷ್ಠತಿ ‖ ೧೪ ‖ ದ್ವಿಜನ್ಮಸ್ವನ್ಯಥಾಜಾತು ವದತ್ಸ್ವತ್ಯಂ

---

ಯಂತೆ ನೀನು ಭಸ್ಮರುದ್ರಾಕ್ಷಗಳನ್ನು ಧರಿಸಿಕೊಂಡಿರುತ್ತೀಯೆ? ಪಂಚಾಕ್ಷರ ಮಂತ್ರ ವನ್ನುಚ್ಚರಿಸುತ್ತೀಯೆ ? ಶಿವನನ್ನು ಅರಿತಿರುವೆಯೇನು ? ‖ ೭ ‖ ಹೊಲತಿಯು ಮಾಡುವ ಶ್ರದ್ಧೆಯಿಂದ ಪ್ರಯೋಜನವೇನು? ಎಂಬುದಾಗಿ ಕೊಬ್ಬಿ ನುಡಿಯುತ್ತ, ಊರಿನಿಂದ ಹೊರಕ್ಕೆ ಅವಳನ್ನು ಹೊರಡಿಸಿದರು ‖ ೮ ‖ ಆಕೆಯು ಮನಸ್ಸಿನಲ್ಲಿ ಅತ್ಯಂತ ವ್ಯಸನಪ ಟ್ಟವಳಾಗಿ, ನಾನು ನಿರ್ದುಷ್ಟವಾದ ಶರೀರವನ್ನು ಪಡೆದುಕೊಂಡಲ್ಲದೆ ಈ ಪಟ್ಟಣಕ್ಕೆ ಬರುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿಕೊಂಡು ‖ ೯ ‖ ಸೌರಾಷ್ಟ್ರವನ್ನು ಕುರಿತು ಹೊರಟವಳಾದಳು. ದಾರಿಯಲ್ಲಿ ಒಡೆದುಕೊಂಡ ಕಾಲು ಬೆರಲುಳ್ಳವಳಾಗಿ ಕಾಲುಗಳಿಂದ ನಡೆಯುವುದಕ್ಕೆ ಅಸಮರ್ಥಳಾಗಿ, ಭೂಮಿಯ ಮೇಲೆ ಉರುಳುತ್ತ, ಕಿತ್ತು ಗಾಯವಾದ ಸರ್ವಾಂಗವುಳ್ಳವಳಾದರೂ, ಧೈರ್ಯದಿಂದ ಹೋಗುತ್ತಿದ್ದಳು ಸೌರಾಷ್ಟ್ರದ ಸೋಮೇ ಶ್ವರನು ಪ್ರೀತಿಯಿಂದ ಆವಳಿಗೆದಿರಾಗಿ ಬಂದು ‖ ೧೦ ‖ ಆಕೆಗೆ ದೋಷರಹಿತವಾಗಿಯೂ ನೋಡುವುದಕ್ಕೆ ಯೋಗ್ಯವಾಗಿಯೂ ಇರುವ ಶರೀರವನ್ನು ಕೊಟ್ಟನು. ನಾವಟಕೆ ಯೆಂಬ ಪಟ್ಟಣದ ಬ್ರಾಹ್ಮಣರಾದರೊ ಅವಳ ಕೋಪದಿಂದ ಕುಷ್ಠರೋಗ ಪೀಡಿತರಾ ದರು ‖ ೧೨ ‖ ಗುಡ್ಡವ್ವೆಯ ಆ ಈ ಜನ್ಮವು ನೀಚವಾದುದೆಂದು ಹೇಗೆ ಹೇಳಲ್ಪಡುತ್ತದೆ? ಮತ್ತೂ ಶಿವನಾಗಯ್ಯನೆಂಬ ಶಿವನ ಸದ್ಭಕ್ತನೊಬ್ಬನಿದ್ದನು ‖ ೧೩ ‖ ಅವನ ಮಹ ತ್ವವು ಜಗತ್ತಿನಲ್ಲಿ ಅತ್ಯಾಶ್ಚರ್ಯಕರವಾದುದು. ಆ ಭಕ್ತನು ಶ್ರೀ ಬಸವೇಶ್ವರನೊಡನೆ ಸುಖದಿಂದಿರುತ್ತಿರಲಾಗಿ ‖ ೧೪ ‖ ಬ್ರಾಹ್ಮಣರು ಒಂದಾನೊಂದು ಕಾಲದಲ್ಲಿ ಅತ್ಯಂತಾ

ತವೋಽಹತಃ । ಶ್ರೀಮದ್ಬಸವರಾಜೋಽಸ್ಯಕರೇ ನವಸುಧಾಝರೀಂ ॥೧೫॥ ಬಿಜ್ಜಳಸ್ಯಸಭಾಮಧ್ಯೇ ನಾಧುಕ್ಷತ್ಕಿಂಪುರಾತನಃ । ಕಿಂವಾಽಸ್ಯೋಽಂತ್ಯಜ ಇತ್ಯೇಷಃ ಕ್ಷಿತಾವಮೃತವಿಗ್ರಹಃ ॥ ೧೬ ॥ ಶ್ವಪಚಾರ್ಯಸ್ಸಾಮವೇದೀಗುರು ಸ್ಸತುಕಿಮುಚ್ಯತೆ । ತನ್ಮಹತ್ವಂಮಹಾಶ್ಚರ್ಯದಾಯಿ ಜ್ಞೇಯಂಕಥಂನೃಭಿಃ ॥ ಜ್ಞಾತೋಮಾದರಚೆನ್ನಯ್ಯಮಹಿಮಾ ನಕಿಮುನ್ನತಃ । ತಸ್ಮಾನ್ಮಹೇಶಸ ದ್ಭಕ್ತಾಸ್ಸಾಕ್ಷಾದೀಶ್ವರಮೂರ್ತಯಃ ॥ ೧೭ । ಕುಲೀನಾಅಪಿಯೇಭಕ್ತಿ ರಹಿತಾಸ್ತೇಽಂತ್ಯಜಾತಯಃ । ದುರ್ಜಾತಯೋಽಪಿಕುಲಜಾಶ್ಶಿವಭಕ್ತಿಯುತಾ ಯದಿ ॥೧೮॥ ಸ್ವರ್ಣಾಯಂತೇಪಂಚಲೋಹಾ ರಸಸಂಸ್ಪರ್ಶತೋಯಥಾ ॥ ಶರನ್ಮೇಘಾವೃತೇಕಾಲೆ ಕಾಲೇಧೂಮಾದಿಭಿರ್ವೃತೇ ॥ ೨೦ ॥ ವಾಸ್ತವಾಂ ಶಂವಿನಾವ್ಯೋಮ್ನೋ ನ್ಯೂನತಾಧಿಕತಾಸ್ತಿಕಿಂ । ರಜ್ಜುಸರ್ಪಾರೌಪ್ಯಶುಕ್ತೀ ಸ್ಥಾಣುಚೋರೌಪರಸ್ಪರಂ ॥ ೨೧ ॥ ಭಿನ್ನಾವಪಿಭ್ರಾಂತಿದೃಷ್ಟ್ಯಾಹ್ಯಭಿನ್ನಾ ವಿತಿನಿಶ್ಚಿತಾ ॥ ಅಭ್ರಾಂತದೃಷ್ಟ್ಯಾತತ್ಸರ್ವಂ ಯಥಾಽಭಿನ್ನಂವಿಲೋಕ್ಯತೇ ॥ ಕುಲಭ್ರಾಂತಿಸ್ತಥಾಕರ್ಮದೃಷ್ಟ್ಯಾಸತ್ಯೈವದೃಶ್ಯತೆ । ತತ್ವಶೈವಜ್ಞಾನದೃ

---

ಜ್ಞಾನದಿಂದ ಬೇರೆ ಬೇರೆ ರೀತಿಯಾಗಿ ಆಡಿಕೊಳ್ಳುತ್ತಿರಲು, ಪುರಾತನನಾದ ಶ್ರೀಬಸವರಾಜನು ಬಿಜ್ಜಳನ ಸಭೆಯೊಳಗೆ ಈ ಭಕ್ತನ ಹಸ್ತದಲ್ಲಿ ಹೊಸ ಹಾಲಿನ ಪ್ರವಾಹವನ್ನು ಕರೆಯಲಿಲ್ಲವೇನು ? ಅಮೃತಶರೀರಿಯಾದ ಈತನು ಭೂಮಿಯಲ್ಲಿ ಅಂತ್ಯಜನೆಂಬುದಾಗಿ ಹೇಳಲ್ಪಡುವುದಕ್ಕೆ ಯೋಗ್ಯನೆ? ॥೧೬॥ ಸಾಮವೇದಿಗೆ ಗುರುವಾದ ಆ ಶ್ವಪಚಯ್ಯನು ಚಂಡಾಲನೆಂದು ಹೇಳಲ್ಪಡತಕ್ಕವನೆ? ಅತ್ಯಾಶ್ಚರ್ಯವನ್ನುಂಟುಮಾಡುವ ಆತನ ಮಹಿಮೆಯನ್ನು ಮನುಷ್ಯರು ತಿಳಿಯಬಲ್ಲರೆ? ॥ ೧೭ ॥ ಮಾದರ ಚೆನ್ನಯ್ಯನ ಮಹಾಮಹಿಮೆಯು ಗೊತ್ತಿಲ್ಲವೇನು ? ಆದುದರಿಂದ ಶಿವನ ಸದ್ಭಕ್ತರು ಪ್ರತ್ಯಕ್ಷ ಶಿವಸ್ವರೂಪರು ॥ ೧೮ ॥ ಸತ್ಕುಲಪ್ರಸೂತರುಗಳು ಕೂಡ ಭಕ್ತಿಹೀನರಾದರೆ ಅವರು ಚಂಡಾಲರೆನಿಸಿಕೊಳ್ಳುವರು. ಪಂಚಲೋಹಗಳು ಕೂಡ ಸಿದ್ಧರಸದ ಸೋಂಕುವಿಕೆಯಿಂದ ಹೇಗೆ ಭಂಗಾರವಾಗುವುವೋ, ಹಾಗೆ ನೀಚಜಾತಿಯವರಾದರೂ ಕೂಡ ಶಿವಭಕ್ತಿಸಂಪನ್ನರಾದರೆ ಸತ್ಕುಲಪ್ರಸೂತರೆನಿಸಿಕೊಳ್ಳುವರು ॥ ೧೯ ॥ ಶರದೃತುವಿನ ಮೇಘಗಳಿಂದ ಕೂಡಿದ ಕಾಲದಲ್ಲಿಯಾಗಲಿ, ಹೊಗೆ ಮೊದಲಾದುವುಗಳಿಂದ ತುಂಬಿದ ವರ್ಷಾಕಾಲದಲ್ಲಿಯಾಗಲಿ ಆಕಾಶಕ್ಕೆ ಸ್ವಭಾವಸಿದ್ಧವಾದಂಶವು ಹೊರತು ಕಡಿಮೆ ಹೆಚ್ಚೇನಾದರೂ ಉಂಟೆ? ಹಗ್ಗವೂ ಹಾವೂ, ಬೆಳ್ಳಿಯೂ, ಮುತ್ತಿನ ಚಿಪ್ಪೂ, ಮೋಟುಮರವೂ ಕಳ್ಳನೂ ಭ್ರಾಂತಿಯ ನೋಟದಿಂದ ಒಂದಕ್ಕೊಂದು ಬೇರೆ ಬೇರೆಯಾಗಿ ತೋರಿದರೂ, ಯಥಾರ್ಥಜ್ಞಾನದೃಷ್ಟಿಯಿಂದ ಭೇದವಿಲ್ಲದವುಗಳೆಂದು ನಿಶ್ಚೈಸಲ್ಪಟ್ಟಿರುವುವು. ಅವೆಲ್ಲವೂ ಜ್ಞಾನದೃಷ್ಟಿಯಿಂದ

ಶಾಸಾಮಿಥ್ಯೈವೇತಿನಿಶ್ಚಿತಾ ॥ ೨೧ ॥ ಇತ್ಥಂಪ್ರಸಿದ್ಧೋಭಕ್ತಾನಾಂ ಮಹಿಮಾಭುವನತ್ರಯೇ । ಪ್ರತ್ಯಯಾರ್ಥಂದರ್ಶಯಾಮಿ ಕಥಾಭಿಃಕಿಂಪ್ರಯೋಜನಂ ॥ ೨೨ ॥ ಷಟ್ತ್ರಿಂಶತ್ತತ್ತ್ವನಿಕರಂ ಲಿಂಗಮೂರ್ತಿಮನಾಮಯಂ । ಹರಿಬ್ರಹ್ಮಾದ್ಯವಿಜ್ಞಾತಂ ಶಿವಮಾದ್ಯಂತವರ್ಜಿತಂ ॥ ೨೩ ॥ ದುರ್ಬೋಧರೂಪಮಖಿಲವೇದಾಂತನಿವಹೈರಪಿ । ದುರ್ಲಕ್ಷ್ಯವಿಲಸನ್ಮೂರ್ತಿಂ ಯೋಗೀಂದ್ರೈಸ್ಸನಕಾದಿಭಿಃ ॥ ೨೪ ॥ ಪುರಾಣಶಾಸ್ತ್ರಸಿದ್ಧಾಂತೈರವಿಜ್ಞಾತನಿಜಾಕೃತಿಂ । ಅಪಾರಕರುಣಂ ಶೇಷವಾಕ್ಪಥಾತೀತವೈಭವಂ ॥ ೨೫ ॥ ನಶಕ್ಯೋಭವತಾಂದ್ರಷ್ಟುಂ ಮಾನವಾಸ್ಸಮಹೇಶ್ವರಃ । ತಥಾಪಿಪಶ್ಯತೇಶಾನಮಿತಿಸಾರಾಂಬಿಕಾತತಃ ॥ ೨೬ ॥ ಶಿವೋಪವಿಷ್ಟಮಾಜಹ್ರೇಪೀಠಂತತ್ರಮಹಾದ್ಭುತಂ । ಧಗದ್ಧಗಿತದಿಗ್ಭಾಗಂ ತತ್ಪ್ರಸಾದಾದಭೂನ್ಮಹತ್ ॥ ೨೭ ॥ ದಿವ್ಯಲೋಚನದುರ್ಲಕ್ಷ್ಯಂಸ್ವಯಂಭೂಲಿಂಗಮುನ್ನತಂ । ತತಸ್ಸಾರಾಂಬಾಮನೋನಿಷ್ಠಾಮೂಲ

---

ಹೇಗೆ ಭಿನ್ನವಿಲ್ಲದವುಗಳಾಗಿ ನೋಡಲ್ಪಡುವವೋ ॥ ೨೦ ॥ ಕುಲದ ಭ್ರಮೆಯು ಕೂಡ ಕರ್ಮದೃಷ್ಟಿಯಿಂದ ನಿಜವಾಗಿಯೇ ಕಾಣುತ್ತದೆ. ಯಥಾರ್ಥಶಿವಜ್ಞಾನ ದೃಷ್ಟಿಯಿಂದ ನೋಡಿದರೆ ಆ ಕುಲದ ಭ್ರಾಂತಿಯು ಸುಳ್ಳೆಂಬುದಾಗಿ ನಿಶ್ಚೈಸಲ್ಪಡುತ್ತದೆ ॥ ೨೧ ॥ ಹೀಗೆ ಮೂರು ಲೋಕದಲ್ಲೂ ಶಿವಭಕ್ತರ ಮಹತ್ವವು ಪ್ರಖ್ಯಾತವಾಗಿರುವುದು. ಕಥೆಗಳನ್ನು ಹೇಳುವುದರಿಂದ ಫಲವೇನು ? ನಿಮಗೆ ನಂಬುಗೆ ಹುಟ್ಟುವುದಕ್ಕಾಗಿ ಮೂವತ್ತಾರು ತತ್ವಗಳ ಸಮೂಹನೂ, ಲಿಂಗರೂಪನೂ, ಭವರೋಗರಹಿತನೂ, ಹರಿಬ್ರಹ್ಮರಿಂದಲೂ ತಿಳಿಯಲ್ಪಡದವನೂ, ಮಂಗಳಮಯನೂ, ಮೊದಲು ಕೊನೆಗಳಿಲ್ಲದವನೂ, ಸಕಲೋಪನಿಷತ್ತುಗಳ ವಿಚಾರದಿಂದಲೂ ತಿಳಿಯಲಾಗದವನೂ, ಸನಕಾದಿಮಹರ್ಷಿಗಳಿಂದಲೂ ಕಾಣುವುದಕ್ಕಸಾಧ್ಯವಾದ ಶರೀರವುಳ್ಳವನೂ, ಪುರಾಣಶಾಸ್ತ್ರಸಿದ್ಧಾಂತಗಳಿಗೆಲ್ಲ ಗೊತ್ತಾಗದ ತನ್ನಾಕಾರವುಳ್ಳವನೂ, ಮಹಾದಯಾವಂತನೂ, ಆದಿಶೇಷನ ಸ್ತುತಿವಚನಗಳಿಗೂ ಕೂಡ ನಿಲುಕದ ವೈಭವವುಳ್ಳವನೂ ಆದ ಪರಶಿವನನ್ನು ಪ್ರತ್ಯಕ್ಷವಾಗಿಯೇ ತೋರಿಸುತ್ತೇನೆ ॥ ೨೬ ॥ ಎಲೆ ಮನುಷ್ಯರೆ ! ಆ ಪರಮೇಶ್ವರನು ನಿಮ್ಮಗಳಿಂದ ನೋಡಲ್ಪಡುವುದಕ್ಕೆ ಅಶಕ್ಯನು. ಆದರೂ ಆ ಸ್ವಾಮಿಯನ್ನು ನೋಡಿರಿ. ಎಂದು ಸಾರಾಂಬೆಯು ಶಿವನು ಕುಳಿತಿದ್ದ ಪೀಠವನ್ನು ಹಿಡಿದು ಎಳೆದಳು. ಅಲ್ಲಿ ಅತ್ಯಾಶ್ಚರ್ಯಕರವಾಗಿಯೂ, ಧಗಧಗನೆ. ತನ್ನ ಕಾಂತಿಯಿಂದ ದಿಕ್ಪ್ರದೇಶಗಳನ್ನೆಲ್ಲ ಬೆಳಗುತ್ತಿರುವುದಾಗಿಯೂ, ದಿವ್ಯದೃಷ್ಟಿಯಿಂದಲೂ ನೋಡುವುದಕ್ಕೆ ಅಶಕ್ಯವಾಗಿಯೂ, ಇರುವ ಮಹಾಸ್ವಯಂಭೂಲಿಂಗವು ಆವಿರ್ಭವಿಸಿತು ॥ ೨೮ ॥ ಆ ಸಾರಾಂಬೆಯ ಮನಸ್ಸಿನ ಶ್ರದ್ಧೆಯಿಂದ ಕೂಡಿದ ಮೂಲಮಂತ್ರವೇ ಆಗ ಹೊರಗೆ ಬಂದು ಮಂಗಳಕರವಾದ ಲಿಂಗಶರೀರವನ್ನು

ಮಂತ್ರಸ್ಸಮುಜ್ವಲಃ ‖ ೩೦ ‖ ತದಾನೀಂಬಹಿರಾಗತ್ಯಭವ್ಯಾಂಮೂರ್ತಿಮಗಾ ದಿವ । ಶಿವೈಕಭಾವನಾಧ್ಯಾನಸುಖಂತತ್ಕಾಮಿನೀಮಣೇಃ ‖ ೩೧ ‖ ಶಿವಸ ದ್ಭಕ್ತಿ ಸಾಮರ್ಥ್ಯಾದ್ಘನೀಭೂತಮಭೂನ್ನಕಿಂ । ಕಿಂವಾಂಕುರವತೀಜಾತಾ ತಚ್ಛಿವಾಚಾರವಲ್ಲರೀ ‖ ೩೨ ‖ ತದ್ಭಾಮಿನೀಪುಣ್ಯರಾಶಿರೇವಂಸಾಂದ್ರೀಬ ಭೂವಕಿಂ । ಕಾಂತಾಯಾಶ್ಶಿವವಿಶ್ವಾಸೋ ನೃಣಾಂದೃಶ್ಯೋಭವತ್ಕಿಮು ‖ ೩೩ ‖ ರಾಹುರ್ಮೂರ್ತಿವಿಹೀನೋಪಿಸೂರ್ಯಾಚಂದ್ರಮಸೋರ್ಗ್ರಹೇ । ಯಥೈಕ್ಷ್ಯತೇ ವಾಯುರಪಿತೃಣರೇಣ್ವಾದಿಯೋಗತಃ ‖ ೩೪ ‖ ನಿರಾಕಾರೋಪಿಸರ್ವೇಶಸ್ಸೂ ರಾಂಬಾಭಾವತಸ್ತಥಾ। ಪ್ರತ್ಯಕ್ಷಂದದೃಶೇಸರ್ವೈರ್ಜನೈರತನುವೈಭವಃ। ೩೫। ಪುರಾಹಿಬಸವೇಶಸ್ಯಮಹಿಮ್ನಾಪ್ರವಿಸಾರಿಣಾ । ಅಭೂವನ್ಬಾಣಲಿಂಗಾನಿವಾ ರ್ತಾಕನಿವಹಾಅಪಿ ‖ ೩೬ ‖ ಬಳ್ಳೇಶಮಲ್ಲಯ್ಯಭಕ್ತ್ಯಾಪ್ರಸ್ಥೋಲಿಂಗಾತ್ಮ ಕೋಬಭೌ । ತಥೈವಕಾಟಕೋಟಸ್ಯಮಹಿಮ್ನಾಜಕರೀಷಕಃ ‖ ೩೭ ‖ ಬಭೂವಲಿಂಗಂಲಲಿತಂತ್ರಿಷುಲೋಕೇಷುವಿಶ್ರುತಂ । ಬಾಹೂರು ಬ್ರಹ್ಮದೇ ವೇನ ಸಮಾಹೂತಸ್ತ್ವದೈವಹಿ ‖ ೩೮ ‖ ಯಾವನಾಳ ಸಮೂಹೋಪಿ ಶಿವ ಲಿಂಗತ್ವಮಾಗತಃ । ಪಶ್ಯತ್ಸುದೇವನಿವಹೇಷ್ವಗಾಚ್ಛಂಡೇಶಭಕ್ತಿತಃ ‖ ೩೯ ‖

---

ಧರಿಸಿತೋ ಎಂಬಂತೆಯೂ, ಆ ಸ್ತ್ರೀರತ್ನವು ಶಿವನೊಬ್ಬನಲ್ಲೇ ಮನಸ್ಸಿಟ್ಟು ಧ್ಯಾನಿಸು ತ್ತಿದ್ದ ಸುಖವು ಶಿವಭಕ್ತಿಯ ಸಾಮರ್ಥ್ಯದಿಂದ ಗಟ್ಟಿಗೊಂಡಿತೋ ಎಂಬಂತೆಯೂ, ಆಕೆಯ ಶಿವಾಚಾರಲತೆಯು ಮೊಳಕೆಗೊಂಡಿತೋ ಎಂಬಂತೆಯೂ ‖ ೩೦ ‖ ಆ ಸ್ತ್ರೀಯ ಪುಣ್ಯರಾಶಿಯೇ ಹೀಗೆ ಬಿಬ್ಬಿಳಿಗೊಂಡಿತೋ ಎಂಬಂತೆಯೂ, ಆ ಅಂಗನೆಯ ಶಿವವಿಶ್ವಾ ಸವು ಮನುಷ್ಯರ ಕಣ್ಣಿಗೆ ಕಾಣಿಸಿಕೊಳ್ಳುವುದಕ್ಕೆ ಹೀಗಾಯಿತೋ ‖ ೩೩ ‖ ರಾಹುಗ್ರ ಹವು ದೇಹರಹಿತವಾಗಿದ್ದರೂ ಸೂರ್ಯಚಂದ್ರರನ್ನು ಗ್ರಹಿಸಿದಾಗ ಹೇಗೆ ಕಾಣಲ್ಪಡು ವುದೋ, ಗಾಳಿಯು ಕೂಡ ಹುಲ್ಲುಧೂಳು ಮೊದಲಾದುವುಗಳೊಡನೆ ಕೂಡುವುದರಿಂದ ಹೇಗೆ ಕಣ್ಣಿಗೆ ಕಾಣಿಸಿಕೊಳ್ಳುವುದೋ ‖ ೩೪ ‖ ಹಾಗೆ ಮಹಾವೈಭವವುಳ್ಳ ಪರಮೇಶ್ವ ರನು ಆಕಾರರಹಿತನಾದರು ಕೂಡ ಸೂರಾಂಬೆಯ ಮನೋಭಾವನೆಯ ದೆಸೆಯಿಂದ ಸಕಲ ಜನರ ಕಣ್ಣಿಗೂ ಕಾಣಿಸಿಕೊಂಡನು ‖ ೩೫ ‖ ಪೂರ್ವದಲ್ಲಾದರೊ ಬಸವೇಶ್ವರನ ಲೋಕಪ್ರಖ್ಯಾತವಾದ ಮಹತ್ವದಿಂದ ಬದನೆಯ ಕಾಯಿಗಳ ಸಮೂಹವು ಕೂಡ ಬಾಣ ಲಿಂಗಗಳಾಗಿದ್ದುವು ‖ ೩೬ ‖ ಬಳ್ಳೇಶ ಮಲ್ಲಯ್ಯನ ಭಕ್ತಿಯಿಂದ ಬಳ್ಳವು ಲಿಂಗರೂಪವಾಗಿ ಪ್ರಕಾಶಿಸಿತು. ಹಾಗೆಯೇ ಕಾಟಕೋಟನ ಮಹಿಮೆಯಿಂದ ಆಡಿನ ಹಿಕ್ಕೆಯು ಜಗದ್ವಿ ಖ್ಯಾತವಾದ ಶಿವಲಿಂಗವಾಯಿತು. ಆ ಪೂರ್ವದಲ್ಲೇ ಬಾಹೂರು ಬ್ರಹ್ಮಯ್ಯನು ಕರದ ಜೋಳದ ರಾಶಿಯು ಕೂಡ ಶಿವಲಿಂಗರೂಪವನ್ನು ಹೊಂದಿತು ‖ ದೇವತೆಗಳು ನೋಡು

ಅತ್ಯಾಶ್ಚರ್ಯತರಂತತ್ರಸೈಕತಂಶಿವಲಿಂಗತಾಂ | ಅನಾಯಿನಾರಿಭಕ್ತಸ್ಯವೃಕ್ಷೋ
ಲಿಂಗಮಭೂತ್ಪುರಾ ||೪೦|| ಘಟಸರ್ಪೋಽಭವಲ್ಲಿಂಗಂದೇವದಾಸಪ್ರತಿ
ಜ್ಞಯಾ | ಶ್ರೀಮತ್ಸಿಂಧಮರಾಜಸ್ಯಶರೀರಂಲಿಂಗತಾಮಗಾತ್ ||೪೧|| ಇತ್ಯೇ
ವಂಶೃಣುಮಃ ಪೂರ್ವಂವಚನೇಷುಪುರಾವಿದಾಂ | ಪ್ರತ್ಯಕ್ಷೇಣಾಧುನಾದೃ
ಷ್ಟಮಸ್ಮಾಭಿರಿದಮದ್ಭುತಂ ||೪೨|| ಜಂಗಮಸ್ಸೂರಮಾಂಬಾಯಾಸ್ಸ್ವಯಂ
ಭೂಲಿಂಗತಾಂಗತಃ| ಇತಿಸ್ತುವತ್ಸುಭಕ್ತೇಷುಸೂರಾಂಬಾನಿಜಗಾದತಾನ್ |೪೩
ಜನಾಃಪಶ್ಯತಮದ್ಗೇಹೇಭುಕ್ತವಾನೇಷಜಂಗಮಃ | ಅಯಂಭವಾಭಿಧೋವಿಶ್ವ
ಮುತ್ಪಾದಯತಿಬುದ್ಧಿಮಾನ್ ||೪೪|| ಮೃಡೋಭೂತ್ವಾಸ್ಯಜಗತೋರಕ್ಷಿ
ತಾಯಂಕೃಪಾನಿಧಿಃ | ಹರಾಖ್ಯಯಾಯಂ ವಿಶ್ವಸ್ಯಸಂಹರ್ತಾತಿಪ್ರತಾಪ
ವಾನ್ ||೪೫|| ಅಯಂವೇದೈಸ್ಸ್ತೂಯಮಾನಸ್ತ್ರಿಮೂರ್ತ್ಯಾದಿಸ್ಸನಾತನಃ|
ಭೂತ್ವೋರುಲಿಂಗಂವಾಣೀಶವಿಷ್ಣ್ವೋರ್ಭ್ರಾಂತಿಪ್ರದೋಽಪ್ಯಯಂ ||೪೬||
ಹರೋವಿಶ್ವಾಧಿಕೋನೇತಿಗರ್ವೇಣಪರಿಜಲ್ಪತಃ | ವ್ಯಾಸಸ್ಯಪಾಣಿಸಂಹಾರ್ತಾ

---

ತ್ತಿರುವಹಾಗೆಯೇ ಚಂಡೇಶನ ಭಕ್ತಿಯಿಂದ ಮಳಲು ಅತ್ಯಾಶ್ಚರ್ಯಕರವಾಗಿ ಶಿವಲಿಂಗ
ಸ್ವರೂಪವನ್ನು ಧರಿಸಿತು. ಪೂರ್ವದಲ್ಲಿ ಅನಾಯಿನಾರಿಭಕ್ತನಿಗೆ ಮರವು ಲಿಂಗವಾಗಿ
ಪರಿಣಮಿಸಿತು ||೪೦|| ದೇವರದಾಸಯ್ಯನ ಶಪಥದಿಂದ ಕುಂಭದಲ್ಲಿದ್ದ ಸರ್ಪವು ಲಿಂಗ
ವಾಯಿತು. ಶ್ರೀ ಸಿಂಧಮರಾಜನ ದೇಹವು ಲಿಂಗರೂಪವನ್ನು ಹೊಂದಿತು ||೪೧||
ಹೀಗೆಂದು ಪುರಾತನರ ಮಾತುಗಳಿಂದ ಕೇಳುತ್ತಲಿದ್ದೇವೆ. ಈಗಲಾದರೂ ಪ್ರತ್ಯಕ್ಷವಾ
ಗಿಯೇ ನಾವು ಈ ಆಶ್ಚರ್ಯವನ್ನು ಕಂಡೆವು ||೪೨|| ಸೂರಾಂಬೆಯ ದೆಸೆಯಿಂದ ಜಂಗ
ಮನು ಸ್ವಯಂಭುಲಿಂಗತ್ವವನ್ನು ಪಡೆದನು. ಎಂಬುದಾಗಿ ಭಕ್ತರುಗಳು ಸ್ತೋತ್ರ
ಮಾಡುತ್ತಿರಲಾಗಿ, ಸೂರಾಂಬೆಯು ಆ ಬ್ರಾಹ್ಮಣರನ್ನು ಕುರಿತು ಹೇಳಿದಳು ||೪೩||
ಏನೆಂದರೆ —ಎಲೈ ಜನರೆ ! ನೋಡಿರಿ, ಈ ಜಂಗಮನೇ ನನ್ನ ಮನೆಯಲ್ಲಿ ಊಟ ಮಾಡಿ
ದವನು. ಈತನು ಸೃಷ್ಟಿಬುದ್ಧಿಸಂಪನ್ನನಾಗಿ ಭವನೆಂಬ ಹೆಸರನ್ನು ಪಡೆದು ಜಗ
ತ್ತನ್ನು ಹುಟ್ಟಿಸುತ್ತಾನೆ ||೪೪|| ಈತನು ದಯಾವಂತನಾಗಿ ಮೃಡನೆಂಬ ಹೆಸರಿನಿಂದ ಜಗ
ದ್ರಕ್ಷಕನಾಗುತ್ತಾನೆ. ಈತನು ಶೌರ್ಯಸಂಪನ್ನನಾಗಿ ಹರನೆಂಬ ಹೆಸರಿನಿಂದ ಜಗನ್ನಾಶಕ
ನಾಗುತ್ತಾನೆ ||೪೫|| ಈತನು ವೇದಗಳಿಂದ ಸ್ತೋತ್ರಮಾಡಲ್ಪಡುವವನು, ತ್ರಿಮೂರ್ತಿ
ಗಳಿಗೆ ಮೊದಲಿಗನು, ಪುರಾತನನು, ಉರುಲಿಂಗರೂಪನಾಗಿ ಬ್ರಹ್ಮವಿಷ್ಣುಗಳಿಗೆ
ಭ್ರಾಂತಿಯನ್ನುಂಟುಮಾಡಿದವನು, ಸರ್ವದೇವಶ್ರೇಷ್ಠನು, ಆಗಿದ್ದರು ಕೂಡ ಶಿವನು
ಜಗತ್ತಿಗೆ ಅಧಿಕನಲ್ಲವೆಂದು ಅಹಂಕಾರದಿಂದ ನುಡಿದ ವ್ಯಾಸಮಹರ್ಷಿಯ ಹಸ್ತವನ್ನು

ಸರ್ವದೇವಾಧಿಕೋಽಪ್ಯಯಂ ॥೪೭॥ ತ್ರಿಪುರಾಣ್ಯಭ್ರಚಾರೀಣಿಜಿತವಾನೇಷಸಾಹಸೀ । ನೇತ್ರಾಗ್ನಿನಾರಮಾನಾಥಕುಮಾರಂದಗ್ಧವಾನಯಂ ॥ ೪೮ ॥ ಲೋಕೇಚನತ್ರಿತಯಂಕ್ಯಸ್ತುತೋಜಗತ್ಯರ್ಧನಾರೀಕಲಿತಾಕಾರವಾನಯಂ । ಲೋಕಚನತ್ರಿತಯಂಕೃತ್ವಾ ಸರ್ವಲೋಕಸ್ತುತೋಽಪ್ಯಯಂ ॥೪೯॥ ವೀರಭದ್ರಾಭಿದೋದಕ್ಷಂ ವಿಶೀರ್ಷಂಕೃತವಾನಯಂ । ಕೃತ್ವಾಪ್ಯೈತಮತಾಂಭೂನ್ಯವಾದಿನಸ್ಸಕಲಾನ್ಮನೀನ್ ॥೫೦॥ ಭಗ್ನಾನ್ಕೃತ್ವಾಶಿವಜ್ಞಾನಂ ಕೃಪಯಾದತ್ತವಾನಯಂ । ಅಯಮಂತ್ಯಜವೇಷೇಣ ಕೃತ್ವಾಽಜ್ಞಾನ್ಭವತೋಽಖಿಲಾನ್ ॥೫೧॥ ಅಧುನಾ ಸಂಸ್ಥಿತಸ್ಸಾಕ್ಷಾನ್ಮಹಾದೇವೋ ಜಗತ್ಪತಿಃ । ಇತಿ ತುಷ್ಟ್ವಾವಹರ್ಷೇಣದರ್ಶಯಂತೀ ಶಿವಂಮುಹುಃ ॥೫೨॥ ಸಾಭಕ್ತ್ಯಾಹಸ್ತಮುದ್ಯಮ್ಯಪ್ರಮೋದಾಶ್ರುಸಮನ್ವಿತಾ । ಸಾತತಃ ಪ್ರಮುದಾದ್ವಿಪ್ರೈಃ ಪೌರೈರ್ನೃಪಪುರೋಗಮೈಃ ॥೫೩॥ ಅವಾದಿದಂಡವದ್ಭೂಮಾನಮದ್ಭಿರತಿವಿಸ್ಮಿತೈಃ । ನವಿದ್ಮೋವಯಮೀಶಾನಂತ್ವಮೇವಾಂಬಸದಾಶಿವಃ ॥೫೪॥ ಗುರುರ್ದಾತಾವಿಧಾತಾಚಪಿತಾಮಾತಾತ್ವಮೇವನಃ । ಏತಾದೃಗ್ವೈಭವಂಭಕ್ತಿರ್ವಿಶ್ವಾಸಶ್ಚ ಮಹೇಶ್ವರೇ ॥೫೫॥ ನೈಕ್ಷಿನಾಶ್ರಾವಿಕುತ್ರಾಸಿಚಾಸ್ಮಾಭಿರ್ಜಗತೀತಳೆ । ವೇದಶಾ

---

ಸಂಹಾರ ಮಾಡಿದವನು ॥೪೭॥ ಈತನು ಅಂತರಿಕ್ಷದಲ್ಲಿ ತಿರುಗುತ್ತಿದ್ದ ತ್ರಿಪುರಗಳನ್ನು ಜೈಸಿದ ಸಾಹಸಿಯು, ಈತನು ಕಣ್ಣಿನ ಬೆಂಕಿಯಿಂದ ವಿಷ್ಣುವಿನ ಮಗನಾದ ಮನ್ಮಥನನ್ನು ಸುಟ್ಟವನು ॥೪೮॥ ಈತನು ಲೋಕದಲ್ಲಿ ಅರ್ಧನಾರಿಯ ಆಕಾರದಿಂದ ಕೂಡಿದವನೆಂದು ಹೊಗಳಲ್ಪಟ್ಟವನು. ಈತನು ಮುಕ್ಕಣ್ಣುಗಳುಳ್ಳವನಾಗಿ ಸರ್ವಲೋಕದಿಂದ ಸ್ತೋತ್ರ ಮಾಡಲ್ಪಟ್ಟವನು ॥೪೯॥ ಈತನು ವೀರಭದ್ರನೆಂಬ ಹೆಸರುಳ್ಳವನಾಗಿ ದಕ್ಷಬ್ರಹ್ಮನನ್ನು ತಲೆಯಿಲ್ಲದವನನ್ನಾಗಿ ಮಾಡಿದನು. ಈತನು ಚಂಡಾಲನ ವೇಷದಿಂದ ನಿಮ್ಮೆಲ್ಲರನ್ನೂ ಮೂಢರನ್ನಾಗಿ ಮಾಡಿ ಈಗ ಲೋಕಾಧಿಪತಿಯಾದ ಪ್ರತ್ಯಕ್ಷ ಪರಮೇಶ್ವರನಾಗಿ ಕುಳಿತಿರುವನು. ಎಂದು ಹೇಳಿ, ಸಂತೋಷದಿಂದ ಬಾರಬಾರಿಗೂ ತೋರಿಸುತ್ತ, ಭಕ್ತಿಯಿಂದ ಕೈಯನ್ನು ಮೇಲಕ್ಕೆತ್ತಿ, ಆನಂದಬಾಷ್ಪದಿಂದ ಕೂಡಿದವಳಾಗಿ ಸ್ತೋತ್ರ ಮಾಡಿದಳು. ಬ್ರಾಹ್ಮಣರೂ ದೊರೆ ಮೊದಲಾದ ಇತರ ಗ್ರಾಮನಿವಾಸಿಗಳೂ ಕೂಡ ಆತ್ಯಾಶ್ಚರ್ಯಗೊಂಡವರಾಗಿ ಸಂತೋಷದಿಂದ ಭೂಮಿಯಲ್ಲಿ ದಂಡದಂತೆ ನಮಸ್ಕರಿಸಿ, ಆಕೆಯನ್ನು ಕುರಿತು ಹೀಗೆ ಹೇಳಿದರು ಎಲೌ ತಾಯಿ ! ನಾವು ಶಿವನನ್ನು ಕಾಣೆವು. ನೀನೇ ಪರಶಿವನು ॥೫೪॥ ನೀನೇ ನಮಗೆ ಗುರುವು, ದಾತೃವು, ಬ್ರಹ್ಮನು ತಂದೆ ತಾಯಿ; ಇಂತಹ ವೈಭವವನ್ನೂ ಶಿವನಲ್ಲಿ ಇಂತಹ ಭಕ್ತಿವಿಶ್ವಾಸವನ್ನೂ ಜಗತ್ತಿನಲ್ಲಿ ನಾವೆಲ್ಲೂ ಕಾಣಲಿಲ್ಲ, ಕೇಳಲೂ ಇಲ್ಲ. ವೇದಶಾಸ್ತ್ರಗಳಲ್ಲಾದರೂ ಇಂತಹ ವೈಭ

ಸ್ತ್ರೀಷುಚೈತಾದೃಗ್ವೈಭವಂಶ್ರೂಯತೇಕಿಮು ‖ ೫೬ ‖ ಸಾಧುಸಾಧ್ವಂಬ ಹೇಗೌರಿ ಸಾಧುಪಾರ್ವತಿತೇನಮಃ । ಶಿವೋಪಿಮಹಿಮಾನಂತೆ ನಜಾನಾತಿಕಿ ಲಸ್ವಯಂ ‖ ೫೭ ‖ ತ್ವನ್ಮಹತ್ವಂವಯಂಸ್ತೋತುಂಸಮರ್ಥಾಃಕಿಮುಮಾ ನುಷಾಃ । ಸನ್ಮಾರ್ಗದೂರಾದುರ್ಜ್ಞಾನಾಘಾಂದಸಾಮಂದಬುದ್ಧಯಃ ‖ ದುರಾಚಾರಾದಂಡಧರದಂಡಪಾತ್ರಂಸಕಲ್ಮಷಾಃ । ಚಂಚಲಾಃ ಕರ್ಮಚಂಡಾ ಲಾಸ್ಸಾಪರಾಧಾಸ್ತಮೋವೃತಾಃ ‖ ೫೯ ‖ ಸ್ಮರ್ತುಂಯೋಗ್ಯಸ್ತ್ವಯಾಸ್ಮಾ ಸುನಾಪರಾಧಃಕೃಪಾನಿಧೆ ! ಅಂತ್ಯಜೋಂತ್ಯಜ ಇತ್ಯೇವಂವದಂತಃ ಪರಮೇ ಶ್ವರಂ ‖ ೬೦ ‖ ಯನ್ನಿಂದಿತೇನಮನುಜಚರ್ಮಣಾಪ್ರಾವೃತಂ ಶಿವಂ । ವಯ ಮೇವಹಿಚಂಡಾಲಾದ್ವಿಜನ್ಮಾನಃ ಕಥಂಭುವಿ ‖ ೬೧ ‖ ಇತಿಸಾಕಂನೃಪತಿನಾ ಪ್ರಣತಾಸ್ತೇದ್ವಿಜಾತಯಃ । ಸರ್ವೇಪಿಮಸ್ತಕನ್ಯಸ್ತಹಸ್ತಾಸ್ಸಂತುಷ್ಟುವು ರ್ಮುದಾ ‖ ೬೨ ‖ ಆಗತ್ಯಸದ್ಭಕ್ತವರಾಃ ಪ್ರಣಮಂತೋತಿಹರ್ಷತಃ । ಲುಠಂತಃ ಪಾದರಜಸಿಸ್ತುವಂತಃ ಪರಿತೋಪರೆ ‖ ೬೩ ‖ ಸ್ಕಂಧಪ್ರದೇಶೆತಾಂ ಧೃತ್ವಾವಲ್ಗಂತಃ ಪರಯಾಮುದಾ । ಆರಾಂಶಸ್ತ್ರೀಂಪರೆಚರ್ಮರಜ್ಜ್ವರ ಪಿಸಗೌರವಂ ‖ ೬೪ ‖ ನೃತ್ಯಂತಸ್ಸ್ವಶಿರೋಭಾಗೆಧೃತ್ವಾಧೃತ್ವಾಪರಸ್ಪರಂ! ತದು

---

ವವು ಕೇಳಲ್ಪಡುವುದೆ? ‖೫೬‖ ತಾಯೀ! ಬಲು ಒಳ್ಳೆಯದಾಯಿತು. ಎಲೌ ಗೌರೀ! ಉತ್ತಮವಾಯಿತು, ಎಲೌ ಪಾರ್ವತಿಯೆ! ನಿನಗೆ ನಮಸ್ಕಾರ. ಶಿವನುಕೂಡ ತಾನು ನಿನ್ನ ಮಹತ್ವವನ್ನು ತಿಳಿಯುತ್ತಾನೋ ಇಲ್ಲವೋ! ‖ ೫೭ ‖ ಮನುಷ್ಯರಾದ ನಾವು ನಿನ್ನ ಮಹಿಮೆಯನ್ನು ಹೊಗಳುವುದಕ್ಕೆ ಸಮರ್ಥರೇ? ನಾವು ಉತ್ತಮಮಾರ್ಗಕ್ಕೆ ದೂರಸ್ಥರು, ಜ್ಞಾನಹೀನರು ಗೊಡ್ಡು ವೈದಿಕರು. ಮೂಢಬುದ್ಧಿಯುಳ್ಳವರು ‖ ೫೮ ‖ ಧುಷ್ಟವಾದ ಆಚಾರವುಳ್ಳವರು. ಯಮ ಶಿಕ್ಷೆಗೆ ಪಾತ್ರರು. ಪಾಪಿಷ್ಠರು, ಚಪಲ ಚಿತ್ತರು, ಕರ್ಮತಃ ಚಂಡಾಲರು, ತಪ್ಪನ್ನು ಮಾಡಿದವರು, ಅಜ್ಞಾನಪಾತ್ರರು. ‖೫೯‖ ಎಲೌ ದಯಾಶಾಲಿನಿಯೆ! ನೀನು ನಮ್ಮಲ್ಲಿರುವ ತಪ್ಪನ್ನು ಸ್ಮರಿಸಲಾಗದು. ದುಷ್ಟ ವಾದ ಮನುಷ್ಯಚರ್ಮದಿಂದ ಹೊದಿಸಲ್ಪಟ್ಟ ಶಿವನನ್ನು ಚಂಡಾಲ ಚಂಡಾಲನೆಂ ಬುದಾಗಿ ಹೇಳಿದ ನಾವೇ ಚಂಡಾಲರಲ್ಲದೆ ಭೂಮಿಯಲ್ಲಿ ನಾವು ಹೇಗೆ ಬ್ರಾಹ್ಮಣರಾಗು ವೆವು? ‖ ೬೧ ‖ ಹೀಗೆಂಬುದಾಗಿ ಆ ಬ್ರಾಹ್ಮಣರೆಲ್ಲರೂ ದೊರೆಯೊಡನೆ ಕೂಡಿ ತಲೆಯ ಮೇಲೆ ಕೈಯಿಟ್ಟು ನಮಸ್ಕರಿಸಿ, ಸಂತೋಷದಿಂದ ಸ್ತೋತ್ರ ಮಾಡಿದರು ‖ ೬೨ ‖ ಆ ಭಕ್ತಶ್ರೇಷ್ಠರು ಅತ್ಯಂತ ಸಂತೋಷದಿಂದ ಬಂದು ನಮಸ್ಕರಿಸಿದರು. ಕೆಲರು ಪಾದ ಧೂಳಿಮೇಲೆ ಬಿದ್ದು ಎಲ್ಲಕಡೆಯೂ ಹೊರಳಾಡಿ ಹೊಗಳುವವರಾದರು. ‖೬೩‖ ಮತ್ತೆ ಕೆಲರು ಆ ಸೂರಾಂಬೆಯನ್ನು ಹೆಗಲಮೇಲೆ ಹೊತ್ತು ಅತ್ಯಂತ ಸಂತೋಷದಿಂದ ಸುತ್ತಾ

ಪಾನದ್ರಜಸ್ಸರ್ವೇಗೃಹೀತುಮತಿಲಾಲಸಾಃ ‖ ೬೫ ‖ ಬಲಾತ್ಕಾರೇಣಚಪರೇ ಗೃಹೀತ್ವಾತದುಪಾನಹಃ । ಊರ್ಧ್ವಂಕ್ಷಿಪಂತೋನೃತ್ಯಂತೋಗೀತವಾದಿತ್ರಸಂಯುತಾಃ ‖ ೬೬ ‖ ಉದ್ಘುಷ್ಯಂತೋಽತಿಸಂತೋಷಾದುಘೋಜಯಜಯೇತಿಚ। ವಸಂತೋತ್ಸವಮಾರಭ್ಯನಂವಂತೋಭಸ್ಮನಾಪರೇ ‖ ೬೭ ‖ ಕೇಚಿತ್ತದ್ಭಕ್ತಿಮತುಳಾಂಕೃತ್ವಾಗೀತಾನಿಸರ್ವತಃ । ಗಾಯಂತೋಬಸವೇಶಸ್ಯಗೀತಾನ್ಯಪಿ ಮಹೋತ್ಸವಾನ್ ‖ ೬೮ ‖ ಪುನಃಪ್ರಾಕ್ತನಭಕ್ತಾನಾಂಗಾಯಂತೋಗೀತಸಂಹತಿಂ । ಏವಂಮಹೋತ್ಸವಂಚಕ್ರುಸ್ಸದ್ಭಕ್ತಾಸ್ತದನಂತರಂ ‖ ೬೯ ‖ ಪಣ್ಯಾಂಗನಾಃ ಪುಣ್ಯಕಾಂತಾಬಾಲವೃದ್ಧಾದಯಸ್ತದಾ । ಸರ್ವೇಽಪ್ರಣೇಮುರಾಗತ್ಯ ತಾಂಸೂರಾಂಬಾಂಪ್ರಮೋದತಃ ‖ ೭೦ ‖ ಸಂಸಾರರಹಿತಾನಿತ್ಯಂಜಂಗಮಾರಾಧನಾನ್ವಿತಾ । ಹೃತರೋಷಾಧೂತದೋಷಾಹರ್ಷನೇತ್ರಾಂಬುವರ್ಷಿಣೀ ‖ ಸಂಜಾತಪುಳಕಾಭಕ್ತಿತ್ರಿಲಕಾಭಸಿತಾಳಿಕಾ । ಸದ್ಭಾವನಾಸತ್ಯಸಂಧಾಸಾಸೂ

---

ಡಿದರು. ಮತ್ತೆ ಕೆಲರು ಕುಮ್ಮಗ್ಗತ್ತಿಯನ್ನೂ ಶಸ್ತ್ರವನ್ನೂ ವಿಳೆಯನ್ನೂ ಕೂಡ ಗೌರವಪೂರ್ವಕವಾಗಿ ಬಬ್ಬನ ತಲೆಯ ಮೇಲಿಂದ ಮತ್ತೊಬ್ಬರು ಹೊತ್ತು ಹೊತ್ತು ಕುಣಿಯುವವರಾದರು. ಆ ಜಂಗಮನ ಎಕ್ಕಡದ ಧೂಳಿಯನ್ನು ಎಲ್ಲರೂ ಗ್ರಹಿಸುವುದಕ್ಕೆ ಅತ್ಯಂತ ಕುತೂಹಲಪಟ್ಟರು ‖ ೬೫ ‖ ಕೆಲರು ಆ ಪಾದರಕ್ಷೆಗಳನ್ನು ಬಲಾತ್ಕಾರದಿಂದ ತೆಗೆದುಕೊಂಡು ಮೇಲಕ್ಕೆಸೆಯುತ್ತ ಹಾಡಿಕೊಂಡು ವಾದ್ಯವನ್ನು ಬಾರಿಸಿಕೊಂಡು ಕುಣಿಯುವವರಾದರು ‖ ೬೬ ‖ ಇನ್ನು ಕೆಲವರು ಅತ್ಯಂತ ಸಂತೋಷದಿಂದ ಉಘೆ ಜಯ ಜಯ! ಎಂದು ಕೂಗುವವರಾದರು. ಕೆಲರು ವಿಭೂತಿಯಿಂದ ಓಕಳಿಯಾಟವನ್ನು ಆರಂಭಿಸಿ ಸಂತೋಷಿಸಿದರು ‖ ೬೭ ‖ ಕೆಲರು ಆ ಸೂರಾಂಬೆಯ ಭಕ್ತಿರೀತಿಯನ್ನೇ ಅಸಾಧಾರಣವಾದ ಗೀತಗಳನ್ನಾಗಿ ಮಾಡಿ ಎಲ್ಲ ಕಡೆಯೂ ಹಾಡುವವರಾದರು. ಮತ್ತೆ ಕೆಲರು ಬಸವೇಶ್ವರನ ಗೀತಗಳನ್ನೂ, ಮಹೋತ್ಸವಗಳನ್ನೂ, ಪುರಾತನಭಕ್ತರ ಗೀತಗಳನ್ನೂ ಹಾಡುವವರಾದರು. ಹೀಗೆ ಆ ಸದ್ಭಕ್ತರೆಲ್ಲರೂ ಅತ್ಯಂತೋತ್ಸವವನ್ನು ಮಾಡುವವರಾದರು. ಬಳಿಕ ‖ ೬೯ ‖ ವಾರಾಂಗನೆಯರು ಕುಲಾಂಗನೆಯರು ಬಾಲಕರು ಮುದುಕರು ಮೊದಲಾದ ಸರ್ವರೂ ಬಂದು ಸಂತೋಷದಿಂದ ಸೂರಾಂಬಿಕೆಯನ್ನು ನಮಸ್ಕರಿಸಿದರು ‖ ೭೦ ‖ ಅನಂತರ ಆ ಸೂರಾಂಬೆಯು ಸಂಸಾರರಹಿತಳಾಗಿಯೂ ಸದಾ ಜಂಗಮಾರ್ಚನೆಯಿಂದ ಕೂಡಿದವಳಾಗಿಯೂ, ಕೋಪರಹಿತಳಾಗಿಯೂ, ದೋಷದೂರಳಾಗಿಯೂ ಸಂತೋಷಾಶ್ರುವನ್ನು ಕಣ್ಣಿನಿಂದ ಸುರಿಸುವಳಾಗಿಯೂ ‖ ೭೧ ‖ ರೋಮಾಂಚನಗೊಂಡವಳಾಗಿಯೂ, ಭಕ್ತಿಯೇ ಹಣೆಯ ಬೊಟ್ಟುಗುಳ್ಳವಳಾಗಿಯೂ, ಹಣೆಯಲ್ಲಿ ಭಸಿತವನ್ನು ಧರಿಸಿದವಳಾಗಿಯೂ, ಶಿವಾನುಸಂಧಾನಯುಕ್ತಳಾಗಿಯೂ, ಸತ್ಯಸಂಪನ್ನಳಾ

ರಾಂಬಾಪಿತತ್ಪರೆ ॥ ೨೬ ॥ ಪ್ರವರ್ತಯಂತೀ ಸದ್ಭಕ್ತಿಂ ಸಮವರ್ತತ ಪೂರ್ವವತ್ ॥

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೆ
ದೀಕ್ಷಾಪ್ರಕರಣೆ ಸೂರಾಂಬೋಪಾಖ್ಯಾನ
ಕಥನಂನಾಮಾಷ್ಟಾದಶೋಽಧ್ಯಾಯಃ.

---

ಅಥ ಏಕೋನವಿಂಶೋಽಧ್ಯಾಯಃ

ಪಂಡಿತಾರಾಧ್ಯಶಿವಾರ್ಚನ ಸಂಕೀರ್ತನಂ.

---

ತತಸ್ಸಮಸ್ತಸದ್ಭಕ್ತಚೈತನ್ಯಸ್ಯನಿರಂತರಂ । ಪಾದೋದಕಾತ್ಯುದನ್ಯಸ್ಯಗತಮನ್ಯೋರ್ಮಹೀಯಸಃ ॥ ೧ ॥ ತ್ಯಕ್ತಜಾಘನ್ಯಸ್ಯಲೋಭಗುಣಶೂನ್ಯಸ್ಯಚೇತಸಿ । ದಗ್ಧಾರಿವನ್ಯಸ್ಯಹೃತಭವಬೀಜಸ್ಯಸತ್ವರಂ ॥ ೨ ॥ ಲೋಕೈಕಮಾನ್ಯಸ್ಯನತಪರ್ಜನ್ಯಸ್ಯಾಮಲಾತ್ಮನಃ । ವಿಸೃಷ್ಟಮಾತ್ಸರ್ಯಸ್ಯವದಾನ್ಯ

---

ಗಿಯೂ, ಆ ಪಟ್ಟಣದಲ್ಲಿದ್ದುಕೊಂಡು ಪೂರ್ವದಂತೆ ತನ್ನ ಭಕ್ತಿಯನ್ನು ನಡೆಯಿಸಿಕೊಂಡಿರುತ್ತಿದ್ದಳು.

ಎಂಬಲ್ಲಿಗೆ............ಹದಿನೆಂಟನೆಯ ಅಧ್ಯಾಯವು ಮುಗಿದುದು.

---

ಹತ್ತೊಂಭತ್ತನೆಯ ಅಧ್ಯಾಯವು.

---

( ಪಂಡಿತಾರಾಧ್ಯರ ಶಿವಾರ್ಚನೆ. )

ಬಳಿಕ ಯಾವಾಗಲೂ ಸಕಲಭಕ್ತೋತ್ತಮರಿಗೆ ಚೈತನ್ಯರೂಪನಾಗಿಯೂ, ಪಾದೋದಕಪಾನದಲ್ಲಿ ನೀರಡಿಕೆಯುಳ್ಳವನಾಗಿಯೂ, ಕೋಪರಹಿತನಾಗಿಯೂ, ಮಹಾತ್ಮನಾಗಿಯೂ ನೀಚತ್ವವನ್ನು ದೂರೀಕರಿಸಿದವನಾಗಿಯೂ, ಲೋಭ ಗುಣದಿಂದ ರಹಿತನಾಗಿಯೂ ಶತ್ರುಗಳೆಂಬ ಕಾಡು ಮರಗಳನ್ನು ಸುಟ್ಟವನಾಗಿಯೂ, ಜನನ ಮರಣದ ಬೀಜವನ್ನು ಬೇಗನೆ ನಾಶಮಾಡಿದವನಾಗಿಯೂ ॥ ೨ ॥ ಜಗತ್ತಿಗೆಲ್ಲ ಬಬ್ಬನೇ ಪೂಜ್ಯನಾಗಿಯೂ, ನಮಸ್ಕರಿಸಿದವರಿಗೆ ಮೋಡಗಳು ನೀರು ಕರೆಯುವಂತೆ ಇಷ್ಟಾರ್ಥಗಳನ್ನು

ಸ್ಯಮಹೀತಳೇ॥ ೩ ॥ ವೀತಮನ್ಮಥಸೈನ್ಯಸ್ಯಸಾಮಾನ್ಯಸ್ಯಕೃಪಾನಿಧೇಃ । ಗತ ಕಾಠಿನ್ಯಸ್ಯಸಾಕ್ಷಾದುಪಮನ್ಯೋರ್ಮಹಾತ್ಮನಃ ॥ ೪ ॥ ಸಮಂಗೀಕೃತಧನ್ಯ ಸ್ಯಾಮಾಲಿನ್ಯಸ್ಯಶುಭಾಕೃತೇಃ । ಪಂಡಿತವ್ರಜಪೂಜ್ಯಸ್ಯದಂಡಿತೇಂದ್ರಿಯಸಂ ಹತೇಃ ॥ ೫ ॥ ಮಂಡಿತಾಚಾರಯುಕ್ತಸ್ಯಪಂಡಿತಾರಾಧ್ಯಸದ್ಗುರೋಃ । ಅಸ ಮಾನೋರುಸದ್ಭಕ್ತಿರಸಾಮೃತಪಯೋನಿಧೌ ॥೬॥ ರೋದಸೀಕುಹರಾಭೋ ಗಭಾಗನಿರ್ಭರಪೂರಿತೇ । ಹೃದಯಾಂತರ್ಧ್ಯಾತಸಾಂಬಾದೋಷಾದ್ರೇಃಶ್ಯಂಬಸ ನ್ನಿಭಾ ॥ ೭ ॥ ಲಸದ್ಗುಣಕದಂಬಾಸಾಸೂರಾಂಬಾಭುವಿವಿಶ್ರುತೈಃ । ಬೆಲ್ದೇ ವಿವೇಮನಾರಾಧ್ಯಮುಖ್ಯೈರ್ಜಂಗಮಪುಂಗವೈಃ ॥ ೮ ॥ ಸಾರ್ಧಂಶ್ರೀಪಂಡಿ ತಾರಾಧ್ಯವಿಭೋರ್ದರ್ಶನಕಾಂಕ್ಷಯಾ । ಆಗಚ್ಛದತಿವೇಗೇನಪರಮಾನಂದ ನಿರ್ಭರಾ ॥ ೯ ॥ ತದಾಮಾಹೇಶ್ವರಾಚಾರಪಟ್ಟಬದ್ಧಃಪ್ರಭಾವವಾನ್ । ಚಿತ್ಸ ಮೃದ್ಧೋಮಹಾದೇವಭಕ್ತಿಶುದ್ಧೋವಿಶುದ್ಧಧೀಃ ॥ ೧೦ ॥ ಸದಾಭವಗುಣಾನ ದ್ಧಶ್ಯಮಿತಕ್ರುದ್ಧಸಂಹತಿಃ । ಸತ್ಪ್ರಬುದ್ಧಸ್ಸಮುಮುಸಂಸಿದ್ಧಸ್ಸತ್ಯಸಮೃ

---

ಕೊಡುವನಾಗಿಯೂ, ನಿರ್ಮಲಾತ್ಮನಾಗಿಯೂ, ತಾಯಿ ಮೊಲೆಹಾಲನ್ನು ಬಿಟ್ಟವನಾಗಿ ಯೂ, ಭೂಲೋಕದಲ್ಲಿ ಮಹೋದಾರಿಯಾಗಿಯೂ॥೩॥ ಕಾಮನಸೇನೆಯ ಸಂಬಂಧವನ್ನು ಕಳೆದುಕೊಂಡವನಾಗಿಯೂ, ಅಸಾಧಾರಣದಯಾನಿಕ್ಷೇಪನಾಗಿಯೂ, ಒರಟುತನವಿಲ್ಲದ ವನಾಗಿಯೂ, ಪ್ರತ್ಯಕ್ಷನಾದ ಉಪಮನ್ಯುಮಹರ್ಷಿಯಾಗಿಯೂ, ಧನ್ಯಜನರನ್ನು ಸಮೀಪದಲ್ಲಿ ಸೇರಿಸಿಕೊಂಡವನಾಗಿಯೂ, ದೋಷರಹಿತನಾಗಿಯೂ, ಮಂಗಳಾಕಾರನಾ ಗಿಯೂ, ವಿದ್ವತ್ಸಮೂಹದಿಂದ ಪೂಜ್ಯನಾಗಿಯೂ, ಇಂದ್ರಿಯ ಸಮೂಹವನ್ನು ಶಿಕ್ಷಿಸಿ ದವನಾಗಿಯೂ ॥ ೫ ॥ ಅಲಂಕೃತವಾದ ಸದಾಚಾರಗಳಿಂದ ಕೂಡಿದವನಾಗಿಯೂ, ಇದ್ದ ಪಂಡಿತಾರಾಧ್ಯ ಗುರುವರ್ಯನ ಅಸದೃಶವಾದ ಸದ್ಭಕ್ತಿರಸವೆಂಬ ಕ್ಷೀರಸಮುದ್ರವು ॥ ೬ ॥ ಆಕಾಶ ಭೂಮಿಗಳೆರಡರ ಮಧ್ಯಗತವಾದ ಪ್ರದೇಶವನ್ನೆಲ್ಲ ದಟ್ಟವಾಗಿ ತುಂಬಿಕೊಂಡಿರು ತ್ತಿರಲು, ಹೃದಯದಲ್ಲಿ ಸದಾಶಿವಧ್ಯಾನವನ್ನು ಮಾಡುತ್ತಿರುವವಳೂ, ಪಾಪವೆಂಬ ಬೆಟ್ಟಕ್ಕೆ ವಜ್ರಾಯುಧಸದೃಶಳೂ, ಸದ್ಗುಣಸಮೂಹರಾಜಿತಗಳೂ ಆದ ಸೂರಾಂಬಿ ಕೆಯು, ಲೋಕಪ್ರಖ್ಯಾತರಾದ ಬೆಲ್ದೇವಿ ವೇಮನಾರಾಧ್ಯರೇ ಮೊದಲಾದ ಜಂಗಮ ಶ್ರೇಷ್ಠರೊಡನೆ ಕೂಡಿ ॥ ೮ ॥ ಶ್ರೀ ಪಂಡಿತಾರಾಧ್ಯಸ್ವಾಮಿಯ ದರ್ಶನವನ್ನು ಮಾಡಬೇ ಕೆಂಬಿಚ್ಛೆಯಿಂದ, ಸಂತೋಷಾತಿಶಯವುಳ್ಳವಳಾಗಿ ಬೇಗಬೇಗನೆ ಬಂದಳು ॥ ೯ ॥ ಆಗ ಮಾಹೇಶ್ವರರ ಆಚಾರವನ್ನು ನಡೆಯಿಸುವುದರಲ್ಲಿ ಪಟ್ಟಕಟ್ಟಿದವನೂ, ಮಹಿಮಶಾಲಿಯೂ ಜ್ಞಾನಪೂರ್ಣನೂ ಶಿವಭಕ್ತಿಯಿಂದಪರಿಶುದ್ಧಾಂತಃಕರಣನೂ, ನಿರ್ಮಲಬುದ್ಧಿಯೂ ॥೧೦॥ ನಿರಂತರವೂ ಶಿವಾಯತ್ತವಾದ ಸದ್ಗುಣಗಳಿಂದ ವ್ಯಾಪ್ತನೂ ಕೋಪಿಷ್ಠರ ಸಮೂಹ

ಮಾನ್ ‖ ೧೧ ‖ ಜಿತಬೌದ್ಧೋವಿಗಳಿತವಿರುದ್ಧೋವೀತಕಲ್ಮಷಃ । ಶ್ರದ್ಧಾ ನಿಬದ್ಧಸಂಸಿದ್ಧಹೃದಯಾಂಬುಜಶಾಲಿನಃ ‖ ೧೨ ‖ ಶಿಷ್ಯಸ್ಯಸಾಧ್ಯೋಭುವನ ಪ್ರಸಿದ್ಧಃ ಪರಮೋನ್ನತಃ । ಶಿವಧ್ಯಾನಮಹಾನಂದಪರಶ್ರೀಪಂಡಿತೋ ತ್ತಮಃ ‖೧೩‖ ಅಧ್ಯಾತ್ಮವಿದ್ಯೇತರಾಗಮೋಕ್ತವಿಧ್ಯುಕ್ತತಂತ್ರತಃ । ಸಾನ್ನಿ ಧ್ಯಸತ್ಕ್ರಿಯಾಯುಕ್ತಃ ಪರಂಸಂಪ್ರೀತಮಾನಸಃ ‖ ೧೪ ‖ ಮಧ್ಯಾಹ್ನಸಮ ಯೋದ್ದಿಷ್ಟಂಕರ್ತುಂಲಿಂಗಾರ್ಚನಾವಿಧಿಂ। ಆದಾವಾರಭಮಾಣಸ್ಸಂತ್ಸರ್ವಶಾ ಸ್ತ್ರಾರ್ಥತತ್ವವಿತ್ ‖ ೧೫ ‖ ವೇದವೇದಾಂತೇತಿಹಾಸಶಿವಶಾಸ್ತ್ರಾಗಮಾ ದಿಷು । ನಿತ್ಯಂವದತ್ಸ್ವಸಂಖ್ಯೇಯಗುಣಾಧಿಕಮಿತಿಸ್ಫುಟಂ ‖ ೧೬ ‖ ತಸ್ಮಾ ದ್ವಾರುಣಮುತ್ಸೃಜ್ಯಸ್ನಾನಮಾಗ್ನೇಯಮಾಚರೇತ್ । ಇತ್ಯುಕ್ತೇಸ್ಸರ್ವ ತೀರ್ಥಾಂಬುಸ್ನಾನಾನಿಸುಬಹೂನಿಚ ‖ ಭಸ್ಮಸ್ನಾನೇನಭವ್ಯೇನಭವಂತಿಸದೃ ಶಾನಿಕಿಂ । ವಿಭೂತಿಸ್ನಾನರಹಿತೈಃ ಕೃತಾನ್ಯಪಿಸಹಸ್ರಶಃ ‖ ೧೭ ‖ ಸ್ನಾನಾನಿ ನಿತ್ಯಂಯತ್ನೇನಗಜಸ್ನಾನಸಮಾನಿಹಿ। ಜಲೂಕಾಮತ್ಸ್ಯಮಂಡೂಕಾಶ್ಶುದ್ಧಾಃ ಕಿಂಜಲವಾಸಿನಃ ‖ ೧೮ ‖ ಶಸ್ತ್ರಚ್ಛಿನ್ನಾಸೃಗಾಲಿಪ್ತತನುಃ ಕಿಂಕ್ಷಾಳಿತಾ

---

ವನ್ನು ಅಡಗಿಸಿದವನೂ, ಮಹಾವಿದ್ವಾಂಸನೂ, ಮತೋಕ್ತಾಚರಣಸಂಪನ್ನತೆಯಿಂದ ಸಕಲ ಸಿದ್ಧಿಗಳನ್ನು ಪಡೆದವನೂ, ಸತ್ಯಸಂಪೂರ್ಣನೂ ‖ ೧೧ ‖ ಬೌದ್ಧರನ್ನು ಜೈಸಿದ ವನೂ, ಪ್ರತಿಘಟಿಸಿದವರನ್ನು ಕಡೆಮೊಲಗಿಸಿದವನೂ, ದೋಷರಹಿತನೂ, ಶ್ರದ್ಧೆಯಿಂದ ಕಟ್ಟು ಬಿದ್ದು ಸಿದ್ಧಿಯನ್ನೈದಿದ ಹೃದಯಕಮಲವುಳ್ಳ (ಭಕ್ತಿಪರಿಪಕ್ವನಾದ) ಶಿಷ್ಯನಿಗೆ ಮಾತ್ರ ಸಾಧ್ಯನೂ, ಲೋಕವಿಖ್ಯಾತನೂ, ಅತ್ಯಂತಶ್ರೇಷ್ಠನೂ, ಶಿವಧ್ಯಾನಾನಂದಲ್ಲಿ ಆಸಕ್ತನೂ ಸಕಲ ಶಾಸ್ತ್ರಾರ್ಥರಹಸ್ಯವನ್ನು ಬಲ್ಲವನೂ ಆದ ಪಂಡಿತಾರಾಧ್ಯವರ್ಯ ನು ‖ ೧೩ ‖ ಅಧ್ಯಾತ್ಮವಿದ್ಯೆಗೆ ಭಿನ್ನವಾಗಿರುವ ಆಗಮೋಕ್ತವಿಧ್ಯನುಸಾರವಾದ ತಂತ್ರಗ ಳಿಂದ ಸತ್ಕ್ರಿಯಾಸಾಮೀಪ್ಯವುಳ್ಳವನೂ, ಅತ್ಯಂತ ಸಂತುಷ್ಟಮನಸ್ಕನೂ ಆಗಿ ಮಾಧ್ಯಾಹ್ನಿಕಲಿಂಗಪೂಜೆಯನ್ನು ಮಾಡುವುದಕ್ಕಾಗಿ ಆರಂಭವನ್ನು ಮಾಡಿ ‖ ೧೫ ‖ ಉಪನಿಷತ್ತು ಇತಿಹಾಸ ಶಿವಶಾಸ್ತ್ರ ಆಗಮ ಮೊದಲಾದವುಗಳೆಲ್ಲ ಭಸ್ಮಸ್ನಾನವನ್ನೇ ಗಣ ನಾತೀತವಾದಷ್ಟು ಹೆಚ್ಚು ಗುಣವುಳ್ಳದ್ದೆಂದು ಹೇಳುತ್ತಿರಲಾಗಿ, „ ಜಲಸ್ನಾನವನ್ನು ಬಿಟ್ಟು, ಭಸ್ಮಸ್ನಾನವನ್ನು ಮಾಡಬೇಕು ” ಎಂದು ವಚನವಿರುವುದರಿಂದಲೂ, ಸಕಲ ತೀರ್ಥ ಜಲಗಳ ಅನೇಕ ಸ್ನಾನವು ಮಂಗಳಕರವಾದ ಭಸ್ಮಸ್ನಾನದೊಡನೆ ಸಮಾನಗ ಳಾಗುವುವೆ ? ಎಂಬುದಾಗಿಯೂ, ವಿಭೂತಿಸ್ನಾನವಿಲ್ಲದೆ ನಿತ್ಯಸ್ನಾನಗಳನ್ನು ಪ್ರಯತ್ನ ಪೂರ್ವಕವಾಗಿ ಸಹಸ್ರಾವೃತ್ತಿ ಮಾಡಿದರೂ, ಅವೆಲ್ಲ ಆನೆಯು ನೀರಿನಲ್ಲಿ ಮುಳುಗುವು ದಕ್ಕೆ ಸಮಾನವೇ ಅಲ್ಲವೆ ? ಎಂಬುದಾಗಿಯೂ, ನೀರಿನಲ್ಲಿ ಸದಾ ವಾಸಮಾಡುವ ಜಿಗಣೆ

ಶುಚಿಃ | ಬಾಹ್ಯಪ್ರಕ್ಷಾಳಿತಾತಿಕ್ತಾಶಿಲಾಬೂಕಿಂಮಧುರಾಭವೇತ್ ॥ ೧೯ ॥
ಪುರಾತನಮತೇಷೂಕ್ತಂವಿಭೂತಿಸ್ನಾನಮುತ್ತಮಂ | ವಿಹಿತಂವಿದುಷಾಂವೇ
ದಮತಂರುದ್ರಾಕ್ಷಧಾರಣಂ ॥ ೨೦ ॥ ಕರ್ತವ್ಯಂಸರ್ವಥಾತಜ್ಜ್ಞೈಃಕರ್ಮಸಾ
ಫಲ್ಯಮಿಚ್ಛುಭಿಃ | ಇತಿನಿಶ್ಚಿತ್ಯಮನಸಾಪರನಿಷ್ಠಾಸಮನ್ವಿತಃ ॥ ೨೧ ॥ ವಿಧಾ
ಯಭಸ್ಮನಾಸ್ನಾನಂಧೃತ್ವಾಭಕ್ತ್ಯಾತ್ರಿಪುಂಡ್ರಕಂ | ಶಿರಶ್ಶಿಖಾಬಾಹುಕರ್ಣ
ಕಂಠವಕ್ಷಸ್ಥಲೇಷುಚ ॥ ೨೨ ॥ ರುದ್ರಾಕ್ಷಾನ್ಮೋಕ್ಷದಾಂಶೈವಪುರಾಣೋ
ಕ್ತಕ್ರಮಾದ್ದಧೌ | ಆದ್ಯಭಕ್ತೋಕ್ತಸದ್ಗೀತಗದ್ಯಪದ್ಯಾದಿಕಾನ್ಪಠನ್ ॥ ೨೩ ॥
ಸಂವೀಕ್ಷ್ಯವೇದಿಕಾಸ್ಥಾನಂಕ್ಷಿಪ್ತ್ವಾಜಂತೂಂಶ್ಶನೈಶ್ಶನೈಃ | ಸಸರ್ವಕಾರ್ಯೇ
ಷುವಸ್ತ್ರಪೂತೋದಕಮಿತಿಶ್ರುತೇಃ ॥ ೨೪ ॥ ವಸ್ತ್ರಪೂತೋದಕೇನೈ
ವಸಮ್ಯಕ್ಕೃತ್ವಾನುಲೇಪನಂ | ಕಳಿಕಾಚಿತ್ರಕಮಲಬಂಧಾದಿಸುಮನೋ
ಹರಂ ॥ ೨೫ ॥ ಪಂಚವರ್ಣಸಮಾಯುಕ್ತವರ್ಣಕಂಪ್ರವಿಧಾಯಚ | ಸರ್ವೋ

---

ಯಾನು ಕಪ್ಪೆಗಳು ಶುದ್ಧವಾದುವುಗಳೆ? ॥ ೧೮ ॥ ಶಸ್ತ್ರದಿಂದ ಕತ್ತರಿಸಲ್ಪಟ್ಟ ರಕ್ತ
ದಿಂದ ಲೇಪನಗೊಂಡ ಶರೀರವು ತೊಳದ ಮಾತ್ರದಿಂದಲೇ ನಿರ್ಮಲವಾಗಿ ಹೋಗುವುದೆ?
ಎಂಬುದಾಗಿಯೂ, ಕಹಿಸೋರೆಯ ಕಾಯಿಯು ಹೊರಗೆ ತೊಳೆದಮಾತ್ರದಿಂದಲೇ ಸಿಹಿ
ಯಾಗುವುದೆ ? ಎಂಬುದಾಗಿಯೂ ॥ ೧೯ ॥ ಪುರಾತನರ ಅಭಿಪ್ರಾಯದಲ್ಲೂ ವಿಭೂತಿಯ
ಸ್ನಾನವು ಶ್ರೇಷ್ಠವಾದುದೆಂದು ಹೇಳಲ್ಪಟ್ಟಿರುವುದೆಂಬುದಾಗಿಯೂ, ರುದ್ರಾಕ್ಷಧಾರ
ಣವು ವಿದ್ವಾಂಸರಿಗೆ ಉಕ್ತವಾದುದೂ ವೇದಸಮ್ಮತವಾಗುದೂ ಆಗಿ, ಅದನ್ನು ತಿಳಿದ
ವರಿಂದಲೂ ಆಚರಿಸುವ ಕರ್ಮಕ್ಕೆ ಸಾರ್ಥಕ್ಯವನ್ನು ಅಪೇಕ್ಷಿಸುವವರಿಂದಲೂ ಆ
ರುದ್ರಾಕ್ಷದ ಧಾರಣವು ಮಾಡಲ್ಪಡತಕ್ಕದೆಂಬುದಾಗಿಯೂ, ಮನಸ್ಸಿನಲ್ಲಿ ನಿಶ್ಚೈಸಿ,
ಅತ್ಯಂತ ಭಕ್ತಿಯಿಂದ ಕೂಡಿದವನಾಗಿ ॥ ೨೧ ॥ ಭಸ್ಮದಿಂದ ಸ್ನಾನವನ್ನು ಮಾಡಿ, ಭಕ್ತಿ
ಯಿಂದ ತ್ರಿಪುಂಡ್ರವನ್ನು ಧರಿಸಿ, ತಲೆ, ಜುಟ್ಟು, ತೋಳು, ಕಿವಿ, ಕತ್ತು, ಎದೆ ಈ
ಸ್ಥಲಗಳಲ್ಲಿ ಮುಕ್ತಿಪ್ರದಗಳಾದ ರುದ್ರಾಕ್ಷಗಳನ್ನು ಪುರಾಣದಲ್ಲಿ ಹೇಳಲ್ಪಟ್ಟಿರುವ ರೀತಿ
ಯಿಂದ ಧರಿಸಿದನು. ಪುರಾತನಭಕ್ತರು ಹೇಳಿರುವ ಗದ್ಯಪದ್ಯಾದಿಗಳನ್ನು ಪಠಿಸುವವ
ನಾಗಿ ॥ ೨೩ ॥ ಶಿವಪೂಜೆಯ ಜಗತಿಯ ಸ್ಥಲವನ್ನು ಚೆನ್ನಾಗಿ ನೋಡಿ, ಅಲ್ಲಿ ಯಾವ
ಜಂತುಗಳಾದರೂ ಇರಬಹುದೆಂದು ಮೆಲ್ಲಮೆಲ್ಲನೆ ಕೊಡಹಿ, „ ಎಲ್ಲ ಕಾರ್ಯಕ್ಕೂ ಉಪ
ಯೋಗಿಸಬೇಕಾದ ನೀರು ಬಟ್ಟೆಯಿಂದ ಶೋಧಿಸಿದುದಾಗಿರಬೇಕು ", ಎಂದು ಹೇಳುವ
ವೇದವಚನ ಪ್ರಕಾರವಾಗಿ, ಶೋಧಿಸಿದ ನೀರಿನಿಂದಲೇ ಚೆನ್ನಾಗಿ ಸಾರಿಸಿ, ಮೊಗ್ಗೆ ಮತ್ತೂ
ಚಿತ್ರ ಕಮಲದಬಂಧ ಮೊದಲಾದುವುಗಳಿಂದ ಮನೋಹರವಾದ ೫ ಬಣ್ಣಗಳಿಂದ ಕೂಡಿ
ದ ರಂಗವಲ್ಲಿಯನ್ನಿಟ್ಟು, ಶಿವಪೂಜಾ ಸಾಮಗ್ರಿಗಳನ್ನೆಲ್ಲ ಮುಂದಿಟ್ಟು ದೀವಿಗೆಗಳನ್ನು

ಪಕರಣಾನ್ಯಗ್ರೇನಿಧಾಯೋಜ್ವಾಲ್ಯದೀಪಿಕಾಃ ॥ ೨೬ ॥ ಫಲಾದಿಕಾಃಕಾಂಚನೀ
ಭ್ಯೋಭವ್ಯಾಃ ಪಿಷ್ಟಕೃತಾಅಪಿ । ನೀರಾಜನಾಶ್ಯಭಾಧಾರಪಾತ್ರೇಷುವಿನಿವೇ
ಶ್ಯಚ ॥ ೨೭ ॥ ಹಸ್ತೋದಕಂಚಶೀತೋಷ್ಣಜಲೇಸಂಶೋಧ್ಯಯತ್ನತಃ ।
ಪತ್ರಪುಷ್ಪಾಕ್ಷತಫಲಧೂಪದೀಪಾದಿಪಾತ್ರಿಕಾಃ ॥ ೨೮ ॥ ಕರ್ಪೂರವೀಟಿಕಾ
ಗಂಧಕಸ್ತೂರೀಪ್ರಮುಖಾತಥಾ । ಅರ್ಪಣೀಯಂದ್ರವ್ಯಜಾತಂಸ್ವಸ್ಯಸಂಸ್ಥಾ
ಪ್ಯವಾಮತಃ॥೨೯॥ಸಂಸ್ಥಾಪ್ಯತ್ರಿವಿಧಾಂಬ್ವರ್ಥಮೇಕಮೇಕಂಪತದ್ಗ್ರಹಂ।
ಕೃಪಯಾಚಾರ್ಯಹಸ್ತಸ್ವಮಸ್ತಕಖ್ಯಾತಯೋಗತಃ ॥ ೩೦ ॥ ಪ್ರಾಪ್ತಾತ್ಮಶು
ದ್ಧಿಸ್ತಾಂಮುಕ್ತ್ವಾತಚ್ಛುದ್ಧಿಶ್ಶಕ್ಯತೇಕಥಂ । ಶಕ್ಯತೇಚೇತ್ತ್ವತೋಭವ್ಯಗುರು
ಣಾಕಿಂಪ್ರಯೋಜನಂ ॥ ೩೧ ॥ ಅವಿಮುಕ್ತಸ್ಥಳಂಶಂಭುಸ್ಥಿತಭೂಮಿರ್ನಚೇ
ದ್ಯದಿ । ಪ್ರಾಕ್ಶುದ್ಧಿಶ್ಶುದ್ಧಿಸಹಿತಸ್ಥಲಸಂಸ್ಥಸ್ಯಕಿಂತಯಾ ॥ ೩೨ ॥ ದ್ರವ್ಯಾ
ಣಿಶಿವಸಾನ್ನಿಧ್ಯಾಚ್ಛುಧ್ಯಂತ್ಯೇವತಥಾನಚೇತ್ । ಕಥಂನರೇಣಶುದ್ಧಿಸ್ಸ್ಯಾದಿಂ
ದ್ರಿಯಾಕ್ರಾಂತಚೇತಸಾ ॥ ೩೩ ॥ ಅನಿಷಿದ್ಧಂಸುಪ್ರಬುದ್ಧಂಸಿದ್ಧಂವೇದಾಂತ

---

ಬೆಳಗಿ ॥ ೨೬ ॥ ಹಣ್ಣು ಹಂಪಲುಗಳನ್ನೂ, ಅಕ್ಕಿಯ ಹಿಟ್ಟಿನಿಂದ ಮಾಡಿದ್ದರೂ ಸುವ
ರ್ಣಮಯವಾದುವುಗಳಿಗಿಂತಲೂ ಶ್ರೇಷ್ಠವಾಗಿರುವ ದೀಪಾರತಿಗಳನ್ನೂ ಸಹ ತಟ್ಟೆಗ
ಳಲ್ಲಿರಿಸಿ ॥ ೨೭ ॥ ಹಸ್ತೋದಕವನ್ನೂ, ತಣ್ಣೀರು ಬಿಸಿನೀರುಗಳನ್ನೂ ಚೆನ್ನಾಗಿ ಶೋಧಿಸಿ,
ಪತ್ರ, ಹೂವು, ಅಕ್ಷತೆ, ಹಣ್ಣು, ಧೂಪ, ದೀಪ ಮೊದಲಾದುವುಗಳ ಪಾತ್ರೆಗ
ಳನ್ನೂ, ಪಚ್ಚಕರ್ಪೂರದಿಂದ ಬೆರೆದ ತಾಂಬೂಲ, ಗಂಧ, ಕಸ್ತೂರಿ ಮೊದಲಾದ ಶಿವನಿಗೆ
ಸಮರ್ಪಿಸತಕ್ಕ ದ್ರವ್ಯಗಳನ್ನೂ ತನ್ನ ಎಡಗಡೆಯಲ್ಲಿ ಮಡಗಿಕೊಂಡು ॥ ೨೯ ॥
ಪಾದ್ಯ ಅರ್ಘ್ಯ ಆಚಮನಗಳಿಗಾಗಿ ಒಂದೊಂದು ಬಟ್ಟಲುಗಳನ್ನಿಟ್ಟು ॥ ಆಚಾರ್ಯನು
ದಯೆಯಿಂದ ಹಸ್ತಮಸ್ತಕಸಂಯೋಗವನ್ನು ಮಾಡುವುದರಿಂದ ಆತ್ಮಶುದ್ಧಿಯನ್ನು
ಪಡೆದವನು ಅಂತಹ ಆತ್ಮಶುದ್ಧಿಯನ್ನು ಬಿಟ್ಟುಬಿಟ್ಟರೆ, ಆ ಶುದ್ಧಿಯನ್ನು ಬೇರೆ ಪಡೆ
ಯುವುದಕ್ಕೆ ಹೇಗಾದೀತು ? ಬೇರೆ ಪಡೆಯುವುದು ಶಕ್ಯವಾದರೆ ಶುಭಂಕರನಾದ ಗುರುವಿ
ನಿಂದ ಪ್ರಯೋಜನವೇನು ? ॥ ೩೧ ॥ ಶಿವನಿರುವ ಭೂಮಿಯೇ ಅವಿಮುಕ್ತಕ್ಷೇತ್ರವಲ್ಲದಿ
ದ್ದರೆ ಪ್ರಾಕ್ಶುದ್ಧಿಯು ಬೇಕು. ಶುದ್ಧಿಸಹಿತವಾದ ಸ್ಥಲದಲ್ಲಿರುವವನಿಗೆ ಪ್ರಾಕ್ಶುದ್ಧಿ
ಯಿಂದ ಪ್ರಯೋಜನವೇನು ? ॥ ೩೨ ॥ ಎಲ್ಲ ದ್ರವ್ಯಗಳೂ ಶಿವನ ಸಾಮೀಪ್ಯದಿಂದಲೇ
ಪರಿಶುದ್ಧಗಳಾಗುತ್ತವೆ. ಹಾಗಲ್ಲದಿದ್ದರೆ ಇಂದ್ರಿಯಾಧೀನವಾದ ಮನಸ್ಸುಳ್ಳ ಮನುಷ್ಯ
ನಿಂದ ಆ ದ್ರವ್ಯಗಳ ಶುದ್ಧಿಯು ಹೇಗಾಗುತ್ತದೆ ? ॥ ೩೩ ॥ ನಿಷೇಧರಹಿತವೂ, ಸುಜ್ಞಾನ
ಗೋಚರವೂ, ವೇದಾಗಮಪ್ರಸಿದ್ಧವೂ, ಉಪನಿಷನ್ಮನೋಹರವೂ ಆದ ಶಿವಲಿಂಗವನ್ನು

ಭಾಸ್ವರಂ । ಲಿಂಗಂಶುದ್ಧಂಕರೋಮೀತಿಸಮುದ್ಯುಕ್ತೋನರೋಜಡಃ ॥೩೪॥ ಭವಬದ್ಧೋಬುದ್ಧಿಹೀನೋನಸ್ಯಾತ್ಕಿಂಧರಣೀತಲೇ । ಪಂಚಾಕ್ಷರೀಪಾಶುಪತಾಘೋರಾದ್ಯಾಮಂತ್ರರಾಶಯಃ ॥ ೩೫ ॥ ಶಿವನಾಮಾಕ್ಷರಾತ್ಮತ್ವಾದ್ವಿಶುದ್ಧಾಸ್ಸ್ಯುಸ್ತಥಾನಚೇತ್ । ಕೇನಮಂತ್ರೇಣವಾತೇಷಾಂಶುದ್ಧಿಸ್ತಸ್ಯಾಪಿಕೇನವಾ ॥ ೩೬ ॥ ಚಿಕೀರ್ಷಾಪಂಚಶುದ್ಧೀನಾಮಪರಾಧೋನಕಿಂತತಃ । ಇತಿನಿಶ್ಚಿತ್ಯಮನಸಾಪಂಡಿತಾರಾಧ್ಯದೇಶಿಕಃ ॥ ೩೭ ॥ ಲಿಂಗೋದಕಪ್ರೋಕ್ಷಣಪ್ರಕ್ಷಾಳನಸ್ಪರ್ಶನೇಕ್ಷಣೈಃ । ಪದಾರ್ಥಶುದ್ಧಿಂತಲ್ಲಿಂಗಸಂಸ್ಕಾರಂಪ್ರವಿಧಾಯಚ ॥ ೩೮ ॥ ಸ್ವಾರ್ಥಾಂಲಯಾಂಗಭೋಗಾಂಗಪೂಜಾಂಕರ್ತುಂಪ್ರಚಕ್ರಮೇ। ನಿರೀಕ್ಷ್ಯಸದ್ಭಕ್ತಜನಾಸ್ತಂತದಾಮಲ್ಲಿಕಾರ್ಜುನಂ॥ ೩೯ ॥ ಶಶಂಸುಸ್ತುಷ್ಟಮನಸೋದೃಷ್ಟ್ವಾಲಿಂಗಾರ್ಚನಾವಿಧಿಂ । ಸದಾವಿಧಿನಿಷೇಧಾತಿಕ್ರಾಂತಭಕ್ತಿಮತಾಂಪರಂ ॥ ೪೦ ॥ ಶಿವಾಚಾರೇಣಸಕಲೇಂದ್ರಿಯಾಂತಃಕರಣೈಸ್ಸಹ । ಸತ್ಪ್ರಸಾದಾಂಗಿನಾಂಶಶ್ವತ್ಸಕಲೀಕರಣೇನಕಿಂ ॥ ೪೧ ॥ ಶಿವಾಸ

---

ಪರಿಶುದ್ಧಿಗೊಳಿಸುವೆನೆಂದು ಉಜ್ಜುಗಿಸಿದ ಮನುಷ್ಯನು ಭೂಮಿಯಲ್ಲಿ ಮೂಢನೂ॥೩೪॥ ಜನನಮರಣಬದ್ಧನೂ ಮತಿಹೀನನೂ ಆಗುವುದಿಲ್ಲವೆ ? ಪಂಚಾಕ್ಷರ, ಪಾಶುಪತ, ಅಘೋರ ಮೊದಲಾದ ಮಂತ್ರಗಳ ಸಮೂಹವು ಶಿವನ ಹೆಸರಿನ ಅಕ್ಷರಗಳಾಗಿರುವುದರಿಂದ ಪರಿಶುದ್ಧಗಳಾಗಿರುವುವು. ಹಾಗಲ್ಲದಿದ್ದರೆ ಆ ಪಂಚಾಕ್ಷರ್ಯಾದಿ ಮಂತ್ರಗಳಿಗೆ ಇನ್ನಾವ ಮಂತ್ರದಿಂದ ಶುದ್ಧಿಯುಂಟಾಗುತ್ತದೆ? ಬಳಿಕ ಆ ಮಂತ್ರಕ್ಕೆ ಶುದ್ಧಿಯಾವುದರಿಂದ ? ॥ ೩೬ ॥ ಅದುಕಾರಣ, ಭೂತಶುದ್ಧಿ ಮೊದಲಾದ ಈ ಪಂಚಶುದ್ಧಿಗಳನ್ನಪೇಕ್ಷಿಸುವುದಕ್ಕಿಂತಲೂ ದೊಡ್ಡದಾದ ಅಪರಾಧವಿಲ್ಲ'' ಎಂದು ಪಂಡಿತಾರಾಧ್ಯನು ಮನಸ್ಸಿನಲ್ಲಿ ನಿಶ್ಚೈಸಿ ॥ ೩೭ ॥ ಲಿಂಗೋದಕದಿಂದ ಪ್ರೋಕ್ಷಿಸುವುದು, ತೊಳೆಯುವುದು, ಮುಟ್ಟುವುದು, ನೋಡುವುದು ಎಂಬ ಕಾರ್ಯಗಳಿಂದ ದ್ರವ್ಯಶುದ್ಧಿಯನ್ನೂ ಆ ಲಿಂಗ ಸಂಸ್ಕಾರವನ್ನೂ ಮಾಡಿ ॥ ೩೮ ॥ ನಿಷ್ಕಾಮವಾದ ಲಯಾಂಗ ಮತ್ತು ಭೋಗಾಂಗವೆಂಬ ದ್ವಿವಿಧದ ಪೂಜೆಯನ್ನು ಮಾಡುವುದಕ್ಕೆ ಉಪಕ್ರಮಿಸಿದನು. ಆಗ ಭಕ್ತಜನರು ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ನೋಡಿ ॥ ೩೯ ॥ ಸ್ತೋತ್ರಮಾಡಿದರು. ಶಿವಲಿಂಗಪೂಜೆ ಮಾಡುವ ನಿಯಮವನ್ನು ನೋಡಿ ಸಂತುಷ್ಟಮನಸ್ಕರಾದರು. ,, ಯಾವಾಗಲೂ ವಿಧಿನಿಷೇಧಗಳನ್ನು ಮೀರಿದ ಭಕ್ತಿಸಂಪನ್ನರಾಗಿಯೂ, ಶಿವಾಚಾರದಿಂದಲೂ, ಎಲ್ಲ ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಸಹಪ್ರಸಾದಾಂಗರಾಗಿಯೂ ಇರತಕ್ಕವರಿಗೆ ಸಕಲೀಕರಣ ಪದ್ಧತಿಯಿಂದ ಪ್ರಯೋಜನವೇನು ? ॥ ೪೧ ॥ ಶಿವಲಿಂಗಕ್ಕೆ ತಾವೇ ಸಿಂಹಾಸನರಾಗಿರುವವರಿಗೆ ಅನೇಕತರದ ಆಸನಗಳಿಂದ ಪ್ರಯೋಜನವೇನು ? ಭಕ್ತಿಯ ನೆಲೆಯಾದ ಚಿತ್ತ

ನ್ಯೈಶ್ಚ ಬಹುಭಿರ್ಲಿಂಗಸಿಹ್ಮಾಸನಾತ್ಮನಾಂ | ಕಿಂಭಕ್ತಿನ್ಯಾಸಜೇತಾನಾಂಕರಾಂಗನ್ಯಾಸಸಂಚಯೈಃ ‖ ೪೦ ‖ ದಿಕ್ಪಾಲವಂದ್ಯಭಕ್ತಾನಾಂಕಿಂದಿಗ್ಬಂಧನಕರ್ಮಭಿಃ | ದೋಷಶೋಷಣಸರ್ವೇಶಭಕ್ತಿಪೋಷಣಶಾಲಿನಾಂ ‖ ೪೩ ‖ ಶೋಷಣಾದಿಕ್ರಿಯಾಭಿಃ ಕಿಂಶೇಷಭೂಷಣಸೇವಿನಾಂ | ಆಚಾರ್ಯಕರುಣಾಯಾತಜ್ಞಾನವಹ್ನಿದಹನಾಂಗಿನಾಂ ‖ ೪೪ ‖ ಕಿಂಪ್ರಯೋಜನಮಾಯಾತಿವ್ಯರ್ಥೈರ್ದಹನಕರ್ಮಭಿಃ | ಪ್ರಸಾದಾಮೃತಸಂಪ್ಲಾವವತಾಂಕಿಂಪ್ಲಾವನಾದಿಭಿಃ ‖ ೪೫ ‖ ನಿತ್ಯಂ ಸ್ವಗಾತ್ರಸಂಯುಕ್ತಂಲಿಂಗಂಜಗತಿಸದ್ಗುರೋಃ | ಪ್ರತ್ಯಕ್ಷಪ್ರತಿಬಿಂಬಂಯತ್ತದಾವಾಹ್ಯಮುಹುರ್ಮುಹುಃ ‖ ೪೬ ‖ ಅಪರಾಧಶತಾಕೀರ್ಣಾನ್ದುರ್ವೃತ್ತಾಂಸ್ತಾಮಸಾತ್ಮನಃ| ಗುರುಣಾವಾಹಿತಂಲಿಂಗಂತದ್ವಿಸರ್ಜಯತೋನರಾನ್ ‖೪೭‖ ನಿರಂತರಪ್ರಾಣಲಿಂಗವಂತೋಽಂಗೀಕುರ್ವತೇಕಥಂ | ಭೃತ್ಯೇನಾವಾಹಿತೇರಾಜ್ಞಿಪುನಶ್ಚಪ್ರವಿಸರ್ಜಿತೇ ‖ ೪೮ ‖ ಸಭೃತ್ಯೋವಾಭವೇದ್ರಾಜಾಸಭವೇದ್ವಾಮಹೀತಲೇ | ಗುರುಣಾವಾಹಿತಂಲಿಂಗಂಯಃಕರೋತಿವಿಸರ್ಜನಂ ‖ ೪೯ ‖ ಸಮಹೇಶೋಭವೇತ್ಕಿಂವಾಪರೋವೇತಿವಿಚಾರ್ಯತಾಂ | ತಸ್ಮಾದ್ವಿನಿಂದಿತೇ

---

ವುಳ್ಳವರಿಗೆ ಕರನ್ಯಾಸ ಅಂಗನ್ಯಾಸ ಇವುಗಳಿಂದ ಫಲವೇನು ? ‖ ೪೦ ‖ ಅಷ್ಟದಿಕ್ಪತಿಗಳಿಂದ ನಮಸ್ಕರಿಸಲ್ಪಡಲು ಯೋಗ್ಯರಾದ ಭಕ್ತರಿಗೆ ದಿಗ್ಬಂಧನಕಾರ್ಯಗಳಿಂದ ಪ್ರಯೋಜನವೇನು ? ಸಕಲ ಪಾಪಗಳನ್ನೂ ಒಣಗಿಸುವ ಶಿವನ ಭಕ್ತಿಯ ಪರಿಪೋಷಣದಿಂದ ಯುಕ್ತರಾಗಿರುವ ಶಿವಸೇವಕರಿಗೆ ಶೋಷಣ ಮೊದಲಾದ ಕ್ರಿಯೆಗಳಿಂದ ಪ್ರಯೋಜನವೇನು ? ಗುರುವಿನ ಕೃಪೆಯಿಂದ ಲಬ್ಧವಾದ ಜ್ಞಾನಾಗ್ನಿಯಿಂದ ಸುಟ್ಟ ದೇಹವುಳ್ಳವರಿಗೆ ನಿಷ್ಫಲವಾದ ದಹನಕರ್ಮಗಳಿಂದ ಬರುವ ಫಲವೇನು. ಶಿವಪ್ರಸಾದವೆಂಬ ಅಮೃತದಲ್ಲಿ ತೇಲಾಡುತ್ತಿರುವವರಿಗೆ ಪ್ಲಾವನ ಮೊದಲಾದ ಕರ್ಮಗಳಿಂದ ಫಲವೇನು ? ‖ ೪೫ ‖ ಲೋಕದಲ್ಲಿ ಗುರುವಿನ ಸಾಕ್ಷಾತ್ಪ್ರತಿಬಿಂಬವಾಗಿಯೂ, ಯಾವಾಗಲೂ ತನ್ನ ದೇಹದಲ್ಲಿ ಕೂಡಿರುವುದಾಗಿಯೂ ಇರುವ ಶಿವಲಿಂಗದಲ್ಲಿ ಪದೆಪದೆ ಆವಾಹಿಸುತ್ತ, ಹಲವು ತಪ್ಪುಗಳಿಂದ ಬೆರೆದ ತಾಮಸಸ್ವರೂಪಿಗಳಾದ ಕೆಟ್ಟ ನಡೆಯುವರನ್ನೂ, ಗುರುವಿನಿಂದ ಆವಾಹನೆ ಮಾಡಲ್ಪಟ್ಟ ಶಿವಲಿಂಗದಲ್ಲಿ ವಿಸರ್ಜನೆ ಮಾಡತಕ್ಕ ಮನುಷ್ಯರನ್ನು ಸಹ ‖ ೪೭ ‖ ಸದಾ ಪ್ರಾಣಲಿಂಗಿಗಳಾಗಿರುವವರು ಹೇಗೆ ಅಂಗೀಕರಿಸುತ್ತಾರೆ ? ದೊರೆಯು ಸೇವಕನಿಂದ ಆವಾಹಿಸಲ್ಪಟ್ಟವನಾಗಿ ಮತ್ತೆ ವಿಸರ್ಜಿಸಲ್ಪಟ್ಟವನಾದರೆ, ಅವನು ಸೇವಕನಾಗುವನೆ ? ಅಥವಾ ಭೂತಲದಲ್ಲಿ ಅವನು ದೊರೆಯಾಗುವನೆ ? ಗುರುವಿನಿಂದ ಆವಾಹನೆ ಮಾಡಲ್ಪಟ್ಟ ಲಿಂಗದಲ್ಲಿ ಯಾವನು ವಿಸರ್ಜನೆಯನ್ನು ಮಾಡುತ್ತಾನೋ ‖ ೪೯ ‖. ಅವನು ಮಾಹೇಶ್ವರನೋ ಅಥವಾ ಬೇರೆಯೋ ಎಂಬುದನ್ನು

ಸ್ಯಾತಾಮಾವಾಹನವಿಸರ್ಜನೆ ॥ ೫೦ ॥ ಅಮುಖ್ಯಮಾಂತರಂಬಾಹ್ಯಂಮು ಖ್ಯಮರ್ಚನಮಿಷ್ಯತೇ । ತತ್ಪ್ರಧಾನಂವಿಹಾಯಾಭ್ಯಂತರಾಂಗೀಕರಣಂ ವೃಥಾ ॥ ೫೧ ॥ ಅಭ್ಯಾಸಯೋಗಮಾರ್ಗಶ್ಚ ಸೋಽಹಂಭಾವೋಽಪಿಭೂತಲೆ । ಏತದ್ದ್ರೋಹಾಸ್ಸಮುದ್ದಿಷ್ಟಾಶ್ಚಿತ್ತವಿಭ್ರಾಂತಿಕಾರಕಾಃ ॥ ೫೨ ॥ ನಾಸಿಕಾ ಗ್ರಹಣಂವಾಯೋರೂರ್ಧ್ವಮಾಕರ್ಷಣಂತಥಾ । ಜಠರಾಕುಂಚನಂಪ್ರಾಚೀ ವೀಕ್ಷಣಂಮೌನಮೇವಚ ॥ ೫೩ ॥ ಸ್ವೀಯಾಂಗಭಂಗವಿಕೃತಮುದ್ರಾದೃ ಙ್ಮೀಲನಾನಿಚ । ಅಕ್ಷಮಾಲಾಕ್ಷಗಣನಾಜಪಾದ್ಯಾವಿವಿಧಾಃಕ್ರಿಯಾಃ ॥ ೫೪ ॥ ಭುಂಜಾನ್ಯೈರೇವಭೋಗಾಂಸ್ತುತೂಷ್ಣೀಮೇವಮಹೇಶ್ವರಂ । ಪ್ರಾಪ್ತುಕಾ ಮೈರ್ವಿರಚಿತಾವಿತಥಾಮಾನಸಾರ್ಚನಾ ॥ ೫೫ ॥ ಸಿಹ್ಮಾಸನಾರ್ಚನಾಸ್ತ ದ್ವತ್ಪಂಚಾವರಣಸಂಯುತಾಃ । ಇತ್ಯಾದಿಕಾನ್ಕರ್ಮಯೋಗಾನಧಃ ಕೃತವ ತಾಭುವಿ ॥ ೫೬ ॥ ಭಕ್ತಿಯೋಗೇನೈವಮಹಾದೇವಃ ಪ್ರೀಣಾತಿಸರ್ವದಾ । ಯಥಾಪ್ರಕಟಯನ್ಭೂಮೌಚೇರಮೇಂದ್ರಂಮುದಾಶಿವಃ ॥ ೫೭ ॥ ತಥಾಪ್ರ

---

ವಿಚಾರಮಾಡಿಕೊಳ್ಳಿರಿ. ಅದುಕಾರಣದಿಂದ ಆವಾಹನವಿಸರ್ಜನಗಳು ನಿಂದ್ಯವಾದುವು ಗಳಾಗಿರುವುವು ॥ ೫೦ ॥ ಒಳಗಿನ ಪೂಜೆಯು ಮುಖ್ಯವಲ್ಲ. ಮತ್ತೇನೆಂದರೆ — ಶಿವನ ಬಾಹ್ಯಪೂಜೆಯೇ ಮುಖ್ಯವಾದುದು. ಹಾಗೆ ಮುಖ್ಯವಾದ ಆ ಪೂಜೆಯನ್ನು ಬಿಟ್ಟು ಒಳಗಿನ ಪೂಜೆಯನ್ನು ಅಂಗೀಕರಿಸಿಕೊಳ್ಳುವುದು ವ್ಯರ್ಥವು ॥ ೫೧ ॥ ಭೂಮಿಯಲ್ಲಿ ಯೋಗಾಭ್ಯಾಸಮಾರ್ಗವೂ, ಸೋಽಹಂಭಾವವೂ, ಕೂಡ ಮನಸ್ಸಿಗೆ ಭ್ರಾಂತಿಯನ್ನುಂಟು ಮಾಡುವ ದ್ರೋಹಕಾರ್ಯಗಳು ॥ ೫೨ ॥ ಮೂಗನ್ನು ಹಿಡಿದುಕೊಳ್ಳುವುದೂ, ವಾಯು ವನ್ನು ಮೇಲಕ್ಕೆ ಆಕರ್ಷಿಸುವುದೂ, ಹೊಟ್ಟೆಯನ್ನು ಬಗ್ಗಿಸುವುದೂ, ಪೂರ್ವದಿಗ್ವೀ ಕ್ಷಣವೂ, ಮೌನಧಾರಣೆಯೂ ॥ ೫೩ ॥ ತನ್ನ ದೇಹವನ್ನು ಮುರಿದು ನಾನಾವಿಕಾರಗೊ ಳಿಸಿ ಮುದ್ರಾಧಾರಣೆ ಮಾಡುವುದೂ ಕಣ್ಣನ್ನು ಮುಚ್ಚಿಕೊಳ್ಳುವುದೂ, ಜಪಮಾಲಿ ಕೆಯ ಮಣಿಯನ್ನೆಣಿಸುವುದೂ, ಜಪವೇ ಮೊದಲಾದ ನಾನಾತರದ ಕ್ರಿಯೆಗಳೂ, ಫಲಾನುಭವವನ್ನು ಮಾಡತಕ್ಕವರಿಂದಲೂ, ಸುಮ್ಮನೆಯೇ ಮಹೇಶ್ವರನನ್ನು ಹೊಂದ ಲು ಅಪೇಕ್ಷಿಸುವವರುಗಳಿಂದಲೂ ಕೂಡ ಕಲ್ಪಿಸಲ್ಪಟ್ಟ ವ್ಯರ್ಥವಾದ ಮಾನಸಿಕಪೂ ಜೆಯೂ, ಹಾಗೆಯೇ ಪಂಚಾವರಣ ದೇವತೆಗಳಿಂದ ಕೂಡಿದ ಪೀಠಸ್ಥಪೂಜೆಗಳೂ, ಇವು ಮೊದಲಾದ ಕರ್ಮಯೋಗಗಳೆಲ್ಲವೂ ಭೂಮಿಯಲ್ಲಿ ಯಾವುದರಿಂದ ಕೀಳುಗೊಳಿಸಲ್ಪ ಟ್ಟವೋ ಅಂತಹ ಭಕ್ತಿಯೋಗವೊಂದರಿಂದಲೇ ಪರಶಿವನು ಯಾವಾಗಲೂ ಪ್ರೀತನಾಗು ತ್ತಾನೆ ॥ ೫೬ ॥ ಪರಶಿವನು ಸಂತೋಷದಿಂದ ಭೂಮಿಯಲ್ಲಿ ಚೇರಮರಾಜನನ್ನು ಹೇಗೆ ಪ್ರಸಿದ್ಧಿಗೊಳಿಸಿದನೋ ॥ ೫೭ ॥ ಹಾಗೆ ಸಕಲೀಕರಣಪದ್ಧತಿಗಳಿಂದ ಕೂಡಿದ ಜನರನ್ನು

ಕಟಯನ್ಕಿಂವಾಸಕಲೀಕರಣಾನ್ವಿತಾನ್ | ಯಥಾಸಂಭಾವಯನ್ಮಾನಕಂಜಾ ರಂಸಮಹೇಶ್ವರಃ || ೫೮ || ಮೌನಿನೋದಾನಿನಸ್ತದ್ವತ್ಕಿಮಸಂಭಾವಯದ್ಭುವಿ | ಯಥೈವಕೇಶಿರಾಜಸ್ಯಮಸ್ತಕೇಽವಸದೀಶ್ವರಃ || ೫೯ || ತಥಾಸನಾದಿಯುಕ್ತೇಷು ಕಿಮತಿಷ್ಠತ್ಕದಾಪಿವಾ | ಯಥೈವಾನುಯಯೌಶಂಭುರ್ಭೋಗಾರ್ಯಂ ಭಕ್ತವತ್ಸಲಃ || ೬೦ || ಸಮುತ್ಪತ್ತಿಸ್ಥಿತಿನ್ಯಾಸರತಾನಸನುಯಯೌಕಿಮು | ಓಹಿಲಾಯಯಥಾಲೋಕೇ ತುಷ್ಟೋಭೂತ್ಪರಮೇಶ್ವರಃ ||೬೧|| ಮುದ್ರಾವಾಹನ ವೇದಿಭ್ಯಸ್ತಥಾ ತುಷ್ಟೋಽಭವತ್ಕಿಮು | ಸ್ಥಿರೋಽಭವನ್ಮಹಾದೇವೋ ಬಲ್ಲಹಸ್ಯ ಗಿರಾಯಥಾ || ೬೨ || ಶೋಷಣಪ್ಲಾವನೈಸ್ತದ್ವತ್ಸ್ಥಿರೋಽಭೂತ್ಕಿಮುಶಂಕರಃ | ಅಂಗೀಚಕ್ರೇ ಯಥಾಭಕ್ತಿಂ ತಥಾಘ್ಯಾದಿನಶಂಕರಃ || ೬೩ || ಅಭುಙ್ತವಿಧಿಭಿಃಕೈರ್ವಾಚೌಡಾರ್ಯೇಣಯಥಾಮೃಡಃ | ಬುಭುಜೇಕಬಳಾನ್ದೀಯಮಾನಾನ್ಸಂಪ್ರೀತಮಾನಸಃ || ೬೪ || ಅರಣ್ಯಪತ್ರೈರಾಛಾದ್ಯಪುಟಕಾಯಾಂಸ್ಥಿತಶ್ಶಿವಃ | ಪೀತಾವಸತಿಕಿಂತತ್ರಶಿವಭಕ್ತಾಂತಿಕೇ ಯಥಾ || ೬೫ || ಕರ್ಮಭಾಗೈಕಮಹಿತಪೂರ್ವಪಕ್ಷೇತರೇಶುಭೇ | ಜ್ಞಾನ

---

ಪ್ರಸಿದ್ಧಿಗೊಳಿಸಿದನೆ ? ಆ ಪರಮೇಶ್ವರನು ಮಾನಕಂಜನರನ್ನು ಹೇಗೆ ಸನ್ಮಾನಗೊಳಿಸಿದನೋ ಹಾಗೆ ಭೂಮಿಯಲ್ಲಿ ಮೌನವ್ರತಧಾರಿಗಳನ್ನೂ ದಾನಶೌಂಡರನ್ನೂ ಸನ್ಮಾನಗೊಳಿಸಿದನ ? ಶಿವನು ಕೇಶಿರಾಜನ ತಲೆಯಲ್ಲಿ ಹೇಗೆ ವಾಸಮಾಡಿದನೋ || ೫೯ || ಹಾಗೆ ಆಸನಾದಿಗಳಿಂದ ಕೂಡಿದವರಲ್ಲಿ ಯಾವಾಗಲಾದರೂ ಇದ್ದನೆ ? ಭಕ್ತವತ್ಸಲನಾದ ಪರಶಿವನು ಕೆಂಬಾವಿಭೋಗಯ್ಯನನ್ನು ಹೇಗೆ ಅನುಸರಿಸಿಹೋದನೋ ಹಾಗೆ ಸೃಷ್ಟಿಸ್ಥಿತಿನ್ಯಾಸಗಳಲ್ಲಿ ಆಸಕ್ತರಾದವರನ್ನು ಅನುಸರಿಸಿಹೋದನ ? || ೬೦ || ಪರಮೇಶ್ವರನು ಓಹಿಲಯ್ಯನಿಗೆ ಹೇಗೆ ಸಂತುಷ್ಟನಾದನೋ || ೬೧ || ಹಾಗೆ ಮುದ್ರೆ ಆವಾಹನ ಮೊದಲಾದುವುಗಳನ್ನು ತಿಳಿದವರಿಗೋಸ್ಕರ ಸಂತುಷ್ಟನಾದನೆ ? ಮಹಾದೇವನು ಬಲ್ಲಹಭೂಪತಿಯ ಮಾತಿನಿಂದ ಹೇಗೆ ಸ್ಥಿರನಾದನೋ || ೬೨ || ಹಾಗೆ ಅವನು ಶೋಷಣಪ್ಲಾವನಕರ್ಮಗಳಿಂದ ಸ್ಥಿರನಾಗಿ ನಿಂತನೆ ? ಶಂಕರನು ಭಕ್ತಿಯನ್ನು ಹೇಗೆ ಅಂಗೀಕರಿಸಿದನೋ ಹಾಗೆ ಅರ್ಘ್ಯ ಮೊದಲಾದುವುಗಳನ್ನು ಸ್ವೀಕರಿಸಲಿಲ್ಲ || ೬೩ || ಸುಂಗಿ ಚೌಡಯ್ಯನು ಕೊಟ್ಟ ತುತ್ತುಗಳನ್ನು ಮೃಡನು ಸಂತುಷ್ಟಚಿತ್ತನಾಗಿ ಹೇಗೆ ಬುಂಜಿಸಿದನೋ, ಹಾಗೆ ಯಾವ ವಿಧಿಗಳಿಂದ ಶಿವನು ಬುಂಜಿಸಿರುವನು ? || ೬೪ || ಶಿವಭಕ್ತರ ಸಮೀಪದಲ್ಲಿ ಶಿವನು ಪ್ರೀತಿಸಂಪನ್ನನಾಗಿ ಹೇಗೆ ವಾಸಮಾಡುತ್ತಾನೋ ಅರಣ್ಯದ ಪತ್ರಗಳಿಂದ ಮುಚ್ಚಿಸಿಕೊಂಡು ಪುಟ್ಟಿಯಲ್ಲಿರುವ ಶಿವನು ಹಾಗೆ ವಾಸಮಾಡುವನೆ ? || ೬೫ || ಕರ್ಮಭಾಗವೊಂದರಿಂದ ಪೂಜ್ಯವಾದ ಪೂರ್ವಭಾಗಕ್ಕೆ ಭಿನ್ನವಾಗಿಯೂ, ಜ್ಞಾನಭಾಗವೊಂದರಿಂದ

ಭಾಗ್ಯೈಕಸಿದ್ಧಾಂತವೇದಾಂತಪ್ರತಿಪಾದಿತೇ ॥ ೬೬ ॥ ಶೈವಾಗಮಾಚಾರ್ಯಸಿ
ದ್ಧಭಕ್ತಿಸದ್ಭಾವನಾಯುತೆ । ವೀರಮಾಹೇಶ್ವರಾಚಾರಮಾರ್ಗೇಕಥಿತರೀತಿ
ತಃ ॥ ೬೭ ॥ ಯುಕ್ತಿಸಂವರ್ಧಿತಶಿವ ತತ್ವಸಾರಕೃತೌಮುದಾ । ತಂಕೇವಲಂ
ಭಕ್ತಿಮಾರ್ಗಂಪ್ರತಿಷ್ಠಾಪ್ಯ ತಥಾಸ್ವಯಂ ॥ ೬೮ ॥ ಪ್ರವರ್ತತೆ ಸವಿಮಾಚೇ
ನಂ ಪಂಡಿತಾರಾಧ್ಯ ಸದ್ಗುರುಃ । ಇತಿ ಪ್ರಶಂಸಿತೋಭಕ್ತೈಸ್ತುಷ್ಟಮಾನ
ಸಃ ॥ ೬೯ ॥ ಪ್ರಶಸ್ತಾಭಿರ್ನ್ಯಕ್ಕೃತಾಷ್ಟವಿಧಪೂಜಾಪ್ರಸಿದ್ಧಿಭಿಃ । ಅಷ್ಟಾಂ
ಗಭಕ್ತಿಕ್ರಿಯಾಭಿಸ್ಸಾಂಗಾಭಿರತಿಭಾಸುರಂ ॥೭೦॥ ಸಮಂಚಿತೈಷ್ಷೋಡಶೋ
ಪಚಾರಾತೀತೈರ್ನಿರಂತರಂ । ಸಂತನ್ಯಮಾನೈರ್ನೃಪವದುಪಚಾರೈಶ್ಚ ಸಾ
ದರಂ ॥ ೭೧ ॥ ನಿತ್ಯಲಿಂಗೈಕನಿಷ್ಠಾಯಾಃ ಪಾರತಂತ್ರ್ಯೇಣಭಕ್ತಿತಃ । ಲಿಂಗಾ
ರ್ಚನಾಂಕರ್ತುಕಾಮೋಹೃತ್ಕಂಜಕರ್ಣಿಕಾಂತರೇ ॥ ೭೨ ॥ ಭಾವಿತಂಸ್ವಪ್ರಾ
ಣಲಿಂಗಮಾಜಹ್ರೇಸಜ್ಜಿಕಾಂತರಾತ್ । ಜ್ವಲತ್ತಲ್ಲಿಂಗಮಾತ್ಮಾನುಕಲಿತಂಪರ
ಮೋನ್ನತಂ ॥ ೭೩ ॥ ದೃಙ್ಮನಃಪೀಠಸಂಸ್ಥಂಸದ್ಬಭಾವತಿತರಾಂತದಾ ।
ತಲ್ಲಿಂಗಮೂರ್ತೇರ್ಮಾಧುರ್ಯದಿವ್ಯತೇಜಸಿಸಂಪದೆ ॥೭೪॥ ಸ್ನೇಹಭಾವೇಚಲಾವ

---

ಸಿದ್ಧಾಂತಗಳಿಂದಲೂ. ಉಪನಿಷತ್ತುಗಳಿಂದ ನಿರೂಪಿತವಾಗಿಯೂ ॥ ೬೬ ॥ ಶೈವಾಗಮ
ಸಂಪನ್ನರಾದ ಆಚಾರ್ಯರಲ್ಲಿ ಪ್ರಸಿದ್ಧವಾಗಿಯೂ, ಭಕ್ತಿಭಾವನೆಯಿಂದ ಕೂಡಿಯೂ,
ಇರುವ ವೀರಮಾಹೇಶ್ವರಾಚಾರ ಮಾರ್ಗದಲ್ಲಿ ಹೇಳಲ್ಪಟ್ಟಿರುವ ರೀತಿಯಿಂದ, ಪಂಡಿತಾ
ರಾಧ್ಯಗುರುಶ್ರೇಷ್ಠನು ಆ ಕೇವಲ ಭಕ್ತಿಮಾರ್ಗವನ್ನು ತನ್ನ ಯುಕ್ತಿಯಿಂದ ವೃದ್ಧಿ
ಗೊಳಿಸಲ್ಪಟ್ಟ ಶಿವತತ್ವಸಾರವೆಂಬ ಕಾವ್ಯದಲ್ಲಿ ಪ್ರತಿಷ್ಠಾಪಿಸಿ, ತಾನೂ ಕೂಡ ಅದರಲ್ಲಿ
ಚೆನ್ನಾಗಿ ಪ್ರವರ್ತಿಸುತ್ತಾನೆ '' ಎಂದು ಭಕ್ತಜನರಿಂದ ಹೊಗಳಲ್ಪಟ್ಟ ಪಂಡಿತಾಚಾ
ರ್ಯನು, ಬಳಿಕ ಸಂತುಷ್ಟಮನಸ್ಕನಾಗಿ ॥ ೬೯ ॥ ಅಷ್ಟವಿಧದ ಪೂಜೆಗಳ ಪ್ರಸಿದ್ಧಿ
ಯನ್ನು ತಿರಸ್ಕರಿಸಿದುವುಗಳೂ, ಶ್ರೇಷ್ಠಗಳೂ, ಸಂಪೂರ್ಣಗಳೂ ಆದ ಅಷ್ಟವಿಧ
ಭಕ್ತಿಯ ಆಚರಣೆಯಿಂದ ಮನೋಹರವಾಗಿಯೂ, ಷೋಡಶೋಪಚಾರಗಳನ್ನು
ಮೀರಿದ ರಾಜೋಪಚಾರಗಳಿಂದ ಪ್ರೀತಿಪುರಸ್ಸರವಾಗಿಯೂ ॥ ೭೧ ॥ ಸದಾ ಶಿವಲಿಂಗಶ್ರ
ದ್ಧೆಯೊಂದಕ್ಕೆ ಅಧೀನನಾಗಿರುವಿಕೆಯಿಂದ ಲಿಂಗಪೂಜೆಯನ್ನು ಭಕ್ತಿಯಿಂದ ಮಾಡಬೇ
ಕೆಂದಪೇಕ್ಷಿಸಿ, ಹೃದಯಕಮಲದಲ್ಲಿ ಕರ್ಣಿಕೆಯೊಳಗೆ ॥ ೭೨ ॥ ಧ್ಯಾನಿಸಲ್ಪಟ್ಟ ತನ್ನ
ಪ್ರಾಣಲಿಂಗವನ್ನೇ ಕರಡಿಗೆಯಿಂದ ತೆಗೆದುಕೊಂಡನು. ಆಗ ಹೊಳೆಯುತ್ತಿರುವ ಆ
ಲಿಂಗವು ತನಗೆ ಅಭಿನ್ನವಾಗಿಯೂ, ಉತ್ತಮೋತ್ತಮವಾಗಿಯೂ, ಕಣ್ಣು ಮನಗ
ಳೆಂಬ ಪೀಠದಲ್ಲಿ ವಾಸಮಾಡುವುದಾಗಿಯೂ ಚೆನ್ನಾಗಿ ಪ್ರಕಾಶಿಸಿತು. ಆ ಲಿಂಗಮೂ
ರ್ತಿಯ ಕಣ್ಣಿಗಿಂಪಾದ ದಿವ್ಯತೇಜಸ್ಸಂಪತ್ತಿಯೂ ॥ ೭೪ ॥ ಸ್ನೇಹಭಾವವೂ, ಲಾವ

ಣ್ಯೈವಮುಗ್ಧತ್ವೈರಮ್ಯಲಕ್ಷ್ಣೆ|ರೀತೌನೀತೌವಿಶ್ರಾಂತೌಚಖ್ಯಾತೌಕಾಂತೌಚಸದ್ಗು
ಣೆ||ಮೂರ್ತಿಸ್ಫೂರ್ತ್ಯಾದಿಕೇತಸ್ಯದೃಷ್ಟ್ಯಾಂಶ್ರೀಪಂಡಿತೇಶಿತುಃ|ಚತುರಂಚಿತ್ರಿ
ತಇವವ್ಯುತ್ಕೀರ್ಣಇವಯತ್ನತಃ ॥ ೭೬ ॥ ಉದ್ವಾಂತಿತಮಧೂಚ್ಛಿಷ್ಟಪ್ರತಿ
ಬಿಂಬೆಮೃದಾಕೃತೆ । ಸಮ್ಯಕ್ಸೃತಇವೋದ್ಗಾಢಂನ್ಯಾಸೀಕೃತಇವಾ
ರ್ಚಯಾ॥ ೭೭ ॥ ಸಮಂತತಸ್ಸಮಾಪೂರ್ಯಸ್ನಿಗ್ಧತೇತತ್ಪೂರ್ವಮೇವಹಿ । ಲಿಂ
ಗೆಶ್ರೀಪಂಡಿತೇಂದ್ರೋಪಿಸಂಕ್ರಾಂತಾಸುಸ್ವದೃಷ್ಟಿಷು॥ ೭೮ ॥ ಲಿಂಗಂದದರ್ಶಾ
ನಿಮಿಷಂಕೇಶಿರಾಜೋಯಥಾಪುರಾ । ಅನಿಮೇಷಂತಥಾಸಮ್ಯಕ್ಪಶ್ಯತಿಶ್ರೀಮ
ಹೇಶ್ವರಂ ॥೭೯॥ ಯಥಾಕರುಳಕೇತಯ್ಯೋನೇತ್ರಯೋರಾಂತ್ರಯೋಸ್ಸತೋಃ|
ಅಪಶ್ಯಚ್ಛ್ರೀಮಹಾದೇವಂತಥಾಪಶ್ಯತಿಸಾದರಂ ॥ ೮೦ ॥ ಯಥಾಽಪಶ್ಯಚ್ಚ
ಗಜ್ಜೇಶಮಸಣಯ್ಯೋಮಹೇಶ್ವರಂ । ತಥಾಪಶ್ಯತಿಸರ್ವೇಶಂಪರಮಪ್ರೀತಿ
ಸಂಯುತಃ ॥ ೮೧ ॥ ಅಸಂಚಾಲ್ಯಾಹಿತಾಂದೃಷ್ಟಿಂಪ್ರಭುವತ್ಪಶ್ಯತೇಶ್ವರಂ ।
ವೀಕ್ಷತೇಂಗಗುಣಾತೀತೋಭೃಂಗೀಶಇವಶಂಕರಂ ॥ ೮೨ ॥ ನಂದೀವಚ್ಚಾವಿ

---

ಣ್ಯವೂ, ಸೌಂದರ್ಯವೂ, ಮನೋಹರತ್ವವೂ, ರೀತಿಯೂ, ನೆಲೆಯೂ, ವಿಶ್ರಾಂತಿಯೂ,
ಪ್ರಸಿದ್ಧಿಯೂ, ಕಾಂತಿಯೂ, ಸದ್ಗುಣವೂ, ॥ ೭೫ ॥ ಮೂರ್ತಿಸ್ಫುರಣವೂ ಸಹ ಶ್ರೀ
ಪಂಡಿತಾರಾಧ್ಯನ ನೋಟದಲ್ಲಿ ಮನೋಹರವಾಗಿ ಚಿತ್ರಿಸಲ್ಪಟ್ಟಂತೆಯೂ, ಪ್ರಯತ್ನ
ಪೂರ್ವಕವಾಗಿ ಹರಡಿದಂತೆಯೂ ॥ ೭೬ ॥ ಜೇನುಮೇಣ ಮತ್ತು ಮಣ್ಣಿನಿಂದ ಕರು
ಗಟ್ಟಿ ಎರಕವೆರೆದಂತೆಯೂ, ಕಡೆದು ಇಟ್ಟಂತೆಯೂ, ಎಲ್ಲಕಡೆಯೂ ತುಂಬಿಕೊಂಡಿ
ರಲು, ಅದಕ್ಕೆ ಮುಂಚೆಯೇ ಶ್ರೀಪಂಡಿತಾರಾಧ್ಯನು ಕೂಡ ಲಿಂಗದಲ್ಲಿ ತನ್ನ ದೃಷ್ಟಿ
ಗಳು ತಗಲಿಕೊಂಡಿರಲಾಗಿ ॥ ೭೮ ॥ ಪೂರ್ವದಲ್ಲಿ ಕೇಶಿರಾಜನು ಎವೆಯಿಕ್ಕದೆ ಶಿವಲಿಂ
ಗವನ್ನು ಹೇಗೆ ನೋಡಿದನೋ ಹಾಗೆ ರಪ್ಪೆ ಮುಚ್ಚದೆ ಚೆನ್ನಾಗಿ ಲಿಂಗನಿರೀಕ್ಷಣೆಯನ್ನು
ಮಾಡುತ್ತಾನೆ ॥ ೭೯ ॥ ಕರುಳ ಕೇತಯ್ಯನು ಕಣ್ಣುಗಳ ಒಳಗರುಳು ಉಬ್ಬಿ ಬರುವ
ಹಾಗೆ ಹೇಗೆ ನೋಡಿದನೋ ಹಾಗೆ ಪಂಡಿತಾರಾಧ್ಯನು ಶ್ರೀ ಮಹಾದೇವನನ್ನು ಪ್ರೀತಿ
ಪೂರ್ವಕವಾಗಿ ನೋಡುತ್ತಾನೆ ॥ ೮೦ ॥ ಗಜೇಶಮಸಣಯ್ಯನು ಶಿವನನ್ನು ಹೇಗೆ ನೋಡಿ
ದನೋ ಹಾಗೆ ಈತನು ಅತ್ಯಂತಪ್ರೀತಿಯುಕ್ತನಾಗಿ ಶಿವನನ್ನು ನೋಡುತ್ತಾನೆ ॥ ೮೧ ॥
ಅಲ್ಲಮಪ್ರಭುವು ಇಟ್ಟ ದೃಷ್ಟಿಯನ್ನು ಅಲ್ಲಾಡಿಸದೆ ಶಿವನನ್ನು ನೋಡಿದಂತೆ ನೋಡು
ತ್ತಾನೆ. ದೇಹಗುಣಗಳಳಿದ ಭೃಂಗೀಶ್ವರನು ಶಿವನನ್ನು ನೋಡಿದಂತೆ ನೋಡುತ್ತಾನೆ.
ಎಂದೂ ಬಿಟ್ಟಗಲದ ವಿಲಾಸದಿಂದ ನಂದೀಶ್ವರನು ಶಿವನನ್ನು ನೋಡುವಂತೆ ಲಿಂಗವನ್ನು

ಸಾಭಾವಲೀಲಯಾವೀಕ್ಷತೇಹರಂ । ಲಿಂಗೇಸ್ವದೃಷ್ಟಿಂಬಧ್ನಾತಿಪರಿಶ್ರಯತಿ
ಲಿಂಪತಿ ॥ ೯೩ ॥ ಪ್ರಸಾರಯತಿಸಂಧತ್ತೇರುಂಧೇವಿಕ್ಷಿಪತಿಸ್ಫುಟಂ । ಸನ್ನ
ಹ್ಯತೇಪೂರಯತಿಪ್ರಾಪಯತ್ಯಂತಿಕಂಪುನಃ ॥ ೯೪ ॥ ತಥಾಸಮಾರೋಹಯ
ತಿಸಮ್ಮಿಶ್ರಯತಿವಿಧ್ಯತಿ । ಸಮೀಕರೋತ್ಯಾವೃಣೋತಿಕ್ಷಿಪತ್ಯುಂಭತಿಸಾ
ದರಂ ॥ ೯೫ ॥ ಲಗ್ನಾಭೂತ್ವಾಶಿವೇಶಿಷ್ಯಕರ್ಣಯೋರ್ಮೂಲಮಂತ್ರವತ್ ।
ವೇದಾಂತಾಶ್ಯಂಭುಚರಣಮಿವಧೃತ್ವಾಮಹೇಶ್ವರಂ ॥ ೯೬ ॥ ಸಂವೇಷ್ಟ್ಯಶಂ
ಕರತನುಂಕಲ್ಪವೃಕ್ಷಂಲತಾಇವ । ನಿರ್ಭಿದ್ಯಶಂಭುಂಧಾನುಷ್ಕಶರೋಲಕ್ಷ್ಯ
ಮಿವಸ್ವಯಂ ॥ ೯೭ ॥ ಆಲಿಂಗ್ಯದೇವದೇವಂತಂತನುಜಾಃಪಿತರಂಯಥಾ ।
ಆವೃತ್ಯೈಶಂಮತ್ತಗಜಂಬದ್ಧರಜ್ಜುಚಯಾಇವ ॥ ೯೮ ॥ ಆಚ್ಛಾದ್ಯೈಶಂ
ಪರಿಮಳದ್ರವ್ಯಾಣೀವಸದಂಬರಂ । ಮಹಾನದ್ಯಇವಾಂಭೋಧಿಂಸಮಾವಿ
ಶ್ಯಮಹೇಶ್ವರಂ ॥ ೯೯ ॥ ಪಾನೀಯಮಿವಚಕ್ಷೀರೇಮಿಳಿತ್ವಾಶ್ರೀಮಹೇಶ್ವರೇ ।
ವಿಲೀಯಗಿರಿಜಾನಾಥೇತಪ್ತಲೋಹೇಪಯೋಯಥಾ ॥ ೧೦೦ ॥ ದೃಷ್ಟಯಃಪಂಡಿ

---

ನೋಡುತ್ತಾನೆ. ಮತ್ತೂ ಲಿಂಗದಲ್ಲಿ ತನ್ನ ನೋಟವನ್ನು ಕಟ್ಟುತ್ತಾನೆ. ಆಶ್ರಯಿ
ಸುತ್ತಾನೆ. ಲೇಪಗೊಳಿಸುತ್ತಾನೆ ॥ ೯೩ ॥ ಹರಡುತ್ತಾನೆ. ಸಮಗೊಳಿಸುತ್ತಾನೆ. ತಡೆ
ಯಿಸುತ್ತಾನೆ ಚೆನ್ನಾಗಿ ಮುಂದೆ ಚಲಿಯಿಸುತ್ತಾನೆ. ಸಿದ್ಧಗೊಳಿಸುತ್ತಾನೆ. ತುಂಬು
ತ್ತಾನೆ, ಅತ್ಯಂತ ಸಮೀಪವನ್ನು ಹೊಂದಿಸುತ್ತಾನೆ ॥ ೯೪ ॥ ಹಾಗೆಯೇ ಹತ್ತಿಸುತ್ತಾನೆ.
ಜತೆಗೂಡಿಸುತ್ತಾನೆ. ಅಂಟಿಸುತ್ತಾನೆ. ನೂಕುತ್ತಾನೆ. ಚೆನ್ನಾಗಿ ಮಾಡುತ್ತಾನೆ. ಆವರಿ
ಸುತ್ತಾನೆ. ಪ್ರೇರಿಸುತ್ತಾನೆ. ಪ್ರೀತಿಪುರಸ್ಸರವಾಗಿ ತುಂಬುತ್ತಾನೆ ॥ ೯೫ ॥ ಮತ್ತೂ. ಪಂ
ಡಿತಾರಾಧ್ಯನ ನೋಟಗಳು —ಶಿಷ್ಯನ ಕಿವಿಯಲ್ಲಿ ಮೂಲಮಂತ್ರವು ಅಂಟಿಕೊಳ್ಳುವಂತೆ
ಶಿವನಲ್ಲಿ ಅಂಟಿಕೊಂಡು, ಉಪನಿಷತ್ತುಗಳು ಶಿವನ ಪಾದವನ್ನು ಧರಿಸಿರುವಂತೆ ಮಹೇ
ಶ್ವರನನ್ನು ಹೊತ್ತು ॥ ೯೬ ॥ ಕಲ್ಪವೃಕ್ಷವನ್ನು ಬಳ್ಳಿಗಳು ಹಬ್ಬಿಕೊಳ್ಳುವಂತೆ ಶಿವನ
ದೇಹಕ್ಕೆ ಹಬ್ಬಿ, ಬಿಲ್ಲುಗಾರನ ಬಾಣವು ಗುರಿಯನ್ನು ಭೇದಿಸುವಂತೆ ಶಿವನನ್ನು ಭೇಧಿ
ಸಿ ॥ ೯೭ ॥ ಮಕ್ಕಳು ತಂದೆಯನ್ನು ಹೇಗೆ ತಬ್ಬಿಕೊಳ್ಳುವುವೋ ಹಾಗೆ ಮಹಾದೇವ
ನನ್ನು ಆಲಿಂಗಿಸಿ, ಕಟ್ಟಿದ ಹಗ್ಗಗಳು ಮದಿಸಿದಾನೆಯನ್ನು ತಡೆಯುವಂತೆ ಶಿವನನ್ನು
ತಡೆದು ॥ ೯೮ ॥ ಸುಗಂಧವಸ್ತುಗಳು ಬಿಳ್ಳಿಯ ಬಟ್ಟೆಯನ್ನು ಹೊಂದಿಕೊಳ್ಳುವಂತೆ
ಶಿವನನ್ನು ಹೊದ್ದಿ, ಮಹಾನದಿಗಳು ಸಮುದ್ರವನ್ನು ಪ್ರವೇಶಿಸುವಂತೆ ಶಿವನನ್ನು
ಹೊಕ್ಕು ॥ ೯೯ ॥ ನೀರು ಹಾಲಿನಲ್ಲಿ ಬೆರೆಯುವಂತೆ ಶಂಕರನಲ್ಲಿ ಬೆರೆದು, ಜಲವು ಕಾದ

ತೇಂದ್ರಸ್ಯತದಾನೀಂಸಂಸ್ಥಿತಾಃಪುನಃ । ಆಗತ್ಯೈತಸ್ತತಸ್ಸ್ವೈರಮುಭೂತ್ವಾ ಪರಿಚಂಚಲಾಃ ॥೯೧॥ ಅಪರಿತ್ಯಜ್ಯಸಂಯೋಗಂಹಿತ್ವಾತರಳತಾಮಪಿ । ಅನು ಪ್ಲುತ್ಯಸವಿಸಾಸಸ್ಥಮಸ್ಪೃಷ್ಟಾನ್ಯಪಸಾರ್ಯಚ ॥ ೯೨ ॥ ಅನುಚ್ಚಾಟ್ಯಾನವ ಸ್ಕಂದ್ಯಹಿತ್ವಾಜಾಡ್ಯಂನಿರಂತರಂ । ಅನುದ್ವೀಕ್ಷ್ಯಾರ್ಧನಯುನಂನಿಮೇಷಮ ವಿಧಾಯಚ ॥ ೯೩ ॥ ತತ್ಪ್ರಾಣಲಿಂಗಮೇವಾಸನ್ನಮಾಶ್ಲಿಷ್ಟಾಃ ಪರಸ್ಪರಂ। ನಿಮಗ್ನದೃಷ್ಟಿಷುಪುರೋಽಭವತ್ಸುಸ್ನಾನವಾರಿಷು ॥ ೯೪ ॥ ಭವತ್ಸುಚಂದನಾ ಘೋಷುಪರಿಲಿಪ್ತಾಸುದೃಷ್ಟಿಷು । ಲಸತ್ಪ್ರಸೂನಜಾಲೇಷುಸಮ್ಯಗ್ಭಿಹಿತದೃ ಷ್ಟಿಷು ॥ ೯೫ ॥ ಮಹತ್ಸುಧೂಪಧೂಮೇಷುಪರಿಚಟ್ಟನ್ನಾಸುದೃಷ್ಟಿಷು । ನೀ ರಾಜನಾಸುಪರಿತಸ್ಸವಿಸಾಸಸ್ಥಾಸುದೃಷ್ಟಿಷು ॥ ೯೬ ॥ ಮಹಾನ್ನೈವೇದ್ಯಜಾ ಲೇಷುಮಿಶ್ರೀಭೂತಾಸುದೃಷ್ಟಿಷು । ಕರ್ಪೂರವೀಟಿಕಾಜಾಲೇಷ್ವನುರಕ್ತಾ ಸುದೃಷ್ಟಿಷು ॥ ೯೭ ॥ ಪ್ರಸಿದ್ಧಪುಷ್ಪಾಂಜಲಿಷುಸಮುಲ್ಲಾಸಿತದೃಷ್ಟಿಷು ಏವಂ ಮಹೇಶ್ವರಸ್ಯಾರ್ಚಾವೀಕ್ಷಣೈರೇವಸಾಽಭವತ್ ॥ ೯೮ ॥ ಪ್ರಥಮಂದೃಷ್ಟಿ ಮಾತ್ರೇಣಪ್ರಾಣಲಿಂಗಸ್ಯತತ್ಕ್ಷಣೆ । ಶ್ರೀಪಂಡಿತಾರಾಧ್ಯಗುರುಃಪ್ರಮೋದಪ

---

ಕಬ್ಬಿನದ ಸೋಲೆ ಬಿದ್ದು ಅಡಗಿಹೋಗುವಹಾಗೆ ಪಾರ್ವತೀಪತಿಯಲ್ಲಿ ಅಡಗಿ ॥ ೯೦ ॥ ಇದ್ದುವು. ಮತ್ತೂ ಇತ್ತತ್ತ ಅಲ್ಲಾಡದೆ, ಇಚ್ಛೆಬಂದಂತೆ ಚಲಿಸಾಡದೆ ॥ ೯೧ ॥ ಕೂಡು ವಿಕೆಯನ್ನು ಬಿಡದೆ, ಚಾಪಲ್ಯವನ್ನು ಬಿಟ್ಟು, ಕುಪ್ಪಳಿಸದೆ, ಬಳಿಯಲ್ಲಿರುವ ವಸ್ತು ವನ್ನೂ ಮುಟ್ಟದೆ, ಹೊರಕ್ಕೆ ಹೋಗದೆ ॥ ೯೨ ॥ ಮಿಡುಕದೆ, ನಡೆಗೊಳ್ಳದೆ, ಮಾವಾ ಗಲೂ ಜಡತ್ವವನ್ನು ಬಿಟ್ಟು, ಅರೆಗಣ್ಣಿನಲ್ಲಿ ನೋಡದೆ, ರಪ್ಪೆ ಮುಚ್ಚದೆ ॥ ೯೩ ॥ ಆ ಪ್ರಾಣಲಿಂಗವನ್ನೇ ಬಂದಕ್ಕೊಂದು ಆಲಿಂಗಿಸಿಕೊಂಡು ಇರುತ್ತಿದ್ದುವು. ಮತ್ತೂ ಮೊದಲು ಶಿವನಲ್ಲಿ ಮುಳುಗಿದ ಪಂಡಿತಾರಾಧ್ಯನ ದೃಷ್ಟಿಗಳು ಜಳಕದನೀರಾಗಲು ॥೯೪॥ ಎಲ್ಲ ಕಡೆಯೂ ಲೇಪಿಸಿದ ದೃಷ್ಟಿಗಳು ಲೇಪನಗಂಧವಾಗಲು, ಚೆನ್ನಾಗಿಟ್ಟ ನೋಟ ಗಳು ಹೂವಿನ ಗುಂಪುಗಲು ॥ ೯೫ ॥ ಆವರಿಸಿದ ನೋಟಗಳು ಮಹಾಧೂಪದ ಹೊಗೆ ಯಾಗಲು, ಸುತ್ತಲೂ ಸವಿಸಾಸಸ್ಥವಾದ ದೃಷ್ಟಿಗಳು ಆರತಿಗಳಾಗಲು ॥ ೯೬ ॥ ಬೆರೆ ರೆದ ನೋಟಗಳು ಮಹಾನ್ನೈವೇದ್ಯ ವಸ್ತುಗಳಾಗಲು, ಅನುರಾಗದಿಂದ ಕೂಡಿದ ನೋಟ ಗಳು ಸಕರ್ಪೂರತಾಂಬೂಲವಾಗಲು ॥ ೯೭ ॥ ಅಗಲವಾಗಿ ಕಣ್ಣಿಟ್ಟು ನೋಡಿದ ನೋಟ ಗಳು ಪುಷ್ಪಾಂಜಲಿಗಳಾಗಲು, ಈ ಪ್ರಕಾರವಾಗಿ ನೋಟಗಳಿಂದಲೇ ಶಿವನಪೂಜೆಯು ಆಯಿತು ॥ ೯೮ ॥ ಪಂಡಿತಾರಾಧ್ಯನು ಮೊದಲು ಪ್ರಾಣಲಿಂಗವನ್ನು ನೋಡಿದ ಮಾತ್ರ

ರಿಪೂರಿತಃ ‖ ೯೯ ‖ ಸ್ಪೃಷ್ಟ್ವಾಸ್ಪೃಷ್ಟ್ವಾಶಿವಂಯದ್ವದ್ದೃಷ್ಟ್ವಾನಿಧಿಮಕಿಂಚನಃ । ಯಥಾಸಮಾಕರ್ಷಣಾಯಕರಿಣೀಂಗಂಧಸಿಂಧುರಃ ‖ ೧೦೦ ‖ ಲೀಲಾಂಬುಜಂಯಥಾಗೌರೀಯಥಾಸಂಬೀವಧೂಕುಚಂ । ಬಾಹ್ವೋರ್ನಿಮಗ್ನಯೋಸ್ಸಮ್ಯಗ್ಲಿಂಗಸಂಸ್ಪರ್ಶನೋತ್ಸವಃ ‖ ೧೦೧ ‖ ಜಾತಾಂಗವಿಕ್ರಿಯೋಭವ್ಯರೀತ್ಯಾಗದ್ಗದಕಂಧರಃ । ಹರಲೀಲಾಪ್ರಬಂಧೇನಹರಲೀಲಾಪ್ರಶಂಸನಂ‖ ಕುರ್ವನ್ನಿತಾಂತಸಂಪ್ರೀತ್ಯಾಹರಲೀಲಾಪರಾಯಣಃ । ಮಹೀಮಹಿತವಿಖ್ಯಾತಮಹಿಮಸ್ತವಪಾಠತಃ ‖ ೧೦೨ ‖ ಮಹಿಮಾಕರಮಾಹಾತ್ಮ್ಯಂಮಹೀಯಃಪರಿಕೀರ್ತಯನ್ ।ಮಲ್ಹಣಸ್ತೋತ್ರವರ್ಯೇಣವರ್ಣಯನ್ಮಲಹಾರಿಣಾ ‖೧೦೩‖ ಮಲ್ಹಣಪ್ರಿಯಮೀಶಾನಂಮಲತ್ರಿತಯಹಾರಿಣಂ। ಶ್ರೀಮಯಾನಾಮಯಸ್ತುತ್ಯಾಶಿನಾಮಯಂಕರುಣಾಮಯಂ ‖ ೧೦೪ ‖ ಪ್ರೀತ್ಯಾಪ್ರಶಂಸನ್ಬಹುಧಾಪರಮಾನಂದನಿರ್ಭರಂ । ಹಲಾಯುಧೇನಸ್ತೋತ್ರೇಣಶೂಲಾಯುಧಮುಮಾಪತಿಂ ‖ ೧೦೫ ‖ ಹಲಾಯುಧಪ್ರಿಯಂಶಂಸನ್ಸವಿಲಾಸಂಮಹೇಶ್ವರಂ। ಪಾಂಚ

---

ದಿಂದಲೇ ಕೂಡಲೇ ಆನಂದಪರಿಪೂರ್ಣನಾದನು ‖ ೯೯ ‖ ದರಿದ್ರನು ನಿಕ್ಷೇಪವನ್ನು ನೋಡಿ ಮುಟ್ಟಿಮುಟ್ಟಿ ನೋಡುವಂತೆ ಪ್ರಾಣಲಿಂಗವನ್ನು ಮುಟ್ಟಿ ಮುಟ್ಟಿ, ಮದವೇರಿದಾನೆಯು ಹೆಣ್ಣಾನೆಯನ್ನು ಸೆಳೆಯುವುದಕ್ಕೆ ಯತ್ನಿಸುವಂತೆಯೂ ‖೧೦೦‖ ಪಾರ್ವತಿಯು ವಿಲಾಸಾರ್ಥವಾದ ತಾವರೆ ಹೂವನ್ನು ಹೇಗೋ, ನಂಬಿದುಣ್ಣನು ಸ್ತ್ರೀಯ ಸ್ತನವನ್ನು ಹೇಗೋ, ಹಾಗೆ ತನ್ನ ತೋಳುಗಳು ಪ್ರಾಣಲಿಂಗವನ್ನು ಮುಟ್ಟುವ ಉತ್ಸವದಲ್ಲಿ ಮಗ್ನಗಳಾಗಿರಲು ‖ ೧೦೧ ‖ ದೇಹದಲ್ಲಿ ಬೆವರು ನಡುಕ ರೋಮಾಂಚ ಮೊದಲಾದ ಕ್ರಿಯೆಗಳುಳ್ಳವನಾಗಿ, ಗದ್ಗದ ಕಂಠವುಳ್ಳವನಾಗಿ, ಶಿವಲೀಲಾಗ್ರಂಥದಿಂದ ಶಿವನ ಲೀಲೆಗಳನ್ನು ಹೊಗಳುವವನಾಗಿ, ಅತ್ಯಂತವಾದ ಪ್ರೀತಿಯಿಂದ ಶಿವಲೀಲೆಗಳಲ್ಲಾಸಕ್ತನಾಗಿ, ಪ್ರಸಿದ್ಧವಾದ ಮಹಿಮ್ನಸ್ತೋತ್ರವನ್ನು ಹೇಳುವುದರಿಂದ ಮಾಹಾತ್ಮ್ಯಾಶ್ರಯನಾದ ಶಿವನ ಮಹಿಮೆಯನ್ನು ಅಧಿಕವಾಗಿ ಹೊಗಳುವವನಾಗಿ, ದೋಷನಿವಾರಕವಾದ ಮಲ್ಹಣಪ್ರಿಯನೂ ಮಲತ್ರಯವಿನಾಶಕನೂ ಆದ ಶಿವನನ್ನು ವರ್ಣಿಸುವವನಾಗಿ, ಸಂಪನ್ಮಯವಾದ ಅನಾಮಯಸ್ತೋತ್ರದಿಂದ ಭವರೋಗರಹಿತನೂ ದಯಾರೂಪನೂ ಆದ ಶಿವನನ್ನು ಅತ್ಯಾನಂದಪೂರಿತನಾಗಿ ಬಹು ವಿಧದಿಂದ ಹೊಗಳುವವನಾಗಿ, ಹಲಾಯುಧಸ್ತೋತ್ರದಿಂದ ಬಲರಾಮಪ್ರಿಯನೂ ಶೂಲಧಾರಿಯೂ ಆದ ಶಿವನನ್ನು ಲೀಲೆಯಿಂದ ಕೂಡಿ ಹೊಗಳುವವನಾಗಿ, ಪಂಚಭೂತಸಂಬಂಧವನ್ನೂ ಪಂಚೇಂದ್ರಿಯಗಳ ಹವ್ಯಾಸವನ್ನೂ ಬಿಟ್ಟಿರುವ ಪಂಚಾಕ್ಷರೀಮಂತ್ರದ ಪ್ರೀತಿಗೆ ಆಶ್ರಯನಾದ ಪರಶಿವನನ್ನು

ಭ್ರಾತಿಕಪಂಚಾಕ್ಷಪ್ರಪಂಚಪರಿವರ್ಜಿತಂ ‖ ೧೦೭ ‖ ಪಂಚಾಕ್ಷರೀಪ್ರೀತಿ ಭಾಜಂಪಂಚಗದ್ಯೈರಭಿಷ್ಟುವನ್ । ಕೀರ್ತಯನ್ನನ್ನುತಶಿವತತ್ವಸಾರಪ್ರಬಂಧತಃ ‖ ೧೦೮ ‖ ರುದ್ರಂಪರಿಷ್ಟುವನ್ರುದ್ರಮಹಿಮಾಖ್ಯಪ್ರಬಂಧತಃ । ಸಂಸಾರಮಾಯಾಸ್ತವೇನಸ್ತುವನ್ಸಂಸಾರದೂರಗಂ ‖ ೧೦೯ ‖ ಸ್ತುವಂಛಂಕರಗೀತಾಖ್ಯಪದ್ಯೈರಾನತಶಂಕರಂ । ಆನಂದಗೀತ್ಯೈರತ್ಯರ್ಥಂಸ್ತುವನ್ನಾನಂದರೂಪಿಣಂ ‖ ೧೧೦ ‖ ಗಾಯಂಛ್ರೀಬಸವೇಶಸ್ಯಗೀತಾನ್ಯಧಿಕಭಕ್ತಿತಃ । ಪ್ರಾಕ್ತನೇದಾನೀಂತನೇಶಭಕ್ತಗೀತಾನಿಚಾದರಾತ್ ‖ ೧೧೧ ‖ ಪರಮಾತ್ಮಪ್ತಜಿಹ್ವಯಾಂಜಗೌತುಷ್ಟಾವಚೇಶ್ವರಂ। ತತಃಪೂರ್ವಂಶಿವಸಾನ್ನಿಧ್ಯಾದ್ವಿಷಯಾಣಾಂಗಣೈಸ್ಸಹ ‖ ೧೧೨ ‖ ಲವಣಂಸಲಿಲೇಯದ್ವದ್ಯಥಾಗ್ನೌಜತುಪುತ್ರಿಕಾ । ವರ್ಷೋಪಲಾಯಥಾವಾರ್ಧೌನವನೀತಂಯಥಾಽನಲೇ ‖ ೧೧೩ ‖ ವಿಲೀನಾಶಂಕರೇತಸ್ಯಗುಣಾತೀತಾಭವತ್ತನುಃ । ತದಾನಂದಾಶ್ರುಸಂದೋಹೇಗತೆಮಜ್ಜನವಾರಿತಾಂ ‖ ೧೧೪ ‖ ಚಿತ್ತಾಗ್ರ್ಯನನ್ಯವಸ್ತ್ರತ್ವಂ ಗಂಧತ್ವಂಸತ್ಕ್ರಿಯಾರತೌ । ಪುಳಕೌಘೇಪ್ರಸೂನತ್ವಮಾತ್ಮನೋವಾಸನಾಚಯೇ ‖ ೧೧೫ ‖ ಧೂಪ

---

ಪಂಚಪ್ರಕಾರವಾದ ಗದ್ಯಗಳಿಂದ ಹೊಗಳುವವನಾಗಿ, ಶಿವತತ್ವಸಾರಗ್ರಂಥದಿಂದ ಕೀರ್ತನಮಾಡುವವನಾಗಿ ‖ ೧೦೮ ‖ ರುದ್ರಮಹಿಮಾ ಎಂಬ ಗ್ರಂಥದಿಂದ ರುದ್ರಸ್ತೋತ್ರವನ್ನು ಮಾಡುವವನಾಗಿ, ಸಂಸಾರಮಾಯಾಸ್ತೋತ್ರದಿಂದ ಸಂಸಾರದೂರನಾದ ಶಿವನನ್ನು ಸ್ತೋತ್ರಮಾಡುವವನಾಗಿ, ಶಿವಗೀತಾಪದ್ಯಗಳಿಂದ ಆನತ ಸುಖಂಕರನಾದ ಶಿವನನ್ನು ಹೊಗಳುವವನಾಗಿ, ಆನಂದಗೀತಗಳಿಂದ ಆನಂದಸ್ವರೂಪವನ್ನು ನುತಿಸುವವನಾಗಿ ‖ ಬಸವೇಶ್ವರನ ಗೀತಗಳನ್ನು ಅತ್ಯಂತ ಭಕ್ತಿಯಿಂದ ಹಾಡಿ, ಪೂರ್ವದ ಮತ್ತು ಈಗಿನ ಭಕ್ತರು ಮಾಡಿದ ಗೀತಗಳನ್ನೂ ಕೂಡ ಪ್ರೀತಿಯಿಂದ ನಾಲಗೆಯು ತೃಪ್ತಿಗೊಳ್ಳುವವರೆಗೂ ಗಾನ ಮಾಡಿದನು. ಈಶ್ವರನಿಗೆ ಸಂತೋಷವನ್ನೂ ಪಡಿಸಿದನು ‖ ಅದಕ್ಕೆ ಮೊದಲೇ ಪಂಡಿತಾರಾಧ್ಯನ ನಿದ್ರಾಲಸ್ಯಾದಿಗುಣಗಳಿಂದ ಶರೀರವು ಸಕಲೇಂದ್ರಿಯಗಣಸಮೇತವಾಗಿ ಶಿವನ ಸಾನ್ನಿಧ್ಯದಿಂದ, ನೀರಿನಲ್ಲಿ ಉಪ್ಪು ಹೇಗೋ, ಬೆಂಕಿಯಲ್ಲಿ ಅರಗಿನ ಬೊಂಬೆಯು ಹೇಗೋ, ಸಮುದ್ರದಲ್ಲಿ ಆಲಿಕಲ್ಲು ಹೇಗೋ, ಬೆಂಕಿಯಲ್ಲಿ ಬೆಣ್ಣೆ ಹೇಗೋ, ‖ ೧೧೩ ‖ ಹಾಗೆ ಶಿವನಲ್ಲಿ ಕರಗಿಹೋಯಿತು. ಆಗ ಪಂಡಿತಾರಾಧ್ಯನ ಕಣ್ಣಿನಿಂದ ಸುರಿದ ಸಂತೋಷ ಬಾಷ್ಪವು ಜಳಕದ ನೀರಾಗಲು ‖ ೧೧೪ ‖ ಏಕಾಗ್ರಚಿತ್ತವು ಹೊಸಬಟ್ಟೆಯಾಗಲು, ಸದಾಚಾರಶಕ್ತಿಯು ಗಂಧವಾಗಲು, ರೋಮಾಂಚನವು ಹೂವಾಗಲು, ಆಧ್ಯಾತ್ಮ

ತ್ವಂದೀಪತಾಂಜ್ಞಾನೆಭೂತಿತಾಂತತ್ವಸಂಪದಿ | ನಿವೇದಿತಪ್ರಾಣಪದೆಸ್ವರ್ಪ
ಣೀಯಪದಾರ್ಥತಾಂ || ೧೧೬ || ಗತೇಂದ್ರಿಯಾನುರಾಗತ್ವೆತಾಂಬೂಲಪದತಾ
ಮಪಿ | ಪುಷ್ಪಾಂಜಲಿತ್ವಂವಾಗ್ಜಾಲೆತ್ವಿಯಮೇಕಾರ್ಚನಾಭವತ್ || ೧೧೭ ||
ಭೂಯೋಪಿಪಂಡಿತೇಂದ್ರಸ್ಯಮನಶ್ಶ್ರೀಮನ್ಮಹೇಶಿತುಃ | ಮಜ್ಜನೆಜಲಧಾ
ರಾಸೀತ್ಪೂಜಾವಾಂಕುಸುಮಾತ್ಮಕಂ || ೧೧೮ || ಆಲೇಪನೆಗಂಧರೂಪಂ
ಧೂಪೆಸದ್ವಾಸನಾಚಯಃ | ನೀರಾಜನಂದೀಪದಾನೆನ್ಯೆವೇದ್ಯಾವಸರೆರುಚಿಃ ||
ಪ್ರಧಾನವಾವಾಮತ್ಯ್ಕಾನಾಂಮನಸ್ತತ್ಪಂಡಿತೇಶಿತುಃ| ಲಗ್ನಂಭಕ್ತಿಕಲಾಯು
ಕ್ತಂವಿಲೀನಂಶ್ರೀಮಹೇಶ್ವರೆ || ೧೨೦ || ಬಾಹ್ಯಾಭ್ಯಂತರಪೂಜಾಸುಪ್ರಧಾನಂ
ಸ್ಯಾನ್ಮತಿರ್ಯತಃ | ದರ್ಶನಸ್ಪರ್ಶನಾಭ್ಯಾಂತಲ್ಲಕ್ಷಿತಂಲಿಂಗಪೂಜನಂ ||೧೨೧||
ಅಥಶ್ರೀಪಂಡಿತಾರಾಧ್ಯಃಪ್ರಮೋದಪರಿಪೂರಿತಃ | ಈಶಪ್ರಾಣೇಶಗಿರಿಶಮಹಾ
ದೇವಜಗತ್ಪತೆ || ೧೨೨ || ವಿಶ್ವತಶ್ಚಕ್ಷುರಿತ್ಯಾದಿಶ್ರುತಿವಾಕ್ಯಾನುಸಾರತಃ |
ಸ್ಪೃಷ್ಟ್ವಂಭವಂತಂದೇಹೀಶಬಹುಕೋಟೀದೃಶಾಂಮಮ ||೧೨೩|| ವಿಶ್ವತೋ

---

ತ್ಮಸುವಾಸನೆಯು ಧೂಪವಾಗಲು || ೧೧೫ || ಶಿವಜ್ಞಾನವು ದೀಪವಾಗಲು, ತತ್ತ್ವ
ಸಂಘತ್ತು ವಿಭೂತಿಯಾಗಲು, ಪ್ರಾಣಾರ್ಪಣವು ನೈವೇದ್ಯವಸ್ತುಗಳಾಗಲು ||೧೧೬||
ಇಂದ್ರಿಯಾನು ರಾಗರಾಹಿತ್ಯವೇ ತಾಂಬೂಲಸ್ಥಾನಾಪನ್ನವಾಗಲು, ಸ್ತುತಿವಚನ ಸಮೂ
ಹವು ಪುಷ್ಪಾಂಜಲಿಯಾಗಲು, ಇದೊಂದು ಪೂಜೆಯಾಯಿತು || ೧೧೭ || ಮತ್ತೂ
ಕೂಡ ಪಂಡಿತಾರಾಧ್ಯನ ಮನಸ್ಸು ಶ್ರೀಮತ್ಪರಮೇಶ್ವರನ ಜಳಕದ ಸಮಯದಲ್ಲಿ
ನೀರಾಯಿತು. ಪೂಜೆಯ ಕಾಲದಲ್ಲಿ ಹೂವಾಯಿತು || ೧೧೮ || ಲೇಪನ ಸಮ
ಯದಲ್ಲಿ ಗಂಧವಾಯಿತು. ಧೂಪಾರ್ಪಣಕಾಲದಲ್ಲಿ ವಾಸನಾದ್ರವ್ಯವಾಯಿತು. ದೀ
ಪಾರ್ಪಣೆಯ ಕಾಲದಲ್ಲಿ ಆರತಿಯಾಯಿತು. ನೈವೇದ್ಯ ಸಮರ್ಪಣೆಯ ಕಾಲದಲ್ಲಿ
ರುಚಿಯಾಯಿತು ||೧೧೯| ಮನಸ್ಸೇ ಮನುಷ್ಯನ ಬಂಧಮೋಕ್ಷಗಳಿಗೆ ಕಾರಣವೆಂಬುದ
ರಿಂದ, ಆ ಪಂಡಿತಾರಾಧ್ಯನ ಮನಸ್ಸು ಮೊದಲೇ ಭಕ್ತಿ ಕಲೆಯಿಂದ ಕೂಡಿ ಶ್ರೀಮತ್ಪರ
ಮೇಶ್ವರನಲ್ಲಿ ಸೇರಿ ಅಡಗಿಹೋಯಿತು ||೧೨೦|| ಹೊರ ಒಳಗಣ ಪೂಜೆಗಳಲ್ಲೆಲ್ಲ ಬುದ್ಧಿ
ಯು ಪ್ರಧಾನವಾಗಿರುವುದರಿಂದ, ದರ್ಶನ ಸ್ಪರ್ಶನಗಳಿಂದೆಲ್ಲ ಲಿಂಗಪೂಜೆಯು ಅಂತಹ
ಮತಿಯಿಂದ ಕೂಡಿದ್ದಿತು ||೧೨೧|| ಬಳಿಕ ಶ್ರೀಮತ್ಪಂಡಿತಾರಾಧ್ಯನು ಆನಂದಪೂರ್ಣನಾಗಿ
ಈಶ! ಪ್ರಾಣನಾಥ : ಗಿರಿಶ! ಮಹಾದೇವ! ಜಗತ್ಪತೆ ||೧೨೨|| ವಿಶ್ವತಶ್ಚಕ್ಷುಃ (ಎಲ್ಲ
ಕಡೆಯೂ ಕಣ್ಣುಗಳುಳ್ಳವನು) ಎಂಬ ವೇದವಚನವನ್ನನುಸರಿಸಿ ನಿನ್ನನ್ನು ನೋಡು

ಮುಖಇತ್ಯಸ್ಮಾತ್ಸ್ತೋತುಂಮುಖಸಹಸ್ರಕಂ | ಬಾಹೂನಸಂಖ್ಯಾನ್ಪೂಜಾ
ರ್ಥಂವಿಶ್ವತೋಬಾಹುರಿತ್ಯತಃ ‖ ೧೦೪ ‖ ಸ್ಮರ್ತುಂಮನಾಂಸ್ಯನಂತಾನಿದೇವಏಕ
ಇತಿಶ್ರುತೇಃ | ಗುರುಲಿಂಗಸದಾನಂದನೀಲಕಂಠತ್ರಿಲೋಚನ ‖೧೦೫‖ ಅಥ
ವಾಕುರುಸರ್ವಾಂಗಂತ್ವಾಂದ್ರಷ್ಟುಂಲೋಚನಾಯುತಂ | ಇತಿಸ್ತುವನ್ನಯನ
ಯೋರಾತೃಪ್ತಿಪ್ರವಿಲೋಕತೇ ‖ ೧೦೬ ‖ ಹರಸರ್ವಶರೀರಂಮೇಕರತಾಕುರ್ವಿ
ತಿಸಂಸ್ತುವನ್ | ಯಥಾಭಿಲಷಿತಂಶಂಭುಂಕರಾಭ್ಯಾಂಪೂಜಯತ್ಯಸೌ ‖೧೦೭‖
ಜಿಹ್ವಾಂವಿಧೇಹಿತ್ವಾಂಸ್ತೋತುಂಸ್ವಾಮಿನ್ಮದಖಿಲಾಂಗಕಂ | ಇತಿವರ್ಣಯ
ತೀಶಾನಂವಿಸ್ರಬ್ಧಮತಿವಿಶ್ರುತಂ ‖ ೧೦೮ ‖ ಸರ್ವಗಾತ್ರಂಶ್ರುತೀಃಶ್ರೋ
ತುಂತ್ವದ್ಗುಣಾನ್ಪಾರ್ವತೀಪತೇ | ಕುರುಷ್ವೇತಿಯಥಾಕಾಮಂಶೃಣೋತಿಶಿವ
ಸತ್ಕಥಾಃ ‖ ೧೦೯ ‖ ಅಶೇಷಕಾಯಂಸ್ವಾಂತಂಮೇಕುರ್ವಿತಿಸ್ಮರತೀಶ್ವರಂ |
ಏನಂಸಂಕೀರ್ತಯನ್ಪಶ್ಯನ್ಸಂಸ್ಪೃಶನ್ಹೃದಿಸಂಸ್ಮರನ್ ‖ ೧೧೦ ‖ ಆಕರ್ಣ

---

ವುದಕ್ಕಾಗಿ ನನಗೆ ಅನೇಕಕೋಟಿ ಕಣ್ಣುಗಳನ್ನು ಕೊಡು ‖೧೦೩‖ ಎಲ್ಲಕಡೆಯೂ ಮು
ಖವುಳ್ಳವನು ಎಂಬ ವೇದವಚನದಿಂದ, ನಿನ್ನನ್ನು ಸ್ತೋತ್ರಮಾಡುವುದಕ್ಕಾಗಿ ಸಹಸ್ರ
ಮುಖಗಳನ್ನು ಕೊಡು. ಎಲ್ಲಕಡೆಯೂ ತೋಳುಗಳುಳ್ಳವನು ಎಂಬ ಶ್ರುತಿವಚನವ
ನ್ನನುಸರಿಸಿ ನಿನ್ನ ಪೂಜೆಯನ್ನು ಮಾಡುವುದಕ್ಕೆ ಮಿತಿಯಿಲ್ಲದಷ್ಟು ತೋಳುಗಳನ್ನು
ನನಗೆ ಕೊಡು ‖೧೦೪‖ "ಜನಮನ್ಸ್ವೇವಏಕಃ" ಎಂಬ ಶ್ರುತಿವಚನಾನುಸಾರವಾಗಿ ನಿನ್ನ
ನ್ನು ಸ್ತೋತ್ರಮಾಡುವುದಕ್ಕೆ ನನಗೆ ಅನೇಕ ಮನಸ್ಸುಗಳನ್ನು ಕೊಡು, ಅಥವಾ
ಸದಾನಂದಮಯನಾದ ಎಲೈ ಸ್ವಾಮಿಯೆ! ನಿನ್ನನ್ನು ನೋಡುವುದಕ್ಕಾಗಿ ನನ್ನಶರೀರ
ವನ್ನೆಲ್ಲ ಹತ್ತುಸಾವಿರ ಕಣ್ಣುಗಳುಳ್ಳದಾಗುವಂತೆ ಮಾಡು ಎಂದು ಸ್ತುತಿಸಿ ಕಣ್ಣು
ತೃಪ್ತಿಗೊಳ್ಳುವವರೆಗೂ ನೋಡುತ್ತಾನೆ ‖೧೦೬‖ ಹರನೆ! ನನ್ನ ಶರೀರದಲ್ಲೆಲ್ಲ ಕೈಗಳ
ನ್ನುಂಟುಮಾಡು ಎಂದು ಸ್ತೋತ್ರಮಾಡಿ ಯಥೇಚ್ಛವಾಗಿ ಶಿವನನ್ನು ಕೈಗಳಿಂದ ಪೂಜಿ
ಸುತ್ತಾನೆ ‖೧೦೭‖ ಎಲೈ ಸ್ವಾಮಿಯೆ! ನಿನ್ನನ್ನು ಸ್ತುತಿಸುವುದಕ್ಕಾಗಿ ನನ್ನ ದೇಹದ
ಲ್ಲೆಲ್ಲ ನಾಲಿಗೆಯನ್ನುಂಟುಮಾಡು ಎಂದು ತನ್ನಿಂದ ವಿಶ್ವಾಸಿಸಲ್ಪಟ್ಟ ಪ್ರಸಿದ್ಧನಾದ ಪರ
ಶಿವನನ್ನು ವರ್ಣಿಸುತ್ತಾನೆ ‖೧೦೮‖ ಎಲೈ ಪಾರ್ವತೀಶ್ವರನೆ! ನಿನ್ನ ಗುಣಗಳನ್ನ ಕೇಳು
ವುದಕ್ಕಾಗಿ ನನ್ನ ದೇಹದಲ್ಲೆಲ್ಲ ಕಿವಿಗಳನ್ನುಂಟುಮಾಡು ಎಂದು ಹೇಳಿ ಶಿವಕಥೆಗಳನ್ನು
ಕೇಳುತ್ತಾನೆ ‖೧೦೯‖ ನಿನ್ನ ಸ್ಮರಣೆಮಾಡುವುದಕ್ಕಾಗಿ ನನ್ನ ದೇಹದಲ್ಲೆಲ್ಲ ಮನಸ್ಸ
ನ್ನುಂಟುಮಾಡು ಎಂದು ಸ್ಮರಿಸುತ್ತಾರೆ. ಹೀಗೆ ಶಿವನನ್ನು ಹೊಗಳುವವನೂ ನೋಡು

ಯಂಛಿವಕಥಾಶ್ಚಿನ್ಮಯಾನಂದಬುದ್ಧಿತಃ | ದರ್ಶಂದರ್ಶಂಶಿವಂಪಾಯಂಪಾಯಂ
ಶಿವಸುಖಾಮೃತಂ ‖ ೧೩೧ ‖ ಗ್ರಾಹಂಗ್ರಾಹಂಮಹೇಶಾನಂಸಂಪ್ರಹೃಷ್ಯನ್ಮ
ಹುರ್ಮುಹುಃ | ಹಿತ್ವಾತನುಗುಣಾನ್ಗಾಯನ್ನನುರಾಗಸಮೇಧಿತಃ ‖ ೧೩೨ ‖
ಪಶ್ಯನ್ಪಶ್ಯನ್ನತೋಭೂತ್ವಾಸತತ್ರಗಣನಾಯಕಾನ್ | ನಿಮಗ್ನಶ್ಶೈವಲೀಲಾಬ್ಧೌ
ಪ್ರವಿಶ್ಯಾಂತರುಮಾಪತೇಃ ‖ ೧೩೩ ‖ ಬಹಿರಭ್ಯಂತರಾಂಗೇಸ್ವಪ್ರಾಣಲಿಂಗಂ
ನಿಯೋಜ್ಯಸಃ | ಅತಿಷ್ಠದಥತಂವೀಕ್ಷ್ಯಶಶಂಸುರ್ಭಕ್ತಪುಂಗವಾಃ ‖೧೩೪‖
ಅಕ್ಷ್ಣಾಂಸಹಸ್ರಮಿಂದ್ರಸ್ಯಚಕ್ಷುರ್ಭ್ಯಾಂಸಮಮಸ್ಯಕಿಂ | ತುಲಾಮುಪೈತಿ
ಕಿಂದೋರ್ಭ್ಯಾಂರವೇಃಕರಸಹಸ್ರಕಂ ‖ ೧೩೫ ‖ ಜಿಹ್ವಾಸಹಸ್ರದ್ವಿತಯಂ
ಫಣೀಂದ್ರಸ್ಯಾಸ್ಯಜಿಹ್ವಯಾ | ಸಮಂಕಿಂಚತುರಾಸ್ಯಸ್ಯಶ್ರವಣಾನಾಂಕದಂ
ಬಕಂ ‖ ೧೩೬ ‖ ಏತಸ್ಯಕರ್ಣಯುಗಳಸಾದೃಶ್ಯಮುಪಯಾತಿಕಿಂ | ಸನಕಾ
ದಿಮಹಾಯೋಗಿವೃಂದಮಾನಸಸಂಹತಿಃ ‖ ೧೩೭ ‖ ಪಂಡಿತಾರಾಧ್ಯಮನಸಾ

---

ವವನೂ ಮುಟ್ಟುವವನೂ ಮನಸ್ಸಿನಲ್ಲಿ ಸ್ಮರಿಸುವವನೂ ಆಗಿ ‖೧೩೦‖ ಶಿವಕಥೆಗಳನ್ನು
ಕೇಳಿ ಚಿದಾನಂದ ಬುದ್ಧಿಯಿಂದ ಶಿವನನ್ನು ನೋಡಿನೋಡಿ, ಶಿವಸುಖಾಮೃತವನ್ನು ಕುಡಿ
ದು ಕುಡಿದು ‖೧೩೧‖ ಶಿವನನ್ನು ಹಿಡಿದು ಹಿಡಿದು, ಬಾರಿಬಾರಿಗೆ ಸಂತೋಷಿಸಿ, ದೇಹಗು
ಣವನ್ನು ಬಿಟ್ಟು, ಅನುರಾಗವೃದ್ಧಿಯಿಂದ ಗಾನಮಾಡಿ ‖೧೩೨‖ ಆ ಪ್ರಾಣಲಿಂಗದಲ್ಲೇ
ಸಕಲಗಣಾಧೀಶರನ್ನೂ ನೋಡಿನೋಡಿ ನಮಸ್ಕರಿಸಿದವನಾಗಿ, ಶಿವವಿಲಾಸವೆಂಬ ಸಮು
ದ್ರದಲ್ಲಿ ಮುಳುಗಿ, ಪರಶಿವನೊಳಗೆ ಹೊಕ್ಕು, ತನ್ನ ಒಳಹೊರಗಣ ದೇಹದಲ್ಲೆಲ್ಲ ತನ್ನ
ಪ್ರಾಣಲಿಂಗವನ್ನು ಸಂಯೋಗಿಸಿಕೊಂಡು, ಇರುತಿದ್ದನು. ಬಳಿಕ ಆ ಪಂಡಿತಾರಾಧ್ಯ
ನನ್ನು ಭಕ್ತಶ್ರೇಷ್ಠರು ನೋಡಿ ಹೊಗಳುವರಾದರು ‖ ೧೩೪ ‖ ಹೇಗೆಂದರೆ—ಇಂದ್ರನ
ಈ ಸಾವಿರಕಣ್ಣುಗಳು ಈ ಪಂಡಿತಾರಾಧ್ಯನ ಎರಡು ಕಣ್ಣುಗಳಿಗೆ ಸಮವೆ? ಸೂರ್ಯನ
ಸಹಸ್ರ ಕರಗಳು ಈ ಆರಾಧ್ಯನ ಎರಡು ಕೈಗಳ ಸಾಮ್ಯವನ್ನು ಹೊಂದು
ವುವೆ? ‖೧೩೫‖ ಆದಿಶೇಷನ ಎರಡುಸಾವಿರ ನಾಲಿಗೆಗಳು ಈ ಆರಾಧ್ಯವರ್ಯನ ಒಂದು
ನಾಲಿಗೆಗೆ ಸಮಾನಗಳಾಗುವುವೆ ? ಚತುರ್ಮುಖಬ್ರಹ್ಮನ ಕಿವಿಗಳ ಗುಂಪು ಈ ಆರಾ
ಧ್ಯನ ಎರಡು ಕಿವಿಗಳ ಸಾಮ್ಯವನ್ನು ಹೇಗೆ ಪಡೆಯುವುವು? ಈ ಆರಾಧ್ಯವರ್ಯನ
ಇಂದ್ರಿಯಗಳು ಶಿವನಿಗೆ ಪಾತ್ರಗಳಾಗಿರುವುದಿಲ್ಲವೆ ‖ ೧೩೬ ‖ ಮತ್ತೂ ಇವು ಶಿವನ
ಪಾತ್ರಗಳಾಗಿದ್ದರೂ ಅವನನ್ನಗಲಿದ ಆಶ್ರಯಗಳಾಗಿರುವುವು ಈ ತೋಳುಗಳೂ
ಅವಯುವಗಳೂ ಕೈಗಳೂ ಇಂದ್ರಿಯಗಳೂ ಕೂಡ ಹಾಗೆಯೇ ಶಿವಾಶ್ರಯಗಳೇ

ಕಥಂಸೌಮ್ಯ ಮುಪೈಷ್ಯತಿ | ಅಸ್ಯೇಂದ್ರಿಯಾಣಿ ರುದ್ರಸ್ಯ ಪಾತ್ರಾಣಿ ನಭವಂ
ತಿಕಿಂ ||೧೩೮|| ಭಾಜನಾನ್ಯಪಿವಾ ಶಂಭೋಃ ಸ್ಥಾನಾನ್ಯಪಿಚ ಬಾಹವಃ | ಅ
ಥವಾವಯವಾಃ ಸಾಕ್ಷಾತ್ ಹೃಷೀಕಾಣಿತಥಾನಕಿಂ ||೧೩೯|| ಕಿಂಚೇದಮಸ್ಯಾಪ್ರ
ಮತ್ತಮಿಂದ್ರಿಯಾಣಾಂಕದಂಬಕಂ | ಅಮಾಲಿನ್ಯಂ ಕರತಳಂ ಪ್ರಯತ್ನೇನಾ
ಕೃತಂತಪಃ ||೧೪೦|| ಸ್ವಜ್ಞಾನಯುಗ್ವಿಸ್ಮರಣಂ ಜ್ಞಾನಂ ಜ್ಞಾತೃತ್ವ ವರ್ಜಿ
ತಂ | ಅಜ್ಞಾತಾತಿಶಯಸ್ನೇಹ ಸ್ತೃಪ್ತಿರ್ನಿತ್ಯಮಭಂಗುರಾ ||೧೪೧|| ಅಸ್ವ
ಪ್ನನಿದ್ರಾ ವಿಹತತುರ್ಯಂ ವರ್ತನಮಕ್ರಿಯಂ | ಅಚ್ಛಿನ್ನಸಾಹಸಂ ಸವ್ಯ
ಜ್ಮೈತ್ರೀಹಾಸ್ಯಾದಿ ವರ್ಜಿತಾ ||೧೪೨|| ಸಮ್ಮಿಶ್ರಾನ್ನಿರ್ಗತಂ ಪ್ರೇಮಸಸ್ಯಂ
ಭೋಗ ವಿವರ್ಜಿತಂ | ಅವರ್ಧಿತ ಮಹಾರಾಶಿರನಾಕರ್ಣನ ಸಂಶ್ರುತಿಃ||೧೪೩
ಪ್ರೀತಿರ್ನಿಯತಿಹೀನಾಚ ಸಂಧಾನಂ ಸಾಮ್ಯವರ್ಜಿತಂ | ಕಿಮನ್ಯೇಷಾಂ ಸಂ
ಭವತಿ ಪಂಡಿತಾರಾಧ್ಯ ದೇಶಿಕಾತ್ ||೧೪೪|| ಇತಿಸ್ತುವತ್ಸು ಭಕ್ತೇಷು
ಮಲ್ಲಿಕಾರ್ಜುನದೇಶಿಕಃ | ನಿತಾಂತ ವೀರಸದ್ಭಕ್ತಿಯುಕ್ತ ಸ್ಸಂತುಷ್ಟಮಾನ
ಸಃ ||೧೪೫|| ಶುದ್ಧಲಿಂಗಾರ್ಚನಾಸಕ್ತೋಕಕ್ರಿಯಾರತಿ ಸಮನ್ವಿತಃ | ಆದೌ
ಸಂದರ್ಶನೋದ್ದಿಷ್ಟವರನೀರಾಜನಾಮಥ ||೧೪೬|| ಸವಿರಾಚೇನಾವಸರ ನೀರಾ
ಜನಾಂ ಸಮಯೋಚಿತಾಂ | ಶೃಂಗಾರ ನೀರಾಜನಾಂಚ ಮಹಾನೀರಾಜನಾಂ

---

ಆಗಿರುವುವಲ್ಲವೆ ? || ೧೩೯ || ಮತ್ತೂ ಈ ಪಂಡಿತಾರಾಧ್ಯನ ಜಾಗರೂಕವಾದ ಈ ಇಂದ್ರಿ
ಯಗಳ ಸಮೂಹವೂ, ಮಲಿನವಾಗದ ಹಸ್ತಪ್ರದೇಶವೂ, ಪ್ರಯತ್ನವಿಲ್ಲದೆ ಸಿದ್ಧವಾ
ಗಿರುವ ತಪಸ್ಸೂ, ತನ್ನ ಅರಿವಿನಿಂದ ಕೂಡಿದ ಮರವೆಯೂ, ಜ್ಞಾತೃತ್ವದಿಂದ ಬಿಡ
ಲ್ಪಟ್ಟ ಅರಿವೂ, ನೆನಹಿಲ್ಲದೆ ಅತ್ಯಧಿಕವಾಗಿ ಬಳೆದಿರುವ ಸ್ನೇಹವೂ, ಯಾವಾಗಲೂ
ನಷ್ಟವಾಗದ ತೃಪ್ತಿಯೂ, || ೧೪೧ || ಈ ಸ್ವಪ್ನಸುಷುಪ್ತ್ಯವಸ್ಥೆಗಳಿಲ್ಲದ ತುರ್ಯಾವ
ಸ್ಥೆಯೂ, ಕ್ರಿಯಾರಹಿತವಾದ ನಡೆಯೂ, ಎಡೆಬಿಡದ ಸಾಹಸವೂ, ನಗೆ ಮೊದಲಾದು
ವಿಲ್ಲದ ಮಿತ್ರತ್ವವೂ, ಬಡಪೆರೆದು ಹೊರಹೋಗದ ಅನುರಾಗವೂ, ಭೋಗಿಸುವಿಕೆ
ಯನ್ನು ಬಿಟ್ಟ ಬೆಳಸೂ, ವೃದ್ಧಿ ಹೊಂದದ ರಾಶಿಯೂ, ಕೇಳದ ಕಿವಿಯೂ, || ೧೪೩ ||
ಅಳತೆಯಿಲ್ಲದ ಪ್ರೀತಿಯೂ, ಅಸದೃಶವಾದ ಅನುಸಂಧಾನವೂ ಈ ಪಂಡಿತಾರಾಧ್ಯನಿಗಲ್ಲದೆ
ಇನ್ನಾರಿಗೆತಾನೇ ಲಭ್ಯವಾಗುವುವು ? || ೧೪೪ || ಎಂಬುದಾಗಿ ಭಕ್ತರುಗಳು ಸ್ತೋತ್ರ
ಮಾಡುತ್ತಿರಲಾಗಿ, ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅತಿಶಯವಾಗಿ ವೀರಭಕ್ತಿಯಿಂದ
ಕೂಡಿ ಸಂತುಷ್ಟಮಾನಸ್ಕನಾಗಿ || ೧೪೫ || ಪರಿಶುದ್ಧವಾದ ಶಿವಲಿಂಗಪೂಜಾಕ್ರಿಯೆಯಲ್ಲಿ
ಆಸಕ್ತನಾಗಿ, ಮೊದಲು ಲಿಂಗದರ್ಶನವನ್ನುದ್ದೇಶಿಸಿದ ದೀಪಾರತಿಯನ್ನು ಬೆಳಗಿ, || ೧೪೬ ||
ಬಳಿಕ ಅವಸರನೀರಾಜನವನ್ನೂ, ಸಮಯೋಚಿತವಾದ ಶೃಂಗಾರ ನೀರಾಜನವನ್ನೂ,

ತತಃ ||೧೪೭|| ನೀರಾಜನಾಂ ಮಂಗಲಾಖ್ಯಾಂ ಧೂಪಂಚ ಸುಮನೋಹರಂ | ಸಮರ್ಪ್ಯ ತತ್ತತ್ಸಮಯೇಷ್ವರ್ಘ್ಯ ಪಾದ್ಯಾದಿಕಂ ಮುದಾ ||೧೪೮|| ಅಭ್ಯರ್ಚ್ಯ ನಾನಿ ಶೀತೋಷ್ಣ ವರಗಂಧೋದಕಾನಿಚ | ಗಂಧಪುಷ್ಪಾಕ್ಷತಾನ್ದತ್ವಾ ಲಿಂಗ ಶೃಂಗಾರಮುಜ್ವಲಂ ||೧೪೯|| ಕುರ್ವಂಸ್ತದಾನೀಂ ನೃಪವದುಪಚಾರೇಷು ಶೋಭಿಷು | ಪ್ರಥಮಾವಸರೆ ಕಾರ್ಯಮಕರೋಲ್ಲಿಂಗಮಜ್ಜನಂ || ೧೫೦ || ತತ್ಕಾಲೆ ಸೂರಮಾಂಬಾಚ ಜಂಗಮಾ ಅಪಿಸನ್ನುತಾಃ | ವೇಮನಾರಾಧ್ಯ ಪ್ರಮುಖಾ ವೀಕ್ಷಿತುಂ ತಂ ಸಮಾಯಯುಃ ||೧೫೧||

ಇತ್ಯಸಂಖ್ಯಾತ...ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತೆ ದೀಕ್ಷಾಪ್ರಕರಣೆ ತಚ್ಛಿವಾರ್ಚನ ಸಂಕೀರ್ತನೆ ಸೂರಾಂಬಾ ವೇಮನಾರಾಧ್ಯ ಪ್ರಮುಖ ಜಂಗಮ ಸಮಾಗಮನ ಕಥನಂ ನಾಮೈಕೋನವಿಂಶೋಽಧ್ಯಾಯಃ.

---

ಅನಂತರ ಮಹಾನೀರಾಜನವನ್ನೂ, ಇನ್ನೂ ಮಾಡಬೇಕಾದ ಲೆಕ್ಕವಿಲ್ಲದಷ್ಟು ಆ ನೀರಾಜನಗಳನ್ನೆಲ್ಲ ಬೆಳಗಿ, ಅಭಿಷೇಕೋದ್ದಿಷ್ಟವಾದ ಆರತಿಯನ್ನು ಎತ್ತಿ, ಮಂಗಲ ನೀರಾಜನವನ್ನು ಬೆಳಗಿ, ಮನೋಹರವಾದ ಧೂಪವನ್ನರ್ಪಿಸಿ, ಆ ಆ ಸಮಯದಲ್ಲಿ ಮಾಡತಕ್ಕ ಅರ್ಘ್ಯಪಾದ್ಯಾದಿಗಳ ಸಮರ್ಪಣೆಯನ್ನು ಸಂತೋಷದಿಂದ ಮಾಡಿ ||೧೪೯|| ಶೀತೋದಕ, ಉಷ್ಣೋದಕ, ಗಂಧೋದಕಗಳ ಅಭಿಷೇಕವನ್ನು ಮಾಡಿ, ಗಂಧಾಕ್ಷತೆ ಪುಷ್ಪಗಳನ್ನು ಸಮರ್ಪಿಸಿ, ಶಿವಲಿಂಗವನ್ನು ಅಂದವಾಗಿ ಶೃಂಗರಿಸಿ || ೧೫೦ || ಆಗ ಸಕಲ ರಾಜೋಪಚಾರವೂ ನಡೆಯಲಾಗಿ, ಮೊದಲಕಾಲದ ಪೂಜಾನಂತರ ಮಾಡತಕ್ಕ ಲಿಂಗಾಭಿಷೇಕವನ್ನು ಮಾಡಿದನು || ೧೫೧ || ಆಗ ಸೂರಾಂಬೆಯೂ, ವೇಮನಾರಾಧ್ಯ ಮೊದಲಾದ ಜಂಗಮಶ್ರೇಷ್ಠರು ಸಹ ಆ ಪಂಡಿತಾರಾಧ್ಯನನ್ನು ನೋಡುವುದಕ್ಕಾಗಿ ಬಂದರು || ೧೫೨ ||

ಎಂಬಲ್ಲಿಗೆ ಶ್ರೀಮತ್ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ „ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ದೀಕ್ಷಾ ಪ್ರಕರಣದೊಳಗೆ ಆ ಆರಾಧ್ಯವರ್ಯನ ಶಿವಪೂಜಾ ಸಮಯದಲ್ಲಿ ಸೂರಾಂಬೆಯೂ ವೇಮನಾರಾಧ್ಯ ಮೊದಲಾದ ಜಂಗಮರೂ ಬಂದರೆಂದು ವರ್ಣಿಸುವ ೧೯ ನೆಯ ಅಧ್ಯಾಯವು ಮುಗಿದುದು.

# ಅಥ ವಿಂಶೋಽಧ್ಯಾಯಃ.

---

## (ಜಂಗಮಭಕ್ತಿ ವೈಶಿಷ್ಟ್ಯ ಕಥನಂ.)

ಅಥ ತೇಷಾಂ ಪುರೋ ಜೃಂಭಮಾಣೇ ಜಯಜಯ ಧ್ವನೌ | ತತ್ಸಂಭ್ರಮೋಪಿ ತಲ್ಲಿಂಗೇದದೃಶ್ಯತ ಪರಿಸ್ಫುಟಂ ||೧|| ಯತೋ ಜಂಗಮಲಿಂಗಸ್ಯ ಸ್ಫುರಣಂ ಲಿಂಗದರ್ಪಣೇ | ಸಹಜಂ ತತ್ಸಮುದ್ವೀಕ್ಷ್ಯ ಪಂಡಿತಸ್ಸಂಭ್ರಮಾನ್ವಿತಃ ||೨|| ಜಂಗಮಾಲೋಕನೋದ್ಭೂತ ಪ್ರಮೋದಾಮೃತ ವಾರಿಧೌ | ನಿಮಗ್ನೋ ವಿಸ್ಮೃತಸ್ವಾಂತಸ್ಸಾಂದ್ರೀಭೂತಾಂಗ ವಿಕ್ರಿಯಃ ||೩|| ಅಹಂ ಲಿಂಗಾರ್ಚನೋದ್ಯುಕ್ತ ಇತಿವಾ ಧ್ಯಾನವಿಪ್ಲುತಿಃ | ಭವಿಷ್ಯತೀತಿವಾ ಹಸ್ತೇ ಲಿಂಗಂಪ್ರವಸತೀತಿಚ ||೪|| ಅವಿಚಾರ್ಯ ಮಹೇಶಸ್ಯ ವರಸಿಂಹಾಸನಂಕರಂ | ಪೂಜಾವ್ಯಾಪೃತಹಸ್ತಂಚ ಸಂಬಧ್ಯಾನಂದತೋಽನಮತ್ ||೫|| ಅಥಾಂತರಿಕ್ಷೇ

---

# ೨೦ ನೆಯ ಅಧ್ಯಾಯವು.

---

## ಜಂಗಮಭಕ್ತಿ ಪ್ರಾಶಸ್ತ್ಯ ವರ್ಣನವು.

ಬಳಿಕ ಆ ಜಂಗಮರ ಮುಂಗಡೆಯಲ್ಲಿ ಜಯಜಯವೆಂಬ ಘೋಷವು ವಿಜೃಂಭಿಸುತ್ತಿರಲಾಗಿ, ಆ ಸಡಗರವು ಕೂಡ ಆರಾಧ್ಯವರ್ಯನಿಂದ ಪೂಜಿಸಲ್ಪಡುತ್ತಿರುವ ಶಿವಲಿಂಗದಲ್ಲಿ ಸ್ಪಷ್ಟವಾಗಿ ಕಂಡುಬಂದಿತು ‖ ೧ ‖ ಇಷ್ಟಲಿಂಗವೆಂಬ ಕನ್ನಡಿಯಲ್ಲಿ ಜಂಗಮಲಿಂಗವು ಪ್ರತಿಫಲಿಸುವುದು ಸಹಜವಾದುದರಿಂದ ಹೀಗೆ ಗೋಚರವಾಯಿತು. ಆದನ್ನು ಪಂಡಿತಾರಾಧ್ಯನು ನೋಡಿ ಸಂಭ್ರಮಗೊಂಡವನಾಗಿ ‖ ೨ ‖ ಜಂಗಮರ ದರ್ಶನದಿಂದ ಉಂಟಾದ ಸಂತೋಷವೆಂಬ ಸಮುದ್ರದಲ್ಲಿ ಮುಳುಗಿದವನಾಗಿ, ಹಿಗ್ಗಿದ ಮನಸ್ಸುಳ್ಳವನಾಗಿ, ರೋಮಾಂಚನಾದಿ ಸಾತ್ವಿಕವಿಕಾರದಿಂದ ಕೂಡಿದ ಶರೀರವುಳ್ಳವನಾಗಿ ‖ ನಾನು ಲಿಂಗಪೂಜೆಯನ್ನು ಮಾಡುತ್ತಲಿದ್ದೇನೆಂಬುದಾಗಿಯಾಗಲಿ, ಧ್ಯಾನಪಲ್ಲಟವಾಗುವುದೆಂಬುದಾಗಿಯಾಗಲಿ, ಹಸ್ತತಲದಲ್ಲಿ ಶಿವಲಿಂಗವಿದೆಯೆಂಬುದಾಗಿಯಾಗಲಿ ವಿಚಾರವಾಡದೆ, ಶಿವನಿಗೆ ಪೀಠವಾಗಿದ್ದ ಎಡಕೈಯನ್ನೂ, ಪೂಜೆಮಾಡುವುದರಲ್ಲಿ ನಿರತವಾಗಿದ್ದ ಬಲಗೈಯನ್ನೂ ಸಹ ಜೋಡಿಸಿ ಆನಂದದಿಂದ ನಮಸ್ಕರಿಸಿದನು ‖ ೫ ‖ ಬಳಿಕ ಆ ಶಿವ

ತಲ್ಲಿಂಗಮತಿಷ್ಠದ್ವಿಸ್ಮಯಂದವತ್ | ತಸ್ಯ ಸಿಹ್ಮಾಸನಂಜಾತಾ ಜಂಗಮಾಸ್ತತ್ರ ಬಿಂಬಿತಾಃ ‖೬‖ ಪಂಡಿತೇಂದ್ರಸ್ಯ ಸದ್ಭಕ್ತಿಃ ಪೀಠಂ ತಜ್ಜಂಗಮಾವಲೇಃ| ಸೂರಾಂಬಾವೇಮನಾರಾಧ್ಯ ಪ್ರಮುಖಾ ಜಂಗಮಾಸ್ತದಾ ‖೭‖ ಸಮಾಗತ್ಯ ನಮಸ್ಕಾರಂ ಚಕ್ರಿರೆ ಭಕ್ತಿತತ್ಪರಾಃ | ನಿವೃತ್ಯ ಪಂಡಿತೇಂದ್ರೇಣ ದೃಷ್ಟೆ ತಜ್ಜಂಗಮವ್ರಜೆ ‖೮‖ ತಥೈವಸ್ವಪ್ರಾಣಲಿಂಗಂ ಸುವ್ಯಕ್ತಂ ಸಮದೃಶ್ಯತ| ಯತೊ ಜಂಗಮ ಸನ್ಮೂರ್ತಿಸ್ಸರ್ವತೊ ಲಿಂಗರೂಪಿಣೀ ‖೯‖ ತತೋಹಿ ಜಂಗಮ ಪದಾಂಬುಜಯುಗ್ಮಂ ಸುನಿರ್ಮಳಂ | ಅಶೇಷ ತೀರ್ಥಸಮಿತೇರ್ನಿರಂತರ ನಿವಾಸಭೂಃ ‖೧೦‖ ದುರ್ವಾರಘೋರ ಸಂಸಾರ ಕ್ರೂರ ರೋಗೈಕ ಭೇಷಜಂ | ಪ್ರಣತಾಳಿಕ ವಿನ್ಯಸ್ತ ದುರ್ವರ್ಣ ಪರಿಮಾರ್ಜಕಂ ‖೧೧‖ ಉತ್ತಮಾಂಗಸ್ಯ ಗಿರಿಜಾಪತೇಃ ಪೂಜಾವಿಧಾಯಕಂ | ಸದ್ಭಕ್ತ ಕಲ್ಪಭೂಜಾತಃ ಪ್ರಾಣಲಿಂಗ ಪದಾಂಬುಜಂ ‖೧೨‖ ಶ್ರೀಮಜ್ಜಂಗಮಲಿಂಗಾನಾಂಭವ್ಯಂ ವಾಮಕರಸ್ಥಲಂ | ಲಿಂಗಸಿಹ್ಮಾಸನಂ ಶಂಭುಶೃಂಗಾರ ಸದನಂ ಲಸತ್ ‖೧೩‖ ಹಸ್ತಚರ್ಮಾಂಬರಧರಪ್ರಶಸ್ತಾಸ್ಥಾನವೇದಿಕಾ | ಶ್ರೀಮಜ್ಜಂಗಮಲಿಂಗಸ್ಯ

---

ಲಿಂಗವು ಆಕಾಶದಲ್ಲಿ ನಿಂತುಕೊಂಡು ಆಶ್ಚರ್ಯವನ್ನುಂಟುಮಾಡಿತು. ಅಲ್ಲಿ ಪ್ರತಿಫಲಿಸಿದ ಜಂಗಮರೆಲ್ಲರೂ ಆ ಲಿಂಗಕ್ಕೆ ಸಿಹ್ಮಾಸನ ಸ್ವರೂಪರಾದರು ‖ ೬ ‖ ಪಂಡಿತಾರಾಧ್ಯನ ಭಕ್ತಿಯು ಆ ಜಂಗಮಪಙ್ತಿಗೆ ಪೀಠವಾಯಿತು. ಆಗ ಸೂರಾಂಬೆಯೂ ವೇಮನಾರಾಧ್ಯ ಮೊದಲಾದ ಜಂಗಮರುಗಳೂ ಬಂದು, ಭಕ್ತಿಯಿಂದ ಕೂಡಿ ನಮಸ್ಕಾರವನ್ನು ಮಾಡಿದರು. ಪಂಡಿತೇಂದ್ರನು ಬಹಿರ್ಮುಖನಾಗಿ, ಅಲ್ಲಿ ನಿಂತಿದ್ದ ಜಂಗಮರ ಸಮೂಹವನ್ನೆಲ್ಲ ನೋಡಿದನು ‖ ೮ ‖ ಹಾಗೆಯೇ ತನ್ನ ಪ್ರಾಣಲಿಂಗವನ್ನೂ ನೋಡಲಾಗಿ, ಅದರಲ್ಲೂ ಜಂಗಮಸಮೂಹವು ಹೊರಗೆ ನೋಡಿದಂತೆಯೇ ಬಂದೇ ರೂಪಿನಿಂದ ತೋರಿತು. ಏಕೆಂದರೆ—ಜಂಗಮಮೂರ್ತಿಯು ಎಲ್ಲ ಕಡೆಯಲ್ಲೂ ಲಿಂಗಸ್ವರೂಪವಾಗಿಯೇ ಇರತಕ್ಕದು ‖ ೯ ‖ ಅದುದರಿಂದಲೇ ಪಂಡಿತಾರಾಧ್ಯನು—"ನಿರ್ಮಲವಾದ ಜಂಗಮಪಾದಯುಗ್ಮವು ಸಕಲ ತೀರ್ಥಗಳಿಗೂ ಆವಾಸಸ್ಥಲವು; ‖ ೧೦ ‖ ನಿವಾರಣೆ ಮಾಡಲಸಾಧ್ಯವಾದ ಭೀಕರಸಂಸಾರವೆಂಬ ಕ್ರೂರರೋಗಕ್ಕೆ ಮುಖ್ಯವಾದ ಔಷಧವು; ನಮಸ್ಕರಿಸಿದವರ ಹಣೆಯ ಕೆಟ್ಟ ಬರಹವನ್ನು ತೊಡೆಯತಕ್ಕದು; ‖ ೧೧ ‖ ಶಿವನ ಶಿರಸ್ಸಿನ ಪೂಜೆಯನ್ನು ಮಾಡತಕ್ಕದು; ಉತ್ತಮರಾದ ಭಕ್ತರಿಗೆ ಕಲ್ಪವೃಕ್ಷವು; ಮತ್ತೂ ಅವೇ ಪ್ರಾಣಲಿಂಗದ ಪಾದಕಮಲಗಳು ‖ ೧೨ ‖ ಮತ್ತೂ ಜಂಗಮಮೂರ್ತಿಗಳ ಮಂಗಳಪ್ರದವಾದ ಎಡಗೈಯು—ಶಿವಲಿಂಗದ ಸಿಹ್ಮಾಸನವು; ಶಿವನ ಪ್ರಕಾಶಿಸುವ ಶೃಂಗಾರಮಂಟಪವು ‖ ೧೩ ‖ ಶಂಕರನ ಯೋಗ್ಯವಾದ ಸಭಾಜಗತಿಯು. ಜಂಗಮಮೂರ್ತಿಯ ಶ್ರೇಷ್ಠ

ಪ್ರಶಸ್ತೋದಕ್ಷಿಣಃ ಕರಃ ॥೧೩॥ ಜನ್ಮಭೂಮಿರ್ಮಹೇಶಸ್ಯ ಶಿವಸ್ಯಪರಿಚಾರಕಃ । ದಕ್ಷಕ್ರತುಧ್ವಂಸಕಸ್ಯಯೋಗ್ಯಃ ಪೂಜಾಕರೋಜನಃ ॥ ೧೪ ॥ ಕಿಂಚ ಜಂಗಮಹಸ್ತಾಸ್ತೆಸನ್ಮಿತ್ರಾಣಿ ಮಹೇಶಿತುಃ । ಲಿಂಗಮೂರ್ತೇರ್ಮಹೇಶಸ್ಯ ಹಸ್ತಾಏವನಸಂಶಯಃ ॥ ೧೬ ॥ ಲಿಂಗಸ್ಯೋಪರಿಪುಷ್ಪಾಣಿ ಲಸಜ್ಜಂಗಮದೃಷ್ಟಯಃ । ಶಿವಾಗ್ರಪ್ರಸ್ಫುರದ್ದೀಪಾಃ ಹರ್ಷಾಶ್ರುಸ್ನೇಹಪೂರಿತಾಃ ॥ ೧೭ ॥ ಸ್ನಾನಾರ್ಥಕಲಶಾಶ್ಶಂಭೋರಂಗತೂಣೀರಗಾಶ್ಶರಾಃ । ಕುಲಾಂಗನಾ ಮಹೇಶಸ್ಯಶಂಭೋರೇವಹಿದೃಷ್ಟಯಃ ॥ ೧೮ ॥ ಜಿಹ್ವಾಜಂಗಮಲಿಂಗಾನಾಂ ಶಿವಭೋಜನಪಾತ್ರಿಕಾ । ಶಿವನಾಮಾಂಕ ಲಿಖಿತ ಪುಸ್ತಕಂಸಮುದಂಚಿತಂ ॥೧೯॥ ರುಚಿಂಶಿವಾಯಕಬಳಂಕೃತ್ವಾಹಸ್ತಃ ಪ್ರದಾಯಕಃ । ಸತ್ಯೇನಾನ್ಯೈರಲಭ್ಯೇನಪೂರ್ಣವಿನಾಶಕರಂಪಕಂ ॥ ೨೦ ॥ ವೀಣಾ ಶ್ರೀ ಬಸವೇಶಸ್ಯ ಗೀತಸಂವಾದಿಕಾಶುಭಾ । ದೇವಸ್ಯ ಶಿವಲಿಂಗಸ್ಯ ಸಾಕ್ಷಾಜ್ಜಿಹ್ವೇತಿಕೀರ್ತಿತಾ ॥೨೧॥ ಜಂಗಮಸ್ಯ ಶ್ರುತೀಲಿಂಗತತ್ವಾಮೃತಘಟಾಘಟೌ । ಶ್ರುತಿಸ್ಮೃತಿಚಯಾನರ್ಘ್ಯಕಾಂತಿಭಾಸುರಕುಂಡಲೆ ॥ ೨೨ ॥ ಶಿವಲಿಂಗಾದಿ ನಾಮಾಂಕ ಮುದ್ರಿತೆ

---

ವಾದ ಬಲಗೈಯು—ಶಿವನ ಜನ್ಮಸ್ಥಲವು ; ಶಂಕರನ ಪರಿಚಾರಕನು ; ದಕ್ಷಯಾಗಧ್ವಂಸಿಯ ಉತ್ತಮನಾದ ಪೂಜಾರಿಯು ॥ ೧೪ ॥ ಮತ್ತೂ ಜಂಗಮರ ಆ ಹಸ್ತಗಳು ಶಿವನ ಸ್ನೇಹಿತರು ; ಸಾಕ್ಷಾತ್ಪರಶಿವನ ಹಸ್ತಗಳೇ ಅವು ; ಸಂಶಯವಿಲ್ಲ. ॥ ೧೬ ॥ ಜಂಗಮರ ಕಣ್ಣುಗಳು—ಲಿಂಗದಮೇಲೆ ಧರಿಸುವ ಹೂವುಗಳು ; ಮತ್ತೂ ಶಿವನಮುಂದೆ ಬೆಳಗುವ ದೀಪಗಳು. ಸಂತೋಷಬಾಷ್ಪದಿಂದ ಕೂಡಿದ ಆ ಕಣ್ಣುಗಳು—ಶಿವನ ಅಭಿಷೇಕಕ್ಕಾಗಿಟ್ಟ ಕಲಶಗಳು ; ಪರಶಿವ ದೇಹವೆಂಬ ಬತ್ತಳಿಕೆಯಲ್ಲಿ ಸೇರಿಸುವ ಬಾಣಗಳು ; ಅವು ಪರಶಿವನ ಸತಿಯರು. ಮತ್ತೂ ಅವು ಸಾಕ್ಷಾಚ್ಛಂಕರನ ದೃಷ್ಟಿಗಳೇ ಸರಿ ॥ ಜಂಗಮರ ನಾಲಿಗೆಯು-ಈಶ್ವರನ ಭೋಜನದ ಪಾತ್ರವು. ಅದು ಶಿವನ ಹೆಸರಕ್ಷರವನ್ನು ಬರೆದ ಉತ್ತಮಪುಸ್ತಕವು ॥ ೧೯ ॥ ಅದು ಶಿವನಿಗೆ ರುಚಿಯನ್ನು ತುತ್ತುಗಟ್ಟಿ ಒಪ್ಪಿಸುವ ಹಸ್ತವು ; ಅನ್ಯರಿಗೆ ದೊರೆಯದಿರುವ ಸತ್ಯದಿಂದ ತುಂಬಿದ ಶಿವನ ಭರಣಿಯು ; ಬಸವೇಶ್ವರನ ಗೀತಗಳನ್ನು ನುಡಿಸುವ ವೀಣೆಯು. ಅದು ಶಿವಲಿಂಗದ ಪ್ರತ್ಯಕ್ಷವಾದ ನಾಲಿಗೆಯೇ ಸರಿಯೆಂದು ಹೇಳಲ್ಪಟ್ಟಿರುವುದು ॥ ೨೧ ॥ ಜಂಗಮಮೂರ್ತಿಯ ಕಿವಿಯು—ಶಿವಲಿಂಗತತ್ವವೆಂಬ ಅಮೃತ ನ್ನು ತುಂಬಿದ ಕೊಡಗಳು ; ವೇದಶಾಸ್ತ್ರಸಮೂಹಗಳಿಗೆ ತೇಜೋಯುಕ್ತವಾದ ಕರ್ಣಾಭರಣಗಳು ॥ ೨೨ ॥ ಶಿವಲಿಂಗಾದಿಗಳ ಹೆಸರಿನ ಮುದ್ರೆಯನ್ನೊತ್ತಿದ ಶಿವಾಲಯಗಳು ; ಮತ್ತೂ ಸಾಕ್ಷಾತ್ಪರಶಿವನ ಕಿವಿ

ಲಿಂಗಮಂದಿರೇ । ಶಿವಸ್ಯ ಲಿಂಗದೇವಸ್ಯ ಶ್ರುತೀ ಇತಿ ವಿನಿಶ್ಚಿತೇ ॥ ೩೩ ॥ ಜಂಗಮಸ್ಯಮನಸ್ಸಾಕ್ಷಾದಂಗಜಾರೇರ್ವಿಹಾರಭೂಃ । ಏಕಾಂತಸ್ಥಲಮೀಶಸ್ಯ ಶಿವಸ್ಯಾಂತರ್ಗೃಹಂ ಲಸತ್ ॥ ೩೪ ॥ ವಿಶ್ರಮಸ್ಥಲಮೀಶಸ್ಯಕೇಳೀಸದನಮೀಶಿತುಃ । ಸನ್ಮಿತ್ರಂಪರಮೇಶಸ್ಯ ಶಿವಸ್ಯ ವರಕಾರಣಂ ॥ ೩೫ ॥ ಅನುಕೂಲಂ ಶಂಕರಸ್ಯ ಮನಃಪ್ರೋಕ್ತಂ ಮಹೇಶಿತುಃ ॥ ತದ್ಘ್ರಾಣಂಶಿವನಿರ್ಮಾಲ್ಯಸಾರಭಾಸ್ವಾದಷಟ್ಪದಃ ॥ ೩೬ ॥ ಆತುಳಾಶಂಕರಸ್ಯೈವನಾಸೇತಿಪರಿಕೀರ್ತ್ಯತೇ । ಪರಂಜ್ಯೋತಿರ್ಜಂಗಮಸ್ಯಕಾಯಶ್ಶಾಂತಿಸಮುಚ್ಚಯಃ ॥ ೩೭ ॥ ಲಿಂಗಸ್ಯ ವಾಹನಂಶಯ್ಯಾ ಮಂದಿರಂ ಲಿಂಗವಿಗ್ರಹಃ । ವಾಕ್ಯಂಜಂಗಮಲಿಂಗಸ್ಯ ಶಿವವಾಕ್ಯಮುದೀರಿತಂ ॥ ೩೮ ॥ ಜಂಗಮಸ್ಯಮುಖಂಸಾಕ್ಷಾಲ್ಲಿಂಗಸ್ಯಮುಖಮುಚ್ಯತೇ । ಜಂಗಮಸ್ಯೋದರಂಸಾಕ್ಷಾನ್ಮಹಾದೇವೋದರಂಸ್ಮೃತಂ ॥೩೯॥ ವಕ್ಷಸ್ಥಲಂ ಜಂಗಮಸ್ಯ ವಕ್ಷಸ್ಥಲಮುಮಾಪತೇಃ । ತದ್ಭೋಗಶ್ಶಿವಭೋಗಸ್ಸ್ಯಾತ್ತತ್ತೃಪ್ತಿಸ್ತೃಪ್ತಿರೀಶಿತುಃ ॥೪೦॥ ತನ್ಮೂರ್ತಿಶ್ಶಿವಮೂರ್ತಿಸ್ಸ್ಯಾತ್ತದ್ವೇಷೋವೇಷಕಃಶಿತುಃ । ತತ್ಪ್ರಾಣಾಶ್ಶಂಕರಪ್ರಾಣಾಸ್ಸತ್ಯಮೇವನಸಂಶಯಃ॥

---

ಗಳೇ ಎಂದು ನಿಶ್ಚಿತವಾದುವುಗಳು ॥ ೩೩ ॥ ಜಂಗಮಮೂರ್ತಿಯ ಮನಸ್ಸು—ಸಾಕ್ಷಾತ್ಪರಶಿವನಿಗೆ ಕ್ರೀಡಾಸ್ಥಲವು ; ಈಶ್ವರನಿಗೆ ಏಕಾಂತದ ಮನೆಯು ; ಮಹಾದೇವನಿಗೆ ಒಳಕೋಣೆಯು ॥ ೩೪ ॥ ಶಂಕರನಿಗೆ ದಣುವಾರಿಸಿಕೊಳ್ಳುವ ಮಂದಿರವು ; ಮಹೇಶ್ವರನಿಗೆ ವಿಹಾರಸ್ಥಾನವು ; ಮತ್ತೂ ಅದು ಶಂಭುವಿಗೆ ಒಳ್ಳೆಯ ಮಿತ್ರನು. ಮಂಗಳಕ್ಕೆ ಉತ್ತಮಕಾರಣವಾದುದು ॥ ೩೫ ॥ ಅದು ಈಶ್ವರನಿಗೆ ಅನುಕೂಲವಾದ ಆಶ್ರಯವು; ಮತ್ತೂ ಸಾಕ್ಷಾತ್ಪಶುಪತಿಯ ಮನಸ್ಸೇ ಅದು. ಆ ಜಂಗಮನ ಮೂಗು—ಶಿವನಿರ್ಮಾಲ್ಯಪುಷ್ಪದ ಪರಿಮಳವನ್ನು ಸೇವಿಸುವ ತುಂಬಿಯು ॥ ೩೬ ॥ ಮತ್ತೂ ಅದು ಶಿವನ ಮೂಗೇ ಎಂದು ಹೇಳಲ್ಪಟ್ಟಿರುವುದು. ಜಂಗಮ ಮೂರ್ತಿಯ ದೇಹವು—ಶಾಂತಿಯ ಬಬ್ಬುಳಿಯು ॥ ೩೭ ॥ ಶಿವಲಿಂಗದ ವಾಹನವು ; ಪರಶಿವನ ಮಲಗುವ ಮನೆಯು. ಮತ್ತೂ ಅದು ಶಿವನ ದೇಹವೇ ಸರಿ. ಜಂಗಮಲಿಂಗದ ವಚನವು ಶಿವವಚನವೇ ಎಂದು ಹೇಳಲ್ಪಟ್ಟಿರುವುದು ॥ ೩೮ ॥ ಜಂಗಮನ ಮುಖವು ಪ್ರತ್ಯಕ್ಷ ಶಿವಲಿಂಗ ಮುಖವೇ ಎಂದು ಹೇಳಲ್ಪಡುತ್ತದೆ. ಜಂಗಮನ ಹೊಟ್ಟೆಯು ಸಾಕ್ಷಾಚ್ಛಂಕರನ ಹೊಟ್ಟೆಯೆಂದು ಸ್ಮರಿಸಲ್ಪಡುತ್ತದೆ ॥ ೩೯ ॥ ಜಂಗಮನ ಎದೆಯು ಪಾರ್ವತೀಪತಿಯ ಎದೆಯು. ಜಂಗಮನ ಸುಖವೇ ಶಿವನ ಸುಖವು ಜಂಗಮನ ತೃಪ್ತಿಯೇ ಶಿವನ ತೃಪ್ತಿಯು! ಜಂಗಮನ ಮೂರ್ತಿಯೇ ಶಿವನ ಮೂರ್ತಿಯು. ಜಂಗಮನ ವೇಷವೇ ಶಿವನ ವೇಷವು. ಆ ಜಂಗಮನ ಪ್ರಾಣಗಳೇ ಶಿವನ ಪ್ರಾಣಗಳು. ಇದು ಸತ್ಯ ; ಸಂಶಯವಿಲ್ಲ ॥೪೦॥

ಆದೌಜಂಗಮಮೂರ್ತಿಸ್ಸನ್ನವಾಗತ್ಯಗುರುಸ್ಸ್ವಯಂ । ಲಿಂಗರೂಪೀ ಜಂಗಮಶ್ಚ ನ ಕಿಮಾಸೀನ್ಮಹೀತಲೆ ॥ ೩೦ ॥ ಗುರುಮೂರ್ತಿರಿತಿಜ್ಞೇಯೋಜನೈರ್ಭಕ್ತ್ಯಾಸಜಂಗಮಃ । ಜಂಗಮೋಯಂಸ್ವಯಂಸಾಕ್ಷಾದ್ಗುರುರಿತ್ಯೇವಭಾವನಾ ॥ ೩೩ ॥ ಸ್ಯಾದುತ್ತಮೋ ಸ್ವೇಷ್ಟಲಿಂಗಮಿತೀಯಂ ಮಧ್ಯಮೋಭವೇತ್ । ಶಿವಶಾಸನಧಾರೀತಿ ಭಾವನಾ ಸಾಧಮಾಸ್ಮೃತಾ ॥ ೩೪ ॥ ತಸ್ಮಾದ್ಗುರುಸ್ವರೂಪಸ್ಯ ಜಂಗಮಸ್ಯ ಮುಖೆ ಶುಭೆ । ಲಿಂಗಮೂರ್ತಿರ್ಮಹೇಶಸ್ಯಭಾನಮೇತತ್ಕಿಮದ್ಭುತಂ ॥ ೩೫ ॥ ಏವಂ ವದನ್ಪಂಡಿತೇಂದ್ರಃ ಪರಮಾನಂದನಿರ್ಭರಃ । ಸೂರಾಂಬಾಂ ವೇಮನಾರಾಧ್ಯಂ ಸಮಾಲಿಂಗ್ಯಾತಿಸಂಭ್ರಮಾತ್ ॥ ಪ್ರಣಿಪತ್ಯಚಸಾಷ್ಟಾಂಗಂ ವಾಚಮೂಚೆಸಮಾಹಿತಃ । ನತೋಸ್ಮಿಭಕ್ತಾನಗ್ರೆಮಾಂನಭವೋಬಾಧಿತುಂಕ್ಷಮಃ ॥ ೩೭ ॥ ಪಾಪಾರಿಭಕ್ತಪಾದಾಬ್ಜಯುಗಳಂ ದೃಷ್ಟವಾನಹಂ । ಭವದುಃಖಮಹಾಕೂಪಾನ್ನಿರ್ಗಂತುಮಭವಂಕ್ಷಮಃ ॥ ೩೮ ॥ ಭಕ್ತಪಾದರಜಾಂಸ್ಯದ್ಯಪತಿತಾನಿಮಮೋಪರಿ । ಪಾತಕಾನಿ ವಿನಷ್ಟಾನಿ ಬಹುಜನ್ಮಾರ್ಜಿತಾನ್ಯಪಿ ॥ ೩೯ ॥ ಓಢುಂಭಕ್ತಪದತ್ರಾಣಿಮೂ

---

ಭೂತಲದಲ್ಲಿ ಗುರುವು ತಾನು ಮೊದಲು ಜಂಗಮಸ್ವರೂಪನಾಗಿ ಬಂದು, ಬಳಿಕ ಲಿಂಗಸ್ವರೂಪನೂ, ಜಂಗಮನೂ ಆಗಿರುವನಲ್ಲವೆ? ॥ ೩೦ ॥ ಆ ಜಂಗಮನನ್ನು ಜನರು ಭಕ್ತಿಯಿಂದ ಗುರುಮೂರ್ತಿಯೆಂದು ತಿಳಿಯಬೇಕು. ಆ ಜಂಗಮನನ್ನೇ ಸಾಕ್ಷಾದ್ಗುರುವೆಂದು ಭಾವಿಸುವುದು ಉತ್ತಮವು. ಆ ಜಂಗಮನನ್ನೇ ತನ್ನ ಇಷ್ಟಲಿಂಗವೆಂದು ಭಾವಿಸುವುದು ಮಧ್ಯಮವು. ಆ ಜಂಗಮನನ್ನು ಶಿವಾಜ್ಞಾಧಾರಕನೆಂದು ಭಾವಿಸುವುದು ಅಧಮವಾದುದು ॥ ೩೪ ॥ ಆದುದರಿಂದ ಗುರುಸ್ವರೂಪನಾದ ಜಂಗಮನ ಮಂಗಳಕರವಾದ ಮುಖದಲ್ಲಿ ಲಿಂಗಮೂರ್ತಿಯಾದ ಪರಶಿವನು ತೋರುವುದೇನಾಶ್ಚರ್ಯವೆ ?" ॥ ೩೫ ॥ ಎಂಬುದಾಗಿ ಹೇಳುವವನಾಗಿ, ಮಹಾನಂದದಿಂದ ಕೂಡಿ ಸಡಗರದಿಂದ ಸೂರಾಂಬೆಯನ್ನೂ ವೇಮನಾರಾಧ್ಯನನ್ನೂ ಆಲಿಂಗಿಸಿಕೊಂಡು ॥೩೬॥ ಸಾಷ್ಟಾಂಗವಾಗಿ ನಮಸ್ಕರಿಸಿ, ತದೇಕಚಿತ್ತವುಳ್ಳವನಾಗಿ ಹೇಳಿದನೇನೆಂದರೆ — "ಮುಂಗಡೆಯಲ್ಲಿರುವ ಭಕ್ತರನ್ನು ನಾನು ನಮಸ್ಕರಿಸುತ್ತೇನೆ. ನನ್ನನ್ನು ಜನನಮರಣಾತ್ಮಕವಾದ ಸಂಸಾರವು ಬಾಧಿಸಲು ಸಮರ್ಥವಾಗದು ॥೩೭॥ ದುರಿತವೈರಿಗಳಾದ ಭಕ್ತರ ಪಾದಕಮಲಯುಗ್ಮವನ್ನು ನೋಡಿದ ನಾನು ಸಂಸಾರದುಃಖವೆಂಬ ದೊಡ್ಡ ಬಾವಿಯಿಂದ ಹೊರಹೊರಡುವುದಕ್ಕೆ ಸಮರ್ಥನಾದೆನು ॥ ೩೮॥ ಭಕ್ತರ ಪಾದದ ಧೂಳಿಗಳು ಈಗ ನನ್ನಮೇಲೆ ಬಿದ್ದುವು ಬಹು ಜನ್ಮಗಳಿಂದ ಸಂಪಾದಿಸಿದ ಪಾಪಗಳು ಕೂಡ ನಷ್ಟವಾಗಿ ಹೋದುವು ॥ ೩೯ ॥ ಭಕ್ತರ ಹಾವುಗೆಗಳನ್ನು ನನ್ನ ತಲೆಯಮೇಲೆ ಹೊತ್ತುಕೊಳ್ಳುವ ಪುಣ್ಯವು ನನಗೆ

ರ್ಥಾರ್ಥಭಾಗ್ಯಮಭೂನ್ಮಮ । ಲಬ್ಧಂ ಮಯಾನಘಂ ಪಾತುಂ ಶಿವಭಕ್ತಪದೋ
ದಕಂ ॥ ೪೦ ॥ ಭಕ್ತಭುಕ್ತಸ್ಥಲಗತ ಪ್ರಸಾದೋ ಮಮ ಭಾಗ್ಯತಃ । ಭೋ
ಕ್ತುಂ ಲಬ್ಧಸ್ತತಸ್ಸಮ್ಯಗ್ಧನ್ಯೋಽಸ್ಮಿ ಧರಣೀತಲೇ ॥ ೪೧ ॥ ಇತಿ ಸ್ತುವನ್ಮು
ದಾ ಗಾಯಂಸ್ತತ್ಪಾದಾನತಿಭಕ್ತಿತಃ । ಪ್ರಕ್ಷಾಳ್ಯ ಪಾದಸಲಿಲಂ ಪೀತ್ವಾಭ್ಯರ್ಚ್ಯ
ಯಥಾವಿಧಿ ॥ ೪೨ ॥ ಧೂಪ ದೀಪೌ ದದೌ ತಸ್ಮಿನ್ಕಾಲೇ ತೇ ಭಕ್ತಪುಂಗವಾಃ ।
ಪ್ರದೀಪಯೋಃ ಪ್ರಜ್ವಲತೋಃ ಪಾರ್ಶ್ವಯೋರ್ಮಧ್ಯಭಾಗತಃ ॥ ೪೩ ॥ ಲಿಂಗಂ
ಪತದ್ಗ್ರಹಸ್ಯೋರ್ಧ್ವಮಂತರಿಕ್ಷೇ ಪರಿಸ್ಫುರತ್ । ನಿರೀಕ್ಷ್ಯ ವಿಸ್ಮಯಾವಿಷ್ಟಾ
ಸ್ಸ್ತುವಂತಃ ಪಂಡಿತೇಶ್ವರಂ ॥ ೪೪ ॥ ಲಿಂಗಾರ್ಚನಂ ಕುರುಷ್ವೇತಿ ಸಂಪ್ರೀ
ತ್ಯಾತಮವಾದಿಷುಃ । ದೃಷ್ಟಸ್ವಪ್ನಃ ಪ್ರಬುಧ್ಯೇವ ಪ್ರಸಾರ್ಯ ಕರಮಾದರಾತ್ ॥
ಲಿಂಗಾಯ ಪರಯಾ ಭಕ್ತ್ಯಾ ಪಂಡಿತೇಂದ್ರೋಽಬ್ರವೀದ್ವಚಃ । ಭಕ್ತಾತ್ಮಂ
ಸ್ತ್ವಯಿ ಸಂದೃಷ್ಟೇ ಜಗತ್ಯಾತ್ಮನಿ ವಿಸ್ಮೃತಿಃ ॥ ೪೬ ॥ ಕಾರ್ಯಾಥ ಜಂಗಮಂ ದೃ
ಷ್ಟ್ವಾ ಭವಂತಮಪಿ ವಿಸ್ಮರೇತ್ ಭವಾನೇವ ಯತಸ್ಸತ್ಯಂ ಜಂಗಮೋ ಭಕ್ತ
ವತ್ಸಲ ॥ ೪೭ ॥ ದೃಷ್ಟ್ವಾ ಜಂಗಮಲಿಂಗಂ ಯೋ ನ ಪೂಜಯತಿ ಮೂಢಧೀಃ ।

---

ಲಭ್ಯವಾಯಿತು. ನಿದುಷ್ಟವಾದ ಶಿವಭಕ್ತರ ಪಾದೋದಕವನ್ನು ಕುಡಿಯುವ ಭಾಗ್ಯವು ನನಗೆ ದೊರೆಯಿತು ॥೪೦॥ ಭಕ್ತರು ಉಂಡಬಳಿಯಲ್ಲಿದ್ದ ಪ್ರಸಾದವನ್ನು ಸೇವಿಸುವುದಕ್ಕೆ ನನ್ನ ಭಾಗ್ಯವಶದಿಂದ ಅನುಕೂಲಿಸಿತು. ಆದುದರಿಂದ ನಾನು ಭೂಲೋಕದಲ್ಲಿ ಧನ್ಯನಾಗಿರುವೆನು" ಎಂದು ಸಂತೋಷದಿಂದ ಅವರನ್ನು ಸ್ತೋತ್ರಮಾಡಿದವನಾಗಿ, ಭಕ್ತಿಯಿಂದ ಅವರ ಪಾದವನ್ನು ತೊಳೆದು, ತೀರ್ಥವನ್ನು ಪಾನಮಾಡಿ, ವಿಧಿಗನುಸಾರವಾಗಿ ಪೂಜಿಸಿ ॥೪೨॥ ಧೂಪದೀಪಗಳನ್ನು ಸಮರ್ಪಿಸಿದನು. ಆಗ ಆ ಭಕ್ತಶ್ರೇಷ್ಠರು ಎರಡು ಪಕ್ಕಗಳಲ್ಲೂ ದೀಪಗಳು ಉರಿಯುತ್ತಿರಲಾಗಿ, ಅವುಗಳ ನಡುವೆ ಅಭಿಷೇಕಪಾತ್ರದ ಮೇಲ್ಗಡೆ ಅಂತರಾಳದಲ್ಲಿ ನಿಂತು ಪ್ರಕಾಶಿಸುತ್ತಿರುವ ಶಿವಲಿಂಗವನ್ನು ನೋಡಿ ಆಶ್ಚರ್ಯಭರಿತರಾಗಿ, ಪಂಡಿತಾರಾಧ್ಯನನ್ನು ಕುರಿತು ನುಡಿದರು. ಆತನಾದರೋ ಸ್ವಪ್ನವನ್ನು ಕಾಣುತ್ತಿದ್ದು ಎಚ್ಚತ್ತವನಂತೆ ತನ್ನ ಕೈಯನ್ನು ಶಿವಲಿಂಗಕ್ಕೆ ಪ್ರೀತಿಯಿಂದ ನೀಡಿ ॥೪೫॥ ಭಕ್ತಿಯಿಂದ ಮುಂದೆ ಹೇಳುವ ವಾಕ್ಯವನ್ನು ಆ ಲಿಂಗವನ್ನು ಕುರಿತು ನುಡಿದನೇನೆಂದರೆ—ಎಲೌ ಭಕ್ತಚೈತನ್ಯನೇ! ನಿನ್ನನ್ನು ನೋಡಿದಕೂಡಲೇ ಜಗತ್ತನ್ನೂ ತನ್ನನ್ನೂ ಮರೆಯಬೇಕಾಗುವುದು. ಜಂಗಮವನ್ನು ನೋಡಿದರೆ ನಿನ್ನನ್ನೂ ಮರೆಯಬೇಕಾಗುವುದು. ಏಕೆಂದರೆ— ಎಲೌ ಭಕ್ತವತ್ಸಲನೇ! ಸತ್ಯವಾಗಿಯೂ ನೀನೇ ಜಂಗಮನು ॥೪೭॥ ಯಾವ ಮೂಢಮತಿಯು ಜಂಗಮಲಿಂಗವನ್ನು ನೋಡಿದರೂ ಪೂಜಿಸುವುದಿಲ್ಲವೊ, ಅವನು ಮಾಡುವ ಸಹಸ್ರಶಿವ

ಶಿವಪೂಜಾಸಹಸ್ರಾಣಿವ್ಯರ್ಥಾನಿಸ್ಯುರ್ನಸಂಶಯಃ ‖ ೪೮ ‖ ಭಕ್ತಾನಾಮರ್ಚನಾದೇವಕೋಟಿಸಂಖ್ಯಾಶ್ಶಿವಾರ್ಚನಾಃ । ಕೃತಾಭವಂತಿಮನುಜೈರ್ನಾತ್ರಕಾರ್ಯಾವಿಚಾರಣಾ ‖ ೪೯ ‖ ನಸ್ತೌತಿಶಿವಭಕ್ತಾನ್ಯೋಮಹಿತಾನಂದನಿರ್ಭರಃ । ಸಾಡಂಬರಾಣ್ಯರ್ಚನಾನಿತತ್ಕೃತಾನಿಮಹೀತಲೆ ‖ ೫೦ ‖ ಭಿನ್ನಕುಂಭಸ್ಥಿತಜಲಸದೃಶಾನಿಭವಂತಿಹಿ । ತಸ್ಮಾಲ್ಲಿಂಗಾರ್ಚನಾನ್ನಿತ್ಯಂ ಜಂಗಮಾರ್ಚನಮುತ್ತಮಂ ‖ ೫೧ ‖ ಶ್ರೀಮಜ್ಜಂಗಮಪೂಜೈವ ಲಿಂಗಪೂಜೇತಿಕೀರ್ತ್ಯತೆ । ಲಿಂಗಾರ್ಚನಂ ಜಗತ್ಯಸ್ಮಿನ್ನಭವೇಜ್ಜಂಗಮಾರ್ಚನಂ ‖ ೫೨ ‖ ಲಿಂಗಾಂಗಶ್ಶಿವಇತ್ಯಸ್ಮಾದ್ಧರೋಭಕ್ತ್ಯೈಕವಿಗ್ರಹಃ । ಇತೀಯಂಭಾವನಾಶ್ರೇಷ್ಠಾವಿದ್ವದ್ಭಿರುಪಗೀಯತೆ ‖ ೫೩ ‖ ಲಿಂಗಂಭವೇತ್ಪ್ರಾಣಸದಮಿತಿಬುದ್ಧೇರ್ಮನೀಷಿಣಾಂ । ಜಂಗಮಃ ಪ್ರಾಣರೂಪೋಸಾವಿತಿಬುದ್ಧಿರ್ಗರೀಯಸೀ ‖ ೫೪ ‖ ಲಿಂಗಾರ್ಪಣಂಭವೇದಂಗಭೋಗಸ್ಸ್ಯಾಜ್ಜಂಗಮಾರ್ಪಣಂ । ಲಿಂಗಭೋಗ ಇತಿಖ್ಯಾತಂಶೈವಸಿದ್ಧಾಂತವೇದಿಭಿಃ ‖ ೫೫ ‖ ಲಿಂಗಾರ್ಚನಾತ್ಸಮಧಿಕಂಯತ್ಕೃತಂಜಂಗಮಾರ್ಚನಂ । ತದುತ್ತಮಂಸಮಾನಂಚೇನ್ಮಧ್ಯಮಂ ಪರಿಚಕ್ಷತೆ ‖

---

ಪೂಜೆಗಳೂ ವ್ಯರ್ಥಗಳಾಗುವುವು ಇದಕ್ಕೆ ಸಂಶಯವಿಲ್ಲ ‖ ೪೮ ‖ ಮನುಷ್ಯರು ಭಕ್ತರನ್ನು ಪೂಜಿಸುವುದರಿಂದಲೇ ಕೋಟಿ ಶಿವಾರ್ಚನೆಯನ್ನು ಮಾಡಿದಂತಾಗುವುದು. ಈ ವಿಷಯದಲ್ಲಿ ಆಲೋಚಿಸಬೇಕಾದುದೇನೂ ಇಲ್ಲ ‖ ೪೯ ‖ ಯಾವನು ಉತ್ತಮಸಂತೋಷಾತಿಶಯವುಳ್ಳವನಾಗಿ ಶಿವಭಕ್ತರನ್ನು ಸ್ತೋತ್ರಮಾಡುವುದಿಲ್ಲವೋ, ಅವನು ಭೂತಲದಲ್ಲಿ ಆಡಂಬರದಿಂದ ಮಾಡುವ ಪೂಜೆಗಳು ‖ ೫೦ ‖ ಒಡೆದ ಗಡಿಗೆಯಲ್ಲಿರುವ ನೀರಿಗೆ ಸಮಾನಗಳಾಗುವುವಲ್ಲವೆ ? ಆದುದರಿಂದ ಯಾವಾಗಲೂ ಲಿಂಗಾರ್ಚನೆಗಿಂತಲೂ ಜಂಗಮಾರ್ಚನೆಯು ಉತ್ತಮವಾದುದು ‖ ೫೧ ‖ ಶ್ರೀಮಜ್ಜಂಗಮನಪೂಜೆಯೇ ಲಿಂಗಪೂಜೆಯೆಂದು ಹೊಗಳಲ್ಪಡುತ್ತದೆ. ಆದರೆ ಲೋಕದಲ್ಲಿ ಜಂಗಮನನ್ನು ಬಿಟ್ಟು ಮಾಡಿದ ಲಿಂಗಪೂಜೆಯು ಮಾತ್ರ ಜಂಗಮಪೂಜೆಯಾಗುವುದಿಲ್ಲ ‖ ೫೨ ‖ ಶಿವನು ಲಿಂಗಾಂಗಿಯಾಗಿರುವುದರಿಂದ ಆತನು ಭಕ್ತ್ಯೈಕಸ್ವರೂಪನಾಗಿರುವನು. ಇದೇ ಉತ್ತಮವಾದ ಭಾವನೆಯೆಂದು ವಿದ್ವಾಂಸರಿಂದ ಹೇಳಲ್ಪಡುತ್ತದೆ ‖ ೫೩ ‖ ವಿಬುಧರುಗಳಿಗೆ ಲಿಂಗವೇ ಪ್ರಾಣವೆಂದು ಉಂಟಾಗುವ ಬುದ್ಧಿಗಿಂತಲೂ ಜಂಗಮವು ಪ್ರಾಣರೂಪವಾದುದೆಂದು ಹುಟ್ಟುವ ಬುದ್ಧಿಯೇ ಶ್ರೇಷ್ಠವಾದುದು ‖ ೫೪ ‖ ಲಿಂಗಕ್ಕೆ ಮಾಡಿದ ಅರ್ಪಣವು ಅಂಗಭೋಗವಾಗುವುದು ಜಂಗಮಕ್ಕೆ ಮಾಡಿದ ಅರ್ಪಣವಾದರೋ ಲಿಂಗಭೋಗವಾಗುವುದೆಂದು ಶಿವಸಿದ್ಧಾಂತವೇದಿಗಳು ಪ್ರಸಿದ್ಧಿಸಿರುವರು ‖ ೫೫ ‖ ಲಿಂಗಪೂಜೆಗಿಂತಲೂ ಅಧಿಕವಾದ ಜಂಗಮಪೂಜೆಯನ್ನು ಮಾಡುವುದು ಉತ್ತಮವಾದುದು.

ಅಧಮಾಲಿಂಗಪೂಜೈವ ಜಂಗಮಾರ್ಚನವರ್ಜಿತಾ । ಅಂಗೋಪಚರ್ಯಾಲಿಂಗಸ್ಯ ಕೃತಾಪೂಜಾಪ್ರಕೀರ್ತ್ಯತೇ ॥ ೫೭ ॥ ಜಂಗಮಾರಾಧನಂಪ್ರಾಣಪರಿಚರ್ಯೇತಿ ಕೀರ್ತ್ಯತೇ । ಜಂಗಮಾರ್ಚನಹೀನೇನ ಯತ್ಕೃತಂ ಲಿಂಗಪೂಜನಂ ॥ ೫೮ ॥ ವಿಗರ್ಹಣೀಯಂತತ್ಪ್ರೋಕ್ತಂ ಶವಾಲಂಕಾರವದ್ಭುವಿ । ನಾಯೋಽಯಥಾಗ್ನಿಸಾನ್ನಿಧ್ಯಾದ್ವಿನಾಪಾತುಂಕ್ಷಮಃಪಯಃ ॥ ೫೯ ॥ ತಥಾಜಂಗಮಹೀನಶ್ಚಾನ್ನಭೋಕ್ತುಂಕ್ಷಮತೇ ಶಿವಃ । ಲಿಂಗಜಂಗಮನಾಮ್ನಾಸ್ಯದ್ವಯೇನ ಪರಮೇಶ್ವರಃ ॥ ೬೦ ॥ ನಾಭುಕ್ತ್ವಾತೃಪ್ತಿಮಾಯಾತಿ ಗಂಡಭೇರುಂಡವದ್ಭುವಿ । ನವಾಂಕುರಿತಮುರ್ವೀಜಾಮುಕ್ತ್ವಾಸಂತತಮಾದರಾತ್ ॥ ೬೧ ॥ ಕೃತ್ವಾಲವಾಲಂಪಾನೀಯಧಾನಂನೀರಸದಾರುಣಿ । ಯಥಾಥೋರಗಮುತ್ಸೃಜ್ಯಕ್ಷೀರದಾನಂಶಿಲಾಮಯೇ ॥ ೬೨ ॥ ಸತ್ಯಾಸ್ಯೇಽಶನಬುಭಾಗಾಯ ಭೋಕ್ತುಂಕಬಳದಾಪನಂ । ಮೂರ್ಧ್ನಿಸ್ಥಿತೇಮಂಗಳಾರ್ಥೇ ಜಾನುಸ್ಥಂತಂಡುಲಾಂಜಲಿಃ ॥ ೬೩ ॥ ಯಥಾತಥಾಲಿಂಗಪೂಜಾ ಜಂಗಮಾರ್ಚನವರ್ಜಿತಾ । ತಸ್ಮಾದ್ಭಕ್ತಂತ್ವಮೇ

---

ಜಂಗಮಪೂಜೆಯನ್ನು ಮಾಡಿ ಲಿಂಗಪೂಜೆಯನ್ನು ಮಾಡುವುದು ಮಧ್ಯಮವು ॥ ೫೬ ॥ ಜಂಗಮಾರ್ಚನೆಯನ್ನು ಮಾಡದೆ ಲಿಂಗಪೂಜೆಯನ್ನೇ ಮಾಡುವುದು ಅಧಮವು. ಲಿಂಗಪೂಜೆಯು ದೇಹಕ್ಕೆ ಮಾಡಿದ ಉಪಚಾರವೆಂದು ಹೇಳಲ್ಪಡುತ್ತದೆ ॥ ೫೭ ॥ ಜಂಗಮಪೂಜೆಯು ಪ್ರಾಣಕ್ಕೆ ಮಾಡಿದ ಉಪಚಾರವೆಂದು ಹೇಳಲ್ಪಡುತ್ತದೆ. ಜಂಗಮಪೂಜೆಯಿಲ್ಲದೆ ಯಾವ ಲಿಂಗಪೂಜೆಯು ಮಾಡಲ್ಪಡುತ್ತದೋ ॥ ೫೮ ॥ ಅದು ಹೆಣಕ್ಕೆ ಮಾಡುವ ಶೃಂಗಾರದಂತೆ ನಿಂದ್ಯವಾದುದೆಂದು ಭೂಮಿಯಲ್ಲಿ ಹೇಳಲ್ಪಡುತ್ತದೆ. ಕಬ್ಬಿಣವು ಬೆಂಕಿಯ ಸಾಮೀಪ್ಯವಿಲ್ಲದೆ ತಾನು ನೀರನ್ನು ಹೇಗೆ ಕುಡಿಯಲಾರದೋ, ಹಾಗೆ ಜಂಗಮಹೀನನಾಗಿ ಶಿವನು ಭುಂಜಿಸಲು ಸಮರ್ಥನಾಗುವುದಿಲ್ಲ. ಗಂಡಭೇರುಂಡಪಕ್ಷಿಯು ಎರಡು ಮುಖದಿಂದಲೂ ಭುಂಜಿಸದಿದ್ದರೆ ಹೇಗೆ ತೃಪ್ತಿಪಡಲಾರದೋ, ಹಾಗೆ ಪರಶಿವನು ಲಿಂಗ-ಜಂಗಮವೆಂಬ ಎರಡು ಮುಖಗಳಿಂದ ಭುಂಜಿಸದಿದ್ದರೆ ತೃಪ್ತನಾಗುವುದಿಲ್ಲ ಹೊಸದಾಗಿ ಮೊಳಕೆಗೊಂಡ ಗಿಡವನ್ನು ಬಿಟ್ಟು, ಒಣಗಿದ ಮರಕ್ಕೆ ಪಾತೆಯನ್ನು ಕಟ್ಟಿ ಪ್ರೀತಿಯಿಂದ ಯಾವಾಗಲೂ ನೀರನ್ನೆರೆಯುವುದು ಹೇಗೋ, ಸಹಜವಾದ ಸರ್ಪವನ್ನು ಬಿಟ್ಟು ಕಲ್ಲಿನಹಾವಿಗೆ ಹಾಲನ್ನು ಎರೆಯುವುದು ಹೇಗೋ ॥ ೬೨ ॥ ಭೋಜನ ಮಾಡುವುದಕ್ಕೆ ಮುಖವಿರಲಾಗಿ ಅದನ್ನು ಬಿಟ್ಟು ಹೆಗ್ಗತ್ತಿಗೆ ತುತ್ತನ್ನು ಕೊಡುವುದು ಹೇಗೋ, ಶಿರಸ್ಸಿರಲಾಗಿ ಮಂಗಳಾರ್ಥವಾದ ಅಕ್ಷತೆಯನ್ನು ಮೊಣಕಾಲಿಗಿಕ್ಕುವುದು ಹೇಗೋ । ಜಂಗಮಾರ್ಚನೆಯನ್ನು ಬಿಟ್ಟು ಮಾಡುವ ಲಿಂಗಾರ್ಚನೆಯೂ ಹಾಗೆಯೇ. ಆದುದ

ವೇತಿಹೃದಿಸಂಚಿಂತ್ಯಪೂಜಯೇತ್ ‖ ೬೪ ‖ ಭಕ್ತೋಪಾಸನಮಾತ್ರಸ್ಯ ಸೇವೈ
ವಸತತಂಭವೇತ್ । ಭಕ್ತಪ್ರಸಾದಮಾತ್ರಸ್ಯ ಪ್ರಸಾದ ಇತಿಭಾವಯೇತ್ ‖
ಅಹಂಭುಜಿಷ್ಯೇಭಕ್ತಾನಾಂ ಭಕ್ತಭೃತ್ಯೋಽಸ್ಮ್ಯನಾರತಂ । ಗತಿರ್ಮೇಶಿವಸದ್ಭ
ಕ್ತಾಸ್ತ ಏವಶರಣಾಮಮ ‖ ೬೬ ‖ ಮದೀಯಾಶ್ಶಿವಸದ್ಭಕ್ತಾಸ್ತದೀಯೋ
ಹಮಹರ್ನಿಶಂ । ವಿಭಾವ್ಯೇಮಾನ್ಪ್ರಸೇವೇತ ಶಿವಭಕ್ತಾನತಂದ್ರಿತಃ ‖ ೬೭ ‖
ಇತಿತ್ವದೀಯವಚನಂ ಭಕ್ತಹೃತ್ಕಮಲಾಸನ । ಭಕ್ತಹೃತ್ಕೌಮುದೀಪಾನಚ
ಕೋರಪರಮೇಶ್ವರ ‖ ೬೮ ‖ ಭಕ್ತಾಸ್ಯದರ್ಪಣವ್ಯಕ್ತಸಾಕಾರ ಕರುಣಾ
ನಿಧೇ । ಭಕ್ತಹೃತ್ಸರಸೀಹಂಸಭಕ್ತಚಿತ್ತಾಬ್ಜಷಟ್ಪದ ‖ ೬೯ ‖ ಭಕ್ತಮಾನ
ಸಶಾಲಾಂತರ್ದೀಪಗೌರೀಮನೋಹರ । ಭಕ್ತಸರ್ವಾಂಗವಿಲಸತ್ಪ್ರಾಣರೂ
ಪಮಹೇಶ್ವರ ‖ ೭೦ ‖ ಗುರುಮೂರ್ತಿಶ್ಶರೀರಂತೇ ಮೂರ್ತಿಶ್ಶ್ರೀಪರಮೇಶ್ವ
ರ । ತತ್ಪ್ರಾಣಶ್ಚರಲಿಂಗಸ್ಯಮೂರ್ತಿರಿತ್ಯಭಿಧೀಯತೇ ‖ ೭೧ ‖ ಪ್ರಾಣಲಿಂಗಾ
ವತಾರಸ್ತೇಮೂರ್ತಿರ್ದೇಹಃಪ್ರಕೀರ್ತ್ಯತೇ । ಸದಾಚಾರ್ಯಾವತಾರಸ್ಸಮೂರ್ತಿ

---

ರಾದ ಭಕ್ತನನ್ನೇ ನೀನೆಂಬುದಾಗಿ ಹೃದಯದಲ್ಲಿ ತಿಳಿದು ಪೂಜಿಸಬೇಕು ‖ ೬೪ ‖ ಯಾವಾ
ಗಲೂ ಭಕ್ತರಿಗೆ ಮಾಡುವ ಸೇವೆಯು ಶಿವನ ಸೇವೆಯೇ ಆಗುವುದು. ಭಕ್ತರ ಪ್ರಸಾ
ದವನ್ನು ಶಿವನ ಪ್ರಸಾದವೆಂದು ಭಾವಿಸಬೇಕು ‖ ೬೫ ‖ ನಾನು ಭಕ್ತರ ಪ್ರಸಾದ
ವನ್ನು ಭುಂಜಿಸುತ್ತೇನೆ. ಯಾವಾಗಲೂ ಭಕ್ತರ ಭೃತ್ಯನಾಗಿರುತ್ತೇನೆ. ನನಗೆ ಶಿವ
ಭಕ್ತರೇ ಗತಿ. ಅವರೇ ನನಗೆ ಸಂರಕ್ಷಕರು ‖ ೬೬ ‖ ಶಿವಭಕ್ತರು ನನ್ನವರು. ನಾನು
ಹಗಲು ರಾತ್ರಿಯೂ ಅವರವನು. ಹೀಗೆಂದು ಭಾವಿಸಿ ಆಲಸ್ಯಾದಿಗಳಿಲ್ಲದೆ ಶಿವಭಕ್ತ
ರನ್ನು ಸೇವಿಸಬೇಕು ‖ ೬೭ ‖ ಹೀಗೆಂಬುದಾಗಿ ನಿನ್ನ ವಚನವಿರುವುದು. ಭಕ್ತರ
ಹೃದಯಕಮಲವೇ ಪೀಠವಾಗುಳ್ಳ ಎಲೈ ಸ್ವಾಮಿಯೇ! ಭಕ್ತರ ಹೃದಯದಲ್ಲಿರುವ
ಬೆಳ್ದಿಂಗಳನ್ನು ಪಾನಮಾಡುವುದರಲ್ಲಿ ಚಕೋರಪಕ್ಷಿಯಾದ ಎಲೈ ಪರಮೇಶ್ವರನೆ !
‖ ೬೮ ‖ ಭಕ್ತರ ಮುಖವೆಂಬ ಕನ್ನಡಿಯಲ್ಲಿ ಪ್ರಕಟವಾದ ಆಕೃತಿಯುಳ್ಳ ಎಲೈ
ದಯಾನಿಧಿಯೇ ! ಭಕ್ತರ ಹೃದಯಸರೋವರದ ಹಂಸಪಕ್ಷಿಯೇ ! ಭಕ್ತರ ಚಿತ್ತವೆಂಬ
ಕಮಲದ ತುಂಬಿಯೇ ! ‖ ೬೯ ‖ ಭಕ್ತರ ಮನೋಮಂದಿರದೊಳಗೆ ಬೆಳಗುವ ದೀಪವಾದ
ಗೌರೀಕಾಂತನೆ ! ಭಕ್ತರ ದೇಹದಲ್ಲೆಲ್ಲ ಪ್ರಕಾಶಿಸುತ್ತಿರುವ ಪ್ರಾಣಸ್ವರೂಪನಾದ
ಮಹೇಶ್ವರನೆ ! ‖ ೭೦ ‖ ಗುರುಮೂರ್ತಿಯು ದೇಹವೇ ನಿನ್ನ ಶರೀರವು. ಜಂಗಮಲಿಂಗ
ಮೂರ್ತಿಯೇ ಆ ನಿನ್ನ ದೇಹದ ಪ್ರಾಣವು ಎಂಬುದಾಗಿ ಹೇಳಲ್ಪಡುತ್ತದೆ ‖ ೭೧ ‖
ಈ ನಿನ್ನ ಶರೀರವು ಪ್ರಾಣಲಿಂಗಾವತಾರವೆಂದು ಹೇಳಲ್ಪಡುತ್ತವೆ. ಆ ಜಂಗಮಮೂ

ರುಕ್ತಾ ಮನೋಹರಾ ॥ ೨೨ ॥ ಯುಕ್ತಾಂಗಸಂಗತೇರೇಷಾ ಸಾ ಪುನಃ ಪ್ರಾಣ
ಸಂಗತೇಃ । ಸಾರಮಂತ್ರಕ್ರಿಯಾಧಾರಮೂರ್ತಿರೇಷಾ ಪ್ರಕಥ್ಯತೇ ॥ ೨೩ ॥ ಚಾರು
ತಂತ್ರಕ್ರಿಯಾಧಾರಾ ಸಾ ಮೂರ್ತಿರುದಿತಾ ಬುಧೈಃ । ಯೋಗಮಜ್ಜನಭೂರೇ
ಷ ಭೋಗಮಜ್ಜನಭೂಸ್ತು ಸಾ ॥ ೨೪ ॥ ಪೂಜಾಪದಮಿಯಂ ಮೂರ್ತಿಃ ಪರಿ
ಚರ್ಯಾಪದಂ ತು ಸಾ । ತ್ರಿಕಾಲಪೂಜಾಂ ಸ್ವೀಕರ್ತುಂ ಶಸ್ತೆಯಂ ಸಾ ಸದಾರ್ಚ
ನಂ ॥ ೨೫ ॥ ಷೋಡಶೈವಾತ್ರ ನೃಪ ವದುಪಚಾರಾ ಹಿತತ್ರ ತು । ಕರಸ್ಪರ್ಶಾ
ಯ ವಿಬುಧೈರ್ಮೂರ್ಧಾತ್ರ ಪರಿಕೀರ್ತ್ಯತೇ ॥ ೨೬ ॥ ಶಿರಸ್ಸ್ಪರ್ಶಾಯ ಚರಣಂ ತ
ತ್ರ ಸಮ್ಯಕ್ಪ್ರಕೀರ್ತಿತಂ । ಆತ್ಮೇಂದ್ರಿಯಾರ್ಪಣಸ್ಥಾನಮೇತದಿತ್ಯುದಿತಂ ಬು
ಧೈಃ ॥ ೨೭ ॥ ಸುಖಭೋಗಾರ್ಪಣಸ್ಥಾನಂ ತದಿತ್ಯುಕ್ತಂ ಮನೀಷಿಭಿಃ । ಏತ
ದ್ರೂಪಾರ್ಪಣಸ್ಥಾನಂ ತದ್ರುಚೇರರ್ಪಣಸ್ಥಲಂ ॥ ೨೮ ॥ ಶುದ್ಧಪ್ರಸಾದವಿಭ
ವಸೂಚನಂ ಚಾತ್ರ ನಿಶ್ಚಿತಂ । ಸಿದ್ಧಪ್ರಸಾದಸಂಸೇವಾತತ್ರ ಸಂಕೀರ್ತ್ಯತೇ ಬು

---

ರ್ತಿಯು ಆಚಾರ್ಯಸ್ವರೂಪವೆಂದು ಹೇಳಲ್ಪಡುತ್ತದೆ ॥೨೨॥ ನಿನ್ನ ಮೂರ್ತಿಯು ದೇಹ
ದಲ್ಲಿ ಬೆರೆದು ತೋರುವುದು. ಆ ಜಂಗಮಮೂರ್ತಿಯು ಪ್ರಾಣದಲ್ಲಿ ಬೆರೆದಿರುವುದು.
ಈ ನಿನ್ನ ಶರೀರವು ಶ್ರೇಷ್ಠವಾದ ಮಂತ್ರ ಕ್ರಿಯೆಗಳಿಗೆ ಆಶ್ರಯವಾದುದೆಂದು ಹೇಳಲ್ಪ
ಡುತ್ತದೆ ॥೨೩॥ ಆ ಜಂಗಮಮೂರ್ತಿಯು ಮನೋಹರವಾದ ತಂತ್ರಕ್ರಿಯೆಗಳಿಗೆ ಆಶ್ರ
ಯವಾದುದೆಂದು ವಿದ್ವಾಂಸರಿಂದ ಹೇಳಲ್ಪಡುತ್ತದೆ. ಈ ನಿನ್ನ ಮೂರ್ತಿಯು ಯೋಗ
ಮಜ್ಜನಕ್ಕೆ ಆಶ್ರಯವು ಆ ಜಂಗಮಮೂರ್ತಿಯಾದರೋ ಭೋಗಮಜ್ಜನಕ್ಕೆ
ಆಶ್ರಯವು ॥೨೪॥ ಈ ನಿನ್ನ ಮೂರ್ತಿಯು ಪೂಜಾಶ್ರಯವಾದುದು. ಅದಾದರೋ
ಸೇವಾಶ್ರಯವಾದುದು. ಇದು ಮೂರುಕಾಲದ ಪೂಜೆಯನ್ನು ಸ್ವೀಕರಿಸುವುದಕ್ಕೆ
ಪ್ರಶಸ್ತವಾಗಿದೆ. ಅದು ಸದಾಕಾಲದಲ್ಲಿ ನಡೆಯುವ ಪೂಜೆಯನ್ನು ಸ್ವೀಕರಿಸುವುದಕ್ಕೆ
ಪ್ರಶಸ್ತವಾಗಿದೆ ॥೨೫॥ ಈ ನಿನ್ನ ಮೂರ್ತಿಯಲ್ಲಿ ೧೬ ಉಪಚಾರಗಳು ಮಾಡಲ್ಪಡು
ತ್ತವೆ. ಆ ಜಂಗಮಮೂರ್ತಿಯಲ್ಲಾದರೋ ರಾಜನಿಗೋಪಾದಿಯಲ್ಲಿ ಅನಂತವಾದ
ಉಪಚಾರಗಳು ಮಾಡಲ್ಪಡುತ್ತವೆ. ಇಲ್ಲಿ ನಿನ್ನ ಶಿರಸ್ಸು ಹಸ್ತ ಸ್ಪರ್ಶನಕ್ಕೆ ಉಚಿತ
ವಾದುದೆಂದು ವಿದ್ವಾಂಸರಿಂದ ಹೇಳಲ್ಪಡುತ್ತದೆ ॥೨೬॥ ಅಲ್ಲಾದರೋ ಪಾದವು ತಲೆಯ
ಸ್ಪರ್ಶನಕ್ಕೆ ಉಚಿತವಾದದೆಂದು ಚೆನ್ನಾಗಿ ಹೇಳಲ್ಪಡುತ್ತದೆ. ಈ ನೀನು ಇಂದ್ರಿ
ಯಾರ್ಪಣಸ್ಥಲವೆಂಬುದಾಗಿ ವಿಬುಧರಿಂದ ಹೇಳಲ್ಪಡುತ್ತೀಯೆ ॥೨೭॥ ಅದಾದರೋ ಭೋ
ಗಾರ್ಪಣಸ್ಥಾನವೆಂದು ಹೇಳಲ್ಪಡುತ್ತದೆ. ಇದು ರೂಪಾರ್ಪಣಸ್ಥಾನವು. ಅದು
ರುಚಿಯ ಅರ್ಪಣಸ್ಥಲವು ॥೨೮॥ ಇಲ್ಲಿ ಶುದ್ಧಪ್ರಸಾದಸೇವೆಯ ವೈಭವವು ಸೂಚಿಸ

ಧ್ಯೈಃ ॥ ೭೯ ॥ ಅತ್ರೋಚ್ಯತೇನಿಜತನುಮನೋಗುಣನಿವೇದನಂ । ತತ್ರೋ
ಚ್ಯತೇ ನಿಜತನುಮನೋಧನನಿವೇದನಂ ॥ ೮೦ ॥ ತಸ್ಮಾದ್ಗುರೌಜಂಗಮೇಚ
ಸಮದೃಷ್ಟಿಂ ಪ್ರದೇಹಿಮೇ । ದೇವತ್ವದ್ಗತಚಿತ್ತಸ್ಯತ್ವಂಭಕ್ತಶ್ಚೇತಿಯಾಭಿ
ಧಾ ॥ ೮೧ ॥ ಸಾಸರ್ಷಪಸಮಾಸಾಪಿಮಾಸ್ತುಶಂಕರಸರ್ವದಾ । ಜಂಗಮೋ
ಯಂಲಿಂಗಮಿದ ಮಿತಿತ್ಯಕ್ತ್ವಾವಿಭಾವನಾಂ ॥ ೮೨ ॥ ತ್ವಮೇವೇತ್ಯತ್ರಯಾಬು
ದ್ಧಿಸ್ತಾಂ ದೇಹಿಗಿರಿಜಾಪತೇ । ಸದಾತಾದೃಶಭಕ್ತೇಷುಭೂಯಾನ್ಮಜ್ಜನ್ಮಪು
ಣ್ಯತಃ ॥ ೮೩ ॥ ಭೇದೋದ್ವಾವಿತ್ಯೇಕಇತ್ಯಭೇದೋಮೇಮಾಸ್ತುಶಂಕರ ।
ಸದ್ಭಕ್ತಗೋಷ್ಠೀವಿರಹಸ್ಸರ್ವದಾಮಾಸ್ತುಮೇಶಿವ ॥ ೮೪ ॥ ಏತನ್ನಸಂಭವಿ
ಸ್ಯಾಚ್ಚೇತ್ಸದ್ಭಕ್ತಜನಮಂದಿರೇ । ಯತ್ಕಿಂಚನಾಪಿವಾಜನ್ಮಮಹ್ಯಂದೇಹಿಮ
ಹೇಶ್ವರ ॥ ೮೫ ॥ ದಾಸೀಭೂತ್ವಾಗೃಹೇಕರ್ಮವಿಧಾತುಮಥವಾಕೃಷಿಂ । ಕ
ರ್ತುಮುಕ್ತ್ವಾಪಿವಾಭೂತ್ವಾಸ್ಥಾತುಮಾಲಕ್ಷ್ಯವಾಗೃಹಂ ॥ ೮೬ ॥ ಶ್ವಾಪಿಭೂ
ತ್ವಾಥವಾಸ್ಥಾತುಮಿಚ್ಛಾವ್ಯೈತದ್ವಿಧೇಹಿಮೇ । ಮುಕ್ತಿಂನಯಾಚೇತ್ವಾಂಶಂ

---

ಲ್ಪಡುತ್ತದೆ. ಅಲ್ಲಿ ಸಿದ್ಧಪ್ರಸಾದಸೇವೆಯು ವೈಭವವು ಹೇಳಲ್ಪಡುತ್ತದೆ ॥ ೭೯ ॥ ಇಲ್ಲಿ
ತನ್ನ ತನುಮನೋಗುಣಗಳ ಅರ್ಪಣೆಯು ಹೇಳಲ್ಪಡುತ್ತದೆ. ಅಲ್ಲಿ ತನ್ನ ತನುಮ
ನೋಧನಗಳ ಅರ್ಪಣೆಯು ಹೇಳಲ್ಪಡುತ್ತದೆ ॥ ೮೦ ॥ ಆದುದರಿಂದ ಗುರುವಿನಲ್ಲೂ ಜಂ
ಗಮನಲ್ಲೂ ಕೂಡ ಸಮಾನವಾದ ದೃಷ್ಟಿಯನ್ನು ನನಗೆ ಕೊಡು. ಎಲೈ ಸ್ವಾಮಿ
ಯೆ! ನಿನ್ನಲ್ಲಿ ಮನೋಲೀನವಾಗಿರತಕ್ಕವನಿಗೆ ನೀನು ಭಕ್ತನಾಗಿರುವೆಯೆಂಬುದಾಗಿ
ಯಾವ ಭೇದವಾದವುಂಟೋ ॥ ೮೧ ॥ ಆಭಾವವು ಸಾಸಿವೆಯಷ್ಟಿದ್ದರೂ ನನ್ನಲ್ಲುಂಟಾ
ಗಬಾರದು. ಇವನು ಜಂಗಮ, ಇದು ಲಿಂಗ, ಎಂಬ ಭಾವನೆಯನ್ನು ಬಿಟ್ಟು, ಇವೆ
ರಡೂ ನೀನೇಎಂಬ ಮತಿಯಾವುದುಂಟೋ ಅದನ್ನು ನನಗೆ ಅನುಗ್ರಹಿಸು. ಅಂಥ
ಭಾವವುಳ್ಳ ಭಕ್ತರಲ್ಲಿ ಪುಣ್ಯವಶದಿಂದ ಯಾವಾಗಲೂ ನಾನು ಜನಿಸುವಂತಾಗಲಿ ॥ ೮೨ ॥
ಎರಡೆಂಬ ಭೇದವೂ ಒಂದೆಂಬ ಅಭೇದವೂ ನನಗೆ ಉಂಟಾಗಬಾರದು. ಎಲೈ ಶಿವನೇ
ಸದ್ಭಕ್ತಸಮೂಹವನ್ನು ಬಿಟ್ಟಿರುವಿಕೆಯು ಯಾವಾಗಲೂ ನನಗುಂಟಾಗಬಾರದು ॥
ಇದು ನನಗೆ ಸಂಭವಿಸದೆ ಹೋಗುವುದಾದರೆ, ಸದ್ಭಕ್ತರ ಮನೆಯಲ್ಲಿ ಯಾವುದಾದ
ರೊಂದು ಜನ್ಮವನ್ನು ಎತ್ತುವಂತೆಯಾದರೂ ಅನುಗ್ರಹಿಸು ॥ ೮೫ ॥ ಅವರ ಮನೆ
ಯಲ್ಲಿ ಆಳಾಗಿ ಪರಿಚಾರಿಕೆಯನ್ನು ಮಾಡಿಕೊಂಡಿರುವುದಕ್ಕಾಗಲೀ, ಅಥವಾ ಎತ್ತಾಗಿ
ಬೇಸಾಯುವನ್ನು ಮಾಡಿಕೊಂಡಿರುವುದಕ್ಕಾಗಲೀ, ಅಥವಾ ನಾಯಾಗಿ ಅವರ ಮನೆ
ಯನ್ನು ಕಾಯ್ದುಕೊಂಡಿರುವುದಕ್ಕಾಗಲೀ ಅಪೇಕ್ಷಿಸುತ್ತೇನೆ ಈ ವರವನ್ನು ನನಗೆ
ಅನುಗ್ರಹಿಸು. ಎಲೈ ಸ್ವಾಮಿಯೆ! ನಿನ್ನನ್ನು ನಾನು ಮುಕ್ತಿಯನ್ನು ಬೇಡುವು

ಭೂತಾವದೇವಾಲವಮಾತ್ಮನಃ ‖ ೯೭ ‖ ಇತಿ ಸಮ್ಯಕ್ಸ್ತುತಿಂಕೃತ್ವಾಪಂಡಿತಾರಾಧ್ಯಪುಂಗವಃ । ಶಿವಲಿಂಗಾರ್ಚನಾಂಕುರ್ವನ್ನತಿಷ್ಠದನುರಾಗತಃ ‖ ೯೮ ‖

ಇತಿ......ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತೆ ದೀಕ್ಷಾಪ್ರಕರಣೆ ತತ್ಪಂಡಿತಾರಾಧ್ಯ ಶಿವಪೂಜಾ ಸಂಕೀರ್ತನೆ ತಜ್ಜಂಗಮ ಭಕ್ತಿವೈಶಿಷ್ಯಕಥನಂ ನಾಮವಿಂಶೋಽಧ್ಯಾಯಃ.

## ಅಥಏಕವಿಂಶೋಽಧ್ಯಾಯಃ.

(ಬಸವೇಶೋತ್ಪತ್ತಿತನ್ಮಾಹಾತ್ಮ್ಯಕಥನಂ.)

ಅಥಸಂತುಷ್ಟಮನಸಸ್ತಂದೃಷ್ಟ್ವಾಪಂಡಿತೇಶ್ವರಂ । ಸೂರಾಂಬಾವೇಮನಾರಾಧ್ಯಮುಖಾಜಂಗಮಪುಂಗವಾಃ ‖೧‖ ಇತಿ ಸಂಕೀರ್ತಯಾಮಾಸುರತ್ಯಾಶ್ಚರ್ಯಸಮನ್ವಿತಾಃ । ಮಹನೀಯತರಂಶ್ರೀಮತ್ಪಂಡಿತಾರಾಧ್ಯವೈಭವಂ ‖

---

ದಿಲ್ಲ. ನನಗೆ ಅಷ್ಟೇ ಸಾಕು ‖೯೭‖ ಹೀಗೆ ಪಂಡಿತಾರಾಧ್ಯಶ್ರೇಷ್ಠನು ಚೆನ್ನಾಗಿ ಸ್ತೋತ್ರವನ್ನು ಮಾಡಿ, ಪ್ರೀತಿಯಿಂದ ಶಿವಲಿಂಗಪೂಜೆಯನ್ನು ಮಾಡುತ್ತಿದ್ದನು. ‖೯೮‖

ಎಂಬಲ್ಲಿಗೆ ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಎಂಬ ಕನ್ನಡ ಟಿಪ್ಪಣದಲ್ಲಿ ೨೦ ನೆಯ ಅಧ್ಯಾಯವು ಮುಗಿದುದು.

## ೨೧ ನೆಯ ಅಧ್ಯಾಯವು.

(ಬಸವೇಶ್ವರನ ಉತ್ಪತ್ತಿ ಮತ್ತು ಮಹಿಮೆ—ಇವುಗಳ ವರ್ಣನೆಯು.)

ಬಳಿಕ ಸೂರಾಂಬೆಯೂ, ವೇಮನಾರಾಧ್ಯನೊಡಲಾದ ಜಂಗಮಶ್ರೇಷ್ಠರೂ ಆ ಪಂಡಿತಾರಾಧ್ಯನನ್ನು ನೋಡಿ ಸಂತೋಷಚಿತ್ತರಾಗಿ, ಅತ್ಯಾಶ್ಚರ್ಯದೊಡನೆ ಕೂಡಿ ಮುಂದೆ ಹೇಳುವಂತೆ, ಹೊಗಳುವವರಾದರು—ಶ್ರೀಮತ್ಪಂಡಿತಾರಾಧ್ಯನ ವೈಭವವು ಅತ್ಯಂತ

ಕೇನವರ್ಣಯಿತುಂಶಕ್ಯಮವಾಙ್ಮಾನಸಗೋಚರಂ । ಏಷಾಜಂಗಮಸದ್ಭಕ್ತಿರೇತಾದೃಙ್ಮಹಿಮಾಪಿಚ ॥ ೩ ॥ ಕಸ್ಯವಾವಿದ್ಯತೇಭೂಮಾವಾಜ್ಞಾಸಿದ್ಧಿರಪೀದೃಶೀ । ಸಾಧು ಶ್ರೀಪಂಡಿತಾರಾಧ್ಯ ಸಾಧುಶ್ರೀ ಪಂಡಿತೇಶ್ವರ ॥೪॥ ಸಾಧು ಶ್ರೀಪಂಡಿತಸ್ವಾಮಿನ್ಸಾಧು ಶ್ರೀ ಮಲ್ಲಿಕಾರ್ಜುನ । ಸಾಧುನಂದಿತಸತ್ಕೀರ್ತೇಸಾಧುಪಂಡಿತವಂದಿತ ॥೫॥ ಸಾಧುಭಕ್ತಕುಲಾಚಾರ್ಯಸಾಧುಶ್ರೀಪಂಡಿತೋತ್ತಮ । ವೀರಮಾಹೇಶ್ವರಾಚಾರೇದಕ್ಷಃಪ್ರಕ್ಷೀಣಕಲ್ಮಷಃ ॥೬॥ ವಿಶುದ್ಧಭಕ್ತಿಃಪಾಪೌಘಘರಟ್ಟೋಬಸವೇಶ್ವರಃ । ಜಂಗಮೇಯೋಜಯಾಮಾಸಪುರಾಪ್ರಾಣಾನಿತಿಸ್ಫುಟಂ ॥೭॥ ಶ್ರುತಂಕಥಾಭಿಸ್ತತ್ಸರ್ವಮಿದಾನೀಂತ್ವಯಿವೀಕ್ಷಿತಂ । ಪುರಾಕಿಲಾಷ್ಟತನವೋಹರಿಬ್ರಹ್ಮಾಖಿಲಂಜಗತ್ ॥೮॥ ಗೌರೀವಿವಾಹೋಗರಳಧೃತಿರಿತ್ಯಾದಿಕಾರ್ಯತಃ । ಪ್ರಾಗೇವಶಂಭುರೀಶಾನೋಮಹಾದೇವಸ್ಸನಾತನಃ ॥೯॥ ಏಕಾದಿಃಪರಮೇಕಾಂತೇವರ್ತಮಾನೋ ಮಹೇಶ್ವರಃ। ದ್ವಿತೀಯಂಭುರಿತ್ಯುಚ್ಚೈಃಖ್ಯಾತಂಶ್ರೀವೃಷಭಾಭಿಧಾಂ ॥೧೦॥ ಮೂರ್ತಿಮಾಸ್ಥಾಯತಾಮೇವಕೃತ್ವಾವಾಹನಮಾತ್ಮನಃ । ಚರನ್ನಿಚ್ಛಾವಶೇನೈವ

---

ಮಹತ್ತರವಾದುದು ॥೩॥ ವಾಙ್ಮನಸ್ಸುಗಳಿಗೆ ಗೋಚರವಾಗದಿರುವ ಅದನ್ನು ವರ್ಣಿಸುವುದಕ್ಕೆ ಯಾರಿಗೆ ಶಕ್ಯವು? ಭೂಮಿಯಲ್ಲಿ ಇಂತಹ ಜಂಗಮಭಕ್ತಿಯೂ, ಇಂತಹ ಮಹತ್ವವೂ, ಇಂಥ ಆಜ್ಞಾಸಿದ್ಧಿಯುಕೂಡ ಯಾರಿಗೆತಾನೇ ಇರುವುದು? ಭೋ ಪಂಡಿತಾರಾಧ್ಯನೇ! ಭಾಪು, ಶ್ರೀ ಪಂಡಿತೇಶ್ವರನೆ! ಭಾಪು, ಶ್ರೀ ಪಂಡಿತಸ್ವಾಮಿಯೆ! ಭಾಪು ॥೫॥ ಶಿವಭಕ್ತ ಕುಲಾಚಾರ್ಯನಾದ ಪಂಡಿತಾರಾಧ್ಯನೇ! ಭಾಪು! ಭಾಪು!! ವೀರಮಾಹೇಶ್ವರಾಚಾರವನ್ನು ನೆರವೇರಿಸುವುದರಲ್ಲಿ ಸಮರ್ಥನೂ, ಪಾಪರಹಿತನೂ ॥೬॥ ನಿರ್ಮಲಭಕ್ತಿಸಂಪನ್ನನೂ ದುರಿತವನ್ನು ನುಚ್ಚುನುರಿ ಮಾಡುವುದರಲ್ಲಿ ಬೀಸುಗಲ್ಲಿನಂಥವನೂ ಆದ ಬಸವೇಶ್ವರನು ಪೂರ್ವದಲ್ಲಿ ತನ್ನ ಪ್ರಾಣಗಳನ್ನು ಜಂಗಮಮೂರ್ತಿಯಲ್ಲಿ ಸಂಯೋಜಿಸಿದ್ದನೆಂಬುದನ್ನು ಕಥೆಯ ರೂಪದಿಂದ ಕೇಳಿದ್ದೆವು. ಅದೆಲ್ಲವನ್ನೂ ಈಗ ನಿನ್ನಲ್ಲಿ ಪ್ರತ್ಯಕ್ಷವಾಗಿ ಕಂಡೆವು. ಆ ಪೂರ್ವದ ಕಥೆಯೆಂತೆಂದರೆ —ಈಶ್ವರನ ಅಷ್ಟಮೂರ್ತಿಗಳೂ, ವಿಷ್ಣುಬ್ರಹ್ಮರೂ, ಸಕಲಜಗತ್ತೂ ಉದಿಸುವುದಕ್ಕೆ ಮುಂಚೆಯೇ, ಗೌರೀವಿವಾಹ, ವಿಷಪಾಲೀಲೆ ಇತ್ಯಾದಿ ಕಾರ್ಯಗಳು ಜರುಗುವುದಕ್ಕೆ ಮೊದಲೇ ಪುರಾತನನಾದ ಪರಶಿವನೊಬ್ಬನೇ ಏಕಾಂತದಲ್ಲಿರುತ್ತ, ದ್ವಿತೀಯಶಂಭುವೆಂದು ಪ್ರಸಿದ್ಧವಾದ ವೃಷಭನೆಂಬ ಹೆಸರಿನ ಮೂರ್ತಿಯನ್ನು ತಾನೇ ಧರಿಸಿ. ಅದನ್ನೇ ತನಗೆ ವಾಹನವನ್ನಾಗಿ ಮಾಡಿಕೊಂಡು, ಸ್ವೇಚ್ಛೆಯಿಂದ ತಿರುಗಾಡಿ, ಲೋಕಗಳನ್ನು ಸೃಷ್ಟಿಸಿದನು

ಭುವನಾನ್ಯಸೃಜತ್ಪ್ರಭುಃ ‖೧೧‖ ತತಶ್ಶಿಲಾದಾಖ್ಯಮುನೌತಪಸಾರಾಧ್ಯಶಂಕ
ರಂ । ತುಷ್ಟಂಪ್ರಕುರ್ವತಿಶಿವೋಭೂತ್ವಾಸ್ವಯಮಯೋನಿಜಃ ‖೧೨‖ ನಂದಿ
ಕೇಶಾಭಿಧಾನಂಚಧೃತ್ವಾಲೋಕೇಷುಸರ್ವತಃ । ಶಿಲಾದಪುತ್ರೋನಂದೀಶಇತಿ
ಪ್ರಖ್ಯಾತಿಮಾಗತಃ ‖೧೩‖ ವೀರಮಾಹೇಶ್ವರಾಚಾರವೃತ್ತ್ಯಾಭೂಲ್ಲೋಕ
ಪಾವನಃ । ಇಂಗುಳೇಶ್ವರಪೂರ್ವಶ್ರೀಬಾಗವಾಡಾಹ್ವಯೆಶುಭೆ ‖೧೪‖ ಮಹಾ
ಗ್ರಹಾರೆಕರ್ಣಾಟದೇಶಭೂಷಣತಾಂಗತೆ । ಮಂಡಗೇ ಶ್ರೀಮಾಧವಾರ್ಯಪ
ತ್ನ್ಯಾಶ್ಶುಭತರಾಕೃತೇಃ ‖ ೧೫ ‖ ಮಾದಾಂಬಾಯಾನಂದಿಕೇಶಶುಭವ್ರತಫ
ಲೋದಯಾತ್। ಸದ್ಭಕ್ತಾನಾಂಹಿತಾರ್ಥಾಯಮಹೇಶೋ ಬಸವಾಖ್ಯಯಾ‖
ಸೂನುಸ್ಸಮುದಭೂದ್ಭೂಮೇಸ್ಸ್ವಯಂಭೂಲಿಂಗಮೂರ್ತಿವತ್ । ಅಶ್ಮನಃ
ಕಾಂಚನಂಯದ್ವದ್ಯಥಾಕಾಷ್ಠಾದ್ಧುತಾಶನಃ ‖೧೭‖ ಲಿಂಗಮೂರ್ತೇರ್ಜಂಗಮ
ಸ್ಯಯೋಗಾತ್ಕೂಡಲಸಂಗಮಃ । ಇತಿಖ್ಯಾತಃ ಪ್ರಾಣಲಿಂಗಂತಸ್ಯಶ್ರೀಸಂಗ
ಮೇಶ್ವರಃ ‖೧೮‖ ಅಭೂದ್ಯದಾತದಾತಸ್ಯಶಿವಭಕ್ತಿಸ್ಸಹೋದಿತಾ । ತತ್ಪೂ
ರ್ವಮೇವಮಹಿಮಾಜಾತಸ್ತ್ರೈಲೋಕ್ಯವಿಶ್ರುತಃ ‖೧೯‖ ಜಾತಮಾತ್ರೇನ
ರುವಕೆಯಥಾಗಂಧಃಪ್ರಜಾಯತೆ । ಶ್ರೀಲಿಂಗಸೌಖ್ಯಾನುಭವೇಸ್ತ್ಯಪಾನತ್ವ

---

‖೧೧‖ ಬಳಿಕ ಶಿಲಾದನೆಂಬ ಋಷಿಯೊಬ್ಬನು ತಪಸ್ಸಿನಿಂದ ಶಿವನನ್ನು ಅರ್ಚಿಸಿ, ಸಂ
ತೋಷಪಡಿಸಲು, ಪರಶಿವನು ಅಯೋನಿಜನಾಗಿ ನಂದಿಕೇಶನೆಂಬ ಹೆಸರಿನಿಂದ ಆ ಶಿಲಾ
ದರ್ಷಿಯ ಪುತ್ರನಾಗಿ ಜಗತ್ಪ್ರಸಿದ್ಧಿಯನ್ನು ಪಡೆದನು ‖೧೩‖ ವೀರಮಾಹೇಶ್ವರಾಚರ
ಣೆಯಲ್ಲಿರುತ್ತ ಲೋಕಪರಿಶುದ್ಧನಾಗಿದ್ದನು. ಭೂಲೋಕದಲ್ಲಿ ಕರ್ಣಾಟದೇಶಕ್ಕೆ ಆಭ
ರಣದಂತಿರುವ ಇಂಗುಳೇಶ್ವರಬಾಗವಾಡಿಯೆಂಬ ಅಗ್ರಹಾರದಲ್ಲಿದ್ದ ಮಂಡಗೆಮಾಧ
ವಾರ್ಯನ ಪತ್ನಿಯಾದ ಮಂಗಳಾಂಗಿಯಾದ ಮಾದಾಂಬೆಯು ಆಚರಿಸಿದ ನಂದೀಶ್ವರ
ವ್ರತಮಹತ್ವದಿಂದ ಪರಶಿವನು ಭಕ್ತಜನರ ಹಿತಕ್ಕೋಸುಗ ಬಸವನೆಂಬ ಹೆಸರಿನಿಂದ ‖
ಕಲ್ಲಿನಿಂದ ಚಿನ್ನವು ಹುಟ್ಟುವಂತೆಯೂ, ಮರದಿಂದ ಬೆಂಕಿಯು ಹುಟ್ಟುವಂತೆಯೂ, ಭೂ
ಮಿಯಿಂದ ಲಿಂಗವು ಒಡೆದು ಮೂಡುವಂತೆಯೂ ಮಾಧವಮಾದಾಂಬೆಯರ ಕುಮಾರ
ನಾಗಿ ಉದ್ಭವಿಸಿದನು ‖೧೭‖ ಶಿವಲಿಂಗ ಜಂಗಮಲಿಂಗಗಳ ಸಂಯೋಗದ ದೆಸೆಯಿಂದ
ಲೇ "ಕೂಡಲಸಂಗಮ" ನೆಂದು ವಿಖ್ಯಾತನಾದ ಶ್ರೀ ಸಂಗಮೇಶ್ವರನು ಆತನಿಗೆ
ಪ್ರಾಣಲಿಂಗವಾಗಿದ್ದನು ‖೧೮‖ ಆತನುದಿಸುವಾಗಲೇ ಶಿವಭಕ್ತಿಯೂ ಆತನ ಜತೆಯ
ಲ್ಲಿಯೇ ಉದಿಸಿತು. ಅದಕ್ಕೆ ಮುಂಚೆಯೇ ಮೂರು ಲೋಕದಲ್ಲೂ ಪ್ರಸಿದ್ಧವಾದ
ಮಹಿಮೆಯುಕೂಡ ಹುಟ್ಟಿತು. ಹೇಗೆಂದರೆ—ಮರುಗವು ಹುಟ್ಟುವಾಗಲೇ ಪರಿಮ
ಳವೂ ಅದರ ಜತೆಯಲ್ಲೇ ಹುಟ್ಟಿಬರುವಂತೆ. ಬಳಿಕ ಆ ಬಸವೇಶನಿಗೆ ಲಿಂಗವು ಬಾಗತ

ಮಾಗತೇ ॥ ೨೦ ॥ ಗುರುಪಾದಾಂಬುಜಧ್ಯಾನೇ ನವನೀತಪದೇಸತಿ । ಆಮ್ನಾ
ಯ ವಾಕ್ಯನಿವಹೇ ಕಲಾಲಾಪೋತ್ಕರೇಸತಿ ॥ ೨೧ ॥ ಆದಿಮಾರ್ಗೆ ಸ್ಖಲತ್ಪಾದವಿ
ನ್ಯಾಸತ್ವಂಸಮಾಗತೇ । ಸತೀಷುಬಾಲಕ್ರೀಡಾಸುಲಿಂಗಪೂಜಾಸುಖಾಸ್ಪದಂ ॥
ಪ್ರವರ್ಧಮಾನಸರ್ವಾಂಗಶ್ಶಿವಭಕ್ತಿಪರಾಯಣಃ । ಸರ್ವಜ್ಞ ನಂದಿಕೇಶಸ್ಯ
ಮೂರ್ತಿತ್ವಾದ್ಬಸವೇಶ್ವರಃ ॥ ೨೩ ॥ ಸಮಭೂದಪ್ರಯಾಸೇನ ಸರ್ವವಿದ್ಯಾ
ವಿಚಕ್ಷಣಃ । ಕರ್ಮಕಾಂಡೋಕ್ತಾಖಿಲೋಪನಯನಾದಿವಿಧಿಕ್ರಮಃ ॥೨೪॥
ನ್ಯಕ್ಕುರ್ವನ್ವೀರಶೈವಾಗಮೋಕ್ತಮಾರ್ಗಾನುಸಾರತಃ । ಧರ್ಮಾನ್ಸ್ವಪೂರ್ವ
ವರ್ಣಾರ್ಹಾನಸ್ಮರನ್ಮಕಾತ್ವಸ್ಥಿತೇಸತಿ ॥ ೨೫ ॥ ಬಲದೇವಾಹ್ವಯೋದಂಡ
ನಾಥಸ್ಸ್ವತನಯಾಂಶುಭಾಂ । ಅದಾದ್ಗಂಗಾಭಿಧಾಂತಸ್ಮೈತತೋವನಿತಯಾ
ಸಹ ॥ ೨೬ ॥ ಸೋದರ್ಯಾಚಯುತೋಭೂತ್ವಾದ್ರಷ್ಟುಂನಿಜಗುರುಂಮುದಾ ।
ತ್ರಿಷುಲೋಕೇಷು ವಿಖ್ಯಾತಂಸ್ಥಾನಂಕೂಡಲಸಂಗಮಂ ॥ ೨೭ ॥ ಸಮಭ್ಯೇ
ತ್ಯಚಸಾಷ್ಟಾಂಗಂ ಸತೋಭೂತ್ಸಂಗಮೇಶ್ವರಂ । ಗುರುಮೂರ್ತಿಂ ಸಮಾ
ಸ್ಥಾಯಪ್ರತ್ಯಕ್ಷಃ ಪರಮೇಶ್ವರಃ ॥ ೨೮ ॥ ತಸ್ಮೈಪ್ರಸಾದಂದತ್ವಾತಂಕರು

---

ವಾದ ಸೌಖ್ಯವನ್ನನುಭವಿಸುವಿಕೆಯೇ ಸ್ತನ್ಯಪಾನವಾಗಲು ॥ ೨೦ ॥ ಗುರುಪಾದಧ್ಯಾನ
ವೇ ಬೆಣ್ಣೆಯಾಗಲು, ವೇದವಚನಗಳೇ ತೊದಲ್ನುಡಿಯಾಗಲು ॥ ೨೧ ॥ ಪುರಾತನರ ಮಾ
ರ್ಗವನ್ನು ಹಿಡಿದು ನಡೆಯುವಿಕೆಯೇ ತಪ್ಪುಹಜ್ಜೆಯಾಗಲು, ಲಿಂಗಾರ್ಚನೆಗಳು ಮುಕ್ಕಾ
ಳಾಟಿಕೆಯಾಗಲು ॥ ೨೨ ॥ ಅವನು ವೃದ್ಧಿಹೊಂದಿದ ಸರ್ವಾಂಗವುಳ್ಳವನಾಗಿ, ಶಿವಭಕ್ತಿ
ಸಂಪನ್ನನಾಗಿ ಒಪ್ಪಿದನು. ಆ ಬಸವೇಶ್ವರನು ಸರ್ವಜ್ಞನಾದ ನಂದಿಕೇಶ್ವರನ ಅವತಾ
ರವಾದುದರಿಂದ ನಿರಾಯಾಸವಾಗಿ ಸಕಲವಿದ್ಯಾವಿಚಕ್ಷಣನಾದನು. ಕರ್ಮಕಾಂಡದಲ್ಲಿ
ಹೇಳಲ್ಪಡುವ ಉಪನಯನ ಮೊದಲಾದ ಕರ್ಮಗಳನ್ನೆಲ್ಲ ತಿರಸ್ಕರಿಸಿ, ಶಿವಾಗಮೋಕ್ತ
ವಾದ ವೀರಶೈವಮಾರ್ಗದಲ್ಲಿ ಚರಿಸುತ್ತ, ತನ್ನ ಪೂರ್ವವರ್ಣಕ್ಕೆ ಉಚಿತವಾದ ಧರ್ಮ
ಗಳನ್ನೆಲ್ಲ ಬಿಟ್ಟು ಇರುತ್ತಿರಲಾಗಿ ॥ ೨೫ ॥ ಬಲದೇವನೆಂಬ ಮಂತ್ರಿಯು ತನ್ನ ಮಗ
ಳಾದ ಗಂಗಾಂಬಿಕೆಯನ್ನು ಆ ಬಸವೇಶನಿಗೆ ಕೊಟ್ಟು ಮದುವೆ ಮಾಡಿದನು. ಬಳಿಕ
ಆತನು ತನ್ನ ಪತ್ನಿಯೊಡನೆಯೂ ಸಹೋದರಿಯಾದ ನೀಲಾಂಬಿಕೆಯೊಡನೆಯೂ ಕೂಡಿ
ತನ್ನ ಗುರುದರ್ಶನವನ್ನು ಮಾಡುವುದಕ್ಕಾಗಿ ತ್ರಿಲೋಕವಿಖ್ಯಾತವಾದ ಕೂಡಲಸಂ
ಗಮಕ್ಷೇತ್ರಕ್ಕೆ ಬಂದು, ಸಂಗಮೇಶ್ವರನನ್ನು ಸಾಷ್ಟಾಂಗವಾಗಿ ನಮಸ್ಕರಿಸಿದನು. ಆ
ಸಂಗಮೇಶ್ವರನು ಗುರುರೂಪವನ್ನು ಧರಿಸಿ ಪ್ರತ್ಯಕ್ಷನಾದನು ॥ ೨೮ ॥ ಆ ಬಸವೇಶನಿಗೆ
ತನ್ನ ಪ್ರಸಾದವನ್ನು ಕೊಟ್ಟು, ಅವನನ್ನು ಕರುಣಾಮೃತ ಸಮುದ್ರದಲ್ಲಿ ಮುಳು

ನಾಮೃತವಾರಿಧೌ । ಮಜ್ಜಯಿತ್ವಾ ವೀರಶೈವ ಸಿದ್ಧಾಂತಾರ್ಥಂ ಪ್ರಬೋ
ಧ್ಯಚ ॥ ೨೯ ॥ ಸ್ವಕಂ ಜಗಾಮ ಲಿಂಗತ್ವಂ ಸೋಽಪಿ ಸಂಪ್ರೀತಮಾನಸಃ । ತ
ಸ್ಥೌ ಮನೋಽಪಹೈರ್ಗೀತೈಸ್ಸಂಸ್ತುವನ್ಸ್ವಗುರುಮಾದರಾತ್ ॥ ೩೦ ॥ ಬಲದೇವಾ
ಖ್ಯೇ ದಂಡನಾಥೇ ಪಂಚತ್ವಮಾಗತೇ । ಬಿಜ್ಜಳಸ್ತಂ ಸಮಾನೀಯ ಬಸವಾರ್ಯಂ
ವಿಚಕ್ಷಣಂ ॥ ೩೧ ॥ ಸ್ವಸರ್ವರಾಜ್ಯಪದವೀದಂಡನಾಥಮಥಾಕರೋತ್ । ತ
ತಃ ಶ್ರೀಬಸವಾಮಾತ್ಯಸ್ತಸ್ಯ ರಾಜ್ಯಂ ವಿಚಾರಯನ್ ॥ ೩೨ ॥ ಲಿಂಗಜಂಗಮ
ಪೂಜಾಂ ಚ ಕುರ್ವನ್ಸಂಪ್ರೀತಮಾನಸಃ । ಶಿವಭಕ್ತಗಣಶ್ರೇಷ್ಠಂ ಸಕಲೇಶ್ವ
ರಮಾಧವಂ ॥ ೩೩ ॥ ಆಚಾರ್ಯಂ ಮಡಿವಾಳೋಪಪದಂ ಮಾಚ್ಯಗಣೋತ್ತ
ಮಂ । ಕಿನ್ನರ ಬ್ರಹ್ಮದೇವಾರ್ಯಪ್ರಮುಖಾನ್ಭಕ್ತಪುಂಗವಾನ್ ॥ ೩೪ ॥ ಸೇವ
ಮಾನಸ್ಸ್ವಶಿಷ್ಯವರೇ ಸಮುದ್ಯದ್ವಿನಯಾನ್ವಿತೇ । ಶ್ರೀ ಚೆನ್ನಬಸವೇ ಸ್ವೀಯಭಕ್ತಿ
ಸಾಹಾಯ್ಯಸಂಗತೇ ॥ ೩೫ ॥ ಮನೋಧನಶರೀರಾಣಾಂ ಸಮರ್ಪಣಪುರಸ್ಸ
ರಂ । ಲಸದ್ವೀರವ್ರತೋದಂಚದ್ಭಕ್ತಿನಿರ್ವಂಚಕಸ್ಥಿತಿಃ ॥ ೩೬ ॥ ಧನಾನಿಸ
ರ್ವಭಕ್ತೇಭ್ಯಃ ಪ್ರಯಚ್ಛನ್ನವಸತ್ಸುಖಂ । ಚೋರಾಃ ಕದಾಚಿದ್ಬಸವಂ ತಂ

---

ಗಿಸಿ, ವೀರಶೈವ ಸಿದ್ಧಾಂತಾಭಿಪ್ರಾಯವನ್ನು ಬೋಧಿಸಿ ॥ ೨೯ ॥ ತಾನು ಲಿಂಗಸ್ವರೂಪ
ವನ್ನು ಧರಿಸಿದನು. ಬಳಿಕ ಬಸವೇಶನು ಕೂಡ ಸಂತುಷ್ಟಮನಸ್ಕನಾಗಿ, ಆ ತನ್ನಗುರು
ವನ್ನು ಪ್ರೀತಿಪುರಸ್ಸರವಾಗಿ ಮನೋಹರವಾದ ಗೀತಗಳಿಂದ ಸ್ತೋತ್ರಮಾಡಿಕೊಂಡು
ಅಲ್ಲೇ ಇರುತಿದ್ದನು ॥ ೩೦ ॥ ಇತ್ತ ಬಲದೇವಮಂತ್ರಿಯು ಮೃತನಾಗಿಹೋಗಲು, ಬಿಜ್ಜ
ಳರಾಜನು ಕುಶಲನಾದ ಬಸವಾರ್ಯನನ್ನು ಬರಮಾಡಿಕೊಂಡು ॥ ೩೧ ॥ ತನ್ನರಾಜ್ಯದ ದಂಡ
ನಾಥಾಧಿಕಾರವನ್ನು ಆತನಿಗೆ ಒಪ್ಪಿಸಿದನು. ಬಳಿಕ ಶ್ರೀ ಬಸವೇಶ್ವರಮಂತ್ರಿಯು ಬಿಜ್ಜ
ಳನರಾಜ್ಯದ ಮೇಲ್ವಿಚಾರಣೆಯನ್ನು ಮಾಡಿಕೊಂಡಿರುತ್ತ, ಲಿಂಗಜಂಗಮಾರ್ಚನೆಯನ್ನು
ನೆರವೇರಿಸುತ್ತ ಸಂತುಷ್ಟಮನಸನಾಗಿ, ಶಿವಭಕ್ತಸಮೂಹಕ್ಕೆಲ್ಲ ಶ್ರೇಷ್ಠನಾದ ಸಕಲೇ
ಶಮಾದರಸನನ್ನೂ, ಗಣಾಧೀಶನಾದ ಮಡಿವಳ ಮಾಚಿದೇವಾಚಾರ್ಯನನ್ನೂ, ಕಿನ್ನರಬ್ರ
ಹ್ಮಾರ್ಯ ಮೊದಲಾದ ಅನೇಕ ಜಂಗಮಶ್ರೇಷ್ಠರನ್ನೂ ಸೇವಿಸುತ್ತಲಿದ್ದನು. ಅತ್ಯಂತ
ವಿನಯಸಂಪನ್ನನಾದ ಶ್ರೀ ಚೆನ್ನಬಸವೇಶ್ವರನು ತನಗೆ ಶಿಷ್ಯನಾಗಿ ತನ್ನ ಭಕ್ತಿಕಾರ್ಯ
ದಲ್ಲಿ ಸಹಾಯಕನಾಗಿರುತ್ತಿರಲು ॥ ೩೫ ॥ ಸಕಲ ಭಕ್ತರಿಗೂ ತನುಮನೋಧನಗಳನ್ನು
ಸಮರ್ಪಿಸುತ್ತ, ವೀರಶೈವ ನಿಯಮಕ್ಕೆ ಅನುಗುಣವಾದ ಸದ್ಭಕ್ತಿಯನ್ನು ನಿರ್ವಂಚನೆ
ಯಿಂದ ನಡೆಯಿಸುವವನಾಗಿ ॥ ೩೬ ॥ ಸರ್ವ ಶಿವಭಕ್ತರಿಗೂ ಬೇಡಿದಷ್ಟು ಧನವನ್ನು ಕೊ
ಡುತ್ತ ಸುಖವಾಗಿದ್ದನು. ಒಂದು ಕಾಲದಲ್ಲಿ ಕಳ್ಳರು ಈ ಬಸವೇಶನನ್ನು ಸೆರೆ ಹಿಡಿಯಬೇ

ಬಂದೀಕರ್ತುಮುದ್ಯತಾಃ ॥ ೩೭ ॥ ಸಂಬಧ್ಯನವ್ಯವಾರ್ತಾಕಶಲಾಟಾನ್ಬವ್ಯವಸ್ತ್ರಕೈಃ । ಆಗತ್ಯಬಸವಾಧೀಶಭಾವಸಂಸ್ಪರ್ಶಮಾತ್ರತಃ ॥೩೮॥ ಸ್ವಭಾವಭಕ್ತಾಸ್ಸಂಜಾತಾಸ್ತೇಽಪಿಚೋರಾಃ ಪರಮಾದ್ಭುತಂ । ಬಾಣಲಿಂಗಾನಿಜಾತಾನಿವಾರ್ತಾಕಾನ್ಯಪಿತತ್ಕ್ಷಣಾತ್ ॥ ೩೯ ॥ ಕದಾಚಿತ್ತಂಸಮಭ್ಯೇತ್ಯಪ್ರೀತ್ಯಾಕಶ್ಚನ ಜಂಗಮಃ । ವರ್ಣಕಾರ್ಥಂಮಹೇಶಾಯ ಮುಕ್ತಾಜಾಲಮಯಾಚತ ॥ ೪೦ ॥ ಜಂಗಮಾಗಮನೇಸ್ವಾತೀವರ್ಷಾತ್ಸನಮುಪಾಗತೇ । ಸ್ವಲೋಚನಪುಟದ್ವಂದ್ವೇಶುಕ್ತಿತಾಮುಪಗಚ್ಛತಿ ॥ ೪೧ ॥ ರಾಶೀಂಸಮಾನನಾಳಾನಾಂಕೃತ್ವಾಮುಕ್ತಾಫಲೋಚ್ಛ್ರಯಂ । ದಿದೇಶತಸ್ಮೈತತ್ಸರ್ವಂಶಿವಭಕ್ತಾಯಭಕ್ತಿಮಾನ್ ॥೪೨॥ ಕಾಮಿಜಂಗಮವರ್ಯೋಽಣಕೋಽನಚಿತ್ಸಕಲಂ ವಸು । ಭಾಂಡಾಗಾರಸ್ಥಪೇಟೀಷುಸ್ಥಿತಂಬಿಜ್ಜಳಭೂಪತೇಃ ॥ ೪೩ ॥ ಯಾಚಿತಸ್ತತ್ಕ್ಷಣಾತ್ತಸ್ಮೈದದೌತದ್ಬಸವೇಶ್ವರಃ । ಅಥಕೋಪಾನ್ನೃಪಾಲೋಽಯಾಚಿತಸ್ವಧನಂತದಾ ॥ ೪೪ ॥ ಬಸವೇಶ್ವರಮಾಹಾತ್ಮ್ಯಾನ್ನಂದಿಮುದ್ರಾಂಕಿತೈರ್ಧನೈಃ । ಪೇಟ್ಯಸ್ತಾಃಪೂರಿತಾಸ್ಸರ್ವಾಹೃಷ್ಟಾಭಕ್ತಾಸ್ತದಾಽಭವನ್ ॥೪೫॥ ವರಜಂಗಮರೂ

---

ಕೆಂದು ಪ್ರಯತ್ನಿಸಿ ॥೩೭॥ ಹೊಸ ಬದನೆ ಮ ವೊಗ್ಗು ಕಾಯಿಗಳನ್ನು ಹೊಸಬಟ್ಟೆಗಳಲ್ಲಿಟ್ಟು ಕೊರಲುಗಳಲ್ಲಿ ಕಟ್ಟಿಕೊಂಡು ಬಂದರು. ಬಸವೇಶನ ಭಾವಸ್ಪರ್ಶಮಾತ್ರದಿಂದಲೇ (ಅವರನ್ನು ಶಿವಭಕ್ತರೇ ಎಂದು ಭಾವಿಸಿದ ಮಾತ್ರದಿಂದಲೇ) ಆ ಕಳ್ಳರೆಲ್ಲರೂ ಸಹಜಭಕ್ತರುಗಳೇ ಆದರು. ಪರಮಾಶ್ಚರ್ಯ! ಆ ಕೂಡಲೇ ಬದನೆಕಾಯಿಗಳೆಲ್ಲವೂ ಬಾಣಲಿಂಗಗಳಾದುವು ॥೩೯॥ ಇನ್ನೊಂದುವೇಳೆ ಒಬ್ಬ ಜಂಗಮನು ಬಸವೇಶನಬಳಿಗೆ ಬಂದು, ಪರಶಿವನ ಪೂಜೆಗಾಗಿ ರಂಗವಲ್ಲಿಯನ್ನು ವಿರಚಿಸುವುದಕ್ಕೆ ಮುತ್ತುಗಳಾಗಬೇಕೆಂದು ಪ್ರೀತಿಯಿಂದ ಬೇಡಿದನು ॥೪೦॥ ಆ ಜಂಗಮನ ಬರುವಿಕೆಯೇ ಸ್ವಾತಿಯ ಮಳೆಯಾಗಲು, ತನ್ನ (ಬಸವೇಶನ) ಎರಡು ಕಣ್ಣುಗಳೇ ಮುತ್ತಿನ ಚಿಪ್ಪುಗಳಾಗಲು ॥೪೧॥ ಜೋಳದರಾಶಿಯನ್ನೇ ಭಕ್ತಿಸಂಪನ್ನನಾದ ಆ ಬಸವೇಶನು ಮುತ್ತಿನರಾಶಿಯನ್ನಾಗಿ ಮಾಡಿ, ಆ ಭಕ್ತನಿಗೆ ಕೊಟ್ಟನು ॥೪೨॥ ಒಂದುವೇಳೆ ವಿಟಜಂಗಮನೊಬ್ಬನು ಬಂದು, ಬಿಜ್ಜಳರಾಜನ ಬೊಕ್ಕಸದಲ್ಲಿದ್ದ ದ್ರವ್ಯವನ್ನೆಲ್ಲ ಬೇಡಿದನು. ಕೂಡಲೇ ಬಸವೇಶನು ಅದೆಲ್ಲವನ್ನೂ ಆ ಜಂಗಮನಿಗೆ ಕೊಟ್ಟುಬಿಟ್ಟನು. ಬಳಿಕ ಬಿಜ್ಜಳರಾಜನು ಕೋಪದಿಂದ ತನ್ನ ಬೊಕ್ಕಸದ ದ್ರವ್ಯವನ್ನೆಲ್ಲ ತಂದು ತೋರಿಸೆಂದು ಕೇಳಲು ॥೪೪॥ ಬಸವೇಶನ ಮಹಿಮೆಯಿಂದ ಬೊಕ್ಕಸದ ಪೆಟ್ಟಿಗೆಗಳೆಲ್ಲವೂ ಬಸವನ ಮುದ್ರೆಯನ್ನೊತ್ತಿರ ಧನಗಳಿಂದ ತುಂಬಲ್ಪಟ್ಟಿದ್ದುವು. ಆಗ ಸಕಲಭಕ್ತರೂ ಸಂತೋಷಪಟ್ಟವರಾದರು ॥೪೫॥

ಷೇಣಕದಾಚಿತ್ಸಂಗಮೇಶ್ವರಃ । ಯಯಾಚೇ ಬಸವಾಮಾತ್ಯಮಾಗತ್ಯಾಳಿಕ
ಲೋಚನಂ ॥ ೪೬ ॥ ಅಸಾವಪಿಸಸಂಭ್ರಂಭೋಽಪಶ್ಯೇತ್ಯಳಿಕಲೋಚನಂ । ದ
ರ್ಶಯಾಮಾಸಮುಕುರಂಸಂಪ್ರದರ್ಶ್ಯತದಾನನೇ॥೪೭॥ಮಹೇಶ್ವರಸ್ತದಾತಸ್ಮೈ
ಸ್ವಮೂರ್ತಿಂ ಸಮದರ್ಶಯತ್ । ಕಾಚಿದ್ಗುಡುಬೆಕಾಳವ್ವಾನಾಮ್ನೀಗೋ
ಪಾಲಭಾಮಿನೀ ॥ ೪೮ ॥ ತಕ್ರಂವಿಕ್ರೇತುಮಾಯಾಂತೀಸಾಮಾರ್ಗೇಜಾತ
ಕರ್ದಮೇ । ಪತಂತೀಬಸವೇತ್ಯಾಹತದಾನೀಂಬಸವೇಶ್ವರಃ ॥ ೪೯ ॥ ಸ್ಥಿತಪಿ
ವಸಭಾಮಧ್ಯೇಪತಂತಂವೀಕ್ಷ್ಯಮಸ್ತಕಾತ್ । ಜಗ್ರಾಹಶೀಘ್ರಂಕಲಶಂಬಿಜ್ಜ
ಳೋಽತ್ಯಂತವಿಸ್ಮಿತಃ ॥ ೫೦ ॥ ಆಹೂಯತಾಮಥಾಪೃಚ್ಛದಬ್ರೂಹಿಗೋಪಾ
ಲಭಾಮಿನಿ । ಜಗ್ರಾಹಕಥಮತ್ರಸ್ಥೋದೂರಾತ್ತ್ವನ್ಮೂರ್ಧ್ನಿಸಂಸ್ಥಿತಂ ॥
ಘಟಂಶ್ರೀಬಸವಾಮಾತ್ಯಇತಿಪೃಷ್ಟಾಥಸಾದರಾತ್ । ಕಿಂಚಿತ್ರಮೇತದ್ಭೂ
ಮಿಪಾಲಯತ್ರಯತ್ರಾಸ್ತಿಶಂಕರಃ ॥ ೫೧ ॥ ಯತ್ರಯತ್ರಹಿಸದ್ಭಕ್ತಾನರ್ತಂ
ತೇಮಹಿತೌಜಸಃ । ತತ್ರತತ್ರಾಪಿನಿಯತಂವರ್ತತೇಬಸವೇಶ್ವರಃ ॥೫೨॥ ತ

---

ಬಂದುವೇಳೆ ಸಂಗಮೇಶ್ವರನು ಜಂಗಮರೂಪದಿಂದ ಬಸವೇಶ್ವರನ ಬಳಿಗೆ ಬಂದು, ತನಗೆ ಹಣೆಗಣ್ಣುಬೇಕೆಂದು ಬೇಡಿದನು ॥೪೬॥ ಈ ಬಸವೇಶನಾದರೂ ಅದನ್ನು ಕೇಳಿ ನಕ್ಕು, “ಎಲೌ ಪರಮೇಶನೆ! ಇದರಲ್ಲಿ ನೋಡು” ಎಂದು ಹೇಳಿ, ಕನ್ನಡಿಯನ್ನು ಇದಿರಿಗೆ ಹಿಡಿದು, ಆ ಜಂಗಮನ ಮುಖದಲ್ಲೇ ಇರುವ ಹಣೆಗಣ್ಣನ್ನು ತೋರಿಸಿದನು ॥ ಪರಶಿವನು ಆಗ ಬಸವೇಶ್ವರನಿಗೆ ತನ್ನ ನಿಜರೂಪವನ್ನು ತೋರಿಸಿದನು. ಮತ್ತೊಂದುವೇಳೆ ಗುಡುಬೆಕಾಳವ್ವನೆಂಬ ಒಬ್ಬ ಗೊಲ್ಲತಿಯು ॥೪೮॥ ಮಜ್ಜಿಗೆಯನ್ನು ಮಾರುವುದಕ್ಕೆ ಬಂದು, ಬೀದಿಯಲ್ಲಿ ಉಂಟಾಗಿದ್ದ ಕೆಸರಿನಲ್ಲಿ ಜಾರಿ ಬೀಳುತ್ತಲಿದ್ದು, “ಬಸವಾ!” ಎಂದು ಕೂಗಿಕೊಂಡಳು. ಆಗ ಬಸವೇಶ್ವರನು ಬಿಜ್ಜಳನ ಸಭಾಮಧ್ಯದಲ್ಲಿದ್ದುಕೊಂಡೇ ಗೊಲ್ಲತಿಯ ತಲೆಯಮೇಲಿಂದ ಬೀಳುತ್ತಿದ್ದ ಮಜ್ಜಿಗೆಯ ಕೊಡವನ್ನು ಕಂಡು ಬೇಗನೆ ಕೈಯೆತ್ತಿ ಹಿಡಿದುಕೊಂಡನು. ಬಿಜ್ಜಳರಾಜನು ನೋಡಿ ಅತ್ಯಾಶ್ಚರ್ಯಪಟ್ಟವನಾಗಿ ॥೫೦॥ (ಇದೇನೆಂದು ಕೇಳಲು, ಬಸವೇಶನು ನಡೆದ ಸಂಗತಿಯನ್ನು ತಿಳಿಸಲು) ಆ ಗೊಲ್ಲತಿಯನ್ನು ಕರೆಯಿಸಿ, “ಎಲೆ ಗೊಲ್ಲತಿಯೆ! ಇಲ್ಲಿರುವ ಬಸವಮಂತ್ರಿಯು ದೂರದಲ್ಲಿ ನಿನ್ನ ತಲೆಯಮೇಲಿದ್ದ ಕೊಡವನ್ನು ಅದು ಹೇಗೆ ಹಿಡಿದುಕೊಂಡನು?” ಎಂದು ಕುತೂಹಲದಿಂದ ಕೇಳಿದನು. ಆಕೆಯಾದರೂ—ಭೂಪತಿಯೆ! ಇದೇನಾಶ್ಚರ್ಯ? ಎಲ್ಲೆಲ್ಲಿ ಪರಶಿವನಿರುವನೋ ॥೫೧॥ ಎಲ್ಲೆಲ್ಲಿ ಸುಜ್ಞಾನಿಗಳಾದ ಭಕ್ತೋತ್ತಮರಿರುವರೋ ಅಲ್ಲಲ್ಲ ಬಸವೇಶನು ತಪ್ಪದೆ ಇರುತ್ತಾನೆ ॥೫೨॥ ಇದು ನಿಜ. ಪೂರ್ವದಲ್ಲಿ ಇಂತಪ ಪ್ರ

ಥಾಹಿಪೂರ್ವಮಸ್ಯಸ್ಮಿನ್ಪ್ರಸಂಗೇ ಸಮುಪಸ್ಥಿತೇ । ಭಕ್ತಾಜ್ಞಯಾಸಿದ್ಧ
ರಾಮದೇವಶ್ಶಂಭುಪುರಂಯಯೌ ॥೫೪॥ ಸತ್ವಾಽಪೃಚ್ಛನ್ಮಹಾದೇವಂಸೋ
ಪಿತಂಸ್ವಹೃದಿಸ್ಥಿತಂ । ಪ್ರದರ್ಶ್ಯಗೌರ್ಯಾಂಪ್ರೀತಾಯಾಮಿದಮಾಹಮಹೇಶ್ವ
ರಃ ॥೫೫॥ ಕಿಂವಿದ್ಯಂತೇಽವನೌಭಕ್ತಾ ಇತಿತಂ ಬಸವೇಶ್ವರಂ । ತೇನೇ
ಶ್ವರೇಣಸದಯಮಿತ್ಯುಕ್ತೋ ಬಸವೋಽಬ್ರವೀತ್ ॥ ೫೬ ॥ ಅಹಮೇವಹಿ
ಭೂಲೋಕೇಭಕ್ತೋ ಭಕ್ತಾಸ್ತಥಾಪರೇ । ಸರ್ವೇತ್ವದ್ರೂಪಮೇವೇಶಸ್ವಾ
ಮಿಂತ್ಸರ್ವಜಗತ್ಪತೇ ॥೫೭॥ ಇತಿ ನಂದಿವಚಶ್ಶ್ರುತ್ವಾಪಾರ್ವತೀಂಪ್ರಾಹಶಂ
ಕರಃ । ಯಸ್ಯವಕ್ತ್ರೇಽಸ್ತಿ ತಂದೇವಿ ಬಸವೇತ್ಯಕ್ಷರತ್ರಯಂ ॥ ೫೮ ॥ ವಸಾ
ಮಿತತ್ರಸತತಂ ಸತ್ಯಂ ಸತ್ಯಂ ವದಾಮ್ಯಹಂ । ಇತೀಶ್ವರವಚಶ್ಶ್ರುತ್ವಾಸಿದ್ಧ
ರಾಮೇಮಹೀತಳೇ ॥೫೯॥ ಕಥಯತ್ಯಹಮಶ್ರೌಷಂ ನೃಪತೆಬಸವಸ್ತವಾ ।
ಇತ್ಯುಕ್ತ್ವಾಸಾಯಯೌಸೋಽಪಿಬಿಜ್ಜಳೋಬಸವೇಶ್ವರಂ ॥೬೦॥ ಸ್ತುವನ್ನವ
ರ್ತತಪ್ರೀತ್ಯಾನಮಸ್ಕಾರಪುರಸ್ಸರಂ । ಅಥೈಕದಾಸಮಾಗತ್ಯಕಸ್ಮಿಂಶ್ಚಿತ್ಕಾ

---

ಸಂಗವೊಂದು ಒದಗಿರಲಾಗಿ ಅದು ನಿದರ್ಶನಕ್ಕೆ ಬಂದಿರುವುದು. ಹೇಗೆಂದರೆ—ಭೂ
ಲೋಕದ ಭಕ್ತರು ಅಪ್ಪಣೆ ಮಾಡಿದಮೇರೆಗೆ ಸಿದ್ಧರಾಮೇಶನು ಕೈಲಾಸದಲ್ಲೂ, ಬಸವೇ
ಶನಿರುವನೇ ಎಂಬುದನ್ನು ತಿಳಿದುಕೊಂಡು ಬರುವುದಕ್ಕಾಗಿ ಹೋಗಿ, ಆ ವಿಷಯದಲ್ಲಿ ಪ
ರಮೇಶ್ವರನನ್ನು ಪ್ರಶ್ನೆಮಾಡಿದನು. ಆತನು ತನ್ನ ಹೃದಯದಲ್ಲಿರುವ ಬಸವೇಶನನ್ನು
ಸಿದ್ಧರಾಮೇಶನಿಗೆ ತೋರಿಸಿ, ಗೌರೀದೇವಿಯು ಸಂತುಷ್ಟಳಾಗಲಾಗಿ, ಬಸವೇಶ್ವರನನ್ನು
ಕುರಿತು—॥೫೫॥ "ಎಲೈ ಬಸವೇಶನೆ! ಭೂಮಿಯಲ್ಲಿ ಭಕ್ತಜನರು ಇರುತ್ತಾರೆಯೆ?"
ಎಂದು ಕೇಳಿದನು. ಹೀಗೆ ದಯಾಪೂರ್ವಕವಾಗಿ ಈಶ್ವರನಿಂದ ಕೇಳಲ್ಪಟ್ಟ ಬಸವೇ
ಶನು—"ಸ್ವಾಮಿ! ಭೂಲೋಕದಲ್ಲಿ ನಾನೊಬ್ಬನೇ ಭಕ್ತನು; ಉಳಿದ ಭಕ್ತರೆಲ್ಲರೂ
ನನಗೆ ನಿನ್ನ ಸ್ವರೂಪರೇ" ಎಂದು ಉತ್ತರವಿತ್ತನು ॥೫೭॥ ನಂದೀಶನ ಈ ಮಾತನ್ನು
ಪರಮೇಶ್ವರನು ಕೇಳಿ, ಪಾರ್ವತಿಯನ್ನು ಕುರಿತು—ಎಲೆ ದೇವಿ! "ಬಸವ" ಎಂಬ
ಮೂರು ಅಕ್ಷರಗಳು ಯಾವನ ಬಾಯಲ್ಲಿರುತ್ತವೆಯೋ, ಆ ಸ್ಥಲದಲ್ಲಿ ನಾನು ಯಾವಾ
ಗಲೂ ವಾಸಮಾಡಿಕೊಂಡಿರುತ್ತೇನೆ. ಇದು ಸತ್ಯ, ಸತ್ಯವೆಂದು ನಾನು ಹೇಳುತ್ತೇನೆ.
ಎಂಬುದಾಗಿ ನುಡಿದ ಪರಶಿವನ ಈ ಮಾತನ್ನು ಸಿದ್ಧರಾಮೇಶನು ಕೇಳಿಕೊಂಡುಬಂದು
ಭೂಮಿಯಲ್ಲಿ ಅದನ್ನು ಹೇಳುತ್ತಲಿರಲಾಗಿ, ದೊರೆಯೇ! ನಾನೂ ಆ ಬಸವನ ಸ್ತೋ
ತ್ರವನ್ನು ಕೇಳಿದೆನು. ಎಂಬುದಾಗಿ ಹೇಳಿ ಆ ಗೊಲ್ಲಿತಿಯು ಹೊರಟುಹೋದಳು. ಆ
ಬಿಜ್ಜಳರಾಜನು ಕೂಡ ಬಸವೇಶ್ವರನನ್ನು ॥ ೬೦ ॥ ಪ್ರೀತಿಯಿಂದ ನಮಸ್ಕಾರಪೂರ್ವಕ
ವಾಗಿ ಸ್ತೋತ್ರಮಾಡುತ್ತಲಿದ್ದನು. ಬಳಿಕ ಬಂದಾನೊಂದುಕಾಲದಲ್ಲಿ ವಿಟಜಂಗಮನೊ

ಮಿಜಂಗಮೆ ॥೩೧॥ ಸಮಾಕರ್ಷತಿಶಾಟಂಕಂ ಬಸವೇಶಸ್ಯಯೋಷಿತಃ । ತ
ದಾಸೀಮಪ್ರಯಚ್ಛಂತೀಂ ಕಪೋಲೇತೇನತಾಡಿತಾಂ ॥ ೩೨ ॥ ರುದಂತೀಂ ಬಸ
ವಾಮಾತ್ಯೋಭರ್ತ್ಸಯಿತ್ವಾನಿಜಾಂಗನಾಂ । ಬತಕ್ಲಿಷ್ಟೇಪಾಣಿರಯಂತವಸಂ
ಕಜಕೋಮಲಃ ॥ ೩೩ ॥ ತಾಡನೇನೇತಿನತ್ವಾತಂ ಶನೈಸ್ಸಂವಾಹಯನ್ಕರಂ ।
ದಾಪಯಾಮಾಸಶಾಟಂಕಂ ತಸ್ಮೈ ಸಂಪ್ರೀತಮಾನಸಃ ॥ ೩೪ ॥ ಪುನರ್ದ್ವಿಜೇ
ಷುಸರ್ವೇಷುಶಿವನಾಗಾರ್ಯಮುತ್ತಮಂ । ಕುಲೇನಹೀನೋಯಮಿತಿನಿಂದತ್ಸು
ಪರಿಮೋಹತಃ ॥೩೫॥ ಹಸ್ತೇಗೃಹೀತ್ವಾತಂ ಭಕ್ತಂ ಬಸವಾಮಾತ್ಯಶೇಖರಃ ।
ಬಿಜ್ಜಳಸ್ಯಸಭಾಮಧ್ಯಂ ನೀತ್ವಾಪ್ರೋವಾಚತಾನ್ದ್ವಿಜಾನ್ ॥೩೬॥ ಕುಲಹೀ
ನೋಯಮಿತ್ಯೇಸಂಪ್ರವಕ್ತುಂ ಯುಜ್ಯತೇ ಕಥಂ । ಪರಮಂ ಪಾವನಂ ಶಂಭು
ಪ್ರಸಾದಾಮೃತವಿಗ್ರಹಂ ॥೩೭॥ ಉತ್ತಮಾಧಮಸಿಂಧೂನಾಂ ಸಮುದ್ರೇಸಂ
ಗತಾತ್ಮನಾಂ । ನ್ಯೂನಾಧಿಕತ್ವಮನನಾವಿದ್ಯತೇ ಕಿಂ ವಿಚಾರಿತೆ ॥ ೩೮ ॥ ರಾ
ಪ್ಯಾಯಸ್ಕಾಂತಭೇದಃ ಕಿಂ ಸ್ಪರ್ಶಸ್ಪೃಷ್ಟೇಹಿ ವಿದ್ಯತೆ । ಶೈಲರತ್ನಾದಿಲಿಂಗಾ
ಘೆವಿಧಿನಾಸುಪ್ರತಿಷ್ಠಿತೆ ॥೩೯॥ ಯುಕ್ತಂಕಿಮನ್ಯಥಾವಕ್ತುಂ ವಸುಮತ್ಯಾಂವಿ

---

ಬ್ಬನು ಬಂದು ॥೩೧॥ ಬಸವೇಶ್ವರನ ಪತ್ನಿಯು ಕಿವಿಯಲ್ಲಿದ್ದ ಓಲೆಯನ್ನು ಸೆಳೆಯುತ್ತಿ
ರಲಾಗಿ, ಆಕೆಯು ಕೊಡದಿರಲು, ಜಂಗಮನು ಕೆನ್ನೆಗೆ ತಟ್ಟಿದನು. ಅದರಿಂದ ತನ್ನ
ಹೆಂಡತಿಯು ಅಳುತ್ತಿರುವುದನ್ನು ಬಸವಮಂತ್ರಿಯು ನೋಡಿ, ಆಕೆಯನ್ನು ಗಜರಿಸಿ,
ಜಂಗಮನನ್ನು ಕುರಿತು-ಅಯ್ಯೋ! ತಾವರೆಯಂತೆ ಮೃದುವಾದ ಈ ನಿನ್ನ ಹಸ್ತಗಳು
ಆಕೆಯನ್ನು ಹೊಡೆದುದರಿಂದ ನೊಂದುವು ; ಎಂದು, ಆತನ ಕೈಯನ್ನು ಮೆಲ್ಲನೆ ಒತ್ತಿ,
ನಮಸ್ಕರಿಸಿ, ಸಂತುಷ್ಟಮನಸ್ಕನಾಗಿ, ಹೆಂಡತಿಯು ಓಲೆಯನ್ನು ಆ ಜಂಗಮನಿಗೆ
ಕೊಡಿಸಿದನು ॥೩೪॥ ಮತ್ತೊಂದುವೇಳೆ ಬ್ರಾಹ್ಮಣರೆಲ್ಲರೂ ಅಜ್ಞಾನದಿಂದ ಶಿವನಾಗಾರ್ಯ
ನೆಂಬ ಉತ್ತಮ ಶರಣನನ್ನು ನೀಚಕುಲೋತ್ಪನ್ನನೆಂದು ದೂಷಿಸಲಾಗಿ ॥೩೫॥ ಬಸವ
ಮಂತ್ರಿಯು ಆ ಶರಣನನ್ನು ಕೈಯಲ್ಲಿ ಹಿಡಿದುಕೊಂಡು ಬಿಜ್ಜಳರಾಜನ ಸಭೆಗೆ ಕರೆ
ದುಕೊಂಡುಹೋಗಿ, ಆ ದ್ವಿಜರನ್ನು ಕುರಿತು ಹೇಳಿದನೆಂದರೆ ॥೩೬॥ ಎಲೈ ವಿಪ್ರರೆ!
ಶಿವಾನುಗ್ರಹದಿಂದ ಅಮೃತಶರೀರಿಯಾಗಿರುವ ಈ ಅತ್ಯಂತ ಪರಿಶುದ್ಧಾತ್ಮನನ್ನು ನೀಚ
ಕುಲದವನೆಂದು ಹೇಗೆ ಹೇಳುವುದಕ್ಕಾದೀತು ? ವಿಚಾರ ಮಾಡಿ ನೋಡಿದರೆ ಮಹಾಸಮು
ದ್ರದಲ್ಲಿ ಬೆರೆದುಹೋದ ದೊಡ್ಡ ಸಣ್ಣ ಸಾಗರಗಳೊಳಗೆಲ್ಲ ಇದು ದೊಡ್ಡದು ಚಿಕ್ಕದು
ಎಂಬ ಭಾವವು ಇರುವುದೆ? ॥೩೮॥ ಪರುಸವು ಸೋಂಕಿದ ಲೋಹದಲ್ಲಿ ಇದು ಬೆಳ್ಳಿ ಇದು
ಕಬ್ಬಿಣದ ಕಿಟ್ಟವೆಂಬ ಭೇದವು ಇರುವುದೆ? ಭೂತಲದಲ್ಲಿ ವಿಧ್ಯನುಸಾರವಾಗಿ ಪ್ರತಿಷ್ಠಿ
ಸಲ್ಪಟ್ಟ ಶಿಲಾಮಯ ರತ್ನಮಯಾದಿಲಿಂಗಗಳ ಸಮೂಹದಲ್ಲಿ, ಬಾಣ ಲಿಂಗ ಮತ್ತೊ

ವೇಕಿಭಿಃ । ಗುರುಹಸ್ತಾಬ್ಜಸಂಜಾತ ದ್ವಿಜೋಯಂ ದುಷ್ಕುಲಃಕಥಂ ॥೨೦॥ ಮಲಮಾಯಾದಿಪಾಶೌಘಸಂಬದ್ಧಾ ಹೇದ್ವಿಜಾತಯಃ । ಮಲಮಾಯಾದಿನಿರ್ಮುಕ್ತ ಸದ್ಭಕ್ತ ಮದಹಸ್ತಿನಾ ॥೨೧॥ ಭವಾರ್ತಾ ಭವಸಂಹಾರಿಭಕ್ತ ಕೇಸರಿಣಾ ತಥಾ । ಕ್ಲಿಶೌಮೃ ತಾಂಗಾಸ್ತ್ವಮೃತದೇಹಸದ್ಭಕ್ತ ಮೋರುಣಾ ॥೨೨॥ ದುರ್ಮದಾಃಕರ್ಮಚಂಡಾಲಾಸ್ಸಪ್ತಧಾತ್ವಾಮೃತಾಂಗಕಾಃ । ಶುದ್ಧಸಿದ್ಧಪ್ರಸಿದ್ಧಾಖ್ಯಪ್ರಸಾದಾಮೃತಪಷ್ಮ್ರಣಾ ॥ ೨೩ ॥ ಶಿವನಾಗಾರ್ಯವರ್ಯೇಣಾನೇನಯೂಯಂಕಥಂಸಮಾಃ । ತಥಾತ್ವಸ್ಯಪ್ರಮಾಣಾಂವ ಇದಾನೀಂದರ್ಶಯಾಮ್ಯಹಂ ॥೨೪॥ ಪಶ್ಯೇತ್ಯೆತಿಕರಂತಸ್ಯಸಂಪೀಡ್ಯಾದರ್ಶಯತ್ಪಯಃ । ಬಸವೇಂದ್ರಸ್ಯಸದ್ಭಕ್ತಿಕಾಮಧೆ ನುಸ್ಸಮುತ್ಸುಕಾ ॥೨೫॥ ತದಾತತಸೋತ್ಸಭಾಮಧ್ಯೆಪಯೋಧಾರಾಮಿವಸ್ವಯಂ । ಅಥವೃಷ್ಟ್ವಾಸುಧಾಧಾರಾಂಪ್ರಣಮ್ಯಸಕಲಾದ್ವಿಜಾಃ ॥೨೬॥ ಬಿಜ್ಜಳೋಪಿಜಸಭ್ಕಾತ್ಯಶತಂಸುರ್ಬಸವೇಶ್ವರಂ । ಭೂಯೋಪಿಜಂಗಮಃ ಕಾವಿನಾಕಶ್ಚಿದಾಗತ್ಯಸಂಸದಿ ॥೨೭॥ ಬಸವಾಮಾತ್ಯರಮ

---

ದು ಲಿಂಗವಲ್ಲವೆಂದು ಹೇಳುವುದು ವಿವೇಕಿಗಳಿಗೆ ಯೋಗ್ಯವೆ ? ಗುರುವಿನ ಹಸ್ತಕಮಲದಿಂದ ಜನಿಸಿದಕಾರಣ ದ್ವಿಜನಾಗಿರುವ ಈತನು ಅದು ಹೇಗೆ ನೀಚಕುಲದವನಾಗುವನು ? ॥೨೦॥ ಎಲೈ ದ್ವಿಜರಾ ! ಮಲಮಾಯಾದಿಪಾಶಗಳಿಂದ ಬದ್ಧರಾದ ನೀವುಗಳು ಆ ಪಾಶಗಳಿಂದ ಬಿಡುಗಡೆಯನ್ನು ಹೊಂದಿದ ಈ ಸದ್ಭಕ್ತನೊಡನೆ ಹೇಗೆ ಸಮಾನರಾಗುವಿರಿ ? ಜನನಮರಣದುಃಖಪೀಡಿತರಾದ ನೀವುಗಳು ಸಂಸಾರವನ್ನು ಧ್ವಂಸಗೊಳಿಸಿರುವ ಭಕ್ತಸಿಂಹನೊಡನೆ ಹೇಗೆ ಸದೃಶರಾಗುವಿರಿ ? ಭೂಮಿಯಲ್ಲಿ ಸತ್ತ ಶರೀರವುಳ್ಳ ನೀವು ಅಳಿವಿಲ್ಲದ ದೇಹವನ್ನು ಪಡೆದ ಭಕ್ತೋತ್ತಮನಿಗೆ ಹೇಗೆ ಸಮಾನರಾಗುವಿರಿ ? ॥೨೨॥ ಕೃತ್ಯತಃ ಚಂಡಾಲರೂ ದುರಹಂಕಾರಿಗಳೂ ಸಪ್ತಧಾತುಮಯದೇಹಿಗಳೂ ಆದ ನೀವು, ಶುದ್ಧಸಿದ್ಧ ಪ್ರಸಿದ್ಧವೆಂಬ ಮೂರು ವಿಧದ ಪ್ರಸಾದಸೇವನೆಯಿಂದ ಅಮೃತಮಯಶರೀರಿಯಾದ ಈ ಶಿವನಾಗಾರ್ಯವರ್ಯನೊಡನೆ ಹೇಗೆ ಸರಿಹೋಲುವಿರಿ ? ಈ ವಿಷಯಕ್ಕೆ ಪ್ರತ್ಯಕ್ಷಪ್ರಮಾಣವನ್ನು ಈಗಲೇ ನಿಮಗೆ ನಾನು ತೋರಿಸುತ್ತೇನೆ ॥ ೨೪ ॥ ನೋಡಿರಿ, ಎಂದುಹೇಳಿ, ಆ ಶಿವನಾಗಾರ್ಯನ ಕೈಯನ್ನು ಹಿಡಿದು ಒತ್ತಿ ಹಿಂಡಿ, ಹಾಲನ್ನು ಕರೆದು ತೋರಿಸಿದನು. ಬಸವೇಶ್ವರನ ಭಕ್ತಿಯೆಂಬ ಕಾಮಧೇನುವು ಕುತೂಹಲಗೊಂಡು ಆಗ ಸಭಾಮಧ್ಯದಲ್ಲಿ ಹಾಲನ್ನು ತಾನೇ ಕರೆದುಬಿಟ್ಟಿತೋ ಎಂಬಂತೆ ಅದು ತೋರಿತು. ಬಳಿಕ ಆ ದ್ವಿಜರುಗಳೂ ಬಿಜ್ಜಳರಾಜನು ಕೂಡ ಅಮೃತಪ್ರವಾಹವನ್ನು ನೋಡಿ, ಭಕ್ತಿಯಿಂದ ಬಸವೇಶ್ವರನನ್ನು ನಮಸ್ಕರಿಸಿ, ಸ್ತೋತ್ರ ಮಾಡಿದರು ॥ ೨೬ ॥ ಮತ್ತೊಂದಾವರಿ ವಿಟಜಂಗಮನೊಬ್ಬನು ರಾಜಸಭೆಗೆ ಬಂದು ಬಸವಮಂತ್ರಿಯ ಹೆಂಡತಿಯಾದ ಗಂಗಾಂ

ಣೀಗಂಗಾಂಬಾಧೃತಮುತ್ತಮಂ । ಚಕರ್ಷ ಪಟ್ಟವಸನಂ ಬಸವೋಽಪಿ ತತಃಪ
ರಂ ॥೭೮॥ ಅಚಂಚಲಧಿಯಾತಸ್ಯಾ ಜಹಾರಸ್ವೀಯಮಂಬರಂ । ಏವಂ ಪುನಃಪು
ನಸ್ತೇನ ಸಮಾಕೃಷ್ಟೇಂಬರಾಂತರೇ ॥೭೯॥ ತದೀಯಕರಸಂಸ್ಪರ್ಶಾತ್ತತ್ಕಟ್ಯಾ
ಮೇಕಮಂಬರಂ । ತಸ್ಥೌ ತತಃ ಪರಂ ತತ್ರ ವಸ್ತ್ರರಾಶಿರಜಾಯತ ॥ ೮೦ ॥
ಕಾಂತಾಭಿಮಾನವಿಚ್ಛೇದ ಭಾವಾತ್ತುಷ್ಟೋ ಬಭೂವ ಸಃ । ಬಸವೋಽಪಿ ತದಾ
ತಸ್ಮೈ ವಸ್ತ್ರರಾಶೀನ್ನ್ಯವೇದಯತ್ ॥೮೧॥ ಸ ತಾನ್ ಸರ್ವಾನ್ ಸಮಾದಾಯ ಸ್ವ
ವೇಶ್ಯಾಯೈ ದದೌ ಮುದಾ । ವಿನವತ್ಸು ಪ್ರಸಾದಾರ್ಥಂ ನಿಷಾದೇಷು ಕದಾಚನ ॥
ಶಿವಪ್ರಸಾದಂ ಭಕ್ತಾಶ್ಚೇದ್ಭುಂಕ್ತಾಯ ಮುಕ್ತಿ ಕಾಕ್ಷತಿಃ । ಇತ್ಯಾಭಾಷ್ಯಾನಯಾ
ಮಾಸ ಕ್ರೂರಾಹಿ ಪ್ರಮುಖಂ ವಿಷಂ ॥೮೩॥ ಧರ್ತುಮಾತ್ಮಾ ಸಮೀಶಾನೋ ನ
ಕ್ಷಮೋ ವಿಷಮೇಕ್ಷಣಃ । ಇತೀವ ನಿರ್ಗತಂ ಶಂಭೋರ್ಗರಳಂ ಕಂಠದೇಶತಃ ॥
ವಗ್ಧಂ ನಿಷಾದಾನ್ ಶ್ರೀಶೈಲೇ ಜನಾಗ್ನಿರಿವಾಗತಃ । ಲುಬ್ಧಕಾನಾಹುತೀಕರ್ತುಂ
ವಡಬಾಗ್ನಿರಿವೋದ್ಗತಃ ॥೮೪॥ ವಿಷಂ ಭುಗಭುಗಾರಾವಘೋರಂ ಪ್ರಜ್ವಲಿತಂ

---

ಬೆಯು ಉಟ್ಟಿದ್ದ ಉತ್ತಮವಾದ ಪಟ್ಟೆಯ ಸೀರೆಯನ್ನು ಸೆಳೆದನು. ಬಸವೇಶನು
ಕೂಡ ಅವನಿಗಿಂತ ಹೆಚ್ಚಾಗಿ ನಿಶ್ಚಲಮತಿಯಿಂದ ತಾನೂ ಆಕೆಯ ಸೀರೆಯನ್ನು ಸೆಳೆ
ದನು. ಹೀಗೆ ಮತ್ತೆ ಮತ್ತೆ ಬಸವೇಶನು ಸೆಳೆಯುತ್ತ ಬರಲಾಗಿ, ಆತನ ಹಸ್ತಸ್ಪರ್ಶ
ದಿಂದ ಗಂಗಾಂಬೆಯು ನಡುವಿನಲ್ಲಿ ಇನ್ನೊಂದೊಂದು ಸೀರೆಯು ಇದ್ದೇ ಇರುತ್ತಿದ್ದಿತು.
ಅದರಮೇಲೆ ಸಭಾಮಧ್ಯದಲ್ಲಿ ಸೆಳೆದ ಸೀರೆಯು ರಾಶಿಯಾಗಿ ಬಿದ್ದಿತು ॥೮೦॥ ಪತ್ನಿಯ
ಮೇಲಣ ಅಭಿಮಾನವನ್ನು ಕೂಡ ಬಸವೇಶನು ಬಿಟ್ಟಿದ್ದುದನ್ನು ಕಂಡು ಜಂಗಮನು
ಸಂತೋಷಿಸಿದನು. ಬಸವೇಶನು ಕೂಡ ಆ ಜಂಗಮನಿಗೆ ಸೀರೆಗಳ ರಾಶಿಯನ್ನು ಒಪ್ಪಿ
ಸಿದನು. ॥೮೧॥ ಅವನು ಅವೆಲ್ಲವನ್ನೂ ತೆಗೆದುಕೊಂಡುಹೋಗಿ, ಸಂತೋಷದಿಂದ ತನ್ನ
ಸೂಳೆಗೆ ಕೊಟ್ಟನು. ಮತ್ತೊಂದುಬಾರಿ ಬೇಡರುಗಳು ಶಿವಪ್ರಸಾದವು ತಮಗೆ ಬೇ
ಕೆಂದು ಜಗಳವಾಡುತ್ತಿರಲಾಗಿ ॥೮೨॥ ಬಸವೇಶನು-ನೀವು ಭಕ್ತರಾಗಿದ್ದರೆ, ಶಿವನ ಪ್ರಸಾ
ದವನ್ನು ಭುಂಜಿಸಿರಿ, ಅದಕ್ಕೆ ಕೊರತೆಯೇನು ? ಎಂದು ನುಡಿದು, ಕ್ರೂರವಾದ ಸರ್ಪ
ಮೊದಲಾದ ವಿಷಜಂತುಗಳ ವಿಷವನ್ನೆಲ್ಲ ತರಿಸಿದನು ॥೮೩॥ ಶಿವನು ತನ್ನನ್ನು ಕೊರಳಿ
ನಲ್ಲಿ ಧರಿಸಲಾರನೆಂದು ಹೊರಟುಬಂದ ಮಹಾಹಾಲಾಹಲವೋ ! ಇದು ; ಅಥವಾ ಬೇಡ
ರನ್ನು ಆಹುತಿತೆಗೆದುಕೊಳ್ಳುವುದಕ್ಕಾಗಿ ಎದ್ದು ಬಂದಿರುವ ಬಡಬಾಗ್ನಿಯೋ ಇದು ;
ಎಂಬಂತೆ ಭುಗಭುಗೆಂಬ ಧ್ವನಿಯಿಂದ ಭಯಂಕರವಾಗಿ ಉರಿಯುತ್ತಿರುವ ಮಹಾವಿಷವು
ಆಗ ಜನಗಳಿಗೆ ಮಧ್ಯಾಹ್ನಕಾಲದ ಪ್ರಚಂಡ ಸೂರ್ಯಮಂಡಲದಂತೆ ನೋಡುವುದಕ್ಕೆ ಅಸ

ಮಹತ್ | ದುರ್ಲಕ್ಷ್ಯಂಘುವಿಮಧ್ಯಾಹ್ನಚಂಡಮಾರ್ತಂಡಬಿಂಬವತ್‖೮೬‖ ತಪ್ತಲೋಹವದಗ್ರಾಹ್ಯಂದವಾಗ್ನಿರಿವದುರ್ಗಮಂ | ಕೃಷ್ಣಾಹ್ಯಾಸ್ಯವದ ಸ್ಪೃಶ್ಯಂತದಾನೀಂದದೃಶೇಜನೈಃ ‖೮೭‖ ಸ್ಯುರೇತತ್ಸೌರಭಾದೇವನಿಷಾದಾವಿ ಗತಾಸವಃ | ಸ್ಮರಣಾದೇವಚಾಂತ್ರಾಣಿಭಿನ್ನಾನ್ಯುರ್ವ್ಯಾಂಪತಂತಿಹಿ ‖೮೮‖ ಪೀತೇಜೀವಂತಿಕಿಮಿತಿಜನೌಘೇವಿಸ್ಮಿತೇಸತಿ | ಪ್ರಹಸನ್ನಸವಾವಮಾತ್ಯಸ್ಸವು ಪೈಶಾಯತದ್ವಿಷಂ ‖೮೯‖ ಅನಂತರಂತತ್ಪ್ರಸಾದಂಸುಪ್ರೀತಸ್ಸ್ವಯಮು ಗ್ರಹೀತ್ ‖

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾ
ರಾಧ್ಯ ಚಾರಿತ್ರೆ ದೀಕ್ಷಾಪ್ರಕರಣೆ ಬಸವೇಶೋ
ತ್ಪತ್ತಿತನ್ಮಾಹಾತ್ಮ್ಯಕಥನಂ
ನಾಮೈಕ ವಿಂಶೋಧ್ಯಾಯಃ.

---

ವಾಗಿಯೂ, ‖೮೬‖ ಕಾದ ಕಬ್ಬಿನದಂತೆ ಹಿಡಿಯುವುದಕೆ ಶಕ್ಯವಾಗಿಯೂ, ಕಾಳ್ಗಿಚ್ಚಿ ನಂತೆ ನುಗ್ಗುವುದಕ್ಕೆ ಶಕ್ಯವಾಗಿಯೂ, ಕಾಳಸರ್ಪದ ಮುಖದಂತೆ ಮುಟ್ಟುವುದಕ್ಕೆ ಸಾಧ್ಯವಾಗಿಯೂ, ತೋರಿತು. ‖೮೭‖ ಬೇಡರು ವಿಷದ ವಾಸನೆಯಿಂದಲೇ ಗತಪ್ರಾಣರಾ ಗಿ ಹೋಗುವರು. ಧರಿಸಿದ ಮಾತ್ರದಿಂದಲೇ ನರಗಳು ಕತ್ತರಿಸಿ ಭೂಮಿಯಲ್ಲಿ ಬಿದ್ದು ಕೊಳ್ಳುವುವು. ‖೮೮‖ ಇನ್ನು ಆ ವಿಷವನ್ನು ಕುಡಿದರೆ ಬದುಕಿರುವುದುಂಟೆ ? ಎಂದು ಲೋಕದ ಜನರು ಆಶ್ಚರ್ಯಪಡುತ್ತಿರಲಾಗಿ, ಬಸವೇಶನು ನಗುತ್ತ ಆ ವಿಷವನ್ನು ಪರ ಮೇಶ್ವರನಿಗೆ ಸಮರ್ಪಿಸಿ, ಸಂತೋಷಪಟ್ಟವನಾಗಿ, ಬಳಿಕ, ಆ ಶಿವಪ್ರಸಾದವನ್ನು ತಾನು ಸ್ವೀಕರಿಸಿದನು. ‖೮೯‖

ಎಂಬಲ್ಲಿಗೆ ಪಂಡಿತರಾಧ್ಯಚಾರಿತ್ರಕ್ಕೆ ಎ. ಆರ್. ಕರಿಬಸವಶಾಸ್ತ್ರಿ
ರಚಿತವಾದ „ಭಾವಮಂಜರಿಯೆಂಬ" ಕನ್ನಡ ಟಿಪ್ಪಣಿ
ದಲ್ಲಿ ಬಸವೇಶನ ಉತ್ಪತ್ತಿಯನ್ನೂ, ಮಾಹಾ
ತ್ಮ್ಯವನ್ನೂ ವರ್ಣಿಸುವ ೨೧
ನೆಯ ಅಧ್ಯಾಯವು
ಮುಗಿದುದು.

# ಅಥ ದ್ವಾವಿಂಶೋಽಧ್ಯಾಯಃ.

(ಬಸವೇಶಜಂಗಮಪ್ರಾಣಿತ್ವಕಥನಂ)

ಕದಾಚಿದ್ಬಸವಾಮಾತ್ಯೋಜಂಗಮಾರಾಧನಾತ್ಪರಂ । ಲಿಂಗಾರ್ಚನಕ್ರಿಯಾಸಕ್ತ್ಯಾಪಶ್ಯನ್ಪಶ್ಯನ್ಮಹೇಶ್ವರಂ ॥೧॥ ಆಸ್ವಾದ್ಯಾಸ್ವಾದ್ಯನಿತರಾಂಭವ್ಯಂಹರಸುಖಾಮೃತಂ । ಸ್ಪೃಷ್ಟ್ವಾಸ್ಪೃಷ್ಟ್ವಾಮಹೇಶಾನಂಹೃಷ್ಯನ್ಹೃಷ್ಯನ್ಮಹೋತ್ಸವಾತ್ ॥೨॥ ವಿಸೃಜ್ಯದೇಹಜಗುಣಾನ್ಗಾಯನ್ಗಾಯನ್ಮುಹುರ್ಮುಹುಃ । ಪ್ರಣಮನ್ಪರಮಪ್ರೀತ್ಯಾದೃಷ್ಟ್ವಾದೃಷ್ಟ್ವಾಗಣಾಧಿಪಾನ್ ॥೩॥ ಲೀಲಾಸಮುದ್ರೇಮಗ್ನಸ್ಸನ್ಲಿಂಗಮಧ್ಯಂವಿಶನ್ವಿಶನ್ । ಸಾಕಂವಿಷಯಜಾಲೇನಚಿತ್ತೇಲಿಂಗೇ ಲಯಂಗತೇ ॥೪॥ ಅಸ್ಪಂದಹಸ್ತೋನಿರ್ಮುಕ್ತಕ್ರಿಯಃಕಂಠೇಸಗದ್ಗದೇ । ವಿಲೀನಸ್ತುತಿವಾಕ್ಯಸ್ಸನ್ಹರ್ಷಾಶ್ರುಭಾದಿತೇಕ್ಷಣಃ ॥೫॥ ಯಥಾಸೂತ್ರೇಸಮಾಕೃಷ್ಟೇಜಾಲಂಸಂಕುಚಿತಂಭವೇತ್ । ಕಿರಣಾವಳಿಭಿಸ್ಸಾಕಮಸ್ತಮೇತಿಯಥಾರವಿಃ ॥೬॥ ತಥಾಲಯಂಗತೇಸ್ವಾಂತೇಲಿಂಗೇಸರ್ವೇಂದ್ರಿಯೈ

---

## ೨೨ ನೆಯ ಅಧ್ಯಾಯವು.

(ಬಸವೇಶನ ಜಂಗಮಪ್ರಾಣಿತ್ವವು).

ಒಂದಾವೃತ್ತಿ ಬಸವಮಂತ್ರಿಯು ಜಂಗಮ ಪೂಜೆಯನ್ನು ಮಾಡಿದ ಬಳಿಕ ಲಿಂಗ ಪೂಜೆಯನ್ನು ಮಾಡಬೇಕೆಂಬ ಆಸಕ್ತಿಯಿಂದ ಶಿವಲಿಂಗವನ್ನು ನೋಡುತ್ತ ॥೧॥ ಮನೋಹರವಾದ ಶಿವದರ್ಶನಾನಂದಾಮೃತವನ್ನು ಅತ್ಯಂತವಾಗಿ ಸವಿದು ಸವಿದು, ಶಿವಲಿಂಗವನ್ನು ಮುಟ್ಟಿ ಮುಟ್ಟಿ ಉಬ್ಬಿ ಸಂತೋಷಿಸುತ್ತ ಸಂತೋಷಿಸುತ್ತ, ॥೨॥ ಅಂಗಗುಣಂಗಳನ್ನೆಲ್ಲ ಬಿಟ್ಟು, ಬಾರಿಬಾರಿಗೂ ಗಾನಮಾಡುತ್ತ, ಅತ್ಯಂತ ಪ್ರೀತಿಯಿಂದ ಗಣಶ್ರೇಷ್ಠರುಗಳನ್ನು ನೋಡಿನೋಡಿ ನಮಸ್ಕರಿಸುವವನಾಗಿ ॥೩॥ ಲಿಂಗಮಧ್ಯವನ್ನು ಹೊಕ್ಕು ಹೊಕ್ಕು ಲೀಲಾಸಮುದ್ರದಲ್ಲಿ ಮುಳುಗಿದವನಾಗಿ, ಸಕಲೇಂದ್ರಿಯವಿಷಯಗಳೊಡನೆ ಕೂಡಿ ಮನಸ್ಸು ಲಿಂಗದಲ್ಲಿ ಅಡಗಿಹೋಗಲಾಗಿ ॥೪॥ ಸ್ತಬ್ಧವಾದಹಸ್ತವು ಯಾವ ಕೆಲಸವನ್ನೂ ಮಾಡಲಾರದೆ ಹೋಗಲು, ಕೊರಲುಗದ್ಗದಸ್ವರದಿಂದ ಕೂಡಲಾಗಿ, ಸ್ತೋತ್ರವಚನಗಳೆಲ್ಲ ನಿಂತುಹೋದವನಾಗಿ, ಸಂತೋಷಬಾಷ್ಪದಿಂದ ಮುಚ್ಚಿದ ಕಣ್ಣುಳ್ಳವನಾಗಿ ॥೫॥ ಬಾಯಿದಾರವನ್ನು ಹಿಡಿದೆಳೆದಕೂಡಲೇ ಬಲೆಯೆಲ್ಲ ಹೇಗೆ ಸಂಕುಚಿತವಾಗುವುದೋ, ಸೂರ್ಯನು ಹೊಂದಿದ್ದ ತನ್ನ ಕಿರಣಗಳನ್ನೆಲ್ಲ ಸೆಳೆದುಕೊಂಡು ಹೇಗೆ ಅಸ್ತಂಗತನಾಗುವನೋ ॥೬॥

ಸ್ಸಹ | ವಿಸ್ಮೃತ್ಯಜಗದಾತ್ಮಾನಂದರ್ಶನಂಮನಸೋಗತಿಂ ||೭|| ಬಾಹ್ಯಾಂತ ರಕ್ರಿಯಾಸ್ಸರ್ವಾಹೃದಯಾಷ್ಟದಳಾಂಬುಜೆ | ಕರ್ಣಿಕಾಮಧ್ಯವಿಲಸತ್ಪ್ರಾಣ ಲಿಂಗೇಲಯಂಗತಾಃ ||೮|| ಯೋಗಾನುಭವಸತ್ಸೌಖ್ಯೈವರ್ಧಮಾನೇನಿರಂತ ರಂ | ಅನೂನೇದಂಚಿತಶಿವಯೋಗನಿದ್ರಾನ್ವಿತೋಽಭವತ್ ||೯|| ಸಂವೀಕ್ಷ್ಯ ಬಸವೇಶಸ್ಯಧ್ಯಾನಸದ್ಭಾವಮಾದರಾತ್ | ಪ್ರಣಮ್ಯಚನ್ನಬಸವಸ್ತದಾನೀ ಮವದದ್ವಚಃ ||೧೦|| ನಿದ್ರಾಜಾಡ್ಯವಿನಿರ್ಮುಕ್ತಾ ಯೋಗನಿದ್ರಾಸಮಂಚಿತಾ | ಶಿವಯೋಗಸುಖಾಂಭೋಧಿಂಭುವನೇಮದ್ಗುರುಂವಿನಾ ||೧೧|| ಆಮುಕ್ತನಿ ದ್ರಾಮಾಲಿನ್ಯಪಶೂನಾಂಯುಜ್ಯತೇಕಥಂ | ಗುರುಮೂರ್ತೇರ್ಭವ್ಯಶಿವಯೋ ಗನಿದ್ರಾಸ್ಥಿತಿಶ್ಶುಭಾ ||೧೨|| ಕಥಂವರ್ಣಯಿತುಂಶಕ್ಯಾಯೋಗಿನಾಮಪಿದು ರ್ಲಭಾ | ನಿಸ್ತರಂಗಾಂಬುಧಿರಿವನಿಶ್ಚಲಃಪವನೋಯಥಾ ||೧೩|| ನಿರ್ಮೇ ಘಾಕಾಶವನ್ಮುಕ್ತಸಕಲೇಂದ್ರಿಯಸಂಭ್ರಮಃ | ಅವಿಚ್ಛಿನ್ನಾನಂದತಯಾ ಯೋಗನಿದ್ರಾನ್ವಿತಃಕಿಮು ||೧೪|| ಅಪಿಚಪ್ರಾಣನಾಥಸ್ಯಪಾಣಿಸ್ಪರ್ಶೋಽತಿದು

---

ಹಾಗೆ ತನ್ನ ಮನಸ್ಸು ಸಕಲೇಂದ್ರಿಯವ್ಯಾಪಾರಗಳೊಡನೆ ಲಿಂಗದಲ್ಲಿ ಲಯಿಸಿಹೋಗಲಾಗಿ ದೃಶ್ಯವಾದ ಪ್ರಪಂಚವನ್ನೂ, ತನ್ನನ್ನೂ, ನೋಟವನ್ನೂ, ಮನೋವ್ಯಾಪಾರವನ್ನೂ, ಕೂಡ ಮರೆತು ||೭|| ಹೃದಯದ ಎಂಟೆಸಳಿನ ತಾವರೆಯಲ್ಲಿ ಕರ್ಣಿಕೆಯ ಮಧ್ಯದೊಳಗೆ ಬಳ್ಪುತ್ತಿರುವ ಪ್ರಾಣಲಿಂಗದಲ್ಲಿ ಹೊರಬಳಗಣ ಕ್ರಿಯೆಗಳೆಲ್ಲವೂ ಅಡಗಿಹೋಗಲಾಗಿ ||೮|| ಶಿವಯೋಗಾನುಭವ ಸೌಖ್ಯವು ಯಾವಾಗಲೂ ವೃದ್ಧಿಹೊಂದುತ್ತಿರಲಾಗಿ, ಸ್ವಲ್ಪವೂ ನ್ಯೂ ನತೆಯಿಲ್ಲದೆ ಬೆಳೆದ ಶಿವಯೋಗನಿದ್ರೆಯಿಂದ ಕೂಡಿದವನಾದನು ||೯|| ಆಗ ಚೆನ್ನಬಸವೇ ಶನು ಬಸವೇಶನ ಶಿವಧ್ಯಾನಭಾವವನ್ನು ಚೆನ್ನಾಗಿ ನೋಡಿ, ಪ್ರೀತಿಯಿಂದ ನಮಸ್ಕರಿಸಿ, ಹೇಳಿದನೆಂತೆಂದರೆ ||೧೦|| ಲೋಕದಲ್ಲಿ ಶಿವಯೋಗಸುಖಸಮುದ್ರನಾದ ನನ್ನ ಗುರುವನ್ನು ಹೊರತು, ನಿದ್ರೆಯ ಮಾಲಿನ್ಯವನ್ನು ಬಿಡದೆ ಇರತಕ್ಕ ಪಶುಗಳಿಗೆ ಜಡತರಹಿತನಾಗಿಯೂ ಯೋಗನಿದ್ರೆಯಿಂದ ಕೂಡಿಯೂ ಇರುವ ಈ ನಿದ್ರೆಯು ಹೇಗೆ ದೊರೆಕೊಂಡೀತು ? ಈ ನನ್ನ ಗುರುಮೂರ್ತಿಗೆ ಪ್ರಾಪ್ತವಾಗಿರುವ ಮಂಗಳಪ್ರದವಾದ ಶಿವಯೋಗನಿದ್ರಾಸ್ಥಿತಿಯು ಯೋಗಿಗಳಿಗೂ ಕೂಡ ದುರ್ಲಭವಾಗಿರುವುದು; ಇದನ್ನು ಹೇಗೆತಾನೇ ವರ್ಣಿಸುವುದ ಕ್ಕಾದೀತು ? ಈ ನನ್ನ ಗುರುಮೂರ್ತಿಯು ತೆರೆಯಿಲ್ಲದ ಸಮುದ್ರದಂತೆಯೂ, ಕಂಪನ ದಿರುವ ಗಾಳಿಯಂತೆಯೂ, ಮೋಡವಿಲ್ಲದ ಆಕಾಶದಂತೆಯೂ, ಸಕಲೇಂದ್ರಿಯವ್ಯಾಪಾರ ರಹಿತನಾಗಿರುವನು. ಈತನು ಎಡೆಬಿಡದ ಪರಮಾನಂದಭರಿತನಾಗಿ ಯೋಗನಿದ್ರಾಸಮನ್ವಿ ತನಾಗಿರುವನೋ ||೧೪|| ಅಥವಾ ತನ್ನ ಪ್ರಾಣನಾಯಕನಾದ ಪರಶಿವನಿಗೆ ಹಸ್ತಪೀಠದಸ್ಪ

ಸ್ಸಹಃ । ಇತಿಹೃತ್ಕಮಳಾಸೀನಂವಿಧಾಯಪರಮೇಶ್ವರಂ ‖೧೫‖ ಶೀತೋಷ್ಣ ಸಲಿಲೈರ್ಲಿಂಗಮೂರ್ತೇಃಕ್ಲೇಶೋಭವೇದಿತಿ । ಚಿದಭ್ರವಿಸ್ಫುರಚ್ಚಂದ್ರಸ್ರುತ ಪಂಚಾಮೃತಾಪ್ಲುತಂ ‖೧೬‖ ವಿಧಾಯವೃಕ್ಷಕುಸುಮೈಃಕಾಠಿಣ್ಯಂಸಂಭವೇ ದಿತಿ । ಸಹಸ್ರದಳಪದ್ಮೇನಚಿಮ್ಮ್ಯಸ್ಥೇನಸಮರ್ಚ್ಯತಾಂ ‖೧೭‖ ಧೂಪಧೂ ಮೇನಲಿಂಗಸ್ಯತನುರ್ವಿಚ್ಛಾಯತಾಂವ್ರಜೇತ್ । ಇತಿಜ್ಞಾನಾಗ್ನಿನಾಧೂಪಮ ದಶಾಂಗಂಸಮರ್ಪ್ಯಚ ‖೧೮‖ ನೀರಾಜನಾಜ್ವಾಲಯೈರುಷ್ಣತ್ವಂಸಂಭವೇ ದಿತಿ । ಸ್ಫುರದಾತ್ಮಜ್ಯೋತಿಷೈವಕೃತ್ವಾನೀರಾಜನಾಂತತಃ ‖೧೯‖ ಕ್ಷಾರಾ ಮ್ಲಮುಖ್ಯೈರ್ನೈವೇದ್ಯೈರರುಚಿಶ್ಶೂಲಿನೋಭವೇತ್ । ಇತಿಸದ್ಭಕ್ತಿತಃಪ್ರಾ ಣಾನುಪಹಾರಂವಿಧಾಯಚ ‖೨೦‖ ಉಪಚಾರಾಃಪರೇಸತ್ಯಮುಪಚಾರಾಶ್ಶಿವಸ್ಯ ಹಿ । ಇತ್ಯಂತಃಪೂಜನಾಸಕ್ತೋವಮದ್ಗುರುರ್ವರ್ತತೇಽಥವಾ ‖೨೧‖ ಶಮಿತೇಂ ದ್ರಿಯಸಂಚಾರೇಯಮೇಸತಿಸಮಂತತಃ । ಶಿವಾನ್ಯಜ್ಞಾನರಾಹಿತ್ಯೇಸದ್ವ್ರತೇ ನಿಯಮೇಸತಿ ‖೨೨‖ ಯೋಗನಿದ್ರಾಸಂಗತೇಚ್ಛಾಸನೇಜಾತೇಸುಖಾಸನೇ ।

---

ಶವು ಕಠಿಣವಾಗಿ ಸಹಿಸುವುದಕ್ಕೆ ಅಸಾಧ್ಯವಾಗಿರುವುದೆಂದು ತನ್ನಹೃದಯಕಮಲದಲ್ಲಿ ಪರಶಿವನನ್ನು ಮೂರ್ತಿಗೊಳಿಸಿ ‖೧೫‖ ತನ್ನ ಪ್ರಾಣಲಿಂಗಮೂರ್ತಿಗೆ ಶೀತೋಷ್ಣಜಲಗಳ ಅಭಿಷೇಕದಿಂದ ಕ್ಲೇಶವುಂಟಾಗುವುದೆಂದು ತಿಳಿದು, ಜ್ಞಾನಾಕಾಶದಲ್ಲಿ ಹೊಳೆಯುತ್ತಿರುವ ಚಂದ್ರನಿಂದ ಸ್ರವಿಸುತ್ತಿರುವ ವಿಸ್ತಾರವಾದ ಅಮೃತರಸದಿಂದ ಮಜ್ಜನವನ್ನು ಮಾಡಿ, ಆ ಪ್ರಾಣಲಿಂಗವನ್ನು ಮರದ ಹೂವುಗಳಿಂದ ಪೂಜಿಸಿದರೆ ಒತ್ತುವುದೆಂದು ತಿಳಿದು, ಚಿ ದಾಕಾಶದಲ್ಲಿರುವ ಸಹಸ್ರಾರ ಕಮಲದಿಂದ ಪೂಜಿಸಿ ‖೧೭‖ ಧೂಪದ ಹೊಗೆಯಿಂದ ಶಿವ ಲಿಂಗದೇಹದ ಕಾಂತಿಯು ಮಸುಳಿಸುವುದೆಂದು ಯೋಚಿಸಿ, ಜ್ಞಾನಾಗ್ನಿಯಿಂದ ದಶಾಂಗ ವಿಲ್ಲದ ಧೂಪವನ್ನು ಸಮರ್ಪಿಸಿ ‖ ೧೮ ‖ ಆರತಿಯ ಜ್ವಾಲೆಗಳಿಂದ ಶಿವಲಿಂಗಕ್ಕೆ ಔಷ್ಣ್ಯವುಂಟಾಗುವುದೆಂದು ತಿಳಿದು, ಪ್ರಕಾಶಿಸುವ ಆತ್ಮಜ್ಯೋತಿಯಿಂದಲೇ ಆರತಿಯ ನ್ನು ಬೆಳಗಿ ‖೧೯‖ ಬಳಿಕ ಶಿವನಿಗೆ, ಉಪ್ಪು ಹುಳಿ ಮೊದಲಾದ ರುಚಿಗಳಿಂದ ಬೆರದ ನೈವೇ ದ್ಯವಸ್ತುಗಳಿಂದ ಅರುಚಿಯಾದೀತೆಂದು ಯೋಚಿಸಿ, ಭಕ್ತಿಭಾವದಿಂದ ಪ್ರಾಣವನ್ನೇ ನೈವೇ ದ್ಯವನ್ನಾಗಿ ಸಮರ್ಪಿಸಿ ‖ ೨೦ ‖ ಉಳಿದ ಉಪಚಾರಗಳೆಲ್ಲವೂ ನಿಜವಾಗಿಯೂ ಪರಶಿ ವನಿಗೆ ಬಾಹ್ಯೋಪಚಾರಗಳೇ ಎಂಬುದಾಗಿ ಯೋಚಿಸಿ, ಈ ನನ್ನ ಗುರುವು ಅಂತರ್ಯಜನ ದಲ್ಲಿ ಆಸಕ್ತನಾಗಿರುವನೊ! ‖೨೧‖ ಅಥವಾ ಎಲ್ಲಾ ಕಡೆಯಲ್ಲೂ ಇಂದ್ರಿಯವ್ಯಾಪಾರಗಳ ಡಗಿರುವುದೇ ಯಮವಾಗಲು, ಶಿವನ ಹೊರತು ಉಳಿದವರನ್ನು ಉಪಾಸ್ಯದೈವವೆಂದು ತಿಳಿಯದಿರುವ ವ್ರತವೇ ನಿಯಮವಾಗಲು ‖೨೨‖ ಶಿವಯೋಗನಿದ್ರೆಯಲ್ಲಿ ಕೂಡಿರುವ ಇಚ್ಛೆಯೇ ಸುಖಾಸನವಾಗಲು, ಮೆಲ್ಲನೆ ಆಡುತ್ತಿರುವ ಉಸುರೇ ಬಳಿಗೆ ಆಚರಿಸಿದ

ಮಂದಶ್ವಾಸಕಯೋಃಪ್ರಾಣಾಯಾಮೋಽಂತಃಪೂರಿತೇಸತಿ ||೭೩|| ಅಂತರ್ವಿಷಯ
ಸಂಚಾರೇಪ್ರತ್ಯಾಹಾರತ್ವಮಾಶ್ರಿತೇ | ಮುಕ್ತಿಧ್ಯಾನೇಸ್ಫುರಲ್ಲಿಂಗಜಂಗಮ
ಸ್ವಾಂತರೀಕ್ಷಣೇ ||೭೪|| ಅಂಗಲಿಂಗಪ್ರಸಾದಾತ್ತಸಾರೂಪ್ಯವರಲಕ್ಷ್ಮಣಿ |
ಧಾರಣಾಯಾಂಭವ್ಯಶಿವಯೋಗನಿದ್ರಾಸ್ಥಿತೌಪುನಃ ||೭೫|| ಸಮಾಧಿತ್ವಂಗತಾ
ಯಾಂಶ್ರೀಬಸವಾಮಾತ್ಯಶೇಖರಃ | ಅಷ್ಟಾಂಗಯೋಗಸದ್ಭಕ್ತ್ಯಾಪ್ರಪಂಚಂ
ನೇಕ್ಷ್ಯತೇಽಥವಾ ||೭೬|| ಮಂತರ್ಯಾತ್ಮನಿಸಂಲೀನೇಮಂತವ್ಯೇಶೇಮನಸ್ಯಪಿ |
ದ್ರಷ್ಟರ್ಯಾತ್ಮನಿದೃಷ್ಟ್ಯಾಶ್ಚ ದೃಶ್ಯೇಶಂಭೌವಿಲೀನಯೋಃ ||೭೭|| ವಾಚ್ಯೇಶಿವೇ
ತಥಾಲೀನೇವಚಸ್ಯಾತ್ಮನಿವಕ್ತರಿ | ಕಾಮೇಚಕಾಮಯಿತರಿಕಾಮ್ಯೇಶರ್ವೇಲ
ಯಂಗತೇ ||೭೮|| ಜ್ಞಾತರ್ಯಾತ್ಮನಿಚಜ್ಞಾನೇಜ್ಞೇಯೇಚವಿಲಯಂಗತೇ | ಬು
ದ್ಧಿಂಬೋದ್ಧಾರಮಾತ್ಮಾನಂವಿಸ್ಮೃತ್ಯಾಸ್ತೇಽಥವಾಕಿಮು ||೭೯|| ಸ್ವದೃಷ್ಟಿವೇ
ಧತೋಲಿಂಗಮೂರ್ತೇರ್ಬಾಧೋಭವೇದಿತಿ | ಭಾವದೃಷ್ಟ್ಯೈವತಾಂಪಶ್ಯ
ನ್ನಂತಸ್ತಿಷ್ಠತಿವಾಕಿಮು ||೮೦|| ಕರಸ್ಪರ್ಶನತಶ್ಶಂಭೋರ್ವಿವರ್ಣತ್ವಂಭವೇ

---

ಪ್ರಾಣಾಯಾಮವಾಗಲು, ||೭೩|| ಇಂದ್ರಿಯು ವಿಷಯಗಳಲ್ಲನ್ನೂ ಹೊರಗೆ ಸ್ಫುರಿಸದೆ, ಒಳ
ಗೆ ಅಡಗಿರುವುದೇ ಪ್ರತ್ಯಾಹಾರವಾಗಲು, ಲಿಂಗಜಂಗಮಸ್ವರೂಪವನ್ನು ಒಳಗೆ ನಿರೀಕ್ಷಿ
ಸುವುದೇ ಧ್ಯಾನವಾಗಲು ||೭೪|| ಅಂಗಲಿಂಗಪ್ರಸಾದದಿಂದ ಪಡೆದ ಸಾರೂಪ್ಯದ ಚಿಹ್ನವೇ
ಧಾರಣೆಯಾಗಲು, ಮಂಗಳಪ್ರದವಾದ ಶಿವಯೋಗನಿದ್ರಾಸ್ಥಿತಿಯೇ ಸಮಾಧಿಯಾಗಲು,
ಶ್ರೀ ಬಸವಮಂತ್ರಿಶ್ರೇಷ್ಠನು ಈ ಪೂರ್ವೋಕ್ತವಾದ ಅಷ್ಟಾಂಗಯೋಗಸದ್ಭಕ್ತಿಯಿಂದ
ಕೂಡಿ, ಲೋಕವನ್ನೇ ನೋಡದೆ ಇರುವನೋ! ||೭೬|| ಅಥವಾ ನೆನೆಯುವ ತಾನೂ ತನ್ನ
ಮನಸ್ಸೂ ಕೂಡ ನೆನೆಯಲ್ಪಡಲು ಯೋಗ್ಯನಾದ ಶಿವನಲ್ಲಿ ಲೀನವಾಗಿಹೋಗಲು, ನೋ
ಡುವ ತಾನೂ ನೋಟವೂ, ನೋಡಲ್ಪಡಲು ಯೋಗ್ಯನಾದ ಶಿವನಲ್ಲಿ ಅಡಗಲು ||೭೭||
ಮಾತನಾಡುವ ತಾನೂ ತನ್ನ ಮಾತೂ ಕೂಡ ನುಡಿಯಲ್ಪಡಲು ಯೋಗ್ಯನಾದ ಶಿವನಲ್ಲಿ
ಅಡಗಲು, ಇಚ್ಛೈಸುವ ತಾನೂ ಆ ಇಚ್ಛೆಯೂ ಕೂಡ ಇಚ್ಛೈಸಲ್ಪಡಲು ಯೋಗ್ಯ
ನಾದ ಶಂಭುವಿನಲ್ಲಿ ಲಯವಾಗಲು ||೭೮|| ತಿಳಿವ ತಾನೂ ತಿಳಿವೂ ಕೂಡ ತಿಳಿಯಲ್ಪಡಲು
ಯೋಗ್ಯನಾದ ಈಶ್ವರನಲ್ಲಿ ಲೀನವಾಗಿ ಹೋಗಲು, ಅರಿವನ್ನೂ ಅರಿವ ತನ್ನನ್ನೂ ಕೂಡ
ಮರೆತುಬಿಟ್ಟಿರುವನೋ! ||೭೯|| ಅಥವಾ ಲಿಂಗಮೂರ್ತಿಯನ್ನು ತನ್ನ ಬಹಿರ್ದೃಷ್ಟಿಯಿಂ
ದ ಚುಚ್ಚಿ ನೋಡಿದರೆ ನೋವಾಗುವುದೆಂದು ತಿಳಿದು, ಶಿವನನ್ನು ತನ್ನ ಭಾವದೃಷ್ಟಿಯಿಂ
ದ ಒಳಗೆ ನೋಡುತ್ತಿರುವನೋ! ||೮೦|| ಅಥವಾ ತನ್ನ ಕೈಯಿಂದ ಮುಟ್ಟಿದರೆ ಶಿವನ
ದೇಹವು ಕಂದಿ ಬಣ್ಣವಳಿಯುವುದೆಂದು ತಿಳಿದು, ಮನಸ್ಸಿನಿಂದಲೇ ಸ್ಪರ್ಶವನ್ನು ಮಾಡು

ದಿತಿ | ಮನಸಾಸ್ಪರ್ಶನಂಕುರ್ವನ್ನಾಸ್ತೇಕಿಮಥವಾಹರಂ ||೩೧|| ಕ್ಲಿಶ್ನಾತಿ
ಪುಳಕಸ್ಪರ್ಶಾದಿತ್ಯಾಲಿಂಗತಿವಾತ್ಮನಾ | ಕೋಲಾಹಲಸ್ತ್ವೇನಸ್ಯಾದಿತಿಸ್ಮ
ರತಿವಾಶಿವಂ ||೩೨|| ಕಾಂತಾಕಾಚಿತ್ಸ್ವರಮಣೇಸ್ಮೃತೇಸತಿನಿರಂತರಂ |
ಭವೇದ್ಭ್ರಮರಕೀಟಾಖ್ಯನ್ಯಾಯಾತ್ಪುರುಷತಾಯದಿ ||೩೩|| ತದಾರತೇರ
ಭಾವಸ್ಸ್ಯಾದಿತಿಭೀತಾಪತಿಸ್ಮೃತೌ | ಅಸ್ಮರಂತೀಸ್ಮರಂತೀಚಪತಿಮೇವಂ
ವ್ಯವಸ್ಥಿತಾ ||೩೪|| ಸ್ವಯಂಸ್ಮರ್ತುಂಚವಿಸ್ಮರ್ತುಂಯತೋನಾಸ್ತಿಸ್ವತಂತ್ರ
ತಾ | ಕಿಯದ್ವರ್ಣ್ಣಯಿತುಂಪ್ರೇಮತದ್ವಧೂನಾಂಮಹೀತಳೆ ||೩೫|| ಸರ್ವದಾ
ಶಂಕರಸ್ಮೃತ್ಯಾತದಾಕಾರೇಸಮಾಗತೇ | ಸ್ವಾಮಿಭೃತ್ಯಜ್ಞಾನಸೌಖ್ಯಂನಶ್ಯ
ತೀತಿಮನೀಷಯಾ ||೩೬|| ಉತವಿಸ್ಮೃತ್ಯಚಾತ್ಮಾನಂಸ್ಮೃತಿಂಮಗ್ನಃಕಿಮೀ
ಶ್ವರೇ | ಕಾಚಿತ್ಪ್ರಿಯಂಸಮಾನೇತುಂಪ್ರೇಷಯಾಮಾಸಮಾನಸಂ ||೩೭||
ತತ್ರೈವರಮಮಾಣಂತನ್ನಿಶ್ಚಿತ್ಯಾಥಚುಕೋಪಸಾ | ನಪುಂಸಕಂಮನಇತಿನ
ದಂತಂಪಾಣಿನಿಂತದಾ ||೩೮|| ವಿಡಂಬಯಂತೀಕಾಂತಾಥತನ್ಮನಃಪುನರಾಯ

---

ತ್ತಲಿರುವನೊ ! ||೩೧|| ಅಥವಾ ತನ್ನ ಸ್ಥೂಲದೇಹದಿಂದಪ್ಪಿದರೆ ರೋಮೋದ್ಗಮಗಳ ಸೋಂಕುವಿಕೆಯಿಂದ ಶಿವನ ಶರೀರವು ನೊಂದುಕೊಳ್ಳುವುದೆಂದು ತಿಳಿದು ಆತ್ಮನಿಂದಾಲಿಗಿಸುವನೊ ! ಅಥವಾ ಸ್ತೋತ್ರಮಾಡುವುದರಿಂದ ಶಿವನಿಗೆ ಗದ್ದಲವಾಗುವುದೆಂದು ಭಾವಿಸಿ, ಶಿವನನ್ನು ಸ್ಮರಣೆಮಾಡುತ್ತಾನೆಯೊ ! ||೩೨|| ಅಥವಾ ಒಬ್ಬಳೊಬ್ಬ ಕಾಂತೆಯು ತನ್ನ ಪತಿಯನ್ನು ಯಾವಾಗಳೂ ಸ್ಮರಿಸುತ್ತಿದ್ದರೆ ಭ್ರಮರಕೀಟನ್ಯಾಯದಂತೆ ತನಗೂ ಪುರುಷತ್ವವೇ ಬಂದು, ಬಳಿಕ ಪತಿಯೊಡನೆ ರತಿಕ್ರೀಡೆಗೆ ಅಭಾವವುಂಟಾದೀತು ಎಂದು ಪತಿಸ್ಮರಣೆಮಾಡುವುದಕ್ಕೆ ಭಯಪಟ್ಟು ಸ್ಮರಿಸದೆಯೂ, ಮತ್ತೆ ಪ್ರೇಮಾತಿಶಯದಿಂದ ಪತಿಯನ್ನು ಸ್ಮರಿಸುತ್ತಲೂ, ಹೀಗೆ ಇರುತ್ತಿರುವಳು ||೩೪|| ತಾವಾಗಿ ಸ್ಮರಿಸುವುದಕ್ಕೂ ಸ್ಮರಿಸದೆ ಇರುವುದಕ್ಕೂ ಅವರಿಗೆ ಸ್ವಾತಂತ್ರ್ಯವಿರುವುದೆ? ಭೂತಲದಲ್ಲಿ ಆ ಸ್ತ್ರೀಯರ ಪ್ರೇಮವು ವರ್ಣ್ಣಿಸುವುದಕ್ಕೆ ಎಷ್ಟುಮಾತ್ರದುದು? ತೆಗೆ. ||೩೫|| ಈ ಬಸವೇಶನಾದರೊ-ಯಾವಾಗಲೂ ಶಿವನ ಸ್ಮರಣೆ ಮಾಡುವುದರಿಂದ ಶಿವನಾಕಾರವು ತನಗೂ ಬಂದರೆ ಶಿವನು ಸ್ವಾಮಿಯಾಗಿಯೂ ತಾನು ಸೇವಕನಾಗಿಯೂ ಇರುವೆನೆಂಬ ತಿಳಿವಿಕೆಯಿಂದುಂಟಾಗುವ ಸೌಖ್ಯವು ನಷ್ಟವಾಗುವುದೆಂಬ ಬುದ್ಧಿಯಿಂದಲೋ ||೩೬|| ಅಥವಾ ತನ್ನನ್ನು ತಾನು ಮರೆತೋ ಶಿವನಲ್ಲಿ ಲೀನವಾಗಿಹೋಗಿರುವನೋ ! ಒಬ್ಬಳೊಬ್ಬ ಹೆಂಗುಸು ತನ್ನ ಪ್ರಿಯನನ್ನು ಕರೆದುಕೊಂಡು ಬರುವುದಕ್ಕಾಗಿ ಮನಸ್ಸನ್ನು ಕಳುಹಿಸಿಕೊಟ್ಟಳು ||೩೭|| ಆ ಮನಸ್ಸು ಅಲ್ಲೇ ನಾಯಕನೊಡನೆ ಕೂಡಿ ಕ್ರೀಡಿಸಿತೆಂಬುದನ್ನು ಆಕೆಯು ತಿಳಿದು, ಕೋಪಿಸಿದಳು. ಮನಸ್ಸನ್ನು ನಪುಂಸಕವೆಂದು ಹೇಳಿದ ಪಾಣಿನ್ಯಾಚಾರ್ಯನನ್ನೂ ಆಗ

ಯಾ | ಧರಣ್ಯಾಂವನಿತಾಮುಗ್ಧಾಸ್ತಾಸಾಂಪ್ರೇಮಚತಾದೃಶಂ ||೩೯|| ಗುರು
ಮೂರ್ತೇರ್ಮಹೇಶಸ್ಯಸಂಯೋಗೇಸಮುದಂಚಿತೇ | ನಪುಂಸಕಂಮನಇತಿಕ
ಥಂವಾಚ್ಯಂಮನೀಷಿಭಿಃ ||೪೦|| ಪುನ್ನಪುಂಸಕತೇಸ್ತಶ್ಚೇದತಿಕಾಮಿಕಾಕಿಮು
ಸ್ವಯಂ | ಕಿಂಚೇಹಭರ್ತುರ್ಭರ್ತಾಸ್ತ್ರಿಯಾಣಾಮಪಿಮದ್ಭರ್ತುರೀಶಿತುಃ ||೪೧||
ಯೋಗಂಸ್ತ್ರಿಯಇವಾತ್ಯಂತಂವಾಂಛಂತಿಪುರುಷಾಅಪಿ | ಮನಶ್ಶಿವೇನಸಂ
ಯುಕ್ತಮಿತ್ಯತ್ರಾಸ್ತಿಕಿಮದ್ಭುತಂ ||೪೨|| ಇತಿಸ್ವಮನಸಃಪೂರ್ವಂಗತ್ವಾಲಿಂಗ್ಯ
ಸ್ವಯಂವಿಭುಂ | ವಿಸ್ಮೃತ್ಯಸ್ವಯಮಾಸ್ತೇಕಿಂನಿಶ್ಚಿಂತಸ್ಸಾದರಂಹರಂ ||೪೩||
ಕಿಂಚಾದೌದೃಕ್ತತಶ್ಚಿಂತಾನಿಶ್ವಾಸಸ್ತದನಂತರಂ | ಜ್ವರಃಕಾರ್ಶ್ಯಮನಾಹಾರ
ಉನ್ಮಾದಸ್ತದನಂತರಂ||೪೪| ಮೌನಂಮೂರ್ಛಾಮೃತಿರಿತಿದಶಾವಸ್ಥಾ ವಿಯೋ
ಗಿನಾಂ | ಅವಿಶ್ಲಿಷ್ಯಪ್ರಾಣವಿಭುಮಮೃತ್ವಾಮೃತಿರಿತ್ಯಸೌ || ೪೫ || ಈದೃಶೀ
ವಿಷಮಾವಸ್ಥಾ ಪರೇಷಾಂಯುಜ್ಯತೇಕಿಮು | ಜೀವನ್ಮುಕ್ತಿಪದಪ್ರಾಪ್ತಿಹೇ
ತುಭಕ್ತಿವಶಾವಶಃ ||೪೬|| ನಿರುಪಾಧಿಶಿವಾನಂದಾಸ್ತಮಿತೇಂದ್ರಿಯಸಂಹತಿಃ |

---

ನಿಂದಿಸಿದಳು. ಬಳಿಕ ಆ ಮನಸ್ಸು ಹಿಂತಿರುಗಿ ಬಂದಿತು. ಭೂಲೋಕದಲ್ಲಿರುವ ಹೆಂಗು
ಸರು ಅಂತಹ ಮುಗ್ಧೆಯರು ; ಅವರ ಪತಿಪ್ರೇಮವು ಅಂತಹದು ||೩೯|| ಗುರುಮೂರ್ತಿ
ಯಾದ ಮಹೇಶ್ವರನ ಕೂಟವು ದೊರಕೊಂಡರೆ, ಮನಸ್ಸನ್ನು ನಪುಂಸಕನೆಂಬುದಾಗಿ
ವಿದ್ವಾಂಸರಿಂದ ಹೇಗೆ ಹೇಳಲಾದೀತು ? ||೪೦|| ಶಿವನಿಗೂ ಮನಸ್ಸಿಗೂ ಕೂಡ ಕ್ರಮವಾಗಿ
ಪುಂಸ್ತ್ವ ನಪುಂಸಕತ್ವಗಳು ಇರುವುವು (ಎಂದರೆ ಶಿವನೂ ಮನಸ್ಸೂ ಕೂಡ ಪುನ್ನಪುಂ
ಸಕ ರೂಪದಿಂದ ಕೂಡಿರುವರೆಂದು ಹೇಳಿದರೆ) ತಾನು ಅಂತಹ ಕಾಮಿಯೆ ? ಎಂದರೆ,
ಸ್ತ್ರೀಯರು ಪುರುಷರ ಸಂಯೋಗವನ್ನು ಅತಿಶಯವಾಗಿ ಹೇಗೆ ಅಪೇಕ್ಷಿಸುವರೋ ಅದ
ರಂತೆ ಗಂಡಂದರಿಗೂ ಕೂಡ ಗಂಡನಾದ ನನ್ನ ಸ್ವಾಮಿಯಾದ ಪರಶಿವನ ಕೂಟವನ್ನು
ಪುರುಷರು ಕೂಡ ಅಪೇಕ್ಷಿಸುವರು ; ಎಂಬುವಲ್ಲಿ, ಶಿವನೊಡನೆ ಮನಸ್ಸು ಕೂಡುವುದೆಂ
ಬುದರಲ್ಲಿ ಆಶ್ಚರ್ಯವೇನಿರುವುದು ? ||೪೨|| ಎಂಬುದಾಗಿ ಯೋಚಿಸಿ, ತನ್ನ ಮನಸ್ಸಿಗಿಂತ
ಲೂ ಮೊದಲಾಗಿ ತಾನೇ ಹೋಗಿ ಸ್ವಾಮಿಯಾದ ಶಿವನನ್ನು ಪ್ರೀತಿಪುರಸ್ಸರವಾಗಿ ಆಲಿಂಗಿಸಿ
ನಿಶ್ಚಿಂತನಾಗಿ ತನ್ನನ್ನು ತಾನೇ ಮರೆತು ಇರುತ್ತಿರುವನೋ! ||೪೩|| ಅಥವಾ ಲೋಕದಲ್ಲಿ
ವಿರಹಿಗಳಿಗೆ ಮೊದಲು ನೋಟ, ಬಳಿಕ ಚಿಂತೆ, ಅನಂತರ ನಿಟ್ಟುಸುರು, ಜ್ವರ, ಕೃಶತ್ವ,
ಆಹಾರ ತ್ಯಾಗ, ಹುಚ್ಚು, ಮೌನ, ಮೂರ್ಛೆ, ಮರಣ, ಎಂಬುದಾಗಿ ೧೦ ಅವಸ್ಥೆಗಳಿ
ರುವುವು. ಈ ನನ್ನ ಗುರುಮೂರ್ತಿಯ ಅವಸ್ಥೆಯಾದರೂ—ಪ್ರಾಣನಾಥನ ವಿಯೋಗವಿಲ್ಲದಿ
ದ್ದರೂ ಸಾಯದಿದ್ದರೂ ಮರಣಾವಸ್ಥೆಯಾಗಿರುವುದು ||೪೫|| ಇಂತಹ ಇಂದ್ರಿಯವ್ಯಾಪಾ
ರವಳಿದವಸ್ಥೆಯು ಇತರರಿಗೆ ದೊರಕೊಳ್ಳುವುದೇನು ? ಈತನು ಜೀವನ್ಮುಕ್ತಿಸ್ಥಲವನ್ನು

ದೃಷ್ಟಿಶ್ಚಿಂತಾ ಚ ನಿಶ್ವಾಸೋ ಜ್ವರಃ ಕಾರ್ಶ್ಯಮಭೋಜನಂ ॥೪೭॥ ಉನ್ಮಾದಮೂ
ರ್ಛಾಶ್ಚ ಮೃತಿರಿತ್ಯೇವಮಾದಿಭಿಃ । ಅವಸ್ಥಾಭಿಸ್ಸಂಗತೋಽಪಿ ಪೂರ್ವಂ
ವಿಸ್ಮೃತ್ಯ ತಾಸ್ಸ್ವಯಂ ॥೪೮॥ ಅವಿಚ್ಛಿನ್ನಸ್ಥಿರಶಿವಯೋಗಾವಸ್ಥಿತಿನಿರ್ಭರಃ ।
ಅಹಂಕಾಂತೇತಿ ಚ ಭಿದಾಂ ಮುಕ್ತ್ವಾ ತಿಷ್ಠತಿ ವಾ ಕಿಮು ॥೪೯॥ ಸಮರ್ಪ್ಯ ಭಕ್ತ
ದೇಹಾಯ ದೇಹಾರ್ಥಂ ದೇಹವಾನಾತ್ಮನಃ । ಭಕ್ತಾನುಬಂಧ ಪ್ರಾಣಾಯ ಪ್ರಾ
ಣಾನ್ಪ್ರಾಣಾರ್ಥಮಾದರಾತ್ ॥೫೦॥ ಕರಣಾರ್ಥಂ ಸ್ವಕರಣಂ ಸದ್ಭಕ್ತಕರಣಾ
ಯ ಚ । ಭಕ್ತಬಾಹ್ಯೇಂದ್ರಿಯವ್ರಾತಬಾಹ್ಯೇಂದ್ರಿಯಚಯಾಯ ಚ ॥೫೧॥
ಬಾಹ್ಯೇಂದ್ರಿಯಾರ್ಥಮಾತ್ಮೀಯಬಾಹ್ಯೇಂದ್ರಿಯಕದಂಬಕಂ । ಯಥಾಸ್ಯ
ದೇಶೇ ಕ್ಷಿಪ್ತೇಷು ರಥಾಂಗೇಷು ಪೃಥಕ್ಪೃಥಕ್ ॥೫೨॥ ರಥಾಭಾವಸ್ತಥೇಶಾ
ಯ ದತ್ವಾತ್ಮೀಯಗುಣೋಚ್ಚಯಂ । ಅಹಂಭಾವಂ ಪರಿತ್ಯಜ್ಯ ದುಸ್ತ್ಯಜಂ ನಿಖಿ
ಲೈರಪಿ ॥೫೩॥ ಏಕೈಕಸ್ಯಾಂ ತ್ವಚಿ ಕ್ಷಿಪ್ರಮಾಕೃಷ್ಯ ಪರಿತೋ ಭೃಶಂ । ಕ್ಷಿ
ಪ್ತಾಯಾಂ ಕದಳೀರೂಪಂ ದೃಶ್ಯತೇ ನೋ ಯಥಾ ತಥಾ ॥೫೪॥ ದೇಹೇಂದ್ರಿಯ
ಮನಃಪ್ರಾಣಾಭಿಧಂ ತ್ವಗ್ಜಾಲಕಂ ಮುದಾ । ಸಮಾಕೃಷ್ಯ ಮಹೇಶಾಯ ಸಮ

---

ಹೊಂದುವುದಕ್ಕೆ ಕಾರಣನಾದ ಭಕ್ತಿಕಾಂತೆಯ ಅಧೀನನಾಗಿ ॥೪೬॥ ಉಪಾಧಿರಹಿತವಾದ
ಶಿವಾನಂದದಿಂದ ನಷ್ಟವಾದ ಇಂದ್ರಿಯವ್ಯಾಪಾರವುಳ್ಳವನಾಗಿ, ನೋಟ, ಚಿಂತೆ, ಮೊದಲಾದ
ದಶಾವಸ್ಥೆಗಳಿಂದ ಕೂಡಿದವನಾದರೂ ಕೂಡ, ಅವೆಲ್ಲವನ್ನೂ ಬಿಟ್ಟು ॥೪೮॥ ಎಡೆಬಿಡದ
ಶಿವಯೋಗನಿದ್ರಾತಿಶಯವುಳ್ಳವನಾಗಿ, ನಾನು ಸತಿಯೆಂಬ ಭೇದವನ್ನು ಕೂಡ ಬಿಟ್ಟು,
ಇರುತ್ತಿರುವನೋ! ॥೪೯॥ ಭಕ್ತದೇಹಿಯಾದ ಶಿವನ ದೇಹಕ್ಕೆ ತನ್ನ ದೇಹವನ್ನರ್ಪಿಸಿ;
ಭಕ್ತಪ್ರಾಣಿಯಾದ ಪರಶಿವನ ಪ್ರಾಣಗಳಿಗೆ ತನ್ನ ಪ್ರಾಣಗಳನ್ನು ಪ್ರೀತಿಯಿಂದ ಸಮ
ರ್ಪಿಸಿ ॥೫೦॥ ಭಕ್ತರ ಅಂತಃಕರಣನಾದ ಶಂಕರನ ಅಂತರಿಂದ್ರಿಯಕ್ಕೆ ತನ್ನ ಅಂತಃಕರ
ಣವನ್ನರ್ಪಿಸಿ, ಹರನ ಬಾಹ್ಯೇಂದ್ರಿಯಗಳಿಗೆ ತನ್ನ ಹೊರಗಣ ಇಂದ್ರಿಯಸಮೂಹವನ್ನ
ರ್ಪಿಸಿ, ಬಂದು ರಥದ ಅಂಗಗಳಾದ ಸಾಮಗ್ರಿಗಳನ್ನು ಬೇರೆಬೇರೆ ಕಳೆದು ಇನ್ನೊಂದಕ್ಕೆ
ಜೋಡಿಸಿಬಿಟ್ಟರೆ, ಮೊದಲರಥದಲ್ಲಿ ರಥತ್ವವು ಹೇಗೆ ಅಡಗಿಹೋಗುವುದೋ, ಹಾಗೆ ಈಶ್ವ
ರನಿಗೆ ತನ್ನ ಗುಣಸಮೂಹವನ್ನೆಲ್ಲ ಸಮರ್ಪಿಸಿ, ಎಲ್ಲರಿಂದಲೂ ಬಿಡಲಸಾಧ್ಯವಾದ ಅಹಂ
ಭಾವವನ್ನು ಬಿಟ್ಟಿರುವ ರೀತಿಯೊ! ॥೫೩॥ ಅಥವಾ ಬಾಳೆಗಂಬದ ಪೊರೆಗಳನ್ನೆಲ್ಲ ಬ
ದೊಂದನ್ನಾಗಿ ಕಳೆದು ಎಲ್ಲಕಡೆಯೂ ಬೇರೆಬೇರೆ ಹರಡಿಬಿಟ್ಟರೆ, ಬಾಳೆಗಂಬದ ರೂಪವು
ಹೇಗೆ ತೋರುವುದಿಲ್ಲವೋ, ಹಾಗೆ ॥೫೪॥ ಶರೀರ, ಇಂದ್ರಿಯ, ಮನಸ್ಸು, ಪ್ರಾಣ
ಗಳೆಂಬ ಹೆಸರುಳ್ಳ ಪೊರೆಗಳ ಸಮೂಹವನ್ನೆಲ್ಲ ಸೆಳೆದು ಸಂತೋಷದಿಂದ ಶಿವನಿಗೆ ಭಕ್ತಿಪು
ರಸ್ಸರವಾಗಿ ಒಪ್ಪಿಸಿಬಿಟ್ಟು, ನಿಶ್ಚಂಚಲನಾದ ಶಿವಾನಂದದ ಯೋಗನಿದ್ರೆಯಿಂದ ಕೂಡಿ

ಪ್ರಾಂತರಭಕ್ತಿತಃ ॥೫೫॥ ಅಚಂಚಲಶಿವಾನಂದಯೋಗನಿದ್ರಾನ್ವಿತಃಕಿಮು ।
ಕಿಂಚೇಶಾಯಮನೋದತ್ವಾಪ್ರಸಾದಾಯತನುಂತಥಾ ॥೫೬॥ ಶ್ರೀಜಂಗಮಾ
ರ್ಪಿತಂಪ್ರಾಣಂವಿಧಾಯಚಪೃಥಕ್ಪೃಥಕ್ । ಮನಃಪ್ರಾಣಶರೀರಾಣಿವಿಸ್ಮೃ
ತ್ಯಪರಮೇಶ್ವರೇ ॥೫೭॥ ನಿಮಗ್ನೋವಾದ್ಯಬಸವೇಶ್ವರಇತ್ಯತಿವಿಸ್ತರಂ ।
ಶ್ರೀಚೆನ್ನಬಸವೇಶಾನೇಸ್ವಗುರುಂಕೀರ್ತಯತ್ಯಥ ॥೫೮॥ ಅಪೂರ್ವೋಜಂಗ
ಮಃಕಶ್ಚಿದ್ದರ್ಶನಾರ್ಥೀಸಮೇತ್ಯತಂ । ಬಸವಂಶಿವಯೋಗಸ್ಥಂದ್ವಾಸ್ಥೈಶ್ಶ್ರು
ತ್ವಾವಿನಿರ್ಯಯೌ ॥೫೯॥ ಯತೋಯಂಜಂಗಮಪ್ರಾಣೋಬಸವಾಮಾತ್ಯಶೇಖ
ರಃ । ಅತಸ್ತೇನಸಹೈವಾಗಾಜ್ಜೀವಿತಂಬಸವೇಶಿತುಃ ॥೬೦॥ ತತೋವಿಸ್ಮಯ
ಚಿತ್ತೇಷುಸೇವಕೇಷುಚಸರ್ವಶಃ । ನಿಸರ್ಗವಿಲಸಲ್ಲಿಂಗನಿಷ್ಠಾಸ್ವಾತಂತ್ರ್ಯ
ಭೂಷಿತಃ ॥೬೧॥ ಶಿವಸದ್ಭಕ್ತಿಸಂಯುಕ್ತಸ್ಸಕಲೇಶ್ವರಮಾಧವಃ । ಮಾಚ
ಯ್ಯೋಮಡಿವಾಳೋಪಪದಸ್ಸದ್ಭಕ್ತಸಿಂಧುರಃ ॥೬೨॥ ಸಂಸಾರಹರಲಿಂಗಾನು
ಭವಸೌಖ್ಯಸಮಂಚಿತಃ । ಕಿನ್ನರಬ್ರಹ್ಮದೇವಾರ್ಯೋಭುವನೈಕಪ್ರಪೂಜಿತಃ
ಧೀರಷ್ಷೊಡ್ಡಳಬಾಚಾರ್ಯಃಪರವಾದಿಪ್ರಭಂಜನಃ । ನಿಗ್ರಹಾನುಗ್ರಹೋದ

---

ವನೋ! ॥೫೫॥ ಮತ್ತು ಬಸವೇಶ್ವರನು ಈಗ ಶಿವಲಿಂಗಕ್ಕೆ ಮನಸ್ಸನ್ನೂ ಪ್ರಸಾ
ದಲಿಂಗಕ್ಕೆ ದೇಹವನ್ನೂ ಜಂಗಮಲಿಂಗಕ್ಕೆ ಪ್ರಾಣವನ್ನೂ ಬೇರೆಬೇರೆ ಅರ್ಪಿಸಿ, ಆ
ಮನಃಪ್ರಾಣದೇಹಗಳನ್ನು ಮರೆತು, ಪರಶಿವನಲ್ಲಿ ಮುಳುಗಿಹೋಗಿರುವನೋ! ಎಂದು
ಚೆನ್ನಬಸವೇಶನು ಅತಿ ವಿಸ್ತಾರವಾಗಿ ತನ್ನ ಗುರುವನ್ನು ಹೊಗಳುತ್ತಿರಲಾಗಿ ಬಳಿಕ ॥
೫೮ ॥ ಒಬ್ಬಾನೊಬ್ಬ ಹೊಸ ಜಂಗಮನು ಬಸವೇಶನನ್ನು ದರ್ಶನ ಮಾಡಬೇಕೆಂದಿ
ಚ್ಛೈಸಿ ಬಂದು, ಆತನು ಶಿವಯೋಗದಲ್ಲಿರುವನೆಂಬುದನ್ನು ದ್ವಾರಪಾಲಕರಿಂದ ತಿ
ಳಿದು, ಹಾಗೆಯೇ ಹೊರಟುಹೋದನು ॥ ೫೯ ॥ ಈ ಬಸವಮಂತ್ರಿ ಶ್ರೇಷ್ಠನು
ಯಾವ ಕಾರಣದಿಂದ ಜಂಗಮಪ್ರಾಣಿಯಾಗಿರುವನೋ, ಈ ಕಾರಣದಿಂದ, ಬಸವೇ
ಶ್ವರನ ಪ್ರಾಣವು ಆ ಜಂಗಮನೊಡನೆಯೇ ಹೊರಟುಹೋಯಿತು ॥ ೬೦ ॥ ಬಳಿ
ಕ ಸೇವಕರೆಲ್ಲರೂ ಎಲ್ಲೆಲ್ಲೂ ಆಶ್ಚರ್ಯಮನಸ್ಕರಾಗಲಾಗಿ, ಸ್ವಭಾವಸಿದ್ಧವಾಗಿ
ರುವ, ಶಿವಲಿಂಗನಿಷ್ಠೆಯಿಂದಲೂ ಸ್ವಾತಂತ್ರ್ಯದಿಂದಲೂ ಅಲಂಕರಿಸಲ್ಪಟ್ಟವ
ನೂ, ಶಿವಭಕ್ತಿಯುಕ್ತನೂ ಆದ ಸಕಲೇಶಮಾದರಸನು, ಭಕ್ತರಲ್ಲಿ ಗಜದಂತೆ ಶ್ರೇಷ್ಠ
ನಾಗಿರುವ ಮಡಿವಾಳ ಮಾಚಯ್ಯನು ॥ ೬೨ ॥ ಜನನ ಮರಣವಿನಾಶಕವಾದ ಶಿವಾನು
ಭವಸೌಖ್ಯದಿಂದ ಯುಕ್ತನಾಗಿಯೂ ಲೋಕೈಕಪೂಜಿತನಾಗಿಯೂ ಇರುವ ಕಿನ್ನರ ಬ್ರಹ್ಮ
ದೇವಯ್ಯನು ॥ ೬೩ ॥ ಅನ್ಯಮತವಾದಿಧ್ವಂಸಕನಾಗಿಯೂ, ಧೀರನಾಗಿಯೂ, ನಿಗ್ರಹಾ
ನುಗ್ರಹಗಳನ್ನು ಮಾಡುವುದರಲ್ಲಿ ಸಮರ್ಥವಾದ ಶಿವಭಕ್ತಿಶಕ್ತಿಯಿಂದ ಅಲಂಕೃತನಾ

ಗ್ರುಭಕ್ತಿಶಕ್ತಿವಿಭೂಷಿತಃ ॥೬೪॥ ಮಹಾನ್ಮೌಳಿಗಮಾರಾರ್ಯೋಮಹನೀಯ
ಯಶೋಽನ್ವಿತಃ । ಕಲಕೇತಬ್ರಹ್ಮಯಾರ್ಯೋಧೂತಪಾತಕಸಂತತಿಃ ॥೬೫॥
ಧಿಕ್ಕೃತಾನ್ಯಮತೋಭಕ್ತದಿಕ್ಕರೀಕಕ್ಕಯಸ್ತಥಾ । ಶೌರ್ಯಾಧಿಕೋಜಗದ್ವ
ರ್ಯಚರ್ಯಸ್ಸುರಗಿಚೌಡಯಃ ॥ ೬೬ ॥ ಪಾಷಂಡಿಖಂಡಕೋವಂದಿತಾಘೋಮು
ಸುಡಿಚೌಡಯಃ । ಏಕಾಂತಸದ್ಭಕ್ತಕಾಂತಶ್ಶಾಂತಏಕಾಂತರಾಮಯಃ ॥೬೭॥
ಭಕ್ತಿಕ್ರಿಯಾಂಗಭಾಷಾಂಗಸಾಂಗಚರ್ಯಾಸಮನ್ವಿತಃ । ಉತ್ತಮಾಂಗದಕೇ
ಶೀಚ ಶಿವಜ್ಞಾನಸುಹೋದಧಿಃ ॥ ೬೮ ॥ ಕನ್ನದಬ್ರಹ್ಮಯೋ ಭಕ್ತಮ
ನೋರಥಸುಖಪ್ರದಃ । ನಾನಾವಿಕೃತಸದ್ಭಕ್ತಿಖ್ಯಾತಸ್ತೆಲುಗುಜೊಮ್ಮಯಃ॥
೬೯ ॥ ಭಕ್ತಾಲಯಃ ಕೊಂಡಗುಡಿಕೇಶಿರಾಜೋಗುಣೋತ್ತಮಃ । ಶಿವನಾ
ಗಃಕೃಪಾಪಾಂಗಸ್ಶಿವಭಕ್ತ್ಯಮೃತಾಂಗಕಃ ॥ ೭೦ ॥ ಮುಕ್ತಾಗುಡುಬೆಕಾಳ
ವ್ವಾ ಗುರುಭಕ್ತಾ ಗುಣಾನ್ವಿತಾ । ಅಘಟ್ಟಮಹಿಮಾಹಿಟ್ಟಗೊಗ್ಗವಾಸಿಷ್ಠ
ಯಾನ್ವಿತಾ ॥ ೭೧ ॥ ಇತ್ಯಾದಯೋಹಿಕಲ್ಯಾಣಕಟಕೇಭಕ್ತಿವರ್ಧನಾಃ । ಅಶೀ

---

ಗಿಯೂ ಇರುವ ಸೊಡ್ಡಳ ಬಾಚಯ್ಯನು ॥೬೪॥ ಅತ್ಯತ್ತಮವಾದ ಕೀರ್ತಿಯಿಂದ ಕೂಡಿದ ಮಹಿಳಗೆ ಮಾರಯ್ಯನು, ಪಾಪವಿದೂರನಾದ ಕಲಕೇತ ಬ್ರಹ್ಮಯ್ಯನು ॥೬೫॥ ಅನ್ಯಮತಗಳನ್ನು ತಿರಸ್ಕರಿಸಿದವನೂ, ಶಿವಭಕ್ತರಲ್ಲಿ ದಿಗ್ಗಜದಂತೆ ಶ್ರೇಷ್ಠನೂ ಆದ ಕಕ್ಕಯ್ಯನು, ಅಧಿಕ ಶೌರ್ಯಸಂಪನ್ನನೂ, ಲೋಕಶ್ರೇಷ್ಠನೂ ಆದ ಸುರಗಿ ಚೌಡಯ್ಯನು ॥ ೬೬ ॥ ವೇದಬಾಹ್ಯರನ್ನು ಖಂಡಿಸುವವನೂ, ಪಾಪಧ್ವಂಸಕನೂ ಆದ ಮುಸುಡಿ ಚೌಡಯ್ಯನು, ನಿಶ್ಚಲವಾದ ಚಿತ್ತವುಳ್ಳ (ಅಥವಾ ಒಂದೇ ಪ್ರಾಪ್ಯಸ್ಥಾನವುಳ್ಳ) ಶಿವಭಕ್ತರಿಗೆ ಪ್ರಿಯನೂ, ಶಾಂತಿಸಂಪನ್ನನೂ ಆದ ಏಕಾಂತರಾಮಯ್ಯನು ॥ ೬೭ ॥ ಭಕ್ತಿಯಲ್ಲೂ ನಡೆಯಲ್ಲೂ ನುಡಿಯಲ್ಲೂ ಒಂದೇ ವಿಧವಾಗಿ ಸಾಂಗವಾದ ಆಚರಣೆಯಿಂದ ಕೂಡಿದವನೂ ಶಿವಜ್ಞಾನ ಸಮುದ್ರನೂ ಆದ ಉತ್ತಮಾಂಗದ ಕೇಶಿಯು ॥ ೬೮ ॥ ಭಕ್ತರ ಇಷ್ಟಾರ್ಥಸೌಖ್ಯವನ್ನು ಕೊಡುವ ಕನ್ನದ ಬ್ರಹ್ಮಯ್ಯನು, ನಾನಾ ವಿಕಾರವಾದ ಸದ್ಭಕ್ತಿಯನ್ನು ನಡೆಯಿಸುವುದರಿಂದ ಪ್ರಸಿದ್ಧನಾದ ತೆಲುಗು ಜೊಮ್ಮಯ್ಯನು॥ ಶಿವಭಕ್ತರಿಗೆ ಆಶ್ರಯನೂ ಸದ್ಗುಣಗಳಿಂದ ಶ್ರೇಷ್ಠನೂ ಆದ ಕೊಂಡಗುಡಿ ಕೇಶಿರಾಜನು, ಶಿವಭಕ್ತಿ ವಿಶೇಷದಿಂದ ಅಮೃತಮಯವಾದ ಶರೀರವುಳ್ಳವನೂ, ದಯಾಪೂರ್ಣವಾದ ಕಡೆಗಣ್ಣುಳ್ಳವನೂ ಆದ ಶಿವನಾಗಾರ್ಯನು ॥ ೭೦ ॥ ಗುರುಭಕ್ತೆಯೂ, ಸದ್ಗುಣವತಿಯೂ, ಪಾಶವಿಮುಕ್ತೆಯೂ ಆದ ಗುಡುಬೆ ಕಾಳವ್ವನು, ತಗ್ಗದಿರುವ ಮಹಿಮೆಯುಳ್ಳವಳೂ, ಭಕ್ತಿಯುಕ್ತಳೂ ಆದ ಹಿಟ್ಟ ಗೊಗ್ಗವ್ವೆಯು ॥ ೭೧ ॥ ಇವರೇ ಮೊದಲಾದ ಕಲ್ಯಾಣಪಟ್ಟಣದಲ್ಲಿ ಶಿವಭಕ್ತಿಯನ್ನು ಅಭಿವೃದ್ಧಿಗೊಳಿಸುವ ಲಕ್ಷದಮೇಲೆಂಭ

ತ್ರಿಸಾಹಸ್ರಯುತಂಲಕ್ಷಂಜಂಗಮಪುಂಗವಾಃ ‖ ೨೨ ‖ ಶಿವರಾತ್ರೀರ್ಭದ್ರದೇವಶ್ಶಿವಭಕ್ತಿಪರಾಯಣಃ । ಘಟಿಕಾವಸರಖ್ಯಾತಃ ಕಾಲಕಂಠೋ ಮಹಾಯಶಾಃ ‖ ೨೩ ‖ ಸ್ವರ್ಣನೀರಾಜನಾ ವೀರಭದ್ರದೇವೋಗಣೋತ್ತಮಃ । ಪಟ್ಟವಸ್ತ್ರದಶಾದೀಪತ್ರಿಪುರಾರಿರ್ವಿಲಕ್ಷಣಃ ‖ ೨೪ ‖ ಕರ್ಪೂರನೀರಾಜನಾನಾಮರ್ಪಕಸ್ಸಂಗಮಸ್ತಥಾ । ಕಸ್ತೂರೀಲೇಪನಕರೋ ಮಹಾನುದ್ಭಟದೇವಯಃ ‖ ೨೫ ‖ ಮುಕ್ತಾಫಲ ಕ್ಲಪ್ತ ರಂಗವಲ್ಲಿಮಾಯಣಸಂಜ್ಞಕಃ । ಇತ್ಯಾದಿ ಪ್ರತಿಭಕ್ತಾನಾಂನವಸಾಹಸ್ರಕಂಪರಂ ‖ ೨೬ ‖ ನಿತ್ಯಸಸ್ಯಪರಿಖ್ಯಾತಸೋಯಿದೇವಾದಯೋಪರೇ । ಫಲವಾದಿಮಹಾಶೀಲವಂತೋದಶಸಹಸ್ರಕಂ ‖ ೨೭ ‖ ದತ್ವಾಕ್ಷಿಯುಗ್ಮವಿಶಾಯತಿ್ರಕಾಲಂನಿತ್ಯಮಾಪ್ನುವನ್ । ಸಕಂಗಳವಿರೂಪಾಕ್ಷದೇವೋಲೋಕನಮಸ್ಕೃತಃ ‖ ೨೮ ‖ ಛಿತ್ವಾಪ್ರತಿದಿನಂಜಿಹ್ವಾಂದತ್ವಾಶ್ರೀಶೂಲಪಾಣಯೆ । ಪ್ರಸ್ತುತಿಯೋನೂತನಯಾ ಜಿಹ್ವಯಾ ಪರಮೇಶ್ವರಂ ‖ ೨೯ ‖ ಪೊಸನಾಲಿಗೆಪೂರ್ವಸ್ಸಶಿವಯೋಗೀವಿಶುದ್ಧಧೀಃ । ಅಂತ್ರೈರ್ಯೋಽರ್ಚಯತೀಶಾನಂತ್ರಿಸಂಧ್ಯಂಭಕ್ತಿತೋನ್ವಹಂ ‖ ೩೦ ‖ ಸನುಹಾವೇವಸದ್ಭಕ್ತೊಮಹಾನ್ಮರುಳಪರ್ವ

---

ತ್ತುಸಾವಿರದ ಜಂಗಮಶ್ರೇಷ್ಠರುಗಳು ‖ ೨೨ ‖ ಶಿವಭಕ್ತಿಸಂಪನ್ನನಾದ ಶಿವರಾತ್ರಿಯ ಭದ್ರಯ್ಯನು, ಗಳಿಗೆಯನ್ನು ತಿಳಿಸುವುದರಲ್ಲಿ ಪ್ರಖ್ಯಾತನೂ, ಅಧಿಕ ಕೀರ್ತಿ ಸಂಪನ್ನನೂ ಆದ ಕಾಲಕಂಠನು ‖ ೨೩ ‖ ಚಿನ್ನದಾರತಿಯನ್ನು ಬೆಳಗುವುದರಲ್ಲಿ ನಿರತನೂ ಗಣಶ್ರೇಷ್ಠನೂ ಆದ ವೀರಭದ್ರದೇವನು, ರೇಶ್ಮೆಬಟ್ಟೆಯ ಬತ್ತಿಯ ದೀಪವನ್ನರ್ಪಿಸುವ ಅಸಾಧಾರಣನಾದ ತ್ರಿಪುರಾರಿಯು ‖ ೨೪ ‖ ಕರ್ಪೂರದಾರತಿಗಳನ್ನು ಬೆಳಗುವ ಸಂಗಯ್ಯನು, ಕಸ್ತೂರಿಯ ಲೇಪನವನ್ನು ಮಾಡುವ ಉದ್ಭಟದೇವಯ್ಯನು ‖ ೨೫ ‖ ಮುತ್ತುಗಳಿಂದ ರಂಗವಲ್ಲಿಯನ್ನಿಸಗುವ ಮಾಯಣ್ಣನು, ಇವರೇ ಮೊದಲಾದ ನಿಯಮತತ್ಪರರಾದ ಭಕ್ತರುಗಳು ಬೇರೆ ಒಂಭತ್ತು ಸಾವಿರ ‖ ೨೬ ‖ ಪ್ರತಿದಿನವೂ ಹೊಸಬೆಳಸನ್ನು ಮಾಡುವುದರಲ್ಲಿ ಪ್ರಸಿದ್ಧನಾದ ಸೋಯಿದೇವ ಮೊದಲಾದ, ಫಲವನ್ನು ಹೇಳುವ ಶೀಲವನ್ನು ಧರಿಸಿದವರು ಬೇರೆ ಹತ್ತುಸಾವಿರ ‖ ೨೭ ‖ ಪ್ರತಿದಿನವೂ ಶಿವನಿಗೆ ಮೂರು ಕಾಲವೂ ತನ್ನ ಕಣ್ಣುಗಳೆರಡನ್ನೂ ಕಳೆದು ಸಮರ್ಪಿಸಿ, ಮತ್ತೆ ಪಡೆಯುತ್ತಿರುವ ಲೋಕವಂದ್ಯನಾದ ಕಣ್ಣುಗಳ ವಿರೂಪಾಕ್ಷದೇವನು ‖ ೨೮ ‖ ಪ್ರತಿದಿನವೂ ತನ್ನ ನಾಲಿಗೆಯನ್ನು ಕತ್ತರಿಸಿ, ಶಿವನಿಗೆ ಅರ್ಪಿಸಿ, ಹೊಸ ನಾಲಿಗೆಯಿಂದ ಶಂಕರನನ್ನು ಸ್ತೋತ್ರ ಮಾಡುತ್ತಿರುವ ನಿರ್ಮಲಮತಿಯಾದ ಹೊಸ ನಾಲಿಗೆಯ ಶಿವಯೋಗಿಯು, ಪ್ರತಿದಿನವೂ ಮೂರು ಸಂಜೆಯಲ್ಲೂ ಶಿವನನ್ನು ಭಕ್ತಿಯಿಂದ ತನ್ನ ಕರುಳುಗಳ ಮಾಲೆಯಿಂದ

ತಃ | ದಿನತ್ರಯಸ್ಯೈಕವಾರಂಛಿತ್ವಾಭಕ್ತ್ಯಾಸ್ವಶೀರ್ಷಕಂ ||೮೧|| ಯಃಪ್ರೂ
ಜಯತಿಗೋವಿಂದಭಟ್ಟಸ್ಸಶಿವಸನ್ನಿಭಃ | ಇತ್ಯಾದ್ಯಾಸ್ಸಪ್ತಸಾಹಸ್ರಗಣಾಸ್ಸ
ಪ್ತದಶಾಧಿಕಂ ||೮೨|| ಸ್ನಿಗ್ಧಭಾವೋಽಜ್ಞಾನವಹ್ನಿದಗ್ಧದುರ್ವಿಷಯೋನ್ನತಿಃ|
ಪ್ರಸಿದ್ಧಮಹಿಮಾಮುಗ್ಧಸಂಗಯ್ಯಶ್ಶಿವತತ್ಪರಃ ||೮೩|| ಪ್ರಹರೇ ಪ್ರಹರೇ
ಭಿನ್ನವರ್ಣಂವಸನಮುತ್ತಮಂ | ಭಿನ್ನಜಾತೀಯಪುಷ್ಪಾಣಿಗಂಧಾನಪಿತಥಾ
ವಿಧಾನ್ ||೮೪|| ಭಿನ್ನಕಾಂತಾಸಂಗಮಂಚಭಿನ್ನಭೂಷಣಜಾಲಕಂ| ಸಮಂಗೀ
ಕೃತ್ಯನಿಯಮಾದ್ವರ್ತಮಾನೋದಿನೇದಿನೇ||೮೫|| ಅಷ್ಟಪ್ರಹರಸೋಮಾಂಕ
ಇತ್ಯಾದ್ಯಾಲೋಕವಿಶ್ರುತಾಃ| ಭುಕ್ತ್ವಾಯಥೇಪ್ಸಿತಾನ್ಭೋಗಾಂಸ್ತಿಷ್ಠಂತೋ
ಲಿಂಗನಿಷ್ಠಯಾ ||೮೬|| ಶುಭಾದ್ವಾದಶಸಾಹಸ್ರಮಿತಾಃಕಾಮುಕಜಂಗಮಾಃ|
ಅನ್ಯೇವೀರವ್ರತೌದಾರ್ಯಭಕ್ತಿನಿಷ್ಠಾಸಮನ್ವಿತಾಃ ||೮೭|| ಸರ್ವೇಕಲ್ಯಾಣಕಟ
ಕವಾಸಿನೋಽಭ್ಯೇತ್ಯಸಾದರಂ | ಲಿಂಗಾರಾಧನವೇಳಾಯಾಂಸಮಾಸೀನಾಸ್ಸ
ಮಂತತಃ ||೮೮|| ದೃಷ್ಟ್ವಾಶ್ರೀಬಸವೇಂದ್ರಸ್ಯಸ್ಥಿತಿಮತ್ಯಂತವಿಸ್ಮಿತಾಃ | ಕಿಂ
ವ್ಯಾಜಮೇತತ್ಕಿಂಕಾರ್ಯಂಕಿಂಪ್ರಸ್ತುತಮಿತಿಸ್ಫುಟಂ ||೮೯|| ಅದ್ಯಾಸ್ಮಾಭಿಃಪ್ರ

---

ಪೂಜಿಸುವ ಶಿವಭಕ್ತನಾದ ಮಹಾಕರುಳ ಪರ್ವತಯ್ಯನು, ಮೂರುದಿನಕ್ಕೊಂದುಬಾರಿ
ತನ್ನ ಶಿರವನ್ನು ಕಡಿದು ||೮೧|| ಭಕ್ತಿಯಿಂದ ಶಿವನಿಗೆ ಸಮರ್ಪಿಸುವ ಶಿವಸಮಾನನಾದ
ಗೋವಿಂದಭಟ್ಟನು. ಇವರೇ ಮೊದಲಾದ ಏಳು ಸಾವಿರದ ಹದಿನೇಳುಮಂದಿ ಗಣಂಗಳು|
ಸ್ನೇಹಪೂರ್ಣವಾದ ಮನಸ್ಸುಳ್ಳವನೂ, ಜ್ಞಾನಾಗ್ನಿಯಿಂದ ಸುಟ್ಟ ಸ್ರಕ್ಚಂದನವನಿ
ತಾದಿ ವಿಷಯಗಳುಳ್ಳವನೂ ಪ್ರಖ್ಯಾತವಾದ ಮಹತ್ವವುಳ್ಳವನೂ, ಶಿವಪರಾಯ
ಣನೂ ಆದ ಮುಗ್ಧಸಂಗಯ್ಯನು ||೮೩|| ಪ್ರತಿದಿನವೂ ಜಾವಜಾವಕ್ಕೂ ಬೇರೆ ಬೇರೆ
ತರದ ಉತ್ತಮವಾದ ವಸ್ತ್ರಗಳನ್ನೂ, ಬೇರೆ ಬೇರೆ ಜಾತಿಯ ಹೂವುಗಳನ್ನೂ, ಬೇರೆ
ಬೇರೆ ತೆರದ ಗಂಧಗಳನ್ನೂ ||೮೪|| ಬೇರೆ ಬೇರೆ ಕಾಂತೆಯರ ಭೋಗವನ್ನೂ, ತರತರದ
ಆಭರಣಗಳನ್ನೂ ಧರಿಸಿ, ಅನುಭವಿಸುತ್ತ ವ್ರತದಿಂದ ಇರುತ್ತಲಿರುವವರೂ ||೮೫||
ಮನಸ್ಸಿಗೆ ತೋರಿದಂಥ ಸುಖಗಳನ್ನೆಲ್ಲ ಅನುಭವಿಸುತ್ತ ಶಿವಲಿಂಗನಿಷ್ಠೆಯಿಂದಿರುವ
ವರೂ, ಜಗತ್ಪ್ರಖ್ಯಾತರೂ ಆದ ಮಂಗಳಮಯರಾದ ಎಂಟುಜಾವದ ಸೋಮಯ್ಯನೇ
ಮೊದಲಾದ ಕಾಮುಕಜಂಗಮರು ಹನ್ನೆರಡುಸಾವಿರ. ಉಳಿದ ವೀರವ್ರತ ಔದರ್ಯ
ಭಕ್ತಿಶ್ರದ್ಧೆಗಳಿಂದೆಲ್ಲ ಕೂಡಿದ ಕಲ್ಯಾಣಪಟ್ಟಣದಲ್ಲಿ ವಾಸಮಾಡುತ್ತಿರುವ ಭಕ್ತರುಗಳೆಲ್ಲ
ವಿಶ್ವಾಸದಿಂದ ಬಂದು, ಶಿವಪೂಜೆಯ ಸಮಯದಲ್ಲಿ ಸುತ್ತಲೂ ಕುಳಿತುಕೊಂಡರು |
ಬಸವೇಶ್ವರನ ಇರುವಿಕೆಯನ್ನು ನೋಡಿ ಅತ್ಯಾಶ್ಚರ್ಯಪಟ್ಟರು. ಇದೇನುಕಾರಣ ಹೀಗಾ
ಯಿತು ? ಇದೇನು ಕೆಲಸ ? ಇದೇನೊದಗಿತು ? ಎನ್ನುತ್ತಲೂ, ಇದನ್ನು ನಾವುಗಳೆಲ್ಲರೂ

ಯತ್ನೇನ ವಿಜ್ಞಾತವ್ಯಮಶೇಷತಃ | ಆಹೂಯಂತಾಮಿಹದ್ವಾಸ್ಥಾಃಪರ ಮಾಪ್ತಾ ನಿಯೋಗಿನಃ ||೯೦|| ಏತಸ್ಮಿನ್ದಿವಸೇಲಿಂಗಾವಸರಾಚಿತ್ಯಸಂಸ್ಥಿತಿಂ | ಗೀತಾನಿಗೀತಕೋಶಸ್ಥಪುಸ್ತಕಾನಿವಿಶೇಷತಃ ||೯೧|| ತತ್ರಸ್ಥಿತಾನಿಗೀತಾನಿಪ ರಾಮೃಶತಸತ್ವರಂ | ಅಸ್ಮಿನ್ದಿನೆಪ್ರತಿಜ್ಞಾಃಕಾಗೃಹೀತಾಃಕೋವ್ರತಕ್ರ ಮಃ ||೯೨|| ಆಗತಾಃಕೇಭಕ್ತವರ್ಯಾಇತಃಪೂರ್ವಂಚಕೇಗತಾಃ | ಅತಿಷ್ಠನ್ಕೆ ಕಥಮತಜಾನೀತಯದಿಸತ್ವರಂ ||೯೩|| ಇತ್ಯೂಚುಸ್ತತ್ಸಮಾಕರ್ಣ್ಯಶಿವಭಕ್ತಿ ಪರಾಯಣಃ | ಆಗತ್ಯಚೆನ್ನಬಸವ್ರೋಸತ್ವಾತೇಭ್ಯೋವ್ಯಜಿಜ್ಞಪತ್ ||೯೪|| ಮದ್ಗುರಾತ್ರೀಮಹಾದೇವಪೂಜಾಕಾಲೇವಿಶೇಷತಃ | ಅನನ್ಯಲಭ್ಯೋರುಶಿವ ಯೋಗಸಿದ್ಧ್ಯಾವಶೇಸತಿ ||೯೫|| ಅಪೂರ್ವೋಜಂಗಮಃಕಶ್ಚಿನ್ನಾಗಚ್ಛನ್ನೇತ ದಂತಿಕಂ | ಯೋಗಸಿದ್ಧ್ಯಾನ್ವಿತಂದ್ವಾಸ್ಥೈರ್ವಿದಿತ್ವಾಬಸವೇಶ್ವರಂ||೯೬|| ವಿನಿ ರ್ಯಯೌತದೇವಾತ್ರಭವಿತವ್ಯಂಹಿಕಾರಣಂ | ಪ್ರತಿಜ್ಞಾಗೀತಮಾಶ್ಚರ್ಯಕರಂ ತೇನೋದಿತಂಪುರಾ ||೯೭|| ಸಂಸ್ಮೃತೇಹೃದಯಂತಸ್ಮಿನ್ವಿದೀರ್ಣಂಭವತಿಕ್ಷ

---

ಸ್ಪಷ್ಟವಾಗಿ ವಿಚಾರಿಸಿ ತಿಳಿಯ ಬೇಕೆನ್ನುತಲೂ, ಹೇಳಿ, ಬಾಗಿಲಕಾವಲಗಾರರಲ್ಲಿ ಅತ್ಯಂ ತಾಪ್ತರಾಗಿರುವ ಊಳಿಗದವರನ್ನು ಇಲ್ಲಿಗೆ ಕರೆತನ್ನಿರಿ ||೯೦|| ಈ ದಿವಸ ಲಿಂಗಪೂಜಾ ಸಮಯದಲ್ಲಿ ಅಂಗೀಕರಿಸಿದ್ದ ರೀತಿಯನ್ನೂ, ಬೊಕ್ಕಸದೊಳಗಿರುವ ಈತನ ಗೀತ ಗಳ ಪುಸ್ತಕಗಳನ್ನೂ, ಅವುಗಳೊಳಗೆ ಈತನು ಹಾಡಿರುವ ಗೀತಗಳನ್ನೂ ಬೇಗನೆ ವಿಚಾರಮಾಡಿರಿ. ಈ ದಿನಕ್ಕೆ ಆತನು ಮಾಡಿರುವ ಪ್ರತಿಜ್ಞೆಯೇನು? ವ್ರತದ ರೀತಿ ಯೇನು? ||೯೨|| ಇದಕ್ಕೆ ಮುಂಚೆ ಯಾವ ಭಕ್ತಶ್ರೇಷ್ಠರು ಇಲ್ಲಿಗೆ ಬಂದಿದ್ದುಹೋ ದರು? ಇಲ್ಲಿಗೆ ಬಂದು ಯಾರು ನಿಂತಿದ್ದರು? ಅದನ್ನು ತಿಳಿದಿದ್ದರೆ ಬೇಗನೆ ಹೇಳಿರಿ||೯೩|| ಎಂಬುದಾಗಿ ಅವರೆಲ್ಲರೂ ನುಡಿದರು. ಶಿವಭಕ್ತಿತತ್ಪರನಾದ ಚೆನ್ನಬಸವೇಶನು ಈ ಮಾ ತನ್ನು ಕೇಳಿ, ಬಂದು, ಅವರೆಲ್ಲರಿಗೂ ನಮಸ್ಕರಿಸಿ, ವಿಜ್ಞಾಪಿಸಿದನೇನೆಂದರೆ— ||೯೪|| ನನ್ನ ಗುರುವಾದ ಈ ಬಸವೇಶನು ಶಿವಪೂಜೆಯ ಸಮಯದಲ್ಲಿ ಮತ್ತಿನ್ನಾರಿಗೂ ಲಭ್ಯ ವಾಗದಿರುವ ಮಹಾ ಶಿವಯೋಗನಿದ್ರೆಯಲ್ಲಿ ವಿಶೇಷವಾಗಿ ವಶನಾಗಿರುವಾಗ ||೯೫|| ಅಪೂರ್ವನಾದ ಒಬ್ಬಾನೊಬ್ಬ ಜಂಗಮನು ಈತನ ಬಳಿಗೆ ಬಂದು, ಈತನು ಯೋಗ ನಿದ್ರೆಯಿಂದ ಸಂಪನ್ನನಾಗಿರುವನೆಂಬುದನ್ನು ಬಾಗಿಲ ಕಾವಲುಗಾರರಿಂದ ತಿಳಿದು ||೯೬|| ಹಾಗೆಯೇ ಹೊರಟುಹೋದನು. ಅದೇ ಹೀಗಾಗುವುದಕ್ಕೆ ಕಾರಣವಾಗಿರಬೇಕು. ಪೂರ್ವ ದಲ್ಲಿ ಆ ಬಸವೇಶ್ವರನು ಹೇಳಿರುವಪ್ರತಿಜ್ಞಾಗೀತವು ಆಶ್ಚರ್ಯಕರವಾಗಿರುವುದು ||೯೭|| ಅದನ್ನು ಸ್ಮರಿಸಿಕೊಂಡರೆ ಕೂಡಲೇ ಎದೆಯು ಬಿರಿದುಹೋಗುವುದು. ಬಾಯಿಂದ

ಸಾತ್ | ಉದಿತೇದೀರ್ಯತೇಜಿಹ್ವಾನಿರ್ವ್ಯಾಹ್ಯಂತತ್ಕಥಂಪರೈಃ ||೯೮|| ವಿಜ್ಞಾಪ ಯಾಮಿಭವತಾಂತಾಂಪ್ರತಿಜ್ಞಾಂಯಥಾಮತಿ | ಲಿಂಗಂಗುರುಕೃಪಾದತ್ತಂಭ ಕ್ತಾನಾಂಪ್ರಾಣಲಿಂಗಕಂ ||೯೯|| ತತ್ಪ್ರಾಣಲಿಂಗಸ್ಯಗುರುಃಪ್ರಾಣಲಿಂಗಮಿ ಹೋಚ್ಯತೇ | ಜಂಗಮಸ್ತತ್ಪ್ರತಿನಿಧಿಃಪ್ರಾಣಲಿಂಗಂಮತಂಮಮ || ೧೦೦|| ತಥಾತ್ವಸ್ಯಸ್ವಯಂಸಾಕ್ಷೀದೇವೋಽಯಂ ಸಂಗಮೇಶ್ವರಃ | ಸತ್ಯಮಸ್ಮದ್ವ್ರ ತಂಚೇದಮಿತಿಜಂಗಮಭಕ್ತಿತಃ ||೧೦೧|| ಬಸವಾಮಾತ್ಯವರ್ಯೇಣಪ್ರತಿಜ್ಞಾಗೀ ತಮೀರಿತಂ | ಈದೃಶೀಕುತ್ರವಾದೃಷ್ಟಾಪ್ರತಿಜ್ಞಾಚಿಂತ್ಯತೇಕಥಂ || ೧೦೨|| ಚಿಂತ್ಯತಾಂನಾಮಚಪರೈರ್ವಕ್ತುಂವಾಶಕ್ಯತೇಕಥಂ | ಉಚ್ಯತಾಂನಾಮವಾ ಚಾವಾಸಾಸಮಾಚರ್ಯತೇಕಥಂ ||೧೦೩|| ತಾಂವಿಚಾರಯಿತುಂಶಕ್ತೋ ವಿಚಾರ ಸದೃಶಂಪುನಃ | ವಕ್ತುಮಾಚರಿತುಂತದ್ವದ್ಬಸವಾಮಾತ್ಯಶೇಖರಃ || ೧೦೪|| ಭೃತ್ಯತ್ವಾದ್ಭವತಾಮೇಷಯದ್ಯದಾಚರತೀದೃಶಂ | ಪಾರಂಪ್ರಾಪಯಿತುಂತ ತ್ತದಂಗೀಕರ್ತುಂಭರೋಽಹಿವಃ ||೧೦೫|| ನಕಶ್ಚನಾಸ್ಯಭಾರೋಽಸ್ತಿಸರ್ವತ್ರ

---

ಹೇಳಿದರೆ ನಾಲಿಗೆಯು ಸೀಳಿಹೋಗುವುದು. ಆ ಶಪಥವನ್ನು ಇನ್ನಾರಾದರೂ ನಿರ್ವಾಹ ಮಾಡಿಕೊಳ್ಳಲಾದೀತೆ? || ೯೮ || ಆ ಪ್ರತಿಜ್ಞೆಯನ್ನು ನಾನು ಬುದ್ಧಿಯಿದ್ದಷ್ಟಕ್ಕೆ ನಿಮಗೆ ಬಿನ್ನೈಸುತ್ತೇನೆ—ಗುರುವಿನ ದಯೆಯಿಂದ ಕೊಡಲ್ಪಟ್ಟ ಶಿವಲಿಂಗವು ಭಕ್ತರಿಗೆ ಪ್ರಾಣಲಿಂಗವು || ೯೯ || ಆ ಪ್ರಾಣಲಿಂಗಕ್ಕೆ ಗುರುವು ಪ್ರಾಣಲಿಂಗವೆಂಬುದಾಗಿ ಹೇಳ ಲ್ಪಡುತ್ತಾನೆ. ಗುರುವಿಗೆ ಪ್ರತಿನಿಧಿಯಾದ ಜಂಗಮನು ನನಗೆ ಪ್ರಾಣಲಿಂಗವು ||೧೦೦|| ಹೀಗೆಂಬುದಕ್ಕೆ ಸಂಗಮೇಶ್ವರನೇ ಸಾಕ್ಷಿಯು. ಈ ನಮ್ಮ ವ್ರತವು ಸತ್ಯವಾದುದು, ಎಂಬುದಾಗಿ ಜಂಗಮಭಕ್ತಿಯಿಂದ || ೧೦೧ || ಬಸವೇಶಮಂತ್ರಿಯು ಪ್ರತಿಜ್ಞಾಗೀತ ವನ್ನು ಹೇಳಿರುವನು. ಇಂಥ ಪ್ರತಿಜ್ಞೆಯನ್ನು ನೀವೆಲ್ಲಾದರೂ ನೋಡಿರುವಿರಾ? ಇಂಥ ಪ್ರತಿಜ್ಞೆಯನ್ನು ಮನಸ್ಸಿನಲ್ಲಾದರೂ ಹೇಗೆ ಯೋಚಿಸುವುವಕ್ಕಾದೀತು? ||೧೦೨ ಒಂದುವೇಳೆ ಇತರರು ಯೋಚಿಸಿದರೂ ಯೋಚಿಸಬಹುದು, ಬಾಯಿಂದ ಹೇಳುವುದ ಕ್ಕಾದೀತೆ? ನುಡಿಯಿಂದ ಹೇಳಿದರೂ ಹೇಳಲಿ, ಅದನ್ನು ಆಚರಿಸುವುದಕ್ಕೆ ಹೇಗಾದೀತು? || ೧೦೩ || ಈ ಬಸವೇಶಮಂತ್ರಿಶ್ರೇಷ್ಠನಾದರೋ, ಅಂಥದನ್ನು ಮನಸ್ಸಿನಲ್ಲಿ ವಿಚಾರಿ ಸುವುದಕ್ಕೆ ಸಮರ್ಥನು ; ಮತ್ತೆ ಆ ವಿಚಾರಕ್ಕೆ ಸಮನಾಗಿ ಬಾಯಿಂದ ನುಡಿಯುವು ದಕ್ಕೂ, ಅದರಂತೆ ಆಚರಿಸುವುದಕ್ಕೂ ಕೂಡ ಸಮರ್ಥನು || ೧೦೪ || ಈತನು ನಿಮ್ಮಗ ಳಿಗೆ ಸೇವಕನಾದುದರಿಂದ, ಹೀಗೆ ಈತನು ಏನೇನನ್ನು ಆಚರಿಸಿದರೂ ಕಡೆಗಾಣಿಸುವು ದಕ್ಕೂ, ಅವನ್ನೆಲ್ಲ ಅಂಗೀಕರಿಸುವುದಕ್ಕೂ ಸಹ ಭಾರವು ನಿಮ್ಮಮೇಲೆ ಬಿದ್ದಿರುವುದು || ೧೦೫ || ಈ ಬಸವೇಶನಮೇಲೆ ಯಾವುದೊಂದು ಭಾರವೂ ಇಲ್ಲ. ಈ ಮಾತನ್ನು

ಬಸವೇಶಿತುಃ| ಪ್ರಾಜ್ಞತ್ವೈಸಮಯಾನೋಕ್ತಂಸಕಾಶಾದ್ಭವತಾಮಿದಂ||೧೦೬||
ಭಯಂಚಿತ್ತೇಪರಿತ್ಯಜ್ಯಯಥಾಸ್ಥಿತಮುದೀರಿತಂ | ಇತ್ಯುಕ್ತ್ವಾಸ್ಮಿನ್ನಮಸ್ಕೃತ್ಯ
ತ್ಯಪ್ರಾಂಜಲೌಸಮುಪಸ್ಥಿತೆ ||೧೦೭|| ವೀರಮಾಹೇಶ್ವರಾಚಾರಪಟ್ಟಬದ್ಧಾಮು
ದಾನ್ವಿತಾಃ | ಆಕಾರಯಿತ್ವಾವೇಗೇನಪ್ರೋಚುಸ್ತೇಪ್ರತಿಹಾರಿಣಃ || ೧೦೮ ||
ಅತ್ರಕಲ್ಯಾಣಕಟಕೇ ಮಹಾಭಕ್ತಗೃಹಾಂತರೇ | ಅವಾರಿತಾನ್ನದಾತ್ರ್ಣಾಂ
ಮಹಾಮಠಚಯೇಷುಚ ||೧೦೯|| ಸಜಂಗಮೋತ್ತಮೋಯತ್ನಾದನ್ವಿಷ್ಯಾನೀ
ಯತಾಮಿತಿ | ಆಜ್ಞಪ್ತೈಸ್ತೈಃಪ್ರಣಮ್ಯಾಥತದಾನೀತೇಸುಜಂಗಮೇ||೧೧೦||
ಯದೇಷಜಂಗಮಪ್ರಾಣಸ್ತತಃ ಪ್ರಾಣಾಸ್ಸಮಾಗತಾಃ | ಕಿನ್ನರಬ್ರಹ್ಮಯ
ಪ್ರಾಣೇಷ್ವಾಗತೇಷುಯಥಾಪುರಾ ||೧೧೧||

ಇತಿ......ಶ್ರೀಗುರುರಾಜಸ್ಯಕೃತೌ ಶ್ರೀ ಮಲ್ಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೆ ದೀಕ್ಷಾ ಪ್ರಕರಣೆ
ಬಸವೇಶಸ್ಯ ಶಿವಯೋಗನಿದ್ರಾಪ್ರಶಂಸಾಯಾಂ
ತಜ್ಜಂಗಮ ಪ್ರಾಣಿತ್ವಕಥನಂ ನಾಮ
ದ್ವಾವಿಂಶೋಽಧ್ಯಾಯಃ.

---

ನಾನು ಪ್ರಾರ್ಥಿಮೆಯಿಂದ ನಿಮಗೆ ಹೇಳುವುದಿಲ್ಲ. ತಮ್ಮ ಸಾಮಿಪ್ಯಮಹಿಮೆಯಿಂದ ||೧೦೬|| ಮನಸ್ಸಿನಲ್ಲಿ ಭಯವನ್ನು ಬಿಟ್ಟು, ಇದ್ದ ರೀತಿಯನ್ನು ತಮಗೆ ಬಿನ್ನೈಸಿರುವೆನು; ಎಂಬುದಾಗಿ ಹೇಳಿ, ನಮಸ್ಕರಿಸಿ, ಕೈಯೊಡ್ಡಿ ನಿಂತುಕೊಂಡಿರಲು ||೧೦೭|| ವೀರಮಾಹೆಶ್ವರಾಚಾರವನ್ನು ನೆರವೇರಿಸುವುದರಲ್ಲಿ ಪಟ್ಟವನ್ನು ಕಟ್ಟಿಕೊಂಡಿರುವ ಆ ಗಣವರ್ಯರೆಲ್ಲರೂ ಸಂತೋಷಪಟ್ಟವರಾಗಿ, ದ್ವಾರಪಾಲಕರನ್ನು ಕರಯಿಸಿ ಬೇಗನೆ ಹೇಳಿದರೇನೆಂದರೆ –|| ೧೦೮ || "ಈ ಕಲ್ಯಾಣಪಟ್ಟಣದಲ್ಲಿ ಮಹಾ ಭಕ್ತರುಗಳ ಮನೆಯಲ್ಲೂ, ತಡೆಯಿಲ್ಲದೆ ಅನ್ನದಾನ ಮಾಡುತ್ತಿರುವ ಮಹಾ ಮಠಗಳಲ್ಲೂ ಕೂಡ ||೧೦೯|| ಇಲ್ಲಿಗೆ ಬಂದು ಹಿಂತಿರುಗಿಹೋದ ಆ ಜಂಗಮನನ್ನು ಪ್ರಯತ್ನಪೂರ್ವಕವಾಗಿ ಹುಡುಕಿ, ಕರಕೊಂಡುಬನ್ನಿರಿ" ಎಂದು ಆಜ್ಞಾಪಿಸಲ್ಪಟ್ಟ ಆ ದ್ವಾರಪಾಲಕರು ನಮಸ್ಕರಿಸಿ, ಹೊರಟು, ಆ ಜಂಗಮನನ್ನು ಕರೆದುಕೊಂಡುಬರಲು ||೧೧೦|| ಈ ಬಸವೇಶನು ಜಂಗಮ

## ತ್ರಯೋವಿಂಶೋಽಧ್ಯಾಯಃ.

ಮಡಿವಾಳ ಮಾಚಿದೇವೇನ ಬ್ರಹ್ಮಯ ಬಸವೇಶ್ವರಯೋಃ
ಪ್ರಾಣಪ್ರದಾನಕಥನಂ.

ತತ್ಕಥಾಕಥಮಿತ್ಯುಕ್ತೆ ಪ್ರವಕ್ಷ್ಯಾಮಿಸಮಾಸತಃ । ಕಿನ್ನರಬ್ರಹ್ಮಯಂಸ್ವಸ್ಯಪ್ರಾಣಾನ್ಕೃತ್ವಾಸ್ಥಿತೇಸತಿ ॥ ೧ ॥ ಬಸವಾಧೀಶ್ವರೇಶಂಭುಸ್ತಜ್ಜಜ್ಞಾಸುರಗೋಪಯತ್ । ಕಿನ್ನರಬ್ರಹ್ಮಯಪ್ರಾಣಾಂತ್ಯಾಸ್ವಾತ್ಮನ್ಯೇವಕದಾಚನ ॥ ೨ ॥ ಕಿನ್ನರಬ್ರಹ್ಮಯಂವೀಕ್ಷ್ಯತದಾಸೀಂಬಸವೇಶ್ವರಃ । ಪ್ರೇಮ್ಣಾ

---

ಪ್ರಾಣವಾಗಿರುವಕಾರಣದಿಂದ, ಈತನ ಪ್ರಾಣಗಳೆಲ್ಲವೂ ಬಂದುವು. ಹೇಗೆಂದರೆ– ಪೂರ್ವದಲ್ಲಿ ಕಿನ್ನರಬ್ರಹ್ಮಯ್ಯನ ಪ್ರಾಣಗಳು ಹೇಗೆ ಬಂದುವೋ ಹಾಗೆ ॥ ೧೧೧ ॥

ಎಂಬಿಲ್ಲಿಗೆ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ „ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ದೀಕ್ಷಾಪ್ರಕರಣದೊಳಗೆ ಬಸವೇಶ್ವರನ ಶಿವಯೋಗನಿಷ್ಠೆಯನ್ನು ಹೊಗಳುವೆಡೆಯಲ್ಲಿ ಆತನ ಜಂಗಮಪ್ರಾಣಿತ್ವವನ್ನುಹೇಳುವ ಕಥೆಯುಳ್ಳ ೨೨ನೆಯ ಅಧ್ಯಾಯವು ಮುಗಿದುದು.

## ೨೩ ನೆಯ ಅಧ್ಯಾಯವು.

ಮಡಿವಾಳ ಮಾಚಿದೇವನು ಕಿನ್ನರಬ್ರಹ್ಮಯ್ಯನಿಗೂ ಬಸವೇಶನಿಗೂ
ಪ್ರಾಣದಾನಮಾಡಿದ ಕಥೆ.

ಆ ಕಿನ್ನರಬ್ರಹ್ಮಯ್ಯನಿಗೆ ಪ್ರಾಣಗಳು ಬಂದವೆಂಬ ಕಥೆಯು ಹೇಗೆಂದರೆ:– ಸಾಂಗವಾಗಿ ಹೇಳುತ್ತೇನೆ. ಬಸವೇಶನು ಕಿನ್ನರಬ್ರಹ್ಮಯ್ಯನನ್ನು ತನ್ನ ಪ್ರಾಣವನ್ನಾಗಿ ಮಾಡಿಕೊಂಡು ಇರುತ್ತಿರಲಾಗಿ ॥ ೧ ॥ ಪರಶಿವನು ಬಂದಾನೊಂದುವೇಳೆ ಅವನ ದೃಢಭಾವವನ್ನು ತಿಳಿಯಲಿಚ್ಛೆಯುಳ್ಳವನಾಗಿ, ಕಿನ್ನರಬ್ರಹ್ಮಯ್ಯನ ಪ್ರಾಣಗಳನ್ನು ತನ್ನಲ್ಲೇ ಅಡಿಸಿಕೊಂಡನು ॥ ೨ ॥ ಆಗ ಬಸವೇಶ್ವರನು ಕಿನ್ನರಬ್ರಹ್ಮಯ್ಯನನ್ನು ಪ್ರೀ

ಶೋಕಪರೀತಸ್ಸನ್ವಿಲಲಾಪಾಶ್ರುಗದ್ಗದಂ ‖ ೩ ‖ ಭ್ರಾತಸ್ತಾತ ಮದೀಯೇಷ್ಟ ಬಂಧೋ ಮನುನುನೋರಮ | ಆಸ್ಥಾನವೇದಿಕಾದೀಪ ಮದೀಯ ಮುಖದರ್ಪಣ ‖ ೪ ‖ ಗುಣರತ್ನನಿಧೇ ಕುತ್ರ ಯಾತಃ ಶೂನ್ಯಮಭೂಜ್ಜಗತ್ | ಪರತತ್ತ್ವಂ ವಿನಿರ್ಯಾತಂ ಪ್ರಭಿನ್ನೋ ಮೇ ಮನೋರಥಃ ‖ ೫ ‖ ಮದ್ಭಕ್ತಿಶಕ್ತೀ ನಿಹತೇ ಮನೋವಲ್ಲೀ ಕ್ಷಯಂ ಗತಾ | ಹಾ ಕಿನ್ನರಬ್ರಹ್ಮದೇವ ಹಾ ಹಾ ಮತ್ಕುಲದೈವತ ‖ ೬ ‖ ಹಾ ಕುಲಾಧ್ಯಕ್ಷ ಹಾ ಕಲ್ಪವೃಕ್ಷ ಹಾ ನಿರಹಂಕೃತೆ | ಹಾ ಸದಾಚಾರ ಹಾ ಪಾಪದೂರ ಹಾ ಸಾರಸದ್ಗುಣ ‖ ೭ ‖ ಹಾ ದಯಾಪೂರ್ಣಹೃದಯ ಹಾ ಶಿವಾನಂದಸಂಗತ | ಇತಿ ಶೋಕಾದ್ವಿಲಪತಿ ಬಸವಾಮಾತ್ಯಶೇಖರೆ ‖ ೮ ‖ ಪ್ರತಿಹಾರೀ ಬಾಚಿದೇವೋ ಮಹೇಶಮುದವಂತಿ ಸಃ | ಖ್ಯಾತಸ್ಯ ಮಡಿವಾಳೋಪಪದ ಮಾಚಸ್ಯ ಮಂದಿರಂ ‖ ೯ ‖ ಆಗತ್ಯ ಕಿನ್ನರಬ್ರಹ್ಮವಾರ್ತಾಂ ತಸ್ಮೈ ನ್ಯವೇದಯತ್ | ಆಗಚ್ಛ ನ್ವಾ ತತ್ರ ಭಕ್ತಾ ಬಸವಃ ಕಿಂ ಕರೋತಿ ಸಃ ‖ ೧೦ ‖ ಕಿಂ ಪ್ರಸ್ತುತಂ ಚೇತಿ ಪೃಷ್ಟಃ ಪ್ರೋವಾಚ ಸಕೃತಾಂಜಲಿಃ | ಮಾದಿರಾಜಾದಿಸದ್ಭಕ್ತಾ

---

ಯಿಂದ ನೋಡಿ, ದುಃಖಾವೃತನಾಗಿ, ಕಣ್ಣೀರನ್ನು ಸುರಿಸುತ್ತ, ಗದ್ಗದಸ್ವರದಿಂದ ಅಳತೊಡಗಿದನು ‖ ೩ ‖ ಅಣ್ಣಾ! ನನ್ನ ತಂದೆಯೆ! ನನ್ನ ಇಷ್ಟಬಂಧುವೇ! ನನ್ನ ಮನಸ್ಸಿನಲ್ಲಿ ಕ್ರೀಡಿಸುವವನೆ! ನನ್ನ ಸಭಾಪತಿಯ ಜ್ಯೋತಿಯೆ! ನನ್ನ ಮುಖದ ಕನ್ನಡಿಯೆ! ‖ ೪ ‖ ಸದ್ಗುಣರತ್ನಗಳಿಗೆ ನಿಕ್ಷೇಪನೆ! ಎಲ್ಲಿಗೆಹೋದೆ! ಈ ಜಗತ್ತೆಲ್ಲ ಬರಿದಾಗಿರುವುದಲ್ಲಾ! ನನ್ನ ಪರತತ್ವವು ಹೊರಟುಹೋಯಿತು! ನನ್ನ ಇಷ್ಟಾರ್ಥವು ಒಡೆದುಹೋಯಿತು! ‖ ೫ ‖ ನನ್ನ ಭಕ್ತಿಶಕ್ತಿಗಳು ಹತವಾಗಿಹೋದುವು. ನನ್ನ ಮನಸ್ಸೆಂಬ ಬಳ್ಳಿಯು ಕ್ಷಯರೋಗವನ್ನೈದಿತು. ಹಾ! ಕಿನ್ನರಬ್ರಹ್ಮದೇವನೇ! ಅಯ್ಯೋ! ನನ್ನ ಕುಲದೇವತೆಯೆ ‖ ೬ ‖ ಅಯ್ಯೋ ವಂಶಾಧಿಪತಿಯೆ! ಹಾ! ನನ್ನ ಕಲ್ಪವೃಕ್ಷವೆ! ಹಾ! ನಿಗರ್ವಿಯೆ! ಹಾ! ಸದಾಚಾರಿಯೆ! ಹಾ! ಪಾಪದೂರನೆ! ಹಾ! ಸದ್ಗುಣಭರಿತನೆ! ‖ ೭ ‖ ಹಾ! ಕೃಪಾಪೂರ್ಣಚಿತ್ತನೆ! ಹಾ! ಶಿವಾನಂದಪರಿಪೂರ್ಣನೆ! ಎಂಬುದಾಗಿ ದುಃಖಾತಿರೇಕದಿಂದ ಬಸವಮಂತ್ರಿಯು ಹಲುಬುತ್ತಿರಲಾಗಿ ‖ ೮ ‖ ದ್ವಾರಪಾಲಕ ಬಾಚಿದೇವನು, ಪರಶಿವನ ಮುದದಾನೆಯೆಂದು ಪ್ರಖ್ಯಾತನಾದ ಮಡಿವಾಳ ಮಾಚಿದೇವನ ಮನೆಗೆ ಹೋಗಿ ‖ ೯ ‖ ಕಿನ್ನರಬ್ರಹ್ಮಯ್ಯನ ಸಮಾಚಾರವನ್ನು ಅವನೊಡನೆ ಹೇಳಿದನು. ಮಾಚಿದೇವನಾದರೊ—ಅಲ್ಲಿಗೆ ಭಕ್ತರಾದವರೂ ಬಂದಿರುವರೆ? ಆ ಬಸವಯ್ಯನು ಏನು ಮಾಡುತ್ತಾನೆ? ಏನು ನಡೆದಿದೆ? ಎಂಬುದಾಗಿ ಕೇಳಲಾಗಿ, ಆ ಬಾಚಿದೇವನು ಕೈಮುಗಿದುಕೊಂಡು ಬಿನ್ನೈಸಿದನೇನೆಂದರೆ—ಮಾದಿರಾಜನೆ ಮೊದಲಾದ ಭಕ್ತಶ್ರೇಷ್ಠರೆಲ್ಲರೂ

ಸ್ತತ್ರಸರ್ವೇಸಮಾಗತಾಃ ॥ ೧೧ ॥ ಕಿನ್ನರಬ್ರಹ್ಮದೇವಾರ್ಯಮಾಲಿಂಗ್ಯಾತ್ಯಂ
ತದುಃಖಿತಃ । ಆಸ್ತೇಸಬಸವಾಮಾತ್ಯಇತಿತಸ್ಮಿನ್ನಿವೇದಿತೇ ॥ ೧೨ ॥ ಪ್ರವಿಹ
ಸ್ಯಾಹಸಕಥಂಕಥಂಶಂಸಪುನಃಪುನಃ । ಆಗತಾಃಕಿಂನುಸದ್ಭಕ್ತಾಬಸವಃಕಿಮು
ರೋದಿತಿ ॥ ೧೩ ॥ ಸಾಧುರೇಜಂಗಮಪ್ರಾಣಸಂಧಾನಬಸವೇಶ್ವರ । ಸಾಧು
ರೇಜಂಗಮಪ್ರಾಣಪ್ರಯಾಣಬಸವೇಶ್ವರ ॥ ೧೪ ॥ ಸಾಧುರೇಜಂಗಮಪ್ರಾಣ
ಸಂತ್ರಾಣಬಸವೇಶ್ವರ । ಸಾಧುಜಂಗಮಸೌಖ್ಯಾನುಗತಚಿತ್ತವೃಷೇಶ್ವರ ॥
೧೫॥ ಹತಾಯಾಂಸ್ವಪ್ರತಿಜ್ಞಾಯಾಂಕಥಮಾಸ್ತೇಸಜೀವಿತಃ । ಭಕ್ತ್ಯಾವೇ
ಶಾದಯಂವಕ್ತಿಪ್ರತಿಜ್ಞಾಮತಿದುರ್ಘಟಾಂ ॥೧೬॥ ತಾಂತಥೈವಕರೋತ್ಯೇವ
ಕಥಂವಿಸ್ಮೃತವಾನಿವ ಶ್ರೀಜಂಗಮಪ್ರಾಣಇತಿಪ್ರತಿಜ್ಞಾಮತಿದುರ್ಘಟಾಂ॥
೧೭ ॥ ಜಂಗಮಪ್ರಾಣಧರ್ಮಃಕಿಂಶೋಕವ್ಯಾಕುಲತೇದೃಶೀ । ಪ್ರತಿಜ್ಞಾಂರಜ
ಸಿಕ್ಷಿಪ್ತ್ವಾಕಿಂಕರೋತ್ಯಧಮಕ್ರಿಯಾಃ ॥ ೧೮ ॥ ಕಿಮಿದಂಜಂಗಮಪ್ರಾಣಾ
ರುದಂತಿವಿಧವಾಇವ । ಇಮಾಮಭಕ್ತವಾರ್ತಾಂಕಿಂಕಲ್ಲಿನಾಥೋಽನುಮನ್ಯ
ತೇ ॥ ೧೯ ॥ ಸಕಿನ್ನರಬ್ರಹ್ಮದೇವೋಭಕ್ತಮಾತ್ರಂಕಿಮುಕ್ಷಿತೌ । ಸಂಯೋ

---

ಅಲ್ಲಿಗೆ ಬಂದಿರುತ್ತಾರೆ. ॥ ೧೧ ॥ ಆ ಬಸವಮಂತ್ರಿಯು ಕಿನ್ನರಬ್ರಹ್ಮದೇವಯ್ಯನನ್ನು
ತಬ್ಬಿಕೊಂಡು, ಅತ್ಯಂತದುಃಖಪಡುವವನಾಗಿರುತ್ತಾನೆ. ಎಂದು ಹೇಳಲು ॥ ೧೨ ॥
ಮಾಚಿದೇವನು ಗಹಗಹಿಸಿ ನಕ್ಕು, ಹೇಗೆ? ಹೇಗೆ? ಮತ್ತೊಂದುಬಾರಿ ಹೇಳು? ಭಕ್ತಶ್ರೇ
ಷ್ಠರೆಲ್ಲರೂ ಬಂದಿರುವರೊ? ಬಸವನು ಅಳುತ್ತಿರುವನೊ? ॥ ೧೩ ॥ ಎಲಾ ಬಸವೇ
ಶ್ವರ! ಜಂಗಮಪ್ರಾಣಸಂಧಾನಿಯೆ! ಚೆನ್ನಾಯಿತು! ಎಲಾ ಜಂಗಮಪ್ರಾಣದೊಡನೆ
ಪ್ರಯಾಣಮಾಡುವ ಬಸವೇಶ್ವರನೇ! ಶಹಬಾಸ್ ॥ ೧೪ ॥ ಎಲಾ ಜಂಗಮಪ್ರಾಣವೇ
ತ್ರಾಣವಾಗುಳ್ಳ ಬಸವೇಶನೆ! ಭಾಪು! ಜಂಗಮಸೌಖ್ಯವನ್ನು ಅನುಸರಿಸಿದ ಮನಸ್ಸುಳ್ಳ
ಬಸವೇಶನೆ! ಲೇಸು ॥ ೧೫ ॥ ತನ್ನ ಪ್ರತಿಜ್ಞೆಯು ಸತ್ತುಹೋದಬಳಿಕ ಆ ಬಸವೇಶನು
ಅದು ಹೇಗೆ ಬದುಕಿರುತ್ತಾನೆ? ಈತನು ಭಕ್ತಿಯ ಆವೇಶವುಂಟಾದಾಗ ನಡೆಯಿಸುವುದ
ಕ್ಕಸಾಧ್ಯವಾದ ಪ್ರತಿಜ್ಞಾಗೀತವನ್ನು ನುಡಿದುಬಿಡುತ್ತಾನೆ ॥ ೧೬ ॥ ಅದನ್ನು ಹಾಗೆಯೇ
ಮರೆತುಬಿಟ್ಟವನಂತೆ ಅದು ಹೇಗೆ ಮಾಡುತ್ತಾನೆ? ಈತನು ತಾನು ಜಂಗಮಪ್ರಾಣಿ
ಯೆಂದು ಅತ್ಯಸಾಧ್ಯವಾದ ಪ್ರತಿಜ್ಞೆಯನ್ನು ಮಾಡಿರುವನು ॥ ೧೭ ॥ ಹೀಗೆ ದುಃಖದಿಂದ
ಹಂಬಲಿಸುವುದೇ ಜಂಗಮಪ್ರಾಣಿತ್ವವೊ? ತಾನು ಮಾಡಿದ ಪ್ರತಿಜ್ಞೆಯನ್ನು ಧೂಳಿಗೆ
ಹಾಕಿ, ನೀಚಕಾರ್ಯಗಳನ್ನು ಮಾಡುತ್ತಿರುವನೆ? ಇದೇನು? ಜಂಗಮಪ್ರಾಣರಾದವರು
ಹೀಗೆ ಮುಂಡೆಯರಂತೆ ಅಳುವರೆ? ಭಕ್ತಿಹೀನವಾದ ಈ ಸುದ್ದಿಯನ್ನು ಕೇಳಿ ಕಲ್ಲಿನಾ
ಥನು ಒಪ್ಪುವನೆ? ॥ ೧೮ ॥ ಭೂಮಿಯಲ್ಲಿ ಆ ಕಿನ್ನರಬ್ರಹ್ಮದೇವಯ್ಯನು ಮಾತ್ರವೇ

ಜುಯತಿಚೇಚ್ಛಂಭುಸ್ತಂಮಹಾತ್ಮಾನಮಾತ್ಮನಿ ॥ ೨೦ ॥ ರುದಂತೀವಾಥಸುಹೃದಸ್ತಸ್ಯಸಂಸಾರಿವತ್ಕಥಂ । ಭಾಷಾವಿಹೀನತಾಂಭಕ್ತಿಂಸಂವಿಧಾಯಪ್ರಶಂಸಿತುಂ ॥ ೨೧ ॥ ರೋದಿತುಂಚನಜಾನೀಮಃಕಿಮಸ್ಮಾಭಿರಲಂವ್ರಜ । ಇತ್ಯುಕ್ತೋತ್ರಥವಿನಿರ್ಗತ್ಯಸದ್ಭಕ್ತೇಭ್ಯಸ್ಸಶಂಕಿತಂ ॥ ೨೨ ॥ ಪ್ರಣಮ್ಯಕಥಯಾಮಾಸತದುಕ್ತಾಸ್ಸಕಲಾಗಿರಃ । ಸ್ಮೃತಪ್ರತಿಜ್ಞಸ್ತಂಶೋಕಂಮುಕ್ತ್ವಾಥಬಸವೇಶ್ವರಃ ॥ ಕಿನ್ನರಬ್ರಹ್ಮಯಪ್ರಾಣೇಷ್ವಾತ್ಮಪ್ರಾಣಾನಯೋಜಯತ್ । ಸ್ಮೃತ್ವಾಭಾಷಾಂಕಥಂಕಾರಂಬಸವಃಪ್ರಾಣಿತೀದೃಶಂ ॥ ೨೪ ॥ ಅನ್ಯಸ್ಮಿಂಶ್ಚಿಂತಿತೇಕಾರ್ಯಮನ್ಯಜ್ಜಾತಂಬತಾಧುನಾ । ಸದ್ಭಕ್ತಿಮರ್ಮಕರ್ಮಾಣಿವಕ್ತುಂಜಾನಾತಿಮಾಚಯಃ ॥ ೨೫ ॥ ತಥೈವಾಚರಿತುಂದಕ್ಷೋವೇತ್ತಿ ಶ್ರೀಬಸವೇಶ್ವರಃ । ತತ್ಸರ್ವಂಶಂಕರೋವೇತ್ತಿದ್ರಷ್ಟುಂಕುತ್ರಾಪಿನೇದೃಶಂ ॥ ೨೬ ॥ ಆಶ್ಚರ್ಯಮಿತಿತೈರ್ಭಕ್ತೈರುಕ್ತ್ವಾಸಂಪ್ರೇಷಿತಃಪುನಃ । ಪ್ರತಿಹಾರೀಮಾಚಯಾಯತದ್ವೃತ್ತಾಂತಂವ್ಯಜಿಜ್ಞಪತ್ ॥ ೨೭ ॥ ತದ್ವಾರ್ತಾಂಮಾಚಯಶ್ಶ್ರುತ್ವಾ ಮಹಾಸಂತೋಷನಿ

---

ಭಕ್ತನೆ? ಶಿವನು ಆ ಮಹಾತ್ಮನನ್ನು ತನ್ನಲ್ಲಿ ಐಕ್ಯಮಾಡಿಕೊಂಡರೆ ॥ ೨೦ ॥ ಅವನ ಸ್ನೇಹಿತರು ಸಂಸಾರಿಗಳಂತೆ ಅದು ಹೇಗೆ ಅಳುತ್ತಾರೆ? ತನ್ನ ಭಾಷೆಯನ್ನು ಕಳೆದುಕೊಂಡ ಭಕ್ತಿಯನ್ನು ದೊಡ್ಡದು ಮಾಡಿ ಹೊಗಳುವುದಕ್ಕೂ ॥ ೨೧ ॥ ಅಳುವುದಕ್ಕೂ ಸಹ ನಾವು ತಿಳಿಯೆವು. ನಮ್ಮಿಂದ ಅಲ್ಲಿ ಪ್ರಯೋಜನವೇನು? ಸಾಕು ಹೋಗು. ಎಂಬುದಾಗಿ ಹೇಳಲಾಗಿ, ಆ ಬಾಚಿದೇವನು ಹಿಂತಿರುಗಿ ಹೊರಟು, ಭಕ್ತರುಗಳಿಗೆ ಭಕ್ತಿಯಿಂದ ಕೂಡಿ ನಮಸ್ಕರಿಸಿ ॥ ೨೨ ॥ ಮಾಚಿದೇವನು ಹೇಳಿದ ಮಾತನ್ನೆಲ್ಲ ಹೇಳಿದನು. ಬಳಿಕ ಬಸವೇಶನು ತನ್ನ ಪ್ರತಿಜ್ಞೆಯನ್ನು ಸ್ಮರಿಸಿಕೊಂಡವನಾಗಿ, ಆ ದುಃಖವನ್ನು ಬಿಟ್ಟು, ॥ ೨೩ ॥ ಕಿನ್ನರಬ್ರಹ್ಮಯ್ಯನ ಪ್ರಾಣಗಳಲ್ಲಿ ತನ್ನ ಪ್ರಾಣಗಳನ್ನು ಕೂಡಿಸಿದನು. ಅಲ್ಲಿದ್ದ ಭಕ್ತರಾದರೊ—ಬಸವೇಶನು ತನ್ನ ಭಾಷೆಯನ್ನು ಸ್ಮರಿಸಿಕೊಂಡು ಈ ಪ್ರಕಾರವಾಗಿ ಇನ್ನು ಅದು ಹೇಗೆ ಜೀವಿಸುತ್ತಾನೆ? ಅಯ್ಯೋ! ನಾವು ಒಂದನ್ನು ಯೋಚಿಸಿದರೆ, ಅದೊಂದಾಯಿತು! ಸದ್ಭಕ್ತಿಯ ಮರ್ಮವನ್ನೂ ಕರ್ಮವನ್ನೂ ಹೇಳುವುದಕ್ಕೆ ಮಾಚಿದೇವನು ಬಲ್ಲನು ॥ ೨೫ ॥ ಹಾಗೆಯೇ ಆಚರಿಸುವುದಕ್ಕೆ ಬಸವೇಶ್ವರನು ತಿಳಿದಿರುತ್ತಾನೆ. ಮತ್ತೂ ಸಮರ್ಥನೂ ಆಗಿರುತ್ತಾನೆ. ಅದೆಲ್ಲವನ್ನೂ ಶಿವನು ತಿಳಿದಿರುತ್ತಾನೆ. ಇನ್ನೆಲ್ಲಿಯೂ ಇಂತಹದನ್ನು ನೋಡುವುದಕ್ಕೆ ಇಲ್ಲವು ॥ ೨೬ ॥ ಆಶ್ಚರ್ಯವು! ಎಂದು ಭಕ್ತರುಗಳು ನುಡಿದು, ತಿರುಗಿ ಪ್ರತಿಹಾರಿಬಾಚಯ್ಯನನ್ನು ಕಳುಹಿಸಲು, ಆತನು ನಡೆದ ವೃತ್ತಾಂತವನ್ನು ಮಾಚಿದೇವನಿಗೆ ಶ್ರುತಪಡಿಸಿದನು ॥ ೨೭ ॥ ಆ ಸುದ್ದಿಯನ್ನು ಮಾಚಿದೇವನು ಕೇಳಿ, ಮಹಾಸಂತೋಷಾತಿಶಯವುಳ್ಳವನಾಗಿ, ಜಂಗಮಪ್ರಾಣದಲ್ಲಿ ಅಡ

ರ್ಭ್ಯರಃ | ಸಾಧುರೇಜಂಗಮಪ್ರಾಣವಿಲೀನಬಸವೇಶ್ವರ ‖ ೨೮ ‖ ಸಾಧುರೇ
ಜಂಗಮಪ್ರಾಣಸಂಧಾನಬಸವೇಶ್ವರ | ಸಾಧುರೇಜಂಗಮಪ್ರಾಣಪ್ರಯಾಣ
ಬಸವೇಶ್ವರ ‖ ೨೯ ‖ ಸಾಧುರೇಜಂಗಮಪ್ರಾಣಸಂತ್ರಾಣಬಸವೇಶ್ವರ| ಬಸ
ವೋಜಂಗಮಪ್ರಾಣ ಇತಿಯುಕ್ತಮಿದಂವಚಃ ‖ ೩೦ ‖ ಸಾಧುಸಾಧುಮಹಚ್ಚಿ
ತ್ರಂಯುಕ್ತಂಯುಕ್ತಮಿತಿಬ್ರುವನ್ | ಕಲ್ಲಿನಾಥಸ್ಯಸನ್ಮಿತ್ರಮಾಚಾರ್ಯೋ
ಭಕ್ತಪುಂಗವಃ‖೩೧‖ ಏತನ್ಮಾಹಾತ್ಮ್ಯಮತ್ಯಂತಂಶ್ರುತವತ್ಸ್ವತಿದುರ್ಘಟಂ |
ಪಲಾಯಮಾನೇಷುದಿಶಃಪ್ರತಿವಾದಿಷುಸರ್ವಶಃ ‖ ೩೨ ‖ ಅತಿತುಷ್ಟೇಷುಭಕ್ತೇ
ಷುಭೇವಿಷ್ವಪಸೃತೇಷುಚ | ವಿಶಂಕಮಾನೇಗಿರಿಶೇನಮಂತ್ರೀಷುಜನಾಳಿಷು ‖
ಪಾತಕೇಷುವಿಶೀರ್ಣೇಷುಯಮಗರ್ವೇವಿಸಿರ್ಗತೇ | ತಂದೇಶಮಗಮತ್ಪ್ರೀತ್ಯಾ
ಯತ್ರಾಸ್ತೇಭಕ್ತಸಂತತಿಃ ‖ ೩೪ ‖ ಪ್ರತ್ಯುತ್ಥಾನಾಭಿಗಮನವಂದನಾದೀನ್ಯ
ಥೋಚಿತಂ | ಕ್ರಿಯಮಾಣೇಷುಭಕ್ತೇಷುಹರ್ಷವಿಸ್ಫಾರಿತೇಕ್ಷಣಃ ‖೩೫‖
ಅನುಜ್ಞಾತೋಗಣೈಸ್ತೇಭ್ಯಸ್ಸಾಷ್ಟಾಂಗಂಪ್ರಣಿಪತ್ಯಚ | ಪ್ರಮಥಪ್ರಾಕ್ತ
ನಪದಸಂಕೀಲಿತಹೃದಂತರಃ ‖ ೩೬ ‖ ಕಿನ್ನರಬ್ರಹ್ಮದೇವಾರ್ಯಗೀರ್ವಾಣಗಣ

---

ಗಿರುವ ಎಲೌ ಬಸವೇಶನೆ! ಶಭಬಾಸು ‖ ೨೮ ‖ ಜಂಗಮಪ್ರಾಣದಲ್ಲಿ ಅನುಸಂಧಾನ
ವುಳ್ಳ ಬಸವೇಶನೇ! ಭಾಪು; ಜಂಗಮಪ್ರಾಣದೊಡನೆ ಪ್ರಯಾಣಮಾಡುವ ಬಸವೇಶ
ನೇ! ಮಝ; ‖ ೨೯ ‖ ಜಂಗಮಪ್ರಾಣವೇ ತ್ರಾಣವಾಗುಳ್ಳ ಎಲೌ ಬಸವೇಶನೇ! ಲೇ
ಸು ; ಬಸವನು ಜಂಗಮಪ್ರಾಣಿಯೆಂಬುದಾಗಿ ಹೇಳುವ ಈ ಮಾತು ವಿಹಿತವಾದದು ‖
೩೦‖ ಭಲಾ! ಭಲಾ! ಮಹದಾಶ್ಚರ್ಯ! ಉಚಿತ, ಉಚಿತ, ಎಂದು, ಕಲ್ಲಿನಾಥನ ಸನ್ಮಿತ್ರ
ನಾದ ಭಕ್ತಶ್ರೇಷ್ಠನಾದ ಮಾಚಿದೇವನು ನುಡಿವವನಾದನು ‖ ೩೧ ‖ ಅಸಾಧ್ಯವಾಗಿ
ಯೂ ಅತಿಶಯವಾಗಿಯೂ ಇರುವ ಈತನ ಮಹತ್ವವನ್ನು ಪ್ರತಿವಾದಿಗಳು ಕೇಳಿದವ
ರಾಗಿ, ಎಲ್ಲಕಡೆಯೂ ದಿಕ್ಕುದಿಕ್ಕಿಗೆ ಓಡಿಹೋಗಲಾಗಿ ‖ ೩೨ ‖ ಶಿವಭಕ್ತರುಗಳು ಅ
ತ್ಯಂತ ಸಂತೋಷಪಡಲಾಗಿ, ಭವಿಗಳು ದೂರಸರಿಯಲಾಗಿ, ಪರಮೇಶ್ವರನು ಅಳ್ಳಾಡ
ಲಾಗಿ, ಕಂಡ ಜನರೆಲ್ಲ ನಮಸ್ಕರಿಸಲಾಗಿ ‖ ೩೩ ‖ ಪಾಪಗಳೆಲ್ಲ ಶಿಥಿಲವಾಗಲಾಗಿ, ಯಮನ
ಅಹಂಕಾರವು ಉಡುಗಲಾಗಿ, ಭಕ್ತರೆಲ್ಲರೂ ಕುಳಿತಿದ್ದ ಆ ಸ್ಥಲಕ್ಕೆ ಪ್ರೀತಿಯಿಂದ
ಮಾಚಿದೇವನು ಬಂದನು ‖ ೩೪ ‖ ಅಲ್ಲಿದ್ದ ಭಕ್ತರೆಲ್ಲರೂ ಮಾಚಿದೇವನಿಗೆ ಎದ್ದೇಳುವುದು
ಇದಿರಾಗಿ ಹೋಗುವುದು ನಮಸ್ಕರಿಸುವುದು ಮೊದಲಾದ ಗೌರವಪ್ರದರ್ಶನಕಾರ್ಯಗಳನ್ನು
ಯಥೋಚಿತವಾಗಿ ಮಾಡಲಾಗಿ, ಮಾಚಿದೇವನು ಸಂತೋಷದಿಂದರಳಿದ ಕಣ್ಣುಳ್ಳವನಾ
ಗಿ ‖ ೩೫ ‖ ಆ ಭಕ್ತರುಗಳಿಂದಪ್ಪಣೆಯನ್ನು ಪಡೆದು ಅವರಿಗೆ ಸಾಷ್ಟಾಂಗನಮಸ್ಕಾರವ
ನ್ನು ಮಾಡಿ, ಪ್ರಾಚೀನರಾದ ಪ್ರಮಥರುಗಳ ಪಾದದಲ್ಲಿಡಲ್ಪಟ್ಟ ಮನಸ್ಸುಳ್ಳವನಾಗಿ ‖

ವಂದಿತ । ವಿಶುದ್ಧಕೀರ್ತೇಪ್ರತ್ಯಕ್ಷರುದ್ರಮೂರ್ತೇಮಹೋನ್ನತ ॥ ೩೭ ॥ ಹಿತ್ವಾಶ್ರೀಬಸವಾಮಾತ್ಯಂಪ್ರಾಣಮಿತ್ರಂಕಥಂತ್ವಯಾ । ಯುಕ್ತಂಶಿವಪುರೀಂಗಂತುಂಭಕ್ತಸಂಪ್ರೀಣನೋಚಿತ ॥ ೩೮ ॥ ಅಕೃತ್ವಾಶಂಕರಸ್ಯಾಜ್ಞಾಂಪೂರ್ಣಾಂಶ್ರೀಬಸವೇಶ್ವರಃ । ತ್ವಯಾಸಹಮಹಾದೇವಪುರೀಂಪ್ರಾಪ್ತೋಽಭವತ್ಕಥಂ ॥ ೩೯ ॥ ಅಜಾನಾನೇಷುಭಕ್ತೇಷುಶಿವಸ್ತ್ವಾಮನಯತ್ಕಥಂ । ಬಸವೇಜಂಗಮಪ್ರಾಣೇತ್ವಯಾಸಹವಿನಿರ್ಗತೇ ॥ ೪೦ ॥ ಪ್ರಯಾತಿಭಕ್ತಿಸ್ತೇನೈವಭಕ್ತಿಶೂನ್ಯಂಜಗದ್ಭವೇತ್ । ಏವಂಸ್ವಚ್ಛಂದತೋಗಂತುಂಯುಷ್ಮಾಕಂಕಿಮುಯುಜ್ಯತೇ ॥ ೪೧ ॥ ತಸ್ಮಾಚ್ಛ್ರೀಬಸವಾಮಾತ್ಯೋಯಾವತ್ಕಾಲಂವಸೇದ್ಭುವಿ । ತಾವತ್ತ್ವಯಾಪಿಸ್ಥಾತವ್ಯಮುತ್ತಿಷ್ಠೋತ್ತಿಷ್ಠಶೋಭನ ॥ ೪೨ ॥ ಇತ್ಯುವಾಚತತಸ್ಸೋಽಪಿಸುಪ್ತೋತ್ಥಿತಇವೋತ್ಥಿತಃ । ಮಾಚಿದೇವಾರ್ಯಪದಯೋರಾಗತ್ಯಪ್ರಣತೋಽಭವತ್ ॥ ೪೩ ॥ ತತಶ್ಶ್ರೀ ಬಸವಾಮಾತ್ಯಸ್ಸಮುತ್ಥಾಯಪದಾಬ್ಜಯೋಃ । ಪ್ರಣಮ್ಯಮಾಚಿದೇವಸ್ಯಪುರಸ್ಸವಿನಯಂಸ್ಥಿತಃ ॥ ೪೪ ॥

---

ಎಲೈ ಕಿನ್ನರಬ್ರಹ್ಮದೇವಯ್ಯನೆ! ದೇವತಾಸಮೂಹನಮಸ್ಕೃತನೆ! ನಿರ್ಮಲಕೀರ್ತಿಸಂಪನ್ನನೆ! ಪ್ರತ್ಯಕ್ಷಪರಶಿವನೆ! ಮಹೋತ್ಕೃಷ್ಟನಾದವನೆ ॥ ೩೭ ॥ ಭಕ್ತರನ್ನು ಪ್ರೀತಿಪಡಿಸುವುದರಲ್ಲಿ ಯೋಗ್ಯನಾದವನೆ! ನಿನ್ನ ಪ್ರಾಣಾಪ್ತನಾದ ಶ್ರೀ ಬಸವೇಶ್ವರಮಂತ್ರಿಯನ್ನು ಬಿಟ್ಟು, ನೀನು ಮಾತ್ರವೇ ಕೈಲಾಸಕ್ಕೆ ಹೋಗುವುದು ಯುಕ್ತವೆ? ॥ ೩೮ ॥ ಶ್ರೀ ಬಸವೇಶ್ವರನು ಶಿವನಪ್ಪಣೆಯನ್ನು ಕೊನೆ ಮುಟ್ಟ ನೆರವೇರಿಸದೆ, ನಿನ್ನೊಡನೆ ಕೈಲಾಸಕ್ಕೆ ಅವನು ಹೇಗೆ ಬಂದನು? ॥ ೩೯ ॥ ಭಕ್ತರುಗಳಾರೂ ತಿಳಿಯದಿರುವಲ್ಲಿ ಶಿವನು ನಿನ್ನನ್ನುಮಾತ್ರ ಅದು ಹೇಗೆ ಕರೆದುಕೊಂಡನು? ಜಂಗಮಪ್ರಾಣಿಯಾದ ಬಸವೇಶನು ನಿನ್ನೊಡನೆ ಹೊರಟುಬಿಟ್ಟರೆ ॥ ೪೦ ॥ ಅವನ ಸಂಗಡವೇ ಶಿವಭಕ್ತಿಯೂ ಹೊರಟುಹೋಗುತ್ತದೆ. ಬಳಿಕ ಜಗತ್ತು ಭಕ್ತಿಯಿಂದಲೇ ಶೂನ್ಯವಾದೀತು. ಹೀಗೆ ನೀವುಗಳು ಸ್ವೇಚ್ಛೆಯಿಂದ ಹೊರಟುಹೋಗುವುದು ಯುಕ್ತವೆ? ॥ ೪೧ ॥ ಆದುಕಾರಣ ಶ್ರೀ ಬಸವಮಂತ್ರಿಯು ಭೂಮಿಯಲ್ಲಿ ಎಷ್ಟುಕಾಲಪರ್ಯಂತ ವಾಸಮಾಡಿಕೊಂಡಿರುವನೋ, ಆ ಪರ್ಯಂತವಾಗಿ ನೀನುಕೂಡ ಇರಬೇಕು. ಎಲೈ ಮಂಗಳಮೂರ್ತಿಯೆ! ಏಳು, ಏಳು ॥ ೪೨ ॥ ಹೀಗೆಂದು ಮಾಚಿದೇವನು ನುಡಿದನು. ಬಳಿಕ ಆ ಕಿನ್ನರಬ್ರಹ್ಮದೇವನಾದರೊ, ಮಲಗಿದ್ದು ಎದ್ದವನಂತೆ ಎದ್ದವನಾಗಿ, ಬಂದು, ಮಾಚಿದೇವಯ್ಯನ ಪಾದಗಳಿಗೆ ನಮಸ್ಕರಿಸಿದನು ॥ ೪೩ ॥ ಅನಂತರ ಶ್ರೀ ಬಸವಮಂತ್ರಿಯು ಎದ್ದು, ಮಾಚಿದೇವನ ಪಾದಗಳಿಗೆ ವಂದಿಸಿ, ಮುಂಗಡೆಯಲ್ಲಿ ವಿನಯಸಮೇತನಾಗಿ ನಿಂತುಕೊಂಡನು. ॥ ೪೪ ॥ ಬಳಿಕ

ಪ್ರಣೇಮುರಥಸದ್ಭಕ್ತಗಣೇಭ್ಯಸ್ತೇತ್ರಯೋಮುದಾ | ಶಶಂಸುರ್ಮಾಚಿದೇ
ವಾರ್ಯಂಪ್ರೀತಾಸ್ಸದ್ಭಕ್ತಪುಂಗವಾಃ ||೪೫|| ಅನೂನಾಂಶಿವಸದ್ಭಕ್ತಿಂಸ್ಥಾಪಿ
ತುಂಜಗತೀತಲೇ | ರಕ್ಷಾಂಯಥೋಚಿತಾಂಶಿಕ್ಷಾಂವಿಧಾತುಂನಾಯಕೋಭ
ವಾನ್ ||೪೬|| ಕೃಪಾಸಮುದ್ರಸುಗುಣೋನ್ನತಕೀರ್ತಿಸಮುನ್ನತ | ಕಲಿರು
ದ್ರಪ್ರಭೋಸಾಕ್ಷಾದ್ವೀರಭದ್ರನಿರಂಕುಶ ||೪೭|| ಜಿತಸಂಸಾರಕದನಸಸ್ಮೇ
ರವದನೋಜ್ವಲ | ನಿರ್ಧೂತಮದನಾಪಾರದಯಾಸದನಭಾಸುರ ||೪೮|| ಬಹಿ
ಷ್ಕೃತಸ್ವರ್ಗವಶೀಕೃತಭರ್ಗಮನೋಹರ | ಸಮುಲ್ಲಸದ್ವೀರಮಾರ್ಗನಿರಸ್ತಕ
ಲುಷೋಚ್ಚಯ ||೪೯|| ಸಮಿದ್ಧಸದ್ಭಕ್ತವರ್ಗಶ್ರುತಿಮಾರ್ಗಪ್ರವರ್ತಕ | ಭ
ಕ್ತರತ್ನಕರಂಡಾಪಹೃತವೇತಂಡಸನ್ನುತ ||೫೦|| ಉದ್ದಂಡಪರವಾದ್ಯೋ
ಘಜಯಶೌಂಡಕೃಪಾನಿಧೇ | ಸಮಾಕಲಿತಗಾಂಧರ್ವವಿದ್ಯಾಖರ್ವಮಹಾಮತೇ
||೫೧|| ಹತಬಿಜ್ಜಳಗರ್ವಾಸ್ಮನ್ನೇತ್ರಪರ್ವಸುಖಪ್ರದ | ಹೃತಾಹಂಕಾರದಳಿತವಿ

---

ಮಾಚಿದೇವ ಕಿನ್ನರಬ್ರಹ್ಮ ಬಸವೇಶ—ಈ ಮೂವರೂ ಅಲ್ಲಿದ್ದ ಸದ್ಭಕ್ತಸಮೂಹಕ್ಕೆಲ್ಲ
ಸಂತೋಷದಿಂದ ನಮಸ್ಕರಿಸಿದರು. ಆ ಭಕ್ತಶ್ರೇಷ್ಠರುಗಳು ಪ್ರೀತಿಯಿಂದ ಮಾಚಿದೇ
ವಯ್ಯನನ್ನು ಕೊಂಡಾಡಿದರು ||೪೫|| ಹೇಗೆಂದರೆ—ಭೂತಲದಲ್ಲಿ ನೀನು ಕುಂದಿಲ್ಲದ
ಶಿವಭಕ್ತಿಯನ್ನು ಸ್ಥಾಪಿಸುವುದಕ್ಕೂ, ಯಥೋಚಿತವಾದ ಶಿಕ್ಷಾರಕ್ಷೆಗಳನ್ನುಮಾಡುವು
ದಕ್ಕೂ ಕೂಡ ಅಧಿಪತಿಯು ||೪೬|| ಎಲೈ ದಯಾಸಮುದ್ರನೆ! ಸದ್ಗುಣಾವಳಿಯಿಂದ
ಶ್ರೇಷ್ಠನಾದವನೆ, ಸತ್ಕೀರ್ತಿಯಿಂದುಬ್ಬಿದವನೆ, ಸಮರ್ಥನಾದ ರುದ್ರಮೂರ್ತಿಯೆ, ಪ್ರ
ತ್ಯಕ್ಷವೀರಭದ್ರನೆ, ಅಪ್ರತಿಹತನಾದವನೆ, ||೪೭|| ಸಂಸಾರಕಲಹವನ್ನು ಗೆದ್ದವನೆ,
ಮುಗುಳ್ನಗೆಯಿಂದ ಕೂಡಿದಮುಖದಿಂದ ಶೋಭಿಸುವವನೆ, ತಿರಸ್ಕರಿಸಲ್ಪಟ್ಟ ಕಾಮವುಳ್ಳ
ವನೆ, ಅಧಿಕವಾದ ಕೃಪೆಗೆ ಆಶ್ರಯನಾಗಿ ಬಪ್ಪುವವನೆ ||೪೮|| ಸ್ವರ್ಗವನ್ನು ದೂರೀಕ
ರಿಸಿರುವವನೆ, ಶಿವನನ್ನು ಅಧೀನಗೊಳಿಸಿಕೊಂಡಿರುವನೆ, ಪ್ರಕಾಶಿಸುವ ವೀರಶೈವಾಚಾರ
ಣೆಯುಳ್ಳವನೆ, ಪಾಪಸಮೂಹವನ್ನು ಧ್ವಂಸಗೊಳಿಸಿದವನೆ ||೪೯|| ಸದ್ಭಕ್ತರ ಸಮೂ
ಹವನ್ನು ವೃದ್ಧಿಗೊಳಿಸಿದವನೆ, ವೇದೋಕ್ತಮಾರ್ಗವನ್ನನುಸರಿಸಿ ನಡೆಯುವವನೆ, ಶಿವ
ಭಕ್ತರೆಂಬ ರತ್ನಗಳನ್ನು ರಕ್ಷಿಸುವ ಬರಣಿಯಾದವನೆ, ಮತ್ತಗಜವನ್ನು ಕೊಂದವರ
ರಿಂದ ಹೊಗಳಲ್ಪಟ್ಟವನೆ ||೫೦|| ಸಮರ್ಥರಾದ ಪರಮತವಾದಿಗಳ ಸಮೂಹವನ್ನು
ಜಯಿಸುವುದರಲ್ಲಿ ಸಮರ್ಥನಾದವನೆ, ಗಾಂಧರ್ವವಿದ್ಯಾವಿಶಾರದನೆ, ಅತ್ಯಂತ ಮಹಾಕು
ಶಲಮತಿಯುಳ್ಳವನೆ, ||೫೧|| ಬಿಜ್ಜಳನ ಅಹಂಕಾರವನ್ನು ಅಡಗಿಸಿದವನೆ, ನಮ್ಮಗಳ
ಕಣ್ಣಿಗೆ ಹಬ್ಬವಾದವನೆ, ಸೌಖ್ಯದಾತೃವೆ, ಅಹಂಕಾರವಿನಾಶಕನೆ, ಮಾಯಾವಿಕಾರವಿ

ಕಾರಶುಭವರ್ತನ ॥ ೫೨ ॥ ಲೋಕೈಕವೀರವಿತತೌತ್ಸುಕ್ಯಭರ್ಗೈಕ್ಯನಿರ್ಮಲ। ನ್ಯಾಯನಿಷ್ಠುರವಾಕ್ಯಾನ್ಯನಶಕ್ಯಪರಾಕ್ರಮ ॥ ೫೩ ॥ ದುರ್ದಾಂತಶೀಲವಿಧ್ವಸ್ತಪಾಪಜಾಲವಿಚಕ್ಷಣ । ನಿರಸ್ತಲಯಕಾಲೇಶಪ್ರಖ್ಯಾಭಿಖ್ಯಾವಿಭಾಸಿತ ॥ ೫೪ ॥ ಸಾಹಿತ್ಯವಿತ್ಸಾಭ್ಯಸಭ್ಯಮುಖ್ಯಧರ್ಮವಿಶಾರದ । ಖಂಡಿತಾಶೌಚದಳಿತನಿಜಭಕ್ತಿಮತಾಂವರ ॥ ೫೫ ॥ ಮಂಡಿತಾಂತಶ್ಯಾಚಮಡಿವಾಳಮಾಚಮಹೀಹಿತ । ಮನಃಪರೀಕ್ಷಿತುಂಭಾಷಾಸ್ಸಂವರ್ಧಯಿತುಮಪ್ಯಥ ॥ ೫೬ ॥ ಜಾಡ್ಯಂಭ್ರಂಶಯಿತುಂಭಕ್ತಿಂಭುವನೇಷುಪ್ರತಿಷ್ಠಿತುಂ । ಆಜ್ಞಾಂಪಾಲಯಿತುಂಶಂಭೋಃಪ್ರಹರ್ತುಂಪಾತಕಾವಳಿಂ ॥ ೫೭ ॥ ಬಿಜ್ಜಳಂಲಜ್ಜಿತಂಕರ್ತುಂಸಂಹರ್ತುಂಮತ್ತಸಿಂಧುರಂ ಸ್ಥಿರೀಕರ್ತುಂಲಸತ್ಕೀರ್ತಿಂಜಗತ್ಕಂಪಯಿತುಂಪರಂ ॥ ೫೮ ॥ ರಕ್ಷಿತುಂಸಜ್ಜನಾನ್ದುಷ್ಟಾಂಛಿಕ್ಷಿತುಂಭೂಭರಾವಹಾನ್ । ಸಮೀಕ್ಷಿತುಂವ್ರತಚಯಂನಿಯಮಾತ್ಸಮುಪಾಗತಃ ॥ ೫೯ ॥ ಪ್ರಮಥೇಂದ್ರಾವತಾರ

---

ಧ್ವಂಸಕನೆ, ಮಂಗಳಪ್ರದವಾದ ನಡೆಯುಳ್ಳವನೆ ॥ ೫೨ ॥ ಜಗದೇಕವೀರನೆ, ವಿಸ್ತಾರವಾದ ಕುತೂಹಲವುಳ್ಳವನೆ, ಶಿವೈಕ್ಯನೆ, ಮಲತ್ರಯರಹಿತನೆ, ನ್ಯಾಯಸಮ್ಮತವಾಗಿಯೂ ಕಠಿಣವಾಗಿಯೂ ಇರುವ ವಚನವುಳ್ಳವನೆ, ಅನನ್ಯಸಾಧಾರಣವಾದ ಪರಾಕ್ರಮವುಳ್ಳವನೆ ॥ ೫೩ ॥ ಇತರರಿಂದಾಚರಿಸುವುದಕ್ಕಶಕ್ಯವಾದ ಸದಾಚರಣವುಳ್ಳವನೆ, ದುರಿತಸಮೂಹವನ್ನು ನಾಶಗೊಳಿಸಿದವನೆ, ಕುಶಲನೆ, ಮರಣವನ್ನೂ ಯಮನನ್ನೂ ಕೂಡ ನಾಶಮಾಡಿದ ಸ್ವಾಮಿಯ, ಲೋಕವಿಖ್ಯಾತವಾದ ನಾಮಧೇಯದಿಂದ ವಿರಾಜಿಸುವವನೆ ॥ ೫೪ ॥ ಸಾಹಿತ್ಯವನ್ನು ತಿಳಿದಿರುವುದರಿಂದ ರಸಿಕರಾಗಿರುವ ಸಭಾಸ್ತರರಲ್ಲೆಲ್ಲ ಪ್ರಮುಖನಾಗಿರತಕ್ಕವನೆ, ಶಿವಧರ್ಮವಿಚಕ್ಷಣನೆ, ಸೂತಕಗಳನ್ನು ಖಂಡಿಸಿರುವುದರಿಂದ ಉಲ್ಲಾಸಗೊಂಡಿರುವನೆ, ಸ್ಥಿರಭಕ್ತಿಸಂಪನ್ನರಲ್ಲಿ ಶ್ರೇಷ್ಠನೆ ॥ ೫೫ ॥ ಮನಶ್ಶುದ್ಧಿಯಿಂದಲಂಕೃತನಾದವನೆ, ಲೋಕಹಿತಂಕರನಾದ ಮಡಿವಾಳ ಮಾಚಿದೇವನೆ! ನೀನು ಭಕ್ತರ ಮನಸ್ಸನ್ನು ಪರೀಕ್ಷಿಸುವುದಕ್ಕೂ, ಅವರಾಡಿದ ಭಾಷೆಯನ್ನು ನೆರವೇರುವಂತೆ ಮಾಡಿಸುವುದಕ್ಕೂ ॥ ೫೬ ॥ ಮನಸ್ಸಿನ ಜಾಡ್ಯವನ್ನು ತೊಲಗಿಸುವುದಕ್ಕೂ, ಲೋಕಗಳಲ್ಲಿ ಶಿವಭಕ್ತಿಯನ್ನು ಸ್ಥಾಪಿಸುವುದಕ್ಕೂ, ಶಿವನಪ್ಪಣೆಯನ್ನು ಪರಿಪಾಲಿಸುವುದಕ್ಕೂ, ಪಾಪಸಮೂಹವನ್ನು ನಾಶಮಾಡುವುದಕ್ಕೂ ॥ ೫೭ ॥ ಬಿಜ್ಜಳರಾಜನನ್ನು ನಾಚಿಕೆಗೊಂಡವನನ್ನಾಗಿ ಮಾಡುವುದಕ್ಕೂ, ಮದಗಜವನ್ನು ಸಂಹರಿಸುವುದಕ್ಕೂ, ಯಶಸ್ಸನ್ನು ಸ್ಥಿರಗೊಳಿಸುವುದಕ್ಕೂ, ಲೋಕವನ್ನೇ ನಡುಗುವಂತೆ ಮಾಡುವುದಕ್ಕೂ ॥ ೫೮ ॥ ಸತ್ಪುರುಷರನ್ನು ಪಾಲಿಸುವುದಕ್ಕೂ, ಭೂಭಾರಕರಾದ ದುಷ್ಟರನ್ನು ಶಿಕ್ಷಿಸುವುದಕ್ಕೂ, ವೀರವ್ರತಸಮೂಹವನ್ನು ಪರಿಶೀಲಿಸುವುದಕ್ಕೂ, ಸಹ ನೀನು ಶಿವನಪ್ಪಣೆಯಿಂದ ಬಂದಿರುವೆ ॥ ೫೯ ॥

ಸ್ತ್ವಂಜಗದ್ವ್ಯಾಪ್ತಯಶಶ್ಚಯಃ । ಕಿನ್ನರಬ್ರಹ್ಮದೇವಾರ್ಯ್ಯಂಬಸವಾಮಾತ್ಯ
ಶೇಖರಂ ॥ ೬೦ ॥ ಕೃತ್ವಾಸಂಜೀವಿತೌಖ್ಯಾತಿಂಸದ್ಭಕ್ತ್ಯೈತ್ವಮುಪಾಗಮಃ ।
ಶಿವಮಾದರ್ಶೇನಹಸ್ತಸ್ಥೇಕಂಕಣೇಧರಣೀತಳೇ ॥ ೬೧ ॥ ನ್ಯಾಯನಿಷ್ಠುರವಾಕ್ಯಾ
ನಿಭವತಾಕಥಿತಾನಿಹಿ । ಕಟೂನ್ಯಪಿಶ್ರವಣಯೋಃಪಥ್ಯಾನ್ಯೇವಭವಂತಿಹಿ ॥
೬೨ ॥ ಯಥಾಪಾಕಃಪದಾರ್ಥಾನಾಂಭವೇತ್ಸ್ವಾದಾಯಕೇವಲಂ। ಉತತೇಷಾಂ
ಪದಾರ್ಥಾನಾಂನಿಶ್ಶೇಷಂದಹನಾಯವಾ ॥ ೬೩ ॥ ಶಿವಸದ್ಭಕ್ತಿಯುಕ್ತಾನಾಂಶಿ
ಕ್ಷಾ ಅಪಿತಥಾವಿಧಾಃ । ಪಾಕಶ್ಶಿಲಾಸ್ಫಾಲನಂಚಜಲೇನಿರ್ಣೇಜನಂತಥಾ ॥೬೪॥
ಘಟ್ಟನಂವಾಸಸಾಂತೇಷಾಂಶುದ್ಧತ್ವಾಯಕಿಮುಕ್ರುಧೆ । ಬಸವೇಶಪ್ರತಿಜ್ಞಾ
ಪಿಭವತಶ್ಶಿಕ್ಷಯೈವಹಿ ॥ ೬೫ ॥ ಮುಕ್ತಾಮಾಲಿನ್ಯಮಭವತ್ತ್ವತ್ಕೀರ್ತ್ಯಾಸ
ಮಮುಜ್ವಲಾ । ಪ್ರಮಥಾನಾಮಭೂದ್ಭವ್ಯಗಣನಾಪತ್ರಿಕಾಂಗತಾ ॥ ೬೬ ॥
ಭವತೋರುಭಯೋರ್ವಾಕ್ಯಸುಧಾಮಥನತೋಭುವಿ । ಸ್ಫುಟಮೇತವಸಂ
ಖ್ಯಾತವೀರಮಾಹೇಶ್ವರಾವಳೇಃ ॥ ೬೭ ॥ ಚಿತ್ತಾಮಾಲೇಶಿವಾನಂದವಿಲಸತ್ಕ

---

ನೀನು ಪ್ರಮಥಪತಿಯಾದ ಪರಶಿವನ ಅಪರಾವತಾರನು, ಲೋಕದಲ್ಲೆಲ್ಲ ಆವರಿಸಿರುವ
ಕೀರ್ತಿಸಮುದಾಯವುಳ್ಳವನು. ಕಿನ್ನರಬ್ರಹ್ಮದೇವಯ್ಯನನ್ನೂ ಬಸವಮಂತ್ರೀಶ್ವರನನ್ನು
ಸಹ ನೀನು ಸದ್ಭಕ್ತಿಯ ಪ್ರಭಾವದಿಂದ ಬದುಕಿಸಿ, ಪ್ರಖ್ಯಾತಿಯನ್ನು ಪಡೆದೆ. ಲೋ
ಕದಲ್ಲಿ ಕಂಕಣವು ಕೈಯಲ್ಲಿರುವಾಗ ಅದನ್ನು ನೋಡುವುದಕ್ಕೆ ಕನ್ನಡಿಯೇತಕ್ಕೆ ? ॥
೬೧ ॥ ನೀನು ನ್ಯಾಯವಾಗಿಯೂ ಕಠೋರವಾಗಿಯೂ ಇರುವ ಮಾತುಗಳನ್ನಾಡಿದೆಯ
ಷ್ಟೆ. ಅವು ಕಿವಿಗಳಿಗೆ ಕಠೋರವಾಗಿದ್ದರೂ, ಹಿತವಾದುವುಗಳೇ ॥ ೬೨ ॥ ಪದಾರ್ಥಗ
ಳನ್ನು ಬೇಯಿಸುವುದು ಅವುಗಳನ್ನು ರುಚಿಯಾಗುವಂತೆ ಮಾಡುವುದಕ್ಕಾಗಿಯೇ ಹೊ
ರತು, ನಿಶ್ಶೇಷವಾಗಿ ಆ ಪದಾರ್ಥಗಳನ್ನು ಸುಡುವುದಕ್ಕಾಗಿಯೆ ? ॥ ೬೩ ॥ ಶಿವಭಕ್ತಿಸಂ
ಪನ್ನರು ಮಾಡುವ ಶಿಕ್ಷೆಗಳೂ ಅಂಥವುಗಳೇ. ಬಟ್ಟೆಗಳನ್ನು ಉಬ್ಬೆಯಲ್ಲಿ ಬೇಯಿಸು
ವುದು, ಕಲ್ಲಿನಮೇಲೆ ಅಪ್ಪಳಿಸುವುದು, ನೀರಿನಲ್ಲಿ ಜಾಲಾಡುವುದು ॥ ೬೪ ॥ ಮತ್ತೂ ಗ
ಟ್ಟನೆ ಮಾಡುವುದುಕೂಡ, ಆ ಬಟ್ಟೆಗಳ ಮಡಿಗೋಸುಗವೇ ಹೊರತು, ಅವುಗಳಮೇ
ಲಣ ಕೋಪಕ್ಕೇನು ? ಬಸವೇಶನು ಮಾಡಿದ್ದ ಪ್ರತಿಜ್ಞೆಯುಕೂಡ ನಿನ್ನ ಶಿಕ್ಷೆಯಿಂದಲೇ
ತನ್ನ ಮಾಲಿನ್ಯವನ್ನು ಕಳೆದು, ನಿನ್ನಕೀರ್ತಿಗೆ ಸಮನಾಗಿ ಹೊಳೆಯುವಂತಾಯಿತು. ಪ್ರ
ಮಥರಿಗೆ ಮಂಗಳವನ್ನುಂಟುಮಾಡುವ ಗಣ್ಯವಾದ ಶಾಸನವಾಗಿ ಪರಿಣಮಿಸಿತು ॥ ೬೬ ॥
ನಿಮ್ಮಿಬ್ಬರ ಸಂಭಾಷಣೆಯ ವಾಕ್ಯಾಮೃತವನ್ನು ಕಡೆಯುವುದರಿಂದ ಲೋಕದಲ್ಲಿ ಈ
ವಿಷಯವು ಪ್ರಕಟಗೊಂಡಿತು. ಅಗಣಿತರಾದ ವೀರಮಾಹೇಶ್ವರರ ಸಮೂಹದ ಮನ
ಸ್ಸೆಂಬ ಪಾತೆಯಲ್ಲಿ ಶಿವಾನಂದವೆಂಬ ಪ್ರಕಾಶಿಸುವ ಕಲ್ಪಲತೆಯು ಹುಟ್ಟಿ ಮೊಳಕೆಗೊ

ಲ್ಪವಲ್ಲರೀ । ಜಾತಾಂಕುರವತೀಸದ್ಯಗಥಪಲ್ಲವಿತಾಪುನಃ ॥೧೮॥ ಸಂಜಾತಕೋರಕಾತ್ಯಂತಂ ಪುಷ್ಪಿತಾಫಲಿತಾಭವತ್ । ಇತಿಸಂಸ್ತುತ್ಯ ನಾಚಾರ್ಯಂ ತತ್ಶ್ರೀಬಸವೇಶ್ವರಃ ॥೧೯॥ ಸ್ವಕೀಯಕರುಣಾಪಾಂಗವೀಕ್ಷಣಾಮೃತವಾರಿಧೌ । ನಿಮಗ್ನಚಕ್ಷುರಭವತ್ಸರ್ವೇಶೋಪಿತೈಸ್ಸಹ ॥೨೦॥ ಏವಂಪ್ರೋಕ್ತನವೃತ್ತಾಂತಂ ಶಂಸಂತೋ ಭಕ್ತಪುಂಗವಾಃ । ಉದೀಕ್ಷ್ಯ ಬಸವಾಮಾತ್ಯಂಪ್ರೋಚುಸ್ಸಿಂಹಾಸನಸ್ಥಿತಾಃ ॥೨೧॥ ಸಂಯೋಜಿತೇಸ್ವಾತ್ಮನಿಶೀಕಿನ್ನರಬ್ರಹ್ಮಯಂಪುರಾ । ಗತೋಸಿತೇನೈವ ಸಪತ್ವಂತದಾನೀಂ ವೃಷೇಶ್ವರ ॥೨೨॥ ಮಾಚಿದೇವಕೃಪಾದೃಷ್ಟ್ಯಾ ತವಲಬ್ಧಾಪುನಸ್ತನು ! ತತ್ಕಿಂಚಿತ್ರಮಿದಾನೀಂತುಸಮುಪಾಗತ್ಯ ಜಂಗಮೇ ॥೨೩॥ ಯಾತೇತೇಸಹ ಸೈವತ್ವತ್ಪ್ರಾಣಾ ಅಪಿವಿನಿರ್ಗತಾಃ । ಆಗತೇಪುನರಾಯಾತಾಸ್ತ್ವನ್ಮಾಹಾತ್ಮ್ಯಂ ಕಥಂನುವಾ ॥೨೪॥ ವರ್ಣನೀಯಂ ಶಿವಶಿವ ಬಸವಾಮಾತ್ಯಶೇಖರ । ಜಂಗಮಸ್ವೀಕೃತಪ್ರಾಣ ಜಂಗಮಾಶ್ರಿತಜೀವಿತ ॥೨೫॥ ಶ್ರೀಜಂಗಮಾಯತ್ತಸಿದ್ಧಪ್ರಾಣವಿತ್ತ್ಯದಯಾನಿಧೇ । ಧನಮರ್ಪಯಿತುಂ ಶಕ್ಯಂ ಶರೀರಂ ಶಕ್ಯತೇ ಕಥಂ ॥೨೬॥ ತನುರರ್ಪಯಿತುಂ ಶಕ್ಯಾ

---

ಡಿತು. ಚೆನ್ನಾಗಿ ಚಿಗುರಿತು ॥೧೮॥ ಅತಿಶಯವಾಗಿ ಮೊಗ್ಗೆಗಳನ್ನು ಕಚ್ಚಿತು. ಹೂವನ್ನೂ ಬಿಟ್ಟಿತು, ಕಾಯಿಗಳನ್ನೂ ಹೊಂದಿತು, ಎಂಬುದಾಗಿ ಮಾಚಿದೇವನನ್ನೂ ಬಳಿಕ ಬಸವೇಶನನ್ನೂ ಸ್ತೋತ್ರ ಮಾಡಿದರು ॥೧೯॥ ಬಸವೇಶನು ಆ ಗುರುವರ್ಯರ ದಯಾಕಟಾಕ್ಷ ವೀಕ್ಷಣಾಮೃತಸಮುದ್ರದಲ್ಲಿ ಮುಳುಗಿದನೋಟವುಳ್ಳವನಾಗಿ ಅವರೆಲ್ಲರೊಡನೆಯೂ ಸುಖದಿಂದಿದ್ದನು. ॥೨೦॥ ಹೀಗೆ ಪೂರ್ವದ ವೃತ್ತಾಂತವನ್ನು ಭಕ್ತಶ್ರೇಷ್ಠರುಗಳು ಹೇಳಿ ಹೊಗಳುವವರಾಗಿ, ಸಿಂಹಾಸನದಲ್ಲಿದ್ದುಕೊಂಡೇ ಬಸವಾಮಾತ್ಯನನ್ನುನೋಡಿ ನುಡಿದರೇನೆಂದರೆ. ॥೨೧॥ ಎಲೈ ವೃಷಭೇಶ್ವರನೆ! ಪೂರ್ವದಲ್ಲಿ ಶಿವನು ತನ್ನಲ್ಲಿ ಕಿನ್ನರ ಬ್ರಹ್ಮಯ್ಯನನ್ನು ಐಕ್ಯಮಾಡಿಕೊಳ್ಳಲು, ನೀನು ಆಗ ಅವನೊಡನೆಯೇ ಹೊರಟುಹೋದೆ. ॥೨೨॥ ಮಾಚಿದೇವನ ಕೃಪಾದೃಷ್ಟಿಯಿಂದ ಮತ್ತೆ ನಿನಗೆ ದೇಹವು ದೊರೆದಿತು. ಅದೇನಾಶ್ಚರ್ಯ? ಈಗಲಾದರೊ, ಜಂಗಮನು ಬಂದು ಹೋಗಲಾಗಿ, ಅವನೊಡನೆಯೇ ನಿನ್ನ ಪ್ರಾಣಗಳೂಸಹ ಹೊರಟುಹೋದುವು. ಜಂಗಮನು ತಿರುಗಿ ಬರಲಾಗಿ ಮತ್ತೆ ನಿನ್ನ ಪ್ರಾಣಗಳು ಬಂದುವು. ನಿನ್ನ ಮಹಿಮೆಯನ್ನು ಹೇಗೆತಾನೇ ವರ್ಣಿಸುವುದಕ್ಕಾದೀತು? ಶಿವಶಿವಾ! ಎಲೈ ಬಸವ ಮಂತ್ರಿಶ್ರೇಷ್ಠನೆ! ಜಂಗಮರನ್ನೇ ಪ್ರಾಣವನ್ನಾಗಿ ಸ್ವೀಕರಿಸಿದವನೆ, ಜಂಗಮರನ್ನವಲಬಿಸಿದ ಬದುಕುವಿಕೆಯುಳ್ಳವನೆ ॥೨೫॥ ಜಂಗಮರಲ್ಲಿ ಎಡೆಬಿಡದಿರುವ ತನ್ನ ಪ್ರಾಣವುಳ್ಳವನೆ, ಕೃಪಾನಿಧಿಯೆ! ಲೋಕದಲ್ಲಿ ದ್ರವ್ಯವನ್ನು ಅರ್ಪಿಸಬಹುದು; ಶರೀರವನ್ನು ಅರ್ಪಿಸುವುದು ಹೇಗೆ? ॥೨೬

ಭವೇದ್ವಾದಾಸಭಾವತಃ | ಕಿಂನಿವೇದಯಿತುಂಶಕ್ಯಂಮಾನಸಂಧರಣೀತಲೇ ||೭೭|| ಪ್ರದಾತುಂಮಾನಸಂಶಕ್ಯಂಸ್ನೇಹಭಾವೇಸಮಾಯದಿ | ಶಕ್ಯಂತೇವಾಕಥಂ ಪ್ರಾಣಾಃಪ್ರದಾತುಂವೃಷಭೇಶ್ವರ ||೭೮|| ದೀಯಂತೇವೀರಭಕ್ತ್ಯಾತೇ ಪ್ರಾಣಾಅಪ್ಯೇಕದಾಕಥಂ | ಸಂಧಾತುಂಶಕ್ಯತೇಪ್ರಾಣಜಂಗಮ್ಯಾಸಂತತಮಾತ್ಮನಃ ||೭೯|| ಶ್ರೀತಂಗಟೂರಮಾರಯ್ಯಪ್ರಭೃತೀನಾಂಮಹಾತ್ಮನಾಂ | ಪುರಾತ್ರಯಾಣಾಮಭವತ್ಪ್ರತಿಜ್ಞಾಲೋಕವಿಶ್ರುತಾ ||೮೦|| ತಥಾನುಲಿಗೆಚಂದಯ್ಯಪ್ರತಿಜ್ಞಾವಿಶ್ರುತಾಭವತ್ | ಪ್ರತಿಜ್ಞಾಭೂತ್ಕೊಂಡಗುಡಿಕೇಶಿರಾಜಸ್ಯಭೂನುತಾ ||೮೧|| ಶ್ರೀಮತ್ಸತ್ಯೇಶಚಾಮಯ್ಯಪ್ರತಿಜ್ಞಾಮಹಿತಾಭವತ್ | ಪ್ರತಿಜ್ಞಾಕಮಲಾದೇವ್ಯಾಃಪ್ರಸಿದ್ಧಾಭೂನ್ಮಹೀತಲೇ ||೮೨|| ಶ್ರೀಲಿಂಗಪ್ರಾಣಿನಃಪ್ರಾಣಲಿಂಗಿನಶ್ಚಪುರಾಶ್ರುತಾಃ | ತತ್ಪ್ರಾಣಲಿಂಗಿನಸ್ಸಂತಿಕಿಂವಾಸಂತಿಮಹೀತಲೇ ||೮೩|| ಪ್ರಾಣಾಜಂಗಮಏವೇತಿದೃಢವ್ರತಪರಾಯಣಾಃ | ಶ್ರೀಜಂಗಮಃಪ್ರಾಣಲಿಂಗಮಿತಿರೂಢಾತವೈವಹಿ ||೮೪|| ಮಹಾಪ್ರತಿಜ್ಞಾಸುತರಾಂಬಸವಾಮಾತ್ಯಶೇಖರ | ಇತಿತದ್ಭಕ್ತವರ್ಯೇಷುಸ್ತುವತ್ಸುಪರಮಾದ್ಭು

---

ಭೃತ್ಯತ್ವದಿಂದ ಬಂದುವೇಳೆ ದೇಹವನ್ನು ಅರ್ಪಿಸುವುದಕ್ಕೂ ಶಕ್ಯವಾಗಬಹುದು. ಮನಸ್ಸನ್ನು ಸಮರ್ಪಿಸುವುದಕ್ಕೆ ಶಕ್ಯವಾದೀತೆ? ||೭೭|| ಮಿತ್ರಭಾವದಿಂದ ಬಂದುವೇಳೆ ಮನಸ್ಸನ್ನು ಒಪ್ಪಿಸುವುದಕ್ಕೆ ಶಕ್ಯವಾದರೂ ಆಗಬಹುದು. ಎಲೈ ಬಸವೇಶ್ವರನೇ ಪ್ರಾಣಗಳನ್ನು ಅರ್ಪಿಸುವುದಕ್ಕೆ ಹೇಗೆ ಶಕ್ಯವಾದೀತು? ||೭೮|| ವೀರಭಕ್ತಿಯಿಂದ ಆ ಪ್ರಾಣಗಳನ್ನು ಒಂದುಬಾರಿಗೆ ಅರ್ಪಿಸಿಬಿಡಲೂಬಹುದು. ತನ್ನ ಪ್ರಾಣವನ್ನು ಯಾವಾಗಲೂ ಜಂಗಮನಲ್ಲಿ ಸೇರಿಸಿ ಹೋದರೆ ಹೋಗುವಂತೆಯೂ ಬಂದರೆ ಬರುವಂತೆಯೂ ಮಾಡುವುದಕ್ಕೆ ಶಕ್ಯವಾದೀತೆ? ||೭೯|| ಪೂರ್ವದಲ್ಲಿ ತಂಗಟೂರು ಮಾರಯ್ಯ ಮೊದಲಾದ ಮೂರುಮಂದಿ ಮಹಾತ್ಮರ ಭಾಷೆಯು ಲೋಕಪ್ರಖ್ಯಾತವಾಗಿದ್ದಿತು ||೮೦|| ಹಾಗೆಯೇ ನುಲಿಗೆ ಚಂದಯ್ಯನ ಪ್ರತಿಜ್ಞೆಯು ಪ್ರಸಿದ್ಧವಾಗಿದ್ದಿತು. ಕೊಂಡಗುಡಿ ಕೇಶಿರಾಜನ ಭಾಷೆಯು ಲೋಕಶ್ಲಾಘ್ಯವಾಗಿದ್ದಿತು. ||೮೧|| ಸತ್ಯೇಶ ಚಾಮಯ್ಯನ ಭಾಷೆಯು ಪೂಜ್ಯವಾಗಿದ್ದಿತು. ಕಮಲಾದೇವಿಯ ಪ್ರತಿಜ್ಞೆಯು ಭೂತಲದಲ್ಲಿ ಪ್ರತೀತಿಗೊಂಡಿದ್ದಿತು. ||೮೨|| ಲಿಂಗಪ್ರಾಣಿಗಳೂ ಪ್ರಾಣಲಿಂಗಿಗಳೂಕೂಡ ಪೂರ್ವದಲ್ಲಿ ಹೀಗೆ ಪ್ರಸಿದ್ಧರಾಗಿದ್ದರು. ಭೂತಲದಲ್ಲಿ ಆ ಪ್ರಾಣಲಿಂಗಿಗಳು ಇರುತ್ತಿರುವರೇ ಹೊರತು ಜಂಗಮವೇ ಪ್ರಾಣಗಳೆಂಬ ದೃಢವ್ರತವುಳ್ಳವರುಗಳು ಇರುತ್ತಾರೆಯೆ? ಜಂಗಮವೇ ಪ್ರಾಣಲಿಂಗವೆಂಬ ರೂಢಿಯು ನಿನ್ನೊಬ್ಬನಿಗೇ ಸಲ್ಲುವುದು. ||೮೪|| ಎಲೈ ಬಸವ ಮಂತ್ರಿಶ್ರೇಷ್ಠನೆ, ನಿನ್ನ ಪ್ರತಿಜ್ಞೆಯು ಅತ್ಯಂತ ಮಹತ್ತರವಾದುದು. ಹೀಗೆಂಬು

ತಂ ||೯೫|| ಖ್ಯಾತೋಭೂಜ್ಜಂಗಮಪ್ರಾಣೀಪುರಾಶ್ರೀಬಸವೇಶ್ವರಃ | ಇದಾನೀಂಶ್ರೀಜಂಗಮೇಂದ್ರಪಾರವಶ್ಯಮಹೋನ್ನತಾ ||೯೬|| ಸದ್ಭಕ್ತಿಃಪಂಡಿತಾರಾಧ್ಯತವೈವಭುವಿಯುಜ್ಯತೇ | ಇತಿಶ್ರೀವೇಮನಾರಾಧ್ಯಸೂರಮಾಂಬಾಪುರೋಗಮೈಃ ||೯೭|| ಭಕ್ತೈಸ್ತುತಃಪಂಡಿತೇಂದ್ರಸ್ತದಾನೀಮತಿಭಕ್ತಿತಃ | ಉದ್ಯದಾನಂದಬಸವಪುರಾಣಾಮೃತವಾರಿಧೌ ||೯೮|| ಅನೂನಹರ್ಷಾವೇಶೇನವಿಹರನ್ನವಸತ್ಸುಖಂ ||

ಇತ್ಯಸಂಖ್ಯಾತಮಾಹೇಶ್ವರ ದಿವ್ಯಶ್ರೀಪಾದಪದ್ಮನಿರಂತರಭಾವನಾ
ಪರಿರಂಜಿತ ಹೃದಯಸರೋಜಸ್ಯ, ಭವ್ಯಪಶುಪಾಶಾನಲಭಸ್ಮೀ
ಕೃತಾಖಿಲಭವಬೀಜಸ್ಯ, ಶ್ರೀ ವೀರಶೈವ ಮತಾಚಾರ್ಯ
ಗುರುರಾಜಸ್ಯಕೃತೌ ಶ್ರೀ ಮಲ್ಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೇ
ದೀಕ್ಷಾಪ್ರಕರಣೇ ಮಡಿವಾಳ
ಮಾಚಿದೇವೇನ ಕಿನ್ನರಬ್ರ
ಹ್ಮಯ್ಯಬಸವೇಶ್ವರಯೋಃ
ಪ್ರಾಣಪ್ರದಾನಕಥನಂ
ನಾಮತ್ರಯೋವಿಂ
ಶೋಽಧ್ಯಾಯಃ.

---

ಪೂರ್ವಂಪಾಲ್ಕುರಿಕ್ಕಿಸೋಮಾಭಿಧವರಗುರುಣಾನಿರ್ಮಿತೇಭಾಷಯಾಂ ಧ್ರ್ಯಾಪ್ರಸಷ್ಟಾಚಿ ಭ್ರೀ ವೀರಶೈವಾಶ್ರಮಗುರುಗುರುರಾಡ್ದೇಶಿಕೇಂದ್ರೇಣವಾ

---

ದಾಗಿ ಆ ಭಕ್ತಶ್ರೇಷ್ಠರುಗಳು ಸ್ತೋತ್ರಮಾಡುತ್ತಿರಲಾಗಿ, ಶ್ರೀ ಬಸವೇಶ್ವರನು ಪೂರ್ವದಲ್ಲಿ ಹಾಗೆ ಅತ್ಯಾಶ್ಚರ್ಯಕರವಾಗಿ ಜನತ್ತಿನಲ್ಲಿ ಜಂಗಮಪ್ರಾಣಿಯೆಂದು ಪ್ರಸಿದ್ಧನಾಗಿದ್ದನು. ಈಗ ಎಲೌ ಪಂಡಿತಾರಾಧ್ಯನೆ! ಶ್ರೀ ಜಂಗಮಶ್ರೇಷ್ಠರಿಗೆ ಅಧೀನವಾಗಿರುವುದರಿಂದ ಅತ್ಯುತ್ಕೃಷ್ಟವೆನಿಸಿದ ಸದ್ಭಕ್ತಿಯು, ನಿನಗೊಬ್ಬನಿಗೇ ಭೂತಳದಲ್ಲಿ ಸಲ್ಲುವುದು. ಎಂಬುದಾಗಿ ಶ್ರೀ ವೇಮನಾರಾಧ್ಯ ಸೂರಾಂಬೆ ಮೊದಲಾದ ಭಕ್ತರುಗಳಿಂದ ಸ್ತೋತ್ರಮಾಡಲ್ಪಟ್ಟ ಮಲ್ಲಿಕಾರ್ಜುನ ಪಂಡಿತಾರಾಧ್ಯನು, ಆವಾಗ ಅತ್ಯಂತ ಭಕ್ತಿಯಿಂದ ಉತ್ಕಟಾನಂದಜನಕವಾದ ಬಸವಪುರಾಣವೆಂಬ ಅಮೃತ ಸಮುದ್ರದಲ್ಲಿ, ಅನಂತ ಸಂತೋ

ಣ್ಯಾ । ಗೈರ್ವಾಣ್ಯಾಸಂಪ್ರಣೀತೇ ನಿಖಿಲಜನಗುರೋಃ ಪಂಡಿತೇಂದ್ರಸ್ಯ ಭವ್ಯೇ ಚಾರಿತ್ರೇಽಸ್ಮಿಂತ್ಸಮಾಪ್ತಂ ಪ್ರಕರಣಮಘಸಹ್ಮಾರಿ ದೀಕ್ಷಾಖ್ಯಮಾದ್ಯಂ ॥

---

ದೀಕ್ಷಾಪ್ರಕರಣಂ ಸಮಾಪ್ತಂ.

---

ಷಾತಿಶಯದಿಂದ ವಿಹರಿಸುತ್ತ ಸುಖವಾಗಿದ್ದನು ॥ ೮೮ ॥

ಎಂಬಲ್ಲಿಗೆ ಅಗಣಿತ ವೀರ ಮಾಹೇಶ್ವರರ ದಿವ್ಯ ಪಾದಕಮಲವನ್ನು ಸದಾ ಧ್ಯಾನಮಾಡು
ವುದರಿಂದ ವಿಲಸಿತವಾದ ಹೃದಯಕಮಲವುಳ್ಳವನೂ, ಮಂಗಳಪ್ರದವಾದ ಪಶುಪಾಶ
ಪತಿಜ್ಞಾನವೆಂಬ ಬೆಂಕಿಯಿಂದ ಭವಬೀಜವನ್ನು ಸುಟ್ಟು ಭಸ್ಮಗೊಳಿಸಿದವನೂ
ಆದ, ವೀರಶೈವ ಮತಾಚಾರ್ಯ ಗುರುರಾಜನ ಕೃತಿಯಾದ ಶ್ರೀ ಲೋ
ಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತಕ್ಕೆ
ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ „ ಭಾ
ವಮಂಜರಿ ” ಯೆಂಬ ಕನ್ನಡ ಟಿಪ್ಪಣಿದಲ್ಲಿ
ಮಡಿವಾಳ ಮಾಚಿದೇವನು ಕಿನ್ನರ
ಬ್ರಹ್ಮಯ್ಯನಿಗೂ ಬಸವೇಶ್ವರ
ನಿಗೂ ಪ್ರಾಣದಾನಮಾಡಿದ
ಕಥೆಯನ್ನು ವರ್ಣಿ
ಸಿರುವ ೨೪ ನೆಯ
ಅಧ್ಯಾಯವು
ಮುಗಿದುದು.

ಮೊದಲು ಪಾಲ್ಕುರಿಕೆ ಸೋಮಾರಾಧ್ಯ ಗುರುವರನಿಂದ ತೆನುಗಿನಲ್ಲಿ ರಚಿತವಾಗಿದ್ದು, ಬಳಿಕ ವೀರಶೈವ ಸಮುದಾಯದ ಗುರುವರ್ಯನಾದ ಗುರುರಾಜ ಕವಿಯಿಂದ ಸಂಸ್ಕೃತಭಾಷೆಯಲ್ಲಿ ರಚಿಸಲ್ಪಟ್ಟ ಶ್ರೀಮತ್ಪಂಡಿತಾರಾಧ್ಯರ ಮಂಗಳಕರವಾದ ಈ ಚರಿತ್ರಗ್ರಂಥದಲ್ಲಿ ಮೊದಲನೆಯ ಶಿವದೀಕ್ಷಾ ಪ್ರಕರಣವು ಸಮಾಪ್ತವಾಯಿತು.

ಶ್ರೀ ಸಾಂಬಸದಾಶಿವ ಸ್ವಾಮಿನೇ ನಮಃ.

# ಅಥ ಪುರಾತನ ಪ್ರಕರಣಂ.

## ಪ್ರಥಮೋಽಧ್ಯಾಯಃ.

(ಪಾದಪ್ರದಾನಕಥನಂ)

ಅಂತಕಾಂತಕಮೂರ್ತಿಶ್ಶ್ರೀಪಂಡಿತಾರಾಧ್ಯದೇಶಿಕಃ । ಜಾತುಜಾತ ಪ್ರಭಾತಾಯಾಂ ರಜನ್ಯಾಂ ಶಿಷ್ಯಸಂಯುತಃ ॥೧॥ ಯಾವನ್ನತಾರಕಾವ್ಯೂಹಃ ಪ್ರಯಾತಿಕ್ಷೀಣಕಾಂತಿತಾಂ । ಸಮುಲ್ಲಸಂತಿಯಾವನ್ನಲಲಿತಾಶ್ಶಂಖನಿಸ್ವನಾಃ ॥೨॥ ಯಾವಚ್ಛಿವಾಲಯೇದೀಪಾಸಪರಿಚ್ಯುತದೀಪ್ತಯಃ । ಯಾವಚ್ಚಕೋರನಿವಹಾನಾಭಜಂತ್ಸಹೃತಾಸನಾಃ ॥ ೩ ॥ ಯಾವದ್ವಿಕಾಸಮಬ್ಜಾನಿ ನಯಾಂತ್ಯಲ್ಪಾನಕೌಮುದೀ । ಪ್ರಯಾತಿಕ್ರೀಡಿತುಂಯಾವನ್ನಚಕ್ರಯುಗಮೇಕತಃ ॥ ೪ ॥ ಯಾವತ್ಪೂರ್ವದಿಗಾಸಕ್ತೋನಜಹಾತ್ಯಪರಾಂರವಿಃ । ಉ

---

# ಪುರಾತನ ಪ್ರಕರಣವು.

## ಮೊದಲನೆಯ ಅಧ್ಯಾಯವು.

(ಪಂಡಿತಾರಾಧ್ಯರು ಪಾದವನ್ನು ಕೊಟ್ಟಕಥೆ.)

ಶ್ರೀಮತ್ಪರಶಿವಸ್ವರೂಪನಾದ ಪಂಡಿತಾರಾಧ್ಯಗುರುರೊತ್ತಮನು ಒಂದು ದಿವಸ ಶಿಷ್ಯರೊಡನೆ ಕೂಡಿದವನಾಗಿ, ಬೆಳಗಿನ ಮುಂಜಾವದೊಳಗೆ ಎಂದರೆ—ನಕ್ಷತ್ರಸಮೂಹವು ಕಾಂತಿಗುಂದುವುದಕ್ಕೆ ಮುಂಚೆ, ಹಿತವಾದ ಶಂಖದ ಶಬ್ದಗಳು ಆಗುವುದಕ್ಕೆ ಮುಂಚೆ, ಶಿವದೇವಸ್ಥಾನದಲ್ಲಿ ದೀಪಗಳು ಕಾಂತಿಗೆಡುವುದಕ್ಕಿಂತ ಮುಂಚೆ, ಚಕೋರಪಕ್ಷಿಗಳ ಸಮೂಹದ ಬಾಯ್ಮುಟ್ಟುವುದಕ್ಕೆ ಮುಂಚೆ, ತಾವರೆಗಳು ಅರಳುವುದಕ್ಕೆ ಮುಂಚೆ, ಬೆಳ್ದಿಂಗಳ ಕಾಂತಿಯು ತಗ್ಗುವುದಕ್ಕಿಂತ ಮುಂಚೆ, ಚಕ್ರವಾಕಪಕ್ಷಿಯುಗ್ಮವು ಒಂದು ಕಡೆ ಸೇರಿ ಕ್ರೀಡಿಸುವುದಕ್ಕಿಂತ ಮುಂಚೆ ॥೪॥ ಸೂರ್ಯನು ಪಶ್ಚಿಮದಿಕ್ಕನ್ನು

ನ್ಮೀಲ್ಯನೇತ್ರೇಭೂತ್ವೋಚ್ಚೈಶ್ಚಾಲಯಿತ್ವಾಥಪಕ್ಷತೀ ॥೫॥ ಪ್ರಸಾರ್ಯಚರ
ಣವ್ಪಂದ್ವಂಕೃತ್ವೋಚ್ಚೈರ್ಘ್ನಾನಿಜಾಂತವಂ । ಪತ್ರಾಣಿಕಂಚ್ವಾಸಮ್ಮೃಜ್ಯ
ಸಮುನ್ನಮ್ಯಸ್ವಕಂಧರಾಂ ॥೬॥ ನಿರೀಕ್ಷ್ಯೋರ್ಧ್ವಂಪ್ರಕುರುತೇಯಾವದ್ರಾವಂ
ನಕುಕ್ಕುಟಃ । ಯಾವತ್ಪರ್ವತನಾಥೇತಿವಿರುತಂಚರತ್ನಾಯುಧಾಃ ॥೭॥ ನನಿ
ಶಾಂತೇಷುಮುಂಚತ್ಸುನಿಶಾಂತಪರಿಶಂಸಿನಃ । ತಾವತ್ತಾಸ್ವೈರಾಮುಮಾಗತ್ಯಪು
ಷ್ಪಾಣ್ಯಚಿನುತಸ್ವಯಂ ॥೮॥ ಸಂಪೂಜ್ಯಯದ್ದಳೈರೀಶಂನರೋಽಯಾತ್ಯಮರೇಂ
ದ್ರತಾಂ । ಬಹೂನಿತಾನಿಸಂಗೃಹ್ಯಕರವೀರಾಣಿಭಕ್ತಿತಃ ॥೯॥ ಏಕಂಪ್ರಮಾದ
ಗಳಿತಂಪುಷ್ಪಂಪ್ರಾಗಶುಚಿಸ್ಥಳೇ । ಮಹೇಶಾರ್ಪಿತಮಿತ್ಯುಕ್ತಿಮಾತ್ರಾಚ್ಛ್ವೇ
ತಾಯಸನ್ಮತಂ ॥೧೦॥ ನಿರ್ವಾಣಂಪ್ರದದೌತಾನಿಕುಮಾರೀಕುಸುಮಾನ್ಯಪಿ ।
ದುರ್ಜಾತೀನಪಿಸಜ್ಜಾತೀನ್ಯಾಃ ಕುರ್ವಂತಿಶಿವಾರ್ಪಿತಾಃ ॥೧೧॥ ತಾಸ್ಸರ್ವಾ
ವಿಲಸದ್ಭಕ್ತ್ಯಾಸಂಗೃಹ್ಯನವಮಾಲಿಕಾಃ । ಯಾಶ್ಶಂಕರಾರ್ಪಣಾದಾತ್ಮಸದೃ
ಶಂನಿರ್ಮಲಾತ್ಮನಃ ॥೧೨॥ ಕುರ್ವಂತಿತಾಸ್ಸ್ವಯಮರ್ಧಂನಿಧಾಯುವರಮಲ್ಲಿ
ಕಾಃ । ಯಾಭಿಃಪ್ರಾಗ್ಜನ್ಮನೀಶಾನಮಭ್ಯರ್ಚ್ಯಾಗ್ರಿಮಜಾತಯಃ ॥೧೩॥ ಭ
ವಂತಿದುರ್ಜಾತಯೋಽಪಿಜಾತಿಂಸಂಗೃಹ್ಯತಾಂಮುದಾ । ಛಿತ್ವಾಕೇರಂತಂಶಬರ

---

ಬಿಟ್ಟು ಪೂರ್ವದಿಕ್ಕಿನಲ್ಲಿ ಮೂಡುವುದರೊಳಗೆ, ಕೋಳಿಯು ಕಣ್ಣುಗಳನ್ನು ಬಿಟ್ಟು, ಗರಿ
ಗಳನ್ನು ಗಟ್ಟಿಯಾಗಿ ಝಾಡಿಸಿ, ಕಾಲುಗಳನ್ನು ನಿಗುರಿಸಿ, ದೇಹವನ್ನುಬ್ಬಿಸಿ, ರಕ್ಕೆಗಳನ್ನು
ಕೊಕ್ಕಿನಿಂದ ಕೆರೆದು ಸರಿಮಾಡಿ, ತನ್ನ ಕತ್ತನ್ನೆತ್ತಿ ಮೇಲಕ್ಕೆ ನೋಡಿ, ಕೂಗುವುದಕ್ಕಿಂತ
ಮುಂಚೆ, ಬೆಳಗಾದುದನ್ನು ಸೂಚಿಸತಕ್ಕ ಹುಂಜಗಳು ಪರ್ವತನಾಥಾ ಕು ಕೂ ಕೂ
ಎಂದು ಗೂಡುಗಳಲ್ಲಿ ಧ್ವನಿಯನ್ನು ಮಾಡುವುದಕ್ಕೆ ಮುಂಚೆ, ತಾನು ಹೂದೋಟಕ್ಕೆ ಬಂದು
ಹೂವುಗಳನ್ನು ಕೊಯ್ದನು ॥೮॥ ಯಾವ ಹೂವಿನ ದಳದಿಂದ ಮನುಷ್ಯನು ಶಿವನನ್ನು
ಪೂಜಿಸಿ ಇಂದ್ರತ್ವವನ್ನು ಪಡೆಯುವನೋ, ಅಂಥ ಕಣಗಿಲೆಯ ಹೂವುಗಳನ್ನು ಭಕ್ತಿ
ಯಿಂದ ಎತ್ತಿ ॥೯॥ ಒಂದು ಹೂವು ಅಜಾಗರೂಕತೆಯಿಂದ ಅಪರಿಶುದ್ಧಸ್ಥಲದಲ್ಲಿ ಬಿ
ದ್ದುಹೋಗಲಾಗಿ „ಶಿವನಿಗೆ ಅದು ಅರ್ಪಿತವಾಗಲಿ" ಎಂದು ನುಡಿದ ಶ್ವೇತನಿಗೆ ಮುಕ್ತಿ
ಪದವನ್ನು ಕೊಟ್ಟ ಆ ಸೇವಂತಿಗೆಯ (ಸಣ್ಣ ಗೋರಂಟಿಯ) ಹೂವುಗಳನ್ನೂ, ಯಾ
ವ ಹೂವುಗಳು ತಮ್ಮನ್ನು ಶಿವನಿಗೆ ಸಮರ್ಪಿಸಿದ ದುರ್ಜಾತಿ ಜನರನ್ನು ಕೂಡ ಉತ್ತ
ಮಜಾತಿಯವರನ್ನಾಗಿ ಮಾಡುವುವೋ ಅಂಥ ಹಜ್ಜಾಜಿಯ ಹೂವುಗಳನ್ನೂ, ಯಾವ
ಹೂವುಗಳು ತಮ್ಮನ್ನು ಶಿವನಿಗೆ ಸಮರ್ಪಿಸಿದವರನ್ನು ಅರ್ಧಸಾಯಂಕಾಲದೊಳಗಾಗಿ
ತಮ್ಮಂತೆಯೇ ನಿರ್ಮಲರನ್ನಾಗಿ ಮಾಡುವುವೋ, ಅಂಥ ಮಲ್ಲಿಗೆಯ ಹೂವುಗಳನ್ನೂ
ಎತ್ತಿಟ್ಟು, ನೀಚಜಾತಿಯವರು ಕೂಡ ಪೂರ್ವಜನ್ಮದಲ್ಲಿ ಯಾವ ಹೂವುಗಳಿಂದ ಶಿವ

ಮನಯಂತಿವಸಟ್ಟ್ರೇಣಂ ||೧೪|| ಯಾನ್ಯುಪಾದಾಯ ಬಹುಳಂತಾನಿ ಬಿಲ್ವದಳಾ
ನ್ಯಪಿ | ಯದ್ದದಾತ್ಯರ್ಕಪದವೀಮರ್ಕಪುಷ್ಪಂ ಶಿವಾರ್ಪಿತಂ ||೧೫|| ಅವಾಚಿ
ನೋತ್ತತ್ಸಹಸ್ರಸುಮನಾನಿ ಕನಕಾನಿಚ | ಹರಾಯ ಕುಸುಮಾರ್ಥಂ ಸ್ವನೇತ್ರ
ಮರ್ಪಯತೋ ಹರೇಃ ||೧೬|| ತನ್ನೇತ್ರೇ ಚಕ್ರಯೋರೀಶಾದ್ವ್ಯಾಪಕಾನ್ಯಂಬು
ಜಾನಿಚ | ವಿಡಂಬಯಂತಿ ಕುಸುಮಾನೀತರಾಣಿ ಸ್ವಕಾಂತಿತಃ ||೧೭|| ನೀಲೋ
ತ್ಪಲಾನಿ ಸುರಭೀಣ್ಯಾದಾಯ ಪರಮೋತ್ಸುಕಃ | ಆಮೋದಾನುಪತದ್ಭೃಂಗ
ಪಕ್ಷೋತ್ಕ್ಷೇಪೇಣ ಮಾರ್ಗತಃ ||೧೮|| ಛಿದ್ರಾಣಿ ಮಧುಪಾಪೀತಮಕರಂದಾ
ನಿ ಭೂತಳೆ | ಸ್ವಯಂಪತಿತಪುಷ್ಪಾಣಿ ಸಂಭ್ರಮದ್ಭ್ರಮರಾರ್ಭಕೈಃ ||೧೯||
ನಿಪೀತಮಾಂತಃ ಸಂಶ್ಲಿಷ್ಟಛದಾನಿ ಮುಕುಳಾನಿಚ | ಗತೈಃ ಪರಿಮಳೈಃ ಸ್ರಸ್ತದ
ಳಾನ್ಯಳಿಸಮಾಗಮಾತ್ ||೨೦|| ಅಶೋಭನಾನಿ ಕುಸುಮಾನ್ಯಥ ಪರ್ಯುಷಿತಾ
ನ್ಯಪಿ | ವರ್ಜಯಿತ್ವೈವಮಾದೀನಿ ಕುಸುಮಾನಿಚ ಯತ್ನತಃ ||೨೧|| ಆಮೋ
ದಪರಿಮುಕ್ತಾನಿ ನಿಷ್ಫಲಾನೀಶಪೂಜನೇ | ಉಗ್ರಗಂಧಾನ್ಯಯೋಗ್ಯಾನಿ ವಿಕಾ

---

ನನ್ನು ಪೂಜಿಸಿ, ಶ್ರೇಷ್ಠಜಾತಿಯವರಾಗುವರೋ ಅಂಥ ಕೆಂಜಾಜಿಯ ಹೂವನ್ನು ಸಂ
ತೋಷದಿಂದ ಸ್ವೀಕರಿಸಿ, ಹತ್ತು ಮೇಲೆ ನೂರಿವ ಜೋಡನನ್ನು ಕೈಲಾಸಕ್ಕೆ ಸೇರಿಸಿದ
ಬಿಲ್ವದಳಗಳನ್ನು ಬಹುಳವಾಗಿ ಎತ್ತಿ, ಶಿವನಿಗೆ ಸಮರ್ಪಿಸಿದ ಯಾವ ಹೂವು ಸೂರ್ಯಪ
ದವಿಯನ್ನು ಕೊಡುತ್ತದೆಯೋ ಅಂಥ ಯಕ್ಕದ ಹೂವನ್ನು ಎತ್ತಿ, ಸಾವಿರ ಉಮ್ಮ
ತ್ತದ ಹೂವುಗಳನ್ನು ಕುಯ್ದನು. ಹೂವಿಗೆ ಪ್ರತಿಯಾಗಿ ತನ್ನ ಕಣ್ಣನ್ನು ಸಮರ್ಪಿ
ಸಿದ ವಿಷ್ಣುವಿಗೆ ಅವನ ಕಣ್ಣನ್ನೂ ಚಕ್ರಾಯುಧವನ್ನೂ ಸಹ ಶಿವನಿಂದ ಕೊಡಿಸಿದ
ತಾವರೆಯ ಹೂವುಗಳನ್ನೂ, ತನ್ನ ಕಾಂತಿಯಿಂದ ಇತರ ಹೂವುಗಳನ್ನೆಲ್ಲ ತಿರಸ್ಕರಿಸು
ತ್ತಿರುವ ಪರಿಮಳಯುಕ್ತವಾದ ಕನ್ನೈದಿಲೆಗಳನ್ನೂ ಸಹ ಅತ್ಯುತ್ಸಾಹದಿಂದ ಎತ್ತಿ,
ಪರಿಮಳಕ್ಕಾಗಿ ಮೇಲೆ ಮೇಲೆ ಬಂದು ಬೀಳುತ್ತಿರುವ ತುಂಬಿಗಳ ಗರಿಯ ಝಾಡಿಸುವಿ
ಕೆಯಿಂದ ಒಡೆದುಹೋಗಿರುವ ಹೂವುಗಳನ್ನೂ, ತುಂಬಿಗಳು ಮಕರಂದವನ್ನು ಕುಡಿ
ದ ಹೂವುಗಳನ್ನೂ, ನೆಲದಮೇಲೆ ತಾವಾಗಿ ಬಿದ್ದ ಹೂವುಗಳನ್ನೂ, ಸಡಗರಗೊಂಡ
ತುಂಬಿಯ ಮರಿಗಳು ಮಕರಂದವನ್ನು ಕುಡಿದು ಕಂದಿಸಿದ ಎಸಳುಳ್ಳ ಹೂವುಗಳ
ನ್ನೂ, ಮೊಗ್ಗೆಗಳನ್ನೂ, ಪರಿಮಳವು ಅಳಿದುಹೋಗಿ ತುಂಬಿಯ ಎರಗಾಟದಿಂದ ದಳಗ
ಳು ಜಾರಿಹೋಗಿರುವ ಹೂವುಗಳನ್ನೂ ||೨೦|| ಅಮಂಗಳಕರವಾಗಿರುವ ಹೂವುಗಳ
ನ್ನೂ, ತಂಗಳ ಹೂವುಗಳನ್ನೂ, ಇವೇ ಮೊದಲಾದ ವರ್ಜ್ಯವಾದ ಹೂವುಗಳನ್ನೆಲ್ಲ ಪ್ರ
ಯತ್ನಪೂರ್ವಕವಾಗಿ ಬಿಟ್ಟು ||೨೧|| ನಿರ್ಗಂಧವಾದ ಹೂವುಗಳನ್ನೂ, ಶಿವಪೂಜೆಯಲ್ಲಿ
ನಿಷ್ಪ್ರಯೋಜಕಗಳಾದ ಹೂವುಗಳನ್ನೂ, ಕ್ರೂರಗಂಧಗಳಾದ ಕುಸುಮಗಳನ್ನೂ,

ರ್ಯೋಪೇಕ್ಷ್ಯದೂರತಃ ॥೨೦॥ ವಿಸೃಜ್ಯಾನ್ಯತವಾಕ್ಯಾನಿಕೈತಕಾನ್ಯಬ್ಜಜನ್ಮನೆ। ಯನ್ಮನ್ಮಥಸ್ಯಬಾಣೋಭೂನ್ಮಲ್ಲಿಕಾಂತತ್ಕುಂದಮಪ್ಯಥ ॥೨೩॥ ಯತ್ಪಾದಪೇಸ್ಥಿತಂಪುಷ್ಪಂಫಲಮೇಕಂಪ್ರಸೂಯತೆ । ತನ್ಮಹೇಶಾರ್ಪಿತಂಸೂತೆಫಲಕೋಟಿಸಹಸ್ರಕಂ ॥೨೪॥ ಏವನ್ನಿತ್ಯಪಚೇಯಾಶುಪುಷ್ಪಾಣಿಸಕಲಾನ್ಯಪಿ । ನಿವೃತ್ತಪಂಡಿತಾರಾಧ್ಯೇಸಮಾಯಾತೇಶನೈಸ್ತತಃ ॥೨೫॥ ವೆಲ್ಲಕೊಂಡಮಹಾದೇವಶ್ಶಿವಸದ್ಭಕ್ತಿಭೂಷಣಃ । ಕಂಚಿತ್ಕಾಲಂವಿಲಂಬ್ಯಾಥನಿದ್ರಯಾಪ್ರಾತರುತ್ಥಿತಃ ॥೨೬॥ ಅಪಚಿನ್ವಂತಿವಾಪೂರ್ವಮಿತಃಪುಷ್ಪಾಣಿಕೇಚನ । ಲಂಘಯಂತೋಲತಾಂತೇಷುಭ್ರಮರಾಃ ಪ್ರಸರಂತಿವಾ ॥೨೭॥ ಕಿಂಮಂದವಾತಾನುಗತಭ್ರಮರಾಃಪುಷ್ಪಸಂಹತಿಂ । ಕ್ಲಿಶ್ನಂತಿತೇಷಾಮಾಮೋದಮುಪಜಿಘ್ರಂತಿವಾಪುನಃ ॥೨೮॥ ಇತಸ್ತತಃಪ್ರಕ್ಷಿಪಂತಿಕಿಂನುತನ್ಮಧ್ಯಜಂರಜಃ । ಪಿಪೀತಮಕರಂದೇಷುಭ್ರಮರೇಷುತತಃಪರಂ ॥೨೯॥ ಪರಿಮ್ಲಾನಾನಿವಾಕಿಂನುಸಂಜಾತಾನಿದಳಾನ್ಯಪಿ । ಇತಃಪರಂಪ್ರಸೂನೇಷುಸಮಾನೀತೇಷುಸತ್ವರಂ ॥೩೦॥ ಮಹೇಶಪೂಜಾಸಮಯಸ್ಸಮತೀತೋಭವೇತ್ಕಿಮು । ಇತಿಕ್ಲೇಶೇಸಮಹತಾ

---

ಶಿವಪೂಜೆಗೆ ಯೋಗ್ಯವಲ್ಲದ ಹೂವುಗಳನ್ನೂ ಸಹ ಆಲೋಚಿಸಿ, ದೂರದಲ್ಲೇ ಬಿಟ್ಟು, ಬ್ರಹ್ಮನಿಗೋಸುಗ ಸುಳ್ಳನ್ನು ನುಡಿದ ತಾಳೆಯ ಹೂವುಗಳನ್ನು ಬಿಟ್ಟು, ಮನ್ಮಥನಿಗೆ ಬಾಣವಾದ ಆ ಮೊಲ್ಲೆಯ ಹೂವನ್ನೂ ಬಿಟ್ಟು ॥೨೩॥ ಮರದಲ್ಲಿದ್ದ ಹೂವು ಒಂದು ಹಣ್ಣನ್ನು ಬಿಡುತ್ತದೆ, ಅದೇ ಹೂವು ಶಿವನಿಗೆ ಸಮರ್ಪಿಸಲ್ಪಟ್ಟರೆ, ಕೋಟಿಸಹಸ್ರ ಫಲವನ್ನು ಕೊಡುತ್ತದೆ ॥೨೪॥ ಎಂಬುದಾಗಿ ಹೇಳುತ್ತ ಬೇಗಬೇಗನೆ ಹೂವುಗಳನ್ನೆಲ್ಲ ಎತ್ತಿ, ಪಂಡಿತಾರಾಧ್ಯನು ಹಿಂತಿರುಗಿ ಮೆಲ್ಲನೆ ಬರುತ್ತಿರಲಾಗಿ ॥೨೫॥ ಶಿವಭಕ್ತಿಯೇ ಅಲಂಕಾರವಾಗುಳ್ಳ ವೆಲ್ಲಕೊಂಡ ಮಹಾದೇವಯ್ಯನು ನಿದ್ರೆಯಿಂದ ಸ್ವಲ್ಪಹೊತ್ತು ತಡವಾಗಿ ಬೆಳಗಿನಲ್ಲಿ ಎದ್ದವನಾಗಿ ॥೨೬॥ "ಇಷ್ಟರೊಳಗೇ ಆರಾದರೂ ಕೆಲವು ಹೂವನ್ನು ಎತ್ತಿಕೊಂಡರೋ! ತುಂಬಿಗಳು ಹೂವುಗಳಲ್ಲಿ ಹಾರಿ ಓಡಾಡುತ್ತಲಿರುವುವೋ ॥೨೭॥ ಮಂದಾನಿಲವನ್ನು ಅನುಸರಿಸಿ ಬಂದ ಭ್ರಮರಗಳು ಹೂವುಗಳ ಸಮೂಹವನ್ನು ಕ್ಲೇಶಗೊಳಿಸುತ್ತಿರುವುವೋ! ಅಥವಾ ಅವುಗಳ ಪರಿಮಳವನ್ನು ಮೂಸಿ ಸ್ವೀಕರಿಸುತ್ತಿರುವುವೋ! ॥೨೮॥ ಆ ಹೂವುಗಳ ಮಧ್ಯದಲ್ಲಿರುವ ಧೂಳಿಯನ್ನು ಇತ್ತಿತ್ತ ಹರಡುತ್ತಿರುವುವೋ! ತುಂಬಿಗಳು ಮಕರಂದವನ್ನೆಲ್ಲ ಕುಡಿದುಕೊಂಡು ಹೋಗಲಾಗಿ ಹೂವಿನ ದಳಗಳೆಲ್ಲ ಬಾಡಿಹೋಗಿರುವುವೋ ಏನೋ! ಇನ್ನುಮೇಲೆ ಹೋಗಿ ಬೇಗನೆ ಹೂವನ್ನು ಎತ್ತಿಕೊಂಡು ಬಂದರೆ ॥೩೦॥ ಶಿವಪೂಜಾಕಾಲವು ಮೀರಿಹೋಗುವುದೋ ಏನೊ!" ಎಂದು ಪರಿಪರಿಯಾಗಿ ಯೋಚಿಸಿ, ಅತ್ಯಂತವಾಗಿ ಚಿಂತಾಕುಲನಾದನು ॥೩೧॥ ಈ ಪ್ರಕಾರವಾದ

ಚಿಂತಯಾಚಾಕುಲೋಭವತ್ ॥ ೩೧ ॥ ಏವಂಸಂಭ್ರಾಂತಚಿತ್ತೇಽಸ್ಮಿಂಛೀಘ್ರಮುತ್ಥಾಯಗಚ್ಛತಿ। ಶಿವಪೂಜೋಪಕರಣಾನ್ಯಾತತಾನಿಸ್ವಕೀಯಯೋಃ॥ ಪಾದಯೋಸ್ಸ್ಪೃಶತೋಸ್ತೂರ್ಣಂಸಂಧೀಚಿಚ್ಛೇದಕೋಪತಃ । ಏವಂವಿಚ್ಛಿದ್ಯಚರಣೌನಿಧಾಯಚಶಿವಾಗ್ರತಃ ॥ ೩೨ ॥ ದೂರಮುತ್ಸಾರ್ಯಸಂಸಾರಂಪಾರಂಭಕ್ತೇರುಪೇತ್ಯಚ । ವಿಚಾರಮಂತಸ್ಸಂತ್ಯಜ್ಯಗೃಹೀತ್ವಾಸ್ಥೈರ್ಯಮುನ್ನತಂ ॥ ಅನುಸೃತ್ಯಪ್ರಾಕ್ಪ್ರತಿಜ್ಞಾಂಸ್ಥಿತಂತಂಪಂಡಿತೇಶ್ವರಃ । ವಿಜ್ಞಾಯವಿಸ್ಮಯಾಕ್ರಾಂತಃಪರಮಾನಂದಸಂಯುತಃ ॥ ೩೪ ॥ ಭಕ್ತೇಃಪಕ್ಷದ್ವಯೇಜಾತೇಚಿತ್ತೇವೀರರತೌತಥಾ । ಪ್ರವೃದ್ಧಾಯಾಂವಿಶೇಷೇಣಶುಂಭತ್ಸಂಭ್ರಮಗುಂಭಿತಃ ॥ ಇಯಮೇವಹಿಸದ್ಭಕ್ತಿರ್ಭೃತ್ಯಾಚಾರೋಽಯಮೇವಹಿ । ಇಯಮೇವೋಚಿತಾವೃತ್ತಿರಿಯಮೇವಹಿವೀರತಾ ॥ ೩೭ ॥ ಇದಮೇವಹಿಸೌಭಾಗ್ಯಮಿಯಮೇವಹಿಧನ್ಯತಾ । ಪ್ರಾವೀಣ್ಯಮಿದಮೇವೇತಿನಿರೀಕ್ಷ್ಯಪರಮಾದ್ಭುತಂ ॥ ತಂಮಹಾದೇವಶರಣಂತದಾನಂದಾಶ್ರುನಿರ್ಭರಃ । ಅಪಶ್ಯಮಸ್ಮದಾಚಾರ್ಯಮಪಶ್ಯಂಪಿತರಂಮಮ ॥ ೩೯ ॥ ಮತ್ಸ್ವಾಮಿನಮಿಹಾಪಶ್ಯಮಪಶ್ಯಂಭ್ರಾತರಂ

---

ಚಿಂತೆಯಿಂದ ವ್ಯಾಕುಲಗೊಂಡ ಮಹಾದೇವಯ್ಯನು ಭ್ರಾಂತಚಿತ್ತನಾಗಿ ಥಟ್ಟನೆದ್ದು ಹೋಗುತ್ತಿರಲು, ವಿಸ್ತಾರವಾಗಿಟ್ಟಿದ್ದ ಶಿವಪೂಜಾ ಸಾಮಗ್ರಿಗಳಿಗೆ ತನ್ನ ಕಾಲುಗಳು ಸೋಂಕಲಾಗಿ, ಕೋಪದಿಂದ ಥಟ್ಟನೆ ಕಾಲ್ಸಂದಿಗಳನ್ನು ಕತ್ತರಿಸಿಹಾಕಿದನು. ಹೀಗೆ ತನ್ನ ಕಾಲ್ಗಳನ್ನು ಕಡಿದು ಶಿವನ ಮುಂಗಡೆಯಲ್ಲಿಟ್ಟು ॥೩೨॥ ಸಂಸಾರ ಚಿಂತೆಯನ್ನು ದೂರೀಕರಿಸಿ, ಶಿವಭಕ್ತಿಯ ಕೊನೆಯನ್ನೇರಿ, ಮನಸ್ಸಿನಲ್ಲಿ ಯೋಚನೆಯನ್ನು ಬಿಟ್ಟು, ನಿಶ್ಚಲಚಿತ್ತವನ್ನು ಹೊಂದಿ ॥೩೩॥ ಪೂರ್ವದ ಪ್ರತಿಜ್ಞೆಯನ್ನು ಅನುಸರಿಸಿ ನಡೆದುಕೊಂಡಿರುವ ಆ ಮಹಾದೇವಯ್ಯನ ವಿಷಯವನ್ನು ಪಂಡಿತಾರಾಧ್ಯನು ಕೇಳಿ ತಿಳಿದು, ಆಶ್ಚರ್ಯ ಸಂತೋಷಗಳನ್ನು ಹೊಂದಿದವನಾಗಿ ॥೩೪॥ ಭಕ್ತಿಗೆ ಎರಡು ರೆಕ್ಕೆಗಳು ಹುಟ್ಟಿದಂತಾಗಲು, ಮನಸ್ಸಿನಲ್ಲಿ ವೀರರಸವೂ ಅನುರಾಗವೂ ವೃದ್ಧಿಯೊಂದಲಾಗಿ, ಅಧಿಕವಾಗಿ ಉಚ್ಚೇರುವ ಸಡಗರದಿಂದ ತುಂಬಿದವನಾಗಿ ॥೩೬॥ ಇದೇ ಸದ್ಭಕ್ತಿಯಲ್ಲವೆ! ಇದೇ ಭೃತ್ಯಾಚಾರವಲ್ಲವೆ! ಇದೀಗ ಯೋಗ್ಯವಾದ ವರ್ತನವಲ್ಲವೆ! ಇದೇ ವೀರತ್ವವಲ್ಲವೆ! ॥೩೭॥ ಇದೇ ಸೌಭಾಗ್ಯವಲ್ಲವೆ! ಇದೇ ಕೃತಾರ್ಥತ್ವವಲ್ಲವೆ! ಇದೇ ಪ್ರೌಢತನವಲ್ಲವೆ! ಎಂದು ಹೇಳುತ್ತ, ಅತ್ಯಾಶ್ಚರ್ಯ ಜನಕನಾದ ಆ ಮಹಾದೇವ ಶರಣನನ್ನು ಪಂಡಿತೇಂದ್ರನು ನೋಡಿ ಸಂತೋಷದಿಂದ ಮೂಡಿದ ಕಣ್ಣೀರಿನಿಂದ ತುಂಬಿದವನಾಗಿ, ನನ್ನ ಆಚಾರ್ಯನನ್ನು ಕಂಡೆ, ನನ್ನ ತಂದೆಯನ್ನು ಕಂಡೆ ॥೩೯ ನನ್ನ ಒಡೆಯನನ್ನು ಇಲ್ಲಿ ಕಂಡೆ, ನನ್ನಣ್ಣನನ್ನು ಕಂಡೆ, ಭೂಮಿಯಲ್ಲಿ

ಮನು । ಸಸ್ಯಾತ್ತನ್ಯಂಕಿಂನುಜನ್ಮಫಲೇನೈವಂಮಹೀತಳೆ ॥೩೦॥ ಅತ್ಯಾಸನ್ನ ವ್ರತೇನೈವಂಭವಿತವ್ಯಂನವಾತವಾ । ನಿವರ್ತತೇಃಕಿಂಸುಸದ್ಧೇಯುದ್ಧೇಮಹತಿ ಧೈರ್ಯವಾನ್ ॥೪೦॥ ಪಲಾಯಿತೋಭವೇಚ್ಛೂರೋಽವಸರೇಸಮುಪಸ್ಥಿತೇ। ಸಾಧುಭಕ್ತಿಪ್ರತಾಪೋರುವಿಲಾಸೋಲ್ಲಾಸಭಾಸುರ ॥೪೧॥ ಕರ್ಮನಾಶನಸ ನ್ಮೂರ್ತೇಧರ್ಮಕೀರ್ತೇವೃಥವ್ರತ । ವೀರಭೃತ್ಯಾಚಾರಮಾರ್ಗವರ್ತಿಂತ್ಸಜ್ಜ ನಸಂಮತ ॥೪೨॥ ಚಾರುಭೃತ್ಯಾಚಾರಸಂಪತ್ಪ್ರಪೂರ್ತೇಪರಮೋಜ್ವಲ। ನಿತ್ಯಭೃತ್ಯಸಮಾಚಾರಚಕ್ರವರ್ತಿನ್ನಿರಂಕುಶ ॥೪೩॥ ಶುದ್ಧಭೃತ್ಯಾಚಾರಸಂಪ ದನಾರ್ತೇಕರುಣಾಕರ । ಮಹಾಭೃತ್ಯಾಚಾರಗತಭವಮೂರ್ತೆಮಹೋದಯ॥ ಸದ್ಭೃತ್ಯಾಚಾರವಿಸಯಸ್ಫೂರ್ತೆಲೋಕೈಕವಿಶ್ರುತ । ವಿರತೌಕೌಶಲಂಭಕ್ತಿ ರ್ಯುಕ್ತಿಶ್ಚ ತವಶೋಭತೆ ॥೪೬॥ ಅಯಂವಿಚಾರಸ್ಸದ್ಭೃತ್ಯಾಚಾರಃ ಕರ್ಮಾಪಿ ಸಾಹಸಂ । ಧಾರ್ಮಿಕತ್ವಂಲಸದ್ಭಕ್ತಿರೌದಾರ್ಯಂಕಸ್ಯವಿದ್ಯತೆ ॥೪೭॥ ಮಹಾದೇ

---

ಎತ್ತಿದ ಜನ್ಮವು ಇಂಥ ಫಲದಿಂದ ಕೂಡಿಲ್ಲದೆ ಇದ್ದರೆ ಇರಬೇಕೇನು? ಹಿಡಿದ ವ್ರತವು ಅನುಗೊಂಡಿದ್ದರೆ, ಹೀಗೆ ಆಗಬೇಕೋ ಇಲ್ಲವೋ? ಧೈರ್ಯಶಾಲಿ ಯಾದವನು ಮಹಾಯುದ್ಧ ಪ್ರಾಪ್ತವಾದರೆ ಹಿಂದಿರುಗುವನೇನು? ॥ ೪೧ ॥ ಸಮಯ ಬಿದ್ದಾಗ ಶೂರನು ಓಡಿಹೋಗುವನೆ? ಭಕ್ತಿಪರಾಕ್ರಮದಿಂದಲೂ ಅಧಿ ಕವಾದ ಉಲ್ಲಾಸದಿಂದಲೂ ಒಪ್ಪುವ ಮಹಾದೇವನೆ! ಭಲಾ! ॥೪೨॥ ಪೂರ್ವಾ ರ್ಜಿತ ಕರ್ಮವನ್ನು ನಾಶಗೊಳಿಸುವ ಮೂರ್ತಿಯೆ! ಸದ್ಧರ್ಮಾಚರಣದಿಂದುತ್ಪನ್ನ ವಾದ ಯಶಸ್ಸುಳ್ಳವನೇ! ಸ್ಥಿರವಾದ ನಿಯಮವುಳ್ಳವನೆ! ವೀರತ್ವದಿಂದ ಕೂಡಿದ ಭೃತ್ಯಾಚಾರ ಮಾರ್ಗದಲ್ಲಿ ಆಚರಿಸುವವನೆ! ಸತ್ಪುರುಷರಿಗೆ ಒಪ್ಪಿಗೆಯಾದವನೆ!॥ ಮನೋಹರವಾದ ಭೃತ್ಯಾಚಾರ ಸಂಪತ್ತಿನಿಂದ ತುಂಬಿದವನೆ! ಅತ್ಯಂತ ಪ್ರಕಾಶ ಮಾನನಾದವನೆ! ಸ್ಥಿರವಾದ ಉತ್ತಮ ಭೃತ್ಯಾಚಾರವನ್ನು ನಡೆಯಿಸುವವರಲ್ಲಿ ಸಾರ್ವಭೌಮನಾದವನೆ! ಅಪ್ರತಿಹತನಾದವನೆ!॥೪೪॥ ನಿರ್ಮಲವಾದ ಭೃತ್ಯಾಚಾರ ಸಂಪತ್ತುಳ್ಳವನೆ! ದಯಾಶ್ರಯನೆ! ಅಧಿಕವಾದ ಭೃತ್ಯಾಚಾರವನ್ನವಲಂಬಿಸಿದ ಶಿವ ಮೂರ್ತಿಯೆ! ಶ್ರೇಷ್ಠವಾದ ಆವಿರ್ಭಾವವುಳ್ಳವನೆ! ॥೪೫॥ ಒಳ್ಳೆಯ ಭೃತ್ಯಾಚಾ ರಕ್ಕೆ ತಕ್ಕ ಸಮ್ಮತಿಯ ಸ್ಫುರಣವುಳ್ಳವನೆ! ಜಗತ್ತಿನಲ್ಲೆಲ್ಲಾ ಪ್ರಸಿದ್ಧನಾದವನೆ! ವೈರಾಗ್ಯಾಚರಣದಲ್ಲಿ ಜಾಣ್ಮೆಯೂ, ಶಿವಭಕ್ತಿಯೂ, ಯುಕ್ತಿಯೂ ಕೂಡ ನಿನಗೆ ಒಪ್ಪುತ್ತಿವೆ ॥೪೬॥ ಈ ದೃಶವಾದ ವಿಚಾರವೂ ಉತ್ತಮವಾದ ಭೃತ್ಯಾಚಾರವೂ, ಸಾ ಹಸಕರ್ಮವೂ, ಧರ್ಮಪರಾಯಣತ್ವವೂ, ಸದ್ಭಕ್ತಿಯೂ, ಉದಾರತನವೂ ಮತ್ತಾ ರಿಗಿದೆ? ॥೪೭॥ ಯಾವಾಗಲೂ ಉತ್ತಮವಾದ ಶೀಲಗಳಿಂದ ಕೂಡಿರುವ ಮಹಾದೇ

ವಾರ್ಯಸತತಂಸುಶೀಲತರಕೇವಲಂ । ಯುಜ್ಯತೇವಾವದೂಕಾನಾಂ ನೇತರೇ ಷಾಂಮಹೀತಳೆ ॥೪೮॥ ಭಕ್ತಾಂಘ್ರಿಶಯ್ಯಸದ್ಭಕ್ತಿ ವಿವೇಕಶಮಿತೇಂದ್ರಿಯ । ಕೃತಭಸ್ಮಾಭಿಷೇಕೋದ್ಯನ್ಮಲಪಾಕಗುರುಪ್ರಿಯ ॥೪೯॥ ಕೃಪಾನ್ವಿತನಿಜಾ ಲೋಕಭವಿಲೋಕವಿವರ್ಜಿತ । ಸದ್ಭಕ್ತಿಶೂಕಸಮಿತಸರ್ವಲೋಕಸಮಾಶ್ರಯ ॥೫೦॥ ದುರ್ಮತಾನೀಕಲುಂಟಾಕಪುಣ್ಯಶ್ಲೋಕಗುಣೋತ್ತಮ । ವೀರಸದ್ಗುಣಸಂದೋಹಪತಾಕಕುಲದೀಪಕ ॥೫೧॥ ಜಿತಚಾರ್ವಾಕಗಾಂಭೀರ್ಯಾಸ್ತೋಕಶೋಕವಿವರ್ಜಿತ । ಏವಂಸ್ತುವನ್ಭಕ್ತತತೇಸ್ಸಾಷ್ಟಾಂಗಂಪ್ರಣಿಪತ್ಯಸಃ ॥೫೨॥ ಸ್ಥಿತೇತತ್ಪದಯೋಃಖಂಡೇಶಿವಸ್ಯಪುರತಸ್ತತಃ । ಪ್ರಣಮ್ಯದೋರ್ಭ್ಯಾಂ ಮಾದಾಯನಿಧಾಯೋರಸಿಭಕ್ತಿತಃ ॥೫೩॥ ಧೃತ್ವಾಶಿರಸಿಸಂತೋಷಾದುವಾಚೇದಂವಿಶುದ್ಧಧೀಃ । ಏತತ್ಪಾದಧೃತಿಶ್ಶಂಭೋರ್ನಕಿಂಪಾದಾಬ್ಜಧಾರಣಂ ॥೫೪॥ ಏತತ್ಪದರಜಶ್ಶಂಭುಪದಧೂಳಿರ್ನಕಿಂಶುಭಾ । ಏತತ್ಪದನತಿಶ್ಶ

---

ವಾರ್ಯನೆ, ವಿದ್ವತ್ಸಮೂಹ ಮಧ್ಯದಲ್ಲಿ ಸಮಯಕ್ಕೆ ತಕ್ಕ ಪ್ರಸಂಗವನ್ನು ಮಾಡ ತಕ್ಕ ಜನರಿಗೆ ಈ ಗುಣವು ಒಪ್ಪುತ್ತದೆಯೇ ಹೊರತು ಭೂತಲದಲ್ಲಿ ಇನ್ನಾರಿಗೂ ಇಲ್ಲವು ॥೪೮॥ ಭಕ್ತರ ಪಾದವೇ ಹಾಸುಗೆಯಾಗುಳ್ಳವನೇ! ಸದ್ಭಕ್ತಿಯು ಅರಿವುಳ್ಳವನೆ! ಮಲತ್ರಯವನ್ನು ಸುಟ್ಟು ಅಟ್ಟಿದವನೆ! ಗುರುವಿಗೆ ಪ್ರೀತಿಪಾತ್ರನೆ ॥ ೪೯ ॥ ದಯಾ ಸಮೇತವಾದ ನೋಟವುಳ್ಳವನೆ! ಭವಿಜನಗಳ ಸಂಗವನ್ನು ಬಿಟ್ಟಿರುವವನೆ ಸದ್ಭಕ್ತಿಯೆಂಬ ಮುಳ್ಳಿನಿಂದ ಬಗ್ಗಿಸಲ್ಪಟ್ಟ ಸಕಲಜನಕ್ಕೂ ಆಶ್ರಯನಾದವನೆ ॥೫೦॥ ದುಷ್ಟಮತಗಳ ಗುಂಪನ್ನೆಲ್ಲಾ ಸೂರೆ ಮಾಡುವವನೆ! ಪರಿಶುದ್ಧವಾದ ಕೀರ್ತಿಯುಳ್ಳವನೆ! ಸದ್ಗುಣಗಳಿಂದ ಶ್ರೇಷ್ಠನಾಗಿರುವವನೆ! ಶೌರ್ಯದಿಂದ ಕೂಡಿದ ಸದ್ಗುಣ ಸಮೂಹವೇ ಧ್ವಜವಾಗುಳ್ಳವನೆ! ವಂಶವನ್ನು ಬೆಳಗುವವನೆ! ॥೫೧॥ ಚಾರ್ವಾಕ ಮತವನ್ನು ಜೈಸಿದವನೆ! ಅಧಿಕವಾದ ಗಂಭೀರ್ಯವುಳ್ಳವನೆ! ದುಃಖದೂರನೆ! ಎಂಬುದಾಗಿ ಆ ಪಂಡಿತಾರಾಧ್ಯನು ಸ್ತೋತ್ರಮಾಡಿದವನಾಗಿ, ಭಕ್ತರ ಸಮೂಹಕ್ಕೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ॥೫೨॥ ಆ ಮಹಾದೇವಾರ್ಯನ ಕಾಲಿನತುಂಡು ಈಶ್ವರನ ಮುಂಗಡೆಯಲ್ಲಿರಲು, ಅವಕ್ಕೆ ನಮಸ್ಕರಿಸಿ, ಎರಡು ಕೈಗಳಿಂದಲೂ ತಬ್ಬಿ ಎತ್ತಿಕೊಂಡು, ಭಕ್ತಿಯಿಂದ ತನ್ನ ಎದೆಯಮೇಲಿಟ್ಟುಕೊಂಡು, ॥೫೩॥ ತಲೆಯಮೇಲೆ ಹೊತ್ತು, ನಿರ್ಮಲಮತಿಯಾದ ಆ ಪಂಡಿತಾರಾಧ್ಯನು ಸಂತೋಷದಿಂದ ಹೀಗೆ ನುಡಿದನು.— ಈ ಪಾದಗಳ ಧಾರಣೆಯು ಪರಮೇಶ್ವರನ ಪಾದಗಳ ಧಾರಣೆಯಲ್ಲವೆ? ॥೫೪॥ ಈ ಪಾದಗಳ ಧೂಳಿಯು ಮಂಗಳಕರವಾದ ಶಿವಪಾದ ಧೂಳಿಯು

ರ್ವಾಚರಣಾವನತಿರ್ನ ಕಿಂ ||೫೫|| ಏತತ್ಪದಾಬ್ಜಯೋಶ್ಶಂಭುಪಾದಯೋರ್ವಾ
ಭಿದಾ ಕಿಮು | ಪಾದಾವೇತೌ ಪ್ರತಿಖ್ಯಾತೌ ಮಹಾಮಹಿಮಶೋಭಿತೌ ||೫೬||
ಹರಿಣಾ ಕಿಲ ದುರ್ಲಕ್ಷ್ಯೌ ಬ್ರಹ್ಮಸಂವಾಪನೋಚಿತೌ | ಭೂಮೌ ಸುಧಾಕರಂ
ಗಾಢಮವಮರ್ದ್ಯ ವಿಜೃಂಭಿತೌ ||೫೭|| ಸಂಪೀಡಕೌ ದಶಾಸ್ಯಸ್ಯ ಬಹುರೋದ
ನಭೀಷಣಂ | ಅಂಧಕಾಸುರಮಾಕ್ರಮ್ಯ ಸ್ಥಿತೌ ಜಗತಿ ಸಾದ್ಭುತಂ ||೫೮|| ವ
ರ್ತಮಾನೌ ಸಮಾರುಹ್ಯ ಪೃಷ್ಠಭಾಗೇ ಗಯಾಸುರಂ | ವೇದಾಂತಮಾರ್ಗಸ್ಫು
ರಿತೌ ಸದ್ಭಕ್ತಿಪರಿಪೂಜಿತೌ ||೫೯|| ಅಪಿ ಚಾಪತ್ಯ ಪದ್ಮಾಕ್ಷವಕ್ಷ ಶ್ರೀವತ್ಸಕಾ
ರಕೌ | ಇಮಾವೇವಾನಘೌ ಪಾದೌ ದಧೀಚಿಪ್ರಭೃತೇರಪಿ ||೬೦|| ಯಥಾ ಕ
ಣ್ಣಪ್ಪಚರಣೌ ಮಹಾದೇವಶಿರೋಮಣೀ | ತಥೈವೈತೌ ಶ್ರೀಚರಣೌ ಭಕ್ತ
ಲೋಕಶಿರೋಮಣೀ ||೬೧|| ತೌ ಪರಿಕ್ಷಿಪತಃ ಪೂಜಾಂ ಮಹಾದೇವಶಿರೋಗ
ತಾಂ | ಪಾದಾವಿಮೌ ಭಕ್ತವರ್ಗಸ್ಯವರಪೂಜಾಪ್ರದಾಯಕೌ ||೬೨|| ನಪ್ರಣ
ಶ್ಯಂತಿ ಪಾಪಾನಿ ಕಿಮೇತತ್ಪಾದದರ್ಶನಾತ್ | ನ ಕಿಂ ಯಾಂತಿ ಸತ್ಕೀರ್ತಿ ರೇತಚ್ಛ

---

ಲ್ಲವೆ ? ಈ ಪಾದಗಳ ನಮಸ್ಕಾರವು ಪರಶಿವಪಾದನಮಸ್ಕಾರವಲ್ಲವೆ ? ||೫೫|| ಈ
ಪಾದಗಳಿಗೂ ಶಿವಪಾದಗಳಿಗೂ ಭೇದವಿರುವುದೇನು ? ಈ ಪಾದಗಳೆರಡೂ ಪ್ರಸಿ
ದ್ಧವಾದುವುಗಳು; ಅತ್ಯಂತ ಮಹತ್ವದಿಂದ ಶೋಭಿಸುವುವು ||೫೬|| ವಿಷ್ಣುವಿನಿಂದ
ಲೂ ಕೂಡ ಕಾಣಲ್ಪಡಲಾರದುವುಗಳಲ್ಲವೆ ? ಇವು ಬ್ರಹ್ಮನು ತಲೆಯಮೇಲೆ ಹೊ
ತ್ತುಕೊಳ್ಳುವುದಕ್ಕೆ ಅರ್ಹವಾದುವು. ಇವು ಭೂಮಿಯಲ್ಲಿ ಚಂದ್ರನನ್ನು ಝಾಡಿಸಿ
ಒದೆದು ಉಬ್ಬೇರಿದ ಪಾದಗಳು ||೫೭|| ಇವು ರಾವಣನನ್ನು ಭಯಂಕರವಾಗಿ
ಗೋಳಾಡುವಂತೆ ಪೀಡಿಸಿದ ಶಿವನ ಪಾದಗಳು. ಜಗತ್ತಿನಲ್ಲಿ ಅಂಧಕಾಸುರನನ್ನು
ಮೆಟ್ಟಿ ಆಶ್ಚರ್ಯಕರವಾಗಿ ನಿಂತ ಪಾದಗಳು ||೫೮|| ಗಯರಾಕ್ಷಸನ ಬೆನ್ನಮೇ
ಲೆ ಹತ್ತಿ ನಿಂತಿರುವ ಪಾದಗಳು, ವೇದಾಂತ ಮಾರ್ಗದಲ್ಲಿ ಗೋಚರಿಸುವವೂ, ಭಕ್ತಿ
ಯಿಂದ ಪೂಜಿಸಲ್ಪಟ್ಟವೂ ಆದ ಪಾದಗಳು ||೫೯|| ಮತ್ತೂ ಕಮಲಲೋಚನನಾದ
ವಿಷ್ಣುವನ್ನು ಒದೆದು ಅವನೆದೆಯಲ್ಲಿ ಶ್ರೀವತ್ಸವೆಂಬ ಗುರುತನ್ನು ಮಾಡಿದ ದಧೀಚಿ
ಮೊದಲಾದ ಮಹರ್ಷಿಗಳ ನಿರ್ದುಷ್ಟಗಳಾದ ಪಾದಗಳೇ ಇವು ||೬೦|| ಕಣ್ಣಪ್ಪನ
ಪಾದಗಳು ಹೇಗೆ ಶಿವನ ಶಿರೋರತ್ನಗಳಾಗಿದ್ದುವೋ ಹಾಗೆಯೇ ಈ ಪಾದಗಳು
ಭಕ್ತಜನರಿಗೆಲ್ಲಾ ಶಿರೋರತ್ನಗಳು ||೬೧|| ಆ ಕಣ್ಣಪ್ಪನಪಾದಗಳು ಶಿವನ ಮಂ
ಡೆಯಮೇಲೆ ಮಾಡಿದ್ದ ಪೂಜೆಯನ್ನು ವಿಸರ್ಜಿಸಿದುವು. ಈ ಪಾದಗಳು ಭಕ್ತಶ್ರೇ
ಷ್ಠರಿಗೆ ಉತ್ತಮವಾದ ಪೂಜಾ ಪ್ರದಾನವನ್ನು ಮಾಡತಕ್ಕವು ||೬೨|| ಈ ಪಾದ

ರಣಧಾರಣಾತ್ ॥೬೩॥ ಏತತ್ಪದರಜಸ್ಪರ್ಶಾನ್ನಕಿಂಸದ್ಭಕ್ತಿಸಂಭವಃ । ಏತ
ತ್ಪಾದಸ್ತುತಿಕೃತೋಧನ್ಯಸ್ಯಭುವನೇಯಶಃ ॥೬೪॥ ಇಯತ್ತಯಾಕಥಯಿತುಂ
ಧ್ರುವಂಕಥಮಹಂಕ್ಷಮಃ । ಇತಿಸ್ತುವನ್ಮಹಾಪ್ರೀತ್ಯಾಗಾಯನ್ನೃತ್ಯನ್ಮುಹು
ರ್ಮುಹುಃ ॥೬೫॥ ಶಿವಾಭಿಷೇಕಸಲಿಲಂವಿಷಾಣಾಮೌಷಧಂಪರಂ । ಪ್ರದೀಪ
ತೈಲವಿನಾಶಸ್ಯಸರ್ವಶಸ್ತ್ರವ್ರಣಾಪಹಂ ॥೬೬॥ ವಿಚಿತ್ರಮೇತದ್ಭಕ್ತಾನಾ
ಮಿತಿಭಕ್ತ್ಯಾವದಂಸ್ತದಾ । ಶಿವಪ್ರದೀಪತೈಲೇನಮಾರ್ಜಯಿತ್ವಾಥತತ್ಪದೇ ॥
ಸಂಧಾಯಸಮ್ಯಕ್ಸದ್ಭಕ್ತಹಸ್ತಭೂತಿಂಪ್ರಕೀರ್ಯಚ । ಕಾರಯಿತ್ವಾನಮಸ್ಕಾ
ರಂಸಾಷ್ಟಾಂಗಂಭಕ್ತಸಮ್ಮತೇಃ ॥೬೮॥ ಏತೇಮಹಾಭಕ್ತವರ್ಯಾಃ ಪ್ರದದುಶ್ಚ
ರಣೌತವ । ಉತ್ತಿಷ್ಠಭದ್ರೇತಿವದನ್ನುತ್ಥಾಪ್ಯಾಲಿಂಗ್ಯಚಾದರಾತ್ ॥೬೯॥ ಉ
ಚ್ಚೈಸ್ತರಾಂತತ್ರಜನ್ಯೈಃ ಕೃತೇಜಯಜಯಧ್ವನೌ । ಅಚಂಚಲೋಲ್ಲಸತ್ಕೀ
ರ್ತಿರ್ಮಲ್ಲಿಕಾರ್ಜುನಪಂಡಿತಃ ॥೭೦॥ ತಮಾದಿದೇಶಭಕ್ತಾನಾಂತತೇಃಕರ್ತುಂ

---

ಗಳ ದರ್ಶನಮಾಡುವುದರಿಂದ ಪಾಪಗಳು ನಾಶಗೊಳ್ಳುವುದಿಲ್ಲವೇನು ? ॥೬೩॥ ಈ ಪಾದಗಳ ಧೂಳಿಯ ಸೋಂಕುವಿಕೆಯಿಂದ ಸದ್ಭಕ್ತಿಯು ಪ್ರಾಪ್ತವಾಗುವುದಿಲ್ಲವೇನು ? ಈ ಪಾದಗಳ ಸ್ತೋತ್ರವನ್ನು ಮಾಡಿದ ಧನ್ಯನಿಗೆ ಭೂಲೋಕದಲ್ಲಿ ಯಶೋಲಾಭವಾಗುವುದಿಲ್ಲವೆ ? ॥೬೪॥ ಇದರ ಮಹಿಮೆಯು ಪ್ರಾಮಾಣ್ಯವಿಷ್ಟೆಂದು ಹೇಳುವುದಕ್ಕೆ ನಿಜವಾಗಿಯೂ ನಾನು ಹೇಗೆ ಸಮರ್ಥನು ? ಎಂಬುದಾಗಿ ಹೇಳಿ ಸ್ತೋತ್ರಮಾಡಿದವನಾಗಿ, ಅತ್ಯಂತ ಪ್ರೀತಿಯಿಂದ ಗಾನ ಮಾಡುವವನಾಗಿ ಅಡಿಗಡಿಗೆ ಕುಣಿಯುವವನಾಗಿ ॥೬೫॥ ಶಿವನಿಗೆ ಅಭಿಷೇಕಿಸಿದ ಜಲವು ವಿಷಪರಿಹಾರಕ್ಕೆ ಉತ್ತಮವಾದ ಔಷಧಿಯಾಗಿರುತ್ತದೆ. ಈಶ್ವರನ ಮುಂದೆ ಉರಿಯುವ ದೀಪದ ಎಣ್ಣೆಯು ಸಕಲಶಸ್ತ್ರಗಳ ಗಾಯವನ್ನೂ ಮಾಯಿಸುತ್ತದೆ ॥೬೬॥ ಇದು ಭಕ್ತರುಗಳಿಗೆ ಆಶ್ಚರ್ಯಕರವಾದುದು ಎಂದು ಭಕ್ತಿಯಿಂದ ನುಡಿಯುವವನಾಗಿ, ಬಳಿಕ ಶಿವನ ಮುಂದಣ ದೀಪದಲ್ಲಿದ್ದ ಎಣ್ಣೆಯಿಂದ ಆ ಪಾದಗಳೆರಡನ್ನೂ ಸವರಿ ॥೬೭॥ ಅವುಗಳನ್ನು ಮಹಾದೇವಯ್ಯನ ಮೊಣಕಾಲಿನ ಮೋಟುಗಳಿಗೆ ಸೇರಿಸಿ, ಭಕ್ತವರ್ಯರ ಹಸ್ತದಿಂದ ಕೊಡಲ್ಪಟ್ಟ ವಿಭೂತಿಯನ್ನು ತೆಗೆದುಕೊಂಡು ಆ ಪಾದಗಳ ಮೇಲೆ ತಳಿದು, ಭಕ್ತ ಸಮೂಹಕ್ಕೆ ಸಾಷ್ಟಾಂಗನಮಸ್ಕಾರವನ್ನು ಮಾಡಿಸಿ, ಎಲೌ ಮಂಗಳಮೂರ್ತಿಯೆ ! ಈ ಮಹಾ ಭಕ್ತಶ್ರೇಷ್ಠರೆಲ್ಲರೂ ನಿನಗೆ ಪಾದಗಳನ್ನು ಕೊಟ್ಟರು ; ಏಳು ; ಎಂದು ಹೇಳಿ, ಏಳಿಸಿ, ಪ್ರೀತಿಯಿಂದ ಆತನನ್ನು ಆಲಿಂಗಿಸಿ ॥೬೯॥ ಅಲ್ಲಿದ್ದ ಜನರೆಲ್ಲರೂ ಗಟ್ಟಿಯಾಗಿ ಜಯಜಯ ಧ್ವನಿಯನ್ನು ಮಾಡಲಾಗಿ, ದೃಢವಾದ ಸತ್ಕೀರ್ತಿಯಿಂದೊಪ್ಪುತ್ತಿರುವ ಮಲ್ಲಿಕಾರ್ಜುನ ಪಂಡಿತನು ॥೭೦॥ ಆ ಮಹಾದೇವಾರ್ಯ

ಪ್ರದಕ್ಷಿಣಂ | ನಮತ್ಸುದ್ರಷ್ಟುಮಾಯಾತೇಷ್ವನಲ್ಪೇಹೃದಿನಿಶ್ಚಯೆ ||೨೧|| ಮ
ಹೇಶ್ವರಸ್ಯಸಂಜಾತೇಕರುಣಾಪೂರಿತೇಸ್ಮಿತೆ | ಆಲೋಕಯತ್ಸುಪ್ರಮಥೇ
ಷ್ವಾಕಾಶೇಗುರುಹರ್ಷತಃ ||೨೦|| ವಿನಯೆವಿಸ್ಮಯೆಜಾತೆಪ್ರಸನ್ನತ್ವೇಸಮಂ
ತತಃ | ಸಮುಲ್ಲಸತಿವೀರತ್ವೇಮಹಾವಾರ್ಯವಿಜೃಂಭಿತೇ ||೨೩|| ಧೀರತ್ವೇ
ಮಹಿಮೋದೀರ್ಣೆತೇಜಸಿಪ್ರತಿಭಾಸಿತೆ | ಪಲಾಯಿತೇಽನ್ಯಸಮಯವ್ರಜೇ
ತುಷ್ಟೇಷುಬಂಧುಷು ||೨೪|| ಭೀತೇನಿರ್ಜರಸಂದೋಹೆಭಕ್ತವರ್ಗೆಮಹೋ
ದ್ಧತೆ | ಪ್ರತ್ಯಯೆಸಮ್ಯಗುದಿತೇಸ್ತುವತ್ಯಾರಾಧ್ಯಶೇಖರೇ ||೨೫|| ಭೃತ್ಯತ್ವೇ
ಬಿರುದೇಸತ್ಯೇವಿಸ್ಮಯೇಚಚಕಾಸತಿ | ಅಕ್ಷೀಣಕೀರ್ತಿರ್ನಿಷ್ಪಾಪಮೂರ್ತಿರು
ತ್ಥಾಯತತ್ಕ್ಷಣಾತ್ ||೨೬|| ಚಕಾರಭಕ್ತವರ್ಗಸ್ಯತದಾಸಮ್ಯಕ್ಪ್ರದಕ್ಷಿಣಂ|
ಸಂಚಾರಂಪೂರ್ವಭಕ್ತಾನಾಂವ್ಯಕ್ತಂಸಂದರ್ಶಯನ್ನಿವ ||೨೭|| ಶಿವಪ್ರೀತಿದ
ಸಂಚಾರಏವಮಿತ್ಯಾದಿಶನ್ನಿವ | ಅದ್ವೈತಿಮಸ್ತಕಾಕ್ರಾಂತಿಸಂಚಾರಂದರ್ಶ

---

ನನ್ನು ಕುರಿತು ಭಕ್ತರ ಸಮೂಹಕ್ಕೆಲ್ಲಾ ನಮಸ್ಕಾರವನ್ನು ಮಾಡುವುದಕ್ಕೆ ಆಜ್ಞಾ
ಪಿಸಿದನು. ಆಗ ನೋಡುವುದಕ್ಕೆ ಬಂದಿದ್ದ ಜನರೆಲ್ಲ ನಮಸ್ಕರಿಸುತ್ತಿರಲಾಗಿ, ಹೃದ
ಯದೊಳಗೆ ಶಿವಭಕ್ತಿ ಪ್ರಾಶಸ್ತ್ಯದ ನಿಶ್ಚಯಜ್ಞಾನವು ಅಧಿಕವಾಗಲಾಗಿ ||೨೧||
ಶಿವನಲ್ಲಿ ದಯಾಭರಿತವಾದ ಮುಗುಳ್ನಗೆ ಉಂಟಾಗಲಾಗಿ, ಆಕಾಶದಲ್ಲಿ ಪ್ರಮಥರು
ಗಳು ಸಂತೋಷದಿಂದ ನೋಡುತ್ತಿರಲಾಗಿ ||೨೨|| ಎಲ್ಲಾ ಕಡೆಯೂ ನಮ್ರತೆಯೂ
ಆಶ್ಚರ್ಯವೂ ಮನೋನೈರ್ಮಲ್ಯವೂ ಉಂಟಾಗಲಾಗಿ, ಅಧಿಕವಾದ ಉದಾರತನ
ದಿಂದುಬ್ಬಿದ ವೀರತ್ವವು ಪ್ರಕಾಶಿಸಲಾಗಿ, ||೨೩|| ಧೈರ್ಯವು ಮಹತ್ವದಿಂದ
ವಿಸ್ತಾರವಾಗಲಾಗಿ, ಶೈವ ತೇಜಸ್ಸು ಬೆಳಗಲಾಗಿ, ಅನ್ಯಮತಸ್ಥರ ಸಮೂಹವು ಓಡಿ
ಹೋಗಲಾಗಿ, ಸಮಾಜಬಂಧುಗಳು ಸಂತೋಷಪಡಲಾಗಿ ||೨೪|| ದೇವತಾಸಮೂ
ಹವು ಭಕ್ತಪ್ರಾಶಸ್ತ್ಯವನ್ನು ಕಂಡು ಭಯಪಡಲಾಗಿ, ಭಕ್ತಸಮೂಹವು ಉಬ್ಬೇರ
ಲಾಗಿ, ಶಿವಭಕ್ತಿಯಲ್ಲಿ ವಿಶ್ವಾಸವು ಚೆನ್ನಾಗಿ ಹುಟ್ಟಲಾಗಿ, ಆರಾಧ್ಯವರ್ಯನಾದ
ಪಂಡಿತೇಂದ್ರನು ಸ್ತೋತ್ರಮಾಡುತ್ತಿರಲಾಗಿ ||೨೫|| ಭೃತ್ಯತ್ವವೂ ಬಿರುದೂ ಸತ್ಯವೂ
ಆಶ್ಚರ್ಯವೂ ಕೂಡ ಪ್ರಕಾಶಿಸುತ್ತಿರಲಾಗಿ, ಅಳಿವಿಲ್ಲದಕೀರ್ತಿಯುಳ್ಳವನೂ, ದುರಿತಸಂ
ಗವಿಲ್ಲದ ದೇಹಿಯೂ ಆದ ಮಹಾದೇವಾರ್ಯನು ಕೂಡಲೇ ಎದ್ದು ||೨೬|| ಪೂರ್ವದ
ಭಕ್ತರ ಆಚರಣೆಗಳನ್ನು ಪ್ರಕಟವಾಗಿ ಹೀಗೆ ನಡೆದು ತೋರಿಸುತ್ತಿರುವನೋ||೨೭||
ಶಿವನಿಗೆ ಪ್ರೀತಿಯನ್ನುಂಟುಮಾಡುವ ನಡೆಯು ಹೀಗಿರಬೇಕೆಂದು ಬೋಧಿಸುವನೋ
ಎಂಬಂತೆಯೂ, ಕೇವಲಾದ್ವೈತಿಗಳ ಮಸ್ತಕಾ ಕ್ರಮಣ ಸಂಚಾರವು ಹೀಗಾಯಿ

ಯಸ್ಸಿವ ॥೭೮॥ ಕರ್ಮಸತ್ಕ್ರರಣಾವೃತ್ತಿರೇವಮಿತ್ಯಾದಿಶನ್ನಿವ । ಪಾದೇನಾಹ
ತ್ಯಸಂಸಾರವಾರ್ಧಿಸಂಚರಣಂನೃಣಾಂ ॥೭೯॥ ಶಂಸನ್ನಿವಮಹಾದೇವಶ್ಶಿವಪಾ
ದಾಬ್ಜಷಟ್ಪದಃ । ಪಾದೌಯಥಾಪೂರ್ವಮವಸ್ಥಿತೌತಸ್ಯಮಹಾದ್ಭುತಂ ॥೮೦॥
ಅಶುಷ್ಕಪಾರ್ಷ್ಣೀನಿರ್ವಕ್ರಾವಸುಚ್ಛೂನೌಪರಸ್ಪರಂ । ಅದೀರ್ಘಾವನತಿಹ್ರ
ಸ್ವಾವಶ್ಲಥಾವನಸೃಗ್ವೃತೌ ॥೮೧॥ ಅನಾಕುಂಚಿತನಾಡೀಕಾವಸ್ಥೂಲಾವಕೃ
ಶೌತಥಾ । ಅರೋಮಪಜೀರ್ಣತೌತ್ಯಕ್ತರೇಖೌಭೂತ್ವಾಮನೋಹರೌ ॥೮೨॥
ತತೋಭಕ್ತಗಣಾಸ್ಸರ್ವೇಪ್ರೋಚುಸ್ಸಂಪ್ರೀತಮಾನಸಾಃ । ದೃಢವ್ರತಸ್ಸಮಾ
ಸನ್ನೇಕಾರ್ಯೇಪ್ರಾಣಪರಾಙ್ಮುಖಃ ॥೮೩॥ ಚಿಚ್ಛೇದಪಾದಾವೇತಸ್ಯವೈಭವಂಜಗ
ತೀತಳೇ । ಕೇನವರ್ಣಯಿತುಂಶಕ್ಯಂಪರಮಾದ್ಭುತಶಾಲಿನಃ ॥೮೪॥ ಕಿಂಚಚ್ಛಿ
ನ್ನಾವಸ್ಯಮಹಾದೇವಸ್ಯಚರಣೌಶುಭೌ । ಸ್ವಕೀಯಭಕ್ತಿಮಾಹಾತ್ಮ್ಯಾತ್ಪು
ನರ್ಲಬ್ಧವತಶ್ಶಿವಾತ್ ॥೮೫॥ ಅಸ್ಯಶ್ರೀಪಂಡಿತೇಂದ್ರಸ್ಯಮಹಿಮಾಪರಮೋ

---

ತೆಂದು ತೋರಿಸುವನಂತೆಯೂ ॥೭೮॥ ಕರ್ಮಸಹ್ಕಾರ ವ್ಯಾಪಾರವು ಈರೀತಿಯಾ
ದುವೆಂದು ಉಪದೇಶಿಸುವನಂತೆಯೂ, ಕಾಲಿನಿಂದೊದೆದು ಸಂಸಾರಸಾಗರದಲ್ಲಿ
ಹೀಗೆ ಸಂಚರಿಸಬೇಕೆಂದು ಮಾನವರಿಗೆ ॥೭೯॥ ಬೋಧಿಸುವವನಂತೆಯೂ, ಶಿವಪಾ
ದ ಕಮಲಕ್ಕೆ ಭೃಂಗಸ್ವರೂಪನಾದ ಮಹಾದೇವಾರ್ಯನು ಆಗ ಭಕ್ತರ ಸಮೂಹ
ವನ್ನು ಚೆನ್ನಾಗಿ ಪ್ರದಕ್ಷಿಣಮಾಡಿದನು ॥೮೦॥ ಅವು ಒಣಗದ ಹರಡುಗಳುಳ್ಳವುಗ
ಳಾಗಿಯೂ, ಡೊಂಕಾಗದುವುಗಳಾಗಿಯೂ ಒಂದಕ್ಕೊಂದು ಹೆಚ್ಚು ಕಡಿಮೆಯಾಗಿ
ಬಿದ್ದುಕೊಂಡಿರದೆಯೂ, ಉದ್ದನಾಗದೆಯೂ, ಬಲು ಚಿಕ್ಕವಾಗದೆಯೂ, ಶಿಥಿಲವಾ
ಗದೆಯೂ, ರಕ್ತಲೇಪಿತವಾಗದೆಯೂ ॥೮೧॥ ಸೇದಿಹೋಗದ ನರಗಳುಳ್ಳವಾಗಿ
ಯೂ, ದಪ್ಪವಾಗದೆಯೂ, ಒಣಗಿಹೋಗದೆಯೂ, ರೋಮಗಳುದುರಿಹೋಗದೆ
ಯೂ, ಸುಕ್ಕು ಗೆರೆ ಕೂಡ ಇಲ್ಲದೆಯೂ, ಮನೋಹರವಾಗಿದ್ದುವು. ಬಳಿಕ
ಭಕ್ತಗಣಂಗಳೆಲ್ಲರೂ ನೋಡಿ, ಸಂತುಷ್ಟಮನಸ್ಕರಾಗಿ ಹೀಗೆ ಹೇಳಿದರು—ಕಾರ್ಯ
ವು ತಟಸ್ಥವಾಗಲಾಗಿ ಸ್ಥಿರವ್ರತನಾದ ಈ ಮಹಾದೇವಾರ್ಯನು ತನ್ನ ಪ್ರಾಣಾಭಿ
ಮಾನವನ್ನು ಕೂಡ ತೊರೆದವನಾಗಿ ॥೮೩॥ ಪಾದಗಳನ್ನು ಕತ್ತರಿಸಿಹಾಕಿದನು.
ಪರಮಾಶ್ಚರ್ಯಭರಿತನಾದ ಈತನ ವೈಭವವನ್ನು ವರ್ಣಿಸುವುದಕ್ಕೆ ಜಗತ್ತಿನಲ್ಲಿ ಯಾ
ರಿಂದಶಕ್ಯವಾದೀತು? ॥೮೪॥ ಮತ್ತು ಈ ಮಹಾದೇವಾರ್ಯನ ಕತ್ತರಿಸಲ್ಪಟ್ಟ ಮಂ
ಗಳಕರವಾದ ಪಾದಗಳನ್ನು ತನ್ನ ಭಕ್ತಿಮಹತ್ವದಿಂದ ಪುನಃಪರಶಿವನದೆಸೆಯಿಂದ ಪ
ಡೆದ ಈ ಪಂಡಿತೇಂದ್ರನ ಮಹತ್ವವು ಅತ್ಯುತ್ಕೃಷ್ಟವಾದುದು. ಇದನ್ನು ತಿಳಿಯುವುದ

ನ್ನತಃ । ಶಿವಂವಿನಾಪರಿಜ್ಞಾತುಮಿತರೈಶ್ಶಕ್ಯತೇಕಥಂ ॥೮೬॥

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೆ
ಪುರಾತನ ಪ್ರಕರಣೇ ತತ್ಪಂಡಿತಾರಾಧ್ಯವರ್ಯೇಣ ವೆಲ್ಲ ಕೊಂಡ
ಮಹಾದೇವಪಾದಪ್ರದಾನಕಥನಂ ನಾಮ
ಪ್ರಥಮೋಽಧ್ಯಾಯಃ.

## ಅಥ ದ್ವಿತೀಯೋಽಧ್ಯಾಯಃ.

(ಕಲಿಕಂಬಗಣೇಶಚರಿತಂ)

ತ್ರಿಷಷ್ಟಿಗಣವರ್ಯೇಷುವರ್ಣನೀಯೋರುವೈಭವಃ । ಅನಘಃಕಲಿಕಂಬಾಖ್ಯಃಪುರಾಮಾಹೇಶ್ವರೋಽಭವತ್ ॥೧॥ ಸಮುದಾಗ್ರಹಮಾಯಾತಿಜಂಗ

---

ಕ್ಕೆ ಪರಶಿವನಿಗೆ ಹೊರತು ಇತರರಿಗೆ ಹೇಗೆ ಶಕ್ಯವು ॥೮೬॥

ಎಂಬಿಲ್ಲಿಗೆ......ಪಂಡಿತಾರಾಧ್ಯ ಚರಿತಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತ
ವಾದ ಭಾವಮಂಜರಿಯೆಂಬ ಕನ್ನಡ ಟಿಪ್ಪಣದಲ್ಲಿ ಪುರಾತನ ಪ್ರಕರಣ
ದೊಳಗೆ ವೆಲ್ಲಕೊಂಡ ಮಹಾದೇವಾರ್ಯನಿಗೆ ಶ್ರೀಮತ್ಪಂಡಿತಾ
ರಾಧ್ಯನು ಪಾದಪ್ರದಾನವನ್ನು ಮಾಡಿದ ಕಥೆಯನ್ನು
ವಿವರಿಸುವ ೧ ನೆಯ ಅಧ್ಯಾಯವು ಮುಗಿದುದು.

## ೨ ನೆಯ ಅಧ್ಯಾಯವು.

(ಕಲಿಕಂಬ ಗಣನಾಥನ ಕಥೆ)

ಬಳಿಕ ಅಲ್ಲಿದ್ದ ಭಕ್ತವರ್ಯರೆಲ್ಲರೂ ಪೂರ್ವದಲ್ಲಿ ಇಂಥ ಭಕ್ತಿಮಹತ್ತ್ವವನ್ನು ಪ್ರಕಾಶಪಡಿಸಿದ ಶರಣರ ಚರಿತವನ್ನು ಸ್ಮರಿಸಿಕೊಂಡು ಹೇಳುತ್ತಾರೆ. ಹೇಗೆಂದರೆ-

ಮಸ್ತತ್ಪದಾಂಬುಜೇ । ಪ್ರಕ್ಷಾಳ್ಯ ತತ್ಪಾದತೋಯಮಪೀತ್ವಾ ಸಕಲಾಃ ಕ್ರಿ
ಯಾಃ ॥೨॥ ನಿತ್ಯಂ ನ ಕುರುತೇ ಶಶ್ವಜ್ಜಂಗಮಾರ್ಚನತತ್ಪರಃ । ಭಕ್ತಪಾದೋ
ದಕಂ ಶಂಭುಪಾದಾಬ್ಜಸಲಿಲಾಧಿಕಂ ॥೩॥ ಮಲತ್ರಯಾಪಹರಣಂ ಭವರೋಗ
ಮಹೌಷಧಂ । ಹರತ್ಯಶೇಷಪಾಪಾನಿ ಪುಣ್ಯಾನಾಮಾಲಯಃ ಪರಃ ॥೪॥ ಕಾರ
ಕಂ ಸರ್ವರಕ್ಷಾಣಾಂ ಪ್ರಭವಸ್ಸರ್ವಸಂಪದಾಂ । ದೃಷ್ಟಾದೃಷ್ಟಫಲಪ್ರಾಪ್ತಿ
ಸಾಧನಂ ಪರಿನಿಶ್ಚಿತಂ ॥೫॥ ಜನನೀ ಸರ್ವತೀರ್ಥಾನಾಂ ಮಹಿಮ್ನಾಂ ಮೂಲ
ಕಾರಣಂ । ವಿಹಾಯಾಶೇಷತೀರ್ಥಾಂಬುಮಜ್ಜನಾಸ್ಥಾಂ ದೃತಾ ಜನಾಃ ॥೬॥
ಕುರುಧ್ವಂ ಭಕ್ತಪಾದಾಂಬುಸೇವನಂ ಪಾವನೋದಯಂ । ಯತಸ್ತತ್ತೀರ್ಥ
ಗಮನಪ್ರಯಾಸೋಽತ್ಯತಿದುಸ್ಸಹಃ ॥೭॥ ಸ್ವರ್ಗಾದ್ಯೇವ ಹಿ ಸಂಪ್ರೋಕ್ತಂ ಫ
ಲಂ ತಸ್ಯ ಮಹೀತಳೇ । ನಾಯಾಸೋ ಮುಕ್ತಿರಾಯಾತಿ ಭಕ್ತಪಾದಾಂಬುಸೇವ
ನಾತ್ ॥೮॥ ಅಭೂತ್ಕ್ಷೀರೋದಕನ್ಯಾಯೋ ವಿಧ್ವಸ್ತಃ ಪೃಥಿವೀತಳೇ। ಕ್ಷೀಯ

---

ಅರವತ್ತು ಮೂರು ಮಂದಿ ಪುರಾತನಶ್ರೇಷ್ಠರಲ್ಲಿ ವರ್ಣಿಸುವುದಕ್ಕೆ ಯೋಗ್ಯವಾದ ಮ
ಹಾವೈಭವವುಳ್ಳವನೂ, ನಿರ್ದುಷ್ಟನೂ ಆದ ಕಲಿಕಂಬನೆಂಬ ಮಾಹೇಶ್ವರನೊಬ್ಬನು
ಪೂರ್ವದಲ್ಲಿದ್ದನು ॥೧॥ ಅವನು ತನ್ನ ಮನೆಗೆ ಯಾವಾಗ ಜಂಗಮನು ಬಂದರೂ ಆತನ
ಪಾದಕಮಲಗಳನ್ನು ತೊಳೆದು ಆ ಪಾದೋದಕವನ್ನು ಪಾನಮಾಡದೆ ಮನೆಗೆಲಸಗಳ
ನ್ನು ಮಾಡುತ್ತಿರಲಿಲ್ಲ. ಹೀಗೆ ಪ್ರತಿದಿನವೂ ಜಂಗಮಪೂಜೆಯನ್ನು ಮಾಡುವುದರಲ್ಲಾಸ
ಕ್ತನಾಗಿ "ಶಿವಭಕ್ತನ ಪಾದೋದಕವು ಶಿವಪಾದೋದಕಕ್ಕಿಂತಲೂ ಶ್ರೇಷ್ಠವಾದು
ದು ॥೩॥ ಅದು ಆಣವಾದಿ ಮಲತ್ರಯವನ್ನು ಪರಿಹರಿಸುವುದು, ಜನನ ಮರಣಾತ್ಮಕ
ಭವರೋಗಕ್ಕೆ ಶ್ರೇಷ್ಠವಾದೌಷಧವು ಅದು ಸಕಲ ಪಾಪಗಳನ್ನೂ ನಾಶಗೊಳಿಸು
ವುದು. ಪುಣ್ಯಗಳಿಗೆಲ್ಲ ಉತ್ತಮವಾದ ಮನೆಯು ॥೪॥ ಸಕಲವಿಧದ ಸಂರಕ್ಷಣೆಯ
ನ್ನು ಮಾಡತಕ್ಕದು. ಎಲ್ಲ ತರದ ಸಂಪತ್ತುಗಳನ್ನೂ ಉಂಟುಮಾಡತಕ್ಕದು. ಕಂ
ಡಕಾಣದ ಫಲಗಳನ್ನೆಲ್ಲ ದೊರಕಿಸಿಕೊಡತಕ್ಕದೆಂದು ನಿರ್ಧರವಾಗಿತಕ್ಕದು ॥೫॥
ಸಕಲ ತೀರ್ಥಗಳಿಗೂ ಮಾತೆಯು. ಮಹತ್ವಗಳಿಗೆಲ್ಲ ಆದಿಕಾರಣವು. ಎಲೈ ಜನರೆ!
ಇತರ ತೀರ್ಥಗಳಲ್ಲೆಲ್ಲ ಸ್ನಾನಮಾಡಬೇಕೆಂಬ ಬಯಕೆಯನ್ನು ಬಿಟ್ಟು ಪರಿಶುದ್ಧವಾದ
ಆವಿರ್ಭಾವವುಳ್ಳ ಶಿವಭಕ್ತ ಪಾದತೀರ್ಥವನ್ನು ಸೇವಿಸಿರಿ. ಏಕೆಂದರೆ—ಆ ತೀರ್ಥಗಳಿ
ಗೆಲ್ಲ ಹೋಗುವ ಆಯಾಸವು ಅತ್ಯಂತವಾಗಿ ಸಹಿಸಲಶಕ್ಯವು ॥೭॥ ಭೂಮಿಯಲ್ಲಿ ಆ ತೀ
ರ್ಥಗಳ ಸೇವನೆಗೆ ಸ್ವರ್ಗಾದಿಸುಖಮಾತ್ರವೇ ಫಲವೆಂದು ಹೇಳಲ್ಪಟ್ಟಿದೆಯಷ್ಟೆ. ಈ
ಭಕ್ತಪಾದತೀರ್ಥವನ್ನು ಸೇವನೆ ಮಾಡುವುದರಿಂದಲಾದರೋ ಮುಕ್ತಿಯು ಲಭಿಸುತ್ತದೆ
ಆಯಾಸವು ಇಲ್ಲ. ॥೮॥ ಲೋಕದಲ್ಲಿ ಹಾಲು ತನ್ನನ್ನು ಸೇರಿದ ನೀರಿನ ಸ್ವರೂಪವನ್ನು

ತೇಜನನೀಸ್ತನ್ಯಂಭಕ್ತಪಾದಾಂಬುನಾಯತಃ ||೯|| ಮಹೇಶಭಕ್ತಶ್ರೀಪಾದಜಲಮೇವಾಧಿಕಂತತಃ | ಪ್ರಕ್ಷಾಳಿತಮಹಾದೇವಭಕ್ತಪಾದೋದಕಂಶುಭಂ || ಉದೀರಯಂತಿಶ್ರುತಯಶ್ಶಿವತೀರ್ಥಮಿತಿಸ್ಫುಟಂ | ತಸ್ಮಾದೀಶ್ವರಸದ್ಭಕ್ತವರಪಾದೋದಕಂಶುಭಂ||೧೧|| ಧನ್ಯಂಕರೋತಿಯಂಯೇನನಿಪೀತಮತಿಭಕ್ತಿತಃ| ಯಸ್ಮೈದದಾತಿಹೃದ್ಯತ್ವಂಯಸ್ಮಾದುನ್ನತಿಮಾಪ್ನುಯಾತ್ ||೧೨|| ಯಸ್ಮೈಭೀಷ್ಟಪ್ರದಂಯಸ್ಮಿನ್ದೃಷ್ಟಂಸದಾಭ್ರಜತೆಸ್ಥಿತಂ| ಏವಂವಿಶಿಷ್ಟಸ್ಸಶಿವಶ್ಶಿವಸ್ತಮಧಿಗಚ್ಛತಿ ||೧೩|| ಗೃಹೀತಸ್ತೇನತಸ್ಮೈಸಂರಾಜತೇಭುವಿಸಂತತಂ | ತಸ್ಮಾದ್ಬದ್ಧೋಭವೇತ್ತಸ್ಯನಿಘ್ನಸ್ತಸ್ಮಿನ್ಪ್ರತಿಷ್ಠಿತಃ ||೧೪|| ಕಿಂತತ್ಪಾದಾಂಬುನಾತುಲ್ಯಂತತ್ಕಥಂವರ್ಣ್ಯತೇಮಯಾ | ಪುಣ್ಯಾನಾಂಲಕ್ಷ್ಯಮಿದಮಿತ್ಯಾಲಪಂತ್ಸ

---

ಅಳಿಸುವುದೆಂಬುದಾಗಿರುವ ನ್ಯಾಯವು ಧ್ವಂಸಗೊಳಿಸಲ್ಪಟ್ಟಿತು. ಏಕೆಂದರೆ— ಶಿವಭಕ್ತರ ಪಾದೋದಕದಿಂದ ಮಾತೆಯ ಸ್ತನ್ಯವೇ ಇಲ್ಲದಂತಾಗಿ ಹೋಗುತ್ತದೆ. (ಎಂದರೆ ಶಿವಪಾದೋದಕಸೇವಕನಿಗೆ ಪುನಃ ತಾಯ ಮೊಲೆಹಾಲನ್ನು ಕುಡಿಯುವ ಜನ್ಮವೇ ಇಲ್ಲವೆಂದು ಭಾವ.) ಆದುದರಿಂದ ಶಿವಭಕ್ತರ ಪಾದೋದಕವೇ ಉತ್ಕೃಷ್ಟವಾದುದು. ಶಿವಭಕ್ತರ ಪಾದವನ್ನು ತೊಳೆದ ತೀರ್ಥವು ಮಂಗಳಮಯವಾದುದು ||೧೦|| ಶಿವತೀರ್ಥವು ಉತ್ತಮವಾದುದೆಂದು ವೇದಗಳು ಕೂಡ ಸ್ಪಷ್ಟವಾಗಿ ಉದ್ಘೋಷಿಸುವುವು. ಆದುದರಿಂದ ಶಿವನ ಭಕ್ತರ ಪಾದೋದಕವು ಮಂಗಳಮಯವಾದುದು ||೧೧|| ಈ ಪಾದೋದಕವು ಯಾವನನ್ನು ಕೃತಾರ್ಥನನ್ನಾಗಿ ಮಾಡುತ್ತದೆಯೋ, ಯಾವನಿಂದ ಅತ್ಯಂತ ಭಕ್ತಿಪೂರ್ವಕವಾಗಿ ಇದು ಪಾನಮಾಡಲ್ಪಡುತ್ತದೆಯೋ, ಯಾವನಿಗೋಸ್ಕರ ಇದು ಮನೋಹರತ್ವವನ್ನು ಕೊಡುತ್ತದೋ, ಯಾವ ಶಿವಭಕ್ತನ ದೆಸೆಯಿಂದ ಇದು ಮಹತ್ವವನ್ನು ಪಡೆಯುವುದೋ, ಯಾವನಿಗೆ ಇದು ಇಷ್ಟಾರ್ಥವನ್ನು ಕೊಡುವುದೋ, ಯಾವನಲ್ಲಿ ಇದು ಕಣ್ಣಿಗೆ ಕಾಣಿಸುತ್ತ ಸ್ಥಿರವಾಗಿ ನೆಲಸಿರುವುದೋ, ಈ ಪ್ರಕಾರವಾದ ಧರ್ಮದಿಂದ ಕೂಡಿದ ಆತನು ಪರಶಿವ ಸ್ವರೂಪನು. ಶಿವನು ಆತನನ್ನು ಹೊಂದಿ ಸಹೆಯುತ್ತಾನೆ ||೧೩|| ಶಿವನು ಆ ಭಕ್ತನಿಂದ ಹಿಡಿದುಕೊಳ್ಳಲ್ಪಟ್ಟಿರುತ್ತಾನೆ ಆ ಭಕ್ತನಿಗೋಸ್ಕರ ಭೂಮಿಯಲ್ಲಿ ಯಾವಾಗಲೂ ವಿರಾಜಿಸುತ್ತಿರುತ್ತಾನೆ. ಆ ಭಕ್ತನ ದೆಸೆಯಿಂದ ಮಾಮಾಬದ್ಧನೂ ಆಗಿರುತ್ತಾನೆ. ಆ ಭಕ್ತನಿಗೆ ಅಧೀನನೂ ಆಗಿರುತ್ತಾನೆ. ಆ ಭಕ್ತನಲ್ಲಿ ನೆಲಸಿರುತ್ತಾನೆ ||೧೪|| ಹೀಗಿರುವಲ್ಲಿ ಅಂತಹ ಭಕ್ತನ ಪಾದೋದಕಕ್ಕೆ ಸಮನಾದುದಾವುದು ? ಅದನ್ನು ನಾನು ಹೇಗೆ ವರ್ಣಿಸಲಿ ? ಪರಿಶುದ್ಧಾತ್ಮರಾದವರಿಗೆ ಈ ಶಿವಭಕ್ತಪಾದೋದಕವೇ ಲಕ್ಷ್ಯವಾದುದು." ಎಂಬುದಾಗಿ ಆಗಣ ಶ್ರೇಷ್ಠನಾದ ಕಲಿ

ಗಣಾಗ್ರಣೀಃ ‖೧೫‖ ಸದ್ಭಕ್ತಪಾದಾಂಬುಸೇವಾವ್ರತಂಕೃತ್ವಾಸದಾವಸತ್ । ಕದಾಚಿದ್ಭಕ್ತಸಂದೋಹೇಸಮಾಯಾತೇಽತಿಭಕ್ತಿತಃ ‖೧೬‖ ಪದಸೇಚನವೇಳಾಯಾಂತದ್ಬ್ರುಜಿಷ್ಯಾತನೂಭವಃ । ಆಗತ್ಯಸಂಕ್ಷಾಳನಾಯಸ್ರಸಾರಿತಪದೋಽಭವತ್ ‖೧೭‖ ಭಾವೇತಮಪಿಮನ್ವಾನೆಶಂಕರಂಭಕ್ತಪುಂಗವೇ । ಪ್ರಕ್ಷಾಳಯಿತುಮುದ್ಯುಕ್ತೇ ಕುರ್ವತ್ಯಂಬುಪ್ರತಿಸ್ಸೃತಿಂ ‖೧೮‖ ತದ್ಭಾರ್ಯಾಸಮ್ಯುಗ್ವೀಕ್ಷ್ಯಸಾಭಿಜ್ಞಾಮಿದಮಾಪತಂ । ಅಸ್ಮದ್ದಾಸ್ಯಾಸ್ಸುರ್ಯಮಾಯಾಸ್ತನುಜೋಽಯಂನಸಂಶಯಃ ‖೧೯‖ ಕರ್ತುಂಕರ್ಮಾಕ್ಷಮೋಗೇಹೇಕೃತಮಸ್ತಕಮುಂಡನಃ । ಮಲ್ಲಾಹ್ವಯಸ್ಸಮಾಯಾತೋಭಕ್ತೋಽಮಾವೀಕ್ಷ್ಯತಾಮಯಂ ‖೨೦‖ ಭ್ರಾಂತೋಭೂತ್ವಾಕಥಂಪಾದಾವೇತೌಪ್ರಕ್ಷಾಳಯಸ್ಯಹೋ । ಮಲ್ಲಸ್ಯೈತಸ್ಯಚರಣೌಕಿಮುಭಕ್ತಿಸಮಾಶ್ರಯೌ ‖ ೨೧ ‖ ಅಥವೇಹಪರಪ್ರಾಪ್ತಿಮೂಲಂಮಾವದತತ್ವತಃ । ಸಶರೀರಶ್ಶಿವಪುರಂಕಿಂಚೋಳಇವಯಾಸ್ಯಸಿ ‖೨೨‖ ಕಿಂಗಮಿಷ್ಯಸಿಕೈಲಾಸಂಸಭಾರ್ಯೋಗುಂಡಯೋಯಥಾ । ಸಿರಿ

---

ಕಂಬನು ಹೇಳುವವನಾಗಿ ‖೧೫‖ ಯಾವಾಗಲೂ ಉತ್ತಮಭಕ್ತರ ಪಾದೋದಕವನ್ನು ಸೇವಿಸುವ ವ್ರತವನ್ನು ಆಚರಿಸುತ್ತಲಿದ್ದನು. ಒಂದಾನೊಂದು ಕಾಲದಲ್ಲಿ ಭಕ್ತರ ಸಮೂಹವು ಬರಲಾಗಿ, ಈತನು ಅತ್ಯಂತ ಭಕ್ತಿಯಿಂದ ‖೧೬‖ ಅವರ ಪಾದಪ್ರಕ್ಷಾಳನೆಯನ್ನು ಮಾಡುತ್ತಿರುವ ಕಾಲದಲ್ಲಿ ಅವನ ಗೌಡಿಯ ಮಗನು ಬಂದು ತಾನೂ ಪಾದವನ್ನು ತೊಳೆಯಿಸಿಕೊಳ್ಳುವುದಕ್ಕಾಗಿ ಕಾಲನ್ನು ಚಾಚಿದವನಾದನು ‖೧೭‖ ಕಲಿಕಂಬ ಭಕ್ತೋತ್ತಮನಾದರೂ ಮನಸ್ಸಿನಲ್ಲಿ ಆತನನ್ನೂ ಕೂಡ ಶಂಕರನನ್ನಾಗಿಯೇ ತಿಳಿದುಕೊಂಡವನಾಗಿ ಪಾದವನ್ನು ತೊಳೆಯುವುದಕ್ಕೆ ಉದ್ಯುಗಿಸಲು, ನೀರನ್ನು ಕೊಡುತ್ತಿದ್ದ ಆತನ ಪತ್ನಿಯು ಚೆನ್ನಾಗಿ ನೋಡಿ, ತಿಳಿದುಕೊಂಡವಳ ಹಾಗೆ ತನ್ನ ಗಂಡನನ್ನು ಕುರಿತು ಹೀಗೆ ಹೇಳಿದಳು—ಇವನು ನಮ್ಮ ಮನೆಯ ಗೌಡಿಯಾದ ಸಿರಿಯಮ್ಮನ ಮಗನು ; ಸಂದೇಹವಿಲ್ಲ ‖ ೧೮ ‖ ಮಲ್ಲನೆಂಬ ಇವನು ಮನೆಯಲ್ಲಿ ಕೆಲಸ ಮಾಡಲಾರದೆ ತಲೆಯನ್ನು ಬೋಳಿಸಿಕೊಂಡು, ಬಂದಿರುವನು. ಇವನು ಸದ್ಭಕ್ತನೆ? ನೋಡು ‖೨೦‖ ಆಶ್ಚರ್ಯ! ಸದ್ಭಕ್ತನೆಂಬ ಭ್ರಾಂತಿಯಿಂದ ಈತನ ಕಾಲ್ಗಳನ್ನು ಹೇಗೆ ತೊಳೆಯುವೆ ? ಈ ಮಲ್ಲನ ಕಾಲ್ಗಳು ಭಕ್ತಿಯನ್ನು ಸ್ವೀಕರಿಸುವುದಕ್ಕೆ ಅರ್ಹಗಳೆ ? ‖೨೧‖ ಅಥವಾ ಇಹಪರಗತಿಗಳನ್ನು ಕೊಡುವುದಕ್ಕೆ ಸಾಧಕಗಳೆ ? ನಿಜವಾಗಿ ಹೇಳು ! ನೀನು ಚೋಳಭೂಪಾಲನಂತೆ ಶರೀರಸಮೇತನಾಗಿ ಕೈಲಾಸಕ್ಕೆ ಹೋಗುವೆಯಾ ? ‖೨೨‖ ಗುಂಡಯ್ಯನಂತೆ ಪತ್ನೀಸಮೇತನಾಗಿ ಕೈಲಾಸಕ್ಕೇನಾದರೂ ಹೋಗುವೆಯಾ ? ದೃಢವ್ರತವುಳ್ಳ ಸಿರಿಯಾಳ

ಯಥಾಳ ಇವೇಶಾನಪುರೀಂಕಿಮುಪಯಾಸ್ಯಸಿ ॥೨೩॥ ಸಪ್ತವೀಥೀಜನಾಕೀ
ರ್ಣಸ್ತವನೀಯನಿಜವ್ರತಃ । ಮಹಾದೇವಪುರೀಂಸ್ವೀಯಪರಿವಾರಸಮನ್ವಿ
ತಃ ॥೨೪॥ ಚಾರಮೇಂದ್ರಇವೋನ್ನಿದ್ರಸ್ಸಮುಪೇಷ್ಯಸಿಕಿಂಜವಾತ್ । ಏತೇ
ನೈವಹಿವಿಜ್ಞಾತಾಭಕ್ತಿರ್ಭವತಿಕಿಂತವ ॥೨೫॥ ನಹಸಂತಿಕಥಂಲೋಕಾಸ್ತ
ವವೀಕ್ಷ್ಯೇದೃಶೀಂಕ್ರಿಯಾಂ । ನಮುಂಡಯಂತಿವಾಕೇಶಾನ್ಪ್ರಸೃತಾರ್ಥಾ
ಯನಾಪಿತಾಃ ॥೨೬॥ ಅಂಗಣಾವಸರೇತ್ಯರ್ಥಂನಾಸ್ತಿವಾಭಸ್ಮಸರ್ವತಃ । ತಾ
ವತಾಜಂಗಮಸ್ಸ್ವೇಚ್ಛೇತ್ಕಿಂಪ್ರಯಾಸೇನಭೂಯಸಾ ॥೨೭॥ ಪಾದಕ್ಷಾಳ
ನಮೇತಸ್ಯಕ್ರಿಯತೇಯದಿಸರ್ವಶಃ । ಸಮಾಯಾಂತೀತರೇಮೂಢಾಬಹುಭಿಃ
ಕಿಂಪ್ರಜಲ್ಪಿತೈಃ ॥೨೮॥ ತವಪಾದಕ್ಷಾಳಕಸ್ಯಪ್ರಕ್ಷಾಳ್ಯೇತೇಪದೇಕಥಂ । ಪ್ರ
ಕ್ಷಾಳಯತ್ವಮೇವಾಹಂನದಾಸ್ಯಾಮ್ಯುದಕಂತವ ॥೨೯॥ ಹಸಂತಿಬಾಂಧವಾಸ್ಸ
ತ್ಯಮಿತಿಕಾಂಚನಪಾತ್ರಿಕಾಂ । ಭುವಿಸಂಸ್ಥಾಪಯಾಮಾಸಸಾತದಾತಿಜಿಗುಪ್ಸಿ
ತಾ ॥ ಶ್ರುತ್ವಾಸತಾನಿವಾಕ್ಯಾನಿವದಂಛಿವಶಿವೇತಿಚ । ಪಿಧಾಯಕರ್ಣಯುಗಳಮು
ವಾಚೇದಂಸ್ವಕಾಮಿನೀಂ ॥೩೦॥ ನಪಶ್ಯಸಿಕಥಂಮೂಢೇಸಾಕ್ಷಾದೀಶ್ವರವಿಗ್ರ

---

ಸೆಟ್ಟಿಯಂತೆ ಏಳುಕೇರಿಯ ಜನರಿಂದ ಕೂಡಿ ಕೈಲಾಸಕ್ಕೆ ಹೋಗುವೆಯಾ? ಚಾರಮರಾ
ಜನು ನನ್ನ ಪರಿವಾರವೊಡನೆಲ್ಲ ಶಿವಪುರಕ್ಕೆ ಹೋದಂತೆ ನೀನೇನಾದರೂ ಬೇಗನೆ ಹೋಗು
ವೆಯಾ? ಇದರಿಂದಲೇ ನಿನ್ನ ಭಕ್ತಿಯು ಗೊತ್ತಾಗುವುದೇನು? ॥೨೫॥ ನಿನ್ನ ಈ ತರದ
ಕೆಲಸವನ್ನು ನೋಡಿ ಜನರು ಅವು ಹೇಗೆ ಹಾಸ್ಯಮಾಡುವುದಿಲ್ಲ? ಕೈಬಿಚ್ಚಿ ದುಡ್ಡನ್ನು ಕೊ
ಟ್ಟರೆ, ಕ್ಷೌರಿಕರು ಕೂದಲನ್ನೆಲ್ಲ ಬೋಳಿಸಲಾರರೆ? ॥೨೬॥ ಮನೆಮುತ್ತಿಪ್ಪೆಯಲ್ಲಿ ಬಹಳವಾ
ಗಿ ಎಲ್ಲಕಡೆಯೂ ಬೂದಿಯು ಇರುವುದಿಲ್ಲವೆ? ಅಷ್ಟರಿಂದಲೇ ಜಂಗಮನಾಗಿ ಹೋಗುವು
ದಾದರೆ, ಇನ್ನು ಬಹಳ ಪ್ರಯಾಸಪಡುವುದೇತಕ್ಕೆ? ॥೨೭॥ ಇವನ ಪಾದಪ್ರಕ್ಷಾಳ
ನವನ್ನು ನೀನು ಮಾಡುವೆಯಾದರೆ ಎಲ್ಲ ಕಡೆಯಲ್ಲೂ ಇರುವ ಮೂಢರೆಲ್ಲ ಬರು
ತ್ತಾರೆ. ಬಲು ಮಾತಿನಿಂದ ಪ್ರಯೋಜನವೇನು? ॥೨೮॥ ನಿನ್ನ ಪಾದವನ್ನು ತೊಳೆ
ಯುವವನ ಕಾಲ್ಗಳನ್ನು ನೀನೇ ಹೇಗೆ ತೊಳೆಯುವೆ? ಬೇಕಿದ್ದರೆ ಇವನ ಪಾದವನ್ನು
ನೀನೇ ತೊಳೆ. ನಾನು ನಿನಗೆ ನೀರನ್ನು ಕೊಡುವುದಿಲ್ಲ ॥೨೯॥ ನನ್ನ ನಂಟರೆಲ್ಲರೂ
ನೋಡಿ ಸತ್ಯವಾಗಿ ನಗುತ್ತಾರೆ. ಎಂದು ಹೇಳಿ, ಅತ್ಯಂತ ಜಿಗುಪ್ಸೆಗೊಂಡವಳಾಗಿ,
ಆಕೆಯು ಚಿನ್ನದ ಪಾತ್ರೆಯನ್ನು ನೆಲದಮೇಲೆ ಇಟ್ಟುಬಿಟ್ಟಳು. ಆ ಕಲಿಕಂಬುಗಣ
ನಾಥನು ಆಕೆಯ ಮಾತನ್ನು ಕೇಳಿ, ಶಿವಶಿವಾ! ಎಂದು ನುಡಿದು, ಕಿವಿಯನ್ನು ಮು
ಚ್ಚಿಕೊಂಡು, ತನ್ನ ಹೆಂಡತಿಯನ್ನು ಕುರಿತು ಹೀಗೆ ನುಡಿದನು ॥೩೦॥ ಎಲೆ ಮೂಢೆ,
ಈತನನ್ನು ನೀನು ಪ್ರತ್ಯಕ್ಷಶಿವಮೂರ್ತಿಯನ್ನಾಗಿ ಅದು ಹೇಗೆ ಕಾಣುವುದಿಲ್ಲ? ಇಂಥವ

ಹಂ । ದಾಸೀಸುತ ಇತಿಸ್ವೈರಂಪ್ರಜಲ್ಪಸಿಕಿಮೀದೃಶಂ ॥೩೦॥ ಆಲೋಕ್ಯಾಲೋಕ್ಯರುದ್ರಸ್ಯಮೂರ್ತಿಂಜ್ಯೋತಿರ್ಮಯಂಪರಂ ॥ ಹರಂಕಲಿಯುಗೇಶಾನಂ ಪ್ರತ್ಯಕ್ಷಪರಮೇಶ್ವರಂ ॥೩೩॥ ಸರೂಪಮಿಶ್ವರಂಭವ್ಯಜಂಗಮಾಕೃತಿಧಾರಿಣಂ । ಕರ್ಮಾಪಹಂಕರ್ಮಶೀಲ ಇತಿಬ್ರೂಷೇಽಘರೂಪಿಣಿ ॥ ೩೪ ॥ ಕ್ಷುದ್ರೇ ಚಂಡಾಲಿವಿಭ್ರಾಂತೆಮಲಿಸಾಂಗಿವಿವೇಕಿಹಿತೆ । ಕಿಮಸ್ತಿಮೌಳಾವಲ್ಪಾನಾಂ ಮಲ್ಲಿಕಾದಳಸನ್ನಿಭಾ ॥೩೫॥ ಮಂದಾಕಿನೀಮೃಗಾಂಕಶ್ಚ ಮೃಣಾಳಸದೃಶಛವಿಃ । ಕಿಮಸ್ತಿಕರಶಾಖಾಯಾಮಹಿನಾಥಾಂಗುಳೀಯಕಂ ॥೩೬॥ ಸಿತಾಂಬುಧರಸಂಲಕ್ಷ್ಯಮಾಣಸೌದಾಮಿನೀನಿಭಂ । ಲಲಾಟೇವಿದ್ಯತೇಽನ್ಯೇಷಾಂಕಿಂ ತೃತೀಯಂವಿಲೋಚನಂ ॥೩೭॥ ಜಂಬೂಫಲೋಪಮಃಕಂಠೆಮರ್ತ್ಯಾನಾಂ ನೀಲಿಮಾಸ್ತಿಕಿಂ । ಏತಾನಿರುದ್ರಚಿಹ್ನಾನಿದಾಸೀಪುತ್ರಸ್ಯಸಂತಿಕಿಂ॥೩೮॥ ಮಲ್ಲೋಮಲ್ಲೋಯಮಿತ್ಯೇನಂವದಸ್ಯಜ್ಞಾನದುರ್ಭರಾತ್ । ಮಲ್ಲಃಕಿಮೇಷಶ್ರೀಶೈಲಮಲ್ಲಿಕಾರ್ಜುನಏವಸಃ ॥೩೯॥ ತ್ವಮಾತ್ಮಾನಮವಿಜ್ಞಾಯಮದಾಂಧಾಶ್ರೀಮಹೇಶ್ವರಂ । ಪರಿಜ್ಞಾಯಾನ್ಯಭಾವೇನಶರೀರಿಣಮಿಮಾಪರಂ ॥

---

ನನ್ನು ನೀನು ಗೌಡಿಯ ಮಗನೆಂದು ಮನಸ್ಸಿಗೆ ಬಂದಂತೆ ಬೊಗಳುವೆಯಾ? ॥೩೦॥ ಎಲೆ ಪಾಪಸ್ವರೂಪಿಣಿ! ಶಿವಸ್ವರೂಪನೂ ಪರಂಜ್ಯೋತಿರೂಪನೂ ಕಲಿಯುಗದ ಪರಶಿವನೂ, ಪ್ರತ್ಯಕ್ಷಮಹೇಶ್ವರನೂ, ಮಂಗಳಕರವಾದ ಜಂಗಮರೂಪವನ್ನು ಧರಿಸಿದವನೂ ಕರ್ಮನಾಶಕನೂ ಆದ ಈ ಶಂಕರನನ್ನು ನೀನು ನೋಡಿನೋಡಿ ಕರ್ಮಾಚಾರಿಯೆಂಬುದಾಗಿ ಅದು ಹೇಗೆ ಹೇಳುವೆ? ॥೩೪॥ ಎಲೆ ನೀಚೆ, ಚಂಡಾಲಿ, ಭ್ರಾಂತಮತಿ, ಪಾಪದೇಹಿನಿ, ಅಜ್ಞೆ, ನೀಚನಕಿರೀಟದಲ್ಲಿ ಮಲ್ಲಿಗೆಯ ದಳಕ್ಕೆ ಸಮನಾದ ದೇವಗಂಗೆಯೂ, ತಾವರೆದಂಟಿಗೆ ಸಮನಾದ ಕಾಂತಿಯುಳ್ಳ ಚಂದ್ರನೂ ಕೂಡ ಇರುವುದುಂಟೆ? ಬೆರಲಿನಲ್ಲಿ ಆದಿಶೇಷನುಂಗುರವು ಇರುವುದೆ? ॥೩೬॥ ಬಿಳಿಯ ಮೋಡದಲ್ಲಿ ತೋರುವ ಮಿಂಚಿಗೆ ಸಮನಾದ ಮೂರನೆಯ ಕಣ್ಣು ಶಿವೇತರರ ಹಣೆಯಲ್ಲಿ ಇರುವುದುಂಟೆ? ॥೩೭॥ ನೇರಿಲೆಯಹಣ್ಣಿಗೆ ಸಮನಾದ ಕಪ್ಪು ಮನುಷ್ಯರ ಕತ್ತಿನಲ್ಲಿ ಇರುವುದುಂಟೆ? ಇಂತಹ ಶಿವಚಿಹ್ನಗಳು ಗೌಡಿಯ ಮಗನಿಗೆ ಇರುವುವೆ? ॥೩೮॥ ಅಜ್ಞಾನಾತಿಶಯದಿಂದ ನೀನು ಈತನನ್ನು "ಮಲ್ಲ, ಮಲ್ಲ" ಎಂಬುದಾಗಿ ನುಡಿಯುತ್ತೀಯೆ. ಇವನು ಮಲ್ಲನೆ? ಆ ಶ್ರೀಶೈಲದ ಮಲ್ಲಿಕಾರ್ಜುನನೇ ಇವನು ॥೩೯॥ ಮದಾಂಧೆಯಾದ ನೀನು ಈತನನ್ನು ಪರಮಾತ್ಮನಾದ ಶ್ರೀ ಮಹೇಶ್ವರನನ್ನಾಗಿ ತಿಳಿಯದೆ, ಅನ್ಯಭಾವದಿಂದ ಸಾಮಾನ್ಯಮನುಷ್ಯನನ್ನಾಗಿ ತಿಳಿದು ॥೪೦॥ ದುರಾಚಾರಿಯೂ, ಮೂಢಬುದ್ಧಿಯೂ, ಜನ್ಮಬದ್ಧನೂ,

ಶಠಂಜಡಮತಿಂಜಾತಂಸಂಸಾರಪರಿದೂಷಿತಂ | ದಾಸೀಸುತಮಿಪ್ರೋದ್ವೀಕ್ಷ್ಯ
ಪದಯೋರ್ಜಲಸೇಚನಂ ||೪೧|| ವಿರಮ್ಯತಿಷ್ಠಸ್ಯಧುನಾಭವಂತೀಂಸಮುಪಾ
ಶ್ರಿತಂ | ಅಜ್ಞಾನಮಪರಾಧಶ್ಚ ಪಾತಕಂಹಾನಿರುದ್ಧತಾ ||೪೨|| ಅದಕ್ಷತಾಮ
ವಿನೀತಿರನ್ಯಾಯಃಕರ್ಮದುರ್ಮದಂ | ಧೂರ್ತತಾಧರ್ಮವಿರಹಃಪರಂದುರ್ಮಾರ್ಗ
ವರ್ತನಂ ||೪೩|| ಅಚಿಂತನೀಯದ್ರೋಹಶ್ಚ ಸರ್ವಮೇತದ್ದುರಾತ್ಮಿಕೆ | ತ್ವಾಂ
ಕೇನಾಪಿಪ್ರಕಾರೇಣಾಹತ್ವಾಶಮಮುಪೇಷ್ಯತಿ ||೪೪|| ನಕೋಪಇತಿಬಧ್ವಾ
ತಾಂಸುತರಾಮನುದ್ಯಾಸಃ| ಚಿಚ್ಛೇದಪಾಣಿಯುಗಳಂಕುಠಾರೇಣಾಥತತ್ಕ್ಷ
ಣಾತ್ ||೪೫|| ಶಿವಾತ್ಮಕಸ್ಯಪಾದಾಭಿಷೇಕಾಯಸಲಿಲಂಮುದಾತ್ | ಅದಾತ್ರೆ
ಕರಯುಗ್ಮಾಯಕಿಂಮೇಯಂಸ್ಯಾದ್ವಿನಿಷ್ಕೃತಿಃ ||೪೬|| ಇತಿಬುದ್ಧ್ವಾಪದೇರ
ಜ್ವಾಪಶ್ಚಾದ್ಭಾಗೇಸ್ವವೇಶ್ಮನಃ | ಕ್ಷೇಪಯಾಮಾಸತಾಂಸ್ವಾಂತೇಪರ್ಷೇಕೋ
ಪೇಚಸಾಹಸೆ ||೪೭|| ಸಾಂದ್ರೇಸತಿಮಹಾಭಕ್ತಃಕಲಿಕಂಬಃಪ್ರಭಾವವಾನ್|
ಪ್ರಿಯೇತಿಸುಮಹತ್ಪ್ರೇಮಸುಗುಣೇತಿಕ್ಷಮಾಮಪಿ ||೪೮|| ಬಹ್ವಪತ್ಯೇತಿ
ಚಸ್ನೇಹಮತ್ಯಾಪ್ತೇತಿಚಸಂಮುದಂ | ಅಭಿಮಾನವತೀಚೇತಿಮಾನ್ಯತಾಂಸ್ವಹಿ

---

ಸಂಸಾರಬಂಧದಿಂದ ನಿಂದಿತನೂ ಆದ ಗೌಡಿಯ ಮಗನನ್ನೋಪಾದಿಯಲ್ಲಿ ಕಂಡು, ಪಾದಗಳಿಗೆ ನೀರನ್ನು ಕೊಡದೆ ನಿಂತಿರುತ್ತೀಯೆ. ಎಲೆ ದುರಾತ್ಮಳೆ ! ನಿನ್ನಲ್ಲಿ ಅಜ್ಞಾನವೂ, ತಪ್ಪೂ, ಪಾಪವೂ, ಮಿಗಿಲಾದ ಹಾನಿಯೂ, ಸಾಮರ್ಥ್ಯಹೀನತೆಯೂ, ವಿನಯರಾಹಿತ್ಯವೂ, ಅನ್ಯಾಯವೂ, ದುರಹಂಕಾರಕರ್ಮವೂ, ಧೂರ್ತತ್ವವೂ, ಧರ್ಮದೂರತ್ವವೂ, ದುರ್ಮಾರ್ಗವರ್ತನವೂ, ನೆನೆಯುವುದಕ್ಕಶಕ್ಯವಾದ ಶಿವದ್ರೋಹವೂ--ಇವೆಲ್ಲವೂ ನೆಲಸಿದುವು. ಆದುದರಿಂದ ನಿನ್ನನ್ನು ಯಾವುದಾದರೊಂದು ಪ್ರಕಾರದಿಂದ ಕೊಲ್ಲದೆ ನನ್ನ ಕೋಪವು ಶಾಂತವಾಗದು. ಎಂದು ಹೇಳಿ ಆ ಕಲಿಕಂಬಗಣನಾಥನು ಪತ್ನಿಯನ್ನು ಚೆನ್ನಾಗಿ ಹೊಡೆದು, ಕೂಡಲೇ ಅವಳ ಕೈಗಳೆರಡನ್ನೂ ಕೊಡಲಿಯಿಂದ ಕತ್ತರಿಸಿಹಾಕಿದನು ||೪೬|| ಶಿವಸ್ವರೂಪನಾದವನ ಪಾದಪ್ರಕ್ಷಾಳನೆಗೆ ನೀರನ್ನು ಅಹಂಕಾರದಿಂದ ಕೊಡದೆ ಹೋದ ಕೈಗಳಿಗೆ ಇದು ಸಾಕಾದ ಪ್ರಾಯಶ್ಚಿತ್ತವಾದೀತೆ? ಎಂದು ಆ ಮಹಿಮಶಾಲಿಯಾದ ಕಲಿಕಂಬಭಕ್ತನು ಯೋಚಿಸಿ, ತನ್ನ ಮನಸ್ಸಿನಲ್ಲಿ ಸಂತೋಷವೂ ಕೋಪವೂ ಸಾಹಸವೂ ಕೂಡ ದಟ್ಟವಾಗಿರಲಾಗಿ, ||೪೬|| ಆಕೆಯ ಕಾಲ್ಗಳನ್ನು ಹಗ್ಗದಿಂದ ಕಟ್ಟಿ, ತನ್ನ ಮನೆಯ ಹಿತ್ತಲಲ್ಲಿ ಅವಳನ್ನು ಬಿಸುಡಿಬಿಟ್ಟನು. ಸದ್ಭಕ್ತಿತತ್ಪರನಾದ ಈ ಕಲಿಕಂಬಭಕ್ತನು, ತನ್ನ ಪ್ರಿಯಪತ್ನಿಯೆಂಬುದಾಗಿ ಪ್ರೇಮವನ್ನೂ, ಸದ್ಗುಣಶಾಲಿನಿಯೆಂಬುದಾಗಿ ಮನ್ನಣೆಯನ್ನೂ, ಹಲವು ಮಕ್ಕಳುಳ್ಳವಳೆಂದು ವಿಶ್ವಾಸವನ್ನೂ, ಅತ್ಯಂತಾಪ್ತಳೆಂದು ಪ್ರೀತಿಯನ್ನೂ, ಮಾನವತಿಯೆಂದು ಗೌರವವನ್ನೂ, ತನಗೆ ಹಿತವನ್ನು

ತ್ರೀತಿಕ ||೪೯|| ಹಿತಂರೂಪವತೀಚೇತಿದೃಷ್ಟಿರಾಗಂಸ್ತ್ರಿಯಾವಧಂ | ನಿಂದಿತಂಚಾವಿಚಾರ್ಯೈಷಭಕ್ತಸ್ಸದ್ಭಕ್ತಿತತ್ಪರಃ ||೫೦|| ಅಚ್ಛಿನತ್ಪಾಣಿಯುಗಳಂ ಪ್ರಿಯಾಯಾಇತಿವಿಸ್ಮಿತಾಃ | ಶಿವಭಕ್ತಾಹರ್ಷಯುಕ್ತಾಸ್ತುವಂತಶ್ಚಾಬ್ರುವನ್ನಿತಿ ||೫೧|| ಉಚಿತಂಶಿವಭಕ್ತಾನಾಂವೃತ್ತಮೇತನ್ಮಹಾತ್ಮನಾಂ | ತಥಾಹಿಪೂರ್ವಂಚಂಡೇಶೋಗೋರಕ್ಷಾವಸರೇಮುದಾ ||೫೨|| ವಿಧಾಯಸೈಕತಂ ಲಿಂಗಂತಸ್ಯಕ್ಷೀರಾಭಿಷೇಚನಂ | ಪ್ರಕುರ್ವತಿಪಿತಾಗತ್ಯಸಿಖಿಲಂಮದ್ಗವಾಂಪಯಃ ||೫೩|| ಕಿಮರ್ಥಂವಿಕಿರಸ್ಯುರ್ವ್ಯಾಮಿತ್ಯುಕ್ತ್ವಾರೋಷದೂಷಿತಃ | ಪದಾಕ್ರಮತತದ್ದಿವ್ಯಲಿಂಗಂಸೋಪ್ಯತಿಕೋಪತಃ ||೫೪|| ಅನುದ್ವೀಕ್ಷ್ಯಪಿತೇತ್ಯೇನಂಶಿರಃಪಾದಾವಖಂಡಯತ್ | ಅಜಸ್ಯೈಕಂಶಕೃತ್ಪಿಂಡಂಲಿಂಗಂಕೃತ್ವಾತಿಭಕ್ತಿತಃ ||೫೫|| ಅಪರಸ್ಮಿನ್ನಜಾಕ್ಷೀರೈರಭಿಷೇಕಂವಿತನ್ವತಿ | ವೃಥಾಕ್ಷಿಪಸ್ಯಜಾಕ್ಷೀರಂಭೂಮಾವಿತಿತದಾಪದಾ ||೫೬|| ಪಿತ್ರಾಪ್ರವಿಹತೇಲಿಂಗೇಸೋಪಿಕೋಪಾತ್ಪಿತುಶ್ಶಿರಃ | ಚರಣೌಚಕುಠಾರೇಣಚಿಚ್ಛೇದಚ್ಛಿನ್ನಸಂಶಯಃ ||೫೭||

---

ಕೋರುವವಳೆಂದು ಆಪ್ತತನವನ್ನೂ, ರೂಪಶಾಲಿನಿಯೆಂದು ನೋಟದಲ್ಲಿ ಅನುರಾಗವನ್ನೂ, ಸ್ತ್ರೀಹತ್ಯವು ದೂಷ್ಯವಾದುದೆಂಬುದನ್ನೂ ಕೂಡ ವಿಚಾರಮಾಡದೆ ||೫೦|| ತನ್ನ ಪತ್ನಿಯ ಕೈಗಳೆರಡನ್ನೂ ಕತ್ತರಿಸಿಬಿಟ್ಟನು. ಎಂದು ಶಿವಭಕ್ತರು ಆಶ್ಚರ್ಯಯುಕ್ತರಾಗಿ ಹೇಳುತ್ತ, ಸಂತೋಷದಿಂದ ಆ ಕಲಿಕಂಬನನ್ನು ಸ್ತೋತ್ರಮಾಡಿದರು ||೫೧|| ಮಹಿಮೆಯುಳ್ಳ ಶಿವಭಕ್ತರಿಗೆ ಇಂತಹ ನಡೆಯು ಯುಕ್ತವೇ ಸರಿ. ಹೇಗೆಂದರೆ— ಪೂರ್ವದಲ್ಲಿ ಚಂಡೇಶನು ಗೋವುಗಳನ್ನು ಕಾಯುವಕಾಲದಲ್ಲಿ ಸಂತೋಷದಿಂದ ||೫೨|| ಮಳಲಿನ ಲಿಂಗವನ್ನು ಮಾಡಿ, ಅದಕ್ಕೆ ಹಸುವಿನ ಹಾಲಿನಿಂದಭಿಷೇಕವನ್ನು ಮಾಡುತ್ತಿರಲು, ತಂದೆಯು ಬಂದು, ಎಲೊ! ನೀನು ನನ್ನ ಹಸುಗಳ ಹಾಲನ್ನೆಲ್ಲ ಭೂಮಿಯಮೇಲೆ ಅದೇಕೆ ಸುರಿಯುತ್ತೀಯೆ ? ಎಂದು ಕೋಪಾವೇಶದಿಂದ ದುಷ್ಟನಾಗಿ, ಆ ಲಿಂಗವನ್ನು ಪಾದದಿಂದೊದೆದನು. ಆ ಚಂಡೇಶನುಕೂಡ ಅತ್ಯಂತ ಕೋಪದಿಂದ ||೫೪|| ಇವನನ್ನು ತಂದೆಯೆಂಬುದಾಗಿ ನೋಡದೆ, ತಲೆಯನ್ನೂ ಕಾಲ್ಗಳನ್ನೂ ಕತ್ತರಿಸಿಹಾಕಿದನು. ಮತ್ತೊಬ್ಬ ಕಾಟಕೋಟನೆಂಬ ಭಕ್ತನು ಆಡಿನ ಹಿಕ್ಕೆಯೊಂದನ್ನು ಲಿಂಗವನ್ನಾಗಿ ಮಾಡಿ ಭಕ್ತಿಯಿಂದ ಅದನ್ನು ಆಡಿನ ಹಾಲಿನಿಂದ ಅಭಿಷೇಕಿಸುತ್ತಿರಲಾಗಿ, ಅವನ ತಂದೆಯು ಬಂದು ನೋಡಿ, ವ್ಯರ್ಥವಾಗಿ ಆಡಿನ ಹಾಲನ್ನು ಭೂಮಿಯಲ್ಲಿ ಸುರಿಯುವೆಯಾ? ಎಂದು ಗದರಿಸಿ, ತನ್ನ ಕಾಲಿನಿಂದ ಆ ಲಿಂಗವನ್ನು ಒದೆಯಲಾಗಿ, ಆ ಕಾಟಕೋಟನು ಕೂಡಲೇ ಕೋಪದಿಂದ ಶಿರಸ್ಸನ್ನು ಕಡಿಯುವುದು ಹೇಗೆಂದು ಸಂಶಯಪಡದೆ ತನ್ನ ತಂದೆಯ ಶಿರಸ್ಸನ್ನೂ ಕಾಲ್ಗಳನ್ನೂ ಕೂಡ ಕೊಡಲಿಯಿಂದ ಕತ್ತರಿಸಿಹಾಕಿದನು ||೫೭|| ಮತ್ತೂ

ಕಿಂಚಾನ್ಯಾ ಶಿವಸದ್ಭಕ್ತಾ ಮಹೇಶಾಚಾರಸಂಯುತಾ । ನಿಂಬಾಂಬಾ ಜಂಗಮ
ಕೃತೇ ಕೃತ್ವಾಪೂಪಾದಿಸಂಯುತಂ ॥೫೮॥ ಅನ್ನಂ ನ್ಯವೇಶಯದ್ಗೇಹೇ ಪೂಪಂ ತ
ಸ್ಯಾಸ್ಸುತಶ್ಶಿಶುಃ । ಅಭಕ್ಷಯತ್ತ್ರಲೌಲ್ಯಾತ್ತಾಂ ವಿಜ್ಞಾಯಾಥ ತಂ ಸುತಂ ॥೫೯॥
ಅತಾಡಯನ್ನ ಕಿಂ ಕೋಪಾನ್ಮುಸಲೇನ ಮಹೀಯಸಾ । ಅಪಿ ಚೇಶ್ವರಸದ್ಭಕ್ತ
ಸ್ಸಮುನ್ನತಮಹಾಯಶಾಃ ॥೬೦॥ ಚೋಳಭೂವಿಶ್ವರೋ ಜೇತುಂ ಪರರಾ
ಷ್ಟ್ರಮಜೇಗಮತ್ । ತತಸ್ತದಗ್ರಮಹಿಷೀ ದುರ್ಭಿಕ್ಷೇ ಸಮುಪಾಗತೇ ॥೬೧॥
ಧಾನ್ಯಾಗಾರೇಷು ರುದ್ರಸ್ಯ ಸ್ಥಾಪಿತಂ ಧಾನ್ಯಸಂಚಯಂ । ಸ್ವಪಿತೃಭ್ಯಾಂ ಚ ಬಂ
ಧುಭ್ಯೋ ದದೌ ತತ್ಸರ್ವವಿಶ್ವರಃ ॥೬೨॥ ಕಥಯಾಮಾಸ ಚೋಳಾಯ ಮ
ದೀಯೋ ಧಾನ್ಯಸಂಚಯಃ । ಪ್ರಯಾತಸ್ತ್ವದ್ದಂಡಯಾತ್ರಾ ಕಿಮರ್ಥಂ ತ್ಯಜ್ಯ
ತಾಮಿತಿ ॥೬೩॥ ತಥೈವ ಚೋಳನೃಪತಿರ್ನಿವೃತ್ತೋ ಪೇತ್ಯ ಮಂದಿರಂ । ಆ
ಹೂಯ ಜಾಯಾಂ ಕ್ವ ಗತೋ ಧಾನ್ಯರಾಶಿರ್ಮಹೇಶಿತುಃ ॥೬೪॥ ಇತಿ ಸಪ್ರಚ್ಛ ಸಾ
ಪ್ಯುರ್ವೀಪತಿಂ ಪ್ರತ್ಯಾಹ ಕಾಮಿನೀ । ದುರ್ಭಿಕ್ಷೇ ಚೋಳಭೂಪಸ್ಯ ಬಾಂಧವಾ
ಶ್ಶ್ವಶುರಾದಯಃ ೬೫॥ ನಿಹತಾ ಇತ್ಯಪಖ್ಯಾತಿಸ್ಸಮಾಯಾತೀತಿ ಶಂಕಿತಾ । ವ್ಯ

---

ಶಿವಭಕ್ತಿಸಂಪನ್ನಳಾಗಿಯೂ ಶಿವಾಚಾರನಿರತಳಾಗಿಯೂ ಇದ್ದ ಇನ್ನೊಬ್ಬ ನಿಂಬ್ಯವ್ವೆ
ನೆಂಬ ಭಕ್ತೆಯು ಜಂಗಮನಿಗೋಸುಗ ಕಜ್ಜಾಯ ಮೊದಲಾದುವುಗಳನ್ನು ಮಾಡಿ,
ಮನೆಯಲ್ಲಿಟ್ಟಿದ್ದಳು. ಅವಳ ಮಗನಾದ ಹುಡುಗನು ಬಂದು, ಆಸೆಯಿಂದ ಅದನ್ನು
ತಿಂದುಬಿಟ್ಟನು. ಬಳಿಕ ತಾಯಿಯು ಅದನ್ನು ತಿಳಿದು, ಕೋಪದಿಂದ ಆ ಮಗನನ್ನು
ದೊಡ್ಡ ಒನಕೆಯಿಂದ ಹೊಡೆಯಲಿಲ್ಲವೇನು? ಮತ್ತೂ ಶಿವಭಕ್ತಿಸಂಪನ್ನನಾಗಿಯೂ
ಅತ್ಯಂತ ಯಶಸ್ವಿಯಾಗಿಯೂ ಇದ್ದ ಚೋಳರಾಜನು ಪರರಾಜ್ಯವನ್ನು ಜೈಸುವುದಕ್ಕಾಗಿ
ಪ್ರಯಾಣ ಮಾಡಿದನು. ಬಳಿಕ ಕ್ಷಾಮವು ಬರಲಾಗಿ, ಅವನ ಹಿರಿಯಪಟ್ಟದರಾಣಿ
ಯು ॥೬೧॥ ಕಣಜದಲ್ಲಿ ಶಿವನ ನೈವೇದ್ಯಕ್ಕಾಗಿಯೆಂದು ಇಟ್ಟಿದ್ದ ಧಾನ್ಯರಾಶಿಯನ್ನೆಲ್ಲ ತನ್ನ
ತಾಯ್ತಂದೆಗಳಿಗೂ ನಂಟರುಗಳಿಗೂ ಕೊಟ್ಟುಬಿಟ್ಟಳು. ಪರಶಿವನಾದರೊ—ನನ್ನ ಧಾನ್ಯ
ವೆಲ್ಲ ಹೋಯಿತು ನಿನ್ನ ದಂಡಯಾತ್ರೆಯು ಏತಕ್ಕೆ? ಬಿಡು, ಎಂದು ರಾಜನೊಡನೆ ಹೇಳಿ
ದನು ॥೬೩॥ ಚೋಳರಾಜನು ಆ ಶಿವವಾಕ್ಯದಂತೆಯೇ ನಡೆದು ದಂಡಯಾತ್ರೆಯನ್ನು
ಬಿಟ್ಟು, ಹಿಂದಿರುಗಿ, ಮನೆಗೆ ಬಂದು, ಹೆಂಡಿತಿಯನ್ನು ಕರೆದು, ಶಿವನ ಕಣಜದ ಧಾನ್ಯ
ರಾಶಿಯು ಎಲ್ಲಿ ಹೋಯಿತೆಂದು ಕೇಳಿದನು. ಆಕೆಯು ದೊರೆಯನ್ನು ಕುರಿತು—ಕ್ಷಾಮ
ದಲ್ಲಿ ಚೋಳರಾಜನ ಮಾವ ಮೊದಲಾದ ನಂಟರೆಲ್ಲ ಸತ್ತುಹೋದರೆಂಬ ಅಪಯಶಸ್ಸು
ನಿನಗೆ ಬರುವುದೆಂಬುದಾಗಿ ಭೀತಿಪಟ್ಟು, ಬಡ್ಡಿಯನ್ನು ಗೊತ್ತುಮಾಡಿ, ನಂಟರುಗಳಿಗೆಲ್ಲ

ದ್ಧಿಂ ವಿಧಾಯ ತದ್ಧಾನ್ಯಮದಾಂ ಬಂಧುಜನಾಳಯೇ ॥೬೬॥ ಇತ್ಯುಕ್ತೇಽನಂತರಂ ರಾಜಾ ಕೋಽಯಂ ದೋಷಸ್ತ್ವಯಿ ಭಾಮಿನಿ । ಮಯಿ ಸ್ಥಿತೇ ಬಾಂಧವಾನಾಂ ಕಿಂ ದಾರಿದ್ರ್ಯೇಣ ಭೂಯಸಾ ॥೬೭॥ ಆಕಾರಯ ಸ್ವ ತಾನ್ ಭೂಪಾನ್ ಕರಿಷ್ಯಾಮೀತಿ ಸೋಽಬ್ರವೀತ್ । ತಯಾ ಬಂಧುಷ್ವಥಾಹೂತೇಷ್ವಾಗತೇಷ್ವಪಿ ಚ ಸರ್ವಶಃ ॥೬೮॥ ಸಂಸ್ಥಾಪ್ಯ ಭವನೇ ಸರ್ವಾನೇಕಸ್ಮಿನ್ ಕ್ರುದ್ಧಮಾನಸಃ । ಮಹೇಶಧಾನ್ಯಭೋಕ್ತೄಣಾಂ ದ್ರೋಹಿಣಾಂ ಕಿಮಿದಂ ಬಹು ॥೬೯॥ ಇತಿ ತಾನ್ ಕಾರಯಾಮಾಸ ಖಂಡಶಃ ಶತಶಃ ಪೃಥಕ್ । ಭಾರ್ಯಾಯಾ ಅಪಿ ಗರ್ಭಿಣ್ಯಾ ವಿದಾರ್ಯ ಜಠರಂ ತತಃ ॥ ತದ್ಗರ್ಭಹನನೋದ್ಯುಕ್ತೇ ತಸ್ಮಿನ್ ಮಾ ಮೇತಿ ಶಂಕರಃ । ಶಮಯಾಮಾಸ ಚೋಳಸ್ಯ ಭೂಪತೇ ರುದಿತಾಂ ಕ್ರುಧಂ ॥೭೦॥ ಕಿಂಚಾನ್ಯಸ್ಸ ಶಿವಾಚಾರಪರೋ ದ್ರಾವಿಡಮಂಡಲೇ । ಮೊನೆಯಾರ್ಯೋ ಮಹೀಪಾಲಃ ಶ್ರೀವಾಲ್ಮೀಕೇಶ್ವರಂ ಶಿವಂ ॥೭೧॥ ಅವಲೋಕಿತುಮಾಯಾತೋ ಭಾರ್ಯಯಾ ಸಹ ಭಕ್ತಿತಃ । ಶಿವಪೂಜಾರ್ಥಮಾನೀತಕಲ್ಹಾರಕುಸುಮಾಳಿಷು ॥೭೨॥ ಏಕಂ ಸಮಾಘ್ರಾತವತ್ಯಾಃ ಕಾಂತಾಯಾ ಮನುಜೇಶಿತುಃ । ಚಿಚ್ಛೇದ ನಾಸಿಕಾಂ ಕೋಪಾತ್ತತ್ಸಮಾರಾಧಕೋ ದ್ವಿಜಃ ॥೭೩॥ ಜಗಾದ ಧರಣೀಪಾಲೋ ಗೃಹೀತರಿ ಕರೇ ಸ್ಥಿತೇ । ನಾ

---

ಧಾನ್ಯವನ್ನು ಕೊಟ್ಟುಬಿಟ್ಟೆನು ॥೬೬॥ ಎಂದು ಹೇಳಿದಳು. ಬಳಿಕ, ರಾಜನು — "ಪತ್ನಿಯೆ! ಹಾಗಾದರೆ ದೋಷವೇನು? ನಾನು ಬದುಕಿರುವಾಗ ನಂಟರಿಗೆ ಬಲು ಬಡತನದ ಬಾಧೆಯಿರಬಹುದೆ? ॥೬೭॥ ಅವರನ್ನೆಲ್ಲ ಕರೆಯಿಸು, ಎಲ್ಲರನ್ನೂ ಅರಸುಗಳನ್ನಾಗಿ ಮಾಡುತ್ತೇನೆ" ಎಂದು ಹೇಳಿದನು. ರಾಣಿಯು ಕರೆಯಿಸಲಾಗಿ ॥೬೮॥ ದೊರೆಯು ಎಲ್ಲರನ್ನೂ ಅರಮನೆಯಲ್ಲಿ ಒಂದು ಕೋಣೆಯಲ್ಲಿರಿಸಿ, ಕೋಪಗೊಂಡ ಮನಸ್ಸುಳ್ಳವನಾಗಿ, "ಪರಶಿವನ ಧಾನ್ಯವನ್ನು ತಿಂದ ದ್ರೋಹಿಗಳಿಗೆ ಈ ಶಿಕ್ಷೆಯು ಬಲು ದೊಡ್ಡದೆ? ॥೬೯॥ ಎಂದು ಯೋಚಿಸಿ, ಅವರೆಲ್ಲರನ್ನೂ ಬೇರೆ ಬೇರೆ ಹಲವು ತುಂಡುಗಳಾಗಿ ಕತ್ತರಿಸಿ ಹಾಕಿದನು. ಬಳಿಕ ತನ್ನ ಪತ್ನಿಯು ಬಸುರಿಯಾಗಿದ್ದರೂ ಕೂಡ ಅವಳ ಹೊಟ್ಟೆಯನ್ನು ಸೀಳಿ, ಗರ್ಭವನ್ನು ಕೊಲ್ಲುವುದಕ್ಕೆ ಯತ್ನಿಸಲು, ಅಷ್ಟರಲ್ಲಿ ಶಿವನು ಪ್ರತ್ಯಕ್ಷನಾಗಿ ಬೇಡ ಬೇಡವೆಂದು ತಡೆದು, ಆ ಚೋಳರಾಜನ ಕೋಪವನ್ನು ಶಾಂತಿಗೊಳಿಸಿದನು ॥೭೦॥ ಮತ್ತು ದ್ರವಿಡದೇಶದಲ್ಲಿ ಉತ್ತಮ ಶಿವಾಚಾರತತ್ಪರನಾದ ನರಸಿಂಗಮೊನೆಯಾರೆಂಬ ರಾಜನು ಶ್ರೀವಾಲ್ಮೀಕೇಶ್ವರನನ್ನು ನೋಡುವುದಕ್ಕಾಗಿ ಪತ್ನಿಯೊಡನೆ ಬಂದನು. ಅಲ್ಲಿ ಶಿವಪೂಜೆಗಾಗಿ ತಂದಿಟ್ಟಿದ್ದ ಸುಗಂಧಪುಷ್ಪಗಳಲ್ಲಿ ಒಂದು ಹೂವನ್ನು ರಾಜನ ಪತ್ನಿಯು ತೆಗೆದುಕೊಂಡು ಮೂಸಿ ನೋಡಲಾಗಿ, ಅರ್ಚಕನಾದ ಬ್ರಾಹ್ಮಣನು ಕೋಪದಿಂದ ಅವಳ ಮೂಗನ್ನು ಕತ್ತರಿಸಿ ಹಾಕಿದನು. ಆಗ ದೊರೆಯು — ಹೂವನ್ನು ಮೊದಲು ತೆಗೆದು

ಪರಾಧೋಽಸ್ತಿ ನಾಸಾಯಾಃ ಕಿಮು ಸಾವೇತ್ತಿ ಸತ್ಪಥಂ ॥೨೫॥ ಇತ್ಯಾಲಪನ್ನತಿ ಕ್ರೋಧಾತ್ತದಾ ತತ್ಕಾಮಿನೀಕರಂ । ನಾಛಿನತ್ಕಿಮತೋ ಲಿಂಗಜಂಗಮದ್ವೇಷಿಣೋ ಜನಾನ್ ॥೨೬॥ ಸದ್ಭಕ್ತಾಃ ಕಿಮುಪೇಕ್ಷಂತೇ ನಿಘ್ನಂತೇ ವಾವಿಚಾರಿತಂ । ಮಾತರಃ ಪಿತರಶ್ಚೇತಿ ವಚನಾತ್ಪಿತರಾವಪಿ ॥೨೭॥ ಹಂತವ್ಯಾ ಏವ ರುದ್ರಸ್ಯ ದೂಷಣಾತ್ಕಿಮುತಾಪರೆ । ಇತಿ ಸದ್ಭಕ್ತಸಂದೋಹಃ ಕಲಿಕಂಬಂ ಗಣೋತ್ತಮಂ ॥ ತವಾಪ್ರೀತಿಸಮಾವಿಷ್ಟಃ ಪರಿತುಷ್ಟಾವ ಸಾದರಂ ॥

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯ
ಚರಿತೆ ಪುರಾತನ ಪ್ರಕರಣೇ ಕಲಿಕಂಬ ಚರಿತ್ರಕಥನಂ
ನಾಮ ದ್ವಿತೀಯೋಽಧ್ಯಾಯಃ.

ಕೊಂಡ ಹಸ್ತವು ಇರಲಾಗಿ, ಮೂಗಿನ ತಪ್ಪೇನೂ ಇರುವುದಿಲ್ಲ. ಈಕೆಯು ಸನ್ಮಾರ್ಗವನ್ನು ಬಲ್ಲಳೆ? ॥೨೫॥ ಎಂದು ಹೇಳಿದವನಾಗಿ, ಆಗ ಅತ್ಯಂತ ಕೋಪದಿಂದ ತನ್ನ ಪತ್ನಿಯ ಹಸ್ತವನ್ನು ಕತ್ತರಿಸಿ ಹಾಕಲಿಲ್ಲವೇನು ? ಈ ಕಾರಣದಿಂದ ಸದ್ಭಕ್ತರುಗಳು ಲಿಂಗಜಂಗಮರುಗಳನ್ನು ದ್ವೇಷಿಸುವ ಜನರನ್ನು ಉಪೇಕ್ಷಿಸುವರೊ ? ಅಥವಾ ಇಂಥವರಂಥವರೆಂದು ವಿಚಾರಮಾಡದೆ ಕೊಲ್ಲುವರೊ? "ಅವರು ತಾಯ್ತಂದೆಗಳಾಗಿದ್ದರೂ ಕೂಡ ಶಿವದ್ವೇಷಿಗಳಾಗಿದ್ದರೆ ಕೊಲ್ಲಲ್ಪಡಲು ಯೋಗ್ಯರಾದವರು" ಎಂಬ ಪ್ರಮಾಣವಚನವಿರುವುದರಿಂದ, ಶಿವದೂಷಣೆಯ ದೆಸೆಯಿಂದ ತಾಯ್ತಂದೆಗಳು ಕೂಡ ಕೊಲ್ಲಲ್ಪಡತಕ್ಕವರೇ ಸರಿ ಎಂದಬಳಿಕ ಇತರರ ಮಾತೇನು ? ಎಂಬುದಾಗಿ ಭಕ್ತಸಮೂಹವು ಹೇಳುತ್ತ, ಪ್ರೀತಿಯುಕ್ತನಾಗಿ ಕಲಿಕಂಬಗಣನಾಥನನ್ನು ಸ್ತೋತ್ರಮಾಡಿತು.

ಎಂಬಲ್ಲಿಗೆ ಪಂಡಿತಾರಾಧ್ಯಚರಿತಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ಪುರಾತನ ಪ್ರಕರಣದೊಳಗೆ ಕಲಿಕಂಬಗಣನಾಥನ ಚರಿತ್ರವನ್ನು ವಿವರಿಸುವ ೨ ನೆಯ ಅಧ್ಯಾಯವು ಮುಗಿದುದು.

# ಅಥ ತೃತೀಯೋಽಧ್ಯಾಯಃ.

---

## ಪಿಳ್ಳೈನೈನಾರಿ ಕಥನಂ.

ಅಥ ಭೂಮಿವ್ಯಾಪ್ತಕೀರ್ತಿಶ್ಶಿವಮೂರ್ತಿರ್ಗುರೂತ್ತಮಃ । ಕೃತಶೈವಾಧ್ವವಿಸ್ತಾರೋ ಗಣಾನ್ವಯಜಃ ಪರಃ ॥೧॥ ತಥಾವಿಧಿನಿಷೇಧಾತಿದೂರೋಭಕ್ತೋತ್ತಮಃ ತಾಂವರಃ । ನಿರ್ಧೂತಜೈನಬೌದ್ಧಾದಿಪ್ರಚಾರೋಮಹಿಮಾಕರಃ ॥೨॥ ಪ್ರತಾಪೋಜ್ವಲದೇಕಾಂಗವೀರೋವಿಸ್ಮಯಭಾಸುರಃ । ರುದ್ರಾವತಾರಶ್ಶ್ರೀಪಿಳ್ಳೈನೈನಾರಿರಿತಿವಿಶ್ರುತಃ ॥೩॥ ಹೇಮಸಿಂಹಾಸನಂಮುಕ್ತಾಮಂಟಪಂಸಮುದಂಚಿತಂ । ಸಿತಾತಪತ್ರಮಮಲಂಚಾಮರೇಚಂದ್ರಸನ್ನಿಭೆ ॥೪॥ ವೃಷಧ್ವಜಾನೇಕವಾತಪೂರ್ಣಾಸ್ಯಚಿಟ್ಟಿತಾಸಿಜ । ವೇದಬಾಹ್ಯಾನ್ಯಸಮಯಧೂಮಕೇತೂಸಮಾಶ್ಚಭಾಃ ॥೫॥ ವರಕಾಹಳಶಂಖಾದ್ಯಾಇತ್ಯೇತೇಷ್ವಖಿಲೇಷ್ವಪಿ । ಭ್ರಾಜಮಾನೇಷುವಿಖ್ಯಾತಸಿಜಸದ್ಭಕ್ತಿಹೇತುಷು ॥೬॥ ಆಮು

---

## ೩ ನೆಯ ಅಧ್ಯಾಯವು.

---

### ( ಪಿಳ್ಳೈನೈನಾರಿಯ ಕಥೆಯು. )

ಬಳಿಕ ಭೂತಲವೆಲ್ಲಲ್ಲ ಹಬ್ಬಿದ ಕೀರ್ತಿಯುಳ್ಳವನೂ, ಶಿವಸ್ವರೂಪನೂ, ಗುರುಶ್ರೇಷ್ಠನೂ, ಶಿವಮತಮಾರ್ಗವನ್ನು ವಿಸ್ತರಿಸಿದವನೂ, ಶಿವಗಣವಂಶೋತ್ಪನ್ನನೂ, ಉತ್ಕೃಷ್ಟನೂ, ಶಾಸ್ತ್ರವಿಧಿನಿಷೇಧಗಳಿಗೆ ಸಿಲುಕದೆ ದೂರನಾಗಿರುವವನೂ, ಭಕ್ತರಲ್ಲಿ ಶ್ರೇಷ್ಠನೂ, ಜೈನಬೌದ್ಧಚಾರ್ವಾಕಾದಿ ಮತದವರನ್ನು ಭಂಜಿಸಿದವನೂ, ಮಹತ್ವಾಶ್ರಯನೂ, ಶಿವಧರ್ಮಾಚರಣ ವಿಷಯಕವಾದ ಪರಾಕ್ರಮವೇ ಪ್ರಕಾಶಿಸುವ ಮುಖ್ಯಾಂಗವಾಗುಳ್ಳವನಾದ ಕಾರಣ ಶೂರನೂ, ಆಶ್ಚರ್ಯಕರಚರಿತದಿಂದ ಒಪ್ಪುವವನೂ, ರುದ್ರನ ಅವತಾರನೂ ಎನಿಸಿ ಪ್ರಸಿದ್ಧನಾದ ಶ್ರೀಪಿಳ್ಳೈನೈನಾರಿಯೆಂಬ ಭಕ್ತೋತ್ತಮನಿದ್ದನು. ಆತನು, ಚಿನ್ನದ ಸಿಂಹಾಸನವೂ, ಉತ್ತಮವಾದ ಮುತ್ತಿನ ಮಂಟಪವೂ, ನಿರ್ಮಲವಾದ ಶ್ವೇತಛತ್ರವೂ, ಚಂದ್ರನಿಗೆ ಸದೃಶವಾದ ಚಾಮರಗಳೂ, ಉನ್ನತಗಳಾದ ನಂದಿಧ್ವಜಗಳೂ ಬಿಜ್ಜಣಿಗೆಗಳೂ, ವೇದಕ್ಕೆ ಹೊರಗಾದ ಅನ್ಯಮತಗಳಿಗೆ ನಾಶಸೂಚಕವಾದ ಧೂಮಕೇತುಗಳಂತಿರುವ ಕಹಳೆ ಶಂಖ ಮೊದಲಾದುವುಗಳೂ ಕೂಡ ತನ್ನ ಪ್ರಖ್ಯಾತವಾದ ಶಿವಭಕ್ತಿಗೆ ಕಾರಣಭೂತಗಳಾಗಿ ಪ್ರಕಾಶಿಸುತ್ತಿರಲಾಗಿ ॥೬॥ ಪೂರ್ವೋಕ್ತನಾದ ಕಲಿಕಂಬಗಣ

ಯಾಕಲಿಕಂಬಸ್ತತ್ರಾಸದನಮಾದರಾತ್ | ತತಸ್ಸಕಲಿಕಂಬೋಽಪಿಗತ್ವಾಭಿ
ಮುಖಮಾಪರಾತ್ ||೭|| ಪ್ರಣಮ್ಯಾನಿಯತಂತಸ್ಮಿನ್ನತಭಕ್ತಾವಲೌಸತಿ |
ಕ್ಷಾಳಯಿತ್ವಾತುತತ್ಪಾದೌಪಪೌಪಾದೋದಕಂಶುಭಂ ||೮|| ಜ್ಞಾತ್ವಾಸಪಿಳ್ಳೈ
ನೈನಾರಿರ್ವಾರ್ತಾಂತಾಂಭಕ್ತಸಂಘತಃ | ಕಲಿಕಂಬಂಸಮಾಲಿಂಗ್ಯಸಂಸ್ತುವ
ನ್ನತಿಹರ್ಷತಃ ||೯|| ಆಕಾರಯಿತ್ವಾತದ್ಭಾರ್ಯಾಂಭಕ್ತೇಭ್ಯಃಪ್ರಣಮಯ್ಯಚ |
ಸ್ವಯಂಚಕೃತ್ವಾತಾಂಭಕ್ತಾನ್ ಶ್ರದ್ಧಾಭಕ್ತಿಪುರಸ್ಸರಂ ||೧೦|| ಛಿನ್ನಪಾಣಿತ
ಳೌಬಾಹ್ವೋಸ್ಸಂಧಾಯೋಪರಿಭಕ್ತಿತಃ | ಭೂತಿಂವಿಕಾರ್ಯಹೇಮಾತಸ್ಸಮು
ದ್ಧೃತ್ಯಭವತ್ಕರೌ ||೧೧|| ತ್ವಂಸಮುಸ್ಕುರುಭಕ್ತೇಭ್ಯಇತಿತಸ್ಯೈತದಾದಿಶತ್ |
ಸಂಸ್ಥಾಪ್ಯಮಸ್ತಕೇಪಾಣೀಸಮುಸ್ಕಾರೇಕೃತೇತಯಾ ||೧೨|| ನಮತ್ಸುಸ
ರ್ವಸಮಯೇಷ್ವತಿಪ್ರೀತ್ಯಾಸ್ತುವತ್ಸ್ವಪಿ | ಯಥಾಪೂರ್ವಂಕರಯುಗಂಜಾ
ತಂತಸ್ಯಾಮಹಾದ್ಭುತಂ ||೧೩|| ಅಶೇಷಭಕ್ತನಿವಹಸ್ತಮಾಚಾರ್ಯವರಂತ
ದಾ | ಪ್ರಸ್ತುತ್ಯಕಥಯಾಮಾಸತನ್ಮಾಹಾತ್ಮ್ಯಂಸಮುನ್ನತಂ ||೧೪|| ಕಿಮೇತ

---

ನಾಥನ ಮನೆಯನ್ನು ಕುರಿತು ಪ್ರೀತಿಯಿಂದ ಬಂದನು. ಆ ಕಲಿಕಂಬನು ಕೂಡ ವಿಶ್ವಾಸದಿಂದ ಇದಿರಾಗಿ ಬಂದು, ಹಲವುಬಾರಿ ನಮಸ್ಕರಿಸಿ, ಇತರ ಭಕ್ತರೆಲ್ಲರೂ ಆ ಪಿಳ್ಳೈನೈನಾರಿಗೆ ನಮಸ್ಕರಿಸಲಾಗಿ, ಆತನ ಪಾದಗಳನ್ನು ತೊಳೆದು ಮಂಗಳಕರವಾದ ಪಾದೋದಕವನ್ನು ಪಾನಮಾಡಿದನು ||೮|| ಆ ಪಿಳ್ಳೈನೈನಾರಿಯು ಕಲಿಕಂಬನು ನಡೆಯಿಸಿದ್ದ ವಿಶೇಷವಾದ ಸಂಗತಿಯನ್ನು ಭಕ್ತಸಮೂಹದ ಮುಖದಿಂದ ತಿಳಿದು, ಸಂತೋಷದಿಂದ ಆ ಕಲಿಕಂಬನನ್ನು ಆಲಿಂಗಿಸಿ, ಸ್ತೋತ್ರಮಾಡಿದವನಾಗಿ ||೯|| ಆತನ ಪತ್ನಿಯನ್ನು ಕರೆಯಿಸಿ, ಭಕ್ತರುಗಳಿಗೆ ನಮಸ್ಕಾರ ಮಾಡಿಸಿ, ತಾನುಕೂಡ ಭಕ್ತಿವಿಶ್ವಾಸಪೂರ್ವಕವಾಗಿ ಆ ಭಕ್ತರನ್ನು ನಮಸ್ಕರಿಸಿ ||೧೦|| ಕತ್ತರಿಸಿದ್ದ ಹಸ್ತಗಳೆರಡನ್ನೂ ಆಕೆಯ ತೋಳುಗಳಿಗೆ ಸೇರಿಸಿ, ಭಕ್ತಿಭಾವದಿಂದ ಅವುಗಳಮೇಲೆ ವಿಭೂತಿಯನ್ನು ಹರಡಿ, "ಎಲೌ ತಾಯೆ, ನಿನ್ನ ಕೈಗಳೆರಡನ್ನೂ ಎತ್ತಿ ಭಕ್ತರುಗಳಿಗೆ ನಮಸ್ಕಾರವನ್ನು ಮಾಡು" ಎಂದು ಆಕೆಗೆ ಆಜ್ಞಾಪಿಸಿದನು. ಆಕೆಯು ತನ್ನ ಹಸ್ತಗಳನ್ನು ಮಂಡೆಯ ಮೇಲೆ ಜೋಡಿಸಿಟ್ಟು, ನಮಸ್ಕಾರವನ್ನು ಮಾಡಲಾಗಿ ||೧೨|| ಸಕಲ ಮತದವರೂ ಈ ಅದ್ಭುತವನ್ನು ಕಂಡು ಅತ್ಯಂತ ಪ್ರೀತಿಯಿಂದ ನಮಸ್ಕರಿಸಿ ಹೊಗಳುತ್ತಿರಲಾಗಿ, ಆಕೆಯ ಹಸ್ತಗಳೆರಡೂ ಪೂರ್ವದಲ್ಲಿದ್ದಂತೆಯೇ ಅತ್ಯಾಶ್ಚರ್ಯಕರವಾಗಿ ನೇರವಾದುವು ||೧೩|| ಆಗ ಭಕ್ತಸಮೂಹವೆಲ್ಲವೂ ಆಚಾರ್ಯಶ್ರೇಷ್ಠನಾದ ಆ ಪಿಳ್ಳೈನೈನಾರಿಯನ್ನು ಸ್ತೋತ್ರಮಾಡಿ, ಉತ್ಕೃಷ್ಟವಾದ ಆತನ ಮಹಿಮೆಯನ್ನು ಕುರಿತು ಮಾತನಾಡಿಕೊಳ್ಳುವವರಾದರು. ||೧೪|| ಹೇಗೆಂದರೆ—ಅತ್ಯಂತ ಪ್ರಸಿದ್ಧವಾಗಿ ವರ್ಣಿಸಲ್ಪಡುತ್ತಿರುವ ಈತನ ಮಾ

ದಸ್ಯಮಾಹಾತ್ಮ್ಯವರ್ಣ್ಯಮಾನೇಽತಿವಿಶ್ರುತೇ | ಷಡಾನನಾಂಶತೋಽಭೂಮೌ
ಜನಿತ್ವಾತದನಂತರಂ ‖೧೫‖ ಪಾರ್ವತೀಸ್ತನ್ಯಪಾನಾಭಿಜಾತಸಾರ್ವಜ್ಞ್ಯಭೂ
ಷಿತಃ | ಜೈನಚಾರ್ವಾಕಬೌದ್ಧಾನಾಂಶಮಯಿತ್ವಾಮದೋದ್ಧತಿಂ ‖೧೬‖ ವಿ
ಧೂಯಸಮಯಾನನ್ಯಾನ್ಸಗಚ್ಛನ್ಮಧುರಾಪುರೀಂ | ಶೂದ್ರಸ್ಯಕಸ್ಯಚಿದ್ಗೇಹೇ
ಕಸ್ಮಿಂಶ್ಚಿತ್ಕನ್ಯಕಾರ್ಥಿನಿ ‖೧೭‖ ನಿರಂತರಃಕರ್ಮಸರ್ವಂಪ್ರಕುರ್ವತ್ಯಥಮಂತ
ತಃ | ಏಕಾಮಸ್ಯಪ್ರದಾಯಾಸ್ಮೈಕನ್ಯಾಂಕನ್ಯಾಸುಸಪ್ತಸು ‖೧೮‖ ಇತರೇ
ಭ್ಯಃಪ್ರದತ್ತಾಸುಕನೀಯಸ್ಯಾಂವಿವೇಕತಃ | ತಮಾಹೂಯಸದಾಸ್ಯಂತಿತು
ಭ್ಯಂಮಾಮಪಿನಿಶ್ಚಿತಂ ‖೧೯‖ ಭ್ರಾತರೋದುರ್ಮದವಶಾದಹಂಕಿಮಪಿಪತ್ತನಂ|
ಯಾಸ್ಯಾಮಇತಿನಿರ್ಗತ್ಯತೇನಸಾರ್ಧಂಮಹಾಟವೀಂ ‖೨೦‖ ಗತಾಯಾಮುಗ್ರ
ಸರ್ಪೇಣದಷ್ಟೇತಸ್ಮಿನ್ಮೃತೇಸತಿ | ರುದಂತೀಂತಾಂಸಮುದ್ವೀಕ್ಷ್ಯಕರುಣಾಪೂ
ರ್ಣಮಾನಸಃ‖೨೧‖ ಶೂದ್ರಮುಜ್ಜೀವಯಾಮಾಸತಪಸಾತುಸ್ವಪ್ರಭಾವತಃ|
ಭೂಯೋಪಿಕಶ್ಚಿದ್ವಾಗೀಶನ್ಯೈನಾರಿರಿತಿವಿಶ್ರುತಃ ‖೨೨‖ ಸದ್ಭಕ್ತೋಽಸ್ತಿಸಸದ್ಭ

---

ಹಾತ್ಮ್ಯದಲ್ಲಿ ಇನ್ನೆಷ್ಟಿರದು? ಈತನು ಕುಮಾರಸ್ವಾಮಿಯ ಅಂಶದಿಂದ ಭೂಮಿಯಲ್ಲಿ
ಸಂಜನಿಸಿ, ಬಳಿಕ ‖೧೫‖ ಪಾರ್ವತಿಯ ಸ್ತನ್ಯಪಾನ ಮಾಡಿದುದರಿಂದ ಉಂಟಾದ ಸರ್ವ
ಜ್ಞತ್ವದಿಂದ ಅಲಂಕೃತನಾಗಿ, ಜೈನ ಬೌದ್ಧ ಚಾರ್ವಾಕರುಗಳ ಅಹಂಕಾರಾತಿಶಯವ
ನ್ನು ಅಡಗಿಸಿ ‖೧೬‖ ದ್ವೈತಾದಿ ಪರಸಮಯಗಳನ್ನು ಭಂಜಿಸಿ, ಮಧುರಾಪಟ್ಟಣ
ವನ್ನು ಕುರಿತು ಹೊರಟವನಾದನು. ಅಲ್ಲಿ ಒಬ್ಬ ಶೂದ್ರನ ಮನೆಯಲ್ಲಿ ಮತ್ತೊಬ್ಬನು
ಹೆಣ್ಣನ್ನಪೇಕ್ಷಿಸಿಕೊಂಡು ಯಾವಾಗಲೂ ಮನೆ ಯಜಮಾನನು ಹೇಳಿದ ಕೀಳುಗೆಲಸಗ
ಳನ್ನೆಲ್ಲ ಮಾಡಿಕೊಂಡಿದ್ದನು. ಆತನು ತನ್ನ ಏಳು ಮಂದಿ ಹೆಣ್ಣುಮಕ್ಕಳಲ್ಲಿ ಇವನಿಗೆ
ಒಬ್ಬಳನ್ನಾದರೂ ಕೊಡದೆ ೬ ಮಂದಿಗಳನ್ನೂ ಇತರರಿಗೇ ಕೊಟ್ಟುಬಿಡಲಾಗಿ, ಉಳಿ
ದಿದ್ದ ಕಿರಿಯವಳೊಬ್ಬಳು ತನ್ನಲ್ಲೇ ವಿಚಾರಮಾಡಿಕೊಂಡು, ಆತನನ್ನು ಕರೆದು—ನನ್ನ
ಸಹೋದರರುಗಳು ದುರಹಂಕಾರದಿಂದ ನನ್ನನ್ನು ಕೂಡ ನಿನಗೆ ಕೊಡರು. ಇದು ನಿಜ.
ಆದುದರಿಂದ ನಾವಿಬ್ಬರೂ ಯಾವುದಾದರೊಂದು ಪಟ್ಟಣಕ್ಕೆ ಹೋಗುವ, ಎಂದು ಹೇಳಿಕೊ
ಟ್ಟು ಅವನೊಡನೆ ದೊಡ್ಡದೊಂದು ಕಾಡಿಗೆ ಹೊರಟುಹೋದಳು ‖೨೦‖ ಅಲ್ಲಿ ಆತನು
ಭಯಂಕರವಾದ ಸರ್ಪದಿಂದ ಕಚ್ಚಲ್ಪಟ್ಟು ಸಾಯಲಾಗಿ, ಅಳುತ್ತಿರುವ ಆಕೆಯನ್ನು
ಪಿಳ್ಳನ್ನೈನಾರಿಯು ಕಂಡು, ದಯೆಯಿಂದ ತುಂಬಿದ ಮನಸ್ಸುಳ್ಳವನಾಗಿ ‖೨೧‖ ಸತ್ತುಬಿ
ದ್ದಿದ್ದ ಆ ಶೂದ್ರನನ್ನು ತನ್ನ ಮಹಿಮೆಯಿಂದ ಬೇಗನೆ ಬದುಕಿಸಿದನು. ಮತ್ತೂ,
ವಾಗೀಶನ್ಯೈನಾರಿಯೆಂದು ಪ್ರಸಿದ್ಧನಾದ ಭಕ್ತೋತ್ತಮನೊಬ್ಬನಿರುವನು. ಆತನು

ಕ್ತ್ಯಾತೋಷಯಿತ್ವಾಮಹೇಶ್ವರಂ । ಲಬ್ಧ್ವಾಪಿಲಲಿತಾಂಪುತ್ರೀಂಸಂತುಷ್ಟಾ
ತ್ಪರಮೇಶ್ವರಾತ್ ॥೨೩॥ ದಾಸ್ಯಾಮಿಪಿಳ್ಳೈನೈನಾರಿಭಕ್ತಾಯೇತ್ಯವಸನ್ಮುದಾ।
ಮೃತಾಯಾಮಥತತ್ಪುತ್ರ್ಯಾಂಸದ್ಭಕ್ತಿಸ್ಥಿರಮಾನಸಃ ॥೨೪॥ ಸರ್ವಥೇಮಾಂ
ಮತ್ಪ್ರತಿಜ್ಞಾಂನತ್ಯಕ್ಷ್ಯಾಮೀತಿನಿಶ್ಚಿತಃ । ಘಟೇನಿಧಾಯತಾಂಪುತ್ರೀಮತಿ
ಷ್ಠತ್ತದನಂತರಂ ॥೨೫॥ ಅಸ್ಮಿಂಛ್ರೀಪಿಳ್ಳೈನೈನಾರಿಭಕ್ತೇತತ್ರಸಮಾಗತೇ ।
ಪ್ರಣಮ್ಯಭಕ್ತ್ಯಾಸತ್ಕಾರಂವಿಧಾಯಸಯಥೋಚಿತಂ ॥೨೬॥ ಆನವಾಬ್ಧಂ
ಘಟಾವಾಸಾಚ್ಛಲ್ಯಶೇಷಾಂಸುತಾಂತದಾ । ಆನೀಯತತ್ಸಭಾಮಧ್ಯೇಪ್ರಾಹಭ
ಕ್ತ್ಯಾಯಥಾರ್ಥತಃ ॥೨೭॥ ಪುತ್ರಿಕಾಮಮಸಂಜಾತಾಕಾಚಿತ್ಸಾಭವತೇಮುದಾ।
ದತ್ತಾಪ್ರತಿಜ್ಞಾಸಂಪೂರ್ಣಾಮಮಜಾತಾಹಿಸಾಂಪ್ರತಂ ॥೨೮॥ ಯಥಾತ
ಥಾಕುರುಷ್ವೈನಾಂತ್ವಮಾಚಾರ್ಯವರೋತ್ತಮ । ತೇನೇತ್ಯುಕ್ತಸ್ಸಪ್ರಣಮ್ಯ
ಭಕ್ತಸಂದೋಹಮಾದರಾತ್ ॥೨೯॥ ಚಿಕ್ಷೇಪಶಲ್ಯನಿವಹೇಭೂತಿಂಸಾಕಸ್ಯ
ಕಾಮದಾ । ಘಟಾದ್ವಿನಿರ್ಗತಾಭವ್ಯಲಾವಣ್ಯಾಸಮುದಂಚಿತಾ ॥೩೦॥ ತಸ್ಮಾ

---

ಉತ್ತಮಭಕ್ತಿಯಿಂದ ಪರಶಿವನನ್ನು ಸಂತೋಷಪಡಿಸಿ, ಶಿವಾನುಗ್ರಹದಿಂದ ಸುಂದರಿಯಾದ ಮಗಳನ್ನು ಪಡೆದು ॥೨೩॥ ಆಕೆಯನ್ನು ಪಿಳ್ಳೈನೈನಾರಿಭಕ್ತನಿಗೆ ಕೊಡಬೇಕೆಂದು ಸಂಕಲ್ಪಿಸಿ, ಸಂತೋಷದಿಂದಿರುತ್ತಿದ್ದನು. ಹೀಗಿರುವಲ್ಲಿ ಆತನ ಮಗಳು ಮೃತಳಾದಳು. ಸದ್ಭಕ್ತಿಯಿಂದ ಸ್ಥಿರವಾದ ಮನಸ್ಸುಳ್ಳ ಆ ವಾಗೀಶನೈನಾರಿಯು ॥೨೪॥ ನಾನು ಮಾಡಿರುವ ಈ ಪ್ರತಿಜ್ಞೆಯನ್ನು ಯಾವ ಪ್ರಕಾರದಿಂದಲೂ ಬಿಡತಕ್ಕವನಲ್ಲವೆಂದು ನಿರ್ಧರಿಸಿದವನಾಗಿ, ಆ ತನ್ನ ಮಗಳನ್ನು ಒಂದು ಕುಂಭದಲ್ಲಿ ತುಂಬಿಟ್ಟು ಸ್ವಸ್ಥನಾಗಿದ್ದನು. ಬಳಿಕ ॥೨೫॥ ಈ ಪಿಳ್ಳೈನೈನಾರಿಭಕ್ತನು ಅಲ್ಲಿಗೆ ಬರಲಾಗಿ, ಆ ವಾಗೀಶನು ಭಕ್ತಿಯಿಂದ ನಮಸ್ಕರಿಸಿ, ಯಥೋಚಿತವಾಗಿ ಸತ್ಕಾರಮಾಡಿ ॥೨೬॥ ೯ ವರ್ಷಗಳಿಂದಲೂ ಕುಂಭದಲ್ಲಿಟ್ಟಿದ್ದುದರಿಂದ ಒಣಗಿ ಬಿದಿರುಕಟ್ಟಿಗೆಯಂತಾಗಿದ್ದ ಆ ಮಗಳ ಶವವನ್ನು ಭಕ್ತರ ಸಭಾಮಧ್ಯಕ್ಕೆ ತರಿಸಿ, ಭಕ್ತಿಯಿಂದ ಯಥಾರ್ಥವಾಗಿ ನುಡಿದನು ॥೨೭॥ ಹೇಗೆಂದರೆ — "ಎಲೈ ಆಚಾರ್ಯನೆ, ಒಬ್ಬ ಮಗಳು ನನಗೆ ಹುಟ್ಟಿದ್ದಳು. ಅವಳನ್ನು ನಿನಗೆ ಕೊಡಬೇಕೆಂದು ಪ್ರತಿಜ್ಞೆ ಮಾಡಿದ್ದೆನು. ಇದೋ ಒಪ್ಪಿಸಿರುತ್ತೇನೆ. ಈಗ ನನ್ನ ಪ್ರತಿಜ್ಞೆಯು ನೆರವೇರಿತು. ನೀನು ಇವಳನ್ನು ಹೇಗೆ ಬೇಕಿದ್ದರೂ ಮಾಡು" ಎಂದು ಹೇಳಿದನು. ಪಿಳ್ಳೈನೈನಾರಿಯಾದರೋ ಭಕ್ತಸಮೂಹಕ್ಕೆ ಪ್ರೀತಿಯಿಂದ ನಮಸ್ಕಾರ ಮಾಡಿ ॥೨೯॥ ಕುಂಭದಲ್ಲಿರುವ ಆ ಅಸ್ಥಿಪಂಜರದ ಮೇಲೆ ವಿಭೂತಿಯನ್ನು ತಳಿದನು. ಆ ಕನ್ಯೆಯಾದರೋ ಮನೋಹರವಾದ ಲಾವಣ್ಯದಿಂದ ಕೂಡಿ ಕುಂಭದಿಂದೀಚೆಗೆ ಹೊರಟು ಬಂದಳು ॥೩೦॥ ಆದುದರಿಂದ ಈತನ ಮಹಿಮೆಯನ್ನು ಹೊಗಳು

ದೇತಸ್ಯಮಾಹಾತ್ಮ್ಯಮೀಶ್ವರೇಣಾಪಿಶಂಸಿತುಂ । ಕಿಂಶಕ್ಯಮಿತಿಸದ್ಭಕ್ತಸಂದೋಹಸ್ಸಮಕೀರ್ತಯತ್ ॥೩೧॥ ಇತ್ಥಂಶ್ರೀಪಿಳ್ಳೆನೈನಾರಿಃಕಲಿಕಂಬಸ್ಯಯೋಷಿತಃ । ಕರೌದದಾವಿತಿಪುರಾವಿದಾಂವಾಕ್ಯೈಃಪುರಾಶ್ರುತಂ ॥೩೨॥ ಇದಾನೀಂ ಪಂಡಿತಾರಾಧ್ಯೋ ಮಹೇಶ್ವರಕೃಪಾಬಲಾತ್ । ಮಹಾದೇವಸ್ಯಚರಣೌದತ್ತವಾನಿದಮದ್ಭುತಂ ॥೩೩॥

ಇತಿ......ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತೆ
ಪುರಾತನ ಪ್ರಕರಣೆ ಶ್ರೀಪಿಳ್ಳೆನೈನಾರಿಮಾಹಾತ್ಮ್ಯ
ಕಥನಂ ನಾಮ ತೃತೀಯೋಽಧ್ಯಾಯಃ.

---

ಪುದಕ್ಕೆ ಶಿವನಿಗುಕೂಡ ಶಕ್ಯವೆ? ಎಂದು ಭಕ್ತಸಮೂಹವೆಲ್ಲವೂ ಹೊಗಳಿತು ॥೩೧॥ ಎಂಬುದಾಗಿ ಹೀಗೆ ಶ್ರೀಪಿಳ್ಳೆನೈನಾರಿಯು ಕಲಿಕಂಬ ಗಣನಾಥನ ಪತ್ನಿಯು ಹಸ್ತಗಳನ್ನು ಕೊಟ್ಟಿದ್ದನೆಂಬ ಪುರಾತನ ವೃತ್ತಾಂತವನ್ನು ಬಲ್ಲವರ ಮುಖದಿಂದ ಕೇಳಿದ್ದೆವು ॥೩೨॥ ಈಗಳಾವರೂ ಶ್ರೀ ಪಂಡಿತಾರಾಧ್ಯನು ಶಿವನ ದಯಾಬಲದಿಂದ ಪೆಲ್ಲಕೊಂಡದ ಮಹಾದೇವನಿಗೆ ಪಾದಗಳನ್ನು ಕೊಟ್ಟನು. ಇದು ಆಶ್ಚರ್ಯವು. ಎಂದು ಹೊಗಳುವವರಾದರು ॥೩೩॥

ಎಂಬಲ್ಲಿಗೆ ೩ ನೆಯ ಅಧ್ಯಾಯವು ಮುಗಿದದು.

# ಅಥ ಚತುರ್ಥೋಽಧ್ಯಾಯಃ.

---

## (ದಸರಯ್ಯಮಾಹಾತ್ಮ್ಯ ಕಥನಂ.)

ಕಿಂಚಾಸನಮಾಕ್ಷಸದ್ಭಕ್ತಶ್ಶುಭಕೀರ್ತಿರ್ಜಿತೇಂದ್ರಿಯಃ । ಭಕ್ತಿಕ್ರಿಯಾಸುಧೌರೇಯಸ್ಸಚ್ಚಾರಿತ್ರಾಶ್ರಯೋಮಹಾನ್ ॥೧॥ ಪಾಪದೂರೋವಿದಳಿತಸಂಸಾರೋಽಹಿಂಸಕೇತರಃ । ಅಪಾಕೃತಾಶುದ್ಧಕರ್ಮಾ ತೃಣೀಕೃತಜಗಜ್ಜನಃ ॥ ಸ್ವೀಕೃತೇಶಾನಚರಣೋ ದೂರೀಕೃತಭವಾಮಯಃ । ದಸರಾರ್ಯಶ್ಯಮದಮದಾನಾದಾನಯಮಾದಿಷು ॥೩॥ ಶೈವಧರ್ಮೇಷುಸತತಮುಲ್ಲಸತ್ಸ್ವಾತಿಭಕ್ತಿತಃ । ಗುರೋರ್ಲಿಂಗಸ್ಯಚತಥಾಜಂಗಮಾನಾಂಸಮರ್ಚನಂ ॥೪॥ ಕುರ್ವನ್ನವರ್ತತಸುಖಂಶಿವಜ್ಞಾನಮಹೋದಧಿಃ । ತಂಕದಾಚಿಚ್ಛಂಭುಪೂಜಾಪುಷ್ಪಾರ್ಥಂಗಂತುಮುದ್ಯತಂ ॥೫॥ ದುರ್ಜನಾಸ್ಸಕಲಾವೀಕ್ಷ್ಯಪುರೇಽಸ್ಮಾಕಮಯಂಕಿಲ ಪ್ರಖ್ಯಾತನಾಮಾಶ್ರೀನೀಲಕಂಠಭಕ್ತಿಮಹತ್ವತಃ ॥೬॥ ಕೋಪಂಜಿತ್ವಾಸರ್ವಜೀವದಯಾಪರತಯಾಭುವಿ । ಸ್ತೋತ್ರಪಾತ್ರಂಕಿಲಾಶೇಷಪ್ರತಿಶ್ರೇಷ್ಠೋ

---

# ೪ ನೆಯ ಅಧ್ಯಾಯವು.

## (ದಸರಯ್ಯಗಳ ಮಹಿಮೆಯ ಕಥೆಯು.)

ಮತ್ತೂ ಶಿವನ ಸದ್ಭಕ್ತನೂ ಮಂಗಳಮಯವಾದ ಕೀರ್ತಿಯುಳ್ಳವನೂ ಜಿತೇಂದ್ರಿಯನೂ ಭಕ್ತ್ಯಾಚರಣದಲ್ಲಿ ಧುರಂಧರನೂ ಸಚ್ಚಾರಿತ್ರನೂ ಗನಹನೂ ॥೧॥ ಪಾಪಕ್ಕೆ ದೂರನೂ, ಜನನ ಮರಣಾತ್ಮಕ ಸಂಸಾರವನ್ನು ಭೇದಿಸಿದವನೂ, ಪ್ರಾಣಿಹಿಂಸಕರಿಂ ವ್ಯತಿರಿಕ್ತನಾದವನೂ, ಮಲಿನ ಕರ್ಮಗಳನ್ನೆಲ್ಲ ತಿರಸ್ಕರಿಸಿದವನೂ, ಲೋಕದ ಜನರನ್ನೆಲ್ಲ ತೃಣೀಕರಿಸಿದವನೂ ॥೨॥ ಶಿವಪಾದವನ್ನು ಹಿಡಿದವನೂ, ಭವರೋಗವನ್ನು ದೂರೀಕರಿಸಿದವನೂ ಆದ ದಸರಾರ್ಯನೆಂಬ ಭಕ್ತನೊಬ್ಬನಿದ್ದನು. ವೀರಶೈವ ಧರ್ಮದಲ್ಲಿ ಅಂತರ್ಬಹಿರಿಂದ್ರಿಯನಿಗ್ರಹಗಳೂ ದಾನಪ್ರತಿಗ್ರಹ ಮೊದಲಾದುವುಗಳೂ ಆತನಿಗೆ ಯಾವಾಗಲೂ ಬಪ್ಪುತ್ತಿರಲಾಗಿ, ಶಿವಜ್ಞಾನ ಸಮುದ್ರನಾದ ಆತನು ಅತ್ಯಂತ ಭಕ್ತಿಯಿಂದ ಗುರುಲಿಂಗ ಜಂಗಮರ ಪೂಜೆಯನ್ನು ಮಾಡಿಕೊಂಡು ಸುಖವಾಗಿದ್ದನು. ಬಳಿಕ ಒಂದು ದಿವಸ ಶಿವಪೂಜೆಗೆ ಹೂವನ್ನು ತರುವುದಕ್ಕಾಗಿ ಹೋಗುತಿದ್ದ ಆತನನ್ನು ॥೫॥ ದುರ್ಜನರೆಲ್ಲರೂ ನೋಡಿ, ,, ನಮ್ಮ ಊರಿನಲ್ಲಿ ಈತನು ಶಿವಭಕ್ತಿಯ ಮಹಿಮೆಯಿಂದ ಪ್ರಸಿದ್ಧವಾದ ಹೆಸರುಳ್ಳವನಂತೆ ! ॥೬॥ ಭೂಮಿಯಲ್ಲಿ ಸಕಲ ಜೀವದಯಾಪರನಾಗಿರುವುದರಿಂದ ಕೋಪವೆಂಬುದನ್ನು ಜಯಿಸಿ, ಶ್ಲಾಘಾಪಾತ್ರನಾಗಿರುವನಂತೆ ! ಸಕಲ ಪ್ರ

ಹ್ಯಯಂಕಿಲ ||೭|| ಅಜ್ಞಾತ್ವಾತ್ಮಹಿತಂಭೂತಹಿತಾಶಂಸಿಹ್ಯಯಂಕಿಲ | ಬಾಧಿ
ತೋಽಪಿಸರ್ವೈರೇತದನುಕ್ತ್ವಾನ್ಯಾಯ್ಯಮಿತ್ಯಲಂ ||೮|| ಕ್ಷಮಾಂಕರ್ತುಂಕ್ಷ
ಮಸ್ಸಾಧುಜನೋಽಯಂಕಿಲಭೂತಳೆ | ಮಯಾಸಂವೀಕ್ಷ್ಯತೇಽನ್ಯೇಷಾಂಯಾಂ
ತಿಚೇತಾಂಸಿಕಿಂಶುಚಂ ||೯|| ಇತಿ ಬುದ್ಧ್ಯೇತರಜನಾನಯಂನಪ್ರೇಕ್ಷತೆಕಿಲ |
ಜಂತವಃಪದವಿನ್ಯಾಸೈರ್ಮ್ರಿಯೇರನ್ನಿತಿಬುದ್ಧಿತಃ ||೧೦|| ಪರೀಕ್ಷ್ಯಪದವಿನ್ಯಾ
ಸಾನಯಂಪ್ರಕುರುತೆಕಿಲ | ಪ್ರಾಣಿನಃಕಿಂಬಾಹುಘಾತಾತ್ಪತೇಯುರಿತಿಭಾ
ವತಃ ||೧೧|| ಯಾನಕಾಲೇನಕುರುತೆಕಿಲಾಯಂಬಾಹುಚಾಲನಂ | ಕಿಮೇಭಿ
ರ್ಬಹುಭಿರ್ವಾಕ್ಯೈರಯಮಾರ್ಯಃ ಪುರಾಕಿಲ ||೧೨|| ಪುಷ್ಪಾಪಚಯವೇಳಾ
ಯಾಂಪುಷ್ಪವೃಕ್ಷೇಷುಜಾತುಚಿತ್ | ದುಃಖಿತಾಸ್ಮಬತೇತ್ಯುಚ್ಚೈರ್ವದತ್ಸು
ತದನಂತರಂ ||೧೩|| ಪುಷ್ಪಚ್ಛಿನ್ನಪ್ರದೇಶೇಷುರಕ್ತಾಕಾರೇರಸೇಪುನಃ | ಪ್ರ
ವರ್ಷತಿಸತೀತ್ಥಂಹಿದ್ರುಮೈರುಕ್ತಮಿತಃಪರಂ ||೧೪|| ವೃಕ್ಷಾಣಾಂಪೀಡನಂ
ಹಿಂಸೇತ್ಯುಕ್ತ್ವಾಪುಷ್ಪಮಹೀರುಹಾಂ | ಪರಿತೋಽಮಾಯುರೋಧಾರ್ಥಂಕ
ಟಾನ್ಬದ್ಧ್ವೋಪಲಿಪ್ಯಗಾಂ ||೧೫|| ಏಕೈಕಶಶ್ಚತಾನ್ಯೇವಸ್ವತಃಪುಷ್ಪಾಣಿಭೂ

---

ಸಂಪನ್ನರಲ್ಲೆಲ್ಲ ಇವನೇ ಶ್ರೇಷ್ಠನಂತೆ! ||೭|| ತನ್ನ ಹಿತವನ್ನು ಕೂಡ ನೋಡದೆ ಇವ
ನು ಪ್ರಾಣಿಗಳ ಹಿತವನ್ನು ಕೋರುವವನಂತೆ! ಇತರರು ತನಗೆ ಹಿಂಸೆಯನ್ನು ಮಾಡಿ
ದರೂ, ಇದು ಅನ್ಯಾಯವೆಂದು ಕೂಡ ಹೇಳದೆ ಸಹಿಸಿಕೊಳ್ಳುವುದಕ್ಕೆ ಸಮರ್ಥನಾದ
ಸತ್ಪುರುಷನಂತೆ! “ನಾನು ನೋಡಿದರೆ ಅವರ ಮನಸ್ಸು ಕ್ಲೇಶಗೊಳ್ಳಬಹುದು; ಅದು
ಕಾರಣ ನೋಡಬಾರದು” ಎಂದು ಯೋಚಿಸಿ, ಇತರ ಜನರನ್ನು ಈತನು ನೋಡುವುದೇ
ಇಲ್ಲವಂತೆ! ತಾನು ಪಾದವನ್ನಿಡುವುದರಿಂದ ಭೂಮಿಯಮೇಲಿರುವ ಜಂತುಗಳು ಹಜ್ಜೆ
ಗೆ ಸಿಕ್ಕಿ ಸಾಯಬಹುದೆಂಬ ಬುದ್ಧಿಯಿಂದ, ಈತನು ಜಂತುಗಳಿಲ್ಲದ ಸ್ಥಲವನ್ನು ಚೆನ್ನಾ
ಗಿ ಪರೀಕ್ಷಿಸುತ್ತ ಹಜ್ಜೆಯನ್ನಿಡುವವನಂತೆ! ತೋಳುಗಳನ್ನು ಬೀಸಿಕೊಂಡು ಹೋಗು
ವುದರಿಂದ ಪ್ರಾಣಿಗಳು ಆ ಏಟಿಗೆ ಸಿಕ್ಕಿಬಿದ್ದು ಹೋಗುವುವೆಂಬ ಯೋಚನೆಯಿಂದ ||೧೧||
ತಿರುಗಾಡುವ ಕಾಲದಲ್ಲಿ ತೋಳುಗಳನ್ನು ಅಲ್ಲಾಡಿಸುವುದೇ ಇಲ್ಲವಂತೆ! ಈ ಹೆಚ್ಚು
ಮಾತುಗಳಿಂದೇನು? ಈ ಪೂಜ್ಯನು ಪೂರ್ವದಲ್ಲಿ ಒಂದಾನೊಂದು ವೇಳೆ ಹೂವನ್ನು ಕೊ
ಯ್ಯುವಾಗ, ಹೂಮರಗಳು “ಅಯ್ಯೋ! ನೊಂದುಕೊಂಡೆವು” ಎಂದು ಗಟ್ಟಿಯಾಗಿ
ಹೇಳಲಾಗಿ, ಬಳಿಕ ||೧೩|| ಹೂವನ್ನು ಕೊಯ್ದ ಸ್ಥಳಗಳಲ್ಲಿ ರಕ್ತರೂಪವಾದ ರಸವು ಸು
ರಿಯಲಾಗಿ, ಈತನು— “ಮರಗಳು ಹೀಗೆ ಹೇಳಿಬಿಟ್ಟಬಳಿಕ ಇನ್ನುಮೇಲೆ ಹೂವಿಗಾಗಿ
ಮರಗಳನ್ನು ನೋಯಿಸುವುದು ಹಿಂಸಾಕಾರ್ಯವು” ಎಂದು ಹೇಳಿ, ಹೂಗಿಡಗಳ ಸುತ್ತ

ತಳೆ | ಆದಾಯಪೂಜಯಚ್ಛಂಭುಮಕುರ್ವನ್ವೃಕ್ಷಪೀಡನಂ ||೧೬|| ಅಹಿಂ
ಸಾತ್ಮಾಕಿಲಾಯಂಕಿಂಸರ್ವಸಾಧಾರಣೋಭುವಿ | ಸರ್ವೇಷಾಂಶಿವಭಕ್ತಾನಾಂ
ಮಧ್ಯೆಸಮ್ಯಗ್ವಿಚಾರಿತೆ ||೧೭|| ಕೀದೃಶೀಶಿವಸದ್ಭಕ್ತಿರ್ವಿಶ್ವಾಸಃಕೀದೃಶಸ್ತಥಾ|
ಕೀದೃಶ್ಯಹಿಂಸಾಪರತಾಕೀದೃಶೀಶಾಂತತಾಪರಾ ||೧೮|| ಕೀದೃಶೀಕರುಣಾಕ್ಷಾಂ
ತಿಃಕೀದೃಶೀಕೀದೃಶಂಮನಃ | ವದಂತಸ್ಸರ್ವಮೇತದ್ಧಿಜ್ಞಾಸ್ಯಾಮಇತಿತೇಽ
ಖಿಲಾಃ ||೧೯|| ಹಸ್ತಹೀನಂಭಂಡಮೇಕಮಾಹ್ವಯಾಮಾಸುರಂಜಸಾ |
ಮುಂಡಯಿತ್ವಾತಸ್ಯಶಿರೋಭಂಡಸ್ಯತದನಂತರಂ ||೨೦|| ತ್ರಿಧಾವೃತ್ತಂಸ್ಥೂ
ಲಸೂತ್ರಂಕಟಿದೇಶೇಪ್ರಬಧ್ಯಚ | ಅಂಗೇಷುಮೂರ್ಧ್ನಿವಕ್ತ್ರೇಚಭಸ್ಮಸಾಂ
ದ್ರಂಪ್ರಲಿಪ್ಯಚ ||೨೧|| ಪಾದೌಪ್ರಕ್ಷಾಳ್ಯರುದ್ರಾಕ್ಷಾನಾಬಧ್ಯಸ್ಫಟಿಕಾನ್ಮ
ಣೀನ್ | ಸಿತಾನ್ಕೃತ್ವಾಘರ್ಷಣೇನದಂತಾಂಛೂನ್ಯಾಂಚಸಜ್ಜಿಕಾಂ ||೨೨||
ಗಳೆಬಧ್ವಾಸಜ್ಜಿಕಾಂತಾಂಸಂವೇಷ್ಟ್ಯಮೃದುವಸ್ತ್ರತಃ | ಇತ್ಥಂಸಮ್ಯಗ್ಜಂ
ಗಮಸ್ಯವೇಷಂಕೃತ್ವಾಮನೋಹರಂ ||೨೩|| ಸವಿಸ್ಮಯೇಷುಪೌರೇಷುಮೋ
ಟಮಲ್ಲಯ್ಯಶೀಘ್ರತಃ | ಗತ್ವಾತ್ವಂವಸರಾರ್ಯಸ್ಯಮಸ್ತಕಂತ್ಯಕ್ತಸಾಧ್ವಸಃ ||

---

ಲೂ ಗಾತೆಯ ತಡೆಗಾಗಿ ನೆರಕೆಯನ್ನು ಕಟ್ಟಿ, ಕೆಳಗೆ ಭೂಮಿಯನ್ನು ಸಾರಿಸಿ ||೧೬||
ಒಂದೊಂದಾಗಿ ತಾನಾಗಿ ಭೂಮಿಯಮೇಲೆ ಬಿದ್ದ ಹೂವುಗಳನ್ನೇ ತೆಗೆದುಕೊಂಡುಬಂದು,
ಶಿವನನ್ನು ಪೂಜಿಸುತ್ತ, ಮರಗಳ ಹಿಂಸೆಯನ್ನು ಮಾಡದಿರುವ ಅಹಿಂಸಾತ್ಮನಂತೆ!
ಭೂಮಿಯಲ್ಲಿ ಸಕಲ ಶಿವಭಕ್ತರ ಮಧ್ಯದಲ್ಲಿ ಚೆನ್ನಾಗಿ ವಿಚಾರ ಮಾಡಿ ನೋಡಿದರೆ
ಇವನೇನು ಸರ್ವಸಾಮಾನ್ಯನೆ? ||೧೭|| ಆ ಶಿವಭಕ್ತಿಯು ಎಂತಹದು? ವಿಶ್ವಾಸವೆಂತ
ಹದು? ಅಹಿಂಸಾಪರತ್ವವೆಂತಹದು? ಉತ್ಕೃಷ್ಟವಾದ ಶಾಂತತ್ವವೆಂತಹದು ||೧೮||
ದಯೆಯೆಂತಹದು? ಸಹನೆಯೆಂತಹದು? ಮನಸ್ಸೆಂತಹದು? ಇವೆಲ್ಲವನ್ನೂ ತಿಳಿಯ
ಬೇಕು ಎಂಬುದಾಗಿ ಅವರೆಲ್ಲರೂ ನುಡಿದವರಾಗಿ ||೧೯|| ಕೈಯಿಲ್ಲದ ಬಂಡನೊಬ್ಬನನ್ನು
ಬೇಗನೆ ಕರೆಯಿಸಿದರು. ಬಳಿಕ ಆ ಬಂಡನ ತಲೆಯನ್ನು ಬೋಳಿಸಿಸಿ, ದಪ್ಪನಾದ
ಮೂರುಸುತ್ತಿನ ಉಡಿದಾರವನ್ನು ಕಟ್ಟಿ, ಎಲ್ಲ ಅಂಗಗಳಲ್ಲೂ ನೆತ್ತಿಯಲ್ಲೂ ಮುಖದಲ್ಲೂ
ಸಹ ವಿಭೂತಿಯನ್ನು ದಟ್ಟವಾಗಿ ಬಳಿದು ||೨೦|| ಕಾಲುಗಳನ್ನು ತೊಳೆದು, ರುದ್ರಾಕ್ಷಿ
ಗಳನ್ನೂ ಸ್ಫಟಿಕದ ಮಣಿಗಳನ್ನೂ ಕೊರಲಿಗೆ ಕಟ್ಟಿ, ಉಜ್ಜುವಿಕೆಯಿಂದ ಹಲ್ಲುಗಳ
ನ್ನು ಬೆಳ್ಳಗೆ ಮಾಡಿ, ಬರಿಯ ಕರಡಿಗೆಯನ್ನು ಕತ್ತಿನಲ್ಲಿ ಕಟ್ಟಿ, ಆ ಕರಡಿಗೆಯನ್ನು
ಮೃದುವಾದ ಬಟ್ಟೆಯಿಂದ ಸುತ್ತಿ, ಹೀಗೆ ಮನೋಹರವಾಗುವಹಾಗೆ ಚೆನ್ನಾಗಿ ಜಂಗ
ಮನ ವೇಷವನ್ನು ಅವನಿಗೆ ರಚಿಸಿ ||೨೩|| ಪಟ್ಟಣದವರೆಲ್ಲರೂ ನೋಡಿ ಆಶ್ಚರ್ಯಪಡುತ್ತಿ
ರಲಾಗಿ, ,, ಎಲೆ ಮೋಟಮಲ್ಲಯ್ಯನೆ! ನೀನು ಬೇಗನೆ ಹೋಗು, ಭೀತಿಯನ್ನು ಬಿಟ್ಟು

ಛಿನ್ನಾಭ್ಯಾಂತವಹಸ್ತಾಭ್ಯಾಂತಾಡಯಾತ್ಯಂತನಿಷ್ಠುರಂ | ಪುನರ್ನತಾಡಯ
ತ್ಯೇವತ್ವಾಮಿತ್ಯುಕ್ತ್ವಾಮದೋದ್ಧತಃ ||೧೫|| ತದಾತಂಪ್ರೇಷಯಾಮಾಸು
ಸ್ಸೋಪಿಹರ್ಷವಿಜೃಂಭಿತಃ | ಸಮುನ್ನಯನ್ಪೃಷ್ಠಭಾಗಂತಿರ್ಯಕ್ಪಾದೌಪ್ರ
ಸಾರಯನ್ ||೧೬|| ಸ್ವಯಂಸ್ವಮೇವಸಂಪಶ್ಯಂಶ್ಚಾಲಯನ್ನಪಿಮಸ್ತಕಂ |
ಭುಜೌವಿಲೋಕಯನ್ವಕ್ತ್ರಂವಕ್ರೀಕುರ್ವನ್ಮುಹುರ್ಮುಹುಃ ||೧೭|| ಜಲ್ಪನ್ನ
ಸಭ್ಯವಾಕ್ಯಾನಿಕುರ್ವನ್ನಿಷ್ಠೀವನಂತದಾ | ಭ್ರಾಮಯಂಸ್ತೌಛಿನ್ನಹಸ್ತೌಪಾ
ದಾಭ್ಯಾಂಪರಿಲಂಘಯನ್ ||೧೮|| ಜಿಹ್ವಯಾಮಸಮರ್ಥಾಯಾಂಶರಣಾ
ರ್ಥೀತಿಭಾಷಿತುಂ | ಕಲ್ಪಾಯುರ್ಭವದೀರ್ಘಾಯುರ್ಭವೇತಿಜವದನ್ನಥ||
ಧೃತಜಂಗಮವೇಷಂಮಾಂಜ್ಞಾತ್ವಾತ್ವಂಲಜ್ಜಿತೋಸಿಕಿಂ | ಭೋಭೋದಸರಿ
ಲಿಂಗಯ್ಯಭೋಭೋದಸರಿದೇವಯ ||೨೦|| ದಸರಾರ್ಯಪುರಾತ್ವಂಕಿಂಕಿಂನಜಾ
ನಾಸಿಮಾವದ | ಗಣಯಸ್ಯೇವಸಪ್ರಾಗ್ವನ್ಮಯಿತ್ವಾಮನುಗಚ್ಛತಿ ||೨೧|| ವಿ
ಹಾಯಗಮನಂಸ್ವೀಯಂನಕಿಂಚಿದಪಿತಿಷ್ಠಸಿ | ಕುತ್ರಗಚ್ಛಸಿಕಿಂಕಾರ್ಯಮಿತಿ
ಪೃಚ್ಛಸಿನಾದ್ಯಹಿ ||೨೨|| ಗರ್ವಿತೋಽಸಿಮಹಾದೇವತ್ವಂನಜಾನಾಸಿಮಾಂಕಿ

---

ವನಾಗಿ ಆ ದಸರದಯ್ಯನ ತಲೆಯನ್ನು ನಿನ್ನ ಮೋಟುಕೈಗಳಿಂದ ಬಲು ಗಟ್ಟಿಯಾಗಿ
ಹೊಡೆ, ಅವನು ತಿರುಗಿ ನಿನ್ನನ್ನೇನೂ ಹೊಡೆಯುವುದೇ ಇಲ್ಲ" ಎಂದು ಆ ಕೊಬ್ಬಿದ
ಜನರೆಲ್ಲರೂ ಹೇಳಿ ||೧೫|| ಆಗ ಅವನನ್ನು ಕಳುಹಿಕೊಟ್ಟರು. ಆ ಮೋಟಮಲ್ಲನಾ
ದರೂ ಅತ್ಯಂತ ಸಂತೋಷದಿಂದುಬ್ಬಿದವನಾಗಿ, ಕುಂಡಿಯನ್ನುಬ್ಬಿಸಿಕೊಂಡು, ಕಾಲ್ಗ
ಳನ್ನು ಅಡ್ಡಡ್ಡಲಾಗಿ ನೀಡಿಹಾಕುತ್ತ ||೧೬|| ತನ್ನನ್ನು ತಾನೇ ನೋಡುತ್ತ, ತಲೆಯನ್ನು
ತೂಗುವವನಾಗಿ, ತೋಳ್ಗಳನ್ನು ನೋಡಿಕೊಳ್ಳುತ್ತ, ಬಾರಿಬಾರಿಗೂ ಮುಖವನ್ನುರುಗಿ
ಸುವವನಾಗಿ ||೧೭|| ಕೀಳ್ಮಾತುಗಳನ್ನು ಆಡುತ್ತ, ಉಗಿಯುತ್ತ, ಮೋಟುಕೈಗಳನ್ನು
ತಿರುಗಿಸುತ್ತ, ಕಾಲ್ಗಳಿಂದ ಹಾರುವವನಾಗಿ ||೧೮|| ಶರಣಾರ್ಥಿಯೆಂದು ನುಡಿಯುವುದಕ್ಕೆ
ನಾಲಿಗೆಯು ಬರದೆ ಇರಲು, "ಕಲ್ಪಾಯುರ್ಭವ, ದೀರ್ಘಾಯುರ್ಭವ" ಎಂದು
ನುಡಿಯುತ್ತ ||೧೯|| ದಸರಿ ದೇವಯ್ಯನ ಬಳಿಗೆ ಹೋಗಿ, ಎಲಾ ದಸರಿ ಲಿಂಗಯ್ಯನೆ,
ಎಲಾ ದಸರಿ ದೇವಯ್ಯನೆ! ಜಂಗಮವೇಷವನ್ನು ಧರಿಸಿರುವ ನನ್ನನ್ನು ನೋಡಿ ನೀನು
ನಾಚಿಕೆಗೊಂಡೇನು? ||೨೦|| ಎಲೆ ದಸರಯ್ಯನೆ! ಇದಕ್ಕೆ ಮುಂಚೆ ನೀನು ನನ್ನನ್ನು
ಕಾಣೆಯಾ? ಹೇಳು. ನಿನ್ನನ್ನು ನಾನು ಅನುಸರಿಸಿ ಹಿಂದೆ ಬರುತ್ತಿದ್ದರೂ ಪೂರ್ವದಂತೆ
ನನ್ನನ್ನು ನೀನು ಕಾಣುವುದೇ ಇಲ್ಲವಲ್ಲ! ಮುಂದಕ್ಕೆ ಹೋಗುತ್ತಿರುವುದನ್ನು ಬಿಟ್ಟು
ಸ್ವಲ್ಪವೂ ನೀನು ನಿಂತುಕೊಳ್ಳದೆ ಇದ್ದೀಯೆ. ಈಗ ಎಲ್ಲಿಗೆ ಹೋಗುತ್ತೀಯೆ? ಏನು
ಕೆಲಸ? ಎಂದುಕೂಡ ನನ್ನನ್ನು ಕೇಳುವುದಿಲ್ಲವಲ್ಲ! ||೨೧|| ಏನು ಮಹಾದೇವ! ನೀನು

ಮು | ಜನಾಶ್ಯಂಸಂತಿಮಾಂವೋಟಮಲ್ಲಲಿಂಗಮಿತಿಕ್ಷಿತೌ ||೩೨|| ಅಹಂಪ
ರ್ವತನಾಥಸ್ಯಪುತ್ರೋಽನ್ಯಃಕಿಂವದಾಧುನಾ | ನಿವೃತ್ಯದರ್ಶಯಸಿಚೇನ್ಮಾನ
ಹಾನಿರ್ಭವೇತ್ಕಿಮು ||೩೪|| ಶರಣಾರ್ಥೀತಿಭಣಸಿಚೇತ್ಕಿಂನಶ್ಯತಿಗೌರವಂ |ಕೃ
ತೇಪ್ರಣಾಮೇಪದಯೋಸ್ಸ್ವರ್ಯತ್ವಂಹೀಯತೇನುಕಿಂ ||೩೫|| ಮದಂಹಿತ್ವಾ
ಮಯಾಸಾಕಂಮುದಾಸಂಭಾಷಸೆಯದಿ | ನಾಶಂಪ್ರಯಾತಿಕಿಂಭಕ್ತಿರ್ಮಹಾ
ತ್ಮ್ಯಂತವಸಾಂಪ್ರತಂ ||೩೬|| ವಯಂಕಿಂತ್ವದ್ದೃಶೋರ್ಗಣ್ಯಾಭವಾಮೋನ್ನೈವ
ಚೇತ್ತಥಾ | ಕಥಮಿತ್ಥಂಕರೋಷ್ಯದ್ಯ ಧಿಕ್ಕಾರಂಕುರುಷೇಽತ್ಯಂತಗರ್ಹಿತಂ ||೩೭|| ಕ್ಷ
ಮಾನ್ವಿತೋದಯಾವಾಂಶ್ಚ ಶಾಂತಾತ್ಮಾಭಕ್ತಿಸಂಯುತಃ | ಭೀತಿಮಾನ್ನಯ
ಸಂಪನ್ನಇತಿತ್ವಾಂಪ್ರೀತಿಪೂರ್ವಕಂ ||೩೮|| ದ್ರಷ್ಟುಮಾಗತ್ಯಸಹಸಾದೃಷ್ಟ
ವಾನಸ್ಮಿತತ್ಫಲಂ | ಕಿಂಬಹೂಕ್ತಿಭಿರಿತ್ಯೇವಮಾತ್ಮಾನಂವಾಗ್ಭಿರುಚ್ಚಕೈಃ ||
ದಂಡಯಂತಂವಿಲೋಕ್ಯೈನಂಲಿಂಗಲಾಂಛನಧಾರಿಣಂ | ಅಯಮಜ್ಞಃಕಪಟ
ವಾನ್ಮದಾಂಧೀಭೂತಮಾನಸಃ ||೪೦|| ಭಂಡೋಧೂರ್ತೋಹಸ್ತಹೀನೋನೀಚ

---

ಮದಾಂಧನಾಗಿದ್ದೀಯೆ ! ನನ್ನನ್ನು ನೀನು ಕಾಣೆಯೇನು ? ಭೂಮಿಯಲ್ಲಿ ಜನರು ನ
ನ್ನನ್ನು ಮೋಟಮಲ್ಲಲಿಂಗಯ್ಯನೆಂದು ಕರೆಯುತ್ತಿರುವರು ||೩೩|| ನಾನು ಪರ್ವತನಾ
ಥನ ಮಗನು. ಹ ಗಲ್ಲವೆ ಈಗ ನಾನು ಬೇರೆಯೇನು ಹೇಳು ? ಹಿಂತಿರುಗಿ ನೋಡಿದರೆ
ನಿನಗೆ ಮಾನಹಾನಿಯಾಗುವುದೇನು ? ||೩೪|| ಶರಣಾರ್ಥಿಯೆಂದು ನುಡಿದರೆ ನಿನ್ನ ಗೌರ
ವವು ಅಳಿದುಹೋಗುವುದೆ? ನನ್ನ ಪಾದಗಳಿಗೆ ನಮಸ್ಕರಿಸಿದರೆ ನಿನ್ನ ಪೂಜ್ಯತ್ವವೆ
ಕುಂದಿಹೋಗುವುದೆ? ||೩೫|| ಅಹಂಕಾರವನ್ನು ಬಿಟ್ಟು ನನ್ನೊಡನೆ ಸಂತೋಷದಿಂದ
ಮಾತನಾಡಿದರೆ ನಿನ್ನ ಭಕ್ತಿಯು ಮಹತ್ತ್ವವು ಈಗ ನಷ್ಟವಾಗಿ ಹೋಗುವುದೆ? ||೩೬||
ನಾವು ನಿನ್ನ ಕಣ್ಣುಗಳಿಗೆ ಗಣ್ಯರಾಗಿ ತೋರುತ್ತಿರುವೆವೊ ? ಇಲ್ಲವೊ ? ಹಾಗಾದಪಕ್ಷದಲ್ಲಿ
ಇಂತಹ ಅತ್ಯಂತ ಹೀನವಾದ ತಿರಸ್ಕಾರವನ್ನು ಹೇಗೆ ಮಾಡುತ್ತೀಯೆ ? ||೩೭|| ನಿನ್ನನ್ನು
ಸಹನಶಾಲಿ, ಕೃಪಾವಂತ, ಶಾಂತ, ಭಕ್ತಿಭರಿತ, ಭಯವಂತ, ನೀತಿವಂತ, ಎಂಬುದಾಗಿ
ತಿಳಿದು, ಪ್ರೀತಿಪುರಸ್ಸರವಾಗಿ ನಿನ್ನನ್ನು ನೋಡುವುದಕ್ಕಾಗಿ ನಾನು ಬೇಗನೆ ಬಂದು,
ಅದರ ಫಲವನ್ನು ಕಂಡೆನು. ಹೆಚ್ಚು ಮಾತನಾಡುವುದರಿಂದ ಫಲವೇನು ? ಎಂದೀಪ್ರ
ಕಾರವಾಗಿ ತನ್ನನ್ನು ಗಟ್ಟಿಯಾದ ಮಾತುಗಳಿಂದ ಶಿಕ್ಷಿಸುತ್ತಿರುವ ಲಿಂಗಲಾಂಛನವನ್ನು
ಧರಿಸಿರುವ ಈ ಮೋಟಮಲ್ಲನನ್ನು ದಸರಾರ್ಯನು ನೋಡಿ, ,,ಇವನು ಮೂಢನು, ಕಪ
ಟಿಯು, ಗರ್ವಾಂಧಚಿತ್ತನು, ಹೇಸದವನು, ಬರಟನು, ಕೈಯಿಲ್ಲದವನು, ನೀಚನು''
ಎಂಬುದಾಗಿ ಬಂದು ಮಾತನ್ನೂ ಆಡದೆ, ಅವನ ಜಂಗಮವೇಷವನ್ನೇ ತಾನು ಭಕ್ತಿ

ಇತ್ಯನುದೀರ್ಯಚ । ತಸ್ಯಜಂಗಮಸದ್ವೇಷಮೇವಾಂಗೀಕೃತ್ಯಭಕ್ತಿತಃ ॥೪೧॥ ಅಜ್ಞಾತ್ವಾನ್ಯದಯಂಸಾಕ್ಷಾದ್ರುದ್ರಇತ್ಯೇವಚೇತಸಿ । ವಿಶ್ವಸ್ಯದೇವಮಾನುಷ್ಯಚರ್ಮಾವೃತಮಹೇಶ್ವರ ॥೪೨॥ ಅಪರಾಧಾಮಯ್ಯನಂತಾಸ್ಸಂತಿಮಾಂಪಾಹಿಶಂಕರ । ಮಯ್ಯಸ್ತಿಮಹದಜ್ಞಾನಂಕೃಪಾಂಕುರ್ವೀಶಸನ್ನಿಭ ॥೪೩॥ ಮಯಿಗರ್ವೋಽಸ್ತಿಹಸತ್ಯಂಪಾಹಿಸರ್ವಜ್ಞಶೇಖರ। ಇತಿಸಂಕೀರ್ತ್ಯಯನ್ಭೂಮೌಸಾಷ್ಟಾಂಗಂಪ್ರಣಿಪತ್ಯಚ ॥೪೪॥ ಪುನಶ್ಚರಣಯೋಸ್ತಸ್ಮಿನ್ನಮಸ್ಕುರ್ವತಿತಚ್ಛಿರಃ । ಸ್ವಕೀಯಮುಷ್ಠಿನ್ನಹಸ್ತಾಭ್ಯಾಂತಸ್ಮಿಂತ್ಸಂತಾಡಯತ್ಯಲಂ ॥೪೫॥ ಅತಿಕೋಪಾದ್ವಿಘಟ್ಟಯತಿಸತಿಶೀರ್ಷಂಸಮಂತತಃ । ಸಂಜಾತಾಗ್ರಂಥಯಸ್ತೇಭ್ಯಸ್ಸ್ರುತೇರಕ್ತೇನಿರಂತರಂ ॥೪೬॥ ಕ್ಲೇಶಿತೋಽಸ್ಮಿಕ್ಲೇಶಿತೋಽಸ್ಮಿಬತಹೇತ್ಯನುದೀರ್ಯಚ । ಅನುಚ್ಛಾರ್ಯಾಪರಾಧಃಕೋಮತ್ಕೃತಸ್ತಇತಿಸ್ಫುಟಂ ॥ ಮಾಂಕಿಮರ್ಥಂತಾಡಯಸೀತ್ಯನುಕ್ತ್ವಾಪಿನಿರಂತರಂ । ಆಜ್ಞಾತೇತಾಡಯಸಿಚೇದಿತ್ಯನಾಭಾಷ್ಯಮಾಮಿತಿ ॥೪೭॥ ಹಂತುಂನಿರಪರಾಧಂಕಿಂನೀತಿರಿತ್ಯನುದೀರ್ಯಚ । ಅಸಂಭಾಷ್ಯಸಹಂತೇಕಿಂಶ್ರುತ್ವೈತಚ್ಛರಣಾಇತಿ ॥೪೮॥ ಸ್ಥಲಾಂ

---

ಯಿಂದ ಅಂಗೀಕರಿಸಿ, ॥೪೧॥ ಬೇರೊಂದುಪರಿಯಾಗಿ ಭಾವಿಸದೆ, ಇವನು ಪ್ರತ್ಯಕ್ಷರುದ್ರಮೂರ್ತಿಯೇ ಎಂದು ಮನಸ್ಸಿನಲ್ಲಿ ನಂಬಿ, „ ಸ್ವಾಮಿಾ! ಮನುಷ್ಯವೇಷಧಾರಿಯಾದ ಮಹೇಶ್ವರನೆ! ನನ್ನಲ್ಲಿ ಹಲವು ತಪ್ಪುಗಳಿವೆ. ಎಲಾ ಶಂಕರನೆ! ನನ್ನನ್ನು ಕಾಪಾಡು. ನನ್ನಲ್ಲಿ ಮಹಾ ಅಜ್ಞಾನವಿದೆ. ಎಲಾ ಶಿವಸಮಾನಮೂರ್ತಿಯೆ! ನನ್ನಲ್ಲಿ ದಯೆಮಾಡು ॥೪೩॥ ನನ್ನಲ್ಲಿ ನಿಜವಾಗಿಯೂ ಅಹಂಕಾರವಿದೆ. ಎಲಾ ಸರ್ವಜ್ಞಶ್ರೇಷ್ಠನೆ! ಸಂರಕ್ಷಿಸು. ” ಹೀಗೆಂಬುದಾಗಿ ಹೊಗಳಿದವನಾಗಿ ಭೂಮಿಯಮೇಲೆ ಸಾಷ್ಟಾಂಗವಾಗಿ ನಮಸ್ಕರಿಸಿ ॥೪೪॥ ಮತ್ತೆ ಆತನ ಪಾದಗಳಿಗೆ ಆ ದಸರಿದೇವಯ್ಯನು ನಮಸ್ಕರಿಸುತ್ತಿರಲಾಗಿ, ಆ ಮೋಟಮಲ್ಲಯ್ಯನು ದಸರಿದೇವಯ್ಯನ ತಲೆಯನ್ನು ತನ್ನ ಮೋಟುಕೈಗಳಿಂದ ಅತ್ಯಂತವಾಗಿ ಹೊಡೆಯುತ್ತಿರಲು ॥೪೫॥ ಬಹು ಕೋಪದಿಂದ ತಲೆಯನ್ನು ಎಲ್ಲಕಡೆಯಲ್ಲೂ ಗಟ್ಟಿಸುತ್ತಿರಲು, ಆ ಹೊಡತಗಳಿಂದ ಗುಳ್ಳೆಗಳೆದ್ದು ರಕ್ತವು ಅವಿಚ್ಛಿನ್ನವಾಗಿ ಸುರಿಯುತ್ತಿರಲಾಗಿ ॥೪೬॥ ದಸರಾರ್ಯನು „ ನೊಂದೆನು „ ನೊಂದೆನು ” ಅಯ್ಯೋ! ” ಎಂದಾದರೂ ನುಡಿಯದೆ, „ ನಿನಗೆ ನಾನೇನಪರಾಧವನ್ನು ಮಾಡಿದ್ದೆ? ” ಎಂದಾದರೂ ಸ್ಪಷ್ಟವಾಗಿ ನುಡಿಯದೆ ॥೪೭॥ „ ನನ್ನನ್ನು ಯಾತಕ್ಕಾಗಿ ಹೊಡೆಯುತ್ತೀಯೆ? ” ಎಂದಾದರೂ ಹೇಳದೆ, ನನ್ನನ್ನು ಹೊಡೆದುದೇಯಾದರೆ ನಿನ್ನಾಣೆ ಎಂದೂ ಹೇಳದೆ, ನಿರಪರಾಧಿಯಾದವನನ್ನು ಕೊಲ್ಲುವುದಕ್ಕೆ ನೀತಿಯಿರುವುದೆ? ಎಂದು ಕೂಡ ಆಡದೆ, ಹೀಗೆ ಹಿಂಸೆ ಮಾಡುವುದನ್ನು ಕೇಳಿ ಶಿವಶರಣರು ಸಹಿಸಿಕೊಂಡಿದ್ದಾರೇನು? ಎಂದೂ ಮಾತನಾ

ತರಮನಾಸಾದ್ಯಭಯಮಪ್ರಾಪ್ಯಚೇತಸಿ | ಬತಹಾಹಾಮಹಾದೇವಹರೇ
ತ್ಯಾದ್ಯನುದೀರ್ಯಚ ||೫೦|| ಕೋಪಮಪ್ರಾಪ್ಯವಚನಮನುಕ್ತ್ವಾಮಮಮ
ಸ್ತಕಂ | ಭಿನ್ನಮಾಸೀಚ್ಛಕ್ತಿಹೀನೋಜಾತೋಸ್ಮೀತ್ಯನುದೀರ್ಯಚ ||೫೧||
ಪುನರ್ಮಹಾದೇವಮೂರ್ತಿರಪರಾಧಂಮಯಿಸ್ಥಿತಂ | ವಿಲೋಕ್ಯಶಿಕ್ಷಯತಿಕಿಂ
ಸ್ವಹಸ್ತೇನಕೃಪಾನಿಧಿಃ ||೫೨|| ಪುನಃಪುನರ್ಲೀಲಯಾಕಿಂಮೇತಾಡಯತಿಮ
ಸ್ತಕಂ | ಪುರಾವಿನ್ಯಸ್ಯಶಿರಸಿಕರಮೇಷಮಹಾಗುರುಃ ||೫೩|| ವಿನಷ್ಟಪೂ
ರ್ವಕಾಯಂಮಾಮಕರೋದಧುನಾಪುನಃ | ಸದ್ಭಕ್ತಿಕಾಯಂನಿರ್ಮಾತುಂನ್ಯ
ಸ್ತವಾನೇಷನಿಶ್ಚಯಃ ||೫೪|| ಕಠಿನಂಮೇಶಿರಸ್ಸ್ವಾಮಿಕರಾವತ್ಯಂತಕೋಮ
ಲೌ | ಭವೇತಾಂಕ್ಲೇಶಸಂಯುಕ್ತಾವಧುನಾಕಿಂಕರೋಮ್ಯಹಂ ||೫೫|| ಇ
ದಂಹಿಮಸ್ತಕಂಸತ್ಯಮುತ್ತಮಾಂಗಂಭವೇದ್ಯದಿ | ಭವಿತವ್ಯಂಮೃದುತ್ವೇನನ
ಕಿಂಪಾಣೇರ್ಮಹೇಶಿತುಃ ||೫೬|| ಯದ್ಯಾನತಂಭವೇಚ್ಛಂಭುಭಕ್ತೇಭ್ಯೋಮ
ಸ್ತಕಂತ್ವಿದಂ | ಬಾಧಾಮಕೃತ್ವಾಸ್ಥಾತವ್ಯಂನಕಿಂಪಾಣ್ಯೋರ್ಮಹೇಶಿತುಃ ||
ಇದಂಮಮಶಿರಸ್ಸ್ವಚ್ಛೇಜ್ಜಂಗಮಸ್ಯಾಸ್ಯಮದ್ಗುರೋಃ | ಪಾಣ್ಯೋರ
ತ್ಯಂತಕಠಿನಂಕಥಂಸ್ಯಾನ್ಮಾರ್ದವಂವಿನಾ ||೫೮|| ಉಕ್ತೇನತಾಡಯೇತ್ಯಸ್ಯಮ

---

ಡದೆ ||೪೯|| ಬೇರೆತಾವಿಗೆ ಹೋಗದೆ, ಮನಸ್ಸಿನಲ್ಲಿ ಭೀತಿಯುನ್ನೈದದೆ, ಅಯ್ಯೋ! ಹಾ! ಮಹಾದೇವ! ಹರಾ! ಎಂದೂ ಕೂಗದೆ ||೫೦|| ಕೋಪವನ್ನು ಹೊಂದದೆ, ಮಾತನಾಡದೆ, "ನನ್ನ ತಲೆಯೊಡೆಯಿತು, ಬಲಹೀನನಾದೆ" ಎಂದುಕೂಡ ಹೇಳದೆ ||೫೧|| ಮತ್ತೇನೆಂದರೆ—"ದಯಾನಿಕ್ಷೇಪನಾದ ಪರಶಿವಮೂರ್ತಿಯು ನನ್ನಲ್ಲಿರುವ ತಪ್ಪನ್ನು ಕಂಡು, ತನ್ನ ಕೈಯಿಂದ ಶಿಕ್ಷಿಸುತ್ತಿರುವನೋ? ಅಥವಾ ವಿಲಾಸದಿಂದ ಮತ್ತೆ ಮತ್ತೆ ನನ್ನ ತಲೆಯನ್ನು ಹೊಡೆಯುತ್ತಿರುವನೋ? ಇಲ್ಲವೆ, ಈ ಮಹಾಗುರುವು ಪೂರ್ವದಲ್ಲಿ ತಲೆಯಮೇಲೆ ಕೈಯಿಟ್ಟು ನನ್ನನ್ನು ಪೂರ್ವದೇಹವನ್ನಳಿದವನನ್ನಾಗಿ ಮಾಡಿದ್ದನು. ಈಗಲಾದರೂ ಈತನು ನನ್ನನ್ನು ಸದ್ಭಕ್ತಿಯೇ ಶರೀರವಾಗುಳ್ಳವನನ್ನಾಗಿ ಮಾಡುವುದಕ್ಕೆ ಕೈಯನ್ನಿಟ್ಟಿರುವನು; ನಿಜವು ||೫೪|| ನನ್ನ ತಲೆಯು ಬರಟಾದುದು. ಸ್ವಾಮಿಯ ಹಸ್ತಗಳು ಅತ್ಯಂತ ಮೃದುವಾದುವುಗಳು. ಇವು ನೊಂದುಕೊಳ್ಳುವುವು. ಈಗ ನಾನೇನು ಮಾಡಲಿ? ||೫೫|| ಈ ನನ್ನ ತಲೆಯು ನಿಜವಾಗಿಯೂ ಶ್ರೇಷ್ಠವಾದ ಅಂಗವಾಗಿದ್ದರೆ, ಶಿವನ ಕೈಗೆ ಇದು ಮೃದುವಾಗಿರಬಾರದೇನು? ||೫೬|| ಈ ತಲೆಯು ಶಿವಭಕ್ತರಿಗೆ ನಮಸ್ಕರಿಸಿದುದಾಗಿದ್ದರೆ, ಶಿವನ ಕೈಗಳಿಗೆ ನೋವನ್ನುಂಟುಮಾಡದೆಇರಬಾರದೇನು? ||೫೭|| ಇದು ನನ್ನ ತಲೆಯಾಗಿದ್ದರೆ, ನನ್ನ ಗುರುವಾದ ಈ ಜಂಗಮಮೂರ್ತಿಯ ಕೈಗಳಿಗೆ ಇದು ಮೃದುತ್ವವನ್ನು ಬಿಟ್ಟು ಅದು ಹೇಗೆ ಕಠಿಣವಾಗಿರುವುದು? ||೫೮|| ಈಗ ಹೊಡೆಯಬೇಡ

ನಃಕ್ಲಿಶ್ನಾತಿಸಾಂಪ್ರತಂ । ತೂಷ್ಣೀಂಸ್ಥಿತೇಪ್ಯಸ್ಯಕರೌಸ್ಯಾತಾಮತ್ಯಂತಪೀಡಿ
ತೌ ॥೫೯॥ ಇತಿಸಂಚಿಂತಯನ್ಖಿನ್ನೋಭವದ್ವಿನಯಪೂರ್ವಕಂ । ಪುನರ್ನಮ
ಸ್ಕೃತ್ಯತನೌಮೃದುಸ್ಥಾನೇಷುಸತ್ಸ್ವಪಿ ॥೬೦॥ ತಾನಿಮುಕ್ತ್ವಾಮಮಶಿರಃಕ
ರೋಟಮತಿಕರ್ಕಶಂ । ತಾಡಯಿತ್ವಾಮೃದುಕರೌಕಿಂಕ್ಲೇಶಯಸಿಹೇಪ್ರ
ಭೋ ॥೬೧॥ ಕಠಿನಂಮೇಶಿರಸ್ಸ್ಪೃಷ್ಟ್ವಾನಿರ್ವಿಣ್ಣೌದೇವತೇಕರೌ । ಇತಿತಸ್ಮಿ
ನ್ಸುಖಕರಂತಸ್ಯಹಸ್ತೌಶನೈಶ್ಶನೈಃ ॥೬೨॥ ದಸರಾರ್ಯೇತದಾಸವ್ಯಕಸ್ಪೃಷ್ಟ್ವಾ
ಸ್ಪೃಷ್ಟ್ವಾಪುನಃಪುನಃ । ವಿಧಾಯಮರ್ದನಂಘೃಷ್ಟ್ವಾಘೃಷ್ಟ್ವಾಮಂದಂಸ್ವ
ಪಾಣಿನಾ ॥೬೩॥ ಸಮಾಕರ್ಷಯತಿಸ್ವೈರಂಛಿನ್ನೌದ್ವಾತಸ್ಯತೌಕರೌ । ಪ್ರ
ರೋಹ್ಯಾಂಕುರಿತೌಭೂತ್ವಾಬಭತುಃಕರಪಲ್ಲವೌ ॥೬೪॥ ಶಿವಾಚಾರಸ್ಯಮಹಿ
ತೇಶೃಂಗೇಜಾತೇಇವಾವನೌ । ಜಾತೌಯಥೇಶಪೂಜಾರ್ಥಂಭಟ್ಟಬಾಣಸ್ಯ
ಸತ್ಕರೌ ॥೬೫॥ ಸ್ಥಾಣುರ್ಯಥಾಮೊರಟವಬಂಕಸ್ಯಾಂಕುರಿತೋಽಭವತ್ ।
ದಸರಾರ್ಯಶಿರಃಕಾಮಧೇನುರ್ದಿವ್ಯಾಮಹೋನ್ನತಾ ॥೬೬॥ ಮಹಚ್ಚಿತ್ರಂಹಸ್ತ

---

ವೆಂದು ನಾನು ಹೇಳಿದರೆ, ಈತನ ಮನಸ್ಸು ಕ್ಲೇಶಗೊಳ್ಳುತ್ತದೆ. ಸುಮ್ಮನೆಯಿದ್ದರೂ
ಈತನ ಕೈಗಳು ಅತ್ಯಂತವಾಗಿ ಹಿಂಸೆಗೊಳ್ಳುವುವು ” ॥೫೯॥ ಎಂಬುದಾಗಿ ಯೋಚಿಸಿ,
ಖೇದಗೊಂಡವನಾಗಿ, ಮತ್ತೆ ವಿನಯಪೂರ್ವಕವಾಗಿ ನಮಸ್ಕರಿಸಿ, “ ಎಲೆ ಸ್ವಾಮಿ
ಯೆ ! ದೇಹದಲ್ಲಿ ಕೋಮಲವಾದ ಸ್ಥಳಗಳು ಇರುತ್ತಿದ್ದರೂ, ಅವುಗಳನ್ನು ಬಿಟ್ಟು,
ಅತ್ಯಂತ ಕಠಿಣವಾದ ನನ್ನ ತಲೆಯ ಚಿಪ್ಪನ್ನು ಹೊಡೆದು, ಕೋಮಲವಾದ ಹಸ್ತಗಳ
ನ್ನು ನೋಯಿಸಿಕೊಳ್ಳುತ್ತೀಯೆ ॥೬೦॥ ಸ್ವಾಮಿ ! ನಿನ್ನ ಹಸ್ತಗಳು ಬರಡಾದ ನನ್ನ
ತಲೆಯನ್ನು ಮುಟ್ಟಿ, ಕ್ಲೇಶಪಟ್ಟು ನಿಶ್ಚೇಷ್ಟಗಳಾಗಿರುವುವು. ” ಎಂದು ಆ ದಸರಿದೇವ
ಯ್ಯನು ಆ ಮೋಟಮಲ್ಲಿನಾಥನ ಕೈಗಳನ್ನು ಮೆಲ್ಲಮೆಲ್ಲಗೆ ಸುಖವಾಗುವಂತೆ ಮುಟ್ಟಿ
ಮುಟ್ಟಿ, ಮತ್ತೆ ಮತ್ತೆ ಚೆನ್ನಾಗಿ ತನ್ನ ಕೈಯಿಂದ ಹಿಸುಕಿ, ಮೆಲ್ಲನೆ ನೀವಿ, ಇಚ್ಛೆ
ಬಂದಂತೆ ಎಳೆಯುತ್ತಿರಲಾಗಿ, ಆ ಮಲ್ಲಿನಾಥನ ಕತ್ತರಿಸಿ ಮೋಟಾಗಿರುವ ಕೈಗಳೆರ
ಡೂ ಮೂಡಿ ಮೊಳೆತು, ಚಿಗುರಿನಂತಿರುವ ಕೈಗಳು ಪ್ರಕಾಶಿಸಿದುವು ॥೬೪॥ ಭೂಮಿ
ಯಲ್ಲಿ ಶಿವಾಚಾರಕ್ಕೆ ಪೂಜ್ಯವಾದ ಕೊಂಬುಗಳು ಮೂಡಿದಂತೆಯೂ, ಶಿವಪೂಜಾರ್ಥ
ವಾಗಿ ಬಾಣಭಟ್ಟನಿಗೆ ಹಸ್ತಗಳು ಹೇಗೆ ಮೂಡಿದುವೋ ಅದರಂತೆಯೂ ॥೬೫॥ ಮೊರ
ಟದ ಬಂಕಯ್ಯನಿಗೆ ಮೋಟುಮರವು ಚಿಗುರಿದಂತೆಯೂ, ದಸರಯ್ಯನ ಶಿರವೆಂಬ ಉ
ತ್ಕೃಷ್ಟವಾದ ದಿವ್ಯಕಾಮಧೇನುವು ಭೂತಲದಲ್ಲಿ ಅತ್ಯಾಶ್ಚರ್ಯಕರವಾಗಿ ಕೈಗಳೆಂಬ
ಕರುಗಳೆರಡನ್ನು ಈದಂತೆಯೂ, ಆ ದಸರಾರ್ಯನ ಭಕ್ತಿಯೆಂಬ ಕೊಳದಲ್ಲಿ ಕೈಗಳೆಂಬ

ವತ್ಸಾಪಾ್ರಸೂತೇವಮಹೀತಲೆ| ಉತ್ಪನ್ನೆ ಇವಹಸ್ತಾಜ್ಜೈತಸ್ಯಭಕ್ತಿಸರೋವರೆ ||೬೭|| ಚೆನ್ನಯ್ಯಸ್ಯರಸಜ್ಞಾಯಾಃಕರಾವಿವಸವಾಗತೌ | ಶುಶುಭಾತೇಕರೌತಸ್ಯದಸರಾರ್ಯಪ್ರಭಾವತಃ ||೬೮|| ಸದ್ಭಕ್ತಿಕಲ್ಪಭೂಜಾತೇದಸರಾರ್ಯೇಣವರ್ಧಿತೆ | ಮೂಲಾನಿವಿಸ್ತೃತಾನೀವಚಾಂಗುಲ್ಯೋದೋಸ್ಸ್ಥಲೇಬಭುಃ || ನಖಾಸದ್ಭಕ್ತಿಕಾಂತಾಯಾಮುಖಾದರ್ಶಾ ಇವಾಬಭುಃ|ಆಜಾನುಲಂಬಿನೌತಸ್ಯ ಜಂಗಮೇಂದ್ರಸ್ಯತೌಕರೌ ||೭೦|| ಭವ್ಯಶೈವಾಗಮ ಇವಸದಾದರ್ಶಿತಸತ್ಪಥೌ | ಅಗಣ್ಯಪುಣ್ಯಸಂಯುಕ್ತೌ ಶಿವಪೂಜಾಫಲಂಯಥಾ ||೭೧|| ಭಸ್ಮತ್ರಿಪುಂಡ್ರವಿವದುರ್ಲಿಖಿತಧ್ವಂಸಕೌತಥಾ | ಹಸ್ತಾವಿವಮಹೇಶಸ್ಯಾಭಯದಾನಸಮುನ್ನತೌ ||೭೨|| ಮಹತ್ತರೋಮೂಲಮಂತ್ರ ಇವಶಿಷ್ಟಸಮಾಶ್ರಯೌ | ಪೂರ್ವವರ್ಣನಿರಾಸೈಕಸಮರ್ಥೌಸ್ಪರ್ಶವೇದಿವತ್ ||೭೩|| ಶಿವನಾಗಾರ್ಯಕರವದಮೃತಾಸಾರಸಂಯುತೌ | ಕೃಷ್ಣಸರ್ಪಚರಣತ್ರಾಣೇ ಇವಶಂಭುಶಿರೋಮಣೀ || ಭೂತ್ವಾಸ್ಯದಸರಾರ್ಯಸ್ಯಕರಯೋಗಾದ್ವಿರೇಜತುಃ | ಲಿಂಗಂಕಂಠೇಸಜ್ಜಿಕಾ

---

ಕಮಲಗಳು ಹುಟ್ಟಿದಂತೆಯೂ ||೬೭|| ಚೆನ್ನಯ್ಯನ ನಾಲಿಗೆಗೆ ಹಸ್ತಗಳು ಬಂದಂತೆಯೂ, ದಸರಾರ್ಯನ ಮಹಿಮೆಯಿಂದ ಬಂದ ಆ ಮೋಟಮಲ್ಲಿನಾಥನ ಕೈಗಳು ಪ್ರಕಾಶಿಸಿದುವು ||೬೮|| ಸದ್ಭಕ್ತಿಯೆಂಬ ಕಲ್ಪವೃಕ್ಷವನ್ನು ದಸರಾರ್ಯನು ಬೆಳೆಯಿಸಲಾಗಿ, ಅದರ ಬೇರುಗಳು ಹರಡಿಕೊಂಡಿರುವಂತೆ ತೋಳುಗಳ ತುದಿಯಲ್ಲಿ ಬೆರಳುಗಳು ಒಪ್ಪಿದುವು ||೬೯|| ಉಗುರುಗಳು ಶಿವಭಕ್ತಿಯೆಂಬ ಸ್ತ್ರೀಯ ಮುಖವನ್ನು ನೋಡುವ ಕನ್ನಡಿಯಂತೆ ಪ್ರಕಾಶಿಸಿದುವು. ಆ ಜಂಗಮಶ್ರೇಷ್ಠನ ಮಂಡಿಯವರೆಗೆ ಜೋಲು ಬಿದ್ದಿರುವ ಆ ಹಸ್ತಗಳು ದಸರಿದೇವಯ್ಯನ ಹಸ್ತಗಳ ಸಂಬಂಧದಿಂದ ಮಂಗಳಕರವಾದ ಶಿವಾಗಮದಂತೆ ಯಾವಾಗಲೂ ಸನ್ಮಾರ್ಗವನ್ನು ತೋರಿಸತಕ್ಕವುಗಳು. ಶಿವಪೂಜೆಯ ಫಲದಂತೆ ಎಣಿಸುವುದಕ್ಕಶಕ್ಯವಾದ ಪುಣ್ಯದಿಂದ ಕೂಡಿಕೊಂಡಿರುವವುಗಳು ||೭೧|| ಭಸ್ಮದ ತ್ರಿಪುಂಡ್ರದಂತೆ ಕೆಟ್ಟ ಹಣೆಯಬರಹವನ್ನು ಅಳಿಸತಕ್ಕವುಗಳು, ಪರಶಿವನ ಕೈಗಳಂತೆ ಅಭಯವನ್ನು ಕೊಡುವುದರಲ್ಲಿ ಎತ್ತಲ್ಪಟ್ಟವುಗಳು ||೭೨|| ಉತ್ಕೃಷ್ಟವಾದ ಶಿವಮಂತ್ರದಂತೆ ಸತ್ಪುರುಷರಿಗೆ ಆಧಾರವಾದುವುಗಳು, ಪರುಸದಜಗತಿಯಂತೆ ಮೊದಲಿನ ಬಣ್ಣವನ್ನು (ಜಾತಿಯನ್ನು) ಹೋಗಲಾಡಿಸುವುದರಲ್ಲಿ ಮುಖ್ಯಸಮರ್ಥಗಳು, ||೭೩|| ಶಿವನಾಗಯ್ಯನ ಹಸ್ತದಂತೆ ಹಾಲಿನ ಸುರಿಯುವಿಕೆಯಿಂದ (ಮೋಕ್ಷದಾನದಿಂದ) ಕೂಡಿದುವುಗಳು. ಕಣ್ಣಪ್ಪನ ಹಾವುಗೆಗಳಂತೆ ಶಿವನ ಶಿರೋಭೂಷಣಗಳು, ಆಗಿ ಪ್ರಕಾಶಿಸಿದುವು ||೭೪|| ಆಗ ಕೊರಳ

ಯಾಂಪ್ರಾದುರ್ಭೂತ್ವಾಬಭೌತದಾ ॥೭೫॥ ಭಯಸಂತೋಷಾದ್ಭುತೇಷುವ ರ್ಧಿತೇಷುಸಮಂತತಃ । ಕರೌಪಶ್ಯನ್ಗಳೇಲಿಂಗಂಸ್ಪೃಷ್ಟ್ವಾಸ್ಪೃಷ್ಟ್ವಾವಿಲೋ ಕಯನ್ ॥೭೬॥ ಪುನಃಪಶ್ಯನ್ದಸರಯಂಪಾಣೀಜನವಾಯನ್ಮುಖಂ । ಅಂಗು ಷ್ಠೇನಲಿಖನ್ಭೂಮಿಂಸ್ಮರನ್ದೋಷಾನ್ಸ್ವಯಂಕೃತಾನ್ ॥೭೭॥ ದಸರಾರ್ಯಸ್ಯಸ ದ್ಭಕ್ತಿಮಹಿಮಾನಂವಿಚಿಂತಯನ್ । ಅತಿಷ್ಠಜ್ಜಂಗಮಸ್ಸೋಽಪಿ ಪರಮಾನಂ ದನಿರ್ಭರಃ ॥೭೮॥ ದಸರಾರ್ಯೋವೈಭವೇನ ತಸ್ಯಪಾಣಿತಲೇತದಾ । ಆಕ ರ್ಷಯನ್ನಂಗುಲೀನಾಂ ಚಿಟ್ಟನೀಃಪರಿಕಲ್ಪ್ಯಚ ॥೭೯॥ ಸಂವಾಹಯನ್ಯಥಾ ಕಾಮಂನಮನ್ತಸ್ಮೈಪುನಃಪುನಃ । ಅತಿಷ್ಠದ್ಭಕ್ತಿವಿಭವೇಭಾಸಮಾನೇಮ ಹೀತಲೇ ॥೮೦॥ ತತಸ್ಸರ್ವಂ ಶಿವಸದ್ಭಕ್ತಾಶ್ಶ್ರುತ್ವಾಸರ್ವಂಕುತೂಹಲಾ ತ್ । ಪ್ರಕುರ್ವಂತೋನಮಸ್ಕಾರಮಸಮಾನೋರುವೈಭವ ॥೮೧॥ ತದಾ ತ್ಮನಿಷ್ಠಬಸವಪಾದಾಬ್ಜಮೋದಭಾಸುರ । ದಸರಾರ್ಯಾದ್ಯತೇಮೂರ್ಧ್ನಿಜಾ ತಮೇವೈತದದ್ಭುತಂ ॥೮೨॥ ಪಶ್ಯಾಮೋಽನ್ಯತ್ರನವಯಂಶ್ರುಣುಮೋನ್ಯೈ

---

ನಲ್ಲಿದ್ದ ಕರಡಿಗೆಯಲ್ಲಿ ಶಿವಲಿಂಗವು ಆವಿರ್ಭವಿಸಿ ಪ್ರಕಾಶಿಸಿತು ॥೭೫॥ ನಿಜವಾಗಿ ಜಂಗಮನೇ ಆದ ಆ ಮೋಟಯ್ಯನು, ತನಗೆ ಭೀತಿಯೂ ಸಂತೋಷವೂ ಆಶ್ಚರ್ಯವೂ ಸಹ ಹೆಚ್ಚುತ್ತಿರಲಾಗಿ, ಕೈಗಳನ್ನು ಸುತ್ತಲೂ ನೋಡಿ, ಕತ್ತಿನಲ್ಲಿ ಲಿಂಗವನ್ನು ಮುಟ್ಟಿಮುಟ್ಟಿ ನೋಡಿದವನಾಗಿ ॥೭೬॥ ಮತ್ತೆ ದಸರಯ್ಯನನ್ನೂ ತನ್ನ ಕೈಗಳನ್ನೂ ನೋಡಿಕೊಂಡು, ನಾಚಿಕೆಯಿಂದ ಮುಖವನ್ನು ಬಗ್ಗಿಸಿದವನಾಗಿ, ಕಾಲಿನ ಹೆಬ್ಬೆರಲಿನಿಂದ ಭೂಮಿಯನ್ನು ಬರೆಯುತ್ತ, ತಾನು ಮಾಡಿದ ತಪ್ಪುಗಳನ್ನೆಲ್ಲ ಸ್ಮರಿಸಿಕೊಂಡು ॥ ದಸರಯ್ಯನ ಉತ್ತಮಭಕ್ತಿ ಮಹತ್ವವನ್ನು ಕುರಿತು ಯೋಚಿಸುತ್ತ, ಅತ್ಯಂತಾನಂದ ಪರಿಪೂರ್ಣನಾಗಿರುತಿದ್ದನು ॥೭೮॥ ಆಗ ದಸರಾರ್ಯನಾದರೊ ಸಡಗರದಿಂದ ಆ ಮಲ್ಲಿನಾಥನ ಹಸ್ತಪ್ರದೇಶಗಳನ್ನು ಹಿಡಿದೆಳೆದುಕೊಂಡು, ಬೆರಲುಗಳ ನಟ್ಟಿಗೆಯನ್ನು ತೆಗೆದು ॥೭೯॥ ಇಷ್ಟಾನುಸಾರವಾಗಿ ಹಿಸುಕಿ, ಮತ್ತೆಮತ್ತೆ ಅವನಿಗೆ ನಮಸ್ಕರಿಸಿ, ಭೂತಲದಲ್ಲಿ ಪ್ರಕಾಶಮಾನವಾಗಿರುವ ಸದ್ಭಕ್ತಿ ಸಂಪತ್ತಿನಲ್ಲಿ ಒಪ್ಪುತ್ತಿದ್ದನು ॥೮೦॥ ಅದಕ್ಕೆ ಮುಂಚೆಯೇ ಶಿವಭಕ್ತರುಗಳು ಈ ಸಂಗತಿಯನ್ನೆಲ್ಲ ಕೇಳಿ ಕುತೂಹಲದಿಂದ ಬಂದು, ನಮಸ್ಕಾರವನ್ನು ಮಾಡಿದವರಾಗಿ,—ಎಲಾ ಅಸದೃಶವಾದ ಮಹಾ ವೈಭವವುಳ್ಳವನೆ! ಪ್ರಸಿದ್ಧವಾದ ಆತ್ಮಾನಾತ್ಮ ವಿಚಾರದಲ್ಲಾಸಕ್ತನಾದವನೆ! ಬಸವೇಶ ಪಾದಕಮಲಧ್ಯಾನಾನಂದದಿಂದೊಪ್ಪುವವನೆ! ಎಲಾ ದಸರಾರ್ಯನೆ, ಈಗ ಈ ಆಶ್ಚರ್ಯಕೃತ್ಯವು ನಿನ್ನ ತಲೆಯಲ್ಲಿಯೇ ಹುಟ್ಟಿತು ॥೮೨॥ ಭೂತಳದಲ್ಲಿ ನಾವು ಇನ್ನೆಲ್ಲೂ ಕಂಡಿಲ್ಲ. ಕೇಳಿಯೂ

ವಭೂತಳೆ । ಚೋರಚೇಲಾಗ್ರವಾರ್ತಾಕಸತ್ಫಲಾನಿಪುರಾಯಥಾ ॥ ೮೩ ॥ ಅಭವನ್ಬಾಣಲಿಂಗಾನಿ ಬಸವೇಶಸ್ಯಭಾವತಃ । ತವಭಾವನಯೇದಾನೀಂಲಿಂಗಬಾಹ್ಯೋಽಂಗಹೀನಕಃ ॥ ೮೪ ॥ ಅವಿನೀತಸ್ತಥಾಲಿಂಗಮೂರ್ತಿರ್ಭೂತ್ವಾವಿರಾಜತೆ । ಕಿಮನ್ಯಚ್ಛಿನ್ನಹಸ್ತಸ್ಯತವದೋರ್ದಂಡಸಂಗತೇಃ ॥ ೮೫ ॥ ಮಹಚ್ಚಿತ್ರಂಜಗತ್ಯಾಂದ್ವಾಕರಾವಾಯಯತುದ್ರುತಂ । ಧನ್ಯಾತ್ಮನೋಽಲಿಂಗವತಸ್ತಸ್ಯಹಸ್ತಸ್ಯಯೋಗತಃ ॥ ೮೬ ॥ ತವಶೀರ್ಷಂಮಹೇಶಸ್ಯಶೀರ್ಷಂಭೂತ್ವಾವ್ಯವಸ್ಥಿತಂ । ತತೋಽಪ್ಯುನ್ನತಿಮಚ್ಚಾಸೀತ್ತದ್ವ್ಯಕ್ತಮಧುನೋಚ್ಯತೆ ॥ ೮೭ ॥ ಸಾಂಖ್ಯಪ್ರಕ್ಷಿಪ್ತಪಾಷಾಣಘಾತೋದ್ಯದ್ಗ್ರಂಥಿ ಸಂಘವತ್ । ಪಿಟ್ಟವ್ಯಾರ್ಥಂತನ್ಯಮಾನವಿಷ್ಟ್ಯಾಂಮೃದ್ವಹನಕ್ಷಣೇ ॥ ೮೮ ॥ ಕಠೋರವೇಣುಪುಟಕಾಘರ್ಷಜಗ್ರಂಥಿವೃಂದವತ್ । ಕಣ್ಣಪ್ಪಚರಣತ್ರಾಣಸ್ಪರ್ಶಜಾತವ್ರಣೌಘವತ್ ॥ ೮೯ ॥ ಸಿಂಧಮತ್ಸ್ಯಂಸ್ವಯಂಪ್ರಾಸ್ಯತಾಡನಾನುಭವಕ್ಷಣೆ । ಸಂಜಾತತಾದೃಶಾನೇಕಕ್ಷತಾನಾಂನಿವಹೋಯಥಾ ॥ ೯೦ ॥ ಪ್ರವಿಲುಠ್ಯವಿಲುಠ್ಯೈವಶ್ರೀಭೋಗಾರ್ಯಸ್ಯಪೃಷ್ಠತಃ । ಯಾನಕಾಲೇಧರಾಘಾತಾಚ್ಛಿನ್ನಚರ್ಮವ್ರ

---

ಇಲ್ಲ. ಪೂರ್ವದಲ್ಲಿ ಬಸವೇಶನ ಮನೆಗೆ ನುಗ್ಗಿದ್ದ ಕಳ್ಳರ ಬಟ್ಟೆಯಲ್ಲಿದ್ದ ಬದನೆಯಕಾಯಿಗಳು ಬಸವೇಶನು ಮನಸ್ಸಿನಲ್ಲಿ ಭಾವಿಸಿದ ಮಾತ್ರದಿಂದಲೇ ಹೇಗೆ ಬಾಣಲಿಂಗಗಳಾಗಿ ಪರಿಣಮಿಸಿದುವೋ, ಹಾಗೆ ಈಗ ನಿನ್ನ ಭಾವನೆಯಿಂದ ಲಿಂಗವಿಲ್ಲದ ಅಂಗಹೀನನಾದ ಧೂರ್ತನು ಈಶ್ವರಸ್ವರೂಪನಾಗಿ ಪ್ರಕಾಶಿಸುತ್ತಾನೆ. ಮೋಟಕೈಯುಳ್ಳವನಿಗೆ ನಿನ್ನ ತೋಳುಗಳ ಸಂಗವುಂಟಾದ ಮಾತ್ರದಿಂದಲೇ ಅವನ ಎರಡು ಕೈಗಳೂ ಬೇಗನೆ ಬಂದುವು. ಲೋಕದಲ್ಲಿ ಇದಕ್ಕಿಂತಲೂ ಹೆಚ್ಚಿನ ಆಶ್ಚರ್ಯವು ಬೇರಾವುದು ? ಧನ್ಯನಾದ ಲಿಂಗಧಾರಿಯಾದ ಆ ಮಲ್ಲಿನಾಥನ ಹಸ್ತದ ಸಂಬಂಧದಿಂದ ನಿನ್ನ ತಲೆಯು ಶಿವನ ಶಿರಸ್ಸಾಗಿ ಪರಿಣಮಿಸಿತು. ಮತ್ತೂ ಆ ಶಿವನ ತಲೆಗಿಂತಲೂ ಶ್ರೇಷ್ಠವಾದುದೂ ಆಯಿತು. ಹೇಗೆಂದರೆ—ಅದನ್ನು ಸ್ಫುಟವಾಗಿ ಈಗ ಹೇಳುತ್ತೇವೆ ॥ ೮೭ ॥-ಶಿವನ ಶಿರಸ್ಸಿನಲ್ಲಿ ಸಾಂಖ್ಯತೊಂಡನು ಇಟ್ಟ ಕಲ್ಲಿನೇಟಿನಿಂದುಂಟಾದ ಬೊಕ್ಕೆಗಳ ಗುಂಪಿನಂತೆಯೂ, ಪಿಟ್ಟವ್ವೆಗಾಗಿ ಮಾಡಿದ ಬಿಟ್ಟಿಯಲ್ಲಿ ಮಣ್ಣನ್ನು ಹೊರುವ ಉತ್ಸವದಲ್ಲಿ ಬರಟಾದ ಬಿದುರಿನ ಪುಟ್ಟಿಯ ಒತ್ತುವಿಕೆಯಿಂದ ಹುಟ್ಟಿದ ಗಂಟುಗಳಂತೆಯೂ, ಕಣ್ಣಪ್ಪನ ಪಾದರಕ್ಷೆಗಳ ಉಜ್ಜುವಿಕೆಯಿಂದುಂಟಾದ ಗಾಯಗಳಂತೆಯೂ ॥ ೮೯ ॥ ತಾನೇ ಸಿಂಧಮರಾಜನಾಗಿ ಏಟನ್ನು ತಿನ್ನುವಾಗ ಉಂಟಾದ ಅಂತಹ ಹಲವು ಗಾಯಗಳ ಸಮೂಹದಂತೆಯೂ ॥ ೯೦ ॥ ಕೆಂಬಾವಿ ಭೋಗಯ್ಯನ ಹಿಂದೆ ಉರುಳುರುಳಿಕೊಂಡೇ ಹೋಗುವಾಗ

ಸ್ತಾಘುವತ್ ‖ ೯೧ ‖ ಚಿರುತೊಂಡಸಹಾಯಾರ್ಥಮಿಕ್ಷುಭಾರಧೃತಿಕ್ಷಣೇ । ನಿ
ವಿಸ್ಟಾಭಾವಂಪರಿಪ್ರಾಪ್ಯಸ್ಥಿತಗರ್ತಸಮೂಹವತ್ ‖ ೯೦ ‖ ವಿರಾಜಮಾನೈ
ರುಚ್ಛೂನಗ್ರಂಥಿವೃಂದೈರ್ಬಹುಕ್ಷತೈಃ । ಛಿನ್ನಚರ್ಮಪ್ರದೇಶೈಶ್ಚ ಬಹುಗ
ರ್ತೈರಲಂಕೃತಂ ‖ ೯೩ ‖ ತವಮಸ್ತಕಮೇವೇಶಮಸ್ತಕಂಜಗತೀತಲೆ । ಸ್ವ
ಶಿರಸ್ಯೇವಶಿರಸಿಸತಿಯೋಜೀವತಿಕ್ಷಿತೌ ‖ ೯೪ ‖ ತಸ್ಯಮಸ್ತಕಮೇವಸ್ಯಾದ್ದಸ
ರಾರ್ಯಶಿರಸ್ತವ । ಬ್ರಹ್ಮವಿಷ್ಣ್ವಾದಿಷುಮಹಚ್ಛಿರಾಸ್ಸನ್ಯಸ್ತುಜೀವತಿ ‖ ೯೫ ‖
ತಸ್ಯಮಸ್ತಕಮೇವಸ್ಯಾದ್ದಸರಾರ್ಯಶಿರಸ್ತವ । ಸಹಸ್ರಶೀರ್ಷಾಃಪುರುಷಇತಿ
ವೇದೇಪ್ರಶಂಸಿತಃ ‖ ೯೬ ‖ ಯೋಽನಂತಮಸ್ತಕೈರ್ಭಾತಿತನ್ಮೂರ್ಧೈವಶಿರ
ಸ್ತವ । ಯಸ್ಸರ್ವಸ್ಮಿನ್ಜಗತ್ಯೇಕಮಸ್ತಕೇಸತಿಭಾಸತೆ ‖ ೯೭ ‖ ತಸ್ಯಮಸ್ತ
ಕಮೇವಸ್ಯಾದ್ದಸರಾರ್ಯ ಶಿರಸ್ತವ । ಗಮಾಗಮತ್ಯಕ್ತಶಿರೋವದಂತೀಹಗ್ರ
ಹಸ್ಯಚ ‖ ೯೮ ‖ ಶಿರಏವಭವೇಚ್ಛೀರ್ಷಂದಸರಾರ್ಯಮಹೀತಲೆ । ಗತಶೀರ್ಷ
ಕಶೀರ್ಷಸ್ಯಶಿರಏವ ಶಿರಸ್ತವ ‖ ೯೯ ‖ ಚತುರಾಸ್ಯಸ್ಯಚತ್ವಾರಿರಾವಣಸ್ಯತಥಾ
ದಶ । ಷಡಾನನಸ್ಯಷಡಪಿಸಹಸ್ರಂ ಪನ್ನಗೇಶಿತುಃ ‖ ೧೦೦ ‖ ಶಿರಾಂಸಿಸರ್ವಾಣಿ

---

ನೆಲಕ್ಕೆ ಉಜ್ಜದುದರಿಂದ ಕತ್ತರಿಸಿಹೋದ ಚರ್ಮದ ಗಾಯಗಳ ಗುಂಪಿನಂತೆಯೂ ‖೯೧‖
ಚಿರುತೊಂಡ (ದಭ್ರಭಕ್ತ) ನ ಸಹಾಯಕ್ಕಾಗಿ ಕಬ್ಬಿನ ಹೊರೆಯನ್ನು ಹೊತ್ತುಕೊಂ
ಡು ಹೋಗುವ ಕಾಲದಲ್ಲಿ ಒತ್ತಿ ತಗ್ಗುಬಿದ್ದಿರುವ ಗುಳಿಗಳ ಸಮೂಹದಂತೆಯೂ ‖೯೨‖
ಒಪ್ಪುತ್ತಲಿರುವ ಉಬ್ಬಿದ ಗಂಟುಗಳ ಗುಂಪಿನಿಂದಲೂ, ಹಲವು ಗಾಯಗಳಿಂದಲೂ,
ಕಿತ್ತುಹೋದ ಚರ್ಮದ ಸ್ಥಲಗಳಿಂದಲೂ, ಹಲವು ಗುಳಿಗಳಿಂದಲೂ ಸಹ ಅಲಂಕೃತವಾಗಿ
ರುವ ‖೯೩‖ ನಿನ್ನ ತಲೆಯೇ ಭೂತಲದಲ್ಲಿ ಶಿವನ ತಲೆಯು. ದಸರಾರ್ಯನೆ, ಭೂಮಿ
ಯಲ್ಲಿ ತನ್ನ ತಲೆಯೇ ತಲೆಯಾಗಿ ಯಾವನು ಜೀವಿಸುತ್ತಾನೋ ಆ ಶಿವನ ತಲೆಯೇ
ನಿನ್ನ ತಲೆ. ಯಾವನು ವೇದದಲ್ಲಿ ಸಾವಿರ ತಲೆಗಳುಳ್ಳವನೆಂದು ಹೊಗಳಲ್ಪಟ್ಟಿರುವ
ನಾಗಿ ಹಲವು ತಲೆಗಳಿಂದೊಪ್ಪುತ್ತಿರುವನೋ ಅಂಥ ಶಿವನ ತಲೆಯೇ ನಿನ್ನ ತಲೆ. ಎಲೈ
ದಸರಾರ್ಯನೆ, ಯಾವನು ಜಗತ್ತಿನಲ್ಲೆಲ್ಲ ಒಂದೇ ಒಂದು ತಲೆಯುಳ್ಳವನಾಗಿ ಪ್ರಕಾಶಿ
ಸುತ್ತಾನೋ ಅಂಥ ಪರಶಿವನ ತಲೆಯೇ ನಿನ್ನ ತಲೆಯಾಗಿರುವುದು. ಎಲೈ ದಸರಾ
ರ್ಯನೆ ಈ ಭೂಲೋಕದಲ್ಲಿ ನಿನ್ನ ತಲೆಯೇ ತಲೆ, ಏಕೆಂದರೆ—ನಿನ್ನ ತಲೆಯನ್ನು ಮ
ನೆಗೆ ಹುಟ್ಟುಸಾವುಗಳಿಲ್ಲದ ತಲೆಯೆಂದು ಹೇಳುತ್ತಾರೆ. ತಲೆಯಿಲ್ಲದವನ ತಲೆಗೆ ನಿನ್ನ
ತಲೆಯೇ ತಲೆ ‖೯೯‖ ಬ್ರಹ್ಮನಿಗೆ ನಾಲ್ಕು, ರಾವಣನಿಗೆ ಹತ್ತು, ಷಣ್ಮುಖನಿಗೆ ಆರು,
ಆದಿಶೇಷನಿಗೆ ಸಾವಿರ ತಲೆಗಳಿರುವುವು. ಅವೆಲ್ಲವೂ ನಿನ್ನ ತಲೆಗೆ ಸಮನಾಗುವುವೇನು ?

ತವಶಿರಸಾಸದೃಶಾನಿಕಿಂ । ಶಿವಸ್ಯಶಿರಏವೈಕಂಸದೃಶಂಶಿರಸಸ್ತವ ॥ ೧೦೧ ॥ ತ್ವಮೇವನಶ್ಯಂಕರಶ್ಚ ಗುರುರ್ಭಕ್ತೋ ನಸಂಶಯಃ । ಕ್ಷಾಂತಿಖಡ್ಗೇನಕೋಪಾರಿಂಛೇತ್ತುಂಶಕ್ನೋತಿಯಃಪುಮಾನ್ ॥ ೧೦೨ ॥ ಸಏವಶೂರಸ್ಸಮುನಿಸ್ಸಬುಧಸ್ಸತುಮಾಂತ್ರಿಕಃ । ಇತಿ ಪ್ರಕಥಯಂಶೈವಶಾಸ್ತ್ರಾರ್ಥಸ್ತ್ವಯಿವರ್ತತೇ॥ ಅನ್ಯೇಷುವರ್ತತೇಕಿಂವಾದಸರಾರ್ಯದಯಾನಿಧೇ । ಅಹಿಂಸಾಪರಮೋಧರ್ಮ ಇತಿ ವಾಕ್ಯಾರ್ಥವಿತ್ತಮ ॥ ೧೦೪ ॥ ವಾಕ್ಯಾರ್ಥಶ್ಚ ನಹಂತವ್ಯಃ ಪ್ರಯತ್ನತಇತಿಪ್ರಭೋ । ತ್ವಯ್ಯೇವಾಸ್ತೇಜಗತ್ಯಸ್ಮಿನ್ನಮನ್ಯೇಷುದುರಾತ್ಮಸು ॥ ೧೦೫ ॥ ಗುಣವತ್ಪಾತ್ರಪೂಜಾಯಾವರಂಶಾಸನಪೂಜನಂ । ಶಾಸನಂಪೂಜಯೇತ್ತಸ್ಮಾದವಿಚಾರ್ಯಶಿವಾಜ್ಞಯಾ ॥ ೧೦೬ ॥ ಲಿಂಗದ್ವಯಂಸಮಾಖ್ಯಾತಂಚರಂಚಾಚರಮೇವಚ । ಚರಂವ್ರತೀತಿವಿಖ್ಯಾತಮಚರಂಪಾರ್ಥಿವಾದಿಕಂ ॥ ೧೦೭ ॥ ಇತ್ಯಾಗಮಾರ್ಥಾಚರಣಂದೃಷ್ಟಂತ್ವಯ್ಯೇವನಾನ್ಯತಃ । ಸದ್ಭಕ್ತಲೋಲಶೈವಾಗಮೋ

---

ಶಿವನ ತಲೆಯೊಂದೇ ನಿನ್ನ ತಲೆಗೆ ಸಮಾನವು ॥ ೧೦೧ ॥ ನೀನೇ ನಮಗೆ ಶಿವನೂ ಗುರುವೂ ಭಕ್ತನೂ ಆಗಿರುವೆ. ಸಂಶಯವಿಲ್ಲ. ಕೃಪಾನಿಧಿಯಾದ ದಸರಾರ್ಯನೆ, ಯಾವ ಮನುಷ್ಯನು ಸಹನೆಯೆಂಬ ಕತ್ತಿಯಿಂದ ಕೋಪವೆಂಬ ಶತ್ರುವನ್ನು ಕತ್ತರಿಸುವುದಕ್ಕೆ ಸಮರ್ಥನಾಗುತ್ತಾನೋ ಅವನೇ ಶೂರನು, ಅವನೇ ಋಷಿಯು, ಅವನೇ ವಿದ್ವಾಂಸನು, ಅವನೇ ಮಂತ್ರಜ್ಞನು. ಹೀಗೆ ಹೇಳುವ ಶಿವಶಾಸ್ತ್ರದ ಅಭಿಪ್ರಾಯವು ನಿನ್ನಲ್ಲಿರುತ್ತದೆ ॥ ೧೦೩ ॥ ಅದು ಇತರರಲ್ಲಿ ವರ್ತಿಸುವುದೇನು ? ಹಿಂಸೆಯನ್ನು ಮಾಡದಿರುವುದು ಉತ್ಕೃಷ್ಟವಾದ ಧರ್ಮವೆಂಬುದನ್ನು ಬಲ್ಲವರಲ್ಲಿ ಶ್ರೇಷ್ಠನಾದ ಎಲೌ ಸ್ವಾಮಿಯೆ ! ಈ ಜಗತ್ತಿನಲ್ಲಿ ಪ್ರಯತ್ನಪೂರ್ವಕವಾಗಿ ಯಾವ ಪ್ರಾಣಿಯನ್ನೂ ಕೊಲ್ಲಲಾಗದು ಎಂಬ ವಾಕ್ಯದ ಅಭಿಪ್ರಾಯವು ನಿನ್ನಲ್ಲಿ ಮಾತ್ರವೇ ಇದೆಯೋ ಹೊರತು ಇತರ ದುರಾತ್ಮರುಗಳಲ್ಲಿರುವುದೆ ? ॥ ೧೦೫ ॥ ಗುಣಶಾಲಿಯಾದ ಯೋಗ್ಯನನ್ನರಸಿಕೊಂಡು ಪೂಜಿಸುವುದಕ್ಕಿಂತಲೂ, ಶಿವನಾಜ್ಞೆಯನ್ನು ಪೂಜಿಸುವುದು ಶ್ರೇಷ್ಠವು. (ಎಂದರೆ ಶಿವಚಿಹ್ನಧಾರಿಯಾಗಿದ್ದವನು ಯಾರೇ ಆಗಲಿ ಅವನು ನನ್ನಂತೆ ಭಾವಿಸಲ್ಪಡತಕ್ಕವನು ಎಂಬ ಶಿವನಾಜ್ಞೆಯನ್ನು ಪಾಲಿಸುವುದೆಂದರ್ಥ) ಆದುದರಿಂದ ವಿಚಾರವನ್ನು ಮಾಡದೆ ಆ ಶಿವಾಜ್ಞೆಯನ್ನು ಪೂಜಿಸಬೇಕು. ಲಿಂಗವು ಚರವೆಂದು ಅಚರವೆಂದು ಎರಡು ಪ್ರಕಾರವು. ಶಿವಯೋಗವ್ರತವುಳ್ಳ ಜಂಗಮನೇ ಚರನೆನ್ನುತಲೂ, ಪಾರ್ಥಿವಾದಿ ಲಿಂಗವೇ ಅಚರವೆನ್ನುತಲೂ ಪ್ರಸಿದ್ಧವಾಗಿರುವುದು ॥ ೧೦೭ ॥ ಈ ಪ್ರಕಾರವಾದ ಆಗಮಾರ್ಥವನ್ನನುಸರಿಸಿ ನಡೆಯುವಿಕೆಯು ನಿನ್ನಲ್ಲೇ ಕಾಣಲ್ಪಡುವುದು. ಬೇರೆ ಕಡೆಯಲ್ಲಿಲ್ಲ. ಉತ್ತಮಭಕ್ತರಲ್ಲಿ ಆಸಕ್ತಿಯುಳ್ಳವನೆ, ಶಿವಾಗಮಗಳಲ್ಲಿ ಹೇಳಲ್ಪಟ್ಟಿರುವ ಧರ್ಮಗಳನ್ನು ಪರಿಪಾ

ಕ್ತ ಧರ್ಮ್ಮಸುಪಾಲಕ ॥ ೧೦೮ ॥ ಹರ್ಷಾ ನುಕೂಲಸಚ್ಛೀಲ ಶಿವಸದ್ಭಕ್ತಿ ಮೂಲಭೋ । ಗತಕಾಲಾಪಹೃತದುರ್ಭವಲೀಲ ಕೃಪಾನಿಧೆ ॥ ೧೦೯ ॥ ಗುಣಾಲವಾಲಸುಕೃತಮಹೋತ್ತಾಲೇತ್ಯಕೀರ್ತ್ತಯನ್ । ತದಾಸರ್ವೇಪೌರಜನಾಭಕ್ತ್ಯಾ ಜಯಜಯೇತಿಚ ॥ ೧೧೦ ॥ ವದಂತೋಭುವಿಸಾಷ್ಟಾಂಗಂ ಪ್ರಣಾಮಂಚಕ್ರಿರೇಮುದಾ । ತತಃಪೂರ್ವಂದಸರಾರ್ಯ್ಯಾಯಾಹಿತಂಕಾರಯಿತುಂಖಲಂ ॥ ೧೧೧ ॥ ಕೌಟಿಲ್ಯಲಾಂಛನಧರಂಪ್ರೇಷಿತಾದುರ್ಜನಾಸ್ತು ತೇ । ಭಯಾಕ್ರಾಂತಹೃದಸ್ಸಂತಸ್ಸಾಷ್ಟಾಂಗಂಪ್ರಣಿಪತ್ಯಚ ॥ ೧೧೨ ॥ ಅಪರಾಧಶತಾಕೀರ್ಣಾಹ್ಯಶುದ್ಧಮತಯೋವಯಂ । ಗತಪುಣ್ಯಾ ಅಹಂಕಾರಾವೃತಾಃ ಕರಿಣಚೇತಸಃ ॥ ೧೧೩ ॥ ಅಜ್ಞಾ ದುಷ್ಕರ್ಮನಿರತಾಶ್ಶಠಾಸ್ಸಂಸಾರ ಸಂಗತಾಃ । ಹಿಂಸಾಪರಾಸ್ಸದಾಚಾರ ದೂರಾಭಾಗ್ಯವಿವರ್ಜಿತಾಃ ॥ ೧೧೪ ॥ ತಸ್ಮಾದನಂತಾಪರಾಧಾಸ್ಸಂತ್ಯಸ್ಮಾಸು ದಯಾನಿಧೆ । ಪಾಲಯಾಸ್ಮಾನ್ಮದೀಶಾನದಸರಾರ್ಯ್ಯಗುಣಾಕರ ॥ ೧೧೫ ॥ ಮಹಿಮಾತಿಶಯಂಶಂಭುರೇವಜಾನಾತಿತಾವಕಂ । ವಯಂಜ್ಞಾತುಂಸಮರ್ಥಾಃ

---

ಲಿಸತಕ್ಕವನೆ ॥ ೧೦೮ ॥ ಸಂತೋಷಸಹಾಯಕವಾದ ಒಳ್ಳೆಯ ನಡತೆಯುಳ್ಳವನೆ, ಶಿವಭಕ್ತಿಗೆ ಕಾರಣನಾದವನೆ, ಯಮಭಯವನ್ನು ಕಳೆದುಕೊಂಡಿರುವವನೆ, ದುಷ್ಟವಾದ ಸಂಸಾರದಾಟವನ್ನು ನಾಶಮಾಡಿಕೊಂಡಿರುವವನೆ, ಕೃಪಾನಿಕ್ಷೇಪನೆ ॥ ೧೦೯ ॥ ಸದ್ಗುಣಗಳಿಗಾಶ್ರಯನೆ, ಪುಣ್ಯದಿಂದುನ್ನತನಾದವನೆ, ಎಂದು ಹೊಗಳಿದರು. ಆಗ ಪಟ್ಟಣದ ಜನರೆಲ್ಲರೂ ಭಕ್ತಿಯಿಂದ ಜಯ ಜಯ ಎಂಬುದಾಗಿ ಹೇಳುವವರಾಗಿ, ಸಂತೋಷದಿಂದ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಅದಕ್ಕೆ ಮುಂಚೆಯೇ ದಸರಾರ್ಯನಿಗೆ ಕೆಡುಕನ್ನುಂಟುಮಾಡುವುದಕ್ಕಾಗಿ ಕಪಟವೇಷವನ್ನು ಧರಿಸಿದ್ದ ನೀಚನನ್ನು ಕಳುಹಿಸಿದ್ದ ಆ ದುರ್ಜನರೆಲ್ಲರೂ ಮನಸ್ಸಿನಲ್ಲಿ ಭಯಪಟ್ಟವರಾಗಿ ಬಂದು ಸಾಷ್ಟಾಂಗವಾಗಿ ನಮಸ್ಕರಿಸಿದವರಾಗಿ ॥ ೧೧೨ ॥ ಎಲೈ ಕೃಪಾನಿಧಿಯೆ, ನನ್ನ ಸ್ವಾಮಿಯೆ, ಸದ್ಗುಣಾಶ್ರಯನಾದ ದಸರಾರ್ಯನೆ, ನಾವು ಹಲವು ತಪ್ಪುಗಳನ್ನು ಮಾಡಿದವರುಗಳು, ಪಾಪಚಿತ್ತರು, ಪುಣ್ಯಹೀನರು, ಅಹಂಕಾರದಿಂದ ಮುಸುಕಿದವರು, ದಯಾಹೀನವಾದ ಮನಸ್ಸುಳ್ಳವರು ॥ ೧೧೩ ॥ ಮೂಢರು, ಕೆಟ್ಟ ಕೆಲಸಗಳಲ್ಲೇ ಆಸಕ್ತಿಯುಳ್ಳವರು, ಧೂರ್ತರು, ಭವಬದ್ಧರು, ಪ್ರಾಣಿಹಿಂಸಾಸಕ್ತರು, ಉತ್ತಮಾಚಾರಗಳಿಗೆ ದೂರರು, ಭಾಗ್ಯಹೀನರು ॥ ೧೧೪ ॥ ಆದುದರಿಂದ ನಮ್ಮಲ್ಲಿ ಅಪಾರವಾದ ತಪ್ಪುಗಳಿವೆ. ನಮ್ಮನ್ನು ರಕ್ಷಿಸು ॥ ೧೧೫ ॥ ನಿನ್ನ ಮಹತ್ವಾಧಿಕ್ಯವನ್ನು ಶಿವನೊಬ್ಬನೇ ತಿಳಿಯಬಲ್ಲನು. ಮರವೆ ಮುಸುಕಿದ ಮನಸ್ಸುಳ್ಳ ನಾವುಗಳು ಅದನ್ನು ತಿಳಿಯಲು ಸಮರ್ಥ

ಕಿಮಜ್ಞಾನಾವೃತಮಾನಸಾಃ ॥ ೧೧೬ ॥ ಅವಿಚಿಂತ್ಯಸ್ವಯಂನೀತಿಂತವೇದೃಗ
ಪರಾಧಕೃತ್। ಅವಿನೀತೋಽಪ್ಯಂಗಹೀನಃಕರಾವಲಭತಕ್ಷಣಾತ್॥ ೧೧೭ ॥ ಕಿಂ
ಬಹೂಕ್ತ್ಯಾತವಾನಿಷ್ಟಂಕರ್ತುಂತಂಪ್ರೇಷಿತಾವಯಂ। ನಕೃತಾರ್ಥಾಸ್ಮಕಿಂದೇ
ವಸರ್ವಜ್ಞಕರುಣಾನಿಧೆ ॥೧೧೮॥ ಖಲಸ್ನೇಹಾತ್ಸಾಧುವೈರಂವರಮಾಹುರ್ಮ
ನೀಷಿಣಃ । ತಸ್ಮಾತ್ತ್ವಮಹಿಮಾನಂತ್ವಂಸ್ಮೃತ್ವಾಸ್ಮಾನ್ಪಾಹಿಭೋಗುರೋ ॥
ಇತ್ಯೇವಂಕಥಯಂತಸ್ತೇಪ್ರಣೇಮುಃಪುರರಾದರಾತ್ । ಮನುಜೇಷುಚಸರ್ವೇ
ಷುವಿಸ್ಮಿತೇಷುಪರಸ್ಪರಂ ॥ ೧೨೦ ॥ ಮಹಾದೇವನಕಿಂಚಿತ್ರಮಸ್ಮದ್ದಸರಿದೇ
ವಯಃ । ಸ್ವಮಸ್ತಕಂದಂಡಯತೋ ಮೋಟಮಲ್ಲಸ್ಯತೌಕರೌ ॥ ೧೨೧ ॥
ನಿರ್ವಿಣ್ಣೋಽಪಿಸ್ವಯಂಪ್ರಾದಾದಸ್ಮಾಸುಪ್ರಣತೇಷ್ವಯಂ । ಕಿಂಕಿಂದಾಸ್ಯತಿನೇ
ತ್ಯುಚ್ಚೈಸ್ತುವತ್ಸುಪ್ರಣಮತ್ಸುಚ ॥ ೧೨೨ ॥ ಇತ್ಥಂಸವಿಸ್ಮಯೇಷ್ವನ್ಯಸ
ಮಯೇಷುನಮತ್ಸ್ವಪಿ । ಭಕ್ತೇಷುಪರಮಾನಂದಂಪ್ರಾಪ್ತೇಷುನಿಖಿಲೇಷು
ಚ ॥ ೧೨೩ ॥ ಏವಂದಸರಯಸ್ತಸ್ಮೈದದೌಕರಯುಗಂಪುರಾ । ಅಯಂಶ್ರೀ
ಪಂಡಿತಾರಾಧ್ಯದೇವೋಽಸ್ಯಚರಣದ್ವಯಂ ॥ ೧೨೪ ॥ ಮಹಾದೇವಾರ್ಯಾಯದ

---

ರೆ ? ॥ ೧೧೬ ॥ ತಾನು ನೀತಿಯನ್ನು ವಿಚಾರಮಾಡದೆ ಇಂತಹ ತಪ್ಪನ್ನು ನಿನಗೆ ಮಾಡಿದ
ಅಂಗಹೀನನಾದ ಧೂರ್ತನು ಕೂಡ ಕ್ಷಣಮಾತ್ರದಲ್ಲಿ ಹಸ್ತಗಳನ್ನು ಪಡೆದುಕೊಂಡನು।
ದಯಾನಿಧಿಯಾದ ಸರ್ವಜ್ಞಮೂರ್ತಿಯೇ, ಹೆಚ್ಚುಮಾತಿನಿಂದೇನು ? ನಿನಗೆ ಕೇಡನ್ನುಂ
ಟುಮಾಡುವುದಕ್ಕಾಗಿ ಆತನನ್ನು ಕಳುಹಿಸಿದ ನಾವು ಧನ್ಯರಾಗುವುದಿಲ್ಲವೇನು ? ॥೧೧೮॥
ನೀಚನ ಸ್ನೇಹಕ್ಕಿಂತಲೂ ಸತ್ಪುರುಷನ ಶತ್ರುತ್ವವು ಶ್ರೇಷ್ಠವಾದುದೆಂದು ವಿದ್ವಾಂಸರು
ಗಳು ಹೇಳುವರು. ಆದುದರಿಂದ ಎಲೈ ಗುರುವೆ ! ನಿನ್ನ ಮಹತ್ವವನ್ನು ನೀನು ಸ್ಮರಿ
ಸಿಕೊಂಡು ನಮ್ಮನ್ನು ಪರಿಪಾಲಿಸು ॥ ೧೧೯ ॥ ಹೀಗೆಂದು ಹೇಳುವವರಾಗಿ, ಪ್ರೀತಿಯಿಂದ
ನಮಸ್ಕರಿಸಿದರು. ಅಲ್ಲಿದ್ದ ಮನುಷ್ಯರೆಲ್ಲರೂ ಒಬ್ಬರಿಗೊಬ್ಬರು ಆಶ್ಚರ್ಯಪಡುತ್ತಿರ
ಲಾಗಿ ,, ಶಿವಶಿವಾ ! ಇದಾಶ್ಚರ್ಯವಲ್ಲವೆ ! ನಮ್ಮ ದಸರಿದೇವಯ್ಯನು ತನ್ನ ತಲೆಯನ್ನು
ಹೊಡೆದ ಮೋಟಮಲ್ಲನಿಗೆ ತಾನು ನೋವನ್ನು ಹೊಂದಿದರೂ ಅವನ ಕೈಗಳನ್ನು ಕೊ
ಟ್ಟನು. ನಾವು ನಮಸ್ಕಾರ ಮಾಡಿದರೆ, ಈತನು ನಮಗೆ ಏನೇನನ್ನು ತಾನೇ ಕೊಡ
ಲಾರನು ? ಎಂಬುದಾಗಿ ಗಟ್ಟಿಯಾಗಿ ಹೇಳಿ ನಮಸ್ಕರಿಸುತ್ತ, ಹೀಗೆ ಆಶ್ಚರ್ಯಭರಿತರಾಗಿ
ಪರಸಮಯದವರು ನಮಸ್ಕರಿಸುತ್ತಿರಲಾಗಿ, ಶಿವಭಕ್ತರುಗಳೆಲ್ಲರೂ ಅತ್ಯಾನಂದವನ್ನು
ಹೊಂದಿರಲಾಗಿ ॥ ೧೨೩ ॥ ಹೀಗೆ ದಸರಿ ದೇವಯ್ಯನು ಆ ಮೋಟಮಲ್ಲನಿಗೆ ಕೈಗಳ
ನ್ನು ಪೂರ್ವದಲ್ಲಿ ಕೊಟ್ಟನು. ಈ ಪಂಡಿತಾರಾಧ್ಯಸ್ವಾಮಿಯು ಈಗ ವೆಲ್ಲಕೊಂಡ

ದಾಪಶ್ಯತ್ಸುನಿಖಿಲೇಷುಚ ||

ಇತ್ಯಸಂಖ್ಯಾತ ಮಾಹೇಶ್ವರ.........ಮಲ್ಲಿಕಾರ್ಜುನ
ಪಂಡಿತಾರಾಧ್ಯಚರಿತೇ ಪುರಾತನ ಪ್ರಕರಣೇ ದಸ
ರಾರ್ಯಮಾಹಾತ್ಮ್ಯಕಥನಂ ನಾಮ
ಚತುರ್ಥೋಽಧ್ಯಾಯಃ.

---

ಮಹಾದೇವಮ್ಯನಿಗೆ ಸರ್ವರೂ ನೋಡುತ್ತಿರುವಾಗಲೇ ಎರಡು ಕಾಲ್ಗಳನ್ನು ಕೊಟ್ಟನು || ೧೨೪ ||

ಎಂಬಲ್ಲಿಗೆ ಶ್ರೀ ಗುರುರಾಜಕೃತವಾದ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತಕ್ಕೆ ಎ. ಆರ್. ಕರಿಬಸವಶಾಸ್ತ್ರಿ ಕೃತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ಪುರಾತನ ಪ್ರಕರಣದೊಳಗೆ ದಸರಿ ದೇವಮ್ಯನ ಮಹತ್ವವನ್ನು ವರ್ಣಿಸಿರುವ ನಾಲ್ಕನೆಯ ಅಧ್ಯಾಯವು ಮುಗಿದುದು.

# ಅಥ ಪಂಚಮೋಽಧ್ಯಾಯಃ.

(ಗುರುಭಕ್ತ ಚಾರಿತ್ರಕಥನಂ.)

ಕಿಂಚಶ್ರೀಗುರುಪಾದಾಬ್ಜಪಾರವಶ್ಯವಿಭಾಸಿತಃ । ಗುರುಭಕ್ತಿಸುಧಾಪೂರ್ಣಜಲಧಿರ್ಗುರುವತ್ಸಲಃ ॥೧॥ ಗುರುಭಕ್ತಿಸುವರ್ಣಾದ್ರಿರ್ಗುರುಭಕ್ತಿಸುರದ್ರುಮಃ । ಗುರುಸದ್ಭಕ್ತಿಸುಮನೋಧೇನುರತ್ಯಂತನಿರ್ಮಲಃ ॥೨॥ ಗುರುಸದ್ಭಕ್ತಿಪದವೀಪಟ್ಟಬದ್ಧೋವಿಶುದ್ಧಧೀಃ । ಗುರುಭಕ್ತಾರ್ಯನಾಮಾಸೀದ್ಗರೀಯಃಖ್ಯಾತಿಭೂಷಿತಃ ॥೩॥ ಯೋಗುರುಸ್ಸಶಿವಃಪ್ರೋಕ್ತೋಯಶ್ಶಿವಸ್ಸಗುರುಸ್ಸ್ಮೃತಃ।ಇತಿವಾಕ್ಯಾನ್ನಾಸ್ತಿತತ್ವಂಗುರೋಃಪರಮಿತಿಶ್ರುತೇಃ ॥೪॥ ತ್ರಿಸಂಧ್ಯಾಸುಗುರೋಃಪೂಜೇತ್ಯುಕ್ತಿತೋಪ್ಯಥಸದ್ಗುರೋಃ । ಪದಾಬ್ಜರೇಣುಂಶಿರಸಃಕೃತ್ವಾಭೂಷಣಮುನ್ನತಂ ॥೫॥ ಸಂಸ್ತುವನ್ಪ್ರಣಿಪತ್ಯೋರ್ವ್ಯಾಂಕ್ಷಾಳಯಿತ್ವಾಪದೇತತಃ । ತೇನಾಂಬುನಾಶಿರೋದೇಶಂಮಾರ್ಜಯಿತ್ವಾಯ

---

# ೫ ನೆಯ ಅಧ್ಯಾಯವು.

(ಗುರುಭಕ್ತಾರ್ಯನ ಕಥೆಯು.)

ಮತ್ತೂ ಶ್ರೀಗುರುವಿನ ಪಾದಕಮಲಕ್ಕೆ ಅಧೀನನಾಗಿ ಒಪ್ಪುತ್ತಿರುವವನೂ, ಗುರುಭಕ್ತಿಯೆಂಬ ಕ್ಷೀರದಿಂದ ತುಂಬಿದ ಸಮುದ್ರನೂ, ಗುರುವಿನಲ್ಲಿ ವಿಶ್ವಾಸವುಳ್ಳವನೂ। ಗುರುಭಕ್ತಿಯೇ ಮೇರುಪರ್ವತವಾಗುಳ್ಳವನೂ, ಗುರುಭಕ್ತಿಯೇ ಕಲ್ಪವೃಕ್ಷವಾಗುಳ್ಳವನೂ, ಗುರುಭಕ್ತಿಯೇ ಕಾಮಧೇನುವಾಗುಳ್ಳವನೂ, ಅತ್ಯಂತ ಪರಿಶುದ್ಧನೂ ॥೨॥ ಗುರುಭಕ್ತಿಯೆಂಬ ಅಧಿಕಾರಸ್ಥಾನಕ್ಕೆ ಪಟ್ಟ ಕಟ್ಟಿಸಿಕೊಂಡಿರುವನೂ, ನಿರ್ಮಲಮತಿಯೂ, ಶ್ರೇಷ್ಠನೂ ಪ್ರಖ್ಯಾತನೂ ಆದ ಗುರುಭಕ್ತಾರ್ಯನೆಂಬುವನೊಬ್ಬನಿದ್ದನು ॥೩॥ "ಯಾವನು ಗುರುವೋ ಅವನು ಶಿವನೆಂಬುದಾಗಿ ಹೇಳಲ್ಪಟ್ಟಿರುವನು. ಯಾವನು ಶಿವನೋ ಅವನು ಗುರುವೆಂದು ಹೇಳಲ್ಪಟ್ಟಿರುವನು" ಎಂಬ ವಚನವಿರುವುದರಿಂದಲೂ, "ಗುರುವಿಗಿಂತಲೂ ಪರವಾದ ತತ್ವವಿಲ್ಲ" ವೆಂಬ ಶ್ರುತಿವಚನದಿಂದಲೂ ॥೪॥ ಮೂರು ಸಂಜೆಗಳಲ್ಲೂ ಗುರುವಿನ ಪೂಜೆಯನ್ನು ಮಾಡಬೇಕು ಎಂಬ ವಾಕ್ಯದಿಂದಲೂ ಸಹ ಈ ಭಕ್ತನು ಸದ್ಗುರುವಿನ ಪಾದಕಮಲದ ಧೂಳಿಯನ್ನು ತನ್ನ ಶಿರಸ್ಸಿಗೆ ಶ್ರೇಷ್ಠವಾದ ಆಭರಣವನ್ನಾಗಿ ಮಾಡಿಕೊಂಡು ॥೫॥ ಆ ಗುರುವನ್ನು ಕೊಂಡಾಡಿ, ಭೂಮಿಯಲ್ಲಿ ನಮಸ್ಕರಿಸಿ, ಆ ಗುರುವಿನ ಪಾದಗಳನ್ನು ತೊಳೆದು, ಬಳಿಕ ಆ ಪಾದೋದಕದಿಂದ ತನ್ನ ತಲೆಯನ್ನು ವಿಧ್ಯುಕ್ತವಾಗಿ ಪ್ರೋಕ್ಷಿಸಿಕೊಂಡು ॥೬॥ ಮೆಲ್ಲಮೆಲ್ಲನೆ ಭಕ್ತಿಯಿಂದ

ಥಾವಿಧಿ ‖ ೬ ‖ ಶನೈಶ್ಶನೈರ್ದುಕೂಲೇನ ಪಾದಾವುನ್ಮೃಜ್ಯಭಕ್ತಿತಃ । ಶ್ರೀ ಚಂದನೇನಾನುಲಿಪ್ಯಸಂಪೂಜ್ಯತದನಂತರಂ ‖ ೭ ‖ ಧೂಪದೀಪಾದ್ಯನೇಕೋಪಚಾರಾನ್ಕೃತ್ವಾಕೃತಾಂಜಲಿಃ । ನಮಸ್ಕೃತ್ಯಚಸದ್ಭಕ್ತ್ಯಾದತ್ವಾಪುಷ್ಪಾಂಜಲಿಂತತಃ ‖ ೮ ‖ ಮಸ್ತಕನ್ಯಸ್ತಹಸ್ತಸ್ಸನ್ಪ್ರಸ್ತುವನ್ಬಹುಧಾಗುರುಂ । ಪ್ರಣಮ್ಯಪಾದಯೋಃಪ್ರೀತ್ಯಾಕೃತ್ವಾಸಮ್ಯಕ್ಪ್ರದಕ್ಷಿಣಂ ‖ ೯ ‖ ಭೂಯೋಽಪಿನತ್ವಾತತ್ಸೇವಾಂಕುರ್ವನ್ನೇವಮತಂದ್ರಿತಃ । ಗುರುಪಾದಾಬ್ಜಸದ್ಭಕ್ತ್ಯಾಗುರುಕಾರ್ಯೈಕಯುಕ್ತಿತಃ ‖ ೧೦ ‖ ಶ್ರೀಗುರೋರ್ದಾಸತಾಸಕ್ತ್ಯಾಗುರೂಕ್ತ್ಯಾಚನಿರಂತರಂ । ಶರೀರಧರ್ಮಾನ್ಪಿಸ್ಮೃತ್ಯವರ್ತತೇಯುಕ್ತಮೇವತತ್ ‖ ೧೧ ‖ ಅಪ್ರತರ್ಕ್ಯಮನಿರ್ಭೇದ್ಯಮಪ್ರಮೇಯಮನಾಮಯಂ । ಪ್ರಮಾಣಾತೀತಮಮಲಂಪ್ರಕಾರಪರಿವರ್ಜಿತಂ ‖ ೧೨ ‖ ಅಸ್ರಚಿಂತ್ಯಮಸಾಧ್ಯಂತದನಾಸಾದ್ಯಂತಥಾವ್ಯಯಂ । ಶಿವತತ್ವಂವಿಜಾನೀಯಾತ್ಸಶಿವಃ ಪರಮೇಶ್ವರಃ ‖ ೧೩ ‖ ಪಾರ್ವತೀಪತಿರೀಶಾನಉಪಮಾತೀತವೈಭವಃ । ಅನುಗ್ರಹಾಯಭಕ್ತಾನಾಂಗುರುಮೂರ್ತಿಮುಪೇತ್ಯಚ ‖ ೧೪ ‖ ಸಂಸಾರಪಾಶಾನ್ನಿರ್ದಗ್ಧುಂಮುಮುಕ್ಷೂನಪಿ

---

ಪಾದಗಳನ್ನು ಮಡಿಯ ಬಟ್ಟೆಯಿಂದ ಒರಸಿ, ಶ್ರೀಗಂಧದಿಂದ ಲೇಪನವನ್ನು ಮಾಡಿ, ಬಳಿಕ ಪೂಜಿಸಿ ‖ ೭ ‖ ಧೂಪದೀಪ ಮೊದಲಾದ ಅನೇಕ ಉಪಚಾರಗಳನ್ನು ಮಾಡಿ, ಕೈಮುಗಿದು, ನಮಸ್ಕರಿಸಿ, ಭಕ್ತಿಯಿಂದ ಪುಷ್ಪಾಂಜಲಿಯನ್ನರ್ಪಿಸಿ, ಅನಂತರ ‖ ೮ ‖ ತಲೆಯ ಮೇಲೆ ಕೈಗಳನ್ನು ಜೋಡಿಸಿಟ್ಟುಕೊಂಡವನಾಗಿ, ಹಲವು ಪ್ರಕಾರದಲ್ಲಿ ಗುರುವನ್ನು ಸ್ತೋತ್ರಮಾಡಿ, ಪ್ರೀತಿಯಿಂದ ಪಾದಗಳಿಗೆ ನಮಸ್ಕರಿಸಿ, ಚೆನ್ನಾಗಿ ಪ್ರದಕ್ಷಿಣಮಾಡಿ ‖ ೯ ‖ ಮತ್ತೆಯೂ ನಮಸ್ಕರಿಸಿ, ಹೀಗೆ ಆಲಸ್ಯವಿಲ್ಲದೆ ಆ ಗುರುವಿನ ಸೇವೆಯನ್ನು ಮಾಡುವವನಾಗಿ, ಯಾವಾಗಲೂ ಗುರುಪಾದ ಕಮಲದ ಭಕ್ತಿಯಿಂದಲೂ, ಗುರುವಿನ ಕೆಲಸವನ್ನು ಮಾಡುವ ಉಪಾಯದಿಂದಲೂ ‖ ೧೦ ‖ ಶ್ರೀಗುರುವಿನ ಊಳಿಗದಲ್ಲಿ ಕುತೂಹಲದಿಂದಲೂ, ಗುರುವಿನ ಅಪ್ಪಣೆಯಂತೆ ಆಚರಿಸುವುದರಿಂದಲೂ ಸಹ ತನ್ನ ಆಹಾರ ನಿದ್ರಾದಿ ಶರೀರ ಧರ್ಮಗಳನ್ನು ಸಹ ಮರೆತುಬಿಟ್ಟಿರುವನು. ಅದು ಯುಕ್ತವೇ ಸರಿ ‖ ೧೧ ‖ ಊಹಿಸಲಸಾಧ್ಯವಾದುದು, ಭೇದಿಸುವುದಕ್ಕಶಕ್ಯವಾದುದು, ಅಳೆಯುವುದಕ್ಕಾಗದುದು, ರೋಗರಹಿತವಾದುದು, ಪರಿಮಿತವಲ್ಲದುದು, ನಿರ್ಮಲವಾದುದು, ಆಕಾರವಾದುದು, ಯೋಚನೆಗೆ ನಿಲುಕದುದು, ಸಾಧಿಸುವುದಕ್ಕೆ ಶಕ್ಯವಲ್ಲದುದು, ಹೊಂದುವುದಕ್ಕಸಾಧ್ಯವಾದುದು, ನಾಶರಹಿತವಾದುದು, ಆಗಿರುವ ಶಿವತತ್ವವನ್ನು ಯಾವನು ತಿಳಿಯುವನೋ ಅವನೇ ಸಾಕ್ಷಾತ್ಪರಶಿವನು ‖ ೧೩ ‖ ಪಾರ್ವತಿಯ ಪತಿಯೂ ಸರ್ವೇಶ್ವರನೂ ಅಸದೃಶವೈಭವವುಳ್ಳವನೂ ಆದ ಶಂಕರನೇ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಗುರುವಿನ ಆಕಾರವನ್ನು ಧರಿಸಿ ‖ ೧೪ ‖

ಭೂತಲೇ । ಪ್ರಬೋಧಯಿತುಮುದ್ಯುಕ್ತೋ ದಯಾಮೃತಕರಾಂಬುಜಃ ॥೧೫॥
ಸ್ವಯಮೇವಸ್ವಮಾತ್ಮಾನಂಪ್ರಕಾಶಯಿತುಮುದ್ಯತಃ । ಬಭೂವಶ್ರೀಗುರು
ಸ್ಸೋಯಮವಾಙ್ಮಾನಸಗೋಚರಂ ॥೧೬॥ ಶ್ರೀಮಹಾದೇವಮಾಶಾಸಂವಿ
ಭುಂಕೃತ್ವಾಮನೋಗತಂ । ಪುನಸ್ಸರ್ವಗತತ್ವಾದಿಗುಣೈರವಯವೈರಪಿ ॥೧೭॥
ಶಿವಂಕೃತ್ವಾವಿರಹಿತಂಕೃಪಯಾ ಶಿಷ್ಯಮಪ್ಯಥ । ಅಹಂಕಾರಾದಿನಿರ್ಮುಕ್ತಂ
ಕೃತ್ವಾಸಂಸ್ಮೃತ್ಯತದ್ದ್ವಯಂ ॥೧೮॥ ಮೂರ್ತ್ಯತೀತಂಪರಂತತ್ವಂಲಿಂಗಮೂ
ರ್ತಿಂ ನಿಯಮ್ಯಚ । ತಚ್ಛಿಷ್ಯಹಸ್ತಸಂಸ್ಥಾಪ್ಯತತ್ಪ್ರಾಣಪರಿನಿಷ್ಠಿತಂ ॥೧೯॥
ವಿದಧಾತಿತದಾತ್ಮಸ್ಥಂಸುತರಾಂಸ್ವಪ್ರಭಾವತಃ । ತಚ್ಛಿಷ್ಯಪರಿಣಾಮೇಽ
ಸ್ಮಿನ್ಸತಿಶ್ರೀಚಂದ್ರಶೇಖರೇ ॥೨೦॥ ಯದರ್ಹಾದಕ್ಷಿಣಾನಾಸ್ತಿವಿನಾತ್ಮಾನಂ
ಗುರೋರತಃ । ಶರೀರಮರ್ಥಂಪ್ರಾಣಾಂಶ್ಚ ಸದ್ಗುರುಭ್ಯೋನಿವೇದಯೇತ್ ॥
ಇತ್ಯುಕ್ತೇಶ್ಚಾ ಸುದೇಹಾರ್ಥಾನ್ನಿವೇದ್ಯಗುರವೇಸ್ವಕಾನ್ । ಸಂಪ್ರಾಪ್ಯಲಿಂಗ

---

ಸಂಸಾರವೆಂಬ ಪಾಶಗಳನ್ನು ಸುಡುವುದಕ್ಕೂ, ಭೂತಲದಲ್ಲಿ ಮೋಕ್ಷಾಪೇಕ್ಷೆಗಳಾದವ
ರನ್ನು ಜಾಗರೂಕಗೊಳಿಸುವುದಕ್ಕೂ ಸಹ ಪ್ರಯತ್ನಿಸಿದವನಾಗಿ, ಕೃಪಾರಸವೆಂಬ ಅ
ಮೃತದಿಂದ ಕೂಡಿದ ಹಸ್ತಕಮಲವುಳ್ಳವನಾಗಿ ॥೧೫॥ ತಾನೇ ತನ್ನನ್ನು ವ್ಯಕ್ತಗೊ
ಳಿಸಿಕೊಳ್ಳುವುದಕ್ಕೆ ಯತ್ನಿಸಿದವನಾದನು ॥೧೬॥ ಆ ಈ ಶ್ರೀಗುರುವು ವಾಕ್ಕು ಮನ
ಸ್ಸುಗಳಿಗೆ ನಿಲುಕದಿರುವ ಸರ್ವವ್ಯಾಪಿಯಾದ ಶ್ರೀ ಪರಮೇಶ್ವರನನ್ನು ತನ್ನ ಮನಸ್ಸಿ
ನಲ್ಲಿ ನಿಲ್ಲಿಸಿಕೊಂಡು, ಮತ್ತೆ ಆ ಶಿವನನ್ನು ಸರ್ವಾಂತರ್ಯಾಮಿತ್ವ ಮೊದಲಾದ ಗುಣಗಳೂ
ಅವಯವಗಳೂ ಸಹ ಇಲ್ಲದವನನ್ನಾಗಿ ಮಾಡಿ, ಬಳಿಕ ಕೃಪೆಯಿಂದ ಶಿಷ್ಯನನ್ನು ಅಹಂ
ಕಾರ ಕ್ರೋಧಲೋಭಾದಿಗಳಿಂದ ವಿರಹಿತನನ್ನಾಗಿ ಮಾಡಿ, ಆ ಶಿವಶಿಷ್ಯರಿಬ್ಬರನ್ನೂ ಸ್ಮರ
ಣೆ ಮಾಡಿ ॥೧೮॥ ತನ್ನ ಮಹತ್ವಶಕ್ತಿಯಿಂದ ಆಕಾರ ವಿರಹಿತವಾದ ಪರಬ್ರಹ್ಮವನ್ನು
ಲಿಂಗರೂಪಿಯನ್ನಾಗಿ ಮಾಡಿ, ಅದನ್ನು ಶಿಷ್ಯನ ಹಸ್ತದಲ್ಲಿರಿಸಿ, ಆ ಲಿಂಗವನ್ನೇ ಅವನ
ಪ್ರಾಣದಲ್ಲಿಯೂ ಆತ್ಮನಲ್ಲಿಯೂ ಚೆನ್ನಾಗಿ ನೆಲೆಗೊಂಡಿರುವಂತೆ ಮಾಡುತ್ತಾನೆ. ಹೀಗೆ
ಶ್ರೀಪರಮೇಶ್ವರನು ಶಿಷ್ಯನೇ ತಾನಾಗಿ ಪರಿಣಮಿಸಲಾಗಿ ॥೨೦॥ ತನ್ನನ್ನು ಹೊರತು
ಗುರುವಿಗೆ ಸಮರ್ಪಿಸುವುದಕ್ಕೆ ಅರ್ಹವಾದ ಬೇರೊಂದು ದಕ್ಷಿಣೆಯು ಇಲ್ಲದಿರುವ ಕಾರಣ
ದಿಂದಲೂ, "ಉತ್ತಮ ಗುರುಗಳಿಗೆ ತನ್ನ ದೇಹಧನಪ್ರಾಣಗಳನ್ನೆಲ್ಲ ಸಮರ್ಪಿಸಬೇಕು"
ಎಂಬ ಆಗಮವಾಕ್ಯವಿರುವುದರಿಂದಲೂ ಸಹ, ದೃಢವ್ರತವುಳ್ಳ ಉತ್ತಮಶಿಷ್ಯನು ತನ್ನ
ತನುಧನಪ್ರಾಣಗಳನ್ನು ಗುರುವಿಗೆ ಸಮರ್ಪಿಸಿ, ಲಿಂಗಾಂಗಸಂಯೋಗವನ್ನೈದಿ, ಜಂಗ
ಮರಲ್ಲಿ ಭಕ್ತಿಯನ್ನು ಹೊಂದಿ, ॥೨೧॥ ಅವರ ಪ್ರಸಾದವನ್ನು ಪಡೆಯುವವನಾಗ

ಸಾನ್ನಿಧ್ಯಂಭಕ್ತಿಂಶ್ರೀಜಂಗಮಾವಳೇಃ ||೨೨|| ಪ್ರಸಾದಮಪಿಸಚ್ಛಿಷ್ಯೋ
ಲಭೇತನಿಯತವ್ರತಃ | ಗುರುಭಕ್ತಿರಿತಿಖ್ಯಾತಾವೃತ್ತಿರೇಷಾನುಹೀತಲೇ ||೨೩
ಏವಂವಿಹಾಯೋದರಾರ್ಥಂ ಪ್ರತಿಜ್ಞಾಮುಕ್ತವರ್ತನಃ । ತದ್ಗುರುಪ್ರತಿಬಿಂ
ಬಾನಾಂಜಂಗಮಾನಾಂಚತದ್ಗುರೋಃ || ೨೪ || ತಲ್ಲಿಂಗಸ್ಯಸ್ವದೇಹಾರ್ಥಪ್ರಾ
ಣೇಷುಕೃತವಂಚನಃ | ಸ್ಯಾಚ್ಛಿನ್ನಮೂಲಂಧನಮಿವಲಿಂಗಂತಸ್ಯಾಶುಗಚ್ಛತಿ ||
ಶರೀರವಂಚಕಸ್ಯಾಸ್ತಿನಪ್ರಸಾದಃಕಥಂಚನ | ತ್ರಿಮೂರ್ತಯೇತ್ರಿವಿಧಸಂದ
ರ್ಶಕಾಯಾದಿ ಮೂರ್ತಯೆ ||೨೬|| ಗುರವೇತ್ರಿತಯೇಭೂಮಾವಂಚಿತೇತ್ರಿ
ತಯಂಕುತಃ | ಗುರುಭಕ್ತೇರ್ವಿಜಾನಾತಿಮಾಹಾತ್ಮ್ಯಂಗುರುರೇವಸಃ ||೨೭||
ಶಂಕರಸ್ಯಾಪಿಸುವಚಂನತದ್ವೈಭವಮುನ್ನತಂ | ಗುರುಭಕ್ತಿರನಂತಾಘಮೇ
ಘಜಂಝಾನಿಲೋಮಹಾನ್ || ೨೮ || ಅಜ್ಞಾನತರುವಿಚ್ಛೇದಕುಠಾರೋನಿ
ಶಿತಾಂಚಲಃ | ಭವಕುಂಜರಪಂಚಾಸ್ಯಃ ಕರ್ಮಾಬ್ಧಿವಡಬಾನಲಃ || ೨೯ || ದು

---

ಬೇಕು. ಭೂತಲದಲ್ಲಿ ಈ ನಡೆಯೇ ಗುರುಭಕ್ತಿಯೆಂದು ಪ್ರಸಿದ್ಧವಾಗಿರುವುದು||೨೩||
ಈ ಪ್ರಕಾರವಾದ ನಡೆಯುಳ್ಳವನಾಗಿರಬೇಕೆಂದು ಹೇಳಲ್ಪಟ್ಟವನು ತನ್ನ ಹೊಟ್ಟೆಯ
ಪಾಡಿಗಾಗಿ, ಅಂತಹ ಪ್ರತಿಜ್ಞೆಯನ್ನು ಬಿಟ್ಟು, ಆ ಗುರುವಿನ ಪ್ರತಿಬಿಂಬಗಳಾದ ಜಂಗ
ಮರಿಗೂ, ಗುರುವಿಗೂ, ಲಿಂಗಕ್ಕೂ ಕೂಡ ತನ್ನ ತನುಧನಪ್ರಾಣಗಳನ್ನು ಅರ್ಪಿಸದೆ
ವಂಚಿಸಿದವನಾದರೆ, ಬುಡವಾಳದ ಹಣವೇ ಹೋದಂತೆ, ಅವನ ಲಿಂಗಧಾರಣವ್ರತವೇ
ಬೇಗನೆ ಹೋಗಿಬಿಡುವುದು || ೨೫ || ತನುವನ್ನರ್ಪಿಸದೆ ವಂಚಿಸಿದವನಿಗೆ ಆ ಗುರುಪ್ರ
ಸಾದವು ಎಂದಿಗೂ ದೊರೆಯುವುದಿಲ್ಲ. ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂ
ರ್ತಿರೂಪನೂ, ಭಕ್ತಿ ಜ್ಞಾನ ಕರ್ಮವೆಂಬ ಮೂರು ಮಾರ್ಗಗಳನ್ನು ತೋರಿಸಿಕೊಡುವ
ವನೂ, ಜಗದಾದಿಮೂರ್ತಿಯೂ || ೨೬ || ಆದ ಗುರುವಿಗೆ ಭೂಮಿಯಲ್ಲಿ ತನ್ನ ತನುಧ
ನಪ್ರಾಣಗಳೆಂಬ ಮೂರು ಪದಾರ್ಥಗಳನ್ನು ಅರ್ಪಿಸದೆ ವಂಚಿಸಿದರೆ, ಶುದ್ಧ ಸಿದ್ಧ ಪ್ರ
ಸಿದ್ಧವೆಂಬ ಮೂರು ತೆರದ ಪ್ರಸಾದಗಳು ಅವನಿಗೆ ಎಲ್ಲಿಂದ ಲಭಿಸುವುವು? ಗುರುಭಕ್ತಿ
ಯ ಮಹಿಮೆಯನ್ನು ಆ ಗುರುವೇ ತಿಳಿಯಬಲ್ಲನು || ೨೭ || ಉನ್ನತವಾದ ಆ ಗುರು
ಮಹಿಮೆಯ ವೈಭವವನ್ನು ಇಷ್ಟೆಂದು ಹೇಳುವುದಕ್ಕೆ ಶಿವನಿಗೂ ಶಕ್ಯವಲ್ಲ. ಗುರು
ಭಕ್ತಿಯು ಅಪಾರವಾದ ಪಾಪವೆಂಬ ಮೋಡಗಳಿಗೆ ದೊಡ್ಡ ಬಿರುಗಾಳಿಯು || ೨೮ ||
ಅಜ್ಞಾನವೆಂಬ ಮರಗಳನ್ನು ತರಿಯುವುದಕ್ಕೆ ಹರಿತವಾದ ಬಾಯುಳ್ಳ ಕೊಡಲಿಯು.
ಜನನಮರಣಾತ್ಮಕ ಸಂಸಾರವೆಂಬ ಆನೆಗೆ ಸಿಂಹವು. ಸಂಚಿತಾದಿ ಕರ್ಮಗಳೆಂಬ ಸಮು
ದ್ರಕ್ಕೆ ಬಡಬಾಗ್ನಿಯು || ೨೯ || ದುಷ್ಟವಾದ ವ್ಯಸನಗಳನ್ನು ಹಾಳುಮಾಡುವುದಕ್ಕೆ

ರ್ಧ್ವಾಂತದುಃಖಸಂದೋಹಧೂಮಕೇತುಸ್ಸಮುತ್ಥಿತಃ । ಅಪುನರ್ಜನ್ಮಹೇತುಃ
ಕಿಂಬಹುನಾಗುರುಸಂಶ್ರಯಃ ‖ ೩೦ ‖ ಮಾತಾಭ್ರಾತಾಸ್ವಯಂಭೂತ್ವಾ ಗು
ರುಭಕ್ತಿಸ್ತು ವತ್ಸಲಾ।ದಾತಾಧಾತಾಚಭೂತ್ವೈವತಥಾಪಾಲಯತಿಸ್ವಯಂ‖೩೧
ವೈದ್ಯೋಭೂತ್ವಾಹಂತಿರುಜಮಾದ್ಯೋಬೋಧಯತಿಸ್ವಯಂ । ನಿಷ್ಫಲಾಪ
ರಭಕ್ತಿಸ್ಸ್ಯಾದ್ಗುರುಭಕ್ತಿವಿನಾಕೃತಾ ‖ ೩೨ ‖ ಶಿವಭಕ್ತೇರ್ಗುರೋರ್ಭ
ಕ್ತಿಃ ಕಿಲಮೂಲಂಮನೋಹರಾ । ಶಕ್ತೀನಾಂಸಂಪದಾಂಭವ್ಯಮುಕ್ತೀನಾಂ
ಸಿದ್ಧಿಸಂತತೇಃ ‖ ೩೩ ‖ ಸರ್ವಾಸಾಂಗುರುಭಕ್ತಿಶ್ರೀ ಶಿವಭಕ್ತೇಶ್ಚ ಕಾರಣಂ
ಪರಮಾರ್ಥಮಿದಂತಸ್ಮಾತ್ಪ್ರಾಣದೇಹಾರ್ಥಸಂಚಯಂ ‖ ೩೪ ‖ ಗುರುಪಾ
ದಾರ್ಪಿತಂಕೃತ್ವಾ ಪರಿಚರ್ಯಾಪರಾಯಣಃ । ಆತ್ಮಾನಂಗುರುಭಕ್ತೇಷುಸ್ತು
ತ್ಯಸಕಲೇಷ್ವಪಿ ‖ ೩೫ ‖ ಸಾತ್ವಿಕಸ್ಥಿರಸದ್ಭಕ್ತ್ಯಾಗುರುಭಕ್ತೋದಿವಾನಿ
ಶಂ । ನಿತ್ಯತಂತ್ರಂಗುರೋಃಪಾದತಂತ್ರಕೃತ್ಯಂವಿಶೇಷತಃ ‖ ೩೬ ‖ ಗುರು
ಮೂರ್ತಿಪ್ರಶಂಸೈವ ಮಂತ್ರಸ್ಸಮಧಿಕಂತಪಃ । ಗುರುಧ್ಯಾನಂಜಪಸ್ತಸ್ಯಪಾ
ದಸ್ಮರಣಮುನ್ನತಂ ‖ ೩೭ ‖ ವ್ರತಂತದ್ವಶವರ್ತಿತ್ವಂತನ್ಮಾರ್ಗಾನುಸ್ಮೃತಿರ್ಮತಂ

---

ಎದ್ದಿರುವ ಧೂಮಕೇತುವು. ಮತ್ತೆ ಜನ್ಮವನ್ನು ಎತ್ತದಂತೆ ಮಾಡುವುದಕ್ಕೆ ಕಾರಣ
ವಾದುದು. ಹೆಚ್ಚುಮಾತಿನಿಂದೇನು? ಈ ಗುರುಭಕ್ತಿಯು, ತಾನೇ ತಾಯೂ ಅಣ್ಣ
ನೂ ಆಗಿ ಬೆಳೆಸುತ್ತದೆ. ಮತ್ತೂ ತಾನೇ ದಾನಿಯೂ ಸ್ವಾಮಿಯೂ ಆಗಿ ಪೋ
ಷಿಸುತ್ತದೆ. ‖ ೩೧ ‖ ವೈದ್ಯನಾಗಿ ರೋಗವನ್ನು ನಾಶಮಾಡುತ್ತದೆ, ತಾನೇ ಮೊದ
ಲಿಗನಾಗಿ ಬೋಧಿಸುತ್ತದೆ. ಗುರುಭಕ್ತಿಯಿಲ್ಲದೆ ಮಾಡುವ ಶಿವಭಕ್ತಿಯು ವ್ಯರ್ಥವಾ
ಗುವುದು ‖ ೩೨ ‖ ಮನೋಹರವಾದ ಗುರುಭಕ್ತಿಯೇ ಶಿವಭಕ್ತಿಗೆ ಮೂಲವಲ್ಲವೆ? ಸಕಲ
ಶಕ್ತಿಗಳಿಗೂ ಸಂಪತ್ತುಗಳಿಗೂ ಸಾಲೋಕ್ಯಾದಿ ಮೋಕ್ಷಗಳಿಗೂ, ಅಣಿಮಾದಿ ಸಿದ್ಧಿಗ
ಳಿಗೂ, ಎಲ್ಲಕ್ಕೂ ಗುರುಭಕ್ತಿಯೇ ಕಾರಣವು. ಇದು ಯಥಾರ್ಥವು. ಆದ್ದರಿಂದ
ಗುರುಭಕ್ತಾಗ್ರ್ಯನು ತನ್ನ ತನುಧನಪ್ರಾಣ ಸಮೂಹವನ್ನು ‖ ೩೪ ‖ ಗುರುವಿನ ಪಾದ
ಕ್ಕೆ ಸಮರ್ಪಿಸಿ, ಆ ಗುರುವಿನ ಸೇವೆಯಲ್ಲಿ ತತ್ಪರನಾಗಿ, ತನ್ನನ್ನು ಉಳಿದ ಗುರುಭಕ್ತ
ರೆಲ್ಲರೂ ಸ್ತೋತ್ರಮಾಡುತ್ತಿರಲಾಗಿ ‖ ೩೫ ‖ ಸತ್ವಗುಣಪ್ರಧಾನವಾದ ಉತ್ತಮಭ
ಕ್ತಿಯಿಂದ ಹಗಲೂ ರಾತ್ರಿ ಗುರುಪಾದಸೇವಾಕೃತ್ಯವೇ ತನ್ನ ನಿತ್ಯಕರ್ಮವಾಗಿಯೂ, ‖
ಗುರುಮೂರ್ತಿಯನ್ನು ಹೊಗಳುವುದೇ ಮಂತ್ರವಾಗಿಯೂ, ಗುರುಧ್ಯಾನವೇ ಉತ್ತಮ
ತಪಸ್ಸಾಗಿಯೂ, ಗುರುಪಾದಸ್ಮರಣವೇ ಶ್ರೇಷ್ಠವಾದ ಜಪವಾಗಿಯೂ ‖ ೩೭ ‖ ಗುರು
ವಿಗಧೀನನಾಗಿ ನಡೆಯುವಿಕೆಯೇ ವ್ರತವಾಗಿಯೂ ಆತನು ನಡೆದ ಮಾರ್ಗವನ್ನನುಸ

ಗುರ್ವಾಜ್ಞಾನಿಯಮೋಹೋಮೋ ಗುರುಪಾದಯುಗಾರ್ಚನಂ ॥ ೩೮ ॥ ತಸ್ಮೈತಸ್ಸ್ವಾರ್ಪಣಂದಾನಂ ಧ್ಯಾನಂತತ್ತತ್ವಚಿಂತನಂ । ಯಥಾಭೂಯಾತ್ತಥಾನಿತ್ಯಂ ವರ್ತಮಾನೋಽತಿಹರ್ಷಿತಃ ॥ ೩೯ ॥ ಜಾತುಯಾಮಾವಶಿಷ್ಟಾಯಾಂರಜನ್ಯಾಂಗುರುಪೂಜನಂ । ಕರ್ತುಂಪ್ರಸೂನಾಹೃತಯೆಸಮುತ್ಥಾಯಾತಿಸಂಭ್ರಮಾತ್ ॥ ೪೦ ॥ ಪ್ರಮಾದಾನ್ನಿಜಪಾದಾಭ್ಯಾಂಸಂಸ್ಪೃಶ್ಯಗುರುಪಾದುಕೇ । ಬತಪ್ರಾಪ್ತಂಶಿವಶಿವಮಹತ್ಪಾಪಮಿತಿಬ್ರುವನ್ ॥ ೪೧ ॥ ಪಾದುಕಾಸನಶಯ್ಯಾದಿಗುರುಣಾಯದಧಿಷ್ಠಿತಂ । ನಮಸ್ಕುರ್ವೀತತತ್ಸರ್ವಂಪಾದಾಭ್ಯಾಂನಸ್ಪೃಶೇತ್ಕ್ವಚಿತ್ ॥ ೪೨ ॥ ಇತಿವಾಕ್ಯಾದ್ಗುರುದ್ರೋಹಾತ್ಕಿಮಸ್ತಿಕಲುಷಂಮಹತ್। ಕಥಂಸಹ್ಯೋಽಪರಾಧೋಽಯಂಮಯಾಪರಮದುಸ್ಸಹಃ ॥ ೪೩ ॥ ಭಾವಿದಂಡಧರೋದ್ದಂಡದಂಡನಂನಸಹೇಽತುಳಂ । ವಿಧಾಯಖಂಡಶಃಪಾದೌಕೃತ್ತಿಮುತ್ಕೃತ್ಯಲೋಹಿತಂ ॥ ೪೪ ॥ ಕೃತ್ವಾಸರ್ಪಿಸ್ತದಸ್ಥೀನಿಸಮಿಧಶ್ಶಂಕರಾನಲೇ।

---

ರಿಸಿ ನಡೆಯುವುದೇ ವ್ರತವಾಗಿಯೂ, ಗುರುವಿನಪ್ಪಣೆಯಂತೆ ನಡೆಯುವುದೇ ನಿಯಮವಾಗಿಯೂ, ಗುರುಪಾದದ್ವಂದ್ವವನ್ನು ಪೂಜಿಸುವುದೇ ಹೋಮವಾಗಿಯೂ, ॥ ೩೮ ॥ ಆ ಗುರುವಿಗೋಸುಗ ದೇಹವನ್ನರ್ಪಿಸುವುದೇ ದಾನವಾಗಿಯೂ, ಆ ಗುರುತತ್ವವನ್ನು ಕುರಿತು ವಿಚಾರಮಾಡುವುದೇ ಧ್ಯಾನವಾಗಿಯೂ ಇರುತ್ತಿರಲು, ನಿತ್ಯದಲ್ಲೂ ಹೀಗೆ ಅತ್ಯಂತ ಸಂತೋಷದಿಂದ ಆಚರಿಸುತ್ತಿದ್ದನು ॥ ೩೯ ॥ ಬಂದಾನೊಂದು ದಿವಸ ರಾತ್ರಿಯಲ್ಲಿ ಇನ್ನೊಂದುಜಾವ ಉಳಿದುಕೊಂಡಿರುವಾಗಲೇ (ಉಷಃಕಾಲದಲ್ಲಿ) ಗುರುಪೂಜೆಯನ್ನು ಮಾಡುವುದಕ್ಕಾಗಿ ಹೂವನ್ನೆತ್ತಿ ತರುವುದಕ್ಕೋಸುಗ ಬಲು ಸಡಗರದಿಂದೆದ್ದು ॥೪೦॥ ಬರುತ್ತಿರುವಲ್ಲಿ ಪ್ರಮಾದದಿಂದ ತನ್ನ ಕಾಲುಗಳು ಗುರುವಿನ ಹಾವುಗೆಗಳಿಗೆ ಸೋಕಲಾಗಿ, ಅಯ್ಯೋ! ಶಿವಶಿವಾ !! ಮಹಾ ಪಾಪವು ಸಂಭವಿಸಿತಲ್ಲಾ ! ಎಂದು ಹೇಳುತ್ತ ॥ "ಗುರುವು ಮೆಟ್ಟಿದ ಹಾವುಗೆ ಪೀಠ ಹಾಸಿಗೆ ಮೊದಲಾದುದನ್ನೆಲ್ಲ ನಮಸ್ಕರಿಸಬೇಕು. ಅದನ್ನು ಯಾವಾಗಲೂ ಕಾಲುಗಳಿಂದ ಸೋಂಕಬಾರದು' ॥ ೪೨ ॥ ಎಂಬ ವಾಕ್ಯವಿರುವುದರಿಂದ ಈಗ ನಾನಾಚರಿಸಿದ ಗುರುದ್ರೋಹಕ್ಕಿಂತಲೂ ದೊಡ್ಡ ಪಾಪಕೃತ್ಯವು ಮತ್ತಾವುದಿರುವುದು ? ಸಹಿಸುವುದಕ್ಕಶಕ್ಯವಾದ ಈ ತಪ್ಪಿತವನ್ನು ನಾನು ಹೇಗೆ ಸಹಿಸಲಿ ॥ ೪೩ ॥ ಮುಂದಾಗತಕ್ಕ ಯಮನ ಅಸಮಾನವಾದ ಶಿಕ್ಷೆಯನ್ನು ನಾನುಸಹಿಸಲಾರನು. ಈ ನನ್ನ ಕಾಲ್ಗಳನ್ನು ತುಂಡುತುಂಡಾಗಿ ಕತ್ತರಿಸಿ, ಚರ್ಮವನ್ನು ಸುಲಿದು, ರಕ್ತವನ್ನು ॥ ೪೪ ॥ ತುಪ್ಪವನ್ನಾಗಿಯೂ, ಆ ಮೂಳೆಗಳನ್ನು ಸಮಿತ್ತುಗಳನ್ನಾಗಿಯೂ ಮಾಡಿ, ಶಿವಾಗ್ನಿಯಲ್ಲಿ ಹೋಮ ಮಾಡುತ್ತೇನೆ. ಇದಕ್ಕೆ ಇದೇ ಪ್ರಾಯಶ್ಚಿತ್ತ ವಿಧಿಯು ಎಂದು

ಹೋಪಾಸ್ಯಾಮಿವಿಧಿರಸ್ಯಾಯಮಿತ್ಯಂಘ್ರಿದ್ವಯಮಚ್ಛಿನತ್ ॥ ೪೫ ॥ ಗುರುರ್
ತಸ್ಯವಿನುತೋಽಮರ † ಗುಂಡನುಪಂಡಿತಃ। ಅಖಂಡಕೀರ್ತಿಸ್ಸದ್ಭಕ್ತಗಣೋ
ಪೇತಸ್ತದುನ್ನತಂ ॥ ೪೬ ॥ ವೃತ್ತಂನಿಶಮ್ಯಾಜಗಾಮಕ್ಷಿಪ್ರಂತಮವಲೋಕ್ಯ
ಸಃ । ಉತ್ಥಾಯಸಂಭ್ರಮಾದ್ಭೀತ್ಯಾ ವಿಸ್ಮೃತ್ಯಾತ್ಮಾನಮುತ್ಸುಕಃ ॥ ೪೭ ॥
ನಮಸ್ಕರ್ತುಂಸಮುದ್ಯುಕ್ತಃ ಪಾದೌಜನಮುಪಾಗತೌ । ಗುರೋರ್ದಯಾ
ಮೃತಸರೋಮಧ್ಯತಃ ಪಾದಪಂಕಜೆ ॥ ೪೮ ॥ ವಿಕಸ್ವರೇಇವಾಯಾತೇಗುರು
ಭಕ್ತೇಃ ಪದೇಇವ । ತತಸ್ಸಂಜಾತಚರಣಃಪ್ರಣಮ್ಯಗುರುಮಾದರಾತ್ ।
ಮಸ್ತಕನ್ಯಸ್ತಹಸ್ತೋಽಸ್ಮಿನ್ಸ್ತವತ್ಯಾಚುರ್ಗಣೋತ್ತಮಾಃ । ಮಹಿಮ್ನೋ
ಗುರುಸದ್ಭಕ್ತೇರೇತತ್ತವಕಿಮದ್ಭುತಂ ॥ ೫೦ ॥ ನಕಿಂಪೂರ್ವೇದ್ಯುರೇವೇಯಂ
ಕಥಾನೈವಪುರಾತನೀ । ಏತಸ್ಯಗುರುಪಾದಾಬ್ಜಪಾರತಂತ್ರ್ಯೋಜ್ವಲನ್ಮತೇಃ।
ಗುರುಸೇವೈಕನಿರತೇರ್ಗುರೋರ್ನಿತ್ಯಕೃಪಾಸ್ಥಿತೇಃ । ಶಿಷ್ಯೇಷ್ವನ್ಯೇಷ್ವಸ

---

ಯೋಚಿಸಿ, ಎರಡುಕಾಲ್ಗಳನ್ನೂ ಕತ್ತರಿಸಿದನು ॥೪೫॥ ಈ ಗುರುಭಕ್ತಾರ್ಯನ ಗುರು
ವಾಗಿಯೂ ಲೋಕನನ್ನುತನಾಗಿಯೂ, ಸಂಪೂರ್ಣ ಕೀರ್ತಿಮಂಡಿತನಾಗಿಯೂ ಇರುವ
ಅಮರಗುಂಡದ ಮಲ್ಲಿಕಾರ್ಜುನ ಪಂಡಿತನು ಶ್ರೇಷ್ಠವಾದ ಆ ಶಿಷ್ಯನ ಆಚರಣೆಯನ್ನು
ಕೇಳಿ, ಸದ್ಭಕ್ತ ಸಮೂಹದಿಂದ ಕೂಡಿಕೊಂಡು ಬೇಗನೆ ಬಂದನು. ಗುರುಭಕ್ತಾರ್ಯ
ನಾದರೊ ಆ ತನ್ನ ಗುರುವನ್ನು ನೋಡಿ, ಸಡಗರದಿಂದೆದ್ದು, ಭೀತಿಯಿಂದ ತನ್ನನ್ನು ತಾನೇ
ಮರೆದು, ಕುತೂಹಲದಿಂದ ನಮಸ್ಕರಿಸುವುದಕ್ಕೆ ಉಜ್ಜುಗಿಸಿದನು. ಗುರುವಿನ ಕೃಪಾ
ರಸವೆಂಬ ಅಮೃತದಿಂದ ತುಂಬಿದ ಕೊಳದ ಮಧ್ಯದಿಂದ ವಿಕಸಿತವಾದ ಎರಡು ಪಾದ
ಕಮಲಗಳಂತೆಯೂ, ಗುರುಭಕ್ತಿಗೆ ಮೂಡಿದ ಎರಡು ಚರಣಗಳಂತೆಯೂ, ಆ ಗುರು
ಭಕ್ತನಿಗೆ ಪಾದಗಳೆರಡೂ ಮುನ್ನಿನಂತೆ ಬಂದುವು. ಆತನು ಹೀಗೆ ಗುರುಕಾರುಣ್ಯ
ದಿಂದ ಕಾಲುಗಳನ್ನು ಹೊಂದಿದವನಾಗಿ, ಬಳಿಕ ಗುರುವನ್ನು ಪ್ರೀತಿಯಿಂದ ನಮಸ್ಕರಿಸಿ
॥೪೯॥ ತಲೆಯಮೇಲೆ ಕೈಗಳನ್ನಿಟ್ಟು ಗುರುವನ್ನು ಸ್ತೋತ್ರಮಾಡುತ್ತಿರಲಾಗಿ, ಅಲ್ಲಿದ್ದ
ಗಣಶ್ರೇಷ್ಠರೆಲ್ಲರೂ ಹೀಗೆ ಹೇಳಿದರು :—ನಿನ್ನ ಉತ್ತಮ ಗುರುಭಕ್ತಿಯ ಮಹತ್ವಕ್ಕೆ
ಇದೇನಾಶ್ಚರ್ಯ? ॥೫೦॥ ನೆನ್ನೆತಾನೇ ಈ ಮುಂದೆ ಹೇಳುವ ಕಥೆಯು ನಡೆದಿತು. ಹಳೆ
ಯದೇನೂ ಅಲ್ಲ. ಗುರುವಿನ ಪಾದಕಮಲಕ್ಕೆ ಅಧೀನವಾದ ಬುದ್ಧಿಯುಳ್ಳವನಾಗಿಯೂ
ಗುರುವಿನ ಸೇವೆಯೊಂದರಲ್ಲೇ ಆಸಕ್ತನಾಗಿಯೂ, ಇರುವ ಈ ಗುರುಭಕ್ತಾರ್ಯ
ನಲ್ಲಿ ಗುರುವಿನ ಕೃಪೆಯು ಸ್ಥಿರವಾಗಿ ನೆಲಸಿರುವುದಕ್ಕಾಗಿ ಇತರ ಶಿಷ್ಯರೆಲ್ಲರೂ ಆ ಗುರು

† ಪಾ॥ ಅಮರಗುಂಡದ ಪಂಡಿತಃ॥

ಹೃತ್ವಂಸಮಾಪನ್ನೇಷುತಂಪ್ರತಿ ॥ ೫೦ ॥ ಪ್ರದರ್ಶಯಿತುಮೇಷಾಂತದ್ಗುರು
ನಿಷ್ಠಾವ್ರತಂಗುರುಃ । ಉದ್ಯಕ್ತೋವರಪರ್ಯಂಕಂತಲ್ಪಯುಕ್ತಂನಿಜಾಗ್ರ
ತಃ ॥ ೫೩ ॥ ಸ್ಥಾಪಯಿತ್ವಾಸನಾಹೂಯಶಿಷ್ಯಾನನ್ಯಾನ್ವಿಚಕ್ಷಣಃ । ಪ್ರತ್ಯೇ
ಕಂತಿಷ್ಠತಾದ್ಯಾತ್ರಯುಾಯುಮಿತ್ಯುಪದಿಷ್ಟವಾನ್ ॥ ೫೪ ॥ ಕಿಮೇತದ್ವಿಪರೀ
ತಾಗೀರ್ನಕಿಂಭ್ರಾಂತ್ಯುದಿತೇವೃಶೀ । ಉನ್ನತಾಸನಶಯ್ಯಾಸುಕಥಂವಾಗುರು
ಸನ್ನಿಧೌ ॥ ೫೫ ॥ ಯುಜ್ಯತೇಸ್ಥಾತುಮಿತ್ಯೇತ್ಯೈರಪಹಾಸೇಕೃತೇಸತಿ । ಅಥಾ
ತ್ಮಾಂಘ್ರ್ಯರ್ಚನಾಸಕ್ತಂಗುರುಭಕ್ತಂವಿಲೋಕ್ಯಸಃ ॥ ೫೬ ॥ ತ್ವಮಾರೋ
ಹಮುಪರ್ಯಂಕಮೇನಮಿತ್ಯವದತ್ತದಾ । ಶಿರಸ್ಯಾಧಾಯುಸುದೃಢಂಗುರೋರಾ
ಜ್ಞಾಂನಲಂಘಯೇತ್ ॥ ೫೭ ॥ ಇತಿಸೂಕ್ತಿಂಗುರೋರಾಜ್ಞಾನುವರ್ತನಮಿ
ತಿಸ್ಫುಟಂ । ವಾಕ್ಯಂಚಪ್ರಾಣಪದಮಿತ್ಯೇವನಿಶ್ಚಿತ್ಯಸದ್ಗುರೋಃ ॥ ೫೮ ॥ ಪಾ
ದೌನತ್ವಾಸತಾಂಶಟ್ವಾಮಾರುರೋಹಗುರುಪ್ರಿಯಃ । ಅಥತೇನಿಖಿಲಾಶ್ಶಿಷ್ಯಾಃ
ಪ್ರೋಚುಃಕ್ರೋಧವಿಜೃಂಭಿತಾಃ ॥ ೫೯ ॥ ಪಶ್ಯತಾಯಂಕಥಂಮಂಚೆಗುರೋ

---

ಭಕ್ತಾರ್ಯನನ್ನು ಕುರಿತು ಅಸಹನೆಯನ್ನು ಹೊಂದಿರಲು ॥೫೦॥ ಕುಶಲನಾದ ಗುರುವು ಆತನ ಗುರುಭಕ್ತಿಯ ದೃಢತೆಯನ್ನು ಉಳಿದ ಶಿಷ್ಯರಿಗೆಲ್ಲ ತೋರಿಸುವುದಕ್ಕಾಗಿ ಪ್ರಯತ್ನಿಸಿ, ಹಾಸಿಗೆಯಿಂದ ಕೂಡಿದ ಶ್ರೇಷ್ಠವಾದ ಮಂಚವನ್ನು ತನ್ನ ಮುಂಗಡೆಯಲ್ಲಿ ಮಡಗಿಸಿ, ಉಳಿದ ಶಿಷ್ಯರನ್ನೆಲ್ಲ ಕರೆದು, ಈಗ ನೀವು ಇದರಮೇಲೆ ಕುಳಿತುಕೊಳ್ಳಿರೆಂದು ಪ್ರತಿಯೊಬ್ಬರಿಗೂ ಆಜ್ಞಾಪಿಸಿದನು ॥೫೪॥ ಈ ಶಿಷ್ಯರುಗಳಾದರೊ "ಇದೇನು ವಿಪರೀತವಾದ ಮಾತು? ಗುರುವು ಹೀಗೆ ಭ್ರಾಂತಿಯಿಂದ ಹೇಳಿರಬೇಕಲ್ಲವೆ? ಗುರುವಿನ ಬಳಿಯಲ್ಲಿ ಉನ್ನತವಾದ ಪೀಠದಮೇಲೂ ಹಾಸಿಗೆಯ ಮೇಲೂ ಹೇಗೆ ಕುಳಿತುಕೊಳ್ಳುವುದಕ್ಕಾದೀತು?" ಎಂದು ಹೇಳಿಕೊಂಡು ನಗುತ್ತಿರಲಾಗಿ, ಬಳಿಕ ಆ ಗುರುವು ತನ್ನ ಪಾದಪೂಜೆಯಲ್ಲಿ ಆಸಕ್ತನಾಗಿರುವ ಗುರುಭಕ್ತನನ್ನು ನೋಡಿ ॥೫೬॥ "ನೀನು ಈ ಮಂಚವನ್ನೇರು" ಎಂದು ನುಡಿದನು. ಆಗ ಗುರುಪ್ರೀತಿಪಾತ್ರನಾದ ಆ ಗುರುಭಕ್ತನು "ಗುರುವಿನಪ್ಪಣೆಯನ್ನು ಮೀರಬಾರದು" ಎಂಬ ಶಾಸ್ತ್ರ ವಚನವನ್ನೂ, "ಗುರುವಿನಪ್ಪಣೆಯಂತೆ ನಡೆಯಬೇಕು" ಎಂದಿರುವ ವಚನವನ್ನೂ ಕೂಡ ತನ್ನ ಪ್ರಾಣಕ್ಕೆ ಆಶ್ರಯವನ್ನಾಗಿ, ನಿಶ್ಚೈಸಿ, ಆ ಗುರ್ವಾಜ್ಞೆಯನ್ನು ತನ್ನ ತಲೆಯಮೇಲೆ ಹೊತ್ತು, ಆ ಗುರುವಿನ ಪಾದಗಳನ್ನು ನಮಸ್ಕರಿಸಿ, ಆ ಮಂಚವನ್ನು ಹತ್ತಿದನು. ಬಳಿಕ ಆ ಉಳಿದ ಶಿಷ್ಯರೆಲ್ಲರೂ ಸಿಟ್ಟೇರಿ ನುಡಿದರೇನೆಂದರೆ— ॥೫೯॥ ನೋಡಿರಿ, ಇವನು ಗುರುವಿನ ಮುಂದೆ ಭೀತಿಯಿಲ್ಲದೆ ಅದು ಹೇಗೆ ಮಂಚದಮೇಲೆ ಕುಳಿತಿರುವನು? ಮನಸ್ಸ

ರಾಸ್ತೇಪುರೋವಿಭೀಃ । ಗುರುಣೋಕ್ತೇಮನೋಜ್ಞಾತುಮೇವಂತತ್ಕ್ರಿಯತೇಕಥಂ ॥ ೬೦ ॥ ಏವಮಸ್ಮಾನಪಿಸ್ನೇಹಗುರುಸ್ತತ್ರನಸಾಮಕಿಂ । ಅಸ್ಮದ್ವಿಧೇಷ್ವಪಿಮಹಾಭಾಗೇಷುಪರಿಶಂಕಿಷು ॥ ೬೧ ॥ ಅಥಮಸ್ಯಾಸ್ಯಪರ್ಯಂಕಮಾರೋಢುಂಯುಜ್ಯತೇಕಿಮು । ತತ್ಸರ್ವಥಾಶಿವದ್ರೋಹೀಹಂತವ್ಯಇತಿಸಂಭ್ರಮಾತ್ ॥ ೬೨ ॥ ತಮುದ್ಯುಕ್ತಾನ್ನಿಹಂತುಂತಾನಾಹೂಯಗುರುಸತ್ತಮಃ । ಪೃಥುಭಕ್ತಿಸಮುನ್ನಿದ್ರಾತಮಾದಿಶ್ಯಾವರೋಹಣೇ ॥ ೬೩ ॥ ಪುರತಸ್ಥಾಪಯಿತ್ವೈಕಂಶೂಲಂತಾನಿದಮಬ್ರವೀತ್ । ತಿಷ್ಠತ್ವಯಂಗುರುದ್ರೋಹೀನೀಚೋಯೂಯಮಿಹಾಧಿಕಾಃ ॥ ೬೪ ॥ ಉತ್ತಮಾಗುರುಭಕ್ತಾಶ್ಚೇದೇತದಾರೋಹತೋಚಿತಂ । ಪಶ್ಯಾಮಿಭವತಾಂಭಕ್ತಿಂ ಹಿತ್ವಾಭಯಮಭಂಗುರಾಃ । ಇತ್ಯುಕ್ತೇಜಗಮುಶ್ಶಿಷ್ಯಾಃ ಕಥಂಕಾರ್ಯಂಭವದ್ವಚಃ । ಆರೋಹತಾಥಪರ್ಯಂಕಮುತ ಶೂಲಮಿತೀರ್ಯತೆ ॥ ೬೬ ॥ ವಯಮೇತಾದೃಶೋಭಕ್ತೇಬಿಭೀಮಸ್ಸುತರಾಂಭುವಿ । ತಮೇವಾದಿಶತಾರೋಢುಂ ಶೂಲಂಸಹಮಸಂಯಥಾ ॥ ೬೭ ॥ ಆರೋಹತೀತಿತೈರುಕ್ತೋಗುರುಸ್ಸಂಪ್ರೀತಮಾನಸಃ । ಕಾರುಣ್ಯವೀಕ್ಷಣ

---

ನ್ನು ಪರೀಕ್ಷಿಸಬೇಕೆಂದು ಗುರುವು ಹೇಳಿದರೆ, ಅದನ್ನು ಹೀಗೆ ಅದೆಂತು ಮಾಡಬಾರದಿತು ? ॥ ೬೦ ॥ ಗುರುವು ನಮಗೂ ಹೀಗೆಯೇ ಆಜ್ಞಾಪಿಸಿದನು. ಅದರೆ, ನಾವು ಹತ್ತಿ ಕುಳಿತುಕೊಂಡೆವೆ ? ನಮ್ಮಂತಹ ದೊಡ್ಡವರೇ ಸಂಶಯಪಡುತ್ತಿರಲಾಗಿ ॥ ೬೧ ॥ ನೀಚನಾದ ಇವನು ಮಂಚವನ್ನೇರಬಹುದೆ ? ಆದುದರಿಂದ ಈತನು ಶಿವದ್ರೋಹಿಯೇ ಸರಿ; ಇವನನ್ನು ಕೊಲ್ಲಬೇಕು ; ಎಂದು ಹೇಳಿ ಸಡಗರದಿಂದ ಎದ್ದು ॥ ೬೨ ॥ ಆ ಗುರುಭಕ್ತನನ್ನು ಕೊಲ್ಲುವುದಕ್ಕೆ ಯತ್ನಿಸಿದ ಆ ಶಿಷ್ಯರನ್ನು ಗುರುಶ್ರೇಷ್ಠನು ಕರೆದು, ವಿಸ್ತಾರವಾದ ಗುರುಭಕ್ತಿಯಲ್ಲಿ ಜಾಗರೂಕನಾಗಿರುವ ಆ ಗುರುಭಕ್ತನನ್ನು ಮಂಚದಿಂದಿಳಿಯೆಂದು ಆಜ್ಞಾಪಿಸಿ, ॥ ೬೩ ॥ ಮುಂಗಡೆಯಲ್ಲಿ ಒಂದು ಶೂಲವನ್ನು ನೆಡಿಸಿ, ಆ ಶಿಷ್ಯರನ್ನು ಕುರಿತು “ಗುರುದ್ರೋಹಿಯೂ ನೀಚನೂ ಆದ ಈತನು ಹಾಗಿರಲಿ, ನೀವುಗಳು ದೊಡ್ಡವರೂ ಶ್ರೇಷ್ಠರೂ ಗುರುಭಕ್ತರೂ ಆಗಿದ್ದರೆ, ಮೊನೆಯಾದ ಈ ಶೂಲವನ್ನು ಭೀತಿಯನ್ನು ಬಿಟ್ಟು ಹಿಂದಿರುಗದೆ ಏರಿ, ನಿಮ್ಮ ಭಕ್ತಿಯನ್ನು ನೋಡುತ್ತೇನೆ” ಎಂದು ಹೇಳಲಾಗಿ, ಶಿಷ್ಯರು—“ಈ ನಿಮ್ಮ ಮಾತನ್ನು ಹೇಗೆ ನಡೆಯಿಸಲಾದೀತು ? ಮಂಚವನ್ನು ಹತ್ತಿರಿ, ಇಲ್ಲವೆ ಶೂಲವನ್ನೇರಿರಿ” ಎಂದು ಹೇಳುವಣವಾಗುತ್ತದೆ, ಭೂಮಿಯಲ್ಲಿ ನಾವು ಇಂತಹ ಭಕ್ತಿಯನ್ನಾಚರಿಸುವುದಕ್ಕೆ ಅತ್ಯಂತವಾಗಿ ಹೆದರುತ್ತೇವೆ; ಹಾಸಿಗೆಯಿಂದ ಕೂಡಿದ ಮಂಚವನ್ನೇರಿದಂತೆಯೇ (ಈ ಶೂಲವನ್ನೂ ಏರುವುದಕ್ಕೆ ಆ ಶಿಷ್ಯ

ಸುಧಾಪೂರಮಗ್ನಂ ವಿಧಾಯತಂ ॥ ೨೮ ॥ ಪ್ರದತ್ತಚರ್ವಿತಶುಭತಾಂಬೂಲಾ
ಖ್ಯಪ್ರಸಾದತಃ । ಸರ್ವಾಂಗಲೇಪನಾಸ್ವಾದನತೋಽಸ್ಯತದನಂತರಂ ॥ ೨೯ ॥
ದರ್ಶಯಾಮಾಸತಚ್ಛೂಲಂ ಗುರುಭಕ್ತಸ್ಯಧೀಮತಃ । ಪ್ರಣಮ್ಯಸಗುರುಂ
ಶೂಲಂಪೂರ್ವಂಪರ್ಯಂಕವನ್ಮುದಾ ॥ ೩೦ ॥ ಆರುರೋಹಾಸನಾನ್ಮೂರ್ಧ್ನಿನಿ
ರ್ಯಾತಂಸ್ಯಾದ್ಯಥಾತಥಾ । ವದನ್ನಮಸ್ಸದ್ಗುರುಭ್ಯ ಇತಿಶೂಲೇ ವ್ಯವಸ್ಥಿತಃ ॥
ಗುರುಪಾದಾಂಬುಜಂಧ್ಯಾಯನ್ಕುಸೂಲಸ್ಥ ಇವೋನ್ನತಃ । ಗುರುಸಕ್ತಂಗುರು
ದಯಾಭಿಷಿಕ್ತಮತಿಶೋಭನಂ ॥ ೩೧ ॥ ಗುರ್ವಾಜ್ಞಾಘಟಿತಪ್ರಾಣಂಗುರುವಾ
ಕ್ಯಪ್ರಮಾಣಕಂ । ಅಮಲಂಗುರುಪಾದಾಬ್ಜಧುರೀಣಂಪರಮೋಜ್ವಲಂ ॥
ಪರಂಗುರುಮತತ್ರಾಣಮಸ್ತಾಘಂಗುಣವಿಸ್ತೃತಂ । ಮಸ್ತನ್ಯಸ್ತೋಜ್ವಲ
ದ್ಧಸ್ತಂಪ್ರಶಸ್ತಂಲೋಕಭೀಕರಂ ॥ ೩೪ ॥ ಗುಣಾಕರಂಚಿದಾನಂದಪ್ರಭಾಕ
ರಮಚಂಚಲಂ । ಘೋರಸಂಸಾರವಿಜಯಂ ಶ್ರೀಕರಂಶೀಲಭಾಸುರಂ ॥೩೫॥

---

ನಿಗೇ ಆಜ್ಞಾಪಿಸಿರಿ, ಹತ್ತುತ್ತಾನೆ” ಎಂದು ಹೇಳಲಾಗಿ, ಗುರುವು ಸಂತುಷ್ಟಮನಸ್ಕ
ನಾಗಿ, ಆ ಮುಖ್ಯಶಿಷ್ಯನನ್ನು ತನ್ನ ಕರುಣಾದೃಷ್ಟಿಯಿಂದ ಸೂಸುವ ಅಮೃತರಸದ
ಪ್ರವಾಹದಲ್ಲಿ ಮುಳುಗಿಸಿ, ॥ ೨೮ ॥ ತಾನು ಅಗಿದ ತಾಂಬೂಲದ ಪ್ರಸಾದವನ್ನು ಆತ
ನಿಗೆ ಕೊಟ್ಟು, ಅದನ್ನು ಸವಿದು ದೇಹಕ್ಕೆಲ್ಲ ಸವರಿಕೊಂಡ ಆ ಗುರುಭಕ್ತಾರ್ಯನಿಗೆ
ಮುಂಗಡೆಯಲ್ಲಿರುವ ಶೂಲವನ್ನು ತೋರಿಸಿದನು. ಆತನು ಗುರುವಿಗೆ ನಮಸ್ಕರಿಸಿ, ಮೊ
ದಲು ಮಂಚವನ್ನು ಹೇಗೆ ಹತ್ತಿದನೋ ಹಾಗೆಯೇ ಸಂತೋಷದಿಂದ ॥ ೨೯ ॥ ದಬಯು
ಗುದದ್ವಾರದಿಂದ ನುಗ್ಗಿ ನೆತ್ತಿಯಲ್ಲಿ ಮೂಡುವಹಾಗೆ ಶೂಲವನ್ನು ಹತ್ತಿದನು. ಶೂಲ
ದಲ್ಲೇ ಇದ್ದುಕೊಂಡು, “ಸದ್ಗುರುಗಳಿಗೆ ನಮಸ್ಕಾರ” ವೆಂದು ನುಡಿಯುತ್ತ ॥ ೩೦ ॥
ಗುರುವಿನ ಪಾದಕಮಲವನ್ನು ಧ್ಯಾನಿಸುತ್ತ, ಬಳವಾನೆಯಲ್ಲಿ ಕುಳಿತವನಂತೆ ದಿಟ್ಟ
ವಾಗಿ ಕುಳಿತಿದ್ದನು. ಗುರುವಿನಲ್ಲಿ ಆಸಕ್ತನೂ, ಗುರುಕರುಣಾರಸದಿಂದ ಅಭಿಷೇಕಿಸ
ಲ್ಪಟ್ಟವನೂ, ಅತ್ಯಂತವಾಗಿ ಪ್ರಕಾಶಿಸುವನೂ ॥ ೩೧ ॥ ಗುರುವಿನ ಆಜ್ಞೆಯಲ್ಲಿ ಪ್ರಾ
ಣವನ್ನು ಸೇರಿಸಿರುವವನೂ, ಗುರುವಿನ ವಚನವೇ ಪ್ರಮಾಣವೆಂದು ತಿಳಿದಿರುವವನೂ,
ನಿರ್ಮಲನೂ, ಗುರುಪಾದ ಕಾರ್ಯನಿರ್ವಾಹದಲ್ಲಿ ಸಮರ್ಥನೂ, ತೇಜಶ್ಶಾಲಿಯೂ ॥ ೩೨ ॥
ಶ್ರೇಷ್ಠನೂ, ಗುರುವಿನ ಅಭಿಪ್ರಾಯವನ್ನು ಕಾಪಾಡುವವನೂ, ಪಾಪದೂರನೂ, ಸದ್ಗು
ಣಗಳಿಂದ ವಿಖ್ಯಾತನೂ, ಶಿರಸ್ಸಿನಲ್ಲಿಟ್ಟಿರುವ ಹಸ್ತಗಳಿಂದೊಪ್ಪುವವನೂ, ಉತ್ಕೃಷ್ಟ
ನೂ, ಲೌಕಿಕಜನಕ್ಕೆ ಭಯಂಕರನೂ ॥ ೩೪ ॥ ಸತ್ವಗುಣಾಶ್ರಯನೂ, ಜ್ಞಾನಾನಂದದ
ತೇಜಸ್ಸಿಗೆ ಆಶ್ರಯನೂ, ನಿಶ್ಚಲನೂ, ಭಯಂಕರಸಂಸಾರವನ್ನು ಜಯಿಸಿದವನೂ, ಸಂ
ಪದ್ದಾಯಕನೂ, ಸದಾಚಾರಸಮೇತನೂ, ॥ ೩೫ ॥ ಶೂಲದ ತುದಿಯಮೇಲೆ ಸುಖವಾಗಿ

ಶೂಲಾಂಚಲಸುಖಾಸೀನಮಂತರ್ನಿಹಿತಶೂಲಿನಂ । ವಿಶೂಲಂದುರ್ಜನಶಿರ
ಶ್ಶೂಲಂಶೂಲಿನಮುತ್ತಮಂ ॥ ೨೬ ॥ ಗುರುಭಕ್ತಂತಮುದ್ವೀಕ್ಷ್ಯಮರಗುಂ
ಡಮಪಂಡಿತಃ । ಶಿಷ್ಯಪ್ರತಾನಮವದತ್ತಸ್ಯಭಕ್ತಿಮಭಿಷ್ಟುವನ್ ॥ ೨೭ ॥ ಏತ
ಸ್ಯವರಸದ್ಭಕ್ತೇರ್ನಿಷ್ಠಾಯಾಶ್ಚರಿತಸ್ಯಚ । ಯೂಯಂವೃಥಾಕುರುಧ್ವೇತ್ರನಿ
ತಾಂತಮಸಹಿಷ್ಣುತಾಂ ॥ ೨೮ ॥ ಸುವ್ಯಕ್ತಮಿತಿಹಾಸಾದಾನೂತನಪ್ರಾಕ್ತನೇ
ಷ್ವಪಿ। ಸವೀಕ್ಷಿತಾವಾಭಕ್ತೇಷುಶ್ರುತಾವಾಭಕ್ತಿರೀದೃಶೀ ॥ ೨೯ ॥ ಯೂಯಂ
ಭಕ್ತಾವಯಮಿತಿವಿಜೃಂಭಧ್ವೇನಿರಂತರಂ । ಭವಂತೋಮತ್ಕ್ಷಮಾಪಾತ್ರಂ
ಕೃಪಾಪಾತ್ರಮಯಂಮಮ ॥ ೩೦ ॥ ಏತಸ್ಯಪ್ರಾಣಪದವೀಮದೀಯಾಜ್ಞಾಸ
ದೈವಹಿ । ಯುಷ್ಮಾಕಂಸೈವಸುತರಾಮುಪಹಾಸ್ಯೈಕಪದ್ಧತಿಃ ॥ ೩೧ ॥ ತ್ವದೀ
ಯೇಚ್ಛಾನುಗಾಯೂಯಂಮದೀಯೇಚ್ಛಾನುಗೋಹ್ಯಯಂ । ಏತಸ್ಯಭವ
ತಾಂಮೇರುಪರಮಾಣ್ವಂತರಂಭುವಿ ॥ ೩೨ ॥ ಸಾಸಮುನ್ನತಶಯ್ಯೇತಿಪೂ
ರ್ವಂಶೂಲಮಿದಂಮಹತ್ । ಇತೀದಾನೀಂನಜಾನಾತಿಮದ್ವಾಕ್ಯೈಕಪ್ರಮಾ

---

ಕುಳಿತಿರುವವನೂ, ಮನಸ್ಸಿನಲ್ಲಿ ಪರಶಿವನನ್ನು ನಿಲ್ಲಿಸಿಕೊಂಡಿರುವವನೂ, ರೋಗೋಪ
ದ್ರವವಿಲ್ಲದವನೂ, ದುಷ್ಟರ ತಲೆಗೆ ಶೂಲಸಮಾನನಾದವನೂ, ಪರಶಿವಸ್ವರೂಪನೂ
ಆಗಿ ॥ ೨೬ ॥ ಇರುವ ಗುರುಭಕ್ತನನ್ನು ಅಮರಗುಂಡದ ಮಲ್ಲಿಕಾರ್ಜುನ ಪಂಡಿತನು
ನೋಡಿ, ತಮ್ಮ ಇತರ ಶಿಷ್ಯಸಮೂಹವನ್ನು ಕುರಿತು ಆ ಗುರುಭಕ್ತನ ಭಕ್ತಿಯನ್ನು
ಹೊಗಳುತ್ತ ನುಡಿದನೇನೆಂದರೆ:—॥ ೨೭ ॥ "ಈತನ ಶ್ರೇಷ್ಠವಾದ ಭಕ್ತಿಗೂ ನಂಬು
ಗೆಗೂ ನಡತೆಗೂ ಸಹ ನೀವು ವ್ಯರ್ಥವಾಗಿ ಅತ್ಯಂತ ಅಸಹನೆಯನ್ನು ಮಾಡಿದಿರಿ ॥ ೨೮ ॥
ಇತಿಹಾಸ ಮೊದಲಾದುವುಗಳಲ್ಲಾಗಲಿ, ನವೀನ ಪ್ರಾಚೀನ ಭಕ್ತರುಗಳಲ್ಲಾಗಲಿ, ಇಂತ
ಹ ಭಕ್ತಿಯನ್ನು ಇಷ್ಟು ಸ್ಫುಟವಾಗಿ ಆಚರಿಸುವುದನ್ನು ನೋಡಿರುವಿರಾ? ಅಥವಾ ಕೇಳಿ
ರುವಿರಾ? ॥ ೨೯ ॥ ನಾವು ಭಕ್ತರೆಂದು ನೀವು ಯಾವಾಗಲೂ ಉಬ್ಬುತ್ತಿರುವಿರಿ. ನೀವು
ನನ್ನ ಸಹನೆಗೆ ಪಾತ್ರರು, ಈತನು ನನ್ನ ದಯೆಗೆ ಪಾತ್ರನು ॥ ೩೦ ॥ ಯಾವಾಗಲೂ
ನನ್ನ ಆಜ್ಞೆಯೇ ಈತನ ಪ್ರಾಣದ ದಾರಿಯಾಗಿರುವುದಲ್ಲವೆ? ನಿಮಗಾದರೋ ಆ ನನ್ನ
ಆಜ್ಞೆಯೇ ಅತ್ಯಂತವಾಗಿ ಅಪಹಾಸ್ಯಕ್ಕೆ ಮುಖ್ಯವಾದ ದಾರಿಯಾಗಿರುವುದು ॥ ೩೧ ॥
ನೀವು ನಿಮ್ಮ ಇಚ್ಛೆ ಬಂದಂತೆ ನಡೆಯತಕ್ಕವರು. ಈತನಾದರೊ ನನ್ನ ಇಷ್ಟದಂತೆ
ನಡೆಯುತಕ್ಕವನು. ಭೂಮಿಯಲ್ಲಿ ಇವನಿಗೂ ನಿಮಗೂ ಮೇರುಪರ್ವತಕ್ಕೂ ಪರಮಾ
ಣುವಿಗೂ ಇರತಕ್ಕಷ್ಟು ಅಭ್ಯಂತರವಿರುವುದು ॥ ೩೨ ॥ ನನ್ನ ಮಾತೇ ಮುಖ್ಯಪ್ರಮಾ
ಣವಾಗುಳ್ಳ ಈತನು ಮೊದಲು ಅದನ್ನು ಉತ್ಕೃಷ್ಟವಾದ ಹಾಸಿಗೆಯೆಂದಾಗಲಿ ಈಗ ಇ

ಣಕಃ ॥ ೮೩ ॥ ಸರ್ವೇಪಶ್ಯತಸುವ್ಯಕ್ತಮಿತಿತಸ್ಮಿನ್ದಯಾನ್ವಿತಃ । ಗುರುಭಕ್ತ ತ್ವದೀಯೋರುಭಕ್ತಿಯುಕ್ತಿರ್ನಿರಂಕುಶಾ ॥ ೮೪ ॥ ಗಣನಾಥಪದವೀಂಪ್ರಾಪ್ತಾ ಪ್ರಮಥಾನಾಂಮಹೇಶಿತುಃ । ಆಯಾಹಿಶೀಘ್ರಂವತ್ಸೇತಿಪ್ರಾಹತಂಪ್ರೀತಮಾನಸಃ ॥ ೮೫ ॥ ಸಂತ್ರಾಡ್ಯಶೂಲಫಲಕೀಂತಸ್ಯಾಂಹಸ್ತೌನಿಧಾಯಸಃ । ಸಮುತ್ಪ್ಲುತ್ಯಭುವಂಪ್ರಾಪ್ಯಪಪಾತಗುರುಪಾದಯೋಃ ॥ ೮೬ ॥ ಗೃಹೀತ್ವಾಗುರುಭಕ್ತಸ್ಯಕರಾವಥಗುರೂತ್ತಮಃ । ಉತ್ಥಾಪ್ಯಾಲಿಂಗ್ಯತಂಸ್ವೀಯಕೃಪಾಮೃತಪಯೋಸಿಧೌ ॥ ೮೭ ॥ ನಿಮಗ್ನಮಕರೋತ್ಪ್ರೀತ್ಯಾಗುರುಭಕ್ತಂಗುಣಾನ್ವಿತಂ । ಶೂಲವಿದ್ಧಂತದೀಯಾಂಗಮವ್ರಣಂಗ್ರಂಥಿವರ್ಜಿತಂ ॥ ೮೮ ॥ ಅರಂಧ್ರಿತಮವಿಚ್ಛಾಯಮಪಖಂಡಮಲೋಹಿತಂ । ಅನುಚ್ಛೂನಂಸಮುದ್ವೀಕ್ಷ್ಯದೃಷ್ಟಪ್ರತ್ಯಯಕಾರಕಂ ॥ ೮೯ ॥ ಅತ್ಯಂತವಿಸ್ಮಯಾಕ್ರಾಂತಾಸ್ಸರ್ವೇಶಿವಸಹೋದರಾಃ । ಸ್ವಾಹಂಕಾರಂಪರಿತ್ಯಜ್ಯಕೀರ್ತಯಾಮಾಸುರಾದರಾತ್ ॥ ಘನಪಾಶವಿನಿರ್ಮುಕ್ತಮಹೀಯಃಕೀರ್ತಿಭೂಷಿತ । ಗುರುಪಾದಾಂಬುಜದ್ವಂದ್ವ

---

ದನ್ನು ದೊಡ್ಡ ಶೂಲವೆಂದಾಗಲಿ ತಿಳಿಯುವುದಿಲ್ಲ ॥ ೮೩ ॥ ಎಲ್ಲರೂ ಚೆನ್ನಾಗಿ ನೋಡಿರಿ" ಎಂದು ಆ ಶಿಷ್ಯನಲ್ಲಿ ಕೃಪಾಯುಕ್ತನಾದ ಗುರುವು ನುಡಿದವನಾಗಿ, "ಎಲೆ ಗುರುಭಕ್ತನೆ, ನಿನ್ನಲ್ಲಿ ಕೂಡಿರುವ ಗುರುಭಕ್ತಿಯು ನಿರರ್ಗಳವಾದುದು, ॥ ೮೪ ॥ ಅದು ಶಿವಗಣಂಗಳ ಮತ್ತೂ ಪ್ರಮಥರ ಪದವಿಯನ್ನು ಸೇರಿತು. ಮಗನೆ, ಬೇಗನೆ ಬಾ," ಎಂಬುದಾಗಿ ಸಂತುಷ್ಟಮನಸ್ಕನಾದ ಗುರುವು ನುಡಿದನು ॥ ೮೫ ॥ ಆ ಗುರುಭಕ್ತನು ಶೂಲದ ಮೇಲಣ ಹಲಗೆಯನ್ನು ಬಡಿದು, ಅದರಮೇಲೆ ಕೈಗಳನ್ನಿಟ್ಟು, ಚಿಗಿದು ಹಾರಿ ಭೂಮಿಯಲ್ಲಿಳಿದು, ಗುರುವಿನ ಪಾದಗಳ ಮೇಲೆ ಅಡ್ಡಬಿದ್ದನು ॥ ೮೬ ॥ ಬಳಿಕ ಗುರುಶ್ರೇಷ್ಠನು ಗುರುಭಕ್ತನ ಕೈಗಳನ್ನು ಹಿಡಿದುಕೊಂಡು ಏಳಿಸಿ, ಪ್ರೀತಿಯಿಂದ ತಬ್ಬಿಕೊಂಡು, ಅವನನ್ನು ತನ್ನ ದಯಾರಸವೆಂಬ ಅಮೃತದ ಸಮುದ್ರದಲ್ಲಿ ಮುಳುಗಿಸಿದನು. ಸದ್ಗುಣಯುಕ್ತನಾದ ಆ ಗುರುಭಕ್ತನು ಶೂಲದಿಂದ ಚುಚ್ಚಲ್ಪಟ್ಟವನಾದರೂ ದೇಹವು ಗಾಯಗೊಳ್ಳದೆಯೂ ಗಂಟು ಕಟ್ಟದೆಯೂ ॥ ೮೮ ॥ ತೂತಾಗದೆಯೂ, ಬಣ್ಣ ಕೆಡದೆಯೂ, ಮಾಂಸವು ಕತ್ತರಿಸದೆಯೂ, ರಕ್ತವು ಸುರಿಯದೆಯೂ, ಊದಿಕೊಳ್ಳದೆಯೂ, ಇರುವ ಕಾರಣ, ಪ್ರತ್ಯಕ್ಷವಾದ ಮಹಿಮೆಯಿಂದ ನಂಬುಗೆಯನ್ನು ಹುಟ್ಟಿಸುತ್ತಿರುವವನನ್ನು ಕಂಡು ಸೋದರರಾದ ಶಿಷ್ಯರೆಲ್ಲರೂ ಅತ್ಯಂತಾಶ್ಚರ್ಯವನ್ನು ಹೊಂದಿ, ತಮ್ಮ ಅಹಂಕಾರವನ್ನು ಬಿಟ್ಟು, ಪ್ರೀತಿಯಿಂದ ಅವನನ್ನು ಹೊಗಳಿದರು ॥ ೯೦ ॥ ಹೇಗೆಂದರೆ — ಸಂಸಾರಪಾಶದಿಂದ ಬಿಡುಗಡೆಯನ್ನು ಹೊಂದಿದವನೆ, ಅತಿಶಯವಾದ ಕೀರ್ತಿಯಿಂದ ಅಲಂಕೃತನಾದವನೆ, ಗುರುಪಾದ ಕಮಲಯುಗ್ಮದಲ್ಲಿ ಭಕ್ತಿಯುಳ್ಳವನೆ, ಸದ್ಗುಣದಿಂದ ಪ್ರಸಿದ್ಧನಾ

ಸದ್ಭಕ್ತಗುಣವಿಶ್ರುತ ॥ ೯೧ ॥ ಗುರುಕಾರ್ಯೈಕನಿರ್ವಾಹಕಲಾಯುಕ್ತ ಮಹೀನುತ । ಗುರುವ್ಯಪಗತಾಶೇಷಪದಾರ್ಥಪರಿವರ್ಜಿತ ॥ ೯೨ ॥ ಗುರುಸೇವಾಸಕ್ತ ಗುರುಮನೋಜ್ಞಚರಿತೋನ್ನತ । ಗುರುಭಕ್ತನಕಿಂ ವರ್ಣ್ಯೋ ಮಹಿಮಾತವ ವಿಶ್ರುತಃ ॥ ೯೩ ॥ ಗುರುಭಕ್ತಿಸ್ತ್ವದೀದಾರಾ ದೃಷ್ಟಪ್ರತ್ಯಯಕಾರಿಣೀ । ನಶಕ್ಯಾ ಶಂಕರೇಣಾಪಿ ಸ್ತೋತುಂಕಿಮುತ ಮಾನವೈಃ ॥ ೯೪ ॥ ಇತಿಪ್ರಶಂಸತ್ಸು ಪುರಾಶಿವಭಕ್ತೇಷು ಸಾದರಂ । ಗುರುಭಕ್ತಃ ಪ್ರಪಾದಾವಿತ್ಯಸ್ಮಾಭಿಃ ಪರಿಶ್ರುತಂ ॥ ೯೫ ॥ ಅದ್ಯದೃಷ್ಟಂ ವೆಲ್ಲಕೊಂಡ ಮಹಾದೇವಾಯ ಸಾದ್ಭುತಂ । ಪಾದದಾನಂ ಪಂಡಿತೇಂದ್ರಗುರುಣಾ ಪರಶಂಭುನಾ ॥ ೯೬ ॥

ಇತ್ಯಸಂಖ್ಯಾತ......ವೀರಶೈವ ಮತಾಚಾರ್ಯ ಗುರುರಾಜಸ್ಯ
ಕೃತೌ, ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ
ಪಂಡಿತಾರಾಧ್ಯ ಚರಿತ್ರೇ ಪುರಾತನಪ್ರಕರಣೇ
ಗುರುಭಕ್ತ ಚರಿತ್ರಕಥನಂ ನಾಮ
ಪಂಚಮೋಽಧ್ಯಾಯಃ.

---

ದವನೆ ॥ ೯೧ ॥ ಗುರುವಿನ ಕೆಲಸವೊಂದನ್ನೇ ಮಾಡುವ ವಿದ್ಯೆಯಿಂದ ಕೂಡಿದವನೆ, ಭೂಜನರಿಂದ ಹೊಗಳಲ್ಪಟ್ಟವನೆ, ಗುರುವು ದೂರೀಕರಿಸಿದ ಸಕಲ ಪದಾರ್ಥಗಳನ್ನೂ ಬಿಟ್ಟಿರುವವನೆ ॥ ೯೨ ॥ ಗುರುವಿನ ಕೈಂಕರ್ಯದಲ್ಲಿ ಕುತೂಹಲವುಳ್ಳವನೆ, ಗುರುವಿಗೆ ಮನೋಹರವಾದ ನಡೆಯಿಂದ ಉತ್ಕೃಷ್ಟನಾದವನೆ, ಎಲೈ ಗುರುಭಕ್ತಾರ್ಯನೆ, ನಿನ್ನ ಲೋಕಪ್ರಸಿದ್ಧವಾದ ಚರಿತ್ರವು ವರ್ಣನೆ ಮಾಡಲ್ಪಡತಕ್ಕದಲ್ಲವೆ? ॥ ೯೩ ॥ ಉತ್ಕೃಷ್ಟವಾದ ನಿನ್ನ ಗುರುಭಕ್ತಿಯು ಪ್ರತ್ಯಕ್ಷಪ್ರಮಾಣದಿಂದ ನಂಬುಗೆಯನ್ನು ಹುಟ್ಟಿಸತಕ್ಕುದು. ಇದನ್ನು ಹೊಗಳುವುದಕ್ಕೆ ಶಿವನಿಗೂ ಅಶಕ್ಯವೆಂಬುವಲ್ಲಿ ಇನ್ನು ಮನುಷ್ಯರಿಗೆ ಸಾಧ್ಯವೆ? ॥ ೯೪ ॥ ಎಂಬುದಾಗಿ. ಹೀಗೆ ಪೂರ್ವದಲ್ಲಿ ಶಿವಭಕ್ತರುಗಳು ಪ್ರೀತಿಯಿಂದ ಹೊಗ

# ಅಥ ಷಷ್ಠೋಽಧ್ಯಾಯಃ.

(ಗುರುಭಕ್ತಾಂಡಾರಿ ಚಾರಿತ್ರಂ.)

ಅಥಾಪರಾಸ್ತಿ ರುಚಿರಪ್ರಥಾವಿಲಸಿತಾ ಕಥಾ | ಅತ್ರೋದಾಹರಣಂ ಸಾ ಪಿಭವಿಷ್ಯತ್ಯೇಷ ತತ್ಕ್ರಮಃ ‖ ೧ ‖ ಗುರುಭಕ್ತಿಸಮಾಯಾತವಿಕಸತ್ಪುಣ್ಯಸತ್ತ

---

ಳುವ ಹಾಗೆ ಗುರುಭಕ್ತಾರ್ಯನು ಪಾದಗಳನ್ನು ಪಡೆದುಕೊಂಡನೆಂದು ನಾವು ಕೇಳಿದ್ದೆವು‖ ಈಗಲಾದರೊ ಅಪರಶಂಭುವಾದ ಪಂಡಿತಾರಾಧ್ಯ ಗುರುವು ವಲ್ಲಕೊಂಡ ಮಹಾದೇವಯ್ಯನಿಗೆ ಆಶ್ಚರ್ಯಕರವಾಗಿ ಪಾದಗಳನ್ನು ಕೊಟ್ಟುದನ್ನು ಕಣ್ಣಾರ ಕಂಡೆವು. ‖ ೯೬ ‖ ಎಂದು ವೇಮನಾರ್ಯ ಸೂರಾಂಬೆ ಮೊದಲಾದವರು ಸ್ತೋತ್ರ ಮಾಡಿದರೆಂಬಲ್ಲಿಗೆ

ಶ್ರೀಮತ್ಪಂಡಿತಾರಾಧ್ಯ ಚರಿತಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿರಚಿತವಾದ
'ಭಾವಮಂಜರಿ' ಯೆಂಬ ಕನ್ನಡಟಿಪ್ಪಣದೊಳಗೆ ಪುರಾತನ
ಪ್ರಕರಣದಲ್ಲಿ ಗುರುಭಕ್ತ ಚಾರಿತ್ರವನ್ನು ವರ್ಣಿಸುವ
೫ ನೇ ಅಧ್ಯಾಯವು.

## ೬ ನೆಯ ಅಧ್ಯಾಯವು.

---

(ಗುರುಭಕ್ತಾಂಡಾರಿಯ ಕಥೆಯು.)

ಬಳಿಕ ಇನ್ನೊಂದು ಮನೋಹರವಾದ ಕಥೆಯು ಪ್ರಸಿದ್ಧವಾಗಿದೆ. ಅದೂ ಕೂಡ ಈ ಚರಿತ್ರಕ್ಕೆ ಉದಾಹರಣೆಯಾಗುತ್ತದೆ. ಅದರ ಕ್ರಮವು ಹೀಗೆ ಎಂದು ವೇಮನಾರ್ಯ ಮೊದಲಾದ ಜಂಗಮರು ಹೇಳತೊಡಗಿದರೆಂತೆಂದರೆ: —‖ ೧ ‖ ಗುರುಭಕ್ತಿಯಿಂದ ಲಭಿ

ಮಃ । ಗುರುಸದ್ಭಕ್ತಿಪರಮಪಾತ್ರಮತ್ಯಂತಶುದ್ಧಧೀಃ ॥೧॥ ಪ್ರಶಸ್ತಗುರುಸ
ದ್ಭಕ್ತಿಲಕ್ಷಣಾವಳಿಸಂಯುತಃ । ಸಮುದ್ಯದ್ಗುರುಸದ್ಭಕ್ತಿಕೃತ್ಯಸಂಪತ್ಸಮನ್ವಿ
ತಃ ॥೩॥ ಗುರುಸದ್ಭಕ್ತಿಸಂರಕ್ಷಾನಿರತೋಽಗುಣಭೂಷಿತಃ । ಗುರುಸದ್ಭಕ್ತಿವಿ
ಜ್ಞಾನಯುತಃಪರಮಧಾರ್ಮಿಕಃ ॥೪॥ ಗುರುಸದ್ಭಕ್ತಿಪಾಶಾಭಿಯುಕ್ತೋಽನಿ
ಯಮಸಂಗತಃ। ಗುರುಭಕ್ತಿರಸಾಸಾರಾಭಿಷಿಕ್ತೋಽಗುರುವತ್ಸಲಃ॥೫॥ ಗುರು
ಭಕ್ತಿಸಮಾಯತ್ತಗಾತ್ರಸ್ಸಾಧುಜನಪ್ರಿಯಃ। ಗುರುಭಕ್ತಿಸದಾಸಕ್ತಚರಿತ್ರ
ತಿವಿಶ್ರುತಃ॥ ಗುರುಭಕ್ತಾಂಡಾರಿನಾಮಾಭಕ್ತಃಕಶ್ಚನವಿದ್ಯತೇ। ಜಾತುಗಚ್ಛನ್ನ
ಸೌವೀಥ್ಯಾಂವೇಶ್ಯಾಂಕಾಂಚಿದ್ವ್ಯಲೋಕಯತ್.೭॥ ನಾಮ್ನಾಪ್ರೌಢವತೀತ್ಯು
ರ್ವ್ಯಾಂಖ್ಯಾತಾಂಲಾವಣ್ಯಸಂಯುತಾಂ । ನವನಿರ್ಮಿತನೇಪಥ್ಯಾಂವಸುತೀಂಸ್ವ
ಗೃಹಾಂಗಣೇ ॥೮॥ ವಿಟಮಾನಸನಿರ್ಭೇದಪಟುತದ್ವೀಕ್ಷಣತ್ವಿಷಃ । ದೃ
ಷ್ಟ್ವೈತಾಸ್ಸತನೋರಸ್ಯಾಃ ಕಿಮುಪಾಂಗಮರೀಚಯಃ ॥೯॥ ಉದ್ದಾಮನಾ
ಕುಶಸಂಘಾಃ ಕಿಂ ಕಿಮುಬಂಧನರಜ್ಜವಃ । ಸೌದಾಮಿನೀಸಮೂಹಾಃಕಿಮ

---

ಸಿರುವ ಪ್ರಕಾಶಮಾನವಾದ ಪುಣ್ಯದಿಂದಕೂಡಿ ಶ್ರೇಷ್ಠನೂ, ಗುರುಭಕ್ತಿಗೆ ಮು
ಖ್ಯಾಶ್ರಯನೂ, ಅತ್ಯಂತ ನಿರ್ಮಲ ಬುದ್ಧಿಯುಳ್ಳವನೂ॥ ೧ ॥ ಶ್ರೇಷ್ಠವಾದ ಗುರುಭಕ್ತಿ
ಲಕ್ಷಣಗಳಿಂದ ಕೂಡಿದವನೂ, ಉತ್ತಮವಾದ ಗುರುಭಕ್ತಿಕಾರ್ಯದ ಸಿರಿಯಿಂದ ಕೂಡಿದ
ವನೂ ॥ ೩ ॥ ಗುರುಭಕ್ತಿಯನ್ನು ಕಾಪಾಡುವುದರಲ್ಲಾಸಕ್ತನೂ, ಸದ್ಗುಣಮಂಡಿತನೂ
ಗುರು ಭಕ್ತಿಜ್ಞಾನದಿಂದ ಕೂಡಿದವನೂ, ಅತ್ಯಂತ ಧರ್ಮಪರನೂ ॥ ೪ ॥ ಗುರು ಭಕ್ತಿ
ಯೆಂಬ ಹಗ್ಗಗಿಂದ ಕಟ್ಟುವಡೆದವನೂ, ಗುರುಭಕ್ತಿ ವ್ರತ ಸಂಪನ್ನನೂ, ಗುರು ಭಕ್ತಿ
ರಸದ ಧಾರೆಯಿಂದ ಅಭಿಷೇಕಗೊಂಡವನೂ, ಗುರುವಿನಲ್ಲಿ ವಿಶ್ವಾಸವುಳ್ಳವನೂ ॥ ೫ ॥
ಗುರುಭಕ್ತಿಯಲ್ಲಿ ಸಿದ್ಧವಾದ ದೇಹವುಳ್ಳವನೂ, ಸತ್ಪುರುಷರ ಪ್ರೀತಿಗೆ ಪಾತ್ರನೂ,
ಯಾವಾಗಲೂ ಗುರುಭಕ್ತಿಯಲ್ಲಿ ತತ್ಪರವಾದ ನಡೆಯುಳ್ಳವನೆಂದು ಪ್ರಸಿದ್ಧನಾದವ
ನೂ ॥ ೬ ॥ ಆದ ಗುರುಭಕ್ತಾಂಡಾರಿಯೆಂಬ ಹೆಸರುಳ್ಳ ಭಕ್ತನೊಬ್ಬನಿರುವನು. ಈ
ತನು ಬಂದಾನೊಂದು ವೇಳೆ ಬೀದಿಯಲ್ಲಿ ಹೋಗುತ್ತಲಿದ್ದು, ಹೊಸದಾಗಿ ಅಲಂಕಾರ ಮಾ
ಡಿಕೊಂಡು ತನ್ನ ಮನೆಯ ಮುಂದಣ ಅಂಗಳದಲ್ಲಿ ನಿಂತುಕೊಂಡಿದ್ದ ಕಾಂತಿಮತಿಯಾ
ಗಿರುವ ಪ್ರೌಢವತಿಯೆಂಬ ಹೆಸರಿನಿಂದ ಪ್ರಸಿದ್ಧಳಾದ ಒಬ್ಬ ಸೂಳೆಯನ್ನು ಕಂಡನು!
ವಿಟರ ಮನಸ್ಸನ್ನು ಸೀಳುವುದರಲ್ಲಿ ಸಮರ್ಥವಾದ ಆಕೆಯ ಕಣ್ಣಿನ ಕಾಂತಿಗಳನ್ನು
ಈತನು ನೋಡಿ, “ಆಹಾ! ಇವೇನು ಈಕೆಯ ಕಡೆಗಣ್ಣ ಕಾಂತಿಗಳೊ! ॥ ೯ ॥ ಮದ
ತ್ತರಗಳಾದ ಅಂಕುಶಗಳ ಸಮೂಹವೊ! ಕಟ್ಟುತಕ್ಕ ಹಗ್ಗಗಳೊ! ಮಿಂಚಿನ ಸಮೂಹ

ಹೋಸ್ವಿದ್ದೀಪಿಕಾಃಕಿಮು ‖ ೧೦ ‖ ಕಿಂವೋಹಪಾಶಜಾಲಾನಿ ಮನ್ಮಥಸ್ಯೇಷ ವಃಕಿಮು । ಆಲಾನಾನಿವಿಟಾನಾಂವಾಕಿಂಜಾಲಾನೀತಿವರ್ಣಯನ್ ‖ ೧೧ ‖ ಕಾಂತಾಕಟಾಕ್ಷಸಂಚಾರಸ್ಖಲನ್ನಿಜಗತಿಸ್ತತಃ । ಲಕ್ಷ್ಯಮಾಸಮಹಂಕಾಂತಾಪಾಂಗಸ್ಮರಶರಾವಳೇಃ ‖ ೧೨ ‖ ನಿವರ್ತ್ಯೈತಾಮಹಂಗಂತುಂನಶಕ್ನೋಮಿ ಕರೋಮಿಕಿಂ । ನಧೈರ್ಯಮಪಿಸಂತ್ಯಾಜ್ಯಂನದದ್ಯಾದಾಂತರಂಸ್ತ್ರಿಯಃ ‖೧೩‖ ಇತಿಪರ್ಯಾಕುಲೋಭಕ್ತಸ್ಸಮಾಲೋಚ್ಯಾತ್ಮನಿಸ್ವಯಂ । ಕೋದೋಷಃಕಾಮಿನೀಸಾಪಿ ಶಿವಭಕ್ತಿಪರಾಯಣಾ ‖ ೧೪ ‖ ಗಚ್ಛನ್ತಿಷ್ಠನ್ಸ್ವಪನ್ ಜಾಗ್ರದ್ಭುಂಜಾನೋಮೈಥುನೇರತೇ । ಯಶ್ಶಿವಾರ್ಪಿತಚೇತಸ್ಕೋಭಕ್ತಿಮಾನ್ಸತುನಾನ್ಯಥಾ ‖ ೧೫ ‖ ಇತಿಶೈವಪುರಾಣೇಷುಸುವ್ಯಕ್ತಂಕಥನಾದಪಿ । ಇಂದ್ರಿಯಾದಾಗತಂಕಿಂಚಿದ್ವಸ್ತುಸ್ಸುಖಂತತ್ಸಮರ್ಪಿತಂ ‖ ೧೬ ‖ ತತ್ಪ್ರಸಾದಂಚಭೋಕ್ತವ್ಯಂ ತದಿಂದ್ರಿಯಮುಖೇನಚ । ಇತಿಸ್ಫುಟತರಂಸೂತಸಂಹಿತಾಯಾಮುದೀರಣಾತ್ ‖ ೧೭ ‖ ಅಸ್ಪೃಷ್ಟಮಿಂದ್ರಿಯೈಃಕೃತ್ವಾಸುಖಜಾಲಂಸಮಾಗತಂ । ಯೋ

---

ಪೋ! ದೀವಿಗೆಗಳೋ! ‖ ೧೦ ‖ ಮೋಹಪಾಶದ ಬಲೆಗಳೋ! ಮನ್ಮಥನ ಬಾಣಗಳೋ! ವಿಟರೆಂಬ ಆನೆಗಳನ್ನು ಕಟ್ಟಿಹಾಕುವ ಕಂಬಗಳೋ! ವಿಟರೆಂಬ ಮೃಗಗಳನ್ನು ಹಿಡಿಯಲು ಒಡ್ಡಿದ ಬಲೆಗಳೋ! ಎಂದು ವರ್ಣಿಸಿದವನಾಗಿ ‖ ೧೧ ‖ ಈ ಕಾಂತೆಯ ಕಡೆಗಣ್ಣೋಟವು ಬಿದ್ದಮಾತ್ರದಿಂದಲೇ ನಾನು ನಡೆಯಲಾರದವನಾಗಿರುವೆನು. ಈಕೆಯ ಕಟಾಕ್ಷವೆಂಬ ಮನ್ಮಥನ ಬಾಣಗಳಿಗೆ ಗುರಿಯಾದೆನು! ‖ ೧೨ ‖ ಈಕೆಯನ್ನು ಬಿಟ್ಟು ನಾನು ಹಿಂದಿರುಗಲಾರೆ, ಏನು ಮಾಡಲಿ? ಧೈರ್ಯವನ್ನೂ ಬಿಡತಕ್ಕುದಲ್ಲ; ಸ್ತ್ರೀಗೆ ತನ್ನ ಮನೋಭಾವವನ್ನು ತಿಳುಹಿಸಬಾರದು ‖ ೧೩ ‖ ಎಂದು ಆ ಭಕ್ತನು ಮನಸ್ಸಿನಲ್ಲೇ ವ್ಯಾಕುಲಪಟ್ಟವನಾಗಿ, ತನ್ನಲ್ಲಿ ತಾನೇ "ದೋಷವೇನು? ಆ ಹೆಂಗುಸಾದರೂ ಶಿವಭಕ್ತಿತತ್ಪರಳು; ‖ ೧೪ ‖ ನಡೆಯುವಾಗಲೂ, ನಿಲ್ಲುವಾಗಲೂ, ಮಲಗಿರುವಾಗಲೂ, ಎಚ್ಚತ್ತಿರುವಾಗಲೂ, ಊಟ ಮಾಡುವಾಗಲೂ, ಸ್ತ್ರೀಸಂಗದಲ್ಲೂ, ಆಟದಲ್ಲೂ ಸಹ ಯಾವನು ಮನಸ್ಸನ್ನು ಶಿವನಿಗೆ ಸಮರ್ಪಿಸಿರುತ್ತಾನೋ ಅವನು ಭಕ್ತನಲ್ಲದೆ ಬೇರೆಯಲ್ಲ, ‖ ೧೫ ‖ ಹೀಗೆಂದು ಶೈವಪುರಾಣಗಳಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದಲೂ, 'ಇಂದ್ರಿಯ ಮುಖದಿಂದ ಬರುವ ಯಾವುದೊಂದು ಸೌಖ್ಯವನ್ನೂ ಶಿವನಿಗೆ ಸಮರ್ಪಿಸಿ, ‖ ೧೬ ‖ ಆ ಪ್ರಸಾದಸೌಖ್ಯವನ್ನು ಆ ಇಂದ್ರಿಯ ಮುಖದಿಂದಲೇ ಅನುಭವಿಸಬೇಕು' ಎಂದು ಅತಿ ಸ್ಪಷ್ಟವಾಗಿ ಸೂತಸಂಹಿತೆಯಲ್ಲಿ ಹೇಳಿರುವುದರಿಂದಲೂ ಸಹ ‖ ೧೭ ‖ 'ಯಾವನು ಇಂದ್ರಿಯಗಳ ಮುಖದಿಂದ ಬರುವ ಸೌಖ್ಯಸಮೂಹವನ್ನು ತಾನು ಮುಟ್ಟದೆ, ಶಿವನಿಗೆ

ಮಹೇಶಾಯಾರ್ಪಯತಿನಾಸೌಭವತಿದುರ್ವಿಟಃ ॥ ೧೮ ॥ ಶ್ರೇಷ್ಠಶ್ಶಮಾದಿಯು
ಕ್ತೇಭ್ಯೋಮುಮುಕ್ಷುಭ್ಯೋನಸಂಶಯಃ । ಇತ್ಯೇತೋಭಕ್ತಿಸನ್ಮಾರ್ಗೇಪ
ಕ್ಷೋಯಮಪಿವಿದ್ಯತೇ ॥ ೧೯ ॥ ಕಿಂಭಯೇನೇತಿಸಂಚಿಂತ್ಯಸ್ವಸಖೇನೋಜಿ
ತಂಧನಂ । ವಿತೀರ್ಯಪ್ರಾಹಿಣೋತ್ತಸ್ಯಾಗೃಹಂಪ್ರತಿಸಮುನ್ಮನಾಃ ॥ ೨೦ ॥
ತಂಸದ್ಭಕ್ತಂಸಮುದ್ವೀಕ್ಷ್ಯನಯುಕ್ತಮಿತಿಕಾಂತಯಾ । ಉಕ್ತೇಸಖ್ಯಾನಿ
ವೃತ್ತೇಽಸ್ಮಿನ್ಪುನಸ್ತಂಪ್ರಾಹಿಣೋದ್ಬಲಾತ್ ॥ ೨೧ ॥ ತಯಾನಯುಜ್ಯತೇಽ
ಸ್ಮಾಕಮಿತಿತಸ್ಮಿನ್ವಿಸರ್ಜಿತೇ । ಭೂಯಸ್ಸಂಪ್ರೇಷಿತೇತೇನಸಖ್ಯಾಸಾಪ್ರತ್ಯು
ವಾಚತಂ ॥ ೨೨ ॥ ನಶೋಭತೇಕಿಮರ್ಥಂತ್ವಂಬಹುಧಾಗಚ್ಛಸೀದೃಶಂ । ಪ್ರ
ಯಾಹೀತಿಸಮಾಭಾಷ್ಯನಾಂಗೀಚಕ್ರೇತಮಂಗನಾ ॥ ೨೩ ॥ ಸಭಕ್ತಸ್ಸ್ವಯ
ಮೇವಾಥಸಮಾಗತ್ಯಾನುರಾಗತಃ । ಪ್ರೋವಾಚತಾಂವಾರವಧೂಂದೃಷ್ಟ್ವಾ
ತಾಂಸ್ಪೃಹಯಾಗಿರಾ ॥ ೨೪ ॥ ನಗೃಹ್ಣಾಮೀತ್ಯವಾದೀಸ್ತ್ವಂಕಿಲಮತ್ಪ್ರೇ
ಷಿತಂಧನಂ । ಮಯಾಸಮಾನಾವಿದ್ಯಂತೇವಿಟಾಃ ಕಿಂ ವಸುಧಾತಳೇ ॥ ೨೫ ॥
ನಾಲಮೇತದ್ಧನಮಿತಿಬ್ರವೀಷಿಯದಿಭಾಮಿನಿ । ವಸುಕಿಂನೇಪಯಚ್ಛಾಮಿ
ತವವಾಂಛಾಪ್ರಮಾಣಕಂ ॥ ೨೬ ॥ ಪರಮಶ್ಶಿವಭಕ್ತೋಽಹಂಭವೀತಿಯದಿಮ

---

ಸಮರ್ಪಿಸುತ್ತಾನೋ ಅಂಥ ಇವನು ದುಷ್ಟವಿಟನಾಗುವುದಿಲ್ಲ ॥ ೧೮ ॥ ಮೋಕ್ಷಾಪೇಕ್ಷಿಗ
ಳಾದ ತಪಸ್ವಿಗಳಿಗಿಂತಲೂ ಅವನು ಶ್ರೇಷ್ಠನು ; ಸಂಶಯವಿಲ್ಲ' ಎಂದು ಭಕ್ತಿಮಾರ್ಗ
ದಲ್ಲಿ ಒಂದು ಪಕ್ಷವು ಸಹ ಇರುವುದು ॥ ೧೯ ॥ ಅದು ಕಾರಣ, ಭಯಪಡುವುದರಿಂದೇನು?
ಎಂಬುದಾಗಿ ಯೋಚಿಸಿ, ಸಂತೋಷಗೊಂಡವನಾಗಿ, ತನ್ನ ಸ್ನೇಹಿತನ ಕೈಯಲ್ಲಿ ಯೋಗ್ಯ
ವಾದಷ್ಟು ಹಣವನ್ನು ಕೊಟ್ಟು ಆ ಸೂಳೆಯ ಮನೆಗೆ ಕಳುಹಿಸಿಕೊಟ್ಟನು ॥ ೨೦ ॥
ಬಂದಂತಹ ಆ ಭಕ್ತನನ್ನು ಕಂಡು ಇದು ಯುಕ್ತವಲ್ಲವೆಂದು ಆಕೆಯು ಹೇಳಿಬಿಡಲು,
ಹಿಂದಿರುಗಿ ಬಂದ ಸಖನನ್ನು ಗುರುಭಕ್ತಾಂಡಾರಿಯು ಮತ್ತೆ ಬಲಾತ್ಕರಿಸಿ ಕಳುಹಿ
ದನು ॥ ೨೧ ॥ ಆಕೆಯಾದರೂ "ನಮಗೆ ಸೇರುವುದಿಲ್ಲ, ಹೊರಟುಹೋಗು" ಎಂದು
ಹೇಳಿ ಕಳುಹಿಬಿಟ್ಟಳು. ಹಿಂದಿರುಗಿ ಬಂದ ಸಖನನ್ನು ಮತ್ತೂ ಈತನು ಕಳುಹಿಕೊ
ಡಲಾಗಿ, ಆ ಸೂಳೆಯು ॥ ೨೨ ॥ "ಇದು ಒಪ್ಪುವುದಿಲ್ಲ; ಆ ನೀನು ಅದೇ
ತಕ್ಕೆ ಹೀಗೆ ಪದೇಪದೆ ಬರುತ್ತೀಯೆ? ಹೊರಟುಹೋಗು" ಎಂದು ಹೇಳಿ, ಆ ಭಕ್ತನನ್ನು
ಒಪ್ಪದೆ ಹೋದಳು ॥ ೨೩ ॥ ಬಳಿಕ ಆ ಭಕ್ತನು ಅನುರಾಗದಿಂದ ತಾನೇ ಬಂದು, ಸೂಳೆ
ಯನ್ನು ನೋಡಿ, ಕುತೂಹಲದಿಂದ ನುಡಿದನೇನೆಂದರೆ:— ॥ ೨೪ ॥ ನಾನು ಕಳುಹಿಕೊ
ಟ್ಟ ಹಣವನ್ನು ತೆಗೆದುಕೊಳ್ಳುವುದಿಲ್ಲವೆಂದು ನೀನು ಹೇಳಿದೆಯಷ್ಟೆ? ಭೂತಲದಲ್ಲಿ ನನಗೆ
ಸದೃಶರಾದ ವಿಟರು ಇದ್ದಾರಯೆ? ॥ ೨೫ ॥ ಎಲೆ ಕಾಮಿನಿ, ಈ ಹಣವನ್ನು ಸಾಲದೆಂದು
ಹೇಳುವೆಯಾದರೆ, ನಿನಗಿಷ್ಟವಾದಷ್ಟು ಹಣವನ್ನು ಕೊಡಲಾರೆನೇನು? ॥ ೨೬ ॥ ನನ್ನನ್ನು

ನ್ಯಸೇ | ಅವಿವೇಕೀತಿ ತೇ ಬುದ್ಧಿರ್ಯದಿ ಪಶ್ಯ ರತೇಷು ಮಾಂ ‖ ೧೭ ‖ ರೂಪಹೀನಾಯುಮಿತಿ ಚೇನ್ಮದ್ರೂಪಮವಲೋಕಯ | ಜಾನಾಸ್ಯನಾಥ ಇತಿ ವಾ ಭಕ್ತಾನಾಮಸ್ಮಿ ಕಿಂಕರಃ ‖ ೧೮ ‖ ಮಹಾತ್ಮನಾಂ ತನೂಜೋಽಹಂ ನಮಹಾನಿತಿ ಮನ್ಯಸೇ | ಯದ್ಯಪ್ರಯೋಜಕ ಇತಿ ಪುರುಷಾರ್ಥಪರೋಽಸ್ಮ್ಯಹಂ ‖ ೧೯ ‖ ವಯೋವೈಷಮ್ಯಮಿತಿ ಚೇದಾವಯೋಸ್ಸದೃಶಂ ವಯಃ | ಕುಶಲೋನೇತಿ ವದಸಿ ಯದ್ಯಾಕರ್ಣಯ ವಾಕ್ಕ್ರಮಂ ‖ ೨೦ ‖ ಅನ್ಯಾನುರಾಗಿಣೀ ಭೂತ್ವಾ ಯದಿ ನಾಂಗೀಕರೋಷಿ ಮಾಂ | ತಾವತ್ಸಂಯುಜ್ಯ ಪಶ್ಯೈಕವಾರಂ ಚಂದ್ರಾನನೇ ಮಯಾ ‖ ೨೧ ‖ ವಿದಿತ್ವಾ ಗುಣಜಾತೀಚ್ಛಾ ಭಾವೇಂಗಿತಮನೋಗತೀಃ | ಬಾಲಿಕಾಯುವತೀಪ್ರೌಢಾಲೋಲಾಭಾವೈಕಲಕ್ಷಣಾಂ ‖ ೨೨ ‖ ವಯೋಗತಿಂ ಯೋನಿದಂಡನ್ಯೂನತಾಧಿಕತಾವಶಾತ್ | ವಿಷಮೇ ಸುರತೇ ಸಾಮ್ಯಕಾರಿಣಾ ನಾಸನಕ್ರಮಾನ್ ‖ ೨೩ ‖ ಕರಣಾನಿ ತತೇಃ ಕಾಲಕ್ರಮಾನಪಿ ವಿಶೇಷತಃ | ಅಂಗುಷ್ಠಪದಗುಲ್ಫಾಗ್ರಜಾನುಗುಹ್ಯಸ್ಥಲೇಷ್ವಥ ‖ ೨೪ ‖ ನಾಭಿವಕ್ಷಃಕುಚದ್ವಂದ್ವಕಕ್ಷಕಂಠಕಪೋಲಕೇ | ದಂತನೇತ್ರಾಲಿಕೇ ಮೂರ್ಧ್ನಿ ಶುಕ್ಲಕೃಷ್ಣ

---

ಭವಿಯೆಂಬುದಾಗಿ ತಿಳಿಯುತ್ತೀಯೋ ? ಹಾಗಲ್ಲ, ನಾನು ಪರಮಶಿವಭಕ್ತ ; ರತಿಕ್ರೀಡೆಯಲ್ಲಿ ನನ್ನನ್ನು ಕುಶಲನಲ್ಲವೆಂದು ನಿನಗೆ ಯೋಚನೆಯಿದ್ದರೆ ಕೂಟಗಳಲ್ಲಿ ನನ್ನನ್ನು ನೋಡು ‖ ೧೭ ‖ ನನ್ನನ್ನು ರೂಪಶಾಲಿಯಲ್ಲವೆಂದು ಭಾವಿಸುವೆಯಾದರೆ ಇದಿರಿಗೇ ನನ್ನ ರೂಪವನ್ನು ನೋಡು. ಅನಾಥನೆಂದು ತಿಳಿದಿರುವೆಯಾದರೆ, ಹಾಗಲ್ಲ, ನಾನು ಭಕ್ತರ ಸೇವಕ ‖ ೧೮ ‖ ದೊಡ್ಡವನಲ್ಲವೆಂದು ತಿಳಿದುಕೊಂಡಿರುವೆಯೋ ? ನಾನು ಮಹಾತ್ಮರ ಮಗ. ನಿಷ್ಪ್ರಯೋಜಕನೆಂದು ತಿಳಿದಿರುವೆಯೊ ? ನಾನು ಪುರುಷಾರ್ಥಸಾಧನದಲ್ಲಿ ಆಸಕ್ತನು ‖ ೧೯ ‖ ವಯಸ್ಸು ಹೆಚ್ಚುಕಡಿಮೆಯಾಗಿರುವುದೆಂದು ಹೇಳುವೆಯಾದರೆ, ಹಾಗಲ್ಲ, ನಮ್ಮಿಬ್ಬರ ವಯಸ್ಸೂ ಸಮಾನವಾಗಿದೆ. ಪ್ರೌಢನಲ್ಲವೆಂದು ಹೇಳುವೆಯಾದರೆ ನನ್ನ ಮಾತಿನರೀತಿಯನ್ನು ಕೇಳು ‖ ೨೦ ‖ ನೀನು ಮತ್ತೊಬ್ಬನಲ್ಲಿ ಅನುರಕ್ತಳಾಗಿದ್ದುಕೊಂಡು ನನ್ನನ್ನು ಅಂಗೀಕರಿಸದೆ ಇರುವೆಯಾದರೆ, ಅವನು ಬರುವುದರೊಳಗೆ ಒಂದುಬಾರಿ ನನ್ನೊಡನೆ ಕೂಡಿ ನೋಡು ‖ ೨೧ ‖ ಸ್ತ್ರೀಯರ ಗುಣ ಜಾತಿ ಅಪೇಕ್ಷೆ ಅಭಿಪ್ರಾಯ, ಮುಖಚೇಷ್ಟೆ, ಮನಸ್ಸ್ಥಿತಿಗಳನ್ನು ತಿಳಿದುಕೊಂಡು, ಬಾಲಿಕೆ, ತರುಣಿ, ಪ್ರೌಢೆ, ಲೋಲೆ, ಎಂಬ ಅವಸ್ಥಾಭೇದಗಳಿಗೆ ತಕ್ಕ ಲಕ್ಷಣಗಳಿಂದ ಅವರ ವಯೋಗತಿಯನ್ನರಿತು, ಯೋನಿದಂಡಗಳ ಹೆಚ್ಚುಕಡಿಮೆಯ ಕಾರಣದಿಂದ ಉಂಟಾಗತಕ್ಕ ವಿಷಮರೀತಿಯನ್ನೂ, ಅನೇಕ ವಿಧವಾದ ಆಸನಕ್ರಮಗಳನ್ನುಪಯೋಗಿಸುವುದರಿಂದ ಸಮರತಿಯನ್ನುಂಟುಮಾಡಿಕೊಳ್ಳುವಿಕೆಯನ್ನೂ, ರತಿಕುತೂಹಲವನ್ನು ಹುಟ್ಟಿಸುವ ಉಪಕ

ವಿಭಾಗತಃ ॥ ೩೫ ॥ ಸಮಾರೋಹಾವರೋಹಾಭ್ಯಾಂದಕ್ಷವಾಮಪ್ರಚಾ
ಣೀಃ । ಚರಸ್ಥಿರಪ್ರಸೂನೇಷುಕಲಾವಿಜ್ಞಾಯತತ್ವತಃ ॥ ೩೬ ॥ ಕಚಂಗೃ
ಹೀತ್ವಾನಯನೇಲಲಾಟಂಪರಿಚುಂಬ್ಯಚ । ದಂತಚ್ಛದಂತತಸ್ಸ್ವನ್ಯಗ್ದಂತೋ
ಷ್ಠೇನನಿಪೀಡ್ಯಚ ॥ ೩೭ ॥ ಶನೈರ್ನಾಭಿಸ್ಥಲೇಸವ್ಯಕ್ಷ್ಪೇಟಂಪ್ರವಿಧಾಯಚ
ಗೃಹೀತ್ವಾನಖರೈರ್ಗಾಢಂಸ್ತನೌಮದನಮಂದಿರೇ ॥ ೩೮ ॥ ಕೃತ್ವಾಕರಿಕ
ಕ್ರೀಡಾಮಥಸಾಥ್ನ್ಯಂಗಕಾನ್ಯಥ । ಸ್ವಾಂಗೈರಾಶ್ಲಿಷ್ಯಲಲಿತಂಭೂತ್ವಾತ್ಯಂತವಿ
ಚಕ್ಷಣಃ ॥ ೩೯ ॥ ನಿಮಜ್ಜಯಿತುಮಬ್ಜಾಕ್ಷೀಃಕಂದರ್ಪರಸಸಾಗರೇ । ಕಿಮ
ಶಕ್ಯಂಮಮಪ್ರೀತ್ಯಾತಾವತ್ತ್ವಂಸಂಮುಖೀಭವ ॥ ೪೦ ॥ ಆಲಿಂಗನೋಚಿತಾ
ಲಾಪೈರ್ಹೃತ್ವಾಪ್ರೇಮ್ಣಶ್ಚಕೀಲಕಂ । ಯಥಾನಕಿಂಚಿಜ್ಜಾನಾಸಿನಿಮೀಲಿತವಿ
ಲೋಚನಾ ॥ ೪೧ ॥ ನಕುರ್ಯಾಚ್ಚೇತ್ತಥಾಕಾಂತೇತವಾಹಂಸ್ಯಾಂಪರಾಜಿತಃ
ಇತ್ಯೇವಂರೂಪವಚನೈಸ್ಸ್ವಚಾತುರ್ಯೇಪ್ರಪಂಚಿತೇ ॥ ೪೨ ॥ ದರಹಾಸಸಮ

---

ರಣಗಳನ್ನೂ, ಮುಖ್ಯವಾದ ಕಾಲರೀತಿಗಳನ್ನೂ, ಕಾಲಿನ ಹೆಬ್ಬೆರಲು, ಕಾಲು, ಹರಡು,
ಮಂಡಿ, ಗುಹ್ಯಸ್ಥಾನ, ಹೊಕ್ಕುಳು, ಎದೆ, ಮೊಲೆ, ಕಂಕುಳು, ಕತ್ತು, ಕೆನ್ನೆ, ಹಲ್ಲು,
ಕಣ್ಣು, ಹಣೆ, ತಲೆ, ಎಂಬ ಈ ಹದಿನೈದು ಸ್ಥಳಗಳನ್ನು ಶುಕ್ಲಪಕ್ಷದ ೧೫ ತಿಥಿಗಳಲ್ಲಿ
ಕ್ರಮವಾಗಿ ಬಲಗಡೆಯ ಭಾಗದಿಂದ ಏರುತ್ತಲೂ, ಕೃಷ್ಣಪಕ್ಷದಲ್ಲಿ ತಲೆಯಿಂದ ಹೆಬ್ಬೆ
ರಲವರೆಗೆ ಎಡಗಡೆಯಲ್ಲಿ ಕ್ರಮವಾಗಿ ಇಳಿಯುತ್ತಲೂ ಇರುವ ಕಾಮಕಲಾಸ್ಥಾನಗಳ
ನ್ನರಿತು ॥ ೩೬ ॥ ತಲೆಗೂದಲನ್ನು ಹಿಡಿದು, ಕಣ್ಣುಗಳನ್ನೂ ಹಣೆಯನ್ನೂ ಚುಂಬಿಸಿ
ಬಳಿಕ ತುಟಿಯನ್ನು ತನ್ನ ಹಲ್ಲು ತುಟಿಗಳಿಂದ ಚೆನ್ನಾಗಿ ಕಚ್ಚಿ ಸೆಳೆದು ॥ ೩೭ ॥ ಹೊ
ಕ್ಕುಳಿನ ಮೇಲೆ ಮೆಲ್ಲಗೆ ತಟ್ಟಿ, ಮೊಲೆಗಳನ್ನು ಗಟ್ಟಿಯಾಗಿ ಕೈಯುಗುರುಗಳಿಂದ ಹಿಡಿ
ದು, ಯೋನಿಯಲ್ಲಿ ಆನೆಸೊಂಡಿಲ ಕ್ರೀಡೆಯನ್ನು ಮಾಡಿ, ಅತ್ಯಂತ ಕುಶಲನಾಗಿ ಅಧೋ
ಭಾಗದ ಅವಯವಗಳನ್ನು ತನ್ನ ಅಧೋಭಾಗದ ಅವಯವಗಳಿಂದ ಹಿತವಾಗುವಂತೆ
ಆಲಿಂಗಿಸಿ ॥ ೩೯ ॥ ಸ್ತ್ರೀಯರನ್ನು ಕಾಮರಸದ ಸಮುದ್ರದಲ್ಲಿ ಮುಳುಗಿಸುವುದಕ್ಕೆ ನನಗೆ
ಅಶಕ್ಯವೆ? ನಿನ್ನ ಮೋಹದ ವಿಟನು ಬರುವವರೆಗೆ ನೀನು ನನಗೆ ಅನುಕೂಲಳಾಗು!
ಎಲೆ ಕಾಂತೆಯೆ! ಆಲಿಂಗಿಸುವುದರಿಂದಲೂ ಕಾಲೋಚಿತವಾದ ಮಾತುಗಳಿಂದಲೂ ನಿನ್ನ
ಪ್ರೇಮದಕೀಲನ್ನು ಬಿಚ್ಚಿ, ನೀನು ಕಣ್ಣುಮುಚ್ಚಿ ಯಾವುದೊಂದು ಹೊರಗಣ ಸಂಗತಿ
ಯನ್ನೂ ಅರಿಯದೆ ಇರುವಹಾಗೆ ನಾನು ಮಾಡದೆಹೋದರೆ, ನಿನಗೆ ನಾನು ಸೋತವನೆ
ಸರಿ." ಈ ಪ್ರಕಾರವಾದ ಮಾತುಗಳಿಂದ ಗುರುಭಕ್ತಾಂಡಾರಿಯು ತನ್ನ ಕೌಶಲವನ್ನು
ವ್ಯಕ್ತಪಡಿಸಲಾಗಿ ॥ ೪೨ ॥ ಆ ಪ್ರೌಢವತಿಯು ಮುಗುಳ್ನಗೆಯಿಂದೊಪ್ಪುತ್ತಿರುವ ತುಟಿ

ದ್ಭಾಸಿತಾಧರಾಭಾಷತಾಂಗನಾ | ವಿಚಾರಿತೇಽಥಸುತರಾಂಸದ್ಭಕ್ತಿಸಮಯೇ
ಸತಿ ‖ ೪೩ ‖ ನಯುಜ್ಯತೇತವಮಮೇತ್ಯುಕ್ತೇಽನಂತರಮಸ್ಯಹೋ | ಕುತ
ಸ್ತ್ಯಮತ್ರಪ್ರಾವೀಣ್ಯಂತ್ವಂವಿವೇಕಾನ್ವಿತೋಯದಿ ‖ ೪೪ ‖ ತಾವನ್ಮಾತ್ರೇಣ
ನಕಿಮುವಿಜ್ಞಾತಮನ್ಯಂಪರೇಂಗಿತಂ | ರಸಿಕೋಯದಿನಿರ್ಭಗ್ನೇಚಿತ್ತೇಪುನರ
ತಃಪರಂ ‖ ೪೫ ‖ ವಿದ್ಯತೇವಾವಕಾಶೋವಕ್ತುಂಭೂಯೋಽಸ್ಯವಸರೋನನು|
ಭಾವಜ್ಞೋನ್ನಗಂತವ್ಯಂದೃಷ್ಟ್ವಾಕಿಂಮದ್ವಿರಾಗಿತಾಂ ‖ ೪೬ ‖ ರತಿತಂತ್ರೇವಿ
ದಗ್ಧಶ್ಚೇತ್ತ್ವಂರತೇರಪ್ರದರ್ಶನಂ | ನಜ್ಞಾತವ್ಯಂನುವಾಕ್ಷೀಘ್ರಂಭವತಾಬ
ತಯೋಷಿತಾಂ ‖ ೪೭ ‖ ಲಿಂಗಾವಧಾನೀಯದಿಕಿಂಯುಕ್ತಂವಕ್ತುಮಸಂಗತಂ |
ತದ್ಗಚ್ಛ ಬಹುನಾಕಿಂತ್ವಂನಮೌರ್ಖ್ಯೇಣಪ್ರಯೋಜನಂ ‖ ೪೮ ‖ ಇತ್ಯುಕ್ತೇ
ಮೋಹತಂಭಕ್ತಃಪುನರಪ್ಯತಿರಾಗತಃ | ಇಯತಾಕಿಂಗಮಿಷ್ಯಾಮಿತೂಷ್ಣೀಮಂ
ಬುಜಲೋಚನೇ ‖ ೪೯ ‖ ಸರ್ವಮಾಚಕ್ಷ್ವರಮಣಿತ್ವಂಪರಿತ್ಯಾಗಕಾರಣಂ |
ಅಥವಾಂಗೀಕುರುಷ್ವಾದ್ಯಮಾಮತ್ರಸಮುಪಾಗತಂ ‖ ೫೦ ‖ ಮುಕ್ತವತ್ಯಥ
ಚೇದ್ವೇಶ್ಯಾವೃತ್ತಿಂಮಾಮೇವಸಂವೃಣು | ನಚೇತ್ಸಮುತ್ಯಜಂಸಂಗಂಪುಂಸಾ

---

ಯುಳ್ಳವಳಾಗಿ, ನುಡಿವಳೇನೆಂದರೆ—,, ಸದ್ಭಕ್ತಿಮತವನ್ನು ಚೆನ್ನಾಗಿ ವಿಚಾರಮಾಡಿ
ನೋಡಿದರೆ ನಿನಗೂ ನನಗೂ ಸಂಗವಾಗುವುದಿಲ್ಲವೆಂದು ನಾನು ಹೇಳಿದರೂ, ಮತ್ತೆ ನಿನ್ನ
ಪ್ರವೀಣತನವನ್ನು ಇಲ್ಲಿ ತೋರಿಸುವುದು ಪಾಮರೋಕ್ತಿಯುಲ್ಲವೆ? ನೀನು ವಿವೇಕಿಯಾ
ಗಿದ್ದರೆ ‖ ೪೪ ‖ ಅಷ್ಟುಮಾತ್ರದಿಂದಲೇ ಅನ್ಯರಭಿಪ್ರಾಯವನ್ನು ತಿಳಿದುಕೊಳ್ಳಬಾರದೆ?
ನೀನು ರಸಿಕನಾಗಿದ್ದರೆ ಸ್ತ್ರೀಚಿತ್ತವು ವಿಮುಖವಾಗಿಹೋದಬಳಿಕ ಆದರಮೇಲೆ ಮಾತನಾ
ಡುವುದಕ್ಕೆ ಅವಕಾಶವೇನಾದರೂ ಉಂಟೆ? ನೀನು ಭಾವಜ್ಞನಾಗಿದ್ದರೆ ನಾನು ಅನುರಕ್ತಳಾ
ಗಿಲ್ಲದಿರುವುದನ್ನು ನೋಡಿ ಹಿಂದಿರುಗಿ ಹೋಗಬೇಡವೆ? ‖೪೬‖ ನೀನು ಕಾಮಶಾಸ್ತ್ರದಲ್ಲಿ ಪ್ರೌಢ
ನಾಗಿದ್ದರೆ, ಸುರತರೀತಿಗಳನ್ನು ಸ್ತ್ರೀಯರಮುಂದೆ ಬಿಚ್ಚಿ ಆಡಬಾರದೆಂಬುದನ್ನು ತಿಳಿದಿರ
ಬೇಡವೆ? ‖೪೭‖ ನೀನು ಲಿಂಗಾವಧಾನಿಯಾಗಿದ್ದರೆ ಅಸಂಗತವಾದ ಮಾತನ್ನು ಆಡಬಹುದೆ?
ಆದುದರಿಂದ ಹೊರಟುಹೋಗು, ಬಹುಮಾತಿನಿಂದ ಪ್ರಯೋಜನವೇನು? ಈ ಹಟದಿಂದಫಲ
ವಿಲ್ಲ" ‖ ೪೮ ‖ ಹೀಗೆ ಹೇಳಲಾಗಿ, ಆ ಗುರುಭಕ್ತಭಂಡಾರಿಯು ಮತ್ತೆ ಮೋಹದಿಂದ ಅವ
ಳನ್ನು ಕುರಿತು ನುಡಿದನೇನೆಂದರೆ–,,ಎಲೆ ಕಮಲಾಕ್ಷಿಯೆ, ಇಷ್ಟರಿಂದಲೇ ನಾನು ಸುಮ್ಮನೆ
ಹೊರಟುಹೋಗತಕ್ಕವನೆ? ‖ ೪೯ ‖ ಎಲೆ ರಮಣಿ! ನಾನು ನಿನ್ನನ್ನು ಬಿಟ್ಟುಹೋಗಬೇ
ಕಾದುದಕ್ಕೆ ಕಾರಣವನ್ನು ಸಾಂಗವಾಗಿ ಹೇಳು. ಹಾಗಲ್ಲದಿದ್ದರೆ ಇಲ್ಲಿಗೆ ಬಂದಿರುವ
ನನ್ನನ್ನು ಈಗ ಅಂಗೀಕರಿಸು ‖ ೫೦ ‖ ಸೂಳೆತನವನ್ನೇ ನೀನು ಬಿಟ್ಟವಳಾಗಿದ್ದರೆ ನನ್ನ
ನ್ನೇ ವರಿಸಿ ಮದುವೆಯಾಗು. ಹಾಗಲ್ಲದೆ ಪುರುಷರ ಸಂಗವನ್ನೇ ಮಾಡುವುದಿಲ್ಲವೆಂದು

ಮಿಥ್ಯಾಲಪಸ್ಯತ ॥೫೧॥ ಕುರುಷ್ವತೀವ್ರಾಮದ್ಯೈವಪ್ರತಿಜ್ಞಾಂತ್ವಂಮಮಾ
ಗ್ರತಃ । ಮಹಾದೇವೀವ ವಿಷಯಭ್ರಾಂತಿಂಮುಂಚಾಥವಾನನು ॥೫೨॥ ಉ
ತಪುಂಸ್ತ್ವಂಭಜೇದಾನೀಂತಿಲಕಾಂಬೇವವಿಸ್ಮಿತಂ । ಬಹುನಾಕಿಂಸ್ತ್ರೀಯಾ
ಮಧ್ಯೈಧೀರಾಭಕ್ತಾಯದಿವ್ರಜ ॥೫೩॥ ವೀರಚೋಳಾಂಬಿಕೇವತ್ವಂದ್ರಾಕ್ಷಾ
ರಾಮಂಶಿವೋಸ್ಮಿಖೀ । ನಿಷ್ಕಾರಣಂವ್ರಜೇತ್ಯುಕ್ತೇಸಾಧುನಾಂಗೀಕರೋ
ಮ್ಯಹಂ ॥೫೪॥ ಅಸ್ತುವಾಕಾರಣಮಪಿನಯಾಸ್ಯಾಮ್ಯಹಮಂಗನೇ । ತವಾಸ
ಧಿರ್ಮದವಧಿಃಕಿಂಬಹುಪ್ರತಿಜಲ್ಪಿತೈಃ ॥೫೫॥ ಅಹೋಚಿತ್ರಂಸಾಧುಭಾವ
ಸ್ತ್ವಯಾಮೇಸಹಸಂಗಮಃ । ಸಾಧುರೇವಿಟಸದ್ಭಕ್ತಸಾಧುಕಾಂತಾಮನೋ
ಹರ ॥೫೬॥ ಕಿಂಸ್ತ್ರೀಯಾವಿರತೌರಂತುಮಿಷ್ಟೇಗೋಪಾಲಕೋಽಪಿ
ವಾ । ವಿರಕ್ತಾಯಾಂವಾರವಧ್ವಾಂವಿರಕ್ತೇಚಾವನೀಪತೌ ॥೫೭॥ ಯೋ
ನುರಕ್ತಸ್ಸಏವಸ್ಯಾತ್ಪಶುಪಾಲೋನಸಂಶಯಃ । ಪಶುಪಾಲೋಽಪಿವಾಜಾ
ತ್ಯಾಸ್ತ್ರೀಣಾಂಚಿತ್ತಂಪ್ರವೇತ್ತಿಯಃ ॥೫೮॥ ಸಏವಸ್ಮರಸಂಕಾಶೋಽವಿ

---

ಹೇಳುವೆಯಾದರೆ, ಈಗಲೇ ನನ್ನ ಮುಂದೆಯೇ ನೀನು ಕಠಿಣವಾದ ಪ್ರತಿಜ್ಞೆಯನ್ನು ಮಾಡು. ಹಾಗಲ್ಲದೆ ಇದ್ದರೆ ಉಡುತಡಿಯ ಮಹಾದೇವಿಯಂತೆ ಸಂಗಸುಖದ ಭ್ರಮೆಯನ್ನು ಬಿಟ್ಟುಬಿಡು. ॥೫೨॥ ಹಾಗೂ ಅಲ್ಲದಿದ್ದರೆ ತಿಲಕಾಂಬೆಯಂತೆ ಆಶ್ಚರ್ಯಕರವಾದ ಪುರುಷತ್ವವನ್ನು ಈಗಲೇ ಪಡೆ. ಹೆಚ್ಚು ಮಾತಿನಿಂದೇನು? ಸ್ತ್ರೀಯರೊಳಗೆ ನೀನು ದೃಢಭಕ್ತಿಸಂಪನ್ನೆಯಾಗಿದ್ದರೆ, ವೀರಚೋಳವ್ವೆಯಂತೆ ಶಿವನನ್ನರಸಿಕೊಂಡು ದ್ರಾಕ್ಷಾರಾಮವನ್ನು ಪ್ರವೇಶಿಸು. ಅದನ್ನೆಲ್ಲ ಬಿಟ್ಟು, ಸುಮ್ಮನೆ ನನ್ನನ್ನು 'ಹೋಗು' ಎಂದು ಹೇಳಿಬಿಟ್ಟರೆ ನಾನು ಅದಕ್ಕೆ ಒಪ್ಪಲಾರೆನು. ॥೫೪॥ ಮತ್ತೂ ಎಲೆ ಕಾಂತೆ? ಬಂದುವೇಳೆ ಬಿಟ್ಟುಹೋಗಬೇಕಾದುದಕ್ಕೆ ತಕ್ಕ ಕಾರಣವಿದ್ದರೂ ಇರಲಿ; ನಾನು ಹೋಗುವುದಿಲ್ಲ; ಏಕೆಂದರೆ, ನಿನ್ನ ನನ್ನ ಜೀವಾವಸಾನದವರೆಗೂ ನಮ್ಮ ಯೋಗವು ತಪ್ಪತಕ್ಕುದಲ್ಲ. ಹೆಚ್ಚುಮಾತನಾಡಿ ಫಲವೇನು? ॥೫೫॥ ನಿನ್ನೊಡನೆ ನನಗೆ ಸಂಗವುಂಟಾದರೆ ಸಜ್ಜನರು ಕೂಡ ಒಪ್ಪುವರು. ಅತ್ಯಾಶ್ಚರ್ಯ! 'ಎಂದು ನುಡಿಯಲು, ಪ್ರಿಥವತಿಯು—' ಎಲೆ ಉತ್ತಮಭಕ್ತನಾದ ವಿಟನೆ! ಚೆನ್ನಾಯ್ತು, ಸ್ತ್ರೀಯರ ಮನಸ್ಸನ್ನು ಸೆಳೆಯತಕ್ಕವನೆ! ಭಲ! ॥೫೬॥ ಇಷ್ಟವಿಲ್ಲದ ಸ್ತ್ರೀಯಲ್ಲಿ ರಮಿಸುವುದಕ್ಕೆ ದನವನ್ನು ಕಾಯುವವನಾದರೂ ಅಪೇಕ್ಷಿಸುವನೆ? ಅನುರಾಗವಿಲ್ಲದ ಸೂಳೆಯಲ್ಲೂ, ವಿಶ್ವಾಸವಿಲ್ಲದ ದೊರೆಯಲ್ಲೂ ಸಹ ಯಾವನು ಪ್ರೀತಿಯುಳ್ಳವನಾಗುವನೋ ಅವನು ದನವನ್ನು ಕಾಯುವವನೇಸರಿ. ಸಂದೇಹವಿಲ್ಲ. ಗೋವಳರ ಜಾತಿಯಲ್ಲಿ ಹುಟ್ಟಿದವನಾಗಿದ್ದರೂ ಯಾವನು ಸ್ತ್ರೀಯರ ಮನಸ್ಸನ್ನು ತಿಳಿದುಕೊಳ್ಳುವನೋ, ಅವನೇ ಮನ್ಮಥನಿಗೆ ಸಮಾನನಾದ

ಮುಖ್ಯೋವಿಚಕ್ಷಣಃ । ವಿವೇಕಿನಾಂವಿಟಾನಾಂತ್ವಂಲೋಕೇಸಂಪ್ರತಿಮೂ
ರ್ಧಸು ॥ ೫೯ ॥ ಆರೋಪಯಾಮಾಸಿಥತೃಣಂಕಿಂವಾತ್ರಪರಿಕಥ್ಯತೇ । ಧಿಗ್ವಿ
ದಗ್ಧವಿಟಾಸ್ಸರ್ವೇತ್ವಾಮಂಗೀಕುರ್ವತೇಕಿಮು ॥ ೬೦ ॥ ಧೈರ್ಯಂವಿಹಾಯಕಾತ
ರ್ಯಂಪ್ರಾಪ್ತೇರಜ್ಯಂತಿಕಿಂಸ್ತ್ರಿಯಃ । ಭಕ್ತಿಮಾರ್ಗೋವಿಟನ್ಯಾಯೋತವೇ
ಯಂಭಂಡತಾಭುವಿ ॥ ೬೧ ॥ ಕರ್ತುಂಝಂಝಾಟಮುತಮಾಂಪರಿತರ್ಜಯಿ
ತುಂಭವಾನ್ । ಭುಜಂಗೋವಾಪರಿಚಿತಃಪತಿರ್ವಾಕಿಮುತಾಮ್ಯತಿ ॥ ೬೨ ॥
ಬತಸರ್ವಸುವಾಸಮ್ಯಗ್ಮಹೋತ್ಸವದಿನೇಷುವಾ । ಉಪಭುಕ್ತಧನಾಃಕಿಂವಾ
ವಯಮತ್ರವದಾಧಿಕಂ ॥ ೬೩ ॥ ಉತದ್ರವ್ಯಾಣಿವಸ್ತ್ರಾಣಿದತ್ವಾಕುಪ್ಯಸಿ
ಮಾಬಹು । ವಿಚಾರ್ಯತ್ವಾಂವದಸಿಚೇತ್ತ್ವಮೇವತ್ವಾಂವಿಲೋಕಯ ॥ ೬೪ ॥
ಶಿವಭಕ್ತಸ್ತ್ವಮಸ್ಯಸ್ಮಿನ್ಗ್ರಾಮೇಪ್ರಾಭವಸಂಯುತಃ। ಯುಕ್ತಿಮಾಂಸ್ತ್ವಂ
ಕಥಂವಾಕ್ಯಮಯುಕ್ತಂಜಲ್ಪಸೀದೃಶಂ ॥ ೬೫ ॥ ವಿಚಾರ್ಯಮಾಂವದಸಿಚೇ
ನ್ನಾಹಮಸ್ಮಿಧನಾರ್ಥಿನೀ । ಮತ್ಸ್ವಾಮಿಲಿಂಗನಿರ್ದಿಷ್ಟಾವೃತ್ತಿರೇಷಾತಥಾ
ಪ್ಯಹಂ ॥ ೬೬ ॥ ನಜಾನೇಶಿವಸದ್ಭಕ್ತಾನ್ವಿನಾಸ್ವಪ್ನೇಪಿಚಾಪರಾನ್ । ವಿಕಾ

---

ಮತ್ತೂ ಕುಶಲನಾದ ವಿಟಶ್ರೇಷ್ಠನೆನಿಸಿಕೊಳ್ಳುವನು. ಈಗ ನೀನು ಲೋಕದಲ್ಲಿ ವಿವೇ
ಕಿಗಳಾಗಿರುವ ವಿಟರ ತಲೆಯಮೇಲೆಲ್ಲ ಹುಲ್ಲನ್ನು ಹೊರಿಸಿದೆ. ಇನ್ನು ಹೇಳುವುದೇನು?
ಪ್ರೌಢರಾದ ವಿಟರು ನಿನ್ನನ್ನು ಒಪ್ಪುವರೆ ? ಸುಡು ॥ ೬೦ ॥ ಧೈರ್ಯವನ್ನು ಬಿಟ್ಟು ಭಯ
ವನ್ನು ಹೊಂದಿದವನಲ್ಲಿ ಸ್ತ್ರೀಯರು ಅನುರಕ್ತರಾಗುವರೆ ? ನಿನ್ನ ಭಕ್ತಿಯ ಮಾರ್ಗವೂ
ವಿಟನ ರೀತಿಯೂ ಭೂಮಿಯಲ್ಲಿ ಬಂಡತನವು ॥ ೬೧ ॥ ನೀನು ನನ್ನನ್ನು ಹೀಗೆ ಜಂಜಾಟ
ಗೊಳಿಸುವುದಕ್ಕೂ ಬೆದರಿಸುವುದಕ್ಕೂ ಸಹ ಪರಿಚಯವುಳ್ಳ ವಿಟನೊ ? ಅಥವಾ ಗಂಡ
ನೊ ? ನನ್ನನ್ನು ದಂಡಿಸುತ್ತೀಯೇನು ? ॥ ೬೨ ॥ ಹಬ್ಬಗಳಲ್ಲಾಗಲಿ ಉತ್ಸವದ ದಿವಸಗ
ಳಲ್ಲಾಗಲಿ ನಾವು ನಿನ್ನಿಂದ ಹೆಚ್ಚಾಗಿ ಹಣವನ್ನು ಪಡೆದುಉಂಡಿರುವೆವೇನು? ಹೇಳು ॥೬೩॥
ಅಥವಾ ಹೆಚ್ಚಾಗಿ ಹಣವನ್ನೂ ಬಟ್ಟೆಗಳನ್ನೂ ಕೊಟ್ಟು ಹೀಗೆ ಕೋಪಮಾಡುತ್ತೀಯೊ?
ನೀನು ಯಾರೆಂಬುದನ್ನು ವಿಚಾರಮಾಡಿಕೊಂಡು ಮಾತನಾಡುವೆಯಾದರೆ, ನಿನ್ನನ್ನು
ನೀನೇ ಯಾರೆಂಬುದನ್ನು ತಿಳಿದು ನೋಡು ॥ ೬೪ ॥ ಈ ಗ್ರಾಮದಲ್ಲಿ ನೀನೂ ಘನತೆಯ
ನ್ನು ಸಂಪಾದಿಸಿರುವ ಶಿವಭಕ್ತನಾಗಿದ್ದರೆ, ಯುಕ್ತಿವಂತನಾದ ನೀನು ಹೀಗೆ ಅಯೋಗ್ಯ
ವಾದ ಮಾತನ್ನು ಅದು ಹೇಗೆ ಆಡುವೆ ? ॥ ೬೫ ॥ ನನ್ನ ವಿಷಯವನ್ನು ಕುರಿತು ವಿಚಾ
ರಮಾಡಿ ಮಾತನಾಡುವೆಯಾದರೆ, ನಾನು ಹಣದಾಸೆಯುಳ್ಳವಳೇನೂ ಅಲ್ಲ. ಈ ನನ್ನ
ವೃತ್ತಿಯು ನನ್ನ ಸ್ವಾಮಿಯಾದ ಶಿವನಿಂದ ತೋರಿಸಲ್ಪಟ್ಟಿದೆ. ಹಾಗಾದರೂ ॥ ೬೬ ॥

ರವತ್ಯಹಂಕಿಂವಾಗೋಪ್ತುಂಧನಮುಪಾರ್ಜಿತಂ ॥ ೬೭ ॥ ಅಪ್ರವೀಣಾಸ್ಮಿತತ್ಸ್ವರ್ವಂಭಕ್ತಾ ಜಾನಂತಿಕಿಂಗಿರಾ । ನಶ್ರುತೋಽಸಿನಪಶ್ಯಾಮಿಕದಾಚಿತ್ತ್ವಾಂಪುರಾಪ್ಯಹಂ ॥ ೬೮ ॥ ಕಿಂಕೌಮಾರಹರೋಽಸಿತ್ವಂಕಿಂವಾಪರಿಚಿತೋವಿಟಃ । ಕಿಂಸಂಪಾದಿತವಾನ್ಮೇತ್ವಂವಯೋಯೌವನಮುನ್ನತಂ ॥ ೬೯ ॥ ಪುರೈಕವಾರಮಾಯಾತಃಪಣ್ಯಾವೃತ್ತಿ ಹರೋಽಥವಾ । ಸಮಾಗತ್ಯಪುರಾಕ್ಲೇಶಂಹೃತವಾನಸಿಮೇಕಿಮು ॥ ೭೦ ॥ ಇಷ್ಟೋವಾಮುತ್ರಸಂಸೃಷ್ಟೋಮದ್ವರ್ಗ್ಯಾಣಾಂಪ್ರಿಯೋಽಥವಾ । ಸನ್ನಿಕೃಷ್ಟನಿವಾಸಿತ್ವಾತ್ಪ್ರೇಮಾವಿಷ್ಟೋಽಥವಾಕಿಮು ॥ ೭೧ ॥ ವಿದಿತ್ವಾಚಿತ್ತಮಾಸಕ್ತಶ್ಚಾಂತೋಜೀವನದಾನತಃ । ದರ್ಶಕಶ್ಶಿವಸದ್ಭಕ್ತೇಃ ಕಿಂಪರಾಮರ್ಶಕೋಮುಹುಃ ॥ ೭೨ ॥ ವಿವಾಹಾದಿಷುಕಾರ್ಯೇಷುನಿತಾಂತಮುಪಕಾರಕಃ । ದಾತಾಋಣಾದೇಸ್ಸಮಯೇಪಾತಾದುರ್ಭಿಕ್ಷಕಾಲತಃ ॥ ೭೩ ॥ ಭರ್ತಾಕಿಮುತಸಂಹರ್ತಾ ಭವಬಂಧಸ್ಯಮೇಮುದಾ । ಅಪರಾಧಸಹೋಮೇ

---

ನಾನು ಶಿವಭಕ್ತರ ಹೊರತು ಇತರರನ್ನು ಸ್ವಪ್ನದಲ್ಲಿಯೂ ಕಾಣೆನು. ನಾನು ಹಣವನ್ನು ಸಂಪಾದಿಸಿ ಹುಗಿದಿಡಬೇಕೆಂದು ಮನಸ್ಸಿನಲ್ಲಿ ಯೋಚಿಸಿಕೊಂಡಿರತಕ್ಕವಳೇನು? ॥ ನಾನು ಹಾಗೆ ಅರಿತ ಪ್ರೌಢೆಯಲ್ಲ. ಅದನ್ನೆಲ್ಲ ಭಕ್ತರುಗಳು ತಿಳಿದಿರಬಹುದು. ಮಾತನಾಡಿ ಫಲವೇನು ? ನಾನು ಇದಕ್ಕೆ ಮೊದಲು ನಿನ್ನನ್ನು ಯಾವಾಗಲೂ ಕೇಳಿಯೂ ಇಲ್ಲ, ನೋಡಿಯೂ ಇಲ್ಲ. ನೀನು ನನ್ನ ಕೌಮಾರಾವಸ್ಥೆಯನ್ನು ಅಪಹರಿಸಿದವನೊ? ಪರಿಚಯವುಳ್ಳ ವಿಟನೊ ? ಅಥವಾ ಬಾಲ್ಯಾರಭ್ಯಸಾಕಿ ನನಗೆ ತುಂಬಿದ ಯೌವನವನ್ನು ಸಂಪಾದಿಸಿಕೊಟ್ಟಿರುವನೊ ? ॥ ೬೯ ॥ ಅಥವಾ ಮೊದಲೊಂದುಬಾರಿ ಬಂದಿದ್ದು, ನನ್ನ ಸೂಳೆತನವನ್ನು ಬಿಡಿಸಿಹೋಗಿದ್ದವನೊ ? ಇಲ್ಲವೆ ಮೊದಲು ಬಂದಿದ್ದು ನನ್ನ ಕಷ್ಟವನ್ನು ನಿವಾರಣೆ ಮಾಡಿದವನಾಗಿದ್ದೆಯೊ ? ॥ ೭೦ ॥ ನಮ್ಮವರೊಡನೆ ಬೆರೆದ ಆಪ್ತನೊ ? ಅಥವಾ ನನ್ನ ಕುಲದವರಿಗೆ ಪ್ರಿಯನಾದವನೊ? ಇಲ್ಲವೆ ಸಮೀಪದಲ್ಲಿ ವಾಸಮಾಡಿಕೊಂಡಿರುವುದರಿಂದ ಪ್ರೇಮಪಾತ್ರನಾದವನೊ ? ॥ ೭೧ ॥ ನನ್ನ ಮನಸ್ಸನ್ನರಿದು ಅನುರಕ್ತನಾದವನೊ ? ನನಗೆ ಜೀವನವನ್ನು ನಡೆಯಿಸಿಕೊಟ್ಟು ಸಾಕಿದವನೊ ? ಶಿವಭಕ್ತಿಯನ್ನು ತೋರಿಸಿಕೊಟ್ಟವನೊ? ಬಾರಿಬಾರಿಗೂ ನನ್ನ ಯೋಗಕ್ಷೇಮವನ್ನು ಚಿಂತಿಸತಕ್ಕವನೊ? ॥ ಮದುವೆ ಮೊದಲಾದ ಕಾರ್ಯಗಳಲ್ಲಿ ಅತ್ಯಂತವಾಗಿ ನನಗೆ ಉಪಕಾರವನ್ನು ಮಾಡಿದವನೊ ? ಸಾಲ ಮೊದಲಾದುವುಗಳ ಸಮಯದಲ್ಲಿ ಹಣವನ್ನು ಕೊಟ್ಟವನೊ ? ದುರ್ಭಿಕ್ಷಕಾಲದಲ್ಲಿ ಸಂರಕ್ಷಿಸಿದವನೊ ? ॥ ೭೩ ॥ ನನ್ನ ಸ್ವಾಮಿಯೊ ? ಅಥವಾ ಸಂತೋಷದಿಂದ ನನ್ನ ಸಂಸಾರಬಂಧವನ್ನು ಪರಿಹರಿಸಿದವನೊ ? ನನ್ನ ತಪ್ಪನ್ನು ಕ್ಷಮಿಸಿದವನೊ ? ನನ್ನ

ಕಿಂದಯಿತೋಽವಾಸ್ವಯಂಮಯಾ ‖ ೭೪ ‖ ಆಹೂತೋಽವಾಕಿಮರಸ್ತೇಽಸಂಸ ರ್ಗ್ಗೋಽಪ್ರಯಂನಿರರ್ಥಕಃ। ಗೃಹಿಣೀಕಿಮಹಂತೇಽಸ್ಯಾಂವೇಶ್ಯಾತ್ವದುಪರಕ್ಷಿತಾ ‖ ಅಥವಾಮಾತುಲಸುತಾತ್ವದ್ಗೃಹೇವರ್ಧಿತಾಚಕಿಂ । ಶಕ್ಯಂವಾತವನಿರ್ಬಂಧಂ ಕರ್ತುಂತೂಷ್ಣೀಂಪ್ರಯಾಹಿತತ್ ‖ ೭೬ ‖ ದೋಷಂನವೇತ್ತಿಕಾಮಾಂಧಇ ತ್ಯುಕ್ತಿರ್ವೀಕ್ಷಿತಾತ್ವಯಿ । ಅತಿಮೋಹೋಗತೇರ್ಹಾನಿರಿತಿವೇತ್ಸಿನಕಿಂವದ ‖ ಕಥನಾನ್ಮಾನವಾಚಂದ್ರತಾರಕಂಚೇತಿಸರ್ವತಃ । ಮುಂಚಂತಿಮಾನಂಸಂತಃ ಕಿಮಪೂರ್ವಾಃಕಿಂಸ್ತ್ರಿಯೋಭುವಿ ‖ ೭೮ ‖ ಮಾಂವಿಹಾಯನವಿದ್ಯಂತೇಪು ರೇಽಸ್ಮಿನ್ವನಿತಾಃಕಿಮು । ಜ್ಞಾನಾತ್ಮಕ್ಶಿವಸಂಸೇವಾಪರಕಿಂಚೆತ್ಪರೇಂಗಿ ತಂ ‖ ೭೯ ‖ ನಜ್ಞಾತವ್ಯಂನುವಾಲಜ್ಜಾಂನಯಾಸ್ಯಧಿಕಲಾಘವಂ । ಭವತೀ ತಿನಜಾನಾಸಿಗೃಹೀತಂನಾಪಿಮುಂಚಸಿ ‖ ೮೦ ‖ ನಯುಕ್ತಮಿತಿಸಂದಿಷ್ಟೇನಗ ಚ್ಛಸಿವಿಕುತ್ಸಯಾ । ಭಕ್ತಿಮಾರ್ಗಂವಿಟನ್ಯಾಯಮಸ್ಮೈಸಂದರ್ಶ್ಯಕಾಂತ ಯಾ ‖ ೮೧ ‖ ಬಹುಧೈವಂಸಮುದ್ದಿಷ್ಟೇಽಪ್ಯನಂಗೀಕೃತವಾನಯಂ । ಅಥ

---

ಗಂಡನೊ? ‖ ೭೪ ‖ ನನ್ನಿಂದ ಕರೆಯಲ್ಪಟ್ಟವನೊ? ಈ ನಿಷ್ಪ್ರಯೋಜನವಾದ ನಿನ್ನ ಸಂಗವು ನನಗೇಕೆ? ನಾನು ನಿನಗೇನಾದರೂ ಹಂಡಿತಿ ಯಾಗಬೇಕೆ? ಅಥವಾ ನಿನ್ನಿಂದ ಸಲ ಹಲ್ಪಟ್ಟ ಸೂಳೆಯೆ? ‖ ೭೫ ‖ ಅಥವಾ ನಿನ್ನ ಮಾವನ ಮಗಳೆ? ನಿನ್ನ ಮನೆಯಲ್ಲಿ ಸಾಕಿಸಿಕೊಂಡವಳೆ? ಸುಮ್ಮನೆ ಹೀಗೆ ಬಲಾತ್ಕಾರವನ್ನು ಮಾಡುವುದು ನಿನಗೆ ಸರಿಯೆ? ಆದುದರಿಂದ ಹೊರಟುಹೋಗು ‖ ೭೬ ‖ 'ಕಾಮಾಂಧನು ದೋಷವನ್ನು ತಿಳಿಯನು' ಎಂಬ ಗಾಥೆಯು ನಿನ್ನಲ್ಲಿ ದೃಷ್ಟಾಂತವಾಯಿತು. ಅತ್ಯಂತ ಮೋಹವು ಸದ್ಗತಿಗೆ ಭಂಗ ಕಾರಿಯೆಂಬುದನ್ನು ನೀನು ತಿಳಿದಿಲ್ಲವೇನು? ಹೇಳು ‖ ೭೭ ‖ 'ಮಾನವು ಚಂದ್ರನೂ ನಕ್ಷತ್ರಗಳೂ ಇರುವವರೆಗೆ ರಕ್ಷಿಸಲ್ಪಡತಕ್ಕದು' ಎಂಬದಾಗಿ ಎಲ್ಲಕಡೆಯೂ ಹೇಳಲ್ಪಡುತ್ತಿರುವುದರಿಂದ, ಸತ್ಪುರುಷರು ಅಂಥ ಮಾನವನ್ನು ಬಿಡುವರೆ? ಭೂಮಿಯಲ್ಲಿ ಸ್ತ್ರೀಯರು ಅಪೂರ್ವವೆ? ‖ ೭೮ ‖ ಈ ಪಟ್ಟಣದಲ್ಲಿ ನನ್ನ ಹೊರತು ಬೇರೆ ಹೆಂಗುಸರು ಇಲ್ಲವೇನು? ಎಲೈ ಜ್ಞಾನಸಂಪನ್ನನೆ! ಶಿವಸೇವಾತತ್ಪರನೆ! ಅನ್ಯರಭಿಪ್ರಾಯವು ಹೇಗಿದೆಯೆಂಬುದನ್ನು ಸ್ವಲ್ಪವಾದರೂ ತಿಳಿಯಬಾರದೆ? ‖ ೭೯ ‖ ನೀನು ನಾಚಿಕೆಯನ್ನೂ ತಾಳುವುದಿಲ್ಲ. ಅತ್ಯಂತ ಲಾಘವವಾಗುವುದೆಂದು ತಿಳಿಯುವುದೂ ಇಲ್ಲ. ಹಿಡಿದ ಹಟವನ್ನೂ ಬಿಡುವುದಿಲ್ಲ ‖ ೮೦ ‖ ಇದು ಯೋಗ್ಯವಲ್ಲವೆಂದು ಹೇಳಿದರೆ, ಜುಗುಪ್ಸೆಗೊಂಡು ಹೋಗುವುದೂ ಇಲ್ಲ' ಎಂದು ಆ ಗುರುಭಕ್ತಾಂಡಾರಿಗೆ ಪ್ರಾರ್ಥವತಿಯು ಭಕ್ತಿಯ ದಾರಿಯನ್ನೂ ವಿಟನ ರೀತಿಯನ್ನೂ ತೋರಿಸಿಕೊಟ್ಟು, ಹಲವುಪ್ರಕಾರವಾಗಿ ನುಡಿದಾಗ್ಯೂ, ಈ ಭಕ್ತನು ಅದನ್ನಂಗೀಕರಿಸಲಿಲ್ಲ. ಬಳಿಕ ಪ್ರಾರ್ಥವತಿಯು ಕಾಮಾನುರಾಗದಿಂದ ವ್ಯಾಪ್ತವಾಗಿರುವ

ಕಾಂತಾಸ್ಯಹೃದಯೇಸ್ಮರರಾಗಸಮಾಕುಲೇ ॥ ೮೨ ॥ ಉತ್ಪಾದಯಂತೀರತಿಷುಜುಗುಪ್ಸಾಮವದದ್ಗಿರಂ । ತ್ವಂವಿವೇಕಿನ್ನಜಾನಾಸಿವೇಶ್ಯಾನಾಂಕಿಂವಿಡಂಬನಾಂ ॥ ೮೩ ॥ ವಿಚಾರ್ಯಸ್ವಯಮೇವಾದ್ಯಪಶ್ಯೈತಾವನಿತಾಸ್ಸ್ಫುಟಂ । ಕಾಮುಕ್ಯಶ್ಚಪಲಾಧೂರ್ತಾಃಪೈಶೂನ್ಯಾವೃತವಿಗ್ರಹಾಃ ॥ ೮೪ ॥ ಪರಿಹಾಸಭುವಶ್ಛದ್ಮಪರಾಶ್ಶಾಠ್ಯವಿಜೃಂಭಿತಾಃ । ಭೀಭತ್ಸನಿಲಯಾಸ್ತೀವ್ರಾಸ್ಸರ್ವಸ್ವಹರಣೇಚ್ಛವಃ ॥ ೮೫ ॥ ಅಸತ್ಯವಚನಾಶ್ಶೌಚರಹಿತಾಃಕಷ್ಟಮಾನಸಾಃ । ಅನೇಕಪುರುಷಾಸಕ್ತಾಸ್ಸಾಹಸಾವಾಸಭೂಮಯಃ ॥ ೮೬ ॥ ದುರ್ಭರಾಃಪಾಪಸಂದೋಹನಿರ್ಭರಾಶ್ಶೋಭನೇತರಾಃ । ಚಂಚಲಾಃಕಾಂಚನಾಸಕ್ತಾ ವಂಚನಾನಿರತಾಸ್ಸದಾ ॥ ೮೭ ॥ ಘೋರಾಶ್ಚೋರಜನಾಧಾರಾಃಕೃತ್ಯಾಭಾಮೃತ್ಯುಕನ್ಯಕಾಃ । ಶಿರಾಃಕೇವಲನೈಪಥ್ಯಧರಾವಾರಾಂಗನಾಭುವಿ ॥ ೮೮ ॥ ಚಂಚಲಾಬಂದಿಕಾಃ ಕ್ರೂರಾಶ್ಚೋರಾಸ್ತೀಕ್ಷ್ಣಾಃಪ್ರಕೋಪನಾಃ । ದುರಂತಾಶಾಪರಾಭ್ರಾಂತಾಃ ದುಃಖಸಂದೋಹಭೂಮಯಃ ॥ ೮೯ ॥ ನಿರಸ್ತವೃತ್ತಿನಿಯಮಾನುಹಾಹಂಕಾ

---

ಈತನ ಮನಸ್ಸಿನಲ್ಲಿ ॥ ೮೨ ॥ ಸ್ತ್ರೀಸಂಗದಲ್ಲಿ ಜುಗುಪ್ಸೆಯನ್ನುಂಟುಮಾಡಬೇಕೆಂದು ಹೇಳಿದಳೇನೆಂದರೆ — ಎಲೈ ವಿವೇಕಶಾಲಿಯೆ, ನೀನು ಸೂಳೆಯರ ತಿರಸ್ಕಾರ್ಯಭಾವವನ್ನು ತಿಳಿದಿಲ್ಲವೇನು? ॥ ೮೩ ॥ ನೀನೇ ಈಗ ಅವನ್ನು ವಿಚಾರಮಾಡಿ ನೋಡು, ಭೂಮಿಯಲ್ಲಿ ಈ ಹೆಂಗುಸರು (ವಾರಾಂಗನೆಯರು) ಸ್ಪಷ್ಟವಾಗಿ ಕಾಮುಕಿಯರು, ಚಂಚಲೆಯರು, ವಂಚಕಿಯರು, ಚಾಡಿಕೋರತನದಿಂದ ತುಂಬಿದ ಶರೀರವುಳ್ಳವರು ॥ ೮೪ ॥ ಹಾಸ್ಯಕೆ ನೆಲೆಯಾದವರು, ಕಪಟಾಸಕ್ತರು, ದುಷ್ಟತನದಿಂದ ಭ್ರಿಶವರು, ನಿಂದೆಗೆ ಮನೆಯಾದವರು, ದುಡುಕುವವರು, ಸರ್ವಸ್ವವನ್ನೂ ಸುಲಿದುಕೊಳ್ಳಲಪೇಕ್ಷಿಸುವವರು, ॥ ೮೫ ॥ ಸುಳ್ಳನ್ನಾಡುವವರು, ಭೀತಿಯಿಲ್ಲದವರು, ಕೆಟ್ಟ ಮನಸ್ಸಿನವರು, ಅನೇಕ ಪುರುಷರಲ್ಲಿ ಆಸಕ್ತಿಯುಳ್ಳವರು, ಅಘಟಿತಘಟನ ಸಾಹಸಗಳಿಗೆ ವಾಸಸ್ಥಲವಾದವರು ॥ ೮೬ ॥ ಇತರರಿಗೆ ತಾಳುವುದಕ್ಕಶಕ್ಯರಾದವರು, ಪಾಪಸಮೂಹದಿಂದ ತುಂಬಿದವರು, ಅಮಂಗಲೆಯರು, ಒಬ್ಬನಲ್ಲಿ ಸ್ಥಿರವಾಗಿಲ್ಲದವರು, ಹಣದಲ್ಲಾಸಕ್ತೆಯರು, ಯಾವಾಗಲೂ ಮೋಸಗೊಳಿಸುವುದರಲ್ಲಿ ತತ್ಪರೆಯರು. ॥ ೮೭ ॥ ಭಯಂಕರಿಯರು, ಕಳ್ಳರಿಗೆ ಆಶ್ರಯವನ್ನು ಕೊಡತಕ್ಕವರು, ಮಾಟದ ಬೊಂಬೆಗೆ ಸಮಾನರಾದವರು, ಮೃತ್ಯುಕನ್ಯಕೆಯರು, ತೀಕ್ಷ್ಣೆಯರು, ಬರಿಯ ವೇಷಧಾರಿಣಿಯರು ॥ ೮೮ ॥ ಈ ಸ್ತ್ರೀಯರುಗಳ ನೋಟಗಳು ಚಪಲವಾದುವುಗಳು, ಪುರುಷರ ಮನಸ್ಸನ್ನು ಕಟ್ಟಿಹಾಕತಕ್ಕವುಗಳು, ಭಯಂಕರವಾದುವು, ವಿಟರ ಮನಸ್ಸನ್ನಪಹರಿಸತಕ್ಕುವು, ಉಗ್ರವಾದುವುಗಳು, ಉದ್ರೇಕವನ್ನುಂಟುಮಾಡತಕ್ಕುವು, ಕೊನೆಯಿಲ್ಲದಾಸೆಯುಳ್ಳವುಗಳು, ಭ್ರಮೆಯುಳ್ಳವು, ದುಃಖಕ್ಕೆ ಆವಾಸಸ್ಥಲಗಳು ॥ ೮೯ ॥ ಒಂದೇತೆರದ ಸ್ಥಿತಿಯೂ ನಿಯಮವೂ ಇಲ್ಲದವುಗಳು, ಬಹಳ ಗರ್ವ

ರಹೇತವಃ | ಅವಿಚಾರಿತವಂಶಾದಿಪ್ರಸರಾಃಪಾಪಮಿಶ್ರಿತಾಃ ॥ ೯೦ ॥ ಜನನ್ಯಃ
ಪರಿತಾಪಸ್ಯಕಾಮಿನೀನಾಂಹಿದೃಷ್ಟಯಃ | ಕಿಂಚವಾರಾಂಗನಾಧದ್ಮವರ್ತ್ತನಾನಿ
ಸಮಂತತಃ ॥ ೯೧ ॥ ವಿಷಯೋಪಪ್ಲುತಾನ್ಯುಗ್ರಾಣ್ಯತ್ಯಂತಕುಟಿಲಾನ್ಯಪಿ | ಮಾ
ಯಾನ್ವಿತಾನಿವ್ಯರ್ಥಾನಿಸಮರ್ಥಾನ್ಯುಪಲಾಲನೇ ॥ ೯೨ ॥ ಮದಾನ್ವಿತಾನಿಹಾ
ಸ್ಯೈಕಸದನಾನಿವಿಶೇಷತಃ | ವಿಷಯೋತ್ಪತ್ತಿಬೀಜಾನಿವಂಚನಾತತ್ಪರಾಣಿಚ ॥
ಯಂತ್ರಾಣ್ಯಾಶಾಸ್ವರೂಪಾಣಿವಕ್ತ್ರಾಣೀಚ್ಛಾಶ್ರಯಾಣಿಚ | ದುರ್ಭೇದಗ
ರ್ಭಾಣ್ಯದಭ್ರಶ್ವಭ್ರಾಣ್ಯಭ್ರೋಪಮಾನಿಚ ॥ ೯೩ ॥ ಶಲ್ಯಾನಿಮನಸೋವಾದ
ಲೌಲ್ಯಾನಿಜಗತೀತಲೇ | ಅಪಿಚಾಲೋಚಿತೇವಾರವನಿತಾಹೃದಯಾನಿಚ ॥ ೯೪ ॥
ಭಂಗುರಾಣ್ಯತಿಮಾಂದ್ಯಾನಿಭಿನ್ನಾನಿಭ್ರಾಂತಿದಾನ್ಯಪಿ | ಕ್ರೂರಾಣಿಕಲ್ಮಷಾ
ಣ್ಯಲ್ಪಾನ್ಯತ್ಯಂತಮಲಿನಾನಿಚ ॥ ೯೫ ॥ ಆವಿಲಾನ್ಯಪವಿತ್ರಾಣಿನಿಷಿದ್ಧಾನಿಸಮಂ
ತತಃ | ಶಠಾನಿಜ್ಞಾನಹೀನಾನಿಹೇತವೋವಿಷಯಾವಳೇಃ ॥ ೯೬ ॥ ಪಕ್ಷಪಾ

---

ಕ್ಕೆ ಕಾರಣಗಳು, ಅಣ್ಣ ತಮ್ಮಂದಿರೆಂಬುದು ಮೊದಲಾದ ಓನೆಯನ್ನು ನೋಡದೆ ಪ್ರಸ
ರಿಸತಕ್ಕವುಗಳು, ಪಾಪದಿಂದ ಕೂಡಿದವುಗಳು ॥ ೯೦ ॥ ಸಂತಾಪಕ್ಕೆ ಜನ್ಮಸ್ಥಳಗಳು,
ಮತ್ತು ಸೂಳೆಯರ ನೋಟದ ನಡವಳಿಕೆಗಳು ಎಲ್ಲಾ ಕಡೆಯಲ್ಲೂ ॥ ೯೧ ॥ ಇಂದ್ರಿಯ
ವ್ಯಾಪಾರಗಳಲ್ಲಿ ತೊಡಗಿದವುಳಾಗಿಯೂ, ಭಯಂಕರಗಳಾಗಿಯೂ, ಬಲು ಡೊಂಕಾಗಿ
ಯೂ, ಮಾಯಾಮಯವಾಗಿಯೂ, ನಿಷ್ಪ್ರಯೋಜಕಗಳಾಗಿಯೂ, ಉಬ್ಬಿಸುವುದರಲ್ಲಿ
ಸಮರ್ಥಗಳಾಗಿಯೂ ॥ ೯೨ ॥ ಗರ್ವದಿಂದ ಕೂಡಿದವುಗಳಾಗಿಯೂ, ಪರಿಹಾಸಕ್ಕೆ ಮು
ಖ್ಯವಾಸಸ್ಥಾನಗಳಾಗಿಯೂ, ಹೆಚ್ಚಾಗಿ ವಿಷಯಾಸಕ್ತಿಯನ್ನು ಹುಟ್ಟಿಸುವ ಬೀಜಗಳಾ
ಗಿಯೂ, ಮೋಸಮಾಡುವುದರಲ್ಲಿ ಆಸಕ್ತಗಳಾಗಿಯೂ ಇರುವವು. ॥ ೯೩ ॥ ಜಗತ್ತಿನ
ಲ್ಲಿ ಸೂಳೆಯರ ಮುಖಗಳು ಆಶಾರೂಪದ ಯಂತ್ರಗಳು, ಬಯಕೆಗೆ ಆಶ್ರಯಸ್ಥಾನ
ಗಳು, ಒಡೆಯಲಾಗದ ರಹಸ್ಯವುಳ್ಳವುಗಳು, ದೊಡ್ಡ ಬಿಲಗಳು, ಮೇಘಕ್ಕೆ ಸಮನಾದ
ವುಗಳು ॥ ೯೪ ॥ ಮನಸ್ಸಿಗೆ ಚುಚ್ಚುವ ಮುಳ್ಳುಗಳು, ವಾಗ್ವಾದ ಮಾಡುವುದರಲ್ಲಿ ಆಸ
ಕ್ತಗಳು, ಮತ್ತೂ ವಿಚಾರಮಾಡಿ ನೋಡಿದರೆ, ಸೂಳೆಯರ ಹೃದಯಗಳು ॥ ೯೫ ॥
ಕ್ಷಣಿಕವಾದುವುಗಳು, ಅತ್ಯಂತ ಮೂರ್ಖವಾದುವುಗಳು, ಭೇದಗುಣವುಳ್ಳವುಗಳು,
ಭ್ರಮೆಯನ್ನುಂಟುಮಾಡತಕ್ಕವು, ತೀಕ್ಷ್ಣವಾದವುಗಳು, ದೋಷಯುಕ್ತಗಳು, ಸಾ
ರವಿಲ್ಲದವುಗಳು, ಬಲುಕೊಳಕಾದುವುಗಳು ॥ ೯೬ ॥ ಕದಡಿದವುಗಳು, ಅಪರಿಶುದ್ಧಗ
ಳು, ಎತ್ತಕಡೆ ನೋಡಿದರೂ ನಿಷೇಧಿಸಲ್ಪಟ್ಟಿರುವುವು. ನಿಷ್ಠುರವಾದವುಗಳು, ಜ್ಞಾನ
ವಿಲ್ಲದವು, ವಿಷಯಸಮೂಹಕ್ಕೆ ಕಾರಣವಾದವುಗಳು ॥ ೯೭ ॥ ಪಕ್ಷಪಾತಗುಣದಿಂದ ಕೂ

ತಸಮೇತಾನಿಪಾತಕಾವಾಸಭೂಮಯಃ । ನಾನಾಮುಖಾನ್ಯಸತ್ಯಾನಿನೀರಸಾ
ನಿವಿಶೇಷತಃ ॥೯೮॥ ವಿಚಿಕಿತ್ಸಾಸುವಿದ್ಧಾನಿಕುತ್ಸಾನಿಕೃಪಣಾನ್ಯಲಂ । ಪಾಶ
ರೂಪಾಣಿಸಂತಾಪವಂತಿನಾದಕರಾಣ್ಯಪಿ ॥೯೯॥ ಜಲ್ಪಿತೈಃಕಿಮುಲಾವಣ್ಯವಿ
ತಾನಮಪಿಯೋಷಿತಾಂ । ವಿಚಾರ್ಯಮಾಣೇಷುಪುನಶ್ಶರೀರೇಷುನಿರಂತರಂ ॥
ಲಾಲಾಗೃಹಾಣಿವಕ್ತ್ರಾಣಿನಾಸಿಕಾಶ್ಶ್ಲೇಷ್ಮಭೂಮಯಃ । ಅಮೇಧ್ಯಾಗಾ
ರಮುದರಂವಸಾದುಷ್ಟೇವಿಲೋಚನೇ ॥೧೦೧॥ ಪಾತಕಾವಾಸಸದ್ಮಾನಿನಿತಂ
ಬಾವಾರಯೋಷಿತಾಂ । ಕಾಮಾಂಧಪತನಶ್ವಭ್ರಾಣ್ಯತಿದುರ್ಗಂಧದೂಷಿತಾಃ ॥
ವ್ರಣಾಸ್ಸದೈವಮೂತ್ರಾಭಿಪೂರ್ಣಾಘಟಸಮುಚ್ಚಯಾಃ । ಅಶೌಚಭಾಂಡ
ನಿಚಯಾರಿಪುವರ್ಗೋದ್ಭವಾಲಯಾಃ ॥೧೦೩॥ ಜನಸರ್ವಸ್ವಹರಣಸ್ಥಾನಕ್ಷು
ದ್ರಶಿಲೋಚ್ಚಯಾಃ । ಸತ್ಯಂಪ್ರತ್ಯಕ್ಷನರಕಕೂಪಾರಕ್ತಾವಟುವ್ರಜಾಃ ॥
ಹರಿಬ್ರಹ್ಮಮಹೇಂದ್ರಾದಿಗರ್ಭೀಕೃತಮಹಾಗುಹಾಃ । ಕುಲಹೀನಾಧಮೋ
ತ್ಕೃಷ್ಟಕುಲೀನವ್ರಜಸಂಕುಲಾಃ ॥೧೦೫॥ ಪಂಥಾನಃಕಾಮಿನೀಯೋನಿಸ

---

ಡಿದವುಗಳು, ಪಾಪಕ್ಕೆ ಆಶ್ರಯಸ್ಥಲಗಳು, ಹಲವುಕಡೆಗೆ ಹರಿಯತಕ್ಕವುಗಳು, ಅಸ
ತ್ಯವಾದವುಗಳು, ಗೌರವವಿಲ್ಲದವು ॥೯೮॥ ಸಂಶಯಾಸ್ಪದಗಳು, ನಿಂದಿತವಾದವುಗಳು,
ಅತ್ಯಂತವಾಗಿ ಲೋಭಗುಣವುಳ್ಳವುಗಳು, ಮಾಯಾಪಾಶಸ್ವರೂಪಗಳು, ಸಂತಾಪವುಳ್ಳವು
ಗಳು, ವಾಕ್ಕಲಹವನ್ನು ಹುಟ್ಟಿಸತಕ್ಕವುಗಳು ॥೯೯॥ ಹೆಚ್ಚು ಮಾತಿನಿಂದೇನು ? ಸಾಕ
ಸ್ತ್ರೀಯರ ಶರೀರಕಾಂತಿಯೂ ಕೂಡ ದುಷ್ಟವಾದುದು. ಮತ್ತೂ ಅವರ ಅಂಗಗಳ
ನ್ನು ಕುರಿತು ವಿಚಾರಮಾಡಿ ನೋಡಿದರೆ, ಯಾವಾಗಲೂ ॥೧೦॥ ಅವರ ಮುಖಗಳು
ಜೊಲ್ಲಿನ ಮನೆಗಳು, ಮೂಗುಗಳು ಗೊಣ್ಣೆಗೆ ವಾಸಸ್ಥಲಗಳು, ಹೊಟ್ಟೆಯು ಮಲಕ್ಕೆ
ಮಂದಿರವು. ಕಣ್ಣುಗಳು ಪಿಸುರಿನಿಂದ ದೂಷಿತವಾದವುಗಳು. ॥೧೦೧॥ ವಾರಾಂಗ
ನೆಯರ ಕುಂಡಿಗಳು ಪಾಪಕ್ಕೆ ವಾಸದ ಮನೆಗಳು, ಆ ಸೂಳೆಯರ ಯೋನಿಗಳು ಕಾ
ಮದಿಂದ ಕುರುಡರಾದ ಜನರು ಬೀಳುವ ಗುಳಿಗಳು. ಕೆಟ್ಟವಾಸನೆಯಿಂದ ಹೇಸಿಗೆ
ಯಾಗಿರುವ ಗಾಯಗಳು, ಯಾವಾಗಲೂ ಉಚ್ಚೆಯಿಂದ ತುಂಬಿದ ಕೊಡಗಳು, ಹೊಲ
ಸಿನಿಂದ ತುಂಬಿದ ಮಡಕೆಗಳ ಗುಂಪು, ಅರಿಷಡ್ವರ್ಗಗಳ ಉತ್ಪತ್ತಿಸ್ಥಾನಗಳು ॥೧೦೩॥
ಜನರ ಎಲ್ಲ ಸೊತ್ತನ್ನೂ ಸುಲಿದುಕೊಳ್ಳುವ ಸ್ಥಲವಾದ ಕಿರುಗುಡ್ಡಗಳು. ಸತ್ಯವಾಗಿ
ಯೂ ಇದಿರಿಗೆ ಕಾಣುವ ನರಕದ ಬಾವಿಗಳು. ರಕ್ತದ ಗುಳಿಗಳು. ॥೧೦೪॥ ವಿಷ್ಣು
ಬ್ರಹ್ಮೇಂದ್ರಾದಿ ದೇವತೆಗಳನ್ನು ಒಳಕೊಂಡಿರುವ ದೊಡ್ಡ ಗವಿಗಳು. ಹೀನಕುಲದ
ವರ ನೀಚರ ಉತ್ತಮರ ಸತ್ಕುಲಜರ ಸಮೂಹದಿಂದೆಲ್ಲ ತುಂಬಿದ ಮಾರ್ಗಗಳು
॥೧೦೫॥ ಅವುಗಳು ಹೊಂದುವುದಕ್ಕೆ ಸಾಧ್ಯವಾದವುಗಳೇನು ? ಅವುಗಳಿಂದ ಮುಂದ

ಮೂಹಾಃಕಿಮುದುರ್ಲಭಾಃ| ತದ್ಭಾವಿಸುಖಮತ್ಯಲ್ಪತರಂಕ್ಷಣವಿಭಂಗುರಂ॥ ಸಮೀರಚಲಿತಾಶ್ವತ್ಥಪರ್ಣಾಗ್ರಜಲಸನ್ನಿಭಂ| ತನ್ಮಾತ್ರಾರ್ಥಾಯಮಾನುಸರತಾಂಸ್ತ್ರಿಯಃಕಾಮಾಂಧಚೇತಸಾಂ ॥ ೧೦೭ ॥ ಸನ್ಮಾನಹಾನಿರಜ್ಞಾನಂಲಜ್ಜಾಯಾಶ್ಚಪರಿಚ್ಯುತಿಃ | ಹಾಸ್ಯತಾಮನಸಸ್ತಾಪೋ ಧನಹಾನಿರ್ವಿಶೇಷತಃ ॥ ೧೦೮ ॥ ಅಪವರ್ಗಹತಿಶ್ಚೇತಿವಿಪದಸ್ಸಪ್ತಸಂಶ್ರಿತಾಃ | ಭವಂತಿವಾರವನಿತಾನಿರತಾನಾಂದುರಾತ್ಮನಾಂ ॥ ೧೦೯ ॥ ಸಂಗತಾಸ್ಸ್ತ್ರಿಯಇತ್ಯೇಷಾಂವಾಸ್ತುಬುದ್ಧಿರ್ಮನೀಷಿಣಾಂ | ತೈಲಕಾಂಜಿಕಸಂಯೋಗಸಮಸ್ತಾಸಾಂಸಮಾಗಮಃ ॥ ೧೧೦ ॥ ಗೃಹೀತವತ್ಯಇತಿಮಾವಿಚಾರ್ಯಂಯೋಷಿತಸ್ಸದಾ | ಜಲೂಕಾಇವಗೃಹ್ಣಂತಿಪುರುಷಾನ್ವಾಮಲೋಚನಾಃ ॥ ೧೧೧ ॥ ಏಕಸ್ಸ್ವಭಾವಇತಿನಸ್ಮರ್ತವ್ಯಂಸರ್ವದಾಂಗನಾಃ | ಪ್ರತಿಸೂರ್ಯಕವದ್ಯಾಂತಿವೈರೂಪ್ಯಂತಾಃಕ್ಷಣಾದ್ಧ್ರುವಂ ॥ ಜಾನೀಮೋವೃತ್ತಿಮೇತಾಸಾಮಿತಿಮಾಸ್ತುವಿಚಾರಣಾ | ಸಲಿಲಾಂತಃಪ್ರಚಾರಿಣ್ಯಶ್ಯಫರ್ಯಇವವಿದ್ಧಿತಾಃ ॥ ೧೧೩ ॥ ಕುರ್ವಂತಿಮದ್ವಚಾಂಸೀತಿವಿಚಾರ್ಯಂನ

---

ಗತಕ ಸೌಖ್ಯವು ಅತ್ಯಂತ ಸ್ವಲ್ಪವು. ಮತ್ತೂ ಕ್ಷಣಕಾಲದಲ್ಲಿ ನಾಶವಾಗತಕ್ಕದು. ॥ ೧೦೬ ॥ ಗಾಳಿಯಿಂದ ಅಲ್ಲಾಡುವ ಅರಳಿಯ ಎಲೆಯ ತುದಿಯಲ್ಲಿರುವ ನೀರಿನ ಹನಿಗೆ ಸಮಾನವಾದುದು. ಅಷ್ಟುಮಾತ್ರಕ್ಕಾಗಿ ಸ್ತ್ರೀಯರನ್ನು ಅನುಸರಿಸಿಕೊಂಡುಹೋಗುವ—ಕಾಮಾಂಧಮನಸ್ಕರಾದ—ಸೂಳೆಯರಲ್ಲನುರಕ್ತರಾದ—ದುರಾತ್ಮರನ್ನು, ॥ ೧೦೭ ॥ ಮಾನಹಾನಿ- ಅಜ್ಞಾನ- ನಾಚಿಕೆಗೇಡು- ಪರಿಹಾಸ—ಮನಶ್ಚಿಂತೆ- ದ್ರವ್ಯನಾಶ- ಮೋಕ್ಷಹಾನಿ — ಈ ಏಳು ವಿಪತ್ತುಗಳು ಆಶ್ರೈಸಿಕೊಂಡಿರುವವು ॥ ೧೦೯ ॥ ಮತಿವಂತರು ತಮ್ಮನ್ನು ಸ್ತ್ರೀಯರು ಮೆಚ್ಚಿಕೊಂಡಿರುವರೆಂದು ತಿಳಿಯಬಾರದು. ಅವರ ಕೂಟವು ಎಣ್ಣೆಗಂಜಿಗಳ ಕೂಟಕ್ಕೆ ಸಮಾನವಾದುದು ॥೧೧೦॥ ಸ್ತ್ರೀಯರು ನಮ್ಮನ್ನು (ಪ್ರೇಮಬಂಧದಿಂದ) ಗ್ರಹಿಸಿಕೊಂಡಿರುವರೆಂದು ತಿಳಿದುಕೊಳ್ಳಬಾರದು. ಆ ಹೆಂಗಸರು ಪುರುಷರನ್ನು ಜಿಗುಣೆಗಳಂತೆ ಹಿಡಿದುಕೊಳ್ಳುತ್ತಾರೆ. ( ಎಂದರೆ ಪುರುಷರ ಸಾರವನ್ನು ಗ್ರಹಿಸುವುದಕ್ಕಾಗಿಯೇ ಅವರ ಪ್ರೇಮಾಭಿನಯವೆಂದು ಭಾವ.) ॥ ೧೧೧ ॥ ಅವರಿಗೆ ಒಂದೇವಿಧದ ಸ್ವಭಾವವಿರುವುದೆಂದು ಸ್ಮರಿಸಿಕೊಳ್ಳಬಾರದು. ಹೆಂಗುಸರು ಯಾವಾಗಲೂ ನೀರಿನಲ್ಲಿ ಪ್ರತಿಬಿಂಬಿಸಿದ ಸೂರ್ಯಮಂಡಲದಂತೆ ಕ್ಷಣಕಾಲದಲ್ಲಿ ರೂಪಾಂತರವನ್ನು ಹೊಂದುತ್ತಾರೆ. ಅದು ನಿಜ ॥ ೧೧೨ ॥ ಸ್ತ್ರೀಯರ ನಡೆಯನ್ನು ನಾವು ಬಲ್ಲೆವೆಂದು ಪುರುಷರು ನೆನೆಸಬಾರದು. ಅವರು ನೀರಿನೊಳಗೆ ಓಡಾಡುವ ಹೆಣ್ಣುಮೀನುಗಳಂತೆ ಅತ್ಯಂತ ಚಪಲವಾದ ನಡೆಯುಳ್ಳವರು ॥ ೧೧೩ ॥ ನಮ್ಮ ಮಾತಿನಂತೆ ಅವರು ನಡೆಯು

ಕದಾಚನ | ಅಂತಃಪ್ರವಿಶ್ಯಬಧ್ನಂತಿದುರೋದರಕರಾಇವ ‖ ೧೧೪ ‖ ನಿರಸ್ತ
ನಿಜಸಂಚಾರಾಇತಿಭಾವ್ಯಂನವೀಕ್ಷಿತುಂ | ಪರಿಮುಕ್ತಾಃಪ್ರಧಾವಂತಿಶ್ಯೇನಾ
ಇವವರಾಂಗನಾಃ ‖ ೧೧೫ ‖ ಸಂಸಕ್ತಾದೃಢಮೇಕತ್ರೈವೇತ್ಯಾಲಪ್ಯಾಲಮಂ
ಗನಾಃ | ಸ್ವೇಚ್ಛಯೇಚ್ಛಂತಿಸಂಸರ್ತುಮನ್ಯತ್ರಚಲಿತಾಇವ ‖ ೧೧೬ ‖ ಪ್ರದ
ತ್ತಂವಸುಸಂಪೂರ್ಣಮಿತಿವಕ್ತುಮಸಾಂಪ್ರತಂ | ಅಪ್ಯೇಕವ್ರೀಹಿಮಾತ್ರೇಣ
ವಿಷಮಾಸ್ಸ್ಯುಸ್ತುಲಾಇವ ‖ ೧೧೭ ‖ ಪ್ರೇಮಾನ್ವಿತಾಸ್ತ್ರಿಯಇತಿಕ್ರಿಯ
ತಾಂನಮತಿರ್ಹೃದಿ | ಪ್ರೇಮಾಣಿಕಾರ್ಯವಶತಃಪ್ರಭವಂತಿಹಿಯೋಷಿತಾಂ |
ಅತೋವಿಚಾರ್ಯಮಾಣೇತುನೇತ್ರಾಣಿವರಯೋಷಿತಾಂ | ಆಡಂಬರಾಣಿವ್ಯ
ರ್ಥಾನಿಮನೋಭಾವೇಕ್ಷಣಾನ್ಯಪಿ ‖ ೧೧೮ ‖ ಮನಾಗಪಿಸುಖಂತಾಸುವಿದ್ಯ
ತೇಕಿಂವಿಚಾರ್ಯತಾಂ | ಕಾಮಿನೀನಾಂಕಾಮಸೌಖ್ಯಂಕಾಮಾರಿವರಕಿಂಕರಾಃ
ಕಾಮಯಂತೇಕಿಮವನೌಕಾಮಾದಿಪರಿವರ್ಜಿತಾಃ | ಮನ್ಯತೇಕಿಂತೃಣಾಯಾ
ಪಿಭಕ್ತಾವಾರಾಂಗನಾಸುಖಂ ‖ ೧೨೦ ‖ ತದೀಕ್ಷಣಾನಿಭಕ್ತಾನಾಂಕಿಂಪ್ರ

---

ತ್ತಾರೆಂದು ಯಾವಾಗಲೂ ಮನುಜರು ತಿಳಿಯಬಾರದು. ಏಕೆಂದರೆ :— ಅವರು
ಜೂಜುಗಾರರಂತೆ ಒಳಹೊಕ್ಕು ಕಟ್ಟಿಹಾಕುತ್ತಾರೆ ॥ ೧೧೪ ॥ ಅವರನ್ನು ಯಾವ
ಕಡೆಯೂ ತಿರುಗಾಡದೆ ಇರತಕ್ಕವರೆಂದು ನಂಬಿರುವುದೂ ಅಲ್ಲ. ಏಕೆಂದರೆ—
ಬಿಟ್ಟುಬಿಟ್ಟರೆ, ಆ ಹೆಂಗುಸರು ಗಿಡುಗಗಳಂತೆ ಓಡಿಹೋಗುತ್ತಾರೆ ॥ ೧೧೫ ॥ ಹೆಂಗು
ಸರು ಒಂದೇಕಡೆ ಅನುರಕ್ತರಾಗಿರುವರೆಂದು ಹೇಳುವುದು ಸಾಕು, ಏಕೆಂದರೆ—
ಅವರು ಮನಸ್ಸಿಗೆ ಬಂದಂತೆ ನಡೆಯತಕ್ಕವರಹಾಗೆ ಬೇರೊಂದುಕಡೆ ಅನುಸರಿಸುವುದಕ್ಕೆ
ಇಚ್ಛೈಸುತ್ತಾರೆ ॥ ೧೧೬ ॥ ಅವರಿಗೆ ಸಾಕಾಗುವಷ್ಟು ಹಣವನ್ನು ಕೊಟ್ಟಿರುವೆನೆಂದು
ಹೇಳುವುದುಕೂಡ ಅವಿಹಿತವು. ಒಂದು ಬತ್ತದ ಕಾಳಿನಷ್ಟು ಕಡಿಮೆಯಾದರೂ ತಕ್ಕ
ಡಿಗಳಂತೆ ಏರುಪೇರಾಗಿಹೋಗುವರು ॥ ೧೧೭ ॥ ಸ್ತ್ರೀಯರು ಪ್ರೇಮಭರಿತರಾಗಿರುವ
ರೆಂದು ಹೃದಯದಲ್ಲಿ ಯಾವಾಗಲೂ ತಿಳಿಯಬಾರದು. ಏಕೆಂದರೆ—ಯಾವುದೋ ಒಂದು
ಕಾರ್ಯಾರ್ಥವಾಗಿಯೇ ಸ್ತ್ರೀಯರೊಳಗೆ ಪ್ರೇಮಗುಣಗಳು ಮೂಡಿರುತ್ತವೆ. ಈ ಕಾರ
ಣದಿಂದ ವಿಚಾರಮಾಡಿನೋಡಿದರೆ, ಸೂಳೆಯರ ನೋಟಗಳು ಡಾಂಭಿಕಗಳೇ ಸರಿ. ಅವರ
ಮನೋಭಾವಗಳೂ ನೋಟಗಳೂ ಸಹ ಹುರುಳಿಲ್ಲದವುಗಳು ॥ ೧೧೮ ॥ ಅವರಲ್ಲಿ ಸ್ವಲ್ಪ
ವಾದರೂ ಸುಖವಿರುವುದೆ? ವಿಚಾರಮಾಡಿ ನೋಡು. ಭೂಮಿಯಲ್ಲಿ ಕಾಮುಗುಣವುಳ್ಳ
ಸ್ತ್ರೀಯರ ಮದನಸೌಖ್ಯವನ್ನು, ಮದನಧ್ವಂಸಿಯಾದ ಶಿವನ ಸೇವಕರೂ ಕಾಮಾದಿಗ
ಳನ್ನು ಬಿಟ್ಟವರೂ ಆದ ಭಕ್ತರು ಅಪೇಕ್ಷಿಸುವರೆ? ಭಕ್ತರು ಸೂಳೆಯರ ಸುಖವನ್ನು
ಹುಲ್ಲಿಗೆ ಸಮನಾಗಿಯಾದರೂ ಭಾವಿಸುವರೆ? ॥ ೧೨೦ ॥ ಆ ಸೂಳೆಯರ ನೋಟಗಳು

ಘ್ಯಾನಿಕದಾಚನ । ಸ್ಪೃಹಣೀಯಂಹಿಭವತಿಕದಾನಿರ್ಮಲಚೇತಸಾಂ ‖೧೦೩‖ ಬೀಭತ್ಸಮೇವಭಕ್ತಾನಾಂನನುವಾರಾಂಗನಾರತಂ । ತಾನಿವೇಶ್ಯಾಡಂಬರಾಣಿ ಕುತ್ಸಾನೀಷ್ಟತರಾಣಿಕಿಂ ‖ ೧೦೩ ‖ ಭಕ್ತಾನಾಂಶಿವಸದ್ಭಕ್ತಿಕಲಾಪ್ರಸ್ಫುರಿತಾತ್ಮನಾಂ । ತಸ್ಮಾತ್ತ್ವಮಪಿಸದ್ಭಕ್ತಿಸಂಗಕೋಭಕ್ತಿಭಾವಕಃ ‖ ೧೦೪ ‖ ಭಕ್ತಿಪಾತ್ರಂಭಕ್ತಿಪರೋಭಕ್ತೇಶ್ಚ ಪರಿಪಾಲಕಃ । ತ್ವಾಮಪಿಜ್ಞಾತುಮತ್ಯಂತಮೇವಂಭಾವ್ಯಂತ್ವಯಾಕಿಮು ‖ ೧೦೫ ‖ ಬಹುನಾಕಿಮವಿಜ್ಞಾತಾಃಪಂಥಾನಸ್ಸಂತಿಕಿಂತ್ವಯಾ । ಕಿಂತುನೇಚ್ಛಸಿವಿಜ್ಞಾತುಮಿದಾನೀಂಭಕ್ತಪುಂಗವ ‖ ತಾಮಸಾಭಕ್ತಿಸಾಮಾನ್ಯಮತಯೋವನಿತಾವಯಂ । ಸ್ವೈರಿಣ್ಯಶ್ಚತದಸ್ಮತ್ತೋನ್ಯೂನಾವಾತ್ವದ್ವಿವೇಕಿತಾ ‖ ೧೦೭ ‖ ವೇಶ್ಯಾವಿಡಂಬನಾಪೂರ್ವಮೇವಂ ಭಕ್ತಿಸ್ಥಿತಿಸ್ತಯಾ । ಕೀರ್ತಿತಾಸವ್ಯಗೇತಸ್ಮಿನ್ಯಥಾಪೂರ್ವಮಶೃಣ್ವತಿ ‖ ಅಕೃತ್ವಾಹೃದಯೇಽತ್ಯಂತ ಜುಗುಪ್ಸಾಮತಿಸಾಹಸೇ । ಔತ್ಸುಕ್ಯಂಪ್ರಮುದಂ

---

ಭಕ್ತರಿಗೆ ಯಾವಾಗಲಾದರೂ ಶ್ಲಾಘ್ಯಗಳೆನಿಸಿಕೊಳ್ಳುವವೆ? ಆ ಸೂಳೆಯರ ಸುರತವು ನಿರ್ಮಲಚಿತ್ತರಾದ ಭಕ್ತರಿಗೆ ಯಾವಾಗಲೂ ಭೀಕರವಾಗಿದ್ದೀತಲ್ಲದೆ ಅಪೇಕ್ಷಣೀಯವಾದೀತೆ? ಶಿವಭಕ್ತಿಕಾಂತಿಯಿಂದ ಪ್ರಜ್ವಲಿಸುವ ಆತ್ಮಜ್ಞಾನವುಳ್ಳ ಭಕ್ತರಿಗೆ ಸೂಳೆಯರ ಆಡಂಭಾಚಾರಗಳು ನೀಚಗಳಾಗಿರುವವಲ್ಲದೆ ಹಿತಕರಗಳಾಗಿರುವವೆ? ನೀನೂ ಕೂಡ ಸದ್ಭಕ್ತಿಯುಕ್ತನೂ, ಭಕ್ತಿಯುಕ್ತಮನಸ್ಕನೂ, ಭಕ್ತಿಗೆ ಆಶ್ರಯನೂ, ಭಕ್ತಿಯಲ್ಲಿ ಆಸಕ್ತನೂ, ಶಿವಭಕ್ತಿಯನ್ನು ಕಾಪಾಡುವವನೂ ಆಗಿರುವೆ. ಆದುದರಿಂದ ನಿನ್ನನ್ನು ನೀನು ತಿಳಿಯುವುದಕ್ಕೂ ಹೀಗಾಗಬಹುದೆ? ‖ ೧೦೫ ‖ ಹೆಚ್ಚುಮಾತಿನಿಂದೇನು? ನಿನಗೆ ತಿಳಿಯದಿರುವ ಸನ್ಮಾರ್ಗಗಳೂ ಉಂಟೆ? ಪರಂತು, ಎಲೈ ಭಕ್ತಶ್ರೇಷ್ಠನೆ, ಈಗ ಅವುಗಳನ್ನು ಮನಸ್ಸಿನಲ್ಲಿ ಅರಿದುಕೊಳ್ಳುವುದಕ್ಕೆ ಮಾತ್ರ ಅಪೇಕ್ಷಿಸದೆ ಇರುತ್ತೀಯೆ ‖೧೦೬ ಸ್ತ್ರೀಯರಾದ ನಾವು ತಾಮಸಾತ್ಮಕಿಯರೂ ಭಕ್ತಿಯಲ್ಲಿ ಸಾಧಾರಣವಾದ ಬುದ್ಧಿಯುಳ್ಳವರೂ, ವ್ಯಭಿಚಾರಿಣಿಯರೂ, ಆಗಿರುತ್ತೇವೆ. ನಮ್ಮಗಳಲ್ಲಿರುವುದಕ್ಕಿಂತಲೂ ನಿನ್ನಲ್ಲಿರುವ ವಿವೇಕಿತನವು ಕಡಿಮೆಯಾದುದೆ?" ‖ ೧೦೭ ‖ ಹೀಗೆಂದು ಆ ಪ್ರೌಢವತಿಯು ಸೂಳೆಯರ ತಿರಸ್ಕಾರವನ್ನು ಮುಂದುಮಾಡಿಕೊಂಡು ಭಕ್ತಿಸ್ಥಿತಿಯನ್ನು ಚೆನ್ನಾಗಿ ವರ್ಣಿಸಲಾಗಿ, ಅತ್ಯಂತ ಸಾಹಸಶಾಲಿಯಾದ ಈ ಗುರುಭಕ್ತಾಂಡಾರಿಯು ಮುಂಚಿನಂತೆಯೇ ಅದೊಂದನ್ನೂ ಕಿವಿಗೆ ಹಾಕಿಕೊಳ್ಳದೆ ‖೧೦೮‖ ಮನಸ್ಸಿನಲ್ಲಿ ಸ್ತ್ರೀವಿಷಯದಲ್ಲಿ ಅತ್ಯಂತ ಜುಗುಪ್ಸೆಯನ್ನೂ ತಾಳದೆ, ಕುತೂಹಲವನ್ನೂ, ಸಂತೋಷವನ್ನೂ, ಬಲವಾದ ಕೋಪವನ್ನೂ ಹೊಂದಿರುತ್ತಿರಲು, ಬಳಿಕ ಆ ಪ್ರೌಢವತಿಯು ಆ ರೀತಿಯನ್ನು ತಿಳಿದುಕೊಂಡು ‖ ೧೦೯ ‖ ಈ ಗುರುಭಕ್ತಾಂಡಾರಿಯನ್ನು ನೋಡಿ, ತನ್ನ ಮನಸ್ಸಿನ

ತೀವ್ರಕೋಪಸಂಪ್ರಾಪ್ತೇಚತತ್ಕ್ರಮಂ ॥ ೧೨೯ ॥ ವಿಜ್ಞಾಯೈನಂಸಮುದ್ವೀಕ್ಷ್ಯಸಾತತಃಕಿಮುಪೇಕ್ಷಣಾತ್ । ವಿಟನ್ಯಾಯೋಕ್ತಿತೋಭಕ್ತಿಮಾರ್ಗಸಂಬೋಧನೇನಚ ॥ ೧೩೦ ॥ ನಾಸೀದೀಷದ್ವಿವೇಕೋಪಿಭೂಯಃಪೂರ್ವಗಣಾವಳೇಃ । ಮಾಹಾತ್ಮ್ಯಶ್ರವಣಾದ್ವಾಪಿಬುದ್ಧಿಃಕಿಂಚಿತ್ಸಮಾಹಿತಾ ॥ ೧೩೧ ॥ ಭೂಯಾದ್ವೇತಿವಿನಿಶ್ಚಿತ್ಯಶ್ವೇತಾದೀನಾಂಮಹಾತ್ಮನಾಂ । ಆಪ್ತಬುದ್ಧಿಶ್ರುತೇರ್ಭಕ್ತೇರಾವಿರ್ಭಾವಕ್ರಮಂತತಃ ॥ ೧೩೨ ॥ ಮುಕ್ತಿಪ್ರಾಪ್ತೇರ್ಮಹೇಶೇನವಿಹಿತತ್ವವಿಧಾಮಪಿ। ಅಮುಷ್ಮೈಕಥಯಾಮಾಸಾತಿವಿಚಾರ್ಯೈನಮಭಾಷತ॥೧೩೩
ಅಂಗೀಕೃತ್ಯಾಪ್ತಕಥಿತಾಂಬುದ್ಧಿಂಕೇಚಿತ್ಪುರಾತನಾಃ । ಸಂಪ್ರಾಪ್ತವಂತೋವಿಜಯಂಶ್ರುಣುಸದ್ಭಕ್ತಿವತ್ಸಲ ॥ ೧೩೪ ॥ ಉತ್ತಮಾಸ್ಸರ್ವಕಾರ್ಯಾಣಿಜಾನಂತಿಸ್ವಯಮೇವಹಿ। ಕಥನಾನ್ಮಧ್ಯಮಾನೀಚಾನವಿದಂತ್ಯೇವಬೋಧಿತಾಃ॥೧೩೫
ಆಪ್ತಬುದ್ಧಿವಶಾತ್ಕಾರ್ಯೆವಿದಿತೇಹಾನಿರಸ್ತಿಕಿಂ । ಹಿತಬುದ್ಧ್ಯಪುರಾಶ್ವೇತೋರಂಭಯಾಕಥಿತೇಸತಿ ॥ ೧೩೬ ॥ ನಾಶ್ರುಣೋತ್ಸಾವಧಾನಸ್ಸ್ಯಕಿಮುತಸ್ಯಕ್ರಮಂಶ್ರುಣು ॥

ಇತ್ಯಸಂಖ್ಯಾತ ಮಹಾಮಾಹೇಶ್ವರ.....ಗುರುರಾಜಸ್ಯಕೃತೌ
ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾ
ಧ್ಯಚರಿತ್ರೆ ಪುರಾತನಪ್ರಕರಣೆ ಗುರುಭಕ್ತಾಂಡಾ
ರ್ಯುಪಾಖ್ಯಾನಸಂಕೀರ್ತನೆ ವೇಶ್ಯಾವಿಡಂಬನ
ಕಥನಂನಾಮ ಷಷ್ಠೋಧ್ಯಾಯಃ.

---

ಲ್ಲೇ "ಈತನಿಗೆ ವೇಶ್ಯಾವಿಡಂಬನೋಕ್ತಿಗಳಿಂದಲೂ, ವಿಟನರೀತಿಯನ್ನು ಬೋಧಿಸಿದುದರಿಂದಲೂ, ಭಕ್ತಿಮಾರ್ಗವನ್ನು ಉಪದೇಶಿಸಿದುದರಿಂದಲೂ ಸಹ ॥ ೧೩೦ ॥ ಸ್ವಲ್ಪವಾದರೂ ವಿವೇಕವುಂಟಾಗಲಿಲ್ಲ. ಆದರೂ ಮತ್ತೂ, ಪೂರ್ವದ ಶಿವಗಣರ ಮಾಹಾತ್ಮ್ಯವನ್ನು

# ಅಥ ಸಪ್ತಮೋಽಧ್ಯಾಯಃ.

(ಶ್ವೇತಕಥಾ)

ರಂಭಾದಿವ್ಯಾಮೃತತನೂರಪ್ಸರೋಜನವಂದಿತಾ | ವಿಕಾರ್ಯೈರ್ಮಾನ್ಯ

---

ಕೇಳುವುದರಿಂದಲಾದರೂ ಈತನ ಬುದ್ಧಿಯು ಸ್ತಿಮಿತವಾದೀತೇನೋ ನೋಡುವ," ಎಂದು ಯೋಚಿಸಿ, ನಿಶ್ಚೈಸಿ, ಶ್ವೇತಾದಿಮಹಾಪುರುಷರಿಗೆ ಆಪ್ತರಾದವರ ಬುದ್ಧಿವಾದವನ್ನು ಕೇಳಿದುದರಿಂದ ಭಕ್ತಿಯುಂಟಾದ ರೀತಿಯನ್ನೂ, ಬಳಿಕ ॥ ೧೩೦ ॥ ಅದರಿಂದಲೇ ಮುಕ್ತಿಯು ದೊರೆದು, ಶಿವನೊಡನೆ ಬೆರೆದ ರೀತಿಯನ್ನೂ ಸಹ ಈತನಿಗೆ ಹೇಳಬೇಕೆಂದು ಯೋಚಿಸಿ, ಈ ಗುರುಭಕ್ತಾಂಡಾರಿಯನ್ನು ಕುರಿತು ನುಡಿದಳೇನೆಂದರೆ— ॥ ೧೩೩ ॥ ಎಲೈ ಭಕ್ತಿತತ್ಪರನೆ, ಕೆಲರು ಪುರಾತನರು ಆಪ್ತರಾದವರು ಹೇಳಿದ ಬುದ್ಧಿವಾದವನ್ನು ಅಂಗೀಕರಿಸಿ, ಜಯಶೀಲರಾಗಿರುವರು. ಅದನ್ನು ಕೇಳು. ಉತ್ತಮಪುರುಷರು ಎಲ್ಲವನ್ನೂ ತಮ್ಮಲ್ಲಿತಾವೇ ತಿಳಿದುಕೊಳ್ಳುವರು, ಮಧ್ಯಮರು ಇತರರ ಬುದ್ಧಿವಾದದಿಂದ ತಿಳಿದುಕೊಳ್ಳುವರು. ನೀಚರಾದರೊ ಎಷ್ಟು ಬೋಧಿಸಲ್ಪಟ್ಟರೂ ತಿಳಿದುಕೊಳ್ಳುವುದೇಇಲ್ಲ॥ ಆಪ್ತರ ಬುದ್ಧಿವಾದದಿಂದ ಕಾರ್ಯಸ್ವರೂಪವು ಗೊತ್ತಾದರೆ ಬಳಿಕ ಹಾನಿಯಿದ್ದೀತೆ? ಪೂರ್ವದಲ್ಲಿ ರಂಭೆಯು ಹಿತಾಚರಣ ಬುದ್ಧಿಯಿಂದ ಶ್ವೇತನಿಗೆ ಬೋಧಿಸಲು, ಅವನು ಗಮನವಿತ್ತು ಅದನ್ನು ಕೇಳಲಿಲ್ಲವೇನು? ಅವರ ರೀತಿಯನ್ನು ಕೇಳು ॥ ೧೩೬ ॥ ಎಂದು ವಿವರಿಸುವುದಕ್ಕೆ ತೊಡಗಿದಳೆಂಬಲ್ಲಿಗೆ.

ಶ್ರೀಮತ್ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರ
ರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ
ಪುರಾತನ ಪ್ರಕರಣದಲ್ಲಿ ಗುರುಭಕ್ತಾಂಡಾರಿಯ ಕಥೆ
ಯಲ್ಲಿ ವೇಶ್ಯಾತಿರಸ್ಕಾರವನ್ನು ನಿರೂಪಿಸುವ
ಆರನೆಯ ಅಧ್ಯಾಯವು
ಮುಗಿದುದು.

# ೭ ನೆಯ ಅಧ್ಯಾಯವು.

---

ಶ್ವೇತನ ಕಥೆ.

ಕಣ್ಣಿಗೆ ಅಮೃತದಂತೆ ಆಪ್ಯಾಯಮಾನವಾದ ಶರೀರವುಳ್ಳವಳಾಗಿಯೂ ಅಪ್ಸರಸ್ತ್ರೀಯರಿಂದ ನಮಸ್ಕರಿಸಲ್ಪಟ್ಟವಳಾಗಿಯೂ ಇರುವ ರಂಭೆಯೆಂಬ ದೇವತಾಸ್ತ್ರೀಯು,

ಥೈರ್ಯುಕ್ತಮಾನಸಂಸ್ವಸಮೀಪತಃ ‖ ೧ ‖ ಅನಂತಪಾತಕೋಪೇತಂಶ್ವೇತಮಾ ಲೋಕ್ಯಚೇತಸಿ | ವಿಚಾರಯಂತೀಕ್ಲೇಶೇನಸ್ಮಯಮಾನಮುಖಾಭವತ್ ‖ ಶ್ವೇತಸ್ತಾಮವಲೋಕ್ಯಾಹ ನಿರ್ನಿಮಿತ್ತಂ ವರಾನನೇ | ವಿಲೋಕ್ಯಮಾಂ ಸ್ಮಿತವತೀ ಕಿಮೇತತ್ಕಥ್ಯತಾಮಿತಿ ‖ ೩ ‖ ತಂಬೋಧಯಿತುಕಾಮಾಸಾಕೃಪಾ ವಿಷ್ಟೇದಮಬ್ರವೀತ್ | ತ್ವಚ್ಚರಿತ್ರಂ ಮಹಾಪಾಪ ದೂಷಿತಂತದಿದಂಶೃಣು‖ ಜ್ಞಾತವಾಂಸ್ತ್ವಂಯದಾಸಂಯುಗ್ಬ್ವಂತಮಭವಃಪುರಾ | ತದಾದಿಸಂತತಂಮತ್ತಃಕರೀವಪರಿಜೃಂಭಿತಃ ‖ ೫ ‖ ತ್ವಂತ್ವಾಂಕಿಂಚಿದವಿಜ್ಞಾಯಚರ್ಗಸಮದವರ್ತನಃ | ರಾತ್ರಿಂದಿವಂಕಾಮಿನೀಭಿರುಪೇತೋವಿಷಯಾತುರಃ ‖ ೬ ‖ ಆಲೋಕ್ಯಶಂಭುಭವನಮಪಿನವೋ್ರನಶಂಭವೇ | ಕಟಾಕ್ಷೇಣಾಪಿನಾದ್ರಾಕ್ಷೀಃಕದಾಚಿದಪಿಸದ್ಗುರೂನ್ ‖ ೭ ‖ ಶ್ರೀಮಹಾದೇವಭಕ್ತೇಭ್ಯಸ್ಸಕೃದಪ್ಯಾನತೋಭವಾನ್| ನಕಿಂಚಿದಪಿದುರ್ಮಾರ್ಗಂತ್ವಂಪರಿತ್ಯಕ್ತವಾನಸಿ ‖ ೮ ‖ ಪುರಾಸ್ಪೃಷ್ಟಾಪಿರುದ್ರಾಕ್ಷಂನಜಾನಾಸಿವಿಮೋಹಿತಃ | ಧೃತವಾನಳಿಕೇಕಿಂಚಿದ್ವಿಭೂತಿಂನ

---

ಅನೇಕ ಪಾಪಗಳಿಂದ ಕೂಡಿದವನೂ ಕಾಮವಿಕಾರದಿಂದ ಕೂಡಿದ ಮನಸ್ಸುಳ್ಳವನೂ ಆಗಿ, ತನ್ನ ಬಳಿಯಲ್ಲಿ ಕುಳಿತಿರುವ ಶ್ವೇತನನ್ನು ನೋಡಿ, ಮನಸ್ಸಿನಲ್ಲಿ ಅವನ ನಡೆಯನ್ನು ಕುರಿತು ಆಲೋಚಿಸಿ, ಖೇದದಿಂದ ಹುಟ್ಟಿದ ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವಳಾದಳು ‖ ೨ ‖ ಶ್ವೇತನು ಅವಳನ್ನು ನೋಡಿ, ಎಲೆ ಸುಮುಖಿಯೆ, ನನ್ನನ್ನು ನೋಡಿ ನೀನು ಹೀಗೆ ನಿಷ್ಕಾರಣವಾಗಿ ಮುಗುಳ್ನಗೆಗೊಳ್ಳುವುದಕ್ಕೆ ಕಾರಣವೇನು ? ಹೇಳು. ಎಂದನು ‖ ೩ ‖ ಆ ರಂಭೆಯಾದರೊ, ದಯೆಗೊಂಡು ಅವನಿಗೆ ಹಿತೋಪದೇಶವನ್ನು ಮಾಡಬೇಕೆಂದು ಯೋಚಿಸಿ, ಹೀಗೆ ಹೇಳಿದಳು — ನಿನ್ನ ಜೀವಿತಚರಿತ್ರವು ಅತ್ಯಂತ ಪಾಪಾಚಾರಣದಿಂದ ನಿಂದ್ಯವಾದುದು, ಅದನ್ನು ಕೇಳು ‖೪‖ ಪೂರ್ವದಲ್ಲಿ ಯಾವಾಗ ನಿನ್ನನ್ನು ನೀನು ಚೆನ್ನಾಗಿ ತಿಳಿದುಕೊಳ್ಳಬಲ್ಲವನಾದೆಯೋ (ಪ್ರಾಪ್ತವಯಸ್ಕನಾದೆಯೋ) ಅದು ಮೊದಲ್ಗೊಂಡು ಯಾವಾಗಲೂ ಮದಿಸಿದ ಆನೆಯಂತೆ ನೀನು ಉಬ್ಬಿದವನಾಗಿ ‖ ೫ ‖ ನಿನ್ನನ್ನು ನೀನು ಸ್ವಲ್ಪವೂ ತಿಳಿದುಕೊಳ್ಳದೆ, ಗರ್ವದಿಂದ ನಡೆಯುತ್ತ, ಹಗಲೂ ರಾತ್ರಿ ಕಾಮಾತುರನಾಗಿ ಸ್ತ್ರೀಯರೊಡನೆ ಕೂಡಿಕೊಂಡು ‖ ೬ ‖ ಶಿವಾಲಯವನ್ನು ನೋಡಿದರೂಕೂಡ ಪರಶಿವನಿಗೆ ನಮಸ್ಕರಿಸದವನಾಗಿದ್ದೆ. ಸದ್ಗುರುಗಳನ್ನು ಕಡೆಗಣ್ಣಿಂದಲೂ ಕೂಡ ಯಾವಾಗಲೂ ನೋಡಿದವನಾಗಲಿಲ್ಲ ‖ ೭ ‖ ಶಿವಭಕ್ತರಿಗೆ ಒಂದು ವೃತ್ತಿಯಾದರೂ ನೀನು ಮಣಿದವನಲ್ಲ. ನೀನು ದುರ್ಮಾರ್ಗವನ್ನು ಸ್ವಲ್ಪವಾದರೂ ಬಿಟ್ಟು ನಡೆಯಲಿಲ್ಲ ‖ ೮ ‖ ಪೂರ್ವದಲ್ಲಿ ನೀನು ಅಜ್ಞಾನಭರಿತನಾಗಿದ್ದುಕೊಂಡು, ರುದ್ರಾಕ್ಷೆಯನ್ನು ಕೈಯಿಂದಾದರೂ ಮುಟ್ಟಿ ತಿಳಿದವನಲ್ಲ. ಹಣೆಯಲ್ಲಿ ಯಾವಾಗಲೂ ವಿಭೂತಿ

ಕದಾಚನ ‖ ೯ ‖ ಸ್ವಪ್ನೇಪಿಜ್ಞಾತವಾನ್ ಧರ್ಮವಾರ್ತಾಂನಹಿಮದೋದ್ಧತಃ ।
ದುಷ್ಕರ್ಮೈವವರೋಧರ್ಮೋನಿಯಮಃಕಾಮಸಂಗತಿಃ ‖ ೧೦ ‖ ಭೋಗಏವ
ಮಹಾನ್ ಯೋಗೋಯಥಾಸ್ಯಾತ್ತ್ವಂತಥಾಸದಾ । ಸಂಚರನ್ ಜಾತುವೇಶ್ಯಾ
ಯೈಪುಷ್ಪಾಣಿಸಮುಪಾಹರನ್ ‖ ೧೧ ‖ ಉಚ್ಛಿಷ್ಟದೇಶೇಕಸ್ಮಿಂಶ್ಚಿತ್ಕುಸು
ಮೇಪತಿತೇಸತಿ । ಆಹರ್ತುಂಲಜ್ಜಿತೋಭೂತ್ವಾತಚ್ಛಿವಾರ್ಪಿತಮಿತ್ಯಥ‖೧೨‖
ಅವದಸ್ತ್ವದ್ವಚಃಪೂರ್ವಜನ್ಮಪುಣ್ಯಾತ್ಸಮಾಗತಂ । ತತ್ಪುಣ್ಯವಶತೋಭವ್ಯ
ಮಿಂದ್ರತ್ವಂಪ್ರಾಪ್ತವಾನಸಿ ‖ ೧೩ ‖ ತತ್ಫಲಾನುಭವಸ್ಯೈತದೇಕಮೇವದಿನಂ
ತವ । ಪತನಸ್ಯಾಪಿಭವತಃಶ್ವೋಭೂತೇನರಕಾನಲೇ ‖ ೧೪ ‖ ತ್ವಾಮವಿಜ್ಞಾ
ಯಭವತೋವರ್ತನಸ್ಯಚದುರ್ಮದಾತ್ । ದುಃಖಸ್ಮಿತೇಮಮೇದಾನೀಮಭೂ
ತಾಂಸುತರಾಮಿತಿ ‖ ೧೫ ‖ ಅಥಾಂಬುಜಾಕ್ಷಿತವಕಿಂದುಃಖಿತುಂಹಸಿತುಂಚ
ಮಾಂ । ಕಾಮಿನ್ಯಃಕಲಿಕಂದರ್ಪಂವಿಟಾದಕ್ಷಿಣಶೇಖರಂ ‖ ೧೬ ‖ ಯಥಾವ
ದಂತಿಮಾಂಭೂಮೌತಥಾಸಂಜೀವಿತುಂಮಯಾ । ಅದ್ಯದೇವೇಂದ್ರಪದವೀಂ

---

ಯನ್ನು ಸ್ವಲ್ಪವಾದರೂ ಧರಿಸಿದವನಲ್ಲ ‖ ೯ ‖ ಕೊಬ್ಬಿನಿಂದುಬ್ಬಿದ ನೀನು ಸ್ವಪ್ನದಲ್ಲಿ
ಯೂ ಕೂಡ ಧರ್ಮದ ಸುದ್ದಿಯನ್ನು ಕೇಳಿ ತಿಳಿದವನಲ್ಲ. ದುಷ್ಕರ್ಮಾಚರಣೆಯೇ ಶ್ರೇ
ಷ್ಠಧರ್ಮವಾಗಿಯೂ, ಕಾಮನೊಡನಾಟವೇ ವ್ರತವಾಗಿಯೂ ‖ ೧೦ ‖ ಸುಖಾನುಭವವೇ
ದೊಡ್ಡ ಯೋಗವಾಗಿಯೂ ಇದ್ದುಕೊಂಡು ನೀನು ಯಾವಾಗಲೂ ಸಂಚರಿಸುತ್ತ, ಒಂ
ದಾನೊಂದುವೇಳೆ ಸೂಳೆಗೋಸ್ಕರ ಹೂವನ್ನು ತೆಗೆದುಕೊಂಡು ಬರುತ್ತಿರುವಲ್ಲಿ ‖ ೧೧ ‖
ಒಂದು ಹೂವು ಎಂಜಲಿನ ಸ್ಥಳದಲ್ಲಿ ಬಿದ್ದುಹೋಗಲು, ಅದನ್ನು ಎತ್ತಿಕೊಳ್ಳುವುದಕ್ಕೆ
ನಾಚಿ, “ಅದು ಶಿವನಿಗರ್ಪಿತವಾಗಲಿ” ಯೆಂದು ನುಡಿದೆ ‖ ೧೨ ‖ ಆ ಮಾತು ಪೂರ್ವ
ಜನ್ಮಸುಕೃತದಿಂದ ನಿನ್ನ ಬಾಯಲ್ಲಿ ಬಂದಿತು. ಆ ಪುಣ್ಯಪ್ರಭಾವದಿಂದ ಈಗ ನೀನು
ಇಂದ್ರತ್ವವನ್ನು ಪಡೆದುಕೊಂಡಿರುವೆ ‖ ೧೩ ‖ ಆ ಫಲವನ್ನನುಭವಿಸುವುದಕ್ಕೆ ನಿನಗೆ
ಇದೊಂದೇ ದಿನವಿರುವುದು. ನಾಳೆಯದಿನ ಪ್ರಬಲವಾದ ನರಕಾಗ್ನಿಯಲ್ಲಿ ನೀನು ಬೀಳ
ಬೇಕಾಗಿರುವುದು. ಅದನ್ನು ಕೂಡ ತಿಳಿಯದೆ ದುರಹಂಕಾರದಿಂದ ವರ್ತಿಸುತ್ತಿರುವ
ನಿನ್ನನ್ನು ಕುರಿತು ನನಗೆ ಈಗ ಅತ್ಯಂತವಾಗಿ ದುಃಖವೂ ಮುಗುಳ್ನಗೆಯೂ ಉಂಟಾಗಿ
ರುವುವು ‖ ೧೫ ‖ ಎಂದು ಹೇಳಲು, ಶ್ವೇತನು-ಎಲೈ ಕಮಲಲೋಚನೆಯೆ, ನೀನು
ನನ್ನನ್ನು ಕುರಿತು ದುಃಖಿಸುವುದಕ್ಕೂ ನಗುವುದಕ್ಕೂ ಕಾರಣವೇನು? ನನ್ನನ್ನು
ಕುರಿತು ಕಾಮಿನಿಯರು ಕಲಿಯುಗದ ಮನ್ಮಥನೆಂತಲೂ, ವಿಟರು ದಕ್ಷಿಣನಾಯಕರಲ್ಲಿ
ಶ್ರೇಷ್ಠನೆಂತಲೂ, ಕೊಂಡಾಡುವಹಾಗೆ ಭೂಮಿಯಲ್ಲಿ ನಾನು ಬದುಕಿದೆನು. ಈಗ

ಸಂಪ್ರಾಪ್ತೋಽತ್ರ ಹಂಸಮುನ್ನತಾಂ ॥ ೧೭ ॥ ಕಿಂಚಾಸುರವಧೂದಿವ್ಯಕಾಮಸೌಖ್ಯೋಪಲಾಲಿತಾ । ರಂಭಾತ್ವಮಪ್ಸರಸ್ತ್ರೀಣಾಂ ಶುಂಭತ್ಕೀರ್ತಿಸಮುಜ್ಜ್ವಲಾ ॥ ೧೮ ॥ ತ್ವಯಾಸ್ಮರಸುಖಂ ಪ್ರಾಪ್ತುಮಾಸನ್ನಶ್ಚಾಸ್ಮಿ ತಾದೃಶಾ । ಅಹಂ ಸರ್ವತ್ರ ವಿಜಯೀ ಮದನ್ಯಃ ಕೋಽಸ್ತಿ ಭೂತಲೇ ॥ ೧೯ ॥ ಶ್ವಸ್ತನಂ ನರಕಂ ನಾಹಂ ಗಣಯಾಮಿ ವರಾನನೇ । ತತ್ಪ್ರಸೂನವಶಾದೇಷಾ ಸಂಪ್ರಾಪ್ತಾ ಚೇನ್ಮಹೇಂದ್ರತಾ ॥ ೨೦ ॥ ವಿಪರೀತಾ ಕಥಂ ಭೂಯಾಚ್ಛಿವದತ್ತಂ ಕಿಮಸ್ಥಿರಂ । ಕಿಮಂಬುಜಾಕ್ಷಿ ಕ್ಲೇಶೇನ ಸಮಾಯಾಹೀತ್ಯುವಾಚ ಸಃ ॥ ೨೧ ॥ ಪ್ರತ್ಯುವಾಚ ತತೋ ರಂಭಾ ತ್ವರಮಾಣಂ ಸಮುತ್ಸುಕಂ । ಕಿಮರ್ಥಂ ತ್ವರಯಾನ್ಯತ್ರ ಗಚ್ಛಾಮಿ ಕಿಮತಃ ಪರಂ ॥ ೨೨ ॥ ಕಿಂತು ತ್ವಯಿ ಮಯಾ ಸಾಕಮದ್ಯ ಸ್ಥಿತ್ವಾ ಪ್ರಗೇ ಸತಿ । ಅಧೋಗತಿಂ ಗತೇ ಶೀಘ್ರಂ ನಾಹಂ ಶಕ್ನೋಮಿ ವೀಕ್ಷಿತುಂ ॥ ೨೩ ॥ ಶೃಣು ಮದ್ವಚನಂ ಭ್ರಾಂತಿಂ ವಿಹಾಯಾದ್ಯ ವಿವೇಕವಾನ್ । ಸುರವ್ರಾತಂ ವಜ್ರಿನಳಕೂಬರಾದಿವಿಟಾನಪಿ ॥ ೨೪ ॥ ಅವಧೀರ್ಯಾಗತೇ ನಾಭಿನವಸೌಂದರ್ಯಶೋಭಿ

---

ನಾನು ಉತ್ಕೃಷ್ಟವಾದ ದೇವೇಂದ್ರಪದವಿಯನ್ನು ಪಡೆದಿರುವೆನು ॥ ೧೭ ॥ ಮತ್ತು ನೀನಾದರೊ ದೇವತಾಸ್ತ್ರೀಯರಲ್ಲಿರುವ ಸೊಗಸಾದ ರತಿಸೌಖ್ಯದ ವಿಷಯದಲ್ಲಿ ಶ್ಲಾಘನೀಯಳಾದವಳು. ಮತ್ತು ಅಪ್ಸರಸ್ತ್ರೀಯರೊಳಗೆ ವಿಶೇಷವಾದ ಕೀರ್ತಿಯಿಂದೊಪ್ಪುತ್ತಿರುವವಳು ॥ ೧೮ ॥ ಅಂಥ ನಿನ್ನೊಡನೆ ಸುರತಸುಖವನ್ನು ಪಡೆಯುವುದಕ್ಕಾಗಿ ನಾನು ಸಮೀಪಕ್ಕೆ ಬಂದಿರುವೆನು. ನಾನು ಎಲ್ಲ ಕಡೆಯಲ್ಲೂ ಜಯಶೀಲನಾದೆ. ಭೂಮಿಯಲ್ಲಿ ನನ್ನ ಹೊರತು ಇನ್ನಾವನು ಇಂಥವನಿರುತ್ತಾನೆ? ॥ ೧೯ ॥ ಎಲೌ ಸುಮುಖಿಯೆ, ನಾಳೆ ಸಂಭವಿಸುವ ನರಕವನ್ನು ನಾನು ಲೆಕ್ಕಿಸತಕ್ಕವನಲ್ಲ; ಅದೊಂದು ಹೂವಿನ ದೆಸೆಯಿಂದ ಈ ಮಹೇಂದ್ರಪದವಿಯು ದೊರೆದಿದ್ದಪಕ್ಷದಲ್ಲಿ ॥ ೨೦ ॥ ಅದು ಹೇಗೆ ವ್ಯತ್ಯಸ್ತವಾಗಿಹೋದೀತು? ಶಿವನು ಕೊಟ್ಟದ್ದು ಅಶಾಶ್ವತವಾಗುವುದುಂಟೆ? ಎಲೈ ಕಮಲಾಕ್ಷಿಯೆ, ಕ್ಲೇಶಪಡುವುದೇಕೆ? ಇತ್ತ ಬಾ, ಎಂದು ನುಡಿದನು ॥ ೨೧ ॥ ಅವಸರಗೊಳ್ಳುತ್ತಲೂ ಕುತೂಹಲಪಡುತ್ತಲೂ ಇರುವ ಆ ಶ್ವೇತನನ್ನು ಕುರಿತು ರಂಭೆಯು ನುಡಿದಳೇನೆಂದರೆ— ತ್ವರೆಯೇತಕ್ಕೆ? ನಾನು ಇಲ್ಲಿ ಬಿಟ್ಟು ಎಲ್ಲಿಗೆ ಹೋಗುವೆನು? ॥ ೨೨ ॥ ಪರಂತು ನೀನು ಈಗ ನನ್ನೊಡನಿದ್ದು, ಬೆಳಗಾದಕೂಡಲೇ ನರಕವನ್ನೈದಿದರೆ ಅದನ್ನು ನಾನು ನೋಡಲಾರೆನು ॥ ೨೩ ॥ ಆದುದರಿಂದ ಈಗ ನನ್ನ ಮಾತನ್ನು ಕೇಳು. ಭ್ರಮೆಯನ್ನು ಬಿಟ್ಟು ವಿವೇಕವುಳ್ಳವನಾಗು. ಹೊಸದಾದ ಸೌಂದರ್ಯದಿಂದೊಪ್ಪಿದವರೂ ಸುರತಸೌಖ್ಯವೆಂಬಮೃತಸಮುದ್ರದಲ್ಲಿ ಮುಳುಗಿದವರೂ ಆದ ಸಾವಿರಾರುಮಂದಿ ದೇವತಾಸ್ತ್ರೀಯರು, ದೇವತೆಗಳ ಸಮೂಹವನ್ನೂ ಇಂದ್ರ ನಳಕೂಬರ ಮುಂತಾದ ವಿಟರುಗಳ

ನಾ । ಕಾಮಸೌಖ್ಯಾಮೃತಾಪಾರಸಿಂಧುಮಜ್ಜನಶಾಲಿನಾ ॥ ೨೫ ॥ ಸುರಾಂ
ಗನಾಸಹಸ್ರೇಣಸದಾವಾಸಕ್ರಮಂತವ । ಕಥಯಾಮ್ಯರ್ಧರಾತ್ರೋಽಭೂದ
ಧುನಾತ್ವಮಿತಃಪರಂ ॥ ೨೬ ॥ ಸುಖಮಿಚ್ಛಸಿಚೇದ್ಯಾಮಮಾತ್ರಮೇವತದಾ
ಪ್ಯತೇ । ತಸ್ಮಾನ್ನಿತ್ಯಸುಖಾವಾಪ್ತಿಂಕರೋಮ್ಯಾಗಮ್ಯತಾಮಿತಿ ॥ ೨೭ ॥ ಅಂ
ಗೀಕೃತಂಕಾರಯಿತ್ವಾಭೂತಿರುದ್ರಾಕ್ಷಧಾರಿಣಂ । ವಿಧಾಯತಂಶಿವಾಗಾರಂ
ದರ್ಶಯಾಮಾಸಭಾಮಿನೀ ॥ ೨೮ ॥ ಸತದುಕ್ತಪ್ರಕಾರೇಣಶ್ವೇತಸ್ತತ್ರಶಿವಾ
ಲಯೇ । ವಿಧಾಯಸಂಮಾರ್ಜನಾನುಲೇಪನೇವರ್ಣಕಂತಥಾ ॥ ೨೯ ॥ ಆಕಾ
ಶಗಂಗಾಸಲಿಲಂಪುಷ್ಪಪತ್ರಫಲಾದಿಕಂ । ಆನೀಯಶ್ರೀಮಹಾಲಿಂಗಮಭಿಷಿ
ಚ್ಯಯಥೋಚಿತಂ ॥ ೩೦ ॥ ಅಕರೋತ್ಪೂಜನಂಧೂಪದೀಪಾದಿವ್ಯತನೋದ
ಥ । ಪ್ರದಕ್ಷಿಣನಮಸ್ಕಾರೌಸ್ತುತಿಂಕೃತ್ವಾಮುದಾನ್ವಿತಃ ॥ ೩೧ ॥ ನನರ್ತಸು
ಚಿರಂದೇವಸ್ಯಾಗ್ರತೋಽಶೈಲಜಾಪತೇಃ । ಉಪಚಾರೈಷ್ಷೋಡಶಭಿಶ್ಶಿವರಾ
ತ್ರಿವಿಧಾನತಃ ॥ ೩೨ ॥ ಚಕಾರಸಮ್ಯಗ್ದೇವಸ್ಯಪೂಜಾಂತ್ರಿಪುರಭೇದಿನಃ ।
ತತ್ಪಾಪಸಂಹತಿರಿವಪ್ರಯಯಾವಥಯಾಮಿನೀ ॥ ೩೩ ॥ ಪ್ರಾತಸ್ಸಮಾಗತಾಃ

---

ನ್ನೂ ಸಹ ಧಿಕ್ಕರಿಸಿ ಬಿಟ್ಟುಬಂದು ನಿನ್ನೊಡನೆ ಯಾವಾಗಲೂ ವಾಸಮಾಡಿಕೊಂಡಿರು
ವಂತಹ ರೀತಿಯನ್ನು ನಿನಗೆ ಹೇಳುತ್ತೇನೆ ಕೇಳು. ಈಗ ಅರ್ಧರಾತ್ರಿಯಾಯಿತು.
ಈಗ ನೀನು ಇಷ್ಟು ಹೊತ್ತಿನಮೇಲೆ ನನ್ನೊಡನೆ ಸುಖಪಡಬೇಕೆಂದಪೇಕ್ಷಿಸಿದರೆ, ಒಂದು
ಜಾವದ ಕಾಲದಲ್ಲಿ ಮಾತ್ರ ಅದನ್ನು ನೀನು ಪಡೆಯಬಹುದು. ಆದುದರಿಂದ ನಿನಗೆ
ಶಾಶ್ವತವಾದ ಸೌಖ್ಯವುಂಟಾಗುವುದನ್ನು ಮಾಡಿಕೊಡುತ್ತೇನೆ ಬಾ. ಎಂದು ಹೇಳಿ ॥ ೨೭ ॥
ಅವನಿಗೆ ಒಡಂಬಡಿಸಿ, ವಿಭೂತಿರುದ್ರಾಕ್ಷಧಾರಿಯನ್ನಾಗಿ ಮಾಡಿ, ಶಿವಾಲಯವನ್ನು ಆತ
ನಿಗೆ ತೋರಿಸಿಕೊಟ್ಟಳು ॥ ೨೮ ॥ ಆ ಶ್ವೇತನಾದರೋ ರಂಭೆಯು ಹೇಳಿಕೊಟ್ಟಪ್ರಕಾರ
ಆ ದೇವಾಲಯದಲ್ಲಿ ಗುಡಿಸಿ ಸಾರಿಸಿ, ರಂಗವಲ್ಲಿಗಳನ್ನಿಟ್ಟು ॥ ೨೯ ॥ ದೇವಗಂಗಾಜಲ
ವನ್ನೂ, ಹೂವು ಪತ್ರೆ ಹಣ್ಣು ಮೊದಲಾದುವುಗಳನ್ನೂ ತೆಗೆದುಕೊಂಡು ಬಂದು, ಶ್ರೀ
ಮಹಾಲಿಂಗಮೂರ್ತಿಗೆ ಅಭಿಷೇಕಿಸಿ, ಯಥೋಚಿತವಾಗಿ ಪೂಜೆಯನ್ನು ಮಾಡಿದನು.
ಬಳಿಕ ಧೂಪದೀಪಾದ್ಯುಪಚಾರಗಳನ್ನು ಮಾಡಿದನು. ಪ್ರದಕ್ಷಿಣ ನಮಸ್ಕಾರಗಳನ್ನು
ಮಾಡಿ, ಸ್ತೋತ್ರವನ್ನು ಮಾಡಿ, ಸಂತೋಷದಿಂದ ॥ ೩೧ ॥ ಪಾರ್ವತೀಪತಿಯಾದ ಮಹಾ
ದೇವನ ಮುಂದೆ ಬಹಳವಾಗಿ ಕುಣಿದಾಡಿದನು. ಹೀಗೆ ಶಿವರಾತ್ರಿಯ ದಿನ ಪೂಜೆ
ಮಾಡುವಂತೆ ಷೋಡಶೋಪಚಾರಗಳಿಂದ ಪುರಾರಿಯಾದ ಪರಮೇಶ್ವರನನ್ನು ಚೆನ್ನಾಗಿ
ಪೂಜಿಸಿದನು. ಬಳಿಕ ಅವನ ಪಾಪವು ಹರಿದುಹೋದಂತೆ ಕತ್ತಲೆಯೂ ಕಳೆದುಹೋ
ಯಿತು ॥ ೩೩ ॥ ನೋಡುವುದಕ್ಕೆ ಭಯಂಕರರಾದ ಕೊಬ್ಬಿದ ಯಮಕಿಂಕರರು ಬೆಳಗ್ಗೆ

ಕಾಲಕಿಂಕರಾಃಕ್ರೂರದರ್ಶನಾಃ । ಭೂತ್ವಾಮಹೇಂದ್ರಃಪೂರ್ವೇದ್ಯುರ್ನಿಶಾ
ಯಾಮಂತಿಕೇತವ ॥ ೩೪ ॥ ಸ್ಥಿತಂದರ್ಶಯರಂಭೇತ್ವಮಿತ್ಯಪೃಚ್ಛನ್ಮಹೋ
ದ್ಧತಾಃ । ತೇಷಾಂಶಿವಾಲಯಗತಂರಂಭಾದಾಸೀಮುಖೇನಹಿ ॥ ೩೫ ॥ ತದಾ
ನೀಂದರ್ಶಯಾಂಚಕ್ರೇವ್ಯಾಪೃತಂಶಿವಪೂಜನೇ । ಭರ್ಗಭಕ್ತಿಸಮುದ್ಯನ್ನಿರರ್ಗ
ಳೈಶ್ವರ್ಯಲೀಲಯಾ ॥ ೩೬ ॥ ಮಹಿಷ್ಟಸತ್ತಪೋನಿಷ್ಠಾವಿಧಿನಾಶಿವಪೂಜಕಂ ।
ತಂದೂರಾದೇವಸಂವೀಕ್ಷ್ಯಗೃಹೀತುಂತೇವಿಶಂಕಿತಾಃ ॥ ೩೭ ॥ ಕಂಪಮಾನಾ
ಸ್ಸಮಾಗತ್ಯಕಾಲಾಯಾಚಖ್ಯುರಂಜಸಾ । ಅಂಕಮಾಸ್ಫೋಟಯಿತ್ವಾಸಕರೇ
ಣಕುಪಿತೋಽಬ್ರವೀತ್ ॥ ೩೮ ॥ ಕಿಂಶ್ವೇತೋಭಜತೇಶಂಭುಂರೇಕಥಂಕಥ
ಮತ್ರತಂ । ಕಿಂರಂಭಾಪ್ರೇಷಿತವತೀಶಿವಃಕಿಂತಸ್ಯರಕ್ಷಕಃ ॥೩೯॥ ಅಲಂಮ
ಮಾಧಿಕಾರೇಣಕೋಪೋಯದಿಮಹೇಶಿತುಃ । ಅಗೃಹೀತ್ವಾನತ್ಯಜಾಮಿಪಾ
ಪಿನಂತಮಿತಿದ್ರುತಂ ॥ ೪೦ ॥ ಪ್ರಯಾತಸ್ಯಾತಿರೌದ್ರೇಣತ್ರಿಶೂಲೇನಮಹೇಶ್ವ
ರಃ । ಜಘಾನತಸ್ಯವೇಗೇನವಕ್ಷಃಕಾಲಹರಃಕ್ಷಣಾತ್ ॥ ೪೧ ॥ ಪ್ರಮಥಾ
ನಾಮಾಧಿಪತ್ಯಂಶ್ವೇತಾಯಚದದೌತದಾ । ಸ್ತುವತ್ಸುದೇವನಿವಹೇಷ್ವೀಶ್ವರಃ

---

ಬಂದು, ಎಲೆ ರಂಭೆಯೆ, ನೆನ್ನೆಯ ದಿನದ ರಾತ್ರಿ ದೇವೇಂದ್ರನು ನಿನ್ನ ಬಳಿಯಲ್ಲಿರಿಸಿಹೋ
ದ ಮನುಷ್ಯನನ್ನು ತೋರಿಸು, ಎಂದು ಕೇಳಿದರು. ರಂಭೆಯಾದರೂ ತನ್ನ ಗೌಡಿಯ
ಮೂಲಕವಾಗಿ ದೇವಾಲಯದಲ್ಲಿರುವ ಶ್ವೇತನನ್ನು ಅವರಿಗೆ ತೋರಿಸಿದಳು ॥ ೩೫ ॥ ಆ
ದೂತರು ಆಗ ಶಿವಪೂಜೆಯಲ್ಲಿ ನಿರತನಾಗಿಯೂ, ಶಿವಭಕ್ತಿಯೆಂಬ ಅಧಿಕವಾದ ಸಂಪ
ತ್ತಿನ ವೈಭವದಿಂದಲೂ, ಶ್ರೇಷ್ಠವಾದ ತಪೋನಿಷ್ಠೆಯಿಂದಲೂ ಶಿವಪೂಜೆಯನ್ನು ಮಾಡು
ವವನಾಗಿಯೂ ಇದ್ದ ಆ ಶ್ವೇತನನ್ನು ದೂರದಿಂದಲೇ ನೋಡಿ, ಹಿಡಿಯುವುದಕ್ಕೆ ಸಂಶ
ಯಪಟ್ಟವರಾಗಿ ॥ ೩೭ ॥ ಭಯದಿಂದ ನಡುಗುತ್ತ ಬಂದು, ಯಮನೊಡನೆ ಎಲ್ಲವನ್ನೂ
ಹೇಳಿದರು. ಆ ಯಮನಾದರೊ ಕೋಪಗೊಂಡವನಾಗಿ ಕೈಯಿಂದ ತೊಡೆಯನ್ನು
ತಟ್ಟಿ ನುಡಿದನೇನೆಂದರೆ ॥ ೩೮ ॥ ಎಲೊ! ಹೇಗೆ ? ಹೇಗೆ ? ಶ್ವೇತನು ಶಿವನನ್ನು ಪೂಜಿ
ಸುತ್ತಾನೊ? ಅವನನ್ನು ರಂಭೆಯು ಈ ಕೆಲಸಕ್ಕೆ ಪ್ರೇರಿಸಿದಳೊ ? ಶಿವನು ಅವನನ್ನು
ರಕ್ಷಿಸಿಕೊಳ್ಳುವನೊ ? ॥ ೩೯ ॥ ಶಿವನಿಗೆ ನನ್ನ ಮೇಲೆ ಕೋಪವುಂಟಾದರೆ ನನ್ನಧಿಕಾರವು
ಸಾಕು, ಆ ಪಾಪಿಯನ್ನು ಹಿಡಿಯದೆ ನಾನು ಬಿಡುವುದಿಲ್ಲ ॥ ೪೦ ॥ ಎಂದು ಹೇಳುತ್ತ,
ಹೊರಟುಬಂದ ಯಮನ ಎದೆಯನ್ನು ಶರಣಾಗತರ ಕಷ್ಟವನ್ನು ನೀಗಿಸುವ ಪರಮೇ
ಶ್ವರನು ಅತ್ಯಂತ ಭೀಕರವಾದ ತ್ರಿಶೂಲದಿಂದ ಥಟ್ಟನೆ ಕ್ಷಣಮಾತ್ರದಲ್ಲಿ ಇರಿದನು ॥೪೧॥
ದೇವತೆಗಳ ಸಮೂಹವು ಸ್ತೋತ್ರಮಾಡುತ್ತಿರಲಾಗಿ ಶ್ವೇತನಿಗೆ ಪ್ರಮಥರ ಯಜಮಾ

ಪ್ರಣತಾರ್ತಿಹೃತ್ ‖ ೪೦ ‖ ಹಿತೋಪದೇಶಾಃ ಕಾಂತಾನಾಂ ಶ್ರೇಯಸೋ ಹೇತವಸ್ತತಃ ‖

ಇತ್ಯಸಂಖ್ಯಾತ......ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನ
ಪಂಡಿತಾರಾಧ್ಯಚರಿತ್ರೇ ಪುರಾತನಪ್ರಕರಣೇ ಗುರುಭಕ್ತಾಂ
ಡಾರ್ಯುಪಾಖ್ಯಾನ ಸಂಕೀರ್ತನೇ ಶ್ವೇತೇತಿಹಾಸಕಥನಂ
ನಾಮ ಸಪ್ತಮೋಽಧ್ಯಾಯಃ.

---

ನ್ನವನ್ನು ದಯಮಾಲಿಸಿದನು ‖ ೪೦ ‖ ಆದುದರಿಂದ ಎಲೆ ಶಿವಭಕ್ತನೆ! ಸ್ತ್ರೀಯರ ಹಿತೋಪದೇಶಗಳು ಶ್ರೇಯಸ್ಸಿಗೆ ಸಾಧಕವಾದುವುಗಳೆಂದು ತಿಳಿ, ಎಂಬುದಾಗಿ ಪ್ರೌಢವತಿಯು ಗುರುಭಕ್ತಾಂಡಾರಿಯನ್ನು ಕುರಿತು ನುಡಿದಳೆಂಬಲ್ಲಿಗೆ

ಪಂಡಿತಾರಾಧ್ಯಚರಿತ್ರದ ಪುರಾತನ ಪ್ರಕರಣದಲ್ಲಿ ಶ್ವೇತನ ಇತಿಹಾಸವನ್ನಭಿ
ವರ್ಣಿಸುವ ೭ ನೆಯ ಅಧ್ಯಾಯವು
ಮುಗಿದುದು.

# ಅಥ ಅಷ್ಟಮೋಽಧ್ಯಾಯಃ.

(ಮಲ್ಲಣ ಕಥಾ)

ಕಿಂಚಾನ್ಯೋಽಮಲ್ಲಣೋನಾಮಕವಿರಾಜಿನುತೋಽಮಹಾನ್ | ಅಭೂನ್ಮಹಾದೇವಭಕ್ತೋಽಧರಣ್ಯಾಂವಿಟಪುಂಗವಃ ‖ ೧ ‖ ವೇಶ್ಯಯಾಸಹಸಂಪ್ರೀತ್ಯಾವಸತ್ಸ್ಮರಸುಖಾಂಚಿತಃ | ದ್ಯಾವಾಪೃಥಿವ್ಯೌಸೂತ್ರೇಣಸವ್ಯಕ್ತೌಪ್ರೀತುಂಸಕೌಶಲಂ ‖ ೨ ‖ ಶಲತ್ಯನ್ವಿತಶೀರ್ಷಾಣಿಬದ್ಧುಂಜಾನೂನಿಚಕಸ್ಸುಟಂ | ಛಾಯಾಮತೀತ್ಯಸ್ವಾಂಗಂತುಮಾಹರ್ತುಂಮೃಗತೃಷ್ಣಿಕಾಂ ‖ ೩ ‖ ಪ್ರವಾಹೀಭೂತಸಲಿಲಂದ್ವಿಧಾಸ್ಫೋಟಯಿತುಂಕ್ಷಣಾತ್ | ಕ್ಷೀರಂತರಕ್ತೋಽಪಿ ಕ್ರೇತುಮಾದಾತುಂಪ್ರಸ್ತರಾತ್ತ್ವಚಂ ‖ ೪ ‖ ಮಜ್ಜಿತುಂಶಿಲಾತಲೇಽತೂರ್ಣಂ ಗೃಹೀತುಂಮತ್ತಸಿಂಧುರಂ | ಮುಸಲಾಗ್ರೇಕಿಸಲಯಂಸಮಾಹರ್ತುಂಪ್ರತಿಕ್ಷಣಂ ‖ ೫ ‖ ಆದಾತುಂ ಕಾಂಜಿಕೇಽಸವ್ಯಜ್ಞವನೀತ ಮನಾಕುಲಂ | ನಿಧಾತುಂ ಶೈಲಮತ್ಯುಚ್ಚ ಮುಪರ್ಯುಪರಿಸರ್ವತಂ ‖ ೬ ‖ ಮಾತುಂಪ್ರಸ್ಥೇನತುಹಿನಂ ದಿ

---

# ೮ ನೆಯ ಅಧ್ಯಾಯವು.

(ಮಲ್ಲಣನ ಕಥೆ.)

ಮತ್ತೂ ಹೇಳುತ್ತೇನೆ ಕೇಳು :—ಕವಿಗಳ ಸಮೂಹದಿಂದ ಶ್ಲಾಘಿಸಲ್ಪಟ್ಟವನೂ ವಿಟಶ್ರೇಷ್ಠನೂ ಆದ ಮಲ್ಲಣನೆಂಬ ಶಿವಭಕ್ತನು ಭೂಮಿಯಲ್ಲಿದ್ದನು ‖ ೧ ‖ ಅವನು ಒಬ್ಬ ಸೂಳೆಯೊಡನೆ ಪ್ರೇಮದಿಂದ ರತಿಸೌಖ್ಯವನ್ನನುಭವಿಸಿಕೊಂಡಿರುತ್ತಿದ್ದನು. ೮ ಸೂಳೆಯು ತಾಯಾದರೋ—ಭೂವ್ಯಾಕಾಶಗಳೆರಡನ್ನೂ ದಾರದಿಂದ ಪೋಣಿಸುವುದಕ್ಕೂ ಕೂದಲು ಹುಟ್ಟದ ಬೋಳು ತಲೆಯನ್ನೂ ಮಂಡಿಗಳನ್ನೂ ಕೂಡಿಸಿ ಬಂದರಿಂದೊ ದನ್ನು ಕಟ್ಟುವುದಕ್ಕೂ, ತನ್ನ ನೆಳಲನ್ನು ತಾನು ದಾಟುವುದಕ್ಕೂ, ಬಿಸಿಲ್ಗುದುರೆಯನ್ನು ಹಿಡಿದು ತರುವುದಕ್ಕೂ ‖ ೩ ‖ ಹರಿಯುವ ನೀರನ್ನು ಕ್ಷಣಮಾತ್ರದಲ್ಲಿ ಇಬ್ಭಾಗವಾಗಿ ಸೀಳುವುದಕ್ಕೂ, ಶಿವಂಗಿಯ ಹಾಲನ್ನು ಕರೆದು ಮಾರುವುದಕ್ಕೂ, ಕಲ್ಲಿನಲ್ಲಿ ತೊಕ್ಕನ್ನು ಎಳೆಯುವುದಕ್ಕೂ, ಕಲ್ಲಿನಲ್ಲಿ ಘುಡುಮ್ಮನೆ ಮುಳುಗುವುದಕ್ಕೂ, ಮದಿಸಿದಾನೆಯನ್ನು ಹಿಡಿಯುವುದಕ್ಕೂ, ಪ್ರತಿಕ್ಷಣದಲ್ಲೂ ಒನಕೆಯ ತುದಿಯಲ್ಲಿ ಚಿಗುರನ್ನು ಕಿತ್ತು ತರುವುದಕ್ಕೂ ‖ ೫ ‖ ನಿಶ್ಚಿಂತೆಯಿಂದ ಗಂಜಿಯಲ್ಲಿ ಬೆಣ್ಣೆಯನ್ನು ತೆಗೆಯುವುದಕ್ಕೂ, ಬೆಟ್ಟಗಳನ್ನು ಒಂದರಮೇಲೊಂದರಂತೆ ಎತ್ತರವಾಗಿಡುವುದಕ್ಕೂ ‖ ೬ ‖ ಬಳ್ಳದಿಂದ ಮಂಜನ್ನು

ವಾಕರ್ತುಂ ನಿಶೀಥಿನೀಂ | ಗಗನೇ ಚಿತ್ರಪತ್ರಾಣಿ ಸಮಾರಚಯಿತುಂಸ್ಫು
ಟಂ ‖ ೭ ‖ ವಾಯುಂ ಗೃಹೀತುಂ ನಿರ್ಮಾತುಂ ಕರಕೈಶ್ಚ ಶಿವಾಲಯಂ |
ಕರ್ತುಂರಜ್ಜುಂವಾಲುಕಾಭಿಃ ಕೃತ್ವಾತಾಳೌಕಕುಪ್ತಟಾ ‖ ೮ ‖ ಸಮ್ಯಗ್ವಾ
ದಯಿತುಂ ಶೀಘ್ರಂ ಜ್ಯೋತ್ಸ್ನಯಾಕರ್ತುಮಂಶುಕಂ | ಮೃತ್ವಾಜಾತುಂ
ಚನಿಪುಣಾತದ್ವಾರವನಿತಾಪ್ರಸೂಃ ‖೯‖ ಕದಾಚಿತ್ತಮುಪಾಗತ್ಯ ಸ್ವಜಾಮಾ
ತರಮಬ್ರವೀತ್ | ಬಾಲ್ಯಾತ್ಪ್ರಭೃತಿಮತ್ಪುತ್ರೀತ್ವದನ್ಯಂನೈವಪಶ್ಯತಿ ‖೧೦‖
ಪಾಪಂಕಿಂತ್ವಯಿಮತ್ಪುತ್ರ್ಯಾಃ ಕನ್ಯಕಾತ್ವೇಽನುರಾಗಿತಾ| ತದ್ವೃಥಾಸಂಭ್ರ
ಮಂ ಕರ್ತುಂ ನ್ಯಾಯ್ಯಂಕಿಂತವಸಂತತಂ ‖ ೧೧ ‖ ಹಸಂತಿಕಿಂನಹಿವಿಟಾಭ
ವಂತಂತ್ವತ್ಸಮಾಃಪರಂ | ತ್ವತ್ಪ್ರಭವಂಕುಸೂಲೇಷುಧಾನ್ಯಂಭವತಿಕಿಂಮ
ಮ ‖೧೨‖ ಭವೇತ್ಕಿಂಮತ್ತನೂಜಾಯಾಸ್ತ್ವತ್ಕವಿತ್ವಂವಿಭೂಷಣಂ | ನಿ
ಷ್ಕಗ್ರಂಥಿರ್ಭವೇತ್ಕಿಂವಾಭವದ್ವಚನಮಾಧುರೀ ‖ ೧೩ ‖ ಶಿವಭಕ್ತಿಸ್ತ್ವೈಷಾ
ಕಿಮಸ್ಮಾಕಂಸ್ಯಾತ್ಪರಾಗತಿಃ | ತಥಾಪಿಸರ್ವಸುಧನಂದತ್ತವಾನಸಿಕಿಂಬಹು ‖
ಶ್ರೀವೀರಭದ್ರಯಾತ್ರಾಯೈಸ್ವಹಾರಂಬಂಧಕಂಸುತಾ | ನಿಧಾಯಪ್ರಯಯೌ

---

ಅಳಿಯುವುದಕ್ಕೂ, ರಾತ್ರಿಯನ್ನು ಹಗಲುಮಾಡುವುದಕ್ಕೂ, ಆಕಾಶದಲ್ಲಿ ಸ್ಪಷ್ಟವಾಗಿ
ಚಿತ್ರದ ಪಟಗಳನ್ನು ರಚಿಸುವುದಕ್ಕೂ ‖ ೭ ‖ ಗಾಳಿಯನ್ನು ಹಿಡಿಯುವುದಕ್ಕೂ, ಆಲಿ
ಕಲ್ಲಿನಿಂದ ದೇವಾಲಯವನ್ನು ಕಟ್ಟುವುದಕ್ಕೂ, ಮಳಲಿನಿಂದ ಹಗ್ಗವನ್ನು ಹೊಸೆಯುವು
ದಕ್ಕೂ, ದಿಕ್ತಟಗಳನ್ನು ತಾಳಗಳನ್ನಾಗಿ ಮಾಡಿಕೊಂಡು ಬಾಜಿಸುವುದಕ್ಕೂ, ಬೆಳ್ದಿಂಗ
ಳಿಂದ ಬೇಗನೆ ವಸ್ತ್ರವನ್ನು ಮಾಡುವುದಕ್ಕೂ, ಸತ್ತು ಹುಟ್ಟುವುದಕ್ಕೂ ಸಹ ಪ್ರವೀಣಳಾ
ಗಿದ್ದಳು ‖ ೯ ‖ ಅವಳು ಬಂದಾನೊಂದು ದಿವಸ ತನ್ನ ಅಳಿಯನಾದ ಮಲ್ಲಣನ ಬಳಿಗೆ
ಬಂದು, ಹೇಳಿದಳೇನೆಂದರೆ:—"ಚಿಕ್ಕಂದಿನಿಂದಲೂ ನನ್ನ ಮಗಳು ನಿನ್ನ ಹೊರತು ಬೇ
ರೊಬ್ಬನನ್ನು ನೋಡಿದವಳಲ್ಲ ‖ ೧೦ ‖ ನನ್ನ ಮಗಳು ಕನ್ನಿಕೆಯಾಗಿದ್ದಾಗಲೇ ನಿನ್ನನ್ನು
ಮೋಹಿಸಿದುದೇ ಪಾಪವೊ? ಯಾವಾಗಲೂ ಬರಿಯ ಡಬ್ಬಿನ ಸಡಗರವನ್ನು ಮಾಡಿಕೊಂ
ಡುಹೋಗುವುದು ನಿನಗೆ ನ್ಯಾಯವೆ ‖ ೧೧ ‖ ನಿನ್ನ ಓರಿಗೆಯ ವಿಟರು ನಿನ್ನನ್ನು ನೋಡಿ
ನಗುವುದಿಲ್ಲವೆ? ನಿನ್ನ ಘನತೆಯು ನನ್ನ ಮನೆಯ ಕಣಜಗಳಲ್ಲಿ ಬತ್ತವಾಗುವುದೆ? ‖೧೨
ನಿನ್ನ ಕವಿತ್ವವು ನನ್ನ ಮಗಳಿಗೆ ಒಡವೆಗಳಾಗುವುದೆ? ನಿನ್ನ ವಾಙ್ಮಾಧುರ್ಯವು ಹಣದ
ಗಂಟಾಗುವುದೆ? ‖ ೧೩ ‖ ನಿನ್ನ ಈ ಶಿವಭಕ್ತಿಯು ನಮಗೆ ಪರಲೋಕದ ಸುಗತಿಯಾ
ಗುವುದೆ? ಹಾಗೂ ಹಬ್ಬಗಳಲ್ಲಿ ಹೆಚ್ಚಾಗಿ ಹಣವನ್ನೇನಾದರೂ ಕೊಟ್ಟಿರುವೆಯೊ? ‖೧೪‖
ನನ್ನ ಮಗಳು ತನ್ನ ಕತ್ತಿನ ಹಾರವನ್ನು ತೆಗೆದು ಅಡುವಿಟ್ಟು, ವೀರಭದ್ರನ ಯಾತ್ರೆಗೆ

ಕಿಂಚವಿಕ್ರೀಯಸ್ವಾಂಗುಳೀಯಕಂ ‖ ೧೫ ‖ ಶಿವರಾತ್ರ್ಯಾಂಸಮತನೋಜ್ಜಂ
ಗಮಾರಾಧನಂಮಹತ್ । ವಿಕ್ರೀಯಹಸ್ತಕಟಕಂಸಾವಸಂತೋತ್ಸವಂವ್ಯಧಾ
ತ್ ‖ ೧೬ ‖ ಸ್ವರ್ಣಸ್ಯಸೂತ್ರಂದಮನಪೌರ್ಣಮಾಸ್ಯಾಂಮದಾತ್ಮಜಾ । ವಿ
ಕ್ರೀಯೋಪಾಯನಂಚಕ್ರೇಗುರೂಣಾಮತಿಭಕ್ತಿತಃ ‖ ೧೭ ‖ ಸಾತಂತುಪೂ
ರ್ಣಿಮಾಯಾಂತುಕೃತ್ವಾನೂಪುರವಿಕ್ರಯಂ । ಚಕಾರಭಕ್ತವರ್ಯಾಣಾಮು
ತ್ಸವಂಪುತ್ರಿಕಾಮಮ ‖ ೧೮ ‖ ಬಂಧಕಂಕೃತ್ಯಪದಕಂದೀಪಾವಳ್ಯಾಂಮದಾ
ತ್ಮಜಾ । ಮಹಾದೇವಾಯಸಂಪ್ರೀತ್ಯಾವ್ಯತನೋದ್ದೀಪಮಾಲಿಕಾಂ ‖ ೧೯ ‖
ಶಿವರಾತ್ರಿರಿಯಂಕಿಂಚವ್ಯಾಘ್ರೀವಸಮುಪಾಗತಾ । ಪ್ರಾಹಿಣೋದ್ಬಂಧಕಂಕ
ರ್ತುಂಮುಕ್ತಾಜಾಲಕಮಾತ್ಮಜಾ ‖ ೨೦ ‖ ಸಮರ್ಥೋಽಸಿಕದಾದಾತುಂವ
ದಹೇವಿಟಪುಂಗವ । ನಾವಗಚ್ಛಸಿವಾಜ್ಞಾತ್ವಾಪ್ಯಜಾನನ್ನಿವತಿಷ್ಠಸಿ ‖ ೨೧ ‖
ಪರಂಭರ್ವಾಭ್ರಮಯಿತುಂಸಮಾಗಚ್ಛತಿಕೇವಲಂ । ಉತ್ಪಾದ್ಯಕಲಹಂತತ್ರ
ತಸ್ಯೈದತ್ವಾಜಯಂಜಿತಃ ‖ ೨೨ ‖ ತಾಮುದ್ಘಾಟ್ಯಾಥರುಷ್ಟಾಯಾಂತಸ್ಯಾಂ
ಕೈಂಕರ್ಯಮಾಚರ । ತಚ್ಚಿತ್ತಂಸಮ್ಯಗಾಕೃಷ್ಯಸಂಯುಜ್ಯತದನಂತರಂ ‖
ವಿಮುಕ್ತಾಯಾಂಸ್ವಯಂಗತ್ವಾಗೃಹೀತಸ್ಸ್ವಪ್ರಕಾಂಚಿತಃ । ಪ್ರಹಾರಾಣಾಂ

---

ಹೋದಳು. ಮತ್ತೂ ತನ್ನ ಉಂಗುರವನ್ನು ಮಾರಿ, ಶಿವರಾತ್ರಿಯಲ್ಲಿ ಜಂಗಮಪೂಜೆ
ಯನ್ನು ಮಾಡಿದಳು. ಅವಳು ಕೈ ಕಡಗವನ್ನು ಮಾರಿ ವಸಂತೋತ್ಸವವನ್ನು ಆಚರಿಸಿ
ದಳು ‖ ೧೬ ‖ ನನ್ನ ಮಗಳು ದವನದ ಹುಣ್ಣಿಮೆಯಲ್ಲಿ ಚಿನ್ನದಸರಿಗೆಯನ್ನು ಮಾರಿ, ಅತ್ಯಂತ
ಭಕ್ತಿಯಿಂದ ಗುರುಗಳಿಗೆ ಬಾಗಿನವನ್ನು ಕೊಟ್ಟಳು ‖ ೧೭ ‖ ಆ ನನ್ನ ಮಗಳು ಅನೂಲ
ಹುಣ್ಣಿಮೆಯಲ್ಲಿ ಕಾಲತೊಡವನ್ನು ಮಾರಿ ಭಕ್ತರ ಉತ್ಸವವನ್ನು ಮಾಡಿದಳು ‖ ೧೮ ‖
ನನ್ನ ಮಗಳು ದೀವಳಿಗೆಯ ಹಬ್ಬದಲ್ಲಿ ಕೊರಲಿನ ಪದಕವನ್ನು ಒತ್ತೆಯಿಟ್ಟು, ಪರಶಿ
ವನ ದೀಪಾರಾಧನ ಮಹೋತ್ಸವವನ್ನು ನಡಿಸಿದಳು ‖ ೧೯ ‖ ಈ ವರ್ಷದ ಶಿವರಾತ್ರಿ
ಯಾದರೂ ಹೆಣ್ಣುಹುಲಿಯಹಾಗೆ ಬಂದಿತು. ಮಗಳು ಮುತ್ತಿನ ಸರವನ್ನು ಒತ್ತೆಯಿ
ಡುವುದಕ್ಕೆ ಕಳುಹಿರುವಳು ‖ ೨೦ ‖ ಎಲೆ ವಿಟಶ್ರೇಷ್ಠನೆ, ಯಾವಾಗ ನೀನು ಹಣವನ್ನು
ಕೊಡುವುದಕ್ಕೆ ಸಮರ್ಥನಾಗುತ್ತೀಯೆ? ಇದೊಂದನ್ನೂ ನೀನು ಕಾಣೆಯಾ? ತಿಳಿದಿದ್ದ
ರೂ ತಿಳಿಯದವನಂತಿದ್ದೀಯೆ ‖ ೨೧ ‖ ಸುಮ್ಮನೆ ನನ್ನ ಮಗಳಿಗೆ ಭ್ರಮೆ ಹಿಡಿಸುವುದ
ಕ್ಕೆ ಮಾತ್ರ ಬರುತ್ತೀಯೆ. ಅವಳ ಬಳಿಯಲ್ಲಿ ಜಗಳವನ್ನು ಹುಟ್ಟಿಸಿ, ಅವಳಿಗೇ ಜ
ಯವನ್ನುಂಟುಮಾಡಿ, ನೀನು ಸೋತು, ಅವಳ ದೋಷೋದ್ಘಾಟನೆಯನ್ನು ಮಾಡಿ,
ಅವಳು ರೇಗಿದರೆ ನೀನು ಕಿಂಕರನಾಗಿ, ಅವಳ ಮನಸ್ಸನ್ನು ಚೆನ್ನಾಗಿ ಸೆಳೆದುಕೊಂಡು
ಬಳಿಕ ಚೆನ್ನಾಗಿ ಕೂಡಿಕೊಂಡು ಇರುವೆ. ‖ ೨೨ ‖ ನೀನು ಅವಳನ್ನು ಬಿಟ್ಟು

ತನುಂದತ್ವಾಸಂಗತಾಯಾಂಚಸಂಗತಃ ‖ ೨೪ ‖ ರತಿಂಕೃತ್ವಾನುರಕ್ತಾಯಾಂ
ಹೃಷ್ಟಾಯಾಂಚಾತಿಹೃಷ್ಟವಾನ್ । ಸತ್ಯಾಮಭಿಮುಖಾಯಾಂಚಸಮಂಗೀ
ಕೃತ್ಯಸಂಮುದಾತ್ ‖ ೨೫ ‖ ಪ್ರಕ್ರಾಂತಾಯಾಂಪ್ರಥಮತಸ್ಸ್ವಯಂಪ್ರೀತಿ
ಯುತೋಭವಾನ್ । ವಚೋಭಿಸ್ಸ್ವವಶಾಂಕೃತ್ವಾವಿಧಾಯಪ್ರೇಮ್ಣಿನಿಷ್ಠಿ
ತಾಂ ‖೨೬‖ ಸಂಭೋಗೇಚಮಾನಸಂದತ್ವಾವಿದಿತ್ವಾಚಕಲಾಕ್ರಮಂ । ತಾಂಮ
ಜ್ಜಯಿತ್ವಾಪ್ರೇಮಾಬ್ಧೌಕಾಮಾನ್ಕೃತ್ವಾಬಹೂನಥ ‖೨೭‖ ಶಮಯಿತ್ವಾ
ರತಿಶ್ರಾಂತಿಂಶಾಂತಾಯಾಮುಚಿತಕ್ರಮೈಃ । ಪ್ರಬೋಧ್ಯಪಾರವಶ್ಯೇನಮು
ಹ್ಯಮಾನಾಮನುಕ್ಷಣಂ‖೨೮‖ ವಿಲಾಸಂದರ್ಶಯನ್ನಗ್ರೇಪುಂವೇಶ್ಯೇವವಧೂ
ಮಿಮಾಂ । ಸಮ್ಯಗ್ವಿಮೋಹಿತಾಂಕೃತ್ವಾವೈಪರೀತ್ಯೇನವರ್ತಸೇ ‖೨೯‖ ಚಾ
ತುರ್ಯಾಲಾಪಜಾಲಾನಿಕಾಮಶಾಸ್ತ್ರಕಲಾಮಪಿ । ಸ್ವವಂಚನಾನಿಪ್ರಾವೀಣ್ಯಾ
ನ್ಯಾಟೋಪಾನ್ಯಪ್ಯನೇಕಶಃ ‖ ೩೦ ‖ ವಿತತ್ಯಪುತ್ರಿಕಾಂಭ್ರಾಂತಾಂವಿಧಾತುಂ
ಯುಜ್ಯತೇಕಿಮು । ತ್ವಯಾದತ್ತಂಸಮಾಯಾತಂಸಹಸ್ರಂಮೆತದೇವಹಿ‖೩೧‖

---

ಹೋಗಿದ್ದು, ಅವಳಾಗಿ ಬಂದು ನಿನ್ನನ್ನು ಹಿಡಿದುಕೊಂಡಾಗ ಹದುಗಿ, ಅವಳ ವಿಟಗೆ ಮೈಯ್ಯನ್ನು ಕೊಟ್ಟು, ಅನುರಾಗದಿಂದ ಒಡಗೂಡಿದವಳೊಡನೆ ಸೇರಿ ‖ ೨೪ ‖ ಸುರತವನ್ನನುಭವಿಸಿ, ಸಂತೋಷಪಟ್ಟವಳೊಡನೆ ಸಂತೋಷಪಟ್ಟವನಾಗಿ, ಅನುಕೂಲಳಾಗಿ ಬಂದಾಗ ಆನಂದದಿಂದ ಅವಳನ್ನು ಅಭಿನಂದಿಸಿಕೊಂಡು ‖ ೨೫ ‖ ಮೊದಲು ಅವಳು ರೇಗಿ ಮೇಲೇರಿಬಂದರೆ, ನೀನು ಪ್ರೇಮಯುಕ್ತನಾಗಿ ಹೋಗಿ, ಸವಿನುಡಿಗಳಿಂದ ವಶಪಡಿಸಿಕೊಂಡು, ಪ್ರೇಮಯುಕ್ತಳನ್ನಾಗಿ ಮಾಡಿ ‖ ೨೬ ‖ ಅವಳಿಗೆ ಕಾಮಕಲಾವಿರ್ಭಾವವಾಗಿರುವುದನ್ನು ತಿಳಿದುಕೊಂಡು, ನೀನೂ ಸುರತಕ್ಕೆ ಮನಸ್ಸನ್ನಿತ್ತು, ಅವಳನ್ನು ಪ್ರೇಮಸಮುದ್ರದಲ್ಲಿ ಮುಳುಗಿಸಿ, ಹಲವುಬಗೆಯ ಕಾಮವ್ಯಾಪಾರಗಳನ್ನು ನಡೆಯಿಸಿ‖ ಬಳಿಕ ಅವಳು ರತಿಕ್ರೀಡೆಯಿಂದ ಬಳಲಲು, ಉಚಿತರೀತಿಯಿಂದ ಅವಳ ಆಯಾಸವನ್ನು ಶಮನಗೊಳಿಸಿ, ಬಾರಿಬಾರಿಗೆ ಸುರತಸುಖದಿಂದ ಪರವಶಳಾಗುತ್ತಿರುವ ಅವಳನ್ನು ಎಚ್ಚರಗೊಳಿಸಿ ‖ ೨೮ ‖ ಅವಳ ಮುಂಗಡೆಯಲ್ಲಿ ಪುರುಷವೇಷದ ಸೂಳೆಯಂತೆ ಶೃಂಗಾರಚೇಷ್ಟೆಗಳನ್ನು ತೋರಿಸಿ, ನನ್ನ ಮಗಳನ್ನು ಚೆನ್ನಾಗಿ ಮೋಹಗೊಳಿಸಿ, ವಿಪರೀತವಾಗಿ ನಡೆಯುತ್ತೀಯೆ ‖೨೯‖ ಕುಶಲತನದ ಮಾತುಗಳನ್ನೂ ಕಾಮಶಾಸ್ತ್ರದ ತತ್ವವನ್ನೂ, ಮೋಸವನ್ನೂ, ಕೌಶಲವನ್ನೂ, ಡಂಭವನ್ನೂ ಸಹ ಹಲವು ಪ್ರಕಾರವಾಗಿ ತೋರಿಸಿ, ನನ್ನ ಮಗಳಿಗೆ ನೀನು ಭ್ರಮೆಹಿಡಿಸಬಹುದೊ? ನೀನು ಕೊಟ್ಟದ್ದೆಲ್ಲ ಬಂದಿತು. ಅದೇ ನನಗೆ ಸಾವಿರವು ‖೩೧‖ ಇಷ್ಟೇಸಾಕು. ಬೇಗನೆ ನಡೆ, ಎಲೆ ಮಗಳೆ, ನೀನು ಇವನನ್ನು ಬಿಟ್ಟುಬಿಡು, ಎಂದು ಕಠಿಣಳಾದ ನೀಚಳಾದ ಆ ಸೂಳೆಯತಾಯಿಯು,

ಗಚ್ಛೇಚ್ಛೀಘ್ರಮನೇನಾಲಂಬಾಲೇತ್ವಮಪಿನರ್ಜಯ | ಏಸನಿತ್ಯತಿನಿರ್ಬ
ಧಂಕೃತ್ವಾಪ್ಯತನಯಾಂತದಾ ||೩೨|| ತ್ಯಾಜಯಿತ್ವೈನಮನ್ಯಸ್ಯಮಂಡಲಾಧಿ
ತೇರ್ವಶೇ| ಸ್ಥಿತಾಂಚಕಾರಸಾದುಷ್ಟಾವೇಶ್ಯಾವಾತಾತಿಕರ್ಕಶಾ ||೩೩|| ಅಥಾ
ಯಮಲ್ಲಣ್ಣೋಽತ್ಯಂತವಿರಹಾಗ್ನಿಶಿಖಾಚಯೈಃ | ಕಾಂತಾವಿಯೋಗಜ
ದುಃಖೈರ್ದ್ವಿಗುಣೋಽಸತಿನಷ್ಟಧೀಃ ||೩೪|| ಪರಿತ್ಯಕ್ತಸ್ತನುಗುಣೈಸ್ತತ್ಕಾಂತಾರ್ಪಿ
ತಮಾನಸಃ | ಪ್ರಾಗಂಬುಜಾಕ್ಷ್ಯೈಕ್ಷಿತುರಂಸಸ್ನೇಹಂವಿಕ್ಷಿತಕ್ರಮಂ||೩೫
ಅನುಸ್ಮರತಿಸಂಧತ್ತೇಕಾಂತಾಬಿಂಬಾಧರಂಹೃದಿ | ಪುರಾತ್ಮಪ್ರಾಪ್ತಿಜಾತ
ಸ್ಯಾಪರ್ಷಂಚಿಂತಯತಿಸ್ವಯಂ ||೩೬|| ಶೃಂಗಾರಚೇಷ್ಟಾರಚಿತಾಃಪರಾನು
ಶತಿಮಾನಸೇ | ಉತ್ಕಂಠತೇಽಸ್ಮಿತರುಚೇಃಪ್ರಹರ್ಷಪುಳಕಾಂಕುರಾನ್ ||೩೭
ಭಾವಯತ್ಯತಿಹಾರ್ದೇನಧಮ್ಮಿಲ್ಲಂಕುರುತೇಮತಾ | ಪರಾಣಿಮನ್ಮಥಸುಖಾ
ನ್ಯಾಲೋಚ್ಯಾಲೋಚ್ಯನಿಸ್ಸಹಃ ||೩೮|| ಸ್ಥಾತುಂವಿಯೋಗದುಃಖಾಗ್ನೌಜ್ವ
ಲತ್ಯಂಗೇಷುಸರ್ವತಃ | ಧೃತಿಂವಿಹಾಯಕಾಂತಾಯಾಮೃದೂನಿವಚನಾನಿವಾ
ಅಶೃಣ್ವತೋಽಮುಪ್ರಾಣಾ ನತಿಷ್ಠಂತೀತಿನಿಶ್ಚಿತಃ | ತಸ್ಯಾಃಕೇಳಿಗೃಹದ್ವಾರ

---

ಅತ್ಯಂತ ನಿರ್ಬಂಧಗೊಳಿಸಿ, ಆಗ ತನ್ನ ಮಗಳನ್ನು ಇವನಿಂದ ಬಿಡಿಸಿ, ಇನ್ನೊ
ಬ್ಬ ಪಾಳಯಗಾರನ ಅಧೀನದಲ್ಲಿ ಇರಿಸಿದಳು ||೩೨|| ಬಳಿಕ ಈ ಮಲ್ಲಣನು, ತನ್ನ ಕಾಂ
ತೆಯನ್ನು ಅಗಲಿದ ದುಃಖವು ವಿರಹಾಗ್ನಿಯ ಜ್ವಾಲೆಗಳಿಂದ ಇಮ್ಮಡಿಯಾಗಲಾಗಿ, ಮತಿ
ಗೆಟ್ಟ ||೩೪|| ದೇಹಧರ್ಮಗಳಳಿದವನಾಗಿ, ಆ ತನ್ನ ಕಾಂತೆಯಲ್ಲೇ ಮನಸ್ಸನ್ನು ತೆತ್ತವ
ನಾಗಿ, ಪೂರ್ವದಲ್ಲಿ ತನ್ನ ಆ ಕಮಲಾಕ್ಷಿಯು ಪ್ರೇಮದಿಂದ ತನ್ನನ್ನು ನೋಡುತ್ತಿದ್ದ
ರೀತಿಯನ್ನು ಸ್ಮರಿಸಿಕೊಳ್ಳುವನು. ಮನಸ್ಸಿನಲ್ಲಿ ಆಕೆಯ ತೊಂಡೆಯ ಹಣ್ಣಿನಂತಹ
ತುಟಿಯನ್ನು ನೆನೆದುಕೊಳ್ಳುವನು. ಮೊದಲು ತಾನು ದೊರಕಿದುದರಿಂದ ಆಕೆಗೆ ಉಂ
ಟಾಗಿದ್ದ ಸಂತೋಷವನ್ನು ಯೋಚಿಸಿಕೊಳ್ಳುವನು ||೩೬|| ಆಕೆಯು ಮಾಡುತ್ತಿದ್ದ
ಶೃಂಗಾರಚೇಷ್ಟೆಗಳನ್ನು ಮನಸ್ಸಿನಲ್ಲಿ ಭಾವಿಸಿಕೊಳ್ಳುವನು. ಅವಳ ಮುಗುಳ್ನಗೆ
ಯ ಕಾಂತಿಯನ್ನು ಅಪೇಕ್ಷಿಸುವನು. ಅತ್ಯಾನಂದದಿಂದ ಅವಳಲ್ಲಿ ಉಂಟಾದ ರೋಮ
ಹರ್ಷಗಳನ್ನು ಆಲೋಚಿಸಿಕೊಳ್ಳುವನು. ಅತ್ಯನುರಾಗದಿಂದ ಅವಳ ಮುಡಿಯ
ನ್ನು ಸ್ಮರಿಸಿಕೊಳ್ಳುವನು. ಉತ್ತಮಗಳಾದ ರತಿಕ್ರೀಡಾಸ ಸೌಖ್ಯಗಳನ್ನು ಯೋಚಿಸಿ
ಯೋಚಿಸಿ ಸಹಿಸಿಕೊಂಡಿರಲಾರದೆ ||೩೮|| ವಿರಹಾಗ್ನಿಯು ದೇಹದಲ್ಲೆಲ್ಲ ಉರಿಯುತ್ತಿರ
ಲಾಗಿ, ಧೈರ್ಯಗೆಟ್ಟು, ತನ್ನ ಕಾಂತೆಯ ಮೆಲ್ನುಡಿಗಳನ್ನಾದರೂ ಕೇಳದೆ ಇದ್ದರೆ ನನ್ನ
ಪ್ರಾಣವು ನಿಲ್ಲಲಾರದೆಂದು ನಿಶ್ಚೈಸಿಕೊಂಡು, ಆ ಮಲ್ಲಣನು ಆ ಸೂಳೆಯ ಕ್ರೀಡಾ
ಮಂದಿರದ ಬಾಗಿಲಿನ ಪಕ್ಕದಲ್ಲಿ ಅವಳ ಮಾತನ್ನು ಕೇಳುವುದಕ್ಕಾಗಿಯೇ ಧ್ಯಾನ

ಪಾರ್ಶ್ವೇಽತಿಷ್ಠತ್ಸಮಲ್ಲಣಃ ॥೪೦॥ ತತ್ಕಾಂತಾವಚನಾನ್ಯೇವಶ್ರೋತುಮೇಕಾಗ್ರಮಾನಸಃ । ತತಸ್ಸಮಾಗತೇನಾನ್ಯವಿಟೇನಸಹಭಾಮಿನೀ ॥೪೧॥ ಕಿಂಚಿತ್ಕಾಲಂಗೃಹೇಸ್ಥಿತ್ವಾಸಮುದ್ಘಾಟ್ಯಕವಾಟಕಂ । ಗಂಡೂಷಸಲಿಲಂತಸ್ಯೋಪರಿಮುಕ್ತವತೀನಿಶಿ ॥೪೨॥ ತದೈವಕಿಂಚಿತ್ತಟಿತಿಸ್ಫುರಂತ್ಯಾಂತಂವ್ಯಲೋಕಯತ್ । ಆಃಕೋಽಯಂಮಲ್ಲಣನ್ಯಾಯ್ಯಂಕಿಮಾಗಂತುಂತವಾಧುನಾ ॥೪೩॥ ಸೌದಾಮಿನೀಂವಿನಾಕಿಂಚಿತ್ತಿಮಿರೇನೈವದೃಶ್ಯತೇ । ಪತಿತಂಮಾನಜಾನೇಽಹಂಗಂಡೂಷಿತಜಲಂತ್ವಯಿ ॥೪೪॥ ಇತ್ಯಾಲಪಂತೀತಂತನ್ವೀಸಂಭ್ರಮೇಣಶನೈಶ್ಶನೈಃ । ದತ್ವಾಕರಂಸಮಾದಾಯಗೃಹಮನ್ಯತ್ಸಮಾಗತಾ ॥೪೫॥ ಪರಂಶೋಕಾಕುಲಾಭೂತ್ವಾಪತಿತ್ವೋಪರಿತಸ್ಯಸಾ । ಉದ್ಯುಕ್ತಾರತಯೇತೇನಸಹಸೋಽಪಿಜಗಾದತಾಂ ॥೪೬॥ ಪ್ರಿಯೇಪ್ರಾಣಾನ್ನದೃಷ್ಟ್ವಾತ್ವಾಂಗೃಹೀತುಮಹಮಕ್ಷಮಃ । ಸಮಾಗತ್ಯತ್ವಾಮಪಶ್ಯಮಿದಮೇಕಾಲಮಾತ್ಮನಃ ॥೪೭॥ ಉಚಿತಂಕಿಂತ್ವಯಾರಂತುಂಮಮಾನ್ಯಸ್ಮಿನ್ವಿಟೇಸ್ಥಿತೇ । ಯಃಕಶ್ಚಿದ್ದಿವಸೇಯಸ್ಮಿನ್ಭೃತಿಂತೇಸಂಪ್ರಯಚ್ಛತಿ ॥೪೮॥ ಸಏವದಿವಸೇಕಾಂತಸ್ತಸ್ಮಿನ್ಕಮಲಲೋ

---

ಚಿತ್ತನಾಗಿ ಹೋಗಿ ನಿಂತುಕೊಂಡನು. ॥೪೦॥ ಬಳಿಕ ಬಂದಂಥ ಬೇರೊಬ್ಬ ವಿಟನೊಡನೆ ಆಕೆಯು ॥೪೧॥ ಮನೆಯೊಳಗೆ ಸ್ವಲ್ಪಕಾಲವಿದ್ದು, ಬಾಗಿಲನ್ನು ತೆರೆದು, ರಾತ್ರಿಯಲ್ಲಿ (ಕಾಣದೆ) ಮುಕ್ಕಳಿಸಿದ ನೀರನ್ನು ಅಲ್ಲಿ ನಿಂತಿದ್ದ ಮಲ್ಲಣನಮೇಲೆ ಉಗಿದುಬಿಟ್ಟಳು॥ ಆಗತಾನೇ ಮಿಂಚು ಹೊಳೆಯಲು, ಆತನನ್ನು ಕಂಡಳು. ಆಹಾ! ಇವನಾರು? ಮಲ್ಲಣನೆ! ಈಗ ಬರುವುದು ನಿನಗುಚಿತವೆ? ॥೪೩॥ ಈ ಗಾಢಾಂಧಕಾರದಲ್ಲಿ ಮಿಂಚಿಲ್ಲದಿದ್ದರೆ ಯಾವುದೊಂದುಪದಾರ್ಥವೂ ಕಣ್ಣಿಗೆ ಕಾಣುವುದಿಲ್ಲ. ಮುಕ್ಕಳಿಸಿದನೀರು ನಿನ್ನ ಮೇಲೆ ಬಿದ್ದುದನ್ನಾದರೂ ನಾನು ಕಾಣೆ ॥೪೪॥ ಎಂಬುದಾಗಿ ಆ ಕೋಮಲಾಂಗಿಯು ನುಡಿಯುತ್ತ, ಸಡಗರದಿಂದ ಅವನಕೈಗೆ ಕೈಯನ್ನು ಜೋಡಿಸಿ, ಮೆಲ್ಲಮೆಲ್ಲನೆ ಇನ್ನೊಂದು ಮನೆಗೆ ಅವನನ್ನು ಕರೆದುಕೊಂಡು ಹೋದಳು ॥೪೫॥ ಅಲ್ಲಿ ಅವಳು ಚಪಲಳಾಗಿ ದುಃಖಿಸಿ, ಅವನ ಮೇಲೆಬಿದ್ದು, ಅವನೊಡನೆ ರತಿಕ್ರೀಡೆಯನ್ನೆಸಗುವುದಕ್ಕೆ ಉಜ್ಜುಗಿಸಿದಳು. ಆ ಮಲ್ಲಣನಾದರೊ ಅವಳನ್ನು ಕುರಿತು ನುಡಿದನೇನೆಂದರೆ ॥೪೬॥ ಪ್ರಿಯೇ ನಿನ್ನನ್ನು ನೋಡದೆ ನಾನು ಪ್ರಾಣವನ್ನುಳುಹಿಕೊಂಡಿರಲಾರದವನಾಗಿದ್ದೆ. ಅದುಕಾರಣ, ಬಂದು ನಿನ್ನನ್ನು ನೋಡಿದೆ; ಇದೇ ನನಗೆ ಸಾಕು ॥೪೭॥ ಮನೆಯಲ್ಲಿ ಬೇರೊಬ್ಬ ವಿಟನು ಇರುತ್ತಿರಲಾಗಿ, ನಿನ್ನೊಡನೆ ಈಗ ನಾನು ಕ್ರೀಡಿಸುವುದುಚಿತವೆ? ಎಲೆ ಕಮಲಾಕ್ಷಿ! ಯಾವದಿವಸದಲ್ಲಿ ಯಾವನು ನಿನಗೆ ಬತ್ತೆಯನ್ನು ಕೊಡುವನೋ ॥೪೮॥ ಆ ದಿವಸದಲ್ಲಿ ಅವನೇ ಕಾಂತನು; ಎಂದು ಹೇಳಿ, ಹೊರಡುವುದಕ್ಕೆ ಉಜ್ಜುಗಿಸಿದ ಆ ಮಲ್ಲಣನನ್ನು

ಚನೇ | ಇತಿಪ್ರಿಯಾತುಮುದ್ಯುಕ್ತಂತಮೂಚೇವಚನಂವಧೂಃ ||೪೯|| ಪರಂತ್ವಯ್ಯನುರಕ್ತಾಹಂಮಯಿತ್ವಮಪಿರಾಗವಾನ್ | ಧನಂವಿಹಾಯಬಹು ಳಂಜನನೀಮಮಕರ್ಕಶಾ ||೫೦|| ಆವಾಂವಿಯೋಜಯತ್ಯೇವನಜಾನಾತ್ಯನು ರಾಗಿತಾಂ | ತತ್ಸದ್ಭಕ್ತೋಭವಾನ್ ಭವ್ಯಕವಿತಾತತ್ವಕೋವಿದಃ ||೫೧|| ಕಪ ರ್ದೇಮಾಷಪತನಮಾತ್ರಕಾಲಂವೃಷಧ್ವಜಂ | ಏಕಾಗ್ರಮಾನಸೋಭೂತ್ವಾ ತ್ಕವಿತ್ವವಿಜೃಂಭಣೈಃ ||೫೨|| ಪ್ರಶಂಸತುತವಾದ್ಯೈವವರದಸ್ಸಭವಿಷ್ಯತಿ | ಭವೇತಾವಾವಯೋರೇವಭುಕ್ತಿಮುಕ್ತೀನಿರರ್ಗಳಂ ||೫೩|| ಇತ್ಯುಕ್ತಃಪ್ರ ಹತಂಬಾಲೇಪಶ್ಚಾದ್ಬಾಗಂಮವಾದರಾತ್ | ಕುಚಕಚೂಚುಕಯುಗ್ಮೇನತ್ವ ಮಾಶ್ಲಿಷ್ಯಸಿತಾಸಿಚೇತ್ ||೫೪|| ಬಹುಭಿರ್ಜಲ್ಪಿತೈಃಕಿಂವಾಕ್ಷಣೇನಪರಮೇ ಶ್ವರಂ | ಪದ್ಯೇನೈಕೇನಸಂತುಷ್ಟಂಕೃತ್ವಾಕಮಲಲೋಚನೇ ||೫೫|| ಸಹಸಂ ಭಾಷಯಿಷ್ಯಾಮಿವರಭಕ್ತಿಪ್ರಭಾವತಃ | ಇತ್ಯುಕ್ತ್ವಾಥಸರೇದ್ಯುಸ್ಸಗತ್ವಾ ಶಂಕರಮಂದಿರಂ ||೫೬|| ತಥೈವಾಸ್ಯಾಂಸಮೇತಾಯಾಂಸ್ಥಿತ್ವಾಭಿಮುಖವಿ ಶಿತುಃ | ನಿಧಾಯದೃಷ್ಟಿಂಸರ್ವೇಶೇಕೀರ್ತ್ಯಮಾನಸಭಕ್ತಿಮಾನ್ ||೫೭|| ಕಾಂ ತಾಕಚೇತ್ಯಾದಿವರಶ್ಲೋಕೈಷ್ಷಟ್ತ್ರಿಂಶತಾಯುತೈಃ | ಸಮಾಲಂಕಾರಮಧು

---

ಕುರಿತು ಆಕೆಯು ಹೇಳಿದಳೇನೆಂದರೆ ||೪೯|| ನಾನು ನಿನ್ನಲ್ಲಿ ಅತಿಶಯವಾಗಿ ಅನುರಕ್ತ ಳಾಗಿರುವೆನು. ನೀನುಕೂಡ ನನ್ನಲ್ಲಿ ಅನುರಕ್ತನಾಗಿರುವೆ. ಕಠಿಣಳಾದ ನನ್ನತಾಯಿ ಯು ಬಹಳವಾಗಿ ಹಣವನ್ನು ಅಪೇಕ್ಷಿಸಿ, ನಮ್ಮಿಬ್ಬರನ್ನೂ ಅಗಲಿಸಿಯೇ ಬಿಡುವಳು. ನಾವು ಅನುರಕ್ತರಾಗಿರುವಿಕೆಯನ್ನು ಅವಳು ಯೋಚಿಸಳು. ಆದುದರಿಂದ, ಉತ್ತಮ ಕವಿತಾರಹಸ್ಯದಲ್ಲಿ ನಿಪುಣನೂ ಸದ್ಭಕ್ತನೂ ಆದ ನೀನು ||೫೦|| ಕನ್ನಡಿಯಮೇಲೆ ಉ ದ್ದು ಉರುಳುವಷ್ಟುಕಾಲ ಮಾತ್ರವಾದರೂ ಏಕಾಗ್ರಚಿತ್ತವುಳ್ಳವನಾಗಿ ನಿನ್ನ ಕವಿತ್ವ ಶಕ್ತಿಯನ್ನು ವಿಜೃಂಭಣೆಗೊಳಿಸುವುದರಿಂದ ಪರಶಿವನನ್ನು ಸ್ತೋತ್ರಮಾಡು. ಆ ಶಂ ಕರನು ಈಗಲೇ ನಿನಗೆ ವರವನ್ನುಕೊಡುತ್ತಾನೆ. ನಮ್ಮಿಬ್ಬರಿಗೂ ಭೋಗವೂ ಮೋಕ್ಷ ವೂ ಸಹ ತಡೆಯಿಲ್ಲದೆ ಉಂಟಾಗುವವು ||೫೩|| ಎಂದು ಹೇಳಲ್ಪಟ್ಟ ಮಲ್ಲಣನು ಆಕೆ ಯನ್ನು ಕುರಿತು—ಎಲೆ ಬಾಲೆ, ನೀನು ಜನನ್ನ ನ್ನನ್ನು ನಿನ್ನ ಮೊಲೆಗಳ ತೊಟ್ಟಿನಿಂದ ಸೇರಿಸಿ ಪ್ರೇಮದಿಂದ ಆಲಿಂಗಿಸಿಕೊಂಡು ಇದ್ದದೇ ಆದರೆ ||೫೪|| ಎಲೆ ಕಮಲಾಕ್ಷಿ, ಹೆಚ್ಚುಮಾತಿನಿಂದೇನು? ಕ್ಷಣಮಾತ್ರದಲ್ಲಿ ಶ್ರೇಷ್ಠವಾದ ಭಕ್ತಿಪ್ರಭಾವದಿಂದ ರಚಿತ ವಾದ ಒಂದೇಪದ್ಯದಿಂದ ಪರಶಿವನನ್ನು ಸಂತೋಷಗೊಳಿಸಿ, ಆತನೊಡನೆ ಮಾತನಾಡು ವೆನು, ಎಂದು ಹೇಳಿ, ಭಕ್ತಿವಂತನಾದ ಮಲ್ಲಣನು ಮರುದಿವಸ ಶಿವಾಲಯಕ್ಕೆ ಹೋಗಿ ಈ ಸೂಳೆಯೂ ಬಂದು ಅವನು ಹೇಳಿದಂತೆಯೇ ಮಾಡಲಾಗಿ, ಶಿವನಿಗಿದಿರಾಗಿ ನಿಂತು ಕೊಂಡು, ಆ ಸರ್ವೇಶ್ವರನಲ್ಲಿ ನೋಟವನ್ನಿಟ್ಟು, "ಕಾಂತಾಕಚಪ್ರಚಯ ಪುಷ್ಪಸ

ರೈಶ್ಶೃಂಗಾರರಸಬಂಧುರೈಃ ||೫೮|| ಕೃತೇನಮಲ್ಲಣಸ್ತೋತ್ರೇತ್ತ ಮೇ
ಸಪರಮೇಶ್ವರಂ | ಅಥಗೌರೀಪತಿಃಪ್ರೀತೋಮಲ್ಲಣಂವೇಶ್ಯಯಾಸಹ ||೫೯
ವೇಶ್ಯಾಹಸ್ತ ಶುಕಂತಸ್ಯಾಮಾತರಂಚಕೃಪಾನ್ವಿತಃ | ಸಶರೀರಂಲಸದ್ದಿವ್ಯವಿ
ಮಾನೇನತದಾಸಯತ್ ||೬೦|| ಕೈಲಾಸಂಸುರಸಂಘೇಷುಪ್ರಸ್ತುವತ್ಸುಸಮಂ
ತತಃ | ತಸ್ಮಾತ್ಕಾಂತಾಜನೋದ್ದಿಷ್ಟಬುದ್ಧಿಮಾರ್ಗಾನುವರ್ತಿನಾಂ ||೬೧|| ಹಿತ
ಮೇವಭವೇತ್ಸವ್ಯಗರ್ಥೇಽಸ್ಮಿನ್ನಾತ್ರಸಂಶಯಃ ||

ಇತ್ಯಸಂಖ್ಯಾತ......ಗುರುರಾಜಸ್ಯಕೃತೌಮಲ್ಲಿಕಾರ್ಜುನ ಪಂಡಿತಾ
ರಾಧ್ಯಚರಿತ್ರೇ ಪುರಾತನಪ್ರಕರಣೇ ಗುರುಭಕ್ತಾಂಡಾರ್ಯುಪಾ
ಖ್ಯಾನ ಸಂಕೀರ್ತನೇ ಮಲ್ಲಣಸ್ಯೇತಿಹಾಸಕಥನಂ
ನಾಮಾಷ್ಟಮೋಽಧ್ಯಾಯಃ.

---

ಗಂಧಿ" ಎಂದಾರಂಭಗೊಂಡಿರುವವುಗಳೂ, ನೂತನವಾದ ಅಲಂಕಾರಗಳಿಂದ ಮನೋಹರ
ಗಳೂ, ಶೃಂಗಾರರಸಸಂಗದಿಂದ ಸೊಗಸಾದುವೂ ಆದ ೩೩ ಶ್ಲೋಕಗಳಿಂದ * ಪರಶಿವನನ್ನು
ಸ್ತೋತ್ರಮಾಡಿದನು ||೫೮|| ಈ ಪ್ರಕಾರವಾದ ಮಲ್ಲಣನ ಸ್ತೋತ್ರದಿಂದ ಪರಮೇ
ಶ್ವರನು ಮೆಚ್ಚಿದವನಾಗಿ, ಆಗ ಕೃಪೆಯಿಂದ ಮಲ್ಲಣನನ್ನೂ ಅವನ ಸೂಳೆಯನ್ನೂ,
ಆಕೆಯ ಕೈಗಿಳಿಯನ್ನೂ, ಅವಳ ತಾಯನ್ನೂ ಸಹ ದೇಹಸಮೇತವಾಗಿ ದೇವವಿಮಾನದ
ಲ್ಲಿ ಕುಳ್ಳಿರಿಸಿಕೊಂಡು, ಎಲ್ಲಕಡೆಯೂ ದೇವತಾಸಮೂಹವು ಸ್ತೋತ್ರಮಾಡುತ್ತಿರಲಾಗಿ,
ಕೈಲಾಸಕ್ಕೆ ಕರೆದುಕೊಂಡು ಹೋದನು. ಆದುದರಿಂದ ಸ್ತ್ರೀಜನರು ತೋರಿಸಿದ ಬು
ದ್ಧಿಯ ಮಾರ್ಗವನ್ನನುಸರಿಸಿ ನಡೆಯುವರಿಗೆ ಹಿತವೇ ಆಗುವುದು. ಈ ಉತ್ತಮಾಭಿ
ಪ್ರಾಯ ವಿಷಯದಲ್ಲಿ ಸಂಶಯವಿಲ್ಲ ||೬೧|| ಎಂದು ರಂಭೆಯು ನುಡಿದಳೆಂದು ಪಾರ್ವತಿ
ಯು ಗುರುಭಕ್ತಾಂಡಾರಿಗೆ ಬೋಧಿಸಿದಳೆಂಬಲ್ಲಿಗೆ,

ಶ್ರೀಮತ್ಪಂಡಿತಾರಾಧ್ಯಚರಿತ್ರಕ್ಕೆ ಎ. ಆರ್. ಕರಿಬಸವಶಾಸ್ತ್ರಿ ರಚಿತವಾದ
"ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ಗುರುಭಕ್ತಾಂಡಾರಿಯ
ಕಥೆಯಲ್ಲಿ ಮಲ್ಲಣನ ಇತಿಹಾಸವನ್ನು ವಿವರಿಸುವ
೮ ನೆಯ ಅಧ್ಯಾಯವು ಮುಗಿದುದು.

---

* ಈ ಸ್ತೋತ್ರಪದ್ಯಗಳು ೩೯ ಎಂದು ಕಂಡುಬರುತ್ತಿವೆ. ಆದರೆ ಮಲ್ಲಣಕ
ಥೆಯನ್ನಭಿವರ್ಣಿಸಿರುವ ಬಸವಪುರಾಣಾದಿಗಳಲ್ಲೆಲ್ಲ ೩೩ ಎಂದೇ ಹೇಳಲ್ಪಟ್ಟಿದೆ.

# ಅಥ ನವಮೋಽಧ್ಯಾಯಃ.

(ಕುಮಾರಪಾಲಗೂರ್ಜರ ಕಥಾ)

ಪುನರ್ಮಹೇಶಸದ್ಭಕ್ತಾಃಪರಿಹಾಸಕಥಾಸ್ವಪಿ । ಯದೂಚುರ್ಜಾಯ ತೇಸರ್ವಂತದೇವಮುಹಿತಂಹಿತಂ ‖ ೧ ‖ ಅತ್ರೋದಾಹರಣಾಯೇಯಂಕಥಾ ಸಂಪ್ರತಿವಕ್ಷ್ಯತೇ । ವೀರಮಾಹೇಶ್ವರಃಪಾಪಘುರಟ್ಟೋಽತಿವಿಚಕ್ಷಣಃ ‖ ಮಹಾನ್ಮಹೇಶಸದ್ಭಕ್ತಿಪರೋಽಸಹ್ಯಪ್ರತಾಪವಾನ್ । ಕುಮಾರಪಾಲೋ ಪಪದಗೂರ್ಜರೋನಾಮಭೂಪತಿಃ ‖ ೨ ‖ ಕದಾಚಿತ್ಕಾಂತಯಾಸಾಕಂಚ ಕ್ರೀದ್ಯೂತಮವಕ್ರಧೀಃ । ಏಕಾದಶೇಂದ್ರಿಯಾಣ್ಯಂತಃಕರಣಾನಾಂಚತುಷ್ಟ ಯೇ ‖ ೪ ‖ ತ್ರೀಣಿನೋಽಹಸ್ಕೇತಿಸರ್ವಾಣ್ಯೇವಂಪಂಚವಶಾಭವನ್ । ಕಾಂತಾ ಸಂಬಂಧಿಷುಸ್ವೀಯೇಷ್ವೇಷುಶಾರೇಷುಸತ್ಸುಚ ‖ ೫ ‖ ಪ್ರಾವೀಣ್ಯಂಫಲಕಂ ಕೃತ್ವಾವೀಥ್ಯೇರಿಹಸರಾಜ್ಯಯೋಃ । ಪಾಪಪುಣ್ಯಾಕ್ಷಯುಗಳೇಮುಹುಸ್ಸಂ

---

# ೯ ನೆಯ ಅಧ್ಯಾಯವು.

( ಕುಮಾರಪಾಲಗೂರ್ಜರನ ಕಥೆ )

ಮತ್ತೂ, ಶಿವಭಕ್ತರುಗಳು ಹಾಸ್ಯಸಮಯದಲ್ಲಿ ಯಾವ ಮಾತನ್ನಾಡುವರೋ ಅದೆಲ್ಲವೂ ಪೂಜ್ಯವಾಗಿ ಹಿತಪ್ರದವಾಗಿರುವುದು. ಈ ವಿಷಯದಲ್ಲಿ ಉದಾಹರಣಾರ್ಥ ವಾಗಿ ಈ ಕಥೆಯನ್ನು ಹೇಳುತ್ತೇನೆ:—ವೀರಶೈವಮಾಹೇಶ್ವರನೂ, ಪಾಪಧ್ವಂಸಕನೂ ಅತ್ಯಂತ ಕುಶಲನೂ ‖ ೧ ‖ ಶಿವಭಕ್ತಿತತ್ಪರನೂ ಇತರರಿಂದ ತಾಳುವುದಕ್ಕೆ ಶಕ್ಯವಾದ ಪರಾ ಕ್ರಮವುಳ್ಳವನೂ ಮಹತ್ತ್ವವುಳ್ಳವನೂ ಆದ ಕುಮಾರಪಾಲಗೂರ್ಜರನೆಂಬ ದೊರೆಯಿ ದ್ದನು ‖ ೨ ‖ ಆತನು ಅಕುಟಿಲವಾದ ಬುದ್ಧಿಯುಳ್ಳವನಾಗಿ ಒಂದಾನೊಂದುದಿನ ತನ್ನ ಪತ್ನಿಯೊಡನೆ ಪಗಡೆಯ ಜೂಜನ್ನಾಡಿದನು. ಹೇಗೆಂದರೆ—೧೧ ಇಂದ್ರಿಯಂಗಳು (ಕ ರ್ಮೇಂದ್ರಿಯಗಳು ೫, ಜ್ಞಾನೇಂದ್ರಿಯಗಳು ೫, ಮನಸ್ಸು ೧) ಅಂತಃಕರಣಗಳು ೪ ( ಬುದ್ಧ್ಯಾದಿಗಳು ೩, ಮೋಹ ೧ ) ಎಲ್ಲವೂ ಸೇರಿ ಹೀಗೆ ಹದಿನೈದಾದುವು. ಹೀಗೆ ತನ್ನ ಹೆಂಡತಿಯವು ೧೫, ತನ್ನವು ೧೫, ಪಗಡೆಯಕಾಯಿಗಳಾಗಿರಲಾಗಿ ‖ ೬ ‖ ತನ್ನ ಆತ್ಮವಿಚಾರ ಕೌಶಲ್ಯವೆಂಬ ಲೆತ್ತದ ಹಲಗೆಯನ್ನು ಮಾಡಿ, ಇಹಪರಗಳೆಂಬ ಎರಡು ಪಾಸಂಗಿಗಳ ಮೇಲೆ, ಆ ಕಾಯಿಗಳು ಇರುತ್ತಿರಲು, ಪಾಪಪುಣ್ಯಗಳೆಂಬ ಎರಡು ದಾಳಗಳನ್ನು ಬಾರಿ

ಪ್ರೇರಿತೇಽಸತಿ ‖ ೬ ‖ ತತ್ವಂಪ್ರಾಪ್ತೇಽಫಲೇದಾಯೇಽಸತಿಸದ್ಭಕ್ತಶೇಖರಃ । ದ್ವಿ
ಪಂಚಕಾಖ್ಯಯೋರ್ದಾಯೋರ್ನಿಪತತ್ಯಕ್ಷಯೋರ್ಯದಾ ‖ ೭ ‖ ತದಾದಶವಿಧಾಭ
ಕ್ತಿಃಪ್ರಾಪ್ತೇತಿಮನುತೇಹೃದಿ । ಯದಾದಾಯೋನಿಪತತಿದ್ವಿತಯದ್ವಯನಾ
ಮಕಃ ‖ ೮ ‖ ಇಹಾಮುತ್ರಚಸದ್ಭಕ್ತಿಃಫಲತೀತಿವದತ್ಯಸೌ । ದ್ವಿತ್ರಿಕೇ
ಪತಿತೇದಾಯೇದೀವ್ಯತ್ಯಧಿಕಹರ್ಷತಃ ‖ ೯ ‖ ಭವೇತ್ತ್ರಿವಿಧಲಿಂಗಾನಾಂತ್ರಿವಿ
ಧಾರ್ಪಣಮಿತ್ಯಯಂ । ದ್ವಿಚತುಷ್ಕೇಯದಾದಾಯೇಪತಿತೇಮನುತೇಹೃದಿ ‖
ಸದೈವಾಷ್ಟಮದಾಸ್ತ್ಯಾಜ್ಯಾಶ್ಶಿವಭಕ್ತಪರೈರಿತಿ । ಯದಾವಾಪಂಚಸಂಖ್ಯಾ
ಕೋದಾಯೋನಿಪತಿತೋಭವೇತ್ ‖ ೧೧ ‖ ಪಂಚೇಂದ್ರಿಯೇಭ್ಯಃಪ್ರಸಾದಂ
ಪ್ರಯಚ್ಛನ್ನಿವದೀವ್ಯತಿ । ಷಟ್ಸಂಖ್ಯಾತೇಯದಾದಾಯೇಪತಿತೇಮನುತೇತ
ದಾ ‖ ೧೨ ‖ ಷಟ್ಸ್ಥಲಾಚರಣಾಜ್ಞೇಯಾಸ್ಸದ್ಭಕ್ತೈರಿತಿಮಾನಸೇ । ಪ್ರಾ
ಪ್ತೇಭದ್ರಾಖ್ಯಯೋದಾಯೇವೀರಭದ್ರಂಸ್ಮರತ್ಯಸೌ ‖ ೧೩ ‖ ತ್ರಿಕೇಚಪಂಚ
ಕೇಪ್ರಾಪ್ತೇತ್ರಿಮಲಂಕ್ಲೇಶಪಂಚಕಂ । ವರ್ಜನೀಯಾಮಹಾದೇವಭಕ್ತೈರಿ
ತಿಸದೀವ್ಯತಿ ‖ ೧೪ ‖ ಚತುಷ್ಕೇಪಂಚಕೇಪ್ರಾಪ್ತೇದಾಯೇಸಧರಣೀಪತಿಃ ।

---

ಬಾರಿಗೂ ಉರುಳಿಸುತ್ತ ‖ ೬ ‖ ಅದರಿಂದ ಬೀಳುವ ದಾಯುಗಳ ಸಂಖ್ಯಾನುಗುಣವಾದ
ಫಲಪ್ರಾಪ್ತಿಯು ತನಗಾದುದೆಂದು ಪರಿಭಾವಿಸಿಕೊಂಡಿರುತ್ತ, ದಾಳಗಳೊಳಗೆ ಯಾವಾಗ
೧೦ ಬೀಳುವುದೋ ‖ ೭ ‖ ಆಗ ಹತ್ತು ತರದ ಭಕ್ತಿಯು ತನಗೆ ಸಮನಿಸಿತೆಂದು ಮನಸ್ಸಿ
ನಲ್ಲಿ ತಿಳಿಯುವನು. ಯಾವಾಗ ದುಗಗಳೆಂಬ ದಾಯುಗಳೆರಡು ಬೀಳುವುವೋ ಆಗ ‖ ೮ ‖
ಇಹಪರಗಳೆರಡರಲ್ಲೂ ತನಗೆ ಭಕ್ತಿಯು ಫಲಿಸುವುದೆಂದು ಹೇಳುವನು. ಇತ್ತಿಗ
(ಮೂರರ ಜೋಡಿ) ವೆಂಬ ದಾಯುವು ಯಾವಾಗ ಬೀಳುವುದೋ ಆವಾಗ ತ್ರಿವಿಧಲಿಂ
ಗಗಳಿಗೆ ತ್ರಿವಿಧವಾದ ಅರ್ಪಣವಾಗುವುದೆಂದು ತಿಳಿದು ಅತ್ಯಂತ ಸಂತೋಷದಿಂದ
ಆಡುವನು ‖ ೯ ‖ ಯಾವಾಗ ಎಂಟರ ದಾಯುವು ಬೀಳುವುದೋ ಆಗ ಅಷ್ಟಮದಗ
ಳನ್ನು ಯಾವಾಗಲೂ ಶಿವಭಕ್ತರುಗಳು ಬಿಟ್ಟಿರಬೇಕೆಂದು ಮನಸ್ಸಿನಲ್ಲಿ ತಿಳಿದುಕೊಳ್ಳು
ವನು. ಯಾವಾಗ ೫ ರ ದಾಯುವು ಬೀಳುವುದೋ ‖ ೧೧ ‖ ಆಗ ೫ ಇಂದ್ರಿಯುಗಳಿಗೂ
ಪ್ರಸಾದವನ್ನು ಅರ್ಪಿಸುವನಂತೆ ಆಡುವನು. ಯಾವಾಗ ಆರರದಾಯುವು ಬೀಳುವುದೋ
ಆಗ ಷಟ್ಸ್ಥಲದ ಆಚರಣೆಯನ್ನು ಭಕ್ತರುಗಳು ತಿಳಿದುಕೊಂಡಿರಬೇಕೆಂದು ಮನಸ್ಸಿ
ನಲ್ಲಿ ತಿಳಿದುಕೊಳ್ಳುವನು. ಭದ್ರವೆಂಬ ೭ ರ ದಾಯುವು ಬಿದ್ದರೆ, ಈ ಭಕ್ತೋತ್ತಮನು
ವೀರಭದ್ರನನ್ನು ಸ್ಮರಿಸುವನು ‖ ೧೩ ‖ ಮೂರೂ ಐದೂ ಸಹ ಬಂದಾವೃತ್ತಿ ದಾಳಗ
ಳಲ್ಲಿ ಬೀಳಲು, ಮಲತ್ರಯವನ್ನೂ ಪಂಚಕ್ಲೇಶವನ್ನೂ ಶಿವಭಕ್ತರುಗಳು ಬಿಡಬೇ
ಕೆಂದು ತಿಳಿದು ಆಟವಾಡುವನು ‖ ೧೪ ‖ ಬಂದಾವೃತ್ತಿ ೪-೫ ರ ದಾಯುವು ಬೀಳಲು, ಸಾ

ಭವೇಚ್ಚತುರ್ವಿಧೋಮೋಕ್ಷಃಪಂಚಾಕ್ಷರ್ಯೇತಿಭಾಷತೆ ॥ ೧೫ ॥ ತ್ರಿಕೋಚತುಷ್ಕೇಸಂಪ್ರಾಪ್ತೇಭಾಷತೇವಸುಧಾಧಿಪಃ । ತಾಪತ್ರಯಂಚತುರ್ವರ್ಗಂವರ್ಜಯೇದಾರ್ಜಯೇದಿತಿ ॥ ೧೬ ॥ ದ್ಯೂತಲೀಲಾಮಿನಾಮೇವಂಕರ್ತುಂಕೈರ್ಭುವಿಶಕ್ಯತೇ । ಕೃಪಾವಿರಹಿತೈಶ್ಯಂಭೋರಿತಿಭಕ್ತಕದಂಬಕೇ ॥ ೧೭ ॥ ಪರಿತಃಕುರ್ವತಿಸ್ತೋತ್ರಂದ್ಯೂತಂಭಕ್ತಿವಿರೋಧಿಯತ್ । ತದೇವಶಿವಸದ್ಭಕ್ತೇರ್ವಿನೋದಮುಪಕಲ್ಪ್ಯಸಃ ॥ ೧೮ ॥ ಕಾರಂಕಾರಮಥದ್ಯೂತಂವಿಲೋಕ್ಯವನಿತಾಮುಖಂ । ದರಹಾಸವಿಕಾಸೇನಸ್ಫುರಿತಾಸ್ಯಾಂಬುಜೋಽಭವತ್ ॥ ೧೯ ॥ ಇತಸ್ತತೋನಿರೀಕ್ಷ್ಯಾಥಸಾತತೋನೃಪತಿವಲ್ಲಭಾ । ಉಭಾವಿನಾತ್ರನಾನ್ಯೋಽಸ್ತಿನಚಕಿಂಚಿತ್ಪ್ರಯೋಜನಂ ॥ ೨೦ ॥ ಕಿಂಕಾರಣಂವಾಹಾಸಸ್ಯಮಾಂವಿಲೋಕ್ಯೇತಿಲಜ್ಜಿತಾ । ಸಂಕೋಚಿತಾಸ್ಯಕಮಲಾನಿಧಾಯಫಲಕಸ್ಥಲೇ । ಕರಸ್ಥಿತಾಕ್ಷಯುಗಳಂವಿಹಾಯದ್ಯೂತಮಾಹತಂ । ನಿರ್ನಿಮಿತ್ತಸ್ಮಿತಮಿದಂಸಂಜಾತಂಭವತೋನೃಪ ॥ ೨೧ ॥ ಅಜ್ಞಾತಾಯಮಾಮೇದಾನೀಂಕರೋತಿಹೃದಿಸಂಶಯಂ । ಬಾಹ್ಯಾಂತರಾರ್ಪಣನಿಜಾವಧಾನವಶತೋಽಧುನಾ ॥ ೨೨ ॥

---

ಲೋಕ್ಯಾದಿ ಚತುರ್ವಿಧಮೋಕ್ಷವು ಪಂಚಾಕ್ಷರಿಯಿಂದ ಉಂಟಾಗುವುದೆಂದು ಆ ದೊರೆಯು ಮಾತನಾಡಿಕೊಳ್ಳುವನು ॥ ೧೫ ॥ ೩-೪ ರ ದಾಯವು ಬೀಳಲು, ತಾಪತ್ರಯವನ್ನು ಬಿಡಬೇಕು, ಧರ್ಮಾದಿ ಚತುರ್ವಿಧಪುರುಷಾರ್ಥಗಳನ್ನು ಸಂಪಾದಿಸಬೇಕು ಎಂದು ದೊರೆಯು ನುಡಿದನು ॥ ೧೬ ॥ ಭೂಮಿಯಲ್ಲಿ ಶಿವನ ಕೃಪೆಯಿಲ್ಲದಿರುವ ಯಾರಿಗೆ ತಾನೇ ಇಂಥ ಜೂಜನ್ನು ಹೀಗೆ ಆಡುವುದಕ್ಕೆ ಶಕ್ಯವಾದೀತು ? ಎಂದು ಭಕ್ತಸಮೂಹವು ॥ ೧೭ ॥ ಸುತ್ತಲೂ ಸ್ತೋತ್ರಮಾಡುತ್ತಿರಲಾಗಿ, ಆ ಪಾಲಗೂರ್ಜರನು ಭಕ್ತಿಮಾರ್ಗಕ್ಕೆ ವಿರುದ್ಧವಾದ ಜೂಜನ್ನೇ ಶಿವಭಕ್ತಿಯ ಲೀಲೆಯನ್ನಾಗಿ ಕಲ್ಪಿಸಿಕೊಂಡು ॥ ೧೮ ॥ ಜೂಜನ್ನಾಡುತ್ತಾ ಡುತ್ತಾ, ಹೆಂಡತಿಯ ಮುಖವನ್ನು ನೋಡಿ, ಮುಗುಳ್ನಗೆಯಿಂದ ಅರಲಿದ ಮುಖಕಮಲವುಳ್ಳವನಾದನು ॥ ೧೯ ॥ ಬಳಿಕ ರಾಜಪತ್ನಿಯು ಇತ್ತತ್ತನೋಡಿ, ನಾವಿಬ್ಬರ ಹೊರತು ಇಲ್ಲಿ ಮತ್ತಾರೂ ಇಲ್ಲ ಇನ್ನಾವ ಫಲವೂ ಇಲ್ಲ ॥ ೨೦ ॥ ನನ್ನನ್ನು ನೋಡಿ ನಗುವುದಕ್ಕೆ ಕಾರಣವೇನು? ಎಂದು ಯೋಚಿಸಿ, ನಾಚಿಕೆಗೊಂಡವಳಾಗಿ, ಮುಖವನ್ನು ಚಿಕ್ಕದುಮಾಡಿಕೊಂಡು, ಕೈಯಲ್ಲಿದ್ದ ದಾಳಗಳನ್ನು ಜೂಜಿನ ಹಾಗೆಯ ಮೇಲಿಟ್ಟು, ಜೂಜನ್ನು ಬಿಟ್ಟು, ಪತಿಯನ್ನು ಕುರಿತು ನುಡಿದಳೇನೆಂದರೆ—ದೊರೆಯೆ, ನಿನ್ನಲ್ಲಿ ನಿಷ್ಕಾರಣವಾಗಿ ಹುಟ್ಟಿದ ಈ ಮುಗುಳ್ನಗೆಯು ॥ ೨೧ ॥ ಏನೂ ತಿಳಿಯದ ನನಗೆ ಈಗ ಮನಸ್ಸಿನಲ್ಲಿ ಸಂಶಯವನ್ನುಂಟುಮಾಡುತ್ತದೆ. ಅವಧಾನವಿತ್ತು ಬಹಿರಂತರರ್ಪಣಗಳನ್ನು ಮಾಡುವುದರಿಂದ ಈಗ ನಿನಗೆ ಬ್ರಹ್ಮಾನಂದವುಂಟಾಗಿ, ಆ ಸೌಖ್ಯಾತಿಶಯದಿಂದ ಈ

ಜಾತಾಪರಶಿವಾನಂದಸೌಖ್ಯಾತಿಶಯತಃ ಕಿಮು । ಏತಸ್ಮಾದವಧಾನಾದ್ವಾ ಕಿಮಹಂ ಮುಕ್ತವಾನಿತಿ ॥ ೨೪ ॥ ಮಯಿ ಕಿಂಚಿದ್ವೈಪರೀತ್ಯಮಿದಾನೀಂ ಪ್ರವಿಲೋಕ್ಯ ವಾ । ದ್ಯೂತಾಭಿರತಿರೀಶಾನಭಕ್ತೇರ್ಯುಕ್ತಾ ನಹೀತಿ ವಾ ॥ ೨೫ ॥ ಅಸ್ಥಾನೇ ನಿಹಿತೇ ಶಾರೇ ಯದಿ ವಾ ಸಂಭ್ರಮಾನ್ಮಯಾ । ದೂರಪ್ರಸಾರಣಾದಕ್ಷಯುಗಸ್ಯ ಯದಿ ವಾ ಪೃಥಕ್ ॥ ೨೬ ॥ ಏತಸ್ಮಿನ್ ಫಲಕೇ ಸೋಽದ್ಯ ಜಯೋ ನಾಸ್ತೀತ್ಯುದೀಕ್ಷ್ಯ ವಾ । ಕುಚಯೋರ್ನಿಹಿತೇ ಚೇಲಾಂಚಲೇ ವಿಗಳಿತೇಽಥವಾ ॥ ೨೭ ॥ ಉತ್ಕ್ರಮಃ ಪರಿತ್ಯಕ್ತಃ ಪರಿಹಾಸವಚೋವಶಾತ್ । ಕಿಂ ವಾ ಸಂಸ್ಮೃತ್ಯ ಹೃದಯೇ ರತಿಂ ಪೂರ್ವದಿನೋದಿತಾಂ ॥ ೨೮ ॥ ಆಗತ್ಯ ಮನ್ಮಥೇನಾದ್ಯ ಕಿಂ ವಾ ಸಮುಪರೋಧನಾತ್ । ಅಥಾಗತಸ್ಯ ಶಾರಸ್ಯ ಭೂಯೋಪಿ ಸಮುಪಾಗಮಾತ್ ॥ ೨೯ ॥ ಅಥವಾ ದ್ವಿಗುಣಂ ಕೃತ್ವಾ ಕಿಮು ಸಮ್ಯಕ್ಪ್ರಹರ್ಷಣಾತ್ । ಶಾರಸ್ಯ ಹನನಾದ್ವಾ ಕಿಂ ದ್ವಿತೀಯಭವನೇಽಥವಾ ॥ ೩೦ ॥ ಯಥಾತಥಂ ಸಮಾಚಕ್ಷ್ವ ತೂಷ್ಣೀಂ ಹಸನಕಾರಣಂ । ಅನ್ಯಥಾ ಗೋಪಯಸಿ ಚೇದಾಜ್ಞಾ ತ್ವತ್ಪಾದಯೋಸ್ತವ ॥ ೩೧ ॥ ಇತ್ಯುಕ್ತೋ ಗೂರ್ಜರೋ ದ್ಯೂತಂ ಸಮಾಸ್ಯ ಪ್ರಹಸನ್ ಪುನಃ । ಉ

---

ನಗೆಯು ಮೂಡಿತೊ? ಅಥವಾ ಅಂಥ ಅವಧಾನದಿಂದ ನಾನು ಬಿಡಲ್ಪಟ್ಟೆನೆಂದು ತಿಳಿದು ಹುಟ್ಟಿತೊ? ॥ ೨೪ ॥ ಈಗ ನನ್ನಲ್ಲಿ ಸ್ವಲ್ಪ ವ್ಯತ್ಯಾಸವನ್ನೇನಾದರೂ ಕಂಡು ನಕ್ಕೆಯೊ? ಜೂಜಿನಲ್ಲಿ ಆಸಕ್ತಿಯಿಡುವುದು ಶಿವಭಕ್ತಿಗೆ ಯುಕ್ತವಲ್ಲವೆಂದು ನಕ್ಕೆಯೊ? ॥ ೨೫ ॥ ನಾನು ಸಡಗರದಿಂದ ಕಾಯನ್ನು ಸ್ಥಾನ ತಪ್ಪಿ ಇಟ್ಟುದುದಕ್ಕಾಗಿ ನಕ್ಕೆಯೊ? ದಾಳಗಳನ್ನು ಬೇರೆ ಬೇರೆ ಮಾಡಿ ದೂರವಾಗಿ ಇಟ್ಟುದಕ್ಕಾಗಿ ನಕ್ಕೆಯೊ? ॥ ೨೬ ॥ ಈ ಆಟದಲ್ಲಿ ನನಗೆ ಗೆಲುವುಂಟಾಗುವುದೆಂದು ಯೋಚಿಸಿ ನಕ್ಕೆಯೊ? ಸ್ತನಗಳ ಮೇಲೆ ಹಾಕಿದ್ದ ಸೀರೆಯ ಮುಸುಗು ಜಾರಿಬಿದ್ದುಹೋಗಿದ್ದುದಕ್ಕಾಗಿ ನಕ್ಕೆಯೊ? ॥ ೨೭ ॥ ಅಥವಾ ಹಾಸ್ಯದ ಮಾತಿನ ಪೆಸೆಯಿಂದ ಆಟದ ರೀತಿಯು ತಪ್ಪಿಹೋಯಿತೆಂದು ನಕ್ಕೆಯೊ? ನೆನ್ನೆಯ ದಿನದಲ್ಲಿ ಅನುಭವಿಸಿದ ಸುರತವನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡು ನಕ್ಕೆಯೋ ॥ ೨೮ ॥ ಈಗ ಕಾಮಾವಿರ್ಭಾವವುಂಟಾಗಿ ಅದನ್ನು ತಡೆದುಕೊಂಡುದರಿಂದ ನಕ್ಕೆಯೋ? ಇಲ್ಲವೆ ಸತ್ತುಬಂದಿದ್ದ ಕಾಯೇ ಮತ್ತೆ ಬಂದುದರಿಂದ ನಕ್ಕೆಯೋ? ॥ ೨೯ ॥ ಅಥವಾ ಬಂದೇ ದಾಯವನ್ನು ಎರಡಾವೃತ್ತಿ ನಡೆಯಿಸಿಕೊಂಡು ಸಂತೋಷಗೊಂಡುದರಿಂದ ನಕ್ಕೆಯೋ? ಮುಂದಿನ ಎರಡನೆಯ ಮನೆಯಲ್ಲಿದ್ದ ಕಾಯನ್ನು ತಪ್ಪಿದ ಲೆಕ್ಕದಿಂದ ವಂಚಿಸಿ ಹೊಡೆದುದರಿಂದ ನಕ್ಕೆಯೋ? ॥ ೩೦ ॥ ಈ ನಗುವಿಗೆ ಕಾರಣವನ್ನು ಯಥಾರ್ಥವಾಗಿ ಹೇಳು. ಹಾಗಲ್ಲದೆ ಮರೆಮಾಜಿದರೆ ನಿನಗೆ ನಿನ್ನ ಪಾದದಾಣೆ ॥ ೩೧ ॥ ಎಂದು ಹೇಳಲು, ಪಾಲಗೂ

ವಾಚವಚನಂರಾಜಾಹರ್ಷೇಣಪ್ರಿಯಭಾಮಿನೀಂ ॥ ೩೨ ॥ ಶೃಣುಕಾಮಿ
ನಿಸೌರಾಷ್ಟ್ರೇ ಸೋಮನಾಥಸ್ಯಶೂಲಿನಃ । ಸೇವಾಪರೋಽನವರತಮೋ
ಹಿಲೋನಾಮಭಕ್ತಿಮಾನ್ ॥ ೩೩ ॥ ಸನ್ಮಾರ್ಗವರ್ತೀಪರಮಮಾಹೇಶ್ವರಪ
ರಾನುಗಃ । ಶಿವೇನಾಪಿವಿಚಿತ್ರಂತಚ್ಚಾರಿತ್ರಂಶಂಸಿತುಂಪ್ರಿಯೇ ॥ ೩೪ ॥ ಹರ
ಸ್ಯಸೋಮನಾಥಸ್ಯಸಮಾಗತ್ಯಾಜ್ಞಯಾಸ್ವಯಂ । ಪರಮೇಶಂತ್ರಿಲೋಕ್ಯೈ
ಕಸೇವ್ಯಂಭಕ್ತಜನಪ್ರಿಯಂ ॥ ೩೫ ॥ ಸೌರಾಷ್ಟ್ರಸೋಮನಾಥಾಖ್ಯಂಥನ
ದೃಷ್ಟ್ವಾಪದಾಬ್ಜಯೋಃ । ನತ್ವಾನಂದಾಶ್ರುಸಂಪೂರ್ಣನಯನಃಪುಲಕಾಂಚಿ
ತಃ ॥ ೩೬ ॥ ಸ್ತುವನ್ಗದ್ಗದಯಾವಾಚಾಮಹಾದೇವಂವಿಶುದ್ಧಧೀಃ । ನಿಜಾ
ಕುಂಠಿತಯಾಭಕ್ತ್ಯಾಧೃತರುದ್ರಾಕ್ಷಮಾಲಿಕಃ ॥ ೩೭ ॥ ಭಸ್ಮಾವಲಿಪ್ತಸ
ರ್ವಾಂಗೋಭೂತ್ವಾಚನಿಯಮಾನ್ವಿತಃ । ಕೃತ್ವಾಸಹಸ್ರಕಲಶಾಭಿಷೇಕಂಪಾರ್ವ
ತೀಪತೇಃ ॥ ೩೮ ॥ ಸಮುದ್ರಸಲಿಲೈರೇವತತೋಬಿಲ್ವದಳೈಶ್ಶಿವಂ । ಅಖಂ
ಡೈಸ್ಸಮ್ಯಗಭ್ಯರ್ಚ್ಯಸ್ವಭಾರತುಲಿತೇನಚ ॥ ೩೯ ॥ ಮಹಿಷಾಕ್ಷ್ಯಭಿಧಾನೇನ
ನವಗುಗ್ಗುಲಜೋತ್ತಮಂ । ಧೂಪಂಸಮರ್ಪ್ಯಸದ್ಭಕ್ತ್ಯಾಕೃತ್ವಾನೀರಾಜ

---

ರ್ಜರ ರಾಜನು ನಕ್ಕು, ಜೂಜನ್ನು ಮುಗಿಸಿ, ಸಂತೋಷದಿಂದ ಪ್ರಿಯಪತ್ನಿಯನ್ನು
ಕುರಿತು ನುಡಿದನೇನೆಂದರೆ — ॥೩೨॥ ಕಾಂತೆಯೇ ಕೇಳು. ಸನ್ಮಾರ್ಗಗಾಮಿಯಾಗಿಯೂ
ಉತ್ಕೃಷ್ಟ ವೀರಮಾಹೇಶ್ವರರ ಸೇವಕನಾಗಿಯೂ ಇರುವ ಮೋಹಿಲನೆಂಬ ಭಕ್ತಿವಂತನು
ಯಾವಾಗಲೂ ಸೌರಾಷ್ಟ್ರದ ಶ್ರೀ ಸೋಮನಾಥನ ಸೇವೆಯನ್ನು ಮಾಡಿಕೊಂಡಿ
ರುತಿದ್ದನು. ಎಲೆಪ್ರಿಯೆ, ವಿಚಿತ್ರವಾದ ಆತನ ಚರಿತ್ರೆಯನ್ನು ಹೊಗಳುವುದಕ್ಕೆ
ಶಿವನಿಗೂ ಅಶಕ್ಯವು. ॥೩೪॥ ಆತನು ಶ್ರೀ ಸೋಮನಾಥನ ಅಪ್ಪಣೆಯಿಂದ ಸೌರಾ
ಷ್ಟ್ರಕ್ಕೆ ಬಂದು, ಮೂರುಲೋಕಗಳಿಗೂ ಒಬ್ಬನೇ ಸೇವ್ಯನಾಗಿಯೂ, ಭಕ್ತಜನರಿಗೆ
ಪ್ರೀತಿಯುಳ್ಳವನಾಗಿಯೂ ಇರುವ ಸೌರಾಷ್ಟ್ರ ಸೋಮನಾಥನನ್ನು ನೋಡಿ, ಪಾದ
ಕಮಲಗಳಿಗೆ ನಮಸ್ಕರಿಸಿ, ಸಂತೋಷಬಾಷ್ಪಗಳಿಂದ ತುಂಬಿದ ಕಣ್ಣುಗಳುಳ್ಳವನಾಗಿ,
ರೋಮಾಂಚನಗೊಂಡು ॥೩೬॥ ನಿರ್ಮಲಬುದ್ಧಿಯುಳ್ಳವನಾಗಿ ಗದ್ಗದಧ್ವನಿಯಿಂದ ಕೂಡಿದ
ಮಾತುಗಳಿಂದ ಶ್ರೀಮಹಾದೇವನನ್ನು ಸ್ತೋತ್ರಮಾಡಿದವನಾಗಿ, ತಡೆಯಿಲ್ಲದ ತನ್ನ
ಭಕ್ತಿಯಿಂದ ರುದ್ರಾಕ್ಷಮಾಲೆಗಳನ್ನು ಧರಿಸಿ ॥೩೭॥ ಸಕಲಾಂಗದಲ್ಲೂ ಭಸ್ಮವನ್ನು ಲೇ
ಪಿಸಿ, ನಿಯಮದಿಂದ ಕೂಡಿ, ಪಾರ್ವತೀಪತಿಯಾದ ಶಿವನಿಗೆ ಸಾವಿರ ಕೊಡಗಳ ಸಮುದ್ರದ ಜಲದಿಂದಲೇ
ಅಭಿಷೇಕಮಾಡಿ ॥೩೮॥ ಬಳಿಕ ಒಡೆಯದೆ ಸಮಗ್ರವಾಗಿರುವ ಬಿಲ್ವಪತ್ರಗಳಿಂದ ಶಿವ
ನನ್ನು ಚೆನ್ನಾಗಿ ಪೂಜಿಸಿ, ತನ್ನ ತೂಕದ ಮಹಿಷಾಕ್ಷಿ ಗುಗ್ಗುಲದ ಧೂಪವನ್ನು ಸಮ

ನಾಮಥ ॥ ೪೦ ॥ ಪಂಚಭಕ್ಷ್ಯಾದಿಲಲಿತಂಸಮರ್ಪ್ಯಾನ್ನಂಕಪರ್ದಿನೇ । ಸಹ
ಸ್ರವಾರಮೇವಸ್ಯಕೃತ್ವಾಸವ್ಯಪ್ರದಕ್ಷಿಣಂ ॥ ೪೧ ॥ ಸ್ತುತ್ವಾಬಹುಪ್ರಕಾ
ರೇಣಶಿವಂಸೌರಾಷ್ಟ್ರನಾಯಕಂ । ತದಾದಿಸ್ವಪ್ರಮಾಣೇನವರಗುಗ್ಗುಲನಾ
ಮುದಾ ॥ ೪೨ ॥ ನಿತ್ಯಂಧೂಪಮನುಹಂದಾಸ್ಯಾಮೀತಿಬದ್ಧದೃಢವ್ರತಃ । ಜುಷನ್
ಮಹೇಶ್ವರಂತತ್ರನ್ಯವಸದ್ಭಕ್ತಪುಂಗವಃ ॥ ೪೩ ॥ ತದ್ಗುಗ್ಗುಲುಕ್ರಯಾಯೈ
ವಗತೇಪೂರ್ವಾರ್ಜಿತೇಧನೇ । ನಿಯಮಸ್ಯಪರಂಹಾನಿರ್ಮಾಭೂದಿತಿವಿಚಿಂತ
ಯನ್ ॥ ೪೪ ॥ ದಿವಸೋಽಯಮಿಯಂರಾತ್ರಿರ್ಗಂತುಂಸಂಪ್ರತಿಕಾನನಂ । ಶ
ಕ್ಯಂನೇತ್ಯವಿಚಾರ್ಯೈವಂಪಶ್ಚಿಮಸ್ಯಸರಿತ್ಪತೇಃ ॥ ೪೫ ॥ ತೀರಸ್ಥವರಕಾಂತಾ
ರಘೋರದುರ್ಗೇಷುಯತ್ನತಃ । ಅನ್ವಿಷ್ಯಗುಗ್ಗುಲುತರೂನ್ಮಹಿಷಾಕ್ಷಿಂ
ವಿಧಾಯಚ ॥ ೪೬ ॥ ಸಂಶೋಧ್ಯತಂವೀವಧಸ್ಯನಿಧಾಯೋಭಯಪಾರ್ಶ್ವಯೋಃ ।
ಚತುರ್ಯಾಮೋರುಗಂಧಾನಿಹೃದ್ಯಾನಿಬಹುಳಾನ್ಯಪಿ ॥ ೪೭ ॥ ನೀತ್ವಾಚಂದನದಾ
ರೂಣಿನಿಜೇಸಂಸ್ಥಾಪ್ಯವೀವಧೇ । ಸಂಗೃಹ್ಯಬಿಲ್ವಪತ್ರಾಣಿರುಚಿರಾಣಿಮೃ
ದೂನಿಚ ॥ ೪೮ ॥ ಗಂಧವಂತ್ಯಸಮಾನಾನಿಬಂಧುರಾಣಿಸಮಂತತಃ । ನಾತಿಮೃ

---

ರ್ಪಿಸಿ, ಬಳಿಕ ಭಕ್ತಿಯಿಂದ ಆರತಿಯನ್ನು ಬೆಳಗಿ ॥ ೪೦ ॥ ಜಟಾಧಾರಿಯಾದ ಶಂಕರನಿಗೆ ಪಂ
ಚಭಕ್ಷ್ಯಾದಿಗಳಿಂದ ಕೂಡಿದ ಅನ್ನವನ್ನು ನಿವೇದಿಸಿ, ಸ್ವಾಮಿಯನ್ನು ಒಂದು ಸಾವಿರಸಲ
ಪ್ರದಕ್ಷಿಣವನ್ನು ಮಾಡಿ ॥ ೪೧ ॥ ಶ್ರೀಸೌರಾಷ್ಟ್ರ ಸೋಮನಾಥನನ್ನು ಬಹುವಿಧ
ವಾಗಿ ಸ್ತೋತ್ರ ಮಾಡಿ, ಅಂದು ಮೊದಲ್ಗೊಂಡು ಆ ಭಕ್ತಶ್ರೇಷ್ಠನು ಸಂತೋಷದಿಂದ
ಪ್ರತಿದಿನವೂ ತನ್ನ ತೂಕದ ಗುಗ್ಗುಲದ ಧೂಪವನ್ನು ಸಮರ್ಪಿಸುತ್ತೇನೆಂದು ದೃಢ
ವಾದ ವ್ರತವನ್ನು ಹಿಡಿದು, ಶಿವನನ್ನು ಸೇವಿಸುತ್ತ, ಆ ಸೌರಾಷ್ಟ್ರದಲ್ಲೇ ವಾಸಮಾ
ಡಿಕೊಂಡಿದ್ದನು ॥ ೪೩ ॥ ತನ್ನ ಪೂರ್ವಾರ್ಜಿತವಾದ ದ್ರವ್ಯವೆಲ್ಲವೂ ಆ ಗುಗ್ಗುಲವನ್ನು ಕೊ
ಳುವುದಕ್ಕಾಗಿಯೇ ತೀರಿಹೋಗಲು, ತಾನು ಹಿಡಿದಿರುವ ವ್ರತಕ್ಕೆ ಚ್ಯುತಿಯುಂಟಾಗಬಾ
ರದೆಂದು ಯೋಚಿಸಿ ॥ ೪೪ ॥ ಇದು ಹಗಲು, ಇದು ರಾತ್ರಿ, ಈಗ ಕಾಡಿಗೆ ಹೋಗಬಹು
ದು, ಹೋಗಬಾರದು, ಎಂಬುದಾವುದನ್ನೂ ವಿಚಾರಮಾಡದೆ, ಪಶ್ಚಿಮಸಮುದ್ರದ ದಡದ
ಲ್ಲಿರುವ ದೊಡ್ಡ ಕಾಡಿನಿಂದ ಕೂಡಿರುವ ಮಲೆಗಳಲ್ಲಿ ಪ್ರಯತ್ನಪೂರ್ವಕವಾಗಿ ಗುಗ್ಗು
ಲದ ಮರಗಳನ್ನು ಹುಡುಕಿ, ಅವುಗಳ ಸಾರವಾದ ಮಹಿಷಾಕ್ಷಿಯನ್ನು ಕೂಡಿಸಿ ॥ ೪೬ ॥
ಚೆನ್ನಾಗಿ ಪರಿಶೋಧಿಸಿ, ಕಂಬಿಯ ಎರಡು ಕಡೆಗಳಲ್ಲೂ ಕಟ್ಟರಿಸಿ, ನಾಲ್ಕು ಜಾವಗಳಲ್ಲಿಯೂ
ಘಮಘಮಿಸುತ್ತಲೂ, ಮನೋಹರಗಳಾಗಿಯೂ ಇರುವ ಶ್ರೀಗಂಧದ ಕೊರಡುಗಳನ್ನು
ಬಹುಳವಾಗಿ ತೆಗೆದುಕೊಂಡು, ಅವನ್ನೂ ತನ್ನ ಕಂಬಿಯಮೇಲಿಟ್ಟು, ಮನೋಹರಗ
ಳಾಗಿಯೂ ಮೃದುಗಳಾಗಿಯೂ ॥ ೪೮ ॥ ಸುಗಂಧಯುಕ್ತಗಳಾಗಿಯೂ, ಅಸದೃಶಗಳಾಗಿ

ಧ್ಧಾನ್ಯವಿಧ್ಧಾನಿಜಂತುಭಿಶ್ಯುಧ್ಧಿಮಂತಿಚ ॥ ೪೯ ॥ ಪೂರ್ಣಾನಿವರವರ್ಣಾನಿಸವ್ರಾ
ನಿಷರಸಾನ್ಯಪಿ । ಸ್ಫುಟಾನ್ಯಚಿದ್ರಮಧ್ಯಾನಿಸಚ್ಛವೀನಿವಿಶೋಕಿತೆ ॥ ೫೦ ॥
ಆಯತಾನಿಚಸರ್ವೇಶಯೋಗ್ಯಾನ್ಯಪತಿತಾನ್ಯಪಿ । ವಿಕಸ್ವರಾಣಿಭಾಸ್ವಂತಿಸ್ವಾ
ದೂನಿಶುಭದಾನಿಚ ॥ ೫೧ ॥ ಅಪವರ್ಗಪದಪ್ರಾಪ್ತಿಕಾರಣಾನಿನೃಣಾಂಸದಾ ।
ಹೃದ್ಯಾನಿಚಾನವದ್ಯಾನ್ಯಖಂಡಿತಾನಿವಿಶೋಧ್ಯಸಃ ॥ ೫೦ ॥ ಪುಟಕಾಮಧ್ಯಪ್ರ
ರ್ಣಾನಿಕೃತ್ವಾಕಕ್ಷೇನಿಧಾಯಚ । ಜನೇಷುಸ್ತೋಯಮಾನೇಷುಮಹಾಸಂ
ತೋಷಪೂರಿತಃ ॥ ೫೨ ॥ ಸದ್ಭಕ್ತಿಸಂವೃತೋವೇಗಾದಗಮತ್ತ್ರ್ಯಂಬಕಾಲ
ಯಂ । ತತಃಪೂರ್ವಮೇವಗೌಳೇಷುತತ್ರತ್ಯೇಷುಮಹೇಶಿತುಃ ॥ ೫೩ ॥ ಕಾಂತಿ
ಪೂಜಾಲತಾಂತಾದಿಪೂಜಾಂಕೃತ್ವಾಯಥಾವಿಧಿ । ವಿಧಾಯಭವ್ಯಶೃಂಗಾರ
ಸೋಮನಾಥಸ್ಯಸನ್ನಿಧೌ ॥ ೫೪ ॥ ದ್ವಾಪಪ್ತತಿನಿಯೋಗ್ಯೈಶ್ಚತಿಷ್ಠತ್ಸುಸ
ತಾಪಸ್ಯೈಃ । ಸಮಯೋಽಯಂನವೇತ್ಯೇತದವಿಚಾರ್ಯಾತಿಸಂಭ್ರಮಾತ್ ।
ಮಹೇಶಪೂಜಾಸತ್ಕರ್ಮತತ್ಪರಶ್ಶಿವಮಂದಿರಂ । ಪ್ರವಿಶ್ಯಶೀಘ್ರಮವನೌಸನ್ನಿ

---

ಯೂ, ಎಲ್ಲಾ ಕಡೆಯೂ ನೋಡುವುದಕ್ಕೆ ಅಂದವಾಗಿಯೂ, ಹಳೆಯುವಾಗದೆಯೂ,
ಹುಳು ಹೊಡೆಯದೆಯೂ, ನಿರ್ಮಲವಾಗಿಯೂ ॥೪೯॥ ಮುಕ್ಕಾಗದೆಯೂ, ಒಳ್ಳೆಯ
ಣ್ಣವುಳ್ಳವುಗಳಾಗಿಯೂ, ಬಾದೇಸವುನಾಗಿಯೂ. ರಸವತ್ತಾಗಿಯೂ, ಶುಭ್ರವಾಗಿಯೂ
ಮಧ್ಯೆ ಒಡೆಯದವುಗಳಾಗಿಯೂ, ಒಳ್ಳೆಯ ಕಾಂತಿಯುಳ್ಳವುಗಳಾಗಿಯೂ ॥೫೦॥ ನೀಳ
ವಾಗಿಯೂ, ಪರಶಿವನಿಗೆ ಯೋಗ್ಯಗಳಾಗಿಯೂ, ನೆಲದಮೇಲೆ ಬೀಳದವುಗಳಾಗಿಯೂ,
ಅಂಟದವುಗಳಾಗಿಯೂ, ಪ್ರಕಾಶಿಸುವವುಗಳಾಗಿಯೂ, ಮಧುರಗಳಾಗಿಯೂ, ಮಂಗ
ಪ್ರದಗಳಾಗಿಯೂ ॥೫೧॥ ಮನುಷ್ಯರಿಗೆ ಮುಕ್ತಿಯನ್ನು ಕೊಡುವುದಕ್ಕೆ ಕಾರಣಗಳಾ
ಗಿಯೂ, ಬಂಧುರಗಳಾಗಿಯೂ, ನಿರ್ದುಷ್ಟಗಳಾಗಿಯೂ, ಕತ್ತರಿಸಿಹೋಗದೆಯೂ,
ರುವ ಬಿಲ್ವಪತ್ರಗಳನ್ನು ಎತ್ತಿ, ಪುಟ್ಟಿಯ ಮಧ್ಯದಲ್ಲಿ ತುಂಬಿ, ಕಂಕುಳಲ್ಲಿ ನೇತು
ಹಾಕಿ, ಜನಗಳು ಸ್ತೋತ್ರಮಾಡುತ್ತಿರಲಾಗಿ, ಮಹಾಸಂತೋಷದಿಂದ ತುಂಬಿದವನಾಗಿ
ಸದ್ಭಕ್ತಿಯಿಂದ ಕೂಡಿ, ಬೇಗನೆ ಶಿವಾಲಯಕ್ಕೆ ಬಂದನು. ಅದಕ್ಕೆ ಮುಂಚೆಯೇ ಅಲ್ಲಿನ
ಗೌಳತಪಸ್ವಿಗಳು, ಒಳ್ಳೆಯಲಂಕಾರವನ್ನು ಮಾಡಿ, ವಿಧಿವತ್ತಾಗಿ ಹಲವುಬಗೆಯ ಪೂ
ವುಗಳಿಂದರ್ಚಿಸಿ, ಮನೋಹರವಾಗಿ ಶೃಂಗರಿಸಿ, ಸೋಮನಾಥನ ಬಳಿಯಲ್ಲಿ ॥೫೪॥ ಎಪ್ಪ
ತ್ತೆರಡು ತರದ ಊಳಿಗದವರಿಂದ ಕೂಡಿ ಒಪ್ಪುತ್ತಿರಲು, ಈ ಓಹಿಲಾರ್ಯನು ಇದು ಸಮ
ಯ ಅಥವಾ ಸಮಯವಲ್ಲವೆಂಬುದೊಂದನ್ನೂ ಯೋಚಿಸದೆ, ಬಲುಸಡಗರದಿಂದ ॥ ೫೫ ॥
ಶಿವನ ಪೂಜೆಯನ್ನು ಮಾಡಬೇಕೆಂಬ ಕುತೂಹಲದಿಂದ ಶಿವಾಲಯವನ್ನು ಹೊಕ್ಕು

ಧಾಮುಚವೀವಥಂ ‖ ೫೭ ‖ ಸಮುದ್ರೋದಕಮಾನೀಯತತಃಪೂರ್ವಂಪ್ರಕ
ಲ್ಪಿತಾಂ । ಕೃತ್ವಾಪೂಜಾಂಮಹಾದೇವಮಭಿಷಿಚ್ಯಯಥಾವಿಧಿ ‖ ೫೮ ‖ ವ
ಸ್ತ್ರೇಣಾದ್ರ್‍ತ್ವಮುತ್ಸೃಜ್ಯಘೃಷ್ಟ್ವಾಚಂದನಮುತ್ಸುಕಃ । ತೇನಾಲಿಪ್ಯ
ಮಹಾದೇವಂಸ್ಥಿರಸದ್ಭಕ್ತಿಸಂಯುತಃ ‖ ೫೯ ‖ ಅಖಂಡಬಿಲ್ವಪತ್ರೈಸ್ತಮ
ಭ್ಯರ್ಚ್ಯಪರಮೇಶ್ವರಂ । ರಾಶೀಭೂತಂಸ್ವಪ್ರಮಾಣಮಾದಾಯವರಗುಗ್ಗ
ಲುಂ ‖ ೬೦ ‖ ಕೃತ್ವಾಧೂಪಂಪ್ರಯತ್ನೇನಶಿವಾಯಪರಮೇಷ್ಠಿನೇ । ಧೂರ್ಜ
ಟೇತಜ್ಜಿತಭವಪ್ರಜಸೌರಾಷ್ಟ್ರನಾಯಕ ‖ ೬೧ ‖ ಕಾರುಣ್ಯಾಮೃತಸಂಪೂ
ರ್ಣಸೋಮಸೋಮಾರ್ಧಶೇಖರ । ಸೋಮಾರ್ಕನೇತ್ರಸೋಮೇಶಧೂ
ಪೋಽಯಮವಧಾರ್ಯತಾಂ ‖ ೬೨ ‖ ಇತಿಪ್ರಣಮ್ಯಸಾಷ್ಟಾಂಗಂಮಸ್ತಕೇಘ
ಟಿತಾಂಜಲಿಃ । ನೃತ್ಯನ್ವಲ್ಗನ್ಸಿಂಹನಾದಂಕುರ್ವನ್ನಾನಂದನಿರ್ಭರಃ ‖ ೬೩ ‖
ಜಯೇತಿಪ್ರಲಪನ್ಘಂಟಾಂವಾದಯನ್ಪ್ರಮಥಾವಳಿಂ । ಸಂಸ್ಮರನ್ಕೀರ್ತ
ಯನ್ದೇವಂಹರೇತಿವ್ಯಾಹರನ್ಮುಹುಃ ‖ ೬೪ ‖ ಗಾಯನ್ಪ್ರಭೋಸೋಮನಾ
ಥಕುರುಭಸ್ಮಾಘಸಂಚಯಂ । ಧೂಪಾಗ್ನಿನಾಮಹಾದೇವನತಾರ್ತಿಧ್ವಂಸನೋ
ನ್ಮುಖ ‖ ೬೫ ‖ ವ್ಯಾಹರನ್ನೇವಮತ್ಯಂತಭಕ್ತ್ಯಾಧೂಪಂಸಮರ್ಪ್ಯಸಃ । ಅವ

---

ಬೇಗನೆ ಕಂಬಿಯನ್ನು ನೆಲದಮೇಲಿರಿಸಿ ‖ ೫೭ ‖ ಸಮುದ್ರದ ಜಲವನ್ನು ತಂದು ತಂದು
ಅದಕ್ಕೆ ಮುಂಚೆ ಗೊತ್ತುಮಾಡಿದ್ದ ಸಾಮಗ್ರಿಗಳು ವಾಡಿದ್ದ ಪೂಜೆಯನ್ನೆಲ್ಲ ಅಳಿಸಿ, ಪರಶಿವನಿಗೆ ವಿಧಿ
ವತ್ತಾಗಿ ಅಭಿಷೇಕ ಮಾಡಿ ‖ ೫೮ ‖ ಮಡಿಬಟ್ಟೆಯಿಂದ ಒರಸಿ, ಕುತೂಹಲವುಳ್ಳವನಾಗಿ,
ಶ್ರೀಗಂಧವನ್ನು ತೇದು ಪರಶಿವನಿಗೆ ಲೇಪಿಸಿ, ಸ್ಥಿರಭಕ್ತಿಯಿಂದ ಕೂಡಿದವನಾಗಿ ‖ ೫೯ ‖
ಆ ಶಂಕರನನ್ನು ಅಖಂಡವಾದ ಬಿಲ್ವಪತ್ರಗಳಿಂದ ಪೂಜಿಸಿ, ಗುಡ್ಡೆಹಾಕಿರುವ ತನ್ನ ತೂ
ಕದ ಗುಗ್ಗುಲವನ್ನು ತೆಗೆದುಕೊಂಡು ಪರಬ್ರಹ್ಮನಾದ ಶಿವನಿಗೆ ಧೂಪವನ್ನು ಹಾಕಿ,
ಭೋಗಂಗಾಧರನೆ, ಪಾಪನಾಶಕನೆ, ದಯಾಮೃತಪರಿಪೂರ್ಣನೆ, ಪಾರ್ವತೀಸಮೇತನೇ, ಚಂ
ದ್ರಶೇಖರನೆ, ಸೂರ್ಯಚಂದ್ರಾಗ್ನಿ ನೇತ್ರನೇ, ಸೌರಾಷ್ಟ್ರ ಸೋಮನಾಥನೇ, ಇದೋ
ಧೂಪವನ್ನು ಸಮರ್ಪಿಸಿರುತ್ತೇನೆ, ಪರಾಮರಿಸಬೇಕು ‖ ೬೨ ‖ ಎಂದು ಹೇಳಿ, ಸಾಷ್ಟಾಂ
ಗವಾಗಿ ನಮಸ್ಕರಿಸಿ, ತಲೆಯಮೇಲೆ ಕೈಗಳನ್ನು ಜೋಡಿಸಿ, ಕುಣಿಯುತ್ತ, ಸುತ್ತುತ್ತ,
ಸಿಂಹನಾದವನ್ನು ಮಾಡುತ್ತ, ಸಂತೋಷಾತಿಶಯವುಳ್ಳವನಾಗಿ ‖ ೬೩ ‖ ಜಯಜಯವೆಂ
ದು ಉದ್ಘೋಷಿಸುತ್ತ, ಗಂಟೆಯನ್ನು ಬಾಜಿಸುತ್ತ, ಪ್ರಮಥರುಗಳನ್ನು ಸ್ಮರಿಸುತ್ತ,
ಶಿವಸಂಕೀರ್ತನೆಯನ್ನು ಮಾಡುತ್ತ, ಹರಹರಾ ಎಂದು ಬಾರಿಬಾರಿಗೂ ಉಚ್ಚರಿಸುತ್ತ ‖
ಸ್ವಾಮಿ ಸೋಮನಾಥನೆ ! ನಮಿಸಿದವರ ಕಷ್ಟಗಳನ್ನು ನಾಶಗೊಳಿಸುವುದರಲ್ಲಿ ನಿರತ
ನಾದ ದೇವನೆ, ಈ ಧೂಪದ ಅಗ್ನಿಯಿಂದ ಪಾಪರಾಶಿಯನ್ನೆಲ್ಲ ಸುಟ್ಟು ಬೂದಿಮಾಡು ‖

ಶಿಷ್ಟಾರ್ಚನಾಂಸಾಂದ್ರಪ್ರೀತ್ಯಾಕೃತ್ವಾಯಥಾವಿಧಿ ‖೬೬‖ ದಿನೇದಿನೇಮಹಾದೇ
ವಮೇವಮಾರಾಧಯನ್ಸ್ಥಿತಃ। ಅಥತಂಪ್ರತಿತತ್ರತ್ಯಾಸ್ಸರ್ವೇಗೌಳತಪಸ್ವಿನಃ।
ಅಬ್ರುವನ್ಕುಪಿತಾಗಾಢಂಮಿಳಿತ್ವಾತೇಕದಾಚನ। ವಿಪರೀತಾನಿದೃಶಾನಿಸ್ವ
ರೇತಸ್ಮಿನ್ನಹೋಪುರಾ ‖೬೮‖ ನಶ್ರುತಾನಿನದೃಷ್ಟಾನಿಜಾನೀಮೋನೇದೃ
ಶಂವ್ರತಂ। ಶುಷ್ಕದಾರೂಣಿನಯತಿಪ್ರವಿಶತ್ಯಭವಾಲಯಂ ‖೬೯‖ ಹರತಿ
ಪ್ರಾಕ್ತನಾಂಪೂಜಾಂವಿನಧಾತಿಸ್ವಪೂಜನಂ। ಅಹೃತ್ವಾಪ್ರಾಕ್ತನಾಂಪೂಜಾಂ
ನಕಾರ್ಯಂಕಿಂಸ್ವಪೂಜನಂ ‖೭೦‖ ಹರಿಬ್ರಹ್ಮಾದಿರಚಿತಾಂಪೂಜಾಂಹೃತ್ವಾಮ
ಹೇಶ್ವರೇ। ಕೃತವಾನರ್ಚನಂಭೃಂಗೀಸಕಿಂಭವತಿವಾಸ್ವಯಂ ‖೭೧‖ ಲೂತ
ಯಾರಚಿತಾಂಪೂಜಾಂಹರ್ತ್ತಾಕಿಂವಾಭವೇತ್ಕರೀ। ತಪಸ್ವಿನಾಕೃತಂಹೃತ್ವಾಕೃ
ತವಾನ್ಸ್ವಯಮರ್ಚನಂ ‖೭೨‖ ಕನ್ನಪ್ಪೋವಾಭವೇದೇಷಮಹಾಪ್ರಮಥಪುಂ
ಗವಃ। ಮುದನೂರುಪುರೇವಿಪ್ರೈಃಕೃತಪೂಜಾಂಪ್ರಮೃಷ್ಟವಾನ್ ‖೭೩‖ ಸ್ವ
ದ್ಧಾದಿಸಾರ್ಯೋಽಯಮಥವಾಪೂರ್ವೈರ್ನಿರ್ಮಿತಮರ್ಚನಂ। ಹೃತ್ವಾಕೃತಶಿಲಾ
ಪೂಜನಸ್ಸಂಖ್ಯತೊಂಡೋಭವೇತ್ಕಿಮು ‖೭೪‖ ಸ್ವಸ್ಥಾನವಸರೇಽಪ್ಯೇನಂಪ್ರ

---

ಎಂದು ಹೇಳುತ್ತ, ಭಕ್ತಿಯಿಂದ ಧೂಪವನ್ನು ಸಮರ್ಪಿಸಿ, ಅತಿಶಯವಾದ ಪ್ರೀತಿಯಿಂ
ದ ಉಳಿದಿರುವ ಪೂಜೆಯನ್ನೂ ವಿಧಿವತ್ತಾಗಿ ಮಾಡಿ ‖೬೬‖ ಪ್ರತಿದಿನವೂ ಪರಶಿವನನ್ನು
ಹೀಗೆಯೇ ಪೂಜಿಸಿಕೊಂಡಿರುತ್ತಿದ್ದನು. ಬಳಿಕ ಅಲ್ಲಿದ್ದ ಗೌಳತಪಸ್ವಿಗಳೆಲ್ಲರೂ ಒಟ್ಟು
ಗೂಡಿ, ಅವನಮೇಲೆ ಬಹಳವಾಗಿ ಕೋಪಗೊಂಡು, ತಮ್ಮತಮ್ಮಲ್ಲಿ ಮಾತನಾಡಿಕೊಂ
ಡುದೇನೆಂದರೆ -ನಮ್ಮ ಊರಲ್ಲಿ ಇಂಥಾ ವಿಪರೀತಕಾರ್ಯಗಳನ್ನು ಹಿಂದೆ ಯಾವಾಗಲೂ
ನಾವು ಕೇಳಿಯೂ ಇಲ್ಲ ನೋಡಿಯೂ ಇಲ್ಲ. ತಿಳಿದೂ ಇಲ್ಲ. ಆಶ್ಚರ್ಯ! ಒಣಗಿದ ಕಟ್ಟಿ
ಗೆಗಳನ್ನು ತೆಗೆದುಕೊಂಡುಬರುತ್ತಾನೆ. ಶಿವಾಲಯವನ್ನು ಪ್ರವೇಶಿಸುತ್ತಾನೆ. ‖೬೯‖
ಮೊದಲು ಮಾಡಿದ್ದ ಪೂಜೆಯನ್ನೆಲ್ಲ ಅಳಿಸಿಬಿಡುತ್ತಾನೆ, ತನ್ನ ಪೂಜೆಯನ್ನು ಮಾಡು
ತ್ತಾನೆ. ಮೊದಲಪೂಜೆಯನ್ನು ಅಳಿಸದೆ ತನ್ನ ಪೂಜೆಯನ್ನು ಮಾಡಲಾಗದೊ? ‖೭೦‖
ಶಿವನಿಗೆ ವಿಷ್ಣು ಬ್ರಹ್ಮಾದಿಗಳು ಮಾಡಿದ್ದ ಪೂಜೆಯನ್ನು ಅಳಿಸಿ, ತನ್ನ ಪೂಜೆಯನ್ನು
ಮಾಡಿದ ಭೃಂಗೀಶ್ವರನೋ ಇವನು? ‖೭೧‖ ಜೇಡರಹುಳುವು ಮಾಡಿದ್ದ ಪೂಜೆಯನ್ನು
ನಾಶಮಾಡಿ ತನ್ನ ಪೂಜೆಯನ್ನು ಮಾಡಿದ ಆನೆಯೋ ಇವನು? ತಾಪಸನು ಮಾಡಿದ್ದ
ಪೂಜೆಯನ್ನು ಕೆಡಿಸಿ, ತನ್ನ ಪೂಜೆಯನ್ನು ಮಾಡಿದ ಪ್ರಮಥಶ್ರೇಷ್ಠನಾದ ಕಣ್ಣಪ್ಪ
ನೋ ಇವನು? ಮುದನೂರಿನಲ್ಲಿ ಬ್ರಾಹ್ಮಣರು ಮಾಡಿದ್ದ ಪೂಜೆಯನ್ನು ಅಳಿಸಿ ತನ್ನ
ಪೂಜೆಯನ್ನು ಮಾಡಿದ ದಾಸಯ್ಯನೋ ಈತನು? ಅಥವಾ ಮೊದಲಿನವರು ಮಾಡಿದ

ವೇಷ್ಟುಂಶಂಕರಾಲಯಂ | ಕುತೋವಾಮಾನ್ಯತಾಯಾತಾಭೃಂಗೀವಾಕಿಂವೃ
ಷಾಧಿಪಃ||೭೫||ದೂರ್ವಾಸಾವೋಪಮನ್ಯುರ್ವಾಪುನರ್ಭಕ್ತಗಣಾಳಿಷು| ಏಕೋ
ವಾಕಥಮೇತಸ್ಯಪ್ರವೇಷ್ಟುಂಯುಜ್ಯತೇನನು || ೭೬ || ಶುಕನಾಸಸ್ಥಏವಾಸ್ತೇ
ಹರಿರಾಗತ್ಯಸೇವಿತುಂ | ಯಾವದ್ಭವೇದವಸರಃಪ್ರವೇಷ್ಟುಂಪರಿಶಂಕಿತಃ ||೭೭||
ಬಹಿರೇವಸ್ತುವನ್ಬ್ರಹ್ಮಾಮಹೇಶಮುಪತಿಷ್ಠತೇ | ಆಸ್ತೇಽನಿಮಿಷದೃಗ್ಯಾವ
ತ್ಸಮಯಂಸುರನಾಯಕಃ ||೭೮|| ರವಿರಾವಸರಾತ್ಪದ್ಮಾನ್ಯಾದಾಯವಿಚರನ್
ಸ್ಥಿತಃ | ಏಕಾಗ್ರಮಾನಸೋಭೂತ್ವಾಮೌಳಾವಿಂದುಃಪ್ರತಿಷ್ಠತೇ ||೭೯||
ಯಾವದ್ವೇಳಾಭವೇಚ್ಛಂಭೋಸ್ತಾವತ್ಸೇವಾಸಮುತ್ಸುಕಃ | ಏತೇಷಾಮ
ಪಿದೇವಸ್ಯದುರ್ಘಟೋಽವಸರಃಕಿಲ ||೮೦|| ಕತಮೋಽಯಂಕಿಮೇತೇನ
ಬಹುನಾಸ್ಥೀಯತಾಮಿತಿ | ಉಕ್ತೇತೀನಕಥಂಶಕ್ಯಂಪ್ರವೇಷ್ಟುಂಶಂಕರಾಲ
ಯಂ ||೮೧|| ಪ್ರಾಗಂತರ್ವರ್ತಿನಶ್ಶಂಭುಮರ್ಚಯಂತುತಪಸ್ವಿನಃ | ಪರಿಚಾ

---

ಪೂಜೆಯನ್ನು ತೆಗೆದು, ಕಲ್ಲಿನಿಂದ ಪೂಜಿಸಿದ ಸಾಂಖ್ಯತೊಂಡನೋ? ||೭೪|| ಸಮಯ
ವಲ್ಲದೆ ಇರುವಾಗಲೂ ಕೂಡ ಶಿವಾಲಯವನ್ನು ಪ್ರವೇಶಿಸುವುದಕ್ಕೆ ಇವನಿಗೆ ಅಂಥ
ಮಾನ್ಯತೆಯುಂಟಾಗಿರುವುದೇನು? ಇವನೇನು ಭೃಂಗೀಶ್ವರನೊ? ವೃಷಭೇಶ್ವರನೋ?
ದೂರ್ವಾಸನೋ? ಉಪಮನ್ಯುವೋ? ಅಲ್ಲದೆ ಪ್ರಮಥರ ಸಮೂಹದಲ್ಲಿ ಯಾವ
ರೊಬ್ಬನಾಗಿರುವನೊ? ಹಾಗಲ್ಲದೆ ಇದ್ದರೆ ದೇವಾಲಯವನ್ನು ಹೀಗೆ ನುಗ್ಗುವುದಕ್ಕೆ ಹೇ
ಗಾದೀತು? ||೭೬|| ಶಿವನನ್ನು ಸೇವಿಸುವುದಕ್ಕಾಗಿ ವಿಷ್ಣುವು ಬಂದು, ಸಮಯವಾಗು
ವವರೆಗೂ ಒಳಕ್ಕೆ ನುಗ್ಗುವುದಕ್ಕೆ ಸಂಶಯಪಟ್ಟುಕೊಂಡು, ಹೊರಬಾಗಿಲಲ್ಲೇ ನಿಂತು
ಕೊಂಡಿರುವನು ||೭೭|| ಬ್ರಹ್ಮನು ಬಂದು ಹೊರಗೇ ಶಿವನನ್ನು ಸ್ತೋತ್ರಮಾಡುತ್ತ
ನಿಂತುಕೊಳ್ಳುವನು. ದೇವೇಂದ್ರನು ಬಂದು, ಸಮಯವಾಗುವವರೆಗೂ ರೆಪ್ಪೆ ಮುಚ್ಚ
ದೆ ನಿಂತುಕೊಂಡಿರುವನು. ||೭೮|| ಸೂರ್ಯನು ತಾವರೆಯಹೂವುಗಳನ್ನು ತೆಗೆದುಕೊಂ
ಡುಬಂದು, ಸಮಯವಾಗುವವರೆಗೂ ಸುತ್ತುತ್ತಾ ಇರುವನು. ಚಂದ್ರನು ಶಿವನ
ಸೇವೆಯನ್ನು ಮಾಡಬೇಕೆಂಬ ಕುತೂಹಲವುಳ್ಳವನಾಗಿ, ಸಮಯವಾಗುವವರೆಗೂ
ಏಕಾಗ್ರಚಿತ್ತನಾಗಿ ಕಿರೀಟದಲ್ಲಿ ನಿಂತುಕೊಂಡಿರುವನು. ಹೀಗೆ [illegible]
ಮಹಾದೇವನ ಸಮಯವು ದುರ್ಲಭವಾಗಿರುವುದು. ||೮೦|| ಹೀಗಿರುವಲ್ಲಿ [illegible]
ವನು? ಈ ಬಲವಾತ್ಕಾರದಿಂದ ಪ್ರಯೋಜನವೇನು? [illegible]
ಳಿಬಿಟ್ಟರೆ, ಶಿವಾಲಯವನ್ನು ನುಗ್ಗುವುದಕ್ಕೆ ಅವನಿಂದ [illegible] ||೮೧||
ಒಳಗಿರುವ ತಾಪಸರು ಮೊದಲು ಶಿವನನ್ನು ಪೂಜಿಸಲಿ; [illegible]
ದವರೂ ಸಹ ಶಿವಾಲಯವನ್ನು ಯಾವಾಗಲೂ ಪ್ರವೇಶಿಸುವರು. [illegible]

ಶಿಷ್ಟಾರ್ಚನಾಂ ಸಾಂದ್ರಪ್ರೀತ್ಯಾ ಕೃತ್ವಾ ಯಥಾವಿಧಿ ॥೬೭॥ ದಿನೇದಿನೇ ಮಹಾದೇವನೇವ ಮಾರಾಧಯನ್ ಸ್ಥಿತಃ। ಅಥ ತಂ ಪ್ರತಿ ತತ್ರಸ್ಥಾಸ್ಸರ್ವೇ ಗೌಳತಪಸ್ವಿನಃ। ಅಬ್ರುವನ್ ಕುಪಿತಾ ಗಾಢಂ ಮಿಳಿತ್ವಾ ತೇ ಕದಾಚನ । ವಿಪರೀತಾನಿ ದೃಷ್ಟಾನಿ ಸ್ವೈರೇ ತಸ್ಮಿನ್ಕನುಹೋ ಪುರಾ ॥೬೮॥ ನಶ್ರುತಾನಿ ನ ದೃಷ್ಟಾನಿ ಜಾನೀ ಮೋ ನೇದೃಶಂ ವ್ರತಂ । ಶುಷ್ಕದಾರೂಣಿ ನಯತಿ ಪ್ರವಿಶತ್ಯಭವಾಲಯಂ ॥೬೯॥ ಹರತಿ ಪ್ರಾಕ್ತನಾಂ ಪೂಜಾಂ ವಿನಥಾತಿ ಸ್ವಪೂಜನಂ । ಅಹೃತ್ವಾ ಪ್ರಾಕ್ತನಾಂ ಪೂಜಾಂ ನ ಕಾರ್ಯಂ ಕಿಂ ಸ್ವಪೂಜನಂ ॥೭೦। ಹರಿಬ್ರಹ್ಮಾದಿರಚಿತಾಂ ಪೂಜಾಂ ಹೃತ್ವಾ ಮಹೇಶ್ವರೇ। ಕೃತವಾನರ್ಚನಂ ಭೃಂಗೀ ಸ ಕಿಂ ಭವತಿ ವಾ ಸ್ವಯಂ ॥೭೧॥ ಊತಯಾರ ರಚಿತಾಂ ಪೂಜಾಂ ಹರ್ತ್ತಾ ಕಿಂ ವಾ ಭವೇತ್ಕರೀ । ತಪಸ್ವಿನಾ ಕೃತಂ ಹೃತ್ವಾ ಕೃತವಾನ್ ಸ್ವಯಮರ್ಚನಂ ।೭೨। ಕನ್ನಪ್ಪೋ ವಾ ಭವೇದೇಷ ಮಹಾಪ್ರಮಥಪುಂಗವಃ। ಮುದನೂರುಪುರೇ ವಿಪ್ರೈಃ ಕೃತಪೂಜಾಂ ಪ್ರಮೃಷ್ಟವಾನ್ ॥೭೩॥ ಸ್ವಾದ್ಯಸಾರ್ಯೋ ಽಯಮಥವಾ ಪೂರ್ವೈರ್ನಿರ್ಮಿತಮರ್ಚನಂ । ಹೃತ್ವಾ ಕೃತಶಿಲಾ ಪೂಜಸ್ಸಂಭ್ಯತೊಂಡೋ ಭವೇತ್ಕಿಮು ॥೭೪॥ ಸ್ವಸ್ಥಾನವಸರೇ ಽಪ್ಯೇನಂಪ್ರ

---

ಎಂದು ಹೇಳುತ್ತ, ಭಕ್ತಿಯಿಂದ ಧೂಪವನ್ನು ಸಮರ್ಪಿಸಿ, ಅತಿಶಯವಾದ ಪ್ರೀತಿಯಿಂದ ಉಚಿತವಾದ ಪೂಜೆಯನ್ನೂ ವಿಧಿವತ್ತಾಗಿ ಮಾಡಿ ॥೬೭॥ ಪ್ರತಿದಿನವೂ ಪರಶಿವನನ್ನು ಹೀಗೆಯೇ ಪೂಜಿಸಿಕೊಂಡಿರುತ್ತಿದ್ದನು. ಬಳಿಕ ಅಲ್ಲಿದ್ದ ಗೌಳತಪಸ್ವಿಗಳೆಲ್ಲರೂ ಒಟ್ಟುಗೂಡಿ, ಅವನಮೇಲೆ ಬಹಳವಾಗಿ ಕೋಪಗೊಂಡು, ತಮ್ಮತಮ್ಮಲ್ಲಿ ಮಾತನಾಡಿಕೊಂಡುದೇನೆಂದರೆ — ನಮ್ಮ ಊರಿನಲ್ಲಿ ಇಂಥಾ ವಿಪರೀತಕಾರ್ಯಗಳನ್ನು ಹಿಂದೆ ಯಾವಾಗಲೂ ನಾವು ಕೇಳಿಯೂ ಇಲ್ಲ ನೋಡಿಯೂ ಇಲ್ಲ. ತಿಳಿದೂ ಇಲ್ಲ. ಆಶ್ಚರ್ಯ! ಒಣಗಿದ ಕಟ್ಟಿಗೆಗಳನ್ನು ತೆಗೆದುಕೊಂಡು ಬರುತ್ತಾನೆ. ಶಿವಾಲಯವನ್ನು ಪ್ರವೇಶಿಸುತ್ತಾನೆ. ॥೬೯॥ ಮೊದಲು ಮಾಡಿದ್ದ ಪೂಜೆಯನ್ನೆಲ್ಲ ಅಳಿಸಿಬಿಡುತ್ತಾನೆ, ತನ್ನ ಪೂಜೆಯನ್ನು ಮಾಡುತ್ತಾನೆ. ಮೊದಲಪೂಜೆಯನ್ನು ಅಳಿಸದೆ ತನ್ನ ಪೂಜೆಯನ್ನು ಮಾಡಲಾಗದೊ ? ॥೭೦॥ ಶಿವನಿಗೆ ವಿಷ್ಣು ಬ್ರಹ್ಮಾದಿಗಳು ಮಾಡಿದ್ದ ಪೂಜೆಯನ್ನು ಅಳಿಸಿ, ತನ್ನ ಪೂಜೆಯನ್ನು ಮಾಡಿದ ಭೃಂಗೀಶ್ವರನೋ ಇವನು ? ॥೭೧॥ ಜೇಡರಹುಳುವು ಮಾಡಿದ್ದ ಪೂಜೆಯನ್ನು ನಾಶಮಾಡಿ ತನ್ನ ಪೂಜೆಯನ್ನು ಮಾಡಿದ ಆನೆಯೋ ಇವನು ? ತಾಪಸನು ಮಾಡಿದ್ದ ಪೂಜೆಯನ್ನು ಕೆಡಿಸಿ, ತನ್ನ ಪೂಜೆಯನ್ನು ಮಾಡಿದ ಪ್ರಮಥಶ್ರೇಷ್ಠನಾದ ಕಣ್ಣಪ್ಪನೋ ಇವನು ? ಮುದನೂರಿನಲ್ಲಿ ಬ್ರಾಹ್ಮಣರು ಮಾಡಿದ್ದ ಪೂಜೆಯನ್ನು ಅಳಿಸಿ ತನ್ನ ಪೂಜೆಯನ್ನು ಮಾಡಿದ ದಾಸಯ್ಯನೋ ಈತನು ? ಅಥವಾ ಮೊದಲಿನವರು ಮಾಡಿದ

ವೇಷ್ಟುಂಶಂಕರಾಲಯಂ | ಕುತೋಽಸಾಮಾನ್ಯತಾಯಾತಾಭೃಂಗೀವಾಕಿಂವೃ
ಷಾಧಿಪಃ||೭೪||ದೂರ್ವಾಸಾವೋಽಪಮನ್ಯುರ್ವಾಪುನರ್ಭಕ್ತಗಣಾಳಿಷು| ಏಕೋ
ವಾಕಥಮೇತಸ್ಯಪ್ರವೇಷ್ಟುಂಯುಜ್ಯತೇನನು || ೭೬ || ಶುಕನಾಸಸ್ಥಏವಾಸ್ತೇ
ಹರಿರಾಗತ್ಯಸೇವಿತುಂ | ಯಾವದ್ಭವೇದವಸರಃಪ್ರವೇಷ್ಟುಂಪರಿಶಂಕಿತಃ ||೭೭||
ಬಹಿರೇವಸ್ತುವನ್‌ಬ್ರಹ್ಮಾಮಹೇಶಮವತಿಷ್ಠತೇ | ಆಸ್ತೇಽನಿಮಿಷದೃಗ್ಯಾವ
ತ್ಸಮಯಂಸುರನಾಯಕಃ ||೭೮|| ರವಿರಾವಸರಾತ್ಪದ್ಮಾನ್ಯಾದಾಯವಿಚರನ್
ಸ್ಥಿತಃ | ಏಕಾಗ್ರಮಾನಸೋಭೂತ್ವಾಮೌಳಾವಿಂದುಃಪ್ರತಿಷ್ಠತೇ || ೭೯ ||
ಯಾವದ್ವೇಳಾಭವೇಚ್ಛಂಭೋಃಸ್ತುವನ್ಸೇವಾಸಮುತ್ಸುಕಃ | ಏತೇಷಾಮ
ಪಿದೇವಸ್ಯದುರ್ಘಟೋಽವಸರಃಕಿಲ ||೮೦|| ಕತಮೋಽಯಂಕಿಮೇತೇನ
ಬಹುನಾಸ್ಥೀಯತಾಮಿತಿ | ಉಕ್ತೇತೇನಕಥಂಶಕ್ಯಂಪ್ರವೇಷ್ಟುಂಶಂಕರಾಲ
ಯಂ ||೮೧|| ಪ್ರಾಗಂತರ್ವರ್ತಿನಶ್ಶಂಭುಮರ್ಚಯಂತುತಪಸ್ವಿನಃ | ಪರಿಚಾ

---

ಪೂಜೆಯನ್ನು ತೆಗೆದು, ಕಲ್ಲುಗಳಿಂದ ಪೂಜಿಸಿದ ಸಾಂಖ್ಯತೊಂಡನೋ ? ||೭೪|| ಸಮಯ
ವಲ್ಲದೆ ಇರುವಾಗಲೂ ಕೂಡ ಶಿವಾಲಯವನ್ನು ಪ್ರವೇಶಿಸುವುದಕ್ಕೆ ಇವನಿಗೆ ಅಂಥ
ಮಾನ್ಯತೆಯುಂಟಾಗಿರುವುದೇನು ? ಇವನೇನು ಭೃಂಗೀಶ್ವರನೊ ? ವೃಷಭೇಶ್ವರನೋ ?||
ದೂರ್ವಾಸನೋ ? ಉಪಮನ್ಯುವೋ ? ಅಲ್ಲದೆ ಪ್ರಮಥರ ಸಮೂಹದಲ್ಲಿ ಯಾರಾದ
ರೊಬ್ಬನಾಗಿರುವನೊ ? ಹಾಗಲ್ಲವೆ ಇದ್ದರೆ ದೇವಾಲಯವನ್ನು ಹೀಗೆ ನುಗ್ಗುವುದಕ್ಕೆ ಹೇ
ಗಾದೀತು ? ||೭೬|| ಶಿವನನ್ನು ಸೇವಿಸುವುದಕ್ಕಾಗಿ ವಿಷ್ಣುವು ಬಂದು, ಸಮಯವಾಗು
ವವರೆಗೂ ಒಳಕ್ಕೆ ನುಗ್ಗುವದಕ್ಕೆ ಸಂಶಯಪಟ್ಟುಕೊಂಡು, ಹೊರಬಾಗಿಲಲ್ಲೇ ನಿಂತು
ಕೊಂಡಿರುವನು ||೭೭|| ಬ್ರಹ್ಮನು ಬಂದು ಹೊರಗೇ ಶಿವನನ್ನು ಸ್ತೋತ್ರಮಾಡುತ್ತ
ನಿಂತುಕೊಳ್ಳುವನು. ದೇವೇಂದ್ರನು ಬಂದು, ಸಮಯವಾಗುವವರೆಗೂ ರೆಪ್ಪೆ ಮುಚ್ಚ
ದೆ ನಿಂತುಕೊಂಡಿರುವನು. ||೭೮|| ಸೂರ್ಯನು ತಾವರೆಯಹೂವುಗಳನ್ನು ತೆಗೆದುಕೊಂ
ಡುಬಂದು, ಸಮಯವಾಗುವವರೆಗೂ ಸುತ್ತಾಡುತ್ತ ಇರುವನು. ಚಂದ್ರನು ಶಿವನ
ಸೇವೆಯನ್ನು ಮಾಡಬೇಕೆಂಬ ಕುತೂಹಲವುಳ್ಳವನಾಗಿ, ಸಮಯವಾಗುವವರೆಗೂ
ಏಕಾಗ್ರಚಿತ್ತನಾಗಿ ಕಿರೀಟದಲ್ಲಿ ನಿಂತುಕೊಂಡಿರುವನು. ಹೀಗೆ ಇವರುಗಳಿಗೆಲ್ಲರಿಗೂ
ಮಹಾದೇವನ ಸಮಯವು ದುರ್ಲಭವಾಗಿರುವುದು. ||೮೦|| ಹೀಗಿರುವಲ್ಲಿ ಇವನೆಷ್ಟರ
ವನು ? ಈ ಬಲುಮಾತಿನಿಂದ ಪ್ರಯೋಜನವೇನು ? ,, ಅಲ್ಲಿ ನಿಂತಿರು ” ಎಂದು ಹೇ
ಳಿಬಿಟ್ಟರೆ, ಶಿವಾಲಯವನ್ನು ನುಗ್ಗುವುದಕ್ಕೆ ಅವನಿಂದ ಹೇಗಾದೀತು ? || ೮೧ ||
ಒಳಗಿರುವ ತಾಪಸರು ಮೊದಲು ಶಿವನನ್ನು ಪೂಜಿಸಲಿ ; ಪರಿಚಾರಕರುಗಳೂ ಪರದೇಶ
ದವರೂ ಸಹ ಶಿವಾಲಯವನ್ನು ಯಾವಾಗಲೂ ಪ್ರವೇಶಮಾಡಕೂಡದು. ಬಂದುವೇಳೆ

ರಕಸಂದೋಹಾಸ್ತಥಾನ್ಯಾಪರದೇಶಿನಃ ‖೮೦‖ ಪ್ರವಿಶಂತುಮಹೇಶಸ್ಯಮಂ ದಿರಂಮಾಕದಾಚನ । ಅಪರಾಧಃಪ್ರವಿಷ್ಟಾಶ್ಚೇದ್ಯದಿವಾಸೇವನೇರತಿಃ ‖೮೩‖ ಭಜಂತಾಂಬಹಿರೇವೇಶಮಿತ್ಯಾಜ್ಞಾಂಚಕ್ರುರುದ್ಧತಾಃ । ಗೌಳಾಸ್ತಪಸ್ವಿನಸ್ತ್ವ್ಯಗೋಹಿಲಾರ್ಯಸ್ಸಮಾಗತಃ ‖೮೪‖ ಯಥಾಹ್ನಿನವಿಶೇದ್ದ್ವಾರ್ಸ್ಥಾಂಸ್ತಥಾಶ್ಯಪುನರ್ನಿಶಿ । ದೃಢಾರ್ಗಳಂಶಿವಗೃಹಂವಿಧಾಯಪ್ರಯಯುರ್ಗೃಹಾನ್ ‖೮೫‖ ಓಹಿಲಾರ್ಯೋಯಥಾಪೂರ್ವಮರ್ಧರಾತ್ರೇಸಮಾಗತಃ । ಈಶೇನೋದ್ಘಾಟಿತಾಶೇಷಕವಾಟಸ್ತಂಮಹೇಶ್ವರಂ ‖೮೬‖ ಅರ್ಚಯಾಮಾಸವೃತ್ತಾಂತಮಿಮಂಜ್ಞಾತ್ವಾಪ್ರಗೇಽಖಿಲಾಃ । ಗೌಳಾಃಪ್ರಕುಪಿತಾಸ್ಸಂತೋಽವದನ್ನಾಹಿತಸಂಶಯಾಃ ‖೮೭‖ ಕವಾಟಮುದ್ಘಾಟಿತವಾನ್ಮದನೂರುಪುರೇಪುರಾ । ದಾಸಾರ್ಯಾಯಸರಾಮೇಶಸ್ಸಂಪ್ರೀತ್ಯಾಭಕ್ತಭಾವನಃ ‖೮೮‖ ಕಟಕೇಕಿನ್ನರಾರ್ಯಾಯತಥೈವತ್ರಿಪುರಾಂತಕಃ । ಪುರಾಶ್ರೀಪಿಳ್ಳೆಭಕ್ತಾಯಬ್ರಹ್ಮೇಶೋಭಕ್ತವತ್ಸಲಃ ‖೮೯‖ ಕವಾಟೋದ್ಘಾಟನಂಚಕ್ರೇಗ್ರಾಮೇತಿರುಮುಡಾಹ್ವಯೆ । ಸ್ವಪುರೀದ್ವಾರನಿಹಿತಕವಾಟೋದ್ಘಾಟನಂಶಿವಃ ‖೯೦‖ ದಿನಾನಿಸಪ್ತವ್ಯತನೋನ್ನಿಂಬಾಂಬಾಯೈಪ್ರಹರ್ಷಿತಃ । ಕಾಟಕೋಟಾಯಕೈಲಾಸಕವಾಟೋದ್ಘಾಟ

---

ಒಳನುಗ್ಗಿದರೆ ಅದು ತಪ್ಪಾಗುವುದು. ಶಿವನ ಸೇವೆಯನ್ನು ಮಾಡಬೇಕೆಂಬ ಪ್ರೀತಿಯು ಅವರಿಗಿದ್ದರೆ ‖೮೩‖ ಹೊರಗೆ ನಿಂತುಕೊಂಡೇ ಶಿವನನ್ನು ಸೇವಿಸಲಿ, ಎಂದು ಕಟ್ಟಪ್ಪಣೆಯನ್ನು ಆ ಕೊಬ್ಬಿದ ಗೌಳತಪಸ್ವಿಗಳು ಮಾಡಿದರು. ಓಹಿಲಾರ್ಯನು ಹಗಲು ಒಳಗೆಬಂದರೆ ಪ್ರವೇಶಗೊಳಿಸದಂತೆ ಬಾಗಿಲ ಕಾವಲುಗಾರರಿಗೆ ಆಜ್ಞಾಪಿಸಿ, ರಾತ್ರಿಯುವೇಳೆ ಬಂದರೆ ನುಗ್ಗಲಾಗದಂತೆ ಬಾಗಿಲಿಗೆ ಬಲವಾದ ಅಗಣಿಗಳನ್ನು ಹಾಕಿಕೊಂಡು ಮನೆಗೆ ಹೊರಟುಹೋದರು. ‖೮೫‖ ಓಹಿಲಾರ್ಯನು ಮುಂಚಿನಂತೆಯೇ ಅರ್ಧರಾತ್ರಿಗೆ ಬಂದನು ಶಿವನು ದೇವಾಲಯದ ಎಲ್ಲಾ ಬಾಗಿಲಕದಗಳನ್ನೂ ತೆರೆದನು. ಆ ಶಿವನನ್ನು ಓಹಿಲಾರ್ಯನು ಪೂಜಿಸಿದನು. ಬೆಳಗಾದಮೇಲೆ ಆ ಗೌಳತಪಸ್ವಿಗಳೆಲ್ಲರೂ ಈ ವೃತ್ತಾಂತವನ್ನು ತಿಳಿದು, ಕೋಪಗೊಂಡು, ಸಂಶಯವುಳ್ಳವರಾಗಿ ಮಾತನಾಡಿಕೊಂಡರು. ಹೇಗೆಂದರೆ — ‖೮೭‖ ಭಕ್ತರಲ್ಲಿ ಅಭಿಮಾನವುಳ್ಳ ರಾಮೇಶ್ವರನು ಮುದನೂರಿನಲ್ಲಿ ಪೂರ್ವದಲ್ಲಿ ದಾಸಾರ್ಯನಿಗೆ ದೇವಾಲಯದ ಬಾಗಿಲನ್ನು ತೆರೆದನು ‖ ೮೮ ‖ ಹಾಗೆಯೇ ಕಲ್ಯಾಣ ಪಟ್ಟಣದಲ್ಲಿ ತ್ರಿಪುರಾಂತಕೇಶ್ವರನು ಕಿನ್ನರಬ್ರಹ್ಮಯ್ಯನಿಗೆ ಬಾಗಿಲನ್ನು ತೆರೆದನು. ಪೂರ್ವದಲ್ಲಿ ತಿರುಮುಡವೆಂಬೂರಿನಲ್ಲಿ ಭಕ್ತವತ್ಸಲನಾದ ಬ್ರಹ್ಮೇಶ್ವರನು ಪಿಳ್ಳೆನಾಯ್ನಾರಿಭಕ್ತನಿಗೆ ದೇವಾಲಯದ ಕದವನ್ನು ತೆಗೆದನು. ಶಿವನು ಸಂತೋಷಗೊಂಡು ನಿಂಬಕ್ಕನಿಗಾಗಿ ತನ್ನ ಕೈಲಾಸದ ಪಟ್ಟಣದ ಬಾಗಿಲನ್ನು ೭ ದಿನಗಳವರಗೂ ತೆರದಿದ್ದನು.

ಸಂವ್ಯಥಾತ್ ॥೯೧॥ ಇತರಸ್ಮೈಚಕಾರೇತಿಪ್ರವಿಭೇದಂಕವಾಟಯೋಃ ।
ಯಾಥಾರ್ಥ್ಯಂವಾಕ್ಯೈತನಂವಾಕಥಂಪ್ರಕುಟಿಲೋಽಹ್ಯಯಂ ॥೯೨॥ ಶಿವಾಲ
ಯಂಪ್ರವಿಶ್ಯಾಸ್ಮದಾಜ್ಞಾಮುಲ್ಲಂಘ್ಯನಿರ್ಭಯಾತ್ । ಯಥಾಪೂರ್ವಂಸ್ವೀ
ಯಮಾಯಾಃಕೃತ್ವೇಚ್ಛಾತೋಽವಿನಿರ್ಗತಃ ॥೯೩॥ ಏತಸ್ಮಿನ್ವರ್ತಮಾನೇ
ಽಸ್ಮದ್ಗ್ರಾಮೇಕಿಂವಾಭವೇತ್ಪರಂ । ಅನಿಷ್ಕಾಸನಮೇತಸ್ಯನಾಸ್ಮಾಕಂಬು
ದ್ಧಿಪದ್ಧತಿಃ ॥೯೪॥ ಯೇನಕೇನಾಪ್ಯುಪಾಯೇನಪುರಾನ್ನಿಷ್ಕಾಸನಂವರಂ । ಭಿ
ಕ್ಷಾಸ್ವದಾಸ್ಯಮಾನಾಸುಸ್ವಯಮೇವಪ್ರಯಾಸ್ಯತಿ ॥೯೫॥ ಇತ್ಯಾಲೋ
ಚ್ಯಾದದತ್ಸ್ವೇಷುಭಿಕ್ಷಾಂವಿಜ್ಞಾತವಾಂಸ್ತದಾ । ಶಿಲಾಸ್ಯೈಕತಪತ್ರಾಂಬುಕಂ
ದಮೂಲಾನಿಲಾಶನಾಃ ॥೯೬॥ ಫಲಾಹಾರಾಃಪುರಾಭಕ್ತಾಃಕಿಂನಾಕುರ್ವಂಸ್ತ
ಪೋಽಧಿಕಂ । ನಿಷ್ಕಾಮಾಸ್ಸಂಮುದೋಪೇತಾಶ್ಶಿವಂನಾರಾಧಯಂತಿಕಿಂ ॥೯೭॥
ಶಿವಪೂಜಾವ್ರತಾಸಕ್ತಸ್ಸದ್ಭಕ್ತಿಪರಿಪಾಲಕಃ । ಛಿನ್ನೇಶಿರಸ್ಯಪಿಗತೇಜೀವಿತೇಽ
ಪಿದೃಢವ್ರತಃ ॥೯೮॥ ಶಂಕರೇಕಿಂಮೃತಿಂಮಿಥ್ಯಾಮಿಥ್ಯೇತಿವದತಿಸ್ಫುಟಂ ।

---

ಕಾಟಕೋಟಭಕ್ತನಿಗಾಗಿ ಕೈಲಾಸದ ಬಾಗಿಲನ್ನು ತೆರೆದನು ॥೯೧॥ ಹಾಗೆ ಮತ್ತೊಬ್ಬ
ನಿಗೂ ಕದವನ್ನು ತೆರೆದನೆಂದು ಹೇಳುವ ಮಾತು ಇದೇನು ನಿಜವೊ? ಕಪಟವೊ ?
ವಂಚನಪರನಾದ ಈತನು ನಿರ್ಭಯದಿಂದ ನಮ್ಮ ಅಪ್ಪಣೆಯನ್ನು ಮೀರಿ, ಶಿವಾಲಯವ
ನ್ನು ನುಗ್ಗಿ, ಮೊದಲಂತೆ ತನ್ನ ಇಷ್ಟಬಂದಹಾಗೆ ತನ್ನ ಮಾಯೆಗಳನ್ನೆಲ್ಲ ಅದು ಹೇಗೆ
ಮಾಡಿ ಬಂದನು? ॥೯೩॥ ಈತನು ನಮ್ಮ ಊರಿನಲ್ಲಿದ್ದರೆ ಮುಂದೆ ಇನ್ನೇನಾಗುವುದೋ!
ಈತನನ್ನು ಹೊರಡಿಸದಿರುವುದು ನಮಗೆ ಸದ್ಬುದ್ಧಿಯ ಮಾರ್ಗವಲ್ಲ ॥೯೪॥ ಯಾವುದಾ
ದರೊಂದುಪಾಯದಿಂದ ಈತನನ್ನು ಊರಿನಿಂದ ಹೊರಡಿಸುವುದೇ ಲೇಸು. ಭಿಕ್ಷೆಯನ್ನು
ಕೊಡದೆ ಇದ್ದರೆ ತಾನೇ ಹೊರಟುಹೋಗುತ್ತಾನೆ ॥೯೫॥ ಎಂದು ತಮ್ಮಲ್ಲಿ ಆಲೋಚಿಸಿ
ಕೊಂಡು, ಇವರು ಭಿಕ್ಷೆಯನ್ನು ಕೊಡದೆಹೋಗಲು, ಪಂಡಿತಾರ್ಯನು ಆಗ ಅದನ್ನರಿತು,
ತನ್ನೊಳಗೆ ಆಲೋಚಿಸಿದನೇನೆಂದರೆ—ಪೂರ್ವದಲ್ಲಿ ಭಕ್ತರುಗಳು ಕಲ್ಲು ಮಳಲು ಎಲೆ
ನೀರು ಗೆಡ್ಡೆ ಗೆಣಸು ಗಾಳಿ ಹಣ್ಣು—ಇವುಗಳನ್ನು ಆಹಾರವಾಗಿ ಮಾಡಿಕೊಂಡು, ಅಧಿಕ
ವಾದ ತಪಸ್ಸನ್ನಾಚರಿಸಲಿಲ್ಲವೆ? ಮತ್ತೂ ಯಾವುದೊಂದರ ಅಪೇಕ್ಷೆಯೂ ಇಲ್ಲದವರು
ಸಂತೋಷದಿಂದ ಕೂಡಿ ಶಿವಾರ್ಚನೆಯನ್ನು ಮಾಡುವುದಿಲ್ಲವೆ? ॥೯೭॥ ಶಿವಾರ್ಚನವ್ರತ
ದಲ್ಲಿ ಆಸಕ್ತನೂ ಸದ್ಭಕ್ತಿಯನ್ನು ಕಾಪಾಡಿಕೊಂಡಿರುವವನೂ ಆದ ದೃಢವ್ರತಸಂಪ
ನ್ನನು ತನ್ನ ತಲೆಯು ಕತ್ತರಿಸಿಹೋದರೂ ಪ್ರಾಣವೇ ಹೋದರೂ ಸಹ ತನ್ನ ವ್ರತ
ವನ್ನು ಹೇಗಾದರೂಮಾಡಿ ರಕ್ಷಿಸಿಕೊಳ್ಳುತ್ತಾನಲ್ಲದೆ, ಮರಣಕ್ಕಾಗಿ ಅವನು ಅಂಜುವನೆ?
ಅವನು ಅದಲ್ಲವನ್ನೂ ಅಸತ್ಯ ಅಸತ್ಯವೆಂದು ಸ್ಪಷ್ಟವಾಗಿ ನುಡಿಯುತ್ತಾನೆ. ಆಪಾದ

ತಸ್ಮಾದ್ಭಕ್ತ್ಯರ್ಥಮತ್ಯಂತಮನಾಕುಲಂಪರಮೇಶ್ವರಃ ‖ ೯೯ ‖ ನಕಿಂಪಸ್ಯ
ಸಾಮರ್ಥ್ಯಂಗಿರಿಜಾಪ್ರಾಣನಾಯಕಃ | ಶರೀರಮಿದಮಾತ್ಮೀಯಂಜನನೀಸ್ತ
ನ್ಯಮಾತ್ರತಃ ‖ ೧೦೦ ‖ ಪೂರ್ವಂಸಂವರ್ಧಿತಂಸ್ಯಾತ್ಕಿಂಕಿಂಚೇಪನ್ನವನೀತತಃ
ಸಪ್ರೋಷಿತಂಕಿಮುಪುನರ್ಮಿತಾಹಾರಾದ್ದಿನೇದಿನೇ ‖ ೧೦೧ ‖ ವರ್ಧಿತಂಸ್ಯಾ
ಕಿಂಕಿಂತುಮನಸಸ್ಯಾಶಾಕುಲೇಸತಿ | ಉಪರ್ಯುಪರ್ಯತಿಶಯಾದಶನೇಚ್ಛಾಪಿವ
ರ್ಧತೇ ‖ ೧೦೨ ‖ ತಥಾಚಿತ್ತೇವಿಹೀನೇಚ ಬುಭುಕ್ಷಾಪಿನಿವರ್ತತೇ | ತಸ್ಮಾ
ನ್ನಿಗೃಹ್ಯಸ್ವಮನಸ್ತುಷ್ಟಃಕಿಂಕಾಂಕ್ಷತೇಜನಃ ‖ ೧೦೩ ‖ ಕಾಮನಾಯಾಂ
ನಷ್ಟಾಯಾಂಶರೀರಂಭಾಸತೇತರಾಂ | ಅಹಮೇವಹಿಮುಂಚಾಮಿಯಾಚ್ಞಾ
ಮಿತಿಹೃದಿಸ್ಥಿತೇ ‖ ೧೦೪ ‖ ಸೌರಾಷ್ಟ್ರಸೋಮನಾಥಸ್ಯಕೃಪಯಾಜನಿತಂ
ಶುಭಂ | ಗುಪ್ತಾಯಾಂಕಿನ್ನುಪೇಷಣ್ಯಾಂವಿವಾಹೋವಿನಿವರ್ತತೇ ‖ ೧೦೫ ‖
ನಿವಾರಿತಾಯಾಂಯಾಚ್ಞಾಯಾಂಭಕ್ತಿರ್ನಷ್ಟಾಭವೇತ್ಕಿಮು | ಜಠರಾರ್ಥ
ಕೃತಾಯಾಚ್ಞಾಕಿಂಶಿವಸ್ಮರಣಂಭವೇತ್ ‖ ೧೦೬ ‖ ಪ್ರದಕ್ಷಿಣಂನುದೇವಸ್ಯ

---

ರಿಂದ ಹೊಟ್ಟೆಯನ್ನು ಕ್ಕಾಗಿ ಪೇಚಾಡುವ. ಮನುಷ್ಯನನ್ನು ನೋಡಿ ಪರಮೇಶ್ವರನು ಸ
ಗುವುದಿಲ್ಲವೆ? ನನ್ನ ಈ ದೇಹವು ಪೂರ್ವದಲ್ಲಿ ತಾಯಿ ಮೊಲೆ ಹಾಲಿನಿಂದ ಮಾತ್ರ
ಬೆಳೆಯಲಿಲ್ಲವೆ? ‖ ೧೦೦ ‖ ಮತ್ತೂ ತುಸು ಬೆಣ್ಣೆಯನ್ನುಂಡು ವೃದ್ಧಿಗೊಳ್ಳಲಿಲ್ಲವೆ? ಮತ್ತೆ
ಅದರಂತೆಯೇ ಈಗಲೂ ಮಿತವಾದ ಆಹಾರವನ್ನು ತೆಗೆದುಕೊಳ್ಳುತ್ತ ಬರುವುದರಿಂದ ಬೆ
ಳೆಯದೆ ಇದ್ದೀತೆ? ಇದಲ್ಲದೆ ಮನಸ್ಸು ಆಸೆಯಿಂದ ವ್ಯಾಪ್ತವಾಗಿದ್ದರೆ ಮೇಲೆಮೇಲೆ
ಆಹಾರವನ್ನು ತಿನ್ನಬೇಕೆಂಬ ಕಾಂಕ್ಷೆಯಾದರೂ ಬೆಳೆಯುತ್ತದೆ ‖ ೧೦೨ ‖ ಮನಸ್ಸು
ಆಸೆಯನ್ನು ತೊರೆದುಬಿಟ್ಟದ್ದರೆ ಹಸಿವಾದರೂ ಬಿಟ್ಟುಹೋಗುತ್ತದೆ. ಆದುದರಿಂದ ತನ್ನ
ಮನಸ್ಸನ್ನು ನಿಗ್ರಹಿಸಿಕೊಂಡು ಸಂತುಷ್ಟನಾದವನು ಏನನ್ನು ತಾನೇ ಅಪೇಕ್ಷಿಸುವನು
‖ ೧೦೩ ‖ ಇನ್ನೊಂದರ ಬಯಕೆಯು ಇಲ್ಲದೆಹೋದರೆ, ದೇಹವು ಚೆನ್ನಾಗಿ ಪ್ರಕಾಶಿಸು
ತ್ತದೆ. ಭಿಕ್ಷೆ ಬೇಡುವುದನ್ನು ಬಿಟ್ಟುಬಿಡಬೇಕೆಂಬ ಮನಸ್ಸಿನಲ್ಲಿ ನಾನೇ ಯೋಚಿಸು
ತ್ತಿರುವಲ್ಲಿ ‖ ೧೦೪ ‖ ಸೌರಾಷ್ಟ್ರದ ಸೋಮನಾಥನ ದಯದಿಂದ ಆದಾಗಿ ತಪ್ಪಿಹೋಯಿ
ತು, ನನಗೆ ಮಂಗಳವೇ ಆಯಿತು. ಅರೆಯುವ ಕಲ್ಲು ಮರೆಯಾಗಿಹೋದರೆ ಮದು
ವೆಯು ನಿಂತುಹೋದೀತೆ? ‖ ೧೦೫ ‖ ಭಿಕ್ಷೆಯನ್ನು ತಡೆದುಬಿಟ್ಟರೆ ಭಕ್ತಿಯು ನಷ್ಟವಾಗಿ
ಹೋದೀತೆ? ಹೊಟ್ಟೆಗಾಗಿ ಮಾಡುವ ಯಾಚನೆಯು ಶಿವಸ್ಮರಣವಾದೀತೆ? ‖ ೧೦೬ ‖ ಮ
ನೆಮನೆಗೆ ತಿರುಗುವುದು ಶಿವನ ಪ್ರದಕ್ಷಿಣವನ್ನು ಮಾಡಿದಂತಾಗುವುದೆ? ತನಗಾಗಿ ಬೇಡು
ವುದು ಶಿವನನ್ನು ಕುರಿತು ಭಕ್ತಿಯನ್ನು ಪ್ರಾರ್ಥಿಸಿದಂತಾಗುವುದೆ? ‖ ೧೦೭ ‖ ತನ್ನ
ಹೊಟ್ಟೆಗಾಗಿ ಹಲವು ಬಣ್ಣದ ಅನ್ನವನ್ನು ತಿರಿದು ತರುವುದು ಶಿವಪೂಜೆಗಾಗಿ ಪತ್ರ

ಸಂಚಾರಃಪ್ರತಿಮಂದಿರಂ | ಅತ್ರಾರ್ಥಮರ್ಥನಾಕಿಂವಾಸದ್ಭಕ್ತೈರ್ಯಾಚನಾಶಿ
ನಂ ‖ ೧೦೭ ‖ ನಾನಾವರ್ಣಾನ್ನಸಂದೋಹಪರಣಂಸ್ವೀಯಕುಕ್ಷಯೆ | ಶಿವಾ
ರ್ಥಂಸತ್ರಪುಷ್ಪಾಣಾಂಭವೇದಾಹರಣಂಕಿಮು ‖ ೧೦೮ ‖ ತದ್ಭುಕ್ತಿರೀಶಪಾದಾ
ಬ್ಜಧ್ಯಾನಾಮೃತರಸಾಂಚಿತಾ | ಭಕ್ತಿರ್ಭವೇತ್ಕಿಮಥವಾಸಮ್ಯಗಾಲೋಕಿ
ತೇಸತಿ ‖ ೧೦೯ ‖ ಬಾಹ್ಯಾಂತರಾರ್ಪಿತಾಂಸಾವಧಾನಜಾತಸುಖಪ್ರದಾಂ |
ಪ್ರಾಣಲಿಂಗಪ್ರಸಾದಾನುಭವಪ್ರಾಪ್ತಿಂವಿನಾನರಃ ‖ ೧೧೦ ‖ ವರ್ತತೇಯೋಹಿ
ದುರ್ವೇಷೋಯಾಚಕೋನಸಭಕ್ತಿಮಾನ್ | ಇತೀಷತ್ಸ್ಮಿತವಿಸ್ಫಾರವದನಾಂ
ಬುರುಹಸ್ತದಾ ‖ ೧೧೧ ‖ ಕಿಮನ್ಯತ್ತುಸುರಕ್ಷಾರ್ಥಮುಪಭೋಕ್ತುಂಮಮಾ
ವನೌ | ಯಸ್ಮಿನ್ಭುಕ್ತೇತನುರ್ಯಸ್ಯಪ್ರಸಾದಸುಖಮಾಪ್ನುಯಾತ್ ‖ ೧೧೨ ‖
ಪ್ರಾಪ್ನುವಂತ್ಯಮೃತತ್ವಂಚಪ್ರಾಣಾಬುದ್ಧಿಶ್ಚನಿರ್ಮಲಾ | ಶಯ್ಯಾಂಕೃತ್ವಾಯ
ದಾತ್ಮಾನಮಧಿಶೇತೇಮಹೇಶ್ವರಃ ‖ ೧೧೩ ‖ ಅಪಿಚಾರಿತ್ರಮಧಿಕಂಸುಪ್ರಸಿ
ದ್ಧತರಂಭವೇತ್ | ಪ್ರಾಪ್ನೋತಿಮಾನಸಂಕುತ್ರಾಪ್ಯಗತ್ವಾವೃಷಕೇತನಂ ‖

---

ಷ್ಪಗಳನ್ನು ಎತ್ತಿದಂತಾಗುವುದೆ? ‖ ೧೦೮ ‖ ಚೆನ್ನಾಗಿ ಆಲೋಚನೆ ಮಾಡಿದರೆ, ಆ ಆಹಾ
ರದ ಭೋಜನವು ಶಿವಪಾದಧ್ಯಾನವೆಂಬ ಅಮೃತದ ರುಚಿಯಿಂದ ಕೂಡಿದ ಭಕ್ತಿಯಾಗು
ವುದೆ? ‖ ೧೦೯ ‖ ಯಾವನು ಅವಧಾನಕ್ರಮವನ್ನನುಸರಿಸಿ, ಬಾಹ್ಯಾಂತರಾರ್ಪಣಗಳ
ನ್ನು ಮಾಡಿ, ಪ್ರಾಣಲಿಂಗ ಪ್ರಸಾದಸೌಖ್ಯವನ್ನು ಅನುಭವಿಸುತ್ತಿರುವುದಿಲ್ಲವೋ? ಅಂಥ
ಮನುಷ್ಯನು ‖ ೧೧೦ ‖ ಕೆಟ್ಟ ವೇಷದ ಭಿಕ್ಷುಕನಲ್ಲದೆ ಭಕ್ತಿವಂತನಲ್ಲ; ಎಂದು ಯೋ
ಚಿಸಿ, ಮುಗುಳ್ನಗೆಯಿಂದ ಅರಳಿದ ಮುಖಕಮಲವುಳ್ಳವನಾಗಿ, ‖ ೧೧೧ ‖ ಭೂಮಿಯಲ್ಲಿ
ದೇಹವನ್ನು ಕಾಪಾಡಿಕೊಂಡಿರುವುದಕ್ಕಾಗಿ ನನಗೆ ಭುಂಜಿಸಲು ಇದಕ್ಕಿಂತಲೂ ಉತ್ತಮ
ವಾದ ಆಹಾರವು ಮತ್ತಾವುದಿದೆ? ಯಾವುದನ್ನು ತಿಂದರೆ ಮನುಷ್ಯನ ದೇಹವು ಶಿವಾನು
ಗ್ರಹಸೌಖ್ಯವನ್ನು ಹೊಂದುತ್ತದೋ ‖ ೧೧೨ ‖ ಪ್ರಾಣಗಳು ಮರಣರಹಿತಗಳಾಗುವು
ವೋ, ಬುದ್ಧಿಯು ನಿರ್ಮಲವಾಗುವುದೋ, ಪರಶಿವನು ಯಾವುದನ್ನು ತನಗೆ ಹಾಸಿಗೆಯ
ನ್ನಾಗಿ ಮಾಡಿಕೊಂಡು ಮಲಗುತ್ತಾನೋ ‖ ೧೧೩ ‖ ಯಾವುದರ ಸೇವನೆಯಿಂದ ಜೀವಿತ
ಚರಿತ್ರವು ಲೋಕದಲ್ಲಿ ಅತ್ಯಂತ ಪ್ರಸಿದ್ಧವಾಗುವುದೋ, ಮನಸ್ಸು ಇನ್ನೆತ್ತಲೂ ಚಲಿ
ಸದೆ ಶಿವನನ್ನೇ ಹೊಂದಿಕೊಂಡಿರುವುದೋ ‖ ೧೧೪ ‖ ರಚಿಸಿದ ಕಾವ್ಯಗಳು ಕಿವಿಗಿಂಪಾಗಿ
ರುವುವೋ, ವಿವೇಕವು ಭೂಮಿಯಲ್ಲಿ ಶ್ಲಾಘಿಸಲ್ಪಡುವಂತಾಗುವುದೋ, ಲೋಕಗಳಲ್ಲೆಲ್ಲ
ಮಹಿಮೆಯು ತುಂಬಿ ತುಳುಕಾಡುವಂತಾಗುವುದೋ ‖ ೧೧೫ ‖ ಅಂಥ, ಅಸದೃಶವಾದ,
ಅತ್ಯಂತ ನಿರ್ಮಲವಾದ, ಮಂಗಳಪ್ರದವಾದ, ಕೊಲೆಯಿಲ್ಲದ, ಜ್ಞಾನವೆಂಬಮೃತದ ಕಾಲ್ಪೆ

ಕೃತಯುಕ್ತೋ ವ್ರತಸುಖದಾವಿನೇ ಕಶ್ಚಿಲ್ಲಭ್ಯತೇ ಭುವಿ | ಮಾಹಾತ್ಮ್ಯಂ ಭುವ
ನೇ ಪುಸ್ಯಾತ್ಪರಿಪೂರ್ಣತರಂ ಮಹತ್ || ೧೧೫ || ತದತುಲ್ಯಂ ಸುನೈರ್ಮಲ್ಯಂ ಕಲ್ಯಾ
ಣಕರಮುತ್ತಮಂ | ಅಮೂಲ್ಯಂ ಚಿತ್ಸುಧಾಕುಲ್ಯಾ ಹೃಚ್ಛಲ್ಯಂ ಕಲುಷಾತ್ಮ
ನಾಂ || ೧೧೬ || ಭಕ್ತಿಲೌಲ್ಯಕರಂ ದತ್ತಕೈವಲ್ಯಮುದಯಾವಹಂ | ಮುಕ್ತಿ
ಮೂಲ್ಯಂ ಪರಗಣೋಪಲಾಲ್ಯಂ ಪರಮೋಜ್ವಲಂ || ೧೧೭ || ತತ್ವಕಲ್ಯಾತ್ಮಕಂ
ಶಂಭೋರ್ನಿರ್ಮಾಲ್ಯಮತಿಪಾವನಂ | ಮಮಾಹಾರಂ ವಿಧಾಸ್ಯೇಹಮಿತಿನಿಶ್ಚಿ
ತಮಾನಸಃ || ೧೧೮ || ಭೂತ್ವಾ ಪೂರ್ವದಿನೇ ಶಂಭುಮಾರಾಧ್ಯಾಪರವಾಸರೇ
ಯುದ್ಭವೇದ್ಬಾಹ್ಯನಿಕ್ಷಿಪ್ತಂ ಪತ್ರಮಾದಾಯ ತಚ್ಛನೈಃ || ೧೧೯ || ಪ್ರಸಾದಭಾ
ವನೋಪೇತಸ್ತದ್ಭಕ್ತ್ಯಾ ಭಕ್ಷಯಂಸ್ಥಿತಃ | ಅಥ ಪಾತಕಿನೋ ಗೌಳತಾಪಸಾಃ
ಪ್ರವಿಲೋಕ್ಯ ತಂ || ೧೨೦ || ಅಪ್ರದತ್ತೇಪಿ ಭಿಕ್ಷಾನ್ನೇ ನ ಪ್ರಯಾತಶ್ಚ ನೋ
ಮೃತಃ | ಪತ್ರಾಶನಸಮುದ್ಯುಕ್ತೋ ಭವತ್ಯೇನಾಪಿ ಜೀವತಿ || ೧೨೧ || ವ
ಯಂ ದಹಾಮಃ ಪತ್ರಾಣಿ ಸರ್ವಾಣಿ ಚ ಮುಹುರ್ಮುಹುಃ | ನಾನ್ಯತ್ತದ್ಭಕ್ಷಣಾಯಾ
ಸ್ತಿ ಗ್ರಾಮೇಸ್ಮಾಕಮಿದಂ ವಿನಾ || ೧೨೨ || ಪ್ರಯಾತಿವಾನ್ಯತ್ಶೀಘ್ರಂ ಮ್ರಿ

---

ಯಾದ, ಪಾಪಾತ್ಮರ ಹೃದಯಕ್ಕೆ ಅಲಗಾದ, || ೧೧೬ || ಭಕ್ತಿತತ್ಪರತೆಯನ್ನುಂಟುಮಾ
ಡುವ, ಮುಕ್ತಿಯನ್ನೀಯುವ, ಪುರೋವೃದ್ಧಿಯನ್ನುಂಟುಮಾಡುವ, ಮುಕ್ತಿಯನ್ನು
ಕೊಳ್ಳುವ ಬೆಲೆಯಾದ, ಶಿವಗಣದಿಂದ ಆದರಿಸಲ್ಪಡುವ, ಅತ್ಯಂತ ಪ್ರಕಾಶಮಾನವಾದ
ತತ್ವಗಳ ಸಾರವಾದ, ಅತ್ಯಂತ ಪರಿಶುದ್ಧವಾದ, ಶಿವನಿರ್ಮಾಲ್ಯವನ್ನು ನನಗೆ ಆಹಾರವ
ನ್ನಾಗಿ ಮಾಡಿಕೊಳ್ಳುವೆನು, ಎಂದು ನಿಶ್ಚೈಸಿದ ಮನಸ್ಸುಳ್ಳವನಾಗಿ || ೧೧೮ || ಮೊದಲು
ದಿವಸ ಶಿವನನ್ನು ಪೂಜಿಸಿ, ಮರುದಿವಸ ಹೊರಕ್ಕೆ ತೆಗೆದಿಟ್ಟ ನಿರ್ಮಾಲ್ಯಪತ್ರವನ್ನು ಮೆ
ಲ್ಲನೆ ತೆಗೆದುಕೊಂಡು || ೧೧೯ || ಶಿವಪ್ರಸಾದವೆಂಬ ಭಾವನೆಯಿಂದ ಕೂಡಿ, ಅದನ್ನು
ಭಕ್ತಿಯಿಂದ ತಿನ್ನುತ್ತಲಿದ್ದನು. ಬಳಿಕ ಪಾಪಿಗಳಾದ ಗೌಳತಪಸ್ವಿಗಳು ಆ ಋಷಿಪುತ್ರ
ನನ್ನು ನೋಡಿ, ಭಿಕ್ಷಾನ್ನವನ್ನು ಕೊಡದೆ ಇದ್ದರೂ ಈತನು ಹೊರಕ್ಕೆಲ್ಲೂ ಹೋಗಲೂ
ಇಲ್ಲ, ಸಾಯಲೂ ಇಲ್ಲ; ಪತ್ರವನ್ನು ತಿನ್ನಲುಜ್ಜುಗಿಸಿರುವನು; ಅದರಿಂದ ಜೀವಿಸಿ
ಕೊಂಡಿರುವನು || ೧೨೧ || ನಾವು ನಿರ್ಮಾಲ್ಯದ ಪತ್ರಗಳನ್ನೆಲ್ಲ ಸುಟ್ಟುಬಿಡುವ; ಬ
ಳಿಕ ಅವನಿಗೆ ತಿನ್ನುವುದಕ್ಕೆ ನಮ್ಮ ಊರಿನಲ್ಲಿ ಇದು ಹೊರತು ಮತ್ತೇನೂ ಇರುವು
ದಿಲ್ಲ || ೧೨೨ || ಇನ್ನೆಲ್ಲಿಗಾದರೂ ಹೊರಟುಹೋಗುತ್ತಾನೆ; ಅಥವಾ ಬೇಗನೆ ಸತ್ತುಹೋ
ಗುತ್ತಾನೆ; ಎಂದು ಯೋಚಿಸಿ, ಆ ಗೌಳತಪಸ್ವಿಗಳು ಸಡಗರದಿಂದ ಕೂಡಿ, ಪತ್ರಗಳ
ನ್ನೆಲ್ಲ ಸುಟ್ಟುಬಿಟ್ಟರು || ೧೨೩ || ಆ ಋಷಿಪುತ್ರನಾದರೋ ಆ ನಿರ್ಮಾಲ್ಯಪತ್ರವನ್ನು

ತ್ರಿಂವಾಸಂಪ್ರಯಾಸ್ಯತಿ | ಇತಿಸರ್ವಾಣಿಪತ್ರಾಣಿಪ್ರದೆಹುಸ್ತೇಸಸಂಭ್ರಮಂ ||
ತತ್ಪತ್ರದಾಹಜಂಭಸ್ಮಚಯಂದೃಷ್ಟ್ವಾಸಕುತೂಹಲಃ | ನಿರ್ಮಾಲ್ಯಮಾದೌಸಂಜಾ
ತಂವಿಭೂತಿರಪಿಸಂಪ್ರತಿ || ೧೦೪ || ಅಹೋಭಾಗ್ಯಂಮಮಾಯಾತಮೇತತ್ಪ
ರಮದುರ್ಲಭಂ | ಪಾದಾಹತಸ್ಯಕೋಪೇನಶಯ್ಯಾಯಾಂಪತನಂಯಥಾ ||
ವಿಕೀರ್ಣಂಧರಣೀಪೃಷ್ಠೇದ್ವಿಗುಣಂಲವಣಂಯಥಾ | ಪ್ರಮಾದಾತ್ಪರಮಾನ್ನ
ಸ್ಯಮಧ್ಯೇಸರ್ಪಿಶ್ಚ್ಯುತಂಯಥಾ || ೧೦೬ || ಫಲಿತಂಸ್ಯಾದ್ಯಥಾಕುಲ್ಯಂತೈಲವಿ
ಕ್ರಯಿಣೋಽನ್ವಹಂ | ಯತ್ರಗಾವಸ್ಸ್ಥಿತಾಸ್ತತ್ರಘಾಸೋತ್ಪತ್ತಿರ್ಯಥಾಸ್ಥ
ಲೇ || ೧೦೭ || ಸ್ನಾತುಂಜಿಗಮಿಷೋಸ್ತೀರ್ಥಂಯಥಾಸಮ್ಮುಖಮಾಗತಂ |
ತಥಾಭವನ್ಮಮೇದಾನೀಂಸೋಮೇಶಕರುಣಾನಿಧೇ || ೧೦೮ || ಸರ್ವೇಮನೋ
ರಥಾಸ್ತೂರ್ಣಂಪ್ರಸೂತಾಇವಮೇಽಭವನ್ | ದಾತಃಪ್ರಸನ್ನಸೋಮೇಶಭೂ
ತಭಾವನಶಂಕರ || ೧೦೯ || ಮದ್ವರ್ತನಸ್ಯಸದೃಶೋಽಪ್ಯಾಹಾರೋಽಭೂದ್ಯ
ತೋಮಮ | ಶಾತಾತಪಸ್ಮೃತಿಪ್ರೋಕ್ತಭಸ್ಮಾಶನಮಭೂನ್ಮಮ || ೧೧೦ ||

---

ಸುಟ್ಟ ಬೂದಿಯ ರಾಶಿಯನ್ನು ನೋಡಿ, “ಮೊದಲು ನಿರ್ಮಾಲ್ಯವಾಗಿದ್ದುದು ಈಗ ವಿಭೂತಿಯಾಗಿರುವುದು || ೧೦೪ || ಆಹಾ! ಅತ್ಯಂತ ದುರ್ಲಭವಾದ ಈ ವಸ್ತುವು ನನಗೆ ದೊರೆತುದು ಭಾಗ್ಯವೇ ಸರಿ. ದಯಾನಿಧಿಯಾದ ಎಲೈ ಸೋಮನಾಥನೆ, ಕೋಪದಿಂದ ಕಾಲಿನಲ್ಲಿ ಒದೆಯಲ್ಪಟ್ಟವನು ಹಾಸಿಗೆಯಮೇಲೆ ಬಿದ್ದಂತೆಯೂ || ೧೦೫ || ಭೂಮಿಯಮೇಲೆ ಹರಡಿದ ಉಪ್ಪು ಒಂದಕ್ಕೆರಡರಷ್ಟಾದಂತೆಯೂ, ಪರಮಾನ್ನದ ಮಧ್ಯದಲ್ಲಿ ಪ್ರಮಾದವಶದಿಂದ ತುಪ್ಪವು ಜಾರಿಬಿದ್ದಂತೆಯೂ, || ೧೦೬ || ಯಾವಾಗಲೂ ಎಣ್ಣೆ ಮಾರುವವನಿಗೆ ಎಣ್ಣೆಯ ಕಾಲ್ವೆಯೇ ದೊರೆದಂತೆಯೂ, ದನಗಳು ನಿಂತಿದ್ದ ಬಳಿಯಲ್ಲಿಯೇ ಹುಲ್ಲು ಹುಟ್ಟಿದಂತೆಯೂ || ೧೦೭ || ಸ್ನಾನಮಾಡಬೇಕೆಂದು ಹೋಗುತ್ತಿದ್ದವನಿಗೆ ಇದಿರಾಗಿ ತೀರ್ಥವೇ ಬಂದಂತೆಯೂ, ಈಗ ನನಗೆ ಫಲವಾಯಿತು || ೧೦೮ || ಭಕ್ತರಿಗೆ ಇಷ್ಟಪ್ರದನಾಗಿಯೂ ಪ್ರಸನ್ನನಾಗಿಯೂ, ಸುಖವನ್ನುಂಟುಮಾಡುವವನಾಗಿಯೂ, ಮನಸ್ಸಿನ ಬಯಕೆಯನ್ನು ನೆರವೇರಿಸುವವನಾಗಿಯೂ ಇರುವ ಎಲೈ ಸೋಮನಾಥನೆ, ಯಾವ ಕಾರಣದಿಂದ ನನ್ನ ನಡೆಗೆ ತಕ್ಕ ಆಹಾರವು ನನಗೆ ಲಭಿಸಿತೋ ಆ ಕಾರಣದಿಂದ ನನ್ನ ಮನೋರಥಗಳೆಲ್ಲವೂ ಬೇಗನೆ ಫಲಿಸಿದಂತಾದುವು || ೧೦೯ || ಶಾತಾತಪಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ಭಸ್ಮದ ಆಹಾರವು ನನಗೆ ಪ್ರಾಪ್ತವಾಯಿತು || ೧೧೦ || ಆ ಸ್ಮೃತಿಯಲ್ಲಿ ಬೋಧಿಸಲ್ಪಟ್ಟ ಭಸ್ಮದ ಹಾಸಿಗೆಯೂ ನನಗೆ ದೊರೆದಿತು. ವೃದ್ಧಶಾತಾತಪಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ಭಸ್ಮದ ಹೊದಿಕೆಯೂ ನನಗೆ ಉಂಟಾಯಿತು || ೧೧೧ || “ತ್ರಿಯಾಯುಷಂ

ಭಸ್ಮಶಯ್ಯಾಪಿತತೋಽಪದಿಷ್ಟಾಮುಮುಸಮುಗತಾ | ವೃದ್ಧಶಾತಾತಪಪ್ರೋಕ್ತಾ ಸಾಭಸ್ಮಚ್ಛನ್ನತಾಪ್ಯಭೂತ್ ‖ ೧೫೧ ‖ ತ್ರಿಯಾಯುಷಮಿತಿಖ್ಯಾತಯಜು ಸ್ಸೂಕ್ತ್ಯರ್ಥನಿಶ್ಚಯಃ | ಕಾಲಾಗ್ನಿರುದ್ರೋಪನಿಷತ್ಪ್ರೋಕ್ತಂಭಸ್ಮಪ್ರ ಶಂಸನಂ ‖ ೧೫೨ ‖ ಜಾಬಾಲಕೈವಲ್ಯಶಾಖಾಮ್ಯುಕ್ತಂಭೂತಿಪ್ರಶಂಸನಂ | ಸ ರ್ವಂಹವಾಇದಂಭಸ್ಮೇತ್ಯಥರ್ವೋಕ್ತಿಶ್ಚ ಮೇಽಭವತ್ ‖ ೧೫೩ ‖ ಶೈವಸ್ಕಾಂ ದಾಸಿಲಾದಿತ್ಯಬ್ರಹ್ಮಕೈವರ್ತನಾಮಸು | ಬ್ರಹ್ಮಬ್ರಹ್ಮಾಂಡಮತ್ಸ್ಯೇಷುಕೂ ರ್ಮವೈಷ್ಣವವಹ್ನಿಷು ‖ ೧೫೪ ‖ ಭವಿಷ್ಯಲಿಂಗಗರುಡಮಾರ್ಕಂಡೇಯೇಷ್ವಪಿ ಸ್ಫುಟಂ | ವರಾಹನರಸಿಹ್ಮಾಭಿಧಾನಭಾಗವತಾದಿಷು ‖ ೧೫೫ ‖ ಅಷ್ಟಾದಶ ಪುರಾಣೋಪಪುರಾಣೇಷುಪ್ರಕೀರ್ತಿತಾ | ವಿಭೂತಿಸೇವಾಮೇಲಬ್ಧಾಕೃತಾ ರ್ಥೋಽಸ್ಮಿಮಹೀತಲೇ ‖ ೧೫೬ ‖ ಮಜ್ಜನ್ಮನಃಫಲಂಜಾತಮಿತಿಸಂತೋಷ ವಾರಿಧೌ | ಮಗ್ನಸ್ತದ್ಭಸ್ಮಸರ್ವಾಂಗೇಸಮಾಲಿಪ್ಯಾತಿಭಕ್ತಿತಃ ‖ ೧೫೭ ‖ ಉ ಪಯುಜ್ಯತತೋಭೂತಿಶಯ್ಯಾಂಕೃತ್ವಾವಶೇಷತಃ | ಏವಮೇಹಿಲಸದ್ಭಕ್ತಃ ಪ್ರಾನರಿತದ್ವ್ರತವ್ರತಃ ‖ ೧೫೮ ‖ ಸವಿಕ್ಷ್ಯತೇತತೋಗೌಳಾಃಪ್ರೋಚುಸ್ತ

---

ಜಮದಗ್ನೇಃ ’’ ಎಂಬ ಯಜುರ್ವೇದಸೂಕ್ತದ ಅರ್ಥನಿರ್ಣಯವೂ, ಕಾಲಾಗ್ನಿರುದ್ರೋ ಪನಿಷತ್ತಿನಲ್ಲಿ ಹೇಳಲ್ಪಟ್ಟಿರುವ ಭಸ್ಮದ ಸ್ತೋತ್ರವೂ ‖ ೧೫೨ ‖ ಜಾಬಾಲೋಪನಿಷತ್ತಿನ ಲ್ಲಿಯೂ ಕೈವಲ್ಯೋಪನಿಷತ್ತಿನಲ್ಲಿಯೂ ಹೇಳಲ್ಪಟ್ಟಿರುವ ವಿಭೂತಿಯ ಶ್ಲಾಘನೆಯೂ, ‘‘ ಸರ್ವಂಹವಾ ಇದಂಭಸ್ಮ ’’ ಎಂದು ಹೇಳಲ್ಪಟ್ಟಿರುವ ಅಥರ್ವಶ್ರುತಿಯ ವಚನವೂ, ಸಹ ನನಗೆ ಫಲಿಸಿತು. ‖ ೧೫೩ ‖ ಶೈವ, ಸ್ಕಾಂದ, ವಾಯವೀಯ, ಆದಿತ್ಯ, ಬ್ರಹ್ಮಕೈವ ರ್ತ, ಬ್ರಾಹ್ಮ, ಬ್ರಹ್ಮಾಂಡ, ಮತ್ಸ್ಯ, ಕೂರ್ಮ, ವೈಷ್ಣವ, ಆಗ್ನೇಯ, ಭವಿಷ್ಯತ್ತು, ಲೈಂಗ್ಯ, ಗಾರುಡ, ಮಾರ್ಕಂಡೇಯ, ವಾರಾಹ, ನಾರಸಿಹ್ಮ, ಭಾಗವತ ಮೊದಲಾದ ೧೮ ಪುರಾಣಗಳಲ್ಲೂ ಉಪಪುರಾಣಗಳಲ್ಲೂ ಹೇಳಲ್ಪಟ್ಟಿರುವ ವಿಭೂತಿಯ ಸೇವನೆಯು ನನಗೆ ಲಭಿಸಿತು. ಭೂತಲದಲ್ಲಿ ನಾನು ಧನ್ಯನಾದೆನು ‖ ೧೫೬ ‖ ನನ್ನ ಜನ್ಮಕ್ಕೆ ಸಾರ್ಥಕ್ಯ ವುಂಟಾಯಿತು ’’ ಎಂದು ಸಂತೋಷಸಮುದ್ರದಲ್ಲಿ ಮುಳುಗಿದವನಾಗಿ, ಆ ಭಸ್ಮವನ್ನು ದೇಹಕ್ಕೆಲ್ಲ ಲೇಪಿಸಿಕೊಂಡು ‖ ೧೫೭ ‖ ಅತ್ಯಂತ ಭಕ್ತಿಯಿಂದ ತಿಂದು, ಬಳಿಕ ಉಳಿದ ಭಸ್ಮದಲ್ಲಿ ಹಾಸಿಗೆಯನ್ನು ಮಾಡಿಕೊಂಡು, ಹೀಗೆ ಏಹಿಲಾರ್ಯಭಕ್ತನು ತನ್ನ ವ್ರತವಾದ ಶಿವಾರ್ಚನವ್ರತವನ್ನು ನೆರವೇರಿಸುತ್ತಿದ್ದನು ‖ ೧೫೮ ‖ ಬಳಿಕ ಗೌಳತಪಸ್ವಿಗಳು ಅವ ನ್ನು ನೋಡಿ ಒಬ್ಬರಿಗೊಬ್ಬರು ಮಾತನಾಡಿಕೊಂಡರೇನೆಂದರೆ—‘‘ ನಮ್ಮ ಊರಿನಲ್ಲಿ ಇದಕ್ಕೆ ಮುಂಚೆ ಇಂಥ ಆಶ್ಚರ್ಯಕೃತ್ಯಗಳನ್ನು ಯಾವಾಗಲೂ ನೋಡಲಿಲ್ಲ. ಹೀಗೆ

ತ್ರಸರಸ್ಪರಂ । ಏವಂವಿಧಾನಿಚಿತ್ರಾಣಿಪುರೇಽತ್ರಸ್ಮಿಕಂಕದಾಚನ ॥ ೧೫೯ ॥
ನಸಶ್ಯಾಮಸ್ಸವಿಾಕ್ಷ್ಯಂತೇವಿಪರೀತಾನಿಸಂಪ್ರತಿ । ಪ್ರದಗ್ಧಪರ್ಣಭಸ್ಮೈವ
ಭಕ್ಷಯಿತ್ವಾವಸತ್ಯಸೌ ॥ ೧೬೦ ॥ ಸ್ಥಾತುಂಶಕ್ಯಂಕಥಂಭಸ್ಮಭಕ್ಷಯಿತ್ವಾನಿ
ರಂತರಂ । ಭಕ್ಷಯಿತ್ವಾಪಿಭಸ್ಮೇದಂನಾಭೂದ್ಭಸ್ಮಾಯುಮದ್ಭುತಂ ॥೧೬೧॥
ಕಿಮೌಷಧಸ್ಯಸಾಮರ್ಥ್ಯಂಮಂತ್ರತಂತ್ರಾದಿಕಂಕಿಮು । ಯೋಗಾಭ್ಯಾಸೋಽಥ
ವಾಕಿಂವಾಕೃಪಯಾಕೋಽಸ್ಯಲಕ್ಷಿತಃ ॥ ೧೬೨ ॥ ಅನ್ನಂದದಾತಿವಾಜ್ಞಾತು
ಮಶಕ್ಯಂವರ್ತ್ತತೇಽಧುನಾ । ಶಿವಾರಾಧನಾಶಕ್ತ್ಯಾವಶಾನ್ನಿದ್ರಾಹಾರಭಯಾದಿಕಂ॥
ವಿಕಾರಜಾತಂನಾಪ್ನೋತಿಭಕ್ತಾನಿತಿವಿದುರ್ಬುಧಾಃ । ಇತ್ಯಾಲಪತ್ಸುತದ್ಗೌಳ
ತಾಪಸೇಷ್ವಯಮೋಹಿಲಃ ॥ ೧೬೪ ॥ ಕದಾಚಿದಟವೀಂಗತ್ವಾಪ್ರತಿಗೃಹ್ಯಯ
ಥಾಪುರಾ । ಗಂಧದಾರೂಣಿಪತ್ರಾಣಿಬಹುಳಂಚಾಪಿಗುಗ್ಗುಲಂ ॥ ೧೬೫ ॥ ಕೃ
ತ್ವಾತಿದುರ್ವಹಭರಂಭೃತ್ವಾವೀಂವಥಮಂಸತಃ । ವೇಗಾದುಪಾಗತಃಕಾಷ್ಠಂತ
ದಾಸಿತಿತಮಧ್ವನಿ ॥ ೧೬೬ ॥ ಬಿಭೇದತಸ್ಯಚರಣಂತೇನತತ್ಪದನಾಡಿಕಾಃ । ಸ

---

ವಿಪರೀತಗಳು ಕಾಣುತ್ತಿವೆ. ಈತನು ಪತ್ರಗಳನ್ನು ಸುಟ್ಟ ಬೂದಿಯನ್ನು ತಿಂದು
ಕೊಂಡೇ ಇರುತ್ತಾನೆ ॥ ೧೬೦ ॥ ಯಾವಾಗಲೂ ಬೂದಿಯನ್ನು ತಿಂದುಕೊಂಡೇ ಇರುವು
ದಕ್ಕೆ ಇತರಿಗೆ ಹೇಗೆ ಶಕ್ಯವಾದೀತು? ಈತನು ಈ ಬೂದಿಯನ್ನು ತಿಂದರೂ ತಾನು ಭ
ಸ್ಮವಾಗದೆ ಇರುವುದು ಆಶ್ಚರ್ಯವು ॥ ೧೬೧ ॥ ಇದೇನು ಔಷಧದ ಸಾಮರ್ಥ್ಯವೊ? ಅಥ
ವಾ ಮಂತ್ರತಂತ್ರಗಳೊ? ಅಥವಾ ಯೋಗಾಭ್ಯಾಸವೊ? ಅಥವಾ ನಮಗೆ ಕಾಣದಂತೆ
ಯಾರಾದರೂ ಇವನಲ್ಲಿ ಕನಿಕರಗೊಂಡು ಅನ್ನವನ್ನೇನಾದರೂ ತಂದುಕೊಡುತ್ತಾರೊ?
ಈಗ ಅದನ್ನು ತಿಳಿಯುವದಕ್ಕೆ ಅಶಕ್ಯವಾಗಿದೆ. ಶಿವಾರಾಧನಪ್ರಭಾವದ ದೆಸೆಯಿಂದ
ನಿದ್ರಾಹಾರಭಯಾದಿ ವಿಕಾರಗಳು ಭಕ್ತರುಗಳನ್ನು ಹೊಂದುವುದಿಲ್ಲವೆಂದು ವಿದ್ವಾಂಸರು
ಗಳು ತಿಳಿಯುತ್ತಾರೆ ;; ಎಂದು ಆ ಗೌಳತಪಸ್ವಿಗಳು ಮಾತನಾಡಿಕೊಳ್ಳುತ್ತಿರಲಾಗಿ, ಈ
ಓಹಿಲಾರ್ಯನು ॥ ೧೬೪ ॥ ಬಂದಾನೊಂದಿನ ಎಂದಿನಂತೆ ಕಾಡಿಗೆ ಹೋಗಿ, ಶ್ರೀಗಂಧದ
ಕಟ್ಟಿಗೆಗಳನ್ನೂ ಪತ್ರಗಳನ್ನೂ ಬಲು ಗುಗ್ಗಲವನ್ನೂ ಶೇಖರಿಸಿ ॥೧೬೫॥ ಕಟ್ಟಿ, ಹೊರ
ಲಾರದ ಭಾರವುಳ್ಳ ಕಂಬಿಯನ್ನು ಹೆಗಲಮೇಲೆ ಹೊತ್ತು, ರಾತ್ರಿಯಲ್ಲಿ ಬೇಗನೆ ಬರುತ್ತಿದ್ದ
ನು. ಆಗ ಮಾರ್ಗದಲ್ಲಿ ಮೊನೆಯಾದ ಬಂದು ದಸಿಯು ॥೧೬೬॥ ಅವನ ಕಾಲಿಗೆ ನಾಟಿತು.
ಅದರಿಂದ ಆ ಓಹಿಲಾರ್ಯನ ಕಾಲಿನ ನರಗಳೆಲ್ಲವೂ ಸೆಳೆದುಕೊಂಡುವು. ಆದರಿಂದ ಆತನು
ಹಜ್ಜೆಯನ್ನಿಡುವುದಕ್ಕೂ ॥೧೬೭॥ ಕಾಲನ್ನು ಮಡಿಸಿಕೊಳ್ಳುವುದಕ್ಕೂ, ನಡೆಯುವುದಕ್ಕೂ,
ನೀಡುವುದಕ್ಕೂ ಅಸಮರ್ಥನಾದನು. ಹಾಗಾದರೂ ಮನಸ್ಸಿನಲ್ಲಿ ಧೈರ್ಯವನ್ನು ತಂದು

ರ್ವ್ಯಾಸ್ಸಂಕುಚಿತಾಜಾತಾಸ್ತೇನಸಂಸ್ಥಾಪಿತುಂಪದಂ ॥ ೧೪೭ ॥ ಸವ್ಯಾಕುಂಚ
ಯಿತುಂಗಂತುಂಪ್ರಸಾರಯಿತುಮಕ್ಷಮಃ । ತಥಾಪಿಮಾನಸೇಧೈರ್ಯಂಕೃತ್ವಾ
ಲಂಬ್ಯೋರುಸಾಹಸಂ ॥ ೧೪೮ ॥ ಗಚ್ಛನ್ನೇಕಪಾದೇನಕಿಂಚಿದ್ದೂರಮತಃಪ
ರಂ । ಪಾರ್ಷ್ಣಿನ್ಯೈವಪ್ರವಿಚರನ್ಪಾದಾಗ್ರೇಣಚಪಾರ್ಶ್ವತಃ ॥ ೧೪೯ ॥ ಪಾದ
ಲಗ್ನೇನತೇನೈವಕಾಷ್ಠೇನಚಶನೈಶ್ಶನೈಃ । ಕಿಂಚಿತ್ಕಿಂಚಿದಸೌದೂರಂಯಯಾ
ಕುತ್ರಾಪಿನಸ್ಥಿತಃ ॥ ೧೫೦ ॥ ಕಾಷ್ಠಂಪಾದತಲೇವಿದ್ಧಂತಸ್ಯಾಗ್ರೇನಿರ್ಗತಂತ
ತಃ । ನಿಸ್ಸಹತ್ವಂಸಮಾಪನ್ನೇತಸ್ಮಿನ್ನೇವಂಮಹೇಶ್ವರಃ ॥ ೧೫೧ ॥ ಮೃಡೋ
ಕ್ಷಯಸ್ಸ್ವಭಕ್ತೈಕಯೋಗಕ್ಷೇಮಕರಶ್ಶಿವಃ । ಸೌರಾಷ್ಟ್ರಶ್ರೀಸೋಮ
ನಾಥೋಭಕ್ತಾತ್ಮಾಭಕ್ತವತ್ಸಲಃ ॥ ೧೫೨ ॥ ಕೃಪಾಸಿಧಿರ್ಯತಸ್ತಸ್ಮಾದ್ವ್ಯಾ
ಪಂಕೈರಾತಮುದ್ವಹನ್ । ಶಿವಭಕ್ತಸ್ಯಚಿಹ್ನಾನಿಕಿಂಚಿತ್ಕಿಂಚಿತ್ಪ್ರದರ್ಶಯನ್
ಸಂವೇಷ್ಟಿತಶ್ಚಾಪಿಮಷೀವಸ್ತ್ರೇಣೈವಸ್ಫುರನ್ಮಣಿಃ । ಭಸ್ಮನಾಚ್ಛಾದಿತೋ
ಪ್ಯೂರ್ಧ್ವಂಪ್ರದೀಪ್ತ ಇವಪಾವಕಃ ॥ ೧೫೪ ॥ ಶುಕ್ತ್ಯಾಸಂಛನ್ನಮಮಲಮಿ
ವಮುಕ್ತಾಕದಂಬಕಂ । ಅಪಿಶೈವಲಸಂಛನ್ನಂಗಂಗಾಜಲಮಿವೋಜ್ಜ್ವಲಂ

---

ಕೊಂಡು, ಅತ್ಯಂತ ಸಾಹಸವನ್ನು ತಾಳಿ, ॥೧೪೮॥ ಒಂದೇ ಕಾಲಿನಿಂದ ಸ್ವಲ್ಪದೂರ ನಡೆದು,
ಬಳಿಕ ಕಾಲಿಗೆ ದಸಿಯು ನಟ್ಟಿದ್ದರೂ ಅದೇ ಕಾಲಿನ ಹಿಮ್ಮಡದಿಂದ ಸ್ವಲ್ಪ ದೂರವನ್ನೂ,
ಕಾಲತುದಿಯಿಂದ ಸ್ವಲ್ಪ ದೂರವನ್ನೂ, ಮಗ್ಗುಲುಗಾಲಿಂದ ಸ್ವಲ್ಪದೂರವನ್ನೂ ॥೧೪೯॥
ಮೆಲ್ಲಮೆಲ್ಲನೆ ನಡೆಯುತ್ತ, ಎಲ್ಲಿಯೂ ನಿಲ್ಲದೆ ಹೋಗುತ್ತಿದ್ದನು ॥೧೫೦॥ ಬಳಿಕ ಕಾಲಿನ ಅಂ
ಯಿಂದ ಭೇದಿಸಿಕೊಂಡು ನುಗ್ಗಿದ್ದ ದಸಿಯು ಕಾಲಮೇಲೆ ಮೂಡಿತು. ಹೀಗೆ ಸಹಿಸಲಾರದ
ಸಂಕಟವನ್ನು ಓಹಿಲಾರ್ಯನು ಅನುಭವಿಸುತ್ತಿರಲು ॥೧೫೧॥ ತನ್ನ ಭಕ್ತರ ಯೋಗಕ್ಷೇ
ಮವನ್ನು ಮಾತ್ರವೇ ಚಿಂತಿಸುವವನೂ, ಭಕ್ತರಲ್ಲಿ ನೆಲಸಿರುವವನೂ, ಭಕ್ತರಲ್ಲಿ ಪ್ರೀತಿ
ಯುಳ್ಳವನೂ ಆದ ಶ್ರೀ ಸೌರಾಷ್ಟ್ರ ಸೋಮನಾಥನು ॥೧೫೨॥ ಯಾವ ಕಾರಣದಿಂದ
ಕೃಪಾನಿಕ್ಷೇಪನಾಗಿರುವನೋ ಆ ಕಾರಣದಿಂದ ಕೂಡಲೇ ಬೇಡನ ವೇಷವನ್ನು ಧರಿ
ಕೊಂಡವನಾಗಿ, ಶಿವಭಕ್ತನ ಗುರುತನ್ನೂ ಸ್ವಲ್ಪ ಸ್ವಲ್ಪವಾಗಿ ಕಾಣಿಸುತ್ತ ॥೧೫೩॥
ಮಸಿಯ ಬಟ್ಟೆಯಿಂದ ಕಟ್ಟಲ್ಪಟ್ಟಿದ್ದರೂ ಉಜ್ವಲಿಸುವ ರತ್ನದಂತೆಯೂ, ಬೂದಿ
ಮುಚ್ಚಿದ್ದರೂ ಮೇಲ್ಮುಖವಾಗಿ ಉರಿಯುವ ಬೆಂಕಿಯಂತೆಯೂ ॥೧೫೪॥ ಚಿಪ್ಪಿನಿಂದ
ಮುಚ್ಚಲ್ಪಟ್ಟಿದ್ದರೂ ನಿರ್ಮಲವಾಗಿರುವ ಮುತ್ತಿನ ಸಮೂಹದಂತೆಯೂ, ಹಾವಸೆಯಿಂದ
ಮುಚ್ಚಲ್ಪಟ್ಟಿದ್ದರೂ ಮಿರುಗುವ ಗಂಗಾಜಲದಂತೆಯೂ ॥೧೫೫॥ ಸ್ವಲ್ಪವೂ ಸಂದೇ
ದಂತೆ ಮೋಡದಿಂದ ಮುಚ್ಚಲ್ಪಟ್ಟಿದ್ದರೂ ಕಾಂತಿಮತ್ತಾಗಿ ಪ್ರಕಾಶಿಸುವ ಆಕಾಶದಂತೆ
ಯೂ, ಕಿರಾತದೇಹದಿಂದ ಕೂಡಿದವನಾಗಿದ್ದರೂ, ಅನಂತವಾದ ಐಶ್ವರ್ಯ ತೇಜಸ್ಸಿನಿಂದ

ನೀರಂಧ್ರಾಂಬುದಸಂಛನ್ನಮಪಿವ್ಯೋಮೇವಸತ್ಪ್ರಭಂ । ಕಿರಾತಚರ್ಮಣಾ
ವ್ಯಾಪ್ತೋಽಪ್ಯನಂತೈಶ್ವರ್ಯಭಾಸುರಃ ॥೧೫೬॥ ಸ್ವಪಾದನಿಹಿತಸ್ಥಾನಾನ್ಯಾಘ್ರಾ
ಯಾಘ್ರಾಯಯಯಾವಿಷು । ವೇದಕುಕ್ಕುರಜಾಲೇಷುಪಶ್ಚಾದ್ಭಾಗೇಧನುರ್ಧ
ರಃ ॥೧೫೭॥ ದುರ್ಮದಸ್ಯವಿಧೇರ್ಹಂತುಂಮೂರ್ಧಾನಂಮೃಗರೂಪಿಣಃ । ಸ
ಮಾಗತೋಽಸುಮೃಗಯುರೂಪಧಾರೀಮಹೇಶ್ವರಃ ॥೧೫೮॥ ಪುರೇಂದ್ರಕೀ
ಲಮಾಯಾತಃಕಿರಾತೋಽಪಿವಿನೋದತಃ । ಪುರಾಹೊನ್ನಯ್ಯಸದ್ಭಕ್ತಸ್ಸಮು
ದ್ರಿಕ್ತೋಽರುಭಕ್ತಿತಃ ॥೧೫೯॥ ತುಂಗಭದ್ರೋದಕಂತೂರ್ಣಮಾನೀಯಪುರ
ವೈರಿಣೇ । ನಿತ್ಯಂಹುಲಿಗೆರೆಗ್ರಾಮಸೋಮೇಶಮಮುದಾಸ್ಪಿತೆ ॥೧೬೦॥ ಶೀ
ತಲಂವಾಸಿತಂಕೃತ್ವಾಸಮರ್ಪಯತಿಶಂಭವೇ । ಸಂಪ್ರಯಾತಾಸುನವತಿಸಂ
ಖ್ಯಾಕಾಸುಸಮಾಸ್ವಪಿ ॥೧೬೧॥ ವೃದ್ಧೋಽಹಮಿತಿಮುಕ್ತ್ವೇಮಂವಿಚಾರಂ
ಸ್ಥಿರಯಾಧಿಯಾ । ಕದಾಚಿದ್ವಿವಧಂಧೃತ್ವಾವೇಗೇನಜಲಪೂರಿತಂ ॥೧೬೨॥
ಮಧ್ಯೇಮಾರ್ಗಂಸಮಾಯಾತಕುಲ್ಯಾತರಣವೇಗತಃ । ಪೃಷ್ಠಭಾಗೇಸ್ವಕೇಭ
ಗ್ನೇಽಪ್ಯತ್ಯಕ್ತ್ವಾವಿವಧಂಬಲಾತ್ ॥೧೬೩॥ ದೇವಸೌರಾಷ್ಟ್ರಸೋಮೇಶ

---

ಶೋಭಿಸುತ್ತಿದ್ದನು ॥೧೫೬॥ ತಾನು ಹಜ್ಜೆಯನ್ನಿಟ್ಟ ಸ್ಥಾನವನ್ನು ಮೂಸಿನೋಡಿ
ಕೊಂಡು, ಹಿಂಗಡೆಯಿಂದ ಚತುರ್ವೇದಗಳೆಂಬ ನಾಯಿಗಳು ಬರುತ್ತಿರಲು, ಪೂರ್ವದಲ್ಲಿ
ಹುಲ್ಲೆಯ ರೂಪವನ್ನು ಧರಿಸಿದ್ದ ದುರಹಂಕಾರಿಯಾದ ಬ್ರಹ್ಮನ ತಲೆಯನ್ನು ಕತ್ತರಿಸು
ವುದಕ್ಕಾಗಿ ಬಿಲ್ಲನ್ನು ಹಿಡಿದು ಬೇಟೆಗಾರನಾಗಿ ಬಂದಿದ್ದ ಮಹೇಶ್ವರನೋ ಇವನು ? ॥
ಪೂರ್ವದಲ್ಲಿ ವಿನೋದದಿಂದ ಇಂದ್ರಕೀಲಕ್ಕೆ ದಯಮಾಡಿಸಿದ್ದ ಬೇಡನೋ ಇವನು ! ಪೂ
ರ್ವದಲ್ಲಿ ಹೊನ್ನಯ್ಯನೆಂಬ ಭಕ್ತನು ಅತ್ಯಂತವಾದ ಭಕ್ತಿಯಿಂದ ॥೧೫೯॥ ಪ್ರತಿದಿ
ನವೂ ತುಂಗಭದ್ರಾನದಿಯ ಜಲವನ್ನು ತಂದು, ತಣ್ಣಗೂ ಸುಗಂಧಭರಿತವಾಗಿಯೂ ಇರು
ವಂತೆ ಮಾಡಿ, ಅದನ್ನು ಹುಲಿಗೆರೆ ಗ್ರಾಮದ ಸೋಮೇಶ್ವರನಿಗೆ ಸಂತೋಷದಿಂದ ಕೂಡಿ
ಅಭಿಷೇಕಿಸುತ್ತಿರಲು, ಹೀಗೆ ೯೦ ವರ್ಷಗಳು ಕಳೆದುಹೋಗಲಾಗಿ ॥೧೬೧॥ ಆತನು
ತಾನು ಮುದುಕನಾದೆನೆಂಬ ಯೋಚನೆಯನ್ನು ಕೂಡ ಮಾಡದೆ, ದೃಢವಾದ ಬುದ್ಧಿ
ಯಿಂದ ಕೂಡಿ, ಒಂದಾನೊಂದುವೇಳೆ ನೀರಿನಿಂದ ತುಂಬಿದ ಕಂಬಿಯನ್ನು ಹೊತ್ತು
ಕೊಂಡು ಬೇಗನೆ ಬರುತ್ತ ॥೧೬೨॥ ಮಾರ್ಗಮಧ್ಯದಲ್ಲಿ ಸಿಕ್ಕಿದ ಕಾಲ್ವೆಯನ್ನು ದಾಟುವ
ರಭಸದಿಂದ ತನ್ನ ಬೆನ್ನು ಮುರಿದುಹೋದರೂ, ಕಂಬಿಯನ್ನು ಬಿಡದೆ ಗಟ್ಟಿಯಾಗಿ ಹಿ
ಡಿದುಕೊಂಡು, ಸ್ವಾಮೀ ! ಸೌರಾಷ್ಟ್ರದ ಸೋಮನಾಥನೆ, ಈ ಪ್ರಾಣವು ಇನ್ನೂ
ಇರುತ್ತಿರುವಲ್ಲಿ, ಹಿಡಿದಿರುವ ವ್ರತವನ್ನು ನಾನು ಹೇಗೆ ಬಿಡಲಿ ? ಎಂದು, ಮತ್ತೆ ನಡೆ

ಜೇವಿತೇಽಸ್ಮಿನ್ಸ್ಥಿತೇಸತಿ । ಮೋಕ್ಷ್ಯೇಪ್ರತಂಕಥನಿತಿಪ್ರಸರ್ಗಂತುಂಸಮ ವ್ಯತೇ ॥ ೧೭೪ ॥ ಆಗತ್ಯಕೃಪಯಾಂಸೋಽರ್ಥ್ವಾಂವಿತಸ್ತಿಮಿತವಾನತಃ । ವಿ ವಧಂಸ್ವಪ್ರಭಾವೇನಗಂತುಮಾಜ್ಞಪ್ತವಾನ್ಸ್ವಯಂ ॥ ೧೭೫ ॥ ಶಿವಶ್ಶಬ ರೂಪೇಣಗುಪ್ತಸ್ಸ್ವಕಿಂಸಮಾಗತಃ । ಕ್ರೀಡಿತುಂಶಬರೈಸ್ಸಾಕಂಯಾತೋ ಮಾಮಲ್ಲಿಕಾರ್ಜುನಃ ॥ ೧೭೬ ॥ ಮೃಗಾನ್ನಿತ್ಯಂಶಿವಪುರೀಂಪ್ರೇಷಯಂಜ್ಞಿ ವಿಗ್ರಹಃ । ಮೃಗಯಾಯಾಂಸಮಾಸಕ್ತಃ ಕಿಂವಾತೆಲುಗಜೊಮ್ಮಯ್ಯಃ ಕಾಲಹಸ್ತಿಪ್ರಚಾರೀಕಿಂಕನ್ನಪ್ಪಶ್ಶಬರಾಕೃತಿಃ । ಶಿವರಾತ್ರಿಫಲಂಸರ್ವಂ ಹೀತ್ವೇಶಪುರಂಗತಃ ॥ ೧೭೮ ॥ ವ್ಯಾಧಃಕಿಮಿತಿಸಂದೇಹದಾಯಿಪ್ರಾಪ್ಯತಮ ಬ್ರವೀತ್ । ಬತಪಾದತಲೇಕಾಷ್ಠಂವಿದ್ಧಂತೇನಶಿವಾದ್ಯತೆ ॥ ೧೭೯ ॥ ತ್ವಂಗತಃ ಸಿಕಥಂಮಾರ್ಗಂವಿದ್ಯತೇವಾಕಿಮಾವೃಶಂ । ಆತ್ಮಘಾತಕತಾಯುಕ್ತಾಕಿಂತ್ವಂ ಗಂತುಮಿತಃಪರಂ ॥ ೧೮೦ ॥ ನಶಕ್ನೋಷಿಕಿಮೇತೇನವಿನೇಶೋವರದೋಸ ವಾ । ಬತದೃಷ್ಟ್ವಂಮಹಾದೋಷಸ್ತಿಷ್ಠತಿಷ್ಠಾತ್ರವೀವಧಂ ॥ ೧೮೧ ॥ ಅನ ರೋಪಯಕಿಂತೇಽದ್ಯಫಲೇನತರಸಾಪದಾತ್ । ಉತ್ಪಾಟಯಸ್ವಯಂಕಾಷ್ಠಂ

---

ಯುವುದಕ್ಕೆ ಉಪ್ಪಾಗಿಸಲು ॥ ೧೭೪ ॥ ಕನಿಕರದಿಂದ ಶಬರರೂಪವನ್ನು ಧರಿಸಿಬಂದು ತನ್ನ ಮಹಿಮೆಯಿಂದ ಆತನ ಕಂಬಿಯನ್ನು ಹೆಗಲ ಮೇಲೆ ಬಂದು ಗೇಹತ್ತರಲ್ಲಿ ಹೋಗುವಂತೆ ಆಜ್ಞಾಪಿಸಿದ ಶಿವನು ॥ ೧೭೫ ॥ ಬೇಡನ ವೇಷದಿಂದ ಗುಟ್ಟಾಗಿ ಬಂದಿರು ವನೊ! ಬೇಡರೊಡನೆ ಆಡುವುದಕ್ಕಾಗಿ ಬಂದಿರುವ ಮಲ್ಲಿಕಾರ್ಜುನೇಶ್ವರನೋ! ॥೧೭೬॥ ಪ್ರತಿದಿನವೂ ಬೇಂಟೆಯಾಡುವುದರಲ್ಲಾಸಕ್ತನಾಗಿ ಮೃಗಗಳನ್ನು ಹೊಡೆದು ಕೈಲಾಸಕ್ಕೆ ಕಳುಹಿಸುತ್ತಿದ್ದ ಶಿವಮೂರ್ತಿಯಾದ ತೆಲುಗಜೊಮ್ಮಯ್ಯನೇ! ॥ ೧೭೭ ॥ ಕಾಲಹಸ್ತಿ ಯಲ್ಲಿದ್ದ ಬೇಡರ ಕನ್ನಪ್ಪನೋ! ಶಿವರಾತ್ರಿಯ ಫಲವನ್ನೆಲ್ಲ ಗ್ರಹಿಸಿಕೊಂಡು ಕೈಲಾ ಸಕ್ಕೆ ತೆರಳಿದ ಬೇಡರ ಸಂಕಣ್ಣನೋ! ಎಂಬ ಸಂದೇಹವನ್ನು ಉಂಟುಮಾಡುವವ ನಾಗಿ ಬಂದು, ಆ ಓಹಿಲಾರ್ಯನನ್ನು ಕುರಿತು ನುಡಿದನೇನೆಂದರೆ—ಅಯ್ಯೋ! ಶಿವನೇ! ನಿನ್ನ ಕಾಲಿನಲ್ಲಿ ದಸಿಯು ನಟ್ಟಿರುವುದಲ್ಲಾ! ಆ ಕಾರಣದಿಂದ ನೀನು ಮಾರ್ಗವನ್ನು ಹೇಗೆ ನಡೆಯುವೆ? ಇವೆಲ್ಲಾದರೂ ಉಂಟೆ? ತನ್ನನ್ನು ತಾನು ಕೊಂದುಕೊಳ್ಳುವುದು ಯುಕ್ತವೆ? ಇದರಿಂದ ಮುಂದೆ ಇನ್ನು ನೀನು ನಡೆಯಲಾರೆ ॥ ೧೮೦ ॥ ಹೀಗೆಲ್ಲ ಮಾಡು ದ್ದರೆ ಈಶ್ವರನು ವರವನ್ನು ಕೊಡುವುದಿಲ್ಲವೆ? ಅಯ್ಯೋ! ಇದನ್ನು ನೋಡುವುದು ಕೂಡ ಮಹಾದೋಷಕರವು. ನಿಲ್ಲು ನಿಲ್ಲು; ಇಲ್ಲಿ ಕಂಬಿಯನ್ನಿಳುಹು ॥೧೮೧॥ ಈ ಹಟ ದಿಂದ ನಿನಗೇನುಪ್ರಯೋಜನ? ಬೇಗನೆ ಕಾಲಿನಿಂದ ದಸಿಯನ್ನು ಹೆದರದೆ ಕಿತ್ತು ಹಾಕು

ವಿಭೀಂಭೀರ್ನತ್ರೋಭವೇದ್ಯದಿ ‖ ೧೩೦ ‖ ಉದ್ಧಾರಯಾವ್ಯಹಂಕಾಷ್ಠಮಿತಃಪಾ
ದಂಪ್ರಸಾರಯ । ಇತಿಸನ್ನಿಹಿತೇತಸ್ಮಿನ್ನುವಾಚಹರಕಿಂಕರಃ ‖ ೧೩೨ ‖ ಸಾಂ
ಪ್ರತಂನಸಪ್ರಯಾಹೀದಂನಸ್ಪೃಶತ್ವಂಪದಂಮಮ । ಸ್ಪೃಷ್ಟಂಯುಕ್ತಂನವೇ
ತ್ರೀಯಂನಕಾರ್ಯಾಕಿಂವಿಚಾರಣಾ ‖ ೧೩೪ ‖ ಕಿರಾತಇತಿಸದ್ಭಕ್ತಂವಿಭಾವ್ಯಾ
ಲಂಪದಾಕಥಂ । ಸಂಸ್ಪೃಷ್ಟುಂಯುಜ್ಯತೇನೋಕಿಮಪರಾಧೋಮಹತ್ತರಃ ‖
ಸಂಸ್ಪೃಷ್ಟವೀವಧಾಭ್ಯಾಂಮತ್ಕರಾಭ್ಯಾಂಸ್ಪರ್ಶನಂಪದೋಃ । ಅಪರಾಧೋ
ಮಾರ್ಗಮಧ್ಯೇವೀವಧಸ್ಥಾಪನಂತಥಾ ‖ ೧೩೬ ‖ ನಾಯುಕ್ತೋತ್ತಮಗಚ್ಛ
ತ್ವಂಪ್ರಯಾಸ್ಯೇಹಂಕಥಂಚನ । ಇತ್ಯುಕ್ತಃಪ್ರಾಹಸತ್ವಂಭೋಃಕಥಂಗಚ್ಛೇ
ಶ್ಶಿವಾಲಯಂ ‖ ೧೩೭ ‖ ಅಕ್ಷಮೋಗಂತುಮತ್ರಾಪಿವೀವಧಸ್ಥಾಪನಂನಚ ।
ಸಂಸ್ಥಾತುಂನಸ್ವಯಂಮಧ್ಯೇಯುಕ್ತಂಕಿಲಕಿಮೀದೃಶಂ ‖ ೧೩೮ ‖ ಖಿದ್ಯಸೇತ್ವ
ಮಭೀಷ್ಟಂಯತ್ತಥಾಕುರ್ಯಾಮಹಂತವ ‖ ಸಂದಂಶೇನೋಪಸಂಗೃಹ್ಯಶನೈರು
ತ್ಪಾಟಯಾಮಿತತ್ ‖ ೧೩೯ ‖ ಕಾಷ್ಠಂಕರಾಭ್ಯಾಮಸ್ಪೃಷ್ಟ್ವಾತರುಮೇಸಂ

---

ನೀನು ಕೀಳುವುದಕ್ಕೆ ಹೆದರುವೆಯಾದರೆ, ‖ ೧೩೦ ‖ ನಾನು ಕಿತ್ತುಹಾಕುತ್ತೇನೆ, ಕಾಲ
ನ್ನು ಇತ್ತನೀಡು" ಎಂದು ಹೇಳುತ್ತ, ಆ ವೇಷಧಾರಿಯಾದ ಶಿವನು ಸಮೀಪಕ್ಕೆ ಬರ
ಲಾಗಿ, ಶಿವಭಕ್ತನಾದ ಓಹಿಲಾರ್ಯನು ಹೇಳಿದನೇನೆಂದರೆ ‖ ೧೩೧ ‖ ಈಗ ಹತ್ತಿರಕ್ಕೆ ಬರ
ಬೇಡ, ನೀನು ಈ ನನ್ನ ಕಾಲನ್ನು ಮುಟ್ಟಬೇಡ, ಮುಟ್ಟಬಹುದು ಬಾರದು ಎಂಬುದ
ನ್ನು ನೀನು ಯೋಚಿಸಿಕೊಳ್ಳಬಾರದೆ ? ‖ ೧೩೩ ‖ ಶಿವಭಕ್ತನಾದ ನಿನ್ನನ್ನು ಬೇಡನೆಂದು
ಭಾವಿಸಿ, ಕಾಲಿನಿಂದ ನಿನ್ನನ್ನು ಸೋಂಕಿಸುವುದು ನಮಗೆ ಹಿತವೆ? ಅದು ಮಹಾದೋ
ಷವು, ಸಾಕು, ಬಿಡು. ‖ ೧೩೪ ‖ ಮತ್ತೂ ಕಂಬಿಯನ್ನು ಮುಟ್ಟಿರುವ ನನ್ನ ಕೈಗ
ಳಿಂದ ಕಾಲುಗಳನ್ನು ಮುಟ್ಟುವುದು ಮಹಾದೋಷವು, ಮಾರ್ಗಮಧ್ಯದಲ್ಲಿ ಕಂಬಿಯ
ನ್ನಿಳುಹುವುದುಕೂಡ ಹಾಗೆಯೇ ಮಹಾದೋಷಕರವು ‖ ೧೩೬ ‖ ಆದುದರಿಂದ ಎಲೈ
ವ್ಯಾಧಶ್ರೇಷ್ಠನೆ, ನೀನು ಹೋಗು, ನಾನು ಹೇಗಾದರೂ ಪ್ರಯಾಸಪಟ್ಟುಕೊಂಡು
ಹೋಗುತ್ತೇನೆ, ಎನಲು, ಆ ವೇಷಧಾರಿಯು —"ಎಲೆ ಭಕ್ತನೇ, ನಡೆಯಲಾರದಿರುವ
ನೀನು ಶಿವಾಲಯಕ್ಕೆ ಹೇಗೆ ಹೋಗುತ್ತೀಯೆ ? ಇಲ್ಲಿ ಕಂಬಿಯನ್ನಿಳುಹುವುದೂ ಯು
ಕ್ತವಲ್ಲ, ಮಾರ್ಗಮಧ್ಯದಲ್ಲಿ ಕುಳಿತುಕೊಳ್ಳುವುದೂ ಯುಕ್ತವಲ್ಲ, ಹಾಗಾದರೆ,
ನೀನು ಹೀಗೆ ಸಂಕಟಪಡಬಹುದೆ ? ‖ ನಿನ್ನ ಇಷ್ಟದಂತೆಯೇ ನಾನು ಮಾಡಿಕೊ
ಡುತ್ತೇನೆ, ಕೈಯಿಂದ ಮುಟ್ಟದೆ ಆ ದಸಿಯನ್ನು ತಂಡಸದಿಂದ ಹಿಡಿದು ಮೆಲ್ಲಗೆ
ಕಿತ್ತುಹಾಕುತ್ತೇನೆ; ನೀನು ಈ ಮರವನ್ನು ಬಾಗಿಸಿಂತುಕೊಳ್ಳು, ಎಂದು ಹೇಳಿ,

ಸಮಾಶ್ರಯ | ಇತ್ಯುದ್ಧೃತೇತಥಾಕಾಷ್ಠೇತಸ್ಯಪೂರ್ವಂಸ್ಥಿತಂತನಾ ||೧೮೦||
ಭಸ್ಮಪ್ರಸೇವಿಕಾಪೂರ್ಣಮಿವತತ್ರಪರಿಸ್ರುತಂ | ತ್ವಮೋಹಿಲಾರ್ಯಮಾಭೈಃ
ರಿತ್ಯುಕ್ತ್ವಾತ್ರಿಮಹೇಶ್ವರಃ || ೧೮೧ || ಆಸಜ್ಯಪರ್ಣಂತದ್ರಂಧ್ರೇನಿಬಧ್ಯಾನ್ಯೈ
ನಹರ್ಷಿತಃ | ಗಚ್ಛಸೌರಾಷ್ಟ್ರನಾಥಸ್ಯಲಭಸ್ವಕರುಣಾಮಿತಿ || ೧೮೨ || ಸ
ಮಾಲಪನ್ಮಹಾದೇವಃಪ್ರಯಯೌವ್ಯಾಧವೇಷಧೃತ್ | ಕೃಪಾವಿಷ್ಟೋ
ಯಾಮಾರಾತ್ಯಸಮಾಗತ್ಯಸ್ವಯಂಶಿವಃ || ೧೮೩ || ಸೋಮೇಶೋಽಪಿ
ಲನ್ನೋಽಚೇಷ್ಟಬರಾಣಾಂಕಿಮೀದೃಶಂ | ಮಾಹಾತ್ಮ್ಯಂಕರುಣಾಪ್ಯಸ್ತಿಚಿತ್ರ
ಮೇತದಿತಿಸ್ತುವನ್ || ೧೮೪ || ಓಹಿಲಾರ್ಯಸ್ಸಮಾಗತ್ಯಶಂಭುನೋದ್ಘಾಟಿತಾ
ರ್ಗಳಃ | ಕೃತ್ವಾಪೂಜಾಂವಿಧಾನೇನಪಾತ್ರೇಮಹತಿಪಾವಕಂ || ೧೮೫ || ಧೂ
ಪಾರ್ಥಮುಜ್ಜ್ವಲಂಕೃತ್ವಾಘಂಟಾಮಾಹರ್ತುಮುದ್ಯಯೌ | ತತ್ರಸ್ಥಂಗುಗ್ಗು
ಲುಂವೀಕ್ಷ್ಯಪಾಪಿನೋಗೌಳತಾಪಸಾಃ || ೧೮೬ || ಅಗೋಪಯನ್ನೋಹಿಲಾ
ರ್ಯಸ್ತತಆಗತ್ಯಗುಗ್ಗುಲುಂ | ಅದೃಷ್ಟ್ವಾಸೋಮನಾಥಸ್ಯಮಹಿತಾಗ್ನೇಯಮ
ಧ್ಯಮೇ || ೧೮೭ || ಶರೀರಮೇವಧೂಪಾರ್ಥಂಗುಗ್ಗುಲುಸ್ಸ್ಯಾದಿತೀರಯನ್

---

ಅದರಂತೆಯೇ ದಸಿಪುನ್ನು ಕಿತ್ತುಹಾಕಲಾಗಿ, ಆ ಓಹಿಲಾರ್ಯನ ಶರೀರದಲ್ಲಿ ಆವ
ಬುಂಜಿಸಿ ನಿಂತಿದ್ದ ಭಸ್ಮವು || ೧೮೦ || ಚೀಲದಲ್ಲಿ ತುಂಬಿದ್ದುದು ಈಚೆಗೆ ಸುರಿದಂತೆ
ಹೊರಕ್ಕೆ ಬಕ್ಕಿತು. ವೇಷಧಾರಿಯಾದ ಶಿವನು —'ಓಹಿಲಾರ್ಯನೇ, ನೀನು ಹೆದರಬೇಡ"
ಎಂದು ಹೇಳಿ || ೧೮೧ || ಒಂದು ಎಲೆಯನ್ನು ಆ ತೂತಿಗೆ ಸೇರಿಸಿ, ಮತ್ತೊಂದು
ಎಲೆಯಿಂದ ಮೇಲೆ ಮುಚ್ಚಿ, ಕಟ್ಟಿ, ಸಂತೋಷಿಸಿ, ಇನ್ನು ಹೋಗು, ಸೌರಾ
ಷ್ಟ್ರನಾಥನ ದಯೆಯನ್ನು ಪಡೆ, ಎಂದು ಹೇಳಿ || ೧೮೨ || ಶಬರಾಕೃತಿಯ ಪರಶಿವನು
ಹೊರಟುಹೋದನು. ಆಗ ಓಹಿಲಾರ್ಯನಾದರೊ ಮನಸ್ಸಿನಲ್ಲಿ— ಪರಶಿವನೇ ದಯಾವಿಷ್ಟ
ನಾಗಿ ಈ ರೂಪದಿಂದ ಬಂದು || ೧೮೩ || ಮಾತನಾಡಿದನು; ಹಾಗಲ್ಲದಿದ್ದರೆ ಬೇಡನಿಗೆ
ಇಂಥ ಮಹಿಮೆಯೂ ದಯೆಯೂ ಉಂಟೆ ? ಇದಾಶ್ಚರ್ಯ! ಎಂದು ಯೋಚಿಸಿ, ಸ್ತುತಿ
ಸುವವನಾಗಿ || ೧೮೪ || ಬಂದು, ದೇವಾಲಯದ ಕದಹುಗಳನ್ನು ಶಿವನು ತೆರೆದವ
ಲಾಗಿ, ಒಳನುಗ್ಗಿ, ವಿಧಿಪ್ರಕಾರವಾಗಿ ಶಿವಾರ್ಚನೆಯನ್ನು ಮಾಡಿ, ಧೂಪವನ್ನು ಹಾಕು
ವುದಕ್ಕಾಗಿ ದೊಡ್ಡಪಾತ್ರದಲ್ಲಿ ಬೆಂಕಿಯನ್ನು || ೧೮೫ || ಚೆನ್ನಾಗಿ ಹೊತ್ತಿಸಿ, ಗಂಟೆಯನ್ನು
ತರುವುದಕ್ಕಾಗಿ ಹೋದನು. ಆಗ ಪಾಪಾತ್ಮರಾದ ಗೌಳತಾಪಸರು ಅಲ್ಲಿದ್ದ ಗುಗ್ಗುಳು
ವನ್ನು ನೋಡಿ || ೧೮೬ || ಅವಿಸಿಬಿಟ್ಟರು. ಬಳಿಕ ಓಹಿಲಾರ್ಯನು ಬಂದು ಗುಗ್ಗುಲುವನ್ನು
ಕಾಣದೆ, ಸೋಮನಾಥನ ದೂಪಾಲೆಯ ಮಧ್ಯದಲ್ಲಿ || ೧೮೭ || ನನ್ನ ದೇಹವೇ ಧೂಪ

ಆಪಪ್ಯದ್ವಹ್ನಿಮತ್ಯುಗ್ರಂಸದ್ಭಕ್ತಿಸ್ಥೈರ್ಯತಾಸ್ಥಿತಃ ‖ ೧೮೯ ‖ ಅಥತತ್ಪಾವಕೋ ಕ್ರೂರಂಧಗದ್ಧಗಿತರೋಽಚಿಷಿ । ದೀಪ್ಯಮಾನೋಽತಿದುರ್ಲಕ್ಷ್ಯಪ್ರಸರತ್ಯೂರ್ಧ್ವ ಮುದ್ಧತೇ ‖ ೧೮೯ ‖ ಸ್ಫುಲಿಂಗಚಯಸಂಛನ್ನೋಮಹದ್ಭುಗಭುಗಾರವೋ । ಜ್ವಾಲಾಮಾಲಾಭಿರಾಭಿಃಲೋವ್ಯಾಲೋಲೋಽತಿವಿಶಾಲಕೋ ‖ ೧೯೦ ‖ ಫಾಲಾಕ್ಷಫಾಲನೇತ್ರಾಗ್ನಿಪ್ರತಿಬಿಂಬಇವಸ್ಥಿತೇ । ಅಪ್ರಕಂಪ್ಯಾಕ್ಲಿಷ್ಟಧೀರ್ಭೂಯಭಯಮಪ್ರಾಪ್ಯಮಾನಸಂ ‖ ೧೯೧ ‖ ಅನುಚ್ಛ್ವಾಲ್ಯಾಕ್ಷಿಣೀಶೀಘ್ರಮಸಿಮಿಾಲ್ಯಮತಿಂ ನಿಜಾಂ । ಅಮುಕ್ತ್ವಾಕ್ಲೇಶಜಂವಾಕ್ಯಮನುಕ್ತ್ವಾತ್ಮನಿಸಾಹಸಂ ‖ ೧೯೨ ‖ ಅತ್ಯಕ್ತ್ವಾಽಕಲುಷೀಭೂಯವರ್ಧಯಿತ್ವಾಭವಸ್ಪೃಹಾಂ । ಅನುತ್ಸೃಜ್ಯನಿಜಂ ಧೈರ್ಯಮವಿಶೀರ್ಯಚವಿಕ್ರಮಂ ‖ ೧೯೩ ‖ ಅವರ್ಧಯಿತ್ವಾಸಂಸಾರಮಸಂಶ್ರಿತ್ಯಮನೋರಥಂ । ಪಶ್ಚಾದ್ಭಾಗಮನಾಲೋಕ್ಯನಿಶ್ಚಲೀಭೂಯನಿಶ್ಚಯಾತ್ ‖ ಅಗತ್ವಾಜಾಡ್ಯಮಿಾಶಾಯಭೂತ್ವಾನೈವಪರಾಜಿತಃ । ಆತ್ಮಾಂಗಧೂಪೋಮಹಿತಶ್ರೀಸೋಮೇಶಾವಧಾರ್ಯತಾಂ ‖ ೧೯೫ ‖ ಮಹಿಷಾಕ್ಷ್ಯಬ್ಯಧೂಪಸ್ಯ

---

ಕ್ಕಾಗಿ ಗುಗ್ಗುಲುವಾಗಲಿ, ಎಂದು ಹೇಳಿದವನಾಗಿ, ಉತ್ತಮಭಕ್ತಿಯಿಂದ ಧೃತಿಗೆಡದವನಾಗಿ ನಿಂತು, ಉಜ್ವಲಿಸಿ ಇತರರಿಗೆ ಅತ್ಯಂತ ಭೀಕರವಾಗಿರುವ ಬೇಕಿಯನ್ನು ನೋಡಿದನು ‖ ೧೮೯ ‖ ಬಳಿಕ ಆ ಬೇಕಿಯು ಭೀಕರವಾಗಿ ಧಗಧಗನೆ ಉರಿಯುತ್ತಲೂ, ನೋಡಗೊಡದಮಟ್ಟಿಗೆ ಹೊಳೆಯುತ್ತಲೂ, ಮೇಲಕ್ಕೆ ಜ್ವಾಲೆಯನ್ನು ಚಾಚಿ ಹಬ್ಬುತ್ತಲೂ ‖ ಕಿಡಿಗಳಿಂದ ತುಂಬಿ ಭುಗುಭುಗನೆ ಧ್ವನಿಮಾಡುತ್ತಲೂ, ಉರಿಗಳ ಸಾಲುಗಳಿಂದ ವ್ಯಾಪ್ತವಾಗಿಯೂ, ಚಂಚಲವಾಗಿಯೂ ಅತ್ಯಂತ ವಿಸ್ತಾರವಾಗಿಯೂ ‖ ೧೯೦ ‖ ಮುಕ್ಕಣ್ಣನ ಹಣೆಗಣ್ಣಿನ ಬೇಕಿಯ ಪ್ರತಿಬಿಂಬದಂತೆ ತೋರುತ್ತಲೂ ಇರಲು, ಓಹಿಲಾರ್ಯನು ನಡುಗದೆ, ಸಡಿಲದೆ, ಭಯವನ್ನು ಹೊಂದದೆ, ಎದೆಗೆಡದೆ ‖ ೧೯೧ ‖ ಕಣ್ಣುಗಳನ್ನು ಬೇಗನೆ ಮುಚ್ಚಿಕೊಳ್ಳದೆ, ಬುದ್ಧಿಗೆಡದೆ, ವ್ಯಥೆಯಿಂದ ಹುಟ್ಟುವ ಮಾತುಗಳನ್ನಾಡದೆ, ತನ್ನ ಸಾಹಸವನ್ನು ಬಿಡದೆ ‖ ೧೯೨ ‖ ಮನಸ್ಸು ಕದಡದೆ, ಶಿವನಲ್ಲಿ ಇಚ್ಛೆಯನ್ನು ಅಭಿವೃದ್ಧಿಗೊಳಿಸಿ, ತನ್ನ ಧೈರ್ಯವನ್ನು ಬೀಸರುಗೊಳಿಸದೆ, ಪರಾಕ್ರಮವನ್ನು ಶಿಥಿಲಗೊಳಿಸದೆ ‖ ಸಂಸಾರಗುಣವನ್ನು ಅಭಿವೃದ್ಧಿಗೊಳಿಸದೆ, ಕಾವ್ಯವನ್ನು ಅಂಗೀಕರಿಸದೆ, ಹಿಂದುನೋಡದೆ ಮನೋನಿಶ್ಚಯದಿಂದ ಸ್ಥಿರನಾಗಿ ‖ ೧೯೪ ‖ ಜಡಭಾವವನ್ನು ಹೊಂದದೆ, ಶಿವನಿಗೋಸುಗ ತಾನು ಹಿಡಿದ ವ್ರತವನ್ನು ಕಳೆದುಕೊಂಡು ಸೋತುಹೋದವನಾಗದೆ, „ ಎಲೈ ಸಾರಾಷ್ಟ್ರಸೋಮನಾಥನೆ, ಬಾಹ್ಯವಾದ ಧೂಪಕ್ಕಿಂತಲೂ ತನ್ನ ಅಂಗದಧೂಪವೇ ಶ್ರೇಷ್ಠವಾದುದು. ಇದನ್ನು ಗಮನಿಸಬೇಕು ‖ ೧೯೫ ‖ ಈ ದೇಹದಿಂದ ಮಹಿಷಾಕ್ಷಿಗು

ನಚೇತ್ಪರಿಮಳೋಽಸ್ಯಮುನಾ । ನಿಜವ್ರತಸ್ಯಭಂಗಸ್ಸ್ಯಾದ್ಭಕ್ತೋಽಪಿನಭವಾಮ್ಯಹಂ ॥೧೯೬॥ ಪುರಾಧೂಪದಮಾಚಯ್ಯೋಮಹನೀಯಯಶಸ್ಫುರದ್ಯಶಾಃ । ಸನ್ಮಾರ್ಗವರ್ತೀಭಕ್ತೋಽಪಿಸೌಶಂಕರಾಯದಿನೇದಿನೇ ॥೧೯೭॥ ಧೂಪಂಪಲಪ್ರಮಾಣೇನವರಗುಗ್ಗುಲುನಾದರಾತ್ । ತ್ರಿಸಂಧ್ಯಮರ್ಪಯಂಸ್ತಸ್ಥೌಜ್ಞಾತುಕುತ್ರಾಪಿಗುಗ್ಗುಲೌ ॥೧೯೮॥ ಅಲಬ್ಧೇಸ್ವಾಂಗಜಂಮಾಂಸಮೇಕೈಕಂಪ್ರದದೌಪಲಂ । ತತ್ರಾಸೀತ್ಕಿಮುದುರ್ಗಂಧೋವಿನಾಗುಗ್ಗುಲುವಾಸನಾಂ ॥ ಅಪಿಚೇಶ್ವರಸದ್ಭಕ್ತಶ್ರೀಗಿರೌವೀರಶಂಕರಃ । ತಪ್ತಾಯಃ ಕಂದುಮಧ್ಯಸ್ಥೋದ್ವಾತ್ರಿಂಶಚ್ಛಸ್ತ್ರಸಂಚಯೈಃ ॥೨೦೦॥ ಸ್ವಾಂಗಂಛಿತ್ವಾಕ್ಷಿಪತ್ಕಂದೌತದಾತದ್ಗಾತ್ರಖಂಡತಃ । ಸಮಭೂತ್ಕಿಮುದುರ್ಗಂಧಸ್ತದಾನೀಂಪರಮೇಶ್ವರ ॥೨೦೧॥ ಪುರಾಶ್ರೀಗುಗ್ಗುಲುಕಲಿಯಾರಿನಾಮಾಯಶೋಧಿಕಃ । ಧೂಪಾಯಮಹಿಷಾಕ್ಷ್ಯೈಶ್ಯಂಸ್ವಶರೀರಪ್ರಮಾಣಕಂ ॥೨೦೨॥ ಗುಗ್ಗುಲುಂಶ್ರೀಮಹೇಶಾಯದದನ್ನವಸದನ್ವಹಂ । ಏಕದಾತದಭಾವೇಽಸ್ಮಿನ್ಪ್ರಾಣಾನರ್ಪ

---

ಗ್ಗುಲದ ಸುವಾಸನೆಯು ಹೊರಡದಿದ್ದರೆ, ನನ್ನ ವ್ರತಕ್ಕೆ ಭಂಗವುಂಟಾಗುವುದೇ ಸರಿ; ನಾನು ಭಕ್ತನೂ ಆಗುವುದಿಲ್ಲ ॥೧೯೬॥ ಪೂರ್ವದಲ್ಲಿ ಅತ್ಯಂತ ಯಶಶ್ಶಾಲಿಯಾದ ಧೂಪದ ಮಾಚಯ್ಯನೆಂಬ ಭಕ್ತನು ಸನ್ಮಾರ್ಗದಲ್ಲಾಚರಿಸುತ್ತ, ಪರಶಿವನಿಗೆ ಪ್ರತಿದಿನವೂ ಪ್ರೀತಿಯಿಂದ ತ್ರಿಕಾಲಗಳಲ್ಲಿ (ಪಲ) ೮ ಗುಲಗಂಜಿಯ ತೂಕದ ಗುಗ್ಗುಲದಿಂದ ಧೂಪವನರ್ಪಿಸುತ್ತಲಿದ್ದನು. ಒಂದಾನೊಂದುವೇಳೆ ಗುಗ್ಗುಲವು ಎಲ್ಲೂ ದೊರೆಯದೆ ಹೋಗಲು, ತನ್ನ ದೇಹದ ಮಾಂಸವನ್ನೇ ಒಂದೊಂದು ಪಲಪ್ರಮಾಣದಷ್ಟನ್ನು ಅರ್ಪಿಸಿದನು. ಅಲ್ಲಿ ಗುಗ್ಗುಲದ ವಾಸನೆಯನ್ನು ಬಿಟ್ಟು ಬೇರೆ ಕೆಟ್ಟ ವಾಸನೆಯಾದರೂ ಹೊರಟಿತೆ?! ಮತ್ತೂ ಶ್ರೀಶೈಲದಲ್ಲಿ ಶಿವಭಕ್ತನಾದ ವೀರಶಂಕರದೇವನು ಕಾದ ಕಬ್ಬುನದ ಓಡಿನಲ್ಲಿ ಕುಳಿತು ೩೨ ಆಯುಧಗಳಿಂದ ॥೨೦೦॥ ತನ್ನ ದೇಹವನ್ನು ಕತ್ತರಿಸಿ, ಓಡಿನಲ್ಲಿ ಹಾಕಿದನು. ಶಿವನೆ! ಆಗ ಆ ಶರೀರದ ಮಾಂಸದ ತುಣುಕಿನಿಂದ ದುರ್ವಾಸನೆಯು ಹುಟ್ಟಿತೆ?! ಪೂರ್ವದಲ್ಲಿ ಅತ್ಯಂತ ಯಶಸ್ವಿಯಾದ ಗುಗ್ಗುಲದ ಕಲಿಯಾರಿಯು ಪ್ರತಿದಿನವೂ ಶಿವನಿಗೆ ಧೂಪವನ್ನು ಹಾಕುವುದಕ್ಕೋಸ್ಕರ ತನ್ನ ತೂಕದ ಗುಗ್ಗುಲುವನ್ನು ಸಮರ್ಪಿಸುತ್ತಿದ್ದನು. ಒಂದಾವೃತ್ತಿ ಗುಗ್ಗುಲವು ಇಲ್ಲದೆಹೋಗಲು, ಈ ಭಕ್ತನು ತನ್ನ ಪ್ರಾಣಗಳನ್ನೇ ಅರ್ಪಿಸುವುದಕ್ಕೋಸ್ಕರ ತೀಕ್ಷ್ಣವಾದ ಕತ್ತಿಯನ್ನು ಕೊರಲಿನ ಬುಡಕ್ಕೆ ಇಡಲಾಗಿ, ಬಳಿಕ ಅರಲಿದ ತಾವರೆಯಲ್ಲಿನಂತಹ ಸುವಾಸನೆಯು ಉಂಟಾಗಲಿಲ್ಲವೆ?! ಪೂರ್ವದಲ್ಲಿ ಕಡವಲನಂಬಿಯೆಂಬ ಹೆಸರಿನ ಭಕ್ತನು ಪರಶಿವನಿಗಾಗಿ ಇಟ್ಟದ್ದ ನಂದಾದೀ

ಯಿತುಂಸ್ವಕಾನ್ ॥ ೨೦೩ ॥ ನಿಶಿತಾಂಕ್ಷುರಿಕಾಂಕಂಠಮೂಲೇನಿಹಿತವತ್ಯಥ | ನಾಸೀತ್ಕಿಂಫುಲ್ಲಕಮಲಸಮುದಂಚಿತಸೌರಭಃ ॥ ೨೦೪ ॥ ಪುರಾಭಕ್ತಃಕಡವಲನಂಬಿನಾಮಾಽಗಜಾಪತೇಃ | ಏಕದಾಽಖಂಡದೀಪೇಷುತೈಲಾಭಾವೇನಸತ್ವರಂ ॥ ೨೦೫ ॥ ಅವಸಾನಂಪ್ರಯಾತೇಷುಪ್ರಜ್ವಾಲ್ಯಸ್ವಶಿರೋರುಹಾನ್ | ದೀಪಂಚಕ್ರೇಮಹೇಶಸ್ಯದುರ್ಗಂಧಃಕಿಂತದಾಽಭವತ್ ॥ ೨೦೬ ॥ ಅಣುಮೂರ್ತಿರಿತಿಖ್ಯಾತೋಭಕ್ತಃಕಶ್ಚನಶಂಭವೇ | ಘೃಷ್ಟ್ವಾನ್ಸ್ವಪ್ರಕೋಷ್ಠೇನಶಾಣೇಚಂದನಮಾದರಾತ್ ॥ ೨೦೭ ॥ ಶ್ರೀಗಂಧಏವತನ್ನಾಭೂನ್ಮಕಾತ್ಯೈದುರ್ವಾಸನಾಂಕಿಮು | ಭೂಯೋಽನ್ಯೋದೀಪದಕಲಿಯಾರಿನಾಮಾತಿಭಕ್ತಿಮಾನ್ ॥ ರಕ್ಷಾರ್ಥಂದೇವದೇವಸ್ಯಯಾಮಿಕಸ್ಸನ್ನಿಶಾಸ್ವಲಂ | ಪ್ರಚರನ್ನಥದೀಪೇಷು ಶಾಂತೇಷುನಿಜಮಸ್ತಕೇ ॥ ೨೦೯ ॥ ಜಟಾಂಕೃತ್ವಾಸ್ವಹಸ್ತೇನಗೃಹೀತ್ವಾತಾಂಪ್ರದೀಪಿಕಾಂ | ವಿಧಾಯಸಂಚಚಾರಾನ್ಯೋಗಂಧಸ್ತತ್ರಾಭವತ್ಕಿಮು ॥ ೨೧೦ ॥ ತಥಾವಿಧಮಹಾದೇವಭಕ್ತದಿವ್ಯಪ್ರಸಾದತಃ | ಸಂಭೂತಾತನುರಪ್ಯೇಷಾಮಮಕಿನ್ನುನತಾದೃಶೀ ॥ ೨೧೧ ॥ ಆಸಮಾಪ್ತಿಶರೀರಸ್ಯನಶ್ಯೇದ್ಘಂಟಾರವೋಯದಿ | ನಮಾಕರಶ್ಚಲತಿಚೇನ್ನಚೇತ್ಪರಿಮಳೋಪಿಚ ॥ ೨೧೨ ॥ ಸುಷಮಾವಿಹ

---

ಏಗೆಗಳಲ್ಲಿ ಎಣ್ಣೆಯು ಇಲ್ಲದೆಹೋದುದರಿಂದ ಅವು ನಂದಿಹೋಗಲು, ಬೇಗನೆ ತನ್ನ ತಲೆಯ ಕೂದಲನ್ನು ಹೊತ್ತಿಸಿ ಪರಶಿವನಿಗೆ ದೀಪವನ್ನಾಗಿ ಮಾಡಿದನು. ಆಗ ದುರ್ವಾಸನೆಯೇನಾದರೂ ಹುಟ್ಟಿತೆ? ॥ ೨೦೬ ॥ ಅಣುಮೂರ್ತಿಯೆಂದು ಪ್ರಸಿದ್ಧನಾದ ಭಕ್ತನೊಬ್ಬನು ತನ್ನ ಮೊಣಕೈಯಿಂದಲೇ ಗಂಧದ ಕಲ್ಲಿನಮೇಲೆ ತೇದು ಶ್ರೀಗಂಧವನ್ನೆತ್ತಿ ಪರಶಿವನಿಗೆ ಪ್ರೀತಿಯಿಂದ ಅರ್ಪಿಸಲಿಲ್ಲವೆ ? ॥ ೨೦೭ ॥ ಅದು ದುರ್ವಾಸನೆಯನ್ನು ಬಿಟ್ಟು ಶ್ರೀಗಂಧವೇ ಆಗಿರಲಿಲ್ಲವೆ ? ಮತ್ತೂ ಇನ್ನೊಬ್ಬ ದೀಪದಕಲಿಯಾರಿಯೆಂಬ ಭಕ್ತಿವಂತನು ರಾತ್ರಿಯಹೊತ್ತು ಶಿವನನ್ನು ಶತ್ರುಭಯದಿಂದ ರಕ್ಷಿಸುವುದಕ್ಕಾಗಿ ತಳಾರಿಯಾಗಿ ತಿರುಗುತ್ತಲಿದ್ದು, ತೈಲಾಭಾವದಿಂದ ದೀಪಗಳೆಲ್ಲ ಆರಿಹೋಗಲಾಗಿ, ತನ್ನ ತಲೆಯಲ್ಲಿ ಜಡೆಯನ್ನು ಹೊಸೆದು, ಅದನ್ನು ದೀವಿಟಗೆಯನ್ನಾಗಿ ಮಾಡಿ, ತನ್ನ ಕೈಯಲ್ಲಿ ಹಿಡಿದು, ತಿರುಗಿದನು. ಅದರಲ್ಲಿ ಕೆಟ್ಟವಾಸನೆಯೇನಾದರೂ ಹೊರಟಿತೆ? ॥ ೨೧೦ ॥ ಅಂಥ ಶಿವಭಕ್ತರ ದಿವ್ಯಾನುಗ್ರಹದಿಂದ ಜನಿಸಿರುವ ಈ ನನ್ನ ಶರೀರವು ಕೂಡ ಅಂತಹುದೇ ಅಲ್ಲವೆ? ॥ ೨೧೧ ॥ ಈ ದೇಹವೆಲ್ಲ ಉರಿದು ಮುಗಿಯುವವರೆಗೂ ಗಂಟೆಯ ಸದ್ದು ನಿಂತುಹೋದರೆ, ಕೈಯು ಅಳ್ಳಾಡದೆ ನಿಂತುಹೋದರೆ, ಸುಗಂಧವು ಮೂಡದೆಹೋದರೆ, ॥ ೨೧೨ ॥ ಕಾಂತಿಯು ಕೆಟ್ಟುಹೋದರೆ, ರಸವಿಲ್ಲದೆಹೋದರೆ,

ತಾಸ್ಯಾಚ್ಚೇದ್ವಿರಸೋಽಯದಿವಾಭವೇತ್ | ದುರ್ವಾಸನಾಯದಿಭವೇತ್ಸಿರಾಸ್ಸ್ವ
ಕುಚಿತಾಯದಿ ‖ ೨೧೩ ‖ ದೇಹಶ್ಚಲತಿಚೇತ್ತಸ್ಯದ್ರೋಗೋಭವೇತ್ಪೂರ್ವಸ್ಥಿತಿ
ವಿನಾ | ವರ್ಣೋಽನ್ಯಥಾಭವೇದಸ್ಥಿಚರ್ಮಾಣಿಸ್ವಚ್ಛ ಧೂಪವತ್ ‖೨೧೪‖ ಪ್ರ
ವಿಲೀನಾಸಿನಸ್ಯುಶ್ಚೇತ್ಪಿತ್ತಶ್ಲೇಷ್ಮಕದಂಬಕಂ | ರಂಧ್ರೇಷುನಿರ್ಗತಂಸ್ಯಾಚ್ಚೇ
ದ್ರೋಮಾಣ್ಯಶುಭವಾಸನಾಂ ‖ ೨೧೫ ‖ ಮುಂಚಂತಿಯದಿವಾರಕ್ತಂಬಹಿಃ
ಪ್ರಚಲಿತಂಯದಿ | ವಿಚ್ಛಾಯಶ್ಚೇದಮುಂಧೂಮೋವಹ್ನಿಶ್ಶಾಂತೋಭವೇ
ದ್ಯದಿ ‖ ೨೧೬ ‖ ನೇತ್ರಾಂಬುನಿಸ್ರುತಂವಾಚೇದ್ದಗ್ಧಮಶ್ರೀತೋನವಾಯದಿ |
ತದ್ಧೂಪಧೂಮಸೌರಭ್ಯಂಸ್ವಯಂನೋಚೇತ್ತ್ವದರ್ಪಿತಂ ‖ ೨೧೭ ‖ ಅನ
ಷ್ಟಾತನುಸ್ಸ್ಯಾಚ್ಚೇದ್ದೃಷ್ಟಯಶ್ಚಲಿತಾಯದಿ | ಶಪೇಪ್ರಮಥವರ್ಯೇಭ್ಯಸ್ತ್ವ
ವಾಲೋಕಯಮಾಮಿತಿ ‖ ೨೧೮ ‖ ಸಂಸ್ಮೃತ್ಯಪ್ರಮಥವ್ರಾತಂಭಕ್ತ್ಯಾಪ
ರಮಯೌಹಿಲಃ | ತದ್ಧೂಪಪಾತ್ರಸ್ಯಮಧ್ಯೇಸನ್ನಿವಿಷ್ಟೋಽಭವತ್ತದಾ ‖೨೧೯‖
ಅಥಧೂಪಸ್ಯಮಹಿತಾವಾಸನಾಶ್ರೀಮಹೇಶ್ವರಂ | ಪರಿತಃಪೂರಿತಾದಿಕ್ಷುವ್ಯಾ
ಪಿನೀಸರ್ವತೋಽಭವತ್ ‖ ೨೨೦ ‖ ತತಶ್ಶ್ರೀಮನ್ಮಹಾದೇವಸ್ತದಾಸ್ವಭ
ಕ್ತಿವತ್ಸಲಃ | ಪ್ರತ್ಯಕ್ಷತಾಂಗತೋಭಕ್ತಂತಮಾನೀಯನಿಜಾಂತಿಕಂ‖೨೨೧‖

---

ದುರ್ಗಂಧವು ಹುಟ್ಟಿದರೆ, ನರವು ಸೇದಿಕೊಂಡರೆ ‖ ೨೧೩ ‖ ದೇಹವು ಕಂಪಿಸಿದರೆ,
ಮೊದಲಿದ್ದಂತಿರದೆ ಬಿವರಿದರೆ, ಬೇರೆ ಬಣ್ಣವುಂಟಾದರೆ, ಮೂಳೆ ಚಕ್ಕಳಗಳು
ನಿರ್ಮಲವಾದ ಧೂಪದಹಾಗೆ ಸುಟ್ಟು ಕರಗದೆಹೋದರೆ, ಪಿತ್ತರಸವೂ ಶ್ಲೇಷ್ಮವೂ
ದೇಹದ್ವಾರಗಳಿಂದ ಹೊರಕ್ಕೆ ಹೊರಟರೆ, ಕೂದಲುಗಳು ಕೆಟ್ಟ ಕಳುಕಿನವಾಸನೆ
ಯನ್ನು ಬೀರಿದರೆ ‖ ೨೧೫ ‖ ರಕ್ತವು ಹೊರಕ್ಕೆ ಚಿಮ್ಮಿದರೆ, ಈ ಹೊಗೆಯು ಬೇರೆ
ಬಣ್ಣವಾದರೆ, ಬೆಂಕಿಯು ಆರಿದರೆ, ಕಣ್ಣೀರು ಸುರಿದರೆ, ಹೊಗೆಯು ತಂಪಾಗಿರದೆಹೋ
ದರೆ, ಆ ಧೂಪದ ಹೊಗೆಯ ಪರಿಮಳವು ತಾನಾಗಿಯೇ ನಿನಗೆ ಅರ್ಪಿತವಾಗದೆಹೋದರೆ
ದೇಹವೆಲ್ಲ ಚೆನ್ನಾಗಿ ಸುಟ್ಟುಹೋಗದೆ ಕರುಕುಗೊಂಡು ಉಳಿದುಹೋದರೆ, ನೋಟಗಳು
ಚಪಲಗಳಾದರೆ, ಪ್ರಮಥಶ್ರೇಷ್ಠರಮೇಲೆ ಆಣೆಯಿಡುತ್ತೇನೆ. ನೀನು ನನ್ನನ್ನು
ನೋಡು ‖ ೨೧೮ ‖ ಎಂದು ಹೇಳಿ, ಓಹಿಲಾರ್ಯನು ಅತ್ಯಂತ ಭಕ್ತಿಯಿಂದ ಪ್ರಮಥರ
ಸಮೂಹವನ್ನು ಸ್ಮರಿಸಿ, ಆಗ ಆ ಧೂಪದ ಪಾತ್ರೆಯ ಮಧ್ಯದಲ್ಲಿ ಕುಳಿತುಕೊಂಡನು!
ಬಳಿಕ ಧೂಪದ ಶ್ರೇಷ್ಠವಾದ ವಾಸನೆಯು ಪರಶಿವನ ಸುತ್ತಲೂ ತುಂಬಿ, ಎಲ್ಲಕಡೆಯೂ
ವ್ಯಾಪಿಸಿತು ‖ ೨೨೦ ‖ ಬಳಿಕ ಉತ್ತಮಭಕ್ತಿಯಲ್ಲಿ ಅನುರಾಗವುಳ್ಳ ಪರಮೇಶ್ವರನು
ಸಂತೋಷದಿಂದ ಅರಳಿದ ಮುಖಕಮಲವುಳ್ಳವನಾಗಿ, ಆಗ ಪ್ರತ್ಯಕ್ಷನಾಗಿ, ಆ ಭಕ್ತನನ್ನು

ಕೃಪಾವಲೋಕನಸುಧಾರಸಾಂಬುನಿಧಿ ಮಧ್ಯತಃ । ಮಗ್ನಂ ಕೃತ್ವಾ ಸಮಾ ಲಿಂಗ್ಯ ಪ್ರಸನ್ನಮುಖಸಂಕಜಃ ॥೨೨೧॥ ಓಹಿಲಂ ಗುಣಸಂದೋಹ ದೋಹಳಂಸಕುತೂಹಲಂ । ಪಾಪಕೋಲಾಹಲಂ ತತ್ವಪಾರಗಂ ಪರಿತೋಷಿಣಂ ॥೨೨೨॥ ಪ್ರಮಥಾಧೀಶಪದವೀಪಟ್ಟಬದ್ಧಂ ವಿಧಾಯತಂ ॥ ಸಾರೂಪ್ಯ ಮಪಿ ಭಕ್ತಾಯ ತಸ್ಮೈಪ್ರಮುದಿತೋದದಾ ॥೨೨೪॥

ಇತ್ಯಸಂಖ್ಯಾತ......ಗುರುರಾಜಸ್ಯ ಕೃತೌ ಮಲ್ಲಿಕಾರ್ಜುನ ಪಂಡಿತಾ ರಾಧ್ಯ ಚರಿತ್ರೇ ಪುರಾತನಪ್ರಕರಣೇ ಗುರುಭಕ್ತಾಂಡಾರ್ಯಖ್ಯಾನ ಸಂಕೀರ್ತನೇ, ಶ್ರೀಮದೋಹಿಲಾರ್ಯಸ್ಯ ಶಿವಪ್ರತ್ಯಕ್ಷ ಕಥನಂ ನಾಮ ನವಮೋಽಧ್ಯಾಯಃ.

---

ಎತ್ತಿ ತನ್ನ ಬಳಿಗೆ ಕರೆದುಕೊಂಡು, ದಯಾಭರಿತವಾದ ನೋಟವೆಂಬ ಅಮೃತದ ಸಮುದ್ರದ ಮಧ್ಯದಲ್ಲಿ ಆತನನ್ನು ಮುಳುಗಿಸಿ, ತಬ್ಬಿ ॥೨೨೧॥ ಸದ್ಗುಣ ಸಮೂಹದಿಂದ ಭರಿತನೂ, ಕುತೂಹಲವಿಶಿಷ್ಟನೂ, ಪಾಪಧ್ವಂಸಕನೂ, ತತ್ವದರ್ಶಿಯೂ, ಸಂತೋಷಯುಕ್ತನೂ ಆದ ಆ ಓಹಿಲಾರ್ಯನಿಗೆ ಪ್ರಮಥಾಧಿಪತಿ ಪಟ್ಟಣವನ್ನು ಕಟ್ಟಿ, ಸಾರೂಪ್ಯ ಪದವಿಯನ್ನು ಅನುಗ್ರಹಿಸಿದನು ॥೨೨೪॥

ಎಂಬಲ್ಲಿಗೆ ಶ್ರೀಮತ್ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡದ ಟಿಪ್ಪಣದಲ್ಲಿ ಪುರಾತನ ಪ್ರಕರಣದೊಳಗೆ ಗುರುಭಕ್ತಾಂಡಾರಿಯ ಕಥೆಯೊಳಗೆ ಓಹಿಲಾರ್ಯನಿಗೆ ಶಿವಪ್ರತ್ಯಕ್ಷವಾದುದನ್ನು ವಿವರಿಸುವ ೯ ನೆಯ ಅಧ್ಯಾಯವು ಮುಗಿದುದು.

# ಅಥ ದಶಮೋಽಧ್ಯಾಯಃ.

---

(ಪೋಲಗೂರ್ಜರ ಕಥಾ.)

ಅಥ ಸದ್ಭಕ್ತಿಕಾಂತೋಸೌಪ್ರೋಹಿಲೋ ಗಣನಾಯಕಃ | ಕರೇಘಂಟಾ ಘಣಘಣಾರವಸಂರಂಭಜೃಂಭಿತಃ ||೧|| ಅನುರಾಗೇಣಕೈಲಾಸಂಪ್ರತಿ ಶಂಭೋರನುಜ್ಞಯಾ | ಪ್ರಯಾತ್ಯಯ ಮಯಂ ಸರ್ವೇಜನಾಃ ಪಶ್ಯತಪಶ್ಯತ |೨| ಇತಿ ಭಕ್ತೇಷು ಸಂರಾವಂ ಕುರ್ವತ್ಸು ಪರಿತೋಷತಃ | ಸೌರಾಷ್ಟ್ರದೇಶೇ ಪರಿತಃಪ್ರಮೋದಭರಿತೇ ಸತಿ ||೩|| ಧೂಪೇ ದಿಗಂತರಾಟೋಪೇ ಪಾಪೇವ್ಯಾಪ್ತಿಮಾಗತೇ | ಸಂರಂಭೇ ಜೃಂಭಿತೇಽತ್ಯಂತಂ ಸಖೇದೇಷ್ವನ್ಯವಾದಿಷು ||೪|| ದಿಗ್ವ್ಯಾಪ್ತಮೂರ್ತೌ ಸತ್ಕೀರ್ತೌ ವಾದ್ಯೇಷೂಚ್ಚೈಃ ಪ್ರಣಾದಿಷು | ಶಿವದೂಷಕಸಂಘೇಷುಗತೇಷ್ವತ್ಯಂತಭೀಷಣಂ ||೫|| ಪರಂಪಾರಂ ಪ್ರತಿಜ್ಞಾಯಾಂಗತಾಯಾಮತಿಮಾನುಷಂ | ಶಿವೇನವ್ರೋತ್ಸವಂ ಪ್ರಾಪ್ತೇ ಸಮುದ್ಭೂತೇಮಹಾದ್ಭುತೇ||೬|| ಉಘೇಸ್ವನಂಪ್ರಕುರ್ವತ್ಸುನಮತ್ಸುಶರಣೇಷ್ವಪಿ

---

# ೧೦ ನೆಯ ಅಧ್ಯಾಯವು.

---

(ಪೋಲಗೂರ್ಜರನ ಕಥೆ)

ಬಳಿಕ ಭಕ್ತ್ಯಂಗನೆಯ ಪತಿಯಾದ ಈ ಓಹಿಲಗಣಶ್ರೇಷ್ಠನು ಕೈಯಲ್ಲಿರುವ ಗಂಟೆಯ ಶಬ್ದದ ಸಡಗರದಿಂದುಬ್ಬಿದವನಾಗಿ, ಶಿವನಪ್ಪಣೆಯಮೇರೆ ಕೈಲಾಸವನ್ನು ಕುರಿತು ಪ್ರೀತಿಯಿಂದ ಹೋಗುತ್ತಲಿದ್ದಾನೆ, ಇದೋ ಇದೋ ಸರ್ವರೂ ನೋಡಿರಿ ||೨|| ಎಂದು ಭಕ್ತರುಗಳು ಸಂತೋಷದಿಂದ ಕೂಗಾಟವನ್ನು ಮಾಡುತ್ತಿರಲಾಗಿ, ಸೌರಾಷ್ಟ್ರದೇಶವೆಲ್ಲ ಸಂತೋಷದಿಂದ ತುಂಬಿರಲಾಗಿ ||೩|| ಧೂಪವಾಸನೆಯು ದಿಕ್ಕುಗಳ ಕೊನೆಯಲ್ಲಿ ಆಡಂಬರವನ್ನು ಮಾಡುತ್ತಿರಲಾಗಿ, ಪಾಪವು ನಾಶಗೊಳ್ಳಲಾಗಿ, ಸಡಗರವು ಉಬ್ಬಲಾಗಿ, ಪರಮತವಾದಿಗಳು ಬಹುಳ ವ್ಯಥೆಯುಳ್ಳವರಾಗಲಾಗಿ, ||೪|| ಓಹಿಲಾಖ್ಯನ ಉತ್ತಮಕೀರ್ತಿಯು ದಿಕ್ಕುಗಳಲ್ಲಿ ವ್ಯಾಪಿಸಿಕೊಂಡಿರಲಾಗಿ, ವಾದ್ಯಗಳು ಭೋರ್ಗರೆಯುತ್ತಿರಲು, ಶಿವದೂಷಕರ ಸಮೂಹವು ಭಯಂಕರವಾಗಿ ಬಣಗಿಹೋಗಲು ||೫|| ಅದ್ಭುತವು ಮಾನುಷ ಶಕ್ತಿಯನ್ನು ಮೀರಿ ಕೊನೆಮುಟ್ಟಲು, ಪರಮೇಶ್ವರನು ನೂತನ ಸಂತೋಷವನ್ನೈದಲು, ಆಶ್ಚರ್ಯವುಂಟಾಗಲು ||೬|| ಶಿವಶರಣರುಗಳು ಉಘೇ ಎಂದು ಕೂಗಿ

ಸ್ತುವತ್ಸುದ್ರಷ್ಟುಮಾಯಾತೇಷ್ವಹೋಜಯಜಯೇತಿಚ ॥೭॥ ಯಾವದೇವಹಿ ಕೈಲಾಸಂ ನಗತಸ್ತಾವದೇವತೇ । ಅಜ್ಞಾನದೂಷಿತಾಗೌಳತಾಪಸಾಹ್ರೀವಿವರ್ಜಿತಾಃ ॥೮॥ ಸಾಷ್ಟಾಂಗಂ ಪ್ರಣಿಪತ್ಯೈನಮೋಹಿಲಾರ್ಯಂ ಸಮುಬ್ರುವನ್ । ಓಹಿಲಾರ್ಯನಮಸ್ತುಭ್ಯಂ ಶಾಂತಭಾವಮಹೋನ್ನತ ॥೯॥ ಸತ್ಯಾನುಭಾವ ಕಾರುಣ್ಯಯುತ ಭಾವಿತದೈವತ । ವೀರಶೈವಸಿರಸ್ತಾನ್ಯದೈವದಾವದವಾನಲ ॥೧೦॥ ಧೂತಸಿದ್ಧೈವ ರುಚಿರಸದ್ಭಾವ ಮಹಿತೋದಯ । ಅಪರಾಧಾನಪಾಕರ್ತುಮಂಹಸ್ಸಂಹರ್ತು ಮುದ್ಧತಂ ॥೧೧॥ ಪರಿಪಾಲಯಿತುಂಚಾಸ್ಮಾನ್ ಕುರುಷ್ವಾನುಗ್ರಹಂ ಪರಂ । ಕೋಽನ್ಯೋಽಸ್ತಿ ನಾಸ್ಮಾಕಂದೇವದೇವಸ್ತ್ವಮೇವಹಿ ॥೧೨॥ ಪಾಲಯಾಸ್ಮಾಂಸ್ತ್ವಮಿತ್ಯುಚ್ಚೈಸ್ತುವಂತ್ಯದ್ಯಹಿ ತತ್ಪುರೇ । ಅಯಂತು ಸ್ವಯಮೇವೈಕೋಯಾತಿ ಕೈಲಾಸಪರ್ವತಂ ॥೧೩॥ ತನಾಲೋಕ್ಯಾಹಸಂಕಾಂತೇ ಕಿಮರ್ಥಮಿತಿಚೇಚ್ಛೃಣು । ಅತಿಘೋರಂ ಬಹುತಪಃ ಕೃತ್ವಾ ವೀರವ್ರತಾನ್ಯಪಿ ॥೧೪॥ ಚರಿತ್ವಾ ದುಃಖಜಾಲಾನಿ ದುಸ್ತ

---

ನಮಸ್ಕರಿಸಲು, ನೋಡುವುದಕ್ಕೆ ಬಂದವರು ಆಹಾ! ಜಯಾಜಯ! ಎಂದು ಸ್ತೋತ್ರ ಮಾಡುತ್ತಿರಲು ॥೭॥ ಓಹಿಲಾರ್ಯನು ಕೈಲಾಸವನ್ನು ಸೇರುವುದರೊಳಗಾಗಿಯೇ ಅಜ್ಞಾನದಿಂದ ನಿಂದಿತರಾದ ಆ ಗೌಳ ತಪಸ್ವಿಗಳು ನಾಚಿಕೆಯಿಲ್ಲದೆ ॥೮॥ ಸಾಷ್ಟಾಂಗವಾಗಿ ನಮಸ್ಕರಿಸಿ, ಓಹಿಲಾರ್ಯನನ್ನು ಕುರಿತು ಹೇಳಿದುದೇನೆಂದರೆ—"ಶಾಂತಸ್ವಭಾವದವನೂ ಅತ್ಯಂತ ಘನನೂ, ನಿಜವಾದ ಅರಿವುಳ್ಳವನೂ, ದಯಾಸಮೇತನೂ, ಪರಶಿವಧ್ಯಾನ ಸಂಪನ್ನನೂ, ವೀರಶೈವ ಮತದಿಂದ ತಿರಸ್ಕರಿಸಲ್ಪಟ್ಟ ಅನ್ಯ ದೇವತೆಗಳೆಂಬ ಕಾಡಿಗೆ ಕಾಡ್ಗಿಚ್ಚಾದವನೂ ॥೧೦॥ ನಾಸ್ತಿಕರನ್ನು ತಿರಸ್ಕರಿಸಿದವನೂ, ಮನೋಹರವಾದ ಸದಭಿಪ್ರಾಯವುಳ್ಳವನೂ, ಪೂಜ್ಯವಾದ ಜನ್ಮವುಳ್ಳವನೂ ಆದ ಎಲೈ ಓಹಿಲಾರ್ಯನೇ! ನಿನಗೆ ನಮಸ್ಕಾರವು. ನಮ್ಮ ತಪ್ಪುಗಳನ್ನು ಕ್ಷಮಿಸುವುದಕ್ಕೂ, ನಮ್ಮ ಉಬ್ಬಿದ ಪಾಪವನ್ನು ಪರಿಹರಿಸುವುದಕ್ಕೂ ॥೧೧॥ ನಮ್ಮನ್ನು ರಕ್ಷಿಸುವುದಕ್ಕೂ ಸಹ ಉತ್ತಮಾನುಗ್ರಹವನ್ನು ಮಾಡು. ನಮಗೆ ಬೇರೆ ಸ್ವಾಮಿ ಯಾವನಿರುವನು? ನೀನೇ ಸ್ವಾಮಿಯು ಸ್ವಾಮಿಯಲ್ಲವೆ? ॥೧೨॥ ನಮ್ಮನ್ನು ರಕ್ಷಿಸು " ಎಂದು ಗಟ್ಟಿಯಾಗಿ ಕೂಗಿ, ಈಗತಾನೇ ಆ ಪಟ್ಟಣದಲ್ಲಿ ಸ್ತೋತ್ರಮಾಡುತ್ತಲಿದ್ದಾರೆ. ಈ ಓಹಿಲಾರ್ಯನಾದರೊ ತಾನೊಬ್ಬನೇ ಕೈಲಾಸ ಪರ್ವತವನ್ನು ಕುರಿತು ತೆರಳುತ್ತಲಿದ್ದಾನೆ ॥೧೩॥ ಎಲೆ ರಮಣಿಯೇ! ನಾನು ಆತನನ್ನು ನೋಡಿ ನಕ್ಕನು. ಯಾತಕ್ಕೆಂದರೆ ಕೇಳು:—ಆ ಓಹಿಲಾರ್ಯನು ಅತ್ಯಂತ ಭಯಂಕರವಾದ ಅನೇಕ ತಪಸ್ಸುಗಳನ್ನು ಮಾಡಿ, ವೀರವ್ರತಗಳನ್ನು ಕೂಡ ಆಚರಿಸಿ ॥೧೪॥ ಸಹಿಸುವುದಕ್ಕಶಕ್ಯವಾದ ವೇದನೆಗಳ ಸಮೂಹಗಳನ್ನು ಕೂಡ ಅನುಭವಿಸಿ, ಪರಶಿವನನ್ನು ಸಂತೋಷಗೊಳಿಸಿಕೊಂಡೂ

ರಾಣ್ಯಾನುಭೂಯುಚ । ಕೃತ್ವಾ ಸಂತುಷ್ಟ ವಿಶಾಶಾನಮಪ್ಯೇಕೋಗಚ್ಛತಿಸ್ವ
ಯಂ॥೧೫॥ ಪುರಾಣಿಕತಿಚಿತ್ಕಾಂತೇನೋವಾತತ್ರ ಪುರೇಜನಾಃ । ನವಿದ್ಯಂತೇ
ಥವೈಕಾಕೀಯಾತಿ ಕಿಂ ದೈನ್ಯವಿಶಾದೃಶಂ ॥೧೬॥ ಇತ್ಯುಕ್ತ್ವಾಪುನರಪ್ಯೇನಂ
ದೃಷ್ಟ್ವಾದೃಷ್ಟ್ವಾಹಸನ್ಸ್ಥಿತಃ । ಸಾರಾಜಕಾಮಿನೀದೃಷ್ಟ್ವಾನಭೋಽನಿಮಿ
ಷಲೋಚನಾ॥೧೭॥ ತತೋಽಹಿಲಂ ಸಮುನ್ವಿಷ್ಯಾಽಪಶ್ಯಂತೀಕುತ್ರಚಿನ್ಮುದಾ
ಪ್ರಣಮ್ಯಭೂಪತಿಂ ಪ್ರಾಹಕೃತಾಂಜಲಿಪುಟಾಸತೀ ॥೧೮॥ ದಿಶಿಕಸ್ಯಾಮಂಬು
ಮುಚಾಂಕೇಪಾಂವಾಯಂ ಸವಿಶಾಪತಃ । ಕಿಯದ್ದೂರೇಸಂಪ್ರಯಾತಿಮಹೀ
ಯಾನೋಽಹಿಲಸ್ತ್ವಯಂ॥೧೯॥ ಪ್ರದರ್ಶಯಾದ್ಯಭೂವಿಶಾಶ ಮಮೇತ್ಯುಕ್ತೋ
ನೃಪೋಽಬ್ರವೀತ್ । ಕರೇಣಪಾವಯನ್ ಘಂಟಾಂ ಪ್ರಯಾತ್ಯಯಮಮುಃ
ಪುರಃ ॥೨೦॥ ಅತಿಹರ್ಷೇಣ ಕೈಲಾಸಂ ಪಶ್ಯಪಶ್ಯಾಂಬುಜಾನನೇ । ಇತಿಪ್ರ
ಶಿತಾಕಾಂತಾ ಮಹಿತಾನಂದಪಿರ್ಭರಾ ॥೨೧॥ ಓಹಿಲಾರ್ಯಂ ಸಮುದ್ವೀಕ್ಷ್ಯ
ಸಾಷ್ಟಾಂಗಂ ಪ್ರಣಿಪತ್ಯಸಾ । ತುಷ್ಟಾವ ಭಕ್ತಿತಸ್ಸಮ್ಯಕ್ ಶಿವಭಕ್ತಗಣೋ
ತ್ತಮಂ ॥೨೨॥ ಯತ್ತಪೋವಿಭವೇನೈಷಧೂಪಾಗ್ನಿರ್ನಾಂಗಮಸ್ಪೃಶತ್

---

ಕೂಡ ತಾನೊಬ್ಬನೇ ಹೋಗುತ್ತಾನೆ ॥೧೫॥ ಎಲೆ ರಮಣಿ! ಅಲ್ಲಿ ಕೆಲಪಟ್ಟಣಗಳಿರಲಿಲ್ಲ
ವೆ? ಅಥವಾ ಆ ಪಟ್ಟಣದಲ್ಲಿ ಜನವಿರುವುದಿಲ್ಲವೆ? ಅವರನ್ನೆಲ್ಲ ಬಿಟ್ಟು ತಾನೊಬ್ಬನೇ ಹೋ
ಗುತ್ತಾನೆ, ಇಂಥ ಬಡತನವೇಕೆ? ॥೧೬॥ ಎಂದು ಹೇಳಿ, ಮತ್ತೆ ಈ ಓಹಿಲಾರ್ಯನನ್ನು
ನೋಡಿ ನೋಡಿ ನಗುತ್ತಿದ್ದನು. ಆ ರಾಜಪತ್ನಿಯು ರಪ್ಪೆಯನ್ನು ಮುಚ್ಚದೆ ಅಂತರಿಕ್ಷವ
ನ್ನು ನೋಡಿ ॥೧೭॥ ಅಲ್ಲಿ ಓಹಿಲಾರ್ಯನನ್ನು ತಡಕಿ ಎಲ್ಲೂ ಕಾಣದೆ, ಸಂತೋಷದಿಂದ ನೃಪ
ಯನ್ನು ನಮಸ್ಕರಿಸಿ, ಕೈಮುಗಿದು ಹೇಳಿದಳು, ಏನೆಂದರೆ:—॥೧೮॥ "ಪ್ರಭುವೆ!
ಮಹಾತ್ಮನಾದ ಆ ಓಹಿಲಾರ್ಯನು ಯಾವದಿಕ್ಕಿನಲ್ಲಿ ಯಾವ ಮೋಡಗಳ ಸಮೀಪದಲ್ಲಿ
ಎಷ್ಟು ದೂರದಲ್ಲಿ ಹೋಗುತಲಿದ್ದಾನೆ? ॥೧೯॥ ನನಗೆ ಈಗ ತೋರಿಸು" ಎನಲು
ದೊರೆಯು—"ಎಲೆ ಕಮಲಾನನೆಯೇ! ಇದೋ ಇದೋ ಮುಂದೆ ಕೈಯಿಂದ ಗಂಟೆ
ಯನ್ನು ಬಾರಿಸುತ್ತ ಅತ್ಯಂತ ಸಂತೋಷದಿಂದ ಕೈಲಾಸಕ್ಕೆ ಹೋಗುತ್ತಲಿದ್ದಾನೆ
ನೋಡು ನೋಡು" ಎಂದು ಹೇಳಿ ತೋರಿಸಲು, ರಾಜಪತ್ನಿಯು ಆ ಓಹಿಲಾರ್ಯನನ್ನು
ನೋಡಿ, ಅತ್ಯಂತ ಸಂತೋಷವನ್ನು ಹೊಂದಿದವಳಾಗಿ ॥೨೧॥ ಸಾಷ್ಟಾಂಗವಾಗಿ ನಮಸ್ಕ
ರಿಸಿ, ಶಿವಗಣಶ್ರೇಷ್ಠನಾದ ಆತನನ್ನು ಭಕ್ತಿಯಿಂದ ಚೆನ್ನಾಗಿ ಸ್ತೋತ್ರಮಾಡಿದ
ಳು ॥೨೨॥ ಯಾವನ ತಪೋವೈಭವದಿಂದ ಧೂಪದ ಅಗ್ನಿಯು ದೇಹವನ್ನು ಕೆಡಿಸ
ಲಿಲ್ಲವೋ, ಪರಶಿವನಿಗೆ ಅರ್ಪಿಸಲ್ಪಟ್ಟ ದೇಹದ ಧೂಪವು ದುರ್ಗಂಧವುಳ್ಳದಾಗಲಿಲ್ಲವೋ
॥೨೩॥ ಆ ಈ ಓಹಿಲಾರ್ಯನು ಈ ಪ್ರಕಾರವಾಗಿ ಭಕ್ತಿಯಿಂದ ಪರಶಿವನನ್ನು ಸಂತೋಷ

ದುರ್ಗಂಧೋ ನಾಭವತ್ತಸ್ಯ ಯಥಾ ಪೂರ್ವೋಪಿ ಗಿರಿಶಾರ್ಪಿತಃ ॥೨೩॥ ಪರಿತುಷ್ಟಂ ವಿಧಾಯೈವಂ ಮಹಾದೇವಂ ಸ ಭಕ್ತಿತಃ। ಕೈಲಾಸಂ ಸಶರೀರೋಽಯಂ ಯಾತಿ ಸರ್ವೈರ್ಜನೈಸ್ಸ್ತುತಃ ॥೨೪॥ ಕಿಂ ವಿಸ್ಮಯಕರಂ ನ್ಯೈತತ್ಕರ್ತುಂ ಶಕ್ಯಂ ಪರೈಃ ಕಥಂ । ಕಿಂತು ಪ್ರವಕ್ತುಂ ಸುಲಭಂ ಸರ್ವೇಷಾಮೀದೃಶಂ ವಚಃ ॥೨೫॥ ಇತ್ಯುಕ್ತೇ ಸತಿ ಕಾಮಿನ್ಯಾ ಪುನರಾಹ ಮಹೀಪತಿಃ । ಕಿಮದ್ಭುತಮಿದಂ ಪೂರ್ವಭಕ್ತವೃತ್ತೇಽಸ್ಮಿನ್ನೀಕ್ಷಿತೇ ॥೨೬॥ ತತೋಽಪ್ಯಧಿಕಮಸ್ತ್ಯೇವಮಿದಂ ನ ಜಾನಾಸಿ ತ್ವಮಂಗನೇ । ಪಾವಕಶ್ಶಿವಭಕ್ತಾನಾಂ ಕಿಂ ಕ್ಲೇಶಕರಣೇ ಕ್ಷಮಃ ॥೨೭॥ ತಸ್ಯಾಗ್ನೇ ರಸನಾ ಬಾಹೂ ಸ್ವೀರಭದ್ರೋಽಚ್ಛಿನನ್ನ ಕಿಂ। ಕಿಮೇಕಸ್ತಿಲಕಂ ಫಾಲೇನ ವ್ಯಥಾದ್ಬಾಡಬಂ ಗಣಃ ॥೨೮॥ ಅಗೋಪಯನ್ನ ಕಿಂ ನೇತ್ರಕೋಣೇ ಪ್ರಳಯಪಾವಕಂ । ಬಹುಕಾಲಮುಪಚ್ಛೇತ್ರಮೇಕಃ ಪ್ರಮಥನಾಯಕಃ ॥೨೯॥ ವ್ಯಾಪ್ತೋಽವಹ್ನಿಃ ಕಿಮತನೋರ್ವ್ಯಾಘ್ರಪಾದಿನಂದನಂ । ನ ಕಿಂ ಶಂಕರದಾಸಸ್ಯ ಫಾಲೇ ತಿಷ್ಠತಿ ಪಾವಕಃ ॥೩೦॥ ವೈರಿಸಂಘೇಷು ವಾಗೀಶಂ ಶಿವಭಕ್ತಂ ಮಹಾನಲೇ । ಸನ್ನಿಪಾತಿತವತ್ಸ್ವಗ್ನಿರ್ಭೂತ್ವಾ ಸ ಸರಸೀನಿಭಃ ॥೩೧॥ ರೋಮಾಪಿ ದಗ್ಧುಮಭವನ್ನ ಪ್ರಭುಸ್ತಸ್ಯ ವಿಗ್ರಹೇ । ಪುರಾ ಭಕ್ತಂ ಪಿಳ್ಳನೈನಾರ್ಯಾಖ್ಯಂ ಜೈ

---

ಗೊಳಿಸಿ, ಸರ್ವಜನರಿಂದ ಸ್ತೋತ್ರ ಮಾಡಿಸಿಕೊಳ್ಳುತ್ತ, ದೇಹಸಮೇತನಾಗಿ ಕೈಲಾಸಕ್ಕೆ ಹೋಗುತ್ತಲಿದ್ದಾನೆ ॥೨೪॥ ಇದು ಆಶ್ಚರ್ಯಕರವಲ್ಲವೆ? ಇದನ್ನು ಇತರರು ಹೇಗೆ ಮಾಡಬಲ್ಲರು? ಆದರೆ ಎಲ್ಲರಿಗೂ ಇಂಥ ಮಾತನ್ನಾಡುವುದಕ್ಕೆ ಮಾತ್ರ ಸುಲಭವು ॥೨೫॥ ಎಂದು ಅರಸಿಯು ನುಡಿಯಲು, ದೊರೆಯು—ಪೂರ್ವದ ಶಿವಶರಣರ ಚರಿತ್ರವನ್ನು ನೋಡಿದರೆ ಇದಾಶ್ಚರ್ಯವೇ? ॥೨೬॥ ಅದಕ್ಕಿಂತಲೂ ಇದು ಹೆಚ್ಚಿನದೋ? ಎಲೆ ರಮಣೀ ನೀನು ಕಾಣೆ. ಅಗ್ನಿಯು ಶಿವಭಕ್ತರಿಗೆ ಕ್ಲೇಶವನ್ನುಂಟುಮಾಡಬಲ್ಲುದೆ? ॥೨೭॥ ಆ ಅಗ್ನಿಯ ನಾಲಗೆಯನ್ನೂ ತೋಳುಗಳನ್ನೂ ವೀರಭದ್ರೇಶನು ಕತ್ತರಿಸಲಿಲ್ಲವೇನು? ಕಲಿಗಣನಾಥನೆಂಬೊಬ್ಬನು ಬಡಬಾಗ್ನಿಯನ್ನು ಹಣೆಯ ಬೊಟ್ಟನ್ನಾಗಿ ಮಾಡಿಟ್ಟುಕೊಳ್ಳಲಿಲ್ಲವೆ? ॥೨೮॥ ಮತ್ತೊಬ್ಬ ಪ್ರಮಥಶ್ರೇಷ್ಠನು ಪ್ರಳಯಾಗ್ನಿಯನ್ನು ತನ್ನ ಕಣ್ಣಿನ ತುದಿಯಲ್ಲಿ ಬಹುಕಾಲ ಪರ್ಯಂತ ಆತ್ಯಾಶ್ಚರ್ಯಕರವಾಗಿ ಅಡಗಿಸಿಕೊಂಡಿರಲಿಲ್ಲವೆ? ॥೨೯॥ ವ್ಯಾಘ್ರಪಾದ ಋಷಿಯ ಚಿಕ್ಕಮಗನನ್ನು ಆವರಿಸಿದ ಬೆಂಕಿಯು ಆತನನ್ನು ಏನುಮಾಡಿತು? ಶಂಕರದಾಸಾರ್ಯನ ಹಣೆಯಲ್ಲಿ ಅಗ್ನಿಯು ಇರುವುದಿಲ್ಲವೆ? ॥೩೦॥ ಶಿವಭಕ್ತನಾದ ವಾಗೀಶನೆಂಬಾರಿಯನ್ನು ಶತ್ರುಗಳು ದೊಡ್ಡ ಬೆಂಕಿಯಲ್ಲಿ ಹಾಕಿಬಿಡಲಾಗಿ, ಆ ಬೆಂಕಿಯು ಕೊಳಕ್ಕೆ ಸಮನಾಗಿ, ॥೩೧॥ ಆ ವಾಗೀಶನ ದೇಹದಲ್ಲಿ ಒಂದು ರೋಮವನ್ನು ಕೂಡ ಸುಡಲಾರದೆ ಹೋಗಲಿಲ್ಲವೆ? ಪೂರ್ವದಲ್ಲಿ ಜೈನರು ಮಧುರೆಯಲ್ಲಿದ್ದ ಪಿಳ್ಳ

ನೇಷು ಕೋಪತಃ ‖೩೦‖ ಮಧುರಾಯಾಂಸ್ಥಿತಂ ಬಧ್ವಾ ದೌರ್ವಾರ್ತಂತ್ರಾತ್ಯ ಸ್ಯ ಮಂದಿರೆ । ಕ್ಷಿಪ್ತವತ್ಸ್ವಗ್ನಿಮುದಹತ್ತೃಣಂವಾ ಪಾವಕಃಕಿಮು ‖೩೩‖ ಅಖಂಡಿತಸದ್ಭಕ್ತ್ಯೈಶ್ವರ್ಯಃ ಪುರಾಶ್ರೀಪತಿಪಂಡಿತಃ । ಕರ್ತೇಶ ಏವತದ್ಭಕ್ತಾ ಏವ ಶಿಷ್ಟಾಸ್ತುನಾಪರೇ ‖೩೪‖ ಪ್ರತಿಪಾದ್ಯೇತಿಸೋತ್ಕರ್ಷಂ ಪುರತಃ ಪ್ರತಿವಾದಿನಾಂ । ಜ್ವಲನಂ ಸ್ವೋತ್ತರೀಯೇಣಬಬಂಧ ನಿಜವೈಭವಾತ್ ‖೩೫‖ ಕಿಂ ವಹ್ನಿರಕರೋತ್ತಸ್ಮಾದ್ಭಕ್ತೇಭ್ಯೋಗ್ನಿರ್ಬಿಭೇತ್ಯಲಂ । ಕಿಮೇತದಧಿಕಂ ತಸ್ಮಿಭಕ್ತ ಚಾರಿತ್ರವೀಕ್ಷಣೇ ‖೩೬‖ ಧೂಪಾಮೋದೋಭವತ್ಕಾಯಸ್ತದಿದಂ ಪರಮಾದ್ಭುತಂ । ಇತಿ ಜಲ್ಪಸಿಚೇದೇತಚ್ಛೃಣು ಪಂಕಜಲೋಚನೇ ‖೩೭‖ ಭುವಿಭಕ್ತ್ಯಾಮೊರಟದಬಂಕಾರ್ಯಸ್ಯ ಮಹಾತ್ಮನಃ । ಸ್ಥಾಣುರ್ನಕಿಂ ಪಲ್ಲವಿತೋನೀರಸೋನಶ್ರುತಂ ಪುರಾ ‖೩೮‖ ವಂಧ್ಯಾನಕಿಂ ಪ್ರಸೂತಾಭೂದ್ಘಟೋಧ್ನೀಪಯಸ್ವಿನೀ । ಪುಂಸ್ತ್ವಂ ಪ್ರಾಪ್ತಾನಕಿಂ ಭಕ್ತಿಮಹಿಮ್ನಾ ತಿಲಕಾಂಬಿಕಾ ‖೩೯‖ ಕಲಕೇತಬ್ರಹ್ಮಯಾರ್ಯಪಾಣಿಸ್ಪೃಷ್ಟಂ ಕ್ಷಿತೌರಜನಕಿಂ ಸುವರ್ಣತಾಂ ಪ್ರಾಪ್ತಂ ಸ್ವೀಯಭಕ್ತಿ ಪ್ರಭಾವತಃ ‖೪೦‖ ಪುರಾ

---

ನೈನಾರಿಯೆಂಬ ಶಿವಭಕ್ತನನ್ನು ಕೋಪದಿಂದ ‖೩೨‖ ದುರಾಲೋಚನೆಯಿಂದ ಮಾತ ಕಟ್ಟಿಹಾಕಿ, ಅವನಿದ್ದ ಮನೆಗೆ ಬೆಂಕಿಯನ್ನು ಹಾಕಲಾಗಿ, ಅಲ್ಲಿ ಬಂದು ಹುಲ್ಲುಕಡ್ಡಿಯನ್ನಾದರೂ ಬೆಂಕಿಯು ಸುಟ್ಟಿತೆ? ‖೩೩‖ ಪೂರ್ವದಲ್ಲಿ ಅಖಂಡವಾದ ಭಕ್ತಿಯೆಂಬ ಸಂಪತ್ತುಳ್ಳ ಶ್ರೀಪತಿಪಂಡಿತನು ಪ್ರತಿವಾದಿಗಳ ಇದಿರಿಗೆ ಶಿವನೇ ಜಗತ್ಕರ್ತನು, ಅವನ ಭಕ್ತರೇ ಶ್ರೇಷ್ಠರು, ಇತರರಲ್ಲ, ಎಂದು ಹೆಚ್ಚುಗೆಯಿಂದ ಕೂಡಿ ನುಡಿದು, ಅದರ ದೃಷ್ಟಾಂತಕ್ಕಾಗಿ ತನ್ನ ಭಕ್ತಿಮಹಿಮೆಯಿಂದ ಹೊದೆದ ಬಟ್ಟೆಯಲ್ಲಿ ಬೆಂಕಿಯನ್ನು ಕಟ್ಟಿದನು ‖೩೪‖ ಬೆಂಕಿಯು ಏನನ್ನು ಮಾಡಿತು? ಆದುದರಿಂದ ಶಿವಭಕ್ತರಿಗೆ ಬೆಂಕಿಯು ಬಹುಳವಾಗಿ ಹೆದರಿಕೊಳ್ಳುತ್ತದೆ. ಎಲೆ ಕೃಶಾಂಗಿಯೇ! ಶಿವಭಕ್ತರ ಚರಿತ್ರವನ್ನು ನೋಡಿದರೆ ಈ ಓಹಿಲಾರ್ಯನು ಆಚರಿಸಿದ ಕೃತ್ಯವು ಹೆಚ್ಚೇ? ‖೩೬‖ ಅವನ ದೇಹವು ಧೂಪದ ಸುವಾಸನೆಯುಳ್ಳುದಾಯಿತು, ಆದುದರಿಂದ ಇದು ಅತ್ಯಾಶ್ಚರ್ಯವೆಂದು ನೀನು ಹೇಳುವೆಯಾದರೆ ಎಲೆ ಕಮಲಾಕ್ಷಿಯೆ! ಇದನ್ನು ಕೇಳು:— ‖೩೭‖ ಪೂರ್ವದಲ್ಲಿ ಭೂಲೋಕದೊಳಗೆ ಮೊರಟದ ಬಂಕಯ್ಯನೆಂಬ ಮಹಾತ್ಮನಿಗೆ ಒಣಗಿಹೋಗಿದ್ದ ಒಂದು ಮರವು ಅವನ ಭಕ್ತಿ ಪ್ರಭಾವದಿಂದ ಚಿಗುರಿತೆಂಬುದನ್ನು ನೀನು ಕೇಳಿಲ್ಲವೆ? ‖೩೮‖ ಮತ್ತೂ ಬಂಜೆಯಾಕಳು ಈದು, ಬಿಂದಿಗೆಯಷ್ಟು ಹಾಲನ್ನು ಕರೆಯುವ ಕೆಚ್ಚಲುಳ್ಳುದಾಗಲಿಲ್ಲವೆ? ತಿಲಕವ್ವೆಯು ಶಿವಭಕ್ತಿಪ್ರಭಾವದಿಂದ ಗಂಡಾಗಲಿಲ್ಲವೆ? ‖೩೯‖ ಕಲಕೇತಬ್ರಹ್ಮಯ್ಯನ ಕೈಗೆ ಸೋಂಕಿದ ಧೂಳಿಯು ಅವನ ಭಕ್ತಿಮಹಿಮೆಯಿಂದ ಚಿನ್ನವಾಗಲಿಲ್ಲವೆ? ‖೪೦‖ ಪೂ

ಪೋಳಿಗೆಮಾರಾರ್ಯಾನೀತಕಾಷ್ಠಾನಿ ಸರ್ವಶಃ | ನಕಿಂ ಸುವರ್ಣಖಂಡಾನಿ ಸಂಜಾತಾನಿ ಪ್ರಭಾವತಃ ||೩೯|| ಮುಸುಂಡಿಚೌಡಯಾರ್ಯಸ್ಯ ಸದ್ಭಕ್ತಿವಿಭವಾತ್ಪುನಃ ಕಿಂಪಾಕಫಲಸಂದೋಹಸ್ಸುಧಾತ್ವಂ ನಾಗಮತ್ಕಿಮು ||೪೦|| ಕೂಲಂಕಷೋಽನದೀಪೂರೋಽಪ್ಯಭವತ್ಸುತರೋಽನಕಿಂ | ಏಕಾಧಿನಾಥಸದ್ಭಕ್ತ್ಯಾಛುರಿಕಾಸ್ರಗಭೂನ್ನಕಿಂ ||೪೨|| ವಲ್ಮೀಕರಂಧ್ರೇ ಬಸವಪುತ್ರೇಽನ್ಯಸ್ತಕರೇ ಸತಿ | ಅಗಮನ್ನಕಿಮತ್ಯುಗ್ರಕೃಷ್ಣಸರ್ಪೋಽಪಿಹಾರತಾಂ||೪೪|| ಏಲೇಶಕೇತಾರ್ಯವರ್ಯಭಕ್ತಿಸಾಮರ್ಥ್ಯತಃಪುರಾ | ಬೀಜೈರ್ಭಸ್ಮೀಕೃತೈಃಕ್ಷೇತ್ರಂ ಸ್ವಕೀಯಂ ಫಲಿತಂ ನಕಿಂ ||೪೫|| ಗೋವಾಯಮ್ರೋಪಿಚ ಕುಲಕ್ಕೊರಿಯಸ್ಯ ಪ್ರಭಾವತಃ| ನಾಭೂವನ್ಕಿಂ ಸವಿಾಚೇನಾಸ್ತರಗಾಜಗತೀತಲೇ ||೪೬|| ಪೂಸಲಾಖ್ಯಸ್ಯನೈನಾರೇರ್ಭಕ್ತ್ಯಾಸ್ಮರಣಮಾತ್ರತಃ| ನಾಭೂತ್ಕಿಮಾಲಯೋಗೌರೀರಮಣಸ್ಯ ವಿಚಿತ್ರತಃ ||೪೭|| ನಮಿನಂದಿಲಸದ್ಭಕ್ತಿಸಾಮರ್ಥ್ಯಾತ್ಕೇವಲಾಂಬುನಾ | ಸಹಸ್ರದೀಪಿಕಾಸ್ಸನ್ತ್ಯಜ್ವನ್ನಕಿಂ ಪ್ರಜ್ವಲಿತಾಃಪುರಾ ||೪೮|| ಅನ್ಯೇಚಾಜ್ಞಾಸಿದ್ಧಿಮಂತೋ ಭಕ್ತಾಸ್ಸಂತಿ ಮಹೀತಲೇ| ಸಕಾಯಃಕೈಲಾಸಂ ಯಯಾವಿತ್ಯಥಮನ್ಯಸೇ||೪೯|| ಕಿಮೇಕಸ್ಯೈವಗಮನಂ ಚಿತ್ರಮಿಂಪು

---

ರ್ವದಲ್ಲಿ ಪೋಳಿಗೆಯ ಮಾರಯ್ಯನು ತಂದಿದ್ದ ಕಟ್ಟಿಗೆಗಳೆಲ್ಲವೂ ಭಕ್ತಿಯ ಮಹತ್ತ್ವದಿಂದ ಚಿನ್ನದ ಗಟ್ಟಿಗಳ ತುಂಡುಗಳಾಗಲಿಲ್ಲವೆ ? ||೩೯|| ಮತ್ತೂ ಮುಸುಡಿ ಚೌಡಯ್ಯನ ಭಕ್ತಿಮಹತ್ವದಿಂದ ಕಟ್ಟಿಯ ಹಣ್ಣುಗಳು ಅಮೃತದಂತಾಗಲಿಲ್ಲವೆ ? ||೪೦|| ಮತ್ತೂ ಕಡೆಗಟ್ಟಿ ಹರಿಯುತ್ತಿದ್ದ ಮಹಾನದೀ ಪ್ರವಾಹವು ಸುಲಭವಾಗಿ ದಾಟುವುದಕ್ಕೆ ಸಾಧ್ಯವಾಗಲಿಲ್ಲವೆ ? ಏಕಾಧಿನಾಥನ ಭಕ್ತಿಯಿಂದ ಕತ್ತಿಯು ಹೂವಿನ ಮಾಲೆಯಾಗಲಿಲ್ಲವೆ? ||೪೨|| ಬಸವಾರ್ಯನ ಮಗನು ಹುತ್ತಿಗೆ ಕೈಯನ್ನು ಹಾಕಲಾಗಿ, ಅತ್ಯಂತ ಭಯಂಕರವಾದ ಕೃಷ್ಣಸರ್ಪವುಕೂಡ ಹಾರವಾಗಲಿಲ್ಲವೆ ? ||೪೪|| ಪೂರ್ವದಲ್ಲಿ ಏಲೇಶಕೇತಯ್ಯನ ಭಕ್ತಿಶಕ್ತಿಯಿಂದ, ಸುಟ್ಟು ಬೂದಿಯಾಗಿದ್ದ ಬೀಜಗಳಿಂದಲೂ ಕೂಡ ಆತನ ಹೊಲವು ಬೆಳಸುಗೊಳ್ಳಲಿಲ್ಲವೆ? ||೪೫|| ಭೂತಲದಲ್ಲಿ ಕುಲಚ್ಚೊರಿಯನ ಮಹಿಮೆಯಿಂದ ನರಿಗಳು ಕೂಡ ಉತ್ತಮಾಶ್ವಗಳಾಗಲಿಲ್ಲವೆ ? ||೪೬|| ಪೂಸಲನೈನಾರಿಯ ಭಕ್ತಿವಿಶೇಷದಿಂದ ಮನಸ್ಸಿನಲ್ಲಿ ಸ್ಮರಿಸಿದಮಾತ್ರಕ್ಕೇ ಆಶ್ಚರ್ಯಕರವಾಗಿ ಶಿವದೇವಾಲಯವು ಉಂಟಾಗಲಿಲ್ಲವೆ ? ||೪೭|| ಪೂರ್ವದಲ್ಲಿ ನಮಿನಂದಿಯು ಭಕ್ತಿಸಾಮರ್ಥ್ಯದಿಂದ ಬರಿಯ ನೀರನ್ನೇ ತುಂಬಿ ಸಾಸಿರದೀವಿಗೆಗಳನ್ನು ಉರಿಸಲಿಲ್ಲವೆ ? ||೪೮|| ಭೂತಲದಲ್ಲಿ ನುಡಿದಂತೆ ಇಷ್ಟಾರ್ಥಸಿದ್ಧಿಯನ್ನು ಪಡೆದ ಭಕ್ತರು ಇನ್ನೂ ಎಷ್ಟೋಮಂದಿ ಯಿರುವರು. ಆದರೆ ಈ ಬಿಹಿಲಾರ್ಯನು ದೇಹಸಹಿತವಾಗಿ ಕೈಲಾಸಕ್ಕೆ ಹೋದನೆಂದು ತಿಳಿದಿರುತ್ತೀಯಲ್ಲವೆ? ||೪೯|| ಎಲೆ

ನಿಭಾನನೇ| ಅಶೀತಿಸಾಹಸ್ರಹಯ್ಯೈಃರುದ್ರಾಕ್ಷಕವಚಾನ್ವಿತೈಃ ||೫೦|| ಧಾಟ್ಯಾ ಚೇರಮರಾಯಃಕಿವಿಶಾಶಸ್ಯ ನಯಯೌಪುರೀಂ || ದ್ವಾತ್ರಿಂಶತ್ಪುರಸಂಯುಕ್ತಸ್ಸಾಮವೇದೀಸ್ವಯಂಪುರಾ ||೫೧|| ನಯಾತಃಕಿಮುಕೈಲಾಸಂ ತುಷ್ಟಂಕೃತ್ವಾ ಸದಾಶಿವಂ | ಹಲಾಯುಧೋನವಪುರೀಯುತಃಕೈಲಾಸಭಾಜ್ಞಕಿಂ ||೫೨|| ಪುರಾಶ್ರೀಪಿಳ್ಳೈನೈನಾರಿಶ್ಶಿವಭಕ್ತಿಸಮನ್ವಿತಃ | ಸರ್ವೈಃಪೌರಜನೈಸ್ಸಾಕಂನಾವಿಶತ್ಕಿಂ ಮಹೇಶ್ವರಂ ||೫೩|| ಕಾಂಚೀಪುರೀಸಪ್ತವೀಥೀಸಂಯುಕ್ತಶ್ಶಿವಪತ್ತನಂ | ಚಿರುತೊಂಡಮಹಾಭಕ್ತಃ ಪ್ರಯಾತೋನಕಿಮುನ್ನತಃ ||೫೪|| ನಕಿಂಮಲಯರಾಜೋಽಗಾತ್ಸಪೌರೋರಾಜತಾಚಲಂ| ಕರ್ತುಂ ಪರ್ವೋತ್ಸವಂ ಶೀಘ್ರಂ ಮಿರುಮಿಂಡಸ್ಸಮುತ್ಸುಕಃ ||೫೫|| ಸದ್ಭಕ್ತೈಸ್ಸಹಕೈಲಾಸಂ ಸಂಪ್ರಯಾತೋನಕಿಂಪುರಾ | ಭೂತೈಸ್ಸಪ್ತಶತೀಸಂಖ್ಯಾಯುಕ್ತೈಸ್ಸಹವಟೇನಚ ||೬೩|| ಉದ್ಭಟಶ್ಶಂಕರಪುರೀಂ ಸಂಪ್ರಯಾತೋನಕಿಂಪುರಾ | ನಿತ್ಯಂ ಸಪ್ತಮೃಗಾನ್ ಕೃತ್ತಿವಾಸಸ್ಸದ್ಭಕ್ತಿಭೂಷಿತಃ ||೫೮|| ಮಹಾದೇವಪುರೀಂ

---

ಚಂದ್ರಮುಖಿಯೆ, ಒಬ್ಬನೇ ಹೋಗುವುದೆನೊಂದಾಶ್ಚರ್ಯವೆ? ರುದ್ರಾಕ್ಷಿಯ ಪಕ್ಕರೆಗಳಿಂದ ಕೂಡಿದ ೮೦ ಸಾವಿರ ಕುದುರೆಗಳೊಡನೆ ಚೇರಮರಾಜನು ಶಿವಪುರವನ್ನು ಕುರಿತು ತೆರಳಲಿಲ್ಲವೆ? ಪೂರ್ವದಲ್ಲಿ ಸಾಮವೇದಿಯು ಪರಶಿವನನ್ನು ಸಂತೋಷಗೊಳಿಸಿ, ೩೦ ಊರುಗಳಿಂದ ಕೂಡಿ ಕೈಲಾಸಕ್ಕೆ ಹೋಗಲಿಲ್ಲವೆ? ಹಲಾಯುಧಾರ್ಯನು ೯ ಊರುಗಳಿಂದ ಕೂಡಿ ಕೈಲಾಸಕ್ಕೆ ಹೋಗಲಿಲ್ಲವೆ? ||೫೨|| ಶಿವಭಕ್ತಿಯುಕ್ತನಾದ ಶ್ರೀಪಿಳ್ಳೈನೈನಾರಿಯು ಪಟ್ಟಣದ ಜನರೆಲ್ಲರೊಡನೆ ಕೂಡಿ ಶಿವನಲ್ಲಿ ಪ್ರವೇಶಿಸಲಿಲ್ಲವೆ? ||೫೩|| ಶ್ರೇಷ್ಠನಾದ ಚಿರುತೊಂಡಭಕ್ತನು ಕಾಂಚೀಪಟ್ಟಣದ ಏಳು ಕೇರಿಗಳೊಡನೆ ಕೂಡಿ ಕೈಲಾಸಕ್ಕೆ ಹೋಗಲಿಲ್ಲವೆ? ||೫೪|| ಮಲಯರಾಜನು ತನ್ನ ಪುರಜನರ ಸಮೇತನಾಗಿ ಕೈಲಾಸಪರ್ವತಕ್ಕೆ ಹೋಗಲಿಲ್ಲವೆ? ಮಿರುಮಿಂಡದೇವನು ಪೂರ್ವದಲ್ಲಿ ಶಿವನ ಹಬ್ಬವನ್ನು ಮಾಡುವುದಕ್ಕಾಗಿ ಉತ್ಸಾಹದೊಡನೆ ಕೂಡಿ ಭಕ್ತರುಗಳೊಡನೆ ಕೈಲಾಸಕ್ಕೆ ಹೋಗಲಿಲ್ಲವೆ? ಪೂರ್ವದಲ್ಲಿ ಮಾನಕಂಜರನು ತನ್ನ ಆಳುಗಳೊಡನೆಯೂ ಮಗಳೊಡನೆಯೂ ಕೂಡಿ ಕೈಲಾಸಕ್ಕೆ ಹೋಗಲಿಲ್ಲವೆ? ಪೂರ್ವದಲ್ಲಿ ಉದ್ಭಟದೇವನು ೭೦೦ ಭೂತಗಣದಲೂ ಅವುಗಳು ನೆಲಸಿದ್ದ ಆಲದ ಮರದೊಡನೆಯೂ ಶಿವಪುರಕ್ಕೆ ಹೋಗಲಿಲ್ಲವೆ? ಶಿವಭಕ್ತಿಯಿಂದಲಂಕೃತನಾದ ತೆಲುಗುಜೊಮ್ಮಯ್ಯನು ಪ್ರತಿದಿನವೂ ಪ್ರೀತಿಯಿಂದ ಏಳು ಮೃಗಗಳನ್ನು ಕೈಲಾಸಕ್ಕೆ ಕಳುಹಿಸಲಿಲ್ಲವೆ? ||೫೮|| ಪೂರ್ವದಲ್ಲಿ ಮಲ್ಲಣನು ತನ್ನ ಸೊಸೆಯೊಡನೆಯೂ ಅವಳ ತಾಯಿಯೊಡನೆಯೂ ಗಿರಿಯೊಡನೆಯೂ ಸಹ ಕೈಲಾಸಕ್ಕೆ ಸಂಭ್ರಮದೊಡನೆ ಹೋಗಲಿಲ್ಲವೆ? ಭಕ್ತಶ್ರೇಷ್ಠನಾದ ಸುಂದರನಂಬ್ಯಣ್ಣನು ಪರಸೆ

ಪ್ರೀತ್ಯಾಜೊಮ್ಮಾರ್ಯಃ ಪ್ರಾಹಿಣೋನ್ನಕಿಂ | ಶುಕೇನವೇಶ್ಯಯಾತಸ್ಯಾವಮಾ ತ್ರಾಸಹವಿಜೃಂಭಿತಃ || ೫೯ || ಮಲ್ಲಣಶ್ಶಂಕರಪುರೀಂ ಸಂಪ್ರಯಾತೋನ ಕಿಂಪುರಾ| ಸ್ತ್ರೀಭ್ಯಾಮುಭಾಭ್ಯಾಂಸಂಯುಕ್ತೋ ಬಂಧುಭಿರ್ನಂಬ್ಯಣಾಹ್ವ ಯಃ ||೬೦|| ಸದ್ಭಕ್ತಶ್ಶಂಕರಪುರೀಂ ಸಂಪ್ರಯಾತೋನಕಿಂಪುರಾ | ಕಿಂಚಶಂ ಕರಭಕ್ತಾ ನಾವಮಾದ್ಯಾನಾಂಬಹವಃಪುರಾ ||೬೧|| ಪರಮೇತಾದೃಶಾಸ್ಸಂತಿಶಿವ ಭಕ್ತಿಪರಾಯಣಾಃ|ಏಕಏವಾಹಿಲಾರ್ಯೋಯಂಗಚ್ಛೇತ್ಕೈಲಾಸಪರ್ವತಂ||೬೨ ಕಿಮತ್ಯಂತಸ್ತುತಿಪದಂಭವೇದಂಬುಜಲೋಚನೇ | ಏವಂ ತಸ್ಯಾಹಿಲಾರ್ಯಸ್ಯನಿ ರಾಕರಣಪೂರ್ವಕಂ ||೬೩|| ಪತ್ಯೋಕ್ತೇಭಾಮಿನೀಪ್ರಾಹಾಸಹಮಾನಾಥತ ದ್ವಚಃ | ತ್ವಂದುಷ್ಕಾಮಿಾಸನಿಷ್ಕಾಮಿಾತ್ವಂ ಭೂಪಶ್ಶಿವಯೋಗ್ಯಸೌ || ೬೪ || ತ್ವಂದ್ಯೂತವ್ಯಸನೀಶಂಭುಪೂಜನವ್ಯಸನೀಸಹಿ | ಸಂಸಾರರಕ್ತೋಹಿಭವಾಞ್ ವಿರಕ್ತಸ್ಸತುಸಂಸೃತೌ || ೬೫ || ನರಲೋಕ ಚರೋಽಸಿತ್ವಂ ಸುರಲೋ ಕಚರಸ್ಸತು| ಪ್ರಶಂಸಯದಿತೇಪ್ರೀತಿ ರ್ನಚೇತ್ತೂಷ್ಣೀಂಭವಸಪ್ರಭೋ ||೬೬ ಲಘುಂ ಮಾವದಸದ್ಭಕ್ತ ಮೋಹಿಲಾರ್ಯಂ ಗಣೋತ್ತಮಂ | ಇತಿ ಬ್ರು ವಾಣಾಂ ರಮಣೀಂ ಪ್ರೋವಾಚವಸುಧಾಧಿಪಃ || ೬೭ || ಕಾಮಯಿತ್ವಾ

---

ಸಂಕಿಲೆಯರೆಂಬ ತನ್ನ ಇಬರು ರಮಣಿಯರೊಡನೆಯೂ ನಂಟರೊಡನೆಯೂ ಕೂಡಿ ಕೈಲಾಸಕ್ಕೆ ಹೋಗಲಿಲ್ಲವೇ? ಮತ್ತೂ ಪೂರ್ವದ ಶಿವಶರಣರಲ್ಲಿ ಹೀಗೆ ಆಚರಿಸಿದ ಭಕ್ತೋತ್ತಮರು ಅನೇಕರಿದ್ದರು||೬೧|| ಎಲೆ ಕಮಲಾಕ್ಷಿಯೆ, ತಾನೊಬ್ಬನೇ ಕೈಲಾಸಕ್ಕೆ ಹೋಗುತ್ತಿರುವ ಈ ಓಹಿಲಾರ್ಯನು ಅಷೊಂದು ಸ್ತೋತ್ರಕ್ಕೆ ಪಾತ್ರನೆ?||೬೨|| ಎಂದು ಪತಿಯಾದ ಪಾಲಗೂರ್ಜರನು ಆ ಓಹಿಲಾರ್ಯನನ್ನು ನಿರಾಕರಿಸಿ ಮಾತನಾಡಲು, ಪತ್ನಿಯು ಅದನ್ನು ಕೇಳಿ ಸೈರಿಸಲಾರದೆ ಹೀಗೆ ನುಡಿದಳು:—"ಪ್ರಭುವೆ! ನೀನು ಕೆಟ್ಟಕಾಮಿಯು, ಆತನು ಕಾಮರಹಿತನು. ನೀನು ದೊರೆಯು, ಈತನು ಶಿವಯೋಗಿಯು ||೬೩|| ನೀನು ಜೂಜಿನಲ್ಲಾಸಕ್ತನು, ಆತನು ಶಿವಪೂಜಾಸಕ್ತನು. ನೀನು ಸಂಸಾರದಲ್ಲಿ ಅನುರಕ್ತನು, ಅವನಾದರೊ ಸಂಸಾರದಲ್ಲಿ ಆಸಕ್ತಿಯಿಲ್ಲದವನು ||೬೪|| ನೀನು ಮರ್ತ್ಯಲೋಕದಲ್ಲಿ ಸಂಚರಿಸತಕ್ಕವನು, ಅವನಾದರೊ ದೇವಲೋಕದಲ್ಲಿ ಸಂಚರಿಸತಕ್ಕವನು. ದೊರೆಯೆ, ನಿನಗೆ ಅವನಲ್ಲಿ ಪ್ರೇಮವಿದ್ದರೆ ಅವನನ್ನು ಹೊಗಳು, ಇಲ್ಲದಿದ್ದರೆ ಸುಮ್ಮನಿರು ||೬೬|| ಸದ್ಭಕ್ತನಾಗಿಯೂ, ಗಣಶ್ರೇಷ್ಠನಾಗಿಯೂ ಇರುವ ಓಹಿಲಾರ್ಯನನ್ನು ತುಚ್ಛವಾಗಿ ಮಾತನಾಡಬೇಡ," ಹೀಗೆ ಹೇಳಿದ ಪತ್ನಿಯನ್ನು ಕುರಿತು ದೊರೆಯು ನುಡಿದನೇನೆಂದರೆ—||೬೭|| "ಕಾಮರಹಿತರಾದವ

ಕಥಂಪ್ರಾಪ್ತುಂ ಶಕ್ಯಂ ನಿಷ್ಕಾಮಿಭಿಶ್ಶಿವಂ । ಕಾಮೀತಿನಂಬ್ಯಣಂಹಿತ್ವಾ
ನಿಷ್ಕಾಮಾನ್ಕಿಂಗತಶ್ಶಿವಃ ॥೧೮॥ ಭೂಮ್ಯರ್ಥರಹಿತೋ ಭಕ್ತಪರಿಚ
ರ್ಯಾಪರಃಕಥಂ । ಮಹೀನಾಥಾ ಇತಿಕರಿಕಾಲಚೋಳಂ ಮಹೋನ್ನತಂ
॥೧೯॥ ರಾಜೇಂದ್ರಚೋಳಮುತ್ತುಂಗಚೋಳಂ ಭವ್ಯಪರಾಕ್ರಮಂ । ಸ
ಮುದ್ಯದ್ವೈಭವಕರಯೂರಚೋಳಂ ಸರಾಧಿಪಂ ॥೨೦॥ ನೃಪಂ ಶ್ರೀವೀರ
ಚೋಳಾಖ್ಯಂ ಶಿವಸದ್ಭಕ್ತಿವಿಶ್ರುತಂ। ವರವಿಕ್ರಮಚೋಳಾಖ್ಯಂ ಮುಕ್ತ್ವಾ
ಪರಮನಿರ್ಧನೈಃ ॥೨೧॥ ಯುಕ್ತವಾನ್ಕಿಂಮಹಾದೇವಃ ಕ್ಷಿತೌಸ್ವತನುವಂ
ಚಕೈಃ । ಭಕ್ತಿಮಾರ್ಗಸ್ಯರಾಜಾನೋ ಬಾಹ್ಯಾಃಕಿಂಕಮಲಾನನೇ ॥೨೨॥ ವಿ
ನೋದಾರ್ಥಂಮಹೇಶಾಯ ಸ್ಯಾಚ್ಚೇದರ್ಪಯಿತುಂಕ್ಷಮಃ । ಕಿಮನಿಂದ್ಯಂ
ಭವೇದ್ದ್ಯೂತಂ ಶಿವಸ್ತುಷ್ಟೋ ನತೇನಕಿಂ॥೨೩॥ ಸದ್ಭಕ್ತೋಮೂರ್ಖನಯಿ
ನಾರ್ಯಾಖ್ಯೋಽನ್ಯೇಷಾಂಚ ಕರ್ಮಣಾಂ । ಅಜ್ಞಾತತ್ವಾತ್ಸ್ವಯಂದ್ಯೂತಾ
ದಾಹೃತಾರ್ಥೇನಸಂತತಂ ॥೨೪॥ ಜಂಗಮಾರಾಧನಂಕುರ್ವನ್ನವರ್ತತಮು

---

ರು ಇಚ್ಛೆಯನ್ನು ಹೊಂದಿ ಶಿವನನ್ನು ಪಡೆಯುವುದಕ್ಕೆ ಹೇಗಾದೀತು ? ಪರಶಿವನು
ಸೌಂದರನಂಬ್ಯಣ್ಣನನ್ನು ಕಾಮಿಯೆಂಬುದಾಗಿ ಪರಿತ್ಯಜಿಸಿ, ನಿಷ್ಕಾಮಿಗಳಾದ ಜನರ
ನ್ನು ಅನುಸರಿಸಿಕೊಂಡು ಹೋದನೆ?॥೧೮॥ ಭೂಮಿಯಲ್ಲಿ ಪ್ರಯೋಜನಾಪೇಕ್ಷೆಯಿಲ್ಲ
ದವನು ಭಕ್ತರ ಸೇವೆಯನ್ನು ಹೇಗೆ ಮಾಡಿಕೊಂಡಿರುವನು ? ಭೂಮಿಯಲ್ಲಿ ಶಿವ
ನು, ದೊಡ್ಡವನಾದ ಕರಿಕಾಲಚೋಳನನ್ನೂ, ರಾಜೇಂದ್ರಚೋಳನನ್ನೂ, ಪರಾ
ಕ್ರಮಶಾಲಿಯಾದ ಉತ್ತುಂಗಚೋಳನನ್ನೂ ಅತಿಶಯವೈಭವಸಂಪನ್ನನಾದ ಕರ
ಯೂರಚೋಳನನ್ನೂ ॥೨೦॥ ಶಿವಭಕ್ತ್ಯಾಚರಣೆಯಿಂದ ಪ್ರಸಿದ್ಧನಾದ ವೀರ
ಚೋಳನನ್ನೂ, ವಿಕ್ರಮಚೋಳನನ್ನೂ ಸಹ, ರಾಜರೆಂಬುದಾಗಿ ಬಿಟ್ಟು, ತಮ್ಮ
ದೇಹವನ್ನೇ ತಾವು ವಂಚಿಸತಕ್ಕ ಬಡವರೊಡನೆ ಕೂಡಿಕೊಂಡನೆ? ಎಲೆ ಕಮಲ
ಮುಖಿಯೆ, ದೊರೆಗಳು ಭಕ್ತಿಮಾರ್ಗಕ್ಕೆ ಹೊರಗಾದವರೇನು ? ॥೨೨॥ ಪ್ರತಿ
ಯೊಂದು ಆನಂದವನ್ನೂ ಪರಶಿವನಿಗೆ ಸಮರ್ಪಿಸಲು ಸಮರ್ಥನಾದವನು ವಿನೋ
ದಾರ್ಥವಾಗಿ ಜೂಜನ್ನಾಡಿದರೆ, ಅದು ದೂಷ್ಯವಾದೀತೆ ? ಅದರಿಂದ ಪರಶಿವನು
ಸಂತೋಷಪಡುವುದಿಲ್ಲವೆ ? ॥೨೩॥ ಮೂರ್ಖನಯಿನಾರಿಯೆಂಬ ಭಕ್ತೋತ್ತಮನು
ಮತ್ತಾವ ಉದ್ಯೋಗವನ್ನೂ ಮಾಡುವುದಕ್ಕೆ ತಿಳಿಯದಿದ್ದುದರಿಂದ, ಯಾವಾಗಲೂ
ಜೂಜನ್ನಾಡಿ ಸಂಪಾದಿಸತಂದ ಹಣದಿಂದ ॥೨೪॥ ಜಂಗಮಾರ್ಚನೆಯನ್ನು ಮಾಡಿ
ಕೊಂಡು ಸಂತೋಷದಿಂದಿರುತಿದ್ದನು. ಬಳಿಕ, ಪರಶಿವನು ಆತನೊಡನೆ ಜೂಜಾಡ

ದಾತತಃ । ಶಿವಸ್ತೇನಸಹದ್ಯೂತಂ ಕರ್ತುಂಪ್ರಚಕ್ರಮೇನ್ನರರೂಪತಃ ॥೭೫॥ ಆಗ ತ್ಯನಿರ್ಜಿತೋಬದ್ಧಸ್ತೇನೋಷ್ಣೀಷೇಣಪಾದಯೋಃ । ಪರಿತ್ಯಜತಿನಾತ್ಮಾನ ಮಿತಿಮತ್ವಾಮಹೇಶ್ವರಃ ॥೭೬॥ ಸ್ವಾಂಬರಾಂತಸ್ಥಿತಂಕಿಂಚಿಚ್ಛಿವಸೂತ್ರ ಮದರ್ಶಯತ್ । ದೃಷ್ಟ್ವಾಶಿವಶಿವೇದಾನೀಂ ಮಹತ್ಪಾಪಂಸಮಾಗತಂ ॥೭೭॥ ಉಷ್ಣೀಷೇಣಮಯಾಬಂಧಿ ಭಕ್ತೋsತೋ ಮಮಮಸ್ತಕಂ । ಹರ್ತವ್ಯಮಿ ತಿಮೂರ್ಧಾನಂ ಛೇತ್ತುಕಾಮಸ್ತದಾಭವತ್॥೭೮॥ಅಥೇಶೋವರದೋ ಭೂ ತ್ವಾಯದ್ಯತ್ತ್ವದಭಿಕಾಂಕ್ಷಿತಂ।ತತ್ತದ್ವರಯದಾಸ್ಮ್ಯಮಿತ್ಯಾಹತೇನಾಪ್ಯನಂ ತರಂ ॥೭೯॥ ದ್ಯೂತಾತ್ಪರಾಜಿತಧನಂ ದೇಹ್ಯಲಂಮೇತದೇವಹಿ । ತತ್ತುಜಂ ಗಮಲಿಂಗಾನಾಂ ಧನಂನೋಪೇಕ್ಷಿತುಂಮತಂ ॥೮೦॥ ಇತ್ಯುಕ್ತೇsನಂತರಂ ಶಂಭು ರ್ದತ್ವಾ ತತ್ಸಕಲಂಧನಂ । ಧನೇನತೇನವಿಧಿವತ್ಸಮಾರಾಧಿತಜಂಗ ಮಂ ॥೮೧॥ ಅನಯತ್ಕೈಲಪಯಾಮೂರ್ಖನಯನಾರಿಂಭಕ್ತಪುಂಗವಂ । ಕೈಲಾಸಶಿಖರಂ ಕಿಂವಾದ್ಯೂತವ್ಯಸನವಾನಿತಿ ॥೮೨॥ ತಂವಿಮುಚ್ಯಗತೋ

---

ಬೇಕೆಂದು ಯೋಚಿಸಿ, ವೇಷಾಂತರದಿಂದ ॥೭೫॥ ಬಂದು, ಜೂಜಾಡಿ, ಆತನಿಗೆ ಸೋತು, ಜೂಜುಕಟ್ಟಿದ್ದ ಹಣವನ್ನು ಕೊಡದೆಹೋಗಲು, ತಲೆಯುಪಾಗಿನಿಂದ ಆತ ನು ಕಾಲ್ಗಳನ್ನು ಕಟ್ಟಿಹಾಕಲಾಗಿ, ಇನ್ನು ತನ್ನನ್ನು ಆತನು ಬಿಡುವುದಿಲ್ಲವೆಂಬುದನ್ನು ಪರಶಿವನು ತಿಳಿದುಕೊಂಡು ॥೭೬॥ ಬಟ್ಟೆಯಲ್ಲಿ ಮರೆಯಾಗಿದ್ದ ಲಿಂಗಸೂತ್ರವನ್ನು ಕಾಣಿಸಿದನು. ಭಕ್ತನು ಅದನ್ನು ಕಂಡು, "ಶಿವಶಿವಾ! ಈಗ ಮಹಾಪಾಪವು ಸಂ ಘಟಿಸಿತು! ಈ ಶಿವಭಕ್ತನನ್ನು ನಾನು ಪಾಗಿನಿಂದ ಕಟ್ಟಿಹಾಕಿದೆನಲ್ಲಾ! ಈ ತಪ್ಪಿ ತಕ್ಕಾಗಿ ನನ್ನತಲೆಯನ್ನೇ ಕಡಿದುಕೊಳ್ಳಬೇಕು" ಎಂದು ನಿಶ್ಚೈಸಿ, ತಲೆಯನ್ನು ಕ ತ್ತರಿಸಿಕೊಳ್ಳಲು ಉಜ್ಜುಗಿಸಿದನು ॥೭೮॥ ಬಳಿಕ ಶಿವನು ಪ್ರಸನ್ನನಾಗಿ, ಭಕ್ತನೇ! ನಿನ್ನ ಇಷ್ಟಾರ್ಥವನ್ನು ಕೊಡುವೆನು, ಏನುಬೇಕೋ ಕೇಳು, ಎಂದು ನುಡಿಯಲು, ಅನಂತರ ಆ ಭಕ್ತನು ॥೭೯॥ 'ನೀನು ಸೋತು ಕೊಡಬೇಕಾಗಿರುವ ಜೂಜಿನ ಹಣ ವನ್ನು ಕೊಡು, ಅದೇ ನನಗೆ ಸಾಕು. ಅದು ಜಂಗಮರ ದ್ರವ್ಯವು, ಅದನ್ನು ಅಲ ಕ್ಷೀಕರಿಸಿ ಬಿಡುವುದು ಸರಿಯಲ್ಲ' ॥೮೦॥ ಎಂದು ಹೇಳಲಾಗಿ, ಶಿವನು ಆ ಹಣವ ನ್ನೆಲ್ಲ ಆತನಿಗೆ ಕೊಟ್ಟು, ಆ ಹಣದಿಂದ ವಿಧಿಪೂರ್ವಕವಾಗಿ ಜಂಗಮಾರಾಧನೆಯನ್ನು ಮಾಡಿದ, ಭಕ್ತಶ್ರೇಷ್ಠನಾದ, ಮೂರ್ಖನಯನಾರಿಯನ್ನು ಪರಶಿವನು ಕೈಲಾಸಕ್ಕೆ ಕರೆದುಕೊಂಡುಹೋದನು. ಸರ್ವಜ್ಞನಾದ ಪರಶಿವನು ಆತನನ್ನು ಜೂಜಾಳಿಯೆಂದು ತಿಳಿದು, ಬಿಟ್ಟುಹೋದನೆ? ॥೮೨॥ ಧರ್ಮರಾಯನೇ ಮೊದಲಾದವರು ಜೂಜನ್ನಾಡಿ

ರ್ಭರ್ಗಶ್ಶಂಕರೋಽಭೂತಭಾವನಃ । ದ್ಯೂತಂಕೃತ್ವಾವ್ಯಸನತೋ ಧರ್ಮಜ
ಪ್ರಮುಖಾಹತಾಃ ॥೮೩॥ ಭಕ್ತ್ಯರ್ಥಂ ಕೃತವಾನ್ಮೂರ್ಖ ನಯಿನಾ
ರಗಾಙ್ಘ್ರಿವಂ । ವಿರಕ್ತಿರಪಿಸಂಸಾರಾನುರಕ್ತಿಶ್ಚ ಮಹೀತಲೇ ॥೮೪॥ ಪ್ರತಿ
ಭಾತ್ಯೇಕರೂಪೇವ ವಿಹಿತಾಸತತಂಜನೈಃ । ಶಿವಾನರ್ಪಿತಸೌಖ್ಯಸ್ಯ ಪರಿ
ತ್ಯಾಗೋಽವಿರಾಗಿತಾ ॥೮೫॥ ಶಿವಾರ್ಪಿತಪ್ರಸಾದಾನ್ಯ ಪದಾರ್ಥೇಷ್ವನುರಾಗಿತಾ
ಸಂಸಾರರಕ್ತಿಃಕಥಿತಾದ್ವೇ ಇಮೇಽಸಂಗತೇ ಇವ॥೮೬॥ತಿಷ್ಠತಸ್ಸಂಗತೇನಸ್ತಃ
ಪಾನೀಯಾಬ್ಜದಳೇ ಇವ । ದೃಷ್ಟೇಃಪರೇಷಾಂ ಸಂಸಾರಾನುರಕ್ತ ಇವತಿ
ಷ್ಠತಿ॥೮೭॥ನಸಂಸಾರಾನುವಿದ್ಧಸ್ಸ್ಯಾಚ್ಛಂಕರೈಕಾಗ್ರಮಾನಸಃ । ಆಲೋಕಿ
ತೇಽಲೋಕಭೇದೇ ಭಕ್ತಲೋಕೋಽನಿರಂತರಂ॥೮೮॥ ಭವೇದ್ದ್ವಿಗತಲೋಕೋ
ಽಯಂ ಹರಸಂಯೋಗಶಾಲಿನಾಂ । ನರಲೋಕೋ ಮಹಾದೇವಲೋಕ
ಇತ್ಯಸ್ತಿಕಿಂಭಿದಾ ॥೮೯॥ ಭಕ್ತಿಮರ್ಮನಜಾನಾಸಿ ಬಾಲೇತ್ವಂ ಕಿಂಪ್ರಜಲ್ಪ
ನೈಃ। ಇತ್ಯುಕ್ತಾಪ್ರತ್ಯುವಾಚೈನಂ ಸಾಕ್ಷೇಪಂಕಮಲೇಕ್ಷಣಾ ॥೯೦॥ ಅಹ

---

ಕೆಟ್ಟುಹೋದರು ॥೮೩॥ ಭಕ್ತಿವ್ರತವನ್ನಾಚರಿಸುವುದಕ್ಕಾಗಿ ಜೂಜಾಡಿದ ಮೂ
ರ್ಖನಯಿನಾರಿಯು ಶಿವನಡಿಯನ್ನೈದಿದನು. ಭೂಮಿಯಲ್ಲಿ ಯಾವಾಗಲೂ ಸಂ
ಸಾರದಲ್ಲಿನ ಅನುರಾಗವೂ ವೈರಾಗ್ಯವೂ ಸಹ ಒಂದೇರೂಪವುಳ್ಳದರೋಪಾದಿಯ
ಲ್ಲಿಯೇ ಜನರಿಂದ ಆಚರಿಸಲ್ಪಡುತಿರುವಂತೆ ತೋರುವುದು. ಶಿವನಿಗೆ ಸಮರ್ಪಿಸದೆ
ಇರುವ ಸೌಖ್ಯದ ಅನುಭವವನ್ನು ಪರಿತ್ಯಜಿಸುವುದೇ ವೈರಾಗ್ಯವು ॥೮೫॥ ಶಿವನಿಗೆ
ಸಮರ್ಪಿಸಿದ ಪದಾರ್ಥಗಳ ಹೊರತು ಇತರ ಪದಾರ್ಥಗಳಲ್ಲಿ ಅನುರಾಗವನ್ನು
ಹೊಂದಿರುವುದೇ ಸಂಸಾರದ ಅನುರಾಗವು ಎಂದು ಹೇಳಲ್ಪಟ್ಟಿರುವುದು. ಇವೆರಡೂ
ಒಟ್ಟಿಗೆ ಕೂಡಿಕೊಂಡಿರುವಂತೆ ತೋರುತ್ತಿರುವುವು. ಆದರೆ ನೀರು ತಾವರೆಯೆಲೆಗಳು
ಒಟ್ಟಿಗೆಯಿದ್ದರೂ ಅವು ಹೇಗೆ ಒಂದಕ್ಕೊಂದು ಅಂಟದೆಯಿರುವುವೋ ಹಾಗೆ ಶಿವೈಕಾ
ಯತ್ತಮನಸ್ಕನಾದ ಭಕ್ತನು ಪರರಕಣ್ಣಿಗೆ ಸಂಸಾರರಕ್ತನಂತೆ ತೋರುತ್ತಿರು
ವನಾದರೂ ॥೮೭॥ ಅವನು ಸಂಸಾರದಲ್ಲಿ ತಗಲಿಕೊಂಡವನಲ್ಲ. ಈ ಲೋಕ ಆ
ಲೋಕವೆಂಬ ಭೇದವು ಇತರರಿಗೆ ಕಾಣುತ್ತಿದ್ದರೂ, ಈ ಭಕ್ತಜನರಿಗೆ ಆ ಲೋಕ
ಈ ಲೋಕವೆಂಬ ಭೇದವೇ ಇರುವುದಿಲ್ಲ. ಶಿವಯೋಗಸಂಪನ್ನರಾದವರುಗಳಿಗೆ
ಇದು ಮಾನವಲೋಕ ಇದು ಶಿವಲೋಕವೆಂಬ ಭೇದವು ಇರುವುದುಂಟೆ? ॥೮೯॥
ಎಲೆ ಮುಗ್ಧೆಯೆ, ನೀನು ಭಕ್ತಿಯ ರಹಸ್ಯವನ್ನು ಕಾಣೆ, ಮಾತನಾಡುವುದರಿಂದ
ಫಲವೇನು?" ಎಂದು ದೊರೆಯು ನುಡಿಯಲು, ಕಮಲಾಕ್ಷಿಯಾದ ರಾಜಪತ್ನಿಯು
ಆಕ್ಷೇಪಿಸಿ ನುಡಿದಳೇನೆಂದರೆ—॥೯೦॥ "ನಾನು ಭಕ್ತಿಯನ್ನು ಕಾಣೆ, ನೀನುಮಾ

ನಜಾನೇಸದ್ಭಕ್ತಿಂತ್ವಂ ಜಾನಾಸಿವಿಶೇಷತಃ । ಏತಾದೃಶಸ್ತ್ವಂ ಸದ್ಭಕ್ತೋ ಧಿ
ಕ್ಕೃತ್ಯಾಹಿಲಮೀದೃಶಂ ॥೯೧॥ ಕಥಂಗಚ್ಛಸಿಗೌರೀಶ ಪುರೀಂಸ್ವೇಯಪ್ರಭಾ
ವತಃ । ವದಕೇನಪ್ರಕಾರೇಣ ಕತಿಭಿಸ್ಸಹಿತೋಜನೈಃ ॥೯೨॥ ಕದಾಗಚ್ಛಸಿ
ಭೂಮೀಶೇ ತ್ಯುಕ್ತಃಪ್ರಾಹಮಹೀಪತಿಃ । ಇತ್ಥಮದ್ಯೈವಸಹಿತ ಸ್ಸರ್ವೈ
ರ್ಗಚ್ಛಾಮಿಕಿಂಗಿರಾ ॥೯೩॥ ಕಾಲೇನಭೂಯಸಾಮಾಕಿಂ ಸಾಕ್ಷೇಪಮುದಿತೇ
ತ್ವಯಾ । ಕರ್ತುಂವಿಲಂಬಮುಚಿತಂ ಕಿಮುಪಂಕಜಲೋಚನೇ ॥೯೪॥ ದೃ
ಷ್ಟ್ವೈವಭಜಸಂತೋಷ ಮಿತ್ಯುಕ್ತ್ವಾವಸುಧಾಧಿಪಃ । ಪ್ರತಿಹಾರಿಣಮಾಹೂ
ಯ ಕಲಧೌತಗಿರಿಂಪ್ರತಿ ॥೯೫॥ ಸಮಾಗಚ್ಛತಸನ್ನದ್ಧಾ ಸ್ಸರ್ವೇಗಂತುಂ ಸಮು
ತ್ಸುಕಾಃ । ಇತ್ಯುದ್ಘೋಷಯಿತುಂತಸ್ಮೈ ಸಮಾದಿಶ್ಯಸ್ವರಾಷ್ಟ್ರಜಾನ್ ॥೯೬॥
ಸರ್ವಾನಾಕಾರಯಿತ್ವಾಥ ಸ್ವಯಂಭೂಷಿತವಿಗ್ರಹಃ । ತುರಂಗೋತ್ತಮಮಾ
ರುಹ್ಯ ಸಮಹಾಸಂಭ್ರಮಾನ್ವಿತಃ ॥೯೭॥ ಬಾಂಧವಾತ್ಮಜಕಾಂತಾದಿ ಸುಹೃ
ತ್ಪರಿಜನಾವೃತಃ । ತತ್ರತತ್ರೋಜ್ಜ್ವಲದ್ಭಕ್ತ ಸಂಘೋಜಯಜಯಧ್ವನೌ ॥೯೮॥
ಭಿನ್ನೇಷ್ವನ್ಯೋನ್ಯಮುತ್ತುಂಗ ಧ್ವಜಛತ್ರೇಷುಸರ್ವತಃ । ಸಂಗೀತೇಮಂಗಳ

---

ತ್ರ ಬಹಳ ತಿಳಿದಿರುವೆ! ಭಕ್ತಿಯ ಮರ್ಮವನ್ನು ತಿಳಿದು ಓಹಿಲಾರ್ಯನನ್ನು ತಿರಸ್ಕರಿ
ಸಿದ ಭಕ್ತೋತ್ತಮನಾದ ಇಂಥ ನೀನು, ನಿನ್ನ ಪ್ರಭಾವದಿಂದ ಅದು ಹೇಗೆ ಕೈಲಾ
ಸಕ್ಕೆ ಹೋಗುವೆ? ಹೇಳು ; ದೊರೆಯೆ, ಎಷ್ಟು ಜನರೊಡನೆ ಯಾವರೀತಿಯಿಂದ
ಯಾವಾಗ ಹೋಗುತ್ತೀಯೆ ?" ॥೯೨॥ ಎಂದು ಕೇಳಲು, ರಾಜನು—" ಇದೋ
ಈಗಲೇ ಎಲ್ಲರೊಡನೆಯೂ ಕೂಡಿಹೋಗುತ್ತೇನೆ, ಮಾತಿನಿಂದ ಪ್ರಯೋಜನ
ವೇನು? ಹೆಚ್ಚು ಕಾಲವನ್ನು ಕಳೆಯುವುದರಿಂದೇನು ? ನೀನು ಆಕ್ಷೇಪಿಸಿ ಮಾತನಾ
ಡಿದ ಬಳಿಕ, ಇನ್ನು ಕಾಲವಿಳಂಬ ಮಾಡುವುದು ಯುಕ್ತವೆ? ॥೯೪॥ ನೀನು ನೋ
ಡಿಯೇ ಸಂತೋಷಪಡು" ಎಂದು ಹೇಳಿ, ದೊರೆಯು ದ್ವಾರಪಾಲಕನನ್ನು ಕರೆದು,
"ಕೈಲಾಸಕ್ಕೆ ಹೋಗಲಪೇಕ್ಷೆಯುಳ್ಳವರೆಲ್ಲರೂ ಸನ್ನದ್ಧರಾಗಿ ಬನ್ನಿರಿ" ಎಂದು
ಗಟ್ಟಿಯಾಗಿ ಸಾರುವುದಕ್ಕೆ ಅವನಿಗೆ ಆಜ್ಞಾಪಿಸಿ, ತನ್ನ ದೇಶದಲ್ಲಿ ಹುಟ್ಟಿದವರೆಲ್ಲ
ರನ್ನೂ ಬರಮಾಡಿಸಿ, ಬಳಿಕ ತಾನೂ ಅಲಂಕರಿಸಿಕೊಂಡು, ಬಲು ಸಡಗರದೊಡನೆ
ಕೂಡಿ, ಶ್ರೇಷ್ಠವಾದ ಕುದುರೆಯನ್ನು ಹತ್ತಿಕೊಂಡು, ॥೯೭॥ ನಂಟರು ಮಕ್ಕಳು
ಹೆಂಡತಿ ಮಿತ್ರರು ಸೇವಕರು ಮೊದಲಾದವರಿಂದೆಲ್ಲ ಸುತ್ತುವರಿಯಲ್ಪಟ್ಟವನಾಗಿ,
ಅಲ್ಲಲ್ಲಿಗೆ ಭಕ್ತಜನರು ಜಯಜಯವೆಂದು ಉದ್ಘೋಷಿಸುತ್ತಿರಲಾಗಿ, ॥೯೮॥ ಉದ್ದ
ನಾದ ಧ್ವಜಗಳೂ ಕೊಡೆಗಳೂ ಎಲ್ಲಕಡೆಯೂ ಒಂದಕ್ಕೊಂದು ಸೇರಿ, ಮೇಲೆಮು
ಚಿಕೊಂಡಿರಲಾಗಿ, ಮಂಗಳಕರವಾಗಿಯೂ ಆನಂದಕರವಾಗಿಯೂ ಇರುವ ಗೀತ

ಕರೇ ಸಮುಜ್ಝುರ್ಭತಿಸುಖಪ್ರದೇ ॥೯೯॥ ಶಿವದುಂದುಭಿಸಂದೋಹೇ ಸಮಂತಾ ದ್ವಾದಿತೇಸತಿ । ಕ್ಷುಬ್ಧೇಂತರಿಕ್ಷೇಬಹುಳೇ ಪುಷ್ಪವರ್ಷೇಪತತ್ಯಥ ॥೧೦೦॥ ಮಹೋತ್ಸವಾಯ ನಿಕಟಗ್ರಾಮಗಾಮಿಾವಲೀಲಯಾ । ಉದ್ದೀಪಿತಮಹಿಮ್ನಾಭ್ರೇ ಸ್ತುವಂತೀಷುಸುರಾಳಿಷು ॥ ೧೦೧ ॥ ಭಕ್ತಾಜ್ಞಾಂಶಿರಸಾಧೃತ್ವಾ ತತ್ಕೃಪಾಮುಪಲಭ್ಯಚ । ಸ್ಫೀತಭಕ್ತಿಪ್ರಭಾಸ್ಫಾಯದ್ಯಶಸ್ಸ್ಫೂರ್ತಿವಿರಾಜಿತಃ ॥ ೧೦೨ ॥ ಅವಿನಿದ್ರಸ್ಫುರದ್ಭದ್ರಮುದ್ರಿತೋದ್ರಿಕ್ತವೃತ್ತಿನಾ । ಮಹಿಮ್ನಾಕಲಧೌತಾದ್ರಿಂ ಸತ್ವರಂಸಮವಾಪಸಃ ॥ ೧೦೩ ॥ ಕುಮಾರಪಾಲೋ ಪಪದಗೂರ್ಜರಃ ಪಾರ್ಥಿವೇಶ್ವರಃ ॥

ಇತ್ಯಸಂಖ್ಯಾತಮಹಾ......ಗುರುರಾಜಸ್ಸ್ವಕೃತೌ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪುರಾತನಪ್ರಕರಣೇ ಗುರುಭಕ್ತಾಂ ಡಾರ್ಯುಪಾಖ್ಯಾನ ಸಂಕೀರ್ತನೇ ಕುಮಾರಪಾಲಗೂ ರ್ಜರೇತಿಹಾಸ ಕಥನಂ ನಾಮ ದಶಮೋಽಧ್ಯಾಯಃ.

---

ವು ಆರೋಹಾವರೋಹಣಕ್ರಮವಾಗಿ ಹಾಡಲ್ಪಡುತ್ತಿರಲಾಗಿ, ॥೯೯॥ ಮಂಗಳಕರವಾದ ನಗಾರಿಗಳನ್ನು ಎಲ್ಲಕಡೆಯೂ ಬಾಜಿಸಲಾಗಿ, ಆಕಾಶವೆಲ್ಲ ಮೊಳಗುತ್ತಿರಲಾಗಿ, ಹೂವಿನಮಳೆಯು ವಿಶೇಷವಾಗಿ ಸುರಿಯಲಾಗಿ ॥೧೦೦॥ ಅಂತರಿಕ್ಷದಲ್ಲಿ ದೇವತಾಸ್ತೋಮವು ಸ್ತೋತ್ರಮಾಡುತ್ತಿರಲಾಗಿ, ॥೧೦೧॥ ಕುಮಾರಪಾಲಗೂರ್ಜರ ಮಹಾರಾಜನು ಪ್ರಜ್ವಲವಾದ ಮಹಿಮೆಯಿಂದ, ಶಿವಭಕ್ತರ ಆಜ್ಞೆಯನ್ನು ಪಡೆದು, ವಿಸ್ತಾರವಾದ ಶಿವಭಕ್ತಿಯ ತೇಜಸ್ಸಿನಿಂದ ಮಿರುಗುವ ಸತ್ಕೀರ್ತಿಯ ಪ್ರಸರಣದಿಂದ ಪ್ರಕಾಶಿಸುವವನಾಗಿ ॥೧೦೨॥ ಜಾಗರೂಕವಾಗಿ ಒಪ್ಪುತ್ತಿರುವ ಮಾಂಗಳ್ಯದಿಂದ ಕೂಡಿರುವ ಶ್ರೇಷ್ಠವಾದ ಭಕ್ತ್ಯಾಚರಣೆಯಿಂದ ಪ್ರಾಪ್ತವಾದ ಪ್ರಭಾವಾತಿಶಯದಿಂದ ಹೀಗೆ ಸಮಿಾಪದ ಒಂದು ಗ್ರಾಮದಲ್ಲಿ ನಡೆಯುವ ಉತ್ಸವಾರ್ಥವಾಗಿ ವಿಲಾಸದಿಂದ ಹೋಗುತ್ತಿರುವಸಂತೆ, ಕೈಲಾಸಪರ್ವತಕ್ಕೆ ಬೇಗನೆ ಹೋದನು ॥೧೦೩॥

ಎಂಬಿಲ್ಲಿಗೆ ಶ್ರೀಮತ್ಪಂಡಿತಾರಾಧ್ಯ ಚರಿತ್ರಕ್ಕೆ ಎಚ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡದ ಟಿಪ್ಪಣದಲ್ಲಿಪುರಾತನಪ್ರಕರಣದಲ್ಲಿ ಗುರುಭಕ್ತಾಂಡಾರಿಯ ಕಥೆಯೊಳಗೆಕುಮಾರ ಪಾಲಗೂರ್ಜರನ ಚರಿತ್ರವನ್ನು ವಿವರಿಸಿರುವ ೧೦ ನೇ ಅಧ್ಯಾಯವು ಮುಗಿದುದು.

# ಏಕಾದಶೋಽಧ್ಯಾಯಃ.

(ಗುರುಭಕ್ತಾಂಡಾರಿ ಕಥನಂ.)

ತಸ್ಮಾತ್ಕಾಂತಾಭಿರುದಿತೇ ಕ್ರಿಯಮಾಣೇಹಿತೇಭುವಿ| ಸ್ಯಾತ್ಕಿಂಹಾನಿರತಸ್ಸ್ರೀಭಿಃಪರಿಹಾಸೇಽಪಿಭಾಷಿತಾತ್ ||೧|| ಹಿತವಾಕ್ಯಾತ್ಪರಂಶ್ರೇಯೋ ಭವತ್ಯತ್ರನಸಂಶಯಃ | ಇತ್ಯುಕ್ತೇಽಕಾಂತಯಾವಹ್ನಾವಿವಸರ್ಪಿಃಪರಿಸ್ರುತಂ ||೨|| ಶಿವಸದ್ಭಕ್ತಿಮಾಹಾತ್ಮ್ಯೇ ಕಾಂತಾಯಾಶ್ಚಾತಿಕೌಶಲೇ | ತಥಾಕಲಾಪ್ರವೀಣತ್ವೇ ತದಾಸಮ್ಯಕ್‌ಶ್ರುತೇಸತಿ ||೩|| ದರ್ಶನಾದಪಿಸಲ್ಲಾಪ ಶ್ರವಣಾನ್ಮದನಾನಲಃ | ಸಹಸ್ರಗುಣತಾಮಾಪ ತಸ್ಯಭಕ್ತಸ್ಯತತ್‌ಕ್ಷಣಾತ್||೪||ತತೋನ್ಯತ್ಕರ್ತುಮುದ್ಯುಕ್ತೇ ತಸ್ಮಿಂಸ್ತದ್ಭಾವಮಂಗನಾ | ವಿದಿತ್ವಾಸಾಸಮುದ್ವೀಕ್ಷ್ಯ ಜಗಾದತಮಿಮಾಂಗಿರಂ ||೫|| ನದೃಶ್ಯತೇಕಿಂಚಿದಪಿ ಕಾಮಾಂಧಸ್ಯೇತಿಭಾಷಿತಂ | ಅಭೂದ್ದೃಷ್ಟಂಕಿಂಕರೋಮಿ ಕಿಂವಾಭಾವ್ಯಂಶಿವಾಜ್ಞಯಾ||೬||

---

## ೧೧ ನೆಯ ಅಧ್ಯಾಯವು.

(ಗುರುಭಕ್ತಾಂಡಾರಿಯ ಕಥೆ.)

"ಆದುದರಿಂದ ಭೂಮಿಯಲ್ಲಿ ಸ್ತ್ರೀಯರು ಹೇಳಿದ ಹಿತೋಕ್ತಿಯಂತೆ ಆಚರಿಸಿದರೆ ಹಾನಿಯುಂಟಾದೀತೆ? ಇದು ಕಾರಣದಿಂದ, ಸ್ತ್ರೀಯರು ಪರಿಹಾಸದಲ್ಲಿ ನುಡಿದ ಹಿತವಚದಿಂದಲಾದರೂ ಉತ್ತಮಶ್ರೇಯಸ್ಸುಂಟಾಗುವುದರಲ್ಲಿ ಸಂಶಯವಿಲ್ಲ" ಎಂದು ಪ್ರೌಢವತಿಯು ಹೇಳಲಾಗಿ, ಇದನ್ನೆಲ್ಲ ಕೇಳುವುದರಿಂದ ಆಕೆಯ ಶಿವಭಕ್ತಿ ಮಹತ್ತ್ವವೂ, ಅತ್ಯಂತ ಕೌಶಲ್ಯವೂ, ವಿದ್ವತ್ತೆಯೂ, ಗುರುಭಕ್ತಾಂಡಾರಿಗೆ ಗೋಚರಿಸಲಾಗಿ, ಆಕೆಯನ್ನು ನೋಡುತ್ತಿರುವುದರಿಂದಲೂ, ಅವಳ ಮಾತನ್ನು ಕೇಳುವುದರಿಂದಲೂ, ಬೆಂಕಿಗೆ ತುಪ್ಪವನ್ನು ಸುರಿದಂತೆ, ಆ ಗುರುಭಕ್ತಾಂಡಾರಿಯ ಕಾಮಾತುರವು ಮೊದಲಿಗಿಂತಲೂ ಸಾವಿರಪಾಲಿನಷ್ಟು ಹೆಚ್ಚಿತು ||೪|| ಕೂಡಲೇ ಅವನು ಅದರಿಂದ ಆಕೆಯಮೇಲೆ ಕಾಮಚೇಷ್ಟೆಗಳನಾಚರಿಸುವುದಕ್ಕೆ ಪ್ರಯತ್ನಿಸಲು, ಆ ರೀತಿಯನ್ನು ಪ್ರೌಢವತಿಯು ಅರಿತು, ಆತನನ್ನು ಕುರಿತು ಈ ಮಾತನ್ನು ಹೇಳಿದಳು:—||೫|| "ಕಾಮದಿಂದ ಕುರುಡನಾದವನಿಗೆ ಸ್ವಲ್ಪವೂ ಕಣ್ಣುಕಾಣುವುದಿಲ್ಲವೆಂಬ ನಾಣ್ಣುಡಿಯು ಪ್ರತ್ಯಕ್ಷವಾಯ್ತು. ನಾನೇನುಮಾಡಲಿ? ಶಿವನಪ್ಪಣೆಯಿಂದ ಏನೇನಾಗಬೇಕಾಗಿದೆಯೊ! ||೬|| ನಾನು ಎಷ್ಟುರೀತಿಯಿಂದ ಬೋಧಿಸಿದರೂ ಆ

ನಶೃಣೋಷಿತ್ವಮಜ್ಞಾನಾತ್ ಕಥಂಚಿದಪಿಮದ್ವಚಃ|ನಾಪರಾಧೋಮಮಾ ಸ್ತ್ಯತ್ರ ನಾನುಕ್ತ್ವಾಶಕ್ಯಮಾಸಿತುಂ ||೭|| ಜೀವಿತಂಗುರುಸದ್ಭಕ್ತಿರ್ಮಮ ಸತ್ಯಂತವಾಪಿಚ | ಧನಾಶಯಾತ್ವಮುಚಿತಂಗಂತುಂ ತ್ವಾಂಮಮವೋಹತಃ ||೮||ರೇಮೇತ್ವದ್ಗುರುರೇಕಸ್ಮಿನ್ ದಿನೇಸಹಮಯಾಪುರಾ|ನಾಗಂತವ್ಯಂತ್ವಯಾ ತಸ್ಮಾದಿತ್ಯಹಂಬಹುಧಾಬ್ರುವಂ ||೯|| ಇತ್ಯುಕ್ತವಾತ್ರಾದುದ್ವಿಗ್ನಸ್ಸಂ ಸ್ಪೃಷ್ಟ ಇವವಹ್ನಿನಾ | ಪತಿತ್ವಾಭೂತಲೇಮೂರ್ಛಾಂ ಗತಸ್ಸಂತಾಡಯನ್ಮು ಖಂ ||೧೦|| ರುರ್ದಶನೈಶ್ಶನೈರುಚ್ಚೈಶ್ಶೋಕ ಸಂಕ್ರಾಂತಮಾನಸಃ | ಹಾ ಗುರೋನಾಥಮತ್ಸ್ವಾಮಿನ್ ಹರಮೂರ್ತೇ ಹತೋಸ್ಮ್ಯಹಂ ||೧೧|| ಮಮ ಕಾಗತಿರಿತ್ಯುಚ್ಚೈರ್ನದನ್ ತಸ್ಯೈಪ್ರಣಮ್ಯಚ | ತ್ವಯ್ಯಂಬಾಹಿತದೃಕ್ಪಾತ ಮೂಢತ್ವಸ್ಯಾಸ್ಯಕಾಗತಿಃ ||೧೨|| ತವೋಪರ್ಯಂಬಸಂಪ್ರೀತಿ ಕರಣಂಪ್ರಸಹೇ ಕಥಂ | ಮಾತಸ್ತ್ವಾಂಪ್ರತಿಹಾಸೇನ ಕೃತಂದೋಷಂಕಥಂಸಹೇ ||೧೩|| ತ್ವ ಯಿಕೋಪನದೋಷಸ್ಯ ತರಣಿಃಕಾಮಮೋಚ್ಯತಾಂ | ಅತಿಪಾತೇನಜನನಿ

---

ಜ್ಞಾನದಿಂದ ನನ್ನಮಾತನ್ನು ನೀನು ಕೇಳುವುದಿಲ್ಲ; ಇನ್ನು ನನ್ನತಪ್ಪಿಲ್ಲ, ಇರುವ ಸಂಗತಿಯನ್ನು ಹೇಳದೆ ಯಿರುವುದಕ್ಕಾಗುವುದಿಲ್ಲ ||೭|| ಎಲೆ ದೊರೆಯೆ, ನನಗೂ ನಿನಗೂ ಕೂಡ ಗುರುಭಕ್ತಿಯೇ ಪ್ರಾಣವು. ಅದು ಸತ್ಯ, ನಾನು ಅಜ್ಞಾನದಿಂದ ಲೂ ದ್ರವ್ಯಾಪೇಕ್ಷೆಯ ಬುದ್ಧಿಯಿಂದಲೂ ನಿನ್ನನ್ನು ಕೂಡುವುದು ಯೋಗ್ಯವೆ? ||೮|| ಹಿಂದೆ ನಿನ್ನ ಗುರುವು ಒಂದುದಿವಸ ನನ್ನೊಡನೆ ಗಮಿಸಿಹೋಗಿರುವನು. ಅದುಕಾರಣವೇ ನೀನು ನನ್ನನ್ನು ಗಮಿಸಬಾರದೆಂದು ಎಷ್ಟೋಪ್ರಕಾರವಾಗಿ ನಾನು ಹೇಳಿದೆನು'' ||೯|| ಎಂಬುದಾಗಿ ಪ್ರೌಢವತಿಯು ಹೇಳಿದಮಾತ್ರದಿಂದಲೇ ರಾಜ ನು ಬೆಂಕಿ ಸೋಂಕಿದವನಂತೆ ಬೆದರಿ, ಮುಖದಮೇಲೆ ಕೈಗಳಿಂದ ಬಡಿದುಕೊಂಡು, ಭೂಮಿಯಮೇಲೆ ಬಿದ್ದು, ಮೂರ್ಛೆಯೊಂದಿದನು ||೧೦|| ಬಳಿಕ ಎಚ್ಚತ್ತು, ಮೆಲ್ಲ ಮೆಲ್ಲನೆ ಅಳುತ್ತ, ದುಃಖದಿಂದಾವೃತವಾದ ಮನಸ್ಸುಳ್ಳವನಾಗಿ, ಹಾ ಗುರುನಾಥನೆ! ನನ್ನ ಸ್ವಾಮಿಯೆ! ಶಿವಸ್ವರೂಪನೆ! ನಾನು ಕೆಟ್ಟೆನು ||೧೧|| ನನಗೆ ಗತಿಯೇನು? ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತ, ಆ ಪ್ರೌಢವತಿಗೆ ನಮಸ್ಕರಿಸಿ, ತಾಯೆ! ನಿನ್ನ ಮೇಲೆ ಕಣ್ಣನ್ನುಹಾಕಿದ ಮೂಢನಾದ ನನಗೆ ಗತಿಯೇನು? ||೧೨|| ತಾಯೆ! ನಿನ್ನ ಮೇಲೆ ನಾನು ಮೋಹಗೊಂಡುದನ್ನು ಹೇಗೆ ಸೈರಿಸಲಿ! ತಾಯೆ! ನಿನ್ನನ್ನು ಕುರಿತು ನಕ್ಕು ನಾನು ಮಾಡಿದ ಪಾಪವನ್ನು ಹೇಗೆ ಸಹಿಸಲಿ? ||೧೩|| ನಿನ್ನಲ್ಲಿ ನಾನು ಕೋ ಪಿಸಿಕೊಂಡ ದೋಷವನ್ನು ಕಳೆದುಕೊಳ್ಳುವುದು ಹೇಗೆ? ಹೇಳು, ತಾಯೆ! ನಿನ್ನ ಮೇಲೆ ಮಿತಿಮೀರಿ ಕಠಿಣೋಕ್ತಿಗಳನ್ನಾಡಿದುದಕ್ಕಾಗಿ ನಾನು ಆಚರಿಸತಕ್ಕ ಪಂ

ನಿಷ್ಠುರೋಕ್ತಿಸ್ತ್ವಯೋಪರಿ||೧೪||ಕಿಂಕರ್ತವ್ಯಂಮಮಾಚಕ್ಷ್ವಕೋಹಿನಾಮಾ
ತ್ರನಿರ್ಣಯಃ|ತ್ವಯ್ಯಾಹಿತಸ್ಯಮನಸೋ ದುಶ್ಚರಿತ್ರಸ್ಯಕಾಗತಿಃ||೧೫||ಅಕಾಂ
ಡೇಽಶನಿಪಾತೋಽಭೂತ್ಕಿಂಮಯಾಘಂಕೃತಂಪುರಾ |ಮಯಾಪುರಾದ್ವೈತಬು
ದ್ಧ್ಯಾನಾರ್ಚಿತಃಕಿಂಮಹೇಶ್ವರಃ||೧೬||ಕಿಂಭೃತ್ಯೋಽಹಂಶಿವಸ್ಸ್ವಾಮೀತ್ಯೇವಂ
ನೋಭಾವಿತಂಮಯಾ | ಉಪಚಾರಾಷ್ಷೋಡಶೇತಿಭ್ರಾಂತ್ಯಾಬಹುಳಯಾ
ನ್ವಹಂ ||೧೭|| ನಕೃತಾಃಕಿಂಮಯಾಶಂಭೋರುಪಚಾರಾಶ್ಚ ರಾಜವತ್ |
ಆಶಾವಿಷ್ಟೋಮಹೇಶಾನ ಮಪೂಜಯಮಹಂಕಿಮು||೧೮|| ಆಲೋಚಿತಾನಿದು
ರ್ಬುದ್ಧ್ಯಾ ಪರಶಾಸ್ತ್ರಾಣಿಕಿಂಮಯಾ | ಭಕ್ತಾನವಸರಾಯಾತಾನ್ ಕಿಂಪ
ರಿಕ್ಷಿಪ್ತವಾನಹಂ ||೧೯|| ಜಂಗಮಾದೃಷ್ಟಮಾತ್ರೇಣ ಮಯಾಕಿಂನನಮ
ಸ್ಕೃತಾಃ | ಸಮುನ್ನತಾಸನಾಸೀನಶ್ಶಿವಲಾಂಛನಧಾರಿಣಾಂ ||೨೦|| ತಿರ
ಸ್ಕಾರಂಕಿಂಕೃತವಾನಹಂ ದುರ್ಜ್ಞಾನಸಂವೃತಃ|ತಾಸ್ತಾಃಕ್ರಿಯಾಸ್ಸಮುಚಿ
ತಾ ಜಂಗಮೇಸಮುಪಾಗತೇ ||೨೧|| ಕಿಮುನಾಕರವಂ ತೀವ್ರಗರ್ವೋಪಹ

---

ಹಾರೋಪಾಯವೇನು ? ಇದಕ್ಕೆ ಮಾಡಬೇಕಾದುದೇನು ? ಹೇಳು, ನಿನ್ನಮೇಲೆ ಮನಸ್ಸಿಟ್ಟ ಈ ದುರ್ವ್ಯಾಪಾರಿಗೆ ಗತಿಯೇನು ? ||೧೫|| ಅಕಸ್ಮಾತ್ತಾಗಿ ಸಿಡಿಲು ಬಿದ್ದಂತಾಯಿತು. ಪೂರ್ವಜನ್ಮದಲ್ಲಿ ನಾನು ಯಾವ ಪಾಪವನ್ನಾಚರಿಸಿದ್ದೆನೋ ! ಪೂರ್ವಜನ್ಮದಲ್ಲಿ ನಾನು ಪರಶಿವನನ್ನು ಶಿವನೂ ನಾನೂ ಒಂದೇ ಎಂಬ ಬುದ್ಧಿಯಿಂದ ಪೂಜಿಸದೆ ಹೋದೆನೊ ? ||೧೬|| ನಾನು ಆಳು, ಶಿವನು ಒಡೆಯನೆಂದು ಭಾವಿಸದೇ ಹೋದೆನೋ ? ಉಪಚಾರಗಳು ಹದಿನಾರೇ ಎಂಬ ಅಧಿಕವಾದ ಭ್ರಾಂತಿಯಿಂದ ನಾನು ನಿರಂತರದಲ್ಲೂ ಶಿವನಿಗೆ ರಾಜೋಪಚಾರಗಳನ್ನು ಮಾಡದೆಹೋದೆನೋ ? ನಾನು ಫಲೇಚ್ಛೆಯಿಂದ ಕೂಡಿ ಶಿವಾರಾಧನೆಯನ್ನು ಮಾಡಿದೆನೋ ? ||೧೮|| ಕೆಟ್ಟಬುದ್ಧಿಯಿಂದ ನಾನು ಶಿವಶಾಸ್ತ್ರಗಳಲ್ಲದ ಅನ್ಯಶಾಸ್ತ್ರಗಳನ್ನು ವಿಚಾರ ಮಾಡಿದೆನೋ ? ಭೋಜನದ ಸಮಯಕ್ಕೆ ಬಂದ ಭಕ್ತರನ್ನು ಸತ್ಕರಿಸದೆ ನಾನು ತಿರಸ್ಕರಿಸಿದೆನೋ ? ||೧೯|| ಜಂಗಮರನ್ನು ನೋಡಿದಮಾತ್ರದಿಂದಲೇ ನಾನು ನಮಸ್ಕರಿಸದೆ ಹೋದೆನೋ ? ನಾನು ಅಜ್ಞಾನದಿಂದ ಕೂಡಿ, ಉನ್ನತಪೀಠದ ಮೇಲೆ ಕುಳಿತುಕೊಂಡು, ಶಿವಲಾಂಛನವನ್ನು ಧರಿಸಿದ ಭಕ್ತರುಗಳಿಗೆ ತಿರಸ್ಕಾರವನ್ನೇನಾದರೂ ಮಾಡಿದೆನೋ ? ಬಹುಗರ್ವದಿಂದ ಕೂಡಿದ ಮನಸ್ಸುಳ್ಳವನಾಗಿ, ಜಂಗಮರು ಮನೆಗೆ ಬಂದರೆ ಉಚಿತವಾದ ಸತ್ಕಾರಗಳನ್ನು ಮಾಡದೆ ಹೋದೆನೋ ? ಯಾವಾಗಲೂ ನಾನು ಭಕ್ತಿಯಿಂದ ಜಂಗಮರ ಪೂಜೆಯನ್ನು ಮಾಡಲಿ

ತಮಾನಸಃ । ಭಕ್ತ್ಯಾಸದಾಕಿಂನಕೃತಂ ಮಯಾಜಂಗಮಪೂಜನಂ ॥೨೨॥
ಉತಭೋಜನವೇಳಾಯಾ ಮಜ್ಞಾನಾವೃತಮಾನಸಃ । ಭಕ್ತೇಷ್ವಕರವಂ
ಪಙ್ತಿಭೇದಂಕಿಂದೀನವೃತ್ತಿತಃ ॥೨೩॥ ವಿಚಾರಿತಂವಾಮೋಹೇನ ಜಂಗಮಾ
ನಾಂಕುಲಂಮಯಾ । ಸಂಸೃಷ್ಟವಾನ್ಕಿಂಭವಿಭಿಃ ಕಿಮುಸಂಸ್ಕಾರಿಭಿಃಕೃತಂ ॥
ಭುಕ್ತವಾನನ್ನಮಥವಾಭವಿನೋನಾತ್ಯಜಂಕಿಮು ॥ ಕಿಂವಾಹಂನೀತವಾನ್ಭಂ
ಗಂಜಂಗಮಾನವಿಚಾರತಃ ॥೨೪॥ ಅಥವಾಜನಮನ್ತೇಷಾಂ ಹ್ರಿಯಂಗೋ
ಷ್ಠೀವಶಾದಹಂ ॥ ವಿದ್ಯಾಶಿವಗುರೂಣಾಂ ಕಿಂಕೃತವಾನ್ ಭೇದಮನ್ವಹಂ॥೨೬॥
ಗುರುಸೇವಾಮಕೃತವಾನ್ಕಿಂಭಕ್ತ್ಯಾನಸಯಾಭುವಿ । ಕಿಮುನಾರ್ಪಿತ
ವಾಂಶ್ಚಿತ್ತಂಗುರೌತತ್ಪಾದಪದ್ಮಯೋಃ॥೨೭॥ ಮಸ್ತಕಂಕಿಂನಘಟಿತಂಮಯಾನಿ
ಶ್ಚಲಭಕ್ತಿತಃ।ಸನ್ಮಾನೋನಕೃತಃಕಿಂನುಮಯಾಗುರುಕುಲಾವಳೇಃ ॥೨೮॥
ಪೂರ್ವಕರ್ಮವಿಸ್ಮೃತವಾನಹಂಕಿಮತಿಮೋಹತಃ। ದುರ್ಲಂಘ್ಯಾಯಾಶ್ಶಿವಾ
ಜ್ಞಾಯಾಭೀತೋನಕಿಮುತೇಂದ್ರಿಯೈಃ ॥೨೯॥ ಅಸ್ಪರ್ಶಿಕಿಂಸಕೃದಪಿಮ
ಹೇಶಾನರ್ಪಿತಂಮಯಾ । ವ್ರತಾನ್ಯಹಂಪ್ರತಿಜ್ಞಾಶ್ಚ ಶಿಥಿಲೀಕೃತವಾನ್ಕಿಮು

---

ಲ್ಲವೋ ? ॥ ೨೨॥ ಅಥವಾ ಅಜ್ಞಾನದಿಂದ ಕೂಡಿದ ಮನಸುಳ್ಳವನಾಗಿ ಊಟ
ಮಾಡುವಾಗ ಕೃಪಣತನದಿಂದ ಭಕ್ತರಲ್ಲಿ ಪಙ್ತಿಭೇದವನ್ನೇನಾದರೂ ಮಾಡಿ
ದೆನೋ? ॥೨೩॥ ಅಥವಾ ನಾನು ಅಜ್ಞಾನದಿಂದ ಜಂಗಮರ ಕುಲವಿಚಾರವನ್ನು
ಮಾಡಿದೆನೋ? ಭವಿಗಳ ಸಂಸರ್ಗವನ್ನು ಹೊಂದಿದೆನೋ ? ದೀಕ್ಷಾಸಂಸ್ಕೃತರಲ್ಲದ
ವರು ಮಾಡಿದ ಅನ್ನವನ್ನು ಭುಂಜಿಸಿದೆನೊ? ಭವಿಗಳ ಸಂಗವನ್ನು ಬಿಡಲಿಲ್ಲವೊ!
ವಿಚಾರವಿಲ್ಲದೆ ನಾನು ಜಂಗಮರಿಗೆ ಭಂಗವನ್ನುಂಟುಮಾಡಿದೆನೊ? ॥೨೪॥ ಅಥವಾ
ಅವರಿಗೆ ಸಭೆಯಲ್ಲಿ ನಾಚಿಕೆಯನ್ನುಂಟುಮಾಡಿದೆನೋ? ವಿದ್ಯೆ, ಶಿವ ಗುರು:, ಇವರು
ಗಳೊಳಗೆ ಯಾವಾಗಲೂ ಭೇದಬುದ್ಧಿಯನ್ನು ಹೊಂದಿದೆನೋ? ॥೨೬॥ ಅಧಿಕವಾದ
ಭಕ್ತಿಯಿಂದ ಗುರುಸೇವೆಯನ್ನು ಮಾಡಲಿಲ್ಲವೋ ? ಗುರುವಿನಲ್ಲಿ ನನ್ನ ಮನಸ್ಸನ್ನು
ತೆತ್ತಿರಲಿಲ್ಲವೋ ? ॥೨೭॥ ಆ ಗುರುವಿನ ಪಾದಕಮಲಗಳಲ್ಲಿ ನನ್ನ ತಲೆಯನ್ನು
ಸ್ಥಿರವಾದ ಭಕ್ತಿಯಿಂದ ಕೂಡಿಸಿರಲಿಲ್ಲವೋ? ಗುರುವಂಶೀಯರಿಗೆ ನಾನು ಸನ್ಮಾ
ನವನ್ನು ಮಾಡಲಿಲ್ಲವೊ? ॥ ೨೮॥ ನಾನು ಅತ್ಯಂತಾಜ್ಞಾನದಿಂದ ಪೂರ್ವಜನ್ಮಕರ್ಮವಾ
ಸನೆಯನ್ನು ಮರೆಯಲಿಲ್ಲವೋ ? ಮೀರುವುದಕ್ಕಶಕ್ಯವಾದ ಶಿವಾಜ್ಞೆಗೆ ಹೆದರಿ ನಾನು
ನಡೆಯಲಿಲ್ಲವೊ? ಅಥವಾ ಶಿವನಿಗೆ ಸಮರ್ಪಿಸದೆ ಇರುವ ವಸ್ತುವನ್ನು ಒಂದು ಬಾರಿ
ಯಾದರೂ ನನ್ನ ಇಂದ್ರಿಯಗಳಿಂದ ಸೋಂಕಿದೆನೊ ? ಹಿಡಿದ ವ್ರತವನ್ನೂ ಮಾಡಿದ
ಪ್ರತಿಜ್ಞೆಯನ್ನೂ ನಾನು ನಡಿಸದೆ ಸಡಿಲಗೊಳಿಸಿಬಿಟ್ಟೆನೋ ? ॥೩೦॥ ಪ್ರಸಾದವನ್ನು

॥೩೦॥ ಪ್ರಸಾದಮುಲ್ಲಂಘಿತಮಾನವಶೇಷಿತವಾ೯ ಕಿಮು । ಅನ್ವಿಷ್ಟವಾನ್ಪ್ರಜಿನುಹಂಕಿಂಪ್ರಸಾದೇಮಹತ್ತರೇ ॥೩೧॥ ಪ್ರಸಾದಾದಪಿವಾನ್ಯತ್ಕಿಂದೈವತಂ ಸ್ಮೃತವಾನಹಂ।ಸಂಸಾರೇಚ್ಛಾಕೃತಾಕಿನ್ನುಕಿಮಸತ್ಯಂಮಯೋದಿತಂ ॥೩೨॥ ಭೀತೋಹಂಕಿಂದೂಷಕೇಭ್ಯಶ್ಶಿವನಿಂದಾಶ್ರುತಾಕಿಮು । ಅಪಶ್ಯಂವಾ ವ್ರತಭ್ರಷ್ಟಾ೯ ಪರನಾರೀನಿರೀಕ್ಷಣಾ ॥೩೩॥ ಕೃತವಾನಸ್ಮಿಕಿಂಮೋಹಾತ್ಕಲಹಃ ಕಿಂನೃಣಾಂಕೃತಃ।ಕಿಮುಹಿಂಸಾವಿರಚಿತಾಶಿವಭಕ್ತಾನ್ವ್ಯಥಾಸ್ವಯಂ ॥೩೪॥ ಛದ್ಮಕೃತ್ವಾತ್ಯಜಂಕಿಂವಾಕಿಂಜಡಃ ಕ್ರೋಧವಾನಹಂ । ಕಿಂಪಾಪಕರಾತ್ಮ ಸಮಯಾಪರಾಧೀಬಹುಜಲ್ಪಕಃ ॥೩೫॥ ಮದಾನ್ವಿತೋನೀತಿಮಾರ್ಗವಿಹೀನೋದುರ್ಜನಃಕಿಮು । ವೀರಮಾಹೇಶ್ವರಾನುಷ್ಠಿತಾಚಾರರಹಿತಃಕಿಮು॥ ಮಮೇಯಂಗುರುತಲ್ಪೇಚ್ಛಾ ಸಂಪ್ರಾಪ್ತೈವಂವಿಧಾಕಥಂ ।ಊಢಾಧೃತಾಚಕ್ರೀತಾಚಮೌಲ್ಯೇನಚಸಮಾವೃತಾ॥೩೭॥ ಸಕೃತ್ವಾಮುಗತಾವಾಪಿ ಪಂಚಧಾ ಗುರುಯೋಷಿತಃ।ಇತಿವಾಕ್ಯಾದ್ಗುರುಜ್ಯೇಷ್ಠಕನಿಷ್ಠಭ್ರಾತೃಯೋಷಿತೌ॥೩೮॥

---

ದಾಟಿದೆನೋ? ಅಥವಾ ಮುಗಿಸದೆ ಬಿಟ್ಟುಬಿಟ್ಟೆನೊ? ಶ್ರೇಷ್ಠವಾದ ಪ್ರಸಾದದಲ್ಲಿ ನಾನು ರುಚಿಯನ್ನ ಅರಸಿದೆನೊ? ॥೩೧॥ ಪ್ರಸಾದಕ್ಕಿಂತಲೂ ಬೇರೊಂದು ಶ್ರೇಷ್ಠವಾದ ದೈವವಿರುವುದೆಂದು ನಾನು ಸ್ಮರಿಸಿದೆನೋ? ಸಂಸಾರದಲ್ಲಿ ನಾನು ಅಪೇಕ್ಷೆಯನ್ನೇನಾದರೂ ಹೊಂದಿದೆನೋ ? ಸುಳ್ಳನ್ನು ನುಡಿದೆನೋ ? ॥೩೨॥ ಶಿವದೂಷಕರಿಗೆ ನಾನು ಹೆದರಿಕೊಂಡೆನೋ? ಶಿವನಿಂದೆಯನ್ನು ಕೇಳಿದೆನೋ ? ವ್ರತಭ್ರಷ್ಟರಾದವರನ್ನು ನೋಡಿದೆನೋ? ಪರಸ್ತ್ರೀಯರನ್ನು ಮೋಹದಿಂದ ನಿರೀಕ್ಷಿಸಿದೆನೋ?॥೩೩॥ ಮನುಷ್ಯರೊಡನೆ ಜಗಳವಾಡಿದೆನೊ? ಪ್ರಾಣಿಹಿಂಸೆಯನ್ನು ಮಾಡಿದೆನೋ? ವ್ಯರ್ಥವಾಗಿ ನಾನು ಕಪಟವನ್ನಾಶ್ರಯಿಸಿ ಶಿವಭಕ್ತರ ಸಂಗವನ್ನು ಬಿಟ್ಟುಬಿಟ್ಟೆನೋ? ನಾನು ಮೂಢನೂ ಕೋಪಿಯೂ ಆಗಿದ್ದೆನೋ? ಪಾಪಕೃತ್ಯವನ್ನಾಚರಿಸಿದೆನೋ ? ಮತದ್ರೋಹಿಯಾಗಿದ್ದೆನೊ? ಬಲು ಹರಟೆಗಾರನಾಗಿದ್ದೆನೊ? ॥೩೫॥ ಗರ್ವಿಯಾಗಿದ್ದೆನೊ? ನೀತಿಮಾರ್ಗವನ್ನು ತಪ್ಪಿದೆನೊ ? ದುಷ್ಟನಾಗಿದ್ದೆನೊ ? ವೀರಮಾಹೇಶ್ವರರು ಆಚರಿಸಬೇಕಾದ ಆಚರಣೆಯನ್ನು ಬಿಟ್ಟಿದ್ದೆನೊ ? ॥೩೬॥ ಗುರುಪತ್ನೀಗಮನದಲ್ಲಿ ನನಗೆ ಇಂಥ ಇಚ್ಛೆಯು ಹೇಗೆ ಉಂಟಾಯಿತು ? ಎಲೌ ತಾಯೆ ! ಗುರುವು ಮದುವೆಯಾದವಳು, ಗುರುವಿಟ್ಟುಕೊಂಡವಳು, ಗುರುವಿನಿಂದ ಬೆಲೆಗೆ ಕೊಂಡವಳು, ಗುರುವು ವರಿಸಿದವಳು, ಒಂದಾವೃತ್ತಿಯಾದರೂ, ಗುರುವಿನ ಸಂಗವನ್ನು ಮಾಡಿದವಳು, ಈ ೫ ತೆರದ ಹೆಂಗುಸರೂ ಗುರುಪತ್ನಿಯರೆನಿಸಿಕೊಳ್ಳುವರು, ಎಂಬ ವಾಕ್ಯದಿಂದಲೂ—ಗುರುವಿನ ಅಣ್ಣತಮ್ಮಂದಿರ ಹೆಂಡತಿಯರೂ ಗುರುವಿನ ದೇಹಾನುಬಂಧಿಗಳೂ ಗುರುವು ಇಟ್ಟು

ತದೀಯಾಸ್ತದ್ಧೃತಪರಿತ್ಯಕ್ತಾ ವಾರಾಂಗನಾಜನಃ। ತತ್ಪ್ರೇಮಪದಸಂಪನ್ನ
ಸ್ತ್ರೀಜನಸ್ತೈಸ್ಸಕೃದೇವ ವಾ ॥೩೯॥ ದತ್ವಾ ಧನಂ ಸಮಾಕ್ರಾಂತವಾರಕಾಂತಾ
ಜನೋಪಿ ಚ। ಸಕೃದ್ವಾ ಗುರುಸಂಸ್ಪೃಷ್ಟಾಃ ಕೀರ್ತಿತಾಶ್ಚೇತಿ ಷಡ್ವಿಧಾಃ ॥೪೦॥ ಮಾ
ತರ್ಮಹೀತಲೇ ನ್ಯೂನಂ ನ ಕಿಮೇತಾ ಗುರುಸ್ತ್ರಿಯಃ। ಸಹೇ ಕಥಮಿದಂ ಘೋ
ರಂ ಮಹಾಪಾತಕಮಾಗತಂ ॥೪೧॥ ಕಿಂ ಕರೋಮಿ ವದಾಂಬ ತ್ವಮಿತಿ ಶೋಕಸ
ಮಾವೃತಃ। ಕ್ಲಿಶ್ನಾತಿ ತಿಷ್ಠತಿ ಪತತ್ಯುತ್ತಿಷ್ಠತಿ ಪುನಃ ಪುನಃ ॥೪೨॥ ನಿರೀಕ್ಷತೇ
ಥ ಕಾಂತಾಯಾಃ ಪಾದಯೋಃ ಪತತಿ ಸ್ವಯಂ। ಗತ್ವಾ ಶಿರಸ್ತಾಡಯತಿ ಮರ್ದ
ಯತ್ಯುದರಂ ಸ್ವಕಂ ॥೪೩॥ ಲುಠತಿ ಧರಾಯಾಂ ರುದತಿ ತ್ಯಕ್ತುಂ ದೇಹಂ ಸಮೀ
ಕ್ಷತೇ। ಲಿಂಗಗರ್ಭಂ ಸಮುದ್ಯುಙ್ಕ್ತೇ ಪ್ರವೇಷ್ಟುಂ ತಾಂ ಚ ಪಶ್ಯತಿ ॥೪೪॥ ಛಿತ್ವಾ ದೇ
ಹಂ ಸ್ವಕಂ ಭೂಮೇರ್ಬಲಿಂ ದಾತುಂ ನಿರೀಕ್ಷತೇ। ಪ್ರಸ್ತರೋಲೂಖಲೇ ದೇಹಮವ
ಹತ್ಯ ನದೀಜಲೇ ॥೪೫॥ ಮೋಕ್ತುಂ ಪ್ರಾರಭತೇ ಛಿತ್ವಾ ಲೋಹಕಂದೌ ನಿಜಾಂ
ತನುಂ। ನಿಧಾಯ ದಗ್ಧುಮುದ್ಯುಙ್ಕ್ತೇ ಭಸ್ಮ ಕೃತ್ವಾ ಶರೀರಕಂ ॥೪೬॥ ಕ್ಷೇಪ್ತುಂ

---

ಕೊಂಡಿದ್ದು ಬಿಟ್ಟ ಸೂಳೆಯರೂ, ಆ ಗುರುವಿನ ಪ್ರೇಮಕ್ಕೆ ಆಶ್ರಯರಾಗಿದ್ದ ಸೂಳೆ
ಯರೂ, ಒಂದಾವೃತ್ತಿಯಾದರೂ ಹಣವನ್ನು ಕೊಟ್ಟು ಆ ಗುರುವು ಅನುಭವಿಸಿರುವ
ಸೂಳೆಯೂ, ಒಂದಾವೃತ್ತಿಯಾದರೂ ಆ ಗುರುವು ಮುಟ್ಟಿರುವ ಸ್ತ್ರೀಯರೂ, ಈ ಆರು
ತೆರದ ನಾರಿಯರು ಸಹ ಭೂಮಿಯಲ್ಲಿ ಗುರುಪತ್ನಿಯರೆನಿಸಿಕೊಳ್ಳುವುದಿಲ್ಲವೇ? ಈಗ
ನನಗೆ ಪ್ರಾಪ್ತವಾದ ಭೀಕರ ಪಾಪವನ್ನು ನಾನು ಹೇಗೆ ಸಹಿಸಲಿ? ॥೪೧॥ ಏನು
ಮಾಡಲಿ? ತಾಯಿ! ಹೇಳು; ಎಂದು ಶೋಕಾಕುಲನಾಗಿ, ಬಾರಿಬಾರಿಗೂ ಖೇದಪಡು
ತ್ತಾನೆ, ನಿಂತುಕೊಳ್ಳುತ್ತಾನೆ, ಬೀಳುತ್ತಾನೆ, ಏಳುತ್ತಾನೆ ॥೪೨॥ ನೋಡುತ್ತಾನೆ, ಆಕೆ
ಯ ಪಾದಗಳಮೇಲೆ ಹೋಗಿ ಬೀಳುತ್ತಾನೆ, ತಲೆಯನ್ನು ಬಡಿದುಕೊಳ್ಳುತ್ತಾನೆ, ತನ್ನ
ಹೊಟ್ಟೆಯನ್ನು ಹಿಸುಕಿಕೊಳ್ಳುತ್ತಾನೆ. ॥೪೩॥ ಭೂಮಿಯಮೇಲೆ ಉರುಳಿ ಅಳುತ್ತಾನೆ
ದೇಹತ್ಯಾಗವನ್ನು ಮಾಡಿಕೊಳ್ಳಬೇಕೆಂದು ಯೋಚಿಸುತ್ತಾನೆ. ಲಿಂಗದೊಳಕ್ಕೆ
ನುಗ್ಗಬೇಕೆಂದು ಪ್ರಯತ್ನಿಸುತ್ತಾನೆ. ಆ ಪ್ರೌಢವತಿಯನ್ನು ನೋಡುತ್ತಾನೆ ॥೪೪॥
ತನ್ನ ದೇಹವನ್ನು ಕತ್ತರಿಸಿ ಭೂಮಿಗೆ ಬಲಿಕೊಡುವುದಕ್ಕೆ ಯೋಚಿಸುತ್ತಾನೆ, ಕಲ್ಲಿನ
ಒಳಲಿನಲ್ಲಿ ತನ್ನ ದೇಹವನ್ನು ಮಿದಿದು, ಹೊಳೆಯ ನೀರಿನಲ್ಲಿ ॥೪೫॥ ಕೊಚ್ಚಿ ಬಿಡುವುದ
ಕ್ಕೆ ಆರಂಭಿಸುತ್ತಾನೆ. ತನ್ನ ಶರೀರವನ್ನು ಕಬ್ಬಿನದ ಓಡಿನಲ್ಲಿರಿಸಿ ಸುಡುವುದಕ್ಕೆ
ಉಜ್ಜುಗಿಸುತ್ತಾನೆ, ದೇಹವನ್ನು ಸುಟ್ಟು ಬೂದಿಮಾಡಿ ॥೪೬॥ ಗಾಳಿಯಲ್ಲಿ ತೂರಿ
ಡುವುದಕ್ಕೆ ನೋಡುತ್ತಾನೆ, ಬಳಿಕ ಸಾಣೆಗಲ್ಲಿನಲ್ಲಿ ತನ್ನ ದೇಹವನ್ನು ತೇದು ನಾಶ

ಮುರುತಿಸಂಪಶ್ಯತ್ಯಥಶಾಣೇನಿಘೃಷ್ಯಚ | ನಷ್ಟಂಕರ್ತುಂಕರೋತೀಚ್ಛಾಂಮು
ರ್ತುಮೇವೇಹತೇಸ್ವಯಂ ॥೪೭॥ ಉತ್ಪಾಟ್ಯತಾಂದೃಷ್ಟವತೀಲೋಚನೇಸಹಸಾ
ಪುನಃ | ವಿಚ್ಛಿದ್ಯಮೇಢ್ರಮೇತಸ್ಯಾಂಸುರತಾಕಾಂಕ್ಷಯೋತ್ಥಿತಂ ॥೪೮॥
ವಿಚ್ಛಿದ್ಯೋಪಗತೌಪಾದೌಕರಾವಾಲಿಂಗನೋನ್ಮುಖೌ | ದ್ವಿಧಾವಿಧಾಯರಸ
ನಾಂಚತುರಾಲಾಪಭಾಷಿಣೀಂ॥೪೯॥ ಉನ್ಮೂಲ್ಯನೀತ್ವಾಸಂಕೋಚಮಾನನಂ
ಪ್ರವಿಕಾಸಿತಂ | ಆಲೋಕಿತಂಸಮುದ್ಧೃತ್ಯ ಭಗ್ನಂನಿರ್ಮಾಯಮಸ್ತಕಂ
॥೫೦॥ತ್ವಚಂಪುಲಕಿತಾಂಸಮ್ಯಗುತ್ಕೃತ್ಯಕುಚಯೋರ್ಯುಗಂ|ವಾಂಛದ್ವಕ್ಷೋ
ವಿನಿರ್ಭಿದ್ಯ ವಿದಾರ್ಯೋದರಮುತ್ಕಟಂ ॥೫೧॥ ವಿಚ್ಛಿದ್ಯಾಂತ್ರಾಣಿತಾನೀ
ಶಾಲಯೇ ಬದ್ಧುಂಸಮೀಹತೇ | ಅಕೃತ್ವೈವಂನಪ್ರಯಾತಿಪಾಪಮಿ
ತ್ಯಾಲಪನ್ಮುಹುಃ ॥೫೨॥ ದುಃಖಾಗ್ನಿಪೂರ್ಣನಯನ ಸ್ಸ್ವಮನ್ಯಮವಲೋ
ಕಿತುಂ | ಅಶಕ್ನುವನ್ಭ್ರಾಂತಇವ ಗತ್ವಾಗತ್ವಾವತಿಷ್ಠತೇ ॥೫೩॥
ನಿಷ್ಕ್ರಾಮತಿಪುರೀಂವೇಗಾದ್ಧಾವತ್ಯಪಿನಿವರ್ತತೇ | ಬಹಿಃಪ್ರಯಾತಿ
ಸದನಾತ್ಪತಿತ್ವೋತ್ತಿಷ್ಠತೀಕ್ಷತೇ ॥೫೪॥ ಪ್ರಯಾತಿವಿಪಿನಂಕ್ವಾಪಿ ಗಚ್ಛತ್ಯ
ಚ್ಛಿನ್ನಸಂಶಯಃ | ಶೋಕಾವೇಶಾನ್ನಕುತ್ರಾಪಿ ತಿಷ್ಠತ್ಯತ್ಯಂತಮೋಹಿತಃ

---

ಗೊಳಿಸುವುದಕ್ಕೆ ಅಪೇಕ್ಷಿಸುತ್ತಾನೆ. ತಾನೇ ಸಾಯುವುದಕ್ಕೆ ಇಚ್ಛೈಸುತ್ತಾನೆ,
ಆ ಪ್ರೌಢವತಿಯನ್ನು ನೋಡಿದ ಕಣ್ಣುಗಳನ್ನು ಬೇಗನೆ ಕಿತ್ತು, ಮತ್ತೂ ಆಕೆಯು
ಸುರತದ ಆಪೇಕ್ಷೆಯಿಂದ ಎದ್ದ ಶಿಶ್ನವನ್ನು ಕತ್ತರಿಸಿ, ಆಲಿಂಗಿಸುವುದಕ್ಕಾಗಿ ಚಾಚಿದ
ಕೈಗಳನ್ನು ಎರಡುಹೋಳು ಮಾಡಿ, ಆವಳೊಡನೆ ಚಾತುರ್ಯದ ಮಾತುಗಳನ್ನಾಡಿದ
ನಾಲಿಗೆಯನ್ನು ಬುಡಸಹಿತ ಕಿತ್ತು, ಆಕೆಯನ್ನು ನೋಡಿ ಅರಲಿದ್ದ ಮುಖವನ್ನು
ಮಿದಿದು ಸೊರಗಿಸಿ, ಆಕೆಯನ್ನು ನೋಡುವುದಕ್ಕಾಗಿ ಮೇಲಕ್ಕೆ ನಿಗುರಿದ ತಲೆಯನ್ನು
ಮುರಿದು॥೫೦॥ರೋಮಾಂಚನಗೊಂಡಿದ್ದ ಮೈಯ ತೊಕ್ಕನ್ನು ಸುಲಿದು, ಆಕೆಯ ಸ್ತನ
ಗಳಾಲಿಂಗನವನ್ನು ಬಯಸಿದ ಎದೆಯನ್ನು ಸೀಳಿ, ಉಬ್ಬಿದ ಹೊಟ್ಟೆಯನ್ನು ಬಗಿದು,
ಕರುಳುಗಳನ್ನು ಕತ್ತರಿಸಿ, ಅವುಗಳನ್ನು ಶಿವಾಲಯದಲ್ಲಿಕಟ್ಟುವುದಕ್ಕೆ ಆಪೇಕ್ಷಿಸು
ತ್ತಾನೆ. ಹೀಗೆ ಮಾಡದಿದ್ದರೆ ಪಾಪವು ಪರಿಹಾರವಾಗುವುದಿಲ್ಲವೆಂದು ಬಾರಿಬಾರಿಗೂ
ಮಾತನಾಡಿಕೊಳ್ಳುವನಾಗಿ॥೫೨॥ಚೆಂಕಿಯಂತೆ ಬೇಯುತ್ತಿರುವ ದುಃಖದಿಂದ ತುಂಬಿ
ದಕಣ್ಣುಗಳುಳ್ಳವನಾಗಿ, ತನ್ನನ್ನೂ ಇತರರನ್ನೂ ನೋಡಲಾರದವನಾಗಿ, ಭ್ರಾಂತಿ
ಗೊಂಡವನಂತೆ ಹೋಗುತ್ತ ಹೋಗುತ್ತ, ನಿಂತುಕೊಳ್ಳುತ್ತಾನೆ ॥೫೩॥ ಊರನ್ನು
ಕುರಿತು ಬೇಗನೆ ಓಡುತ್ತಾನೆ. ಹಾಗೆಯೇ ಹಿಂತಿರುಗಿ ಬರುತ್ತಾನೆ. ಮನೆಯಿಂದ

॥೫೫॥ ಭೋಭೋಪಥಿಕಭಕ್ತಾಸ್ತಿ ಕಿಂಪಾಪಸ್ಯಾಸ್ಯನಿಷ್ಕೃತಿಃ । ಪರ್ವತಕ್ರೀಡಾಸವಾಸಕ್ತ ವೃಷಭೇಂದ್ರನುಮಾಸ್ತಿವಾ ॥ ೫೬ ॥ ಕಿಮುಪ್ಯಾಲಂಬನಮಿತಿ ಪ್ರವದನ್ ಕಲುಷೀಭವನ್ । ವಿಧಿಮಸ್ಯಾಪರಾಧಸ್ಯನಾಶಕಂ ಚೂತಶಂಸಮೇ ॥೫೭॥ ಇಯಂನಾರೀಗುರೋರ್ನಾರೀ ನಾಳಿಕೇರಹತೋಸ್ಮ್ಯಹಂ । ತ್ವಯಿಮಾಂಪ್ರತಿಶೋಕೋಽಸ್ತಿಛಿತ್ವಾಕರ್ಮೇದಮಂಜಸಾ ॥೫೮॥ ಭವೇಯಂಕ್ಷೀಣಶೋಕಃ ಕಿಮುಶೋಕಾಚಕ್ಷ್ವವೀಕ್ಷ್ಯಮಾಂ । ಘನಸಾರಾಘಮೇತತ್ಕಿಂಮೋಘೀಕರ್ತುಂ ಕ್ರಿಯಾಸ್ತಿವಾ ॥೫೯॥ ಮಮಾನಂದೋಽವಸನ್ನೋಽಭೂದ್ಭೋಜಂದನಕರೋಮಿಕಿಂ । ಭ್ರಮದ್ಭ್ರಮರನಶ್ಯೇತ್ಕಿಂಭ್ರಮೋಽಯಂಭ್ರಮತೋಮಮ ॥೬೦॥ ಪುರೋವಿತತ್ಯಬರ್ಹಾಣಿ ಬರ್ಹಿನ್ನಾಸಕ್ತನರ್ತನೇ । ಪುರಂಹಿತ್ವೇಶಿತುಃ ಕಾಲಪುರಂಯಾಸ್ಯಾಮಿವಾಕಥಂ ॥೬೧॥ ಪ್ರಲಾಪೋಮೇಕದಾನಶ್ಯೇತ್ಪರಪುಷ್ಟಪ್ರಲಾಪಕ । ಕಿಂನಿರೀಕ್ಷ್ಯಗತಿಂಹಂಸ ಹಸಸ್ಯಂಚದ್ರವೇಣಮಾಂ ॥೬೨॥ಮಾಭೈಷೀರಿತಿವಾಕ್ಯಂತೇ ಮಂಜುವಾದೀಶುಕಾಸ್ತಿಕಿಂ।

---

ಹೊರಕ್ಕೆ ಹೋಗುತ್ತಾನೆ. ನೆಲದಮೇಲೆ ಬಿದ್ದು ಏಳುತ್ತಾನೆ. ನೋಡುತ್ತಾನೆ ॥೫೪॥ ಸಂಶಯವು ತೊಲಗದವನಾಗಿ ಎಲ್ಲಿಗೋ ಅರಣ್ಯಕ್ಕೆ ಹೋಗುತ್ತಾನೆ. ದುಃಖಾತಿರೇಕದಿಂದ ಎಲ್ಲೂ ನಿಲ್ಲುವುದಿಲ್ಲ. ಅತಿಶಯವಾಗಿ ಭ್ರಾಂತಿಗೊಂಡು ॥೫೫॥ "ಎಲೆ ಎಲೆ ಮಾರ್ಗಸ್ಥನೆ! ಈ ಪಾಪಕ್ಕೆ ಪ್ರಾಯಶ್ಚಿತ್ತವಿದೆಯೋ? ಪರ್ವತದ ತೊಪ್ಪಲಿನಲ್ಲಿ ವಿಹರಿಸುವ ಎಲೈ ವೃಷಭೇಶನೇ, ನನಗೆ ಆಶ್ರಯವೇನಾದರೂ ಉಂಟೇ"! ಎಂದು ಹೇಳುತ್ತ, ಕಡಡಿದ ಮನಸ್ಸುಳ್ಳವನಾಗಿ, ಎಲೆ ಮಾವಿನ ಮರವೇ ಈ ನನ್ನ ಅಪರಾಧವನ್ನು ತೊಲಗಿಸುವ ರೀತಿಯನ್ನು ನನಗೆ ಹೇಳು ॥೫೭॥ ಎಲೆ ತೆಂಗೆ, ಈ ಹೆಂಗುಸು ಗುರುಪತ್ನಿಯು, ನಾನು ಕೆಟ್ಟೆ, ನನ್ನಮೇಲೆ ನಿನಗೆ ಕನಿಕರವಿದ್ದರೆ, ಈ ನನ್ನ ದುಷ್ಕರ್ಮವನ್ನು ಕತ್ತರಿಸಿ ರಕ್ಷಿಸು ॥೫೮॥ ಎಲೈ ಅಶೋಕವೇ, ನಾನು ಈ ಶೋಕದಿಂದ ನಿರ್ಮುಕ್ತನಾಗುತ್ತೇನೆಯೋ ? ನನ್ನನ್ನು ನೋಡಿ ಹೇಳು. ಎಲೈ ಪಚ್ಚೆ ಕರ್ಪೂರದ ಗಿಡವೇ , ಈ ನನ್ನ ಪಾಪವನ್ನು ನಾಶಗೊಳಿಸುವುದಕ್ಕೆ ಪ್ರತಿಕ್ರಿಯೆಯೇನಾದರೂ ಉಂಟೇ?॥೫೯॥ಎಲೈ ಶ್ರೀಗಂಧದ ಮರವೇ! ನನ್ನ ಸಂತೋಷವು ಕೊನೆಗಂಡಿತು. ಏನುಮಾಡಲಿ? ಎಲೈ ಸುತ್ತುವ ತುಂಬಿಯೆ! ಅಲೆಯುತ್ತಿರುವ ನನ್ನ ಈ ಭ್ರಾಂತಿಯು ನಾಶಗೊಳ್ಳುವುದೆ?॥೬೦॥ಹಿಂಗಡೆಯ ಗರಿಗಳನ್ನು ಎತ್ತಿ ಮುಂದಕ್ಕೆ ಚಾಚಿ ವಿಸ್ತರಿಸಿ ನರ್ತನಮಾಡುವುದರಲ್ಲಿ ಆಸಕ್ತವಾದ ಎಲೈನವಿಲೆ! ನಾನು ಶಿವನ ಪುರವನ್ನು ಬಿಟ್ಟು ಯಮನ ಪಟ್ಟಣಕ್ಕೆ ಹೇಗೆ ಹೋಗಲಿ? ॥೬೧॥ ಕೂಗುತ್ತಿರುವ ಎಲೈ ಕೋಗಿಲೆಯೇ ! ನನ್ನ ಈ ಪ್ರಲಾಪವು ಯಾವಾಗ ನಾಶಗೊಂಡೀತು!

ದೀಪ್ರಃಪ್ರಮೋದಃಕೇನಾಯಂ ಪ್ರಮಾಣೇನಪ್ರಯಾಸ್ಯತಿ ‖೬೩‖ ಬ್ರೂಹಿವ ಪ್ರಸ್ರಭೋಕ್ತ್ವಿಪ್ರಂ ಪ್ರಮೋದಂಜನಯರ್ಮಮ | ರುದ್ರಸ್ಯಮುಖಭದ್ರಾಖ್ಯಂ ಭದ್ರಂಸ್ಯಾತ್ಕಿಮುಪದ್ರವಃ ‖೬೪‖ ಸ್ಯಾದ್ಭೋನಂದಿಮಹಾಕಾಲೌ ತುಷ್ಟಃಕಾಲಗಳಃಕದಾ | ಭೋವೀರಭದ್ರಭೋಗೌರಿ ಕಾಚಿನ್ಮೇಗತಿರಸ್ತಿಕಿಂ ‖೬೫‖ ಪ್ರಮಥಾಮಥನೋಪಾಯಂ ವದತಾಘಚಯಸ್ಯಮೇ | ಏತತ್ಪಾಪಮಪಂಕರ್ತುಂ ಶಕ್ತಾಃಕಿಂಹೇಪುರಾತನಾಃ ‖೬೬‖ ತೂಷ್ಣೀಂಸ್ಥಾತುಂಸಮುಚಿತಂನಯುಷ್ಮಾಭಿರಿತಃಪರಂ | ನನ್ವಸಂಖ್ಯಾತಸದ್ಭಕ್ತಾ ವೀರಮಹೇಶ್ವರಾನಘಾಃ ‖೬೭‖ ಏತನ್ನಿರೋಧಾತ್ಕಿಂವಾಸ್ಯಾ ದ್ಯೂಯಂಶೃಣುತಮದ್ವಚಃ | ಬಹೂಕ್ತಿಭಿಃಕಿಂಮಹೇಶ ಮೃತಶ್ಶುದ್ಧೋಭವಾಮ್ಯಹಂ ‖೬೮‖ ಇತ್ಯುಕ್ತ್ವೈಕೇನಕಾಷ್ಠೇನ ನೇತ್ರಯೋರ್ಯುಗಳಂತದಾ | ಅಂತರ್ನಿರ್ಭಿದ್ಯವೇಗೇನ ಕ್ಷೋಭಯಾಮಾಸನಿರ್ಭಯಃ ‖೬೯‖ ಛೇತ್ತುಮಂಗಾನ್ಯಪಿತತಸ್ತಸ್ಮಿನ್ ಕುರ್ವತ್ಯುಪಕ್ರಮಂ | ತಸ್ಮಿನ್ನವಸರೇವಾರ್ತಾ ಮಿಮಾಮಾಕರ್ಣ್ಯತತ್ಕ್ಷಣಾ

---

ಎಲೈ ಹಂಸಪಕ್ಷಿಯೆ ! ನನ್ನ ದುರ್ಗತಿಯನ್ನು ನೋಡಿ ನಿನ್ನಶ್ಲಾಘ್ಯವಾದ ಧ್ವನಿಯಿಂದ ನನ್ನನ್ನು ಹಾಸ್ಯಮಾಡುವೆಯಾ ? ‖೬೨‖ ಮನೋಹರವಾಗಿ ಮಾತನಾಡುವ ಎಲೆ ಗಿಳಿಯೇ, "ಹೆದರಬೇಡ" ಎಂಬ ಮಾತು ನಿನ್ನ ಬಾಯಲ್ಲಿರುವುದೇ? ಕೋಟೆಯ ದಿಣ್ಣೆಮೇಲಿರುವ ಎಲೈ ಸ್ವಾಮಿಯೆ! ಪ್ರಜ್ವಲಿಸುತ್ತಿರುವ ಈ ನನ್ನ ಅಪರಾಧವು ಯಾವ ಪ್ರಮಾಣವಚನದ ಪ್ರಕಾರ ಪರಿಹಾರಗೊಳ್ಳುತ್ತದೆ? ‖೬೩‖ ನನಗೆ ಸಂತೋಷವನ್ನು ಹುಟ್ಟಿಸುವಂತೆ ಬೇಗನೆ ಹೇಳು. ಎಲೈ ರುದ್ರನ ಮೊಗವಾಡವೆ! ನನಗೆಉಂಟಾಗಿರುವ ಈ ತೊಂದರೆಯು ಮಂಗಳಕರವಾದೀತೆ? ‖೬೪‖ ಎಲೈ ದ್ವಾರಪಾಲಕರಾದ ನಂದಿಮಹಾಕಾಳರೆ. ಪರಶಿವನು ಯಾವಾಗ ನನ್ನ ವಿಷಯದಲ್ಲಿ ಸಂತುಷ್ಟನಾಗುವನು? ಎಲೈ ವೀರಭದ್ರೇಶನೆ, ಎಲೌ ಗೌರಿಯೇ! ನನಗೆ ಏನಾದರೂ ಸದ್ಗತಿಯುಂಟೆ ? ‖೬೫‖ ಎಲೈ ಪ್ರಮಥರಿರಾ! ನನ್ನ ಪಾಪಸಮೂಹವನ್ನು ಪರಿಹರಿಸುವ ಉಪಾಯವನ್ನು ಹೇಳಿರಿ, ಎಲೈ ಪುರಾತನರೆ! ಈ ಪಾಪವನ್ನಾಚರಿಸುವುದಕ್ಕೆ ನಾನು ಸಮರ್ಥನೆ? ‖೬೬‖ ಇನ್ನೂ ನೀವು ಉತ್ತರವನ್ನು ಹೇಳದೆ ಸುಮ್ಮನಿರುವುದು ಸರಿಯಲ್ಲವಲ್ಲವೆ ? ಗಣನಾತೀತರಾದ ಸದ್ಭಕ್ತರೆ! ವೀರಮಾಹೇಶ್ವರರುಗಳೆ! ೬೭‖ಏನನ್ನೂ ಹೇಳದೆ ಹೀಗೆ ಸುಮ್ಮನೆ ತಡೆದುಕೊಂಡಿರುವುದರಿಂದ ಏನುತಾನೇ ಆದೀತು? ನೀವು ನನ್ನ ಮಾತುಗಳನ್ನು ಕೇಳಿರಿ. ಬಲುಮಾತಿನಿಂದ ಪ್ರಯೋಜನವೇನು ? ಪರಶಿವನೆ! ನಾನು ಸತ್ತೇ ಶುದ್ಧನಾಗುವೆನು ‖೬೮‖ ಎಂದು ಹೇಳಿ, ಆಗ ಒಂದು ಕಟ್ಟಿ

ತ್ ‖೨೦‖ ಸುವೃತ್ತಶ್ಚಿತ್ಸುಖಾಯುಕ್ತಸ್ಸಮಗ್ರೋಮಹಿತೈರ್ಗುಣೈಃ । ಮ
ಹಾತ್ಮಾಸ್ವಗುರುಹಸ್ತಾಗ್ರಸಂಭವಸ್ಸಮುಪಾಗಮತ್ ‖೨೧‖ ತತೋಯಂಭ
ಯಸದ್ಭಕ್ತಿವಿನಯೈಸ್ಸಮುದಂಚಿತಃ । ದುಃಖಾಗ್ನಿನಾ ಸಮಿದ್ಧೇನ ಪತಿತ್ವಾ
ತಸ್ಯಪಾದಯೋಃ ‖೨೨‖ರುದನ್ನುಚ್ಚೈಃಸ್ಥಿತಸ್ಸೋಽಪಿ ನಿರೀಕ್ಷ್ಯೈಕೃಪಯಾಽ
ಬ್ರವೀತ್ । ಗುರುಸದ್ಭಕ್ತಿತಿಲಕ ಗುರುಸದ್ಭಕ್ತಿವರ್ಧಕ ‖೨೩‖ ಗುರುಸ
ದ್ಭಕ್ತಿಶೃಂಗಾರ ಗುರುಸದ್ಭಕ್ತಿಸಾಂದ್ರಿತ । ದುಃಖಂಮಾವಹಚಿತ್ತೇನ ಸಮೀ
ಚೀನಸಮಿತಃಪರಂ ‖೨೪‖ ಗುರುಭಕ್ತಿರಿದಾನೀಂತೇ ಪ್ರಮಥಾನಾಂಮತಾಭವ
ತ್ । ಕ್ಲೇಶೇನತವಕಿಂವತ್ಸ ಸಂತಾಪೋಪಶಮಂಕುರು ‖೨೫‖ ಉತ್ತಿ
ಷ್ಠೇತಿತಮುತ್ಥಾಪ್ಯ ಸಮಾಲಿಂಗ್ಯಚಸಾದರಂ । ಮೂರ್ಧಾನಮುರಸಾಶ್ಲಿಷ್ಯ
ರಕ್ತಧಾರಾಃಪ್ರಮೃಜ್ಯಚ ‖೨೬‖ ತಸ್ಮಿನ್ಸದ್ಗುರುಲಿಂಗಸ್ಯ ಪಾದೌಸಂಸ್ಮೃತ
ವತ್ಯಥ । ಗುರುಭಕ್ತಸ್ಯತಸ್ಯಾಶು ಸಮುದ್ಭೂತೇವಿಲೋಚನೇ ‖೨೭‖ ಮು

---

ಗೆಯು ದಸಿಯಿಂದ ಕಣ್ಣುಗಳೆರಡನ್ನೂ ನಿರ್ಭಯವಾಗಿ ಬೇಗನೆ ಚುಚ್ಚಿ, ಮೀಟದಸು
‖೨೦‖ಬಳಿಕ ಅವಯವಗಳನ್ನು ಕತ್ತರಿಸುವುದಕ್ಕೆ ಉಪಕ್ರಮಿಸಲಾಗಿ, ಅಷ್ಟರೊಳಗೆ
ಸಚ್ಚರಿತನೂ ಜ್ಞಾನಾನಂದದಿಂದ ಕೂಡಿದವನೂ, ಸದ್ಗುಣಪರಿಪೂರ್ಣನೂ, ಮಹಾ
ತ್ಮನೂ, ತನ್ನ ಗುರುವಿನ ಹಿರಿಯುಶಿಷ್ಯನಾದುದರಿಂದ ತನಗೆ ಜ್ಯೇಷ್ಠನೂ ಆದಾತನು
ಈಸುದ್ದಿಯನ್ನು ಕೇಳಿ, ಕೂಡಲೇ ಬಂದನು ‖೨೧‖ ಬಳಿಕ ಗುರುಭಕ್ತಾಂಡಾರಿಯು
ಭಯಭಕ್ತಿವಿನಯಗಳಿಂದ ಕೂಡಿದವನಾಗಿ, ಮೀರಿರುವ ದುಃಖಾಗ್ನಿಯಿಂದ ಬೆಂದು,
ಆತನ ಪಾದಗಳ ಮೇಲೆ ಬಿದ್ದು ‖೨೨‖ ಗಟ್ಟಿಯಾಗಿ ಅಳುತ್ತಿದ್ದನು. ಆಜ್ಯೇಷ್ಠ
ನಾದರೂ, ಈತನನ್ನು ನೋಡಿ, ದಯೆಯಿಂದ ಹೇಳಿದನೇನೆಂದರೆ—ಎಲೈಗುರುಭ
ಕ್ತಿಯೇತಿಲಕವಾಗಿಯುಳ್ಳವನೆ! ಗುರುಭಕ್ತಿಯನ್ನು ವೃದ್ಧಿಗೊಳಿಸುವವನೆ! ‖೨೩‖ಗುರು
ಭಕ್ತಿಯೇ ಅಲಂಕಾರವಾಗಿಯುಳ್ಳವನೆ! ಗುರುಭಕ್ತಿಯಿಂದ ತುಂಬಿದವನೇ! ಮನಸ್ಸಿ
ನಲ್ಲಿ ದುಃಖವನ್ನು ತಾಳಬೇಡ; ಇನ್ನು ಮುಂದೆ ಒಳ್ಳೆಯದಾಗುವುದು. ‖೨೪‖ ಈಗ
ನಿನ್ನ ಗುರುಭಕ್ತಿಯು ಪ್ರಮಥರಿಗೆ ಸಮ್ಮತವಾಯಿತು. ಮಗನೆ! ದುಃಖದಿಂದೇನು?
ಸಂಕಟವನ್ನು ಅಡಗಿಸಿಕೊ ‖೨೫‖ ಮೇಲಕ್ಕೇಳು ಎಂದು ಹೇಳಿ, ಅವನನ್ನು ಏಳಿಸಿ,
ಪ್ರೀತಿಯಿಂದ ತಬ್ಬಿಕೊಂಡು, ಅವನ ತಲೆಯನ್ನು ತನ್ನ ಎದೆಯಿಂದ ಆಲಿಂಗಿಸಿ,
ಸುರಿಯುತ್ತಿರುವ ರಕ್ತದಧಾರೆಯನ್ನು ತೊಡೆದು ‖೨೬‖ ಆತನು ತನ್ನ ಗುರುವರ್ಯನ
ಪಾದಗಳನ್ನು ಸ್ಮರಿಸಲಾಗಿ, ಆ ಗುರುಭಕ್ತನ ಕಣ್ಣುಗಳು ಬೇಗನೆ ಉದ್ಭವಿಸಿದುವು
‖೨೭‖ಶಿವಭಕ್ತರುಗಳು ಸಂತೋಷಪಡಲಾಗಿ, ಜನರೆಲ್ಲ ಆಶ್ಚರ್ಯಪಡಲಾಗಿ, ಶಿವಸ
ಮಾನನಾದ ಆ ಗುರುಶಿಷ್ಯಜ್ಯೇಷ್ಠನು ಹಾಗೆ ಗುರುಭಕ್ತಾಂಡಾರಿಗೆ ತನ್ನ ನಿರ್ಮಲವಾದ

ದಿತೇಷ್ವೀಶಭಕ್ತೇಷು ವಿಸ್ಮಿತೇಷುಜನೇಷ್ವಪಿ । ಅತಿನಿರ್ಮಲಯೋದಾರ ಭಕ್ತ್ಯಾಶಿವಸಹೋದರಃ ॥೩೮॥ ಗುರುಭಕ್ತಾಂಡಾರಯೇಽದಾತ್ತನ್ನೇತ್ರೇ ಇತಿಹಿಶ್ರುತಂ । ಅದ್ಯಶ್ರೀಪಂಡಿತಾರಾಧ್ಯಃ ಪಶ್ಯತ್ಸುಸಕಲೇಷ್ವಪಿ ॥೩೯॥ ಮಹಾದೇವಾಯುಚರಣೌ ಸ್ವಮಾಹಾತ್ಮ್ಯಾದ್ದದಾವಹೋ ॥

ಇತ್ಯಸಂಖ್ಯಾತ...ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ.
ಪುರಾತನಪ್ರಕರಣೇ ಗುರುಭಕ್ತಾಂಡಾರಿಚರಿತ್ರಕಥನಂ
ನಾಮೈಕಾದಶೋಽಧ್ಯಾಯಃ.

---

ಉತ್ಕೃಷ್ಟವಾದ ಭಕ್ತಿಪ್ರಭಾವದಿಂದ ಕಣ್ಣುಗಳನ್ನು ಕೊಟ್ಟನು ಎಂದು ಕೇಳಿದ್ದೆವು. ಈಗ ಸಕಲಜನರೂ ನೋಡುತ್ತಿರಲಾಗಿ ಶ್ರೀಪಂಡಿತಾರಾಧ್ಯನು ತನ್ನಮಹಿಮೆಯಿಂದ ಮಹಾದೇವಾರ್ಯನಿಗೆ ಕಾಲುಗಳನ್ನು ಕೊಟ್ಟನು. ಆಶ್ಚರ್ಯ! ॥೩೯॥ ಎಂದು ಭಕ್ತರುಗಳೆಲ್ಲರೂ ಸ್ತೋತ್ರಮಾಡಿದರೆಂಬಲ್ಲಿಗೆ—

ಶ್ರೀ ಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸ
ವಶಾಸ್ತ್ರಿ ರಚಿತವಾದ " ಭಾವಮಂಜರಿ " ಯೆಂಬ ಕನ್ನಡದ
ಟಿಪ್ಪಣದಲ್ಲಿ ಪುರಾತನಪ್ರಕರಣದೊಳಗೆ ಗುರುಭಕ್ತಾಂ
ಡಾರಿಚರಿತ್ರವನ್ನು ವರ್ಣಿಸುವ ೧೧ನೆಯ
ಅಧ್ಯಾಯವು ಮುಗಿದುದು.

# ವೇಮನಾರ್ಯಕಥನಂ.

ಕಿಂಚಪಂಚೇಷುಮಥನಸದ್ಭಕ್ತ ಮದಸಿಂಧುರಃ । ಆಸೀತ್‌ಬೆಲ್ದೇವಿ ವೇಮನ್ನಪೆದ್ದಾರ್ಯಇತಿಭೂನುತಃ ॥೧॥ ಶ್ರೀಶೈವಸಮಯಾಚಾರ್ಯವರ್ಯಸ್ಸರ್ವ ಗುಣಾಧಿಕಃ । ಪಾಶಸಂವಮೋಚನಕಲಾಕುಶಲೋವೇದಪಾರಗಃ ॥೨॥ ಅಕಲಂ ಕಾಗಮಾರ್ಥಾನಾಂ ವೇತ್ತಾ ವಿಶದಬುದ್ಧಿಯುಕ್ । ಧರ್ಮಾರ್ಥಕಾಮಮೋ ಕ್ಷಾರ್ಥ ಸ್ಥಾಪನಖ್ಯಾತಸದ್ಯಶಾಃ ॥೩॥ ಪಂಚಾಕ್ಷರೀಮಂತ್ರಸಿದ್ಧಃ ಸಮೃದ್ಧ ಸ್ಸತ್ಯಸಂಪದಾ । ನಿರ್ವ್ಯಾಜಕರುಣಾಪಾಂಗ ನಿರೀಕ್ಷಣಸುಧಾನಿಧಿಃ ॥೪॥ ವೀರ ಮಾಹೇಶ್ವರಾಚಾರ ವಿಸ್ತಾರಗುಣಭೂಷಿತಃ । ಬಸವೇಶಪದಾಂಭೋಜಪವಿ ತ್ರನಿಜಮಾನಸಃ ॥೫॥ ಶಾಪಾನುಗ್ರಹಸಾಮರ್ಥ್ಯಭೂಷಿತಃ ಪರಮೋನ್ನತಃ। ನಮ್ರಾಣಾಂಮೃತ್ಯುಸಂಹಾರ ಪ್ರಭಾವಸಮುದಂಚಿತಃ ॥೬॥ ನಮಜ್ಜನಪು

---

## ೧೨ನೆಯ ಅಧ್ಯಾಯವು.

( ವೇಮನಾರಾಧ್ಯರ ಕಥೆಯು. )

ಮತ್ತೂ ಶಿವಭಕ್ತರುಗಳಲ್ಲಿ ಮದಗಜದಂತಿರುವ ಬೆಲ್ದೇವಿ ವೇಮನ್ನ ಪೆದ್ದಾರ್ಯ ನೆಂಬ ಶಿವಮತಾಚಾರ್ಯನು ಇದ್ದನು. ಆತನು ಸಕಲ ಸದ್ಗುಣಗಳಿಂದ ಶ್ರೇಷ್ಠ ನಾಗಿಯೂ ಮಲಮಾಯಾಪಾಶಬಂಧನಗಳನ್ನು ತೊಲಗಿಸುವ ಬ್ರಹ್ಮವಿದ್ಯೆಯಲ್ಲಿ ಪಂಡಿತನಾಗಿಯೂ, ವೇದಗಳನ್ನು ಪೂರ್ಣವಾಗಿ ಅರಿತವನಾಗಿಯೂ ॥೨॥ ನಿರ್ದು ಷ್ಟವಾದ ಶಿವಾಗಮಗಳ ಅಭಿಪ್ರಾಯವನ್ನು ತಿಳಿದವನಾಗಿಯೂ, ನಿರ್ಮಲಮತಿಯಾ ಗಿಯೂ, ತನ್ನಾಶ್ರಿತರಿಗೆ ಧರ್ಮಾದಿಚತುರ್ವಿಧ ಪುರುಷಾರ್ಥವನ್ನು ಸಾಧಿಸಿ ಕೊಡು ವುದರಿಂದ ಪ್ರಸಿದ್ಧವಾದ ಕೀರ್ತಿಯುಳ್ಳವನಾಗಿಯೂ ॥೩॥ ಪಂಚಾಕ್ಷರೀ ಮಂತ್ರದ ಸಿದ್ಧಿಯುಳ್ಳವನಾಗಿಯೂ, ಸತ್ಯಸಂಪತ್ತಿನಿಂದ ಪೂರ್ಣನಾಗಿಯೂ, ಚಂದ್ರನಂತೆ ಆಪ್ಯಾಯಮಾನವಾಗಿರುವ-ನಿಷ್ಕಾರಣ ಕರುಣಾಕಟಾಕ್ಷವೀಕ್ಷಣವುಳ್ಳವನಾಗಿಯೂ ॥೪॥ ವೀರಮಾಹೇಶ್ವರರಿಗೆ ಉಕ್ತವಾದ ಆಚರಣೆಯನ್ನು ನಡೆಯಿಸುವ ವಿಶಾಲವಾದ ಸದ್ಗುಣಗಳಿಂದಲಂಕೃತನಾಗಿಯೂ, ಬಸವೇಶ್ವರನ ಪಾದಕಮಲಧ್ಯಾನದಿಂದ ಪರಿಶುದ್ಧ ವಾದ ಮನಸುಳ್ಳವನಾಗಿಯೂ ॥೫॥ ಶಾಪವನ್ನು ಕೊಡುವ ಮತ್ತೂ ಅನುಗ್ರಹಿಸುವ ಶಕ್ತಿಯುಳ್ಳವನಾಗಿಯೂ, ಉತ್ಕೃಷ್ಟನಾಗಿಯೂ, ವಿಧೇಯರಾದವರ ಮೃತ್ಯುವನ್ನು ಕೂಡ ತೊಲಗಿಸುವ ಮಹಿಮೆಯಿಂದ ವಿಖ್ಯಾತನಾಗಿಯೂ ॥ ೬ ॥ ನಮಸ್ಕರಿಸಿದ

ನಃಪ್ರಾಣಪ್ರದಾತಾಭುವನಾಧಿಕಃ । ಮರುಜ್ಜಲಾಗ್ನಿನೃಪತಿ ಚೋರಗರ್ವಾಪ
ಹಾರಕಃ ॥೭॥ ವ್ಯಾಘ್ರಾದಿಮೃಗಸಂತಾನ ಸರ್ಪವೃಶ್ಚಿಕದರ್ಪಹೃತ್ । ಸಮ
ಸ್ತಜನಸಂತೋಷಕರೋಽಭೂತ್ವಾಽವಸತ್ತತಃ ॥೮॥ ಸಮೀಪಗ್ರಾಮತಃಕಶ್ಚಿತ್
ಪರಿಣೀತೋಧರಾಧಿಪಃ । ಪತ್ನ್ಯಾಜಾತುಸಹಾಗಚ್ಛನ್ ವೇಮನಾರಾಧ್ಯಮ
ಗ್ರತಃ ॥೯॥ ದೃಷ್ಟ್ವಾನನಾಮಸೋಽಪ್ಯಾರಾತ್ಪುಷ್ಪಪಚಯಮಾಚರನ್ ।
ತುರಗಾತ್ತರಥಾರೂಢಂ ಪ್ರವಿಲೋಕ್ಯನರಾಧಿಪಂ ॥೧೦॥ ತ್ರಿಕಾಲವೃತ್ತವೇದಿ
ತ್ವಾತ್ತಂಜ್ಞಾತ್ವಾಽಲ್ಪಾಯುಷಂತದಾ । ಅಕೃತ್ವಾಽಽಶಿಷಮನ್ಯತ್ರಜಗಾಮಬುಧ
ಪುಂಗವಃ ॥೧೧॥ ಪ್ರಣತೋಽಸ್ಮಿನಕುರ್ವಂತಿ ಮಮಾಶೀರುಕ್ತಿಮಪ್ಯಮೀ ।
ಕಿಂಮಾಹಸತಿಭಾರ್ಯೇತಿ ಹ್ರಿಯಾಬಹುಳಯಾನ್ವಿತಃ ॥ ೧೨ ॥ ನಮೋವಾಕ್ಯಂ
ನಶೃಣ್ವಂತಿಕಿಂವೈತೇಮದುದೀರಿತಂ । ಗಮಿಷ್ಯಂತಿಕಥಂಶ್ರುತ್ವಾಕಿಂನಪಶ್ಯಂತಿ
ಮಾಂಜಲಿಂ ॥೧೩॥ ಪಶ್ಯಂತಿಚೇದವಸ್ಥಾನಂತೂಷ್ಣೀಂಗರ್ವೋಥವೇತಿಸಃ ।

---

ಜನರಿಗೆ ಹೋಗಿದ್ದ ಪ್ರಾಣವನ್ನು ಮತ್ತೆ ಉಂಟುಮಾಡಿಕೊಡತಕ್ಕವನಾಗಿಯೂ, ಲೋಕಶ್ರೇಷ್ಠನಾಗಿಯೂ, ಗಾಳಿ-ನೀರು-ಬೆಂಕಿ-ಅರಸು-ಕಳ್ಳ ಇವರುಗಳ ಅಹಂಕಾರವನ್ನು ಅಡಗಿಸುವವನಾಗಿಯೂ ॥೭॥ ಹುಲಿ ಮೊದಲಾದ ದುಷ್ಟಮೃಗಗಳ-ಹಾವು ಚೇಳು ಮೊದಲಾದ ವಿಷಜಂತುಗಳ ಅಹಂಕಾರವನ್ನು ನಾಶಗೊಳಿಸುವವನಾಗಿಯೂ, ಸರ್ವಜನರಿಗೂ ಸಂತೋಷಕರನಾಗಿಯೂ ಇರುತ್ತಿದ್ದನು ॥೮॥ ಬಳಿಕ ಬಂದಾಸೊಂದು ದಿವಸ, ಹೊಸದಾಗಿ ಮದುವೆಯಾದ ಒಬ್ಬ ದೊರೆಯು ಹೆಂಡತಿಯೊಡನೆ ಸಮೀಪದ ಹಳ್ಳಿಯಿಂದ ಬರುತ್ತ, ಮುಂಗಡೆಯಲ್ಲಿ ಬರುತ್ತಿರುವ ವೇಮನಾರಾಧ್ಯನನ್ನು ಕಂಡು, ನಮಸ್ಕರಿಸಿದನು. ವಿದ್ವದ್ವರ್ಯನಾದ ಆ ವೇಮನಾರಾಧ್ಯನು ಕೂಡ ಹುವ್ವುಗಳನ್ನೆತ್ತುತ್ತ, ಕುದುರೆ ಕಟ್ಟಿದ್ದ ರಥದಲ್ಲಿ ಕುಳಿತಿರುವ ದೊರೆಯನ್ನು ನೋಡಿ ॥೯-೧೦॥ ತಾನು ತ್ರಿಕಾಲಜ್ಞಾನಿಯಾದುದರಿಂದ, ಆ ದೊರೆಗೆ ಇರುವ ಅಲ್ಪಾಯುಸ್ಸನ್ನು ತಿಳಿದು, ಆತನಿಗೆ ಆಶೀರ್ವಾದವನ್ನು ಮಾಡದೆ ಬೇರೆಕಡೆಗೆ ಹೊರಟುಹೋದನು ॥೧೧॥ ಆ ದೊರೆಯಾದರೋ—" ನಾನು ನಮಸ್ಕರಿಸಿದೆ, ಆದರೂ ನನಗೆ ಇವರು ಆಶೀರ್ವದಿಸುವುದಿಲ್ಲ, ಇದನ್ನು ಕಂಡು ನನ್ನ ಹೆಂಡತಿಯು ಎಲ್ಲಿ ನಗುವಳೋ ಕಾಣೆ, ಎಂದು ಬಹಳವಾಗಿ ನಾಚಿಕೆಗೊಂಡು ॥೧೨॥ ನಾನು ನಮಸ್ಕಾರವೆಂದು ನುಡಿದುದು ಇವರಿಗೇನಾದರೂ ಕೇಳಲಿಲ್ಲವೊ ? ಇಲ್ಲದಿದ್ದರೆ ಆ ಮಾತನ್ನು ಕೇಳಿಯೂ ಇವರು ಸುಮ್ಮನೆ ಹೇಗೆ ಹೋಗುತ್ತಾರೆ ? ನಾನು ಮುಗಿದುಕೊಂಡಿರುವ ಕೈಗಳನ್ನಾದರೂ ಇವರು ನೋಡಲಿಲ್ಲವೊ ? ॥೧೩॥ ಅದನ್ನು ನೋಡಿದ್ದರೂ ಇವರು ಸುಮ್ಮನೆ ಇರಬೇಕಾದರೆ, ಇದೇನು ಅಹಂಕಾರವೊ ? " ಎಂದು ಮನಸ್ಸಿನಲ್ಲಿ ಯೋಚಿಸುತ್ತ, ರಥದಿಂದಿಳಿದು,

ಅವರುಹ್ಯರಥಂಗತ್ವಾ ವಿಧಾಯಾಂಜಲಿಮುಚ್ಚಕೈಃ ||೧೪|| ತುಭ್ಯಂನಮೋಸ್ತ್ವಿತಿಪುರೋಽವ್ಯಾಜಹಾರಮಹೀಪತಿಃ | ಅಕೃತ್ವಾಪುನರಪ್ಯಾಶೀರ್ವಾದಂತೂಷ್ಣೀಂಸ್ಥಿತೇ ಸತಿ ||೧೫||ಈಷತ್ಕ್ರೋಪತ್ರಪಾಭಕ್ತಿಯುತಃಪ್ರಾಹಜನಾಧಿಪಃ| ಮಹಾಭಕ್ತವರಾಶ್ರೇಯಸ್ಕರಾಮಹಿತಭೂಸುರಾಃ ||೧೬|| ಹರವೇಷಧರಾಃ ಪಾಪಹರಾಸ್ಸದ್ಭಕ್ತಿತತ್ಪರಾಃ | ಆರಾಧ್ಯಾಶ್ಶಿವಪಥಾಚಾರ್ಯಾಧೈರ್ಯವಂತೋವಿಚಕ್ಷಣಾಃ ||೧೭|| ಅವಾರ್ಯವೀರ್ಯಾಸ್ಸನ್ಮಾರ್ಗ ವರ್ಯಾಯೂಯಂಗುರೂತ್ತಮಾಃ | ಇತಿಬುದ್ಧ್ಯಾನಮಸ್ಕಾರೇ ಕೃತೇತೂಷ್ಣೀಮವಸ್ಥಿತಿಃ ||೧೮|| ಔಚಿತ್ಯಂವಾಥ ಗಾಂಭೀರ್ಯಂ ಪ್ರಾಭವಂವಾಗುಣೋಽಥವಾ| ಸದ್ಭಕ್ತಿರ್ವಾಮಹತ್ವಂವಾ ಪೂಜ್ಯತಾವಾನಿರೂಪ್ಯತಾಂ ||೧೯|| ಅಸ್ಯಾಮೂರ್ತೇರ್ಮಹಿಮ್ನೋಸ್ಯ ದೇಶಿಕತ್ವಸ್ಯಚಾಸ್ಯತೇ | ಅಸ್ಯ ವೇಷಸ್ಯಕಿಂವೇಯ ಮುಚಿತಾಹಂಕೃತಿಸ್ತವ ||೨೦|| ತ್ವಯಾಶಿಷಿಪ್ರದತ್ತಾಯಾ ಮಪಿಸರ್ಷಪಮಾತ್ರಕಂ | ಆಯುರಾಯಾತಿವಾನಸ್ತ್ವಂ ಜೀವಯೇಃಕಿಂನಿರಾಯುಷಃ || ೨೧ || ಮಾಮುದ್ದಿಶ್ಯಾಗತಾಮೃತ್ಯುರ್ದಾಸೀವಾತವವಕ್ಷ್ಯತಾಂ | ವಿಧಿನಾಲಿಖಿತಂಫಾಲೇನಸ್ಯೆ

---

ಅವರ ಮುಂದಕ್ಕೆ ಹೋಗಿ, ಕೈಮುಗಿದು, ಗಟ್ಟಿಯಾಗಿ||೧೪|| " ನಿಮಗೆ ನಮಸ್ಕಾರ" ಎಂದು ನುಡಿದನು. ವೇಮನಾರಾಧ್ಯನು ಆಗಲೂ ಆಶೀರ್ವಾದವನ್ನು ಮಾಡದೆ ಸುಮ್ಮನಿರಲು ||೧೫|| ದೊರೆಯು ಸ್ವಲ್ಪ ಕೋಪವನೂ ನಾಚಿಕೆಯನ್ನೂ ಭಕ್ತಿಯನ್ನೂ ಹೊಂದಿ, ಹೇಳಿದನು ಏನೆಂದರೆ:-" ಎಲೈ ಗುರೂತ್ತಮರೆ! ನಿಮ್ಮನ್ನು ಮಹಾಭಕ್ತಶ್ರೇಷ್ಠರು, ಒಳ್ಳೆಯದನ್ನು ಮಾಡತಕ್ಕವರು, ಪೂಜ್ಯರಾದ ಬ್ರಾಹ್ಮಣರು, ||೧೬|| ಶಿವಲಾಂಛನವನ್ನು ಧರಿಸಿದವರು, ಪಾಪಪರಿಹಾರಕರು, ಭಕ್ತಿಸಂಪನ್ನರು, ಪೂಜ್ಯರು, ಶಿವಮತಾಚಾರ್ಯರು, ಧೀರರು, ಕುಶಲರು || ೧೭ || ಸಾಮರ್ಥ್ಯಶಾಲಿಗಳು, ಉತ್ತಮಮಾರ್ಗಗಾಮಿಗಳಲ್ಲಿ ಶ್ರೇಷ್ಠರು, ಎಂದು ತಿಳಿದು, ನಾನು ನಮಸ್ಕರಿಸಿದರೆ, ಸುಮ್ಮನಿರುವುದು ನಿಮಗೆ ಯೋಗ್ಯವೆ? ಅಥವಾ ಅದೊಂದು ಗಾಂಭೀರ್ಯವೆ? ಸಾಮರ್ಥ್ಯವೆ ? ಸದ್ಗುಣವೆ ? ಸದ್ಭಕ್ತಿಯೆ ? ದೊಡ್ಡತನವೆ ? ಪೂಜ್ಯತ್ವವೆ? ಹೇಳಿ ||೧೯|| ಈ ನಿಮ್ಮ ಸ್ವರೂಪಕ್ಕೂ ಮಹಿಮೆಗೂ ಈ ಗುರುತ್ವಕ್ಕೂ, ಈ ವೇಷಕ್ಕೂ ಈ ಅಹಂಕಾರವು ತಕ್ಕುದೆ ? ||೨೦|| ನೀನು ಆಶೀರ್ವಾದವನ್ನು ಮಾಡಿದರೆ, ಸಾಸಿವೆಯಷ್ಟಾದರೂ ಆಯುಸ್ಸು ಹೆಚ್ಚುವುದೇ ? ಅಥವಾ ಆಯುಸ್ಸಿಲ್ಲದವರನ್ನು ನೀನು ಬದುಕಿಸುವೆಯೊ ? ||೨೧|| ನನಗಾಗಿ ಬಂದ ಮೃತ್ಯುವು ನೀನು ಹೇಳಿದಂತೆ ಕೇಳುವ ದಾಸಿಯೊ ? ಹೇಳು, ಹಣೆಯಲ್ಲಿ ಬ್ರಹ್ಮನು ಬರೆದುದು ತಪ್ಪಿಹೋಗುವುದೆ ?

ದ್ವಾಕಿಂಬಹೂಕ್ತಿಭಿಃ ॥೧೨॥ ಪ್ರಮೃಜ್ಯಪೂರ್ವಲಿಖಿತಂನಾಲಂಬ್ರಹ್ಮಾ
ಪಿರಕ್ಷಿತುಂ। ವಯಮೇತನ್ನಕುತ್ರಾಪಿ ಜಾನೀಮೋಧರಣೀತಲೇ ॥೧೩॥
ಯೂಯಮಾರ್ಯಾಹಿಜಗತಿಸಂತೋಪ್ಯೇವಂವಿಧಾಯದಿ। ಕಿಮಂಗೀಕುರ್ವತೇ
ಯುಷ್ಮಾನ್ನಿತರಾಂಕೃತಬುದ್ಧಯಃ ॥೧೪॥ ಪ್ರಣಮಂತಿಕಿಮೇವಂಚೇದ್ಭವಂ
ತೋಮಾನವಾಭುವಿ। ಉಕ್ತಾಯಾಮಾಶಿಷಿಭವದ್ವದನೇಕಿಂಪ್ರಹೀಯತೇ ॥೧೫॥
ಕಿಂವಾಯಂಗುರುಮಾರ್ಗಸ್ತೇ ಮಹತ್ತ್ವಂತವತಿಷ್ಠತು। ಕಾಹಾನಿರ್ಭುವಿಮೇ
ಸಂತಿನಾರ್ಯಾಃ ಕರ್ತುಂಕಿಮಾಶಿಷಂ ॥೧೬॥ ತೇನೇತ್ಯುಕ್ತಃಪ್ರತ್ಯುವಾಚತಂವೇ
ಮನಮಹಾಗುರುಃ। ಶ್ವೋಮಧ್ಯಾನ್ಹೇತವಮೃತಿಃಕಿಂವಾದೇನಾತ್ರಭೂಪತೇ
॥೧೭॥ನಾಯಾತ್ಯಾಶೀರ್ಮಮಮುಖೇಕಿಂವಾತವಪುರಾಕೃತಂ। ಶ್ವೋಮೃತಿಸ್ತ
ವನಾತ್ರಾಸ್ತಿಸಂಶಯೋಗಚ ಭೂಪತೇ ॥೧೮॥ ಇತ್ಯುಕ್ತಃಕುಪಿತೋಭೂತ್ವಾ
ತಂಮಹೀಪತಿರಬ್ರವೀತ್। ವಿಷ್ಣುರ್ವಾಸ್ವಸುತಂಪ್ರೇಮ್ಣಾಸಪಾಲಯಿತು
ಮೀಶ್ವರಃ॥೧೯॥ನಿಹಂತುಂವಾಪಿಶಕ್ನೋತಿನಕೋಪೇನಜಲಂಧರಂ। ಬ್ರಹ್ಮಾ

---

ಹೆಚ್ಚುಮಾತನಾಡಿ ಫಲವೇನು? ॥೧೨॥ ಪೂರ್ವಕರ್ಮಾನುಸಾರವಾಗಿ ಹಣೆಯಲ್ಲಿ ಬರೆದಿ
ರುವುದನ್ನು ಅಳಿಸಿ ರಕ್ಷಿಸುವುದಕ್ಕೆ ಬ್ರಹ್ಮನೂ ಸಮರ್ಥನಲ್ಲ. ಹೀಗೆ ನಮಸ್ಕರಿಸಿದ
ವರಿಗೆ ಆಶೀರ್ವದಿಸದಿರುವುದನ್ನು ಭೂಮಿಯಲ್ಲಿ ನಾವೆಲ್ಲೂ ಕೇಳಿ ತಿಳಿಯಲಿಲ್ಲ ॥೧೩॥
ಲೋಕದಲ್ಲಿ ನೀವು ಪೂಜ್ಯರೂ ಸತ್ಪುರುಷರೂ ಆಗಿರುವಿರಲ್ಲವೆ? ನೀವು ಹೀಗೆ ಆಶೀ
ರ್ವದಿಸದವರಾದರೆ, ನಿಮ್ಮನ್ನು ಬುದ್ಧಿವಂತರು ಗುರುಗಳೆಂದು ಅಂಗೀಕರಿಸುವರೆ?
॥೧೪॥ ಹೀಗಾದರೆ ಭೂಮಿಯಲ್ಲಿ ಮನುಷ್ಯರು ನಿಮ್ಮನ್ನು ನಮಸ್ಕರಿಸುವರೆ? ಬಾಯಿ
ಯಲ್ಲಿ ಆಶೀರ್ವಚನವನ್ನು ನುಡಿದರೆ ನೀವು ಕಳೆದುಕೊಳ್ಳುವುದೇನು? ॥೧೫॥ ಇದು
ನಿಮಗೆ ಗುರುಮಾರ್ಗವೆ? ನಿಮ್ಮ ಮಹಿಮೆಯು ಹಾಗಿರಲಿ, ನನಗೆ ಉಂಟಾದ ನಷ್ಟ
ವೇನು? ಭೂಮಿಯಲ್ಲಿ ನನಗೆ ಆಶೀರ್ವಾದವನ್ನು ಮಾಡುವುದಕ್ಕೆ ಇನ್ನಾರೂ ಪೂಜ್ಯ
ರಿಲ್ಲವೆ?" ॥೧೬॥ ಎಂದು ನುಡಿಯಲು, ವೇಮನಗುರೂತ್ತಮನು ಆ ದೊರೆಯನ್ನು
ಕುರಿತು—ಎಲೆ ದೊರೆಯೆ! ವಾಗ್ವಾದವನ್ನು ಮಾಡಿ ಪ್ರಯೋಜನವೇನು? ನಾಳೆ
ಯ ಮಧ್ಯಾಹ್ನಕ್ಕೆ ನಿನಗೆ ಮರಣವು ಸಂಭವಿಸುವುದು. ॥೧೭॥ ನನ್ನ ಬಾಯಲ್ಲಿ ಆಶೀ
ರ್ವಚನವು ಹೊರಡುವುದಿಲ್ಲ. ನಿನ್ನ ಪೂರ್ವಕರ್ಮವೋ ಏನೋ! ದೊರೆಯೆ, ನಾಳೆ
ನಿನಗೆ ಮರಣವು ಸಿದ್ಧ, ಅದರಲ್ಲಿ ಸಂಶಯವಿಲ್ಲ. ಹೋಗು ॥೧೮॥ ಎಂದು ಹೇಳಲು,
ದೊರೆಯು ಕೋಪಗೊಂಡು ಹೇಳಿದನೇನೆಂದರೆ— "ವಿಷ್ಣುವು ಸಹ ಶಿವನ ಫಾಲ
ನೇತ್ರದಿಂದ ಸುಟ್ಟುಹೋದ ತನ್ನ ಮಗನಾದ ಮನ್ಮಥನನ್ನು ಪ್ರೇಮದಿಂದ ರಕ್ಷಿಸು
ವುದಕ್ಕೆ ಸಮರ್ಥನಾಗಲಿಲ್ಲ; ಮತ್ತೂ ಜಲಂಧರಾಸುರನನ್ನು ಸಹ ಕೋಪದಿಂದ

ಪಿಸ್ವಶಿರಸಸ್ತ್ರಾತುಂ ನಶಕ್ನೋತಿ ಗಜಾಸುರಂ ||೩೦|| ನಿಹಂತುಂನಾಪಿಶ ಕ್ನೋತಿ ಕೋಪೇನಮಹತಾವೃತಃ | ನಿಹಂತುಂಕುಪಿತೋಭೂತ್ವಾ ತುಷ್ಟಃ ಪಾಲಯಿತುಂಪುನಃ||೩೧||ಶಕ್ನೋತಿಶ್ರೀಮಹಾದೇವಏವನಾನ್ಯೋಹಿಮಾನವಃ ಶಿವಲಾಂಛನಧಾರೀತಿನಮಸ್ಕಾರೇಕೃತೇಸತಿ||೩೨|| ತನ್ಮಾತ್ರಾದೇವಭೂಯಾ ತ್ರಿಂಭವಾನರ್ಧೇಂದುಶೇಖರಃ | ಭವೇತ್ಸತ್ಯಂಭವದ್ವಾಕ್ಯಂಸರ್ವಂಶ್ವೋಹಂ ಮೃತೋಯದಿ ||೩೩|| ಕುತ್ರಾಪಿತ್ವತ್ಸಮಾಸ್ಸಂತಿನಹ್ಯಾಚಾರ್ಯಾಃಕ್ಷಿ ತಾವಿತಿ | ಅಖರ್ವಗರ್ವವಚನಾನ್ಯುಕ್ತ್ವಾನಿಜಗೃಹಂಯಯೌ ||೩೪|| ತತ ಸ್ಸ್ವಕಾಂತಯಾಸಾಕಂಸ್ವೀಯಾಂತರ್ಭವನೇವರೇ | ಸುರತಾನಂದಜಲಧಿ ಮಗ್ನೋಮನ್ಮಥನಿರ್ಭರಃ ||೩೫|| ಸುರತಾಂತಪರಿಶ್ರಾಂತತನುರ್ನಿದ್ರಾ ಮುಪಾಗಮತ್ | ಅನಂತರಂತದಾಕ್ರಾಂತಡೋಲಾಪರ್ಯಂಕರಜ್ಜುತಃ ||೩೬|| ಉರಗಃಕಶ್ಚಿದಾಗತ್ಯತತ್ಕರಾಂಗುಷ್ಠಮೂಲಕಂ | ದಷ್ಟ್ವಾಽಖಿಲತ ತ್ಸಮುತ್ಥಾನಂಪ್ರಬುದ್ಧಾಥತದಂಗನಾ ||೩೭|| ಸಮುತ್ಥಾಯೋರಗಂವೀ ಕ್ಷ್ಯತ್ರಸ್ತಾಮೂರ್ಛಾಮುಪಾಗಮತ್ | ತದೈವನರನಾಥೋಪಿಮರಣಂಸಮು ಪಾಗತೇ ||೩೮|| ಆದ್ಯಾಃಪ್ರಸಿದ್ಧಾನುಭವವೇದ್ಯಾವೈದ್ಯಾಶ್ಚಶಾಸ್ತ್ರಿಣಃ|

---

ಕೊಲ್ಲಲಾರದೆ ಹೋದನು. ಬ್ರಹ್ಮನು ಕೂಡ ಶಿವನಿಂದ ಕತ್ತರಿಸಲ್ಪಟ್ಟ ತನ್ನ ತಲೆ ಯನ್ನು ಕಾಪಾಡಿಕೊಳ್ಳಲಾರದೆ ಹೋದನು. ಮತ್ತೂ ಮಹಾಕೋಪದಿಂದ ಕೂಡಿ ಗಜಾಸುರನನ್ನು ಕೊಲ್ಲುವುದಕ್ಕೂ ಕೂಡ ಸಮರ್ಥನಾಗಲಿಲ್ಲ. ಕೋಪಿಸಿಕೊಂ ಡರೆ ಕೊಲ್ಲುವುದಕ್ಕೂ ಸಂತೋಷಗೊಂಡರೆ ರಕ್ಷಿಸುವುದಕ್ಕೂ ಶ್ರೀ ಪರಮೇಶ್ವರನೊ ಬ್ಬನೇ ಸಮರ್ಥನಲ್ಲದೆ, ಮತ್ತಾವ ಮನುಷ್ಯನೂ ಸಮರ್ಥನಲ್ಲವಲ್ಲವೆ ? ಶಿವಲಾಂ ಛನವನ್ನು ಧರಿಸಿರುವೆಯೆಂದು ನಿನಗೆ ನಾನು ನಮಸ್ಕರಿಸಿದ ಮಾತ್ರದಿಂದಲೇ ||೩೨|| ನೀನು ಪರಶಿವನಾಗಿ ಹೋಗುವೆಯಾ ? ನಾಳೆ ನಾನು ಸತ್ತರೆ, ನಿನ್ನ ಮಾತೆಲ್ಲವೂ ಸತ್ಯ ವೇಸರಿ.||೩೩||ಭೂಮಿಯಲ್ಲಿ ನಿನಗೆ ಸಮಾನರಾದ ಆಚಾರ್ಯರು ಎಲ್ಲಿಯೂ ಇಲ್ಲವೋ ?" ಎಂದು ಅಹಂಕಾರದ ಮಾತುಗಳನ್ನಾಡಿ, ತನ್ನ ಮನೆಗೆ ಹೋದನು. ||೩೪|| ಬಳಿಕ ತನ್ನ ಹೆಂಡತಿಯೊಡನೆ ಅಂತಃಪುರದಲ್ಲಿ ಸುರತಸುಖಸಮುದ್ರದಲ್ಲಿ ಮುಳುಗಿ, ಬಳಲಿ ದವನಾಗಿ ನಿದ್ರೆಯನ್ನೈದಿದನು.|ತರುವಾಯ ಆವನು ಮಲಗಿದ್ದ ತೂಗುಮಂಚದ ಸರ ಪಣಿಯಿಂದ ಒಂದು ಸರ್ಪವು ಹರಿದುಬಂದು, ಆ ದೊರೆಯ ಕೈಯ ಹೆಬ್ಬೆರಲ ಬುಡ ವನ್ನು ಕಚ್ಚಿ ಹೊರಳಿತು. ಬಳಿಕ ಅವನ ಹೆಂಡತಿಯು ಎಚ್ಚರುಗೊಂಡೆದ್ದು ||೩೭|| ಹಾವನ್ನು ಕಂಡು, ಭಯಪಟ್ಟು ಮೂರ್ಛೆಯನ್ನೈದಿದಳು. ಆಗತಾನೇ ದೊರೆಯು ಕೂಡ ಮರಣವನ್ನೈದಲಾಗಿ.||೩೮|| ಹಳಬರಾಗಿಯೂ ಪ್ರಸಿದ್ಧರಾಗಿಯೂ ಅನುಭವ

ಮಹಾಗಾರುಡಮಂತ್ರಜ್ಞಾಃಸಮಾಗತ್ಯನಿರೀಕ್ಷ್ಯತಂ ‖೩೯‖ ಅಶಕ್ಯಮಿದಮ
ಸ್ಮಾಕಮಿತಿನಿಶ್ಚಿತ್ಯತೇಯಯುಃ| ಕಶ್ಚಿದಾಗತ್ಯಗರುಡಮಂತ್ರಸಿದ್ಧೋವಿಷೋ
ತ್ಕಟಂ ‖೪೦‖ ದಂಷ್ಟ್ರಾಭಾವಂಸಮುದ್ವೀಕ್ಷ್ಯಸಮ್ಯಙ್ನಿಶ್ಚಿತ್ಯಚಾಬ್ರವೀತ್ |
ಬತತೀವ್ರೇಣಸಂದಷ್ಟೋಽಪ್ಯಯಂಶಿವಶಿವಾಹಿನಾ ‖೪೧‖ಕಿಂಸಂಪೂರ್ಣೋಽಭವ
ತ್ಕಾಲೋಽನ್ಯಪತೇರಸ್ಯಸಂಪ್ರತಿ | ಸುಮನೋಮಣಿನಾಗಾಖ್ಯಪುರಾಣಕುಮು
ದಾಕ್ಷಕಾಃ ‖೪೨‖ ಕರ್ಕೋಟಕಾನಿಲಗುಹತಲಪೋತಕವಾಮನಾಃ | ಶಬ
ಲಾಸ್ಯಾಖ್ಯತರಲಮಹೋದರಹವಿರ್ಮುಖಾಃ ‖೪೩‖ ಹೇಮಶಂಖನಖಖ್ಯಾತ
ಹವ್ಯಕರ್ಣಧನಂಜಯಾಃ|ಪರಿವರ್ತಕಸಚ್ಛಂಖನಖಕೋಟನಖಾಭಿದಾಃ‖೪೪‖
ವಾಸುಕ್ಯಾಹ್ವಾರ್ಯಕಮಹಚ್ಛಿಖಿಪಂಚಕರಾಹ್ವಯಾಃ | ಮಿತ್ರನಿಷ್ಠುರಕೋದೀ
ರ್ಣಕುಮುದಾಹ್ವಯಕಲ್ಮಷಾಃ ‖೪೫‖ ಐರಾವತಾಖ್ಯಮಲಿನಾಹ್ವಯತಕ್ಷಕ
ಪುಂಡ್ರಕಾಃ ! ಶೇಷಪಿಂಡಕರೋಚ್ಛಂಡಕಾಲಕೌಶಿಕಸಂಜ್ಞಕಾಃ ‖೪೬‖ ಶಂಖ
ಪಾಲಾಖ್ಯಶಕಲಮುದ್ಗಕೈಲಾಸಕಾದಯಃ | ಸಹಸ್ರಂಸಂತ್ಯಹೀಂದ್ರಾಸ್ತೇಷ್ವ
ಷ್ಟಾನಾಗಾಇತಿಶ್ರುತಾಃ ‖೪೭‖ ಯಾಮಾನಾಂಸ್ವಾಮಿನೋಽಷ್ಟಾನಾಂದಿನ

---

ಶಾಲಿಗಳಾಗಿಯೂ ಇರುವ ವೈದ್ಯರನ್ನೂ ಶಾಸ್ತ್ರಿಗಳನ್ನೂ ಗಾರುಡಮಂತ್ರಜ್ಞರನ್ನೂ ಕರೆಯಿಸಲು, ಅವರುಗಳು ಬಂದು, ಸತ್ತಿರುವವನನ್ನು ನೋಡಿ ‖೩೯‖ ಇದು ನಮಗೆ ಅಶಕ್ಯವೆಂದು ನಿಶ್ಚಯಿಸಿ ಹೊರಟುಹೋದರು. ಮತ್ತೊಬ್ಬ ಗಾರುಡ ಮಂತ್ರಸಿದ್ಧನು ಬಂದು, ಕೋರೆಹಲ್ಲುಗಳಿಂದ ಹೆಚ್ಚಾದ ವಿಷವಿಳಿದಿರುವರೀತಿಯನ್ನು ನೋಡಿ, ಚೆನ್ನಾಗಿ ವಿಚಾರಮಾಡಿ ನಿಶ್ಚೈಸಿ, ಹೇಳಿದನೇನೆಂದರೆ—ಶಿವಶಿವಾ ! ಈತನನ್ನು ಘೋರವಾದ ಸರ್ಪವು ಕಚ್ಚಿರುವುದು ‖೪೧‖ ಈ ದೊರೆಗೆ ಆಯುಃಕಾಲ ಮುಗಿಯಿತೇನೋ ! ಸರ್ಪಗಳಲ್ಲಿ—ಸುಮನೋಮಣಿ, ಪುರಾಣ, ಕುಮುದಾಕ್ಷ, ಕರ್ಕೋಟಕ, ಅನಿಲ, ಗುಹ, ತಲಪೋತ, ವಾಮನ, ಶಬಲಾಸ್ಯ, ತರಲ, ಮಹೋದರ, ಹವಿರ್ಮುಖ, ಹೇಮ, ಶಂಖನಖ, ಹವ್ಯಕರ್ಣ, ಧನಂಜಯ,ಪರಿವರ್ತಕ, ಸಚ್ಛಂಖನಖ, ಕೋಟನಖ, ವಾಸುಕಿ, ಆರ್ಯಕ, ಮಹಚ್ಛಿಖಿ, ಪಂಚಕರ, ಮಿತ್ರ, ನಿಷ್ಠುರಕ, ಉದೀರ್ಣ, ಕುಮುದ, ಕಲ್ಮಷ, ಐರಾವತ, ಮಲಿನ, ತಕ್ಷಕ, ಪುಂಡ್ರಕ, ಶೇಷ, ಪಿಂಡಕರ, ಉಚ್ಛಂಡ, ಕಾಲ, ಕೌಶಿಕ, ಶಂಖಪಾಲ, ಶಕಲ, ಮುದ್ಗ, ಕೈಲಾಸಕ, ಮೊದಲಾದ ಸಾವಿರಾರುತೆರಗಳಿರುತ್ತವೆ. ಅವುಗಳಲ್ಲಿ ಶ್ರೇಷ್ಠವಾದ ೮ ಜಾತಿಯ ಸರ್ಪಗಳುಂಟು. ‖೪೭‖ ಪ್ರತಿಯೊಂದು ದಿನದ ಎಂಟುಜಾವಗಳಿಗೂ ಕ್ರಮವಾಗಿ ಅವೆಂಟೂ ಅಧಿಪತಿಗಳು. ಅವು ತಮ್ಮ ತಮ್ಮ ಜಾವದಲ್ಲಿ ಕಚ್ಚಿದರೆ, ಕಚ್ಚಿಸಿಕೊಂಡವನಿಗೆ ಕಾಲಮೃತ್ಯುವು ಒದಗದೇ ಇದ್ದರೆ, ಗಾರುಡಮಂತ್ರ ತಂತ್ರ

ಸ್ಯಸ್ಯಸ್ಯಯಾಮಕೇ | ದಶಂತಿತೇಷಾಂಗರುಡಮಂತ್ರತಂತ್ರೌಷಧೈರ್ವಿಷಂ॥೪೮॥ ನಿವರ್ತತೇಕಾಲಮೃತ್ಯುಂವಿನಾಮರ್ತ್ಯೋಪಿಜೀವತಿ|ಭೂಯೋಪಿಗಜಮಿತ್ರಾತಿಕುಳಿಕಾದಿಮಹೋರಗಾಃ ॥೪೯॥ ದುಷ್ಟಾಶ್ಚತಂಸಹಸ್ರಾಣಾಂವಿದ್ಯಂತೇಧರಣೀತಲೆ| ತೈಸ್ಸಂದಷ್ಟಸ್ಯನಿರ್ಯಾತಿಕಾಲಮೃತ್ಯುರ್ನಚೇದ್ವಿಷಂ ॥೫೦॥ ವಿನಾಪಿಗಾರುಡಂಕರ್ಮ ಭುವಿಮಂತ್ರೌಷಧಾದಿಭಿಃ | ಏತಾವಂತೋಸ್ಯರದನಾಜಾತಿರಸ್ಯೇಯಮಿತ್ಯಥ॥೫೧॥ ಅಸ್ಮಿನ್ಕಾಲೆಽತ್ರಭಾಗೇಸ್ಮಿನ್ನಂಗೇಸಂದಶತೀತಿಚ| ಸ್ವಸ್ಯೋಕ್ತಮಾರ್ಗಮನತಿಕ್ರಮ್ಯಾಷ್ಟೌಸಂದಶಂತಿಯೆ॥೫೨॥ಗಾರುಡಾನಾಂಕ್ರಿಯಾಣಾಂಹಿಪ್ರಯೋಗಾತ್ಪುರುಷೇಷುತೇ|ಆವಿಶ್ಯಕಥಯಂತ್ಯೇಷಾಂಭಾವಿವೃತ್ತಂಯಥಾರ್ಥತಃ ॥೫೩॥ ಹೃತ್ವಾವಿಷಂಕಾಲಮೃತ್ಯು ಮೃತೇಸಂಜೀವಯಂತಿಚ | ಅಪಮೃತ್ಯಾವಪಿನರೇಸರ್ವದಂತೈರ್ಮಹಾಹಿನಾ ॥೫೪॥ ಸಂದಷ್ಟೇಸತಿತಂಶಕ್ಯಂನಹಿಜೀವಯಿತುಂಭುವಿ| ಏಕದಂತೇನಸಂದಷ್ಟೇಸರ್ಪಸ್ಯಧರಣೀತಲೇ ॥೫೫॥ ವಹ್ನಿಪ್ರತಾಪನೀರಾಭಿಷೇಕಾದ್ಯೈಃಪರಿಶಾಮ್ಯತಿ |ದಂತದ್ವಯೇ

---

ಔಷಧಾದಿಗಳನ್ನು ಪ್ರಯೋಗಿಸಿ, ವಿಷವನ್ನು ಪರಿಹರಿಸಬಹುದು. ಆ ಮನುಷ್ಯನು ಬದುಕಿಕೊಳ್ಳುತ್ತಾನೆ. ಮತ್ತೂ ಭೂತಲದಲ್ಲಿ ಗಜಮಿತ್ರ, ಅತಿಕುಳಿಕ ಮೊದಲಾದ ಮಹಾದುಷ್ಟಸರ್ಪಗಳು ಲಕ್ಷಾಂತರವಿರುತ್ತವೆ. ಅವುಗಳಿಂದ ಕಚ್ಚಲ್ಪಟ್ಟ ಮನುಷ್ಯನ ವಿಷವನ್ನು ಸಹ ಅವನಿಗೆ ಕಾಲಮೃತ್ಯುವು ಸಂಘಟಿಸದಿದ್ದರೆ ಗಾರುಡಕರ್ಮಪ್ರಯೋಗವಿಲ್ಲದಿದ್ದರೂ ಮಂತ್ರೌಷದಾದಿಗಳಿಂದ ಇಳಿಸಬಹುದು. ಮೇಲೆ ಹೇಳಿದ ೮ ಜಾತಿಯ ಸರ್ಪಗಳಲ್ಲಿ ಇಂತಹ ಜಾತಿಯುದಕ್ಕೆ ಇಷ್ಟು ಹಲ್ಲುಗಳು, ಇಂತ ಹಕಾಲದಲ್ಲಿ ದೇಹದಇಂತಹ ಭಾಗದಲ್ಲಿ ಕಚ್ಚುವುದು ಎಂಬ ನಿಯಮವುಂಟು,ಅವುಗಳು ಅಂಥ ನಿಯಮವನ್ನು ಅತಿಕ್ರಮಿಸದೆ ಕಚ್ಚಿದ್ದರೆ, ಹಾಗೆ ಕಚ್ಚಲ್ಪಟ್ಟ ಪುರುಷನಿಗೆ ಗಾರುಡಕ್ರಿಯೆಗಳನ್ನು ಪ್ರಯೋಗಿಸಲು, ಅವುಗಳು ಶರೀರದಲ್ಲಿ ಆವೇಶಗೊಂಡು, ಭವಿಷ್ಯತ್ ಸಂಗತಿಗಳನ್ನು ನಿಜವಾಗಿ ಹೇಳುತ್ತವೆ ॥೫೩॥ ಮತ್ತೂ ಅವನಿಗೆ ಕಾಲಮೃತ್ಯು ವೊದಗದೆ ಇದ್ದರೆ, ಅವನ ವಿಷವನ್ನು ಹೋಗಲಾಡಿಸಿ, ಬದುಕಿಸುತ್ತವೆ. ಮನುಷ್ಯನಿಗೆ ಕಾಲಮೃತ್ಯುವಲ್ಲದೆ ಅಪಮೃತ್ಯುವೊದಗಿದ್ದರೂ,ಮಹಾಸರ್ಪವು ಎಲ್ಲಾ ಹಲ್ಲುಗಳಿಂದಲೂ ಕಡಿದಿದ್ದರೆ ಅಂಥವರನ್ನು ಭೂಮಿಯಲ್ಲಿ ಬದುಕಿಸುವುದು ಅಶಕ್ಯವು. ಭೂಮಿಯಲ್ಲಿ ಸರ್ಪವು ೧ ಹಲ್ಲಿನಿಂದ ಕಚ್ಚಿದ್ದರೆ, ॥೫೫॥ ತಲೆಯಮೇಲೆ ಬೆಂಕಿಯಿಂದಕಾಯಿಸಿ, ನೀರಿನಿಂದ ಅಭಿಷೇಕಮಾಡುವುದೇ ಮೊದಲಾದ ಪ್ರಯೋಗಗಳಿಂದ ವಿಷವು ಇಳಿಯುವುದು. ಎರಡು ಹಲ್ಲುಗಳಿಂದ ಕಚ್ಚಿದ್ದರೆ, ಅದರ ವಿಷವು ಮಹಾ

ನಸಂದಷ್ಟೇಸತಿತಸ್ಯಮಹಾವಿಷಂ ||೫೬|| ಮಹಾಮಂತ್ರೇಣತಂತ್ರೇಣಚಾಪಿ ಶಾಂತಿಮುಪೈತಿಹಿ|ದಂತತ್ರಯೇಽಪಸಂದಷ್ಟೋನರಃಕೃಚ್ಛ್ರೇಣಜೀವತಿ ||೫೭|| ಮಂತ್ರತಂತ್ರೌಷಧೈರ್ಯಾತವಿಷೋಽಭೂತ್ವಾಚಿರಾದ್ಭುವಿ | ಚತುರ್ಭಿರಪಿದಂತ್ರೈಶ್ಚ ಸಂದಷ್ಟೇತ್ವಖಿಲಾಃಕ್ರಿಯಾಃ ||೫೮|| ಮಂತ್ರತಂತ್ರಾದಿಕಾವ್ಯರ್ಥಾಸ್ಸ್ಯುರ್ಹರಿಬ್ರಹ್ಮಣೋರಪಿ | ನತ್ರಾತುಂಶಕ್ಯತೇಮರ್ತ್ಯಮಯಂಕರ್ಕೋಟಕಾಂಶಕಃ ||೫೯|| ಸರ್ಪಶ್ಚತುರ್ಭಿರ್ದಶನೈರದಶದ್ಭೂಮಿಪಾಲಕಂ | ಫಾಲನೇತ್ರೋಮಹಾದೇವೋ ಭುಜಗಾಧಿಪಕಂಕಣಃ ||೬೦|| ಕಾಲಕಾಲಃಕಾಲಕಂಠಸ್ತ್ರಾತುಂಶಕ್ತೋಽಥವಾನವಾ | ಇತ್ಯುದಿಶ್ಯಗತೇತಸ್ಮಿನ್ ಹಾಹೇತಿಕರುಣಾರವೈಃ |೬೧| ಸೋಽರಸ್ತಾಡಂಬಾಂಧವೇಷು ತತ್ಪೌರೇಷ್ವನುಜೀವಿಷು | ರುದತ್ಸುತಸ್ಯಸಾಕಾಂತಾನಿರೀಕ್ಷ್ಯಸ್ವಮನೋರಮಂ |೬೨| ತಸ್ಯಾರ್ಯಸ್ಯವಚಸ್ಸತ್ಯಮಿತಿನಿಶ್ಚಿತ್ಯಚೇತಸಿ | ಸ್ವಕೀಯೇಭ್ಯಸ್ತತ್ಪ್ರಸಂಗಮಶೇಷ ಮವದತ್ತದಾ |೬೩|| ತಂಶ್ರುತ್ವಾಭಾಂಧವಾಸ್ಸರ್ವೇ ಜನನೀಜನಕಾದಯಃ | ತತ್ಸತ್ಯಮಿತಿನಿಶ್ಚಿತ್ಯಕಿಮಾಲಸ್ಯೇನಸಂಪ್ರತಿ ||೬೪|| ಯಾಸ್ಯಾಮಸ್ತತ್ರಮಿಳಿತಾಸ್ಸರ್ವೇ

---

ಮಂತ್ರತಂತ್ರಾದಿಗಳಿಂದ ಶಾಂತಿಗೊಳ್ಳುವುದು. ಮೂರು ಹಲ್ಲುಗಳಿಂದ ಕಚ್ಚಲ್ಪಟ್ಟಿದ್ದ ಮನುಷ್ಯನು ಮಂತ್ರತಂತ್ರೌಷಧಾದಿಪ್ರಯೋಗಗಳಿಂದ ಬಹುಕಷ್ಟದಿಂದ ಬಹುಕಾಲಕ್ಕೆ ವಿಷವಿಳಿದು ಬದುಕುತ್ತಾನೆ. ನಾಲ್ಕು ಹಲ್ಲುಗಳಿಂದ ಕಚ್ಚಿದ್ದರೆ, ಮಂತ್ರತಂತ್ರಾದಿ ಸಕಲ ಕ್ರಿಯೆಗಳೂ ವ್ಯರ್ಥವಾಗುವುವು. ಅಂಥ ಮನುಷ್ಯನನ್ನು ರಕ್ಷಿಸುವುದಕ್ಕೆ ವಿಷ್ಣುಬ್ರಹ್ಮರಿಗೂ ಅಶಕ್ಯವು. ಈ ದೊರೆಗೆ ಕಚ್ಚಿರುವ ಹಾವಾದರೊ ಕರ್ಕೋಟಕಜಾತಿಯುದು ||೫೯|| ಮತ್ತೂ ೪ ಹಲ್ಲುಗಳಿಂದ ಕಚ್ಚಿರುವುದು. ಆದಿಶೇಷನನ್ನೇ ಕಂಕಣವನ್ನಾಗಿ ಮಾಡಿಕೊಂಡಿರುವ---ಹಣೆಗಣ್ಣುಳ್ಳ--ಋಮುನಿಗೆ ಯಮುನಾದ—ವಿಷಕಂಠನಾದ—ಮಹಾದೇವನಾದರೂ ಈತನನ್ನು ರಕ್ಷಿಸುವುದಕ್ಕೆ ಶಕ್ತನಾಗುತ್ತಾನೆಯೋ ಇಲ್ಲವೋ!" ಎಂದು ಹೇಳಿ ಆತನು ಹೊರಟುಹೋಗಲು, ದೊರೆಯ ನಂಟರುಗಳೂ ಪಟ್ಟಣದ ಜನರೂ ಆಳುಗಳೂ ಸಹ, ಹಾ! ಅಯ್ಯೋ! ಎಂದು ದೀನಧ್ವನಿಗಳಿಂದ ಎದೆಯನ್ನು ಬಡಿದುಕೊಂಡು ಅಳುತ್ತಿರಲು, ಆ ದೊರೆಯ ಹೆಂಡತಿಯು ತನ್ನ ಗಂಡನನ್ನು ನೋಡಿ ||೬೨|| ಹಿಂದಿನದಿನದಲ್ಲಿ ನುಡಿದ ಪೂಜ್ಯನ ಮಾತು ಸತ್ಯವಾಯ್ತೆಂದು ಮನಸ್ಸಿನಲ್ಲಿ ನಿಶ್ಚೈಸಿಕೊಂಡು, ಆಗ ತನ್ನ ಬಳಗದವರೊಡನೆ ಆ ಹಿಂದಿನ ದಿನದಲ್ಲಿ ನಡೆದ ಸಂಗತಿಯನ್ನೆಲ್ಲ ಸಾಂಗವಾಗಿ ಹೇಳಿದಳು ||೬೩|| ತಾಯ್ತಂದೆ ಮೊದಲಾದ ಬಂಧುಜನರೆಲ್ಲರೂ ಅದನ್ನು ಕೇಳಿ, ಆರ್ಯರ ವಚನವು ಸುಳ್ಳಾಗದು, ಇನ್ನು ತಡಮಾಡುವುದರಿಂದ ಫಲವೇನು? ಎಂದು ನಿಶ್ಚೈಸಿ

ವಯಮಿಮಂನೃಪಂ । ತದ್ಗೇಹದ್ವಾರನಿಕಟೇನಿಧಾಯಶರಣೋತ್ತಮಂ ॥೬೪॥ ತಮೇವಶರಣಂಪ್ರಾಪ್ತಾ ಭವಿಷ್ಯಾಮಃಕೃಪಾನಿಧಿಃ । ಸಪಾಲಯತಿನೋಪೇಕ್ಷಾಂಕರೋತಿಗುರುಶೇಖರಃ ॥೬೬॥ ಇತಿಗತ್ವಾಥತೇಸರ್ವೆ ತಂಪ್ರಣಮ್ಯಯಥೋಚಿತಂ । ಊಚುರ್ವಾಚಂ ಸಮುದ್ವಿಗ್ನಾವೇಮನಾರಾಧ್ಯಶೇಖರಂ ॥೬೭॥ ಪಂಚತ್ವಮಗಮತ್ಸ್ವಾಮಿನ್ ಭವದ್ಭೃತ್ಯಸ್ತ್ವದಾಶಿಷಂ । ವಿನಾತದೀಯಕಾಲೋಪಿಸಮಾಸನ್ನೋಽಭವತ್ಪ್ರಭೋ ॥೬೮॥ ಕದಾಚಿದಪಿತೇವಾಕ್ಯಮಯಥಾರ್ಥಂ ಕಥಂಭವೇತ್ । ವರಸದ್ಭಕ್ತಹೃದಯಾಂಬುಜಶಯ್ಯಮಹಾಮತೇ॥ ಅಮೋಘಾನೇಕಫಲದಾಶೀರ್ವಾದ ಗುರುಶೇಖರ । ಅಭ್ಯಸ್ತಬಹುಳಾರ್ಥಾನುಗತವೇದಕೃಪಾಕರ ॥ ೭೦ ॥ ಪರಮಾನಂದಭರಿತಪ್ರಸೀದಸುಗುಣಾಂಬುಧೆ । ಅಜಸ್ರಾಭಯದಾನೈಕವಿನೋದಮಹಿಮೋತ್ತಮ ॥೭೧॥ ಅಶ್ರಾಂತಪರಮಾಗಣ್ಯಪುಣ್ಯಭಕ್ತಿವಿವರ್ಧನ । ಸಮಿದ್ಧವೀರಭಕ್ತಾಗ್ರಗಣ್ಯ ಸತ್ಯಸಮಂಚಿತ ॥ ಮಹೇಶಸಮಯಾಚಾರವರೇಣ್ಯ ಮಹಿಮೋನ್ನತ । ಸಮಸ್ತಲೋಕವಿಸ್ತಾರಿ

---

॥೬೪॥ ನಾವೆಲ್ಲರೂ ಕೂಡಿಕೊಂಡು ಅವರ ಬಳಿಗೆ ಹೋಗುವ; ಈ ದೊರೆಯನ್ನು ಅವರ ಮನೆಯ ಬಾಗಿಲಬಳಿಯಲ್ಲಿರಿಸಿ, ಮಹಾಶರಣನಾದ ಆತನನ್ನೇ ಮರೆಹುಗುವ, ದಯಾನಿಕ್ಷೇಪನಾದ ಆ ಗುರೂತ್ತಮನು ಕಾಪಾಡುತ್ತಾನಲ್ಲದೆ ಉಪೇಕ್ಷೆಯನ್ನು ಮಾಡುವುದಿಲ್ಲ ॥೬೬॥ ಎಂದು ಯೋಚಿಸಿಕೊಂಡು, ಅವರೆಲ್ಲರೂ ಹೋಗಿ, ಆ ವೇಮನಾರ್ಯನನ್ನು ಯಥೋಚಿತವಾಗಿ ನಮಸ್ಕರಿಸಿ, ಅತ್ಯಂತ ದುಃಖಗೊಂಡವರಾಗಿ, ನುಡಿದರೇನೆಂದರೆ:—॥೬೭॥ ಸ್ವಾಮಿ! ನಿಮ್ಮ ಸೇವಕನು ನಿಮ್ಮ ಆಶೀರ್ವಾದಕ್ಕೆ ಪಾತ್ರನಾಗದೆ ಮೃತನಾದನು. ಅವನಿಗೆ ಅವಸಾನಕಾಲವೂ ಪ್ರಾಪ್ತವಾಗಿದ್ದಿತು ॥೬೮॥ ನಿನ್ನ ವಾಕ್ಯವು ಯಾವಾಗಲಾದರೂ ಹೇಗೆ ಸುಳ್ಳಾದೀತು? ಶ್ರೇಷ್ಠರಾದ ಭಕ್ತರ ಹೃದಯಕಮಲದಲ್ಲಿ ವಾಸಮಾಡಿಕೊಂಡಿರುವವನೆ! ಮಹಾಬುದ್ಧಿಶಾಲಿಯೇ! ವ್ಯರ್ಥವಾಗದಿರುವ ಅನೇಕಫಲಗಳನ್ನುಂಟುಮಾಡುವ ಆಶೀರ್ವಾದವುಳ್ಳವನೆ ಗುರೂತ್ತಮನೆ! ಅನೇಕಾರ್ಥಗುಂಭಿತವಾದ ವೇದವನ್ನಭ್ಯಾಸಮಾಡಿದವನೆ! ದಯಾಶ್ರಯನೆ! ॥೭೦॥ ಪರಮಾನಂದಪರಿಪೂರ್ಣನೆ! ಎಲೈ ಸದ್ಗುಣಾರ್ಣವನೆ! ಪ್ರಸನ್ನನಾಗು. ಯಾವಾಗಲೂ ಅಭಯಪ್ರದಾನಮಾಡುವ ಮುಖ್ಯವಿನೋದವುಳ್ಳವನೆ! ಮಹಾಮಹಿಮನೆ ॥೭೧॥ ಅತ್ಯಧಿಕವಾದ ಶ್ರೇಷ್ಠವಾದ ಮಹಾಪುಣ್ಯವುಳ್ಳವನೆ! ಸದ್ಭಕ್ತಿಯ ಅಭಿವೃದ್ಧಿಯುಳ್ಳವನೆ! ವೃದ್ಧಿಂಗತರಾದ ವೀರಭಕ್ತರಲ್ಲಿ ಅಗ್ರಗಣ್ಯನೆ! ಸತ್ಯಶಾಲಿಯೆ ॥೭೨॥ ಶಿವಮತಾಚರಣೆಯುಳ್ಳವರಲ್ಲಿ ಶ್ರೇಷ್ಠನೆ! ಎಲ್ಲಾ ಲೋಕಗಳಲ್ಲೂ ಹರಡಿಕೊಂಡಿರುವ ಕೀರ್ತಿಯಿಂದ ಪ್ರಕಾಶಿಸುವವನೆ

ಕ್ಷೀರ್ತಿ ವಿಸ್ಫೂರ್ತಿರಂಜಿತ ॥ ೭೩ ॥ ಪ್ರಸಿದ್ಧ ಶಿವಯೋಗಾನುಗತಮೂರ್ತೇ ನಿರಂಕುಶ । ಪಶುಪಾಶಪತಿಜ್ಞಾನವರ್ತಿನ್ ಶಂಕರಸನ್ನಿಭ ॥೭೪॥ ಕಾಲಾಹಿದಷ್ಟಂ ಕೃಪಯಾತ್ರಾತುಮಸ್ಮಾನ್ ಸವಿಃಾಕ್ಷಿತುಂ । ಪ್ರಭುಸ್ತ್ವಮೇವಸತತಂ ವೇಮನಾರಾಧ್ಯಶೇಖರ ॥೭೫॥ ದೇವಾಸ್ಮಾಕಂ ಭಯಾರ್ತಾನಾಂ ಸಂಪ್ರಯಚ್ಛ ಭಯಂವಿಭೋ । ಅಹಿದಂಷ್ಟ್ರಾಹುತಿರ್ಜಾತಸ್ತ್ವತ್ಕೃಪಾಂಲಬ್ಧುಮಕ್ಷಮಃ ॥೭೬॥ ಅಯಂಕಿಂಚಾನರ್ನ್ ಜಂತುಸ್ತ್ವನಶ್ಯತಿನಧ್ರುವಂ । ಅಯಂತವಾಭವನ್ನಮ್ರಃಪ್ರಾಗೇವಗುರುಸತ್ತಮ ॥೭೭॥ ನಮಸ್ಕಾರಮಕೃತ್ವಾಯಂಭವತೇಯದಿನಶ್ಯತಿ । ತದಾಸ್ಯದೋಷೋಭವತಿನನಾಮುಪ್ರಾಗ್ಗುರೂತ್ತಮ ॥೭೮॥ ಮುಸುಂಡಿಚೌಡಯಾರ್ಯಸ್ಯಪ್ರಣತಾಕಾಪಿಕನ್ಯಕಾ । ತದಾಶೀರ್ವಚಸಂ ಪ್ರಾಪ್ತಾನಕಿಂಪೂರ್ವಂಯಥಾರ್ಥತಃ ॥೭೯॥ ಕರ್ತಾಶಿಷಸ್ತತಃಕನ್ಯಾಂ ಮೃತಾಂನಾಜೀವಯತ್ಸಕಿಂ । ಸಾಲ್ಪಾಯುಷೇತಿಮತ್ವಾಸ್ಯಾನಾಕರೋತ್ಸಕಿಮಾಶಿಷಂ ॥೮೦॥ ತಾತೇಸ್ವಪುತ್ರೀಂಕುಣಪಂನಿಧಾಯಾಗ್ರೇಸ್ಯಭೋಪ್ರಭೋ। ತವಾಪಿಸ್ಯಾದ್ವ್ಯಥಾಶೀಃಕಿಮಿತಿನತ್ವಾಪದಾಬ್ಜಯೋಃ ॥೮೧॥ ಅನುತ್ಥಿತೇನಕಿಂ

---

॥೭೩॥ ಪ್ರಸಿದ್ಧ ಶಿವಯೋಗದಿಂದ ಪ್ರಸನ್ನನಾದವನೆ! ಮತ್ತೊಬ್ಬರ ತಡೆಯಿಲ್ಲದವನೆ! ಪಶುಪಾಶಪತಿಯೆಂಬ ಪದಾರ್ಥತ್ರಯದ ವಿಜ್ಞಾನದಿಂದ ಕೂಡಿದವನೆ! ಶಿವಸಮಾನನೆ ॥೭೪॥ ಭೋವೇಮನಾರಾಧ್ಯಪುಂಗವನೇ! ಸರ್ಪದಷ್ಟನಾದ ಈತನನ್ನು ದಯದಿಂದ ಸಂರಕ್ಷಿಸುವುದಕ್ಕೂ ನಮ್ಮನ್ನು ಸಂರಕ್ಷಿಸುವುದಕ್ಕೂ ನೀನೇ ಯಾವಾಗಲೂ ಮರ್ಥನು ॥೭೫॥ ಸ್ವಾಮಿಾ! ಭಯದಿಂದ ಪೀಡಿತರಾದ ನಮಗೆ ಅಭಯದಾನವನ್ನು ಮಾಡು. ನಿಮ್ಮ ದಯೆಯನ್ನು ಪಡೆಯುವುದಕ್ಕೆ ಅನರ್ಹನಾದ ಈತನು ಸರ್ಪದ ಕೋರೆಹಲ್ಲಿಗೆ ಆಹುತಿಯಾದನು ॥೭೬॥ ನಿನಗೆ ನಮಸ್ಕರಿಸಿದ ಪ್ರಾಣಿಯು ನಿಜವಾಗಿಯೂ ನಾಶವಾಗುವುದಿಲ್ಲ ಎಲೈ ಗುರುಶ್ರೇಷ್ಠನೆ! ಈ ರಾಜನಾದರೊ ಮೊದಲೇ ನಿನಗೆ ನಮಸ್ಕರಿಸಿರುತ್ತಾನೆ॥೭೭॥ ಈತನು ನಿನಗೆ ನಮಸ್ಕರಿಸದೆ ಸತ್ತಿದ್ದರೆ ಆಗ ಇವನದೇ ತಪ್ಪು, ಹಾಗಲ್ಲದೆ ಮೊದಲೇ ನಿನಗೆ ನಮಸ್ಕರಿಸಿರುವನು. ॥೭೮॥ ಪೂರ್ವದಲ್ಲಿ ಮುಸುಡಿಚೌಡಯ್ಯನಿಗೆ ನಮಸ್ಕರಿಸಿದ ಒಬ್ಬಾಕೊಬ್ಬ ಕನ್ನೆಯು ಆತನಿಂದ ಆಶೀರ್ವಾದವನ್ನು ಪಡೆಯಲಿಲ್ಲವೆ? ॥೭೯॥ ಮತ್ತೂ ಆಶೀರ್ವಾದವನ್ನು ಮಾಡಿದ ಆ ಚೌಡಯ್ಯನು, ಒಳಿಕ ಸತ್ತ ಆಕೆಯನ್ನು ಬದುಕಿಸಲಿಲ್ಲವೆ? ಆಕೆಯು ಅಲ್ಪಾಯುಷ್ಯಳೆಂಬುದನ್ನು ತಿಳಿದು ಆತನು ಆಶೀರ್ವಾದವನ್ನು ಮಾಡದೆಹೋದನೆ? ॥೮೦॥ ಆಕೆಯ ತಂದೆಯು ಮಗಳ ಹೆಣವನ್ನು ಚೌಡದೇವನಮುಂದೆ ಇರಿಸಿ, ಅವರ ಪಾದಕ್ಕೆ ನಮಸ್ಕರಿಸಿ, ಸ್ವಾಮಿಾ ನಿಮ್ಮ ಆಶೀರ್ವಾದವು ಹುಸಿಯಾಗಬಹುದೇ? ॥೮೧॥ ಎಂದು ಹೇಳಿ, ಮೇಲಕ್ಕೇಳದೆ ಬಿದ್ದಿರಲು, ಮೂರು

ಪ್ರಾದಾದಾಯುಸ್ತ್ರೈಲೋಕ್ಯವಿಶ್ರುತಂ । ಭಕ್ತಾನಾಂಭಕ್ತಿಮಾಹಾತ್ಮ್ಯೆ
ಸ್ಮೃತೆ ಕಿಂ ವೇದವಮದ್ಭುತಂ ॥೮೩॥ ತಸ್ಮಾದಸ್ಮಾನ್ ಕಟಾಕ್ಷೇಣ ಸಿರೀ
ಕ್ಷ್ಯಸ್ಮೈಕೃಪಾನಿಧೆ । ಪ್ರಾಣದಾನಂಕುರುಸ್ವಾಮಿನ್ನಿತಿನತ್ವಾಪುನಃಪುನಃ॥
ಶರಣಾಗತಸಂರಕ್ಷಾಬಿರುದಂಭವತಾಮಹೋ । ಕಿಂ ವಿಸ್ಮರ್ತುಂ ಸಮುಚಿತ
ಮಭಯೆಯಾಚಿತೇಸತಿ ॥೮೪॥ ತೂಷ್ಣೀಂಭಾವೋಹಿಭವತಾಂಯುಕ್ತಃ ಕಿಂ
ಗುರುಸತ್ತಮ।ಸರ್ವಾಶ್ರಿತೇಽನ್ಯಥಾಭಾವೋವೀರಭಕ್ತೇರುತೋಽಚಿತಃ ॥೮೫॥
ತ್ವಮೇವದಿಗಿತಿಪ್ರೋಕ್ತೆ ಕಿಮುತ್ಯಕ್ತುಂತವೋಚಿತಂ । ಸ್ಥಾನಂಗತಿರ್ಮತಿ
ಸ್ಸರ್ವಂ ತ್ವಮೇವೇತ್ಯುದಿತೇಸತಿ ॥೮೬॥ ಉಪೇಕ್ಷಾ ಭಕ್ತಿಮಾರ್ಗಸ್ಯಮತಂ
ಕಿಂಶುಭದರ್ಶನ ।ಇತಿ ಪ್ರಾರ್ಥಯಮಾನಾಸ್ತೇಪ್ರಣಮಂತಃಪದಾಬ್ಜಯೋಃ।
ಸಂಸ್ತುವಂತಃ ಪ್ರಾಣದಾನಂಯಾಚಮಾನಾಃ ಕೃಪೇಕ್ಷಣಂ । ಅವಸನ್ನಾಂಕ್ಷ
ಮಾಣಾಸ್ಸವೇಮನಾರಾಧ್ಯಶೇಖರಃ ॥೮೭॥ ನಿರೀಕ್ಷ್ಯತಾನ್ ಕೃಪಾದೃಷ್ಟ್ಯಾಭ
ಕ್ತಿಮಾಹಾತ್ಮ್ಯವಿಸ್ಮೃತಿಂ । ಸಂಸ್ಮೃತ್ಯಶರಣಂಪ್ರಾಪ್ತಂ ನರಂತ್ರಾತುಮಶ
ಕ್ತತಾ ॥೮೮॥ ಶಿವಸದ್ಭಕ್ತಿಮಾಹಾತ್ಮ್ಯಕ್ಷತಿರೇಷಾನಕಿಂಭುವಿ । ಉದ್ಘಾಟ್ಯ

---

ಲೋಕಕ್ಕೂ ಆಶ್ಚರ್ಯವಾಗುವಹಾಗೆ ಆಕೆಗೆ ಆಯುಸ್ಸನ್ನು ದಯಪಾಲಿಸಲಿಲ್ಲವೆ?
ಭಕ್ತರ ಭಕ್ತಿಮಹತ್ತ್ವವನ್ನು ನೆನಸಿಕೊಂಡರೆ ಇದೇನಾಶ್ಚರ್ಯವೆ? ॥೮೩॥
ಆದುದರಿಂದು ಎಲೈ ದಯಾನಿಧಿಯೆ, ನಮ್ಮನ್ನು ಕಡೆಗಣ್ಣಿನಿಂದ ನೋಡಿ, ಈತನಿಗೆ
ಪ್ರಾಣದಾನವನ್ನು ಮಾಡು, ಎಂಬದಾಗಿ ಪುನಃಪುನಃ ನಮಸ್ಕರಿಸಿ, ॥೮೪॥ ಶರಣಾ
ಗತರಾದವರನ್ನು ಸಂರಕ್ಷಿಸುವನೆಂಬ ನಿನ್ನಬಿರುದನ್ನು ನೀನೇ ಮರೆಯಬಹುದೆ?
ಆಶ್ಚರ್ಯ! ಅಭಯವನ್ನು ಬೇಡಿದರೆ ಸುಮ್ಮನಿರುವುದು ನಿಮಗೆ ಉಚಿತವೇ? ಎಲೈ
ಗುರುಶ್ರೇಷ್ಠನೆ, ಮರೆಹೊಕ್ಕವನಲ್ಲಿ ವಾತ್ಸಲ್ಯವನ್ನು ತೋರಿಸದೆಹೋಗುವುದು
ವೀರಭಕ್ತಿಗೆ ಉಚಿತವೆ? ॥೮೫॥ ನೀನೇ ನಮಗೆ ದಿಕ್ಕು ಎಂದು ಹೇಳಿದರೆ ಉಪೇ
ಕ್ಷಿಸಿ ಬಿಟ್ಟುಬಿಡುವುದು ನಿನಗೆ ಯೋಗ್ಯವೆ? ನೋಡಿದವರಿಗೆ ಮಂಗಳವನ್ನುಂಟು
ಮಾಡುವ ಎಲೈ ಸ್ವಾಮಿಯೆ! ನೀನೇ ನಮಗೆ ಪ್ರಾಪ್ಯಸ್ಥಾನ, ಗತಿ ಮತಿಯೆ
ಲ್ಲವೂ ನೀನೇ ಎಂದು ನಾವು ಹೇಳುತ್ತಿರಲಾಗಿ ॥೮೬॥ ಉಪೇಕ್ಷಿಸುವುದು ನಿನ್ನ
ಭಕ್ತಿಮಾರ್ಗಕ್ಕೆ ಸಮ್ಮತವಾದುದೆ? ಎಂಬುದಾಗಿ ಹೇಳಿ ಪ್ರಾರ್ಥಿಸುತ್ತ, ಅವರೆ
ಲ್ಲರೂ ವೇಮನಾರಾಧ್ಯಪಾದಕಮಲಕ್ಕೆ ನಮಸ್ಕರಿಸಿ, ಸ್ತುತಿಸಿ, ಪ್ರಾಣದಾನವನ್ನು
ಬೇಡುತ್ತಲೂ, ಕರುಣಾದೃಷ್ಟಿಯನ್ನು ಅಪೇಕ್ಷಿಸುತ್ತಲೂ ಇದ್ದರು. ಆಗ ವೇಮ
ನಾರಾಧ್ಯನು ಅವರುಗಳನ್ನು ದಯಾವಲೋಕನದಿಂದ ನೋಡಿ, ಶಿವಭಕ್ತಿಯ
ಮಹಿಮೆಯನ್ನು ನಾನು ಮರೆತಿದ್ದೆನಲ್ಲಾ ಎಂದು ಸ್ಮರಿಸಿ ಕೊಂಡು, ಭೂಮಿಯಲ್ಲಿ ಶರ

ಭಾಷಿತೇ ಮೂರ್ಖಭಾವೇನ ಸಪರಿಹಾಸನಂ ॥೯೦॥ ಪ್ರಕೋಪನಂ ಚ ಸಾಮರ್ಥ್ಯ
ನ್ಯೂನತಾಯೈ ನ ಕಿಂ ಭುವಿ । ಲಕ್ಷ್ಯೀಕೃತ್ಯ ಮಹಾದೇವ ಭಕ್ತಿಮುಕ್ತೇ ಸತಿ ಸ್ವ
ಯಂ ॥೯೧॥ ಶ್ಲಥೀಕೃತೇ ಪುರಾರಾತಿಸ್ಸದಾ ಹಸತಿ ಮಾಂ ನ ಕಿಂ । ಸಂಪ್ರೇಷಿತೇ ಭಟೇ
ಭರ್ತ್ರಾ ದೃಷ್ಟ್ವಾ ಶತ್ರುಕದಂಬಕಂ ॥೯೨॥ ಪಲಾಯಿತೇ ಸತಿ ಭಯಾತ್ ಕಿಮುತ
ದ್ವಿರುದಂ ಭುವಿ । ಸಂಯಾಚಿತೇ ಪ್ರಾಣದಾನೇ ದರ್ಶಿತೇ ಭಕ್ತಿವೈಭವೇ ॥೯೩॥
ಪ್ರಾಣಾನಾಂ ವಂಚನಂ ಕಿನ್ನು ವೀರತೇತಿ ವದಂಸ್ತತಃ । ಆಹೂಯ ಶಿವಸದ್ಭ
ಕ್ತಾನ್ನತ್ವಾ ಸದ್ಭಕ್ತಿಪೂರ್ವಕಂ ॥೯೪॥ ಭವ್ಯಸಿಂಹಾಸನಾಸೀನಾನ್ ಕೃತ್ವಾ ತಾನಾ
ದರಾನ್ವಿತಃ । ಉಘೇ ಶಬ್ದೇ ಜೃಂಭಮಾಣೇ ತದಾ ಜಯಜಯಧ್ವನೌ ॥೯೫॥ ಕವಿಪಾ
ಠಕಸಂದೋಹೈಃ ಸ್ತೋತ್ರೇ ವಿರಚಿತೇ ಸತಿ । ವಾದ್ಯಘೋಷೇ ವಾದಿತೇ ತೇಷಾಂ ಪಾ
ದಾನ್ ಪ್ರಕ್ಷಾಳ್ಯ ಭಕ್ತಿತಃ ॥೯೬॥ ಕುಂಭೇಷ್ವಾಪೂರ್ಯ ತತ್ಪಾದಜಲಂ ಸಂವೇಷ್ಟ್ಯ ವಿ
ಚಾಂಬರೈಃ । ಸಭಾಸ್ಥಲೇ ಸ್ಥಾಪಯಿತ್ವಾ ಕುಂಭಾನಭ್ಯರ್ಚ್ಯ ತಾನಥ ॥೯೭॥
ಗಂಧಮಾಲ್ಯಾಕ್ಷತೈರ್ಭಕ್ತಾನ್ ಸಂಪೂಜ್ಯಾತ್ಯಂತಭಕ್ತಿತಃ । ಬಹುಘಂಟಾ
ರವೈಃ ಕೀರ್ಣಾನ್ ಧೂಪದೀಪಾದಿಕಾನಪಿ ॥೯೮॥ ವಿಭೂತಿಮಪಿತಾಂಬೂಲಂ

---

ಣಾಗತನಾದ ಮನುಷ್ಯನನ್ನು ಸಂರಕ್ಷಿಸಲಾರದೆ ಹೋಗುವುದು ಶಿವಭಕ್ತಿಮಹ
ತ್ವಕ್ಕೆ ಕುಂದಲ್ಲವೆ ? ಇದ್ದುದನ್ನು ಎತ್ತಿ ಆಡಿದರೆ ಮೂರ್ಖತನದಿಂದ ಪರಿಹಾಸ್ಯ
ಮಾಡುವುದೂ ಕೋಪಮಾಡುವುದೂ ಸಹ ತನ್ನ ಸಾಮರ್ಥ್ಯದ ಕೊರತೆಯನ್ನೇ
ಪ್ರದರ್ಶಿಸತಕ್ಕುದಲ್ಲವೆ? ಶಿವಭಕ್ತಿಯನ್ನು ಗುರಿಯಾಗಿಟ್ಟುಕೊಂಡು ಹೇಳಿದರೆ
ಅದನ್ನು ನಾನು ಅಲಕ್ಷ್ಯಮಾಡಿಬಿಟ್ಟರೆ ಶಿವನು ನನ್ನನ್ನು ನೋಡಿ ಯಾವಾಗಲೂ
ನಗುವುದಿಲ್ಲವೆ ? ಪ್ರಭುವಿನಿಂದ ಯುದ್ಧಕ್ಕೆ ಕಳುಹಿಸಿಕೊಡಲ್ಪಟ್ಟ ಭಟನು ಶತ್ರು
ಸಮೂಹವನ್ನು ನೋಡಿ ॥೯೨॥ ಭೀತಿಯಿಂದ ಓಡಿದರೆ ಅದೊಂದು ಬಿರುದೆ?
ಭಕ್ತಿಮಹತ್ತ್ವವನ್ನು ನಿದರ್ಶನಮಾಡಿತೋರಿಸಿ ಪ್ರಾಣದಾನವನ್ನು ಬೇಡಿದರೆ, ವಂಚಿ
ಸುವುದು ವೀರತನವೆ? ಎಂದು ಹೇಳುತ್ತ, ಬಳಿಕ ಶಿವಭಕ್ತರುಗಳನ್ನು ಕರೆಯಿಸಿ, ಅವ
ರಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ ॥೯೪॥ ಆದರದಿಂದ ಸಿಹ್ಮಾಸನದಮೇಲೆ ಕುಳ್ಳಿ
ರಿಸಿ, ಆಗ ಉಘೆ ಎಂಬ ಶಬ್ದವೂ ಜಯಜಯವೆಂಬ ಧ್ವನಿಯೂ ತುಂಬಿಕೊಂಡಿರಲು
॥೯೫॥ ಕವಿಗಳೂ ಸ್ತುತಿಪಾಠಕರೂ ಸ್ತೋತ್ರಮಾಡುತ್ತಿರಲು, ವಾದ್ಯಗಳು ಬಾಜಿಸ
ಲ್ಪಡುತ್ತಿರಲು, ಆ ಶಿವಭಕ್ತರುಗಳ ಪಾದಗಳನ್ನು ಭಕ್ತಿಯಿಂದ ತೊಳೆದು ॥೯೬॥
ಆ ಪಾದತೀರ್ಥವನ್ನು ಕಲಶಗಳಲ್ಲಿ ತುಂಬಿ, ಮೇಲೆ ವಸ್ತ್ರಗಳನ್ನು ಹೊದ್ದಿಸಿ, ಬಳಿಕ
ಸಭೆಯಲ್ಲಿಟ್ಟು ಅವುಗಳನ್ನು ಪೂಜಿಸಿ ॥೯೭॥ ಶಿವಭಕ್ತರುಗಳನ್ನು ಗಂಧ ಹೂವು
ಅಕ್ಷತೆಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ, ಗಂಟೆಗಳನ್ನು ಬಾಜಿಸುತ್ತ, ಧೂಪದೀ
ಪಾದಿಗಳನ್ನು ಸಮರ್ಪಿಸಿ ॥೯೮॥ ವಿಭೂತಿವೀಳೆಯವನಿತ್ತು, ಬಳಿಕ ಸಂತೋಷದಿಂದ

ಸಮರ್ಪ್ಯಾನಂತರಂಮುದಾ | ಪುಷ್ಪಾಂಜಲಿಂವಿಧಾಯತ್ರಿಃ ಪ್ರದಕ್ಷಿಣಮು
ಪೇತ್ಯಚ || ಪ್ರಣಮ್ಯಪರಯಾಭಕ್ತ್ಯಾತೇಷಾಮಾಜ್ಞಾಮವಾಪ್ಯಚ | ಪ್ರಾ
ಹಿಣೋದ್ಭೂಪತಿಶವಮಾನೇತುಂತಸ್ಯ ಬಾಂಧವಾನ್ ||೧೦೦|| ವಿವೃತಾಸ್ಯೇತ್ರಿವಿ
ಕಟೇ ನಿಷ್ಕಂಪೇಕ್ಷಣತಾರಕೇ | ಸಮುಚ್ಛೂನೋಷ್ಠಯುಗಳೇಮುಕುಳೀಕೃತ
ಪಕ್ಷ್ಮಣಿ ||೧೦೧|| ಸಮಾನತಕಪೋಲೇಽತಿ ಮೃದೂಚ್ಛೂನೋರುನಾಸಿಕೇ |
ಹರಿದ್ದಂತೇವಿನಿರ್ಯಾತಲಾಲಾಜಲಜುಗುಪ್ಸಿತೇ ||೧೦೨|| ಆಮುಕ್ತರಂಧ್ರೇವಿಭ್ರ
ಷ್ಟಕೇಶಬಂಧೇವಿಭೀಷಣೇ | ವಿಚ್ಛಾಯಾಂಗೇ ಸಮಾಧ್ಮಾತಕುಕ್ಷೌವಿಸ್ರಸ್ತಕಂ
ಧರೇ ||೧೦೩|| ಭುಗ್ನಪೃಷ್ಠೇಪರಿಧ್ವಸ್ತಸಂಧೌ ನೀರಕ್ತಚರ್ಮಣಿ | ಅತಿದುರ್ಗಂ
ಧಭರಿತೇ ದುರ್ಲಕ್ಷ್ಯೇಽತೀವಗರ್ಹಿತೇ ||೧೦೪|| ಉತ್ಪತನ್ನಿಪತತ್ಸಾಂದ್ರಮಕ್ಷಿ
ಕಾಝಂಕೃತಾಂಚಿತೇ | ದ್ಭೂಪತಿಶವೇಛನ್ನನಾಸಿಕೇಷುಜುಗುಪ್ಸಯಾ||೧೦೫||
ಭುವಿನಿಷ್ಠೀವನಂಶೀಘ್ರಂ ಕುರ್ವತ್ಸ್ವದ್ವೀಕ್ಷ್ಯದೂರತಃ | ಜನೇಷುಸತ್ಸ್ವ
ಪಸೃತೇಷ್ವಾಶುಬಂಧುಭಿರಾಕುಲೈಃ ||೧೦೬|| ಸಭಾಂತರಂಸಮಾನೀತೇ ತೇಷಾ

---

ಪುಷ್ಪಾಂಜಲಿಯನ್ನರ್ಪಿಸಿ, ಮೂರುಬಾರಿ ಪ್ರದಕ್ಷಿಣೆಯನ್ನು ಮಾಡಿ ||೯೯|| ಅತ್ಯಂತ
ಭಕ್ತಿಯಿಂದ ನಮಸ್ಕರಿಸಿ, ಅವರಪ್ಪಣೆಯನ್ನು ಪಡೆದು, ದೊರೆಯ ಹೆಣವನ್ನು ತರುವು
ದಕ್ಕೆ ಅವನ ನಂಟರನ್ನು ಕಳುಹಿಸಿದನು ||೧೦೦|| ಆ ದೊರೆಯ ಹೆಣವು ಬಾಯ್ದೆರೆ
ದುಕೊಂಡು ಅತಿವಿಕಾರವಾಗಿಯೂ, ನಟ್ಟಕಣ್ಣುಗುಡ್ಡೆಗಳುಳ್ಳದಾಗಿಯೂ, ಊದಿ
ಕೊಂಡಿರುವ ತುಟಿಗಳುಳ್ಳದಾಗಿಯೂ ಮುಚ್ಚಿದ ರೆಪ್ಪೆಗಳುಳ್ಳದಾಗಿಯೂ ||೧೦೧||
ಒಳಕ್ಕೆ ಹತ್ತಿದ ಕೆನ್ನೆಯುಳ್ಳದಾಗಿಯೂ, ಉಬ್ಬಿ ಮೆತ್ತಗಿರುವಮೂಗುಳ್ಳದಾಗಿಯೂ
ಹಸುರಾದಹಲ್ಲುಗಳುಳ್ಳದಾಗಿಯೂ, ಜೊಲ್ಲು ಹೊರಕ್ಕೆ ಸುರಿದಿರುವಕಾರಣ ಜುಗು
ಪ್ಸೆಗೊಳಿಸುವುದಾಗಿಯೂ ||೧೦೨|| ತೆರೆದುಕೊಂಡಿರುವ ಮಲರಂಧ್ರಗಳುಳ್ಳದಾ
ಗಿಯೂ, ಬಿಚ್ಚಿಹೋದ ತಲೆಗಂಟುಳ್ಳದಾಗಿಯೂ, ಭೀಕರವಾಗಿಯೂ, ಕಾಂತಿ
ಹೀನವಾದ ದೇಹವುಳ್ಳದಾಗಿಯೂ, ಉಬ್ಬಿದ ಹೊಟ್ಟೆಯುಳ್ಳದಾಗಿಯೂ, ಸಡಿಲ
ಗೊಂಡ ಕೊರಲುಳ್ಳದಾಗಿಯೂ ||೧೦೩|| ಕುಗ್ಗಿದಬೆನ್ನುಳ್ಳದಾಗಿಯೂ, ಬಿಚ್ಚಿ
ಹೋದ ಕೀಲುಗಟ್ಟುಗಳುಳ್ಳದಾಗಿಯೂ, ಬಲು ಕೆಟ್ಟವಾಸನೆಯಿಂದ ತುಂಬಿದು
ದಾಗಿಯೂ,ನೋಡುವುದಕ್ಕಶಕ್ಯವಾಗಿಯೂ, ನಿಕೃಷ್ಟವಾಗಿಯೂ||೧೦೪|| ಜೊಯ್ಯ
ನೆ ಹಾರಿ ಮುತ್ತುತ್ತಿರುವ ನೊಣಗಳುಳ್ಳದಾಗಿಯೂ ಇರುತ್ತಿರಲು, ಅದನ್ನು ಜನರು
ನೋಡಿ, ಜುಗುಪ್ಸೆಯಿಂದ ಮೂಗನ್ನು ಮುಚ್ಚಿಕೊಂಡು,ನೆಲದಮೇಲೆ ಉಗುಳಿ ದೂರ
ವಾಗಿ ಹೊರಟುಹೋಗುತ್ತಿರಲು,ನಂಟರುಗಳು ಬೇಗನೆ ಆದನ್ನು ಸಭೆಗೆ ತಂದಿಟ್ಟರು.
ಪಾಪಸಮೂಹವೆಂಬ ಗೋಡೆಗೆ ಬೀಸುವ ಕಲ್ಲಾದವನೂ, ಪ್ರಖ್ಯಾತಕೀರ್ತಿಯುಳ

ಕ ಪದಾಂಬುನಾ । ಪ್ರಕ್ಷಾಳ್ಯಸಮ್ಯಕ್ತದ್ದೇಹಂ ಭಕ್ತಶ್ರೀಪಾದಧೂಳಿಭಿಃ ‖ ವಿಮಿಶ್ರಿತಂಭಕ್ತಹಸ್ತಾರ್ಪಿತಭಸ್ಮವಿಧಾಯಸಃ । ತತ್ಪಾದಸಲಿಲಾರ್ದ್ರಾಂಚಕ್ರ್ಯ ತ್ವಾಲಿಪ್ಯಕಳೇಬರಂ ‖೧೦೮‖ ತತಸ್ತ್ರಿಪುಂಡ್ರಮಾರೋಪ್ಯಯಥೋಕ್ತಸ್ಥಾ ನತೋಮುದಾ । ಶಿವಸದ್ಭಕ್ತನಿರ್ಮಾಲ್ಯಸುಮನೋ ಮಾಲಿಕಾವ್ರಜಂ‖೧೦೯‖ ಸಮ್ಯಕ್‌ಸಂಬಧ್ಯತದ್ದೇಹೆ ವೇಮನಾರಾಧ್ಯಸದ್ಗುರುಃ । ಪಾಪಸಂದೋಹ ಗೋಧೂಮಘರಟ್ಟೋವಿಸರದ್ಯಶಾಃ ‖೧೧೦‖ ತಾನಸಂಖ್ಯಾತಸದ್ಭಕ್ತಾನ್ನಮ ಸ್ಕೃತ್ಯಯಥಾವಿಧಿ । ವಿನಯಾವನತೋಭೂತ್ವಾಭಕ್ತಿಮಾಹಾತ್ಮ್ಯವಿಶ್ರುತಃ‖ ವಿಜ್ಞಾಪ್ಯಾಜ್ಞಾಪನಾಂತೇಷಾಂಕೃಪಾಂಚಪ್ರಾಪ್ಯಹರ್ಷಿತಃ । ಪುನಸ್ಸದ್ಭಕ್ತ ಸಂಘಾಮನತ್ವಾ ಸಾಷ್ಟಾಂಗಮುನ್ಮತಃ ‖೧೧೨‖ ಕೃತಪ್ರಮಥರುದ್ರಾಘ ಪುರಾತನಪದಸ್ಮೃತಿಃ । ಭವ್ಯಪಂಚಾಕ್ಷರೀಮಂತ್ರಾನುಷ್ಠಾನಮಹಿಮಾನ್ವಿ ತಃ ‖೧೧೩‖ ಭದ್ರಾಂ ಭಕ್ತಾರ್ಪಿತಾಂ ಭೂತಿಂ ಭೂಪವಕ್ತ್ರೆವಿಕೀರ್ಯಚ । ಉತ್ತಿಷ್ಠೋತ್ತಿಷ್ಠಭೂಪೇತಿಜಗ್ರಾಹಾಸ್ಯಕರಂತತಃ ‖೧೧೪‖ ನೃಪಸ್ಸಜೀವಿ ತೋಭೂತ್ವಾನಿರಸ್ತಾಂತಕಭೀಸ್ತದಾ । ವೇಮನಸ್ವಾಮಿನಃಪಾದಾನನಾಮ

---

ವನೂ ಶಿವಭಕ್ತಿಯ ಮಹತ್ವದಿಂದ ಹೆಸರ್ಗೊಂಡವನೂ ಆದ ವೇಮನಾರಾಧ್ಯ ಗುರುವು ಪೂರ್ವೋಕ್ತವಾದ ಭಕ್ತಪಾದೋದಕದಿಂದ ಆ ಹೆಣವನ್ನು ಚೆನ್ನಾಗಿ ತೊಳೆದು,ಭಕ್ತರುಕೊಟ್ಟ ವಿಭೂತಿಯನ್ನು ಅವರ ಪಾದಧೂಳಿಯೊಡನೆ ಮಿಶ್ರಮಾಡಿ, ನೀರಿನಲ್ಲಿಕಲಸಿ ದೆಹಕ್ಕೆಲ್ಲಾ ಲೇಪಿಸಿ‖೧೦೮‖ಯಾವಯಾವ ಸ್ಥಾನದಲ್ಲಿ ಧರಿಸಬೇಕೋ ಆಆಸ್ಥಳಗಳಲ್ಲಿ ಸಂತೋಷದಿಂದ ತ್ರಿಪುಂಡ್ರವನ್ನು ದರಿಸಿ, ಶಿವಭಕ್ತರು ಉಪಯೋ ಗಿಸಿಕೊಟ್ಟ ನಿರ್ಮಾಲ್ಯದ ಹೂವಿನ ಸರವನ್ನು ‖೧೦೯‖ ಆ ದೇಹಕ್ಕೆ ಕಟ್ಟಿ ‖೧೧೦‖ ಗಣನಾತೀತವಾಗಿರುವ ಶಿವಭಕ್ತರ ಸಮೂಹಕ್ಕೆ ವಿಧಿವತ್ತಾಗಿ ನಮಸ್ಕರಿಸಿ, ವಿನ ಯದಿಂದ ಬಗ್ಗಿ ನಿಂತುಕೊಂಡು, ಆತನಿಗೆ ಪ್ರಾಣದಾನಮಾಡುವ ವಿಷಯದಲ್ಲಿ ಬಿನ್ನೈಸಿಕೊಂಡು, ಆಗಣಶ್ರೇಷ್ಠರ ಅಪ್ಪಣೆಯನ್ನೂ ದಯೆಯನ್ನೂ ಪಡೆದುಕೊಂಡು ಸಂತೋಷಪಟ್ಟವನಾಗಿ, ಮತ್ತೆ ಆ ಭಕ್ತಸಮೂಹಕ್ಕೆ ಸಾಷ್ಟಾಂಗನಮಸ್ಕಾರಮಾಡಿ ‖೧೧೨‖ ಪ್ರಮಥಗಣ ರುದ್ರಗಣ ಪುರಾತನಗಣಗಳ ಪಾದವನ್ನು ಸ್ಮರಿಸಿ, ಮಂಗ ಳಕರವಾದ ಪಂಚಾಕ್ಷರಮಂತ್ರಜಪದ ಮಹತ್ವದಿಂದ ಕೂಡಿದವನಾಗಿ ‖೧೧೩‖ ಶಿವಭಕ್ತರು ಕೊಟ್ಟ ಮಂಗಳಕರವಾದ ವಿಭೂತಿಯನ್ನು ದೊರೆಯ ಬಾಯಿಯಲ್ಲಿ ಹಾಕಿ, " ದೊರೆಯೆ, ಏಳು ಏಳು " ಎಂದು ಅವನ ಕೈಯನ್ನು ಹಿಡಿದುಕೊಂಡನು ‖೧೧೪‖ ಆಗ ದೊರೆಯು ಜೀವಗೂಡಿದವನಾಗಿ, ಯಮನ ಭಯವನ್ನು ಕಳೆದು

ಧಿಕಭಕ್ತಿತಃ ॥೧೧೫॥ ಭಕ್ತ್ಯಾ ಕೃಪಾಯಾಂಸತ್ಕೀರ್ತ್ಯಾಂಸಂಪ್ರಾಪ್ತ್ಯಾಂ
ಮಹೋನ್ನತಿಂ । ತಂಲಿಂಗಸಂಗಿನಂಚಕ್ರೇನೃಪತಿಂಸಮಹಾಯಶಾಃ ॥೧೧೬॥
ಅಥ ಭೂಪತಿನಾಸಾಕಂಭಕ್ತೇಭ್ಯೋಭಕ್ತಿಪೂರ್ವಕಂ । ಸಾಷ್ಟಾಂಗಂಪ್ರಣತ
ತಸ್ಮಿನ್ ತೇವಮಾಹೇಶ್ವರಪುಂಗವಾಃ ॥೧೧೭॥ ಅವಾರ್ಯವೇಮನಾಚಾರ್ಯವರ್ಯಂ
ಗಾಂಭೀರ್ಯಭೂಷಣಂ । ಸದ್ಭಕ್ತಪಾದಕಮಲಶಿರೋಭಾಗಂಸಮುನ್ನತಂ ॥೧೧೮॥
ನಿತ್ಯಾನುರಾಗಂ ಭುವನಾಭೋಗವಿಖ್ಯಾತವೈಭವಂ । ಭಕ್ತಪಾದರಜಃಪೂತ
ಲಲಾಟಂ ಪರಮೋಜ್ವಲಂ ॥ ೧೧೯ ॥ ವೀರಮಾಹೇಶ್ವರಸ್ತೋಮಕಿರೀಟಂ
ಸಜ್ಜನಪ್ರಿಯಂ । ಭಕ್ತಪಾದಾಂಬುಜಲಸನ್ಮರಂದಾವೃತವಿಗ್ರಹಂ ॥೧೨೦॥
ಬಸವಧ್ಯಾನಮಹಿತಾಂತರಂಗಮತಿಭಾಸುರಂ । ಗಣಪಾದನಖಾದರ್ಶಭಾಸ
ಮಾನಸ್ಮಿತಾನನಂ ॥೧೨೧॥ ಗುಣಾಂಚಿತೋದಾರದೇಹಂ ನುತದಾಸೋಹಮು
ಜ್ಜ್ವಲಂ । ಭಕ್ತಾಂಘ್ರಿನಖಭಾಜ್ಯೋತ್ಸ್ನಾಚಕೋರಮನಪಾಯಿನಂ ॥೧೨೨॥
ಉದಾರಂ ಸತ್ಯವಿಸ್ತಾರಮಪಾರಕರುಣಾಸಿಧಿಂ । ಅಬ್ಜಸಂಭೂತಿಲಿಖಿತಾಳಿಕ
ದುರ್ವರ್ಣಪದ್ಧತೇಃ ॥೧೨೩॥ ಹರ್ತಾರಂಕ್ಷಮಂಪ್ರಭಾವಾಢ್ಯಮಮಾಢ್ಯಮು

---

ಕೊಂಡು, ವೇಮನಾರಾಧ್ಯಸ್ವಾಮಿಯ ಪಾದಗಳನ್ನು ಅತ್ಯಂತ ಭಕ್ತಿಯಿಂದ ನಮ
ಸ್ಕರಿಸಿದನು ॥೧೧೫॥ ಭಕ್ತ್ಯತಿಶಯದಿಂದ ತನ್ನ ಕೃಪೆಗೂ ಕೀರ್ತಿಗೂ ಮಹತ್ವಕ್ಕೂ
ಪ್ರಾಪ್ತವಾಗಲಾಗಿ, ಆಗ ಮಹಾಯಶಸ್ವಿಯಾದ ವೇಮನಾರ್ಯಗುರುವು ಆ ದೊರೆ
ಯನ್ನು ಲಿಂಗಧಾರಿಯನ್ನಾಗಿ ಮಾಡಿದನು ॥೧೧೬॥ ಬಳಿಕ ವೇಮನಾರ್ಯನು ದೊರೆ
ಯೊಡನೆಕೂಡಿ ಭಕ್ತಸಮೂಹಕ್ಕೆ ಭಕ್ತಿಯಿಂದ ಸಾಷ್ಟಾಂಗವಾಗಿ ನಮಸ್ಕರಿಸಿರಲು,
ಆಮಾಹೇಶ್ವರಶ್ರೇಷ್ಠರುಗಳು ॥೧೧೭॥ ಪೂಜ್ಯನೂ, ಗಾಂಭೀರ್ಯವೇ ಅಲಂಕಾರವಾಗು
ಳ್ಳವನೂ, ಸದ್ಭಕ್ತರ ಪಾದಕಮಲವನ್ನು ತಲೆಯಲ್ಲಿ ಹೊತ್ತವನೂ, ಶ್ರೇಷ್ಠನೂ
॥೧೧೮॥ ಸದಾನುರಾಗವುಳ್ಳವನೂ, ಜಗತೀತಲದಲ್ಲಿ ಪ್ರಸಿದ್ಧವಾದ ವೈಭವವುಳ್ಳ
ವನೂ, ಭಕ್ತರ ಪಾದಧೂಳಿಯಿಂದ ಪರಿಶುದ್ಧವಾದ ಹಣೆಯುಳ್ಳವನೂ, ತೇಜಸಿ
ಯೂ ॥೧೧೯॥ ವೀರಮಾಹೇಶ್ವರರ ಸಮೂಹದಲ್ಲಿ ಶ್ರೇಷ್ಠನೂ, ಸತ್ಪುರುಷರ ಮಿತ್ರ
ನೂ, ಭಕ್ತಪಾದಕಮಲಮಕರಂದದಿಂದ ಲಿಪ್ತವಾದ ಶರೀರವುಳ್ಳವನೂ ॥೧೨೦॥
ಬಸವೇಶ್ವರಧ್ಯಾನವನ್ನು ಮಾಡುವುದರಿಂದ ಪೂಜ್ಯವಾದ ಮನಸ್ಸುಳ್ಳವನೂ, ಅತ್ಯಂ
ತಪ್ರಕಾಶನೂ, ಗಣಂಗಳ ಪಾದದ ಉಗುರೆಂಬ ಕನ್ನಡಿಯಲ್ಲಿ ಹೊಳೆಯುತ್ತಿರುವ
ತನ್ನ ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವನೂ ॥೧೨೧॥ ಸದ್ಗುಣ
ಮೂರ್ತಿಯೂ, ದಾಸೋಹಂಭಾವವುಳ್ಳವನೂ, ಭಕ್ತರ ಪಾದದ ಉಗುರಿನ ಕಾಂತಿ
ಯೆಂಬ ಬೆಳ್ದಿಂಗಳಿಗೆ ಚಕೋರಪಕ್ಷಿಯಾದವನೂ, ಅಪಾಯರಹಿತನೂ ॥೧೨೨॥
ಔದಾರ್ಯಶಾಲಿಯೂ, ಸತ್ಯವನ್ನು ವಿಸ್ತರಿಸುವವನೂ, ಅನಂತಕರುಣಾಶ್ರಯನೂ,

ದಯಾನ್ವಿತಂ | ವಿಷ್ಣುಮಾಯೋಪಸಂಹಾರಪ್ರವೀಣಂಪುರುಷಾಧಿಕಂ||೧೩೪|| ಅಕ್ಷೀಣಂಪಶುಪಾಶೌಘಮೋಚನೇ ಧುರ್ಯಮುತ್ತಮಂ | ಸಮಾನಂ ಶಂಭುನಾಭಕ್ತಿನಿಧಾನಂ ಸೌಖ್ಯದಾಯಿನಂ ||೧೩೫|| ಮೃತ್ಯುದಂಷ್ಟ್ರೋತ್ಪಾಟನೈಕಕಲಾಕಲ್ಪಮಚಂಚಲಂ | ಗಣಲಾಲ್ಯಂ ಯಮೋದ್ದಂಡದಂಡಹೃತ್ಕರ್ಮಸಂಯುತಂ ||೧೩೬|| ಪ್ರಖ್ಯಾತಂಕೃತಕಾಲಾಹಿವಿಷಸಂಹಾರಮುದ್ಧರಂ | ಧೀರಂ ಸ್ವಕರುಣಾಂಭೋಧಿಸರಿಮಗ್ನಂವಿಧಾಯಚ ||೧೩೭|| ಮುದಂಮುಮುಸ್ತತಸ್ತಸ್ಮಿನ್ ಪ್ರಣತೇಚಮುಹುರ್ಮುಹುಃ | ಸಂವಿತ್ಸುಖಸಮಾರಾಧ್ಯಂ ವೇಮನಾರಾಧ್ಯಮಾನತಂ ||೧೩೮|| ಉತ್ಥಾಪ್ಯಾನ್ಯೋನ್ಯಮಹಿತಾಲಿಂಗನಪ್ರತಿಪಾಲಿತಂ | ಕೃತ್ವಾತಮುಬ್ರುವನ್ನಾಘಪ್ರಮೋದಭರಿತಾನನಾಃ ||೧೩೯|| ಸಾಧುಭೋ ವೇಮನಾರಾಧ್ಯಸರ್ವಜ್ಞಮಹಿಮೋನ್ನತ | ಸಾಧುರೇವೇಮಸದ್ಭಕ್ತಮನೋಜ್ಞಕರುಣಾಕರ ||೧೪೦|| ಸಾಧುಭೋವೇಮಸಾನಂದವರಮಾತೇ ನಿರಂಕುಶ | ಶವಪ್ರಾಣಪ್ರದಾನೇನ ಪರಿಜೀವಯಿತುಂತವ ||೧೪೧|| ಅಭೂಚ್ಛಕ್ಯಂವದಾನ್ಯಸ್ಯಕಸ್ಯವಾಕರುಣಾನಿಧೆ ಯಮವಕ್ತ್ರಾತ್ಸಮಾಕೃಷ್ಟುಂಕಿಂ

---

ಬ್ರಹ್ಮನು ಬರೆದ ಹಣೆಯ ಕೆಟ್ಟ ಬರಹವನ್ನು ತೊಡೆಯುವುದಕ್ಕೆ ಸಮರ್ಥನೂ, ಮಹಿಮೆಯಿಂದ ಪರಿಪೂರ್ಣನೂ, ಮೂಢತನವಿಲ್ಲದವನೂ, ಪುರೋವೃದ್ಧಿಯಿಂದ ಕೂಡಿದವನೂ, ವಿಷ್ಣುವಿನ ಮಾಯೆಯನ್ನು ಅಡಗಿಸುವುದರಲ್ಲಿ ಕುಶಲನೂ, ಪುರುಷಶ್ರೇಷ್ಠನೂ||೧೩೪|| ನಾಶವಿಲ್ಲದವನೂ, ಜೀವರುಗಳ ಮಾಯಾಪಾಶವನ್ನು ತೊಲಗಿಸುವುದರಲ್ಲಿ ಸಮರ್ಥನೂ, ಭಕ್ತಿಗೆ ನಿಕ್ಷೇಪನೂ, ಸುಖಪ್ರದಾಯಕನೂ ||೧೩೫|| ಮೃತ್ಯುವಿನ ಕೋರೆದಾಡೆಯನ್ನು ಕೀಳುವ ವಿದ್ಯೆಯಲ್ಲಿ ಸಮರ್ಥನೂ, ಸ್ಥಿರಮನಸ್ಕನೂ, ಶಿವಗಣಂಗಳಿಂದ ಆದರಿಸಲ್ಪಡುವವನೂ, ಯಮನ ಬಾಧೆಯನ್ನು ಪರಿಹರಿಸುವ ಸತ್ಕರ್ಮದಿಂದ ಕೂಡಿದವನೂ ||೧೩೬|| ಪ್ರಸಿದ್ಧನೂ, ಕಾಲಸರ್ಪದ ವಿಷವನ್ನು ಪರಿಹರಿಸಿದವನೂ, ಉದ್ಧಾರಕನೂ, ಧೈರ್ಯಶಾಲಿಯೂ, ಆದ ವೇಮನಾರಾಧ್ಯನನ್ನು ತಮ್ಮ ಕೃಪಾರಸ ಸಮುದ್ರದಲ್ಲಿ ಮುಳುಗಿಸಿ ||೧೩೭|| ಸಂತೋಷಪಟ್ಟರು. ಆ ವೇಮನಾರ್ಯನು ಪುನಃಪುನಃ ನಮಸ್ಕರಿಸುತ್ತಿರಲು, ಜ್ಞಾನಾನಂದಪೂರ್ಣತೆಯಿಂದ ಪೂಜ್ಯನಾದ ಆ ವೇಮನಾರಾಧ್ಯನನ್ನು ಎತ್ತಿ ಪರಸ್ಪರವಾಗಿ ಆಲಿಂಗಿಸುವುದರಿಂದ ಆದರಿಸಿ, ಮುಖದಲ್ಲಿ ತುಂಬಿತುಳುಕುತ್ತಿರುವ ಆನಂದರಸವುಳ್ಳವರಾಗಿ ಹೀಗೆ ಹೇಳಿದರು:—||೧೩೯|| ಎಲೈ ವೇಮನಾರಾಧ್ಯನೆ ! ಭಲಾ! ಸರ್ವಜ್ಞನೂ ಮಹತ್ವಾಧಿಕನೂ ಆದ ವೇಮನಾರಾಧ್ಯನೇ, ಭಲಾ! ಸದ್ಭಕ್ತರಲ್ಲಿ ಮನೋಹರನೂ ದಯಾಕರನೂ ಆದವನೇ ! ಭಲಾ ||೧೪೦|| ಆನಂದಮೂ

ಧಿಕಭಕ್ತಿತಃ ॥೧೧೫॥ ಭಕ್ತ್ಯಾ ಕೃಪಾಯಾಂಸತ್ಕೀರ್ತ್ಯಾಂಸಂಪ್ರಾಪ್ತಾಯಾಂ ಮಹೋನ್ನತಿಂ । ತಂಲಿಂಗಸಂಗಿನಂಚಕ್ರೇನೃಪತಿಂಸಮಹಾಯಶಾಃ ॥ ೧೧೬ ॥ ಅಥ ಭೂಪತಿನಾಸಾಕಂಭಕ್ತೇಭ್ಯೋಭಕ್ತಿಪೂರ್ವಕಂ । ಸಾಷ್ಟಾಂಗಂಪ್ರಣತೆ ತಸ್ಮಿನ್ ತೇಮಾಹೇಶ್ವರಪುಂಗವಾಃ ॥೧೧೭॥ ಅವಾರ್ಯವೇಮನಾಚಾರ್ಯವಾರ್ಯಾಂ ಗಾಂಭೀರ್ಯಭೂಷಣಂ। ಸದ್ಭಕ್ತಪಾದಕಮಲಶಿರೋಭಾಗಂಸಮುನ್ನತಂ॥೧೧೮ ನಿತ್ಯಾನುರಾಗಂ ಭುವನಾಭೋಗವಿಖ್ಯಾತವೈಭವಂ । ಭಕ್ತಪಾದರಜಃಪೂತ ಲಲಾಟಂ ಪರಮೋಜ್ವಲಂ ॥ ೧೧೯ ॥ ವೀರಮಾಹೇಶ್ವರಸ್ತೋಮಕಿರೀಟಂ ಸಜ್ಜನಪ್ರಿಯಂ । ಭಕ್ತಪಾದಾಂಬುಜಲಸನ್ಮರಂದಾವೃತವಿಗ್ರಹಂ ॥ ೧೨೦ ॥ ಬಸವಧ್ಯಾನಮಹಿತಾಂತರಂಗಮತಿಭಾಸುರಂ । ಗಣಪಾದನಖಾದರ್ಶಭಾಸ ಮಾನಸ್ಮಿತಾನನಂ ॥೧೨೧॥ ಗುಣಾಂಚಿತೋದಾರದೇಹಂ ನುತದಾಸೋಹಮು ಜ್ವಲಂ। ಭಕ್ತಾಂಘ್ರಿನಖಭಾಜ್ಯೋತ್ಸ್ನಾಚಕೋರಮನಪಾಯಿನಂ ॥೧೨೨ ಉದಾರಂ ಸತ್ಯವಿಸ್ತಾರಮಪಾರಕರುಣಾಸಿಧಿಂ । ಅಬ್ಜಸಂಸೂತಿಲಿಖಿತಾಳಿಕ ದುರ್ವರ್ಣಪದ್ಧತೇಃ ॥೧೨೩॥ ಹರ್ತಾರಂಕ್ಷಮಂಪ್ರಭಾವಾಢ್ಯಮಮಾಢ್ಯಮು

---

ಕೊಂಡು, ವೇಮನಾರಾಧ್ಯಸ್ವಾಮಿಯ ಪಾದಗಳನ್ನು ಅತ್ಯಂತ ಭಕ್ತಿಯಿಂದ ನಮ ಸ್ಕರಿಸಿದನು ॥೧೧೫॥ ಭಕ್ತ್ಯತಿಶಯದಿಂದ ತನ್ನ ಕೃಪೆಗೂ ಕೀರ್ತಿಗೂ ಮಹತ್ವವು ಪ್ರಾಪ್ತವಾಗಲಾಗಿ, ಆಗ ಮಹಾಯಶಸ್ವಿಯಾದ ವೇಮನಾರ್ಯಗುರುವು ಆ ದೊರೆ ಯನ್ನು ಲಿಂಗಧಾರಿಯನ್ನಾಗಿ ಮಾಡಿದನು ॥೧೧೬॥ ಬಳಿಕ ವೇಮನಾರ್ಯನು ದೊರೆ ಯೊಡನೆಕೂಡಿ ಭಕ್ತಸಮೂಹಕ್ಕೆ ಭಕ್ತಿಯಿಂದ ಸಾಷ್ಟಾಂಗವಾಗಿ ನಮಸ್ಕರಿಸಿರಲು, ಆಮಾಹೇಶ್ವರಶ್ರೇಷ್ಠರುಗಳು॥೧೧೭॥ ಪೂಜ್ಯನೂ, ಗಾಂಭೀರ್ಯವೇ ಅಲಂಕಾರವಾಗು ಳ್ಳವನೂ, ಸದ್ಭಕ್ತರ ಪಾದಕಮಲವನ್ನು ತಲೆಯಲ್ಲಿ ಹೊತ್ತವನೂ, ಶ್ರೇಷ್ಠನೂ ॥೧೧೮॥ ಸದಾಸುರಾಗವುಳ್ಳವನೂ, ಜಗತೀತಲದಲ್ಲಿ ಪ್ರಸಿದ್ಧವಾದ ವೈಭವವುಳ್ಳ ವನೂ, ಭಕ್ತರ ಪಾದಧೂಳಿಯಿಂದ ಪರಿಶುದ್ಧವಾದ ಹಣೆಯುಳ್ಳವನೂ, ತೇಜಸಿ ಯೂ ॥೧೧೯॥ ವೀರಮಾಹೇಶ್ವರರ ಸಮೂಹದಲ್ಲಿ ಶ್ರೇಷ್ಠನೂ, ಸತ್ಪುರುಷರ ಮಿತ್ರ ನೂ, ಭಕ್ತಪಾದಕಮಲಮಕರಂದದಿಂದ ಲಿಪ್ತವಾದ ಶರೀರವುಳ್ಳವನೂ ॥೧೨೦॥ ಬಸವೇಶ್ವರಧ್ಯಾನವನ್ನು ಮಾಡುವುದರಿಂದ ಪೂಜ್ಯವಾದ ಮನಸ್ಸುಳ್ಳವನೂ, ಅತ್ಯಂ ತಪ್ರಕಾಶನೂ, ಗಣಂಗಳ ಪಾದದ ಉಗುರೆಂಬ ಕನ್ನಡಿಯಲ್ಲಿ ಹೊಳೆಯುತ್ತಿರುವ ತನ್ನ ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವನೂ ॥೧೨೧॥ ಸದ್ಗುಣ ಮೂರ್ತಿಯೂ, ದಾಸೋಹಂಭಾವವುಳ್ಳವನೂ, ಭಕ್ತರ ಪಾದದ ಉಗುರಿನ ಕಾಂತಿ ಯೆಂಬ ಬೆಳ್ದಿಂಗಳಿಗೆ ಚಕೋರಪಕ್ಷಿಯಾದವನೂ, ಅಪಾಯರಹಿತನೂ ॥೧೨೨॥ ಔದಾರ್ಯಶಾಲಿಯೂ, ಸತ್ಯವನ್ನು ವಿಸ್ತರಿಸುವವನೂ, ಅನಂತಕರುಣಾಶ್ರಯನೂ,

ದಯಾನ್ವಿತಂ | ವಿಷ್ಣುಮಾಯೋಪಸಂಹಾರಪ್ರವೀಣಂಪುರುಷಾಧಿಕಂ||೧೨೪|| ಅಕ್ಷೀಣಂಸಶುಪಾಶೌಘವಿಮೋಚನೆ ಧುರ್ಯಮುತ್ತಮಂ | ಸಮಾನಂ ಶಂಭು ನಾಭಕ್ತಿನಿಧಾನಂ ಸೌಖ್ಯದಾಯಿನಂ ||೧೨೫|| ಮೃತ್ಯುದಂಷ್ಟ್ರೋತ್ಪಾಟನೈ ಕಕಲಾಕಲ್ಪಮಚಂಚಲಂ | ಗಣಾಲಾಲ್ಯಂ ಯಮೋದ್ದಂಡದಂಡಹೃತ್ಕರ್ಮಸಂ ಯುತಂ ||೧೨೬|| ಪ್ರಖ್ಯಾತಂಕೃತಕಾಲಾಹಿವಿಷಸಂಹಾರಮುದ್ಧರಂ | ಧೀರಂ ಸ್ವಕರುಣಾಂಭೋಧಿಸರಿಮಗ್ನಂವಿಧಾಯಚ ||೧೨೭|| ಮುದಂಯಯುಸ್ತತ ಸ್ತಸ್ಮಿನ್ ಪ್ರಣತೇಚಮುಹುರ್ಮುಹುಃ | ಸಂವಿತ್ಸುಖಸಮಾರಾಧ್ಯಂ ವೇಮ ನಾರಾಧ್ಯಮಾನತಂ ||೧೨೮|| ಉತ್ಥಾಪ್ಯಾನ್ಯೋನ್ಯಮಹಿತಾಲಿಂಗನಪ್ರತಿಪಾಲಿ ತಂ | ಕೃತ್ವಾತಮುಬ್ರುವನ್ಸಾಗ್ರಹಪ್ರಮೋದಭರಿತಾನನಾಃ ||೧೨೯|| ಸಾಧು ಭೋ ವೇಮನಾರಾಧ್ಯಸರ್ವಜ್ಞಮಹಿಮೋನ್ನತ | ಸಾಧುರೇವೇಮಸದ್ಭಕ್ತ ಮನೋಜ್ಞಕರುಣಾಕರ ||೧೩೦|| ಸಾಧುಭೋವೇಮಸಾನಂದವರಮೂರ್ತೇ ನಿರಂಕುಶ | ಶವಪ್ರಾಣಪ್ರದಾನೇನ ಪರಿಜೀವಯಿತುಂತವ ||೧೩೧|| ಅಭೂ ಚ್ಛಕ್ಯಂವದಾನ್ಯಸ್ಯಕಸ್ಯವಾಕರುಣಾನಿಧೆ ಯಮವಕ್ತ್ರಾತ್ಸಮಾಕೃಷ್ಟಂಕಿಂ

---

ಬ್ರಹ್ಮನು ಬರೆದ ಹಣೆಯ ಕೆಟ್ಟ ಬರಹವನ್ನು ತೊಡೆಯುವುದಕ್ಕೆ ಸಮರ್ಥನೂ, ಮಹಿಮೆಯಿಂದ ಪರಿಪೂರ್ಣನೂ, ಮೂಢತನವಿಲ್ಲದವನೂ, ಪುರೋವೃದ್ಧಿಯಿಂದ ಕೂಡಿದವನೂ, ವಿಷ್ಣುವಿನ ಮಾಯೆಯನ್ನು ಅಡಗಿಸುವುದರಲ್ಲಿ ಕುಶಲನೂ, ಪುರುಷ ಶ್ರೇಷ್ಠನೂ||೧೨೪|| ನಾಶವಿಲ್ಲದವನೂ, ಜೀವರುಗಳ ಮಾಯಾಪಾಶವನ್ನು ತೊಲಗಿ ಸುವುದರಲ್ಲಿ ಸಮರ್ಥನೂ, ಭಕ್ತಿಗೆ ನಿಕ್ಷೇಪನೂ, ಸುಖಪ್ರದಾಯಕನೂ ||೧೨೫|| ಮೃತ್ಯುವಿನ ಕೋರೆದಾಡೆಯನ್ನು ಕೀಳುವ ವಿದ್ಯೆಯಲ್ಲಿ ಸಮರ್ಥನೂ, ಸ್ಥಿರಮನ ಸ್ಕನೂ, ಶಿವಗಣಂಗಳಿಂದ ಆದರಿಸಲ್ಪಡುವವನೂ, ಯಮನ ಬಾಧೆಯನ್ನು ಪರಿಹರಿ ಸುವ ಸತ್ಕರ್ಮದಿಂದ ಕೂಡಿದವನೂ ||೧೨೬|| ಪ್ರಸಿದ್ಧನೂ, ಕಾಲಸರ್ಪದ ವಿಷ ವನ್ನು ಪರಿಹರಿಸಿದವನೂ, ಉದ್ಧಾರಕನೂ, ಧೈರ್ಯಶಾಲಿಯೂ, ಆದ ವೇಮನಾರಾ ಧ್ಯನನ್ನು ತಮ್ಮ ಕೃಪಾರಸ ಸಮುದ್ರದಲ್ಲಿ ಮುಳುಗಿಸಿ ||೧೨೭|| ಸಂತೋಷಪ ಟ್ಟರು. ಆ ವೇಮನಾರ್ಯನು ಪುನಃಪುನಃ ನಮಸ್ಕರಿಸುತ್ತಿರಲು, ಜ್ಞಾನಾ ನಂದಪೂರ್ಣತೆಯಿಂದ ಪೂಜ್ಯನಾದ ಆ ವೇಮನಾರಾಧ್ಯನನ್ನು ಎತ್ತಿ ಪರಸ್ಪರ ವಾಗಿ ಆಲಿಂಗಿಸುವುದರಿಂದ ಆದರಿಸಿ, ಮುಖದಲ್ಲಿ ತುಂಬಿತುಳುಕುತ್ತಿರುವ ಆನಂದ ರಸವುಳ್ಳವರಾಗಿ ಹೀಗೆ ಹೇಳಿದರು:—||೧೨೮|| ಎಲೈ ವೇಮನಾರಾಧ್ಯನೆ ! ಭಲಾ! ಸರ್ವಜ್ಞನೂ ಮಹತ್ವಾಧಿಕನೂ ಆದ ವೇಮನಾರಾಧ್ಯನೇ, ಭಲಾ! ಸದ್ಭಕ್ತರಲ್ಲಿ ಮನೋಹರನೂ ದಯಾಕರನೂ ಆದವನೇ ! ಭಲಾ ||೧೩೦|| ಆನಂದಮೂ

ಶಕ್ಯಂ ವಿಷ್ಣು ವೇಧಸೋಃ ||೧೩೦|| ವಿಕ್ಷೇಪ್ತುಂಪರಮಾಂಮೃತ್ಯುಂಪರಿಜೀವ ಯಿತುಂಪುನಃ | ವೀರಶೈವಂವಿಧಾಧೈರ್ಯಮೇತಾದೃಙ್ಮಹನೀಯತಾ || ೧೩೩ || ಏತಾದೃಶೀಕೃತಿರ್ದೃಷ್ಟಾಃ ಶ್ರುತಾಸ್ತ್ವಯ್ಯೇವಭೂನುತ | ಇತಿಸ್ತುವತ್ಸುಭ ಕ್ತೇಷು ವೇಮನಾರಾಧ್ಯಪುಂಗವಃ || ೧೩೪ || ನೃಪಾಯಕೃಪಯಾಪ್ರಾಣಾ ದದಾವಿತಿಪುರಾಶ್ರುತಂ ಅದ್ಯಶ್ರೀಪಂಡಿತಾರಾಧ್ಯಃಪಶ್ಯತ್ಸುನಿಖಿಲೇಷ್ವಪಿ||೧೩೫ ಪಾದೌದದೌವೆಲ್ಲಕೊಂಡಮಹಾದೇವಾಯಸಾದ್ಭುತಂ ||

ಇತ್ಯಸಂಖ್ಯಾತ......ಶ್ರೀ ಮಲ್ಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಪುರಾತನಪ್ರಕರಣೇವೇಮನಾರಾಧ್ಯ
ಚರಿತ್ರಕಥನಂನಾಮ
ದ್ವಾದಶೋಽಧ್ಯಾಯಃ.

ರ್ತಿಯೂ ತಡೆಯಿಲ್ಲದವನೂ ಆದ ಎಲೈ ವೇಮನಾರಾಧ್ಯನೇ, ಭಲಾ ! ಎಲೈದಯಾ ನಿಧಿಯೆ ! ಹೆಣಕ್ಕೆ ಪ್ರಾಣದಾನವನ್ನು ಮಾಡಿ ಬದುಕಿಸುವುದಕ್ಕೆ ನಿನಗೆಮಾತ್ರ ಶಕ್ಯ ವಾಯಿತು, ಮತ್ತಾರಿಗಾದರೂ ಅದು ಶಕ್ಯವೆ ? ಹೇಳು. ಯಮನಬಾಯಿಗೆ ಬಿದ್ದ ವರನ್ನು ಅಲ್ಲಿಂದ ಸೆಳೆದುತರುವುದಕ್ಕೂ ಕಾಲಮೃತ್ಯುವಿನಿಂದ ಬಿಡುಗಡೆಮಾಡುವು ದಕ್ಕೂ, ಸತ್ತವರನ್ನು ಮರಳಿ ಬದುಕಿಸುವುದಕ್ಕೂ ವಿಷ್ಣುಬ್ರಹ್ಮರಿಗಾದರೂ ಶಕ್ಯವೆ! ಎಲೈ ಲೋಕಸ್ತುತನೆ ಈಪ್ರಕಾರವಾದ ಶೌರ್ಯವನ್ನೂ ಧೈರ್ಯವನ್ನೂ ಘನತೆಯನ್ನೂ ||೧೩೩|| ಇಂಥ ಪ್ರಯತ್ನವನ್ನೂ ನಿನ್ನಲ್ಲೇ ಕಂಡೆವು, ಎಂಬುದಾಗಿ ಭಕ್ತರುಗಳು ಸ್ತೋತ್ರಮಾಡುತ್ತಿರಲಾಗಿ, ಪೂರ್ವದಲ್ಲಿ ಹೀಗೆ ವೇಮನಾರಾಧ್ಯಶ್ರೇಷ್ಠನು ದೊರೆಗೆ ಪ್ರಾಣವನ್ನು ಕೊಟ್ಟನು ಎಂಬುದನ್ನು ಕೇಳಿದ್ದೆವು. ಈಗಲಾದರೊ ಶ್ರೀ ಮಲ್ಲಿಕಾರ್ಜುನಪಂಡಿತಾರಾಧ್ಯನು ಎಲ್ಲರೂ ನೋಡುತ್ತಿರುವಂತೆಯೇ ವೆಲ್ಲಕೊಂಡ ದ ಮಹಾದೇವಯ್ಯನಿಗೆ ಆಶ್ಚರ್ಯಕರವಾಗಿ ಎರಡುಕಾಲುಗಳನ್ನು ಕೊಟ್ಟನು. ಎಂದು ಶರಣರುಗಳು ಕೊಂಡಾಡಿದರು.

ಎಂಬಲ್ಲಿಗೆ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡಟಪ್ಪಣ ದಲ್ಲಿ ಪುರಾತನಪ್ರಕರಣದೊಳಗೆ ವೇಮನಾರಾಧ್ಯರ ಕಥೆಯನ್ನು ವಿವರಿಸುವ ೧೨ನೆಯ ಅಧ್ಯಾಯವು ಮುಗಿದುದು.

# ತ್ರಯೋದಶೋಽಧ್ಯಾಯಃ

(ಚಿಕ್ಕಮಾದಾರ್ಯಕಥನಂ)

ಅಕಳಂಕಮಹಾಭಕ್ತಿಸ್ಸಕಳೇಶ್ವರಮಾಧವಃ । ವೀರಶೈವಾಚಾರಮಾರ್ಗವರ್ತನಃಪಾಪಕರ್ತನಃ ॥೧॥ ಕಾಲಮೃತ್ಯುದೃಶೋರ್ಧೂಳಿಂಪ್ರವಿಕೀರ್ಯಯಮಾನನಂ । ನಿಹತ್ಯ ವಾಮಪಾದೇನ ವಿಧಾತಾರಂ ವಿಧೂಯಚ ॥೨॥ ವಿಧಾಯಚಧರಾಪೃಷ್ಠೆ ವಿಧಿಸಂತಾಡಿತತ್ರಿಕಂ । ವಿಷ್ಣುಮಾಯಾಂತಕಇತಿಧ್ವನದ್ಬಿರುದಕಾಹಳಃ ॥೩॥ ಶ್ರುತಿಂಶತಾಯುಃಪುರುಷಇತೀಮಾಂ ಪರಿಭೂಯಸಃ । ಸಮಾಸ್ಸಪ್ತಶತಂ ಲಿಂಗಪೂಜಾ ಲೀಲಾಪರೋಽಭವತ್ ॥೪॥ ಜಂಗಮಾರಾಧನಾಸಕ್ತೋ ವರದಾನಸ್ಸುಖಾಂಬುಧೌ । ನಿಮಗ್ನಃಪರಮೋತ್ಕೃಷ್ಟಶಿವಾಚಾರಪರೋಽಭವತ್ ॥೫॥ ಅಥ ಸಾತ್ವಿಕಸದ್ಭಕ್ತಿಶ್ಚಿಕ್ಕಮಾದರಸಾಹ್ವ

---

## ೧೩ ನೆಯ ಅಧ್ಯಾಯವು.

( ಚಿಕ್ಕಮಾದಯ್ಯನ ಕಥೆ. )

ಸಕಳೇಶಮಾದರಸನೆಂಬ ಶರಣನು ನಿರ್ದುಷ್ಟವಾದ ಮಹಾ ಶಿವಭಕ್ತಿಯಿಂದ ಸಂಪನ್ನನಾಗಿಯೂ, ವೀರಶೈವಾಚಾರ ಮಾರ್ಗದಲ್ಲಿ ವರ್ತಿಸುವನಾಗಿಯೂ, ಪಾಪವನ್ನು ಕತ್ತರಿಸಿದವನಾಗಿಯೂ ॥೧॥ ಕಾಲಮೃತ್ಯುವಿನ ಕಣ್ಣಿಗೆ ಧೂಳಿಯನ್ನೆರಚಿ, ಯಮನ ಮೋರೆಯಮೇಲೆ ಎಡಗಾಲಿನಿಂದ ಒದೆದು, ಬ್ರಹ್ಮನನ್ನು ತಿರಸ್ಕರಿಸಿ ॥೨॥ ಅದೃಷ್ಟವೆಂಬುದರ ತಿಕದಮೇಲೆ ಬಡಿದು ನೆಲದಮೇಲೆ ಕೆಡಹಿ, ವಿಷ್ಣುವಿನ ಮಾಯೆಗೆ ನಾಶಕನೆಂದು ಧ್ವನಿಮಾಡುತ್ತಿರುವ ಬಿರುದಿನ ಕಹಳೆಯುಳ್ಳವನಾಗಿಯೂ ಇದ್ದನು ॥೩॥ ಮನುಷ್ಯನು ನೂರುವರ್ಷದ ಆಯುಸ್ಸುಳ್ಳವನು ಎಂದು ಹೇಳುತ್ತಿರುವ ವೇದವಚನವನ್ನು ಆತನು ತಿರಸ್ಕರಿಸಿ, ಏಳುನೂರು ವರ್ಷಗಳಕಾಲ ಲಿಂಗಪೂಜಾತತ್ಪರನಾಗಿ ಇರುತ್ತಿದ್ದನು ॥೪॥ ಮತ್ತೂ ಆತನು ಜಂಗಮಾರ್ಚನ ಲೋಲನಾಗಿಯೂ, ಶ್ರೇಷ್ಠವಾದ ದಾನಗುಣವುಳ್ಳವನಾಗಿಯೂ, ಆನಂದಸಮುದ್ರದಲ್ಲಿ ಮುಳುಗಿದವನಾಗಿಯೂ, ಉತ್ಕಲಿಷ್ಟ ಶಿವಾಚಾರಯುಕ್ತನಾಗಿಯೂ ಇದ್ದನು ॥೫॥ ಮತ್ತೊಬ್ಬ ಸಾತ್ವಿಕಭಕ್ತಿ ಸಂಪನ್ನನಾದ ಚಿಕ್ಕಮಾದರಸನೆಂಬ ಭಕ್ತನು ತನ್ನ ಪತ್ನೀ

ಯಃ | ಭಕ್ತೋ ನ್ಯಃಪರಮಪ್ರೇಮ್ಣಾ ಪತ್ನ್ಯಾಸಹಸುತೇನಚ ||೬|| ತನ್ಮಾದಿ ರಾಜಚರಣೌ ಸೇವ್ಯಮಾನೋ ನಿರಂತರಂ | ಅಯಂಸ್ವಜೀವನೋಪಾಯಃ ಕುಟುಂಬಸ್ಯಾಸ್ಯಸಂಪ್ರತಿ ||೭|| ಉಪಾರ್ಜನಮಿದಂಚೇತಿ ವಿಚಾರಂ ಪ್ರವಿ ಹಾಯಚ | ಮಹೇಶ್ವರೋಪದಿಷ್ಟೇನ ಸ್ವಲ್ಪೇನೈವಹಿಕರ್ಮಣಾ ||೮|| ವರ್ತ ಮಾನಸ್ಸ್ವದಾರಿದ್ರ್ಯದುಃಖಂ ಚಿಂತಾಂಗೃಹಸ್ಯಚ | ನಕಿಂಚಿದಪಿಚಾಧ್ಯಾಯಮ ನಸ್ಯತ್ಯಂತಹರ್ಷಿತಃ ||೯|| ಸದ್ಭಕ್ತಾತ್ಯಮಾದಿರಾಜಾರ್ಯಪಾದಾವೇವಗತಿರ್ಮತಿಃ | ಸರ್ವಮೇವೇತಿಮನಸಾಸ್ಮರ್ಣ ಕಾಲಮಪಾನಯತ್ ||೧೦|| ಕದಾಚಿನ್ಮೃತ ವತ್ಯಸ್ಮಿನ್ನಸಂಭ್ರಾಂತಾತದಂಗನಾ| ಶುಭಪಾದೋದಕೇನೈವಪತಿಂಪ್ರಕ್ಷಾಳ್ಯ ಯತ್ನತಃ || ೧೧ || ವರಾಂಭೂತಿಂ ಸಮಾಲಿಪ್ಯಸರ್ವಾಂಗೇಷ್ವಥತಂಶವಂ | ನಿ ಧಾಯಸ್ತಂಭನಿಕಟೇ ನಜಾನಾತಿಯಥಾಜನಃ ||೧೨|| ತಥಾಗೃಹಾಂತರೇಶಾಂ ತಂ ನಿಕ್ಷಿಪ್ತುಮುಚಿತಾಂಗುಹಾಂ | ಕುರ್ವಂತ್ಯವಸ್ಥಿತಾತತ್ರ ನಿದ್ರಿತೋಬಾಲ ಕಸ್ತತಃ ||೧೩|| ತಮಾರವಂಸಮಾಕರ್ಣ್ಯಸಮುತ್ಥಾಯಸ್ವಮಾತರಂ ¦ ಅಪೃ ಚ್ಛತ್ಸಂಭ್ರಮಾದಂಬ ಮಧ್ಯರಾತ್ರೇಕರೋಷಿಕಿಂ ||೧೪|| ಸ್ತಂಭೋಪಕಂಠೇ

---

ಪುತ್ರರೊಡಗೂಡಿ, ಅತ್ಯಂತ ಪ್ರೀತಿಯಿಂದ ಆ ಸಕಳೇಶ ಮಾದರಸನ ಪಾದಗ ಳನ್ನು ಯಾವಾಗಲೂ ಸೇವಿಸಿಕೊಂಡು, “ ಇದು ತನ್ನ ಜೀವನೋಪಾಯ, ಇದು ತನ್ನ ಕುಟುಂಬಕ್ಕಾಗಿ ಸಂಪಾದನೆ ” ಯೆಂಬ ಆಲೋಚನೆಯನ್ನೇ ಮಾಡದೆ, ಶಿವಾ ಗಮದಲ್ಲಿ “ ಅಲ್ಪಕ್ರಿಯಂ ಬಹುಫಲಂ ” ಎಂಬುದಾಗಿ ಹೇಳಲ್ಪಟ್ಟಿರುವ ವೀರಶೈ ವಮತದ ನಿಯತಕರ್ಮವನ್ನು ಆಚರಿಸಿಕೊಂಡು, ತನ್ನ ಬಡತನದ ಯೋಚನೆಯನ್ನಾ ಗಲಿ ಗೃಹಕೃತ್ಯದ ಯೋಚನೆಯನ್ನಾಗಲಿ ಸ್ವಲ್ಪವೂ ಮಾಡದೆ, ಅತ್ಯಂತ ಸಂತೋಷ ವಿಶಿಷ್ಟನಾಗಿರುತಿದ್ದನು || ೯ || ಸಕಳೇಶಮಾದರಸನ ಪಾದಗಳೇ ನನಗೆ ಗತಿ, ಮತಿ, ಸರ್ವಸ್ವವೂ ಅದೇ ಎಂಬುದಾಗಿ ಮನಸ್ಸಿನಲ್ಲಿ ಭಾವಿಸಿಕೊಂಡು, ಕಾಲವನ್ನು ಕಳೆ ಯುತ್ತಿದ್ದನು || ೧೦ || ಈ ಭಕ್ತನು ಒಂದಾನೊಂದು ದಿವಸ ಮೃತನಾಗಲು, ಆತನ ಪತ್ನಿಯು ದಿಗಿಲುಗೊಳ್ಳದೆ, ಮಂಗಳಕರವಾದ ಜಂಗಮ ಪಾದೋದಕದಿಂದ ತನ್ನ ಪತಿಯನ್ನು ತೊಳೆದು || ೧೧ || ಶ್ರೇಷ್ಠವಾದ ವಿಭೂತಿಯನ್ನು ದೇಹಕ್ಕೆಲ್ಲಾ ಬಳಿ ದು, ಬಳಿಕ ಆ ಶವವನ್ನು ಕಂಬದ ಬಳಿಯಲ್ಲಿ ಕುಳ್ಳಿರಿಸಿ, ಜನಗಳಾರೂ ಕಾಣದಂತೆ ಗಂಡನನ್ನು ಭೂಮಿಯಲ್ಲಿ ಹೂಳುವುದಕ್ಕಾಗಿ ತನ್ನ ಮನೆಯೊಳಗೆ ಯೋಗ್ಯವಾದ ಹಳ್ಳವನ್ನು ತೆಗೆಯುತ್ತಲಿದ್ದಳು. ಬಳಿಕ ಅಲ್ಲಿಯೇ ಮಲಗಿದ್ದ ಬಾಲಕನು, ಆ ಅಗೆ ಯುವ ಸದ್ದನ್ನು ಕೇಳಿ ಎದ್ದು, ಸಡಗರದಿಂದ ತನ್ನ ತಾಯನ್ನು ಕುರಿತು — ಅಮ್ಮಾ ! ನಡುರಾತ್ರಿಯಲ್ಲಿ ನೀನು ಮಾಡುವುದೇನು? || ೧೪ || ತಂದೆಯು ಕೂಡ ಕಂಬದ ಬಳಿ

ತಾತೋಽಪಿತೂಷ್ಣೀಮಾಸ್ತೇಕಿಮುಚ್ಯತಾಂ | ಕಿಮರ್ಥಂನಪ್ರಯಾತ್ಯೇವಮಾಚಾರ್ಯಮಪಿ ಸೇವಿತುಂ ‖೧೫‖ ತ್ವಮೇಕಾಶಿವಪೂಜಾರ್ಥವೇದಿಂಖನಸಿಕಿಂವೃಥಾ | ಲಿಂಗಾರ್ಚನಸ್ಥನವೇದ್ಯಾಮಕೃತ್ವಾಚ ಜಲಾಶಯಂ ‖೧೬‖ ನಾರ್ಚಯಾಮೀತಿನಿಯಮಂ ಜಗೃಹೇಮತ್ಪಿತಾಕಿಮು | ತಸ್ಮಿಞ್ಜಲೇ ಸಮುದ್ಭೂತೇ ತೇನಶರ್ವಾಭಿಷೇಚನಂ ‖೧೭‖ ಯಾವತ್ತಾವತ್ತಾವದಸ್ಮಾಭಿಃ ಕಿಂ ತಾತೋನಾನುಭಾಷತೇ | ಅಥವಾ ಯೇನಕೇನಾಪಿ ಕಾರಣೇನಾದ್ಯಮತ್ಪಿತಾ ‖೧೮‖ ಕಿಂ ವಿವಾದೇನಹೃದಯೇ ಕುಪಿತೋಭವತೀಂಪ್ರತಿ | ನಕೇನಾಪಿಪ್ರಕಾರೇಣಕದಾಪಿಕುಪಿತಃಪುರಾ ‖೧೯‖ ಅದ್ಯತ್ವಾಂಪ್ರತಿಕೋಪಸ್ಯ ಕಾರಣಂ ಕಿಂ ನಿರೂಪ್ಯತಾಂ | ಕಿಂಪೂಜಾವಸರಂಚೈಂಭಶೋಸ್ಸಮುಲ್ಲಂಘಿತವತ್ಯಸಿ ‖೨೦‖ ಶೀಲವ್ರತಂಸಮುತ್ತುಂಗಮಕರೋಃ ಕಿಂ ಸಮಾಕುಲಂ | ಸಮಯಾಯಾತಮುಚಿತಜಂಗಮಾನಾಂಸಮರ್ಚನಂ ‖೨೧‖ ತ್ವಮಾಲಸ್ಯವಶಾದಾಶುನಕಿಂ ನಿರ್ಮಿತವತ್ಯಸಿ | ನಕಿಂ ಸಮುತ್ತೇಜಿತಾನಿ ಪೂಜೋಪಕರಣಾನಿವಾ ‖೨೨‖ ನಭೃಂಗಾರುಕುಲಂಸಮ್ಯಕ್ ಕ್ಷಾಳಿತಂವಾತ್ವಯಾಕಿಮು | ಆಹೋಸ್ವಿತ್ತ್ವಂಪತ

---

ಯಲ್ಲಿ ಸುಮ್ಮನೆ ಕುಳಿತುಕೊಂಡಿದ್ದಾನೆ. ಅದೇತಕ್ಕೆ ? ಹೇಳು. ಈತನು ಗುರುಸೇವೆಗಾಗಿಯೂ ಅದೇಕೆ ಹೋಗುವುದಿಲ್ಲ? ‖ ೧೫ ‖ ಶಿವಪೂಜೆಯ ಜಗತಿಯನ್ನು ನೀನೊಬ್ಬಳೇ ವ್ಯರ್ಥವಾಗಿ ಅದೇಕೆ ಅಗೆಯುತ್ತೀಯೆ? ಲಿಂಗಪೂಜೆಮಾಡುವ ಸ್ಥಳದ ಜಗತಿಯಲ್ಲಿ ಚಿಲುಮೆಯನ್ನು ತೋಡದಿದ್ದರೆ ಶಿವಪೂಜೆ ಮಾಡುವುದಿಲ್ಲವೆಂದು ನನ್ನ ತಂದೆಯು ನಿಯಮವನ್ನೇನಾದರೂ ಮಾಡಿರುವನೆ? ಆ ಹಳ್ಳದಲ್ಲಿ ನೀರು ಹುಟ್ಟಿದರೆ, ಅದರಿಂದ ಶಿವನಿಗೆ ಅಭಿಷೇಕವನ್ನು ಮಾಡುವವರೆಗೂ ಈ ನಮ್ಮ ತಂದೆಯು ನಮ್ಮೊಡನೆ ಮಾತನಾಡುವುದಿಲ್ಲವೇನು? ಅಥವಾ ಇನ್ನಾವಕಾರಣದಿಂದಲಾದರೂ ನಮ್ಮಯ್ಯನು ಮಾತನಾಡುವುದಿಲ್ಲವೊ? ‖ ೧೮ ‖ ಜಗಳದಿಂದೇನಾದರೂ ನಿನ್ನಮೇಲೆ ಮನಸ್ಸಿನಲ್ಲಿ ಕೋಪಿಸಿಕೊಂಡಿರುವನೊ? ಹಿಂದೆ ಯಾವಾಗಲೂ ಯಾವಕಾರಣದಿಂದಲೂ ಕೋಪಿಸಿಕೊಂಡಿರಲಿಲ್ಲವಲ್ಲಾ! ‖ ೧೯ ‖ ಈಗ ನಿನ್ನ ಮೇಲೆ ಕೋಪಿಸಿಕೊಂಡಿರುವುದಕ್ಕೆ ಕಾರಣವೇನು? ಹೇಳು. ಶಿವಪೂಜೆಯ ಸಮಯವನ್ನು ನೀನೇನಾದರೂ ಮೀರಿದೆಯೊ? ‖ ೨೦ ‖ ಉತ್ತಮವಾದ ಸದಾಚಾರವನ್ನೂ ವ್ರತವನ್ನೂ ನೀನೇನಾದರೂ ಕೆಡಿಸಿದೆಯೊ? ಕಾಲಕ್ಕೆ ಬಂದ ಜಂಗಮರನ್ನು ನೀನು ಆಲಸ್ಯಗೊಂಡು ಬೇಗನೆ ಪೂಜಿಸದೆ ಹೋದೆಯೊ? ಪೂಜಾಸಾಮಗ್ರಿಗಳನ್ನು ನೀನು ಬೆಳಗದೆ ಹೋದೆಯೊ ? ‖ ೨೨ ‖ ತಂಬಿಗೆ ಮೊದಲಾದ ಪಾತ್ರೆಗಳನ್ನು ನೀನು ಚೆನ್ನಾಗಿ ತೊಳೆದಿಡದೆ ಹೋದೆಯೊ? ಅಯ್ಯೋ! ನೀನು ಅಭಿಷೇ

ಯಃ । ಭಕ್ತೋ ನ್ಯಃಪರಮಪ್ರೇಮ್ಣಾ ಪತ್ನ್ಯಾ ಸಹಸುತೇನಚ ॥೬॥ ತನ್ಮಾದಿ ರಾಜಚರಣಾ ಸೇವ್ಯಮಾನೋ ನಿರಂತರಂ । ಅಯಂಸ್ವಜೀವನೋಪಾಯಃ ಕುಟುಂಬಸ್ಯಾಸ್ಯಸಂಪ್ರತಿ ॥೭॥ ಉಪಾರ್ಜನಮಿದಂಚೇತಿ ವಿಚಾರಂ ಪ್ರವಿಹಾಯಚ । ಮಹೇಶ್ವರೋಪದಿಷ್ಟೇನ ಸ್ವಲ್ಪೇನೈವಹಿಕರ್ಮಣಾ ॥೮॥ ವರ್ತಮಾನಸ್ಸ್ವದಾರಿದ್ರ್ಯದುಃಖಂ ಚಿಂತಾಂಗೃಹಸ್ಯಚ । ನಕಿಂಚಿದಪಿಚಾಧಾಯಮನಸ್ಯತ್ಯಂತಹರ್ಷಿತಃ ॥೯॥ ಸದ್ಭಕ್ತ್ಯಾ ಮಾದಿರಾಜಾರ್ಯಪಾದಾವೇವಗತಿರ್ಮತಿಃ । ಸರ್ವಮೇವೇತಿಮನಸಾಸ್ಮರ ಕಾಲಮುಪಾನಯತ್ ॥೧೦॥ ಕದಾಚಿನ್ಮೃತವತ್ಯಸ್ಮಿನ್ನಸಂಭ್ರಾಂತಾತದಂಗನಾ। ಶುಭಪಾದೋದಕೇನೈವಪತಿಂಪ್ರಕ್ಷಾಳ್ಯಯತ್ನತಃ ॥ ೧೧ ॥ ವರಾಂಭೂತಿಂ ಸಮಾಲಿಪ್ಯಸರ್ವಾಂಗೇಷ್ವಥತಂಶವಂ । ನಿಧಾಯಸ್ತಂಭನಿಕಟೇ ನಜಾನಾತಿಯಥಾಜನಃ ॥೧೨॥ ತಥಾಗೃಹಾಂತರೇಶಾಂತಂ ನಿಕ್ಷಿಪ್ತುಮುಚಿತಾಂಗುಹಾಂ । ಕುರ್ವಂತ್ಯವಸ್ಥಿತಾತತ್ರ ನಿದ್ರಿತೋಬಾಲಕಸ್ತತಃ ॥೧೩॥ ತಮಾರವಂಸಮಾಕರ್ಣ್ಯಸಮುತ್ಥಾಯಸ್ವಮಾತರಂ । ಅಪೃಚ್ಛತ್ಸಂಭ್ರಮಾದಂಬ ಮಧ್ಯರಾತ್ರೇಕರೋಷಿಕಿಂ ॥೧೪॥ ಸ್ತಂಭೋಪಕಂಠೇ

---

ಪುತ್ರರೊಡಗೂಡಿ, ಅತ್ಯಂತ ಪ್ರೀತಿಯಿಂದ ಆ ಸಕಳೇಶ ಮಾದರಸನ ಪಾದಗಳನ್ನು ಯಾವಾಗಲೂ ಸೇವಿಸಿಕೊಂಡು, "ಇದು ತನ್ನ ಜೀವನೋಪಾಯ, ಇದು ತನ್ನ ಕುಟುಂಬಕ್ಕಾಗಿ ಸಂಪಾದನೆ" ಯೆಂಬ ಆಲೋಚನೆಯನ್ನೇ ಮಾಡದೆ, ಶಿವಾಗಮದಲ್ಲಿ "ಅಲ್ಪಕ್ರಿಯಂ ಬಹುಫಲಂ" ಎಂಬುದಾಗಿ ಹೇಳಲ್ಪಟ್ಟಿರುವ ವೀರಶೈವಮತದ ನಿಯತಕರ್ಮವನ್ನು ಆಚರಿಸಿಕೊಂಡು, ತನ್ನ ಬಡತನದ ಯೋಚನೆಯನ್ನಾಗಲಿ ಗೃಹಕೃತ್ಯದ ಯೋಚನೆಯನ್ನಾಗಲಿ ಸ್ವಲ್ಪವೂ ಮಾಡದೆ, ಅತ್ಯಂತ ಸಂತೋಷವಿಶಿಷ್ಟನಾಗಿರುತಿದ್ದನು ॥ ೯ ॥ ಸಕಳೇಶಮಾದರಸನ ಪಾದಗಳೇ ನನಗೆ ಗತಿ, ಮತಿ, ಸರ್ವಸ್ವವೂ ಅದೇ ಎಂಬುದಾಗಿ ಮನಸ್ಸಿನಲ್ಲಿ ಭಾವಿಸಿಕೊಂಡು, ಕಾಲವನ್ನು ಕಳೆಯುತ್ತಿದ್ದನು ॥ ೧೦ ॥ ಈ ಭಕ್ತನು ಒಂದಾನೊಂದು ದಿವಸ ಮೃತನಾಗಲು, ಆತನ ಪತ್ನಿಯು ದಿಗಿಲುಗೊಳ್ಳದೆ, ಮಂಗಳಕರವಾದ ಜಂಗಮ ಪಾದೋದಕದಿಂದ ತನ್ನ ಪತಿಯನ್ನು ತೊಳೆದು ॥ ೧೧ ॥ ಶ್ರೇಷ್ಠವಾದ ವಿಭೂತಿಯನ್ನು ದೇಹಕ್ಕೆಲ್ಲಾ ಬಳಿದು, ಬಳಿಕ ಆ ಶವವನ್ನು ಕಂಬದ ಬಳಿಯಲ್ಲಿ ಕುಳ್ಳಿರಿಸಿ, ಜನಗಳಾರೂ ಕಾಣದಂತೆ ಗಂಡನನ್ನು ಭೂಮಿಯಲ್ಲಿ ಹೂಳುವುದಕ್ಕಾಗಿ ತನ್ನ ಮನೆಯೊಳಗೆ ಯೋಗ್ಯವಾದ ಹಳ್ಳವನ್ನು ತೆಗೆಯುತ್ತಲಿದ್ದಳು. ಬಳಿಕ ಅಲ್ಲಿಯೇ ಮಲಗಿದ್ದ ಬಾಲಕನು, ಆ ಅಗೆಯುವ ಸದ್ದನ್ನು ಕೇಳಿ ಎದ್ದು, ಸಡಗರದಿಂದ ತನ್ನ ತಾಯನ್ನು ಕುರಿತು — ಅಮ್ಮಾ! ನಡುರಾತ್ರಿಯಲ್ಲಿ ನೀನು ಮಾಡುವುದೇನು? ॥ ೧೪ ॥ ತಂದೆಯು ಕೂಡ ಕಂಬದ ಬಳಿ

ತಾತೋಽಪಿತೂಷ್ಣೀಮಾಸ್ತೇಕಿಮುಚ್ಯತಾಂ |ಕಿಮರ್ಥಂನಪ್ರಯಾತ್ಯೇವಮಾ ಚಾರ್ಯಮಪಿ ಸೇವಿತುಂ ‖೧೫‖ ತ್ವಮೇಕಾಶಿವಪೂಜಾರ್ಥವೇದಿಂಬನಸಿಕಿಂವೃಥಾ | ಲಿಂಗಾರ್ಚನಸ್ಥಾನವೇದ್ಯಾಮುಕ್ಷ್ಯತ್ವಾಚ ಜಲಾಶಯಂ ‖೧೬‖ ನಾರ್ಚಯಾಮೀತಿನಿಯಮಂ ಜಗೃಹೇಮತ್ಪಿತಾಕಿಮು | ತಸ್ಮಿಜ್ಜಲೇ ಸಮುದ್ಭೂತೇ ತೇನಶರ್ವಾಭಿಷೇಚನಂ ‖೧೭‖ ಯಾವತ್ಸ್ಯಾತ್ತಾವದಸ್ಮಾಭಿಃ ಕಿಂ ತಾತೋನಾನುಭಾಷತೇ | ಅಥವಾ ಯೇನಕೇನಾಪಿ ಕಾರಣೇನಾದ್ಯಮತ್ಪಿತಾ ‖೧೮‖ ಕಿಂ ವಿವಾದೇನಹೃದಯೇ ಕುಪಿತೋಭವತೀಂಪ್ರತಿ | ನಕೇನಾಪಿಪ್ರಕಾರೇಣಕದಾಪಿಕುಪಿತಃಪುರಾ ‖೧೯‖ ಅದ್ಯತ್ವಾಂಪ್ರತಿಕೋಪಸ್ಯ ಕಾರಣಂ ಕಿಂ ನಿರೂಪ್ಯತಾಂ | ಕಿಂಪೂಜಾವಸರಂಚ್ಚಂಭೋಸ್ಸಮುಲ್ಲಂಘಿತವತ್ಯಸಿ ‖೨೦‖ ಶೀಲವ್ರತಂಸಮುತ್ತುಂಗಮಕರೋಃ ಕಿಂ ಸಮಾಕುಲಂ | ಸಮಯಾಯಾತಮಹಿತಜಂಗಮಾನಾಂಸಮರ್ಚನಂ ‖೨೧‖ ತ್ವಮಾಲಸ್ಯವಶಾದಾಶುನಕಿಂ ನಿರ್ಮಿತವತ್ಯಸಿ | ನಕಿಂ ಸಮುತ್ತೇಜಿತಾನಿ ಪೂಜೋಪಕರಣಾನಿವಾ ‖೨೨‖ ನಭೃಂಗಾರುಕುಲಂಸಮ್ಯಕ್ ಕ್ಷಾಳಿತಂವಾತ್ವಯಾಕಿಮು | ಆಹೋಸ್ವಿತ್ತ್ವಂಪತ

---

ಯಲ್ಲಿ ಸುಮ್ಮನೆ ಕುಳಿತುಕೊಂಡಿದ್ದಾನೆ. ಅದೇತಕ್ಕೆ? ಹೇಳು. ಈತನು ಗುರುಸೇವೆಗಾಗಿಯೂ ಅದೇಕೆ ಹೋಗುವುದಿಲ್ಲ? ‖೧೫‖ ಶಿವಪೂಜೆಯ ಜಗತಿಯನ್ನು ನೀನೊಬ್ಬಳೇ ವ್ಯರ್ಥವಾಗಿ ಅದೇಕೆ ಅಗೆಯುತ್ತೀಯೆ? ಲಿಂಗಪೂಜೆಮಾಡುವ ಸ್ಥಲದ ಜಗತಿಯಲ್ಲಿ ಚಿಲುಮೆಯನ್ನು ತೋಡದಿದ್ದರೆ ಶಿವಪೂಜೆ ಮಾಡುವುದಿಲ್ಲವೆಂದು ನನ್ನ ತಂದೆಯು ನಿಯಮವನ್ನೇನಾದರೂ ಮಾಡಿರುವನೆ? ಆ ಹಳ್ಳದಲ್ಲಿ ನೀರು ಹುಟ್ಟಿದರೆ, ಅದರಿಂದ ಶಿವನಿಗೆ ಅಭಿಷೇಕವನ್ನು ಮಾಡುವವರೆಗೂ ಈ ನಮ್ಮ ತಂದೆಯು ನಮ್ಮೊಡನೆ ಮಾತನಾಡುವುದಿಲ್ಲವೇನು? ಅಥವಾ ಇನ್ನಾವಕಾರಣದಿಂದಲಾದರೂ ನಮ್ಮಯ್ಯನು ಮಾತನಾಡುವುದಿಲ್ಲವೊ? ‖ ೧೮ ‖ ಜಗಳದಿಂದೇನಾದರೂ ನಿನ್ನಮೇಲೆ ಮನಸ್ಸಿನಲ್ಲಿ ಕೋಪಿಸಿಕೊಂಡಿರುವನೊ? ಹಿಂದೆ ಯಾವಾಗಲೂ ಯಾವಕಾರಣದಿಂದಲೂ ಕೋಪಿಸಿಕೊಂಡಿರಲಿಲ್ಲವಲ್ಲಾ! ‖ ೧೯ ‖ ಈಗ ನಿನ್ನ ಮೇಲೆ ಕೋಪಿಸಿಕೊಂಡಿರುವುದಕ್ಕೆ ಕಾರಣವೇನು? ಹೇಳು. ಶಿವಪೂಜೆಯ ಸಮಯವನ್ನು ನೀನೇನಾದರೂ ಮೀರಿದೆಯೊ? ‖ ೨೦ ‖ ಉತ್ತಮವಾದ ಸದಾಚಾರವನ್ನೂ ವ್ರತವನ್ನೂ ನೀನೇನಾದರೂ ಕೆಡಿಸಿದೆಯೊ? ಕಾಲಕ್ಕೆ ಬಂದ ಜಂಗಮರನ್ನು ನೀನು ಆಲಸ್ಯಗೊಂಡು ಬೇಗನೆ ಪೂಜಿಸದೆ ಹೋದೆಯೊ? ಪೂಜಾಸಾಮಗ್ರಿಗಳನ್ನು ನೀನು ಬೆಳಗದೆ ಹೋದೆಯೊ? ‖ ೨೨ ‖ ತಂಬಿಗೆ ಮೊದಲಾದ ಪಾತ್ರೆಗಳನ್ನು ನೀನು ಚೆನ್ನಾಗಿ ತೊಳೆದಿಡದೆ ಹೋದೆಯೊ? ಅಯ್ಯೋ! ನೀನು ಅಭಿಷೇ

ದ್ಗ್ರಹಾಕ್ವ್ಯತ್ಕ್ರಮೋನಕರೋಃಕಿಮು ॥೧೩॥ ಆಲೇಪನಂಕೃತವತೀ
ಗೋಮಯೇನನಕಿಂವದ| ಅಥವಾ ಪರಿನಷ್ಟಾನಿ ಕೀಟಜಾತಾನಿಗೋಮಯೇ॥
ವರ್ಣಕಂ ಕಿಂ ನಸಂಪೂರ್ಣಂಪದ್ಮಾನಿಸ್ಫುಟಿತಾನಿಕಿಂ |ಚಂದನಂಮಲಿನಂಸ್ಯಾ
ತ್ಕಿಂವಸ್ತ್ರಪೂತಂಜಲಂನಕಿಂ ||೧೪|| ಆರ್ದ್ರತ್ವಮಾರ್ಜಕಂವಸ್ತ್ರಂಸಿಕ್ತಂ
ನಮಲಿನಂಕಿಮು | ಅವ್ಯಂತಂಪ್ರಾಕ್ತನಂವಾಪಿಕ್ಲಿಷ್ಟಂನಿರ್ಗತವಾಸನಂ ॥೧೬॥
ಸವ್ಯಕ್ತೋಧಿತಪುಷ್ಪೇಷು ಮಿಶ್ರಿತಂಕುಸುಮಂ ಕಿಮು | ಗುಗ್ಗುಲುಃ ಕಿನ್ನ
ಪರ್ಯಾಪ್ತೋ ರಸಾಧಿಕ್ಯೇನತಸ್ಯಚ ॥೧೭॥ ಬಾಹುಳ್ಯಾತ್ಕಿಮುಶಾಂತೋಽಭೂ
ದನಲೋಧೂಪಪಾತ್ರಕೇ | ನಕಿಂನೀರಾಜನಾದೀಪಾನಿಯಮಸ್ಯಮಿತೇರಲಂ॥
ಆರಾತ್ರಿಕಚಯಸ್ಸಮ್ಯಙ್ನಪ್ರದತ್ತಸ್ತ್ವಯಾಕಿಮು | ಪಾರ್ಶ್ವಯೋರುಭ
ಯೋರ್ದೀಪೌ ಪಟೂನಸ್ತೋಽಥವಾಕಿಮು ॥೧೮॥ ಕಿಂದಶಾಗ್ರಸಮುಚ್ಛ್ರಾಯ
ಸಾದುಷ್ಣತಾಸಮುಪಸ್ಥಿತಾ | ಪರಮೇಶಾಯೋಪಹಾರಪರಿವೇಷಣಕರ್ಮಣಿ ॥
ಸಾಕಾಂಕ್ಷಮಭವಚ್ಚಿತ್ತಂವಾನಮಾನಸಂತವಶೋಭನೇ | ಅರ್ಪಿತಂಚಾರ್ಪಣೈಃ
ಯೈಸ್ತ್ವಂ ಕಿಂವಾದ್ರವ್ಯೈರಮಿಶ್ರಯಃ ॥೨೦॥ ತ್ರಿವಿಧೋದಕಮನ್ಯೋನ್ಯಂ
ತ್ವಯಾ ಕಿಂ ಪರಿಮಿಶ್ರಿತಂ| ತ್ವಂಪ್ರಸಾದೇಪೂರ್ವಬುದ್ಧಿಮಥವಾಕೃತವತ್ಯಸಿ|

---

ಕದ ಪಾತ್ರೆಗಳನ್ನು ಕ್ರಮವಾಗಿಡದೆ ವ್ಯತ್ಯಸ್ತಗೊಳಿಸಿದೆಯೊ? ॥ ೧೩ ॥ ಸಗಣ
ದಿಂದ ನೀನು ಸಾರಿಸಲಿಲ್ಲವೊ? ಅಥವಾ ಸಾರಿಸುವಾಗ ಸಗಣದಲ್ಲಿ ಸಿಕ್ಕಿ ಹುಳುಗ
ಳೇನಾದರೂ ಸತ್ತುಹೋದುವೊ? ॥ ೧೪ ॥ ಚಿತ್ರವರ್ಣದ ರಂಗವಲ್ಲಿಯನ್ನು
ಪೂರ್ಣವಾಗಿಡಲಿಲ್ಲವೊ? ಬರೆದ ಪದ್ಮರೇಖೆಗಳು ಕೂಡದೆ ಬಿಚ್ಚಿಹೋದುವೊ?
ಗಂಧವು ನಿರ್ಮಲವಾಗಿರಲಿಲ್ಲವೊ? ನೀರನ್ನು ಬಟ್ಟೆಯಲ್ಲಿ ಶೋಧಿಸಲಿಲ್ಲವೊ?॥೧೫॥
ಒದ್ದೆಯನ್ನು ಒರಸತಕ್ಕ ವಸ್ತ್ರವು ಕೊಳೆಯಾಗಿರಲು ಅದನ್ನು ಒಗೆದುಹಾಕಲಿ
ಲ್ಲವೊ? ತೊಟ್ಟಿಲ್ಲದೆಯೂ ಒರಟಾಗಿಯೂ ಪರಿಮಳವಿಲ್ಲದೆಯೂ ಇರುವ ಹಳೆಯ
ಹೂವನ್ನೂ ಚೆನ್ನಾಗಿ ಶೋಧಿಸಿದ ಹೂವುಗಳನ್ನೂ ಬೆರಸಿಬಿಟ್ಟೆಯೊ? ಗುಗ್ಗುಲವು
ಸಾಲದೆ ಹೋಯಿತೊ? ॥ ೧೭ ॥ ಅಥವಾ ಅದರ ರಸವು ಹೆಚ್ಚಾಗಿ ಧೂಪಾರ್ತಿ
ಯಲ್ಲಿದ್ದ ಬೆಂಕಿಯನ್ನು ಆರಿಸಿಬಿಟ್ಟಿತೊ? ಬೆಳಗುವ ದೀಪಗಳು ಲೆಕ್ಕಕ್ಕೆ ತಕ್ಕಷ್ಟು
ಇಲ್ಲದೆ ಹೋದುವೊ? ॥ ೧೮ ॥ ಆರತಿಗಳ ಸಮೂಹವನ್ನು ನೀನು ಚೆನ್ನಾಗಿ ಅಣಿ
ಮಾಡಿಕೊಡಲಿಲ್ಲವೊ? ಎರಡು ಪಕ್ಕಗಳಲ್ಲೂ ದೀವಿಗೆಗಳು ಪ್ರಕಾಶವಾಗಿ ಉರಿ
ಯುತ್ತಿರಲಿಲ್ಲವೊ? ಅಥವಾ ಆರಿಹೋಗಿದ್ದಿತೊ? ॥ ೧೯ ॥ ಇಲ್ಲವೆ ಬತ್ತಿಯ
ತುದಿಯನ್ನು ಹೆಚ್ಚಾಗಿ ಚಾಚಿದುದರಿಂದ ಜ್ವಾಲೆಯು ಹೆಚ್ಚಾಗಿ ಸೆಕೆ ಹುಟ್ಟಿತೊ?
ಶಿವನಿಗೆ ನೈವೇದ್ಯವನ್ನು ಬಡಿಸುವಾಗ ನಿನ್ನ ಮನಸ್ಸೇನಾದರೂ ಅದರಲ್ಲಿ ಆಸೆಗೊಂ

ಕಥಿತಂಕರ್ಮ ಕಿಮಪಿ ನಾಕರೋಸ್ತ್ವಂತದೈವಕಿಂ । ತೂಷ್ಣೀಂಸ್ಥಿತಾಕಿವಾ ಹೂತಾಕಿಂವಾಪ್ರತ್ಯುಕ್ತವತ್ಯಸಿ ॥೩೩॥ ನರ್ಮಲೀಲಾವಶಾದ್ಭೀತಿರಹಿತಾಸ್ಯಥ ವಾಕಿಮು । ನಾಶೃಣೋರ್ವಚನಂ ಕಿಂವಾಪ್ರತಿಕೂಲಾಭವಃಕಿಮು ॥೩೪॥ ನಕದಾಪಿತವಾಸ್ತ್ಯೇತತ್ಸವಿಧಾಪಭವನಂಗತಾ। ಚಿರಂಸ್ಥಿತಾಸಿವಾಕೋಪೇಪಿತುಃ ಕೋಹೇತುರುಚ್ಯತಾಂ ॥೩೫॥ ಕೋಪಂಮುಕ್ತ್ವಾಸಹಾಸ್ಮಾಭಿರ್ಭಾಷತೇ ಶಿವಪೂಜನಂ। ಕರ್ತುಮಾಯಾಸ್ಯತಿ ಗುರುಂನಮಸ್ಕರ್ತುಂ ಗಮಿಷ್ಯತಿ ॥೩೬॥ ನಪಾರ್ಯತೇವಾನಿರ್ಗಂತುಂಪಶ್ಚಾದ್ಗತ್ವಾಜಲಾಶಯಂ । ತಾವತ್ಕೋಪೋಪಶಮನಂ ಕರಿಷ್ಯಾವಃಕೃತಾನತೀ ॥೩೭॥ ತಿಷ್ಠಾವಃಪಾದಯೋಃಕರ್ತುಂ ಕೋಪಪ್ರಶಮನಂಪಿತುಃ । ಆಗಚ್ಛಶೀಘ್ರಮಂಬೇತಿಕರ್ಷತ್ಯಸ್ಮಿನ್ನಿಜಾಂಬರಂ॥೩೮ ಉವಾಚಜನನೀಪುತ್ರಂ ಕಿಂಚಿತ್ಪ್ರಕುಪಿತಾಸತೀ । ದುರಾಲಾಪಕೃತಾಭ್ಯಾಸೋನಂದನೊಽಸಿತ್ವಮೀದೃಶಃ ॥೩೯॥ ಕಿಮುಬಾಲಿಶವಾಕ್ಯಾನಿ ತವೈತಾನಿವ

---

ಡಿತೊ ? ನಿವೇದನ ಮಾಡಿದ್ದ ಪ್ರಸಾದವನ್ನು ನಿವೇದನ ಮಾಡುವುದಕ್ಕರ್ಹವಾದ ಪದಾರ್ಥಗಳ ಸಂಗಡ ಮಿಶ್ರಮಾಡಿಬಿಟ್ಟೆಯೊ ? ॥೩೧॥ ಗುರುಲಿಂಗ ಜಂಗಮ ಪಾದತೀರ್ಥಗಳನ್ನು ಒಂದರೊಡನೊಂದನ್ನು ಬೆರಸಿಬಿಟ್ಟೆಯೊ? ಪ್ರಸಾದವನ್ನು ಪದಾರ್ಥವನ್ನಾಗಿ ಭಾವಿಸಿದೆಯೊ? ॥೩೨॥ ಹೇಳಿದ ಕೆಲಸವನ್ನು ನೀನು ಥಟ್ಟನೆ ಮಾಡದೆ ತಪ್ಪಿದೆಯೊ? ಅಥವಾ ಕರೆದರೆ ಸುಮ್ಮನಿದ್ದೆಯೊ? ಇಲ್ಲವೆ ಪ್ರತ್ಯುತ್ತರ ವನ್ನೇನಾದರೂ ನುಡಿದೆಯೊ? ॥೩೩॥ ಪ್ರೀತಿಯಿಂದುಂಟಾದ ಸರಸದಿಂದ ಭಯ ವನ್ನು ಬಿಟ್ಟವಳಾದೆಯೊ? ಆತನ ಮಾತನ್ನು ಕೇಳದೆ ಹೋದೆಯೊ? ಅಥವಾ ಇದಿರುಬಿದ್ದೆಯೊ? ॥೩೪॥ (ಈ ಗುಣವು ನಿನಗೆ ಯಾವಾಗಲೂ ಇಲ್ಲ.) ಸಮೀಪದ ಮನೆಗೆ ಹೋಗಿ ಬಲುಹೊತ್ತಾಗಿ ನಿಂತೆಯೊ? ತಂದೆಗೆ ಉಂಟಾಗಿರುವ ಕೋಪಕ್ಕೆ ಕಾರಣವೇನು ? ಹೇಳು ॥೩೫॥ ಅಮ್ಮಾ! ಅನಂತರ ಹೋಗಿ ಬಾವಿಯನ್ನು ತೋಡಿದರಾಗದೊ? ಅಷ್ಟರೊಳಗೆ ನಾವು ತಂದೆಗೆ ಅಡ್ಡಬಿದ್ದು ಕೋಪವನ್ನು ಶಾಂತಿಗೊಳಿಸುವ, ಹಾಗಾದರೆ ಈತನು ಕೋಪವನ್ನು ಬಿಟ್ಟು ನನ್ನೊಡನೆ ಮಾತನಾಡುತ್ತಾನೆ. ಶಿವಪೂಜೆಯನ್ನು ಮಾಡುವುದಕ್ಕೆ ಬರುತ್ತಾನೆ. ಗುರುವಿಗೆ ನಮಸ್ಕಾರವನ್ನು ಮಾಡುವುದಕ್ಕೆ ಹೋಗುತ್ತಾನೆ ॥೩೭॥ ಅದುಕಾರಣ ತಂದೆಯ ಕೋಪವನ್ನು ಆರಿಸುವುದಕ್ಕಾಗಿ ಆತನ ಪಾದಗಳಲ್ಲಿ ಅಡ್ಡಬೀಳುವ, ಬೇಗನೆ ಬಾ, ಎಂದು ಈ ಬಾಲಕನು ತನ್ನ ಸೀರೆಯನ್ನು ಸೆಳೆಯುತ್ತಿರಲು ॥೩೮॥ ತಾಯಿಯು ಸ್ವಲ್ಪ ಕೋಪಗೊಂಡು, ಮಗನನ್ನು ಕುರಿತು ಹೇಳಿದಳೇನೆಂದರೆ—ನೀನು ಹೀಗಲ್ಲಾ ಕೆಟ್ಟಮಾತುಗಳನ್ನಾಡುವುದನ್ನು ಕಲಿತುಕೊಂಡೆಯೊ? ॥೩೯॥ ಇವು

ಚಾಂಸ್ಯಲಂ | ಜಲಾಶಯೇಽಕೃತೇತಾತಸ್ತವಕೋಪಂನಮುಂಚತಿ ||೪೦|| ಅಗ
ಚ್ಛಾ ವಿವಿಧಾಯೈನಂ ನಕಿಂಚಿದಪಿಭಾಷತೇ | ತಥಾದೃಢತರಂಕೃತ್ವಾಭವಾ
ತಂಬೋಧಯಾಮ್ಯಹಂ ||೪೧|| ಶೇಷ್ವತಾವದಪಾಕರ್ತುಂಕೋಪೋಽಶಕ್ಯೋ
ಭವತ್ಪಿತುಃ | ಏವಂವದಂತೀಪುತ್ರಸ್ಯಮೋಚಯಿತ್ವಾಬಲಾತ್ಕರಂ ||೪೨|| ಹ
ಸಂತೀಪತಿಮಾಲೋಕ್ಯಕುರ್ವಂತ್ಯೇವಾವಟಂಸ್ಥಿತಾ | ತತೋಗೃಹಾದ್ವಿನಿರ್ಯಾತ
ಶ್ಶಿಶುರಾಕುಲಮಾನಸಃ ||೪೩|| ಯಥಾಪಿತ್ರಾಸಹಪುರಾಯಾತಿಸ್ಮ ಗುರುಮಂ
ದಿರಂ | ತಥಾಗುರುಗೃಹಂಗತ್ವಾಪ್ರಣನಾಮಗುರೂತ್ತಮಂ ||೪೪|| ನಾದಾಮೃ
ತರಸಾಂಭೋಧಿಮಗ್ನಂಶ್ರೀಮಾಧವಾಹ್ವಯಂ | ಸ್ವಾಮಿನ್ಮದಂಬಯಾಸಾ
ಕಂಭಾಷತೇನಾದ್ಯಮತ್ಪಿತಾ ||೪೫|| ಇಮುಂಕೋಪಂಶಮಯಿತುಂಸಮಾಗತ್ಯ
ತ್ವಮರ್ಹಸಿ| ಅಯಂವ್ಯಾಜೋಽಪರಾಧೋಽಯಮಿತಿವಕ್ತಿನಕಾರಣಂ ||೪೬||
ಶೀರ್ಣಮಾಚ್ಛಾದನಂದೃಷ್ಟ್ವಾಭವದ್ಭಿಃಪರಿಪಾಲಿತಂ | ಕಾಷಾಯವಸ್ತ್ರಮ
ಧುನಾಸಮ್ಯಕ್ಕೃತ್ವಾವಕುಂಠನಂ ||೪೭|| ಭಸ್ಮಾವಲಿಪ್ತಸರ್ವಾಂಗಸ್ಸ್ತಂಭ
ಮಾಶ್ರಿತ್ಯತಿಷ್ಠತಿ | ನಸ್ಪಂದತೇ ಕಿಂಚಿದಪಿನಿಯಮಂಚಾಗ್ರಹೀನ್ನವಂ ||೪೮||

---

ಹುಡುಗಾಟದ ಮಾತುಗಳೆ? ಸಾಕು; ಬಾವಿಯನ್ನು ತೋಡದಿದ್ದರೆ ನಿನ್ನ ತಂದೆಯು ಕೋಪವನ್ನು ಬಿಡುವುದಿಲ್ಲ ||೪೦|| ಈತನುಇನ್ನು ಮುಂದೆ ಸ್ವಲ್ಪವೂ ಆಕ್ಷೇಪಿಸಿ ಮಾತನಾಡದೆ ಇರುವಂತೆ ಗಟ್ಟಿಮಾಡಿ, ಬಳಿಕ ನಿನ್ನನ್ನು ಎಚ್ಚರಿಸುತ್ತೇನೆ || ೪೧ || ಅದುವರೆಗೆ ನೀನು ಮಲಗಿಕೊ. ನಿನ್ನ ತಂದೆಯ ಕೋಪವನ್ನು ಇಳುಹಿಸುವುದಶಕ್ಯ, ಎಂಬುದಾಗಿ ಹೇಳುತ್ತ ಮಗನ ಕೈಯನ್ನು ಬಲಾತ್ಕಾರದಿಂದ ಬಿಡಿಸಿ || ೪೨ || ಗಂಡನನ್ನು ನೋಡಿ ನಗುತ್ತ, ಹಳ್ಳವನ್ನು ತೋಡುತ್ತಲೇ ಇದ್ದಳು. ಬಳಿಕ ಹುಡುಗನು ವ್ಯಾಕುಲಚಿತ್ತನಾಗಿ ಮನೆಯಿಂದ ಹೊರಟು ||೪೩|| ಹಿಂದೆ ತನ್ನ ತಂದೆಯೊಡನೆ ತನ್ನ ಗುರುವಿನ ಮನೆಗೆ ಹೇಗೆ ಹೋಗುತ್ತಿದ್ದನೋ ಹಾಗೆಯೇ ಅದೇ ಗುರ್ತಿನಿಂದ ಗುರುಮಠಕ್ಕೆ ಹೋಗಿ, ವೀಣಾನಾದವೆಂಬ ಅಮೃತರಸದ ಸಮುದ್ರದಲ್ಲಿ ಮುಳುಗಿದವನಾಗಿರುವ ಮಾದರಸನೆಂಬ ಗುರುಶ್ರೇಷ್ಠನನ್ನು ನಮಸ್ಕರಿಸಿದನು || ೪೪ || ಮತ್ತು– ಸ್ವಾಮೀ! ಈಗ ನಮ್ಮಪ್ಪನು ನಮ್ಮವ್ವನೊಡನೆ ಮಾತನಾಡುವುದಿಲ್ಲ || ೪೫ || ನೀನಾದರೆ ಬಂದು ಆ ಕೋಪವನ್ನು ಶಮನಮಾಡಬಲ್ಲೆ. ಇದೊಂದು ನೆಪ ಅಥವಾ ತಪ್ಪು ಎಂಬುದಾಗಿ ಯಾವಕಾರಣವನ್ನೂ ಹೇಳುವುದಿಲ್ಲ || ೪೬ || ಆತನು ಹೊದೆದಿದ್ದ ಹಳೆಯ ಹರಕುಬಟ್ಟೆಯನ್ನು ನೋಡಿ ತಾವು ಕೊಟ್ಟ ಕಾವಿಯಬಟ್ಟೆಯನ್ನು ಈಗ ಚೆನ್ನಾಗಿ ಹೊದೆದುಕೊಂಡು ||೪೭|| ದೇಹಕ್ಕೆಲ್ಲಾ ಭಸ್ಮವನ್ನು ಧರಿಸಿಕೊಂಡು ಕಂಬವನ್ನೊರಗಿ ಕುಳಿತಿರುವನು ಸ್ವಲ್ಪವೂ ಅಲುಗಾಡುವುದಿಲ್ಲ. ಇದೊಂದು ನೂತನ ವ್ರತವನ್ನು ಹಿಡಿದಿರುವನು ||

ಭರ್ತ್ಸಯಂತಿಪ್ರಕುಪಿತಾಸ್ತಾಡಯಂತ್ಯಥವಾಭುವಿ । ಅಭಾಷಮಾಣಾಃಕೇ
ತೂಷ್ಣೀಂತಿಷ್ಠಂತಿಸ್ಪಂದವರ್ಜಿತಾಃ ॥೮೩॥ ವಿದ್ಯಂತೇಬಾಲಕಾಶ್ಚೇದೃಙ್ಮು
ಗ್ಧಾಸ್ತಿಷ್ಠಂತಿಕುತ್ರವಾ । ಅಸ್ಯಬಾಲಸ್ಯವಚನಾದನ್ಯಥಾಪ್ರತಿಭಾತಿಮೇ ॥
ಕಿಮಿಯಂಸಕಲೇಶಾಜ್ಞಾಗಚ್ಛಾಮಿಯಾತ್ಯುತ್ಥಿತಸ್ತತಃ । ಅಹಮುತ್ಕೃಷ್ಟಪದ
ವೀಮರ್ಥಯೇನಕದಾಚನ ॥೮೫॥ ಏತದರ್ಥಸ್ಯಸಾಕ್ಷೀತ್ವಂದೇವದೇವಮ
ಹೇಶ್ವರ । ಸಕಲೇಶಮಹಾಭಕ್ತಸಂದೋಹಾಯವರಪ್ರದ ॥೮೬॥ ಸಂತ್ರಾತ
ದೀನಶರಣನಿಧಾನೈತಚ್ಛಿವಾಸ್ತು ಮೇ । ಇತಿನೋದೀರಯೇತಸ್ಮಾದದ್ಯಪಾಲ
ಯಮದ್ವಚಃ॥೮೭॥ ಇತಿಮಾಧುರ್ಯಸರಸಗೀತಮೇಕಮುದೀರಯನ್ । ಸ್ಮಿತಾ
ನನಸ್ತದ್ಭವನಂಸಮಾಗತ್ಯಾಬ್ರವೀದ್ವಚಃ ॥೮೮॥ ಕಿಂಕರೋಷಿಮಹಾದೇವಿ
ಗೃಹಾಂತಸ್ತ್ವಂಭವತ್ಪತಿಃ । ಕಿಮರ್ಥಂಕುಪಿತಃಕಿಂವಾರಾತ್ರೌತ್ವತ್ಪ್ರಿಯ
ನಂದನಃ ॥೮೯॥ ಆಯಾತೋಬಾಲಲಿಂಗಣ್ಣೋನಿರ್ಗತ್ಯಭವನಾದಿತಃ । ಇತ್ಯು
ಕ್ತೇಸಂಭ್ರಮಾತ್ಕಾಂತಾಸಮಾಗತ್ಯಾನಮದ್ಗುರುಂ ॥೯೦॥ ಪುನಃಪುನಶ್ಚ ಸದ್ಭ

---

ಅವರು ಹೀಗೆ ಮನೆಯೊಳಗೆ ಚಿಲುಮೆಯನ್ನು ಮಾಡುವುದಿಲ್ಲ. ಕೋಪಿಸಿಕೊಂಡರೆ
ಗದರಿಸುತ್ತಾರೆ. ಅಥವಾ ಹೊಡೆಯುತ್ತಾರೆ. ಆದರೆ ಹೀಗೆ ಮಾತನಾಡದೆ ಅಲ್ಲಾ
ಡದೆ ಸುಮ್ಮನೆ ಯಾರು ಕುಳಿತುಕೊಳ್ಳುತ್ತಾರೆ? ॥೮೩॥ ಬಲುಮಂದಿ ಬಾಲಕರು
ಇದ್ದಾರೆ. ಹೀಗೆ ಮುಗ್ಧರಾದವರು ಎಲ್ಲಾದರೂ ಉಂಟೆ? ಈ ಬಾಲಕನ ಮಾತಿ
ನಿಂದ ನನಗೆ ಬೇರೆ ತೆರನಾಗಿ ತೋರುತ್ತದೆ ॥೮೪॥ ಇದೇನು ಶಿವನಪ್ಪಣೆಯೊ!
ಹೋಗುವ, ಎಂದು ಎದ್ದನು. ಬಳಿಕ ಆ ರೇವಾರ್ಯನು—ಎಲೈ ಪರಮೇಶ್ವರನೆ,
ನಾನು ಯಾವಾಗಲೂ ಉತ್ಕೃಷ್ಟಪದವಿಯನ್ನು ಅಪೇಕ್ಷಿಸುವವನಲ್ಲ. ಇದಕ್ಕೆ
ನೀನೇ ಸಾಕ್ಷಿ. ಭಕ್ತಸಮೂಹಕ್ಕೆ ವರದಾನವನ್ನು ಮಾಡುವ-ದೀನರಕ್ಷಕನಾದ-
ಶಿವಶರಣರಿಗೆ ನಿಕ್ಷೇಪನಾದ-ಎಲೈ ಸಕಲೇಶ್ವರನೆ! ನನಗೆ ಇಂತಹುದಾಗಬೇಕು
ಎಂದು ಕೇಳಿದವನಲ್ಲ. ಆದುದರಿಂದ ಈಗ ನನ್ನ ಮಾತನ್ನು ಕಾಪಾಡು ॥೮೭॥
ಎಂಬಭಿಪ್ರಾಯವುಳ್ಳ ಇಂಪಾದ ಒಂದು ಹಾಡನ್ನು ಹಾಡಿ, ಮುಗುಳ್ನಗೆಗೂಡಿದ
ಮುಖವುಳ್ಳವನಾಗಿ, ಆ ಚಿಕ್ಕಮಾದಣ್ಣನ ಮನೆಗೆ ಬಂದು, ಹೇಳಿದನೇನೆಂದರೆ—
॥೮೮॥ ಮಹಾದೇವಿಯೆ! ಮನೆಯೊಳಗೆ ಏನು ಮಾಡುತ್ತೀಯೆ? ನಿನ್ನ ಗಂಡನು
ಏತಕ್ಕೆ ಕೋಪಿಸಿಕೊಂಡನು? ರಾತ್ರಿಯಲ್ಲಿ ನಿನ್ನ ಪ್ರಿಯಪುತ್ರನಾದ ಬಾಲಲಿಂಗ
ಣ್ಣನು ಮನೆಯಿಂದ ಹೊರಟು ಅದೇತಕ್ಕೆ ಬಂದನು? ಎಂದು ಕೇಳಲು, ಆ ಮಾದೇ
ವಿಯು ಸಡಗರದಿಂದ ಬಂದು ಗುರುವಿಗೆ ನಮಸ್ಕರಿಸಿದಳು ॥೯೦॥ ಮತ್ತೆ ಮತ್ತೆ
ಸಾಷ್ಟಾಂಗವಾಗಿ ನಮಸ್ಕರಿಸಿದಳು. ಬಳಿಕ ತಪೋನಿಧಿಯಾದ ಆ ಗುರುವು ಸ್ವಲ್ಪ

ಕ್ತ್ವಾ ಸಾಷ್ಟಾಂಗಂ ಪ್ರಣತೋಭವತ್ | ತತಃಕಿಂಚಿದ್ಗೃಹದ್ವಾರಂ ಪ್ರವಿಶ್ಯಾಹ
ತಪೋನಿಧಿಃ ||೯೧|| ಚಿಕ್ಕಮಾದಣ್ಣ ಕುತ್ರತ್ವಂ ವರ್ತಸೇ ಕಿಂಕರೋಷಿಚ| ಉತ್ತಿ
ಷ್ಠೋತ್ತಿಷ್ಠ ತೂರ್ಣಂ ತ್ವಮಾಗಚ್ಛೇತೋ ಮಹಾಮತೇ ||೯೨|| ಲಿಂಗಾರ್ಚ
ನಸ್ಯ ಸಮಯೋ ಜಾತಃ ಕಿಂ ಸ್ಥೀಯತೇ ತ್ವಯಾ | ತತ್ರ ಮುಕ್ತಿಪದವ್ಯಾಂ ಕಿಂ ವಿದ್ಯ
ತೇ ಬಹುಳಂ ಸುಖಂ ||೯೩|| ಭುವಿ ಸದ್ಭಕ್ತಿಮಾರ್ಗೋಯಮಸ್ಮದಾಯತ್ತ ಏ
ವಹಿ | ತಸ್ಮಾದುಪೈಹಿ ಚೈತನ್ಯಂ ತ್ಯಜ ಮೌನಮಿತಃ ಪರಂ ||೯೪|| ಏತದಸ್ಯತಿಪ್ರ
ಯಂ ನೂನಮಭಾಷಣಕೃತಂ ಫಲಂ | ರೋಷೋಽಪ್ಯಸ್ತಿ ತವೇತ್ಯಸ್ಮಾತ್ಕೋ
ಪೋಪಶಮನಾಯತೇ ||೯೫|| ಬಾಲಲಿಂಗೋಽಯಮಧುನಾ ಸಂಪ್ರಾರ್ಥ್ಯಾನೀತ
ವಾನಿಹ | ಇತ್ಯುಕ್ತ್ವಾ ಸ್ವದಯಾದೃಷ್ಟಿಸುಧಾಸಿಂಧೌ ಸಮಂತತಃ ||೯೬||
ತಚ್ಛವಸ್ಯೋಪರಿ ತದಾ ತೇನ ಗಾಢಂ ಪ್ರವಾಹಿತೇ | ಕರೇಣ ತಾಡನಾನ್ನಿದ್ರಾಪ್ರಸ
ರಿಬದ್ಧ ಇವಾಧ್ವಗಃ ||೯೭|| ಶರೀರಮಭಿತಃ ಪ್ರಾಣೇಷ್ವಭಿವ್ಯಾಪ್ತೇಷು ತತ್ಕ್ಷಣಾ
ತ್ | ಪೃಷ್ಠಂ ತಿರ್ಯಕ್ಸಮುಚ್ಚಾಲ್ಯ ಮಿಥಃ ಕರತಲಾಂಗುಳೀಃ ||೯೮|| ಸಂಯೋ
ಜ್ಯ ವಕ್ರಿತಾಃ ಕೃತ್ವಾ ಕ್ರಮಾದಂಗಾನಿ ಸರ್ವತಃ | ವ್ಯಾಪ್ನುವತ್ಯಧಿಕಂ ಸ್ವೇದೇ ವಂ
ಡಲೀಕೃತ್ಯ ಮಸ್ತಕೇ ||೯೯|| ಬಾಹೂ ಪ್ರಸಾರ್ಯ ಶನಕೈರ್ಭ್ರೂವಾ ಕಟತಟಾವಪಿ|

---

ಒಳಬಾಗಿಲಿಗೆ ನುಗ್ಗಿ ||೯೧|| "ಚಿಕ್ಕಮಾದಣ್ಣಾ! ನೀನು ಎಲ್ಲಿದ್ದೀಯೆ? ಏನು
ಮಾಡುತ್ತೀಯೆ? ಏಳು ಏಳು; ಬುದ್ಧಿಶಾಲಿಯಾದವನೇ! ಬೇಗನೆ ಇತ್ತ ಬಾ ||೯೨||
ಲಿಂಗಪೂಜೆಯ ಹೊತ್ತಾಯಿತು, ನೀನು ಯಾತಕ್ಕೆ ಕುಳಿತಿದ್ದೀಯೆ? ಆ ಮುಕ್ತಿಪದವಿ
ಯಲ್ಲಿ ಬಹು ಸೌಖ್ಯವಿರುವುದೆ? ||೯೩|| ಭೂಮಿಯಲ್ಲಿ ಈ ಭಕ್ತಿಮಾರ್ಗದ ಆಚರ
ಣೆಯೇ ನಮಗೆ ಸಿದ್ಧವಾಗಿರತಕ್ಕುದು. ಆದುದರಿಂದ ಚೈತನ್ಯವನ್ನು ಪಡೆ, ಇನ್ನು
ಮೌನವನ್ನು ಬಿಡು ||೯೪|| ಮಾತನಾಡದಿರುವ ಈ ಫಲವು ನಮಗೆ ಪ್ರಿಯವಾ
ದುದೆ? ನಿನಗೆ ಕೋಪವೇನಾದರೂ ಇದ್ದೀತೋ ಏನೋ ಎಂದು ಅದನ್ನು ಇಳುಹ
ಸುವುದಕ್ಕಾಗಿ ಈ ಬಾಲಲಿಂಗನು ನಮ್ಮನ್ನು ಬೇಡಿ ಈಗ ಕರೆತಂದಿರುವನು. ಎಂದು
ಹೇಳಿ, ತನ್ನ ಕರುಣಾದೃಷ್ಟಿಯೆಂಬ ಅಮೃತದ ಸಮುದ್ರವನ್ನು ಆ ಶವದ ಮೇಲೆ
ಎಲ್ಲ ಕಡೆಯೂ ಶೀಘ್ರವಾಗಿ ಹರಿಯಿಸಲು, ಕೈಯಿಂದ ತಟ್ಟಿದರೆ ಮಲಗಿದ್ದ ಮಾರ್ಗ
ಸ್ಥನು ಹೇಗೆ ಏಳುತ್ತಾನೋ ಹಾಗೆ ||೯೭|| ಚಿಕ್ಕಮಾದಣ್ಣನು ತತ್ಕ್ಷಣದಲ್ಲೇ
ತನ್ನ ದೇಹದಲ್ಲೆಲ್ಲಾ ಪ್ರಾಣಗಳು ವ್ಯಾಪಿಸಿಕೊಳ್ಳಲು, ಬೆನ್ನನ್ನು ಅಡ್ಡಲಾಗಿ ಅಲು
ಗಿಸಿ, ಕೈ ಬೆರಲುಗಳನ್ನು ಒಂದಕ್ಕೊಂದನ್ನು ಸೇರಿಸಿ ಬಗ್ಗಿಸಿ, ನಟಿಕೆ ಮುರಿದು, ಶರೀ
ರದಲ್ಲೆಲ್ಲಾ ಕ್ರಮವಾಗಿ ಬೆಮರು ಹೆಚ್ಚಾಗಿ ವ್ಯಾಪಿಸಿಕೊಳ್ಳಲು, ತೋಳುಗಳನ್ನು
ತಲೆಯ ಮೇಲೆ ಚಾಚಿ, ಗುಂಡುಗಟ್ಟಿ ||೯೯|| ಹುಬ್ಬುಗಳನ್ನೂ ಕಪೋಲಗಳನ್ನೂ

ಋಜೂಕೃತ್ವಾಥನಾಸಾಯಾಃಪುಟೌಮುಕುಳಿತೌಯಥಾ॥೧೦೦॥ ಸ್ಮಿತಾವೋಷ್ಠೌಚಸಂಯುಕ್ತಾವುನ್ನಮಯ್ಯತಥಾಸುಖಂ । ತನುಂಸಂವೇಲ್ಲಯನ್ಗಾತ್ರಭಂಗಮಾರಚಯನ್ನಪಿ ॥೧೦೧॥ ವಿತನ್ವನ್ಜೃಂಭಿತಂಮಂದಂನಿಶ್ವಸನ್ನುಚ್ಛ್ವಸನ್ನಪಿ। ಉನ್ಮೀಲ್ಯಲೋಚನೇಚೆಕ್ಕಮಾದಣ್ಣೋವೀಕ್ಷ್ಯತಂಗುರುಂ॥ ಭಯಸಂಭ್ರಮಸದ್ಭಕ್ತಿಕಂಪೈಃಕೃತ್ವಾಥವಂದನಂ । ಧನ್ಯಃಪುಣ್ಯೋಹಮೇವಾಸ್ಮಿಗತದೈನ್ಯಕ್ಷಮಾಪರ ॥೧೦೩॥ ಸಿರಸ್ತಜನನೀಸ್ತನ್ಯಭವಜನ್ಯವಿವರ್ಜಿತ। ದೂರೀಕೃತಜಘನ್ಯೋಪಹತಮನ್ಮಥಸೈನ್ಯಕ ॥೧೦೪॥ ಹೃತಾನ್ಯಸಮಯಾನೀಕಚೈತನ್ಯಪರಮೋನ್ನತ । ಇತಿಸ್ತುತಿಮಸೌಚಕ್ರೇಪತ್ನ್ಯಾಸಹಸುತೇನಚ ॥೧೦೫॥ ಪುನಃಪುನಃಪ್ರಮೋದೇನಪ್ರಣಮನ್ಗುರುಪುಂಗವಂ । ತತಆಗತ್ಯಸದ್ಭಕ್ತಗಣಾಃಪ್ರೋಚುಸ್ಸವಿಸ್ಮಯಾಃ ॥೧೦೬॥ ಪಿತುರ್ಭಕ್ತ್ಯಾಸುತಪ್ರಾಣಾನ್ಪುರಾಗೌರೀಶ್ವರೋದದೌ । ತಥಾಸುತಸ್ಯಭಕ್ತ್ಯದ್ಯಪಿತ್ರೇಪ್ರಾಣಾನ್ಭವಾನದಾತ್ ॥೧೦೭॥ ಸಕಲೇಶ್ವರಮಾದಾರ್ಯಭಕ್ತಹೃಚ ಯ್ಯಶಾಶ್ವತ।

---

ಮೆಲ್ಲನೆ ನೇರಮಾಡಿ, ಕಿಸಿದಿದ್ದ ಮೂಗಿನ ಒರಲೆಗಳನ್ನು ಸಂಕೋಚಗೊಳಿಸಿ, ಬಿಚ್ಚಿದ್ದ ತುಟಿಗಳನ್ನು ಕೂಡಿಸಿ, ಸುಖವಾಗುವಂತೆ ದೇಹವನ್ನು ಮೇಲಕ್ಕೆ ನಿಗುರಿಸಿ, ಮುರಿದು ॥೧೦೧॥ ಆಕುಳಿಸಿ, ಮೆಲ್ಲಗೆ ಉಸುರಾಡಿಸುತ್ತ ಕಣ್ಣುಗಳನ್ನು ತೆರೆದು, ಆ ತನ್ನ ಗುರುವನ್ನು ನೋಡಿ ॥೧೦೨॥ ಭಯ—ಸಡಗರ—ಭಕ್ತಿ-ಕಂಪನ—ಇವುಗಳಿಂದ ಕೂಡಿ ನಮಸ್ಕಾರ ಮಾಡಿ, ನಾನು ಧನ್ಯನಾದೆನು, ಪರಿಶುದ್ಧನಾದೆನು, ಎಲೈ ಗುರುವೇ! ದೈನ್ಯವಿಲ್ಲದವನೆ! ಸಹನಗುಣಾಸಕ್ತನೆ! ॥೧೦೩॥ ತಾಯಮೊಲೆ ಹಾಲ ಕುಡಿಯುವುದನ್ನು ತಪ್ಪಿಸಿದವನೆ! (ಪುನರ್ಜನ್ಮವಿಲ್ಲದಂತೆ ಮಾಡಿದವನು) ಸಂಸಾರದಲ್ಲಿ ಹುಟ್ಟುವ ಕ್ಲೇಶಗಳಿಂದ ಬಿಡಲ್ಪಟ್ಟವನೆ! ನೀಚರನ್ನು ದೂರೀಕರಿಸಿದವನೆ! ಮನ್ಮಥನ ಸೈನ್ಯವನ್ನು ನಾಶಮಾಡಿದವನೆ! ॥೧೦೪॥ ಪರಮತದ ಸತ್ತ್ವವನ್ನು ಅಪಹರಿಸಿದವನೆ! ಅತ್ಯುತ್ಕೃಷ್ಟನೆ! ಎಂದು, ಆ ಗುರುವರನ ಸ್ತೋತ್ರವನ್ನು ಮಾಡಿದನು. ಮತ್ತೂ ಹೆಂಡತಿಯೊಡನೆಯೂ ಮಗನೊಡನೆಯೂ ಕೂಡಿ ॥೧೦೫॥ ಮತ್ತೆ ಮತ್ತೆ ಸಂತೋಷದಿಂದ ಆ ಗುರುಶ್ರೇಷ್ಠನನ್ನು ನಮಸ್ಕರಿಸಿದನು. ಬಳಿಕ ಭಕ್ತಗಣಂಗಳು ಬಂದು, ಆಶ್ಚರ್ಯದಿಂದ ಕೂಡಿ, ನುಡಿದರೇನೆಂದರೆ—॥೧೦೬॥ ಹಿಂದೆ ಪರಶಿವನು ತಂದೆಯ (ಸಿರಿಯಾಳನ) ಶಿವಭಕ್ತಿಯಿಂದ ಮಗನಿಗೆ (ಚೀಲಾಳನಿಗೆ) ಪ್ರಾಣವನ್ನು ಕೊಟ್ಟಿದ್ದನು. ಈಗ ನೀನು ಮಗನಲ್ಲಿರುವ ಭಕ್ತಿಯಿಂದ ತಂದೆಗೆ ಪ್ರಾಣವನ್ನು ಕೊಟ್ಟೆ ॥೧೦೭॥ ಭಕ್ತರ ಹೃದಯದಲ್ಲಿ ವಾಸವಾಗಿರುವ ಶಾಶ್ವತನಾದ ಎಲೆ

ದೂರಾದೇವಭವದ್ರೂಪೇವೀಕ್ಷಿತೇಜನಸಂಹತೇಃ ‖೧೦೮‖ ಪ್ರಯಾತಿಸಕಲಂ ಪಾಪಂನಕಿಂಸದ್ಗುರುಶೇಖರ | ಅವಿನೀತೋಪಿವೀಕ್ಷ್ಯತ್ವಾಂಕೃತಾರ್ಥೋನ ಭವೇತ್ಕಿಮು ‖೧೦೯‖ ಛಾಯಾಯಾಂತವದೇಹಸ್ಯಸ್ಪೃಷ್ಟಾಯಾಂಕಿಂಪ್ರಜಲ್ಪನೈಃ | ಪ್ರಯಾಂತಿಕಿಂಪಾಶಬಂಧಾಃಪ್ರಾಣಿನಾಂನನುನಾಖಿಲಾಃ ‖೧೧೦‖ ರೋಗೀನಿರೋಗೀಕಿಂನಸ್ಯಾದ್ಭವದ್ವಿಸ್ಮೇರವೀಕ್ಷಣಾತ್ | ನಿರೀಕ್ಷಿತೋಭವದ್ಭಿಃ ಕಿಂನಸ್ಯಾದಂಧೋಪಿದೃಷ್ಟಿವರ್ಾ ‖೧೧೧‖ ತ್ವತ್ಕೃಪಾಲೋಕನೇನಸ್ಯಾನ್ನ ಕಿಂವಾಸ್ಥವಿರೋಯುವಾ | ಭವತ್ಕೃಪಾಕಟಾಕ್ಷೇಣಸ್ಥೂಣಾಪ್ಯಂಕುರಿತಾ ನಕಿಂ ‖೧೧೨‖ ಭವತಾಕ್ಕರುಣ್ಯದೃಷ್ಟ್ಯಾಕಿಂನಶವೋಽಪಿಸಜೀತನಃ | ತ್ವತ್ಪ್ರೀಮದೃಷ್ಟ್ಯಾದಾವಾಗ್ನಿರಪಿಸ್ಯಾತ್ತುಹಿನಂನಕಿಂ ‖೧೧೩‖ ನಕಿಂಹಾಲಾಹಲಮಪಿಸುಧಾಸ್ಯಾತ್ತ್ವನ್ನಿರೀಕ್ಷಣಾತ್ | ಮಾಹಾತ್ಮ್ಯೇಭವತೋದೃಷ್ಟೇ ಗುರೋದಿಕ್ಷುಪ್ರಸಾರಿತೇ ‖೧೧೪‖ ಪ್ರಶಂಸಾಕಿಮಿದಂಸರ್ವಂಸಹಜಂತವಮನ್ಯೈಭವಂ| ಸ್ವೀಕೃತ್ಯಪ್ರಾರ್ಥನಾಮಸ್ಯಬಾಲಸ್ಯಚಮನೋರಥಂ ‖೧೧೫‖ ಕರ್ತುಮಾಗತ್ಯಭವತಾಪ್ರಾಣದಾನೇಕೃತೇಸತಿ | ಜೀವಿತಶ್ಚಿಕ್ಕಮಾದಣ್ಣ ಇತಿಯು

---

ಸಕಲೇಶಮಾದಾರ್ಯನೆ! ದೂರದಿಂದಲೇ ನಿನ್ನರೂಪದರ್ಶನವನ್ನು ಮಾಡಿದರೂ ಭಕ್ತಸಮೂಹದ ಸಕಲಪಾಪವೂ ನಾಶಗೊಳ್ಳದೆಯಿದ್ದೀತೆ? ಎಲೈ ಗುರುಶ್ರೇಷ್ಠನೆ! ಧೂರ್ತನಾದವನು ಸಹ ನಿನ್ನ ದರ್ಶನ ಮಾಡಿದರೆ ಕೃತಾರ್ಥನಾಗದೆ ಇರುವನೆ? ಹೆಚ್ಚು ಮಾತಿನಿಂದೇನು? ನಿನ್ನ ಶರೀರದ ನೆಳಲನ್ನು ಮುಟ್ಟಿದರೂ ಪ್ರಾಣಿಗಳ ಸಕಲ ಪಾಶಬಂಧಗಳೂ ತೊಲಗಿಹೋಗುವುವಲ್ಲವೆ? ‖೧೧೦‖ ನಿಮ್ಮ ಮುಗುಳ್ನಗೆಯಿಂದ ಕೂಡಿದ ನೋಟದಿಂದ ರೋಗಿಯೂ ನಿರೋಗಿಯಾಗುವನಲ್ಲವೆ? ನೀವು ನೋಡಿದ ಕುರುಡನೂ ಕೂಡ ನೇತ್ರಪಾಟವವುಳ್ಳವನಾಗುವನಲ್ಲವೆ? ‖೧೧೧‖ ನಿಮ್ಮ ದಯಾವಲೋಕನದಿಂದ ಮುದಿಕನೂ ಹರೆಯದವನಾಗದೆ ಇರುವನೆ? ನಿಮ್ಮ ಕರುಣಾಕಟಾಕ್ಷದಿಂದ ಮರದ ಕಂಬವೂ ಚಿಗುರುವುದಲ್ಲವೆ? ‖೧೧೨‖ ನಿಮ್ಮ ದಯಾವಲೋಕನದಿಂದ ಹೆಣವೂ ಪ್ರಾಣವುಳ್ಳುದಾಗುವುದಲ್ಲವೆ? ನಿನ್ನ ಪ್ರೀತಿಯುಕ್ತವಾದ ನೋಟದಿಂದ ಕಾಳ್ಗಿಚ್ಚೂ ಕೂಡ ಶೀತಲವಾಗುವುದಲ್ಲವೆ? ‖೧೧೩‖ ನಿನ್ನ ನೋಟದಿಂದ ಮಹಾವಿಷವೂ ಅಮೃತವಾಗುವುದಲ್ಲವೆ? ಎಲೈ ಗುರುವೆ! ನಿನ್ನ ಮಹಿಮೆಯನ್ನು ಎಲ್ಲರೂ ನೋಡಿರುವಾಗ, ದಿಕ್ಕುಗಳಲ್ಲೆಲ್ಲಾ ಅದು ಪ್ರಸಾರಗೊಂಡಿರುವಾಗ‖೧೧೪‖ ಈ ನಿನ್ನ ವೈಭವವೆಲ್ಲಾ ಸಹಜವಾದುದೇ ಹೊರತು ಸ್ತೋತ್ರವೆ? ಈಬಾಲಕನ ಪ್ರಾರ್ಥನೆಯನ್ನಂಗೀಕರಿಸಿ, ಇಷ್ಟಪೂರ್ತಿಯನ್ನು ಮಾಡುವುದಕ್ಕಾಗಿ

ಅಂಬಾಶಿವಾರ್ಚನಸ್ಥಾನೇಪ್ರಕುರ್ವಂತೀಜಲಾಶಯಂ । ನಾಕ್ರೋಶಸ್ಮಿನ್ನಯಂ ಕೋಪಂಮುಂಚತೀತಿಸ್ಮಿತಾನನಾ ॥೪೯॥ ಮಾತ್ರಾಕುಪ್ಯತುವೈನಂ ಮಾಂ ಪ್ರಾಣಾನ್ಮತ್ವಾಪುರಾಸ್ಥಿತಃ । ಅದ್ಯಚಿತ್ರಂಗುರೋತತ್ತುಮಯಾನವದತೀತಿ ಯತ್॥೫೦॥ ಪುರಾವಮಾಂದೃಷ್ಟಮಾತ್ರೇಣದರಹಾಸಯುತಾನನಃ। ರೋಮಾಂಚಿತತನುರ್ಬಾಲಲಿಂಗಾರ್ಯಾಗಮ್ಯತಾಮಿತಿ ॥೫೧॥ ಪರ್ದಪ್ರಸಾರಯತ್ಯಗ್ರೇ ಕರೌತುಷ್ಯತ್ಯುಪಾಗತೇ। ಉರೋದದಾತಿಹಸ್ತಾಭ್ಯಾಂಪರಿಷ್ವಜತಿಸಾದರಂ॥ ಕರೋತ್ಯಂಕೇಕಾಕಪಕ್ಷಂ ಶನೈಃ ಕಂಡೂಯತೇ ಮಮ । ಕರೋತಿವೇಣೀಂತಸ್ಯಾಗ್ರೇ ಬಧ್ನಾತಿಕುಸುಮಂನವಂ ॥೫೨॥ ಭಸ್ಮಾಲೀಪತಿಫಾಲಾಗ್ರೇ ನೇತ್ರಯೋಃ ಕುರುತೇಂಜನಂ । ಆನಮಯ್ಯಶಿರೋವಕ್ತ್ರಮಾಲೋಕಯತಿಸಸ್ಮಿತಂ ॥೫೪॥ ಉಭೇಪಾರ್ಶ್ವೇಮಮಮುದಾಸ್ವಹಸ್ತಾಭ್ಯಾಂಪರಿಸ್ಪೃಶ । ಕಕ್ಷೌಪ್ರಪೀಡ್ಯಚಾಂಗುಳ್ಯಾಮಾಂಹಾಸಯತಿಲೀಲಯಾ ॥೫೫॥ ಶ್ರೋತುಂಸವಿಾಹತೇವಾಕ್ಯಂಚುಂಬನಂಯಾಚತೇಮಮ । ಪಂಚಾಕ್ಷರಂ

---

॥೪೮॥ ತಾಯಿಯಾದರೂ ಇದನ್ನು ತೋಡದಿದ್ದರೆ ಈತನು ಕೋಪವನ್ನು ಬಿಡುವುದಿಲ್ಲವೆಂದು ಹೇಳಿ ಮುಗುಳ್ನಗೆ ನಗುತ್ತ, ಶಿವಪೂಜೆಯ ಸ್ಥಲದಲ್ಲಿ ಚಿಲುಮೆಯನ್ನು ತೋಡುತ್ತಿದ್ದಾಳೆ ॥೪೯॥ ಬೇಕಿದ್ದರೆ ತಾಯೊಡನೆ ಅವನು ಕೋಪಿಸಿಕೊಳ್ಳಲಿ. ನನ್ನನ್ನು ಪ್ರಾಣವನ್ನಾಗಿ ತಿಳಿದುಕೊಂಡಿದ್ದನಲ್ಲಾ! ಅಂಥ ನನ್ನೊಡನೆ ಈಗ ಮಾತನಾಡದಿರುವುದೀಗ ಆಶ್ಚರ್ಯವು! ॥೫೦॥ ಪೂರ್ವದಲ್ಲಿ ನಮ್ಮಪ್ಪನು ನನ್ನನ್ನು ನೋಡಿದ ಮಾತ್ರದಿಂದಲೇ ಮುಗುಳ್ನಗೆ ನಗುತ್ತ, ದೇಹದಲ್ಲಿ ರೋಮಾಂಚವನ್ನೈದಿ, ಎಲೆ ಬಾಲಕನೇ! ಬಾ, ಎಂದು ಹೇಳಿ, ಕೈಗಳನ್ನು ಮುಂದೆ ಚಾಚುವನು. ನಾನು ಹತ್ತಿರಕ್ಕೆ ಬಂದರೆ ಸಂತೋಷಪಡುವನು. ಎದೆಯನ್ನೊಡ್ಡುವನು. ಕೈಗಳಿಂದ ಹಿಡಿದು ಪ್ರೀತಿಯಿಂದ ತಬ್ಬಿಕೊಳ್ಳುವನು ॥೫೨॥ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಮೆಲ್ಲನೆ ಮುಂಗೂದುಲನ್ನು ತೂರಿಸುವನು. ಜಡೆಯನ್ನು ಹೆಣೆದು ಮೇಲೆ ಹೂವನ್ನು ಮುಡಿಸುವನು ॥೫೩॥ ಹಣೆಗೆ ವಿಭೂತಿಯನ್ನು ಧರಿಸುವನು; ಕಣ್ಣುಗಳಿಗೆ ಕಪ್ಪನ್ನಿಕ್ಕುವನು. ತಲೆಯನ್ನು ಬಗ್ಗಿಸಿ ಮುಗುಳ್ನಗೆ ನಗುತ್ತ ಮುಖವನ್ನು ನೋಡುವನು ॥೫೪॥ ಸಂತೋಷದಿಂದ ನನ್ನ ಎರಡು ಪಕ್ಕಗಳಲ್ಲೂ ತನ್ನ ಕೈಗಳಿಂದ ಮುಟ್ಟಿ ವಿಲಾಸದಿಂದ ಕಂಕುಳಲ್ಲಿ ಬೆರಲಿನಿಂದ ಚಕ್ಕಲಗುಲಿಯನ್ನಿಕ್ಕಿ ನಗಿಸುವನು ॥ ನನ್ನ ಮಾತನ್ನು ಕೇಳುವುದಕ್ಕೆ ಅಪೇಕ್ಷಿಸುವನು. ಮುತ್ತನ್ನು ಕೊಡೆಂದು ಕೇಳುವನು. ಪಂಚಾಕ್ಷರಮಂತ್ರವನ್ನು ನುಡಿಸುವನು. ಸಂತೋಷದಿಂದ ಮುತ್ತು ಕೊಡು

ಪಾಠಯತಿಪರಿಚುಂಬತಿಹರ್ಷತಃ ‖೫೬‖ ಬಸವಾಧೀಶ್ವರಸ್ಯತ್ವಂಗೃಹದಾಸೀ ಸುತಃಕಿಮು । ಮುಸುಂಡಿಚೌಡಯಾರ್ಯಾಣಾಂಪೌತ್ರಃಕಿಮುಪಲಾಲಿತಃ ‖೫೭‖ ಕ್ಷುರಿಕಾಚೌಡಯಾರ್ಯಾಣಾಮುತಾಹೋಪರಿಚಾರಕಃ । ಕ್ಷುರಿಕಃಕಿನ್ನುತಕರಿಕಾಲಚೋಳನೃಪತೇರ್ಭೃತಃ ‖೫೮‖ ಕಕ್ಕಾರ್ಯದ್ವಾಸ್ಥಿತಶ್ಚಾತ್ರಃಕಿಂಚಿಕ್ಕಬಸವೇಶಿತುಃ । ಸಿರಿಯಾಳಪ್ರಿಯಸಖಃ ಪಂಡಿತಾರಾಧ್ಯಪೌತ್ರಕಃ ‖೫೯‖ ತೆಲುಂಗಜೊಮ್ಮಯಾರ್ಯಸ್ಯಕಿ ಮಾಖೇಟಕರೋಽಥವಾ । ಕಲಕೇತಬ್ರಹ್ಮಯಸ್ಯ ಭೃತ್ಯೋವಾಸಮುದಂಚಿತಃ ‖೬೦‖ ಉತಸೊಡ್ಡಲಬಾಚಾರ್ಯಡಿಂಭೋನಿಂಬಿತನೂಭವಃ । ಭವಾನ್ಕಿಮಥವಾಮ್ಮವ್ವಾಪರಿವರ್ಧಿತನಂದನಃ ‖೬೧‖ ಏಲೇಶಕೇತಯಾರ್ಯಸ್ಯಪಶುಪಾಲೋಽಥವಾಸ್ವಯಂ । ಉತಮೋಳಿಗೆಮಾರಾರ್ಯಭಾಂಡಾಗಾರನಿವೇಶಿತಃ ‖೬೨‖ ಅಥಶಂಕರದಾಸಾರ್ಯಕಿಂಕರಃಕಿಂವಶಂವದಃ। ಸುಂಕಿಬಂಕಾರ್ಯಭೃತ್ಯೋವಾಪ್ರಭೋಸ್ಸ್ನಾನಸಪ್ರದಾಯಕಃ ‖೬೩‖ ಚೆನ್ನಯಾರ್ಯಭುಜಿಷ್ಯೋವಾಕಿನ್ನರಾರ್ಯಾತ್ಮಸಂಭವಃ । ಸತ್ಯೇಶಚಾಮಯಾರ್ಯಸ್ಯಪ್ರಸಾದೀವಾತ್ವಮುತ್ತಮಃ ‖೬೪‖ ಅಶ್ವಪಾಲಶ್ಚೇರಮಸ್ಯಸಿದ್ಧರಾಮಭಟೋಽಥವಾ । ಶ್ರೀಮಾದಿರಾಜಾರ್ಯವರ್ಯಪೌತ್ರೋವಾಸುಗುಣಾನ್ವಿತಃ ‖೬೫‖

---

ವನು ‖೫೬‖ ನೀನು ಬಸವೇಶನ ಮನೆಯು ಗೌಡಿಯು ಮಗನೊ? ಮುಸುಡಿ ಚೌಡಯ್ಯನ ಮುದ್ದುಮೊಮ್ಮಗನೊ? ‖೫೭‖ ಇಲ್ಲವೆ ಸುರಗಿ ಚೌಡಯ್ಯನ ಪರಿಚಾರಕನೊ? ಅಥವಾ ಕರಿಕಾಲ ಚೋಳರಾಜನ ಬಿಚ್ಚುಗತ್ತಿಯು ಸೇವಕನೊ? ‖೫೮‖ ಕಕ್ಕಯ್ಯನ ಮನೆಯು ಬಾಗಿಲ ಕಾವಲುಗಾರನೊ? ಚಿಕ್ಕಬಸವಣ್ಣನ ಶಿಷ್ಯನೊ? ಸಿರಿಯಾಳಸೆಟ್ಟಿಯು ಆಪ್ತಮಿತ್ರನೊ? ಪಂಡಿತಾರಾಧ್ಯನ ಮೊಮ್ಮಗನೊ? ‖೫೯‖ ತೆಲುಂಗಜೊಮ್ಮಯ್ಯನ ಬೇಟೆಗಾರನೊ? ಕಲಕೇತ ಬ್ರಹ್ಮಯ್ಯನ ಉತ್ತಮನಾದ ಬಂಟನೊ? ಇಲ್ಲವೆ ಸೊಡ್ಡಳ ಬಾಚಯ್ಯನ ಮಗುವೊ? ನಿಂಬ್ಯವ್ವನ ಮಗನೊ? ಅಥವಾ ಅಮ್ಮವ್ವೆಯು ಸಾಕಿದ ಮಗನೊ? ‖೬೧‖ ಏಲೇಶ ಕೇತಯ್ಯನ ಮನೆಯು ದನಕಾಯುವವನೊ? ಇಲ್ಲವೆ ಮೋಳಿಗೆ ಮಾರಯ್ಯನ ಬಂಡಾರವನ್ನು ಕಾಯುವ ಗೊಲ್ಲನೊ? ಶಂಕರದಾಸಯ್ಯನ ಅಧೀನನಾದ ಸೇವಕನೊ? ಸುಂಕದ ಬಂಕಯ್ಯನ ಆಳೊ? ಅಲ್ಲಮಪ್ರಭುವಿಗೆ ಸ್ನಾನ ಮಾಡಿಸುವ ಊಳಿಗದವನೊ? ‖೬೩‖ ಚೆನ್ನಯ್ಯನಿಗೆ ಉಣಬಡಿಸುವನೊ? ಕಿನ್ನರಯ್ಯನ ಮಗನೊ? ಅಥವಾ ನೀನು ಸತ್ಯೇಶ ಚಾಮರಸನ ಉತ್ತಮನಾದ ಪ್ರಸಾದಿಯೊ? ‖೬೪‖ ಚೇರಮರಾಯನ ಕುದುರೆಯಾಳೊ? ಸಿದ್ಧರಾಮಯ್ಯನ ಕಾಳಗದಾಳೊ? ಮಾದರಸನ ಸದ್ಗುಣಸಂಪನ್ನನಾದ ಮೊಮ್ಮಗನೊ? ‖೬೫‖ ಅಥವಾ ಚಿಕ್ಕಮಾದಣ್ಣ ಮಹಾದೇವಿಯರ ಪ್ರಿಯಪುತ್ರನೊ?

ಅಥವಾಚಿಕ್ಕಮಾದಣ್ಣ ಮಹಾದೇವೀ ಪ್ರಿಯಾತ್ಮಜಃ । ಇತ್ಯುಕ್ತ್ವಾ ಚುಂಬ ತಿಮುಹುರ್ನರ್ತಯತ್ಯತಿರಾಗವಾನ್ ॥೬೬॥ ಕಿಂಚಿದ್ಬುಭುಕ್ಷಿತೇವಕ್ತಿ ಮಯ್ಯಂಬಾಂಪ್ರೀತಿಭಾಸುರಂ। ನನ್ವಸ್ಯಬಾಲಕಸ್ಯಾಶುಪ್ರದಾನೇಭೋಜನಸ್ಯತೇ।೬೭॥ ಹಸ್ತೇನಾನ್ಯೇನಭಾವ್ಯಂಕಿಂಯತ್ತ್ವಂಚಿರಯಸೀದೃಶಂ । ಬುಭುಕ್ಷಿತೋ ಬಾಲಲಿಂಗಃಕಿಂಸರ್ವೈಃಕರ್ಮಭಿಶ್ಶುಭಾ ॥೬೮॥ ಆಗಚ್ಛತ್ವಂಬಾಲಲಿಂಗಮಿಮಂಭೋಜಯಿತುಂಕ್ಷಣಾತ್ । ಏವಮಾಕಾರಯತ್ಯಂಬಾಂತಸ್ಯಾಃಕರ್ಮಾಸ್ತಿ ಚೇತ್ಸ್ವಯಂ ॥೬೯॥ ಮಾಂಭೋಜಯತಿಯತ್ನೇನ ವಿಧಾಯಕಬಳಂಶನೈಃ । ಉರಸ್ಯಾದಾಯಮಾಂಗಂತುಂಭವದಂತಿಕಮೇಷ್ಯತಿ ॥೭೦॥ ಜಡಾಇವಾತ್ಮಜ ಭ್ರಾಂತ್ಯಾನಮಯಿಪ್ರೀಮಾನ್ಪಿತಾ । ಕಿಂತುಸ್ವಾರಾಧ್ಯದೇವಸ್ಯನಾಮವಾನಿತಿಭಾವತಃ ॥೭೧॥ ಯದ್ಯಂತೇಯಾನಿಬಾಲಾನಾಂಕ್ರೀಡಿತಾನಿಮಹೀತಲೇ । ತೈಃಕ್ರೀಡಯತಿಮಾಂಪ್ರೀತ್ಯಾಪುರ್ವೈವಂಸ್ನೇಹವಾನ್ಮಯಿ ।೭೦। ಅನುಷ್ಟಃ ಕೀದೃಶೋವಾಗ್ರೇನಾಹೂತೋಪಿಶೃಣೋತ್ಯಹೋ। ಕಾಲೋಚಿತಾಭಿಷೇಕಸ್ಯಸಮಯಾನ್ನವ್ಯಲಂಘಯಂ ॥೭೨॥ ಕ್ರೀಡಿತುಂಬಾಲಕೈಸ್ಸಾಕಂನಗಚ್ಛ

---

ಎಂದು ಹೇಳಿ, ಬಾರಿಬಾರಿಗೂ ಮುತ್ತಿಡುವನು. ಅನುರಾಗಯುಕ್ತನಾಗಿ ಕುಣಿಯುವನು ॥೬೬॥ ನಾನು ಸ್ವಲ್ಪ ಹಸಿವುಗೊಂಡರೆ ತಾಯಿಯನ್ನು ಕುರಿತು—ಪ್ರೀತಿಯಿಂದ ಈ ಮಗನಿಗೆ ಬೇಗನೆ ಉಣಬಡಿಸುವುದಕ್ಕೆ ನಿನಗೆ ಮತ್ತೊಂದು ಕೈಯಾಗಬೇಕೆ ? ಹೀಗೇಕೆ ತಡಮಾಡುತ್ತೀಯೆ ? ಬಾಲಲಿಂಗನು ಹಸಿದಿರುವನು. ಬೇರೆ ಕೆಲಸಗಳೇತಕ್ಕೆ ? ಈ ಬಾಲಲಿಂಗನಿಗೆ ಉಣಿಸುವುದಕ್ಕಾಗಿ ಥಟ್ಟನೆ ಬಾ. ಎಂದು ತಾಯಿಯನ್ನು ಕರೆಯುವನು. ಆಕೆಗೆ ಕೆಲಸವೇನಾದರೂ ಇದ್ದರೆ ॥೬೯॥ ತಾನೇ ತುತ್ತುಗಟ್ಟಿ ಮೆಲ್ಲಗೆ ನನಗೆ ಉಣಿಸುವನು. ನನ್ನನ್ನು ತನ್ನ ಎದೆಯಲ್ಲಿ ತಬ್ಬಿಕೊಂಡು ನಿಮ್ಮ ಬಳಿಗೆ ಬರುವನು. ॥೭೦॥ ನನ್ನ ತಂದೆಯು ಮಗನೆಂಬ ಭ್ರಾಂತಿಯಿಂದ ಮೂಢರ ಹಾಗೆ ನನ್ನನ್ನು ಪ್ರೀತಿಸುತ್ತಿರಲಿಲ್ಲ. ಮತ್ತೇನೆಂದರೆ—ತಾನು ಪೂಜಿಸುವ ದೇವರ ಹೆಸರುಳ್ಳವನೆಂಬಭಾವದಿಂದ ಪ್ರೀತಿಸುತ್ತಿದ್ದನು ॥೭೧॥ ಭೂತಲದಲ್ಲಿ ಮಕ್ಕಳಾಟಗಳೆಷ್ಟುಂಟೋ ಅವೆಲ್ಲವುಗಳಿಂದಲೂ ನನ್ನನ್ನಾಡಿಸುವನು. ಪೂರ್ವದಲ್ಲಿ ಹೀಗೆ ನನ್ನಲ್ಲಿ ವಿಶ್ವಾಸದಿಂದಿದ್ದನು ॥೭೨॥ ಈಗ ನಾನು ಮುಂದೆ ನಿಂತು ಕರೆದರೂ ಕೇಳುವುದಿಲ್ಲ! ಆಶ್ಚರ್ಯ ! ನಾನು ಸ್ನಾನಮಾಡುವ ವೇಳೆಯನ್ನು ಮೀರಲಿಲ್ಲ! ಹುಡುಗರೊಡನೆ ಆಡುವುದಕ್ಕೆ ಯಾವಾಗಲೂ ಹೋಗಲಿಲ್ಲ. ಬೀದಿಯಲ್ಲಿ ಮಾರುವ ಹಣ್ಣುಗಳನ್ನು ನಾನು ಯಾವಾಗಲೂ ಅಪೇಕ್ಷಿಸಲಿಲ್ಲ. ಇಂತಹುದನ್ನು ತಂದು

ಮಿಕದಾಚನ | ವೀಥ್ಯಾಂವಿಕ್ರೀಯಮಾಣಾನಾಂಫಲಾನಾಂಚಕದಾಚನ ||೩೪||
ಇಚ್ಛಾಮಕರವಂನಾಹಮಿದಮಾನೀಯತಾಮಿತಿ | ನಕ್ಲೇಶಯಾಮಿಭುಂಜೀ
ಹಂನಾತ್ಮಲಿಂಗಾಯಕಿಂಚನ ||೩೫|| ಅನರ್ಪಿತಂವಸ್ತುಜಾತಂಕದಾಪಿಸಮುಪ
ಸ್ಥಿತಂ | ನಾಹಂಕೋಪಾರ್ಹಮನ್ಯಾಯ್ಯಂಕರೋಮ್ಯದ್ಭುತಮದ್ಯಮೇ ||೩೬||
ಪ್ರತಿಭಾತಿಸಕೋಪೋಪಿಭವದ್ಭಿಃಕ್ಷಣಮಾತ್ರತಃ | ಶಮಂನಯಾತಿಕಿಂಸ್ವಾ
ಮಿನ್ಸಮಾಗಚ್ಛವಿಭೋದ್ರುತಂ ||೩೭|| ಪ್ರೀತ್ಯಾನಮತಿಪಾದಾಗ್ರೇ ಗೃಹ್ಣಾ
ತ್ಯಾಕುಲಿತಸ್ತಥಾ | ಸಗದ್ಗದವಚಾಭೂಯಃಪ್ರಣಿಪತ್ಯೋರಸಿಸ್ಥಿತಂ ||೩೮||
ಆಸಜ್ಯಬಾಹುಮೂಲೇನ ಲಿಂಗಮುತ್ತಿಷ್ಠತಿಸ್ವಕಂ | ಪ್ರಣಮ್ಯರೋದಿತಿ
ಭೃಶಂಭೂಯೋಭೂಯಸ್ಸಬಾಲಕಃ ||೩೯|| ಆಲಂಬ್ಯತಸ್ಯೋತ್ತರೀಯಮಾ
ಕರ್ಷತಿಬಲಾತ್ಪುನಃ | ಕೋಪಃಪ್ರಯಾತಿನಾನ್ಯಸ್ಮಾದ್ವಿನಾಯುಷ್ಮಾನಿತೀರ
ಯನ್ ||೪೦|| ಏವಂಪರ್ಯಾಕುಲೇತಸ್ಮಿನ್ದಯಾಮೃತಪಯೋನಿಧಿಃ | ಸ್ಫುರ
ದ್ದಂತಾಂಶುರುಚಿರದರಹಾಸಾಂಚಿತಾನನಃ ||೪೧|| ಬಹವಸ್ಸಂತಿಜಗತಿಶೀಲವಂ
ತೋಗೃಹೇಗೃಹೇ | ನಕುರ್ವಂತಿಗೃಹಸ್ಥಾಂತಃಪರಮೇವಂಜಲಾಶಯಂ ||೪೨

---

ಕೊಡಬೇಕೆಂದು ಕಾಡಿದವನಲ್ಲ ಇಷ್ಟಲಿಂಗಕ್ಕೆ ಅರ್ಪಿಸದ ಯಾವ ವಸ್ತು
ವನ್ನೂ ನಾನು ತಿಂದವನಲ್ಲ. ಕೋಪಗೊಳಿಸುವುದಕ್ಕೆ ಅರ್ಹವಾದ ಯಾವುದೊಂದು
ಅನ್ಯಾಯವಾದ ಕೆಲಸವನ್ನೂ ನಾನು ಮಾಡಿದವನಲ್ಲ. ಈಗ ನನ್ನ ಮೇಲೆ ಕೋಪ
ಗೊಂಡಿರುವುದು ಆಶ್ಚರ್ಯವಾಗಿ ತೋರುತ್ತದೆ. ||೩೬|| ಸ್ವಾಮಿಾ ಆ ಕೋಪವು
ಕೂಡ ನಿಮ್ಮಿಂದ ಕ್ಷಣಮಾತ್ರದಲ್ಲಿ ಶಾಂತವಾಗದೆ ಇದ್ದೀತೆ? ಪ್ರಭುವೆ! ಬೇಗನೆ
ದಯಮಾಡಿಸಿ ||೩೭|| ಎಂದು, ಪ್ರೀತಿಯಿಂದ ಪಾದದ ಮೇಲೆ ನಮಸ್ಕರಿಸುತ್ತಾನೆ.
ಹಾಗೆಯೇ ದುಃಖದಿಂದ ಪಾದಗಳನ್ನು ಹಿಡಿದುಕೊಳ್ಳುತ್ತಾನೆ. ಮತ್ತೂ ದುಕ್ಕಿ
ಸಿಕೊಂಡು ಮಾತನಾಡುತ್ತ, ಅಡ್ಡಬಿದ್ದು, ಎದೆಯಮೇಲಿನ ಇಷ್ಟಲಿಂಗವನ್ನು
ಕಂಕುಳಲ್ಲಿರುಕಿಕೊಂಡು ಮೇಲಕ್ಕೇಳುವನು. ಮತ್ತೂ ಆ ಹುಡುಗನು ಬಾರಿಬಾ
ರಿಗೂ ಅಡ್ಡಬಿದ್ದು ಅಳುವನು ||೩೯|| ಆ ಗುರುವರ್ಯನು ಹೊದೆದಿರುವ ಬಟ್ಟೆಯನ್ನು
ಬಲಾತ್ಕಾರದಿಂದ ಹಿಡಿದೆಳೆಯುವನು. ನಿಮ್ಮ ಹೊರತು ಇತರರಿಂದ ಆ ಕೋಪವು
ತೊಲಗುವುದಿಲ್ಲವೆಂದು ಹೇಳುವನು ||೪೦|| ಹೀಗೆ ಆ ಹುಡುಗನು ವ್ಯಾಕುಲಪಡು
ತ್ತಿರಲಾಗಿ, ದಯಾಸಮುದ್ರನಾದ ಗುರುವು ಪ್ರಕಾಶಿಸುತ್ತಿರುವ ಹಲ್ಲುಗಳ ಕಾಂತಿ
ಯಿಂದ ಮನೋಹರವಾದ ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವನಾಗಿ ||೪೧||
ಲೋಕದಲ್ಲಿ ಮನೆಮನೆಗೂ ಶೀಲವಂತರಾದ ಜನರು ಬಹುಜನರಿದ್ದಾರೆ. ಆದರೆ

ತ್ರೇಕಿಮದ್ಭುತಂ ||೧೧೬|| ಇತ್ಯಾಶ್ಚರ್ಯಾನುವಿದ್ಧೇಷುಶಿವಭಕ್ತೇಷುಸರ್ವಶಃ | ಚಿಕ್ಕಮಾದಣ್ಣಾಯದದಾವಮಾದಿರಾಜಃಪುರಾಹ್ಯಸೂನ್ ||೧೧೭| ಅದ್ಯಶ್ರೀಪಂಡಿತಾರಾಧ್ಯಃಪಶ್ಯತ್ಸುನಿಖಿಲೇಷ್ವಿಹ | ಮಹಾದೇವಾರ್ಯಭಕ್ತಾಯಚರಣಾಕ್ಯಪಯಾದಿಶತ್ ||೧೧೮||

ಇತ್ಯಸಂಖ್ಯಾತ ಮಹಾಮಾಹೇಶ್ವರ.....ಶ್ರೀಮಲ್ಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪುರಾತನಪ್ರಕ
ರಣೇ ಚಿಕ್ಕಮಾದಣ್ಣೋಪಾಖ್ಯಾನ ಸಂಕೀರ್ತನೇ
ಶ್ರೀ ಸಕಲೇಶಮಾದಿರಾಜಾರ್ಯಮಾಹಾತ್ಮ್ಯ
ಕಥನಂ ನಾಮ ತ್ರಯೋದಶೋಽಧ್ಯಾಯಃ

---

ಬಂದು, ನೀನು ಪ್ರಾಣದಾನಮಾಡಲಾಗಿ, ಚಿಕ್ಕಮಾದಣ್ಣನು ಬದುಕಿದನೆಂಬುದಾಶ್ಚರ್ಯವೆ? ||೧೧೬|| ಎಂದು ಶಿವಭಕ್ತರುಗಳು ಎಲ್ಲ ಕಡೆಯೂ ಆಶ್ಚರ್ಯಗೊಳ್ಳುತ್ತಿರಲು, ಪೂರ್ವದಲ್ಲಿ ಸಕಲೇಶಮಾದಿರಾಜನು ಚಿಕ್ಕಮಾದಣ್ಣನಿಗೆ ಪ್ರಾಣದಾನಮಾಡಿದ್ದನು ||೧೧೭|| ಈಗಲಾದರೊ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನು ಸಕಲಜನರೂ ನೋಡುತ್ತಿರುವಹಾಗೆಯೇ ಕೃಪೆಯಿಂದ ವೆಲ್ಲಕೊಂಡಮಹಾದೇವಯ್ಯನಿಗೆ ಪಾದಗಳನ್ನಿತ್ತನು ||೧೧೮||

ಎಂಬಲ್ಲಿಗೆ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎನ್. ಆರ್.
ಕರಿಬಸವ ಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ
ಟಿಪ್ಪಣದಲ್ಲಿ ಪುರಾತನಪ್ರಕರಣದಲ್ಲಿ ಚಿಕ್ಕಮಾದಣ್ಣನ ಕಥೆ
ಯೊಳಗೆ ಸಕಲೇಶಮಾದರಸರ ಮಾಹಾತ್ಮ್ಯವನ್ನು ವರ್ಣಿ
ಸುವ ಹದಿಮೂರನೆಯಧ್ಯಾಯವು ಮುಗಿದುದು.

# ಚತುರ್ದಶೋಽಧ್ಯಾಯಃ.

(ಕದಿರ ರೇವಮಾರ್ಯಕಥನಂ.)

ಪುನಃ ಕದಿರರೇವಮಾರ್ಯನಾಮಾಸದ್ಭಕ್ತಪುಂಗವಃ । ದಯಾಪ್ರವೃತ್ತಿರ್ವಿಮಲಕೀರ್ತಿರುನ್ನತವರ್ತನಃ ॥೧॥ ವಿಧೂತಪ್ರಣತಾರ್ತಿಶ್ಚಿನ್ಮೂರ್ತಿರಾಗಮಕೋವಿದಃ। ಭವ್ಯದೇಶಿಕಸನ್ಮೂರ್ತಿಸ್ಸ್ಫುರತ್ಕಾಂತಿವಿಭೂಷಿತಃ ॥೨॥ಲೋಕೇವಿಧಿನಿಷೇಧಾತಿದೂರಾಣಾಂಮೋಕ್ಷದಾಯಿನಾಂ । ಸತ್ಕರ್ಮಣಾಂಚಕ್ರವರ್ತೀಗುರೋರ್ದ್ರಷ್ಟುಂಕದಾಚನ ॥೩॥ ಗಚ್ಛಲ್ಲಿಂಗಾರ್ಚನಾಕಾಲೇಮಧ್ಯೇಮಾರ್ಗಂಸಮಾಗತೇ । ಗ್ರಾಮಸ್ಯೈಕಸ್ಯಚಿತ್ಪ್ರಾಂತೇ ತತಃಕಾಲೋಪಲಂಘನಂ ॥೪॥ ನಯುಕ್ತಮಿತಿಶೈವೇಷುಪುರಾಣೇಷುನಿವೇದನಾತ್ । ತ್ರಿಕಾಲಪೂಜಾನಿಯಮೋಮಾಭೂತ್ಪ್ರಹತಇತ್ಯಯಂ ॥೫॥ ಭಕ್ತಸ್ಯೈಕಸ್ಯಭವನಂಯಯಾವರ್ಚಯಿತುಂಶಿವಂ । ಸಭಕ್ತೋಽಪ್ಯತಿಸದ್ಭಕ್ತ್ಯಾಕಳತ್ರತನಯಾನ್ವಿ

---

# ೧೪ ನೆಯ ಅಧ್ಯಾಯವು.

(ಕದಿರೆ ರೇಮಯ್ಯನ ಕಥೆ.)

ಮತ್ತೂ ಕದಿರೆ ರೇಮಯ್ಯನೆಂಬ ಸದ್ಭಕ್ತಶ್ರೇಷ್ಠನೊಬ್ಬನಿದ್ದನು. ಆತನು ದಯಾಶೀಲನೂ, ನಿರ್ಮಲಯಶಸ್ಕನೂ, ಉತ್ಕೃಷ್ಟವಾದ ನಡೆಯುಳ್ಳವನೂ ॥೧॥ ತನ್ನನ್ನು ನಮಸ್ಕರಿಸಿದವರ ಸಂಕಟವನ್ನು ಪರಿಹರಿಸಿದವನೂ, ಜ್ಞಾನಸ್ವರೂಪನೂ ಶಿವಾಗಮಶಾಸ್ತ್ರಪಂಡಿತನೂ, ಸದ್ಗುರುಶ್ರೇಷ್ಠನೂ, ಉಜ್ಜ್ವಲವಾದ ಶಿವತೇಜಸ್ಸಿನಿಂದ ಮಂಡಿತನೂ ॥೨॥ ವಿಧಿನಿಷೇಧಗಳನ್ನು ಮೀರಿದ ಮೋಕ್ಷಸಾಧಕವಾದ ಸತ್ಕರ್ಮಗಳನ್ನಾಚರಿಸುವುದರಲ್ಲಿ ಸಾರ್ವಭೌಮನೂ ಆಗಿದ್ದನು. ಆತನು ಒಂದಾನೊಂದು ದಿವಸ ತನ್ನ ಗುರುದರ್ಶನವನ್ನು ಮಾಡುವುದಕ್ಕಾಗಿ ॥೩॥ ಹೋಗುತ್ತ, ಮಾರ್ಗಮಧ್ಯದಲ್ಲಿ ಒಂದಾನೊಂದು ಹಳ್ಳಿಯ ಹತ್ತಿರ ಶಿವಾರ್ಚನೆಯನ್ನು ಮಾಡತಕ್ಕ ಕಾಲಪ್ರಾಪ್ತವಾಗಲು, ಶಿವಾರ್ಚನದ ಕಾಲವನ್ನು ಮೀರುವುದು ಯುಕ್ತವಲ್ಲವೆಂದು ಶೈವಪುರಾಣಗಳಲ್ಲಿ ಹೇಳಲ್ಪಟ್ಟಿರುವುದರಿಂದ, ತನ್ನ ತ್ರಿಕಾಲಪೂಜಾವ್ರತವು ಕೆಡಬಾರದೆಂದು ಯೋಚಿಸಿ, ಈ ಕದಿರ ರೇಮಾರ್ಯನು ॥೪॥ ಶಿವಪೂಜೆಗಾಗಿ ಒಬ್ಬ ಭಕ್ತನ ಮನೆಗೆ ಹೋದನು. ಆ ಭಕ್ತನಾದರೊ ತನ್ನ ಪತ್ನೀಪುತ್ರರಿಂ ಸಮೇತ

ತಃ ||೬|| ಪ್ರಣಮ್ಯ ಪ್ರದದೌ ತಸ್ಮೈ ಸರ್ವಂ ಲಿಂಗಾರ್ಚನೋಚಿತಂ | ತತೋ
ಲಿಂಗಾರ್ಚನಂ ಕೃತ್ವಾ ತಸ್ಮಿನ್ ಕದಿರರೇಮಯೇ ||೭|| ಭುಂಜಾನೇ ಸ ಪ್ರಣಮ್ಯೈ
ನಂ ತತ್ಪ್ರಸಾದಂ ಸಮಗ್ರಹೀತ್ | ಬಾಲಕೋಪಿ ತದಾ ನತ್ವಾ ಪ್ರಸಾದಮುಪ
ಲಬ್ಧವಾನ್ ||೮|| ಬುಭುಜೇ ಸಹಿತೋ ಮಾತ್ರಾ ತತಃ ಕದಿರರೇಮಯಃ | ಗ
ತ್ವಾ ಸ್ವಗುರುಸಾನ್ನಿಧ್ಯಂ ತತ್ಕೃಪಾಮೃತವಾರಿಧೌ ||೯|| ನಿಮಗ್ನೋ ವರ್ತತ
ತತಸ್ತು ಸ್ವಲಿಂಗಾರ್ಚನೋಚಿತಂ | ಯೋ ಭಕ್ತೋ ದತ್ತವಾಂಸ್ತು ಸ್ವಗೃಹಿಣೀ ನಿ
ಜಬಾಲಕೇ ||೧೦|| ಸ್ವಪಶ್ಚಾದ್ಭಾಗವನ್ಯಾಯಾತೇ ಕರೀಷಾರ್ಥಂ ವಿನಿರ್ಗತಾ | ಮ
ಹೋರಗೇಣ ಸಂದಷ್ಟಃ ಕೇನಚಿತ್ತನಯಸ್ತತಃ ||೧೧|| ಪ್ರಹಸಂಚ್ಛಂಕರಾ
ಜ್ಞೇತಿ ತದಾನೀಂ ನಾಹ ಮಾತರಂ | ಮಾತಸ್ಸರ್ಪೋಯಮಾಸ್ತೇತ್ರ ಮಾಗ
ಚ್ಛೇತ್ಯಾಲಪನ್ಮೃತಃ ||೧೨|| ಅಭೂತ್ವಾ ದುಃಖಿತಾ ಪುತ್ರೋ ಮೃತ ಇತ್ಯನುದೀ
ರ್ಯಚ | ಆನೀಯಂತಾಂ ದ್ರುತಂ ವೈದ್ಯಾ ಇತಿ ನೋಕ್ತೋರಗಃ ಕುತಃ ||೧೩|| ಆ
ಯಾತ ಇತ್ಯನಾಲಪ್ಯ ಕಿಂ ಪೂರ್ವಲಿಖಿತಂ ಕ್ಷಿತೌ | ಮೋಘಂ ಭವೇದಿತ್ಯುದೀರ್ಯ

---

ಸಾಗಿ ||೬|| ಆ ಭಕ್ತವರ್ಯನಿಗೆ ನಮಸ್ಕರಿಸಿ, ಲಿಂಗಪೂಜೆಗೆ ಬೇಕಾದ ಸಾಮಗ್ರಿಗ
ಳನ್ನೆಲ್ಲಾ ಒದಗಿಸಿಕೊಟ್ಟನು. ಬಳಿಕ ಆ ಕದಿರ ರೇಮಾರ್ಯನು ಲಿಂಗಾರ್ಚನೆಯನ್ನು
ಮಾಡಿಕೊಂಡು ||೭|| ಭೋಜನವನ್ನು ಮಾಡಲಾಗಿ, ಭಕ್ತನು ರೇಮಾರ್ಯನಿಗೆ ನಮ
ಸ್ಕರಿಸಿ, ಆತನ ಪ್ರಸಾದವನ್ನು ತಾನು ಪರಿಗ್ರಹಿಸಿದನು. ಮಗನು ಕೂಡ ಅಡ್ಡ
ಬಿದ್ದು ಆ ಪ್ರಸಾದವನ್ನು ಪಡೆದುಕೊಂಡು ತಾಯಿಯೊಡನೆ ಭುಂಜಿಸಿದನು. ಬಳಿಕ
ಕದಿರ ರೇಮಯ್ಯನು ತನ್ನ ಗುರುವಿನ ಬಳಿಗೆ ಹೋಗಿ, ಆತನ ದಯೆಯೆಂಬ ಅಮೃತ
ಸಮುದ್ರದಲ್ಲಿ ||೯|| ಮುಳುಗಿದ್ದನು. ಅನಂತರ ದಾರಿಯಲ್ಲಿ ತನ್ನ ಲಿಂಗಪೂಜೆಗೆ
ಬೇಕಾದ ಸಾಮಗ್ರಿಗಳನ್ನು ಯಾವ ಭಕ್ತನು ಅನುಕೂಲಿಸಿಕೊಟ್ಟಿದ್ದನೋ ಆತನ
ಹೆಂಡತಿಯು ಬೆರಣಿಯನ್ನು ತರುವುದಕ್ಕಾಗಿ ಹೊರಕ್ಕೆ ಹೋದಳು. ಆಕೆಯ
ಮಗನೂ ಹಿಂದೆಯೇ ಹೋದನು. ಅಲ್ಲಿ ಮಗನನ್ನು ಒಂದಾನೊಂದು ದೊಡ್ಡ
ಹಾವು ಕಡಿದಿತು ||೧೧|| ಆಗ ಹುಡುಗನು ಶಿವಾಜ್ಞೆಯೆಂದು ತಿಳಿದು, ನಕ್ಕು, ತಾಯಿ
ಯನ್ನು ಕುರಿತು—“ ಅಮ್ಮಾ! ಇಲ್ಲಿ ಸರ್ಪವಿದೆ, ಇತ್ತ ಬರಬೇಡ ” ಎಂದು ಹೇಳುತ್ತ
ಮೃತನಾದನು ||೧೨|| ತಾಯಿಯಾದರೊ ಅದಕ್ಕೆ ದುಃಖಗೊಳ್ಳದೆ, ಮಗನು ಸತ್ತ
ನೆಂದುಕೂಡ ಹೇಳದೆ, ಬೇಗನೆ ವೈದ್ಯರನ್ನು ಕರತನ್ನಿರೆಂದೂ ಹೇಳದೆ, ಹಾವು
ಎತ್ತಣಿಂದ ಬಂದಿತೋ! ಎಂದೂ ಪ್ರಲಪಿಸದೆ, ಭೂಮಿಯಲ್ಲಿ ಪೂರ್ವಕರ್ಮಾನು
ಸಾರವಾಗಿ ಬರೆಯಲ್ಪಟ್ಟ ಹಣೆಯ ಬರಹವು ವ್ಯರ್ಥವಾದೀತೇ? ಎಂದೂಕೂಡ

ನಭ್ರಾಂತಾಹೃದಯೇಽಪರಂ ॥೧೪॥ ಅಕ್ಲೇಶಯಿತ್ವಾಸ್ವಾತ್ಮಾನಂನೋಕ್ತ್ವಾ
ಶಿವಶಿವೇತಿಚ, ಬತೈಕಏವಪುತ್ರೋಽಯ ಮಿತಿವ್ಯಾಹೃತ್ಯನೋಽಮುಹುಃ ॥೧೫॥
ಸಸಂದಷ್ಟಶ್ಶಿಶುಃಪಾಪೋಽರಗೋಽದಶತಿಮಾಂನಕಿಂ । ಇತ್ಯನುಕ್ತ್ವಾಸ್ಥಿತೇಽಪ
ಕ್ವಫಲೇಬಾಲಶಲಾಟುಕಂ ॥೧೬॥ ಉನಾಸಿತವಮಾಹಾತ್ಮ್ಯಮಿದಂವಾಶಂಕ
ರೇತಿಚ । ನಾಭಿಧಾಯಫಲಂಪಕ್ವಮಪಶ್ಯಂಸ್ತಸ್ಕರೋಽಯಥಾ ॥೧೭॥ ಉನಾ
ತಿನಿಷ್ಕುಟಗತಶ್ಶಲಾಟೂನ್ ಸಕಲಾನಪಿ । ತಥಾಪ್ರಹರ್ತುಮುಚಿತಂಕಿಂಶಿವೇತಿ
ಚಶೋಕತಃ ॥೧೮॥ ಅನಾಲಪ್ಯಚಸದ್ಭಕ್ತೈರ್ದತ್ತಭೂತ್ಯಾಪಿವಾಸುತಃ ।
ಜೀವಿತೋಽನಭವೇತ್ಕಿಂಚೇತ್ಯನುಕ್ತ್ವಾಶ್ರೀಮಹೇಶ್ವರ ॥೧೯॥ ತ್ವದ್ಭಕ್ತಾ
ನಾಂನಹರ್ತ್ತವ್ಯಾವಿಪದೇಕಾಪಿಕಿಂಭುವಿ । ಇತ್ಯನುಕ್ತ್ವಾಕ್ಷಿತಾಧರ್ಮಶ್ಶಿರಃಪಾ
ಲಯತೀತ್ಯಲಂ ॥೨೦॥ ವದಂತಿಕಿಂನತೇನಾಪಿಯುಕ್ತಂಪಾಲಯಿತುಂಭುವಿ ।
ತವಪೂಜಾಫಲಾತ್ಕಿಂವೋಽಮುಗ್ಧಬಾಲೋಽಮೃತಶ್ಶಿವ ॥೨೧॥ ಇತಿನೋಕ್ತ್ವಾ
ಮಹಾದೇವಭಕ್ಷಯೇನ್ಮಾಮಭೋಽಭವಾನ್ । ಕಿಂಸರ್ಪಸ್ಯಾಕರೋದೇನಂ

---

ಆಡದೆ, ಮನಸ್ಸಿನಲ್ಲಿ ಸ್ವಲ್ಪವೂ ಭ್ರಾಂತಿಗೊಳ್ಳದೆ ॥೧೪॥ ತನ್ನಲ್ಲಿ ತಾನಾದರೂ ಕ್ಲೇಶ
ಪಟ್ಟುಕೊಳ್ಳದೆ, ಶಿವಶಿವಾ! ಎಂದಾದರೂ ಕಳವಳಪಡದೆ, ಅಯ್ಯೋ! ನನಗೆ
ಇವನೊಬ್ಬನೇ ಮಗನಾಗಿದ್ದನಲ್ಲಾ! ಎಂದಾದರೂ ಬಾರಿಬಾರಿಗೆ ಹಂಬಲಿಸದೆ॥೧೫॥
ಪಾಪಿ ಸರ್ಪವು ಮಗುವನ್ನು ಕಚ್ಚಬಹುದೆ? ನನ್ನನ್ನೇಕೆ ಕಚ್ಚಬಾರದಾಗಿದ್ದಿತು?
ಎಂದಾದರೂ ಪ್ರಲಾಪಿಸದೆ, ಶಿವನೆ! ಕಳಿತಹಣ್ಣು ಇರುತ್ತಿರಲಾಗಿ, ಎಳೆಗಾಯನ್ನು
ಕೀಳುತ್ತೀಯೆ, ಇದು ನಿನಗೆ ದೊಡ್ಡತನವೆ? ಎಂದುಕೂಡ ಆಡದೆ, ಹಿತ್ತಲತೋಟ
ವನ್ನು ನುಗ್ಗಿದ ಕಳ್ಳನು ಕಳಿತ ಹಣ್ಣನ್ನು ನೋಡದೆ, ಕಾಯಿ ಹೀಚುಗಳನ್ನೆಲ್ಲಾ ಹೇಗೆ
ಅಪಹರಿಸಿಕೊಂಡು ಹೋಗುತ್ತಾನೋ ಹಾಗೆ ಈ ಮಗುವನ್ನು ಅಪಹರಿಸಿಕೊಂಡು
ಹೋಗುವುದುಚಿತವೆ? ಎಂದಾದರೂ ಶೋಕದಿಂದ ಪ್ರಲಾಪಿಸದೆ, ॥೧೮॥ ಸದ್ಭ
ಕ್ತರು ಕೊಟ್ಟಿರುವ ವಿಭೂತಿಯಿಂದಲಾದರೂ ಮಗನು ಬದುಕಿಕೊಳ್ಳಲಾರನೆ?
ಎಂದಾದರೂ ಹೇಳದೆ, ಪರಶಿವನೆ! ಭೂಮಿಯಲ್ಲಿ ನಿನ್ನ ಭಕ್ತರಿಗೊದವಿದ ಒಂದು
ವಿಪತ್ತನ್ನಾದರೂ ನೀನು ಪರಿಹರಿಸಬಾರದೆ? ಎಂದುಕೂಡ ಹೇಳದೆ, ಭೂಮಿಯಲ್ಲಿ
ಧರ್ಮವು ತಲೆಯನ್ನು ಕಾಯುತ್ತದೆಯೆಂದು ಮಹಾಜನರು ಹೇಳುವರು; ಆರೀತಿ
ಯಿಂದಾದರೂ ಧರ್ಮವು ಈತನನ್ನು ಕಾಪಾಡಬಾರದೆ? ಎಂತಲೂ ಹೇಳದೆ,
ಶಿವನೆ! ನನ್ನ ಮುದ್ದುಮಗನು ಸತ್ತುದು ನಿನ್ನ ಪೂಜೆಯ ಫಲದಿಂದಲೊ? ಎಂದಾ
ದರೂ ಹೇಳದೆ, ಓ ಮಹಾದೇವನೆ! ಈ ನನ್ನ ಮಗನನ್ನು ಬೇಕಿದ್ದರೆ ನೀನು ಭಕ್ಷಿ
ಸಬಹುದಾಗಿದ್ದಿತು, ಅದನ್ನು ಬಿಟ್ಟು ಹಾವಿನ ಬಾಯಿಗೆ ತುತ್ತನ್ನು ಮಾಡಬಹುದೆ?।

ಕಬಳಂತನಯಂ ಮಮ ||೨೦|| ಗಳೇ ವಿಷಾಗ್ನಿಃ ಶಿರಸಿ ವಿಷಪೂರಃ ಪ್ರಕೋಷ್ಠಕೇ | ಮಹಾವಿಷೋರಗೋಽಸ್ಯಸ್ತಿ ಜ್ವಲನಾಕ್ಷ ತವಾನಿಶಂ ||೨೧|| ತ್ವತ್ಸೇವಕಾನಾಂ ಮರಣಂ ನ ಕಿಂ ಸ್ಯಾತ್ಸರ್ವಥೇತಿ ಚ | ಅನುದೀರ್ಯ ಸುತಪ್ರಾಣಾನ್ಯದಿ ದಾಸ್ಯಸಿ ಶಂಕರ ||೨೪|| ನೃತ್ಯಂ ಕರೋಮಿ ತೇ ದೇವೇತ್ಯನುಕ್ತ್ವಾ ಚಲಬುದ್ಧಿತಃ | ಇಮಂ ವಿಪದ್ವೀರಭದ್ರ ಪ್ರಸ್ಪೃತಾಃ ಕಿತ್ತ್ಯ ಯಾಧುನಾ ||೨೫|| ಸಮಾಗಚ್ಛಾಮಿ ಯಾತ್ರಾಯೈ ತವೇತ್ಯುಕ್ತ್ವಾ ನ ಕಾತರಾತ್ | ಸಂಜೀವಯತ ಮತ್ಪುತ್ರಂ ಭೋ ಭೋಃ ಪ್ರಮಥಪುಂಗವಾಃ ||೨೬|| ಯುಷ್ಮಾಕಂ ಮದ್ಗುಳಿಭಿರ್ದೀಪಾನಿತ್ಯನುಕ್ತ್ವಾಪಿ ಸಾಧ್ವಸಾತ್ | ಗುಡ್ಡಾಂಬಿಕೇ ಜೀವಯೈನಂ ತವ ಸೇವಾಂ ಕರೋಮ್ಯಹಂ ||೨೭|| ಅಮುಂ ಚ ತ್ವಂ ಸುತಪ್ರಾಣಾನ್ ಭೋ ಭೋ ಮಮ ಪುರಾತನಾಃ | ದಾಸ್ಯಾಮಿ ಮಮ ಯುಷ್ಮಭ್ಯಂ ಮಾಂಸಯೋರ್ವರ್ಮಾಂಸಖಂಡಕೇ ||೨೮|| ಇತ್ಯನುಕ್ತ್ವಾ ತತೋ ಮಾತಾ ಜನಕಶ್ಚ ಪರಸ್ಪರಂ | ಹಸಂತೌ ತನಯಂ ವೀಕ್ಷ್ಯ ಸಾಧು ಜಾತಂ ಹಿ ಸಾಂಪ್ರತಂ ||೨೯|| ಆಸೀತ್ಪ್ರಮಥವರ್ಯಾಣಾಂ ಮತೋಽಯಂ ಸೂನುರಿತ್ಯುಭೌ | ಹರ್ಷವಂತೌ ತದಾಕ್ಯೈರಪ್ಯಜ್ಞಾತಂ ಸ್ವಗೃಹಾಂತರೇ ||೩೦||

---

ಕಿಡಿಗಣ್ಣನೆ! ನಿನಗೆ ಯಾವಾಗಲೂ ಕಂಠದಲ್ಲಿ ವಿಷಾಗ್ನಿಯೂ, ತಲೆಯ ಮೇಲೆ ವಿಷ (ಗಂಗಾಜಲ) ಪ್ರವಾಹವೂ, ಮಣಿಕಟ್ಟಿನಲ್ಲಿ ಮಹಾವಿಷಸರ್ಪವೂ, ಇರುತ್ತಿವೆ॥ ಇಂತಪ್ಪ ನಿನ್ನ ಸೇವಕರಿಗೆ ಮರಣವು ಸಂಭವಿಸದೆ ಯಿರುವುದುಂಟೆ? ಎಂಬುದಾಗಿ ಯಾದರೂ ಹೇಳದೆ, ಸ್ವಾಮಿೂ ಶಂಕರನೆ! ನೀನು ನನ್ನ ಮಗನಿಗೆ ಪ್ರಾಣದಾನ ಮಾಡಿದರೆ ॥೨೪॥ ನಿನ್ನಿದಿರಿಗೆ ನರ್ತನವನ್ನು ಮಾಡುತ್ತೇನೆಯೆಂಬಾದರೂ ಚಪಲ ಬುದ್ಧಿಯಿಂದ ನುಡಿಯದೆ, ಎಲೈ ವೀರಭದ್ರೇಶನೆ! ಈಗ ನೀನು ಈ ವಿಪತ್ತನ್ನು ಪರಿಹರಿಸಿದರೆ ॥೨೫॥ ನಿನ್ನ ಜಾತ್ರೆಗೆ ನಾನು ಬರುತ್ತೇನೆ ಎಂಬುದಾಗಿಯಾದರೂ ವಿಹ್ವಲಳಾಗಿ ನುಡಿಯದೆ, ಎಲೈ ಪ್ರಮಥಶ್ರೇಷ್ಠರುಗಳಿರಾ! ನನ್ನ ಮಗನನ್ನು ಬದುಕಿಸಿರಿ ॥೨೬॥ ನನ್ನ ಬೆರಲುಗಳಿಂದ ನಿಮಗೆ ದೀಪವನ್ನು ಬೆಳಗುತ್ತೇನೆ ಎನ್ನುತ ಲಾದರೂ ಭೀತಿಯಿಂದ ನುಡಿಯದೆ, ಎಲೌ ಗುಡ್ಡವ್ವಾ! ಈ ಮಗನನ್ನು ನೀನು ಬದುಕಿಸು, ನಾನು ನಿನ್ನ ಸೇವೆಯನ್ನು ಮಾಡುತ್ತೇನೆ ॥೨೭॥ ಓ ನಮ್ಮ ಪುರಾತನರೆ! ಮಗನಿಗೆ ಪ್ರಾಣದಾನವನ್ನು ಮಾಡಿರಿ, ನಿಮಗೆ ನನ್ನ ಭುಜಶಿರಸ್ಸಿನ ಮಾಂಸ ಪಿಂಡಗಳನ್ನರ್ಪಿಸುತ್ತೇನೆ ॥೨೮॥ ಎಂದಾದರೂ ನುಡಿಯದೆ, ಬಳಿಕ ತಾಯ್ತಂದೆ ಗಳಿಬ್ಬರೂ ನಕ್ಕು, ಮಗನನ್ನು ನೋಡಿ, ಈಗ ಲೇಸಾಯಿತು ॥೨೯॥ ಈ ಮಗನು ಪ್ರಮಥಶ್ರೇಷ್ಠರೊಳಗೆ ಸಂದುಹೋದನು. ಎಂದು ಹೇಳಿ, ಸಂತೋಷಗೊಂಡವ

ವೇದ್ಯಾಂ ಸಮಾಧಿನಿಕ್ಷಿಪ್ತಂ ಕ್ಷಣಾದಕುರುತಾಂ ಸುತಂ । ತತಃ ಕದಿರರೇಮಾ ರ್ಯೋ ಗುರುಭಕ್ತಿಪರಾಯಣಃ ॥೨೧॥ ಗುರುಸ್ವಾಮಿನ ಮಾರಾಧ್ಯ ಸದ್ಭಕ್ತ್ಯಾ ಸಪ್ತವಾಸರಾನ್ । ತದಾಜ್ಞಾಂ ಶಿರಸಾ ಧೃತ್ವಾ ಪ್ರಹಿತಸ್ತೇನ ಸಾದರಂ ॥೨೨॥ ನಿವೃತ್ತಸ್ತಸ್ಯ ಭಕ್ತಸ್ಯ ಭವನಂ ಪ್ರಾಪ ಪೂರ್ವವತ್ । ಸ ಭಕ್ತೋಪಿ ಪ್ರಣಮ್ಯೈನಂ ತಸ್ಮೈ ಸಮುಚಿತಾಃ ಕ್ರಿಯಾಃ ॥೨೩॥ ವ್ಯಧಾತ್ಕದಿರರೇಮಾರ್ಯಃ ಕೃತ್ವಾ ಲಿಂಗಾರ್ಚನಂ ತತಃ । ಪ್ರಸಾದಭೋಗಾವಸರೇ ದಂಪತೀ ವೀಕ್ಷ್ಯ ತಾವುಭೌ ॥ ಉವಾಚ ವಾಚಂ ಕ್ವ ಗತೋ ಭವತ್ಪುತ್ರೋ ಗುಣಾನ್ವಿತಃ । ಮದಾಗಮನಮಾರಭ್ಯ ನ ಪಶ್ಯಾಮಿ ಸುತಂ ಗೃಹೇ ॥೨೪॥ ನಾಹೂಯತೇ ಕಿಮರ್ಥಂ ವಾ ಯುಷ್ಮತ್ತಃ ಪೂರ್ವಮೇವ ಸಃ । ಆದರಾತ್ ಪ್ರಣತೋ ಮಹ್ಯಂ ಸಮಾರಾಧಯತೋ ಸ್ವತೋ ॥೨೫॥ ಭವತೋ ವೀಕ್ಷ್ಯ ಹರ್ಷೇಣ ಸ್ವಯಂ ಭಕ್ತಿಪರೋಽವಸತ್ । ಪುನರಾತ್ಮೀಯಲಿಂಗಸ್ಯ ಪ್ರಸಾದಮಪಿ ಚಾಗ್ರಹೀತ್ ॥೨೬॥ ಅತಿಷ್ಠದಸ್ಮತ್ಸಾನ್ನಿಧ್ಯೇ ತದಾಸೀಂ ಪ್ರೀತಿಸಂಯುತಃ । ನಾಸ್ತ್ಯತ್ರಾಸ್ತೇ ಸ ಭವನೇ ಕಿಂ ವಾ ದ್ವಾರಿ ಸ್ಥಿತೋಽಧುನಾ ॥೨೮॥ ಸಮಾಹ್ವಯ ತ್ವಂ ಬಾಲೇ ತಂ ಸ

---

ರಾಗಿ, ಯಾರಿಗೂ ಅರಿಯಬಾರದಂತೆ ಕ್ಷಣಕಾಲದೊಳಗೆ ತಮ್ಮ ಮನೆಯ ಶಿವಪೂಜೆಯ ಜಗತಿಯಲ್ಲಿ ಆ ಮಗನನ್ನು ಸಮಾಧಿ ನಿಕ್ಷೇಪಗೊಳಿಸಿದರು. ಅತ್ತ ಗುರುಭಕ್ತಿ ತತ್ಪರನಾದ ಕದಿರೆ ರೇಮಯ್ಯನು ॥೨೧॥ ತನ್ನ ಗುರುಪೂಜೆಯನ್ನು ಭಕ್ತಿಯಿಂದ ೭ ದಿನಗಳವರೆಗೂ ಮಾಡಿ, ಆತನಪ್ಪಣೆಯನ್ನು ಶಿರಸಾವಹಿಸಿ, ಪ್ರೀತಿಯಿಂದ ಬೀಳ್ಕೊಂಡು ॥೨೨॥ ಹಿಂದಿರುಗಿ, ಈ ಭಕ್ತನ ಮನೆಗೆ ಪೂರ್ವದಂತೆಯೇ ಬಂದನು. ಭಕ್ತನುಕೂಡ ಭಕ್ತಿಯಿಂದ ನಮಸ್ಕರಿಸಿ, ಉಚಿತವಾದ ಸತ್ಕಾರಗಳನ್ನು ಮಾಡಿದನು. ಕದಿರೆ ರೇಮಾರ್ಯನು ಲಿಂಗಾರ್ಚನೆಯನ್ನು ಮಾಡಿ, ಬಳಿಕ ಪ್ರಸಾದವನ್ನು ಭುಂಜಿಸುವಾಗ ಆ ಗಂಡಹೆಂಡಿರನ್ನು ಕುರಿತು ಸಂತೋಷದಿಂದ ಹೀಗೆ ಹೇಳಿದನು-॥೨೪॥ ಗುಣಶಾಲಿಯಾದ ನಿಮ್ಮ ಮಗನು ಎಲ್ಲಿಗೆ ಹೋದನು ? ನಾನು ಬಂದಾಗಿನಿಂದಲೂ ಮನೆಯಲ್ಲಿ ಮಗನನ್ನು ಕಾಣಲಿಲ್ಲ ॥೨೫॥ ಅದೇಕೆ ಅವನನ್ನು ಕರೆಯಲಿಲ್ಲ? ಆತನು ನಿಮಗಿಂತಲೂ ಮುಂಚೆಯೇ ಬಂದು ಪ್ರೀತಿಯಿಂದ ಅಡ್ಡಬಿದ್ದು, ಬಳಿಕ ನೀವುಗಳು ಬಂದು ನಮ್ಮನ್ನು ಪೂಜಿಸುತ್ತಿದ್ದರೆ ನೋಡಿ, ಸಂತೋಷದಿಂದ ತಾನು ಭಕ್ತಿಭರಿತನಾಗಿ ನಿಂತಿರುತ್ತಿದ್ದನು. ಮತ್ತೂ ನಮ್ಮ ಲಿಂಗಪ್ರಸಾದವನ್ನೂ ಸ್ವೀಕರಿಸಿದನು ॥೨೬॥ ನಮ್ಮ ಬಳಿಯಲ್ಲೇ ಪ್ರೀತಿಯುಕ್ತನಾಗಿ ನಿಂತಿರುತ್ತಿದ್ದನು. ಈಗ ಅದೇಕಿಲ್ಲ? ಮನೆಯಲ್ಲೇ ಇಲ್ಲವೊ ? ಬಾಗಿಲಲ್ಲೇನಾದರೂ ನಿಂತಿದ್ದರೆ ॥೨೮॥

ಮಾಗಚ್ಛತಿಸತ್ವರಂ । ತೇನೇತ್ಯುಕ್ತಾ ವದತ್ಸೈನ ಮಹಂಕಿಂಚಂಗಳಾಂಬಿಕಾ ॥೬೯॥ ಆಹ್ವಾತುಂತನಯುಂಕಿಂವಾನಾಹ್ವಾತುಮಪಿಚಕ್ಷಮಾ । ನಿಂಬಾಂಬಾವಾಸಮಾಹಂತದ್ಗೃಹದಾಸ್ಯಾಪಿನಕ್ಷಿತೌ ॥೩೦॥ ಭವದ್ಭಿಸ್ತಾದೃಶಾಂಸುಶ್ವಾಸದ್ಭಕ್ತಾಂಮಾಂತನೂಭವಂ । ಕಥಂಸಮಾಹ್ವಯೇತ್ಯೇತದ್ಯುಕ್ತಂವಾಕ್ಯಮುದೀರಿತುಂ ॥೩೧॥ ಅನಾಹೂತೇತುತನಯೇವೈರಾಗ್ಯಂಕಿಂಚವೇದಥ । ಸಮಾಹೂತೇತುಸಂಸಾರಸ್ಸ್ಯಾಚ್ಛ್ರೀದೇಶಿಕೋತ್ತಮ ॥ ಆಹ್ವಾತುಮಪ್ಯನಾಹ್ವಾತುಂನಾಹಂವೇದ್ಮಿಸುತಂಗುರೋ । ವೇತ್ಸಿತ್ವಮೇವಕರುಣಾಮೃತಪೂರ್ಣಪಯೋನಿಧೆ ॥೩೩॥ ತ್ವತ್ಪಾದಯೋರಥಸ್ಸೂನಾವಿದ್ಯಮಾನೇಪಿತಚ್ಛಿಶೋಃ । ಆಹ್ವಾನೇನಾನ್ಯತಃಕಿಂವಾತಯೇತ್ಯುಕ್ತೆಸದೇಶಿಕಃ ॥೩೪॥ ತತ್ಸಮಾಧಿಸ್ಥಲಂಪಿತ್ರಾಖನಯಿತ್ವೋಪರಿಸ್ಥಿತಂ । ಬಿಲ್ವಪತ್ರಂಚಯೋಭಸ್ಮಸಮುತ್ಸೃಪ್ಯಾಖ್ಯಯಾಸುತಂ ॥೩೫॥ ಆಹೂತವಾನ್ಸುಪ್ತ ಇವಸಮುತ್ಥಾಯೇಕ್ಷ್ಯತಂಶಿಶುಃ । ಶರಣಾರ್ಥೀತಿಜಪವರ್ದನ್ಸಭಕ್ತ್ಯಾಭೂತ್ಕೃತಾಂ

---

ಎಲೆ ಮಗಳೆ ನೀನು ಆತನನ್ನು ಬೇಗನೆ ಕರೆ. ಬರುತ್ತಾನೆ. ಹೀಗೆಂದು ಹೇಳಲಾಗಿ ಆಕೆಯು ರಾಮಾರ್ಯನನ್ನು ಕುರಿತು–ಮಗನನ್ನು ಕರೆಯೆಂದಕೂಡಲೇ ಕರೆಯಲು ಸಿದ್ಧಳಾಗುವುದಕ್ಕೆ ನಾನೇನು (ಸಿರಿಯಾಳಸೆಟ್ಟಿಯ ಹೆಂಡತಿ) ಚಂಗಳಾಂಬೆಯೆ? ಅಥವಾ ಕರೆಯದೆಯಿರಲು ಸಮರ್ಥಳಾಗುವುದಕ್ಕೆ ನಿಂಬ್ಯವ್ವನೆ? ಅವರ ಮನೆಯ ದಾಸಿಗಾದರೂ ನಾನು ಸಮಾನಳಲ್ಲ ॥೪೦॥ ನೀವು ನನ್ನನ್ನು ಅಂಥ ಸದ್ಭಕ್ತಳನ್ನಾಗಿ ತಿಳಿದು, ಮಗನನ್ನು ಕರೆಯೆಂಬ ಮಾತನ್ನು ಅಪ್ಪಣೆ ಕೊಡಿಸುವುದು ಅದು ಹೇಗೆ ಯುಕ್ತವು? ॥೪೧॥ ಗುರೂತ್ತಮನೆ! ಮಗನನ್ನು ಕರೆಯದಿದ್ದ ಮಾತ್ರಕ್ಕೇ ಅದು ವೈರಾಗ್ಯವೆನಿಸಿಕೊಳ್ಳುವುದೆ? ಮಗನನ್ನು ಕರೆದುಬಿಟ್ಟರೆ ಅದು ಸಂಸಾರವಾಗುವುದೆ? ॥೪೨॥ ಗುರುವೆ! ಮಗನನ್ನು ಕರೆಯುವುದಕ್ಕೂ ಕರೆಯದೆಯಿರುವುದಕ್ಕೂ ನಾನು ಅರಿಯೆನು. ದಯಾಸಮುದ್ರನೆ! ಅದನ್ನೆಲ್ಲಾ ನೀನೇ ಬಲ್ಲೆ ॥೪೩॥ ನಿಮ್ಮ ಪಾದದಡಿಯಲ್ಲೇ ಮಗನು ಇರುತ್ತಿರುವಲ್ಲಿ ಆತನನ್ನು ಕರೆವುದರಿಂದಾಗಲೀ ಕರೆಯದಿರುವುದರಿಂದಾಗಲೀ ಏನುಪ್ರಯೋಜನ? ಎಂಬುದಾಗಿ ಆಕೆಯುನುಡಿಯಲು, ಆ ಗುರೂತ್ತಮನು ॥೪೪॥ ಆ ಸಮಾಧಿ ಮಾಡಿದ್ದ ಸ್ಥಲವನ್ನು ತಂದೆಯಿಂದ ಅಗೆಯಿಸಿ, ಮೇಲಿದ್ದ ಬಿಲ್ವಪತ್ರವನ್ನೂ ಭಸ್ಮವನ್ನೂ ಹೊರತೆಗೆಯಿಸಿ, ಮಗನನ್ನು ಹೆಸರು ಹಿಡಿದು ಕೂಗಿದನು. ಬಾಲಕನು ಮಲಗಿದ್ದವನಂತೆ ಎದ್ದು, ಆ ಗುರುವರ್ಯನನ್ನು ನೋಡಿ, "ಶರಣಾರ್ಥೀ" ಎಂದು ಹೇಳಿ, ಭಕ್ತಿಯಿಂದ ಕೈಮುಗಿದನು ॥ ಕೂಡಲೆ ತಾಯಿ ಬಂದು ಆ ಮಗನನ್ನು ಎರಡು ತೋಳುಗಳಿಂದಲೂ ತಬ್ಬಿ, ಮೊಲೆ

ಜಲಿಃ ॥೪೬॥ ಆಗತ್ಯಜನನೀಶೀಘ್ರಂದೋರ್ಭ್ಯಾಮಾದಾಯತಂಶಿಶುಂ । ಪ್ರವರ್ಷಂತೀಸ್ತನ್ಯಧಾರಾಃಪ್ರಣಮಯ್ಯತಪೋನಿಧಿಂ॥೪೭॥ಸ್ಥಾಪಯಾಮಾಸಕದಿರರೇವಾರ್ಯಾಗ್ರೇಪ್ರಹರ್ಷಿತಾ ! ಕರುಣಾಪೂರ್ಣಹೃದಯಸ್ತಮುದ್ವೀಕ್ಷ್ಯಸರೇಮಯಃ ॥೪೮॥ ಪ್ರಸಾದಂಪ್ರದದೌತಸ್ಮೈತದಾನೀಂಹರ್ಷಸಂಯುತಃ। ಅತಿಪ್ರಹರ್ಷೇಸಂಜಾತೇಪಿತ್ರೋರ್ಮಹತಿವಿಸ್ಮಯೇ ॥೪೯॥ ಇತಿಪ್ರಾಣಾದದೌಭೂಮೌಖ್ಯಾತಃಕದಿರರೇಮಯಃ । ಜಮಾಯಸಪ್ತದಿವಸಸ್ಥಿತಾಯುಸ್ಸ್ವಪ್ರಭಾವತಃ ॥ಅದ್ಯಶ್ರೀಪಂಡಿತಾರಾಧ್ಯಃಪಂಡಿತಾರಾಧ್ಯಸತ್ಪದಃ ! ಪ್ರಾದಾತ್ಸರ್ವೇಷುಪಶ್ಯತ್ಸುಮಹಾದೇವಾಯಸತ್ಪದೇ ॥೫೦॥

ಇತ್ಯಸಂಖ್ಯಾತ.........ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪುರಾತನಪ್ರಕರಣೇ ಕದಿರ ರೇಮಾರ್ಯಕಥನಂ ನಾಮ ಚತುರ್ದಶೋಽಧ್ಯಾಯಃ.

---

ಹಾಲು ಪ್ರವಾಹವಾಗಿ ಸುರಿಯುತ್ತಿರಲು, ಮಗನನ್ನು ಆ ತಪಸ್ವಿಗೆ ನಮಸ್ಕಾರ ಮಾಡಿಸಿ ॥೪೭॥ ಸಂತೋಷಗೊಂಡವಳಾಗಿ, ಕದಿರ ರೇಮಾರ್ಯನ ಮುಂಗಡೆಯಲ್ಲಿ ನಿಲ್ಲಿಸಿದಳು. ಆ ರೇಮಾರ್ಯನು ದಯಾಪೂರ್ಣಮನಸ್ಕನಾಗಿ, ಆ ಮಗನನ್ನು ನೋಡಿ॥ ಸಂತೋಷಗೊಂಡು, ಆತನಿಗೆ ಪ್ರಸಾದವನ್ನಿತ್ತನು. ತಾಯ್ತಂದೆಗಳಿಗೆ ಅತ್ಯಂತ ಸಂತೋಷವೂ, ಮಹಾಶ್ಚರ್ಯವೂ ಉಂಟಾಗಲಾಗಿ, ಹೀಗೆ ಭೂತಳದಲ್ಲಿ ಪ್ರಸಿದ್ಧನಾದ ಕದಿರ ರೇಮಯ್ಯನು ಏಳುದಿನಕಳೆದು ಹೋಗಿದ್ದ ಹೆಣಕ್ಕೆ ತನ್ನ ಮಹಿಮೆಯಿಂದ ಪ್ರಾಣಗಳನ್ನು ಕೊಟ್ಟಿದ್ದನು ॥೫೦॥ ಈಗಲಾದರೊ ಪಂಡಿತಜನರಿಂದ ಪೂಜ್ಯನಾದ ಚರಣವುಳ್ಳ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯನು ಎಲ್ಲರೂ ನೋಡುತ್ತಿರುವ ಹಾಗೆಯೇ ವೆಲ್ಲಗೊಂಡದ ಮಹಾದೇವಯ್ಯನಿಗೆ ಪಾದಗಳನ್ನು ಕೊಟ್ಟನು.

ಎಂಬಲ್ಲಿಗೆ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ಪುರಾತನ ಪ್ರಕರಣದೊಳಗೆ ಕದಿರ ರೇಮಾರ್ಯನಕಥೆಯನ್ನು ವಿವರಿಸುವ ೧೪ನೆಯ ಅಧ್ಯಾಯವು ಮುಗಿದುದು.

# ಪಂಚದಶೋಽಧ್ಯಾಯಃ.

(ಚೇಟಲ ವೇಮಾರ್ಯಕಥಾ)

ಕಿಂಚಚೇಟಲವೇಮಯ್ಯ ಇತಿಭಕ್ತವರೋಽಭವತ್ । ಆದ್ಯಪ್ರಶಸ್ತೋಮಹಿತಸ್ಸದ್ಭಕ್ತಮದಸಿಂಧುರಃ ॥೧॥ ಅಣಿಮಾದಿಗುಣೈಶ್ವರ್ಯಸಂಪನ್ನಃ ಕೀರ್ತಿಭಾಸುರಃ । ಸದ್ಭಕ್ತಿಖಡ್ಗನಿರ್ಭಿನ್ನರಸಸಿದ್ಧಘನಾಸಿಕಃ ॥೨॥ ವಿಸ್ಪಷ್ಟೋದ್ಯದ್ರಸರಸಾಯನರಾಜ್ಯಸುಖೋಜ್ಝಿತಃ । ಸ್ವರ್ಗಾಪವರ್ಗಸೌಖ್ಯಾಪವರ್ಜಿತೋನಿರ್ಗತಾಶುಭಃ ॥೩॥ ನಿರರ್ಗಳಸ್ಫುರದ್ಭರ್ಗಭಕ್ತಿಕಾಂತೋಽಸಮೋಽವಶೀ। ಬಸವಾರ್ಪಿತದೇಹಾರ್ಥಪ್ರಾಣಪ್ರತತಿಭಾಸಿತಃ ॥೪॥ ಅಂಗೀಕೃತಶಿವಾಚಾರೋಜಂಗಮಾಧೀನವರ್ತನಃ । ಲಸದ್ಬಸವಪಾದಾಬ್ಜಕಾಂತಚೇತಸ್ಸರೋವರಃ ॥೫॥ ಬಸವೇಶಪದಧ್ಯಾನಕಲ್ಪವೃಕ್ಷಸ್ಯಸಂತತಂ । ಆಲವಾಲಂಮನೋಬಿಭ್ರದಸಮಾನನಿಜವ್ರತಃ ॥೬॥ ಬಸವಾಕ್ಷರಸದ್ರತ್ನಕರಂಡರ

---

# ೧೫ನೆಯ ಅಧ್ಯಾಯವು.

ಚೇಟಲ (ಮೊರಿನ) ವೇಮಯ್ಯನ ಕಥೆ.

ಮತ್ತೂ ಮೊರನವೇಮಯ್ಯನೆಂಬ ಭಕ್ತಶ್ರೇಷ್ಠನಿದ್ದನು. ಆತನು ಪುರಾತನಶರಣರಲ್ಲಿ ಶ್ರೇಷ್ಠನೂ, ಪೂಜ್ಯನೂ, ಸದ್ಭಕ್ತರಲ್ಲಿ ಅಗ್ರೇಸರನೂ ॥೧॥ ಅಣಿಮಾದ್ಯಷ್ಟೈಶ್ವರ್ಯದಿಂದ ಕೂಡಿದವನೂ, ಕೀರ್ತಿಸಂಪನ್ನನೂ, ತನ್ನ ಭಕ್ತಿಯೆಂಬ ಕತ್ತಿಯಿಂದ ರಸಸಿದ್ಧಿಯುಳ್ಳ ಜನಸ್ತೋಮದ ಮೂಗನ್ನು ಕೊಯ್ದವನೂ ॥೨॥ ರಸರಸಾಯನಕ್ರಿಯೆಗಳೆಂಬ ರಾಜ್ಯದ ಭೋಗಸಮೂಹವನ್ನೆಲ್ಲಾ ತಿರಸ್ಕರಿಸಿಬಿಟ್ಟವನೂ, ಸ್ವರ್ಗಮೋಕ್ಷಸೌಖ್ಯಗಳನ್ನು ಕೂಡ ದೂರೀಕರಿಸಿದವನೂ, ಅಮಂಗಳರಹಿತನೂ, ತಡೆಯಿಲ್ಲದೆ ಪ್ರಸರಿಸುತ್ತಿರುವ ಶಿವಭಕ್ತಿಯಿಂದ ಮನೋಹರನೂ, ಅನುಪಮನೂ, ಸ್ವತಂತ್ರನೂ, ತನ್ನ ತನುಧನಪ್ರಾಣಗಳನ್ನೆಲ್ಲಾ ಬಸವೇಶ್ವರನಿಗೆ ಸಮರ್ಪಿಸಿ ಬಪ್ಪುತ್ತಿರುವವನೂ ॥೪॥ ಶಿವಾಚಾರವನ್ನಂಗೀಕರಿಸಿದವನೂ, ಜಂಗಮರಿಗೆ ವಿಧೇಯವಾದ ನಡೆಯುಳ್ಳವನೂ, ಹೊಳೆಯುತ್ತಿರುವ ಬಸವನ ಪಾದಕಮಲದಿಂದ ಮನೋಹರವಾದ ತನ್ನ ಮನಸ್ಸರೋವರವುಳ್ಳವನೂ ॥೫॥ ಬಸವೇಶ ಪಾದಧ್ಯಾನವೆಂಬ ಕಲ್ಪವೃಕ್ಷಕ್ಕೆ ಯಾವಾಗಲೂ ತನ್ನ ಮನಸ್ಸನ್ನು ಪಾತ್ರೆಯನ್ನಾಗಿ ಮಾಡಿದವನೂ, ಎಣೆಯಿಲ್ಲದ ದೃಢಶೀಲವುಳ್ಳವನೂ ॥೬॥ ಬಸವೇಶನ ನಾಮಾಕ್ಷರವೆಂಬ ರತ್ನಗಳಿಗೆ ಬರಣಿ

ಸನಾಂಚಲಃ । ಬಸವಾಹ್ವಯವರ್ಣಾಂಚತ್ಪುಷ್ಪಭ್ರಮರಸನ್ಮತಿಃ ॥೭॥ ಬಸವೇಶಾಕ್ಷರಸುಧಾಪೂರ್ಣಕರ್ಣಘುಟದ್ವಯಃ । ಬಸವೇಶಗುಣಸ್ತೋತ್ರ ಪವಿತ್ರಿತರಸಜ್ಞಕಃ ॥೮॥ ಬಸವೇಶಸ್ತುತಿಲತಾ ಬದ್ಧಮಾನಸಕಲ್ಪಕಃ । ಏವಂಭೂತೋಽವರ್ತಮಾನಃ ಕಟಕಾರ್ಯೈರಥಾಪರೈಃ ॥೯॥ ಗೃಹೀತಭೃತಿಭಿಃ ಶೂರ್ಪಾನ್ಕಾರಯಿತ್ವಾಪ್ರಯತ್ನತಃ । ನಿಧಾಯಶಕಟೇಷ್ವೇತಾ ಗ್ರಾಮೇ ಗ್ರಾಮೇಪ್ರಯತ್ನತಃ॥೧೦॥ ವಿಕ್ರೀಯತದ್ಧನೇನೈವ ನಿತ್ಯಂಜಂಗಮಸೇವನಂ । ಕುರ್ವನ್ಸದ್ಭಕ್ತಗೋಷ್ಠೀಭಿರತಿಷ್ಠತ್ಸೌಖ್ಯಭಾಸುರಃ ॥೧೧॥ ಶ್ರುತ್ವೈತದ್ವಿಭವಂನಾನಾದೇಶೇಭ್ಯಸ್ತಂಸಮೀಕ್ಷಿತುಂ । ಸಮಾಗಚ್ಛತ್ಸುಸರ್ವೇಷುರಸಸಿದ್ಧೋಽಥಕಶ್ಚನ ॥೧೨॥ ಆಗತ್ಯದೃಷ್ಟ್ವಾತದ್ವೃತ್ತಿಂ ಜಂಗಮಾರಾಧನಂಮಹತ್ । ಅತ್ಯದ್ಭುತಾಕ್ರಾಂತಮನಾರಸಸಿದ್ಧಿಸ್ಸ್ವಕಾಪುನಃ ॥೧೩॥ ಕುತ್ರಾನ್ಯತ್ರಯೋಜ್ಯೇತಿ ನಿಶ್ಚಿತ್ಯಪ್ರಾಕ್ಪ್ರಯತ್ನತಃ । ರಸಂಸಂಶೋಧಿತಂಕೃತ್ವಾ ಜಾರಣಾನಿವಿಧಾಯಚ ॥೧೪॥ ಅಸಮೌಷಧತೈಲಾದ್ಯೈಃಪಾಷಾಣದ್ರುತಿಭಿಸ್ಸ

---

ಯಾಗಿರುವ ನಾಲಗೆಯುಳ್ಳವನೂ, ಬಶವೇಶ್ವರನ ನಾಮಾಕ್ಷರವೆಂಬ ಹೂವುಗಳಲ್ಲಿ ಸೇರಿಸಿಕೊಂಡಿರುವ ತುಂಬಿಯಂತಿರುವ ಬುದ್ಧಿಯುಳ್ಳವನೂ ॥೭॥ ಬಸವೇಶನಾಮಾಕ್ಷರವೆಂಬಮೃತದಿಂದ ತುಂಬಿದ ಎರಡು ಕಿವಿಗಳೆಂಬ ಘಟಗಳುಳ್ಳವನೂ, ಬಸವೇಶ್ವರನ ಗುಣಗಳನ್ನು ಸ್ತೋತ್ರಮಾಡುವುದರಿಂದ ಪರಿಶುದ್ಧವಾದ ನಾಲಗೆಯುಳ್ಳವನೂ ॥೮॥ ಬಸವೇಶ್ವರಸ್ತೋತ್ರವೆಂಬ ಬಳ್ಳಿಯಿಂದ ಸುತ್ತಿ ಕಟ್ಟಲ್ಪಟ್ಟಿರುವ ಮನಸ್ಸೆಂಬ ಕಲ್ಪವೃಕ್ಷವುಳ್ಳವನೂ, ಆಗಿ, ಇರುತ್ತಿದ್ದನು. ಆತನು ಸಂಬಳಗಾರರಾದ ಮ್ಯಾದರಿಂದಲೂ ಇತರರಿಂದಲೂ ಮೊರಗಳನ್ನು ಮಾಡಿಸಿ, ಬಂಡಿಗಳಲ್ಲಿ ತುಂಬಿ ಪ್ರಯತ್ನಪೂರ್ವಕವಾಗಿ ಊರೂರಿನಲ್ಲಿ ಮಾರಿ, ಆದರಿಂದ ಬಂದ ಹಣದಿಂದಲೇ ಪ್ರತಿದಿನವೂ ಜಂಗಮಸೇವೆಯನ್ನು ಮಾಡುವವನಾಗಿ, ಸದ್ಭಕ್ತಸಹವಾಸ ಸಲ್ಲಾಪ ಸೌಖ್ಯದಿಂದೊಪ್ಪಿದ್ದನು ॥೧೧॥ ವೇಮಯ್ಯನ ಈರೀತಿಯಾದ ವೈಭವವನ್ನು ಕೇಳಿ, ಆವನನ್ನು ನೋಡುವುದಕ್ಕಾಗಿ ನಾನಾದೇಶಗಳಿಂದ ಸರ್ವರೂ ಬರುತ್ತಿರಲಾಗಿ, ಅವರಲ್ಲಿ ರಸಸಿದ್ಧಿಸಂಪನ್ನನಾದವನೊಬ್ಬನು ॥೧೨॥ ಬಂದು, ವೇಮಯ್ಯನ ಅಧಿಕವಾದ ಜಂಗಮಾರ್ಚನ ಶೀಲವನ್ನು ನೋಡಿ, ಮನದಲ್ಲಿ ಆಶ್ಚರ್ಯಗೊಂಡು, ತನ್ನಲ್ಲಿರುವ ರಸಸಿದ್ಧಿ ವಿದ್ಯೆಯನ್ನು ಇಂಥ ಸತ್ಪಾತ್ರಕ್ಕಲ್ಲದೆ ಮತ್ತಾರಿಗೆ ಕೊಡಬೇಕು ? ಎಂದು ಯೋಚಿಸಿ ನಿರ್ಧರಿಸಿ, ಪ್ರಯತ್ನಪೂರ್ವಕವಾಗಿ ಜಾರಣಕರ್ಮವನ್ನು ಮಾಡಿ, ಪಾದರಸವನ್ನು ಚೆನ್ನಾಗಿ ಶೋಧಿಸಿ ॥೧೪॥ ಎಣೆಯಿಲ್ಲದ ಮೂಲಿಕೆಗಳಿಂದಲೂ, ಎಣ್ಣೆ ಮೊದಲಾದುವುಗಳಿಂದಲೂ ಪಾಷಾಣ ದ್ರಾವಕಗಳಿಂದಲೂ ಸಸ ಮರ್ದನಮಾಡಿ, ಆ ರಸ

ಹ। ಮರ್ದಯಿತ್ವಾಮೂರ್ಛಿತಂಚಮೃತಂಕೃತ್ವಾಕ್ರಮಾತ್ಪುನಃ॥೧೫॥ ಕಲ್ಕೀಕೃತ್ಯತತಃಪಿಂಡಂವಿಧಾಯವಿವಿಧೌಷಧೈಃ । ಭಾವಯಿತ್ವಾತತೋವಜ್ರಮೂಷಾಸಂಸ್ಥಂವಿಧಾಯಚ ॥೧೬॥ ಸಂತಾಪ್ಯಾನಂತರಂಮಂದಾನಲಾಪ್ಯೋಷ್ಣ್ಯೇನಪ್ರಯತ್ನತಃ । ಆಲಿಪ್ಯಸಮ್ಯಗ್ರಚಿತೈಃಪಕ್ಷಚ್ಛಿದಕರೌಷಧೈಃ ॥೧೭॥ ಸನ್ಮಂತ್ರಮೂಲಿಕಾವ್ರಾತಸಾರೈಸ್ತಂಕಲ್ಕಮಾವೃತಂ । ವಿಧಾಯಭಾಗಸಂಖ್ಯಾವನ್ಮಿತ್ರಪಂಚಕಜಾಲಕಂ ॥೧೮॥ ಅಧರೋತ್ತರತಃಕೃತ್ವಾಪ್ಯಂಧಿತಂಮೂಷಿಕಾಗತಂ । ಮಂದತೀವ್ರಾಗ್ನಿಪಾಕಂಚ ಕೃತ್ವಾಪಾತಂವಿಧಾಯಚ ॥೧೯॥ ಸಾಂಗಶೀತಾಂಸಮಾದಾಯಘುಟಿಕಾಂತಾಂರಸಸ್ಯಚ । ಕೃತ್ವಾಚದೀಪನಮಥನಾನಾಯಂತ್ರಪುಟೌಷಧೈಃ ॥೨೦॥ ಪಾಷಾಣಸತ್ವಾನಿಹೇಮವಜ್ರಸಂಘಂತತಃಕ್ರಮಾತ್ । ದತ್ವಾಗ್ರಾಸಮಸೌತೃಪ್ತಿಂಪ್ರಾಪಿತಾತಿಪ್ರಯತ್ನತಃ ॥೨೧॥ ಸಹಸ್ರವೇಧಿನೀಚೇಯಮನರ್ಘ್ಯಾಘುಟಿಕೇತಿಚ । ಆಖ್ಯಾಯವಿನತೋಭೂತ್ವಾವೇಮಯಾರ್ಯಾಯಭಕ್ತಿತಃ ॥೨೨॥ ಸಮರ್ಪ್ಯತಸ್ಯಚರಣಸನ್ನಿಧೌಸತತೋಯಯೌ । ರಸಸಿದ್ಧಿರ್ಮಮಾಯಾತಾ೭ಲಭ್ಯಾಘುಟಿಕಯಾನಯಾ ॥೨೩॥ ಉತ್ಪಾದಯಾಮಿವಿಪುಲಂ ಧನಂವೃತ್ಯಾಮದೀಯಯಾ । ಕಿಮಿ

---

ವನ್ನು ಮೂರ್ಛಿತವನ್ನಾಗಿಯೂ, ಬಳಿಕ ಮೃತವನ್ನಾಗಿಯೂ ಮಾಡಿ, ಮತ್ತೆ ॥೧೫॥ ಕಲ್ಕವನ್ನಾಗೆಸಗಿ, ಬಳಿಕ ನಾನಾ ಔಷಧಗಳಿಂದ ಭಾವನೆಮಾಡಿ, ಉಂಡೆಕಟ್ಟಿ, ಬಳಿಕ ವಜ್ರಮೂಷೆಗಳಲ್ಲಿಟ್ಟು ॥೧೬॥ ಸ್ವಲ್ಪವಾದ ಬೆಂಕಿಯ ಸೇಕದಿಂದ ಕಾಯಿಸಿ, ಸೇಕದಿಂದ ರಸವು ಹಾರಿಹೋಗದಂತೆ ಮಾಡಲು ಸಾಧಕವಾಗಿ ಅಚ್ಚುಗಟ್ಟಾಗಿ ಮಾಡಿದ ಓಷಧಗಳಿಂದ ಆ ಉಂಡೆಯನ್ನು ಲೇಪಿಸಿ ॥೧೭॥ ಉತ್ತಮವಾದ ಮಂತ್ರಬಂಧಗಳಿಂದಲೂ, ಮೂಲಿಕೆಗಳ ರಸದಿಂದಲೂ, ಆರಸಕಲ್ಕವನ್ನು ಹುದುಗಿಸಿ, ರಸದ ಭಾಗಗಳಿಗೆ ತಕ್ಕಷ್ಟು ಆಪ್ತವಾದ ೫ ಪದಾರ್ಥಗಳನ್ನು ಕೆಳಗೂ ಮೇಲೂ ಕವಚವಾಗಿಟ್ಟು, ಕುರುಡನ್ನಾಗಿ ಮಾಡಿ, ಬಳಿಕ ಮೂಸೆಯಲ್ಲಿಟ್ಟು, ನಸುಬಿಸಿ ಬಲು ಬಿಸಿಯ ಪಾಕವನ್ನು ಮಾಡಿ, ಊರ್ಧ್ವಪಾಕಾದಿಗಳನ್ನು ಮಾಡಿ,॥೧೯॥ ಸಂಪೂರ್ಣವಾಗಿ ತಣ್ಣಗಾದ ರಸಘುಟಿಕೆಯನ್ನು ನೋಡಿ ತೆಗೆದುಕೊಂಡು, ಬಳಿಕ ನಾನಾಯಂತ್ರ ಪುಟಗಳಿಂದಲೂ, ಔಷಧಗಳಿಂದಲೂ, ದೀಪನಗೊಳಿಸಿ, ತರುವಾಯ ಪಾಷಾಣಸತ್ವಗಳನ್ನೂ, ಚಿನ್ನವಜ್ರಗಳನ್ನೂ ಕ್ರಮವಾಗಿ ಅದಕ್ಕೆ ಗ್ರಾಸವಾಗಿ ಕೊಟ್ಟು, ತೃಪ್ತಿಗೊಳಿಸಿ॥೨೧॥ ವೇಮಯ್ಯನ ಬಳಿಗೆ ಹೋಗಿ,— ಈ ಘುಟಿಕೆಯು ಸಾವಿರಸಲ ಭಾವಿಸಿ ಪುಟ ಹಾಕಲ್ಪಟ್ಟುದು, ಬೆಲೆಯಿಲ್ಲದುದು, ಎಂದು ಹೇಳಿ, ಭಕ್ತಿಯಿಂದ ಅಡ್ಡಬಿದ್ದು॥ ಆ ವೇಮಯ್ಯನ ಪಾದಸನ್ನಿಧಿಯಲ್ಲಿಟ್ಟು ಒಪ್ಪಿಸಿ, ಅವನು ಅಲ್ಲಿಂದ ಹೊರಟುಹೋ

ತ್ಯಸಾಲೋಚ್ಯಹೃದಿ ತದಾಚೇಟಲವೇಮಯಃ ॥೨೪॥ ಅಯಂಸಿದ್ಧೋಮಹಾ ನೇಷರಸಇತ್ಯೇತದುನ್ನತಿಂ । ತೃಣಾಯಾಪಿನಮನ್ವಾನಃಸ್ವವೃತ್ತ್ಯೈವಾವಸ ತ್ಸುಧೀಃ ॥೨೫॥ ಶೃತ್ವೈತದ್ರಸವೃತ್ತಾಂತಮನ್ಯಃಪ್ರಾಕ್ತತ್ಸವಿಧಾಪಗಃ । ಘುಟಿಕಾಂತಾಂಸಮಾದಾಯಶನೈಃಕೇನಾಪ್ಯಲಕ್ಷಿತಃ ॥೨೬॥ ಪುತ್ರಮಿತ್ರಕಳ ತ್ರಾದಿಯುತಸ್ಸೌಖ್ಯಮವಾಪಸಃ । ಸಸಿದ್ಧೋಜಾತುಸಂಸ್ಮೃತ್ಯವೇಮಾರ್ಯ ಮತಿಹರ್ಷತಃ ॥೨೭॥ ಮಯಾಸಿದ್ಧರಸೋದತ್ತೋವೇಮಾರ್ಯಾಯಸುಸಾ ಧಿತಃ । ದುಷ್ಪ್ರಾಪಮಸ್ತಿಕಿಂತೇನವಸ್ತುಕಿಂಚನಭೂತಲೇ ॥೨೮॥ ತಾವ ದ್ರಾಜ್ಞಾಂಮಹಾರಾಜೋಭೂತ್ವಾಭೂಮಾವಸೇದಿತಿ । ನಿಶ್ಚಿತ್ಯದ್ರಷ್ಟುಮಾ ಯಾತೋವೇಮನಾರ್ಯಂಗುಣೋನ್ನತಂ ॥೨೯॥ ಪುರೇವಶಸ್ತ್ರಿಕಾಪಾಣಿಂವಿ ಶೀರ್ಣಾಂಬರಧಾರಿಣಂ ಕುರ್ವಂತಂಶೂರ್ಪನಿಚಯಂತದ್ವಿಕ್ರಯಧನಾನ್ಮುದಾ ॥ ಜಂಗಮಾರ್ಚಾಂವಿತನ್ವಂತಂದೃಷ್ಟ್ವಾವೇಮಾರ್ಯಮಬ್ರವೀತ್ । ಅತ್ಯರ್ಥಂ

---

ದನು. ಆಗ ಆ ವೇಣನವೇಮಯ್ಯನು "ದುರ್ಲಭವಾದ ರಸಸಿದ್ಧಿಯು ನನಗೆ ಲಭ ಪಾಯಿತು; ಈ ರಸಘುಟಿಕೆಯಿಂದ ಬೇಕಾದಷ್ಟು ಹಣವನ್ನು ಹುಟ್ಟಿಸುವೆನು, ನನ್ನ ಕಾಯಕದಿಂದ ಇನ್ನು ಪ್ರಯೋಜನವೇನು?" ಎಂದು ಮನಸ್ಸಿನಲ್ಲಿ ಆಲೋ ಚಿಸಿಕೊಳ್ಳದೆ, ॥೨೪॥ "ಈತನು ರಸಸಿದ್ಧನು, ಅದುಕಾರಣ ದೊಡ್ಡವನು" ಎಂಬು ದಾಗಿ ಇವರುಗಳ ಆಧಿಕ್ಯವನ್ನು ಹುಲ್ಲಿಗೆ ಸಮವಾಗಿಯೂಕೂಡ ಎಣಿಸದೆ, ತನ್ನ ಕಾಯಕದಿಂದಲೇ ಇರುತ್ತಿದ್ದನು ॥೨೫॥ ಬಳಿಕ ಮತ್ತೊಬ್ಬನು ಈ ರಸಘುಟಿಕೆಯ ವೃತ್ತಾಂತವನ್ನು ಕೇಳಿ, ವೇಮಯ್ಯನ ಬಳಿಗೆ ಬಂದು, ಒಬ್ಬರೂ ಕಾಣದಂತೆ ಮೆಲ್ಲನೆ ಆ ಘುಟಿಕೆಯನ್ನು ತೆಗೆದುಕೊಂಡು ಹೋಗಿ ॥೨೬॥ ಮಕ್ಕಳು ಸ್ನೇಹಿತರು ಪತ್ನಿ ಮೊದಲಾದವರಿಂದ ಕೂಡಿಕೊಂಡು ಸೌಖ್ಯವಾಗಿರುತಿದ್ದನು. ವೇಮಯ್ಯನಿಗೆ ರಸಘುಟಿಕೆಯನ್ನು ಕೊಟ್ಟು ಹೋಗಿದ್ದ ಆಸಿದ್ಧನು ಒಂದಾನೊಂದು ದಿವಸ ವೇಮಯ್ಯ ನನ್ನು ನೆನಸಿಕೊಂಡು, ಅತ್ಯಂತ ಸಂತೋಷದಿಂದ ॥೨೭॥ "ನಾನು ವೇಮಯ್ಯನಿಗೆ ಚೆನ್ನಾಗಿ ಸಾಧಿಸಿದ ಸಿದ್ಧಿಗೊಂಡ ರಸವನ್ನು ಕೊಟ್ಟಿದ್ದೆನು; ಭೂತಲದಲ್ಲಿ ಅದರಿಂದ ದೊರೆಯದೆಯಿರತಕ್ಕ ವಸ್ತುವು ಯಾವುದಿರುವುದು? ಯಾವುದೂ ಇಲ್ಲ. ॥೨೮॥ ಆ ವೇಮಯ್ಯನು ಇಷ್ಟರಲ್ಲಿ ರಾಜಾಧಿರಾಜನಾಗಿ ಭೂಮಿಯಲ್ಲಿ ಬಾಳುತ್ತಿರಬಹುದು. ಎಂದು ನಿಶ್ಚೈಸಿ, ಗುಣಾಧಿಕನಾದ ವೇಮಯ್ಯನನ್ನು ನೋಡುವುದಕ್ಕಾಗಿ ಬಂದನು॥ ಮೊದಲಂತೆಯೇ ಕೈಯಲ್ಲಿ ಚೂರಿಯನ್ನು ಹಿಡಿದುಕೊಂಡು, ಹರಕುಬಟ್ಟೆಯನ್ನು ಹೊದೆದು, ಮೊರಗಳನ್ನು ಮಾಡುತ್ತಲೂ, ಅವುಗಳನ್ನು ಮಾರಿ ಬಂದ ಹಣದಿಂದ ಸಂತೋಷಗೊಂಡು ॥೩೦॥ ಜಂಗಮಾರ್ಚನೆಯನ್ನು ಮಾಡುತ್ತಲೂ ಇರುವ ವೇಮ

ಶೂರ್ಪನಿರ್ಮಾಣಾತ್ತದಾಗತಧನೇನಚ ‖೩೧‖ ಆರಾಧನಾಜ್ಜಂಗಮಾನಾಂಭು ವಿಖ್ಯಾತಲವೇಮಯಃ । ಇತಿಪ್ರಸಿದ್ಧಸ್ತ್ವಂತಸ್ಮಾತ್ಪ್ರದತ್ತಾಘುಟಿಕಾಮ ಯಾ ‖೩೨‖ ನಭುಜ್ಯತೇವಿರಾಗೋವಾಕಿಮುಗರ್ವೋಽವಧೀರಣಾ । ಉತ ಭಕ್ತೇರ್ಮಹತ್ವಂವಾಘುಟಿಕಾಂರಸನಿರ್ಮಿತಾಂ ‖೩೩‖ ಅಮೂಲ್ಯಾಂದು ರ್ಲಭಾಂದೇಹಿಮಹ್ಯಂ ವತವಕಿಂತಯಾ । ತೇನೇತ್ಯುಕ್ತೋವೇಮನಾರ್ಯೋ ರಸಸಿದ್ಧಂಜಗಾದತಂ ‖೩೪‖ ಸಾಕಿಂತ್ವಯೋಪರಚಿತಾಘುಟಿಕಾರಸನಿರ್ಮಿತಾ । ಜಾನೀಮಹೇಕಿಂಚಿದಪಿನವಯಂಸಂಸ್ಥಿತಂತದಾ ‖೩೫‖ ಏಕಂಪರಿಸ್ಫುರದ್ರೌ ಪ್ಯಮಣಿವತ್ಕಿಂಚಿದಗ್ರತಃ । ತತ್ರೈವಯುಷ್ಮನ್ನಿಹಿತಸ್ಥಲೇಕೇನುಸಮಾಹ ರ್ತ ‖೩೬‖ ಬಾಲಾಃಕ್ರೀಡಾರ್ಥಮುಪುತ್ರಾರ್ಥಂಸಮುದ್ವೀಕ್ಷ್ಯನಯುಸ್ಕಿಮು । ಕ್ರೇತುಂಸಮಾಗತಾಃಕಾಂತಾಶ್ಶೂರ್ಪಸಂಘಂಮದಂಗಣೇ ‖೩೭‖ ನೀಲಕಾ ಚಾಕ್ಷಹಾರಾಂತಗ್ರಂಥ್ಯರ್ಥಮಹರನ್ಕಿಮು । ಪ್ರಚಾರಣವಶಾತ್ಪಾದೈರುತ ವಾಘುಟ್ಯಯನ್ನನಾಃ ‖೩೮‖ ತೃಣಸಮ್ಮಾರ್ಜನವಶಾದ್ವ್ಯತಿರಸ್ಕಿಮವಸ್ಕರೇ ।

---

ಯ್ಯನನ್ನು ಆ ರಸಸಿದ್ಧನು ನೋಡಿ, ಹೀಗೆ ಹೇಳಿದನು – “ನೀನು ಅತಿಶಯವಾಗಿ ಮೊರಗಳನ್ನು ಮಾಡಿ ಅವುಗಳಿಂದ ಬಂದ ಹಣದಿಂದ ‖೩೧‖ ಜಂಗಮಾರ್ಚನೆ ಯನ್ನು ಮಾಡುತ್ತಿದ್ದುದರಿಂದ ಭೂಮಿಯಲ್ಲಿ “ಮೊರಸವೇಮಯ್ಯ” ಎಂದು ಪ್ರಸಿ ದ್ಧನಾದೆ. ಆದುದರಿಂದ ನಿನಗೆ ನಾನು ರಸಘುಟಿಕೆಯನ್ನು ಕೊಟ್ಟೆನು ‖೩೨‖ ಆದ ರಿಂದ ನೀನು ಸೌಖ್ಯವನ್ನನುಭವಿಸದೆ ಇರುತ್ತೀಯೆ, ಇದೇನು ವೈರಾಗ್ಯವೊ? ಅಥವಾ ಅಹಂಕಾರವೊ? ಉಪೇಕ್ಷೆಯೊ? ಇಲ್ಲವೆ ಭಕ್ತಿಯ ಮಹತ್ತ್ವವೊ? ಅಮೂ ಲ್ಯವೂ–ದುರ್ಲಭವೂ ಆದ ಆ ರಸಘುಟಿಕೆಯನ್ನು ನನಗೇ ಕೊಟ್ಟುಬಿಡು. ಅದ ರಿಂದ ನಿನಗೇನು ಪ್ರಯೋಜನ?” ಎಂದು ಹೇಳಲು, ಆ ರಸಸಿದ್ಧನನ್ನು ಕುರಿತು ವೇಮಯ್ಯನು—‖೩೪‖ ಆ ರಸಘುಟಿಕೆಯನ್ನು ನೀನು ಮಾಡಿ ಇಟ್ಟದ್ದೆಯೊ? ಮುಂಗ ಡೆಯಲ್ಲಿ ಹೊಳೆಯುತ್ತಿರುವ ಬೆಳ್ಳಿಯ ಮಣಿಯಂತೆ ಒಂದಾನೊಂದು ವಸ್ತುವು ನಿನ್ನಿಂದ ಇಡಲ್ಪಟ್ಟಿದ್ದರೆ ಅದನ್ನು ನಾವು ಸ್ವಲ್ಪವೂ ಕಾಣಲಿಲ್ಲ. ನೀನಿಟ್ಟದ್ದ ಸ್ಥಲ ದಲ್ಲೇ ಯಾರಾದರೂ ಅದನ್ನು ಎತ್ತಿಕೊಂಡುಹೋದರೊ? ‖೩೬‖ ಹುಡುಗರು ಅದನ್ನು ನೋಡಿ, ತಮ್ಮ ಆಡುವ ಬೊಂಬೆಗಳಿಗಾಗಿ ಎತ್ತಿಕೊಂಡುಹೋದರೊ! ನನ್ನ ಮನೆಯಂಗಣಕ್ಕೆ ಮೊರವನ್ನು ಕೊಳ್ಳುವುದಕ್ಕಾಗಿ ಹೆಂಗುಸರು ಬಂದಿದ್ದರು ‖ ಅವರು ತಮ್ಮ ಕರಿಮಣಿಯ ಹಾರದ ತುದಿಯ ಗಂಟಿಗೆ ಸೇರಿಸಿಕೊಳ್ಳುವುದಕ್ಕಾಗಿ ಅದನ್ನು ತೆಗೆದುಕೊಂಡು ಹೋದರೋ ಏನೋ! ಜನರು ತಿರುಗಾಟದಲ್ಲಿ ಕಾಲುಗ ಳಿಂದ ಭೂಮಿಯೊಳಗೆ ಅದನ್ನು ತುಳಿದುಬಿಟ್ಟರೋ ಏನೋ! ‖೩೮‖ ಅಥವಾ ಗುಡಿಸಿ

ಕಾರ್ಪಾಸಬೀಜಸಂದೋಹಶ್ರಿತಂಕಿಂಭಕ್ಷಿತಂಗವಾ ॥೩೯॥ ತತ್ರೈವರಜಸಾ ಮಿಶ್ರೀಭೂಯತಿಷ್ಠತಿವಾಕಿಮು । ವಿಚಾರಯಾವೋನವಯಂತದಾನೀಂ ಘುಟಿಕಾಂಸ್ಥಿತಾಂ॥೪೦॥ ತಾಂಮಯಾಯಾಚಿತೋಽದಾಃಕಿಂ ದತ್ವಾ ವಾಯಾಚಿತುಂಪುನಃ । ಕಿಮರ್ಥಂಸ್ಥಾಪಿತಾತತ್ರಕುತ್ರತ್ಯಾಘುಟಿಕಾಚಸಾ ॥೪೧॥ ಅದ್ಯಾಗತ್ಯಕಿಮರ್ಥಂತಾಂತ್ವಮನ್ವಿಷ್ಯಸಿಭೋವೃಥಾ । ಕಸ್ಯಹಸ್ತೇತಾಮದಾಸ್ತ್ವಂ ಕಿಮರ್ಥಂವಾಸಮಾಗತಃ ॥೪೨॥ ಕಂಯಾಚಸೇವಾಕಿಂಭ್ರಾಂತ್ಯಾಯದಿಕೋವಾಗ್ರಹೀದಿಮಾಂ । ಭವಿಷ್ಯತಿಸಕೋಟೀಶಃ ಕಿಂವಾತತ್ರೈವಸಂಸ್ಥಿತಾ ॥೪೩॥ ನಹೀಯತೇಸಿದ್ಧರಸಃಪ್ರಕಾರೇಣಾಪಿಕೇನಚಿತ್ । ಮಹೀತಲೇಕ್ಷೀಯತೇಕಿಂಸಹಿಬದ್ಧೋರಸೋಯದಿ ॥೪೪॥ ಕಿಂದುಷ್ಕರಾಮಯಾಸೇತಿವಚನಂಸಿದ್ಧಲಕ್ಷಣಂ। ಅಥೇಚ್ಛಸಿಸ್ವೀಕುರುತ್ವಂ ಸಂಪ್ರಯಚ್ಛನಚೇದಿಮಾಂ॥ ಕಿಂಬಹೂಕ್ತಿಭಿರತ್ರೈವನಿಹಿತಾನಾನ್ಯತೋಮಯಾ । ಇತಿತ್ವಮಾಲಪಸಿಚೇತ್ತರ್ಹಿಯಚ್ಛಾಮ್ಯಹಂತವ ॥೪೫॥ ಘುಟಿಕಾಯಾದಶಗುಣಮಿದಮಿತ್ಯಲಿಕಸ್ಥಿ

---

ತಿಪ್ಪೆಯಲ್ಲಿ ಸುರಿದುಬಿಟ್ಟರೊ! ಇಲ್ಲವೆ ಹತ್ತಿಬಿತ್ತದಲ್ಲಿ ಸೇರಿಕೊಂಡಿದ್ದರೆ ಅದನ್ನು ಹಸುವು ತಿಂದುಬಿಟ್ಟಿತೋ ಏನೋ ॥೩೯॥ ಹಾಗಲ್ಲದಿದ್ದರೆ ನೀನಿಟ್ಟಿದ್ದ ಸ್ಥಳದಲ್ಲೇ ದೂಳಿನಲ್ಲಿ ಬೆರೆದು ಬಿದ್ದಿದೆಯೋ ಏನೋ! ಆ ರಸಘುಟಿಕೆಯ ಸಂಗತಿಯನ್ನು ನಾವು ವಿಚಾರಮಾಡಲಾರೆವು ॥೪೦॥ ನಾನು ಬೇಡಿದುದರಿಂದೇನಾದರೂ ಅದನ್ನು ನೀನು ನನಗೆ ಕೊಟ್ಟೆಯೊ? ಅಥವಾ ಪುನಃ ಬಂದು ಈಸಿಕೊಳ್ಳುವುದಕ್ಕಾಗಿ ಕೊಟ್ಟು ಹೋಗಿದ್ದೆಯೊ? ಆ ಘುಟಿಕೆಯನ್ನು ಅಲ್ಲೇಕೆ ಮಡಗಿದೆ? ಅದು ಎಲ್ಲಿಯದು?। ಈಗ ಬಂದು ವ್ಯರ್ಥವಾಗಿ ಅದನ್ನು ಏತಕ್ಕೆ ಹುಡುಕುತ್ತೀಯೆ? ನೀನು ಅದನ್ನು ಯಾರ ಕೈಯಲ್ಲಿ ಕೊಟ್ಟೆ? ನೀನು ಯಾತಕ್ಕಾಗಿ ಬಂದೆ? ॥೪೨॥ ಭ್ರಾಂತಿಯಿಂದ ನೀನು ಯಾರನ್ನು ಕುರಿತು ಏನನ್ನು ಬೇಡುತ್ತೀಯೆ? ಆ ರಸಘುಟಿಕೆಯನ್ನು ಯಾರಾದರೂ ತೆಗೆದುಕೊಂಡು ಹೋಗಿದ್ದರೆ ಅವನು ಕೋಟೀಶ್ವರನಾಗುತ್ತಾನೆ. ಆ ರಸಘುಟಿಕೆಯು ಮಡಗಿದೆಡೆಯಲ್ಲೇ ಇದ್ದೀತೋ ಏನೋ ॥೪೩॥ ಸಿದ್ಧರಸವು ಯಾವಪ್ರಕಾರದಿಂದಲೂ ಹಾಳಾಗಿಹೋಗತಕ್ಕುದಲ್ಲ. ಅದು ಕಟ್ಟಿದ ರಸವಾಗಿದ್ದರೆ ಭೂಮಿಯಲ್ಲಿ ನಾಶವಾಗಿಹೋಗುತ್ತದೇನು? ॥೪೪॥ ನಾನು ಅದನ್ನು ಮಾಡಲಾರೆನೆ? ಎಂದು ರಸಸಿದ್ಧಿಸಂಪನ್ನನ ಲಕ್ಷಣವನ್ನು ಸೂಚಿಸುವ ಮಾತನ್ನಾಡಿ, ಬಳಿಕ “ ನಿನಗೆ ಅದು ಬೇಕಿದ್ದರೆ ಇಟ್ಟುಕೊ, ಇಲ್ಲದಿದ್ದರೆ ನನಗೆ ಕೊಟ್ಟುಬಿಡು, ಬಲು ಮಾತೇಕೆ? ನಾನು ಅದನ್ನು ಇಲ್ಲೇ ಇಟ್ಟಿದ್ದೆ, ಇನ್ನೆಲ್ಲೂ ಮಡಗಲಿಲ್ಲ ” ಎಂದು ನೀನು ಹೇಳುವೆಯಾದರೆ, ನಾನೇ ನಿನಗೆ ಅದನ್ನು ಕೊಡುತ್ತೇನೆ ॥೪೫॥ ಇದು ರಸಘುಟಿಕೆಗಿಂತ

ತಂ | ಭಸ್ಮಘರ್ಮಾಂಬುಮಿಲಿತಂವಿಧಾಯಘುಟಿಕಾಕೃತಿಂ ||೪೭|| ತತ್ಸಿದ್ಧಾಯದದೌಸೋಪಿಭ್ರಾಂತೋಭೂತ್ವಾವ್ಯಲೋಕಯತ್ | ಪರೀಕ್ಷಾಭಿರ್ದಶಭಿಸ್ಸಿದ್ಧೋತಸ್ಮಿನ್ಪ್ರವಿಸ್ಮಿತಃ ||೪೮|| ತುಷ್ಟಾವಬಹುಧಾಸವ್ಯಗ್ವೇಮಯ್ಯಂಮಹಿವೋಸ್ನತಂ | ತತಃಪ್ರಾಗ್ವೇಮಯಾರ್ಯಸ್ಯಮಹೌದಾರ್ಯೇಮಹಿಮ್ನ್ಯಪಿ ||೪೯|| ಶಿವಸದ್ಭಕ್ತಿಮಾಹಾತ್ಮ್ಯೇಖ್ಯಾತೇದಿಕ್ಷುಮಹಾದ್ಭುತೇ | ಸಮಾಕರ್ಣ್ಯತದಾಗತ್ಯವ್ರತೀಕಶ್ಚನಜಂಗಮಃ ||೫೦|| ನಿರೀಕ್ಷ್ಯವೇಮಯಂಪ್ರೀತ್ಯಾಬಭಾಷೇವಚನಂತತಃ | ಶೃಣ್ವಸ್ಮತ್ಪೂರ್ವನಿಯಮಂ ಸಮ್ಯಕ್ಕೋಟಲವೇಮಯ ||೫೧|| ಮುದಾದ್ವಾದಶಸಾಹಸ್ರಜಂಗಮೇಭ್ಯೋತಿಭಕ್ತಿತಃ | ಛತ್ರಧ್ವಜಪತದ್ಗ್ರಾಹಭೂಷಾಮತ್ರಾಸನೈಸ್ಸಹ ||೫೨|| ಘಂಟಿಕಾಧೂಪದೀಪಾದಿಪಾತ್ರಿಕಾಭಿಸ್ತುರಂಗಮೈಃ | ಪಂಚಭಕ್ಷ್ಯಾನಿತಾಂಬೂಲಗಂಧಮಾಲ್ಯಾದಿಕಾನ್ಯಪಿ ||೫೩|| ಅನರ್ಪಯಿತ್ವಾನೋಭುಂಜೇ ತತ್ಪ್ರಸಾದಂ ಸಮಾಹಿತಃ | ನೋಚೇದಿದಂವಿಮುಂಚಾಮಿಮಚ್ಛರೀರಂಮಹಾಮತೇ ||೫೪|| ಇತಿ

---

ಲೂ ಹತ್ತುಭಾಗ ಹೆಚ್ಚಾದ ಗುಣವುಳ್ಳದು ಎಂದು ಹೇಳಿ, ತನ್ನ ಹಣೆಯಲ್ಲಿದ್ದ ಭಸ್ಮವನ್ನು ಬೆಮರಿನಿಂದ ಕೂಡಿಸಿ, ಗುಳಿಗೆಯಾಕಾರಕ್ಕೆ ಮಾಡಿ ||೪೭|| ಆದನ್ನು ಆ ಸಿದ್ಧನಿಗೆ ಕೊಟ್ಟನು. ಅವನು ಭ್ರಾಂತನಾಗಿ, ಅದನ್ನು ದಶವಿಧಪರೀಕ್ಷೆಗಳಿಂದಲೂ ನೋಡಿ, ಆಶ್ಚರ್ಯಪಟ್ಟು ||೪೮|| ಮಹತ್ವಾಧಿಕನಾದ ವೇಮಯ್ಯನನ್ನು ಬಹುವಿಧವಾಗಿ ಚೆನ್ನಾಗಿ ಸ್ತೋತ್ರಮಾಡಿದನು. ತದನಂತರ ವೇಮಯ್ಯನ ವಿತರಣಗುಣವೂ, ಮಹತ್ವವೂ ||೪೯|| ಶಿವಭಕ್ತಿಮಹಿಮೆಯೂ ಅತ್ಯಾಶ್ಚರ್ಯಕರವಾಗಿ ದಿಕ್ಕುಗಳಲ್ಲೆಲ್ಲಾ ಹರಡಿಕೊಳ್ಳಲು, ಅದನ್ನು ಕೇಳಿ, ಒಂದಾನೊಂದು ವ್ರತವನ್ನು ಹಿಡಿದ ಜಂಗಮನೊಬ್ಬನು ಬಂದು ||೫೦|| ವೇಮಯ್ಯನನ್ನು ನೋಡಿ, ಪ್ರೀತಿಯಿಂದ ಹೀಗೆ ಸಂಭಾಷಿಸಿದನು-" ಎಲೈ ಕುಶಲಮತಿಯಾದ ಕೋಟಲವೇಮಯ್ಯನೆ! ಪೂರ್ವಕಾಲದಲ್ಲಿ ಆಚರಿಸಬೇಕಾದ ನಮ್ಮ ನಿಯಮವನ್ನು ಚೆನ್ನಾಗಿ ಕೇಳು, ಇಲ್ಲಿ ೧೨ ಸಾವಿರ ಜಂಗಮರಿಗೆ ಸಂತೋಷದಿಂದ ಅತ್ಯಂತ ಭಕ್ತಿಪೂರ್ವಕವಾಗಿ ಛತ್ರ-ಧ್ವಜ-ಅಭಿಷೇಕಪಾತ್ರೆ-ಆಭರಣಗಳನ್ನೂ-ಚಿತ್ರಾಸನ-ಗಂಟೆ, ಧೂಪದೀಪಪಾತ್ರೆ-ಕುದುರೆಗಳನ್ನೂ ಕೊಟ್ಟು, ಪಂಚಭಕ್ಷ್ಯಗಳನ್ನುಣಬಡಿಸಿ, ತಾಂಬೂಲ ಹೂವು ಗಂಧ ಮೊದಲಾದುವುಗಳನ್ನು ಸಹ ಕೊಟ್ಟು ಹೀಗೆ ಸೇವಿಸಿದಲ್ಲದೆ ಅವರ ಪ್ರಸಾದವನ್ನು ಅವಧಾನಪೂರ್ವಕವಾಗಿ ನಾನು ಭುಂಜಿಸುವುದಿಲ್ಲ. ಹಾಗೆ ಮಾಡದೆಹೋದರೆ ಈ ನನ್ನ ದೇಹವನ್ನೇ ಪರಿತ್ಯಜಿಸಿಬಿಡುತ್ತೇನೆ ||೫೪|| ಎಂದು ಹೇಳಲು, ಇದನ್ನು ಆ ಕೋಟಲ ವೇಮಯ್ಯನು ಕೇಳಿ, ರಸಸಿದ್ಧನಿಗೆ ತನ್ನ ಹಣೆಯಲ್ಲಿದ್ದ ಭಸ್ಮವನ್ನು ಕೊಟ್ಟಾಗ ತನ್ನ ಉಗುರಿನ ತುದಿಯಲ್ಲಿ

ವಾಕ್ಯಂಸನಾಕರ್ಣ್ಯತತಶ್ಚೋಟಲವೇಮಯಃ । ಸಿದ್ಧಾಯಸ್ವಲಲಾಟಸ್ಥಭಸ್ಮ ವಿಶ್ರಾಣನಕ್ಷಣೇ ॥೫೪॥ ಕಿಂಚಿನ್ನಖಾಗ್ರಸಲ್ಲಗ್ನಂಭಸ್ಮದತ್ವಾನವತ್ಪುನಃ । ಸಜಂಗಮೋತಿಹರ್ಷೇಣಪ್ರಶಶಂಸಚವೇಮಯಂ ॥೫೬॥ ಕಲಿಕಾಲವೃಷಾ ಧೀಶವಿಭೋಚೋಟಲವೇಮಯ । ಕಾಮ್ಯಪ್ರದಾನಬಸವಾಧೀಶಸಾನ್ನಿಧ್ಯರಂ ಜಿತ ॥೫೭॥ ಇತಿಸ್ತುತ್ವಂಸ್ತತೋಗತ್ವಾತಥಾಜಂಗಮಪೂಜನಂ । ಚಕಾರಪ ರ್ವಣ್ಯಥತದ್ವೀಕ್ಷ್ಯಸಿದ್ಧೋತಿಲಜ್ಜಿತಃ ॥೫೮॥ ಯಯೌಚೋಟಲವೇಮ ಯೋಪ್ಯವಸತ್ಪ್ರಹಸಂಸ್ತದಾ ॥

ಇತ್ಯಸಂಖ್ಯಾತ........ಶ್ರೀ ವೀರಶೈವಮತಾಚಾರ್ಯಗುರುರಾಜಸ್ಯಕೃತೌ ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೇ ಪುರಾತನಪ್ರಕರಣೇ ಮೊರನವೇಮಯ್ಯಮಾಹಾತ್ಮ್ಯ ಸಂಕೀರ್ತನೇ ರಸಸಿದ್ಧವಿಜಯಕಥನಂ ನಾಮಪಂಚದಶೋಧ್ಯಾಯಃ.

---

ಅಂಟಿಕೊಂಡಿದ್ದ ಸ್ವಲ್ಪ ಭಸ್ಮವನ್ನು ಆ ಜಂಗಮನಿಗೆ ಕೊಟ್ಟು ನಮಸ್ಕರಿಸಿದನು. ಆ ಜಂಗಮನುಕೂಡ ಅತ್ಯಂತ ಸಂತೋಷದಿಂದ ಆ ವೇಮಯ್ಯನನ್ನು ಹೀಗೆ ಸ್ತೋತ್ರಮಾಡಿದನು ॥೫೬॥ ಕಲಿಕಾಲದ ಬಸವೇಶ್ವರಮೂರ್ತಿಯಾದ ಎಲೈ ಮೊರನ ವೇಮಯ್ಯನೆ! ಇಷ್ಟಾರ್ಥವನ್ನು ಕೊಡುವಲ್ಲಿ ಬಸವೇಶ್ವರನ ಸಮೀಪಕ್ಕೆ ಮುಟ್ಟುವವನಾಗಿ ಒಪ್ಪುತ್ತಿರುವವನೆ! ॥೫೭॥ ಎಂದು ಹೊಗಳಿದವನಾಗಿ, ಅಲ್ಲಿಂದ ಹೊರಟು ತಾನು ಸಂಕಲ್ಪಿಸಿದ್ದಂತೆಯೇ ಜಂಗಮಪೂಜೆಯನ್ನು ಪರ್ವಕಾಲದಲ್ಲಿ ಮಾಡಿದನು. ಬಳಿಕ ರಸಸಿದ್ಧನು ಅದನ್ನೆಲ್ಲಾ ನೋಡಿ ನಾಚಿಕೆಗೊಂಡು ಹೊರಟುಹೋದನು. ಮೊರನ ವೇಮಯ್ಯನು ಸಹ ನಕ್ಕು ಯಥಾಪ್ರಕಾರವಾಗಿದ್ದನು ॥೫೮॥

ಎಂಬಲ್ಲಿಗೆ ಶ್ರೀ ಮಲ್ಲೋಕಾರಾಧ್ಯ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ಪುರಾತನ ಪ್ರಕರಣದೊಳಗೆ ಮೊರನ ವೇಮಯ್ಯನ ಮಾಹಾತ್ಮ್ಯವನ್ನು ವರ್ಣಿಸುವ ರಸಸಿದ್ಧವಿಜಯವನ್ನು ಹೇಳುವ ೧೫ ನೆಯ ಅಧ್ಯಾಯವು ಮುಗಿದುದು.

## ಷೋಡಶೋಽಧ್ಯಾಯಃ.

(ವೇಮಯ್ಯ ಬಸವೇಶ್ವರ ಸದ್ಭಕ್ತಿಕಥನಂ.)

ಕಿಂಚಚೇಟಲವೇಮಯ್ಯಶ್ಶಿವಲಿಂಗಾರ್ಚನಾರತಃ | ಜಾತೂದಯಾಭಿಷೇಕಸ್ಯಸಮಯೇಸಮುಪಸ್ಥಿತೇ ‖೧‖ ಗುರುಧ್ಯಾನೈಕಭಕ್ತ್ಯಾಚಧ್ಯಾನೇನ ಬಸವೇಶಿತುಃ | ಪೂರ್ವನಿದ್ರಾರ್ಪಿತಾಖಂಡಲಿಂಗಗರ್ಭನಿವೇಶಿತಃ ‖೨‖ ವಿಷಯೇಷ್ವಿಂದ್ರಿಯಚಯೋಯಥಾನವ್ಯಾಪೃತೋಭವೇತ್ | ತಥಾಶ್ರೀಲಿಂಗಸಂಸ್ಪರ್ಶಂಕುರ್ವನ್ನೇವವಿಧಾನತಃ ‖೩‖ ನವೋರುದ್ರಾಯೇತಿವನಸದಇತ್ಯುಕ್ತಿತಃಪುನಃ | ತದ್ವದೇವಾಪ್ಸುಷದಇತ್ಯೇತಸ್ಮಾದ್ವಚನಾದಪಿ ‖೪‖ ತತಸ್ಸರ್ವಂನಮಇತಿರುದ್ರಾಯೇತಿಚವಾಕ್ಯತಃ | ಶ್ರುತಿಪ್ರಯುಕ್ತಂಕರೋಮೀತ್ಯುಕ್ತಿತಃಪರಮೇಶ್ವರ ‖೫‖ ಧರಿತ್ರೀಕಾನನಜಲಸಂದೋಹೇಷುಚಸರ್ವದಾ | ಏಕೋಜೀವಸ್ತತಃಕರ್ಮದ್ವಿತಯಂಚತ್ರಯೋಗುಣಾಃ ‖೬‖ ಚತುಷ್ಕಮಂ

---

## ೧೬ ನೆಯಧ್ಯಾಯವು.

(ವೊರನ ವೇಮಯ್ಯನ ಬಸವೇಶ್ವರ ಭಕ್ತಿಯು.)

ಬಳಿಕ ಆ ಚೇಟಲ ವೇಮಯ್ಯನು ಶಿವಲಿಂಗಪೂಜಾಸಕ್ತನಾಗಿದ್ದುಕೊಂಡಿರಲು, ಒಂದಾನೊಂದು ದಿವಸ ಬೆಳಗಿನ ಲಿಂಗಾಭಿಷೇಕದ ಸಮಯವು ಪ್ರಾಪ್ತವಾಗಲು ‖೧‖ ಶ್ರೀಗುರುಧ್ಯಾನ ಭಕ್ತಿಯಿಂದಲೂ ಶ್ರೀ ಬಸವೇಶ್ವರ ಧ್ಯಾನದಿಂದಲೂ ಕೂಡಿದವನಾಗಿ, ಮೊದಲು ಶಿವಯೋಗನಿದ್ರೆಯಿಂದ ಶ್ರೀ ಶಿವಲಿಂಗಮಧ್ಯದಲ್ಲಿ ನಿಲ್ಲಿಸಿ ಅರ್ಪಿಸಿದ ತನ್ನ ಇಂದ್ರಿಯಗಳ ಸಮೂಹವು ಅವವುಗಳ ವಿಷಯಗಳಲ್ಲಿ ತಗುಲಿಕೊಳ್ಳದಿದ್ದಹಾಗೆಯೇ ವಿಧಿ ವಿಧಾನಪೂರ್ವಕವಾಗಿ ಶಿವಲಿಂಗ ಸಂಸ್ಪರ್ಶನವನ್ನು ಮಾಡಿ ‖೩‖ "ನಮೋರುದ್ರಾಯ" ಎಂಬ ವೇದವಚನದಿಂದಲೂ, "ನಮೋವನಸದೆ" ಎಂಬ ವಚನದಿಂದಲೂ, "ನಮೋಽಪ್ಸುಷದೆ" ಎಂಬ ವೇದವಾಕ್ಯದಿಂದಲೂ ‖೪‖ "ಸರ್ವಂನಮಃ" ಎಂಬ ವಚನದಿಂದಲೂ, "ರುದ್ರಾಯನಮೋ" ಎಂಬ ವಚನದಿಂದಲೂ, "ಶ್ರುತಿಪ್ರಯುಕ್ತಂಕರೋಮಿ" ಎಂಬ ವಚನದಿಂದಲೂ ಸಹ ಎಲೈ ಪರಮೇಶ್ವರನೆ! ‖೫‖ ಭೂಮಿ—ಅರಣ್ಯ—ಜಲ—ಇವುಗಳಲ್ಲಿಯಾವಾಗಲೂ ಉಂಟಾಗತಕ್ಕ ಸೌಖ್ಯವನ್ನು, ಜೀವವೊಂದು—ಪಾಪಪುಣ್ಯಕರ್ಮಗಳೆರಡು,—ಸತ್ವಾದಿಗುಣಗಳು ಮೂರು ‖೬‖ ಮಾನಸಾದಿಕರಣಗಳು ನಾಲ್ಕು—ಪೃಥಿವ್ಯಾ

ತರಂಗಾಣಾಂ ತತ್ಸ್ಥೂಲಂಭೂತಪಂಚಕಂ | ಷಡ್ವರ್ಗೋ ಧಾತವಸ್ಸಪ್ತ ಮದಾನಾಮಷ್ಟಕಂಪುನಃ |೭|| ಋಣಾನವವಿಧಾಃಪ್ರಾಣಾದಶೇತ್ಯೇಷಾಮಪಿಕ್ರಿಯಾಃ | ನಿದ್ರಾಂತರಗತಾಂಚರ್ಯಾಂ ಶ್ರೀಮಹಾದೇವಶಂಕರ |೮|| ಭವತ್ಪ್ರಸಾದಾನ್ಕೃತ್ವೇಶಸದಾಭಾವಯಮಾಮಿತಿ | ಸಂಪ್ರಾರ್ಥ್ಯ ಬಹುಧಾದೇವಂಸಾವಧಾನೇನಚೇತಸಾ |೯|| ಉಪಭೋಗಾಯಪುರತೋವಸ್ತುಯದ್ಯದುಪಸ್ಥಿತಂ | ತತ್ತತ್ಸಮರ್ಪ್ಯದೇವಾಯವಿದಧೀತಾತ್ಮಸಾತ್ಪುನಃ ||೧೦|| ಅಸಮರ್ಪ್ಯಯದೀಶಾಯವಸ್ತುಕಿಂಚಿತ್ಕದಾಚನ | ಕಥಂಚಿನ್ನೋಪಭುಂಜೀತಶಿವಭಕ್ತಿಪರೋನರಃ |೧೧|| ಇತ್ಯಾದಿವಾಕ್ಯಾತ್ತಾಂಸ್ತಾಂಶ್ಚ ವಿಷಯಾನ್ಕಾರ್ಯಜಾಲಕಂ | ಪ್ರಾಣಲಿಂಗಾರ್ಪಿತಂಕರ್ತುಂಸಮುದ್ಯುಕ್ತೋ ವಿಶುದ್ಧಧೀಃ ||೧೨|| ಸಂಸ್ಪೃಶ್ಯಂಧಾರ್ಯಮಾಚ್ಛಾದ್ಯಂಯದ್ಯದ್ಭೋಗೋಚಿತಂಭವೇತ್ | ಸಮರ್ಪ್ಯತತ್ತದೀಶಾಯತತಸ್ಸದ್ಭಕ್ತಿಭಾವಿತಃ |೧೩|| ಬಸವೇಶಪದಧ್ಯಾನಸುಧಾಪೂರೇಽತಿನಿರ್ಭರೇ | ದೇಹಕುಂಭಾದ್ವಿನಿರ್ಗತ್ಯಬಹಿಃಪ್ರಸ್ರಮರೇಸತಿ |೧೪|| ಅಂತಃ

---

ದಿ ಪಂಚಭೂತಗಳು, ಕಾಮಾದಿರಿಪುಷಡ್ವರ್ಗ,— ಶುಕ್ಲಶೋಣಿತಾದಿ ಸಪ್ತಧಾತುಗಳು—ಕುಲಬಲಾದಿ ಅಷ್ಟಮದಗಳು—ಪಿತೃಋಣಾದಿ ನವಋಣಗಳು—ಪ್ರಾಣಾಪಾನಾದಿ ದಶಪ್ರಾಣಗಳು,— ಇವೆಲ್ಲವುಗಳ ಮುಖದಿಂದ ನಡೆಯತಕ್ಕ ಕಾರ್ಯಗಳನ್ನೂ, ನಿದ್ರಾವಸ್ಥೆಯಲ್ಲಿ ಆಚರಿಸಲ್ಪಡುವ ಕ್ರಿಯೆಯನ್ನೂ ಸಹ ಎಲೈ ಮಹಾದೇವನೆ! ನಿನ್ನ ಪ್ರಸಾದವನ್ನಾಗಿ ಮಾಡಿ, ನನ್ನನ್ನು ಅನುಗ್ರಹಿಸು, ಎಂದು ಏಕಾಗ್ರಚಿತ್ತದಿಂದ ಬಹು ವಿಧವಾಗಿ ಪರಶಿವನನ್ನು ಪ್ರಾರ್ಥಿಸಿ, ||೯|| ಯಾವಯಾವ ವಸ್ತುವು ತನ್ನಲ್ಲಿದ್ದಿತೋ ಅದನ್ನೆಲ್ಲಾ ಪರಶಿವನ ಸ್ವೀಕಾರಕ್ಕಾಗಿ ಮುಂದಿಟ್ಟು, ಸಮರ್ಪಿಸಿ, ಬಳಿಕ ತತ್ಪ್ರಸಾದವನ್ನು ತಾನು ಸ್ವೀಕರಿಸಿದನು. ||೧೦|| ಶಿವಭಕ್ತಿತತ್ಪರನಾದ ಮನುಷ್ಯನು ಯಾವುದೊಂದು ಸ್ವಲ್ಪ ವಸ್ತುವನ್ನೂ ಯಾವಾಗಲೂ ಶಿವನಿಗೆ ಸಮರ್ಪಿಸದೆ ತಾನು ಸ್ವೀಕರಿಸಬಾರದು ಎಂಬುದು ಮೊದಲಾದ ಶಿವಾಗಮ ವಚನಗಳಿಂದ ಆಯಾ ಇಂದ್ರಿಯ ವಿಷಯಗಳನ್ನೂ ಸಕಲ ಕಾರ್ಯಗಳನ್ನೂ ನಿರ್ಮಲಬುದ್ಧಿಯಿಂದ ಆ ವೇಮಯ್ಯನು ಪ್ರಾಣಲಿಂಗಕ್ಕೆ ಸಮರ್ಪಿಸುವುದಕ್ಕುಜ್ಜುಗಿಸಿದವನಾಗಿ ||೧೨|| ಕೈಯಿಂದ ಮುಟ್ಟಲರ್ಹವಾದುದನ್ನೂ, ಶರೀರದ ಮೇಲೆ ಧರಿಸಿಕೊಳ್ಳಲರ್ಹವಾದುದನ್ನೂ, ಮೇಲೆ ಹೊದಿಸತಕ್ಕುದನ್ನೂ, ಹೀಗೆ ನಾನಾವಿಧದಿಂದ ಭೋಗಿಸಬೇಕಾದುವುಗಳನ್ನೆಲ್ಲಾ ಪರಶಿವನಿಗೆ ಸದ್ಭಕ್ತಿಪೂರ್ವಕವಾಗಿ ಸಮರ್ಪಿಸಿದವನಾಗಿ ||೧೩|| ಬಸವೇಶ್ವರ ಪಾದಧ್ಯಾನವೆಂಬ ಅಮೃತಪ್ರವಾಹವು ತುಂಬಿ ದೇಹವೆಂಬ ಗಡಿಗೆಯಿಂದ ಹೊರಕ್ಕೆ ಹೊರಟು ಹರಿಯುತ್ತಿರಲಾಗಿ ||೧೪|| ಬಸವನಾಮವು ದೇಹ

ಪ್ರಪೂರ್ಣಬಸವಶಬ್ದೇವಾಚ್ಯುದಿತೇಸತಿ | ಉಚ್ಚೈಸ್ತರಾಂಚಬಸವಬಸವೇ-
ತ್ಯವದತ್ತದಾ ||೧೫|| ಓಹೋಇತ್ಯಾಗತಃಕೋಪಿಬಾಲಕೋಬಸವಾಹ್ವಯಃ |
ನಿರೀಕ್ಷ್ಯಸಂಭ್ರಮಾಕ್ರಾಂತಸ್ತಂಬಾಲಂಪ್ರಣಿಪತ್ಯಸಃ ||೧೬|| ಕರುಣಾಪೂ-
ರ್ಣಜಲಧಿರ್ಬಸವಸ್ಸಮುಪಾಗತಃ | ವೃಷಭೇಂದ್ರಾವತಾರೋಽಯಂಬಸವ
ಸ್ಸಮುಪಸ್ಥಿತಃ ||೧೭|| ನಂದಿಕೇಶಇತಿಖ್ಯಾತಶ್ಶಿಲಾದಸ್ಯಚನಂದನಃ | ದ್ವಿತೀ-
ಯಶಂಭುನಾಮಾಂಕೋಬಸವಸ್ಸಮುಪಾಗತಃ ||೧೮|| ಮಾದಿರಾಜಾರ್ಯಮಾ-
ದಾಂಬಾವರಗರ್ಭಮಹೋತ್ಸವಃ | ಸಂಗಮೇಶೋಽರ್ಭಜನನಮಾತ್ರಾದ್ಯ-
ಸ್ಯಾಭವದ್ಗುರುಃ ||೧೯|| ಸಏವಪ್ರಾಣಲಿಂಗಂಚಯಸ್ಯಾಭೂತ್ಸಇಹಾಗತಃ |
ಬಲದೇವಾಮಾತ್ಯವರ್ಯತನಯಾಪ್ರಾಣನಾಯಕಃ ||೨೦|| ಕರುಣಾಪೂರ್ಣಜ-
ಲಧಿರ್ಬಸವಸ್ಸಮಾಗತಃ | ಭಾಷಯಾಮಾಸಯೋಭಕ್ತ್ಯಾಸ್ವಗುರುಂಸಂ-
ಗಮೇಶ್ವರಂ ||೨೧|| ಕರುಣಾಪೂರ್ಣಜಲಧಿರ್ಬಸವಸ್ಸಮಾಗತಃ | ಬಿಜ್ಜ-
ಳಪ್ರಾರ್ಥಿತಸ್ಸನ್ಯೋಭಾಂಡಾಗಾರಮಪಾಲಯತ್ ||೨೨|| ಕರುಣಾಪೂರ್ಣ

---

ದೊಳಗೆಲ್ಲಾ ತುಂಬಿ ಮಾತಿನಲ್ಲಿ ಈಚೆಗೆ ಹೊರಡಲು, ಬಲು ಗಟ್ಟಿಯಾಗಿ "ಬಸವ
ಬಸವಾ" ಎಂದು ಉದ್ಘೋಷಿಸಿದನು ||೧೫|| ಆಗ "ಬಸವ" ಎಂಬ ಹೆಸರುಳ್ಳ
ಯಾವನೋ ಒಬ್ಬ ಹುಡುಗನು "ಓಹೋ" ಎಂದು ಕೂಗುತ್ತ ಬಂದನು. ವೇ-
ಮಯ್ಯನು ಸಡಗರಗೊಂಡು ಆ ಹುಡುಗನನ್ನು ನೋಡಿ, ಅಡ್ಡಬಿದ್ದು ||೧೬|| ದಯಾ-
ರಸದಿಂದ ತುಂಬಿದ ಸಮುದ್ರನಾದ ಬಸವೇಶನು ಬಂದನು. ವೃಷಭಾವತಾರವನ್ನು
ಮಾಡಿದ ಬಸವೇಶನು ಇದೊ ಬಂದನು ||೧೭|| ಶಿಲಾದನ ಮಗನಾಗಿ ನಂದಿಕೇಶ-
ನೆಂದು ಪ್ರಸಿದ್ಧಿಗೊಂಡ ಬಸವೇಶನು ಬಂದನು. ದ್ವಿತೀಯಶಂಭುವೆಂಬ ಹೆಸರ-
ನ್ನಾಂತ ಬಸವೇಶನು ಬಂದನು ||೧೮|| ಮಾದರಸ ಮಾದಾಂಬಿಕೆಯರ ಶ್ರೇಷ್ಠ-
ವಾದ ಗರ್ಭದ ಮಹೋತ್ಸವ ಸ್ವರೂಪನಾದ ಬಸವೇಶನು ಬಂದನು. ಯಾವನ
ಅರ್ಭಜನನಕಾಲದಲ್ಲಿಯೇ ಸಂಗಮೇಶ್ವರನು ಗುರುವಾಗಿ ಬಂದಿದ್ದನೋ, ಆ ಸಂಗ-
ಮೇಶನೇ ಯಾವನಿಗೆ ಪ್ರಾಣಲಿಂಗವಾಗಿ ಪರಿಣಮಿಸಿದನೋ ಅಂಥ ಬಸವೇಶನು
ಇಲ್ಲಿಗೆ ಬಂದನು. ಬಲದೇವಮಂತ್ರಿಯ ಮಗಳ ಪ್ರಾಣಕಾಂತನೂ ದಯಾರಸ-
ಸಮುದ್ರನೂ ಆದ ಬಸವೇಶ್ವರನು ಬಂದನು ||೨೦|| ತನ್ನ ಗುರುವಾದ ಸಂಗಮೇಶ್ವ-
ರನನ್ನು ಭಕ್ತಿಯಿಂದ ಮಾತನಾಡಿಸಿದ ದಯಾಸಮುದ್ರನಾದ ಆ ಬಸವೇಶನು
ಬಂದನು ||೨೧|| ಬಿಜ್ಜಳನಿಂದ ಪ್ರಾರ್ಥಿತನಾಗಿ ಅವನ ಬೊಕ್ಕಸವನ್ನು ಸಂರಕ್ಷಿಸಿದ
ದಯಾಸಮುದ್ರನಾದ ಬಸವೇಶನು ಬಂದನು ||೨೨|| ಬೊಕ್ಕಸದಲ್ಲಿದ್ದ ಹಣವನ್ನು

ಜಲಧಿರ್ಬಸವಸ್ಸಸಮಾಗತಃ ! ವಿಟಜಂಗಮವರ್ಯೇಭ್ಯಃಕೋಶಸ್ಥಂಯೋಥ ನಂದದಾ ॥೧೩॥ ಕರುಣಾಪೂರ್ಣಜಲಧಿರ್ಬಸವಸ್ಸಸಮಾಗತಃ । ಅಯ ಚ್ಛಂತೀಂಸ್ವತಾಟಂಕಂಶಿಕ್ಷಯಿತ್ವಾಸ್ವಕಾಮಿನೀಂ ॥೧೪॥ ದಾಪಯಾಮಾಸ ಯಃಕಾಮಿಃಜಂಗಮಾಯಾತಿಭಕ್ತಿತಃ । ಕರುಣಾಪೂರ್ಣಜಲಧಿರ್ಬಸವಸ್ಸಸ ಮಾಗತಃ ॥೧೫॥ ಮುಗ್ಧಸಂಗಮಸದ್ಭಕ್ತಮಕರೋತ್ಕಾಮುಕಂಚಯಃ । ಕರುಣಾಪೂರ್ಣಜಲಧಿರ್ಬಸವಸ್ಸಸಮಾಗತಃ ॥೧೬॥ ವೃಂತಾಕಾನ್ಯತನೋ ದ್ಬಾಣಲಿಂಗಾನಿಸ್ವೇಕ್ಷಣಾಚ್ಛಯಃ । ಕರುಣಾಪೂರ್ಣಜಲಧಿರ್ಬಸವಸ್ಸಸಮಾ ಗತಃ ॥೧೭॥ ಗತೇಸಮಾಗತೇಭಕ್ತೇಯತ್ಪ್ರಾಣಾಯಯುರಾಯಯುಃ । ಕ ರುಣಾಪೂರ್ಣಜಲಧಿರ್ಬಸವಸ್ಸಸಮಾಗತಃ ॥೧೮॥ ಸಮಾಗತ್ಯಾನ್ಯರೂಪೇಣ ಯಾಚಮಾನಾಯಶಂಭವೇ । ಯೋಽಮೇಯವೈಭವೋಪೇತೋದದೌಘಾ ಲವಿಲೋಚನಂ ॥೧೯॥ ಕರುಣಾಪೂರ್ಣಜಲಧಿರ್ಬಸವಸ್ಸಸಮಾಗತಃ । ಯಾ ವನಾಲೋಚ್ಛಯಂಮುಕ್ತಾರಾಶಿಂಭಕ್ತ್ಯಾಚಕಾರಯಃ ॥೨೦॥ ಕರುಣಾಪೂ ರ್ಣಜಲಧಿರ್ಬಸವಸ್ಸಸಮಾಗತಃ । ಏಕಸ್ಯಾಂತ್ಯಜಭಕ್ತಸ್ಯಶರೀರೇಮಹಿಮಾ ನ್ವಿತಃ ॥೨೧॥ ಅದರ್ಶಯತ್ಪಯೋಧಾರಾಂಜನಾನಾಂಪಶ್ಯತಾಂಚಯಃ । ಕರು

---

ವಿಟಜಂಗಮರಿಗೆ ಕೊಟ್ಟ ದಯಾಸಮುದ್ರನಾದ ಬಸವೇಶನು ಬಂದನು ॥೧೩॥ ಕಿವಿಯೋಲೆಯನ್ನು ಕೊಡದೆಯಿದ್ದ ತನ್ನ ಹೆಂಡತಿಯನ್ನು ಶಿಕ್ಷಿಸಿ, ವಿಟಜಂಗಮನಿಗೆ ಭಕ್ತಿಯಿಂದ ಅದನ್ನು ಕೊಡಿಸಿದ ದಯಾಸಮುದ್ರನಾದ ಬಸವೇಶನು ದಯಮಾ ಡಿಸಿದನು ॥೧೪॥ ಮುಗ್ಧಸಂಗಯ್ಯನನ್ನು ವಿಟಜಂಗಮನನ್ನಾಗಿ ಮಾಡಿ ಕಳುಹಿದ ದಯಾಸಮುದ್ರನಾದ ಬಸವೇಶನು ಬಂದನು ॥೧೬॥ ನೋಡಿದಮಾತ್ರದಿಂದ ಬದ ನೆಯ ಕಾಯ್ಗಳನ್ನು ಬಾಣಲಿಂಗಗಳನ್ನಾಗಿ ಮಾಡಿದ ದಯಾಸಮುದ್ರನಾದ ಬಸವೇ ಶನು ಬಂದನು ॥೧೭॥ ಭಕ್ತನು ಹೊರಟು ಹೋಗಲು, ಅವನ ಜತೆಗೇ ಯಾವನ ಪ್ರಾಣಗಳು ಹೋಗಿ, ಆ ಭಕ್ತನು ಬರಲು ಯಾವನ ಪ್ರಾಣಗಳು ಬಂದುವೋ, ಅಂಥ ದಯಾಸಮುದ್ರನಾದ ಬಸವೇಶನು ಬಂದನು ॥೧೮॥ ವೇಷಾಂತರದಿಂದ ಬಂದು ಬೇಡಿದ ಶಂಭುವಿಗೆ ಹಣೆಗಣ್ಣನ್ನು ದಾನಮಾಡಿದ—ಅಗಣ್ಯವೈಭವದಿಂದ ಕೂಡಿದ—ದಯಾಸಮುದ್ರನಾದ ಬಸವೇಶನು ಬಂದನು ॥೧೯॥ ಭಕ್ತಿಮಹತ್ವ ದಿಂದ ಜೋಳದ ರಾಶಿಯನ್ನು ಮುತ್ತಿನ ರಾಶಿಯನ್ನಾಗಿ ಮಾಡಿದ ದಯಾಸಮುದ್ರ ನಾದ ಬಸವೇಶನು ಬಂದನು ॥೨೦॥ ಒಬ್ಬಾನೊಬ್ಬ ಪಿರಿಯಭಕ್ತನ ದೇಹದಿಂದ ಹಾಲಿನ ಧಾರೆಯನ್ನು ಕರೆದು ನೋಡುತ್ತಿದ್ದ ಜನರಿಗೆಲ್ಲಾ ತೋರಿಸಿದ—ಮಹಿಮಾ

ಣಾಪೂರ್ಣಜಲಧಿರ್ಬಸವಸ್ಸಸಮಾಗತಃ ॥೩೦॥ ಅನನ್ಯಾರ್ಹಃಪ್ರಸಾದೋಯಮಿತ್ಯಭುಂಜವಿಷಂಚಯಃ । ಕರುಣಾಪೂರ್ಣಜಲಧಿರ್ಬಸವಸ್ಸಸಮಾಗತಃ ॥೩೨॥ ತಸ್ಯಾಶ್ಚಿದ್ದೋಗ್ಧ್ರೀಪಕಾಂತಾಯಾಬಸವೇತ್ಯುಕ್ತಿಮಾತ್ರತಃ । ಅಪಾತಯಿತ್ವಾಕಲಶಮಗ್ರಹೀದ್ದೂರಗೋಪಿಯಃ ॥೩೪॥ ಕರುಣಾಪೂರ್ಣಜಲಧಿರ್ಬಸವಸ್ಸಸಮಾಗತಃ । ಯಮುದ್ರಾಕ್ಷೀತ್ಸಿದ್ಧರಾಮಶ್ಶಿವಹೃತ್ಕಮಲಸ್ಥಿತಂ ॥ ಸಮದ್ವಾಕ್ಯಂಸಮಾಕರ್ಣ್ಯಪರಿಪಾಲಯಿತುಂಚಮಾಂ । ಮುಗ್ಧಬಾಲಕರೂಪೇಣಬಸವೇಶಸ್ಸಮಾಗತಃ ॥೩೬॥ ಮತ್ಪೂರ್ವಜನ್ಮಪುಣ್ಯೇನಮತ್ಸ್ವಾಮಿಗೃಹಮಾಗತಃ । ನಂತುಂಕೀರ್ತಯಿತುಂದ್ರಷ್ಟುಮಪಶ್ಯಂಬಸವೇಶ್ವರಂ ॥೩೭॥ ಧನ್ಯಃಪುಣ್ಯೋಽಸ್ಮಿಮಾನ್ಯೋಽಸ್ಮಿಕೃತಾರ್ಥೋಽಸ್ಮಿಕ್ಷಿತಾವಿತಿ, ರೋಮಾಂಚಿತಾಂಗೋಹರ್ಷಾಶ್ರುಪೂರ್ಣೋಗದ್ಗದಭಾಷಣಃ ॥೩೮॥ ಆನಮ್ಯಚಸ್ವಯಂಕಿಂಚಿದ್ವಕ್ರೀಕೃತಸಿಜಾನನಃ । ನಿರೀಕ್ಷ್ಯಸಿಶ್ಚಲದೃಶಾ ತದ್ಬಾಲಬಸವಾನನಂ॥ ಬಸವೇತಿಸಮಾಹೂತೇವದತ್ಯೋಽಇತಿಬಾಲಕೇ । ಪುನಃಪ್ರಣಮತಿಪ್ರಾಗ್ವ

---

ನ್ವಿತನಾದ—ದಯಾಸಮುದ್ರನಾದ ಬಸವೇಶ್ವರನು ಬಂದನು ॥೩೨॥ ಈ ಇಷ್ಟಲಿಂಗಪ್ರಸಾದವು ಭಕ್ತರ ಹೊರತು ಮತ್ತಾರಿಗೂ ದೊರೆಯತಕ್ಕುದಲ್ಲವೆಂದು ಹೇಳಿ, ವಿಷವನ್ನುಂಡ ದಯಾಸಮುದ್ರನಾದ ಬಸವೇಶನು ಬಂದನು ॥೩೩॥ ತಾನು ದೂರಸ್ಥಿತನಾಗಿದ್ದರೂ ಒಬ್ಬಾಕೆಯೊಬ್ಬ ಗೊಲ್ಲಿತಿಯು "ಬಸವಾ" ಎಂದು ಕೂಗಿದ ಮಾತ್ರದಿಂದಲೇ ಕೆಳಕ್ಕೆ ಬೀಳಗೊಡಿಸದೆ ಆಕೆಯ ಮೊಸರ ಕೊಡವನ್ನು ಹಿಡಿದುಕೊಂಡ ದಯಾಸಮುದ್ರನಾದ ಬಸವೇಶನು ಬಂದನು ॥೩೪॥ ಸೊನ್ನಲಾಪುರದ ಸಿದ್ಧರಾಮೇಶನು ಯಾವನನ್ನು ಪರಶಿವನ ಹೃದಯಕಮಲದಲ್ಲಿ ಕಂಡನೋ ಅಂಥ ಬಸವೇಶನು ನನ್ನ ಮಾತನ್ನು ಕೇಳಿ, ನನ್ನನ್ನು ಕಾಪಾಡುವುದಕ್ಕಾಗಿ ಸುಂದರನಾದ ಬಾಲಕನರೂಪದಿಂದ ಬಂದನು ॥೩೬॥ ನನ್ನ ಪೂರ್ವಜನ್ಮಸುಕೃತದಿಂದ ನನ್ನ ಒಡೆಯನು ಮನೆಗೆ ಬಂದನು. ಬಸವೇಶನನ್ನು ನಮಸ್ಕರಿಸುವುದಕ್ಕಾಗಿಯೂ ಹೊಗಳುವುದಕ್ಕಾಗಿಯೂ ನೋಡುವುದಕ್ಕಾಗಿಯೂ, ನಾನು ಆತನನ್ನು ಕಂಡೆನು. ॥೩೭॥ ಭೂಮಿಯಲ್ಲಿ ನಾನು ಧನ್ಯನೂ ಪುಣ್ಯಶಾಲಿಯೂ ಸಮ್ಮಾನ್ಯನೂ ಕೃತಕೃತ್ಯನೂ ಆದೆನು. ಎಂದು ಹೇಳುತ್ತ, ದೇಹದಲ್ಲಿ ಪುಳಕಗೊಂಡು, ಸಂತೋಷದಿಂದ ಊರುತ್ತಿರುವ ನೀರಿನಿಂದ ತುಂಬಿದ ಕಣ್ಣುಗಳುಳ್ಳವನಾಗಿ, ಕಂಠದಲ್ಲಿ ನಡುಗುತ್ತಿರುವ ಸ್ವರವುಳ್ಳವನಾಗಿ ॥೩೮॥ ಬಗ್ಗಿ, ತನ್ನ ಮುಖವನ್ನು ಸ್ವಲ್ಪ ಉರುಗಿಸಿ, ಎವೆಯಿಕ್ಕದ ನೋಟದಿಂದ ಆ ಬಾಲಬಸವೇಶ್ವರನನ್ನು ನೋಡಿ ॥೩೯॥ "ಬಸವಾ" ಎಂದು ಕರೆಯಲು, ಬಾಲಕನು "ಓ" ಎಂದು ಉತ್ತರ ಕೊಡಲಾಗಿ, ಮತ್ತೆಯೂ ಪ್ರೇಮ

ದ್ಬಸವೇತ್ಯುದಿತೇಸತಿ ||೪೦|| ಓಇತ್ಯುದೀರಿತೇಭೂಯೋಲುಠತ್ಯೇತತ್ಪದಾಬ್ಜ
ಯೋಃ | ಬಸವೇತಿಪುನಶ್ಪ್ರೋಕ್ತೇತಸ್ಮಿನ್ನೋಇತಿವಾದಿನಿ ||೪೧|| ಸ್ವಲಲಾ
ಟಂತತ್ಪದಾಭ್ಯಾಂಘಟಯತ್ಯತಿಭಕ್ತಿತಃ| ಬಸವೇತಿಪುನಶ್ಪ್ರೋಕ್ತೇತಸ್ಮಿನ್ನೋ
ಇತಿವಾದಿನಿ ||೪೨|| ಸಮಾಲಿಂಗತಿತಂಬಾಲಂಪ್ರಮೋದಾಪೂರ್ಣವಿಗ್ರಹಃ |
ಬಸವಾಧೀಶ್ವರೇತ್ಯುಕ್ತೇ ತಸ್ಮಿನ್ನೋಇತಿವಾದಿನಿ ||೪೩|| ಉರಸ್ಯಾಧಾಯತಂ
ಬಾಲಂಪ್ರಹರ್ಷಾನ್ನೃತ್ಯತಿಸ್ವಯಂ | ಬಸವೇಶೇತಿವದತಿತಸ್ಮಿನ್ನೋಇತಿ
ವಾದಿನಿ ||೪೪|| ಉನ್ನಮ್ಯೋನ್ನಮ್ಯಶಿರಸಿತಂಧತ್ತೇಬಾಲಕಂದೃಢಂ | ಬಹು
ಧೈವಂಭಕ್ತಿವಶಾದ್ಬಸವೇತ್ಯುದಿತೇಸತಿ ||೪೫|| ವದತ್ಯೋಇತಿಬಾಲೇಪಿಯಾ
ತಿಹರ್ಷಮಖಂಡಿತಂ| ಮುಹುರ್ನೃತ್ಯತಿಸಂಚಾಲ್ಯತತ್ಪಾದಕ್ಷುದ್ರಘಂಟಿಕಾಃ||
ಗೃಹೀತ್ವಾತತ್ಪದೇಕ್ರೀಡಾಂಕರೋತಿಬಹುಶಃಪ್ರಿಯಾತ್ | ತಾಲಮಾರ್ಗೇಣ
ಬಸವಬಸವೇತ್ಯಾಲಪನ್ಪುನಃ ||೪೬|| ಸಂಸ್ತುವನ್ಗೀತಮುಚ್ಚೈರ್ಯಪ್ರದರ್ಶಯ

---

ಯ್ಯನು ನಮಸ್ಕರಿಸಿ, ಮೊದಲಿನಂತೆ “ ಬಸವಾ ” ಎಂದು ಕೂಗಲಾಗಿ ||೪೦|| ಮರಳಿ
ಬಾಲಕನು “ ಓ ” ಎಂದು ನುಡಿಯಲು, ಈ ಬಾಲಕನ ಪಾದಗಳಲ್ಲಿ ವೇಮಯ್ಯನು
ಹೊರಳುತ್ತ, “ ಬಸವಾ ” ಎಂದು ಮರಳಿ ಕೂಗಲಾಗಿ, ಆ ಹುಡುಗನು “ ಓ ”
ಎಂದು ಉತ್ತರ ಕೊಡಲು ||೪೧|| ವೇಮಯ್ಯನು ತನ್ನ ಹಣೆಯನ್ನು ಆ ಬಾಲಬಸ
ವೇಶನ ಪಾದಗಳಿಗೆ ಭಕ್ತಿಯಿಂದ ಸೇರಿಸಿ, ಮತ್ತೆ “ ಬಸವಾ ” ಎಂದು ಕೂಗ
ಲಾಗಿ, ಆ ಬಾಲಕನು “ ಓ ” ಎಂದು ಉತ್ತರ ಕೊಡಲು ||೪೨|| ವೇಮಯ್ಯನು
ಸಂತೋಷದಿಂದುಬ್ಬಿದ ಶರೀರವುಳ್ಳವನಾಗಿ ಆ ಹುಡುಗನನ್ನು ಆಲಿಂಗಿಸಿ, “ ಬಸ
ವೇಶ್ವರಾ ” ಎಂದು ಕೂಗಲು, ಆತನು “ ಓ ” ಎಂದು ಉತ್ತರ ಕೊಡಲಾಗಿ||೪೩||
ಆ ಹುಡುಗನನ್ನು ತನ್ನ ಎದೆಯಲ್ಲಿ ತಬ್ಬಿಕೊಂಡು, ಸಂತೋಷದಿಂದ ತಾನು ಕುಣಿ
ಯುವನು. ಮತ್ತೆ “ ಬಸವೇಶಾ ” ಎಂದು ಕೂಗಲು, ಅವನು “ ಓ ” ಎಂದು
ಹೇಳಲಾಗಿ, ಆ ಬಾಲಕನನ್ನು ಎತ್ತಿ ತಲೆಯಮೇಲೆ ಕುಳ್ಳಿರಿಸಿಕೊಳ್ಳುವನು. ಹೀಗೆ
ವೇಮಯ್ಯನು ಭಕ್ತಿವಶದಿಂದ ಅನೇಕಾವೃತ್ತಿ “ ಬಸವಾ-ಬಸವಾ ” ಎಂದು
ಕೂಗುತ್ತಿರಲಾಗಿ ||೪೫|| ಆ ಬಾಲಕನುಕೂಡ “ ಓ ” ಎಂದು ಉತ್ತರ ಕೊಡು
ತ್ತಿರಲಾಗಿ, ವೇಮಯ್ಯನು ಎಡೆಬಿಡುವಿಲ್ಲದಷ್ಟು ಆನಂದವನ್ನು ಹೊಂದಿ, ಆ ಬಾಲ
ಕನ ಕಾಲಿನಲ್ಲಿರುವ ಕಿರುಗೆಜ್ಜೆಗಳನ್ನು ಅಲ್ಲಾಡಿಸಿ, ಬಾರಿಬಾರಿಗೂ ಕುಣಿಯುವನು ||
ಪ್ರೀತಿಯಿಂದ ಆ ಬಾಲಕನ ಪಾದಗಳನ್ನು ಹಿಡಿದುಕೊಂಡು ಆಟವಾಡುವನು.
ಮತ್ತೂ ತಾಳವನ್ನು ಹಾಕಿಕೊಂಡು “ ಬಸವ ಬಸವಾ ” ಎಂದು ಉಚ್ಚರಿಸುತ್ತ ||

ತಿನರ್ತನಂ | ನೃತ್ಯನೃತ್ಯೇತಿವದತಿಬಾಲೇಹರ್ಷಾತ್ಪ್ರನೃತ್ಯತಿ ||೪೮|| ತತೋ
ಹಸತಿಬಾಲೇಽಸ್ಮಿನ್ವಲ್ಗತ್ಯತಿತರಂಮುದಾ | ವಿಸ್ಮೃತ್ಯತಾಲಂಪ್ರಕ್ರಾಂತಂವಿ
ಸ್ಮಯಾದುತ್ಪತಂಛನೈಃ ||೪೯|| ನೀತ್ವಾತಂಬಾಲಬಸವಂಸ್ವಕೀಯಭವನಂ
ಪ್ರತಿ | ದಿವ್ಯಸಿಂಹಾಸನಾಸೀನಂಕೃತ್ವಾತತ್ಪಾದಪಂಕಜೇ ||೫೦|| ಕ್ಷಾಲಯಿ
ತ್ವಾತದುದಕಂಪೀತ್ವಾಸಂಪೂಜ್ಯಭಕ್ತಿತಃ | ಮಗ್ನೋಭೂತ್ವಾಧಿಕತರಂತದ್ದ
ಯಾಮೃತವಾರಿಧೌ ||೫೧|| ಭುಜಕ್ರಿಯಾಂಕಾರಯಿತ್ವಾಪ್ರಸಾದಮುಪಯು
ಜ್ಯಚ | ತಾಂಬೂಲಗಂಧಮಾಲ್ಯಾದೀನ್ವಿತೀರ್ಯವಿನಯಾನ್ವಿತಃ ||೫೨|| ಧನ
ಧಾನ್ಯಪಶುವ್ರಾತಮುಖ್ಯಂಯದ್ಯದ್ಗೃಹಾಂತರೇ | ಸ್ವಸ್ಯಾಸ್ತಿಸಮ್ಯಕ್ತತ್ಸ
ರ್ವಮರ್ಪಯಿತ್ವಾಮುದಾತದಾ ||೫೩|| ಮದ್ಗುರೋಬಾಲಬಸವತಾತಮತ್ಪ
ರಿಪಾಲಕ | ಮತ್ಪ್ರಾಣಲಿಂಗಮನ್ನಾಥಸ್ವಾಮಿಂಸ್ತ್ವಮವಧಾರಯ ||೫೪||
ಇತ್ಯುಕ್ತ್ವಾವನಿತಾಯುಕ್ತಸ್ಸಾಷ್ಟಾಂಗಂಪ್ರಣಿಪತ್ಯಚ | ಸಾನುರಾಗಂನುತಿಂ
ಕುರ್ವನ್ನವಸದ್ಭಕ್ತಿದೀಪಿತಃ ||೫೫|| ಬಸವೇಶ್ವರಪಾದಾಬ್ಜೇಸುರಭೂಜವ

---

ಬಸವೇಶನ ನಾಮಗೀತವನ್ನು ಹೇಳಿ, ಸ್ತುತಿಸುತ್ತ, ಕುಣಿತವನ್ನು ಆ ಬಾಲಕನಿಗೆ
ತೋರಿಸಿಕೊಡುವನು. ಕುಣಿಕುಣಿಯೆಂದು ಹೇಳಿಕೊಟ್ಟರೆ, ಆತನು ಸಂತೋಷ
ದಿಂದ ಕುಣಿಯುವನು ||೪೮|| ಈ ವೇಮಯ್ಯನು ಅನುಸರಿಸಿಬಂದ ತಾಳವನ್ನು
ಸಂತೋಷದಿಂದ ಮರೆತು, ಹೆಚ್ಚಾಗಿ ಕುಪ್ಪಳಿಸಲಾಗಿ, ಬಾಲಕನುನೋಡಿ, ನಗುತ್ತಿ
ರಲು, ವೇಮಯ್ಯನು ಅದನ್ನು ಕಂಡು ಆಶ್ಚರ್ಯದಿಂದ ಹಾರಿಬಂದು, ಮೆಲ್ಲನೆ ಆ ಬಾಲ
ಬಸವನನ್ನು ಎತ್ತಿಕೊಂಡು ತನ್ನ ಮನೆಗೆ ಹೋಗಿ, ದಿವ್ಯಸಿಂಹಾಸನದಲ್ಲಿ ಕುಳ್ಳಿ
ರಿಸಿ, ಆವನ ಪಾದಕಮಲಗಳನ್ನು ತೊಳೆದು ||೫೦|| ಆ ಪಾದತೀರ್ಥವನ್ನು ಕುಡಿದು,
ಭಕ್ತಿಯಿಂದ ಪೂಜಿಸಿ, ಆತನ ಕರುಣಾಮೃತರಸ ಸಮುದ್ರದಲ್ಲಿ ಅತ್ಯಂತವಾಗಿ
ಮುಳುಗಿ ||೫೧|| ಭೋಜನವನ್ನು ಮಾಡಿಸಿ, ಆತನ ಪ್ರಸಾದವನ್ನು ಸೇವಿಸಿ, ವಿನ
ಯಸಮೇತನಾಗಿ, ತಾಂಬೂಲ ಗಂಧಪುಷ್ಪಗಳನ್ನಿತ್ತು ||೫೨|| ಮನೆಯೊಳಗೆ ತನ್ನ
ಸೊತ್ತಾಗಿ ಆವಾವುದಿದ್ದಿತೋ ಅಂಥ ಧನಧಾನ್ಯ ಪಶು ಮೊದಲಾದ ಸಾಮಗ್ರಿಯ
ನ್ನೆಲ್ಲಾ ಸಂತೋಷದಿಂದ ಆ ಬಾಲಬಸವೇಶನಿಗೆ ಸಮರ್ಪಿಸಿ ||೫೩|| ಎಲೈ ನನ್ನ
ಗುರುವಾದ ಬಾಲಬಸವೇಶನೆ! ನನ್ನ ತಂದೆಯೆ! ನನ್ನ ರಕ್ಷಕನೆ! ನನ್ನ ಪ್ರಾಣ
ಲಿಂಗವೆ! ನನ್ನೊಡೆಯನೆ! ನನ್ನ ದೊರೆಯೆ! ಅವಧರಿಸು ||೫೪|| ಎಂದು ಹೇಳಿ, ತನ್ನ
ಪತ್ನೀಸಮೇತನಾಗಿ ಸಾಷ್ಟಾಂಗವಾಗಿ ನಮಸ್ಕರಿಸಿ, ಭಕ್ತಿಯಿಂದುಜ್ವಲಿತನಾಗಿ,
ಪ್ರೀತಿಪುರಸ್ಸರವಾಗಿ ಸ್ತೋತ್ರವನ್ನು ಮಾಡುತ್ತಾ ಇದ್ದನು. ||೫೫|| ಬಸವೇ

ನಂನಕಿಂ | ಬಸವಾಧೀಶ್ವರಕರೌಕಾಮಧುಙ್ನಿವಹಾನಕಿಂ ||೫೬|| ಬಸವಾಧಿಪತಿಸ್ವಾಂತಂಚಿಂತಾಮಣಿಖನಿರ್ನಕಿಂ| ಬಸವಾಧೀಶ್ವರೋದ್ವೀಕ್ಷಾಸ್ಪರ್ಶವೇಧಿಸ್ಥಲಂನಕಿಂ ||೫೭|| ಅತೋವೇಮಯ್ಯಸದ್ಭಕ್ತಿಭಾವೇಸಮುದಿತೇಸತಿ | ತದಾಬಾಲೇಬಸವಾಧೀಶದಿವ್ಯರೂಪಸಮಾಶ್ರಯಾತ್ ||೫೮|| ಸಾಕ್ಷಾದ್ಬಸವರೂಪೇಣತಸ್ಮಿನ್ಬಾಲೇಚಕಾಸತಿ | ಸರ್ವಾಸಾಂಸಂಪದಾಂಸ್ಥಾನಮಭೂತ್ತದ್ಭವನಂಮಹತ್ ||೫೯|| ಜನನೀಜನಕಾಭ್ಯಾಂತದ್ಬಾಲಸ್ಯತದನಂತರಂ | ಧನೇತಸ್ಮಿನ್ಸಮಾನೀತೇಸರ್ವಸ್ಮಿನ್ನಿಜಮಂದಿರಂ ||೬೦|| ಬಸವಾಧೀಶ್ವರಧನಂ ಮದೀಯಮಿತಿಜಂಗಮೈಃ | ಗೃಹೀತೇಗೋಕುಲೇಕಿಂಚಿದಪಿತದ್ಗೋಕದಂಬಕಂ ||೬೧|| ನಪ್ರಾಪ್ತಂನ್ಯೂನತಾಂಪೇಟೀಷ್ವಾನೀತೇಸಕಲೇಧನೇ | ಪುನಸ್ಸಂಪೂರಿತಾಸ್ಸ್ಯಸ್ತಾಧಾನ್ಯೇಚೋಪಹೃತೇಸತಿ ||೬೨|| ಧಾನ್ಯಾಗಾರಸ್ಥಿತಂಧಾನ್ಯಂತಿಷ್ಠತ್ಯಕ್ಷಯತಾಂಗತಂ | ವಸ್ತ್ರಮುಕ್ತಾಪದ್ಮರಾಗವಜ್ರವಾಹನಸಂಹತೌ ||೬೩|| ಆನೀತಂಯದ್ಯದಖಿಲಂತತ್ತದಕ್ಷಯತಾಂಗತಂ | ಏವಂಚೇಟ

---

ಶ್ವರನ ಪಾದಕಮಲಗಳು ಕಲ್ಪವೃಕ್ಷದ ತೋಟವಲ್ಲವೆ? ಬಸವೇಶ್ವರನ ಕೈಗಳು ಕಾಮಧೇನುವಿನ ಸಮೂಹಗಳಲ್ಲವೆ? ॥೫೬॥ ಬಸವೇಶ್ವರನ ಮನಸ್ಸು ಚಿಂತಾಮಣಿಯ ಖನಿಯಲ್ಲವೆ? ಬಸವೇಶ್ವರನ ನೋಟವು ಸ್ಪರ್ಶಶಿಲಾಸ್ಥಲವಲ್ಲವೆ? ॥೫೭॥ ಈ ಕಾರಣದಿಂದಲೇ ವೇಮಯ್ಯನ ಸದ್ಭಕ್ತಿಭಾವವು ಪ್ರಸರಿಸಲಾಗಿ, ಆಗ ಆ ಬಾಲಕನಲ್ಲಿ ಬಸವೇಶ್ವರನ ದಿವ್ಯರೂಪವು ನೆಲಸಿತು. ಆಗ ಪ್ರತ್ಯಕ್ಷಬಸವರೂಪದಿಂದ ಆ ಬಾಲಕನು ಪ್ರಕಾಶಿಸಲಾಗಿ, ಆ ವೇಮಯ್ಯನ ಮನೆಯು ಸಕಲ ಸಂಪತ್ತುಗಳಿಗೂ ಮಹಾಶ್ರಯವಾಗಿ ಪರಿಣಮಿಸಿತು ॥೫೯॥ ಬಳಿಕ ಆ ಬಾಲಕನ ತಾಯ್ತಂದೆಗಳು ಬಂದು ಆ ದ್ರವ್ಯವನ್ನೆಲ್ಲಾ ತಮ್ಮ ಮನೆಗೆ ತೆಗೆದುಕೊಂಡು ಹೋಗಲಾಗಿ ॥೬೦॥ ಜಂಗಮರುಗಳು ಬಸವೇಶ್ವರನ ಹಣವು ತಮ್ಮದೆಂದು ಹೇಳುತ್ತ, ಗೋಸಮೂಹವನ್ನು ಹಿಡಿದುಕೊಂಡು ಹೋಗುತ್ತಿದ್ದರೂ, ಆ ಮನೆಯ ಹಸುಗಳ ಗುಂಪಿನಲ್ಲಿ ಸ್ವಲ್ಪವೂ ಕಡಿಮೆಯಾಗಲಿಲ್ಲ ॥೬೧॥ ಪೆಟ್ಟಿಗೆಗಳಲ್ಲಿದ್ದ ಹಣವನ್ನೆಲ್ಲಾ ತೆಗೆದುಕೊಂಡುಹೋದರೂ ಮರಳಿ ಅವುಗಳು ಹಣದಿಂದ ತುಂಬಿಕೊಳ್ಳುವುವು. ಧಾನ್ಯವನ್ನು ತುಂಬಿಕೊಂಡುಹೋದರೂ ॥೬೨॥ ಕಣಜದಲ್ಲಿದ್ದ ಧಾನ್ಯವು ಕೊನೆಗಾಣದೆ ತುಂಬಿಯೇ ಇದ್ದಿತು. ಬಟ್ಟೆಗಳು ಮುತ್ತು ಪದ್ಮರಾಗ ವಜ್ರ ವಾಹನ—ಇವುಗಳಲ್ಲಿ ॥೬೩॥ ಇದ್ದುದನ್ನೆಲ್ಲಾ ತೆಗೆದುಕೊಂಡುಹೋದರೂ ಅವೆಲ್ಲವೂ ಅಕ್ಷಯವಾಗಿ ಹಾಗೆಯೇ ಇದ್ದುವು. ಹೀಗೆ ಅತ್ಯಾಶ್ಚರ್ಯಕರವಾದ ಚೇಟಲ

ಲವೇಮಯ್ಯಮಹಿಮಾನಂಮಹಾದ್ಭುತಂ ‖೬೪‖ ವಿಲೋಕ್ಯಸದ್ಭಕ್ತಜನಾಸ್ತತ್ರಿಂಚಕ್ರುಸ್ಸವಿಸ್ಮಯಾಃ । ಪ್ರಣಮ್ಯಪರಮಾನಂದಭರಿತಾಸ್ತದನಂತರಂ ‖೬೫‖ ನೈವಂವಿಶ್ವಾಸಿತವ್ಯಂಕಿಂವಿಶ್ವಾಸಃಕ್ರಿಯತೇಯದಿ । ವಿಶ್ವಾಸೋಬಸವೇऽಸ್ಮಾಕಮಿತಿಜಲ್ಪಂತಿಕೇಚನ ‖೬೬‖ ಸ್ಮರ್ತವ್ಯಂನಕಿಮೇವಂಹಿಸ್ಮರಣಂಯದಿವಾಕೃತಂ । ಸ್ಮರಾಮೋಬಸವಾಧೀಶಮಿತಿಜಲ್ಪಂತಿಕೇಚನ ‖೬೭‖ ನಸೇವಿತವ್ಯಮೇವಂಕಿಂಯದಿವಾಸೇವನಾಕೃತಾ । ಸೇವಾಮಹೇವೃಷಾಧೀಶಮಿತಿಶಂಸಂತಿಕೇಚನ ‖೬೮‖ ಏವಂಕಿಂನಾನುರಕ್ತವ್ಯಮನುರಾಗಃಕೃತೋಯದಿ । ಅನುರಾಗಿಣಇತ್ಯನ್ಯೇವದಂತಿಬಸವೇಶ್ವರೇ ‖೬೯‖ ರಕ್ತಾಭವಂತಿ ಸೇವಂತೇಸ್ಮರಂತಿಬಸವೇಶ್ವರಂ । ಸರ್ವೇಜನಾಶ್ಚಿತ್ರಮಿದಂನಪಶ್ಯಾಮೋऽದ್ಯವಾಪುರಾ ‖೭೦‖ ಭವನಾಂತಸ್ಥಸರ್ವಸ್ವಸಮರ್ಪಣಮಿಹಕ್ಷಿತೌ । ಪೂರ್ವವತ್ಪರಿಸಂಪೂರ್ಣಂಭವನಸ್ಯಾಪ್ಯವಸ್ಥಿತಿಂ ‖೭೧‖ ಬಾಲಕೋಬಸವಸ್ಸಾಕ್ಷಾದಿತಿಬುದ್ಧಿಮಚಂಚಲಾಂ । ಬಸವಸ್ಯಾಪಿತದ್ಬಾಲೇವಸಿತ್ವಾವರದಾನತಾಂ ‖ ಅಕ್ಷೀಣಧನಧಾನ್ಯಾದಿಸಂಪದಾಮಪ್ಯವಸ್ಥಿತಿಂ । ನಜಾನೀಮೋಹಿಚಾರಿತ್ರಂ ಕುತ್ರಾಪ್ಯೇವಂವಿಧಂವಯಂ ‖೭೩‖ ಬಸವೇತ್ಯುಕ್ತಿಸಮಯೇಬಾಲವೋಇ

---

ವೇಮಯ್ಯನ ಮಹತ್ವವನ್ನು ಭಕ್ತರುಗಳು ನೋಡಿ, ಆಶ್ಚರ್ಯಯುಕ್ತರಾಗಿ, ಹೊಗಳುವವರಾದರು. ಬಳಿಕ ಅತ್ಯಂತ ಸಂತೋಷದಿಂದ ಕೂಡಿದವರಾಗಿ ನಮಸ್ಕರಿಸಿ‖ "ಕೆಲವರು ನಮಗೆ ಬಸವೇಶ್ವರನಲ್ಲಿ ನಂಬುಗೆಯಿಡೆಯೆಂದು ಹೇಳುತ್ತಾರೆ; ನಂಬುಗೆಯಿಡಬೇಕಾದರೆ ಹೀಗಲ್ಲವೆ ಇಡಬೇಕು ?‖೬೬‖ ಕೆಲವರು ಬಸವೇಶನನ್ನು ತಾವು ನೆನೆಯುತ್ತೇವೆಂದು ಹೇಳಿಕೊಳ್ಳುತ್ತಾರೆ; ನೆನೆಯಬೇಕಾದರೆ ಹೀಗಲ್ಲವೆ ನೆನೆಯಬೇಕು ? ‖೬೭‖ ಕೆಲರು ತಾವು ಬಸವೇಶನನ್ನು ಸೇವಿಸುತ್ತೇವೆಂದು ಹೊಗಳಿಕೊಳ್ಳುತ್ತಾರೆ; ಸೇವನೆಯನ್ನು ಮಾಡಬೇಕಾದರೆ ಹೀಗಲ್ಲವೆ ಮಾಡಬೇಕು? ‖೬೮‖ ಮತ್ತೆ ಕೆಲರು ತಾವು ಬಸವೇಶನಲ್ಲಿ ಪ್ರೀತಿಯುಳ್ಳವರೆಂದು ಹೇಳಿಕೊಳ್ಳುತ್ತಾರೆ; ಪ್ರೀತಿಯನ್ನಿಟ್ಟರೆ ಹೀಗಲ್ಲವೆ ಇಡಬೇಕು? ‖೬೯‖ ಎಲ್ಲರೂ ಬಸವೇಶ್ವರನನ್ನು ಪ್ರೀತಿಸುತ್ತಾರೆ, ಸೇವಿಸುತ್ತಾರೆ, ನೆನೆಯುತ್ತಾರೆ, ಆದರೆ ಇಂಥ ಆಶ್ಚರ್ಯವನ್ನು ಪೂರ್ವದಲ್ಲಾಗಲೀ ಈಗಲಾಗಲೀ ನಾವು ನೋಡಲಿಲ್ಲ ‖೭೦‖ ಈ ಭೂಮಿಯಲ್ಲಿ, ಮನೆಯಲ್ಲಿದ್ದುದನ್ನೆಲ್ಲಾ ಸಮರ್ಪಿಸುವುದನ್ನೂ, ಬಳಿಕ ಪೂರ್ವದಲ್ಲಿದ್ದಂತೆಯೇ ಮನೆಯು ಸಕಲವಸ್ತು ಪರಿಪೂರ್ಣವಾಗುವುದನ್ನೂ ‖೭೧‖ ಒಬ್ಬಾನೊಬ್ಬ ಹುಡುಗನು ಪ್ರತ್ಯಕ್ಷಬಸವೇಶನಾಗಿರುವನೆಂದು ಸ್ಥಿರಬುದ್ಧಿಗೊಳ್ಳುವುದನ್ನೂ, ಅಂಥ ಹುಡುಗನಲ್ಲೇ ಬಸವೇಶ್ವರನು ನೆಲಸಿ ವರದಾನಮಾಡುವುದನ್ನೂ, ‖೭೨‖ ಧನಧಾನ್ಯಾದಿಸಂಪತ್ತು

ತಿಪಾದಿನಂ | ಬಸವೇಶಂಭಾವಯಂತೀಸದ್ಭಕ್ತಿಃಪರಮೋನ್ನತಾ ||೭೪|| ಕಸ್ಯ ವಾವಿದ್ಯತೇಽನ್ಯಸ್ಯತ್ವತ್ತಸ್ಸದ್ಭಕ್ತಕುಂಜರ | ಶೃತ್ಯರ್ಥಪರಿಪಾಕಾಧಿಷ್ಠಿತಶ್ಲೋಕಮಹೋನ್ನತ ||೭೫|| ಪರವಿಶ್ವಾಸಸದ್ಭಕ್ತಿವಿಲಾಸಮಹಿಮೋಜ್ಜ್ವಲ | ಅಶೇಷದೋಷಸಂಹಾರಿನ್ಧೂತಸಂಸಾರಭಾಸುರ ||೭೬|| ವರಪ್ರಸಾದಸರ್ವಾಂಗಗುಣೋತ್ತುಂಗನಿರಂಕುಶ | ಚಿದಾಯತ್ತಸ್ವಚಿತ್ತೇಶತತ್ತ್ವವೇದಿನ್ಗಣೋತ್ತಮ ||೭೭|| ಅಸದೃಕ್ಷವದಾನ್ಯೋರರೀಕೃತಧನ್ಯಮಹೋತ್ಸವ | ಬಸವೇಶ್ವರನಾಮೋಕ್ತಿಪ್ರಧಾನಕರುಣಾನಿಧೇ ||೭೮|| ಅವಿಕಲ್ಪಸ್ವಸಂಕಲ್ಪಗುಣಾಕಲ್ಪಸುಜಲ್ಪನ | ಶಿವಭಕ್ತಗಣಸ್ತೋಮಧಾಮಚೇಟಲವೇಮ ಭೋಃ ||೭೯|| ಇತಿಸ್ತೌತಿಹರ್ಷೇಣಭಕ್ತ್ಯಶ್ಚೇಟಲವೇಮಯಃ | ಸಂಸ್ತುವನ್ಬಾಲಬಸವಮವಸತ್ಸತತಂಮುದಾ ||೮೦|| ಇತಿ ಷೋಡಶೋಽಧ್ಯಾಯಃ.

---

ಗಳೊಂದೂ ಕ್ಷೀಣವಾಗದೆ ಇರುತ್ತಿರುವುದನ್ನೂ—ಈ ವಿಧವಾದ ಚರಿತ್ರವನ್ನು ನಾವು ಎಲ್ಲೂ ಕೇಳಿ ತಿಳಿದಿಲ್ಲ ||೭೩|| ನಿಗಮಾರ್ಥಜ್ಞಾನಪರಿಪಾಕದಲ್ಲಿ ನಿಷ್ಠೆಯುಳ್ಳವನೆಂಬ ಕೀರ್ತಿಯಿಂದ ಉತ್ಕೃಷ್ಟನಾದವನೆ ||೭೫|| ಉತ್ಕೃಷ್ಟವಾದ ನಂಬುಗೆ ಭಕ್ತಿ---ಇವುಗಳ ಲೀಲಾಮಹತ್ತ್ವದಿಂದ ಪ್ರಕಾಶಿಸುವವನೆ, ಸಕಲ ದೋಷಗಳನ್ನೂ ನಾಶಮಾಡಿದವನೆ, ಸಂಸಾರವನ್ನು ದೂರೀಕರಿಸಿ ರಂಜಿಸುತ್ತಿರುವವನೆ || ಶಿವಪ್ರಸಾದಮಯವಾದ ಸಕಲಾವಯವಗಳುಳ್ಳವನೆ, ಸದ್ಗುಣಸಮೇತತ್ವದಿಂದುತ್ಕೃಷ್ಟನಾಗಿರುವವನೆ, ತಡೆಯಿಲ್ಲದವನೆ, ಶಿವಜ್ಞಾನದಲ್ಲಿ ಮೈಮರೆದ ಮನೋವ್ಯಾಪಾರವುಳ್ಳ ಸ್ವಾಮಿಯೆ, ಶಿವತತ್ತ್ವವನ್ನರಿತವನೆ, ಗಣಶ್ರೇಷ್ಠನೆ ||೭೭|| ಅಸದೃಶನಾದ ದಾನಿಯೆ, ಶ್ರೇಷ್ಠವಾದ ಮಹಾವೈಭವವನ್ನಂಗೀಕರಿಸಿದವನೆ, ಬಸವೇಶ್ವನ ಹೆಸರನ್ನುಚ್ಚರಿಸುವುದೇ ಮುಖ್ಯವ್ಯಾಪಾರವಾಗುಳ್ಳವನೆ, ದಯಾರಸನಿಕ್ಷೇಪನೆ || ಚ್ಯುತಿಯಿಲ್ಲದ ತನ್ನ ಮನಸ್ಸಂಕಲ್ಪವುಳ್ಳವನೆ, ಸದ್ಗುಣಭೂಷಣನೆ, ಉತ್ತಮವಾದ ಮಾತುಳ್ಳವನೆ, ಶಿವಭಕ್ತಸಮೂಹಕ್ಕೆ ಆಶ್ರಯಭೂತನಾದ ಭಕ್ತಶ್ರೇಷ್ಠನಾದ ಎಲೈ ಮೊರನವೇಮಯ್ಯನೆ, "ಬಸವಾ" ಎಂದು ಕೂಗಿದಾಗ "ಓ" ಎಂದು ಪ್ರತ್ಯುತ್ತರವನ್ನು ಕೊಟ್ಟ ಬಾಲಕನನ್ನೇ ಬಸವೇಶ್ವರನೆಂದು ಭಾವಿಸತಕ್ಕ ಅತ್ಯುತ್ಕೃಷ್ಟವಾದ ಸದ್ಭಕ್ತಿಯು ನಿನ್ನ ಹೊರತು ಮತ್ತಾರಿಗಿದೆ?" ||೭೯|| ಎಂಬುದಾಗಿ ಶಿವಭಕ್ತರುಗಳಿಂದ ಅತ್ಯಂತ ಸಂತೋಷಪೂರ್ವಕವಾಗಿ ಹೊಗಳಲ್ಪಟ್ಟ ಮೊರನವೇಮಯ್ಯನು ಆಬಾಲಬಸವನನ್ನು ಸ್ತೋತ್ರಮಾಡುತ್ತ, ಯಾವಾಗಲೂ ಸಂತೋಷಭರಿತನಾಗಿರುತಿದ್ದನು ||೮೦|| ಎಂಬಲ್ಲಿಗೆ ೧೬ನೆಯ ಅಧ್ಯಾಯವು ಮುಗಿದುದು.

# ಸಪ್ತದಶೋಽಧ್ಯಾಯಃ.

ಅಥಭಕ್ತೋ ಮಹಾನ್ನಂದಿಕೋಲಬಲ್ಲಯ್ಯನಾಮಕಃ । ಸ್ವಪುತ್ರಮರ್ಭಜನನಮಾತ್ರಾಲ್ಲಿಂಗಾಗಸಂಗಿನಂ ॥೧॥ ಕ್ವಾಪ್ಯಾಖ್ಯಾತಮಹಾಭಕ್ತಗಣಸಂಘಾಯಸಂಮುದಾತ್ । ಸಮರ್ಪ್ಯಭೂತಿತಾಂಬೂಲಂ ತನಯಸ್ಯಾತ್ಮನಸ್ತದಾ ॥೨॥ ಸದ್ವೀರಷೋಡಶಗಣನಾಮಚಕ್ರೇ ಸಮಾಹಿತಃ । ಭಕ್ತಹಸ್ತಾರ್ಪಿತಾಂಭೂತಿಂ ನಿಧಾಯತನಯಾಲಕೇ ॥೩॥ ಕಾಂತಾಯುತಸ್ಸಮಾದಾಯ ವೀರಷೋಡಶನಾಮಕಂ । ಸಭ್ಯಪಮಾಮಾಸಸದ್ಭಕ್ತ್ಯಾ ವೇಮಯ್ಯೋರುತಲೇಶಿಶುಂ ॥೪॥ ಸೋಽಪಿಸ್ಮೃತ್ವಾಚಬಸವಂಘಾಲೇತಸ್ಯಶಿಶೋರ್ಮುದಾ ಭೂತಿಮಾಲಿಪ್ಯತದಾಬ್ಲೇಕ್ಷ್ಯತವತ್ಯಥಸತ್ಯವಾಕ್ ॥೫॥ ತ್ವಂಶತಾಯುರ್ಭವೇತ್ಯಾಶೀರ್ವಾದಂಚಕ್ರೇ ವಿಚಕ್ಷಣಃ । ತತಃಕತಿಪಯೇಕಾಲೇಗತೇಽಕಸ್ಮಾತ್ಸಬಾಲಕಃ ॥೬॥ ಮೃತೋಭವದ್ದೈವವಶಾದ್ವೇಮಯ್ಯೋಽಪಿಸಮಾಗತಃ । ತಂವೀಕ್ಷ್ಯದಂಪತೀಸ್ಮೇರಮುಃಖೌಮ್ಲತಶಿಶುಂತದಾ ॥೭॥ ಗೂಢಮಾಚ್ಛಾದ್ಯಸದ್ಭ

---

## ೧೭ನೆಯ ಅಧ್ಯಾಯವು.

(ಮೊರನವೇಮಯ್ಯನು ನಂದಿಕೋಲಬಲ್ಲಯ್ಯಪುತ್ರನಿಗೆ ಪ್ರಾಣದಾನಮಾಡಿದ ಕಥೆ)

ಮತ್ತೂ ನಂದಿಕೋಲಬಲ್ಲಯ್ಯನೆಂಬ ಮಹಾಭಕ್ತನೊಬ್ಬನಿದ್ದನು. ಅವನು ತನ್ನ ಮಗನಿಗೆ ಗರ್ಭದಿಂದಧೋದಯವಾದಾಗ್ಗೇ ಲಿಂಗಧಾರಣವನ್ನು ಮಾಡಿ ॥೧॥ ಪ್ರಸಿದ್ಧರಾದ ಶಿವಭಕ್ತರ ಸಮೂಹಕ್ಕೆ ಸಂತೋಷದಿಂದ ವಿಭೂತಿವೀಳಯವನ್ನಿತ್ತು ॥೨॥ ಕುತೂಹಲಗೊಂಡವನಾಗಿ, ತನ್ನ ಮಗನಿಗೆ ಷೋಡಶವೀರಗಣರ ಹೆಸರನ್ನು ಕರೆದನು. ಬಳಿಕ ಭಕ್ತರು ಕೊಟ್ಟ ವಿಭೂತಿಯನ್ನು ಮಗನ ಹಣೆಗೆ ಧರಿಸಿ ॥೩॥ ಪತ್ನೀಸಮೇತನಾಗಿ, ಆ ತನ್ನ ಷೋಡಶಗಣರ ಹೆಸರಿನ ಶಿಶುವನ್ನು ತೆಗೆದುಕೊಂಡು ಬಂದು ಭಕ್ತಿಯಿಂದ ಮೊರನವೇಮಯ್ಯನ ತೊಡೆಯಮೇಲೆ ಇರಿಸಿದನು ॥೪॥ ಆ ವೇಮಯ್ಯನಾದರೊ ಬಸವೇಶ್ವರನನ್ನು ನೆನೆದು, ಸಂತೋಷದಿಂದ ಆ ಮಗುವಿನ ಹಣೆಯಲ್ಲಿ ವಿಭೂತಿಯನ್ನು ಧರಿಸಿ, ಬಳಿಕ ಮಗುವು ಸೀನಲಾಗಿ, "ನೀನು ಶತಾಯು (ನೂರುವರ್ಷದಾಯುಸ್ಸುಳ್ಳವನು) ವಾಗು" ಎಂದು, ಸತ್ಯವಚನನೂ ಕೋವಿದನೂ ಆದ ವೇಮಯ್ಯನು ಆಶೀರ್ವಾದವನ್ನು ಮಾಡಿದನು. ಬಳಿಕ

ಕೃತ್ವಾ ತಂವೇಮಾರ್ಯಂಪ್ರಣಮ್ಯಚ । ಉಚಿತಾರ್ಘ್ಯಾರ್ಚನಂಕರ್ತುಂನಿನ್ಯತುಸ್ಸ್ವಗೃಹಾಂತರಂ ॥೮॥ ಮಹಾತ್ಮಾಸೋಽಪಿವೇಮಯ್ಯಃಪೂರ್ಣವಾಚ್ಛಾದಿತಂಶಿಶುಂ । ಸಂವೀಕ್ಷ್ಯಸಂಶಯಾವಿಷ್ಟೋ ಜಗಾದಪಿತರೌತದಾ ॥೯॥ ವಿಚಿತ್ರಮೇಷಪುತ್ರೋವಾಂಸ್ಪಂದತೇನಹಿಕಿಂಚನ । ನಚವರ್ತಯತ್ಯಂಗುಲೀಸ್ಸ್ವಸ್ತ್ಥಾವಕ್ತ್ರಾವೃತಾಂಬರಂ॥೧೦॥ ನವಿಕ್ಷಿಪತಿಕಿಂವೈತತ್ಕ್ಷುಧಾರ್ತೋಽನರುದತ್ಯಪಿ । ತಥಾಸ್ತನ್ಯಂನಾರ್ಥಯತೇಕೋಽಸ್ಯವಾಸಂಸ್ಥಿತಿಕ್ರಮಃ ॥೧೧॥ ನಿದ್ರಾವಾದೀರ್ಘನಿದ್ರಾವೇತ್ಯುಕ್ತ್ವಾಕೃಷ್ಯಾಚ್ಛಾದಿತಾಂಬರಂ । ದೃಷ್ಟ್ವಾವಿಹಸ್ಯಭೋಲಿಂಗಮಯಾಶೀರುದಿತಾಪುರಾ ॥೧೨॥ ತ್ವಂಶತಾಯುರ್ಭವೇತ್ಯಸ್ಯನಿಗ್ರಹಾನುಗ್ರಹಾನ್ವಿತ । ತದೇವಮವಿಚಾರ್ಯೈನಂಪ್ರಹರ್ತುಮುಚಿತಂಕಿಮು ॥ ಇತ್ಯುಕ್ತ್ವಾಬಸವಾಧೀಶಂಸಂಸ್ಮೃತ್ಯಭಸಿತಂತತಃ । ವಿಕೀರ್ಯತತ್ಫಾಲದೇಶೇಸಂಗೃಹ್ಯಜನನೀಕರೇ ॥೧೩॥ ದದೌಶಿಶುಂನಿಜಸ್ತನ್ಯಂದೇಹಿತನ್ವೀತಿಹರ್ಷತಃ ।

---

ಕೆಲವುಕಾಲ ಕಳೆಯಲಾಗಿ, ಆಕಸ್ಮಾತ್ತಾಗಿ ವಿಧಿವಶದಿಂದ ಆ ಬಾಲಕನು ಮೃತನಾದನು. ವೇಮಯ್ಯನೂ ಅಲ್ಲಿಗೆ ಬಂದನು. ಗಂಡಹೆಂಡಿರು ಆ ವೇಮಯ್ಯನನ್ನು ನೋಡಿ, ಮುಗುಳ್ನಗೆಗೂಡಿದ ಮುಖವುಳ್ಳವರಾಗಿ, ಸತ್ತ ಶಿಶುವನ್ನು ಗುಟ್ಟಾಗಿ ಹೊದ್ದಿಸಿ, ಭಕ್ತಿಯಿಂದ ಆ ವೇಮಯ್ಯನಿಗೆ ನಮಸ್ಕರಿಸಿ, ಉಚಿತವಾದ ಅತಿಥಿಪೂಜೆಯನ್ನು ಮಾಡುವುದಕ್ಕಾಗಿ ತಮ್ಮ ಮನೆಯೊಳಕ್ಕೆ ಕರೆದುಕೊಂಡು ಹೋದರು ॥ ಮಹಾತ್ಮನಾದ ಆ ವೇಮಯ್ಯನಾದರೊ ತುಂಬಾ ಹೊದ್ದಿಸಿರುವ ಮಗುವನ್ನು ನೋಡಿ ಸಂಶಯಗೊಂಡವನಾಗಿ, ತಾಯ್ತಂದೆಗಳನ್ನು ಕುರಿತು ॥೯॥ ಆಶ್ಚರ್ಯ! ನಿಮ್ಮ ಈ ಮಗನು ಸ್ವಲ್ಪವೂ ಕದಲುವುದಿಲ್ಲ. ತನ್ನ ಬೆರಲುಗಳನ್ನೂ ಚೀಪುವುದಿಲ್ಲ. ಮತ್ತೂ ಮುಖದಮೇಲೆ ಹೊದಿಸಿರುವ ಬಟ್ಟೆಯನ್ನೂ ಕೊಡಹುವುದಿಲ್ಲ. ಏನಾದರೂ ಹಸಿವುಗೊಂಡಿರುವನೋ? ಅಳುವುದೂ ಇಲ್ಲ. ಮತ್ತೂ ಮೊಲೆಹಾಲನ್ನೂ ಬೇಡುವುದಿಲ್ಲ. ಈ ಇರುವಿಕೆಯ ರೀತಿಯೇನು? ॥೧೧॥ ಇದೇನು ನಿದ್ರೆಯೊ? ಅಥವಾ ಮರಣವೊ? ಎಂದು ಹೇಳಿ, ಹೊದಿಸಿರುವ ಬಟ್ಟೆಯನ್ನು ಸೆಳೆದು, ನೋಡಿ, ನಕ್ಕು, ಎಲೈ ಪರಶಿವನೆ! ಹಿಂದೆ ನಾನು ಈ ಶಿಶುವಿಗೆ "ಶತಾಯುವಾಗು" ಎಂದು ಆಶೀರ್ವದಿಸಿರುವೆನು; ನಿಗ್ರಹಾನುಗ್ರಹ ಸಮರ್ಥನಾದ ಎಲೈ ಸ್ವಾಮಿಯೆ, ನೀನು ಆ ನನ್ನ ನುಡಿಯನ್ನು ವಿಚಾರಮಾಡದೇನೆಯೇ ಹೀಗೆ ಈ ಮಗುವಿನ ಪ್ರಾಣವನ್ನು ಅಪಹರಿಸಿಕೊಂಡು ಹೋಗುವುದು ಯೋಗ್ಯವೆ? ॥೧೩॥ ಎಂದು ಹೇಳಿ, ಬಸವೇಶ್ವರನನ್ನು ಸ್ಮರಿಸಿ, ಬಳಿಕ ಆ ಮಗುವಿನ ಹಣೆಯಲ್ಲಿ ಭಸ್ಮವನ್ನು ತಳಿದು, ಮಗುವನ್ನು ಎತ್ತಿಕೊಂಡು, ಅಮ್ಮಾ ನಿನ್ನ ಮೊಲೆಹಾಲನ್ನು ಕೊಡು ಎಂದು ಹೇಳಿ, ಸಂತೋಷದಿಂದ

ಪ್ರಾಗೇವಜೀವಿತೋಭೂತ್ವಾಸರುದಂಜಸನೀಸ್ತನಂ ॥೧೫॥ ಪಪೌಸಂಗೃಹ್ಯ ಹಸ್ತೇನಪ್ರಿಯಯೋರ್ವಿಸ್ಮಯಂಜನಾಃ । ಏವಂಚೇಟಲವೇಮಾರ್ಯಶ್ಶಿವಭಕ್ತಿ ಮಹೋನ್ನತಃ ॥೧೬॥ ಭವದಾವಾನಲೋನಂದಿಕೋಲಬಲ್ಲಯ್ಯಪುತ್ರಕಂ । ಸಪ್ರಾಣಮಕರೋತ್ಪೂರ್ವಮದ್ಯಶ್ರೀಪಂಡಿತೇಶ್ವರಃ ॥೧೭॥ ಮಹಾದೇವ ಯ್ಯಮಕರೋತ್ಸಪಾದಂಲೋಕವಿಶ್ರುತಂ । ಇತಿಸದ್ಭಕ್ತಸಂದೋಹೇಭೂ ಯೋಪಿವಿವಿಧಾಸ್ತದಾ ॥೧೮॥ ಪುರಾತನಕಥಾಸ್ಸಮ್ಯಕ್ಪರಿಗೀಯತಿ ಸಸ್ಮ ಯಂ । ಉತ್ಸಾಹವತ್ಸುವಿದ್ವತ್ಸುಸದ್ಭಕ್ತಿಪರಿಪೂರಿತಃ ॥೧೯॥ ಯಥಾಪೂರ್ವಂ ಪ್ರಮುದಿತೋಮಲ್ಲಿಕಾರ್ಜುನಪಂಡಿತಃ । ವೆಲ್ಲಕೊಂಡಮಹಾದೇವಸಹಿ ತೋಸ್ಯವಸತ್ಸುಖಂ ॥೨೦॥

ಇತ್ಯಸಂಖ್ಯಾತ ಮಹಾಮಾಹೇಶ್ವರದಿವ್ಯಶ್ರೀಪಾದಪದ್ಮನಿರಂತರಭಾವನಾ
ಪರಿರಂಜಿತಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲ
ಭಸ್ಮೀಕೃತಾಖಿಳಭವಬೀಜಸ್ಯ ಶ್ರೀ ವೀರಶೈವಮತಾಚಾರ್ಯ
ಗುರುರಾಜಸ್ಯ ಕೃತೌ ಶ್ರೀ ಮಲ್ಲೋಕಾರಾಧ್ಯಮಲ್ಲಿಕಾ
ರ್ಜುನ ಪಂಡಿತಾರಾಧ್ಯಚರಿತ್ರೇ ಪುರಾತನಪ್ರಕ
ರಣೇ ವೊರನವೇಮಯ್ಯೋಪಾಖ್ಯಾನೇ ತ
ದ್ವೇಮಯ್ಯೇನ ನಂದಿಕೋಲಬಲ್ಲಯ್ಯ
ಪುತ್ರಾಯ ಪ್ರಾಣಪ್ರದಾನಕಥನಂ
ನಾಮ ಸಪ್ತದಶೋಽಧ್ಯಾಯಃ.

---

ಪೂರ್ವಂ ಪಾಲ್ಕುರ್ಕಿಸೋಮಾಭಿಧವರಗುರುಣಾ ನಿರ್ಮಿತೇಭಾಷ ಯಾಂಧ್ರ್ಯಾ ಪಶ್ಚಾಚ್ಛ್ರೀವೀರಶೈವಾಶ್ರಮ ಗುರುಗುರುರಾಡ್ದೇಶಿಕೇಂದ್ರೇಣ

---

ತಾಯಿಯಕೈಗೆ ಮಗುವನ್ನು ಕೊಟ್ಟನು. ಅಷ್ಟರೊಳಗಾಗಿ ಮಗುವು ಚೇತನಗೊಂಡು ಅಳುತ್ತಾ ತಾಯಿಯ ಮೊಲೆಯನ್ನು ಕೈಯಿಂದ ಹಿಡಿದುಕೊಂಡು ಕುಡಿದಿತು॥೧೫॥ ನೋಡಿದ ಜನರೆಲ್ಲರೂ ಆಶ್ಚರ್ಯವನ್ನೈದಿದರು. ಶಿವಭಕ್ತಿಯಿಂದ ವೆಗ್ಗಳನೂ ॥೧೬॥ ಜನನಮರಣ ವಿನಾಶಕನೂ ಆದ ವೇಮಯ್ಯನು ಪೂರ್ವದಲ್ಲಿ ಹೀಗೆ ನಂದಿಕೋಲ ಬಲ್ಲಯ್ಯನ ಸತ್ತಿದ್ದ ಮಗನನ್ನು ಪ್ರಾಣಯುಕ್ತನನ್ನಾಗಿ ಮಾಡಿದ್ದನು. ಈಗಲಾ ದರೊ ಶ್ರೀಮಲ್ಲಿಕಾರ್ಜುನ ಪಂಡಿತೇಶ್ವರನು ॥೧೭॥ ವೆಲ್ಲಕೊಂಡದ ಮಹಾದೇವ

ವಾಣ್ಯಾ || ಗೈರ್ವಾಣ್ಯಾ ಸಂಪ್ರಣೀತೇ ನಿಖಿಲಜನಗುರೋಃಪಂಡಿತೇಂದ್ರಸ್ಯಭ
ವ್ಯೇಚಾರಿತ್ರೇಽಸ್ಮಿನ್ದ್ವಿತೀಯಂಪ್ರಕರಣಮಗಮಚ್ಛ್ರಾರುಪ ಪೌರಾತನಂಸತ್||

→ ಪುರಾತನಪ್ರಕರಣಂ ಸಂಪೂರ್ಣಂ. ←

---

ಯ್ಯನನ್ನು ಜಗತ್ತಿಗೆಲ್ಲಾ ಪ್ರಸಿದ್ಧವಾಗುವಹಾಗೆ ಕಾಲುಳ್ಳವನನ್ನಾಗಿ ಮಾಡಿದನು. ಎಂಬುದಾಗಿ ಭಕ್ತಸಮೂಹವು ಆಶ್ಚರ್ಯದಿಂದ ಕೂಡಿ ಹೀಗೆಯೇ ಮತ್ತೂ ವಿಧವಿಧ ವಾದ ||೧೮|| ಪುರಾತನಭಕ್ತರ ಕಥೆಗಳನ್ನು ಚೆನ್ನಾಗಿ ಹೇಳುತ್ತಿರಲಾಗಿ, ವಿದ್ವಾಂ ಸರುಗಳು ಉತ್ಸಾಹಗೊಳ್ಳಲಾಗಿ, ಭಕ್ತಿಪರಿಪೂರ್ಣನಾದ ||೧೯|| ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪೂರ್ವದಂತೆಯೇ ಸಂತೋಷಭರಿತನಾಗಿ ವೆಲ್ಲಕೊಂಡ ಮಹಾ ದೇವಯ್ಯನೊಡನೆ ಸುಖವಾಗಿರುತಿದ್ದನು ||೨೦||

ಎಂಬಿಲ್ಲಿಗೆ ಅಗಣಿತವೀರಮಾಹೇಶ್ವರರ ದಿವ್ಯಪಾದಕಮಲವನ್ನು ಸದಾ ಧ್ಯಾನ ಮಾಡು ವುದರಿಂದ ವಿಲಸಿತವಾದ ಹೃದಯಕಮಲವುಳ್ಳವನೂ, ಮಂಗಳಪ್ರದವಾದ ಪಶು-ಪಾಶ-ಪತಿಜ್ಞಾನವೆಂಬ ಬೆಂಕಿಯಿಂದ ಭವಬೀಜವನ್ನು ಸುಟ್ಟು ಭಸ್ಮಮಾಡಿದ ವನೂಆದ-ವೀರಶೈವ ಮತಾಚಾರ್ಯ ಗುರುರಾಜನಿಂದ ವಿರಚಿತವಾದ ಶ್ರೀ ಮಲ್ಲೋಕಾರಾಧ್ಯ ಪಂಡಿತಾರಾಧ್ಯಚರಿತ್ರಕ್ಕೆ ಎಜ್. ಆರ್. ಕರಿಬಸವ ಶಾಸ್ತ್ರಿರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ಪುರಾತನ ಪ್ರಕರಣದೊಳಗೆ ಮೊರನವೇಮಯ್ಯನ ಕಥೆಯೊ ಳಗೆ ಆತನು ನಂದಿಕೊಲಬಲ್ಲಯ್ಯನ ಮಗನಿಗೆ ಪ್ರಾಣ ದಾನಮಾಡಿದ ಚರಿತ್ರವನ್ನು ವರ್ಣಿಸುವ ೧೭ನೆಯ ಅಧ್ಯಾಯವು ಮುಗಿದುದು.

---

ಮೊದಲು ಪಾಲ್ಕುರ್ಕಿ ಸೋಮಾರಾಧ್ಯಗುರುವರನಿಂದ ತೆನುಗಿನಲ್ಲಿ ರಚಿತವಾ ಗಿದ್ದು, ಬಳಿಕ ವೀರಶೈವಸಮಯದ ಗುರುವರ್ಯನಾದ ಗುರುರಾಜಕವಿಯಿಂದ ಸಂಸ್ಕೃ ತಭಾಷೆಯಲ್ಲಿ ರಚಿಸಲ್ಪಟ್ಟ ಶ್ರೀಮಲ್ಲೋಕಾರಾಧ್ಯ ಪಂಡಿತಾರಾಧ್ಯರ ಮಂಗಳಕರ ವಾದ ಈ ಚರಿತ್ರಗ್ರಂಥದಲ್ಲಿ ೨ನೆಯ ಪುರಾತನಪ್ರಕರಣವು ಸಂಪೂರ್ಣವಾಯಿತು.

ಶ್ರೀಗುರುಮೂರ್ತಯೇನಮಃ.

# ಅಥ ವಾದಪ್ರಕರಣಂ.

## ಪ್ರಥಮೋಽಧ್ಯಾಯಃ.

(ಪಂಡಿತೇಂದ್ರಸ್ಯವೆಲ್ನಾಡಚೋಳಾಸ್ಥಾನಾಭಿಗಮನಕಥನಂ)

ಕಿಂಚದಂಡಿತವಾದೀಂದ್ರಃಪಂಡಿತಾರಾಧ್ಯದೇಶಿಕಃ ॥ ಪ್ರೀತ್ಯಾ ಸನದವ್ರೋಲಾಖ್ಯಪುರೇಽವಸದಥೈಕದಾ ॥೧॥ ಪಂಡಿತಾರಾಧ್ಯದೇವಸ್ಯ ಪಾಂಡಿತ್ಯಂಶೀಲಸಂಪದಂ ॥ ಸಾರ್ವಜ್ಞ್ಯಂಶಿವಸದ್ಭಕ್ತಿಂವಿದ್ಯಾಪ್ರಾಪ್ತಿಂ ಸುದುರ್ಲಭಾಂ ॥ ೨ ॥ ಪ್ರಭುಶಕ್ತಿಂಭಾವಶುದ್ಧಿಂಪುಣ್ಯಲಕ್ಷಣಸಂಚಯಂ ॥ ಖ್ಯಾತಬುದ್ಧಿಂವಚಸ್ಸಿದ್ಧಿಂಸಂವೀಕ್ಷ್ಯಾಸಹ್ಯಭಾವತಃ ॥೩॥ ವೆಲ್ನಾಡಚೋಳನೃಪತೇರ್ಗುರುರ್ಬಾಧ್ಯೋಽತಿಕಲ್ಮಷಃ ॥ ಕುಟಿಲೋಽಸದ್ವಾದಚಣೋಧರ್ಮೇತರನಿಜಕ್ರಿಯಃ ॥೪॥ ನಿಕೃಷ್ಟಃಕಷ್ಟಧೀರ್ವೇದವಿ

---

# ವಾದಪ್ರಕರಣವು.

## ಮೊದಲನೆಯ ಅಧ್ಯಾಯವು.

(ಶ್ರೀಮತ್ಪಂಡಿತಾರಾಧ್ಯರು ವಾದಕ್ಕಾಗಿ ವೆಲ್ನಾಡ ಚೋಳರಾಜನ ಸಭೆಗೆ ದಯಮಾಡಿಸಿದ ಕಥೆ.)

ಮತ್ತೂ ಪರವಾದಿಗಳನ್ನು ಶಿಕ್ಷಿಸಿದವರಲ್ಲಿ ಶ್ರೇಷ್ಠನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯಗುರೂತ್ತಮನು "ಸನದವ್ರೋಲ" ಎಂಬ ಪಟ್ಟಣದಲ್ಲಿ ಸಂತೋಷದಿಂದ ವಾಸಮಾಡಿಕೊಂಡಿದ್ದನು. ಒಂದಾನೊಂದು ವೇಳೆ ॥೧॥ ಪಂಡಿತಾರಾಧ್ಯಸ್ವಾಮಿಯ ಪಾಂಡಿತ್ಯವನ್ನೂ, ಸದಾಚಾರ ಸಂಪತ್ತಿಯನ್ನೂ, ಸರ್ವಜ್ಞತ್ವವನ್ನೂ, ಶಿವಭಕ್ತಿಯನ್ನೂ, ಇತರರಿಗೆ ಅಸಾಧ್ಯವಾದ ವಿದ್ಯಾವೈದುಷ್ಯವನ್ನೂ,॥೨॥ ನಿಗ್ರಹಾನುಗ್ರಹಶಕ್ತಿಯನ್ನೂ, ಮನಶ್ಶುದ್ಧಿಯನ್ನೂ, ಸುಕೃತ ಲಭ್ಯವಾದ ಸಲ್ಲಕ್ಷಣಸಮೂಹವನ್ನೂ, ಪ್ರಸಿದ್ಧವಾದ ಬುದ್ಧಿಯನ್ನೂ, ವಾಕ್ಸಿದ್ಧಿಯನ್ನೂ, ವೆಲ್ನಾಡಚೋಳನೆಂಬ ರಾಜನ ಗುರುವೂ-ಅತ್ಯಂತ ಮಲಿನನೂ ವಕ್ರಮಾರ್ಗಗಾಮಿಯೂ, ದುರ್ವಾದಮಾಡುವುದರಲ್ಲಿ ಸಮರ್ಥನೂ, ಪಾಪಾಚರಣೆಯುಳ್ಳವನೂ ॥೪॥ ನೀಚನೂ, ಕೆಟ್ಟ ಬುದ್ಧಿಯುಳ್ಳವನೂ, ವೇದ

ರುದ್ಧೋಽಶಿಷ್ಟಸಂಮತಃ ॥ ದುಷ್ಟೋದುರಾಚಾರರತಸ್ಸಮಾಹ್ವಾಯ್ಯಾ
ವದನ್ನೃಪಂ ॥೫॥ ಭೂಲೋಕಾಧಿಪತಿರ್ಲೋಕವಂದ್ಯಸ್ತ್ವಂಲೋಕ
ಪಾಲಕಃ ॥ಲೋಕಾಸ್ತ್ವಮೇವಲೋಕೇಶತ್ವದಾಜ್ಞಾವಶವರ್ತನಾತ್॥೬॥
ತಏವಗುರವೋಲೋಕಗುರವೋಧರಣೀಪತೇ ॥ ಗುರವಸ್ತವಯೇತೇಭ್ಯ
ಇತರೇಗುರವಃಕಥಂ ॥೭॥ಜಗದ್ಗುರುತ್ವಂಪಾಂಡಿತ್ಯಂಕುತೋಽನ್ಯೇಷಾಂ
ಸಮಾಗತಂ॥ಗುರುರ್ಬೌದ್ಧಮತಾಚಾರಪಟ್ಟಬದ್ಧೋಽಥವಾಸ್ವಯಂ ॥೮
ಶುದ್ಧವೈದಿಕಮಾರ್ಗೈಕಪಟ್ಟಬದ್ಧೋವದಪ್ರಭೋ ॥ ಬುದ್ಧೋಜಗತ್ಪ್ರ
ಭುರ್ಬೌದ್ಧಮತಂಚೇನ್ಮೋಕ್ಷಸಾಧನಂ ॥೯॥ ಆರಾಧ್ಯತ್ವಂಚಜಗತಿಪಂ
ಡಿತತ್ವಂಮಮೈವಹಿ ॥ ಸ್ಯಾಚ್ಚೇದ್ರುದ್ರೋಜಗತ್ಕರ್ತಾಮೋಕ್ಷದಂಶೈವದ
ರ್ಶನಂ ॥೧೦॥ ತಸ್ಯೈವಪಂಡಿತಾಖ್ಯಾತುಲೋಕಾರಾಧ್ಯತ್ವಮಪ್ಯಲಂ ॥
ತೇಷಾಮಸ್ಮಾಕಮಪ್ಯತ್ರಭಾವ್ಯಂವಾದೇನಸಂಪ್ರತಿ ॥೧೧॥ ತದಾಪಶ್ಯಸಿ
ಭೂಮೀಶಮಹಿಮಾನಂಭವದ್ಗುರೋಃ॥ ತದ್ದೇವವಾರ್ತಾಮುನ್ಮೃಜ್ಯತಂ
ಕರಿಷ್ಯೇಽಪರಾಜಿತಂ ॥೧೨॥ ಕಿಂಲಕ್ಷ್ಯಂಮೇಮಹೀಪಾಲಪಂಡಿತೋವಾ

---

ಕ್ಕೆ ವಿರುದ್ಧನೂ, ಸಜ್ಜನರಿಗೆ ಅಹಿತನೂ, ದುಷ್ಟನೂ, ದುರಾಚಾರದಲ್ಲಿ ಆಸಕ್ತನೂ ಆದ-ಬೌದ್ಧನು ನೋಡಿ, ಸೈರಿಸಲಾರದೆ, ದೊರೆಯನ್ನು ಕರೆಯಿಸಿ, ಹೀಗೆಹೇಳಿದನು॥೫॥ ಎಲೆ ಪ್ರಭುವೆ ! ಸರ್ವಜನರೂ ನಿನ್ನ ಆಜ್ಞಾನುವರ್ತಿಗಳಾಗಿರುವುದರಿಂದ ನೀನೇ ಭೂಲೋಕಕ್ಕೆ ಅಧಿಪತಿಯೂ, ಸಕಲ ಜನರಿಂದಲೂ ನಮಸ್ಕರಿಸಲ್ಪಡುವುದಕ್ಕೆ ಯೋಗ್ಯನೂ, ಲೋಕರಕ್ಷಕನೂ ಆಗಿರುತ್ತೀಯೆ. ಎಲೆ ದೊರೆಯೆ, ನಿನಗೆ ಯಾರು ಗುರುಗಳೋ ಅವರೇ ಲೋಕಕ್ಕೆಲ್ಲಾ ಗುರುಗಳಾಗಿರಬೇಕು. ಅವರ ಹೊರತು ಇತರರು ಹೇಗೆ ಗುರುಗಳಾಗುವರು ? ॥೭॥ ಇತರರಿಗೆ ಜಗದ್ಗುರುತ್ವವೂ, ಪಾಂಡಿತ್ಯವೂ ಹೇಗೆ ಸಂಭವಿಸುವುವು? ಎಲೆ ದೊರೆಯೆ, ಬೌದ್ಧಮತಾಚಾರಪಟ್ಟವನ್ನು ಕಟ್ಟಿಕೊಂಡಿರುವವನು ಲೋಕಗುರುವೊ ? ಅಥವಾ ಶುದ್ಧವೈದಿಕಾಚಾರಪಟ್ಟಬದ್ಧನು ಲೋಕಗುರುವೊ ? ಹೇಳು. ಲೋಕದಲ್ಲಿ ಬೌದ್ಧಮತವೇ ಮೋಕ್ಷಸಾಧನವಾಗಿರುವಲ್ಲಿ ಬುದ್ಧನೇ ಜಗದೀಶ್ವರನು. ಅದುಕಾರಣ, ಅಂಥ ಬೌದ್ಧಮತಾಚಾರ್ಯನಾದ ನನಗೇ ಅಲ್ಲವೆ ಲೋಕದಲ್ಲಿ ಆರಾಧ್ಯತ್ವವೂ ಪಂಡಿತತ್ವವೂ ಸಲ್ಲುವುದು ? ರುದ್ರನೇ ಜಗತ್ಕರ್ತನಾಗಿಯೂ ಶೈವಮತವು ಮೋಕ್ಷಪ್ರದವಾಗಿಯೂ ಇರುವ ಪಕ್ಷದಲ್ಲಿ ॥೧೦॥ ಆ ಶೈವನಿಗೇ ಪಂಡಿತನೆಂಬ ಹೆಸರೂ ಜಗದ್ಗುರುತ್ವವೂ ಸಹ ಸಲ್ಲಬಹುದು. ಎಲೆ ಭೂಪತಿಯೆ, ಈಗ ಅವರಿಗೂ ನಮಗೂ ವಾದವು ನಡೆಯಲಿ ॥೧೧॥ ಆಗ ನಿನ್ನ ಗುರುವಿನ ಮಹತ್ತ್ವವನ್ನು ನೀನೇ ಕಾಣುತ್ತೀಯೆ, ಅವರ ದೇವರ ಸುದ್ದಿಯನ್ನೇ ತೊಡೆದುಬಿಟ್ಟು, ಆ ಪಂಡಿತಾರಾಧ್ಯನನ್ನು ಸೋಲಿಸಿ ಬಿಡುವೆನು ॥೧೨॥ ಎಲೆ ದೊರೆಯೆ, ಆ ಪಂಡಿತನೇ ಆಗಲೀ

ಅಥವಾಪರಃ॥ ಸಸಮಾನೀಯತಾಂ ಶೀಘ್ರಂ ಇತ್ಯಾಜ್ಞಪ್ತೇ ತತಃ ಪರಂ ॥೧೩॥ ಸ್ವಕೀಯಸಮಯಾಚಾರವೃದ್ಧಾನ್ ಬೌದ್ಧಾನಘಾತ್ಮನಃ॥ ಶ್ರುತಿದ್ವಿಷಸ್ಸಾಪರಾಧಾನ್ ಕ್ಕಜನಾನ್ ಜೈನವಾದಿನಃ ॥೧೪॥ ಶ್ರೌತಕರ್ಮಪರಿಭ್ರಷ್ಟಾನಥಸನ್ಯಾಸಿನಸ್ತಥಾ ॥ ಸನ್ನೀತಿವರ್ಜಿತಾನ್ವೀತಸತ್ಯಾನದ್ವೈತವಾದಿನಃ ॥೧೫॥ ಬ್ರಹ್ಮಬೋಧಶೂನ್ಯಪರಬ್ರಹ್ಮದೂರಾಂಸ್ತಾನ್ ಬ್ರಹ್ಮವಾದಿನಃ ॥ ವಿದ್ವಿಷ್ಟಬುದ್ಧಾನ್ವಿಬುಧವಿಮುಖಾನ್ವೇದವಾದಿನಃ ॥೧೬॥ ಪಾಂಚರಾತ್ರಾನ್ಪರಿಭ್ರಾಂತಾನ್ವಾದಿನಶ್ಚಾಂತರಾಲಿಕಾನ್॥ ದುರ್ಮಾರ್ಗನಿರತಾನ್ಕಾಮಕ್ರೋಧಾದಿಪರಿಜೃಂಭಿತಾನ್ ॥೧೭॥ ಪರಮಾತ್ಮವಿನಿರ್ಮುಕ್ತಾನನ್ಯಾನೇಕಾತ್ಮವಾದಿನಃ ವೈದಿಕಾಚಾರರಹಿತಾಂಸ್ತಥೈವಾಭೇದವಾದಿನಃ ॥೧೮॥ ದೈನ್ಯಸ್ವಭಾವಾನಧಮಾನಮಾನ್ಯಾಂಶ್ಚೋನ್ಯವಾದಿನಃ॥ ಅಲ್ಪಬುದ್ಧೀನ್ವಿಕಲ್ಪಾತಿಜಲ್ಪಕಾನ್ಕಾಲವಾದಿನಃ ॥೧೯॥ ದೈವಹೀನಾನಸತ್ಕರ್ಮಕರ್ಮಠಾನ್ಕರ್ಮವಾದಿನಃ॥ ಚಾರ್ವಾಕಾನ್ಸ್ವರ್ಗನರಕಪುಣ್ಯಪಾಪಾಧ್ಯನಾಸ್ತಿಕಾನ್ ॥೨೦॥ ನಿಕೃಷ್ಟಧರ್ಮಾನ್ಸುಕೃತದೂರಾನ್ಪ್ರಕೃತಿವಾದಿನಃ ॥ ಪ್ರಚ್ಛನ್ನಬೌದ್ಧಾನುದ್ವೃಲ

---

ಮತ್ತಾವೇ ಆಗಲೀ ನನಗೆ ಲಕ್ಷ್ಯವೆ? ಬೇಗನೆ ಆ ಪಂಡಿತನನ್ನು ಕರೆಯಿಸು, ಎಂದು ಆಜ್ಞಾಪಿಸಲಾಗಿ, ಬಳಿಕ ॥೧೩॥ ತನ್ನ ಮತದವರಲ್ಲಿ ಹಳಬರಾಗಿಯೂ, ಪಾಪಾತ್ಮರಾಗಿಯೂ ಇರುವ ಬೌದ್ಧರುಗಳನ್ನೂ, ವೇದವಿದ್ವೇಷಿಗಳಾಗಿಯೂ ದೋಷಿಗಳಾಗಿಯೂ ದುರ್ಜನರಾಗಿಯೂ ಇರುವ ಜೈನಮತವಾದಿಗಳನ್ನೂ ॥೧೪॥ ವೇದೋಕ್ತಕರ್ಮಾಚರಣವಿಲ್ಲದೆ ಭ್ರಷ್ಟರಾಗಿರುವ ಸನ್ಯಾಸಿಗಳನ್ನೂ, ಉತ್ತಮ ನೀತಿದೂರರಾಗಿಯೂ ಸತ್ಯಭ್ರಷ್ಟರಾಗಿಯೂ ಇರುವ ಅದ್ವೈತಮತವಾದಿಗಳನ್ನೂ ॥೧೫॥ ನಿಜಪರಬ್ರಹ್ಮನಿಗೆ ದೂರರಾಗಿಯೂ ಚತುರ್ಮುಖ ಬ್ರಹ್ಮನ ಸೃಷ್ಟಿಸಂಬಂಧವುಳ್ಳವರಾಗಿಯೂ ಇರುವ ಬ್ರಹ್ಮವಾದಿಗಳನ್ನೂ, ಬೌದ್ಧರನ್ನು ದ್ವೇಷಿಸುವವರೂ ವಿದ್ವಾಂಸರಿಗೆ ಬೆನ್ನುತೋರಿಸದವರೂ ಆದ ವೇದವಾದಿಗಳನ್ನೂ ॥೧೬॥ ಭ್ರಾಂತರಾದ ಪಾಂಚರಾತ್ರಮತವಾದಿಗಳನ್ನೂ, ದುರ್ಮಾರ್ಗನಿರತರಾದ ಆಂತರಾಳಿಕರನ್ನೂ, ಕಾಮಕ್ರೋಧದಿಂದ ತುಂಬಿದ ಪರಮಾತ್ಮದೂರರಾದ ಅನೇಕಾತ್ಮವಾದಿಗಳನ್ನೂ, ವೈದಿಕಾಚರಣೆಯಿಲ್ಲದ ಕೇವಲ ಅಭೇದವಾದಿಗಳನ್ನೂ, ॥೧೮॥ ಹೀನಸ್ವಭಾವದವರೂ, ನಿಕೃಷ್ಟರೂ, ಅಯೋಗ್ಯರೂ ಆದ ಶೂನ್ಯಬ್ರಹ್ಮವಾದಿಗಳನ್ನೂ, ಅಲ್ಪಮತಿಗಳೂ ಸಂದಿಗ್ಧವಾಗಿ ಬಲು ಹರಟೆಹೊಡೆಯುವವರೂ ಆದ ಕಾಲಬ್ರಹ್ಮವಾದಿಗಳನ್ನೂ, ॥೧೯॥ ಅಸ್ಪೃಷ್ಟಹೀನರೂ ದುಷ್ಕರ್ಮಪರಾಯಣರೂ ಆದ ಕರ್ಮಬ್ರಹ್ಮವಾದಿಗಳನ್ನೂ, ಸ್ವರ್ಗ ನರಕ ಪುಣ್ಯಪಾಪಗಳೊಂದೂ ಇಲ್ಲವೆಂದು ವಾದಿಸುವ ಚಾರ್ವಾಕರನ್ನೂ ॥೨೦॥ ಧರ್ಮಬಾಹಿರರೂ ಪುಣ್ಯದೂರರೂ ಆದ ಪ್ರಕೃತಿವಾದಿಗಳನ್ನೂ, ಒಳಗೆ ಬೌದ್ಧಾಚರಣೆಯುಳ್ಳವರೂ, ಉಚ್ಛೃಂಖಲಪ್ರವರ್ತಕರೂ

ತ್ತಾನ್ಮಾಯಾವಾದಪರಾಯಣಾನ್ ॥೨೧॥ ಶಬ್ದಂಬ್ರಹ್ಮೇತಿವದತಸ್ತಾಂ
ಚ್ಛಬ್ದಬ್ರಹ್ಮವಾದಿನಃ ॥ ಹೇತುದೃಷ್ಟಾಂತರಹಿತವಾದಾನಧ್ಯಾತ್ಮವಾದಿ
ನಃ ॥೨೨॥ ತ್ರಿಮೂರ್ತಿವಾದಿನಃಕಾರ್ಯತ್ರಯಭೇದಬೆದುಜ್ಝಿತಾನ್ ॥ ಕ
ಸ್ಯಚಿತ್ಸಮಯಸ್ಯಾಪ್ತಸಂಮತಾನ್ಭ್ರಾಂತಚೇತಸಃ ॥೨೩॥ ದ್ವಿಮೂರ್ತಿ
ವಾದಿನಸ್ಸಭ್ಯದೂರಾನ್ದುಷ್ಕರ್ಮಸಂಯುತಾನ್ ॥ ಅಷ್ಟಮೂರ್ತೀಃಕಾ
ರ್ಯಕರ್ತ್ರೀಃಕರ್ತಾರಂಜಗತೋಸ್ಯಹಿ ॥೨೪॥ ವದತೋಯುಕ್ತಿರಹಿತಾ
ನಷ್ಟಮೂರ್ತ್ಯೈಕವಾದಿನಃ॥ವೇದಭ್ರಾಂತಾನ್ವೇದಬಾಹ್ಯಯಂತ್ರವಿದ್ಯಾ
ವಿಶಾರದಾನ್॥೨೫॥ಭ್ರಮಿತಾನ್ಯೋಗಶಾಸ್ತ್ರೇಣಸ್ಮಾರ್ತಾಂಶ್ಚರಸವಾದಿನಃ॥
ತರ್ಕಶಾಸ್ತ್ರಪುರಾಣಜ್ಞಾನ್ಧರ್ಮಶಾಸ್ತ್ರಾತಿಚಾರಿಣಃ ॥೨೬॥ ಪುರಾಣಾಗ
ಮಶಾಸ್ತ್ರಾದಿಮಂತ್ರಮಾರ್ಗವಿಗರ್ಹಿತಾನ್ ॥ ಷಟ್ತರ್ಕವೇದಿನಸ್ತ್ರೀವ್ರತಾ
ರ್ಕಿಕಾನ್ಬಹುಭಾಷಿಣಃ ॥೨೭॥ ಕೌಟಲ್ಯಶಾಸ್ತ್ರನಿರತಾನ್ಪಾಠಕಾನ್ಪರಿ
ಹಾಸಕಾನ್ ॥ ನಕ್ಷತ್ರಗಣನಾಸಕ್ತಾನ್ಸಕಲಾಗಮಿಕಾನಪಿ ॥೨೮॥ ಕ
ವೀಂದ್ರಾಂಶ್ಚಕಲಾದಕ್ಷಾನ್ಬುಧಾನಾಹೂಯಸರ್ವಶಃ ॥ ನಾಯಾತಿಕಶ್ಚಸ್ಯೈ

---

ಆದ ಮಾಯಾವಾದಿಗಳನ್ನೂ ॥೨೧॥ ಶಬ್ದವೇ ಪರಬ್ರಹ್ಮವೆಂದು ವಾದಿಸುವ ಶಬ್ದಬ್ರ
ಹ್ಮಿಗಳನ್ನೂ, ಕಾರಣದೃಷ್ಟಾಂತಗಳೊಂದೂ ಇಲ್ಲದ ವಾದವನ್ನು ಮಾಡುವ ಅಧ್ಯಾ
ತ್ಮವಾದಿಗಳನ್ನೂ ॥೨೨॥ ಸೃಷ್ಟ್ಯಾದಿಕಾರ್ಯತ್ರಯ ಭೇದಜ್ಞಾನವಿಲ್ಲದ ತ್ರಿಮೂರ್ತ್ಯೈಕ
ವಾದಿಗಳನ್ನೂ, ಆಪ್ತವಾಕ್ಯವನ್ನೊಪ್ಪದವರೂ ಭ್ರಾಂತಮನಸ್ಕರೂ ಆದ ಮತ್ತೊಂ
ದು ಮತದವರನ್ನೂ, ॥೨೩॥ ಸತ್ಪುರುಷರಿಗೆ ದೂರಸ್ಥರೂ ದುಷ್ಕರ್ಮಿಗಳೂ ಆದ ದ್ವಿ
ಮೂರ್ತ್ಯೈಕವಾದಿಗಳನ್ನೂ, ಈ ಜಗತ್ತಿಗೆ ಅಷ್ಟಮೂರ್ತಿಗಳೇ ಅನಾದಿಕರ್ತೃಗಳೆಂದು
ಅವುಗಳ ಕರ್ತೃತ್ವವನ್ನು ಹೇಳತಕ್ಕ ಯುಕ್ತಿಹೀನರಾದ ಅಷ್ಟಮೂರ್ತ್ಯೈಕವಾದಿಗಳ
ನ್ನೂ, ವೇದಾರ್ಥವನ್ನು ಸರಿಯಾಗಿ ತಿಳಿದುಕೊಳ್ಳದೆ ವೇದವಿರುದ್ಧವಾದ ಯಂತ್ರವಿದ್ಯೆ
ಗಳಲ್ಲಿ ನಿಪುಣರಾದ ವೇದಭ್ರಾಂತರನ್ನೂ ॥೨೫॥ ಯೋಗಶಾಸ್ತ್ರಭ್ರಮೆ ಹಿಡಿದವರನ್ನೂ,
ಸ್ಮೃತ್ಯುಕ್ತಾಚಾರಪರರಾದ ಸ್ಮಾರ್ತರನ್ನೂ, ರಸವಾದಿಗಳನ್ನೂ, ತರ್ಕಶಾಸ್ತ್ರಪುರಾ
ಣಜ್ಞರುಗಳನ್ನೂ, ಧರ್ಮಶಾಸ್ತ್ರಜ್ಞರನ್ನೂ ॥೨೬॥ ಪುರಾಣಾಗಮಶಾಸ್ತ್ರಾದಿಗಳಲ್ಲು
ಕ್ತವಾದ ಮಂತ್ರಮಾರ್ಗಕ್ಕೆ ಸಲ್ಲದವರನ್ನೂ, ಷಟ್ತರ್ಕಶಾಸ್ತ್ರಪ್ರಮಾಣವನ್ನರಿತ
ಬಲುಮಾತಾಡುವ ತಾರ್ಕಿಕರನ್ನೂ ॥೨೭॥ ವಶ್ಯ ಆಕರ್ಷಣ ಮಾರಣ ಮೊದಲಾದುವು
ಗಳನ್ನು ಹೇಳುವ ಶಾಸ್ತ್ರದಲ್ಲಿ ತತ್ಪರರಾದವರನ್ನೂ, ಸ್ತುತಿಪಾಠಕರನ್ನೂ, ಹಾಸ್ಯಗಾ
ರರನ್ನೂ, ಜ್ಯೋತಿಷ್ಕರನ್ನೂ, ಆಗಮಿಕರುಗಳನ್ನೂ ॥೨೮॥ ಕವಿಶ್ರೇಷ್ಠರನ್ನೂ, ನಾ
ನಾಕಲಾವಿಚಕ್ಷಣರನ್ನೂ ಸಹ ದೊರೆಯು ಬರಹೇಳಿ, ತನ್ನ ದೇಶದ ಯಾವುದೊಂದು

ಕೋಪಿನೃಪಾಜ್ಞಾಲಂಘಕಸ್ಸಹಿ ॥೨೯॥ ಇತ್ಯುಕ್ತ್ವಾಸರ್ವತೋಗ್ರಾಮೇ ಘೋಷಯಾಮಾಸಭೂಪತಿಃ ॥ ಮಂಡಲೇಶಾಮಾತ್ಯಮಂತ್ರಿಸಾಮಂತಾ ದಂಡನಾಯಕಾಃ ॥೩೦॥ ದಾಸಾಭಟ್ಟಾನರ್ತಕಾಶ್ಚ ಗಾಯಕಾಶ್ಚ ಪುರೋಹಿತಾಃ ॥ ರಾಜಪುತ್ರಾಧನಾಧ್ಯಕ್ಷಾಹಯಾರೋಹಾನಿಷಾದಿನಃ ॥೩೧॥ ದಾಸೀಜನಾವಿಲಾಸಿನ್ಯಆಪ್ತಮಿತ್ರಾಣಿಲಿಂಗಿನಃ ॥ ಇತ್ಯಾದ್ಯಾಧರಣೀಪಾಲಪರಿವಾರ್ಯನಿಯೋಗಿನಃ ॥೩೨॥ ಸೇವಾಂಚಕ್ರುಸ್ತದಾರಾಜಾಮೂರ್ಖಬೌದ್ಧಶ್ಚ ವೈಭವಾತ್ ॥ ಸ್ಥಿತ್ವಾಸ್ಥಾನೇಬ್ರಹ್ಮರಾಜಸಭಯಾಸಹ ಗರ್ವತಃ ॥೩೩॥ ವಾದಾಯಾರಾಧ್ಯಮಾನೇತುಂಪ್ರೇಷಯಾಮಾಸಮಾನುಷಾನ್ ॥ ತಚ್ಛ್ರುತ್ವಾಪಂಡಿತಾರಾಧ್ಯಃಸ್ಮಿತ್ವೇದಂವಾಕ್ಯಮಬ್ರವೀತ್ ॥ ವಾದಾಯವಾಥಯುದ್ಧಾಯಸಮಾಹ್ವಾನೇಕೃತೇಸತಿ ॥ ಪ್ರತಿನಾಪಿನೃಪೇಣಾಪಿಗಂತವ್ಯಂನಾತ್ರಸಂಶಯಃ ॥೩೪॥ ತಾವನ್ಮಾತ್ರೇಣಕೋದೋಷ ಇತಿನಿಶ್ಚಿತ್ಯಪಂಡಿತಃ ॥ ಕೃತ್ವಾಶಿವಾರ್ಚನಾಂಪೂರ್ವಪ್ರಮಥಾನನುಕೀರ್ತ್ಯಚ ॥೩೬॥ ಜಂಗಮಾಶೀರ್ವಚಃಪುಂಜಸಂಜಾತವರವೈಭವಃ ॥ ವಿತೀ

---

ಗ್ರಾಮದಲ್ಲಿರುವ ಯೊರೊಬ್ಬ ವಿದ್ವಾಂಸರಾದರೂ ಸರಿಯೆ ಬರದೆ ತಪ್ಪಿಸಿಕೊಂಡರೆ, ಅಂಥವರು ರಾಜಾಜ್ಞೆಯನ್ನು ಮೀರಿದವರಾಗುತ್ತಾರೆ, ಎಂದು ಎಲ್ಲಕಡೆಯೂ ಸಾರಿಸಿದನು. ಆಗ ಪಾಳೆಯಗಾರರು, ಪ್ರಧಾನಿ, ಮಂತ್ರಿ, ಆಶ್ರಿತರಾಜರು, ದಂಡನಾಯಕರು ॥೩೦॥ ಭೃತ್ಯರು, ಸ್ತುತಿಪಾಠಕರು, ನಾಟ್ಯಗಾರರು, ಗಾಯಕರು, ಪುರೋಹಿತರು, ದೊರೆಮಕ್ಕಳು, ಕೋಶಾಧಿಕಾರಿಗಳು, ರಾವುತರು, ಮಾವುತರು ॥೩೧॥ ಗೌಡಿಯರು, ಸೂಳೆಯರು, ವಿಟವಿದೂಷಕಾದಿಸಖರು, ಸನ್ಯಾಸಿಗಳು, ಜಿಜ್ಜಣಿಗೆ ಚಾಮರ ಮೊದಲಾದುವನ್ನು ಹಿಡಿವ ಊಳಿಗದವರು ಮೊದಲಾದವರೆಲ್ಲಾ ದೊರೆಯನ್ನು ಸುತ್ತುವರಿದು ॥೩೨॥ ಓಲಯಿಸುತ್ತಿದ್ದರು. ಆಗ ದೊರೆಯೂ, ಅವನ ಗುರುವಾದ ಮೂರ್ಖಬೌದ್ಧನೂ ಸಹ ವೈಭವದಿಂದ ಆಸ್ಥಾನದಲ್ಲಿ ಬ್ರಾಹ್ಮಣಸಭೆ ರಾಜಸಭೆಗಳೊಡನೆ ಕುಳಿತು, ಗರ್ವದಿಂದ ॥೩೩॥ ವಾದಮಾಡುವುದಕ್ಕೋಸ್ಕರ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಕರೆತರಲು ಮನುಷ್ಯರನ್ನು ಕಳುಹಿಕೊಟ್ಟನು ॥ ಅವನು ಬಂದ ಸುದ್ದಿಯನ್ನು ಪಂಡಿತಾರಾಧ್ಯನು ಕೇಳಿ, ಹೀಗೆ ನುಡಿದನು ॥೩೪॥ ಬೌದ್ಧ ಸನ್ಯಾಸಿಯು ವಾದಕ್ಕಾಗಲೀ, ರಾಜನು ಯುದ್ಧಕ್ಕಾಗಲೀ ಕರೆಯಿಸಿದರೆ ಹೋಗಲೇಬೇಕು. ಇದಕ್ಕೆ ಸಂಶಯವಿಲ್ಲ ॥೩೫॥ ಅಷ್ಟುಮಾತ್ರದಿಂದ ದೋಷವೇನು? ಎಂದು ನಿಶ್ಚಯಿಸಿಕೊಂಡು, ಶಿವಾರ್ಚನೆಯನ್ನು ಮಾಡಿ, ಪುರಾತನ ಪ್ರಮಥರ ಸ್ತುತಿಯನ್ನುಮಾಡಿ ॥೩೬॥ ಜಂಗಮರ ಆಶೀರ್ವಚನದಿಂದ ಇಷ್ಟವರವನ್ನು ಹೊಂದಿದವನಾಗಿ, ಆ ಜಂಗಮರಿಗೆ ಬೀ

ರ್ಯಾಭಿಮತಾನರ್ಥಾಂಸ್ತೇಭ್ಯಃಕೃತ್ವಾನಮಸ್ಕ್ರಿಯಾಂ ॥೩೭॥ ಗಂತುಂಪ್ರಚಕ್ರಮೇತಸ್ಯನೃಪಸ್ಯಾಸ್ಥಾನಮಂದಿರಂ॥ತತೋದೋನಮರಾಜಾರ್ಯಪ್ರಮುಖಾಶ್ಶಿಷ್ಯಪುಂಗವಾಃ ॥೩೮॥ ಶ್ರೀಪಂಡಿತಾರಾಧ್ಯದೇವಂಪ್ರಣಿಪತ್ಯೇದಮಬ್ರುವನ್ ॥ ಬಸವೇಶದಯಾಪಾತ್ರವಾದಿಜೈತ್ರನಿರಂಕುಶ ॥೩೯॥ ನಿಸ್ಸೀಮಪುಣ್ಯನಿಗಮವರೇಣ್ಯಪರಮೋನ್ನತ। ಸದ್ಭಕ್ತಲೋಲಪ್ರಮಥಾನುಗಶೀಲಪ್ರಿಯಂವದ ॥೪೦॥ ಮಹದ್ಯಶಸ್ಕಸಂಶುದ್ಧಮನಸ್ಕವಿಭವೋರ್ಜಿತ ॥ ಸಮಸ್ತಜಗದಾರಾಧ್ಯದುರ್ಮತಾಭೇದ್ಯವಿಕ್ರಮ ॥೪೧॥ ಲೋಕೈಕವೀರಸ್ವಮತವಿಸ್ತಾರಮಹಿಮಾಕರ ॥ ಪಂಚಾಕ್ಷರೀಮಂತ್ರಸಿದ್ಧಭಕ್ತಿಶುದ್ಧಕ್ಷಮಾಪರ ॥೪೨॥ ಲಸತ್ಕೃಪಾಸುಧಾಕುಲ್ಯಗಣಲೌಲ್ಯಗುಣಾಧಿಕ॥ ಗತದುರ್ಯಂತ್ರಶರಣಪರತಂತ್ರಸ್ವವರ್ತನ ॥೪೩॥ ಹಿತಶೈವಮಹಿಷ್ಠಾನುಭಾವಲೋಕೈಕಪೂಜಿತ॥ಪಂಡಿತಾರ್ಚಿತಸತ್ಪಾದಜ್ಞಾತವೇದಶುಭಾನ್ವಿತ॥ ಪಂಡಿತಾರಾಧ್ಯಸದ್ಭಕ್ತಿಸಾಸ್ನಿಧ್ಯಶಿವತತ್ಪರ ॥ ವೀರಾವತಾರಚಿತ್ಸೌಖ್ಯೋದಾರಸದ್ಧರ್ಮವತ್ಸಲ ॥೪೪॥ ಯಶಃಪ್ರಪೂರ್ತೇವಿಬುಧಚಕ್ರವರ್ತಿ

ಕಾದುದನ್ನೆಲ್ಲಾ ಕೊಟ್ಟು, ನಮಸ್ಕರಿಸಿ ॥೩೭॥ ಆ ವೆಲ್ನಾಡ ಚೋಳಭೂಪಾಲನ ಸಭೆಗೆ ಹೋಗುವುದಕ್ಕೆ ಉಜ್ಜುಗಿಸಿದನು. ಬಳಿಕ ದೋನಮರಾಜಯ್ಯನೇ ಮೊದಲಾದ ಶಿಷ್ಯಶ್ರೇಷ್ಠರುಗಳು ಶ್ರೀಪಂಡಿತಾರಾಧ್ಯಸ್ವಾಮಿಯನ್ನು ನಮಸ್ಕರಿಸಿ, ಈಮಾತನ್ನಾಡಿದರು--ಎಲೈ ಬಸವೇಶ್ವರ ಕೃಪಾಶ್ರಯನೆ, ವಾದಿಗಳನ್ನು ಜಯಿಸಿದವನೆ, ತಡೆಯಿಲ್ಲದವನೆ ॥೩೮॥ ಅಪಾರಪುಣ್ಯಶಾಲಿಯೆ, ಪಾಂಡಿತ್ಯದಿಂದ ಶ್ರೇಷ್ಠನಾದವನೆ, ಅತ್ಯುತ್ಕೃಷ್ಟನಾದವನೆ, ಉತ್ತಮಭಕ್ತರಲ್ಲಿ ಆಸಕ್ತಿಯುಳ್ಳವನೆ, ಪ್ರಮಥರ ಶೀಲವನ್ನನುಸರಿಸಿದವನೆ, ಪ್ರಿಯವಚನವನ್ನಾಡುವವನೆ ॥೪೦॥ ಮಹಾಯಶಸ್ಸಂಪನ್ನನೆ, ನಿರ್ಮಲಮನಸ್ಕನೆ, ಅತಿಶಯವಾದ ವೈಭವವುಳ್ಳವನೆ, ಸಕಲ ಲೋಕಪೂಜ್ಯನೆ, ದುಷ್ಟಮತದವರಿಂದ ಭೇದಿಸಲಶಕ್ಯವಾದ ಪರಾಕ್ರಮವುಳ್ಳವನೆ ॥೪೧॥ ಜಗದೇಕವೀರನೆ, ಸ್ವಮತವನ್ನು ವಿಸ್ತಾರಗೊಳಿಸುವ ಮಹತ್ವಕ್ಕೆ ಆಶ್ರಯನಾದವನೆ, ಪಂಚಾಕ್ಷರೀಮಂತ್ರದ ಸಿದ್ಧಿಯುಳ್ಳವನೆ, ಶಿವಭಕ್ತಿಯಿಂದ ಪರಿಶುದ್ಧನಾದವನೆ, ಸಹನೆಯುಳ್ಳವನೆ॥೪೨॥ ಕರುಣಾಮೃತರಸಕ್ಕೆ ಕಾಲ್ವೆಯಾಗಿರುವವನೆ, ಶಿವಗಣವಂ ಪ್ರೀತಿಸುವ ಸದ್ಗುಣಗಳಿಂದ ಶ್ರೇಷ್ಠನಾಗಿರುವವನೆ, ದುಷ್ಟಯಂತ್ರತಂತ್ರಗಳಿಗೆ ದೂರನಾದವನೆ, ಶರಣರು ಹೇಳಿದಂತೆ ನಡೆಯುವವನೆ ॥೪೩॥ ಶ್ರೇಷ್ಠವಾದ ಶಿವಾನುಭಾವವುಳ್ಳವನೆ, ಜಗದೇಕಪೂಜಿತನೆ, ವಿದ್ವಾಂಸರಿಂದ ಪೂಜಿಸಲ್ಪಟ್ಟ ಚರಣವುಳ್ಳವನೆ, ವೇದಪಾರಂಗತನೆ, ಮಂಗಳಯುಕ್ತನೆ ॥೪೪॥ ಶಿವಭಕ್ತಿಗೆ ನೆಲೆಯಾದವನೆ, ಶಿವಾಯತ್ತಚಿತ್ತನಾದ ಎಲೈ ಪಂಡಿತಾರಾಧ್ಯನೆ, ವೀರಭದ್ರೇಶನ ಅವತಾರವೆ, ಶಿವಜ್ಞಾನಸೌಖ್ಯವನ್ನು ಕೊಡುವುದರಲ್ಲಿ ಮಹಾದಾನಿಯಾದವನೆ, ಉತ್ತ

ನ್ಮಹೋದಯ॥ ಸ್ಮೃತಿಮಾತ್ರೇಣಭವತೋಧ್ವಸ್ತಾಃಕಿಂನಾನ್ಯವಾದಿನಃ॥ ತ್ವನ್ನಾಮಮಾತ್ರಶ್ರವಣಾನ್ನಷ್ಟಾ ದುಸ್ಸಮಯಾನಕಿಂ॥ ಭವನ್ಮಾಹಾತ್ಮ್ಯ ವಿಸ್ತಾರೇ ಕಿಯಂತಸ್ಸಮಯಾಃಪರೇ ॥೪೭॥ ತ್ವದೀಯಮಹಿಮಾಬೌದ್ಧ ಘ್ರಾಣಸ್ಯೋಪರಿಶಸ್ತ್ರಿಕಾ॥ ಆರ್ಹತಾನಾಂಮಹಾದಂಡಃಪೃಷ್ಠವಂಶಪ್ರ ಹಾರಕಃ ॥೪೮॥ ಅಭೇದವಾದಿನಾಂಶೂಲಂಪಾಂಚರಾತ್ರಶಿರಶ್ಶಿಲಾ ॥ ಏ ಕಾತ್ಮವಾದಿಹೃದಯಶಲ್ಯಮತ್ಯಂತದುಸ್ಸಹಂ ॥೪೯॥ ಲೋಕಾಯತಾ ನಾಂಮೂರ್ಖಾಣಾಂರಸನಾಭೇದಕಂಟಕಃ॥ ಕರ್ಮವಾದಿಮನೋಭೀ ತಿರ್ಬ್ರಹ್ಮವಾದಿದೃಶೋಸ್ತೃಣಂ ॥೫೦॥ ಸನ್ಯಾಸಿನಾಂಕಾಲಮೃತ್ಯು ಶ್ಶೂನ್ಯವಾದಿಗಳೋರಗಃ॥ ಭವತ್ಪುರೋಹಂಕೃತಿತಃಕಸ್ಸ್ಥಾತುಂಕ್ಷಮ ತೇವಿಭೋ॥೫೧॥ ತಾರ್ಕಿಕೋವಾವದೂಕೋಪಿಕೃತಶಾಸ್ತ್ರಪರಿಶ್ರಮಃ॥ ಏತಾದೃಶಾನಸ್ವಾಪದಾನ್ಸ್ವಸ್ಮಿಕೇತುರ್ವಯಂಕ್ಷಮಾಃ ॥೫೨॥ ಭವತ್ಪಾ ದಪ್ರಭಾವಾತ್ಕಿಂಗಂತವ್ಯಂಭವತಾಮಿತಿ ॥ ಉಕ್ತ್ವಾನಮತ್ಸುಶಿಷ್ಯೇಷು ವ್ಯಾಸಸ್ತೋತ್ರಮನಿಂದಿತಂ ॥೫೩॥ ದಕ್ಷಾಧ್ವರಂಶಾರಭಂಚಗಣಾಡಂಬರ

---

ಮಶಿವಧರ್ಮಾಚರಣದಲ್ಲಿ ಆಸಕ್ತಿಯುಳ್ಳವನೆ ॥೪೫॥ ಸತ್ಕೀರ್ತಿಯಿಂದ ತುಂಬಿದವನೆ, ವಿದ್ವತ್ಸ್ವಭಾವನೆ, ಮಹಾವಿರ್ಭಾವವುಳ್ಳವನೆ, ನಿನ್ನನ್ನು ನೆನೆದ ಮಾತ್ರದಿಂದಲೇ ಪರವಾದಿಗಳು ಧ್ವಂಸವಾಗಿ ಹೋಗುವುದಿಲ್ಲವೆ? ॥೪೬॥ ನಿನ್ನ ಹೆಸರನ್ನು ಕೇಳಿದಮಾ ತ್ರದಿಂದಲೇ ದುರ್ಮತಗಳು ಹಾಳಾಗದೆ ಇರುವುವೆ? ನಿನ್ನ ಮಹಿಮೆಯು ಪ್ರಸರಿಸಲಾಗಿ ಅದರಮುಂದೆ ಪರಮತಗಳು ಎಷ್ಟರವು? ॥೪೭॥ ನಿನ್ನ ಮಹಿಮೆಯು ಬೌದ್ಧರ ಮೂ ಗಿನಮೇಲೆ ಕತ್ತಿಯು. ಆರ್ಹತರ ಬೆನ್ನಮೂಳೆಯನ್ನು ಮುರಿವ ದೊಡ್ಡ ದೊಣ್ಣೆ ಯು. ॥೪೮॥ ಅದ್ವೈತಿಗಳಿಗೆ ಶೂಲವು, ಪಾಂಚರಾತ್ರರ ತಲೆಯಮೇಲೆ ಕಲ್ಲು. ಏಕಾ ತ್ಮವಾದಿಗಳ ಎದೆಗೆ ದುಸ್ಸಹವಾದ ಅಲಗು ॥೪೯॥ ಮೂರ್ಖರಾದ ಲೋಕಾಯತಿಕರ ನಾಲಿಗೆಯನ್ನು ಸೀಳುವ ಮುಳ್ಳು, ಕರ್ಮಬ್ರಹ್ಮಿಗಳ ಮನಸ್ಸಿಗೆ ಭಯಸ್ವರೂಪವು, ಬ್ರಹ್ಮ ವಾದಿಗಳ ಕಣ್ಣನ್ನು ಒತ್ತುವ ಹುಲ್ಲು ॥೫೦॥ ಸನ್ಯಾಸಿಗಳಿಗೆ ಕಾಲಮೃತ್ಯುವು, ಶೂ ನ್ಯವಾದಿಗಳ ಕೊರಲಿಗೆ ಸರ್ಪವು. ಶಾಸ್ತ್ರಜ್ಞನೂ ವಿದ್ವನ್ಮಂಡಲಿಯಲ್ಲಿ ನಿರ್ಭೀತಿಯಾ ಗಿ ಮಾತನಾಡತಕ್ಕವನೂ ತಾರ್ಕಿಕನೂ ಆದ ಯಾವನೇ ಆಗಲಿ ನಿನ್ನಿದಿರಿಗೆ ಭಯವಿಲ್ಲದೆ ಅಹಂಕಾರದಿಂದ ನಿಲ್ಲುವುದಕ್ಕೆ ಸಮರ್ಥನಾಗುತ್ತಾನೆಯೆ? ಇಂಥವರುಗಳುಮಾಡು ವ ದುರ್ವಾದಗಳನ್ನೆಲ್ಲಾ ಸುಟ್ಟು ಬೂದಿಮಾಡುವುದಕ್ಕೆ ನಿಮ್ಮ ಪಾದದ ಮಹಿ ಮೆಯಿಂದ ನಾವೇ ಸಮರ್ಥರಾಗಿರುತ್ತೇವೆ. ॥೫೦॥ ತಾವು ದಯಮಾಡಿಸುವುದೇ ತಕ್ಕೆ? ಎಂದು ಹೇಳಿ, ನಮಸ್ಕರಿಸಲಾಗಿ, ನಿರ್ದುಷ್ಟವಾದ ವ್ಯಾಸಕೃತಶಿವಾಷ್ಟ ಕವನ್ನೂ, ದಕ್ಷಾಧ್ವರಧ್ವಂಸ ಶ್ಲೋಕಗಳನ್ನೂ [illegible] ಸ್ತೋತ್ರವನ್ನೂ [illegible]ಷ್ಟಕ

ಮಾದರಾತ್ ॥ ಪಠತ್ಸ್ವತ್ಯಂತಸಂತೋಷಾತ್ಸಂಸ್ತುವತ್ಸ್ವಪಿವಂದಿಷು ॥೫೪॥ ಶ್ರೀರುದ್ರಮಹಿಮಾನಂಚಶತಕಂಗದ್ಯಪಂಚಕಂ ॥ ಪ್ರಭೂತಹರ್ಷೇಣಶಿವತತ್ವಸಾರಮುಖಾನ್ಯಪಿ ॥೫೫॥ ಹೃದ್ಯಪದ್ಯಾನಿಕವಿಷುಪಠತ್ಸುನಿಜಪಾರ್ಶ್ವಯೋಃ ॥ ಸಂಸಾರಮಾಯಾಸ್ತವನಪದಾನಿಗುರುಹರ್ಷತಃ ॥೫೬॥ ನೀರಾಜನಪದಾನ್ಯುದ್ಯದಾನಂದಾಖ್ಯಪದಾನ್ಯಪಿ ॥ ಶಂಕರಾಖ್ಯಪದಾದೀನಿತತ್ಕೃತಾನ್ಯಾಂಧ್ರಭಾಷಯಾ ॥೫೭॥ ವಿವಿಧಾನಿಪದಾನ್ಯುಚ್ಚೈರ್ಗಾಯಂತೀಷುಜನಾಲಿಷು॥ ಋಗ್ವೇದರುದ್ರಸೂಕ್ತಾನಿಪವಮಾನಾದಿಕಾನ್ಯಪಿ॥೫೮॥ ನಮಕಂಚಮಕಂಚೈವಯಾಜುಷಂಬ್ರಹ್ಮಪಂಚಕಂ ॥ ರುದ್ರಪ್ರಶಂಸಾಪರಾಣಿಸಾಮವೇದವಚಾಂಸ್ಯಪಿ ॥೫೯॥ ರುದ್ರಸೂಕ್ತಾವಳಿಂದಿವ್ಯಾಮಾಥರ್ವಣಶಿರಶ್ಶಿಖಾಂ ॥ ಅತಿಖ್ಯಾತಾನಘೋರಾದಿಮಂತ್ರಾನ್ಪರಮವೈದಿಕಾನ್ ॥೬೦॥ ಕಿಂಚಮಾನಾದನಂತಾನ್ವೈವೇದಾ ಇತ್ಯಾಗಮಾತ್ಮಕಾತ್ ॥ ವಾಶ್ಯಾಮಾಮಾಧ್ಯಂದಿನಾಃಕಾಣ್ವಾಶ್ಚರ್ಚಕಶ್ರವಣಂತಥಾ ॥೬೧॥ ವಾರ್ತಾಂತವೇಯಾಔಖೇಯಾದಂಡಿಕಾಂಡಲಶಾಕಲಾಃ ॥ಶಾಮಾಯಣೀಯಾಮಾಂಡೂಕಾಲಾಂಗಲಾಭಾಷ್ಕಲಾಭಿಧಾಃ ॥೬೨॥ ಮೈತ್ರಾಯಣೀಯಾ

---

ವನ್ನು ಸಹ ಪ್ರೀತಿಯಿಂದಲೂ ಸಂತೋಷದಿಂದಲೂ ಶಿಷ್ಯರುಗಳು ಹೇಳುತ್ತಿರಲಾಗಿ, ಸ್ತುತಿಪಾಠಕರು ಸ್ತೋತ್ರಮಾಡುತ್ತಿರಲಾಗಿ ॥೫೪॥ ಶ್ರೀರುದ್ರಮಹಿಮಾಶತಕವನ್ನೂ, ಪಂಚಗದ್ಯಗಳನ್ನೂ ಶಿವತತ್ವಸಾರ ಮುಂತಾದ ಮನೋಹರವಾದ ಗ್ರಂಥಗಳನ್ನೂ ಕವಿಗಳು ಶ್ರೀಮತ್ಪಂಡಿತಾರಾಧ್ಯರ ಇಕ್ಕೆಲದಲ್ಲೂ ಸಂತೋಷಾತಿಶಯದಿಂದ ಹೇಳುತ್ತಿರಲಾಗಿ, ಸಂಸಾರಮಾಯಾಮೋಚನ ಸ್ತುತಿಪದಗಳನ್ನೂ, ಆರತಿಯಪದಗಳನ್ನೂ ಆನಂದಾಂಕಿತವಾದ ಪದಗಳನ್ನೂ, ಶಂಕರಾಂಕಿತಪದಗಳನ್ನೂ, ಇವೇ ಮೊದಲಾಗಿ ತೆನುಗಿನಲ್ಲಿ ಆಪಂಡಿತಾರಾಧ್ಯರು ರಚಿಸಿದ್ದ ನಾನಾವಿಧದ ಪದಗಳನ್ನೂ ಸಂತೋಷದಿಂದ ಜನಗಳು ಗಟ್ಟಿಯಾಗಿ ಹಾಡಿಕೊಂಡು ಬರುತ್ತಿರಲು ॥೫೭॥ ಋಗ್ವೇದದ ರುದ್ರಸೂಕ್ತಗಳನ್ನೂ, ವಾಯುಸೂಕ್ತ ಮೊದಲಾದುವುಗಳನ್ನೂ, ॥೫೮॥ ಯಜುರ್ವೇದದ ನಮಕಚಮಕಗಳನ್ನೂ, ಪಂಚಬ್ರಹ್ಮಸೂಕ್ತಗಳನ್ನೂ ರುದ್ರಸ್ತುತಿಪರವಾದ ಸಾಮವೇದಸೂಕ್ತಗಳನ್ನೂ ॥೫೯॥ ಅಥರ್ವಣವೇದದ ರುದ್ರಸ್ತುತಿಪರಸೂಕ್ತಗಳನ್ನೂ, ಅತ್ಯಂತ ಪ್ರಸಿದ್ಧವಾದ ಅಘೋರಾದಿವೈದಿಕ ಮಂತ್ರವಚನಗಳನ್ನೂ ॥೬೦॥ ವೇದಗಳು ಅಪರಿಮಿತವು ಎಂಬ ಆಗಮವಚನದಿಂದ ವೇದಗಳ ಶ್ಯಾಮ-ಮಾಧ್ಯಂದಿನ-ಕಾಣ್ವ-ಚರ್ಚಕ-ಶ್ರವಣ-ವಾರ್ತಾಂತವೇಯ-ಔಖೇಯ-ದಂಡಿ-ಪಾಂಡಲ-ಶಾಕಲ-ಶ್ಯಾಮಾಯಣೀಯ-ಮಾಂಡೂಕ-ಲಾಂಗಲ-ಭಾಷ್ಕಲ ॥೬೨॥ ಮೈತ್ರಾಯಣೀಯ-ವೈನೇಯ-ವೈಧೇಯ-ದೇವದರ್ಶಿ-ನಾ

ವೈನೇಯಾವೈಧೇಯಾದೇವದರ್ಶಿನಃ । ರಾಯಾಯಣೀಯಾ ಸ್ಸಾಂಖ್ಯಾಯ
ನೀಯಾ ಶ್ಶೌನಕಿನಸ್ತಥಾ ॥೬೩॥ ಶಾಬಾಯಣೀಯಾ ಶ್ಶೌಕ್ಲೇಯಾಕಾಪಾ
ಲಾಗಾಲವಾಸ್ತಥಾ । ದುಂದುಭಿರ್ದೇವದರ್ಶೀಚಕ್ಷಾಂತಾಓಂತಾಶ್ಚಖಲ್ವಾ
ಲಾಃ ॥೬೪॥ ಕತಾಃಪ್ರಾಚ್ಯಕತಾವಾರಕ್ರಮಾವೈಜವನಾಮಕಾಃ । ಪಾ
ರಾಯಣೀಯಾಬೌಧೇಯಾಖಾಂಡಿಕೀಯಾಸ್ತಥೈವಚ॥೬೫॥ಇತ್ಯಾದ್ಯಾಶ್ಚ
ರಣವ್ಯೂಹೇಶಾಖಾಭೇದಾಃಪ್ರಕೀರ್ತಿತಾಃ । ತೇಷೂಪದಿಷ್ಟಸೂಕ್ತಾನಿ
ಕೈವಲ್ಯೋಪನಿಷದ್ಯಪಿ ॥೬೬॥ ಕಾಲಾಗ್ನಿರುದ್ರಜಾಬಾಲಬ್ರಹ್ಮಾತ್ಮೋಪ
ನಿಷತ್ಸ್ವಪಿ। ಬೃಹದಾರಣ್ಯಕೇತದ್ವಚ್ಛಿವಸಂಕಲ್ಪಕೇಷುಚ ॥೬೭॥ ಗರ್ಭ
ಹಂಸೋಪನಿಷದೋರ್ಯದ್ಯಚ್ಛಿವಪರಂವಚಃ । ಪಠತ್ಸುತತ್ತತ್ಸಕಲಂಸ್ವಾ
ಧ್ಯಾಯಶ್ರಮಶಾಲಿಷು॥೬೮॥ದ್ವಿಜೋತ್ತಮೇಷುಸತತಂಶಿವಪೂಜಾವಿನೋ
ದಿಷು।ವದತ್ಸುವೇದಭಾಷ್ಯಾಣಿತೇಷ್ವೇವೋಭಯಪಾರ್ಶ್ವಯೋಃ॥೬೯॥ನ್ಯಾ
ಯವೈಶೇಷಿಕೋದಾತ್ತಶಾಸ್ತ್ರವಿಶ್ರುತಬುದ್ಧಿಷು।ಕುರ್ವತ್ಸುವಾದಗೋಷ್ಠೀ
ಷುಖಂಡನಸ್ಯಾಪಿಖಂಡನಂ॥೭೦॥ ಸಮಾಗಚ್ಛತ್ಸುಚಮಹಾತಾರ್ಕಿಕೇಷು
ಸಮಂತತಃ।ಪ್ರಭುಸತ್ಯೇಶಚಾಮಯ್ಯಮಾಚಯ್ಯಾಜಗಮೈಸ್ತಥಾ ॥೭೧॥

---

ಮಾಯಣೀಯ, ಸಾಂಖ್ಯಾಯನೀಯ, ಶೌನಕಿ ॥೬೩॥ ಶಾಬಾಯಣೀಯ, ಶೌಕ್ಲೇಯ,
ಕಾಪಾಲ, ಗಾಲವ, ದುಂದುಭಿ, ದೇವದರ್ಶಿ, ಕ್ಷಾಂತ, ಓಂತ, ಖಲ್ವಾಲ ॥೬೪॥ ಕಠ,
ಪ್ರಾಚ್ಯಕಠ, ವಾರಕ್ರಮ, ವೈಜವ, ಪಾರಾಯಣೀಯ, ಬೌಧೇಯ, ಖಾಂಡಿಕೀಯ
॥೬೫॥ ಎಂಬಿವೇ ಮೊದಲಾದುವುಗಳು, ವೇದಶಾಖಾಭೇದಗಳಾಗಿ ಹೇಳಲ್ಪಟ್ಟಿರುವುವು.
ಅವುಗಳಲ್ಲಿ ಉಕ್ತವಾಗಿರುವ ಶಿವಪರವಾದ ಸೂಕ್ತಗಳನ್ನೂ, ಕೈವಲ್ಯೋಪನಿಷತ್ತಿನ
ಲ್ಲಿಯೂ ॥೬೬॥ ಕಾಲಾಗ್ನಿರುದ್ರ ಜಾಬಾಲ ಬ್ರಹ್ಮ ಆತ್ಮೋಪನಿಷತ್ತುಗಳಲ್ಲಿಯೂ,
ಬೃಹದಾರಣ್ಯಕ ಶಿವಸಂಕಲ್ಪ ॥೬೭॥ ಗರ್ಭ ಹಂಸ-ಈ ಉಪನಿಷತ್ತುಗಳಲ್ಲಿಯೂ ಯಾ
ವಯಾವ ಸೂಕ್ತಗಳು ಶಿವಪರಗಳಾಗಿವೆಯೋ ಅವುಗಳನ್ನೆಲ್ಲಾ ವೇದಾಧ್ಯಯನಸಂಪ
ನ್ನರುಗಳು ಹೇಳುತ್ತಿರಲಾಗಿ, ॥೬೮॥ ಯಾವಾಗಲೂ ಶಿವಪೂಜಾತತ್ಪರರಾದ ವೀರಶೈವ
ಬ್ರಾಹ್ಮಣ ಶ್ರೇಷ್ಠರುಗಳು ವೇದಭಾಷ್ಯಗಳನ್ನು ಹೇಳುತ್ತಿರಲು, ಅವರಲ್ಲೇ ಕೆಲಕೆಲರು
ತರ್ಕವೈಶೇಷಿಕಾದಿಶಾಸ್ತ್ರಾಧ್ಯಯನ ಸಂಪನ್ನರಾದವರುಗಳು ಎರಡು ಪಕ್ಕಗಳಲ್ಲೂ
ಶಾಸ್ತ್ರವಾದಗಳನ್ನು ಮಾಡಿ ಖಂಡನಪ್ರತಿಖಂಡನಗಳನ್ನು ನಡೆಯಿಸುತ್ತಿರಲು, ॥೭೦॥
ಮಹಾತಾರ್ಕಿಕರ ಸಮೂಹವು ಎಲ್ಲಕಡೆಯೂ ಬಳಸಿ ಬರುತ್ತಿರಲು, ಹಾಡುಗಾರಿಕೆಯ
ವರು ಅಲ್ಲಮಪ್ರಭುವು-ಸತ್ಯೇಶ-ಚಾಮಯ್ಯ-ಮಡಿವಳಮಾಚಯ್ಯ-ಅಜಗಮ-ಶಂಕರ

ವರಶಂಕರದಾಸಯ್ಯದಾಸಕೇತೋದ್ಭಟೈರಪಿ । ಕಕ್ಕಯ್ಯಚೆನ್ನಬಸವಕಲ್ಲಿ
ದೇವಹಲಾಯುಧೈಃ ॥೩೨॥ ಶ್ರೀಕೇಶಿರಾಜಚಿಕ್ಕಾರ್ಯಮಸಣಾರ್ಯೈರ್ಮ
ಹಾತ್ಮಭಿಃ । ಸಿದ್ಧರಾಮಾಭಿಧಾನೇನ ಮಹಾದೇವ್ಯಾಪ್ರಸಿದ್ಧಯಾ ॥೩೩॥
ಭವ್ಯಸೊಡ್ಡಳಬಾಚಾರ್ಯಬಸವೇಶಪುರಸ್ಸರೈಃ । ಕೃತೇಷುಗೀತೇಷ್ವಭಿತೋ
ಗೀಯಮಾನೇಷುಗಾಯಕೈಃ ॥೩೪॥ ಪಾರ್ಶ್ವಯೋಸ್ತಾಪಸೌಘೇಷುವದ
ತ್ಸುಶಿವಮಸ್ತ್ವಿತಿ । ಶ್ರಾವ್ಯೇಪಂಚಮಹಾವಾದ್ಯಧ್ವನೌಕಾಹಲನಿಸ್ವನೇ
॥೩೫॥ ಶಂಖಧ್ವನೌಚಸರ್ವತ್ರ ಸಂಸರ್ಪತಿದಿಗಂತರೇ । ತತ್ರತತ್ರಜನೈರ್ಭ
ಕ್ತ್ಯಾಕೃತೇಜಯಜಯಧ್ವನೌ॥೩೬॥ ಸಮರ್ಪ್ಯಭೂತಿತಾಂಬೂಲಂಭಕ್ತ
ಕಾಂತಾಸುಭಕ್ತಿತಃ । ಭಕ್ತದೃಙ್ಮಣಿಷೂತ್ಕೃಷ್ಟವಚೋಮಣಿಷುಸರ್ವ
ತಃ ॥೩೭॥ ನೀರಾಜನಾದೀಪಮಣಿಷ್ವನ್ಯೋನ್ಯಂಪರಿಶೋಭಿಷು । ಪುಷ್ಪಾಂ
ಜಲಿಂವಿಕೀರ್ಯಾಥದತ್ವಾನೀರಾಜನಾಶ್ಶುಭಾಃ ॥೩೮॥ ಸಪ್ರಶ್ರಯಂನಮ
ಸ್ಕಾರಂವಿಧಾಯಾಪಸೃತಾಸ್ವಥ । ರಾಜವೀಥ್ಯಾಂತತ್ರತತ್ರಸ್ಥಿತ್ವಾರ್ಯೈಷ್ವ
ನುರಾಗತಃ ॥೩೯॥ ನಾಸ್ತಿಪ್ರತಿಭಟಃಕ್ವಾಪಿಭಕ್ತಾನಾಮಿತಿವಾದಿಷು ।
ಕೃಪಾಕಟಾಕ್ಷೈರ್ಭಕ್ತೌಘವೀಕ್ಷಕೈಶ್ಶಾಂತನಂದಿಭಿಃ ॥೪೦॥ ಭಸ್ಮೀಕ

---

ದಾಸಯ್ಯ-ಜೇಡರದಾಸಯ್ಯ- ಮೋದಂಕೇತಯ್ಯ-ಉದ್ಭಟಯ್ಯ-ಕಕ್ಕಯ್ಯ-ಚೆನ್ನಬಸ
ವಯ್ಯ-ಕಲ್ಲಿದೇವ-ಹಲಾಯುಧಯ್ಯ-ಕೇಶಿರಾಜ-ಚಿಕ್ಕಯ್ಯ-ಮಸಣಯ್ಯ-ಸಿದ್ಧರಾಮ-
ಅಕ್ಕಮಾದೇವಿ-ಸೊಡ್ಡಳಬಾಚಯ್ಯ-ಬಸವೇಶ ಮೊದಲಾದ ಪ್ರಮಥರು ರಚಿಸಿರುವ
ಗೀತೆಗಳನ್ನು ಸುತ್ತಲೂ ಹಾಡುತ್ತಲಿರಲು ॥೩೪॥ ಎರಡು ಪಕ್ಕಗಳಲ್ಲೂ ತಪಸ್ವಿಗಳು
ಮಂಗಳವಾಗಲಿ ಎಂದು ಹರಸುತ್ತಿರಲು, ಕಿವಿಗಿಂಪಾದ ಪಂಚಮಹಾವಾದ್ಯಗಳ ಧ್ವನಿ
ಯೂ ಕಹಳೆಯ ಧ್ವನಿಯೂ, ಶಂಖದಧ್ವನಿಯೂ ಸಹ ಎಲ್ಲದಿಕ್ಕುಗಳ ಕೊನೆಗೂ
ವ್ಯಾಪಿಸುತ್ತಿರಲು, ಅಲ್ಲಿಗಲ್ಲಿಗೆ ಜನರು ಭಕ್ತಿಯಿಂದ ಜಯಜಯವೆಂದು ಉದ್ಘೋಷಿ
ಸುತ್ತಿರಲು ॥೩೬॥ ಭಕ್ತಸ್ತ್ರೀಯರು ಭಕ್ತಿಯಿಂದ ವಿಭೂತಿವೀಳಯವನ್ನಿತ್ತು, ಭಕ್ತ
ರ ಕಣ್ಣೆಂಬರತ್ನಗಳೂ ಉತ್ತಮವಾದ ಮಾತುಗಳೆಂಬ ರತ್ನಗಳೂ ಆರತಿಯ ದೀಪವೆಂ
ಬ ಮಣಿಗಳೂ ಒಂದಕ್ಕೊಂದುಸೇರಿ ಪ್ರಕಾಶಿಸುತ್ತಿರಲು, (ಅಂದರೆ ಭಕ್ತನಾರಿಯರು
ಶ್ರೀ ಪಂಡಿತಾರಾಧ್ಯರಿಗೆ ದೀಪದಾರತಿಯನ್ನು ಬೆಳಗಲು ಭಕ್ತಜನರು ಆ ಆರತಿಗಳನ್ನು
ನೋಡುತ್ತ ಅವುಗಳ ವಿಷಯಕವಾದ ಮಾತುಗಳನ್ನಾಡಿಕೊಳ್ಳುತ್ತಿದ್ದರೆಂದು ಭಾವ
ವು.) ಮಂಗಳಕರಗಳಾದ ಆರತಿಗಳನ್ನು ಬೆಳಗಿ, ಪುಷ್ಪಾಂಜಲಿಯನ್ನಿತ್ತು ॥ ವಿನಯದಿಂ
ಕೂಡಿ ನಮಸ್ಕಾರವಂಮಾಡಿ ತೆರಳಲಾಗಿ, ಬಳಿಕ ರಾಜಬೀದಿಯಲ್ಲಿ ಅಲ್ಲಿಗಲ್ಲಿಗೆ ಆರ್ಯಜ
ನರು ನಿಂತು ಶ್ರೀಮತ್ಪಂಡಿತಾರಾಧ್ಯರಲ್ಲಿ ಭಕ್ತಿಯಿಂದ ಶಿವಭಕ್ತರಿಗೆ ಇದಿರಾಗುವವನು

ರ್ಣಂಪರಮತಾನ್ದಗ್ಧುಂಶರ್ಕೈರುಗ್ರನಂದಿಭಿಃ । ವಿಭೂಷಿತಾನ್ಧ್ವಜವ್ಯೂಹಾನ್ಸ್ವಾಯುಪ್ರೇರಣಸಂಚಯಾತ್ ॥೮೧॥ ಗೃಹೀತ್ವಾಪುರತೋಯಾತೇಷ್ವನುಜೀವಿಷುಸಾಂದ್ರಿತಂ । ಸಾವಿದಲ್ಲೇಷುಸತತಂವದತ್ಸ್ವಾಲೋಕಯೇತಿಚ ॥೮೨॥ ಶ್ರೀವಾಯುಸಂಹಿತಾವಾಕ್ಯಾಚ್ಛತ್ರಂಶಶಿನಿಭಂತ್ವಿತಿ । ನಿರ್ಮಲಚ್ಛತ್ರಮಿತ್ಯುಕ್ತೇಃಪುರಾಣೇಪಾದ್ಮನಾಮನಿ॥೮೩॥ ಶ್ವೇತಚ್ಛತ್ರಂಶಿವಸ್ಯೇತಿಪೀತಂಶಾರ್ಙ್ಗಿಣಇತ್ಯಪಿ । ರಕ್ತಂಚ್ಛತ್ರಂವಿಧೇಶ್ಚೇತಿಸ್ಕಾಂದಸ್ಥಾದ್ವಚನಾತ್ತಥಾ ॥೮೪॥ ತಥಾವಿಧೇಚವ್ಯಜನೇಚಾಮರೇಚೇತಿವಾಕ್ಯತಃ । ಶಿವಭಕ್ತಾನ್ವಿನಾಬ್ರಹ್ಮಕೇಶವಪ್ರಭೃತೇರಪಿ ॥೮೫॥ ಅಸಾಂಪ್ರತಂತನ್ನರಕಂವ್ರಜೇದಿತ್ಯಪಿಭಾಷಿತಾತ್ । ಮುಕ್ತಾಂಚಿತಸಿತಚ್ಛತ್ರಸಂಘೇಪ್ಯನುಚರೈರ್ಧೃತೇ ॥೮೬॥ ಸೂರಮಾಂಬಾವೆಲ್ಲಕೊಂಡಮಹಾದೇವಪುರಸ್ಸರೈಃ । ಭಕ್ತಾಗ್ರ್ಯೈರನುಗಚ್ಛದ್ಭಿಃಪರಿತಃಪರಮೋನ್ನತೈಃ ॥೮೭॥ ಪರವಾದಿಮಹಾ

---

ಎಲ್ಲೂ ಇಲ್ಲವೆಂದು ಆಡಿಕೊಳ್ಳುತ್ತಿರಲು, ದಯಾಕಟಾಕ್ಷದಿಂದ ಭಕ್ತಸಮೂಹವನ್ನವಲೋಕಿಸುವ ಶಾಂತಮೂರ್ತಿಗಳಾದ ನಂದಿಗಳಿಂದಲೂ, ಪರಮತಗಳನ್ನು ಸುಟ್ಟು ಭಸ್ಮಗೊಳಿಸುವುದಕ್ಕಾಗಿ ಉಗ್ರದೃಷ್ಟಿಯಿಂದ ನೋಡುವ ಉಗ್ರಮೂರ್ತಿಗಳಾದ ನಂದಿಗಳಿಂದಲೂ ಅಲಂಕರಿಸಲ್ಪಟ್ಟಿರುವ ನಂದಿಧ್ವಜಗಳ ಸಮೂಹವನ್ನೂ, ಬಿಜ್ಜಣಿಗೆಚಾಮರಗಳ ಸಮೂಹವನ್ನೂ ॥೮೧॥ ಹಿಡಿದುಕೊಂಡು ಸೇವಕರು ಮುಂಗಡೆಯಲ್ಲಿ ದಟ್ಟವಾಗಿ ಹೋಗುತ್ತಿರಲು, ದ್ವಾರಪಾಲಕರು "ಪರಾಕು" ಎಂದು ಯಾವಾಗಲೂ ಹೇಳುತ್ತಿರಲು ॥೮೨॥ ಶಿವನಿಗೆ ಚಂದ್ರಸಮಾನವಾದ ಶ್ವೇತಛತ್ರವು ಅರ್ಹವಾದುದು ಎಂದು ವಾಯುಸಂಹಿತೆಯುಲ್ಲಿ ಹೇಳಲ್ಪಟ್ಟಿರುವುದರಿಂದಲೂ, ಪದ್ಮಪುರಾಣದಲ್ಲಿ ಬಿಳಿಯ ಛತ್ರವು ಶಂಕರನಿಗೆ ಅರ್ಹವಾದುದು ಎಂದು ಉಕ್ತವಾಗಿರುವುದರಿಂದಲೂ ॥೮೩॥ ಶಿವನಿಗೆ ಶ್ವೇತಛತ್ರ, ವಿಷ್ಣುವಿಗೆ ಹೊಂಬಣ್ಣದ ಛತ್ರ, ಬ್ರಹ್ಮನಿಗೆ ಕೆಂಬಣ್ಣದ ಛತ್ರ ಎಂದು ಸ್ಕಾಂದಪುರಾಣದ ವಚನವಿರುವುದರಿಂದಲೂ, ಮತ್ತೂ ಪೂರ್ವೋಕ್ತವಾದ ಆಯಾಬಣ್ಣದ ಬಿಜ್ಜಣಿಗೆಗಳೂ ಚಾಮರಗಳೂ ಆಯಾದೇವತೆಗಳಿಗೆ ಅರ್ಹವಾದುವುಗಳೆಂದು ಹೇಳಲ್ಪಟ್ಟಿರುವುದರಿಂದಲೂ, ಶಿವಭಕ್ತರ ಹೊರತು ಬ್ರಹ್ಮ ವಿಷ್ಣು ಮೊದಲಾದವರುಗಳಿಗು ಕೂಡ ಅಂತಹ ಶ್ವೇತಛತ್ರ ಚಾಮರಾದಿಗಳ ಧಾರಣವು ಅಕ್ರಮವಾದುದೆಂತಲೂ, ಕ್ರಮತಪ್ಪಿ ಆ ಇತರರಿಗೆ ಅವುಗಳನ್ನು ಉಪಯೋಗಿಸಿದವನು ನರಕವನ್ನೈದುವನೆಂದು ಹೇಳಲ್ಪಟ್ಟಿರುವುದರಿಂದಲೂ ಸಹ ಊಳಿಗದವರು ಮುತ್ತಿನ ಜಾಲರಿಗಳನ್ನು ಕಟ್ಟಿರುವ ಶ್ವೇತಛತ್ರಗಳನ್ನು ಹಿಡಿದುಕೊಂಡಿರಲು ॥೮೬॥ ಸೂರಮಾಂಬೆ ವೆಲ್ಲಕೊಂಡದ ಮಹಾದೇವಯ್ಯ ಮೊದಲಾದ ಭಕ್ತೋತ್ತಮರ ಸಮೂಹವು ಒಡನೆ ಬರುತ್ತಿರಲು ॥೮೭॥ ಪರವಾದಿಗಳೆಂಬ ಮ

ಘೋರಸಮುದ್ರಬಡಬಾನಲಃ । ಪರವಾದಿಮದೋದ್ರಿಕ್ತಮಾತಂಗಮೃಗನಾಯಕಃ ॥೮೮॥ ಪರವಾದಿಜನಾನೀಕಮೇಘದುರ್ಘರಮಾರುತಃ । ಪರವಾದಿಗಣಾರಣ್ಯದಾಹದಕ್ಷಮದವಾನಲಃ ॥೮೯॥ ಪರವಾದಿದ್ರುಮೋದ್ದಂಡಕುಠಾರೋಽತಿನಿಶಾತನಃ ॥೯೦॥ ಪರವಾದಿವಿನಾಶೋದ್ಯದ್ಧೂಮಕೇತುಸ್ಸಮುದ್ಧತಃ । ಪರವಾದಿಕ್ಷಿತಿಧರದಲನೋದ್ಯನ್ಮಹಾಶನಿಃ॥೯೧॥ ಪರವಾದ್ಯುಚ್ಚವಲ್ಮೀಕಖನಿತ್ರಮತಿನಿಷ್ಠುರಂ । ಪರವಾದಿಭಣದ್ಭೇಕಭಯಂಕರಭುಜಂಗಮಃ ॥೯೨॥ ಪರವಾದಿಪುರವ್ಯೂಹಸಂಹಾರಫಣಿಭೂಷಣಃ । ಕೋಪಾಗ್ನಿದಹ್ಯಮಾನೇನಬೌದ್ಧೇನಾರಾದ್ವಿಲೋಕಿತಃ ॥೯೩॥ ಆಯಯೌಪಂಡಿತಾರಾಧ್ಯದೇಶಿಕೇಂದ್ರಸ್ಸಭಾಸ್ಥಲಂ ।

ಇತ್ಯಸಂಖ್ಯಾತ.... ......ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೇ ವಾದಪ್ರಕರಣೇ ವಾದಾಯ ತತ್ಪಂಡಿತೇಂದ್ರಸ್ಯವೆಲ್ನಾಡಚೋಳಾಸ್ಥಾನಾಭಿಗಮನಕಥನಂನಾಮಪ್ರಥಮೋಽಧ್ಯಾಯಃ.

---

ಹಾಭಯಂಕರಸಮುದ್ರಕ್ಕೆ ಬಡಬಾಗ್ನಿಯೂ,ಪರವಾದಿಗಳೆಂಬ ಮತ್ತಗಜಗಳಿಗೆ ಸಿಂಹನೂ ॥೮೮॥ ಪರವಾದಿ ಜನ ಸಮೂಹವೆಂಬ ಮೋಡಕ್ಕೆ ಬಿರುಗಾಳಿಯೂ, ಪರವಾದಿಸಮೂಹವೆಂಬ ಕಾಡನ್ನು ಸುಡುವುದಕ್ಕೆ ಸಮರ್ಥವಾದಕಾಳ್ಕಿಚ್ಚೂ ॥೮೯॥ ಪರವಾದಿಗಳೆಂಬ ಬಳ್ಳಿಗಳನ್ನು ಕುಯ್ಯುವುದಕ್ಕೆ ಕುಡುಗೋಲೂ, ಪರವಾದಿಗಳೆಂಬ ಕತ್ತಲೆಗೆ ಸೂರ್ಯನೂ, ಪರವಾದಿಗಳೆಂಬ ಮರಗಳನ್ನು ಕತ್ತರಿಸುವುದಕ್ಕೆ ಕೊಡಲಿಯೂ॥೯೦॥ ಪರವಾದಿಗಳನ್ನು ಧ್ವಂಸಮಾಡುವುದರಲ್ಲಿ ಉದ್ದನಾಗಿ ಎದ್ದಿರುವ ಮಹಾಧೂಮಕೇತುವೂ, ಪರವಾದಿಗಳೆಂಬ ಬೆಟ್ಟಗಳನ್ನು ಸೀಳುವುದರಲ್ಲಿ ಮಹಾ ವಜ್ರಾಯುಧವೂ ॥೯೧॥ ಪರವಾದಿಗಳೆಂಬ ಹುತ್ತುಗಳನ್ನು ಅಗೆವುದಕ್ಕೆ ಕಠಿನವಾದ ಗುದ್ದಲಿಯೂ, ಪರವಾದಿಗಳೆಂಬ ವಟವಟವೆನ್ನುವ ಕಪ್ಪೆಗಳನ್ನು ನುಂಗುವಲ್ಲಿ ಭೀಕರಸರ್ಪವೂ ॥೯೨॥ ಪರವಾದಿಗಳೆಂಬತ್ರಿಪುರಸಮೂಹವನ್ನು ಸುಟ್ಟು ಸಂಹರಿಸುವಲ್ಲಿ ಪರಮೇಶ್ವರನೂ ಆದ ಶ್ರೀಮನ್ಮಲ್ಲಿಕಾರ್ಜುನಪಂಡಿತಾರಾಧ್ಯನು, ಕೋಪಾಗ್ನಿಯಿಂದ ಬೇಯುತ್ತಿರುವ ಬೌದ್ಧಗುರುವಿನ ಕಣ್ಣಿಗೆ ಸಮೀಪದಲ್ಲೇ ಗೋಚರಿಸಿದವನಾಗಿ, ಸಭೆಯನ್ನು ಪ್ರವೇಶಿಸಿದನು.

ಎಂಬಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ವಾದಪ್ರಕರಣದೊಳಗೆ ಆ ಪಂಡಿತಾರಾಧ್ಯರು ವಾದಕ್ಕಾಗಿ ವೆಲ್ನಾಡ ಚೋಳರಾಜನ ಸಭೆಗೆ ದಯಮಾಡಿಸಿದುದನ್ನು ವರ್ಣಿಸುವ ಮೊದಲನೆಯಧ್ಯಾಯವು ಮುಗಿದುದು.

# ಅಥ ದ್ವಿತೀಯೋಽಧ್ಯಾಯಃ.

(ವೇದಾನಾದಿತ್ವಸ್ವಯಂಭೂತ್ವನಿರಸನಕಥನಂ.)

ಅಥಾರಾಧ್ಯೋದಕ್ಷಭಾಗೇಕೃತ್ವಾಭಕ್ತಾನ್ಕೃತಾಸನಾನ್। ಧೃತ್ವಾ ಶಿರಸಿಭಕ್ತಾನಾಂತೇಷಾಮಾಜ್ಞಾಂಪ್ರಮೋದತಃ ॥೧॥ ಖುರಲೀಗತಸನ್ನದ್ಧ ಇವೋದಗ್ರಭಟಾಗ್ರಣೀಃ । ಮಾದ್ಯದ್ಗಜಇವೋದ್ದಾಮಭೀಮಸ್ವೈರವಿಜೃಂಭಿತಃ॥೨॥ ಮೃಗಾನ್ವೀಕ್ಷ್ಯವ್ಯಾಧಇವರಿಪೂನ್ದೃಷ್ಟ್ವೇವವಿಕ್ರಮೀ। ವಿಲೋಕ್ಯಗಾವ್ಯಾಘ್ರ ಇವತಂಬೌದ್ಧಂಪ್ರೇಕ್ಷ್ಯಕೋಪತಃ॥೩॥ ಸಮಯಾಪಶದಾನ್ಪ್ರಾಹಪ್ರಹಸನ್ನವಧೀರ್ಯತಾನ್। ಕ್ವವೈದಿಕಃಕ್ವಬೌದ್ಧಃಕ್ವಕಪಾಲೀಕ್ವವೈಷ್ಣವಃ ॥೪॥ ಕ್ವಚಾರ್ವಾಕಃಕ್ವಸಾಂಖ್ಯಃಕ್ವವೇದಾಂತೀಕ್ವಕರ್ಮಠಃ । ವಿರುದ್ಧೈವಂಸಭಾಽನ್ಯೋನ್ಯಂವಿದ್ಯತೇಕುತ್ರ ವೇಶ್ಮನಿ ॥೫॥ ವಲ್ಕಲೇನಕೃತಾಸ್ಸೂಕ್ಷ್ಮರಜ್ಜವೋಬಹವೋಭುವಿ । ಮಹತಾರಥಪಾಶೇನಲಭೇರನ್ಸಮತಾಂಕಿಮು ॥೬॥ ನೃಪೋಪರೋಧ

---

## ೨ ನೆಯ ಅಧ್ಯಾಯವು.

(ವೇದದ ಅನಾದಿತ್ವಸ್ವಯಂಭೂತ್ವವಾದವನ್ನು ಶ್ರೀ ಪಂಡಿತಾರಾಧ್ಯರು ಖಂಡಿಸಿದ ಕಥೆಯು.)

ಬಳಿಕ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ ಬಲಗಡೆಯಲ್ಲಿ ಭಕ್ತಜನರನ್ನೆಲ್ಲಾ ಆಸನಗಳಮೇಲೆ ಕುಳ್ಳಿರಿಸಿ, ಸಂತೋಷದಿಂದ ಆ ಭಕ್ತರುಗಳ ಅಪ್ಪಣೆಯನ್ನು ತನ್ನ ತಲೆಯಮೇಲೆ ಹೊತ್ತು ॥೧॥ ಗರಡಿಗೆ ಹೋಗಿ ಸಾಧನವನ್ನು ಮಾಡಿ ಸನ್ನದ್ಧನಾಗಿರುವ ಶೂರಶ್ರೇಷ್ಠನಂತೆಯೂ, ಅತ್ಯಂತ ಭಯಂಕರವಾಗಿ ಸ್ವೇಚ್ಛೆಯಿಂದ ವಿಹರಿಸುತ್ತಿರುವ ಮತ್ತಗಜದಂತೆಯೂ ॥೨॥ ಸಭೆಗೆ ಭೀಕರನಾಗಿ, ಮೃಗಗಳನ್ನು ಕಂಡ ಬೇಡನಂತೆಯೂ, ಶತ್ರುಗಳನ್ನು ಕಂಡ ಪರಾಕ್ರಮಿಯಂತೆಯೂ, ಗೋವುಗಳನ್ನು ನೋಡಿದ ಹುಲಿಯಂತೆಯೂ, ಆ ಬೌದ್ಧನನ್ನು ಕೋಪದಿಂದ ನೋಡಿ, ಕೀಳುಮತದವರಾದ ವಾದಿಗಳನ್ನೆಲ್ಲಾ ನೋಡಿ ನಕ್ಕು, ಹೀಗೆ ಹೇಳಿದನು–ವೈದಿಕನೆಲ್ಲಿ? ಬೌದ್ಧನೆಲ್ಲಿ? ಕಾಪಾಲಿಕನೆಲ್ಲಿ? ವೈಷ್ಣವನೆಲ್ಲಿ? ॥ಚಾರ್ವಾಕನೆಲ್ಲಿ? ಸಾಂಖ್ಯನೆಲ್ಲಿ? ವೇದಾಂತಿಯೆಲ್ಲಿ? ಕರ್ಮಿಯೆಲ್ಲಿ ? ಇವರಿವರಿಗ ಕೂಟವು ಹೇಗೆ ಸಲ್ಲುವುದು ? ಪರಸ್ಪರ ವಿರುದ್ಧವಾದ ಮತದವರಿಂದ ಕೂಡಿದ ಇಂಥ ಸಭೆಯು ಮತ್ತೆಲ್ಲಾದರೂ ಇರುವುದೆ ? ॥೫॥ ಭೂಮಿಯಲ್ಲಿ ನಾರಿನಿಂದ ಹೊಸೆದ ಅನೇಕ ಸಣ್ಣ ದಾರಗಳು, ದೊಡ್ಡ ರಥವನ್ನೆಳೆಯಲು ಕಟ್ಟುವ ಹಗ್ಗದೊಡನೆ ಸಮನಾಗುವುದೆ? ॥೬॥ ರಾಜನ ಕಟ್ಟುಬಲ್ಮೆಗಾಗಿ ಬಂದ ಇವರುಗಳೆಲ್ಲಾ

ಸಂಪ್ರಾಪ್ತಾವಾದಾಯಾಲಮಮಾಕಥಂ । ಪ್ರೋತಶಂಖಾಶ್ಮಖಟ್ವಾಂಘ್ರಿ ಮಾಲೇವಾಸ್ತಿಸಭಾಕಿಮು ॥೭॥ ಮೈತ್ರೀದಿಗಂಬರಾಣಾಂಚರಜಕಾನಾಂ ನುವಿದ್ಯತೇ॥ಕಸ್ಸಭಾನಾಯಕೋಽಸ್ತ್ಯತ್ರವಾದೀವಕ್ತುಂಕ್ಷಮಶ್ಚಕಃ॥೮॥ ಏತಾವತ್ಯೈವತದ್ಯುಕ್ತಮಸ್ಮಾಕಂವಿನಿವರ್ತಿತುಂ । ತಥಾಪಿಕ್ರಿಯತೇಪ್ರ ಶ್ನಃಶೃಣುತ್ವಂನನುವೈದಿಕ ॥೯॥ ಕಥಂಬೌದ್ಧೇನತೇಮೈತ್ರೀನಜಾನಾಸಿತ ನುಂಕಿಮು! ಸ್ಪ್ರಷ್ಟುಂದ್ರಷ್ಟುಂವಚೋವಕ್ತುಂಪ್ರತಿವಕ್ತುಂನಯುಜ್ಯ ತೇ ॥೧೦॥ ಜೈನೇನವೇದಬಾಹ್ಯೇನತಥಾಹ್ಯುಕ್ತಾಪುರಾತನೈಃ । ಹಸ್ತಿನಾ ಹನ್ಯಮಾನೋಽಪಿನವಿಶೇಜ್ಜೈನಮಂದಿರಂ ॥೧೧॥ ಇತಿಸ್ಮೃತಿಪ್ರಸಿದ್ಧೇಯಂ ಭವತಾವಿಸ್ಮೃತಾಕಿಮು । ಅಯಂಜಿನೋನಭವತಿಕಿಂತುಬೌದ್ಧಇತಿತ್ವ ಯಾ ॥೧೨॥ ಕಥ್ಯತೇಚೇನ್ಮಹೀಭಾಗೇಕೋಭೇದೋಜಿನಬೌದ್ಧಯೋಃ। ತತ್ಪ್ರೋಕ್ತೋನರಕಸ್ತೇಕಿಮಿಷ್ಟಸ್ತಿಷ್ಠತುತತ್ತಥಾ ॥೧೩॥ ವೇದಾನಿತ್ಯಾಇ ತಿಯದಿಮನ್ಯಸೇಶೃಣುವೈದಿಕ । ಷಟ್ತ್ರಿಂಶತ್ತತ್ವಸಂದೋಹೇಹ್ಯನಿತ್ಯೋ

---

ವಾದಮಾಡುವುದಕ್ಕೆ ಹೇಗೆ ಸಮರ್ಥರಾದಾರು? ಶಂಖ-ಕಲ್ಲುಮಣಿ-ಮಂಚದಕಾಲು-ಇವುಗಳನ್ನೆಲಾ ಒಟ್ಟಿಗೆ ಸೇರಿಸಿ ಪೋಣಿಸಿ ಮಾಡಿದ ಸರದಂತೆ ಈ ಸಭೆಯಿರುವುದಲ್ಲ! ಇದೇನು ? ಬಟ್ಟೆ ಹೊದೆಯದಿರುವವರಿಗೂ (ದಿಗಂಬರಜೈನರಿಗೂ) ಅಗಸರಿಗೂ ಸ್ನೇಹವಿರುವುದೇನು? ಇಲ್ಲಿ ಸಭಾನಾಯಕನಾಗಿರುವವನಾರು? ಮಾತನಾಡಲು ಸಮರ್ಥನಾದ ವಾದಿಯಾರು ? ॥೮॥ ಈ ಸಭೆಗೆ ಸುಮ್ಮನೆ ಬಂದಂತಾಯ್ತು. ಮುಂದೆನಿಂದು ವಾದಿಸುವವರಾರೂಇಲ್ಲದ ಬಳಿಕ ನಾವು ಹಿಂದಿರುಗಿ ಹೋಗುವುದೇ ಯುಕ್ತವಾಗಿ ತೋರುತ್ತದೆ. ಆದರೂ ಪ್ರಶ್ನೆಮಾಡದೆ ಸುಮ್ಮನೆ ಹೋಗುವುದು ಸರಿಯಲ್ಲವೆಂದು ಯೋಚಿಸಿ, ಹೀಗೆ ಆರಂಭಿಸಿದನು—ಎಲೈ ವೈದಿಕನೆ, ಕೇಳು ॥೯॥ ಬೌದ್ಧನೊಡನೆ ನಿನಗೆ ಸ್ನೇಹವು ಹೇಗೆ ಸಮನಿಸಿರುವುದು ? ಪಂಚಮಲಯುಕ್ತವಾದ ಅವನ ದೇಹವನ್ನು ತಿಳಿದಿಲ್ಲವೇನು ? ವೇದಬಾಹ್ಯನಾದ ಜೈನನನ್ನು ಮುಟ್ಟಲೂ ನೋಡಲೂ ಮಾತನಾಡಿಸಲೂ ಪ್ರತ್ಯುತ್ತರವನ್ನು ಕೊಡಲೂ ಸಹ ಆಗದು ॥೧೦॥ ಎಂದು ಆರ್ಯೋಕ್ತಿಯಿರುವುದು. ಆನೆಯಿಂದ ಕೊಲ್ಲಲ್ಪಡುವ ಸ್ಥಿತಿಯಲ್ಲಿದ್ದರೂ ಜಿನಾಲಯವನ್ನು ಪ್ರವೇಶಿಸಬಾಗದೆಂದು ಧರ್ಮಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ವಚನವನ್ನು ನೀನು ಮರತೆಯೊ ? ಇವನು ಜಿನನಲ್ಲ, ಬೌದ್ಧನೆಂದು ನೀನು ಹೇಳುವೆಯೋನೊ ? ಹಾಗಾದರೆ ಭೂತಲದಲ್ಲಿ ಜೈನರಿಗೂ ಬೌದ್ಧರಿಗೂ ಇರುವ ಭೇದವೇನು ? ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ನೀನು ಜೈನಸಂಗವನ್ನು ಮಾಡಿದ ಕಾರಣ, ನಿನಗೆ ನರಕಪ್ರಾಪ್ತಿಯಾಗುವುದು, ಅದು ನಿನಗಿಷ್ಟವೊ ? ಅದು ಹಾಗಿರಲಿ ॥೧೩॥ ಎಲೈ ವೈದಿಕನೆ, ವೇದಗಳು ನಿತ್ಯ

ಪಂಚಮಂಸಭಃ ||೧೪|| ಶಬ್ದೋಗುಣಸ್ತಸ್ಯಕಥಂನಿತ್ಯಸ್ಸ್ಯಾತ್ಸಂಬದ್ಧಿಣವೈದಿಕ । ಹೇತುಶೂನ್ಯೋಭುವಿಕಥಂಸಾದಿರುತ್ಪತ್ತಿಮಾನ್ಕಥಂ ||೧೫|| ತಸ್ಮಾತ್ಸ್ವಯಂಭುವೋವೇದಾ ಇತಿತ್ವಂಮನುಷೇಯದಿ । ಉತ್ಪತ್ತಿನಾಶರಹಿತಾಸ್ಥಿತಿಸ್ತೇಷಾಂಕಥಂಭವೇತ್ ||೧೬|| ರುರುವರ್ಣತನುಃಪದ್ಮಪತ್ರಾಕ್ಷೋಬ್ರಹ್ಮದೈವತಃ।ಕ್ವರತ್ನಿಃಕುಂಚಿತಶ್ಮಶ್ರುರಾತ್ರೇಯವರಗೋತ್ರಕಃ||೧೭|| ಋಗ್ವೇದಃಕಥಿತಸ್ತಸ್ಯಗಾಯತ್ರಂಛಂದಉಚ್ಯತೇ । ಯಜುರ್ವೇದಃಕೃಶಸ್ಸ್ಥೂಲಕಪಾಲೀತಾಮ್ರವರ್ಣಕಃ||೧೮|| ತ್ರಿಷ್ಟುಪ್‌ಛಂದೋಭರದ್ವಾಜಗೋತ್ರಮಸ್ಯಹರಿಃಪತಿಃ।ಸಾಮವೇದೋಶಿರ್ಜುನಸ್ಸ್ರಗ್ವೀ(ಪಾ-ಅರ್ಜುನಶೃಂಗೀ)ಶುಚಿಶ್ಶಿ ರುದ್ರದೈವತಃ ||೧೯|| ಛಂದಸ್ತುಜಗತೀತಸ್ಯದಾಂತಃಕಾಶ್ಯಪಗೋತ್ರಕಃ । ಅಥರ್ವವೇದಸ್ತೀಕ್ಷ್ಣಸ್ಯಾತ್ಕೃಷ್ಣೋಮಾಹೇಂದ್ರದೈವತಃ ||೨೦|| ಛಂದೋಶಿಸ್ಯಾನುಷ್ಟುಭಂಪ್ರೋಕ್ತಂಗೋತ್ರಂಬೈಜಾನಸಂಜ್ಞಕಂ । ಏವಂವರ್ಣಪ್ರಮಾಣಾಧಿದೈವಗೋತ್ರಾದಿಕೇಸ್ಫುಟಂ||೨೧

---

ವಾದುವೆಂದು ನೀನು ತಿಳಿವೆಯಾದರೆ, ಕೇಳು-೩೬ ತತ್ವಗಳ ಗುಂಪಿನಲ್ಲಿ ಆಕಾಶತತ್ವವು ಐನೆಯದು. ||೧೪|| ಅದರ ಗುಣವಾದ ಶಬ್ದವು ಅನಿತ್ಯವಾದುದು. ಅಂಥ ಅನಿತ್ಯಗುಣಸಂಬಂಧವುಳ್ಳ ಆಕಾಶವೂ ಅನಿತ್ಯವಾದುದು. ಹೀಗಿರುವಲ್ಲಿ ಶಬ್ದಮಯವಾದ ಆ ವೇದವು ಹೇಗೆ ನಿತ್ಯವಾಗುವುದು? "ಭೂಮಿಯಲ್ಲಿ ತನಗೊಂದು ಕಾರಣವಿಲ್ಲದ ವಸ್ತುವು ಆದಿಸಮೇತವೂ ಉತ್ಪತ್ತಿಯುಳ್ಳುದೂ ಹೇಗೆ ಆಗುವುದು? ಅದುಕಾರಣ, ವೇದಗಳು ಸ್ವಯಂಭುಗಳು" ಎಂದು ನೀನು ತಿಳಿವೆಯಾದರೆ, ಅವುಗಳ ಸ್ಥಿತಿಯು ಅದು ಹೇಗೆ ಉತ್ಪತ್ತಿನಾಶರಹಿತವಾದುದು? ||೧೬|| ಋಗ್ವೇದವು ಕಪ್ಪುಮಚ್ಚೆಗಳುಳ್ಳದುಪ್ಪಿಯಬಣ್ಣದ ಶರೀರವುಳ್ಳುದು, ತಾವರೆಯೆಸಳನಂತೆ ಕಣ್ಣುಳ್ಳುದು, ಅದಕ್ಕೆ ಬ್ರಹ್ಮನೇ ಅಧಿದೈವತೆಯು, ಅದಕ್ಕೆ ತುಂಡಾದಮುಂದೋಳೂ, ಗುಜುರುಮೀಸೆಯೂ, ಆತ್ರೇಯಗೋತ್ರವೂ ||೧೭|| ಗಾಯತ್ರೀಛಂದಸ್ಸೂ ಇರುವುವು. ಯಜುರ್ವೇದವು ಕೃಶಾಂಗವಾಗಿಯೂ, ದಪ್ಪನಾದ ತಲೆಬುರುಡೆಯುಳ್ಳುದಾಗಿಯೂ ಕೆಂಪು ವೈಬಣ್ಣವುಳ್ಳುದಾಗಿಯೂ ||೧೮|| ತ್ರಿಷ್ಟುಪ್ಛಂದಸ್ಸುಳ್ಳುದಾಗಿಯೂ, ಭಾರದ್ವಾಜಗೋತ್ರವುಳ್ಳುದಾಗಿಯೂ ಇರುವುದು. ಅದಕ್ಕೆ ವಿಷ್ಣುವೇ ದೇವತೆಯು. ಸಾಮವೇದವು ಶುಭ್ರವರ್ಣವಾದುದು. ಮಾಲಾಧಾರಿಯು, (ಬಿಳಿಯ ಕೊಂಬುಗಳುಳ್ಳುದು) ನಿರ್ಮಲವಾದುದು, ರುದ್ರನೈವತಾಕವಾದುದು ||೧೯|| ಇಂದ್ರಿಯ ನಿಗ್ರಹಾದಿ ತಪಶ್ಶಾಲಿಯು, ಅದಕ್ಕೆ ಜಗತಿಯೆಂಬ ಛಂದಸ್ಸು. ಕಾಶ್ಯಪಗೋತ್ರವು. ಅಥರ್ವವೇದವಾದರೋ- ಕಪ್ಪುಬಣ್ಣವೂ ಕಠಿನಸ್ವಭಾವವೂ ವುಳ್ಳುದು. ಅದಕ್ಕೆ ಇಂದ್ರನು ಅಧಿದೇವತೆಯು ||೨೦|| ಅನುಷ್ಟುಪ್ ಛಂ

ಚರಣವ್ಯೂಹವಾಕ್ಯೇಷುವಿಶ್ರುತೇಷುಸಮಂತತಃ । ಶ್ರೂಯಮಾಣೇಭ
ಯಂಹಿತ್ವಾವೇದಾನಿತ್ಯಾಸ್ಸ್ವಯಂಭುವಃ॥೨೨॥ ಇತಿವಕ್ತುಂಶಕ್ಯತೇಕಿಂ
ಭವತಾನನುವೈದಿಕ । ತಥಾಪಿತೇಪುನರ್ನಿತ್ಯಾಇತಿಬ್ರೂತೇಭವಾನ್ಯದಿ॥
ಜಗತಸ್ಸೃಷ್ಟಿವಿಲಯವಶಾದೇಷಾಮನಿತ್ಯತಾ । ಜಗತೋಽಪಿಹ್ಯನಾದಿತ್ವಂ
ಮನ್ಯಸೇಚೇದಿದಂಶೃಣು ॥೨೪॥ ಪ್ರಾಕ್ ಜ್ಞಾನವಿಷಯಜ್ಞಾನೋತ್ತರಜ್ಞಾನ
ಕದಂಬಕೇ । ಬುದ್ಧಾಹಿವಿಷಯಜ್ಞಾನೇದ್ವಿತೀಯೇಸ್ಫುರಿತೇಸತಿ ॥ ತೃತೀ
ಯಂಭಾಸತೇಜ್ಞಾನಂತಸ್ಮಿನ್ಜ್ಞಾತೇತತಃಪರಂ । ಇತಿಜ್ಞಾನಾತ್ಪೂರ್ವಪೂ
ರ್ವಾತ್ಪರಂಜ್ಞಾನಂಪ್ರತೀಯತೇ ॥೨೬॥ ಯಥಾತಥಾಪರಂಭೂತ್ವಾಯತ್
ಜ್ಞಾನಂಪ್ರಾಗವಸ್ಥಿತಂ।ಪೂರ್ವಂಭವತಿತದ್ ಜ್ಞಾನಮೇವಮಕ್ಷರಸಂಹತೌ॥
ಆದ್ಯಾಕ್ಷರಂತದ್ಭವತಿವಿಷಯಾಕ್ಷರಮತ್ರಹಿ। ಅಕ್ಷರಂಯದ್ದ್ವಿತೀಯಂತದು
ತ್ತರಾಕ್ಷರಮುಚ್ಯತೇ॥೨೮॥ ತದ್ವೈವಿಷಯವರ್ಣಂಸತ್ಪೂರ್ವಾಕ್ಷರಮು
ದೀರ್ಯತೇ । ತಸ್ಮಾದಪ್ಯುತ್ತರಂವರ್ಣಂವಿಷಯಾಕ್ಷರಮುಚ್ಯತೇ ॥೨೯॥

---

ದನ್ನು, ಬೈಜಾನವೆಂಬ ಗೋತ್ರವು. ಹೀಗೆ ಆ ನಾಲ್ಕು ವೇದಗಳ ಬಣ್ಣ ಸ್ವರೂಪ ಅ
ಧಿದೇವತೆ ಗೋತ್ರ ಮೊದಲಾದುವುಗಳು ಇರುವುವೆಂದು ಶಾಸ್ತ್ರವಚನಗಳು ಪ್ರಸಿದ್ಧ
ವಾಗಿರುವಾಗ, ಎಲೆ ವೈದಿಕನೆ, ಅದನ್ನು ಕೇಳಿಯೂ ಭಯವಿಲ್ಲದೆ " ವೇದಗಳು ನಿತ್ಯ
ಗಳು-ಸ್ವಯಂಭುಗಳು " ಎಂದು ॥೨೦॥ ನೀನು ಹೇಳಲಾದೀತೆ ? ಹಾಗಾದರೂ ವೇದಗ
ಳು ನಿತ್ಯಗಳೇ ಸರಿ ಎಂದು ನೀನು ಹೇಳುವೆಯಾದರೆ ॥೨೩॥ ಕೇಳು-ಜಗತ್ತಿನಂತೆ ಈ
ವೇದಗಳೂ ಉತ್ಪತ್ತಿನಾಶಗಳಿಗೆ ಅಧೀನಗಳಾಗಿರುವುದರಿಂದ ಇವುಗಳಿಗೆ ನಿತ್ಯತ್ವವಿರು
ವುದಿಲ್ಲ. ಜಗತ್ತುಕೂಡ ಅನಾದಿಯಾದುದೆಂದು ನೀನು ತಿಳಿವೆಯಾದರೆ, ಕೇಳು-॥೨೪॥
ಪ್ರಾಗ್ಜ್ಞಾನ- ವಿಷಯಜ್ಞಾನ-ಉತ್ತರಜ್ಞಾನವೆಂದು ಮೂರುತೆರನಾದ ಜ್ಞಾನಗಳಲ್ಲಿ ವಿಷ
ಯಜ್ಞಾನವೆಂಬ ೨ನೆಯದು ತನ್ನ ಬುದ್ಧಿಯಲ್ಲಿ ಸ್ಫುರಿಸಲಾಗಿ, ಅದರಿಂದ ೩ನೆಯ ಸುಜ್ಞಾ
ನವು ಸಿದ್ಧಿಸುವುದು. ಆ ಜ್ಞಾನದಿಂದ ಅದರ ಮುಂದಣ ಜ್ಞಾನವು ಸಿದ್ಧಿಸುವುದು. ಹೀಗೆ
ಯೇ ಪರಂಪರೆಯಾಗಿ ಮೊದಮೊದಲ ಜ್ಞಾನದಿಂದ ಅವುಗಳ ಉತ್ತರೋತ್ತರ ಜ್ಞಾನವು
ಸಿದ್ಧಿಸುವುದು ॥೨೬॥ ಮೊದಲನೆಯಜ್ಞಾನಕ್ಕೆ ಯಾವುದು ಪರಜ್ಞಾನವಾಗಿರುವುದೋ
ಅದೇ ಮುಂದೆ ತನಗೆ ಪರವಾದ ಜ್ಞಾನಕ್ಕೆ ತಾನು ಪೂರ್ವಜ್ಞಾನವಾಗುವುದು. ಇಂಥ
ಜ್ಞಾನ ಪರಂಪರೆಯನ್ನೆಲ್ಲಾ ಅರಿವವನೊಬ್ಬನಿರುವಾಗ ಅವನಿಗಿಂತ ಈ ಜ್ಞಾನವು ಅದು
ಹೇಗೆ ಅನಾದಿಯಾಗುವುದು ? ಇದರಂತೆಯೇ ಅಕ್ಷರ ಸಮೂಹದಲ್ಲಿಯೂ ಸಹ ತಿಳಿಯ
ಬೇಕು ॥೨೭॥ ಹೇಗೆಂದರೆ—ಮೊದಲನೆಯಕ್ಷರಕ್ಕೆ ೨ನೆಯ ವಿಷಯಾಕ್ಷರವು ಪರವಾ

ತುರೀಯಮಕ್ಷರಂತದ್ವದುತ್ತರಾಕ್ಷರಮುಚ್ಯತೇ । ಇತ್ಯುತ್ತರೋತ್ತರೇ ವರ್ಣೇ ಪೂರ್ವಪೂರ್ವಾಣಿತಾನಿತು ||೪೦|| ಅಕ್ಷರಾಣಿಹ್ಯನಾದೀನಿಸಂತುಯಸ್ಯಾಪಿಕಸ್ಯಚಿತ್ । ಸರ್ವಪದ್ಯಾಕ್ಷರಜ್ಞಾತುರನಾದೀನ್ಯಕ್ಷರಾಣಿಕಿಂ ||೪೧|| ತಸ್ಮಾಜ್ಜಗಂತ್ಯನಾದೀನಿನಭವಂತ್ಯೇವತತ್ತ್ವತಃ । ಕಿಂಚನಿತ್ಯಾನ್ಯನಾದೀನಿ ಜಗಂತೀತಿಬ್ರವೀಷಿಚೇತ್ ||೪೨|| ಕಿಂತಜ್ಜಗದನಾದಿತ್ವಂಜ್ಞಾತಂಜ್ಞಾನದೃಶಾಽಥವಾ । ಸ್ಥಿತ್ವಾತಜ್ಜಗತಃಪೂರ್ವಂಕಿಂಜ್ಞಾತಂಚಕ್ಷುಷಾಽಥವಾ ||೪೩|| ಜ್ಞಾತಮಾಗಮವಾಕ್ಯೇನಕಿಂವಾತ್ವಂವದವೈದಿಕ । ಜಾನಾಮಿಜ್ಞಾನದೃಷ್ಟ್ಯಾಽಹಮಿತಿಬ್ರೂತೇಭವಾನ್ಯದಿ ||೪೪|| ತ್ವಂತ್ವಾಮೇವನಜಾನಾಸಿಜಗತಸ್ತುಸ್ಯನಿತ್ಯತಾಂ । ಅನಾದಿತಾಂಚವಿಜ್ಞಾತುಂಸಮರ್ಥೋಽಸಿಕಥಂವದ ||೪೫|| ಜಾನಾಮ್ಯಹಂಚಕ್ಷುಷೈವದೃಷ್ಟ್ವಾಜಗದನಾದಿತಾಂ । ಇತಿ ಬ್ರವೀಷಿಚೇನ್ನೇತ್ರೇಭವತಃಕ್ವಸಮಾಗತೇ ||೪೬|| ಶಿವಸ್ಯನೇತ್ರಯೋಸ್ಸೂರ್ಯಸೋಮಯೋಸ್ಸ್ಫುರಣಂವಿನಾ । ತದ್ಭಾಜಿಜ್ಞಾನಂದೃಷ್ಟ್ಯೋರ್ಗ್ರ

---

ಗಿರುವುದು. ಬಳಿಕ ಆ ಪರವಾದ ೨ ನೆಯಕ್ಷರವೇ ತನ್ನ ಮುಂದಣ ಅಕ್ಷರಕ್ಕೆ ಪೂರ್ವಾಕ್ಷರವಾಗುವುದು. ಆಗ ೩ ನೆಯಕ್ಷರವೇ ವಿಷಯಾಕ್ಷರವೆನಿಸಿಕೊಳ್ಳುವುದು. ಬಳಿಕ ಆ ಅಕ್ಷರವೇ ತನ್ನ ಉತ್ತರವರ್ಣಕ್ಕೆ ತಾನು ಪೂರ್ವಾಕ್ಷರವಾಗುವುದು. ||೩೯|| ಹೀಗೆ ಮುಂದುಮುಂದಣ ಅಕ್ಷರಗಳಿಗೆ ಹಿಂದು ಹಿಂದಿನ ಅಕ್ಷರಗಳು ಪೂರ್ವಗಳಾಗಿಯೇ ಇರುವುವು. ||೪೦|| ಅಕ್ಷರಗಳನ್ನೇ ಅರಿಯದ ಯಾವನಾಪರೊಬ್ಬನಿಗೆ ಅಕ್ಷರಗಳು ಅನಾದಿಗಳಾದರೆ ಆಗಲಿ, ಅಂಥ ಅಕ್ಷರ ಸಮೂಹವೆಲ್ಲಾ ಕೂಡಿರುವ ಒಂದು ಪದ್ಯವನ್ನು ಅರಿತವನಿಗೆ ಆ ಅಕ್ಷರಗಳು ಅನಾದಿಗಳಾಗುವುವೇನು ? ||೪೧|| ಅದುಕಾರಣವೇ ವಿಚಾರ ಮಾಡಿನೋಡಿದರೆ ಜಗತ್ತುಗಳೂ ಅನಾದಿಗಳಾಗುವುದಿಲ್ಲ. "ಹಾಗಲ್ಲ, ಜಗತ್ತುಗಳು ನಿತ್ಯಗಳು ಅನಾದಿಗಳು" ಎಂದು ನೀನು ಹೇಳುವೆಯಾದರೆ, ||೪೨|| ಎಲೆ ವೈದಿಕನೆ, ಆ ಜಗತ್ತಿನ ಅನಾದಿತ್ವವನ್ನು ಜ್ಞಾನಚಕ್ಷುಸ್ಸಿನಿಂದ ಕಂಡೆಯೊ ? ಅಥವಾ ಆಜಗದುದಯಕ್ಕಿಂತ ಪೂರ್ವವೇ ಇದ್ದು ಚರ್ಮಚಕ್ಷುಸ್ಸಿನಿಂದ ನೋಡಿ ತಿಳಿದೆಯೊ ? ||೪೩|| ಇಲ್ಲವೆ ಶಾಸ್ತ್ರವಚನಾಧಾರದಿಂದ ತಿಳಿದೆಯೊ ? ಹೇಳು. ಜ್ಞಾನ ಚಕ್ಷುಸ್ಸಿನಿಂದ ತಿಳಿದೆನೆಂದು ನೀನು ಹೇಳುವೆಯಾದರೆ ||೪೪|| ನಿನ್ನನ್ನೇ ನೀನು ಅರಿಯದವನಾಗಿರುವಾಗ ಆ ಜಗತ್ತಿನ ನಿತ್ಯತ್ವವನ್ನೂ ಅನಾದಿತ್ವವನ್ನೂ ತಿಳಿವುದಕ್ಕೆ ಹೇಗೆ ಸಮರ್ಥನಾದೆ ? ಹೇಳು ||೪೫|| ನಾನು ಚರ್ಮಚಕ್ಷುಸ್ಸಿನಿಂದಲೇ ನೋಡಿ ಜಗತ್ತಿನ ಅನಾದಿತ್ವವನ್ನು ತಿಳಿವೆನೆಂದು ಹೇಳುವೆಯಾದರೆ, ಶಿವನ ಕಣ್ಣುಗಳಾದ ಸೂರ್ಯ ಚಂದ್ರರ ತೇಜಸ್ಸು ಸ್ಫುರಣವಿಲ್ಲದಿದ್ದರೆ ನಿನ್ನ ಕಣ್ಣುಗಳು ಎಲ್ಲಿ ನೋಡಬಲ್ಲುವು ? ||೪೬|| ಸೂರ್ಯ

ಷ್ಟುಂನೈವಶಕ್ತಾ ಭವಂತಿಹಿ ॥೩೭॥ ಅಜ್ಞಸ್ಯಭವತೋದ್ರಷ್ಟುಂಸಾಮ
ರ್ಥ್ಯಂವಿದ್ಯತೇಕಿಮು । ಸ್ಥಿತ್ಯಾಪೂರ್ವಂಜಗದ್ದೃಷ್ಟ್ವಾಜಾನಾಮೀತಿಬ್ರ
ವೀಷಿಚೇತ್ ॥೩೮॥ ಜಗಂತ್ಯೇತಾನ್ಯನಾದೀನಿತ್ವಮಿದಾನೀಂತನಸ್ತತಃ ।
ಪ್ರಾಕ್‌ಸ್ಥಿತಾನಿಜಗಂತ್ಯದ್ಯಕಥಂಜಾನಾಸಿತದ್ವದ ॥೩೯॥ ತಸ್ಮಾದನಾದಿ
ರ್ಗೌರೀಶೋಜಗತಾಂವೇತ್ತ್ಯನಾದಿತಾಂ । ಆದಿತಾಂಚಮಹೇಶಾನಾ
ದ್ವಿದಂತಿಕ್ವಾಪರೇಕಥಂ ॥೪೦॥ ಅಥವಾಗಮವಾಕ್ಯೇನಜಾನಾಮೀತಿಬ್ರ
ವೀಷಿಚೇತ್ । ಕಿಮಸ್ತ್ಯಾಗಮಮಾನಂತೇಜಗತಾಂಪತಯೇನಮಃ॥೪೧
ಇತ್ಯಾದಿಸೂಕ್ತೇರ್ವಿಜ್ಞಾತುಂಶಕ್ತಿಃಕಿಂವಿದ್ಯತೇತವ । ತಸ್ಮಾದೇತಾನ್ಯನಾ
ದೀನಿಜಗಂತಿನಭವಂತಿಹಿ ॥೪೨॥ ತಸ್ಮಾಜ್ಜಗಂತಿವೇದೇಭ್ಯೋನಭವಂತಿಕ
ದಾಚನ ॥ ಕಿಂಚಯಾವಾಗಸ್ತಿಪಿತೃದೇವಇತ್ಯಾದಿಕಾತತಃ ॥೪೩॥ ವಚಃ
ಪಿತಾತದಸ್ಯಾಮೋತ್ಯಾದಿಕಂಯತ್ತತೋಪಿಚ । ಯುಷ್ಟ್ವೋವೋಮೇಪಿತರಾ
ವಿತಿವಾಕ್ಯಂತತೋಪಿಚ ॥೪೪॥ ತಾಏವಶ್ರುತಯಸ್ತ್ವೇಷಾಮೂಚುಶ್ಶಂಭುಃ

---

ಚಂದ್ರರ ಬೆಳಕಿಲ್ಲದೆ ನಿನ್ನ ಕಣ್ಣುಗಳು ಜಗತ್ತಿನ ಸ್ಥಿತಿಯನ್ನು ನೋಡಿ ಅರಿಯುವುದ
ಕ್ಕೆ ಸಮರ್ಥಗಳಲ್ಲವೇ ಅಲ್ಲ. ॥೩೭॥ ಅಜ್ಞನಾದ ನಿನಗೆ ಜಗತ್ತಿನ ನೆಲೆಯನ್ನು
ನೋಡುವುದಕ್ಕೆ ಸಾಮರ್ಥ್ಯವಿರುವುದೇನು ? ಜಗದುದಯಕ್ಕಿಂತ ಪೂರ್ವವೇ ಇದ್ದ
ಜಗತ್ತನ್ನು ಅರಿಯುವೆನೆಂದು ನೀನು ಹೇಳುವೆಯಾದರೆ, ಜಗತ್ತುಗಳು ಪ್ರಾಚೀನಗಳು,
ನೀನು ಈಗಿನವನು; ಅದುಕಾರಣ, ನಿನಗಿಂತ ಮೊದಲೇ ಇದ್ದ ಜಗತ್ತುಗಳನ್ನು ಈಗ
ನೀನು ಹೇಗೆ ತಿಳಿವೆ ? ಅದನ್ನು ಹೇಳು ॥೩೯॥ ಆದುದರಿಂದ ಅನಾದಿಯಾದ ಪರಶಿವನೇ
ಜಗತ್ತಿನ ಅನಾದಿತ್ವವನ್ನು ಅರಿಯಬಲ್ಲನು. ಶಿವನ ಹೊರತು ಇತರರು ಅದರ ಅನಾ
ದಿತ್ವವನ್ನು ಹೇಗೆ ತಿಳಿಯುವರು ? ॥೪೦॥ ವೇದವಚನದಿಂದ ನಾನು ಜಗತ್ತಿನ ಅನಾ
ದಿತ್ವವನ್ನು ತಿಳಿವೆನೆಂದು ಹೇಳುವೆಯಾದರೆ, ನಿನಗೆ ವೇದ ವಚನದಲ್ಲಿ ಪ್ರಾಮಾಣ್ಯವುಂ
ಟೊ ? ಹಾಗಾದರೆ, "ಜಗತಾಂಪತಯೆನಮಃ" ಎಂದು ಮೊದಲಾದ ಶ್ರುತಿ ವಚನಗ
ಳರ್ಥವನ್ನು ತಿಳಿವುದಕ್ಕೆ ನಿನಗೆ ಸಾಮರ್ಥ್ಯವುಂಟೆ ? ಅದುಕಾರಣ, ಈ ಜಗತ್ತುಗಳು
ಅನಾದಿಗಳಾಗುವುದಿಲ್ಲ ॥೪೨॥ ಜಗತ್ತುಗಳು ಅನಾದಿಗಳೆಂಬು ವೇದವಚನಗಳ ದೆಸೆಯಿಂ
ದ ಎಂದಿಗೂ ಸಿದ್ಧವಾಗುವುದಿಲ್ಲ. ಮತ್ತೂ "ಪಿತೃದೇವೋಭವ" ಎಂಬಶ್ರುತಿವಚನ
ವೂ, "ಪಿತಾತದಶ್ಯಾಮುತವರುದ್ರಪ್ರಣೇತಾ" ಎಂಬ ವೇದವಚನವೂ, "ಯುಷ್ಮೈಷೋ
ಮೋಮೇಪಿತರಾ ॥ ಎಂಬ ವಚನವೂ ಇರುವುದರಿಂದ ಆ ವೇದಗಳೇ ತಮಗೆ ಪರಶಿವನು
ತಂದೆಯೆಂದು ಹೇಳಿಕೊಂಡಿರುವುವು ॥೪೪॥ ಮತ್ತೂ ಆ ವೇದಪುರುಷರುಗಳು ಭಕ್ತಿ
ಯಿಂದ ಶಿವವ್ರತಸಂಪನ್ನರಾದವರುಗಳು. ಹೇಗೆಂದರೆ— "ವೇದಾಧಾರಯಂತಿ"

ಪಿತೇತಿಹಿ । ಸದ್ಭಕ್ತ್ಯಾ ವೇದಪುರುಷಾಶ್ಶಾಂಭವವ್ರತಸಂಯುತಾಃ ॥೪೫॥ ರುದ್ರಾಕ್ಷಧಾರಿಣೋವೇದಾಧಾರಯಂತೀತಿವಾಕ್ಯತಃ । ತನ್ಮೇಅಸ್ತು ತ್ರಿಯಾಯುಷಮಿತ್ಯಾದಿಶ್ರುತಿವಾಕ್ಯತಃ ॥೪೬॥ ಶ್ರುತೀನಾಂಭಸ್ಮನಿರತಿಸ್ಸ್ವತ ಏವಾಭಿಧೀಯತೇ । ಅಯಂಮೇಹಸ್ತ ಇತ್ಯಾದೇರ್ಲಿಂಗಪೂಜಾನುರಾಗಿತಾ ॥೪೭॥ ಯದ್ವೇದಾಶ್ಚ ಕಾಮಯಂತ ಇತ್ಯಾದಿವಚನಂತತಃ । ಯತ್ತದಶ್ನಾಮೀತಿ ಪೂರ್ವಂವಾಕ್ಯಮಸ್ತಿತತೋಪಿಚ ॥೪೮॥ ಪ್ರಸಾದಭೋಗಿತಾಸ್ವೇಷಾಂಶ್ರುತಿಭಿಸ್ತೈರ್ನಿರೂಪ್ಯತೇ । ಸಾಂಗಾವೇದಾಶ್ಚ ಶಾಸ್ತ್ರಾಣಿಮಂತ್ರೇಪಂಚಾಕ್ಷರೇಸ್ಥಿತಾಃ ॥೪೯॥ ಇತ್ಯುಕ್ತೇರ್ಲಯಮಾಯಾಂತಿವೇದಾಃ ಪಂಚಾಕ್ಷರೇಖಿಲಾಃ॥ ಇತ್ಯುಕ್ತತ್ವಾಚ್ಚ ತೇವೇದಾನಹಿನಿತ್ಯಾಸ್ಸ್ವಯಂಭುವಃ॥೫೦॥ ಉತ್ಪನ್ನಾನಿಕಥಂತಾನಿಜಗಂತೀತ್ಯತ್ರಚೋಚ್ಯತೇ । ನಿಜಾಜ್ಞಾತಶ್ಶಿವಃಪಾಥಃಕರಿಕೂರ್ಮಫಣೀಶ್ವರಾನ್ ॥೫೧॥ ಆಧಾರಾರ್ಥಂವಿಧಾಯಾದಾವಸೃಜತ್ತಚ್ಚರಾಚರಂ । ತದ್ರಕ್ಷಿತುಂಪ್ರಹರ್ತುಂಚಕ್ಷಮತೇಶಂಭುರವ್ಯಯಃ ॥೫೨॥ ಕಿಂಚನಿರ್ಮತ್ಸರೋಭೂತ್ವಾವೇದೇತ್ವಮಪಿಭಾವ

---

ಎಂಬ ಶ್ರುತಿವಚನದಿಂದ ಅವರುಗಳು ರುದ್ರಾಕ್ಷಧಾರಿಗಳೆಂದು ಸಿದ್ಧವಾಗುವುದು.॥೪೫॥ "ತನ್ಮೇಅಸ್ತುತ್ರಿಯಾಯುಷಂ" ಎಂಬುದು ಮೊದಲಾದ ವೇದವಚನಗಳಿಂದ ಶ್ರುತಿಗಳಿಗಿರುವ ಭಸ್ಮಧಾರಣನಿಷ್ಠೆಯು ತಾನಾಗಿ ವ್ಯಕ್ತವಾಗುವುದು ॥೪೬॥ "ಅಯಂಮೇಹಸ್ತೋಭಗವಾನ್" ಎಂಬ ವೇದವಚನದಿಂದ ವೇದಗಳಿಗಿರುವ ಲಿಂಗಪೂಜಾತತ್ಪರತೆಯು ಸ್ಫುಟವಾಗುವುದು ॥೪೭॥ "ಯದ್ವೇದಾಶ್ಚ ಕಾಮಯಂತೆ" ಎಂಬುದು ಮೊದಲಾದ ವಚನದಿಂದಲೂ, "ತದಶ್ನಾಮಿ" ಎಂಬುದು ಮೊದಲಾದ ವಾಕ್ಯದಿಂದಲೂ ಆ ವೇದಗಳ ಶಿವಪ್ರಸಾದ ಸ್ವೀಕಾರಾಸಕ್ತಿಯು ಗೊತ್ತಾಗುವುದು. "ಸಕಲ ವೇದಗಳೂ ಶಾಸ್ತ್ರಗಳೂ ಸಹ ಪಂಚಾಕ್ಷರ ಮಂತ್ರದಲ್ಲೇ ಅಡಕವಾಗಿರುವುವು" ಎಂಬ ವಾಕ್ಯವಿರುವುದರಿಂದ ಆವೇದಗಳು ನಿತ್ಯಗಳಾಗುವುದಿಲ್ಲ. ಮತ್ತೂ ಅವುಸ್ವಯಂಭುಗಳೂ ಅಲ್ಲ. ॥೫೦॥ (ವೇದಗಳೇ ನಿತ್ಯಗಳೂ ಸ್ವಯಂಭುಗಳೂ ಅಲ್ಲವಾದ ಬಳಿಕ, ಅಂಥವುಗಳ ವಚನಮೂಲಕವಾಗಿ ಜಗತ್ತಿನ ಅನಾದಿತ್ವವನ್ನು ನಿರ್ಧರಿಸುವುದು ಅಸಂಭವವೆಂದು ಭಾವ.) ಇನ್ನು ಆ ಜಗತ್ತುಗಳು ಹೇಗೆ ಉತ್ಪನ್ನಗಳಾದುವು ಎಂಬೀವಿಷಯದಲ್ಲಿ ಹೇಳುತ್ತೇನೆ— ಆದಿಯಲ್ಲಿ ಪರಮೇಶ್ವರನು ತನ್ನ ಆಜ್ಞೆಯಿಂದ ನೀರು ಆನೆ ಆಮೆ ಆದಿಶೇಷ-ಇವುಗಳನ್ನು ಭೂಮಿಗಾಧಾರವಾಗಿ ನಿರ್ಮಿಸಿ, ಬಳಿಕ ಚರಾಚರಾತ್ಮಕವಾದ ಜಗತ್ತನ್ನು ಸೃಷ್ಟಿಸಿದನು. ಅದನ್ನು ರಕ್ಷಿಸುವುದಕ್ಕೂ ಸಂಹರಿಸುವುದಕ್ಕೂ ಅಚ್ಯುತನಾದ ಆ ಪರಮೇಶ್ವರನೇ ಸಮರ್ಥನು ॥೫೧॥ ಈ ವಿಷಯವಾಗಿ

ಯ । ಯದಸ್ತಿಸೋಽಮಃಪವತೇರ್ಜನಿತೇತ್ಯಾದಿಕಂವಚಃ ||೫೩|| ಕಿಂಚ ಯಚ್ಚಾಸ್ತಿಪಶವೋಽಭವಂತೀತ್ಯಾದಿಕಂವಚಃ । ದೇವಾಶ್ಚಪಶವಸ್ಸಲಿಷ್ಟಾಇತ್ಯನ್ಯಂವಾಕ್ಯಮಸ್ತಿಯತ್ ||೫೪|| ಸವೇದಾಃ ದೇವತಾಸ್ಸೃಷ್ಟೇತ್ಯಾದಿಕಂವಾಕ್ಯಮಸ್ತಿಯತ್ । ತೈಸ್ಸರ್ವೈರ್ಜ್ಞಾಯತೇಶಂಭುಃಕರ್ತೇತಿಜಗತಾಂಸ್ಫುಟಂ ||೫೫|| ಯದಿಶಂಭುರ್ಜಗತ್ಕರ್ತಾಕಥಂನಿರ್ಮಿತವಾನ್ಜಗತ್ । ಬಹಿಃಸ್ಥಿತೋಽವಾಜಗತಸ್ತದಂತರ್ವಾಮಹೇಶ್ವರಃ ||೫೬|| ಇತಿಚೋದ್ಯೇತಚೇದತ್ರಕಥ್ಯತೇಸವ್ಯಗುತ್ತರಂ । ಲಿಂಗಮಧ್ಯೇಜಗತ್ಸರ್ವಮಿತಿಪೌರಾಣವಾಕ್ಯತಃ ||೫೭|| ಬ್ರಹ್ಮಾಂಡಕೋಟಯಸ್ತಸ್ಯನಿರ್ಮಾತುರ್ಲಿಂಗರೂಪಿಣಃ । ಶಿವಸ್ಯಕುಕ್ಷಿಜಲಧೌಜಾಯಂತೇಬುದ್ಬುದೋಪಮಾಃ||೫೮||ಸಾಕಾರೋವಾನಿರಾಕಾರ ಸ್ಸೃಷ್ಟಿಕರ್ತಾಶಿವಸ್ಸ್ವಯಂ । ನಿರಾಕಾರಃಕಥಂಕುರ್ಯ್ಯಾತ್ಸಾಕಾರಇತಿಚೇತ್ಸಕಿಂ||೫೯||ಅನಿತ್ಯೋವಾಽಥನಿತ್ಯೋವಾನಾನಿತ್ಯೋಽಸ್ಮದಾದಿವತ್ । ಕರ್ತಾಸನಿತ್ಯಇತಿಚೇದ್ಜ್ಞಾತಾತನ್ನಿತ್ಯತಾಕಥಂ||೬೦|| ತತ್ಸಾಕಾರನಿರಾಕಾರತತ್ವಯೋಃ

---

ವೇದದಲ್ಲಿರುವ ಈ ವಕ್ಷ್ಯಮಾಣವಾದ ವಚನಗಳನ್ನು ನೀನು ಮಾತ್ಸರ್ಯವಿಲ್ಲದೆ ಪರಿಭಾವಿಸಿನೋಡು. "ಸೋಽಮಃಪವತೇರ್ಜನಿತಾಮತೀನಾಂ" ಎಂಬುದು ಮೊದಲಾದ ವಚನವೂ, "ದೇವಾಃಪಶವೋಽಭವಂತಿ" ಎಂಬುದು ಮೊದಲಾದ ವಚನವೂ, "ಸವೇದಾಃ ದೇವತಾಸ್ಸೃಷ್ಟಾಃ" ಎಂಬುದು ಮೊದಲಾದ ವಚನವೂ ಸಹ ವೇದದಲ್ಲಿವೆ. ಅವುಗಳಿಂದೆಲ್ಲಾ ಜಗತ್ತಿಗೆ ಶಂಭುವೇ ಕರ್ತನೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ ||೫೫|| "ಶಿವನು ಜಗತ್ಕರ್ತೃವಾದರೆ ಅವನು ಅದನ್ನು ಹೇಗೆ ಸೃಷ್ಟಿಸಿದನು ? ಆ ಶಿವನುಜಗತ್ತಿಗೆ ಹೊರಗಾದವನೊ? ಒಳಗಾದವನೊ ?" || ಎಂದು ನೀನುಪ್ರಶ್ನೆಮಾಡುವೆಯಾದರೆ, ಈವಿಷಯದಲ್ಲಿ ಚೆನ್ನಾಗಿ ಉತ್ತರವನ್ನು ಹೇಳುತ್ತೇನೆ—"ಲಿಂಗಮಧ್ಯೇ ಜಗತ್ಸರ್ವಂ" ಎಂಬ ಪುರಾಣವಚನದಿಂದ ||೫೭|| ಜಗನ್ನಿರ್ಮಾತೃವಾದ ಲಿಂಗರೂಪಿಯಾದ ಆ ಪರಶಿವನ ಹೊಟ್ಟೆಯೆಂಬ ಸಮುದ್ರದಲ್ಲಿ ಗುಳ್ಳೆಗಳಿಗೆ ಸಮಾನವಾಗಿ ಕೋಟ್ಯಂತರ ಬ್ರಹ್ಮಾಂಡಗಳು ಹುಟ್ಟುವುವು. ||೫೮||"ಸೃಷ್ಟಿಕರ್ತನಾದ ಶಿವನು ಸಾಕಾರನೊ? ನಿರಾಕಾರನೊ ? ಅವನು ನಿರಾಕಾರನಾದರೆ ಸಾಕಾರವಾದ ಪ್ರಪಂಚವನ್ನು ಹೇಗೆ ಸೃಜಿಸುವನು ? ಸಾಕಾರನಾದರೆ ಅವನು ನಿತ್ಯನೊ ? ಅನಿತ್ಯನೊ ? 'ಅವನು ನಾವು ಮೊದಲಾದವರಂತೆ ಅನಿತ್ಯನಲ್ಲ; ಜಗತ್ಕರ್ತೃವಾದ ಆ ಶಿವನು ನಿತ್ಯನು, ಎಂದು ಹೇಳುವೆಯಾದರೆ, ಆ ಪರಶಿವನ ನಿತ್ಯತ್ವವನ್ನು ನೀನು ಹೇಗೆ ತಿಳಿದೆ ? ||೬೦|| ಆ ಶಿವನ

ರೇಕತಾಕಥಂ। ಇತಿಚೇದುಚ್ಯತೇತಾವಚ್ಛೃಣುವೈದಿಕವಮದ್ವಚಃ॥೬೧॥ಗು ಣೇನರಾಜಸೇನಾಯಮುತ್ಪಾದಯತಿಸಂಸೃತಃ । ಭವಇತ್ಯಖಿಲಾನ್ಲೋ ಕಾನ್ಸಏವಶ್ರೀಮಹೇಶ್ವರಃ ॥೬೨॥ ಸಾತ್ವಿಕೇನಮೃಡೋಭೂತ್ವಾಪಾಲ ಯತ್ಯೇವಶಂಕರಃ । ತಾಮಸೇನಹರೋಭೂತ್ವಾಹರತ್ಯಖಿಳಮೀಶ್ವರಃ ॥ ಸಏವತ್ರಿಗುಣಾತೀತ ಶ್ಶಿವೋನಾಮಪ್ರಕಾಶತೇ । ವರ್ತಯತ್ಯೇವಮೀ ಶಾನೋಜಗಚ್ಚಕ್ರಂನಿರಂತರಂ ॥೬೪॥ ಶಿವಶಕ್ತ್ಯಾತ್ಮಕಂವಿಶ್ವಮಕಳಂ ಕೋಮಹೇಶ್ವರಃ । ಆದಿರುದ್ರ ಸ್ಸಕಲನಿಷ್ಕಲೈಶ್ವರ್ಯಸಮನ್ವಿತಃ ॥೬೫॥ ಈಶಾನ ಶ್ಶ್ರೀಮಹಾದೇವೋಽಕ್ಷಯೋಽಜೇಯೋನಿರಾಮಯಃ । ಆ ದ್ಯಂತವರ್ಜಿತೋಽನಾದಿರ್ನಿತ್ಯೋವಿಭುರಗೋಚರಃ ॥೬೬॥ ವೇದಾಂತ ವೇದ್ಯಸ್ತೇಜಸ್ವೀಗೌರೀಶಃಪರಮೇಶ್ವರಃ । ಅಮೇಯಮಹಿಮಾವಿಶ್ವಪತಿ ಸ್ಸದ್ಭಕ್ತವತ್ಸಲಃ ॥೬೭॥ ವರದ ಶ್ಶಂಕರಸ್ತಸ್ಯಸಾಕಾರಂತತ್ವಮುತ್ತ ಮಂ । ಜಗದುತ್ಪಾದಕಂಯಸ್ಮಾಲ್ಲೋಕಾಸ್ತೇನವಿನಿರ್ಮಿತಾಃ ॥೬೮॥

---

ಸಾಕಾರತ್ವ ನಿರಾಕಾರತ್ವಗಳೆರಡೂ ಒಂದೇಯಾದಬಗೆ ಹೇಗೆ? ,, ಎಂದು ನೀನುಪ್ರಶ್ನೆ ಮಾಡುವೆಯಾದರೆ, ಎಲೆ ವೈದಿಕನೆ, ನನ್ನ ಮಾತನ್ನು ಕೇಳು:-॥ ಆ ಶ್ರೀ ಪರಮೇಶ್ವರ ನೇ ರಜೋಗುಣ ವಿಶಿಷ್ಟತೆಯಿಂದ ಭವನಾಗಿ ಸಕಲ ಜಗತ್ತನ್ನೂ ಸೃಷ್ಟಿಸುತ್ತಾನೆ. ಆ ಶಂಕರನೇ ಸತ್ವಗುಣ ವಿಶಿಷ್ಟತೆಯಿಂದ ಮೃಡನಾಗಿ ಜಗತ್ತನ್ನು ರಕ್ಷಿಸುತ್ತಾನೆ. ಆ ಈಶ್ವರನೇ ತಮೋಗುಣವಿಶಿಷ್ಟತೆಯಿಂದ ಹರನಾಗಿ ಸಕಲ ಜಗತ್ತನ್ನೂ ಸಂಹರಿಸು ತ್ತಾನೆ ॥೬೩॥ ಆತನೇ ಗುಣತ್ರಯವನ್ನೂ ಮೀರಿ ಶಿವನಾಗಿ ಮೆರೆಯುತ್ತಾನೆ. ಹೀಗೆ ಆ ಪರಮೇಶ್ವರನು ಶಿವಶಕ್ತ್ಯಾತ್ಮಕವಾದ ನಿಖಿಲ ಜಗಚ್ಚಕ್ರವನ್ನೂ ಯಾವಾಗಲೂ ತಿರುಗಿಸುತ್ತಿರುವನು ॥೬೪॥ ಆ ಮಹೇಶ್ವರನು ನಿರ್ದುಷ್ಟನೂ, ಆದಿರುದ್ರನೂ, ಸರ್ವ ಜ್ಞತ್ವಾದಿ ಷಡ್ಗುಣೈಶ್ವರ್ಯಯುಕ್ತನೂ, ಸರ್ವಸ್ವಾಮಿಯೂ, ಸಕಲದೇವಾಧೀಶ್ವರನೂ, ನಾಶರಹಿತನೂ, ಯಾರಿಂದಲೂ ಜಯಿಸಲ್ಪಡದವನೂ, ನೀರೋಗಿಯೂ, ಆದ್ಯಂತಶೂ ನ್ಯನೂ, ಅನಾದಿಯೂ, ಶಾಶ್ವತನೂ, ಸರ್ವವ್ಯಾಪಿಯೂ, ಅಭಕ್ತರಿಗೆ ಅಗೋಚರನೂ ॥೬೬॥ವೇದಾಂತಗೋಚರನೂ, ಅತ್ಯಂತ ತೇಜಸ್ವಿಯೂ, ಗೌರೀಪತಿಯೂ, ಉತ್ಕೃ ಷ್ಟನಾದ ಈಶ್ವರನೂ, ಅಗಣಿತಮಹಿಮನೂ, ಜಗದೀಶನೂ, ಉತ್ತಮ ಭಕ್ತರಲ್ಲಿ ಪ್ರೀ ತಿಯುಳ್ಳವನೂ ॥೬೭॥ ಇಷ್ಟಾರ್ಥದಾಯಕನೂ, ಸುಖಕರನೂ ಆಗಿರುವನು. ಅವ ನ ಉತ್ತಮವಾದ ಸಾಕಾರತತ್ವವು ಜಗದುತ್ಪಾದನ ಹೇತುವಾದುದು. ಆ ಸಾಕಾ ರತತ್ವದಿಂದ ಈ ಜಗತ್ತುಗಳೆಲ್ಲಾ ಸೃಜಿಸಲ್ಪಟ್ಟುವು ॥೬೮॥“ ಹಾಗಾದರೆ ಶಿವನು ಮೊ

ಸಾತ್ತೋವಿನಿರ್ಮಿತಾಲೋಕಾಃಕಿಮಸಂತೋಮುನೇತಿಚೇತ್ । ಜಲ
ಮೃದ್ದಂಡಚಕ್ರಾದಾವಿದ್ಯಮಾನೇಘಟಾದಿಕಂ ॥೧೯॥ ಅಸದೇವಯಥಾಚ
ಕ್ರೇಕುಲಾಲಸ್ತದ್ವದೀಕ್ಷ್ಯತಾಂ । ಪಟಾದಿಕಂಕುವಿಂದೋಪಿಯಥಾತಂ
ತ್ವಾದಿಕೆತಥಾ॥೨೦॥ ಪರಮಾಣ್ವಾದಿಭಿಃಪಂಚಶಕ್ತಿಭಿಶ್ಶ್ರೀಮಹೇಶ್ವರಃ।
ಅಸದೇವಜಗಚ್ಛಕ್ರೇಸ್ವಾತಂತ್ರ್ಯೇಣಜಗತ್ಪತಿಃ ॥೨೧॥ ಜಲಮೃದ್ದಂಡ
ಚಕ್ರಾದಾಸತಿಭಾಂಡಾನಿಭೂತಲೇ । ವಿನಾಕುಲಾಲಂಯೇಕೇಪಿಯಥಾಽ
ಭ್ಯಾಸೇನಕುರ್ವತೇ॥೨೨॥ ತಥೈವಜಗದುತ್ಪಾದೇಕಿಂಶಿವೇನೇತಿಚೇಚ್ಛೃಣು । ಸಂತುಭಾಂಡಾದಿನಿರ್ಮಾಣೇಕುಲಾಲಾದೀತರೇಪಿಚ ॥೨೩॥ ಭಗ
ವಂತಂಶಿವಂಮುಕ್ತ್ವಾನಾನ್ಯೇಪರಮಕಾರಣಂ । ತದ್ಬ್ರಹ್ಮಾಂಡಾನಿ
ಕಾರ್ಯಾಣಿಶಕ್ತಯಃಪರಮಾಣವಃ ॥೨೪॥ ಕಾರಣಂತತ್ರತೇಷಾಂತುಶಿವಃ

---

ದಲೇ ಇದ್ದ ಲೋಕಗಳನ್ನು ಸೃಷ್ಟಿಸಿದನೊ? ಅಥವಾ ಮುನ್ನಾವಾಗಲೂ ಇಲ್ಲದಿದ್ದ
ಲೋಕಗಳನ್ನು ಸೃಜಿಸಿದನೊ? " ಎಂದು ಕೇಳುವೆಯಾದರೆ, ಹೇಳುತ್ತೇನೆ ಕೇಳು—
ನೀರು ಮಣ್ಣು ದೊಣ್ಣೆ ಚಕ್ರ ಮೊದಲಾದುವುಗಳು ಮೊದಲೇ ಇದ್ದರೂ, ಕುಂಬಾರ
ನು ಅಭೂತಪೂರ್ವವಾದ ಗಡಿಗೆಯನ್ನು ಹೇಗೆ ನಿರ್ಮಿಸುವನೋ, ಅದರಂತೆಯೇ ಇದೂ
ಎಂದು ನೋಡಿಕೊ. ನೂಲು ರಾಟೆ ಮಗ್ಗ ಮೊದಲಾದುವುಗಳು ಮೊದಲೇ ಇದ್ದ
ರೂ, ನೆಯ್ಗೆಯವನು ಹೊಸ ಬಟ್ಟೆಯನ್ನು ಹೇಗೆ ನೆಯ್ಯುವನೋ, ಹಾಗೆ ॥೨೦॥ ಜಗ
ದೀಶನಾದ ಶ್ರೀಪರಮೇಶ್ವರನು ಸ್ವತಂತ್ರನಾಗಿ, ಪರಮಾಣು ಮೊದಲಾದುವುಗಳಿಂದಲೂ
ಪಂಚಶಕ್ತಿಗಳಿಂದಲೂ ಅಭೂತಪೂರ್ವವಾದ ಜಗತ್ತನ್ನೇ ಸೃಜಿಸಿದನು ॥೨೧॥ ಮತ್ತೂ
" ಲೋಕದಲ್ಲಿ ನೀರು ಮಣ್ಣು ದೊಣ್ಣೆ ಚಕ್ರ ಮೊದಲಾದುವುಗಳು ಸಿದ್ಧವಾಗಿದ್ದರೆ
ಕುಂಬಾರನಿಲ್ಲದೆ ಹೋದರೂ ಇತರರಾದರೂ ಅಭ್ಯಾಸವಶದಿಂದ ಗಡಿಗೆಗಳನ್ನು ಹೇಗೆ
ಮಾಡಬಹುದೋ ॥೨೨॥ ಹಾಗೆಯೇ ಕಾರಣಗಳಾದ ಪರಮಾಣುಗಳೂ ಪಂಚಶಕ್ತಿ
ಗಳೂ ಇರುವಾಗ ಜಗದುತ್ಪತ್ತಿಗೆ ಶಿವನೊಬ್ಬನೇ ಏತಕ್ಕೆ ಕರ್ತನಾಗಿರಬೇಕು ? "
ಎಂದು ಪ್ರಶ್ನೆಮಾಡುವೆಯಾದರೆ, ಕೇಳು—ಗಡಿಗೆ ಮೊದಲಾದುವುಗಳನ್ನು ನಿರ್ಮಿಸುವುದ
ಕ್ಕೆ ಕುಂಬಾರಮೊದಲಾದ ಇತರರು ಕೂಡ ಕರ್ತೃಗಳಾಗಿದ್ದರೆ ಇರಲಿ ॥೨೩॥ ಜಜ
ಗನ್ನಿರ್ಮಾಣರೂಪಕಾರ್ಯದಲ್ಲಿ ಭಗವಂತನಾದ ಶಿವನೇ ಹೊರತು ಮತ್ತಾರೂ ಪರಮಕಾ
ರಣವಾಗುವುದಿಲ್ಲ. ಆ ಬ್ರಹ್ಮಾಂಡಗಳೇ ಕಾರ್ಯರೂಪಗಳು. ಅವುಗಳಿಗೆ ಪಂಚಶಕ್ತಿ
ಗಳೂ ಪರಮಾಣುಗಳೂ ಕಾರಣಗಳು. ಆಶಕ್ತಿಪರಮಾಣುಗಳಿಗು ಕೂಡ ಪರಶಿವನು
ಪರಮಕಾರಣನಾಗಿರುವನು. " ಆ ಶಿವನು ಪರಮಕಾರಣನಾಗಿದ್ದರೆ, ಜಗದುತ್ಪತ್ತಿ
ಯ ವಿಷಯದಲ್ಲಿ ಅವನಿಗೆ ಮತ್ತೊಂದು ಕಾರಣದಪೇಕ್ಷೆಯೇತಕ್ಕೆ ? " ಎಂದು ಕೇ

ಪರಮಕಾರಣಂ। ಕಿಮಸ್ಯಕಾರಣಾಪೇಕ್ಷಾಸಜೇತ್ಪರಮಕಾರಣಂ॥೭೫॥ ಇತಿಬ್ರವೀಷಿಚೇದೇತತ್ಸತ್ಯಂಲೀಲಾಮಹೇಶಿತುಃ । ವಿನಾತತ್ಕಾರಣಂಚ ಯಂಸಿಮರ್ಾತುಂಪ್ರಭುರೀಶ್ವರಃ ॥೭೬॥ ಸ್ಥಾಪಿತುಂತಚ್ಚಸಂಹರ್ತುಂಮನಸೈವಹಿಕೇವಲಂ । ಸಈಕ್ಷತೇಮಾನ್ಲೋಕಾಂಶ್ಚೇತ್ಯಾಮ್ನಾಯವಚನಾಜ್ಜಗತ್ ॥೭೭॥ ದೃಷ್ಟಿಮಾತ್ರಾನ್ಮಹೇಶಸ್ಯಜಾಯತೇಸಚರಾಚರಂ। ನಾಶಮಾಯಾತಿಚಪುನರ್ನಬ್ರಹ್ಮೇತ್ಯಾದಿವಾಕ್ಯತಃ॥೭೮॥ ತವೋನ್ಮೇಷನಿಮೇಷಾಭ್ಯಾಮಸ್ಮಾಕಂಪ್ರಲಯೋದಯಾ । ಪ್ರತ್ಯಂಜನಸ್ತಿಷ್ಠತಿಸಂಯುಗಾಂತೇಕಾಲೇತದಾನೋಹರಿಮುಖ್ಯದೇವಾಃ । ತ್ವಂವಿಶ್ವಭರ್ತಾತವನಾಸ್ತಿಭರ್ತಾತ್ವಂವಿಶ್ವಹರ್ತಾತವನಾಸ್ತಿಹರ್ತಾ ॥ ೮೦ ॥ ಇತಿವಾಕ್ಯೈರೀಶಏವಜಗತ್ಸೃಷ್ಟ್ಯಾದಿಕಾರಣಂ । ಏಕಮೇವಾದ್ವಿತೀಯಂಬ್ರಹ್ಮೇತ್ಯಾದಿಶ್ರುತಿವಾಕ್ಯತಃ ॥೮೧॥ ಏಕಏವೇತ್ಯಾದಿಕಾಚ್ಚವಾಕ್ಯಾದಾಗಮವರ್ತನಃ। ಶಂಕರಾಜ್ಜಗತಃಕರ್ತಾನಾನ್ಯೋಽಸ್ತೀತಿನಕಿಂಶ್ರುತಂ ॥೮೨ ತವಾಗಮಃಪ್ರಮಾಣಂಚೇತ್ತತ್ರೈವಪ್ರಲಯೋದಯಾ । ಕಥಿತಾತದನಾದೀನಿನಜಗಂತಿವಿಚಾರಿತೇ॥೮೩॥ ತೇನೈವಕಾರಣೇನೈತಾ ಶ್ಶ್ರುತಯೋನ

---

ಳುವೆಯಾದರೆ ॥೭೫॥ ಇದು ಸತ್ಯವಾಗಿಯೂ ಆಪರಮೇಶ್ವರನಲೀಲೆಯು. ಹೇಗಂದರೆ ಈ ಪರಮಾಣ್ವಾದಿಕಾರಣಸಮೂಹಗಳಿಲ್ಲದಿದ್ದರೂ ಆ ಶಂಕರನು ಮನಸ್ಸಂಕಲ್ಪಮಾತ್ರದಿಂದಲೇ ಜಗನ್ನಿರ್ಮಾಣಮಾಡುವುದಕ್ಕೂ ॥೭೬॥ ಆ ಜಗತ್ತನ್ನು ನೆಲೆಗೊಳಿಸುವುದಕ್ಕೂ, ಅದನ್ನು ಸಂಹರಿಸುವುದಕ್ಕೂ ಸಹ ಸಮರ್ಥನಾಗಿರುತ್ತಾನೆ. "ಸಈಕ್ಷತೇಮಾನ್ಲೋಕಾಂಶ್ಚ" ಎಂಬ ವೇದವಚನಪ್ರಕಾರ ಈಶ್ವರನ ಕಣ್ಣಸನ್ನೆಯಮಾತ್ರದಿಂದಲೇ ಚರಾಚರಾತ್ಮಕವಾದ ಈ ಜಗತ್ತು ಹುಟ್ಟುವುದು ಮತ್ತೂ ಅಳಿವುದು. "ನ ಬ್ರಹ್ಮಾನದಿವಾಕರಃ" ಎಂಬ ವಚನದಿಂದಲೂ ॥೭೮॥ "ತವೋನ್ಮೇಷ.........ಪ್ರಲಯೋದಯಾ" ಎಂಬ ವಾಕ್ಯದಿಂದಲೂ, "ಪ್ರತ್ಯಂಜನ.......................ತವನಾಸ್ತಿಹರ್ತಾ" ಎಂಬ ವಚನದಿಂದಲೂ ಸಹ ಪರಶಿವನೊಬ್ಬನೇ ಜಗದುತ್ಪತ್ತಿರಕ್ಷಣಾದಿಗಳಿಗೆ ಕಾರಣನೆಂಬುದು ಸಿದ್ಧವಾಗುವುದು. "ಏಕಮೇವಾದ್ವಿತೀಯಂಬ್ರಹ್ಮ" ಎಂಬುದು ಮೊದಲಾದ ವೇದವಚನದಿಂದಲೂ॥೮೧॥ "ಏಕಏವರುದ್ರೋನದ್ವಿತೀಯಾಯತಸ್ಥೇ" ಎಂಬುದು ಮೊದಲಾದವಚನಗಳಿಂದಲೂ ಸಹ ಶಿವನೇಹೊರತು ಜಗತ್ತಿಗೆ ವೇದಪ್ರಸಿದ್ಧನಾದ ಕರ್ತೃವು ಮತ್ತೊಬ್ಬನಿಲ್ಲವೆಂಬುದನ್ನು ನೀನುಕೇಳಿಲ್ಲವೇನು॥೮೨॥ ನಿನಗೆ ವೇದವು ಪ್ರಮಾಣವಾಗಿದ್ದರೆ ಅದರಲ್ಲಿಯೇ ಜಗತ್ತಿನ ಉತ್ಪತ್ತಿವಿನಾಶದ ವಿಷಯಗಳು ಪೂರ್ವೋಕ್ತರೀತಿಯಲ್ಲಿ ಹೇಳಲ್ಪಟ್ಟಿರುವುವು. ಅದುಕಾರಣ, ವಿಚಾರಮಾಡಿ ನೋಡಿದರೆ ಜಗತ್ತುಗಳು ಅನಾದಿಗಳೆಂದು ಸಿದ್ಧವಾಗುವುದಿಲ್ಲ ॥೮೩॥ ಪೂರ್ವೋಕ್ತ

ಹಿದೈವತಂ।ಸರ್ವಪ್ರಪಂಚಕಥನದ್ವಾರಾಶಂಭುನಿವೇದನಾತ್ ||೮೪|| ತೇ ಚವೇದಾಮಹೇಶಸ್ಯಪ್ರತಿಪಾದನತಾರ್ಕಿಕಾಃ । ಶಿವಪ್ರಶಂಸಾಕವಯೋ ಮಹೇಶಸ್ತುತಿಪಾಠಕಾಃ ||೮೫|| ವೈದಿಕವ್ರತಿನಾಂರಕ್ಷಾಂವಿಧಾಯೋನ್ಮಥ್ಯಚೇತರಾನ್ । ತಿಷ್ಠಂತಿತದಮೀಃವೇದಾದೈವತಾನೀತಿಚೇದಥ ||೮೬|| ಅಸ್ತುವೇದಾದೈವತಂಚೇಚ್ಛಾಪಪ್ರಕ್ಷೀಣಶಕ್ತಿಕಾಃ । ಕಥಂಬಭೂವುರ್ದೈತ್ಯೇನಗಿಲಿತಾಃಪಕ್ಷಿಣಾಹೃತಾಃ ||೮೭|| ಮುನಿನಾಪ್ರಚ್ಛ್ಯತಾಃಕಿಂವಾ ಶ್ವಾನೋಭೂತ್ವಾಹರಾನುಗಾಃ । ಸ್ವಬ್ರಹ್ಮಣ ಶ್ಶಿರಸ್ಸೃಷ್ಟುಮದ್ಯಾಪಿಕಥಮಕ್ಷಮಾಃ ||೮೮|| ಕವಿತಾರೂಪಿಣಸ್ಸಂತಃಕಥಂವಾವಾಕ್ಯಗೋಚರಾಃ । ಅದಕ್ಷಾರಕ್ಷಿತುಂದಕ್ಷಂವ್ಯಸನೋದ್ವೀಕ್ಷಕಾಃಕಥಂ ||೮೯||

---

ವಾದಕಾರಣದಿಂದಲೇ ಈ ವೇದಗಳು ಕೂಡ ಪರದೇವತೆಯಲ್ಲ. ಆವೇದಗಳು ಸಕಲಪ್ರಪಂಚವಿಷಯಗಳನ್ನೂ ಹೇಳುವುದರ ಮೂಲಕವಾಗಿ ಪರಮೇಶ್ವರನನ್ನೇ ಉಪಾಸ್ಯ ದೇವತೆಯನ್ನಾಗಿ ನಿರೂಪಿಸುವಕಾರಣ, ಅವುಗಳು ಈಶ್ವರೋಪಾಸ್ಯತ್ವವನ್ನು ಸಿದ್ಧಾಂತಮಾಡುವ ತಾರ್ಕಿಕರಾಗಿಯೂ, ಶಿವನನ್ನು ಹೊಗಳುವ ಕವಿಗಳಾಗಿಯೂ, ಮಹೇಶ್ವರನ ಸ್ತುತಿಪಾಠಕರಾಗಿಯೂ ಇರುವುವು. ||೮೫|| " ಹಾಗಲ್ಲ, ಈ ವೇದಗಳು ವೈದಿಕವ್ರತಿಗಳಾದ ಜನರನ್ನು ಕಾಪಾಡಿ ತದಿತರರನ್ನು ಭಂಜಿಸುವುವಾದಕಾರಣ, ಇವು ನಿಗ್ರಹಾನುಗ್ರಹ ಸಾಮರ್ಥ್ಯವುಳ್ಳ ದೇವತೆಗಳೇ ಸರಿ ,, ಯೆಂದು ನೀನುಹೇಳುವೆಯಾದರೆ, ಕೇಳು||೮೬|| ನೀನು ವಾದಿಸುವಂತೆ ವೇದಗಳು ಪರದೇವತೆಯೇ ಆದರೆ,*ಗೌತಮ ಮಹರ್ಷಿಯ ಶಾಪದಿಂದ ಅವು ಶಕ್ತಿಗುಂದಿದುವುಗಳಾಗುವುವೆ ? ತಮಸಾಸುರನಿಂದ ನುಂಗಲ್ಪಡುವುವೆ ? ತಿತ್ತಿರಿಪಕ್ಷಿಯ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗುವುವೆ ? ಯಾಜ್ಞವಲ್ಕ್ಯ ಮುನಿಯಿಂದ ಕಕ್ಕಲ್ಪಡುವುವೆ ? ನಾಯಿಗಳಾಗಿ ಶಿವನಹಿಂದೆ ಸುತ್ತಾಡುವುವೆ ? ಅವೇ ಪರದೈವತೆಗಳಾಗಿದ್ದರೆ ತಮ್ಮ ಚತುರ್ಮುಖಬ್ರಹ್ಮನ ಐನೆಯ ಶಿರಸ್ಸನ್ನು ಮೂಡಿಸುವುದಕ್ಕೆ ಇದುವರೆಗೂ ಅವು ಏಕೆಸಮರ್ಥಗಳಾಗಲಿಲ್ಲ?|| ಅವು ದೇವತೆಗಳಾಗಿದ್ದರೆ ಕವಿತ್ವರೂಪವಾಗಿ ಹೇಳಲ್ಪಡುವುದಕ್ಕೆ ಹೇಗೆ ಸಾಧ್ಯವಾಗುತ್ತಿದ್ದುವು? ಅವು ದೇವತೆಯಾಗಿದ್ದರೆ ಯಜ್ಞದಲ್ಲಿ ದಕ್ಷಬ್ರಹ್ಮನನ್ನು ರಕ್ಷಿಸುವುದಕ್ಕೆ ಅಸಮರ್ಥಗಳೂ, ಅವನ ಪರಿಭವವನ್ನು ವ್ಯಸನದಿಂದ ನೋಡುತ್ತಲಿದ್ದುವುಗಳೂ ಹೇಗೆ ಆದುವು?||೮೯||

---

* " ತಯೋರ್ಮುಖಾಗತಾವೇದಾವಿನಿಂದ್ಯಾಸ್ಸರ್ವಕರ್ಮಸು । ಸುರಾಭಾಂಡಗತಂ ತೋಯಂಯಥಾಭವತಿನಿಂದಿತಂ " ಲೈಂಗ್ಯೇ. ಗೌತಮರ್ಷಿಶಾಪದಿಂದ ಅಧಾರ್ಮಿಕರಾಗಿ ಕಲಿಯುಗದಲ್ಲಿ ಜನಿಸುವ ವೇದವಿಕ್ರಯಿಗಳಾದ ಬ್ರಾಹ್ಮಣರ ಮುಖದಿಂದ ಬಂದ ವೇದಗಳು, ಹೆಂಡದ ಗಡಿಗೆಯಲ್ಲಿ ತುಂಬಿದ ನೀರಿನಂತೆ ಅಶುಚಿಗಳಾಗಿ ಸತ್ಕರ್ಮಾನರ್ಹಗಳಾಗುವುವೆಂದು ಹೇಳಲ್ಪಟ್ಟಿರುವುದು.

ಇತ್ಯಸಂಖ್ಯಾತಮಹಾಮಾಹೇಶ್ವರ.........................
ಗುರುರಾಜಸ್ಯ ಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿ
ಕಾರ್ಜುನ ಪಂಡಿತಾರಾಧ್ಯಚರಿತ್ರೇ ವಾದಪ್ರ
ಕರಣೇ ವೇದಾನಾಮನಾದಿತ್ವಸ್ವಯಂ
ಭೂತ್ವನಿರಸನಕಥನಂ ನಾಮ
ದ್ವಿತೀಯೋಽಧ್ಯಾಯಃ.

---

ಅಥತೃತೀಯೋಽಧ್ಯಾಯಃ.

---

(ಕರ್ಮವಾದನಿರಸನಂ.)

ಯದಿವೇದೋನಕರ್ತಾಸ್ಯಾತ್ತದ್ವೇದೋಕ್ತಸ್ಯಕರ್ಮಣಃ ‖ ಅನುಷ್ಠಾನೋದ್ಭವಫಲಂ ತತ್ಕರ್ತುರಧಿಕಾರಿಣಃ ‖೧‖ ಸ್ವರ್ಗಾಪವರ್ಗಾದಿದಾಯಿಕಥಂಸ್ಯಾದಿತಿಭಾಷಸೆ ‖ ಕರ್ತೃತ್ವಂಕರ್ಮಣೋಽಭೀಷ್ಟಂ ತ್ವತ್ಸಿದ್ಧಾಂತಮತಾನಹಿ ‖೨‖ ಕರ್ತೃತ್ವಸಿದ್ಧಿರ್ನೈವಾಸ್ತಿ ಕರ್ಮಣಃಪ್ರವಿ

---

ಎಂಬಲ್ಲಿಗೆ ಶ್ರೀಗುರುರಾಜಕವಿ ಕೃತ ಶ್ರೀ ಮನ್ಮಲ್ಲಿಕಾರ್ಜುನ ಪಂಡಿತಾ
ರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ
"ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ವಾದ
ಪ್ರಕರಣವೊಳಗೆ ವೇದಗಳ ಅನಾದಿತ್ವ ಸ್ವಯಂ
ಭೂತ್ವವನ್ನು ಖಂಡಿಸುವ ೨ ನೆಯ ಅಧ್ಯಾ
ಯವು ಸಂಪೂರ್ಣವು.

---

## ೩ ನೆಯ ಅಧ್ಯಾಯ.

(ಕರ್ಮವೇ ಬ್ರಹ್ಮವೆಂಬ ವಾದವನ್ನು ಖಂಡಿಸುವುದು)

ವೇದವು ಜಗತ್ಕರ್ತೃವಲ್ಲವೆನೆ ಹೋದರೆ, ಆ ವೇದೋಕ್ತವಾದ ಕರ್ಮವನ್ನಾಚರಿಸಿದ ಅಧಿಕಾರಿಗೆ ಅವರ ಫಲವು ಸ್ವರ್ಗಮೋಕ್ಷಾದಿ ಪದವಿಗಳನ್ನು ಅದು ಹೇಗೆ ಕೊಡಬಲ್ಲುದು, ಎಂದು ಹೇಳುತ್ತೀಯೋನೊ ? ಎಲೆ ವೈದಿಕನೇ, ಕರ್ಮಕ್ಕೆ ಕರ್ತೃತ್ವವನ್ನು ಹೇಳುವುದು ನಿನ್ನಮತದ ಸಿದ್ಧಾಂತವಲ್ಲ ‖೧‖ ವಿಚಾರಮಾಡಿ ನೋಡಿದರೆ

ಚಾದಿತೆ || ತಸ್ಮಾತ್ತ್ವಂವೇದವಾದೀನ ಕರ್ಮವಾದ್ಯಧುನಾಭವಃ ||೩|| ಕರ್ಮವಾದೀಭವನ್ನಾಮ ಕರ್ಮವಾದೋಮತಂತವ || ಸ್ವರ್ಗಕಾಮೋ ಯಜೇತ್ತೇತಿ ಸೂಕ್ತಿರೇಷಾಭವನ್ಮತೇ ||೪|| ಚತುರ್ಥ್ಯಂತಶಬ್ದವಿವ ದೇವತೇತಿನಿಗದ್ಯತೆ || ಸ್ವಯಂಕೃತಂಕರ್ಮಫಲಮೇವತತ್ಕರ್ತುರಗ್ರತಃ||೫|| ಭೂತ್ವಾಸಮಾಭೋಗಯೋಗ್ಯಂ ಭಾತೀತಿಯದಿಭಾಷಸೇ || ಕಾಯಃಕರ್ಮಾನುಸಾರೀವಾಕರ್ಮಕಾಯಾನುಸಾರಿವಾ ||೬|| ಕಿಮನಾದಿಶರೀರಂಸ್ಯಾ ದುತಾಹೋಕರ್ಮಕೀರ್ತಿತಂ || ಯುಗಪಜ್ಜೀವಿನಃಕಿಂಸ್ಯಾದುಭಯಾತತ್ರವಕ್ಷ್ಯತಾಂ ||೭|| ಕಿಮೇತ್ಯಚೇತನಂಕರ್ಮಕ್ಷಣಿಕಂನಿರ್ಗುಣಂಸ್ವತಃ || ಕರ್ತಾರಂಯಾತಿಕಿಂಕರ್ತಾಕರ್ಮಕರ್ಮವಶೋಜಡಃ||೮|| ಅಪರಾಧೀಸ್ವಯಂದಂಡಂಕಿಂಪ್ರಾಪ್ನೋತಿಯಥೋಚಿತಂ || ಅಪರಾಧೋಽ

---

ಕರ್ಮಕ್ಕೆ ಕರ್ತೃತ್ವಸಿದ್ಧಿಯುಂಟಾಗುವುದೂ ಇಲ್ಲ. ಕರ್ಮಕ್ಕೆ ಕರ್ತೃತ್ವವನ್ನು ಹೇಳುವುದಕ್ಕೆ ಹೊರಟ ನೀನು ಈಗ ವೇದವಾದಿಯಾಗಿರದೆ, ಕರ್ಮವಾದಿಯಾಗಿರುತ್ತೀಯೆ|| ಈಗ ನಿನಗೆ ಕರ್ಮವಾದಿಯೆಂಬ ಹೆಸರುಂಟಾಗಿರುವುದು. ಕರ್ಮವನ್ನು ಬ್ರಹ್ಮವೆಂದು ಹೇಳುವುದೇ ನಿನ್ನಮತವಾಯಿತು. ಈ ನಿನ್ನಮತದಲ್ಲಿ “ ಸ್ವರ್ಗಾಪೇಕ್ಷಿಯಾದವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ” ಎಂಬ ವೇದೋಕ್ತಿಯು ಪ್ರಮಾಣವಾಗಿರುವುದು. ಹಾಗೆ ಯಾಗಮಾಡತಕ್ಕ ಕಾಲದಲ್ಲಿ “ಇಂದ್ರಾಯಸ್ವಾಹಾ” ಎಂದು ಮೊದಲಾಗಿ ಹವಿರ್ದಾನವನ್ನು ಮಾಡುವುದರಿಂದ,ಹಾಗೆ ಚತುರ್ಥೀವಿಭಕ್ತ್ಯಂತ ಶಬ್ದವಾಚ್ಯವಾದುದೇ ಕರ್ಮಫಲಪ್ರದವಾದ ದೇವತೆಯೆಂದು ಸಿದ್ಧವಾಗುತ್ತದೆಯೇ ಹೊರತು ಕರ್ಮವೇ ಫಲಪ್ರದವಾದ ದೇವತೆಯೆಂದು ಸಿದ್ಧವಾಗುವುದಿಲ್ಲ “ ತಾನುಮಾಡಿದ ಕರ್ಮದಫಲವೇ ಆ ಕರ್ಮಕರ್ತೃವಿಗೆ ಮುಂದೆ ಶರೀರಾನುಗತವಾಗಿ ಭೋಗಿಸಲು ಯೋಗ್ಯವಾಗಿ ನಿಂತಿರುವುದು ” ಎಂದು ಕರ್ಮಕ್ಕೆ ಕರ್ತೃತ್ವವನ್ನು ನೀನು ಹೇಳುವೆಯಾದರೆ ಅದು ಅನುಚಿತವು. ದೇಹವು ಕರ್ಮವನ್ನನುಸರಿಸಿರುವುದೋ ? ಅಥವಾ ಕರ್ಮವು ದೇಹಾನುಸಾರಿಯಾಗಿರುವುದೋ ?||೬||ಮತ್ತೂ ದೇಹವು ಅನಾದಿಯೊ ? ಕರ್ಮವು ಅನಾದಿಯೊ ? ಆ ಕರ್ಮ ದೇಹಗಳೆರಡೂ ಜೀವಾತ್ಮನನ್ನು ಅನುಸರಿಸುವುವೊ ? ಎಂದು ಪ್ರಶ್ನೆ ಮಾಡುವೆಯಾದರೆ ಕೇಳು;— ||೭|| ಕರ್ಮವು ಜಡವೂ ಕ್ಷಣಿಕವೂ ನಿರ್ಗುಣವೂ ಆಗಿರುವುದು. ಇಂತಪ್ಪ ಕರ್ಮವು ತನ್ನನ್ನು ಮಾಡುವವನನ್ನು ತಾನಾಗಿಯೇ ಹೋಗಿ ಹೇಗೆ ಹೊಂದುವುದು ? ಮತ್ತೂ ಕರ್ಮಾಧೀನನಾಗಿ ಜಡನಾದ ಆ ಕರ್ತೃವು (ಜೀವ) ವಾದರೂ ಆ ಕರ್ಮವನ್ನು ತಾನಾಗಿ ಹೇಗೆ ಹೊಂದುವುದು ? ||೮|| ಲೋಕದಲ್ಲಿ ಅಪರಾಧಮಾಡಿದವನು ಅದಕ್ಕೆ ತಕ್ಕಶಿಕ್ಷೆಯನ್ನು ತಾನೇ ಮಾಡಿಕೊಳ್ಳುವುದುಂಟೊ? ಅಥವಾ ಅವನು ಮಾಡಿದ ಅಪರಾಧವು ತಾನಾಗಿ ಬಂದು ಅವನನ್ನು ದಂಡಿಸು

ಪಿಪಾಸೋಕೇಸ್ವಯಮಾಗತ್ಯಹಂತಿಕಿಂ ॥೯॥ ತಸ್ಮಾತ್ಫಲಪ್ರದಾತಾಽಸ್ಯಃ ಪ್ರತ್ಯೇತವ್ಯೋವಿಶೇಷತಃ ॥ ತಿಷ್ಠತಿಶ್ರೀಮಹಾದೇವೇ ಕರ್ಮಣಃಫಲದಾತರಿ ॥೧೦॥ ಕದಾನಾವಿನ್ಯತೇತತ್ರ ಕರ್ತೃತ್ವಂಜೀವಕರ್ಮಣೋಃ ॥ ದರ್ಶಶ್ಚಪೂರ್ಣಮಾಸಶ್ಚ ಷಡ್ಯಾಗಾಃಪರಿಕೀರ್ತಿತಾಃ ॥೧೧॥ ಷಡಪೂರ್ವಾಣಿಜಾಯಂತೇ ತೇಭ್ಯಃಪ್ರತ್ಯೇಕಮೇವಹಿ ॥ ಅಪೂರ್ವೈಃಪರಮಾಪೂರ್ವಮೇಕಂತೈರುಪಜಾಯತೇ ॥೧೨॥ ತದೇವಕೀರ್ತ್ಯತೇಽದೃಷ್ಟಂದೈವತಂ ಕರ್ಮಚೇತ್ಯಥ ॥ ದೇಹಾಂತರೇಪಿಸಮಯಾಂತರೇಲೋಕಾಂತರೇಪಿಚ ॥೧೩॥ ದದಾತಿಫಲಮಿತ್ಯೇತದಸಂಗತಮುದೀರಿತಂ ॥ ಕಾಲಾಂತರೇಜಡಂ ಕರ್ಮಸ್ವಯಂದದ್ಯಾತ್ಕಥಂಫಲಂ ॥೧೪॥ ತಥಾತ್ವೇಜೈನಬೌದ್ಧಾದ್ಯೈರ್ಭಾಟ್ಟಮೀಮಾಂಸಕಾದಿಭಿಃ ॥ ತಪೋದಾನಾದಿಕಂಕರ್ಮ ಕೃತಾನ್ಯ

---

ವುದೋ? ॥೯॥ ಎರಡೂ ಇಲ್ಲ, ಮತ್ತೊಬ್ಬನೇ ಆ ಅಪರಾಧಿಗೆ ಶಿಕ್ಷೆಯನ್ನು ವಿಧಿಸುವನು. ಅದು ಕಾರಣ, ಅವರವರ ಕರ್ಮಕ್ಕನುಸಾರವಾದ ಫಲವನ್ನು ಕೊಡತಕ್ಕ ಕರ್ತೃವೊಬ್ಬನು ಬೇರೆ ಇರುವನೆಂದೇ ಸಂಪೂರ್ಣವಾಗಿ ನಂಬಬೇಕು. ಕರ್ಮಗಳಿಗೆ ಉಚಿತವಾದ ಫಲವನ್ನು ಕೊಡತಕ್ಕ ಶ್ರೀಪರಮೇಶ್ವರನು ಕರ್ತೃವಾಗಿರುತ್ತಿರಲಾಗಿ, ॥೧೦॥ ಆ ಜೀವಕ್ಕಾಗಲೀ ಕರ್ಮಕ್ಕಾಗಲೀ ಫಲಪ್ರದಾನಮಾಡತಕ್ಕ ಕರ್ತೃತ್ವವು ಯಾವಾಗಲಾದರೂ ಸಮನಿಸುವುದುಂಟೋ? ಪೂರ್ವಮೀಮಾಂಸೆಯ ಪ್ರಕಾರ ಅಮಾವಾಸ್ಯೆಯಲ್ಲಿ ೩, ಹುಣ್ಣಿಮೆಯಲ್ಲಿ ೩. ಹೀಗೆ ೬ ಯಾಗಗಳನ್ನು ಮಾಡಬೇಕೆಂದು ವಿಧಿಯಿರುವುದರಿಂದ ಆ ಪ್ರತಿಯೊಂದು ಕರ್ಮವೂ ಫಲಸಾಧಕವಾದ ಒಂದೊಂದು ಅಪೂರ್ವವನ್ನು ಹುಟ್ಟಿಸಿ, ತಾನು ಮುಗಿಯುವುದು. ಆ ಅಪೂರ್ವಗಳಿಂದ ಪರಮಾಪೂರ್ವವೆಂಬುದೊಂದು ಹುಟ್ಟುವುದು. ಅದೇ ಫಲಪ್ರದವಾದ ದೃಷ್ಟವೆಂತಲೂ ದೈವವೆಂತಲೂ ಕರ್ಮವೆಂತಲೂ ಹೇಳಿಸಿಕೊಳ್ಳುತ್ತದೆ. ಆ ಪರಮಾಪೂರ್ವವೇ ದೇಹಾಂತರದಲ್ಲಾಗಲೀ ಕಾಲಾಂತರದಲ್ಲಾಗಲೀ ಲೋಕಾಂತರದಲ್ಲಾಗಲೀ ॥೧೩॥ ಫಲವನ್ನು ಕೊಡುತ್ತದೆ ಎಂದು ನಿಮ್ಮ ಮತದಲ್ಲಿ ಹೇಳಲ್ಪಟ್ಟಿರುವ ಈ ವಿಷಯವು ಅಸಂಗತವಾಗಿರುತ್ತದೆ. ಏಕೆಂದರೆ-ಜಡವಾದ ಕರ್ಮವು ಸ್ವತ ಕರ್ತೃತ್ವವಿಲ್ಲದೆ ಕಾಲಾಂತರದಲ್ಲಿ ಫಲವನ್ನು ಅದು ಹೇಗೆ ಕೊಡುವುದು! ॥೧೪॥ ಹಾಗಿದ್ದ ಪಕ್ಷದಲ್ಲಿ ಕರ್ಮವಾದಿಗಳಾದ ಜೈನ ಬೌದ್ಧ ಮೊದಲಾದವರಿಂದಲೂ, ಭಾಟ್ಟ ಮೀಮಾಂಸಕ ಮೊದಲಾದವರಿಂದಲೂ, ಮಾಡಲ್ಪಡುವ ತಪಸ್ಸು ದಾನ ಜಪ ಮೊದಲಾದ ಕರ್ಮಗಳೆಲ್ಲಾ ಮೋಕ್ಷ ಫಲವನ್ನೀಯುವದೆ ವ್ಯರ್ಥವಾಗುವುದೆಂದು ಹೇಳಲ್ಪಡುವುದಕ್ಕೆ; ಅದು ಹೇಗೆ! ಮತ್ತೂ ಊಟವು ದೇಹಪೋಷಣೆಯನ್ನು ಮಾಡತಕ್ಕದಾಗಿದ್ದರೂ, ಅದೇ ಭೋಜನವು ಒಂದುವೇಳೆ ದೇಹಪೋಷ

ರ್ಥಂಹಿತದ್ವ್ಯಥಾ ॥೧೫॥ ಪುಷ್ಟಿಪ್ರದೇಭೋಜನೇಹಿಮರಣಂಪರಿದೃಶ್ಯತೇ। ಪ್ರಾಪ್ಟಿಕೇಹಾನಿರಾಯಾತಿಶಿಷ್ಟಾನ್ನೇವಿಷಸಂಗತೇ ॥೧೬॥ ಅವಿಶ್ವಾಸೇಪ್ಯನುಷ್ಠಾನೇಪ್ರಾದುಷ್ಯಾದ್ವೇದಚೋದಿತೇ । ನಕರ್ಮಣೇತಿಶ್ರುತಿತೋಮಹಾದೇವಸ್ಸದಾಶಿವಃ ॥೧೭॥ ಕರ್ಮಾನುರೂಪಂಹಿಫಲಂದದಾತಿಕರುಣಾನಿಧಿಃ । ಸೋಯಂಸರ್ವಗತೋರುದ್ರಃ ಕ್ರತುಕರ್ತಾನಿರೂಪ್ಯತೇ ॥೧೮॥ ಆನೋರಾಜಾನಮಿತ್ಯೇತಚ್ಛ್ರುತಿವಾಕ್ಯಪ್ರಮಾಣತಃ । ಕಿಂಚೋಪೇಂದ್ರಾಯಚಂದ್ರಾಯಮಹೇಂದ್ರಾಯೇತಿಮಂತ್ರಕೈಃ ॥೧೯॥ ಸ್ವಾಹಾಂತೈರ್ಭಸ್ಮಶೇಷೇಣಹುತೇನಹವಿಷಾಕಥಂ । ಅಪೂರ್ವಜನನಂತೇನಕಥಂಸ್ವರ್ಗಾದಿಸಂಗಮಃ ॥೨೦॥ ಕಾಲಾಂತರೇಫಲಂಕರ್ಮದದಾತೀತ್ಯಸಮಂಜಸಂ । ಹತ್ವಾಮುಕ್ತಿಮಗಾತ್ತಾತಂಚಂಡಃಕಾಲಾಂತರೇಕಿಮು ॥೨೧॥

---

ಹೆಗೆ ವಿರುದ್ಧವಾದ ಮರಣವನ್ನೇ ಉಂಟುಮಾಡುವುದಾಗಿ ಕಂಡುಬರುವುದು. ಹೇಗೆಂದರೆ— ಶ್ರೇಷ್ಠವಾದ ಅನ್ನದಲ್ಲಿ ವಿಷಮಿಶ್ರವಾಗಿದ್ದರೆ ಅಂಥ ಅನ್ನದ ಭೋಜನದಿಂದ ದೇಹಪುಷ್ಟಿಗೆ ಪ್ರತಿಯಾಗಿ ಹಾನಿಯೇ ಉಂಟಾಗುತ್ತದೆ ॥೧೬॥ ಅದುಕಾರಣ, ಕರ್ಮಕ್ಕೆ ಸ್ವತಃ ಫಲಪ್ರದಾತೃತ್ವ ವಿರುವುದಿಲ್ಲ. ಎಲೆ ವಾದಿಯೆ, ವೇದೋಕ್ತವಾದ ಕರ್ಮವನ್ನನುಷ್ಠಿಸುವುದರಲ್ಲಿಯೂ ಆ ವೇದ ವಚನದಲ್ಲಿಯೂ ಅಶ್ರದ್ಧೆಯುಂಟಾದರೆ ದೋಷ ವುಂಟಾಗುವುದು. ಆ ವೇದವು ಏನು ಹೇಳುವುದೆಂದರೆ:—"ನಕರ್ಮಣಾ ನಪ್ರಜಾಯಾಧನೇನ" ಎಂಬುದಾಗಿ. ಇದರಿಂದ ಕರ್ಮಕ್ಕೆ ಸ್ವತಃ ಫಲಪ್ರದತ್ವ ವಿರುವುದಿಲ್ಲವೆಂದು ಸಿದ್ಧವಾಗುವುದು. ಅದುಕಾರಣ, ದಯಾನಿಕ್ಷೇಪನಾದ ದೇವಾಧಿದೇವನಾದ ಶ್ರೀಪರಮೇಶ್ವರನೇ ಕರ್ಮಾನುಗುಣವಾದ ಫಲವನ್ನು ತತ್ತತ್ಕರ್ತೃಗಳಿಗೆ ಉಂಟುಮಾಡತಕ್ಕವನು ॥೧೭॥ "ಆನೋರಾಜಾನಮಧ್ವರಸ್ಯ" ಎಂಬ ವೇದವಚನಪ್ರಮಾಣದಿಂದ ಸರ್ವವ್ಯಾಪಿಯಾದ ಆ ಈ ರುದ್ರನೇ ಯಜ್ಞಕರ್ಮಕ್ಕೆ ಕರ್ತೃವೆಂದು ಹೇಳಲ್ಪಡುತ್ತಾನೆ. ॥೧೮॥ ಅದುಕಾರಣ, ಕರ್ಮಾಧಿಪತಿಯಾದ ಆ ಪರಶಿವನೇ ಕರ್ಮಾನುಗುಣಫಲವನ್ನು ಜೀವಿಗಳಿಗೆ ಉಂಟುಮಾಡುವನೆಂದು ತಿಳಿ. ಇವಲ್ಲದೆ ಯಜ್ಞದಲ್ಲಿ "ಉಪೇಂದ್ರಾಯ ಸ್ವಾಹಾ-ಚಂದ್ರಾಯ ಸ್ವಾಹಾ- ಮಹೇಂದ್ರಾಯಸ್ವಾಹಾ" ಎಂಬ ಮಂತ್ರಗಳಿಂದ ಹವಿಸ್ಸನ್ನು ಹೋಮಮಾಡಲಾಗಿ, ಭಸ್ಮಗೊಂಡ ಆ ಹವಿಸ್ಸಿನಿಂದ ಅಪೂರ್ವವುಂಟಾಗುವುದು ಹೇಗೆ? ಆ ಅಪೂರ್ವದಿಂದ ಸ್ವರ್ಗಾದಿಫಲಪ್ರಾಪ್ತಿಯಾಗುವುದು ಹೇಗೆ? ॥೨೦॥ ಕರ್ಮವು ಕಾಲಾಂತರದಲ್ಲಿ ಫಲವನ್ನು ಕೊಡುತ್ತದೆಯೆಂದು ಹೇಳುವುದು ಕೂಡ ಅಸಮಂಜಸವಾಗಿದೆ. ಏಕೆಂದರೆ:—ಚಂಡೇಶನು ತನ್ನ ತಂದೆಯ ತಲೆಯನ್ನು ತರಿದು ಕಾಲಾಂತರದಲ್ಲಿ ಮೋಕ್ಷಫಲವನ್ನು ಹೊಂದಿದನೆ?. ॥೨೧॥ ಸಿರಿಯಾಳಸೆಟ್ಟಿಯು ಮಗನನ್ನು ಕೊಂದು ಶಿವನಿಗೆ ನೀಡಿ ಕಾಂಚೀಪಟ್ಟ

ಸಿರಿಯಾಲಸ್ಸುತಂಹತ್ವಾಕಿಮು ಕಾಲಾಂತರೇಶಿವಂ । ಪ್ರಾಪಕಾಂಚೀಪುರೀಸಪ್ತವೀಧೀಜನಸಮಾವೃತಃ ॥೨೨॥ ನಿರ್ಮಾಯಭ್ರೂಣಹಸಂವಧ ಕಾಲಾಂತರೇ ಕಿಮು । ಅಗಮಚ್ಚೋಲನೃಪತಿಸ್ಸಶರೀರಸ್ಸದಾಶಿವಂ॥೨೩॥ ಹತ್ವಾದ್ವಿಜಂಯಯೌಲಿಂಗಗರ್ಭಂಪಶ್ಚಾತ್ಕಿಮುರ್ಯಮಃ। ವೈದಿಕಾಧ್ವರತೋದಕ್ಷಃಕಮಲಾಸನಸಂಭವಃ ॥೨೪॥ ಕಾಲಾಂತರೇಕಿಮಭವದ್ವಾದತ್ಯಂವೀತಮಸ್ತಕಃ । ಅವಶ್ಯಮನುಭೋಕ್ತವ್ಯಂಕೃತಂಕರ್ಮಶುಭಾಶುಭಂ ॥೨೫॥ ಇತ್ಯಲ್ಪವಾದಿಜಲ್ಪಾನಾಮವಕಾಶಃಕಥಂಭವೇತ್ । ಮನ್ನಿಮಿತ್ತಂಕೃತಂಪಾಪಮಪಿಧರ್ಮಾಯಕಲ್ಪತೇ ॥೨೬॥ ಮಾಮನಾದೃತ್ಯಯತ್ಪುಣ್ಯಮಪ್ಯಧರ್ಮಾಯಕಲ್ಪತೇ । ಇತ್ಯೇತಚ್ಛಂಕರಸ್ಯೈವವಚಃಖ್ಯಾತಂಕ್ಷಿತಾತತಃ ॥೨೭॥ ಫಲಸ್ತ್ರೀತಿಕಥಂಜೀವಃಕರ್ತೃತ್ವಂಕರ್ಮಣಃಕುತಃ । ಕೀದೃಗ್ವಿಧಸ್ಯಪಾಪಸ್ಯಕೀದೃಶೀಪುಣ್ಯಸಂಸ್ಥಿತಿಃ ॥೨೮॥ ಕೀದೃ

---

ಣದ ವಿಳು ಕೇರಿಯು ಜನರೊಡನೆ ಕೂಡಿ ಶಿವಸನ್ನಿಧಿಯನ್ನು ಕಾಲಾಂತರದಲ್ಲಿ ಹೊಂದಿದನೆ ! ॥ ೨೨ ॥ ಮನುಚೋಳಭೂಪತಿಯು ತನ್ನ ಮಗುವಿನ ತಲೆಯನ್ನು ಕತ್ತರಿಸಿ, ದೇಹಸಮೇತನಾಗಿ ಶಿವಲೋಕಕ್ಕೆ ಕಾಲಾಂತರದಲ್ಲಿ ಹೋದನೆ ! ಪರದೇವತೆಯ ನಾಮಸ್ಮರಣವನ್ನು ಮಾಡಿದ ಬ್ರಾಹ್ಮಣನನ್ನು ಕೊಂದ ಅಣ್ಣಭಕ್ತನು ಕಾಲಾಂತರದಲ್ಲಿ ಲಿಂಗಮಧ್ಯವನ್ನು ಹೊಕ್ಕನೆ ! ಬ್ರಹ್ಮಪುತ್ರನಾದ ದಕ್ಷಬ್ರಹ್ಮನು ಶಿವವಿರುದ್ಧವಾಗಿ ಯಜ್ಞವನ್ನಾಚರಿಸಿ ತನ್ನ ತಲೆಯನ್ನು ಕಾಲಾಂತರದಲ್ಲಿ ಕಳೆದುಕೊಂಡನ್ನೇ ನು! ॥ ೨೪ ॥ ಮತ್ತೂ " ತಾನಾಚರಿಸಿದ ಪುಣ್ಯಪಾಪ ಕರ್ಮಗಳ ಫಲವನ್ನು ತಪ್ಪದೆ ತಾನು ಅನುಭವಿಸಿಯೇ ತೀರಬೇಕು " ಎಂದು ಸಣ್ಣ ಜನರಾಡುವ ಮಾತುಗಳಿಗೆ ತಾನೇ ಅವಕಾಶವೆಲ್ಲಿರುವುದು! " ನನಗೋಸ್ಕರ ಮಾಡಿದ ಪಾಪಕಾರ್ಯವೂ ಪುಣ್ಯಪ್ರದವೇ ಆಗುತ್ತದೆ. ನನ್ನನ್ನುಪೇಕ್ಷಿಸಿ ಮಾಡಿದ ಪುಣ್ಯಕಾರ್ಯವೂ ಪಾಪ ಫಲಪ್ರದವೇ ಆಗುತ್ತದೆ" ಎಂಬುದಾಗಿ ಪರಶಿವನ ವಚನವೇ ಲೋಕದಲ್ಲಿ ಪ್ರಖ್ಯಾತವಾಗಿರುವುದು. ಅದು ಕಾರಣವೇ ॥ ೨೬ ॥ (ಮೇಲೆ ಹೇಳಿದಂತೆ ಶಿವಭಕ್ತಿಯಿಂದ ಚೋಡಾದಿಗಳು ಆಚರಿಸಿದ ಜನಕವಧೆ ಮೊದಲಾದ ಪಾಪಕಾರ್ಯಗಳಿಗೆ ಶಿವಲೋಕಸಾಧಕತ್ವವೂ, ದಕ್ಷನು ಶಿವವಿರುದ್ಧವಾಗಿ ಆಚರಿಸಿದ ಯಜ್ಞರೂಪ ಸತ್ಕಾರ್ಯಕ್ಕೆ ನಿಷ್ಫಲಸಾಧಕತ್ವವೂ ಉಂಟಾಯಿತೆಂಬ ದೃಷ್ಟಾಂತವು ನಿರೂಪಿಸಲ್ಪಟ್ಟಿತು.) ಹೀಗಿರುವಲ್ಲಿ, ಜೀವನು ಕರ್ಮಫಲವನ್ನು ತಾನಾಗಿ ಹೇಗೆ ಹೊಂದುತ್ತಾನೆ! ಕರ್ಮಕ್ಕೆ ತಾನೇ ಕರ್ತೃತ್ವವೆಲ್ಲಿ ಸಂಭವಿಸುವುದು! ಮೇಲೆ ರೂಪಿತವಾದ ದೃಷ್ಟಾಂತವನ್ನವಲೋಕಿಸಿದರೆ ಯಾವ ವಿಧದ ಪಾಪಕೃತ್ಯಕ್ಕೆ ಯಾವ ತೆರದ ಪುಣ್ಯಪ್ರಾಪ್ತಿ ! ಯಾವ ವಿಧದ ಪುಣ್ಯಕಾರ್ಯಕ್ಕೆ ಯಾವ ತೆರ

ಗ್ವಿಧಸ್ಯಪುಣ್ಯಸ್ಯಕೀದೃಶೀಪಾಪಸಂಸ್ಥಿತಿಃ । ಇತ್ಯೇತಚ್ಛಂಕರಮೃತೇಕಿಂ ವಿಜಾನೀತರೇಕ್ಷಿತಾ ॥೯॥ ತಸ್ಮಾತ್ತತ್ಕರ್ಮಫಲದಶ್ಶಂಭುರೇವೇತಿಕೀರ್ತಿತಃ । ಭೃಗುಪತ್ನೀಕ್ಲೇಶಜಾತಂ ಫಲಂಶ್ರೀರಮಣೀಪತೇಃ ॥ ೧೦ ॥ ವಿಷ್ಣೋರಪಿನೃತಿಂಜನ್ಮದಶವಾರಮುದಾತ್ಸ್ಯಯಾಂ । ಶರೇಣಬಾಲಿವಪುಷಃಕ್ಷತಾತ್ಸಂಪಾದಿತಂಫಲಂ ॥೧೧॥ ಚಕಾರಚಕ್ರಿಣಸ್ತಸ್ಯಚರಣಾಗ್ರತಲೇಕ್ಷತಂ । ಅಕರೋದಹಿಬದ್ಧಂತಂಬಲಿಬಂಧನಜಂಫಲಂ ॥೧೨॥ ಮಿತ್ರಜಾಯಾಹೃತಿಫಲಂರಾವಣಾಯದದೌಪ್ರಿಯಾಂ । ತಸ್ಮಾದಿತರಮರ್ತ್ಯೈಶ್ಚಸ್ವಸ್ಯಕರ್ಮೋದ್ಭವಂಫಲಂ॥೧೩॥ ಭೋಕ್ತವ್ಯಮೇವಾನಿಚ್ಛದ್ಭಿರಪಿಸ್ವೈರೇವನಿಶ್ಚಿತಂ । ಇತಿಬ್ರುವಿಃಷಿಚೇತ್ತತ್ರಶೃಣುಪ್ರಥಿತಮುತ್ತರಂ ॥ ೪॥ ಧನುರ್ಧರೋಽಸ್ಯಮನಾಯದಿಲಕ್ಷ್ಯಂನವಿಧ್ಯತಿ । ಪ್ರಸ್ಥಾಯಾದತಿವೇಗೇನಸಾಯಕಸ್ಸ್ವಯಮೇವಕಿಂ ॥೧೫॥ ವಿನೇಶ್ವರಪ್ರೇರಣಯಾಕುರ್ಯಾತ್ಕರ್ಮಕಥಂಫಲಂ । ನಿಷೇಧವಿಧಿಮಾರ್ಗೇಣಪಾಪಪುಣ್ಯಾನಿದೇಹಿನಾಂ ॥

---

ದ ಪಾಪಫಲಪ್ರಾಪ್ತಿ! ಈ ರಹಸ್ಯವನ್ನು ಲೋಕದಲ್ಲಿ ಶಿವನ ಹೊರತು ಮತ್ತಾರು ತಿಳಿಯುವರು?॥೯॥ ಆದುದರಿಂದ ಆ ಕರ್ಮಕ್ಕೆ ತಕ್ಕ ಫಲವನ್ನು ಕೊಡುವವನು ಪರಶಿವನೇ ಸರಿಯೆಂದು ಹೇಳಲ್ಪಟ್ಟಿದೆ. " ಭೃಗುಪತ್ನಿಯನ್ನು ಕೊಂದ ಫಲವು ಲಕ್ಷ್ಮೀಪತಿಯಾದ ವಿಷ್ಣುವಿಗೆ ೧೦ ಆವೃತ್ತಿ ಜನನ ಮರಣಗಳನ್ನು ಉಂಟುಮಾಡಿತು. ವಿಷ್ಣುವು ಬಾಣದಿಂದ ವಾಲಿಯ ಶರೀರದಲ್ಲಿ ಗಾಯಮಾಡಿದುದರಿಂದುಂಟಾದ ಪಾಪದ ಫಲವು ॥೧೧॥ ಕೃಷ್ಣಾವತಾರದಲ್ಲಿ ಅವನಿಗೆ ಬೇಡನ ಬಾಣದೇಟಿನಿಂದ ಗಾಯವಾಗುವಂತೆ ಮಾಡಿತು. ಬಲಿಚಕ್ರವರ್ತಿಯನ್ನು ವಿಷ್ಣುವು ತುಳಿದುದರಿಂದ ಸಂಪಾದಿಸಿದ ಫಲವು, ಅವನನ್ನು ಜಲಂಧರಾಸುರನು ಸರ್ಪದಿಂದ ಕಟ್ಟಿಹಾಕುವಂತೆಮಾಡಿತು ॥೧೨॥ ಅಪ್ತರಾದ ಪರ್ವತನಾರದರ ಪತ್ನಿಯನ್ನು ಬಲಾತ್ಕಾರದಿಂದಪಹರಿಸಿದ ದೋಷದ ಫಲವು ರಾಮಾವತಾರದಲ್ಲಿ ಆತನ ಪತ್ನಿಯನ್ನು ರಾವಣನಿಗೊಪ್ಪಿಸಿತು. ಅದುಕಾರಣದಿಂದ ಉಳಿದ ಮನುಜರುಸಹ ಅವರವರು ಮಾಡಿದ ಕರ್ಮದಿಂದ ಹುಟ್ಟುವ ಫಲವನ್ನು ತಾವಪೇಕ್ಷಿಸದಿದ್ದರೂ ತಪ್ಪದೆ ತಾವೇ ಅನುಭವಿಸಬೇಕು " ಎಂದು ಎಲೆ ಕರ್ಮವಾದಿಯೆ ನೀನು ಹೇಳುವೆಯಾದರೆ, ಇದಕ್ಕೆ ಪ್ರಸಿದ್ಧವಾದ ಉತ್ತರವನ್ನು ಹೇಳುತ್ತೇನೆ ಕೇಳು— ॥೧೪॥ ಧನುರ್ಧಾರಿಯು ಬೇರೆಕಡೆ ಮನಸ್ಸಿತ್ತು ಕುಳಿತಿದ್ದರೆ ಅವನು ಗುರಿಯನ್ನು ಎಂದಿಗೂ ಭೇದಿಸಲಾರನು. ಅವನು ಬಿಲ್ಲಿಗೆ ಬಾಣವನ್ನು ಹೂಡಿ ಪ್ರಯೋಗಿಸದಿದ್ದರೆ ಅದು ತಾನಾಗಿ ವೇಗದಿಂದ ಹೋಗಿ ಗುರಿಯನ್ನು ತಗುಲುವುದೆ ! ॥೧೫॥ ಅದರಂತೆಯೇ ಈಶ್ವರಪ್ರೇರಣೆಯಿಲ್ಲದೆ ಕರ್ಮವು ತಾನಾಗಿ ಫಲವನ್ನು ಕೊಡುವುದೆ? ಪರಶಿವನು ವಿಧಿನಿಷೇಧವೆಂಬ ಮಾರ್ಗದಿಂದ ಪಾಪ ಪುಣ್ಯಗಳೆಂಬುದನ್ನು ವಿರಚಿಸಿ, ಪ್ರಾಣಿಗಳ ಕ

ಉತ್ಪಾದ್ಯನರಕಸ್ವರ್ಗಪದಾನಿಪ್ರಾಪಯೇಚ್ಛಿವಃ । ಆದಿಕರ್ತ್ರ್ಯಸಮಾಯ ತ್ತಂಪರಿಜ್ಞೇಯಂಹಿಕರ್ಮತತ್ ॥೩೭॥ ಕರ್ಮಣೋಯದಿಗೌರೀಶಃಕ ರ್ತಾತದನುಸಾರಿತತ್ । ಕರ್ಮತತ್ಪ್ರೇರಿತಂಲೋಕೇಪ್ರಾಪ್ನುಯಾತ್ಪು ರುಷಂಯದಿ ॥೩೮॥ ವಿರಿಂಚಿಹನನಾಜ್ಜಾತಂಪಾಪಂಶಿವಮಗಾತ್ಕಥಂ । ಇತಿವಕ್ಷ್ಯಸಿಚೇದತ್ರಶ್ರೂಯತಾಂಸಮ್ಯಗುತ್ತರಂ ॥೩೯॥ ಮದಾದ್ವಿರಿಂ ಚಿರಜ್ಞಾನಪ್ರತಿಬದ್ಧೋವಿಮೂಢಧೀಃ। ಪರಬ್ರಹ್ಮಾಹಮಿತ್ಯೇವಮಭವತ್ಪ ರಿಜೃಂಭಿತ ॥೪೦॥ ಋತಂಸತ್ಯಂಪರಂಬ್ರಹ್ಮೇತ್ಯೇವಮತ್ಯಂತಭಕ್ತಿತಃ । ಋಗ್ವೇದೇಭುವಿವಿಖ್ಯಾತೇಸಂಕೀರ್ತಯತಿಶಂಕರಂ ॥೪೧॥ ಬ್ರಹ್ಮಾಧಿಪ ತಿರಿತ್ಯೇವಂಯಜುರ್ವೇದೇಸ್ತುವತ್ಯಪಿ। ತಂಸಾಮ್ನಿತತ್ಪರಂಬ್ರಹ್ಮವಿಭಾತೀ ತಿಪ್ರಶಂಸತಿ ॥೪೨॥ ತತ್ಪರಂಬ್ರಹ್ಮೇತ್ಯಥರ್ವಶಿರಸ್ಯುದ್ಘೋಷ್ಯತಿಸ್ಫುಟಂ। ಓಮಿತ್ಯಾದಿಮಹಾಸೂಕ್ತಿನಿಚಯೋಕೀರ್ತಯತ್ಯಥ ॥೪೩॥ ಅವಮತ್ಯಸ್ಥ

---

ರ್ಮಾನುಸಾರವಾಗಿ ನರಕ ಸ್ವರ್ಗಗಳೆಂಬ ಗತಿಯನ್ನು ಹೊಂದಿಸುವನು. ಅದುಕಾರ ಣ, ಆ ಕರ್ಮವೆಂಬುದು ಆದಿಕರ್ತೃವಾದ ಪರಶಿವನ ಅಧೀನವಾದುದೆಂದು ತಿಳಿಯಬೇ ಕು. ॥೩೭॥ “ ಪರಶಿವನು ಕರ್ಮಕ್ಕೆ ಕರ್ತೃವಾದರೆ ಆ ಕರ್ಮವು ಆ ಪರಶಿವನ ಅಧೀ ನವಾಯಿತು. ಲೋಕದಲ್ಲಿ ಹೀಗೆ ಆ ಕರ್ಮವು ಪರಶಿವನಿಂದ ಪ್ರೇರಿತವಾಗಿ ಮನುಷ್ಯ ನನ್ನು ಹೊಂದುವುದಾಗಿದ್ದಲ್ಲಿ ॥೩೮॥ ಬ್ರಹ್ಮನನ್ನು ವಧಿಸಿದುದರಿಂದ ಹುಟ್ಟಿದ ಪಾಪ ವು ಆ ಶಿವನನ್ನು ಹೇಗೆ ಹೊಂದಿತು ? ” ಎಂದು ಎಲೆ ವಾದಿಯೆ ನೀನು ಕೇಳುವೆಯಾ ದರೆ, ಈ ವಿಷಯವಲ್ಲಿ ಚೆನ್ನಾಗಿ ಉತ್ತರವನ್ನು ಹೇಳುತ್ತೇನೆ, ಕೇಳು—॥೩೯॥ ಅಜ್ಞಾನ ದಿಂದ ಕಟ್ಟು ಪಡೆದ ಮೂಢಬುದ್ಧಿಯು ಬ್ರಹ್ಮನು ಅಹಂಕಾರದಿಂದ ತಾನೇ ಪರಬ್ರಹ್ಮ ನೆಂಬುದಾಗಿ ವಿಜೃಂಭಿಸಿದನು ॥೪೦॥ ಭೂಮಿಯಲ್ಲಿ ಪ್ರಸಿದ್ಧವಾದ ಋಗ್ವೇದವು ಅ ತ್ಯಂತ ಭಕ್ತಿಯಿಂದ ಪರಶಿವನನ್ನು ಸತ್ಯಸ್ವರೂಪನು ಪರಬ್ರಹ್ಮನು ಎಂದು ಮೊದಲಾ ಗಿ ಕೊಂಡಾಡುತ್ತಿರಲಾಗಿಯೂ, ॥೪೧॥ ಯಜುರ್ವೇದವು ಶಿವನೇ ಪರಬ್ರಹ್ಮನು, ಅವ ನೇ ಚತುರ್ಮುಖ ಬ್ರಹ್ಮನಿಗೂ ಅಧಿಪತಿಯು,ಎಂದು ಸ್ತೋತ್ರಮಾಡುತ್ತಿರಲಾಗಿಯೂ, ಸಾಮವೇದವು ಆ ಪರಶಿವನನ್ನು ಆ ಪರಬ್ರಹ್ಮವು ಪ್ರಕಾಶಿಸುತ್ತದೆ ಎಂದು ಹೊಗಳು ತ್ತಿರಲಾಗಿಯೂ ॥೪೨॥ ಅಥರ್ವವೇದವು ಅದೇ ಪರಬ್ರಹ್ಮವು ಎಂಬುದಾಗಿ ಶಿವನನ್ನು ಕುರಿತು ಘಂಟಾಘೋಷವಾಗಿ ಸಾರುತ್ತಿರಲಾಗಿಯೂ, ಮಹಾವಾಕ್ಯಗಳು ಆ ಶಂ ಕರನನ್ನು ಪ್ರಣವಸ್ವರೂಪನು ಎಂದು ಮೊದಲಾಗಿ ಕೀರ್ತಿಸುತ್ತಿರಲಾಗಿಯೂ, ತನ್ನ ನ್ನು ಅವಮಾನಗೊಳಿಸಿ ನಿಂತುಕೊಂಡಿರುವ ಬ್ರಹ್ಮನನ್ನು ಕೋಪೋದ್ದೀಪಿತನಾದ ಗೌರೀಯೆಂಬ ಶಕ್ತಿಗೆ ಪತಿಯಾದ-ಅತ್ಯಂತ ಪ್ರತಾಪಶಾಲಿಯಾದ-ಭೈರವನೆಂಬ ಪ್ರಮಥ

ತಂದೃಷ್ಟ್ವಾವಿಧಿಂಕೋಪಪ್ರದೀಪಿತಃ । ಭೈರವೋನಾಮಗೌರೀಶಃಪ್ರಮ
ಥೋ ಕ್ಷಿಪ್ರತಾಪವಾನ್ ॥೪೩॥ ಚಿಚ್ಛೇದಕೋಪತಸ್ತಸ್ಯಬ್ರಹ್ಮಣಃಪಂ
ಚಮಂಶಿರಃ। ಸ್ತುತ್ವಾಸೋಽಮಾಷ್ಟಕೇನೇಶಂವಿಧಾಯವರದಂಶಿವಂ॥೪೪॥
ಕಪಾಲಮೇತದವನಾನವಿಸರ್ಜಯಶಂಕರ । ವಿಸರ್ಜಿತೇಜಗತ್ಸರ್ವಂಭ
ಸ್ಮತಾಂಯಾತಿತತ್ಕ್ಷಣಾತ್ ॥೪೫॥ ತಲ್ಲೋಕಾನುಗ್ರಹಾರ್ಥಾಯತ್ವಮೇ
ವೇಶ್ವರಧಾರಯ । ಶಂಕರಶ್ರೀಮಹಾದೇವಪರಮಾತ್ಮನ್ಪರಾತ್ಪರ ॥೪೬॥
ಅನ್ಯೋನ್ಯಮನಿತ್ಯಪರಮಸ್ವತಂತ್ರಕರುಣಾನಿಧೇ । ಇತಿಸಂಪ್ರಾರ್ಥಿತಶ್ಶಂ
ಭುರ್ಬ್ರಹ್ಮಣಾಪರಮೇಷ್ಠಿನಾ ॥೪೭॥ ತತ್ಕಪಾಲಂದಧೌಬ್ರಹ್ಮಹತ್ಯಾತಂ
ಶಿವಮಾಪಕಿಂ। ತ್ವಾಂದೇವೇಷ್ವಿತ್ಯಾದಿಸೂಕ್ತಾತ್ ಬ್ರಾಹ್ಮಣೋವೃಷಭ
ಧ್ವಜಃ ॥೪೯॥ ತತ್ಸಾಮವೇದಾನುಗುಣಂಪುರಾಣೇನಾಪ್ಯುದೀರಿತಂ। ಬ್ರಾ
ಹ್ಮಣೋಭಗವಾನ್ರುದ್ರಃಕ್ಷತ್ರಿಯಃಪರಮೋಹರಿಃ ॥೫೦॥ ಪಿತಾಮಹಸ್ತು
ವೈಶ್ಯಶ್ಚೇತ್ಯೇವಂವಿಚ್ಛಿನ್ನಸಂಶಯಂ । ತದ್ಬ್ರಹ್ಮಣೋವಿಧಾತಾನಬ್ರ
ಹ್ಮಹತ್ಯಾನತತ್ಕ್ಷತಿಃ ॥೫೧॥ ದುಷ್ಟಾನಾಂನಿಗ್ರಹೇಹತ್ಯಾನ್ಯಪಾಣಾಂವಿಧ್ಯ

---

ಸು ನೋಡಿ ॥೪೪॥ ಆ ಬ್ರಹ್ಮನ ಐದನೆಯ ಶಿರಸ್ಸನ್ನು ಕೋಪದಿಂದ ಕತ್ತರಿಸಿದನು,
ಆಗ ಬ್ರಹ್ಮನು ಭೈರವೇಶನನ್ನು ಸೋಮಾಷ್ಟಕ ಪದ್ಯಗಳಿಂದ ಸ್ತೋತ್ರಮಾಡಿ, ಪ್ರಸ
ನ್ನಗೊಳಿಸಿ, ನಿನಗಾವವರವು ಬೇಕೆಂದು ಕೇಳಲ್ಪಟ್ಟವನಾಗಿ ॥೪೫॥ "ಎಲೈ ಶಂಕರನೆ
ಮಹಾದೇವನೆ, ಪರಮಾತ್ಮನೆ, ಪರಕ್ಕಿಂತಲೂ ಪರನಾದವನೆ, ಅಳತೆಗೆ ಸಿಲ್ಕದವನೆ, ಶಾ
ಶ್ವತನೆ, ಅತ್ಯಂತ ಸ್ವತಂತ್ರನೆ, ಕರುಣಾನಿಧಿಯೆ, ಈ ತಲೆಯೋಡನ್ನು ಭೂಮಿಯಮೇ
ಲೆ ಬಿಸುಡಬೇಡ; ಬಂದುವೇಳೆ ಬಿಸುಟರೆ, ತತ್ಕ್ಷಣದಲ್ಲಿಯೇ ಸಕಲ ಜಗತ್ತೂ ಸು
ಟ್ಟುಬೂದಿಯಾಗುವುದು॥೪೬॥ ಅದುಕಾರಣ, ಎಲೈಪರಶಿವನೆ, ಆಲೋಕಾನುಗ್ರಹಾರ್ಥ
ವಾಗಿ ನೀನೇ ಇದನ್ನು ಹಿಡಿದುಕೊ" ಎಂದು ಬ್ರಹ್ಮನು ಬೇಡಿಕೊಳ್ಳಲು ॥೪೭॥ ಆ
ಬ್ರಹ್ಮನ ತಲೆಯೋಡನ್ನು ಶಿವನುಹಿಡಿದುಕೊಂಡನು. ಆಬ್ರಹ್ಮಹತ್ಯಾದೋಷವು ಶಿವನಿಗೆ
ಉಂಟಾಯಿತೇನು? ನೀನು ದೇವತೆಗಳಲ್ಲಿ ಬ್ರಾಹ್ಮಣನು ಎಂದು ಮೊದಲಾದ ವಚನದಿಂ
ದ ಪರಶಿವನೇ ಬ್ರಾಹ್ಮಣನೆಂಬುದಾಗಿ ಹೇಳಲ್ಪಟ್ಟಿರುವುದು.॥೪೯॥ ಸಾಮವೇದದ ವ
ಚನವನ್ನುಸರಿಸಿಯೇ ಪುರಾಣವಚನವು ಕೂಡ ಇರುತ್ತಿರುವುದು.. ಹೇಗೆಂದರೆ_ಭಗ
ವಂತನಾದ ರುದ್ರನು ಬ್ರಾಹ್ಮಣನು, ಉತ್ಕೃಷ್ಟನಾದ ವಿಷ್ಣುವು ಕ್ಷತ್ರಿಯನು ॥೫೦॥
ಬ್ರಹ್ಮನು ವೈಶ್ಯನು ಎಂಬುದಾಗಿ ನಿಸ್ಸಂಶಯವಾಗಿ ಹೇಳಲ್ಪಟ್ಟಿರುವುದು. ಅದುಕಾ
ರಣ, ಬ್ರಹ್ಮನು ಬ್ರಾಹ್ಮಣನಲ್ಲ, ಅವನ ವಧೆಯು ಬ್ರಹ್ಮಹತ್ಯೆಯೂ ಅಲ್ಲ ॥೫೧॥

ತೇಕಿಮು। ಕರ್ಮದುಷ್ಕರ್ಮಣೋಹಂತಿನಾಘಂದುಷ್ಕರ್ಮಮಾರಣೇ॥೫೨॥
ಇತ್ಯೇಕೋಭಾಟ್ಟಶಾಸ್ತ್ರೇಽಸ್ತಿಪಕ್ಷೋವಿದ್ವದ್ಭಿರಾದೃತಃ । ರಾಮೇಣರಾ
ವಣವಧದೋಷನಿಷ್ಕೃತಿಮಿಚ್ಛತಾ ॥೫೩॥ ಶ್ರೀರಾಮೇಶ್ವರಲಿಂಗಾದಿ
ಪ್ರತಿಷ್ಠಾಬಹವಃಕೃತಾಃ । ವಿರಿಂಚಿಹತ್ಯಾದೋಷಾಪನುತ್ಯರ್ಥಂಶಿವನಿನಿ
ರ್ಮಿತಾಃ ॥೫೪॥ ಲಿಂಗಪ್ರತಿಷ್ಠಾಃಕಿಂಸಂತಿಧರಣ್ಯಾಂಯತ್ರಕುತ್ರಚಿತ್।
ಕಿಂಚಗಂಗಾಧರೇಣೈವಬಹುಶಃಪದ್ಮಜೋಹತಃ ॥೫೫॥ ದಕ್ಷಪ್ರಜಾಪತಿ
ಶಿರಸ್ಸಂಹಾರಸಮಯೇತಥಾ । ಸ್ವಸುತಾಕಾಮುಕವಿಧಿಧ್ವಂಸಕಾಲೇತ-
ಥಾಪುನಃ ॥೫೬॥ ದಕ್ಷಜಾಮಾತೃಮಹಿತದ್ವಿಜರಾಜವಿಮರ್ದನೇ । ವಿಷ್ವ
ಕ್ಸೇನಸ್ಯಹನನೇಪಿತುಃಕಮಲಜನ್ಮನಃ ॥೫೭॥ ಪಾವಕಸ್ಯದ್ವಿಜಗುರೋ
ರ್ಜಿಹ್ವಾಸಂಹಾರಕರ್ಮಣಿ । ಸಮುದ್ದೀಪಿತಕೋಪೇನಮುನಿಸಂಘಾತ
ಶಾಸನೇ ॥೫೮॥ ಲಲಾಟಘೋರನೇತ್ರಾಗ್ನಿಜ್ವಾಲಾಜಾಲವಿಜೃಂಭಣಾ
ತ್ । ಬ್ರಹ್ಮಬ್ರಾಹ್ಮಣಸಂಪೂರ್ಣಬ್ರಹ್ಮಾಂಡಪ್ರಳಯೋನ್ನತಾ ॥೫೯॥

---

ದುಷ್ಟರನ್ನು ನಿಗ್ರಹಿಸಿದರೆ ರಾಜರಿಗೆ ಹತ್ಯಾದೋಷವುಂಟಾಗುವುದೇನು? "ದುಷ್ಕರ್ಮಿ
ರನ್ನು ಅವರ ಕರ್ಮವೇ ಕೊಲ್ಲುತ್ತದೆ. ಅಂಥ ದುಷ್ಕರ್ಮಿಗಳನ್ನು ಕೊಲ್ಲುವುದರಿಂದ ಪಾಪ-
ವಿಲ್ಲ" ಎಂಬುದಾಗಿ ಭಟ್ಟಮತಶಾಸ್ತ್ರದಲ್ಲಿ ವಿದ್ವಾಂಸರಿಂದ ಆದರಿಸಲ್ಪಟ್ಟ ಒಂದಾನೊಂ-
ದು ಪಕ್ಷವಿರುವುದು. ರಾವಣನನ್ನು ಕೊಂದ ದೋಷಕ್ಕೆ ಪ್ರಾಯಶ್ಚಿತ್ತವನ್ನು ಅ
ಪೇಕ್ಷಿಸಿದ ರಾಮನು ॥೫೩॥ ರಾಮೇಶ್ವರಲಿಂಗ ಮೊದಲಾದ ಕೋಟ್ಯಂತರ ಲಿಂಗಗಳ
ಪ್ರತಿಷ್ಠೆಯನ್ನು ಬಹುಳವಾಗಿ ಮಾಡಿದನು. ಅದರಂತೆ ಬ್ರಹ್ಮನನ್ನು ವಧಿಸಿದ ದೋ-
ಷದ ಪರಿಹಾರಾರ್ಥವಾಗಿ ಶಿವನು ಭೂಮಿಯ ಮೇಲೆಲ್ಲಾದರೂ ಲಿಂಗ ಪ್ರತಿಷ್ಠೆಯ
ನ್ನು ಮಾಡಿರುವುದುಂಟೋ ? ಮತ್ತೂ ಬ್ರಹ್ಮನು ಶಿವನಿಂದಲೇ ಅನೇಕಾವೃತ್ತಿ ವಧಿ
ಸಲ್ಪಟ್ಟಿರುತ್ತಾನೆ ॥೫೫॥ ಹೇಗೆಂದರೆ;—ಯಜ್ಞದಲ್ಲಿ ದಕ್ಷಬ್ರಹ್ಮನ ಶಿರಸ್ಸನ್ನು ಛೇದಿ-
ಸುವಾಗಲೂ, ತನ್ನ ಮಗಳನ್ನೇ ಮೋಹಿಸಿದ ಹರಿಣರೂಪನಾದ ಬ್ರಹ್ಮನನ್ನು ಛೇದಿಸು-
ವಾಗಲೂ ॥೫೬॥ ದಕ್ಷಬ್ರಹ್ಮನ ಅಳಿಯನಾದ ದ್ವಿಜರಾಜ (ಬ್ರಾಹ್ಮಣಶ್ರೇಷ್ಠನನ್ನು
ಚಂದ್ರನನ್ನು) ಕಾಲಿನ ಹೆಬ್ಬೆರಳಿನಿಂದ ಒರಸಿದಾಗಲೂ, ಬ್ರಹ್ಮನ ತಂದೆಯಾದ ವಿ-
ಷ್ವಕ್ಸೇನನನ್ನು ಶೂಲದಿಂದಿರಿದಾಗಲೂ. ಬ್ರಾಹ್ಮಣರಿಗೆ ಪೂಜ್ಯವಾದ ಅಗ್ನಿಯ ನಾಲ-
ಗೆಯನ್ನು ಸೀಳಿದಾಗಲೂ, ಕೋಪೋದ್ವೇಗದಿಂದ ಋಷಿಪತ್ನಿಯರನ್ನು ಶಿಕ್ಷಿಸಿದಾಗ
ಲೂ, ಹಣೆಯಲ್ಲಿರುವ ಭಯಂಕರವಾದಕಣ್ಣಿನ ಬೆಂಕಿಯಜ್ವಾಲೆಯು ಹೊರಹೊಮ್ಮು
ವಿಕೆಯಿಂದ ಅನೇಕ ಬ್ರಹ್ಮರಿಂದಲೂ ಬ್ರಾಹ್ಮಣರುಗಳಿಂದಲೂ ತುಂಬಿದ ಬ್ರಹ್ಮಾಂಡನೇ-
ನಾಶಗೊಳ್ಳುತ್ತಿದ್ದಾಗಲೂ ಸಹ ಶಿವನಿಗೆ ಬರದೆಯಿದ್ದ ಬ್ರಹ್ಮಹತ್ಯಾದೋಷವು ಈಗ ಚ-
ತುರ್ಮುಖಬ್ರಹ್ಮನ ಶಿರಸ್ಸನ್ನು ಕತ್ತರಿಸಿದುದರಿಂದ ಅದು ಹೇಗೆ ಪ್ರಾಪ್ತವಾಗುವುದು ?

ನಾಗತಾಬ್ರಹ್ಮಹತ್ಯಾಸಾಮಹಾದೇವಸ್ಯಸಾಂಪ್ರತಂ। ಚತುರ್ವದನಶೀರ್ಷ
ಸ್ಯಚ್ಛೇದೇನಾಯಾತಿವಾಕಥಂ ||೬೦|| ನಮೃತಃಕಿಲಧಾತಾಪಿತದಂಗಚ್ಛೇ
ದನಮಾತ್ರತಃ । ಆಯಾತಿಕಥಮೀಶಸ್ಯಬ್ರಹ್ಮಹತ್ಯಾತಿದುಸ್ತರಾ ||೬೧||
ಬ್ರಹ್ಮಮಸ್ತಕಸಂಹರ್ತುರ್ಬ್ರಹ್ಮೇಶಸ್ಯಾಘಹಾರಿಣಃ। ದರ್ಶನಾನ್ನಾಶಮಾ
ಯಾಂತಿಪಾತಕಾನಿಮಹಾಂತ್ಯಪಿ ||೬೨|| ಸುರಾಪಾನಸಹಸ್ರಾಣಿಬ್ರಹ್ಮಹ
ತ್ಯಾಯುತಾನಿಚ। ದಹತ್ಯಶೇಷಪಾಪಾನಿಶಿವಭಕ್ತಸ್ಯದರ್ಶನಂ ||೬೩|| ಇ
ತಿಪ್ರಸಿದ್ಧಾತ್ಪುರಾಣವಚನಾದ್ಧಿತಥಾಪುನಃ । ಅಪಾಪಕಾಶಿನೀಚೇತಿಶ್ರುತಿ
ವಾಕ್ಯಾನ್ಮಹೀಯಸಃ||೬೪|| ದರ್ಶನಂಶಿವಭಕ್ತಸ್ಯಕಿಲಬ್ರಹ್ಮವಧಾಪಹಂ।
ತತ್ಕಥಂಶ್ರೀಮಹೇಶಸ್ಯಬ್ರಹ್ಮಹತ್ಯಾಸ್ತಿಶೂಲಿನಃ ||೬೫|| ಅತಃಕರ್ಮಮ
ಹೇಶಾನುಸಾರಿಸಮ್ಯಗ್ವಿಲೋಕಿತೇ । ತತ್ಕರ್ಮಾಪಿಪುನರ್ಬುದ್ಧೇರನುಸಾ
ರಿಭವತ್ಯಲಂ||೬೬|| ಬುದ್ಧಿಃಪ್ರವರ್ತಕಾನಾಂಸಾಭವತ್ಯೇವಾನುಸಾರಿಣೀ ।
ತಸ್ಮಾತ್ಕರ್ತಾಮಹಾದೇವಃಕರ್ಮಣಾಂವಸುಧಾತಲೇ ||೬೭||

---

ಇದೂ ಅಲ್ಲದೆ ಶಿವನು ಶಿರಚ್ಛೇದವನ್ನು ಮಾಡಿದುದರಿಂದ ಬ್ರಹ್ಮನು ಸಾಯಲೂ ಇಲ್ಲ
ವಷ್ಟೆ ! ಹೀಗಿರುವಲ್ಲಿ ದಾಟಲಶಕ್ಯವಾದ ಬ್ರಹ್ಮಹತ್ಯೆಯು ಪರಮೇಶ್ವರನಿಗೆ ಸಂಭವಿ
ಸುವುದು ಹೇಗೆ ? ||೬೧|| ಬ್ರಹ್ಮಶಿರಚ್ಛೇದಕನೂ, ಪಾಪವಿನಾಶಕನೂ, ಚತುರ್ಮುಖ
ಬ್ರಹ್ಮನಿಗೆ ಅಧಿಪತಿಯೂ ಆದ ಪರಶಿವನ ದರ್ಶನಮಾತ್ರದಿಂದ ಬ್ರಹ್ಮಹತ್ಯಾದಿ ಮಹಾ
ಪಾತಕಗಳೂ ಕೂಡ ನಾಶವಾಗುತ್ತವೆ ||೬೨|| ಶಿವಭಕ್ತರ ದರ್ಶನವು ಮದ್ಯಪಾನರೂ
ಪ ಸಹಸ್ರದೋಷಗಳನ್ನೂ ೧೦ ಸಹಸ್ರ ಬ್ರಹ್ಮಹತ್ಯಾದೋಷಗಳನ್ನೂ, ಇನ್ನೂ ಸಕ
ಲ ಪಾಪಗಳನ್ನೂ ಸಹ ಸುಟ್ಟು ಬಿಡುತ್ತದೆ ||೬೩|| ಎಂಬುದಾಗಿ ಸ್ಕಾಂದಪುರಾಣವ
ಚನ ಪ್ರಮಾಣವಿರುವುದರಿಂದಲೂ, ಮತ್ತೂ "ಅಘೋರಾಪಾಪಕಾಶಿನೀ" ಎಂಬವೇ
ದ ಮಂತ್ರದಲ್ಲಿ ಪಾಪರಹಿತರಾದ ಭಕ್ತರ ದೇಹದಲ್ಲಿ ಶಿವನು ಲಿಂಗರೂಪನಾಗಿ ಪ್ರಕಾ
ಶಿಸುತ್ತಿರುವನೆಂದು ಹೇಳಲ್ಪಟ್ಟಿರುವುದರಿಂದಲೂ ||೬೪|| ಶಿವಭಕ್ತರ ದರ್ಶನವೇ ಬ್ರಹ್ಮ
ಹತ್ಯಾದೋಷವನ್ನು ಪರಿಹರಿಸತಕ್ಕುದಾಗಿರುವುದು. ಹೀಗಿರುವಲ್ಲಿ, ಶೂಲಧಾರಿಯಾ
ದ ಶ್ರೀ ಪರಮೇಶ್ವರನಿಗೆ ಬ್ರಹ್ಮಹತ್ಯಾದೋಷವು ಎಲ್ಲಿರುವುದು ? ||೬೫|| ಈ ಕಾರಣ
ದಿಂದ ಚೆನ್ನಾಗಿ ವಿಚಾರಮಾಡಿ ನೋಡಿದರೆ, ಕರ್ಮವೆಂಬುದು ಶ್ರೀಮತ್ಪರಮೇಶ್ವರನ
ಆಜ್ಞಾಧೀನವಾಗಿರುವುದು. ಆ ಕರ್ಮವು ಕೂಡ ಬುದ್ಧಿಗನುಸಾರವಾಗಿ ವರ್ತಿಸುವುದು.
ಆ ಬುದ್ಧಿಯಾದರೋ ತನ್ನನ್ನುಪಯೋಗಿಸತಕ್ಕವರನ್ನನುಸರಿಸಿಕೊಂಡಿರುವುದು. ಆ
ದುದರಿಂದ ಭೂತಲದಲ್ಲಿ ಕರ್ಮವು ಸ್ವತಂತ್ರವಾದುದಲ್ಲ. ಆ ಕರ್ಮಗಳಿಗೆ ಶ್ರೀ ಮಹಾ
ದೇವನೇ ಕರ್ತೃವಾಗಿರುವನು ||೬೭||

ಇತ್ಯಸಂಖ್ಯಾತ............ಶ್ರೀವೀರಶೈವಮತಾಚಾರ್ಯಗುರು
ರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾ
ರ್ಜುನಪಂಡಿತಾರಾಧ್ಯಚರಿತ್ರೇ ವಾದಪ್ರಕರ
ಣೇ ಕರ್ಮವಾದನಿರಸನಕಥನಂ ನಾಮ
ತೃತೀಯೋಽಧ್ಯಾಯಃ.

## ಅಥ ಚತುರ್ಥೋಽಧ್ಯಾಯಃ.

(ಕಾಲವಾದ ನಿರಸನಂ.)

ಅವಾದಿಪೂರ್ವಂ ಭವತಾ ಕರ್ಮ ಕಾಲಾಂತರೇ ನರಂ। ಸಂಪ್ರಾಪ್ನೋತೀತ್ಯತಸ್ತ್ವಂ ಹಿ ಕಾಲವಾದೀ ಭವಿಷ್ಯಸಿ ॥೧॥ ಭವನ್ಮತಮಿದಂ ಕಾಲವಶಃ ಪುಣ್ಯಫಲೋದಯಃ। ಜಗತ್ಕಾಲವಶಂ ಸರ್ವಂ ಕಾಲಃ ಕರ್ತಾಽಖಿಲಸ್ಯ ಚ ॥೨

ಎಂಬಿಲ್ಲಿಗೆ ಶ್ರೀಗುರುರಾಜಕವಿಕೃತ ಶ್ರೀ ಮನ್ಮಲ್ಲಿಕಾರ್ಜುನ ಪಂಡಿತಾ
ರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ಕೃತನಾದ
"ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣಿಯಲ್ಲಿ ಶ್ರೀಮ
ನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ಕರ್ಮವಾದವ
ನ್ನು ಖಂಡಿಸಿದುದನ್ನು ವಿವರಿಸುವ ೩ನೆಯ
ಅಧ್ಯಾಯವು ಮುಗಿದುದು.

## ೪ ನೆಯ ಅಧ್ಯಾಯವು.

( ಕಾಲವೇ ಬ್ರಹ್ಮವೆಂಬುದನ್ನು ಖಂಡಿಸುವುದು. )

ಎಲೆ ವಾದಿಯೆ, ಕರ್ಮಫಲವು ಕಾಲಾಂತರದಲ್ಲಿ ಮನುಷ್ಯನನ್ನು ಹೊಂದುತ್ತದೆ ಯೆಂದು ನೀನು ಹಿಂದೆ ಹೇಳಿರುತ್ತೀಯೆ, ಈ ಕಾರಣದಿಂದ ನೀನು ಕೇವಲ ಕರ್ಮವಾದಿಯಾಗಿರದೆ ಕಾಲವಾದಿಯಾಗಿಯೂ ಇರುತ್ತೀಯೆ ॥೧॥ "ಪುಣ್ಯಫಲವು ಕಾಲಾಧೀನವಾಗಿ ಸಂಭವಿಸುವುದು" ಎಂದು ಹೇಳುವುದೇ ನಿನ್ನ ಮತವಾಗಿರುವುದು. "ಸಕಲ ಜಗತ್ತು ಕಾಲಕ್ಕಧೀನವಾಗಿರುವುದು, ಸಕಲಕ್ಕೂ ಕಾಲವೇ ಕರ್ತೃವು ॥೨॥ ಮ

ತಥಾ ಕಾಲವಶಾತ್ಪಾಪಕರ್ಮಣಾಂ ಸಂಭವಃ ಪುನಃ । ಕಾಲಾಧೀನಾ ಕರ್ಮ
ಫಲಪ್ರಾಪ್ತಿರಸ್ಮಿನ್ಮಹೀತಲೇ ॥೩॥ ಯುಗಪ್ರವರ್ತನಂ ಕಾಲವಶಮೇವೇ
ತಿ ಕೀರ್ತಿತಂ । ಜಗತಃ ಕಾರಣಂ ಕಾರ್ಯಂ ಕಾಲಾಯತ್ತಂ ಪ್ರಜಾಯತೇ ॥೪॥
ಕಾಲಾಧೀನೇ ವಿನಿರ್ದಿಷ್ಟೇ ಜಗತಸ್ಸೃಷ್ಟಿಸಂಹೃತೀ । ಜಗತ್ಪ್ರವರ್ತನಂ
ಕಾಲವಶಮೇವೇತಿ ನಿಶ್ಚಿತಂ ॥೫॥ ರಾಜಿಕಂ ದೈವಿಕಮಪಿ ಕಾಲಾಯತ್ತಂ
ಪ್ರಕೀರ್ತ್ಯತೇ । ಸರ್ವಂ ಕಾಲವಶಾತ್ಪ್ರೋಕ್ತಂ ರವೀಂದುಗ್ರಹಣಾದಿಕಂ ॥
ಸುಖದುಃಖೇ ಕಾಲವಶೇ ಸಂಪತ್ಕಾಲವಶಾ ಸ್ಮೃತಾ । ತಥಾ ದರಿದ್ರತ್ವಮಪಿ
ಕಾಲಾಧೀನಮಿತಿ ಸ್ಮೃತಂ ॥೭॥ ಕಾಲಾಧೀನಾಃ ಪರಿಜ್ಞೇಯಾಸ್ತ್ರುಟಿಕ್ಷಣ
ಲವಾದಯಃ । ಮುಹೂರ್ತಲಗ್ನಾದಯಶ್ಚ ತಥಾ ಕಾಲವಶಾಸ್ಸ್ಮೃತಾಃ ॥೮॥
ಕಾಲಾಧೀನೇ ಸಮುದ್ದಿಷ್ಟೇ ನವಗ್ರಹಬಲಾಬಲೇ । ಸಂಕ್ರಾಂತಯಃ ಕಾ
ಲವಶಾಸ್ತಿಥಯೋಽಪಿ ತಥಾ ಪುನಃ ॥೯॥ ನಕ್ಷತ್ರಾಣಾಂ ಪ್ರಚರಣಂ ಕಾಲಾಧೀ
ನಂ ಭವತ್ಯಲಂ । ವೇಲಾಕರಣಯೋಗಾಶ್ಚ ಸರ್ವೇ ಕಾಲವಶಾಸ್ಸ್ಮೃತಾಃ ॥

---

ತ್ತು ಪಾಪಕರ್ಮಫಲವಾದ ನರಕವು ಸಹ ಕೆಲಕಾಲಾನಂತರದಲ್ಲಿಯೇ ಪ್ರಾಪ್ತವಾಗು
ವುದು. ಭೂತಲದಲ್ಲಿ ಸಕಲ ಕರ್ಮಫಲವೂ ಕಾಲಕ್ಕಧೀನವಾಗಿಯೇ ಸಮನಿಸುವುದು
ಯುಗಗಳು ಕೂಡ ಕ್ಲುಪ್ತವಾದ ಕಾಲದ ನಂತರವೇ ಬಂದಾದ ಮೇಲೊಂದು ಪ್ರವರ್ತಿ
ಸುವುವು. ಅದು ಕಾರಣ, ಅವೂ ಕಾಲಾಧೀನವಾದುವುಗಳು. ಜಗತ್ಸೃಷ್ಟಿರೂಪ
ಕಾರ್ಯವೂ ತತ್ಕಾರಣವೂ ಸಹ ಬಂದೊಂದು ಮಹಾಪ್ರಳಯಾನಂತರದಲ್ಲಿಯೇ ಸಂಭ
ವಿಸುವುದಾದ ಕಾರಣ ಅವು ಕೂಡ ಕಾಲಾಧೀನವಾಗಿಯೇ ಇರುವುವು ॥೪॥ ಜಗ
ತ್ತಿನ ಸೃಷ್ಟಿ ಸಂಹಾರಗಳು ಸಹ ಒಂದಾನೊಂದು ಕ್ಲುಪ್ತ ಕಾಲದಲ್ಲಿ ಆಗತಕ್ಕವೆಂ
ದು ನಿರ್ಣೀತವಾಗಿರುವುವು. ಜಗದ್ವ್ಯವಹಾರವೆಲ್ಲವೂ ಕಾಲಾಧೀನವಾಗಿಯೇ ಇರು
ವುದೆಂದು ನಿಶ್ಚಿತವಾಗಿರುವುದು ॥೫॥ ರಾಜಕರ್ತೃಕ ದೈವಕರ್ತೃಕ ಕಾರ್ಯಗಳೆಲ್ಲವೂ
ಕಾಲಾಧೀನವಾಗಿಯೇ ಸಮನಿಸುವುವು. ಸೂರ್ಯ ಚಂದ್ರ ಗ್ರಹಣಾದಿಗಳೆಲ್ಲವೂ ಗೊ
ತ್ತಾದ ಕಾಲದಲ್ಲಿಯೇ ಪ್ರಾಪ್ತವಾಗುವುವೆಂದು ಹೇಳಲ್ಪಟ್ಟಿದೆ ॥೬॥ ಸುಖದುಃಖಗಳೂ
ಕಾಲಾಧೀನಗಳು. ಸಂಪತ್ತೂ ಕೂಡ ಬರತಕ್ಕ ಕಾಲದಲ್ಲಿಯೇ ಬಂದು ಹೋಗತ
ಕ್ಕ ಕಾಲದಲ್ಲಿಯೇ ಹೋಗುವುದು. ಹಾಗೆಯೇ ಬಡತನವೂ ಕೂಡ ಬರತಕ್ಕ ಕಾಲ
ದಲ್ಲಿಯೇ ಬರುವುದು ॥೭॥ ತ್ರುಟಿ (ಸೂಜಿಮೊನೆಯಿಂದ ಹೂವಿನ ದಳವನ್ನು ಭೇದಿಸು
ವಷ್ಟು ಹೊತ್ತು) ನಿಮಿಷ-ಲವ (ಎಂಟುಕ್ಷಣ)-ಗಳಿಗೆ-ಲಗ್ನ ಮೊದಲಾದುವುಗಳೆಲ್ಲಾ
ಕಾಲವಶಗಳಾಗಿಯೇ ಇರುವುವು ॥೮॥ ನವಗ್ರಹಗಳ ಬಲಾಬಲಗಳೆಲ್ಲವೂ ಕಾಲವಶವಾ
ಗಿಯೇ ಇರುವುವು. ಸಂಕ್ರಮಣಗಳೂ ತಿಥಿಗಳೂ ಸಹ ಕಾಲಾಧೀನಗಳಾಗಿಯೇ ಇ
ರುವುವು. ॥೯॥ ನಕ್ಷತ್ರಗಳ ಗತಿಯೂ ಕಾಲಾಧೀನವಾಗಿಯೇ ಇರುವುದು. ಕರಣಗ
ಳೂ ಯೋಗಗಳೂ ಸಹ ಕಾಲಾಧೀನವಾಗಿಯೇ ಇರುವುವು ॥೧೦॥ ಬಂಧಮೋಕ್ಷಗ

ಕಾಲಾಧೀನೌಬಂಧಮುಕ್ತೀತಥೈವಸ್ವರ್ಗದುರ್ಗತೀ । ಸರ್ವಂಕಾಲಾಯತ್ತಮೇವಲೋಕೇಽಪಿ ಪ್ರತ್ಯುಚ್ಯತೇಯದಿ ॥೧೧॥ ಶೃಣುವಕ್ಷ್ಯಾಮ್ಯಹಂಸಮ್ಯಗುತ್ತರಂತವಸಂಪ್ರತಿ । ಚಂಚಲೋಽಚೇತನೋಽಸ್ಥಿರೋನಿರ್ಗುಣಃಕ್ಷಣಭಂಗುರಃ ॥೧೨॥ ಅನಾಶ್ರಯೋಽಶರೀರೀತಿಸಕಾಲಃಪರಿಕೀರ್ತ್ಯತೇ । ಅನಾದಿಕರ್ತೃತಾತಸ್ಯಕಾಲಸ್ಯಕಿಮುವಿದ್ಯತೇ ॥೧೩॥ ಕುಲಾಲೇಸ್ವಯಮಭ್ರಾಂತ್ವಾಚಕ್ರಂಭ್ರಮಯತಿಕ್ಷಿತೌ । ಯಥಾಭ್ರಮತಿತಚ್ಚಕ್ರಂಸ್ವಯಂನಭ್ರಮತಿಕ್ವಚಿತ್ ॥೧೪॥ ತಥಾಮಹೇಶ್ವರೋಽಭ್ರಾಂತ್ವಾಪರಿಭ್ರಮಯತಿಧ್ರುತಂ । ಪರಿಭ್ರಮತಿಕಾಲೋಽಪಿಸ್ವಯಂನಭ್ರಮತಿಧ್ರುವಂ ॥೧೫॥ ಅಪಿಚಾಧಾರಶಕ್ತಿಂತಾಂಸ್ವಕೀಯಾಜ್ಞಾಪ್ರವರ್ತಿನೀಂ । ಅಧಃಕೃತ್ವಾಽಧಿಧಾರಶಿಲಾಂಮೇರುಂಸ್ತಂಭಂವಿಧಾಯಚ ॥೧೬॥ ಆಸಜ್ಯಕಾಲಚಕ್ರಂತದಗ್ರೇದಂಡಂದಿವಾಕರಂ । ಕೃತ್ವಾಗೃಹೀತ್ವಾಹಸ್ತೇನಹ್ಯಭ್ರಾಂತ್ವಾಸ್ವಯಮೀಶ್ವರೇ ॥೧೭॥ ಭ್ರಾಮಕೇತಸ್ಯಚಕ್ರಸ್ಯಮಹಾದೇ

---

ಳೂ ಸ್ವರ್ಗ ನರಕಗಳೂ ಸಹ ಕಾಲಾಧೀನವಾಗಿಯೇ ಪ್ರಾಪ್ತವಾಗತಕ್ಕವು. ಲೋಕದಲ್ಲಿ ಹೀಗೆ ಸಕಲವೂ ಕಾಲಾಧೀನವಾಗಿದೆ; ಇರುವುದು. ಅದುಕಾರಣ, ಅದೇ ಸ್ವಕರ್ತೃವು" ಎಂದು ನೀನು ಹೇಳುವೆಯಾದರೆ ॥೧೧॥ ಈಗ ನಿನಗೆ ಉತ್ತರವನ್ನು ಹೇಳುತ್ತೇನೆ ಕೇಳು, ಎಂದು ಶ್ರೀಮತ್ಪಂಡಿತಾರಾಧ್ಯರು ಹೇಳತೊಡಗಿದರು, ಎಂತೆಂದರೆ:—"ಈ ಕಾಲವೆಂಬುದು ಚಪಲವಾದುದು, ಜಡವಾದುದು, ಅಸ್ಥಿರವಾದುದು, ನಿರ್ಗುಣವಾದುದು, ಕ್ಷಣಿಕವಾದುದು ॥೧೨॥ ಆಶ್ರಯರಹಿತವಾದುದು, ದೇಹರಹಿತವಾದುದು, ಎಂದು ಹೇಳಲ್ಪಡುತ್ತದೆ. ಇಂಥ ಕಾಲಕ್ಕೆ ಅನಾದಿಕರ್ತೃತ್ವವು ಇರುವುದೆ? ॥೧೩॥ ಭೂಮಿಯಲ್ಲಿ ಕುಂಬಾರನು ತಾನು ಸುತ್ತದೆ, ಚಕ್ರವನ್ನು ಹೇಗೆ ತಿರುಗಿಸುವನೋ, ಕುಂಬಾರನ ತಿರುಗಿಸುವಿಕೆಯಿಂದ ಚಕ್ರವು ತಿರುಗುತ್ತದೆಯೇ ಹೊರತು ತಾನಾಗಿಯೇ ಅದು ಹೇಗೆ ಸುತ್ತಲಾರದೋ, ಅದರಂತೆಯೇ ಅನಾದಿ ಮಹೇಶ್ವರನು ತಾನು ಚಲಿಸದೆ, ಜಗತ್ತಿನ ರಾಟೆಯನ್ನು ಸುತ್ತಿಸುವನು. ಆ ಜಗದೀಶನ ಪ್ರೇರಣೆಯಿಂದಲೇ ಕಾಲವೂ ಸುತ್ತುವುದು. ಅಷ್ಟೇ ಹೊರತು ಕಾಲವು ತಾನಾಗಿ ಸುತ್ತಲಾರದು. ಇದು ನಿಶ್ಚಯ. ॥೧೫॥ ಮತ್ತೂ ಆ ಪರಶಿವನು ತನ್ನ ಆಜ್ಞಾನುವರ್ತಿಯಾದ ಆಧಾರಶಕ್ತಿಯನ್ನು ತಳಗಲ್ಲನ್ನಾಗಿ ಮಾಡಿ, ಮೇರುಪರ್ವತವನ್ನು ಆ ಕಲ್ಲಿನ ಮಧ್ಯದ ಮೊಳೆಯನ್ನಾಗಿ ನಿಲ್ಲಿಸಿ, ಅದರಮೇಲೆ ಕಾಲವೆಂಬ ಚಕ್ರವನ್ನು ತಗುಲಿಸಿ, ಸೂರ್ಯನನ್ನು ದೊಣ್ಣೆಯನ್ನಾಗಿ ಮಾಡಿ, ಕೈಯಿಂದ ಹಿಡಿದು, ತಾನು ಮಾತ್ರ ಸುತ್ತದೆ, ಈ ಕಾಲಚಕ್ರವನ್ನು ತಿರುಗಿಸುತ್ತಿರಲಾಗಿಯೂ, ನಿರ್ವ್ಯಾಘಾತಿಯಾದ ಪರಶಿ

ವೇಸ್ಥಿತೇ ಕ್ಷಿತೌ । ಭವದಾರುಮಹಾಯಂತ್ರಂ ಸಜೀವಘಟಮುನ್ನತಂ ॥೧೮॥
ಕರ್ಮಚಕ್ರನಿಬದ್ಧಾರ್ಕಬಲೀವರ್ದಭ್ರಮೇಣ ಹಿ । ಭ್ರಮಯತ್ಯರ್ಕವರ್ತಿಸ
ದಾ ವಿಶ್ವಕರ್ತರಿ ತಿಷ್ಠತಿ ॥೧೯॥ ವಿರಿಂಚಿಹರಿಮುಖ್ಯಾನಾಮಾಯೂರಾಶಿಂ
ಮಹೋನ್ನತಂ । ರವಿಪ್ರಸ್ಥೇನ ಚತುರಂ ಮಾತುಂ ದಕ್ಷೇ ಮಹೇಶ್ವರೇ ॥೨೦॥
ಕಾಲಾತೀತೇ ಮಹಾಕಾಲೇಽತಿಕಾಲೇ ಕಾಲಕಂಧರೇ । ಕಾಲಾತ್ಮಕೇ ಕಾ
ಲಕಾಲೇ ಕಾಲರೂಪೇಽಕ್ಷರೇಽಭವೇ ॥೨೧॥ ಕಾಲಾಶ್ರಯೇ ಕಾಲವಶೇ
ಮೋಕ್ಷದೇ ಕಾಲಚೇತನೇ । ತಸ್ಮಿನ್ ಸತಿ ಮಹಾದೇವೇ ಕಥಂ ಕಾಲಸ್ಯ ಕ
ರ್ತೃತಾ ॥೨೨॥ ಕಿಂತ್ವಜ್ಞಾನವಶತಸ್ತು ಸ್ವಯಂ ಕಾಲಃ ಪರಿವರ್ತತೇ । ಕಿಂಚ
ಪುಂಸಾಮಶೇಷಾಣಾಂ ಶತಾಯುಸ್ತ್ವಂ ಮಹೀತಲೇ ॥೨೩॥ ಸ್ಪಷ್ಟಂ ಶತಾ
ಯುಃ ಪುರುಷ ಇತಿ ಶ್ರುತ್ಯುದಿತೇಽಪ್ಯಲಂ । ತತೋಽಧಿಕಂ ಮಹಾದೇವಭಕ್ತಾ
ಜೀವಂತಿ ಕೇಚನ ॥೨೪॥ ಮಾರ್ಕಂಡೇಯಃ ಕಾಲಮೃತ್ಯುಮಜಯನ್ನ ಕಿ

---

ವನು ಪುಣ್ಯ ಪಾಪ ಕರ್ಮವೆಂಬ ಚಕ್ರವುಳ್ಳುದಾಗಿಯೂ, ಜೀವಾತ್ಮನೆಂಬ ಗಡಿಗೆಗಳಿಂ
ದ ಕೂಡಿರುವುದಾಗಿಯೂ ಇರುವ ಜನನ ಮರಣಾತ್ಮಕ ಸಂಸಾರವೆಂಬ ದೊಡ್ಡರಾ
ಟೆಯನ್ನು, ಸೂರ್ಯನೆಂಬ ಎತ್ತಿಗೆ ಕಟ್ಟಿ ಎಳೆಯಿಸಿ ಸುತ್ತಿಸುತ್ತಿರಲಾಗಿಯೂ ॥೧೯॥
ಪರಶಿವನು ಬ್ರಹ್ಮ ವಿಷ್ಣ್ವಾದಿದೇವತೆಗಳ ಅಧಿಕವಾದ ಆಯುಸ್ಸಿನ ರಾಶಿಯನ್ನು ಸೂರ್ಯ
ನೆಂಬ ಕೊಳಗದಿಂದ ಕುಶಲವಾಗಿ ಅಳೆಯುವುದಕ್ಕೆ ಸಮರ್ಥನಾಗಿರುತ್ತಿರಲಾಗಿಯೂ
ಆ ಪರಶಿವನು ಕಾಲವನ್ನು ಮೀರಿದವ ( ಕಾಲವು ತತ್ವಸಮೂಹಪ್ರವಿಷ್ಟವಾದು
ದು; ಪರಶಿವನು ತತ್ವಾತೀತನು ) ನಾಗಿಯೂ, ಮಹಾಪ್ರಳಯದಲ್ಲಿ ಸರ್ವವಿನಾಶಕನಾ
ಗಿಯೂ, ಕಾಲಚಕ್ರಕ್ಕೆ ಸಿಲ್ಕದವನಾಗಿಯೂ, ಕರೆಗೊರಲನಾಗಿಯೂ, ಸರ್ವಕಾಲದ
ಲ್ಲೂ ಅಖಂಡವಾಗಿರುವುದರಿಂದ ಕಾಲಸ್ವರೂಪನಾಗಿಯೂ, ಯಮವಿನಾಶಕನಾಗಿ
ಯೂ, ಕಾಲರುದ್ರಸ್ವರೂಪನಾಗಿಯೂ, ನಾಶರಹಿತನಾಗಿಯೂ ಜನನವಿಲ್ಲದವನಾಗಿ
ಯೂ ॥೨೧॥ ಕಾಲಕ್ಕಧಿಷ್ಠಾನನಾಗಿಯೂ, ಕಾಲಕ್ಕಧೀನನಲ್ಲದವನಾಗಿಯೂ,
ಮೋಕ್ಷವನ್ನು ಕೊಡುವವನಾಗಿಯೂ, ಕಾಲಚಕ್ರಕ್ಕೆ ತಾನೇ ಪ್ರೇರಕನಾದುದರಿಂದ
ಚೈತನ್ಯಸ್ವರೂಪನಾಗಿಯೂ ಇರುತ್ತಿರಲಾಗಿ, ಆ ಕಾಲಕ್ಕೆ ಅನಾದಿಕರ್ತೃತ್ವವು ಹೇ
ಗೆ ಸಂಭವಿಸುವುದು? ॥೨೨॥ ಮತ್ತೂ ಆ ಕಾಲವು ಪರಶಿವನ ಆಜ್ಞಾಧೀನವಾಗಿರುತ್ತ
ದೆ. ಹೇಗೆಂದರೆ;—ಭೂತಲದಲ್ಲಿ ಪುರುಷನಿಗೆ ನೂರುವರ್ಷದಾಯುಸ್ಸಿರುವುದು. ಈ
ಮಾತು "ಶತಾಯುರ್ವೈ ಪುರುಷಃ" ಎಂಬ ವೇದವಚನದಿಂದಲೂ ಸ್ಪಷ್ಟವಾಗಿರುವು
ದು. ಆ ಆಯುಃಪರಿಮಿತಿಗಿಂತಲೂ ಹೆಚ್ಚು ಕಾಲ ಶಿವಭಕ್ತರು ಕೆಲವು ಬದುಕಿದ್ದಾ
ರೆ. ಮಾರ್ಕಂಡೇಯನು ಆಶ್ಚರ್ಯಕರವಾಗಿ ಕಾಲಮೃತ್ಯುವನ್ನು ಜಯಿಸಲಿಲ್ಲವೆ? ಶಿವ
ಶರಣಶ್ರೇಷ್ಠನಾದ ಸಕಲೇಶ್ವರಮಾದರಸನು ಕಾಲಮೃತ್ಯುವನ್ನೊತ್ತರಿಸಿ, ಪರಶಿವಾ

ಮದ್ಭುತಂ । ಅವಧೀದ್ಯಪರಂ ಕಾಲಂ ಸಕಲೇಶ್ವರಮಾಧವಃ ॥೨೫॥ ಕಾಲಕಾಲಾಜ್ಞಯಾತಸ್ಥಾನ ಕಿಂ ಹರಗಣಾಧಿಕಃ । ಸಪ್ತವರ್ಷಾದಿರಾಜಾರ್ಯಃ ಕಂಚಿದ್ಭಕ್ತಂ ಮೃತಂ ಪುನಃ ॥೨೬॥ ಉಜ್ಜೀವ್ಯ ಬಾಲಕಪ್ರೀತ್ಯಾ ಜಿತಕಾಲಂ ವ್ಯಧಾನ್ನ ಕಿಂ । ಕಾಂಚಿತ್ಸ್ವ ಪಾದಾವನತಾಂ ಕನ್ಯಾಂ ಮುಸುಟೆಚೌಡಯಃ ॥೨೭॥ ಉಲ್ಲಂಘ್ಯ ಜೀವಿತೇಶಾಜ್ಞಾಂ ನಾಕರೋತ್ಕಿಂ ಸಜೀವಿತಾಂ । ಅವಮೃತ್ಯುಯಮುಂ ಕಂಚಿದ್ಬಾಲಂ ಕಾಲವಶಂಗತಂ ॥೨೮॥ ಕ್ಷಣಾದುಜ್ಜೀವಿತಂ ಚಕ್ರೇ ನ ಕಿಂ ಶ್ರೀಸಂಬ್ಯಣ್ಣೋ ಮಹಾನ್ । ಶ್ರೀಪಿಳ್ಳೈನಾರ್ಯ ಆಖ್ಯಕಲ್ಯಶೇಷಾಂ ಚ ಕಸ್ಯಕಾಂ ॥೨೯॥ ಕಾಂಚಿದುಜ್ಜೀವಯಾಮಾಸ ನ ಕಿಂ ಪರಗಣಾಗ್ರಣೀಃ । ರಕ್ಕಸಬೊಮ್ಮಯ್ಯ ಶ್ಚ ವರಥಾನ್ನ ಕಿಂ ಪುತ್ರಮುಜ್ಜೀವಯತ್ ॥೩೦॥ ಏವಂ ಕಾಲಮತಿಕ್ರಮ್ಯ ವರ್ತಂತೇ ಬಹವೋ ಗಣಾಃ । ಭಕ್ತಾ ಭೂಯೋಪಿ ವಿದ್ಯಂತೇ ಬಹವಃ ಕಾಲವಂಚಕಾಃ ॥೩೧॥ ಕರ್ತಾ ಯದಿ ಭವೇತ್ಕಾಲೋ ನಾಸ್ತಿ ಸ್ವಾತಂತ್ರ್ಯಮೇಷು ಕಿಂ । ತಥೈವ ಲುಂಪಂತಿ ದೈವಲಿಖಿತಾಸೀತಿ ಭಾ

---

ಜ್ಞೆಯಿಂದ ಭೂಮಿಯಲ್ಲಿ ೩೦೦ ವರ್ಷಗಳವರೆಗೆ ಜೀವಿಸಿರಲಿಲ್ಲವೆ ? ಅದೇ ಮಾದಿರಾಜಾರ್ಯನು ಚಿಕ್ಕಮಾದಣ್ಣನೆಂಬ ತನ್ನ ಶಿಷ್ಯನೊಬ್ಬನು ಮೃತನಾಗಲು, ಆತನ ಮಗನಾದ ಬಾಲಲಿಂಗನ ಮೇಲಣ ಪ್ರೀತಿಯಿಂದ ಆ ಚಿಕ್ಕಮಾದಣ್ಣನನ್ನು ಬದುಕಿಸಿ, ಅವನನ್ನು ಕಾಲಮೃತ್ಯು ವಿಜಯಿಯನ್ನಾಗಿ ಮಾಡಲಿಲ್ಲವೆ ! ॥೨೬॥ ಮುಸುಟೆಚೌಡಯ್ಯನೆಂಬ ಶಿವಶರಣನು, ತನ್ನ ಪಾದಕ್ಕೆ ನಮಸ್ಕರಿಸಿ ಆಯುಷ್ಮತಿಯಾಗೆಂದು ಆಶೀರ್ವಾದಗೊಂಡು ಹೋಗಿದ್ದ ಬಾಲಿಕೆಯೊಬ್ಬಳು ಸ್ವಲ್ಪಕಾಲನೊಳಗೆ ಕಾಲಮೃತ್ಯುಗಧೀನಳಾಗಿ ಮೃತಳಾಗಲು, ಶಿವಾಜ್ಞೆಯಾದ ಆಕೆಯ ಕಾಲಮೃತ್ಯುವನ್ನು ಮೀರಿ, ಆಕೆಯನ್ನು ಬದುಕಿಸಲಿಲ್ಲವೆ ? ಒಬ್ಬ ಹಾರ್ವರ ಹುಡುಗನು ಕಾಲಮೃತ್ಯುಗಧೀನನಾಗಿ ಮೊಸಳೆಯಿಂದ ನುಂಗಲ್ಪಟ್ಟು ಮೃತನಾಗಲು, ಅವನ ತಾಯಿ ಗೋಳನ್ನು ಮಹಾತ್ಮನಾದ ಸೌಂದರಸಂಬ್ಯಣ್ಣನು ಕೇಳಿ, ತನ್ನ ಹೆಸರಿನ ಆ ಹುಡುಗನಿಗೆ ಕ್ಷಣಕಾಲದಲ್ಲಿ ಪ್ರಾಣವನ್ನಿತ್ತು ಬದುಕಿಸಲಿಲ್ಲವೆ ! ಶಿವಗಣಶ್ರೇಷ್ಠನಾದ ಪಿಳ್ಳೈನಾರಿಯು ತನಗೆ ಮೀಸಲಾಗಿದ್ದ ಪದ್ಮಮುಖಿಯೆಂಬ ಹೆಣ್ಣು ಸತ್ತು ೯ ವರ್ಷವಾಗಿ, ಮೂಳೆ ಮಾತ್ರ ಉಳಿದಿರಲು, ಆಕೆಯನ್ನು ಬದುಕಿಸಲಿಲ್ಲವೆ ! ರಕ್ಕಸಬೊಮ್ಮಯ್ಯನು ಸತ್ತಿದ್ದ ಹುಡುಗನನ್ನು ಬದುಕಿಸಿ ವಿಮಾನದಿಂ ದಿಳುಹಿಸಲಿಲ್ಲವೆ ? ॥೩೦॥ ಹೀಗೆ ಕಾಲಮೃತ್ಯುವನ್ನು ಮೀರಿದ ಶಿವಗಣರು ಬಹುಮಂದಿಗಳಿದ್ದಾರೆ. ಮತ್ತೂ ಕಾಲವನ್ನು ಮೀರಿದ ಭಕ್ತರುಗಳೂ ಅನೇಕರಿದ್ದಾರೆ ॥೩೧॥ ಕಾಲವೇ ಕರ್ತೃವಾಗಿದ್ದರೆ ಈ ಶಿವಗಣರಲ್ಲಿ ಅದರ ಸ್ವತಂತ್ರಶಕ್ತಿಯು ಏಕೆ ನಡೆಯಲಿಲ್ಲ! ಶಿವಶರಣರು ದೈವಲಿಖಿತವನ್ನು ಕೂಡ ಅ

ಷಿತಾತ್ ॥೩೨॥ ಕುತ್ರಕಾಲಸ್ಯಕರ್ತೃತ್ವಂಕಾಲವಾದಿಂಸ್ತ್ವಯೋಚ್ಯತೇ ।ಷಟ್ತ್ರಿಂಶತ್ತತ್ವಬಾಹ್ಯಾಂತರ್ವ್ಯಾಪ್ತಾಽಽಜ್ಞಾಶ್ರೀಮಹೇಶಿತುಃ ॥೩೪॥ ತತ್ರೈಕತತ್ವಂಕಾಲೋಽಸ್ಯಕರ್ತೃತ್ವಂವಿದ್ಯತೇಕಥಂ ॥

ಇತ್ಯಸಂಖ್ಯಾತ..........ಶ್ರೀ ವೀರಶೈವಮತಾಚಾರ್ಯ ಗು
ರುರಾಜಸ್ಯ ಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿ
ಕಾರ್ಜುನ ಪಂಡಿತಾರಾಧ್ಯಚರಿತ್ರೇ ವಾದಪ್ರ
ಕರಣೇ ಕಾಲವಾದಸಿರಸನಕಥನಂ
ನಾಮ ಚತುರ್ಥೋಽಧ್ಯಾಯಃ.

---

ಅಥಪಂಚಮೋಽಧ್ಯಾಯಃ.

(ವೇದಾಂತಿಮತನಿರಸನಂ)

---

ಅನಾದಿರ್ನಿಷ್ಕಲಂತತ್ವಂಕಾಲಸ್ತದ್ವಶಗಂಜಗತ್ । ಇತಿಜಲ್ಪಸಿತಸ್ಮಾತ್ತ್ವಂವೇದಾಂತೀವಪ್ರವೃಶ್ಯಸೇ॥೧॥ವೇದಾಂತಿಚ್ಛ್ರೃಣುವೇದಾಂತಮಾ

---

ಳಿಸಿಬಿಡುವರು ಎಂದು ಹೇಳಲ್ಪಟ್ಟಿರುವುದರಿಂದ ॥೩೦॥ ಎಲೆ ವಾದಿಯೆ, ಕಾಲಕ್ಕೆ ಅನಾದಿಕರ್ತೃತ್ವವನ್ನು ಹೇಗೆ ಹೇಳುವೆ ! ಶ್ರೀಮಹೇಶ್ವರನ ಆಜ್ಞಾಶಕ್ತಿಯು ಪೃಥಿವ್ಯಾದಿ ಶಿವಾಂತವಾದ ೩೬ ತತ್ವಗಳಲ್ಲಿ ಒಳಗೂ ಹೊರಗೂ ವ್ಯಾಪಿಸಿರುವುದು. ॥೩೧॥ ಕಾಲವೆಂಬುದು ಆ ೩೬ ತತ್ವಗಳಲ್ಲಿ ಒಂದಾಗಿರುವುದು. ಇದಕ್ಕೆ ಅನಾದಿಕರ್ತೃತ್ವವು ಹೇಗಿರುವುದು ?

ಎಂಬಿಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್.
ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ
ಟಿಪ್ಪಣಿದಲ್ಲಿ ವಾದ ಪ್ರಕರಣದೊಳಗೆ ಶ್ರೀಮತ್ಪಂಡಿತಾರಾಧ್ಯ
ರು ಕಾಲಬ್ರಹ್ಮವಾದವನ್ನು ಖಂಡಿಸಿದುದನ್ನು ವಿವರಿಸುವ
೪ ನೆಯ ಅಧ್ಯಾಯವು ಮುಗಿದುದು.

---

೫ ನೆ ಅಧ್ಯಾಯವು.

(ವೇದಾಂತಿಮತಖಂಡನವು.)

---

ಎಲೆ ವಾದಿಯೆ, "ಕಾಲವು ಅನಾದಿಯು, ಅದೇ ನಿಷ್ಕಲವಾದ ತತ್ವವು, ಜಗತ್ತೆಲ್ಲವೂ ಅದರಧೀನವು" ಎಂದು ನೀನು ಹೇಳುತ್ತೀಯೆ ; ಅದುಕಾರಣ, ನೀನು ವೇ

ರ್ಗಂಮಾಯಾಮತಂತವ । ವೇದಾಂತಶಾಸ್ತ್ರಹೃದಯಮಜ್ಞಾತ್ವಾತ್ವಂಭ್ರಮಾನ್ವಿತಃ ॥೨॥ ಜೀವಶ್ಶಿವಶ್ಶಿವೋಜೀವ ಇತಿಬಂಧವಿನಾಶಕಂ । ಶಿವಂಬದ್ಧಂವಿಧಾಯಾದ್ಯಕಥಯ ಸ್ಸ್ಯಚಿತಂಕಿಮು ॥೩॥ ಅಹಮೇವಪಶೂನಾಮಿತ್ಯಾದೇರಾಮ್ನಾಯವಾಕ್ಯತಃ । ರುದ್ರಃಪಶೂನಾಮಿತ್ಯಾದಿಶ್ರುತೇಶ್ಚ ವಚನಾತ್ತಥಾ ॥೪॥ ಶ್ರುತೇರೇತಸ್ಯಾಶ್ಚ ಪಶುಪತಯೇಚೇತ್ಯಥಾಸ್ಯತಃ । ಬ್ರಹ್ಮಾದಯಃಪಶವ ಇತ್ಯಮುಷ್ಯಾಶ್ಚ ಶ್ರುತೇರಪಿ ॥೫॥ ಪಿಪೀಲಿಕಾಂತಾಶ್ಶ್ರೀನಾಥಬ್ರಹ್ಮಾದ್ಯಾಜೀವರಾಶಯಃ । ಪಶವಃಕೀರ್ತಿತಾಸ್ತೇಷಾಂ ಪತಿತ್ವಾಜ್ಜಗದೀಶ್ವರಃ ॥೬॥ ಶಿವಃಪಶುಪತಿಸ್ತಸ್ಯಪಶುನಾಯುಜ್ಯತೇಕಿಮು । ಪಶವಃಕಥಿತಾಜೀವಾಃಪಾಶಃಪ್ರಕೃತಿರಾವೃತಾ ॥೭॥ ರುದ್ರಸ್ತಯೋಃಪತಿರಿತಿಪ್ರತ್ಯಯೇಸಂಸ್ಥಿತೇಸತಿ । ಪತಿಶ್ಶಿವಸ್ತದಿತರೇಪಶವಃಕೀರ್ತಿತಾಸ್ತತಃ ॥ ಗೋಪಾಲೇನಯಥಾಮುಕ್ತಾ ಪಾಶಾಸ್ಸ್ಯಃಪಶವಃಕ್ಷಿತೌ । ಮುಕ್ತಪಾಶಾ

---

ದಾಂತಿಯಹಾಗೆ ಕ್ವಾಣ್ಯುರುತ್ತೀಯೆ ॥೧॥ ಎಲೆ ವೇದಾಂತಿಯೆ, ವೇದಾಂತಮಾರ್ಗವನ್ನು ಹೇಳುತ್ತೇನೆ, ಕೇಳು:—ನಿನ್ನದು ಮಾಯಾಮತವು. ವೇದಾಂತಶಾಸ್ತ್ರದೊಡಲನು ಅರಿಯದೆ ಭ್ರಾಂತನಾಗಿ ॥೨॥ ಜೀವನೇ ಶಿವನು, ಶಿವನೇ ಜೀವನು, ಎಂಬುದಾಗಿ, ಬ್ಲಂಧನಾಶಕನಾದ ಶಿವನನ್ನೇ ಬಂಧಯುಕ್ತನನ್ನಾಗಿಮಾಡಿ,ನುಡಿಯುತ್ತೀಯೆ ; ಇದು ಯೋಗ್ಯವೆ ? ॥೩॥ "ಅಹಮೇವಪಶೂನಾಂಪತಿಃ" (ಸಕಲ ಜೀವರಾಶಿಗಳೆಂಬ ಪಶುಗಳಿಗೆಲ್ಲನಾನೊಬ್ಬನೇ ಪತಿ) ಎಂಬುದು ಮೊದಲಾದ ವೇದವಚನದಿಂದಲೂ, "ರುದ್ರಃ ಪಶುಪತಿಃಕರ್ತಾ" (ರುದ್ರನೇ ಪಶುಪತಿಯು, ಆತನೇ ಯಜ್ಞಕರ್ತೃವು) ಎಂಬುದು ಮೊದಲಾದ ವೇದವಚನದಿಂದಲೂ ॥ ೪ ॥ "ಪಶುಪತಯೆನಮೋ" ಎಂಬ, "ಬ್ರಹ್ಮಾದಯಃಪಶವಃ" ಎಂಬ ವೇದವಚನದಿಂದಲೂ ಸಹ ವಿಷ್ಣುಬ್ರಹ್ಮಾದಿಯಾಗಿ ಇರುವೆ ಕೊನೆಯಾದ ಜೀವರಾಶಿಗಳೆಲ್ಲವೂ ಪಶುಗಳೆಂದು ಹೇಳಲ್ಪಟ್ಟವು. ಅವುಗಳಿಗೆಲ್ಲಾ ಜಗದೀಶನಾದ ಶಿವನು ಪತಿಯಾದುದರಿಂದ ಆತನು ಪಶುಪತಿಯೆನಿಸಿಕೊಂಡನು. ಅಂಥ ಪಶುಪತಿಯಾದ ಶಿವನು ಅದುಹೇಗೆ ಪಶುವೆನಿಸಿಕೊಳ್ಳುವನು ? ಜೀವರುಗಳಲ್ಲರೂ ಪಶುಗಳೆಂದು ಹೇಳಲ್ಪಡುತ್ತಾರೆ. ಸರ್ವವನ್ನೂ ಆವರಿಸಿಕೊಂಡಿರುವ ಪ್ರಕೃತಿಯೇ (ಮಾಯೆಯೇ) ಪಾಶವೆನಿಸಿಕೊಳ್ಳುತ್ತದೆ. ಆ ಪಶುಪಾಶಗಳೆರಡಕ್ಕೂ ರುದ್ರನೇ ಪತಿ ಎಂದು ವೇದವಚನಪ್ರಮಾಣವಿರುವಾಗ, ಶಿವನೇ ಪತಿಯೆಂತಲೂ, ತದಿತರರೆಲ್ಲರೂ ಪಶುಗಳೆಂತಲೂ ಹೇಳಲ್ಪಟ್ಟಿರುವರು. ಅದುಕಾರಣ, ಪತಿಯಾದ ಶಿವನು ಎಂದಿಗೂ ಪಶುವಾಗಲಾರನು. ಪಶುವು ಪತಿಯಾಗಲಾರನು ॥೮॥ ಭೂಮಿಯಲ್ಲಿ ಗೋಪಾಲಕನು ಕಟ್ಟಿದ ಹಗ್ಗವನ್ನು ಬಿಚ್ಚಿದರೆ ದನಗಳು ಹೇಗೆ ಬಿಡುಗಡೆ ಹೊಂದುವುವೋ, ಹಾ

ಸ್ತಥಾಜೀವಾಭವಂತಿಪರಮೇಶ್ವರಾತ್ ||೯|| ಬಂಧುಂಮೋಕ್ತುಂಕಿಂಕುಶ
ಲಾಸ್ಸ್ವಯಂತೇಪಶವಃಪಶೂನ್ । ಏಕಏವಹಿಗೋಪಾಲಃಕುಶಲೋಭವತಿ
ಧ್ರುವಂ ||೧೦|| ವಿಮೋಕ್ತುಂಭವಪಾಶೇನಬಾಧುಂಸರ್ವಹಿತೇರತಃ । ಮ
ಹೇಶೋಜೀವರಾಶೀನಾಂಕರ್ತೈವನಹಿಸಂಶಯಃ ||೧೧|| ತಸ್ಮಾತ್ಪತ್ಯುರ್ಮ
ಹೇಶಸ್ಯಪಶವೋವಶವರ್ತಿನಃ । ಭವದುಃಖಸಮುದ್ರಾಂತರ್ನಿಮಗ್ನಾಜೀ
ವರಾಶಯಃ ||೧೨|| ಶಿವಸ್ಯಕೃಪಯಾಮುಕ್ತಾಸ್ಸಾಲೋಕ್ಯಾದಿಪದಾನ್ಯ
ಪಿ । ಸಮಾಗತ್ಯವಿರಾಜಂತೇಸರ್ವದೈವಯತಸ್ತತಃ ||೧೩|| ಪಶುಪಾಶಪ
ತಿಜ್ಞಾನಂತರಣಿರ್ಭವವಾರಿಧೇಃ । ಜ್ಞಾತಾಜ್ಞಾನಂತಥಾಜ್ಞೇಯಮಿತ್ಯೇತ
ತ್ತ್ರಿತಯಂಭುವಿ ||೧೪|| ಪ್ರತ್ಯಕ್ಷೇಣಾವಿಸಂವಾದಿಬಹುಧಾಜ್ಞಾಯತೇಜ
ನೈಃ । ಭೇದಸ್ತಸ್ಮಾದ್ವ್ಯಕ್ತತರೋಹಸ್ತಾಮಲಕವದ್ಧ್ರುವಂ ||೧೫|| ತ
ಸ್ಮಾದಭೇದಂಭಣಿತುಂಭವತಾಯುಜ್ಯತೇಕಥಂ । ದೃಷ್ಟಾದೃಷ್ಟಾರ್ಥಫಲ
ಸಂಪಾದಕಶ್ರುತಿಪದ್ಧತೇಃ ||೧೬|| ಪ್ರದರ್ಶಕೋಯತಸ್ತಸ್ಮಾದ್ಭೇದಃಪ್ರ

---

ಗೆಯೇ ಜೀವರುಗಳು ಪರಮೇಶ್ವರನ ಅನುಗ್ರಹದಿಂದ ಪಾಶಮುಕ್ತರಾಗುವರು. ||೯||
ಪಶುಗಳು ತಮ್ಮಿಷ್ಟಿಗೆ ತಾವೇ ಹಗ್ಗದಿಂದ ಕಟ್ಟಿಕೊಳ್ಳುವುದಕ್ಕೂ ಬಿಚ್ಚಿಕೊಳ್ಳುವುದ
ಕ್ಕೂ ಸಮರ್ಥವಾಗುವುವೆ? ಪಶುಗಳನ್ನು ಕಟ್ಟುವುದಕ್ಕೂ ಬಿಚ್ಚುವುದಕ್ಕೂ ಗೋ
ಪಾಲಕನೊಬ್ಬನೇ ನಿಜವಾಗಿ ಸಮರ್ಥನು ||೧೦|| ಅದರಂತೆಯೇ ಸರ್ವರಿಗೂ ಹಿತ
ವನ್ನು ಮಾಡುವುದರಲ್ಲಿ ಆಸಕ್ತನಾದ ಪರಮೇಶ್ವರನೇ ಜೀವಕೋಟಿಗಳನ್ನು ಭವಪಾಶ
ದಿಂದ ಕಟ್ಟುವುದಕ್ಕೂ ಬಿಚ್ಚುವುದಕ್ಕೂ ಕರ್ತನಾಗಿರುವನು. ಇದರಲ್ಲಿ ಸಂಶಯವಿ
ಲ್ಲ. ||೧೧|| ಆದುದರಿಂದ ಪತಿಯಾದ ಪರಶಿವನಿಗೆ ಪಶುಗಳೆಲ್ಲವೂ ಆಜ್ಞಾಧಾರಕವಾ
ಗಿರುವುವು. ಸಂಸಾರದುಃಖ ಸಮುದ್ರದಲ್ಲಿ ಮುಳುಗಿಕೊಂಡಿರುವ ಜೀವಕೋಟಿಗ
ಳು ||೧೨|| ಯಾವಾಗಲೂ ಶಿವನ ಕಾರುಣ್ಯದಿಂದ ಬಂಧಮುಕ್ತರಾಗಿ, ಸಾಲೋಕ್ಯಾದಿ
ಪದಗಳನ್ನೈದಿ ಒಪ್ಪುವರಾದಕಾರಣ, ಪಶು-ಪಾಶ-ಪತಿ-ಎಂಬ ಈ ತ್ರಿಪದಾರ್ಥಗಳ
ಜ್ಞಾನವೇ ಭವಸಾಗರವನ್ನು ದಾಟಿಸುವುದಕ್ಕೆ ಹಡಗಾಗಿರುವುದು. ಭೂಮಿಯಲ್ಲಿ
ಜ್ಞಾತೃ-ಜ್ಞಾನ-ಜ್ಞೇಯ-ವೆಂಬ ಈ ಮೂರು ವಸ್ತುಗಳಿರುವುವೆಂದು ||೧೪|| ಜನರಿಗೆ
ಪ್ರತ್ಯಕ್ಷವಾಗಿ ಬಹು ಪ್ರಕಾರದಿಂದ ನಿರ್ವಿವಾದವಾಗಿ ತಿಳಿದು ಬರುತ್ತಿದೆಯಾಗಿ, ದ್ವೈತ
ವೆಂಬುದು ನಿಜವಾಗಿ ಕರತಲಾಮಲಕದಂತೆ ಅತ್ಯಂತ ಸ್ಫುಟವಾಗಿರುತ್ತದೆ ||೧೫||
ಅದುಕಾರಣ, ಅಭೇದವಾದವನ್ನು ಮಾಡುವುದಕ್ಕೆ ನಿನ್ನಿಂದ ಹೇಗಾದೀತು ? ದ್ವೈತ
ವೆಂಬುವುದು ಪ್ರತ್ಯಕ್ಷಾಪ್ರತ್ಯಕ್ಷವಾದ ಫಲಗಳನ್ನುಂಟುಮಾಡಿಕೊಡುವ ವೈದಿಕಮಾ
ರ್ಗವನ್ನು ತೋರಿಸಿಕೊಡತಕ್ಕದು. ಅದುಕಾರಣ, ದ್ವೈತವು ಪ್ರಮಾಣಗಳಿಂದ ದೃ
ಢವಾದುದು. ಅದರ ದೆಸೆಯಿಂದಲೇ ಆತ್ಯಂತಿಕಭೇದವಾದಕ್ಕೂ ಸಿದ್ಧಿಯುಂಟಾಗು

ಮಿತಿಪಂಡಿತಃ । ಸಿದ್ಧಿರ್ಭೇದಕಸ್ಯಾಪಿತತ್ಪಿವಭವೇದತಃ ॥೧೭॥ ವೇದೋಕ್ತಕರ್ಮಫಲವಶ್ರೀಮನ್ಮಹೇಶ್ವರಸಂಗತೇಃ । ನೃಣಾಂಮಹಾನಾದರಸ್ಸ್ಯಾತ್ಪ್ರತಿಚೋದಿತಕರ್ಮಸು ॥೧೮॥ ತಸ್ಮಾದಾರಾಧನೀಯೇಶಸೇವಯಾಪರಿಲಭ್ಯತೇ । ಸ್ವರ್ಗಮೋಕ್ಷಾದಿಕಂಸೌಖ್ಯಂತತ್ತತ್ಕರ್ಮಾನುರೂಪತಃ ॥೧೯॥ ಏತಸ್ಮಿನ್ವೇದಶಾಸ್ತ್ರೋಕ್ತೇಹಿತಮಾರ್ಗೇಸ್ಥಿತೇಸತಿ । ಅಭೇದದರ್ಶನಂಪ್ರಾಪ್ತುಂಕಿಂವೋಹೇನಪ್ರಯೋಜನಂ ॥೨೦॥ ಪ್ರತ್ಯಕ್ಷೇಣಜಗದ್ಭೇದೇದೃಷ್ಟೇಶಬ್ದೇನಕೇವಲಂ । ಆಹುರ್ವೇದಾಂತಿನಸ್ತಸ್ಯಬಾಧಂತದುಚಿತಂನುಕಿಂ ॥೨೧॥ ಯಃಪ್ರಪಂಚಸ್ಯಮಿಥ್ಯಾತ್ವಂವಕ್ತಿತಸ್ಯಸ್ಥಿತಿಃಕ್ವಚಿತ್ । ಅಜ್ಞಾತ್ವಾಲೇಶಂಸತಿಕಥಂತನ್ಮಿಥ್ಯಾತ್ವಮನಾಶ್ರಯಂ ॥೨೨॥ ಅಗೃಹೀತಂಪ್ರಮಾಣೇನವಸ್ತುಜ್ಞಾತುಂನಶಕ್ಯತೇ । ಗೃಹೀತಂಚೇತ್ಪ್ರಮಾಣೇನತನ್ಮಿಥ್ಯಾನಭವೇದ್ಭುವಿ ॥ ೨೩ ॥ ಶುಕ್ತಿಜ್ಞಾನಾದುತ್ತರಸ್ಮಾದ್ಯಥಾರಜತವೇದನಂ । ವಿನಶ್ಯತಿತಥಾವಿಶ್ವಭೇದೇನಾಶಮುಪಾಗತೇ ॥೨೪॥ ವ

---

ವುದು. ॥೧೭॥ ವೇದೋಕ್ತಕರ್ಮಾಚರಣೆಗೆ ತಕ್ಕ ಫಲವನ್ನು ಕೊಡುವುದಕ್ಕೆ ಶ್ರೀಮನ್ಮಹೇಶ್ವರನು ಕರ್ತೃವಾಗಿರುವುದರಿಂದಲೇ ಮನುಷ್ಯರಿಗೆ ವೇದೋಕ್ತಕರ್ಮವನ್ನಾಚರಿಸುವುದಕ್ಕೆ ಅತ್ಯಾಸಕ್ತಿಯುಂಟಾಗುವುದು. ॥೧೮॥ ಆದುದರಿಂದ ಪೂಜ್ಯನಾದ ಪರಶಿವನ ಸೇವೆಯಿಂದ ಸ್ವರ್ಗಮೋಕ್ಷ ಮೊದಲಾದ ಪದಗಳ ಸೌಖ್ಯವು ಅವರವರು ಮಾಡಿದ ಕರ್ಮಾನುಸಾರವಾಗಿ ದೊರಕೊಳ್ಳುವುದು. ॥೧೯॥ ವೇದಶಾಸ್ತ್ರೋಕ್ತವಾದ ಈ ಸನ್ಮಾರ್ಗವು ಇರುತ್ತಿರಲಾಗಿ, ಇದನ್ನು ಬಿಟ್ಟು ಅದ್ವೈತಮತವನ್ನು ಹೊಂದಬೇಕೆಂಬ ಭ್ರಾಂತಿಯಿಂದ ಪ್ರಯೋಜನವೇನು ? ॥೨೦॥ ಈ ಜಗತ್ತು ಭಿನ್ನವಾದುದೆಂದು ಪ್ರತ್ಯಕ್ಷಪ್ರಮಾಣದಿಂದಲೇ ಕಾಣಲ್ಪಡುತ್ತಿದ್ದರೂ, ವೇದಾಂತಿಗಳು ಕೇವಲ ಶಾಬ್ದಪ್ರಮಾಣದಿಂದ ಅದಕ್ಕೆ ಬಾಧೆಯನ್ನು ಹೇಳುವರು; ಅದು ಉಚಿತವಾದುದೆ ? ॥೨೧॥ ಯಾವನು ಪ್ರಪಂಚವನ್ನು ಮಿಥ್ಯವೆಂದು ಹೇಳುತ್ತಾನೋ ಅವನು ಆ ಪ್ರಪಂಚದ ಸ್ಥಿತಿಯನ್ನು ಸ್ವಲ್ಪವಾದರೂ ತಿಳಿಯದೆ ಅದು ಹೇಗೆ ನುಡಿಯುವನು ? ಜಗತ್ತು ಮಿಥ್ಯೆಯೆಂದು ಹೇಳುವವಮತವು ನಿರಾಧಾರವಾದುದು. ॥೨೨॥ ಭೂಮಿಯಲ್ಲಿ ಪ್ರಮಾಣದಿಂದ ಸಿದ್ಧವಲ್ಲದ ವಸ್ತುವನ್ನುತಿಳಿವುದಕ್ಕೆ ಸಾಧ್ಯವಲ್ಲ (ಸತ್ಯವಲ್ಲ). ಪ್ರಮಾಣದಿಂದ ಸಿದ್ಧವಾದ ವಸ್ತುವು ಮಿಥ್ಯವಾಗುವುದಿಲ್ಲ. (ಸತ್ಯವು) " ಮುತ್ತಿನಚಿಪ್ಪನ್ನು ನೋಡಿ ಮೊದಲು ಬೆಳ್ಳಿಯೆಂದು ಭ್ರಾಂತಿಗೊಂಡಿದ್ದು, ಬಳಿಕ ಮುತ್ತಿನಚಿಪ್ಪೇಸರಿಯೆಂಬ ನಿಜವಾದ ಜ್ಞಾನವುಂಟಾದ ಬಳಿಕ, ಬೆಳ್ಳಿಯೆಂಬ ಪೂರ್ವದ ಭ್ರಾಂತಿಯು ಹೇಗೆ ಅಳಿದುಹೋಗುವುದೋ, ಹಾಗೆ ಜಗತ್ತಿನ ಅಭೇದಜ್ಞಾನವು ಜನಿಸಿದ ಬಳಿಕ ಭೇದಜ್ಞಾನವು ನಷ್ಟ



ಟ

ದೃಶ್ಯಂತ್ರಿಕದಾದ್ವೈತಂವದವೇದಾಂತವಾದಿನಃ । ವಿನಾನಿರ್ವಚನೀಯಂ
ಸ್ಯಾತ್ಕಿಮನಿರ್ವಚನೀಯತಾ ॥೩೫॥ ಅವಸ್ಥಿತೇತ್ವದುಭಯೋಃಸರ್ವಾದ್ವೈ
ತಂಕಥಂಭವೇತ್ । ತಸ್ಮಾಜ್ಜೀವಶ್ಶಿವಇತಿವಚನಂಶಿವಜೀವಯೋಃ ॥೩೬
ನೈಕತ್ವವಾಚಿಕಿಂತ್ವೇಷಜೀವಶ್ಶಂಭೋಃಪಶುಸ್ತಥಾ। ಕಿಂಕರೋಽತಸ್ತ
ದೀಯೋಽನ್ಯೋನೇತ್ಯರ್ಥಸ್ಯೈವವಾಚಕಂ ॥೩೭॥ ಸಂಸಾರಬಂಧಮೋ
ಕ್ಷಾಂಕೋಜೀವಶ್ಶಂಭುಃಕಥಂಭವೇತ್ । ಉಭಯೋರ್ದೃಶ್ಯತೇಮೇರು
ಪರಮಾಣ್ವೋರಿವಾಂತರಂ ॥೩೮॥ ಈಶಸ್ತ್ವತ್ತೋಽನ್ಯೋನಾಸ್ತೀತಿವಾ
ದೀಚಾರ್ವಾಕಏವಸಃ । ಅಹಮೇವೇಶ್ವರೋಮೋಹಾನ್ನಜಾನೇಮಾಮಿ
ತಿಬ್ರುವನ್ ॥೩೯॥ ವಾದೀಜ್ಞಾನಾತ್ಮನೋಮೇಽಸ್ತಿನಾವಿದ್ಯೇತಿನವಕ್ತಿಕಿಂ।
ಅಯಂದೀಪೋಭವತ್ಯೇವತಿಮಿರೇಣಸಹದೃಶ್ಯತೇ ॥೪೦॥ ಇತಿಕೇನಾಪಿಗದಿ
ತುಂಯುಜ್ಯತೇಪುರುಷೇಣಕಿಂ । ಮಾತಾಮೇಯಂಪ್ರಮಾಣಂಚಮಿಥ್ಯೇ

---

ವಾಗುವುದು " ಎಂದು ಹೇಳಿದರೆ, ಜಗತ್ತೆಂಬ ಬಾಧ್ಯ ವಸ್ತುವಿದೆಯೆಂಬ ಜ್ಞಾನವೇ ನಷ್ಟವಾದ ಬಳಿಕ, ಇನ್ನು ಆ ಜಗತ್ತನ್ನು ಕುರಿತು ಅಭೇದವನ್ನು ವೇದಾಂತಿಗಳು ಹೇಳುವುದಾವಾಗ? ಹೆಸರಿಟ್ಟು ನಿರ್ದೇಶಿಸಿ ಹೇಳಲ್ಪಡತಕ್ಕ ವಸ್ತುವೇ ಇಲ್ಲದಮೇಲೆ, ಕುರುಹಿಟ್ಟು ಹೇಳದಿರುವಿಕೆಯೆಂಬ ಮಾತಿಗೆ ಅವಕಾಶವೆಲ್ಲಿರುವುದು? ॥೩೫॥ ಕುರುಹಿಟ್ಟು ಹೇಳಲ್ಪಡುವುದು ಹೇಳಲ್ಪಡದಿರುವುದು ಎಂಬ ಅನೆರಡು ವಸ್ತುಗಳಿದ್ದರೆ ಇನ್ನ ಅಖಂಡಾದ್ವೈತನೆಂಬುದು ಹೇಗೆ ಸಮನಿಸುವುದೋ! ಅದು ಕಾರಣ, " ಜೀವನೇ ಶಿವನು " ಎಂಬ ವಚನವು ಶಿವ-ಜೀವರಿಗೆ ಅಭೇದವನ್ನು ಹೇಳತಕ್ಕುದಲ್ಲ, ಮತ್ತೇನೆಂದರೆ-ಈ ಜೀವನು ಪಶುಪತಿಯಾದ ಶಿವನಿಗೆ ಪಶುವು, ಮತ್ತೂ ಸೇವಕನು. ಈ ಕಾರಣದಿಂದ ಜೀವನು ಶಿವಸಂಬಂಧನಾದವನೇ ಹೊರತು ಅನ್ಯನಲ್ಲನೆಂಬರ್ಥವನ್ನು ತೋರಿಸುವುದಕ್ಕಾಗಿಯೇ " ಜೀವಶ್ಶಿವಃ " ಎಂಬ ವಚನವು ಹೇಳಲ್ಪಟ್ಟಿರುವುದು ॥೩೭॥ ಇದಲ್ಲದೆ ಸಂಸಾರಬಂಧಮೋಚನಗಳಿಂದ ಕೂಡಿರುವ ಜೀವನು ತಾನೇ ಹೇಗೆ ಶಿವನಾಗುವನು? ಶಿವಜೀವರಿಬ್ಬರಿಗೂ ಮೇರುಪರ್ವತಕ್ಕೂ ಒಂದು ಪರಮಾಣುವಿಗೂ ಇರುವಷ್ಟು ಅಂತರವಿರುವುದು ॥೩೮॥ ಮತ್ತೂ ನಾನೇ ಈಶ್ವರನೇ ಹೊರತು ಮತ್ತೊಬ್ಬ ಈಶ್ವರನು ಇಲ್ಲವೆಂದು ಹೇಳತಕ್ಕವನು ಚಾರ್ವಾಕಮತದವನೇಸರಿ. " ನಾನೇ ಈಶ್ವರನು ಅಜ್ಞಾನದಿಂದ ನನ್ನನ್ನು ನಾನು ಅರಿಯದವನಾಗಿದ್ದೇನೆ " ಎಂದು ಹೇಳುವ ವಾದಿಯು " ಜ್ಞಾನಸ್ವರೂಪನಾದ ನನಗೆ ಅವಿದ್ಯೆಯೆಂಬುದು ಇಲ್ಲವು " ಎಂಬುದಾಗಿ ಅದೇಕೆ ಹೇಳುವುದಿಲ್ಲ? (ತಾನೆ ಶಿವನಾದಮೇಲೆ ಅವನಲ್ಲಿ ಅವಿದ್ಯೆಯೆಂಬುದು ಹೇಗೆ ಸಂಭವಿಸುವುದು? ಎಂದಭಿಪ್ರಾಯವು) " ಇದು ದೀಪವೇ ಸರಿ, ಆದರೆ ಕತ್ತಲೆಯಲ್ಲಿ ಕಾಣುವುದಿಲ್ಲ ಎಂದು ಯಾವ ಮನುಷ್ಯ [illegible] ( [illegible] ವು ಆ ಮಾತಿನಂತೆ

ಶಿವಚಸಂಶ್ರಿದಂ ॥೩೧॥ ತಸ್ಯಪ್ರಮಾಣಸ್ಯಪದಂತ್ವಮೇವಪರಿಭಾವಯ। ಆತ್ಮನೋಜಗದುತ್ಪತ್ತಿ ರಿತಿಶಂಸನ್ಪುನಸ್ಸ್ವಯಂ॥೩೨॥ ಆತ್ಮಾನಿರಾಕಾರ ಇತಿಪ್ರವಕ್ತುಂಪಾರ್ಯತೇಂಕಿಮು। ಅತುಲಸ್ಸಚ್ಚಿದಾನಂದೋನಿತ್ಯಸ್ಸರ್ವ ಗತೋಽವ್ಯಯಃ ॥೩೩॥ ನಿರಾಕಾರಶ್ಶಿವಇತಿವದಂತೋಽದ್ವೈತಿನಸ್ತಥಾ। ಅಸ್ತಿನಾಸ್ತೀತಿವಾಮೂಕಬಧಿರಾಇವಭಾಷಿತುಂ ॥೩೪॥ ಅಸಮರ್ಥಾಃಕ ಲ್ಪಯಂತಿಹ್ಯವಿದ್ಯಾಮೀಶಿತುರ್ವೃಥಾ। ಅತಿಸ್ಪಷ್ಟಂಜಗದ್ಭೇದಮಾಲೋ ಕ್ಯಪರಿತೋಮುಹುಃ ॥೩೫॥ ವಯಮದ್ವೈತಿನಇತಿವಕ್ತುಂಸಾಮರ್ಥ್ಯ ಮಸ್ತಿಕಿಂ। ಶಬ್ದಸ್ಸರ್ವಂಶಿವಇತಿಶಂಭೋರ್ಗುಣವಿಚಾರತಃ ॥೩೬॥ ಸ ರ್ವಂಶಿವಾಜ್ಞಯಾವ್ಯಾಪ್ತಮಿತ್ಯರ್ಥೇಸಂಗತೋಭವೇತ್।ಆದ್ಯೋಕ್ತ್ಯಾ ನಶಿವಾದ್ವೈತಪ್ರತಿಪಾದನತತ್ಪರಃ॥೩೭॥ ಮನುಜಃಪರಮೇಶಾನಃಕಿಂವಾ ಭವತಿಭೂತಲೇ। ತದ್ವದೀಶೋಪಿಮನುಜೋನಭವತ್ಯೇವಹಿಧ್ರುವಂ॥೩೮

---

ಯೇ ಇರುವುದು.) ಮಾತೃ-ಮಾನ-ಮೇಯವೆಂಬ ಮೂರೂ ಸುಳ್ಳೇಸರಿ" ಎಂಬಈ ವಚನವು ॥೩೧॥ ಯಾವ ಪ್ರಮಾಣದ ಮೇಲೆ ಸಿದ್ಧವಾದುದು ? ನೀನೇ ಆಲೋಚಿಸಿ ನೋಡು. ಪುರುಷನ ದೆಸೆಯಿಂದ ಜಗದುತ್ಪತ್ತಿಯಾಯಿತೆಂದು ತಾನೇ ಹೇಳುತ್ತ, ಮ ರಳಿ ॥೩೨॥ ಅಂತಹ ಪುರುಷನು ನಿರಾಕಾರನು ಎಂದು ಹೇಳಲು ಆಗುವುದೆ? (ಏಕೆಂ ದರೆ-ನಿರಾಕಾರನಾದ ಪುರುಷನು ಸಾಕಾರವಾದ ಪ್ರಪಂಚವನ್ನು ಸೃಷ್ಟಿಸಲಾರನು) ಶಿವನು-ಅಸದೃಶನೂ, ಸಚ್ಚಿದಾನಂದಸ್ವರೂಪನೂ, ನಿತ್ಯೈಶ್ವರ್ಯಸಂಪನ್ನನೂ, ಸರ್ವವ್ಯಾ ಪಿಯೂ, ನಾಶರಹಿತನೂ ॥ ನಿರಾಕಾರನೂ ಆಗಿರುವನೆಂದು ಹೇಳುವ ಅದ್ವೈತಿಗಳು ಜಗತ್ತುಂಟು ಅಥವಾ ಇಲ್ಲವೆಂಬುದನ್ನು ಸಪ್ರಮಾಣವಾಗಿ ಸಾಧಿಸಿ ಹೇಳಲು ಕಿವುಡ ಮೂಗರಂತೆ ಅಸಮರ್ಥರಾಗಿ, ಆ ಸರ್ವೇಶ್ವರನಿಗೆ ಅವಿದ್ಯೆಯನ್ನು ಕಲ್ಪಿಸಿ ಹೇಳುವರು. ತಮ್ಮ ಸುತ್ತಲೂ ಬಾರಿಬಾರಿಗೂ ಅತಿಸ್ಪಷ್ಟವಾಗಿ ಜಗತ್ತು ಭಿನ್ನವಾಗಿರುವುದೆಂಬುದ ನ್ನು ನೋಡಿಯೂ, ನಾವು ಅದ್ವೈತಿಗಳೆಂದು ಹೇಳುವುದಕ್ಕೆ ಅವರಿಗೆ ನಿಜವಾಗಿ ಸಾ ಮರ್ಥ್ಯವುಂಟೋ? ॥೩೫॥ "ಸರ್ವಂಶಿವಃ" ಎಂಬ ವಚನವು ಗೌಣಾರ್ಥಕವಾದುದ ಲ್ಲದೆ, ಮುಖ್ಯಾರ್ಥವುಳ್ಳುದಲ್ಲ. ಸಕಲ ಜಗತ್ತೂ ಶಿವಾಜ್ಞೆಯಿಂದ ವ್ಯಾಪ್ತವಾಗಿರುವು ದೆಂಬ ಅರ್ಥದಲ್ಲಿ ಆ ವಚನವು ಉಪಯೋಗಿಸಲ್ಪಟ್ಟಿರುವುದೇ ಹೊರತು ಸರ್ವವೂ ಶಿವ ನೇ ಎಂದು ಹೇಳುವುದು ಅದರ ಮುಖ್ಯಾರ್ಥವಲ್ಲ. ಭೂತಲದಲ್ಲಿ ವೇದವಚನಾಧಾರ ದಿಂದ ಶಿವಾದ್ವೈತಸ್ಥಾಪನವಮಾಡುವುದರಲ್ಲಿ ಆಸಕ್ತನಾದ ಮನುಷ್ಯನು ॥೩೭॥ ತಾನೇ ಪರಮೇಶ್ವರನಾಗಿ ಹೋಗುತ್ತಾನೆಯೆ? ಅದರಂತೆಯೇ ಈಶ್ವರನಾದರೂ ಮನುಷ್ಯನಾ ಗುವುದುಂಟೇ? ಎಂದಿಗೂ ಇಲ್ಲ. ಅದು ನಿಜ. ॥೩೮॥ ತನ್ನನ್ನು ತಾನು ತಿಳಿದವನಾದರೆ

ಸ್ವಂವೇತ್ತಿ ಚೇದ್ವ್ಯಕ್ತಿ ಶಂಭುಕಿಂಕರೋಽಹಮಿತಿಸ್ಫುಟಂ । ಅಹಮೇವ ಮಹಾದೇವಇತಿಜಲ್ಪತಿಕಿಂಭ್ರಮಾತ್ ॥೩೯॥ ತನ್ಮಾಯಯಾನುಗತೋವಾದೋವೇದಾಂತಿಂಸ್ತ್ವತಿಷ್ಠತು। ಅನುಪಾಸ್ಯಸ್ವಾಮಿಭೃತ್ಯಸ್ಥಿತ್ಯಾಶಂಭುಂ ಜಗತ್ಪತಿಂ ॥೪೦॥ ಮೋಕ್ಷಃಕೇನಾಪಿಮಾರ್ಗೇಣನಸಿದ್ಧ್ಯೇತ್ತಿನಸಂಶಯಃ । ತದನ್ಯಾಯತರಂಶೂನ್ಯಾನುಕೂಲಂಹಾಸ್ಯಕಾರಣಂ ॥೪೧॥ ಸತ್ಕರ್ಮದೂರಂವಿಬುಧದ್ವೇಷ್ಯಂಸಾಧುವಿಗರ್ಹಿತಂ । ಸರ್ವಪ್ರಮಾಣಗಳಿತಂಗರ್ವಾಂಧೀಕೃತವರ್ತನಂ ॥೪೨॥ ಪ್ರಚ್ಛನ್ನಬೌದ್ಧಮಜ್ಞಾನಾಚ್ಛಾದಿತಂತುಚ್ಛಪದ್ಧತಿ । ಮಾಯಾವಾದಇತಿಖ್ಯಾತಂಲೋಕೇಪರಮನಾಸ್ತಿಕಂ ॥೪೩॥ ವಿದ್ವದ್ವಿರುದ್ಧಮದ್ವೈತಂ ವೇದಾಂತಂಸ್ಯಾತ್ಕಥಂತ್ವಿದಂ । ವೇದಾಂತಸ್ಯಾಸ್ಯ ತಾತ್ಪರ್ಯಮಿದಮಿತ್ಥಮಿತಿಸ್ಫುಟಂ ॥೪೪॥ ನಿಶ್ಚಿತ್ಯತುಂತವಸಾಮರ್ಥ್ಯಂವಿದ್ಯತೇಕಿಂವದಾಧುನಾ । ತಸ್ಮಾತ್ತ್ವಂನೈವವೇದಾಂತೀಸಾಂಖ್ಯವಾದೀವದೃಶ್ಯಸೇ ॥೪೫॥

---

ನಾನು ಶಿವನ ಸೇವಕನಾಗಿರುವೆನೆಂದು ಸ್ಪಷ್ಟವಾಗಿ ಹೇಳುತ್ತಾನೆ. ಅದನ್ನು ಬಿಟ್ಟು ನಾನೇ ಪರಮೇಶ್ವರನೆಂದು ಭ್ರಾಂತಿಯಿಂದ ನುಡಿಯುವನೆ? ॥೩೯॥ ಅದುಕಾರಣ, ಎಲೆ ವೇದಾಂತಿಯೆ, ನಿನ್ನ ಮಾಯಾನುಗತವಾದವು ಹಾಗಿರಲಿ, ಜಗದೀಶ್ವರನಾದ ಶಂಭುವನ್ನು ಸ್ವಾಮಿಭೃತ್ಯನ್ಯಾಯದಿಂದ ಉಪಾಸನೆ ಮಾಡಿದಲ್ಲದೆ ಜೀವನಿಗೆ ಯಾವ ಮಾರ್ಗದಿಂದಲೂ ಮೋಕ್ಷಸಿದ್ಧಿಯುಂಟಾಗುವುದಿಲ್ಲ. ಇದು ನಿಸ್ಸಂಶಯವು ॥೪೦॥ ಆ ಅದ್ವೈತವೆಂಬುದು ಅತ್ಯಂತಾನ್ಯಾಯವೂ, ನಿರೀಶ್ವರವಾದಕ್ಕನುಕೂಲವೂ, ಪರಿಹಾಸ್ಯಾಸ್ಪದವೂ ॥೪೧॥ ಸತ್ಕರ್ಮಗಳಿಗೆ ದೂರವೂ, ವಿದ್ವಾಂಸರಿಗೆ ಅಹಿತವೂ, ಸತ್ಪುರುಷರಿಂದ ತಿರಸ್ಕೃತವೂ, ಸಕಲವಿಧ ಪ್ರಮಾಣಗಳಿಂದಲೂ ಜಾರಿದುದೂ, ಅಹಂಕಾರದಿಂದುಬ್ಬಿದ ನಡತೆಯುಳ್ಳುದೂ ॥೪೨॥ ಮುಚ್ಚುಮರೆಯ ಬೌದ್ಧಮತವೂ, ಅಜ್ಞಾನದ ಹೊದಿಕೆಯುಳ್ಳುದೂ, ನೀಚವಾದ ಪದ್ಧತಿಯುಳ್ಳುದೂ, ಮಾಯಾವಾದವೆಂದು ಲೋಕದಲ್ಲಿ ಹೆಸರಾದುದೂ, ಅತ್ಯಂತ ನಾಸ್ತಿಕವೂ ॥೪೩॥ ವಿದ್ವಾಂಸರಿಗೆ ವಿರುದ್ಧವೂ ಆಗಿರುವುದು. ಇಂತಹ ಅದ್ವೈತವು ಅದು ಹೇಗೆ ವೇದಾಂತವೆನಿಸಿಕೊಳ್ಳುವುದು! ಈ ವೇದಾಂತದ ತಾತ್ಪರ್ಯವು ಹೀಗೆ-ಹೀಗೆ ಎಂದು ಸ್ಪಷ್ಟವಾಗಿ ನಿಶ್ಚಯಿಸಿ ಸಾಧಿಸುವುದಕ್ಕೆ ನಿನಗೆ ಈಗ ಸಾಮರ್ಥ್ಯವಿದೆಯೆ? ಆದುದರಿಂದ ನೀನು ವೇದಾಂತಿಯಲ್ಲ, ಸಾಂಖ್ಯಮತವಾದಿಯೆಂದು ಕಾಣ್ಬರುತ್ತೀಯೆ. ॥೪೫॥

ಇತ್ಯಸುಂಖ್ಯಾತ.........................................
ಶ್ರೀ ವೀರಶೈವ ಮತಾಚಾರ್ಯ ಗುರುರಾಜಸ್ಯ ಕೃತೌ
ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನ ಪಂಡಿ
ತಾರಾಧ್ಯಚರಿತ್ರೇ ವಾದಪ್ರಕರಣೇ ವೇ
ದಾಂತಿಮತ ನಿರಸನಕಥನಂ ನಾಮ
ಪಂಚಮೋಽಧ್ಯಾಯಃ.

---

ಶ್ರೀಸಾಂಬಸದಾಶಿವಾಯನಮಃ.

---

## ಅಥ ಷಷ್ಠೋಽಧ್ಯಾಯಃ.

( ಸಾಂಖ್ಯವಾದನಿರಸನಂ )

ಪ್ರಕೃತಿರ್ವಿಕೃತಿಶ್ಚ ಶ್ವಜ್ಜಡಾಚೈತನ್ಯವರ್ಜಿತಾ । ಇತಿಪ್ರಕೃತಿವಾದಂತಮುಕ್ತ್ವಾಪ್ರತಿಯೋಗತಃ ॥ ೧ ॥ ಸ್ವಪ್ರಧಾನಾಸತ್ವರಜಸ್ತಮ

---

ಎಂಬಿಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್.
ಕರಿಬಸವಶಾಸ್ತ್ರಿ ರಚಿತವಾದ ॥ ಭಾವಮಂಜರಿ ॥ ಎಂಬ ಕನ್ನಡ
ಟಿಪ್ಪಣದಲ್ಲಿ ವಾದಪ್ರಕರಣದೊಳಗೆ ಶ್ರೀಮತ್ಪಂಡಿತಾರಾ
ಧ್ಯರು ವೆಲ್ನಾಡು ಚೋಳನ ಸಭೆಯಲ್ಲಿ ವೇದಾಂತ
ಮತವಾದವನ್ನು ಖಂಡಿಸಿದುದನ್ನು ನಿರೂ
ಪಿಸುವ ೫ನೆಯ ಅಧ್ಯಾಯವು
ಮುಗಿದುದು.

---

## ೬ ನೆಯ ಅಧ್ಯಾಯವು.

---

( ಸಾಂಖ್ಯಮತವಾದ ಖಂಡನವು. )

ಎಲೆ ಸಾಂಖ್ಯವಾದಿಯೆ, ಪ್ರಕೃತಿಯೆಂಬುದು ವಿಕೃತವಾದುದು, ಅತ್ಯಂತಜಡವಾದುದು, ಚೈತನ್ಯರಹಿತವಾದುದು, ಎಂದು ಆಪ್ರಕೃತಿಲಕ್ಷಣವನ್ನು ಹೇಳದೆ, ತದ್ವಿರುದ್ಧವಾಗಿ ಆ ಪ್ರಕೃತಿಯು ತಾನೇ ಪ್ರಧಾನ ಕರ್ತೃವಾಗಿದ್ದುಕೊಂಡು, ಬಂ

ಸಾಸಾಮ್ಯರೂಪಿಣಾ । ಜಗದಾಧಿಷ್ಠಾನರೂಪಾಸಾಹ್ಯೈಕೈಕಗುಣಾಧಿಕಾ।
ಇತರಾನುಗೃಹೀತತ್ವಾತ್ಕರೋತೀತಿಸಕಲಂಜಗತ್ । ಇತಿಶಂಸಸಿಚೇದತ್ರಶೃ
ಣುವ್ಯಾಘಾತಮುದ್ಧತಂ ॥೩॥ ಏಕೈಕಗುಣವೃದ್ಧ್ಯಾಹಿಸಾಮ್ಯಾವಸ್ಥಾಪ್ರ
ಹೀಯತೇ । ಪ್ರಧಾನಂಭವೇದೇವನಜಾಯೇತಜಗತ್ತತಃ ॥೪॥ ಪ್ರಕೃತಿ
ರ್ವಿಶ್ವರೂಪೇಣಪರಿಣಾಮಂಗತೇತಿಹಿ। ಯದಿಬ್ರೂಷೇಪರಿಣತಾಕಿಂಪ್ರಾ
ದೇಶಿಕರೂಪತಃ॥೫॥ ಸಂಪೂರ್ಣಸ್ವರೂಪೇಣಕಿಂವಾತ್ವಂಕಥಯಾಧುನಾ।
ಪ್ರಾದೇಶಿಕಸ್ವರೂಪೇಣಯದಾಪರಿಣಮತ್ಯಸೌ ॥೬॥ ತದಾಭವೇತ್ಸಾಪ್ರ
ಕೃತಿಃಕಾರ್ಯತ್ವೇನೈವಹೇತುನಾ । ವಿನಶ್ವರಾಸಾವಯವಾತಸ್ಮಾನ್ನಶ್ವರ
ಯಾತಯಾ ॥೭॥ ಸಮುತ್ತಜಗತಾಂಸೃಷ್ಟಿರಪಿನೈವಭವೇತ್ಪುನಃ। ಪರಿಪೂ
ರ್ಣಸ್ವರೂಪೇಣಪ್ರಮಾಣಮತಿರಿಚ್ಯಚ ॥೮॥ ಯದಾಪರಿಣಮತ್ಯೇಷಾತ
ದಾನೋಜಗದುದ್ಭವಃ।ಏಕಕಾರ್ಯಂಪ್ರಸಂಗತ್ವಾಜ್ಜಗತ್ಸೃಷ್ಟಿರ್ದ್ವಿಧಾಪಿ

---

ದಕ್ಕೊಂದು ಸಮನಾದ ಸತ್ವ-ರಜಸ್ಸು-ತಮಸ್ಸು—ಎಂಬ ತ್ರಿಗುಣಗಳಿಂದ ಕೂಡಿ, ಜಗತ್ತಿಗೆ ಅಧಿಷ್ಠಾನಸ್ವರೂಪವಾಗಿರುವುದು. ಆ ಪ್ರಕೃತಿಯು ತ್ರಿಗುಣಗಳಿಂದ ಸಮೇತವಾಗಿದ್ದುಕೊಂಡು, ರಜೋಗುಣಾಧಿಕ್ಯದಶೆಯಲ್ಲಿ ಜಗತ್ಸೃಷ್ಟಿಯನ್ನೂ, ಸತ್ವಗುಣಾಧಿಕ್ಯದಶೆಯಲ್ಲಿ ಪ್ರಪಂಚದ ಸ್ಥಿತಿಯನ್ನೂ, ತಮೋಗುಣಾಧಿಕ್ಯದಶೆಯಲ್ಲಿ ಜಗದ್ವಿಲಯವನ್ನೂ ಮಾಡುವುದು " ಎಂಬುದಾಗಿ ನೀನು ಹೇಳುವೆಯಾದರೆ, ಇಲ್ಲಿ ಸಂಭವಿಸುವ ಪ್ರಬಲವಾದ ವ್ಯಾಘಾತದೋಷವನ್ನು ಕೇಳು:—॥೩॥ ಒಂದೊಂದು ಗುಣವು ಒಂದೊಂದಾವೃತ್ತಿ ಅಧಿಕವಾಗುವುದು ಎಂಬುದರಿಂದ ಆ ಗುಣಗಳ ಪರಸ್ಪರ ಸಾಮ್ಯಾವಸ್ಥೆಯೆಂಬುದು ಇಲ್ಲದೆ ಹೋಗುತ್ತದೆ. ಮತ್ತೂ ಆ ಪ್ರಕೃತಿಯು ಜಗದುತ್ಪತ್ತಿಯನ್ನು ಕುರಿತು ಮುಖ್ಯಕಾರಣವೂ ಆಗುವುದಿಲ್ಲ. ಅದು ಕಾರಣ, ಅಂಥ ಪ್ರಕೃತಿಯಿಂದ ಜಗದುತ್ಪತ್ತಿಯಾಗುವುದೂ ಅಸಂಭವ. ॥೪॥ ಪ್ರಕೃತಿಯೆಂಬುದು ಜಗದ್ರೂಪದಿಂದ ಪರಿಣಾಮಗೊಂಡಿತು ಎಂದು ಹೇಳುವೆಯಾದರೆ, ಆ ಪರಿಣಾಮವೆಂಬುದು ಏಕದೇಶರೂಪವಾದುದೊ ? ಅಥವಾ ಪೂರ್ಣವಾದುದೊ ? ಹೇಳು. ॥೫॥ ಏಕದೇಶರೂಪದಿಂದ ಇದು ಪರಿಣಾಮಗೊಂಡಿತೆಂದರೆ, ಆಗ ಪ್ರಕೃತಿಯು ಕಾರ್ಯತ್ವರೂಪ ಗುಣವಿಶಿಷ್ಟವಾಗುವ ಕಾರಣ, ನಶ್ವರತ್ವವೂ ಸಾಕಾರತ್ವವೂ ಅದಕ್ಕೆ ಉಂಟೆಂದಾಗುವುದು. ಅಂಥ ನಶ್ವರವಾದ ಪ್ರಕೃತಿಯಿಂದ ಸಕಲ ಜಗತ್ತಿನ ಸೃಷ್ಟಿಯು ಆಗುವುದೇ ಇಲ್ಲ. ॥೬-೭॥ ಆ ಪ್ರಕೃತಿಯು ಪ್ರಮಾಣವನ್ನು ಮೀರಿ ಪರಿಪೂರ್ಣರೂಪದಿಂದ ಯಾವಾಗ ಪರಿಣಾಮವನ್ನೈದುವುದೋ ಆಗ ಜಗದುತ್ಪತ್ತಿಯೇ ಇಲ್ಲ. ॥೮॥

ನ ॥೯॥ ಅತೀತಪ್ರಲಯೇಸಾಪಿನಷ್ಟಾಚೇತ್ಸೃಷ್ಟಿರೇವನ । ಪರಮಾತ್ಮ ಪರಬ್ರಹ್ಮಮಹಾದೇವಶಿವಾದಿಭಿಃ ॥೧೦॥ ನಾಮಭಿಸ್ಸಮುಪೇತಾದ್ಯಪ್ರಕೃತೇರುಪಜಾತಯಾ। ಮಾಯಾಪ್ರಕೃತ್ಯಾಸಂಭೂತಾಪ್ರಕೃತಿಸ್ತ್ರಿಗುಣಾನ್ವಿತಾ ॥೧೧॥ ಕಲಾತ್ಮಿಕಾಽವ್ಯಕ್ತರೂಪಾಪ್ರಧಾನಮಿತಿಕೀರ್ತಿತಾ। ಪುರುಷಾದಿಷ್ಠಿತಾಲೋಕಾನ್ಕರೋತಿಶಿವಶಾಸನಾತ್ ॥೧೨॥ ಇತಿವಕ್ತುಂಯುಕ್ತಮಸ್ಯಾವಿಭುತ್ವಂವಿದ್ಯತೇಕಿಮು । ಜಡಾಸಾಽಚೇತನಾಕರ್ತ್ರೀಕಥಂಸೃಜ್ಜಗತಾಂಸ್ವತಃ ॥೧೩॥ ತಸ್ಮಾನ್ನದೈವಂಪ್ರಕೃತಿರ್ನ್ನವಮೋಕ್ಷಪ್ರದಾಯಿನೀ । ತಸ್ಮಾತ್ಪ್ರಕೃತಿಪಾದ್ಯೈಕಪ್ರತಿಪಾದನಶಾಲಿನಾಂ ॥೧೪॥ ವಿಕೃತಾನಾಂತಾರ್ಕಿಕಾಣಾಂಮತಂಕಿಂಸತ್ಪಥೋಭವೇತ್ । ಶಿವೋನಾಸ್ತೀತಿಯುಕ್ತ್ಯಾಜಿತ್‌ಸಾಂಖ್ಯಮಸ್ತಿನಿರೀಶ್ವರಂ ॥೧೫॥ ಪರತತ್ವಪ್ರಬೋಧಾಯಸಮರ್ಥಂತನ್ಮತಂಕಿಮು । ಸ್ಯಾತ್ತಾವತೈವಮುಕ್ತಿಶ್ಚೇತ್ಕಿಂತಪೋ

---

ಏಕೆಂದರೆ—ಪ್ರಕೃತಿಯು ತಾನೇ ಕಾರ್ಯವಾಗಿದ್ದುಕೊಂಡು, ಅಂತಹ ತಾನು ಎರಡು ಪರಿಣಾಮಗಳಿಂದ ಜಗತ್ಸೃಷ್ಟಿಯನ್ನು ಮಾಡಲಾರದು ॥೯॥ ಮತ್ತೂ ಮಹಾಪ್ರಳಯದಲ್ಲಿ ಆ ಪ್ರಕೃತಿಯೂ ನಷ್ಟವಾಗುವುದಾಗಿದ್ದರೆ ಆ ಕಾರಣದಿಂದಲೂ ಜಗತ್ಸೃಷ್ಟಿಯು ಅನಾದಿಯಾಗಲಾರದು. ಪರಮಾತ್ಮ ಪರಬ್ರಹ್ಮ ಮಹಾದೇವ ಶಿವನೊದಲಾದ ಹೆಸರುಗಳಿಂದೊಪ್ಪುತ್ತಿರುವ ಬಿಂದುಶಕ್ತಿಯಿಂದ ಉತ್ಪನ್ನವಾದ ಪ್ರಕೃತಿಯಿಂದ ಮಾಯೆ ಉದಿಸಿತು. ಅದರಿಂದ ಸತ್ವಾದಿ ಗುಣತ್ರಯ ಸಮೇತವಾದ ಜಡಪ್ರಕೃತಿಯು ಉದಿಸಿತು. ॥೧೧॥ ಅದು ಕಲಾಸ್ವರೂಪವು ಅವ್ಯಕ್ತರೂಪವು ಪ್ರಧಾನವುಎಂದು ಹೇಳಿಸಿಕೊಂಡಿತು. ಅಂತಪ್ಪ ಪ್ರಕೃತಿಯು ಪರಬ್ರಹ್ಮಚೈತನ್ಯಕ್ಕಾಶ್ರಯವಾಗಿ, ಶಿವಾಜ್ಞೆಯಿಂದ ಜಗತ್ಸೃಷ್ಟಿಯನ್ನು ಮಾಡುವುದು ॥೧೦॥ ಎಂದು ಜಗತ್ಸೃಷ್ಟಿ ಲಕ್ಷಣವನ್ನು ಹೇಳುವುದು ಯುಕ್ತವಾದುದು. ಹೀಗಿರುವಲ್ಲಿ ಈ ಪ್ರಕೃತಿಗೆ ಜಗತ್ಸೃಷ್ಟಿಯನ್ನು ಸ್ವತಃ ಮಾಡುವ ಸಾಮರ್ಥ್ಯವು ಇರುವುದೆ? ಅಚೇತನವೂ ಜಡವೂ ಆದ ಆಪ್ರಕೃತಿಯು ಜಗತ್ಸೃಷ್ಟಿಗೆ ತಾನೇ ಹೇಗೆ ಕರ್ತೃವಾಗುವುದು? ॥೧೩॥ ಅದುಕಾರಣ, ಪ್ರಕೃತಿಯೆಂಬುದು ದೈವವಲ್ಲ. ಮೋಕ್ಷವನ್ನು ಕೊಡತಕ್ಕದೂ ಅಲ್ಲ. ಆದುದರಿಂದ ಪ್ರಕೃತಿವಾದವನ್ನೇ ಮುಖ್ಯವಾಗಿ ಮಾಡುವವರೂ ವಿಕಾರಿಗಳೂ ಆದ ತಾರ್ಕಿಕರ ಸೇಶ್ವರಸಾಂಖ್ಯಮತವು ಸನ್ಮಾರ್ಗವೆನಿಸಿಕೊಳ್ಳುವುದೆ? ಮತ್ತೂ ಶಿವನೇ ಇಲ್ಲವೆಂದು ವಾದಿಸುವ ನಿರೀಶ್ವರಸಾಂಖ್ಯವೆಂಬ ಯಾವ ಬಂದಾನೊಂದು ಮತವುಂಟೊ ॥೧೫॥ ಆ ಮತವುಕೂಡ ಪರತತ್ವಜ್ಞಾನವನ್ನು ಮಾಡಿಕೊಡುವುದಕ್ಕೆ ಸಮರ್ಥವಾದುದೆ? ಅಲ್ಲ "ಮರಣವೇ ಮುಕ್ತಿ" ಯೆಂದುಹೇಳುವಂತೆ ಅಷ್ಟರಿಂದಲೇ ಮುಕ್ತಿಯು ದೊರಕೊಳ್ಳುವುದಾಗಿದ್ದರೆ ತಪೋಧ್ಯಾನದೇವಾರ್ಚನಗಳಿಂದೇನು ಪ್ರಯೋ

ಧ್ಯಾನಪೂಜನೈಃ ||೧೬|| ಮುನಯಃ ಕಿಂ ನ ಜಾನಂತಿ ಕಪಿಲಸ್ಯ ಮುನೇರ್ಮತಂ। ನಿಮಿತ್ತಮಪವರ್ಗಸ್ಯ ತತ್ಕಥಂ ಭವತೀದೃಶಂ ||೧೭|| ಶುಕಯೋಗೀಂದ್ರಸನಕವಾಮದೇವಸನಂದನಾಃ । ಸರ್ವೇಽಪಿಮರಗಣಾಃ ಪೂರ್ವಂ ಕಿಮು ಸಾಂಖ್ಯಮತಾನುಗಾಃ ||೧೮|| ಪ್ರಮಾಣಂ ಸೇಶ್ವರೇ ಸಾಂಖ್ಯೇ ವಿದ್ಯತೇ ಕಿಂ ನಿರೀಶ್ವರೇ । ಅಥಾನುಮಾನಮುಖ್ಯೇಷು ಮಾನೇಷು ತವ ಕಿಂ ಮತಂ ||೧೯|| ಅನುಮಾನಂ ವಾಽಗಮೋ ವಾ ಪ್ರತ್ಯಕ್ಷಂ ವಾಖಿಲೈರ್ಮತಂ । ಏತಾನಿತ್ವತ್ಪ್ರಮಾಣಾನಿ ಮಹೇಶಂ ಸಾಧಯಂತಿ ಕಿಂ ||೨೦|| ಅಥಾನಲಂ ವಿನಾ ಬಾಷ್ಪಃ ಶೈಲಸ್ಯೋಪರಿ ನಾಸ್ತಿ ಕಿಂ । ಅಸೌ ಧೂಮೋ ನ ಕಿಂ ವಹ್ನಿಸ್ತಸ್ಯಾಧೋ ವಿದ್ಯತೇ ಕಿಮು ||೨೧|| ಜಗತ್ಸು ವಿಸ್ಮಯಮಾನೇಷು ಜಗತ್ಕರ್ತಾ ಮಹೇಶ್ವರಃ। ಸರ್ವಥಾ ವಿದ್ಯತ ಇತಿ ಪ್ರವಕ್ತುಂ ಶಕ್ಯತೇ ಕಥಂ ||೨೨|| ಇತಿ ಜಲ್ಪನ್ಪ್ರಮಾಣಾನಿ ಹ್ಯನುಮಾನಾದಿಕಾನಿ ತು । ಯದಿಸ್ವೈರಂ ಖಂಡಯಸಿ ಶೃಣು ಸಾಂಖ್ಯಮಮೋತ್ತರಂ ||೨೩|| ಬಾಷ್ಪಃ ಪ್ರಸಿದ್ಧೋ ಜಗತಿ ಪ್ರಸಿದ್ಧಸ್ಯೋಸ್ತು ವಾಥವಾ।

---

ಜನವೇನು ? ||೧೬|| ಕಪಿಲಮುನಿಯ ಈ ನಿರೀಶ್ವರಸಾಂಖ್ಯಮತದ ತತ್ವವನ್ನು ಋಷಿಗಳೆಲ್ಲರೂ ಕಾಣರೆ? ಇಂಥ ಮತವು ಅದು ಹೇಗೆ ಮೋಕ್ಷಸಾಧಕವಾಗುವುದು ?॥ ಶುಕಸನಕಸನಂದನ ವಾಮದೇವ ಮೊದಲಾದ ಮಹರ್ಷಿಗಳೂ, ಸಕಲ ದೇವಗಣಗಳೂ ಸಹ ಪೂರ್ವದಲ್ಲಿ ಸಾಂಖ್ಯಮತವನ್ನವಲಂಬಿಸಿದವರಾಗಿದ್ದರೆ? ಸೇಶ್ವರಸಾಂಖ್ಯಮತದಲ್ಲಿ ಪ್ರಮಾಣವಿದ್ದರೂ ಇದ್ದೀತು. ನಿರೀಶ್ವರಸಾಂಖ್ಯದಲ್ಲಿ ಇರುವುದುಂಟೆ? ಇಲ್ಲ. ಮತ್ತೂ "ಅನುಮಾನವೇ ಮೊದಲಾದ ಚತುರ್ವಿಧಪ್ರಮಾಣಗಳಲ್ಲಿ ನಿನ್ನ ಮತವು ಯಾವ ಪ್ರಮಾಣಸಿದ್ಧವಾದುದು ? ||೧೯|| ಅನುಮಾನ ಪ್ರಮಾಣಸಿದ್ಧವಾದುದೊ ? ಶಬ್ದಪ್ರಮಾಣಸಿದ್ಧವಾದುದೊ ? ಅಥವಾ ಸರ್ವಸಮ್ಮತವಾದ ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದುದೊ ? ಈ ನಿನ್ನ ಪ್ರಮಾಣಗಳೆಲ್ಲಾ ಮಹೇಶನೊಬ್ಬ ನಿರುವನೆಂದು ಸಾಧಿಸುವುವೊ ? ಬೆಂಕಿಯಿಲ್ಲದಿದ್ದರೂ ಬೆಟ್ಟದ ಮೇಲೆ ಹೊಗೆಯಾಡುತ್ತಿರುವುದಿಲ್ಲವೆ ? ಬೆಟ್ಟದ ಮೇಲೆ ಮುಸುಗಿರುವ ಅದು ಹೊಗೆಯುಲ್ಲವೆ ? ಆ ಹೊಗೆಯ ಕೆಳಗೆ ಬೆಂಕಿಯಿರುವುದುಂಟೆ ! ||೨೧|| ಈ ಕಾರಣದಿಂದ ಜಗತ್ತುಗಳು ಗೋಚರವಾಗಿರುತ್ತಿರಲಾಗಿ ಆ ಜಗತ್ತುಗಳಿಗೆ ಕರ್ತನಾದ ಮಹೇಶ್ವರನೊಬ್ಬನು ಇದ್ದೇ ಇರುವನೆಂದು ಅನುಮಾನಪ್ರಮಾಣದಿಂದ ಹೇಳುವುದಕ್ಕೆ ಹೇಗೆ ಶಕ್ತವಾಗುವುದು? " ||೨೨|| ಎಂದು ಹೇಳುತ್ತಾ, ಈಶ್ವರನಿರುವನೆಂಬುದನ್ನು ಸಾಧಿಸತಕ್ಕ ಅನುಮಾನ ಮೊದಲಾದ ಪ್ರಮಾಣಗಳನ್ನು ಸ್ವೇಚ್ಛೆಯಿಂದ ನೀನು ಖಂಡಿಸುವೆಯಾದರೆ, ಎಲೆ ನಿರೀಶ್ವರಸಾಂಖ್ಯವಾದಿಯೆ, ಅದಕ್ಕೆ ನನ್ನ ಉತ್ತರವನ್ನು ಕೇಳು—||೨೩|| ಲೋಕದಲ್ಲಿ ಆವಿಯೆಂಬುದು ಪ್ರ

ಧೂಮೋನಧೂಮವದ್ಭಾನಾದಗ್ನಿಮತ್ತಾಂಸಪ್ರಯಾತಿಕಿಂ ॥೨೪॥ ಮರೀ
ಚಿಕಾಸಲಿಲವತ್ಸ್ಥಿತಾಕಿಂಸಲಿಲಂಭವೇತ್ । ಅನ್ಯಸ್ಯಸದೃಶೋಽನ್ಯಸ್ಮಿನ್ನಿ
ವೇಕಸ್ತ್ವಂಪ್ರಭೋವದ ॥೨೫॥ ಧೂಮವತ್ಪರ್ವತಸ್ಯಾಗ್ರೇಬಾಷ್ಪೇವಿಸ್ಫುರಿ
ತೇಽಸತಿ । ವಿಚಾರಿತೇಽಸಧೂಮಃಕಿಂಸತುಧೂಮೋಭವೇದ್ಯದಿ ॥೨೬॥ ಉ
ತ್ಪದ್ಯತೇಯಥಾಧೂಮಾನ್ಮೇಘಪಙ್ಕ್ತಿರ್ಮಹೀತಲೇ । ತಥೈವಬಾಷ್ಪಾದೇತ
ಸ್ಮಾತ್ಸಾಕಿಂನೋತ್ಪದ್ಯತೇಽನಿಶಂ ॥೨೭॥ ತಸ್ಮಾದಗ್ನೌಸ್ಥಿತೇಧೂಮೋವಹ್ನಿ
ರಸ್ತಿಯಥಾಹ್ಯಧಃ । ತಥಾಸತಿಪ್ರಪಂಚೇಽಸ್ಮಿಂಚ್ಛಿವೋಽಸ್ತಿನಹಿಸಂಶಯಃ ॥
ಅತೋಽನುಮಾನಂತತ್ತ್ವಾವಗತೇಃಪರಮಕಾರಣಂ । ಕಿಂಚಾಕಾಶಗುಣಃಶ
ಬ್ದಸ್ತದ್ರೂಪಾವೇದರಾಶಯಃ ॥೨೯॥ ಶಬ್ದಾತೀತಂತ್ವತ್ತತ್ತ್ವಂಕಥಂಬೋ
ಧಯಿತುಂಕ್ಷಮಾಃ । ಶ್ರುತಿವಾಕ್ಯವತ್ಯತಿಷ್ಠದ್ದಶಾಂಗುಲಮಿತಿಶ್ರುತಾತ್
॥೩೦॥ ಮಹಾದೇವೋಽಪ್ಯತ್ರತತ್ತ್ವಂಪರಿಶಂಸತಿನಕ್ವಚಿತ್ । ವೇದಾಅ
ಪಿಶಿವೋದ್ದಿಷ್ಟಾಸ್ತನ್ಮಹೇಶಾವಬೋಧನೇ ॥೩೧॥ ಭವೇಯುಸ್ತೇಕಿಂಪ್ರ

---

ಸಿದ್ಧವಾದುದು. ಆ ಆವಿಯೆಂಬುದು ಪ್ರಸಿದ್ಧವಾದರೆ ಆಗಲಿ ಅಥವಾ ಹೋಗಲಿ.
ಹೊಗೆಯುಳ್ಳವ ವಸ್ತುವು ಹೊಗೆಯಂತೆ ತೋರಿದ ಮಾತ್ರದಿಂದಲೇ ಅದು ಹೊಗೆಯಾ
ಗಿ ಹೋಗುವುದೆ? ॥೨೪॥ ಬಿಸಿಲ್ಗುದುರೆಯು ನೀರಿನಂತೆ ತೋರುತ್ತಿದ್ದರೂ ಅದು ನಿ
ಜವಾದ ನೀರಾಗುವುದೆ? ಒಬ್ಬನು ಮತ್ತೊಬ್ಬನಂತೆ ಇದ್ದ ಮಾತ್ರದಿಂದಲೇ ಅವರಿ
ಬ್ಬರೂ ಒಬ್ಬನೇ ಆಗುವುದುಂಟೆ? ಹೇಳು ॥೨೫॥ ಬೆಟ್ಟದಮೇಲೆ ಹೊಗೆಯಂತೆ ಆವಿ
ಯಾಗುತ್ತಿರಲಾಗಿ, ವಿಚಾರಮಾಡಿ ನೋಡಿದರೆ ಅದು ನಿಜವಾದ ಹೊಗೆಯಾಗಿರುವು
ದುಂಟೆ? ಅದು ಹೊಗೆಯೇ ಆಗಿರುವುದಾದರೆ, ॥೨೬॥ ಭೂತಲದಲ್ಲಿ ಹೊಗೆಯಿಂದ
ಮೋಡಗಳ ಸಾಲು ಹೇಗೆ ಉಂಟಾಗುವುದೋ ಹಾಗೆಯೇ ನಿರಂತರವೂ ಈ ಆವಿಯ
ದೆಸೆಯಿಂದ ಆ ಮೋಡಗಳ ಸಾಲು ಏತಕ್ಕೆ ಉತ್ಪನ್ನವಾಗುವುದಿಲ್ಲ? ॥೨೭॥ ಅದು
ಕಾರಣ, ಮೇಲೆ ಹೊಗೆಯಾಡುತ್ತಿದ್ದರೆ ಕೆಳಗೆ ಬೆಂಕಿಯು ಹೇಗೆ ಇದ್ದೇ ಇರುವುದೋ,
ಹಾಗೆಯೇ ಕಾರ್ಯರೂಪವಾದ ಪ್ರಪಂಚವೆಂಬುದು ಇರುತ್ತಿರಲಾಗಿ, ಅದಕ್ಕೆ ಕಾರಣ
ನಾದ ಶಿವನೆಂಬುವನೊಬ್ಬನು ಇದ್ದೇ ಇರುವನು. ಅದಕ್ಕೆ ಸಂಶಯವಿಲ್ಲ. ॥೨೮॥
ಈ ಕಾರಣದಿಂದ ಪೂರ್ವೋಕ್ತವಾದ ಅನುಮಾನ ಪ್ರಮಾಣವೇ ಶಿವನಿರುವನೆಂಬ ತತ್ತ್ವಾ
ರ್ಥ ನಿಶ್ಚಯಕ್ಕೆ ಮುಖ್ಯಕಾರಣವಾಗಿರುವುದು. ಮತ್ತೂ "ಶಬ್ದವೆಂಬುದು ಆಕಾ
ಶದ ಗುಣವಾಗಿರುವುದು. ವೇದಸಮೂಹವು ಆ ಶಬ್ದದ ರೂಪವಾಗಿರುವುದು ॥೨೯॥
ನಿನ್ನ ಶಿವತತ್ತ್ವವು ಶಬ್ದಕ್ಕೆ ನಿಲುಕದೆ ಅತೀತವಾಗಿರುವಕಾರಣ, ಅಂಥ ತತ್ತ್ವವನ್ನು
ತಿಳುಹಿಕೊಡುವುದಕ್ಕೆ ಶಬ್ದರೂಪವಾದ ವೇದಗಳು ಹೇಗೆ ಸಮರ್ಥಗಳಾಗುವುವು!
"ಉಳಿದ ಜ್ಞಾನಕ್ಕಿಂತಲೂ ಶಿವನು ಹತ್ತಂಗುಲಪ್ರಮಾಣವಿರುವವನು" ಎಂದು ಶ್ರುತಿ

ಮಾಣಮಿತಿತ್ವಂಯದಿಶಂಸಸಿ । ಶೃಣುಮಾಯಾತಮಸ್ಸಮ್ಯಗ್ಜ್ಞಷ್ಟಂಕೃತ್ವಾಪ್ರವರ್ತಿನಾಂ ॥೩೨॥ ಅನನ್ಯಶರಣಾನಾಂತುಶರಣಾನಾಂಮಹಾತ್ಮನಾಂ। ಮುಮುಕ್ಷೂಣಾಂಹೃತ್ಕಮಲೇಸ್ಥಿತೋಭೂತ್ವಾನಿರಂತರಂ ॥೩೩॥ ಆತ್ಮಾನಂಸಂದರ್ಶಯತಿಕೃಪಯಾಪರಮೇಶ್ವರಃ । ಯಸ್ಮಾದಜ್ಞಾನತಿಮಿರಧ್ವಂಸದೀಪಾನಕಲ್ಪಯತ್ ॥೩೪॥ ವೇದಾನೀಶಸ್ತತಸ್ತೇಷಾಂಪ್ರಾಮಾಣ್ಯಮನಿವಾರಿತಂ । ಕಿಂಚಮೃಷ್ಟಂಯಜ್ಜಗತಿತನ್ನಷ್ಟಮಿತಿವಾಕ್ಯತಃ ॥೩೫॥ ಸಾಮೃಶ್ಯಮಾನೈಃಪ್ರತ್ಯಕ್ಷಮನಿತ್ಯೈರ್ಹೇತುಭಿಸ್ಸ್ಫುಟಂ। ನಿತ್ಯೋಮಹೇಶ್ವರೋಜ್ಞಾತುಮನುಮಾಶಕ್ಯತೇಕಥಂ ॥೩೬॥ ಏವಂಯದಿತ್ವಂವದಸಿಶೃಣುಪ್ರವ್ಯಕ್ತಮುತ್ತರಂ।ಮಾನಂಪ್ರತ್ಯಕ್ಷರಹಿತಮನುಮಾನಾದ್ಯಮಸ್ತಿಕಿಂ ॥ ॥೩೭॥ ಪಶ್ಯಂತಿಸೂರಯಇತಿಪ್ರಖ್ಯಾತಾಯಾಶ್ರು ತೇರಥ । ಸೂರಯೋ

---

ವಚನವಿರುವುದರಿಂದ, ಆವೇದಗಳು ಶಿವತತ್ವ ನಿಶ್ಚಯವನ್ನು ಮಾಡಲಾರವು. ಮತ್ತೂ ಆವೇದಗಳನ್ನು ಹುಟ್ಟಿಸಿದ ಮಹಾದೇವನು ಕೂಡ ತನ್ನನ್ನು ತಾನು ಅರುಹಿಕೊಡುವನೆಂದು ಎಲ್ಲಿಯೂ ಹೇಳಿರುವುದಿಲ್ಲ. ವೇದಗಳು ಶಿವನನ್ನು ಕುರಿತ ಉಪ್ದೇಶವುಳ್ಳುವುಗಳಾಗಿದ್ದರೂ ಆ ಶಿವತತ್ವವನ್ನರುಹಿಕೊಡುವುದಕ್ಕೆ ಅವುಗಳು ಪ್ರಮಾಣಗಳಾಗುವುವೆ! ಎಂದು ಎಲೆವಾದಿಯೆ ನೀನು ಪ್ರಶ್ನೆಮಾಡುವೆಯಾದರೆ, ಉತ್ತರವನ್ನು ಹೇಳುತ್ತೇನೆ ಕೇಳು:—ಮಾಯಾಮೂಲಕವಾದ ಅಜ್ಞಾನವನ್ನು ತೊಲಗಿಸಿ ವರ್ತಿಸುವವರೂ, ಶಿವನ ಹೊರತು ಅನ್ಯರನ್ನು ಮರೆಹೊಗದವರೂ, ಮಹಾತ್ಮರೂ ಮೋಕ್ಷಾಪೇಕ್ಷಿಗಳೂ ಆದ ಶರಣರ ಹೃದಯಕಮಲದಲ್ಲಿ ಪರಶಿವನು ಯಾವಾಗಲೂ ಇದ್ದುಕೊಂಡು ॥೩೩॥ ದಯೆಯಿಂದ ಅವರಿಗೆ ತನ್ನನ್ನು ಗೋಚರಿಸಿಕೊಡುವನು. ಪರಶಿವನು ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವ ದೀಪಗಳಂಥ ವೇದಗಳನ್ನು ಯಾವಕಾರಣದಿಂದ ಸೃಜಿಸಿದನೋ, ಆ ಕಾರಣದಿಂದ ಅವುಗಳಿಗೆ ಸ್ವತಃಪ್ರಾಮಾಣ್ಯವು ಅಬಾಧಿತವಾಗಿರುವುದು. ಅದು ಕಾರಣ, ಶಾಬ್ದಪ್ರಮಾಣದಿಂದಲೂ ಶಿವತತ್ವವು ಸಿದ್ಧವಾಗಿರುವುದು. ಮತ್ತೂ "ಲೋಕದಲ್ಲಿ ಯಾವುದು ಕಣ್ಣಿಗೆ ಕಾಣುವುದೋ ಅದು ನಷ್ಟವಾಗುವುದು" ಎಂಬ ವಚನವಿರುವುದರಿಂದ ಭೂಮಿಯಲ್ಲಿ ಪ್ರತ್ಯಕ್ಷವಾಗಿ ಕಾಣಲ್ಪಡುವ ಅನಿತ್ಯವಾದ ಕಾರಣಗಳಿಂದ ನಿತ್ಯನಾದ ಮಹೇಶ್ವರನನ್ನು ಕಾಣುವುದಕ್ಕೆ ಹೇಗೆ ಶಕ್ತವಾದೀತು?"॥೩೬॥ ಎಂದು ನೀನು ಆಕ್ಷೇಪಿಸುವೆಯಾದರೆ, ಎಲೆವಾದಿಯೆ, ಇದಕ್ಕೆ ಸ್ಪಷ್ಟವಾದ ಉತ್ತರವನ್ನು ಹೇಳುತ್ತೇನೆ ಕೇಳು:—ಅನುಮಾನ ಮೊದಲಾದ ಪ್ರಮಾಣಗಳಲ್ಲಿ ಪ್ರತ್ಯಕ್ಷಪ್ರಮಾಣವಿಲ್ಲದಿರುವುದುಂಟೆ ? ॥೩೭॥ "ತದ್ವಿಷ್ಣೋಃಪರಮಂಪದಂಸದಾಪಶ್ಯಂತಿಸೂರಯಃ" (ಆ ವಿಷ್ಣುವಿಗಿಂತಲೂ ಉತ್ಕೃಷ್ಟವಾದ ಪ್ರಾಶಸ್ತ್ಯವನ್ನು ವಿದ್ವಾಂಸರುಗಳು ಯಾವಾಗಲೂ ನೋಡುತ್ತಿರುವರು) ಎಂತಲೂ, ಮತ್ತೂ "ಸೂರಯಃ

ಯತ್ಪ್ರಪಶ್ಯಂತಿತದ್ವಿಷ್ಣೋಃಪರಮಂಪದಂ ॥೩೮॥ ಇತಿವಾಕ್ಯಾತ್ತತ್ತ್ವಮ
ಪ್ರಮಾಣಾತೀತಂಭವೇನ್ನುಕಿಂ । ಸೋಽಪಿಭೂತ್ಪರಃಪ್ರೋಭಕ್ತಿಗೋಚ
ರೋಽಪಿನಾದಿರೀಶ್ವರಃ ॥೩೯॥ ಅನಿತ್ಯಮಿತಿತಂಶಂಭುಂವಕ್ತುಂಕಿಂಶಕ್ಯತೇ
ಜನೈಃ। ನಮೇಭಕ್ತಾಃಪ್ರಣಶ್ಯಂತಿಯಥಾವಾರಾಣಸೀಪುರೀ ॥೪೦॥ ನಶ್ಯಂ
ತುನಾಮವಸ್ತೂನಿನಶ್ವರಾಣಿಮಹೀತಲೇ । ಅನಶ್ವರಾಣಿವಸ್ತೂನಿಕಿಂವಿನ
ಶ್ಯಂತಿಸರ್ವದಾ॥೪೧॥ ಕಿಂಚಜ್ಞಾನಪ್ರಭೃತಿಭಿಃಪ್ರಮಾಣೈರ್ವಿಷಯೀಕೃತಂ।
ತತ್ತ್ವಂಕಿಂಮಾನಸಾತೀತಂಸಮ್ಯಗಾಲೋಕಿತೇಸತಿ॥೪೨॥ ಹೇತುದೃಷ್ಟಾಂ
ತರಹಿತಂಯದಿತತ್ತ್ವಂಮನೀಷಿಣಃ।ಕೇನೋಪಾಯೇನತತ್ತ್ವಂನಿಶ್ಚಿನ್ವಂತಿ
ಯಥಾರ್ಥತಃ॥೪೩॥ ಸುವರ್ಣಪರಿಮಾಣಸ್ಯಜ್ಞಾಪನಾಯತುಲಾಸ್ಥಿತಂ।ಗುಂ
ಜಾದಿಕಂಸ್ವರ್ಣಸಮಂಕಿಮುತದ್ವದಿಹೇಕ್ಷ್ಯತಾಂ ॥೪೪॥ ಶಿವಪ್ರತ್ಯಾಯ
ಕಂವಾಕ್ಯಮಸ್ತಿತತ್ಸಂನಿಭಂತುನ । ಲಕ್ಷೀಕೃತ್ಯಗಿರಿಂಮುಕ್ತಶ್ಶರಸ್ತಂ

---

ಯತ್ಪ್ರಪಶ್ಯಂತಿತದ್ವಿಷ್ಣೋಃಪರಮಂಪದಂ " ( ವಿದ್ವಾಂಸರುಗಳು ಯಾವ ಪದವನ್ನು
ನೋಡುತ್ತಿರುವರೋ ಅದು ವಿಷ್ಣುವಿಗಿಂತಲೂ ಉತ್ಕೃಷ್ಟವಾದ ಸ್ಥಾನವು.) ॥೩೮॥
ಎಂತಲೂ ವೇದವಚನಗಳಿರುವುದರಿಂದ ಹೀಗೆ ಶಾಬ್ದಪ್ರಮಾಣದಿಂದಲೂ ಸಿದ್ಧವಾದ
ಆ ಶಿವತತ್ತ್ವವು ಪ್ರಮಾಣರಹಿತವಾದುದಾಗುವುದೆ? ಆ ಪರಶಿವನು ಭಕ್ತಿಗೆ ಗೋಚರಿ
ಸತಕ್ಕವನೂ ಅನಾದಿಯೂ ಸರ್ವೇಷ್ಟಪ್ರದಾತನೂ ಆಗಿರುವನು. ॥೩೯॥ ಅಂತಪ್ಪ
ಶಂಭುವನ್ನು ಅನಿತ್ಯನಾದವನೆಂದು ಹೇಳುವುದಕ್ಕೆ ಜನರಿಗೆ ಶಕ್ಯವಾಗುವುದೆ? ಕಾಶೀ
ಪಟ್ಟಣವು ಹೇಗೆ ನಾಶವಾಗುವುದಿಲ್ಲವೋ ಹಾಗೆ ನನ್ನ ಭಕ್ತರು ನಾಶವಾಗುವುದಿಲ್ಲ॥೪೦॥
ಭೂತಲದಲ್ಲಿ ಅಸ್ಥಿರಗಳಾದ ಪದಾರ್ಥಗಳು ನಾಶವಾದರಾಗಲಿ. ಯಾವಾಗಲೂ ಶಾಶ್ವತ
ಗಳಾಗಿರತಕ್ಕ ವಸ್ತುಗಳು ನಾಶಗೊಳ್ಳುವುವೇನು ? ॥೪೧॥ (ಅನಶ್ವರರಾದ ವಿಷ್ಣುಬ್ರ
ಹ್ಮಾದಿಗಳು ಪ್ರಳಯಕಾಲದಲ್ಲಿ ಅಳಿವಂತೆ ಪರಮೇಶ್ವರನ ದೇಹವು ಅಳಿವುದುಂಟೆ ?
ಶಿವನ ದೇಹಕ್ಕೆ ಯಾವಾಗೂ ಅಳಿವೆಂಬುದಿಲ್ಲ. ಜಗತ್ಕಾರಣನಾದ ಆ ಶಿವನು ನಿತ್ಯನಾದ
ವನು.) ಚೆನ್ನಾಗಿ ವಿಚಾರಮಾಡಿ ನೋಡಿದರೆ ಜ್ಞಾನವೇ ಮೊದಲಾದ ಪ್ರಮಾಣಗಳಿಂ
ದ ಗೋಚರಿಸಲ್ಪಟ್ಟ ತತ್ತ್ವವು ಮನಸ್ಸಿಗೆ ಅಗೋಚರವೂ ಹೇತುದೃಷ್ಟಾಂತಗಳಿಲ್ಲದು
ದೂ ಸಹ ಆಗುವುದುಂಟೆ ? ಆ ಶಿವತತ್ತ್ವವು ಅಂತಹುದಾಗಿದ್ದರೆ ವಿದ್ವಾಂಸರುಗಳು
ಯಾವ ಉಪಾಯದಿಂದ ಆ ತತ್ತ್ವವನ್ನು ಯಥಾರ್ಥವಾಗಿ ತಿಳಿದುಕೊಳ್ಳುವರು?॥೪೩॥
ಚಿನ್ನದ ತೂಕವನ್ನು ತಿಳುಹುವುದಕ್ಕಾಗಿ ತಕ್ಕಡಿಯಲ್ಲಿಡಲ್ಪಟ್ಟ ಗುಲಗಂಜಿಯೇ ಮೊ
ದಲಾದುವುಗಳು ಅದರ ಜತೆಯಲ್ಲಿಡಲ್ಪಟ್ಟ ಚಿನ್ನಕ್ಕೆ ಸಮನಾಗಿ ಹೋಗುವುವೆ? ಅದ
ರಂತೆಯೇ ಇಲ್ಲಿಯೂ ಎಂದು ನೋಡಿರಿ. ॥೪೪॥ ಶಿವತತ್ತ್ವವನ್ನು ನಿಶ್ಚಯಿಸಿಕೊಡುವ
ವಾಕ್ಯಗಳೇನೋ ವೇದದಲ್ಲುಂಟು. ಆದರೆ ಅಂತಹ ವಾಕ್ಯಗಳು ಶಿವಸಮಾನವಾದ ವು

ಪ್ರಮಾಣಮಿತಿತ್ವಂಯದಿಶಂಸಸಿ । ಶೃಣುಪ್ರಾಯಾತಮುಸ್ಸವ್ಯುಜ್ಞುಷ್ಟಂಕೃ
ತ್ವಾಪ್ರವರ್ತಿನಾಂ ॥೩೨॥ ಅನನ್ಯಶರಣಾನಾಂತುಶರಣಾನಾಂಮಹಾತ್ಮ
ನಾಂ। ಮುಮುಕ್ಷೂಣಾಂಹೃತ್ಕಮಲೇಸ್ಥಿತೋಽಭೂತ್ವಾನಿರಂತರಂ ॥೩೩॥
ಆತ್ಮಾನಂಪ್ರದರ್ಶಯತಿಕೃಪಯಾಪರಮೇಶ್ವರಃ । ಯಸ್ಮಾದಜ್ಞಾನತಿಮಿರ
ಧ್ವಂಸದೀಪಾನಕಲ್ಪಯತ್ ॥೩೪॥ ವೇದಾನೀಶಸ್ತತಸ್ತೇಷಾಂಪ್ರಾಮಾಣ್ಯ
ಮನಿವಾರಿತಂ । ಕಿಂಚದೃಷ್ಟಂಯಜ್ಜಗತಿತನ್ನಷ್ಟಮಿತಿವಾಕ್ಯತಃ ॥೩೫॥
ಸಂದೃಶ್ಯಮಾನೈಃಪ್ರತ್ಯಕ್ಷಮನಿತ್ಯೈರ್ಹೇತುಭಿಸ್ಸ್ಫುಟಂ। ನಿತ್ಯೋಮಹೇ
ಶ್ವರೋಜ್ಞಾತುಮುಪಸಾಶಕ್ಯತೇಕಥಂ ॥೩೬॥ ಏವಂಯದಿತ್ವಂವದಸಿಶೃಣು
ಪ್ರವ್ಯಕ್ತಮುತ್ತರಂ।ಮಾನಂಪ್ರತ್ಯಕ್ಷರಹಿತಮನುಮಾನಾದ್ಯಮಸ್ತಿಕಿಂ ॥
॥೩೭॥ ಪಶ್ಯಂತಿಸೂರಯಇತಿಪ್ರಖ್ಯಾತಾಯಾಶ್ರುತೇರಥ । ಸೂರಯೋ

---

ವಚನವಿರುವುದರಿಂದ, ಆವೇದಗಳು ಶಿವತತ್ವ ನಿಶ್ಚಯವನ್ನು ಮಾಡಲಾರವು. ಮತ್ತೂ ಆವೇದಗಳನ್ನು ಹುಟ್ಟಿಸಿದ ಮಹಾದೇವನು ಕೂಡ ತನ್ನನ್ನು ತಾನು ಅರುಹಿಕೊಡುವವನೆಂದು ಎಲ್ಲಿಯೂ ಹೇಳಿರುವುದಿಲ್ಲ. ವೇದಗಳು ಶಿವನನ್ನು ಕುರಿತ ಉದ್ದೇಶವುಳ್ಳುವುಗಳಾಗಿದ್ದರೂ ಆ ಶಿವತತ್ವವನ್ನರುಹಿಕೊಡುವುದಕ್ಕೆ ಅವುಗಳು ಪ್ರಮಾಣಗಳಾಗುವುವೆ? ಎಂದು ಎಲೆವಾದಿಯೆ ನೀನು ಪ್ರಶ್ನೆಮಾಡುವೆಯಾದರೆ, ಉತ್ತರವನ್ನು ಹೇಳುತ್ತೇನೆ ಕೇಳು:—ಮಾಯಾಮೂಲಕವಾದ ಅಜ್ಞಾನವನ್ನು ತೊಲಗಿಸಿ ವರ್ತಿಸುವವರೂ, ಶಿವನ ಹೊರತು ಅನ್ಯರನ್ನು ಮರೆಹುಗದವರೂ, ಮಹಾತ್ಮರೂ ಮೋಕ್ಷಾಪೇಕ್ಷಿಗಳೂ ಆದ ಶರಣರ ಹೃದಯಕಮಲದಲ್ಲಿ ಪರಶಿವನು ಯಾವಾಗಲೂ ಇದ್ದುಕೊಂಡು ॥೩೩॥ ದಯೆಯಿಂದ ಅವರಿಗೆ ತನ್ನನ್ನು ಗೋಚರಿಸಿಕೊಡುವನು. ಪರಶಿವನು ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವ ದೀಪಗಳಾದಂಥ ವೇದಗಳನ್ನು ಯಾವಕಾರಣದಿಂದ ಸೃಜಿಸಿದನೋ, ಆಕಾರಣದಿಂದ ಅವುಗಳಿಗೆ ಸ್ವತಃಪ್ರಾಮಾಣ್ಯವು ಅಬಾಧಿತವಾಗಿರುವುದು. ಅದುಕಾರಣ, ಶಾಬ್ದಪ್ರಮಾಣದಿಂದಲೂ ಶಿವತತ್ವವು ಸಿದ್ಧವಾಗಿರುವುದು. ಮತ್ತೂ " ಲೋಕದಲ್ಲಿ ಯಾವುದು ಕಣ್ಣಿಗೆ ಕಾಣುವುದೋ ಅದು ನಷ್ಟವಾಗುವುದು " ಎಂಬ ವಚನವಿರುವುದರಿಂದ ಭೂಮಿಯಲ್ಲಿ ಪ್ರತ್ಯಕ್ಷವಾಗಿ ಕಾಣಲ್ಪಡುವ ಅನಿತ್ಯವಾದ ಕಾರಣಗಳಿಂದ ನಿತ್ಯನಾದ ಮಹೇಶ್ವರನನ್ನು ಕಾಣುವುದಕ್ಕೆ ಹೇಗೆ ಶಕ್ಯವಾದೀತು?" ॥೩೬॥ ಎಂದು ನೀನು ಆಕ್ಷೇಪಿಸುವೆಯಾದರೆ, ಎಲೆವಾದಿಯೆ, ಇದಕ್ಕೆ ಸ್ಪಷ್ಟವಾದ ಉತ್ತರವನ್ನು ಹೇಳುತ್ತೇನೆ ಕೇಳು:—ಅನುಮಾನ ಮೊದಲಾದ ಪ್ರಮಾಣಗಳಲ್ಲಿ ಪ್ರತ್ಯಕ್ಷಪ್ರಮಾಣವಿಲ್ಲದಿರುವುದುಂಟೆ ? ॥೩೭॥ "ತದ್ವಿಷ್ಣೋಃಪರಮಂಪದಂಸದಾಪಶ್ಯಂತಿಸೂರಯಃ" ( ಆ ವಿಷ್ಣುವಿಗಿಂತಲೂ ಉತ್ಕೃಷ್ಟವಾದ ಪ್ರಾಪ್ಯಸ್ಥಾನವನ್ನು ವಿದ್ವಾಂಸರುಗಳು ಯಾವಾಗಲೂ ನೋಡುತ್ತಿರುವರು ) ಎಂತಲೂ, ಮತ್ತೂ "ಸೂರಯೋ

ಯತ್ಪ್ರಪಶ್ಯಂತಿತದ್ವಿಷ್ಣೋಃಪರಮಂಪದಂ ॥೩೮॥ ಇತಿವಾಕ್ಯಾತ್ತತ್ತ್ವಮ
ಪಿಪ್ರಮಾಣಾತೀತಂಭವೇತ್ಕಿಂ । ಸೋಽಪಿಭೂತ್ಪರಃಶಿವೋಭಕ್ತಿಗೋಚ
ರೋಽಪ್ಯನಾದಿರೀಶ್ವರಃ ॥೩೯॥ ಅನಿತ್ಯಮಿತಿತಂಶಂಭುಂವಕ್ತುಂಕಿಂಶಕ್ಯತೇ
ಜನೈಃ। ನಮೇಭಕ್ತಾಃಪ್ರಣಶ್ಯಂತಿಯಥಾವಾರಾಣಸೀಪುರೀ ॥೪೦॥ ನಶ್ಯಂ
ತುನಾಮವಸ್ತೂನಿನಶ್ವರಾಣಿಮಹೀತಲೇ । ಅನಶ್ವರಾಣಿವಸ್ತೂನಿಕಿಂವಿನ
ಶ್ಯಂತಿಸರ್ವದಾ॥೪೧॥ ಕಿಂಚಜ್ಞಾನಪ್ರಭೃತಿಭಿಃಪ್ರಮಾಣೈರ್ವಿಷಯೀಕೃತಂ।
ತತ್ತ್ವಂಕಿಂಮಾನಸಾತೀತಂಸವ್ಯಾಗಾಲೋಕಿತೇಸತಿ॥೪೨॥ ಹೇತುದೃಷ್ಟಾಂ
ತರಹಿತಂಯದಿತತ್ತ್ವಂಮನೀಷಿಣಃ।ಕೇನೋಪಾಯೇನತತ್ತತ್ತ್ವಂನಿಶ್ಚಿನ್ವಂತಿ
ಯಥಾರ್ಥತಃ॥೪೩॥ ಸುವರ್ಣಪರಿಮಾಣಸ್ಯಜ್ಞಾಪನಾಯತುಲಾಸ್ಥಿತಂ।ಗುಂ
ಜಾದಿಕಂಸ್ವರ್ಣಸಮಂಕಿಮುತದ್ವದಿಹೇಕ್ಷ್ಯತಾಂ ॥೪೪॥ ಶಿವಪ್ರತ್ಯಾಯ
ಕಂವಾಕ್ಯಮಸ್ತಿತತ್ಸಂನಿಭಂತುನ । ಲಕ್ಷೀಕೃತ್ಯಗಿರಿಂಮುಕ್ತಃಶರಸ್ತಂ

---

ಯತ್ಪ್ರಪಶ್ಯಂತಿತದ್ವಿಷ್ಣೋಃಪರಮಂಪದಂ" (ವಿದ್ವಾಂಸರುಗಳು ಯಾವ ಪದವನ್ನು ನೋಡುತ್ತಿರುವರೋ ಅದು ವಿಷ್ಣುವಿಗಿಂತಲೂ ಉತ್ಕೃಷ್ಟವಾದ ಸ್ಥಾನವು.) ॥೩೮॥ ಎಂತಲೂ ವೇದವಚನಗಳಿರುವುದರಿಂದ ಹೀಗೆ ಶಾಬ್ದಪ್ರಮಾಣದಿಂದಲೂ ಸಿದ್ಧವಾದ ಆ ಶಿವತತ್ತ್ವವು ಪ್ರಮಾಣರಹಿತವಾದುದಾಗುವುದೆ? ಆ ಪರಶಿವನು ಭಕ್ತಿಗೆ ಗೋಚರಿಸತಕ್ಕವನೂ ಅನಾದಿಯೂ ಸರ್ವೇಷ್ಟಪ್ರದಾತನೂ ಆಗಿರುವನು. ॥೩೯॥ ಅಂತಪ್ಪ ಶಂಭುವನ್ನು ಅನಿತ್ಯನಾದವನೆಂದು ಹೇಳುವುದಕ್ಕೆ ಜನರಿಗೆ ಶಕ್ಯವಾಗುವುದೆ? ಕಾಶೀಪಟ್ಟಣವು ಹೇಗೆ ನಾಶವಾಗುವುದಿಲ್ಲವೋ ಹಾಗೆ ನನ್ನ ಭಕ್ತರು ನಾಶವಾಗುವುದಿಲ್ಲ॥೪೦॥ ಭೂತಲದಲ್ಲಿ ಅಸ್ಥಿರಗಳಾದ ಪದಾರ್ಥಗಳು ನಾಶವಾದರಾಗಲಿ. ಯಾವಾಗಲೂ ಶಾಶ್ವತಗಳಾಗಿರತಕ್ಕ ವಸ್ತುಗಳು ನಾಶಗೊಳ್ಳುವುವೇನು? ॥೪೧॥ (ಅನಶ್ವರರಾದ ವಿಷ್ಣುಬ್ರಹ್ಮಾದಿಗಳು ಪ್ರಳಯಕಾಲದಲ್ಲಿ ಅಳಿವಂತೆ ಪರಮೇಶ್ವರನ ದೇಹವು ಅಳಿವುದುಂಟೆ? ಶಿವನ ದೇಹಕ್ಕೆ ಯಾವಾಗ್ಗೂ ಅಳಿವೆಂಬುದಿಲ್ಲ. ಜಗತ್ಕಾರಣನಾದ ಆ ಶಿವನು ನಿತ್ಯನಾದವನು.) ಚೆನ್ನಾಗಿ ವಿಚಾರಮಾಡಿ ನೋಡಿದರೆ ಜ್ಞಾನವೇ ಮೊದಲಾದ ಪ್ರಮಾಣಗಳಿಂದ ಗೋಚರಿಸಲ್ಪಟ್ಟ ತತ್ತ್ವವು ಮನಸ್ಸಿಗೆ ಅಗೋಚರವೂ ಹೇತುದೃಷ್ಟಾಂತಗಳಿಲ್ಲದುದೂ ಸಹ ಆಗುವುದುಂಟೆ? ಆ ಶಿವತತ್ತ್ವವು ಅಂತಹುದಾಗಿದ್ದರೆ ವಿದ್ವಾಂಸರುಗಳು ಯಾವ ಉಪಾಯದಿಂದ ಆ ತತ್ತ್ವವನ್ನು ಯಥಾರ್ಥವಾಗಿ ತಿಳಿದುಕೊಳ್ಳುವರು?॥೪೩॥ ಚಿನ್ನದ ತೂಕವನ್ನು ತಿಳುಹುವುದಕ್ಕಾಗಿ ತಕ್ಕಡಿಯಲ್ಲಿಡಲ್ಪಟ್ಟ ಗುಲಗಂಜಿಯೇ ಮೊದಲಾದುವುಗಳು ಅದರ ಜತೆಯಲ್ಲಿಡಲ್ಪಟ್ಟ ಚಿನ್ನಕ್ಕೆ ಸಮನಾಗಿ ಹೋಗುವುವೆ? ಅದರಂತೆಯೇ ಇಲ್ಲಿಯೂ ಎಂದು ನೋಡಿರಿ. ॥೪೪॥ ಶಿವತತ್ತ್ವವನ್ನು ನಿಶ್ಚಯಿಸಿಕೊಡುವ ವಾಕ್ಯಗಳೇನೋ ವೇದದಲ್ಲುಂಟು. ಆದರೆ ಅಂತಹ ವಾಕ್ಯಗಳು ಶಿವಸಮಾನವಾದುವು

ಪ್ರಾಪ್ನುಯಾನ್ನಕಿಂ ||೪೫|| ಕಿಂನಪ್ರಯುಂಜತೇಶಂಭೌಬುಧಾಹೇತ್ವಾದಿ
ಕಂಕ್ಷಿತಾ । ತತ್ಪ್ರತ್ಯಕ್ಷಮಿವಂಮಾನಂಯೇನಕೇನಾಪಿವಾದಿನಾ ||೪೬||
ದುರ್ಲಂಘ್ಯಂತನ್ಮೃಥಾಬ್ರೂಷೇತ್ವಮಕರ್ತೇತಿಶಂಕರಂ । ಆದೌಕಪಿಲ
ಸಂಪ್ರೋಕ್ತೋಯೋಗಶ್ಶಿಷ್ಟಮತಃಕಿಮು||೪೭|| ಶುದ್ಧೋಬುದ್ಧೋಽನು
ಪಮಿತಃಕಲಾತೀತೋಽಗುಣಾನ್ವಿತಃ । ಅಣೋರಣೀಯಾನ್ಮಹತೋ
ಮಹೀಯಾನಿತಿಸಂತತಂ||೪೮||ಮಹೋಪನಿಷದಾಸಮ್ಯಕ್ಪ್ರತಿಪಾದ್ಯೋ
ನಿರಾಮಯಃ । ಈಶೋಽಹ್ಯಸಂಗೋನಾನಾತ್ಮಾಸರ್ವಂವ್ಯಾಪ್ಯಪ್ರಕಾಶ
ತೇ ||೪೯|| ತಸ್ಮಾದೇಕಾತ್ಮಕಂವಿಶ್ವಮಿತಿಜ್ಞೇಯಂಮನೀಷಿಭಿಃ। ಏವಂ
ವಿಧೋಮಹೇಶಾನಃಕಥಂಪ್ರಾದೇಶಿಕೋಭವೇತ್ ||೫೦|| ಇತಿಬ್ರೂತೇ
ಯದಿಭವಾಂಚ್ಛೃಣುತತ್ರೋಚ್ಯತೇಮಯಾ। ಕಥಮಾಸ್ತೇನಿರ್ಮಲಾತ್ಮಾ
ದುರ್ಮಲಾತ್ಮಾಂತರೇಽನಿಶಂ ||೫೧|| ದೇಹೇಂದ್ರಿಯಾದಿನಿರ್ಮುಕ್ತೋಮ

---

ಗಳಲ್ಲ. ಬಿಟ್ಟವನ್ನು ಗುರಿಮಾಡಿ ಬಿಟ್ಟ ಬಾಣವು ಆ ಬಿಟ್ಟವನ್ನು ತಗುಲದೆಹೋಗುವುದೆ? ||೪೫||ಭೂಮಿಯಲ್ಲಿ ವಿದ್ವಾಂಸರುಗಳು ಶಿವನ ವಿಷಯವಾಗಿ ಹೇತುದೃಷ್ಟಾಂತಾದಿಗಳನ್ನು ಪ್ರಯೋಗಿಸುವುದಿಲ್ಲವೆ? ಅದು ಕಾರಣ, ಶಿವತತ್ವಸಿದ್ಧಾಂತಕ್ಕೆ ಸಾಧಕವಾದ ಈ ಪ್ರತ್ಯಕ್ಷಪ್ರಮಾಣವನ್ನು ಯಾವಮತದ ವಾದಿಯೂ ದಾಂಟಲಾರನು. ಆದುದರಿಂದ ಶಂಕರನನ್ನು ಕರ್ತೃವಲ್ಲವೆಂದು ನೀನು ವ್ಯರ್ಥವಾಗಿ ಹೇಳುತ್ತೀಯೆ. ಪೂರ್ವದಲ್ಲಿ ಕಪಿಲಋಷಿಯಿಂದ ಹೇಳಲ್ಪಟ್ಟ ಯೋಗಮತವು ಕೂಡ ಶಿಷ್ಟಸಮ್ಮತವಾದುದೆ ? ||೪೭|| ಶಿವನು ಮಲರಹಿತನು, ಪ್ರಮಾಣಗೋಚರನು, ಅಸದೃಶನು, ನಿಷ್ಕಲನು, ಗುಣರಹಿತನು. ಅಣುವಿಗೆ ಅಣುವು, ಮಹತ್ತಿಗೆ ಮಹತ್ತಾದವನು ಎಂದು ಯಾವಾಗಲೂ ಉಪನಿಷತ್ತಿನಿಂದ ಚೆನ್ನಾಗಿ ಪ್ರತಿಪಾದಿಸಲ್ಪಟ್ಟವನು, ಜನನ ಮರಣ ರೂಪ ಭವರೋಗವಿಲ್ಲದವನು. ಸಕಲೇಷ್ಟಾರ್ಥಪ್ರದಾತನು, ಮಲಪಾಶಾದಿ ಸಂಗರಹಿತನು. ಸಕಲ ಪ್ರಾಣಿಗಳಲ್ಲೂ ಚೈತನ್ಯಭೂತನಾಗಿದ್ದು ನಾನಾವಿಧದಿಂದ ತೋರುವವನು. ಸಕಲ ಜಗತ್ತನ್ನೂ ತನ್ನ ಶಕ್ತಿಯಿಂದ ವ್ಯಾಪಿಸಿ ಪ್ರಕಾಶಿಸುತ್ತಲಿರುವವನು. ||೪೯|| ಅದುಕಾರಣ, ಜಗತ್ತು ಒಬ್ಬ ಆತ್ಮನನ್ನುಳ್ಳುದಾಗಿರುವುದು, ಎಂದು ವಿದ್ವಾಂಸರು ತಿಳಿಯಬೇಕು. ಹೀಗಿರುವಲ್ಲಿ ಪೂರ್ವೋಕ್ತ ಲಕ್ಷಣ ಲಕ್ಷಿತನಾದ ಶಿವನು ಅದು ಹೇಗೆ (ಚೋಟುದ್ದದವನು) ಸಾಮಾನ್ಯನಾಗುವನು ? ||೫೦|| ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿಯಲಾಗಿ, ಸಾಂಖ್ಯವಾದಿಯು ಹೀಗೆ ಆಕ್ಷೇಪಿಸುತ್ತಾನೆ:—ನೀನು ಪೂರ್ವೋಕ್ತರೀತಿಯಾಗಿ ಹೇಳುವೆಯಾದರೆ, ಆ ವಿಷಯದಲ್ಲಿ ನಾನು ಹೀಗೆ ಆಕ್ಷೇಪಿಸುತ್ತೇನೆ—ನಿರ್ಮಲಾತ್ಮಕನಾದ ಶಿವನು ಮಲಬದ್ಧರಾದವರ ದೇಹಮಧ್ಯದಲ್ಲಿ ಅದು ಹೇಗೆ ಸದಾ ವಾಸಮಾಡುವನು? ||೫೧|| ದೇಹೇಂದ್ರಿಯಾದಿಗ

ಹಾದೇವೋನಿರಂಜನಃ । ದೇಹೇಂದ್ರಿಯವತಾಂನೄಣಾಂಕಥಂವಾಧ್ಯೇ ಪ್ರವರ್ತತೇ ||೫೨|| ಅಗುಣಸ್ತು ಕಥಂತಿಷ್ಠೇದ್ಗುಣತ್ರಿತಯವತ್ಸುಚ । ಸಚ್ಚಿದಾನಂದಾತ್ಮಕೋಽಸಚ್ಚಿದಾನಂದಸ್ವರೂಪಿಣಾಂ||೫೩|| ಅಂತರೇಸ್ವಯಮತ್ಯಂತಮೇಕೀಭೂಯವಸೇತ್ಕಥಂ । ವಿಶುದ್ಧಾತ್ಮಾಕಥಂವಾಸ್ಯಾದತ್ಯಂತಾಶುದ್ಧವಿಗ್ರಹಃ ||೫೪|| ಬುದ್ಧಾತ್ಮಕಶ್ಶಂಕರೋಽಸಾವಬುದ್ಧಾತ್ಮಕಥಂಭವೇತ್ । ನಿತ್ಯೋಽನಿತ್ಯಃಕಥಂನುಸ್ಯಾತ್ಸತ್ಯಾತ್ಮಾಸತ್ಯವರ್ಜಿತಃ|| ಶಾಶ್ವತೋಽಶಾಶ್ವತಃಕಿಂಸ್ಯಾದೀಶ್ವರೋಽನೀಶ್ವರಃಕಥಂ । ಅಜನ್ಮಾಪ್ಯಥಂಜನ್ಮಮೃತ್ಯುಯುತೋಭವೇತ್ ||೫೬|| ಸರ್ವಜೀವಮಯೋಪ್ಯಾತ್ಮಾಸುಖದುಃಖಾಶ್ರಯಃಕಥಂ। ಅಣೋರಣೀಯಾನಿತ್ಯಸ್ಮಾದಾಮ್ನಾಯಾನ್ನಖಿಲಾತ್ಮಸು ||೫೭|| ಆಧಾರಾರ್ಥಂತಿಷ್ಠತಿತಚ್ಛಿವಚೈತನ್ಯಮೇವಹಿ। ಕಿಂನ್ಪ್ರೋಽಜೀವಸಮೂಹೇಷುಸಾಕ್ಷಾತ್ತಿಷ್ಠತಿಕಿಂವದ ||೫೮|| ಕಿಂವರ್ತತೇ ಸೂತ್ರಧಾರೀಸಾಲಭಂಜೇಷುಭೂತಲೇ । ಕಿಂತುತತ್ಸೂತ್ರಮೇವಾತ್ರಸರ್ವತ್ರಪರಿವರ್ತತೇ ||೫೯|| ಕಿಂಜಾಯತೇಶಿವೋಽಜೀವೈಸ್ಸಹನಶ್ಯತಿಕಿಂತ

---

ಕೊಂದೂ ಇಲ್ಲದ ನಿರಂಜನನಾದ ಮಹಾದೇವನು ದೇಹೇಂದ್ರಿಯಗಳುಳ್ಳ ಮನುಷ್ಯರ ಮಧ್ಯದಲ್ಲಿ ಅದು ಹೇಗೆ ವರ್ತಿಸುವನು? ||೫೨|| ಗುಣ ರಹಿತನಾದ ಶಿವನು ಗುಣತ್ರಯ ಸಮೇತರಾದ ಮನುಷ್ಯರಲ್ಲಿ ಹೇಗಿರುವನು? ಸಚ್ಚಿದಾನಂದ ಸ್ವರೂಪನಾದ ಶಂಕರನು ಸಚ್ಚಿದಾನಂದ ಸ್ವರೂಪರಲ್ಲದ ಜನರ ಹೃದಯಾಂತರದಲ್ಲಿ ತಾನು ಸಮರಸಗೊಂಡು ಹೇಗೆ ವಾಸಮಾಡುವನು ? ಮಲರಹಿತಾತ್ಮನಾದ ಶಂಭುವು ಅತ್ಯಂತ ಮಲಿನದೇಹನು ಹೇಗಾಗುವನು ? ||೫೪|| ಜ್ಞಾನದಿಂದರಿಯಲ್ಪಟ್ಟ ಶಂಕರನು ಅದುಹೇಗೆ ಅಬುದ್ಧಸ್ವರೂಪನಾಗುವನು? ನಿತ್ಯನಾದ ಶಿವನು ಹೇಗೆ ಅನಿತ್ಯನಾಗುವನು? ಸತ್ಯಸ್ವರೂಪನಾದ ಹರನು ಅದು ಹೇಗೆ ಅಸತ್ಯರೂಪನಾಗುವನು? ||೫೫|| ಶಾಶ್ವತನಾದ ಶಂಭುವು ಅಶಾಶ್ವತನಾಗುವುದು ಹೇಗೆ ? ಈಶ್ವರನು ಅನೀಶ್ವರನಾಗುವುದು ಹೇಗೆ ? || ಸರ್ವ ಚೈತನ್ಯ ಸ್ವರೂಪನಾದ ಆ ಪರಮಾತ್ಮನು ಸುಖ ದುಃಖಗಳಿಗೆ ನೆಲೆಯಾದ ಜೀವಾತ್ಮನಾಗುವುದು ಹೇಗೆ? ,, ಅಣೋರಣೀಯಾನ್ ಮಹತೋಮಹೀಯಾನ್ '' ಎಂಬ ಉಪನಿಷದ್ವಚನದಿಂದ ಸಕಲಾತ್ಮರುಗಳಲ್ಲೂ ಆ ಶಿವಚೈತನ್ಯವೇ ಆಧಾರಭೂತವಾಗಿ ಇರುತ್ತಿರುವುದಷ್ಟೆ. ಶಿವನು ಈಜೀವರ ಸಮೂಹದಲ್ಲಿ ಪ್ರತ್ಯಕ್ಷವಾಗಿಯೇ ಇರುತ್ತಿರುವನೇನು? ||೫೮|| ಹಾಗಾದರೆ ಭೂಮಿಯಲ್ಲಿ ಗೊಂಬೆಗಳೊಳಗೆ ಸೂತ್ರಧಾರಕನು ತಾನೇ ಇರುತ್ತಿರುವುದುಂಟೋ? ಅಥವಾ ಆ ಶಿವನು ಹಿಡಿದಿರುವ ಸೂತ್ರವೇ ಜೀವ ಸಮೂಹದಲ್ಲೆಲ್ಲಾ ತಗುಲಿಕೊಂಡಿರುವುದೋ? ||೫೯|| ಶಿವನು ಜೀವಾತ್ಮರೊಡನೆ ಕೂ

ಸನಾತನಃ ||೬೦|| ಅನೇಕಜ
ಥಾ | ನಜಾಯತೇನಮ್ರಿಯತೇಮಹಾದೇವಸ್ಸನಾತನಃ ||೬೦|| ಅನೇಕಜ
ಲಕುಂಭೇಷುಪ್ರತಿಬಿಂಬಮುಪಾಗತಃ | ಚಂದ್ರಃಕಿಂನಾಶಮಾಯಾತಿತೇ
ಷುಭಿನ್ನೇಷುಸತ್ಸ್ವಪಿ ||೬೧|| ಘಟಾಂತಸ್ಥಂಕಿಮಾಕಾಶಂಘಟೇಭಗ್ನೇವಿನ
ಶ್ಯತಿ | ಮುಕುರೇಸ್ಫುರಿತಾಮೂರ್ತಿರ್ಮುಕುರಸ್ಯಪ್ರಭಾಚಯೇ ||೬೨||
ವಿನಷ್ಟೇನಾಶಮಾಯಾತಿಕಿಮುತದ್ವನ್ಮಹೇಶ್ವರಃ | ಸಮಸ್ತಭೂತಾಂತರಾ
ತ್ಮಾಕಿಂನಶ್ಯತಿಹತೇಽಖಿಳೇ ||೬೩|| ವಾಯುನಾಸಲಿಲೇಪಾತ್ರಗತೇಚಲತಿ
ಚಂದ್ರಮಾಃ | ಯಥಾನಕಂಪತೇತದ್ವಜ್ಜನ್ಮಮೃತ್ಯುಜರಾದಿಭಿಃ ||೬೪||
ಚಲನ್ತ್ಯತಿಷುಸರ್ವೇಶಃ ಕಥಂಚಲನಮೃಚ್ಛತಿ | ಪ್ರಾಪ್ತವ್ಯಾಜೀವಜಾಲೇ
ನಮರವಸ್ಥಾಮಹೇಶ್ವರಂ ||೬೫|| ಪ್ರಾಪ್ನುವಂತಿಕಥಂತಸ್ಮಾಜ್ಜೀವೈರ್ಗ
ಸ್ಪೃಶ್ಯತೇಶಿವಃ | ತಸ್ಮಾಜ್ಜೀವೋನಭವತಿಶಿವಸ್ಸವ್ಯಾಪ್ತಿಜಾಗತೇ ||೬೬||
ಜೇವಾಜೇವಾಏವಶಿವಶ್ಶೈವಏವನಸಂಶಯಃ | ಸ್ವಾಮೀಶಿವೋವಯಂಭೃ
ತ್ಯಾಇತಿಭಾವನಯಾಸದಾ ||೬೭|| ಯುಕ್ತಾನಾಂಸತ್ಕ್ರಿಯಾಮಾರ್ಗರ

---

ಡಿಕೊಂಡು ಉತ್ಪನ್ನನಾಗಿ, ಅವರೊಡನೆಯೇ ತಾನೂ ನಾಶಗೊಳ್ಳುವನೋ ಹೇಗೆ ?
ಎಂದು ಪ್ರಶ್ನೆಮಾಡಲಾಗಿ, ಪಂಡಿತಾರಾಧ್ಯರು ಹೀಗೆ ಉತ್ತರವನ್ನು ಕೊಡುತ್ತಾರೆ–
ಎಲ್ಲಕ್ಕೂ ಮೊದಲಿಗನಾದ ಶ್ರೀಮನ್ಮಹಾದೇವನು ಹುಟ್ಟುವುದೂಇಲ್ಲ. ಸಾಯುವು
ದೂ ಇಲ್ಲ. ||೬೦|| ನೀರನ್ನು ತುಂಬಿದ ಹಲವುಗಡಿಗೆಗಳಲ್ಲಿ ಪ್ರತಿಬಿಂಬಿಸಿರುವ
ಚಂದ್ರನು ಆ ಗಡಿಗೆಗಳು ಒಡೆದುಹೋದರೆ ತಾನೂ ನಾಶಗೊಳ್ಳುವನೆ ? ಗಡಿಗೆಯ
ಮಧ್ಯದಲ್ಲಿರುವ ಆಕಾಶವು ಆಗಡಿಗೆಯೊಡೆದು ಹೋದಬಳಿಕ ತಾನೂ ನಾಶಗೊಳ್ಳುವು
ದೆ ? ಕನ್ನಡಿಯಲ್ಲಿ ತೋರುವ ದೇಹವು, ಆ ಕನ್ನಡಿಯ ಮೆರುಗು ಅಳಿದುಹೋದಮಾ
ತ್ರದಿಂದ ತಾನೂ ಅಳಿದು ಹೋಗುವುದೆ ? ಅದರಂತೆಯೇ ಸಕಲ ಭೂತಗಳ ಮಧ್ಯ
ದಲ್ಲೂ ಆತ್ಮಸ್ವರೂಪನಾಗಿರುವ ಮಹೇಶ್ವರನು ಆ ಭೂತಗಳೆಲ್ಲಾ ನಾಶವಾಗಿ ಹೋ
ದರೆ ತಾನೂ ನಾಶವಾಗುವುದುಂಟೆ ? ||೬೩|| ಪಾತ್ರದಲ್ಲಿರುವ ನೀರು ಗಾಳಿಯಿಂದ
ಅಳ್ಳಾಡಲಾಗಿ, ಚಂದ್ರನು ತಾನು ಹೇಗೆ ಅಳ್ಳಾಡುವುದಿಲ್ಲವೋ ಹಾಗೆ ಜನನ ಮರಣ
ಮುಪ್ಪು ಮೊದಲಾದುವುಗಳಿಂದ ತರಹರಿಸುತ್ತಿರುವ ಪ್ರಾಣಿಗಳಲ್ಲಿರುವ ಈಶ್ವರನು
ತಾನು ಹೇಗೆ ಚಲಿಸಾಡುವನು? ಜೀವಕೋಟಿಗಳು ಅನುಭವಿಸತಕ್ಕ ದುರವಸ್ಥೆಗಳಲ್ಲ
ಮಹೇಶ್ವರನನ್ನು ಅವು ಹೇಗೆ ಹೊಂದುವುವು ? ||೬೫|| ಅದುಕಾರಣ ಶಿವನು ಜೀವ
ಗುಣಗಳಿಂದ ಸೋಂಕಲ್ಪಡಲಾರನು. ಆದುದರಿಂದ ಚೆನ್ನಾಗಿ ವಿಚಾರಮಾಡಿ ನೋ
ಡದರೆ ಶಿವನು ಜೀವನಾಗಲಾರನು. ಜೀವನು ಜೀವರುಗಳೇ ಶಿವನು ಶಿವನೇ ||೬೬||
ಯಾವಾಗಲೂ ಶಿವನು ಸ್ವಾಮಿಯು, ನಾವು ಸೇವಕರು, ಎಂಬ ಭಾವನೆಯಿಂದ ||೬೭||

ತಾನಾಂನಿರ್ಮಲಾತ್ಮನಾಂ । ಸಮ್ಯಗ್ಜ್ಞಾನಾಂಬುಕುಂಭೇಷುಶಿವೇಂದುಃ
ಪ್ರತಿಬಿಂಬತಿ॥೧೮॥ ಪರ್ಯಾಕುಲೇಸತಿಜಲೇಚಂದ್ರಸ್ಯವ್ಯಕ್ತಿಃಕಿಂಸಮಾಕು
ಲಃ । ತಥಾಽಽಕುಲಮನಸ್ಕೇಷುಶಿವಸ್ಯವ್ಯಕ್ತಿಃಕಿಂಸಮಾಕುಲಃ ॥೧೯॥ ಯ
ಥಾನಭಾಸತೇಸಮ್ಯಕ್ಚಂದ್ರಮಾಮಲಿನೋದಕೇ! ತಥಾಮಲಿನದೇಹೇಷು
ಶಂಕರೋನಪ್ರಕಾಶತೇ ॥೨೦॥ ಯಥಾದರ್ಪಣಮಿತ್ಯೇತನ್ನಾಮಾತ್ರಾನ್ಮಲಿನ
ದರ್ಪಣೇ। ಛಾಯಾನದೃಶ್ಯತೇತದ್ವನ್ಮಹಾದೇವಸ್ಸನಾತನಃ ॥೨೧॥ ಜ್ಞಾನೀ
ತ್ಯೇತಾವತಾಭಕ್ತಿವಿಹೀನೇಕಿಮುದೃಶ್ಯತೇ । ಶೃಣುಜ್ಞಾನಾದೇವಮೋಕ್ಷ
ಇತ್ಯುಕ್ತ್ಯೈವಮೋಕ್ಷಸತ್ಪದಂ ॥೨೨॥ ನಹಿಸಿದ್ಧ್ಯತಿಸದ್ಭಕ್ತಿಹೀನಾನಾಂಪಾ
ಪಕರ್ಮಣಾಂ । ಮದಾಜ್ಞಾಸಮಾನಯಮಿತಿಸ್ವಸೇವಾಗಹಿತಂನರಂ ॥೨೩॥
ಪರಿರಕ್ಷತಿಕಿಂರಾಜಾಲೋಕೇತ್ವಂಕಥಯಾಧುನಾ । ಗಜಾಶ್ವಶಾಸ್ತ್ರವಿಜ್ಞಾ
ನಮಾತ್ರಾದ್ಗಜತುರಂಗಮಂ ॥೨೪॥ ಆರೋಢುಂಶಕ್ಯತೇಽನ್ಯೈಃಕಿಂತದಾ
ರೋಹಕ್ಷಮೈರಿವ । ತತ್ಸರ್ವಾದ್ವೈತವಿಜ್ಞಾನಂಮುಕ್ತಿಮೂಲಂಕಥಂಭ

---

ಕೂಡಿರುವವರೂ ಸದಾಚಾರಮಾರ್ಗ ತತ್ಪರರೂ, ನಿರ್ಮಲಾತ್ಮರೂ ಆದವರ ಸಮ್ಯಗ್
ಜ್ಞಾನವೆಂಬ ಜಲಪೂರ್ಣ ಘಟದಲ್ಲಿ ಈಶಿವನೆಂಬ ಚಂದ್ರನು ಪ್ರತಿಬಿಂಬಿಸುತ್ತಾನೆ ॥೧೮॥
ಗಡಿಗೆಯಲ್ಲಿ ತುಂಬಿದ ನೀರು ಅಲ್ಲಾಡಿದರೆ ಚಂದ್ರನು ಅಲ್ಲಾಡುವುದುಂಟೇ ? ಅ
ದರಂತೆಯೇ ಜನರು ವ್ಯಾಕುಲಿತಮನಸ್ಕರಾದರೆ ಶಿವನೂ ವ್ಯಾಕುಲಿತನಾಗುವುದುಂ
ಟೇ ? ॥೧೯॥ ಬಗ್ಗಡವಾದ ನೀರಿನಲ್ಲಿ ಚಂದ್ರನು ಚೆನ್ನಾಗಿ ಪ್ರತಿಫಲಿಸಿ ಹೇಗೆ ತೋ
ರಲಾರನೋ ಹಾಗೆಯೇ ಮಲಿನಾತ್ಮರದೇಹದಲ್ಲಿ ಶಿವನೂ ಪ್ರಕಾಶಿಸಿ ತೋರುವುದಿ
ಲ್ಲ ॥೨೦॥ ಕನ್ನಡಿಯೆಂದು ಹೆಸರಿದ್ದ ಮಾತ್ರದಿಂದಲೇ ಮೆರುಗು ಅಳಿದು ಮಸಕಾಗಿ
ರುವ ಕನ್ನಡಿಯಲ್ಲಿ ಪ್ರತಿಬಿಂಬವು ಹೇಗೆ ತೋರುವುದಿಲ್ಲವೋ ಹಾಗೆ ಪುರಾತನನಾದ
ಮಹೇಶ್ವರನು ॥೨೧॥ ಜ್ಞಾನಿಯೆಂಬ ಹೆಸರಿದ್ದ ಮಾತ್ರದಿಂದಲೇ ಭಕ್ತಿರಹಿತನಾಗಿದ್ದ
ಮನುಷ್ಯನಲ್ಲಿ ಗೋಚರನಾಗುವನೆ ? ಎಲೆ ವಾದಿಯೆ ಕೇಳು — ಕೇವಲಜ್ಞಾನದಿಂದ
ಲೇ ಮೋಕ್ಷವುಂಟಾಗುವುದು ಎಂಬ ವಚನವಿದ್ದ ಮಾತ್ರದಿಂದಲೇ ಭಕ್ತಿಹೀನರೂ
ಪಾಪಕರ್ಮಿಗಳೂ ಆದ ಜನರಿಗೆ ಮುಕ್ತಿಪದವಿಯು ಸಿದ್ಧಿಸಲಾರದು. ಲೋಕದಲ್ಲಿ ತ
ನ್ನನ್ನು ಅರಿತವನಾಗಿರುವನೆಂಬ ಕಾರಣದಿಂದಲೇ ತನ್ನ ಸೇವೆಯನ್ನು ಮಾಡದಿರುವ
ಮನುಷ್ಯನನ್ನು ॥೨೩॥ ದೊರೆಯು ಪರಿಪಾಲಿಸುವದುಂಟೆ? ನೀನೇ ಹೇಳು. ಆನೆ
ಕುದುರೆಗಳ ಲಕ್ಷಣ ಆರೋಹಣ ಮೊದಲಾದ ಕ್ರಮಗಳನ್ನು ಹೇಳುವ ಶಾಸ್ತ್ರಗಳ
ನ್ನು ಓದಿ ತಿಳಿದುಕೊಂಡಿದ್ದ ಮಾತ್ರದಿಂದಲೇ, ಆ ಆನೆ ಕುದುರೆಗಳನ್ನು ಹತ್ತಿ ಸ್ವಾರಿ
ಮಾಡಿದ ಅನುಭವವುಳ್ಳವರಂತೆ ಗಜಾಶ್ವಶಾಸ್ತ್ರಜ್ಞರು ಅವುಗಳನ್ನು ಹತ್ತಿ ಸ್ವಾರಿಮಾಡ

ವೇತ್ ॥೩೫॥ ಅಖಿಲಂಶಿವಇತ್ಯುಕ್ತಿರ್ಮದಾದ್ಜ್ಞಾನಫಲಂನುಕಿಂ । ಸರ್ವಭೂತಾಂತರಸ್ಥತ್ವಾದಪಶ್ಯಂಶಿವಮಾತ್ಮನಿ ॥೩೬॥ ಇತಿವಕ್ತುರ್ದುಷ್ಟಮಾತ್ರಾದ್ಭವೇತ್ಕಿಂಮುಕ್ತಿರುತ್ತಮಾ । ಅನುಪಾಸ್ಯಶಿವಂಜ್ಞಾನಮಾತ್ರಾದ್ಯೋಗೀಕಥಂಭವೇತ್ ॥೩೭॥ ಜ್ಞಾನವೈರಾಗ್ಯಸತ್ಕರ್ಮನಿಷ್ಠಾಭಿಃಪರಿವರ್ಜಿತಃ । ಯೋಗಃಕುತಸ್ತ್ಯೋಜಗತಿತ್ವಮೇವಪರಿಭಾವಯ ॥೩೮॥ ಪರಿಜ್ಞಾಯಪರಿಜ್ಞಾಯಸತ್ಕ್ರಿಯಾಪರಿವರ್ಜಿತಃ । ಪತಿತೋಯೋಗಸಂಪನ್ನೋಭವೇತ್ಕಥಮನಿಂದಿತಃ ॥೩೯॥ ಅನಿಗೃಹ್ಯಸ್ವಮಾತ್ಮಾನಮಾಧಾರಂಸರ್ವಕರ್ಮಣಾಂ । ಸತ್ಕರ್ಮಾಣಿಪರಿತ್ಯಕ್ತುಮುಚಿತಂಕಿಮುಭೂತಲೇ ॥೪೦॥ ಯೋಗೀತಿಸತ್ಕ್ರಿಯಾಸ್ತ್ಯಕ್ತ್ವಾವಿಷಯಾನ್ಯೋನಮುಂಚತಿ । ಅವಿನೀತೋಯುಕ್ತಿಶೂನ್ಯೋರಾಗಾಂಧೋನಾಸ್ತಿಕಸ್ಸಹಿ ॥೪೧॥ ಸಯೋಗೀಸ್ಯಾತ್ಕಥಂಮುಕ್ತಿವಿಯೋಗೀತ್ಯೇವಕಥ್ಯತೇ । ಸ್ವಂನಜಾನಾತಿಯೋಗೀಯಸ್ಸಜಾನಾತಿಮಹೇಶ್ವರಂ ॥೪೨॥ ಆತ್ಮಾನಂವೇತ್ತಿಯಸ್ಸವ್ಯಗೀಶ್ವರಂಸನಪ

---

ಬಲ್ಲರೆ? ಅದುಕಾರಣ, ಅಖಂಡಾದ್ವೈತ ಜ್ಞಾನವು ಮೋಕ್ಷಕ್ಕೆ ಹೇಗೆ ಸಾಧಕವಾಗುವುದು? ॥೩೫॥ ಸರ್ವತ್ರ ಶಿವನೇ ಎಂದು ಅಹಂಕಾರದಿಂದ ನುಡಿಯುವುದೇ ಜ್ಞಾನಕ್ಕೆ ಫಲವೊ? ॥ ಶಿವನು ಸಕಲಪ್ರಾಣಿಗಳ ಮಧ್ಯದಲ್ಲೂ ಇರುವನಾದ ಕಾರಣ ಆತನನ್ನು ತನ್ನಲ್ಲೇ ಕಂಡೆನು " ಎಂದು ಹೇಳತಕ್ಕವನಿಗೆ, ಆ ಶಿವನನ್ನು ಕಂಡೆನೆಂದ ಮಾತ್ರದಿಂದಲೇ ಉತ್ಕೃಷ್ಟವಾದ ಮುಕ್ತಿಯು ದೊರಕೊಳ್ಳುವುದೆ! ॥೩೬॥ ಶಿವನನ್ನು ಉಪಾಸನೆಮಾಡದೆ ಕೇವಲಜ್ಞಾನಮಾತ್ರದಿಂದಲೇ ಅದು ಹೇಗೆ ಶಿವಯೋಗಿಯಾಗುವನು ? ॥೩೭॥ ಜಗತ್ತಿನಲ್ಲಿ ಜ್ಞಾನವೈರಾಗ್ಯಸತ್ಕರ್ಮಾಚರಣಗಳಿಲ್ಲದ ಯೋಗವು ಏತರದು? ನೀನೇ ಆಲೋಚಿಸಿ ನೋಡು ॥೩೮॥ ತಿಳಿದೂ ತಿಳಿದು ಸತ್ಕರ್ಮಾಚರಣೆಯನ್ನು ಬಿಟ್ಟು ಭ್ರಷ್ಟನಾದವನು ಅದು ಹೇಗೆ ನಿರ್ದುಷ್ಟಯೋಗಿಯೆನಿಸಿಕೊಳ್ಳುವನು? ॥೩೯॥ ಭೂಮಿಯಲ್ಲಿ ಸರ್ವಕರ್ಮಾಚರಣೆಗೂ ಆಶ್ರಯನಾದ ತನ್ನನ್ನು ತಾನು ನಿಗ್ರಹಿಸದೆ, ಸತ್ಕರ್ಮಾಚರಣೆಯನ್ನು ಬಿಟ್ಟುಬಿಡುವುದು ಯೋಗ್ಯವಾದುದೆ? ॥೪೦॥ ತಾನು ಯೋಗಸಂಪನ್ನನಾಗಿದ್ದೇನೆಂದು ಹೇಳಿಕೊಂಡು ಸತ್ಕರ್ಮಾಚರಣೆಯನ್ನು ಪರಿತ್ಯಜಿಸಿ ಸ್ರಕ್ಚಂದನಾದಿ ವಿಷಯಗಳನ್ನು ಯಾವನು ದೂರೀಕರಿಸುವುದಿಲ್ಲವೋ ಅವನು ನೀತಿಭ್ರಷ್ಟನೂ ಮುಕ್ತಿಸಾಧಕೋಪಾಯರಹಿತನೂ ಮೋಹಾಂಧನೂ ನಾಸ್ತಿಕನೂ ಆಗಿರುವನಲ್ಲವೆ?॥೪೧॥ ಅಂಥವನು ಯೋಗಿಯೆನ್ನಿಸಿಕೊಳ್ಳುವುದು ಹೇಗೆ? ಮುಕ್ತಿವಿಯೋಗಿ (ಮೋಕ್ಷಕ್ಕೆ ದೂರ) ನೆಂದೇ ಹೇಳಿಸಿಕೊಳ್ಳುವನು. ಯಾವ ಯೋಗಿಯು ತನ್ನನ್ನೇ ಶಿವನೆಂದು ತಿಳಿವುದಿಲ್ಲವೋ ಅವನು ಈಶ್ವರನನ್ನು ಅರಿಯುತ್ತಾನೆ. ॥೪೨॥ ಯಾವನು ತನ್ನನ್ನೇ ಶಿವನೆ

ಶ್ರುತಿ । ಜ್ಞಾನೀ ಸ ಸಕಲಂತ್ಯಕ್ತ್ವಾವಿಷಯಭ್ರಾಂತಿವರ್ಜಿತಃ॥೮೩॥ ಅಹಮಿತ್ಯುರುಗರ್ವೋತ್ಥಮದವೃತ್ತಿಪರಾಙ್ಮುಖಃ । ಶಿವೈಕ್ಯಸೌಖ್ಯಸಂಜಾತಮಹಾನಂದೈಕನಿಶ್ಚಲಃ ॥೮೪॥ ಆತ್ಮವಿಸ್ಮೃತಿಪರ್ಯಂತಮಾಕ್ಷಯಂನಿಜಕರ್ಮಣಾಂ । ಯೋವಿಮುಂಚತಿಕರ್ಮಾಣಿತಂತನೋತ್ಯಂತಕೋವಶಂ ॥ ತವ್ಯಃಕ್ರಿಯಾಫಲಾಕಾಂಕ್ಷಾಂಮುಕ್ತ್ವಾನಾಚರತಿಕ್ರಿಯಾಃ । ನಸಿದ್ಧ್ಯೇಚ್ಛಿವಯೋಗಸ್ಯ ಸಂಪತ್ತಸ್ಯನಿರುತ್ತರಾ ॥೮೬॥ ಅಹಂಕಾರಪರೋಯೋಗೀಪುಣ್ಯಪಾಪಾತಿಗಃಕಥಂ । ಅತಿದುರ್ವಿಷಯಾಸಕ್ತೋಯೋಗೀಭೂಮಾವಹರ್ನಿಶಂ ॥೮೭॥ ಭವೇದ್ವಿಧಿನಿಷೇಧಾಖ್ಯಕ್ರಿಯಾವಿರಹಿತಃಕಥಂ । ಸುಖದುಃಖಾನ್ವಿತೋಯೋಗೀಸಚ್ಚಿದಾನಂದವಾನ್ಕಥಂ ॥೮೮॥ ಶಿವಭಕ್ತ್ಯಾವಿರಹಿತೋಯೋಗಾಸಕ್ತಸ್ತುಕೇವಲಂ । ಭವಪಾಶಾನ್ಸಮುಚ್ಛೇತ್ತುಂಕಥಂಸಾಮರ್ಥ್ಯವಾನ್ಭವೇತ್ ॥೮೯॥ ಮಹತಾಕಾಲಪಾಶೇನ ಯೋಗೀಸಂವೃತಕಂಧರಃ । ಕಾಲಮೃತ್ಯೋರ್ಹಿವಿಜಯೇಧೀರೋಭವತಿಕಿಂಕ್ಷಿತೌ ॥೯೦॥ ಯೋಗೀಸಂಸಾರಾಮಯೋದ್ಯದ್ದುಃಖಾನುಭವಪೀಡಿ

---

ದ ತಿಳಿಯುತ್ತಾನೋ ಅವನು ಚೆನ್ನಾಗಿ ಈಶ್ವರನನ್ನ ಅರಿವುದಿಲ್ಲ. ಶಿವಜ್ಞಾನಸಂಪನ್ನನಾಗಿ ವಿಷಯಸಂಗಪರಿತ್ಯಾಗಮಾಡಿ ವೈರಾಗ್ಯಗೊಂಡು ॥೮೩॥ ನಾನೇ ಶಿವನೆಂದು ಹೇಳುವ ಅಹಂಕಾರಾಚರಣೆಗೊಳ್ಳದೆ ಇರತಕ್ಕವನಾಗಿ, ಶಿವಸಾಮರಸ್ಯ ಸೌಖ್ಯದಿಂದುಂಟಾದ ಅವಿರಳಾನಂದದಲ್ಲಿ ಮುಳುಗಿ ನಿಶ್ಚಲನಾಗಿದ್ದುಕೊಂಡು ತನ್ನನ್ನು ತಾನು ಮರೆವವರೆಗೂ ತನ್ನ ಕರ್ಮವು ತಾನಾಗಿ ಕ್ಷಯಿಸುವವರೆಗೂ, ಸತ್ಕರ್ಮಾಚರಣೆಯನ್ನು ಮಾಡದೆ ಯಾವನು ಬಿಡುವನೋ ಅವನನ್ನು ಯಮನು ತನ್ನಧೀನಮಾಡಿಕೊಳ್ಳುತ್ತಾನೆ. ॥೮೫॥ ಅದುಕಾರಣ, ಕರ್ಮಫಲದ ಅಪೇಕ್ಷೆಯನ್ನು ಬಿಟ್ಟು, ಸತ್ಕರ್ಮಾಚರಣವನ್ನು ಯಾವನು ಮಾಡುವುದಿಲ್ಲವೋ ಅಂಥವನಿಗೆ ಎಲ್ಲಕ್ಕೂ ಮೇಲಾದ ಶಿವಯೋಗಸಂಪತ್ತಿಯು ಸಿದ್ಧಿಸುವುದಿಲ್ಲ ॥೮೬॥ ತಾನು ಎಂಬ ಅಹಂಕಾರದಿಂದ ಬೆರೆದ ಯೋಗಿಯು ಪುಣ್ಯ ಪಾಪ ಸಂಬಂಧವನ್ನು ಅದು ಹೇಗೆ ಮೀರಿರುವನು ? ಭೂಮಿಯಲ್ಲಿ ಹಗಲೂರಾತ್ರಿ ಅತ್ಯಂತವಾಗಿ ವಿಷಯಾಸಕ್ತಿಯಿಂದ ಕೂಡಿದ ಯೋಗಿಯು ವಿಧಿನಿಷೇಧಕರ್ಮಗಳಿಲ್ಲದಾತನು ಹೇಗಾಗುವನು? ಸುಖದುಃಖಗಳಿಂದ ಕೂಡಿದ ಯೋಗಿಯು ಸಚ್ಚಿದಾನಂದಸ್ವರೂಪನು ಹೇಗಾಗುವನು? ॥೮೮॥ ಶಿವಭಕ್ತಿಯಿಲ್ಲದೆ ಕೇವಲ ಯೋಗಾಭ್ಯಾಸತತ್ಪರನಾದ ಮನುಷ್ಯನು ಜನನ ಮರಣಾತ್ಮಕಭವಪಾಶವನ್ನು ಕತ್ತರಿಸುವುದಕ್ಕೆ ಹೇಗೆ ಸಮರ್ಥನಾಗುವನು? ॥೮೯॥ ಯಮನ ದೊಡ್ಡ ಪಾಶವು ಕೊರಲಿಗೆ ಸುತ್ತುಕೊಂಡಿರುವ ಯೋಗಿಯು ಆ ಯಮನನ್ನೂ ಮೃತ್ಯುವನ್ನೂ ಗೆಲ್ಲುವುದಕ್ಕೆ ಸಮ

ತಃ। ಶಿವಯೋಗಸಮಾಯಾತಪುಣ್ಯಪೂರ್ಣೋಭವೇತ್ಕಥಂ ॥ ಸಕಿಂದುರು
ಕ್ತಂರಾಗಾದಿಯುತೋಯೋಗೀತಿಭಾಷಿತಂ ।ತಸ್ಮಾತ್ತ್ವಂಸಾಂಖ್ಯಯೋ
ಗಾನುರಕ್ತ್ಯಾವಿಭ್ರಾಂತಮಾನಸಃ ॥೯೨॥ ಅಹಮೇವೇಶ್ವರಇತಿಬ್ರೂಷೇ

---

ರ್ಣನಾಗುವನೇ? ॥೯೦॥ ಭವರೋಗದ ಮಹಾದುಃಖದಿಂದ ಪೀಡಿತನಾಗಿರುವ ಯೋ
ಗಿಯು ಶಿವಯೋಗಾಚರಣೆಯಿಂದ ಲಭಿಸುವ ಪುಣ್ಯಫಲವನ್ನು ಹೇಗೆ ಹೊಂದುವ
ನು? ॥೯೧॥ ವಿಷಯಾಸಕ್ತಿಯಿಂದ ಕೂಡಿದವನು ತಾನು ಯೋಗಿಯೆಂದು ಹೇಳಿಕೊ
ಳ್ಳುವುದು ಕೆಟ್ಟಮಾತಲ್ಲವೆ ? (ಎಂದರೆ-ಕೇವಲ ಮಂತ್ರ ಹಠ ಲಂಬಿಕಾದಿ ಯೋಗಂಗಳ
ನ್ನಭ್ಯಾಸಿಸುತ್ತ, ನಾನೇ ಶಿವನಾಗಿರುವೆನೆಂದು ಬಾಯಲ್ಲಿ ಅಹಂಕಾರವಚನವನ್ನಾಡು
ತ್ತ, ರಾಗದ್ವೇಷಾದಿಗಳೊಂದನ್ನೂ ಬಿಡದೆ, ದೇಹೇಂದ್ರಿಯವನ್ನೂ ಪ್ರಾಣಾದಿಗಳ
ನ್ನೂ ತನ್ನನ್ನೂ ತಾನು ಮರೆಯದೆ, ಮಾಯಾಪ್ರಪಂಚದಲ್ಲಿ ಸಿಲ್ಕಿ ಫಲಕಾಂಕ್ಷೆಯಿಂ
ದ ತೊಳಲುತ್ತಿರುವ ಯೋಗಿಯು ನಿಜಮುಕ್ತಿಯನ್ನು ಪಡೆಯಲಾರನು. ದೇಹೇಂ
ದ್ರಿಯಾದಿವಾಸನೆಯಳಿದು ಸರ್ವದೇವಾಧಿದೇವನಾದ ಶಿವನೊಬ್ಬನಲ್ಲಿ ಭಕ್ತ್ಯಾಚರಣೆ
ಗೊಂಡು, ಜ್ಞಾನವೈರಾಗ್ಯಸಂಪನ್ನನಾಗಿರುತ್ತಿರುವ ಶಿವಯೋಗಿಗೆ ದೇಹೇಂದ್ರಿಯಾದಿ
ಕರ್ಮಗಳಿಲ್ಲವೂ ದಗ್ಧಪಟದಂತೆಯೂ ಭ್ರಷ್ಟಬೀಜದಂತೆಯೂ ತೋರಿಕೆಗೆ ಮಾತ್ರನಾ
ಗಿರುತ್ತ ತಮ್ಮಷ್ಟಿಗೆ ತಾವೇ ಅಳಿದು ಹೋಗುವುವಾದ ಕಾರಣ, ಅಂತಪ್ಪ ಭಕ್ತಿ
ಸಂಪನ್ನಶಿವಜ್ಞಾನಿಗಳಿಗೆ ವಿಜ್ಞಾನಕೈವಲ್ಯವು ಕರತಲಾಮಲಕವಾಗಿರುತ್ತಿರುವುದೇ ಹೊ
ರತು ಇತರರಿಗೆ ಅದು ದುರ್ಲಭವೆಂದು ಭಾವವು. ಕ್ರಿಯೆಯಿಲ್ಲದ ಕೇವಲಜ್ಞಾನ
ದಿಂದಲೇ ಆಗಲಿ, ಜ್ಞಾನವಿಲ್ಲದ ಕೇವಲಕ್ರಿಯೆಯಿಂದಲೇ ಆಗಲಿ ಕೈವಲ್ಯಲಾಭವಿಲ್ಲ
ವೆಂಬುದು ಸಿದ್ಧಾಂತವು. ಎಂದರೆ-ಶಿವಸ್ವರೂಪವನ್ನರಿಯದೆ ಶಿವಸೇವೆಯನ್ನು ಮಾ
ಡುವುದು ವ್ಯರ್ಥ. ಮತ್ತೂ ದೂರದಲ್ಲಿ ಶಿವಸ್ವರೂಪವನ್ನು ಮಾತ್ರ ತಿಳಿದುಕೊಂ
ಡು ಆತನ ಸೇವೆಯನ್ನು ಮಾಡದಿರುವುದೂ ವ್ಯರ್ಥವೆಂದು ಭಾವ. ಪಕ್ಷಿಗೆ ಅಂತರಿ
ಕ್ಷದಲ್ಲಿ ಹಾರುವುದಕ್ಕೆ ಎರಡುರಕ್ಕೆಗಳೂ ಹೇಗೆ ಅವಶ್ಯಕವೋ ಹಾಗೆ ಮಾನವ
ನು ಮುಕ್ತನಾಗುವದಕ್ಕೆ ಕರ್ಮ ಜ್ಞಾನಗಳೆರಡೂ ಅತ್ಯಾವಶ್ಯಕವಾಗಿರುವುವು. ಅ
ದು ಕಾರಣ, ಸತ್ಕ್ರಿಯಾಸಂಪನ್ನವಾದ ಶಿವಜ್ಞಾನವಂ ಕೂಡಿ ಶಿವಾರಾಧನೆಯನ್ನು ಯಾ
ರು ಮಾಡುವರೋ ಅವರಿಗೆ ಮೋಕ್ಷವು ಕರತಲಾಮಲಕವಾಗಿರುವುದು. ಅದ
ನ್ನರಿಯದೆ ಬರಿಯ ಜ್ಞಾನದಿಂದಲೇ ಮುಕ್ತಿಲಾಭವಾಗುವುದೆಂದು ಹೇಳುವ ಸಾಂಖ್ಯ
ರಿಗೆ ಮುಕ್ತಿಪ್ರಾಪ್ತಿಯು ಮೊಲದ ಕೊಂಬಿನಂತೆ ದುರ್ಲಭವೆಂದು ಭಾವವು.) ಅದು
ಕಾರಣ, ಎಲೆ ವಾಯುವೆ ನೀನು ಸಾಂಖ್ಯಯೋಗದಿಂದ ಮೋಕ್ಷವಾಗುವುದೆಂದು ಬರಿ
ಯ ಭ್ರಮೆಗೊಂಡವನಾಗಿ, ನಾನೇ ಬ್ರಹ್ಮನಾಗಿರುವೆನೆಂದು ಅವಿವೇಕದಿಂದ ನುಡಿವೆ

ಯದ್ಯವಿವೇಕತಃ ।ನಿರ್ಬುದ್ಧೇಸಾಂಖ್ಯತವಚಚಾರ್ವಾಕಸ್ಯಚವೀಕ್ಷಿತೇ॥
ಭೇದೋನಾಸ್ತಿತತಸ್ಸಾಂಖ್ಯೋನತ್ವಂಚಾರ್ವಾಕಏವಹಿ ॥

ಇತ್ಯಸಂಖ್ಯಾತಮಹಾಮಾಹೇಶ್ವರ..................ಶ್ರೀವೀರಶೈವ
ಮತಾಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ
ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೇ ವಾದಪ್ರಕ
ರಣೇ ಸಾಂಖ್ಯವಾದನಿರಾಸಕಥನಂ ನಾಮ
ಷಷ್ಠೋಽಧ್ಯಾಯಃ.

---

ಅಥಸಪ್ತಮೋಽಧ್ಯಾಯಃ.

(ಚಾರ್ವಾಕವಾದ ನಿರಸನಂ)

ವಿರುದ್ಧವರ್ತಿನ್ವೇದಾನಾಂಚಾರ್ವಾಕತ್ವನ್ಮತಂಶೃಣು । ಆತ್ಮಾಮ
ತೋಽದೇಹಏವ ದೇಹಾದಾತ್ಮಾಪೃಥಙ್ನಹಿ ॥೧॥ ದೇಹೈಕದೇಶೇಭಿನ್ನೇಽಕಿ
ಮಾತ್ಮಾದೃಷ್ಟಃಪೃಥಕ್ತನೋಃ । ಗೌರೋಽಹಂಶ್ಯಾಮೋಽಹ ಮಹಂ

---

ಯಾದರೆ, ಎಲೈ ಮತಿಹೀನನಾದಸಾಂಖ್ಯನೆ, ವಿಚಾರಮಾಡಿ ನೋಡಿದರೆ, ನಿನಗೂ ಚಾ
ರ್ವಾಕನಿಗೂ ಏನೂ ಭೇದ ತೋರುವುದಿಲ್ಲ ॥೯೩॥ ಅದುಕಾರಣ, ನೀನು ಸಾಂಖ್ಯನಲ್ಲ;
ಚಾರ್ವಾಕನೇ ಸರಿ.

ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿದರೆಂಬಿಲ್ಲಿಗೆ ಪಂ
ಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ
"ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣಿದಲ್ಲಿ ವಾದ
ಪ್ರಕರಣದೊಳಗೆ ಸಾಂಖ್ಯವಾದ ಖಂಡನವನ್ನು
ನಿರೂಪಿಸುವ ೬ ನೆಯ ಅಧ್ಯಾಯವು
ಮುಗಿದುದು.

---

## ೭ ನೆಯ ಅಧ್ಯಾಯವು.

(ಚಾರ್ವಾಕವಾದಖಂಡನವು.)

ವೇದವಚನಗಳಿಗೆ ವಿರುದ್ಧವಾಗಿ ಆಚರಿಸುವ ಎಲೆ ಚಾರ್ವಾಕನೆ, ನಿನ್ನ ಮತ
ಲಕ್ಷಣವನ್ನು ಕೇಳು— "ದೇಹವೇ ಆತ್ಮನು, ದೇಹಕ್ಕಿಂತಲೂ ಆತ್ಮನು ಭಿನ್ನನಲ್ಲ.
ದೇಹವನ್ನು ಕೊರೆದು ಕತ್ತರಿಸಿನೋಡಿದರೂ, ಆತ್ಮನು ಬೇರೆಯಾಗಿ ಕಾಣಿಸಿಕೊಳ್ಳು

ದೀರ್ಘೋರ್ಧ್ವಹ್ರಸ್ವೋಹಮಿತ್ಯತಃ ॥೨॥ ಸಾಮಾನಾಧಿಕರಣ್ಯಾಚ್ಚ ಭೇದೋನಾಸ್ತ್ಯಾತ್ಮದೇಹಯೋಃ। ಉತ್ಪದ್ಯತೇಭೂಜಲಾಗ್ನಿಮರುತಾಂ ಪರಮಾಣುಭಿಃ ॥೩॥ ದೇಹೋಭಸ್ಮೀಕೃತೇತಸ್ಮಿನ್ನೈವಾಸ್ತಿಪುನರುದ್ಭವಃ। ತಸ್ಮಾನ್ಮರಣಮೇವಸ್ಯಾ ದಪವರ್ಗೋನೃಣಾಂಪುನಃ ॥೪॥ ಸಂತಿದೃಷ್ಟಾನಿವಸ್ತೂನಿ ತ್ವದೃಷ್ಟಾನಿನಸಂತಿಹಿ । ಸುಖಮೇವಮಹಾನ್ಸ್ವರ್ಗೋ ನರಕೋದುಃಖನೇವಹಿ ॥೫॥ ನಾಸ್ತ್ಯನ್ಯಃಪರಲೋಕೋಽಸ್ಮಾತ್ಪುಣ್ಯಂ ಪಾಪಂಚನೋಭಯಂ। ಮಿಥ್ಯಾಜಗತ್ತದುತ್ಪತ್ತಿಕರ್ತಾನಾಸ್ತಿಮಹೇಶ್ವರಃ॥ ದೈವತಂನಾಮಕಿಮಪಿನಾಸ್ತಿ ಮೋಕ್ಷಫಲಪ್ರದಂ । ಇತಿಬ್ರುವೀಷಿಚೇದ್ವೇದವಿರುದ್ಧ ವಿಬುಧಾಹಿತ ॥೭॥ ಚಾರ್ವಾಕಾಹಂಪ್ರವಕ್ಷ್ಯಾಮಿ ಸಮ್ಯಗಾಕರ್ಣಯೋತ್ತರಂ। ಶರೀರಮೇವಯದ್ಯಾತ್ಮಾಭವೇತ್ತ್ವಂಭಣನಾಸ್ತಿಕ ॥೮॥ ತಿಷ್ಠೇತಾಂಕಿಂಜಡೇಭೂತ್ವಾ ಶವಸುಪ್ತತನೂಕ್ಷಿತೌ । ಯದಿಬ್ರೂಷೇಸುಪ್ತಮೃತ ತನ್ವೋರಸ್ತೀತಿಚಾಂತರಂ ॥೯॥ ತದಾಽಽತ್ಮಾದೇ

---

ವುದುಂಟೆ ? ನಾನು ಬೆಳ್ಳಗಿರುವವನು, ನಾನು ಕಪ್ಪಾದವನು, ನಾನು ಉದ್ದನಾದವನು, ನಾನು ಕುಳ್ಳನು, ಎಂದು ಹೇಳುವ ಸಂದರ್ಭದಲ್ಲಿ ದೇಹಾಭಿನ್ನನಾದ ಆತ್ಮನೇ ಅಂತಪ್ಪ ವಾಗ್ವ್ಯವಹಾರಕ್ಕೆ ವಿಷಯೀಭೂತನಾಗಿರುವ ಕಾರಣ, ಆತ್ಮನಿಗೂ ದೇಹಕ್ಕೂ ಭೇದವೇ ಇಲ್ಲ. ದೇಹವು ಪೃಥಿವಿ ಅಪ್ಪು ಅಗ್ನಿ ವಾಯುಗಳ ಪರಮಾಣುಗಳಿಂದ ಕೂಡಿ ಉತ್ಪನ್ನವಾಗಿರುತ್ತದೆ ॥೩॥ ಎಲೆ ಅಡಿಕೆ ಸುಣ್ಣಗಳ ಸಂಯೋಗದಿಂದ ಕೆಂಪು ಹುಟ್ಟುವಂತೆ ಭೂತಸಂಯೋಗ ವಿಕಾರವೇ ಚೈತನ್ಯವಾಗಿರುವುದು. ಅಂಥ ದೇಹವು ಸುಡಲ್ಪಟ್ಟರೆ ಪುನರ್ಜನ್ಮವೆಂಬುದೇ ಇಲ್ಲ. ಅದು ಕಾರಣ, ಮನುಷ್ಯರಿಗೆ ಮರಣವೇ ಮೋಕ್ಷವಾಗಿರುವುದು. ಕಣ್ಣಿಗೆ ಕಾಣಿಸತಕ್ಕ ವಸ್ತುಗಳೇ ಲೋಕದಲ್ಲಿರತಕ್ಕವು. ಕಾಣದೆ ಇರತಕ್ಕವುಗಳು ಇಲ್ಲವೇ ಇಲ್ಲ. ಸುಖವೇ ಮಹಾಸ್ವರ್ಗವು, ದುಃಖವೇ ನರಕವು ॥೫॥ ಈ ಲೋಕಕ್ಕಿಂತ ಬೇರಾದ ಲೋಕವು ಇರುವುದಿಲ್ಲ. ಪುಣ್ಯ ಪಾಪವೆಂಬುವೆರಡೂ ಇಲ್ಲವೇ ಇಲ್ಲ. ಜಗತ್ತು ಮಿಥ್ಯವಾದುದು. ಅದರ ಉತ್ಪತ್ತಿಗೆ ಕರ್ತೃವಾದ ಮಹೇಶ್ವರನೊಬ್ಬನು ಇರುವುದಿಲ್ಲ ॥೬॥ ಮುಕ್ತಿಫಲವನ್ನು ಕೊಡತಕ್ಕ ದೇವತೆಯೆಂಬ ಯಾವುದೊಂದು ವಸ್ತುವೂ ಇರುವುದಿಲ್ಲ. ಎಂಬುದಾಗಿ ವೇದವಿರೋಧಿಯೂ-ವಿದ್ವಾಂಸರ ಶತ್ರುವೂ ಆದ-ಎಲೈ ಚಾರ್ವಾಕನೆ, ನೀನು ನುಡಿವೆಯಾದರೆ, ಇದಕ್ಕೆ ನಾನು ಚೆನ್ನಾಗಿ ಉತ್ತರವನ್ನು ಹೇಳುತ್ತೇನೆ ಕೇಳು.— ದೇಹವೇ ಆತ್ಮನಾದರೆ, ಎಲೆ ನಾಸ್ತಿಕನೆ, ಭೂಮಿಯಲ್ಲಿ ಹೆಣವೂ ಮಲಗಿದವನ ದೇಹವೂ ಎರಡೂ ಬಂದೇ ತೆರದ ಜಡವಸ್ತುಗಳಾಗಿರುವುವೇನು ? ಹೇಳು. ಮಲಗಿದವನ

ಹಮುತ್ಸೃಜ್ಯ ಸಮಾಗತ್ಯಪಿಶಾಚತಾಂ । ಬಲಿಂಯಯಾಕಯಾಚಿದ್ವಾ ಭಂಗ್ಯಾಪ್ರಾರ್ಥಯತೇಕಿಮು ॥೧೦॥ ಜಂತವಸ್ಸಂತಿನಿರ್ದೇಹಾ ಇತಿತ್ವಂ ಯದಿಭಾಷಸೇ । ಅಶ್ವತ್ಥಸ್ಥೋಹರಿಹರಭಟ್ಟೋಹಂ ಬ್ರಹ್ಮರಾಕ್ಷಸಃ ॥ ಜಗ್ರಾಹಶೂದ್ರಮಿಮ ಮಿತ್ಯಾದಿಕಂನಶ್ರುತಂವಚಃ। ಮನ್ಯಸೇಯದಿತಾಂ ಭ್ರಾಂತಿಂ ಸಮ್ಯಗುಚ್ಚಾರ್ಯಸಶ್ರುತಿಂ॥೧೨॥ ಸಯಯಾಚೇಕಿಮಾಹಾರಂ ಸಮಸ್ತಜನವಿಶ್ರುತಂ । ತಸ್ಮಾಚ್ಛರೀರಮೇವಾತ್ಮಾ ಯದಿಸ್ಯಾತ್ತರ್ಹಿನಾಸ್ತಿಕ ॥೧೩॥ ಅಸ್ಮಿಂಚ್ಛರೀರೇನಷ್ಟೇಪಿ ಕಥಮಾತ್ಮಾಚರೇದ್ಭುವಿ । ಆ

---

ಮತ್ತೂ ಸತ್ತವನ ದೇಹಗಳಿಗೆ ವ್ಯತ್ಯಾಸವುಂಟೆಂದು ನೀನು ಹೇಳುವೆಯಾದರೆ ॥೯॥ ಅದಕ್ಕೆ ಕಾರಣವೇನು? ಹೊವು ಕಣ್ಣಿಗೆ ಕಾಣಿಸುತ್ತಿರಲಾಗಿ ಮಲಗಿದವನ ದೇಹದಲ್ಲಿ ಶ್ವಾಸೋಚ್ಛ್ವಾಸಾದಿಗಳು ತೋರುವಂತೆ ಶವದಲ್ಲಿ ಏತಕ್ಕೆ ತೋರುವುದಿಲ್ಲ? (ದೇಹದಿಂದ ಭಿನ್ನನಾದ ಆತ್ಮನೆಂಬೋರ್ವನು ಮೃತನ ದೇಹದಲ್ಲಿಲ್ಲದೆ ಹೋಗಿರುವ ಕಾರಣದಿಂದಲೆ ಮಲಗಿದವನ ದೇಹಕ್ಕೂ ಹೆಣಕ್ಕೂ ವ್ಯತ್ಯಾಸವುಂಟಾಗಿರುವುದೆಂದು ತಿಳಿಯಬೇಕು.) ಮತ್ತೂ ಆತ್ಮನು ದೇಹವನ್ನು ಬಿಟ್ಟು ಪಿಶಾಚತ್ವವನ್ನೈದಿ ಯಾವುದಾದರೊಂದು ರೀತಿಯಿಂದ (ಎಂದರೆ ಅಶರೀರಿಯಾಗಿ ಅಥವಾ ಮತ್ತೊಬ್ಬರ ದೇಹದಲ್ಲಿ ಆವೇಶಗೊಂಡು) ತನಗೆ ಬೇಕಾದ ಆಹಾರವನ್ನು ಬೇಡಿದಂತೆ ಬರಿಯ ದೇಹದಿಂದ ಮಾಡಲಾದೀತೇನು?॥೧೦॥ಹಾಗಾದರೆ ದೇಹವೇ ಇಲ್ಲದಿರುವ ಪ್ರಾಣಿಗಳೂ ಇರಬೇಕಾಯಿತೆಂದು ನೀನುಹೇಳುವೆಯಾದರೆ. ಕೇಳು-ಆತ್ಮನಿಗೆ ಸ್ಥೂಲದೇಹವಲ್ಲದೆ ಸೂಕ್ಷ್ಮದೇಹವೂ ಉಂಟು. ಪೂರ್ವದಲ್ಲಿ ವೇದ ವೇದಾಂಗಾದಿ ನಿಪುಣನಾದ ಹರಿಹರಭಟ್ಟನೆಂಬ ಬ್ರಾಹ್ಮಣನು ದುಸ್ಸಹವಾಸದಿಂದ ಪಾಪಾಚರಣೆಯಲ್ಲಿದ್ದು ಮೃತನಾಗಿ, ಸೂಕ್ಷ್ಮಶರೀರವನ್ನಾಂತು, ಪಾಪಫಲವಾದ ನರಕಯಾತನೆಯನ್ನನುಭವಿಸಿ, ಅಲ್ಲಿಂದ ಕರ್ಮಫಲಾನುಭವಕ್ಕಾಗಿ ಭೂಮಿಗೆಬಂದು ಒಂದು ಅರಳಿಯ ಮರದಲ್ಲಿ ವಾಸವಾಗಿದ್ದುಕೊಂಡು, ಆಹಾರಾರ್ಥವಾಗಿ ಒಬ್ಬ ಶೂದ್ರನಲ್ಲಿ ಆವೇಶಗೊಂಡು, ವೇದಾದಿಗಳನ್ನುದ್ಘೋಷಿಸುತ್ತ, ಬೇಕಾದನ್ನಗಳನ್ನು ಬೇಡಿ ತಿನ್ನುತ್ತ, ತಾನು ಬ್ರಹ್ಮರಾಕ್ಷಸನೆಂಬು ಹೇಳಿಕೊಳ್ಳುತ್ತಿದ್ದನೆಂಬ ಐತಿಹ್ಯವನ್ನು ನೀನು ಕೇಳಿಲ್ಲವೇನು? ಆ ಶೂದ್ರನು ಅಷ್ಟು ಆಹಾರವನ್ನು ತಿಂದುದೂ, ಹಾಗೆ ಮಾತನಾಡುತ್ತಿದ್ದುದೂ ಬುದ್ಧಿ ಭ್ರಾಂತಿ ಮೂಲಕವೆಂದು ನೀನು ತಿಳಿವೆಯಾದರ ಸರ್ವ ಜನರೂ ಕೇಳುವಹಾಗೆ ವೇದಪಠನವನ್ನು ಮಾಡಿ ಅವನು ಆಹಾರವನ್ನು ಬೇಡುತ್ತಿರಲಿಲ್ಲವೆ? ಬುದ್ಧಿ ಭ್ರಾಂತನಿಗೆ ಹಾಗೆ ಮಾಡಲು ಸಾಧ್ಯವೆ? ॥೧೨॥ ಅದುಕಾರಣ ಎಲೆ ನಾಸ್ತಿಕನೆ ದೇಹವೇ ಆತ್ಮನಾದರೆ ಈ ದೇಹವು ನಷ್ಟವಾದ ಬಳಿಕವೂ ಆತ್ಮನು ಪೃಥಕ್ಕಾಗಿ ಭೂಮಿಯಲ್ಲಿ ಹೇಗೆ ಸಂಚರಿಸುವನು? ಆತ್ಮನು ತಾನು ಶರೀರವನ್ನು ಬಿ

ತ್ಮಾ ಶರೀರಮತ್ಯಕ್ತ್ವಾ ಶರೀರೇಽಸ್ಮಿನ್ಪ್ರವರ್ತತೇ ॥೧೪॥ ಅನುಕೂಲತ
ರಂ ನಿದ್ರಾ ಮನುಭೂಯಾಪಿ ವರ್ತತೇ । ತದಾ ಜಾಗ್ರದವಸ್ಥಾಂ ಚ ಸ್ವಪ್ನಾ
ವಸ್ಥಾಂ ತಥಾ ಪುನಃ ॥೧೫॥ ಆತ್ಮಾ ವಿಜಾನಾತಿ ಕಿಮು ಶರೀರಂ ವಾ ಕಿಮುಚ್ಯ
ತಾಂ । ಜಾಗ್ರತ್ಕ್ರಿಯಾಸು ಚ ಸ್ವಪ್ನ ಕ್ರಿಯಾಸ್ವಾತ್ಮಾ ನ ಸಂತತಂ ॥೧೬॥
ನಿಮಿತ್ತಭೂತೇಷು ಕರ್ಮಸಮೂಹೇಷು ಸ್ಫುರತ್ಸ್ವಪಿ । ತತ್ಕರ್ಮಫಲಕಾಂ
ಕ್ಷೋತ್ಥ ಭೂತಸೂಕ್ಷ್ಮೈಸ್ಸಮಂತತಃ ॥೧೭॥ ಆರಬ್ಧಂ ಸದ್ವರ್ತತೇ ಲಿಂಗಂ
ತದಂಗಮುಪವಿಶ್ಯ ಚ । ಉಪಭೋಕ್ತುಂ ತಾನಿ ಕರ್ಮಫಲಾನಿ ತನುಮೃಚ್ಛ
ತಿ ॥ ತಥಾ ಪುನರ್ವಿಶ್ರಮಾರ್ಥಂ ಸುಷುಪ್ತಿಮಪಿ ಗಚ್ಛತಿ । ಪರಲೋಕಗತಿ
ಶ್ಚೇತ್ಥಮಾತ್ಮಾಽನ್ಯೋಽತಶ್ಶರೀರತಃ ॥೧೯॥ ಶರೀರಮಾತ್ಮಚೈತನ್ಯವ್ಯಾ
ಪ್ತಂ ಚೇತಯತೇ ಸ್ವಯಂ । ನ ತು ಚೇತಯತೇ ತಸ್ಮಾದ್ಭವತ್ಯಾತ್ಮೈವ ಚೇ
ತನಃ ॥ ಅಯಸಿ ಜ್ವಲನವ್ಯಾಪ್ತೇ ತೃಣಂ ದಹತಿ ಸರ್ವತಃ । ಅಯಸೋ ವಾದಾ

---

ಡದೆ ಈ ದೇಹದಲ್ಲೇ ಇರುತ್ತಾನೆ ॥೧೪॥ ಹಾಗೆ ಇದ್ದುಕೊಂಡೇ ಅನುಕೂಲವಾಗಿ ನಿ
ದ್ರೆಯನ್ನು ಅನುಭವಿಸುತ್ತಾನೆ. (ಎಂದರೆ-ಜಾಗ್ರತ್ಸ್ವಪ್ನಾದ್ಯವಸ್ಥಾತ್ರಯಂಗಳಿಗೆ ಕಾ
ರಣವಾದ ಸ್ಥೂಲಾದಿ ದೇಹಗಳಲ್ಲಿ ಆತ್ಮನೊಬ್ಬನೇ ವಿಶ್ವತೈಜಸ ಪ್ರಾಜ್ಞನೆನಿಸಿ ವ್ಯಾಪಿ
ಸಿಕೊಂಡಿರುವ ಕಾರಣ, ಆ ದೇಹವು ಸಚೇತನವಾಗಿರುವುದೆಂದು ಭಾವ.) ಹಾಗೆ
ಜಾಗ್ರದಾದ್ಯವಸ್ಥೆಗಳನ್ನನುಭವಿಸುವಾಗ, ಅಂತಪ್ಪ ಅವಸ್ಥಾದಿಗಳನ್ನೆಲ್ಲಾ ತಿಳಿಯತ
ಕ್ಕವನು ಆತ್ಮನೋ? ಅಥವಾ ದೇಹವೋ? ಹೇಳು ॥೧೫॥ ಆ ಆತ್ಮನು ಯಾವಾಗಲೂ
ಜಾಗ್ರದವಸ್ಥೆಯ ಕಾರ್ಯಗಳಲ್ಲಿಯೂ ಸುಪ್ತಾವಸ್ಥೆಯ ಕ್ರಿಯೆಗಳಲ್ಲಿಯೂ ಆ ಅವಸ್ಥೆಗ
ಳಿಗೆ ಕಾರಣಗಳಾದ ಕರ್ಮಗಳ ಸಮೂಹದಲ್ಲಿಯೂ ಸೇರಿಕೊಂಡು ಗೋಚರಿಸುತ್ತಿದ್ದ
ರೂ, ಆ ಕರ್ಮಗಳ ಫಲದ ಅಪೇಕ್ಷೆಯಿಂದ ಹುಟ್ಟಿದ ಸೂಕ್ಷ್ಮಭೂತಾಂಶದಿಂದ ಉದ
ಯಂಗೊಂಡ ಶರೀರವೊಂದು ಅವನಿಗೆ ಇದ್ದೇ ಇರುವುದು. ಆ ಅಂಗದಲ್ಲಿ ಆತ್ಮನು ವಾಸಿ
ಸಿಕೊಂಡು, ಆ ಕರ್ಮದ ಫಲವನ್ನನುಭವಿಸುವುದಕ್ಕೋಸುಗ ಸ್ಥೂಲತನುವನ್ನೈದುವ
ನು. ಆ ಶರೀರದಲ್ಲಿದ್ದು ಬಳಲಿ, ವಿಶ್ರಾಂತಿಯನ್ನೈದುವುದಕ್ಕಾಗಿ ಸುಷುಪ್ತ್ಯವಸ್ಥೆಯ
ನ್ನೈದುವನು. ಹೀಗೆ ಆತ್ಮನಿಗೆ ಇಹಲೋಕ ಪರಲೋಕಗತಿಗಳು ಪ್ರಾಪ್ತವಾಗುವುವು.
ಈ ಕಾರಣದಿಂದ ಆತ್ಮನು ದೇಹಕ್ಕಿಂತ ಭಿನ್ನನಾಗಿರುತ್ತಾನೆ ॥೧೯॥ ದೇಹವು ಆತ್ಮನ
ಚೈತನ್ಯದಿಂದ ವ್ಯಾಪ್ತವಾಗಿದ್ದುಕೊಂಡು ತಾನು ಸಕಲ ವ್ಯಾಪಾರಗಳನ್ನೂ ನಡೆಯಿ
ಸುತ್ತದೆ. ಆ ಆತ್ಮನಿಲ್ಲದಿದ್ದರೆ ದೇಹವು ತಾನೇ ಯಾವ ವ್ಯಾಪಾರವನ್ನೂ ನಡೆಯಿಸ
ಲಾರದು. ಆದುದರಿಂದ ದೇಹಕ್ಕೆ ಆತ್ಮನೇ ಚೈತನ್ಯನಾಗಿರುವನು ॥೨೦॥ ಲೋಹದ
ಲ್ಲಿ ಬೆಂಕಿಯು ವ್ಯಾಪಿಸಿಕೊಂಡಿದ್ದರೆ, ಅಂತಪ್ಪ ಲೋಹವು ಹುಲ್ಲನ್ನು ಸುಡುತ್ತದೆ.

ಹಕತ್ವಂ ಕೃಶಾನೋಃರಥವಾವದ ॥೨೧॥ ಆತ್ಮವ್ಯಾಪ್ತಾನಿಸತತಂ ತದ್ವದ್ದೇಹೇಂದ್ರಿಯಾಣ್ಯಪಿ। ಕಾರ್ಯಕ್ಷಮಾಣ್ಯಾತ್ಮಶಕ್ತ್ಯಾ ಭವಂತಿಭುವಿನಸ್ವತಃ॥ ತಸ್ಮಾದಾತ್ಮಾತನೋಃರನ್ಯಃ ಪ್ರಸಿದ್ಧಃಪರಿಕೀರ್ತ್ಯತೇ । ದ್ರಷ್ಟಾಘಟಪಟಾದೀನಾಂ ತೇಭ್ಯೋಃಭಿನ್ನೋಃನಕಿಂಚನಃ ॥೨೩॥ ದೇಹದ್ರಷ್ಟಾತಥೈವಾತ್ಮಾ ಭವತ್ಯನ್ಯಸ್ತಥಾತನೋಃ।ತದಾತ್ಮಾತ್ಮೇತಿಕ್ರಿಯಪ್ರಕಥಿತಃ ಕಾಯಃಕಾಯಉದಾಹೃತಃ ॥೨೩॥ ತದುತ್ಪತ್ತೌ ಕರ್ತೈಕಃ ಪೃಥಕ್‌ಸ್ಥಿತ್ಯಾತ್ಮದೇಹಯೋಃ । ತಸ್ಮಾದ್ಬ್ರಹ್ಮಾಂಡಜಾಲಾನಿ ಸಂಜಾಯಂತೇಮಹಾತ್ಮನಃ ॥ ತೇಷೂತ್ಪನ್ನಾತ್ಮರಾಶಿಭ್ಯೋಃ ಜಾತಾನಾನಾಮತಕ್ರಿಯಾಃ । ವಿದ್ಯೇತೇ ಪುಣ್ಯಪಾಪೇಚ ತಥೈವಸ್ವರ್ಗದುರ್ಗತೀ ॥೨೬॥ ತದಾಜ್ಞಯಾಜಗತ್ಸರ್ವಂ ವರ್ತತೇಸಚರಾಚರಂ । ತಸ್ಮಾದ್ವಸ್ತೂನ್ಯದೃಷ್ಟಾನಿ ನೇತಿವಕ್ತುಂನಸಾಂಪ್ರತಂ ॥೨೭॥ಮೇರ್ವಾದೀನಾಮದೃಷ್ಟಾನಾಂ ಸದ್ಭಾವಾತ್ಸರ್ವದಾ

---

ಹಾಗೆ ಸುಡುವ ಗುಣವು ಸ್ವಭಾವಸಿದ್ಧವಾಗಿ ಲೋಹಕ್ಕಿರುವುದೊ? ಅಗ್ನಿಗಿರುವುದೊ? ಹೇಳು. ॥೨೧॥ ಅದರಂತೆಯೇ ಯಾವಾಗಲೂ ದೇಹಕರಣಾದಿಗಳೆಲ್ಲವೂ ಆತ್ಮನಿಂದ ವ್ಯಾಪ್ತವಾಗಿರುವುವು. ಆ ಆತ್ಮನ ಚೈತನ್ಯದಿಂದಲೇ ಭೂಮಿಯಲ್ಲಿ ದೇಹಗಳು ಕಾರ್ಯಗಳನ್ನು ಮಾಡಲು ಸಮರ್ಥವಾಗಿರುವುವೇ ಹೊರತು ಸ್ವತಃ ಮಾಡಲಾರವು॥೨೨ ಅದುಕಾರಣ, ಆತ್ಮನು ದೇಹಕ್ಕಿಂತಲೂ ಭಿನ್ನನಾದವನೆಂದು ಘಂಟಾಘೋಷವಾಗಿ ಹೇಳಲ್ಪಡುತ್ತಾನೆ. ಘಟಪಟ ಮೊದಲಾದ ವಸ್ತುಗಳನ್ನು ನೋಡತಕ್ಕ ಮನುಷ್ಯನು ಆ ಘಟಪಟಾದಿಗಳಿಂದ ತಾನು ಬೇರೆಯಾದವನಲ್ಲವೆ ? ॥೨೩॥ ಹಾಗೆಯೇ ದೇಹವನ್ನು ನೋಡತಕ್ಕ ಆತ್ಮನು ಆ ದೇಹಕ್ಕೆ ಭಿನ್ನನಾಗಿಯೇ ಇರುವನು. ಆದುದರಿಂದ ಆತ್ಮನು ಆತ್ಮನೇ, ದೇಹವು ದೇಹವೇ ಎಂದು ಹೇಳಲ್ಪಟ್ಟಿತು ॥೨೪॥ ಅದುಕಾರಣ ಈ ದೇಹಾತ್ಮಗಳೆರಡಕ್ಕೂ ಭಿನ್ನನಾಗಿ ಮತ್ತೊಬ್ಬನು ಈ ಜಗತ್ತಿನ ಉದಯಕ್ಕೆ ಕರ್ತೃವಾಗಿ ಇರುತ್ತಿರುವನು. ಆ ಮಹಾತ್ಮನಿಂದಲೇ ಈ ಬ್ರಹ್ಮಾಂಡ ಸಮೂಹವೆಲ್ಲವೂ ಉತ್ಪನ್ನವಾಗುತ್ತದೆ. ॥೨೫॥ ಆ ಬ್ರಹ್ಮಾಂಡಗಳಲ್ಲಿ ಹುಟ್ಟಿರುವ ಆತ್ಮಸಮೂಹಗಳಿಗೋಸ್ಕರವೇ ನಾನಾಮತಾಚಾರಗಳೆಲ್ಲವೂ ಉತ್ಪನ್ನವಾಗಿರುವುವು. ಪಾಪ ಪುಣ್ಯಗಳೂ ಸ್ವರ್ಗ ನರಕಗಳೂ ಸಹ ಅವುಗಳಿಗಾಗಿಯೇ ಕಲ್ಪಿಸಲ್ಪಟ್ಟಿರುವುವು ॥೨೬॥ ಜಗದುದಯ ಕರ್ತೃವಾದ ಆ ಮಹಾತ್ಮನ ಆಜ್ಞೆಗಧೀನವಾಗಿಯೇ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಇರುತ್ತಿರುವುದು. ಅದುಕಾರಣ, ಕಣ್ಣಿಗೆ ಕಾಣದಿರುವ ವಸ್ತುಗಳೆಲ್ಲವೂ ಇಲ್ಲವೇಇಲ್ಲವೆಂದು ಹೇಳುವುದು ಸಾಧುವಲ್ಲ ॥೨೭॥ ಭೂಮಿಯಲ್ಲಿ ಕಣ್ಣಿಗೆ ಕಾಣಿಸದಿದ್ದರೂ ಮೇರುಪರ್ವತ ಮೊದಲಾದುವುಗಳು ಯಾವಾಗಲೂ ಸಿದ್ಧವಾ

ಕ್ಷಿತಾ । ಅಸ್ತ್ಯೇವಪರಲೋಕಾದಿ ತದಿದಂವೇದಸಂಮತಂ ॥೨೮॥ ಅತ
ಶ್ಚಾರ್ವಾಕಮಾಮೋಹೀರ್ಮಾಂ ನ್ಯಾಯಮಾರ್ಗವಿವರ್ಜಿತಃ । ಕಲಿಕಾಲಮ
ಹಾಪಾಪಹೇತುರ್ಹಿತಪರಿಚ್ಯುತಃ ॥೨೯॥ ತತಸ್ತೂಷ್ಣೀಂತಿಷ್ಠ ಚಾರ್ವಾ
ಕ ತವವಾದಂವಿಸರ್ಜಯ । ಅಖರ್ವಗರ್ವಾಂಧಪಾಪಯುತಾಸದ್ವಾದತ
ತ್ಪರ ॥೩೦॥ ಪಾತ್ರೇತರತ್ವಂಪ್ರಚ್ಛನ್ನಪಾಂಚರಾತ್ರಇವೇಕ್ಷ್ಯಸೇ । ವೇ
ದೋಕ್ತಮಾರ್ಗವೈಮುಖ್ಯಂ ಜಾತಿಭೇದವಿಹೀನತಾ ॥೩೧॥ ಸ್ವೇಚ್ಛಾ
ಚಾರೋಮಹಾದೇವನಿಂದಾ ಬಹುತರಾತಥಾ । ಕಳತ್ರಸಾಮಾನ್ಯವೃತ್ತಿ
ರ್ವಿಷಯೇಷ್ವನುರಾಗಿತಾ ॥ ೩೨ ॥ ಪಾಂಚರಾತ್ರಸ್ಯತವಚ ಸಮಂಸ
ರ್ವಂಹಿದೃಶ್ಯತೇ ॥

---

ಗಿರುವುದರಿಂದ, ಅದರಂತೆಯೇ ಪರಲೋಕಾದಿಗಳು ಕಣ್ಣಿಗೆ ಕಾಣಿಸದಿದ್ದರೂ ಇದ್ದೇ ಇರುವುವೆಂಬುದು ಸಿದ್ಧವು. ಮತ್ತೂ ಅದು ವೇದವಿಹಿತವಾದುದು. (ಹೇಗೆಂದರೆ- "ಸ್ವರ್ಗಕಾಮೋಯಜೇತ" ಎಂಬ ಶ್ರುತಿವಚನವು ಸ್ವರ್ಗಾಪೇಕ್ಷಿಯಾದವನು ಯಾಗವನ್ನಾಚರಿಸಬೇಕೆಂದು ಹೇಳುತ್ತಿರುವುದು. ಮತ್ತೂ "ಹೀಯ್ಯತಾಂಮಮ ನರಕಸನ್ನಿಧೌ" ಎಂಬುದೇ ಮೊದಲಾದ ಶಾಸ್ತ್ರವಚನದಿಂದ ಪಾಪಾಚರಣಸಂಪನ್ನನು ನರಕಯಾತನೆ ಯನ್ನನುಭವಿಸುವನೆಂದು ಹೇಳಲ್ಪಟ್ಟಿರುವುದು. ಈಕಾರಣದಿಂದ ಧರ್ಮಮಾರ್ಗ ತತ್ಪರನಿಗೆ ಸ್ವರ್ಗಲೋಕವೆಂಬುದೂ, ಪಾಪತತ್ಪರನಿಗೆ ನರಕಲೋಕವೆಂಬುದೂ ಸಹ ಅವು ಅಪ್ರತ್ಯಕ್ಷಗಳಾಗಿದ್ದರೂ ದೇಹಾಂತದಲ್ಲಿ ದೊರಕೊಳ್ಳುವುವೆಂದು ಸಿದ್ಧವಾಗಿರುವುದು.) ॥೨೮॥ ಈ ಕಾರಣದಿಂದ ಎಲೆ ಚಾರ್ವಾಕನೆ, ಮಾಡುವ ಈ ವಾದವು ಕಲಿಕಾಲದ ಮಹಾ ಪಾಪಾಚರಣೆಗೆ ಕಾರಣಭೂತವಾದುದು. ಹಿತಕರವಲ್ಲದೆ ಇರತಕ್ಕದು ॥೨೯॥ ಆದುದರಿಂದ ಇಲೆ ಚಾರ್ವಾಕನೆ, ಸುಮ್ಮನಿರು. ನಿನ್ನ ವಾದವನ್ನು ಬಿಡು. ಅತ್ಯಂತಾಹಂಕಾರದಿಂದ ಕುರುಡನಾಗಿರುವ- ಪಾಪಿಷ್ಠನಾದ- ದುರ್ವಾದದಲ್ಲಾಸಕ್ತನಾದ- ಅಯೋಗ್ಯನಾದ- ಎಲೆ ವಾದಿಯೆ, ನೀನು ಮೇಲೆ ಚಾರ್ವಾಕನಂತಿದ್ದರೂ ಒಳಗೆ ಪಾಂಚರಾತ್ರ ವಾದಿಯಂತೆ ತೋರುತ್ತೀಯೆ ॥ ಏಕೆಂದರೆ- ॥೩೦॥ ವೇದೋಕ್ತಮಾರ್ಗಾಚರಣದಲ್ಲಿ ವಿಮುಖತೆಯೂ, ಜಾತಿಭೇದವಿಲ್ಲದಿರುವುದೂ ॥೩೧॥ ಮನಸ್ಸಿಗೆ ಬಂದಂತೆ ಆಚರಿಸುವುದೂ, ಪರಮೇಶ್ವರನನ್ನು ಬಹಳವಾಗಿ ದೂಷಿಸುವುದೂ, ಹೆಂಡಿರಲ್ಲಿ ಸಮಾನವಾಗಿ ವರ್ತಿಸುವುದೂ, ವಿಷಯಾಸಕ್ತಿಯೂ ॥೩೨॥ ಈ ಪೂರ್ವೋಕ್ತಗುಣಗಳೆಲ್ಲಾ ನಿನ್ನಲ್ಲೂ ಪಾಂಚರಾತ್ರನಲ್ಲಿಯೂ ಸಮನಾಗಿ ತೋರಿ ಬರುತ್ತಿರುವುವು.

ಇತ್ಯಸಂಖ್ಯಾತಮಹಾಮಾಹೇಶ್ವರ....................ಶ್ರೀವೀರಶೈವ
ಮತಾಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ವಾದಪ್ರಕ
ರಣೇ ಚಾರ್ವಾಕವಾದನಿರಾಸಕಥನಂ ನಾಮ
ಸಪ್ತಮೋಽಧ್ಯಾಯಃ.

---

ಅಥಾಷ್ಟಮೋಽಧ್ಯಾಯಃ
(ಪಾಂಚರಾತ್ರವಾದನಿರಸನಂ)

ಅಸಿತ್ವಂ ಪಾಂಚರಾತ್ರೋಽಸ್ಯ ಸಮಾಕರ್ಣಯತೇಮತಂ । ಆಂ
ತರಾಲಿಕಮಾಮ್ನಾಯಬಾಹ್ಯಂ ವಿಭ್ರಷ್ಟಸತ್ಕ್ರಿಯಂ ॥೧॥ ಅಜಾತಿಭೇ
ದಕಲುಷಂ ಭವಜ್ವರತಮೋವೃತಂ । ಸ್ವಭಾವತೋಮಹೇಶಸ್ಯ ನಿಂದ

---

ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಪಂ
ಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ
"ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ವಾದ
ಪ್ರಕರಣದೊಳಗೆ ಚಾರ್ವಾಕವಾದ ನಿರಸನವನ್ನು
ನಿರೂಪಿಸುವ ೭ ನೆಯ ಅಧ್ಯಾಯವು
ಮುಗಿದುದು.

---

## ೮ ನೆಯ ಅಧ್ಯಾಯವು.

(ಪಾಂಚರಾತ್ರವಾದಖಂಡನವು.)

ಎಲೆ ವಾದಿಯೆ, ಈಗ ನೀನು ಪಾಂಚರಾತ್ರಮತದವನಾಗಿರುತ್ತೀಯೆ. ನಿನ್ನ ಮತದ ಲಕ್ಷಣವನ್ನು ಕೇಳು—ಇದು ಮಧ್ಯದಲ್ಲಿ ಹುಟ್ಟಿದುದು (ಎಂದರೆ ಪುರಾತನ ವಾದುದಲ್ಲ.)॥ "ಏಕಏವರುದ್ರಃ" ಎಂಬುದು ಮೊದಲಾದ ಶಿವಾಧಿಕ್ಯಬೋಧಕವಾದ ಶ್ರುತಿವಚನಗಳಿಗೆ ವಿರುದ್ಧವಾಗಿ ವಿಷ್ಣುವನ್ನು ಸೇವಿಸುವುದರಿಂದಲೂ, ಭಸ್ಮ ರುದ್ರಾಕ್ಷಾದಿ ಆಧಿಕ್ಯವನ್ನು ಹೇಳುವ "ಸರ್ವಿಷಭಸ್ಮ ಜ್ಯೋತಿಃ" ಎಂಬುದು ಮೊದಲಾದ ಶ್ರುತಿ ವಚನಗಳಿಗೆ ವಿರುದ್ಧವಾಗಿ ಗೋಪೀಮೃತ್ತಿಕಾದಿಧಾರಣಮಾಡಿಕೊಳ್ಳುವುದರಿಂದಲೂ ವೇದವಿರುದ್ಧವಾಗಿರುವುದು. ಮತ್ತೂ ಸದಾಚಾರಭ್ರಷ್ಟವಾಗಿರುವುದು॥೧॥ ಭಗವದ್ಭಕ್ತರಲ್ಲಿ ಜಾತಿಭೇದವಿಲ್ಲವೆಂಬ ನಿಯಮದಿಂದ ಕಲುಷಿತವಾಗಿರುವುದು. ಜನನ ಮರ

ಯಾಪರಿವರ್ಧಿತಂ ||೨|| ಸ್ವೇಚ್ಛಾಪ್ರವರ್ತನಾದೇವ ಸ್ವೇಷ್ಟದೈವತಪೂಜನಂ । ಸರ್ವದಾತ್ಯಕ್ತಲಜ್ಜಾನಾಂ ದುಷ್ಟಾನಾಂಸಮ್ಮತಂತಥಾ ||೩|| ನಿತ್ಯಂಜಪತಪೋಧ್ಯಾನ ನಿಷ್ಠಾರಹಿತವರ್ತನಂ । ಕಳತ್ರಸುಮತಾದುಷ್ಟೇಂದ್ರಿಯಾನುಸರಣಂಪುನಃ ||೪|| ಸರ್ವಂಸ್ವಮತಚಾರಿತ್ರ ಮೇವಂವಿಧಮುದಾಹೃತಂ । ಮುಕ್ತಿಶ್ಚತ್ವನ್ಮತೇಪ್ರೋಕ್ತಾ ವಿದಿತೈವತಥಾವಿಧಾ ||೫|| ತ್ವನ್ಮತಾಧಿಪತೇರ್ವಿಷ್ಣೋಃ ಶೃಣುದೇವತ್ವಮದ್ಯತತ್ । ಅನೇಕಭವದುಃಖಾನಾ ಮಸುಹ್ಯಾನಾಂವಿಮೋಹತಃ ||೬|| ತಿರ್ಯಗ್ಯೋನಿಷುಸಂಭೂಯ ಸರ್ವದಾಽನುಭವಕ್ರಮಃ। ತೇಷುತೇಷ್ವವತಾರೇಷು ಶಿವಮೂರ್ತಿಂಮಹೇಶ್ವರಂ ||೭|| ಉಪಾಸ್ಯಧನ್ಯತಾವಾಪ್ತಿವಿಧಾ ಸದ್ಭಕ್ತಿಪೂರ್ವಕಂ । ಪ್ರಜಾಪತೇರೇಕವಾರ ಮುತ್ಪತ್ತಿಂಪ್ರಾಪ್ಯಭೂತಲೇ ||೮|| ಆಖ್ಯಯಾಽಧೋಕ್ಷಜಇತಿಪ್ರಸಿದ್ಧಿವಹನಕ್ರಮಃ । ಇಂದ್ರಾನುಜಾಭಿದಾನೇನಾದಿತೇ

---

ಣರೂಪ ಸಂಸಾರ ಜ್ವರರೋಗದಿಂದ ಕಣ್ಗಾಣದಿರುವುದು. ಶಿವನಿಂದೆಯೇ ಹುಟ್ಟುಗುಣವಾಗಿ ಬೆಳೆದಿರುವುದು. ||೨|| ತನ್ನ ಇಷ್ಟಬಂದಂತೆ ಆಚರಿಸುವ ಧರ್ಮವುಳ್ಳುದರಿಂದ ತನ್ನ ಮನಸ್ಸಿಗೆ ತೋರಿದ ದೈವವನ್ನಾರಾಧಿಸತಕ್ಕದು. ಯಾವಾಗಲೂ ನಾಚಿಕೆಯಿಲ್ಲದ ದುರ್ಜನರಿಗೆ ಸಮ್ಮತವಾಗಿರತಕ್ಕದು ||೩|| ಯಾವಾಗಲೂ ಜಪ—ತಪಸ್ಸು—ಧ್ಯಾನ—ಭಕ್ತಿ ಇವುಗಳಿಂದ ವಿರಹಿತವಾದ ನಡೆಯೂ, ಎಲ್ಲರ ಹೆಂಡರಲ್ಲೂ ಸಮಾನ ಭಾವವೂ, ದುಷ್ಟವಾದ ಇಂದ್ರಿಯ ಪರವಶತೆಯೂ ||೪|| ಇವೆಲ್ಲವೂ ಆ ಮತದ ನಡತೆಯಾಗಿರುವುದೆಂದು ಹೇಳಲ್ಪಟ್ಟಿದೆ. ನಿನ್ನ ಮತದಲ್ಲಿ ಹೇಳಲ್ಪಟ್ಟ ಮುಕ್ತಿಯೂ ಕೂಡ ಆ ನಡತೆಗೆ ಸಮಾನವಾಗಿಯೇ ಲೋಕಪ್ರಸಿದ್ಧವಾಗಿರುವುದು. (ಎಂದರೆ ಅವರ ಧರ್ಮವು ವೇದವಿರುದ್ಧವಾದುದರಿಂದ ಮುಕ್ತಿಯು ಅದಕ್ಕೆ ದುರ್ಲಭವೆಂದರ್ಥ) ||೫|| ನಿನ್ನ ಮತಕ್ಕೆ ಅಧಿಪತಿಯಾದ ವಿಷ್ಣುವಿನ ದೇವತ್ವವನ್ನು ಕುರಿತು ವಿವರಿಸುತ್ತೇನೆ, ಅದನ್ನು ಕೇಳು—ಆ ವಿಷ್ಣುವು ಅಜ್ಞಾನದಿಂದ ಭೃಗುಋಷಿಪತ್ನಿಯನ್ನು ಕೊಂದು, ಋಷಿಶಾಪಕ್ಕೀಡಾಗಿ, ಮತ್ಸ್ಯ ಕೂರ್ಮಾದಿ ತಿರ್ಯಜ್ಜಂತುಗಳ ಯೋನಿಯಲ್ಲಿ ಹುಟ್ಟಿ, ಸಹಿಸಲಶಕ್ಯವಾದ ಸಂಸಾರದುಃಖಗಳನ್ನು ಅನುಭವಿಸಿದ ರೀತಿಯೂ, ಆಯಾ ಅವತಾರಗಳಲ್ಲಿ ಸರ್ವಾಧಿಪತಿಯಾದ ಪರಮೇಶ್ವರನನ್ನು ||೭|| ಭಕ್ತಿಪುರಸ್ಸರವಾಗಿ ಪೂಜಿಸಿ, ಕೃತಾರ್ಥನಾದ ರೀತಿಯೂ, ಒಂದಾವೃತ್ತಿ ಚತುರ್ಮುಖಬ್ರಹ್ಮನ ಅಧೋದ್ವಾರದಿಂದ ಜನಿಸಿ, ಅಧೋಕ್ಷಜ ( ಕೆಳಗಣ ಇಂದ್ರಿಯ ಮುಖದಿಂದ ಹುಟ್ಟಿದವನು ) ಎಂಬ ಹೆಸರಿನಿಂದ ಭೂಮಿಯಲ್ಲಿ ಪ್ರಖ್ಯಾತನಾಗಿರುವಿಕೆಯೂ, ಅದಿ

ಗರ್ಭಾತ್ಸಮುದ್ಭವಂ ॥೯॥ ಪ್ರಾಪ್ಯ ಪ್ರಾಪ್ತ ರಾಕ್ಷಸೇಭ್ಯಃ ಪರಾಜಯ
ವಿಧಾಪಿ ಸಃ । ಬಾದರಾಯಣನಾಮ್ನಾ ಚ ಶಬರ್ಯಾಂ ಜನನಕ್ರಮಃ ॥೧೦॥
ಕೃಷ್ಣ ಇತ್ಯಾಖ್ಯಯೋತ್ಪದ್ಯ ದೇವಕೀಜಠರಾತ್ಪುನಃ । ಪಾಂಡವಾನಾಂ
ಸದಾ ಲೋಕೇ ಕೃತಸೇವಾವಿಧಿಕ್ರಮಃ ॥೧೧॥ ಕಿಂಚ ದತ್ತಾತ್ರೇಯ ಇತಿ
ನಾಮ್ನಾತ್ರೇಸ್ಸಂಭವಕ್ರಮಃ । ಕಿಂಚ ದೈತ್ಯಾರಿರಿತ್ಯುವಾರ್ಯ್ಯಾಂ ಸಂಸ್ತು
ತಿಂ ಪ್ರಾಪ್ಯ ಸನ್ನುತಾಂ ॥೧೨॥ ಪ್ರಾಪ್ತ ಪರಾಜಯವಿಧಾ ಜಲಂಧರಮ
ಹಾಸುರಾತ್ । ಶಿವೇನ ಚಕ್ರೇಣ ತದ್ದೈತ್ಯ ಸಂಹಾರಂ ಕೃತವತ್ಯಥ ॥೧೩॥ ಜ
ನ್ಮನ್ಯಾದೌ ಪ್ರಪೂಜ್ಯೇಶಂ ತಚ್ಚಕ್ರಾವಾಪ್ತಿರೀಶ್ವರಾತ್ । ಕಿಂಚ ಚೂರ್ಣೀ
ಕೃತೇ ತಸ್ಮಿನ್ ಚಕ್ರೇ ಸಂಗ್ರಾಮರಂಗಕೇ ॥೧೪॥ ಪ್ರಾಪ್ತ ಪರಾಜಯವಿ
ಧಾ ದಧೀಚೇರ್ಮುನಿಪುಂಗವಾತ್ । ಭೂತ್ವೋಪಮನ್ಯೋಸ್ಸಚ್ಛಿಷ್ಯ
ಶ್ಚಿಂಪ್ರಮುಖಾಳೇರ್ಮಹೇಶಿತುಃ ॥೧೫॥ ಸಮರ್ಚನವಿಧಾ ಸವ್ಯಗನುರಾಗ
ಪುರಸ್ಸರಂ । ಶಿವಪೂಜಾರ್ಥಮಾನೀತೇ ಕಮಲಾನಾಂ ಸಹಸ್ರಕೇ ॥೧೬॥
ನ್ಯೂನೇ ಸತ್ಯೇಕಕಮಲೇ ಸ್ವನೇತ್ರೇಣಾರ್ಚನಕ್ರಮಃ । ಚಕ್ರಾರ್ಥಂ ಚ

---

ತಿಯ ಹೊಟ್ಟೆಯಲ್ಲಿ ಇಂದ್ರಾನುಜನೆಂಬ ಹೆಸರಿನಿಂದ ಹುಟ್ಟಿ ॥೯॥ ರಾಕ್ಷಸರಿಂದ ಅಪ
ಜಯವನ್ನು ಪಡೆದುದೂ, ವ್ಯಾಸನೆಂಬ ಹೆಸರಿನಿಂದ ಅಂಬಿಗಿತ್ತಿಯ ಹೊಟ್ಟೆಯಲ್ಲಿ
ಹುಟ್ಟಿದುದೂ ॥೧೦॥ ಮತ್ತೆ ಕೃಷ್ಣನೆಂಬ ಹೆಸರಿನಿಂದ ದೇವಕಿಯ ಹೊಟ್ಟೆಯಲ್ಲಿ
ಹುಟ್ಟಿ, ಪಾಂಡವರ ಸೇವೆಯನ್ನು ಮಾಡಿದುದೂ ॥೧೧॥ ಮತ್ತೂ ದತ್ತಾತ್ರೇಯ
ನೆಂಬ ಹೆಸರಿನಿಂದ ಅತ್ರಿಋಷಿಯ ದೆಸೆಯಿಂದ ಅನಸೂಯೆಯ ಹೊಟ್ಟೆಯಲ್ಲಿ ಹುಟ್ಟಿ
ದುದೂ, ಲೋಕದಲ್ಲಿ ದೈತ್ಯಾರಿಯೆಂದು ಅತ್ಯಂತ ಶ್ಲಾಘನೀಯವಾದ ಬಿರುದನ್ನಾಂ
ತಿದ್ದು, ಜಲಂಧರಾಸುರನಿಗೆ ಸೋತು ಹೋದುದೂ, ಶಿವನು ಪಾದದ ಬೆರಲಿನಿಂದ
ಬರೆದ ಚಕ್ರದಿಂದ ಆ ಜಲಂಧರಾಸುರನನ್ನು ಸಂಹರಿಸಲಾಗಿ ॥೧೩॥ ಮೊದಲ ಜನ್ಮ
ದಲ್ಲಿ ಶಿವಾರಾಧನೆಯನ್ನು ಮಾಡಿ, ಶಂಕರನಿಂದ ಆ ಚಕ್ರವನ್ನು ಪಡೆದುಕೊಂಡು
ದೂ, ಕ್ಷುಪರಾಜನಿಗೆ ಸಹಾಯಕನಾಗಿ ವಿಷ್ಣುವು ದಧೀಚಿ ಮುನಿಯಮೇಲೆ ಯುದ್ಧ
ಮಾಡುವಾಗ್ಗೆ ಯುದ್ಧಾಂಕಣದಲ್ಲಿ ಆ ಚಕ್ರವು ಋಷಿಯಿಂದ ನೆಗ್ಗಿ ಪುಡಿ ಪುಡಿ ಮಾ
ಡಲ್ಪಡಲಾಗಿ ॥೧೪॥ ಆ ಋಷಿಶ್ರೇಷ್ಠನಿಗೆ ಸೋತುಹೋದುದೂ, ಉಪಮನ್ಯು ಮ
ಹರ್ಷಿಗೆ ಕೃಷ್ಣನು ಶಿಷ್ಯನಾಗಿ, ಆತನಿಂದ ಶಿವದೀಕ್ಷೆಯನ್ನು ಪಡೆದು, ಭಕ್ತಿಪುರ
ಸ್ಸರವಾಗಿ ಶಿವಾರಾಧನೆಯನ್ನು ಮಾಡಿದುದೂ, ಶಿವಾರ್ಚನೆಗಾಗಿ ವಿಷ್ಣುವು ಎತ್ತಿತಂದ
ಸಾವಿರ ತಾವರೆ ಹೂವುಗಳಲ್ಲಿ ಒಂದು ಹೂವು ಕಡಿಮೆಯಾಗಲಾಗಿ, ತನ್ನ ಕಣ್ಣನ್ನೇ
ಕಳೆದು ಪೂಜಿಸಿದುದೂ ॥೧೬॥ ಕಳೆದುಕೊಂಡ ಚಕ್ರವನ್ನು ಪುನಃ ಪಡೆದುಕೊಳ್ಳುವು

ಪುನರ್ಭರ್ಗಕೃತ್ಯೈಶಿವಮಾರಾಧ್ಯಯತ್ನತಃ ॥೧೭॥ ಚಕ್ರಪ್ರಾಪ್ತಿರ್ವಿಧಾತಸ್ಮಾ
ತ್ಸಂತುಷ್ಟಾತ್ಪರಮೇಶ್ವರಾತ್ । ಮೇಘರೂಪೇಣಧೃತ್ವೇಶಂ ಪರಿತುಷ್ಟಂ
ವಿಧಾಯಚ ॥೧೮॥ ಸಾಂಬಾಹ್ವಯಸ್ಯಪುತ್ರಸ್ಯ ವರಲಾಭವಿಧಾತತಃ ।
ದೂರ್ವಾಸಸಃಪದೇನೋಚ್ಚೈರ್ನಿಹತಸ್ಯಸ್ಥಲಸ್ಯಹಿ ॥೧೯॥ ವಕ್ಷಸಿಶ್ರೀವ
ತ್ಸಇತಿ ನಾಮತೋಧಾರಣಕ್ರಮಃ । ರುಕ್ಮಿಣ್ಯಾಸಹಬದ್ಧ್ವೈನಂ ಶಕ
ಟೇಽಸ್ಮಿನ್ಮಹಾಮುನೌ ॥೨೦॥ ತೂರ್ಣಂಪರಿಭ್ರಮಯತಿ ಪರಿತೋಭ್ರಮ
ಣಕ್ರಮಃ । ಉಚ್ಛಿಷ್ಟಪರಮಾನ್ನಸ್ಯ ತನ್ಮುನೀಂದ್ರಸ್ಯಲೇಪತಃ ॥೨೧॥
ವಜ್ರಾಂಗತ್ವಾಂಘ್ರಿಪ್ರಾಪ್ತ್ಯಪ್ರವರ್ತನವಿಧಾಶಿವನೌ । ತತ್ಪಾಯಸೋಪಲೇ
ಪೇನ ವಿಹೀನೇಚರಣಸ್ಥಲೇ ॥೨೨॥ ವ್ಯಾಧಸ್ಯಬಾಣೋಪಹತ್ಯಾ ಸಂಪ್ರಾ
ಪ್ತೋಮರಣಕ್ರಮಃ । ಕೃಷ್ಣಸ್ಯನಾಶಾದೇಕಸ್ಯ ಬಲಸ್ಯಮರಣಕ್ರಮಃ।
ಮುನಿಶಾಪಾನ್ಮುಸಲತಃಕುಲಕ್ಷಯವಿಧಾಶಿತ್ಮನಃ। ಕಿರೀಟಿನಾಕೃತಶ್ರಾದ್ಧೇ
ನಾರಾಯಣಬಲಿಕ್ರಮಃ ॥೨೩॥ ಚೋರೈಃ ಷೋಡಶಸಾಹಸ್ರಗೋಪಸ್ತ್ರೀ

---

ದಕ್ಕಾಗಿ ವಿಷ್ಣುವು ಭಕ್ತಿಯಿಂದ ಪ್ರಯತ್ನಪೂರ್ವಕವಾಗಿ ಶಿವನನ್ನರ್ಚಿಸಿ ॥೧೭॥ ಸಂತು
ಷ್ಟನಾದ ಆ ಪರಶಿವನಿಂದ ಚಕ್ರವನ್ನು ಪಡೆದುದೂ, ವಿಷ್ಣುವು ಮೇಘರೂಪದಿಂದ
ಈಶ್ವರನನ್ನು ಹೊತ್ತುಕೊಂಡು, ಸಂತೋಷಪಡಿಸಿ ॥ ಆತನಿಂದ ಸಾಂಬನೆಂಬ ಪು
ತ್ರವರವನ್ನು ಪಡೆದುಕೊಂಡುದೂ, ವಿಷ್ಣುವಿನ ಎದೆಯಮೇಲೆ ದೂರ್ವಾಸಮಹರ್ಷಿ
ಯು ಪಾದದಿಂದ ಒದೆಯಲು, ಆ ಸ್ಥಲದಲ್ಲಿ ಆದ ಗುರುತನ್ನು ಶ್ರೀವತ್ಸವೆಂಬ ಹೆಸರಿ
ನಿಂದ ಧರಿಸಿದುದೂ ॥೧೯॥ ಇದೇ ಮಹರ್ಷಿಯು ಕೃಷ್ಣನನ್ನು ರುಕ್ಮಿಣೀಸಹಿತವಾ
ಗಿ ಬಂಡಿಯಲ್ಲಿ ಕಟ್ಟಿ ವೇಗದಿಂದ ಗರಗರನೆ ಸುತ್ತಿಸುತ್ತಿರಲಾಗಿ, ಸುತ್ತಲೂ ಸುತ್ತಿದು
ದೂ, ಅದೇ ದೂರ್ವಾಸಮಹರ್ಷಿಯ ಉಚ್ಛಿಷ್ಟವಾದ ಪರಮಾನ್ನವನ್ನು ಮೈಯ
ಲ್ಲಿ ಲೇಪಿಸಿಕೊಂಡು ವಿಷ್ಣುವು ವಜ್ರದೇಹವನ್ನು ಪಡೆದುಕೊಂಡು ನಡೆದುದೂ, ಆ
ಪಾಯಸದ ಲೇಪನವಾಗದೆ ಯಿದ್ದ ಕಾಲಿಗೆ ಕೃಷ್ಣಾವತಾರದಲ್ಲಿ ಜರಕನೆಂಬ ಬೇಡನ
ಬಾಣದ ಏಟು ತಗುಲಿ, ಕೃಷ್ಣನಿಗೆ ಮರಣ ಸಂಭವಿಸಿದುದೂ ॥೨೦॥ ಕೃಷ್ಣನೊ
ಬ್ಬನು ನಾಶಗೊಂಡ ಬಳಿಕ ಯಾದವ ಸೇನೆಯೆಲ್ಲವೂ ತಮ್ಮತಮ್ಮಲ್ಲೇ ಕಾದಿ ಮೃತ
ವಾದುದೂ, ಬಳಿಕ ಬಲರಾಮನೂ ಸತ್ತು ಸರ್ಪರೂಪನಾಗಿ ಹೋದುದೂ, ದೂರ್ವಾ
ಸಮಹರ್ಷಿಯ ವಚನದಮೇರೆಗೆ ಸಾಂಬನ ಹೊಟ್ಟೆಯಲ್ಲಿ ಹುಟ್ಟಿದ ಒನಕೆಯೇ ಆ
ಕೃಷ್ಣನ ಕುಲದ ವಿನಾಶಕ್ಕೆ ಹೇತುವಾದುದೂ, (ಎಂದರೆ-ಯಾದವರು ಸಾಂಬನೆಂಬವ
ನಹೊಟ್ಟೆಗೆ ಒನಕೆಯೊಂದನ್ನು ಕಟ್ಟಿ ಬಸುರು ಹೆಂಗುಸಿನಂತೆ ಮಾಡಿ, ದೂರ್ವಾಸ
ಮಹರ್ಷಿಗೆ ತೋರಿಸಿ, ಈ ಹೆಂಗುಸು ಏನನ್ನು ಹೆರುವಳೆಂದು ಹಾಸ್ಯಮಾಡಿ ಕೇಳಲು,

ಹರಣಕ್ರಮಃ ॥ ಕಿಂಚವಿಪ್ರೇಷುನಿಖಿಲಾಂಹೃತವತ್ಸುವಸುಂಧರಾಂ॥೫೪॥ ಅಬ್ಧೌಪತಿತ್ವಾಪರಶುರಾಮಸ್ಯಮರಣಕ್ರಮಃ। ವನವಾಸವಿಧಾರಾಜ್ಯಂತ್ಯಕ್ತ್ವಾ ದಾಶರಥೇಸ್ತತಃ ॥೨೬॥ ತತ್ಪ್ರೇಯಸ್ಯಾರಾವಣೇನಬಂದೀಕೃತವಿಧಾಪುನಃ॥ ತದಾತ್ಮಜೇನೇಂದ್ರಜಿತಾರಚಿತೋಬಂಧನಕ್ರಮಃ ॥೨೭॥ ಕಿಂಚಕೋಪೇತ್ಯಬ್ರಹ್ಮಹತ್ಯಾಂಬಾಲಿರಾವಣಯೋರ್ವಧಾತ್। ಧರಾಪ್ರದಕ್ಷಿಣವಿಧಾರಚಿತಾತೇನಸಂತತಂ॥೨೮॥ ತದ್ಬ್ರಹ್ಮಹತ್ಯಾಹೃತಯೇಪ್ರತಿಷ್ಠಾಪ್ಯಾತಿಭಕ್ತಿತಃ ॥ ರಾಮೇಶ್ವರಂಮುದಾನಿತ್ಯಂ ಕೃತಾಪೂಜಾವಿಧಾತ್ಮನಾ॥

---

ನಿಮ್ಮ ವಂಶವನ್ನು ಹಾಳ್ಮಾಡುವ ಒನಕೆಯನ್ನು ಹೆರುವಳೆಂದು ಅವರು ನುಡಿಯಲು, ಎಲ್ಲರೂ ಬೆದರಿ, ಆ ಒನಕೆಯನ್ನು ತೆಯ್ದು ಕುಡಿದು, ಕಬ್ಬಿಣದ ಕಟ್ಟನ್ನು ನೀರಿಗಿಟ್ಟರು. ಅದನ್ನು ಒಂದು ಮೀನು ನುಂಗಿತು. ಆ ಮೀನನ್ನು ಜರಕನೆಂಬ ಬೆಸ್ತನು (ರಾಮಾವತಾರದಲ್ಲಿ ರಾಮನಿಂದ ವಧಿಸಲ್ಪಟ್ಟಿದ್ದ ವಾಲಿಯೇ ಈ ಜರಕನಾಗಿ ಹುಟ್ಟಿದ್ದನು) ಹಿಡಿದು, ಅದರ ಹೊಟ್ಟೆಯಲ್ಲಿದ್ದ ಕಬ್ಬಿಣದ ಬಳೆಯನ್ನು ಕರಗಿಸಿ ಬಾಣವನ್ನು ಮಾಡಿಟ್ಟುಕೊಂಡಿದ್ದು, ಕಡೆಗೆ ಕೃಷ್ಣನ ಕಾಲಿಗೆ ಪ್ರಯೋಗಿಸಿಕೊಂದನು.) ಅರ್ಜುನನು ಮಾಡಿದ ಶ್ರಾದ್ಧದಲ್ಲಿ ನಾರಾಯಣನು ಬಲಿಯಾದುದೂ ಕಳ್ಳರು ೧೬ ಸಾವಿರ ಗೋಪಿಕಾಸ್ತ್ರೀಯರನ್ನು ಕದ್ದುಕೊಂಡು ಹೋದುದೂ, ಮತ್ತು ತನ್ನಿಂದ ದಾನವನ್ನು ಪಡೆದುಕೊಂಡ ಬ್ರಾಹ್ಮಣರು ಸಕಲ ಭೂಮಿಯನ್ನೂ ತಾವೇ ಆಕ್ರಮಿಸಿಕೊಳ್ಳಲು, ನಿಲ್ಲುವುದಕ್ಕೆ ತಾವಿಲ್ಲದೆ ಪರಶುರಾಮನು ಸಮುದ್ರದಲ್ಲಿ ಬಿದ್ದು ಮರಣಗೊಂಡುದೂ ಮತ್ತೂ ರಾಮನು ರಾಜ್ಯವನ್ನುತೊಲಗಿ ವನವಾಸಗೊಂಡುದೂ ॥೨೬॥ ಆ ರಾಮನ ಹೆಂಡತಿಯಾದ ಸೀತೆಯನ್ನು ರಾವಣಾಸುರನು ಸೆರೆಯಲ್ಲಿಟ್ಟಿದ್ದುದೂ, ಆ ರಾವಣನಮಗನಾದ ಇಂದ್ರಜಿತುವಿನಿಂದ ರಾಮನು ಮೂರ್ಛೆಗೊಂಡು ನಿಶ್ಚೇಷ್ಟನಾಗಿ ಬಿದ್ದಿದ್ದುದೂ ॥೨೭॥ ಮತ್ತೂ ವಾಲಿಯನ್ನೂ ರಾವಣನನ್ನೂ ಕೊಂದುದರಿಂದ ರಾಮನು ಬ್ರಹ್ಮಹತ್ಯಾದೋಷವನ್ನು ಹೊಂದಿ ಭೂಪ್ರದಕ್ಷಿಣೆಯನ್ನು ಮಾಡಿದುದೂ ॥೨೮॥ ಆ ಬ್ರಹ್ಮಹತ್ಯಾದೋಷ ಶಾಂತಿಗಾಗಿ ರಾಮನು ಅತ್ಯಂತ ಭಕ್ತಿಯಿಂದ ರಾಮೇಶ್ವರ ಲಿಂಗವನ್ನು ಸಂತೋಷದಿಂದ ಪ್ರತಿಷ್ಠಾಪಿಸಿ ಪೂಜಿಸಿದುದೂ ಅದೇ ರಾಮನು ಹೆಂಡತಿಯ ಪಾತಿವ್ರತ್ಯದ ವಿಷಯದಲ್ಲಿ ಅಪನಂಬುಗೆಗೊಂಡು ಆಕೆಯನ್ನು ತೊರೆದು,* ತಮ್ಮನನ್ನು ತಾನೇ ವಧಿಸಿ, ಸರಯೂನದಿಯಲ್ಲಿ ಬಿದ್ದು ಮೃತ

---

* ಸೀತೆಯನ್ನು ಕೊಂದು ಬಿಡೆಂದು ಹೇಳಿ, ಲಕ್ಷ್ಮಣನೊಡನೆ ಆಕೆಯನ್ನು ರಾಮನು ಅರಣ್ಯಕ್ಕೆ ಕಳುಹಿಸಿದ ಸಂಗತಿಯು ರಾಮಾಯಣದಲ್ಲಿ ಪ್ರಸಿದ್ಧವಾಗಿದೆ. ಆದರೆ ಇಲ್ಲಿ ಗುರುರಾಜ ಕವಿಗಳು ರಾಮನು ಸೀತೆಯನ್ನು ತೊರೆದು ತಮ್ಮನನ್ನು ತಾನೇ ಕೊಂದನೆಂದು ಹೇಳಿರುವರು. ಇದಕ್ಕೆ ಯಾವ ಗ್ರಂಥದಲ್ಲಿ ಆಧಾರವಿರುವುದೋ ತಿಳಿಯಲಿಲ್ಲ

ತ್ಯಕ್ತ್ವಾ ಭಾರ್ಯಾಮವಿಶ್ವಾಸಾದ್ಧತ್ವಾಽನುಜಮಪಿಸ್ವಯಂ ॥ ಪತಿತ್ವಾಸರ
ಯೂನದ್ಯಾಂಸಂಪ್ರಾಪ್ತಮರಣಕ್ರಮಃ ॥೩೦॥ ಮತ್ಸ್ಯಾವತಾರಂಸಂಹೃ
ತ್ಯತದೀಯಮತಿಗರ್ವಿತಂ ॥ ಗಂಗಾಧರೇಣರಚಿತೋಮಸ್ತಕಾವೇಷ್ಟನ
ಕ್ರಮಃ ॥೩೧॥ ಕಿಂಚಕೂರ್ಮಾವತಾರಸ್ಯತದೀಯಸ್ಯಹತಸ್ಯಚ ॥ ಹರಹಾ
ರಲತಾಮಧ್ಯೇಸಪಾಪಾಶವಿಧಾಪುನಃ ॥೩೨॥ ಮಹಾವರಾಹದಂಷ್ಟ್ರಾಯಾಸ್ತ
ದೀಯಾಯಾಅಮರ್ಷತಃ ॥ ಉತ್ಪಾಟಿತಾಯಾಗಿರಿಶಪ್ರಕೋಷ್ಠೇಸಂಸ್ಥಿತಿಕ್ರ
ಮಃ ॥೩೩॥ ನೃಸಿಂಹಕೃತ್ತಿಮುತ್ಕೃತ್ಯಪರಮೇಶೇನಲೀಲಯಾ ॥ ತಯಾಕೃ
ತ್ವಾವಿರಚಿತಾವಸನತ್ವವಿಧಾಪಿಚ ॥೩೪॥ ತ್ರಿವಿಕ್ರಮಾವತಾರಸ್ಯಕಂಕಾ
ಲಸ್ಯಮಹೀಯಸಃ ॥ ಖಟ್ವಾಂಗಾಕಾರತಶ್ಶಂಭುಹಸ್ತೇಸ್ಥಿತಿವಿಧಾಽನಿಶಂ ॥
ದಕ್ಷಾಧ್ವರೇಮಸ್ತಕಸ್ಯಚ್ಛಿನ್ನಸ್ಯಹವನೀಯಕೇ ॥ ಪಾವಕೇಲೋಕವಿ
ಖ್ಯಾತಾಪತನಸ್ಯವಿಧಾತಥಾ ॥೩೬॥ ಧಾವತೋಮೃಗರೂಪೇಣಶಿರೋವಿಚ್ಛೇ
ದನಕ್ರಮಃ ॥ ವಿಷ್ವಕ್ಸೇನಶರೀರಸ್ಯಶಿವಶೂಲಸ್ಥಿತಿಕ್ರಮಃ ॥೩೭॥ ಕಪಾಲಂ
ಶಿವಹಸ್ತಸ್ಥಂಸಿಭಿರ್ವಿದ್ಯಾಲಿಕಮಾತ್ಮನಃ ॥ ರಕ್ತಧಾರಾಭಿರಾಪೂರ್ಯಮೂರ್ಧ

---

ನಾದುದೂ ॥೩೦॥ ಹಾಯೂ ಮತ್ಸ್ಯಾವತಾರವನ್ನೆತ್ತಿರಲು, ಅತ್ಯಂತ ಗರ್ವವೇರಿದ್ದ ಆ
ಮತ್ಸ್ಯವನ್ನು ಶಿವನು ಸಂಹರಿಸಿ, ಅದರ ಅಂಗವನ್ನು ಶಿರೋವೇಷ್ಟನಮಾಡಿಕೊಂಡು
ದೂ ॥೩೧॥ ಕೂರ್ಮಾವತಾರವನ್ನೆತ್ತಿ ಶಿವನಿಂದ ಹತಿಗೊಂಡು, ಆ ಪರಶಿವನ ಕಂಠ
ಹಾರದ ಮಧ್ಯದಲ್ಲಿ ಪದಕವಾಗಿ ಒಪ್ಪುತ್ತಿರುವುದೂ ॥೩೨॥ ಆ ವಿಷ್ಣುವು ವರಾಹಾ
ವತಾರದಲ್ಲಿ ಮತ್ತನಾಗಿ ವಿಹರಿಸುತ್ತಿರಲು, ಶಿವನು ಕೋಪದಿಂದ ಅದನ್ನು ಸಂಹರಿಸಿ
ಅದರ ಕೋರೆದಾಡೆಗಳನ್ನು ಮುರಿದು ಕೈಯಲ್ಲಿ ಧರಿಸಿಕೊಂಡುದೂ ॥೩೩॥ ನೃಸಿಂ
ಹಾವತಾರದಲ್ಲಿ ಪರಮೇಶ್ವರನು ಅವನನ್ನು ಕೊಂದು, ಮೈಯ ತೊಗಲನ್ನು ಸುಲಿ
ದು, ತನ್ನ ಹೊದಿಕೆಯನ್ನಾಗಿ ಮಾಡಿಕೊಂಡುದೂ ॥೩೪॥ ವಾಮನಾವತಾರದಲ್ಲಿ ಅ
ವನ ದೊಡ್ಡ ಬೆನ್ನೆಲುವನ್ನು ಶಿವನು ಮುರಿದು, ಊರುಗೋಲಾಗಿ ಯಾವಾಗಲೂ ಕೈ
ಯ್ಯಲ್ಲಿ ಹಿಡಿದುಕೊಂಡುದೂ ॥೩೫॥ ದಕ್ಷಯಜ್ಞದಲ್ಲಿ ಅಂಗವಾಗಿದ್ದ ವಿಷ್ಣುವಿನ ಮಸ್ತ
ಕವು ಕತ್ತರಿಸಲ್ಪಡಲಾಗಿ, ಅದು ಆ ಹವನೀಯಾಗ್ನಿಯಲ್ಲಿ ಲೋಕಪ್ರಸಿದ್ಧವಾಗಿಬಿದ್ದು
ಕೊಂಡುದೂ ॥೩೬॥ ವಿಷ್ಣುವು ಜಿಂಕೆಯರೂಪದಿಂದ ಯಜ್ಞಶಾಲೆಯಲ್ಲಿ ಓಡಿಹೋ
ಗುತ್ತಿರಲು, ವೀರಭದ್ರನು ಅದರ ಶಿರವನ್ನು ಕತ್ತರಿಸಿದುದೂ, ವೈಕುಂಠದ್ವಾರದಲ್ಲಿ
ನಿಂತು ಶಿವನನ್ನು ತಡೆದ ವಿಷ್ವಕ್ಸೇನನು ಶಿವನ ಶೂಲಾಗ್ರದಿಂದ ತಿವಿಯಲ್ಪಟ್ಟು ಅ
ದರಮೇಲೆ ಸಿಕ್ಕಿಕೊಂಡಿರುವುದೂ ॥೩೭॥ ಭಿಕ್ಷಾಟನಲೀಲಾಧಾರಿಯಾದ ಶಿವನ ಕೈಯ
ಲ್ಲಿದ್ದ ಬ್ರಹ್ಮಕಪಾಲಕ್ಕೆ ವಿಷ್ಣುವು ತನ್ನ ಹಣೆಯನ್ನು ಸೀಳಿ, ರಕ್ತವನ್ನು ಸುರಿಸಿ,

ಯಾಪತನಕ್ರಮಃ ||೩೮|| ಉರುಲಿಂಗಸ್ಯ ಚರಣಾವವಲೋಕಯಿತುಂಜ
ವಾತ್ | ಪರಿಪ್ರಾಪ್ತವರಾಹತ್ವವಿಧಾಸ್ಯೇನಸ್ಯ ಭೂತಲೇ ||೩೯|| ಪ್ರತ್ಯಬ್ದಂ
ಚ ಪ್ರತಿಗ್ರಾಮಂ ಕಾಮದಾಹೇ ಕೃತೇ ಸತಿ | ತದ್ವಾರಣಾಸಮರ್ಥಸ್ಯ ಕ್ಲೇ
ಶಪ್ರಾಪ್ತಿವಿಧಾ ತಥಾ ||೪೦|| ಚಲಿತೇ ವ್ಯಾಸಹಸ್ತೇಽಭ್ರೇ ಲಂಬಮಾನೇ ನಿರಂ
ತರಂ | ತದ್ರಕ್ಷಣಂ ವಿರಚಿತುಮಸಾಮರ್ಥ್ಯವಿಧಾಪಿ ಚ ||೪೧|| ಅವಮಾ
ನೈರ್ಮಹೇಶೇನ ರಚಿತೈರೇವಮಾದಿಭಿಃ | ಅಹಂಕಾರಕ್ಷಯವಿಧಾ ವಿಷ್ಣೋ
ರಸ್ಮಿನ್ಮಹೀತಲೇ ||೪೨|| ಕಿಂಚ ಕ್ಷೀರಾರಾಮಪುರೇ ಶಿವಂ ಸಂಸ್ಥಾಪ್ಯ ಯ
ತ್ನತಃ | ವಿಷ್ಣುನಾ ರಚಿತಾ ಭಕ್ತ್ಯಾ ತದೀಶಸ್ಯಾರ್ಚನಾವಿಧಾ ||೪೩|| ವಾ
ರಾಣಸ್ಯಾಂ ಚ ವಿಶ್ವೇಶಂ ಪ್ರತಿಷ್ಠಾಪ್ಯ ಸ್ವನಾಮತಃ | ಕ್ರಿಯಮಾಣಾ ಚ
ಸದ್ಭಕ್ತ್ಯಾ ಮಹೇಶಸ್ಯಾರ್ಚನಾವಿಧಾ ||೪೪|| ಇಂದ್ರನೀಲಮಯಂ ಲಿಂ
ಗಂ ಭಕ್ತ್ಯಾ ಪರಮಯಾ ಸಹ | ಸಜ್ಜಿಕಾಯಾಂ ವಿನಿಕ್ಷಿಪ್ಯ ತನ್ಯಮಾನಾಽ
ರ್ಚನಾವಿಧಾ ||೪೫|| ಕಿಂ ಸಹಸ್ರೇಣ ವಚಸಾಂ ಸ್ಥಿರಭಕ್ತೇನ ವಿಷ್ಣುನಾ |
ವಿಶ್ವೇಶ್ವರಸ್ಯ ಸದ್ಭಕ್ತ್ಯಾ ಸತತಂ ಭಜನಾವಿಧಾ ||೪೬|| ನಿಗ್ರಹಾನುಗ್ರಹ

---

ತಂಬಿ, ಮೂರ್ಛೆಗೊಂಡು ಬಿದ್ದುದೂ ||೩೮|| ಬ್ರಹ್ಮ ವಿಷ್ಣುಗಳ ವಾದವನ್ನಡಗಿಸುವು
ದಕ್ಕಾಗಿ ಪರಮೇಶ್ವರ ಮಧ್ಯದಲ್ಲಿ ಉದ್ಭವಿಸಿದ ಉರುಲಿಂಗದ ಪಾದಗಳನ್ನು ಬೇಗನೆ
ನೋಡಿ ಬರುವುದಕ್ಕಾಗಿ ವಿಷ್ಣುವು ತಾನೇ ಹಂದಿಯ ರೂಪವನ್ನು ಧರಿಸಿದುದೂ ||೩೯||
ಪ್ರತಿವರ್ಷವೂ ಪ್ರತಿಯೊಂದು ಗ್ರಾಮದಲ್ಲೂ ತನ್ನ ಮಗನಾದ ಕಾಮನ ದಹನವು
ಮಾಡಲ್ಪಡುತ್ತಿರಲಾಗಿ, ಅದನ್ನು ತಪ್ಪಿಸುವುದಕ್ಕೆ ಅಸಮರ್ಥನಾದ ವಿಷ್ಣುವು ದುಃ
ಖಿಸುತ್ತಿರುವುದೂ ||೪೦|| ನಂದೀಶ್ವರನಿಂದ ಸ್ತಂಭಿತವಾದ ವ್ಯಾಸನ ತೋಳು ಯಾವಾ
ಗಲೂ ಅಂತರಿಕ್ಷದಲ್ಲಿ ಜೋತುಬಿದ್ದು ಅಲ್ಲಾಡುತ್ತಿದ್ದರೂ, ಅದನ್ನು ಕಾಪಾಡುವುದ
ಕ್ಕೆ ಸಾಮರ್ಥ್ಯವಿಲ್ಲದೆ ಇರುವುದೂ ||೪೧|| ಇವೇ ಮೊದಲಾದ ಕ್ರಿಯೆಗಳಿಂದ ಈಶ್ವ
ರನು ವಿಷ್ಣುವಿನ ಅಹಂಕಾರವನ್ನಡಗಿಸುವುದಕ್ಕಾಗಿ ಈ ಭೂತಲದಲ್ಲಿ ಮಾಡಿರುವ ರೀ
ತಿಯೂ ||೪೨|| ಮತ್ತೂ ಕ್ಷೀರಾರಾಮವೆಂಬ ಪಟ್ಟಣದಲ್ಲಿ ವಿಷ್ಣುವು ಶಿವಲಿಂಗಸ್ಥಾಪ
ನೆಯನ್ನು ಮಾಡಿ, ಭಕ್ತಿಯಿಂದ ಆ ಶಿವಾರಾಧನೆಯನ್ನು ಮಾಡಿರುವುದೂ ||೪೩|| ಮ
ತ್ತೂ ಕಾಶಿಯಲ್ಲಿ ತನ್ನ ಹೆಸರಿನಿಂದ ವಿಶ್ವೇಶ್ವರಲಿಂಗವನ್ನು ಪ್ರತಿಷ್ಠಿಸಿ, ಉತ್ತಮಭ
ಕ್ತಿಯಿಂದ ಶಿವಾರ್ಚನೆಯನ್ನು ಮಾಡುತ್ತಿರುವುದೂ ||೪೪|| ಇಂದ್ರನೀಲರತ್ನದ ಲಿಂ
ಗವನ್ನು ಕರಡಿಗೆಯಲ್ಲಿ ಇರಿಸಿಕೊಂಡು, ಉತ್ಕೃಷ್ಟಭಕ್ತಿಯಿಂದ ಪೂಜಿಸುತ್ತಿರುವು
ದೂ ||೪೫|| ಸಾವಿರ ಮಾತುಗಳಿಂದೇನು ಪ್ರಯೋಜನ? ದೃಢಭಕ್ತನಾದ ವಿಷ್ಣುವು
ಯಾವಾಗಲೂ ಕಾಶಿಯಲ್ಲಿ ವಿಶ್ವೇಶ್ವರನನ್ನು ಸೇವಿಸುತ್ತಿರುವ ರೀತಿಯೂ ||೪೬|| ನಿಗ್ರ

ವತಶ್ಶಂಕರೇಣೈವಶಾರ್ಙ್ಗಿಣಃ । ಪ್ರಾಪ್ತಭಂಗಸ್ಯಾಪಗತಗರ್ವಸ್ಯಪರ
ಮೇಶ್ವರೇ ||೪೭|| ಸದ್ಭಕ್ತ್ಯಾಸಾಂಗಯಾಜಾತಾ ದಿವ್ಯಶೋಭಾವಿಧಾ
ಯಿಚ। ವೇದಶಾಸ್ತ್ರಾಗಮಪುರಾಣಾದಿವಾಕ್ಯೇಷುಕಥ್ಯತೇ||೪೮|| ತಸ್ಮಾತ್ಕಿಂ
ಪ್ರತ್ಯಯೈರನ್ಯೈಃ ಪಾಂಚರಾತ್ರಾದಿಕೇಷ್ವಪಿ । ಅಸತ್ಯೇಷುವ್ರತೇಷ್ವೇ
ಷು ಭವೇತ್ಕಿಂಮುಕ್ತಿರುತ್ತಮಾ ||೪೯|| ಮಹಿಮ್ನಃಪರಮೇಶಸ್ಯ ವಿ
ಷ್ಣೋರ್ಹೀನಸ್ಥಿತೇರಪಿ । ಅಯಮೇವಹಿದೃಷ್ಟಾಂತಶ್ಶ್ರೃಣುಸಮ್ಯಗ್ವಿಚಾ
ರಿತೇ ||೫೦|| ನಿತ್ಯೇಶಿವೇಽರ್ಚಿತೇಮುಕ್ತಿ ರಾಯಾತ್ಯೇವಶಿವಂಕರಾ । ಅ
ನಿತ್ಯೇಪೂಜಿತೇವಿಷ್ಣೌ ಸಾಮುಕ್ತಿಸ್ಸ್ಯಾತ್ಕಥಂನೃಣಾಂ ||೫೧|| ತಸ್ಮಾದ
ತ್ಯಂತವಿಕೃತಂಮತಂ ತೇಪಾಂಚರಾತ್ರಕಂ । ಮೋಕ್ಷಮಾರ್ಗಸ್ಯನಭವ
ತ್ಯುಪಕಾರಿನಸಂಶಯಃ। ಕೇವಲಂವೈಷ್ಣವೋನತ್ವಂ ತದ್ಬೌದ್ಧೋಭವಸಿ
ಧ್ರುವಂ । ಕಥಂತದಿತಿಚೇದ್ವಿಷ್ಣುಃ ಪುರಸಂಹರಣಕ್ಷಣೇ ||೫೩|| ಯತಶ್ಶಿ
ವಾಜ್ಞಯಾಸಾಕ್ಷಾದ್ಬುದ್ಧಸ್ಸಮಭವತ್ತತಃ । ದಶಜನ್ಮಸ್ವಪಿಪರೇ ಸ್ಸ

---

ಹಾನುಗ್ರಹ ಸಮರ್ಥನಾದ ಶಿವನಿಂದ ವಿಷ್ಣುವು ನಾನಾ ಭಂಗಗಳನ್ನೈದಿ ಗರ್ವವನ್ನು
ತೊರೆದು, ಸಮಗ್ರ ಶಿವಭಕ್ತಿ ಸಂಪನ್ನನಾದುದರಿಂದ ಮಹಾಪ್ರಭಾವವನ್ನು ಪಡೆದು
ಕೊಂಡ ರೀತಿಯೂ ಸಹ ವೇದಶಾಸ್ತ್ರಾಗಮ ಪುರಾಣ ಮೊದಲಾದುವುಗಳ ವಚನಗಳ
ಲ್ಲೆಲ್ಲಾ ಹೇಳಲ್ಪಡುತ್ತಿದೆ. ||೪೮|| ಆದುದರಿಂದ ಇತರ ವಚನ ವಿಶ್ವಾಸಗಳಿಂದ ಪ್ರ
ಯೋಜನವೇನು? ಅನೃತಗಳಾದ ಪಾಂಚರಾತ್ರಾದಿ ವ್ರತಗಳ ಆಚರಣೆಯಲ್ಲಿ ಮುಕ್ತಿ
ಲಾಭವಾಗುವುದುಂಟೆ ? ||೪೯|| ಚೆನ್ನಾಗಿ ವಿಚಾರಮಾಡಿ ನೋಡಿದರೆ ಈಶ್ವರನ ಮಹಿ
ಮೆಗೂ, ವಿಷ್ಣುವಿನ ಹೀನಸ್ಥಿತಿಗೂ ಸಹ ಇದೊಂದೇ ದೃಷ್ಟಾಂತವಲ್ಲವೆ? ||೫೦|| ಏನೆಂ
ದರೆ—ಶಿವನು ನಿತ್ಯನಾದವನು: ಅವನನ್ನು ಪೂಜಿಸಿದರೆ ಮಂಗಳಕರವಾದ ಮುಕ್ತಿ
ಯು ಪ್ರಾಪ್ತವಾಗಿಯೇ ಆಗುವುದು. ವಿಷ್ಣುವಾದರೊ ಅನಿತ್ಯನಾದವನು, ಅವನ
ನ್ನು ಪೂಜಿಸಿದರೆ ಮನುಷ್ಯರಿಗೆ ಮುಕ್ತಿಯು ಹೇಗೆ ಲಭಿಸುವುದು ? ||೫೧|| ಆದು
ದರಿಂದ ಅತ್ಯಂತವಿಕಾರವಾದ ನಿನ್ನ ಪಾಂಚರಾತ್ರಮತವು ಮೋಕ್ಷಮಾರ್ಗಕ್ಕೆ ಎಂ
ದಿಗೂ ಸಾಧಕವಾಗುವುದಿಲ್ಲ. ಈ ಮಾತಿಗೆ ಸಂಶಯವಿಲ್ಲ. ||೫೨|| ಎಲೆ ವಾದಿಯೆ,
ನೀನು ಕೇವಲವೈಷ್ಣವನೇ ಅಲ್ಲ; ಬೌದ್ಧಮತದವನಾಗಿದ್ದೀಯೆ, ಅದು ನಿಜ.
ಹೇಗೆಂದರೆ—ಈಶ್ವರನು ತ್ರಿಪುರಸಂಹಾರ ಮಾಡುವಕಾಲದಲ್ಲಿ ವಿಷ್ಣುವು ಶಿವನಪ್ಪ
ಣೆಯಮೇರೆ ಬುದ್ಧನಾಗಿದ್ದುದರಿಂದಲೂ ||೫೩|| ವಿಷ್ಣುವಿನ ಹತ್ತು ಅವತಾರಗಳ
ಲ್ಲಿ ಈ ಬೌದ್ಧಾವತಾರವೂ ಸೇರಿರುವುದರಿಂದಲೂ, ಭೂಮಿಯಲ್ಲಿ ಕೂರ್ಮಮೂರ್ತಿಯು

ಧ್ಯಾಭವಾದ್ಬುದ್ಧಜನ್ಮನಃ ||೫೪|| ಕೂರ್ಮವಾಮನದಾಸೇಷು ವಿದ್ಯಮಾನೇಷುಭೂತಲೇ । ಅವಿದ್ಯಮಾನೇಷುಪುನರ್ಬುದ್ಧದಾಸೇಷ್ವಪಿಸ್ಫುಟಂ||೫೫|| ಸ್ವಲ್ಪಭೇದತಯಾಬೌದ್ಧ ಜೈನಯೋಶ್ಚ ಪ್ರತಿಬಾಹ್ಯಯೋಃ । ಸಾಕ್ಷಾನ್ಮಾಧವಏವಾತ್ರ ಬುದ್ಧೋಭವತಿಭೂತಲೇ ||೫೬|| ಬಹುನಾಕಿಂಬೌದ್ಧಏವ ವೈಷ್ಣವಸ್ಸ್ಯಾನ್ನಸಂಶಯಃ ।

ಇತ್ಯಸಂಖ್ಯಾತಮಹಾಮಾಹೇಶ್ವರ......................ಶ್ರೀವೀರಶೈವ
ಮತಾಚಾರ್ಯ ಗುರುರಾಜಸ್ಯ ಕೃತೌ ಶ್ರೀಮಲ್ಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ವಾದಪ್ರಕ
ರಣೇ ಪಾಂಚರಾತ್ರನಿರಾಸಕಥನಂ ನಾಮ
ಅಷ್ಟಮೋಽಧ್ಯಾಯಃ

---

ನ್ನು ಪೂಜಿಸುವ ಭಕ್ತರೂ, ವಾಮನಮೂರ್ತಿಯನ್ನು ಸೇವಿಸುವ ಜನರೂ ಇರುತ್ತಿದ್ದು, ಅವರಂತೆಯೇ ಬುದ್ಧದೇವಾರಾಧಕರಾದ ಜನರು ಬೇರೆ ಇರದೆ ಇರುವುದರಿಂದಲೂ, ಬೌದ್ಧರೆಂಬವರಿಗೂ ಜೈನರಿಗೂ ಸ್ವಲ್ಪ ಭೇದವಿರುತ್ತ, ಅವರು ಪ್ರತ್ಯೇಕವರ್ಗದವರಾಗಿರುವುದರಿಂದಲೂ, ದಶಾವತಾರದಲ್ಲಗ್ರಗಣ್ಯನಾದ ಬುದ್ಧದೇವನೂ, ಅವನ ಭಕ್ತರೂ ಇಲ್ಲದೆ ಹೋಗುವ ಕಾರಣದಿಂದಲೂ, ಭೂಮಿಯಲ್ಲಿ ವಿಷ್ಣುವೇ ಪ್ರತ್ಯಕ್ಷನಾದ ಬುದ್ಧನಾಗಿರುವನು. ಹೆಚ್ಚು ಮಾತಿನಿಂದ ಪ್ರಯೋಜನವೇನು ? ವಿಷ್ಣುಭಕ್ತನೇ ಬೌದ್ಧನಾಗಿರುವನು. ಈ ವಿಷಯದಲ್ಲಿ ಸಂಶಯವಿಲ್ಲ. ||೫೬||

ಎಂದು ಶ್ರೀಮತ್ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಮತ್ಪಂಡಿತಾ
ರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿರಚಿತವಾದ
" ಭಾವಮಂಜರಿ " ಯೆಂಬ ಕನ್ನಡ ಟಿಪ್ಪಣದಲ್ಲಿ ವಾದ
ಪ್ರಕರಣದೊಳಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾ
ರಾಧ್ಯರು ಪಾಂಚರಾತ್ರವಾದವನ್ನು ಖಂ
ಡಿಸಿದುದನ್ನು ನಿರೂಪಿಸುವ ೮ನೆಯ
ಅಧ್ಯಾಯವು ಮುಗಿದುದು.

# ಅಥನವಮೋಽಧ್ಯಾಯಃ.

(ಬೌದ್ಧಮತವಾದನಿರಸನಂ.)

ಬೌದ್ಧಾ ಕರ್ಣಯ ಬೌದ್ಧಂತೇಮತಂಶ್ರುತಿವಿರುದ್ಧಕಂ। ಭವಪಾಶೇನ ಸಂಬದ್ಧಂ ನಿಷಿದ್ಧಂ ಭುವನೇ ಸದಾ ॥೧॥ ಅಬದ್ಧಂ ಪಾಪಸಂಬದ್ಧಂ ಸಮೃದ್ಧಂ ದುಃಖಸಂಚಯೈಃ। ವಿಜ್ಞಾನದೂರಂ ಸತತಂ ಭಾತಿ ಕೋಶೇ ಮನೋಮಯೇ ॥೨॥ ವಿಜ್ಞಾನಮಯಕೋಶಸ್ಸ ಏವ ಬುದ್ಧಿರಿತೀರ್ಯತೇ। ಸಾ ಬುದ್ಧಿಃ ಕ್ಷಣಿಕಾ ಪೂರ್ವಬುದ್ಧಿನಾಶಂ ಮುಹುರ್ಮುಹುಃ ॥೩॥ ಪ್ರಯಾಂತ್ಯಾಂ ವರ್ತತೇ ದೀಪಸಂತಾನ ಇವ ಸಂತತಂ । ಉತ್ತರೋತ್ತರಬುದ್ಧೌ ಹಿ ಸಂಪ್ರಾಪ್ತಾಯಾಂ ಸಮುತ್ಥಿಪಾ ॥೪॥ ಬುದ್ಧಿಸ್ಸತತರೂಪಾ ಸಾ ಭವತ್ಯಾತ್ಮಾ ವಿಚಾರಿತೇ।

---

## ೯ ನೆಯ ಅಧ್ಯಾಯವು.

(ಬೌದ್ಧಮತವಾದಖಂಡನವು)

ಎಲೆ ಬೌದ್ಧಮತದವನೆ, ನಿನ್ನ ಮತಲಕ್ಷಣವನ್ನು ಕೇಳು — ಅದು ವೇದವಿರುದ್ಧವಾದುದು. ಅತಿಶಯವಾಗಿ ಭವಪಾಶದಿಂದ ಕಟ್ಟುವಡೆದದ್ದು, ಲೋಕದಲ್ಲಿ ಯಾವಾಗಲೂ ನಿಷೇಧಿಸಲ್ಪಟ್ಟಿರತಕ್ಕದು ॥೧॥ ಶಾಸ್ತ್ರಬದ್ಧವಲ್ಲದುದು. ಪಾಪಾಚರಣದಿಂದ ಕೂಡಿದುದು, ನಾನಾ ಕ್ಲೇಶಗಳಿಂದ ತುಂಬಿರತಕ್ಕದು. ಯಾವಾಗಲೂ ಜ್ಞಾನಕ್ಕೆ ದೂರವಾದುದು. ಮತ್ತು ಮನೋಮಯಕೋಶದೊಳಗೆ ವಿಜ್ಞಾನಮಯಕೋಶವೆಂಬುದು ಶೋಭಿಸುತ್ತಿರುವುದು. ಅದೇ ಬುದ್ಧಿಯೆಂದು ಹೇಳಲ್ಪಡುತ್ತದೆ. ಆ ಬುದ್ಧಿಯು ಕ್ಷಣಿಕವಾದುದು. ಏಕೆಂದರೆ— ಒಂದು ದೀಪದಿಂದ ಮತ್ತೊಂದು ದೀಪವೂ ಅದರಿಂದ ಇನ್ನೊಂದು ದೀಪವೂ ಹೊತ್ತಿಕೊಳ್ಳುವಂತೆ ಮುಂದುಮುಂದೆ ನೂತನ ಬುದ್ಧಿಯು ಉತ್ಪನ್ನವಾಗುತ್ತ ಬಂದಂತೆ ಅದರದರ ಪೂರ್ವಬುದ್ಧಿಯು ನಾಶಗೊಳ್ಳುತ್ತದೆ. ॥೪॥ ವಿಚಾರಮಾಡಿದರೆ ಸಂತತಿರೂಪವಾದ ಆ ಬುದ್ಧಿಯೇ ಆತ್ಮನೆನಿಸಿಕೊಳ್ಳುತ್ತದೆ. ಈ ಬುದ್ಧಿ ಸಂತತಿಯಲ್ಲಿ ಯಾವಾಗಲೂ ಕ್ಷಣಿಕವಾಗಿರತಕ್ಕ ನಾಲ್ಕುತೆರದ * ಕ್ಷಣ(ಭಾವ)ಗಳಲ್ಲಿ ಯಾವುದಾದರೊಂದುತೆರದ ಜ್ಞಾನದಿಂದ ಕೂ

---

* ಸರ್ವಂಕ್ಷಣಿಕಂಕ್ಷಣಿಕಂ । ದುಃಖಂದುಃಖಂ । ಸ್ವಲಕ್ಷಣಂಸ್ವಲಕ್ಷಣಂ । ಶೂನ್ಯಂಶೂನ್ಯಂ । ಎಂಬಿವೇ ಚತುರ್ವಿಧ ಭಾವಗಳು,

ಏತಸ್ಯಾಂ ಬುದ್ಧಿಸಂತತ್ಯಾಂವರ್ತಮಾನೇಷುನಿತ್ಯಶಃ ॥೫॥ ಚತುರ್ವಿಧೇಷುಭಾವೇಷುಕ್ಷಣಿಕೇಷ್ವಂತರೇಪುನಃ । ಜ್ಞಾನೇನಯೇನಕೇನಾಪಿಸಂಯುಕ್ತಃಕ್ಷಣಏವಹಿ ॥೬॥ ಮೋಕ್ಷಸ್ಯಕಾರಣಮಿತಿಭವಾನ್ವದತಿಚೇಚ್ಛೃಣು । ಮೋಕ್ಷಸ್ಯಕಾರಣಂಭಾವೋಭವೇತ್ಕಿಂಕ್ಷಣಭಂಗುರಃ ॥೭॥ ಕೃತ್ವಾಸಂಖ್ಯಾಮೇಕಏಕಇತಿಪೂರ್ವಂತತಃಪರಂ । ವರ್ಜಯಿತ್ವಾಚತಾಂಸಂಖ್ಯಾಂದ್ವಾವಿತ್ಯುಚ್ಚಾರ್ಯತತ್ಪರಂ ॥೮॥ ಗಣನಾಂತಾಂಪರಿತ್ಯಜ್ಯತ್ರಯಇತ್ಯೇವಮೇವಹಿ । ಉತ್ತರೋತ್ತರಸಂಖ್ಯಾಯಾಂಕೃತಾಯಾಮವನೀತಲೇ ॥೯॥ ಯಥಾವಿನಾಶಮಾಯಾತಿಸಂಖ್ಯಾಸಾಪೂರ್ವಪೂರ್ವಿಕಾ । ಕೂಲಂಕಷೇನದೀಪೂರೇಪುರತಃಪರಿಸರ್ಪತಿ ॥೧೦॥ ಪಶ್ಚಾದ್ಭಾಗಸ್ತತ್ತಟಸ್ಯಾಯಥಾನಾಶಂಪ್ರಯಾತಿಚ । ಪುರೋಜ್ವಲತಿದಾವಾಗ್ನೌಯಥಾಪಶ್ಚಾತ್ಪರಂ ... ಶಾಮ್ಯತಿ ॥೧೧॥ ಕ್ರಮಾದುಚ್ಚಾರ್ಯಮಾಣೇಷುಚಾಕ್ಷರೇಷೂತ್ತರೋತ್ತರಂ।ಯಥಾಽಕ್ಷರಂಪೂರ್ವಪೂರ್ವಮುಪಯಾತಿವಿನಾಶಿತಾಂ॥೧೨॥ ಪುಷ್ಪಂ

---

ಡಿದ ಕ್ಷಣವೇ ಮೋಕ್ಷಕ್ಕೆ ಕಾರಣವಾಗುವುದು " ಎಂದು ನೀನು ವಾದಿಸುವೆಯಾದರೆ ಅದಕ್ಕೆ ಉತ್ತರವನ್ನು ಕೇಳು ॥೬॥ ಕ್ಷಣಮಾತ್ರವಿದ್ದು ನಷ್ಟವಾಗುವ ಭಾವವು ಶಾಶ್ವತ ಮೋಕ್ಷಕ್ಕೆ ಕಾರಣವಾಗುವುದುಂಟೆ? ॥೭॥ ಮತ್ತು " ಲೋಕದಲ್ಲಿ ಒಬ್ಬನು ಜನರನ್ನು ಲೆಕ್ಕಮಾಡುವಾಗ ಮೊದಲು " ಒಬ್ಬನು " ಎಂದೆಣಿಸಿ, ಬಳಿಕ, ಆ ಸಂಖ್ಯೆಯನ್ನು ಬಿಟ್ಟು, " ಇಬ್ಬರು " ಎಂದೆಣಿಸಿ, ಅನಂತರ ॥೮॥ ಆ ಸಂಖ್ಯೆಯನ್ನು ಬಿಟ್ಟು, " ಮೂರು " ಎಂದು ಹೇಳಿ, ಆಮೇಲೆ ಹೀಗೆಯೇ ಮುಂದು ಮುಂದಣ ಸಂಖ್ಯೆಯನ್ನು ಹೇಳುತ್ತ ಹೋದಂತೆ ಹಿಂದಣ ಸಂಖ್ಯೆಯು ಹೇಗೆ ಅಳಿದುಹೋಗುವುದೋ ಅದರಂತೆಯೂ, ಹೊಳೆಯ ಪ್ರವಾಹವು ದಡಗಳನ್ನು ಕಟ್ಟಿ ಮುಂದುಮುಂದಕ್ಕೆ ಹರಿದುಹೋದಂತೆ ಹಿಂದುಳಿದ ಪ್ರವಾಹವು ಹೇಗೆ ಅಳಿದು ಹೋಗುವುದೋ ಅದರಂತೆಯೂ, ಕಾಳ್ಕಿಚ್ಚು ಮುಂದೆ ಮುಂದೆ ಸುಟ್ಟುಕೊಂಡು ಹೋಗುತ್ತಿರಲಾಗಿ, ಹಿಂದಣ ಭಾಗವು ಹೇಗೆ ಆರಿಹೋಗುವುದೋ ಅದರಂತೆಯೂ ॥೧೧॥ ಕ್ರಮವಾಗಿ ಅಕ್ಷರಗಳನ್ನು ಮುಂದು ಮುಂದಕ್ಕೆ ಓದಿಕೊಂಡು ಹೋಗುತ್ತಿರಲಾಗಿ ಹಿಂದು ಹಿಂದಣ ಅಕ್ಷರಗಳು ಅಳಿದು ಹೋಗುವಂತೆಯೂ ॥೧೨॥ ಹೂವು ಕಾಯಿ ಹಣ್ಣು ಬೀಜ ಮೊಳಕೆ ಎಂಬಿವುಗಳು ಬಂದನಂತರ ಬಂದು ಆಗುವಾಗ ಉತ್ತರೋತ್ತರ ರೂಪವನ್ನು ಹೊಂದುತ್ತ ಹೋದಂತೆ ಅವುಗಳ ಪೂರ್ವರೂಪವು ಹೇಗೆ ಕೆಡುತ್ತ

ಫಲಂಚತತ್ಪಕ್ವಂತದ್ಬೀಜಂತನ್ನವಾಂಕುರಃ । ಭೂತ್ವಾಸ್ವಕಂಪೂರ್ವರೂ
ಪಂಪ್ರಜಹಾತಿಯಥಾತಥಾ ॥೧೩॥ ಆತ್ಮನ್ಯಗ್ರೇಗತೇಮುಕ್ತಿಂಪೂರ್ವಧ್ವಂ
ಸೋಭವೇದಿತಿ। ವದೇದ್ಯದಿಭವಾಂಸ್ತತ್ರಶೃಣುಸಂಗತಮುತ್ತರಂ ॥೧೪॥
ಸ್ಥಿತ್ವಾಬುದ್ಧಿರ್ಯತೋನಾಶಮುಪಯಾತಿತತಃಖಲು । ತ್ರಿಕ್ಷಣಾವಸ್ಥಿ
ತಿಯಾತದ್ಬುದ್ಧೇಃಪ್ರತ್ಯುತಸ್ಫುಟಂ ॥೧೫॥ ಕ್ಷಣವಾದಸ್ಯಭವತೋ
ಭಂಗಃಕಿಂನಭವೇದ್ಭುವಿ । ಕ್ಷಣವಾದಃಪ್ರಶಸ್ತೋಽಯಂಭವೇತ್ಕಿಂವಿದು
ಷಾಂಸತಾಂ ॥೧೬॥ ಉತ್ಪತ್ತಿಕ್ಷಣಏವೇಹಭವೇನ್ನಷ್ಟಃಕ್ಷಣೋಯದಿ ।
ತರ್ಹಿಸ್ವನಾಶಸಂಗ್ರಸ್ತೋಜನಿತುಂಪ್ರಭವೇತ್ಕಥಂ ॥೧೭॥ ವಿಚಾರಿತೇಸಚ
ಪುನಃಕಥಂಕಾರ್ಯಕ್ಷಮೋಭವೇತ್ । ನಷ್ಟೇತಸ್ಮಿನ್ ಕ್ಷಣೇತಸ್ಯಸಂತತೌಕ
ಶ್ಚನಕ್ಷಣಃ ॥೧೮॥ ಮೋಕ್ಷಂಪ್ರಯಾಸ್ಯತಿಚಿರಮಿತಿತ್ವಂಯದಿಜಲ್ಪಸಿ ।
ಸತುಮುಕ್ತಿಂಯಾತುನಾಮತವಲಾಭೋಽಸ್ತಿಕಿಂವದ ॥೧೯॥ ಸಮಂಚಿತ
ತರಾಏವಲೋಕೇಶೈವಗುಣಾದಯಃ। ಕಿಂಚಿದ್ಗುಣಾನ್ಯೇವಪುನಸ್ತ್ವದ್ವ್ರ
ತೇಹಿವಿಲೋಕಿತೇ ॥೨೦॥ ವವಂತಿವಾಚಾಽಹಿಂಸಾಚಸತ್ಯಂಚಾಸ್ಮದ್ವ್ರತೇ

---

ಹೋಗುವುದೋ ಅದರಂತೆಯೂ ॥೧೩॥ ಆತ್ಮನು ಮುಂದೆ ಮುಕ್ತಿಯನ್ನು ಪಡೆದು
ಕೊಂಡರೆ, ಪೂರ್ವಬುದ್ಧಿಗೆ ಅಳಿವುಂಟಾಗಿಯೇ ಆಗುವುದು ” ಎಂದು ಎಲೆ ವಾದಿ
ಯೆ ನೀನು ವಾದಿಸುವೆಯಾದರೆ, ಆ ವಿಷಯದಲ್ಲಿ ಸಮಂಜಸವಾದ ಉತ್ತರವನ್ನು
ಹೇಳುತ್ತೇನೆ ಕೇಳು ॥೧೪॥ ಯಾವ ಕಾರಣದಿಂದ ಬುದ್ಧಿಯು ಸ್ವಲ್ಪ ಕಾಲವಿದ್ದು
ನಾಶಗೊಳ್ಳುವುದೋ ಆ ಕಾರಣದಿಂದಲೂ, ಮತ್ತೂ ಆ ಬುದ್ಧಿಯು ತ್ರಿಕ್ಷಣಾವಸ್ಥೆಗ
ಳುಳ್ಳ ಕಾರಣದಿಂದಲೂ, ನಿನ್ನ ಕ್ಷಣವಾದಕ್ಕೆ ಭೂಮಿಯಲ್ಲಿ ಭಂಗವುಂಟಾಗದೆ ಇರು
ವುದೆ ? ಈ ನಿನ್ನ ಕ್ಷಣವಾದವು ಸಜ್ಜನರಾದ ವಿದ್ವಾಂಸರಿಗೆ ಪ್ರಶಸ್ತವಾಗಿ ತೋರುವು
ದೆ ? ॥೧೬॥ ಉತ್ಪನ್ನವಾದ ಕಾಲದಲ್ಲಿಯೇ ಕ್ಷಣವು ನಷ್ಟವಾಗುವುದೆಂದು ನೀನು
ಹೇಳುವೆಯಾದರೆ, ಹಾಗಾದರೆ ತಾನೇ ಅಳಿವುಗೊಂಡ ಕ್ಷಣವು ಮತ್ತೊಂದನ್ನು ಹು
ಟ್ಟಿಸಲು ಹೇಗೆ ಸಮರ್ಥವಾಗುವುದು ? ॥೧೭॥ ವಿಚಾರಮಾಡಿ ನೋಡಿದರೆ ನಷ್ಟ
ವಾದ ಆ ಕ್ಷಣವು ಮತ್ತೊಂದು ಕಾರ್ಯವನ್ನು ಮಾಡಲು ಹೇಗೆ ಶಕ್ತವಾಗುವುದು ?
“ ಆ ಬುದ್ಧಿಸಂತತಿಯು ಜನಿಸಿದ ಕಾಲದಲ್ಲಿಯೇ ನಷ್ಟವಾದರೂ, ಅದರಲ್ಲಿರುವ
ಬಾದಾನೊಂದು ಕ್ಷಣವು ಶಾಶ್ವತ ಮೋಕ್ಷವನ್ನು ಪಡೆದುಕೊಳ್ಳುವುದು ” ಎಂದು ನೀ
ನು ಹೇಳುವೆಯಾದರೆ, ಆ ಕ್ಷಣವು ಮುಕ್ತಿಯನ್ನು ಪಡೆದರೆ ಪಡೆದುಕೊಳ್ಳಲಿ, ನಿನಗೆ
ಅದರಿಂದ ಪ್ರಯೋಜನವುಂಟೆ ? ಹೇಳು ॥೧೯॥ ಲೋಕದಲ್ಲಿ ಶೈವಶರಣರ ಗುಣ ನಡ
ತೆ ಮೊದಲಾದುವುಗಳು ಅತ್ಯಂತ ಪ್ರಶಸ್ತಗಳಾಗಿಯೇ ಇರುವುವು. ವಿಚಾರಮಾಡಿ
ನೋಡಿದರೆ ನಿನ್ನ ಮತದ ವ್ರತದಲ್ಲಿ ಅಲ್ಪಗುಣಗಳೇ ಕಂಡು ಬರುವುವಲ್ಲವೆ ? ॥೨೦॥

ಇತಿ। ತೇ ಚನಸ್ತುಃ ಪುನರ್ಹತ್ವಾದತ್ತೇ ಽಶ್ನಂತಿ ಸಮಂತತಃ ||೨೧|| ಕಥಯಂತಿ ನ ಕರ್ತವ್ಯಾ ಪ್ರಾಣಿಹಿಂಸೇತಿ ಸರ್ವದಾ । ಹಿಂಸಾನುಮತಿರಪ್ಯೇವಂ ಹಿಂಸಾ ನ ಕಿಮು ಭೂತಲೇ। ಜಗತ್ಕರ್ತಾ ಮಹೇಶಾನೋ ನಾಸ್ತ್ಯೇವೇತಿ ವದಂತಿ ಚ । ಅಸತ್ಯಂ ನೋಚಿತಂ ವಕ್ತುಮಿತಿ ಶಂಸಂತಿ ಸರ್ವದಾ ||೨೨|| ನೇದಂ ಮಹದಸತ್ಯಂ ಕಿಮು ಸತ್ಯೇಷು ಮಹೀತಲೇ । ಸ ಮಹೇಶೋ ನಾಸ್ತಿ ಕಿಲ ಬುದ್ಧೋಽಸ್ತಿ ಭುವನೇ ಕಿಮು ||೨೩|| ಭವನ್ಮತೇ ಸದಾ ಕರ್ಮ ಭವತಿ ಕ್ಷಣಭಙ್ಗುರಂ। ತದೇವ ತತ್ಕರ್ಮಫಲಂ ನ ಯುತೀತಿ ವಚಸ್ತ್ವದಮ್ ||೨೪|| ಬೌದ್ಧಾನಾಂ ಸಂಮತಂ ಸ್ಯಾಚ್ಚೇತ್ ಬುದ್ಧೋ ದೇವಃ ಕಥಂ ಭವೇತ್। ವದದ್ಭಿರ್ದೇವತಾ ಶೂನ್ಯಮಿತ್ಯುಚ್ಚೈಶ್ಯಶಶೃಙ್ಗವತ್ ||೨೫|| ಚತುರ್ವಿಂಶತ್ತೀರ್ಥಕರ್ತ್ರೈಃ ಕಾಲತ್ರಿತಯವರ್ತಿಭಿಃ । ಸಪ್ತಸಪ್ತತಿಸಂಖ್ಯಾಕೈರಿತರ್ಯ್ಯೈರ್ಮಸಿಭಿಸ್ತಥಾ ||೨೬|| ಶೂನ್ಯಧ್ಯಾನಪರೈಸ್ಸವ್ಯಗ್ರಚಿತ್ತಾ ನಾಮಹರ್ನಿಶಂ । ಜಪಹೋ

---

ಪ್ರಾಣಿಹಿಂಸೆಯನ್ನು ಮಾಡದಿರುವುದೂ, ಸತ್ಯವಾದಿತ್ವವೂ ನಮ್ಮ ವ್ರತಗಳೆಂಬುದಾಗಿ ಬೌದ್ಧರು ವಾಕ್ಕಿನಲ್ಲಿ ಮಾತ್ರ ಹೇಳುತ್ತಾರೆ. ವಿಚಾರಮಾಡಿದರೆ ಆ ವ್ರತಗಳೂ ಇಲ್ಲವೇ ಇಲ್ಲ. ಏಕೆಂದರೆ—ಇತರರು ಮೃಗ ಪಕ್ಷಿಗಳನ್ನು ಕೊಂದು ಮಾಂಸವನ್ನು ಕೊಟ್ಟರೆ, ಅದನ್ನು ಬೌದ್ಧರು ತಿನ್ನುತ್ತಾರೆ ||೨೧|| ಈ ಕಾರಣದಿಂದ ಇತರರು ಕೊಂದುದನ್ನು ತಾವು ತಿಂದು, ಅವರು ಮಾಡಿದ ಪ್ರಾಣಿಹಿಂಸೆಗೆ ತಾವು ಒಪ್ಪಿಕೊಳ್ಳುತ್ತಿದ್ದರೂ, ಪ್ರಾಣಿಹಿಂಸೆಯನ್ನು ಯಾವಾಗಲೂ ಮಾಡಕೂಡದೆಂದು ಮಾತ್ರ ತಾವು ಹೇಳುತ್ತಾರೆ. ಇತರರು ಮಾಡಿದ ಹಿಂಸೆಗೆ ತಾವು ಒಪ್ಪುವಾಗ ಅದು ಭೂಮಿಯಲ್ಲಿ ಪ್ರಾಣಿಹಿಂಸೆಯಾಗುವುದಿಲ್ಲವೊ? ||೨೨|| ಯಾವಾಗಲೂ ಸುಳ್ಳನ್ನು ಆಡಬಾರದೆಂದೂ, ತಾವು ಸತ್ಯವಾದಿಗಳೆಂದೂ ಬೌದ್ಧರು ಹೊಗಳಿಕೊಳ್ಳುತ್ತಾರೆ. ಆದರೆ ಜಗತ್ತಿಗೆ ಕರ್ತೃವಾದ ಪರಮೇಶ್ವರನು ಇಲ್ಲವೇ ಇಲ್ಲವೆಂದು ಜರಚುತ್ತಾರೆ ||೨೩|| "ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ" ಎಂಬುದುಮೊದಲಾದ ವೇದವಚನಗಳಲ್ಲಿ ಸಕಲಕ್ಕೂ ಕರ್ತೃವಾದ ಶಿವನೊಬ್ಬನಿರುವನೆಂದು ಸಾರಲ್ಪಡುತ್ತಿದ್ದರೂ, ಅದನ್ನೆಲ್ಲಾ ತಿರಸ್ಕರಿಸಿ, ಈಶ್ವರನೇ ಇಲ್ಲವೆಂದು ನುಡಿವುದು ಭೂಮಿಯಲ್ಲಿ ಸುಳ್ಳುಗಳೊಳಗೆಲ್ಲಾ ದೊಡ್ಡ ಸುಳ್ಳಲ್ಲವೆ? ಲೋಕೇಶ್ವರನಾದ ಅಂತಹ ಶಿವನು ನಿಮ್ಮ ಭಾಗಕ್ಕೆ ಇಲ್ಲವಷ್ಟೆ: ಹಾಗಾದರೆ ಬುದ್ಧನೆಂಬುವನು ಮಾತ್ರ ಲೋಕದಲ್ಲಿದ್ದಾನೋ? ||೨೪|| ಮತ್ತೂ ನಿಮ್ಮ ಮತದಲ್ಲಿ ಯಾವಾಗಲೂ ಕರ್ಮವೆಂಬುದು ಕ್ಷಣಿಕವಾದುದಷ್ಟೆ. ಅಂತಪ್ಪ ಕರ್ಮವೇ ತನ್ನ ಫಲವನ್ನು ತಾನು ಇತರರಿಗೆ ಕೊಡುತ್ತದೆಂಬ ಮಾತು ಬೌದ್ಧರಿಗಸಮ್ಮತವಾಗುವುದಾದರೆ (ಕರ್ಮಕ್ಕೆ ಕರ್ತೃತ್ವವುಂಟಾಗುವ ಕಾರಣ) ಇನ್ನು ಬುದ್ಧನು ಕ

ಮತಪೋಧ್ಯಾನ ಶಮಾದೀನಾಂ ತಥಾಪುನಃ ||೨೮|| ಯಮಾದಿಕಾಷ್ಟಾಙ್ಗ ಯೋಗಮುಖ್ಯಾನಾಂಧರ್ಮಕರ್ಮಣಾಮ್ । ಫಲಪ್ರದಾತಾಕಸ್ತೇಷಾಂ ನಿರ್ಣಯಃಕೋನುಕರ್ಮಣಾಮ್||೨೯|| ಯದಿಶೂನ್ಯಂದೈವತಂಸ್ಯಾದ್ವಿ ರುದ್ಧಂವಚನಂತ್ವಿದಮ್ । ಉತ್ಪತ್ತಿಸ್ಥಿತಿನಾಶಾನಾಂಕಥಂಕರ್ತೃಭವಿಷ್ಯ ತಿ ||೩೦|| ಸೃಷ್ಟಿಸ್ಥಿತಿಲಯಾನಾಂನಕರ್ತೃಯತ್ತನ್ನದೈವತಮ್ । ಅಸ್ತಿ ವಾನಾಸ್ತಿವಾಶೂನ್ಯತತ್ತ್ವಂತಾವದಿದಂವದ ||೩೧|| ಅಸ್ತಿಚೇತ್ತಚ್ಛೂನ್ಯತ ತ್ವಂಶೂನ್ಯಂನಭವತಿಧ್ರುವಮ್ । ನಾಸ್ತಿಚೇತ್ತಚ್ಛೂನ್ಯತತ್ತ್ವಂಶೂನ್ಯಂ ನಾಸ್ತಿಕಥಂಹಿತತ್ ||೩೨|| ಅಸ್ತಿಚೇಚ್ಛೂನ್ಯಮಿತ್ಯುಕ್ತಿರ್ಮಿಥ್ಯಾಭವತಿ ಭೂತಳೇ। ನಾಸ್ತಿಚೇಚ್ಛೂನ್ಯಮಿತ್ಯುಕ್ತಿಃಸಾಮಿಥ್ಯಾಸುತರಾಂಭವೇತ್|| ತಸ್ಮಾದಹಿಂಸಾಹೀನಾನಾಂಸತ್ಯಸಂವರ್ಜಿತಾತ್ಮನಾಮ್ । ಕ್ರಿಯಾಫಲವಿ ಹೀನಾನಾಂಧರ್ಮವರ್ಜಿತಚೇತಸಾಮ್||೩೪|| ಸತತಂದೈವಹೀನಾನಾಮ

---

ರ್ತೃವಾಗುವುದು ಹೇಗೆ ? ಮೊಲಕ್ಕೆ ಕೋಡು ಹೇಗಿಲ್ಲವೋ ಹಾಗೆ ದೈವವೆಂಬುದೂ ಇಲ್ಲವೆಂದು ಗಟ್ಟಿಯಾಗಿ ಹೇಳುತ್ತಿರುವವರೂ ಶೂನ್ಯವನ್ನೇ ಧ್ಯಾನಿಸತಕ್ಕವರೂ ಆದ ೨೪ ಮಂದಿ ತೀರ್ಥಂಕರರೂ, ಭೂತಾದಿಕಾಲತ್ರಯದಲ್ಲಿರತಕ್ಕ ೩೩ಮಂದಿ ಮುನಿಗಳೂ ಸಹ ಹಗಲೂ ರಾತ್ರಿಯೂ ಚೆನ್ನಾಗಿ ಮಾಡುತ್ತಿರುವ ಜಪ ಹೋಮ ತಪಸ್ಸು ಶಮ ದಮ ಯಮನಿಯಮಾದಿ ಅಷ್ಟಾಂಗಯೋಗ ಮೊದಲಾದ ಧರ್ಮಕರ್ಮಗಳಿಗೆಲ್ಲಾ ಫಲವನ್ನು ಕೊಡತಕ್ಕವನಾರು ? ಆ ಕರ್ಮಗಳಿಗೆಲ್ಲಾ ಇಂಥಿಂಥ ಫಲವೆಂಬ ನಿರ್ಣಯವಾವುದು ? ||೨೯|| ಶೂನ್ಯವೇ ದೈವವೆಂದು ಹೇಳುವ ಪಕ್ಷದಲ್ಲಿ ಈ ಮಾತು ಯುಕ್ತಿವಿರುದ್ಧವಾದುದು. ಹೇಗೆಂದರೆ—ಅಂಥ ಶೂನ್ಯವು ಜಗತ್ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತೃವಾಗುವುದು ಹೇಗೆ? ||೩೦|| ಯಾವುದು ಜಗತ್ಸೃಷ್ಟಿ ಸ್ಥಿತಿ ಲಯಗಳಿಗೆ ಕರ್ತೃವಾಗುವುದಿಲ್ಲವೋ ಅದು ದೈವವೇ ಅಲ್ಲ. ಅದು ಕಾರಣ, ಶೂನ್ಯತತ್ವವೆಂಬುದು ಇದೆಯೋ ಇಲ್ಲವೋ ಈಗ ಯೋಚಿಸಿ ಹೇಳು ||೩೧|| ಆ ಶೂನ್ಯತತ್ವವೆಂಬುದು ಇರುವುದಾದ ಪಕ್ಷದಲ್ಲಿ (ಇರತಕ್ಕ ವಸ್ತುವನ್ನು ಇಲ್ಲವೆಂದು ಹೇಳುವುದು ಅಸಾಧುವಾದ ಕಾರಣ,) ಅದು ನಿಜವಾಗಿಯೂ ಶೂನ್ಯವಾಗುವುದಿಲ್ಲ. ಆ ಶೂನ್ಯತತ್ವವೆಂಬುದು ಇಲ್ಲವಾದ ಪಕ್ಷದಲ್ಲಿ ಶೂನ್ಯವಾದುದನ್ನು ಶೂನ್ಯವೆಂದು ನಿರ್ದೇಶಿಸಿ ಹೇಳುವುದೂ ಅನುಚಿತ. ಅದು ಕಾರಣ, ಆ ತತ್ವವು ಇರುವುದೆಂದು ಹೇಳುವುದಾದರೆ ಅದನ್ನು ಶೂನ್ಯವೆಂದು ಹೇಳುವುದೂ ಲೋಕದಲ್ಲಿ ಸುಳ್ಳಾಗುವುದು. ಆ ತತ್ವವನ್ನು ಇಲ್ಲವೆಂದು ಹೇಳುವುದಾದರೆ, ಆಗಲೂ ಅದಕ್ಕೆ ಶೂನ್ಯವೆಂಬ ಹೆಸರನ್ನು ಕರೆವುದೂ ಮತ್ತಷ್ಟು ಸುಳ್ಳಾಗುವುದು ||೩೩|| ಆದುದರಿಂದ ಅಹಿಂಸಾಧರ್ಮವಿಲ್ಲದವರಾಗಿಯೂ, ಸತ್ಯದೂರರಾಗಿಯೂ, ಮಾಡುವ ಕರ್ಮಗಳಿಗೆ ಫಲವಿಲ್ಲದವರಾಗಿಯೂ, ಧರ್ಮವಾಸನೆಯೇ ಇಲ್ಲ

ಪುಣ್ಯಾನಾಂದುರಾತ್ಮನಾಮ್ । ಸ್ಯಾತ್ಕಿಂಮೋಕ್ಷಸುಖಂಜೈನಬೌದ್ಧಾದೀನಾಮನಶ್ವರಮ್॥೩೫॥ ತಸ್ಮಾತ್ತ್ವಮಪಯೇದಾನೀಂಬೌದ್ಧವಾದಂಹಿತಾವಕಮ್ । ಇತಿಪ್ರೋಕ್ತೇಽಸ್ಮದೀಯಾನಾಮಾದ್ಯಾನಾಂಮಹಿತಾತ್ಮನಾಮ್॥೩೬॥ ಶೈವಾನಾಂತ್ವದ್ವಿಬದ್ಧಮತಾನಾಪಿಗುಲ್ಫಪ್ರಮಾಣಕಂ ॥ ಲವಮಾತ್ರಂಜೈನಮತಂಲಕ್ಷ್ಯಂಕಿಂಭುವನತ್ರಯೇ　　॥೩೭॥

ಇತ್ಯಸಂಖ್ಯಾತ ಮಹಾಮಾಹೇಶ್ವರ ದಿವ್ಯಶ್ರೀಪಾದಪದ್ಮನಿರಂತರಭಾವನಾಪರಿರಂಜಿತಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲಭಸ್ಮೀಕೃತಾಖಿಲಭವಬೀಜಸ್ಯಶ್ರೀವೀರಶೈವಮತಾಚಾರ್ಯ ಗುರುರಾಜಸ್ಯ ಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನಪಣ್ಡಿತಾರಾಧ್ಯಚರಿತ್ರೇ ವಾದಪ್ರಕರಣೇ ಬೌದ್ಧಮತನಿರಾಸಕಥನಂನಾಮ ನವಮೋಽಧ್ಯಾಯಃ.

---

ದ ಮನಸ್ಸುಳ್ಳವರಾಗಿಯೂ ॥೩೪॥ ಯಾವಾಗಲೂ ದೈವವೆಂಬುದೇ ಇಲ್ಲದವರಾಗಿಯೂ ಪುಣ್ಯಹೀನರಾಗಿಯೂ, ದುಷ್ಟರಾಗಿಯೂ ಇರುವ ಜೈನ ಬೌದ್ಧಾದಿಗಳಿಗೆ ಶಾಶ್ವತವಾದ ಮುಕ್ತಿಸುಖವು ಪ್ರಾಪ್ತವಾಗುವುದೆ ? ಎಂದಿಗೂ ಇಲ್ಲ. ॥೩೫॥ ಅದುಕಾರಣ, ಎಲೆ ವಾದಿಯೆ, ಈಗ ನಿನ್ನ ಬೌದ್ಧ ಮತವಾದವನ್ನು ಮುಗಿಸು. ಶೈವಮತವಾದಿಗಳಿಗೆ ನಿನ್ನ ಬೌದ್ಧಮತವಾದವನ್ನು ದಾಟುವುದೆಂದರೆ ಅದು ಕಾಲಹರಡು ಮುಳುಗುವಷ್ಟು ಪ್ರಮಾಣವುಳ್ಳುದು ಕೂಡ ಅಲ್ಲ (ಎಂದರೆ ಅದನ್ನು ಖಂಡಿಸುವುದು ಅತ್ಯಂತ ಸುಲಭವೆಂದರ್ಥ) ॥೩೬॥ ಎಂದು ಹೇಳಲ್ಪಟ್ಟರಲಾಗಿ, ಮೂರು ಲೋಕದಲ್ಲಿಯೂ ಪೂಜ್ಯರಾದ ನಮ್ಮ ಪುರಾತನರಿಗೆ ಜೈನಮತವೆಂಬುದು ಲೇಶಮಾತ್ರವಾಗಿಯಾದರೂ ಲಕ್ಷ್ಯವಾಗಿದ್ದೀತೆ ?

ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ " ಭಾವಮಂಜರಿ " ಯೆಂಬ ಕನ್ನಡ ಟಿಪ್ಪಣಿದಲ್ಲಿ ವಾದಪ್ರಕರಣದೊಳಗೆ ಬೌದ್ಧ ಮತವಾದ ನಿರಸನವನ್ನು ನಿರೂಪಿಸುವ ೯ ನೆಯ ಅಧ್ಯಾಯವು ಮುಗಿದುದು.

# ಅಥ ದಶಮೋಽಧ್ಯಾಯಃ.

(ಜೈನವಾದನಿರಸನಂ)

ಅಸ್ಮದಾದ್ಯೇಷು ವಿಖ್ಯಾತಭಕ್ತೇ ದೇವರದಾಸಯೇ । ದೈವತಂಶಿವಮೇವೇತಿ ಜೈನತರ್ಕಂನಿರಸ್ಯಹಿ॥೧॥ ದರ್ವೀಪ್ರಸರ್ಪತಿಘಟಸರ್ಪಂಸಜ್ಗೃಹ್ಯಹರ್ಷತಃ॥ ಸರ್ಪಾಂಕಮುತ್ತರೇಶಾನಂಸುಪ್ರತಿಷ್ಠಾಪ್ಯವೈಭವಾತ್ । ಧರಾವಿಖ್ಯಾತಪೊಟಲಕೆರೆಗ್ರಾಮೇಜಿನಾಲಯಾನ್ । ಪಾತಯಿತ್ವಾಸಪ್ತಶತೀಸಂಖ್ಯಾಂಸ್ತತ್ಪ್ರತಿಮಾಅಪಿ ॥೨॥ ಭಿತ್ವಾಸಮಂಚತಿತದಾಜೈನಾಃಕುತ್ರವಿನಿರ್ಗತಾಃ। ಭಾವಜಾನ್ತಕಸದ್ಭಕ್ತೇಕೋಮ್ಮರಬ್ರಹ್ಮನಾಮನಿ ॥೩॥ ಮಹಾವೀರಗಣಶ್ರೇಷ್ಠೇತರ್ಕವಾದೇನಭೂಯಸಾ।ಅಶೇಷಜೈನಾನ್ನಿರ್ಜಿತ್ಯಮಹಿಮ್ನಾಪರಿಜೃಂಭಿತೇ॥೪॥ಭೂಯಃಪರಾಜಿತಾಜೈನಾಮಂತ್ರಸಿದ್ಧಾವಯಂಪರಮ್। ಇತ್ಯಗ್ನಿಮನ್ತ್ರತಃಕಂಚಿದ್ಭಸ್ಮೀಚಕ್ರುರ್ವಟಂತದಾ ॥೬॥ ಮನ್ತ್ರರಾಜಂಮೂಲಮನ್ತ್ರಂಸಮ್ಯಗುಚ್ಚಾರ್ಯಭಕ್ತಿತಃ । ಭಸ್ಮೀಕೃತಂ

---

## ಹತ್ತನೆಯಧ್ಯಾಯವು.

(ಜೈನಮತವಾದ ಖಂಡನವು)

ನಮ್ಮ ಪುರಾತನರಲ್ಲಿ ಪ್ರಸಿದ್ಧಭಕ್ತನಾದ ದೇವರದಾಸಯ್ಯನು ಶಿವನೇ ದೈವವೆಂದು ಹೇಳಿ,ಜೈನರ ವಾದವನ್ನು ಅಡಗಿಸಿ, ಗಡಿಗೆಯಲ್ಲಿದ್ದ ಸರ್ಪವನ್ನು ದಿಟ್ಟತನದುಬ್ಬಿನಿಂ ಹಿಡಿದು, ಸಂತೋಷದಿಂದ ಅವನ್ನು ಶಿವಲಿಂಗವನ್ನಾಗಿ ಎಸಗಿ, ಸರ್ಪಭೂಷಣನಾದ ಆ ಶಿವನಿಗೆ ಉತ್ತರೇಶ್ವರನೆಂಬ ಹೆಸರನ್ನಿತ್ತು, ಅತ್ಯಂತ ವೈಭವದಿಂದ ಪ್ರತಿಷ್ಠೆಮಾಡಿ ॥೨॥ ಭೂತಲಪ್ರಸಿದ್ಧವಾದ ಪೊಟ್ಟಲಕೆರೆಯೆಂಬ ಗ್ರಾಮದಲ್ಲಿದ್ದ ಏಳುನೂರು ಬಸದಿಗಳನ್ನೂ,ಅವುಗಳಲ್ಲಿದ್ದ ಅಷ್ಟೇ ಜಿನವಿಗ್ರಹಗಳನ್ನೂ ಒಡೆದು ಮುರಿದಾಗ ಜೈನರೆಲ್ಲರೂ ಎಲ್ಲಿಗೆ ಹೋಗಿದ್ದರೂ? ಶಿವಭಕ್ತನೂ ಮಹಾಗಣಶ್ರೇಷ್ಠನೂ ಆದ ಕೋಮರ ಬ್ರಹ್ಮಯ್ಯನು॥೩॥ ಬಹುಳವಾದ ಚರ್ಚೆಯನ್ನು ಮಾಡಿ, ಸಕಲ ಜೈನರನ್ನೂ ಜಯಿಸಿ, ಮಹತ್ವದಿಂದುಬ್ಬಿರಲಾಗಿ ॥೪॥ ಸೋತುಹೋದ ಜೈನರು ಮರಳಿ ಬಂದು "ನಾವು ಅತಿಶಯವಾಗಿ ಮಂತ್ರಸಿದ್ಧಿಯುಳ್ಳವರು" ಎಂದು ಹೇಳಿಕೊಂಡು, ಬಂದು ಆಲದ ಮರವನ್ನು ಅಗ್ನಿಮಂತ್ರೋಚ್ಚಾರದಿಂದ ಸುಟ್ಟು ಬೂದಿಮಾಡಿದರು ॥೬॥ ಆಗ ಬ್ರಹ್ಮಯ್ಯನು ಮಂತ್ರರಾಜನಾದ ಪಂಚಾಕ್ಷರಮಂತ್ರವನ್ನು ಭಕ್ತಿಯಿಂದುಚ್ಚರಿ

ತೈರ್ವಟಂತಂವಿಧಾಯ ಪ್ರಾಗಿವಸ್ಥಿತಮ್ ॥೭॥ ಧ್ವಂಸಯಾಮಾಸ ಕೋಪೂರಪುರೇ ಜೈನಾಲಯಾನ್ಬಹೂನ್ । ರೋಷೇಣ ಮಹತಾ ಜೈನಾ ಅಮೀ ಕುತ್ರ ಗತಾಸ್ತದಾ ॥೮॥ ವಿಶುದ್ಧಕೀರ್ತಿಸ್ಸದ್ಭಕ್ತಿಸ್ಫೂರ್ತಿರೇಕಾಂತರಾಮಯ್ಯೋ। ಅಬ್ಬಲೂರುಪುರೇ ಜೈನಾನ್ನಿರ್ಜಿತ್ಯ ನಿಜವೈಭವಾತ್ ॥೯॥ ತದಾದಿ ಜಿನವೇಶ್ಮಾನಿ ತತ್ಪುರೇ ನ ಭವಂತ್ವಿತಿ। ಶಾಪಂ ದತ್ವಾಽಥ ಕಟಕೇ ಖ್ಯಾತಕೀರ್ತಿರ್ಜಗತ್ತ್ರಯೇ ॥೧೦॥ ಭಣ್ಡಾರಿಬಸವಾಮಾತ್ಯೇ ಪ್ರಮೋದಭರಿತೇ ಸತಿ । ದೈವತಂ ಶಿವ ಏವೇತಿ ಪ್ರತಿಪಾದ್ಯಾಗಮೋಕ್ತಿಭಿಃ ॥೧೧॥ ಮಹಾದೇವಾಯ ಮೂರ್ಧಾನಂ ಛಿತ್ವಾ ಸ್ವೀಯಂ ಸಮರ್ಪ್ಯ ಚ । ಪ್ರತಿರಥ್ಯಂ ತತ್ಪುರಸ್ಯ ನೃತ್ಯನ್ ಸಪ್ತಾಹತಃ ಪರಮ್ ॥೧೨॥ ಲಬ್ಧ್ವಾನ್ಯನ್ಮಸ್ತಕಂ ಜೈನಾನ್ಭಸ್ಮೀಕುರ್ವತಿ ತೇ ತದಾ । ಪ್ರಯಾತಾಃ ಕುತ್ರ ವಾಽಽಚಕ್ಷ್ವ ಜೈನಾ ಜೈನಮತಾನುಗಾಃ ॥೧೩॥ ಪರಿವಲ್ಗೆಪುರೇ ಕಾಚಿದ್ವೈಜಿಕಾಂಬಾ ನಿಜಂ ಪತಿಮ್ । ಅವಧೀರ್ಯ ವಿನಿರ್ಯಾನ್ತೀ ಗೃಹಾದ್ಭಕ್ತಿಸಮನ್ವಿತಾ ॥೧೪॥ ದೃಷ್ಟ್ವಾ ಜಿನಾಲ

---

ಸಿ, ಆ ಜೈನರು ಬೂದಿಮಾಡಿದ್ದ ಆಲದ ಮರವನ್ನು ಮೊದಲಿದ್ದಂತೆಯೇ ಮಾಡಿ ॥೭॥ ಆ ಕೋಪೂರಿನಲ್ಲಿದ್ದ ಬಹುಳವಾದ ಬಸದಿಗಳನ್ನು ಅತ್ಯಂತರೋಷದಿಂದ ಧ್ವಂಸಮಾಡಿದನು. ಆಗ ಈ ಜೈನರೆಲ್ಲರೂ ಎಲ್ಲಿಗೆ ಹೋಗಿದ್ದರು? ॥೮॥ ನಿರ್ಮಲಕೀರ್ತಿಯುಳ್ಳವನೂ ಉತ್ತಮ ಭಕ್ತಿಸಂಪನ್ನನೂ ಆದ ಏಕಾಂತರಾಮಯ್ಯನೆಂಬ ಭಕ್ತನು ಅಬ್ಬಲೂರು ಎಂಬ ನಗರದಲ್ಲಿದ್ದ ನಿನ್ನ ಜೈನರನ್ನು ವೈಭವದಿಂದ ಗೆದ್ದು ॥೯॥ ಅದು ಮೊದಲ್ಗೊಂಡು ಆ ಪಟ್ಟಣದಲ್ಲಿ ಜೈನರ ಮನೆಗಳು ಇರದಂತಾಗಲೆಂದು ಶಾಪವನ್ನು ಕೊಟ್ಟು, ಕಲ್ಯಾಣ ಪಟ್ಟಣಕ್ಕೆ ಬಂದು, ಮೂರುಲೋಕದಲ್ಲೂ ಹಬ್ಬಿದ ಕೀರ್ತಿಯುಳ್ಳವನಾಗಿ ಮೆರೆಯುತ್ತಿರಲು ॥೧೦॥ ಬಿಜ್ಜಳನ ಬೊಕ್ಕಸದ ಅಧ್ಯಕ್ಷನಾದ ಬಸವೇಶನು ಆತನನ್ನು ಕಂಡು ಸಂತೋಷಭರಿತನಾಗಿರಲಾಗಿ, ಆ ಏಕಾಂತರಾಮಯ್ಯನು ಶಿವನೇ ದೈವವೆಂದು ಶಿವಾಗಮವಚನಗಳಿಂದ ಸಿದ್ಧಾಂತಮಾಡಿ ॥೧೧॥ ತನ್ನ ತಲೆಯನ್ನು ಕತ್ತರಿಸಿಕೊಂಡು ಶಿವನಿಗೆ ಸಮರ್ಪಿಸಿ, ಆ ಊರಿನ ಪ್ರತಿಯೊಂದು ಬೀದಿಯಲ್ಲಿಯೂ ಕುಣಿದಾಡುತ್ತಿದ್ದು, ಏಳು ದಿನಗಳಾದಮೇಲೆ ॥೧೨॥ ಬೇರೆ ತಲೆಯನ್ನು ಶಿವನಿಂದ ಪಡೆದು, ಜಿನಭಕ್ತರನ್ನೆಲ್ಲಾ ಭಸ್ಮಗೊಳಿಸಿದಾಗ ಜೈನಮತಸ್ಥರೆಲ್ಲರೂ ಎಲ್ಲಿಗೆ ಹೋಗಿದ್ದರು? ಹೇಳು. ॥೧೩॥ ಪರಿವಳಿಗೆ ಯೆಂಬ ಊರಿನಲ್ಲಿದ್ದ ವೈಜವ್ವೆಯೆಂಬ ಬಣಜಿಗಳೊಬ್ಬ ಭಕ್ತೆಯು ತನ್ನನ್ನು ಹೊರದಬ್ಬಿದ ಪತಿಯನ್ನು ಬಿಟ್ಟು ಬಿಟ್ಟು ಮನೆಯಿಂದ ಹೊರಟುಬರುತ್ತಾ ॥೧೪॥ ಬಂದು ಜಿನದೇವಾಲಯವನ್ನು ಕಂಡು,

ಯಾ ಬುದ್ಧ್ವಾ ಮನ್ವಾನಾ ಶಂಭುಮಂದಿರಮ್ । ನನಾಮ ಸದ್ಯಃ ಪತಿತಾ ದ್ವಿ
ಧಾಭಿನ್ನಾ ಜಿನಾಕೃತಿಃ ॥೧೫॥ ತನ್ಮಧ್ಯೇ ಶ್ರೀವೈಜನಾಥಃ ಪ್ರಾದುರಾಸೀದು
ಮಾಪತಿಃ । ಜಿನಾಲಯೋ ಜಿನ ಇತಿ ಯಥಾ ವಾರ್ತಾಪಿ ನೋ ಭವೇತ್ ॥೧೬॥
ತಥಾ ಶಶಾಪ ತೇ ಜೈನಾಸ್ತದಾನೀಂ ಕ್ವನು ನಿರ್ಗತಾಃ । ಕಿಂಚ ಮಾರುಡಿಗೆ ಗ್ರಾ
ಮೇ ಶಿವಭಕ್ತಿಪರಾಯಣಾಃ ॥೧೭॥ ವಿಶ್ವಾಸವನ್ತೋ ಹಿರಿಯನಾಚಯ್ಯಪ್ರ
ಮುಖಾ ಗಣಾಃ । ವೀರಾವತಾರಾಸ್ಸದ್ವೀರಾ ನಿರವದ್ಯೋರುಕೀರ್ತಯಃ ॥ ತ್ರ
ಯೋದಶ ಸಮಾಗತ್ಯ ಹತ್ವಾ ಜೈನಾನಶೇಷತಃ । ಪ್ರತಿಷ್ಠಾಪ್ಯ ಮಹಾದೇವಂ
ತತ್ರ ಮುಖ್ಯೇ ಜಿನಾಲಯೇ ॥೧೮॥ ಸತ್ಕೀರ್ತಿಸ್ಥಾಪನಾಚಾರ್ಯಮಹಿಮ್ನಾ ರಂ
ಜಿತಾ ಬಭುಃ । ಕಾಲೇ ತಸ್ಮಿನ್ನಮೀ ಜೈನಾಃ ಪ್ರಯಾತಾಃ ಕುತ್ರ ದುರ್ಮದಾಃ ॥
ಅಪಿ ಚೇಶ್ವರಸದ್ಭಕ್ತಃ ಕಶ್ಚಿದಾದಯ್ಯನಾಮಕಃ । ಅಭಿರಾಮೇ ಹುಲಿಗೆರೆ
ಗ್ರಾಮೇ ಕಾಮಹರೋಚಿತೇ ॥೨೦॥ ಮುಕ್ತ್ವಾ ಜಿನಾಲಯಾಂಶ್ಶಮ್ಭುಸ
ದನಾನಿ ಜಿನಾಕೃತೀಃ । ವಿಹಾಯ ಶಿವಲಿಙ್ಗಾನಿ ತಥಾ ಜೈನಾಧಮಾನ್ವಿನಾ ॥೨೧॥
ಮಹಾದೇವಸ್ಯ ಸದ್ಭಕ್ತಾನನುದ್ವೀಕ್ಷ್ಯಾತಿದುಃಖಿತಃ । ಸುರಹೊನ್ನೆವಸತ್ಯಾ

---

ಶಿವಾಲಯವೆಂದು ತಿಳಿದುಕೊಂಡು, ಜಿನವಿಗ್ರಹದ ಮುಂದೆ ಬಿದ್ದು ನಮಸ್ಕರಿಸಿದಳು.
ಆಗ ಜಿನಪ್ರತಿಮೆಯು ಎರಡು ಹೋಳಾಯಿತು ॥೧೫॥ ಆ ಹೋಳಿನ ಮಧ್ಯದಲ್ಲಿಯೇ
ಪಾರ್ವತೀಪತಿಯಾದ ಶ್ರೀ ವೈಜನಾಥೇಶ್ವರನು ಉದ್ಭವಿಸಿದನು. ಇದು ಜಿನದೇವಾಲಯ
ಇವನು ಜೈನ ಎಂಬೀ ಸುದ್ದಿಯೇ ಆ ಊರಿನಲ್ಲಿಲ್ಲದಂತಾಗುವ ಹಾಗೆ ಶಿವನು ಶಪಿಸಿದನು.
ಆಗ ನಿನ್ನ ಜೈನರು ಎಲ್ಲಿಗೆ ಹೋಗಿದ್ದರು ? ॥೧೬॥ ಮತ್ತೂ ಮಾರುಡಿಗೆಯೆಂಬ ಗ್ರಾ
ಮದಲ್ಲಿ ಶಿವಭಕ್ತಿತತ್ಪರರೂ ಭಕ್ತರಲ್ಲಿ ವಿಶ್ವಾಸವುಳ್ಳವರೂ, ಅತ್ಯಂತ ವೀರವ್ರತನಿಷ್ಠ
ರೂ, ನಿರ್ದುಷ್ಟಕೀರ್ತಿಸಂಪನ್ನರೂ ಆದ ಹಿರಿಯನಾಚಯ್ಯನೇ ಮೊದಲಾದ ೧೩ ಮಂ
ದಿಗಣಂಗಳು ಬಂದು, ಅಲ್ಲಿದ್ದ ಜೈನರನ್ನೆಲ್ಲಾ ನಿಶ್ಶೇಷವಾಗಿ ಕೊಂದು, ಅಲ್ಲಿನ ಬಸದಿ
ಗಳೊಳಗೆಲ್ಲಾ ಮುಖ್ಯವಾದೊಂದರಲ್ಲಿ ಮಹಾದೇವಮೂರ್ತಿಯನ್ನು ಸ್ಥಾಪಿಸಿ, ಸತ್ಕೀ
ರ್ತಿಯನ್ನು ಸ್ಥಾಪಿಸಿದ ಆಚಾರ್ಯಮಹತ್ವದಿಂದ ವಿರಾಜಿಸಿದರು. ಈ ದುರಹಂಕಾ
ರಿಗಳಾದ ಜೈನರು ಆ ಕಾಲದಲ್ಲಿ ಎಲ್ಲಿಗೆ ಹೋಗಿದ್ದರು ? ॥೨೦॥ ಮತ್ತೂ ಶಿವಭಕ್ತಿ
ಸಂಪನ್ನನಾದ ಆದಯ್ಯನೆಂಬೊಬ್ಬನು, ಮನೋಹರವಾದ ಪುಲಿಗೆರೆಯೆಂಬ ಗ್ರಾಮ
ವು ಶಿವನ ವಾಸಕ್ಕೆ ಯೋಗ್ಯವಾಗಿರುತ್ತಿರಲು, ಅಂತಪ್ಪ ಗ್ರಾಮದಲ್ಲಿ ಜಿನದೇವಾಲಯ
ಗಳ ಹೊರತು ಶಿವಾಲಯಗಳನ್ನೂ ಜಿನವಿಗ್ರಹಗಳ ಹೊರತು ಶಿವಲಿಂಗಗಳನ್ನೂ ನೀ
ಚಜೈನರ ಹೊರತು ಶಿವಭಕ್ತರನ್ನೂ ಕಾಣದೆ, ಅತ್ಯಂತ ದುಃಖಪಟ್ಟವನಾಗಿ, ॥೨೧॥
" ಸುರಹೊನ್ನೆಯ ಬಸದಿಯೆಂದು ಪ್ರಸಿದ್ಧವಾದ ಹೆಸರುಳ್ಳ ಈ ಜಿನದೇವಾಲಯವು

ಖ್ಯಾಪ್ರಸಿದ್ಧಂಜಿನಮಂದಿರಮ್ ||೨೩|| ಇದಂಕದಾನುಭವಿತಾಮತ್ಸ್ವಾ
ಮಿಭವನಂಶುಭಮ್ । ವಿದೀರ್ಣ್ಯಗಾತ್ರೇಷುಪಟಪಟಧ್ವನಿಯಥಾತಥಾ ||೨೪||
ಚಟ್ಚಟಚ್ಚಟನಿಧ್ವಾನಂಪತಿತೇಷುಸಮಂತತಃ । ಮಧ್ಯೇಜಿನಪ್ರತಿಕೃತೇ
ಸ್ಸೌರಾಷ್ಟ್ರನಗರಾಧಿಪಃ ||೨೫|| ಶ್ರೀಸೋಮನಾಥೋವರದಃಕದಾಪ್ರಾದು
ರ್ಭವಿಷ್ಯತಿ । ಸ್ವಯಂಭುವಿಶಿವೇತಸ್ಮಿನ್ಲೋಚನತ್ರಿತಯೇನಚ ||೨೬|| ಜ
ಟಾಜೂಟೇನವೃಷಭವಾಹನೇನಚತುರ್ಭುಜೈಃ । ವಾಮಭಾಗೇಗಿರಿಜಯಾ
ಯುತಂಸಾಕಾರವಿಗ್ರಹಮ್ ||೨೭|| ಯಥೇಷ್ಟಂಮಮದೃಷ್ಟೇರ್ವಿಷಯಕ
ದಾದ್ರಕ್ಷ್ಯೇಽಹಂಮುದಾ । ಇತಿಚಿಂತಯತೋಽಗಚ್ಛನ್ನವತಿಶ್ಶರದಾಂ
ಮಮ ||೨೮|| ಅಥಾಪಿಶ್ರೀಮಹಾದೇವಶ್ಶಂಭುರ್ಮಮಮನೋರಥಮ್ ।
ನಕರೋತ್ಯಹಮೇವಾದ್ಯಗತ್ವಾಸೌರಾಷ್ಟ್ರನಾಯಕಮ್ ||೨೯|| ಆನೇಷ್ಯಾ
ಮಿಧ್ರುವಂದೇವಂಸೋಮೇಶಮಿತಿನಿಶ್ಚಯಾತ್ ||೩೦|| ಪರಿನಿಷ್ಕ್ರಮ್ಯಭವ
ನಾದಥಯೋಜನಮಾತ್ರತಃ । ಸುಖಿತ್ವಾದತಿವೃದ್ಧತ್ವಾದ್ದುರ್ಬಲತ್ವಾಚ್ಚ
ತತ್ಕ್ಷಣಾತ್ ||೩೧|| ವಿದೀರ್ಣಯೋಶ್ಚರಣಯೋರ್ಜಾನ್ವೋರಪಿವಿಶೀರ್ಣ
ಯೋಃ । ಆಲಕ್ಷ್ಯರಕ್ತಯೋಃಪಾಣಿತಲಯೋರುಷ್ಣದೀಧಿತೇಃ ||೩೨|| ಆ

---

ಯಾವಾಗ ನನ್ನ ಸ್ವಾಮಿಯಾದ ಶಿವನ ಮಂಗಳಕರವಾದ ಆಲಯವಾಗುವುದೋ! ಜಿನ
ವಿಗ್ರಹದ ಅಂಗಗಳೆಲ್ಲಾ ಪಟಪಟನೆ ಸೀಳಿಹೋಗಿ, ಚಟಚಟನೆ ಎಲ್ಲಕಡೆಯೂ ಬಿದ್ದು
ಹೋಗಿ, ಆ ಜಿನವಿಗ್ರಹದ ಮಧ್ಯದಲ್ಲಿ ಭಕ್ತೇಷ್ಟಪ್ರದನಾದ ಸೌರಾಷ್ಟ್ರದ ಶ್ರೀಸೋಮೇ
ಶ್ವರನು ಯಾವಾಗ ಉದ್ಭವಿಸುವನೋ! ಆ ಪರಶಿವನು ಬಡೆದು ಮೂಡಿದರೆ ಮುಕ್ಕಣ್ಣು
ಗಳಿಂದಲೂ, ಜಟಾಪಟಲದಿಂದಲೂ, ವೃಷಭವಾಹನದಿಂದಲೂ, ನಾಲ್ಕು ತೋಳುಗಳಿಂ
ದಲೂ, ಎಡಭಾಗದಲ್ಲಿ ಪಾರ್ವತಿಯಿಂದಲೂ ಕೂಡಿಕೊಂಡಿರುವ ಆ ಪರಶಿವನ ಸಕಲ
ಮೂರ್ತಿಯನ್ನು ನನ್ನ ಕಣ್ದುಂಬಿ ಯಾವಾಗ ಸಂತೋಷದಿಂದ ನೋಡುವೆನೋ! ಎಂ
ದು ಯೋಚಿಸುತ್ತಲೇ ನನಗೆ ಎಷ್ಟೋವರ್ಷಗಳು ಕಳೆದು ಹೋದುವು || ಆದರೂ
ಶ್ರೀ ಪರಮೇಶ್ವರನು ನನ್ನ ಮನೋರಥಪೂರ್ತಿಯನ್ನು ಮಾಡುವುದಿಲ್ಲ. ಅದುಕಾರಣ
ಈಗ ನಾನೇ ಹೋಗಿ ಸೌರಾಷ್ಟ್ರನಾಥನಾದ ಶ್ರೀಸೋಮೇಶ್ವರನನ್ನು ತಪ್ಪದೆ ಕರೆದು
ಕೊಂಡುಬರುತ್ತೇನೆ" ಎಂಬ ನಿಶ್ಚಯದಿಂದ ||೩೦|| ಮನೆಯಿಂದ ಹೊರಟು, ಒಂದು
ಯೋಜನದಮಾತ್ರ ನಡೆದು ಹೋಗುವುದರೊಳಗಾಗಿ, ತಾನು ಯಾವಾಗಲೂ ಸುಖವಾ
ಗಿದ್ದವನಾದುದರಿಂದಲೂ, ಬಹುಮುಪ್ಪಿನವನಾದುದರಿಂದಲೂ, ಬಲಹೀನನಾದುದ
ರಿಂದಲೂ, ಕಾಲುಗಳೂ ಜಾಘೆಗಳೂ ಬಿರಿದು, ಅಂಗಾಲಿನಿಂದ ರಕ್ತವು ಸೋರುತ್ತಿರ
ಲು, ಸೂರ್ಯನ ಬಿಸಿಲಿನ ಬೇಗೆಯಿಂದ ಕಣ್ಣುರಪ್ಪೆಗಳು ಅತಿಶಯವಾಗಿ ಕುಗ್ಗಿ ನೋ

ತಪಾತ್ಸಂಕುಚಿತಯೊಸ್ಸುತರಾಂನೇತ್ರಪಕ್ಷ್ಮಣೋಃ। ಪದಮುನ್ನಮಿತುಂ ಭೂಮಾವಾಸ್ಥಾಪಿತುಂದುರ್ಬಲೋಽಭವತ್ ॥೩೩॥ ಅಪಶ್ಯನ್ನಗ್ರತೋಽಧ್ವಾನಂಸಾಹಸೇನಚ್ಛಲೇನಚ। ಸ್ವಪದಸ್ಯೋಪರಿಪದಂಸ್ಥಾಪಯನ್ಸ್ಖಲನ್ನಪಿ॥ ತಿಷ್ಠನ್ನಗ್ನಸ್ತುಮಸಾಮರ್ಥ್ಯಾತ್ಸತ್ವಂಸಂಪಾದಯನ್ಮತಾ। ವೇಪಮಾನೋಬಹುತರಂನಿಪತ್ಯಚನಿಪತ್ಯಚ ॥೩೫॥ ಉತ್ಥಾಯೋತ್ಥಾಯಪನ್ಥಾನಂಪಶ್ಯನ್ನುನ್ಮೀಲ್ಯಲೋಚನೇ। ಪ್ರಯಾತುಮೇವಸಂಪಶ್ಯನ್ಪುರೋಭಾಗಂವಿಲೋಕಯನ್ ॥೩೬॥ ಗಚ್ಛನ್ನೇಭಿಃಶ್ರೀಸೋಮಲಿಙ್ಗಮಲ್ಲಿಙ್ಗಕರುಣಾನಿಧೇ। ದೇವದೇವಮಹಾದೇವಮಾನಾಥನಯನಾರ್ಚಿತ ॥೩೭॥ ಬ್ರಹ್ಮಾಚ್ಯುತೇನ್ದ್ರಾದ್ಯಸಾಧ್ಯಜಗದಾರಾರಾಧ್ಯಶಙ್ಕರ। ನಿಷ್ಕೈಕಸಾಧ್ಯಸದ್ಭಕ್ತಜನಸಾನ್ನಿಧ್ಯಲೋಲುಪ ॥೩೮॥ ಕಾರುಣ್ಯಮೂರ್ತೇವಿಹೃತಪ್ರಣತಾರ್ತೇಮಹೇಶ್ವರ। ಸಮುಂಚಿತದಯಾಸ್ಫೂರ್ತೇಪುಣ್ಯಕೀರ್ತೇಜಗತ್ಪತೇ ॥೩೯॥ ಪಾರ್ವತೀನಾಥಗೋಕಾನ್ತವರೂಥಕೃತಸತ್ಪಥ। ಸೌರಾಷ್ಟ್ರನಾಥಪ್ರಮಥಯೂಥಸಂಜನಿತಪ್ರಥ ॥೪೦॥ ಇತಿಸ್ತುವನ್ಪುನರಪಿಪ್ರಚಚಾಲದೃಢವ್ರತಃ। ತತೋಽನ

---

ಟವು ಮಂಕಾಗಿ, ಕಾಲನ್ನು ಮೇಲಕ್ಕೆತ್ತುವುದಕ್ಕೂ ನೆಲದಮೇಲೆ ಮಡಗುವುದಕ್ಕೂ ಸಹ ಆಗದಷ್ಟು ಅಶಕ್ತನಾದನು ॥೩೩॥ ಮುಂದಣ ದಾರಿಯನ್ನು ಕಣ್ಣಿನಿಂದ ನೋಡುವುದಕ್ಕಾಗದಿದ್ದರೂ, ಆ ಭಕ್ತನು ಸಾಹಸದಿಂದಲೂ ಛಲದಿಂದಲೂ ಕೂಡಿ ಹಜ್ಜೆಯ ಮೇಲೆ ಹಜ್ಜೆಯನ್ನಿಡುತ್ತ ಜಾರುತ್ತ, ನಡೆಯಲಾರದೆ ಅಲ್ಲಲ್ಲಿ ನಿಂತುಕೊಳ್ಳುತ್ತ, ಮನಸ್ಸನ್ನು ಗಟ್ಟಿಮಾಡಿಕೊಳ್ಳುತ್ತ, ತ್ರಾಣವಿಲ್ಲದೆ ನಡುಗುತ್ತ, ಅಲ್ಲಲ್ಲಿಗೆ ಬಿದ್ದು ಬಿದ್ದು ॥ ಏಳುತ್ತ, ಕಣ್ಣನ್ನು ಕಿಸಿದು ದಾರಿಯನ್ನು ನೋಡುತ್ತ, ಮುಂದು ಮುಂದೆ ಸಾಗುವುದಕ್ಕಾಗಿ ಮಾರ್ಗವನ್ನು ನೋಡಿಕೊಂಡು ಹೋಗುತ್ತ ॥೩೬॥ "ಎಲೈ ಸೋಮನಾಥನೆ! ಎಲೈ ಮಂಗಲಮೂರ್ತಿಯೇ! ಕೃಪಾನಿಕ್ಷೇಪನೇ! ದೇವಾಧಿದೇವನೇ! ಮಹಾದೇವನೇ! ವಿಷ್ಣುವಿನ ನೇತ್ರದಿಂದ ಪೂಜಿಸಲ್ಪಟ್ಟವನೆ! ॥೩೭॥ ಬ್ರಹ್ಮ ವಿಷ್ಣು ದೇವೇಂದ್ರನೊದಲಾದ ದೇವಶ್ರೇಷ್ಠರಿಗೆ ಮಾತ್ರ ಗೋಚರಿಸತಕ್ಕವನೆ! ಲೋಕಪೂಜ್ಯನೆ! ಭಕ್ತಸುಖಂಕರನೆ! ಭಕ್ತಿಗೆ ಮಾತ್ರವೇ ದೊರೆಯತಕ್ಕವನೆ! ಉತ್ತಮಭಕ್ತರ ಸಮೀಪದಲ್ಲಿರುವುದಕ್ಕೆ ಆಸಕ್ತನಾದವನೆ! ॥೩೮॥ ದಯಾಮಯನೆ! ಶರಣಾಗತರ ಮನೋವ್ಯಥೆಯನ್ನು ನಿವಾರಿಸತಕ್ಕವನೆ! ಸರ್ವಜ್ಞತ್ವಾದಿಷಡ್ಗುಣೈಶ್ವರ್ಯದಿಂದ ಕೂಡಿದವನೆ! ಉಕ್ಕಿಬರುತ್ತಿರುವ ದಯಾರಸವುಳ್ಳವನೆ! ಪರಿಶುದ್ಧವಾದ ಕೀರ್ತಿಯುಳ್ಳವನೆ! ಲೋಕನಾಥನೆ ॥೩೯॥ ಪಾರ್ವತೀಪತಿಯೇ! ವೃಷಭವಾಹನನೆ! ಸನ್ಮಾರ್ಗಸ್ಥಾಪಕನೆ! ಪ್ರಮಥಸಮೂಹದಲ್ಲಿ ಸದ್ಯೋಜಾತನಾಗುವವನೆಂದು ಹೊಗಳಿಸಿಕೊಳ್ಳತಕ್ಕವನೆ! ॥೪೦॥ ಎಲೈ ಸೋಮನಾಥನೆ

ಘಸ್ಯೋದಯುಸ್ಯತಸ್ಯಾಚಂಚಲಭಕ್ತಿತಃ ॥೪೧॥ ಶ್ರೀಸೌರಾಷ್ಟ್ರಪುರಾಧೀಶಸ್ಸೋಮನಾಥಃಪ್ರಹರ್ಷಿತಃ। ತತ್‌ಕ್ಷಣಾದೇವಾಭಿಮುಖಮಾಗತ್ಯಾಕರುಣಾನಿಧಿಃ॥೪೨॥ಜನೇಷುಜೈನೇಷ್ವಾಶ್ಚರ್ಯಂಪ್ರಾಪ್ತೇಷುನಿಖಿಲೇಷುಚ। ಜಿನಪ್ರತಿಕೃತೇರ್ಮಧ್ಯಂಸ್ವಯಂಕೃತ್ವಾವಿದಾರಣಮ್ ॥೪೩॥ ಸಮುಜ್ಜ್ವಲಿಂಗಾಕಾರಂಸ್ವಯಂಭೂರ್ಲಿಂಗವಿಗ್ರಹಮ್ ॥ ತಸ್ಮೈದತ್ವಾಕಾಮಿತಾರ್ಥಾನಾದಯ್ಯಾಯಮಹಾತ್ಮನೇ ॥೪೪॥ ಸಿವಾರ್ಯಚಿಂತಾದುಃಖಂಚತಸ್ಯೋದಯ್ಯಸ್ಯತತ್‌ಕ್ಷಣಾತ್ । ಕಟಾಕ್ಷವೀಕ್ಷಣೋದ್ಭೂತದಯಾರಸಪಯೋನಿಧೌ॥೪೫॥ನಿಮಜ್ಜ್ಯಜೈನಸಂಹಾರಶಕ್ತಿಂಭಕ್ತಿಂದದೌಸ್ಥಿರಾಮ್। ತದಾಽಽದಯ್ಯೋಜೈನಮುನೀನ್ಸಂಹರತ್ಯತಿರೋಷತಃ॥೪೬॥ ಅಮೀಜೈನಾಧಮಾಸ್ಸರ್ವೇಗತಾಃಕುತ್ರವದಾಧುನಾ । ಭೂಯೋಪಿಪಿಳ್ಳೆನಯಿನಾರ್ಯಾಖ್ಯಸ್ಸದ್ಭಕ್ತಪುಂಗವಃ॥೪೭॥ ಮಧುರಾಪುರಜೈನೇಷುಭಯಾಕ್ರಾನ್ತೇಷುಸರ್ವತಃ। ಕೂನಪಾಣ್ಡ್ಯಾಖ್ಯನೃಪತೇಃಪೃಷ್ಠಂಕುಣಿತಯಾಯುತಮ್ ॥೪೮॥ ಸಮ್ಯಕ್ಕೃತ್ವಾಜೈನಬೌದ್ಧೈಃಪ್ರತಿಪಕ್ಷೈಸ್ಸಹಸ್ವಯಮ್ । ಅಭಿಯು

---

ಎಂದು ಹೊಗಳುತ್ತ, ಮತ್ತೆಯೂ ಹಿಡಿದ ವ್ರತವನ್ನು ಬಿಡದೆ ಮುಂದಕ್ಕೆ ಅಡಿಯಿಟ್ಟನು. ಬಳಿಕ ನಿರ್ದುಷ್ಟನಾದ ಆ ಆದಯ್ಯನ ದೃಢಭಕ್ತಿಯಿಂದ ॥೪೧॥ ದಯಾನಿಧಿಯಾದ ಸೌರಾಷ್ಟ್ರನಾಥ ಸೋಮೇಶ್ವರನು ಸಂತೋಷಗೊಂಡವನಾಗಿ, ತತ್‌ಕ್ಷಣವೇ ಇದಿರಾಗಿ ಬಂದು ॥೪೨॥ ಜೈನರೂ ಲೋಕದ ಜನರೂ ಸಹ ಆಶ್ಚರ್ಯಪಡುತ್ತಿರಲಾಗಿ, ಆ ಸುರಹೊನ್ನೆ ಬಸದಿಯಲ್ಲಿದ್ದ ಜಿನವಿಗ್ರಹವನ್ನು ಮಧ್ಯದಲ್ಲಿ ತಾನೇ ಸೀಳಿ, ಒಡೆದು ಮೂಡಿ, ಲಿಂಗದ ಆಕಾರವನ್ನು ಧರಿಸಿ ಗೋಚರಿಸಿ, ಆ ಮಹಿಮನಾದ ಆದಯ್ಯನಿಗೆ ಇಷ್ಟಾರ್ಥವನ್ನು ಕೊಟ್ಟು ॥೪೪॥ ಕೂಡಲೇ ಅವನ ಮನೋವ್ಯಥೆಯನ್ನೂ ಗೋಳನ್ನೂ ತಪ್ಪಿಸಿ, ತನ್ನ ಕಡೆಗಣ್ಣೋಟದಿಂದ ಹುಟ್ಟಿದ ಕರುಣಾರಸದ ಸಮುದ್ರದಲ್ಲಿ ಅವನನ್ನು ಮುಳುಗಿಸಿ, ಜೈನರನ್ನೆಲ್ಲಾ ಧ್ವಂಸಮಾಡುವ ಶಕ್ತಿಯನ್ನೂ ದೃಢಭಕ್ತಿಯನ್ನೂ ಅವನಿಗೆ ಕೊಟ್ಟನು. ಆಗ ಆದಯ್ಯನು ಅತ್ಯಂತ ಕೋಪದಿಂದ ಜೈನಮುನಿಗಳನ್ನು ಸಂಹರಿಸುತ್ತಿರಲು ॥೪೬॥ ಈ ನೀಚಜೈನರೆಲ್ಲರೂ ಎಲ್ಲಿಗೆ ಹೋಗಿದ್ದರು ? ಹೇಳು. ಮತ್ತೂ ಪಿಳ್ಳೆನಯಿನಾರ್ಯನೆಂಬ ಸದ್ಭಕ್ತಶ್ರೇಷ್ಠನು ॥೪೭॥ ಮಧುರಾಪುರಿಯ ಜೈನರೆಲ್ಲರೂ ಭಯಪಡುವಹಾಗೆ ಅಲ್ಲಿನ ದೊರೆಯಾದ ಕೂನಪಾಂಡ್ಯರಾಜನ ಗೂನಾದ ಬೆನ್ನನ್ನು ನೇರವಾಡಿ, ಜೈನ ಬೌದ್ಧರುಗಳಿಂದ ಪ್ರತಿಘಟಿಸಲ್ಪಟ್ಟವನಾಗಿ, ತಾನು ಬರೆದ ಶಿವಮಂತ್ರದ ಪತ್ರಿಕೆಯನ್ನೂ ಪ್ರತಿವಾದಿಗಳು ಬರೆದ ಜಿನಮಂ

ಶ್ಚ ಶೈವಮಂತ್ರಪೂರಿತಾಂ ಪತ್ರಿಕಾಂ ತಥಾ ॥೪೯॥ ಪೂರಿತಾಂ ಜಿನಮಂತ್ರೇಣ ಪತ್ರಿಕಾಂ ಮನುಜೇಶಿತುಃ । ಕರೇಣಾಗ್ನೌ ಪ್ರಜ್ವಲತಿ ಕ್ಷೇಪಯಾಮಾಸ ತತ್ಕ್ಷಣಾತ್ ॥೫೦॥ ದಾವಾಗ್ನೌ ನಿಪತಚ್ಛುಷ್ಕ ಪಲಾಶಮಿವ ಸತ್ವರಮ್ ॥ ಜಿನಮಂತ್ರಾಂಕಿತಂ ಪತ್ರಂ ಭಸ್ಮತಾಮಗಮತ್ತದಾ ॥೫೧॥ ಸರೋಗತಾಬ್ಜವಚ್ಛೈವಮಂತ್ರಪತ್ರಂ ವ್ಯರಾಜತ । ಪುನಶ್ಚ ಜಿನಮಂತ್ರಾಂಕಂ ಶಿವಮಂತ್ರಸಮನ್ವಿತಮ್ ॥೫೨॥ ಪತ್ರಂ ಪ್ರವಾಹೇ ಕಾವೇರ್ಯಾಃ ಕ್ಷಿಪ್ತಂ ತದುಭಯಂ ತದಾ । ಅಗಾತ್ಪ್ರವಾಹವಶತಾಂ ಜಿನಮಂತ್ರಾಂಕಪತ್ರಿಕಾ ॥೫೩॥ ಪತ್ರಿಕಾ ಸಾ ಶೈವಮಂತ್ರಯುಕ್ತಾಭಿಮುಖಮಾಯಯೌ । ಗೃಹೀತ್ವಾ ಸಕಲಾಂ ಜೈನಾನ್ ಭೂಲಪ್ರೋತಾನಥಾಕರೋತ್ ॥೫೪॥ ಜೈನಾಲಯಾನಶೇಷಾಂಶ್ಚ ಪಾತಯಾಮಾಸ ತತ್ಕ್ಷಣಾತ್ । ಕಿಂ ಸಹಸ್ರೇಣ ತತ್ಕಾಲೇ ಕ್ವಗತಾ ಜೈನವಾದಿನಃ ॥೫೫॥ ಪುನಶ್ಚ ನಿಡುಮಾರಾಖ್ಯೇ ಚೋಳಭೂಪೇ ಸ್ವನೀವೃತಿ । ಜೈನಾನಶೇಷಾಂಸ್ತತ್ರತ್ಯಾನ್ಸಮಾಹ್ವಾಯೈಕವಾರತಃ ॥೫೬॥ ವಾದೇ ಪರಾಜಿತಾನ್ಕೃತ್ವಾ ತಾನ್ಸರ್ಗ್ವಾನ್ ಗೃಹ್ಯಾತಿಕೋಪತಃ । ಪ್ರತಪ್ತಲೋಪಶೂ

---

ತ್ರದ ಪತ್ರಿಕೆಯನ್ನೂ ಸಹ ದೊರೆಯು ಕೈಯಿಂದ ಉರಿಯುತ್ತಿರುವ ಬೆಂಕಿಯಲ್ಲಿ ಹಾಕಿಸಲು, ಕೂಡಲೇ ॥೫೦॥ ಜಿನಮಂತ್ರಪತ್ರವು ಕಾಳ್ಗಿಚ್ಚಿನಲ್ಲಿ ಬಿದ್ದ ತರಗೆಲೆಯಂತೆ ಸುಟ್ಟು ಬೂದಿಯಾಯಿತು. ॥೫೧॥ ಶಿವಮಂತ್ರಪತ್ರವಾದರೂ ಕೊಳದಲ್ಲಿರುವ ತಾವರೆಹೂವಿನಂತೆ ಒಪ್ಪಿತು. ಅದರಮೇಲೂ ಜೈನರು ಹಟವನ್ನು ಮಾಡಿ ಜಿನಮಂತ್ರದ ಮತ್ತೊಂದು ಪತ್ರವನ್ನು ಬರೆದುಕೊಡಲು, ತಾನೊಂದು ಶಿವಮಂತ್ರದ ಪತ್ರವನ್ನು ಬರೆದುಕೊಟ್ಟು, ಎರಡನ್ನೂ ದೊರೆಯು ಕೈಯಿಂದ ಕಾವೇರಿಯ ಪ್ರವಾಹದಲ್ಲಿ ಬಿಡಿಸಲಾಗಿ, ಜಿನಮಂತ್ರವನ್ನು ಬರೆದ ಪತ್ರಿಕೆಯು ಪ್ರವಾಹಕ್ಕೆ ಅಧೀನವಾಗಿ ಕೊಚ್ಚಿ ಹೋಯಿತು. ॥೫೩॥ ಶಿವಮಂತ್ರದಿಂದ ಕೂಡಿದ ಪತ್ರವಾದರೊ ಪ್ರವಾಹಕ್ಕೆ ಇದಿರುಮುಖವಾಗಿ ಹರಿಬಂದಿತು. ಬಳಿಕ ಸಕಲ ಜೈನರನ್ನೂ ಹಿಡಿದು ಶೂಲಕ್ಕೇರಿಸಿದನು ॥೫೪॥ ಕೂಡಲೇ ಸಕಲ ಜಿನಾಲಯಗಳನ್ನೂ ಕೆಡಹಿಸಿಬಿಟ್ಟನು ಸಾವಿರ ಮಾತಿನಿಂದೇನು? ಆ ಕಾಲದಲ್ಲಿ ಈ ಜೈನವಾದಿಗಳೆಲ್ಲಾ ಎಲ್ಲಿಗೆ ಹೋಗಿದ್ದರೋ! ॥ ಮತ್ತೂ ನಿಡುಮಾರನೆಂಬ ಚೋಳರಾಜನು ತನ್ನ ದೇಶದಲ್ಲಿದ್ದ ಜೈನರೆಲ್ಲರನ್ನೂ ಒಂದು ದಿನ ಕರೆಯಿಸಿ ॥೫೬॥ ಪ್ರಚಲಿತವಾದ ವಾದದಲ್ಲಿ ಅವರನ್ನೆಲ್ಲಾ ಸೋಲಿಸಿ, ಅತ್ಯಂತಕೋಪದಿಂದ ಅವರನ್ನೆಲ್ಲಾ ಹಿಡಿಯಿಸಿ ಕಾಯಿಸಿದ ಶೂಲಕ್ಕೇರಿಸಿಬಿಟ್ಟು,

ಲಸ್ಥಾನ್ಸ್ಕೃತ್ವಾಶಾಸತಿಭೂತಲಮ್ ॥೫೭॥ ಸರ್ವೇಯೂಯಂತತ್ರಕಾಲೇ ಪ್ರಯಾತಾಃಕುತ್ರವಾವದ । ಕಿಂಚವಾಗೀಶನಮಿನಾರ್ಯ್ಯಾಖ್ಯಂಸದ್ಭಕ್ತಪುಙ್ಗವಮ್ ॥೫೮॥ ಗೃಹೀತ್ವಾಜೈನಮುನಿಷು ಸರ್ವೇಪ್ಯತ್ಯನ್ತಕೋಪತಃ ॥ ಪ್ರಜ್ವಲದ್ದಹನಾನ್ತಸ್ಥಂ ಪ್ರಕ್ಷಿಪ್ತಂದ್ವಿರದಾಗ್ರತಃ ॥೫೯॥ ಪಯೋನಿಮಗ್ನಂಚತಥಾ ಪರೀತಂವಿಷವಹ್ನಿನಾ। ಕುರ್ವತ್ಸುಪಂಚಾಕ್ಷರತ ಸ್ತತ್ಸರ್ವಂ ವಿನಿವಾರ್ಯ್ಯಸಃ ॥೬೦॥ ಭಸ್ಮೀಚಕಾರತಾನ್ಸರ್ವಾಂ ಸ್ತದಾಯೂಯಂಕುತ್ರನಿರ್ಗತಾಃ। ಕಿಂಚಾಸ್ತಿಕಶ್ಚಿಜ್ಜಾತ್ಯಂಧ ಇರಿತ್ತಾಣ್ಡರಿತಿಶ್ರುತಃ ॥೬೧॥ ತಸ್ಮಿನ್ನೀಶಸ್ಯಪುರತೋವಾಪೀಂ ಕರ್ತುಂಸಮುದ್ಯತೇ । ಬಹುವಾರಂಕೃತೇತತ್ರ ವಿಘ್ನೇಜೈನೈರ್ದುರಾತ್ಮಭಿಃ ॥೬೨॥ ಖಿನ್ನಶ್ಶಿವಂಸಮಾರಾಧ್ಯ ಲಬ್ಧ್ವಾದೃಷ್ಟೀಃಪರಾದಮೂನ್।ಚಕಾರಸಕಲಾನನ್ಧಾಂ ಸ್ತದಾಯೂಯಂಕುತ್ರನಿರ್ಗತಾಃ ॥೬೩॥ ತಥೈವನಮಿನಂದ್ಯಾಖ್ಯೇ ಸದ್ಭಕ್ತೇಽತ್ಯನ್ತಭಕ್ತಿತಃ । ಸಮರ್ಪ್ಯಪರಮೇಶಾಯ ಘೃತದೀಪಸಹಸ್ರಕಮ್ ॥೬೪॥ ಅಹರ್ನಿಶಂಸೇವಮಾನೇ ಜೈನಾಸ್ಸರ್ವೇಪ್ಯಸೂಯತಃ । ನದದುರ್ನಿತ್ಯಮೇತಸ್ಮೈ ದೇಯಂ ಟಂಕಮಿತಂಘೃತಮ್ ॥೬೫॥ ಸಜ್ಞಾತ್ವಾತತ್ಕೃತಂಲಿಂಗೋದಕೇನ ಪರಿ

---

ಜ್ಯವನ್ನು ಪಾಲಿಸುತ್ತಿರಲು ॥೫೭॥ ಆ ಕಾಲದಲ್ಲಿ ನೀವೆಲ್ಲರೂ ಎಲ್ಲಿಗೆ ಹೋಗಿದ್ದಿರಿ? ಹೇಳು. ಮತ್ತೂ ವಾಗೀಶನಮಿನಾರ್ಯನೆಂಬ ಭಕ್ತಶ್ರೇಷ್ಠನನ್ನು ॥೫೮॥ ಜೈನಮುನಿಗಳೆಲ್ಲರೂ ಅತ್ಯಂತ ಕೋಪದಿಂದ ಹಿಡಿದುಕೊಂಡು ಉರಿಯುತ್ತಿರುವ ಬೆಂಕಿಯಲ್ಲಿ ಹಾಕಿ, ಆನೆಯ ಮುಂಪಕ್ಕೆ ನೂಕಿ, ॥೫೯॥ ನೀರಿನಲ್ಲಿ ಕೆಡಹಿ ಮುಳುಗಿಸಿ, ವಿಷಾಗ್ನಿಯಲ್ಲಿ ಹಾಕಲು, ಆ ಭಕ್ತೋತ್ತಮನು ಪಂಚಾಕ್ಷರೀಮಂತ್ರಪುರಶ್ಚರಣದಿಂದ ಆ ಬಾಧೆಯೆಲ್ಲವನ್ನೂ ಪರಿಹರಿಸಿಕೊಂಡು ॥೬೦॥ ಆ ಜೈನರೆಲ್ಲರನ್ನೂ ಸುಟ್ಟು ಬೂದಿಮಾಡಿದನು. ಆಗ ಇವರೆಲ್ಲರೂ ಎಲ್ಲಿಗೆ ಹೋಗಿದ್ದರು? ಮತ್ತೂ ಇರಿತ್ತಾಂಡಾರಿಯೆಂಬ ಹೆಸರಿನಿಂದ ಪ್ರಸಿದ್ಧನಾದ ಬಬ್ಬನೊಬ್ಬ ಹುಟ್ಟು ಕುರುಡನಿದ್ದನು ॥೬೧॥ ಅವನು ಶಿವಲಿಂಗದಿದಿರಿಗೆ ಬಾವಿಯನ್ನು ತೋಡಬೇಕೆಂದು ಯತ್ನಿಸಿರಲು, ಅದಕ್ಕೆ ದುಷ್ಟರಾದ ಜೈನರು ಹಲವುಬಾರಿ ವಿಘ್ನವನ್ನಾಚರಿಸಲಾಗಿ ॥೬೨॥ ಆ ಭಕ್ತನು ಖೇದಪಟ್ಟು, ಶಿವನನ್ನು ಪೂಜಿಸಿ, ಕಣ್ಣುಗಳನ್ನು ಪಡೆದುಕೊಂಡು, ಈ ಜೈನರೆಲ್ಲರನ್ನೂ ಕುರುಡರನ್ನು ಮಾಡಿದನು. ಆಗ ಇವರುಗಳು ಎಲ್ಲಿಗೆ ಹೋಗಿದ್ದರು? ॥೬೩॥ ಹಾಗೆಯೇ ನಮಿನಂದಿಯೆಂಬ ಭಕ್ತಶ್ರೇಷ್ಠನೊಬ್ಬನು ಅತ್ಯಂತ ಭಕ್ತಿಯಿಂದ ಪರಶಿವನಿಗೆ ತುಪ್ಪದ ದೀಪಗಳು ಸಾವಿರವನ್ನು ಬೆಳಗುತ್ತ, ಹಗಲೂ ರಾತ್ರಿಯೂ ಸೇವಿಸುತ್ತಿರಲು, ಜೈನರೆಲ್ಲರೂ ಅದನ್ನು ನೋಡಿ ಸೈರಿಸಲಾರದೆ, ಪ್ರತಿದಿನವೂ ಇವನಿಗೆ ಕೊಡಬೇಕಾದ ಒಂದೊಂದು ಸೌಟಿನ ತುಪ್ಪವನ್ನು ಕೊಡದೆಹೋದರು. ॥೬೪॥ ಅವರು ಮಾಡಿದ ಕು

ಪೂರಿತಮ್। ಪುನರ್ದೀಪಸಹಸ್ರಂಚ ದತ್ವಾತಜ್ಜೈನಗೋಕುಲಮ್ ॥೬೬॥ ಶಾಪೇನವಿಹತಂಕೃತ್ವಾ ತದಾಪ್ರಭೃತಿತತ್ಪುರೇ । ಜಿನಾಲಯೋಜೈನ ಇತಿ ಯಥಾವಾರ್ತಾಪಿನೋಭವೇತ್ ॥೬೭॥ ತಥಾಚಕಾರತೇಜೈನಾಸ್ತದಾನೀಂಕುತ್ರವಾಗತಾಃ । ಕಿಂಚಾಸೀತ್ಸಾಂಖ್ಯತೊಣ್ಡಾಖ್ಯ ಸ್ಸದ್ಭಕ್ತಸ್ತೊಣ್ಡಮಣ್ಡಲೇ ॥೬೮॥ ತದ್ಭೂಮೌಜೈನದೇಶತ್ವಾ ಲ್ಲಿಙ್ಗಂಭಕ್ತಶ್ಶಿವಾಲಯಃ । ಇತಿವಾರ್ತಾಪಿತದ್ದೇಶೇ ನಕುತ್ರಾಪಿಪ್ರವರ್ತತೇ ॥೬೯॥ ಯತಸ್ತಚ್ಛ್ರವಣಾಜ್ಜೈನಾ ಹನಿಷ್ಯನ್ತಿಕ್ರುಧಾತತಃ । ಶಿವಾಲಯಾಭಿಗಮನಂ ಕುಸುಮಾಹರಣಂತಥಾ ॥೭೦॥ ಭಸಿತಸ್ಪರ್ಶನಮಪಿ ನಕಾರ್ಯಮನಾವಿತಿ । ಪ್ರಚ್ಛನ್ನೋಬೌದ್ಧವೇಷೇಣ ಪುಷ್ಪಭಾವನಯಾತ್ರಿಭಿಃ ॥೭೧॥ ಪಾಷಾಣೈಸ್ತ್ರಿಷುಕಾಲೇಷು ಕುರ್ವೇನಿತ್ಯವಿಧಿಂಶುಭಮ್ । ಇತಿನಿಶ್ಚಿತ್ಯಾನ್ತರಂಗೇ ಬಹಿರ್ಬೌದ್ಧಇವಾಚರನ್ ॥೭೨॥ ದೃಷ್ಟ್ವಾಸ್ವಗ್ರಾಮಸೀಮಾನ್ತೇಜೀರ್ಣಂ ಕಿಂಚಿಚ್ಛಿವಾಲಯಮ್ । ಬೌದ್ಧವತ್ಕುಪಿ

---

ಯುಕ್ತಿಯನ್ನು ಆ ಭಕ್ತನು ತಿಳಿದುಕೊಂಡು, ದೀವಿಗೆಗಳಿಗೆಲ್ಲಾ ಲಿಂಗತೀರ್ಥಜಲವನ್ನೇ ತುಂಬಿ, ಮತ್ತೆ ಸಾವಿರ ದೀವಿಗೆಗಳನ್ನು ಶಿವನಿಗೆ ಸಮರ್ಪಿಸಿ, ಆ ಜೈನರ ಸಮೂಹವನ್ನೆಲ್ಲಾ ಶಾಪದಿಂದ ಕೊಂದು, ಅದು ಮೊದಲುಗೊಂಡು ಆ ಊರಿನಲ್ಲಿ "ಇದು ಜಿನದೇವಾಲಯ-ಇವನು ಜೈನ" ಎಂದು ಹೇಳಹೆಸರಿಲ್ಲದಿರುವಂತೆ ಮಾಡಿಬಿಟ್ಟನು. ಆಗ ನಿನ್ನ ಜೈನರೆಲ್ಲರೂ ಎಲ್ಲಿಗೆ ಹೋಗಿದ್ದರು? ॥೬೭॥ಮತ್ತೂ ತೊಂಡಮಂಡಲದಲ್ಲಿ ಸಾಂಖ್ಯತೊಂಡನೆಂಬ ಉತ್ತಮ ಭಕ್ತನೊಬ್ಬನಿದ್ದನು ॥೬೮॥ ಆದೇಶವೆಲ್ಲವೂ ಜೈನರದಾಗಿದ್ದುದರಿಂದ ಶಿವಲಿಂಗ-ಶಿವಭಕ್ತ-ಶಿವಾಲಯ-ಎಂಬಿವುಗಳ ಸುದ್ದಿಯು ಆದೇಶದಲ್ಲೆಲ್ಲಿಯೂ ಇರುತ್ತಿರಲಿಲ್ಲ. ಏಕೆಂದರೆ-ಆ ಹೆಸರನ್ನು ಕೇಳಿದಕೂಡಲೇ ಜೈನರು ಕೋಪದಿಂದ ಅವುಗಳನ್ನು ಹಾಳ್ಮಾಡಿಬಿಡುತ್ತಿದ್ದರು. ಆ ಸಾಂಖ್ಯತೊಂಡನಾದರೊ ಒಳಗೆ ಭಕ್ತನಾಗಿದ್ದರೂ ಹೊರಗೆ ಬೌದ್ಧವೇಷವನ್ನು ಧರಿಸಿಕೊಂಡು, „ಭೂಮಿಯಲ್ಲಿ ಶಿವದೇವಾಲಯಕ್ಕೆ ಹೋಗುವುದೂ, ಶಿವನಿಗಾಗಿ ಹೂವನ್ನೆತ್ತಿತರುವುದೂ, ಭಸ್ಮವನ್ನು ಮುಟ್ಟುವುದು ಸಹ ಅಕೃತ್ಯಗಳು„ ಎಂದು (ತನ್ನ ಗುಟ್ಟು ಹೊರಕ್ಕೆ ಬರಬಾರದೆಂಬುದಕ್ಕಾಗಿ) ಬಾಯಿಂದ ಹೇಳುತ್ತ, ಪ್ರತಿದಿನವೂ ಮೂರುಕಾಲದಲ್ಲಿಯೂ ಮೂರು ಮೂರು ಕಲ್ಲುಗಳಿಂದ ಅವನ್ನೇ ಪುಷ್ಪವೆಂದು ಭಾವಿಸಿ ಶಿವನಿಗೆ ಸಮರ್ಪಿಸುವುದನ್ನೇ ನಿತ್ಯವ್ರತವನ್ನಾಗಿ ಆಚರಿಸುವೆನೆಂದು ಅಂತರಂಗದಲ್ಲಿ ನಿರ್ಧರಿಸಿ, ಹೊರಗೆ ಬೌದ್ಧನಂತೆ ನಟಿಸುತ್ತ॥೭೨॥ತನ್ನ ಊರಿನ ಎಲ್ಲೆಯಕೊನೆಯಲ್ಲಿದ್ದ ಒಂದು ಶಿವದೇವಾಲಯವನ್ನು ಕಂಡು, ಬೌದ್ಧನಹಾಗೆ ಕೋಪವನ್ನಭಿನಯಿಸಿ, ಶಿವನನ್ನು ಚೆನ್ನಾಗಿ ಭಯಪಡಿಸು

ತೋಭೂತ್ವಾ ಶಿವಂಸವ್ಯಗ್ರಿಭರ್ತ್ಸಯನ್ ॥೭೩॥ ಸ್ಥಾತುಂನನುಕಥಂ ಶಕ್ಯಂ ಮದ್ಗ್ರಾಮಂನಿಕಷಾತ್ವಯಾ । ಅದ್ರಾಕ್ಷಂತವನಕ್ವಾಪಿಗನ್ತುಂ ಶಕ್ಯಮಿತಃಪರಮ್ ॥೭೪॥ ನತ್ಯಕ್ಷ್ಯಾಮಿಶಿಲಾವಿದ್ಧಂ ತ್ವಾಂಕರೋಮಿದೃಢ ವ್ರತಃ । ಇತಿಸಂಪ್ರೋಜಯಂಸ್ತಸ್ಥೌ ನಿತ್ಯಂಸನ್ಧ್ಯಾಸುಶಂಕರಮ್ ॥೭೫॥ ಶಿಲಾತ್ರಯೇಣಸತತಂ ಸದ್ಭಕ್ತಿಪರಿಪೂರಿತಃ । ವರ್ಷೇವರ್ಷತ್ಯೇಕದಾತ ದ್ಗ್ರಾಮೇಶಾಲಯಮಧ್ಯತಃ ॥೭೬॥ ಪ್ರವಹಂತ್ಯಾಂಸಮುದ್ವೇಲಂ ನಿಮ್ನಗಾಯಾಂನಿರಂತರಂ । ಪ್ರಯಾತುಂಶಿವಸೇವಾರ್ಥಮಶಕ್ಯತ್ವಾತ್ಕಥಂ ಚನ ॥೭೭॥ ವಿಹಾಯಭೋಜನಂತಸ್ಮಿನ್ಪಂಚರಾತ್ರಂಸ್ಥಿತೇಸತಿ । ಈದೃಶೋನಿಯಮೋಭೂಮಾವೀದೃಶಂವ್ರತಮುನ್ನತಂ ॥೭೮॥ ಈದೃಗ್ವಿಧಂಫಲಮಪಿಕಿಮನ್ಯೇಷಾಂತುವಿದ್ಯತೇ । ಅಯಮೇವಭವತ್ಯುರ್ವ್ಯಾಂವಿಶಿಷ್ಟೋಬೌದ್ಧಪುಙ್ಗವಃ ॥೭೯॥ ಬುದ್ಧವೈರಿಂತಮೀಶಾನಂ ಪ್ರಹರ್ತುಂಪ್ರಸ್ತರೈರ್ಘನೈಃ। ಸಂಪ್ರಯಾತುಮಶಕ್ಯತ್ವಾದ್ದುಃಖಿತೋಭವತಿಧ್ರುವಮ್॥ ತ್ರಿಷ್ಠತ್ಯೇವಂವ್ರತಿಶ್ರೇಷ್ಠೋ ಮುಕ್ತ್ವಾಭೋಜನಮೀದೃಶೇ । ಮಾಹಾತ್ಮ್ಯಾ

---

ತ್ತ ॥೭೩॥ ಎಲೊ ಶಿವನೆ! ನನ್ನ ಊರಿಸಬಳಿ ನೀನು ಇರಬಹುದೆ? ನೀನಿಲ್ಲಿರುವುದನ್ನು ನಾನು ಕಂಡುಬಿಟ್ಟೆ: ಇನ್ನುಮೇಲೆ ನನ್ನಕಣ್ಣು ತಪ್ಪಿಸಿ ನೀನು ಎಲ್ಲಿಗೂ ಹೋಗಲಾರೆ॥೭೪॥ನಿನ್ನನ್ನು ನಾನು ಬಿಡುವುದಿಲ್ಲ; ನಿನ್ನನ್ನು ಕಲ್ಲಿನಿಂದಲೇ ಹೊಡೆಯುತ್ತೇನೆ; ಎಂದು ಶಪಥವನ್ನು ಅಭಿನಯಿಸಿದವನಾಗಿ, ಒಳಗೆ ಪೂರ್ಣಭಕ್ತಿಗೊಂಡು, ಪ್ರತಿದಿನವೂ ಮೂರುಸಂಜೆಗಳಲ್ಲೂ ಮೂರುಮೂರು ಕಲ್ಲೇಟನ್ನೇ ಪೂಜೆಯನ್ನಾಗಿ ಶಿವನಿಗೆ ಸಮರ್ಪಿಸುತ್ತಿದ್ದನು. ॥೭೫॥ ಒಂದಾನೊಂದುದಿನ ಮಳೆ ಸುರಿದು ಆಗ್ರಾಮಕ್ಕೂ ಶಿವಾಲಯಕ್ಕೂ ಮಧ್ಯದಲ್ಲಿ ನೀರು ಹೊಳೆಯಾಗಿ ದಡ ಮೀರಿ ಸದಾ ಹರಿಯುತ್ತಿರಲಾಗಿ, ಈ ಸಾಂಖ್ಯತೊಂಡನಿಗೆ ಶಿವಾಲಯಕ್ಕೆ ಹೋಗಿ ಪೂಜಿಸಲು ಅಶಕ್ಯವಾದಕಾರಣ, ಆತನು ೫ ದಿನಗಳವರೆಗೂ ಊಟವನ್ನು ಬಿಟ್ಟು ಉಪವಾಸವಿದ್ದನು. ಜೈನಬೌದ್ಧರೆಲ್ಲರೂ ಆತನನ್ನು ನೋಡಿ, "ಆಹಾ! ಭೂಮಿಯಲ್ಲಿ ಇಂಥ ಸದಾಚಾರ ಪೂ ಇಂಥ ಶ್ರೇಷ್ಠವ್ರತವೂ ಇಂಥ ಫಲವೂ ಇವನೊಬ್ಬನಲ್ಲಲ್ಲದೆ ಮತ್ತಾರಲ್ಲಿರುವುವು? ಭೂಮಿಯಮೇಲೆ ಇವನೊಬ್ಬನೇ ಮಹಾಬೌದ್ಧಶ್ರೇಷ್ಠನು ॥೭೯॥ ಏಕೆಂದರೆ—ನಮ್ಮ ಬೌದ್ಧಮತಕ್ಕೆ ಶತ್ರುವಾದ ಶಿವನನ್ನು ಕಲ್ಲಿನಿಂದ ಹೊಡೆಯಬೇಕೆಂದು ಸಂಕಲ್ಪಿಸಿ, ಆ ದೇವಾಲಯಕ್ಕೆ ಹೋಗಲು ಅಶಕ್ಯವಾದುದರಿಂದ ದುಃಖಪಡುತ್ತಿದ್ದಾನೆ ॥೮೦॥ ಇಂತಹುದಕ್ಕೋಸ್ಕರವೇ ಮಹಾವ್ರತಸಂಪನ್ನನಾದೀತನು ಭೋಜನವನ್ನುಕೂಡ ಮಾಡದೆ ಉಪವಾಸವಾಗಿದ್ದಾನೆ. ವ್ರತಸಂಪನ್ನರು ಭೂಮಿಯಲ್ಲಿ ಹೀಗಲ್ಲವೆ ಇರಬೇಕು?

ದೃಷ್ಟ್ವೈಕಸ್ತ್ವಂ ಕಿಮುಚಿತಂ ವ್ರತಿನಾಮವನೀತಲೇ ॥೮೧॥ ಇತ್ಯಾದರಾತ್ಪ್ರ
ಸ್ತುವತ್ಸು ಜೈನಬೌದ್ಧೇಷು ಸನ್ತತಮ್ । ಆತ್ಮಾನಂ ಸೇವಮಾನೇಷು ಸಾಂಖ್ಯ
ತೊಂಡೋ ಮಹಾಮತಿಃ ॥೮೨॥ ಶನೈಃ ಕ್ಷೀಣೇನದೀಪೂರೇ ಸದ್ಭಕ್ತ್ಯೈ
ವಮಚಿನ್ತಯತ್ । ಬತವ್ರತಪ್ರತಿಜ್ಞಾನೋ ವಿಗತಾಮಮ ಜೀವನಮ್ ॥೮೩॥
ಅಙ್ಗೀಕರೋತಿ ಕಿಂ ದೇವೋ ಮಹಾದೇವಸ್ಸನಾತನಃ । ಗೃಹೀತವ್ರತಸಂ
ಪೂರ್ತಿಮಕೃತ್ವಾ ಭೋಜನಂ ಮಯಾ ॥೮೪॥ ಪರಿತ್ಯಕ್ತಮಿತಿ ಸ್ವೈರಂ ವ
ಕ್ತುಂ ಕಿಮುಚಿತಂ ಮಮ । ಮಯಾ ಮಹಾದೇವಸೇವಾ ವ್ರತಮಙ್ಗೀಕೃ
ತಂ ಕಿಮು ॥೮೫॥ ಆಹೋಸ್ವಿದುಪವಾಸಸ್ಯ ವ್ರತಮಙ್ಗೀಕೃತಂ ನು ವಾ ।
ಉಪವಾಸವ್ರತಾನಾನ್ತು ತಾದೃಶಾನಾಂ ಸಹಸ್ರಕಮ್ ॥೮೬॥ ಜಗತ್ಪ್ರ
ಭೋರ್ಮಹೇಶಸ್ಯ ಸೇವಾವ್ರತಸಮಂ ಕಿಮು । ತದಸ್ಮಿನ್ ಭುವನೇ ಸ್ಥಾ
ತುಂ ನ ಯುಕ್ತಂ ಮರಣಂ ಪರಮ್ ॥೮೭॥ ತಚ್ಚಾಪ್ಯಸಙ್ಗತಂ ಬೌದ್ಧಾ ಮ
ತ್ಪರೋಕ್ಷೇ ಕಪರ್ದಿನೇ । ಕಿಮನಿಷ್ಟಂ ಸ್ಮರಿಷ್ಯನ್ತಿ ಕಿಂ ವಾ ಜ್ಞಾತುಂ ನ ಶ
ಕ್ಯತೇ ॥೮೮॥ ತಸ್ಮಾದೀಶಂ ಪರಿತ್ಯಜ್ಯ ಯಾನಬುದ್ಧಿರ್ನ ಶೋಭನಾ । ಇವಾ

---

ಅವನ್ನು ಬಿಟ್ಟು, ಮೂಢತನದಿಂದ ವ್ರತಕೆಟ್ಟರೂ ಕೆಡಲೆಂದು ಭೋಜನಮಾಡಿಬಿಡು
ವುದು ಉಚಿತವೆ? ॥೮೧॥ ಎಂದು ಜೈನಬೌದ್ಧರುಗಳು ತನ್ನನ್ನು ಆದರದಿಂದ ಹೊ
ಗಳುತ್ತ ಸೇವಿಸುತ್ತಿರಲು, ಅಷ್ಟರಲ್ಲಿ ಮೆಲ್ಲಮೆಲ್ಲನೆ ಹೊಳೆಯು ಇಳಿಯಲಾಗಿ, ಬುದ್ಧಿ
ಶಾಲಿಯಾದ ಸಾಂಖ್ಯತೊಂಡನು ಸದ್ಭಕ್ತಿಯಿಂದ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು
॥ ಅಯ್ಯೋ! ನನ್ನ ವ್ರತಪ್ರತಿಜ್ಞೆಯು ಹಾಳಾಯಿತು. ಇನ್ನೂ ನಾನು ಬದುಕಿರುವುದ
ನ್ನು ಪುರಾತನನಾದ ಪರಮೇಶ್ವರನು ಒಪ್ಪುವನೆ! 'ಹಿಡಿದ ವ್ರತವನ್ನು ಪರಿಪೂರಣಮಾ
ಡದೆ ಹೋದಕಾರಣ ನಾನು ಊಟವನ್ನು ಬಿಟ್ಟೆನು' ಎಂದು ಮನಸ್ಸಿಗೆ ಬಂದಂತೆ ಹೇ
ಳಿಕೊಳ್ಳುವುದು ನನಗೆ ಯೋಗ್ಯವೆ? ನಾನು ಶಿವಸೇವಾ ವ್ರತವನ್ನು ಹಿಡಿದೆನೊ? ಉಪವಾ
ಸವ ವ್ರತವನ್ನು ಹಿಡಿದೆನೊ? ಅಂಥ ಸಹಸ್ರ ಉಪವಾಸವ್ರತಗಳು ಜಗದೀಶನಾದ ಶಂ
ಕರನ ಸೇವಾವ್ರತಕ್ಕೆ ಸಮಾನವಾಗುವುದುಂಟೆ? ಅದು ಕಾರಣ ಉಪವಾಸವನ್ನು ಮಾ
ಡಿದ ಮಾತ್ರದಿಂದಲೇ ನನ್ನ ವ್ರತವು ನೆರವೇರಿದ ಹಾಗಾಗಲಿಲ್ಲ. ವ್ರತಭಂಗವಾದಮೇಲೆ
ಈ ಲೋಕದಲ್ಲಿ ಉಳಿದಿರುವುದು ಯೋಗ್ಯವಲ್ಲ. ಸಾಯುವುದೇ ಲೇಸು ॥೮೭॥ ಆದ
ರೆ ಹಾಗೆ ಸಾಯುವುದು ಕೂಡ ಅಸಂಗತವು. ಏಕೆಂದರೆ—ನಾನಿಲ್ಲದೆ ಹೊದಕಾಲ
ದಲ್ಲಿ ಬೌದ್ಧರು ಪರಮೇಶ್ವರನಿಗೆ ಯಾವ ಕೇಡನ್ನು ಕೋರುವರೋ ಅದನ್ನು ತಿಳಿಯು
ವುದು ಕಷ್ಟ. ಆದುದರಿಂದ ಶಿವನನ್ನು ಬಿಟ್ಟು ಹೋಗಬೇಕೆಂಬ ಬುದ್ಧಿಯು ಶುಭ

ನೀಂತ್ಯೈರ್ವಿಚಾರೈಃ ಕಿಂಪಶ್ಚಾತ್ಕಿಲಭವಂತುತೇ ||೪೯|| ದಿನಾನಾಂಪಂ
ಚಕೇಪಂಚಚತ್ವಾರಿಂಶನ್ಮಿತಾಶ್ಶಿಲಾಃ । ಗೃಹೀತಸ್ಯವ್ರತಸ್ಯಾಹಂ ಶ
ಕ್ತೋಽಸ್ಮ್ಯೇಷ್ಟುಂನತಾವತೀಃ ||೫೦|| ತಾಸಾಂಸಮಾನಂ ಪಾಷಾಣಪು
ಷ್ಪಮೇಕಮುಮಾಪತೇಃ । ಆನಯಾಮೀತಿಮಹತೀಂ ಶಿಲಾಮಾದಾಯ
ಸತ್ವರಮ್ ||೫೧|| ಉಪಾಗತ್ಯಾರ್ಪಣೋದ್ಯುಕ್ತೇ ಪ್ರಹಸನ್ಪರಮೇಶ್ವರಃ
ಹಸ್ತಂಪ್ರಸಾರಯನ್ಮೂರ್ಧ್ನಿ ಪ್ರತ್ಯಕ್ಷಸ್ಸಮಜಾಯತ||೫೨|| ತುಷ್ಟೋಽಹ
ಸ್ಮಿಸಾಂಖ್ಯತೇಭಕ್ತ್ಯಾ ವರಯಾಭೀಷ್ಟಿತಂತವ । ಇತ್ಯುಕ್ತೇಃಪೂರ್ವತ
ಸ್ಸಾಂಖ್ಯಃ ಪ್ರಣಿಪತ್ಯಮಹೇಶ್ವರಮ್ ||೫೩|| ಸ್ತುವನ್ನುವಾಚವಚನಂಪರಿ
ಸಂತುಷ್ಟಮಾನಸಃ । ವರೈಃಕಿಮಿತರೈರ್ದೇವ ಶೃಣುವಿಜ್ಞಾಪನಂಮಮ ||
ಭಕ್ತಿಂಮಮಾಸಙ್ಗತಾಂತಾಂ ಯದಙ್ಗೀಕೃತವಾನಸಿ । ನಾಲಂಕಿಮೇತ
ದ್ವಿಶ್ವೇಶ ಕರುಣಾಮೃತಸಾಗರ ||೫೫|| ಇತಿಭೂಯೋನತೇತಸ್ಮಿನ್ ಮ
ಹಾದೇವಃಕೃಪಾನಿಧಿಃ । ದಿವ್ಯಂವಿಮಾನಮಾರೋಪ್ಯ ಕೈಲಾಸಾದ್ರಿಂನಿ
ನಾಯತಮ್ ||೫೬|| ದುಷ್ಟಾನ್ನಿಜೈನಬೌದ್ಧಾದಿಮತಾನಿ ಸ್ವಪ್ರಭಾವತಃ ।

---

ಕರವಲ್ಲ. ಈಗ ಆ ವಿಚಾರಗಳಿಂದೇನು ಫಲ? ಅವೆಲ್ಲಾ ಅನಂತರವಾಗಲಿ ||೪೯||
ಈಗ ಶಿವನಪೂಜೆಯು ತಪ್ಪಿ ೩ ದಿನಗಳಾದುವು. ದಿನಕ್ಕೆ ಮೂರುಕಾಲದ ಪೂಜೆಗೆ ೫
ರಂತೆ ೩ ದಿನಕ್ಕೆ ೪೫ ಕಲ್ಲುಗಳಾದುವು. ನನ್ನ ವ್ರತಕ್ಕಾಗಿ ಅಷ್ಟೊಂದು ಕಲ್ಲುಗಳ
ನ್ನು ಹುಡುಕುವುದಕ್ಕೆ ನಾನು ಶಕ್ತನಲ್ಲ ||೫೦|| ಅಷ್ಟು ಕಲ್ಲುಗಳಿಗೂ ಸಮಾನವಾದ
ದೊಡ್ಡಕಲ್ಲಿನ ಹೂವೊಂದನ್ನು ಶಿವನಪೂಜೆಗೆ ತೆಗೆದುಕೊಂಡು ಬರುವೆನು ಎಂದು
ಯೋಚಿಸಿ, ಬೇಗನೆ ಬಂದು ದೊಡ್ಡಕಲ್ಲನ್ನು ತೆಗೆದುಕೊಂಡು ಬಂದು ||೫೧|| ಸಮ
ರ್ಪಿಸುವುದಕ್ಕೆ ಉಜ್ಜುಗಿಸಲು, ಪರಶಿವನು ನಕ್ಕು, ಕೈಯನ್ನು ತನ್ನ ತಲೆಯಮೇಲೆ
ಅಡ್ಡಲಾಗಿ ಇಟ್ಟು, ಪ್ರತ್ಯಕ್ಷನಾದನು ||೫೨|| ‹‹ಎಲೈ ಸಾಂಖ್ಯತೊಂಡನೆ, ನಿನ್ನ ಭಕ್ತಿ
ಯಿಂದ ನಾನು ಸಂತೋಷಪಟ್ಟೆನು. ನಿನ್ನ ಇಷ್ಟಾರ್ಥವನ್ನು ಬೇಡು ›› ಎಂದು ಶಿವ
ನು ಹೇಳುವುದಕ್ಕೆ ಮೊದಲೇ ಸಾಂಖ್ಯತೊಂಡನು ಶಂಕರನನ್ನು ನಮಸ್ಕರಿಸಿ ||೫೩||
ಮನಸ್ಸಂತೋಷಗೊಂಡು ಸ್ತುತಿಸಿ, ಹೀಗೆ ನುಡಿದನು — ಎಲೆ ದೇವನೆ, ಬೇರೆ ವರಗ
ಳಿಂದೇನು ಪ್ರಯೋಜನ? ನನ್ನ ವಿಜ್ಞಾಪನೆಯನ್ನು ಲಾಲಿಸು ||೫೪|| ದಯಾಮೃತಸಮು
ದ್ರನಾದ ಎಲೈ ಜಗದೀಶ್ವರನೆ, ನನ್ನ ಭಕ್ತಿಯು ಅಸಂಗತವಾದುದಾಗಿದ್ದರೂ ಅದನ್ನು
ನೀನು ಅಂಗೀಕರಿಸಿದೆಯಲ್ಲಾ ! ಇದೇ ನನಗೆ ಸಾಲದೆ ? ||೫೫|| ಎಂದು, ಮರಳಿ ಆ
ಸಾಂಖ್ಯತೊಂಡನು ನಮಸ್ಕರಿಸಲಾಗಿ, ದಯಾನಿಧಿಯಾದ ಮಹಾದೇವನು ಆ ಭಕ್ತನ
ನ್ನು ದೇವಲೋಕದ ವಿಮಾನದಲ್ಲಿ ಹತ್ತಿಸಿ, ಕೈಲಾಸಪರ್ವತಕ್ಕೆ ಕರೆದುಕೊಂಡುಹೋ
ದನು ||೫೬|| ಆಗ ಸಾಂಖ್ಯತೊಂಡನು ಕೋಪಗೊಂಡು, ತನ್ನ ಮಹಿಮೆಯಿಂದ ಆ

ಸಾಂಖ್ಯತೊಣ್ಡೇತದಾತಸ್ಮಿನ್ ನಿಶ್ಶೇಷಂತೊಣ್ಡಮಣ್ಡಲೇ ॥೯೩॥ ಶಾಪೇ ನಪರಿನಷ್ಟಾನಿ ಕೃತವತ್ಯತಿರೋಷತಃ। ನಸನ್ತಿ ಕಿಮಮೀಜೈನಮುನಯಸ್ಸ ಕಲಾಅಪಿ ॥೯೪॥ ತಸ್ಮಾದಸದ್ವಾದಪರಾನ್ ಜೈನತರ್ಕಾನ್ಸಮಾಪಯ ॥

ಇತ್ಯಸಂಖ್ಯಾತಮಹಾಮಾಹೇಶ್ವರ......................ಶ್ರೀವೀರಶೈವ ಮತಾಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ವಾದಪ್ರಕ ರಣೇ ಜೈನವಾದ ನಿರಾಸಕಥನಂ ನಾಮ ದಶಮೋಽಧ್ಯಾಯಃ.

## ಅಥ ಏಕಾದಶೋಽಧ್ಯಾಯಃ.

(ಚಂದ್ರಧಾರಣಲೀಲಾಕಥನಂ)

ಇತಿಜೈನಾದ್ಯಸದ್ವಾದಾ ನ್ವಾರಯನ್ತಂ ಮಹಾಮತಿಂ । ಪ್ರಚಣ ತಾರ್ಕಿಕಚಯ ಜಯಾಖಂಡಿತಮಂಡನಂ ॥೧॥ ಪ್ರತಿವಾದಿಪ್ರತಾನಾಪಾ

---

ತೊಂಡಮಂಡಲದಲ್ಲಿದ್ದ ದುಷ್ಟವಾದ ಜೈನ ಬೌದ್ಧಾದಿಮತಗಳನ್ನು ಶಾಪದಿಂದ ನಿಶ್ಶೇ ಷವಾಗಿ ಹಾಳ್ಮಾಡುವಾಗ ಈ ಜೈನಮುನಿಗಳೆಲ್ಲರೂ ಇರಲಿಲ್ಲವೋ? ॥೯೪॥ ಅದುಕಾರ ಣ, ಎಲೈ ಜೈನನೆ, ದುರ್ವಾದಪಕ್ಷದ ನಿನ್ನ ತರ್ಕಗಳನ್ನು ಮುಗಿಸು.

ಎಂದು ಶ್ರೀಮತ್ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಮನ್ಮಲ್ಲಿಕಾ ರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎಂ. ಆರ್. ಕರಿಬಸವಶಾಸ್ತ್ರಿ ರಚಿತವಾದ 'ಭಾವಮಂಜರಿ' ಯೆಂಬ ಕನ್ನಡಟಿಪ್ಪಣಿ ದಲ್ಲಿ ವಾದಪ್ರಕರಣದೊಳಗೆ ಶ್ರೀಮತ್ಪಂಡಿತಾರಾ ಧ್ಯರು ಜೈನವಾದವನ್ನು ಖಂಡಿಸಿದುದನ್ನು ನಿರೂಪಿಸುವ ೧೦ನೆಯ ಅಧ್ಯಾಯವು ಮುಗಿದುದು.

## ೧೧ ನೆಯ ಅಧ್ಯಾಯವು.

(ಚಂದ್ರಧಾರಣಲೀಲಾನಿರೂಪಣವು.)

ಹೀಗೆ ಜೈನಾದಿಗಳ ದುರ್ವಾದವನ್ನು ಅಡಗಿಸಿದವನೂ, ಅತ್ಯಂತ ಬುದ್ಧಿಶಾಲಿ ಯೂ, ಸಮರ್ಥರಾದ ತರ್ಕಶಾಸ್ತ್ರಜ್ಞರನ್ನು ಜಯಿಸುವುದೇ ಅಖಂಡವಾದ ಆಭರಣ ವಾಗುಳ್ಳವನೂ ॥೧॥ ಪ್ರತಿವಾದಿಗಳ ಸಮೂಹವು ಮಾಡತಕ್ಕ ಖಂಡನಗಳನ್ನು ಖಂಡಿ

ದಿತಖಣ್ಡನಖಣ್ಡನೇ । ಕ್ಷಮೈರನುಜ್ಝಿತಶ್ರುತ್ಯುಪನ್ಯಾಸೈಶ್ಶಬ್ದಜಾಲಕೈಃ ಪೂರ್ವಾಕ್ಷೇಪಪ್ರಶ್ನಜಾಲಂ ಪ್ರತಿವಾದಿಭಿರೀರಿತಮ್ । ಖಣ್ಡಯನ್ತಂ ತಥೋಚ್ಚಾರ್ಯಮಾಣಾಂಸ್ತೈರೇವತಾರ್ಕಿಕೈಃ॥೩॥ ಉತ್ತರಾಕ್ಷೇಪಪ್ರಮಿತ ಪ್ರಶ್ನಾನಪಿಸವಿಸ್ತರಮ್ । ಸ್ವಯಂವದನ್ತಮಿತಿತದ್ವಾದಿವೃಂದಂಪರಾಜಿತಮ್ ॥೪॥ ವಿಧಾಯಸನ್ದೀಪ್ಯಮಾನಂ ಶಿವಸದ್ಭಕ್ತಸಿಂಧುರಮ್ । ಜಿತಾನ್ಯಸಮಯಂದಿವ್ಯಪಾಂಡಿತ್ಯಪ್ರತಿಭಾಯುತಮ್ ॥೫॥ ವಿರಾಜಿತಂಶುದ್ಧಕೀರ್ತ್ಯಾ ಮಲ್ಲಿಕಾರ್ಜುನದೇಶಿಕಮ್ । ದೃಷ್ಟ್ವೈವಬೌದ್ಧಃಪ್ರಕುಪಿತಃ ಪುನರೇವಮಭಾಷತ ॥೬॥ ತತ್ಕಥಂಕಥಮೀಶಾನ ಇತಿದೈವತಮಸ್ತಿ ಕಿಮ್ ಅಹಮೇವಶ್ರುತಿಗಿರಾಂ ಸಮರ್ಥಃಪ್ರತಿಪಾದನೇ॥೭॥ ಇತಿಗರ್ವೇಣಾತಿವಾದಾ ನ್ಬಹೂನ್ವದಸಿಮೋಹತಃ । ಜನಾರ್ದನವಿರಿಂಚಿಭ್ಯಾ ಮದೃಶ್ಯನಿಜವಿಗ್ರಹಃ ॥೮॥ ಆದಿಮಧ್ಯಾಂತರಹಿತೋ ಯದಿಸ್ಯಾತ್ಸಮಹೇಶ್ವರಃ । ನಾರಾಯಣಾಜ್ಗಸಮುದ್ಭೂತ ಬ್ರಹ್ಮಪುತ್ರಂಸುಧಾಕರಮ್ ॥೯॥ ಬಿಭರ್ತಿಸಕಥಂ ಕಿಂವಾ ಮಸ್ತಕೇನನಿಜೇನಸಃ । ಅಭವಸ್ಸ್ಯಾದ್ಯದಿವಿಧೇ ರ್ಲಲಾಟೇಕಿಮಜಾಯತ ॥೧೦॥ ಪುನಃಕಿಮರ್ಥಮಕರೋ ದ್ವಧಂತಸ್ಯಾಬ್ಜಜನ್ಮನಃ ।

---

ಸುವುದರಲ್ಲಿ ಸಮರ್ಥಗಳಾದ ಬಿಡುವಿಲ್ಲದ ವೇದಮಂತ್ರಪ್ರಮಾಣಭರಿತವಾದ ಉಪನ್ಯಾಸವಚನಗಳಿಂದ ಪ್ರತಿವಾದಿಗಳು ಮಾಡುವ ಪೂರ್ವಪಕ್ಷವೆಲ್ಲವನ್ನೂ ಖಂಡಿಸುತ್ತಿರುವವನೂ, ಆ ತಾರ್ಕಿಕರು ಮಾಡತಕ್ಕ ಬಹುವಾದ ಆಕ್ಷೇಪಗಳನ್ನೆಲ್ಲಾ ವಿಸ್ತಾರವಾಗಿ ತಾನೇ ಮಾಡಿಕೊಂಡು, ಅವನ್ನು ಖಂಡಿಸಿ, ಆ ಪ್ರತಿವಾದಿಗಳ ಸಮೂಹವನ್ನು ಸೋಲಿಸಿ ॥೪॥ ವಿರಾಜಿಸುತ್ತಿರುವವನೂ, ಶಿವಭಕ್ತಶ್ರೇಷ್ಠನೂ, ಪರಮತಗಳನ್ನು ಗೆದ್ದವನೂ,ಶ್ರೇಷ್ಠವಾದ ಪಾಂಡಿತ್ಯದ ತೇಜಸ್ಸಿನಿಂದ ಕೂಡಿದವನೂ, ನಿರ್ಮಲಕೀರ್ತಿಯಿಂದೊಪ್ಪುತ್ತಿರುವವನೂ ಆದ ಶ್ರೀಮನ್ಮಲ್ಲಿಕಾರ್ಜುನಗುರೂತ್ತಮನನ್ನು ಬೌದ್ಧನುನೋಡಿ, ಅತ್ಯಂತ ಕೋಪಗೊಂಡು, ಮತ್ತೆ ಹೀಗೆ ನುಡಿದನು॥೬॥ "ಹೇಗೆ ಹೇಗೆ ? ಶಿವನೆಂಬ ದೇವತೆಯೊಂದು ಇರುವುದೊ? ವೇದವಚನಾರ್ಥವನ್ನು ಪ್ರತಿಪಾದಿಸುವುದರಲ್ಲಿ ನಾನೇ ಸಮರ್ಥನೆಂಬ ಅಹಂಕಾರದಿಂದ ಅರಿಯದೆ ಬಹುವಾದವನ್ನು ಮಾಡುತ್ತೀಯೆ. ಆಮಹೇಶ್ವರನು ವಿಷ್ಣುಬ್ರಹ್ಮರಿಗೆ ಕಾಣದೆ ಹೋದ ತನ್ನ ದೇಹದಳತೆಯುಳ್ಳ ಆದಿಮಧ್ಯಾಂತರಹಿತನಾಗಿದ್ದರೆ॥೮॥ ವಿಷ್ಣುವಿನ ದೇಹದಿಂದ ಹುಟ್ಟಿದ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಚಂದ್ರನನ್ನು ಯಾವಾಗಲೂ ತನ್ನ ತಲೆಯಮೇಲೆ ಧರಿಸಿಕೊಂಡಿರುವನೆ ? ಅವನು ಜನ್ಮರಹಿತನಾಗಿದ್ದರೆ ಬ್ರಹ್ಮನ ಹಣೆಯಿಂದ ಏತಕ್ಕೆ ಹುಟ್ಟಿದನು ? ಮತ್ತೆ ಆಬ್ರಹ್ಮನ ವಧೆಯನ್ನೇ ಏತಕ್ಕೆ ಮಾಡಿದನು? ಆ ಶಿವನು ಮಂಗಳಮಯನಾದ ಮನಸ್ಸುಳ್ಳ

ಸಾಂಖ್ಯತೊಣ್ಡೇತದಾತಸ್ಮಿನ್ ನಿಶ್ಶೇಷಂತೊಣ್ಡಮಣ್ಡಲೇ ॥೯೭॥ ಶಾಪೇ ನಪರಿನಷ್ಟಾನಿ ಕೃತವತ್ಯತಿರೋಷತ್ಕ। ನಸನ್ತಿ ಕಿಮಮಿಾಜೈನಮುನಯಸ್ಸ ಕಲಾಅಪಿ ॥೯೮॥ ತಸ್ಮಾದಸದ್ವಾದಪರಾನ್ ಜೈನತರ್ಕಾನ್ಸಮಾಪಯ ॥

ಇತ್ಯಸಂಖ್ಯಾತಮಹಾಮಾಹೇಶ್ವರ.....................ಶ್ರೀವೀರಶೈವ ಮತಾಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ವಾದಪ್ರಕ ರಣೇ ಜೈನವಾದ ನಿರಾಸಕಥನಂ ನಾಮ ದಶಮೋಽಧ್ಯಾಯಃ.

## ಅಥ ಏಕಾದಶೋಽಧ್ಯಾಯಃ.

(ಚಂದ್ರಧಾರಣಲೀಲಾಕಥನಂ)

ಇತಿಜೈನಾದ್ಯಸದ್ವಾದಾ ನ್ವಾರಯನ್ತಂ ಮಹಾಮತಿಂ । ಪ್ರಚಣ ತಾರ್ಕಿಕಚಯ ಜಯಾಖಂಡಿತಮಂಡನಂ ॥೧॥ ಪ್ರತಿವಾದಿಪ್ರತಾನಾಪಾ

---

ತೊಂಡಮಂಡಲದಲ್ಲಿದ್ದ ದುಷ್ಟವಾದ ಜೈನ ಬೌದ್ಧಾದಿಮತಗಳನ್ನು ಶಾಪದಿಂದ ನಿಶ್ಶೇಷವಾಗಿ ಹಾಳ್ಮಾಡುವಾಗ ಈ ಜೈನಮುನಿಗಳೆಲ್ಲರೂ ಇರಲಿಲ್ಲವೊ? ॥೯೮॥ ಅದುಕಾರಣ, ಎಲೈ ಜೈನನೆ, ದುರ್ವಾದಪಕ್ಷದ ನಿನ್ನ ತರ್ಕಗಳನ್ನು ಮುಗಿಸು.

ಎಂದು ಶ್ರೀಮತ್ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ 'ಭಾವಮಂಜರಿ' ಯೆಂಬ ಕನ್ನಡಟಿಪ್ಪಣಿ ದಲ್ಲಿ ವಾದಪ್ರಕರಣವೊಳಗೆ ಶ್ರೀಮತ್ಪಂಡಿತಾರಾಧ್ಯರು ಜೈನವಾದವನ್ನು ಖಂಡಿಸಿದುದನ್ನು ನಿರೂಪಿಸುವ ೧೦ನೆಯ ಅಧ್ಯಾಯವು ಮುಗಿದುದು.

## ೧೧ ನೆಯ ಅಧ್ಯಾಯವು.

(ಚಂದ್ರಧಾರಣಲೀಲಾನಿರೂಪಣವು.)

ಹೀಗೆ ಜೈನಾದಿಗಳ ದುರ್ವಾದವನ್ನು ಅಡಗಿಸಿದವನೂ, ಅತ್ಯಂತ ಬುದ್ಧಿಶಾಲಿಯೂ, ಸಮರ್ಥರಾದ ತರ್ಕಶಾಸ್ತ್ರಜ್ಞರನ್ನು ಜಯಿಸುವುದೇ ಅಖಂಡವಾದ ಆಭರಣವಾಗುಳ್ಳವನೂ ॥೧॥ ಪ್ರತಿವಾದಿಗಳ ಸಮೂಹವು ಮಾಡತಕ್ಕ ಖಂಡನಗಳನ್ನು ಖಂಡಿ

ದಿತಖಣ್ಡನಖಣ್ಡನೇ । ಕ್ಷಮೈರನುಜ್ಝಿತಶ್ರುತ್ಯುಪನ್ಯಾಸೈಶ್ಶಬ್ದಜಾಲಕೈಃ ಪೂರ್ವಾಕ್ಷೇಪಪ್ರಶ್ನಜಾಲಂ ಪ್ರತಿವಾದಿಭಿರೀರಿತಮ್ । ಖಣ್ಡಯನ್ತಂ ತಥೋಚ್ಚಾರ್ಯಮಾಣಾಂಸ್ತೈರೇವತಾರ್ಕಿಕೈಃ ॥೩॥ ಉತ್ತರಾಕ್ಷೇಪಪ್ರಮಿತ ಪ್ರಶ್ನಾನಪಿಸುವಿಸ್ತರಮ್ । ಸ್ವಯಂವದನ್ತಮಿತಿತ ದ್ವಾದಿವೃಂದಂಪರಾಜಿತಮ್ ॥೪॥ ವಿಧಾಯಸನ್ದೀಪ್ಯಮಾನಂ ಶಿವಸದ್ಭಕ್ತಸಿಂಧುರಮ್ । ಜಿತಾನ್ಯಸಮಯಂದಿವ್ಯಪಾಂಡಿತ್ಯಪ್ರತಿಭಾಯುತಮ್ ॥೫॥ ವಿರಾಜಿತಂಶುದ್ಧಕೀರ್ತ್ಯಾ ಮಲ್ಲಿಕಾರ್ಜುನದೇಶಿಕಮ್ । ದೃಷ್ಟ್ವೈವಬೌದ್ಧಃಪ್ರಕುಪಿತಃ ಪುನರೇವಮಭಾಷತ ॥೬॥ ತತ್ಕಥಂಕಥಮೀಶಾನ ಇತಿದೈವತಮಸ್ತಿ ಕಿಮ್ ಅಹಮೇವಶ್ರುತಿಗಿರಾಂ ಸಮರ್ಥಃಪ್ರತಿಪಾದನೇ॥೭॥ ಇತಿಗರ್ವೇಣಾತಿವಾದಾ ನ್ಬಹೂನ್ವದಸಿಮೋಹತಃ । ಜನಾರ್ದನವಿರಿಂಚಿಭ್ಯಾ ಮದೃಶ್ಯನಿಜವಿಗ್ರಹಃ ॥೮॥ ಆದಿಮಧ್ಯಾಂತರಹಿತೋ ಯದಿಸ್ಯಾತ್ಸಮಹೇಶ್ವರಃ । ನಾರಾಯಣಾಜ್ಜಸಮುದ್ಭೂತ ಬ್ರಹ್ಮಪುತ್ರಂಸುಧಾಕರಮ್ ॥೯॥ ಬಿಭರ್ತಿಸತತಂ ಕಿಂವಾ ಮಸ್ತಕೇನನಿಜೇನಸಃ । ಅಭವಸ್ಸ್ಯಾದ್ಯದಿವಿಧೇರ್ಲಲಾಟೇಕಿಮಜಾಯತ ॥೧೦॥ ಪುನಃಕಿಮರ್ಥಮಕರೋದ್ವಧಂತಸ್ಯಾಬ್ಜಜನ್ಮನಃ ।

---

ಸುವುದರಲ್ಲಿ ಸಮರ್ಥಗಳಾದ ಬಿಡುವಿಲ್ಲದ ವೇದಮಂತ್ರಪ್ರಮಾಣಭರಿತವಾದ ಉಪನ್ಯಾಸವಚನಗಳಿಂದ ಪ್ರತಿವಾದಿಗಳು ಮಾಡುವ ಪೂರ್ವಪಕ್ಷವೆಲ್ಲವನ್ನೂ ಖಂಡಿಸುತ್ತಿರುವವನೂ, ಆ ತಾರ್ಕಿಕರು ಮಾಡತಕ್ಕ ಬಹುವಾದ ಆಕ್ಷೇಪಗಳನ್ನೆಲ್ಲಾ ವಿಸ್ತಾರವಾಗಿ ತಾನೇ ಮಾಡಿಕೊಂಡು, ಅವನ್ನು ಖಂಡಿಸಿ, ಆ ಪ್ರತಿವಾದಿಗಳ ಸಮೂಹವನ್ನು ಸೋಲಿಸಿ ॥೪॥ ವಿರಾಜಿಸುತ್ತಿರುವವನೂ, ಶಿವಭಕ್ತಶ್ರೇಷ್ಠನೂ, ಪರಮತಗಳನ್ನು ಗೆದ್ದವನೂ, ಶ್ರೇಷ್ಠವಾದ ಪಾಂಡಿತ್ಯದ ತೇಜಸ್ಸಿನಿಂದ ಕೂಡಿದವನೂ, ನಿರ್ಮಲಕೀರ್ತಿಯಿಂದೊಪ್ಪುತ್ತಿರುವವನೂ ಆದ ಶ್ರೀಮನ್ಮಲ್ಲಿಕಾರ್ಜುನಗುರೂತ್ತಮನನ್ನು ಬೌದ್ಧನು ನೋಡಿ, ಅತ್ಯಂತ ಕೋಪಗೊಂಡು, ಮತ್ತೆ ಹೀಗೆ ನುಡಿದನು॥೬॥ "ಹೇಗೆ ಹೇಗೆ ? ಶಿವನೆಂಬ ದೇವತೆಯೊಂದು ಇರುವುದೋ? ವೇದವಚನಾರ್ಥವನ್ನು ಪ್ರತಿಪಾದಿಸುವುದರಲ್ಲಿ ನಾನೇ ಸಮರ್ಥನೆಂಬ ಅಹಂಕಾರದಿಂದ ಅರಿಯದೆ ಬಹುವಾದವನ್ನು ಮಾಡುತ್ತೀಯೆ. ಆ ಮಹೇಶ್ವರನು ವಿಷ್ಣುಬ್ರಹ್ಮರಿಗೆ ಕಾಣದೆ ಹೋದ ತನ್ನ ದೇಹದಳತೆಯುಳ್ಳ ಆದಿಮಧ್ಯಾಂತರಹಿತನಾಗಿದ್ದರೆ॥೮॥ ವಿಷ್ಣುವಿನ ದೇಹದಿಂದ ಹುಟ್ಟಿದ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಚಂದ್ರನನ್ನು ಯಾವಾಗಲೂ ತನ್ನ ತಲೆಯಮೇಲೆ ಧರಿಸಿಕೊಂಡಿರುವನೆ ? ಅವನು ಜನ್ಮರಹಿತನಾಗಿದ್ದರೆ ಬ್ರಹ್ಮನ ಹಣೆಯಿಂದ ಏತಕ್ಕೆ ಹುಟ್ಟಿದನು ? ಮತ್ತೆ ಆ ಬ್ರಹ್ಮನ ವಧೆಯನ್ನೇ ಏತಕ್ಕೆ ಮಾಡಿದನು? ಆ ಶಿವನು ಮಂಗಳಮಯವಾದ ಮನಸ್ಸುಳ್ಳ

ಕಲ್ಯಾಣಚಿತ್ತಪರಮುಮಾಙ್ಗಲ್ಯಾಂಗೋಭವೇದ್ಯದಿ ||೧೧|| ಅಮಙ್ಗಲಾನಿಶಲ್ಯಾನಿ ಚರ್ಮಾಣಿಚದಧೌಕಿಮು । ಸ್ವಾಜ್ಞೇತ್ ಸರ್ವೇಶ್ವರೋಭಿಕ್ಷಾಟನಂಕಿಮುಕರೋನ್ಮುದಾ ||೧೨|| ವಾಹನೇಷ್ವಪಿದಿಸ್ಯೇಷು ಸತ್ಸುಹಸ್ತಿರಥಾದಿಷು। ಅತಿಮೌಢ್ಯಾದನಡ್ವಾಹ ಮಾರುರೋಹಕಿಮಿದ್ಧ್ವಶಂ || ಪಂಚಬಾಣೋಪಸಂಹಾರೀಯದಿಸ್ಯಾತ್ಪರಮೇಶ್ವರಃ। ಉಮಾಯೈ ಕಿಂದದೌಸ್ವಾರ್ಧಂಮೂರ್ಧ್ನಿಗಙ್ಗಾಮಧತ್ತಕಿಮ್ ||೧೪|| ವಿಮೃಷ್ಟೇದ್ಯಪತಂಸ್ಯಾತ್ಕಿಮರ್ಧನಾರೀವಪುರ್ಭುವಿ । ಶಿವೋಬ್ರಹ್ಮಾಣ್ಡಕೋಟೀನಾಮಧಿನಾಥೋಭವೇದ್ಯದಿ||೧೫|| ನಗ್ನೋಭೂತ್ವಾಕಿಂಸಿಮಿತ್ತಂಚಚಾರಪಿಪಿನಾನ್ತರೇ । ಆಯುಧತ್ವೇನಸಹಸ್ತೇನಕಿಮರ್ಥಂಪಾವಕಂದಧೌ ||೧೬|| ಅನೇಕದಿವ್ಯಾಭರಣಭೂಷಿತಾಂಗೋಯದೀಶ್ವರಃ । ಯಜ್ಞೋಪವೀತಮುಕರೋತ್ಕಿಮರ್ಥಮುರಗೇಶ್ವರಮ್||೧೭|| ಸುಧಾರಸಮಸಾದೃಶ್ಯಂಪ್ರದಾಯವಿಬುಧಾಳಯೇ। ವಿಷಮತ್ಯುಗ್ರಮಗಿಲತ್ಕಿಮುದ್ದಂಡತಯಾಪುನಃ ||೧೮|| ಹರಿನೇತ್ರಾರ್ಚಿತಪದೋಯದಿಸ್ಯಾತ್ಕಾಲಭಂಜಕಃ । ಕಥಮಾಸೀದ್ಧರಿಹರಇತ್ಯೇಕೋಜಗತೀತಲೇ ||೧೯|| ಯಜ್ಞೇಶ್ವರೋಯದಿಭವೇತ್ಪರಮೇ

---

ವನೂ, ಶುಭವಿಗ್ರಹನೂ ಆಗಿದ್ದರೆ ||೧೧|| ಅಮಂಗಳಕರವಾದ ಮೂಳೆಗಳನ್ನೂ, ಚಕ್ಕಳವನ್ನೂ ಏತಕ್ಕೆ ಧರಿಸಿಕೊಂಡನು ? ಆತನು ಸರ್ವಾಧಿಪತಿಯಾಗಿದ್ದರೆ ಸಂತೋಷದಿಂದ ಭಿಕ್ಷಾಟನವನ್ನೇಕೆ ಮಾಡಿದನು? ಅವನಿಗೆ ಆನೆ ರಥ ಮೊದಲಾದ ಉತ್ತಮವಾದ ಅನೇಕ ವಾಹನಗಳಿರುತ್ತಿದ್ದರೆ ದಡ್ಡತನದಿಂದ ಇಂಥ ಎತ್ತನ್ನೇಕೆ ಹತ್ತಿದನು ? ಪರಶಿವನು ಮನ್ಮಥನನ್ನು ಸಂಹರಿಸಿದವನಾದರೆ ಪಾರ್ವತಿಗೆ ತನ್ನ ಅರ್ಧದೇಹವನ್ನೇತಕ್ಕೆ ಕೊಟ್ಟನು? ತಲೆಯಲ್ಲಿ ಗಂಗೆಯನ್ನೇತಕ್ಕೆ ಧರಿಸಿದನು?||೧೪||ಲೋಕದಲ್ಲಿ ವಿಚಾರಮಾಡಿ ನೋಡಿದರೆ ಅರೆಹೆಣ್ಣಾದ ಶರೀರವುಳ್ಳವನು ( ನಪುಂಸಕನು ) ದೇವತೆಯಾಗುವುದುಂಟೆ? ಶಿವನು ಅನಂತಬ್ರಹ್ಮಾಂಡಗಳಿಗೆಲ್ಲಾ ಅಧಿಪತಿಯಾಗಿದ್ದರೆ ||೧೫|| ಬತ್ತಲೆಯಾಗಿ ಕಾಡಿನಲ್ಲಿ ಏನೇಕೆ ಸಂಚರಿಸಿದನು? ಬೆಂಕಿಯನ್ನು ಆಯುಧವನ್ನಾಗಿ ಕೈಯಲ್ಲೇಕೆ ಹಿಡಿದುಕೊಂಡನು ? ||೧೬|| ಈಶ್ವರನು ದೇಹದಲ್ಲಿ ಅನೇಕ ದಿವ್ಯಾಭರಣಗಳಿಂದಲಂಕರಿಸಿಕೊಂಡಿರುವವನಾದರೆ, ಸರ್ಪಾಧಿಪತಿಯನ್ನು ಏನೇಕೆ ಯಜ್ಞೋಪವೀತವನ್ನಾಗಿ ಮಾಡಿಕೊಂಡನು? ||೧೭|| ಅವನು ಸರ್ವಜ್ಞನಾಗಿದ್ದರೆ ಅಸದೃಶವಾದ ಅಮೃತವನ್ನು ದೇವತೆಗಳ ಸಮೂಹಕ್ಕೆ ಕೊಟ್ಟು, ತಾನು ದಿಟ್ಟತನದಿಂದ ಭಯಂಕರವಾದ ವಿಷವನ್ನು ಏತಕ್ಕೆ ಕುಡಿದನು ? ||೧೮|| ಕಾಲಹರನಾದ ಆ ಶಿವನು ವಿಷ್ಣುನೇತ್ರದಿಂದ ಪೂಜಿಸಲ್ಪಟ್ಟ ಪಾದವುಳ್ಳವನಾಗಿದ್ದರೆ ಲೋಕದಲ್ಲಿ ಹರಿಹರನೆಂಬ ಒಬ್ಬ ಮೂರ್ತಿಯು ಹೇಗಾದನು ? ||೧೯|| ಪಿನಾಕವೆಂಬ ಧನುಸ್ಸನ್ನು ಧರಿಸಿರುವ

ಶಃ ಪಿನಾಕಧೃತ್। ಕಿಂ ಕ್ರಿಯಾದಕ್ಷದಕ್ಷಸ್ಯ ಯಜ್ಞಂ ದೇವಾನನಾಶಯತ್॥
ಯದಿ ಬ್ರಹ್ಮಾಂಡಕೋಟೀನಾಮಧಿಪಸ್ಸ್ಯಾನ್ಮಹೇಶ್ವರಃ । ಪುನಃಪುನ
ರ್ನಾಶಯತಿ ಕಿಂ ತದ್ಬ್ರಹ್ಮಾಂಡಸಂಚಯಮ್ ॥೨೧॥ ಸಚ್ಚಿದಾನಂದರೂಪ
ಶ್ಚೇಚ್ಛ್ಮಶಾನೇಷು ನರ್ತಕಿಮ್। ತಸ್ಮಾದಮಾಙ್ಗಲ್ಯರೂಪಂ ವಿರುದ್ಧಪ್ರಾ
ಭವಾನ್ವಿತಮ್ ॥೨೨॥ ವಿಪರೀತಚರಿತ್ರಂ ದುರ್ವೇಷಂ ದುಶ್ಶೀಲಸಂಯುತ
ಮ್। ಅಪವಿತ್ರಂ ತಮುದ್ದೈಕೋ ದೇವ ಇತ್ಯತಿಕೌಶಲಾತ್ ॥೨೩॥ ಸ್ಥಾ
ಪಯಿತ್ವಾ ಕೀರ್ತಯಸಿ ತ್ವಂ ತತ್ಪಾಂಡಿತ್ಯಮಿದಂ ಕಿಮು । ಅಪಹಾಸಂ ನ ಕುರ್ವ
ನ್ತಿ ಕಿಂ ವಿದ್ವಾಂಸೋ ಮಹೀತಳೇ ॥೨೪॥ ಗಚ್ಛ ಗಚ್ಛ ಭವದ್ವ್ಯಾಖ್ಯಾಪು
ಸ್ತಕಂ ಬಧ್ಯತಾಮಿತಿ । ಮಹಿಮ್ನಃ ಪರಮೇಶಸ್ಯ ಸುಧಾಂಶುಧರಣಾದಿಕಾ
ನ್ ॥೨೫॥ ತಸ್ಮಿನ್ನಿಂದತಿ ದುರ್ಬುದ್ಧೌ ಬೌದ್ಧೇ ದುಷ್ಕರ್ಮಯೋಗತಃ । ನಿ
ಧಾನಮಕ್ಷಯಂ ಯದ್ವದ್ಭಿಗೃಹೀನಸ್ಯ ಭೂತಲೇ ॥೨೬॥ ಭಾಂಡ್ಡಖಣ್ಡಾ

---

ಆ ಪರಮೇಶ್ವರನು ಯಜ್ಞಗಳಿಗಧಿಪತಿಯಾಗಿದ್ದರೆ ಯಜ್ಞಕಾರ್ಯಗಳಲ್ಲಿ ಸಮರ್ಥನಾದ ದಕ್ಷಬ್ರಹ್ಮನ ಯಜ್ಞವನ್ನೂ ಅದಕ್ಕೆ ಬಂದಿದ್ದ ದೇವತೆಗಳನ್ನೂ ಅದೇಕೆ ನಾಶಮಾಡಿದನು? ॥೨೦॥ ಮಹೇಶ್ವರನು ಕೋಟ್ಯಂತರಬ್ರಹ್ಮಾಂಡಗಳಿಗೆಲ್ಲಾ ಒಡೆಯನಾಗಿದ್ದರೆ ಆ ಬ್ರಹ್ಮಾಂಡಗಳ ಸಮೂಹವನ್ನೇ ಮತ್ತೆಮತ್ತೆ ನಾಶಮಾಡುವನೆ? ॥೨೧॥ ಆತನು ಸಚ್ಚಿದಾನಂದಸ್ವರೂಪನಾಗಿದ್ದರೆ ಸುಡುಗಾಡಿನಲ್ಲಿ ಏತಕ್ಕೆ ಕುಣಿದಾಡಿದನು? ಅದುಕಾರಣ, ಅಮಂಗಲಸ್ವರೂಪನೂ ಶಾಸ್ತ್ರಲೋಕವಿರುದ್ಧವಾದ ಕಾರ್ಯವೈಭವದಿಂದ ಕೂಡಿದವನೂ ॥೨೨॥ ವಿಪರೀತವಾದ ನಡೆಯುಳ್ಳವನೂ, ಕೆಟ್ಟವೇಷದವನೂ, ದುರಾಚಾರಸಂಪನ್ನನೂ, ಅಶುಚಿಯೂ ಆದ ಆ ಶಿವನನ್ನು ಲೋಕಕ್ಕೆ ಒಬ್ಬನೇ ಒಬ್ಬನಾದ ದೈವವೆಂದು ನೀನು ಈಗ ಅತ್ಯಾತಪಾಂಡಿತ್ಯದಿಂದ ॥೨೩॥ ಸಿದ್ಧಾಂತಮಾಡಿ ಹೊಗಳುತ್ತೀಯೆ, ಇದೇ ನಿನ್ನ ಪಾಂಡಿತ್ಯವೆ? ಇದನ್ನು ನೋಡಿ ಭೂತಲದಲ್ಲಿ ವಿದ್ವಾಂಸರು ಪರಿಹಾಸಮಾಡುವುದಿಲ್ಲವೆ? ॥೨೪॥ ಹೋಗುಹೋಗು, ನಿನ್ನ ವ್ಯಾಖ್ಯಾನದ ಪುಸ್ತಕವನ್ನು ಕಟ್ಟು, ಎಂಬುದಾಗಿ ದುಷ್ಟಮತಿಯಾದ ಆ ಬೌದ್ಧನು ಪರಮೇಶ್ವರನ ಚಂದ್ರಧಾರಣಾಲೀಲೆಯೇ ಮೊದಲಾದ ಮಹತ್ತ್ವಗಳನ್ನು ತನ್ನ ದುಷ್ಕರ್ಮಸಂಬಂಧದಿಂದ ದೂಷಿಸುತ್ತಿರಲಾಗಿ, ಶ್ರೀಮಲ್ಲಿಕಾರ್ಜುನಪಂಡಿತೇಶ್ವರನು ನಕ್ಕು, ಭೂತಲದಲ್ಲಿ ಪುಣ್ಯವಿಲ್ಲದವನಿಗೆ ನಾಶರಹಿತವಾದ ನಿಧಿಯೂ ಬಕ್ಕರೆಯಾಗಿಯೂ ಇದ್ದಲಾಗಿಯೂ ಪರಿಣಮಿಸಿ ಹೇಗೆ ಯಾವಾಗಲೂ ತೋರುತ್ತಿರುವುದೋ ಹಾಗೆ ಪಾಪಿಗಳಿಗೆ ಪರಮೇಶ್ವರನ ವೈಭವವು ವಿಕಾರವಾಗಿ ತೋರುತ್ತದೆ. ಆದುದರಿಂದ ಈ ಬೌದ್ಧನು ದೂಷಿಸುವುದರಲ್ಲಿ ದೋಷವೇನುಂಟು? ಎಂದು, ಈ ವಕ್ಷ್ಯಮಾಣಪ್ರಕಾರವಾಗಿ ನುಡಿದ

ನಿಮುಷ್ಯಶ್ಚಭೂತ್ವಾಭಾತಿನಿರಂತರಮ್ । ತಥೈವವಿಕೃತಂಭಾತಿಪಾಪಿನಾಂಶಿವವೈಭವಮ್ ॥೨೭॥ ಕೋದೋಷಇತಿತಂಪ್ರಾಹಪ್ರಹಸನ್ಪಿಣ್ಡಿತೇಶ್ವರಃ । ಪುರಾಣಾಗಮವಾಕ್ಯೇಷುಭವತಾನಶ್ರುತಂಕಿಮು ॥೨೮॥ ಇನ್ದುಜೂಟೇನಮುಕುಟೇಶಶಾಙ್ಕಧೃತಿಕಾರಣಂ । ಚತುರ್ಮುಖೋಕ್ತ್ವಾವಿವಿಧಪುರಾಣಪ್ರಥಿತೇಶುಭೇ ॥೨೯॥ ಪುರಾಣೇಬ್ರಹ್ಮಕೈವರ್ತೇಸಂಹಿತಾಸುಪ್ರತೀಯತೆ । ಸಮವರ್ತಿಸಭಾಸೀನಶ್ಚಿತ್ರಗುಪ್ತಃಕದಾಚನ ॥೩೦॥ ಸೌವರ್ಣಪುಷ್ಪಕಾರೂಢಾನ್‌ಗಚ್ಛತೋವ್ಯೋಮ್ನಿಕಾಂಶ್ಚನ।ದೃಷ್ಟ್ವಾವಿದ್ಧಿತಾಕ್ರಾನ್ತಮನಾಜಗಾದಸಮವರ್ತಿನಮ್ ॥೩೧॥ ಅಪ್ರವಿಶ್ಯಭವಲ್ಲೋಕಂತ್ವಾಮನಾದೃತ್ಯಚಾನ್ತಕ । ತ್ವದಾಜ್ಞಯಾವಿನಾತಥ್ಯಾಮಕೃತ್ವಾಪ್ರಣತಿಂಮುದಾ ॥೩೨॥ ಕಥಮೇತೇಪುಷ್ಪಕಾರೂಢಾಯಾನ್ತಿಲೋಕಾನ್ಸಮುನ್ನತಾನ್। ಇತಿಪೃಷ್ಟೋಥಧರ್ಮರಾಜಸ್ತಮೇವಮವದತ್ಪುನಃ॥೩೩॥ ಸಪ್ತವಿಂಶತಿಸಂಖ್ಯಾತಾದಕ್ಷಸ್ಯತನಯಾಶ್ಶುಭಾಃ । ದತ್ವಾಚನ್ದ್ರಾಯಚನ್ದ್ರತ್ವಮಾಶುಮತ್ಕನ್ಯಕಾಸ್ವಲಂ ॥೩೪॥ ವರ್ತಸ್ವಸಾಮ್ಯತಇತಿಸಮ್ಪ್ರಾರ್ಥ್ಯಪ್ರೀತಿತೋಯಯೌ। ತತಶ್ಚನ್ದ್ರಸ್ತಾಸುಮಧ್ಯೇರೋಹಿಣ್ಯಾಂಸ್ನೇ

---

ನು—ಎಲೆ ಪಾದಿಯೆ, ಚಂದ್ರಶೇಖರನಾದ ಶಿವನು ತನ್ನ ಕಿರೀಟದಲ್ಲಿ ಚಂದ್ರನನ್ನು ಧರಿಸಿಕೊಂಡುದರ ಕಾರಣವು ಪುರಾಣಾಗಮ ವಚನಗಳಲ್ಲಿ ಹೇಳಲ್ಪಟ್ಟಿರುವುದನ್ನು ನೀನು ಕೇಳಿಲ್ಲವೊ? ॥೨೮॥ ಬ್ರಹ್ಮನಿಂದ ಹೇಳಲ್ಪಟ್ಟ-ನಾನಾಪುರಾಣಗಳೊಳಗೆಲ್ಲಾ ಪ್ರಸಿದ್ಧವಾದ-ಬ್ರಹ್ಮಕೈವರ್ತಪುರಾಣದಲ್ಲಿರುವ ಸಂಹಿತೆಗಳಲ್ಲಿ ಅದು ಹೇಳಲ್ಪಟ್ಟಿದೆ. ಹೇಗೆಂದರೆ:—ಒಂದಾನೊಂದು ಕಾಲದಲ್ಲಿ ಯಮನ ಸಭೆಯಲ್ಲಿ ಕುಳಿತಿದ್ದ ಚಿತ್ರಗುಪ್ತನು ಆಕಾಶದಲ್ಲಿ ಸುವರ್ಣಮಯವಾದ ವಿಮಾನವನ್ನೇರಿಕೊಂಡು ಹೋಗುತ್ತಿದ್ದ ಕೆಲವರನ್ನು ನೋಡಿ, ಮನಸ್ಸಿನಲ್ಲಿ ಆಶ್ಚರ್ಯಗೊಂಡವನಾಗಿ, ಯಮನನ್ನು ಕುರಿತು ಹೀಗೆ ಹೇಳಿದನು ॥೩೦॥ ಎಲೈ ಯಮರಾಜನೆ, ನಿನ್ನ ಲೋಕವನ್ನು ಪ್ರವೇಶಮಾಡದೆ, ನಿನ್ನನ್ನೂ ಲಕ್ಷ್ಯಮಾಡದೆ, ನಿನಗೆ ನಮಸ್ಕಾರವನ್ನೂ ಮಾಡದೆ, ನಿನ್ನಪ್ಪಣೆಯೂ ಇಲ್ಲದೆ, ಸಂತೋಷದಿಂದ ॥೩೨॥ ವಿಮಾನವನ್ನೇರಿ ಊರ್ಧ್ವಲೋಕವನ್ನು ಕುರಿತು ಹೋಗುತ್ತಿದ್ದಾರೆ. ಇವರುಗಳು ಯಾರು? ಹೀಗೆ ಪ್ರಶ್ನೆಮಾಡಲ್ಪಟ್ಟ ಯಮಧರ್ಮನು ಆ ಚಿತ್ರಗುಪ್ತನನ್ನು ಕುರಿತು ಹೀಗೆ ಉತ್ತರವಿತ್ತನು ॥೩೩॥ ದಕ್ಷಬ್ರಹ್ಮನು ತನ್ನ ಸೌಮಂಗಲ್ಯವತಿಯರಾದ ಇಪ್ಪತ್ತೇಳುಮಂದಿ ಹೆಣ್ಣುಮಕ್ಕಳನ್ನು ಚಂದ್ರನಿಗೆ ಕೊಟ್ಟು, "ಎಲೈ ಚಂದ್ರನೇ, ನೀನು ಈ ನನ್ನ ಪುತ್ರಿಯರೆಲ್ಲರಲ್ಲೂ ಒಂದೇ ಸಮನಾದ ವಿಶ್ವಾಸದಿಂದ ಇರುವವನಾಗು" ಎಂದು ಪ್ರಾರ್ಥನೆಮಾಡಿ, ಸಂತೋಷದಿಂದ ಹೊರಟು

ಹವಾನಭೂತ್ ॥೩೫॥ ಇತರಾಸ್ವಬಲಾಸ್ವಿನ್ದುರಯಮಸ್ಮಾಂಶ್ಚ ಸಾವ್ಯ
ತಃ। ನಸಂಮಾನಯತೀತ್ಯೇವಂ ಕೃತಮಾನಾಸುವಲ್ಲಭೇ ॥೩೬॥ ಏತತ್ ಜ್ಞಾ
ತ್ವಾ ಸಮಾಗತ್ಯ ದಕ್ಷಃ ಕುಪಿತಮಾನಸಃ । ಪಕ್ಷಪಾತಿಂಚ್ಛಶಾಂಕತ್ವಂ ಪರಿ
ಪ್ರಾಪ್ಯ ಕಲಾಕ್ಷಯಮ್ ॥೩೭॥ ದಿನೇದಿನೇ ಗುರುತ್ವೇನ ವಿಹೀನೋ ನಾಶಮಾ
ಪ್ನುಹಿ । ಇತಿ ಶಾಪಂ ದದೌ ಪಶ್ಚಾತ್ತಸ್ಮಿನ್ ಕುಮುದಬಾನ್ಧವೇ ॥೩೮॥ ಮ
ಹೇಶ್ವರಂ ಮಹಾದೇವಂ ಸಮುದ್ದಿಶ್ಯಾಭಿಗಚ್ಛತಿ । ತಾವತ್ಕಲಾಮಮಾಂನಾ
ಮವಿಹಾಯ ಸಕಲಾಸು ಚ ॥೩೯॥ ಕಲಾಸು ಪರಿನಷ್ಟಾಸು ಚನ್ದ್ರೋ ನ
ತ್ವಾ ಮಹೇಶ್ವರಮ್। ರಮೇಶವಾಗೀಶವನ್ದ್ಯ ಮಲಸಂಹಾರ ಶಂಕರ ॥೪೦॥
ಗಿರಿಜಾನಾಥ ವಿಶ್ವೇಶ ಗಿರಿಶಾ ಕ್ಷಯ ರಕ್ಷ ಮಾಮ್ । ಇತಿ ವಿಜ್ಞಾಪಯಾಮಾಸ
ಸಂಸ್ತುವನ್ಕಾರ್ಯಮಾತ್ಮನಃ ॥೪೧॥ ಸುಧಾಕರ ತ್ವಂ ಮಾ ಭೈಷೀರ್ಮಾ ಭೈ
ಷೀರಿತಿ ಶಙ್ಕರಃ। ವದನ್ಕಲಾಂ ಸಂಸ್ಥಿತಾಂ ತಾಂ ಧೃತ್ವಾ ಜೂಟಾಗ್ರತೋ ಮು
ದಾ ॥೪೨॥ ದಿನೇದಿನೇ ದಕ್ಷಶಾಪಾತ್ಕಲೈಕೈಕಾ ವಿನಶ್ಯತಿ । ಯಥಾತಥಾ

---

ಹೋದನು. ಬಳಿಕ ಚಂದ್ರನಾದರೊ ಆ ಹೆಂಡತಿಯರೊಳಗೆಲ್ಲಾ ರೋಹಿಣಿಯೆಂ
ಬುವಳಲ್ಲಿ ಹೆಚ್ಚು ವಿಶ್ವಾಸವುಳ್ಳವನಾದನು. ॥೩೫॥ ಆಗ ಉಳಿದ ಹೆಂಡತಿಯರೆಲ್ಲರೂ
"ಈ ಚಂದ್ರನು ನಮ್ಮನ್ನು ರೋಹಿಣಿಗೆ ಸಮನನ್ನಾಗಿ ಕಂಡು ಸನ್ಮಾನಿಸುವುದಿಲ್ಲ"
ಎಂದುಕೊಂಡು, ತಮ್ಮ ಪತಿಯಲ್ಲಿ ಮುಳಿಸುಗೊಂಡವರಾಗಲಾಗಿ ॥೩೬॥ ದಕ್ಷಬ್ರ
ಹ್ಮನು ಈ ಸಂಗತಿಯನ್ನು ತಿಳಿದು, ಮನಸ್ಸಿನಲ್ಲಿ ಕೋಪಗೊಂಡವನಾಗಿ, ಬಂದು,
"ಪಕ್ಷಪಾತಿಯಾದ ಎಲೆ ಚಂದ್ರನೆ, ನೀನು ದಿನದಿನಕ್ಕೆ ಕುಂದುವ ಕಲೆಯುಳ್ಳವನಾಗಿ
ಗೌರವಹೀನನಾಗಿ ಕ್ಷೀಣಿಸಿಹೋಗು" ಎಂದು ಶಾಪವನ್ನು ಕೊಟ್ಟನು. ಬಳಿಕ ಆ
ಚಂದ್ರನು ॥೩೮॥ ಸಕಲ ದೇವಾಧೀಶನಾದ ಪರಶಿವನ ಬಳಿಗೆ ಹೋಗಬೇಕೆಂದುದ್ದೇಶಿಸಿ
ಹೊರಡಲಾಗಿ, ಅಷ್ಟರೊಳಗೆ "ಅಮೆ" ಎಂಬ ಒಂದು ಕಲೆಯ ಹೊರತು ಉ
ಳಿದ ಕಲೆಗಳೆಲ್ಲವೂ ನಷ್ಟವಾಗಿರಲು, ಚಂದ್ರನು ಪರಶಿವನನ್ನು ನಮಸ್ಕರಿಸಿ, ಎಲೈ
ವಿಷ್ಣು ಬ್ರಹ್ಮವಂದ್ಯನೇ! ಮಲತ್ರಯವಿನಾಶಕನೇ! ಭಕ್ತಸುಖಂಕರನೇ! ಪಾರ್ವ
ತೀಪತಿಯೇ! ಜಗದೀಶ್ವರನೇ! ಕೈಲಾಸಪರ್ವತವಾಸಿಯೇ! ನಾಶರಹಿತನೇ! ನನ್ನ
ನ್ನು ಸಂರಕ್ಷಿಸು, ಎಂದು ಸ್ತೋತ್ರಮಾಡಿದವನಾಗಿ, ತಾನು ಬಂದ ಕಾರ್ಯವನ್ನು
ಬಿನ್ನಯಿಸಿಕೊಂಡನು. ॥೪೧॥ ಆಗ ಶಂಕರನು—"ಎಲೈ ಚಂದ್ರನೆ! ನೀನು
ಹೆದರಬೇಡ, ಹೆದರಬೇಡ" ಎಂದು ಹೇಳಿ, ಚಂದ್ರನ ಉಳಿದಿದ್ದ "ಅಮೆ"ಯೆಂಬ
ಆ ಕಲೆಯನ್ನು ತನ್ನ ಜಟಾಜೂಟದ ತುದಿಯಮೇಲೆ ಸಂತೋಷದಿಂದ ಧರಿಸಿಕೊಂಡ
ವನಾಗಿ ॥೪೨॥ ದಕ್ಷನ ಶಾಪದಿಂದ ಪ್ರತಿದಿನಕ್ಕೂ ಒಂದೊಂದು ಕಲೆಯು ಹೇಗೆ

ಮತ್ಕೃಪಯಾತಾಸಾಂವೃದ್ಧಿರ್ಭವತ್ವಿತಿ ॥೪೨॥ ಸ್ತುವತ್ಸುಸುರಸಂಘೇಷು ಕೃಪಾಂಚಕ್ರೇಸುಧಾಂಶವೇ। ದಿನೇದಿನೇಕ್ಷೀಯಮಾಣಾಃಕಲಾಸ್ತಾಸ್ಸಕಲಾಅಪಿ ॥೪೩॥ ಹಿತಾಯಜಗತಾಮಾಸನ್ಮಹೇಶಕರುಣಾಬಲಾತ್ । ಅಮಾನಾಮಕಲಾಯಾತ್ವಿತ್ಯಾದೇಃ ಪೌರಾಣವಾಕ್ಯತಃ ॥೪೪॥ ಯತ್ತಿಥೌತಾಂದಧಾವೀಶಸ್ಸಾನಮಾವಾಸ್ಯಾಽಭವತ್ತಿಥಿಃ। ಯೇಽಕೆಽನಿಶ್ಚಲಯಾಭಕ್ತ್ಯಾತಿಥೌತಸ್ಯಾಂಮಹೇಶ್ವರಮ್ ॥೪೫॥ ಏಕಾಗ್ರಮಾನಸಾಭೂತ್ವಾಸಮಾರಾಧ್ಯಂತಿಲೀಲಯಾ। ಗಮಿಷ್ಯಂತ್ಯೂರ್ಧ್ವತಾನ್ಲೋಕಾನಸಾಧಾರಣವೈಭವಾಃ ॥೪೬॥ ಇತಿದಂಡಧರಶ್ಚಿತ್ರಗುಪ್ತಾಯಾಕಥಯತ್ಕಥಾಮ್ । ತಸ್ಮಾದಿಂದುಕಲಾಮಾತ್ರಂಶಮ್ಭುರುತ್ತಂಸಲೀಲಯಾ॥೪೭॥ಅಧತ್ತತತಏವೇಂದುಧರಇತ್ಯಭಿಧೀಯತೇ। ವಿಚಾರಿತೆಸತ್ಯನಂತವೇದಾನ್ತಾಭೇದ್ಯವೈಭವಃ ॥೪೮॥ ಆದಿಮಧ್ಯಾನ್ತರಹಿತಶ್ಶಿವಸ್ಸರ್ವಜಗತ್ಪ್ರಭುಃ । ಹರಿಬ್ರಹ್ಮಾದ್ಯವಿಜ್ಞೇಯೋಹರೋವಿಶ್ವಾಧಿಕೋಽವ್ಯಯಃ ॥೪೯॥ ಕಲಾನಿಧಿಂಕಿಂಬಿಭರ್ತಿಗಂಗಾದರಂಪರಮೇಶ್ವ

---

ನಾಶವಾಗುವುವೋ ಹಾಗೆಯೇ ಬಳಿಕ ನನ್ನ ಕಾರುಣ್ಯದಿಂದ ಆ ಕಲೆಗಳು ಬಂದೊಂದಾಗಿ ಬೆಳೆಯುತ್ತ ಬರಲಿ" ಎಂದು ಹೇಳಿ, ದೇವತಾಸಮೂಹವೆಲ್ಲವೂ ಸ್ತುತಿಸುತ್ತಿರಲಾಗಿ, ಪರಶಿವನು ಚಂದ್ರನಿಗೆ ಈರೀತಿಯಾಗಿ ಕೃಪೆಮಾಡಿದನು. ದಿನದಿನಕ್ಕೆ ಕ್ಷಯಿಸುತ್ತಿರುವ ಆ ಕಲೆಗಳೆಲ್ಲವೂ ॥೪೩॥ ಪರಶಿವನ ಕಾರುಣ್ಯದ ಬಲದಿಂದ ಲೋಕದ ಹಿತಾರ್ಥವಾದುವುಗಳಾಗಿಯೇ ಪರಿಣಮಿಸಿದುವು. "ಅಮಾನಾಮಕಲಾಯಾತು" ಎಂಬುದು ಮೊದಲಾಗುಳ್ಳ ಪುರಾಣವಚನದಿಂದ ॥೪೪॥ ಯಾವ ತಿಥಿಯಲ್ಲಿ ಪರಶಿವನು ಆ "ಅಮಾ" ಎಂಬ ಕಲೆಯನ್ನು ಧರಿಸಿಕೊಂಡನೋ, ಆ ತಿಥಿಯು ಅಮಾವಾಸ್ಯೆಯೆನಿಸಿಕೊಂಡಿತು. ಆ ತಿಥಿಯಲ್ಲಿ ಯಾರು ದೃಢವಾದ ಭಕ್ತಿಯಿಂದ ಪರಮೇಶ್ವರನನ್ನು ನಿಶ್ಚಲಮನಸ್ಕರಾಗಿ, ಅತ್ಯಂತ ವಿಲಾಸದಿಂದ ಪೂಜಿಸುವರೋ, ಅವರುಗಳು ಹೀಗೆ ಅಸಾಧಾರಣವಾದ ವೈಭವವುಳ್ಳವರಾಗಿ ಊರ್ಧ್ವಲೋಕಗಳಿಗೆ ಹೋಗುತ್ತಾರೆ" ॥೪೬॥ ಎಂದು ಯಮಧರ್ಮನು ಚಿತ್ರಗುಪ್ತನಿಗೆ ಪೂರ್ವಕಥೆಯನ್ನು ಹೇಳಿದನು. ಆದುದರಿಂದ ಶಂಕರನು ಚಂದ್ರನ ಬಂದು ಕಲೆಯನ್ನು ಶಿರೋಭೂಷಣರೂಪವಾಗಿ ವಿಲಾಸದಿಂದ ಧರಿಸಿಕೊಂಡನು. ॥೪೭॥ ಅದುಕಾರಣದಿಂದಲೇ ಶಿವನು ಚಂದ್ರಧರನೆಂದು ಕರೆಯಲ್ಪಡುತ್ತಾನೆ. ವಿಚಾರಮಾಡಿ ನೋಡಿದರೆ, ಪರಶಿವನು ಉಪನಿಷತ್ತುಗಳಿಗೂ ಗೋಚರವಾಗದ ಅಸಾರವೈಭವವುಳ್ಳವನು ॥೪೮॥ ಆತನು ಆದಿಮಧ್ಯಾಂತ್ಯಗಳಿಲ್ಲದವನು. ಸಕಲ ಜಗತ್ಸ್ವಾಮಿಯು. ಹರಿಬ್ರಹ್ಮಾದಿ ದೇವತೆಗಳಿಗೂ ಅರಿಯಲಶಕ್ಯನು. ಪ್ರಪಂಚಕ್ಕೆ ಮಿಗಿಲಾದವನು. ನಾಶರಹಿತನು. ಜನನಮರಣ ವಿನಾಶಕನು ॥೪೯॥ ಅಂತಪ್ಪ ಪರಮೇಶ್ವರನು ಚಂದ್ರನನ್ನೇ ತಲೆಯಮೇಲೆ ಧರಿಸಿಕೊ

ರಃ। ಅಯಂ ಚನ್ದ್ರಸ್ತಿಷ್ಠತಿ ಚೇತ್ಪರಮೇಶಸ್ಯ ಮಸ್ತಕೇ ॥೫೧॥ ತರ್ಹಿ ಭ್ರಮ
ನ್ಸದಾ ವ್ಯೋಮ್ನಿ ಚನ್ದ್ರೋ ಮಿಥ್ಯಾ ಕಿಮುಚ್ಯತಾಮ್। ಸುಧಾಂಶುರಪರೋ
ಜಾತೋ ಯದಿ ವಾ ಜಗತೀತಲೇ ॥೫೨॥ ಮಹಾದೇವಜಟಾಜೂಟೇ ಯದ್ಯ
ಸ್ಥಿಸ್ಯೈತ್ಸುಧಾಕರಃ। ನಾಸ್ಥಿಸ್ಯಾದೇವ ಗಗನೇ ಸರ್ವದಾ ಸ ಸುಧಾಕರಃ ॥೫೩॥
ಆಕಾಶಮಧ್ಯೇ ಸತತಮವತಿಷ್ಠೇದ್ಯದಿ ಚನ್ದ್ರಮಾಃ। ಶ್ರೀಕಣ್ಠಸ್ಯ ಜಟಾ
ಜೂಟೇ ನೈವಾವತಿಷ್ಠೇತ ಸರ್ವದಾ ॥೫೪॥ ತಸ್ಮಾನ್ಮಹೇಶ್ವರಸ್ಯಾಭೂದವತಂ
ಸಃ ಕಲೈವ ಸಾ। ಇಯಂ ಸಿದ್ಧಿ ಕಿಮಾಶಸ್ಯ ಶಿವಸ್ಯ ಪರಮಾತ್ಮನಃ ॥೫೫॥

ಇತ್ಯುಪಾಖ್ಯಾತ.... .......ಶ್ರೀ ವೀರಶೈವಮತಾಚಾರ್ಯ ಗುರುರಾ
ಜಸ್ಯಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನಪಣ್ಡಿ
ತಾರಾಧ್ಯಚರಿತ್ರೇ ಪಾದಪ್ರಕರಣೇ ಚನ್ದ್ರಧಾರಣಕಥ
ನಂ ನಾಮೈಕಾದಶೋಽಧ್ಯಾಯಃ.

---

ಳುವನೆ? ಈ ದೃಶ್ಯಮಾನನಾದ ಚಂದ್ರನೇ ಪರಶಿವನ ತಲೆಯಲ್ಲಿ ಇರುವವನಾಗಿ
ದ್ದರೆ॥೫೧॥ ಯಾವಾಗಲೂ ಆಕಾಶದಲ್ಲಿ ಸುತ್ತುತ್ತಿರುವ ಚಂದ್ರನು ಸುಳ್ಳಾದವನೇನು?
ಹೇಳು. ಅಥವಾ ಲೋಕದಲ್ಲಿ ಮತ್ತೊಬ್ಬ ಚಂದ್ರನು ಹುಟ್ಟಿರುವನೊ? ಚಂ
ದ್ರನು ಪರಶಿವನ ಜಡೆಯ ತುದಿಯಲ್ಲಿ ಇರುವನಾದರೆ, ಆ ಚಂದ್ರನು ಯಾವಾಗಲೂ
ಆಕಾಶದಲ್ಲಿ ಇರಲೇಬಾರದಾಗಿದ್ದಿತು ॥೫೩॥ ಅಥವಾ ಚಂದ್ರನು ಯಾವಾಗಲೂ ಆ
ಕಾಶ ಮಧ್ಯದಲೇ ಇರುತ್ತಿರುವನಾದರೆ, ಪರಶಿವನ ಜಟಾಜೂಟದಲ್ಲಿ ಯಾವಾಗಲೂ
ಇರಲೇಬಾರದು. ಆದುಕಾರಣ, ಪರಶಿವನಿಗೆ ಚಂದ್ರನ ಕಲೆಯು ಶಿರೋಭೂಷಣ
ವಾಗಿದೆಯೇ ಹೊರತು ಚಂದ್ರನೇ ಶಿವನ ತಲೆಯ ಮೇಲಿಲ್ಲ. ಹೀಗೆ ಶರಣಾಗತನಾದ
ಚಂದ್ರನ ಕಷ್ಟವನ್ನು ಪರಿಹರಿಸಿ, ಅವನ ಕಲೆಯನ್ನು ಪರಶಿವನು ಧರಿಸಿಕೊಂಡವನಾ
ದ್ದರಿಂದಲೇ ಪರಮಾತ್ಮನಾದ ಶಿವನಿಗೆ ಇದು ದೋಷವೆ? ಎಂದು ಶ್ರೀಮನ್ಮಲ್ಲಿಕಾ
ರ್ಜುನ ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ

ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ
ರಚಿತವಾದ „ಭಾವಮಂಜರಿ” ಯೆಂಬ ಕನ್ನಡ ಟಿಪ್ಪಣಿದಲ್ಲಿ
ಪಾದಪ್ರಕರಣದೊಳಗೆ ಚಂದ್ರಧಾರಣ ಲೀಲೆಯನ್ನು
ನಿರೂಪಿಸುವ ೧೧ ನೆಯಧ್ಯಾಯವು ಮುಗಿದುದು.

# ಅಥ ದ್ವಾದಶೋಽಧ್ಯಾಯಃ.

(ಶಿವಸ್ಯಬ್ರಹ್ಮಲಲಾಟಸಂಭವತ್ವನಿರಾಸಕಥನಂ.)

ಕಿಂಚಾಜಸ್ಯಾಲಿಕಾಚ್ಛಂಭುರ್ಜಾತಇತ್ಯುಚ್ಯತೇಕಥಮ್। ಸಂವುತಾದ್ವೇದವಾಕ್ಯಸ್ಯಸ್ವೇಚ್ಛಯಾಽಚಿನ್ತಯಚ್ಛಿವಃ ॥೧॥ ಇತಿವಾಕ್ಯಾದುವೂನಾಥಶ್ಶಿವೋವಿಶ್ವಾಧಿಕೋಹರಃ।ಆದಿಸೃಷ್ಟಿಂಸ್ವಲೀಲಾರ್ಥಂಪುರಾಕರ್ತುಮಚಿನ್ತಯತ್ ॥೨॥ ಮದಙ್ಗಸ್ವೇದಸಂಭೂತೌ ಬ್ರಹ್ಮನಾರಾಯಣಾವುಭೌ। ಇತಿವಾಕ್ಯಾದ್ಬ್ರಹ್ಮವಿಷ್ಣೂವಾಮದಕ್ಷಿಣಪಾರ್ಶ್ವಯೋಃ ॥ ಸ್ವೇದಾದ್ಭೂತ್ವಾಮಹೇಶಸ್ಯತಾಸ್ತ್ಸ್ಯೋಭಕ್ತ್ಯಾಪ್ರಣೇಮತುಃ।ಯಸ್ಯಪಾದರಜಸ್ಪರ್ಶಾದಿತ್ಯಾದೇರಾಪ್ತವಾಕ್ಯತಃ॥೫॥ ಕಾಮಾರೇಃಪಾದಕಮಲರೇಣು

---

# ಹನ್ನೆರಡನೆಯ ಅಧ್ಯಾಯವು.

(ಶಿವನು ಬ್ರಹ್ಮಲಲಾಟಸಂಭವನೆಂಬುದನ್ನು ಖಂಡಿಸುವುದು)

ಮತ್ತೂ "ಬ್ರಹ್ಮನ ಹಣೆಯ ದೆಸೆಯಿಂದ ಶಿವನು ಹುಟ್ಟಿದನು" ಎಂದು ವೇದವಚನಸಮ್ಮತಿಯಿಂದ ಹೇಗೆ ಹೇಳುವುದಕ್ಕಾದೀತು? ಏಕೆಂದರೆ-"ಸ್ವೇಚ್ಛಯಾಽಚಿಂತಯಚ್ಛಿವಃ-ಶಿವನು ಜಗತ್ಸೃಷ್ಟಿಯನ್ನು ಮಾಡಬೇಕೆಂದು ತಾನೇ ಯೋಚಿಸಿದನು" ಎಂಬ ವಚನದಿಂದಲೂ, "ಜಗದೀಶನಾದ ಪಾರ್ವತೀಪತಿಯು ತನ್ನ ವಿಲಾಸಾರ್ಥವಾಗಿ ಪೂರ್ವದಲ್ಲಿ ಜಗತ್ಸೃಷ್ಟಿಯನ್ನು ಮಾಡಬೇಕೆಂದು ಯೋಚಿಸಿದನು, ॥೨॥ ಎಂಬ ವಚನದಿಂದಲೂ "ಬ್ರಹ್ಮವಿಷ್ಣುಗಳಿಬ್ಬರೂ, ನನ್ನ ದೇಹದ ಬೆವರಿನಿಂದ ಹುಟ್ಟಿದರು" ಎಂಬ ವಚನದಿಂದಲೂ, "ಬ್ರಹ್ಮವಿಷ್ಣುಗಳು ಪರಮೇಶ್ವರನ ಎಡಬಲ ಪಕ್ಕಗಳ ಬೆವರಿನಿಂದ ಹುಟ್ಟಿ, ಆತನನ್ನು ಭಕ್ತಿಯಿಂದ ನಮಸ್ಕರಿಸಿದರು" ಎಂಬ ವಚನದಿಂದಲೂ, "ಯಸ್ಯಪಾದರಜಸ್ಸ್ಪರ್ಶಾತ್" ಎಂಬ ಪುರಾಣವಾಕ್ಯದಿಂದ ಶಿವನ ಪಾದಕಮಲಧೂಳಿಯು ಸೋಂಕಿದ ಮಾತ್ರದಿಂದ ಈ ವಿಷ್ಣು ಬ್ರಹ್ಮರಿಗೆ ಸತ್ವಗುಣ ರಾಜಸಗುಣಗಳು ಬೇಗನೆ ಪ್ರಾಪ್ತವಾದುವು ॥೫॥ ಬ್ರಹ್ಮನು ಬ್ರಹ್ಮಾಂಡ

ಸಜ್ಜತಿವಾತ್ರತಃ । ಅಭೂತಾಮನಯೋಶ್ಶೀಘ್ರಂಗುಣೌಸಾತ್ವಿಕರಾಜಸೌ॥
ಸೃಷ್ಟ್ವಾಬ್ರಹ್ಮಾಣ್ಡನಿಚಯಾನ್ಸಮುಭೂದ್ಗರ್ವಿತೋವಿಧಿಃ।ಅಹಮೇವಪರಂ
ಬ್ರಹ್ಮಾಹಮೇವಪರಮೇಶ್ವರಃ॥೬॥ಅಹಮೇವಪರೋದೇವಇತ್ಯಜ್ಞಾನಾದ
ಭಾಷತ । ತದ್ರಜೋಗುಣಸಾಮರ್ಥ್ಯಂತತ್‌ಕ್ಷಣಾನ್ನಾಶಮಾಯಯೌ ॥
ಅಥಗರ್ವೋಜ್ಝಿತಿಂತ್ಯಕ್ತ್ವಾಭಾಲನೇತ್ರಂಪುರಾಯಥಾ।ವೀರಘೋರತಪೋ
ನಿಷ್ಠಾಂಗರಿಷ್ಠಸ್ಸ್ಪೃಶಿತಾಮಹಃ ॥೮॥ ಛಿತ್ವಾಸ್ವಕೀಯರಸನಾಃಪೂಜಯನ್ಪರ
ಮೇಶ್ವರಮ್।ಅಹರ್ನಿಶಂಸೇವಮಾನಃಕುರ್ವನ್ನಷ್ಟವಿಧಾರ್ಚನಮ್ ॥೯॥
ವಿಶಿಷ್ಟಾಷ್ಟಾಙ್ಗಯೋಗಸ್ಯಸಜ್ಜತ್ವಾಸ್ಥಿರಮಾನಸಃ । ಪದ್ಮಾಸನಸ್ಥೋಹೃ
ದಯಪದ್ಮಸದ್ಮನಿಶೋಭನೇ॥೧೦॥ ಮಹೇಶ್ವರಂಸಮಾಸೀನಂಕೃತ್ವಾಪ್ರೀತಿ
ಪುರಸ್ಸರಮ್ । ನಿಪೀಡ್ಯವಾಮಚರಣಮೂಲೇನಾಧಾರಮಣ್ಡಲಮ್ ॥೧೧॥
ಮಂಜೂಷಿಕಾಮಿವದೃಢಮಾಬಧ್ಯತದನನ್ತರಮ್ । ವಿಜ್ಞಾಯಚತಥಾಪ್ರಾ
ಣಾಪಾನಯೋರ್ಯೋಗಕೀಲಕಮ್ ॥೧೨॥ ಅನ್ತರ್ಯೋಗಸ್ಯಚಾತುರ್ಯೇ ಚ
ಕಾಸತ್ರಿವಿಶೇಷತಃ। ಪ್ರಸುಪ್ತಾಂಭುಜಗೀಮಾದಿಮಣ್ಡಲಾಕುಂಚನೇನಹಿ॥

---

ಸಮೂಹಗಳನ್ನು ಸೃಜಿಸಿ ಅಹಂಕಾರಪಟ್ಟವನಾದನು. ನಾನೇ ಪರಬ್ರಹ್ಮ, ನಾನೇ
ಪರಮೇಶ್ವರ, ನಾನೇ ಸರ್ವೋತ್ಕೃಷ್ಟನಾದ ದೈವ, ಎಂದು ಅಜ್ಞಾನದಿಂದ ನುಡಿ
ದನು. ಆಗ ಕೂಡಲೇ ಅವನ ರಜೋಗುಣದ ಸಾಮರ್ಥ್ಯವು ಅಳಿದುಹೋಯಿ
ತು ॥೭॥ ಬಳಿಕ ಬ್ರಹ್ಮನು ಮಹಾಹಂಕಾರವನ್ನು ಬಿಟ್ಟು, ಪೂರ್ವದಂತೆಯೇ ಫಾಲಾಕ್ಷ
ನಾದ ಶಿವನನ್ನು ಕುರಿತು ಶೌರ್ಯಸಮೇತವೂ ಭಯಂಕರವೂ ಆದ ತಪಸ್ಸನ್ನಾಚರಿಸಿದ
ವನಾಗಿ, ತನ್ನ ನಾಲಗೆಗಳನ್ನು ಕತ್ತರಿಸಿ ಪರಶಿವನಿಗೆ ಸಮರ್ಪಿಸಿ, ಹಗಲು ರಾತ್ರಿ
ಯೂ ಅಷ್ಟವಿಧೋಪಚಾರದಿಂದ ಪೂಜಿಸುತ್ತ ॥೯॥ ಯಮಾದ್ಯಷ್ಟಾಂಗಯೋಗಸಂಬಂ
ಧದಿಂದ ನಿಶ್ಚಲಮನಸ್ಕನಾಗಿ, ಪದ್ಮಾಸನಾಸೀನನಾಗಿ, ಮಂಗಳಕರವಾದ ತನ್ನ ಹೃದ
ಯಕಮಲವೆಂಬ ಮನೆಯಲ್ಲಿ ॥೧೦॥ ಪರಮೇಶ್ವರನನ್ನು ಪ್ರೀತಿಪುರಸ್ಸರವಾಗಿ ನೆಲೆಗೊ
ಳಿಸಿ,ತನ್ನ ಎಡದ ಪಾದದ ಮಡದಿಂದ ಮೂಲಾಧಾರ ಚಕ್ರಸ್ಥಲವನ್ನು, ಪೆಟ್ಟಗೆಯನ್ನು
ಮುಚ್ಚಿ ಅದಿಮುವಹಾಗೆ ಬಲವಾಗಿ ಒತ್ತಿ, ಬಳಿಕ ಅಪಾನವಾಯುವನ್ನು ಹೃದಯದ
ಲ್ಲಿಪ್ಪ ಪ್ರಾಣವಾಯುವಿನೊಡನೆ ಸಂಯೋಗಗೊಳಿಸುವ ಮೂಲಬಂಧರೂಪವಾದ
ಕೀಲನ್ನರಿತು ॥ ಅಂತರ್ಯೋಗಸಾಧನದ ಕೌಶ್ಯಲವು ಅಧಿಕವಾಗಿ ಪ್ರಕಾಶಿಸುತ್ತಿರಲಾ
ಗಿ, ಮೂಲಾಧಾರವನ್ನೊತ್ತಿ ಪೀಡಿಸುವುದರಿಂದ ನಾಭಿಕಂದವನ್ನು ಬಳಸಿ ಮಲಗಿರು
ವ ಕುಂಡಲಿನಿಯನ್ನು ಎಬ್ಬಿಸಿ, ಸೂರ್ಯಚಂದ್ರನಾಡಿಗಳಲ್ಲಿ ಆಡುತ್ತಿರುವ ಪ್ರಾಣವಾ
ಯುವಿನ ಗತಿಯನ್ನು ತಡೆದು, ನಾಸಿಕಾಗ್ರದಲ್ಲಿ ನೋಟವನ್ನು ನಿಲ್ಲಿಸಿ, ಹೃದಯಕಂ

ಪ್ರಬೋಧ್ಯ ಗತಿಮಾಬಧ್ಯ ಸೂರ್ಯಾಚನ್ದ್ರಮಸೋಸ್ತಥಾ । ವಿನ್ಯಸ್ಯದೃಷ್ಟಿಂ ನಾಸಾಗ್ರೇ ಪದ್ಮಸ್ಯಸ್ತಸ್ಸ್ಫುರನ್ತಿ ಚ ||೧೪|| ಪ್ರವಿಧಾಯೋರ್ಧ್ವವಕ್ತ್ರಾಣಿ ಪಂಚಾಬ್ಜೇಷು ಸ್ಥಿತೇಷ್ವಧಃ । ಸಮ್ಯಕ್ ಪಂಚಾಸನೀಭೂಯ ಸಂಸ್ಫುರತ್ಸು ಪ್ರಭಾಭರೈಃ ||೧೫|| ಅಗ್ರೇ ತತ್ಪಂಚಪದ್ಮಾನಾಂ ಸಂಸ್ಥಿತೇ ದ್ವಿದಳೇಽಮ್ಬುಜೇ । ಪ್ರಕಾಶಮಾನೇ ಸುತರಾಂ ಪುಷ್ಪಮುಣ್ಟಪಲೀಲಯಾ || ಲಲಾಟೇ ಚಿನ್ತಯನ್ ಬ್ರಹ್ಮಾ ತಪಸ್ಯುಗ್ರೇ ವ್ಯವಸ್ಥಿತಃ । ಇತಿ ಪ್ರಸಿದ್ಧಾದ್ಭುವನೇ ಪುರಾಣವರವಾಕ್ಯತಃ || ತನ್ಮಧ್ಯೇ ಚ ಪರಂಜ್ಯೋತಿಸ್ಸ್ವರೂಪಮುಭವಂ ಭವಮ್ । ಉಪಚಾರೈಃ ಪಂಚಭಿಸ್ತೈರವಗಾಹನಪೂರ್ವಕೈಃ ||೧೭|| ಸುಪ್ರಸನ್ನಂ ವಿಧಾಯಾಥ ಸಹಸ್ರದಳರಂಜಿತಾತ್ । ಅಬ್ಜಾದುದ್ಭೂಯ ನಿಷ್ಯಂದಮಾನಸ್ಯಾಕಲ್ಮಷಸ್ಯ ಚ ||೧೮|| ಮಕರನ್ದಸ್ಯ ಧಾರಾಭಿಃ ಪ್ರವಿಧಾಯಾಭಿಷೇಚನಮ್ । ಪಙ್ಕೇರುಹೇಣ ತೇನೈವ ಕೃತ್ವಾ ಸಮ್ಯಕ್ ಸಮರ್ಚನಮ್ ||೨೦|| ಭಕ್ತಿವಾಸನಯಾ ಧೂಪಂ ವಿತೀರ್ಯ ವಿಧಿಪೂರ್ವಕಮ್ । ಸ್ಫುರದಾತ್ಮಜ್ಯೋತಿಷೈವ ಕೃತ್ವಾ ನೀರಾಜನಂ ತತಃ ||೨೧|| ಅಶೇಷೈರ್ವೇದವಚನೈಸ್ಸ್ತುತಿಂ ಚಕ್ರೇಽತಿಭಕ್ತಿತಃ । ತದಾ ಶಿವೋಽಭಾಲದೇಶೇ ಪ್ರತ್ಯಕ್ಷಸ್ಸಮಜಾಯತ || ತುಷ್ಟೋಽತಿ

---

ತಾದಿ ಸ್ಥಾನಗಳಲ್ಲಿ ಅಧೋಮುಖವಾಗಿರುವ ಪಂಚಕಮಲಗಳನ್ನು ಮೇಲ್ಮುಖಗಳನ್ನಾಗಿಸಿ, ಆ ಅಯ್ದು ತಾವರೆಗಳೂ ಅಯ್ದು ಆಸನಗಳಾಗಿ ಕಾಂತಿಸಮೂಹದಿಂದ ಕೂಡಿ ಹೊಳೆಯುತ್ತಿರಲು ||೧೫|| ಆ ಪಂಚಕಮಲಗಳ ಮೇಲೆ ಇರುತ್ತಿರುವ ಎರಡೆಸಳಿನ ಕಮಲದಲ್ಲಿ ಹೂವಿನ ಮಂಟಪದಂತೆ ಚೆನ್ನಾಗಿ ತೊಳಗುತ್ತಿರುವ ಲಲಾಟಸ್ಥಲದಲ್ಲಿ (ಶೃಂಗಾಟಕದಲ್ಲಿ) ಇರುವ ಪರಶಿವನನ್ನು ಬ್ರಹ್ಮನು ಧ್ಯಾನಿಸುತ್ತ, ಉಗ್ರವಾದ ತಪಸ್ಸಿನಲ್ಲಿದ್ದನು." ಎಂಬುದಾಗಿರುವ ಲೋಕವಿಖ್ಯಾತವಾದ ಪುರಾಣವಚನದಿಂದಲೂ|| ಮತ್ತೂ ಆ ಲಲಾಟಮಧ್ಯದಲ್ಲಿ ಪರಂಜ್ಯೋತಿಸ್ವರೂಪನಾದ ಜನನರೂಪನಾದ ಪರಶಿವನನ್ನು ಪ್ರಾಣಾಯಾಮಾದ್ಯಷ್ಟಾಂಗಯೋಗರೂಪವಾದ ಪಂಚೋಪಚಾರದಿಂ ಪೂಜಿಸಿ, ಪ್ರಸನ್ನೀಕರಿಸಿಕೊಂಡು, ಬಳಿಕ ಸಹಸ್ರಾರಕಮಲದಿಂದ ಹುಟ್ಟಿ ಸ್ರವಿಸುತ್ತಿರುವ ನಿಷ್ಕಲ್ಮಷವಾದ ಮಕರಂದರಸದ ಧಾರೆಗಳಿಂದ ಆ ಪರಶಿವನಿಗೆ ಅಭಿಷೇಕವಂ ಮಾಡಿ, ಆ ಸಹಸ್ರಾರಕಮಲದಿಂದಲೇ ಚೆನ್ನಾಗಿ ಶಿವನ ಪೂಜೆಯನ್ನು ಮಾಡಿ ||೨೦|| ವಿಶ್ಯಕ್ತವಾಗಿ ಸದ್ಭಕ್ತಿವಾಸನೆಯೆಂಬ ಧೂಪವನ್ನು ಬೀಸಿ, ಪ್ರಕಾಶಿಸುತ್ತಿರುವ ಆತ್ಮಜ್ಯೋತಿಯನ್ನೇ ಆರತಿಯನ್ನಾಗಿ ಬೆಳಗಿ, ಬಳಿಕ ||೨೧|| ಅತ್ಯಂತ ಭಕ್ತಿಪೂರ್ವಕವಾಗಿ ಸಕಲ ವೇದವಚನಗಳಿಂದ ಈಶ್ವರಸ್ತೋತ್ರವನ್ನು ಮಾಡಿದನು. ಆಗ ಶಿವನು ಯಾವ ಸ್ಥಲದಲ್ಲಿ ಬ್ರಹ್ಮನಿಂದ ಲಕ್ಷ್ಯಪೂರ್ವಕವಾಗಿ ಧ್ಯಾನಿಸಲ್ಪಡುತ್ತಿದ್ದನೋ ಅಂತಹ ಲಲಾಟತಟದಲ್ಲಿಯೇ ಅವತರಿಸಿ, ಪ್ರತ್ಯಕ್ಷನಾದನು ||೨೨|| "ಎಲೆ ಬ್ರಹ್ಮನೆ, ನಿನ್ನ ತಪ

ಸ್ಮಿತೇಯದೀಷ್ಟಂತೇತದ್ವಾಚಸ್ವದದಾಮ್ಯಹಮ್। ಇತಿಪ್ರೋಕ್ತೇತದಾಬ್ರಹ್ಮಾಸಾಷ್ಟಾಙ್ಗಂಪ್ರಣಿಪತ್ಯತಂ ॥ ಶಿವಂಬ್ರಹ್ಮಾಷ್ಟಕೇನಾಶುಸಂಸ್ತುತ್ಯಪರಮೇಶ್ವರಾತ್। ಸಪ್ರಾಪ್ಯಸೃಷ್ಟಿಕರ್ತೃತ್ವಂಸೃಷ್ಟಿಂಕುರ್ವನ್ಪುರಾಯಥಾ ॥೨೪॥ ವರ್ತತೇಽಥಮಹಾದೇವಃಪಸ್ಯೋಽಪ್ಯಂತರ್ಧಿಮಾಗಾತ್ತದಾ। ಇಯಂನಿನ್ದಾಕಿಮುಶಿವಪಕ್ಷಾಣಾಂಸಮಯಿನಾಮಪಿ ॥೨೫॥ ಧ್ಯಾನ್ಯೈಕನಿಷ್ಠಯಾಸ್ವಸ್ವದೈವತಾನ್ಯನುರಾಗತಃ। ಸ್ವಸ್ವಹೃತ್ಸರಸಿಜೇಷುಪ್ರಕಾಶನ್ತೇನಿರನ್ತರಮ್ ॥೨೬॥ ತಾವನ್ಮಾತ್ರಾದ್ದೈವತಾನಿತಾನಿಪುತ್ರಾಭವನ್ತಿಕಿಮ್। ಭವನ್ತ್ಯೇವಸ್ವಾಮಿನಸ್ತುತೇಷಾಂನಾಸ್ತ್ಯತ್ರಸಂಶಯಃ ॥೨೭॥ ಕಿಮುಕ್ತೋನಾನಲಃಕಾಷ್ಠೇಜಾಯತೇತತ್ಸುತಃಕಿಮು। ಪಾಷಾಣೇಜಾಯತೇಸ್ವರ್ಣಮಪತ್ಯಂತಸ್ಯತತ್ಕಿಮು ॥೨೮॥ ದಿವ್ಯಸ್ವಯಮ್ಭುಲಿಙ್ಗಾನಿಸಮ್ಪೂಜ್ಯಾನ್ಯಪಿಸ್ವೈರಪಿ। ಭೂಮ್ಯಾಂಸಂಜಾತಮಾತ್ರೇಣಭೂಮಿಜಾನಿಭವನ್ತಿಕಿಮ್ ॥ ಸ್ತಮ್ಭೇಕಶ್ಚಿತ್ಸಸಂಜಾತಇತಿಜಲ್ಪನ್ತಿಕೇಚನ। ಸ್ತಮ್ಭಸ್ಯತಸ್ಯಪುತ್ರಃಕಿಂ

---

ಸ್ಸನಿಂದ ನಾನು ಸಂತುಷ್ಟನಾದೆನು. ನಿನ್ನಿಷ್ಟಾರ್ಥವೇನು? ಕೇಳು, ನಾನು ಕೊಡುತ್ತೇನೆ" ಎಂದು ಶಂಕರನು ಹೇಳಲಾಗಿ, ಆಗ ಬ್ರಹ್ಮನು ಪರಶಿವನನ್ನು ನಮಸ್ಕರಿಸಿ, ಶೀಘ್ರವಾಗಿ ಬ್ರಹ್ಮಾಷ್ಟಕವೆಂಬ ಸ್ತುತಿಪದ್ಯಗಳಿಂದ ಹೊಗಳಿ, ಆ ಪರಮೇಶ್ವರನಿಂದ ಸೃಷ್ಟಿಕರ್ತೃತ್ವವನ್ನು ಪಡೆದುಕೊಂಡು, ಪೂರ್ವದಂತೆಯೇ ಜಗತ್ಸೃಷ್ಟಿಯನ್ನು ಮಾಡುತ್ತಲಿದ್ದಾನೆ ॥೨೪॥ ಬ್ರಹ್ಮನಿಗೆ ಶಿವನು ವರವನ್ನಿತ್ತು ಬಳಿಕ ಅಂತರ್ಹಿತನಾದನು. ಹೀಗೆ ಪ್ರತ್ಯಕ್ಷನಾದ ಮಾತ್ರಕ್ಕೇ ಪರಶಿವನಿಗೆ ಅದೊಂದು ದೋಷವಾಗಿ ಹೋಗುವುದೆ? ಲೋಕದಲ್ಲಿ ಷಣ್ಮತದವರೂ ಕೂಡ ತಮ್ಮ ತಮ್ಮ ಉಪಾಸ್ಯದೈವವನ್ನು ಅವರವರ ಹೃದಯಕಮಲದಲ್ಲಿ ತದೇಕಧ್ಯಾನದಿಂದ ಭಕ್ತಿಪುರಸ್ಸರವಾಗಿ ಭಜಿಸುತ್ತಾರೆ. ಅಂಥವರ ಹೃದಯಕಮಲಗಳಲ್ಲಿ ಆ ದೇವತೆಗಳು ಯಾವಾಗಲೂ ನೆಲಸಿ ಒಪ್ಪುತ್ತಾರೆ ॥೨೬॥ ಅವರ ಹೃದಯದಲ್ಲಿ ಆ ದೇವತೆಗಳು ಉದಿಸಿ ತೋರಿದ ಮಾತ್ರದಿಂದಲೇ ಆ ದೇವತೆಗಳು ಅವರುಗಳ ಮಕ್ಕಳುಗಳಾಗುವರೇನು? ಎಂದಿಗೂ ಇಲ್ಲ. ಆ ಉಪಾಸ್ಯದೈವಗಳು ಆ ಭಜಕರಿಗೆ ಅಧೀಶ್ವರರಾಗಿಯೇ ಇರುತ್ತಾರೆ. ಈ ವಿಷಯದಲ್ಲಿ ಸಂಶಯವಿಲ್ಲ ॥೨೭॥ ಹೆಚ್ಚು ಮಾತನಾಡುವುದರಿಂದ ಫಲವೇನು? ಬೆಂಕಿಯು ಕಟ್ಟಿಗೆಯಲ್ಲಿ ಹುಟ್ಟುತ್ತದೆ. ಆದರೆ ಅದು ಕಟ್ಟಿಗೆಯ ಮಗನೊ? ಚಿನ್ನವು ಕಲ್ಲಿನಲ್ಲಿ ಹುಟ್ಟುತ್ತದೆ. ಅದು ಕಲ್ಲಿನ ಮಗುವೊ? ॥೨೮॥ ಸರ್ವರಿಂದಲೂ ಪೂಜಿಸಿಕೊಳ್ಳುವ ಸ್ವಯಂಭುಲಿಂಗಗಳು ಭೂಮಿಯಲ್ಲಿ ಒಡೆದು ಮೂಡಿದ ಮಾತ್ರದಿಂದಲೇ ಆ ಭೂಮಿಯ ಮಕ್ಕಳುಗಳಾಗುವುವೆ? ॥ ಒಬ್ಬಾನೊಬ್ಬನು (ವಿಷ್ಣುವು) ಕಂಬದಲ್ಲಿ ಒಡೆದು ಮೂಡಿದನೆಂದು ಕೆಲರು ಹೇಳಿ

ಸತುಸರ್ವ್ಯಗ್ರ್ಯಭಿಚಾರಿತೇ ||೩೯|| ಹಿರಣ್ಯಗರ್ಭಇತ್ಯಾಖ್ಯಾಯಥಾಸ್ತ್ಯಬ್ಜ ಜಜನ್ಮನಃ । ತಥೈವಾಮರಸಿಂಹಾದಿನಿಘಂಟುಷ್ವಖಿಲೇಷ್ವಪಿ ||೩೧|| ಪಾಣಿನೀಯಪ್ರಭೃತಿಷುಶಬ್ದಶಾಸ್ತ್ರಚಯೇಷ್ವಪಿ । ಬ್ರಹ್ಮಾಲಿಕಜಇತ್ಯಾಖ್ಯಾವಿದ್ಯತೇಕಿಂಮಹೇಶಿತುಃ ||೩೨|| ತನ್ಮಹತ್ಪಾತಕಮಿದಂಪ್ರವಕ್ತುಂಯುಜ್ಯತೇಕಥಮ್ ।

ಇತ್ಯಸಂಖ್ಯಾತ............ಶ್ರೀವೀರಶೈವಮತಾಚಾರ್ಯ ಗುರುರಾ
ಜಸ್ಯಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನಪಣ್ಡಿತಾ
ರಾಧ್ಯಚರಿತ್ರೇ ವಾದಪ್ರಕರಣೇ ಪರಮೇಶ್ವರಸ್ಯ
ಬ್ರಹ್ಮಲಲಾಟಸಮ್ಭವತ್ವನಿರಾಸಕಥನಂನಾ
ಮ ದ್ವಾದಶೋಽಧ್ಯಾಯಃ.

---

ಕೊಳ್ಳುತ್ತಾರೆ. ಚೆನ್ನಾಗಿ ವಿಚಾರಮಾಡಿನೋಡಿದರೆ ಅವನು ಆ ಕಂಬದ ಮಗನೋ? ||೩೦|| ಬ್ರಹ್ಮನಿಗೆ „ ಹಿರಣ್ಯಗರ್ಭ " ನೆಂಬ ಹೆಸರು ಹೇಗಿರುವುದೋ ಹಾಗೆಯೇ ಅಮರಸಿಹ್ಮಾದಿಗಳ ನಿಘಂಟುಗಳಲ್ಲಿಯೂ ||೩೧|| ಪಾಣಿನಿ ಮೊದಲಾದವರ ವ್ಯಾಕರಣಗಳಲ್ಲಿಯೂ ಸಹ ಶಿವನಿಗೆ " ಬ್ರಹ್ಮಲಲಾಟಜ " ನೆಂಬ ಪರ್ಯಾಯನಾಮವು ಇರುವುದುಂಟೆ ? ಅದುಕಾರಣ, ಈ ಪಾಪದ ಮಾತನ್ನು ಆಡುವುದಕ್ಕೆ ಹೇಗಾದೀತು ?

ಎಂದು ಶ್ರೀಮನ್ಮಲ್ಲಿಕಾರ್ಜುನಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಪಂಡಿತಾ
ರಾಧ್ಯಚರಿತಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ " ಭಾವಮಂ
ಜರಿ " ಯೆಂಬ ಕನ್ನಡ ಟಿಪ್ಪಣಿದಲ್ಲಿ ವಾದಪ್ರಕರಣದೊಳಗೆ
ಶಿವನು ಬ್ರಹ್ಮನ ಲಲಾಟದಿಂದ ಹುಟ್ಟಿದವನೆಂಬ ವಾದದ
ಖಂಡನೆಯನ್ನು ನಿರೂಪಿಸುವ ೧೨ ನೆಯ
ಅಧ್ಯಾಯವು ಮುಗಿದುದು.

# ಅಥ ತ್ರಯೋದಶೋಽಧ್ಯಾಯಃ.

(ಹರಿಬ್ರಹ್ಮಕಪಾಲಾಸ್ಥಿಮಾಲಾನೃಸಿಹ್ಮಾದಿಚರ್ಮಧಾರಣಕಥನಂ.)

ಅಪಿಚಶ್ರೀಮಹಾದೇವೋದಧಾಶಿಮತಿಲಾಲ್ಯತಃ। ಅಮಾಙ್ಗಲ್ಯಾನಿಶಲ್ಯಾನಿಚಮಾರ್ಗಣೇತ್ಯಾತ್ಥಚೇಚ್ಛೃಣು ॥೧॥ ಅನನ್ತಾತೀತಕಲ್ಪಾನ್ತಹತಾನಾಂಪರಮೇಷ್ಠಿನಾಮ್। ಅಸಂಖ್ಯಾತಕಪಾಲಾಸ್ಥಿಮಾಲಿಕಾಭಿಸ್ಸಮಂತತಃ ॥೨॥ ಸನ್ನದ್ಧಪಿಙ್ಗಳಜಟಾಜೂಟಕೋಟೀರಕಾನ್ತಯಃ। ಸ್ಫುರನ್ತೀನಿಖಿಲಾಂಗೇಷುದೇವದಾನವಸಂಹತೇಃ ॥೩॥ ಸ್ಥೂಲಾಃಕಪಾಲನಿವಹಾಸ್ತಥೈವಾಸ್ಥಿಚಯಾಅಪಿ। ಸ್ವಪಾದಪದ್ಮನಿಹಿತಹರಿನೇತ್ರಾಬ್ಜರೋಚಿಷಃ ॥೪॥ ದಕ್ಷಿಣಾಂಸಾಗ್ರವಿನ್ಯಸ್ತವಿಷ್ವಕ್ಸೇನಕಲೇಬರಮ್। ವಾಮಹಸ್ತಗೃಹೀತಾಬ್ಜಜನ್ಮಸ್ಥೂಲಕಪಾಲಕಃ ॥೫॥ ದಿವ್ಯದೇಹಶ್ಚಾಪ್ಯಶಂಭೋರ್ಮಹೇಶಸ್ಯಜಗತ್ಪತೇಃ। ನಿತ್ಯತಾಯಾಮಹಿಮ್ನಶ್ಚವಿಮೃಷ್ಟೇಸಾ

---

## ೧೩ ನೆಯ ಅಧ್ಯಾಯವು.

(ಹರಿಬ್ರಹ್ಮಕಪಾಲಾಸ್ಥಿನೃಸಿಹ್ಮಾದಿಚರ್ಮಧಾರಣ ನಿರೂಪಣವು)

ಮತ್ತೂ ಶ್ರೀಮಹಾದೇವನು ಅಮಂಗಳಕರವಾದ ಮೂಳೆಗಳನ್ನೂ ಚಕ್ಕಳಗಳನ್ನೂ ಅತಿ ಪ್ರೀತಿಯಿಂದ ಏತಕ್ಕೆ ಧರಿಸಿಕೊಂಡನೆಂದು ನೀನು ಹೇಳುವೆಯಾದರೆ, ಕೇಳು—॥೧॥ ಗಣನೆಯಿಲ್ಲವೆ ಕಳೆದುಹೋಗಿರುವ ಎಷ್ಟೋ ಪ್ರಳಯಗಳಲ್ಲಿ ಸತ್ತ ಬ್ರಹ್ಮರುಗಳ ಲೆಕ್ಕವಿಲ್ಲದ ತಲೆಬುರುಡೆಗಳ ಮಾಲಿಕೆಗಳಿಂದ ಸುತ್ತಲೂ ಸೇರಿಸಿ ಕಟ್ಟಲ್ಪಟ್ಟಿರುವ ಹೊಂಬಣ್ಣವಾದ ಜಡೆಮುಡಿಯ ಕಿರೀಟದ ಕಾಂತಿಗಳೂ, ದೇಹದಮೇಲೆಲ್ಲಾ ಒಪ್ಪುತ್ತಿರುವ ದೇವದಾನವರ ದೊಡ್ಡದೊಡ್ಡ ತಲೆಬುರುಡೆಗಳೂ, ಮತ್ತೂ ಅವರ ಮೂಳೆಯ ಸಮೂಹಗಳೂ, ತನ್ನ ಪಾದದಲ್ಲಿ ಸಮರ್ಪಿಸಲ್ಪಟ್ಟಿರುವ ವಿಷ್ಣುನೇತ್ರಕಮಲದ ಕಾಂತಿಗಳೂ॥೪॥ ಬಲಗಡೆ ಹೆಗಲಿನಮೇಲೆ ಇಟ್ಟುಕೊಂಡಿರುವ ವಿಷ್ವಕ್ಸೇನನ ಶರೀರವೂ, ಎಡಗೈಯಲ್ಲಿ ಹಿಡಿದುಕೊಂಡಿರುವ ಬ್ರಹ್ಮನ ದೊಡ್ಡ ತಲೆಯೋಡೂ ॥೫॥ ದಿವ್ಯವಾದ ಶರೀರವೂ ಸಹ ವಿಚಾರಮಾಡಿ ನೋಡಿದರೆ ಜಗದೀಶನಾದ ಶಂಕರನ ನಿತ್ಯ

ಕ್ಷಿಣೋ ನ ಕಿಮ್ ||೬|| ಏಕ ಏವ ಹಿ ನಿತ್ಯೋಽಹಮನಿತ್ಯಾ ಇತರೇಽಖಿಲಾಃ |
ಇತ್ಯೇತಸ್ಯ ಪ್ರತ್ಯಯಾರ್ಥಂ ಕೃಪಯಾ ಪರಮೇಶ್ವರಃ ||೭|| ಬ್ರಹ್ಮವಿಷ್ಣು
ಕಪಾಲಾನಿ ತದೀಯಾಶ್ಚಾಸ್ಥಿಮಾಲಿಕಾಃ | ನ ಧತ್ತೇ ಚೇನ್ಮೋಕ್ಷಲಾಭೋ
ಮುಮುಕ್ಷೂಣಾಂ ಕಥಂ ಭವೇತ್ ||೮|| ಹರಿಬ್ರಹ್ಮಕಪಾಲಾಸ್ಥಿಸಙ್ಗತ್ವಾ
ತ್ಪರಮೇಶ್ವರಃ | ಅಪವಿತ್ರೋ ಭವೇತ್ಕಿಂ ವಾ ಸತಿ ಸಮ್ಯಗ್ವಿಚಾರಿತೇ ||೯||
ಜನಾರ್ದನಃ ಪದ್ಮಜಶ್ಚ ಸ್ವಕಪಾಲಾಸ್ಥಿಧಾರಣೇ | ಮಹೇಶ್ವರೇಣ ರಚಿತೇ
ಕೃತಾರ್ಥೌ ಭವತಸ್ಸ್ಫುಟಮ್ ||೧೦|| ಗಙ್ಗಾನದೀಸಙ್ಗತಾಸ್ಥಿಮಾಲಾ ಪೂ
ತಾ ಭವೇನ್ನ ಕಿಮ್ | ಗಙ್ಗಾಯಾಶ್ಚ ಲ್ಯಸಙ್ಗತ್ವಾದ್ಭವೇತ್ಕಿಮಪವಿತ್ರತಾ ||
ಗಙ್ಗಾಂ ಪ್ರಾಪ್ಯಾಸ್ಥಿಸಂಘೇಷು ಪರಿಪೂತೇಷು ಸರ್ವತಃ | ತಜ್ಜೀವಾನಾಂ ನ
ಜಾಯನ್ತೇ ಲೋಕಾಸ್ಸ್ವರ್ಗಾದಯೋ ನ ಕಿಮ್ || ಹರಿಪದ್ಮಜಶಲ್ಯಾನಿ ತಥೈವೇ
ಶ್ವರಸಙ್ಗತೇಃ | ಉತ್ತರತ್ರ ಹರಿಬ್ರಹ್ಮಪದಬೀಜಾನಿ ಕಿಂ ನ ಹಿ ||೧೨|| ಅತಸ್ತ
ದ್ಧಾರಣಂ ಶವೈರ್ಭಿರ್ವಿಕೃತಿಸ್ಸಾ ಸ್ವತ್ಸ್ಕಥಂ ಭುವಿ | ಕಿಂಚ ಚರ್ಮಾಣಿ ಕಿಂಧ

---

ಕೆಗೂ ಮಹತ್ತ್ವಕ್ಕೂ ಸಾಕ್ಷಿಗಳಾಗಿರುವುದಿಲ್ಲವೆ? ||೬|| ನಾನೊಬ್ಬನೇ ಶಾಶ್ವತನಾದ
ವನು, ಉಳಿದವರೆಲ್ಲರೂ ಅಶಾಶ್ವತರು, ಎಂಬ ಈ ತತ್ತ್ವವನ್ನು ಕೃಪೆಯಿಂದ ಲೋಕ
ಕ್ಕೆ ಸಾಕ್ಷಿಪೂರ್ವಕವಾಗಿ ತೋರಿ ನಂಬಿಸುವುದಕ್ಕೋಸುಗ, ಆ ಪರಮೇಶ್ವರನು || ಬ್ರಹ್ಮ
ವಿಷ್ಣುಗಳ ತಲೆಬುರುಡೆಗಳನ್ನೂ ಮೂಳೆಗಳನ್ನೂ ಧರಿಸದೆಯಿದ್ದರೆ ಮುಮುಕ್ಷುಗಳಾ
ದ ಜನರು ಶಾಶ್ವತನಾದ ದೈವವು ಇವನೇ ಯೆಂದು ತಿಳಿದು ಉಪಾಸಿಸಿ, ತನ್ಮೂಲಕ
ಮೋಕ್ಷಪ್ರಾಪ್ತಿಗೊಳ್ಳುವುದಕ್ಕೆ ಮಾರ್ಗವೆಲ್ಲಿರುತ್ತಿದ್ದಿತು ? || ಚೆನ್ನಾಗಿ ವಿಚಾರಮಾಡಿ
ನೋಡಿದರೆ, ಪರಶಿವನು ಹರಿಬ್ರಹ್ಮರ ತಲೆಯೋಡುಮೂಳೆಗಳ ಸಂಬಂಧದಿಂದ ಅಶುಚಿ
ಯಾಗುವುದುಂಟೆ ? || ತಮ್ಮ ತಲೆಯೋಡನ್ನೂ ಮೂಳೆಗಳನ್ನೂ ಈಶ್ವರನು ಧರಿಸಿ
ಕೊಂಡುದರಿಂದ ಬ್ರಹ್ಮವಿಷ್ಣುಗಳು ಕೃತಾರ್ಥರಾದರು. ಅದು ಸ್ಪಷ್ಟವಾಗಿರುವು
ದ . ಹೇಗೆಂದರೆ-ಸತ್ತವರ ದೇಹದ ಮೂಳೆಗಳನ್ನು ಗಂಗಾನದಿಯಲ್ಲಿ ಸಂಬಂಧಗೊಳಿ
ಸುವುದರಿಂದ ಆ ಮೂಳೆಯು ಮಾಲಿಕೆಯು ಪರಿಶುದ್ಧವಾಗುವುದೆಂದು ಹೇಳಲ್ಪಡುವು
ದಿಲ್ಲವೆ ? ಆದರೆ ಆ ಮೂಳೆಗಳ ಸಂಬಂಧವು ತನಗುಂಟಾಗುವುದರಿಂದ ಗಂಗೆಗೆ ಅಶು
ಚಿಯೇನಾದರೂ ಉಂಟಾಗುವುದೆ? ||೧೧|| ಯಾವ ಪ್ರಾಣಿಗಳ ದೇಹದ ಮೂಳೆಗ
ಳು ಗಂಗೆಯಲ್ಲಿ ಬಿಡಲ್ಪಟ್ಟು ಪರಿಶುದ್ಧಗಳಾಗುವುವೋ, ಅಂಥ ಪ್ರಾಣಿಗಳಿಗೆ ಸ್ವರ್ಗಾದಿ
ಉತ್ತಮಲೋಕಗಳ ಪ್ರಾಪ್ತಿಯು ಆಗುವುದೋ ಇಲ್ಲವೋ? ||೧೨|| ಅದರಂತೆಯೇ
ವಿಷ್ಣು ಬ್ರಹ್ಮರ ದೇಹದ ಮೂಳೆಗಳು ಶಿವನ ಸಂಬಂಧದಿಂದ ಮುಂದೆ ತಮ್ಮ ತಮ್ಮ ಹ
ರಿಬ್ರಹ್ಮಪದವಿಗಳ ಪ್ರಾಪ್ತಿಗೆ ಕಾರಣಗಳಾಗುವುದಿಲ್ಲವೆ! ಈ ಕಾರಣದಿಂದ ಭೂಮಿಯ

ತ್ರ್ಗಾಂಯೋಗ್ಯಾನೀತಿವದೇಶ್ವ್ಯಣು ॥೧೪॥ ಪುರಾಹತ್ವಾಹಿರಣ್ಯಾಕ್ಷಂ ಪ್ರಮತ್ತಮತಿಗರ್ವಿತಮ್ । ನೃಸಿಹ್ಮಂವೀಕ್ಷ್ಯ ಶರಭಮೂರ್ತಿಸ್ಸಮುಪ ಮರ್ದ್ಯತಮ್ ॥೧೫॥ ಕೃತ್ತಿಮಾದಾಯಚತತೋವ್ಯಾಘ್ರರೂಪಂಮಹಾಸು ರಮ್ । ಹತ್ವಾತಚ್ಛರ್ಮಸಜ್ಜಗೃಹ್ಯೇಪ್ರನರಸ್ಯಗ್ರವಿಗ್ರಹಮ್ ॥೧೬॥ ಲೋಕ ಸಂಹಾರಕಂಭೀಮಂಹರಿಬ್ರಹ್ಮಾದಿದುಸ್ಸಹಮ್ । ಗಜಾಸುರಂಪ್ರಕುಪಿತ ಸ್ಸಂಹತ್ವಾದಾಯಚರ್ಮಚ ॥೧೭॥ ಪಲಾಯಮಾನೇಪದ್ಮಾಕ್ಷೇಮೃಗರೂ ಪೇಣತಚ್ಛಿರಃ । ಛಿತ್ವಾಬಾಣೇನತತ್ಕೃತ್ತಿಮಾದಾಯಶ್ರೀಮಹೇಶ್ವರಃ ॥ ಚಕ್ರೇಸವ್ಯಾನಕಂಚೋಲಂಪೀಠಂವಾಸೋಯಥೋಚಿತಮ್। ಮಹಿಮೋ ನ್ನತಿರೇವೈಷಾ ಕಿಮುನಿನ್ದಾಮಹೇಶಿತುಃ　　　　॥೧೮॥

ಇತ್ಯಸಂಖ್ಯಾತ............ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಣ್ಡಿತಾರಾಧ್ಯಚರಿತೇ ಪಾದಪ್ರಕರಣೇ ಹರಿಬ್ರಹ್ಮಕಪಾ ಲಾಸ್ಥಿಮಾಲಾಧಾರಣ ನೃಸಿಂಹಾದಿ ಚರ್ಮಧಾರಣ ಕಥನಂನಾಮ ತ್ರಯೋದಶೋಽಧ್ಯಾಯಃ.

---

ಲ್ಲಿ ಶಿವನಿಗೆ ಆ ಅಸ್ಥಿಧಾರಣವು ಹೇಗೆ ವಿಕಾರವಾದೀತು ? ಮತ್ತೂ ಚರ್ಮಗಳನ್ನು ಶಿವ ನು ಧರಿಸಿಕೊಳ್ಳುವುದು ಯೋಗ್ಯವೆ ? ಎಂದು ಹೇಳುತ್ತೀಯೇನೊ ? ಹಾಗಾದರೆ, ಕೇ ಳು, ॥೧೪॥ ಪೂರ್ವದಲ್ಲಿ ಹಿರಣ್ಯಾಕ್ಷನೆಂಬ ದೈತ್ಯನನ್ನು ಕೊಂದು ಅತ್ಯಂತ ಮದವೇರಿ ಕೊಬ್ಬಿದ್ದ ನೃಸಿಂಹನನ್ನು ಶರಭೇಶ್ವರನು ನೋಡಿ, ಅವನನ್ನು ಚೆನ್ನಾಗಿ ಗುದ್ದಿ, ಕೊಂದು, ಅವನ ಚರ್ಮವನ್ನು ಸುಲಿದು ತೆಗೆದುಕೊಂಡು, ಬಳಿಕ ವ್ಯಾಘ್ರಸ್ವರೂಪ ದ ಮಹಾದೈತ್ಯನನ್ನು ಕೊಂದು ಅವನ ಚರ್ಮವನ್ನು ತೆಗೆದುಕೊಂಡು, ಮತ್ತೆ ಭೀಕ ರನೂ-ಲೋಕಸಂಹಾರಕನೂ-ವಿಷ್ಣುಬ್ರಹ್ಮಾದಿಗಳಿಂದಲೂ ತಾಳಲಶಕ್ಯನೂ ಆಗಿ ದ್ದ ಗಜಾಸುರನನ್ನು ಶಿವನು ಕೋಪಗೊಂಡವನಾಗಿ ಕೊಂದು, ಅವನ ಚರ್ಮವನ್ನು ಸುಲಿದು ತಂದು ॥೧೭॥ ಮತ್ತೂ ದಕ್ಷಯಾಗದಲ್ಲಿ ವಿಷ್ಣುವು ಹುಲ್ಲೆಯ ರೂಪದಿಂದ ಓಡಿಹೋಗುತ್ತಿರಲು, ರುದ್ರನು ಬಾಣದಿಂದ ಕತ್ತನ್ನು ಛೇದಿಸಿ, ಅವರ ತೊಗಲನ್ನು ತೆಗೆದುಕೊಂಡು॥೧೮॥ ಅವುಗಳನ್ನು ತನ್ನಿಷ್ಟಬಂದಂತೆ ಹೊದಿಕೆಯನ್ನಾಗಿಯೂ,ಅಂಗಿ ಯನ್ನಾಗಿಯೂ, ಗದ್ದುಗೆಯನ್ನಾಗಿಯೂ ಮಾಡಿಕೊಂಡನು. ಇವೆಲ್ಲವೂ ಶಿವನಿಗೆ ಮ ಹತ್ವಸಿದ್ಧಕವೇ ಹೊರತು ನಿಂದಾಸ್ಪದವಾಗುವುದೆ ?　　　　॥೧೮॥

ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಪಾದಪ್ರಕರಣದಲ್ಲಿ ೧೩ ನೆಯ ಅಧ್ಯಾಯವು ಮುಗಿದುದು.

## ಅಥ ಚತುರ್ದಶೋಽಧ್ಯಾಯಃ.

(ಅರ್ಧನಾರೀಶ್ವರತ್ವಕಥನಂ.)

ಕಿಂಚಾರ್ಧನಾರೀವಪುಷೋಪಿಭೂತಾಕೀದೃಶೀತಿಚೇತ್ ।ಸಮಾಕರ್ಣಯಸಮ್ಯಕ್ತ್ವಂವದಾಮಿಸ್ಫುಟಮುತ್ತರಮ್ ॥೧॥ ಪೂರ್ವಂದಕ್ಷಸುತಾಗೌರೀಸ್ವತಾತೇಪರಮೇಶ್ವರಮ್ । ವಿನಿಂದತ್ಯವಿವೇಕೇನಸ್ವದೇಹಮತಿನಿಷ್ಠಯಾ ॥೨॥ ಆತ್ಮಾಗ್ನೇರಾಹುತಿಂಕೃತ್ವಾಹರವಾಮಾರ್ಧಸಂಸ್ಥಿತಿಮ್ ಅವಾಪಪರಮಾಂಪಶ್ಚಾದವಿನಾಭಾವಲೀಲಯಾ ॥೩॥ ಅರ್ಧನಾರೀಶ್ವರಇತಿತಸ್ಮಾದಾಖ್ಯಾಯತೇಶಿವಃ । ಕಿಂಚಕಾತ್ಯಾಯನೀಮಾತಾಪಿತಾದೇವೋಮಹೇಶ್ವರಃ ॥ ಇತ್ಯಸೇವಂತಮುರಜಿದ್ಬ್ರಹ್ಮಮುಖ್ಯಸುರಾಸುರಾಃ । ಜ್ಞೇಯೌತತಶ್ಚಪಿತರೌಪಾರ್ವತೀಪರಮೇಶ್ವರೌ ॥೪॥ ಕಿಂಚಕಾಣ್ವಶಾಖಾಯಾಮುದಿತಾಲ್ಲೋಕವಿಶ್ರುತಂ । ಸಪತಿಶ್ಚಸಪತ್ನೀಚೇತ್ಯೇತಸ್ಮಾದ್ವಚನಾದಪಿ ॥೬॥ ನಿಜೈಕಲಿಙ್ಗನಿಷ್ಠಾನಾಂಸದ್ವೀರವ್ರತಶಾಲಿನಾಂ । ಶ್ರೀವೀರಮಾಹೇಶ್ವರಾಣಾಂಕೃಪಯಾಪರಮೇಶ್ವರಃ॥೭॥ಅರ್ಧನಾರೀವಪುರ್ಮಾತಾ

---

## ೧೪ ನೆಯ ಅಧ್ಯಾಯವು.

(ಅರ್ಧನಾರೀಶ್ವರ ಲೀಲಾಕಥವು.)

ಮತ್ತೂ ಅರ್ಧಸ್ತ್ರೀಶರೀರನಾದ ಶಿವನಿಗೆ ಸರ್ವವ್ಯಾಪೀಶ್ವರತ್ವವು ಹೇಗೆ ಸಮನಿಸುವುದು? ಎಂದು ಪ್ರಶ್ನೆಮಾಡುವೆಯಾದರೆ, ಚೆನ್ನಾಗಿ ಕೇಳು-ಸ್ಪಷ್ಟವಾದ ಉತ್ತರವನ್ನು ಹೇಳುತ್ತೇನೆ ॥೧॥ ಪೂರ್ವದಲ್ಲಿ ದಕ್ಷಬ್ರಹ್ಮನ ಮಗಳಾದ ಗೌರಿಯು, ಶಿವನನ್ನು ತನ್ನ ತಂದೆಯು ಅವಿವೇಕದಿಂದ ನಿಂದಿಸಲಾಗಿ, ಅದನ್ನು ಕೇಳಲಾರದೆ ಪತಿಯಲ್ಲಿದ್ದ ಅತ್ಯಂತಭಕ್ತಿಯಿಂದ ತನ್ನ ದೇಹವನ್ನು ಆತ್ಮಾಗ್ನಿಯಲ್ಲಿ ಆಹುತಿಯನ್ನಾಗಿ ಮಾಡಿ, ಬಳಿಕ ತಪಸ್ಸನ್ನಾಚರಿಸಿ, ಯಾವಾಗಲೂ ಶಿವನನ್ನಗಲದೆ ಅವನ ಎಡಗಡೆಯ ಅರ್ಧದೇಹವಾಗಿಯೇ ಇರುವ ಸ್ಥಿತಿಯನ್ನು ಪಡೆದುಕೊಂಡಳು ॥೩॥ ಅದರಿಂದ ಶಿವನು ಅರ್ಧನಾರೀಶ್ವರನೆಂದು ಕರೆಯಲ್ಪಡುತ್ತಾನೆ. ಮತ್ತೂ ವಿಷ್ಣುಬ್ರಹ್ಮಾದಿ ದೇವತೆಗಳೂ ರಾಕ್ಷಸರೂ ಸಹ ಪಾರ್ವತಿಯೇ ತಾಯಿ, ಪರಮೇಶ್ವರನೇ ತಂದೆಯೆಂದು ಅವರನ್ನು ಸೇವಿಸಿದರು. ಅದುಕಾರಣದಿಂದ ಪಾರ್ವತೀಪರಮೇಶ್ವರರು ತಾಯಿತಂದೆಗಳೆಂದು ತಿಳಿಯಲ್ಪಡತಕ್ಕವರಾಗಿದ್ದಾರೆ ॥೪॥ ಮತ್ತೂ ಕಾಂಡವಶಾಖೆಯಲ್ಲಿ ಲೋಕಪ್ರಸಿದ್ಧವಾಗಿ ಹೇಳಲ್ಪಟ್ಟಿರುವ „ ಅವನು ಪತಿಯೂ ಪತ್ನಿಯೂ ಆಗಿದ್ದಾನೆ" ಎಂಬ ವಚನದಿಂದಲೂ ಸಹ ॥೬॥ ತಮ್ಮ ಇಷ್ಟಲಿಂಗವೊಂದರಲ್ಲೇ ನಿಷ್ಠೆಯುಳ್ಳ ವೀರಶೈವವ್ರತಸಂಪನ್ನ

ಪಿತಾಽಭೂತ್ಸ್ವಯಮೇವಹಿ। ಕಿಂಚವ್ಯಾಸಾಷ್ಟಕೇಸರ್ವಸಂಮತೇಲೋಕವಿಶ್ರುತೇ ॥೮॥ ನವಜ್ರಚಕ್ರಾಂಕಸರೋರುಹಾಙ್ಕಮಿತಿವಾದಿನಿ। ಕಙ್ಕಣಸ್ಯಕರಸ್ಥಸ್ಯದರ್ಶನೇದರ್ಪಣೇನಕಿಮ್॥ ಶಿವಶಕ್ತ್ಯಾತ್ಮಕಮಿದಂಭುವನಂಸಚರಾಚರಮ್। ವ್ಯಾಸಹಸ್ತೇನಸಾಕ್ಷೀಕಿಮೇತಸ್ಯಾರ್ಥಸ್ಯಭೂತಲೇ॥ ಏತತ್ಸ್ಪಷ್ಟಾಙ್ಕಮನ್ಯತ್ರಾಪಿಕಿಂನಪಶ್ಯಂತಿಸರ್ವತಃ। ತಸ್ಮಾದ್ಧಿವೋಽರ್ಧನಾರೀವಪುಸ್ತ್ವಂಗರ್ಹಿತಂಕಿಮು ॥೧೧॥

ಇತ್ಯಸಂಖ್ಯಾತ............ಶ್ರೀವೀರಶೈವಮತಾಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಣ್ಡಿತಾರಾಧ್ಯಚರಿತ್ರೇ ವಾದಪ್ರಕರಣೇ ಪರಮೇಶ್ವರಸ್ಯಾರ್ಧನಾರೀಶ್ವರತ್ವಕಥನಂ ನಾಮ ಚತುರ್ದಶೋಽಧ್ಯಾಯಃ.

---

ರಾದ ಮಾಹೇಶ್ವರರಿಗೆ ಪರಮೇಶ್ವರನು ಕೃಪೆಯಿಂದ ತಾನೇ ತಾಯಿಯೂ ತಂದೆಯೂ ಆದನು. ಈ ಕಾರಣದಿಂದಲೂ ಅವನು ಅರ್ಧನಾರೀಶರೀರನಾದನು. ಮತ್ತೂ ಲೋಕಪ್ರಸಿದ್ಧವಾಗಿಯೂ ಸರ್ವಸಮ್ಮತವಾಗಿಯೂ ಇರುವ ವ್ಯಾಸಾಷ್ಟಕವೆಂಬ ಶಿವಸ್ತೋತ್ರವು ॥೮॥ "ಜಗತ್ತು ವಜ್ರಾಂಕಿತವಾಗಿಯೂ ಇಲ್ಲ, ಚಕ್ರಾಂಕಿತವಾಗಿಯೂ ಇಲ್ಲ, ಕಮಲಾಂಕಿತವಾಗಿಯೂ ಇಲ್ಲ" ಎಂದು ಹೇಳುತ್ತಿರಲು, ಕೈಯ ಕಂಕಣವನ್ನು ನೋಡುವುದಕ್ಕೆ ಕನ್ನಡಿಯೇತಕ್ಕೆ? ॥೯॥ ಈ ಚರಾಚರಾತ್ಮಕಪ್ರಪಂಚವೆಲ್ಲವೂ ಶಿವಶಕ್ತ್ಯಾತ್ಮಕವಾಗಿರುವುದು. ಈ ಅರ್ಥವನ್ನು ಸತ್ಯವೆಂದು ನಿರೂಪಿಸುವುದಕ್ಕೆ ಭೂತಲದಲ್ಲಿ ವ್ಯಾಸನ ತೋಳೇ ಸಾಕ್ಷಿಯಲ್ಲವೆ? ॥೧೦॥ ಮತ್ತೂ ಜಗತ್ತೆಲ್ಲವೂ ಲಿಂಗಾಂಕಭಗಾಂಕವಾಗಿ ಶಿವಶಕ್ತ್ಯಾತ್ಮಕವಾಗಿರುವುದನ್ನು ನೀವುಗಳು ಸಹ ಕಾಣಿರಾ? ಅದು ಕಾರಣ, ಪರಶಿವನಿಗೆ ಅರ್ಧನಾರೀಶರೀರವಿರುವುದು ನಿಂದ್ಯವಾದುದೆ? ಎಂದಿಗೂ ಅಲ್ಲ.

ಎಂದು ಶ್ರೀಮತ್ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರದ ವಾದಪ್ರಕರಣದೊಳಗೆ ಅರ್ಧನಾರೀಶ್ವರ ಲೀಲಾನಿರೂಪಣವಂ ಮಾಡುವ ೧೪ ನೆಯ ಅಧ್ಯಾಯವು ಮುಗಿದುದು.

## ಅಥ ಪಂಚದಶೋಽಧ್ಯಾಯಃ

### (ಭಿಕ್ಷಾಟನಲೀಲಾಕಥನಂ)

ತ್ರ್ಯಕ್ಷೋಭಿಕ್ಷಾಟನಂಚಕ್ರೇಕಿಂಜಗತ್ತ್ರಯರಕ್ಷಕಃ । ಮಹಾದೇವಃಪಶುಪತಿರಿತಿಪೃಚ್ಛಸಿಚೇಚ್ಛೃಣು ॥೧॥ ಅಹಂಕರ್ತಾಹ್ಯಹಂಕರ್ತೇತ್ಯಬ್ಜಸಂಭವಕೇಶವೌ। ಗರ್ವಿತೌಭವತಸ್ತಾಭ್ಯಾಂಸ್ವಮಾಹಾತ್ಮ್ಯಂಮಹೇಶ್ವರಃ ॥೨॥ ಸಂದರ್ಶಯಿತುಕಾಮಸ್ಸಚಿಚ್ಛೇದಬ್ರಹ್ಮಣಶ್ಶಿರಃ । ಬ್ರಹ್ಮಾಪಿನತ್ವಾಸದ್ಭಕ್ತ್ಯಾಸ್ತುವನ್ಸೋಮಾಷ್ಟಕೇನತಮ್ ॥೩॥ ಉವಾಚೇದಂವಚೋಗರ್ವಂಮುಕ್ತ್ವಾಶಂಭುಮಹತ್ತ್ವತಃ।ಬ್ರಹ್ಮತ್ವವರದಬ್ರಹ್ಮಶಿರಃಖಂಡನಪಂಡಿತ ॥೪॥ ಬ್ರಹ್ಮೇಶಶ್ರೀಪತಿಬ್ರಹ್ಮಸ್ವರೂಪಹರಶಂಕರ। ಪತಿತೇಮತ್ಕಪಾಲೇಽಸ್ಯಾಂಕ್ಷಿತೌಭಸ್ಮೀಕೃತಾಃಕ್ಷಣಾತ್ ॥೫॥ ಭವನ್ತಿ

---

## ೧೫ನೆಯ ಅಧ್ಯಾಯವು.

### (ಭಿಕ್ಷಾಟನ ಲೀಲಾಕಥನವು.)

ಮುಕ್ಕಣ್ಣನಾದ ಶಿವನು ತ್ರಿಲೋಕಪಾಲಕನೂ ದೇವೋತ್ತಮನೂ ಆಗಿದ್ದರೆ, ಭಿಕ್ಷಾಟನವನ್ನೇತಕ್ಕೆ ಮಾಡಿದನು? ಎಂದು ಕೇಳುವೆಯಾದರೆ ಉತ್ತರವನ್ನು ಹೇಳುತ್ತೇನೆ ಲಾಲಿಸು. ॥೧॥ ಬ್ರಹ್ಮವಿಷ್ಣುಗಳಿಬ್ಬರೂ ಗರ್ವಿತರಾಗಿ "ನಾನು ಲೋಕಕರ್ತ; ನಾನು ಲೋಕಕರ್ತ"ನೆಂದು ವಾಗ್ವಾದ ಮಾಡುತ್ತಿದ್ದರು. ಆಗ ಪರಶಿವನು ಅವರಿಗೆ ತನ್ನ ಮಹತ್ವವನ್ನು ತೋರ್ಪಡಿಸಬೇಕೆಂದಿಚ್ಛೈಸಿದವನಾಗಿ, ಬ್ರಹ್ಮನಶಿರಸ್ಸನ್ನು ಕತ್ತರಿಸಿಬಿಟ್ಟನು. ಬ್ರಹ್ಮನಾದರೂ ಶಿವನಪ್ರಭಾವದಿಂದ ತನ್ನ ಹಂಕಾರವನ್ನು ಬಿಟ್ಟು, ಉತ್ತಮಭಕ್ತಿಯಿಂದ ಆತನನ್ನು ನಮಸ್ಕರಿಸಿ, ಸೋಮಾಷ್ಟಕವೆಂಬ ಸ್ತುತಿಪದ್ಯಗಳಿಂದ ಸ್ತೋತ್ರಮಾಡಿ ಈ ಮುಂದೆ ಹೇಳುವಂತೆ ನುಡಿದನು. ಎಲೈ ಬ್ರಹ್ಮತ್ವವರವನ್ನು ದಯಪಾಲಿಸಿದವನೆ, ಬ್ರಹ್ಮಶಿರಸ್ಸನ್ನು ಛೇದಿಸುವುದರಲ್ಲಿ ಕುಶಲನಾದವನೆ ॥೪॥ ಬ್ರಹ್ಮನಿಗೆ ಅಧಿಪತಿಯಾದವನೆ, ವಿಷ್ಣುಬ್ರಹ್ಮ ಸ್ವರೂಪನಾದವನೆ, ಸಂಸಾರನಾಶಕನೆ, ಭಕ್ತಸುಖಂಕರನಾದ ಸ್ವಾಮಿಯೆ, ಈ ಕತ್ತರಿಸಲ್ಪಟ್ಟಿರುವ ನನ್ನ ತಲೆಬುರುಡೆಯು ಈ ಭೂಮಿಯಮೇಲೆ ಬಿದ್ದುದೇ ಆದರೆ ಕ್ಷಣಮಾತ್ರದಲ್ಲಿ ಲೋಕಗಳೆಲ್ಲವೂ ಸುಟ್ಟು ಬೂದಿಯಾಗುವುವು. ಅದುಕಾರಣ, ಎಲೈ ಮಹೇಶ್ವರನೆ, ಇದನ್ನು ಕೈಯಲ್ಲೇ ಹಿಡಿದುಕೊಂಡು, ಪ್ರಪಂಚವ

ಲೋಕಾಸ್ತದ್ಧೃತ್ವಾ ವರಕ್ಷಲೋಕಾನ್ಮಹೇಶ್ವರ। ಇತಿವಿಜ್ಞಾಪಿತೇಧಾತ್ರಾತ ಥೇತಿವೃಷಭಧ್ವಜಃ ॥೬॥ ತತ್ಕಪಾಲಂಕರೇಧೃತ್ವಾವಿಷ್ಣುಲೋಕಮ ಥಾಗಮತ್ । ತಾಸ್ಸಾಕುಲೇಷುಸಕಲಸುರಸಂಘೇಷುಕೋಪತಃ ॥೭॥ ವಿಷ್ವಕ್ಸೇನಂವಿನಿರ್ಭಿದ್ಯಶೂಲಪ್ರೋತಮಥಾಕರೋತ್। ತತಸ್ಸ್ವಭಾಲಂ ನಿರ್ಭಿದ್ಯವೈಕುಂಠೇನಸಮರ್ಪಿತಾಮ್ ॥೮॥ ರಕ್ತಧಾರಾಂಸಮಾಪೂರ್ಯ ತತ್ರಬ್ರಹ್ಮಕಪಾಲಕೇ । ಗರ್ವಿತಾನಾಂವಿಪದಿಯಮಿತಿಸಂದರ್ಶಯನ್ನಿವ ॥ ಜೃಂಭೇತಿಧಿಕ ಸಂರಂಭಶ್ಶಂಭುರ್ಗಾಂಭೀರ್ಯಗುಂಭಿತಃ। ವೃತ್ಯುದೇವ ತಯಾಸಾಕಂಸಾಶ್ಚರ್ಯಂಸಕಲಾಸ್ಸುರಾಃ ॥೧೦॥ ದೃಷ್ಟ್ವಾತಾಂಮೂರ್ತಿ ಮಿತ್ಯುಚ್ಚೈಃ ಕೀರ್ತಯಾಮಾಸುರಾದರಾತ್ । ದೇವದೇವಮಹಾದೇವಜ ಯಶರ್ವಶಿವಾಕ್ಷಯ ॥೧೧॥ ಕಂದರ್ಪದರ್ಪಸಂಹಾರಭುವನತ್ರಯರಕ್ಷ ಕ । ಪದ್ಮಾಸನಶಿರೋಹಾರದಾವಾಗ್ನಿಕ್ಷಮಿತಾಂತಕ ॥೧೨॥ ಹರಾಭವ ಮುಕುಂದಾಸ್ಥಿದಾಮಾಂಕಭವತೇನಮಃ । ವಿಷ್ಣುಸಂಜ್ಞಾಹ್ಯಸಂಖ್ಯಾತಾ

---

ನ್ನು ಪರಿಪಾಲಿಸು, ಎಂದುಬ್ರಹ್ಮನು ವಿಜ್ಞಾಪಿಸಿಕೊಳ್ಳಲಾಗಿ, ವೃಷಭಧ್ವಜನಾದ ಶಿವನು ಹಾಗೇ ಆಗಲೆಂದು ಹೇಳಿ॥೬॥ ಅವನ ತಲೆಬುರುಡೆಯನ್ನು ಕೈಯಲ್ಲಿ ಹಿಡಿದು, ಬಳಿಕ ವಿಷ್ಣುಲೋಕಕ್ಕೆ ಹೋದನು. ಅಲ್ಲಿದ್ದ ದೇವತಾಸ್ತೋಮವೆಲ್ಲವೂ ಶಿವನನ್ನು ನೋಡಿ ಭಯಾಕ್ರಾಂತರಾಗಲಾಗಿ, ದ್ವಾರಪಾಲಕನಾಗಿದ್ದ ತನ್ನನ್ನು ತಡೆದ ವಿಷ್ವಕ್ಸೇನನನ್ನು ಶಿವನು ಶೂಲದಿಂದಿರಿದು, ಅವರಲ್ಲೇ ಅವನ ದೇಹವನ್ನು ಸಿಕ್ಕಿಸಿಕೊಂಡನು. ಅ ಷ್ಟರಲ್ಲಿ ಬಂದ ವಿಷ್ಣುವು ಶಿವನ ಭಿಕ್ಷಾಟನಲೀಲೆಯನ್ನು ಕಂಡು, ತನ್ನ ಹಣೆಯನ್ನು ಸೀಳಿ, ಅಲ್ಲಿಂದ ಸುರಿಸಿದ ರಕ್ತಧಾರೆಯನ್ನು ಬ್ರಹ್ಮಕಪಾಲದಲ್ಲಿ ತುಂಬಿಕೊಂಡು ಗರ್ವಪಟ್ಟವರಿಗೆಲ್ಲಾ ಇದೇ ವಿಪತ್ತು ಒದಗುವುದೆಂಬುದನ್ನು ಆ ಬ್ರಹ್ಮಕಪಾಲದ ಮೂ ಲಕ ತೋರಿಸುವನೋ ಎಂಬಂತೆ ಶಿವನು ಒಪ್ಪಿ, ಗಾಂಭೀರ್ಯದಿಂದಲೂ ಬಲುಸಡ ಗರದಿಂದಲೂ ಕೂಡಿ ವಿಜೃಂಭಿಸಿದನು. ಆಗ ಸಕಲದೇವತೆಗಳೂ ವೃತ್ಯುದೇವತೆ ಯೊಡನೆ ಕೂಡಿಬಂದು, ಪರಶಿವನ ಆ ಲೀಲಾಮೂರ್ತಿಯನ್ನು ಕಂಡು ಆಶ್ಚರ್ಯಯುಕ್ತ ರಾಗಿ॥೧೦॥ಪ್ರೀತಿಯಿಂದ ಈ ಮುಂದೆ ಹೇಳುವಂತೆ ಹೊಗಳುವವರಾದರು. "ಎಲೈ ದೇವಾಧಿದೇವನೆ, ಪ್ರಳಯಕಾಲದಲ್ಲಿ ಸರ್ವವನ್ನೂ ನಾಶಗೊಳಿಸುವವನೆ, ಕಲ್ಯಾಣಸ್ವ ರೂಪನೆ, ನಾಶರಹಿತನೆ ॥೧೧॥ ಮನ್ಮಥನ ಅಹಂಕಾರವನ್ನಳಿಸಿದವನೆ, ತ್ರಿಲೋಕಸಂ ರಕ್ಷಕನೆ, ಬ್ರಹ್ಮರುಗಳ ತಲೆಬುರುಡೆಗಳೇ ಹಾರವಾಗುಳ್ಳವನೆ, ಭಯಂಕರವಾದ ಅಗ್ನಿ ನೇತ್ರವುಳ್ಳವನೆ, ಪಾಪನಾಶಕನೆ॥೧೨॥ ಜನನಮರಣವಿನಾಶಕನೆ, ಉತ್ಪತ್ತಿಯಿಲ್ಲದವನೆ, ವಿಷ್ಣುವಿನ ಮೂಳೆಗಳ ಮಾಲಿಕೆಯನ್ನು ಧರಿಸಿದವನೆ,ಸಕಲಪ್ರಾಣಿಗಳುತ್ಪತ್ತಿಗೆ ಮೂ

ಹ್ಯಸಂಖ್ಯಾತಾಃಪಿತಾಮಹಾಃ ॥೧೩॥ ಇತಿಪೌರಾಣವಚನಾದ್ಬ್ರಹ್ಮಾ
ಣಶ್ಚದಿನೇದಿನೇ । ಇತ್ಯುಕ್ತೇಃಪ್ರಳಯೇಽಸಿನಸ್ನಬ್ರಹ್ಮಬ್ರಾಹ್ಮಣಸಂಹೃ
ತಾ ॥೧೪॥ ಕಲಾಧರಕಲಾಮೌಳೇಕಾಹತ್ಯಾತ್ವಮುಪಾಶ್ರಿತಾ । ಪುತ್ರಿ
ಕಾಕಾಮ.ಕಾಂಭೋಜಭವಸಂಹರಣೇತಥಾ ॥೧೫॥ ದಕ್ಷಮಸ್ತಕವಿ
ಧ್ವಂಸೇಃಹತ್ಯಾಕಿಂತ್ವಾಂಸಮಾಗತಾ । ನಿತ್ಯಸ್ವತಂತ್ರವಿಗತಬ್ರಹ್ಮಹತ್ಯಾ
ದಿಪಾತಕ ॥೧೬॥ ವಿಪರೀತಾಮಿಮಾಂಮೂರ್ತಿಂವರ್ಜಯಾದ್ಯದಯಾನಿ
ಧೇ। ಭಾಗೀರಥ್ಯಾಂಬಹುತರೇಮೃತೇಪ್ರಾಣಿಕದಂಬಕೇ ॥೧೭॥ ತತ್ಪ್ರಾ
ಣಿಹನನಾಯಾತಹತ್ಯಾಽಸ್ಯಾವಿದ್ಯತೇಕಿಮು । ದವಾಗ್ನಿನಾಹತೇವಿಪ್ರೇಽಪ
ತ್ಯಾಽಗ್ನೇಃಕಿಮುವಿದ್ಯತೇ ॥೧೮॥ ಕಿಮಿವಾಭಾತಿಸೇಚಾನಾಂನಜಾನೇ
ಮೋದೃಶಾಂವಮುಮ್ । ಕೃಪಾನಿಧೇಜಗನ್ನಾಥಸಕಲಾದ್ವೈತಶಂಕರ ॥
ಇತಿಸಂಪ್ರಾರ್ಥ್ಯಮಾನಾಸುಃಪ್ರಣಿಪತ್ಯಾಖಿಲಾಸ್ಸುರಾಃ । ಏತದ್ಭಿಕ್ಷಾಟ

---

ಲನಾದವನೆ, ನಿನಗೆ ನಮಸ್ಕಾರ, ನೀನು ಸರ್ವೋತ್ಕೃಷ್ಟನಾಗು. “ಲೆಕ್ಕವಿಲ್ಲದ
ಷ್ಟು ವಿಷ್ಣುಗಳೂ, ಗಣನೆಯಿಲ್ಲದಷ್ಟು ಬ್ರಹ್ಮರೂ॥೧೩॥ಪ್ರಳಯಕಾಲಗಳಲ್ಲಿ ಶಿವನಿಂದ
ಸಂಹರಿಸಲ್ಪಟ್ಟಿರುವರು” ಎಂಬ ಪುರಾಣವಚನದಿಂದಲೂ, “ಪ್ರತಿದಿನವೂ ಎಷ್ಟೋ
ಬ್ರಹ್ಮರುಗಳು ಸಂಹೃತರಾಗುವರು” ಎಂಬ ಪುರಾಣೋಕ್ತಿಯಿಂದಲೂ ಸಹ ನಿನ್ನಿಂದ
ಅಪರಿಮಿತಬ್ರಹ್ಮರ ಮತ್ತೂ ಬ್ರಾಹ್ಮಣರುಗಳ ಸಂಹರಣವು ಮಾಡಲ್ಪಟ್ಟಿದ್ದರೂ॥೧೪
ಎಲೈ ಚಂದ್ರಕಲಾಶೇಖರನೆ, ಆಗಲ್ಲಿ ನಿನಗೆ ಯಾವ ಬ್ರಹ್ಮಹತ್ಯಾದೋಷವು ಪ್ರಾಪ್ತ
ವಾಗಿದ್ದಿತು ? ಮತ್ತೂ ಬ್ರಹ್ಮನು ತನ್ನಿಂದ ಸೃಷ್ಟಿಸಲ್ಪಟ್ಟು ತನಗೆ ಮಗಳಾಗಿದ್ದ ಸ
ರಸ್ವತಿಯನ್ನೇ ಕಾಮಿಸಿ ಅಟ್ಟಿಕೊಂಡು ಹೋಗುತ್ತಿದ್ದಾಗ, ಅವನನ್ನು ನೀನು ಸಂಹ
ರಿಸಿದಾಗಲೂ ॥೧೫॥ ದಕ್ಷಬ್ರಹ್ಮನ ಶಿರಸ್ಸನ್ನು ನೀನು ಛೇದಿಸಿದಾಗಲೂ ನಿನಗೆ ಬ್ರಹ್ಮ
ಹತ್ಯೆಯು ಪ್ರಾಪ್ತವಾಯಿತೆ ? ಯಾವಾಗಲೂ ಪರವಸ್ವತಂತ್ರನಾದ ಎಲೈ ಪರಶಿವನೆ!
ಬ್ರಹ್ಮಹತ್ಯಾದಿಪಾತಕಗಳೊಂದೂಹೊದ್ದದವನೆ! ॥೧೬॥ಎಲೈ ಕೃಪಾನಿಧಿಯೇ! ವಿಪ
ರೀತವಾಗಿರುವ ಈ ರೂಪವನ್ನು ಪರಿತ್ಯಜಿಸು. ಗಂಗೆಯಲ್ಲಿ ಬಿದ್ದು ಬಹು ಪ್ರಾಣಿಗಳು
ಸತ್ತರೆ ॥೧೭॥ ಆ ಪ್ರಾಣಿಗಳನ್ನೆಲ್ಲಾ ಕೊಂದ ಪಾಪವು ಗಂಗೆಗೆ ಉಂಟಾಗುವುದೇನು?
ಕಾಳ್ಕಿಚ್ಚಿನಿಂದ ಬ್ರಾಹ್ಮಣನು ಸುಟ್ಟುಹೋದರೆ ಆ ಬ್ರಹ್ಮಹತ್ಯೆಯು ಅಗ್ನಿಗಿರುವುದೇ
ನು ? ॥೧೮॥ ನೀಚರ ಕಣ್ಣಿಗೆ ನಿನ್ನ ಕಾರ್ಯವು ಹೇಗೆತೋರುವುದೋ ನಾವು ಕಾಣೆವು.
ದಯಾನಿಧಿಯೇ, ತ್ರಿಜಗತ್ಸ್ವಾಮಿಯೆ, ಸಕಲ ಚರಾಚರವಸ್ತುಗಳ ಸ್ವರೂಪನಾಗಿ ಅ
ಭಿನ್ನಭಾವದಿಂದಿರುವನೆ, ಲೋಕಸುಖಂಕರನೆ” ಎಂದು ಹೊಗಳುತ್ತ ಸಕಲ ದೇವತೆಗ
ಳೂ ನಮಸ್ಕರಿಸಿ, ಪ್ರಾರ್ಥನೆಮಾಡಿದರು. ಇದೇ ಭಿಕ್ಷಾಟನವು. ಇಂತಹ ಲೀಲಾಚರಣೆ

ನಂನಾಮಶಂಭೋರ್ನಿಂದ್ಯಂ ಕಿಮೀದೃಶಮ್ ॥೨೦॥ ವಿಶಾಲಸ್ಯಕಪಾಲಸ್ಯ
ನಾರ್ಧಮಪ್ಯಭಿಪೂರಿತಂ । ಇತಿಬ್ರಹ್ಮಾಂಡಾಭಿಧಾನಪುರಾಣವಚನಾ
ದ್ಯರಾತ್ ॥೨೧॥ ನಾರಾಯಣಲಲಾಟಾಸೃಗ್ಧಾರಯಾಸ್ರುತಯಾನಿಶಂ । ಆ
ದ್ವಿಪಂಚಯುಗಾತ್ಪಾತ್ರಂನಾರ್ಧಮಪ್ಯಭಿಪೂರಿತಮ್ ॥೨೨॥ ತಾದೃಙ್ಮ
ಹೇಶಪಾತ್ರಸ್ಯಕಿಂಭೈಕ್ಷಂವಿದ್ಯತೇತಥಾ । ಜಗಂತಿಯತ್ಕುಕ್ಷಿಕೋಣೇ
ಜಾತಾನಿನಪುನೇದತಾ ॥೨೩॥ ತತ್ತಸ್ಯೋದರಂಪೂರ್ತ್ಯೈಕೋವಾಭಿ
ಕ್ಷಾಂಪ್ರಯಚ್ಛತಿ । ಬ್ರಹ್ಮತ್ವಂಬ್ರಹ್ಮಣೋವಿಷ್ಣೋರ್ವಿಷ್ಣುತ್ವಂ
ಮರುತಾಂಪತೇಃ ॥೨೪॥ ಇಂದ್ರತ್ವಮದಿಶತ್ತಸ್ಯಕಿಂಭಿಕ್ಷಾಚರ್ಯಯಾಶಿ
ವ್ಯತೇ । ಹರಿಬ್ರಹ್ಮಮನೋಗರ್ವಭ್ರಂಶಾರ್ಥಮುಪಪಾದಿತಮ್ ॥೨೫॥
ಭಿಕ್ಷಾಟನಮಿದಂನಿಂದಾಕಿಂಮಹತ್ವಾಯಕೇವಲಮ್ । ಪರಂಬ್ರಹ್ಮಾ
ಹಮೇವೇತಿವದತೋಬ್ರಹ್ಮಣಶ್ಶಿರಃ ॥೨೬॥ ಅಹರತ್ಪಂಚಮಂತೇನಕಿಂ
ಹತ್ಯಾಘಮುಪೈತಿವಾ । ತನ್ನಿಗ್ರಹಾನುಗ್ರಹಯೋರಸತಾಂಚಸತಾಮಪಿ ॥
ಕರ್ತುಶ್ಶೋಃಕತ್ರಿಯಾಭರ್ತುಃಕೋದೋಷೋದುಷ್ಟಶಿಕ್ಷಣೇ ।

---

ರಾ ಶಿವನಿಗೆ ನಿಂದ್ಯವಾದುದೇನು? ॥೨೦॥ "ಈ ಭಿಕ್ಷಾಚರಣದಿಂದ ಶಿವನ ಕೈಯಲ್ಲಿ
ದ್ದ ಬ್ರಹ್ಮಕಪಾಲದಲ್ಲಿ ಅರ್ಧಭಾಗವೂ ತುಂಬಲಿಲ್ಲ" ವೆಂದು ಶ್ರೇಷ್ಠವಾದ ಬ್ರಹ್ಮಾಂಡ
ಪುರಾಣವಚನವಿರುವುದರಿಂದ, ೧೦ ಯುಗಗಳ ಕೊನೆಯವರೆಗೂ ಸಂತತಧಾರೆಯಾಗಿ
ಸುರಿದ ವಿಷ್ಣುವಿನ ಹಣೆಯ ರಕ್ತದಿಂದ ಆಭಿಕ್ಷಾಪಾತ್ರೆಯಲ್ಲಿ ಅರ್ಧಭಾಗವೂ ತುಂಬ
ಲಿಲ್ಲ ॥೨೨॥ ಅಂಥ ಮಹತ್ವದಿಂದ ಕೂಡಿದ ಶಿವನ ಕರಪಾತ್ರೆಗೆ ತಿರಿಪೆಯತನವಿರು
ವುದೇನು? ಯಾವನ ಹೊಟ್ಟೆಯ ಮೂಲೆಯಲ್ಲಿ ಜಗತ್ತುಗಳೆಲ್ಲವೂ ಹುಟ್ಟಿದುವೋ, ಆ
ದರೂ ಅಂತಪ್ಪ ಲೋಕವು ಯಾವನನ್ನು ಕಾಣದಿರುವುದೋ ॥೨೩॥ ಅಂಥ ಪರಮೇ
ಶ್ವರನ ಹೊಟ್ಟೆಯು ತುಂಬುವುದಕ್ಕೆ ಯಾವನು ಭಿಕ್ಷವನ್ನು ಕೊಡುವನು? ಯಾವ
ನು ಬ್ರಹ್ಮನಿಗೆ ಬ್ರಹ್ಮತ್ವವನ್ನೂ, ವಿಷ್ಣುವಿಗೆ ವಿಷ್ಣುತ್ವವನ್ನೂ, ದೇವಪತಿಯಾದ
ಇಂದ್ರನಿಗೆ ಇಂದ್ರತ್ವವನ್ನೂ ಕೊಟ್ಟನೋ, ಅಂಥ ಮಹೇಶ್ವರನಿಗೆ ಈ ತಿರಿಪೆಯಿಂದ
ಆಗುವುದೇನು? ವಿಷ್ಣು ಬ್ರಹ್ಮರ ಮನಸ್ಸಿನಲ್ಲಿ ತಾವು ಅಧಿಕರೆಂದು ಇದ್ದ ಗರ್ವವನ್ನು
ಹಾಳ್ಮಾಡುವುದಕ್ಕಾಗಿಯೇ ಈ ಭಿಕ್ಷಾಟನವೆಂಬುದನ್ನು ಶಿವನು ಆಚರಿಸಿದನು. ಇದು
ಆತನ ಮಹತ್ತ್ವಕ್ಕೆ ನಿದರ್ಶಕವೇ ಹೊರತು ನಿಂದಾಸ್ಪದವಾಗುವುದೆ! ॥೨೫॥ ನಾನೇ
ಬ್ರಹ್ಮನೆಂದು ಹೇಳಿಕೊಳ್ಳುತ್ತಿದ್ದ ಬ್ರಹ್ಮನ ಐದನೆಯ ತಲೆಯನ್ನು ಶಿವನು ತೆಗೆದು
ಬಿಟ್ಟನು. ಅದರಿಂದ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗುವುದೆ! ದುಷ್ಟರ ನಿಗ್ರ
ಹವನ್ನೂ ಶಿಷ್ಟರಪಾಲನೆಯನ್ನೂ ಮಾಡಲು ಕರ್ತೃವಾದವನೂ ತ್ರಿಲೋಕಸ್ವಾಮಿ
ಯೂ ಆದ ಆಪರಶಿವನು ದುಷ್ಟಶಿಕ್ಷಣೆಮಾಡಿದುದರಲ್ಲಿ ದೋಷವೇನುಂಟು? ॥೨೬॥

ಇತ್ಯಸಂಖ್ಯಾತ ಮಹಾಮಾಹೇಶ್ವರ........ಶ್ರೀವೀರಶೈವ ಮತಾ
ಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ ಮ
ಲ್ಲಿಕಾರ್ಜುನ ಪಣ್ಡಿತಾರಾಧ್ಯಚರಿತ್ರೇ ಪಾದಪ್ರಕರ
ಣೇ ಪರಮೇಶ್ವರಸ್ಯ ಭಿಕ್ಷಾಟನಕಥನಂ ನಾ
ಮ ಪಂಚದಶೋಽಧ್ಯಾಯಃ ||

## (ಅಥಷೋಡಶೋಽಧ್ಯಾಯಃ)

### (ಗಂಗಾಧಾರಣಲೀಲಾಕಥನಂ)

ಬಭ್ಯಾರಶಙ್ಕರೋಗಙ್ಗಾಂಕಿಮಿತ್ಯತ್ರೋತ್ತರಂಬ್ರುವೇ । ಅನವ
ದ್ಯಮಹಾಶೈವಪುರಾಣೋಕ್ತಿಪ್ರಸಿದ್ಧಿತಃ ||೧|| ಉದನ್ವತಿನಿಶಾನಾಥಬಿಂ
ಬೇಸಮುದಿತೇಸತಿ । ತರಙ್ಗಕುಲಸಂಛನ್ನೇವ್ಯೋಮಭಾಗೇಪ್ರಸರ್ಪ
ತಿ ||೨|| ತತ್ರಗಙ್ಗಾಪಯಃಪೂರಸಿಮಗ್ನೇಭುವನತ್ರಯೇ । ಭಿಯಾಶರಣ

---

ಎಂದು ಶ್ರೀಮತ್ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಪಂಡಿತಾರಾಧ್ಯಚರಿತ್ರಕ್ಕೆ
ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ “ ಭಾವಮಂಜರಿ ” ಯೆಂಬ
ಕನ್ನಡ ಟಿಪ್ಪಣದಲ್ಲಿ ಪಾದಪ್ರಕರಣದೊಳಗೆ ಶಿವನ ಭಿಕ್ಷಾಟನ ಲೀ
ಲೆಯನ್ನು ನಿರೂಪಿಸುವ ೧೫ ನೆಯ ಧ್ಯಾಯವು ಮುಗಿದುದು.

## ೧೬ ನೆಯ ಅಧ್ಯಾಯವು.

### (ಗಂಗಾಧರಲೀಲಾಕಥನವು)

ಶಿವನು ಗಂಗೆಯನ್ನೇತಕ್ಕೆ ಧರಿಸಿಕೊಂಡನು ? ಎಂಬ ಪ್ರಶ್ನೆಗೆ ನಿರ್ದುಷ್ಟವಾದ
ಮಹಾಶೈವಪುರಾಣದ ವಚನದ ಪ್ರಸಿದ್ಧಿಯಿಂದ ಉತ್ತರವನ್ನು ಹೇಳುತ್ತೇನೆ ||೧||
ಚಂದ್ರಮಂಡಲವು ಉದಿಸಲಾಗಿ, ಸಮುದ್ರವು ತೆರೆಗಳ ಗುಂಪಿನಿಂದ ತುಂಬಿ ಆ ಕಾಶ
ವನ್ನೆಲ್ಲಾ ವ್ಯಾಪಿಸುತ್ತಿರಲು ||೨|| ಆಗ ಮೂರು ಲೋಕವೂ ಗಂಗಾಜಲಪ್ರವಾಹದಲ್ಲಿ

ಮಾಜಗ್ಮುಶ್ಶಿವಂಸರ್ವೇದಿವೌಕಸಃ ||೩|| ಶಙ್ಕರೋಪಿನಿರೀಕ್ಷ್ಯೈತಾನ್ವಿಬುಧಾನ್ಪ್ರಹಸಂಸ್ತನ್ಮೃಃ । ದಧೌಶಿರಸಿತಾಂಗಙ್ಗಾಂಮಲ್ಲಿಕಾಮಾಲಿಕೋಪಮಾಮ್ ||೪|| ನಾಕೌಕಸ್ಸಂಹತಿಪ್ರೀತ್ಯೈಲೋಕೋಪಕೃತಯೇಽಪಿವಃ । ತಸ್ಮಾದ್ರಕ್ಷಾರ್ಥಮೇವೈತತ್ಸುರಸಿಂಧುಪ್ರಧಾರಣಮ್ ||೫|| ನಿನ್ದಾವಾಲೋಕನಾಥಸ್ಯಮಹತ್ತ್ವಾಯೈವಕೇವಲಮ್ । ಸಾಗಂಗಾಕಥಮಾಯಾತಾಭುವಮಿತ್ಯತ್ರವಕ್ಷ್ಯತೇ ||೬|| ಜ್ವಾಲತ್ಕಪಿಲಕೋಪಾಗ್ನಿಜ್ವಾಲಾಭಸ್ಮಿತಸಾಗರಾಃ । ಅಪವರ್ಗಪದಪ್ರಾಪ್ತ್ಯೈಕರ್ತುಂತದ್ವಂಶಸಮ್ಭವಃ ||೭|| ಕಶ್ಚಿದ್ಭಗೀರಥೋನಾಮಗಙ್ಗಾಂಪ್ರತಿಸುದಾರುಣಮ್ । ತಪಶ್ಚಕ್ರೇತ್ರಿಕೋಟ್ಯಬ್ದಾನ್ಸಾಪಿಪ್ರತ್ಯಕ್ಷತಾಮಗಾತ್ ||೮|| ವತ್ಸಪ್ರೀತಾಽಸ್ಮಿತೇಶೀಘ್ರಮಾಗಚ್ಛಾಮಿಮಹೀತಲಮ್। ಮದ್ವೇಗಂಸಹತೇನೋರ್ವೀನಕಿಮಪ್ಯವಲಮ್ಬನಮ್ ||೯|| ವಿದ್ಯತೇಭಜಗೌರೀಶಮಹಮಾಲಮ್ಬ್ಯತಜ್ಜಟಾಮ್ । ಯಾಸ್ಯಾಮೀತಿಪ್ರದಿಷ್ಟೋಽಸೌತದ್ವಿಮಾರಾಧ್ಯತಂಹರ

---

ಮುಳುಗಿಹೋಗಲು, ದೇವತೆಗಳೆಲ್ಲರೂ ಭಯದಿಂದ ಪರಶಿವನನ್ನು ಮರೆಹೊಕ್ಕರು|| ಶಿವನಾದರೂ ಈ ಭಯಾರ್ತರಾದ ದೇವತೆಗಳನ್ನು ನೋಡಿ ನಕ್ಕು, ಆ ದೇವತಾಸಮೂಹದ ಪ್ರೀತಿಗಾಗಿಯೂ, ಲೋಕೋಪಕಾರಕ್ಕೋಸುಗವೂ, ಆ ಗಂಗೆಯನ್ನು ಮಲ್ಲಿಗೆಯ ಹೂವಿನಸರದಂತೆ ತಲೆಯಲ್ಲಿ ಮೆಲ್ಲಗೆ ಧರಿಸಿಕೊಂಡನು ||೪.| ಅದು ಕಾರಣ, ಲೋಕರಕ್ಷಣಾರ್ಥವಾಗಿಯೇ ಮಾಡಲ್ಪಟ್ಟ ಈ ಗಂಗಾಧಾರಣವು ||೫|| ಜಗನ್ನಾಥನಾದ ಪರಶಿವನ ಮಹಿಮೆಗೆ ನಿದರ್ಶಕವಾಗಿದೆಯೇ ಹೊರತು ನಿಂದಾಸ್ಪದವಾಗಿರುವುದೆ! ಆಗಂಗೆಯು ಭೂಮಿಗೆ ಹೇಗೆಬಂದಿತೆಂಬ ವಿಷಯದಲ್ಲಿ ಹೇಳುತ್ತೇನೆ ||೬|| ಕಪಿಲಮಹರ್ಷಿಯ ಕೋಪಾಗ್ನಿಯ ಜ್ವಾಲೆಯಿಂದ ಸುಟ್ಟು ಬೂದಿಯಾದ ಸಗರಚಕ್ರವರ್ತಿಪುತ್ರರನ್ನು ಮುಕ್ತರನ್ನು ಮಾಡುವುದಕ್ಕಾಗಿ, ಅವರ ವಂಶದಲ್ಲಿ ಹುಟ್ಟಿದ || ಭಗೀರಥನೆಂಬುವನೊಬ್ಬನು ಗಂಗೆಯನ್ನು ಕುರಿತು ಭಯಂಕರವಾದ ತಪಸ್ಸನ್ನು ಮೂರುಕೋಟಿವರ್ಷಗಳವರೆಗೆ ಮಾಡಿದನು. ಆಗ ಗಂಗೆಯು ಪ್ರತ್ಯಕ್ಷಳಾದಳು || ಮತ್ತೂ ಎಲೆ ಮಗನೆ ನಿನ್ನ ತಪಸ್ಸಿನಿಂದ ಸಂತುಷ್ಟಳಾದೆನು. ನಿನ್ನಿಷ್ಟದಂತೆ ನಾನು ಭೂಲೋಕಕ್ಕೆ ಬರುವೆನು, ಆದರೆ ನಾನು ಭೂಮಿಗೆ ದುಮಿಕಿದರೆ ಆ ರಭಸವನ್ನು ಭೂಮಿಯು ತಾಳಿಕೊಳ್ಳಲಾರದು. ನನ್ನನ್ನು ತಾಳಿಕೊಳ್ಳ ಸಮರ್ಥವಾದ ಅವಲಂಬನವು ಮತ್ತಾವುದೂ ಇಲ್ಲ ||೯| ಅದು ಕಾರಣ, ನೀನು ಗೌರೀಪತಿಯನ್ನು ಪೂಜಿಸು. ನಾನು ಆತನ ಜಡೆಯನ್ನವಲಂಬಿಸಿಕೊಂಡು ಭೂಮಿಯಲ್ಲಿ ಪ್ರವಹಿಸುವೆನು, ಎಂದು ಹೇಳಲಾಗಿ, ಈ ಭಗೀರಥನು ಆಗಲೇ ಆ ಪರಮೇಶ್ವರನನ್ನು ಪೂಜಿಸಿ ||೧೦|| ಸಂ

ಮ್ ॥೧೧॥ ಸನ್ತುಷ್ಟಮಕರೋತ್ತೋಷಿದದಾವಾಲಮ್ಬನಾಂಜಟಾಮ್। ಸಾತೇನವರ್ತ್ಮನಾಯಾತಾಗಙ್ಗಾತದ್ಗತಭಸ್ಮನಿ ॥೧೧॥ ಆಸೀದ್ವಿಲೀನಸಲಿಲಾತನ್ನಿರೀಕ್ಷ್ಯಭಗೀರಥಃ। ತಪಸಾಽರಾಧಯಾಮಾಸಪುನರೇವಗಜಾಪತಿಮ್ ॥೧೨॥ ಅಙ್ಗುಷ್ಠತರ್ಜನೀಭ್ಯಾಂತದ್ಭಸ್ಮೇತಿವರವಾಕ್ಯತಃ । ತತ್ರತ್ಯಭೂತಿಮಾದಾಯಶಿವೋಽಙ್ಗುಷ್ಠನಖಾಗ್ರತಃ ॥೧೪॥ ಕನಿಷ್ಠಿಕಾಙ್ಗುಳಿನಖಾಂಚಲೇನತದನನ್ತರಮ್ । ಖ್ಯಾತಾನ್ನಿಖಾಗ್ರಾದಪತದಿತಿವಾಕ್ಯಾತ್ತಥೈವಚ ॥೧೪॥ ವರವಾಕ್ಯಾದ್ಭಸ್ಮವರ್ಣಂತತೋಽಜಲಮಿತಿಶ್ರುತಾತ್ । ಭೂಮಾವಾಚಿಕ್ಷೇಪಸಾತಸ್ಮಾನ್ನಖಜೇತಿ ಪರಿಶ್ರುತಾ ॥ ೫ ಬಭೂವಸಾನದೀಭಸ್ಮಧವಳಾಂಭಃಪ್ರವಾಹಿನೀ । ಏವಂಭಾಗೀರಥೀನಾಮ್ನಾಖ್ಯಾತಾಂಲೋಕಹಿತಾಪ್ತಯೇ ॥೧೬॥ ಪ್ರವಾಹರೂಪಾಂತಾಂಗಙ್ಗಾಂಸಮಾದಾಯಸ್ವವಂಶಜಾನ್ । ಅಪವರ್ಗಪದಪ್ರಾಪ್ತಾಂಶ್ಚಕಾರಕುಲದೀಪಕಃ ॥೧೭॥ ಇಯಂಶೈವಪುರಾಣೋಕ್ತಿಸಂಮತಿಸ್ಸಮುದೀರಿತಾ । ಚಾರುಸ್ವಚ್ಛನ್ದಲಲಿತಭೈರವಾಖ್ಯಾಗಮೇ ಸ್ಫುಟಮ್ ॥೧೮॥ ಸಮುದ್ದಿಷ್ಟಾನುಪಿಗಿರಂಕಥಯಾಮಾಸಪಿನಾಕಿನಾ । ಮಹೀಮಣ್ಡಲವಿಸ್ತಾರವರ್ಣ

---

ತೋಷಪಡಿಸಿದನು. ಶಿವನು ಭಕ್ತನ ಇಷ್ಟದಂತೆ ತನ್ನ ಜಡೆಯನ್ನು ದೇವಗಂಗೆಯ ಪತನಕ್ಕೆ ಅವಲಂಬನವನ್ನಾಗಿತ್ತನು. ಆಗ ಶಿವನ ಜಟಾಮಾರ್ಗವನ್ನನುಸರಿಸಿ ಇಳಿದು ಬಂದ ಗಂಗೆಯ ಜಲವೆಲ್ಲವೂ ಶಿವನ ಮುಡಿಯಲ್ಲಿದ್ದ ಭಸ್ಮದಲ್ಲೇ ಅಡಗಿಹೋಯಿತು. ಅವನ್ನು ನೋಡಿ ಭಗೀರಥನು ಮತ್ತೆ ಪರಶಿವನನ್ನು ಕುರಿತು ತಪಸ್ಸನ್ನು ಮಾಡಿದನು॥ ಆಗ ಶಿವನು ಜಡೆಯಲ್ಲಿದ್ದ ಭಸ್ಮವನ್ನು ಹೆಬ್ಬೆರಲಿನ ಉಗುರಿನ ತುದಿಯಿಂದ ತೆಗೆದು ಕೊಂಡು ಕಿರಿಬೆರಲಿನ ಉಗುರಿನ ತುದಿಯಿಂದ ಕೆಳಕ್ಕೆ ಚಿಮ್ಮಿಬಿಟ್ಟನು. ಅದರಿಂದ ಗಂಗಾಜಲವು ಭಸ್ಮದಬಣ್ಣವುಳ್ಳುದಾಯಿತು. ಅದು ಕಾರಣವೇ ಗಂಗೆಯು ಉಗುರಿನಿಂದ ಹುಟ್ಟಿದವಳು ಎಂಬುದಾಗಿ ಪ್ರಸಿದ್ಧಿಗೊಂಡಳು. ಎಂದು ಪುರಾಣವಚನದಿಂದ ಹೇಳಲ್ಪಟ್ಟಿರುವುದು. ॥೧೫॥ ಆ ಗಂಗಾನದಿಯು ವಿಭೂತಿಯಂತೆ ಬೆಳ್ಳಗಿರುವ ನೀರಿನಿಂದ ಕೂಡಿ ಹರಿಯುತ್ತಿರುವುದು. ಹೀಗೆ ಲೋಕಹಿತಾರ್ಥವಾಗಿ ಭಾಗೀರಥಿಯೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಪ್ರವಾಹರೂಪವಾದ ಗಂಗೆಯನ್ನು ವಂಶಪ್ರಕಾಶಕನಾದ ಭಗೀರಥನು ಕರೆತಂದು ತನ್ನ ವಂಶದವರನ್ನು ಮುಕ್ತರನ್ನಾಗಿ ಮಾಡಿದನು ॥೧೭॥ ಇದು ಶೈವಪುರಾಣವಚನಸಿದ್ಧವಾಗಿ ಹೇಳಲ್ಪಟ್ಟ ಅಭಿಪ್ರಾಯವಾಯಿತು. ಇನ್ನು ಸ್ವಚ್ಛಂದಲಲಿತಭೈರವವೆಂಬ ಹೆಸರುಳ್ಳ ಆಗಮದಲ್ಲಿ ಪರಶಿವನು ಸ್ಪಷ್ಟವಾಗಿ ಹೇಳಿರುವ ವಚನವನ್ನೂ ಹೇಳುತ್ತೇನೆ: — ॥೧೮॥ ಶಿವನು ಸಂತೋಷದಿಂದ ಪಾರ್ವತಿಗೆ ಭೂಮಂಡಲದ ವಿಸ್ತಾರವನ್ನು ಕುರಿತು ವರ್ಣಿಸುವ ಸಮಯದಲ್ಲಿ ಮೇ

ನಾವಸರೇಮುದಾ ॥೧೯॥ ಸುಮೇರುಗತಮಾಹಾತ್ಮ್ಯಂ ಪಾರ್ವತ್ಯಾಃಪ್ರಾ
ಹಶಂಕರಃ । ಮೇರೌಶಿರೇತಸ್ಯಶೈಲಸ್ಯಚತುರ್ಭಾಗೇಷುಪಾರ್ವತಿ ॥೨೦
ಅವತೀರ್ಣಾಮಹೀಂಗಂಗೇತ್ಯುಕ್ತೇಸಾಪ್ರಾಂಜಲಿಃಶಿವಾ। ಕಥಯಸ್ವಮ
ಹಾದೇವಸುರಸಿದ್ಧನಮಸ್ಕೃತ ॥೨೧॥ ಇತಿವಾಕ್ಯಾದಿಯಂಗಂಗಾಕಥಂ
ಜಾತಾಶುಭಾತ್ಮಿಕಾ । ಮೇರುಂಕಿಮರ್ಥಂಸಂಪ್ರಾಪ್ತಾಪುನಃಕ್ಷಿತಿಮ
ಗಾತ್ಕಥಮ್ ॥೨೨॥ ಏತತ್ಸರ್ವಂಮಮಾಚಕ್ಷ್ವದೇವದೇವಜಗತ್ಪತೇ ।
ಇತಿಪೃಷ್ಟೋಮಹಾದೇವ್ಯಾಸರ್ವಜ್ಞಃಪರಮೇಶ್ವರಃ ॥೨೩॥ ಗಂಗಾ
ಯಾಸ್ತುಸಮುತ್ಪತ್ತಿಂಕಥಯಿಷ್ಯಾಮಿಸುವ್ರತೇ। ಇತಿವಾಕ್ಯಾನ್ಮಹಾದೇ
ವ್ಯೈಗಂಗಾವೃತ್ತಾಂತಮಬ್ರವೀತ್ ॥೨೪॥ ಜಗನ್ಮಾತಾಮಹಾದೇವೀ
ತ್ಯಾಗಮೋಕ್ತ್ಯಾಜಗನ್ನುತಾ । ಪುರಾಪಿಮಮದೇವೀತ್ವಂಭೂತ್ವಾಕ್ರೀ
ಡಾಸಮುತ್ಸುಕಾ ॥೨೫॥ ಮತ್ಪಶ್ಚಾದ್ಭಾಗಮಾಗತ್ಯಪಿಧಾಯಮಮಲೋ
ಚನೇ । ಸ್ಥಿತಾಸ್ಯಹಂತತಃಫಾಲಲೋಚನೇನವ್ಯಲೋಕಯಮ್ ॥೨೬॥
ತದ್ವಿಲೋಚನಜಾತಾಗ್ನಿಪ್ರಸರ್ಪ್ಯತಿಹಿಮಾಚಲಮ್। ಪ್ರಣಿಪತ್ಯಭಯೇ
ನತ್ವಮೂಚಿಷೇಕಮಲಾಕ್ಷಿಮಾಮ್ ॥೨೭॥ ತೃತೀಯಲೋಚನೋನ್ಮೇ

---

ರುಪರ್ವತದ ಮಹಿಮೆಯನ್ನು ಹೇಳಿದನು. ಹೇಗೆಂದರೆ—"ಎಲೆ ಪಾರ್ವತಿಯೆ, ಈ
ಮೇರುಪರ್ವತದ ನಾಲ್ಕುಭಾಗಗಳಲ್ಲೂ ಗಂಗೆಯು ಭೂಮಿಗೆ ಅವತರಿಸಿದಳು" ಎಂದು
ಹೇಳಲಾಗಿ, ಆ ಪಾರ್ವತಿಯು ಕೈಮುಗಿದುಕೊಂಡು, ದೇವತೆಗಳಿಂದಲೂ ಸಿದ್ಧರು
ಗಳಿಂದಲೂ ನಮಸ್ಕರಿಸಲ್ಪಟ್ಟ ಎಲೈ ಮಹಾದೇವನೆ, ನನಗೆ ಸಾಂಗವಾಗಿ ಆ ವಿಷ
ಯವನ್ನು ಹೇಳು, ಎಂದಾರಂಭಿಸಿರುವ ವಚನದಿಂದ "ಎಲೈ ಜಗನ್ನಾಥನೆ! ಮಂಗ
ಳಾತ್ಮಳಾದ ಈ ಗಂಗೆಯು ಹೇಗೆ ಉದ್ಭವಿಸಿದಳು? ಮೇರುಪರ್ವತಕ್ಕೆ ಏತಕ್ಕಾ
ಗಿ ಬಂದಳು? ಅಲ್ಲಿಂದ ಮರಳಿ ಭೂಮಿಗೆ ಹೇಗೆ ಬಂದಳು? ॥೨೨॥ ಇದೆಲ್ಲವನ್ನೂ
ನನಗೆ ಅಪ್ಪಣೆಕೊಡಿಸು" ಎಂದು ಪಾರ್ವತಿಯಿಂದ ಕೇಳಲ್ಪಟ್ಟ ಸರ್ವಜ್ಞನಾದ ಪರ
ಮೇಶ್ವರನು ॥೨೩॥ "ಎಲೆ ಸುವ್ರತೆಯೆ, ಗಂಗೆಯ ಉತ್ಪತ್ತಿಯನ್ನು ಹೇಳುತ್ತೇನೆ"
ಎಂಬ ವಚನದ ಮೂಲಕವಾಗಿ ಗಂಗಾವೃತ್ತಾಂತವನ್ನು ಅಪ್ಪಣೆಕೊಟ್ಟನು. ॥೨೪॥
"ಜಗನ್ಮಾತೆ-ಮಹಾದೇವಿ" ಎಂಬುದಾಗಿ ಆಗಮವಚನದಿಂದ ಕೊಂಡಾಡಲ್ಪಟ್ಟ
ಜಗನ್ನುತಳಾದ ನೀನು ಪೂರ್ವದಲ್ಲಿಯೂ ನನಗೆ ಪತ್ನಿಯಾಗಿದ್ದು, ವಿನೋದಪಡೆಯ
ಬೇಕೆಂಬ ಕುತೂಹಲವುಳ್ಳವಳಾಗಿ ॥೨೫॥ ನನ್ನ ಹಿಂಗಡೆಗೆ ಬಂದು, ನನ್ನ ಕಣ್ಣುಗ
ಳನ್ನು ಮುಚ್ಚಿ ನಿಂತುಕೊಂಡೆ. ಬಳಿಕ ನಾನು ಹಣೆಗಣ್ಣಿನಿಂದ ನೋಡಿದೆ ॥೨೬॥ ಆ
ಕಣ್ಣಿನಿಂದ ಹುಟ್ಟಿದ ಬೆಂಕಿಯು ಹಿಮವತ್ಪರ್ವತಕ್ಕೂ ವ್ಯಾಪಿಸಲಾಗಿ, ಎಲೆ ಕಮಲಾಕ್ಷಿ
ಯೆ, ನೀನು ಭಯದಿಂದ ನಮಸ್ಕರಿಸಿ, ಈಮೂರನೆಯ ಕಣ್ಣನ್ನು ತೆರೆಯುವುದಕ್ಕೆ

ಷಕಾರಣಂಕಥ್ಯತಾಮಿತಿ । ಪ್ರಹಸನ್ನವದಂ ದೇವಿಮನ್ನೇತ್ರೇಶಶಿಭಾಸ್ಕರೌ ॥೨೮॥ ತಯೋಸ್ತ್ವಯಾಚ್ಛಾದಿತಯೋರ್ಜಗದಾಸೀತ್ತಮೋವೃತಮ್ । ಕರಾವನುತ್ಸಾರ್ಯತವಪ್ರಕಾಶಾಯಾಖಿಲಸ್ಯಚ ॥೨೯॥ ಉನ್ಮೀಲಿತಂತೃತೀಯಾಕ್ಷಿದೇವ್ಯಾಗಚ್ಛಸಭೀಸ್ತ್ವಮ। ನೇತ್ರಾಚ್ಛಾದನಕಾಲೇಮದಾನನ್ದಾಶ್ರುಜಲಂತತಃ ॥೩೦॥ ತ್ವದ್ದಶಾಙ್ಗುಲಿಲಗ್ನಂಸದ್ಗಲಿತಂವಸುಧಾತಲೇ । ನದೀದಶಕತಾಂಪ್ರಾಪ್ತಂತದಾತದ್ಬಿಂದುಜಾಲಕಮ್ ॥೩೧॥ ತಾಸುಸಂಪ್ರಾರ್ಥ್ಯಮಾಮೇಕಾಂವೈಕುಂಠಮನಯದ್ಧರಿಃ । ವಿರಿಂಚಿರಪ್ಯರ್ಥಯಿತ್ವಾಪ್ಯಲೋಕಮನಯತ್ಪರಾಮ್ ॥೩೨॥ ಪುರುಹೂತೋಪ್ಯಪಾಸ್ಯಾಸ್ಮಾನನ್ಯಾಂಸ್ವರ್ಗಂನಿನಾಯಚ । ಶಶಿಮಣ್ಡಲಸಂಚ್ಛನ್ನಾಸಾಭೂನ್ಮಂದಾಕಿನೀದಿವಿ ॥೩೩॥ ನದ್ಯಸ್ಸಪ್ತೇತರಾಗಙ್ಗಾನಾಮ್ನಾಸರ್ವಂಜಗತ್ತ್ರಯಮ್ । ಪ್ರವಾಹಮಧ್ಯವಿಕ್ಷಿಪ್ತಂಕುರ್ವನ್ತ್ಯತಿವೇಗತಃ ॥೩೪॥ ಬ್ರಹ್ಮವಿಷ್ಣ್ವಾದಯೋದೇವಾಶ್ಶರಣಂಮಾಮುಪೇತ್ಯಚ । ಶಶಂಸುರತಿಸದ್ಭಕ್ತ್ಯಾ ತತಃಕಮಲಲೋಚನೇ ॥೩೫॥ ಪಾರ್ವತೀರಮಣಾಶೇಷಾ

---

ಕಾರಣವೇನು ? ಹೇಳೆಂದು ನನ್ನನ್ನು ಕೇಳಿದೆ. ಆಗ ನಾನು ನಕ್ಕು, ಹೇಳಿದುದೇನೆಂದರೆ—,, ಎಲೆ ದೇವಿ, ನನ್ನ ಕಣ್ಣುಗಳೆರಡೂ ಚಂದ್ರಸೂರ್ಯರಾಗಿರುವುವು ॥೨೮॥ ಅವುಗಳನ್ನು ನೀನು ಮುಚ್ಚಲಾಗಿ, ಲೋಕವು ಕತ್ತಲೆ ಗವಿದುಹೋಯಿತು. ನಿನ್ನ ಕೈಗಳನ್ನು ಬಿಡಿಸದೆ,ಸಕಲ ಜಗತ್ತಿಗೂ ಬೆಳಕನ್ನುಂಟುಮಾಡುವುದಕ್ಕೋಸುಗ॥೨೯ ಮೂರನೆಯ ಕಣ್ಣನ್ನು ತೆರೆದೆನು. ಎಲೆ ದೇವಿಯೇ ನಿನಗೆ ಭಯವಿಲ್ಲ, ಬಾ, ಎಂದು ಹೇಳಿದೆನು. ಕಣ್ಣುಮುಚ್ಚಿದಾಗ ನಿನ್ನ ಕರಸ್ಪರ್ಶದಿಂದುದಿಸಿದ ನನ್ನ ಆನಂದಬಾಷ್ಪವು ನಿನ್ನ ಕೈಯ ಹತ್ತುಬೆರಲುಗಳಲ್ಲೂ ಅಂಟಿಕೊಂಡು ಭೂಮಿಯಮೇಲೆ ಬಿದ್ದಿತು. ಆಗ ಆ ಜಲಬಿಂದುಸಮೂಹವು ಹತ್ತು ಹೊಳೆಗಳಾಯಿತು ॥೩೧॥ ಅವುಗಳಲ್ಲಿ ಒಂದನ್ನು ಅನುಗ್ರಹಿಸಬೇಕೆಂದು ವಿಷ್ಣುವು ನನ್ನನ್ನು ಬೇಡಿಕೊಂಡು ವೈಕುಂಠಕ್ಕೆ ತೆಗೆದುಕೊಂಡು ಹೋದನು ॥೩೦॥ ದೇವೇಂದ್ರನುಕೂಡ ನನ್ನನ್ನುಪ್ರಾರ್ಥನೆ ಮಾಡಿ ಮತ್ತೊಂದು ಹೊಳೆಯನ್ನ ಸ್ವರ್ಗಕ್ಕೆತೆಗೆದುಕೊಂಡು ಹೋದನು. ಆನದಿಯು ಚಂದ್ರಮಂಡಲದಲ್ಲಿ ವ್ಯಾಪ್ತವಾಗಿ ಸ್ವರ್ಗದಲ್ಲಿ ಮಂದಾಕಿನಿಯೆನಿಸಿಕೊಂಡಿರುವುದು॥೩೩ ಉಳಿದ ಏಳು ನದಿಗಳು ಗಂಗೆಯೆಂಬ ಹೆಸರುಳ್ಳವ ಮೂರು ಲೋಕವನ್ನೆಲ್ಲಾ ಅತ್ಯಂತ ವೇಗದಿಂದ ತಮ್ಮ ಪ್ರವಾಹವಮಧ್ಯದಲ್ಲಿ ಮುಳುಗಿಸಿಬಿಟ್ಟುವು ॥೩೪॥ ಬಳಿಕ ಎಲೌ ಕಮಲಾಕ್ಷಿಯೆ, ಬ್ರಹ್ಮ ವಿಷ್ಣು ಮೊದಲಾದದೇವತೆಗಳು ನನ್ನನ್ನು ಮರೆಹೊಕ್ಕು ಅತಿಭಕ್ತಿಯಿಂದ ॥೩೫॥ ಎಲೈ ಪಾರ್ವತೀಪತಿಯೆ, ಸರ್ವಾಧಿಪತಿಯೆ, ದೇವತೆಗಳ ಮ

ನಾಥದೇವಾರ್ತಿನಾಶನ । ಕೈಲಾಸವಾಸಪ್ರಮಥವಿಲಾಸಾಕ್ಷಯಶಾಶ್ವತ ॥ ಗಙ್ಗಾಜಲತರಂಗೇಭ್ಯೋರಕ್ಷಾಸ್ಮಾನ್ವೃಷವಾಹನ । ಇತಿಸ್ತುತೋಽಹಮಮರ್ತ್ಯೈರ್ಗಙ್ಗಾಂಪ್ರಾಲೇಯಬಿನ್ದುವತ್ ॥೩೭॥ ಅವಹಂಮಸ್ತಕಸ್ಯಾಗ್ರೆ ತತಸ್ಸರ್ವೇದಿವೌಕಸಃ । ವಿಸ್ಮಿತಾಸ್ಸತರಾಂಭೂಯಃಪ್ರಣತಾಃಪ್ರೋಚುರುತ್ಸುಕಾಃ ॥೩೮॥ ತ್ರಿಲೋಕಗ್ರಸನೋದ್ಯೋಗಜ್ವಲದ್ಧಾಲಾಹಲಾನಲಮ್ । ಗಳೇಧೃತ್ವಾಗಿರಿಸುತಾವಲ್ಲಭೋಽಸ್ಮಾನಪೀಪಲಃ ॥೩೯॥ ಕೃತ್ವಾನಿಮಗ್ನಂಭುವನತ್ರಿತಯಂಪರಿಜೃಂಭಿತಾಮ್ । ನಿಧಾಯಗಙ್ಗಾಂಶಿರಸಿರಕ್ಷಿತಾಸಿಶಿವಾಧುನಾ ॥೪೦॥ ಗಙ್ಗಾಪ್ರವಾಹಸಂಚಾರಪೂತೋಽಭೂತ್ತ್ರಿದಶಾಲಯಃ । ಮರ್ತ್ಯಲೋಕಂತಥೈವೈನಾಂಪಾವನೀಕರ್ತುಮಾದಿಶ ॥೪೧॥ ಇತ್ಯುಕ್ತೋಽಹಂಸುರೈರ್ಗಙ್ಗಾಪ್ರವಾಹೋದ್ಧತವೇಗತಃ । ಧರಿತ್ರೀವಿಹ್ವಲಾಮಾಭೂದಿತಿಬುದ್ಧ್ಯಾಜಟಾಧ್ವತಃ ॥೪೨॥ ಸ್ವರ್ಣಶೈಲಾಗ್ರಮಹಿತದೇಶಸಂಪತಿತಾಮಿಮಾಮ್ । ಕೃತ್ವಾಗಙ್ಗಾಂಮಹೀಭಾಗಗತಾಮಕರವಂಶಿವೆ ॥೪೩॥ ಸಾಮೇರೋಃಪೂರ್ವದಿಗ್ಭಾಗನಿಸ್ಸೃತಾಪೂರ್ವವಾರಿಧಿಮ್ । ಸಂಪ್ರಯಾತಾ

---

ನೋವ್ಯಥೆಯನ್ನು ಪರಿಹರಿಸುವವನೆ, ಕೈಲಾಸಪರ್ವತದಲ್ಲಿ ವಾಸಮಾಡುವವನೆ, ಪ್ರಮಥರೊಡನೆ ವಿನೋದಪಡುವವನೆ, ಕುಂದಿಲ್ಲದವನೆ, ಶಾಶ್ವತನೆ, ಎಂದು ಸ್ತೋತ್ರಮಾಡಿದರು. ॥೩೬॥ ಮತ್ತೂ ಎಲೈ ವೃಷಭವಾಹನನೆ, ಗಂಗಾಜಲದ ತೆರೆಗಳ ಹಾವಳಿಯಿಂದ ನಮ್ಮನ್ನು ಸಂರಕ್ಷಿಸು, ಎಂದು ಬೇಡಿಕೊಂಡರು. ಆಗ ನಾನು ಆ ಗಂಗೆಯನ್ನು ಬಿಂದು ಮಂಜಿನ ಹನಿಯಹಾಗೆ ತಲೆಯ ತುದಿಯಲ್ಲಿ ಧರಿಸಿಕೊಂಡೆನು. ಬಳಿಕ ಸಕಲ ದೇವತೆಗಳೂ ಅತ್ಯಂತಾಶ್ಚರ್ಯಪಟ್ಟವರಾಗಿ ಮರಳಿ ನಮಸ್ಕರಿಸಿ, ಕುತೂಹಲಗೊಂಡವರಾಗಿ ಹೀಗೆ ನುಡಿದರು:— ॥೩೮॥ ಎಲೈ ಪಾರ್ವತೀಪತಿಯೆ, ಮೂರು ಲೋಕವನ್ನೂ ನುಂಗುವ ವ್ಯಾಪಾರವುಳ್ಳುದಾಗಿ ಉರಿಯುತ್ತಿದ್ದ ಮಹಾವಿಷಾಗ್ನಿಯನ್ನು ಕಂಠದಲ್ಲಿ ಧರಿಸಿಕೊಂಡು ಹಿಂದೆ ನಮ್ಮನ್ನು ರಕ್ಷಿಸಿದೆ ॥೩೯॥ ಈಗ ಮೂರುಲೋಕವನ್ನೂ ತನ್ನಲ್ಲಿ ಮುಳುಗಿಸಿಕೊಂಡು ಉಬ್ಬೇರಿದ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ನಮ್ಮನ್ನು ಸಂರಕ್ಷಿಸಿದೆ. ॥೪೦॥ ಸ್ವರ್ಗಲೋಕವು ಗಂಗಾಪ್ರವಾಹದ ಸಂಚಾರದಿಂದ ಪವಿತ್ರವಾಯಿತು. ಇದರಹಾಗೆಯೇ ಭೂಲೋಕವನ್ನು ಪವಿತ್ರಮಾಡುವುದಕ್ಕಾಗಿ ಈ ಗಂಗೆಗೆ ಆಜ್ಞಾಪಿಸು ॥೪೧॥ ಹೀಗೆಂದು ದೇವತೆಗಳಿಂದ ಹೇಳಲ್ಪಟ್ಟ ನಾನು, ಈ ಗಂಗಾಪ್ರವಾಹದ ಪ್ರಬಲವಾದ ವೇಗದಿಂದ ಭೂಮಿಯು ಒಡೆದುಹೋಗದಂತೆ ಮಾಡಬೇಕೆಂಬುದಾಗಿ ಯೋಚಿಸಿ, ನನ್ನ ಜಡೆಯಮಾರ್ಗದಿಂದ ॥೪೨॥ ಮೇರುಪರ್ವತದ ಶಿಖರಪ್ರದೇಶದಲ್ಲಿ ಗಂಗೆಯು ಬಿದ್ದು, ಭೂತಲಕ್ಕೆ ಹೋಗುವಂತೆ ಮಾಡಿದೆನು. ॥೪೩॥ ಬಳಿ

ತತಸ್ಸೀತಾಖ್ಯಯಾ ಪುಣ್ಯತರಂಗಿಣೀ ||೪೪|| ದಕ್ಷಿಣಾಂಬುಧಿಮಾಯಾತಾ ಸುಮಕ್ಷಾನಾಮದಕ್ಷಿಣೇ । ಸುನಂದೇತ್ಯಾಖ್ಯಯಾಸ್ಯೈವಪಶ್ಚಿಮಾಂಬುಧಿಮಾಯಯೌ ||೪೫|| ಉತ್ತರೇರುದ್ರಸೋಮಾಖ್ಯಾಪ್ರಯಾತೋತ್ತರವಾರಿಧಿಂ । ಇತ್ಯೇತದ್ವಿಸ್ತರಾತ್ಸರ್ವಂಗಂಗಾಯಾಸ್ಸಂಭವಕ್ರಮಮ್ ||೪೬|| ಕಥಯಾಮಾಸಪಾರ್ವತ್ಯೈಸುಧಾಕಿರಣಶೇಖರಃ । ತಸ್ಮಾದ್ಗಂಗಾಸಮುತ್ಪತ್ತಿರಿಯಮೇವೋಚಿತಾಭುವಿ || ಹರಿರ್ವಾಮನರೂಪೇಣ ಬಲಿಮಾಗತ್ಯಯಾಚಿತುಮ್ । ವಿಹಾಯತತ್ಪೂರ್ವರೂಪಂತ್ರಿವಿಕ್ರಮಘನಾಕೃತಿಃ ||೪೮|| ಸಮುತ್‌ಕ್ಷಿಪ್ಯೈಕಚರಣಂತಸ್ಥೌತತ್ಪದ್ಮಸಂಭವಃ । ಕ್ಷಾಳಯಾಮಾಸಸಂಪ್ರೀತ್ಯಾಕಮಂಡಲುಗತಾಂಬುನಾ ||೪೯|| ಜಲಂತದೇವಗಂಗೇತಿಯದ್ವಚಸ್ತದಸಂಗತಮ್ । ತ್ರಿಲೋಕಮಜ್ಜನಾಯಾಲಂಕಿಮುತಚ್ಚರಣೋದಕಮ್ ||೫೦|| ವಿಶ್ವನಿರ್ಮಜ್ಜನೋದಗ್ರಜಲಸ್ಯಸದೃಶೋಘಟಃ । ಬ್ರಹ್ಮಾಂಡೇಸಂಸ್ಥಿತಃಕಸ್ಮಿನ್ಕೋವಾತಂಘಟಮಗ್ರಹೀತ್ ||೫೧|| ಕುತ್ರವಾಸಂಸ್ಥಿ

ಈ ಆ ಪುಣ್ಯನದಿಯು ಒಂದು ಭಾಗವಾಗಿ ಮೇರುಪರ್ವತದ ಪೂರ್ವದಿಗ್ಭಾಗದಲ್ಲಿಹರಿದು ಸೀತೆಯೆಂಬ ಹೆಸರಿನಿಂದ ಪೂರ್ವಸಮುದ್ರವನ್ನು ಸೇರಿತು. || ಸುಮಕ್ಷೆಯೆಂಬ ಹೆಸರಿಂದ ಮೇರುಪರ್ವತದ ದಕ್ಷಿಣಭಾಗದಲ್ಲಿ ಹರಿದಭಾಗವು ದಕ್ಷಿಣಸಮುದ್ರವನ್ನು ಸೇರಿತು. ಪಶ್ಚಿಮದಿಕ್ಕಿನಲ್ಲಿ ಹರಿದ ನದಿಯು ಸುನಂದೆಯೆಂಬ ಹೆಸರಿನಿಂದ ಪಶ್ಚಿಮಸಮುದ್ರವನ್ನು ಹೊಂದಿತು. ||೪೫|| ಉತ್ತರದಿಕ್ಕಿಗೆ ಹರಿದ ನದಿಯು ರುದ್ರಸೋಮೆಯೆಂಬ ಹೆಸರಿನಿಂದ ಉತ್ತರಸಮುದ್ರವನ್ನು ಸೇರಿತು " ಎಂಬುದಾಗಿ ಚಂದ್ರಶೇಖರನು ಗಂಗೋತ್ಪತ್ತಿಕ್ರಮವನ್ನೆಲ್ಲಾ ವಿಸ್ತಾರವಾಗಿ ಪಾರ್ವತಿಗೆ ಹೇಳಿದನು. ಆದುದರಿಂದ ಭೂಮಿಯಲ್ಲಿ ಯೋಗ್ಯವಾದ ಗಂಗೋತ್ಪತ್ತಿರೀತಿಯು ಇದೇನೆಯೇ ||೪೭|| " ವಿಷ್ಣುವು ವಾಮನರೂಪದಿಂದ ಯಾಚನೆಮಾಡುವುದಕ್ಕಾಗಿ ಬಲಿಚಕ್ರವರ್ತಿಯ ಬಳಿಗೆ ಬಂದು, ಅವನು ದಾನಮಾಡಿದ ನಂತರ ತನ್ನ ಪೂರ್ವರೂಪವನ್ನುಳಿದು, ಭೂಮಿಯಗಲಕ್ಕೊಂದು ಆಕಾಶಕ್ಕೊಂದು ಬಲಿಚಕ್ರವರ್ತಿಯ ತಲೆಯ ಮೇಲೊಂದು ಪಾದವನ್ನಿಡುವಷ್ಟು ದೊಡ್ಡದಾದ ಆಕಾರವುಳ್ಳವನಾಗಿ ||೪೮|| ಒಂದು ಪಾದವನ್ನು ಅಂತರಿಕ್ಷಕ್ಕೆತ್ತಿ ನಿಂತುಕೊಂಡನು. ಬ್ರಹ್ಮನು ಆದರದಿಂದ ತನ್ನ ಕಮಂಡಲುವಿನುದಕದಿಂದ ತೊಳೆದನು. ಆ ಪಾದವಾರಿಯೇ ಗಂಗೆಯೆನಿಸಿಕೊಂಡಿತು " ಎಂಬುದಾಗಿ ಹೇಳಲ್ಪಡುವ ಮಾತಾವುದುಂಟೋ ಅದು ಅಸಂಗತವಾದುದು. ಏಕೆಂದರೆ— ಆ ಪಾದೋದಕವು ಮೂರುಲೋಕವನ್ನೂ ತನ್ನಲ್ಲಿ ಮುಳುಗಿಸಿಕೊಳ್ಳಬಲ್ಲುದೆ? ||೫೦|| ಪ್ರಪಂಚವನ್ನೇ ಮುಳುಗಿಸುವಷ್ಟು ಮಹಾಜಲವನ್ನು ತುಂಬಿಕೊಳ್ಳುವುದಕ್ಕೆ ತಕ್ಕ ಬಿಂದಿಗೆಯು ಯಾವ ಬ್ರಹ್ಮಾಂಡದಲ್ಲಿದ್ದಿತು? ಅಷ್ಟು ಬಿಂದಿಗೆಯನ್ನು ಯಾವನು ಹಿಡಿದುಕೊಂಡಿದ್ದನು? ||೫೧|| ಇಷ್ಟು ಮಹಾಜಲವು

ತಂಪೂರ್ವಮೇತಾವದ್ಬಹುಳಂಜಲಮ್ । ಆನೀತವಾನಿದಂಕೋವಾಪುರಾ
ತಾದೃಗ್ವಿಧಂಪಯಃ ॥೫೨॥ ಭೀತೋಽಭೂತ್ಸಕಥಂವಿಷ್ಣುಸ್ಸ್ವಪಾದಕ್ಷಾ
ಳನಾಂಬುನಃ । ನಿವೇದಯಿತುಮಾಯಾತಃ ಕಿಂಶಿವಸ್ಯಮಹೇಶಿತುಃ ॥೫೩॥
ವ್ಯೋಮ್ನೋಽಸ್ತಿವಿಷ್ಣುಪದಮಿತ್ಯಾಖ್ಯಾತತ್ಕಾರಣಾದಿಯಮ್ । ಗಂಗಾವಿ
ಷ್ಣುಪದೀಚೇತಿಪ್ರಸಿದ್ಧಿಂಸಮುಪಾಗತಾ ॥೫೪॥ ವಿಷ್ಣುಪಾದಸ್ಯಚವ್ಯೋ
ಮ್ನೋನಾಮ್ನೈಕ್ಯೇಕಸ್ಮಿನ್ವ್ಯವಸ್ಥಿತೇ । ತಯೋರ್ವ್ಯೋಮಕಿಂಹರಿಪದಂಮು
ಖ್ಯವೃತ್ತ್ಯಾವಿಚಾರಿತೇ ॥೫೫॥ ಭೇಕೇಽಪಿಶ್ರೀಪತೌನಾಮಹರಿರಿತ್ಯೇಕಮೀರ್ಯ
ತೇ । ಏತಾವತೈವಜಗತಿಕಿಂಭೇಕಶ್ಶ್ರೀಪತಿರ್ಭವೇತ್ ॥೫೬॥ ಯೌಗಿಕಾ
ರ್ಥವಶಾಚ್ಛಬ್ದಾವಿಭಿನ್ನವ್ಯಕ್ತಿವಾಚಕಾಃ । ಹರಿಪಾದಜಲಂಗಂಗೇತ್ಯಾ
ಲಪನ್ತೀಹನಿಶಂಜನಾಃ ॥೫೭॥ ಬುದ್ಧ್ಯಾವಿಚಾರ್ಯಕುತ್ರಾಪಿಕಿಂನಜಾನನ್ತಿ
ತತ್ಸ್ಥಿತಿಮ್ । ಕಿಂಚಪಾದೇಸಮುತ್ಕ್ಷಿಪ್ತೇಹರಿಣಾಕುಪಿತಶ್ಶಿವಃ ॥೫೮॥
ಪಾದೇನಸಹತತ್ಪೃಷ್ಠವಂಶಾಸ್ಥಿಚಸಮುನ್ನತಮ್ । ಭಙ್ಕ್ತ್ವಾಕರತಲೇಸ
ವ್ಯೇಖಟ್ವಾಂಗಮಕರೋತ್ಪುರಾ ॥೫೯॥ ಭುವಿತ್ರಿವಿಕ್ರಮಮಹಾಕಂ

---

ಪೂರ್ವದಲ್ಲಿ ಎಲ್ಲಿತಾನೇ ಇದ್ದಿತು? ಪೂರ್ವದಲ್ಲಿ ಅಷ್ಟೊಂದು ಮಹಾಜಲವನ್ನು ತೆಗೆದು
ಕೊಂಡು ಬಂದವನಾರು? ॥೫೨॥ ಅವು ತನ್ನ ಪಾದವನ್ನು ತೊಳೆದ ನೀರೇ ಆಗಿದ್ದರೆ
ವಿಷ್ಣುವು ಅದರಿಂದ ಭಯಪಟ್ಟುದು ಹೇಗೆ? ಮಹೇಶ್ವರನ ಬಳಿಗೆ ಬಿನ್ನೈಸಿಕೊಳ್ಳುವುದ
ಕ್ಕೆ ಅವನು ಏಕೆಬಂದನು? ॥ ಆಕಾಶಕ್ಕೆ ವಿಷ್ಣುಪದವೆಂಬದಾಗಿ ಒಂದು ಹೆಸರುಂಟು.
ಅಂತಹ ವಿಷ್ಣುಪದದಲ್ಲಿ ಈ ನದಿಯು ಪ್ರವಹಿಸಿದುದರಿಂದ ಇದಕ್ಕೆ "ವಿಷ್ಣುಪದೀ"
ಎಂಬ ಪ್ರಸಿದ್ಧಿಯುಂಟಾಯಿತು ॥೫೪॥ ಆಕಾಶಕ್ಕೂ ವಿಷ್ಣುಪಾದಕ್ಕೂ ಒಂದೇ ಹೆಸ
ರಿದ್ದಮಾತ್ರಕ್ಕೇ ಮುಖ್ಯವಾಗಿ ವಿಚಾರಮಾಡಿನೋಡಿದರೆ ವಿಷ್ಣುಪಾದವೇ ಆಕಾಶವಾ
ಗುವುದೆ? ॥೫೫॥ "ಹರಿ" ಎಂಬ ಹೆಸರು ಕಪ್ಪೆಗೂ ಇದೆ; ಲಕ್ಷ್ಮೀಪತಿಗೂ ಇದೆ.
ಇಷ್ಟುಮಾತ್ರದಿಂದಲೇ ಲೋಕದಲ್ಲಿ ಕಪ್ಪೆಯು ವಿಷ್ಣುವಾಗುವುದೆ? ಶಬ್ದಗಳು ಯೌ
ಗಿಕವಾದ ಅರ್ಥಗಳಿಂದ ನಾನಾವ್ಯಕ್ತಿವಾಚಕಗಳಾಗುತ್ತವೆ. ಗಂಗೆಯು ವಿಷ್ಣುವಿನ
ಪಾದದಿಂದ ಹುಟ್ಟಿದುದೆಂದು ಹೇಳುವ ಜನರು, ಅಂತಪ್ಪ ವಿಷ್ಣುವು ಸತ್ತರೀತಿಯನ್ನು
ಬುದ್ಧಿಯಲ್ಲಿ ವಿಚಾರಮಾಡಿ ತಿಳಿಯುವುದಿಲ್ಲವೊ? ಪೂರ್ವದಲ್ಲಿ ವಿಷ್ಣುವು ಬ್ರಹ್ಮಾಂಡಕ
ಟಾಹವು ಛೇದಿಸುವಂತೆ ಪಾದವನ್ನೆತ್ತಲಾಗಿ, ಪರಶಿವನು ಕೋಪಗೊಂಡು, ಆ ವಿಷ್ಣು
ವಿನ ಕಾಲನ್ನೂ ಉನ್ನತವಾದ ಬೆನ್ನುಮೂಳೆಯನ್ನು ಸಹ ಮುರಿದು, ಕೈಯಲ್ಲಿ ಖಟ್ವಾಂ
ಗಾಯುಧವನ್ನಾಗಿಮಾಡಿ ಹಿಡಿದುಕೊಂಡನು. ॥೫೯॥ ಮಹಾನಾಟಕವೊದಲಾದ
ಗ್ರಂಥಗಳು "ಭುವಿತ್ರಿವಿಕ್ರಮಮಹಾಕಂಕಾಲ" ಎಂಬ ವಚನಗಳಿಂದ ಇದೇ ಅರ್ಥ

ಕಾಲೇತಿವರೋಕ್ತಿಭಿಃ । ಮಹಾನಾಟಕಮುಖ್ಯೇಷುಗ್ರಂಥೇಷೂದ್ಘೋಷಯತ್ಸ್ವಲಮ್ ॥೬೦॥ ಕ್ಷಾಳಕಃಕ್ಷಾಳನಮಪಿಯುಜ್ಯತೇಪದಮಸ್ತಿಚೇತ್ । ಗ್ರಾವೋನಾಸ್ತಿಕುತಸ್ಸೀಮೇತ್ಯುಕ್ತೇರಸತಿತತ್ಪದೇ ॥೬೧॥ ಕ್ಷಾಲಕಃಕ್ಷಾಳನಮಪಿಕಥಂಸಂಭಾವ್ಯತೇಕ್ಷಿತೌ । ತತ್ಕಥಂವಿದ್ಯತೇತಚ್ಚಕಥಂಕ್ಷಾಳಿತವಾನಜಃ ॥೬೨॥ ಕಿಂಚತ್ರಿವಿಕ್ರಮೇವ್ಯೋಮ್ನಿಪ್ರಸಾರಿತಪದೇಸತಿ। ಬ್ರಹ್ಮಾಂಡಖರ್ಪರೇಭಿನ್ನೇತದೋಪರಿತನಂಜಲಮ್ ॥೬೩॥ ಆಯಾತಮಿತಿಪಕ್ಷೇಪಿಕಿಂತದ್ವಿಷ್ಣುಪದೋದಕಮ್ । ಆಪೀಯಜಹ್ನುನೋತ್ಸೃಷ್ಟಾಪುನರಪ್ಯಾತ್ಮಜಾನುತಃ ॥೬೪॥ ಯಥಾಖ್ಯಾಭೂಜ್ಜಾಹ್ನವೀಗಂಗಾಸರ್ವಲೋಕೇಷುವಿಶ್ರುತಾ । ಹರಿಪಾದಭವೇತ್ಯಸ್ಯಾವಿದ್ಯತೇನಾಮಕಿಂತಥಾ ॥ ಕಿಂವಿಷ್ಣುದೀರ್ಘಿಕಾಮಾಹುರುತ್ಯೈನಾಂಸುರದೀರ್ಘಿಕಾಮ್।ಸ್ವರ್ಣದೀತ್ಯುಚ್ಯತೇ:ಕಿಂವಾವಿಷ್ಣುಲೋಕನದೀತಿವಾ॥ ವಿಯದ್ಗಂಗೇತಿವಾಕಿಂನುಪಾದಗಂಗೇತಿವಾಶ್ರುತಾ।ಮಂದಾಕಿನೀತಿವಾಸಾಕಿಂವೈಷ್ಣವೀವೇತಿಕಥ್ಯತೇ॥

---

ವನ್ನು ಚೆನ್ನಾಗಿ ಸಾರುತ್ತಿರಲಾಗಿ ||೬೦|| ಅಂಥ ವಿಷ್ಣುವಿನ ಪಾದದಿಂದ ಗಂಗೆಯು ಹುಟ್ಟಿತೆಂಬ ಮಾತು ಹೇಗೆ ಸಂಗತವಾಗುವುದು ? ಏಕೆಂದರೆ—ಕಾಲಿದ್ದರೆ ಅವನ್ನು ತೊಳೆಯುವವನೂ ತೊಳೆಯುವುದೂ ಸಹ ಸಂಭವಿಸಬಹುದು. ಊರೇಯಿಲ್ಲವಾದಮೇಲೆ ಎಲ್ಲೆಯೆಲ್ಲಿರುವುದು ? " ಎಂಬ ನಾಣ್ಣುಡಿಯಂತೆ, ಕಾಲೇಯಿಲ್ಲವಾದಬಳಿಕ ಅದನ್ನು ತೊಳೆವನೂ ತೊಳೆವುದೂಕೂಡ ಭೂತಲದಲ್ಲಿ ಹೇಗೆ ಸಂಭವಿಸುವುದು? ಅದುಕಾರಣ ಈಶ್ವರನಿಂದ ಮುರಿಯಲ್ಪಟ್ಟ ಆ ವಿಷ್ಣುವಿನ ಕಾಲು ಮರಳಿ ಇರುವುದು ಹೇಗೆ? ಅದನ್ನು ಬ್ರಹ್ಮನು ತೊಳೆದುದು ಹೇಗೆ? ||ಇವಲ್ಲದೆ " ಆ ತ್ರಿವಿಕ್ರಮನು ಆಕಾಶಕ್ಕೆ ಕಾಲನ್ನು ನೀಡಲಾಗಿ, ಬ್ರಹ್ಮಾಂಡದ ಓಟೆಯು ಒಡೆದುಹೋಯಿತು. ಆಗ ಅದರ ಮೇಲಿದ್ದ ಜಲವು ಭೂಮಿಗೆ ಇಳಿದುಬಂದಿತು " ಎಂದು ಹೇಳುವ ಪಕ್ಷದಲ್ಲೂ ಕೂಡ ಅದು ವಿಷ್ಣುಪಾದೋದಕವಾದೀತೆ? ಇಲ್ಲ. ಮತ್ತೂ ಆ ವಿಷ್ಣುಪದಿಯ ಉದಕವನ್ನು ಜಹ್ನುಋಷಿಯು ಪೂರ್ಣವಾಗಿ ಕುಡಿದು, ಮರಳಿ ಆತನ ಮೊಣಕಾಲಿನಿಂದ ಬಿಡಲ್ಪಟ್ಟಕಾರಣ ಗಂಗೆಯು "ಜಾಹ್ನವಿ" ಎಂದು ಹೇಗೆ ಪ್ರಸಿದ್ಧಳಾದಳೋ ಹಾಗೆ, ಈ ಗಂಗೆ "ಹರಿಪಾದಭವಾ" ಎಂಬ ಹೆಸರು ಈಕೆಗೆ ಇರುವುದೆ ? ||೬೩|| ಮತ್ತೂ ಈ ಗಂಗೆಯು ಹೆಸರನ್ನು ದೇವನದಿಯೆಂದು ಹೇಳುವರೊ ? ವಿಷ್ಣುನದಿಯೆಂದು ಹೇಳುವರೂ? ಮತ್ತೂ ಅದು ಸ್ವರ್ಗನದಿಯೆಂದು ಹೇಳಲ್ಪಡುವುದೊ ? ವೈಕುಂಠನದಿಯೆಂದು ಕರೆಯಲ್ಪಡುವುದೊ ? ||೬೬|| ಅದಕ್ಕೆ ಆಕಾಶಗಂಗೆಯೆಂದು ಪ್ರಸಿದ್ಧಿಯಿರುವುದೊ? ಪಾದದ ಗಂಗೆಯೆಂದು ಪ್ರಸಿದ್ಧಿಯಿರುವುದೊ ? ಅದು ಮಂದಾಕಿನಿಯೆಂದು ಕರೆಯಲ್ಪಡುವುದೊ ? ವೈಷ್ಣವಿಯೆಂದು ಕರೆಯಲ್ಪಡುವುದೊ? ||೬೭|| ಈ ನಿಜವಾದ ಸಂಗತಿ

ಯಥಾರ್ಥಮೇತದಜ್ಞಾತ್ವಾಯೈರನ್ಯದಘಮುಚ್ಯತೇ । ತನ್ಮುಖೇಷು ನಜಾ
ಯನ್ತೇ ಕಥಂವಾ ಕ್ರಿಮಿರಾಶಯಃ ॥೧೮॥ ಯುಕ್ತಂವಾಶ್ರೋತುಮೇತಾನಿ
ದುರ್ವಚಾಂಸಿ ದುರಾತ್ಮನಾಂ। ಹ್ಯೋಽವಾ ಪೂರ್ವದಿನೇ ಹ್ಯಸ್ತೋಽಬಬಂಧಬ
ಲಿಮಚ್ಯುತಃ ॥೧೯॥ ತೇನ ತ್ರಿವಿಕ್ರಮೇಣೈವ ಪಾದೇ ವ್ಯೋಮ್ನಿ ಪ್ರಸಾರಿತೇ।
ಕಮಣ್ಡಲೂದಕೇನಾಸ್ಮಿನ್ ಬ್ರಹ್ಮಣಾ ಕ್ಷಾಳಿತೇ ಸತಿ॥೨೦॥ ಉತ್ಪನ್ನಾಕಿಲ
ಸಾಗಂಗೇತ್ಯಬದ್ಧಂ ತದಸಾಂಪ್ರತಮ್ । ವಿರುದ್ಧಂ ಪಾಪಸಂಶ್ಲಿಷ್ಟಂ ಕಥಂ
ಸಹ್ಯಮಿದಂ ವಚಃ ॥೨೧॥ ನೀಲಕಣ್ಠೋ ಮಹಾದೇವೋ ಧೃತ್ವಾ ಗಙ್ಗಾಮ
ತಃಪರಮ್ । ಯುಗೇಷು ಸಮತೀತೇಷು ಬಹುಷ್ವಥ ಕದಾಚನ ॥೨೨॥ ಲೋ
ಕಮಾತಾ ಮಹಾದೇವೀ ಮಮ ಪತ್ನೀ ಪುರಾ ಹಿ ಸಾ । ಇತಿ ಪೌರಾಣವಚನಾತ್ಪ
ರಮಾನನ್ದ ನಿರ್ಭರಃ ॥೨೩॥ ಆಚಷ್ಟ ಗೌರ್ಯೈ ಗಙ್ಗಾಯಾ ಜನ್ಮನಃ ಕಾರಣಕ್ರ
ಮಮ್ । ಮಹಾಯುಗಾರ್ಬುದಾನೀಕೇ ಗತೇಽಥ ಸ ಭಗೀರಥಃ ॥೨೪॥ ಕೃ
ತ್ವಾತಿದುಸ್ಸಹತರಂ ತಪಸ್ಸದ್ಭಕ್ತಿಸಂಯುತಃ । ಅನಯದ್ಧರಣೀಂ ಗಙ್ಗಾಂ
ಸಾ ನದೀ ಜಗತೀತಲೇ ॥೨೫॥ ರೇಜೇ ಭಾಗೀರಥೀ ನಾಮ್ನಾ ವಿಖ್ಯಾತಾ ಲೋ

---

ಯನ್ನರಿಯದೆ ಯಾವ ಪಾಪವಚನವನ್ನು ನುಡಿಯುತ್ತಾರೋ? ಅವರ ಬಾಯಲ್ಲಿ ಹು
ಳುಗಳು ಹುಟ್ಟದೆಯಿರುವುವೆ?॥೧೮॥ ದುರ್ಜನರ ಈ ದುರುಕ್ತಿಗಳನ್ನು ಕೇಳಬಹುದೆ?
ನಿನ್ನೆಯೋ ಮೊನ್ನೆಯೋ ಸತ್ತ ವಿಷ್ಣುವು ಬಲಿಚಕ್ರವರ್ತಿಯನ್ನು ಬಂಧಿಸಿದನು. ಅಂ
ಥ ತ್ರಿವಿಕ್ರಮನು ಆಕಾಶಕ್ಕೆ ಪಾದವನ್ನು ನೀಡಲಾಗಿ, ಬ್ರಹ್ಮನು ಅದನ್ನು ತನ್ನ ಕ
ಮಂಡಲುಜಲದಿಂದ ತೊಳೆದ ಕಾರಣ, ಆ ಗಂಗೆಯು ಹುಟ್ಟಿತೆಂದು ಹೇಳಲ್ಪಡುವುದ
ಷ್ಟೇ ಅದು ಸುಳ್ಳಾಗಿಯೂ ಅಸಂಬದ್ಧವಾಗಿಯೂ, ಪುರಾಣಾರ್ಥಕ್ಕೆ ವಿರುದ್ಧವಾ
ಗಿಯೂ, ಪಾಪಭರಿತವಾಗಿಯೂ ಇದೆ. ಈ ದುರ್ವಚನವನ್ನು ಹೇಗೆ ಸಹಿಸಬಹು
ದು? ॥೨೧॥ ಮಹಾದೇವನಾದ ಪರಮೇಶ್ವರನು ಗಂಗಾಧಾರಣೆಯನ್ನು ಮಾಡಿದಬಳಿ
ಕ ಎಷ್ಟೋ ಯುಗಗಳಾದ ನಂತರ ಬಂದಾನೊಂದು ಕಾಲದಲ್ಲಿ ॥೨೨॥ ಪರಮಾನಂದ
ಭರಿತನಾಗಿದ್ದ ಪರಶಿವನು “ ಲೋಕಮಾತಾ ಮಹಾದೇವೀ ಮಮ ಪತ್ನೀ ಪುರಾ ಹಿ ಸಾ ”
ಎಂಬುದು ಮೊದಲಾಗಿ ಆರಂಭಿಸಲ್ಪಟ್ಟಿರುವ ಪುರಾಣವಚನಗಳಿಂದ ಗಂಗೋತ್ಪತ್ತಿ
ಕಾರಣದ ರೀತಿಯನ್ನು ಗೌರಿಗೆ ನಿರೂಪಿಸಿದನು. ಬಳಿಕ ಅನೇಕಾರ್ಬುದಮಹಾಯು
ಗಗಳು ಕಳೆದಮೇಲೆ ಭಗೀರಥನು ॥೨೪॥ ಉತ್ತಮಭಕ್ತಿಯಿಂದ ಕೂಡಿದವನಾಗಿ
ಅತ್ಯಂತ ದುಸ್ಸಹವಾದ ತಪಸ್ಸನ್ನಾಚರಿಸಿ, ಗಂಗೆಯನ್ನು ಭೂಮಿಗೆ ಕರೆದುಕೊಂಡು
ಬಂದನು. ಲೋಕಪಾವನವಾದ ಆ ನದಿಯು ಭೂಮಿಯಲ್ಲಿ “ ಭಾಗೀರಥೀ ”
ಎಂಬ ಹೆಸರಿನಿಂದ ಪ್ರಖ್ಯಾತವಾಗಿ ಒಪ್ಪಿತು. ಇಂತಪ್ಪ ನದಿಯು ವಾಮನರೂ

ಕಪಾವನೀ । ಪಿಷಾವಾಮನಪಾದಾತ್ತು ಸಮುದ್ಭೂತಾ ಕಥಂನದೀ ॥೩೬॥ ಮತ್ಸ್ಯಕಚ್ಛಪಭೂದಾರನರಸಿಂಹಾದಯಃ ಕಥಮ್। ತತ್ಪೂರ್ವಂಸಮಜಾಯನ್ತ ವಿರೋಧಸ್ಸುಮಹಾನಯಮ್॥೩೭॥ ಅವತಾರೋಹರೇರಾದ್ಯೋಮತ್ಸ್ಯೋಗಜ್ಗಾ ಸಮುತ್ಥಿತಃ । ಅಗಸ್ತ್ಯಸ್ಯಾಂಜಲಾವರ್ಘ್ಯದಾನಕಾಲೇಸಮಾಗತಃ ॥೩೮॥ ಸೋಽಪ್ಯಂಜಲಾವರ್ತಮಾನಂಮತ್ಸ್ಯಂತಂಸ್ವರ್ಣವಿಗ್ರಹಮ್ । ವಿಲೋಕಯನ್ವಿಹಾಯಾರ್ಘ್ಯಮತಿಷ್ಠತ್ಸುಚಿರಂಮುದಾ ॥೩೯॥ ತತೋಽಬಭಾಷೇಮತ್ಸ್ಯೋಽಸೌತಂಮುನಿಂತಪಸಾಂನಿಧಿಮ್। ಮುಂಚಮಾಮಚ್ಯುತಸ್ಸೋಽಹಂಭೃಗೋಶ್ಶಾಪಾನ್ಮಹಾಮುನೇ॥೪೦॥ ಏತಜ್ಜನ್ಮಮಮಾಯಾತಮಿತ್ಯುಕ್ತ್ವಾ ಶಿವವೈಭವಮ್ । ಸ್ಥಾಪಯಾಮಾಸನಿಖಿಲಂಪುರಾಣೇಮತ್ಸ್ಯನಾಮನಿ ॥೪೧॥ ತತ್ಪೂರ್ವಂಕಿಮಿದಂಪೂರ್ವಂಕಥಂವಾಮನಪಾದತಃ । ಜಾತಾಭಾಗೀರಥೀಗಜ್ಗಾವಿಖ್ಯಾತಾಲೋಕಪಾವನೀ ॥೪೨॥ ಕಿಂಚಾದಿಕೂರ್ಮೋಜಲಧೌಭೂತ್ವಾಽಜಪತ್ತಪಸ್ವಿನಾಮ್ । ಪರಂಕೂರ್ಮಪುರಾಣಂ ಶ್ರೀಮಹಾದೇವಸಮರ್ಥಕಮ್ ॥೪೩॥ ಗಜ್ಗಾತಟೇಸ್ಥಿತಇತಿ

---

ರ್ತಿಯ ಪಾದದಿಂದ ಹುಟ್ಟಿರುವುದು ಹೇಗೆ ? ॥೩೬॥ ಮತ್ಸ್ಯ ಕೂರ್ಮ ವರಾಹ ನೃಸಿಹ್ಮ ಮೊದಲಾದುವುಗಳು ಆ ಗಂಗೋದಯಕ್ಕೆ ಮೊದಲೇ ಹುಟ್ಟಿದುದುಹೇಗೆ ? ಇದು ಬಹಳ ಪೂರ್ವಾಪರವಿರುದ್ಧವಾದ ಮಾತು.॥೩೭॥ ವಿಷ್ಣುವಿನ ಮೊದಲನೆಯ ಅವತಾರವು ಮತ್ಸ್ಯರೂಪವಾದುದು, ಆ ಮೀನು ಗಂಗೆಯಲ್ಲಿ ಹುಟ್ಟಿ, ಅಗಸ್ತ್ಯಮಹರ್ಷಿಯು ಅರ್ಘ್ಯವನ್ನು ಕೊಡುತ್ತಿರುವ ಕಾಲದಲ್ಲಿ ಬೊಗಸೆಯಲ್ಲಿ ಬಂದಿತು॥೩೮॥ ಆ ಋಷಿಯು ತನ್ನ ಬೊಗಸೆಯಲ್ಲಿದ್ದ ಚಿನ್ನದ ಬಣ್ಣದಮೈಯುಳ್ಳುದಾಗಿದ್ದ ಆ ಮೀನನ್ನು ನೋಡಿ, ತನ್ನ ಅರ್ಘ್ಯಪ್ರದಾನಕಾರ್ಯವನ್ನು ಬಿಟ್ಟು, ಬಹುಕಾಲ ಸಂತೋಷದಿಂದ ಅದನ್ನೇ ನೋಡುತ್ತಿರಲು ॥೩೯॥ ತಪೋನಿಧಿಯಾದ ಆ ಮುನಿಯನ್ನು ಕುರಿತು ಈ ಮೀನು— " ಎಲೈ ಋಷಿಯೆ, ನನ್ನನ್ನು ಬಿಟ್ಟುಬಿಡು, ನಾನು ವಿಷ್ಣುವು, ಭೃಗುಮಹರ್ಷಿಯ ಶಾಪದಿಂದ ಈ ಜನ್ಮವು ನನಗೆ ಪ್ರಾಪ್ತವಾಗಿರುವುದು. " ಎಂದು ಹೇಳಿ, ಸಕಲವಾದ ಶಿವಾಧಿಕ್ಯವೈಭವವನ್ನು ಮತ್ಸ್ಯಪುರಾಣದಲ್ಲಿ ಸ್ಥಾಪಿಸಿರುವನು. ॥೪೧॥ ಆ ಗಂಗೋದಯವು ಮೊದಲೊ? ಈ ಮತ್ಸ್ಯಾವತಾರವು ಮೊದಲೊ ? ಲೋಕಪಾವನಿಯಾದ ಭಾಗೀರಥಿಯೂ ಆದ ಆ ಗಂಗೆಯು ವಾಮನನ ಪಾದದಿಂದ ಹುಟ್ಟಿದುದು ಹೇಗೆಂಬುದನ್ನು ಈಗ ವಿಚಾರಮಾಡಿನೋಡು ॥೪೨॥ ಮತ್ತೂ ಆದಿಕೂರ್ಮಮೂರ್ತಿಯು ಸಮುದ್ರದಲ್ಲಿ ಉದಿಸಿ ಗಂಗಾತೀರದಲ್ಲಿ ಕುಳಿತುಕೊಂಡು, ಶ್ರೀಮಹಾದೇವಾಧಿಕ್ಯವನ್ನು ಸಮರ್ಥನಮಾಡುವ ಕೂರ್ಮಪುರಾಣವನ್ನು ಮುನಿಗಳಿಗೆ ಉಪದೇಶಿಸಿದನು, ಎಂದು

ಖ್ಯಾತಪೌರಾಣವಾಕ್ಯತಃ ॥೮೪॥ ಸವರಾಹಾವತಾರೋಽಪಿಪುರಾಗಙ್ಗಾತಟೇಸ್ಥಿತಃ । ಪುರಾಣಂಕಿಲವಾರಾಹಮೂಹಸದ್ಭಕ್ತಿಸಂಯುತಃ ॥ ಮುನೀನಾಂಶೃಣ್ವತಾಂಸರ್ವ್ವಂಶ್ಮಹಾದೇವಸಮರ್ಥಕಮ್ । ತತ್ಪೂರ್ವಂಕಿಮಿದಂಪೂರ್ವಂಕಥಂವಾಮನಪಾದತಃ ॥೮೫॥ ಜಾತಾಭಾಗಿರಥೀಗಙ್ಗಾವಿಖ್ಯಾತಾಲೋಕಪಾವನೀ । ಅಪಿಚಾನ್ಯೋಽನೃಸಿಂಹಾವತಾರಶ್ಶ್ರೀಶೈಲಕನ್ದರೇ ॥೮೬॥ ಸರಸ್ವತ್ಯಾಸ್ತಥಾಸ್ವರ್ಗಗಙ್ಗಾಪಾತಾಳಗಙ್ಗಯೋಃ। ಸಙ್ಗಮಂಭವ್ಯಮಾವಾಹನಾಖ್ಯತೀರ್ಥಮಪಿಪ್ರತಿ ॥೮೭॥ ಶಶ್ವದ್ಗತಾಗತಂಕುರ್ವನ್ನರಸಿಂಹಾಹ್ವಯಂಬಿಲಮ್ । ಕೃತ್ವಾಸಮಾಗತ್ಯತತ್ರನದ್ಯಾಂವಿಹಿತಮಜ್ಜನಃ ॥೮೮॥ ಆವಾಹನಾಖ್ಯತೀರ್ಥಾಧಿವಾಸಂ ಶ್ರೀಶರಭೇಶ್ವರಮ್ । ನರಸಿಂಹೇಶ್ವರಂಭಕ್ತ್ಯಾಪೂಜಯನ್ವರ್ತತೇಽನಿಶಂ ॥೯೦॥ ತತ್ಪೂರ್ವಂಕಿಮಿದಂಪೂರ್ವಂಕಥಂವಾಮನಪಾದತಃ ॥ ಜಾತಾಭಾಗೀರಥೀಗಙ್ಗಾವಿಖ್ಯಾತಾಲೋಕಪಾವನೀ ॥೯೧॥ ಕಿಂಚೋತ್ಕ್ಷಿಪ್ತಪದೇಸರ್ವ್ವಗಾಬ್ರಹ್ಮಾಣ್ಡಂತ್ರಿವಿಕ್ರಮೇ । ಉಮಾವಿವಾಹಸಮಯೇಕೃಪಾವಿಷ್ಟೇನಶಂ

---

ಪ್ರಸಿದ್ಧವಾಗಿರುವ ಪುರಾಣವಚನವಿರುವುದರಿಂದ ಗಂಗಾವತಾರವು ಮೊದಲೊ? ವಿಷ್ಣುವಿನ ಅವತಾರವು ಮೊದಲೊ ? ॥೮೪॥ ಮತ್ತೂ ಆ ವರಾಹಾವತಾರಮೂರ್ತಿಯೂ ಕೂಡ ಗಂಗಾತೀರದಲ್ಲಿ ಕುಳಿತು ಸದ್ಭಕ್ತಿಯಿಂದ ಕೂಡಿ ಶಿವಾಧಿಕ್ಯಸಮರ್ಥಕವಾದ ವಾರಾಹಪುರಾಣವನ್ನು ಮುನಿಗಳಿಗೆ ನಿರೂಪಿಸಿದನಷ್ಟೆ. ಹೀಗಿರುವುದರಿಂದ ಗಂಗಾವತಾರವು ಮೊದಲೊ? ವಿಷ್ಣುವಿನ ಅವತಾರವು ಮೊದಲೊ ? ಲೋಕಪ್ರಸಿದ್ಧಗಳಾದ ಆ ಭಾಗೀರಥಿಯು ವಾಮನಮೂರ್ತಿಯ ಪಾದದಿಂದ ಉದ್ಭವಿಸಿದಳೆಂದು ಅದು ಹೇಗೆ ಹೇಳಬಹುದು? ವಿಚಾರಮಾಡಿನೋಡು. ಮತ್ತೂ ವಿಷ್ಣುವಿನ ಮತ್ತೊಂದು ಅವತಾರವಾದ ನೃಸಿಂಹನು ಶ್ರೀಶೈಲದ ಗುಹೆಯಲ್ಲಿರುತ್ತ, ಸರಸ್ವತಿ-ಸ್ವರ್ಗಂಗೆ-ಪಾತಾಳಗಂಗೆ-ಎಂಬ ಈಮೂರು ನದಿಗಳೂ ಸಂಗಮವಾಗಿರುವ ಆವಾಹನವೆಂಬ ತೀರ್ಥಕ್ಕೆ ನರಸಿಂಹಬಿಲವೆಂಬ ಅಂತರ್ಮಾರ್ಗವನ್ನುಮಾಡಿಕೊಂಡು ಆಗಾಗ್ಗೆ ಹೋಗಿಬರುತ್ತ, ಆ ನದಿಯಲ್ಲಿ ಸ್ನಾನಮಾಡಿದವನಾಗಿ ॥೮೮॥ ಆವಾಹನವೆಂಬ ತೀರ್ಥದಬಳಿಯಲ್ಲಿ ವಾಸವಾಗಿರುವ ಶ್ರೀ ನೃಸಿಂಹನಿಗೆ ಅಧಿಪತಿಯಾದ ಶ್ರೀಶರಭೇಶ್ವರನನ್ನು ಭಕ್ತಿಯಿಂದ ಯಾವಾಗಲೂ ಪೂಜಿಸುತ್ತಲಿರುವನು ॥೯೦॥ ಹೀಗಿರುವುದರಿಂದ ಗಂಗಾವತಾರವು ಮೊದಲೊ ? ವಿಷ್ಣುವಿನ ವಾಮನಾವತಾರವು ಮೊದಲೊ ? ವಾಮನನ ಪಾದದಿಂದ ಲೋಕಪ್ರಸಿದ್ಧವಾದ ಜಗತ್ಪಾವನೀ ಗಂಗೆಯು ಹುಟ್ಟಿದಳೆಂದು ಹೇಳುವುದು ಹೇಗೆ ? ಎಂಬುದನ್ನು ವಿಚಾರಮಾಡಿನೋಡು. ॥೯೧॥ ಮತ್ತೂ ಈ ಸಂದರ್ಭದಲ್ಲಿ ನಡೆದಿರುವ ನಿಜವಾದ ಸಂಗತಿ ಏನೆಂದರೆ— ತ್ರಿವಿಕ್ರಮನು ಬ್ರಹ್ಮಾಂಡದ ಕೊನೆಯವರೆಗೆ ತನ್ನ

ಭುನಾ ॥೯೨॥ ದತ್ತೇಕಮಣ್ಡಲೌಗಙ್ಗಾದ್ಯಶೇಷೋದಕಪೂರಿತೇ । ಸ್ಥಿತೇನಸಲಿಲಾಸ್ತ್ರೇಣತತ್ಪದಂಕಮಲಾಸನಃ॥೯೩॥ ನಿನಾಯಶಾನ್ತಿಮಿತ್ಯೇತತ್ಕಿಂಸ್ಯಾತ್ತತ್ಪದಸೇಚನಮ್ । ಕಥಂನುಜಲಮಸ್ತ್ರಂಸ್ಯಾದಿತ್ಯತ್ರೋತ್ತರಮುಚ್ಯತೇ ॥೯೪॥ ಮಹಿಷಾಸುರಸಂಹಾರಕೃತೇದುರ್ಗ್ಯೈದದುಸ್ಸುರಾಃ। ಶಿವಶ್ಶೂಲಂಹರಿಶ್ಚಕ್ರಮಬ್ಜಸೂತಿಃಕಮಣ್ಡಲುಮ್ ॥೯೫॥ ಮಹೇನ್ದ್ರಶ್ಶಕ್ತಿಮಿತ್ಯೇವಮಾಯುಧಾನಿಸಮುತ್ಸುಕಾಃ। ಮಾರ್ಕಣ್ಡೇಯಪುರಾಣೇಽತಿವಿಶದಂಪ್ರತಿಪಾದಿತಾತ್ ॥೯೬॥ ಬ್ರಾಹ್ಮಣೇಮನ್ತ್ರಪೂತೇನೇತ್ಯೇತದ್ವಾಕ್ಯಾದನನ್ತರಮ್ । ಕಮಣ್ಡಲುಜಲೋತ್ಕ್ಷೇಪಾದಿತಿವಾಕ್ಯಾತ್ಪರಿಶ್ರುತಾತ್ ॥ ಹತವೀರ್ಯಾಇತಿತತೋಽಹತೌಜಸಇತೀರಿತಾತ್ । ಮಹಿಷಾಸುರಮುಖ್ಯಾಸ್ತೇಹತಾಸ್ಸರ್ವೇಮಹಾಸುರಾಃ ॥೯೭॥ ತತ್ಕಮಣ್ಡಲುಮಧ್ಯಸ್ಥಪಯೋಬಿನ್ದುಸಮುತ್ಕ್ಷಿತಾಃ । ತಸ್ಮಾದವಗತಿಂಪ್ರಾಪವಾಮನಪ್ರೋದ್ಧೃತಂಪದಮ್ ॥೯೮॥ ಕಮಲಾಸನವಿಕ್ಷಿಪ್ತಕಮಣ್ಡಲುಜಲಾಸ್ತ್ರತಃ । ಉಮಾ

---

ಪಾದವನ್ನೆತ್ತಲು, ಕೃಪಾವಿಶಿಷ್ಟನಾದ ಪರಶಿವನಿಂದ॥ ಉಮಾವಿವಾಹಕಾಲದಲ್ಲಿ ತನಗೆ ಕೊಡಲ್ಪಟ್ಟದ್ದ ಗಂಗಾದಿ ಸಕಲತೀರ್ಥಜಲದಿಂದ ತುಂಬಿದ ಕಮಂಡಲುವಿನಲ್ಲಿದ್ದ ಜಲಾಸ್ತ್ರದಿಂದ ಬ್ರಹ್ಮನು ಆ ತ್ರಿವಿಕ್ರಮನ ಪಾದವನ್ನು ತಗ್ಗಿಸಿದನು .ತಾವನ್ಮಾತ್ರಕ್ಕೇ ಅದು ವಾಮನಪಾದದ ಪ್ರಕ್ಷಾಳನಜಲವೆನಿಸಿಕೊಳ್ಳುವುದೆ? ಆ ಕಮಂಡಲುವಿನ ಜಲವೇ ಅಸ್ತ್ರವಾದುದು ಹೇಗೆಂದರೆ, ಉತ್ತರವನ್ನು ಹೇಳುತ್ತೇನೆ—॥೯೪॥ಮಹಿಷಾಸುರನ ಸಹ್ಮಾರಮಾಡುವುದಕ್ಕಾಗಿ ದುರ್ಗೆಗೆ ದೇವತೆಗಳೆಲ್ಲರೂ ನಾನಾಅಸ್ತ್ರಶಸ್ತ್ರಗಳನ್ನು ಕೊಟ್ಟರು. ಶಿವನು ಶೂಲವನ್ನೂ, ವಿಷ್ಣುವು ಚಕ್ರವನ್ನೂ, ಬ್ರಹ್ಮನು ಕಮಂಡಲುವನ್ನೂ ॥೯೫॥ ಇಂದ್ರನು ಶಕ್ತ್ಯಾಯುಧವನ್ನೂ, ಈಪ್ರಕಾರವಾಗಿ ನಾನಾಯುಧಗಳನ್ನು ದೇವತೆಗಳು ಉತ್ಸಾಹಯುಕ್ತರಾಗಿ ಕೊಟ್ಟರೆಂದು ಮಾರ್ಕಂಡೇಯಪುರಾಣದಲ್ಲಿ ಅತ್ಯಂತವಿಶದವಾಗಿ ಹೇಳಲ್ಪಟ್ಟಿರುವಕಾರಣ ॥೯೬॥ “ ಬ್ರಾಹ್ಮಣೇಮಂತ್ರಪೂತೇನ ” ಎಂಬ ವಾಕ್ಯದನಂತರ “ ಕಮಂಡಲುಜಲೋತ್ಕ್ಷೇಪಾತ್ ” ಎಂಬ ವಾಕ್ಯವಿರುವುದರಿಂದಲೂ ॥೯೭॥ ಬಳಿಕ ರಾಕ್ಷಸರು ಶಕ್ತಿಗುಂದಿದರು, ಪರಾಕ್ರಮಹೀನರಾದರು ಎಂದು ಹೇಳಲ್ಪಟ್ಟಿರುವುದರಿಂದಲೂ,ಅನಂತರ ಮಹಿಷಾಸುರನೇ ಮೊದಲಾದ ಮಹಾರಾಕ್ಷಸರೆಲ್ಲರೂ ಆ ಕಮಂಡಲುಮಧ್ಯದಲ್ಲಿದ್ದ ಜಲಕಣಗಳಿಂದ ಸೇಚಿಸಲ್ಪಟ್ಟವರಾಗಿ ಕೊಲ್ಲಲ್ಪಟ್ಟರು ” ಎಂದು ಹೇಳಲ್ಪಟ್ಟಿರುವುದರಿಂದಲೂ ಆ ಕಮಂಡಲುಜಲವೇ ಅಸ್ತ್ರವೆಂಬುದು ಸ್ಪಷ್ಟವಾಗುವುದು. ಬ್ರಹ್ಮನು ಉಪಯೋಗಿಸಿದ ಅಂಥ ಜಲಾಸ್ತ್ರದಿಂದಲೇ ವಾಮನಮೂರ್ತಿ ಯೆತ್ತಿದ್ದ ಪಾದವು ತಗ್ಗಿಹೋಯಿತು ॥೯೮॥ ಹೀಗಿರುವಲ್ಲಿ ಉಮೆಯ ಕೈ ಸೋಂಕಿನಿಂದ ಶಿವನಿಗುಂಟಾದ ಆನಂದಬಾಷ್ಪದಿಂದ ಜನಿಸಿದ ಗಂಗೆ

ಕರಸ್ಪರ್ಶಜಾತಹರಹರ್ಷಾಶ್ರುಸಂಭವಾ॥೧೦೦॥ ಗಂಗಾಕಥಂಹರಿಪದಪ್ರ
ಕ್ಷಾಳನಜಲಂಭವೇತ್। ಅಬದ್ಧಮೇತನ್ನಕಥಂಸ್ವಪಾದಸಲಿಲಂಹರಿಃ॥೧೦೧
ಅರ್ಘ್ಯಪಾದ್ಯಾಭಿಷೇಕಾನ್ನಪಾನಾರ್ಥಂಕಿಮಸೇವತ। ಕಥಮರ್ಜಾವ
ಭೂತ್ಸ್ವೀಯಪಾದಪ್ರಕ್ಷಾಳನಂಜಲಮ್ ॥೧೦೨॥ ಇತಿಪ್ರತ್ಯಯಸನ್ದೋ
ಹೇಸತಿಯುಕ್ತಂನತಾರ್ಕಿಕೈಃ। ವಕ್ತುಂವಿರುದ್ಧಂವಚನಂಪುರಾಣಾಗ
ಮಗರ್ಹಿತಮ್ ॥೧೦೩॥

ಇತ್ಯಸಂಖ್ಯಾತ..........ಶ್ರೀವೀರಶೈವಮತಾಚಾರ್ಯ ಗುರುರಾಜಸ್ಯ
ಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಣ್ಡಿತಾರಾಧ್ಯ
ಚರಿತ್ರೇ ಮಾವಪ್ರಕರಣೇ ಪರಮೇಶ್ವರಸ್ಯಗಙ್ಗಾಧಾರಣ
ಲೀಲಾಕಥನಂನಾಮ ಷೋಡಶೋಽಧ್ಯಾಯಃ.

---

ಯು, ಅದು ಹೇಗೆ ವಿಷ್ಣುವಿನ ಪಾದಪ್ರಕ್ಷಾಳನಜಲವೆನಿಸಿಕೊಂಡಾಳು ? ಈ ಮಾತು
ಅದು ಹೇಗೆ ಸುಳ್ಳಾಗುವುದಿಲ್ಲ? ವಿಷ್ಣುವು ತನ್ನ ಕಾಲ್ತೊಳೆದ ನೀರನ್ನು ॥೧೧॥ ತಾನೇ
ಅರ್ಘ್ಯಪಾದ್ಯಾಭಿಷೇಚನಗಳಿಗೂ ಅನ್ನ ಪಾನಗಳಿಗೂ ಉಪಯೋಗಿಸಿಕೊಂಡನೆ ? ತನ್ನ
ಪಾದಪ್ರಕ್ಷಾಳನಜಲವೇ ಆತನಿಗೆ ಹೇಗೆ ಸ್ವೀಕರಿಸಲರ್ಹವಾಯಿತು ? ॥೧೨॥ ಎಂಬ
ಸಂಶಯವು ಸ್ಪಷ್ಟವಾಗಿ ಹುಟ್ಟುತ್ತಿರಲಾಗಿ, ತಾರ್ಕಿಕರು ಯುಕ್ತಿವಿರುದ್ಧವಾಗಿಯೂ
ಪುರಾಣಾಗಮಗಳಿಂದ ನಿಂದಿತವಾಗಿಯೂ ಇರುವ ವಚನವನ್ನು ಹೇಳಬಹುದೆ ? ॥
ಎಂದು ಶ್ರೀಮನ್ಮಲ್ಲಿಕಾರ್ಜುನಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಗುರು
ರಾಜ ಕವಿಕೃತಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿ
ಬಸವಶಾಸ್ತ್ರಿ ರಚಿತವಾದ “ ಭಾವಮಂಜರಿ ” ಯೆಂಬ ಕನ್ನಡ ಟಿಪ್ಪ
ಣದಲ್ಲಿ ಮಾಸಪ್ರಕರಣದೊಳಗೆ ಪರಶಿವನ ಗಂಗಾಧಾರಣ ಲೀಲೆ
ಯನ್ನು ನಿರೂಪಿಸುವ ೧೬ ನೆಯ ಅಧ್ಯಾಯವು
ಮುಗಿದುದು.

# ಅಥ ಸಪ್ತದಶೋಽಧ್ಯಾಯಃ.

## (ಹರಿಹರಾಭೇದವಾದನಿರಸನಂ)

ಅಪಿಚಾಽಕರ್ಣಯಹರಿಹರಯೋರೇಕತಾಕ್ರಮಮ್ । ಹರೋಽಹರಿರ್ನಭವತಿಹರಿರ್ಭವತಿನೋಽಹರಃ ॥೧॥ ಗುಹಾಸುರವಧಾರ್ಥಾಯಹರಿರಾಗತ್ಯಶಂಕರಮ್।ಉವಾಚೇದಂವಚೋಽಭಕ್ತ್ಯಾಪ್ರಣಮ್ಯರಚಿತಾಂಜಲಿಃ॥ ಹರಶಂಕರಚಂದ್ರಾರ್ಧಧರವ್ಯಾಘ್ರಾಜಿನಾಂಬರ । ಉಮಾಸಂಮಿಶ್ರಿತಾರ್ಧಾಂಗದಯಾಮೃತಪಯೋನಿಧೇ ॥೨॥ ಪ್ರಣತಾಮರಸಂದೋಹಕರ್ಮಸಂಹಾರಕೃತ್ಪರ । ಗಜಾಸುರೋಪಶಮನಮಹಾಗುಣಗಣೋನ್ನತ ॥೪॥ ಗುಹಾಸುರೋನಾಮಮಹಾದೈತ್ಯಸ್ಸರ್ವದಿವೌಕಸಾಮ್ । ಕರೋತಿಕ್ಲೇಶಮತುಲಮಸಾಧ್ಯಸ್ಸತತಂಶಿವ ॥೫॥ ಪದ್ಮಾಸನೇನಭವತಾಮಯಾಪಿವ್ರಿಯತೇನಸಃ । ಕೇನಾಪ್ಯವಧ್ಯತಾಂಪ್ರಾಪ್ತೋವರೇಣಭವತೋಽನಿಶಮ್ ॥

---

## ೧೭ ನೆಯ ಅಧ್ಯಾಯವು.

### (ಹರಿಹರರಿಗೆ ಅಭೇದವೆಂಬ ವಾದವನ್ನು ಖಂಡಿಸುವುದು.)

ಮತ್ತೂ ಆ ಹರಿಹರರಿಬ್ಬರೂ ಒಂದೇಯೆಂಬ್ವ ಏಕೆಯ ರೀತಿಯನ್ನು ಕೇಳು-ಹರನು ಹರಿಯಾಗುವುದಿಲ್ಲ; ಹರಿಯು ಹರನಾಗುವುದಿಲ್ಲ ॥೧॥ ಗುಹನೆಂಬ ರಾಕ್ಷಸನನ್ನು ಕೊಲ್ಲುವುದಕ್ಕಾಗಿ ವಿಷ್ಣುವು ಶಿವನಬಳಿಗೆ ಬಂದು, ಭಕ್ತಿಯಿಂದ ನಮಸ್ಕರಿಸಿ, ಕೈಮುಗಿದುಕೊಂಡು ಹೀಗೆ ಹೇಳಿವನು—"ಎಲೈ ಪಾಪಹರನೂ ಭಕ್ತಸುಖಂಕರನೂ ಅರ್ಧಚಂದ್ರಶೇಖರನೂ ಹುಲಿಯಚರ್ಮವನ್ನು ಧರಿಸಿದವನೂ ಪಾರ್ವತೀಸಮೇತವಾದ ಅರ್ಧದೇಹವುಳ್ಳವನೂ ದಯಾರಸಸಮುದ್ರನೂ॥೨॥ ನಮಸ್ಕರಿಸಿದ ದೇವತಾಸಮೂಹದ ದುಷ್ಕರ್ಮವನ್ನು ನಾಶಗೊಳಿಸುವವನೂ, ಪರಬ್ರಹ್ಮನೂ, ಗಜಾಸುರನನ್ನು ಅಣಗಿಸಿದ ಮಹಾವೀರಗುಣವುಳ್ಳವನೂ, ಪ್ರಮಥಗಣಂಗಳಿಗೆ ಅಧೀಶ್ವರನೂ ಆದ ಪರಶಿವನೆ,॥೪॥ಗುಹಾಸುರನೆಂಬ ದೊಡ್ಡರಾಕ್ಷಸನನು ಎಲ್ಲರಿಗೂ ಅಸಾಧ್ಯನಾಗಿ ದೇವತೆಗಳಿಗೆಲ್ಲಾ ಯಾವಾಗಲೂ ಅಸಾಧಾರಣವಾದ ದುಃಖವನ್ನುಂಟುಮಾಡುತ್ತಿದ್ದಾನೆ ॥೫॥ ಅವನು ಬ್ರಹ್ಮನಿಂದಲೂ ನಿನ್ನಿಂದಲೂ ನನ್ನಿಂದಲೂ ಸಹ ಸಾಯದವನಾಗಿದ್ದಾನೆ. ನಿನ್ನ ವರದಿಂದ ಅವನು ಯಾರಿಂದಲೂ ಕೊಲ್ಲಲ್ಪಡದಿರುವ ತನವನ್ನು ಪಡೆದಿದ್ದಾನೆ ॥೬॥ ಎಲೈ

ತದ್ದೈತ್ಯಹನನೇಶಕ್ತಿಂದೇಹಿಮೇಕೃಪಯಾವಿಭೋ । ತ್ವಚ್ಚಿಹ್ನೈರೇವಸ
ಹತಸ್ಸ್ಯಾನ್ನೈವಪರಚಿಹ್ನಕೈಃ ॥೭॥ ಭವಚ್ಚಿಹ್ನಾನಿಮೇದೇವಪ್ರಯಚ್ಛ
ಪರಮೇಶ್ವರ। ಇತಿಸಂಪ್ರಾರ್ಥ್ಯವಿಶ್ವೇಶಂತದೀಯಾಜ್ಞಾಪನಾವಶಾತ್ ॥೮॥
ಸ್ವಸ್ಯದಕ್ಷಿಣವಾಮಾಭ್ಯಾಂಕರಾಭ್ಯಾಂಪರಮೇಶಿತುಃ । ಶಂಖಚಕ್ರಾದಿ
ಚಿಹ್ನಾನಿಪ್ರೀತ್ಯಾಧೃತ್ವಾಮಹಾಬಲಃ ॥೯॥ ಜಘಾನಗುಹದೈತ್ಯೇಯಂತದಾ
ದಿಸಹರಿರ್ಭುವಿ। ಜನೈಃಪ್ರಸಿದ್ಧಿಮಗಮತ್ಸ್ವಯಂಹರಿಹರಾಖ್ಯಯಾ ॥೧೦॥
ತತ್ತಾವದೇವನಹರೋಹರಿರ್ಲೋಕೇತಥೈವಚೇತ್ । ಭವಿತವ್ಯಂನಕಿಂಶ
ಕ್ತ್ಯಾಲಕ್ಷ್ಮ್ಯಾಗೌರ್ಯರ್ಧರೂಪಯಾ ॥೧೧॥ ತಜ್ಜಾತೇನಸ್ಮರಸ್ಕಂದರೂಪೇ
ಣಾಪಿನಕಿಂಪುನಃ। ತದ್ಗೃಹಸ್ಯೋಪರಿನಕಿಂವರಾಹವೃಷಲಾಂಛನೈಃ ॥೧೨॥
ಫಾಲೇಷುವಾಹರಿಹರಸೇವಕಾನಾಂನಿರಂತರಂ । ನಕಿಂಸಿತಮೃದಾಭೂ
ತ್ಯಾಭುವಿಕಾಕರದೋಷವಮ್ ॥೧೩॥ ತಿರ್ಯಕ್ಪುಂಡ್ರೋರ್ಧ್ವಪುಂ
ಡ್ರಾಭ್ಯಾಂಸ್ಥಾತವ್ಯಂವಾವಿಚಾರಿತೇ । ಕಂಠೇಪದ್ಮಾಕ್ಷರುದ್ರಾಕ್ಷತುಲ

---

ಸ್ವಾಮಿಯೆ, ಆ ರಾಕ್ಷಸನನ್ನು ಕೊಲ್ಲುವ ಶಕ್ತಿಯನ್ನು ನನಗೆ ದಯಪಾಲಿಸು. ಅವನು
ನಿನ್ನ ಚಿಹ್ನೆಗಳಿಂದ ಕೊಲ್ಲಲ್ಪಡುವನು; ಹೊರತು ಇತರಚಿಹ್ನೆಗಳಿಂದ ಕೊಲ್ಲಲ್ಪಡುವು
ದಿಲ್ಲ ॥೭॥ ಅದುಕಾರಣ, ಎಲೈ ಪರಮೇಶ್ವರನೆ, ನಿನ್ನ ಚಿಹ್ನೆಗಳನ್ನು ನನಗೆ ಅನುಗ್ರ
ಹಿಸು" ಎಂದು ಜಗದೀಶನನ್ನು ಪ್ರಾರ್ಥನೆಮಾಡಿ, ಅವನಪ್ಪಣೆಯಿಂದ ತನ್ನ ಬಲಗೈ
ಎಡಗೈಗಳಿಂದ ಪರಶಿವನ ಶಂಖಚಕ್ರ ಮೊದಲಾದ ಚಿಹ್ನೆಗಳನ್ನು ಪ್ರೀತಿಯಿಂದ ಧರಿಸಿ,
ಮಹಾಶಕ್ತಿಸಮನ್ವಿತನಾಗಿ ॥೯॥ ಗುಹದೈತ್ಯನನ್ನು ಕೊಂದನು. ಅದು ಮೊದಲ್ಗೊಂ
ಡು ಆ ವಿಷ್ಣುವು ಭೂಮಿಯಲ್ಲಿ ಹರಿಹರನೆಂಬ ಹೆಸರಿನಿಂದ ಜನರಿಂದ ಕರೆಯಲ್ಪಟ್ಟು
ಪ್ರಸಿದ್ಧಿಗೊಂಡನು. ॥೧೦॥ ಅಷ್ಟುಮಾತ್ರಕ್ಕೇ ಲೋಕದಲ್ಲಿ ಹರನು ಹರಿಯಾಗುವುದಿ
ಲ್ಲ; ಹಾಗಲ್ಲದೆ ಹರಿಯೂ ಹರನೂ ಒಂದೇದೇಹವುಳ್ಳವರಾಗಿದ್ದರೆ ಶಿವಶಕ್ತಿಯೂ ಕೂ
ಡ ಅರ್ಧಲಕ್ಷ್ಮಿಯು ಅರ್ಧಗೌರಿಯು ದೇಹದಿಂದ ಕೂಡಿರಬೇಕಾಗಿದ್ದಿತಲ್ಲವೆ! ॥೧೧॥ ಅವ
ರಿಂದ ಹುಟ್ಟಿದವನೂ ಮನ್ಮಥ ಷಣ್ಮುಖೈಕದೇಹಿಯಾಗಿರಬೇಕಾಗಿದ್ದಿತಲ್ಲವೆ? ಮತ್ತೂ
ಆ ಹರಿಹರ ದೇವಾಲಯದಮೇಲೆ ಹಂದಿಯು ಮತ್ತೂ ಬಸವನ ವಿಗ್ರಹಗಳೆರಡೂ ಗು
ರ್ತಾಗಿರಬೇಕಾಗಿದ್ದಿತಲ್ಲವೆ? ॥೧೨॥ ಅಂಥ ಹರಿಹರನ ಭಜಕರ ಹಣೆಗಳಲ್ಲಿ ಯಾವಾ
ಗಲೂ ಗೋಪೀಮೃತ್ತಿಕೆಯು ಮತ್ತೂ ವಿಭೂತಿಯು ಧಾರಣೆಗಳೆರಡೂ ಇರಬೇಕಲ್ಲವೆ?
ವಿಚಾರಮಾಡಿದರೆ ಭೂತಲದಲ್ಲಿ ಭಸ್ಮದ ತಿರ್ಯಕ್ಪುಂಡ್ರವನ್ನೂ ಮೃತ್ತಿಕೆಯ ಊರ್ಧ್ವ
ಪುಂಡ್ರವನ್ನೂ ಒಬ್ಬೊಬ್ಬರೇ ಧರಿಸಿರುವರೆಂಬುದು ಕಾಗೆಯ ಹಲ್ಲಿನಂತೆ ಅಪ್ರಸಿದ್ಧವಾ
ದುದು. ಮತ್ತೂ ಭೂಮಿಯಲ್ಲಿ ಹರಿಹರನ ಸೇವಕರು ಕೊರಳಲ್ಲಿ ತಾವರೆಮಣಿರುದ್ರಾ

ಸೇಸ್ಫಟಿಕಾಕ್ಷಕೈಃ ॥೧೪॥ ಭುಜೇಷುಚಕ್ರಶೂಲಾದ್ಯೈರ್ಭಾವಿತವ್ಯಂನ
ಕಿಂಭುವಿ। ಮಹೀತಲೇಹರಿಹರಸೇವಕಾನಾಂನೃಣಾಂತಥಾ ॥೧೫॥ ಭವಿತ
ವ್ಯಂಹರಿಹರಲೋಕೇನಾಪಿನಕಿಂವದ। ಏತೇಷಾಮಪಿವೈಕಸ್ಮಿನ್ನಸತಿಶ್ರೀಶ
ಶಂಕರೌ ॥೧೬॥ ಕಥಮೈಕ್ಯಂಸಮಾಪನ್ನೌತ್ವಮೇವಕಥಯಾಧುನಾ। ಯ
ಥಾಸ್ಯಘ್ರಾಣಯೋಸ್ಸಾಮ್ಯಂಛಿದ್ರತ್ವೇಪಿನವಿದ್ಯತೇ ॥೧೭॥ ಇತಿಸಂಕೀರ್ತಿ
ತೇಸೂತಸಂಹಿತಾರ್ಥೇವಿಚಾರಿತೇ । ಸ್ಥಿತಯೋರೇಕದೇಹೇಪಿವದನಾಘ್ರಾಣ
ರಂಧ್ರಯೋಃ ॥೧೮॥ ಸಾದೃಶ್ಯಮಸ್ತಿಕಿಂಕಿಂಚಜಘನ್ಯೋತ್ತಮಮಧ್ಯ
ಮಾಃ । ಏಕಾಙ್ಗಸ್ಥಾ ಅಪಿಸಮಾನೃಣಾಮವಯವಾಃಕಿಮು ॥೧೯॥ ತಥೈ
ಕದೇಹಸ್ಥಿತಯೋಸ್ಸತೋರ್ಹರಿಹರಾಙ್ಗಯೋಃ। ಹರಿರ್ಗೌರೀಪತಿಸಮೋಭವೇ
ತ್ಕಿಂವದತತ್ವತಃ ॥೨೦॥ ಹಿರಣ್ಯಾಕ್ಷಮಹಾದೈತ್ಯಹನನಾಯಹರಿಃಪುರಾ ।
ಸ್ವಯಂನರಮೃಗಾಕಾರೇಕಿಮುಸಿಂಹೋನರೋಭವೇತ್ ॥೨೧॥ ತಸ್ಮಿನ್ನೆ

---

ಕ್ಷಗಳನ್ನೂ ತುಲಸಿಯ ಮಣಿ ಸ್ಫಟಿಕದ ಮಣಿಗಳನ್ನೂ ಜೋಡಿಜೋಡಿಯಾಗಿಯೂ, ತೋಳುಗಳಲ್ಲಿ ಚಕ್ರಲಾಂಛನ ಶೂಲಲಾಂಛನಗಳನ್ನು ಒಟ್ಟಿಗೆಯೂ ಅನೇಕ ಧರಿಸಿರಬಾರದು ? ಮತ್ತೂ ಹರಿಹರರು ಒಂದೇಯಾಗಿದ್ದರೆ ಹರಿಹರಲೋಕವೆಂಬುದೊಂದು ಇರಬೇಕಾಗಿದ್ದಿತೋ ಇಲ್ಲವೋ ? ಹೇಳು. ಈ ಪೂರ್ವೋಕ್ತವಾದುವುಗಳೊಳಗೆ ಯಾವುದೊಂದೂ ಜೋಡಿಯಾಗಿಲ್ಲದ ಬಳಿಕ ಹರಿಹರರು ಮಾತ್ರ ಅದು ಹೇಗೆ ಅಭಿನ್ನರಾಗಿರುವರು ? ಈಗ ನೀನೇ ವಿಚಾರಮಾಡಿಹೇಳು. ಬಾಯಿಗೂ ತಿಕಕ್ಕೂ ಸಹ ರಂಧ್ರವಿದ್ದ ಮಾತ್ರಕ್ಕೆ ಅವು ಒಂದಕ್ಕೊಂದು ಹೇಗೆ ಸಮನಾಗಲಾರವೋ, ಹಾಗೆಯೇ ಹರಿಹರರು ಒಂದೇತೆರದ ಅಂಗವುಳ್ಳವರಾಗಿದ್ದರೂ ಅಭಿನ್ನರಲ್ಲವೆಂದು ಸೂತಸಂಹಿತೆಯಲ್ಲಿ ಹೇಳಲ್ಪಟ್ಟಿರುವ ಅರ್ಥವನ್ನು ವಿಚಾರಮಾಡಿ ನೋಡಿದರೂ, ಇದೇ ಅಭಿಪ್ರಾಯವೇ ಸಿದ್ಧವಾಗುವುದು. ಮತ್ತೂ ಒಂದೇದೇಹದಲ್ಲಿ ಮುಖಕ್ಕೂ ಮತ್ತೂ ತಿಕಕ್ಕೂ ರಂಧ್ರವಿದ್ದ ಮಾತ್ರಕ್ಕೆ ಅವು ಒಂದಕ್ಕೊಂದು ಸಮವೆ ? ಮತ್ತೂ ಮನುಷ್ಯರ ಅವಯವಗಳು ಒಂದೇ ಶರೀರದಲ್ಲಿದ್ದಾಗ್ಗೂ ಅವುಗಳಲ್ಲಿ ನೀಚಾಂಗ ಮಧ್ಯಮಾಂಗ ಉತ್ತಮಾಂಗ-ಎಂಬ ಭೇದಗಳುಳ್ಳುವಾಗಿರುವುವೇಹೊರತು ಎಲ್ಲವೂ ಒಂದೇಸಮನೆನಿಸಿಕೊಳ್ಳುವುವೆ ?॥ ಹಾಗೆಯೇ ಹರಿಹರರ ಅಂಗಗಳು ಒಂದೇ ವಿಗ್ರಹದಲ್ಲಿದ್ದರೂ ಹರಿಯು ಪರಶಿವನಿಗೆ ಸಮಾನನಾಗುವುದುಂಟೆ ? ನಿಜವಾಗಿ ಹೇಳು. ॥೨೦॥ ಪೂರ್ವದಲ್ಲಿ ವಿಷ್ಣುವು ಹಿರಣ್ಯಾಕ್ಷನೆಂಬ ಮಹಾರಾಕ್ಷಸನನ್ನು ಕೊಲ್ಲುವುದಕ್ಕಾಗಿ ಅರ್ಧ ಮನುಷ್ಯಾಕಾರ ಅರ್ಧ ಸಿಂಹಾಕಾರವುಳ್ಳ ದೇಹವನ್ನು ಧರಿಸಿದ್ದನು. ತಾವನ್ಮಾತ್ರಕ್ಕೆ ಸಿಂಹವೇ ಮನುಷ್ಯನಾಗುವುದುಂಟೆ ? ॥೨೧॥ ಆ ನೃಸಿಂಹನು ಹಿರಣ್ಯಾಕ್ಷಮಹಾದೈತ್ಯನನ್ನು ಕೊಂದು ಅಹಂ

ರಹರಾಹತ್ವಾಹಿರಣ್ಯಾಕ್ಷಂಮಹಾಸುರಮ್। ಅಹಂಕಾರಮದಗ್ರಸ್ತೋಜಿಹೀ
ರ್ಷುಸ್ತಂಮಹೇಶ್ವರಃ ||೨೨|| ಮೃಗಪಕ್ಷ್ಯರ್ಧಮಿಳಿತರೂಪೋನರಹರಿಂ
ತದಾ । ಜಘಾನಾತ್ಯಂತಕೋಪೇನಮಹೋಗ್ರಶರಭಾಕೃತಿಃ ||೨೩|| ತಾವ
ನ್ಮಾತ್ರೇಣಹಿಸಮಾಕಿಂಲೋಕೇಮೃಗಪಕ್ಷಿಣಾ । ವಿಧಾಯದುಸ್ಸಹತರಂ
ತಪಃಪ್ರಾಪಮಹೇಶಿತುಃ ||೨೪|| ಶರೀರಾರ್ಧಂಗಿರಿಸುತಾಸಮಾಕಿಂಕಿಸ್ತು
ಭಾಮಿನೀ । ತಸ್ಮಾದ್ಧರಿಹರಾಕಾರೇಸತ್ಯೈಕ್ಯಂಕಿಂಹರೀಶಯೋಃ ||೨೫||
ವಿಚಾರಿತೇಹರಿಹರಶಬ್ದಾರ್ಥೇವಸ್ತುವೃತ್ತಿತಃ । ಏಕೋಭವೇದ್ಧರಿಹರಇ
ತಿಶಂಸಸಿಚೇಚ್ಛೃಣು ||೨೬|| ಕಾಮಸಂಹರಣಾತ್ಕಾಮಹರಃಕಿಮಥವಾ
ಭುವಿ। ಕಿಮುಕಾಮೋಹರೋಪ್ಯೇಕೋಭವೇದ್ವಾಬ್ರೂಹಿತತ್ವತಃ||೨೭||
ಕಾಲಸಂಹರಣಾತ್ಕಾಲಹರಃಕಿಮಥವಾಭುವಿ । ಕಿಮುಕಾಲೋಹರೋ
ಪ್ಯೇಕೋಭವೇದ್ವಾಬ್ರೂಹಿತತ್ವತಃ || ಪುರಾಣಾಂದಹನಾದ್ದೇವೋಽಭವ
ತ್ಪುರಹರೋಽಥವಾ। ಪುರಾಣಿಚಹರೋಪ್ಯೇಕೋಭವೇದ್ವಾಬ್ರೂಹಿತತ್ವ

---

ಕಾರದಿಂದ ಮತ್ತನಾಗಿರಲು, ಅವನನ್ನು ಕೊಲ್ಲುವುದಕ್ಕಾಗಿ ಪರಶಿವನು ಅರ್ಧಮೃಗ
ದ ಅರ್ಧಪಕ್ಷಿಯ ದೇಹದಿಂದ ಕೂಡಿದ ಮಹಾಶರಭಾಕಾರನಾಗಿ ಆಗ ನೃಸಿಂಹನನ್ನು
ಮಹಾಕೋಪದಿಂದ ಕೊಂದನು. ಆ ಮಾತ್ರದಿಂದಲೇ ಲೋಕದಲ್ಲಿ ಮೃಗವೂ ಪಕ್ಷಿ
ಯೂ ಒಂದೇ ಆಗುವುವೆ ? ||೨೩|| ಪಾರ್ವತಿಯು ದುಸ್ಸಹವಾದ ತಪಸ್ಸನ್ನು ಮಾಡಿ,
ಪರಶಿವನ ಅರ್ಧಾಂಗವನ್ನು ಪಡೆದುಕೊಂಡಳು. ಹಾಗಾದರೆ ಆ ಪಾರ್ವತಿಯು ಶಿವನಿಗೆ
ಸಮಾನಳೇನೆಯೊ? ಅದು ಕಾರಣ, ಲೋಕದಲ್ಲಿ ಹರಿಹರರಾಕಾರವು ಒಂದೇ ವಿಗ್ರಹದ
ಲ್ಲಿದ್ದ ಮಾತ್ರಕ್ಕೇ-ಆ ಹರಿಹರರಿಗೆ ಅಭೇದವನ್ನು ಹೇಳಲಾಗುವುದೆ ? ಎಂದಿಗೂ ಆಗ
ಲಾರದು. ||೨೫|| ಮತ್ತೂ " ವಸ್ತುವೂ ಒಂದಾಗಿರುತ್ತೆ ಅವರ ಹೆಸರೂ ಸಹ ಹರಿಹ
ರರೆಂಬದು ಒಂದೇ ಆಗಿರುವ ಕಾರಣದಿಂದಲೂ, ಆ ಶಬ್ದದ ಅರ್ಥದಿಂದಲೂ ಸಹ ಹರಿಹ
ರರು ಒಂದೇ ಎಂದು ಸಿದ್ಧವಾಗುವುದು" ಎಂದು ನೀನು ಹೇಳುವೆಯಾದರೆ, ಕೇಳು ||
ಶಿವನು ಕಾಮನನ್ನು ಸಂಹರಿಸಿದುದರಿಂದ ಕಾಮಹರನೆಂದು ಭೂಮಿಯಲ್ಲಿ ಕರೆಯಲ್ಪ
ಡುತ್ತಾನೆ. ಹಾಗಲ್ಲದೆ ಕಾಮಹರನೆಂಬ ಹೆಸರಿನ ಮಾತ್ರಕ್ಕೇ ಕಾಮನೂ ಹರನೂ ಇ
ಬ್ಬರೂ ಒಂದೇ ಎಂದು ಆ ಶಬ್ದಕ್ಕರ್ಥವೆ ? ಅವರಿಬ್ಬರೂ ಸಮಾನರಾಗುವರೆ ? ವಿ
ಚಾರಮಾಡಿ ಹೇಳು ||೨೭|| ಮತ್ತೂ ಕಾಲನನ್ನು ಸಂಹರಿಸಿದ ಕಾರಣದಿಂದ ಶಿವನು ಕಾ
ಲಹರನೆಂದು ಕರೆಯಲ್ಪಡುವನೊ ? ಅಥವಾ ಕಾಲನೂ ಹರನೂ ಇಬ್ಬರೂ ಒಂದೇನೆ
ಯೊ ? ನಿಜವಾಗಿ ಹೇಳು ||೨೮|| ಪರಮೇಶನು ತ್ರಿಪುರಗಳನ್ನು ನಾಶಮಾಡಿದುದರಿಂ
ದ ಪುರಹರನೆನ್ನಿಸಿಕೊಳ್ಳುವನೊ? ಅಥವಾ ಆ ತ್ರಿಪುರಗಳೂ ಹರನೂ ಒಂದೇನೆಯೊ ?

ತಃ ॥೨೯॥ ಕರ್ಮಣಾಂ ಹರಣಾತ್ಕರ್ಮಹರಸ್ಸ್ಯಾದಥವಾ ಭುವಿ । ಕರ್ಮಾ
ಣಿ ಚ ಹರೋಽಪ್ಯೇಕೋ ಭವೇದ್ವಾ ಬ್ರೂಹಿ ತತ್ವತಃ ॥೩೦॥ ಹರಿಂ ಹರಂತಮನು
ಯಾಂತೀತ್ಯಾದೇಶ್ಶ್ರುತಿವಾಕ್ಯತಃ । ಯತೋ ನಿಗೃಹ್ಯ ಹರಸಿ ಹರ ಇತ್ಯುಚ್ಯಸೇ
ತತಃ ॥೩೧॥ ಇತಿ ವಾಕ್ಯಾತ್ಪುರಾಣೋಕ್ತಾದಪಿ ತಚ್ಛ್ರುತಿಸಂಮತಾತ್ ।
ಕಿಂ ಚ ಸರ್ವಾತ್ಮಕೋ ವಿಷ್ಣುಸ್ಸರ್ವಂ ವಿಷ್ಣುಮಯಂ ಜಗತ್ ॥೩೨॥ ಇ
ತ್ಯುಕ್ತೇಸ್ಸರ್ವಹರಣಾದಿನ್ದ್ರಾದೀನಾಂ ಹೃತೇರಪಿ । ಅಭೂದ್ಧರಿಹರಶ್ಶಂಭು
ರ್ನೈಕ್ಯಮತ್ರ ವಿವಕ್ಷಿತಮ್ ॥೩೩॥ ಅನ್ಯಥಾ ಹರಿಣಾ ಪ್ರಾಪ್ತಮರ್ಧಾಂಗಂ ಗೌ
ರ್ಯಾಃ ಹರತ್ಕಿಮು । ಉತ ಗೌರೀಂ ಪರಿಪ್ರಾಪ್ತಂ ಹರಿರ್ವಾ ಸಮುಪಾಹರತ್ ॥೩೪॥
ಅವಿನಾಭಾವಸಂಬಂಧಾದ್ವಿಷ್ಣ್ವಂಗಂ ಗಿರಿಜಾಹೃತಮ್ । ದಕ್ಷಿಣಂ ಭಾಗಮ
ಹರದ್ಗಿರಿಶಸ್ಯ ತನೋರ್ಹರಿಃ ॥೩೫॥ ಇತ್ಯಸಂಭಾವಿತಃ ಪಕ್ಷೋ ವಿರುದ್ಧತ್ವಾ
ತ್ಪರಿಸ್ಫುಟಮ್ । ಏಕೈಕಸ್ಮಿನ್ ಹೃತೇ ಶಂಭೋರರ್ಧೇ ಗೌರ್ಯಾ ಚ ವಿಷ್ಣು

---

ನಿಜವಾಗಿ ಹೇಳು ॥೨೯॥ ಕರ್ಮಗಳನ್ನು ನಾಶಮಾಡುವುದರಿಂದ ಶಿವನು ಕರ್ಮಹರನಾಗಿ
ರುವನೊ ? ಅಥವಾ ಕರ್ಮಗಳೂ ಶಿವನೂ ಅಭಿನ್ನರೊ ? ನಿಜವಾಗಿ ಹೇಳು ॥೩೦॥
“ ಹರಿಂ ಹರಂತಂ-(ವಿಷ್ಣುವನ್ನು ಕೊಂದಂಥ) ಪರಶಿವನನ್ನು ದೇವತೆಗಳು ಅನುಸರಿಸಿ
ಹೋಗುವರು” ಎಂಬುವ ಮೊದಲಾದ ಶ್ರುತಿವಚನವಿರುವುದರಿಂದಲೂ, “ಯಾವ ಕಾ
ರಣದಿಂದ ದುಷ್ಟರನ್ನು ನಿಗ್ರಹಿಸಿ ನಾಶಮಾಡುತ್ತೀಯೋ ಆ ಕಾರಣದಿಂದ ನೀನು ಕರ್ಮ
ಹರನೆಂದು ಕರೆಯಲ್ಪಡುತ್ತೀಯೆ” ಎಂದು ಪುರಾಣವಚನವು ಕೂಡ ಶ್ರುತಿವಚನಕ್ಕೆ
ಸಂಮತವಾಗಿ ಹೇಳಲ್ಪಟ್ಟಿರುವುದರಿಂದಲೂ, ಮತ್ತೂ “ ವಿಷ್ಣುವು ಸಕಲಜಗತ್ಸ್ವ
ರೂಪನು-ಸರ್ವವೂ ವಿಷ್ಣುಮಯವು” ಎಂದು ಪುರಾಣವಚನವಿರುವುದರಿಂದಲೂ, ಅಂ
ಥ ವಿಷ್ಣುರೂಪವಾದ ಜಗತ್ತನ್ನೆಲ್ಲಾ ಪರಶಿವನು ಮಹಾಪ್ರಳಯದಲ್ಲಿ ನಾಶಮಾಡಿದವ
ನಾದುದರಿಂದಲೂ, ಇಂದ್ರಾದಿದೇವತೆಗಳನ್ನೆಲ್ಲಾ ಸಂಹರಿಸಿದವನಾದುದರಿಂದಲೂ, ಶಿವ
ನು ಹರಿಹರ-(ಹರಿಯನ್ನು ಸಂಹರಿಸಿದವನು) ಆದನು. ಅಷ್ಟೇಹೊರತು ಹರಿಹರನೆಂಬ
ನಾಮವು ಹರಿಹರರಿಬ್ಬರೂ ಒಂದೇಯೆಂಬರ್ಥದ ಬೋಧೆಗಾಗಿ ಉಪಯೋಗಿಸಲ್ಪಟ್ಟುದ
ಲ್ಲ॥ ಹಾಗಲ್ಲದೆ ಹರಿಯ ದೇಹವೇ ಶಿವನಲ್ಲಿ ಅರ್ಧವಾಗಿರುವುದರಿಂದ ಆಹೆಸರು ಬಂದಿರು
ವುದೇ ನಿಜವೆಂದು ಸಾಧಿಸುವೆಯಾದರೆ, ಆಪಕ್ಷದಲ್ಲಿ ಶಿವನ ಅರ್ಧದೇಹವನ್ನು ಹರಿಯೂ
ಇನ್ನರ್ಧದೇಹವನ್ನು ಪಾರ್ವತಿಯೂ ಹಂಚಿಕೊಂಡರೊ? ಅಥವಾ ಪಾರ್ವತಿಯು ಪಡೆದು
ಕೊಂಡ ಅರ್ಧದೇಹವನ್ನೇ ಬಳಿಕ ವಿಷ್ಣುವು ಕದ್ದುಕೊಂಡನೊ ? ॥೩೪॥ ಪಾರ್ವತಿ
ಯು ಪಡೆದುಕೊಂಡ ಶಿವನ ವಾಮಭಾಗಾಂಗವು ಎಂದೂ ಶಿವನನ್ನೆಡೆವಿಡದೆ ಇರುವು
ದಾದಕಾರಣ, ಅದನ್ನು ವಿಷ್ಣುವು ಪಡೆದುಕೊಳ್ಳಲಾಗುವುದಿಲ್ಲ. ಇನ್ನು ಶಿವನ ದಕ್ಷಿಣಭಾ
ಗವನ್ನು ಹರಿಯು ಅಪಹರಿಸಿಕೊಂಡನೆಂದು ಹೇಳಿದರೆ ಸ್ಪಷ್ಟವಾಗಿ ಯುಕ್ತಿವಿರುದ್ಧ

ನಾ ||೩೬|| ತದಾದಿಜಗತಾಂಕರ್ತಾನಾಸ್ತಿ ಕಿಂಪರಮೇಶ್ವರಃ । ಪರಿಪ್ರಾಪ್ತಹರಾರ್ಧಾಯಾಂಪಾರ್ವತ್ಯಾಂದ್ರೋಹಿಣೋಽಧ್ವರೇ||೩೭|| ಕೋಪಾದಾಹವನೀಯಾಗ್ನೌಹುತವತ್ಯಾಂತನುಂಶಿವಃ । ಶೀಘ್ರಂಸ್ವಭಾಗಂಸಂಯೋಜ್ಯಪೂರ್ವರೂಪಮವಾಪಕಿಮ್||೩೮|| ಉಭಾಸ್ವಸ್ವಾರ್ಧವಪುಷೋಸ್ಯಾತಾಂಪರಿಹರೌಯದಿ । ಅರ್ಧದ್ವಯಂಕುತ್ರಗತಂತಯೋಸ್ತ್ವಮಿಹತದ್ವದ||೩೯|| ಶಿವಸ್ಸ್ವಾರ್ಧೇನಶಿಷ್ಟೇನಚಕ್ರೇಶೈಲಸುತಾಂಕಿಮು। ಕಿಂಚೇಶ್ವರಸ್ಸಕಲನಿಷ್ಕಲಾಙ್ಗಶ್ಶಾಶ್ವತೋಽಕ್ಷರಃ || ತದ್ದೇಹಸ್ಯಾಪಿನಿತ್ಯತ್ವಾತ್ಕಥಂಚಿನ್ನಾವಸೀದತಿ।ಹರೇರ್ಜಾತಶರೀರಸ್ಯತದರ್ಧಂಕುತ್ರವಾಗತಮ್|| ಕಿಂಚೇಶಕೇಶವೌಪೂರ್ವಂಕೇವಲಾರ್ಧತನೂಕಿಮು। ಕತಿಚಿದ್ಭುವನೇಸನ್ತಿ ಕಿಮರ್ಧತನವೋನರಾಃ || ಕಿಂವಾಹರಿಹರೌಮುಕ್ತ್ವಾನಸನ್ತೀದೃಶವಿಗ್ರಹಾಃ । ಗುಹಾಸುರವಧಾರ್ಥಾಯತ್ಯಕ್ತ್ವಾಸ್ವಾರ್ಧೇಹರೀಶ್ವರೌ||೪೨||ಏವಮರ್ಧತನೂಸ್ಯಾತಾಂಕಿಂವಾಸಂಮಿಶ್ರಿತಾವುಭೌ । ಆದೌಪರಿಹರಾಕಾರಃಕಿಮು

---

ವಾಗಿರುವಕಾರಣ ಅದೂ ಅಸಂಭವ. ಹೇಗೆಂದರೆ-ಗೌರಿಯೂ ವಿಷ್ಣುವೂ ಸಹ ಬೇರೆ ಬೇರೆ ಶಿವನ ದೇಹದ ಅರ್ಧ-ಅರ್ಧಭಾಗಗಳನ್ನು ಅಪಹರಿಸಿಕೊಂಡರೆಂದಬಳಿಕ ಅದು ಮೊದಲ್ಗೊಂಡು ಜಗತ್ಕರ್ತನಾದ ಪರಶಿವನೇ ಲೋಕದಲ್ಲಿ ಇಲ್ಲವೊ ? ಅಥವಾ ಪಾರ್ವತಿಯು ಶಿವನಿಂದ ಪಡೆದುಕೊಂಡಿದ್ದ ಅರ್ಧದೇಹವನ್ನು ಶಿವದ್ರೋಹಿಯಾದ ದಕ್ಷಬ್ರಹ್ಮನ ಯಜ್ಞದಲ್ಲಿ ಕೋಪದಿಂದ ಆಹವನೀಯಾಗ್ನಿಯೊಳಗೆ ಹೋಮಮಾಡಲಾಗಿ,ಪರಶಿವನು ಬೇಗನೆ ತನ್ನದೇಹಾರ್ಧಕ್ಕೆ ಇನ್ನರ್ಧ ಭಾಗವನ್ನು ಸೇರಿಸಿಕೊಂಡು ಪೂರ್ವದ ರೂಪವನ್ನು ಹೊಂದಿದನೊ ? || ಹರಿಹರರಿಬ್ಬರೂ ತಮ್ಮತಮ್ಮ ದೇಹದ ಅರ್ಧಭಾಗಗಳಿಂದ ಸೇರಿ ಹರಿಹರರಾಗಿದ್ದರೆ, ಅವರುಗಳ ಉಳಿದ ದೇಹಾರ್ಧಭಾಗಗಳು ಎಲ್ಲಿಗೆ ಹೋದುವೋ ! ಅದನ್ನು ಹೇಳು ||೩೯|| ಶಿವನು ತನ್ನ ಉಳಿದರ್ಧದೇಹದಿಂದೇನಾದರೂ ಪಾರ್ವತಿಯನ್ನು ಮಾಡಿಕೊಂಡನೊ? ಶಿವನು ಸಕಲನೂ ನಿಷ್ಕಲನೂ ಶಾಶ್ವತನೂ ನಾಶರಹಿತನೂ ಆಗಿರುವಕಾರಣ ಅವನ ದೇಹವೂ ನಿತ್ಯವಾದುದು. ಅದು ಹೇಗೂ ನಾಶವಾಗತಕ್ಕುದಲ್ಲ. ಆದರೆ ವಿಷ್ಣುವಿನ ಶರೀರವು ಎಲ್ಲಿಗೆ ಹೋಯಿತು ? ||೪೦|| ಅಥವಾ ಶಿವವಿಷ್ಣುಗಳು ಪೂರ್ವದಲ್ಲಿ ಅರ್ಧ ಶರೀರವನ್ನು ಮಾತ್ರವೇ ಹೊಂದಿದವರಾಗಿದ್ದರೊ? ಹಾಗಾದರೆ ಕೆಲವುಲೋಕದಲ್ಲಿ ಅರ್ಧಶರೀರದ ಮನುಷ್ಯರೂ ಇರುವುದುಂಟೊ ? || ಮತ್ತು ಹರಿಹರರನ್ನು ಬಿಟ್ಟರೆ ಇಂತಹ ಶರೀರವುಳ್ಳವರು ಇನ್ನಾರೂ ಇಲ್ಲವೆ ? ಹರಿಹರರುಗಳು ಗುಹಾಸುರನನ್ನು ಕೊಲ್ಲುವುದಕ್ಕಾಗಿ ತಮ್ಮ ದೇಹದ ಅರ್ಧಭಾಗಗಳನ್ನು ಬಿಟ್ಟು ಉಳಿದರ್ಧಗಳನ್ನು ಒಂದು ಗೂಡಿಸಿ ಹೀಗೆ ಒಂದೇಶರೀರವುಳ್ಳವರಾದರು. ಅಷ್ಟೇ ಹೊರತು ಅದಕ್ಕೆ ಮುಂಚೆ ಪೂರ್ವದಲ್ಲಿ ಹರಿಹರರಿಬ್ಬರೂ ಕೂಡಿ ಒಂದೇಶರೀರದವ

ಸ್ತಿ ಧರಣೀತಲೇ॥೪೪॥ ಅದ್ಯವಾಽಜಾಯತ ಕಿಮು ಕೋಽಪರಾಧೋಽಸ್ತಿ ಜಾಯತಾಮ್। ವಿದ್ಯೇತೇ ಕಿಂ ಹರೇರ್ಮಾತಾಪಿತರೌ ನ ಹಿ ವಾ ವದ॥೪೫॥ ಅವತಾರೇಷು ಪೂರ್ವೇಷು ಕಿಮು ವಿಷ್ಣುರಯೋನಿಜಃ। ಜನನೀಜನಕೌ ತಸ್ಯ ಪೂರ್ವಂ ನಸ್ತಃ ಕಿಮುಚ್ಯತಾಮ್॥೪೬॥ ಅವತಾರಾ ಹರೇಸ್ತಸ್ಯ ಮತ್ಸ್ಯಕಚ್ಛಪಪೋತ್ರಿಣಃ। ಸಮುಜಾಯಂತ ಯುಗ್ಮೇಭ್ಯೋ ಮತ್ಸ್ಯಕಚ್ಛಪಪೋತ್ರಿಣಾಮ್॥೪೭॥ ಸ್ತಂಭಪಿವಪಿತಾಮಾತಾ ತದನನ್ತರಜನ್ಮನಃ। ಅಪಿ ಜೇನ್ದ್ರಾನುಜ ಇತಿ ಸಮಭೂದ್ವಾಮನೋಽದಿತೇಃ॥ ತತಃ ಪರಶುರಾಮೋಽಭೂದ್ರೇಣುಕಾತನಯೋ ಭುವಿ। ಕೌಸಲ್ಯಾಯಾಸ್ತನೂಜೋಽಭೂದ್ರಾಮೋ ದಾಶರಥಿಸ್ತತಃ॥೪೯॥ ಅಜಾಯೇತಾಂ ಗೋಪಿಕಾಯಾಂ ಕೃಷ್ಣನೀಲಾಂಬರೌ ತಥಾ। ಬುದ್ಧೋಽನ್ಯಸ್ಮಾಜ್ಜನಾಜ್ಜಾತಃ ಕಲ್ಕ್ಯನ್ಯಸ್ಮಾನ್ಮಹೀಪತೇಃ॥೫೦॥ ಜಾತೋಧಾತುರಧೋಽದ್ವಾರಾತ್ಪುನಃ ಕೌಮಾರಸರ್ಗತಃ। ಆಕೂತ್ಯಾಮೃಭುಸಂಜ್ಞಸ್ಯ ಮುನೇರ್ಯಜ್ಞಾಖ್ಯಯಾಽಭವತ್॥೫೧॥ ಮರುದ್ದೇವ್ಯಾಂ ನಾಭಿರಾಜಾಜ್ಜಿನೋಽಪ್ಯರ್ಹಾಹ್ವಯೋಽಭವತ್। ಅನಸೂಯಾತ್ರಿಮುನ್ಯೋಶ್ಚ ದತ್ತಾತ್ರೇ

---

ರಾಗಿ ಭೂಮಿಯಲ್ಲಿದ್ದುದುಂಟೆ? ॥೪೪॥ ಅಥವಾ ಈಗೇನಾದರೂ ಹುಟ್ಟಿರುವರೊ? ಹೇಳು. ಹುಟ್ಟಿದರೆ ಹುಟ್ಟಲಿ, ಅದರಲ್ಲಿ ತಪ್ಪೇನು? ಎಂದರೆ, ವಿಷ್ಣುವಿಗೆ ತಾಯ್ತಂದೆಗಳುಂಟೊ? ಇಲ್ಲವೊ? ಹೇಳು. ॥೪೫॥ ವಿಷ್ಣುವು ಪೂರ್ವದಲ್ಲಿ ಅವತಾರಗಳನ್ನೆತ್ತಿದಾಗ್ಗೆ ಅಯೋನಿಜನಾಗಿದ್ದನೇನು? ಅವನಿಗೆ ಪೂರ್ವದಲ್ಲಿ ತಾಯ್ತಂದೆಗಳು ಇರಲಿಲ್ಲವೆ? ಹೇಳು ॥೪೬॥ ಆ ವಿಷ್ಣುವಿನ ಮತ್ಸ್ಯಕೂರ್ಮವರಾಹಾವತಾರಗಳು ಮೀನು ಆಮೆ ಹಂದಿ ಇವುಗಳ ಗಂಡುಹೆಣ್ಣುಗಳ ಜೋಡಿಯಿಂದಲೇ ಉತ್ಪನ್ನವಾದುವುಗಳು. ॥೪೭॥ ಬಳಿಕ ನೃಸಿಹ್ಮಾವತಾರಕ್ಕೆ ಕಂಬವೇ ತಾಯ್ತಂದೆಯು. ಬಳಿಕಿನ ವಾಮನನು ಅದಿತಿಯ ಹೊಟ್ಟೆಯಲ್ಲಿ ಇಂದ್ರನ ಅನುಜನೆನಿಸಿಕೊಂಡು ಹುಟ್ಟಿದನು. ಆ ಮೇಲೆ ರೇಣುಕೆಯ ಹೊಟ್ಟೆಯಲ್ಲಿ ಹುಟ್ಟಿ ಪರಶುರಾಮನಾದನು. ಅನಂತರ ದಶರಥನ ಮಗನಾಗಿ ಕೌಸಲ್ಯೆಯ ಹೊಟ್ಟೆಯಲ್ಲಿ ಹುಟ್ಟಿ ರಾಮನೆನಿಸಿಕೊಂಡನು. ಆಮೇಲೆ ಕೃಷ್ಣನೂ ಬಲರಾಮನೂ ಗೊಲ್ಲಿತಿಯ ಹೊಟ್ಟೆಯಲ್ಲಿ ಹುಟ್ಟಿದರು. ಬಳಿಕ ಬುದ್ಧನು ಒಬ್ಬನ ದೆಸೆಯಿಂದ ಹುಟ್ಟಿದನು. ಕಲ್ಕಿಯು ಮತ್ತೊಬ್ಬ ದೊರೆಯಿಂದ ಹುಟ್ಟಿದನು. ॥ ಬ್ರಹ್ಮನ ಗುದದ್ವಾರದಿಂ ಹುಟ್ಟಿ ಅಧೋಕ್ಷಜನೆಂದು ಹೇಳಿಸಿಕೊಂಡನು. ಋಭುಮಹರ್ಷಿಗೆ ಆಕೂತಿಯೆಂಬವಳಿಂದ ಯಜ್ಞನೆಂಬ ಹೆಸರಾಂತು ಜನಿಸಿದನು. ॥೫೦॥ ನಾಭಿರಾಜನಿಗೆ ಮರುದೇವಿಯ ಹೊಟ್ಟೆಯಲ್ಲಿ ಅರ್ಹನೆಂಬ ಪರ್ಯಾಯನಾಮವುಳ್ಳ ಜಿನನಾಗಿ ಹುಟ್ಟಿದನು. ಅನಸೂಯೆಗೂ ಅತ್ರಿಮುನಿಗೂ ದತ್ತಾತ್ರೇಯ

ಯಾಭಿಧೋಽಭವತ್ ॥ ವ್ಯಾಸಕನ್ಯಾತನೂಜೋಽಭೂದ್ವ್ಯಾಸನಾಮ್ನಾ ಸಂಜ್ಞಯಾ । ಕಿಂಚ ಧನ್ವಂತರಿಸ್ತದ್ವನ್ನರನಾರಾಯಣಸ್ತಥಾ ॥೫೩॥ ಮೋಹಿನೀ ನಾರದಮುನಿಃ ಕಪಿಲಾಖ್ಯಸ್ತಥೋ ಽಪಿನಿಃ । ಇತ್ಯಾದಿಕಾವತಾರಾಣಾಮಸಂಖ್ಯಾನಾಂ ಕ್ಷಿತಾವಪರೇಃ ॥ ಮಾತಾಪಿತ್ರೋರ್ಯಸ್ಸಮಸ್ತಾನಾಂ ಸತತಂ ವಿದ್ಯಮಾನಯೋಃ । ನಸ್ತಃ ಕಿಂ ಪಿತರಾವಸ್ಯ ಭೂಮೌ ಹರಿಹರಾಕೃತೇಃ ॥೫೪॥ ಜನನೀಜನಕಾಭಾವಸ್ತಥ್ಯೋ ಯದಿ ಭವೇತ್ತದಾ । ಮಿಥ್ಯಾ ಭವೇದ್ಧರಿಹರಾವತಾರೋಽಪಿ ಕ್ಷಿತಾವ್ ಧ್ರುವಮ್ ॥೫೫॥ ಮಾತಾಪಿತ್ರೋರ್ಯಸ್ತು ಸದ್ಭಾವಃ ಪರಮಾರ್ಥೋ ಭವೇದ್ಯದಿ । ಕಿಂ ಮಾತಾಪಿತೃಮಲ್ಲೋಕೇ ಭವೇತ್ತತ್ಪರದೈವತಮ್ ॥೫೬॥ ಭವಪಾಶೇನ ಸಂಬದ್ಧೋ ವಿರುದ್ಧಃ ಪ್ರಳಯೇ ನಚ । ಕಿಮುತ್ಪತ್ತಿಸ್ಥಿತಿಲಯವಶೋ ವಿಷ್ಣುಃ ಪರಾತ್ಪರಃ ॥೫೭॥ ಕಿಮು ನಿತ್ಯಾನಂದಮಯಃ ಕಿಂ ತೇಜಃಪುಂಜಭಾಸ್ವರಃ । ಪರಮೇಶಃ ಕಿಂ ಪರಮಸ್ವತಂತ್ರಃ ಕಿಂ ಕಿಮೀಶ್ವರಃ ॥೫೮॥ ಸರ್ವಜ್ಞಃ ಕಿಂ ಸದೈಶ್ವರ್ಯಯುತಃ ಕಿಂ ಶಾಶ್ವತಃ ಕಿಮು । ಹರೇಣ ಸತತಂ ಮೋಕ್ಷಕರೇಣ ಪರಮೇಣ ಚ ॥೬೦॥ ದಯಾಪರೇಣ ಲೋಕೈಕಗುರುಣಾಽಭಯದಾಯಿನಾ । ತ್ರಿಣೇತ್ರೇಣಾತಿವಿಮಲಗಾತ್ರೇಣ ಗಣ

---

ನೆಂಬ ಹೆಸರುಳ್ಳವನಾಗಿ ಜನಿಸಿದನು. ವ್ಯಾಸನೆಂಬ ಹೆಸರಿನಿಂದ ಬೇಡರಹೆಣ್ಣಿನ ಮಗನಾಗಿ ಜನಿಸಿದನು. ಮತ್ತೂ ಧನ್ವಂತರಿ ನರ ನಾರಾಯಣ ಮೋಹಿನಿ ನಾರದಮುನಿ ಕಪಿಲಮುನಿ ಮೊದಲಾದ ಗಣನಾತೀತವಾದ ವಿಷ್ಣುವಿನ ಅವತಾರಗಳಿಗೆಲ್ಲಾ ಭೂಮಿಯಲ್ಲಿ ತಾಯ್ತಂದೆಗಳು ಇರುತ್ತಿರಲಾಗಿ, ಈ ಹರಿಹರಾಕಾರಮೂರ್ತಿಗೆ ಮಾತ್ರ ತಾಯ್ತಂದೆಗಳು ಇಲ್ಲವೇನು ? ॥೫೪॥ ಭೂಮಿಯಲ್ಲಿ ಈ ಅವತಾರಕ್ಕೆ ತಾಯ್ತಂದೆಗಳಿಲ್ಲವೆಂಬುದು ನಿಜವಾದರೆ, ಆಗ ಹರಿಹರಾವತಾರವೆಂಬುದು ಸುಳ್ಳೇ ಆಗುವುದು. ಇದು ನಿಶ್ಚಯ ॥೫೫॥ ಈ ಅವತಾರಕ್ಕೆ ತಾಯ್ತಂದೆಗಳಿರುವುದು ನಿಜವಾದರೆ, ಲೋಕದಲ್ಲಿ ತಾಯ್ತಂದೆಗಳುಳ್ಳ ವಸ್ತುವು ಪರಬ್ರಹ್ಮವೆನಿಸಿಕೊಳ್ಳಬಲ್ಲುದೆ ? ॥೫೬॥ ಜನನಮರಣಪಾಶಬದ್ಧನೂ ಪ್ರಳಯಾಧೀನನೂ ಉತ್ಪತ್ತಿಸ್ಥಿತಿಲಯಗಳಿಗೆ ವಶನೂ ಆದ ವಿಷ್ಣುವು ಪರಾತ್ಪರವಸ್ತುವಾಗುವನೆ ? ॥೫೭॥ ಅವನು ನಿತ್ಯಾನಂದಸ್ವರೂಪನೆ ? ದಿವ್ಯತೇಜಸ್ತೋಮದಿಂದ ಪ್ರಕಾಶಿಸುವವನೆ ? ಪರಮೇಶ್ವರನೆ ? ಸರ್ವಸ್ವತಂತ್ರನೆ ? ಸರ್ವೇಶ್ವರಪ್ರಧಾನನೆ ? ॥೫೮॥ ಸರ್ವಜ್ಞನೆ ? ಷಡ್ಗುಣೈಶ್ವರ್ಯಯುಕ್ತನೆ ! ಶಾಶ್ವತನೆ ? ಯಾವಾಗಲೂ ಮೋಕ್ಷಪ್ರದನಾಗಿಯೂ ಸರ್ವೋತ್ಕೃಷ್ಟನಾಗಿಯೂ ॥೬೦॥ ಕೃಪಾನಿಧಿಯಾಗಿಯೂ, ಸರ್ವಲೋಕಗುರುವಾಗಿಯೂ ಅಭಯಪ್ರದನಾಗಿಯೂ ಮುಕ್ಕಣ್ಣನಾಗಿಯೂ ಅತ್ಯಂತನಿರ್ಮಲಶರೀರನಾಗಿಯೂ ಸರ್ವಜ್ಞತಾದಿ ಗುಣಗಳಿಂದೊಪ್ಪುವವನಾಗಿಯೂ ॥೬೧॥ ಎಲ್ಲೆಲ್ಲೂ ಕೊಂಡಾಡಲ್ಪಟ್ಟ ಚರಿತ್ರವುಳ್ಳವನಾಗಿಯೂ ಆಶ್ರಿತ

ಶೋಭಿನಾ || ಸಮುದ್ಗೀತಚರಿತ್ರೇಣ ದೂರೀಕೃತಜನಾರ್ತಿನಾ | ಚಿತ್ಪೂರ್ತಿನಾಽಧಿಕಸ್ವಚ್ಛಕೀರ್ತಿನಾ ಲಿಙ್ಗಮೂರ್ತಿನಾ || ಗುಣಾಃ ಕಿಂ ಸಂತಿ ದೇವಾನಾಮಭೇದಪರಿಶಂಸಿನಃ | ಅಸ್ಯೇಶಸ್ಯೇತರೇಷಾನ್ತು ನಾಸ್ತಿ ಕಿಂ ಮಹದನ್ತರಮ್ || ಸೂರ್ಯಖದ್ಯೋತಯೋಸ್ತದ್ವದ್ವಿದ್ಯುದ್ವಲ್ಲೀಸ್ಫುಲಿಙ್ಗಯೋಃ | ಚನ್ದ್ರರ್ಕ್ಷಯೋರ್ಮೇರುಕಾಕಸ್ವರ್ಣಪಾಷಾಣಯೋಸ್ತಥಾ ||೬೪|| ಬಡಬಾನಲಪಾಷಾಣಸಮುದ್ಭೂತಹುತಾಶಯೋಃ | ಕಿಂ ಸಾಮ್ಯಮಸ್ತಿ ಧಾತಾಪಿ ಸಮೀಕರ್ತುಂ ಕ್ಷಮಃ ಕಿಮು ||೬೫|| ತಸ್ಮಾದೈಕ್ಯಂ ಭುವಿ ಹರಿಹರಯೋಃ ಸ್ಯಾತ್ಕಥಂ ವದ | ಲೋಕೇ ವಿಷ್ಣುಃ ಶಿವಶ್ಚೇತಿ ಕಿಂ ಭೇದೋ ವಿದ್ಯತೇ ತಯೋಃ ||೬೬|| ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ | ಇತ್ಯುಚ್ಚೈರ್ಘೋಷಮಾಣಾಂ ಕಿಂ ಸೂಕ್ತಂ ನಾ ಶೃಣುತೇತಿ ಚೇತ್ ||೬೭|| ಪ್ರಕ್ಷಿಪ್ತಮೇತದ್ವಚನಮಿತ್ಥಂ ವೇದಾ ವದಂತಿ ಕಿಮ್ | ಶಿವಮೂರ್ತಿಃ ಕಥಂ ವಿಷ್ಣುರ್ಭವೇತ್ಸಮ್ಯಗ್ವಿಚಾರತಃ ||೬೮|| ಮೂರ್ತಾಮೂರ್ತಸ್ವರೂಪಂ ಯತ್ತಾತ್ತ್ವಿಕಂ ಪರಿಕೀರ್ತ್ಯತೇ | ಶಿವಸ್ಯ ರೂಪಮೇತದ್ಧಿ ಶೃಣು ವಕ್ಷ್ಯಾಮಿ ಸಾಂಪ್ರತಮ್ ||೬೯||

---

ಜನರ ವ್ಯಥೆಯನ್ನು ಪರಿಹರಿಸಿದವನಾಗಿಯೂ ಜ್ಞಾನಪೂರ್ಣನಾಗಿಯೂ ಅತ್ಯಂತನಿರ್ಮಲಕೀರ್ತಿಯುಳ್ಳವನಾಗಿಯೂ ಲಿಂಗಸ್ವರೂಪನಾಗಿಯೂ ಇರುವ ಪರಮೇಶ್ವರನೊಡನೆ ವಿಷ್ಣುವಿಗೆ ಅಭಿನ್ನತ್ವವು ಸಂಭವಿಸುವುದೆ? ||೬೦|| ಶಿವನೊಡನೆ ಅಭೇದವನ್ನು ಹೇಳುವುದಕ್ಕೆ ತಕ್ಕ ಗುಣಗಳು ಇತರದೇವತೆಗಳಿಗಿರುವುವೇನು? ಈ ಪರಮೇಶ್ವರನಿಗೂ ಇತರದೇವತೆಗಳಿಗೂ ಎಷ್ಟೋ ತಾರತಮ್ಯವಿರುವುದಲ್ಲವೆ? ||೬೩|| ಸೂರ್ಯನಿಗೂ ಮಿಂಚುಹುಳುವಿಗೂ, ಮಿಂಚಿಗೂ ಬೆಂಕಿಯ ಕಿಡಿಗೂ, ಚಂದ್ರನಿಗೂ ನಕ್ಷತ್ರಕ್ಕೂ, ಮೇರುಪರ್ವತಕ್ಕೂ ಕಾಗೆಗೂ, ಚಿನ್ನಕ್ಕೂ ಕಲ್ಲಿಗೂ, ಕಾಳ್ಕಿಚ್ಚಿಗೂ ಚಕಮುಕಿಕಲ್ಲಿನಿಂದ ಹುಟ್ಟಿದ ಬೆಂಕಿಗೂ ಪರಸ್ಪರಸಾಮ್ಯವಿರುವುದುಂಟೆ? ಇವುಗಳನ್ನೊಂದನ್ನೊಂದಕ್ಕೆ ಸಮಾನಮಾಡಲು ಬ್ರಹ್ಮನಾದರೂ ಸಮರ್ಥನಾದಾನೆ? ||೬೫|| ಆದುದರಿಂದ ಭೂಮಿಯಲ್ಲಿ ಹರಿಹರರಿಗೆ ಅಭೇದವೆಂಬುವುದು ಹೇಗೆ ಸಮನಿಸುವುದು? ಹೇಳು. "ಪ್ರಪಂಚದಲ್ಲಿ ವಿಷ್ಣು ಬೇರೆ ಶಿವನು ಬೇರೆಯೆಂದು ಅವರವರಿಗೆ ಭೇದವುಂಟೆ? ವಿಷ್ಣುರೂಪನಾದ ಶಿವನಿಗೂ ಶಿವರೂಪನಾದ ವಿಷ್ಣುವಿಗೂ ನಮಸ್ಕಾರವೆಂದು ಸಾರುತ್ತಿರುವ ಪುರಾಣವಚನವನ್ನು ಕೇಳಿಲ್ಲವೆ!" ಎಂದು ನೀನು ಆಕ್ಷೇಪಿಸುವೆಯಾದರೆ ||೬೭|| ಉತ್ತರವನ್ನು ಹೇಳುತ್ತೇನೆ ಕೇಳು— ಈ ವಚನವು ಪುರಾಣದಲ್ಲಿ ಈಚೆಗೆ ಸೇರಿಸಲ್ಪಟ್ಟುದು. ಏಕೆಂದರೆ— ಈ ಪ್ರಕಾರವಾದ ಅಭಿಪ್ರಾಯವನ್ನು ವೇದಗಳು ಎಲ್ಲಾದರೂ ಹೇಳುತ್ತಿರುವುವೆ? ||೬೮|| ಚೆನ್ನಾಗಿ ವಿಚಾರಮಾಡಿ ನೋಡಿದರೆ ಶಿವನು ಅದು ಹೇಗೆ ವಿಷ್ಣುವಾಗುವನು? ಶಿವನ ತಾತ್ತ್ವಿಕಸ್ವರೂಪವು ಮೂರ್ತವಾಗಿಯೂ ಅಮೂರ್ತವಾಗಿಯೂ ಇರುವುದೆಂದು

ಶಿವಸ್ಸದಾಶಿವಶ್ಚೈವ ಮಹೇಶೋ ಮೂರ್ತಯಸ್ತ್ರಿಧಾ । ಇತಿ ವಾಕ್ಯಾತ್ಪರಿಜ್ಞೇಯಂ ತ್ರಿವಿಧಂ ತತ್ತ್ವವಿಶಾರದಃ ॥೨೦॥ ಶಿವಮೇಕಂ ವಿಜಾನೀಯಾತ್ಸದಾಖ್ಯಂ ಪಂಚಧಾ ಭವೇತ್ । ಮಹೇಶ್ವರಸ್ವರೂಪಂ ತತ್ಪಂಚವಿಂಶತಿಭೇದಕಮ್ ॥೨೧॥ ಇತ್ಯುಕ್ತೇಶ್ಶಿವತತ್ತ್ವಂ ತದೇಕಮೇವ ಪ್ರಕೀರ್ತಿತಮ್ । ತತ್ತ್ವಂ ಸದಾಶಿವಂ ಪಂಚವಿಧಮಾಹುರ್ಮನೀಷಿಣಃ ॥೨೨॥ ಪಂಚವಿಂಶತಿಭೇದಂ ತನ್ಮಾಹೇಶಂ ತತ್ತ್ವಮುಚ್ಯತೇ । ತತ್ರಾದಾವದುದ್ದಿಷ್ಟಂ ಶಿವತತ್ತ್ವಂ ಮಹಾತ್ಮಭಿಃ ॥೨೩॥ ಆನನ್ದಮವ್ಯಯಂ ನಿತ್ಯಮಪ್ರತರ್ಕ್ಯಂ ನಿರಂಜನಮ್ । ಅಪ್ರಮಾಣಮನಾಕಾಶ್ಯಮಸಾದೃಶ್ಯಮಗೋಚರಮ್ ॥೨೪॥ ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । ಇತ್ಯಸ್ಮಾದ್ವಚನಾತ್ತದ್ವದತ್ಯತಿಷ್ಠದ್ದಶಾಂಗುಲಮ್ ॥೨೫॥ ಇತ್ಯಮುಷ್ಮಾಚ್ಚ ವಾಕ್ಯಾನ್ನ ಸ್ಮರ್ಯತೇ ನ ಚ ದೃಶ್ಯತೇ । ಇತಿ ವಾಕ್ಯಾಚ್ಚ ವೇದೈರಪ್ಯಜ್ಞಾತಾತುಲವೈಭವಮ್ ॥೨೬॥ ಶಾಂತಪ್ರಭಾವಂ ಸಗುಣತಿರಸ್ಕರಿ ನಿರಾಮಯಮ್ । ಅದೇಹಮಮಲಂ ಶುದ್ಧಮವಾಙ್ಮನಸ

---

ಹೇಳಲ್ಪಡುವ ಅವರ ಪರಿಯನ್ನು ಈಗ ಹೇಳುತ್ತೇನೆ ಕೇಳು:— ॥೧೯॥ "ಆ ಈಶ್ವರತತ್ತ್ವವು ಶಿವ-ಸದಾಶಿವ-ಮಹೇಶ್ವರನೆಂಬ ಮೂರುಮೂರ್ತಿಗಳುಳ್ಳುದಾಯಿತು" ಎಂಬ ಆಗಮವಚನದ ಪ್ರಕಾರ ಈಶ್ವರತತ್ತ್ವ ವೊಂದೇ ಮೂರುತೆರನಾಯಿತು ॥ "ಅವುಗಳಲ್ಲಿ ಶಿವತತ್ತ್ವವು ಒಂದೇರೂಪವಾದುದು, ಸದಾಶಿವತತ್ತ್ವವು ಐದು ಭೇದಗಳುಳ್ಳುದು. ಮಹೇಶ್ವರತತ್ತ್ವವು ಇಪ್ಪತ್ತೈದು ಭೇದಗಳುಳ್ಳುವು" ॥೨೦॥ ಎಂಬ ಆಗಮವಚನಪ್ರಕಾರ ಶಿವತತ್ತ್ವವು ಭೇದವಿಲ್ಲದೆ ಒಂದೇ ಆಗಿರುವುದೆಂದು ಹೇಳಲ್ಪಟ್ಟಿತು. ಸದಾಶಿವತತ್ತ್ವವು ೫ ಪ್ರಕಾರವಾದುದೆಂದು, ವಿದ್ವಾಂಸರು ಹೇಳುವರು ॥೨೧॥ ಮಹೇಶ್ವರತತ್ತ್ವವು ೨೫ ಭೇದಗಳುಳ್ಳುದೆಂದು ಹೇಳಲ್ಪಡುವುದು. ಈ ತತ್ತ್ವಗಳೊಳಗೆ ಮೊದಲನೆಯದಾಗಿ ಮಹನೀಯರಿಂದ ಹೇಳಲ್ಪಟ್ಟ ಶಿವತತ್ತ್ವವು ॥೨೨॥ ಆನಂದಮಯವೂ-ಅಚ್ಯುತವೂ-ಶಾಶ್ವತವೂ-ಊಹೆಗೆ ನಿಲುಕದುದೂ-ಮಾಯಾರಹಿತವೂ-ಅಳತೆಯಿಲ್ಲದುದೂ-ಭಾವನಾತೀತವಾದುದೂ, ಅಸದೃಶವಾದುದೂ, ಇಂದ್ರಿಯಗಳಿಗೆ ಗೋಚರಿಸದುದೂ ಆಗಿರುವುದು ॥೨೩॥ "ವಾಙ್ಮನಸ್ಸುಗಳಿಗೆ ಅದು ನಿಲುಕದು" ಎಂದು ಹೇಳಲ್ಪಟ್ಟಿರುವ ಶ್ರುತಿವಚನದಿಂದಲೂ, "ಸಕಲಪ್ರಪಂಚವನ್ನೂ ಮೀರಿ ೧೦ ಅಂಗುಲ ಹೊರಗಿರತಕ್ಕದ್ದು" ಎಂಬ ಶ್ರುತಿವಾಕ್ಯದಿಂದಲೂ, ಅದನ್ನ ನೆನೆವುದಕ್ಕೂ ನೋಡುವುದಕ್ಕೂ ಆಗದು, ಎಂದು ಹೇಳಲ್ಪಟ್ಟಿರುವ ವೇದವಚನದಿಂದಲೂ ಸಹ ಆ ಶಿವತತ್ತ್ವವು ವೇದಗಳಿಂದಲೂ ತಿಳಿಯಲ್ಪಡದ ಅಸಾಧಾರಣವಾದ ವೈಭವವುಳ್ಳುದು ॥೨೪॥ ಅನುಗ್ರಹವುಳ್ಳುದು, ಶಾಂತವಾದ ಮಹತ್ತ್ವವುಳ್ಳುದು. ನಿರ್ಗುಣವಾದುದು, ನವರಹಿತವಾದುದು, ದೇಹರಹಿತವಾದುದು, ನಿರ್ದೋಷವಾದುದು, ಪರಿಶುದ್ಧವಾದುದು, ವಾಕ್ಕುಮನಸ್ಸುಗಳಿಗೆ ನಿಲುಕದ್ದು

ಗೋಚರಮ್ ||೭೭|| ವಿಜ್ಞಾನರೂಪಂ ಸರ್ವಜ್ಞಂ ಸಚ್ಚಿದಾನಂದಭಾಸುರಮ್ |
ಸ್ವತಂತ್ರಂ ಶಾಶ್ವತಂ ಸತ್ಯಂ ಸದೈಶ್ವರ್ಯಂ ಪರಾತ್ಪರಮ್ ||೭೮|| ನಿರ್ವಿಘ್ನಂ ಸ
ರ್ವಗಂ ನಿತ್ಯಂ ಪರಂ ಜ್ಯೋತಿರ್ನಿರಂಜನಮ್ | ಪಂಚೇಂದ್ರಿಯಪಥಾತೀತಸ್ವ
ರೂಪಂ ಸ್ಯಾನ್ನಿರಂತರಮ್ ||೭೯|| ವಿನಿಶ್ಚೇತುಮಸಾಮರ್ಥ್ಯಾತ್ತದೇಕಮಿತಿ
ಚಾಣ್ವಿತಿ | ಬ್ರಹ್ಮೇತಿ ವಿಜ್ಞಾನಮಿತಿ ತದ್ವದಾನಂದ ಇತ್ಯಪಿ ||೮೦|| ತಥಾ ನಿರಾ
ಕಾರಮಿತಿ ಸಾಕಾರಮಿತಿ ಮೋಹತಃ | ವಾದಿವೃಂದೇಷು ವಿವಿದತ್ಸ್ವೇತಾದೃ
ಙ್ಮಹಿಮಾಸ್ಪದಮ್ ||೮೧|| ಶಿವತತ್ತ್ವಂ ಭಾತಿ ತಸ್ಮಾದಭೂಚ್ಛಿವಸದಾಶಿವಮ್ |
ತದ್ವಿಶ್ವತೋಮುಖ ಇತಿ ಶ್ರುತಿತಸ್ಸರ್ವತೋಮುಖಮ್ ||೮೨|| ಭಾತಿ ತಚ್ಛಿವ
ಸಾದಾಖ್ಯಾದಮೂರ್ತಾಖ್ಯಂ ಸದಾಶಿವಮ್ | ವಿರಾಜತೇ ಚಾತಿತರಾಮಗ್ನಿಮೀ
ಳೇಪುರೋಹಿತಮ್ ||೮೩|| ಇತಿ ಶ್ರುತೇರ್ನಮಸ್ತುಂಗಶಿರಶ್ಚುಂಬೀತಿ ವಾಕ್ಯ
ತಃ | ಯೋಽಗ್ನಿಸ್ಸಭಸ್ಮನಃ ಪರೋಽಪ್ಯಗ್ನಿಮೀಳೇಪುರೋಹಿತಮ್ ||೮೪|| ಋ

---

ದು ||೭೭|| ಜ್ಞಾನಸ್ವರೂಪವಾದುದು, ಸರ್ವವನ್ನೂ ಬಲ್ಲುದು, ಸತ್ತು ಚಿತ್ತು ಆನಂದಗಳ
ರೂಪವಾಗಿ ಮೆರೆಯುತಕ್ಕುದು, ಸರ್ವಕಾರ್ಯಗಳನ್ನೂ ಸ್ವತಂತ್ರನಾಗಿ ಮಾಡಬಲ್ಲುದು,
ಅಳಿವಿಲ್ಲದುದು, ಹುಸಿಯದುದು, ಷಡ್ಗುಣೈಶ್ವರ್ಯವಿರಾಜಿತವಾದುದು. ಪರಕ್ಕಿಂತಲೂ
ಪರವಾದುದು ||೭೮|| ತಡೆಯಿಲ್ಲದುದು, ಸರ್ವವ್ಯಾಪಿಯು, ಶಾಶ್ವತವು, ದಿವ್ಯಜ್ಯೋತಿ
ಸ್ಸ್ವರೂಪವು, ಪಾಪರಹಿತವು. ಅದು ಯಾವಾಗಲೂ ಪಂಚೇಂದ್ರಿಯಗಳ ಗತಿಗೆ ನಿಲುಕ
ದ ರೂಪವುಳ್ಳುದಾದುದರಿಂದಲೂ ||೭೯|| ಆ ವಸ್ತುವನ್ನು ಇಂತಹುದೆಂದು ನಿಶ್ಚಯಿಸುವು
ದಕ್ಕೆ ಶಕ್ತಿಯಿಲ್ಲವಾದುದರಿಂದಲೂ, ಅದನ್ನು ಒಂದೇಯಾಗಿರುವುದು, ಅಣುರೂಪವಾದು
ದು, ಸರ್ವಾತ್ಮಕವಾದುದು, ಚಿದ್ರೂಪವಾದುದು, ಆನಂದರೂಪವಾದುದು || ನಿರಾಕಾರ
ವಾದುದು, ಸಾಕಾರವಾದುದು, ಎಂದು ಮೊದಲಾಗಿ ಹೇಳುತ್ತ ಅಜ್ಞಾನದಿಂದ ನಾನಾಮ
ತವಾದಿಗಳು ಪರಸ್ಪರವಿವಾದಮಾಡುತ್ತಿರುವರು. ಅದಕ್ಕೆ ಕಾರಣ, ಆ ಶಿವತತ್ವವು ಇ
ಷ್ಟೆಂದು ಘನತರವಾದ ಪ್ರಭಾವಕ್ಕೆ ಆಶ್ರಯವಾಗಿ ಮೆರೆಯುತ್ತಿರುವುದು ||೮೦||
ಆ ಶಿವತತ್ವದಿಂದ ಪಂಚಕಲಾತ್ಮಕವಾದ ಸದಾಶಿವತತ್ವವಾಯಿತು. ಅದರಲ್ಲಿ ಮೊದಲನೆಯ
ಭೇದವಾದ ಶಿವಸಾದಾಖ್ಯವು "ಅದು ಎಲ್ಲಕಡೆಗೂ ಮುಖವುಳ್ಳುದು" ಎಂದು ಶ್ರುತಿ
ಯು ಹೇಳುತ್ತಿರುವುದರಿಂದ ಸರ್ವತೋಮುಖವಾಗಿರುವುದು ||೮೧|| ಆ ಶಿವಸಾದಾ
ಖ್ಯದಿಂದ ಅಮೂರ್ತಸದಾಶಿವತತ್ವವುದಿಸಿ ಒಪ್ಪುತ್ತಿರುವುದು. "ಅಗ್ನಿಮೀಳೇ ಪು
ರೋಹಿತಂ ಯಜ್ಞಸ್ಯ ದೇವಮೃತ್ವಿಜಂ" ಎಂಬ ಮಂತ್ರದಲ್ಲಿ ಯಜ್ಞಾಧಿಪತಿಯಾದ ಅಗ್ನಿ
ರೂಪನೂ ಆದವನು ಶಿವನೆಂದು ನಿರೂಪಿಸಲ್ಪಟ್ಟಿರುವುದರಿಂದಲೂ, "ನಮಸ್ತುಂಗಶಿರ
ಶ್ಚುಂಬಿಚಂದ್ರಚಾಮರಚಾರವೇ | ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂ
ಭವೇ ||" ಎಂಬ ವಚನದಲ್ಲಿ ಶಿವನು ಜಗದುತ್ಪತ್ತಿಗೆ ಆಧಾರವಾದ ಮೂಲಸ್ತಂಭ ಸ್ವ

ಗಾಹಾಕಾಶಗಸ್ತ್ವಮ್ಸ್ಫುರೋಗ್ರಜ್ಯೋಗ್ನಿ ರಿತಿಶ್ರುತಿಃ । ಇತ್ಯಸ್ಮಾದ್ವಚನಾತ್ಕಿಂಚಲಿಙ್ಗಮೂರ್ತೇರುಮಾಪತೇಃ ॥೪೬॥ ಇತಿವಾಕ್ಯಾತ್ಕಿಂಚಮೂಲಸ್ತಮ್ಭ ಇತ್ಯಪಿವಾಕ್ಯತಃ । ತಥಾಚ ಮೂಲಪ್ರಕೃತಿರಿತ್ಯೇತಸ್ಯಾಃ ಶ್ರುತೇರಪಿ ॥ ಲಿಙ್ಗಮಧ್ಯೇಜಗತ್ಸರ್ವಂತ್ರೈಲೋಕ್ಯಂಸಚರಾಚರಮ್ । ಲಿಙ್ಗಾದ್ಬಾಹ್ಯಂಪರಂನಾಸ್ತೀತ್ಯೇತಸ್ಮಾದ್ಭಾಷಿತಾದಪಿ ॥೪೭॥ ತಥಾಹುತವಹಸ್ತಂಭ ಇತ್ಯಸ್ಯವಾಕ್ಯಪದ್ಧತೇಃ । ಅನಲಸ್ತಂಭವಪುಷ ಇತಿವಾಕ್ಯಾತ್ಪರಿಶ್ರುತಾತ್ ॥೪೮॥ ಪರಮೇಶಃಪರಂಬ್ರಹ್ಮ ಪರಮಾತ್ಮಾಪರಾತ್ಪರಃ । ಪರಂಲಿಙ್ಗಮಿತಿಖ್ಯಾತಾತದಮೂರ್ತಾತ್ಸದಾಶಿವಾತ್ ॥೪೯॥ ಭ್ರಾಜತೇಸುತರಾಂನಿತ್ಯಂಮೂರ್ತಸಾದಾಖ್ಯಮುತ್ತಮಮ್ । ಪ್ರಭೂತತೇಜಃಪಟಲಭಾಸ್ವರಸ್ಯಗರೀಯಸಃ ॥೫೦॥ ತಸ್ಯಸ್ವರೂಪಂವಿಮಲಮೇಕಾಸ್ಯಂತ್ರಿವಿಲೋಚನಮ್। ದಂಷ್ಟ್ರಾಂಶುಸ್ಫುರಿತಾಲವ್ಬಕರ್ಣಮುನ್ನತನಾಸಿಕಮ್ ॥೫೧॥ ಭೂಷಾವಿಭಾಸಿತಂತಸ್ಮಾತ್ಸಾದಾಖ್ಯಾನ್ಮೂರ್ತನಾಮಕಾತ್ । ಭ್ರಾಜತೇಕರ್ತೃಸಾ

---

ರೂಪಲಿಂಗಾಕಾರನಾಗಿರುವನೆಂದು ಹೇಳಲ್ಪಟ್ಟಿರುವುದರಿಂದಲೂ, ಅಗ್ನಿಸ್ವರೂಪನಾದ ಶಿವನು ಭಸ್ಮಕ್ಕಿಂತಲೂ ಉತ್ಕೃಷ್ಟನಾದವನು ಎಂದು ಹೇಳಲ್ಪಟ್ಟಿರುವುದರಿಂದಲೂ, ಶಂಭುವು ದಹರಾಕಾಶವುಳ್ಳಗತ್ತಲಿಂಗಸ್ವರೂಪನು ಎಂದು ಋಗ್ವೇದವು ಹೇಳುವುದರಿಂದಲೂ, ಅಗ್ನಿಯು ಶಿವನಿಂದ ಹುಟ್ಟಿದುದು ಎಂದು ವೇದವು ಸಾರುತ್ತಿರುವುದರಿಂದಲೂ, ಪಾರ್ವತೀಪತಿಯು ಲಿಂಗಸ್ವರೂಪನಾಗಿರುವನು ಎಂಬ ವಚನದಿಂದಲೂ, ಅವನು ಜಗದಾಧಾರವೂ ಸ್ತಂಭಸ್ವರೂಪನು ಎಂದು ಹೇಳಲ್ಪಟ್ಟಿರುವ ವಚನದಿಂದಲೂ, ಜಗತ್ಕಾರಣವಾದ ಮೂಲಪ್ರಕೃತಿಯು ಶಿವಾಭಿನ್ನವಾದುದು ಎಂಬ ವೇದವಚನದಿಂದಲೂ, ಸ್ಥಾವರಜಂಗಮಾತ್ಮಕವಾದ ಸಕಲಜಗತ್ತೂ ಲಿಂಗಮಧ್ಯದಲ್ಲಿರುವುದು, ಲಿಂಗದ ಹೊರಗೆ ಯಾವುದೂ ಇಲ್ಲ, ಎಂಬ ವಚನದಿಂದಲೂ,ಶಿವನು ಅಗ್ನಿಸ್ತಂಭಸ್ವರೂಪನು ಎಂಬ ವಾಕ್ಯಸರಣಿಯಿಂದಲೂ, ಅಗ್ನಿಸ್ತಂಭದೇಹಿಯಾದವನು ಎಂಬ ಪ್ರಮಾಣವಚನದಿಂದಲೂ, ಪರಾತ್ಪರನೂ ಪರಬ್ರಹ್ಮನೂ ಆದ ಪರಮೇಶ್ವರನು ಜ್ಯೋತಿರ್ಲಿಂಗನೂ ಜ್ವಾಲಾಸ್ತಂಭಸ್ವರೂಪಮಹಾಲಿಂಗನೂ ಆಗಿರುವನೆಂದು ಪ್ರಸಿದ್ಧನಾಗಿರುವನು. ಇಂತಪ್ಪ ರೂಪವುಳ್ಳ ಅಮೂರ್ತಸದಾಖ್ಯದಿಂದ ॥೪೯॥ ಉತ್ಕೃಷ್ಟವಾದ ಮೂರ್ತಸಾದಾಖ್ಯವುದಿಸಿ ಅತ್ಯಂತವಾಗಿ ವಿರಾಜಿಸುತ್ತಿರುವುದು. ಬಹು ತೇಜಃಪುಂಜದಿಂದೊಪ್ಪುತ್ತಿರುವ ಶ್ರೇಷ್ಠವಾದ ಆ ಮೂರ್ತಸಾದಾಖ್ಯದ ಸ್ವರೂಪವು ಹೇಗೆಂದರೆ—ಅದು ನಿರ್ಮಲವಾದುದು, ಒಂದು ಮುಖವುಳ್ಳುದು, ಮೂರುಕಣ್ಣುಗಳುಳ್ಳುದು, ಕೋರೆದಾಡೆಗಳ ಕಾಂತಿಯಿಂದೊಪ್ಪುತ್ತಿರುವುದು, ಜೋಲುತ್ತಿರುವ ಕಿವಿಗಳುಳ್ಳುದು, ಉದ್ದನಾದ ಮೂಗುಳ್ಳುದು ॥೫೧॥ ಅನೇಕಾಭರಣಗಳಿಂದೊಪ್ಪುತ್ತಿರುವುದು. ಇಂತಹ ಮೂ

ದಾಭ್ಯಾಂಪ್ರಸನ್ನಮುಖಪಙ್ಕಜಮ್ ॥೯೨॥ ಪ್ರತಿವಕ್ತ್ರಂತ್ರಿನಯನಂಕಲಾ
ಭಿಃಪರಿರಂಜಿತಮ್।ದಂಷ್ಟ್ರಾಂಕುರೋಜ್ಜ್ವಲತ್ತೇಜಸ್ಸ್ಫುರಚ್ಚನ್ದ್ರಾರ್ಧ
ಶೇಖರಮ್ ॥೯೩॥ ಸಶೂಲವೀಣಾಕ್ಷಸೂತ್ರವರ್ದೈರ್ದಕ್ಷಿಣಪಾಣಿಭಿಃ । ವಾ
ಮಹಸ್ತೈರ್ವರ್ಮತುಲುಙ್ಗಕಪಾಲಾಭ್ಯಭಯಾನ್ವಿತೈಃ॥೯೪॥ ಸಮುಪೇತಂ
ದಿವ್ಯಭೂಷಾಪುಷ್ಪಾಂಬರಪರಿಷ್ಕೃತಮ್। ಅಮುಷ್ಮಾತ್ಕರ್ತೃಸಾದಾಖ್ಯಾ
ತ್ತತ್ತ್ವಂಕರ್ಮಸದಾಶಿವಮ್॥೯೫॥ ಶೋಭತೇಲೋಕಸಂಹಾರಪರಿಪಾಲನ
ಕಾರಣಮ್ । ಘಟಿತಂನಾದಬಿನ್ದುಭ್ಯಾಂಲಿಂಗಪೀಠಾಮಲಾಕೃತಿ ॥೯೬॥
ಕಲಾಭಿಃಪಂಚಭಿರ್ವ್ಯಕ್ತಂಪರಂಜ್ಯೋತಿಸ್ಸ್ವರೂಪಕಮ್ । ಇತರೈಶ್ಶಕ್ಯ
ತೇಜ್ಞಾತುಂಸ್ವರೂಪಂಕಥಮಸ್ಯತು ॥೯೭॥ ವಿಖ್ಯಾತವಾಕ್ಯಾಚ್ಚಕಿತಮಭಿ
ಧತ್ತ ಇತೀರಿತಾತ್ । ಕಂಪಮಾನೇಷುವೇದೇಷುನಿಖಿಲೇಷುನಿರನ್ತರಮ್ ॥
ಗುಣಸ್ಯನಿಷ್ಕಳತ್ವಸ್ಯಸಕಲತ್ವಸ್ಯಚಾಸಿಶಮ್ । ಸಾನ್ನಿಧ್ಯರಂಜಿತೋಭೂ
ತ್ವಾವರ್ತತೇಶ್ರೀಸದಾಶಿವಃ ॥೯೯॥ ಸದಾಶಿವಸ್ಯತಸ್ಯೋದ್ಯದ್ದಿವ್ಯದೇಹ
ಸ್ಯಕೀದೃಶಃ।ಭಾಸ್ವರಾಕಾರಇತಿಚೇಚ್ಛೃಣುವಕ್ಷ್ಯಾಮಿತತ್ತ್ವತಃ॥೧೦೦॥

---

ರ್ತೃಸಾದಾಖ್ಯದಿಂದ ಕರ್ತೃಸಾದಾಖ್ಯವುದಿಸಿತು. ಅದರ ಸ್ವರೂಪವು ಹೇಗೆಂದರೆ—
ಅದು ನಿರ್ಮಲವಾದ ನಾಲ್ಕುಮುಖಕಮಲವುಳ್ಳುದು ॥೯೨॥ ಅದರ ಪ್ರತಿಯೊಂದು
ಮುಖವೂ ಮುಕ್ಕಣ್ಣುಗಳುಳ್ಳುದು, ಎಂಟು ಕಲೆಗಳಿಂದ ಕೂಡಿ ಮನೋಹರವಾದು
ದು. ಕೋರೆದಾಡೆಯು ಮೊಳಕೆಯು ಹೊಳೆಯುತ್ತಿರುವ ತೇಜಸ್ಸಿನಿಂದ ಕೂಡಿದುದು.
ಚಂದ್ರಾರ್ಧನನ್ನು ಕಿರೀಟದಲ್ಲಿ ಧರಿಸಿರುವುದು ॥೯೩॥ ಬಲಗಡೆಯು ನಾಲ್ಕುಕೈಗಳಲ್ಲಿ
ಶೂಲ-ವೀಣೆ-ಜಪಮಾಲಿಕೆ-ವರಪ್ರದಾನಗಳಿಂದ ಕೂಡಿರುವು. ಎಡಗಡೆಯು ನಾಲ್ಕು
ಕೈಗಳಲ್ಲಿ ಮಾದಿವಾಳದಫಲ-ತಲೆಯೋಡು-ಸರ್ಪ-ಅಭಯದಾನಗಳಿಂದ ಕೂಡಿದುದು.
ದಿವ್ಯಾಭರಣಗಳಿಂದಲೂ ವಸ್ತ್ರಗಳಿಂದಲೂ ಪುಷ್ಪಮಾಲೆಗಳಿಂದಲೂ ಅಲಂಕೃತವಾ
ದುದು. ಈ ಕರ್ತೃಸಾದಾಖ್ಯದಿಂದ ಕರ್ಮಸಾದಾಖ್ಯತತ್ತ್ವವು ಉದಿಸಿತು ॥೯೫॥ ಇದು
ಲೋಕವಿನಾಶಕ್ಕೂ ಪಾಲನೆಗೂ ಕಾರಣವಾಗಿ ಒಪ್ಪುತ್ತಿರುವುದು. ನಾದಬಿಂದುಗಳಿಂ
ದ ಕೂಡಿದುದು, ಲಿಂಗಪೀಠಗಳ ಆಕೃತಿಯುಳ್ಳುದು ॥ ಐದು ಕಲೆಗಳಿಂದ ಕೂಡಿದು
ದು. ಪರಂಜ್ಯೋತಿಸ್ವರೂಪವಾದುದು. "ಚಕಿತಮಭಿಧತ್ತೇಶ್ರುತಿರಪಿ,, ಎಂಬ ಪ್ರಸಿದ್ಧವ
ಚನದಿಂದ ಸಕಲವೇದಗಳು ಕೂಡ ಆಮೂರ್ತಿಯನ್ನು ಹೊಗಳಲಾರದೆ ಯಾವಾಗಲೂ
ಭಯದಿಂದ ನಡುಗುತ್ತಿರಲಾಗಿ ಈ ಕರ್ಮಸಾದಾಖ್ಯತತ್ತ್ವದ ಸ್ವರೂಪವನ್ನು ತಿಳಿವುದಕ್ಕೆ
ಇತರರಿಗೆ ಹೇಗೆ ಶಕ್ಯವಾಗುವುದು? ॥ ಈ ಪಂಚಸಾದಾಖ್ಯಭೇದವುಳ್ಳ ಸದಾಶಿವಮೂ
ರ್ತಿಯು ನಿಷ್ಕಲತ್ವ ಸಕಲತ್ವ ಗುಣಗಳೆರಡರಿಂದಲೂ ಕೂಡಿ ಪರಿರಂಜಿಸುತ್ತಿರುವುದು.॥
ದಿವ್ಯಶರೀರಿಯಾದ ಆ ಸದಾಶಿವನ ಆಕೃತಿಯು ಯಾವರೀತಿಯಾಗಿರುವುದೆಂದರೆ, ಹೇಳು

ಇನ್ದ್ರಚಾಪಮಿವಾಕಾಶೇ ದರ್ಪಣೇ ಪ್ರತಿಬಿಂಬವತ್ । ಚರ್ಮಮಾಂಸಾ
ಸ್ಥಿರುಧಿರಮುಖ್ಯೈಸ್ತನುಗುಣೈಸ್ಸದಾ ॥೧೦೧॥ ಸದಾವಿಮುಕ್ತಸ್ಸರ್ವಭಾತಿ ದೇ
ಹಸ್ಸ್ಯಾತಿಭಾಸ್ವರಃ । ಕುನ್ದೇನ್ದುಚನ್ದ್ರಕಾಕ್ಷೀರಫೇನಸುನ್ದರವರ್ಣಕ
ಮ್ ॥೧೦೨॥ ಭಸ್ಮೋಪಲಿಪ್ತಂ ಪಂಚೇಷುಭಸ್ಮಸಾತ್ಕೃತಲೋಚನಮ್ ।
ಬ್ರಹ್ಮೇನ್ದ್ರಾದಿಸುರವ್ರಾತವನ್ದಿತಂ ಯೋಗಿಪೂಜಿತಮ್ ॥೧೦೩॥ ಸಲೀಲ
ಯಾ ಸಕಲನಿಷ್ಕಲಧರ್ಮಾನುಷಕ್ತಯಾ । ಸದ್ಯೋಜಾತಾಭಿಧಂ ತಸ್ಯ ಭಾ
ಸತೇ ಪಶ್ಚಿಮಾನನಮ್ ॥೧೦೪॥ ಗೌರಂ ಕುಂಕುಮಪಿಂಗೋರುತಿಲಕಪ್ರತಿ
ಭಾಸಿತಮ್ । ಭ್ರೂವಿಕ್ಷೇಪಕಟಾಕ್ಷಾಭ್ಯಾಂ ರಮ್ಯಂ ಕರ್ಣೋತ್ಪಲಾಂಚಿ
ತಮ್ ॥೧೦೫॥ ನೀಲಾಳಕೈಃ ಪರಿವೃತಂ ಹಸಿತಾಲಂಕೃತಾಧರಮ್ । ಆಪಾ
ಣ್ಡುಗಣ್ಡಂ ಸಂಪೂರ್ಣಸುಧಾಕಿರಣಸನ್ನಿಭಮ್ ॥೧೦೬॥ ವಾಮದೇವಾಭಿ
ಧಂ ತಸ್ಯ ಶೋಭತೇ ವಕ್ತ್ರಮುತ್ತರಮ್ । ಭ್ರಮರಾಂಜನಕಾಲಾಭ್ರದ್ಯುತಿ
ಭ್ರೂಭಙ್ಗಭೀಷಣಮ್ ॥೧೦೭॥ ವ್ಯಾವೃತ್ತಪಿಙ್ಗನಯನಮಹೀನ್ದ್ರೇಣವಿ

---

ತ್ತೇನೆ, ಕೇಳು:-॥ ಆತನ ದೇಹವು ಯಾವಾಗಲೂ ಚರ್ಮ ಮಾಂಸ ಮೂಳೆ ರಕ್ತ ಮೊದ
ಲಾದ ದೇಹಗುಣಗಳಿಂದ ಬಿಡಲ್ಪಟ್ಟುದಾಗಿ ಅಂತರಿಕ್ಷದಲ್ಲಿರುವ ಇಂದ್ರಧನುಸ್ಸಿನಂತೆ
ಯೂ, ಕನ್ನಡಿಯೊಳಗಣ ಪ್ರತಿಬಿಂಬದಂತೆಯೂ ಅತ್ಯಂತಪ್ರಕಾಶಮಾಗಿ ಒಪ್ಪುತ್ತಿರು
ವುದು. ಆ ಮೂರ್ತಿಯ ಸದ್ಯೋಜಾತವೆಂಬ ಹೆಸರುಳ್ಳ ಪಶ್ಚಿಮಮುಖವು, ಮೊಲ್ಲೆಯ
ಹೂವು-ಚಂದ್ರ-ಬೆಳ್ದಿಂಗಳು-ಹಾಲು-ನೊರೆ-ಇವುಗಳಂತೆ ಶುಭ್ರವಾದ ಬಣ್ಣವುಳ್ಳುದಾ
ಗಿಯೂ, ಭಸ್ಮಲಿಪ್ತವಾಗಿಯೂ, ಮನ್ಮಥನನ್ನು ಭಸ್ಮಗೊಳಿಸಿದ ಅಗ್ನಿನೇತ್ರವುಳ್ಳುದಾ
ಗಿಯೂ, ಬ್ರಹ್ಮ ಇಂದ್ರ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟುದಾಗಿಯೂ
ಯೋಗೀಶ್ವರರಿಂದ ಪೂಜಿಸಲ್ಪಟ್ಟುದಾಗಿಯೂ, ಸಕಲ ನಿಷ್ಕಲಧರ್ಮಗಳಿಂದ ಕೂಡಿ
ದುದಾಗಿಯೂ ಒಪ್ಪಿರುವುದು ॥೧೦೪॥ ಆ ಮೂರ್ತಿಯ ವಾಮದೇವನೆಂಬ ಹೆಸರುಳ್ಳ
ಉತ್ತರದಿಕ್ಕುಮುಖವು-ಬಿಳಿಯಬಣ್ಣವುಳ್ಳುದು, ಕುಂಕುಮದಿಂದ ಕೆಂಬಣ್ಣವಾದ ತಿಲಕ
ದಿಂದೊಪ್ಪುತ್ತಿರುವುದು, ಹುಬ್ಬನ್ನು ಹಾರಿಸುವಿಕೆ ಕಡೆಗಣ್ಣೋಟ-ಇವುಗಳಿಂದ ಮ
ನೋಹರವಾದುದು. ಕಿವಿಯಮೇಲೆ ನೈದಿಲಹೂವನ್ನು ಧರಿಸಿಕೊಂಡಿರುವುದು.॥೧೦೫॥
ಕರ್ರಗಿರುವ ಮುಂಗುರುಳುಗಳಿಂದ ಸುತ್ತುವರಿಯಲ್ಪಟ್ಟಿರುವುದು, ನಗುವಿಕೆಯಿಂದ
ಲಂಕೃತವಾದ ತುಟಿಗಳುಳ್ಳುದು, ತುಂಬಾ ಬಿಳುಪಾದ ಕೆನ್ನೆಗಳುಳ್ಳುದು, ಪೂರ್ಣಚಂ
ದ್ರನ ಕಿರಣಕ್ಕೆ ಸಮಾನವಾದ ಬಣ್ಣವುಳ್ಳುದು, ಹೀಗೆ ಅದು ಮೆರೆಯುತ್ತಿರುವುದು ॥
ಆ ಮೂರ್ತಿಯ ಅಘೋರವೆಂಬ ಹೆಸರುಳ್ಳ ದಕ್ಷಿಣದಿಕ್ಕಿನಮುಖವು, ತುಂಬಿ-ಕಾಡಿಗೆ-
ಕಾರ್ಮುಗಿಲು-ಇವುಗಳ ಕಾಂತಿಯಂತಿರುವ ಕಪ್ಪುಕಾಂತಿಯುಳ್ಳುದು, ಹುಬ್ಬುಗಂಟಿನಿಂ
ದ ಭಯಂಕರವೂ ॥೧೦೭॥ ಗುಂಡಾದ ಹೊಂಬಣ್ಣದ ಕಣ್ಣುಗಳುಳ್ಳುದೂ, ಆದಿಶೇಷ

ಭೂಷಿತಮ್ । ಗಂಭೀರರಾವಂಲಸಿತವಶನೈರುಪಶೋಭಿತಮ್ ॥೧೦೮॥ ಕಪಾಲಮಾಲಾಲಲಿತಂದಂಷ್ಟ್ರಾಭ್ಯಾಮುಪಶೋಭಿತಮ್ । ತಸ್ಯಾನನಮಘೋರಾಖ್ಯಂದಕ್ಷಿಣಂಭಾಸತೇತರಾಮ್ ॥೧೦೯॥ ಸಂವರ್ತಾಗ್ನಿತಟಿತ್ತಪ್ತಕನಕಾಂಶುಸಮಪ್ರಭಮ್ । ಸಿತಾಂಶುಭಾಸಿದಶನಪ್ರಭಾಪೂರೋದ್ಭಾಸಿತಾಧರಮ್ ॥೧೧೦॥ ಆಪಿಙ್ಗಲಜಟಾಜೂಟಮರ್ಧೇನ್ದುಕೃತಶೇಖರಮ್ । ಭುಜಙ್ಗಭೂಷಣಂಸಿದ್ಧಾಮರಾದಿಪರಿಪೂಜಿತಮ್ ॥೧೧೧॥ ತಸ್ಯತತ್ಪುರುಷಂಪೂರ್ವಮಾನನಂಪ್ರವಿಭಾಸತೇ । ಷಟ್ತ್ರಿಂಶತ್ತತ್ತ್ವಾತಿಶಾಯಿವ್ಯಕ್ತಾವ್ಯಕ್ತಗುಣೋತ್ತರಮ್ ॥೧೧೨॥ ಪ್ರಶಾನ್ತಮಕ್ಷರಂಯೋಗಿಧ್ಯೇಯಂತೇಜೋಮಯಂಪರಮ್ । ಸೂಕ್ಷ್ಮಾತಿಸೂಕ್ಷ್ಮಮಾಕಾಶವ್ಯಾಪಿತತ್ತ್ವೋತ್ತರೋತ್ತರಮ್ ॥೧೧೩॥ ತಸ್ಯದೇವಸ್ಯವದನಮೂರ್ಧ್ವಮೀಶಾನನಾಮಕಮ್ । ಮಹದೈಶ್ವರ್ಯತೇಜೋಭಿಃಪರಿಸ್ಫುರತಿಸನ್ತತಮ್ ॥೧೧೪॥ ಇತ್ಯೇವಂಸ್ತುತಿಪಾತ್ರೇಷುವದನೇಷುಚಪಂಚಸು । ಅರ್ಕೇನ್ದ್ವಗ್ನಿಪ್ರಭಾವತ್ಸುತತ್ತ್ವದ್ವಕ್ತ್ರಾಕ್ಷಿಷುತ್ರಿಷು ॥೧೧೫॥ ಕಪರ್ದಚನ್ದ್ರರುಚಿಷುಪ್ರಶಾಂತೋನ್ನತಕಾನ್ತಿಷು ।

---

ನಿಂದಲಂಕೃತವಾದುದೂ, ಗಂಭೀರಧ್ವನಿಯುಳ್ಳುದೂ, ಹೊಳೆಯುತ್ತಿರುವ ಹಲ್ಲುಗಳಿಂದೊಪ್ಪುತ್ತಿರುವುದೂ, ತಲೆಬುರುಡೆಗಳ ಸರದಿಂದ ರಾಜಿಸುತ್ತಿರುವುದೂ, ಕೋರೆದಾಡೆಗಳಿಂದ ಮೆರೆಯುವುದೂ ಆಗಿ ಪ್ರಕಾಶಿಸುತ್ತಿರುವುದು ॥೧೦೯॥ ಆ ಮೂರ್ತಿಯ ತತ್ಪುರುಷನಾಮಕವಾದ ಪೂರ್ವದಿಙ್ಮುಖವು, ಪ್ರಳಯಕಾಲದ ಬೆಂಕಿ-ಕಾಯ್ಸಿದ ಚಿನ್ನ-ಇವುಗಳ ಕಾಂತಿಗೆ ಸಮನಾದ ಕಾಂತಿಯುಳ್ಳುದಾಗಿಯೂ, ಶುಭ್ರವಾದ ಕಾಂತಿಯಿಂದೊಪ್ಪುತ್ತಿರುವ ಹಲ್ಲುಗಳ ಶೋಭೆಯಿಂದ ಪ್ರಕಾಶಿಸುತ್ತಿರುವ ತುಟಿಗಳುಳ್ಳುದಾಗಿಯೂ, ॥ ತುಂಬಾ ಹೊಂಬಣ್ಣವಾದ ಜಡೆಮುಡಿಯುಳ್ಳುದಾಗಿಯೂ, ಅರ್ಧಚಂದ್ರನನ್ನು ಶಿರೋಭೂಷಣವನ್ನಾಗಿ ಮಾಡಿಕೊಂಡಿರುವುದಾಗಿಯೂ, ಸರ್ಪಾಭರಣವುಳ್ಳುದಾಗಿಯೂ, ಸಿದ್ಧರು-ದೇವತೆಗಳು ಮೊದಲಾದವರಿಂದ ಪೂಜಿಸಲ್ಪಟ್ಟುದಾಗಿಯೂ ಪ್ರಕಾಶಿಸುತ್ತಿರುವುದು. ಮತ್ತೂ ಆ ಸ್ವಾಮಿಯ ಈಶಾನನಾಮಕವಾದ ಊರ್ಧ್ವಮುಖವು-೩೬ ತತ್ವಗಳನ್ನು ಮೀರಿದುದಾಗಿಯೂ, ಸ್ಫುಟವೂ ಅಸ್ಫುಟವೂ ಆದ ಗುಣಗಳಿಂದ ಕೂಡಿ ಶ್ರೇಷ್ಠವಾಗಿಯೂ, ॥೧೧೨॥ ಅತ್ಯಂತಶಾಂತವಾಗಿಯೂ, ನಾಶರಹಿತವಾಗಿಯೂ, ಯೋಗಿಗಳಿಂದ ಧ್ಯಾನಿಸಲ್ಪಡಲು ಯೋಗ್ಯವಾಗಿಯೂ, ದಿವ್ಯತೇಜಸ್ಸ್ವರೂಪವಾಗಿಯೂ, ಸರ್ವಕ್ಕೂ ಪರವಾಗಿಯೂ, ಅಣುವಿಗಿಂತ ಅಣುವಾಗಿಯೂ, ದಹರಾಕಾಶವ್ಯಾಪಿಯಾಗಿಯೂ, ಸಕಲತತ್ವಗಳನ್ನೂ ಮೀರಿರುದಾಗಿಯೂ ಇರುತ್ತೆ, ಷಡ್ಗುಣೈಶ್ವರ್ಯತೇಜಸ್ಸಿನಿಂದ ಕೂಡಿ ಯಾವಾಗಲೂ ಒಪ್ಪಿರುವುದು ॥೧೧೪॥ ಈ ಪ್ರಕಾರವಾಗಿ ಆ ಐದು ಮುಖಗಳೂ ಸ್ತೋತ್ರಪಾತ್ರಗಳಾಗಿರಲು, ಆ ಮಾಮುಖಗಳಲ್ಲಿರುವ ಮೂರುಮೂರು

ಪಾಶಾಂಕುಶಾನಲಾಹೀಂದ್ರಘಂಟಾಭಿಃ ಪರಿಶೋಭಿಷು ॥೧೧೬॥ ವಾಮಭಾಗಸ್ಥಹಸ್ತೇಷು ತಥಾ ದಕ್ಷಿಣಭಾಗತಃ । ಪರಶ್ವಭಯಶೂಲಾಸಿಪವಿಯುಕ್ತೇಷು ಪಾಣಿಷು ॥೧೧೭॥ ಸ್ಫಟಿಕತ್ವಿಟ್ಸ್ಫುಟದಿಶಾತಟವ್ಯಾಪ್ತಾಂಗದೀಪ್ತಿಷು । ಭವ್ಯಪದ್ಮಾಸನೇ ದಿವ್ಯವಿಲೇಪನಚಯೇಷು ಚ ॥೧೧೮॥ ದಿವ್ಯಾಂಬರಸಮೂಹೇಷು ದಿವ್ಯಾಭರಣರಾಜಿಷು । ಪ್ರೋತಪಂಚಬ್ರಹ್ಮಸೂಕ್ತಸ್ತುತಿಷ್ವೇಷ್ವಖಿಲೇಷು ಚ ॥೧೧೯॥ ವಿಜೃಂಭಿತೇಷು ಪರಿತೋ ಭಾತಿ ಕರ್ಮಸದಾಶಿವಃ । ತಸ್ಮಿನ್ ಸದಾಶಿವೇ ದಿವ್ಯಮಹಿಮ್ನಾಽನುಪಮೇನ ಹಿ ॥೧೨೦॥ ಖ್ಯಾತಂ ಮಾಹೇಶ್ವರಂ ತತ್ತ್ವಂ ಭಾಸತೇಽತಿಮನೋಹರಮ್ । ವಾಕ್ಯಾದಸ್ಮಾದ್ಯಃ ಪರಸ್ಸ ಮಹೇಶ್ವರ ಇತೀರಿತಾತ್ ॥೧೨೧॥ ಪರಾತ್ಪರತರೋ ಬ್ರಹ್ಮಾ ಪರಾತ್ಪರತರೋ ಹರಿಃ । ಪರಾತ್ಪರಂ ತಯೋರೈಶಮಿತಿ ವಾಕ್ಯಾಚ್ಚ ವಿಶ್ರುತಾತ್ ॥೧೨೨॥ ಶವ ಭಿರ್ಮೃಡಶ್ಶಙ್ಕರ ಈಶ್ವರೋ ವಾ ಮಹೇಶ್ವರೋ

---

ಕಣ್ಣುಗಳೂ ಸೂರ್ಯಚಂದ್ರಾಗ್ನಿಗಳಾಗಿರುತ್ತಿರಲು ॥೧೧೫॥ ಅವುಗಳ ಜಟಾಜೂಟದಲ್ಲಿರುವ ಚಂದ್ರಕಾಂತಿಗಳು ಸೌಮ್ಯವಾದ ಮಹಾಪ್ರಭೆಗಳಾಗಿ ಬಪ್ಪುತ್ತಿರಲು ಆ ಮೂರ್ತಿಯು ಎಡಗಡೆಯ ೫ ಕೈಗಳು ಪಾಶ-ಅಂಕುಶ-ಅಗ್ನಿ-ಸರ್ಪರಾಜ-ಘಂಟೆ-ಇವುಗಳಿಂದ ಕೂಡಿ ಬಪ್ಪುತ್ತಿರಲು ॥೧೧೬॥ ಬಲಗಡೆಯ ೫ ಕೈಗಳು ಕೊಡಲಿ-ಅಭಯದಾನ-ತ್ರಿಶೂಲ-ಕತ್ತಿ-ವಜ್ರಾಯುಧ-ಇವುಗಳಿಂದ ಕೂಡಿರಲು ॥೧೧೭॥ ಆ ಮೂರ್ತಿಗಳು ಸ್ಫಟಿಕದ ಕಾಂತಿಯಂತೆ ಶುಭ್ರವಾಗಿಯೂ ಎಲ್ಲಾ ಪ್ರದೇಶಗಳನ್ನು ವ್ಯಾಪಿಸಿಯೂ ಇರುವ ದೇಹಕಾಂತಿಯುಳ್ಳವುಗಳಾಗಿರಲು, ದಿವ್ಯಗಂಧಾನುಲೇಪನಗಳೂ ॥೧೧೮॥ ದಿವ್ಯವಸ್ತ್ರಾಭರಣ ಸಮೂಹಗಳೂ ಮೆರೆಯುತಿರಲು, ಪವಿತ್ರವಾದ ಪಂಚಬ್ರಹ್ಮಸೂಕ್ತದ ಸ್ತುತಿಗಳು ತನಗೆ ಸುತ್ತಲೂ ವೈಭವವಾದ ಜರುಗುತ್ತಿರಲು, ಆ ಕರ್ಮಸಾದಾಖ್ಯಮೂರ್ತಿಯು ಮಂಗಳಮಯವಾದ ಪದ್ಮಾಸನದಲ್ಲಿ ಕುಳಿತು ಪ್ರಕಾಶಿಸುತ್ತಿರುವುದು. ಆ ಕರ್ಮಸಾದಾಖ್ಯಮೂರ್ತಿಯಲ್ಲಿ ಅತ್ಯಂತಮನೋಜ್ಞವಾದ-ಪ್ರಖ್ಯಾತವಾದ-ಮಹೇಶ್ವರತತ್ತ್ವವು ಅಸದೃಶವಾದ ಮಹತ್ತ್ವದಿಂದ ಕೂಡಿ ಬಪ್ಪುತ್ತಿರುವುದು. ॥೧೨೦॥ "ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ-ಪ್ರಕೃತಿಲೀನನಾದ ಪುರುಷನಿಗಿಂತಲೂ ಪರನಾದವನೇ ಮಹೇಶ್ವರನು" ಎಂದು ಹೇಳಲ್ಪಟ್ಟಿರುವುದರಿಂದಲೂ, ॥೧೨೧॥ "ಶ್ರೇಷ್ಠರಾದವರಿಗೆಲ್ಲಾ ಶ್ರೇಷ್ಠನು ಬ್ರಹ್ಮನು, ಅದರಂತೆಯೇ ವಿಷ್ಣುವು ಶ್ರೇಷ್ಠನು. ಅವರಿಬ್ಬರಲ್ಲೂ ಶ್ರೇಷ್ಠವಾದುದು ಮಹೇಶ್ವರತತ್ತ್ವವು" ಎಂದು ಪ್ರಸಿದ್ಧಪ್ರಮಾಣವಚನವಿರುವುದರಿಂದಲೂ ॥೧೨೨॥ "ವಿಷ್ಣುವು-ಶಂಭು (ಸುಖದಾಯಕ) ನೆಂದಾ

ವಾನಹಿವಿಷ್ಣುರುಕ್ತಃ । ಏತನ್ಮಹಾಸ್ತೋತ್ರವಾಕ್ಯಾದ್ಯಥಾರ್ಥಂಸಮುದೀ
ರಿತಾತ್ । ಕಿಮಸ್ತಿವಿಷ್ಣುಮುಖ್ಯಾನಾಂಮಹಾದೇವಾದಿಕಾಭಿಧಾ ॥೧೨೩॥
ಲಕ್ಷ್ಮೀಶ್ವರಸ್ತಥಾವಾಗೀಶ್ವರಶ್ಚದಿವಸೇಶ್ವರಃ । ವಾಸುದೇವೋಬ್ರಹ್ಮ
ದೇವಸ್ಸೂರ್ಯದೇವಇತಿಸ್ಫುಟಮ್ ॥೧೨೪॥ ಇತ್ಥಮಾಖ್ಯಾಸ್ಸೋಪಪದಾ
ಸ್ಸಂತಿಚೇತ್ಸನ್ತುನಾಮಹಿ । ಕಿಂಸನ್ತಿಶಿವನಾಮಾನಿಕೇವಲಾನಿವಿಚಾರಿ
ತೇ ॥೧೨೫॥ ತತ್ತನ್ನಾಮಸ್ವನನ್ತೇಷುಮುಖ್ಯನಾಮಸುಸತ್ಸ್ವಲಮ್ ।
ಮಹೇಶ್ವರಸ್ಯಹೃಷ್ಟಸ್ಯಸ್ವರೂಪಮುಪವರ್ಣ್ಯತೇ ॥೧೨೬॥ ದಿವ್ಯತೇಜ
ಸ್ಸಮುದ್ದೀಪಿತಾಙ್ಗಸ್ಸ್ಮಿತಮುಖಾಂಬುಜಃ । ಲಲಾಟತಟಸಂಪ್ರಾಪ್ತಶಿಖಿ
ಲೋಚನೇನವಿರಾಜಿತಃ ॥೧೨೭॥ ಪಾರ್ಶ್ವದ್ವಯಲಸತ್ಸೂರ್ಯಸುಧಾಕಿರ
ಣಲೋಚನಃ । ವಿಯತ್ತಟೋತ್ಕಟಜಟಾಜೂಟಕಾನ್ತಿವಿರಾಜಿತಃ ॥೧೨೮॥
ತನ್ಮಙ್ಗಳಜಟಾರಙ್ಗತುಙ್ಗಗಙ್ಗಾತರಙ್ಗಕಃ । ಸದಾಸುಧಾಕರಕಲಾವತಂ

---

ಗಲಿ, ಮೃಡ (ಆನಂದಪ್ರದ) ನೆಂದಾಗಲಿ, ಶಂಕರ (ಭಕ್ತರಿಗೆಸೌಖ್ಯವನ್ನುಮಾಡುವ
ವ) ನೆಂದಾಗಲಿ, ಈಶ್ವರ (ಷಡ್ಗುಣೈಶ್ವರ್ಯಯುಕ್ತ) ನೆಂದಾಗಲಿ, ಮಹೇಶ್ವರ( ಸಕಲ
ದೇವತೆಗಳಿಗಿಂತಲೂ ಮಹತ್ತರನಾದವ) ನೆಂದಾಗಲಿ ಕರೆಯಲ್ಪಡುವುದಿಲ್ಲ'' ಎಂದು
ಹೇಳಲ್ಪಟ್ಟಿರುವ ಸಹಜಾರ್ಥವುಳ್ಳ ಈ ಸ್ತೋತ್ರವಾಕ್ಯದಿಂದಲೂ ಸಹ ವಿಷ್ಣುವೇಮೊ
ದಲಾದ ದೇವತೆಗಳಿಗೆ ''ಮಹಾದೇವ'' ಎಂಬುದೇ ಮೊದಲಾದ ಹೆಸರಿರುವುದೆ!॥೧೨೩॥
ಅವರ ಹೆಸರುಗಳು ಹೇಗಿರುವುವೆಂದರೆ-ಲಕ್ಷ್ಮೀಶ್ವರ-ವಾಗೀಶ್ವರ-ದಿನೇಶ್ವರ ಎಂಬುದಾ
ಗಿಯೂ, ವಾಸುದೇವ-ಬ್ರಹ್ಮದೇವ-ಸೂರ್ಯದೇವ-ಎಂಬುದಾಗಿಯೂ ಆ ಈಶ್ವರ-ದೇ
ವ ಎಂಬ ಶಬ್ದಗಳು ಬೇರೆ ಉಪಪದಗಳೊಡನೆ ಕೂಡಿಯೇ ಉಪಯೋಗಿಸಲ್ಪಟ್ಟಿ
ರಬಹುದೇ ಹೊರತು ಶಿವನಿಗಿರುವಂತೆ ಈಶ್ವರ ಮಹೇಶ್ವರ ಮಹಾದೇವ ಎಂಬ ಕೇವ
ಲವಾದ ಹೆಸರುಗಳಿರುವುವೇ ? ॥೧೨೫॥ ಆ ಮಹೇಶ್ವರನಿಗೆ ಉಪಪದಗಳಿಲ್ಲದ ಅಯಾ
ಮುಖ್ಯನಾಮಗಳೇ ಅನಂತವಾಗಿರುತ್ತಿರಲಾಗಿ ಇನ್ನಾತನ ಮಹತ್ತ್ವವನ್ನು ಹೇಳುವು
ದೇನು ? ಹಾಗಿರಲಿ, ಆನಂದಮಯನಾದ ಆ ಮಹೇಶ್ವರನ ಸ್ವರೂಪವನ್ನು ವಿವರಿಸು
ತ್ತೇನೆ ಕೇಳು:—॥೧೨೬॥ ದಿವ್ಯತೇಜಸ್ಸಿನಿಂದ ಹೊಳೆಯುತ್ತಿರುವ ದೇಹವುಳ್ಳವನು,
ಮುಗುಳ್ನಗೆಯಿಂದ ಕೂಡಿದ ಮುಖಕಮಲವುಳ್ಳವನು, ಹಣೆಯಲ್ಲಿರುವ ಅಗ್ನಿನೇತ್ರ
ದಿಂದೊಪ್ಪುತ್ತಿರುವವನು ॥೧೨೭॥ ಇಕ್ಕೆಲಗಳಲ್ಲಿ ಹೊಳೆಯುವ ಸೂರ್ಯಚಂದ್ರರೆಂಬ ಎ
ರಡುಕಣ್ಣುಗಳುಳ್ಳವನು. ಆಕಾಶಪ್ರದೇಶದವರೆಗೆ ನಿಗುರಿದ ಜಟಾಪಟಲದ ಪ್ರಭೆಯಿಂ
ದೊಪ್ಪುತ್ತಿರುವವನು ॥೧೨೮॥ ಆ ಜಡೆಯುಗಳವಲ್ಲಿ ಉನ್ನತವಾಗಿ ಧಿಂಕಿಡುತ್ತಿರು
ವ ದೇವಗಂಗೆಯ ತೆರೆಗಳುಳ್ಳವನು. ಯಾವಾಗಲೂ ಚಂದ್ರನ ಕಲೆಯೇ ಶಿರೋಭೂಷ

ಸಪರಿರಂಜಿತಃ ||೧೨೯|| ಸುರಾಸುರಶಿರೋಮಾಲಾಭಿರಾಮವರವಿಗ್ರಹಃ | ಮಹೋರಗೇನ್ದ್ರಮಹಿತಕರ್ಣಕುಣ್ಡಲಮಣ್ಡಿತಃ ||೧೩೦|| ಆಭೀಲಶೂಲಡಮರುದಾನಾಭಯವಿಭಾಸಿತೈಃ | ಚತುರ್ಭಿರ್ಬಾಹುಭಿರ್ಯುಕ್ತೋದಿವ್ಯಭೂಷಾವಿಭೂಷಿತಃ ||೧೩೧|| ದಿವ್ಯಾಂಬರಧರೋದಿವ್ಯಗನ್ಧಪುಷ್ಪಪರಿಷ್ಕೃತಃ | ಮಹೇಶ್ವರೋಽತ್ರಿವ್ಯಯಃ ಕೇನಪ್ರಸ್ತೋತುಂಪರಿಶಕ್ಯತೇ || ತಲ್ಲೀಲಾಮೂರ್ತಿಮಾಹಾತ್ಮ್ಯಮಗಣ್ಯಂತನ್ನಿರೂಪ್ಯತೇ | ದೃಷ್ಟ್ವಾಪರ್ಯಾಕುಲಂಚನ್ದ್ರಂತತ್ಕಲಾಧಾರಣಂಮುದಾ ||೧೩೩|| ಆದಿಲೀಲಾಮಹೇಶಸ್ಯಮಹಿಮೋನ್ನತಿಶಾಲಿನಃ | ದ್ವಿತೀಯಾದಕ್ಷತನಯಾಂಪ್ರಿಯಾಂಕೃತ್ವಾವ್ಯವಸ್ಥಿತಿಃ ||೧೩೪|| ದ್ವಿತೀಯಶಂಭುಂವೃಷಭಂವಿಧಾಯಸ್ವೀಯವಾಹನಮ್ | ಅವಸ್ಥಾನಂಮಹೇಶಸ್ಯತೃತೀಯಾಪರಿಕೀರ್ತಿತಾ ||೧೩೫|| ತುರೀಯೇಭಾಸುರಂಹತ್ವಾನರ್ತನಂಪರಮೇಶಿತುಃ | ಗೌರೀವಿವಾಹರಚನಾಪಂಚಮೀಪರಿಕೀರ್ತಿತಾ ||೧೩೬|| ಷಷ್ಠೀಹರಿಶವಬ್ರಹ್ಮಕಪಾಲಪರಿಧಾರ

---

...ವನ್ನಾಗಿ ಮಾಡಿ ಬಸ್ಸುತ್ತಿರುವವನು ||೧೨೯|| ದೇವದಾನವರ ರುಂಡಮಾಲೆಗಳಿಂದ ...ನೋಹರವಾದ ಶ್ರೇಷ್ಠ ಶರೀರವುಳ್ಳವನು, ಮಹಾಸರ್ಪಶ್ರೇಷ್ಠಗಳನ್ನೇ ಕರ್ಣಕುಂಡಲಗಳನ್ನಾಗಿ ಮಾಡಿ ಅಲಂಕರಿಸಿಕೊಂಡಿರುವವನು ||೧೩೦|| ಭಯಂಕರವಾದ ಶೂಲಾಯುಧವನ್ನೂ ಡಮರುಗವನ್ನೂ ಹಿಡಿದಿರುವ ಮತ್ತೂ ವರದಾನ ಅಭಯಪ್ರದಾನವನ್ನು ಮಾಡುತ್ತಿರುವ ಕೈಗಳಿಂದೊಪ್ಪುತ್ತಿರುವ ನಾಲ್ಕುತೋಳುಗಳಿಂದ ಕೂಡಿದವನು. ಶ್ರೇಷ್ಠವಾದ ಆಭರಣಗಳಿಂದಲಂಕೃತನಾದನು ||೧೩೧|| ಶ್ರೇಷ್ಠವಾದ ವಸ್ತ್ರಗಳನ್ನು ಹೊದೆದವನು, ಶ್ರೇಷ್ಠವಾದ ಗಂಧದಿಂದಲೂ ಹೂವುಗಳಿಂದಲೂ ಶೃಂಗಾರಗೊಂಡವನು, ಸರ್ವಪೂಜ್ಯನು, ನಾಶರಹಿತನು, ಅಂಥ ಮಹೇಶ್ವರನನ್ನು ಹೊಗಳುವುದಕ್ಕೆ ಯಾರಿಗೆ ಶಕ್ಯವು? ||೧೩೨|| ಲೀಲಾವಿಶಿಷ್ಟವಾದ ಆ ಮೂರ್ತಿಯ ಮಹಿಮೆಯು ...ಗಣನಾತೀತವಾಗಿರುವುದು. ಅದನ್ನು ಹೇಳುತ್ತೇನೆ ಕೇಳು—ಮಾವನಾದ ದಕ್ಷನ ಶಾಪದಿಂದ ದುಃಖಗೊಂಡು ಬಂದ ಚಂದ್ರನನ್ನು ನೋಡಿ, ಅವನ ಬಿಂದುಕಲೆಯನ್ನು ಸಂತೋಷದಿಂದ ಧರಿಸಿಕೊಂಡುದೇ ಅತ್ಯಂತಮಹಿಮನಾದ ಆ ಮಹೇಶ್ವರನ ಮೊದಲನೆಯ ಲೀಲೆಯಾಗಿರುವುದು. ದಕ್ಷಬ್ರಹ್ಮನ ಮಗಳನ್ನು ವರಿಸಿ ವಿವಾಹಮಾಡಿಕೊಂಡುದೇ ೨ ನೇಯ ಲೀಲೆಯು ||೧೩೪|| ಎರಡನೆಯ ಶಂಭುವಾದ ವೃಷಭೇಶನನ್ನು ತನ್ನ ವಾಹನವನ್ನಾಗಿ ಮಾಡಿಕೊಂಡುದೇ ಮೂರನೆಯಲೀಲೆಯು ||೧೩೫|| ಗಜಾಸುರನನ್ನು ಕೊಂದು ನಾಟ್ಯಮಾಡಿದುದೇ ಮಹೇಶ್ವರನ ೪ ನೆಯ ಲೀಲೆಯು. ಗಿರಿಜೆಯನ್ನು ಮದುವೆಯಾದುದೇ ೫ ನೆಯ ಲೀಲೆಯೆಂದು ಹೇಳಲ್ಪಟ್ಟಿರುವುದು ||೧೩೬||

ಣಮ್ । ನಿಜನೇತ್ರಾಗ್ನಿನಾ ಕಾಮದಹನಂ ಸಪ್ತಮೀ ಸ್ಮೃತಾ ॥೧೩೭॥ ಶ್ವೇತಾರ್ಥಂ ಕಾಲಸಂಹಾರಕರಣಂ ಕಥಿತಾಷ್ಟಮೀ । ಪುರಸಂಹರಣಂ ನೇತ್ರಾನಲೇನ ನವಮೀ ಸ್ಮೃತಾ ॥೧೩೮॥ ಜಲನ್ಧರಸ್ಯ ಹನನಂ ಬದ್ಧವಿಷ್ಣೋರ್ಮಹೀಯಸಃ । ದಶಮೀ ಪರಿಸಂಖ್ಯಾತಾ ಶ್ರೀಮಹೇಶಸ್ಯ ಶೂಲಿನಃ ॥೧೩೯॥ ಅಹಂ ಬ್ರಹ್ಮೇತಿ ವದತಶ್ಶಿರಶ್ಛೇದಸ್ಸ್ವಯಂಭುವಾ। ಏಕಾದಶೀತಿ ವಿಖ್ಯಾತಾ ಲೀಲಾ ಶಂಭೋರ್ಜಗತ್ಪತೇಃ ॥೧೪೦॥ ಖಣ್ಡಿತಾಮರದಕ್ಷಸ್ಯ ವೀರಭದ್ರಸ್ಯ ವಿಕ್ರಮಃ । ದ್ವಾದಶೀ ಕಥಿತಾ ಲೀಲಾ ಮಹೇಶಸ್ಯ ಪಿನಾಕಿನಃ ॥೧೪೧॥ ತ್ರಯೋದಶೀ ನೃಸಿಂಹಸ್ಯ ಹನನಂ ಪರಿಕೀರ್ತಿತಾ । ಅರ್ಧನಾರೀಶ್ವರತ್ವಂ ಸಾ ಲೀಲೇಶಸ್ಯ ಚತುರ್ದಶೀ ॥೧೪೨॥ ಲೀಲಾ ಪಂಚದಶೀ ಪ್ರೋಕ್ತಾ ಕಿರಾತಾಕೃತಿಧಾರಣಮ್ । ಕಂಕಾಲವೇಷಧರಣಂ ಷೋಡಶೀ ಪರಿಕೀರ್ತಿತಾ ॥೧೪೩॥ ಪ್ರಸಾದದಾನಂ ಭಕ್ತಾಯ ಚಣ್ಡೇಶಾಯ ಕೃಪಾವಶಾತ್। ಕಥಿತಾ ಪರಮೇಶಸ್ಯ ಲೀಲಾ ಸಪ್ತದಶೀ ವರಾ ॥೧೪೪॥ ಅಷ್ಟಾದಶೀ ಸ್ಮೃತಾ ಲೀಲಾ ಹಾಲಾಹಲಪರಿಗ್ರಹಃ। ವಿಷ್ಣವೇ ಚಕ್ರನೇತ್ರಾಬ್ಜದಾನಮೇಕೋನವಿಂಶತಿಃ ॥೧೪೫॥

---

ಬ್ರಹ್ಮಕಪಾಲವಂ ಹಿಡಿದು ವಿಷ್ವಕ್ಸೇನನನ್ನಿರಿದು ಅವನ ಹೆಣವಂ ಹೊತ್ತು ಭಿಕ್ಷಾಟನನನ್ನು ಮಾಡಿದ ಲೀಲೆಯೇ ೬ ನೆಯದು ತನ್ನ ಹಣೆಗಣ್ಣಿನ ಬೆಂಕಿಯಿಂದ ಮನ್ಮಥನನ್ನು ಸುಟ್ಟುದೇ ೭ ನೆಯ ಲೀಲೆಯು ॥೧೩೭॥ ತನ್ನನ್ನು ಮರೆಬಿದ್ದ ಶ್ವೇತನನ್ನು ಪೊರೆಯುವುದಕ್ಕಾಗಿ ಯಮನನ್ನು ಸಂಹರಿಸಿದುದೇ ೮ ನೆಯ ಲೀಲೆಯು. ಹಣೆಗಣ್ಣಿನ ಬೆಂಕಿಯಿಂದ ತ್ರಿಪುರಗಳನ್ನು ಹಾಳ್ಮಾಡಿದುದೇ ೯ ನೆಯ ಲೀಲೆಯು ॥೧೩೮॥ ವಿಷ್ಣುವು ಕಟ್ಟಸೆರೆಹಾಕಿದ್ದ ಜಲಂಧರ ಮಹಾದೈತ್ಯನನ್ನು ಕೊಂದುದೇ ಶ್ರೀಪರಮೇಶ್ವರನ ೧೦ ನೆಯ ಲೀಲೆಯು ॥೧೩೯॥ ತಾನೇ ಬ್ರಹ್ಮನೆಂದು ಹೇಳಿಕೊಳ್ಳುತ್ತಿದ್ದ ಬ್ರಹ್ಮನ ೫ ನೆಯ ತಲೆಯನ್ನು ಕತ್ತರಿಸಿದುದೇ ಜಗದೀಶನ ೧೧ ನೆಯ ಪ್ರಸಿದ್ಧವಾದ ಲೀಲೆಯು ॥೧೪೦॥ ಶಿವವಿರುದ್ಧ ಯಜ್ಞಕ್ಕೆ ನೆರೆದಿದ್ದ ದೇವತೆಗಳನ್ನೂ ದೀಕ್ಷಿತನಾಗಿದ್ದ ದಕ್ಷನನ್ನೂ ಭಂಗಗೊಳಿಸಿದ ವೀರಭದ್ರನ ಅವತಾರವೇ ೧೨ ನೆಯ ಲೀಲೆಯು ॥೧೪೧॥ ನೃಸಿಂಹನನ್ನು ಕೊಂದುದೇ ೧೩ ನೆಯ ಲೀಲೆಯು, ಅರ್ಧನಾರೀಶ್ವರನಾಗಿದ್ದುದೇ ೧೪ ನೆಯ ಲೀಲೆಯು ॥೧೪೨॥ ಕಿರಾತವೇಷವನ್ನು ಧರಿಸಿದ್ದುದೇ ೧೫ ನೆಯ ಲೀಲೆಯು. ವಾಮನಮೂರ್ತಿಯ ಬೆನ್ನಮೂಳೆಯನ್ನು ಮುರಿದು ಹಿಡಿದುಕೊಂಡುದೇ ೧೬ ನೆಯ ಲೀಲೆಯು ॥೧೪೩॥ ಭಕ್ತನಾದ ಚಂಡೇಶನಿಗೆ ವರಪ್ರದಾನ ಮಾಡಿದುದೇ ೧೭ ನೆಯ ಲೀಲೆಯು ॥೧೪೪॥ ವಿಷವನ್ನು ಕಂಠದಲ್ಲಿ ಧರಿಸಿದುದೇ ೧೮ ನೆಯ ಲೀಲೆಯು. ವಿಷ್ಣುವಿಗೆ ಚಕ್ರಾಯುಧವನ್ನೂ ಅವನು ಕಳೆದು ಪೂಜಿಸಿದ್ದ ನೇತ್ರಕಮಲವನ್ನು ಸಹ ಕೊಟ್ಟುದೇ ೧೯ ನೆಯ ಲೀಲೆಯು ॥೧೪೫॥ ಜಗತ್ತೆಲ್ಲಾ ಶಿವನಹೊಟ್ಟೆಯಲ್ಲೇ

ವಿಘ್ನೇಶಾಯಪ್ರಸನ್ನತ್ವಂವಿಂಶತಿಃಪರಿಕೀರ್ತಿತಾ।ಉಮಾಷಡಾನನಾದಿಭ್ಯಸ್ಸ್ವಮಾಹಾತ್ಮ್ಯನಿವೇದನಮ್ ॥೧೪೬॥ ಸ್ಮೃತ್ಯೈಕವಿಂಶತಿತಮಾಲೀಲಾ ಶೈಲಸುತಾಪತೇಃ । ಏಕಪಾದಾವತಾರೇಣಸ್ಥಿತಿರ್ದ್ವಾವಿಂಶತಿರ್ಮತಾ ॥ ಸೇವ್ಯಮಾನೈರ್ಹರಿಬ್ರಹ್ಮಮುಖ್ಯೈಸ್ಸುಕಮವಸ್ಥಿತಿಃ ।ತ್ರಯೋವಿಂಶತಿರಿತ್ಯುಕ್ತಾ ಲೀಲೇಯಂ ಪಾರ್ವತೀಪತೇಃ ॥೧೪೮॥ ದಕ್ಷಿಣಾಮೂರ್ತಿರೂಪೇಣಸ್ಥಿತ್ವಾಸನ್ಮುನಿಪಾಲನಮ್ । ಸಾಚತುರ್ವಿಂಶತಿತಮಾಲೀಲಾಪುರಭಿದಸ್ಸ್ಮೃತಾ ॥೧೪೯॥ ಉರುಲಿಙ್ಗಾಕೃತಿಃಪಂಚವಿಂಶತಿಃಪರಿಕೀರ್ತಿತಾ। ಶ್ರುತಿವಾಕ್ಯೇಪ್ರಜನನಮಲಂಕೃತಮಿತಿಸ್ಥಿತೇ ॥೧೫೦॥ ಅನಲಸ್ತಮ್ಭವಪುಷಇತಿವಾಕ್ಯೇಪರಿಶ್ರುತೇ । ತಥಾಹುತವಹಸ್ತಂಭ ಇತಿವಾಕ್ಯೇಚಕಾಸತಿ ॥೧೫೧॥ ವಾಕ್ಯೇಪರಸ್ಮಿನ್ಜ್ವಲನಸ್ತಮ್ಭರೂಪಿಣ ಇತ್ಯಪಿ । ಆವಾಮೇವಹಿಕರ್ತಾರಾವಿತ್ಯವಷ್ಟಂಭ ಸ್ರಂಭಿತೌ ॥೧೫೨॥ ನಿರೀಕ್ಷ್ಯವಿಧಿಪದ್ಮಾಕ್ಷಾವೇತನ್ಗರ್ವಾಪನುತ್ತಯೇ ।ವರೋರುಲಿಙ್ಗರೂಪೇಣತಯೋರ್ಮಧ್ಯೇ

---

ಇರುವುದರಿಂದ, ಶಿವಪ್ರದಕ್ಷಿಣದಿಂದ ಜಗತ್ಪ್ರದಕ್ಷಿಣವಾಯ್ತೆಂದು ಹೇಳಿ ಮೆಚ್ಚಿಸಿದ ವಿಘ್ನೇಶ್ವರನಿಗೆ ತನ್ನ ಕೈಯ ಮಾವಿನಹಣ್ಣನ್ನು ಕೊಟ್ಟುದೇ ಮಹೇಶ್ವರನ ೨೦ನೆಯ ಲೀಲೆಯು. ಉಮೆಯನ್ನೂ ಷಣ್ಮುಖನನ್ನೂ ತೊಡೆಗಳಮೇಲೆ ಕುಳ್ಳಿರಿಸಿಕೊಂಡು, ಅವರಿಗೆ ತನ್ನ ಮಹತ್ತ್ವವನ್ನು ನಿರೂಪಿಸಿದುದೇ ಈಶ್ವರನ ೨೧ ನೆಯ ಲೀಲೆಯು. ಈಶ್ವರನು ಪ್ರಳಯಕಾಲದಲ್ಲಿ ಮಹಾತಾಂಡವವನ್ನಾಡಿ ಏಕಪಾದದಿಂದ ನಿಂತ ಲೀಲೆಯೇ ೨೨ ನೆಯದು ॥೧೪೭॥ ವಿಷ್ಣುಬ್ರಹ್ಮಾದಿಗಳಿಂದ ಸೇವೆಗೊಳ್ಳುತ್ತ ಸುಖಮಯನಾಗಿ ಕುಳಿತಿದ್ದುದೇ ೨೩ ನೆಯ ಸುಖಾವಹಲೀಲೆಯು. ದಕ್ಷಿಣಾಮೂರ್ತಿಯಾಗಿ ಕುಳಿತು ಮುನಿಜನಕ್ಕೆ ತತ್ತ್ವೋಪದೇಶವನ್ನು ಮಾಡಿದುದೇ ೨೪ ನೆಯ ಲೀಲೆಯು ॥ ಬ್ರಹ್ಮವಿಷ್ಣುಗಳ ಕಲಹವನ್ನು ನಿವಾರಿಸುವುದಕ್ಕಾಗಿ, ಅವರಿರ್ವರ ಮಧ್ಯದಲ್ಲಿ ಆದ್ಯಂತಗಳನ್ನರಿಯಬಾರದಂಥ ಮಹಾಲಿಂಗಾಕಾರವಾಗಿ ನಿಂದುದೇ ೨೫ ನೆಯ ಲೀಲೆಯೆಂದು ಹೇಳಲ್ಪಟ್ಟಿತು.॥೧೫೦॥ ವೇದಗಳಲ್ಲಿ ಜಗದೀಶ್ವರನು ಸಕಲೋತ್ಪತ್ತಿಮೂಲವಾದ ಲಿಂಗರೂಪನೆಂದೂ, ಅವನು ಅಗ್ನಿಸ್ತಂಭಸ್ವರೂಪನಾಗಿರುವನೆಂದೂ ಬೇರೆಬೇರೆ ವಚನಗಳಲ್ಲಿ ಹೇಳಲ್ಪಟ್ಟಿರುವುದು. ಹಾಗೆ ಹೇಳಲ್ಪಟ್ಟಿರುವುದಕ್ಕೆ-ಬ್ರಹ್ಮವಿಷ್ಣುಗಳ ವಾದವನ್ನಡಗಿಸುವುದಕ್ಕಾಗಿ ಮಧ್ಯದಲ್ಲಿ ಸರ್ವೋಪಾಸ್ಯನಾದ ಶಿವನು ಮಹಾಜ್ವಾಲಾಲಿಂಗರೂಪದಿಂದವತರಿಸಿದ್ದುದೇ ಕಾರಣವು. ಬಂದಾನೊಂದುಸಮಯದಲ್ಲಿ ಬ್ರಹ್ಮನೂ ವಿಷ್ಣುವೂ ಅಹಂಕಾರದಿಂದುಬ್ಬಿ, ನಾನೇಜಗತ್ಕರ್ತ ತಾನೇಜಗತ್ಕರ್ತನೆಂದು ವಿವಾದಿಸುತ್ತಿರಲು ॥೧೫೨॥ ಶಿವನು ಇದನ್ನು ನೋಡಿ, ಇವರ ಗರ್ವವನ್ನಡಗಿಸುವುದಕ್ಕೋಸುಗ ಅವ

ಶಿವೇಸ್ಥಿತೇ ॥೧೫೩॥ ಅದ್ಭುತಾಕ್ರಾನ್ತಮನಸೌತೌಬ್ರಹ್ಮಕಮಲೇಶ್ವರೌ। ವದನ್ತೌಯೋಽಸ್ಯಾದಿಮನ್ತ್ಯಂವೇತ್ತಿ ಕರ್ತಾಸಇತ್ಯಥ॥೧೫೪॥ಬ್ರಹ್ಮೋತ್ಪಪಾತದಿವಮಿತ್ಯಾದ್ಯುಕ್ತೇಸ್ತದ್ವದೇವಹಿ। ವರಾಹೋವಿಷ್ಣುರಿತ್ಯುಕ್ತೇರಪಿಭೂತ್ವಾತದೈವಹಿ ॥೧೫೫॥ ಮರಾಳಕೋಲವಪುಷೌಗತಾವೂರ್ಧ್ವಮಧಃಕ್ಷಣಾತ್ । ಅದೃಷ್ಟ್ವಾಽಽದ್ಯನ್ತಮೇತಸ್ಯಸ್ತುವಂತೌತೌಪ್ರಣೇಮತುಃ ॥೧೫೬॥ ಲಿಙ್ಗಾಷ್ಟಕೇನವಿಶ್ವೇಶಂಗಿರಿಜಾಪತಿಮಕ್ಷಯಮ್ । ಸಾಪಂಚವಿಂಶತಿತಮಾಲೀಲಾವರ್ಣ್ಯಾನರೈಃಕಥಮ್ ॥೧೫೭॥ ತನ್ಮಹೇಶ್ವರಮೂರ್ತೇಃಶ್ರೀರುದ್ರಮೂರ್ತಿರ್ವಿರಾಜತೇ। ಶ್ರುತ್ಯಾನಮೋಭಗವತೇರುದ್ರಾಯೇತಿತಥಾಪುನಃ ॥೧೫೮॥ ನಮಸ್ತೇಅಸ್ತುರುದ್ರಾಯೇತ್ಯನ್ಯಯಾಚೋರ್ಧ್ವಬಾಹವೇ । ರುದ್ರಾಯೇತ್ಯಪರಶ್ರುತ್ಯಾಯಮುಪಿಷೋರುದ್ರಉಚ್ಯತೇ ॥೧೫೯॥ ಇತಿಶ್ರುತ್ಯಾಚವಿಶ್ವಾಧಿಕೋರುದ್ರಇತಿಚಾನ್ಯಯಾ । ಶ್ರುತ್ಯಾಚೇತರಯಾಸರ್ವೋಹ್ಯೇಷರುದ್ರಇತೀಡ್ಯಯಾ ॥೧೬೦॥ ಶ್ರುತ್ಯಾನ

---

ರಿಬ್ಬರ ಮಧ್ಯದಲ್ಲಿ ಶ್ರೇಷ್ಠವಾದ ಮಹಾಲಿಂಗರೂಪದಿಂದ ನಿಂತುಕೊಂಡನು ॥೧೫೩॥ ಆ ಬ್ರಹ್ಮವಿಷ್ಣುಗಳಿಬ್ಬರೂ ಅದನ್ನು ನೋಡಿ ಮನಸ್ಸಿನಲ್ಲಿ ಆಶ್ಚರ್ಯಗೊಂಡವರಾಗಿ, "ನಮ್ಮಿಬ್ಬರಲ್ಲಿ ಈ ಲಿಂಗದ ಬುಡವನ್ನಾಗಲಿ ತುದಿಯನ್ನಾಗಲಿ ಯಾವನು ಕಾಣುವನೋ ಅವನೇ ಜಗತ್ಕರ್ತನೆಂಬುದು ಸಿದ್ಧವಾಗಲಿ" ಎಂದು ಶಪಥಮಾಡಿಕೊಂಡರು. ಬ್ರಹ್ಮನು ಆಕಾಶಕ್ಕೆ ಹಾರಿದನು, ಎಂದು ಮೊದಲಾಗಿ ಪುರಾಣವಚನವಿರುವುದರಿಂದಲೂ, ಅದರಂತೆಯೇ "ವಿಷ್ಣುವು ಹಂದಿಯಾಗಿ ಹೊರಟನು" ಎಂದು ಪುರಾಣದಲ್ಲಿ ಹೇಳಲ್ಪಟ್ಟಿರುವುದರಿಂದಲೂ, ॥೧೫೫॥ ಆ ಕೂಡಲೇ ಕ್ಷಣಕಾಲದೊಳಗಾಗಿ ಬ್ರಹ್ಮವಿಷ್ಣುಗಳು ಹಂಸನ ಮತ್ತೂ ಹಂದಿಯ ಆಕೃತಿಯನ್ನು ತಳೆದವರಾಗಿ, ಮೇಲಕ್ಕೂ ಕೆಳಕ್ಕೂ ಹೊರಟರು. ಆದರೆ ಅವರಿಬ್ಬರೂ ಈ ಲಿಂಗದ ಆದ್ಯಂತಗಳನ್ನು ಕಾಣಲಾರದೆ, ಗಿರಿಜಾಪತಿಯೂ ನಾಶರಹಿತನೂ ಆದ ಜಗದೀಶ್ವರನನ್ನು ಲಿಂಗಾಷ್ಟಕದಿಂದ ಸ್ತೋತ್ರಮಾಡಿ ನಮಸ್ಕರಿಸಿದರು. ಹೀಗೆ ಹೇಳಲ್ಪಟ್ಟಿರುವ ೨೫ನೆಯದಾದ ಆ ಉರುಲಿಂಗೋದ್ಭವಲೀಲೆಯು ಮನುಷ್ಯರಿಂದ ವರ್ಣಿಸುವುದಕ್ಕೆ ಸಾಧ್ಯವೆ ? ॥೧೫೭॥ ಆ ತಪ್ಪ ಮಹೇಶ್ವರಮೂರ್ತಿಯಿಂದ ಶ್ರೀರುದ್ರಮೂರ್ತಿಯು ಉದಿಸಿ ಪ್ರಕಾಶಿಸುತ್ತಿರುವನು. ವೇದವು ಆ ರುದ್ರಮೂರ್ತಿಯನ್ನು ಭಗವಂತನಾದ ರುದ್ರನಿಗೆ ನಮಸ್ಕಾರವೆಂದೂ, ರುದ್ರನಾದ ನಿನಗೆ ನಮಸ್ಕಾರವಾಗಲಿ ಎಂದೂ ನಿನ್ನ ಉತ್ಕೃಷ್ಟವಾದ ತೋಳಿಗೆ ನಮಸ್ಕಾರವೆಂದೂ, ರುದ್ರನಿಗೆ ನಮಸ್ಕಾರವೆಂದೂ, ರುದ್ರನೊಬ್ಬನೇ ಉಪಾಸ್ಯನೆಂದೂ, ರುದ್ರನು ಜಗತ್ತಿಗೆಲ್ಲಾ ದೊಡ್ಡವನು ಎಂದೂ, ಈ ದೃಶ್ಯಪ್ರಪಂಚವೆಲ್ಲವೂ ರುದ್ರಮಯವೆಂದೂ ॥೧೬೦॥ ರುದ್ರನೆ ಕೋಪಿಸಬೇಡವೆಂದೂ, ರುದ್ರನೇ ನಿನ್ನ ಕೋ

ಮೋಽಅಸ್ತು ರುದ್ರಾಯೇತಿ ಚಾಪರಯಾತಥಾ । ನಮೋ ರುದ್ರಾಯೇತಿ ಮಾತ್ವಾ ರುದ್ರೇತೀತರಯಾ ತಥಾ ॥೧೯೧॥ ಕದ್ರುದ್ರಾಯೇತಿ ಚ ತಥಾ ನಮಸ್ತೇ ರುದ್ರ ಮನ್ಯವೇ । ಇತಿ ತನ್ನೋ ರುದ್ರ ಇತಿ ನಮೋ ರುದ್ರಾಯ ಮನ್ಯವೇ॥ ಇತೀತರಾಭೀ ರುದ್ರಾಯ ನಮ ಇತ್ಯನ್ಯಯಾ ಪುನಃ । ರುದ್ರಾಯ ತೇ ರಸವತೇ ಯ ಏಕೋ ರುದ್ರ ಉಚ್ಯತೇ ॥೧೯೨॥ ರುದ್ರಃ ಪಶೂನಾಮಿತ್ಯಾದಿ ಶೃತಿಭಿಸ್ಸಂಸ್ತುತಸ್ಯ ಹಿ । ರುದ್ರಸ್ಯ ಮಹಿಮಾ ಽಸ್ಮಾಭಿಃ ಪ್ರಸ್ತೋತುಂ ಶಕ್ಯತೇ ಕಥಮ್ ॥ ಶರ್ವಸ್ಯ ಸಕಲಂ ರೂಪಮ ಪೂರ್ವಾಚೀನಂ ಯದಸ್ತಿ ತತ್ । ಆದ್ಯೈಃ ಷಡ್ಗೀರ್ವಾರ್ಣೈರ್ಭವೇ ಸಂಸ್ತೋತುಂ ಮಾರಭ್ಯ ಭಕ್ತಿತಃ ॥೧೯೩॥ ನ ಮನಃ ಕಸ್ಯ ನ ವಚ ಇತಿ ಸತ್ಸು ಪವತ್ಸ್ವಪಿ । ಕಸ್ಸಮರ್ಥಃ ಪರಿಷ್ಟೋತುಂ ತಸ್ಯ ರೂಪಂ ಮಹೇಶಿತುಃ ॥೧೯೪॥ ತಾದೃಕ್ಛಕ್ತೇ ರುದ್ರ ವಾಮಾಂಗಸಂಜಾತೋಽಯಂ ಜನಾರ್ದನಃ । ತೇನ ರುದ್ರೇಣ ಲೋಕೈಕನಾಥೇನ ಸದೃಶಃ ಕಿಮು ॥೧೯೫॥ ಅವಿಶೇಷೇಡ್ಯ ಸಕಲನಿಷ್ಕಲಾಂಗಸ್ಯ ಶೂಲಿನಃ । ತತ್ವತ್ರಯಾಭಿರವ್ಯಾಸು ಸರ್ವಾಸ್ವೇತಾಸು ಮೂರ್ತಿಷು ॥೧೯೬॥ ಕಾಮನುಚಕ್ರೇ ಹರಿಂ ಮೂರ್ತಿಮರ್ಮೂರ್ತಿಂ ಸೋನುಚಕಾರ ಕಾಮ್ । ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ ॥೧೯೭॥

---

ಪಕ್ಕೆ ನಮಸ್ಕಾರವೆಂದೂ, ರುದ್ರನು ನಮಗೆ ಹಿತವನ್ನು ಮಾಡಲಿಯೆಂದೂ, ಸಗುಣನಾದ ರುದ್ರನಿಗೆ ನಮಸ್ಕಾರವೆಂದೂ, ರುದ್ರನೊಬ್ಬನೇ ಹೊರತು ಮತ್ತೊಬ್ಬನಿಲ್ಲವೆಂದೂ, ವಿಷ್ಣು ಬ್ರಹ್ಮಾದಿ ಪಶುಕುಲಕ್ಕೆಲ್ಲಾ ರುದ್ರನೇ ಪತಿಯೆಂದೂ ಬೇರೆಬೇರೆ ವಚನಗಳಿಂದ ಸ್ತೋತ್ರಮಾಡಿರುವುದು. ಅಂತಪ್ಪ ರುದ್ರನ ಮಹತ್ತ್ವವನ್ನು ವರ್ಣಿಸುವುದಕ್ಕೆ ನಮ್ಮಿಂದ ಹೇಗೆ ಶಕ್ಯವಾದೀತು? ॥೧೯ ॥ ಶಿವನ ಪುರಾತನವಾದ ಸಗುಣರೂಪವನ್ನು ಎಲ್ಲಕ್ಕೂ ಮೊದಲಿನವಾದವೇದಗಳು ಭಕ್ತಿಯಿಂದ ವಾಗ್ವೈಭವದೊಡನೆ ಹೊಗಳುವುದಕ್ಕಾರಂಭಿಸಿ, ॥ ಕಡೆಗೆ ,,ಆ ರೂಪವನ್ನು ಧ್ಯಾನಿಸುವುದಕ್ಕೂ ವರ್ಣಿಸುವುದಕ್ಕೂ ಯಾರ ಮನೋವಾಕ್ಕುಗಳು ತಾನೇ ಅಶಕ್ತವಾಗದೆಯಿರುವುವು!'' ಎಂದು ಹೇಳಿಬಿಟ್ಟರುತ್ತಿರಲಾಗಿ, ಆ ಮಹಾರುದ್ರನ ರೂಪವನ್ನು ಹೊಗಳುವುದಕ್ಕೆ ಯಾವನು ಸಮರ್ಥನು ? ॥೧೯೪॥ ಅಂತಪ್ಪ ಶ್ರೀಗುರುವಿನ ಎಡಗಡೆಯ ದೇಹದಿಂದ ಜನಿಸಿದ ಈ ವಿಷ್ಣುವು ಲೋಕೈಕನಾಥನಾದ ಆ ರುದ್ರನಿಗೆ ಸಮಾನನಾಗುವನೆ ? ॥೧೯೫॥ ತನಗಿಂತಧಿಕರು ಮತ್ತೊಬ್ಬರಿಲ್ಲವೆಂದು ಹೊಗಳಿಸಿಕೊಳ್ಳಲು ಯೋಗ್ಯನಾದ-ಸಗುಣನೂ ನಿರ್ಗುಣನೂ ಆದ-ಪರಶಿವನ ಮೂರು ತತ್ವಗಳಾಗಿ ಮೆರೆಯುತ್ತಿರುವ ಈ ಪೂರ್ವೋಕ್ತಮೂರ್ತಿತ್ರಯಗಳೊಳಗೆ ॥೧೯೬॥ ಯಾವ ಮೂರ್ತಿಯು ಹರಿಯಾಕಾರವನ್ನನುಸರಿಸಿದೆ? ಅಥವಾ ಈ ಮೂರ್ತಿಗಳಲ್ಲಿ ಯಾರ ಆಕೃತಿಯನ್ನು ಹರಿಯು ಹೊಂದಿದ್ದಾನೆ ? ಹೇಳು.

ಯಥಾಶಿವಮಯೋವಿಷ್ಣುರೇವಂವಿಷ್ಣುಮಯಶ್ಶಿವಃ । ಇತ್ಯಯುಕ್ತಂವ
ಚೋವಕ್ತುಮೇತೌಕಿಂನುಸಮಾಕೃತೀ ॥೧೨೦॥ ಉರೋವತ್ಸಂಕಣ್ಠಕಾ
ನ್ತಿಂವಿನಾಕಿಂಕಾರೌಹರೀಶಯೋಃ । ಕಿಂತುಲ್ಯವರ್ಣೌಸಹರಿರೀಶಾನಸದೃ
ಶೋಯದಿ ॥೧೨೧॥ ಲೋಚನತ್ರಿತಯಂನೇತ್ರದ್ವಯಂನೇತ್ರೇಷುತೇಷ್ವ
ಪಿ । ಅನಲಾಕ್ಷ್ಯಂಬುಜದೃಶೌನೃಸಿಂಹಾದ್ಯಜಿನಾಮ್ಬರಮ್ ॥೧೨೨॥ ಪೀ
ತಾಮ್ಬರಂಹರಿಬ್ರಹ್ಮಾಸ್ಥಿಮಾಲಾವನಮಾಲಿಕಾ । ಯಜ್ಞಚರ್ಮೋತ್ತ
ರೀಯಂಚಕೇವಲಂಚೋತ್ತರೀಯಕಮ್ ॥೧೨೩॥ ಪದ್ಮಾಸನಜಟಾಯ
ಜ್ಞಸೂತ್ರಂತನ್ತೂಪವೀತಕಮ್ । ಹರಿನೇತ್ರಾರ್ಚಿತಃಪಾದಶ್ಶಂಭುನಾಖ
ಣ್ಡಿತಂಪದಮ್ ॥೧೨೪॥ ಕಪಾಲದಾಮ್ನಾಕೂರ್ಮಸ್ಯಸಂವೀತಮುದರಂ
ಮಹತ್ । ಪುನಃಕೇವಲದಾಮ್ನಾನಿಬದ್ಧಂಚೋದರಮನ್ಯತಃ ॥೧೨೫॥ ಬ
ಹೂರಗಫಣಾರತ್ನನಿಚಯಃಕೌಸ್ತುಭೋಮಣಿಃ । ಸ್ವನೇತ್ರಾರ್ಪಣಸಂ
ಲಬ್ಧಚಕ್ರಂವಿಷ್ಣುಶವಾಂಕಿತಮ್ ॥೧೨೬॥ ತ್ರಿಶೂಲಂಚೇತ್ಯದಸ್ಸರ್ವಂಕಿ

---

"ವಿಷ್ಣುರೂಪನಾದ ಶಿವನಿಗೂ ಶಿವರೂಪನಾದ ವಿಷ್ಣುವಿಗೂ ನಮಸ್ಕಾರ, ವಿಷ್ಣುವು
ಶಿವಸ್ವರೂಪನಾಗಿರುವಂತೆಯೇ ಶಿವನೂ ವಿಷ್ಣುರೂಪನಾದವನು" ಎಂದು ಅನುಚಿತ
ವಾದ ಈ ಮಾತನ್ನಾಡುವುದಕ್ಕೆ ಈ ಹರಿಹರರಿಬ್ಬರೂ ಒಂದೇತೆರದ ಆಕಾರವುಳ್ಳವ
ರೇನು? ॥೧೨೦॥ ವಿಷ್ಣುವಿನ ಎದೆಯಮೇಲಿರುವ ಮಚ್ಚೆ-ಶಿವನ ಕಂಠದಲ್ಲಿರುವ ವಿಷ
ದಕಪ್ಪು-ಇವೆರಡೂ ಬಣ್ಣದಲ್ಲಿ ಸಮನಾಗಿರಬಹುದು. ಇವೆರಡರಹೊರತು ಹರಿಹರರು
ದೇಹದ ಬಣ್ಣದಿಂದಲಾದರೂ ಸಮಾನರಾಗಿರುವರೆ ? ಆ ವಿಷ್ಣುವು ಶಿವನ ಸಮಾನನಾ
ದರೆ ॥೧೨೧॥ ಶಿವನಿಗೆ ಮೂರುಕಣ್ಣುಗಳು, ಹರಿಗೆ ಎರಡುಕಣ್ಣುಗಳು, ಹರನ ಆ
ಮೂರುಕಣ್ಣುಗಳಲ್ಲೂ ಒಂದು ಬೆಂಕಿಯಕಣ್ಣು, ವಿಷ್ಣುವಿಗೆ ತಾವರೆಗಣ್ಣು, ಹರನಿ
ಗೆ ನೃಸಿಂಹ ಮೊದಲಾದವರ ಚರ್ಮವೇ ವಸ್ತ್ರವು, ವಿಷ್ಣುವಿಗಾದರೊ ಪೀತಾಂಬರವು,
ಹರನಿಗೆ ಹರಿಬ್ರಹ್ಮರ ಮೂಳೆಯ ಮಾಲಿಕೆಯು, ಹರಿಗೆ ಪುಷ್ಪಮಾಲಿಕೆಯು, ಹರನಿ
ಗೆ ವಿಷ್ಣುವಿನ ದೇಹಚರ್ಮವೇ ಹೊದಿಕೆಯು, ಹರಿಗೆ ಸಾಧಾರಣವಾದ ಬಟ್ಟೆಯಹೊದಿ
ಕೆಯು ॥೧೨೩॥ ಹರನಿಗೆ ಬ್ರಹ್ಮನಜಡೆಯ ಯಜ್ಞೋಪವೀತವು, ಹರಿಗೆ ನೂಲಿನಉಪ
ವೀತವು, ಹರನಪಾದವು ವಿಷ್ಣುವಿನ ಕಣ್ಣಿನಿಂದ ಪೂಜಿಸಲ್ಪಟ್ಟದು, ಹರಿಯಪಾದವು
ಶಿವನಿಂದ ಕತ್ತರಿಸಲ್ಪಟ್ಟದು ॥೧೨೪॥ ಶಿವನ ದೊಡ್ಡಹೊಟ್ಟೆಯು ಕೂರ್ಮಮೂರ್ತಿ
ಯ ಬೆನ್ನೋಟೆಯಿಂದ ಪೋಣಿಸಿದ ಮಾಲಿಕೆಯಿಂದ ಸುತ್ತುವರಿಯಲ್ಪಟ್ಟದು. ಹರಿ
ಯ ಹೊಟ್ಟೆಯು ಸಾಧಾರಣವಾದ ರತ್ನಾದಿಹಾರಗಳಿಂದ ಕಟ್ಟಲ್ಪಟ್ಟದು ॥೧೨೫॥
ಶಿವನ ದೇಹದಲ್ಲಿ ಅನೇಕಸರ್ಪಗಳ ಹೆಡೆಗಳಲ್ಲಿರುವ ರತ್ನಗಳ ಸಮೂಹವಿರುವುದು, ಹ
ರಿಯದೇಹದಲ್ಲಿ ಕೌಸ್ತುಭಮಣಿಯಿರುವುದು. ಶಿವನದೇಹವು ವಿಷ್ಣುವಿನ ಹೆಣದಿಂದ

ವೋಕಂವದತತ್ವತಃ । ಹರಿರ್ಹರಸವೋಸ್ತೈವೇತ್ಯೇತಸ್ಯಾರ್ಥಸ್ಯವಸ್ತುತಃ ॥೧೭೭॥ ವಿಶಾಲಕಾಲವಕ್ಷೋಽಸ್ಯಗ್ರಾಜಲಕೇಲ್ಯತಿಲಾಲಸಮ್ । ಲಾಲಾಸು ರೋರಸ್ಥಲಾಸ್ಯಗ್ರಾಜಲಕೇಲ್ಯತಿಲಾಲಸಮ್ ॥೧೭೮॥ ವಿಷ್ವಕ್ಸೇನಪಿಚಣ್ಡಾ ಲಾಸು ಸ್ಯಗ್ರಾಜಲಕೇಲ್ಯತಿಲಾಲಸಮ್ । ಕಾಲಕೋಲಾಹಲಸ್ಯೈತಚ್ಛೂಲಂಸಾಕ್ಷಿ ಕಪಾಲಿನಃ ॥೧೭೯॥ ಹರಿಮುಖ್ಯಾಮರ್ತ್ಯದೈತ್ಯಹರಣಾಯಹರೋಽಭ ವತ್। ಇತಿಲೋಕೇದರ್ಶಯಿತುಂಮಹಿಮಾನಂಮಹೋನ್ನತಮ್ ॥೧೮೦॥ ಸಮುದ್ಧೃತಾಮಹಾದೇವಭುಜೇಷ್ವಾಯುಧಪಙ್ಕ್ತಯಃ । ತ್ರಿಶೂಲಾದ್ಯಾ ಸ್ಸರ್ವಲೋಕರಕ್ಷಣೇಕೃತದೀಕ್ಷಿತಾಃ ॥೧೮೧॥ ಹತ್ವಾಜಲನ್ಧರಂದತ್ತಂಶಿ ವೇನಕೃಪಯಾಪುರಾ । ಮುನಾದಧೀಚಾಮುಕ್ತಂಸತ್ತತ್ಕ್ಷಣಾದೇವ ಚೂರ್ಣಿತಮ್ ॥೧೮೨॥ ಆತ್ಮನೇತ್ರಾರ್ಚನಾಯಾತಂಚಕ್ರಮೇತಸ್ಯಸಾಕ್ಷಿ ತತ್ । ಮಹೇಶಏವನೋಕರ್ತಾಸಂಹರ್ತಾಸುತರಾಮಿತಿ ॥೧೮೩॥ ಪ್ರದ

---

ಕೂಡಿರುವುದು, ಮತ್ತೂ ಶೂಲಾಯುಧವನ್ನು ಧರಿಸಿರುವುದು, ಹರಿಯುದೇಹವು ತ ನ್ನ ಕಣ್ಣನ್ನು ಸಮರ್ಪಿಸಿ ಪಡೆದ ಚಕ್ರಾಯುಧವನ್ನು ಧರಿಸಿರುವುದು ॥೧೭೭॥ ಈ ಪೂರ್ವೋಕ್ತವಾದುವೆಲ್ಲವೂ ಪರಸ್ಪರಭಿನ್ನವಲ್ಲವೆ ಬಂದೇನೆಜೊ ? ನಿಜವಾಗಿ ಹೇಳು. ವಿಸ್ತಾರವಾದ ಯಮುನೆಯು ರಕ್ತದೊಡನೆ ಕ್ರೀಡಿಸುವುದರಲ್ಲಿ ಆಸಕ್ತನಾಗಿಯೂ, ವಿಷ್ವಕ್ಸೇನನಹೊಟ್ಟೆಯ ರಕ್ತದೊಬ್ಬಳಿಯೊಡನೆ ಕ್ರೀಡಿಸುವುದರಲ್ಲಿ ಅತ್ಯಾಸಕ್ತವಾ ಗಿಯೂ, ಲಾಲಾಸುರನ ಎದೆಯ ರಕ್ತದೊಡನೆ ಆಟವಾಡುವುದರಲ್ಲಿ ಅತ್ಯಾಸಕ್ತವಾ ಯೂ, ಇರುವ (ಕಾಲಸಹ್ಮರನೂ ಕಪಾಲಧರನೂ ಆದ ಶಿವನ) ಈ ಶೂಲಾಯುಧವು, ಹರಿಯು ಎಂದಿಗೂ ಹರನಸಮನಲ್ಲನೇ ಅಲ್ಲವೆಂಬ ಅರ್ಥವನ್ನು ನಿರೂಪಿಸುವುದಕ್ಕೆ ಸಾಕ್ಷಿಯು ॥೧೭೯॥ ಹರಿ ಮೊದಲಾದ ದೇವತೆಗಳನ್ನೂ ಗಜಾಸುರಾದಿದೈತ್ಯರನ್ನೂ ಸಂಹರಿಸುವುದಕ್ಕೋಸುಗವೇ ಆತನು ಹರನಾದನು, ಎಂಬುದಾಗಿ ಆ ಶಿವನ ಅತಿಶ ಯವಾದ ಮಹತ್ವವನ್ನ ಪ್ರಪಂಚವಲ್ಲಿ ತೋರಿಸುವುದಕ್ಕಾಗಿಯೇ, ಸರ್ವಲೋಕವ ನ್ನೂ ಕಾಪಾಡುವುದರಲ್ಲಿ ದೀಕ್ಷಾಬದ್ಧಗಳಾದ ತ್ರಿಶೂಲಾದ್ಯಾಯುಧಗಳು ಪರಶಿವನ ತೋಳುಗಳಲ್ಲಿ ಮೇಲಕ್ಕೆತ್ತಿ ಹಿಡಿಯಲ್ಪಟ್ಟಿರುವುವು. ॥ ಇದು ಶಿವನ ಆಯುಧಗಳ ವಿಷ ಯವಾಯಿತು. ಹರಿಯು ಆಯುಧವಾದ ಚಕ್ರವಾದರೊ, ಪೂರ್ವದಲ್ಲಿ ಶಿವನು ಜಲಂಧರ ದೈತ್ಯನ ವಧೆಗಾಗಿ ಅದನ್ನು ಕಲ್ಪಿಸಿದ್ದು, ಅವನ ವಧೆಯಾದನಂತರ ಶಿವನು ಅದನ್ನು ದಯೆಯಿಂದ ವಿಷ್ಣುವಿಗೆ ಕೊಟ್ಟನು. ಅದನ್ನು ಹರಿಯು ತನ್ನ ಭಕ್ತನಾದ ಕ್ಷುಪನ ಉದ್ಧಾರಾರ್ಥವಾಗಿ ದಧೀಚಿಮುನಿಯುಮೇಲೆ ಉಪಯೋಗಿಸಲು, ಅದು ಆಮುನೀಶ್ವರ ನಿಂದ ಕ್ಷಣಮಾತ್ರದಿಂದ ಪುಡಿಪುಡಿಮಾಡಲ್ಪಟ್ಟಿತು. ॥೧೮೨॥ ತನ್ನ ಕಣ್ಣನ್ನು ಅರ್ಪಿ ಸಿದುದರಿಂದ ಲಬ್ಧನಾದ ಆ ಚಕ್ರವೇ ಈ ವಿಷ್ಣುವಿನ ಯೋಗ್ಯತೆಗೆ ಸಾಕ್ಷಿಯು. ನನ

ರ್ಶನಾಯೈವಹಸ್ತೈಶ್ಚತುರ್ಭಿರಪಿಸನ್ತತಮ್ । ಧೃತಂಹೇತಿಕುಲಂಚೈಕಂ ಶಿವಮುಚಕ್ರಾದಿಶಾರ್ಙ್ಗಿಣಃ ॥೧೮೪। ತ್ರಿವಿಕ್ರಮಸ್ಯಕಂಕಾಲಂಕಪಾಲಂ ಪರಮೇಷ್ಠಿನಃ। ಅನನ್ತಮುಣ್ಡಮಾಲಾಶ್ಚಸಮಸ್ತಸುರರಕ್ಷಸಾಮ್ ॥೧೮೫॥ ಸ್ವನಿತ್ಯತ್ವಸ್ಯಾಯಮೇವಪ್ರತ್ಯಯಸ್ತತ್ರ ನಿತ್ಯಲಮ್ । ಪ್ರದರ್ಶನಾಯೈವ ಭುವೋಮಹಾದೇವೇಧೃತೇಸತಿ ॥೧೮೬॥ ಶೋಭಮಾನಂಸದಾದಿವ್ಯಶರೀರಂಸ್ಥಿರಲೀಲಯಾ। ಅನಿತ್ಯಾಙ್ಗಂಹರೇಸ್ತಸ್ಯಕಥಮೇಕಂಭವೇತ್ಪುನಃ ॥ ಕಿಂಚಕರ್ಪೂರಮಂದಾರತಾರಾತಾರಧರಾಧರೈಃ । ಹಾರಗೌರೀಕಟಾಕ್ಷೇನ್ದ್ರವಾರಣಕ್ಷೀರಸಾಗರೈಃ ॥೧೮೮॥ ಶರನ್ನೀರದಡಿಂಡೀರಮರಾಳಸಿತನೀರಜೈಃ। ಮಲ್ಲಿಕಾಕುಂದಕುಮುದಚಂದ್ರಿಕಾಚಂದ್ರಚಂದ್ರವೈಃ॥೧೮೯ ಹಿಮಹಾಸಸುಧಾಶೇಷೈಸ್ಸಮಃಕಾಯಃಕಪರ್ದಿನಃ । ಕಾಳಿಂದೀಕಾಲಭುಜಗಕಾಕಕೋಕಿಲಕಲ್ಮಷೈಃ ॥೧೯೦॥ ನೀಲವಾಸೋನೀಲಮೇಘನೀಲನೀಲಾಭ್ರಕಾಂಜನೈಃ । ಪಾಪಭ್ರಮರಭಲ್ಲೂಕಕ್ರೋಡಾಜ್ಞಾನಗು

---

ಗೆ ಶಿವನೇ ಕರ್ತನು. ಶಿವನೇ ಸಂಹಾರಕನು, ಎಂಬುವನ್ನು ತೋರಿಸುವುದಕ್ಕೋಸುಗವೇ ಹರಿಯು ತನ್ನ ನಾಲ್ಕು ಕೈಗಳಿಂದಲೂ ಯಾವಾಗಲೂ ಚಕ್ರಾದ್ಯಾಯುಧಸಮೂಹವನ್ನು ಧರಿಸಿಕೊಂಡಿರುವನು. ಪೂರ್ವೋಕ್ತಲಕ್ಷಣವುಳ್ಳ ಶಿವನ ಆಯುಧಗಳೂ, ವಿಷ್ಣುವಿನ ಈ ಚಕ್ರಾದ್ಯಾಯುಧಗಳೂ ಬಂದೇನೆಯೊ ? ॥೧೮೪॥ ಶಿವನು ತನ್ನನಿತ್ಯತ್ವಕ್ಕೆ ಇದೇ ಪ್ರಮಾಣವೆಂದು ಲೋಕಕ್ಕೆ ತೋರಿಸುವುದಕ್ಕೋಸ್ಕರವೋ ಎಂಬಂತೆ ವಾಮನಮೂರ್ತಿಯ ಬೆನ್ನಮೂಳೆಯನ್ನೂ ಬ್ರಹ್ಮನ ತಲೆಯೋಡನ್ನೂ ಗಣನಾತೀತವಾದ ದೇವದೈತ್ಯಾದಿಗಳ ತಲೆಯ ಸರಗಳನ್ನು ಸಹ ॥೧೮೫॥ ಧರಿಸಿಕೊಂಡಿರಲಾಗಿ, ಪೂರ್ವೋಕ್ತವಾದ ಶಾಶ್ವತಲೀಲೆಯಿಂದ ಯಾವಾಗಲೂ ಶೋಭಿಸುತ್ತಿರುವ ಪರಶಿವನ ದಿವ್ಯಶರೀರವೂ ವಿಷ್ಣುವಿನ ಅಸ್ಥಿರವಾದ ಶರೀರವು ಸಹ ಬಂದೇ ಹೇಗಾಗುವುವು ? ॥೧೮೬॥ ಮತ್ತೂ ಹರನದೇಹವು, ಕರ್ಪೂರ-ಕಲ್ಪವೃಕ್ಷದಕುಸುಮ-ನಕ್ಷತ್ರ-ರಜತಪರ್ವತ-ಮುಕ್ತಾಹಾರ-ಪಾರ್ವತಿಯಕಡೆಗಣ್ಣೋಟ-ಐರಾವತ-ಕ್ಷೀರಸಮುದ್ರ-ಶರತ್ಕಾಲದಮೇಘ-ನೊರೆ-ಬಿಳಿದಾವರೆ, ಮಲ್ಲಿಗೆಹೂವು, ಮೊಲ್ಲೆಯಹೂವು ಬಿಳಿನೈದಿಲು-ಬೆಳ್ದಿಂಗಳು-ಚಂದ್ರ-ಶ್ರೀಗಂಧ-ಮಂಜು-ಮುಗುಳ್ನಗೆ-ಅಮೃತ-ಆದಿಶೇಷ ಇವುಗಳಿಗೆ ಸಮನಾಗಿ ಶುಭ್ರವಾದುದು, ವಿಷ್ಣುವಿನ ದೇಹವಾದರೊ, ಯಮುನಾನದಿ-ಕಾಳೋರಗ-ಕಾಗೆ-ಕೋಗಿಲೆ-ಕೊಳೆ-ಕರಿಯಬಟ್ಟೆ-ಇಂದ್ರನೀಲರತ್ನ- ಕಾರ್ಮುಗಿಲು, ಕಾಡಿಗೆ-ಪಾಪ-ತುಂಬಿ-ಕರಡಿ-ಹಂದಿ-ಅಜ್ಞಾನ-ಗವಿಯೊಳಭಾಗ-ನೀಚರಹೃದಯ-ಹೊಗೆ-ಕತ್ತಲು-ವಿಷ-ಅಂತರಿಕ್ಷ-ಇವುಗಳಿಗೆ ಸಮಾನವಾದ ಬಣ್ಣವುಳ್ಳುದು. ಇವೆರಡು ತೆರದ ಶರೀರಗಳೂ ಭೂತಲದಲ್ಲಿ ಅದು ಹೇಗೆ ಬಂದಾಗುವುವು ? ॥ ಮತ್ತೂ ಆ ಶಿವನ

ಹಾನ್ಮರೈಃ ||೯೧|| ನೀಚಾನ್ತರಂಗಾಗ್ನಿಗತಿತವೋಪಾಲಾಹಲಾಂಬರ್ಯೈಃ| ಸದೃಶೋವಿಷ್ಣು ದೇಹೋಪಿಕಥಮೇಕೋಪುಹೀತಲೇ ||೯೨|| ಹರಾದ ನ್ಯಮಜಾನನ್ತೀ ಸಾಧ್ವೀ ಹಿಮನಗಾತ್ಮಜಾ | ರಮಾಚಕಕಥಮೇಕಾಸ್ಯಾತ್ಸ ತತಂಸರ್ವಗಾಮಿನೀ ||೯೩|| ಈಶಸ್ಯವಾಹೋವೃಷಭಸ್ತಚ್ಛ್ವಾಸಾನಿಲ ವೇಗತಃ|ಗತಾಗತಮನುಪ್ರಾಪ್ತಸ್ತಾರ್ಕ್ಷ್ಯಸ್ಸೈಕಃಕಥಂಭವೇತ್||೯೪ ಮಹೇಶಸ್ಯಾಷ್ಟತನವಃಪೃಥಿವೀಸಲಿಲಾದಯಃ | ಮತ್ಸ್ಯಕೂರ್ಮಾದ ಯೋವಿಷ್ಣೋಸ್ತನವಸ್ತು ಕಥಂಸಮಾಃ ||೯೫|| ವ್ಯಾಪೀಹರಃಪರಿಚ್ಛಿ ನ್ನೋಹರಿಸ್ಸೈಕಃಕಥಂಭವೇತ್ | ಇತ್ಥಂಕಾನ್ತಿಕಲಾಕಾನ್ತಾಕಾರಣಾ ನ್ಯಾಯುಧಾನ್ಯಪಿ ||೯೬|| ಗುಣಭೂಷಾವಾಹಶೌರ್ಯಾಣ್ಯಭಿನ್ನಾನಿಕಥಂ ತಯೋಃ| ಕಿಂಚಾಜಾತೋಜನಯಿತಾಸರ್ವೇಷಾಂಜಗತಾಂಭವಃ||೯೭ ಜಾತೋಹರಿರ್ಭವಾತ್ತಸ್ಮಾತ್ಕಥಮೈಕ್ಯಂತತಸ್ತಯೋಃ | ಜೀವನ್ಸ ರ್ವಸ್ಯಜಗತಃಪರಿಜೀವಯಿತಾಮೃಡಃ ||೯೮|| ಸಂಜೀವಿತಸ್ತೇನಹರಿಸ್ತ

---

ಪತ್ನಿಯಾದ ಪಾರ್ವತಿಯು ಶಿವನನ್ನು ಹೊರತು ಮತ್ತೊಬ್ಬನನ್ನು ಕಾಣದ ಪತಿವ್ರತೆ ಯು, ವಿಷ್ಣುಪತ್ನಿಯಾದ ಲಕ್ಷ್ಮಿಯಾದರೊ ಯಾವಾಗಲೂ ಸರ್ವರನ್ನೂ ಬಳಸುತ್ತಿರು ವವಳು, ಇವರಿಬ್ಬರೂ ಒಂದೇ ಎನಿಸಿಕೊಳ್ಳುವುದು ಹೇಗೆ ? ||೯೩|| ಶಿವನಿಗೆ ವಾ ಹನನಾಗಿರುವವನು ವೃಷಭನು. ಆತನ ಶ್ವಾಸೋಚ್ಛ್ವಾಸದ ಗಾಳಿಯ ರಭಸದಿಂದ ವಿಷ್ಣುವಾಹನನಾದ ಗರುಡನು ಹೊಡೆಯಲ್ಪಟ್ಟು ಒಳಕ್ಕೂ ಹೊರಕ್ಕೂ ಹೋಗಿಬ ರುತ್ತಿದ್ದನು. ಇವರಿಬ್ಬರೂ ಒಂದೇಯಾಗುವುದು ಹೇಗೆ ? ||೯೪|| ಮಹೇಶ್ವರನಿ ಗೆ ಪೃಥ್ವಿ ಅಪ್ಪು ಮೊದಲಾದ ೮ ಶರೀರಗಳಿರುವವು. ವಿಷ್ಣುವಿಗೆ ಮತ್ಸ್ಯ ಕೂರ್ಮಾ ದಿಶರೀರಗಳಿರುವುವು. ಇವು ಪರಸ್ಪರ ಹೇಗೆ ಸಮನಾಗುವುವು ? ||೯೫|| ಹರನು ಸರ್ವವ್ಯಾಪಿಯು, ಹರಿಯು ಕ್ವಚಿದ್ವ್ಯಾಪಿಯು. ಇವರಿಬ್ಬರೂ ಒಂದಾಗುವುದು ಹೇಗೆ? ಹೀಗೆ ಆ ಹರಿಹರರ ದೇಹದಬಣ್ಣಗಳು-ಪತ್ನಿಯರು-ಆಯುಧಗಳು- ಗುಣಗಳು-ಆಭ ರಣಗಳು-ವಾಹನಗಳು-ಶೌರ್ಯಗಳು ಮೊದಲಾದುವೆಲ್ಲಾ ಪರಸ್ಪರವ್ಯಸ್ತಗಳಾಗಿರು ವಾಗ, ಅವುಗಳು ಒಂದೇಯೆನಿಸಿಕೊಳ್ಳುವುದು ಹೇಗೆ ? ಮತ್ತೂ ಶಿವನು ಯಾರಿಂದ ಲೂ ಹುಟ್ಟದವನು. ಸಕಲ ಜಗತ್ತನ್ನೂ ಹುಟ್ಟಿಸಿದವನು ||೯೭|| ಹರಿಯಾದರೊ ಆ ಪರಶಿವನಿಂದ ಹುಟ್ಟಿದವನು. ಆದುದರಿಂದ ಇಂಥ ಇವರಿಬ್ಬರಿಗೆ ಐಕ್ಯವೆಂಬುದು ಹೇಗೆ ಸಮನಿಸುವುದು ? ಶಿವನು ಅಳಿವಿಲ್ಲದೆ ಸದಾ ಜೀವಿಸಿರುವನಾಗಿ ಸಕಲಜಗತ್ತ ನ್ನೂ ಸಲಹುತ್ತಿರುವನು. ಹರಿಯಾದರೊ ಆಶಿವನಿಂದ ಬದುಕಿಸಲ್ಪಟ್ಟವನು. ಆದು ದರಿಂದ ಅವರಿಬ್ಬರಿಗೆ ಐಕ್ಯವೆಂಬುದು ಹೇಗೆ? ||೯೮|| ಹರನು ಇತರರಿಂದ ಸಹ್ಯ

ಸ್ಮಾದೈಕ್ಯಂಕಥಂತಯೋಃ । ಇತರೈರಹೃತಸ್ಸರ್ವಸಂಹರ್ತಾಸತತಂ ಹರಃ ||೧೯೯|| ಹೃತೋಹರಿಸ್ತದ್ಧರೇಣಕಥವೈಕ್ಯಂತಯೋಸ್ತತಃ । ಮಹಾದೇವಸ್ಸತ್ವರಜಸ್ತಮಸ್ಸಮಗುಣೋಹರಿಃ ||೨೦೦|| ಸತ್ವೈಕಗುಣ ಸಂಯುಕ್ತಸ್ತಯೋರೈಕ್ಯಮತಃಕಥಮ್ । ಪಂಚವಿಂಶತಿತತ್ವಾತಿಶಾಯಿ ಶೈಲಸುತಾಪತಿಃ ||೨೦೧|| ಪಂಚವಿಂಶತಿಕೋವಿಷ್ಣುರೇಕತ್ವಂತತ್ಕುತಸ್ತ ಯೋಃ । ವಿಶ್ವಾಧಿಕಇತಿಶೃತ್ಯಾಸೋಽಯಂವಿಶ್ವಾಧಿಕೋಹರಃ ||೨೦೨|| ವಿಶ್ವೋಹರಿರ್ವಿಶ್ವಮಯಇತ್ಯುಕ್ತೇರ್ನೈಕ್ಯಮೇತಯೋಃ । ಯಜ್ಞೇಶ್ವ ರಇತಿಶೃತ್ಯಾಯಜ್ಞೇಶಃಪರಮೇಶ್ವರಃ ||೨೦೩|| ಯಜ್ಞಸ್ಯಶಿರಇತ್ಯುಕ್ತೇ ರ್ಯಜ್ಞರೂಪಸ್ಸ್ಮೃತೋಹರಿಃ । ತಸ್ಮಾತ್ತಯೋರ್ನಹರಿಹರಯೋರೇ ಕತಾಕಥಮ್ ||೨೦೪|| ಪೂರ್ವಂಪುರುಷಇತ್ಯುಕ್ತೇಃಪುರುಷಃಪುರಶಾಸನಃ। ಜಗತ್ಪ್ರಕೃತಿರಿತ್ಯುಕ್ತೇಃಪ್ರಕೃತ್ಯಾತ್ಮಾಚಮಾಧವಃ ||೨೦೫|| ಕಥವೈಕ್ಯಂ

---

ಹರಿ ||೧೯೯|| ರಿಸಲ್ಪಡದವನು; ಮತ್ತು ತಾನೇ ಸರ್ವವನ್ನೂ ಸಂಹರಿಸತಕ್ಕವನು ಯಾದರೊ, ಆ ಹರನಿಂದ ಕೊಲ್ಲಲ್ಪಟ್ಟವನು. ಅವರಿಬ್ಬರಿಗೂ ಐಕ್ಯವೆಂಬುದು ಹೇಗೆ? ಶಿವನು ಸತ್ವರಜಸ್ತಮೋಗುಣಗಳೆಲ್ಲವನ್ನೂ ಸಮನಾಗಿ ಹೊಂದಿರುವವನು. ||೨೦೦|| ವಿಷ್ಣುವಾದರೊ ಸತ್ವಗುಣವೊಂದನ್ನೇ ಹೊಂದಿರುವವನು. ಈ ಕಾರಣದಿಂದ ಅವರಿ ಬ್ಬರಿಗೂ ಐಕ್ಯವೆಂಬುದು ಹೇಗೆ? ಪಾರ್ವತೀಪತಿಯು ೨೫ ತತ್ವಗಳನ್ನು ಮೀರಿದವ ನು.||ವಿಷ್ಣುವು ೨೫ ನೆಯ ತತ್ವವು, ಆದುದರಿಂದ ಅವರಿಬ್ಬರಿಗೂ ಏಕತ್ವವು ಹೇಗುಂ ಟಾಗುವುದು? ಆ ಈ ಹರನು "ಯೋದೇವಾನಾಂಪ್ರಭವಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋಮಹರ್ಷಿಃ" ಎಂಬ ಶೃತಿವಚನದಿಂದ ಜಗತ್ತಿಗೆ ಶ್ರೇಷ್ಠನಾಗಿರುವನು, ಹರಿ ಯಾದರೊ, "ವಿಶ್ವಮಯೋಹರಿಃ" ಎಂಬ ವಚನದಿಂದ ಜಗತ್ಸ್ವರೂಪನಾಗಿ ರುವನು. ಇಂಥವರಿಬ್ಬರಿಗೂ ಐಕ್ಯವೆಂಬುದಿಲ್ಲ. ಪರಶಿವನು "ಯಜ್ಞೇಶ್ವರಃ" ಎಂಬ ಶೃತಿವಚನದಿಂದ ಯಜ್ಞಕ್ಕಧಿಪತಿಯಾಗಿರುವನು, ವಿಷ್ಣುವು "ಯಜ್ಞಸ್ಯಶಿರಃ" ಎಂಬ ಶೃತಿವಚನದಿಂದ ಯಜ್ಞಸ್ವರೂಪನಾಗಿರುವನು, ಆದುದರಿಂದ ಅಂಥ ಹರಿಹರರಿಗೆ ಐಕ್ಯವುಂಟಾಗುವುದು ಹೇಗೆ! ||೨೦೪|| ತ್ರಿಪುರನಾಶಕನಾದ ಶಿವನು "ಪೂರ್ವಮೇವಾಹಮಿಹಾಸಂ ತತ್ಪುರುಷಸ್ಯಪುರುಷತ್ವಂ; "ಪುರುಷೋವೈರುದ್ರಃ" ಎಂಬ ಶೃತಿವಚನದಿಂದ ಪುರುಷಶಬ್ದವಾಚ್ಯನಾಗಿರುವನು; ವಿಷ್ಣುವಾದರೊ "ಜಗತ್ಪ್ರ ಕೃತಿಃ" ಎಂಬ ವಚನದಿಂದ ಪ್ರಕೃತಿಸ್ವರೂಪನಾಗಿರುವನು. ವಿವೇಕಿಗಳಾದವರು ವಿ ಚಾರಮಾಡಿನೋಡಿದರೆ ಅವರಿಬ್ಬರಿಗೂ ಏಕತ್ವವು ಹೇಗೆ ಉಂಟಾಗುವುದು? ||೨೦೫||

ತಯೋಸ್ಸ್ವವ್ಯಕ್ಪರಾಮೃಷ್ಟೇವಿವೇಕಿಭಿಃ । ಶಿರೋದಂಷ್ಟ್ರಾಕ್ಷಿಕಂ
ಕಾಲಶರೀರಮುಖಚರ್ಮಭಿಃ ॥೨೦೬॥ ನಿಹತಸ್ಯಾತ್ರನಾವಿಷ್ಣೋರ್ಭೂಷಿ
ತೇಪರಮೇಶ್ವರೇ । ಈಶತ್ವನಿತ್ಯತಾಹೇತುಮಾಹಾತ್ಮ್ಯಪರಿರಂಜಿತೇ ೨೦೭
ಶಂಭೋರ್ವಿಷ್ಣುಮಯತ್ವಸ್ಯವಾಚಿವಿಷ್ಣುಮಯಶ್ಶಿವಃ । ಇತಿವಾಕ್ಯಂ
ಪ್ರಜೇದೇವಕಿಂಚಿದಿತ್ಥಂಹಿಯುಕ್ತತಾಮ್ ॥೨೦೮॥ ಸ್ವಸ್ವಭೇದಂದರ್ಶ
ಯತೋಸ್ಸ್ವಯಂಹರಮಹೇಶಯೋಃ । ಯಥಾನ್ತರಂನಪಶ್ಯಾಮಿತ್ಯು
ಕ್ತಿಂಸನ್ದರ್ಶ್ಯವಿಮೋಹತಃ ॥೨೦೯॥ ಮಹಾದೇವಸ್ಯವಿಷ್ಣೋಶ್ಚಭೇದೋ
ನಾಸ್ತೀತಿಸನ್ತತಮ್ । ವದನ್ತಿಯೇತಏವಾತ್ರಚಂಡಾಲಾನಾಂತ್ಯಜೋಽನ್
ತ್ಯಜಃ॥೨೧೦॥ ಯೋಮಹಾದೇವಮನ್ಯೇನಹೀನದೈವೇನದುರ್ಮತಿಃ । ಸಕೃ
ತ್ಸಾಧಾರಣಂಬ್ರೂತೇ ಸೋಽನ್ತ್ಯಜೋನಾಂತ್ಯಜೋಽನ್ತ್ಯಜಃ॥ ರುದ್ರಸ್ಯ
ಬ್ರಹ್ಮವಿಷ್ಣುಭ್ಯಾಂನಾಧಿಕ್ಯಂಪ್ರವದನ್ತಿಯೇ । ಹನ್ಯಾತ್ತಾನವಿಚಾರೇಣ
ಹನ್ತುರ್ದೋಷೋನಕಶ್ಚನ ॥೨೧೧॥ ಶಿವಂಬ್ರಹ್ಮಾದಿಭಿಸ್ತುಲ್ಯಂಸ್ವಗು
ರುಂಪ್ರಾಕೃತೈಸ್ಸಮಮ್ । ಶಿವವಿದ್ಯಾಮವೇದಾರ್ಥಾಂಮನುತೇಯಸ್ತು

---

ತನ್ನಿಂದ ತಾನೇ ಕೆಟ್ಟ ವಿಷ್ಣುವಿನ ತಲೆ ಕೋರೆದಾಡೆ ಕಣ್ಣು ಬೆನ್ನುಮೂಳೆ ದೇಹ
ಮುಖ ಚರ್ಮ ಇವುಗಳಿಂದ ಪರಮೇಶ್ವರನು ಅಲಂಕೃತನಾಗಿರಲಾಗಿ, ಇದರಿಂದಲೇ ಶಿ
ವನ ಈಶ್ವರತ್ವ ನಿತ್ಯತ್ವಗಳಿಗೆ ಕಾರಣವಾದ ಮಹಿಮೆಯು ಪ್ರಕಾಶಿಸುತ್ತಿರಲಾಗಿ ॥
ಶಿವನು ವಿಷ್ಣುರೂಪನೆಂಬುದನ್ನು ತೋರಿಸುವುದಕ್ಕೆ ಬರಿಯ ಬಾಯ್ಮಾತಿನಿಂದ "ಶಿವ
ನು ವಿಷ್ಣುಮಯನು" ಎಂದು ಹೇಳಿಬಿಡುವುದು ಮಾತ್ರವೇ ಸಾಕಾದೀತೆ? ॥೨೦೮॥
ಹರಿಹರರು ತಮತಮಗಿರುವ ಭೇದವನ್ನು ತಾವೇ ತಮ್ಮ ಸ್ವರೂಪದಿಂದಲೇ ತೋರಿಸು
ಕೊಳ್ಳುತ್ತಿರಲಾಗಿ, "ಅವರಿಬ್ಬರಿಗೆ ಭೇದವನ್ನು ಕಾಣೆ" ಎಂದು ಹೇಳುವ ವಚನವ
ನ್ನು ಮಾತ್ರ ತೋರಿಸಿಬಿಟ್ಟು, ಶಿವನಿಗೂ ವಿಷ್ಣುವಿಗೂ ಭೇದವಿಲ್ಲವೆಂದು ಯಾವಾಗಲೂ
ಅಜ್ಞಾನದಿಂದ ಯಾರು ನುಡಿಯುವರೋ ಅವರೇ ಈ ಲೋಕದಲ್ಲಿ ಚಂಡಾಲರಲ್ಲವೆ,
ಚಂಡಾಲನೆಂದು ಕರೆಯಲ್ಪಡುತ್ತಿರುವವನು ನಿಜವಾದ ಚಂಡಾಲನಲ್ಲ ॥ ದುರ್ಬುದ್ಧಿ
ಯುಳ್ಳ ಯಾವನು ಪರಶಿವನನ್ನು ನೀಚವಾದ ಇತರ ದೈವದೊಡನೆ ಸಮನೆಂದು ಹೇಳು
ವನೋ ಅವನು ಚಂಡಾಲನೇ ಹೊರತು, ಅಂತ್ಯಜನು ಚಂಡಾಲನಲ್ಲ ॥೨೧೦॥ ಬ್ರ
ಹ್ಮವಿಷ್ಣುಗಳಿಗಿಂತಲೂ ರುದ್ರನು ದೊಡ್ಡವನೆಂದು ಯಾರು ಹೇಳುವುದಿಲ್ಲವೋ ಅಂಥವ
ರನ್ನು ಯಾವುದೊಂದು ಯೋಚನೆಯೂ ಇಲ್ಲದೆ ಕೊಲ್ಲಬೇಕು. ಹಾಗೆ ಕೊಂದವನಿ
ಗೆ ಯಾವ ಪಾಪವೂ ಇಲ್ಲ ॥೨೧೧॥ ಶಿವನನ್ನು ಬ್ರಹ್ಮಾದಿದೇವತೆಗಳಿಗೆ ಸಮನನ್ನಾಗಿ
ಯೂ, ತನ್ನ ಗುರುವನ್ನು ಬದ್ಧಾತ್ಮರಿಗೆ ಸಮನನ್ನಾಗಿಯೂ, ಶಿವಜ್ಞಾನಬೋಧಕವಾ

ಮಾನವಃ॥೨೧೩॥ ಸಪಾಪೀದುರ್ಮದಃಕ್ರೂರಶ್ಶ್ವಪಚಶ್ಶ್ವಪಚಾಧಮಃ। ಮಹಾಪಾಪವತಾಂಪೂರ್ವಜನ್ಮಕೋಟಿಷುಸುವ್ರತಾಃ ॥೨೧೪॥ ವಿಷ್ಣು ರ್ವಿಶ್ವಾಧಿಕೋಭಾತಿನಾರಕಾಸ್ತೇನಸಂಶಯಃ। ಇತಿಸ್ಕಾಂದಪುರಾಣಾದಿ ಪುರಾಣವರವಾಕ್ಯತಃ ॥೨೧೫॥ ಕಿಂಚವೇದಾಶ್ಚಯೋವೈಸ್ವಾಂದೇವ ತಾಮಿತಿಪೂರ್ವಕಾತ್।ಪಾಪೀಯಾನ್ಭವತೀತ್ಯಸ್ಮಾದೀಶ್ವರಸ್ಯತಥಾಹರೇಃ॥ ಅಭೇದಂಯಃಕಥಯತಿಸಏವಪತಿತೋಭುವಿ। ಸಚವೇದಸ್ಸಂಹಿತಾಯಾ ಮೇವಮಾಮ್ನಾಯತೇಽನಿಶಂ ॥೨೧೬॥ " ಯೋವೈಸ್ವಾಂದೇವತಾಮತಿ ಯಜತೇಪ್ರಸ್ವಾಯೈದೇವತಾಯೈಚ್ಯವತೇ।ನಪರಾಂಪ್ರಾಪ್ನೋತಿಪಾಪೀ ಯಾನ್ಭವತಿ" ॥೨೧೭॥ ತಸ್ಮಾದ್ಧರಿಹರಾವೇಕಮೂರ್ತಿರಿತ್ಯಪಿಭಾಷ ಣಮ್। ಶಿವಸ್ವರೂಪಮೇವಾತ್ರವಿಷ್ಣುರೂಪಮಿತೀರಣಮ್॥೨೧೮॥ ಲೋ ಕೇನಿಷಿದ್ಧಂನರಕಸಮೃದ್ಧಮನಿಬದ್ಧಕಮ್।ಅತ್ಯಸಂಬದ್ಧಮನ್ಯೋನ್ಯವಿರು ದ್ಧಂಪರಿಕೀರ್ತ್ಯತೇ॥೨೨೦॥ ತಸ್ಮಾತ್ಪ್ರಶ್ನಾನಿಮಾಂಜಿಜ್ಞಾಸಿತುಂಯುಜ್ಯ

---

ದ ವಿದ್ಯೆಯನ್ನು ವೇದಸಂಮತಾರ್ಥವುಳ್ಳುದಲ್ಲವೆಂಬುದಾಗಿಯೂ ಯಾವನು ತಿಳಿಯು ವನೋ ॥೨೧೩॥ ಅವನು ಪಾಪಿಯು; ದುರಹಂಕಾರಿಯು; ಕ್ರೂರನು; ಚಂಡಾಲ ನು; ಚಂಡಾಲನಿಗಿಂತಲೂ ಕಡೆಯಾದವನು. " ಎಲೈ ಸಚ್ಛೀಲರುಗಳಿರಾ, ಪೂರ್ವದ ಅ ನೇಕಜನ್ಮಗಳಲ್ಲಿ ಆರ್ಜಿಸಿದ ಮಹಾಪಾಪವುಳ್ಳವರಿಗೆ ವಿಷ್ಣುವು ಜಗತ್ತಿಗಧಿಕನಾಗಿ ತೋರುತ್ತಾನೆ; ಅಂಥ ಪಾಪಿಗಳು ನರಕಭಾಜನರೆಂಬ ವಿಷಯದಲ್ಲಿ ಸಂಶಯವಿಲ್ಲ" ಎಂದು ಸ್ಕಂದಾದಿಪುರಾಣಗಳ ವಚನವಿರುವುದರಿಂದಲೂ ॥೨೧೫॥ ಮತ್ತೂ ವೇದಗಳು ಕೂಡ ಸಂಹಿತೆಯಲ್ಲಿ " ಯೋವೈಸ್ವಾಂದೇವತಾಮತಿಯಜತೇಪ್ರಸ್ವಾಯೈ ದೇವತಾಯೈಚ್ಯವತೇನಪರಾಂಪ್ರಾಪ್ನೋತಿಪಾಪೀಯಾನ್ಭವತಿ"-ಯಾವನು ತನ್ನ ದೇವ ತೆಯನ್ನು ಮೀರಿ ಅನ್ಯದೈವವನ್ನಾರಾಧಿಸುವನೋ ಅವನು ತನ್ನ ಉಪಾಸ್ಯದೇವತೆಯ ಅನುಗ್ರಹಕ್ಕೆ ದೂರನಾಗುತ್ತಾನೆ. ಉತ್ತಮಗತಿಯನ್ನು ಹೊಂದನವನೂ ಪಾಪಿಯೂ ಆಗುತ್ತಾನೆ" ಎಂದು ಹೇಳಲ್ಪಟ್ಟಿರುವುದರಿಂದಲೂ, ಶಿವನಿಗೂ ಮತ್ತೂ ವಿಷ್ಣುವಿಗೂ ಅಭೇದವನ್ನು ಯಾವನು ಹೇಳುವನೋ ಅವನೇ ಭೂಮಿಯಲ್ಲಿ ಪತಿತನು. ॥೨೧೭॥ ಮತ್ತೂ ಹರಿಹರರು ಏಕದೇಹರಾಗಿರುವವರು ಎಂದು ಹೇಳುವುದೂ, ವಿಷ್ಣುರೂ ಪವು ಶಿವರೂಪವೇ ಆಗಿದೆಯೆಂದು ಹೇಳುವುದೂ ಕೂಡ ಲೋಕದಲ್ಲಿ ನಿಷಿದ್ಧವಾದು ದು, ನರಕಫಲದಿಂದ ತುಂಬಿದುದು, ಪ್ರಮಾಣಬದ್ಧವಲ್ಲದುದು, ಯುಕ್ತಿಯುಕ್ತವಲ್ಲ ದುದು, ಪೂರ್ವಾಪರವಿರುದ್ಧವಾದುದು, ಎಂದು ಹೇಳಿಸಿಕೊಳ್ಳುತ್ತದೆ. ॥೨೨೦॥ ಆ

ತೇಃ ಕಿಂಮಹಾತ್ಮಭಿಃ । ಕಿಂಚಸಾಧಾರಣಂಶಂಭೋರ್ಮಹಿಮಾನಂಪ್ರ
ತಿಷ್ಠತುಮ್ ॥೨೨೧॥ ವಾದಕಾಲೇಽನ್ಯದೇವಾನಾಂನಾಮಗ್ರಹಣಜನ್ಮನಃ।
ಅಪರಾಧಸ್ಯನಾಶಾಯಸ್ಮೃತ್ವಾಗುರುಪದಾಂಬುಜಮ್ ॥೨೨೨॥ ನನ್ದೀಶ್ವ
ರಾಯವೃಷಭೇಶ್ವರಾಯಚನಮೋನಮಃ। ಭೃಙ್ಗೀಶ್ವರಾಯಪ್ರಮಥೇಶ್ವ
ರಾಯಚನಮೋನಮಃ ॥೨೨೩॥ ಮಹೇಶ್ವರಾಯಬಸವೇಶ್ವರಾಯಚ
ನಮೋನಮಃ। ಶಿವಾಯನಮಇತ್ಯುಕ್ತ್ವಾ ಕರ್ತವ್ಯೋದುರಿತಕ್ಷಯಃ॥೨೨೪
ತದನ್ಯದೇವತಾವಾದಮಯುಕ್ತಂಪ್ರಸವಾಪಯ॥

ಇತ್ಯಸಂಖ್ಯಾತಮಹಾಮಾಹೇಶ್ವರ ದಿವ್ಯಶ್ರೀಪಾದಪದ್ಮ ನಿರನ್ತರಭಾ
ವನಾಪರಿರಂಜಿತಹೃದಯಸರೋಜಸ್ಯ ಭವ್ಯ ಪಶುಪಾಶಪತಿಜ್ಞಾ
ನಾನಲಭಸ್ಮೀಕೃತಾಖಿಲಭವಬೀಜಸ್ಯ ಶ್ರೀವೀರಶೈವ ಮತಾ
ಚಾರ್ಯ ಗುರುರಾಜಸ್ಯಕೃತಾ ಶ್ರೀಮಲ್ಲೋಕಾರಾಧ್ಯಮಲ್ಲಿ
ಕಾರ್ಜುನ ಪಣ್ಡಿತಾರಾಧ್ಯ ಚರಿತ್ರೇ ವಾದಪ್ರಕರಣೇ ಹ
ರಿಹರಯೋ ರಭೇದವಾದನಿರಸನಕಥನಂನಾಮಸಪ್ತ
ದಶೋಽಧ್ಯಾಯಃ॥ಶ್ರೀ॥

---

ಮಪರಿಂದ ಮಹಾತ್ಮರು ಇಂಥ ಪ್ರಶ್ನಗಳನ್ನು ಕಿವಿಯಿಂದಲಾದರೂ ಕೇಳುವರ ? ಮ
ತ್ತೂ ಶಿವನ ಮಹಿಮೆಯನ್ನು ಇಷ್ಟೇಸರಿಯೆಂದು ಹೇಳಿ ಸ್ಥಾಪಿಸುವುದಕ್ಕೆ ಅದೇನು
ಸಾಮಾನ್ಯವೆ ? ॥೨೨೧॥ ಈ ವಾದಮಾಡತಕ್ಕ ಕಾಲದಲ್ಲಿ ಶಿವೇತರದೇವತೆಗಳ ಹೆ
ಸರನ್ನೆತ್ತಿದುದರಿಂದ ಉಂಟಾದ ದೋಷದ ಪರಿಹಾರಕ್ಕಾಗಿ ಶ್ರೀಗುರುಪಾದಕಮಲವ
ನ್ನು ಧ್ಯಾನಿಸಿ ॥೨೨೨॥ ಶ್ರೀನಂದೀಶ್ವರನಿಗೆ ನಮಸ್ಕಾರ ; ವೃಷಭೇಶ್ವರನಿಗೆ ನಮ
ಸ್ಕಾರ; ಭೃಂಗೀಶನಿಗೆ ನಮಸ್ಕಾರ ; ಪ್ರಮಥಾಧಿಪತಿಯಾದ ವೀರಭದ್ರೇಶ್ವರನಿಗೆ ನಮ
ಸ್ಕಾರ; ॥೨೨೩॥ ಮಹೇಶ್ವರನಿಗೆ ನಮಸ್ಕಾರ; ಬಸವೇಶ್ವರನಿಗೆ ನಮಸ್ಕಾರ, ಶಿವ
ನಿಗೆ ನಮಸ್ಕಾರ; ಎಂದು ಹೇಳಿ ಪಾಪವನ್ನು ಕಳೆದುಕೊಳ್ಳಬೇಕಾಗಿದೆ ॥೨೨೪॥ ಅದು
ಕಾರಣ, ಅನ್ಯದೇವತೆಗಳ ಹೆಸರನ್ನು ಹಿಡಿದು ಮಾಡುವ ವಾದವು ಅನುಚಿತವಾದುದು,
ಸಾಕುಮಾಡು.

ಎಂದು, ಶ್ರೀಮನ್ಮಲ್ಲಿಕಾರ್ಜುನಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಗುರು
ರಾಜಕವಿಕೃತ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್
ಕರಿಬಸವಶಾಸ್ತ್ರಿ ರಚಿತವಾದ “ ಭಾವಮಂಜರಿ ” ಯೆಂಬ ಕನ್ನ
ಡಟಿಪ್ಪಣಿಯೊಳಗೆ ವಾದಪ್ರಕರಣದಲ್ಲಿ ಹರಿಹರರಿಗೆ ಅಭೇ
ದವೆಂಬ ವಾದವನ್ನು ಖಂಡಿಸುವ ೧೭ ನೆಯ
ಅಧ್ಯಾಯವು ಮುಗಿದುದು.

ಶಿವಾಯಪರಬ್ರಹ್ಮಣೇನಮಃ.

# ಅಥಅಷ್ಟಾದಶೋಧ್ಯಾಯಃ

## ವೃ ಷೇ ೦ ದ್ರ ವಾ ಹ ನ ತ್ವ ಕ ಥ ನ ೦.

ದಿವ್ಯವಾಹನಸನ್ದೋಹೇವಿದ್ಯಮಾನೇಮಹೇಶ್ವರಃ । ಆರುರೋಹ ಶಿಮುಕ್ಷಾಣಮಿತಿಚೇದತ್ರವಕ್ಷ್ಯತೇ ॥೧॥ ಮಹೇಶ್ವರೋಭವಶ್ಶಂಭುಃ ಪಾರ್ವತೀವಲ್ಲಭಶ್ಶಿವಃ।ಆದಿಸರ್ಗಸ್ಯಸಮಯೇಪ್ರಪಂಚಸ್ಯಾಖಿಲಸ್ಯಸಃ॥೨ ರಜಾಂಸೀವಸ್ಥೂಲರೂಪರೋಮಕೂಪೇಷುಮೇಪುನಃ।ಸೂಕ್ಷ್ಮರೂಪೇಚ ಜಲಧೇರ್ಬುದ್ಬುದಾವಳಯೋಯಥಾ ॥೩॥ ಕಾಲಾಗ್ನಿರುದ್ರಭಾಲಾಗ್ನಿ ವಿಸ್ಫುಲಿಙ್ಗಚ್ಛಟಾಇವ । ಅನೇಕಶೋಽಪಿವತಿಷ್ಠನ್ತೇಬ್ರಹ್ಮಾಣ್ಡಾನಾಂಸ ಮುತ್ಕರಾಃ ॥೪॥ತಸ್ಮಾದ್ವೋಢುಂಕಃಕ್ಷಮೋತಮಾಮಿತ್ಯಾತ್ಮಾನಮಾತ್ಮ ನಾ । ಧಾರಯಾಮೀತಿಸಂಚಿನ್ತ್ಯವೃಷೋಭೂತ್ವಾಽಽರುರೋಹತಮ್॥೫ ಅಭೂತ್ತದಾದಿವೇದಾನ್ತವೇದ್ಯಶ್ಶ್ರೀವೃಷಭೇಶ್ವರಃ।ವಾಹನಂತಸ್ಯದೇವಸ್ಯ

---

# ೧೮ನೆಯ ಅಧ್ಯಾಯವು.

## (ವೃಷಭವಾಹನಲೀಲಾಕಥನವು)

ಉತ್ಕೃಷ್ಟವಾದ ವಾಹನಗಳು ಬೇಕಾದಷ್ಟಿದ್ದರೆ, ಶಿವನು ವೃಷಭನನ್ನೇತ ಕ್ಕೇರಿದನು ? ಎಂದು ಕೇಳುವೆಯಾದರೆ, ಇದಕ್ಕೆ ಉತ್ತರವನ್ನು ಹೇಳುತ್ತೇನೆ:—॥೧ ಪಾರ್ವತೀಪತಿಯಾದ ಪರಮೇಶ್ವರನು ಸಕಲ ಪ್ರಪಂಚವನ್ನು ಮೊದಲು ಸೃಷ್ಟಿಸುವಾ ಗ॥೨॥ "ನನ್ನ ಸ್ಥೂಲಾಕೃತಿಯು ಶರೀರದ ರೋಮಕೂಪಗಳಲ್ಲಿ ಬ್ರಹ್ಮಾಂಡಸಮೂಹ ಗಳು ಅಣುಗಳೋಪಾದಿಯಲ್ಲಿಯೂ, ಸೂಕ್ಷ್ಮಾಕೃತಿಯು ಶರೀರದಲ್ಲಿ ಸಮುದ್ರದೊಳಗಿ ರುವ ನೊರೆಗಳ ಪಙ್ತಿಗಳಂತೆಯೂ, ಕಾಲಾಗ್ನಿರುದ್ರನ ಹಣೆಗಣ್ಣಿನ ಬೆಂಕಿಯಕಿಡಿಗಳ ಸಾಲುಗಳೋಪಾದಿಯಲ್ಲಿಯೂ ಅನೇಕವಾಗಿರುವುವು. ॥೪॥ ಅದುಕಾರಣ ಇಂತಪ್ಪ ನನ್ನನ್ನು ಹೊರುವುದಕ್ಕೆ ಯಾವನು ಸಮರ್ಥನಾಗುವನು ? ಅಂಥವನಾರೂ ಇಲ್ಲದ ಕಾರಣ ನನ್ನನ್ನು ನಾನೇಹೊರುವೆನು,, ಎಂದು ಯೋಚಿಸಿ, ತಾನೇವೃಷಭೇಶ್ವರನಾಕಾರ ವಾಗಿ ನಿಂತು ಅದನ್ನು ಹತ್ತಿದನು. ಅದುಮೊದಲ್ಗೊಂಡು ವೇದಾಂತವೇದ್ಯನಾದ ಶ್ರೀ ವೃಷಭೇಶ್ವರನು ಆ ಮಹಾದೇವನಿಗೆ ವಾಹನನಾದನು. ಆತನು ಅಲ್ಪನೆ ? ದ್ವಿತೀಯ

ಕಿಮುಲ್ಪಶ್ಶಙ್ಕರೋಽಿಪರಃ ||೬|| ಅಯೋನಿಸಂಭವಖ್ಯಾತಸ್ಸಂಸಾರೀಕಿಂವೃ
ಷಾಧಿಪಃ । ಚತುರ್ಭುಜಾವತಾರೋಽಿಸಾವಕ್ಷರಸ್ಸಕಥಂಪಶುಃ ||೭|| ತ್ರಿ
ಲೋಕವಂದಿತೋಲೋಕಪಾವನೋಗೋಕುಲಾಧಿಪಃ । ಕಿಮುಲೋಕ
ಪ್ರಪಂಚಾನ್ತಃಪಾತೀಶ್ರೀವೃಷಭೇಶ್ವರಃ ||೮|| ದ್ವಿತೀಯಶಂಭುರಿತ್ಯು
ರ್ವ್ಯಾಂಪ್ರಸಿದ್ಧೋಧರ್ಮವಿಗ್ರಹಃ । ಕಿಂಕರ್ಮವಾನ್ವೃಷೇಶೋಸಾವ
ಚಿನ್ತ್ಯನಿಜವೈಭವಃ||೯|| ವಾಹನಂಭವಿತುಂಯೋಗ್ಯೋನಕಿಮೇಷಗಣಾ
ಗ್ರಣೀಃ। ಅಪಿಚೈರಾವತಸ್ಸೋಽಿತಿದುರ್ಮದೋಚ್ಛ್ರಯಸಂಯುತಃ ||೧೦||
ಸಸಮ್ಯದೋಚ್ಛ್ರಯಶ್ಶಂಭುವಾಹನಂವೃಷಭಾಧಿಪಃ । ಯಾನಂಪಶುಃಪಾ
ವಕಸ್ಯವೃಷಃಪಶುಪತಿರ್ಮಹಾನ್ ||೧೧|| ಯಮಲೋಕಪ್ರವರ್ತೀಸಲು
ಲಾಯಸ್ಸಮವರ್ತಿನಃ । ಶಿವಲೋಕೇಸದಾವರ್ತೀಶುಭಕೀರ್ತಿರ್ವೃಷೇಶ್ವ
ರಃ ||೧೨|| ನರಸ್ಸ್ವರೂಪಿನಿರ್ಋತಿವಾಹನಂಪರಿಕೀರ್ತಿತಮ್। ಅಸೌಶ್ರೀವೃಷ
ಭಾಧೀಶೋನರಾಮರಸಮಸ್ಕೃತಃ ||೧೩|| ಸಂಬದ್ಧಂಜಡಪಾಶೇನಜಲನಾ

---

ಶಂಭುವಾಗಿರುವನು ||೬|| ಯೋನಿಸಂಭೂತನಲ್ಲವೆಂದು ಪ್ರಸಿದ್ಧನಾದ ಆ ವೃಷ
ಭೇಶ್ವರನು ಜನನಮರಣಬದ್ಧನೆ ? ನಾಶರಹಿತನೂ ವಿಷ್ಣುವಿನ ಅವತಾರವೂ ಆದ
ಈ ವೃಷಭೇಶನು ಅದು ಹೇಗೆ ಪಶುವಾಗುವನು?||೭|| ಮೂರು ಲೋಕಗಳಿಂದ ನಮ
ಸ್ಕರಿಸಲ್ಪಟ್ಟವನೂ ಜಗತ್ಪವಿತ್ರನೂ ಪಶುಕುಲಕ್ಕೆಲ್ಲಾ ಸ್ವಾಮಿಯೂ ಆದ ಶ್ರೀ ವೃಷ
ಭೇಶ್ವರನು ಜಗದ್ವ್ಯವಹಾರಕ್ಕೊಳಪಟ್ಟವನೆ? ||೮|| ಎನೆಯ ಶಿವನೆಂದು ಭೂಮಿ
ಯಲ್ಲಿ ಪ್ರಖ್ಯಾತಿಗೊಂಡಿರುವ–ಯೋಚಿಸುವುದಕ್ಕಸಾಧ್ಯವಾದ ತನ್ನ ಮಹತ್ವವುಳ್ಳ-
ಈ ವೃಷಭೇಶ್ವರನು ಕರ್ಮಬದ್ಧನೆ? ||೯|| ಇಂತಹ ಯೋಗ್ಯತೆಯುಳ್ಳ ಶಿವಗಣಾಗ್ರೇಸ
ರನಾದ ಈ ವೃಷಭೇಶನು ಶಿವನ ವಾಹನವಾಗುವುದಕ್ಕೆ ಯೋಗ್ಯನಲ್ಲವೆ ? ಮತ್ತೂ
ಇಂದ್ರನ ವಾಹನವಾಗಿರುವ ಆ ಐರಾವತವು ಅತ್ಯಂತ ದುಷ್ಟವಾದ ಗರ್ವದಿಂದ ಕೂ
ಡಿರುವುದು. ಶಿವವಾಹನವಾದ ವೃಷಭೇಶನಾದರೋ ಉತ್ತಮವಾದ ಮದದಿಂದ (ಸದಾ
ನಂದದಿಂದ) ಕೂಡಿರುವನು. ಅಗ್ನಿಯ ವಾಹನವಾದ ಟಗರು ಪಶುವು, ಶಿವನವಾ
ಹನವಾದ ಮಹಾವೃಷಭೇಷನು ಪಶುಗಳಿಗೆಲ್ಲಾ ಅಧಿಪತಿಯಾದವನು. ||೧೧|| ಯ
ಮನ ವಾಹನವಾದ ಆ ಕೋಣವು ನರಕಲೋಕದಲ್ಲಿರುವುದು. ಶಿವವಾಹನವಾದ
ವೃಷಭೇಶನು ಸತ್ಕೀರ್ತಿಯುಳ್ಳವನಾಗಿ ಯಾವಾಗಲೂ ಕೈಲಾಸದಲ್ಲಿರುವನು ||೧೨||
ನಿರ್ಋತಿಯ ವಾಹನವು ಮನುಷ್ಯರೂಪವಾದುದೆಂದು ಹೇಳಲ್ಪಟ್ಟಿರುವುದು. ಶಿವವಾಹ
ನನಾದ ಈ ವೃಷಭೇಶನಾದರೋ ಮರ್ತ್ಯರಿಂದಲೂ ಅಮರ್ತ್ಯರಿಂದಲೂ ನಮಸ್ಕರಿ
ಸಲ್ಪಟ್ಟವನು ||೧೩|| ವರುಣನ ವಾಹನವಾದ ಮೊಸಳೆಯು ಜಡವಾದ ಪಾಶ

ಥಸ್ಯವಾಹನಂ। ಜಡಪಾಶವಿನಿರ್ಮುಕ್ತಂಪರಮೇಶ್ವರವಾಹನಮ್॥೧೪॥ ಸದಾಗತಿಮೃಗೋಽಜಸ್ರಸಂಚಾರಪರಿದುಃಖಿತಃ। ಇದಂಪುನಃಪುರಾರಾತೇರ್ವಾಹನಂದುಃಖವರ್ಜಿತಂ॥೧೫॥ ಸುವ್ಯಕ್ತಮುತ್ತರಾಶಾರ್ಥೀಧನಾಧಿಪತಿಘೋಟಕಃ। ಅಯಂತೂತ್ತಮಸಂತುಷ್ಟಸ್ಸತತಂವೃಷಭಾಧಿಪಃ॥೧೬॥ ಬಹುನಾಕಿಂತದೀಶಾನವಾಹನಂನಂದಿನಾಮಕಂ। ಮದೀಯಸ್ವಾಮಿಭಾಲಾಕ್ಷವಾಹನಂನಂದಿನಾಯಕಃ॥೧೭॥ ಜಾತೋಽಬ್ಜಜನ್ಮನೋಹಂಸೋಜೀವಹಂಸಸ್ಸಮೀರಿತಃ। ಅಯಂಪರಮಹಂಸಶ್ಶ್ರೀವೃಷಭಾಧಿಪತಿರ್ಭುವಿ॥ ವಿಶ್ವವಿಶ್ವಂಭರೋದ್ಧಾರಧೌರೇಯಂನಗಧಾರಿಣಂ। ಧೃತ್ವಾಗಮನವೇಳಾಯಾಂಕಮಲಾಪತಿಮೇಕದಾ॥೧೯॥ ಶ್ರೀನಂದಿಕೇಶ್ವರೋಚ್ಛ್ವಾಸನಿಶ್ವಾಸಪಥಪಾತಿತಃ। ಆಸೀದ್ಗತಾಗತಂಕುರ್ವನ್ನಾಕೈಲಾಸಂಖಗಾಧಿಪಃ॥೨೦॥ ಉಚ್ಛ್ವಾಸನಿಶ್ವಾಸಜೈಶ್ಚೇತ್ಯಾದಿಪೌರಾಣವಾಕ್ಯತಃ। ವೃಷಾಧಿಪತಿನಾಲೋಕವಿಸರಸ್ತುತ್ಯಕೀರ್ತಿನಾ॥೨೧॥ ಕೃಷ್ಣಸ್ಯಪಕ್ಷಿವಾಹಸ್ಯಸಪಕ್ಷೀಸದೃಶಃಕಥಂ।

---

ಪಾಶದಿಂದ (ಜಲರೂಪವಾದ ಪಾಶದಿಂದ) ಕಟ್ಟಲ್ಪಟ್ಟದು. ಶಿವನ ವಾಹನವು ಜಡವಾದ ಮಾಯಾಪಾಶದಿಂದ ಕಟ್ಟಲ್ಪಡದಿರುವುದು ॥೧೪॥ ವಾಯುವಿನ ವಾಹನವಾದ ಜಿಂಕೆಯು ಯಾವಾಗಲೂ ತಿರುಗುತ್ತಲೇ ಇರಬೇಕಾದ ದುಃಖದಿಂದ ಕೂಡಿದುದು. ಈ ಶಿವವಾಹನವಾದರೊ ದುಃಖವಿಲ್ಲದುದು, ॥೧೫॥ ಕುಬೇರನ ವಾಹನವಾದ ಕುದುರೆಯು ಎಲ್ಲರೂ ಕಾಣುವಂತೆ ಬಲು ಆಸೆಯಿಂದ ಬೇಡುತ್ತಿರುವುದು (ಉತ್ತರದಿಕ್ಕನ್ನಪೇಕ್ಷಿಸುತ್ತಿರುವುದು) ಈ ವೃಷಭೇಶ್ವರನಾದರೊ ಯಾವಾಗಲೂ ಪೂರ್ಣ ಸಂತೃಪ್ತಿಯುಳ್ಳವನು ॥೧೬॥ ಹೆಚ್ಚು ಮಾತಿನಿಂದೇನು? ಆ ಈಶಾನನ ವಾಹನವು ಕೇವಲ ನಂದಿಯೆಂಬ ಹೆಸರುಳ್ಳವನು. ನನ್ನ ಸ್ವಾಮಿಯಾದ ಪರಶಿವನ ವಾಹನವಾದರೊ ನಂದಿನಾಯಕನೆಂಬ ಹೆಸರುಳ್ಳವನು ॥೧೭॥ ಬ್ರಹ್ಮನ ವಾಹನವಾದ ಹಂಸಪಕ್ಷಿಯು ಜೀವದ ಹಂಸನೆನಿಸಿಕೊಂಡಿರುವುದು. ಈ ವೃಷಭೇಶ್ವರನಾದರೊ ಭೂಮಿಯಲ್ಲಿ ಪರಮಹಂಸ (ಪರಬ್ರಹ್ಮ) ನೆನಿಸಿಕೊಂಡಿರುವನು ॥೧೮॥ ಸಕಲ ಪ್ರಪಂಚವನ್ನೂ ಉದ್ಧರಿಸಲು ಸಮರ್ಥನಾದ ಗೋವರ್ಧನಗಿರಿಯನ್ನು ಹೊತ್ತಿರುವ ವಿಷ್ಣುವನ್ನು ಗರುಡನು ಬಂದಾನೊಂದಾವೃತ್ತಿ ಹೊತ್ತುಕೊಂಡು ಹೋಗುತ್ತಿರುವಲ್ಲಿ ॥೧೯॥ ನಂದೀಶ್ವರನ ಉಚ್ಛ್ವಾಸನಿಶ್ವಾಸದ ಗತಿಗೆ ಸಿಕ್ಕಿಬಿದ್ದು, ಕೈಲಾಸಪರ್ವತದವರೆಗೂ ಹಿಂದಕ್ಕೂ ಮುಂದಕ್ಕೂ ಬಡಿದಾಡುತ್ತಿದ್ದನು ॥೨೦॥ ಎಂಬ ಸಂಗತಿಯು "ಉಚ್ಛ್ವಾ

ಕಥಯಾಕಿಂವಾಹನಾಸಾಮುಮುನಾಧರ್ಮಮೂರ್ತಿನಾ ॥೨೨॥ ವಿಷ್ಣ್ವಾದಯೋಪಿತ್ರಿದಶಾಸದೃಶಾನೇತಿಭಾಷಿತೇ । ನಪ್ರದೋಷೇಹರಿಂಪಶ್ಯೇತ್ತ್ರಯೋದಶ್ಯಾಂವಿಶೇಷತಃ॥೨೩॥ಯದಿಪ್ರಮಾದಾತ್ಪಶ್ಯೇತ್ತದ್ದ್ವಾದಶಾಹವೃಷಷಯಃ।ತ್ರಯೋದಶ್ಯಾಂಪ್ರದೋಷೇತುಯಃಪಶ್ಯೇದ್ಧರಿಮಾದರಾತ್॥೨೪॥ದ್ವಾದಶಾಹಕೃತಂಪುಣ್ಯಂತತ್ಕ್ಷಣಾದೇವನಶ್ಯತಿ । ಇತಿಪೌರಾಣವಚನೈರ್ನಿಷಿದ್ಧೇಹರಿದರ್ಶನೇ ॥೨೫॥ ಪೃಥಿವ್ಯಾಂಯಾನಿತೀರ್ಥಾನಿಸಾಗರಾಂತಾನಿತಾನಿತು ।ಅಂಡಮಾಶ್ರಿತ್ಯತಿಷ್ಠಂತಿಪ್ರದೋಷೇಗೋವೃಷಸ್ಯತು ॥೨೬॥ ವೃಷಸ್ಯವೃಷಣಂಸ್ಪೃಷ್ಟ್ವಾಶಂಕರಸ್ಯಾವಲೋಕನಾತ್ । ಸಪ್ತಜನ್ಮಕೃತಂಪಾಪಂತತ್ಕ್ಷಣಾದೇವನಶ್ಯತಿ॥೨೭॥ಏಭಿಃಪುರಾಣವಚನೈಃಪ್ರಶಸ್ತನಿಜವೈಭವಃ । ವೃಷಾಧಿನಾಯಕಸ್ಸೋಯಂಕಿಮಲ್ಪಃಪರಿದೃಶ್ಯತಾಂ ॥೨೮॥ ಯತ್ರಪಾದೃಶ್ಯತೇಲಿಙ್ಗಂಸರ್ವತೀರ್ಥಾನಿತತ್ರವೈ।ವಸನ್ತಿಲಿಙ್ಗಮೂಲೇತ್ವಿ

---

ಸನಿತ್ಯಾವಸಜ್ಯೈಚ'' ಎಂದಾರಂಭಿಸಿ ಹೇಳಲ್ಪಟ್ಟಿರುವ ಪುರಾಣವಚನದಿಂದ ಸಿದ್ಧವಾಗಿರುವುದು. ಹೀಗೆ ಲೋಕಸಮುದಾಯದಿಂದ ಹೊಗಳಲ್ಪಡುವುದಕ್ಕೆ ಯೋಗ್ಯವಾದ ಶಕ್ತಿಯುಳ್ಳ ವೃಷಭೇಶ್ವರನೊಡನೆ ॥೨೧॥ ವಿಷ್ಣುವಿನ ವಾಹನವಾದ ಆ ಹಕ್ಕಿಯು ಹೇಗೆ ಸಮಾನವಾದೀತು? ಈ ಧರ್ಮಸ್ವರೂಪನಾದ ವೃಷಭೇಶನೊಡನೆ ವಿಷ್ಣುವೊದಲಾದ ದೇವತೆಗಳುಕೂಡ ಸಮಾನರಲ್ಲವೆಂದು ಹೇಳಲ್ಪಡುತ್ತಿರಲಾಗಿ, ಈ ವಾಹನಗಳ ಸುದ್ದಿಯಿಂದೇನು? ತತ್ರಾಪಿ ತ್ರಯೋದಶಿಯದಿನ ಪ್ರದೋಷಕಾಲದಲ್ಲಿ ಖಂಡಿತವಾಗಿಯೂ ವಿಷ್ಣು ದರ್ಶನವನ್ನು ಮಾಡಕೂಡದು. ॥೨೩॥ ಒಂದುವೇಳೆ ಪ್ರಮಾದವಶಾತ್ ದರ್ಶನ ಮಾಡಿದರೆ ೧೨ವರ್ಷಗಳಿಂದ ಗಳಿಸಿದ ಪುಣ್ಯವೆಲ್ಲಾ ನಾಶಗೊಳ್ಳುವುದು, ಎಂಬರ್ಥವು "ತ್ರಯೋದಶ್ಯಾಂ......ನಶ್ಯತಿ'' ಎಂಬ ಪುರಾಣ ವಚನಗಳಿಂದ ಹೇಳಲ್ಪಟ್ಟ ವಿಷ್ಣುವಿನ ದರ್ಶನವು ನಿಷಿದ್ಧವಾಗಿರಲಾಗಿ ॥೨೫॥ ಭೂಮಿಯಲ್ಲಿ ಸಪ್ತಸಾಗರಗಳವರೆಗೆ ಯಾವ ಯಾವ ತೀರ್ಥಗಳಿರುವುವೋ ಅವುಗಳೆಲ್ಲಾ ಪ್ರದೋಷಕಾಲದಲ್ಲಿ ವೃಷಭೇಶನ ಅಡೆಯನ್ನಾಶ್ರಯಿಸಿರುವುವು ॥೨೬॥ ವೃಷಭೇಶನ ಅಡೆಯನ್ನು ಮುಟ್ಟಿ ಶಿವನ ದರ್ಶನವನ್ನು ಮಾಡುವುದರಿಂದ ೭ಜನ್ಮಗಳಲ್ಲಿ ಮಾಡಿರುವ ಪಾಪವೆಲ್ಲಾ ತತ್ಕ್ಷಣದಲ್ಲಿಯೇ ನಾಶವಾಗುವುದು ॥೨೭॥ ಈ ಪ್ರಕಾರವಾದ ಪುರಾಣ ವಚನಗಳಿಂದ ಶ್ರೇಷ್ಠವಾದ ತನ್ನ ಮಹತ್ತಾದ ವೈಭವವುಳ್ಳ ಆ ಈ ವೃಷಭೇಶ್ವರನು ಅಲ್ಪನೆ? ವಿಚಾರಮಾಡಿ ನೋಡು ॥೨೮॥ ಎಲ್ಲಿ ಲಿಂಗವು ಕಾಣುವುದೋ ಅಲ್ಲೇ ಸಕಲ ತೀರ್ಥಗ

ತ್ಯೇತದುಕ್ತೇರ್ವೃಥಾಶಿವೇ ॥೨೯॥ ಲಿಙ್ಗಸ್ವರೂಪೇತೀರ್ಥಾನಿಸರ್ವಾಣಿನಿವ
ಸನ್ತಿಹಿ। ತಥಾವಸನ್ತಿತೀರ್ಥಾನಿಸರ್ವಾಣ್ಯಾಪಿವೃಷೇಶ್ವರೇ ॥೩೦॥ ಕಿಂಚ
ಪಾಪಾಯುಪದ್ಮಾಕ್ಷದರ್ಶನಂಕಥಿತಂನೃಣಾಮ್ । ವೃಷಸ್ಯವೃಷಣಸ್ಪರ್ಶಃ
ಪುಣ್ಯಾಯೇತಿಪ್ರಕೀರ್ತಿತೇ ॥೩೧॥ ವೃಷಭೇಶಸ್ಯಮಹಿಮಾಪ್ರಸ್ತೋತುಂ
ಶಕ್ಯತೇಕಥಮ್। ಮಾದುಷ್ಟುತಿರ್ವೃಷಭಮಾಸಹೂತಿರಿತಿಚಶ್ರುತೇಃ ॥೩೨॥
ನನುದೂಷಕತತ್ಸಾಕ್ಷಾದ್ರುದ್ರಮೂರ್ತಿರ್ವೃಷೇಶ್ವರಃ। ಅವಿಜ್ಞಾಯತ್ವಯಾ
ಮೋಹಾತ್ಪಶುರಿತ್ಯುಚ್ಯತೇಕಥಮ್ ॥೩೩॥ ಈಶಸ್ಯವೃಷವಾಹತ್ವಂನಿಂದಾ
ಕಿಂಕೀರ್ತಿರೇವಹಿ ॥

ಇತ್ಯಸಂಖ್ಯಾತಮಹಾಮಾಹೇಶ್ವರ........ಶ್ರೀವೀರಶೈವಮತಾಚಾ
ರ್ಯ ಗುರುರಾಜಸ್ಯಕೃತೌ ಶ್ರೀಮಲ್ಲಿಕಾರ್ಜುನಪಣ್ಡಿತಾ
ರಾಧ್ಯಚರಿತ್ರೇ ಪಾದಪ್ರಕರಣೇ ಪರಮೇಶ್ವರ
ಸ್ಯ ವೃಷೇನ್ದ್ರವಾಹನತ್ವಕಥನಂ ನಾ
ಮ ಅಷ್ಟಾದಶೋಽಧ್ಯಾಯಃ.

---

ಳೂ ಇರುವುವು. ಮೂಲದಲ್ಲಿ ಸಕಲ ತೀರ್ಥಗಳೂ ಇರುವುವೆಂದು ಹೇಳಲ್ಪಟ್ಟಿರುವ
ಪುರಾಣವಚನದಂತೆ ಲಿಂಗಸ್ವರೂಪನಾದ ಶಿವನಲ್ಲಿ ಸಕಲ ತೀರ್ಥಗಳೂ ಹೇಗಿರುವು
ವೋ, ಹಾಗೆಯೇ ಸಕಲ ತೀರ್ಥಗಳೂ ವೃಷಭೇಶ್ವರನಲ್ಲಿರುವುವು ॥೩೦॥ ಮತ್ತೂ
ಮನುಷ್ಯರಿಗೆ ವಿಷ್ಣುದರ್ಶನವು ಪಾಪಕರವಾದುದೆಂದೂ ವೃಷಭೇಶ್ವರನ ಅಡಿಗಳ
ನ್ನು ಮುಟ್ಟುವುದು ಪುಣ್ಯಸಾಧಕವೆಂದೂ ಹೇಳಲ್ಪಟ್ಟಿರುವುದಷ್ಟೆ ॥೩೧॥ ಹೀ
ಗಿರಲಾಗಿ, ವೃಷಭೇಶ್ವರನ ಮಹಿಮೆಯನ್ನು ಹೊಗಳುವುದಕ್ಕೆ ಹೇಗೆ ಸಾಧ್ಯವು?
ಎಲೆ ದೂಷಕನೆ, "ಮಾದುಷ್ಟುತಿರ್ವೃಷಭಮಾಸಹೂತಿಃ" ಎಂದು ಶ್ರುತಿವಚನವಿರು
ವುದರಿಂದ ವೃಷಭೇಶ್ವರನು ಸಾಕ್ಷಾದ್ರುದ್ರನೇ ಆಗಿರುವನಲ್ಲವೆ? ಅದನ್ನು ತಿಳಿಯದೆ
ನೀನು ಅಜ್ಞಾನದಿಂದ ಆತನನ್ನು ಪಶುವೆಂಬುದಾಗಿ ಹೇಗೆ ಹೇಳುತ್ತೀಯೆ? ॥೩೩॥
ಅದು ಕಾರಣ, ಪರಶಿವನಿಗೆ ವೃಷಭವಾಹನತ್ವವು ಕೀರ್ತಿಕರವಾಗಿರುವುದೇ ಹೊರತು
ನಿಂದಾಸ್ಪದವಾದುದೇನು?

ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ
ಪಂಡಿತಾರಾಧ್ಯ ಚರಿತ್ರದಲ್ಲಿ ಪಾದಪ್ರಕರಣದೊಳಗೆ
ಶಿವನ ವೃಷಭವಾಹನತ್ವವನ್ನು ನಿರೂಪಿಸುವ
೧೮ನೆ ಅಧ್ಯಾಯವು ಸಂಪೂರ್ಣವು.

## ಅಥವಿಕೋನವಿಂಶೋಽಧ್ಯಾಯಃ.

(ವಿಷಧರತ್ವಾದಿಲೀಲಾಕಥನಂ)

ಕಿಂಚ ಕಾಲಾನ್ತಕಃ ಕಂಠೇ ಕಾಲಕೂಟಮಧತ್ತ ಕಿಮ್। ಕಿಮರ್ಥಂ
ಫಣಿನಾಥಂಚ ಪ್ರೀತ್ಯಾ ಚಕ್ರೇ ವಿಭೂಷಣಮ್॥೧॥ ದಧಾವಹ್ನಿಂ ಕಿಮರ್ಥಂ
ಚ ನಗ್ನೋ ಭೂತ್ವಾ ಚಚಾರ ಕಿಮ್। ಏಷು ಚೋದ್ಯೇಷು ವಕ್ಷ್ಯೇಹಂ ಕ್ರಮಾ
ದಾಕರ್ಣಯೋತ್ತರಮ್ ॥೨॥ ಮಥನಾವಸರೇ ಸಿನ್ಧೋಶ್ಚಕಿತೇಷು ಪರ
ಸ್ಪರಮ್ । ಸುರಾಸುರಸಮೂಹೇಷು ಹರಿಪದ್ಮಭವಾದಿಷು ॥೩॥ ಬ್ರ
ಹ್ಮಾಣ್ಡಭಾಣ್ಡದಹನೋದ್ದಣ್ಡಚಣ್ಡಕರಾರ್ಚಿಷಿ । ಹರನೇತ್ರಾಗ್ನಿಸದೃ
ಶೇ ಯುಗಾನ್ತಾದಿತ್ಯಸನ್ನಿಭೇ ॥೪॥ ಘೋರಕಾಲಾನಲಪ್ರಖ್ಯೇ ಕಾಲ
ಕೂಟಾಭಿಧೇಽಸಮೇ । ಪುರಾಣೋಕ್ತ್ಯಾ ಕೃತಃ ಕೃಷ್ಣೋ ಜನಾರ್ದನ
ಇತೀರ್ಷ್ಯಯಾ ॥೫॥ ದಾಮೋದರಂ ಶ್ಯಾಮತನುಂ ವಿಧಾಯ ಪರಿಜೃಂಭಿತೇ।
ವಿರಿಂಚಿಶ್ಮಶ್ರುದಹನಕಾರಿಸ್ಫಾರಸ್ಫುಲಿಙ್ಗಕೇ ॥೬॥ ಗರಳಾಗ್ನೌ ಸಮಾ

---

### ೧೯ನೆ ಅಧ್ಯಾಯವು.

(ವಿಷಧರತ್ವಾದಿಲೀಲಾಕಥನವು)

ಮತ್ತೂ ಎಲೆ ವಾದಿಯೆ, ಆಯಮನಾಶಕನಾದ ಶಿವನು ಕೊರಲಿನಲ್ಲಿ ವಿಷವ
ನ್ನೇಕೆ ಧರಿಸಿದನು? ಪ್ರೀತಿಯಿಂದ ಆದಿಶೇಷನನ್ನೇತಕ್ಕೆ ಆಭರಣಮಾಡಿಕೊಂಡನು?॥
ಅಗ್ನಿಯನ್ನು ಏತಕ್ಕೆ ಧರಿಸಿದನು? ಬತ್ತಲೆಯಾಗಿ ಏತಕ್ಕೆ ತಿರುಗಿದನು ? ಎಂದು ಕೇ
ಳುತ್ತೀಯೆ, ಇವಕ್ಕೆ ನಾನು ಕ್ರಮವಾಗಿ ಉತ್ತರವನ್ನು ಹೇಳುತ್ತೇನೆ ಕೇಳು-॥೨॥
ಸಮುದ್ರವನ್ನು ಮಥನಮಾಡುವ ಕಾಲದಲ್ಲಿ ವಿಷ್ಣುಬ್ರಹ್ಮಾದಿದೇವತೆಗಳೂ ರಾಕ್ಷಸರೂ
ಸಹ ಒಬ್ಬರಿಗೊಬ್ಬರು ಬೆರಗಾಗುವಂತೆ ॥೩॥ ಬ್ರಹ್ಮಾಂಡವೆಂಬ ಅಳಗೆಯನ್ನು ಸು
ಡುವ ಮಹಾಗ್ನಿಯಂತೆಯೂ, ಶಿವನ ಹಣೆಗಣ್ಣಿನ ಬೆಂಕಿಯಂತೆಯೂ, ಪ್ರಳಯ
ಕಾಲದ ಸೂರ್ಯನಿಗೆ ಸಮನಾಗಿಯೂ ॥೪॥ ಪ್ರಳಯಕಾಲದ ಭಯಂಕರವಾದ
ಬೆಂಕಿಗೆ ಸದೃಶವಾಗಿಯೂ, ಕಾಲಕೂಟವೆಂಬ ಹಸರುಳ್ಳುದಾಗಿಯೂ, ಅಸದೃಶವಾಗಿ
ಯೂ, "ಅದರ ಬೇಗೆಯಿಂದ ವಿಷ್ಣುವು ಕಪ್ಪುಬಣ್ಣದವನಾದನು" ಎಂದು ಹೇಳಿರು
ವ ಪುರಾಣವಚನದಂತೆ ಹರಿಯನ್ನು ಕಪ್ಪುಬಣ್ಣದ ದೇಹವುಳ್ಳವನನ್ನಾಗಿ ಮಾಡಿ ಹ
ಬ್ಬಿಕೊಂಡು, ಬ್ರಹ್ಮನ ಮೀಸೆಗಳನ್ನು ಸುಡುತ್ತಿರುವ ಕಿಡಿಗಳುಳ್ಳುದಾಗಿಯೂ ॥೬॥

ಯಾತೇರಕ್ಷಾಯೈ ಜಗತಾಂ ಶಿವಃ । ದೇವಸಂಜೀವನಾರ್ಥಾಯ ತಂ ವ್ಯಧಾತ್ಕಣ್ಠಭೂಷಣಮ್ ॥೭॥ ಶ್ರೀಕಣ್ಠ ಇತಿ ತೇನಾಭೂನ್ನಿನ್ದ್ಯೋಯಂ ಕಿಮು ಶೂಲಿನಃ । ಸನತ್ಕುಮಾರಃ ಕಮಲಾಸನಪುತ್ರೋಽತಿಗರ್ವದಾತ್ ॥೮॥ ವಿರಚ್ಯ ಮತಮದ್ವೈತಂ ಪುರಾ ಮುನಿಜನೈಸ್ಸಹ । ವಯಮೇವೇಶ್ವರಾಸ್ಸತ್ಯಮಸ್ಮದನ್ಯೋ ನಹೀಶ್ವರಃ ॥೯॥ ವದನ್ನಿದಂ ಸತ್ಯಮಿತಿ ತ್ಯಕ್ತ್ವಾ ಪಾಶುಪತವ್ರತಮ್ । ಸ್ವಬುದ್ಧ್ಯಾ ಯೋಗಶಾಸ್ತ್ರಾಣಿ ಪ್ರವಿರಚ್ಯ ಭ್ರಮಾನ್ವಿತಃ ॥೧೦॥ ವೇದಬಾಹ್ಯೋಽಪ್ಯವರ್ತಿಷ್ಟ ದೇವದಾರುವನೇಽನಿಶಮ್ । ತತೋ ಮಹೇಶೋ ವಿಕೃತವಿಟವೇಷೇಣ ತದ್ವನಮ್ ॥೧೧॥ ಸಮಾಗಚ್ಛತಿ ತಂ ದೃಷ್ಟ್ವಾ ಮುನಿಪತ್ನ್ಯೋಽತಿಮೋಹಿತಾಃ । ಕಾಮಾನ್ಧಕಾರಸಂಛನ್ನಾಃ ಪ್ರಸ್ಖಲನ್ತ್ಯಃ ಪದೇ ಪದೇ ॥೧೨॥ ಪಾತಿವ್ರತ್ಯಂ ಸ್ವಕಂ ತ್ಯಕ್ತ್ವಾ ತೇ ತದಾಽನ್ವಯುಶ್ಶಿವಮ್ । ಮುನಯಶ್ಚ ಕ್ಷೀಣಶಕ್ತಿಸ್ವಮನ್ತ್ರನಿಚಯೇ ಸತಿ ॥೧೩॥ ಸಮಾಗಚ್ಛನ್ನಯಂ ಕೋ ವೇತ್ಯಾಗ್ರಹಾವಿಷ್ಟಚೇತಸಃ । ಹುತ್ವಾಭಿಚಾರಮನ್ತ್ರೈ

---

ಇರುವ ವಿಷಾಗ್ನಿಯು ಸಮುದ್ರದಿಂದ ಉದಿಸಿಬರಲಾಗಿ, ಪರಶಿವನು ಅದರ ಭೀತಿಯಿಂದ ಜಗತ್ತುಗಳನ್ನು ಸಂರಕ್ಷಿಸುವುದಕ್ಕಾಗಿಯೂ, ದೇವತೆಗಳನ್ನು ಬದುಕಿಸುವುದಕ್ಕಾಗಿಯೂ, ಆ ವಿಷವನ್ನು ತನ್ನ ಕೊರಲಿನಲ್ಲಿ ಭೂಷಣವನ್ನಾಗಿ ಮಾಡಿ ಧರಿಸಿಕೊಂಡನು ॥೭॥ ಅದರಿಂದ ಅವನು ಶ್ರೀಕಂಠನೆಂಬ ಹೆಸರನ್ನು ತಾಳಿದನು. ಇದು ಶಿವನಿಗೆ ದೂಷಣಾಸ್ಪದವಾದುದೆ? ಪೂರ್ವದಲ್ಲಿ ಬ್ರಹ್ಮನ ಪುತ್ರನಾದ ಸನತ್ಕುಮಾರನು ಮುನಿಗಳೊಡನೆ ಕೂಡಿಕೊಂಡು ಅದ್ವೈತಮತವನ್ನು ನಿರ್ಮಿಸಿ, ನಾವೇ ಜಗದೀಶ್ವರರುಗಳು, ನಮಗಿಂತ ಬೇರೆಯಾದ ಈಶ್ವರನಿಲ್ಲ,ಇದು ಸತ್ಯವು ಸತ್ಯವು, ಎಂದು ದುರಹಂಕಾರದಿಂದ ॥೯॥ ಹೇಳುತ್ತ, ಪಾಶುಪತಾಚಾರವನ್ನು ಬಿಟ್ಟು, ಅಜ್ಞಾನದಿಂ ಕೂಡಿ, ಸ್ವಬುದ್ಧಿಯಿಂದ ಯೋಗಶಾಸ್ತ್ರಗಳನ್ನು ರಚಿಸಿ ॥೧೦॥ ಬೋಧಿಸುತ್ತ, ವೇದಬಾಹ್ಯನಾಗಿ, ಯಾವಾಗಲೂ ದೇವದಾರುವನದಲ್ಲಿ ವಾಸಮಾಡಿಕೊಂಡಿದ್ದನು. ಇದನ್ನು ಪರಶಿವನು ತಿಳಿದು, ವಿಟಪುರುಷವೇಷದಿಂದ ಆ ವನಕ್ಕೆ ಬರಲಾಗಿ ॥೧೧॥ ಅಲ್ಲಿದ್ದ ಋಷಿಪತ್ನಿಯರೆಲ್ಲರೂ ಆ ವಿಟನನ್ನು ನೋಡಿ, ಅತ್ಯಂತಮೋಹಗೊಂಡು, ಕಾಮವಿಕಾರದಿಂದ ಮಂಕುಹಿಡಿದವರಾಗಿ, ಹಜ್ಜೆಹಜ್ಜೆಗೆ ಮನಸ್ಥೈರ್ಯವು ಜಾರಿ, ತಮ್ಮ ಪಾತಿವ್ರತ್ಯವನ್ನು ಬಿಟ್ಟು, ಆ ವಿಟವೇಷದ ಶಿವನನ್ನೇ ಅನುಸರಿಸಿಕೊಂಡು ಹೋದರು. ಅವರ ಗಂಡಂದಿರಾದ ಮುನಿಗಳೂ ಕೂಡ ತಮ್ಮ ತಮ್ಮ ಮಂತ್ರಶಕ್ತಿಯು ಕ್ಷೀಣಿಸಿಹೋಗಲಾಗಿ, ಓಡಿಬಂದು, ಇವನಾರೆಂದು ಕೋಪಾವಿಷ್ಟರಾಗಿ, ಅಗ್ನಿಮಂತ್ರಗಳಿಂದಲೂ,

ಭರ್ಗಾರಿಕ್ರಿಯಾಕ್ರುದ್ಧೈಃ ॥೧೪॥ ಉನ್ಮತ್ತರೂಪಮುತ್ಪಾದ್ಯಪ್ರೇಷಯಾಮಾ
ಸುರುದ್ಧತಾಃ । ಅತಿಪೃತ್ತಮಪಸ್ಮಾರಂ ಪಾದೇನೋನ್ಮಥ್ಯ ಶಂಕರಃ ॥೧೫॥
ಪುನಶ್ಚ ಪ್ರೇಷಯಾಮಾಸುರ್ಮನ್ತ್ರಯಿತ್ವಾ ಭುಜಂಗಮಮ್ । ಶ್ರೀಕಣ್ಠೋ
ಹಸ್ತಕಟಕಂ ಚಕಾರಾಶುತಮಪ್ಯಹಿಮ್ ॥ ಭೂಯೋಽಪಿ ಪ್ರೇಷಯಾಮಾ
ಸುರಗ್ನಿಮೇವ ಮುನೀಶ್ವರಾಃ । ತಮಪ್ಯಥ ಮಹೇಶಾನೋ ದಧೌ ದೋಷ್ಣಾಽ
ಯುಧೋಪಮಮ್ ॥೧೬॥ ಪುನರ್ದುರ್ಮನ್ತ್ರನಿಚಯೇ ಕೃತೇಽಪ್ಯವಿಗಣಯ್ಯ
ತಮ್ । ಆಗತ್ಯೇಶೋ ವಿಲೋಕ್ಯಸ್ವಮನಮನ್ತಂ ವಿಧಾತೃಜಮ್ ॥೧೭॥ ಉ
ಷ್ಟ್ರಂ ಚಕಾರ ಶಾಪೇನ ದುರಹಙ್ಕಾರದೂಷಿತಮ್ । ತತೋ ವಿಗರ್ವಾಮು
ನಯಃ ಕಂಪಮಾನಾ ಭಯಾಚ್ಛಿವಮ್ ॥೧೮॥ ಸಾಷ್ಟಾಙ್ಗಂ ಪ್ರಣಿಪತ್ಯೋ
ರ್ವ್ಯಾಮಬ್ರುವನ್ಭಕ್ತಿಸಂಯುತಾಃ । ವಯಮದ್ವೈತಮತಯೋ ಮಹಾ
ಹಙ್ಕಾರದೂಷಿತಾಃ ॥ ಅದ್ವಿತೀಯಾದಿಸೂತ್ರಾರ್ಥವಾದಿನೋಽಜ್ಞಾನವಂ
ಚಿತಾಃ । ತದ್‌ಜ್ಞೇತರಾಸ್ಸಹಸ್ರಾಪರಾಧಾಸ್ಸದ್ಭಕ್ತಿವರ್ಜಿತಾಃ ॥೨೧॥

---

ನಾನಾವಿಧದ ಅಥರ್ವಣದ ತಂತ್ರಗಳಿಂದಲೂ ಮಾರಣಹೋಮವನ್ನು ಮಾಡಿ ॥೧೪॥
ಕೊಬ್ಬಿದ ಆ ಮುನಿಗಳು ಅಪಸ್ಮಾರವನ್ನು ಹುಟ್ಟಿಸಿ, ಶಿವನಮೇಲೆ ಬೀಳುವುದಕ್ಕೆ ಕ
ಳುಹಿಕೊಟ್ಟರು. ಶಿವನು ಆ ಅಪಸ್ಮಾರವನ್ನು ಪಾದದಿಂದ ಹೊಸಗಿ ನಿಂತುಕೊಂಡ
ನು ॥೧೫॥ ಆ ಮುನಿಗಳು ಮತ್ತೆ ಮಂತ್ರಿಸಿ ಸರ್ಪವನ್ನು ಕಳುಹಿಸಿದರು. ಶಿ
ವನು ಥಟ್ಟನೆ ಆ ಸರ್ಪವನ್ನು ಕೈಗೆ ಕಡಗವನ್ನಾಗಿ ಮಾಡಿಕೊಂಡನು ॥೧೬॥ ಮ
ತ್ತೂ ಆ ಮುನಿಗಳು ಅಗ್ನಿಯನ್ನೇ ಕಳುಹಿಸಿದರು. ಅದನ್ನೂ ಶಿವನು ಆಯುಧದಂ
ತೆ ತೋಳಿನಿಂದ ಹಿಡಿದುಕೊಂಡನು ॥೧೭॥ ಪುನಃ ಅವರು ನಾನಾದುರ್ಮಂತ್ರಗಳ
ನ್ನು ಅಭಿಮಂತ್ರಿಸಿದರೂ ಅವನ್ನು ಶಿವನು ಲಕ್ಷ್ಯಮಾಡದೆ, ಸ್ವಾಪರಾಧವನ್ನರಿತುಬಂ
ದು ತನಗೆ ನಮಸ್ಕರಿಸುತ್ತಿರುವ ಸನತ್ಕುಮಾರನನ್ನು ನೋಡಿ ॥೧೮॥ ದುರಹಂ
ಕಾರಿಯಾದ ಅವನನ್ನು ಶಿವನು ಶಾಪದಿಂದ ಒಂಟೆಯನ್ನಾಗಿ ಮಾಡಿದನು. ಬಳಿಕ
ಮುನಿಗಳು ಗರ್ವವನ್ನು ಬಿಟ್ಟು, ಭಯದಿಂದ ನಡುಗುತ್ತ ॥೧೯॥ ಭೂಮಿಯಲ್ಲಿ
ಸಾಷ್ಟಾಂಗವಾಗಿ ನಮಸ್ಕರಿಸಿ, ಭಕ್ತಿಸಂಪನ್ನರಾಗಿ ಹೀಗೆ ನುಡಿದರು:—"ನಾವು ಅ
ದ್ವೈತಬುದ್ಧಿಯುಳ್ಳವರಾಗಿ ಅಹಂಕಾರದಿಂದ ಕೆಟ್ಟು ॥೨೦॥ ನಮಗೆ ಭಿನ್ನವಾದ
ಬೇರೊಂದು ವಸ್ತುವಿಲ್ಲವೆಂಬುದೇ ಮೊದಲಾಗಿ ಸೂತ್ರಾರ್ಥಗಳನ್ನು ಹೇಳುತ್ತ, ಅಜ್ಞಾ
ನದಿಂದ ಮೋಸಹೊಂದಿದವರಾಗಿ, ಆ ಪರವಸ್ತುವನ್ನು ತಿಳಿಯದವರಾಗಿ, ಉತ್ತಮ
ಭಕ್ತಿಯಿಲ್ಲದವರಾಗಿ, ಹಲವು ತಪ್ಪುಗಳುಳ್ಳವರಾಗಿ ಇರುವೆವು ॥೨೧॥ ದಿವ್ಯಲಿಂಗಕ

ಅಸ್ಮತ್ಕೃತಾಪರಾಧಂಸ್ತ್ವಂಕೃಪಯಾಕ್ಷನ್ತುಮರ್ಹಸಿ । ದಿವ್ಯಲಿಙ್ಗ ಜ್ಗ ದೇವೇಶಸದಾನನ್ದೇಶಶಙ್ಕರ॥೨೨॥ಮೋಹಶಾಸ್ತ್ರಾಣಿಕತಮಾನ್ನಭ್ರಾನ್ತ್ಯಾನ್ಕುರ್ವತೇಜನಾನ್ । ಅಜೋವೇದಾತ್ಮಕೋಽಪಿತ್ವಾಮವಿಜ್ಞಾಯಹತೋಽಭವತ್ ॥ ತತ್ಪುತ್ರೋಽಪ್ಯದ್ವೈತವೃತ್ತ್ಯಾತ್ವಾಮಜ್ಞಾತ್ವಾಹತೋಽನಕಿಮ್।ವ್ಯಾಸೋವಿದ್ಯಾಮದಫಲಂನಾಪಶ್ಯತ್ಕಿಂಕ್ಷಣಾಚ್ಛಿವಮ್ ॥೨೪॥ ಯಜ್ಞೇಪ್ರಥಮಭಾಗಾರ್ಹಂಹಿತ್ವಾತ್ವಾಮುಕ್ಷವಾಹನಮ್ । ದಕ್ಷಪ್ರಜಾಪತಿರಭೂನ್ನಕಿಮುತ್ಕೃತ್ತಮಸ್ತಕಃ ॥೨೫॥ ತಸ್ಮಾದ್ಧಿತಪಸೋಗರ್ವಾದ್ವಯಮಪ್ಯತಿಮೋಹಿತಾಃ । ವಿಧಾಯಾದ್ವೈತಕರ್ಮಾಣಿಹತಾಸ್ಸ್ಮಃಪಾಹಿ ಶಙ್ಕರ ॥೨೬॥ ಇತ್ಯುಕ್ತ್ವಾ ಶ್ರುತಿಭಿಸ್ತೇಷುಸ್ತುವತ್ಸುಪರಮೇಶ್ವರಃ । ವಿಕೃತಾಕೃತಿರುದ್ದಣ್ಡವರ್ತನೋವಿಟವೇಷಧೃತ್॥೨೭॥ದಿಗಮ್ಬರತನುಸ್ಸ್ವೀಯಕೃಪೇಕ್ಷಣಸುಧಾಂಬುಧೌ।ನಿಮಜ್ಜ್ಯತಾನ್ ಮುನೀನ್ಸ್ವೀಯಲಿಙ್ಗಮೂರ್ತಿಮನನ್ತರಮ್ ॥೨೮॥ ನಿಧಾಯತನ್ಮುನೀನಾಂ ಸಜ್ಜಿಕಾಸುನಿರ

---

ೀರಿಯೂ, ದೇವಾಧಿದೇವನೂ, ಸದಾನಂದಮಯನೂ, ಭಕ್ತಸುಖಂಕರನೂ ಆದ ಎಲೈ ಪರಶಿವನೆ, ನೀನು ದಯೆಯಿಂದ ನಮ್ಮ ತಪ್ಪುಗಳನ್ನೆಲ್ಲಾ ಕ್ಷಮಿಸು ॥೨೩॥ ಲೋಕದಲ್ಲಿ ಮೋಹಶಾಸ್ತ್ರಗಳು ಯಾರನ್ನುತಾನೇ ಭ್ರಾಂತರನ್ನು ಮಾಡುವುದಿಲ್ಲ? ಬ್ರಹ್ಮನು ವೇದಸ್ವರೂಪನೇ ಆಗಿದ್ದರೂ ನಿನ್ನನ್ನುತಿಳಿಯದೆ ಜರೆದು ತಲೆಯನ್ನು ಕಳೆದುಕೊಂಡನು. ॥ ಅವನ ಮಗನಾದ ಈ ಸನತ್ಕುಮಾರನುಕೂಡ ನಿನ್ನನ್ನು ತಿಳಿಯದೆ ಅದ್ವೈತಾಚರಣೆಯಿಂದ ಕೆಟ್ಟುಹೋದನಲ್ಲವೆ ? ವ್ಯಾಸಮಹರ್ಷಿಯು ವಿದ್ಯಾಗರ್ವದ ಫಲವನ್ನು ಕ್ಷಣಕಾಲದೊಳಗಾಗಿ ಅನುಭವಿಸಲಿಲ್ಲವೆ ? ॥೨೪॥ ಯಜ್ಞದಲ್ಲಿ ಅಗ್ರಹವಿರ್ಭಾಗಕ್ಕೆ ಅರ್ಹನಾದ ಶಿವನನ್ನು ಬಿಟ್ಟು ಯಜ್ಞವನ್ನಾಚರಿಸಿದ ದಕ್ಷಬ್ರಹ್ಮನು ತಲೆಯನ್ನು ಕತ್ತರಿಸಿಕೊಂಡನಲ್ಲವೆ ? ॥೨೫॥ ನಾವುಕೂಡ ಹಾಗೆಯೇ ತಪೋಗರ್ವದಿಂದ ಅಜ್ಞಾನಗೊಂಡು ಅದ್ವೈತಕರ್ಮಾಚರಣೆಯನ್ನು ಮಾಡಿ ಕೆಟ್ಟುಹೋದೆವು. ಆದುದರಿಂದ ಅಜ್ಞರಾದ ನಮ್ಮನ್ನು ಕಾಪಾಡು ॥೨೬॥ ಎಂದು ಹೇಳಿ, ವೇದವಚನಗಳಿಂದ ಆ ಋಷಿಗಳು ಹೊಗಳುತ್ತಿರಲಾಗಿ, ವಿಕಟವಾದ ವಿಟವೇಷವನ್ನು ಧರಿಸಿಕೊಂಡು ದಿಗಂಬರನಾಗಿ ಸ್ವೇಚ್ಛೆಯಿಂದ ನಡೆಯುತ್ತಿದ್ದ ಆಶಿವನು ತನ್ನ ಕೃಪಾಕಟಾಕ್ಷವೆಂಬ ಅಮೃತಸಮುದ್ರದಲ್ಲಿ ಆಮುನಿಗಳನ್ನು ಮುಳುಗಿಸಿ,ಬಳಿಕ ತನ್ನ ಲಿಂಗಮೂರ್ತಿಯನ್ನು ॥೨೮॥ ಆ ಋಷಿಗಳ ಕಂಡಿಗೆಗಳಲ್ಲಿರಿಸಿ, ಯಾವಾಗಲೂ ಇದನ್ನು ನೀವು ಸ

ನ್ತರಮ್ । ಆರಾಧಯತಸದ್ಭಕ್ತ್ಯಾಯೂಯಮಿತ್ಯುಪದಿಶ್ಯಚ ॥೨೯॥
ಭ್ರಂಶಯಿತ್ವಾತದದ್ವೈತಮತಂದುರ್ಮತಮತಂದ್ರಿತಃ । ಪಶುಪಾಶಪತಿಜ್ಞಾ
ನೋಪದೇಶಮದಿಶಚ್ಛಿವಃ ॥೩೦॥ ಅಥಭಕ್ತ್ಯಾಮಹಾದೇವಂಪ್ರಣಮ್ಯ
ಮುನಯೋಽವದನ್ । ತ್ವಚ್ಛೇಫಸೋಽಪಿಮಾಹಾತ್ಮ್ಯಮಾವಾಂದ್ರಷ್ಟುಂ
ನಹಿಕ್ಷಮಾಃ ॥೩೧॥ ಸೂರಯೋಽಯತ್ಪ್ರಪಶ್ಯನ್ತಿತದ್ವಿಷ್ಣೋಃಪರಮಂಪದ
ಮ್ । ಇತ್ಯಾದಿವಾಕ್ಯಸನ್ದೋಹಾತ್ತಥಾವ್ಯಾಸಾಷ್ಟಕಸ್ಯಚ ॥೩೨॥ ಸ
ರ್ವಸ್ಯಪೂಜಾರ್ಹಮಿಹೋತ್ತಮಾಙ್ಗಮಿತಿವಾಕ್ಯತಃ। ಲಿಙ್ಗಾಙ್ಕಿತಂಪಶ್ಯಜ
ಗದ್ಭಗಾಙ್ಕಮಿತಿವಾಕ್ಯತಃ ॥೩೩॥ ಮಹಿಮ್ನಃಕಾಲಿಕಾಖಣ್ಡೇಶಿವಸ್ಯೋತ್
ಕೀರ್ತನಾತ್ । ಧರ್ಮಾರ್ಥಕಾಮಮೋಕ್ಷಾಣಾಂಹೇತುಸ್ತಲ್ಲಿಙ್ಗಪೂಜನ
ಮ್ ॥೩೪॥ ತಸ್ಮಾದ್ವಯಂವಿಧಾಯೇಶತವಲಿಙ್ಗಸ್ಯಪೂಜನಮ್ । ಚರಿತಾ
ರ್ಥಾಭವಾಮೇತಿತಸ್ಮಾಲ್ಲಿಙ್ಗಾರ್ಚನಾವಿಧಿಮ್ ॥೩೫॥ ಲಬ್ಧ್ವೋಪದೇಶ
ತಸ್ತಸ್ಮಿನ್ದೇವದಾರುವನೇಶುಭೇ । ಸರ್ವೇಸಂಪೂಜಯಾಮಾಸುಃಶಿವಂತೇ

---

ದ್ಭಕ್ತಿಯಿಂದ ಪೂಜಿಸಿರಿ ಎಂದು ಉಪದೇಶಿಸಿ ॥೨೯॥ ಅವರ ಅದ್ವೈತಮತವನ್ನು
ಬಿಡಿಸಿ, ಶಿವನು ಬೇಗನೆ ಅವರಿಗೆ ಪಶು ಪತಿ ಪಾಶ ಪದಾರ್ಥತ್ರಯವಿಚಾರವುಳ್ಳ ಪಾಶು
ಪತಶಾಸ್ತ್ರವನ್ನುಪದೇಶಿಸಿದನು ॥೩೦॥ ಬಳಿಕ ಮುನಿಗಳು ಪರಶಿವನನ್ನು ಭಕ್ತಿಯಿಂ
ದ ನಮಸ್ಕರಿಸಿ, "ಶಿವನೆ, ನಿನ್ನ ಮೇಢ್ರದ ಮಹತ್ವವನ್ನು ಕಾಣುವುದಕ್ಕೂ ನಾವು
ಸಮರ್ಥರಲ್ಲ ॥೩೧॥ "ವಿಬುಧರುಗಳು ಯಾವವಸ್ತುವನ್ನು ಸಂಲಕ್ಷಿಸುವರೋ ಅ
ದು ವಿಷ್ಣುವಿಗಿಂತಲೂ ಉತ್ಕೃಷ್ಟವಾದಸ್ಥಾನವು" ಎಂಬುದೇ ಮೊದಲಾದ ವಚನ
ಗಳಿಂದಲೂ, ಮತ್ತೂ, ವ್ಯಾಸಾಷ್ಟಕದಲ್ಲಿ "ನಿನ್ನ ಉತ್ತಮವಾದ ಅಂಗವಾಗಿ
ರುವ ಈ ಲಿಂಗವು ಸರ್ವರಿಗೂ ಪೂಜಾಯೋಗ್ಯವಾದುದು" ಎಂದು ಹೇಳಲ್ಪಟ್ಟಿರುವ
ವಚನಾಧಾರದಿಂದಲೂ, "ಜಗತ್ತು ಲಿಂಗಾಂಕಿತವಾಗಿಯೂ ಭಗಾಂಕಿತವಾಗಿಯೂ ಇ
ರುವುದು ನೋಡು" ಎಂದು ಹೇಳಲ್ಪಟ್ಟಿರುವ ವಚನದಿಂದ ಕಾಳಿಕಾಖಂಡದಲ್ಲಿ ಶಿವನ
ಮಹಿಮೆಯು ಉಕ್ತವಾಗಿರುವುದರಿಂದಲೂ, ಆ ಶಿವಲಿಂಗದ ಪೂಜನವು ಧರ್ಮಾರ್ಥಕಾ
ಮ ಮೋಕ್ಷಗಳನ್ನು ಕೊಡುವುದಕ್ಕೆ ಕಾರಣವಾಗಿರುವುದು. ॥೩೪॥ ಅದುಕಾರಣ, ಎ
ಲೈ ಪರಶಿವನೆ, ನಾವು ನಿನ್ನ ಲಿಂಗದ ಪೂಜೆಯನ್ನು ಮಾಡಿ ಧನ್ಯರಾಗುವೆವು" ಎಂದು
ಪ್ರಾರ್ಥಿಸಿ, ಆ ಪರಶಿವನಿಂದ ಲಿಂಗಪೂಜೆಮಾಡತಕ್ಕ ಕ್ರಮವನ್ನು ಉಪದೇಶಮಾಡಿ
ಸಿಕೊಂಡು, ಮಂಗಳಕರವಾದ ಆ ದೇವದಾರುವನದಲ್ಲಿ ಸರ್ವಮುನಿಗಳೂ ಸ್ಥಿರಚಿತ್ತ

ಸುಸಮಾಹಿತಾಃ ॥೪೬॥ ತದಾದಿಶಙ್ಕರಸ್ಯಾಹಿಭೂರ್ಷಾಭೂದಗ್ನಿರಾಯು ಧಮ್ । ತನ್ಮುನಿವ್ರತಭಙ್ಗಾರ್ಥಂಸ್ವೀಕೃತಂಶವಮ್ಭಿನಾತದಾ ॥೪೭॥ ನಗ್ನ ತ್ವಂಸಹಜಂಸ್ಯಾತ್ಕಿಂನಿನ್ದೈಷಾಕಿಮುಶೂಲಿನಃ ।

ಇತ್ಯಸಂಖ್ಯಾತಮಹಾಮಾಹೇಶ್ವರ.......ಶ್ರೀಮಲ್ಲೋಕಾರಾ
ಧ್ಯಮಲ್ಲಿಕಾರ್ಜುನಪಣ್ಡಿತಾರಾಧ್ಯಚರಿತ್ರೇ ವಾದ
ಪ್ರಕರಣೇ ಪರಮೇಶ್ವರಸ್ಯ ವಿಷಧರತ್ವಾಸ
ರ್ಪಾಭರಣತ್ವಾನಲಾಯುಧತ್ವನಗ್ನತ್ವ
ಕಥನಂನಾಮ ಏಕೋನವಿಂ
ಶೋಽಧ್ಯಾಯಃ.

---

## ಅಥ ವಿಂಶೋಽಧ್ಯಾಯಃ.

(ದಕ್ಷಾಧ್ವರಧ್ವಂಸಕಥನಂ)

ಕಿಂಚದಕ್ಷೇಣವಿಧಿವತ್ಕ್ರಿಯಮಾಣಂತಮಧ್ವರಮ್।ತ್ರ್ಯಕ್ಷಃಕಿಮ ರ್ಥಮಹರದಿತ್ಯತ್ರೋತ್ತರಮುಚ್ಯತೇ॥೧॥ದಕ್ಷೋಗರ್ವಾನ್ವಿತೋಭೂತ್ವಾ

---

ರಾಗಿ ಪರಶಿವನನ್ನು ಪೂಜೆಮಾಡಿದರು ॥೪೬॥ ಅದು ಮೊದಲುಗೊಂಡು ಶಿವನಿಗೆ ಸರ್ಪವು ಭೂಷಣವಾಗಿಯೂ ಅಗ್ನಿಯು ಆಯುಧವಾಗಿಯೂ ಏರ್ಪಟ್ಟಿತು. ಆ ಮುನಿಗಳ ವ್ರತದ ಭಂಗವನ್ನು ಮಾಡುವುದಕ್ಕಾಗಿ ಆಗ ಶಿವನು ದಿಗಂಬರತ್ವವನ್ನು ಧರಿಸಿಕೊಂಡಿದ್ದನು. ಅಷ್ಟೇಹೊರತು ಶಿವನಿಗೆ ಬತ್ತಲೆಯಾಗಿರುವುದು ಯಾವಾಗಲೂ ಸ್ವಭಾವವಾಗಿರುವುದೇನು ? ಹೀಗೆ ಅವನು ಸರ್ಪಾಭರಣಾದಿ ವೇಷಧಾರಣೆಮಾಡಿದು ದು ಅವನಿಗೆ ನಿಂದೆಯೇನು ?

ಎಂದು ಶ್ರೀಮತ್ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಪಂಡಿತಾರಾಧ್ಯ ಚರಿತ್ರದಲ್ಲಿ
ವಾದಪ್ರಕರಣದೊಳಗೆ ಪರಶಿವನ ವಿಷಧರತ್ವಾದಿ ಲೀಲೆಗಳನ್ನು
ನಿರೂಪಿಸುವ ೧೯ನೆ ಅಧ್ಯಾಯವು ಸಂಪೂರ್ಣವು.

---

## ೨೦ನೆ ಅಧ್ಯಾಯವು.

(ದಕ್ಷಾಧ್ವರವಿನಾಶಕಥನವು)

ಮತ್ತೂ ಎಲೆ ವಾದಿಯೆ, ದಕ್ಷಬ್ರಹ್ಮನು ವಿಧಿವತ್ತಾಗಿ ಮಾಡುತ್ತಿದ್ದ ಯಜ್ಞ ವನ್ನು ಶಿವನು ಏತಕ್ಕೆ ನಾಶಮಾಡಿದನೆಂದು ನೀನು ಕೇಳುವ ಪ್ರಶ್ನೆಯ ವಿಷಯದಲ್ಲಿ ಉತ್ತರವನ್ನು ಹೇಳುತ್ತೇನೆ, ಕೇಳು:— ॥೧॥ ದಕ್ಷನು ಗರ್ವಿಷ್ಠನಾಗಿ ಯಜ್ಞವನ್ನು

ಯಾಗಂಕರ್ತುಂಸಮುದ್ಯತಃ। ಬ್ರಹ್ಮವಿಷ್ಣ್ವಾದಿಕಾನ್ದೇವಾನ್ಮುನೀನ್ದ್ರಾ ನ್ಸಕಲಾನಪಿ ॥೨॥ ಪುತ್ರೀಸ್ಸರ್ವಾಶ್ಚ ಜಾಮಾತೄನ್ಸಕಲಾನ್ಬಾಂಧವಾನಪಿ। ಆಹ್ವಾಯಭಾಷಾಪ್ರಮುಖಾನಿಖಿಲಾಸ್ಸುರಕಾಮಿನೀಃ ॥೩॥ ಯಜ್ಞದೀಕ್ಷಾಂಪರಿಪ್ರಾಪ್ತುಂವೈಭವಾದುಪಚಕ್ರಮೇ। ತದಾಽಗ್ರತನಯಾತಸ್ಯದಕ್ಷಸ್ಯಶಿವವಲ್ಲಭಾ॥೪॥ ದಾಕ್ಷಾಯಣೀಜಾತಕೋಪಾತಂದಕ್ಷಮವದದ್ವಚಃ। ಆಹೂಯಕಮಲಾಕ್ಷಾದಿಸುರಾನ್ಮುನಿಗಣಾಂಸ್ತಥಾ ॥೫॥ ಸಕಾಮಿನೀಕಾನ್‌ಜಾಮಾತೄನ್‌ಸರ್ವಾನ್ದಕ್ಷವಿಮೋಹತಃ । ಯಜ್ಞೇಶ್ವರಂನಾಹ್ವಯತಿಕಿಂಭವಾನ್ಪರಮೇಶ್ವರಂ ॥೬॥ ಇತ್ಯುಕ್ತಶ್ಶಿವಯಾದಕ್ಷೋಜಾಮಾತರಇವೇತರೇ । ಮಹಾದೇವೋಮಾನಯತಿನಮಾಮಿತಿಮದಾನ್ವಿತಃ ॥೭॥ ಅವಿಚಾರ್ಯಪುರಾಶಮ್ಭೋರಹಂಕಿಂಕರಇತ್ಯದಃ । ಶ್ವಶುರಃಖಲ್ವಹಮಿತಿಗರ್ವೋದ್ರೇಕೇಣಮೂಢಧೀಃ ॥೮॥ ಜಗಾದತ್ವತ್ಪತಿಶ್ಶಂಭುರ್ವಿಪರೀತಚರಿತ್ರಕಃ । ಚರ್ಮಾಮ್ಬರೋಪಿಚವಿಧಿನಿಷೇಧಪರಿವರ್ಜಿತಃ ॥೯॥ ಅಸ್ಥಿ

---

ಮಾಡುವುದಕ್ಕೆ ಪ್ರಯತ್ನಿಸಿದನು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳನ್ನೂ, ಸರ್ವಮುನಿಶ್ರೇಷ್ಠರುಗಳನ್ನೂ, ತನ್ನ ಎಲ್ಲಾ ಹೆಣ್ಣುಮಕ್ಕಳನ್ನೂ, ಎಲ್ಲಾ ಅಳಿಯಂದಿರನ್ನೂ, ನಂಟರುಗಳನ್ನೂ, ಸರಸ್ವತಿ ಮೊದಲಾದ ಸಕಲ ದೇವತಾಸ್ತ್ರೀಯರನ್ನೂ ಕರೆಯಿಸಿ ॥೩॥ ತಾನು ಸಡಗರದಿಂದ ಯಜ್ಞದೀಕ್ಷೆಯನ್ನು ಹೊಂದುವುದಕ್ಕೆ ಪ್ರಾರಂಭಿಸಿದನು. ಆಗ ಆ ದಕ್ಷಬ್ರಹ್ಮನ ಹಿರಿಯಮಗಳೂ ಶಿವನ ಪತ್ನಿಯೂ ಆದ ದಾಕ್ಷಾಯಣಿಯು ಬಂದು, ಕೋಪಗೊಂಡವಳಾಗಿ, ಆ ದಕ್ಷನನ್ನು ಕುರಿತು ಹೀಗೆ ಹೇಳಿದಳು:— ಎಲೈ ದಕ್ಷಬ್ರಹ್ಮನೆ, ನೀನು ಈ ಯಜ್ಞಕ್ಕೆ ವಿಷ್ಣು ಮೊದಲಾದ ದೇವತೆಗಳನ್ನೂ, ಋಷಿಗಳ ಸಮೂಹವನ್ನೂ, ಹೆಂಡತಿಯರೊಡನೆ ಕೂಡಿದ ಎಲ್ಲಾ ಅಳಿಯಂದಿರನ್ನೂ ಸಹ ಕರೆಯಿಸಿ, ಅಜ್ಞಾನದಿಂದ ಯಜ್ಞಾಧಿಪತಿಯಾದ ಪರಮೇಶ್ವರನನ್ನು ಮಾತ್ರ ಏತಕ್ಕೆ ಕರೆಯಿಸಲಿಲ್ಲ? ॥೬॥ ಎಂದು ಕೇಳಲು, ಉಳಿದ ಅಳಿಯಂದಿರಂತೆ ಶಿವನು ಮಾವನಾದ ನನ್ನನ್ನು ಸನ್ಮಾನಮಾಡುವುದಿಲ್ಲವಲ್ಲಾ! ಎಂಬ ಕೋಪದಿಂದ ಕೂಡಿದವನಾಗಿಯೂ ॥೭॥ ಪೂರ್ವದಲ್ಲಿ ಶಿವನಿಗೆ ನಾನು ಸೇವಕನಾಗಿದ್ದೆನೆಂಬುದನ್ನು ವಿಚಾರಮಾಡದೆಯೂ, ಮೂಢಮತಿಯಾದ ಆ ದಕ್ಷನು ಶಿವನಿಗೆ ನಾನು ಮಾವನಲ್ಲವೆ? ಎಂಬ ಅಹಂಕಾರಾತಿಶಯದಿಂದ ॥೮॥ ಹೀಗೆ ಹೇಳಿದನು— "ನಿನ್ನ ಗಂಡನಾದ ಶಿವನು ವಿಪರೀತವಾದ ನಡತೆಯುಳ್ಳವನು. ಚರ್ಮಾಂಬರಧಾರಿಯು; ವಿಧಿನಿಷೇಧಗಳಿಲ್ಲದವನು ॥೯॥ ಮೂಳೆಗಳ ಸರವನ್ನು ಹಾಕಿಕೊಂಡಿರುವವನು; ಕೆಟ್ಟ

ಧಾರ್ಗ್ಯಪವಿತ್ರಾಂಗಸ್ಸರ್ಪಸಸನ್ದೋಹಸಂವೃತಃ । ಪಿನಾಕೀಯಾಗಯೋಗ್ಯೋನೇತ್ಯವಮಾನಪುರಸ್ಸರಮ್॥೧೦॥ ಶ್ರುತ್ವಾನಿನ್ದಾಂಮಹೇಶಸ್ಯತತ್ಕ್ಷಣಾತ್ಕುಪಿತಾಶಿವಾ । ಆತ್ಮಕೋಪಾನಲೇಚಕ್ರೇತನುಮಾಹುತಿಮಾತ್ಮನಃ ॥೧೧॥ ಕಂಪಮಾನೇಷುವಿಷ್ಣ್ವಾದಿದೇವೇಷುಮಹತೋಭಯಾತ್ । ಹರನಿನ್ದಾಶ್ರುತಿದ್ರೋಹಶಾನ್ತ್ಯೈಕೇವಲಮೀಶ್ವರೀ ॥೧೨॥ ಭಸ್ಮೀಬಭೂವಜನಕಗೀರ್ವಾಣಮುನಿಸಂಹತಿಮ್ । ಭಸ್ಮೀಕರ್ತುಮಶಕ್ತಾನ್ಯನ ದೃಷ್ಟ್ವಾಹರಹರೇತಿಚ ॥೧೩॥ ವದನ್ತೋಗೌತಮಮುನಿದಧೀಚ್ಯಾದ್ಯಾಸ್ತಪೋಧನಾಃ। ಸಂಜಾತಕೋಪಾಸ್ಸಕಲಾಸ್ಸಂಪ್ರೋಚುರ್ಯಜ್ಞಮಂಟಪೇ॥ ಶಿವಬಾಹ್ಯಃಕ್ರತುಸ್ಸತ್ಯಂನಯೋಗ್ಯೋದ್ರಷ್ಟುಮವ್ಯಯಮ್ । ದಕ್ಷೋಪ್ಯಯಂಶಿವದ್ರೋಹೀನಾರ್ಹಸ್ಸಂಭಾಷಿತುಂತಥಾ ॥೧೪॥ ಕಥಂತದಿತಿಚೇನ್ನಿತ್ಯಂನಮೋರುದ್ರಾಯಮನ್ಯವೇ । ಇತಿಪ್ರಣಾಮಮೃಗ್ವೇದೇಭಕ್ತ್ಯಾರುದ್ರಾಯಕುರ್ವತಿ ॥೧೫॥ ಯಜುರ್ವೇದೇಚತದ್ವದ್ಧಿನಮೋರುದ್ರಾಯಮ

---

ದೇಹವುಳ್ಳವನು; ಸರ್ಪಗಳ ಸಮೂಹವನ್ನು ದೇಹಕ್ಕೆ ಸುತ್ತಿಕೊಂಡಿರುವವನು. ಅದುಕಾರಣ ಅವನು ಯಾಗಕ್ಕೆ (ಪೂಜೆಗೆ) ಯೋಗ್ಯನಾದವನಲ್ಲ'' ಎಂದು ಅವಮಾನಪೂರ್ವಕವಾಗಿ ನುಡಿಯಲು, ॥೧೦॥ ಈ ಶಿವನಿಂದೆಯನ್ನು ದಾಕ್ಷಾಯಣಿಯು ಕೇಳಿ, ಕೋಪಗೊಂಡವಳಾಗಿ, ಕೂಡಲೇ ತನ್ನ ಕೋಪಾಗ್ನಿಯಲ್ಲಿ ತನ್ನ ದೇಹವನ್ನು ಆಹುತಿಮಾಡಿದಳು ॥೧೧॥ ವಿಷ್ಣ್ವಾದಿ ದೇವತೆಗಳು ಅತ್ಯಂತ ಭಯದಿಂದ ನಡುಗುತ್ತಿರಲಾಗಿ, ಭವಾನಿಯು ಶಿವನಿಂದೆಯನ್ನು ಕೇಳಿದ ಪಾಪದ ಶಾಂತಿಗಾಗಿಯೇ ತಾನು ಭಸ್ಮಭೂತಳಾದಳೇ ಹೊರತು, ಶಿವನಿಂದಕನಾದ ಆ ತನ್ನ ತಂದೆಯನ್ನೂ ಅಂಥವನ ಯಜ್ಞಕ್ಕೆ ಬಂದಿದ್ದ ದೇವತೆಗಳನ್ನೂ ಋಷಿಸ್ತೋಮವನ್ನೂ ನೋಡಿದ ಮಾತ್ರದಿಂದಲೇ ಸುಟ್ಟುಬೂದಿಮಾಡಲಸಮರ್ಥಳಾಗಿ ತಾನು ಸುಟ್ಟುಹೋದವಳಲ್ಲ. ಹೀಗೆ ಭವಾನಿಯು ಭಸ್ಮೀಭೂತಳಾದುದನ್ನು ನೋಡಿ ಗೌತಮ-ದಧೀಚಿ ಮೊದಲಾದ ಸಕಲ ಮಹರ್ಷಿಗಳೂ ಹರಹರಾ! ಎಂದು ನುಡಿದರು,—॥೧೩॥ ಶಿವನಿಲ್ಲದಿರುವ ಈ ಯಜ್ಞವು ನೋಡುವುದಕ್ಕೂ ಯೋಗ್ಯವಾದುದಲ್ಲ. ಈಮಾತು ಸತ್ಯವು. ಶಿವದ್ರೋಹಿಯಾದ ಈ ದಕ್ಷನುಕೂಡ ಹಾಗೆಯೇ ಸಂಭಾಷಿಸುವುದಕ್ಕೂ ಯೋಗ್ಯನಲ್ಲ ॥೧೪॥ ಅದು ಹೇಗೆಂದರೆ—'' ನಮೋರುದ್ರಾಯಮನ್ಯವೇ '' ಎಂಬ ವಚನದಿಂದ ಋಗ್ವೇದವು ಯಾವಾಗಲೂ ಭಕ್ತಿಯಿಂದ ರುದ್ರನಿಗೆ ನಮಸ್ಕಾರವನ್ನು ಮಾಡುತ್ತಿರಲು॥೧೫॥ ಅದರಂತೆಯೇ ಯಜುರ್ವೇದವುಕೂಡ '' ನಮಸ್ತೇರುದ್ರಮನ್ಯವೇ '' ಎಂದು ಹೇಳಿ

ಸ್ಯವೇ । ಇತಿಪ್ರೀತ್ಯಾನಮಸ್ಕಾರಂವಿತನ್ವತಿಕಪರ್ದಿನೇ ॥೧೭॥ ರುದ್ರಾ
ಯತೇರಸವತೇಃನಮಇತ್ಯಜ್ಗಜಾರಯೇ । ನಮಸ್ಕೃತಿಂವಿದಧತಿಸಾಮವೇ
ದೇಪಿಸನ್ತತಮ್॥೧೮॥ಅಥರ್ವವೇದೇರುದ್ರಾಯನಮೋಅಸ್ತ್ವಿತಿಶೂಲಿನೇ।
ಕುರ್ವಾಣೇಪ್ರಣತಿಂಸಮ್ಯಗನುರಾಗೇಣಸರ್ವದಾ ॥೧೯॥ ಇತರಾಭ್ಯೋ
ದೇವತಾಭ್ಯೋಜಗತ್ಯಾಮ್ನಾಯಸಂಹತೌ ।ಕೃತಪ್ರಣಾಮಸೂಕ್ತಾನಿಸ
ನ್ತಿಕಿಂವದತಾಧುನಾ ॥೨೦॥ ಶ್ರುತ್ಯಾಚಯಸ್ಮೈನಮಸ್ತಚ್ಛಿರಇತ್ಯನಯಾತ
ಥಾ।ಪುನರ್ಯಸ್ಮೈನಮಸ್ತಸ್ಮಾ ಇತಿಶ್ರುತ್ಯಾಽನ್ಯಯಾಪಿಚ॥೨೧॥ ನಮಸಾಮ
ಧಿಪಸ್ತದ್ವನ್ಮೋಕ್ಷಸೌಖ್ಯಸ್ಯಚಾಶ್ರಯಃ।ಏಕಏವಮಹಾದೇವೋಫಾಲಾ
ಕ್ಷಃಕಥಿತೋನಕಿಮ್ ॥೨೨॥ ದತ್ತಂನಮಃಕಿಮಪಿಶುಶ್ರುಮದೇವತಾಭ್ಯ
ಸ್ತ್ವಾಮನ್ತರೇಣನಮಸಾಮವಸಾನಭೂಮಿಮ್ । ತಾಸ್ತದ್ಗೃಹೀತುಮನ
ಲಂನಹಿಕಶ್ಚಿದೀಷ್ಟೇಚೋರೋಪನೀತಮಿವಧಾರಯಿತುಂಕಿರೀಟಮ್ ॥೨೩
ಇತ್ಯಸ್ಮದ್ಧರದತ್ತಾರ್ಯವಚನಾನ್ಮಕುಟಂವರಮ್। ಚೋರೈರ್ಧಾರಯಿತುಂ

---

ಪ್ರೀತಿಯಿಂದ ಪರಶಿವನಿಗೆ ನಮಸ್ಕಾರವನ್ನು ಮಾಡುತ್ತಿರಲು, “ರುದ್ರಾಯತೇರಸವ
ತೇನಮಃ” ಎಂದು ಸಾಮವೇದವುಕೂಡ ಯಾವಾಗಲೂ ಶಿವನಿಗೆ ನಮಸ್ಕಾರವನ್ನು
ಮಾಡುತ್ತಿರಲು ॥೧೮॥ ಅಥರ್ವಣವೇದವುಕೂಡ “ರುದ್ರಾಯನಮೋಅಸ್ತು” ಎಂ
ಬುದಾಗಿ ಹೇಳಿ ಪರಶಿವನಿಗೆ ಪ್ರೀತಿಯಿಂದ ಚೆನ್ನಾಗಿ ನಮಸ್ಕಾರವನ್ನು ಮಾಡುತ್ತಿರ
ಲು ॥೧೯॥ ಲೋಕದಲ್ಲಿ ಹೀಗೆ ವೇದಗಳೊಳಗೆ ಇತರ ದೇವತೆಗಳಿಗೆ ನಮಸ್ಕಾರವನ್ನು
ಮಾಡಿರುವ ಸೂಕ್ತಿಗಳೆಲ್ಲಾದರೂ ಇರುವುವೆ ? ಹೇಳು ॥೨೦॥ “ಯಸ್ಮೈನಮಸ್ತ
ಚ್ಛಿರಃ” ಎಂಬ ಶ್ರುತಿವಚನದಿಂದಲೂ, ಮತ್ತೂ “ಯಸ್ಮೈನಮಸ್ತಸ್ಮೈ” ಎಂಬ
ಬೇರೊಂದು ಶ್ರುತಿವಚನದಿಂದಲೂ ಸಹ ॥೨೧॥ ಶಿವನೊಬ್ಬನೇ ನಮಸ್ಕಾರಮಾಡಿಸಿ
ಕೊಳ್ಳುವುದಕ್ಕೆ ಅಧಿಪತಿಯೆಂಬುದಾಗಿಯೂ, ಮುಕ್ತಿಸೌಖ್ಯಕ್ಕೆ ಆಶ್ರಯನೆಂಬುದಾ
ಗಿಯೂ ಹೇಳಲ್ಪಟ್ಟಿರುವನಲ್ಲವೆ ? ॥೨೨॥ ಎಲೈ ಪರಶಿವನೆ, ನಮಸ್ಕಾರಮಾಡಿಸಿಕೊ
ಳ್ಳುವುದಕ್ಕೆ “ಹಕ್ಕುದಾರ” ನಾದ ನಿನ್ನಹೊರತು ಇತರ ದೇವತೆಗಳಿಗೋಸ್ಕರ ನ
ಮಸ್ಕಾರವು ಅರ್ಪಿಸಲ್ಪಟ್ಟಿರುವುದೆಂದು ಎಲ್ಲೋಸ್ವಲ್ಪ ಕೇಳುತ್ತೇವೆ, ಆದರೆ ಆ ಶಿ
ವೇತರದೇವತೆಗಳು ಅಂಥ ನಮಸ್ಕಾರವನ್ನು ಸ್ವೀಕರಿಸುವುದಕ್ಕೆ ಸಮರ್ಥರಲ್ಲ. ಏಕೆಂ
ದರೆ-ಕಳ್ಳನು ಅಪಹರಿಸಿಕೊಂಡುಹೋದ ರಾಜಕಿರೀಟವನ್ನು ಧರಿಸಿಕೊಳ್ಳುವುದಕ್ಕೆ
ಯಾರೂಕೂಡ ಅಪೇಕ್ಷಿಸಲಾರರಲ್ಲವೆ ? ॥೨೩॥ ಎಂದು ಹರದತ್ತಾಚಾರ್ಯರು ಹೇಳಿ
ರುವ ವಚನದಪ್ರಕಾರ ಕಿರೀಟವನ್ನು ರಾಜರಹೊರತು ಕಳ್ಳರು ಧರಿಸಿಕೊಳ್ಳುವುದಕ್ಕೆ

ಶಕ್ಯಂಕಿಂಸ್ಯಾದ್ಭೂಮಿಶ್ವರಾನ್ವಿನಾ ||೨೪|| ಶಿವಂವಿನೇತರೇದೇವಾಸ್ತ ಥೇಶಾ ನಮಸ್ಕಾಂಕಿಮು । ಪರಾತ್ಪರತರೋಬ್ರಹ್ಮಾ ಪರಾತ್ಪರತರೋಹ ರಿಃ ||೨೫|| ಪರಾತ್ಪರಂತಯೋರ್ಶೈವಮಿತ್ಯುಪನಿಷದುಕ್ತಿತಃ। ಶಿವಏಕೋ ಧ್ಯೇಯಇತಿಪೂರ್ವಕಾತ್ತದ್ವದೇವಹಿ ||೨೬|| ಸರ್ವಮನ್ಯತ್ಪರಿತ್ಯಜ್ಯೇ ತ್ಯನ್ತ್ಯಾಚ್ಚಾಥರ್ವವಾಕ್ಯತಃ । ಕಿಮರ್ಹಂಸ್ಯಾಚ್ಛಿವಾದನ್ಯದೇವತಾಪೂ ಜನಂಭುವಿ ||೨೭|| ಅಥರ್ವಣಸ್ಯತದ್ವಾಕ್ಯಮಾರ್ಯೈರೇವಂಹಿಪಠ್ಯತೇ । ಶಿವಏಕೋಶಿವಂಕರಸ್ಸರ್ವಮನ್ಯತ್ಪರಿತ್ಯಜೇತ್ ||೨೮|| ಕಿಂಚವೇದೇ ಷುರಾಜಾನಮಧ್ವರಸ್ಯೇತಿಕೀರ್ತನಾತ್ । ರುದ್ರಂಹುವೇಮೇತ್ಯನ್ಯಸ್ಯಾಂ ಶೃತೌಸಮ್ಯಕ್ಸಮರ್ಥನಾತ್ ||೨೯|| ಶೃತ್ಯಾಮನ್ಯತ್ರೇದಮಸ್ತುಹವ್ಯ ಮಿತ್ಯನುಕೀರ್ತನಾತ್ । ಯಜ್ಞೇಶ್ವರಸ್ತ್ವಮಿತಿಚಹರದತ್ತಾಗ್ರ್ಯವಾಕ್ಯ ತಃ ||೩೦|| ಯಜ್ಞೇಶ್ವರೋಹವ್ಯಕವ್ಯಸಮಸ್ತೇತ್ಯಾದಿವಾಕ್ಯತಃ । ಸ

---

ಶಕ್ಯವಾದೀತೆ ? ||೨೪|| ಅದರಂತೆಯೇ ಶಿವನಹೊರತು ಇತರದೇವತೆಗಳು ನಮಸ್ಕಾ ರವನ್ನು ಸ್ವೀಕರಿಸುವುದಕ್ಕೆ ಅಧಿಪತಿಗಳಾಗುವರೆ ? " ಬ್ರಹ್ಮನು ಪರಕ್ಕಿಂತಲೂ ಪರ ನಾದವನು, ವಿಷ್ಣುವೂ ಪರಕ್ಕಿಂತಲೂ ಪರನಾದವನು. ||೨೫|| ಶಿವಾಭಿಧ ಪರಬ್ರ ಹ್ಮವು ಅವರಿಬ್ಬರಿಗಿಂತಲೂ ಪರಾತ್ಪರವಾದುದು " ಎಂದು ಉಪನಿಷದ್ವಚನವಿರುವು ದರಿಂದಲೂ, ಅದರಂತೆಯೇ "ಉಳಿದೆಲ್ಲವನ್ನೂ ಬಿಟ್ಟು ಶಿವನೊಬ್ಬನೇ ಧ್ಯಾನಿಸಲ್ಪಡುವು ದಕ್ಕೆ ಯೋಗ್ಯನಾದವನು " ಎಂಬುದೇ ಮೊದಲಾದ ಅಥರ್ವವೇದವಚನವಿರುವುದರಿಂ ದಲೂ, ಭೂಮಿಯಲ್ಲಿ ಶಿವನಹೊರತು ಇತರದೇವತೆಗಳನ್ನು ಪೂಜಿಸುವುದು ಉಚಿತ ವೆನಿಸಿಕೊಳ್ಳುವುದೆ ? ||೨೭|| ಅಥರ್ವಣವೇದದಲ್ಲಿ ಪೂರ್ವೋಕ್ತಾರ್ಥವನ್ನು ಕೊಡು ವ ವಚನವನ್ನು ಆರ್ಯರು ಹೀಗೆ ಹೇಳುತ್ತಾರೆ-" ಶಿವಏಕೋಧ್ಯೇಯಶ್ಶಿವಂಕರಸ್ಸರ್ವ ಮನ್ಯತ್ಪರಿತ್ಯಜ್ಯ " ಎಂಬುದಾಗಿ ||೨೮|| ಮತ್ತೂ ವೇದಗಳಲ್ಲಿ " ಯಜ್ಞಕ್ಕೆ ಅಧಿ ಪತಿಯಾದ ಶಿವನನ್ನು " ಎಂದು ಹೇಳಿರುವುದರಿಂದಲೂ, ಮತ್ತೊಂದು ವೇದವಚನದ ಲ್ಲಿ, " ರುದ್ರನನ್ನು ಕುರಿತು ಹೋಮಮಾಡುವೆವು " ಎಂದು ಹೇಳಿ ಚೆನ್ನಾಗಿ ಪೂ ಜಾರ್ಹತ್ವವನ್ನು ಶಿವನಿಗೆ ಸಮರ್ಥನಮಾಡಿರುವುದರಿಂದಲೂ, ವೇದದಲ್ಲಿ ಮತ್ತೊಂ ದುಕಡೆ " ಶಿವನೇ, ನಿನಗೆ ಈ ಹವ್ಯವು ಸಮರ್ಪಿತವಾಗಲಿ " ಎಂದು ಹೇಳಲ್ಪಟ್ಟಿರು ವುದರಿಂದಲೂ, ಹರದತ್ತಾಚಾರ್ಯರು " ನೀನು ಯಜ್ಞಾಧಿಪತಿಯಾಗಿದ್ದೀಯೆ " ಎಂದು ಹೇಳಿರುವುದರಿಂದಲೂ ||೩೦|| " ಹವ್ಯಕವ್ಯಾದಿ ಸಮಸ್ತಕಾರ್ಯಗಳಲ್ಲೂ ನೀನೇ ಯ

ಮ್ಯಕ್ಜ್ಞಾತ್ವಾಪ್ಯವಿಜ್ಞಾಯಪ್ರೋಕ್ತೇಸತಿಮುಖಾದಿಕಮ್ ||೪೧|| ಕ್ರಿಯಾ
ಕದಮ್ಬಕಂಸಾಙ್ಗಂಭವೇತ್ಕಿಂಜಗತೀತಲೇ | ಮನ್ತ್ರಾ ಊಚುಸ್ಸುರಾ
ಯೂಯಂತಮೋಪಹತಚೇತಸಃ ||೪೨|| ಯೇನಪ್ರಥಮಭಾಗಾರ್ಹಂನ
ಯಜಧ್ವಂಮಹೇಶ್ವರಮ್| ಇತಿವಾಕ್ಯಾಚ್ಚದೇವಾನಾಂಮಧ್ಯೇಽನ್ಯಃಪರ
ಮೇಶ್ವರಾತ್ ||೪೩|| ಯಜ್ಞೇಪ್ರಥಮಭಾಗಾರ್ಹೋವಿದ್ಯತೇಕಿಂಯಥಾ
ರ್ಥತಃ | ಪೂಜ್ಯೇಷುವಿದ್ಯಮಾನೇಷುಯಜ್ಞೋಽಪೂಜ್ಯೈಸ್ಸಮನ್ವಿತಃ ||
ಪೂಜ್ಯೋಭವತಿಕಿಂದಕ್ಷೋದುರ್ಬುದ್ಧಿರ್ನಹಿಸಂಶಯಃ | ಇತ್ಯೇವಂಕಥ
ಯಂತಸ್ತೇದಕ್ಷಸ್ಯಚದುರಾತ್ಮನಃ ||೪೪|| ಅಧ್ವರಸ್ಯಾಸ್ಯಾಭಿಚಾರೋಜಾ
ಯತಾಮವಿಲಮ್ಬಿತಮ್ | ತಥಾಭವತುಸರ್ವಾಸಾಂಶೃತೀನಾಂಶಕ್ತಿಹೀ
ನತಾ ||೪೫|| ವಿಷ್ಣ್ವಾದೀನಾಂಪರಿಭವೋದೇವಾನಾಮಸ್ತುದುಸ್ಸಹಃ |
ಮನ್ತ್ರಾಣಾಂಚಫಲಪ್ರಾಪ್ತಿಹತಾಯಾಮಖಿಲಾದ್ವಿಜಾಃ ||೪೬|| ಪಾ
ಷಣ್ಡಿನೋಭಕ್ತಿಬಾಹ್ಯಾಮುಕ್ತಿಮಾರ್ಗಪರಿಚ್ಯುತಾಃ | ವಿರುದ್ಧಚರಿತಾ
ಭ್ರಷ್ಟಾಶ್ಚಾನ್ಯವೇಷಸಮನ್ವಿತಾಃ ||೪೭|| ಭವನ್ತ್ವಿತಿರುಷಾಶಪ್ತ್ವಾನಿರ್ಯ

---

ಜ್ಞಾಧಿಪತಿಯಾಗಿರುವ " ಎಂದು ಹೇಳಲ್ಪಟ್ಟಿರುವುದರಿಂದಲೂ, ಲೋಕದಲ್ಲಿ ಚೆನ್ನಾಗಿ
ತಿಳಿದೇ ಆಗಲಿ ತಿಳಿಯದೆಯೇ ಆಗಲಿ ಹೇಳಿಬಿಟ್ಟರೆ ಯಜ್ಞಾದಿಕಾರ್ಯಸಮೂಹವು ಸಾಂ
ಗವಾಗುವುದೆ ? ಎಲೆ ದೇವತೆಗಳೆ ! ನೀವು ಅಜ್ಞಾನಾವೃತವಾದ ಮನಸ್ಸುಳ್ಳವರು, ಏ
ಕೆಂದರೆ-ಅಗ್ರಹವಿರ್ಭಾಗಕ್ಕೆ ಅರ್ಹನಾದ ಪರಮೇಶ್ವರನನ್ನು ಪೂಜಿಸದೆ ಯಿರುವಿರಿ
ಎಂದು ಮಂತ್ರಾಧಿದೇವತೆಗಳು ನುಡಿದರು " ಎಂಬ ವಾಕ್ಯವಿರುವುದರಿಂದಲೂಸಹ
ದೇವತೆಗಳ ಮಧ್ಯದಲ್ಲಿ ಯಜ್ಞದ ಅಗ್ರಹವಿರ್ಭಾಗಕ್ಕೆ ಅರ್ಹನಾದವನು ಪರಮೇಶ್ವ
ರನ ಹೊರತು ಮತ್ತಾವನಾದರೂ ನಿಜವಾಗಿರುವನೆ ? ಪೂಜ್ಯರಾದವರುಗಳು ಇರು
ತ್ತಿರಲಾಗಿ ಅಪೂಜ್ಯರನ್ನು ಕೂಡಿಕೊಂಡು ನಡೆದ ಯಜ್ಞವು ಪೂಜ್ಯವಾಗುವುದೆ ? ದ
ಕ್ಷನು ದುರ್ಬುದ್ಧಿಯುಳ್ಳವನೇಸರಿ. ಅದಕ್ಕೆ ಸಂಶಯವಿಲ್ಲ ಎಂಬುದಾಗಿ ಆ ಋಷಿಗ
ಳೆಲ್ಲರೂ ಹೇಳಿದವರಾಗಿ, ಎಲೆ ದಕ್ಷನೆ, ದುರಾತ್ಮನಾದ ನಿನಗೂ ||೪೪|| ನಿನ್ನ ಈ
ಯಜ್ಞಕ್ಕೂ ಬೇಗನೆ ಕೇಡುಂಟಾಗಲಿ; ಮತ್ತೂ ಸಕಲವೇದಗಳಿಗೂ ಶಕ್ತಿಹೀನತ್ವವುಂ
ಟಾಗಲಿ, ||೪೫|| ವಿಷ್ಣು ಮೊದಲಾದ ದೇವತೆಗಳಿಗೆ ಸಹಿಸಲಾಗದ ತಿರಸ್ಕಾರವುಂಟಾ
ಗಲಿ, ಮಂತ್ರಗಳ ಸಿದ್ಧಿಯಿಲ್ಲದೆ ಹೋಗಿ ಸಕಲ ಬ್ರಾಹ್ಮಣರೂ ||೪೬|| ಪಾಷಂಡಿಗ
ಳೂ ಭಕ್ತಿಹೀನರೂ ಮುಕ್ತಿಯ ದಾರಿತಪ್ಪಿದವರೂ, ದುರಾಚಾರರೂ,ಸನ್ಮಾರ್ಗಭ್ರಷ್ಟ
ರೂ, ವೇಷಾಂತರಧಾರಿಗಳೂ ಆಗಲಿ ||೪೭|| ಎಂದು ಕೋಪದಿಂದ ಶಪಿಸಿ, ಯಜ್ಞ

ಯುರ್ಯಜ್ಞಮಂಟಪಾತ್ । ವೃತ್ತಾಂತಮೇತದ್ವಿಜ್ಞಾಯ ಕುಪಿತೋಽಂತಕ
ಕೃಂತನಃ॥೩೯॥ ವೀರಭದ್ರಂ ಕ್ರೂರತರಂ ನರಸಿಂಹವಿದಾರಕಮ್ । ವೀರಾ
ವತಾರಂ ನಿರ್ನಿದ್ರಂ ಪ್ರೇಷಯಾಮಾಸ ಸತ್ವರಮ್ ॥೪೦॥ ವೀರಭದ್ರಗಣಶ್ರೇ
ಷ್ಠಸೇವಿತೇಽಸ್ಮಿನ್ ಜಯೋತ್ತರೇ । ಶ್ರೀವೀರಭದ್ರೇ ಸಹಸಾ ಸಮಾಗಚ್ಛತಿ ತ
ತ್ಕ್ಷಣಾತ್ ॥೪೧॥ ದಕ್ಷಾಧ್ವರಧ್ವಂಸನೋದ್ಯತ್ಕ್ರೋಧಸ್ಫುರಣಜನ್ಮ
ನಃ । ಲಲಾಟತಟತೀವ್ರೋಲ್ಕೋತ್ಕಟಾಗ್ನೇಶ್ಚಟುಲಾರ್ಚಿಷಾಮ್ ॥೪೨॥
ಪಟಲೇಷು ಸ್ಫುಟತರೋದ್ಭಟಾಗ್ನಿಕಣಸಂಕುಲೈಃ । ಭಸ್ಮೀಭೂತಾಸ್ವೇಕ
ದೈವ ಯಜ್ಞಶಾಲಾಸು ಸರ್ವಶಃ ॥೪೩॥ ಮಹಾನಾದಂ ಭೂತಗಣಾಸ್ತದಾ
ಕೃತ್ವಾಽತಿಹರ್ಷತಃ । ಯೂಪಸ್ತಂಭೇಷು ತದ್ಬೋತ್ರ್ಯಾನ್ ಪ್ರಬಧ್ಯ ಪಶು
ಶರಜ್ಜುಭಿಃ ॥೪೪॥ ವಿಕ್ಷಿಪ್ಯ ಗಂಗಾಸಲಿಲೇ ತ್ರೇತಾಗ್ನೀನ್ ಯಾಗಘೋಟಕಾನ್ ।
ತತ್ಸದಃ ಕ್ಷೋಭಯಾಮಾಸುರ್ಗಣಾಸ್ತದ್ಭದ್ರರೋಮಜಾಃ ॥೪೫॥ ಹೋ
ಮದ್ರವ್ಯವಿಧಿತ್ಸೂಂಸ್ತತ್ಸದಸ್ಯಾನ್ ಗಣನಾಯಕಾಃ । ಪ್ರಗೃಹ್ಯ ಮೂಷಕ

---

ಮಂಟಪವನ್ನು ಬಿಟ್ಟು ಹೊರಟುಹೋದರು. ಈ ಸುದ್ದಿಯನ್ನು ಕೇಳಿ ಪರಶಿವನು
ಕೋಪಗೊಂಡನು ॥೩೯॥ ಅತ್ಯಂತಕ್ರೂರನಾದ ನೃಸಿಂಹನನ್ನು ಸೀಳಿದ ವೀರಾವ
ತಾರವನ್ನು ಮಾಡಿದ್ದ-ಒಳ್ಳೆಯ ಹುರುಪುಳ್ಳ-ವೀರಭದ್ರೇಶನನ್ನು ಬೇಗನೆ ಕಳುಹಿಸಿದ
ನು. ॥೪೦॥ ಶೌರ್ಯಮಾಂಗಲ್ಯಸಮೇತರಾದ ಗಣಶ್ರೇಷ್ಠರಿಂದ ಸೇವಿಸಲ್ಪಡುತ್ತಿರುವ
ವನೂ, ಉತ್ತರೋತ್ತರಜಯವುಳ್ಳವನೂ ಆದ ಶ್ರೀವೀರಭದ್ರೇಶ್ವರನು ಬೇಗನೆ ಹೊರ
ಟುಬರಲಾಗಿ, ಆ ಕೂಡಲೇ ॥೪೧॥ ದಕ್ಷಯಾಗವನ್ನು ನಾಶಮಾಡಬೇಕೆಂಬ ಅತ್ಯಂ
ತಕೋಪದಿಂದ ಉಬ್ಬಿ ಹೊರಹೊರಟ ತೀಕ್ಷ್ಣವಾದ ಕೆಂಡಗಳುಳ್ಳ ಹಣೆಗಣ್ಣಿನ ಬೆಂ
ಕಿಯ ಜ್ವಾಲೆಗಳ ಸಮೂಹದಲ್ಲಿ ಹಾರಾಡುತ್ತಿರುವ ಕಿಡಿಗಳ ಸಮೂಹದಿಂದ ಯಜ್ಞ
ಮಂಟಪಗಳೆಲ್ಲವೂ ಎಲ್ಲಾಕಡೆಗೂ ಒಂದೇಆವೃತ್ತಿ ಸುಟ್ಟುಬೂದಿಯಾಗಲಾಗಿ, ॥೪೩॥
ಆಗ ವೀರಭದ್ರೇಶನ ರೋಮಗಳಿಂದ ಹುಟ್ಟಿದ ಭೂತಗಣವೆಲ್ಲವೂ ಅತ್ಯಂತಹರ್ಷದಿಂದ
ಘೋಷವನ್ನು ಮಾಡಿ, ಪಶುವನ್ನು ಕಟ್ಟತಕ್ಕ ಯೂಪಸ್ತಂಭದಲ್ಲಿ ಹೋತೃಗಳನ್ನು ದ
ರ್ಭೆಯ ದಾರಗಳಿಂದ ಬಿಗಿದು ಕಟ್ಟಿ ॥೪೪॥ ತ್ರೇತಾದಿಅಗ್ನಿಗಳನ್ನೂ ಯಜ್ಞೀಯಪಶುಗ
ಳಾಗಿದ್ದ ಕುದುರೆಗಳನ್ನೂ ಸಹ ಗಂಗಾನದಿಗೆ ಹಾಕಿ, ಆ ಸಭೆಯನ್ನು ಹಾಳ್ಮಾಡಿಬಿಟ್ಟ
ರು. ॥೪೫॥ ಮತ್ತೂ ಗಣಶ್ರೇಷ್ಠರುಗಳು ಹೋಮಪರಿಕರವನ್ನು ಮಾಡುತ್ತಿದ್ದ ಅ
ಲ್ಲಿನ ಸಭಿಕರನ್ನು ಹಿಡಿದುಕೊಂಡು, ಇಲಿಗಳನ್ನು ಬಡಿಯುವಂತೆ ಭೂಮಿಯಮೇಲೆ ಕೆ

ಚಯಾಸಿವಜಘ್ನುರ್ಮಹೀತಲೇ ॥೪೬॥ ಗೃಹೀತ್ವಾ ಭೂತವೇತಾಳಗಣಾ ದೇವಾಙ್ಗನಾಕುಲಮ್ । ಅಧ್ವಂಸಂತಮಹೋದ್ಧತ್ಯಾ ಜಾರಾ ಇವ ಕುಲಸ್ತ್ರಿಯಃ ॥೪೭॥ ಅಥ ದೇವೋ ವೀರಭದ್ರಃ ಪಶೂನ್ ಗೋಪಾಲಕೋ ಯಥಾ । ವಿದ್ರಾವ್ಯ ದೇವತಾಸಂಘಂ ಚಿಚ್ಛೇದಾದಿತಿನಾಸಿಕಾಮ್ ॥೪೮॥ ಸ್ವಾಹಾದೇವ್ಯಾಃ ಕುಚಂ ವಾಮಮಹರತ್ಸಹನಾಸಯಾ । ಸರಸ್ವತ್ಯಾ ಮಹಾದೇವ್ಯಾ ನಾಸಿಕೋಷ್ಠೌ ವ್ಯಕೃಂತನಃ ॥೪೯॥ ಇತ್ಯುಕ್ತೇರಕರೋದ್ವಾಣೀಂ ವಿನಾಸಾಮತಿಕೋಪತಃ । ಅಹರದ್ವಚನಾದ್ದಂತವಿನಾಶನ ಇತೀರಿತಾತ್ ॥೫೦॥ ಪೂಷ್ಣೋ ದನ್ತಾನ್ವೀರಭದ್ರೋ ನಿರ್ನಿರೋಧನಿಜಕ್ರಿಯಃ । ಯಜ್ಞಸ್ಯ ಶಿರ ಇತ್ಯುಕ್ತೇರ್ಯಜ್ಞಸ್ಯ ಚ ಶಿರೋಽಹರತ್ ॥೫೧॥ ಕಿಂಚ ವಾಕ್ಯಾದ್ವಹ್ನಿಹಸ್ತಹರ ಇತ್ಯನುಕೀರ್ತಿತಾತ್ । ಅಕರೋದ್ವೀತಿಹೋತ್ರಸ್ಯ ಬಾಹುಜಿಹ್ವಾವಿದಾರಣಮ್ ॥೫೨॥ ಏತಸ್ಮಾದ್ವೀರಭದ್ರೋಽಸೌ ಭಗನೇತ್ರನಿಪಾತನಃ । ಇತಿ ವಾಕ್ಯಾದ್ಭಗಸ್ಯಾಕ್ಷಿ ಸಾಕ್ಷೇಪಂ ಸಮುದಕ್ಷಿಪತ್ ॥೫೩॥ ಪಾದಾಙ್ಗುಷ್ಠೇನ ಸೋಮಾಙ್ಗಪೇಷಕಃ ಪ್ರಭುಸಂಜ್ಞಿತಃ । ಇತಿ ವಾಕ್ಯಾತ್ಪಿಷೇ

---

ಡಹಿ ಹೊಡೆದರು ॥೪೬॥ ಭೂತಬೇತಾಳಸಮೂಹವು ಹಮ್ಮಿನಿಂದ ದೇವತಾಸ್ತ್ರೀಯರನ್ನು ಹಿಡಿದುಕೊಂಡು, ಜಾರಸ್ತ್ರೀಯರನ್ನು ಕುಲಸ್ತ್ರೀಯರು ಹಿಂಸಿಸುವಂತೆ ಧ್ವಂಸಗೊಳಿಸಿದರು.॥೪೭॥ ಬಳಿಕ ದನಗಳನ್ನು ಗೊಲ್ಲನು ಅಟ್ಟಿಕೊಂಡು ಹೋಗುವಂತೆ ವೀರಭದ್ರೇಶನು ದೇವತಾಸ್ತೋಮವನ್ನು ಅಟ್ಟಿಕೊಂಡೋಡಿಸಿ, ಅದಿತಿಯ ಮೂಗನ್ನೂ, ಸ್ವಾಹಾದೇವಿಯ ಎಡಮೊಲೆಯನ್ನೂ ಮೂಗನ್ನೂ ಸಹ ಕತ್ತರಿಸಿದನು. "ವೀರಭದ್ರನು ಸರಸ್ವತಿಯ ಮೂಗು ತುಟಿಗಳನ್ನು ಕೊಯ್ದವನು" ಎಂದು ಹೇಳಲ್ಪಟ್ಟಿರುವ ವಚನವಿರುವುದರಿಂದ ಅತ್ಯಂತ ಕೋಪದಿಂದ ಸರಸ್ವತಿಯನ್ನು ಮೂಗುಹರುಕಿಯನ್ನಾಗಿ ಮಾಡಿದನು. "ಸೂರ್ಯನ ಹಲ್ಲನ್ನು ಕಳೆದವನು" ಎಂಬ ವಚನವಿರುವುದರಿಂದ ॥೫೦॥ ತನ್ನ ಕೆಲಸಕ್ಕೆ ತಡೆಯಿಲ್ಲದ ವೀರಭದ್ರೇಶನು ಪೂಷನೆಂಬ ಸೂರ್ಯನ ಹಲ್ಲುಗಳನ್ನು ಮುರಿದನು. "ಯಜ್ಞಪುರುಷನ ಶಿರಸ್ಸನ್ನು ಕತ್ತರಿಸಿದನು" ಎಂಬ ವಚನವಿರುವುದರಿಂದ ಯಜ್ಞದೇವತೆಯ ಕತ್ತನ್ನು ಕತ್ತರಿಸಿದನು. ॥೫೧॥ ಮತ್ತೂ "ಅಗ್ನಿಯ ಹಸ್ತವನ್ನು ಕಡಿದವನು" ಎಂಬ ವಚನವಿರುವುದರಿಂದ, ಅಗ್ನಿಯ ತೋಳುಗಳನ್ನೂ ನಾಲಿಗೆಗಳನ್ನೂ ಕತ್ತರಿಸಿದನು ॥೫೨॥ "ಭಗನೆಂಬ ಸೂರ್ಯನ ಕಣ್ಣನ್ನು ಕಳೆದವನು" ಎಂಬ ವಚನವಿರುವುದರಿಂದ, ಶಿವವಿರುದ್ಧಯಾಗಕ್ಕೆ ಬಂದುದಕ್ಕಾಗಿ ಆಕ್ಷೇಪಿಸಿ, ಭಗನ ಕಣ್ಣನ್ನು ಕಳದಿಕ್ಕಿದನು ॥೫೩॥ "ಪಾದದ ಹೆಬ್ಬೆರಲಿನಿಂದ ಚಂದ್ರನ ದೇಹವನ್ನು ಹೊಸಗಿದವನು" ಎಂದು ಹೇಳಲ್ಪಟ್ಟಿರುವ ವಚನವಿರುವು

 

ಷೇಂದುಂಪಾದಾಙ್ಗುಷ್ಠೇನಲೀಲಯಾ ॥೫೪॥ ಪ್ರವಿವೇಶಕ್ಷಣಾದೇವತ
ದಾಹ್ಯಾಹವನೀಯಕೇ । ಇತಿವಾಕ್ಯಾಚ್ಛಿರೋವಿಷ್ಣೋಃಕ್ಷಿಪ್ತೇಪಾಹವನೀ
ಯಕೇ॥೫೫॥ ಕಿಂಚಸ್ವಕೀಯಮಾಹಾತ್ಮ್ಯೇಭುವನೇಷುವಿಜೃಂಭಿತೇ ।
ಉಪೇನ್ದ್ರೇಂದ್ರಯಮಾದೀನಾಂದೇವಾನಾಮಙ್ಗತಕ್ಷಕಃ॥೫೬॥ ಇತಿವಾ
ಕ್ಯಾದ್ವಿಷ್ಣುಯಮಸುರೇನ್ದ್ರಾದಿದಿವೌಕಸಾಮ್। ಅಙ್ಗನಿಚ್ಛೇದನಮ
ಸ್ತಕ್ಷೇಭ್ಯಇತಿಚಶ್ರುತೇಃ ॥೫೭॥ ತ್ರ್ಯಕ್ಷಸಿನ್ಧುಕರಸ್ಯಾಸ್ಯದಕ್ಷಸ್ಯಚದು
ರಾತ್ಮನಃ । ಶಿರೋಽಪಹೃತ್ಯವಿಧಿವತ್ಕ್ರಿಯಮಾಣಂತಮಧ್ವರಮ್ ॥೫೮॥
ಅನಾಶಯತ್ತತಸ್ತೇನಕ್ರಿಯಮಾಣಸ್ಯತತ್ಕ್ರತೋಃ । ಫಲಂತಸ್ಯಾಭಿಚಾ
ರಾಯತತ್ಕ್ಷಣಾತ್ಸಮಜಾಯತ ॥೫೯॥ ಮಹಾದೇವೇಭಕ್ತಿಹೀನೈಃಕ್ರಿ
ಯಮಾಣಾಃಕ್ರಿಯಾಭುವಿ । ಸಾಙ್ಗಾಭವನ್ತಿಕಿಂಲೋಕೇವಿಮೃಶ್ಯೇಪ
ರಮಾರ್ಥತಃ॥೬೦॥ಏಕಸ್ಮಿನ್ಮನುಜೇರಾಜ್ಯೇಗರ್ವೇಣಾನ್ಯಾಯಕಾರಿಣಿ ।
ನರನಾಥಸ್ಯದೋಷಾಯತಸ್ಯಶಿಕ್ಷಾಭವೇತ್ಕಿಮು ॥೬೧॥ ಶಿಕ್ಷಣೇಭಕ್ತಿಹೀ
ನಾನಾಂದೋಷೋಽಸ್ತಿಕಿಮುಶೂಲಿನಃ। ದಕ್ಷಸಙ್ಗತಿದೋಷೇಣಹರಿಬ್ರ

---

ದರಿಂದ ಚಂದ್ರನನ್ನು ಲೀಲಾಮಾತ್ರವಾಗಿ ಪಾದದ ಹೆಬ್ಬೆರಲಿನಿಂದ ಮೆಟ್ಟಿ ಹೊಸಗಿ
ದನು ॥೫೪॥ “ಕ್ಷಣಕಾಲದೊಳಗಾಗಿ ಆಹವನೀಯಾಗ್ನಿಯನ್ನು ಪ್ರವೇಶಿಸಿದನು”
ಎಂದು ಹೇಳಿರುವ ವಚನದಪ್ರಕಾರ ವಿಷ್ಣುವಿನ ತಲೆಯನ್ನು ಆಹವನೀಯಾಗ್ನಿ
ಯಲ್ಲಿ ಹಾಕಿದನು ॥೫೫॥ ಮತ್ತೂ ವಿಷ್ಣು ಇಂದ್ರ ಯಮ ಮೊದಲಾದ ದೇವತೆಗಳೆ
ಗಲ್ಲಾ ಆತನು ಅಂಗಭಂಗವನ್ನು ಮಾಡಿದವನು” ಎಂದು ಹೇಳಲ್ಪಟ್ಟಿರುವ ವಚನ
ದಿಂದಲೂ “ಕತ್ತರಿಸಿದವನಿಗೋಸ್ಕರ ನಮಸ್ಕಾರ”ವೆಂದು ಶ್ರುತಿವಚನವಿರುವುದರಿಂದ
ಲೂ ಸಹ ತನ್ನ ಮಾಹಾತ್ಮ್ಯವು ಲೋಕಗಳಲ್ಲಿ ಪ್ರಸಿದ್ಧವಾಗಿರುತ್ತಿರಲು, ವಿಷ್ಣು
ಯಮ ದೇವೇಂದ್ರಾದಿದೇವತೆಗಳ ಅಂಗಗಳನ್ನು ಕತ್ತರಿಸಿದನು॥೫೭॥ ಬಳಿಕ ಶಿವನಿಂದೆ
ಯನ್ನು ಮಾಡಿದ ದುರಾತ್ಮನಾದ ಈ ದಕ್ಷನ ಶಿರಸ್ಸನ್ನು ಕಡಿದು ಅವನ ಯಜ್ಞವನ್ನು
ನಾಶಮಾಡಿದನು. ಆದುದರಿಂದ ಅವನ ತಪ್ಪಿಗಾಗಿ ಅವನು ಮಾಡುತ್ತಿದ್ದ ಯಜ್ಞ
ಕ್ಕೆ ತಕ್ಕ ಫಲವು ತತ್ಕ್ಷಣವೇ ಉಂಟಾಯಿತು ॥೫೯॥ ನಿಜವಾಗಿ ವಿಚಾರಮಾಡಿ
ನೋಡಿದರ ಭೂತಲದೊಳಗೆ ಶಿವಭಕ್ತಿಹೀನರಾದವರು ಮಾಡತಕ್ಕ ಕೆಲಸಗಳು ಸಾಂಗ
ವಾಗುವುವೆ? ॥೬೦॥ ರಾಜ್ಯವಲ್ಲಿ ಒಬ್ಬ ಮನುಷ್ಯನು ಅಹಂಕಾರದಿಂದ ಮಾಡಬಾರದ
ಕೆಲಸವನ್ನು ಮಾಡಿದರೆ, ಅವನನ್ನು ಶಿಕ್ಷಿಸುವುದು ದೊರೆಗೆ ನಿಂದೆಯೇನು? ॥೬೧॥
ಭಕ್ತಿಹೀನರಾದವರನ್ನು ಶಿಕ್ಷಿಸುವುದರಲ್ಲಿ ಶಿವನಿಗೆ ದೋಷವುಂಟೆ? ಅಂಥ ದಕ್ಷಬ್ರಹ್ಮನ
ಸಂಗದೋಷದಿಂದ ವಿಷ್ಣು ಬ್ರಹ್ಮಾದಿ ದೇವತೆಗಳೂ ಇಂಥ ಭಂಗವನ್ನು ಹೊಂದಬೇ

ಹ್ಮಾದಿಭಿಸ್ಸುರೈಃ ‖೬೨‖ ಪ್ರಾಪ್ತವಾನ್ದಕ್ಷಪರಿಭವಂಯುಕ್ತಮೇವತಥೈವಹಿ। ಅಯಸ್ಸಜ್ಜತಿದೋಷೇಣಕಿಮಗ್ನಿರ್ನಾವಮರ್ದ್ಯತೇ ‖೬೩‖ ತಸ್ಮಾದ್ದಕ್ಷಸ್ಯದೇವಾನಾಮಪಿಸಂಶಿಕ್ಷಣೇಕೃತೇ । ಮಹೇಶ್ವರಸ್ಯನಿನ್ದಾಕಿಮಿಯಂಜಗತಿವಕ್ಷ್ಯತಾಮ್ ‖೬೪‖

ಇತ್ಯಸಂಖ್ಯಾತಮಹಾಮಾಹೇಶ್ವರ..............ಶ್ರೀವೀರಶೈವಮತಾಚಾರ್ಯಗುರುರಾಜಸ್ಯ ಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನಪಣ್ಡಿತಾರಾಧ್ಯಚರಿತ್ರೇ ವಾದಪ್ರಕರಣೇ ದಕ್ಷಾಧ್ವರಧ್ವಂಸಕಥನಂನಾಮ ವಿಂಶೋಽಧ್ಯಾಯಃ.

## ಅಥ ಏಕವಿಂಶೋಽಧ್ಯಾಯಃ.

ಕಿಂಚಬ್ರಹ್ಮಾಣ್ಡಕೋಟೀಃಪ್ರಾಕ್ಸ್ವೇನೈವಪರಿನಿರ್ಮಿತಾಃ । ಹರೋಽಹರನ್ನಿರ್ದಯಃಕಿಮಿತ್ಯತ್ರೋತ್ತರಮುಚ್ಯತೇ ‖ ಬದ್ಧಾರ್ಧಜೀವಾ

---

ಕಾಗಿಬಂದುದು ಯುಕ್ತವೇ ಸರಿ. ಏಕೆಂದರೆ—ಕಬ್ಬುನದ ಸಂಗದ ದೋಷದಿಂದ ಬೆಂಕಿಯು ಸುತ್ತಿಗೆಯಿಂದ ಹೊಡೆಯಲ್ಪಡುವುದಿಲ್ಲವೆ? ‖೬೩‖ ಆದುದರಿಂದ ಅನ್ಯಾಯಾಚಾರನಾದ ದಕ್ಷನನ್ನೂ ಅವನಿಗೆ ಸಹಾಯಕರಾಗಿದ್ದ ದೇವತೆಗಳನ್ನೂ ಶಿಕ್ಷಿಸಿದರೆ ಪರಶಿವನಿಗೆ ಜಗತ್ತಿನಲ್ಲಿ ಅದೊಂದು ನಿಂದಾಸ್ಪದವೆ? ಹೇಳು ‖೬೪‖

ಎಂದು ಶ್ರೀಮನ್ಮಲ್ಲಿಕಾರ್ಜುನಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಪಂಡಿತಾರಾಧ್ಯಚರಿತ್ರಕ್ಕೆ ಎಂ. ಆರ್. ಕರಿಬಸವಶಾಸ್ತ್ರಿ ಕೃತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ವಾದಪ್ರಕರಣದೊಳಗೆ ದಕ್ಷಾಧ್ವರವಿನಾಶವನ್ನು ನಿರೂಪಿಸುವ ೨೦ನೆಯಧ್ಯಾಯವು ಮುಗಿದುದು.

---

### ೨೧ ನೆಯಧ್ಯಾಯವು.

(ಜಗತ್ಸಂಹಾರಕಾರಣಕಥನವು)

ಮತ್ತೂ ಪರಶಿವನು ಪೂರ್ವದಲ್ಲಿ ತಾನೇ ಸೃಜಿಸಿದ ಅನೇಕ ಬ್ರಹ್ಮಾಂಡಗಳನ್ನು ತಾನೇ ದಯಾಹೀನನಾಗಿ ಅದೇಕೆ ಸಂಹರಿಸಿದನು? ಎಂಬ ಈ ಪ್ರಶ್ನೆಯ ವಿಷಯದಲ್ಲಿ

ನ್ನಿಖಿಲಪಶುಪತಿನಾ ಕೃತ್ತಿವಾಸಸಾ। ಪುನಸ್ತಸ್ಮಾತ್ಪಶುಪತೇರಪ್ರಾಪ್ತಾನ್ಮು
ಕ್ತಿಮುತ್ತಮಾಮ್ ||೨||ಸತಿಧೂಳೀಕೃತೇಸಮ್ಯಗ್ವಿಶ್ವವಿಶ್ವಂಭರಾತಲೇ।ಉ
ದ್ಗಚ್ಛತ್ಪರಮಾಣ್ವೋಘಪ್ರಮಾಣಭವಸಙ್ಗತಾನ್||೩||ಸಪ್ತಾಂಬುಧಿಜಲಾ
ತೀತಜನನೀಸ್ತನ್ಯಪಾಯಿನಃ। ವೃಷ್ಟೇಃಪೃಷತವತ್ಸಂಖ್ಯಾಮತೀತೈರ್ಮ
ರಣೈರ್ಯುತಾನ್ ||೪|| ಯುಗಕೋಟಿಷ್ವವಿರತಂಸಂಭೂಯಬಹುಜನ್ಮಸು।
ಅತ್ಯಂತದುಃಖಿತಾಂಶ್ಛಿತ್ತೇಖಿನ್ನಾನ್ಬುದ್ಧಿವಿವರ್ಜಿತಾನ್ ||೫|| ಅನೇಕಧಾ
ಪರಿಕ್ಲಿಷ್ಟಾನ್ಜೀವಾನ್ವೀಕ್ಷ್ಯೇಂದುಶೇಖರಃ । ಭವಪಾಶಂಸಮುಚ್ಛೇ
ತ್ತುಂಸಂಪ್ರಾಪ್ತುಂಮುಕ್ತಿಮುನ್ನತಾಮ್ ||೬|| ಅಶಕ್ತಾದುಃಖಸಂಪ್ರಾ
ಪ್ತಾಜೀವಾಇತಿಕೃಪಾನ್ವಿತಃ। ಯತೋಽಯಂವರದಶ್ಶಂಭುಸ್ಸರ್ವಜೀವ
ದಯಾಪರಃ ||೭|| ತತಶ್ಚಕಾರಪ್ರಳಯಮೇಷಾಂನಿರ್ವೃತಿಕಾರಣಮ್। ಜೀ
ವಾಭವನ್ತುವಿಶ್ರಾಂತಾಃಕಂಚಿತ್ಕಾಲಮನಾತುರಾಃ ||೮|| ಸಂಸಾರಜಾತನಿ
ಖಿಲಘೋರದುಃಖಚ್ಯುತಾಇತಿ। ತಸ್ಮಿನ್ಪ್ರಳಯಲೀಲಾಭಿಮುಖೇಸತಿಮ

---

ಉತ್ತರವನ್ನು ಹೇಳುತ್ತೇನೆ ||೧|| ಸರ್ವಸಾಕ್ಷಿಕನಾದ ಶ್ರೀ ಪರಮೇಶ್ವರನಿಂದ ಭೂ
ಮಿಯಲ್ಲಿ ಕರ್ಮಬದ್ಧರಾಗಿ ಮಾಡಲ್ಪಟ್ಟವರೂ—ಮರಳಿ ಆ ಪರಮೇಶ್ವರನಿಂದ ಉತ್ತ
ಮಮೋಕ್ಷವನ್ನು ಪಡೆಯದೆ ಹೋದವರೂ— ||೨|| ಸಕಲ ಜಗನ್ಮಂಡಲವೂ ಚೆ
ನ್ನಾಗಿ ಧೂಳಿಮಾಡಲ್ಪಟ್ಟರೆ ಮೇಲಕ್ಕೆ ಎಷ್ಟು ಪರಮಾಣುಗಳು ಎದ್ದು ಹೋಗುತ್ತಿರು
ವುವೋ ಅವುಗಳ ಸಂಖ್ಯೆಯಷ್ಟು ಅಗಣಿತವಾದ ಜನನಗಳನ್ನು ಪಡೆದವರೂ—||೩||
ಏಳು ಸಮುದ್ರಗಳಲ್ಲಿಯೂ ಇರುವಷ್ಟು ನೀರಿನ ಪ್ರಮಾಣಕ್ಕಿಂತಲೂ ಮೀರಿದ ಮಾತೃ
ಸ್ತನ್ಯವನ್ನು ಪಾನಮಾಡಿದವರೂ—ಮಳೆಯ ಹನಿಗಳ ಸಂಖ್ಯೆಯನ್ನು ಮೀರಿದಷ್ಟು
ಮರಣಗಳ ಸಂಖ್ಯೆಯಿಂದ ಕೂಡಿದವರೂ ||೪|| ಅನೇಕ ಯುಗಗಳಲ್ಲಿ ಅನಂತ
ಜನ್ಮಗಳನ್ನೆತ್ತಿ ಯಾವಾಗಲೂ ಅತ್ಯಂತ ದುಃಖಪಟ್ಟವರೂ-ಖಿನ್ನಮನಸ್ಕರೂ-ಬು
ದ್ಧಿಹೀನರೂ— ||೫|| ಅನೇಕಪ್ರಕಾರವಾಗಿ ಕಷ್ಟಪಟ್ಟವರೂ-ಆದ ಜೀವರುಗಳನ್ನು
ಚಂದ್ರಶೇಖರನಾದ ಮಹೇಶ್ವರನು ನೋಡಿ, ತಾನು ಸಕಲ ಜೀವಕೋಟಿಯಲ್ಲೂ
ಕಾರುಣ್ಯವುಳ್ಳವನಾದುದರಿಂದಲೂ, ಸುಖದಾಯಕನಾದುದರಿಂದಲೂ, ಇಷ್ಟಾರ್ಥ
ವನ್ನು ಕೊಡತಕ್ಕವನಾದುದರಿಂದಲೂ, "ಈ ಪ್ರಾಣಿಗಳು ತಮ್ಮ ಭವಪಾಶವನ್ನು
ಕತ್ತರಿಸಿಕೊಳ್ಳುವುದಕ್ಕೂ, ಉತ್ತಮವಾದ ಮುಕ್ತಿಯನ್ನು ಪಡೆದುಕೊಳ್ಳುವುದ
ಕ್ಕೂ ಅಶಕ್ತರಾಗಿರುವರು; ದುಃಖಕ್ಕೀಡಾಗಿರುವರು" ಎಂದು ಯೋಚಿಸಿ, ಅವುಗಳ
ವಿಷಯದಲ್ಲಿ ಕೃಪೆಗೊಂಡವನಾಗಿ ||೬|| ಬಳಿಕ "ಈ ಜೀವರುಗಳು ಸ್ವಲ್ಪಕಾಲ
ಸಂಸಾರದ ಸಕಲ ದುಃಖಗಳನ್ನೂ ಕಳೆದುಕೊಂಡು ನಿಶ್ಚಿಂತರಾಗಿ ವಿಶ್ರಾಂತಿಗೊ
ಳ್ಳಲಿ" ಎಂದು, ಈ ಜೀವರುಗಳ ಸುಖಕ್ಕೆ ಕಾರಣವಾದ ಪ್ರಳಯವನ್ನು ಮಾಡಿದನು.

ಹೇಶ್ವರೇ ॥೯॥ ರುದ್ರಾಕ್ಷಪ್ರಮಥಾಭೂತಾಃಪುರಜಿತ್ಪಾರ್ಶ್ವವರ್ತಿನಃ। ಅಭೂವನ್ಸರ್ವಭೂತಾನಾಂಸಮಸುಪ್ತಿ ಸಮುತ್ಸುಕಾಃ ॥೧೦॥ ಫಾಲನೇತ್ರೋಚ್ಚಲದ್ವಹ್ನಿಕೀಲಾಜಾಲೇಪ್ರಸರ್ಪತಿ। ವಿಪತ್ತದಾಃಭೂಜ್ಜಗತಾಂಪ್ರಮಥಾನಾಂಮಹೋತ್ಸವಃ ॥೧೧॥ ಯಥಾಕುಲಾಲೋದಹತಿಘಟಾನಾಪಾಕಸಂಸ್ಥಿತಾನ್। ಭರ್ಗೋಃಜಾಣ್ಡಚಯಾಂಸ್ತದ್ವದ್ದಹತ್ಯಕ್ಷಿಭವಾರ್ಚಿಷಾ ॥ ಲೋಕದಾಹಕರೇತಸ್ಮಿನ್ಕಾಲಾಗ್ನಿಪ್ರಮಥೇಶ್ವರಾಃ। ಚನ್ದ್ರಿಕಾಯಾಮಿವಾನನ್ದಸಾನ್ದ್ರಾಶ್ಚೇರುರ್ಯಥೇಪ್ಸಿತಮ್ ॥೧೩॥ ತೇಷಾಂಪ್ರಮಥವರ್ಯಾಣಾಂಮಧ್ಯಏಕೋಗಣೇಶ್ವರಃ। ಸಶೈಲಸಾಗರದ್ವೀಪಂವಿಶ್ವವಿಶ್ವಂಭರಾತಲಮ್ ॥೧೪॥ ವಿಕ್ಷಿಪನ್ನುಪರಿವ್ಯೋಮಸಹಲೋಕೈರಧೋನಯನ್। ಚಕಾರಚತುರಕ್ರೀಡಾಂಪರಮಾನನ್ದಪೂರಿತಃ ॥೧೫॥ ಅಳಕೇತಿಲಕಂಕೃತ್ವಾಬಡಬಾಗ್ನಿಂಭಯಂಕರಮ್। ಕಶ್ಚನಪ್ರಮಥಾಧೀಶೋಽನನರ್ತಪರಯಾಮುದಾ॥ ಪೀತ್ವಾಪಯೋಃಖಿಲಂಸಪ್ತಸಮುದ್ರಪರಿಪೂರಿತಮ್। ನಿಷ್ಠೀವನಂಚಕಾ

---

ಶಿವನು ಹಾಗೆ ಪ್ರಳಯವನ್ನು ಮಾಡಬೇಕೆಂಬ ಲೀಲೆಯಲ್ಲಿ ಗಮನವನ್ನಿತ್ತ ಕೂಡಲೇ ॥೯॥ ರುದ್ರರೂ ಪ್ರಮಥರುಗಳೂ ಭೂತಗಳೂ ಸಹ ಆ ಪರಶಿವನ ಮಗ್ಗುಲಲ್ಲಿ ಬಂದು ನಿಂತುಕೊಂಡವರಾಗಿ, ಸಕಲ ಪ್ರಾಣಿಗಳಿಗೂ ಬಂದೇಸಮನಾದ ದೀರ್ಘನಿದ್ರೆಯನ್ನುಂಟುಮಾಡುವಲ್ಲಿ ಕುತೂಹಲಗೊಂಡವರಾದರು ॥೧೦॥ ಆಗ ಶಿವನ ಹಣೆಗಣ್ಣಿನಿಂದ ಹೊರಟಂಥ ಬೆಂಕಿಯ ಜ್ವಾಲೆಯು ಹರಡುತ್ತಿರಲಾಗಿ, ಜಗತ್ತಿಗೆ ವಿಪತ್ತುಂಟಾಯಿತು. ಪ್ರಮಥರುಗಳಿಗಾದರೂ ಮಹಾಸಂತೋಷವುಂಟಾಯಿತು॥೧೧॥ ಕುಂಬಾರನು ಚೆನ್ನಾಗಿ ಬೆಯ್ಯುವವರೆಗೂ ಮಡಕೆಗಳನ್ನು ಹೇಗೆ ಸುಡುವನೋ ಹಾಗೆ ಪರಶಿವನು ತನ್ನ ಹಣೆಗಣ್ಣಿನಿಂದ ಹುಟ್ಟಿದ ಬೆಂಕಿಯ ಜ್ವಾಲೆಯಿಂದ ಬ್ರಹ್ಮಾಂಡಸಮೂಹಗಳನ್ನು ಸುಡುತ್ತಿರಲಾಗಿ ॥೧೨॥ ಆ ಪ್ರಳಯಾಗ್ನಿಯು ಜಗತ್ತುಗಳನ್ನು ಸುಡುತ್ತಿದ್ದರೆ ಪ್ರಮಥರುಗಳು ಬೆಳ್ದಿಂಗಳಿನಲ್ಲಿ ವಿಹರಿಸುವಂತೆ ಸಂತೋಷಪೂರಿತರಾಗಿ ಯಥೇಚ್ಛವಾಗಿ ತಿರುಗಾಡುತ್ತಿದ್ದರು ॥೧೩॥ ಆ ಪ್ರಮಥಶ್ರೇಷ್ಠರುಗಳ ಮಧ್ಯದಲ್ಲಿ ಒಬ್ಬ ಗಣೇಶ್ವರನು ಸಕಲಕುಲಾಚಲಗಳಿಂದಲೂ ಸಪ್ತಸಮುದ್ರ ಸಪ್ತದ್ವೀಪಗಳಿಂದಲೂ ಕೂಡಿದ ಭೂಮಂಡಲವನ್ನೇ ಎತ್ತಿ ಆಕಾಶದ ಮೇಲಕ್ಕಿಟ್ಟು, ಬಳಿಕ ಅದನ್ನು ಹಾಗೆಯೇ ಪಾತಾಳಕ್ಕಿಟ್ಟು, ಪರಮಾನಂದ ಪರಿಪೂರ್ಣನಾಗಿ ಹೀಗೆ ಲೋಕಗಳೊಡನೆ ಕುಶಲದಾಟವನ್ನಾಡುತ್ತಿದ್ದನು ॥೧೪॥ ಮತ್ತೊಬ್ಬ ಪ್ರಮಥವರ್ಯನು ಭೀಕರವಾದ ಬಡಬಾಗ್ನಿಯನ್ನು ಹಣೆಗೆ ತಿಲಕವನ್ನಾಗಿ ಮಾಡಿಟ್ಟುಕೊಂಡು, ಅತ್ಯಂತ ಸಂತೋಷದಿಂದ ಕುಣಿದಾಡಿದನು ॥೧೬॥ ಇನ್ನೊಬ್ಬ ಗಣಾಧೀಶನು

ರಾಶು ಫೂತ್ಕಾರಧ್ವನಿಭೈರವಮ್॥೧೭॥ ಸಗ್ರಹಂತಾರಕಾವ್ಯೂಹಂಚಿಕ್ಷೇಪೈಕೋಗಣೇಶ್ವರಃ। ಏಕಸ್ತುಭ್ರಾಮಯಾಮಾಸಸಪ್ತದ್ವೀಪಾನಿಚಕ್ರವತ್॥ ಯಮೇನ್ದ್ರವಾಹಯೋಶ್ಶೃಂಗದನ್ತೌತಾಳೌವ್ಯಧಾತ್ಪರಃ । ಅಲಾತವದ್ಭ್ರಮಂಚಕ್ರೇಗಣೋಽನ್ಯೋಮೃತ್ಯುದಂಷ್ಟ್ರಯಾ॥೧೯॥ ಪ್ರಚೇತೋವಾಕರಂವಾಯುಮೃಗಮಾಶಾಮತಂಗಜಾನ್ । ಗಿಳಿತ್ವಾಪುನರುದ್ಧಾರಂತತಾನ್ಯೈಕೋಗಣಾಗ್ರಣೀಃ ॥೨೦॥ ಇತರೇಪ್ರಮಥಾಮೇರುಮನ್ದರಾದ್ರಿಹಿಮಾಚಲೈಃ।ಚಕ್ರಿರೇಕಂತುಕಕ್ರೀಡಾಂಪರಮಾನನ್ದಲೀಲಯಾ ॥೨೧॥ ಹಿಮಾಚಲಾದಿಶೈಲೌಘಾಂಶ್ಚೂರ್ಣಯಿತ್ವಾಽಥಕಶ್ಚನ । ಅಕಾರ್ಷೀತ್ಫೂತ್ಕೃತಿಂವ್ಯೋಮ್ನಿಕರಾಭ್ಯಾಮುಪಗೃಹ್ಯಚ॥೨೨॥ ಅತಾನೀದಙ್ಗುಲೀಯಾನಿಕಶ್ಚನಾಷ್ಟಭುಜಂಗಮಾನ್ ॥ ಆದಾಯಾದಿವರಾಹಸ್ಯದಂಷ್ಟ್ರಾಂಕೋಪಿನನರ್ತಚ ॥೨೩॥ ವಿನಿರ್ಭಿದ್ಯಾದಿಕೂರ್ಮಸ್ಯಪೃಷ್ಠಂತತೋರಗಾಧಿಪ

---

ಏಳುಸಮುದ್ರಗಳಲ್ಲೂ ತುಂಬಿರುವ ನೀರನ್ನೆಲ್ಲಾ ಕುಡಿದು, ಫೂತ್ಕರಿಸುವ ಶಬ್ದದಿಂದ ಭಯಂಕರವಾಗುವಹಾಗೆ ಬೇಗನೆ ಅದನ್ನೆಲ್ಲಾ ಉಗಿದುಬಿಟ್ಟನು ॥೧೭॥ ಇನ್ನೊಬ್ಬ ಗಣವರ್ಯನು ಸಕಲ ಗ್ರಹಗಳ ಸಮೇತವಾಗಿ ನಕ್ಷತ್ರಸಮುದಾಯವನ್ನೆಲ್ಲಾ ಕೈಯಿಂದ ಮಿಡಿದುಬಿಟ್ಟನು. ಇನ್ನೊಬ್ಬ ಗಣಾಧೀಶನು ಸಪ್ತದ್ವೀಪಗಳನ್ನೂ ಚಕ್ರದಂತೆ ತಿರುಗಿಸಬಿಟ್ಟನು ॥೧೮॥ ಮತ್ತೊಬ್ಬ ಪ್ರಮಥನು ಯಮನ ವಾಹನವಾದ ಕೋಣನ ಕೊಂಬನ್ನೂ, ಇಂದ್ರನ ವಾಹನವಾದ ಐರಾವತದ ದಂತವನ್ನೂ ಸಹ ತಾಳಗಳನ್ನಾಗಿಮಾಡಿಕೊಂಡು ಕುಟ್ಟಿದನು. ಮತ್ತೊಬ್ಬ ಗಣಾಧೀಶನು ಮೃತ್ಯುವಿನ ಕೋರೆದಾಡೆಯಿಂದ ಬೆಂಕಿಯ ಕೊಳ್ಳಿಯನ್ನು ಹಿಡಿದುಕೊಂಡು ಸುತ್ತಿಸುವಂತೆ ಸುತ್ತಿಸಿದನು ॥೧೯॥ ಇನ್ನೊಬ್ಬ ಗಣಶ್ರೇಷ್ಠನು ವರುಣನವಾಹನವಾದ ಮೊಸಳೆಯನ್ನೂ, ವಾಯುವಿನ ವಾಹನವಾದ ಎರಳೆಯನ್ನೂ, ಅಷ್ಟದಿಗ್ಗಜಗಳನ್ನೂ ಹಿಡಿದು ನುಂಗಿಬಿಟ್ಟು, ಮರಳಿ ಈಚೆಗೆ ಬರಿಸಿದನು ॥೨೦॥ ಉಳಿದ ಪ್ರಮಥರುಗಳೆಲ್ಲಾ ಸಂತೋಷದಿಂದ ಕೂಡಿದ ಲೀಲೆಯಿಂದ ಮೇರುಪರ್ವತ-ಮಂದರಪರ್ವತ-ಹಿಮವತ್ಪರ್ವತಗಳಿಂದ ಚೆಂಡಾಟವನ್ನಾಡಿದರು ॥೨೧॥ ಮತ್ತೊಬ್ಬ ಪ್ರಮಥನು ಹಿಮಾಚಲ ಮೊದಲಾದ ಪರ್ವತಗಳನ್ನೆಲ್ಲಾ ಪುಡಿಮಾಡಿ ಕೈಗಳಿಂದ ಹಿಡಿದುಕೊಂಡು ಆಕಾಶಕ್ಕೆ ಉಫ್ ಎಂದು ಊದಿ ಹಾರಿಸಿಬಿಟ್ಟನು ॥೨೨॥ ಮತ್ತೊಬ್ಬ ಪ್ರಮಥನು ಅಷ್ಟಮಹಾಫಣಿಗಳನ್ನು ತನ್ನ ಬೆರಳಿಗೆ ಉಂಗುರಗಳನ್ನು ಮಾಡಿಕೊಂಡನು. ಇನ್ನೊಬ್ಬ ಗಣಾಧೀಶನು ಆದಿ ವರಾಹಮೂರ್ತಿಯ ಕೋರೆದಾಡೆಗಳನ್ನು ಹಿಡಿದುಕೊಂಡು ಕುಣಿದಾಡಿದನು ॥೨೩॥ ಇನ್ನೊಬ್ಬ ಪ್ರಮಥವರ್ಯನು ಆದಿಕೂರ್ಮನ ಬೆನ್ನೋಟೆಯನ್ನು ತೂತುಮಾಡಿ ಅದರಲ್ಲಿ ಆದಿಶೇಷನನ್ನು ಪೋಣಿಸಿ, ಗಿರಗಿರನೆ ತಿರುಗಿಸಿದನು ॥ ಇನ್ನೊಬ್ಬ ಗಣಾಧೀ

ಮ್। ನಿಘಾಯಭ್ರಮಣಂಚಕ್ರೇಕಶ್ಚಸಪ್ರಮಥೇಶ್ವರಃ ॥೨೪॥ ಕೇಸರಾನ್ನ
ರಸಿಂಹಸ್ಯಜಟಾಮಪಿಚಕನ್ಧರಾಮ್ । ತತಾನಗಿರಿಜಾಪೀತೇಕಶ್ಚನಪ್ರಮ
ಥಾಧಿಪಃ ॥೨೫॥ ಪಕ್ಷಾನ್ವಿಹಗನಾಥಸ್ಯಮೂರ್ಧಾನಮಪಿಹರ್ಷತಃ। ನಿಧಾ
ಯಮಕುಟಸ್ಯಾಗ್ರೇಚಚಾರಾನ್ಯೋಗಣೇಶ್ವರಃ ॥೨೬॥ ರವೀಂದುಮಣ್ಡ
ಲೇಸ್ವಚ್ಛೇಕಶ್ಚನಪ್ರಮಥೇಶ್ವರಃ । ಚಕಾರಾಧಾರಯುಗಳಂನಿಜಭೋ
ಜನಪಾತ್ರಯೋಃ॥೨೭॥ ಬ್ರಹ್ಮಾಂಡಭಾಂಡಂಹಸ್ತಾಬ್ಜತಲೇಧೃತ್ವಾಽಥಕ
ಶ್ಚನ । ಭಗ್ನಂವ್ಯಧಾದನುದ್ವಿಗ್ನೋಮಹಾನ್ಪ್ರಮಥನಾಯಕಃ ॥೨೮॥
ತ್ರಿವಿಕ್ರಮಸ್ಯಪೃಷ್ಠಾಸ್ಥಿಕಪಾಲೇನಾಬ್ಜಜನ್ಮನಃ । ಪ್ರೋತಂವಿಧಾಯಯಾತ
ಪತ್ರಂಚಕಾರಾನ್ಯೋಗಣೇಶ್ವರಃ॥೨೯॥ ಅಂಡಾಭರಣನಾಮಾಽನ್ಯೋಮ
ಹಾನ್ಪ್ರಮಥಪುಂಗವಃ। ಬ್ರಹ್ಮಾಣ್ಡೈರ್ಮಾಲಿಕಾಂಕೃತ್ವಾಸ್ವಕೇಕಂಠೇದ
ಧೌಮುದಾ ॥೩೦॥ ಪರ್ವತಾಭರಣಾಭಿಖ್ಯಾಪ್ರಸಿದ್ಧಃಪ್ರಮಥಃಪರಃ। ಕಂ
ಠೇಸನ್ಧಾರಯಾಮಾಸಹಾರಂಕೃತ್ವಾಕುಲಾಚಲಾನ್॥೩೧॥ಮೇರುಪಾತನ
ನಾಮಾಽನ್ಯೋಮಹಾಪ್ರೌಢಗಣೇಶ್ವರಃ। ಮೇರುಂಪ್ರಳಯವೇಳಾಯಾಂ
ಪಾತಯಾಮಾಸಸತ್ವರಮ್॥೩೨॥ ಕರೌಚಚರಣೌಸವ್ಯಾಕ್ಸಂಮೇಲ್ಯಹರಿ

---

ಶನು ನೃಸಿಂಹಮೂರ್ತಿಯ ಕೇಸರಗಳನ್ನೂ ಜಡೆಯನ್ನೂ ಕೊರಲನ್ನೂ ಸಹ ಕಿತ್ತು ತಂ
ದು ಪಾರ್ವತಿಯ ಸಿಂಹಾಸನದಲ್ಲಿ ಅಲಂಕರಿಸಿದನು॥೨೫॥ ಇನ್ನೊಬ್ಬ ಗಣಾಧೀಶನು ಗರುಡ
ನ ರೆಕ್ಕೆಗಳನ್ನೂ ಶಿರಸ್ಸನ್ನೂ ಮುರಿದು ತಂದು ಸಂತೋಷದಿಂದ ತನ್ನ ಕಿರೀಟದಮೇಲಿ
ಟ್ಟುಕೊಂಡು ತಿರುಗಾಡಿದನು. ಇನ್ನೊಬ್ಬ ಗಣಾಧೀಶನು ನಿರ್ಮಲಗಳಾದ ಸೂರ್ಯಚಂದ್ರ
ಮಂಡಲಗಳನ್ನು ತನ್ನ ಊಟದಬಟ್ಟಲುಗಳಿಗೆ ಅಡ್ಡಣಿಗೆಗಳನ್ನಾಗಿ ಮಾಡಿಕೊಂಡನು.॥
ಬಳಿಕ ಮತ್ತೊರ್ವ ಮಹಾಗಣನಾಥನು ಬ್ರಹ್ಮಾಂಡವೆಂಬ ಅಳಗೆಯನ್ನು ತನ್ನ ಕರಕ
ಮಲದಲ್ಲಿ ಹಿಡಿದುಕೊಂಡು ಲೀಲಾಜಾಲವಾಗಿ ಒಡೆದುಬಿಟ್ಟನು॥೨೮॥ ಇನ್ನೊಬ್ಬ ಗಣಾ
ಧೀಶನು ವಾಮನಮೂರ್ತಿಯ ಬೆನ್ನಮೂಳೆಯನ್ನು ಬ್ರಹ್ಮನ ತಲೆಬುರುಡೆಗೆ ಸಿಕ್ಕಿಸಿ,
ಛತ್ರಿಯನ್ನು ಮಾಡಿ ಹಿಡಿದುಕೊಂಡನು ॥೨೯॥ ಅಂಡಾಭರಣನೆಂಬ ಹೆಸರುಳ್ಳ ಮತ್ತೊ
ಬ್ಬ ಪ್ರಮಥಶ್ರೇಷ್ಠನು ಅನೇಕ ಬ್ರಹ್ಮಾಂಡಗಳಿಂದ ಮಾಲಿಕೆಯನ್ನು ಮಾಡಿಕೊಂಡು
ಸಂತೋಷದಿಂದ ತನ್ನ ಕೊರಲಿನಲ್ಲಿ ಧರಿಸಿಕೊಂಡು ಆ ಹೆಸರನ್ನು ಹೊಂದಿದನು
ಮತ್ತೊಬ್ಬ ಪ್ರಮಥನು ಕುಲಗಿರಿಗಳನ್ನೆಲ್ಲಾ ಹಾರವನ್ನಾಗಿ ಮಾಡಿಕೊಂಡು ಕಂಠದ
ಲ್ಲಿ ಧರಿಸಿಕೊಂಡು ॥೩೧॥ ಪರ್ವತಾಭರಣನೆಂಬ ಹೆಸರಿನಿಂದ ಪ್ರಸಿದ್ಧನಾದನು. ಮತ್ತೊ
ಬ್ಬ ಶಿವಗಣಾಧೀಶನು ಪ್ರಳಯಕಾಲದಲ್ಲಿ ಮೇರುಪರ್ವತವನ್ನು ಬೇಗನೆ ಕೆಡಹಿಬಿಟ್ಟು
ಮೇರುಪಾತನನೆಂಬ ಹೆಸರುಳ್ಳವನಾದನು. ॥೩೨॥ ಇನ್ನೊಬ್ಬ ಗಣಶ್ರೇಷ್ಠನು

ವೇಧಸೋಃ। ಶವಾದಧಾಕನ್ಧರಾಯಾಂಲೀಲಯೈಕೋಗಣೇಶ್ವರಃ ॥೩೩॥ ಇತ್ಥಂಸಮಸ್ತಸಂಹಾರಂಚಕ್ರಿರೇಪ್ರಮಥೇಶ್ವರಾಃ। ಸುರಾಸುರಾದಿಸಂದೋಹೇವಿನಾಶಮುಪಗಚ್ಛತಿ॥೩೪॥ಸರ್ವಂವಿಯತ್ತಲಂಸದ್ಯೋಬಭೂವಪ್ರಮಥಾವೃತಮ್। ತೇಷಾಂಬ್ರಹ್ಮಾಚ್ಯುತಾದೀನಾಂಲೋಕಾಸ್ಸರ್ವೇದಿವೌಕಸಾಮ್॥೩೫॥ಬಭೂವುಃಪ್ರಮಥೇಂದ್ರಾಣಾಂಲೋಕಾವಿಕ್ರಮಶಾಲಿನಾಂ।ಇತ್ಥಂಬ್ರಹ್ಮಾಂಡಕೋಟೀಸ್ತೇಪ್ರಮಥೇಂದ್ರಾಮಹಾಬಲಾಃ॥೩೬॥ವಿನಿನ್ಯುರತಿಹರ್ಷೇಣಸಮಸುಪ್ತಿಂಸಸತ್ವರಮ್।ಭವಂತೋಽತ್ಯುನ್ನತಾಸ್ಸದ್ಯೋಭವನ್ತೋಽತ್ಯಂತವಾಮನಾಃ॥೩೭॥ಭವಂತೋಽತಿಸ್ಥೂಲಕಾಯಾಭವಂತಸ್ಸೂಕ್ಷ್ಮವಿಗ್ರಹಾಃ।ಗಾಯಂತಃಪರಿನೃತ್ಯನ್ತಶ್ಚೇತ್ಥಂಪ್ರಮಥಪುಙ್ಗವಾಃ॥೩೮॥ಆನನ್ದಲೀಲಯಾಸ್ವೈರಂಲೀಲಾಂಚಕ್ರುಸ್ತದಾಽಖಿಲಾಃ।ಕಿಂಚತೇಪ್ರಮಥಾಃಕೀದೃಗ್ರೂಪಾಇತ್ಯತ್ರವಕ್ಷ್ಯತೇ॥೩೯॥ ಲಂಬಾಕ್ಷಾಲಂಬರಸನಾಲಂಬೋಷ್ಠಾಲಂಬನಾಸಿಕಾಃ। ಲಂಬಕಂಠಾಗಜಾಶ್ವಾಜಕೋಲಕ

---

ಸತ್ತ ವಿಷ್ಣುಬ್ರಹ್ಮರುಗಳ ಕೈಕಾಲುಗಳನ್ನು ಚೆನ್ನಾಗಿ ಸೇರಿಸಿ ಆ ಹೆಣಗಳನ್ನು ಲೀಲೆಯಿಂದ ಹೆಕ್ಕತ್ತಿನಮೇಲೆ ಹೊತ್ತುಕೊಂಡನು॥೩೩॥ ಹೀಗೆ ಪ್ರಮಥಶ್ರೇಷ್ಠರುಗಳು ಸಕಲ ಲೋಕಸಂಹಾರವನ್ನೂ ಮಾಡಿದರು. ಸಕಲ ದೇವರಾಕ್ಷಸರಸಮೂಹವೆಲ್ಲಾ ಆಪ್ರಳಯಕಾಲದಲ್ಲಿ ನಾಶವನ್ನು ಹೊಂದಲಾಗಿ ॥೩೪॥ ಕೂಡಲೇ ಸಕಲಾಕಾಶತಲವೂ ಪ್ರಮಥರುಗಳಿಂದ ಆವರಿಸಲ್ಪಟ್ಟುದಾಯಿತು. ಆ ಬ್ರಹ್ಮವಿಷ್ಣು ಮೊದಲಾದ ದೇವತೆಗಳ ಸಕಲ ಲೋಕಗಳೂ॥೩೫॥ ಪರಾಕ್ರಮಶಾಲಿಗಳಾದ ಪ್ರಮಥವರ್ಯರ ಲೋಕಗಳಾಗಿ ಪರಿಣಮಿಸಿದುವು. ಮಹಾಬಲಶಾಲಿಗಳಾದ ಆ ಪ್ರಮಥವರ್ಯರುಗಳು ಹೀಗೆ ಬೇಗನೆ ಅತ್ಯಂತಸಂತೋಷದಿಂದ ಅನಂತಬ್ರಹ್ಮಾಂಡಗಳನ್ನೆಲ್ಲಾ ನಾಶಗೊಳಿಸಿದರು. ಮತ್ತೂ ಆ ಪ್ರಮಥಶ್ರೇಷ್ಠರೆಲ್ಲರೂ ಅತ್ಯಂತಾನಂದದಿಂದುಂಟಾದ ಪರಿಪರಿಯ ಲೀಲೆಗಳಿಂದ ಕೂಡಿ, ಕೆಲರು ಕೂಡಲೇ ಬಹಳ ಉದ್ದವಾದವರೂ, ಕೆಲರು ಬಹಳ ಕುಳ್ಳಾದವರೂ, ॥೩೬॥ ಕೆಲರು ಅತ್ಯಂತ ಸ್ಥೂಲವಾದ ದೇಹವುಳ್ಳವರೂ, ಕೆಲರು ಸಣ್ಣನಾದ ಶರೀರವುಳ್ಳವರೂ ಆಗಿ, ಹಾಡುತ್ತಲೂ, ಕುಣಿಯುತ್ತಲೂ ಹೀಗೆ ಮನಸ್ಸಿಗೆಬಂದಂತೆ ವಿಹರಿಸುವವರಾದರು. ಮತ್ತೂ ಆ ಪ್ರಮಥರು ಆಗ ಯಾವತೆರದ ಆಕೃತಿಗಳುಳ್ಳವರಾಗಿದ್ದರೆಂದರೆ—ಅವನ್ನಿಲ್ಲಿ ಹೇಳುತ್ತೇನೆ— ॥೩೯॥ ಕೆಲರು ಉದ್ದವಾದ ಕಣ್ಣುಳ್ಳವರು, ಕೆಲರು ನಿಡಿದಾದ ನಾಲಗೆಯುಳ್ಳವರು, ಕೆಲರು ಜೋಲುಬಿದ್ದಿರುವ ತುಟಿಗಳುಳ್ಳವರು, ಕೆಲರು ನಿಡುಮೂಗಿನವನು, ಕೆಲರು ಉದ್ದನಾದ ಕತ್ತುಳ್ಳವರು, ಕೆಲಕೆಲರು ಆನೆ-ಕುದುರೆ-ಆಡು-ಹಂದಿ-ಹುಲಿ ಇವುಗಳ ಕಿವಿಯಂತಹ ಕಿವಿ

ಣಾಃಪುನಸ್ತಥಾ ||೪೦|| ವ್ಯಾಘ್ರಕರ್ಣಾಗಜಾಶ್ವಾಜಕೋಲವ್ಯಾಘ್ರಮು
ಖಾಃಪರೇ|ಸಾರಙ್ಗಖಡ್ಗಶರಭಸಿಂಹಗೋಮಹಿಷಾನನಾಃ||ಬಹುವಕ್ತ್ರಾಬ
ಹುಶ್ರೋತ್ರಾಬಹುನೇತ್ರಾಸ್ತಥಾಪರೇ| ಬಹುಹಸ್ತಾಬಹುಪದಾಬಹುಜ್ಞಾ
ನುತಲಾಅಪಿ||೪೨||ಬಹುಬಾಹೂರುವದನಾಬಹೂರುತನವಸ್ತಥಾ| ಬಹೂ
ದರಾಜಾನುಪದಾದ್ವಿಮುಖಾಸ್ತ್ರಿಮುಖಾಃಪರೇ ||೪೩|| ಚತುಃಪಂಚಾ
ಷ್ಟವದನಾಸ್ಸಹಸ್ರವದನಾಅಪಿ| ಕಿಂಚನಾನಾವಿಧಾತ್ಯಂತವಿಕೃತಾಕಾರಸಂ
ಯುತಾಃ||೪೪||ನಾನಾವಿಧಮನೋಹಾರಿಲಾವಣ್ಯಯುತವಿಗ್ರಹಾಃ| ವರಶ್ರು
ತಿಸಮೂಹೇನಸ್ಮರ್ಯತೇನಚದೃಶ್ಯತೇ ||೪೫|| ಇತ್ಯುಕ್ತೇರಪಿಸಂಖ್ಯಾತಾಸ್ಸ
ಹಸ್ರಾಣೀತಿವಾಕ್ಯತಃ| ತಥಾಶೃತೌಚಾಪರಸ್ಯಾಮೇವಮೇತನ್ನಿಬೋಧತ||
ಇತ್ಯುಕ್ತೇಶ್ಚಾಣುಶಶ್ಚಮಹಶಶ್ಚೇತಿಕೀರ್ತನಾತ್ | ಕೋವಾವರ್ಣಯಿ
ತುಂಶಕ್ತಃಪ್ರಮಥಾಂಚ್ಛಿವಸನ್ನಿಭಾನ್||೪೬|| ತಥಾಪೀಶಾಗಮಶಿವಪುರಾ

---

ಗಳುಳ್ಳವರು, ಇನ್ನು ಕೆಲಕೆಲರು ಆನೆ-ಕುದುರೆ-ಆಡು-ಹಂದಿ-ಹುಲಿ ಇವುಗಳ ಮುಖ
ದಂತಹ ಮುಖಗಳುಳ್ಳವರು, ಮತ್ತೆ ಕೆಲಕೆಲರು ಎರಳೆ-ಖಡ್ಗಮೃಗ-ಶರಭ-ಸಿಂಹ-
ಆಕಳು-ಕೋಣ ಇವುಗಳ ಮುಖದಂತಹ ಮುಖಗಳುಳ್ಳವರು ||೪೧|| ಮತ್ತೆ ಕೆ
ಲರು ಅನೇಕ ಮುಖಗಳುಳ್ಳವರು, ಹಲವು ಕಿವಿಗಳುಳ್ಳವರು, ಬಹಳ ಕಣ್ಣುಗಳುಳ್ಳ
ವರು, ಹಲವು ಕೈಗಳುಳ್ಳವರು, ಬಹಳ ಕಾಲುಗಳುಳ್ಳವರು, ಹಲವು ಮಣಕಾಲುಗ
ಳುಳ್ಳವರು ||೪೨|| ಬಹು ತೋಳುಗಳು ಬಹು ತೊಡೆಗಳು ಬಹು ಮುಖಗಳು
ಬಹು ಕಣ್ಣುಗಳುಳ್ಳವರು, ವಿಶಾಲವಾದ ಬಹು ದೇಹಗಳುಳ್ಳವರು, ಬಹು ಹೊಟ್ಟೆಗ
ಳುಳ್ಳವರು, ಬಹು ಕಾಲುಗಳುಳ್ಳವರು, ಕೆಲರು ಎರಡು ಮುಖಗಳುಳ್ಳವರು,
ಕೆಲರು ಮೂರು ಮುಖಗಳುಳ್ಳವರು ||೪೩|| ಕೆಲಕೆಲರು ನಾಲ್ಕು ಅಯ್ದು ಎಂ
ಟು ಮುಖಗಳುಳ್ಳವರು, ಕೆಲರು ಸಹಸ್ರಮುಖಗಳುಳ್ಳವರು, ಮತ್ತೂ ಕೆಲರು
ನಾನಾವಿಧವಾಗಿ ಅತ್ಯಂತ ವಿಕಾರವಾದ ರೂಪಗಳಿಂದ ಕೂಡಿದವರು ||೪೪||
ಕೆಲರು ಅತ್ಯಂತ ಮನೋಹರವಾದ ಸೌಂದರ್ಯದಿಂದ ಕೂಡಿದ ಶರೀರವುಳ್ಳವರು ಆಗಿ
ದ್ದರು. ವೇದಗಳು ಅವರುಗಳನ್ನು "ನೆನೆವುದಕ್ಕೂ ಅಸಾಧ್ಯವು ನೋಡುವುದಕ್ಕೂ
ಅಸಾಧ್ಯವು," ಎಂಬುದಾಗಿಯೂ, "ಅವರು ಗಣನಾತೀತರೂ ಅನೇಕ ಪ್ರಕಾರವಾ
ದವರೂ ಆಗಿರುವರು" ಎಂಬುದಾಗಿಯೂ, "ಇವರನ್ನು ತಿಳಿಯಿರಿ" ಎಂಬುದಾಗಿ
ಯೂ, "ಅವರು ಅಣುಸ್ವರೂಪರಾಗಿಯೂ ಮಹತ್ಸ್ವರೂಪರಾಗಿಯೂ ಇರುವರು"
ಎಂಬುದಾಗಿಯೂ, ಬೇರೆ ಬೇರೆ ವಚನಗಳಿಂದ ಕೊಂಡಾಡಿರುತ್ತಿರಲಾಗಿ, ಶಿವಸಮಾ
ನರಾದ ಆ ಪ್ರಮಥರುಗಳ ಸ್ವರೂಪವನ್ನು ವರ್ಣಿಸುವುದಕ್ಕೆ ಯಾವನು ಸಮರ್ಥನಾ
ದಾನು? ||೪೬|| ಹಾಗಾದರೂ ಶಿವಾಗಮಗಳಲ್ಲಿಯೂ ಶಿವಪುರಾಣಗಳಲ್ಲಿಯೂ ಸಹ

ಣೋಕ್ತಕ್ರಮಾದಹಮ್ । ಅವರ್ಣಯಂಯಥಾಶಕ್ತಿಪ್ರಮಥಾನ್ಮಹಿತಾತ್ಮನಃ॥೪೮॥ ಯೇಗಣಾಡಮ್ಬರಂಮರ್ತ್ಯಾಃಶೃಣ್ವಂತೇತತ್ಪಠಂತಿಚ। ಲಿಖನ್ತಿತೇಷಾಂಜಾಯನ್ತೇಸುಖಾನಿನಿಖಿಲಾನ್ಯಪಿ ॥೪೯॥ ನಾಶಂಪ್ರಯಾನ್ತಿಪಾಪಾನಿಭುಕ್ತಿಮುಕ್ತೀಚಸಿದ್ಧ್ಯತಃ।ಪ್ರಮಥೈಸ್ತಾದೃಶೈಸ್ಸಾರ್ಧಂಮಹೇಶೋಽಮಿತವಿಕ್ರಮೈಃ ॥೫೦॥ ಸಮಸುಪ್ತಿಂಪ್ರಾಪಯತಿಜಗನ್ತಿನಿಖಿಲಾನಿಚ। ಉತ್ಪತ್ತಿಸ್ಥಿತಿನಾಶಾನಾಂಕಾರಣಂಜಗತಾಂಶಿವಃ॥೫೧॥ ಉತ್ಪಾದಯತ್ಯವತ್ಯೇತದಖಿಲಂನಾಶಯತ್ಯಪಿ। ಉತ್ಪತ್ತೌತಸ್ಯಕಿಂಪುಣ್ಯಮಸ್ತಿಪಾಪಂಚಸಂಹೃತೌ॥೫೨॥ ಜಲೇಷುಕೇಚಿಜ್ಜಾಯಂತೇಮ್ರಿಯನ್ತೇಜನ್ತವಸ್ತಥಾ । ಏತಾವತಾಪುಣ್ಯಪಾಪೇಜಲಾನಾಂಭವತಃಕಿಮು ॥೫೩॥ ತಸ್ಮಾತ್ಸೃಜತಿಲೀಲಾರ್ಥಂಜಗದೇತಚ್ಚರಾಚರಮ್ । ವಿಶ್ರಮಾರ್ಥಂಸಂಹರತಿಪುನಸ್ತತ್ಪರಮೇಶ್ವರಃ॥೫೪॥ಮಹೇಶ್ವರಸ್ಯಕಿಮಿಯಂನಿಂದಾವಿಶ್ವಸ್ಯಸಂಹೃತಿಃ ।

ಇತ್ಯಸಂಖ್ಯಾತಮಹಾಮಾಹೇಶ್ವರ............ಶ್ರೀವೀರಶೈವಮತಾಚಾ

---

ಹೇಳಿರುವ ಪ್ರಕಾರವನ್ನನುಸರಿಸಿ ನಾನು ಪೂಜ್ಯರಾದ ಆ ಪ್ರಮಥರ ಸ್ವರೂಪವನ್ನು ನನ್ನ ಶಕ್ತಿಯಿದ್ದಮಟ್ಟಿಗೆ ಇಲ್ಲಿ ವರ್ಣಿಸಿರುವೆನು ॥೪೮॥ ಆ ಪ್ರಮಥಗಣಂಗಳ ಲೀಲಾವೈಭವಗಳನ್ನು ಯಾವ ಮನುಷ್ಯರುಗಳು ಕೇಳುತ್ತಾರೋ ಯಾರು ಓದುತ್ತಾರೋ ಯಾರು ಬರೆಯುತ್ತಾರೋ ಅವರುಗಳಿಗೆ ಸಕಲ ಸೌಖ್ಯಗಳೂ ಲಭಿಸುವುವು ॥೪೯॥ ಅವರ ಸಕಲಪಾಪಗಳೂ ನಾಶಗೊಳ್ಳುವುವು. ಅವರಿಗೆ ಭೋಗಮೋಕ್ಷಗಳು ಸಿದ್ಧಿಸುವುವು. ಪರಶಿವನು ಅಂತಹ ಅಪಾರ ಪರಾಕ್ರಮವುಳ್ಳ ಪ್ರಮಥರುಗಳೊಡನೆ ಕೂಡಿ ಸಕಲ ಜಗತ್ತಿಗೂ ಸಮಸಿದ್ರೆಯನ್ನು ಹೊಂದಿಸುವನು. ॥೫೦॥ ಜಗತ್ತಿನ ಸೃಷ್ಟಿ ಸ್ಥಿತಿ ಸಹ್ಮಾರಗಳಿಗೆ ಕಾರಣಕರ್ತೃವಾದ ಪರಶಿವನು ಈ ಸಕಲ ಚರಾಚರಾತ್ಮಕವಾದ ಜಗತ್ತನ್ನೆಲ್ಲಾ ಹುಟ್ಟಿಸುತ್ತಾನೆ; ಸಲಹುತ್ತಾನೆ; ಮತ್ತೂ ನಾಶಗೊಳಿಸುತ್ತಾನೆ. ಜಗತ್ತನ್ನು ಸೃಷ್ಟಿಸುವುದರಲ್ಲಿ ಪುಣ್ಯವೂ ಜಗತ್ತನ್ನು ಸಹ್ಮರಿಸುವುದರಲ್ಲಿ ಪಾಪವೂ ಅವನಿಗುಂಟೆ? ॥೫೨॥ ನೀರಿನಲ್ಲಿ ಕೆಲಪ್ರಾಣಿಗಳು ಹುಟ್ಟುತ್ತವೆ, ಮತ್ತೂ ಸಾಯುತ್ತವೆ. ಇಷ್ಟುಮಾತ್ರದಿಂದ ನೀರಿಗೆ ಪುಣ್ಯಪಾಪಗಳು ಸಂಘಟಿಸುವುದುಂಟೆ ? ॥೫೩॥ ಅದುಕಾರಣ, ಪರಮೇಶ್ವರನು ಈ ಚರಾಚರಾತ್ಮಕ ಜಗತ್ತನ್ನೆಲ್ಲಾ ತನ್ನ ಲೀಲಾರ್ಥವಾಗಿ ಸೃಷ್ಟಿಸುತ್ತಾನೆ. ಅದಕ್ಕೆ ವಿಶ್ರಾಂತಿಯನ್ನು ಕೊಡುವುದಕ್ಕಾಗಿ ಮರಳಿ ಅದನ್ನು ಸಹ್ಮರಿಸುತ್ತಾನೆ ॥೫೪॥ ಹೀಗೆ ಜಗತ್ಸಹ್ಮಾರಮಾಡುವುದು ಪರಮೇಶ್ವರನಿಗೆ ನಿಂದಾಸ್ಪದವಾದುದೇನು ?

ಎಂದು ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯರು ನುಡಿದರೆಂಬಲ್ಲಿಗೆ ಶ್ರೀಮತ್ಪಂಡಿ

ರ್ಯಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನ
ಪಂಡಿತಾರಾಧ್ಯಚರಿತ್ರೇ ವಾದಪ್ರಕರಣೇ ಜಗತ್ಸಂಹಾರನಿ
ಮಿತ್ತಕಥನಂ ನಾಮ ಏಕವಿಂಶೋಽಧ್ಯಾಯಃ.

ಅಥ ದ್ವಾವಿಂಶೋಽಧ್ಯಾಯಃ.

(ಪರಮೇಶ್ವರತಾಂಡವಕಾರಣಕಥನಂ)

ಕಿಂಚಕೀದೃಗ್ವಿಧಂಶಂಭೋಸ್ತಾಂಡವಂತದ್ವ್ಯಧಾತ್ಸಕಿಮ್ । ಇತಿ ಚೋದ್ಯೇಪ್ರವಕ್ಷ್ಯಾಮಿಶೃಣ್ವಾಹಂಯುಕ್ತಮುತ್ತರಮ್ ॥೧॥ ಅಜಾಂಡ ಕೋಟೀಸ್ಸಂಹೃತ್ಯತದ್ಭೂತ್ಯಾಪರಮೇಶ್ವರಃ। ಸರ್ವಾಣ್ಯಂಗಾನಿಸ್ವಕೀಯಾನಿ ಸಮಾಲಿಪ್ಯಪ್ರಮೋದತಃ ॥೨॥ ಹರಿಬ್ರಹ್ಮಸುರೇನ್ದ್ರಾದಿದೇವದಾನವ ರಕ್ಷಸಾಂ । ಕಪಾಲಮಾಲಿಕಾಸ್ತದ್ವದ್ಧೃತ್ವಾಽಸ್ಥೀನಿಚಮಸ್ತಕೇ ॥೩॥ ಭಾರತೀಯೋದಿತಾನೇಕಪ್ರಬನ್ಧಾಕಾರಭಾಗಿನಃ । ಸಮುದೀರಯತೋ

---

ತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂ
ಜರಿ" ಯೆಂಬ ಕನ್ನಡ ಟಿಪ್ಪಣಿದೊಳಗೆ ವಾದಪ್ರಕರಣದಲ್ಲಿ ಪರಶಿವನು
ಜಗತ್ಸಂಹಾರಮಾಡುವುದರಕಾರಣವನ್ನು ನಿರೂಪಿಸುವ ೨೧ನೆಯ
ಅಧ್ಯಾಯವು ಮುಗಿದುದು.

---

೨೨ ನೆಯ ಅಧ್ಯಾಯವು.

(ಪರಮೇಶ್ವರನರ್ತನಕಾರಣ ನಿರೂಪಣವು.)

ಮತ್ತೂ ಶಿವನು ಮಾಡಿದ ನರ್ತನವು ಯಾವಪ್ರಕಾರವಾದುದು ? ಅದನ್ನು ಆ ತನು ಯಾತಕ್ಕೆ ಮಾಡಿದನು ? ಎಂಬ ಈ ವಿಷಯದಲ್ಲಿ ನಾನು ಉಚಿತವಾದ ಉತ್ತರವನ್ನು ಹೇಳುತ್ತೇನೆ ಕೇಳು:— ॥೧॥ ಪರಶಿವನು ಅನೇಕ ಬ್ರಹ್ಮಾಂಡಗಳನ್ನು ಸಂಹರಿಸಿ, ಅವುಗಳ ಬೂದಿಯಿಂದ ತನ್ನ ಅಂಗಗಳನ್ನೆಲ್ಲಾ ಸಂತೋಷದಿಂದ ಲೇಪಿಸಿ ಕೊಂಡು ॥೨॥ ಹಾಗೆಯೇ ವಿಷ್ಣು ಬ್ರಹ್ಮ ದೇವೇಂದ್ರ ಮೊದಲಾದ ದೇವತೆಗಳ ದಾನವರುಗಳ-ರಾಕ್ಷಸರುಗಳ ತಲೆಬುರುಡೆಗಳ ಮಾಲಿಕೆಗಳನ್ನೂ ಮೂಳೆಗಳನ್ನೂ ತನ್ನ ತಲೆಯಲ್ಲಿ ಧರಿಸಿಕೊಂಡು ॥೩॥ ಭರತಶಾಸ್ತ್ರಸಂಮತವಾದ ನಾನಾಗ್ರಂಥ ಗಳಲ್ಲಿ ಹೇಳಲ್ಪಟ್ಟಿರುವ ಅನೇಕಪ್ರಕಾರವಾದ ತಾಳಗಳನ್ನು ನರ್ತನಶಾಸ್ತ್ರಪ್ರವರ್ತಕ

ಸ್ತಾಲಾಸ್ತದಾಭರತನನ್ದಿನೋಃ ॥೪॥ ಬ್ರಹ್ಮಾಣ್ಡನಿಕರಾನ್ರುದ್ರೇಷ್ವಂ
ಡಾಭರಣನಾಮಸು । ಆನನ್ದತೋನಾದಯತ್ಸುಮೃದಙ್ಗಾನಿವಸನ್ತತಂ ॥
ರುದ್ರೇಷುಮಹತಶ್ಶೈಲಾನ್ಮೇರುಪಾತನನಾಮಸು । ಆದಾಯಮುರಜಾ
ನ್ಕೃತ್ವಾವಾದಯತ್ಸ್ವತಿಹರ್ಷತಃ ॥೬॥ ಪರ್ವತಾಭರಣಾಖ್ಯೇಷುರು
ದ್ರೇಷುಕುಲಪರ್ವತಾನ್ । ಶಂಖಾನ್ಕೃತ್ವಾಕರೇಧೃತ್ವಾಪೂರಯತ್ಸುಪ್ರ
ಮೋದತಃ ॥೭॥ ಪುನರನ್ಯೇಷುರುದ್ರೇಷುರುಂಡಾಭರಣನಾಮಸು । ರು
ಣ್ಡಮಾಲಾಃ ಕಾಹಲವದ್ಧ್ವನತ್ಸುಪ್ರೀತಿಪೂರ್ವಕಮ್ ॥೮॥ ಕಪಾಲಂಬ್ರ
ಹ್ಮಣಃ ಕಾಲಭೈರವೇಷುಮಹತ್ತರಮ್ । ವಿಧಾಯದುಂದುಭಿಂರಮ್ಯಂವಾ
ದಯತ್ಸ್ವನುರಾಗತಃ ॥೯॥ ಕಂಕಾಲಾನ್ಹರಿಕೋಟೀನಾಂಕರೇಷ್ವಾ
ದಾಯಸತ್ವರಂ । ನೀಲರುದ್ರೇಷುಕುರ್ವತ್ಸುರಾಸಕ್ರೀಡಾಂರಸೋದ್ಧತಾ
ಮ್ ॥೧೦॥ ತತ್ತ್ವಾಭರಣರುದ್ರೇಷುತತ್ತ್ವಾನಿಜಯಘಂಟಿಕಾಃ । ವಿಧಾಯ
ಲೀಲಯಾಶಶ್ವದ್ವಾದಯತ್ಸುಸಮೀಪತಃ ॥೧೧॥ ಮಹಾಕಾಲಾಭಿಧಾನೇ
ಷುಪ್ರಮಥೇಷುಸಸಂಭ್ರಮಮ್ । ವಿಧಾಯರೋದಸೀತಾಲಾನ್ವಾದಯ

---

ರಾದ ಭರತನೂ ನಂದಿಯೂ ಬಾಯಿಂದ ಹೇಳುತ್ತಿರಲು ॥೪॥ ಅಂಡಾಭರಣರೆಂಬ ಹೆ
ಸರುಳ್ಳ ರುದ್ರರುಗಳು ಬ್ರಹ್ಮಾಂಡಗಳ ಸ್ತೋಮವನ್ನು ಮದ್ದಲೆಗಳನ್ನೇ ಮಾಡಿಯಲ್ಲಿ
ಸಂತೋಷದಿಂದ ಅವಿಚ್ಛಿನ್ನವಾಗಿ ಬಾಜಿಸುತ್ತಿರಲು ॥೫॥ ಮೇರುಪಾತನರೆಂಬ ಹೆಸ
ರುಳ್ಳ ರುದ್ರರುಗಳು ದೊಡ್ಡದೊಡ್ಡ ಬೆಟ್ಟಗಳನ್ನು ತೆಗೆದುಕೊಂಡು ಢೋಲುಮಾಡಿ
ಕೊಂಡು ಅತ್ಯಂತಸ ತೋಷದಿಂದ ಬಾಜಿಸುತ್ತಿರಲು ॥೬॥ ಪರ್ವತಾಭರಣರೆಂಬ ಹೆಸ
ರುಳ್ಳ ರುದ್ರರುಗಳು ಕುಲಾಚಲಗಳನ್ನು ಶಂಖಗಳನ್ನು ಮಾಡಿ ಕೈಯಲ್ಲಿ ಹಿಡಿದು
ಕೊಂಡು ಸಂತೋಷದಿಂದ ಊದುತ್ತಿರಲು ॥೭॥ ರುಂಡಾಭರಣರೆಂಬ ಹೆಸರುಳ್ಳ
ಇನ್ನು ಬೇರೆ ರುದ್ರರುಗಳು ರುಂಡಮಾಲಿಕೆಗಳನ್ನು ಪ್ರೀತಿಪುರಸ್ಸರವಾಗಿ ಕಹಳೆಗಳಂತೆ
ಊದುತ್ತಿರಲು ॥೮॥ ಕಾಲಭೈರವರುಗಳು ದೊಡ್ಡ ಬ್ರಹ್ಮಕಪಾಲವನ್ನು ಮನೋಹರ
ವಾದ ನಗಾರಿಯನ್ನು ಮಾಡಿಕೊಂಡು ಪ್ರೀತಿಯಿಂದ ಬಾಜಿಸುತ್ತಿರಲು ॥೯॥ ನೀಲರು
ದ್ರರುಗಳು ಅನಂತವಿಷ್ಣುಗಳ ಬೆನ್ನುಮೂಳೆಗಳನ್ನು ಕೈಯಲ್ಲಿ ಹಿಡಿದುಕೊಂಡು ರಸ
ಭರಿತವಾದ ಗೊಲ್ಲಗುಣಿತವನ್ನು ಮಾಡುತ್ತಿರಲು ॥೧೦॥ ತತ್ತ್ವಾಭರಣರುದ್ರರುಗಳು
ಸಕಲ ತತ್ತ್ವಗಳನ್ನೂ ಜಯಘಂಟೆಗಳನ್ನು ಮಾಡಿಕೊಂಡು, ಶಿವನ ಸಮೀಪದಲ್ಲಿ
ಬಾರಿಬಾರಿಗೂ ಲೀಲೆಯಿಂದ ಬಾಜಿಸುತ್ತಿರಲು ॥೧೧॥ ಮಹಾಕಾಲರೆಂಬ ಪ್ರಮ
ಥರುಗಳು ಸಡಗರದಿಂದ ಭೂನ್ಯಂತರಿಕ್ಷಗಳನ್ನು ತಾಳಗಳನ್ನಾಗಿ ಮಾಡಿಕೊಂಡು

ತ್ಸು ನಿರಂತರಮ್ ||೧೨|| ಆಶಾತತಿಂ ಕಾಂಸ್ಯತಾಲಾವಲಿಂ ಕೃತ್ವಾ ಮಹೋತ್ಸವಾತ್ | ರುದ್ರಾಙ್ಗನಾಸಹಸ್ರೇಷು ವಾದಯತ್ಸು ಸಮಂತತಃ ||೧೩|| ಮಹಾಪ್ರಮಥಕಾನ್ತಾಭಿರ್ವಿಹಿತಾಸು ಗತಿಷ್ವಥ | ಭವತ್ಸು ನಾನಾವಿಧೇಷು ಗೀತಜಾತೇಷು ಸನ್ತತಮ್ ||೧೪|| ಚಂಡಕೀರ್ತ್ಯಾದಿಭಿರ್ಭಕ್ತ್ಯಾ ಕೃತೇ ಸ್ತುತಿರವೇ ಶುಭೇ | ಅತ್ಯಾಭೀಳೇ ಸಿಂಹನಾದೇ ತದಾ ಭವತಿ ವೇಗತಃ || ಭೂತವೇತಾಳಸಂದೋಹರಚಿತೇ ಭೂರಿಘೋಷಣೇ | ಸಮುದ್ಭಿಟಾಭ್ರಟಾರಾವಪದವೀಂ ಸಮುಪಾಗತೇ ||೧೬|| ಮಹಾವಿಲಯಕಾಲಾನುಕೃತತಾಣ್ಡವಮಾವಿಶನ್ | ಮುದಾ ವಾದ್ಯಂ ವಾದಯತೋಃ ಪಾರ್ಶ್ವಯೋರ್ವಿಷ್ಣುವೇಧಸೋಃ ||೧೭|| ಗಜಾಸುರವಧಂ ಕೃತ್ವಾ ನರ್ತನಾವಸರೇ ಪುರಾ | ಯಥಾ ನನರ್ತ ಸಂತುಷ್ಟಸ್ತಥೈವಾದ್ಯಾಪಿ ನೃತ್ಯತಿ ||೧೮|| ವ್ಯಾಘ್ರಪಾದಾಭಿಧಾನಸ್ಯ ತಪಸೋ ನಿಷ್ಠಯಾ ಮುನೇಃ | ಹೃಷ್ಟೋ ನರ್ತನವೇಳಾಯಾಂ ಸಾಕ್ಷಾತ್ಕೃಪಯಾ ನನರ್ತ ||೧೯|| ಯಥಾ ನನರ್ತ ಸಂತುಷ್ಟಸ್ತಥೈವಾದ್ಯಾಪಿ ನೃತ್ಯತಿ | ಕಿಂಚ ಗುಂಡಯ್ಯೇ ನಮುದಾ ಘಟಸಂಘಟ್ಟನೇ ಕೃತೇ ||೨೦||

---

ಬಿಡುವಿಲ್ಲದಂತೆ ಬಾಜಿಸುತ್ತಿರಲು ||೧೨|| ಅನೇಕ ರುದ್ರಾಂಗನೆಯರು ದಿಕ್ಸಮೂಹಗಳನ್ನೆಲ್ಲಾ ಕಂಚಿನ ತಾಳಗಳನ್ನಾಗಿ ಮಾಡಿಕೊಂಡು ಶಿವನ ಸುತ್ತಲೂ ಅತಿ ಸಂತೋಷದಿಂದ ಬಾಜಿಸುತ್ತಿರಲು ||೧೩|| ಮಹಾ ಪ್ರಮಥನಾರಿಯರು ಕಾಲಗತಿಗಳನ್ನು ಹಾಕುತ್ತಿರಲು, ಶಿವನ ಸುತ್ತಲೂ ಸದಾ ಪರಿಪರಿಯ ಗೀತಗಳು ಹಾಡಲ್ಪಡುತ್ತಿರಲು ||೧೪|| ಚಂಡಕೀರ್ತಿ ಮೊದಲಾದ ಸ್ತುತಿಪಾಠಕರು ಭಕ್ತಿಯಿಂದ ಮಂಗಳಕರವಾದ ಶಿವಸ್ತುತಿಧ್ವನಿಯನ್ನು ಮಾಡುತ್ತಿರಲು, ಅತಿಭಯಂಕರವಾದ ಸಿಂಹನಾದವು ಮೇಲಿಂದ ಬರುತ್ತಿರಲು ||೧೫|| ಭೂತಬೇತಾಳಗಳ ಸಮೂಹವು ಮಹಾಧ್ವನಿಯನ್ನು ಮಾಡುತ್ತಿರಲು, ಇವೆಲ್ಲವೂ ಸೇರಿ ಅತ್ಯಧಿಕ ಮಹಾಧ್ವನಿಯಾಗಿ ಪರಿಣಮಿಸಿರಲು||೧೬|| ಆಗ ಪರಶಿವನು ಮಹಾಪ್ರಳಯಕಾಲದಲ್ಲಿ ಮಾಡುವ ನರ್ತನಕ್ಕೆ ಸಮನಾದ ನಾಟ್ಯವನ್ನು ಮಾಡುವಲ್ಲಿ ತೊಡಗಿದವನಾಗಿ, ತನ್ನ ಪಕ್ಕಗಳಲ್ಲಿ ವಿಷ್ಣುಬ್ರಹ್ಮರುಗಳು ಸಂತೋಷದಿಂದ ವಾದ್ಯವನ್ನು ಬಾಜಿಸುತ್ತಿರಲು ||೧೭|| ಪೂರ್ವದಲ್ಲಿ ಗಜಾಸುರನನ್ನು ಕೊಂದು ನರ್ತನಮಾಡುವ ಕಾಲದಲ್ಲಿ ಹೇಗೆ ಸಂತೋಷಗೊಂಡು ಕುಣಿದನೋ ಹಾಗೆ ಈಗಲೂ ನಾಟ್ಯಮಾಡುತ್ತಿರಲು ||೧೮|| ವ್ಯಾಘ್ರಪಾದಮುನಿಯ ತಪೋನಿಷ್ಠೆಯಿಂದ ಸಂತುಷ್ಟನಾಗಿ, ಅವನ ಮೇಲಣ ಕೃಪೆಯಿಂದ ಭೂಮಿಯಲ್ಲಿ ಕುಣಿಯುವಾಗ, ಆಶ್ಚರ್ಯಕರವಾಗುವಹಾಗೆ ಹೇಗೆ ನರ್ತನಮಾಡಿದನೋ ಹಾಗೆ ಈಗಲೂ ನರ್ತನಮಾಡುತ್ತಿರಲಾಗಿ, ಮತ್ತೂ ಕುಂಬಾರ ಗುಂಡಯ್ಯನು ಸಂತೋಷದಿಂದ ಮಡ

ತದ್ಧಿಂಡಿಮಶಬ್ದಸುಗತೇರ್ನಟನಾವಸರೇಶುಭೇ । ಯಥಾನನರ್ತಸಂತುಷ್ಟಸ್ತಥೈವಾದ್ಯಾಪಿನೃತ್ಯತಿ ॥೨೧॥ ಪಿಷ್ಟಾಂಬಾಯಾಃಕೃತೇವಿಷ್ಟಿಂಕರ್ತುರ್ಮೂರ್ಧ್ನ್ಯಸ್ವಮಸ್ತಕೇ । ನರ್ತನಾವಸರೇವೇಣುಪುಟಕಾಂವಾದಯನ್ಸ್ಫುಟಮ್ ॥೨೨॥ ಯಥಾನನರ್ತಸಂತುಷ್ಟಸ್ತಥೈವಾದ್ಯಾಪಿನೃತ್ಯತಿ । ಪೂಜಾಕಾಲೇಚೇರಮೇಂದ್ರೇವಾದ್ಯಂವಾದಯತಿಸ್ವಯಮ್ ॥೨೩॥ ಯಥಾನನರ್ತಸಂತುಷ್ಟಸ್ತಥೈವಾದ್ಯಾಪಿನೃತ್ಯತಿ । ಭವಿಷ್ಯತ್ಪ್ರಳಯಂದೇವಸ್ಸಂಸ್ಥಾಪ್ಯಹೃದಯೇಽಥವಾ ॥೨೪॥ ನೃತ್ಯಂಕರ್ತುಂಸಮುದ್ಯುಕ್ತಃಕಿಮುತ್ರಿಪುರಮರ್ದನಃ । ಇತಿಪ್ರಮಥಸಂದೋಹೇ ಕೀರ್ತಯತ್ಯತಿವಿಸ್ಮಯಮ್ ॥೨೫॥ ಅಲೌಕಿಕಕ್ರಮಾನೇಕವರ್ಣನೇಷೂಪಶೋಭಿಷು । ರಸಿಕೈರಪ್ಯವಿಜ್ಞಾತರಸೇಷುಪ್ರಸ್ಫುರತ್ಸುಚ ॥೨೬॥ ಅಲಙ್ಕಾರೇಷ್ವನರ್ಘೇಷುಭಾಸಮಾನೇಷುಸರ್ವತಃ । ಶೋಭಮಾನೇಷುಸರ್ವೇಷುಭಾವೇಷ್ವಸದೃಶೇಷುಚ ॥೨೭॥ ವಿಸ್ಮಯಾವಹಮಾರ್ಗಾಸುಸುಗತಿಷ್ವವಲೋಕಿತೇ ।

---

ಕೆಗಳನ್ನು ತಟ್ಟುತ್ತಿರಲು, ಶಿವನು ಆ ಮಡಕೆ ತಟ್ಟುವ ಸದ್ದಿಗೆ ಅನುಸಾರವಾಗಿ ಕುಣಿಯುವಾಗ್ಗೆ ಹೇಗೆ ನರ್ತನಮಾಡಿದನೋ ಹಾಗೆ ಈಗಲೂ ಸಂತೋಷಗೊಂಡು ನಾಟ್ಯಮಾಡುತ್ತಿರಲು ॥೨೧॥ ಪಿಟ್ಟವ್ವೆಗೋಸುಗವಾಗಿ ಶಿವನು ಬಿಟ್ಟಿಯನ್ನು ಮಾಡುವುದಕ್ಕಾಗಿ ತನ್ನ ತಲೆಯಮೇಲೆ ಬಿದಿರ ಪುಟ್ಟಿಯನ್ನು ಹೊತ್ತುಕೊಂಡು ಅದನ್ನು ಸದ್ದಾಗುವಂತೆ ಬಡಿಯುತ್ತ ನರ್ತನಮಾಡುವಾಗ ಹೇಗೆ ಕುಣಿದನೋ ಹಾಗೆಯೇ ಈಗಲೂ ಸಂತೋಷಪಟ್ಟವನಾಗಿ ಕುಣಿಯುತ್ತಿರಲು ॥೨೨॥ ಚೇರಮರಾಜನು ಶಿವಪೂಜೆಮಾಡತಕ್ಕ ಕಾಲದಲ್ಲಿ ತಾನು ವಾದ್ಯವನ್ನು ಬಾಜಿಸುತ್ತಿರಲು ॥೨೩॥ ಶಿವನು ಸಂತೋಷಪಟ್ಟು ತಾನು ಹೇಗೆ ಕುಣಿದನೋ ಹಾಗೆಯೇ ಈಗಲೂ ನರ್ತನಮಾಡುತ್ತಿರಲು, ಈ ಶಿವನು ಮುಂದೆ ಮರಳಿ ಲೋಕಪ್ರಳಯವನ್ನುಂಟುಮಾಡಬೇಕೆಂಬ ಯೋಚನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಹೀಗೆ ನಾಟ್ಯವನ್ನು ಮಾಡುವುದಕ್ಕೇನಾದರೂ ಉಜ್ಜುಗಿಸಿರುವನೋ! ಎಂದು ಪ್ರಮಥ ಸಮೂಹವು ಅತ್ಯಾಶ್ಚರ್ಯಪಟ್ಟು ಹೊಗಳುತ್ತಿರಲು ॥೨೫॥ ಅಸಾಧಾರಣ ರೀತಿಯಿಂದಿರುವ ಅನೇಕತರದ ನರ್ತನವಿವರಣಗಳು ಶೋಭಿಸುತ್ತಿರಲು, ರಸಜ್ಞರೂ ಸಹ ತಿಳಿಯದಿರುವ ಶೃಂಗಾರಾದಿ ರಸವಿಶೇಷಗಳು ಹೊರಬೀಳುತ್ತಿರಲು ॥೨೬॥ ಶ್ರೇಷ್ಠಗಳಾದ ನಾನಾವಿಧಾಲಂಕಾರಗಳು ಎಲ್ಲಾ ಕಡೆಯೂ ಬಳ್ಪುತ್ತಿರಲು, ಅನುಪಮವಾದ ಹಸ್ತಭಾವಗಳೆಲ್ಲಾ ಪ್ರಕಾಶಿಸುತ್ತಿರಲು ॥೨೭॥ ಉತ್ತಮ ಪದಗತಿಗಳು ನೋಡಿದರೆ ಆಶ್ಚರ್ಯವನ್ನುಂಟುಮಾಡುವ ನಾನಾಮಾರ್ಗಗಳುಳ್ಳವಾಗಿರುತ್ತಿರಲು, ಹೊಸತೆರದ ನುಡಿಗಳುಳ್ಳ ಗೀತಗಳು ಇತರ

ಸಮುದ್ಗಾತುಮಶಕ್ಯೇಷುಗೀತೇಷ್ವಭಿನವೋಕ್ತಿಷು ॥೨೮॥ ಪ್ರಬನ್ಧೇಷುತಥಾಸ್ವಪ್ನೇಽಪ್ಯಶ್ರುತೇಷುಪ್ರಸರ್ಪಿಷು । ಪರಿಸ್ಫುರತ್ಸುತಾಲೇಷುಮನೋಮಾರ್ಗಾತಿಲಂಘಿಷು ॥೨೯॥ ಗಾಯಕಾಶಕ್ಯರಾಗೇಷುರಂಜಿತೇಷು ವಿಶೇಷತಃ । ಉದ್ದಣ್ಡತಾಣ್ಡವಂಚಕ್ರೇಕಾನ್ತಮನ್ತಕಕೃನ್ತನಃ ॥೩೦॥ ಪಾದಘಟ್ಟನಸಿಧ್ವಾನಂಮುಕ್ತ್ವಾಂಘ್ರಿಚಲನಕ್ರಮೋ । ಖಮತೇಕರಾಸ್ಫೋಟಶಬ್ದಂದೋಸ್ಸಹಸ್ರಾಟನೇತಥಾ ॥೩೧॥ ತ್ಯಕ್ತ್ವಾಕಿರೀಟಧಾಮಾನಿಮುಕುಟಾಗ್ರಸಮುನ್ನತೌ । ಜಟಾಚ್ಛಟಾರವಂಮುಕ್ತ್ವಾಜಟಾಗ್ರೌಘೇಸಮಂಚಿತೇ ॥೩೨॥ ಬ್ರಹ್ಮವಿಷ್ಣ್ವಾದಿಭಿರ್ದೃಷ್ಟುಮಶಕ್ಯೇಸತಿ ಹರ್ಷತಃ । ಆದ್ಯನ್ತರಹಿತೇದೇವೇನೃತ್ತಾಟೋಪಪ್ರದೀಪಿತೇ ॥೩೩॥ ಪ್ರಣಮ್ಯಪಾರ್ವತೀಪ್ರಾಹಘಟಿತಾಂಜಲಿರೀಶ್ವರಮ್ । ಪರಮಾನಂದಭರಿತ ಪರಾತ್ಪರಮಹೇಶ್ವರ ॥೩೪॥ ತ್ವನ್ಮೂರ್ತಿಸ್ತಾಣ್ಡವೋದ್ವೃತ್ತ್ಯಾನಿತರಾ

---

ರಾರಿಂದಲೂ ಹಾಡುವುದಕ್ಕೆ ಅಶಕ್ಯವಾದ ರೀತಿಯಿಂದಿರುತ್ತಿರಲು ॥೨೮॥ ತತ್ಕಾಲಕಲ್ಪಿತಪದ್ಯಗಳು ಲೋಕದಲ್ಲಿ ಯಾರೂ ಸ್ವಪ್ನದಲ್ಲಿಯೂ ಸಹ ಕೇಳದಿರುವುವುಗಳಾಗಿ ಬಾಯಿಂದ ಹೊರಡುತ್ತಿರಲು, ತಾಳಗಳು ಮನಸ್ಸಿನ ಊಹೆಗೂ ನಿಲುಕದವುಗಳಾಗಿ ಪ್ರಕಟನೆಗೊಳ್ಳುತ್ತಿರಲು ॥೨೯॥ ಸಮರ್ಥರಾದ ಗಾನಶಾಸ್ತ್ರಜ್ಞರಾರಿಂದಲೂ ಹಾಡುವುದಕ್ಕಶಕ್ಯವಾದ ರಾಗಗಳು ವಿಶೇಷ ಮನೋಹರವಾಗಿರಲು, ಯಮವಿನಾಶಕನಾದ ಶಿವನು ಮನೋಹರವಾದ ಮಹಾನಾಟ್ಯವನ್ನು ಮಾಡಿದನು ॥೩೦॥ ಆಗ ಸುತ್ತಲೂ ಇದ್ದ ಬ್ರಹ್ಮ ವಿಷ್ಣ್ವಾದಿಗಳಿಗೆ ಆ ನಟನಮೂರ್ತಿಯ ಪಾದದ ತುಳಿತದ ಧ್ವನಿಯುಮಾತ್ರ ಕೇಳಬರುತ್ತ ಪಾದದ ಚಲನಕ್ರಮಗಳೊಂದೂ ಕಾಣಲಸಾಧ್ಯವಾಗಿರುತ್ತಿರಲು, ಕೈಗಳ ಶಬ್ದವು ಮಾತ್ರ ಕೇಳಬರುತ್ತ, ಸಾವಿರ ತೋಳುಗಳ ತಿರುಗಿಸುವಿಕೆಯನ್ನು ಕಾಣುವುದಸಾಧ್ಯವಾಗಿರುತ್ತಿರಲು ॥೩೧॥ ಕಿರೀಟದ ಕಾಂತಿಗಳು ಮಾತ್ರ ಕಾಣಬರುತ್ತಿದ್ದಿತೇ ಹೊರತು ಕಿರೀಟದ ತುದಿಯನ್ನು ಕಾಣುವುದಸಾಧ್ಯವಾಗಿರುತ್ತಿರಲು, ಜಟಾವಳಿಗಳ ಬಡಿತದ ಸದ್ದು ಮಾತ್ರ ಕೇಳಬರುತ್ತ, ಆ ಜಡೆಗಳ ತುದಿಯ ಗುಂಪನ್ನು ಕಾಣುವುದಸಾಧ್ಯವಾಗಿರುತ್ತಿರಲು ॥೩೨॥ ಆದ್ಯನ್ತರಹಿತನಾದ ಪರಶಿವನು ಸಂತುಷ್ಟಾಂತರಾಗಿ ಹೀಗೆ ನಟನಾಡಂಬರದಲ್ಲಿ ಉಲ್ಲಾಸಗೊಂಡಿರುತ್ತಿರಲು ॥೩೩॥ ಪಾರ್ವತಿಯು ಆ ಪರಶಿವನನ್ನು ನಮಸ್ಕರಿಸಿ, ಕೈಮುಗಿದು ನಿಂತು ಹೀಗೆ ಬಿನ್ನಯಿಸಿದಳು—ಪರಮಾನಂದ ಪರಿಪೂರ್ಣನೂ-ಸರ್ವೋತ್ಕೃಷ್ಟನೂ ದೇವಾಧಿದೇವನೂ ಆದ ಎಲೈ ಶಂಕರನೆ! ॥೩೪॥ ನರ್ತನ ವ್ಯಾಪಾರದಿಂದ ಅತ್ಯಂತವಾಗಿ ಅಭಿವೃದ್ಧಿಗೊಂಡಿರುವ ಈ ನಿನ್ನ ಶರೀರವು ನಮ್ಮಗಳಿಗೆ ನೋಡುವುದಕ್ಕೆ

ತದ್ಧಿಂಡಶಬ್ದಸುಗತೇರ್ನಟನಾವಸರೇಶುಭೇ । ಯಥಾನನರ್ತಸಂತುಷ್ಟ ಸ್ತಥೈವಾದ್ಯಾಪಿನೃತ್ಯತಿ ॥೨೧॥ ಪಿಷ್ಟಾಂಬಾಯಾಃಕೃತೇವಿಷ್ಟಿಂಕರ್ತುಂ ಮೂರ್ಧ್ನಿಸ್ವಮಸ್ತಕೇ । ನರ್ತನಾವಸರೇವೇಣುಪುಟಿಕಾಂವಾದಯನ್ಸ್ಫುಟಮ್ ॥೨೨॥ ಯಥಾನನರ್ತಸಂತುಷ್ಟಸ್ತಥೈವಾದ್ಯಾಪಿನೃತ್ಯತಿ । ಪೂಜಾಕಾಲೇಚೇರವೇಂದ್ರೇವಾದ್ಯಂವಾದಯತಿಸ್ವಯಮ್ ॥೨೩॥ ಯಥಾನನರ್ತಸಂತುಷ್ಟಸ್ತಥೈವಾದ್ಯಾಪಿನೃತ್ಯತಿ । ಭವಿಷ್ಯತ್ಪ್ರಳಯಂದೇವಸ್ಸಂಸ್ಥಾಪ್ಯಹೃದಯೇಽಥವಾ ॥೨೪॥ ನೃತ್ಯಂಕರ್ತುಂಸಮುದ್ಯುಕ್ತಃಕಿಮುತ್ರಿಪುರಮರ್ದನಃ । ಇತಿಪ್ರಮಥಸಂದೋಹೇ ಕೀರ್ತಯತ್ಯತಿವಿಸ್ಮಯಮ್ ॥೨೫॥ ಅಲೌಕಿಕಕ್ರಮಾನೇಕವರ್ಣನೇಷೂಪಶೋಭಿಷು । ರಸಿಕೈರಪ್ಯವಿಜ್ಞಾತರಸೇಷುಪ್ರಸ್ಫುರತ್ಸುಚ ॥೨೬॥ ಅಲಙ್ಕಾರೇಷ್ವನರ್ಘೇಷುಭಾಸಮಾನೇಷುಸರ್ವತಃ । ಶೋಭಮಾನೇಷುಸರ್ವೇಷುಭಾವೇಷ್ವಸದೃಶೇಷುಚ ॥೨೭॥ ವಿಸ್ಮಯಾವಹಮಾರ್ಗಾಸುಸುಗತಿಷ್ವವಲೋಕಿತೇ ।

---

ಕೆಗಳನ್ನು ತಟ್ಟುತ್ತಿರಲು, ಶಿವನು ಆ ಮಂಡಕೆ ತಟ್ಟುವ ಸದ್ದಿಗೆ ಅನುಸಾರವಾಗಿ ಕುಣಿಯುವಾಗ್ಗೆ ಹೇಗೆ ನರ್ತನಮಾಡಿದನೋ ಹಾಗೆ ಈಗಲೂ ಸಂತೋಷಗೊಂಡು ನಾಟ್ಯಮಾಡುತ್ತಿರಲು ॥೨೧॥ ಪಿಟ್ಟವ್ವೆಗೋಸುಗವಾಗಿ ಶಿವನು ಬಿಟ್ಟಿಯನ್ನು ಮಾಡುವುದಕ್ಕಾಗಿ ತನ್ನ ತಲೆಯಮೇಲೆ ಬಿದಿರ ಪುಟ್ಟಿಯನ್ನು ಹೊತ್ತುಕೊಂಡು ಅದನ್ನು ಸದ್ದಾಗುವಂತೆ ಬಡಿಯುತ್ತ ನರ್ತನಮಾಡುವಾಗ ಹೇಗೆ ಕುಣಿದನೋ ಹಾಗೆಯೇ ಈಗಲೂ ಸಂತೋಷಪಟ್ಟವನಾಗಿ ಕುಣಿಯುತ್ತಿರಲು ॥೨೨॥ ಚೇರಮ ರಾಜನು ಶಿವಪೂಜೆಮಾಡತಕ್ಕ ಕಾಲದಲ್ಲಿ ತಾನು ವಾದ್ಯವನ್ನು ಬಾಜಿಸುತ್ತಿರಲು ॥೨೩॥ ಶಿವನು ಸಂತೋಷಪಟ್ಟು ತಾನು ಹೇಗೆ ಕುಣಿದನೋ ಹಾಗೆಯೇ ಈಗಲೂ ನರ್ತನಮಾಡುತ್ತಿರಲು, ಈ ಶಿವನು ಮುಂದೆ ಮರಳಿ ಲೋಕಪ್ರಳಯವನ್ನುಂಟುಮಾಡಬೇಕೆಂಬ ಯೋಚನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಹೀಗೆ ನಾಟ್ಯವನ್ನು ಮಾಡುವುದಕ್ಕೇನಾದರೂ ಉಜ್ಜುಗಿಸಿರುವನೋ ! ಎಂದು ಪ್ರಮಥ ಸಮೂಹವು ಅತ್ಯಾಶ್ಚರ್ಯಪಟ್ಟು ಹೊಗಳುತ್ತಿರಲು ॥೨೫॥ ಅಸಾಧಾರಣ ರೀತಿಯಿಂದಿರುವ ಅನೇಕತರದ ನರ್ತನವರ್ಣನೆಗಳು ಶೋಭಿಸುತ್ತಿರಲು, ರಸಜ್ಞರೂ ಸಹ ತಿಳಿಯದಿರುವ ಶೃಂಗಾರಾದಿ ರಸವಿಶೇಷಗಳು ಹೊರಚೀಲುತ್ತಿರಲು ॥೨೬॥ ಶ್ರೇಷ್ಠಗಳಾದ ನಾನಾವಿಧಾಲಂಕಾರಗಳು ಎಲ್ಲಾ ಕಡೆಯೂ ಬಪ್ಪುತ್ತಿರಲು, ಅನುಪಮವಾದ ಹಸ್ತಭಾವಗಳೆಲ್ಲಾ ಪ್ರಕಾಶಿಸುತ್ತಿರಲು ॥೨೭॥ ಉತ್ತಮ ಪದಗತಿಗಳು ನೋಡಿದರೆ ಆಶ್ಚರ್ಯವನ್ನುಂಟುಮಾಡುವ ನಾನಾಮಾರ್ಗಗಳುಳ್ಳುವಾಗಿರುತ್ತಿರಲು, ಹೊಸತೆರದ ನುಡಿ-ಳುಳ್ಳ ಗೀತಗಳು ಇತರ

ಸಮುದ್ಗಾತುಮಶಕ್ಯೇಷುಗೀತೇಷ್ವಭಿನವೋಕ್ತಿಷು ॥೨೮॥ ಪ್ರಬನ್ಧೇಷುತಥಾಸ್ವಪ್ನೇಪ್ಯಶ್ರುತೇಷುಪ್ರಸರ್ಪಿಷು । ಪರಿಸ್ಫುರತ್ಸುತಾಲೇಷುಮನೋಮಾರ್ಗಾತಿಲಂಘಿಷು ॥೨೯॥ ಗಾಯಕಾಶಕ್ಯರಾಗೇಷುರಂಜಿತೇಷು ವಿಶೇಷತಃ । ಉದ್ದಣ್ಡತಾಣ್ಡವಂಚಕ್ರೇಕಾನ್ತಮನ್ತಕಕೃನ್ತನಃ ॥೩೦॥ ಪಾದಘಟ್ಟನನಿರ್ಧ್ವಾನಂಮುಕ್ತ್ವಾಂಘ್ರಿಚಲನಕ್ರಮೋ । ಖ್ಯಾತೇಕರಾಸ್ಫೋಟಶಬ್ದಂದೋಸ್ಸಹಸ್ರಾಟನೇತಥಾ ॥೩೧॥ ತ್ಯಕ್ತ್ವಾಕಿರೀಟಧಾಮಾನಿಮುಕುಟಾಗ್ರಸಮುನ್ನತೌ । ಜಟಾಛಟಾರವಂಮುಕ್ತ್ವಾಜಟಾಗ್ರೌಘೇಸಮಂಚಿತೇ ॥೩೨॥ ಬ್ರಹ್ಮವಿಷ್ಣ್ವಾದಿಭಿರ್ದ್ರಷ್ಟುಮಶಕ್ಯೇಸತಿ ಹರ್ಷತಃ । ಆದ್ಯನ್ತರಹಿತೇದೇವೇನೃತ್ತಾಟೋಪಪ್ರದೀಪಿತೇ ॥೩೩॥ ಪ್ರಣಮ್ಯಪಾರ್ವತೀಪ್ರಾಹಘಟಿತಾಂಜಲಿರೀಶ್ವರಮ್ । ಪರಮಾನಂದಭರಿತ ಪರಾತ್ಪರಮಹೇಶ್ವರ ॥೩೪॥ ತ್ವನ್ಮೂರ್ತಿಸ್ತಾಣ್ಡವೋದ್ವೃತ್ತ್ಯಾನಿತರಾ

---

ರಾರಿಂದಲೂ ಹಾಡುವುದಕ್ಕೆ ಅಶಕ್ಯವಾದ ರೀತಿಯಿಂದಿರುತ್ತಿರಲು ॥೨೮॥ ತತ್ಕಾಲಕಲ್ಪಿತಪದ್ಯಗಳು ಲೋಕದಲ್ಲಿ ಯಾಗೂ ಸ್ವಪ್ನದಲ್ಲಿಯೂ ಸಹ ಕೇಳದಿರುವುವುಗಳಾಗಿ ಬಾಯಿಂದ ಹೊರಡುತ್ತಿರಲು, ತಾಳಗಳು ಮನಸ್ಸಿನ ಊಹೆಗೂ ನಿಲುಕದವುಗಳಾಗಿ ಪ್ರಕಟನೆಗೊಳ್ಳುತ್ತಿರಲು ॥೨೯॥ ಸಮರ್ಥರಾದ ಗಾನಶಾಸ್ತ್ರಜ್ಞರಾರಿಂದಲೂ ಹಾಡುವುದಕ್ಕಶಕ್ಯವಾದ ರಾಗಗಳು ವಿಶೇಷ ಮನೋಹರವಾಗಿರಲು, ಯಮವಿನಾಶಕನಾದ ಶಿವನು ಮನೋಹರವಾದ ಮಹಾನಾಟ್ಯವನ್ನು ಮಾಡಿದನು ॥೩೦॥ ಆಗ ಸುತ್ತಲೂ ಇದ್ದ ಬ್ರಹ್ಮ ವಿಷ್ಣ್ವಾದಿಗಳಿಗೆ ಆ ನಟನಮೂರ್ತಿಯ ಪಾದದ ತುಳಿತದ ಧ್ವನಿಯುಮಾತ್ರ ಕೇಳಬರುತ್ತ ಪಾದದ ಚಲನಕ್ರಮಗಳೊಂದೂ ಕಾಣಲಸಾಧ್ಯವಾಗಿರುತ್ತಿರಲು, ಕೈಗಳ ಶಬ್ದವು ಮಾತ್ರ ಕೇಳಬರುತ್ತ, ಸಾವಿರ ತೋಳುಗಳ ತಿರುಗಿಸುವಿಕೆಯನ್ನು ಕಾಣುವುದಸಾಧ್ಯವಾಗಿರುತ್ತಿರಲು ॥೩೧॥ ಕಿರೀಟದ ಕಾಂತಿಗಳು ಮಾತ್ರ ಕಾಣಬರುತ್ತಿದ್ದಿತೇ ಹೊರತು ಕಿರೀಟದ ತುದಿಯನ್ನು ಕಾಣುವುದಸಾಧ್ಯವಾಗಿರುತ್ತಿರಲು, ಜಟಾವಳಿಗಳ ಬಡಿತದ ಸದ್ದು ಮಾತ್ರ ಕೇಳಬರುತ್ತ, ಆ ಜಡೆಗಳ ತುದಿಯ ಗುಂಪನ್ನು ಕಾಣುವುದಸಾಧ್ಯವಾಗಿರುತ್ತಿರಲು ॥೩೨॥ ಆದ್ಯನ್ತರಹಿತನಾದ ಪರಶಿವನು ಸಂತುಷ್ಟಾಂತರಾಗಿ ಹೀಗೆ ನಟನಾಡಂಬರದಲ್ಲಿ ಉಲ್ಲಾಸಗೊಂಡಿರುತ್ತಿರಲು ॥೩೩॥ ಪಾರ್ವತಿಯು ಆ ಪರಶಿವನನ್ನು ನಮಸ್ಕರಿಸಿ, ಕೈಮುಗಿದು ನಿಂತು ಹೀಗೆ ಬಿನ್ನಯಿಸಿದಳು—ಪರಮಾನಂದ ಪರಿಪೂರ್ಣನೂ-ಸರ್ವೋತ್ಕೃಷ್ಟನೂ ದೇವಾಧಿದೇವನೂ ಆದ ಎಲೈ ಶಂಕರನೆ! ॥೩೪॥ ನರ್ತನ ವ್ಯಾಪಾರದಿಂದ ಅತ್ಯಂತವಾಗಿ ಅಭಿವೃದ್ಧಿಗೊಂಡಿರುವ ಈ ನಿನ್ನ ಶರೀರವು ನಮ್ಮಗಳಿಗೆ ನೋಡುವುದಕ್ಕೆ

ಮುಪವರ್ಧಿತಾ । ಭಯಂಕರೀಭವಂತ್ಯಸ್ಮದಾದೀನಾಮಿಹಶಂಕರ ॥೩೫॥
ತ್ವಮಿದಾನೀಮತ್ಯತಿಷ್ಠದ್ದಶಾಙ್ಗುಲಮಿತಿಶ್ರುತೇಃ । ಇಷ್ಟಂನಿಹತ್ಯಾತ್ಯತಿ
ಷ್ಠತ್ಸಹಸ್ರಾಙ್ಗುಲಮಿತ್ಯತಃ ॥೩೬॥ ಅನ್ಯದ್ವಾಕ್ಯಂದರ್ಶಯಿತುಂಸಮು
ದ್ಯುಕ್ತೋಽಸಿಕಿಂವದ । ವೇದಾಗಮಪುರಾಣಾದ್ಯೈರ್ಹರಿಬ್ರಹ್ಮಾದಿದೈ
ವತೈಃ ॥೩೭॥ ಭವದೀಯಸ್ಥೂಲಸೂಕ್ಷ್ಮರೂಪಮಾಹಾತ್ಮ್ಯಮುನ್ನತಂ ।
ಅಶಕ್ಯಂಕಿಲವಿಜ್ಞಾತುಂತಾಂಡವಾಡಂಬರೋದ್ಧತಿಃ ॥೩೮॥ ಇಯಂಕಿ
ಮುತತಾಂಕ್ರೀಡಾಂವಿರಮೇಶಕೃಪಾನಿಧೇ । ಉಪಕ್ರಾನ್ತಜಗತ್ಸೃಷ್ಟಿ
ರ್ಭವಶ್ರೀಮನ್ಮಹೇಶ್ವರ ॥೩೯॥ ಇತ್ಯುಕ್ತ್ವಾಶಙ್ಕರಂಭೂಯಃಪಾರ್ವ
ತೀಪ್ರಣನಾಮಸಾ । ಅಥತಾಂಡವಲೀಲಾಂತಾಮುದ್ಧತಾಂ ಪರಮೇ
ಶ್ವರಃ ॥೪೦॥ ಪರಿತ್ಯಜ್ಯಸ್ವಕಾನ್ತಾಯೈಪ್ರಸನ್ನೋಭೂದ್ದಯಾಧಿಯಾ ।
ತದಾಗಣೇಷುನಬ್ರಹ್ಮಾನವಿಷ್ಣುರಿತಿಪೂರ್ವಕೈಃ ॥೪೧॥ ನಾಗ್ನಿರ್ನಸೂ
ರ್ಯೋನಚಸ್ಥ್ರತಾರಕಾಇತಿಕೀರ್ತಿತೈಃ । ಪ್ರಖ್ಯಾತೋಪನಿಷದ್ವಾಕ್ಯೈ
ರನೇಕೈರೇವಮಾದಿಭಿಃ ॥೪೨॥ ಶ್ರುತಿವಾಕ್ಯೈರೇಕಏವರುದ್ರಇತ್ಯಾದಿ

---

ಭಯಂಕರವಾಗಿರುವುವು ॥೩೫॥ "ಅತ್ಯತಿಷ್ಠದ್ದಶಾಂಗುಲಂ"—(ಹತ್ತು ಬೆರಲು
ಗಳ ಪ್ರಮಾಣವಂ ಮೀರಿದವನು) ಎಂಬುದಾಗಿರುವ ವೇದದ ಇಷ್ಟವಾದ ವಚನ
ವನ್ನು ತಪ್ಪಿಸಿ, "ಅತ್ಯತಿಷ್ಠತ್ಸಹಸ್ರಾಂಗುಲಂ"—(ಸಾವಿರದಂಗುಲಗಳ ಪ್ರಮಾಣ
ವನ್ನು ಮೀರಿದವನು) ಎಂಬುದಾಗಿ ಮತ್ತೊಂದು ವಾಕ್ಯವನ್ನು ತೋರಿಸುವುದಕ್ಕಾಗಿ
ಈ ಆಕಾರದಿಂದ ಪ್ರಯತ್ನಿಸಿರುವೆಯೊ? ಏನು? ಹೇಳು. ವೇದ ಆಗಮ ಪುರಾಣ
ಮೊದಲಾದುವುಗಳಿಂದಲೂ, ವಿಷ್ಣು ಬ್ರಹ್ಮ ಮೊದಲಾದ ದೇವತೆಗಳಿಂದಲೂ ಸಹ
ನಿನ್ನ ಸ್ಥೂಲ ಸೂಕ್ಷ್ಮ ರೂಪಗಳ ಅತಿಶಯವಾದ ಮಹಿಮೆಯು ತಿಳಿಯುವುದಕ್ಕೆ
ಅಶಕ್ಯವಲ್ಲವೆ? ಹೀಗಿರುವಲ್ಲಿ ಈ ಮಹಾ ತಾಂಡವಾಡಂಬರದ ಅತಿಶಯವನ್ನು ಹೇಳು
ವುದೇನು? ಎಲೈ ದಯಾನಿಧಿಯೆ! ಈ ನರ್ತನವಿನೋದವನ್ನು ನಿಲ್ಲಿಸು, ಎಲೈ ಮಹೇ
ಶ್ವರನೆ, ಜಗತ್ಸೃಷ್ಟಿಯನ್ನಾರಂಭಿಸುವವನಾಗು ॥೩೯॥ ಎಂದು ಆ ಪಾರ್ವತಿಯು
ಬಿನ್ನಯಿಸಿ, ಮತ್ತೆ ಮತ್ತೆ ಪರಶಿವನನ್ನು ನಮಸ್ಕರಿಸಿದಳು. ಬಳಿಕ ಶಂಕರನು ಕೃಪಾ
ಬುದ್ಧಿಯಿಂದ ಆ ತನ್ನ ಮಹಾತಾಂಡವ ಲೀಲೆಯನ್ನು ಬಿಟ್ಟು, ತನ್ನ ಪ್ರಿಯಪತ್ನಿ
ಗೋಸುಗ ಪ್ರಸನ್ನನಾದನು ॥೪೦॥ ಆಗ ಪ್ರಮಥರುಗಳೆಲ್ಲರೂ ತಮ್ಮ ತಮ್ಮ ತಲೆ
ಗಳ ಮೇಲೆ ಕೈ ಜೋಡಿಸಿಕೊಂಡು ಅತ್ಯಂತ ಭಕ್ತಿಯಿಂದ "ನಬ್ರಹ್ಮಾನವಿಷ್ಣುಃ ॥
ನತತ್ರಸೂರ್ಯೋಭಾತಿನಚಂದ್ರತಾರಕಾಃ" ಎಂದು ಮೊದಲಾಗಿ ಹೊಗಳಿರುವ ಉಪನಿ
ಷದ್ವಚನಗಳಿಂದಲೂ ॥೪೧॥ "ಏಕಏವರುದ್ರೋನದ್ವಿತೀಯಾಯತಸ್ಥೇ" ಎಂಬುದು

ಭಿಶ್ಶಿವಮ್ । ಮಸ್ತಕನ್ಯಸ್ತಹಸ್ತೇಷುಸಂಸ್ತುವತ್ಸ್ವತಿಭಕ್ತಿತಃ ॥೪೩॥ ವರಾನಭೀಪ್ಸಿತಾಂಸ್ತೇಭ್ಯಃಪ್ರದದೌಕರುಣಾನಿಧಿಃ । ಸಈಕ್ಷತೇಮಾ ಲೋಕಾಂಶ್ಚಲೋಕಪಾಲಾನಿತಿಶ್ರುತೇಃ ॥೪೪॥ ಪುನಸ್ಸಈಕ್ಷತೇತ್ಯಾದಿಶ್ರುತೇರ್ಲೋಕಾನ್ಸೃಜಾ ಇತಿ । ಸೃಷ್ಟಿಲೀಲೋನ್ಮುಖೋಭೂತ್ವಾಸರ್ವೇಷಾಂಜಗತಾಂಮುದಾ ॥೪೫॥ ಪೂರ್ವಪ್ರಳಯವಿಧ್ವಸ್ತಭೂತೌಘಜನಿಕಾರಣಮ್ । ವ್ಯಲೋಕಯನ್ನಿಜಾಂಗಾನಿಜಗತ್ಕರ್ತಾಮಹೇಶ್ವರಃ ॥೪೬॥ ಕಿಂಚಚಕ್ಷುಷಆದಿತ್ಯೋಮನಸಶ್ಚಂದ್ರಮಾಇತಿ । ಮುಖಾದ್ವಾಚೋಽಗ್ನಿರಿತಿಚಶಿಶ್ನಾದ್ರೇತಇತೀರಿತಾತ್ ॥೪೭॥ ಪುನಸ್ತಥಾನಾಸಿಕಾಭ್ಯಾಂಪ್ರಾಣಾದ್ವಾಯುರಿತಿಸ್ಫುಟಾತ್ । ಪದ್ಭ್ಯಾಂಭೂಮಿರಿತಿಶ್ರೋತ್ರಾದ್ದಿಶಇತ್ಯಪಿವಿಶ್ರುತಾತ್ ॥೪೮॥ ತಥಾರೇತಸಆಪಶ್ಚೇತ್ಯೇತದೃಗ್ವಚನವ್ರಜಾತ್ । ತಥಾಚಾತ್ಮನಆಕಾಶಇತಿಚಾತ್ಮನಆತ್ಮನಃ ॥೪೯॥ ಇತಿಖ್ಯಾತಾದ್ಬಾಷ್ಕಲೋಪನಿಷದೋವಚನಾದಪಿ । ಜಾತಾಃಪ್ರಕೃತಿಬೀಜಾಷ್ಟತನವಶ್ಶಿವವೀಕ್ಷಣಾತ್ ॥೫೦॥ ತತ್ಪೂರ್ವಮೇವರುದ್ರಸ್ಯಕಟಾಕ್ಷಾಮೃತವಾರಿಧೌ । ಪರಿವ್ಯಾಪ್ತೇ

---

ಮೊದಲಾದ ವೇದವಚನಗಳಿಂದಲೂ ಸಹ ಪರಶಿವನನ್ನು ಸ್ತೋತ್ರಮಾಡುತ್ತಿರಲಾಗಿ ॥ ದಯಾನಿಧಿಯಾದ ಪರಶಿವನು ಅವರಿಗೆ ಇಷ್ಟಾರ್ಥವರಗಳನ್ನು ಅನುಗ್ರಹಿಸಿದನು. ಮತ್ತು "ಸಈಕ್ಷತೇಮೇನುಲೋಕಾಲೋಕಪಾಲಾನ್ಸೃಜಾ" "ಸಈಕ್ಷತಲೋಕಾನ್ಸೃಜಾ" ಎಂಬ ಐತರೇಯೋಪನಿಷದ್ವಚನಗಳಲ್ಲಿ ಹೇಳಲ್ಪಟ್ಟಿರುವಂತೆ ಸಂತೋಷದಿಂದ ಸಕಲ ಜಗತ್ತನ್ನು ಸೃಜಿಸುವ ಲೀಲೆಗೆ ಮನಸ್ಸುಳ್ಳವನಾಗಿ ॥ ಪೂರ್ವದ ಮಹಾಪ್ರಳಯದಲ್ಲಿ ನಾಶಗೊಳಿಸಲ್ಪಟ್ಟ ಸಕಲಭೂತಗಳ ಉತ್ಪತ್ತಿಗೆ ಕಾರಣವಾದ ತನ್ನ ಅವಯವಗಳನ್ನು ಜಗದೀಶನಾದ ಪರಶಿವನು ನೋಡಿದನು. ॥೪೬॥ ಕಣ್ಣಿನಿಂದ ಸೂರ್ಯನೂ, ಮನಸ್ಸಿನಿಂದ ಚಂದ್ರನೂ, ಮುಖದಿಂದ ವಾಕ್ಕೂ ಅಗ್ನಿಯೂ, ಮೇಢ್ರದಿಂದ ತೇಜಸ್ಸೂ ಉದಿಸಿದುವು ಎಂದು ಹೇಳಲ್ಪಟ್ಟಿರುವ ವಚನದಿಂದಲೂ ॥೪೭॥ ಮತ್ತೂ ಮೂಗಿನಿಂದಲೂ ಪ್ರಾಣಗಳಿಂದಲೂ ವಾಯುವು, ಪಾದಗಳಿಂದ ಭೂಮಿಯು, ಕಿವಿಯಿಂದ ದಿಕ್ಕುಗಳು ಉದಿಸಿದುವು ಎಂಬ ಪ್ರಸಿದ್ಧವಾಗಿರುವ ವಚನದಿಂದಲೂ ॥೪೮॥ ಹಾಗೆಯೇ ರೇತಸ್ಸಿನಿಂದ ಜಲಗಳು ಉದಿಸಿದುವೆಂದು ಹೇಳುವ ಋಗ್ವೇದದ ವಚನಸಮುದಾಯದಿಂದಲೂ, ಪ್ರಕೃತಿಃ-ಪ್ರಕೃತೇರ್ಮಹಾನ್-ಮಹತೋ ಆಕಾಶಃ-ಆಕಾಶಾದ್ವಾಯುಃ-ವಾಯೋರಗ್ನಿಃ-ಅಗ್ನೇರಾಪಃ-ಅದ್ಭ್ಯಃಪೃಥಿವೀ- ಹೀಗೆಂದು ಪ್ರಸಿದ್ಧವಾದ ಬಾಷ್ಕಲೋಪನಿಷದ್ವಚನವಿರುವುದರಿಂದಲೂ ಸಹ ಶಿವನ ನಿರೀಕ್ಷಣಮಾತ್ರದಿಂದಲೇ ಪ್ರಕೃತಿಯೇ ಕಾರಣವಾಗುಳ್ಳ ಪೃಥಿವ್ಯಾದಿ ಅಷ್ಟಶರೀರಗಳು ಜನಿಸಿದುವು. ॥೫೦॥ ಅದಕ್ಕೆ ಪೂರ್ವವೇ

ಸತೀಶೇನಸ್ವಕಣ್ಠೇಧೃತಯೋಃಪುನಃ ॥೫೧॥ ಚೈತನ್ಯಮಾಯಯೌತ್ತೂರ್ಣಂಹರಿಬ್ರಹ್ಮಕಪಾಲಯೋಃ। ಅಥೇಶ್ವರಸ್ಸಂಸ್ತುವತೋಸ್ತಯೋರ್ಭಕ್ತ್ಯಾಕಪಾಲಯೋಃ ॥೫೨॥ ದದೌಬ್ರಹ್ಮತ್ವಮೇಕಸ್ಮೈಚಾನ್ಯಸ್ಮೈವಿಷ್ಣುತಾಮದಾತ್ । ಆಮ್ನಾಯವಾಕ್ಯಾಜ್ಜನಿತಾಥವಿಷ್ಣೋರಿತಿವಿಶ್ರುತಾತ್ ॥೫೩॥ ಜನಿತಾರಮವಾಪ್ಯೇಶಂಪಿತಾಮಹಜನಾರ್ದನೌ। ಭೂತ್ವಾರಜಸ್ಸತ್ವಗುಣೈಶ್ವರ್ಯಾಢ್ಯೌತದ್ವದೇವಹಿ॥೫೪॥ ಸೃಷ್ಟಿಪಾಲನಯೋರ್ನಾಥೌಸದ್ಯಏವಬಭೂವತುಃ । ಸಭವೋಪಿಯಥಾಪೂರ್ವಂಬ್ರಹ್ಮಾಂಡಾನಾಂಕದಂಬಕಮ್ ॥೫೫॥ ಪುನಸ್ಸಂಸ್ಥಾಪಯಾಮಾಸನಿಜಲೋಚನಸಂಜ್ಞಯಾ। ನಿಗ್ರಹಾನುಗ್ರಹಗುಣಸಮಗ್ರಸ್ಯತ್ರಿಶೂಲಿನಃ ॥೫೬॥ ಉದಗ್ರತೇಜಸೋಲಿಙ್ಗವಿಗ್ರಹಸ್ಯಮಹೇಶಿತುಃ । ಸಂಹಾರಲೀಲಾಮಹಿತಾಸೃಷ್ಟಿಲೀಲಾಸ್ಸಮುನ್ನತಾಃ॥೫೭॥ಮಹಾತಾಂಡವಲೀಲಾದ್ಯಾಸ್ಸರ್ವಾಲೀಲಾಶ್ಚಸನ್ನುತಾಃ।

---

ಶಿವನು ತನ್ನ ಕಂಠದಲ್ಲಿ ಧರಿಸಿಕೊಂಡಿದ್ದ ವಿಷ್ಣುಬ್ರಹ್ಮರುಗಳ ತಲೆಬುರುಡೆಗಳಿಗೆ ರುದ್ರನ ಕಡೆಗಣ್ಣೋಟವೆಂಬ ಅಮೃತ ರಸಸಮುದ್ರವು ವ್ಯಾಪಿಸಲಾಗಿ, ಬೇಗನೆ ಪ್ರಾಣವು ಕೂಡಿಕೊಂಡಿತು. ಬಳಿಕ ಭಕ್ತಿಯಿಂದ ಆ ತಲೆಬುರುಡೆಗಳು ಕೊಂಡಾಡುತ್ತಿರಲು॥ ಶಿವನು ಒಂದಕ್ಕೆ ಬ್ರಹ್ಮತ್ವವನ್ನೂ, ಮತ್ತೊಂದಕ್ಕೆ ವಿಷ್ಣುತ್ವವನ್ನೂ ಕೊಟ್ಟನು. "ಬ್ರಹ್ಮಸೋಮೋಹಂಪವನಸ್ಸೋಮೋಹಂಪವತೇಸೋಮೋಹಂ ಜನಿತಾಮತೀನಾಂ ಸೋಮೋಹಂಜನಿತಾ ಪೃಥಿವ್ಯಾಸ್ಸೋಮೋಹಂಜನಿತಾಗ್ನೇಸ್ಸೋಮೋಹಂಜನಿತಾಸೂರ್ಯಸ್ಯಸೋಮೋಹಂ ಜನಿತೇಂದ್ರಸ್ಯಸೋಮೋಹಂ ಜನಿತಾಥವಿಷ್ಣೋಸ್ಸೋಮೋಹಮೇವ" ಎಂದು ಪ್ರಸಿದ್ಧವಾಗಿ ಹೇಳಲ್ಪಟ್ಟಿರುವ ಭಸ್ಮಜಾಬಾಲಶ್ರುತಿ ವಚನದಪ್ರಕಾರ ಇಂದ್ರಾದಿ ಸಕಲ ದೇವತೆಗಳಿಗೂ ಜನಕನಾಗಿರುವ ಪರಶಿವನ ಬಳಿಗೆ ಬ್ರಹ್ಮ ವಿಷ್ಣುಗಳಿಬ್ಬರೂ ಹೋಗಿ, ಕೂಡಲೇ ಅವನನುಗ್ರಹದಿಂದ ಕ್ರಮವಾಗಿ ರಜೋಗುಣ-ಸತ್ವಗುಣಸಂಪನ್ನರುಗಳಾಗಿ, ಸೃಷ್ಟಿಗೂ ರಕ್ಷಣೆಗೂ ಸಹ ಕರ್ತೃಗಳಾದರು. ಆ ಪರಶಿವನು ಕೂಡ ಮೊದಲಿದ್ದಂತೆಯೇ ಬ್ರಹ್ಮಾಂಡಗಳ ಸಮೂಹವನ್ನು ತನ್ನ ಕಣ್ಣುಸನ್ನೆಯಮಾತ್ರದಿಂದಲೇ ಪೂರ್ವದಂತೆ ಸೃಷ್ಟಿಸಿ ನಿಲ್ಲಿಸಿದನು ॥೫೫॥ ಜಗತ್ತನ್ನು ನಿಗ್ರಹಿಸುವ ಮತ್ತೂ ಅನುಗ್ರಹಿಸುವ ಗುಣದಿಂದ ಸಂಪೂರ್ಣನಾಗಿರುವವನೂ ತ್ರಿಶೂಲಧಾರಿಯೂ ॥೫೬॥ ಅತ್ಯುತ್ಕೃಷ್ಟವಾದ ದಿವ್ಯತೇಜಸ್ಸುಳ್ಳವನೂ ಲಿಂಗದೇಹಿಯೂ ಆದ ಪರಮೇಶ್ವರನ ಪೂರ್ವೋಕ್ತವಾದ ಪೂಜ್ಯವಾದ ಜಗತ್ಸಂಹಾರಲೀಲೆಯೂ, ಜಗತ್ತನ್ನು ಸೃಷ್ಟಿಸುವ ಆತನ ಅತ್ಯುತ್ಕೃಷ್ಟಗಳಾದ ಲೀಲೆಗಳೂ, ಆತನ ಮಹಾನರ್ತನ ಲೀಲೆಯೇ ಮೊದಲಾದ ಶ್ಲಾಘ್ಯಗಳಾದ ಸಕಲಲೀಲೆಗಳೂ ಸಹ ಆತನ ಸರ್ವಸ್ವಾತಂತ್ರ್ಯವನ್ನೂ, ಷಡ್ಗುಣೈಶ್ವರ್ಯವನ್ನೂ, ನಿತ್ಯತ್ವವನ್ನೂ,

ಸ್ವಸ್ಯಸ್ವಾತನ್ತ್ರ್ಯಮೈಶ್ವರ್ಯಂನಿತ್ಯತ್ವಂವಿಭುತಾಮಪಿ ||೫೮|| ಅನನ್ಯಸಾಮಾನ್ಯಕೀರ್ತಿಂಮಹಿಮಾನಮನಿನ್ದಿತಮ್। ತಥಾಽನನ್ಯಶರಣ್ಯಾನಾಂಪ್ರಮಥಾನಾಂಚವೈಭವಮ್॥೫೯॥ಪ್ರದರ್ಶಯಿತುಮೇವಾತಃ ಕಥಂಸ್ಯುರ್ನಿಷ್ಪ್ರಯೋಜನಾಃ । ತಸ್ಮಾದಸಿಂದ್ಯಲೀಲೈಕವರ್ತಿನೋಜ್ಞಾನರೂಪಿಣಃ ||೬೦|| ಆನನ್ದಮೂರ್ತೇರತುಲಕೀರ್ತೇಸ್ಸರ್ವಜಗತ್ಪತೇಃ । ಲೀಲಾಸ್ಸುಧಾಂಶುಧರಣಪ್ರಮುಖಾನಿಖಿಲಾಅಪಿ ||೬೧|| ಕಿಂನಿನ್ದಿತಾಸ್ಸ್ಯುರ್ಭುವನೇವಂದ್ಯಾಏವನಸಂಶಯಃ । ಇತಿಶ್ರುತಿಪುರಾಣೇತಿಹಾಸಸ್ಮೃತ್ಯಾಗಮಾದಿಷು||೬೨|| ಯಥೋಕ್ತಮೇವಕಥಿತಂಭಕ್ತ್ಯುದ್ರೇಕಾನ್ನಭಾಷಿತಮ್ । ವಿಚಾರಯತವಿದ್ವಾಂಸೋಯೂಯಂಮಧ್ಯಸ್ಥಭಾವತಃ||೬೩|| ವಿಷ್ಣುಭಕ್ತ್ಯಾಚಮದ್ಭಕ್ತ್ಯಾನಾಸ್ತಿನಾಸ್ತಿಪರಾಗತಿಃ । ಶಂಭುಭಕ್ತ್ಯೈವಸರ್ವೇಷಾಂಸತ್ಯಮೇವಮಯೋದಿತಮ್||೬೪|| ಶಿವಏವಾಸ್ತಿನೈವಾನ್ಯದಿತಿಯೋನಿಶ್ಚಯಸ್ಸ್ಥಿರಃ । ಸದಾಸಏವಸಿದ್ಧಾನ್ತಃ ಪೂರ್ವಪಕ್ಷಾಸ್ತಥಾಪರೇ||೬೫|| ಅತಸ್ಸರ್ವಂ

---

ಸರ್ವವ್ಯಾಪಕತ್ವವನ್ನೂ ||೫೮|| ಇತರರಿಗೆ ದೊರೆಯದಿರುವ ವಿಶೇಷವಾದ ಕೀರ್ತಿಯನ್ನೂ, ನಿರ್ದುಷ್ಟವಾದ ಮಾಹಾತ್ಮ್ಯವನ್ನೂ, ಮತ್ತೂ ಶಿವನಹೊರತು ಮತ್ತೊಬ್ಬರನ್ನು ಮರೆಹುಗದಿರುವ ಪ್ರಮಥರುಗಳ ವೈಭವವನ್ನೂ ||೫೯|| ಜಗತ್ತಿಗೆ ತೋರ್ಪಡಿಸುವುದಕ್ಕೆ ಸಾಧಕವಾಗಿರುತ್ತವೆ. ಅದುಕಾರಣ, ಆಲೀಲೆಗಳು ಅದುಹೇಗೆ ನಿಷ್ಪ್ರಯೋಜನಗಳಾದಾವು? ಆದುದರಿಂದ, ನಿಂದಿಸಲ್ಪಡಲರ್ಹವಲ್ಲದ ಲೀಲೆಗಳಲ್ಲಿ ಪ್ರವರ್ತಿಸಿ ಸಕಲನೂ, ಜ್ಞಾನಸ್ವರೂಪನಾಗಿ ನಿಷ್ಕಲನೂ ಆದ- ||೬೦|| ನಿತ್ಯಾನಂದಸ್ವರೂಪನೂ, ಅನುಪಮ ಕೀರ್ತಿಸಂಪನ್ನನೂ, ಸಕಲ ಜಗದೀಶನೂ ಆದ-ಶಂಕರನ ಚಂದ್ರಧರಣಾದಿ ಲೀಲೆಗಳೆಲ್ಲವೂ ||೬೧|| ಲೋಕದಲ್ಲಿ ನಿಂದ್ಯಗಳಾಗುವುವೆ? ಅವು ಲೋಕದಲ್ಲಿ ವಂದ್ಯಗಳೇ ಸರಿ ಯೆಂಬ ವಿಷಯದಲ್ಲಿ ಸಂಶಯವಿಲ್ಲ. ಈ ಪೂರ್ವೋಕ್ತರೀತಿಯಾಗಿ ನಾನು ಹೇಳಿರುವುದೆಲ್ಲವೂ ವೇದಾಗಮಪುರಾಣೇತಿಹಾಸ ಧರ್ಮಶಾಸ್ತ್ರಾದಿಗಳಲ್ಲಿ ಹೇಗೆ ಹೇಳಲ್ಪಟ್ಟಿರುವುದೋ ಅದನ್ನನುಸರಿಸಿ ಹೇಳಿದ ಮಾತಾಗಿರುವುದೇ ಹೊರತು ಕೇವಲ ಶಿವಭಕ್ತ್ಯತಿಶಯದಿಂದ ಆಡಲ್ಪಟ್ಟುದಲ್ಲ. ಎಲೈ ವಿದ್ವಾಂಸರೆ! ನೀವು ಮಧ್ಯಸ್ಥಭಾವದಿಂದ ವಿಚಾರಮಾಡಿ ನೋಡಿರಿ||೬೩||ಮತ್ತೂ ಬ್ರಹ್ಮನು-,, ವಿಷ್ಣುಭಕ್ತಿಯಿಂದಲೇ ಆಗಲೀ, ನನ್ನ ಭಕ್ತಿಯಿಂದಲೇ ಆಗಲೀ, ಸದ್ಗತಿಯಾಗುವುದಿಲ್ಲ. ಶಿವಭಕ್ತಿಯಿಂದಲೇ ಸರ್ವರಿಗೂ ಸದ್ಗತಿಯಾಗುವುದು. ಈ ನನ್ನ ಮಾತೇ ಸತ್ಯವಾದುದು ||೬೪|| ಶಿವನೊಬ್ಬನೇ ಉಪಾಸ್ಯನಾಗಿರತಕ್ಕವನು. ಮತ್ತೊಬ್ಬನಿಲ್ಲವೆಂಬ ಮನೋನಿಶ್ಚಯವೇ ದೃಢವಾದುದು. ಅದೇ ಯಾವಾಗಲೂ ಸಿದ್ಧಾಂತವು. ಉಳಿದುವೆಲ್ಲವೂ ಪೂರ್ವಪಕ್ಷವಾದುವುಗಳು. ||೬೫|| ಅದುಕಾರಣ ಸದ್ಯೋಮುಕ್ತಿಯನ್ನಪೇಕ್ಷಿಸುವುದಾದರೆ ಉಳಿದ

ಪರಿತ್ಯಜ್ಯಶಿವಾದನ್ಯತ್ತು ದೈವತಮ್ । ತಮೇವಶರಣಂಗಚ್ಛೇತ್ಸದ್ಯೋವಮು
ಕ್ತಿಂಯದೀಚ್ಛತಿ ॥೬೬॥ ಅಯಮೇವಹಿವೇದಾರ್ಥೋನಾಪರಃಪರಮಾಸ್ತಿ
ಕಾಃ । ಅನ್ಯಥಾಚೇತ್ಸುರಾಸ್ಸ್ವಯಂಮೂರ್ಧಾಮೇತುಪತಿಷ್ಯತಿ ॥೬೭॥
ಇತಿವಾಕ್ಯಾನ್ಮಹಾದೇವಾದಿತರಂದೈವತಂಭುವಿ। ಯದ್ಯನ್ಯವಾದಿಷಮಸ್ತೀತಿ
ಮೇಪತೇನ್ಮಸ್ತಕಸ್ತಥಾ॥೬೮॥ ಪುರಾವ್ಯಾಸೇನಮುನಿನಾನದೇವಃಕೇಶವಾ
ತ್ಪರಃ । ಇತ್ಯಾಭಾಷ್ಯಸ್ವಕರಯೋಃಕಾಶ್ಯಾಂವಿಶ್ವೇಶಸನ್ನಿಧೌ ॥೬೯॥
ಮೋಹಾದುತ್‌ಕ್ಷಿಪ್ತಯೋಸ್ತೂರ್ಣಂನನ್ದಿನಾಸ್ತಂಭಿತೌಭುಜೌ । ಇತಿ
ವಾಕ್ಯಾತ್ತಸ್ಯಕರೌಯಥಾಛಿನ್ನೌಬಭೂವತುಃ॥೭೦॥ ಇತ್ಥಂಭಕ್ತ್ಯಾಮ
ಹೇಶಸ್ಯಶಙ್ಕರಸ್ಯಜಗತ್ಪತೇಃ। ಸ್ಥಾಪಯಾಮಾಸಮಾಹಾತ್ಮ್ಯಂತದಾನೀಂ
ಭಾರತೀಪತಿಃ ॥೭೧॥ ವ್ಯಾಸೋಽಪಿಸಭಯೋದ್ವಿಗ್ನಃಪಶ್ಚಾದ್ವ್ಯಾಸಾಷ್ಟ
ಕೇನತಂ । ಸ್ತುತ್ವಾಮಹೇಶ್ವರಂದೇವಂನದೇವಶ್ಶಂಕರಾತ್ಪರಃ ॥೭೨॥ಇ
ತ್ಯುಕ್ತೇಃಸ್ಥಾಪಯಾಮಾಸಶಿವವೈಭವಮುತ್ತಮಮ್।ತಸ್ಮಾದಹಂಚಗೌರೀ
ಶಾತ್ಪರಂನಾಸ್ತೀತಿದೈವತಮ್॥೭೩॥ ಗೃಹಿಷ್ಯೇಽಯೋಘನಂತಪ್ತಂಲಪ್ಸ್ಯೇ

---

ದೇವತೆಗಳನ್ನೆಲ್ಲಾ ಬಿಟ್ಟು, ಆ ಪರಶಿವನನ್ನೇ ಮರೆಹುಗಬೇಕು ॥೬೬॥ ಎಲೈ ಆಸ್ತಿ
ಕರಾದ ದೇವತೆಗಳಿರಾ ! ಇದೇ ವೇದಾರ್ಥವು. ಇದಕ್ಕಿಂತಲೂ ಉತ್ಕೃಷ್ಟವಾದಭಿ
ಪ್ರಾಯವು ಬೇರೊಂದಿಲ್ಲ. ಶಿವನ ಹೊರತು ಇತರ ದೇವತೆಗಳು ಉತ್ಕೃಷ್ಟರಾಗಿರು
ವುದು ನಿಜವಾದರೆ ನನ್ನ ತಲೆಯು ನಿಜವಾಗಿ ಕಳೆದು ಬೀಳುತ್ತದೆ. ಲೋಕದಲ್ಲಿ
ಶಿವನಿಗಿಂತ ಅನ್ಯನಾದ ದೇವತೆಯು ಇರುವುದೆಂದು ನಾನು ಹೇಳುವೆನಾದರೆ ॥೬೮॥
ಪೂರ್ವದಲ್ಲಿ ವ್ಯಾಸಮುನಿಯು ಕಾಶಿಯೊಳಗೆ ವಿಶ್ವೇಶ್ವರನ ಸಮೀಪದಲ್ಲಿ "ವಿಷ್ಣುವಿಗಿಂತ
ಶ್ರೇಷ್ಠವಾದ ದೈವವಿಲ್ಲ" ವೆಂದು ಅಜ್ಞಾನದಿಂದ ಹೇಳಿ, ತನ್ನ ಎರಡುಕೈಗಳನ್ನೂ ಮೇ
ಲಕ್ಕೆತ್ತಲಾಗಿ, "ಕೂಡಲೇ ನಂದೀಶನಿಂದ ಆ ತೋಳುಗಳು ಸ್ತಂಭಿಸಲ್ಪಟ್ಟುವು"
ಎಂಬ ಪುರಾಣವಾಕ್ಯವಿರುವಂತೆ ಅವನ ಹಸ್ತಗಳು ಹೇಗೆ ಕತ್ತರಿಸಲ್ಪಟ್ಟುವೋ ಹಾಗೆ
ನನ್ನ ತಲೆಯೂ ಕತ್ತರಿಸಿಬೀಳುವುದು."॥೭೦॥ ಎಂಬುದಾಗಿ ಹೇಳಿ, ಬ್ರಹ್ಮನು ಭಕ್ತಿ
ಯಿಂದ ಜಗದೀಶನಾದ ಶಂಕರನ ಮಾಹಾತ್ಮ್ಯವನ್ನು ಆಗ ಸ್ಥಾಪಿಸಿರುವನು ॥೭೧॥
ಆ ವೇದವ್ಯಾಸನು ಕೂಡ ಭುಜಸ್ತಂಭನವಾದನಂತರ ಭಯದಿಂದ ಬೆರಗಾದವನಾಗಿ
ವ್ಯಾಸಾಷ್ಟಕವೆಂಬ ಸ್ತೋತ್ರಪದ್ಯಗಳಿಂದ ಶಿವನಿಗಿಂತಲೂ ಉತ್ಕೃಷ್ಟವಾದ ದೈವವು
ಮತ್ತೊಂದಿಲ್ಲವೆಂದು ಹೇಳಿ, ಆಪರಶಿವನನ್ನು ಸ್ತುತಿಸಿ॥೭೨॥ಶಿವನುಹತ್ತ್ವವನ್ನು ಜಗ
ತ್ತಿನಲ್ಲಿ ಸ್ಥಾಪಿಸಿದನು. ಆದುದರಿಂದ ನಾನೂಕೂಡ ಪರಶಿವನಿಗಿಂತಲೂ ಉತ್ಕೃಷ್ಟ
ವಾದ ದೈವವಿಲ್ಲವೆಂದು ಹೇಳಿ, ಇದರ ಯಥಾರ್ಥ್ಯದ ದೃಷ್ಟಾಂತಕ್ಕಾಗಿ ಕಾದ ಕಬ್ಬು

ಚ್ಛಿತ್ವಾಶಿರೋಮಮ । ವಾದಜಲ್ಪವಿತಂಡಾಭಿರ್ಜಯಿಷ್ಯಾಮ್ಯಥವಾಧ್ರುವಮ್॥೭೪॥ ಕಿಂಚಯಃಶ್ಯಂಕರಾದನ್ಯೋದೇವೋಸ್ತೀತಿವದೇನ್ನರಃ।ಅಮುಷ್ಯಮಸ್ತಕೇವಾಮಪಾದನ್ಯಾಸಂಕರೋಮ್ಯಹಮ್॥೭೫॥ ಪ್ರತಿಜ್ಞೇಯಂಮಮೋದಗ್ರಾಪಾದೋಪ್ಯೇಷಮಯೋದ್ಧೃತಃ । ಇತಿಬ್ರುವನ್‌ಜಗತ್‌ಖ್ಯಾತೇಶ್ರೀರುದ್ರಮಹಿಮಾಭಿಧೇ॥ ಪ್ರಬನ್ಧೇಪರಮೇಶಸ್ಯಮಹಿಮಾನಂಮಹೋನ್ನತಂ।ಸಂಪ್ರೀತ್ಯಾಸ್ಥಾಪಯಾಮಾಸಮಲ್ಲಿಕಾರ್ಜುನದೇಶಿಕಃ॥೭೬॥

ಇತ್ಯಸಂಖ್ಯಾತಮಹಾಮಾಹೇಶ್ವರದಿವ್ಯಶ್ರೀಪಾದಪದ್ಮನಿರಂತರಭಾವನಾಪರಿರಂಜಿತಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲಭಸ್ಮೀಕೃತಾಖಿಲಭವಬೀಜಸ್ಯ ಶ್ರೀವೀರಶೈವಮತಾಚಾರ್ಯಗುರುರಾಜಸ್ಯ ಕೃತೌ ಶ್ರೀಮಲ್ಲೋಕಾರಾಧ್ಯಮಲ್ಲಿಕಾರ್ಜುನಪಣ್ಡಿತಾರಾಧ್ಯಚರಿತ್ರೇ ವಾದಪ್ರಕರಣೇ ಪರಮೇಶ್ವರತಾಂಡವಕಾರಣಕಥನಂನಾಮ ದ್ವಾವಿಂಶೋಽಧ್ಯಾಯಃ.

---

ನದ ಗಟ್ಟಿಯನ್ನಾದರೂ ಹಿಡಿಯುತ್ತೇನೆ ; ನನ್ನ ತಲೆಯನ್ನು ಕತ್ತರಿಸಿ ಮರಳಿ ಪಡೆಯುತ್ತೇನೆ. ಅಥವಾ ಸ್ವಸಮಯವಾದವವನ್ನೂ ಸ್ವಸಮಯಸ್ಥಾಪನ ಪರಸಮಯಖಂಡನವನ್ನೂ ಅಥವಾ ಕೇವಲ ಪರಸಮಯಖಂಡನವನ್ನೂ ಮಾಡಿ ಜಯಶೀಲನಾಗುತ್ತೇನೆ ಇದು ನಿಜ ॥೭೪॥ ಅದುಕಾರಣ, ಶಿವನ ಹೊರತು ಬೇರೆ ದೈವವು ಇರುವುದೆಂದು ಯಾವ ಮನುಷ್ಯನು ಹೇಳುವನೋ ಅಂಥ ಇವನ ತಲೆಯಮೇಲೆ ನನ್ನ ಎಡಗಾಲನ್ನಿಡುತ್ತೇನೆ ॥ ಇದೇ ನನ್ನ ಉತ್ಕೃಷ್ಟವಾದ ಶಪಥ. ಇದೋ ಅದಕ್ಕಾಗಿಯೇ ಈ ನನ್ನ ಕಾಲನ್ನು ಎತ್ತಿರುವೆನು, ಎಂದು ಹೇಳುವವನಾಗಿ, ಶ್ರೀಮನ್ಮಲ್ಲಿಕಾರ್ಜುನ ಪಂಡಿತ ಗುರೂತ್ತಮನು ಲೋಕಪ್ರಸಿದ್ಧವಾದ "ಶ್ರೀರುದ್ರಮಹಿಮೆ" ಎಂಬ ಹೆಸರುಳ್ಳ ತನ್ನ ಗ್ರಂಥದಲ್ಲಿ ಪರಮೇಶ್ವರನ ಅತ್ಯಧಿಕವಾದ ಮಾಹಾತ್ಮ್ಯವನ್ನು ಸದ್ಭಕ್ತಿಯಿಂದ ಸ್ಥಾಪಿಸಿದನು. ॥೭೬॥

ಎಂಬಲ್ಲಿಗೆ ಅಗಣಿತ ವೀರಮಾಹೇಶ್ವರರ ದಿವ್ಯ ಪಾದಕಮಲವನ್ನು ಸದಾ ಧ್ಯಾನಮಾಡುವುದರಿಂದ ವಿಲಸಿತವಾದ ಹೃದಯಕಮಲವುಳ್ಳವನೂ, ಮಂಗಳಪ್ರದವಾದ ಪಶು-ಪಾಶ-ಪತಿಜ್ಞಾನವೆಂಬ ಬೆಂಕಿಯಿಂದ ಭವಬೀಜವನ್ನು ಸುಟ್ಟು ಭಸ್ಮಮಾಡಿದವನೂ ಆದ ವೀರಶೈವ ಮತಾಚಾರ್ಯ ಗುರುರಾಜನಿಂದ ವಿರಚಿತವಾದ ಶ್ರೀಮಲ್ಲೋಕಾರಾಧ್ಯ ಪಂಡಿತಾರಾಧ್ಯಚರಿತ್ರಕ್ಕೆ ಎ. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಯೆಂಬ ಕನ್ನಡ ಟಿಪ್ಪಣದಲ್ಲಿ ವಾದಪ್ರಕರಣದೊಳಗೆ ಪರಶಿವನ ತಾಂಡವದ ಕಾರಣವನ್ನು ನಿರೂಪಿಸುವ ೨೨ನೆಯಧ್ಯಾಯವು ಮುಗಿದುದು.

ಪೂರ್ವಂಪಾಲ್ಕುರ್ಕಿಸೋಮಾಭಿಧವರಗುರುಣಾನಿರ್ಮಿತೇಭಾಷ ಯಾಂಧ್ರ್ಯಾ ಪಶ್ಚಾಚ್ಛ್ರೀವೀರಶೈವಾಶ್ರಮಗುರುಗುರುರಾಡ್‌ದೇಶಿಕೇಂದ್ರೇಣವಾಣ್ಯಾ । ಗೈರ್ವಾಣ್ಯಾ ಸಂಪ್ರಣೀತೇ ನಿಖಿಲಜನಗುರೋಃ ಪಣ್ಡಿತೇನ್ದ್ರಸ್ಯಭವ್ಯೇ ಚಾರಿತ್ರೇ ವಾದನಾಮಪ್ರಕರಣ ಮಗಮತ್ಪೂರಿಲಾಲ್ಯಂ ತೃತೀಯಮ್ ॥

ವಾದಪ್ರಕರಣಂ ಸಂಪೂರ್ಣಂ.

---

ಶ್ರೀಸಾಂಬಾಯನಮಃ.

ಭದ್ರಂ ಶಿವಂ ಮಂಗಳಂ.

---

ಮೊದಲು ಪಾಲ್ಕುರ್ಕಿಸೋಮಾರಾಧ್ಯಗುರುವಿನಿಂದ ತೆಲುಗಿನಲ್ಲಿ ರಚಿತವಾಗಿದ್ದು, ಬಳಿಕ ವೀರಶೈವಸಮಯದ ಗುರುವರ್ಯನಾದ ಗುರುರಾಜಕವಿಯಿಂದ ಸಂಸ್ಕೃತಭಾಷೆಯಲ್ಲಿ ರಚಿಸಲ್ಪಟ್ಟ ಮಂಗಳಕರವಾದ ಶ್ರೀಮಲ್ಲಿಕಾರಾಧ್ಯ ಪಂಡಿತಾರಾಧ್ಯಚರಿತ್ರದೊಳಗೆ ವಿದ್ವದಭಿನಂದ್ಯವಾದ ೩ನೆಯ ವಾದಪ್ರಕರಣವು ಸಂಪೂರ್ಣವಾಯಿತು.

ಮಂಗಳಮಕ್ಕೆ.

ಶ್ರೀಮಜ್ಜಗದ್ಗುರವೇ ನಮಃ

# ಅಥ ಮಹಿಮಪ್ರಕರಣಂ.

## ಪ್ರಥಮೋಽಧ್ಯಾಯಃ.

(ಬೌದ್ಧಾಚಾರ್ಯಹನನಕಥನಂ.)

ಪಂಡಿತಾರಾಧ್ಯದೇವೇನ ದಂಡಿತಪ್ರತಿವಾದಿನಾ | ಖ್ಯಾತಖಂಡನಶಾಸ್ತ್ರಾದಿ ತರ್ಕಪ್ರೌಢೇರ್ಮಹತ್ವತಃ ||೧|| ಅನಂತಶ್ರುತ್ಯುಪನಿಷತ್ಸ್ಮೃತೀನಾಂ ಸಂಪ್ರೋಕ್ತಿಭಿಃ | ಸಾಕ್ಷಿವಾಕ್ಯೈಶ್ಚಾಗಮೇತಿಹಾಸಾದೀನಾಮನಿಂದಿತೈಃ ||೨|| ಶಿಷ್ಟೈರಸುಮತೈರ್ಹೇತು ದೃಷ್ಟಾಂತಾದಿಸಮನ್ವಿತೈಃ | ಪ್ರಮಾಣವಾಕ್ಯೈಶ್ಚ ವಾದೇ ಕೃತೇಽಗ್ರೇ ಸರ್ವವಾದಿನಾಂ ||೩|| ತನ್ಮಲ್ಲಿಕಾರ್ಜುನಾರಾಧ್ಯದೇವೇನೋರ್ಜಿತಕೀರ್ತಿನಾ | ಪ್ರಶ್ನಾನಾಂ ಕ್ರಿಯಮಾಣಾನಾಂ ಪ್ರತಿಪ್ರಶ್ನಾನ ಘೋಚಿತಾನ್ ||೪|| ವಕ್ತುಂ ಬೌದ್ಧೋಽಸಮರ್ಥಸ್ಸನ್ನಿರ್ವ್ಯಾಜ್ವಲಲೋ

---

ಶ್ರೀಗುರುಪರಬ್ರಹ್ಮಣೇ ನಮಃ.

# ಮಹಿಮಪ್ರಕರಣವು.

## ೧ ನೆ ಅಧ್ಯಾಯವು.

(ಬೌದ್ಧಗುರುವನ್ನು ಕೊಂದ ಕಥೆಯು.)

ಪರವಾದಿಗಳನ್ನು ಶಿಕ್ಷಿಸಿದ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಸ್ವಾಮಿಯು ಪೂರ್ವಪ್ರಕರಣೋಕ್ತರೀತಿಯಿಂದ ವೆಲ್ನಾಡ ಚೋಳನ ಸಭೆಯಲ್ಲಿ ಸಕಲ ಮತವಾದಿಗಳ ಇದಿರಿಗೆ ಪ್ರಸಿದ್ಧಗಳಾದ ಖಂಡನಶಾಸ್ತ್ರಗಳ ಆಧಾರಗಳಿಂದಲೂ, ತರ್ಕಶಾಸ್ತ್ರಪಾಂಡಿತ್ಯಮಹತ್ವದಿಂದಲೂ, ವೇದವೇದಾಂತ ಸ್ಮೃತಿಪ್ರಮಾಣಗಳಿಂದಲೂ, ನಿರ್ದುಷ್ಟಗಳಾದ ಆಗಮ ಪುರಾಣೇತಿಹಾಸಾದಿ ಉಪಬೃಹ್ಮಣವಚನಗಳಿಂದಲೂ, ಸತ್ಪುರುಷರು ಒಪ್ಪುವಂಥ ಹೇತುವಾದ ದೃಷ್ಟಾಂತವಾದಗಳಿಂದ ಕೂಡಿದ ಪ್ರಮಾಣವಾಕ್ಯಗಳಿಂದಲೂ ಸಹ ವಾದವನ್ನು ನಡೆಯಿಸಲಾಗಿ ||೩|| ಮಹಾ ಕೀರ್ತಿಸಂಪನ್ನನಾದ ಆ ಪಂಡಿತಾರಾಧ್ಯಸ್ವಾಮಿಯು ಮಾಡಿದ ಪ್ರಶ್ನೆಗಳಿಗೆ ಯಾವುದಕ್ಕೂ ಯೋಗ್ಯಗಳಾದ ಉತ್ತರಗಳನ್ನು ||೪|| ಹೇಳುವುದಕ್ಕೆ ಬೌದ್ಧನು ಅಸ

ಜನಃ | ದಂದಹ್ಯಮಾನೋ ನಿರ್ಗಚ್ಛ ದ್ಧೂಮಸಂಲಕ್ಷ್ಯನಾಸಿಕಃ || ೫ ||
ಉಪತಾಪಪರಿಸ್ವಿನ್ನ ತನುರ್ಭ್ರುಕುಟಿಭೀಷಣಃ | ಸಮುನ್ನತೀಕೃತಶ್ಮಶ್ರುಪ್ರ
ರೋಹನಿಚಿತಾನನಃ ||೬|| ಕೋಪಾತಿರೇಕಾವಿರತ ಕಂಪಮಾನ ಕರದ್ವಯಃ |
ಆರಕ್ತಾಭೀಳವದನಸ್ಸಮುತ್ತುಙ್ಗಕಟದ್ವಯಃ || ೭ || ಸಂಕುಚತ್ಕಂಧರಸ್ತ್ರುಟ್ಯ
ದ್ವಚಸಸ್ಖಲದೂರುಕಃ | ಪ್ರಸ್ಪಂದಮಾನಹೃದಯಃ ಸ್ಫುರದೋಷ್ಠಪುಟೋ
ಭವನ್ ||೮|| ಆದ್ಯಂ ಶ್ರೀಪಣ್ಡಿತಾರಾಧ್ಯ ಮಭೇದ್ಯಂ ಪರವಾದಿನಾಂ | ಅಗ
ಣ್ಯಪುಣ್ಯಂ ಲೋಕೈಕವರೇಣ್ಯಂ ಮಾನ್ಯವರ್ತನಂ || ೯ || ಅತಿಧಿಕ್ಕಾರವಚನಾ
ನ್ಯುಕ್ತ್ವಾ ಕ್ರೋಧವಿಜೃಂಭಿತಃ | ಹತೋತ್ಸಾಹಸ್ತತ್ಸಭಾಯಾ ನಿರ್ಯಯೌ ವಾದಿಭಿ
ಸ್ಸಹ ||೧೦|| ತತ ಶ್ಶ್ರೀಪಣ್ಡಿತಾರಾಧ್ಯದೇವಶ್ಶ್ರೀಶಗಣಾನ್ವಿತಃ | ಅತುಲಪ್ರತಿ
ಭಾವಾದಿಜಯಭಂಜನವೈಭವಮ್ || ೧೧ || ಶ್ರೀಮಹಾದೇವಮಾಹಾತ್ಮ್ಯಪರಿ
ಪಾಲನವೈಖರೀ | ಕೃಪಾಕರತ್ವಂ ಚ ಲೋಕಗುರುತ್ವಂ ಭಕ್ತಿರುನ್ನತಾ ||೧೨||
ಪರತತ್ತ್ವವೇದಕತ್ವಮೇತೇಷಾಮೇವ ಯುಜ್ಯತೇ | ಇತಿ ಪೌರೇಷು ಸರ್ವೇಷು ಬು
ಧೇಷು ಪರಿಶಂಸಿಷು ||೧೩|| ಆರೂಢಭಕ್ತಿಸಾಮಗ್ರೀಧುರೀಣತ್ವೇನ ಶಾಸತಿ |

---

ಮರ್ಘನಾಗಿ, ಕಣ್ಣುಗಳಿಂದ ಕಿಡಿಗಳು ಹೊರಡುತ್ತಿರುವವನಾಗಿ, ಕ್ರೋಧಾಗ್ನಿಯಿಂದ ಸುಡು
ತ್ತಿರುವವನಾಗಿ, ಮೂಗಿನಿಂದ ಹೊರಹೊರಡುತ್ತಿರುವ ಕೋಪಾಗ್ನಿಯ ಹೊಗೆಯುಳ್ಳವನಾಗಿ
||೫|| ಬೇಗೆಯಿಂದ ಮೈ ಬೆಮರುಂಡವನಾಗಿ, ಹುಬ್ಬು ಗಂಟಿಕ್ಕಿದವನಾಗಿ, ನಿಗುರಿದ ಮೀಸೆ
ಗಡ್ಡಗಳಿಂದ ತುಂಬಿದ ಮುಖವುಳ್ಳವನಾಗಿ ||೬|| ಅತ್ಯಂತ ಕೋಪದಿಂದ ಬಿಡುವಿಲ್ಲದೆ ನಡು
ಗುತ್ತಿರುವ ಕೈಗಳುಳ್ಳವನಾಗಿ, ಬಲು ಕೆಂಪೇರಿದ ಮುಸುಡಿಯುಳ್ಳವನಾಗಿ, ಉಬ್ಬಿದ ಗಂಡ
ಸ್ಥಲಗಳುಳ್ಳವನಾಗಿ ||೭|| ಬಗ್ಗಿದ ಕೊರಲುಳ್ಳವನಾಗಿ, ಗದ್ಗದಿಸುವ ಮಾತುಳ್ಳವನಾಗಿ,
ನಿಲ್ಲಲಾರದೆ ತತ್ತರಿಸುತ್ತಿರುವ ತೊಡೆಗಳುಳ್ಳವನಾಗಿ, ದಡಗುಟ್ಟುವ ಎದೆಯುಳ್ಳವನಾಗಿ, ಕುಣಿ
ಯುತ್ತಿರುವ ತುಟಿಗಳುಳ್ಳವನಾಗಿ ||೮|| ಗುರುಕುಲಕ್ಕೆಲ್ಲಾ ಮೊದಲಿಗನೂ, ಪರವಾದಿಗಳಿಂ
ದ ಜಯಿಸಲ್ಪಡಲು ಅಸಾಧ್ಯನೂ, ಅತ್ಯಂತ ಪರಿಶುದ್ಧನೂ, ಲೋಕೈಕಶ್ರೇಷ್ಠನೂ, ಪೂಜ್ಯವಾದ
ನಡತೆಯುಳ್ಳವನೂ ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಕುರಿತು ||೯|| ಕೋಪದಿಂದ
ನಿಗುರಿ ನಿಂತು ಅತ್ಯಂತ ತಿರಸ್ಕಾರದ ಮಾತುಗಳನ್ನಾಡಿ, ತನ್ನ ಜತೆಯ ವಾದಿಗಳೊಡನೆ ಕೂಡಿ
ಉತ್ಸಾಹಗೆಟ್ಟು ಆ ಸಭೆಯಿಂದ ಹೊರಟುಹೋದನು ||೧೦|| ಬಳಿಕ ಆ ಪಟ್ಟಣದ ವಿದ್ವಾಂ
ಸರೆಲ್ಲರೂ ಪಂಡಿತಾರಾಧ್ಯನನ್ನು ಕುರಿತು—ಅಸಾಧಾರಣವಾದ ಬುದ್ಧಿಮತ್ತೆಯಿಂದ ಪರವಾ
ದಿಗಳನ್ನು ಖಂಡಿಸುವ ವೈಭವವೂ, ಶಿವಮಾಹಾತ್ಮ್ಯವನ್ನು ಪರಿಪೋಷಿಸುವ ರೀತಿಯೂ, ದಯಾ
ಶಾಲಿತ್ವವೂ, ಜಗದ್ಗುರುತ್ವವೂ, ಮಹಾಭಕ್ತಿಯೂ, ಪರತತ್ತ್ವದ ನೆಲೆಯರಿವೂ ಸಹ ಇಂಥವ
ರಿಗೇ ಅಲ್ಲದೆ ಸಲ್ಲತಕ್ಕುದು? ಎಂಬುದಾಗಿ ಹೊಗಳುತ್ತಿರಲಾಗಿ ||೧೩|| ತನ್ನಲ್ಲಿ ಶಿವಭಕ್ತಿ

ಜಯಲಕ್ಷ್ಮೀಕೀರ್ತಿಲಕ್ಷ್ಮೀ ವೀರಲಕ್ಷ್ಮೀಕದಮ್ಬಕೇ ||೧೪|| ದಾಸೀಭಾವಂ ಸಮಾಯಾತೇ ಸಾಕಂಸ್ವಮಹಿಮಶ್ರಿಯಾ | ಆಜಗಾಮನಿಜಸ್ಥಾನಂಪ್ರತಿ ಸೌಜನ್ಯವಾರಿಧಿಃ ||೧೫|| ಅಥೈವಂಚಿಂತಯಾಮಾಸುಸ್ತತ್ರತತ್ರವಿಪಶ್ಚಿತಃ | ಕಪೋಲತಲವಿನ್ಯಸ್ತ ಹಸ್ತಾಸ್ಸಂತ್ರಸ್ತವೀಕ್ಷಣಾಃ ||೧೬|| ಬತಶ್ರೀಪಣ್ಡಿತಾರಾಧ್ಯಮುವಾದೀದತಿನಿಷ್ಠುರಮ್ | ಮದೋನ್ಮತ್ತೋಽಯಮಧಮೋಬೌದ್ಧೋವಿಧ್ವಸ್ತಸತ್ಪಥಃ ||೧೭|| ತರ್ಕಯಾಮಾಸಕಿಮಿತಿಕಿಂವಾವಚಸಮಬ್ರವೀತ್ | ಪರಾಜಿತಃಕಿಮರ್ಥಂವಾ ನಿಜದುರ್ಬುದ್ಧಿಭಾವಿತಃ ||೧೮|| ಸಂರಕ್ಷಣಾರ್ಥಾಯ ಜಗತಾಂ ಸಂಜಾತಃಪ್ರಾಜ್ಞಮಹೀತಲೇ | ದಕ್ಷಿಣಾಮೂರ್ತಿರೇವಾಯಮಾರಾಧ್ಯಃಪ್ರಾಕೃತಃಕಿಮು ||೧೯|| ದೇಹಸ್ವೀಕೃತಿಮಾತ್ರೇಣ ಸಬೌದ್ಧೋನರಇತ್ಯಮುಂ | ಯದ್ವಚೋಭಿಸ್ತಿರಸ್ಕಾರಂ ಚಕ್ರೇತೂಷ್ಣೀಂನಯಾತಿತತ್ ||೨೦|| ಭೀಮೇಶ್ವರಸ್ಯಗದ್ಯಾದಾವಾರಾಧ್ಯೇನಾಮುನಾಕೃತಮ್ | ಯತ್ಸಂವಿತ್ತೀತಿವರ್ಣಾದ್ಯಂ ಪದ್ಯಂ ಸರ್ವೇವಿಪಶ್ಚಿತಃ ||೨೧|| ವಿಚಾರ್ಯಾಸಂಗತಮಿತಿಮತೌ ನಿಶ್ಚಿತ್ಯತಜ್ಞವಾತ್ | ಪ್ರಾಹಿಣ್ವನ್ನಥಸಾಕ್ಷ್ಯರ್ಥಂ ಗೌಳಭಟ್ಟಾರಕಂಪ್ರತಿ ||೨೨|| ವಾರಾಣಸ್ಯಾಂ

---

ಧುರಂಧರತೆಯು ಮೆರೆಯುತ್ತಿರಲಾಗಿ, ತನ್ನ ಪ್ರಭಾವಾತಿಶಯದಿಂದ ಜಯಲಕ್ಷ್ಮಿ ಕೀರ್ತಿಲಕ್ಷ್ಮಿ ವೀರಲಕ್ಷ್ಮಿಯರುಗಳೆಲ್ಲಾ ದಾಸಿಯರಾಗಿ ಒಡನೆ ಬರುತ್ತಿರಲಾಗಿ, ಸದ್ಗುಣ ಸಮುದ್ರನಾದ ಶ್ರೀಮತ್ಪಂಡಿತಾರಾಧ್ಯಸ್ವಾಮಿಯು ಶಿವಶರಣರೊಡನೆ ಕೂಡಿ ತನ್ನ ಮನೆಗೆ ಬಂದನು ||೧೫|| ಬಳಿಕ ಆ ಪುರದಲ್ಲಿದ್ದ ವಿದ್ವಾಂಸರುಗಳು ಅಲ್ಲಲ್ಲಿ ಕುಳಿತು ಕೆನ್ನೆಯಮೇಲೆ ಕೈಯಿಟ್ಟು, ಬೆದರಿದ ನೋಟವುಳ್ಳವರಾಗಿ ||೧೬|| ಅಯ್ಯೋ! ಗರ್ವಾಂಧನೂ ನೀಚನೂ ಸನ್ಮಾರ್ಗವಿಧ್ವಂಸಕನೂ ಆದ ಈ ಬೌದ್ಧನು ಶ್ರೀ ಪಂಡಿತಾರಾಧ್ಯನನ್ನು ಕುರಿತು ಅತಿ ಕಠಿನವಾಗಿ ಮಾತನಾಡಿದನು ||೧೭|| ಕುಮತಿಯಾದ ಈ ಬೌದ್ಧನು ಆತನೊಡನೆ ಏತಕ್ಕೆ ವಾದಮಾಡಬೇಕು? ಏತಕ್ಕೆ ಮಾತನಾಡಬೇಕು? ಏತಕ್ಕೆ ಸೋಲಬೇಕು? ||೧೮|| ಈ ಪಂಡಿತಾರಾಧ್ಯನು ಜಗತ್ತನ್ನು ಸಂರಕ್ಷಿಸುವುದಕ್ಕಾಗಿ ಭೂತಲದಲ್ಲಿ ಹುಟ್ಟಿದ ದಕ್ಷಿಣಾಮೂರ್ತಿಯೇ ಹೊರತು ಸಾಮಾನ್ಯ ಮನುಷ್ಯನೆ? ||೧೯|| ಭೌತಿಕ ದೇಹವನ್ನು ಧರಿಸಿರುವ ಮಾತ್ರದಿಂದ ಈತನನ್ನು ಮನುಷ್ಯಮಾತ್ರನೆಂದು ಆಬೌದ್ಧನು ತಿಳಿದುಕೊಂಡು ಯಾವ ಯಾವ ಕೆಟ್ಟಮಾತುಗಳನ್ನಾಡಿ ತಿರಸ್ಕರಿಸಿದನೋ ಆ ದೋಷವು ಸುಮ್ಮನೆ ಬಿಟ್ಟುಹೋಗುವುದಿಲ್ಲ ||೨೦|| ಹಿಂದೆ ಇದೇ ಪಂಡಿತಾರಾಧ್ಯನು ರಚಿಸಿದ್ದ ಭೀಮೇಶ್ವರ ಗದ್ಯದ ಮೊದಲಿನ "ಯತ್ಸಂವಿತ್ತಿ" ಎಂದಾರಂಭಗೊಂಡಿದ್ದ ಪದ್ಯವನ್ನು ಎಲ್ಲಾ ವಿದ್ವಾಂಸರೂ ಕಂಡು || ೨೧ || ವಿಚಾರಮಾಡಿ, ಅದನ್ನು ಅಸಂಗತ ಪ್ರಯೋಗವೆಂದು ನಿಶ್ಚಯಿಸಿ, ಅದರ ಸಾಕ್ಷಿಗಾಗಿ ಕಾಶಿಯಲ್ಲಿರುವ ಗೌಳಭಟ್ಟಾರಕನ ಬಳಿಗೆ ಅದನ್ನು ಬೇಗನೆ ಕಳುಹಿಸಿಕೊಟ್ಟರು ||೨೨|| ಭಟ್ಟಾಚಾರ್ಯಶ್ರೇಷ್ಠನಾದ ಆ ವಿದ್ವಾಂ

ಸೋಽಪಿ ವಿದ್ವಾನ್ ಪದ್ಯಂ ಸಮ್ಯಗ್ವಿಮೃಶ್ಯ ತತ್ | ಯತ್ಸಂವಿತ್ತೀತಿ ವರ್ಣಾನಾಂ
ತತ್ಪದ್ಯಾದೌ ಪ್ರವರ್ತಿನಾಮ್ ||೨೩|| ಚತುರ್ಣಾಮೇವ ಹಿ ಚತುಸ್ಸಹಸ್ರೀಗ್ರನ್ಥ
ವಿಸ್ತೃತಮ್ | ಭಾಷ್ಯಂ ಕೃತ್ವಾ ಪ್ರತಿಷ್ಠಾಪ್ಯ ತತ್ರೇಶಂ ಜಗದೀಶ್ವರಮ್ ||೨೪||
ಶೇಷಾಕ್ಷರಾರ್ಥಂ ಶೇಷೋಽಪಿ ನ ಜಾನಾತೀತಿ ತತ್ವತಃ | ಲಿಖಿತ್ವಾ ಪ್ರಾಹಿಣೋ
ದ್ಧೀಮಾನ್ ಗೌಳಭಟ್ಟಾರಕರ್ಷಭಃ ||೨೫|| ಹ್ರೀತಾಃ ಸ್ವತರ್ಕಜಾಲಾನಿ
ಸನ್ತ್ಯಜ್ಯ ಮದವರ್ಜಿತಾಃ | ಅನನ್ತರಂ ಸಂಪ್ರಯಾತಾ ವಾವದೂಕಾ ನ ಕಿಂ ಸ್ವಯ
ಮ್ ||೨೬|| ಪುರೇದಂ ಕಿಂ ನ ಜಾನಾತಿ ಸ್ವಯಂ ಬೌದ್ಧೋ ಮದೋದ್ಧತಃ | ಕಿಮ
ರ್ಥಮಕರೋದ್ವಾದಂ ಪಣ್ಡಿತೇನ್ದ್ರೇಣ ಧೀಮತಾ ||೨೭|| ಅಥಾಪಿ ತಂ ಪಣ್ಡಿತೇ
ನ್ದ್ರಂ ಜೇತುಂ ಕಿಂ ಶಕ್ಯಮಾತ್ಮನಾ | ಭವಿತೇತಃ ಪರಂ ಕಿಂ ವಾ ನಾ ವಿನಾಶ್ಯ ಪ್ರಯಾ
ತಿ ಹಿ ||೨೮|| ಮಹಾಪುರುಷಧಿಕ್ಕಾರ ಇತಿ ಸರ್ವೇ ಸಮಾಕುಲಾಃ | ಅನನ್ತರಂ ವಾ
ಸರೇಷು ಸಂಪ್ರಯಾತೇಷು ಕೇಷುಚಿತ್ ||೨೯|| ಅಶಕ್ತಸ್ತರ್ಕಮಾರ್ಗೇಣ ವಿಜೇ
ತುಂ ಪಣ್ಡಿತೇಶ್ವರಮ್ | ಧಿಕ್ಕಾರಂ ಕೃತವಾನ್ಪಾಪಕರ್ಮಾ ಬೌದ್ಧೋಽಪ್ಯಯಂ
ಕಿಲ ||೩೦|| ಕಿಂಚಾಯಂ ದುರ್ಮದಾವಿಷ್ಟಃ ಶ್ರೀಕಾಕುಲನಿವಾಸಿನಃ | ಗಿರಿಜಾ
ಧಿಪತೇಶ್ಚಿನ್ನಮಲ್ಲಿಕಾರ್ಜುನನಾಮತಃ ||೩೧|| ಖ್ಯಾತಸ್ಯ ದೀಪಿಕಾಸ್ತಂಭಂ ಸಮು

---

ಸನಾದರೂ ಆ ಪದ್ಯವನ್ನು ಚೆನ್ನಾಗಿ ವಿಮರ್ಶೆಮಾಡಿ, ಅದರ ಮೊದಲಲ್ಲಿದ್ದ "ಯತ್ಸಂವಿತ್ತಿ"
ಎಂಬ ನಾಲ್ಕಕ್ಷರದ ಅರ್ಥವನ್ನು ನಾಲ್ಕುಸಾವಿರ ಗ್ರಂಥಪರಿಮಿತವಾದ ದೊಡ್ಡ ಭಾಷ್ಯವನ್ನಾಗಿ
ಬರೆದು, ಅದರಲ್ಲಿ ಶಿವನೇ ಜಗತ್ಕರ್ತನೆಂಬುದಾಗಿ ಸಿದ್ಧಾಂತಗೊಳಿಸಿ, ಪದ್ಯದ ಉಳಿದಕ್ಷರಗಳ
ಅರ್ಥವನ್ನು ಆದಿಶೇಷನೂ ಕೂಡ ಅರಿಯಲಾರನೆಂದು ನಿಜಸ್ಥಿತಿಯನ್ನು ಬರೆದು ಕಳುಹಿಸಿಕೊ
ಟ್ಟನು ||೨೫|| ಆಗ ಹರಟೆಗಾರರಾದ ಆ ವಿದ್ವಾಂಸರೆಲ್ಲಾ ನಾಚುಗೆಗೊಂಡು, ತಮ್ಮ ವಾ
ದವನ್ನೆಲ್ಲಾ ಬಿಟ್ಟು, ಗರ್ವವುಡುಗಿ, ತಮ್ಮಷ್ಟಿಗೆ ತಾವೇ ಹೊರಟುಹೋಗಲಿಲ್ಲವೆ ? ||೨೬||
ಪಟ್ಟಣದಲ್ಲಿ ನಡೆದ ಈ ಸಂಗತಿಯನ್ನು ಗರ್ವಾಂಧನಾದ ಈ ಬೌದ್ಧನು ಕಾಣನೇ ? ಹೀಗಿರು
ವಲ್ಲಿ ಆಂತಪ್ಪ ಪಂಡಿತಾರಾಧ್ಯನೊಡನೆ ಏತಕ್ಕೆ ವಾದಮಾಡಿದನು ? ||೨೭|| ಹಾಗಾದರೂ
ಪಂಡಿತಾರಾಧ್ಯನನ್ನು ಜಯಿಸುತ್ತುದಕ್ಕೆ ಇವನಿಗೆ ಶಕ್ಯವಾಯಿತೆ ? ಆ ಮಹಾಪುರುಷನ ಧಿಕ್ಕಾರದ
ಫಲವು ಮುಂದೆ ಹೇಗೆ ಪರಿಣಮಿಸುವುದೋ ! ಇವನನ್ನು ಹಾಳುಮಾಡದೆ ಅದು ತೊಲಗಲಾರ
ದಲ್ಲವೆ ? ||೨೮|| ಎಂದು ಅವರೆಲ್ಲರೂ ವ್ಯಾಕುಲಪಟ್ಟು ಮಾತನಾಡಿಕೊಂಡರು. ಬಳಿಕ
ಕೆಲದಿವಗಳು ಕಳೆದುಹೋದಮೇಲೆ ||೨೯|| ಪಂಡಿತಾರಾಧ್ಯನನ್ನು ವಾದಮಾರ್ಗದಿಂದ ಜಯಿ
ಸಲು ಅಶಕ್ತನಾಗಿ ತಿರಸ್ಕಾರ ವಚನಗಳನ್ನಾಡಿದ್ದ ಪಾಪಕರ್ಮಿಯಾದ ಈ ಬೌದ್ಧನು ಗರ್ವಾಂಧ
ತೆಯಿಂದ ಮತ್ತೊಂದು ಪಾಪಾಚರಣವನ್ನು ನಡೆಯಿಸಿದನು. ಏನೆಂದರೆ—ಶ್ರೀಕಾಕುಲಕ್ಷೇತ್ರದ
ಲ್ಲಿದ್ದ ಚಿನ್ನಮಲ್ಲಿಕಾರ್ಜುನಸ್ವಾಮಿಯ ದೇವಾಲಯದ ಶಿಲಾದೀಪಸ್ತಂಭವನ್ನು ಎಲ್ಲರೂ

ತ್ಪಾಟ್ಯಾತಿಮೋಹತಃ | ಸ್ವಸಭಾಮಂಟಪಸಕೃತೇ ನಿರ್ಭೀರಾಸೀತ್ತವಾನ್ಕಿಲ ||೧೨||
ಪಶ್ಯತ್ಸುಸಕಲೇಷ್ವೇತದಯುಕ್ತಮಿತಿಮಾನಸೇ |ಅವಿಚಾರ್ಯಾಪರಾಧೋಮೇಭವಿ
ಷ್ಯತಿಮಹಾನಿತಿ ||೧೩|| ಏತತ್ಕಾರ್ಯಂಮಹಾಭಾರ ಇತಿ ದುರ್ನೀತಿರಿತ್ಯಪಿ |
ಉಪದ್ರವೋಽಯಮಿತಿವಾನೇಯಂಯುಕ್ತಿರ್ವರೇತಿವಾ ||೧೪|| ನಾಂಗೀಕುರ್ವ
ನ್ತಿಸುಜನಾಇತಿವಾಭಕ್ತಸಂಹತಿಃ | ಸತಿಷ್ಯತ್ಯನಿಹತ್ಯೈತಚ್ಛ್ರುತ್ವೇತ್ಯವಿಗಣಯ್ಯ
ಚ ||೧೫|| ಶಿವದ್ರೋಹೋಽಯಮಿತಿವಾಲೋಕಾನಾಂಸಂಮತಂನಚ | ಇತ್ಯಾ
ದಿಕಮನಾಲೋಚ್ಯ ದುರ್ಬುದ್ಧಿಪರಿಚೋದಿತಃ ||೧೬|| ತಸ್ಮಾನ್ನೇಮಂಹನಿಷ್ಯಾ
ವೋಯದಿ ಬೌದ್ಧಂನರಾಧಮಮ್ | ಸಕಿಂದ್ರೋಹೀ ಶಿವಸ್ಯಾವಾಮೇವಹಿದ್ರೋ
ಹಿಣೌಸ್ಮೃತೌ ||೧೭|| ಸಭವಾವಸ್ತಥಾಭಕ್ತಾವಿತಿರೇಮಯದೇವಯೌ | ನಿಬ
ದ್ಧಕಜ್ಜಣೌಜಾತೌ ಶಿವಭಕ್ತಾವಿಚಕ್ಷಣೌ ||೧೮|| ವರ್ಷವಿಕ್ರೇಯವಸ್ತೂನಿವಿ
ಕ್ರೀಯಸಕೃದೇವತೌ | ಪರ್ಯೈರವಿದಿತೌ ಬೌದ್ಧಹನನೋಪಾಯದರ್ಶಿನೌ ||೧೯||

---

ನೋಡುತ್ತಿದ್ದರೂ ನಿರ್ಭಯವಾಗಿ ತನ್ನ ಮಂಟಪದ ಕೆಲಸಕ್ಕೋಸ್ಕರ ಕೀಳಿಸಿ ತರಿಸಿಕೊಂಡುಬಿಟ್ಟನು. ||೧೨|| ಇದು ನನಗೆ ಮಹಾ ಶಿವಾಪರಾಧವಾಗುವುದೆಂದಾಗಲೀ, ಇದು ನನಗೆ ಮಹಾ ಪಾಪಭಾರವಾಗುವುದೆಂದಾಗಲೀ, ಇದು ಅನ್ಯಾಯವೆಂದಾಗಲೀ, ಇದು ಬಾಧಕವೆಂದಾಗಲೀ, ಇದು ಯುಕ್ತವಲ್ಲವೆಂದಾಗಲೀ, ಇದು ಶ್ರೇಷ್ಠಕಾರ್ಯವಲ್ಲವೆಂದಾಗಲೀ ||೧೪|| ಇದನ್ನು ಸತ್ಪುರುಷರು ಒಪ್ಪುವುದಿಲ್ಲವೆಂದಾಗಲೀ, ಈ ಸುದ್ದಿಯನ್ನು ಶಿವಭಕ್ತಸಂದೋಹವು ಕೇಳಿದರೆ ನನ್ನನ್ನು ಕೊಂದುಹಾಕದೆ ಬಿಡುವುದಿಲ್ಲವೆಂದಾಗಲೀ ಕೂಡ ಆಲೋಚಿಸದೆ ||೧೫|| ಇದು ಶಿವದ್ರೋಹದ ಕೆಲಸವೆಂದಾಗಲೀ, ಇದು ಲೋಕಸಂಮತವಾದುದಲ್ಲವೆಂದಾಗಲೀ, ಯೋಚನೆಮಾಡದೆ, ದುರ್ಬುದ್ಧಿಯಿಂದ ಪ್ರೇರಿತನಾಗಿ ಪೂರ್ವೋಕ್ತ ಶಿವದ್ರೋಹ ಕಾರ್ಯವನ್ನು ಮಾಡಿಸಿಬಿಟ್ಟನು ||೧೬|| ಈ ಸುದ್ದಿಯನ್ನು ರೇಮಯ್ಯ, ದೇವಯ್ಯ, ಎಂಬ ಇಬ್ಬರು ತಿಳುವಳಿಕೆಯುಳ್ಳ ಶಿವಭಕ್ತರು ಕೇಳಿ, ಇಂಥ ಶಿವದ್ರೋಹವನ್ನು ಸಗಿದ ಮನುಷ್ಯಾಧಮನಾದ ಈ ಬೌದ್ಧನನ್ನು ನಾವುಗಳು ಕೊಲ್ಲದಿದ್ದರೆ ಶಿವದ್ರೋಹಿಯು ಅವನಲ್ಲ; ಅದನ್ನು ಕೇಳಿಕೊಂಡು ಸುಮ್ಮನಿರುವ ನಾವೇ ಶಿವದ್ರೋಹಿಗಳೆನ್ನಿಸಿಕೊಳ್ಳುವೆವು ||೧೭|| ಮತ್ತು ನಾವು ಭಕ್ತರಾಗಲಾರೆವು ಎಂಬುದಾಗಿ ಯೋಚಿಸಿ, ಆ ಬೌದ್ಧನನ್ನು ಕೊಲ್ಲುವುದೇ ಸಿದ್ಧವೆಂದು ನಿರ್ಧರಿಸಿ, ಅದಕ್ಕಾಗಿ ಕಂಕಣವನ್ನು ಕಟ್ಟಿಕೊಂಡರು ||೧೮|| ಒಂದುವರ್ಷದವರೆಗೆ ಮಾರಬಹುದಾಗಿದ್ದಷ್ಟು ತಮ್ಮ ಪದಾರ್ಥಗಳನ್ನೆಲ್ಲಾ ಬೇಗ ಬೇಗನೆ ಮಾರಿಬಿಟ್ಟು, ಮತ್ತೊಬ್ಬರಿಗೆ ತಮ್ಮ ಜಾಡು ತಿಳಿಯದಂತೆ ಗುಟ್ಟಿನಿಂದ ಬೌದ್ಧನನ್ನು ಕೊಲ್ಲುವ ಉಪಾಯವನ್ನು ಯೋಚಿಸುತ್ತ ||೧೯|| ಅವನು ಹೋದಕಡೆಗೇ ಅನುಸರಿಸಿ ದೂರದಲ್ಲಿ ಹೋಗುತ್ತ, ಸಮುದ್ರಮಧ್ಯದ ಒಂದು ದ್ವೀಪದಲ್ಲಿರುವ ಜನಬಸದಿಗೆ ಈ ಬೌದ್ಧನು ಪ್ರತಿದಿನವೂ ಹೋಗಿ ಸ್ವಲ್ಪಕಾಲ

ತಮೇವಾನುಗತೌ ದೂರಾತ್ಸಮುದ್ರಾಸ್ತ್ರಸ್ಥಲೇತದಾ | ಅಸ್ತ್ರರೀಪೇಜಿನಾಗಾರೇ ಕಿಂಚಿತ್ಕಾಲಂದಿನೇದಿನೇ ||೪೦|| ಸ್ಥಿತ್ವಾಸ್ಥಿತ್ವಾಸಪಾಯಾಸ್ತಂ ವಿದಿತ್ವಾಜಗ್ಮತು ರ್ದುದಂ | ಸಮುದ್ರಾಸ್ತ್ರಸ್ಥಿತಜಿನಾಗಾರಮೇವಾಸ್ಯದುರ್ಮತೇಃ ||೪೧|| ವಿಧಿ ನಾಲಿಖಿತಾ ಭೂಮಿರ್ಮರಣಾಯೇತಿತಾವುಭೌ | ನಿಶ್ಚಿತ್ಯಾನ್ಯೇದ್ಯುರುತ್ಥಾಯ ಪ್ರಾತಃಕೃತ್ವಾಶಿವಾರ್ಚನಂ ||೪೨|| ಏಕಾಙ್ಗವೀರೌವೀರಾವತಾರೌಶೂರೌಮ ನಸ್ವಿನೌ | ಪ್ರಸಾದಭೋಗಸನ್ತುಷ್ಟೌಛನ್ನವೇಷೌಜನಿರ್ಭಯೌ ||೪೩|| ವಿವೇ ಕತುಷ್ಟಿವಾಚಾರಂ ನಾವಂಕೃತ್ವಾಸರಿತ್ಪತಿಂ | ಪ್ರಭುದೇವಂಪಿಲ್ಲೆನಾಥಂಗುಂಡ ಯಂನಮಿನಂದಿನಂ ||೪೪|| ಚೇರಮಂನಂಬ್ಯಣಂಚೋಲಂ ಗುರುಭಕ್ತಂಗುಣೋ ನ್ನತಂ | ಗಜ್ಜೇಶಮಸಣಯ್ಯಂಚತಥಾಮುಸುಟಿಚೌಡಯಮ್ ||೪೫|| ದಾಸ ಯ್ಯಂ ಮೊಗವಾಡೋಪಪದಂ ಬಸವಯಂಪುನಃ | ವಾಗೀಶ್ವರಂಕೊಂಡಗುಡಿ ಕೇಶಿರಾಜಮನುತ್ತಮಂ ||೪೬|| ಅನ್ಯಾನಪಿಚಸದ್ಭಕ್ತಾನ್ ಸಘಟಿಸ್ಫುರಣಾಪಹಾ ನ್ | ಸಂಸ್ಮೃತ್ಯತತ್ಪ್ರಭಾವೇನ ಸಂಶ್ರಿತಾವಪರಂತಟಂ ||೪೭|| ಪ್ರದರ್ಶಯ ದ್ರೋಹಿಣಂತಮವಿಲಂಬಮಘಾವೃತಂ | ಅದ್ಯಪಶ್ಚಾದ್ದಿವಪ್ರೇಮವಿಧಾತುಂತೇ ನಪಾರ್ಯತೇ ||೪೮|| ಇತೀವಬುದ್ಧದೇವಸ್ಯ ಪಶ್ಚಾದ್ಭಾಗಂಸಮಾಶ್ರಿತೌ | ತಸ್ಮಿ

---

ಅಲ್ಲಿದ್ದು ಬರುತ್ತಿದ್ದುದನ್ನು ತಿಳಿದು ಸಂತೋಷಪಟ್ಟರು. "ಈದುರ್ಬುದ್ಧಿ ಬೌದ್ಧನಿಗೆ ಸಮು ದ್ರಮಧ್ಯದಲ್ಲಿರುವ ಜಿನದೇವಾಲಯುವೇ ಸಾಯುವ ಭೂಮಿಯಾಗಿ ಬ್ರಹ್ಮನು ಬರೆದಿರುವನು" ಎಂಬುದಾಗಿ ಅವರೀರ್ವರೂ ನಿರ್ಧರಿಸಿ, ಮರುದಿವಸ ಅವರುಗಳು ಬೆಳಗ್ಗೆ ಎದ್ದು ಶಿವಾರ್ಚನೆ ಯನ್ನು ಮಾಡಿಕೊಂಡು ||೪೨|| ಶೌರ್‍ಯವೆಲ್ಲಾ ಒಬ್ಬುಳಿಯಾಗಿ ದೇಹವನ್ನಾಂತಂತಿರುವರಾ ಗಿಯೂ, ವೀರಭದ್ರಾವತಾರರಾಗಿಯೂ, ಸ್ವತಂತ್ರರಾಗಿಯೂ, ಶಿವಪ್ರಸಾದವನ್ನು ಸವಿದು ಸಂ ತುಷ್ಟಚಿತ್ತರಾಗಿಯೂ, ಗೂಢವೇಷವನ್ನು ಧರಿಸಿದವರಾಗಿಯೂ, ನಿರ್ಭೀತರಾಗಿಯೂ ||೪೩|| ಹೊರಟು, ತಮ್ಮ ಶಿವಾಚಾರವನ್ನೇ ಸಮುದ್ರವನ್ನು ದಾಂಟುವುದಕ್ಕೆ ದೋಣಿಯನ್ನಾಗಿ ಮಾಡಿ ಕೊಂಡು ಸಮುದ್ರಕ್ಕೆ ನುಗ್ಗಿದರು. ಮತ್ತು ಮನಸ್ಸಿನಲ್ಲಿ—ಅಲ್ಲಮಪ್ರಭು, ಪಿಳ್ಳನೈನಾರರು, ಕುಂಬರಗುಂಡಯ್ಯ, ನಮಿನಂದಿ, ಚೇರಮ, ಸೌಂದರನಂಬ್ಯಣ್ಣ, ಕರಿಕಾಲಚೋಳ, ಗುರುಭ ಕ್ತಾರ್‍ಯ, ಗಜ್ಜೇಶಮಸಣಯ್ಯ, ಮುಸುಟಿಚೌಡಯ್ಯ || ೪೫ || ಶಂಕರದಾಸಯ್ಯ, ಮೊಗೆ ವಾಡದ ಬಸವಯ್ಯ, ವಾಗೀಶಯ್ಯನವರು, ಕೊಂಡಗುಳಿಕೇಶಿರಾಜ ಮೊದಲಾದ ಮಹಾ ಮಹಿಮರಾದ ಶಿವಶರಣರನ್ನು ಧ್ಯಾನಿಸುತ್ತ, ಆ ಧ್ಯಾನಪ್ರಭಾವದಿಂದ ಸಮುದ್ರವನ್ನು ದಾಟಿ ದ್ವೀಪದ ದಡವನ್ನು ಸೇರಿದರು ||೪೭|| "ಎಲೆ ಬುದ್ಧನೆ! ಪಾಪಿಯಾದ ಆ ದ್ರೋಹಿ ಯನ್ನು ಬೇಗನೆ ತೋರಿಸು, ಅವನು ದೈವದ್ರೋಹಿಯಾಗಿರುವುದರಿಂದ ಅವನ ಮೇಲೆ ನೀನು ಪ್ರೇಮವಿಡಲಾಗುವುದಿಲ್ಲ" ಎಂದು ಹಿಂಗಡೆಯಲ್ಲಿ ಕುಳಿತು ಬುದ್ಧದೇವನಿಗೆ ಎಚ್ಚರಿಕೆ ಹೇಳು

ನ್ಬೌದ್ಧೋತದಾಬುದ್ಧಗೇಹಮಾಗತ್ಯಪೂರ್ವವತ್ ||೪೯|| ನಮಸ್ಕುರ್ವತ್ಯಶನಿವತ್ತ ಸ್ಯೋಪರಿನಿಪತ್ಯತೌ | ಪದ್ಭ್ಯಾಂಕಂಠಂಸಮಾಕ್ರಮ್ಯಪ್ರವಿದಾರ್ಯೋದರಂತಥಾ ||೫೦|| ದೀಪಸ್ತಂಭಂಸದುರ್ಬುದ್ಧಿರ್ಯಥಾದಾರಿತವಾನ್ಪುರಾ | ವೀರಭದ್ರೋ ಯಥಾಪೂಷ್ಣೋ ಬಿಭೇದದಶನಾವಲಿಂ ||೫೧|| ತಥಾತದ್ಬೌದ್ಧರದನಾನ್ನಿರ್ಭಿದ್ಯಾ ಧಿಕಕೋಪತಃ | ವಹ್ನೇಶ್ಚಿಚ್ಛೇದರಸನಾಂ ವೀರಭದ್ರೋಯಥಾತಥಾ ||೫೨|| ದುರ್ಮದಾತ್ಪಣ್ಡಿತಾರಾಧ್ಯಂ ಪ್ರತಿನಿಷ್ಠುರಭಾಷಿಣೀಂ | ರೇರೇಜಿಹ್ವಾಂ ಪಾಪ ಕರ್ಮಂತಪದರ್ಶಯದರ್ಶಯ ||೫೩|| ಇತ್ಯುಕ್ತ್ವಾಭೀಷಣತರಂ ತಸ್ಯತಾಲೂನಿ ದಾರ್ಯಚ | ಪಾದೇನಾಕ್ರಮ್ಯಹೃದಯಮುನ್ಮೂಲ್ಯರಸನಾಂಪುನಃ ||೫೪|| ಸಮು ತ್ಪಾಟ್ಯತದಂತ್ರಾಣಿ ವಿಚ್ಛಿದ್ಯಚಶಿರಸ್ತದಾ | ಸ್ಥಾಪಯಿತ್ವಾತಜ್ಜಠರೇನಿಹತ್ಯೈವ ಮಮುಮಂಬಿಲಂ ||೫೫|| ಏಷಾಃಸಂಖ್ಯಾತಭಕ್ತಾನಾಂ ಕೃತಾಜ್ಞೇತ್ಯಸ್ಯವಕ್ಷಸಿ | ನಿಧಾಯಲೇಖಾಮುತ್ತೀರ್ಯಜಲಧಿಂ ಭಕ್ತಕುಂಜರೌ ||೫೬|| ಉದ್ದೀಪ್ತತೇಜ ಸೋಃ ಪಾದೌ ಹತಬಿಜ್ಜಲಭೂಪಯೋಃ| ಮೊಲ್ಲೆಬೊಂಮಯ್ಯಜಗದೇವಯ್ಯಯೊ ರ್ಭಕ್ತ್ಯೋರ್ವತಾತಾ ||೫೭|| ಪಂಗೀಶ್ವರಂಹತವತೋಮಹಾಮಹಿಮತೇಜ

---

ಪದಕ್ಕೆ ಹೋದರೋ ಎಂಬಂತೆ ಆ ಬುದ್ಧ ವಿಗ್ರಹದ ಹಿಂಗಡೆಗೆ ಹೋಗಿ ಕುಳಿತುಕೊಂಡರು. ಆಗಲಾ ಬೌದ್ಧನು ಎಂದಿನಂತೆ ಬಸದಿಗೆ ಬಂದು ||೪೯|| ಅಡ್ಡಬೀಳಲಾಗಿ, ಅಷ್ಟರೊಳಗೆ ಆತನ ಮೇಲೆ ರೇಮಯ್ಯ, ದೇವಯ್ಯಗಳಿಬ್ಬರೂ ಸಿಡಿಲೆರಗಿದಂತೆ ಬಿದ್ದು, ತಮ್ಮ ಕಾಲುಗಳಿಂದ ಅವನ ಕುತ್ತಿಗೆಯನ್ನು ಸೇರಿಸಿ ಹಿಡಿದು, ಅವನ ಹೊಟ್ಟೆಯನ್ನು ||೫೦|| ಹಿಂದೆ ಆ ದುರ್ಮತಿ ಬೌದ್ಧನು ಶಿವಾಲಯ ದೀಪಸ್ತಂಭವನ್ನು ಹೇಗೆ ಒಡೆದು ಸೀಳಿಸಿದ್ದನೋ ಹಾಗೆ ಸೀಳಿ, ವೀರ ಭದ್ರೇಶ್ವರನು ದಕ್ಷಯಜ್ಞಶಾಲೆಯಲ್ಲಿ ಸೂರ್ಯನ ಹಲ್ಲುಗಳನ್ನು ಹೇಗೆ ಮುರಿದನೋ ||೫೧|| ಹಾಗೆ ಆ ಬೌದ್ಧನ ಹಲ್ಲುಗಳನ್ನು ಅತ್ಯಂತ ಕೋಪದಿಂದ ಮುರಿದು, ಅಗ್ನಿಯ ನಾಲಗೆಯ ನ್ನು ವೀರಭದ್ರನು ಹೇಗೆ ಕತ್ತರಿಸಿ ಹಾಕಿದ್ದನೋ ಹಾಗೆ "ಎಲಾ ಪಾಪಿ! ಪಂಡಿತಾರಾಧ್ಯ ನನ್ನು ಕುರಿತು ಗರ್ವದಿಂದ ದುಷ್ಟವಚನಗಳನ್ನಾಡಿದ್ದ ನಿನ್ನ ನಾಲಗೆಯನ್ನು ತೋರಿಸು ತೋ ರಿಸು" ಎಂಬುದಾಗಿ ಹೇಳುತ್ತ ಅವನ ದವಡೆಗಳನ್ನು ಕೊರೆದು, ಎದೆಯನ್ನು ಕಾಲಿನಲ್ಲಿ ಮೆಟ್ಟಿ ಸೀಳಿ, ನಾಲಗೆಯನ್ನು ಕತ್ತರಿಸಿ ||೫೪|| ಕರುಳುಗಳನ್ನು ಬಗಿದು ತಲೆಯನ್ನು ಕು ಯ್ದು, ಅವನ ಹೊಟ್ಟೆಯ ಮೇಲೆ ಅದನ್ನಿಟ್ಟು, ಹೀಗೆ ಆ ನೀಚನನ್ನು ಕೊಂದು ||೫೫|| "ಇದು ಅಸಂಖ್ಯಾತ ಮಹಾಗಣಾಧೀಶರಿಂದ ಮಾಡಲ್ಪಟ್ಟ ಅಪ್ಪಣೆಯಮೇರೆಗೆ ನಡೆದ ಕೆಲಸ" ಎಂಬ ಒಂದು ಚೀಟಿಯಲ್ಲಿ ಬರೆದು, ಅದನ್ನು ಆ ಹೆಣದ ಎದೆಯಮೇಲಿರಿಸಿ ಆ ಭಕ್ತಶ್ರೇಷ್ಠರೀ ರ್ವರೂ ಸಮುದ್ರವನ್ನು ದಾಟುತ್ತ ||೫೬|| ಶಿವದ್ರೋಹಿ ಬಿಜ್ಜಳರಾಜನನ್ನು ಕೊಂದ ಪರಾಕ್ರ ಮಶಾಲಿಗಳಾದ ಮೊಲ್ಲೆಬೊಮ್ಮಯ್ಯ, ಜಗದೇವಯ್ಯಗಳ ಪಾದವನ್ನೂ ||೫೭|| ಶಿವನಿಂದಕನಾದ

ಸಃ | ಮಹೀಯಸೋ ಹಡಪದರೇಚಯಸ್ಯಾಂಘ್ರಿಪಂಕಜೇ ||೫೮|| ಹತಶಂಕರಕೂಚೇಃ ಪ್ರಾಗ್ಬಂಕಯಸ್ಯ ಪದಾಮ್ಬುಜೇ | ಕೇಣಿಹರ್ತುಸ್ಸಗರದ ಬ್ರಹ್ಮಯಸ್ಯ ಪದಾಮ್ಬುಜೇ ||೫೯|| ನಿಹತ್ಯಾಂಕದಸೆಟ್ಟಿಂ ಪ್ರಾಕ್ ಪಾಪಿನಂ ಪ್ರಾಪ್ತತೇಜಸಃ | ರಾಜಾನಬ್ರಹ್ಮಯಾರ್ಯಸ್ಯ ಪಾದಾಬ್ಜಯುಗಳಂ ಪರಂ ||೬೦|| ಮಲ್ಲಿಬೋಪಂ ಹತವತೋ ಬಸವಸ್ಯ ಪದಾಂಬುಜೇ | ಪುರಾ ಸಂಹೃತ್ಯ ಬಡಗಂ ಘನಕೀರ್ತಿವಿಕಾಸಿನೋಃ ||೬೧|| ಕಲ್ಲಯರಾಮಯನಾಮ್ನೋಶ್ಚರಣೌ ಶಿವಭಕ್ತಯೋಃ | ಹತಂ ಮಲಧರಂ ಕೃತ್ವಾ ವಿಜೃಂಭಿತವತೋರ್ಬಲಾತ್ ||೬೨|| ಮಾಕಯ್ಯದಸರಯ್ಯಾಖ್ಯಭಕ್ತಯೋಶ್ಚ ಪದಾಂಬುಜೇ | ಕರಹಾಟಕಸನ್ಯಾಸೀ ಹನನಾದ್ಭುವಿ ಶೋಭಿನಃ ||೬೩|| ಸರ್ವದೇವಸ್ಯ ಪಾದಾಬ್ಜಯುಗಂ ಪರಮಪಾವನಂ | ಅತಿಕೋಪೇನ ಸಮಯಚಕ್ರವರ್ತಿನಮುದ್ಧತಮ್ ||೬೪|| ಹತ್ವಾ ವಿಲಸತೋ ವೀರಬ್ರಹ್ಮದೇವಸ್ಯ ಸತ್ಪದೇ | ಭೂಯೋಪಿ ದ್ರೋಹಿಹರಣ ಚಣವೀರಗಣಾವಲೇಃ ||೬೫|| ಪಾದಾಂಬುಜಾನಿಜ ಶಿವಾಚಾರಂ ನಾವಂ ವಿಧಾಯ ತೌ | ರೇಮಯ್ಯದೇವಯೌ ಶೀಘ್ರಂ ತೇರತುಸ್ಸರಿತಾಂಪತಿಂ ||೬೬||

---

ವಂಗೀಶನನ್ನು ಕತ್ತರಿಸಿ ಕೊಂದು, ತನ್ನ ತಲೆಯನ್ನೂ ಕತ್ತರಿಸಿ ಕುಣಿಸಿ ಮತ್ತೆ ರುಂಡಕ್ಕೆ ಸೇರಿಸಿ ಮಹಾ ಮಹಿಮೆಯನ್ನು ತೋರಿಸಿದ ಹಡಪದ ರೇಚಯ್ಯನ ಪಾದಗಳನ್ನೂ ||೫೮|| ಶಿವೋತ್ತಮತ್ವವನ್ನು ಸಾರದೆ ಶಿವದ್ವೇಷಿಯಾಗಿದ್ದ ಶಂಕರಕೂಚಿಗೆನನ್ನು ಕೊಂದ ವೀರಬಂಕಯ್ಯನ ಪಾದಕಮಲಗಳನ್ನೂ, ಪರವಾದಿಜೈನನಾದ ಕೇಣಿಯೆಂಬುವನನ್ನು ಕೊಂದ ಸಗರದ ಬ್ರಹ್ಮಯ್ಯನ ಪಾದಪಂಕಜಗಳನ್ನೂ ||೫೯|| ಪಾಪಿಯಾದ ಅಂಕದಸೆಟ್ಟಿಯನ್ನು ಕೊಂದ ರಾಜಾನಬ್ರಹ್ಮಯ್ಯನ ಪಾದಸರೋಜಯುಗ್ಮವನ್ನೂ ||೬೦|| ಮಲ್ಲಿಬೋಪನನ್ನು ಕೊಂದ ಬಸವಯ್ಯನ ಪಾದಾಬ್ಜಗಳನ್ನೂ, ಬಡಗನೆಂಬುವನ ಹೊಟ್ಟೆಯನ್ನು ಸೀಳಿ ಕೊಂದ ಕಲ್ಲಯ್ಯ ರಾಮಯ್ಯ ಎಂಬಿವರುಗಳ ಪಾದಗಳನ್ನೂ, ಮಲಧರನೆಂಬುವನನ್ನು ಕೊಂದು ಉಬ್ಬೇರಿದ ಮಾಕಯ್ಯ ದಸರಯ್ಯ ಎಂಬ ಭಕ್ತರುಗಳ ಪಾದಕಮಲಗಳನ್ನೂ, ಕರಹಾಟಕಸನ್ಯಾಸಿಯನ್ನು ಕೊಂದು ಮೆರೆದ ಸರ್ವದೇವಯ್ಯನ ಪಾದಕಮಲಯುಗಳವನ್ನೂ, ಕೊಬ್ಬಿದ ಸಮಯ ಚಕ್ರವರ್ತಿಯೆಂಬುವನನ್ನು ಅತ್ಯಂತ ಕೋಪದಿಂದ ಕೊಂದ ವೀರಬ್ರಹ್ಮದೇವನ ಪಾದಗಳನ್ನೂ, ಹೀಗೆಯೇ ಶಿವದ್ರೋಹಿಗಳಾದ ಅನೇಕರನ್ನು ಕೊಂದ ವೀರಗಣಂಗಳ ಚರಣಕಮಲಗಳನ್ನೂ ಮನಸ್ಸಿನಲ್ಲಿ ಧ್ಯಾನಿಸಿ, ಶಿವಾಚಾರವನ್ನೇ ದೋಣಿಯನ್ನಾಗಿ ಮಾಡಿಕೊಂಡು, ಆ ರೇಮಯ್ಯ ದೇವಯ್ಯಗಳೀರ್ವರೂ ಬೇಗನೆ ಸಮುದ್ರವನ್ನು ದಾಟಿ ಬಂದರು. ||೬೬||

ಇತ್ಯಸಂಖ್ಯಾತ ಮಹಾಮಾಹೇಶ್ವರ ದಿವ್ಯ ಶ್ರೀಪಾದಪದ್ಮ ನಿರಂತರಭಾವನಾಶರಿ
ರಂಜಿತಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲ ಭಸ್ಮೀಕೃ
ತಾಖಿಲಭವಬೀಜಸ್ಯ ಶ್ರೀ ವೀರಶೈವಮತಾಚಾರ್ಯ ಗುರುರಾಜಸ್ಯ
ಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾ
ರಾಧ್ಯಚರಿತೆ ಮಹಿಮಪ್ರಕರಣೆ ಬೌದ್ಧಾಚಾರ್ಯಹ
ನನಕಥನಂನಾಮ ಪ್ರಥಮೋಽಧ್ಯಾಯಃ.

---

## ಅಥ ದ್ವಿತೀಯೋಽಧ್ಯಾಯಃ.

### (ಪಂಡಿತಾರಾಧ್ಯ ಪ್ರಥಮವಾರಪ್ರತಿಜ್ಞಾಕಥನಂ)

---

ಅಥಪರಾಹ್ಣಸಮಯೇ ತದ್ಬೌದ್ಧೇಽನಾಗತೇಗೃಹಮ್ | ಶಿಷ್ಯಾಬುದ್ಧಾ
ಲಯಂಗತ್ವಾ ಸಮುದ್ಘಾಟ್ಯಕವಾಟಕಮ್ ||೧|| ಖಂಡಿತಾಙ್ಗಂ ಪ್ರಾಪ್ತವಧಂ
ರಕ್ತಧಾರಾಭಿರಾವೃತಮ್ | ದಳಿತೋದರನಿಕ್ಷಿಪ್ತಶಿರಸಂ ಕ್ರಿಮಿಭಿರ್ಯುತಮ್
||೨|| ನಿರೀಕ್ಷ್ಯಸ್ವಗುರುಂಬೌದ್ಧಂ ತೇಸರ್ವೇಪರಯಾಶುಚಾ | ಉಚ್ಚೈರ್ವಿ

---

ಎಂಬಲ್ಲಿಗೆ ಶ್ರೀಗುರುರಾಜ ಕವಿಕೃತ ಶ್ರೀಮಜ್ಜಗದ್ಗುರು ಪಂಡಿತಾರಾಧ್ಯಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ "ಭಾವಮಂಜರಿ" ಎಂಬ ಕನ್ನಡ ಟಿಪ್ಪಣದಲ್ಲಿ ಮಹಿಮಪ್ರಕರಣದೊಳಗೆ ಬೌದ್ಧಮತಾಚಾರ್ಯನನ್ನು ಕೊಂದ ಕಥೆಯನ್ನು ನಿರೂಪಿಸುವ ಮೊದಲನೆ ಅಧ್ಯಾಯವು ಮುಗಿದುದು.

---

## ೨ನೆಯ ಅಧ್ಯಾಯವು.

---

### ಪಂಡಿತಾರಾಧ್ಯರ ಮೊದಲನೆ ಪ್ರತಿಜ್ಞೆ.

ಬಳಿಕ ಆ ಬೌದ್ಧನು ಸಾಯಂಕಾಲದ ಹೊತ್ತಿಗೆ ಮನೆಗೆ ಬರದೆ ಇರಲು, ಅವನ ಶಿಷ್ಯರು ಬುದ್ಧ ದೇವಾಲಯಕ್ಕೆ ಹೋಗಿ ಕದವನ್ನು ತೆರೆದು ||೧|| ಅಂಗಗಳೆಲ್ಲಾ ಕತ್ತರಿಸಲ್ಪಟ್ಟು ಕೊಲೆಯನ್ನು ಹೊಂದಿ ರಕ್ತಪ್ರವಾಹದಿಂದ ತುಂಬಿ ಹೊಟ್ಟೆಯು ಸೀಳಿ ಇಡಲ್ಪಟ್ಟಿರುವ ಶಿರಸ್ಸುಳ್ಳವನಾಗಿ ಹುಳುಗಳು ತುಂಬಿ ಬಿದ್ದಿರುವ ಬೌದ್ಧ ಗುರುವನ್ನು ನೋಡಿ ಅವರೆಲ್ಲರೂ ಬಹಳ

ಪ್ರಲಪಂತಸ್ತೇ ಸಮಾಗತ್ಯನರಾಧಿಪಂ ||೩|| ಶಶಂಸುಸ್ಸ್ವಗುರೋಃ ಪ್ರಾಪ್ತಾಮ
ವಸ್ಥಾಂತಸ್ಯಭೂಪತೇಃ | ಸಮಾಕರ್ಣ್ಯನೃಪೋ ದುಃಖವಿದೀರ್ಣಹೃದಯೋಽ
ಭವತ್ ||೪|| ಏತಾದೃಶೀಮೃತಿಃ ಕಸ್ಮಾದಾಯಾತೇತಿವಿಚಾರಯನ್ | ತದ್ವ
ಕ್ಷಸಿಸ್ಥಿತಾಂಲೇಖಾಂ ದೃಷ್ಟ್ವಾಮನುಜನಾಯಕಃ ||೫|| ಆಗತಾಪಣ್ಡಿತಾ
ರಾಧ್ಯಾದಿತ್ಯೇವಂ ನಿಶ್ಚಿಕಾಯಸಃ | ತದುತ್ತರಕ್ರಿಯಾಸ್ಸಮ್ಯಗ್ವಿಧಾಯಸದಸಿಸ್ಥಿ
ತಃ ||೬|| ಜ್ವಲತ್ಕೋಪಾನಲಜ್ವಾಲಾ ಸ್ಫುಲಿಂಗಾಭೀಲಲೋಚನಃ | ಆಕಾರ
ಯಿತ್ವಾಽಥಶೀಘ್ರಂ ಮಲ್ಲಿಕಾರ್ಜುನಪಂಡಿತಂ ||೭|| ಮಹಾತ್ಮನಾಽನೇನ ಸಹ
ನಯುಕ್ತೋ ವಿಗ್ರಹೋಮಮ | ಇತ್ಯನಾಲೋಚ್ಯಕಿಮಪಿ ಗ್ರಸನ್ನಿವಸಮುದ್ಧ
ತಃ ||೮|| ಮಾರ್ಕಂಡೇಯಮುನಿಂ ನಿತ್ಯಮಪಶ್ಯಚ್ಛಮನೋಯಥಾ | ಸಏವ
ಶಮನಃ ಕೋಪಾದ್ಯಥಾಶ್ವೇತಂವ್ಯಲೋಕಯತ್ ||೯|| ಕ್ಷುಪೋದಧೀಚಿಮುನಿ
ಪಂ ದದೃಶೇಕುಪಿತೋಯಥಾ| ವ್ಯಲೋಕಯದ್ಯಥಾದಕ್ಷೋ ಗೌತಮಂಯಾಗ
ಶಾಪಿನಂ ||೧೦|| ಯಥೈಕ್ಷತಕ್ಷಪಣಕೋಭಟ್ಟಾಚಾರ್ಯಂರುಷಾವೃತಃ | ತಥಾ
ಮದಾಂಧತಮಸಾಽಽವೃತಾಕ್ಷೋವೀಕ್ಷ್ಯಪಂಡಿತಂ ||೧೧|| ಅತಿಕ್ರೋಧೋ
ದ್ದೀಪಿತಾಂಗೋಽಭಣದ್ಭ್ರುಕುಟಿಭೀಷಣಂ | ಕುಟಿಲಂಭವತೋವೇಷಂ ನಿರೀ

---

ದುಃಖದಿಂದ ಗಟ್ಟಿಯಾಗಿ ಅತ್ತು, ದೊರೆಯ ಬಳಿಗೆ ಬಂದು ||೩|| ತಮ್ಮ ಗುರುವಿಗೆ ಪ್ರಾಪ್ತ
ವಾಗಿರುವ ಅವಸ್ಥೆಯನ್ನು ದೂರಿಕೊಂಡರು. ಅದನ್ನು ಕೇಳಿದ ದೊರೆಯು ದುಃಖದಿಂದ ಎದೆ
ಒಡೆದುಹೋದನು. ||೪|| ಇಂಥ ಮರಣವು ಗುರುವಿಗೆ ಯಾರಿಂದ ಸಂಭವಿಸಿರಬಹುದು!
ಎಂದು ವಿಚಾರಮಾಡಲಿಕ್ಕುಪಕ್ರಮಿಸಿ, ಆತನ ಎದೆಯ ಮೇಲೆ ಇದ್ದ ಚೀಟಿಯನ್ನು ದೊರೆಯು
ನೋಡಿ ||೫|| ಇದು ಪಂಡಿತಾರಾಧ್ಯನಿಂದಲೇ ಸಂಭವಿಸಿರತಕ್ಕದು ಎಂದು ನಿರ್ಧರಿಸಿದನು.
ಬಳಿಕ ಆ ಬೌದ್ಧಗುರುವಿನ ಉತ್ತರ ಕರ್ಮಗಳನ್ನು ಚೆನ್ನಾಗಿ ನೆರವೇರಿಸಿ, ಸಭೆಯಲ್ಲಿ ಕುಳಿತು
||೬|| ಕೋಪದಿಂದ ಕೆಂಪಾದ ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತ, ಕೂಡಲೇ ಮಲ್ಲಿಕಾ
ರ್ಜುನ ಪಂಡಿತಾರಾಧ್ಯನನ್ನು ಕರೆಯಿಸಿ ||೭|| ಮಹಿಮನಾದ ಈತನೊಡನೆ ವಿರೋಧವು ಉಚಿ
ತವಲ್ಲವೆಂದು ಆಲೋಚಿಸದೆ, ಏನನ್ನೋ ನುಂಗಿದವನಹಾಗೆ ಮದೋನ್ಮತ್ತನಾಗಿ ||೮|| ಅಳಿ
ವಿಲ್ಲದ ಮಾರ್ಕಂಡೇಯರ್ಷಿಯನ್ನು ಯಮನು ಹೇಗೆ ನೋಡಿದನೋ, ಆ ಯಮನು ಶ್ವೇತ
ನನ್ನು ಹೇಗೆ ಅವಲೋಕಿಸಿದನೋ ||೯|| ಕ್ಷುಪರಾಜನು ದಧೀಚಿ ಮಹರ್ಷಿಯನ್ನು ಕೋಪ
ಗೊಂಡು ಹೇಗೆ ನೋಡಿದನೋ, ಯಜ್ಞಕ್ಕೆ ಶಾಪಕೊಟ್ಟ ಗೌತಮ ಮಹರ್ಷಿಯನ್ನು ದಕ್ಷಬ್ರ
ಹ್ಮನು ಹೇಗೆ ನೋಡಿದನೋ ||೧೦|| ಬೌದ್ಧನು ಕೋಪಗೊಂಡು ಪಂಡಿತಾರಾಧ್ಯನನ್ನು
ಹೇಗೆ ನೋಡಿದನೋ, ಹಾಗೆ ರಾಜನು ಗರ್ವವೆಂಬ ಕತ್ತಲೆಯಿಂದ ಕವಿದ ಕಣ್ಣುಳ್ಳವನಾಗಿ ಪಂ
ಡಿತಾರಾಧ್ಯನನ್ನು ನೋಡಿ ||೧೧|| ಅತ್ಯಂತ ಕೋಪದಿಂದ ಉರಿಯುತ್ತಿರುವ ದೇಹವುಳ್ಳವ

ಕ್ಷ್ಯಭ್ರಾಂತಮಾನಸೈಃ ||೧೨|| ಜನೈಃ ಪಂಡಿತಇತ್ಯುಕ್ತಿಮಾತ್ರಾದೇವಾತಿಗರ್ವಿತಃ | ನಾನಾವಿಧೇಷುವಾದೇಷು ಭವಾನ್ಪ್ರಾಪ್ಯಪರಾಜಯಂ ||೧೩|| ಸಂಜೀವಿತುಂಲಜ್ಜಿತಶ್ಚೇನ್ಮ್ರಿಯತಾಂ ನಾಮರೇಸ್ಸ್ವಯಂ | ವಿದ್ವತ್ತಮಂ ಬ್ರಹ್ಮವಿದಂ ಬ್ರಹ್ಮವಂಶಸಮುದ್ಭವಂ ||೧೪|| ಸದಸದ್ವೇದಿನಂ ಬೌದ್ಧಮತಸಿದ್ಧಾಂತಪದ್ಧತೇಃ| ಆಚಾರ್ಯಂಹನ್ತುಮುಚಿತಂ ತವಕಿಂಧರಣೀತಲೆ ||೧೫|| ಇತ್ಯುಕ್ತ್ವಾಭಕ್ತವೀರಾಭ್ಯಾಂ ಹತ್ವಾತಮುಪರಾಧಿನಂ | ಪತ್ರಿಕಾಂತದುರೋನ್ಯಸ್ತಾಂ ಪಂಡಿತಸ್ಯೋಪರಿಕ್ಷಿಪ್ಯಧಾ ||೧೬|| ಚಿಕ್ಷೇಪಾಲೋಕಯ ತ್ಯಕ್ತ್ವಾ ಗರ್ವಂ ತ್ವಂಪತ್ರಿಕಾಮಿತಿ| ತದಸಂಖ್ಯಾತಭಕ್ತಾನಾಮಾಜ್ಞಾಪತ್ರಂ ನಿರೀಕ್ಷ್ಯಸಃ ||೧೭|| ದಧೌಸ್ವಶಿರಸಾಭಕ್ತ್ಯಾ ಮಲ್ಲಿಕಾರ್ಜುನದೇಶಿಕಃ| ಜನೇಷುವಿಸ್ಮಯಾಕ್ರಾನ್ತೇಷ್ವೀಷತ್‌ಸ್ಮಿತಮುಖಾಂಬುಜಃ ||೧೮|| ಅವಾದೀದಪಿರಾಜಾನ ಮನಿವಾರಿತವೈಭವಃ । ತತ್ಕಾರ್ಯಸರಣಿಂರಾಜನ್ನಾಜ್ಞಾನಾಮಾತಿಚಭಾಷಿತುಂ ||೧೯|| ಅಜ್ಞಾತತತ್ವಾತ್ಪುರಾಽಸ್ಮಾಭಿರೇತದ್ವೃತ್ತಸ್ಯಕಿಂಚನ | ನಜಾನಾಮಾತಿವಕ್ತುಂಚ ಪಾರ್ಯತೇನಮಯಾಪರಂ ||೨೦|| ಆಜ್ಞಾಮಹೇಶಭಕ್ತಾನಾ ಮಿಯಂಸಂಲಕ್ಷ್ಯತೆಯತಃ | ಉಪರ್ಯಪಿಪತೇ

---

ನಾಗಿ, ಭಯಂಕರವಾಗಿ ಹುಬ್ಬು ಗಂಟಿಕ್ಕಿ ಹೀಗೆ ನುಡಿದನು—ಎಲೊ! ನಿನ್ನ ಕಪಟವೇಷವನ್ನು ನೋಡಿ ಭ್ರಮೆಗೊಂಡಿರುವ ಜನರು ನಿನ್ನನ್ನು "ಪಂಡಿತ" ಎಂದು ಕರೆಯುತ್ತಿರುವ ಮಾತ್ರದಿಂದಲೇ ನೀನು ಬಹು ಅಹಂಕಾರಪಟ್ಟಿರುವೆ. ನಾನಾವಿಧಗಳಾದ ವಾದದಲ್ಲಿ ನೀನು ಸೋತು ||೧೩|| ಭೂಮಿಯಲ್ಲಿ ಬದುಕಿರುವುದಕ್ಕೆ ನಾಚುಗೆಪಟ್ಟಿದ್ದರೆ ನಿನ್ನಷ್ಟಿಗೆ ನೀನು ಸಾಯಬೇಕಾಗಿತ್ತು. ಅದನ್ನು ಬಿಟ್ಟು, ವಿದ್ವದ್ವರ್ಯನೂ, ಬ್ರಹ್ಮಜ್ಞಾನಿಯೂ, ಬ್ರಾಹ್ಮಣವಂಶೋತ್ಪನ್ನನೂ, ಸದಸದ್ವಿವೇಕಿಯೂ, ಬೌದ್ಧಮತಾಚಾರ್ಯನೂ ಆದವನನ್ನು ಕೊಲ್ಲುವುದು ನಿನಗೆ ಉಚಿತವೆ? ||೧೫|| ಎಂದು ಹೇಳಿ, ವೀರಭಕ್ತರು ಬೌದ್ಧಗುರುವನ್ನು ಕೊಂದು ಅವನ ಎದೆಯಮೇಲೆ ಇರಿಸಿದ್ದ ಚೀಟಿಯನ್ನು ತೆಗೆದು, ಇದೋ ಅಹಂಕಾರವನ್ನು ಬಿಟ್ಟು ಈ ಚೀಟಿಯನ್ನು ನೋಡು ಎಂದು ಪಂಡಿತಾರಾಧ್ಯನಮೇಲೆ ಎಸೆದನು. ಆ ಮಲ್ಲಿಕಾರ್ಜುನ ಪಂಡಿತಾರಾಧ್ಯನಾದರೂ ಅಸಂಖ್ಯಾತ ಮಹಾ ಭಕ್ತಜನರ ಆ ಅಪ್ಪಣೆ ಚೀಟಿಯನ್ನು ನೋಡಿ ||೧೭|| ಭಕ್ತಿಯಿಂದ ತನ್ನ ಶಿರಸ್ಸಿನಮೇಲೆ ಧರಿಸಿಕೊಂಡನು. ಅಲ್ಲಿದ್ದ ಜನರು ಇದನ್ನು ನೋಡಿ ಆಶ್ಚರ್ಯಪಡಲಾಗಿ, ಪಂಡಿತಾರಾಧ್ಯನು ಮುಗುಳ್ನಗೆ ನಗುತ್ತ ||೧೮|| ಅವನು ದೊರೆಯಾಗಿದ್ದರೂ ಅವನನ್ನು ಕುರಿತು ದಿಟ್ಟತನದಿಂದ ಹೀಗೆ ನುಡಿದನು—ದೊರೆಯೆ! ಇದಕ್ಕೆ ಮೊದಲು ನಾವು ಈ ಸಂಗತಿಯನ್ನು ಲೇಶಮಾತ್ರವೂ ಅರಿಯದವರಾದುದರಿಂದ, ಆ ಕೆಲಸದ ಸಂಗತಿಯನ್ನು ನಾನು ಬಲ್ಲೆನೆಂದು ಹೇಳಲೂ ಆರೆನು. ಇದು ಮಹಾ ಶಿವಭಕ್ತರ ಅಪ್ಪಣೆಯಿಂದ ಮಾಡಲ್ಪಟ್ಟ ಕೆಲಸವೆಂದು ಈ ಪತ್ರಿಕೆಯಲ್ಲಿ ಬರೆಯಲ್ಪಟ್ಟಿರುವುದರಿಂದ ಇದನ್ನು ನಾನು ಕಾಣೆನೆಂದು ಹೇಳಲೂ ಆಗುವು

ದ್ಯೋವ್ಯೋಮ ನಜಾನಾಮೀತಿನಬ್ರುವೇ ||೨೧|| ಸಬೌದ್ಧೋವೇದಬಾಹ್ಯತ್ವಾಚ್ಛಿವ
ದ್ರೋಹೀತಿನಿಶ್ಚಿತಃ| ಹಂತುಂನಿಯುಕ್ತವಾನ್ಕಿಂಚಹತವಾನ್ಸಮುವರ್ತಿನಃ||೨೨||ಪು
ರಂಪ್ರೇಷಿತವಾನ್ಸೋಽಸಂತಂಭವಾಮಿಭವಾಮ್ಯಹಂ| ಸಗುರುಸ್ತವತೇಧರ್ಮೋದ್ವೇ
ಷಿಣಾಂತಸ್ಯದಣ್ಡನಂ ||೨೩|| ಹತವಾನಹಮೇವೇತಿ ಸಮುಚ್ಛೀಕರಣಾದಹಂ|
ದಂಡ್ಯಸ್ತವೇತಿಪುರತೋ ಭೂತ್ವಾವದತಿಪಣ್ಡಿತೇ ||೨೪||ಜ್ವಲತ್ಕೋಪಾಗ್ನಿನಿರ್ದ
ಗ್ಧವಿವೇಕಃಪಾಪವರ್ತನಃ | ಚೆಲ್ನಾಡಚೋಳನೃಪತಿರಜ್ಞಾನಪರಿದೂಷಿತಃ ||೨೫||
ಸುಪ್ರಸಿದ್ಧಾದ್ಬ್ರಾಹ್ಮಣೋ ನ ಹನ್ತವ್ಯ ಇತಿಭಾಷಿತಾತ್ | ಯಾವತ್ಯಪ್ಯಪರಾ
ಧೇಽತ್ರ ವಿದ್ಯಮಾನೇ ಯಥಾಽಧಮಾನ್ ||೨೬|| ಶಿಕ್ಷಯನ್ತಿತಥಾವಿಪ್ರೋನಶಿ
ಕ್ಷ್ಯೋಧರಣೀತಳೇ| ಕುರ್ವನ್ತಿನೇತ್ರಯೋರ್ದಂಡಮಪರಾಧೋ ಮಹಾನ್ಯದಿ
||೨೭|| ಕರ್ತುಂತದಪಿನೋಯುಕ್ತಂ ಶಿವಭಕ್ತೋಭವೇದ್ಯದಿ | ವಿಪ್ರಾದ್ಯಧಮ
ಜಾತ್ಯಂತಂ ಯೋವಾಕೋವಾಸ್ತುಮಾನವಃ ||೨೮|| ಅತ್ಯಂತಮಪರಾಧ್ಯೋ
ಪಿಸತತಂ ವಸುಧಾತಲೇ | ವಿಪ್ರೋಚಿತವಧಸ್ಯಾಪಿ ಶಿವಸಾನ್ನಿಧ್ಯಕಾರಣಾತ್
||೨೯|| ಇತಿವಾಕ್ಯಾತ್ಸುಪ್ರಸಿದ್ಧಾನ್ನಾರ್ಹೋಽಯಮಿತಿನಿಶ್ಚಿತಾಂ| ವೇದಶಾಸ್ತ್ರ

---

ದಿಲ್ಲ. ತಲೆಯಮೇಲೆ ಆಕಾಶವು ಕಳಚಿ ಬಿದ್ದರೂ ಇವನ್ನು ನಾನು ಕಾಣೆನೆಂದು ಹೇಳುವು
ದಿಲ್ಲ ||೨೧|| ಆ ಬೌದ್ಧನು ವೇದಬಾಹ್ಯನಾದುದರಿಂದ ಅವನು ಶಿವದ್ರೋಹಿಯೆಂದು ನಿರ್ಧ
ರಿಸಲ್ಪಟ್ಟನು. ಅದುಕಾರಣ ಅವನನ್ನು ಕೊಲ್ಲುವುದಕ್ಕೆ ನಿಯೋಜಿಸಿದವನೂ, ಕೊಂದವನೂ,
ಅವನನ್ನು ಯಮಪುರಿಗೆ ಕಳುಹಿಸಿದವನೂ ಸಹ ನಿಜವಾಗಿ ನಾನೇ ಆಗುತ್ತೇನೆ. ಕೊಲ್ಲಲ್ಪಟ್ಟ
ಆ ಬೌದ್ಧನು ನಿನ್ನ ಗುರುವು. ಅವನ ಶತ್ರುಗಳನ್ನು ಶಿಕ್ಷಿಸುವುದು ನಿನಗೆ ಧರ್ಮವು ||೨೩||
ಕೊಂದವನು ನಾನೇ ಎಂದು ಸಂಪೂರ್ಣವಾಗಿ ಒಪ್ಪಿಕೊಂಡಿರುವುದರಿಂದ ಶಿಕ್ಷಿಸಲ್ಪಡುವು
ದಕ್ಕೆ ನಾನು ಅರ್ಹನಾಗಿರುತ್ತೇನೆ. ಎಂಬುದಾಗಿ ಪಂಡಿತಾರಾಧ್ಯನು ಇದಿರಿಗೆ ನಿಂತು
ಹೇಳಲಾಗಿ ||೨೪|| ಅಜ್ಞಾನಿಯೂ ಪಾಪಿಯೂ ಆದ ಚೆಲ್ನಾಡ ಚೋಳರಾಜನು ಕೋಪ
ದಿಂದ ವಿವೇಕಶೂನ್ಯನಾಗಿ ||೨೫|| ‘‘ಬ್ರಾಹ್ಮಣನನ್ನು ಕೊಲ್ಲಲಾಗದು’’ ಎಂದು ಸುಪ್ರ
ಸಿದ್ಧವಾಗಿರುವ ಶಾಸ್ತ್ರವಚನವಿರುವುದರಿಂದಲೂ, ‘‘ಎಷ್ಟು ಅಪರಾಧವು ಇವರಲ್ಲಿದ್ದರೂ
ನೀಚರನ್ನು ಶಿಕ್ಷಿಸುವಂತೆ ಬ್ರಾಹ್ಮಣರನ್ನು ದಂಡಿಸಲಾಗದು. ತಪ್ಪು ಬಹಳ ದೊಡ್ಡವಾಗಿದ್ದರೆ
ಕಣ್ಣುಗಳಿಗೆ ಶಿಕ್ಷೆಯನ್ನು ಮಾಡುವರು ||೨೭|| ಅದರಲ್ಲೂ ಅಪರಾಧಿಯು ಶಿವಭಕ್ತನಾಗಿದ್ದರೆ
ಆ ಕಣ್ಣಿನ ಶಿಕ್ಷೆಯನ್ನೂ ಕೂಡ ಮಾಡಲಾಗದು. ಭೂಮಿಯಲ್ಲಿ ಬ್ರಾಹ್ಮಣನು ಮೊದಲು
ಗೊಂಡು ನೀಚಜಾತಿಯವರೆಗಿರುವ ಯಾವೊಬ್ಬ ಮನುಷ್ಯನಾಗಲೀ ಅತ್ಯಂತಾಪರಾಧವನ್ನು
ಮಾಡಿದ್ದರೂ ಅವನು ಶಿವಭಕ್ತನಾಗಿದ್ದರೆ ಅವನಲ್ಲಿ ಶಿವನ ಸಾಮೀಪ್ಯವಿರುವುದರಿಂದ, ಬ್ರಾ
ಹ್ಮಣಾಪರಾಧಿಗೆ ಮಾಡಲ್ಪಡತಕ್ಕ ಶಿಕ್ಷೆಯನ್ನು ಕೂಡ ಮಾಡಲಾಗದು.’’ ಹೀಗೆಂದು ಪ್ರಸಿ

ಪುರಾಣೇತಿಹಾಸಸಿದ್ಧಾನ್ತಪದ್ಧತಿಂ ||೩೦|| ಉಲ್ಲಂಘ್ಯದುರ್ಮತಿರ್ಬೌದ್ಧಗುರುಹನ್ತಾಽಯಮಿತ್ಯಮುಂ | ವಿಧಾತುಮದಿಶನ್ನೇತ್ರದಣ್ಡಿತಂ ಪಂಡಿತೋತ್ತಮಂ ||೩೧|| ಅಥಾವದನ್ನರಪತಿಂ ತದಾಪಂಡಿತಸತ್ತಮಃ | ದೈವತಂನಶಿವಃಕಿನ್ತು ಬುದ್ಧಏವಮಹೀತಳೇ ||೩೨|| ಬೌದ್ಧಾಏವವಿಶಿಷ್ಟಾಶ್ಚ ನಾನ್ಯೇಸಮಯಿನಃಸ್ಫುಟಂ| ತಥಾಚಸುತರಾಂವಾದೇನಯಮೇವಪರಾಜಿತಾಃ ||೩೩|| ದ್ರೋಹೀನತ್ವದ್ಗುರುಶ್ಚೈನಂ ಸೂನಂನಿರಪರಾಧಿನಂ | ಹತವಾನಹಮೇವೇತಿತ್ವನ್ಮತೌ ವಿದ್ಯತೇ ನೃಪ ||೩೪|| ದೈವತಂ ಶಿವಏವೇಶಭಕ್ತಾಏವ ಮಹೀತಳೇ | ಶಿಷ್ಟಾಇತ್ಯಸ್ಯಚಾರ್ಥಸ್ಯ ಶ್ರೀಮಹಾದೇವವೈಭವಂ ||೩೫|| ವಕ್ತುಂಪ್ರಯೋಜನಂಕಿಂವಾ ದ್ರೋಹಿಣಸ್ತದ್ಗುರಾತ್ಮನಃ | ಮಹೇಶಂಧಿಕ್ಕೃತವತೋ ಬೌದ್ಧಸ್ಯವದನೇಽಧುನಾ ||೩೬|| ಸಮಾಕೀರ್ಣಕ್ರಿಮಿಕುಲಂ ಸಾಕ್ಷಿತನ್ಮೃತಿರೇವಹಿ | ಸಾಕ್ಷಿಣೇದೂಷಕತ್ವಸ್ಯ ತದೀಯಸ್ಯಪರಿಸ್ಫುಟಂ||೩೭|| ಶಿವದ್ರೋಹೀಜ ಇತ್ಯಸ್ಯ ಸ್ವದೇಶಿಪರದೇಶಿನಃ | ಸಾಕ್ಷಿಣಸ್ಸ್ಯುಃ ಕಿಂಚಪೂರ್ವಂ ಯೇಮಯಾವಾದತೋಜಿತಾಃ ||೩೮|| ತಾರ್ಕಿಕಾಸ್ತೇಽಚಮೇವಾದೇ ಭಂಗೋನೇತ್ಯಸ್ಯಸಾಕ್ಷಿಣಃ | ಏವಂಸ್ಥಿತೇಽಪಿಸಕ

---

ಷ್ಟವಾದ ಧರ್ಮಶಾಸ್ತ್ರವಚನವಿರುವುದರಿಂದ, ಈ ಪಂಡಿತಾರಾಧ್ಯನು ಶಿವಭಕ್ತನೂ ಬ್ರಾಹ್ಮಣನೂ ಆಗಿರುವುದರಿಂದ ನೇತ್ರದಂಡನೆಗೂ ಕೂಡ ಅರ್ಹನಲ್ಲವೆಂಬ ವೇದಶಾಸ್ತ್ರಪುರಾಣೇತಿಹಾಸಸಿದ್ಧಾಂತಮರ್ಯಾದೆಯನ್ನು ಕೂಡ ||೩೦|| ದುರ್ಬುದ್ಧಿಯಾದ ಚೋಳರಾಜನು ಉಲ್ಲಂಘಿಸಿ, ಇವನು ಬೌದ್ಧಗುರುವನ್ನು ಕೊಂದವನು ಎಂಬುದಾಗಿ ನಿರ್ಧರಿಸಿ, "ಈ ಪಂಡಿತಾರಾಧ್ಯನ ಕಣ್ಣನ್ನು ಕಿತ್ತುಬಿಡಿ" ಎಂದು ಆಜ್ಞಾಪಿಸಿದನು ||೩|| ಆಗ ಪಂಡಿತಾರಾಧ್ಯನು ದೊರೆಯನ್ನು ಕುರಿತು ಹೀಗೆ ಹೇಳಿದನು—ಎಲೆ ದೊರೆಯೆ! ಶಿವನು ದೇವರಲ್ಲ, ಬುದ್ಧನೇ ದೈವವು, ಬೌದ್ಧರೇ ಶ್ರೇಷ್ಠರು, ಉಳಿದ ಮತದವರೆಲ್ಲಾ ಶ್ರೇಷ್ಠರಲ್ಲ, ವಾದದಲ್ಲಿ ಇವರೇ ಸೋತವರು, ನಿನ್ನ ಗುರುವು ದೈವದ್ರೋಹಿಯಲ್ಲ, ಈ ನಿರಪರಾಧಿ ಬೌದ್ಧನನ್ನು ನಿಜವಾಗಿ ಕೊಂದವನು ನಾನೇ ಎಂದು ನಿನ್ನ ಬುದ್ಧಿಗೆ ಗೊತ್ತಾಗಿರುತ್ತದೆ ||೩೪|| ಭೂತಲದಲ್ಲಿ ಶಿವನೇ ದೈವವು, ಶಿವಭಕ್ತರೇ ಶ್ರೇಷ್ಠರು ಎಂಬ ಅರ್ಥಕ್ಕೆ ಶ್ರೀ ಪರಮೇಶ್ವರನ ಮಹತ್ತ್ವವನ್ನು ಬರೀ ಬಾಯಿಂದ ಹೇಳಿಕೊಂಡರೆ ಪ್ರಯೋಜನವೇನು? ಆ ಪರಮೇಶ್ವರನನ್ನು ಧಿಕ್ಕರಿಸಿದ ಬೌದ್ಧನ ಬಾಯಲ್ಲಿ ಈಗ ತುಂಬಿರುವ ಹುಳುಗಳೇ ಸಾಕ್ಷಿಯು. ಮತ್ತು ಅವನು ದೂಷಕನಾಗಿದ್ದನೆಂಬುದಕ್ಕೆ ಸುವ್ಯಕ್ತವಾಗಿ ಅವನಿಗುಂಟಾದ ಸಾವೇ ಸಾಕ್ಷಿಯು ||೩೭|| ಅವನು ಶಿವದ್ರೋಹಿಯಾಗಿದ್ದನೆಂಬುದಕ್ಕೆ ಶಿವಾಲಯದ ದೀಪಸ್ತಂಭವನ್ನು ನೋಡಿದ್ದ ಸ್ವದೇಶ ಪರದೇಶದವರನೇಕರು ಸಾಕ್ಷಿಗಳಾಗಿರುವರು. ಮತ್ತು ವಾದದಲ್ಲಿ ನನಗೆ ಸೋಲಾಯಿತೆ ಇಲ್ಲವೆ ಎಂಬುದನ್ನು ಹೇಳುವುದಕ್ಕೆ ಪೂರ್ವದಲ್ಲಿ ನನ್ನೊಡನೆ ವಾದಮಾಡಿ ಸೋತುಹೋದ ತಾರ್ಕಿಕರೇ. ಸಾಕ್ಷಿಗಳಾಗಿರು

ಲಾನ್ವಿಸ್ಮೃತ್ಯಪ್ರತ್ಯಯಾನಮೂನ್ ||೩೯|| ಮದಾಂಧಸ್ತ್ವಮಜಾನಂ ಸ್ತ್ವಾಂ ಯದಿಮಾಂದಣ್ಡಯಿಷ್ಯಸಿ | ಸ್ವಯಂದಣ್ಡಯಿತುಂತಿಷ್ಠಾಮ್ಯಹಂ ಮಾಮೇವ ಸಂಪ್ರತಿ ||೪೦|| ಅನ್ಯದಾಕರ್ಣಯಾಶ್ಚರ್ಯಂ ಯದಿದಂಡಯಿತುಂಮತಿಃ | ನೇತ್ರಯೋರ್ದಂಡಪಾಲಮಿತಿಮಾಸ್ತುಮಹೀತಲೇ ||೪೧|| ಪಶ್ಯತ್ರಿವಾರಂ ಗಿರಿಶಮಹಿಮಾಡಂಬರಂಪರಂ| ಪ್ರತ್ಯಯಾಡಂಬರಂ ಚಾದ್ಯ ತ್ವಮಸ್ಮಾಕಂಮಹೋನ್ನತಿಂ ||೪೨|| ವಿಶ್ವಾಧಿಕೋ ಮಹಾದೇವ ಇತಿದರ್ಶಯಿತುಂಶ್ರುತೌ | ತಚ್ಛಿರೋಧರ್ಮಇತ್ಯುಚ್ಚೈಃ ಕೀರ್ತಯಂತ್ಯಾಮಹಂಶಿರಃ ||೪೩|| ಛಿತ್ವಾತ್ರಿವಾರಂ ಯದಿ ತನ್ನಲಭೇಯ ಸಸತ್ವರಂ | ವಿಶಿಷ್ಟಾಶ್ಶಿವಸದ್ಭಕ್ತಾ ಇತಿಸ್ಥಾಪಯಿತುಂಸ್ಫುಟಂ ||೪೪|| ದರ್ಶನಾದಿತ್ಯಾಗಮೋಕ್ತೇಸ್ತದ್ದರ್ಶನಪವಿತ್ರಿತೇ | ನೇತ್ರೇತ್ರಿವಾರಮುತ್ಪಾಟ್ಯಲಭೆಯಾಹಂ ನವಾಯದಿ ||೪೫|| ನಿರ್ಮಾಲ್ಯಸೌಖ್ಯಂ ಸನ್ಮುಕ್ತಿರಿತಿಖ್ಯಾಪಯಿತುಂಭುವಿ | ಛಿತ್ವಾತ್ರಿಃ ಪೂರ್ವವತ್ಕಾಯಂ ನಲಭೇಯತಥಾಯದಿ ||೪೬|| ಕುತ್ರತ್ಯಶ್ಶಂಕರೋಭಕ್ತಾಃ ಕುತಸ್ತ್ಯಾಃ ಕ್ವತದರ್ಚನಂ | ನಿರ್ಮಾಲ್ಯಮಪಿದೇವಸ್ಯ ಕ್ವತ್ಯಂ ವಿಶ್ವಂಭರಾತಲೇ ||೪೭|| ಬೌದ್ಧಾ ಏವಮಹೀಂಯಾಂಸಸ್ತ

---

ವರು. ಹೀಗಿದ್ದರೂ ಈ ಪ್ರಮಾಣಗಳನ್ನೆಲ್ಲಾ ಮರೆತು ||೩೯|| ಗರ್ವಾಂಧನಾದ ನೀನು ನಿನ್ನನ್ನೇ ಅರಿಯದೆ ನನ್ನನ್ನು ಶಿಕ್ಷಿಸುವೆಯಾದರೆ, ಅದಕ್ಕೆ ಮುಂಚೆ ಈಗ ನನ್ನನ್ನೇ ನಾನು ಶಿಕ್ಷಿಸಿಕೊಳ್ಳುತ್ತೇನೆ. ||೪೦|| ಮತ್ತೊಂದು ಆಶ್ಚರ್ಯಕರವಾದ ವಿಷಯವನ್ನು ಕೇಳು—ನನ್ನನ್ನು ಶಿಕ್ಷಿಸಬೇಕೆಂಬ ಬುದ್ಧಿಯು ನಿನಗಿದ್ದರೆ, ಎಲೆ ದೊರೆಯೆ! ಒಂದುಸಲ ಕಣ್ಣನ್ನು ಕೀಳಿಸಿಬಿಡುವಷ್ಟು ಶಿಕ್ಷೆಯೇ ಸಾಕೆನ್ನಬೇಡ; ಅದನ್ನು ಮೂರುಸಲ ಮಾಡಿಸಿ ನೋಡು. ಈಗ ಪರಶಿವನ ಮಹಶ್ವಾತಿಶಯುವನ್ನೂ, ನಮ್ಮ "ರುಜುವಾತಿನ" ಅಗ್ಗಳತೆಯನ್ನೂ, ನಮ್ಮ ಮಹೋನ್ನತ್ಯವನ್ನೂ ತಿಳಿದುಕೊ ||೪೧|| ಶಿವನು ಜಗದಧಿಕನೆಂಬುದನ್ನು ತೋರಿಸುವುದಕ್ಕಾಗಿ, ವೇದವು "ತಚ್ಛಿರೋಧರ್ಮಃ" ಎಂಬ ವಾಕ್ಯದಲ್ಲಿ ಗಟ್ಟಿಯಾಗಿ ಕೂಗಿ ಹೇಳುತ್ತಿರಲಾಗಿ ||೪೨|| ನನ್ನ ತಲೆಯನ್ನು ಮೂರುಸಲ ಕತ್ತರಿಸಿಕೊಂಡು ಕೂಡಕೂಡಲೇ ಮರಳಿ ಅದನ್ನು ಪಡೆದುಕೊಳ್ಳದಿದ್ದರೆ, ಮತ್ತೂ ಶಿವಭಕ್ತರು ಶ್ರೇಷ್ಠರೆಂಬುದನ್ನು ವ್ಯಕ್ತವಾಗಿ ಸಿದ್ಧಾಂತಪಡಿಸುವುದಕ್ಕಾಗಿ ||೪೪|| "ದರ್ಶನಾತ್ಪಾವನಂ" ಎಂಬ ಆಗಮ ವಚನಪ್ರಕಾರ ಶಿವದರ್ಶನದಿಂದ ಪವಿತ್ರವಾಗಿರುವ ನನ್ನ ಕಣ್ಣುಗಳನ್ನು ಮೂರುಸಲ ಏಣಂಟೆ ತೆಗೆದು ಮರಳಿ ಅವನ್ನು ಪಡೆದುಕೊಳ್ಳದಿದ್ದರೆ ||೪೫|| ಶಿವನಿರ್ಮಾಲ್ಯಸೇವನಸೌಖ್ಯವೇ ಮೋಕ್ಷವೆಂಬುದನ್ನು ಭೂಮಿಯಲ್ಲಿ ಪ್ರಸಿದ್ಧಿಗೊಳಿಸುವುದಕ್ಕಾಗಿ, ನನ್ನ ದೇಹವನ್ನು ಆ ಕಣ್ಣಿನಂತೆಯೇ ಮೂರುಸಲ ಕಡಿದು ತುಂಡುಮಾಡಿ ಮರಳಿ ಪೂರ್ವದಂತೆಯೇ ಪಡೆಯುಕೊಳ್ಳದಿದ್ದರೆ ||೪೬|| ಶಿವನು ಎಲ್ಲಿಯುವನು? ಅವನ ಭಕ್ತರೆಲ್ಲಿಯುವರು? ಅವನ ಅರ್ಚನೆಯೂ ಪ್ರಸಾದವೂ ಎಲ್ಲಿಯುದು? ||೪೭|| ಆಗ್ಗೆ ಭೂಮಿಯಲ್ಲಿ

ಸ್ಮೃತಂಸಸ್ಮೃತಂಭವೇತ್ | ಭವಾನೇವಪತಿರ್ಭೂಮೌ ಬುದ್ಧ ಏವಹಿದೈವತಂ ||೪೮||
ಆಲೋಕಯಾಧುನಾದೃಷ್ಟಪ್ರತ್ಯಯಂ ಧರಣೀಶ್ವರ| ಇತಿಪ್ರಹರ್ಷಿತೋಭೂತ್ವಾ
ಪಂಡಿತಃ ಖಂಡಿತಾಶುಭಃ ||೪೯|| ಪ್ರತಿವೀಥ್ಯಾಮಂಗನಾಸು ಪುರುಷೇಷುಸವಿ
ಸ್ಮಯಂ | ಆಯಾತೇಷುಸಮಾಕರ್ಣ್ಯ ವೃತ್ತಾಂತಮಿಮಮಾಯಯೌ ||೫೦||
ಶ್ರೀಲಿಂಗೋದ್ಭವದೇವಸ್ಯ ತುಂಗಗೋಪುರಮಂಟಪಂ | ತದಂಗಣೋಪವಿಷ್ಟಾ
ಯಾಸ್ತದಾಸದ್ಭಕ್ತಸಂಸದಃ ||೫೧|| ತ್ರಿಃಪ್ರಣಮ್ಯಸಮಸ್ತಾಂಗಸಂಸ್ಪೃಷ್ಟಧರ
ಣೀತಲಃ | ಸ್ವಗತಾಗತವೃತ್ತಾಂತಂ ವಿಜ್ಞಾಪ್ಯಾಸ್ಯೈಸಮಾಹಿತಃ ||೫೨|| ಲಿಂ
ಗೋದ್ಭವಾಹ್ವಯಂಗದ್ಯಂ ವಿರಚ್ಯಪರಯಾಮುದಾ | ಲಿಂಗೋದ್ಭವಾಹ್ವಯಂ
ದೇವಂ ಸಂಸ್ತುತ್ಯಪರದಂದ್ರುತಂ ||೫೩|| ಕೃತ್ವಾಸತದ್ದೇವನಿರ್ಮಾಲ್ಯ ಪುಷ್ಪೋ
ತ್ತಂಸಿತಮಸ್ತಕಃ | ಪ್ರಾಜ್ಯಸದ್ಭಕ್ತಿಸಾಮ್ರಾಜ್ಯ ಪಟ್ಟಬದ್ಧನಿಜಾಲಕಃ ||೫೪||
ದರಹಾಸಾಮಲಜ್ಯೋತ್ಸ್ನಾ ಪೂರ್ಣವಕ್ತ್ರೇಂದುಮಂಡಲಃ | ಹರನಾಮಸುಧಾ
ಪೂರ್ಣ ಸ್ವಕರ್ಣಕಲಶಾಂಚಿತಃ ||೫೫|| ಆನಂದಬಾಷ್ಪಸಂವರ್ಧಮಾನನೇತ್ರಾಂ
ಬುಜದ್ವಯಃ | ದೃಗಂಚಲೋದ್ಯತ್ಕರುಣಾಮೃತಾಂಚದ್ಗಂಡಮಂಡಲಃ ||೫೬||

---

ಬೌದ್ಧರೇ ದೊಡ್ಡವರು, ಅವರ ಮತವೇ ದೊಡ್ಡದು, ನೀನೇ ಸ್ವಾಮಿ, ಬುದ್ಧನೇ ದೈವವು ಆಗುವಿರಿ ||೪೮|| ಎಲೆ ದೊರೆಯೆ, ಈಗ ಪ್ರತ್ಯಕ್ಷ ಪ್ರಮಾಣವನ್ನು ನೋಡು, ಎಂಬುದಾಗಿ ಅಮಂಗಳ ವಿನಾಶಕನಾದ ಪಂಡಿತಾರಾಧ್ಯನು ನುಡಿದು, ಸಂತೋಷವಿಶಿಷ್ಟನಾಗಿ ||೪೯|| ಈ ಸುದ್ದಿಯನ್ನು ಕೇಳಿ ಊರಿನ ಹೆಂಗುಸರು ಗಂಡುಸರೆಲ್ಲಾ ಆಶ್ಚರ್ಯಪಟ್ಟು ಬೀದಿಬೀದಿಯಲ್ಲಿ ಬರುತ್ತಿರಲಾಗಿ, ರಾಜನ ಸಭೆಯಿಂದ ಹೊರಟು, ಲಿಂಗೋದ್ಭವ ಮಹಾ ದೇವಾಲಯಕ್ಕೆ ಬಂದು ಅದರ ಸಭಾಮಂಟಪಾಂಗಣದಲ್ಲಿ ಕುಳಿತಿದ್ದ ಭಕ್ತರ ಪಾದಕ್ಕೆ ಮೂರುಸಲ ಸರ್ವಾಂಗವೂ ಭೂಮಿಗೆ ಸೋಂಕುವಂತೆ ನಮಸ್ಕರಿಸಿ, ನಡೆದ ಯಾವದ್ವೃತ್ತಾಂತವನ್ನೂ ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ಆ ಸಭೆಗೆ ವಿಜ್ಞಾಪಿಸಿ, ||೫೨|| ಇಷ್ಟಾರ್ಥಪ್ರದನಾದ ಲಿಂಗೋದ್ಭವ ಮಹಾದೇವನ ಮೇಲೆ ಪ್ರಶಂಸಾಪರವಾದ ಗದ್ಯವನ್ನು ಕೂಡಲೇ ಸಂತೋಷದಿಂದ ರಚಿಸಿ ಹೇಳಿ ||೫೩|| ಆ ಮಹಾದೇವನ ನಿರ್ಮಾಲ್ಯಕುಸುಮವನ್ನು ಮಂಡೆಯಲ್ಲಿ ಅಲಂಕರಿಸಿಕೊಂಡು, ಅತಿಶಯವಾದ ಶಿವಭಕ್ತಿಸಾಮ್ರಾಜ್ಯದ ಪರಿಪಾಲನ ಪಟ್ಟವನ್ನು ಹಣೆಗೆ ಕಟ್ಟಿಕೊಂಡು ||೫೪|| ಮುಗುಳ್ನಗೆಯೆಂಬ ಬೆಳ್ದಿಂಗಳಿಂದ ಕೂಡಿದ ಮುಖಚಂದ್ರಮಂಡಲವುಳ್ಳವನಾಗಿ, ತನ್ನ ಕಿವಿಯೆಂಬ ಕಲಶದಲ್ಲಿ ಶಿವನಾಮವೆಂಬ ಅಮೃತವನ್ನು ತುಂಬಿಕೊಂಡವನಾಗಿ, ||೫೫|| ಆನಂದಾಶ್ರುಜಲದಲ್ಲಿ ಮುಳುಗಿ ವೃದ್ಧಿಹೊಂದುತ್ತಿರುವ ನಯನಕಮಲಯುಗ್ಮವುಳ್ಳವನಾಗಿ, ಕಡೆಗಣ್ಣಿನಲ್ಲಿ ತುಂಬಿರುವ ಕರುಣಾಮೃತರಸದಿಂದ ಕೂಡಿರುವ ಕಪೋಲಪ್ರದೇಶಗಳುಳ್ಳವನಾಗಿ ||೫೬|| ಶಿವ ಪ್ರಸಾದ ತಾಂಬೂಲ ಸ್ವೀಕರಣದಿಂದ ಕೆಂಪಾಗಿರುವ ತುಟಿಗಳುಳ್ಳವನಾಗಿ, ಸಮಯೋಚಿತ

ವರಪ್ರಸಾದ ತಾಂಬೂಲರಾಗಾಂಶುಕಲಿತಾಧರಃ | ಸಮಯೋಚಿತಸಲ್ಲಾಪವ್ಯಕ್ತದಂತಾಂಶುಭಾಸುರಃ ||೫೭|| ವರಪಂಚಾಕ್ಷರೀರತ್ನ ಕರಂಡರಸನಾಂಚಲಃ| ಪ್ರಸಾದೇತರಸಮ್ಮಿಶ್ರ ಗಂಧವರ್ಜಕನಾಸಿಕಃ ||೫೮|| ಪೂರ್ವಾರ್ಚನಾಧೂಪಧೂಮವಾಸನಾಕಲಿತಾಂಬರಃ | ಭಸ್ಮೋದ್ಧೂಳನರುದ್ರಾಕ್ಷ ತ್ರಿಪುಂಡ್ರಾವಲಿ ಭೂಷಣಃ ||೫೯|| ಪ್ರಣಮಚ್ಛಿಷ್ಯಸಂದೋಹ ನಿಜಾಂಘ್ರಿನಖದರ್ಪಣಃ | ಶರಣಾಗತಹೃದ್ಭೃಂಗಾಶ್ರಿತ ಪಾದಪಯೋರುಹಃ ||೬೦|| ಪಂಡಿತಾರಾಧ್ಯದೇವೋಸೌಸ್ಥಿತ್ವಾಗಂಧದ್ವಿಪೋಯಥಾ | ನಿರೀಕ್ಷ್ಯತಾಂಸಭಾಂಪ್ರಾಹ ಸ್ತೂಯಮಾನೋಖಿಲೈರ್ಜನೈಃ||೬೧|| ಇಮಾಂಮಮಪ್ರತಿಜ್ಞೋಕ್ತಿಂ ಶೃಣುತೈಕಾಗ್ರಮಾನಸಾಃ | ದ್ವಿಜಾದ್ಯಧಮಜಾತ್ಯಂತ ಮಾನವಾಸ್ಸುಗತಾಅಪಿ ||೬೨|| ಜೈನಾಮಹೀಪತೇಃ ಪೌರಾಸ್ಸಮಸ್ತಾಸ್ಸೇವಕಾಜನಾಃ | ಪಂಡಿತಾಃ ಕವಯೋವಿದ್ವತ್ಪ್ರವರಾಸ್ತಾರ್ಕಿಕಾಅಪಿ ||೬೩|| ಸರ್ವೇಸಂಪಶ್ಯತಾಸ್ಮಾಭಿರಿದಾನೀಂಶ್ರುತಮಶ್ರುತಂ | ತಥಾದೃಷ್ಟಮದೃಷ್ಟಂಚಸ್ಥಿತಮಸ್ಥಿತಮಿತ್ಯಪಿ ||೬೪|| ವಚನಂಭಣಿತುಂಪಶ್ಚಾದ್ಭವದ್ಭಿರ್ಸ್ಸರ್ವಸಾಂಪ್ರತಂ | ಪ್ರಮಥಪ್ರಾಕ್ತನೇಶಾನಭಕ್ತಪಾದಾಂಬುಜಾ

---

ವಚನಗಳನ್ನಾಡುತ್ತಿರುವಾಗ್ಗೆ ಹೊರಹೊರಡುತ್ತಿರುವ ಶುಭ್ರದಂತಕಾಂತಿಯಿಂದ ಮನೋಹರನಾಗಿ ||೫೭|| ಪಂಚಾಕ್ಷರೀ ಮಂತ್ರವೆಂಬ ರತ್ನವನ್ನಿಡುವುದಕ್ಕೆ ಭರಣಿಯಾಗಿರುವ ನಾಲಗೆಯ ತುದಿಯುಳ್ಳವನಾಗಿ, ಶಿವಪ್ರಸಾದವಲ್ಲದ ಇತರ ವಾಸನೆಯಿಂದ ಕೂಡಿದ ಗಂಧವನ್ನು ಯಾವಾಗಲೂ ಮೂಸದಿರುವ ಮೂಗುಳ್ಳವನಾಗಿ ||೫೮|| ಹಿಂದೆ ಶಿವಾರ್ಚನೆ ಮಾಡುವಾಗ್ಗೆ ಹಾಕಿದ್ದ ಧೂಪದ ಹೊಗೆಯಿಂದ ವಾಸನೆ ಕಟ್ಟಿಕೊಂಡಿರುವ ವಸ್ತ್ರವುಳ್ಳವನಾಗಿ, ಭಸ್ಮಲೇಪನ ತ್ರಿಪುಂಡ್ರಧಾರಣ ರುದ್ರಾಕ್ಷಮಾಲಿಕೆ ಇವುಗಳೇ ಆಭರಣವಾಗುಳ್ಳವನಾಗಿ ||೫೯|| ನಮಸ್ಕರಿಸುತ್ತಿರುವ ಶಿಷ್ಯಸಮೂಹಕ್ಕೆ ತನ್ನ ಪಾದದ ಉಗುರುಗಳೇ ಕನ್ನಡಿಯಾಗುಳ್ಳವನಾಗಿ, ತನ್ನನ್ನು ಮರೆಹೊಕ್ಕವರ ಚಿತ್ತವೆಂಬ ಭ್ರಮರಕ್ಕೆ ಆಶ್ರಯಭೂತವಾಗಿರುವ ಪಾದಕಮಲವುಳ್ಳವನಾಗಿ ||೬೦|| ಇದ್ದು, ಶಿವನ ಮದಗಜವೋ ಎಂಬಂತೆ ಆ ಭಕ್ತ ಸಭೆಯನ್ನು ಗಂಭೀರವಾಗಿ ನೋಡಿ ಸಕಲರಿಂದಲೂ ಸ್ತೋತ್ರಮಾಡಿಸಿಕೊಳ್ಳುತ್ತ ಹೀಗೆ ನುಡಿದನು—||೬೧|| ಬ್ರಾಹ್ಮಣರು ಮೊದಲಾಗಿ ನೀಚಜಾತಿಯವರೆಗಣ ಎಲೈ ಸಕಲ ಮನುಜರೆ! ಬೌದ್ಧರೆ! ಜೈನರೆ! ಪುರಜನರೆ! ರಾಜಭೃತ್ಯರೆ! ಪಂಡಿತರೆ! ಕವಿಗಳೆ! ವಿದ್ವಚ್ಛ್ರೇಷ್ಠರೆ! ತಾರ್ಕಿಕರೆ! ನೀವೆಲ್ಲರೂ ಏಕಾಗ್ರಚಿತ್ತರಾಗಿ ನನ್ನ ಶಪಥ ವಚನವನ್ನು ಕೇಳಿರಿ. ಈಗ ನೀವು ಕೇಳಿದುದನ್ನೂ ಕೇಳದೆ ಇದ್ದುದನ್ನೂ, ನೋಡಿದುದನ್ನೂ ನೋಡದೆ ಇದ್ದುದನ್ನೂ, ಇದ್ದುದನ್ನೂ ಇಲ್ಲದೆ ಇದ್ದುದನ್ನೂ, ಈಗಲ್ಲ, ಮುಂದೆ ಯಥಾರ್ಥವಾಗಿ ನುಡಿಯುವುದಕ್ಕಾಗಿ ಎಲ್ಲರೂ ಈಗ ನಡೆಯುವುದನ್ನು ನೋಡಿರಿ ಎಂದು ಹೇಳಿ, ಬಳಿಕ ಭಕ್ತಿಯಿಂದ ಮಹಾ ಪ್ರಮಥಗಣಂಗಳ ಪಾದಕಮಲಗಳನ್ನು ನಮಸ್ಕರಿಸಿ,

ಸ್ಯಥ ||೭೫|| ಸಿಥಾಯಮೂರ್ಧ್ನೈಕ್ಯೃತ ಏಪರುದ್ರ ಇತ್ಯತಿಭಕ್ತಿತಃ | ತಥಾವಿಶ್ವಾಧಿಕೋರುದ್ರ ಇತಿವೇದೇವದತ್ಯಥ ||೭೬|| ಶಂಭೋರ್ವಿಶ್ವಾಧಿಕತ್ವಸ್ಯ ಪ್ರಮಾಣಮಿದಮೇವಹಿ | ಕಿಂಚಾಮ್ನಾಯೇಸರ್ವಪೂತ ಇತಿಕೀರ್ತಯತಿಸ್ಫುಟಂ||೭೭|| ಅನ್ಯಾನಶಿಷ್ಟಾ ಇತಿಚ ವಚನೇಸಮುದಂಚತಿ | ವಿಶಿಷ್ಟಾಶ್ಶಿವಸದ್ಭಕ್ತಾ ಇತ್ಯಸ್ಯ ಪ್ರತ್ಯಯೋಹ್ಯಸೌ ||೭೮|| ವೇದೇಪಿತಾತದಶ್ಯಾಮ ತವರುದ್ರೇತಿಶಂಸತಿ | ತಥಾಪುರಾಣೇವದತಿ ಪ್ರಸಾದಾನ್ಮುಕ್ತಿಸಂಭವಃ ||೭೯|| ಇತಿಜೋವಾಪತೇಶ್ಯಂಭೋಃ ಪ್ರಸಾದೋ ಮುಕ್ತಿಕಾರಣಂ | ಇತ್ಯಸ್ಯಾಪಿಪ್ರತ್ಯಯೋಽಯಂ ಪಶ್ಯಂತು ನಿಖಿಲಾಜನಾಃ ||೮೦|| ಕಿಂಚರೋಷಾಚ್ಛಿಕ್ಷಯತಿ ಯದಾಸ್ಮಾನ್ನೃಪತಿಸ್ತದಾ | ಶಿರಃ ಪಾದಕರಂನೇತ್ರೇ ಭಿನ್ನಮುತ್ಪಾಟಿತೇಪುನಃ ||೮೧|| ನಪ್ರರೋಹತಿವಾಽಽಯಾತೋ ಯದಿತತ್ಸಕಲಾಂಗಕಂ| ರುಧಿರಾಚ್ಛನ್ನಮುಚ್ಛೂನಂ ಸವ್ರಣಂಶ್ವಯಥೂಲ್ಬಣಂ ||೮೨|| ಶುಷ್ಕಂ ಸಂಕುಚಿತಂ ಕ್ಲಿಷ್ಟಂ ಲಂಬಿತಂ ವಿಕೃತಂಯದಿ | ನೇಶಂ ಪ್ರದಕ್ಷಿಣೀಕುರ್ಮೋ ನಹಿ ವೀಕ್ಷಾಮಹೇವಯಂ ||೮೩|| ಭಜಾಮಹೇನವಾಕುರ್ಮೋ ನ ನಮಸ್ಕಾರಮಾದರಾತ್ | ಅತ್ರಸ್ಥಾನಾಮಸಂ

---

ವೇದವು "ಏಕಏವರುದ್ರೋನದ್ವಿತೀಯಾಯತಸ್ಥೆ" ಎಂಬುದಾಗಿಯೂ, "ವಿಶ್ವಾಧಿಕೋರುದ್ರೋಮಹರ್ಷಿಃ" ಎಂಬುದಾಗಿಯೂ ಹೇಳುತ್ತಿದೆಯಾಗಿ, ಶಿವನು ಲೋಕಾಧಿಕನೆಂಬುದಕ್ಕೆ ಇದೇ ನನ್ನ ಶಪಥವು. ಮತ್ತು ಅದೇ ವೇದವು—"ಸರ್ವಪೂತಃ" ಎಂಬುದಾಗಿ ಸ್ಪಷ್ಟೋಕ್ತಿಯಿಂದ ಹೊಗಳುತ್ತಿರಲು ||೭೭|| "ಅನ್ಯಾನಶಿಷ್ಟಾಃ" ಎಂಬ ವೇದವಚನವು ಕೂಡ ಇರುತ್ತಿರಲಾಗಿ, ಲೋಕದಲ್ಲಿ ಶಿವಭಕ್ತರು ಶ್ರೇಷ್ಠರೆಂಬುದಕ್ಕೆ ಇದೇ ನನ್ನ ಭಾಷೆಯು. ||೭೮|| ಮತ್ತು "ಪಿತಾತದಶ್ಯಾಮತವರುದ್ರಪ್ರಣೀತೌ" ಎಂಬುದಾಗಿ ವೇದವು ಹೇಳುತ್ತಿರಲಾಗಿಯೂ, ಪುರಾಣವು "ಪ್ರಸಾದಾನ್ಮುಕ್ತಿಸಂಭವಃ" ಎಂಬುದಾಗಿ ಹೇಳುತ್ತಿರಲಾಗಿಯೂ ಸಹ ಶಿವಪ್ರಸಾದವು ಮುಕ್ತಿಗೆ ಸಾಧಕವಾದುದೆಂಬುದಕ್ಕೆ ಇದೇ ಪಂಥವು. ಸರ್ವಜನರೂ ನೋಡಿರಿ ||೮೦|| ನಮ್ಮನ್ನು ದೊರೆಯು ಕೋಪದಿಂದ ಶಿಕ್ಷಿಸುವುದಕ್ಕಾಗಿ ಪ್ರವರ್ತಿಸಿ ಕಣ್ಣನ್ನು ಕೀಳಿಸಿದರೂ, ಕೈಕಾಲುಗಳನ್ನು ಕತ್ತರಿಸಿದರೂ, ಅವೆಲ್ಲವೂ ಮರಳಿ ಯಥಾಪೂರ್ವವಾಗಿ ಹುಟ್ಟಿಬರದಿದ್ದರೆ, ಮತ್ತು ಆ ಅಂಗಗಳು ರಕ್ತದಿಂದ ವ್ಯಾಪ್ತಗಳಾದರೂ, ಗಾಯಗೊಂಡರೂ, ಬಾತುಕೊಂಡರೂ. ಒಣಗಿಹೋದರೂ, ಸೆಳೆದುಕೊಂಡರೂ, ನೆನದುಹೋದರೂ, ನಿಗುರಿಕೊಂಡರೂ, ವಿಕಾರವಾದರೂ ಸಹ ನಾವು ಇನ್ನು ಶಿವನನ್ನು ಪ್ರದಕ್ಷಿಣೆ ಮಾಡುವುದಿಲ್ಲ, ಅವನ ದರ್ಶನವನ್ನು ಮಾಡುವುದಿಲ್ಲ ||೮೩|| ಧ್ಯಾನಿಸುವುದೂ ಇಲ್ಲ. ಭಕ್ತಿಯಿಂದ ನಮಸ್ಕಾರವನ್ನೂ ಮಾಡುವುದಿಲ್ಲ. ಇಲ್ಲಿರುವ ಅಸಂಖ್ಯಾತ ಮಹಾ ಭಕ್ತರ ಮಾತೆಲ್ಲಾ ವ್ಯರ್ಥವೇ ಆಗುವುದು

ಖ್ಯಾತ ಭಕ್ತಾನಾಂ ಭಾಷಣಂವೃಥಾ ||೨೪|| ಇತ್ಯುದೀರ್ಯಪುನಸ್ಸಾಂಗಂ ಶೇಷಾಂಕೃತ್ವಾನಮಸ್ಕ್ರಿಯಾಂ | ಕಿಂಸಂಶಯೇನ ಭೂಮೀಶ ಬ್ರೂಹಿದಂಡಯಿಶುಂದ್ಧೃತಂ ||೨೫|| ಇತ್ಯವಾದೀತ್ಪಂಡಿತೇಂದ್ರಸ್ತಂ ಪ್ರತಿಜ್ಞಾಪುರಸ್ಸರಂ ||

ಇತ್ಯಸಂಖ್ಯಾತ ಮಹಾಮಾಹೇಶ್ವರ ದಿವ್ಯಶ್ರೀಪಾದಪದ್ಮನಿರಂತರ ಭಾವನಾಪರಿರಂಜಿತ ಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲ ಭಸ್ಮೀಕೃತಾಖಿಲಭವಬೀಜಸ್ಯ ಶ್ರೀ ವೀರಶೈವಮತಾಚಾರ್ಯ ಗುರುರಾಜಸ್ಯಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೇ ಮಹಿಮಪ್ರಕರಣೇ ತತ್ಪಂಡಿತಾರಾಧ್ಯ ಪ್ರಮಥವಾರ ಪ್ರತಿಜ್ಞಾಕಥನಂ ನಾಮ ದ್ವಿತೀಯೋಽಧ್ಯಾಯಃ

---

## ಅಥ ತೃತೀಯೋಽಧ್ಯಾಯಃ.

(ಪಂಡಿತಾರಾಧ್ಯ ಪ್ರಥಮನಾರನೇತ್ರಲಾಭಕಥನಂ)

ಅಥರಾಜಾಽತಿರೋಷೇಣ ಬಭಾಷೇವೀಕ್ಷ್ಯಯಾಮಿಕಾನ್ | ಉತ್ಪಾಟ್ಯತಾಂ ನೇತ್ರಯುಗಮಾದೌ ತಾವತ್ತದುಕ್ತಿವತ್ ||೧|| ತ್ರಿವಾರಮಪಿತನ್ನೇತ್ರ

---

||೨೪|| ಎಂಬುದಾಗಿ ಭಾಷೆಯನ್ನು ಕೊಟ್ಟು ಮತ್ತೆ ಆ ಭಕ್ತರುಗಳಿಗೆಲ್ಲಾ ಸಾಷ್ಟಾಂಗ ನಮಸ್ಕಾರಮಾಡಿ, ದೊರೆಯ ಕಡೆಗೆ ತಿರುಗಿ, ಎಲೆ ರಾಜನೆ! ಸಂಶಯವೇಕೆ? ಶಿಕ್ಷಿಸುವುದಕ್ಕೆ ಬೇಗನೆ ಅಪ್ಪಣೆ ಕೊಡು ||೨೫|| ಎಂಬುದಾಗಿ ಪಂಡಿತಾಚಾರ್ಯನು ದೊರೆಯನ್ನು ಕುರಿತು ಶಪಥಪೂರ್ವಕವಾಗಿ ನುಡಿದನು.

ಎಂಬಲ್ಲಿಗೆ ೨ನೆ ಅಧ್ಯಾಯವು ಮುಗಿದುದು.

---

## ೩ನೆ ಅಧ್ಯಾಯವು.

ಮೊದಲನೆಸಲ ಹೋದ ಕಣ್ಣನ್ನು ಪಡೆದ ಕಥೆ

ಬಳಿಕ ವೆಲ್ನಾಡ ಚೋಳರಾಜನು ಅತ್ಯಂತ ಕೋಪದಿಂದ ತಳಾರರನ್ನು ನೋಡಿ, ಮೊದಲು ಆತನ ಮಾತಿನಂತೆಯೇ ಈಗ ಅವನ ಎರಡು ಕಣ್ಣುಗಳನ್ನೂ ಕಿತ್ತುಬಿಡಿ ||೧|| ಮೂರು

ಯುಗಂ ಜಾಯೇತವಾನವಾ | ಅಥೈಕವಾರಮಪಿವಾ ನೋತ್ಪದ್ಯೇತಪರಿಸ್ಫುಟಂ ||೨|| ಪಶ್ಯಾಮಃ ಪ್ರಥಮಂ ನೇತ್ರದಂಡನಂ ಕ್ರಿಯತಾಮಿತಿ | ಆದಿಷ್ಟವಾನ್ಸಮಸ್ತೇಷುಜನೇಷು ಚಕಿತೇಷುಸಃ ||೩|| ಯಾಮಿಕೇಷುಸಮಾಯಾತೇಷ್ವಾದಾಯನಖರಂಜನೀಂ | ಅಥ ಪದ್ಮಾಸನಸ್ಥೋಽಸೌ ಮಲ್ಲಿಕಾರ್ಜುನಪಂಡಿತಃ ||೪|| ಪ್ರಾಣೇಶಂ ಪ್ರಾಣಜಲಜೇ ನಿಧಾಯಾತ್ಯಂತಭಕ್ತಿತಃ | ಜಾತೇಹರ್ಷಾಶ್ರುಸಂಪೂರೇ ಜಗಾದಘಟಿತಾಂಜಲಿಃ ||೫|| ಶ್ರೀಮಲ್ಲಿಕಾರ್ಜುನೇಶಾಯಸ್ಮರಗರ್ವಾಪಹಾರಿಣೇ | ಶೂಲಾಯುಧಾಯ ಸೋಮಾಂಕಜೂಟಾಯ ಶುಭದಾಯಿನೇ ||೬|| ಭಸ್ಮೀಕೃತಾಘಜಾಲಾಯ ಪರಮೇಶಾಯಭಾಸ್ವತೇ | ತಸ್ಮೈ ನಮಃ ಶ್ರೀಗಿರೀಂದ್ರವಲ್ಲಭಾಯ ಮಹಾತ್ಮನೇ ||೭|| ನಮಃ ಶ್ರೀವೀರಭದ್ರಾಯ ನೃಸಿಂಹಾಜಿನಧಾರಿಣೇ | ತೇಜೋಮಯಾಯ ದೇವಾಧಿದೇವಾಯಾಘೌಘಹಾರಿಣೇ ||೮|| ನೇತ್ರಾನಲಪರಿಕ್ಷಿಪ್ತಾಧ್ವರಾಯ ಪರಮೇಷ್ಠಿನೇ | ತಸ್ಮೈ ನಮಃ ಶ್ರೀಗಿರೀಂದ್ರಕೃತಕ್ರೀಡಾಯ ಶಂಭವೇ ||೯|| ಶ್ರೀವೃಷಾಧೀಶ್ವರಾಯೇಶವಾಹನಾಯ ನಿರಾಧಯೇ | ಶೈವಾಗಮಪುರಾಣಾದಿ ಶಾಸ್ತ್ರಾಣಾಮಧಿಪಾ

---

ಸಲವೂ “ಅವನ ಕಣ್ಣುಗಳು ಹುಟ್ಟುತ್ತವೆಯೋ ಇಲ್ಲವೋ! ಅಥವಾ ಒಂದುಸಲವಾದರೂ ಹುಟ್ಟುತ್ತವೆಯೋ ಇಲ್ಲವೋ ನೋಡೋಣ. ಮೊದಲು ಕಣ್ಣನ್ನು ಕೀಳುವ ಶಿಕ್ಷೆಯನ್ನು ಮಾಡಿರಿ” ಎಂಬುದಾಗಿ, ನೋಡುತ್ತಿರುವ ಸಕಲ ಜನರೂ ಆಶ್ಚರ್ಯಪಡುವಂತ ಆಜ್ಞೆ ಮಾಡಿದನು ||೩|| ತಳಾರರು ನಖರಂಜನಿ (ಉಗುರನ್ನು ತೆಗೆಯುವ ಆಯುಧ) ಯನ್ನು ತೆಗೆದುಕೊಂಡು ಬರಲಾಗಿ, ಮಲ್ಲಿಕಾರ್ಜುನ ಪಂಡಿತಾರಾಧ್ಯನು ಪದ್ಮಾಸನಾಸೀನನಾಗಿ ||೪|| ಪ್ರಾಣನಾಥನಾದ ಸಾಂಬನನ್ನು ತನ್ನ ಪ್ರಾಣವೆಂಬ ಕಮಲದಲ್ಲಿ ಅತ್ಯಂತ ಭಕ್ತಿಯಿಂದ ನೆಲೆಗೊಳಿಸಿ, ಆ ಅನುಸಂಧಾನಾತಿಶಯದಿಂದ ಸಂತೋಷಾಶ್ರುಗಳು ಕಣ್ಣಿನಿಂದ ಪ್ರವಾಹವಾಗಿ ಸುರಿಯುತ್ತಿರಲಾಗಿ, ಕೈಗಳನ್ನು ಮುಗಿದುಕೊಂಡು ಹೀಗೆ ಹೇಳಿದನು ||೫|| ಮದನಗರ್ವಧ್ವಂಸಿಯೂ, ಶೂಲಧಾರಿಯೂ, ಚಂದ್ರಶೇಖರನೂ, ಮಂಗಳಪ್ರದನೂ, ಪಾಪವಿನಾಶಕನೂ, ಪರಮೇಶ್ವರನೂ, ಅತಿಶಯ ಪ್ರಭಾವಂತನೂ, ಶ್ರೀಶೈಲಾಧಿಪತಿಯೂ ಆದ ಶ್ರೀಮನ್ಮಲ್ಲಿಕಾರ್ಜುನಸ್ವಾಮಿಗೆ ನಮಸ್ಕಾರವು ||೭|| ನೃಸಿಹ್ಮನ ಚರ್ಮವನ್ನು ಧರಿಸಿದ ವೀರಭದ್ರಾವತಾರಿಯೂ, ತೇಜೋಮಯನೂ ದೇವಾಧಿದೇವನೂ ಸಕಲ ದುಃಖವಿನಾಶಕನೂ ಆದ ಪರಮೇಶ್ವರನಿಗೆ ನಮಸ್ಕಾರವು ||೮|| ಫಾಲನೇತ್ರಾಗ್ನಿಯಿಂದ ದಕ್ಷಯಜ್ಞವನ್ನು ಸುಟ್ಟವನೂ, ಮಹೋತ್ಕೃಷ್ಟಪದವಿಯಲ್ಲಿರತಕ್ಕವನೂ, ಶ್ರೀಶೈಲದಲ್ಲಿ ವಿಹರಿಸಿಕೊಂಡಿರುವವನೂ ಆದ ಶಂಭುವಿಗೆ ನಮಸ್ಕಾರವು ||೯|| ಯಾವುದೊಂದು ಮನೋವ್ಯಥೆಯೂ ಇಲ್ಲದ ಶಿವವಾಹನನಾದ ಶ್ರೀ ವೃಷಭೇಶ್ವರನಿಗೆ ನಮಸ್ಕಾರವು. ಶಿವಾಗಮ ಪುರಾ

ಯಜ ||೧೦|| ಸಸ್ಮೇರವದನಾಂಭೋಜ ಶಾಸ್ತ್ರತೇಜೋವಿಭಾಸಿನೇ | ತಸ್ಮೈ ನಮಃಶ್ರೀಗಿರೀಂದ್ರಮಂದಿರಾಯಕಪರ್ದಿನೇ ||೧೧|| ಭಕ್ತವ್ರಜಾಯರುದ್ರಾಯ ಪ್ರಮಥಾಯಾಮಲಾತ್ಮನೇ | ವಿಶ್ವಸ್ತುತಾಯ ಭಸ್ಮಾಂಗಲೇಪನಾಯಾಘಹಾರಿಣೇ ||೧೨|| ನಿತ್ಯರೂಪಾಯ ವಿನತಶ್ರೀಶೈಲಾಯನಮೋನಮಃ | ಶ್ರೀಮದ್ದೇಶಿಕನಾಥಾಯ ಶಿವಸನ್ನಿಭಮೂರ್ತಯೇ ||೧೩|| ವೇದಿತಾತ್ಮೀಯಾರ್ಥಲಸದ್ವೀರವ್ರತವಿಭಾಸಿನೇ | ಶ್ರುತಿಸ್ಮೃತಿಸದಾಚಾರಾಧಿಪಾಯ ಮಹೌಜಸೇ ||೧೪|| ತಸ್ಮೈನಮಃಶ್ರೀಗಿರೀಂದ್ರ ಲೋಲುಪಾಯ ದಯಾವತೇ | ನತ್ವೈವ ವಿಶಂ ಪ್ರಮಥಭಕ್ತಾನ್ಸ್ವೀಯಗುರೂನ್‌ಹೃದಿ ||೧೫|| ತದ್ಧ್ಯಾಮಿಕಕರಾಸಕ್ತನಖರಂಜನಿಕಾಮುಖೇ | ಮಂತ್ರಿತಂ ಮೂಲಮಂತ್ರೇಣ ಭಸ್ಮಕ್ಷಿಪ್ತ್ವೋಪಗೃಹ್ಯ ತಾಂ ||೧೬|| ಲಿಂಗೋದಕೇನ ಸನ್ಮಂತ್ರಪೂತೇನ ಪ್ರೋಕ್ಷ್ಯ ಸಾದರಂ | ಯಾಯಾಕ್ರಿಯಾವಿಧಾತವ್ಯೇತ್ಯಾಗಮೋಕ್ತ್ಯನುಸಾರತಃ ||೧೭|| ಮಹಾದೇವಾಯ ಭಕ್ತ್ಯಾತಾಂ ಸಮರ್ಪ್ಯನಖರಂಜನೀಂ| ಸ್ವಾಮಿನ್ಕೃಪಾನಿಧೇ ಚೆನ್ನಮ

---

ಶಾದಿ ಸಕಲ ಶಾಸ್ತ್ರಗಳಿಗೂ ಅಧಿಪತಿಯೂ, ಮುಗುಳ್ನಗೆಯಿಂದ ಕೂಡಿದ ಮುಖದಲ್ಲಿ ಉಕ್ಕುತ್ತಿರುವ ಶಾಂತಿ ಕಳೆಯಿಂದ ಪರಿಶೋಭಿಸುವವನೂ, ಶ್ರೀಶೈಲನಿವಾಸಿಯೂ ಆದ ಶಂಕರನಿಗೆ ನಮಸ್ಕಾರವು ||೧೧|| ಭಕ್ತರ ಗುಂಪನ್ನು ಕಟ್ಟಿಕೊಂಡಿರುವವನೂ, ಸರ್ವದುಃಖನಿವಾರಕನೂ, ಕೈಲಾಸ ಸಭಾಧಿಪನೂ, ನಿರ್ಮಲಸ್ವರೂಪನೂ, ಲೋಕಸಂಸ್ತುತನೂ, ಭಸ್ಮಲಿಪ್ತಶರೀರನೂ, ಆಶ್ರಿತರ ಪಾಪನಿರ್ಮೂಲಕನೂ ಆದ ಪರಶಿವನಿಗೆ ನಮಸ್ಕಾರವು ||೧೨|| ಶಾಶ್ವತಸ್ವರೂಪನೂ, ಶ್ರೀಗಿರಿಯಿಂದಲೂ ಕೂಡ ನಮಸ್ಕರಿಸಿಕೊಂಡವನೂ, ಶಿವಸಮಾನಮೂರ್ತಿಯೂ, ಶಿಷ್ಯಜನರಿಗೆ ಸಕಲ ತತ್ವಾರ್ಥವನ್ನು ಅರುಹಿದವನೂ, ಮಹಾ ವೀರಶೈವ ವ್ರತಸಂಪನ್ನನೂ, ವೇದಶಾಸ್ತ್ರಾದಿಚೋದಿತ ಸದಾಚಾರಗಳನ್ನು ತಾನೂ ಆಚರಿಸಿ, ಇತರರಿಗೂ ಅವನ್ನು ಅನುವರ್ತಿಸುವಂತೆ ಮಾಡುವ ಅಧಿಕಾರವನ್ನು ಪಡೆದವನೂ, ಮಹಾಮಹಿಮಾನ್ವಿತನೂ, ಕೃಪಾಶಾಲಿಯೂ, ಶ್ರೀಶೈಲವಾಸಿಯೂ ಆದ ನನ್ನ ಗುರುಮೂರ್ತಿಗೆ ನಮಸ್ಕಾರವು ||೧೪|| ಹೀಗೆ ಒಬ್ಬದಾಗಿ ಶಿವನನ್ನೂ ಅವನ ಭಕ್ತರಾದ ಪ್ರಮಥರನ್ನೂ, ತನ್ನ ಗುರುವನ್ನೂ ಸಹ ನಮಸ್ಕರಿಸಿ ಚಿತ್ತದಲ್ಲಿ ಧ್ಯಾನಿಸಿ ||೧೫|| ಶಿವಮಂತ್ರದಿಂದಭಿಮಂತ್ರಿಸಿದ ಭಸಿತವನ್ನು ಆ ಕಳಾರನ ಕೈಯಲ್ಲಿರುವ ಆಯುಧದ ಬಾಯಿಗೆ ಹಾಕಿ, ಅದನ್ನು ತನ್ನ ಕೈಗೆ ತೆಗೆದುಕೊಂಡು ||೧೬|| ಮಂತ್ರಸಂಸ್ಕಾರದಿಂದ ಪರಿಶುದ್ಧವಾದ ಲಿಂಗಾಭಿಷೇಕ ಜಲವನ್ನು ಆ ಕತ್ತಿಯ ಮೇಲೆ ಪ್ರೋಕ್ಷಿಸಿ, ಹೀಗೆ ಅದರ ಪರಿಶುದ್ಧಿಗಾಗಿ ಯಾವ ಯಾವ ಕರ್ಮಗಳನ್ನು ಮಾಡಬೇಕೆಂದು ಆಗಮಗಳಲ್ಲಿ ಹೇಳಲ್ಪಟ್ಟದೆಯೋ ಅದನ್ನೆಲ್ಲಾ ಸಾಂಗವಾಗಿ ಮಾಡಿ ||೧೭|| ಪರಿಪೂತವಾದ ಆ ನಖರಂಜನಿಯನ್ನು ಭಕ್ತಿಯಿಂದ ಮೊದಲು ಈಶ್ವರನಿಗೆ ಸಮರ್ಪಣೆಮಾಡಿ, ಕೃಪಾನಿಧಿಯೂ ಸುಖ

ಲ್ಲಿಕಾರ್ಜುನಶಂಕರ ||೧೮|| ಭವನ್ಮಾಹಾತ್ಮ್ಯವಿಸ್ತಾರಕೃತೇ ನಯನಯೋರ್ಯು
ಗಂ | ಉತ್ಪಾಟಯತ್ರಿವಾರಂ ಸ್ವಹಸ್ತೇನೇತಿವದನ್ನಿವ ||೧೯|| ಶಿವಾರ್ಪಿತಮ
ನಾಭೂತ್ವಾ ನೇತ್ರೋತ್ಪಾಟನಬುದ್ಧಿತಃ | ನಿಯಮ್ಯ ದಕ್ಷಿಣೇಭಾಗೇವಾಯುಂ
ವಿಸ್ತೃತ್ಯಕುಂಭಕಂ ||೨೦|| ಕೃತ್ವಾಸಮುನ್ನತಾವಂಸೌ ವಕ್ರೀಕೃತ್ಯಚಕಂಧರಂ|
ಸ್ವೇದೇನಾಪೂರ್ಯವದನಾಂ ಕೃತ್ವೋನ್ಮೀಲಿತವೀಕ್ಷಣಮ್ ||೨೧|| ಸ್ವವಾಮ
ಕರಶಾಖಾಯಾಂ ಸಮುತ್ಕ್ಷಿಪ್ಯಚಪಕ್ಷ್ಮಣೀ | ತತೋದಕ್ಷಿಣಹಸ್ತಸ್ಥಾಂ
ನಖರಂಜನಿಕಾಂಶಿತಾಂ ||೨೨|| ದಕ್ಷಿಣಾಕ್ಷ್ಯಂಚಲೇನ್ಯಸ್ಯ ಯಥಾನಾಂತಃಕ
ಣೀನಿಕಾ | ನಶ್ಯೇನ್ನಿರ್ಭಿದ್ಯ ಪರಿತಸ್ತಥೋತ್ಪಾಟ್ಯೋರ್ಧ್ವಮುದ್ಗತಂ ||೨೩||
ತನ್ನೈಸ್ಸಿರಾಸ್ತ್ಯಾಜಯಿತ್ವಾ ಸಮಾದಾಯವಿಲೋಚನಂ | ವಾಮಾಕ್ಷ್ಯಪ್ಯೇವ
ಮುತ್ಪಾಟ್ಯ ಭವ್ಯಗಾಂಭೀರ್ಯಜೃಂಭಿತಃ ||೨೪|| ಹೇಮಪಾತ್ರೇನಿಧಾಯಾಥ
ಪದ್ಮರಾಗಮಣೀಇವ | ಕಾರಯಾಮಾಸಭಕ್ತೇಭ್ಯಸ್ತಾಭ್ಯಾಂನೀರಾಜನಾವಿ
ಧಿಂ ||೨೫|| ಜನೇಷುವೀಕ್ಷಮಾಣೇಷು ಚಕ್ಷುಷೀತೇನೃಪಾಂತಿಕಮ್ | ಪ್ರಾ
ಹಿಣೋಜ್ಜನಸಾಥೋಽಪಿ ನಿರ್ಯಾತಂವೈರಮದ್ಯಮೇ ||೨೬|| ಇತಿ ಬ್ರುವಾಣ
ಸ್ತನ್ನೇತ್ರೇ ದೃಷ್ಟ್ವಾ ಸಂಸ್ಪೃಶ್ಯಪಾಣಿನಾ | ತೇನಸರಕ್ತೇನತಿಲಕಂ ಪ್ರಾಭವಾದ

---

ಕರನೂ ಆದ ಎಲೈ ಚಿನ್ನಮಲ್ಲಿಕಾರ್ಜುನಸ್ವಾಮಿಯೆ! ನಿನ್ನ ಮಹಿಮೆಯನ್ನು ಜಗತ್ತಿನಲ್ಲಿ
ಪ್ರಕಟಪಡಿಸುವುದಕ್ಕೋಸ್ಕರ ನನ್ನ ಕಣ್ಣುಗಳೆರಡನ್ನೂ ನಿನ್ನ ಕೈಯಿಂದ ಮೂರುಸಲ ಕಿತ್ತು
ಬಿಡು ಎಂದು ಹೇಳುವನೋ ಎಂಬ ಹಾಗೆ ತೋರಿ ||೧೯|| ಶಿವನಿಗೆ ಆತ್ಮಾರ್ಪಣವನ್ನು
ಮಾಡಿ, ಬಳಿಕ ಕಣ್ಣುಗಳನ್ನು ಕೀಳುವುದಕ್ಕೆ ಸಿದ್ಧನಾಗಿ, ಬಲಕಡೆಗೆ ಒರಗಿ, ಪ್ರಾಣವಾಯು
ವನ್ನು ತಡೆದು, ಕುಂಭಕವಮಾಡಿ, ಭುಜ ಶಿರಸ್ಸುಗಳನ್ನು ಉಬ್ಬಿಸಿ, ಕೊರಳನ್ನು ಬಗ್ಗಿಸಿ,
ಮುಖದಲ್ಲಿ ಬೆವರು ತುಂಬಿರಲು, ಕಣ್ಣುಗಳನ್ನು ಅಗಲವಾಗಿ ತೆರೆದು ||೨೧|| ತನ್ನ
ಎಡಗೈ ಬೆರಲುಗಳಲ್ಲಿ ರಪ್ಪೆಗಳನ್ನು ಮೇಲಕ್ಕೆತ್ತಿ ಹಿಡಿದು, ಬಲಗೈಯಲ್ಲಿರುವ ತೀಕ್ಷ್ಣವಾದ
ನಖರಂಜನಿಯನ್ನು ಬಲಗಣ್ಣ ತುದಿಯಲ್ಲಿಟ್ಟು, ಒಳಗಣ ಗುಡ್ಡೆಯು ಒಡೆದು ಹಾಳಾಗದಂತೆ
ಉಪಾಯದಿಂದ ಸುತ್ತಲೂ ಆಯುಧದಿಂದ ಮೀಂಟಿ, ಮೇಲಕ್ಕೆ ಬಂದ ಆ ಕಣ್ಣನ್ನು ಅಂಟಿ
ಕೊಂಡಿದ್ದ ನರಗಳಿಂದ ಮೆಲ್ಲಗೆ ಬಿಡಿಸಿ ತೆಗೆದುಕೊಂಡು, ಅತ್ಯಂತ ಗಂಭೀರಮುದ್ರೆಯಿಂದು
ಬ್ಬಿದವನಾಗಿ, ಎಡಗಣ್ಣನ್ನೂ ಹೀಗೆಯೇ ಮೀಂಟಿ ತೆಗೆದು ||೨೪|| ಅವೆರಡು ಕಣ್ಣುಗಳ
ನ್ನೂ ಚಿನ್ನದ ತಟ್ಟೆಯಲ್ಲಿ ಪದ್ಮರಾಗ ರತ್ನಗಳನ್ನಿರಿಸುವಂತೆ ಇಟ್ಟು, ಭಕ್ತರುಗಳಿಗೆ ಅವುಗಳಿಂದ
ಆರತಿಯನ್ನೆತ್ತಿದನು ||೨೫|| ಬಳಿಕ ಸಕಲ ಜನರೂ ನೋಡುತ್ತಿರುವಂತೆಯೇ ಆ ಕಣ್ಣುಗಳ
ನ್ನು ದೊರೆಯ ಬಳಿಗೆ ಕಳುಹಿಸಿಕೊಟ್ಟನು. ಅದನ್ನು ಕಂಡಕೂಡಲೇ ಭೂಪತಿಯು ಈಗ ನನ್ನ
ಹಗೆಯು ತೀರಿತೆಂದು ಹೇಳುತ್ತ, ಆ ಕಣ್ಣುಗಳನ್ನು ಕೈಯಿಂದ ಮುಟ್ಟಿ, ಅಂಟಿದ ರಕ್ತದಿಂದ

ಲಿಕೇವ್ಯಧಾತ್ ||೨೭|| ತತೋಮಹೇಶಮಾಹಾತ್ಮ್ಯ ದಹಂಪೂರ್ವಿಕಯಾ ಪುನಃ | ಉದಿತೇಪಂಡಿತೇಂದ್ರಸ್ಯ ಲೋಚನೇ ಸುಮನೋಹರೇ ||೨೮|| ನೇತ್ರೋತ್ಪಾಟನಜೇರಂಧ್ರೇ ಕ್ಷಣಾತ್ಸುಘಟಿತೇಕೃತೇ | ವಿಲೋಕ್ಯತನ್ನೇತ್ರಯುಗಂ ಸಭಾವಿಸ್ಮಯಮಾಪಸಾ ||೨೯|| ತತೋಭಕ್ತಜನಾಸ್ಸರ್ವೇ ಚರಣೌ ಪಂಡಿತೇಶಿತುಃ | ಆದಾಯಪಾಣಿಭಿರ್ಭಕ್ತ್ಯಾ ಪ್ರಣಮಸ್ತಸ್ಸವಿಸ್ಮಯಾಃ ||೩೦|| ಧರನ್ತಃ ಪದಯೋಃ ಪಾಂಸೂನ್ ಸ್ವಕೀಯೈರ್ಮಸ್ತಕೈರ್ಮುದಾ | ಸ್ತುವನ್ತೋವೀಕ್ಷಮಾಣಾಸ್ತನ್ನೇತ್ರಯೋರ್ಯುಗಳಂನವಂ ||೩೧|| ಮಹಚ್ಚಿತ್ರಮಿದಂ ಸಾಧ್ವಿತ್ಯಾಲಪನ್ತಃ ಪರಸ್ಪರಂ | ಲಾಲಯಂತೋನೃತ್ತವಿಧಿಂ ಕಾರಯಂತಸ್ಸ್ವಯಂ ತಥಾ ||೩೨|| ಪ್ರನೃತ್ಯನ್ತೋ ಘೂರ್ಣಮಾನಾ ದದತಃ ಪಾರಿತೋಷಿಕಂ | ಸಂಘೀಭವನ್ತಸ್ಸಂದ್ರಷ್ಟುಂ ಮಾಯಾತೇಕ್ಷಧ್ವಮಿತ್ಯಪಿ ||೩೩|| ಪ್ರವದನ್ತಸ್ಸಂಭ್ರಮಂತೋಧ್ವನಂತಃ ಪರಿಜೃಂಭಿತಾಃ | ಉತ್ಸಹನ್ತೋ ಜಯಜಯಗುರೋತುಭ್ಯಂ ನಮೋಸ್ತ್ವಿತಿ ||೩೪|| ಸಮಾಲಪಂತೋಮಾದ್ಯಂತಃ ಪ್ರಯಾಂತೋಭೂಮಿಪಾಂತಿಕಂ | ಪ್ರೋತ್ಸಾರಯನ್ತಸ್ಸಂದೋಹಂ ಸಂಘೃಷ್ಯನ್ತಃ ಪರಸ್ಪರಂ ||೩೫|| ಸಂಘೇಶಿರಾಂಸಿನಿಕ್ಷಿಪ್ಯ ಪ್ರವಿಶನ್ತೋಬಲಾತ್ಪುನಃ | ವಾರಯನ್ತೋ

---

ತನ್ನ ಹಣೆಗೆ ವೈಭವದಿಂದ ಬಟ್ಟನ್ನಿಟ್ಟುಕೊಂಡನು ||೨೭|| ಬಳಿಕ ಶಿವನ ಮಹತ್ತ್ವದಿಂದ ಪಂಡಿತಾರಾಧ್ಯನ ಕಣ್ಣುಗಳೆರಡೂ ನಾನು ಮುಂದು ತಾನು ಮುಂದೆನ್ನುವಂತೆ ಮನೋಹರವಾಗಿ ಮೂಡಲಾಗಿ ||೨೮|| ಮೊದಲು ಕಣ್ಣುಗಳನ್ನು ಕಿತ್ತಿದ್ದ ಸ್ಥಲದಲ್ಲಿದ್ದ ತೂತುಗಳು ಕ್ಷಣಕಾಲದೊಳಗಾಗಿ ಸೇರಿಕೊಂಡುವು. ಆ ನೇತ್ರಯುಗಳವನ್ನು ನೋಡಿ ಸಭೆಯೆಲ್ಲಾ ಆಶ್ಚರ್ಯಪಟ್ಟಿತು. ||೨೯|| ಬಳಿಕ ಅಲ್ಲಿದ್ದ ಭಕ್ತಜನರೆಲ್ಲರೂ ಅಚ್ಚರಿಗೊಂಡವರಾಗಿ, ಭಕ್ತಿಯಿಂದ ಪಂಡಿತಾರಾಧ್ಯನ ಪಾದಗಳನ್ನು ಕೈಗಳಿಂದ ಹಿಡಿದುಕೊಂಡು ನಮಸ್ಕರಿಸಿ ||೩೦|| ಅದರ ಧೂಳಿಯನ್ನು ತಮ್ಮ ತಲೆಗಳಮೇಲೆ ಸಂತೋಷದಿಂದ ಧರಿಸಿದವರಾಗಿ, ಆ ಹೊಸ ಕಣ್ಣುಗಳೆರಡನ್ನೂ ನೋಡಿ ಹೊಗಳುತ್ತ, ಇದು ಬಹು ಆಶ್ಚರ್ಯಕರವು ಬಲು ಲೇಸಾಯಿತು ಎಂಬುದಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುತ್ತ, ಒಬ್ಬರನ್ನೊಬ್ಬರು ಮುದ್ದಾಡಿ ಕುಣಿದಾಡುತ್ತ ||೩೨|| ಒಬ್ಬರಿಗೊಬ್ಬರು ಬಹುಮಾನ ದ್ರವ್ಯಗಳನ್ನು ಕೊಟ್ಟಾಡುತ್ತ, ಆ ಆಶ್ಚರ್ಯದ ಕೆಲಸವನ್ನು ನೋಡುವುದಕ್ಕಾಗಿ ಗುಂಪು ಕೂಡಿದವರಾಗಿ, ಬನ್ನಿರಿ ನೋಡಿರಿ ಎಂಬುದಾಗಿ ಇತರರಿಗೆ ಹೇಳುತ್ತ, ಸಡಗರಪಡುತ್ತ, ಕೂಗುತ್ತ, ಉಬ್ಬುತ್ತ, ಉಲ್ಲಾಸಗೊಳ್ಳುತ್ತ, ಭೋ ಗುರೋ! ಜಯ ಜಯ, ನಿನಗೆ ನಮಸ್ಕಾರ,, ಎಂದು ||೩೪|| ಹೇಳುವವರಾದರು. ಕೆಲವರು ಹೆಮ್ಮೆಗೊಳ್ಳುತ್ತ, ದೊರೆಯ ಬಳಿಗೆ ಹೋಗಿ, ಅಲ್ಲಿ ಗುಂಪುಕೂಡಿದ್ದ ಜನರ ಸಂದಣಿಯನ್ನು ಬಿಡಿಸುತ್ತ, ಒಬ್ಬರಿಗೊಬ್ಬರು ಇಕ್ಕಟ್ಟಿನಿಂದ ತಿಕ್ಕಾಡುವವರಾದರು. ||೩೫|| ಕೆಲರು ಜನದ

ಘನರವಂ ಗಚ್ಛಂತಶ್ಚ ಶನೈಶ್ಶನೈಃ ||೩೬|| ಭಣಂತೋಽನ್ಯೋನ್ಯಮತುಲಂ ಸಮ್ಮರ್ದೋಽತ್ರಮಹಾನಿತಿ| ಅನ್ವೇಷಯನ್ತೋಽವಕಾಶಂಸೋಽಯಮಾಸ್ತೇ ನರಾಧಿಪಃ ||೩೭|| ಮಾತತ್ರಯಾತೇತಿಮುಹುಃ ಪ್ರವದನ್ತಸ್ಸಸಂಭ್ರಮಂ | ತರ್ಜಯಂತಸ್ಸಮುತ್ಕೃತ್ತೇ ಪಶ್ಯನ್ತಸ್ತಸ್ಯಲೋಚನೇ ||೩೮|| ಪ್ರಯಾಂತೋಮಹದಾಶ್ಚರ್ಯಂ ಸ್ಪೃಷ್ಟ್ವಾತ್ವ ಸ್ಪೃಷ್ಟ್ವಾವಿಲೋಚನೇ | ವಿಲೋಕಯನ್ತಃಪ್ರಣತಿಂ ಕುರ್ವಂತೋಭಯಸಂಗತಾಃ ||೩೯|| ಪಂದ್ರವಂತಸ್ಸಂಮರ್ದಂ ತಿಷ್ಠಂತೋಽವೀಕ್ಷ್ಯಕುತ್ರಚಿತ್ | ವೀಕ್ಷಮಾಣಾಃ ಪದಾಗ್ರಾಭ್ಯಾಂ ಸ್ಥಿತ್ವಾಗತ್ವೋನ್ನತಸ್ಥಲಂ ||೪೦|| ಪಶ್ಯಂತಸ್ತಂ ಕಲಕಲಂಹಿತ್ವಾ ಪ್ರಾಸಾದಮುನ್ನತಂ | ಆರುಹ್ಯಾನಿಬಿಡೀಭೂಯಾಪಶ್ಯನ್ತಸ್ತತ್ರಕೇಚನ ||೪೧|| ಅವಕಾಶಮಲಬ್ಧ್ವಾಧೋಗಚ್ಛನ್ತಸ್ತೇವ್ರದುಃಖಿತಾಃ | ನೇತ್ರೇದ್ರಷ್ಟುಂ ಸಮಾಯಾಂತಃ ಖಿನ್ನಸ್ಯಧರಣೀಪತೇಃ ||೪೨|| ಸವಿಧಪದೇಶಂ ಸಂದಿಷ್ಟ್ಯ ಸಮಾಸಾದಿತುಮಕ್ಷಮಾಃ | ಕಿಮಲ್ಪಃ ಪಂಡಿತೋರಾಜಾನೇಕ್ಷತೇಪಾದೃಶಾವಿಮೇ ||೪೩|| ಬಹುಶೋವೃದ್ಧೃತೇನೇತ್ರೇ ಪಂಡಿತಸ್ಯೈವಮೇವಹಿ | ಇತಃಪರಂ ಸಮುಚಿತಂ ಕರ್ತುಂಸನ್ಮಾನಮು

---

ಗುಂಪಿನಲ್ಲಿ ತಲೆಯನ್ನು ತೂರಿಸಿ ಬಲಾತ್ಕಾರದಿಂದ ನುಗ್ಗುತ್ತ, ಕೋಲಾಹಲವನ್ನು ಮಾಡಬೇಡಿರೆಂದು ತಡೆದು, ಮೆಲ್ಲಮೆಲ್ಲನೆ ಸಾಗುತ್ತಲಿದ್ದರು. ||೩೬|| ಕೆಲವರು ಇಲ್ಲಿ ಬಹಳ ಇಕ್ಕಟ್ಟು ಎಂಬುದಾಗಿ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತ, ತಾವನ್ನು ಹುಡುಕಿಕೊಳ್ಳುತ್ತ ಹೋಗಿ, "ಇದೋ ದೊರೆಯು ಇಲ್ಲೇ ಇರುವನು, ಅಲ್ಲಿಗೆ ಯಾರೂ ಹೋಗಬೇಡಿರಿ" ಎಂದು ಬಾರಿಬಾರಿಗೆ ಸಡಗರದಿಂದ ಹೇಳುತ್ತ, ಬೆದರಿಸುವವರಾಗಿ, ಆ ಪಂಡಿತಾರಾಧ್ಯರ ಕೀಳಲ್ಪಟ್ಟಿರುವ ಕಣ್ಣುಗಳನ್ನು ನೋಡಿ ಅತ್ಯಾಶ್ಚರ್ಯಪಟ್ಟರು. ಆ ಕಣ್ಣುಗಳನ್ನು ಕೈಗಳಿಂದ ಮುಟ್ಟಿ ಮುಟ್ಟಿ ನೋಡಿ, ಭೀತಿನೆರೆದು ನಮಸ್ಕರಿಸಿದರು. || ೩೯ || ಕೆಲರು ಜನದ ಸಂಮರ್ದವನ್ನು ನೋಡಿ ಓಡಿಹೋಗಿ ಒಂದುಕಡೆಯಲ್ಲಿ ಕುಳಿತು ನೋಡುತ್ತ, ಅಲ್ಲಿ ಕಾಣದೆಹೋಗಲು, ಎತ್ತರವಾಗಿರುವ ಮತ್ತೊಂದು ಸ್ಥಳಕ್ಕೆ ಹೋಗಿ ತುದಿಗಾಲಿನಲ್ಲಿ ನಿಂತು ನೋಡುವವರಾದರು. ಕೆಲರು ಆ ಜನದ ಸಂಮರ್ದವನ್ನು ಬಿಟ್ಟು ಎತ್ತರವಾದ ಉಪ್ಪರಿಗೆಯನ್ನು ಹತ್ತಿ ದಟ್ಟವಾಗಿ ಸೇರಿ ನೋಡುವವರಾದರು. ||೪೧|| ಕೀಳಲ್ಪಟ್ಟಿರುವ ಕಣ್ಣುಗಳನ್ನು ನೋಡುವುದಕ್ಕಾಗಿ ಬಂದ ಇನ್ನು ಕೆಲವರು ಆ ಉಪ್ಪರಿಗೆಯಲ್ಲಿ ಸ್ಥಳವು ಸಿಕ್ಕದೆ ಬಹಳ ವ್ಯಸನಪಟ್ಟು, ಕೆಳಕ್ಕೆ ಇಳಿದುಹೋಗಿ, ಖೇದವಿಶಿಷ್ಟನಾಗಿರುವ ದೊರೆಯ ಹತ್ತಿರಕ್ಕೆ ಹೋಗಲಾರದೆ, "ಏನು ಪಂಡಿತಾರಾಧ್ಯನು ಸಾಮಾನ್ಯನೆ? ದೊರೆಯು ಪಂಡಿತಾರಾಧ್ಯನ ಕಣ್ಣುಗಳನ್ನು ಹೀಗೆಯೇ ಅನೇಕಾವೃತ್ತಿ ಕೀಳಿಸಿದರೂ ಮರಳಿ ಹುಟ್ಟುವುವೆಂಬುದನ್ನು ಕಾಣಲಾರನೆ? ಇನ್ನುಮೇಲಾದರೂ ಪಂಡಿತಾರಾಧ್ಯನಿಗೆ ಉತ್ಕೃಷ್ಟ ಸನ್ಮಾನವನ್ನು ಮಾಡುವುದು ಉಚಿತವ

ನ್ನತಂ ||೪೪|| ಅದ್ಯಾಪ್ಯಲಮಿತಿಕ್ಷಿಪ್ರಂ ಕಿಂನಬ್ರೂತೇನರಾಧಿಪಃ | ಉತಮೂಢೋಜನಾನ್ಸರ್ವಾನ್ವಿನಾಶಯಿತುಮುದ್ಯತಃ ||೪೫|| ಭವಿತಾಕಿಯತೀಭೂಮೇರ್ವಿಪತ್ತಿಃ ಕಿಮಿತಃಪರಂ | ಶಿವಏವಹಿ ಜಾನಾತೀತ್ಯಾಲಪನ್ತಸ್ತದಾಸ್ಥಿತಾಃ ||೪೬|| ತತಸ್ಸಮೂರ್ಜಿತಶ್ರೇಯಾ ಸ್ತರ್ಜಿತಾಶುಭಸನ್ತತಿಃ | ಅವರ್ಜಿತಯಶೋರಾಶಿರ್ಮಲ್ಲಿಕಾರ್ಜುನಪಂಡಿತಃ ||೪೭|| ತಾನ್ವೀಕ್ಷ್ಯಸನ್ದಿತಮನಾ ಮನ್ದಸ್ಮಿತಮುಖಾಂಬುಜಃ | ನಿವಾರ್ಯತತ್ಕಲಕಲಂ ಹಸ್ತಲೋಚನಸಂಜ್ಞಯಾ ||೪೮|| ಖ್ಯಾತತದ್ದೋಪುರೋದ್ಭಾಸಿ ಹರ್ಮ್ಯದ್ವಾರಸಮೀಪತಃ | ಸಂಸ್ಥಾಪ್ಯಸ್ವತನುಸ್ತಂಭ ಕಲಿತಾಕ್ಷಿಮಣಿದ್ವಯಃ ||೪೯|| ಲಸದ್ಗುರುಕಟಾಕ್ಷೋದ್ಯದ್ದಯಾಮೃತಸರೋವರೇ | ಜಾತಸದ್ಭಕ್ತಿಗನ್ಧಾನು ಸ್ಯೂತಲೋಚನಪಙ್ಕಜಃ ||೫೦|| ಭಕ್ತದಿವ್ಯಶರೀರೋದ್ಯತ್ಕಾನ್ತಿಜ್ಯೋತ್ಸ್ನಾಘಪಾನತಃ | ಮತ್ತಸ್ವಕೀಯನಯನ ಚಕೋರಯುಗಲಾಂಛಿತಃ ||೫೧|| ಪ್ರಾಗ್ಜನ್ಮಪಾಪಜಾತಾನ್ಯದೇವ ಸೇವಾಸಮುತ್ಥಿತೈಃ | ಸಂಸಾರಕರ್ಮಭಿರ್ನಿತ್ಯಂ ಪೀಡಿತಾನಾಂ ಶರೀರಿಣಾಂ ||೫೨||

---

ಲ್ಲವೆ? ||೪೪|| ಈಗಲಾದರೂ ಇನ್ನು ಕಣ್ಣನ್ನು ಕೀಳಿಸುವುದು ಸಾಕು ಎಂಬುದಾಗಿ ದೊರೆಯು ಹೇಳುವುದಿಲ್ಲವೊ? ಇನ್ನೂ ಈ ಮೂಢನು ಹೀಗೆಯೇ ಹಠ ತೊಟ್ಟು ಸರ್ವಜನರನ್ನೂ ನಾಶಗೊಳಿಸಿಕೊಳ್ಳುವುದಕ್ಕೆ ಯತ್ನಿಸುವನೊ? ||೪೫|| ಇನ್ನು ಮುಂದೆ ಭೂಮಿಗೆ ಎಷ್ಟೆಷ್ಟು ಆಪತ್ತು ಸಂಭವಿಸಬೇಕಾಗಿದೆಯೊ! ಅದನ್ನು ಶಿವನೇ ಬಲ್ಲ. ಎಂಬುದಾಗಿ ಹೇಳಿಕೊಳ್ಳುತ್ತಿದ್ದರು. ||೪೬|| ಬಳಿಕ ಶ್ರೇಯೋವೃದ್ಧಿಗೊಂಡವನೂ, ಅಮಂಗಳವನ್ನು ಬೆದರಿಸಿ ಓಡಿಸಿದವನೂ, ಕಳೆದುಹೋಗದ ಯಶಸ್ಸಂಪತ್ತಿಯುಳ್ಳವನೂ ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ||೪೭|| ಆನಂದಗೊಂಡ ಮನಸ್ಸುಳ್ಳವನೂ, ಮುಗುಳ್ನಗೆಯಿಂದ ಕೂಡಿದ ಮುಖಕಮಲವುಳ್ಳವನೂ ಆಗಿ, ಆ ನೆರೆದಿದ್ದ ಜನರನ್ನು ನೋಡಿ, ಅವರ ಬೊಬ್ಬೆಯನ್ನು ಕೈಸನ್ನೆ ಕಣ್ಣುಸನ್ನೆಗಳಿಂದ ನಿವಾರಿಸಿ ||೪೮|| ಪ್ರಸಿದ್ಧವಾದ ಆ ಚೆನ್ನಮಲ್ಲಿಕಾರ್ಜುನ ದೇವಾಲಯದ ಮಹಾದ್ವಾರದ ಮೇಲೆ ಪ್ರಕಾಶಿಸುವ ಉಪ್ಪರಿಗೆಯ ಬಾಗಿಲ ಸಮೀಪದಲ್ಲಿ ಸ್ಥಾಪನೆಮಾಡಲ್ಪಡುವುದಕ್ಕೆ ಯೋಗ್ಯವಾದ ತನ್ನ ದೇಹಸ್ತಂಭದಲ್ಲಿ ಕೂಡಿರುವ ರತ್ನಗಳಂತಿರುವ ಎರಡು ಕಣ್ಣುಗಳುಳ್ಳವನೂ ||೪೯|| ಶ್ರೀಗುರುಕಟಾಕ್ಷದಲ್ಲಿರುವ ದಯಾಮೃತ ಸರೋವರದಲ್ಲಿ ಹುಟ್ಟಿ, ಶಿವಭಕ್ತಿಯೆಂಬ ಪರಿಮಳದಿಂದ ವ್ಯಾಪ್ತವಾಗಿರುವ ನಯನ ಕಮಲಗಳುಳ್ಳವನೂ, ||೫೦|| ಶಿವಭಕ್ತರ ದಿವ್ಯದೇಹಕಾಂತಿಯೆಂಬ ಬೆಳ್ದಿಂಗಳನ್ನು ಪಾನಮಾಡುವುದರಿಂದ ಮದಿಸಿದ ತನ್ನ ಕಣ್ಣುಗಳೆಂಬ ಚಕೋರಪಕ್ಷಿಗಳುಳ್ಳವನೂ ||೫೧|| ಪೂರ್ವಜನ್ಮಾರ್ಜಿತ ಪಾಪಶೇಷದಿಂದ ಹುಟ್ಟಿದ, ಮತ್ತು ಶಿವೇತರ ದೇವತೆಗಳ ಉಪಾಸನೆಯಿಂದ ಹುಟ್ಟಿದ ಭವಕರ್ಮಗಳಿಂದ ಪೀಡಿತರಾಗಿರುವ ದೇಹಿಗಳ ಒಳಗೂ ಹೊರಗೂ ಆವರಿಸಿಕೊಂಡಿರುವ ಮೋಹಾಂಧಕಾರವನ್ನು ತೊಲಗಿಸು

ಅನ್ತರ್ಬಹಿಸ್ತಮೋಹನ್ತೃ ದೀಪಾಕೃತಿವಿಲೋಚನಃ । ಭೂತ್ವಾಸಂಪ್ರೇಷ್ಯಭ ಕ್ತೇಭ್ಯೋ ಭೂತಿತಾಂಬೂಲಮುತ್ತಮಂ ॥೫೩॥ ನೃಪತಿಂ ತತ್ಸಭಾಂಚಾಸೌ ಪ್ರವಿಲೋಕ್ಯಾಬ್ರವೀದ್ವಚಃ । ಮಹಿಮಾತಿಶಯಶ್ಶಂಭೋರ್ಭಕ್ತಾನಾಮಪಿವೈ ಭವಂ ॥೫೪॥ ಯುಷ್ಮದ್ದೃಶೈವಸುವ್ಯಕ್ತಂ ಕಿಮಲೋಕಿಸಮಾಹಿತೈಃ। ಅಶ್ರಾ ವಿಕಿಂ ಮಹಾವೀರಪ್ರತಿಜ್ಞಾ ಸಾ ಮಯೋದಿತಾ ॥೫೫॥ ಭೂಸ್ಥೇತೇಪಾಟಿತೇ ನೇತ್ರೇ ಶಂಭುನಾಪಾಲಿತೇ ಇಮೆ । ಪಶ್ಯನಿಸ್ಸಂಶಯಂರಾಜನ್ ಸದೃಷ್ಟಪ್ರತ್ಯ ಯಂನೃಭಿಃ ॥೫೬॥ ಏಕವಾರಂ ಪ್ರತಿಜ್ಞೇಯಂ ಮದೀಯಾರೂಢಿಮಾಗತಾ ।

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೇ
ಮಹಿಮಪ್ರಕರಣೇ ತತ್ಪಂಡಿತಾರಾಧ್ಯ ಪ್ರಥಮವಾರನೇತ್ರಲಾಭ
ಕಥನಂನಾಮ ತೃತೀಯೋಽಧ್ಯಾಯಃ.

---

ವಲ್ಲಿ ದೀಪಸದೃಶಗಳಾಗಿರುವ ಕಣ್ಣುಗಳುಳ್ಳವನೂ ಆಗಿ, ಭಕ್ತಜನರಿಗೆ ಉತ್ತಮವಾದ ವಿಭೂತಿ ವೀಳಯವನ್ನು ಕಳುಹಿಸಿಕೊಟ್ಟು ॥೫೩॥ ದೊರೆಯನ್ನೂ ಅವನ ಸಭೆಯನ್ನೂ ಸಹ ಈ ಪಂಡಿತಾರಾಧ್ಯನು ನೋಡಿ, ಶಿವನ ಮಹಿಮೆಯೂ, ಶಿವಭಕ್ತರ ಮಹತ್ತ್ವವೈಭವವೂ ಕೂಡ ನಿಮ್ಮ ಕಣ್ಣೆದಿರಿಗೇ ಚೆನ್ನಾಗಿ ವ್ಯಕ್ತವಾಯಿತು. ಅದನ್ನು ನೀವು ಗಮನಿಸಿ ನೋಡಲಿಲ್ಲವೆ? ನಾನು ಮಾಡಿದ್ದ ಮಹಾ ವೀರಭಾಷೆಯನ್ನು ನೀವು ಕೇಳಲಿಲ್ಲವೆ? ॥೫೫॥ ಕಿತ್ತುಹಾಕಿದ ಆ ಕಣ್ಣುಗಳು ಭೂಮಿಯಲ್ಲಿವೆ. ನನ್ನ ಅಂಗದಲ್ಲಿರುವ ಈ ಕಣ್ಣುಗಳು ಶಿವನಿಂದ ದಯಪಾಲಿಸಲ್ಪಟ್ಟುವುಗಳಾಗಿವೆ. ಎಲೆ ದೊರೆಯೆ! ನಿಸ್ಸಂದೇಹವಾಗಿರತಕ್ಕ ಈ ಪ್ರತ್ಯಕ್ಷಪ್ರಮಾಣವನ್ನು ಈ ನಿನ್ನ ಪ್ರಜೆಗಳೊಡನೆ ಕೂಡಿ ನೋಡು ॥೫೬॥ ನಾನು ಮಾಡಿದ ಪ್ರತಿಜ್ಞೆಯು ಒಂದುಸಲ ನೆರವೇರಿತು,

ಎಂಬುದಾಗಿ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯನು ನುಡಿದನೆಂಬಲ್ಲಿಗೆ ಪಂಡಿತಾರಾಧ್ಯ
ಚರಿತ್ರಕ್ಕೆ ಎಚ್. ಆರ್. ಕರಿಬಸವಶಾಸ್ತ್ರಿರಚಿತವಾದ "ಭಾವಮಂಜರಿ" ಎಂಬ ಕನ್ನಡ
ಟಿಪ್ಪಣದಲ್ಲಿ ಮಹಿಮಪ್ರಕರಣದೊಳಗೆ ಪಂಡಿತಾರಾಧ್ಯರು ಮೊದಲು ಮಾಡಿದ
ಭಾಷೆಯ ಪ್ರಕಾರ ಕಣ್ಣನ್ನು ಪಡೆದುಕೊಂಡ ಕಥೆಯನ್ನು ನಿರೂಪಿಸುವ
೩ನೆ ಅಧ್ಯಾಯವು ಮುಗಿದುದು.

---

## ಅಥ ಚತುರ್ಥೋಽಧ್ಯಾಯಃ.

(ಪಂಡಿತಾರಾಧ್ಯ ದ್ವಿತೀಯವಾರ ಪ್ರತಿಜ್ಞಾಕಥನಂ.)

ಭೂಯೋಪಿ ರಾಜನ್ಸಭಯಾ ಬೌದ್ಧೈಸ್ಸಾಕಮನನ್ಯಧೀಃ । ಶೃಣುತ್ವಮಪರಾಂ ಚಿತ್ರಾಂ ಪ್ರತಿಜ್ಞಾಂ ಮಮ ಭೂತಲೆ ॥೧॥ ಸಮುತ್ಪಾಟ್ಯೈಕನಯನಮನ್ಯಾಕ್ಷ್ಯುತ್ಪಾಟನಕ್ಷಣೇ । ನೋತ್ಪಾಟಿತಾಕ್ಷಿ ಜಾತಂ ಚೇತ್ ತ್ವಥೈವೋತ್ಪಾಟ್ಯ ಚೇತರತ್ ॥೨॥ ಪೂರ್ವಾಕ್ಷ್ಯುತ್ಪಾಟನೋದ್ಯೋಗೇ ನೈತದಾಯಾತಿ ಚೇದ್ಯದಿ । ಭವೇನ್ಮಮ ಪ್ರತಿಜ್ಞಾಯಾ ಭಂಗಃ ಪಶ್ಯಂತು ಸರ್ವಶಃ ॥೩॥ ಕಿಂ ನ ಜಾನೀಥ ಶರ್ವಸ್ಯ ಯೂಯಂ ವೈಭವಮುನ್ನತಂ । ಪುರಾ ಪಂಕಜನಾಭಾಯ ದತ್ತವಾನ್ನೇತ್ರಮೀಶ್ವರಃ ॥೪॥ ವಿತೀರ್ಣವಾನಪಿ ಶಿವನಾಗಾರ್ಯಾಯಾಕ್ಷಿಣೀ ಶಿವಃ । ಪುನಶ್ಚ ದತ್ತವಾನ್ನೇತ್ರಂ ಕಣ್ಣಪ್ಪಾಯ ಗಜಾಪತಿಃ ॥೫॥ ಕಾಳಿದಾಸಾಯ ನಯನರಾಶಿಂ ಶಂಭುರ್ವಿತೀರ್ಣವಾನ್ । ಅಕ್ಷಪಾದಾಯ ಚರಣೇ ನೇತ್ರಂ ಕಲ್ಪಿತವಾನ್ವಿಭುಃ ॥೬॥ ಕಿಮಿದಾನೀಂ ದರಿದ್ರೋಽಭೂದಥವಾ ಕುತ್ರವಾಗತಃ । ಶ್ರೀಗಿರಿ

---

## ೪ನೆ ಅಧ್ಯಾಯವು.

(ಶ್ರೀ ಪಂಡಿತಾರಾಧ್ಯರೆ ಎಸಗಲದ ಭಾಷೆಯು.)

ಬಳಿಕ ಪಂಡಿತಾರಾಧ್ಯನು ಮತ್ತೆ ದೊರೆಯನ್ನು ಕುರಿತು—ರಾಜನೆ! ನೀನೂ ನಿನ್ನ ಸಭೆಯಲ್ಲಿರುವವರೆಲ್ಲರೂ ಈ ಬೌದ್ಧರೂ ಸಹ ಆಶ್ಚರ್ಯಕರವಾದ ಮತ್ತೊಂದು ನನ್ನ ಪ್ರತಿಜ್ಞೆಯನ್ನು ಏಕಾಗ್ರಚಿತ್ತವುಳ್ಳವರಾಗಿ ಕೇಳಿರಿ ॥೧॥ ನನ್ನ ಒಂದು ಕಣ್ಣನ್ನು ಕಿತ್ತು ಮತ್ತೊಂದು ಕಣ್ಣನ್ನು ಕೀಳುವುದರೊಳಗೆ ಆ ಮೊದಲು ಕಿತ್ತಿದ್ದ ಕಣ್ಣು ಹುಟ್ಟದೆ ಹೋದರೆ, ಮತ್ತೂ ಅದರಂತೆಯೇ ಮತ್ತೊಂದು ಕಣ್ಣನ್ನು ಕಿತ್ತು ಇನ್ನೊಂದು ಕಣ್ಣನ್ನು ಎಳೆಯುವುದರೊಳಗಾಗಿ ಈ ಕಣ್ಣು ಹುಟ್ಟದೆಹೋದರೆ ನನ್ನ ಭಾಷೆಗೆ ಭಂಗವುಂಟಾಗುವುದು. ಸರ್ವಪ್ರಕಾರದಿಂದಲೂ ನೋಡಿ ॥೩॥ ನೀವುಗಳು ಪರಮೇಶ್ವರನ ಮಹತ್ತ್ವ ವೈಭವವನ್ನು ತಿಳಿದಿಲ್ಲವೆ? ಶಂಕರನು ಪೂರ್ವದಲ್ಲಿ ವಿಷ್ಣುವಿಗೆ ಕಣ್ಣನ್ನು ಕೊಟ್ಟನು. ಶಿವನಾಗಯ್ಯನಿಗೆ ಕಣ್ಣುಗಳನ್ನು ಕೊಟ್ಟನು. ಮತ್ತು ಬೇಡರ ಕಣ್ಣಪ್ಪನಿಗೆ ಕಣ್ಣುಗಳನ್ನು ಕೊಟ್ಟನು ॥೫॥ ಮಹಾಕವಿ ಕಾಳಿದಾಸನಿಗೆ ಕಣ್ಣುಗಳ ರಾಶಿಯನ್ನೇ ಕೊಟ್ಟನು. ಅಕ್ಷಪಾದ ಮಹರ್ಷಿಗೆ ಕಾಲಿನಲ್ಲಿ ಕಣ್ಣು ಮೂಡುವಂತೆ ಮಾಡಿದನು ॥೬॥ ಅಂಥವರಿಗೆಲ್ಲಾ ನೇತ್ರದಾನವನ್ನು ಮಾಡಿದ ಪರಮೇಶ್ವರನು ಈಗ ನನಗೆ ಕಣ್ಣನ್ನು ಕೊಡುವುದಕ್ಕೆ ಇಲ್ಲದೆ ಬಡವನಾಗಿರುವನೆ? ಅಥವಾ ಎಲ್ಲಿಗಾದರೂ ಹೋಗಿಬಿಟ್ಟನೆ? ಶಿವಾಗಮಗಳಲ್ಲಿ ಈ ಶ್ರೀ ಶೈಲವು ಶ್ರೀ .ಗಿರೀಶ್ವರವು ಎಂಬುದಾಗಿ ಹೇಳಲ್ಪಟ್ಟಿರು

ಶ್ರೀಗಿರೀಶೋಽಯ ಮಿತ್ಯಾಗಮವರೋಕ್ತಯಃ ||೬|| ಪ್ರತ್ಯಕ್ಷಾ ನಿವಸಯ್ಯಸ ಪರ್ವತೋಽಯಂಪರಿಸ್ಫುಟಂ | ನಯನಾದ್ರಿಪತಿಶ್ಚಾಯಂ ಮಲ್ಲಿನಾಥೋಮಹಾನಿತಿ |೭|| ಸಮರ್ಪ್ಯಾಸ್ಮೈಸ್ವನೇತ್ರಾಣಿ ಸರ್ವೇಭೂಯೋಽಲಭಂತಚ | ಪಶುಪಾಲೋಸ್ಯವಿಚಯಂ ಪಶ್ಯನ್ನೇವಕರಸ್ಥಿತಾನ್ ||೮|| ಯಷ್ಟಿಂತತ್ರಪರಿತ್ಯಜ್ಯ ಸಮರ್ಪ್ಯೇಶಾಯಚಾಕ್ಷಿಣೀ | ಪ್ರತಿಲಭ್ಯಪುನಶ್ಶೀಘ್ರಂ ಗಚ್ಛತ್ಯೇವಾವಿರಕ್ಷಣೇ ||೯|| ಇತರೇಕಿಂಪುನರ್ಮರ್ತ್ಯಾ ಸ್ತಸ್ಮಾಚ್ಛೈಲಪತೇಃಪರಂ | ಮಹಿಮಾಸಂಕಥಯಿತುಂ ಮನುಜೈಶ್ಶಕ್ಯತೇಕಥಂ ||೧೦|| ಬಹುನಾಕಿಂ ಬೀಜಜಾಲಂ ಕರ್ದಮೇವಿಕಿರನ್ನರಃ | ಮಹತ್ಫಲಮವಾಪ್ನೋತಿ ಲೋಕೇಶಿವಸಮರ್ಪಿತಾಃ ||೧೧|| ವಿಧಾನತಃ ಕ್ರಿಯಾಸ್ಸರ್ವಾಭವೇಯುರ್ನಿಷ್ಫಲಾಃಕಥಂ | ಕಿಂಚ ದ್ವಿಜಾದ್ಯಾಃ ಪರಮೇಶ್ವರಪ್ರೀತ್ಯರ್ಥಮಿತ್ಯಮುಂ ||೧೨|| ಉದ್ದಿಶ್ಯಶಂಭುಮಿತರಸಮಯಸ್ಥಾ ಅಪಿಸ್ವಯಂ | ವಿಸೃಜ್ಯಾಗ್ನೌ ಜಲೇವಾಪಿ ಘೃತಾಕ್ಷತತಿಲಾದಿಕಂ ||೧೩|| ತತ್ತತ್ಫಲಂ ಸಮಧಿಕಂ ಪ್ರಾಪ್ನುವಂತೀತಿನಿಶ್ಚಿತೇ| ಸಾಕ್ಷಾಚ್ಛಿವಾರ್ಪಿತನಿಜ ಕ್ರಿಯಾಫಲಕದಂಬಕಂ ||೧೪|| ನಿಷ್ಫಲತ್ವಂಸಂಪ್ರಯಾತಿಕುತೋವಾ

---

ವುದು ಪ್ರತ್ಯಕ್ಷವಾಗಿಯೇ ಇದೆ. ಇದು ನೇತ್ರಪರ್ವತ (ಕಣ್ಣುಗಳಸ್ವತ್ತ ಬೆಟ್ಟ) ವೆಂದು ವ್ಯಕ್ತವಾಗಿ ಹೇಳಲ್ಪಟ್ಟದೆ. ಅಲ್ಲಿರುವ ಮಲ್ಲಿಕಾರ್ಜುನಸ್ವಾಮಿಯು ನೇತ್ರಪರ್ವತಕ್ಕೆ ಅಧಿಪತಿಯೆಂಬುವಾಗಿಯೂ ಪ್ರಖ್ಯಾತನಾಗಿದ್ದಾನೆ ||೭|| ಸರ್ವರೂ ಈ ಮಲ್ಲಿಕಾರ್ಜುನಸ್ವಾಮಿಗೆ ತಮ್ಮ ಕಣ್ಣುಗಳನ್ನು ಕಿತ್ತು ಸಮರ್ಪಿಸಿ ಮತ್ತೆ ಪಡೆದುಕೊಂಡಿರುವರು. ಒಬ್ಬ ಗೊಲ್ಲನು ಆಡುಗಳ ಗುಂಪನ್ನು ಕಾಯುತ್ತಲಿದ್ದಂತೆಯೇ ತನ್ನ ಕೈಯಲ್ಲಿದ್ದ ||೮|| ದೊಣ್ಣೆಯನ್ನು ಬಿಸುಟು, ಶ್ರೀಗಿರೀಶನಿಗೆ ತನ್ನ ಕಣ್ಣುಗಳನ್ನು ಕಿತ್ತು ಸಮರ್ಪಿಸಿ, ಮರಳಿ ಬೇಗನೆ ಆ ಕಣ್ಣುಗಳನ್ನು ಪಡೆದು ಆಡುಗಳನ್ನು ಕಾಯುವುದಕ್ಕೆ ಹೋದನು. ಹೀಗಿರುವಾಗ ಇತರರು ಆ ಶ್ರೀಶೈಲಾಧಿಪತಿ ಮಲ್ಲಿಕಾರ್ಜುನನಿಂದ ಕಣ್ಣನ್ನು ಪಡೆಯುವುದು ಒಂದು ಚೋದ್ಯವೆ? ಆ ಪರಮೇಶ್ವರನ ಮಹಿಮೆಯನ್ನು ವರ್ಣಿಸುವುದಕ್ಕೆ ಮನುಷ್ಯಮಾತ್ರದವರಿಗೆ ಹೇಗೆ ಶಕ್ಯವಾದೀತು? ||೧೦|| ಲೋಕದಲ್ಲಿ ಮನುಷ್ಯರು ಬೀಜಗಳನ್ನು ಕೆಸರಿನಲ್ಲಿ ಬಿತ್ತು ಮಹಾಧಾನ್ಯಫಲವನ್ನು ಪಡೆದುಕೊಳ್ಳುತ್ತಾರೆ. ಹೀಗಿರುವಾಗ ಶಾಸ್ತ್ರೋಕ್ತವಿಧಿಗನುಸಾರವಾಗಿ ಶಿವನಿಗೆ ಅರ್ಪಿಸಿ ಮಾಡಲ್ಪಟ್ಟ ಕಾರ್ಯಗಳೆಲ್ಲಾ ಹೇಗೆ ನಿಷ್ಫಲಗಳಾಗುವುವು? ಮತ್ತೂ ದ್ವಿಜಾತಿಯವರೇ ಮೊದಲಾದವರುಗಳು ಶಿವಪ್ರೀತಿಗಾಗಿಯೂ, ಇತರ ಮತದವರುಗಳು ಈ ಪರಮೇಶ್ವರನನ್ನು ದ್ವೇಷಿಸಿಯೂ, ಅಗ್ನಿಯಲ್ಲಿ ತುಪ್ಪವನ್ನೂ, ನೀರಿನಲ್ಲಿ ಅಕ್ಷತೆ ಎಳ್ಳು ಮೊದಲಾದುವುಗಳನ್ನೂ ಬಿಟ್ಟು ||೧೩|| ಅದಕ್ಕೆ ತಕ್ಕ ಮಹಾ ಪುಣ್ಯಫಲವನ್ನು ಪಡೆಯುವರೆಂಬುದು ನಿಶ್ಚಿತವಾಗಿರುವಾಗ, ಸಾಕ್ಷಾತ್ಪಶಿವನಿಗೆ ಸಮರ್ಪಿಸಿ ಮನುಷ್ಯರಿಂದ ಮಾಡಲ್ಪಟ್ಟ ಸಹಜ ಕ್ರಿಯಾಕದಂಬಗಳು ||೧೪|| ಯಾವ

ಭುವನೇನ್ನೃಣಾಂ | ಗಿರಿಂಪ್ರತಿಪ್ರೇಷಿತೇಷು ಭೂರ್ಮಿಮಾಸ್ಫಾಲಿತಃಕರಃ ||೧೬|| ಆಕಾಶನಿಹಿತಾದೃಷ್ಟಿರ್ಯಥಾಽನ್ಯತ್ರನಗಚ್ಛತಿ | ತಥೇಶಮುದ್ದಿಶ್ಯಕೃತಾಃ ಕ್ರಿಯಾಸ್ಯುರ್ನಿಷ್ಫಲಾಃಕಥಂ ||೧೭|| ಅತ್ಯುತ್ಕಟೈಃ ಪುಣ್ಯಪಾಪೈರಿಹೈವಫಲಮಶ್ನುತೇ| ಇತ್ಯಾದಿಸೂಕ್ತಿರಮಲಾ ಭವದ್ಭಿರ್ನಶ್ರುತಾಕಿಮು ||೧೮|| ತಥೈವಾತ್ಯುತ್ಕಟಾಶ್ಯಂಭುಂ ಸಮುದ್ದಿಶ್ಯಜನೈಃಕೃತಾಃ | ಪುಣ್ಯಪಾಪಕ್ರಿಯಾಸ್ಸರ್ವಾ ವಿತಥತ್ವಂ ವ್ರಜಂತಿಕಿಂ ||೧೯|| ತಥಾಹೀಶಾರ್ಪಿತಶಿರಾ ದಶಾಸ್ಯಶ್ಶಿವಮಸ್ತಕಂ | ಅದ್ರಾಕ್ಷಮಿತಿಸಂಜಲ್ಪನ್‌ದೇವಃ ಕಮಲಸಂಭವಃ ||೨೦|| ದೃಷ್ಟೇಶ್ವರಪದೋವ್ಯಾಘ್ರಪಾದಶ್ಶಂಭೋರಹಂಪದೇ | ದ್ರಕ್ಷ್ಯಾಮೀತಿವದನ್ ದರ್ಪಾತ್ತಥಾಕಮಲಲೋಚನಃ ||೨೧|| ಸ್ತುತಶಂಭುರ್ಭಟ್ಟಬಾಣೋ ದಕ್ಷೋನಿಂದಿತಶಂಕರಃ | ಶಿವಾತ್ಪರೋಜಗತ್ಕರ್ತಾ ನೇತಿಶಂಸೀಸಗೌತಮಃ ||೨೨|| ಹರಾದ್ದೇವಃ ಪರೋಽಸ್ತೀತಿಕೀರ್ತಯನ್ಬಾದರಾಯಣಃ | ಸ್ಮೃತೇಶ್ವರಶ್ಶ್ವೇತಮುನಿ ರಸ್ಮೃತಶ್ರೀಮಹೇಶ್ವರಾಃ ||೨೩|| ಅದ್ವೈತಮುನಯೋಬಾಣಾಸುರಶ್ಶಂಕರಪೂಜಕಃ | ಸನತ್ಕುಮಾ

---

ಕಾರಣದಿಂದ ನಿಷ್ಫಲಗಳಾಗುವವು? ಪರ್ವತವನ್ನು ಗುರಿಯಾಗಿಟ್ಟು ಹೊಡೆದ ಬಾಣವೂ, ಭೂಮಿಯಮೇಲೆ ಅಪ್ಪಳಿಸಿದ ಕೈಯೂ ||೧೬|| ಅಂತರಿಕ್ಷದ ಕಡೆಗೆ ಇಟ್ಟ ನೋಟವೂ ಹೇಗೆ ಗುರಿ ತಪ್ಪಿ ವ್ಯರ್ಥವಾಗಿ ಹೋಗುವುದಿಲ್ಲವೋ ಹಾಗೆ ಶಿವನನ್ನು ಕುರಿತು ಮಾಡಲ್ಪಟ್ಟ ಕ್ರಿಯೆಗಳೂ ಕೂಡ ವ್ಯರ್ಥವಾಗುವುದಿಲ್ಲ ||೧೭|| ಪುಣ್ಯ ಪಾಪಕರ್ಮಗಳನ್ನು ಮಿತಿಮೀರಿ ಮಾಡಿದರೆ ಅವುಗಳ ಫಲವನ್ನು ಈ ಜನ್ಮದಲ್ಲೇ ಅನುಭವಿಸುವನು ಎಂಬುದೇ ಮೊದಲಾಗಿರುವ ನೀತಿವಾಕ್ಯವನ್ನು ನೀವು ಕೇಳಿಲ್ಲವೆ? ||೧೮|| ಹಾಗೆಯೇ ಶಿವನನ್ನು ಕುರಿತು ಜನರು ಅತ್ಯಧಿಕವಾಗಿ ಮಾಡುವ ಒಳ್ಳೆಯ ಮತ್ತೂ ಕೆಟ್ಟ ಕರ್ಮಗಳೆಲ್ಲವೂ ತಕ್ಕ ಫಲವನ್ನು ಕೊಡದೆ ವ್ಯರ್ಥವಾಗಿ ಹೋಗುವುದುಂಟೇ? ||೧೯|| ಅದಕ್ಕೆ ಉದಾಹರಣೆಯನ್ನು ನೋಡಿರಿ—ರಾವಣನು ಶಿವನಿಗೋಸ್ಕರ ತನ್ನ ತಲೆಗಳನ್ನು ಕತ್ತರಿಸಿ ಸಮರ್ಪಿಸಿದನು. ಬ್ರಹ್ಮನು ಶಿವನ ತಲೆಯನ್ನು ಕಂಡುಬಂದೆನೆಂದು ಸುಳ್ಳನ್ನಾಡಿದನು. ಅವರಿಬ್ಬರಿಗೂ ಆದ ಫಲವನ್ನು ನೋಡಿರಿ. ವ್ಯಾಘ್ರಪಾದಮುನಿಯು ಶಿವಪಾದ ಸಂದರ್ಶನವನ್ನು ಮಾಡಿದನು. ವಿಷ್ಣುವು ತಾನು ಶಿವಲಿಂಗದ ಪಾದಗಳನ್ನು ಕಂಡುಬರುವೆನೆಂದು ಅಹಂಕಾರದಿಂದ ನುಡಿದನು ||೨೦|| ಅವರಿಬ್ಬರಿಗೂ ಆದ ಫಲಗಳನ್ನು ನೋಡಿರಿ ||೨೧|| ಬಾಣಭಟ್ಟನು ಶಿವನನ್ನು ಸ್ತೋತ್ರಮಾಡಿದನು. ದಕ್ಷಬ್ರಹ್ಮನು ಆ ಶಿವನನ್ನು ನಿಂದಿಸಿದನು. ಅವರಿಬ್ಬರಿಗೂ ಆದ ಫಲಗಳನ್ನು ನೋಡಿರಿ. ಗೌತಮಮುನಿಯು ಶಿವನ ಹೊರತು ಬೇರೆ ಜಗತ್ಕರ್ತನಿಲ್ಲವೆಂದು ಹೇಳಿದನು ||೨೨|| ವ್ಯಾಸನು ಶಿವನಿಗಿಂತಲೂ ದೊಡ್ಡ ದೈವವು ಬೇರೊಂದುಂಟೆಂದು ಹೇಳಿದನು. ಅವರಿಬ್ಬರಿಗೂ ಆದ ಫಲಗಳನ್ನು ನೋಡಿರಿ. ಶ್ವೇತಮುನಿಸನು ಈಶ್ವರಧ್ಯಾನಮಾಡಿದನು. ದಾರುಕಾವನದ ಅದ್ವೈತಮುನಿಗಳು ಆ ಶಿವನನ್ನು ಧ್ಯಾನ

ರಸ್ಸಂತ್ಯಕ್ತ ಮಹಾದೇವಸಮರ್ಚನಃ ||೨೪|| ಇತ್ಯಾದ್ಯಾಸಗತಾಸ್ಸ್ವಸ್ವಪು ಣ್ಯಪಾಪಫಲಾನಿಕಿಂ | ದೇಹಾಂತರೇಣಭೋಕ್ತವ್ಯಂ ಯತ್ಕರ್ಮಫಲಮಸ್ತಿತತ್ ||೨೫|| ಏತದ್ದೇಹಾನುಭೂತಂ ಚೇತ್ತದಾಶ್ಚರ್ಯಂ ಮಹದ್ಭುವಿ | ಸದ್ಯಃ ಪ್ರಸಾ ದೈಕಶಕ್ತಿ ಸ್ತತಶ್ಶ್ರೋದ್ಯತರಾನಕಿಂ ||೨೬|| ಉಕ್ತಪ್ರತಿಜ್ಞಾನುರೂಪಾ ಸದ್ಯಸ್ಸ್ವ ಪ್ರತ್ಯಯಂತತಃ | ಭಕ್ತಿರ್ನಕಿಂಚಿತ್ರತರಾ ಫಲಸಿದ್ಧಿನಿಬನ್ಧನಾ ||೨೭|| ಏಕಂಪು ರೋತ್ಪಾಟ್ಯನೇತ್ರ ಮನ್ಯಾಕ್ಷ್ಯುತ್ಪಾಟನಕ್ಷಣೇ | ಉತ್ಪಾಟಿತಾಕ್ಷಿಜಾತಂಚೇ ತ್ತನ್ನೇತ್ರೋತ್ಪಾಟನಾದನು ||೨೮|| ಏತದಾಯಾತಿಚೇನ್ನೇತ್ರಂ ತದ್ವೈವಾಗನು ಸಂದೃಶೋಃ | ವಿಲಂಬ್ಯಲೋಚನೇ ಜಾತೇ ಹೃದಯಂ ಕಂಪಿತಂಯದಿ ||೨೯|| ಜನಾನಾಂ ಸಂಶಯಸ್ಸ್ಯಾಚ್ಚೇ ದ್ಯದಿಧೈರ್ಯಂಪರಿಶ್ಲಥಂ | ಅಭವಂಚೇಚ್ಚಾತಶಂ ಕೋಽಹಂಕೃತಿರ್ವಿಹತಾಯದಿ ||೩೦|| ಆಗಚ್ಛೇದ್ಯದಿವಾಜಾಡ್ಯ ಮಙ್ಗು ಲ್ಯೋವಿಶ್ಲಥಾಯದಿ | ಸ್ಫುಟಿತಾತಾರಕಾವಕ್ರಾ ನಖರಂಜನಿಕಾಯದಿ ||೩೧|| ಕಂಪಿತಂಚೇತ್ಕರಯುಗಂ ಸ್ವೇದೋಜಾತೋಮುಖೇಯದಿ | ಯದಿಸ್ಯಾರ್ಧಾತ

---

ಮಾಡಲಿಲ್ಲ. ಅವರುಗಳಿಗಾದ ಫಲಗಳನ್ನು ನೋಡಿರಿ. ಬಾಣಾಸುರನು ಶಿವಪೂಜೆಯನ್ನು ಮಾ ಡಿದನು. ಸನತ್ಕುಮಾರನು ಶಿವಪೂಜೆಯನ್ನು ಮಾಡದೆ ಬಿಟ್ಟನು. ಅವರಿಬ್ಬರಿಗೂ ಆದ ಫಲಗೆ ಳನ್ನು ನೋಡಿರಿ ||೨೪|| ಈ ಪೂರ್ವೋಕ್ತರಾದವರೆಲ್ಲರೂ ಅವರವರು ಮಾಡಿದ ಪುಣ್ಯಪಾಪ ಕರ್ಮಗಳ ಫಲವನ್ನು ಹೊಂದಲಿಲ್ಲವೆ? ದೇಹವಳಿದಮೇಲೆ ಅನುಭವಿಸಬೇಕಾದ ಯಾವ ಕರ್ಮಫಲ ವುಂಟೋ ಅದನ್ನು ಈಗಣ ದೇಹವಿರುವಾಗಲೇ ಅನುಭವಿಸುವಂತಾದರೆ ಅದು ಭೂಮಿಯಲ್ಲಿ ಅತ್ಯಾಶ್ಚರ್ಯವು. ಹೀಗಿರುವಲ್ಲಿ ತತ್‌ಕ್ಷಣದಲ್ಲಿ ಉಂಟಾಗತಕ್ಕ ಫಲರೂಪವಾದ ಶಿವಾನುಗ್ರಹ ಶಕ್ತಿಯು ಅದಕ್ಕಿಂತಲೂ ಉತ್ಕೃಷ್ಟವಾದುದಲ್ಲವೆ? ||೨೬|| ಅದರಮೇಲೂ ಕೊಟ್ಟ ಭಾ ಷೆಗೆ ಅನುಗುಣವಾಗಿ ಫಲವನ್ನು ಸದ್ಯದಲ್ಲೇ ಕೊಡತಕ್ಕ ಭಕ್ತಿಯು ಅದಕ್ಕಿಂತಲೂ ಉತ್ಕೃ ಷ್ಟವೂ ಅತ್ಯಂತಾಶ್ಚರ್ಯಕರವೂ ಆಗಿರುವುದಲ್ಲವೆ? ಅದೇ ಪ್ರತ್ಯಕ್ಷಪ್ರಮಾಣವೆನಿಸಿಕೊಳ್ಳತಕ್ಕು ದು ||೨೭|| ಮೊದಲು ಒಂದು ಕಣ್ಣನ್ನು ಕಿತ್ತು, ಮತ್ತೊಂದು ಕಣ್ಣನ್ನು ಕೀಳುವುದರೊಳ ಗಾಗಿ ಮೊದಲು ಕಿತ್ತಿದ್ದ ಕಣ್ಣು ಮೂಡಿದುದೇ ಆದರೆ, ಆದೀಗ ಕಣ್ಣುಗಳ ಬರುವಿಕೆ. ಅದ ನ್ನು ಬಿಟ್ಟು ಕಿತ್ತ ಕಣ್ಣುಗಳು ತಡವಾಗಿ ಬಂದರೂ, ಎದೆಯು ತಲ್ಲಣಿಸಿದರೂ ||೨೯|| ಜನ ರು ಸಂಶಯಪಡುವಂತಾದರೂ, ಧೈರ್ಯವು ಜಾರಿದರೂ, ಸಂಶಯವು ಮೂಡಿದರೂ, ಹೆಮ್ಮೆಯು ಅಳಿದುಹೋದರೂ ||೩೦|| ಜಡತ್ವವು ಸಂಭವಿಸಿದರೂ, ಬೆರಲುಗಳು ಸಡಿಲಗಳಾಗಿಹೋದರೂ, ಕಣ್ಣುಗುಡ್ಡೆಗಳು ಒಡೆದುಹೋದರೂ, ನಖರಂಜನೀ ಆಯುಧವು ಬಗ್ಗಿಹೋದರೂ, ||೩೧|| ಕೈಗಳು ನಡುಗಿದರೂ, ಮುಖದಲ್ಲಿ ಬೆವರು ಹುಟ್ಟಿದರೂ, ಧಾತುವಿಕಾರವುಂಟಾದರೂ,

ವಃ ಕ್ಷುಬ್ಧಾಯದಿಬಾಷ್ಪಸ್ಸಮಾಪತೇತ್ || ೩೨ || ನಾಡ್ಯಸ್ಸಂಕುಚಿತಾಸ್ಸ್ಯು ಶ್ಚೇದ್ಯದಿ ಶ್ವಾಸೋಽಧಿಕೋಽಭವೇತ್ | ಯದ್ಯಕ್ಷಿಕೋಣಶ್ಶೋಣಶ್ಚೇತ್ಪ್ರಮಾದಾಸ್ನಖರಂಜನೀ || ೩೩|| ಚಕ್ಷುಷ್ಯತಿಪ್ರವಿಷ್ಟಾಚೇದ್ಭೀತಶ್ಚೇದ್ರಕ್ತಧಾರಯಾ | ಪಕ್ಷ್ಮಣೀ ಘಟಿತೇಸ್ಯಾತಾಂ ವಿಸಷ್ಟಂ ಸ್ಮರಣಂಯದಿ || ೩೪ || ಪರಿಕ್ಷೀಣಾಯದಿಭವೇದ್ವಿಲಸದ್ವದನದ್ಯುತಿಃ | ಮಯಾಕೃತಂ ನಯನಯೋರರ್ಪಣಂ ತತ್ಕಿಮರ್ಪಣಂ || ೩೫|| ತಯೋರಾಗಮನಂಚಾಪಿ ತತ್ಕಿಮಾಗಮನಂಧ್ಯಶೋಃ | ತತ್ಪೈವೋತ್ಪಾಟನಮಪಿ ಕಿಮುತ್ಪಾಟನಮೇತಯೋಃ ೩೬|| ಸಚಕಿಂ ಪರಿತೋಷಸ್ಸ್ಯಾತ್ ಪರಿತೋಽಷೋಽಭವತ್ಕೃತಃ | ಇತಿಪ್ರತಿಜ್ಞಾಮಕರೋತ್ಸಸ್ವರ್ವಾಶ್ಚರ್ಯಕಾರಿಣೀಂ ||೩೭|| ಅತಶ್ಶ್ರೀಪಂಡಿತಾರಾಧ್ಯ ದೇವಸ್ಸದ್ಭಕ್ತಿಸಂಯುತಃ | ಪೂರ್ವವನ್ನತಸದ್ಭಕ್ತ ಪಾದಪಂಕೇರುಹೋಽಭವನ್|| ೩೮|| ಸ್ಮೃತಪ್ರಮಥಸದ್ಭಕ್ತ ಪುರಾತನಪದಾಂಬುಜಃ | ಅವಿಚ್ಛಿನ್ನಪರಾನಂದಜಾತಶ್ಶಧ್ಯಾನತತ್ಪರಃ ||೩೯|| ಶಿವಯೋಗಸುಖಾಕ್ರಾಂತ ಸಮಾಧಿಸಮುದಂಚಿತಃ | ಅತ್ಯದ್ಭುತಮಹಾವೀರ ಭಕ್ತಿಯುಙ್ಮಹಿಮೋನ್ನತಃ ||೪೦|| ತಚ್ಚಕ್ಷುಷ್ಯಸ್ತ್ರಸಂಧಾನೇ ಸಾಶ್ಚರ್ಯೇನೇತ್ರಯೋರ್ಯುಗಂ | ಪ್ರಾಗ್ವದುತ್ಪಾಟಯಾಮಾಸ ತದಪ್ಯಾಶುಸಹೋದಿತಂ ||೪೧|| ತತ್ಸಂಜಾತಂ ನೇತ್ರಯುಗಂ ವೀಕ್ಷ್ಯಾಸ್ಥಾನೀಸ್ಥಿತಾಜನಾಃ |

---

ಕಣ್ಣೀರು ಸುರಿದರೂ ||೩೨|| ನಾಡಿಗಳು ಸೆಳೆದುಕೊಂಡರೂ, ಉಸುರು ವೇಗವಾದರೂ, ಕಣ್ಣ ತುದಿಯು ಕೆಂಪಾದರೂ, ಅಜಾಗರೂಕತೆಯಿಂದ ನಟ್ಟ ಆಯುಧವು ಕಣ್ಣಿನೊಳಗೆ ಹೆಚ್ಚಾಗಿ ನಾಟಿದರೂ, ರೆಪ್ಪೆಗಳು ರಕ್ತಸಿಕ್ತಗಳಾದರೂ, ಸ್ಮೃತಿತಪ್ಪಿಹೋದರೂ ||೩೪|| ಮುಖಕಾಂತಿಯು ಕುಗ್ಗಿದರೂ,ಆಗ್ಗೆ ನಾನು ಶಿವನಿಗೆ ಮಾಡಿದ ನೇತ್ರಸಮರ್ಪಣೆಯು ಎಂಥ ಸಮರ್ಪಣೆ? ||೩೫|| ಮರಳಿ ಆ ಕಣ್ಣುಗಳ ಬರುವಿಕೆಯು ಅದೆಂಥ ಬರುವಿಕೆ? ಈ ಕಣ್ಣುಗಳ ಕೀಳುವಿಕೆಯೂ ಕೂಡ ಎಂಥ ಕೀಳುವಿಕೆ? ||೩೬|| ನೀವು ಪಟ್ಟ ಸಂತೋಷವುತಾನೇ ಎಂಥ ಸಂತೋಷ ? ಎಂಬುದಾಗಿ ಶ್ರೀ ಪಂಡಿತಾರಾಧ್ಯರು ಸಕಲರೂ ಆಶ್ಚರ್ಯಪಡುವಂಥ ಭಾಷೆಯನ್ನು ತೊಟ್ಟನು ||೩೭|| ಬಳಿಕ ಪಂಡಿತಾರಾಧ್ಯನು ಮೊದಲಸಲದಂತೆಯೇ ಭಕ್ತಗಣದ ಪಾದಕ್ಕೆ ನಮಸ್ಕರಿಸಿ, ಪ್ರಮಥವರ್ಯರ ಮತ್ತೂ ಅರುವತ್ತುಮೂರು ಪುರಾತನರ ಪಾದಕಮಲವನ್ನು ಧ್ಯಾನಿಸಿ, ಅಖಂಡ ಪರಮಾನಂದಮಯನಾಗಿ ಶಿವಧ್ಯಾನವನ್ನು ಮಾಡುತ್ತ ||೩೯|| ಶಿವಯೋಗಸುಖದಿಂದ ಉಂಟಾದ ಚಿತ್ತೈಕಾಗ್ರತೆಯಿಂದ ಕೂಡಿದವನಾಗಿ. ಅತ್ಯಾಶ್ಚರ್ಯಕರವಾದ ಮಹಾ ವೀರಭಕ್ತಿಯಿಂದ ಕೂಡಿದ ಮಹತ್ತ್ವವುಳ್ಳವನಾಗಿ ||೪೦|| ಆ ಕಣ್ಣುಗಳಲ್ಲಿ ಆಶ್ಚರ್ಯಕರವಾಗಿರುವಂತೆ ಶಸ್ತ್ರಗಳನ್ನಿಟ್ಟು, ಎರಡು ಕಣ್ಣುಗಳನ್ನೂ ಮೊದಲಸಲದಂತೆಯೇ ಬೇಗನೆ ಮಿಂಟಿ ತೆಗೆದನು. ಒಡನೆಯೇ ಹೊಸದಾಗಿ ಎರಡು ಕಣ್ಣುಗಳೂ ಹುಟ್ಟಿದುವು||೪೧||

ಏಕಂಸಮುತ್ಪಾಟ್ಯನೇತ್ರ ಮಸ್ಯಸ್ಯೋತ್ಪಾಟನಕ್ಷಣೇ ||೪೨|| ಸಮಾಗತಂ ಪೂರ್ವನೇತ್ರಮಿದಮಾಗತಮಾಗತಂ | ಇತಿವಕ್ತುಂ ಪುನಸ್ತತ್ರಾಗ್ನೇತ್ರಸ್ಯೋತ್ಪಾಟನಕ್ಷಣೇ ||೪೩|| ದ್ವಿತೀಯಾಕ್ಷಿಸಮಾಯಾತ ಮಿದಮಾಗತಮಾಗತಂ| ಇತಿಚಾಖ್ಯಾತುಮೇವಸ್ಯಾದ್ವಿಲಂಬೋ ನಯನಾಗಮೇ ||೪೪|| ನಕಶ್ಚನವಿಲಂಬೋಽಸ್ತೀತ್ಯಾಶ್ಚರ್ಯಾಕ್ರಾಂತಚೇತಸಃ| ಶಶಂಸುಃ ಪಂಡಿತೇಂದ್ರಸ್ಯಮಹತ್ವಂಭುವನಾದ್ಭುತಂ ||೪೫|| ತತಶ್ರೀಪಂಡಿತಾರಾಧ್ಯ ಸ್ತುಷ್ಟೇಭಕ್ತಕದಂಬಕೇ | ತೇಷಾಂಕೃಪಾಬ್ಧಿಸಂಜಾತ ಸ್ವಲೋಚನಮಣೀಶುಭೌ ||೪೬|| ಸದ್ಭಕ್ತ್ಯಾ ಶಿವಸದ್ಭಕ್ತ ರತ್ನರತ್ನಕ್ಷಮಾಭೃತೆ | ನೀರಾಜನಂಕಾರಯಿತ್ವಾ ಪ್ರಾಹಿಣೋದ್ಭೂಮಿಪಾಸ್ತಿಕಂ ||೪೭||

ಇತಿ....ಮಹಿಮಪ್ರಕರಣೇ ತತ್ಪಂಡಿತಾರಾಧ್ಯದೇವಸ್ಯ ದ್ವಿತೀಯವಾರಪ್ರತಿಜ್ಞಾ ದ್ವಿತೀಯವಾರ ನೇತ್ರಬಾಧಕಕಥನಂನಾಮ ಚತುರ್ಥೋಽಧ್ಯಾಯಃ.

---

## ಅಥ ಪಂಚಮೋಽಧ್ಯಾಯಃ.

### (ಚೋಳಕೃತ ಪಂಡಿತಾರಾಧ್ಯ ನೇತ್ರದಂಡನಂ)

ಅಥೋತ್ಪಾಟಿತಯೋಃ ಪೂರ್ವಂ ನೇತ್ರಯೋಸ್ತದನಂತರಂ | ಉತ್ಪಾಟಿ

---

ಅದನ್ನು ಸಭೆಯ ಜನರೆಲ್ಲರೂ ನೋಡಿ ಒಂದು ಕಣ್ಣನ್ನು ಕಿತ್ತು ಮತ್ತೊಂದನ್ನು ಕೀಳುವುದರೊಳಗಾಗಿ ಇದೋ ಮೊದಲ ಕಣ್ಣು ಬಂದಿತು ಬಂದಿತು! ಎಂಬುದಾಗಿಯೂ, ಮತ್ತೊಂದು ಕಣ್ಣನ್ನು ಕಿತ್ತುವುದರೊಳಗಾಗಿ ಇದೋ ಆ ಎರಡನೆ ಕಣ್ಣೂ ಬಂದಿತು ಬಂದಿತು! ಎಂಬುದಾಗಿಯೂ, ಅವರುಗಳು ಬಾಯಿಂದ ಆಡಿಕೊಳ್ಳುವುದಕ್ಕೆ ತಡವಾಯಿತೇ ಹೊರತು ಕಣ್ಣುಗಳು ಬರುವುದರಲ್ಲಿ ತಡವಾಗಲಿಲ್ಲ ||೪೪|| ಎಂಬುದಾಗಿ ಆಶ್ಚರ್ಯಚಿತ್ತರಾದ ಆ ಜನರೆಲ್ಲರೂ ಲೋಕಾಶ್ಚರ್ಯಕರವಾದ ಪಂಡಿತಾರಾಧ್ಯ ಮಹಿಮೆಯನ್ನು ಹೊಗಳಿದರು. ||೪೫|| ಬಳಿಕ ಶಿವಭಕ್ತ ಸಮೂಹವೆಲ್ಲವೂ ಸಂತೋಷಗೊಳ್ಳಲಾಗಿ, ಪಂಡಿತಾರಾಧ್ಯನು ಭಕ್ತಗಣದ ದಯಾರಸ ಸಮುದ್ರದಿಂದ ಹುಟ್ಟಿರತಕ್ಕ ಕಣ್ಣುಗಳೆಂಬ ರತ್ನಗಳನ್ನು ||೪೬|| ಭಕ್ತಶ್ರೇಷ್ಠರೆಂಬ ಮೇರುಗಿರಿಗೆ ಭಕ್ತಿಯಿಂದ ಆರತಿಯೆತ್ತಿ, ಅವನ್ನು ದೊರೆಯಬಳಿಗೆ ಕಳುಹಿಸಿಕೊಟ್ಟನು ||೪೭||

ಎಂಬಲ್ಲಿಗೆ ೪ನೆ ಅಧ್ಯಾಯವು ಮುಗಿದುದು.

---

## ೫ನೆ ಅಧ್ಯಾಯವು.

### ಚೋಳನು ಪಂಡಿತಾರಾಧ್ಯನ ನೇತ್ರವನ್ನು ಕೀಳಿಸಿದ ಕಥೆ.

ಬಳಿಕ, ಮೊದಲು ಸಲ ಕೀಳಿಸಿದ್ದ ಕಣ್ಣುಗಳೆರಡರ ಜತೆಗೆ ೨ನೆಸಲ ಕೀಳಿಸಿದ ಕಣ್ಣುಗೆ

ತಾಭ್ಯಾಂ ನೇತ್ರಾಭ್ಯಾಂ ಸಹದ್ವಿಗುಣಯೋಸ್ಸತೋಃ ||೧|| ಪರಿಭ್ರಾನ್ತೋಽಭವಚ್ಚೋಲ ಧರಣೀಪಾಲಕಸ್ತದಾ | ವಿಲೋಕ್ಯ ಪ್ರಾಕ್ತನೇ ನೇತ್ರೇ ನೂತನೇ ಅಪಿ ಪಶ್ಯತಿ ||೨|| ನೂತ್ನೇ ಚ ಪ್ರಾಕ್ತನೇ ನೇತ್ರೇ ಮಿಶ್ರಯಿತ್ವಾ ಸಮೀಕ್ಷತೇ | ಪಶ್ಯತ್ಯಾರಾಧ್ಯಸಯನೇ ತಚ್ಚತ್ವಾರ್ಯಪಿ ಪಶ್ಯತಿ ||೩|| ಆತ್ಮಾ ಸಂಪಶ್ಯತಿ ಪುನಸ್ತನ್ನೇತ್ರಾಣ್ಯಪಿ ಪಶ್ಯತಿ | ಈಕ್ಷತೇ ಜನಸಂದೋಹಂ ಭೂಯೋ ಭೂಮಿಂ ಸಮೀಕ್ಷತೇ ||೪|| ಕ್ಷಿತೌ ಮಾನಕ್ಷತಿರ್ಮೇಽಭೂದಿತಿ ಚಿನ್ತಯತಿ ಕ್ಷಣಂ | ಅಸಿಹತ್ಯ ಮಮ ಕ್ರೋಧೋ ನೈ ಸಂಯಾತೀತಿ ಬುಧ್ಯತೇ ||೫|| ಬಹುವಾರಂ ಪಂಡಿತೇನ್ದ್ರಂ ಕಟಾಕ್ಷೇಣ ನಿರೀಕ್ಷತೇ | ತದಾತಿಕ್ಷುಬ್ಧಹೃದಯೋಽಭವಸ್ಸ ಕ್ಷಿತಿಪಾಲಕಃ ||೬|| ಯಾಪತ್ರಮಾಣಮಭವದಾಶ್ಚರ್ಯಂ ದ್ವಿಗುಣಾ ತತಃ | ಲಜ್ಜಾ ಚತುರ್ಗುಣೇತಸ್ಯಾಃ ಕೋಪೇ ಪಾಪೇ ಮನೋಗತೇ ||೭|| ಕಾರ್ಯೋಪತಾಪೇ ಚ ಮಹದ್ವಜ್ರಲೇಪಾಯಿತೇ ಸತಿ | ಬೌದ್ಧಾಚಾರ್ಯೋಪಕಾರಿತ್ವೇ ವಿಕಾರೇ ದುರ್ಮದಸ್ಯ ಚ ||೮|| ಕ್ರೂರತ್ವೇ ಚಾತ್ಮದುಷ್ಕೃತ್ಯ ಸಹಕಾರಕತಾಂ ಗತೇ | ಸೌಜನ್ಯಹಾನೇ ದುರಭಿಮಾನೇ ಚ ಸತತಂ ಹೃದಿ ||೯|| ಮಹತ್ಯನ್ಯಾಯಸನ್ಮಾನೇ ಸ್ವಸ್ಯಾಭಿಮತತಾಂ ಗತೇ |

---

ಳೆರಡೂ ಸೇರಿ ನಾಲ್ಕಾಗಿರಲು ||೧|| ಚೋಳರಾಜನು ನೋಡಿ ಭ್ರಾಂತನಾದನು. ಕೀಳಿಸಿದ್ದ ಹಳೆಯ ಕಣ್ಣುಗಳನ್ನು ನೋಡಿ, ಬಳಿಕ ಮೂಡಿರುವ ಹೊಸ ಕಣ್ಣುಗಳನ್ನು ನೋಡುತ್ತಾನೆ. ಹಳೆಯ ಹೊಸ ಕಣ್ಣುಗಳನ್ನೆಲ್ಲಾ ಕೂಡಿಸಿ ಒಂದೇ ಸಲ ನೋಡುತ್ತಾನೆ. ಪಂಡಿತಾರಾಧ್ಯನ ಮುಖದಮೇಲೆ ಹೊಸದಾಗಿ ಮೂಡಿರುವ ಕಣ್ಣುಗಳನ್ನೂ ನೋಡುತ್ತಾನೆ. ಅವನ ಹಳೆಯ ಕಣ್ಣುಗಳು ನಾಲ್ಕನ್ನೂ ನೋಡುತ್ತಾನೆ. ಗುಂಪುಕಟ್ಟಿ ನಿಂತಿರುವ ಜನಸ್ತೋಮವನ್ನೂ ನೋಡುತ್ತಾನೆ. ಮತ್ತೆ ನೆಲವನ್ನು ನೋಡುತ್ತಾನೆ ||೪|| ಭೂಮಿಯಲ್ಲಿ ನನಗೆ ಮಾನಹಾನಿಯಾಯಿತೆಂದು ಸ್ವಲ್ಪಹೊತ್ತು ಚಿಂತಿಸುತ್ತಾನೆ. ಇವನನ್ನು ಕೊಲ್ಲದಿದ್ದರೆ ನನ್ನ ಕೋಪವು ಶಾಂತವಾಗುವುದಿಲ್ಲವೆಂದು ಯೋಚಿಸಿಕೊಳ್ಳುತ್ತಾನೆ ||೫|| ಹಲವುಸಲ ಕಡೆಗಣ್ಣಿನಿಂದ ಪಂಡಿತಾರಾಧ್ಯನನ್ನು ನೋಡುತ್ತಾನೆ. ಹೀಗಾಗಿ ಕಡೆಗೆ ದೊರೆಯು ಕ್ಷೋಭೆಗೊಂಡನು ||೬|| ಅವನಲ್ಲಿ ಆಶ್ಚರ್ಯವೆಂಬುದು ಸಂಪೂರ್ಣವಾಗಿ ತುಂಬಲು, ನಾಚಿಕೆಯು ದ್ವಿಗುಣವಾಗಲು, ಕೋಪವು ನಾಲ್ಮಡಿಯಾಗಲು, ಪಾಪವು ಮನಸ್ಸನ್ನೆಲ್ಲಾ ಆವರಿಸಲು, ||೭|| ಮಾಡಿದ ಕೆಲಸ ಕೆಟ್ಟಿತೆಂಬ ಸಂಕಟದ ಬೇಗೆಯು ವಜ್ರಲೇಪದಂತೆ ಅಂಟಿಕೊಳ್ಳಲು, ಆ ಗರ್ವಾಂಧರಾಜನ ಮನೋವಿಕಾರವು ಬೌದ್ಧಗುರುಗಳಿಗೆ ಉಪಕಾರಿಯಾಗಿರಲು, ಅವನ ಕ್ರೂರತ್ವವು ಅವನ ದುಷ್ಕರ್ಮಗಳಿಗೆ ಸಾಹಾಯ್ಯಕಾರಿಗಳಾಗಲು, ಅವನ ಮನದೊಳಗಣ ದುರಭಿಮಾನವು ಸೌಜನ್ಯವಿನಾಶಕವಾಗಿರಲು, ||೯|| ಅತ್ಯಂತಾನ್ಯಾಯಾಚರಣವು ಅವನಿಗೆ ಒಪ್ಪಿತವಾಗಿರಲು, ಅವನ ಮಾತುಗಳು ದುರ್ಮತಗಳವರಿಗೆ ಸಂತೋಷಕರವಾಗಿರಲು, ಅವನ ಮನೋವ್ಯಥೆಯು ಸಹಿಸಲಶಕ್ಯವಾಗಿರಲು,

ವಾದೇಕುಸಮಯಾಹ್ಲಾದೇ ವಿಷಾದೇಽತ್ಯಂತದುಸ್ಸಹೇ ||೧೦|| ತದಾಸೀನ್ಮಾತ್ಮನಶ್ಶ್ರೀಘ್ರಮುಪರೋಧಕತಾಂಗತೇ | ದುಷ್ಕರ್ಮಣಿ ಪರಿಧ್ವಸ್ತಪರಮರ್ಮಣಿ ಸಜ್ಜನೈಃ ||೧೧|| ಅತ್ಯಂತಗರ್ಹಿತಾಧರ್ಮೇವ್ರಜತಿ ಸ್ವಸ್ಯಧರ್ಮತಾಂ | ವಿಸ್ಮೃತ್ಯಾತ್ಮಾ ಸಮುದ್ವಿಗ್ನೋ ಮದಗ್ರಸ್ತೋವಿಮೋಹಿತಃ || ೧೨ || ಉತ್ಪಾಟನಂ ನಯನಯೋರದ್ರಾಕ್ಷಂ ನಾತ್ರಸಂಶಯಃ | ತಯೋರಾಗಮನಂ ಸಾಕ್ಷಾತ್ಸಮಾಲೋಕಿತವಾನಹಂ ||೧೩|| ಇತಃಪರಂಚೈವಮೇವ ದೃಶೋರುತ್ಪಾಟನಸ್ಯಚ | ಪುನರಾಗಮನಸ್ಯಾಪಿ ಪ್ರಮಾಣಮಿದಮೇವಹಿ ||೧೪|| ಅದ್ಯೇಕ್ಷಣಂದತ್ತವಾನ್ಸ್ಮಿಂ ತ್ರಿವಾರಂದಾತುಮಕ್ಷಮಃ | ಅಸ್ಯಸ್ವಾಮಿನ್ಯಾತ್ಯನಾಲೋಚ್ಯ ಬೌದ್ಧಪುಂಗವಘಾತಿನಂ ||೧೫|| ಏನಮದ್ಯೈವಹನ್ಮೀತಿ ವದನ್ಪಾತಕಸಂಹತೇಃ | ಪಾತ್ರೀಭವನ್ಪೂರ್ವಜನ್ಮದೋಷೇ ದ್ವೇಷೇಽತಿನಿರ್ಭರೇ ||೧೬|| ರೋಷೇಸ್ಸವೇಷತಾಂಯಾತೇ ವಿರೋಧೇಗಣಸಂತತೇಃ | ಸ್ವಾಪರಾಧೇಚಮಹತಿ ಪ್ರರೋಧತ್ವಂಗತೇಸತಿ ||೧೭|| ನರಾಧಿಪೇನರಚಿತಂ ದಂಡನಂ ಪಂಡಿತೇಶಿತುಃ | ಮಂಡನಂ ಪ್ರತ್ಯುತ ನೃಪಯಶಃಖಂಡನಕಾರ್ಯಭೂತ್ ||೧೮|| ಇತಿನಿಂದಾಕೇವಲಂಮೇ ಸಮಾಯಾತಾಮಹೀತಲೇ | ತಾಂಶ್ರೋತುಂನಸಹೇಕುರ್ಯಾಂ ಭಂಗಿತಂ ಪಂಡಿತಂಪ್ರಭುಂ ||೧೯|| ದಂಡಯಾಮ್ಯನತಮುಖಂ ರಚಯಾಮ್ಯಂತಕಾನ್ತಿ

---

||೧೦|| ಅನ್ಯರ ರಹಸ್ಯವನ್ನು ಭೇದಿಸುವ ಆತನ ದುಷ್ಕರ್ಮವು ತನಗೆ ಒತ್ತಾಸೆಯಾಗಿರಲು||೧೧|| ಸಜ್ಜನರು ನಿಂದಿಸುವ ಅಧರ್ಮಗಳೇ ತನಗೆ ಸದ್ಧರ್ಮಗಳಾಗಿರಲು, ತನ್ನನ್ನು ತಾನು ಮರೆತು, ಕೆರಳಿ, ಗರ್ವಾಂಧನಾಗಿ, ಅಜ್ಞಾನ ವಿಶಿಷ್ಟನಾಗಿ ||೧೨|| ೨ಸಲ ಕಣ್ಣುಗಳನ್ನು ಕೊಟ್ಟ ಅವನ ದೈವವಾದ ಪರಶಿವನು ಮತ್ತೊಂದುಸಲವೂ ಕೊಡಲಾರನೆ? ಎಂಬುದನ್ನು ಆಲೋಚಿಸದೆ, "ಮೊದಲು ಈತನ ಕಣ್ಣುಗಳನ್ನು ಕಿತ್ತುದನ್ನು ನಾನು ನೋಡಲಿಲ್ಲ; ಹೊಸ ಕಣ್ಣುಗಳು ಬಂದುದನ್ನು ಮಾತ್ರ ನಾನೇ ನಿಸ್ಸಂಶಯವಾಗಿ ನೋಡಿದನು ||೧೩|| ಈಸಲ ನನ್ನಿದಿರಿಗೆ ಕಣ್ಣನ್ನು ಕೀಳಿರಿ, ಮರಳಿ ಅದು ಬರುವುದಾದರೆ, ಅದೀಗ ಪ್ರಮಾಣವು" ಎಂದು ಹೇಳಿ, ||೧೪|| "ಬೌದ್ಧಗುರುವನ್ನು ಕೊಂದ ಇವನನ್ನು ಈಗಲೇ ಕೊಂದುಬಿಡುತ್ತೇನೆ" ಎಂದು ನುಡಿದು, ಪಾಪರಾಶಿಗೆ ಭಾಜನನಾದನು. ಜನ್ಮಾಂತರ ಪಾಪರೂಪವಾದ ಅವನ ಭಕ್ತದ್ವೇಷವು ವೃದ್ಧಿಗೊಂಡಿರಲು, ||೧೬|| ಶಿವಗಣಂಗಳ ಮೇಲಣ ವೈರವೂ ಕೋಪವೂ ತನ್ನ ಮೂರ್ತಿಮತ್ತಾಗಿರಲು, ತನ್ನ ದೊಡ್ಡತಪ್ಪು ತನಗೆ ತಡೆಯಾಗಿರಲು ||೧೭|| "ದೊರೆಯು ಪಂಡಿತಾರಾಧ್ಯನಿಗೆ ವಿಧಿಸಿದ ಶಿಕ್ಷೆಯು ಅವನಿಗೆ ಭೂಷಣವಾಗದೆ ಅವನ ಕೀರ್ತಿಗೆ ಭಂಗಕಾರಿಯಾಗಿ ಪರಿಣಮಿಸಿತು" ||೧೮|| ಎಂಬ ನಿಂದೆಯು ಮಾತ್ರ ನನಗೆ ಭೂಮಿಯಲ್ಲಿ ಪ್ರಾಪ್ತವಾಯಿತು. ಅದನ್ನು ನಾನು ಕೇಳಲಾರೆ. ಅದಕ್ಕಾಗಿ ಈ ಪಂಡಿತಾರಾಧ್ಯನನ್ನು ಅತ್ಯಂತವಾಗಿ ಭಂಗಪಡಿಸುತ್ತೇನೆ ||೧೯|| ಶಿಕ್ಷಿಸುತ್ತೇ

ಕಂ | ನಯಾಮಿ ಪುರತೋ ಯದ್ವಾ ತದ್ವಾ ಭೂಯಾದಿತೀರಯನ್ ||೨೦|| ಏ
ಲೋಕ್ಯಯಾಮಿಕಾನಾಹ ಗೃಹೀತ್ವಾ ಪಂಡಿತಂ ಕ್ಷಣಾತ್ | ನಯನಯತ ತಸ್ಯನೇ
ತ್ರೇ ಸಂಕ್ಷೋಭ್ಯಾತ್ಯಂತನಿಷ್ಠುರಂ ||೨೧|| ತಥಾಕುರುಧ್ವಂ ಸಹಸಾ ಯುಷ್ಮ
ಭ್ಯಂ ರೋಚತೇ ಯಥಾ | ಪಶ್ಚಾತ್ಪಶ್ಯಾಮಿ ತಾಂ ಭಕ್ತಿಂ ಪಂಡಿತಸ್ಯಾದ್ಯ ಸತ್ವರಂ
||೨೨|| ಯೂಯಂ ಭವತ ತಸ್ಯೋಗ್ರಮೃತ್ಯುರಿತ್ಯಾಲಪನ್ನಮುಂ | ಆನಾಯ್ಯ
ಜೋತ್ಪಾಟ್ಯ ತಥಾ ನೇತ್ರೇ ದುಸ್ಸಹವೇದನಂ ||೨೩|| ಅರ್ಕಕ್ಷೀರಂ ಸಮಾಪೂರ್ಯ
ತತಶ್ಚೋಲನೃಪೋ ಯಯೌ | ಯಯೌ ತತ್ಪುಣ್ಯಮಪ್ಯಾಶು ತತಸ್ಸರ್ವೇ ಸಭಾಸ
ದಃ ||೨೪ ಸದ್ಭಕ್ತಾಶ್ಚ ಸಮುತ್ಥಾಯ ಶೀಘ್ರಂ ಶಿವಶಿವೇದೃಶಂ | ಕರ್ಮಕರ್ತುಂ
ಕಿಮುಚಿತಮಿತ್ಥಂ ಶಿವಶಿವೋಸ್ಮದಃ ||೨೫|| ಹತೋ ರಾಜಾ ಪಂಡಿತೇನ್ದ್ರೇ ಸ್ವ
ಯಂ ಸ್ವೀಯೇ ವಿಲೋಚನೇ| ಉತ್ಪಾಟಯತಿ ಕಿಂ ದಂಡಂ ಕಾರಯಾಮಾಸ ಭೂಪತಿಃ
||೨೬|| ಉತ್ಪಾಟನಂ ನಯನಯೋರ್ನೇಕ್ಷತೇ ವಾ ಜಡಃ ಕಿಮು | ಕಿಮವಿಜ್ಞಾ
ತವೃತ್ತಾಂತೋ ಭ್ರಾಂತೋ ವಾ ಬಾಲಕೋಽಥವಾ ||೨೭|| ಕಿನ್ತು ದೃಷ್ಟ್ವಾ ಮ
ಹತ್ತ್ವಮಸೂಯಾಪರತೈವ ಚ | ಕುಟಿಲಾತ್ಮಾ ಕ್ಷುಲ್ಲಕೋಽಯಂ ನೋ ಚೇತ್ಕ

---

ನೆ, ತಲೆ ಬಗ್ಗುವಹಾಗೆ ಮಾಡುತ್ತೇನೆ, ಮತ್ತು ಯಮನ ಬಳಿಗೆ ಕಳುಹಿಸುತ್ತೇನೆ, ಮುಂದೆ
ಏನಾದರೂ ಆಗಲಿ ಎಂಬುದಾಗಿ ನುಡಿಯುತ್ತ ||೨೦|| ತಳಾರರನ್ನು ನೋಡಿ—ಪಂಡಿತನನ್ನು
ಕೂಡಲೇ ಎಳೆದು ತನ್ನಿರಿ. ಅವನ ಕಣ್ಣುಗಳನ್ನು ಅತಿ ಕಠಿನವಾಗಿ ಒಡೆದು ನಿಮಗೆ ಹೇಗೆ ಮಾ
ಡಬೇಕೆಂಬುದು ತೋರುತ್ತದೋ ಹಾಗೆ ತಡಮಾಡದೆ ಮಾಡಿರಿ. ಬಳಿಕ ಅವನ ಭಕ್ತಿಯನ್ನು ನಾನು
ನೋಡುತ್ತೇನೆ. ||೨೨|| ಈಗ ನೀವು ಅವನ ವಿಷಯದಲ್ಲಿ ಭಯಂಕರ ಮೃತ್ಯುಗಳಾಗಿರಿ,
ಎಂದು ಹೇಳಿದವನಾಗಿ, ಪಂಡಿತಾರಾಧ್ಯನನ್ನು ಬರಮಾಡಿ, ತಾನು ಹೇಳಿದಂತೆಯೇ ಕಣ್ಣುಗ
ಳನ್ನು ಒರಟುತನದಿಂದ ಬಹು ಬಾಧೆಯಾಗುವಂತೆ ಕೀಳಿಸಿ ||೨೩|| ಆ ಕಣ್ಣುಗಳ ಗುಳಿಗೆ
ಎಕ್ಕದ ಹಾಲನ್ನು ತುಂಬಿಸಿ, ದೊರೆಯು ಹೊರಟುಹೋದನು. ಆ ಕೂಡಲೇ ಅವನ ಪೂರ್ವಪು
ಣ್ಯವೆಲ್ಲವೂ ಬೇಗನೆ ಕಳೆದುಹೋಯಿತು. ಬಳಿಕ ಅಲ್ಲಿದ್ದ ಸಕಲ ಸಭಿಕರೂ ||೨೪|| ಭಕ್ತವ
ರ್ಯರುಗಳೂ ತಟ್ಟನೆ ಎದ್ದು, ಅಯ್ಯೋ! ಶಿವಶಿವಾ! ಇಂಥ ಕೆಲಸವನ್ನು ಮಾಡಬಹುದೆ? ದೊರೆ
ಯು ಗರ್ವಾಂಧನಾಗಿ ಕೆಟ್ಟ. ಪಂಡಿತಾರಾಧ್ಯನು ತನ್ನ ಕಣ್ಣುಗಳನ್ನು ತಾನೇ ಕಿತ್ತುಕೊಂಡ
ನಲ್ಲ! ದೊರೆಯು ಶಿಕ್ಷೆ ಮಾಡಿಸಿದುದೇನು? ||೨೬|| ಹಾಗೆ ಕಣ್ಣು ಕೀಳಿಸಿದಾಗ ಏನಾಯಿ
ತೆಂಬುದನ್ನು ಈ ಮೂಢ ರಾಜನು ನೋಡಲಿಲ್ಲವೆ? ಆಗ ನಡೆದ ವಿದ್ಯಮಾನವನ್ನೆಲ್ಲಾ ತಿಳಿಯ
ಲ್ಲವೆ? ಇವನೇನು ಭ್ರಾಂತನೊ? ಅಥವಾ ಏನೂ ಅರಿಯದ ಹುಡುಗನೊ? ||೨೭|| ನಡೆದ
ಮಹತ್ತ್ವವನ್ನು ನೋಡಿ ಸೈರಿಸಲಾರದವನನ್ತೊ? ಅಥವಾ ಅಸೂಯಾಳುತ್ವವೇನೆಯೊ!
ಇಲ್ಲವೆ ಕಪಟಿಷ್ಟನೊ! ಇವನೇನು ನೀಚನೊ? ಹಾಗಲ್ಲದಿದ್ದರೆ ಇಂಥ ದುಷ್ಕಾರ್ಯವನ್ನು ಮನ

ರ್ಮೇದೃಶಂಕ್ವಪಾ ||೨೮|| ವಿದ್ಯತೇಸ್ವೇಚ್ಛಯಾಕರ್ತುಂ ತೇ ಪ್ರಾಕೃತಜನಾಃ ಕಿಮು | ಕಿಂತಾನ್ಪರಿಕ್ಲೇಶಯಿತುಂ ಸಭಂಗಮುಚಿತಂಭುವಿ ||೨೯|| ಸ್ವಯಂದ ಗ್ಧುಮುಪಕ್ರಾನ್ತಂ ರಾಷ್ಟ್ರಂ ಚೋಳಮಹೀಪತೇಃ | ಉದ್ಯುಕ್ತಶ್ಚೋಳನೃಪತಿ ರೇತನ್ನಾಶಯಿತುಂಪುರಂ ||೩೦|| ಕುದ್ದಾಲಂಚಗೃಹೇ ಸ್ವಸ್ಯಕುಲಸ್ಯ ಸ್ವಯಮೇ ವಹಿ | ಆತ್ಮಾಸಂಹಸ್ತುಮುದ್ಯುಕ್ತ ಸ್ಸ್ವಯಮೇವಮಹೀಪತಿಃ ||೩೧|| ಸ್ವದೇ ಶಮುನ್ಮೂಲಯಿತುಂ ದಗ್ಧುಂಶಾಪಾನಲೇನಚ | ಉದ್ಯತೋ ಬತಕುತ್ರೇ೭ತಃ ಪರಂಚೋಲಮಹೀಪತಿಃ ||೩೨|| ವೆಲನಾಡ್ವಿತಿವಿಖ್ಯಾತೋದೇಶಃ ಕ್ವೇತಃಪ ರಂಬತ | ಹನ್ತಚೋಲಸ್ಯರಾಜ್ಯಂ ಕ್ವ ವೆಲನಾಡೋಃ ಕ್ವಜೀವಿತಂ ||೩೩|| ಏ ಕತ್ರಜಾತಮನ್ಯತ್ರಸ್ಫುರಿತಂ ಸತ್ಪರತ್ರಚ | ಗರ್ಜಿತಂಚಾನ್ಯತಃ ಪಾತಿಮಹೋಗ್ರ ಕುಲಿಶಂಯಥಾ ||೩೪|| ಅನ್ಯದನ್ಯತ್ಸಮಭವದತ್ರ ಭಾಗ್ಯವಿಪರ್ಯಯಾತ್ | ಕ್ವ ಪಾಸನದಪ್ರೋಲಾಖ್ಯಪುರಂ ಬೌದ್ಧಃ ಕ್ವವೇದೃಶಃ ||೩೫|| ವಾದಃಕ್ವಚೋಲ ನೃಪತಿಃ ಕ್ವಾರಾಧ್ಯಃ ಕ್ವಚವಿಗ್ರಹಃ | ಕ್ವೇದಂಕುತ್ರಸಮುದ್ಭೂತಂ ಕುತ್ರಪಾಸ ಮುಪಾಗತಂ ||೩೬|| ನೃಪಸ್ಯೈವೇದಮಶ್ರೇಯಃ ಕಾರಣಂಕಿಮುವಾಭವೇಶ್ | ಜಾನಾತಿತನ್ಮಹೀಪಾಲ ಭಾಗ್ಯದೈವತಮೇವಹಿ ||೩೭|| ಭವಿತೇ೭ತಃಪರಂ ಕೊ

---

ನ್ನಿಗೆ ಬಂದಂತೆ ಮಾಡಿಸುವುದು ಎಲ್ಲುಂಟು? ಅವರೇನು ಸಾಮಾನ್ಯ ಮನುಷ್ಯರೆ? ಅವರನ್ನು ಭಂಗಪಡಿಸಿ ವ್ಯಥೆಗೊಳಿಸುವುದು ಉಚಿತವೆ? ||೨೯|| ಚೋಳರಾಜನ ರಾಜ್ಯವು ತನಗೆ ತಾನೇ ಉರಿದುಹೋಗುವುದಕ್ಕೆ ಆರಂಭಿಸಿತು. ರಾಜನು ತನ್ನ ಈ ಪಟ್ಟಣವನ್ನು ನಾಶಪಡಿಸಿಕೊಳ್ಳು ವುದಕ್ಕೆ ತಾನೇ ಗುದ್ದಲಿಯನ್ನು ಹಿಡಿದುಕೊಂಡನು. ದೊರೆಯು ತನ್ನ ನಾಶವನ್ನು ತಾನೇ ಮಾಡಿಕೊಳ್ಳಲು ಯತ್ನಿಸಿದನು ||೩೧|| ತನ್ನ ದೇಶವನ್ನು ತಾನೇ ನಿರ್ಮೂಲಮಾಡಿಕೊಳ್ಳುವು ದಕ್ಕೂ ಮಹಾತ್ಮರ ಶಾಪಾಗ್ನಿಯಿಂದ ಅದನ್ನು ಸುಟ್ಟುಕೊಳ್ಳುವುದಕ್ಕೂ ಪ್ರಯತ್ನಪ ಟ್ಟನು. ಅಯ್ಯೋ! ಇನ್ನೆಲ್ಲಿಯ ಚೋಳರಾಜ! ||೩೨|| ಇನ್ನುಮೇಲೆ ವೆಲನಾಡೆಂದು ಪ್ರಸಿ ದ್ಧವಾಗಿದ್ದ ಚೋಳದೇಶದ ಹೆಸರೆಲ್ಲಿ? ವೆಲನಾಡು ಚೋಳನ ರಾಷ್ಟ್ರವೆಲ್ಲಿ? ಅವನ ಬಾಳೆಲ್ಲಿ ||೩೩|| ಅತಿ ಭಯಂಕರವಾದ ಸಿಡಿಲು ಒಂದು ಕಡೆಯಲ್ಲಿ ಹುಟ್ಟಿ ಮತ್ತೊಂದು ಕಡೆ ಹೊಳೆ ದು, ಬೇರೊಂದು ಕಡೆ ಗರ್ಜಿಸಿ, ಇನ್ನೊಂದೆಡೆಯಲ್ಲಿ ಹೇಗೆ ಎರಗುವುದೋ ||೩೪|| ಹಾಗೆ ದೊರೆಯ ಹತಭಾಗ್ಯತೆಯಿಂದ ಏನೇನೋ ಆಗಿಹೋಯಿತು! ಎಲ್ಲಿಯ ಸನದಪ್ರೋಲುಪಟ್ಟಣ? ಎಲ್ಲಿಯ ಬೌದ್ಧಗುರು! ||೩೫|| ಎಲ್ಲಿಯ ವಾದ! ಎಲ್ಲಿಯ ಚೋಳರಾಜ! ಎಲ್ಲಿಯ ಪಂಡಿತಾರಾಧ್ಯ! ಎಲ್ಲಿಯ ಜಗಳ! ಇದೆಲ್ಲಿಯ ಕರ್ಮ! ಎಲ್ಲಿ ಹುಟ್ಟಿತು! ಎಲ್ಲಿ ಪರ್ಯವಸಾನ ವಾಯಿತು! ||೩೬|| ಇದೆಲ್ಲಾ ದೊರೆಯ ಅಶ್ರೇಯಸ್ಸಿಗೇ ಕಾರಣವಾದೀತೋ ಏನೋ! ರಾ ಜನ ಭಾಗದ ಭಾಗ್ಯದೇವತೆಗೇ ಅದು ಗೊತ್ತು ||೩೭|| ಇನ್ನುಮೇಲೆ ಈ ಪೊಳೆಯ ರಾಜ್ಯವು

ಸ್ವಂ ರಾಜ್ಯಮಸ್ಯಮಹೀಪತೇಃ | ಸಾಕ್ಷಾನ್ಮಹೇಶಏವಾಯ ಮಾರಾಧ್ಯೋ ಮಾನುಷಃ ಕಿಮು ||೩೮|| ಬಹುಭಿರ್ವಚನೈಃಕಿಂನಃ ಪ್ರತ್ಯಕ್ಷಂ ತನ್ನಕಿಂಭುವಿ| ಕಿಂನಾಸ್ಮಾಭಿರ್ದೃಷ್ಟಮೇತತ್ಕಿಮುವಾಗೇವಕೇವಲಂ || ೩೯ || ಅದ್ಯಪಶ್ಯತ್ಸು ಸರ್ವೇಷು ದ್ವಿವಾರಮಪಿಲೋಚನೇ | ಸ್ವಪ್ರತಿಜ್ಞಾನುರೂಪೇಣ ಕಿನ್ನಾಲಭತ ಶೀಘ್ರತಃ ||೪೦|| ಏವಂ ವದನ್ತೋಮಹಿತಂ ಮಲ್ಲಿಕಾರ್ಜುನಪಂಡಿತಂ | ಸ್ತುವ ನ್ತೋನ್ಯಪತನ್ ಪ್ರೀತ್ಯಾಕೃತಪ್ರಣತಯಸ್ತದಾ ||೪೧||

ಇತಿ.......ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೇ ಮಹಿಮಪ್ರಕರಣೇ ವೆಲನಾಡಚೋಳಕೃತ ತತ್ಪಂಡಿತಾರಾಧ್ಯ ನೇತ್ರದಂಡನ ಕಥನಂನಾಮ ಪಂಚಮೋಽಧ್ಯಾಯಃ.

---

## ಅಥ ಷಷ್ಠೋಽಧ್ಯಾಯಃ.

(ಪಂಡಿತಾರಾಧ್ಯಕೃತ ಶಾಪಕಥನಂ.)

ಅಥ ಶ್ರೀಪಂಡಿತಾರಾಧ್ಯದೇವಸ್ಸಭ್ಯೇಷು ಸಾದರಂ | ಶೃಣ್ವತ್ಸು ಶಿವಭಕ್ತೇಷು ದೇವಶ್ರೀಮಲ್ಲಿಕಾರ್ಜುನ ||೧|| ಅನನ್ತಮಹಿಮಾಧಾರ ಮಹಾದೇವ

---

ಹಾಳಾಗತಕ್ಕದ್ದೇ ಸರಿ. ಈ ಆರಾಧ್ಯನು ಸಾಕ್ಷಾತ್ಪರಮೇಶ್ವರನೇ: ಹೊರತು ಸಾಮಾನ್ಯ ಮನುಷ್ಯನೇ? ||೩೮|| ಹೆಚ್ಚು ಮಾತಿನಿಂದೇನು? ಆ ವಿಷಯವು ನಮಗೆ ಪ್ರತ್ಯಕ್ಷವೇ ಆಗಿಲ್ಲವೆ? ನಾವೇ ನೋಡಿಲ್ಲವೆ? ಇದೇನು ಬರಿಯಮಾತೆ? ||೩೯|| ಈಗತಾನೇ ಎಲ್ಲರೂ ನೋಡುತ್ತಿರುವಂತೆಯೇ ಈ ಆರಾಧ್ಯನು ತನ್ನ ಪ್ರತಿಜ್ಞೆಯಂತೆಯೇ ಎರಡುಸಾರೂ ಕಿತ್ತ ಕಣ್ಣುಗಳನ್ನು ಮರಳಿ ಥಟ್ಟನೆ ಪಡೆದುಕೊಳ್ಳಲಿಲ್ಲವೆ? ಎಂಬುದಾಗಿ ಹೇಳುತ್ತ, ಪೂಜ್ಯನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಹೊಗಳುತ್ತ, ಅತ್ಯಂತ ಪ್ರೀತಿಯಿಂದ ನಮಸ್ಕರಿಸುತ್ತ ಇದ್ದರು. ||೪೧||

ಎಂಬಲ್ಲಿಗೆ ವೆಲನಾಡು ಚೋಳನು ಪಂಡಿತಾರಾಧ್ಯರ ಕಣ್ಣನ್ನು ತನ್ನ ಪ್ರತ್ಯಕ್ಷವಾಗಿ ಕೀಳಿಸಿ ದಂಡಿಸಿದ ಕಥೆಯನ್ನು ನಿರೂಪಿಸುವ ೫ನೆಯ ಅಧ್ಯಾಯವು ಮುಗಿದುದು.

---

## ೬ನೆ ಅಧ್ಯಾಯವು.

ಪಂಡಿತಾರಾಧ್ಯರು ಶಾಪವನ್ನು ಕೊಟ್ಟ ಕಥೆಯು.

ಅನಂತರ ಸಭಿಕರಾಗಿದ್ದ ಶಿವಭಕ್ತರುಗಳು ಪ್ರೀತಿಯಿಂದ ಕೇಳುತ್ತಿರಲಾಗಿ ಶ್ರೀ ಪಂಡಿತಾರಾಧ್ಯಸ್ವಾಮಿಯು- ಅಪರಿಮಿತಮಹತ್ತ್ವಾಶ್ರಯನೂ, ದೇವಾಧಿದೇವನೂ ಆದ ಎಲೈ

ಮಹೇಶ್ವರ | ಮಹಿಮ್ನೋವರ್ಧನಾರ್ಥಾಯ ತವದಂಡಯಿತುಂಹಿಮಾಂ ||೨|| ಮಯ್ಯೇವಾಘಸ್ಥಿತೇ ಘೋಪಸ್ತ್ವರಿತಂ ಕೃತವಾನಯಂ | ಪಾಪೀಸದ್ಭಕ್ತಮಾಹಾತ್ಮ್ಯಂ ನಜಾನಾತಿಸಮುನ್ನತಂ ||೩|| ಕೋಪೀನವೇತ್ತಿತವಸನ್ಮಹಿಮಾನಂ ಜಗದ್ಗುರೋ| ಏವಂಜನೇಷುಸರ್ವೇಷು ಪಶ್ಯತ್ಸುಮಮಲೋಚನೇ ||೪|| ತ್ವಂಖಾನುಪುಂಖಮನ್ಯೋನ್ಯಂ ಲಂಘಯಿತ್ವಾತಿವೇಗತಃ | ದ್ವಿವಾರಮುತ್ಪಾಟನಂ ಚ ಪ್ರದಾನಂ ಶೋಭತೇತರಾಂ ||೫|| ಇತಃಪರಂ ನೇತ್ರದಾನಮಹತ್ವಂ ನಭವೇತ್ತ್ವ | ಶ್ರೀಮಹಾದೇವತೇಭಕ್ತಾಶ್ಶಾಪಾದಪಿ ಶರಾದಪಿ ||೬|| ಇತ್ಯುಕ್ತೇ ದ್ರೋಹಿಣಮಿಮಂ ಘ್ನಂತಿಯಾವನ್ಮಹೀಪತಿಂ | ಏತದ್ವಂಶಂ ಯಮಪುರೀಂ ಯಾವತ್ಸಂಪ್ರೇಷಯನ್ತಿಚ ||೭|| ತಾವನ್ಮಮಾಕ್ಷಿಯುಗಳಂ ಯದಿದಾಸ್ಯಸಿಶಂಕರ | ಆಜ್ಞಾ ತೇ ಶಿವಭಕ್ತಾನಾಂತವಾಜ್ಞಾಪಿಕೃತಾಮಯಾ ||೮|| ಅಹಂಚ ಯದಿವಾಕಾಂಕ್ಷೇ ನಯನೇಗಿರಿಜಾಪತೇ | ಆಜ್ಞಾಮೇ ಶಿವಭಕ್ತಾನಾಂತವಾಜ್ಞಾಪಿತಥಾಕೃತಾ ||೯|| ಅಸ್ಮದೀಯಾಮರಾರಾಮೇ ವಿಸ್ಮಯಾಕ್ರಾನ್ತಬುದ್ಧಿಷು | ಬೌದ್ಧೇಷುಕೀರ್ತ್ಯಮಾನೇಷು ಮರ್ತ್ಯೇಷ್ವದ್ಭುತಮದ್ಭುತಂ ||೧೦|| ಇತಿಸ್ತುವತ್ಸು ನಯನಸಂಪ್ರಾಪ್ತಿರ್ಮಮಶೋಭತೇ | ಮಯಾಪ್ರಾಪ್ತೇದೃಶಾ

---

ಮಲ್ಲಿಕಾರ್ಜುನಸ್ವಾಮಿಯೆ! ನಿನ್ನ ಮಹಿಮೆಯನ್ನು ಭೂಮಿಯಲ್ಲಿ ಪ್ರಸರಿಸುವುದಕ್ಕಾಗಿ ನನ್ನನ್ನು ಶಿಕ್ಷಿಸಿಕೊಳ್ಳಲು ನಾನೇ ಸಿದ್ಧನಾಗಿದ್ದರೂ ಈ ದೊರೆಯು ಅವಸರ ಮಾಡಿದನು. ಪಾಪಿಯಾದೀತನು ಶಿವಭಕ್ತರ ಮಹಿಮಾತಿಶಯವನ್ನು ಅರಿಯನು ||೩|| ಎಲೈ ಜಗದ್ಗುರುವೆ! ಕೋಪಿಷ್ಠನಾದೀತನು ನಿನ್ನ ಮಹಿಮೆಯನ್ನು ತಿಳಿಯನು. ಈ ನೆರೆದಿದ್ದ ಜನರೆಲ್ಲರೂ ನೋಡುತ್ತಿದ್ದಂತೆಯೇ ನನ್ನ ಕಣ್ಣುಗಳನ್ನು ಎರಡುಸಲ ಕಿತ್ತುದೂ, ಮರಳಿ ಅವು ನಾಮುಂದು ತಾಮುಂದೆಂದು ವೇಗವಾಗಿ ಹಾರಿಕೊಂಡು ಬಂದುದೂ ಸಹ ಅತ್ಯಂತವಾಗಿ ಮೆರೆದಿರುವುದು. || ೫ || ಇನ್ನುಮೇಲೆ ನಿನ್ನ ನೇತ್ರದಾನ ಮಹತ್ವವು ಬೇಡ; ಸಾಕು. ಎಲೈ ಮಹಾದೇವನೆ! ಶಾಪಾದಪಿ ಶರಾದಪಿ ಎಂಬ ವಚನದಂತೆ ನಿನ್ನ ಭಕ್ತರು ಶಿವದ್ರೋಹಿಯಾದ ಈ ದೊರೆಯನ್ನು ಯಾವಾಗ ಕೊಲ್ಲುವರೋ, ಇವನ ವಂಶವನ್ನು ಯಾವಾಗ ಯಮಪಟ್ಟಣಕ್ಕೆ ಸಾಗಿಸುವರೋ ಅಲ್ಲಿಯವರೆಗೂ ನನ್ನ ಕಣ್ಣುಗಳನ್ನು ನೀನು ಕೊಟ್ಟುದೇ ಆದರೆ ನಿನಗೆ ಭಕ್ತರ ಮೇಲಣ ಆಣೆಯನ್ನೂ ನಿನ್ನ ಮೇಲಣ ಆಣೆಯನ್ನೂ ಇಟ್ಟಿರುವೆನು. ||೮|| ಎಲೈ ಪಾರ್ವತೀಪತಿಯೆ! ನಾನೂ ಕೂಡ ಕಣ್ಣುಗಳನ್ನು ಅಪೇಕ್ಷಿಸಿದರೆ ನನಗೆ ಶಿವಭಕ್ತರಾಣೆ ನಿನ್ನಾಣೆ ಇರುವುದು ||೯||ನಮ್ಮ ಅಮರಾರಾಮವೆಂಬ ಪುರದಲ್ಲಿ ಹಿಂದೆ ಬೌದ್ಧರೆಲ್ಲರೂ ಅಚ್ಚರಿಗೊಳ್ಳುವಂತೆಯೂ, ಉಳಿದಜನರೆಲ್ಲಾ ಆಶ್ಚರ್ಯ, ಆಶ್ಚರ್ಯವೆಂದು ಕೊಂಡಾಡುತ್ತಿರಲಾಗಿಯೂ ನನಗೆ ಕಣ್ಣುಗಳು

ಮೂರ್ಧ್ನೇರ್ದಾತುಂತವಚಶೋಭತೇ ||೧೧|| ತಥಾಕುರುಷ್ವಕರುಣಾಂ ಮಯಿ ಸದ್ಭಕ್ತವತ್ಸಲ | ಏತದ್ದುರಾತ್ಮನೋದೇಶೇ ಸ್ಥಾತುಂ ಭಕ್ತೈರ್ನಸಾಂಪ್ರತಂ ||೧೨|| ಇತ್ಯಾಲಪನ್ಪಂಡಿತೇಂದ್ರೋ ಭಕ್ತಾನಾಮಾಜ್ಞಯಾತತಃ | ಶಾಪೋದಕಂ ಸಮುದ್ಧೃತ್ಯ ಶೃಣ್ವತ್ಸುಸಕಲೇಷ್ವಪಿ ||೧೩|| ಕಾಲಸಂಹಾರರುದ್ರೋಗ್ರ ವಿರೂಪಾಕ್ಷ ವಿಷಾಶನ | ಕಾಲಾಗ್ನಿರುದ್ರ ಶ್ರೀವೀರಭದ್ರಾದಿಪ್ರಮಥಾಧಿಪ||೧೪|| ಮಮವಿಜ್ಞಾಪನಮಿದ ಮವಧಾರಯಸಾದರಂ | ದೇವತ್ವಚ್ಛಾಪತೋಧಾತುಸ್ಸ್ಥಾನನಾಶೋಯಥಾಽಭವತ್ ||೧೫|| ಯಥಾದೂರ್ವಾಸಸಶ್ಶಾಪಾದ್ಯದುವಂಶಃ ಕ್ಷಯಂಗತಃ | ದಕ್ಷಾಧ್ವರೋಽಕ್ಷಪಾದಸ್ಯ ಶಾಪಾಧ್ವಸ್ತೋಯಥಾಽಭವತ್ ||೧೬|| ಯಥಾದಧೀಚಿಶಾಪೇನ ಮುನಯೋದಿವಿಜಾಹತಾಃ | ವ್ಯಾಸಶಾಪೇನವಿಪ್ರಾಣಾಂ ತವಭಕ್ತಿರ್ಯಥಾಹೃತಾ ||೧೭|| ಯಥಾಽತಿವಿಖ್ಯಾತತಿರುನೀಲನಕ್ಕಸ್ಯಶಾಪತಃ | ಜೈನಾಬೌದ್ಧಾಶ್ಚನಿಹತಾ ಆಸನ್ದ್ರವಿಡಮಂಡಲೇ ||೧೮|| ಶಾಪತಃ ಪಿಲ್ಲೈನೈನಾರೇರ್ಜೈನಾಬೌದ್ಧಾಯಥಾಹತಾಃ | ಪುರಾಗಾ

---

ಬಂದೇ ಇರುವುವು. ಇನ್ನು ಮುಂದೆ ಅಂಥ ಕಣ್ಣುಗಳನ್ನು ಕೊಡಬೇಡ. ಕೊಟ್ಟರೆ ಮೇಲಣ ಕಣ್ಣನ್ನು (ಫಾಲನೇತ್ರವನ್ನು) ಕೊಡು. ಅದನ್ನು ಕೊಡುವುದು ನಿನಗೂ ಒಪ್ಪುತ್ತದೆ ||೧೧|| ಭಕ್ತವತ್ಸಲನಾದ ಎಲೈ ಸ್ವಾಮಿಯೆ! ನನ್ನಲ್ಲಿ ಕೃಪೆಯಿಟ್ಟು ಹಾಗೆ ಮಾಡು, ದುಷ್ಟಾತ್ಮನಾದ ಈ ದೊರೆಯ ರಾಜ್ಯದಲ್ಲಿ ಭಕ್ತರು ಇರತಕ್ಕುದಲ್ಲ ||೧೨|| ಎಂಬುದಾಗಿ ಪಂಡಿತಾರಾಧ್ಯಸ್ವಾಮಿಯು ನುಡಿದವನಾಗಿ, ಬಳಿಕಾಭಕ್ತರ ಅಪ್ಪಣೆಯನ್ನು ಪಡೆದು, ಶಾಪೋದಕವನ್ನು ಅಂಗೈಯಲ್ಲಿ ಹಿಡಿದು, ಸಕಲ ಜನರೂ ಕೇಳುತ್ತಿರಲಾಗಿ—||೧೩|| "ಯಮನಾಶಕನೂ, ಭಕ್ತರ ದುಃಖನಿವಾರಕನೂ, ದುಷ್ಟರಿಗೆ ಭಯಂಕರನೂ, ಫಾಲನೇತ್ರನೂ, ನಂಜುಂಡನೂ, ಪ್ರಳಯಾಗ್ನಿರುದ್ರನೂ, ವೀರಭದ್ರಾದಿ ಪ್ರಮಥಗಣಪತಿಯೂ ಆದ ಎಲೈ ಮಲ್ಲಿಕಾರ್ಜುನಮೂರ್ತಿಯೆ! ||೧೪|| ಈ ನನ್ನ ಬಿನ್ನಹವನ್ನು ಪ್ರೀತಿಯಿಂದ ಆಲಿಸು. ಎಲೈ ಸ್ವಾಮಿಯೆ! ನಿನ್ನ ಶಾಪದಿಂದ ಚತುರ್ಮುಖಬ್ರಹ್ಮನು ಹೇಗೆ ಪದಚ್ಯುತನಾದನೋ ||೧೫|| ದೂರ್ವಾಸ ಮಹರ್ಷಿಯ ಶಾಪದಿಂದ ಹೇಗೆ ಯದುವಂಶ ನಾಶವಾಯಿತೋ, ಗೌತಮನ ಶಾಪದಿಂದ ದಕ್ಷಯಜ್ಞವು ಹೇಗೆ ಹಾಳಾಯಿತೋ ||೧೬|| ಆ ದಕ್ಷಾಧ್ವರಕ್ಕೆ ಬಂದಿದ್ದ ಋಷಿಗಳೂ ದೇವತೆಗಳೂ ದಧೀಚಿ ಶಾಪದಿಂದ ಹೇಗೆ ಕೆಟ್ಟರೋ, ವ್ಯಾಸ ಮಹರ್ಷಿಯ ಶಾಪದಿಂದ ಬ್ರಾಹ್ಮಣರ ಶಿವಭಕ್ತಿಯು ಹೇಗೆ ನಷ್ಟವಾಯಿತೋ ||೧೭|| ತಿರುನೀಲ ನಕ್ಕನಯ್ನಾರ ಶಾಪದಿಂದ ದ್ರವಿಡದೇಶದಲ್ಲಿದ್ದ ಜೈನಬೌದ್ಧರೆಲ್ಲಾ ಹೇಗೆ ಹಾಳಾದರೋ, ||೧೮|| ಪಿಳ್ಳೈನೈನಾರ ಶಾಪದಿಂದ ಜೈನಬೌದ್ಧರು ಹೇಗೆ ನಷ್ಟರಾದರೋ, ನಮಿನಂದಿಯ ಶಾಪದಿಂದ ಜೈನರ ಮನೆಯು ಹಸುಗಳೆಲ್ಲಾ

ವೋಯಥಾನಷ್ಟಾ ನಮಿಸಂದ್ಯುರುಶಾಪತಃ ||೧೯|| ಸದ್ಭಕ್ತಾತ್ರ್ಯಮುಶಾಪೇನ ಮಹೇಂದ್ರನಗರೇಶ್ವರಃ | ಮಂಗಳಾಖ್ಯೋಸರಪತಿರ್ಯಥಾ ನಷ್ಟೋಽಭವತ್ಪುರಾ ||೨೦|| ಇರಿತಾಂಡ್ಯುಗ್ರಶಾಪೇನ ಜೈನಾಜಾತಾಯಥಾಽಂಧಕಾಃ | ಏಕಾಂತ್ರರಾಮದೇವಸ್ಯ ಶಾಪಾದ್ವಿಖ್ಯಾತತೇಜಸಃ ||೨೧|| ಯಥಾನಾಶಂಗತಾಃ ಪೂರ್ವಮಬ್ಬಲೂರುಜಿನಾಲಯಾಃ | ಗುಡ್ಡವ್ವಾಶಾಪತೋಧ್ವಸ್ತಾಃ ಕುಷ್ಠಾಕ್ರಾನ್ತಾಯಥಾದ್ವಿಜಾಃ ||೨೨|| ಕಲ್ಲಿನಾಥಸ್ಯಶಾಪೇನ ಯಥಾಸರ್ಪೋಲಯಂಗತಃ| ಕಿಂಸಹಸ್ರೇಣಾಸ್ಮದೀಯ ಬಸವೇಶ್ವರಶಾಪತಃ ||೨೩|| ಯಥಾಬಿಜ್ಜಲಭೂಮಿಶಕುಲಂ ನಾಶಮುಪಾಗತಂ | ತಥಾಽಸಂಖ್ಯಾತಭಕ್ತಾನಾ ಮೇಷಾಂಕ್ರೋಧಾನಲೋತ್ಥಿತೇ ||೨೪|| ಅಖಿಲಪ್ರೋಜ್ವಲಜ್ಜ್ವಾಲಾಜಾಲೇಕಲ್ಪಾಗ್ನಿಸನ್ನಿಭೇ | ವೆಲನಾಡುಮಹೀಪಾಲ ಚೋಲಾಧಮಪತಂಗಕಃ ||೨೫|| ಆತ್ಮಜೈರ್ಬಂಧುಭಿಸ್ಸಾಕಂ ಭಸ್ಮೀಭವತುಸತ್ವರಂ | ಇತಿಶಾಪಂಮಹೀಶಾಯ ದತ್ವಾಶ್ರೀಪಂಡಿತೇಶ್ವರಃ ||೨೬|| ಶ್ರೀಲಿಂಗೋದ್ಭವದೇವಾಯ ಪ್ರಾಕ್ಸಮುತ್ಪಾಟಿತಾಸ್ಯಥ | ಅರ್ಪಯಾಮಾಸಚತ್ವಾರಿ ಲೋಚನಾನಿಸಮಾಹಿತಃ ||೨೭|| ತ್ರ್ಯಕ್ಷಸ್ತಾನಿಸ್ವನೇತ್ರೇಷುತ್ರಿಷು ತ್ರೀಣ್ಯೇಕಮೀಕ್ಷಣಂ | ಕೃಷ್ಣಾರ್ಚಿತಸ್ವವಾಮಾಂಘ್ರಿ ನೇತ್ರಸಾ

---

ಹೇಗೆ ನಷ್ಟವಾದುವೋ ||೧೯|| ಅರ್‍ಮನೆಂಬ ಶಿವಭಕ್ತನ ಶಾಪದಿಂದ ಮಹೇಂದ್ರ ಪಟ್ಟಣಾಧಿಪತಿಯಾದ ಮಂಗಳರಾಜನು ಹೇಗೆ ಹಾಳಾದನೋ ||೨೦|| ಇರಿವತಾಂಡಾರಿಯ ಶಾಪದಿಂದ ತಿರುವಾರೂರಿನ ಜೈನರೆಲ್ಲಾ ಹೇಗೆ ಕುರುಡರಾಗಿ ಹೋದರೊ, ಪ್ರಸಿದ್ಧ ತೇಜಸ್ವಿಯಾದ ಏಕಾಂತ ರಾಮದೇವನ ಶಾಪದಿಂದ ಅಬ್ಬಲೂರಿನ ಜಿನಬಸದಿಗಳೆಲ್ಲಾ ಹೇಗೆ ಹಾಳಾದುವೋ, ಮಾದರ ಗುಡ್ಡವ್ವೆಯ ಶಾಪದಿಂದ ನಾವದಿಗೆ ಪಟ್ಟಣದ ವಿಪ್ರರುಗಳು ಕುಷ್ಠರೋಗಪೀಡಿತರಾಗಿ ಹೇಗೆ ಹಾಳಾದರೋ ||೨೨|| ಹಾವಿನಹಾಳ ಕಲ್ಲಯ್ಯನ ಶಾಪದಿಂದ ಸರ್ಪವು ಹೇಗೆ ಮೃತವಾಯಿತೋ, ಸಾವಿರ ಮಾತಿನಿಂದೇನು? ನಮ್ಮ ಬಸವೇಶ್ವರನ ಶಾಪದಿಂದ ಬಿಜ್ಜಳರಾಜನ ಕುಲವು ಹೇಗೆ ನಾಶಗೊಂಡಿತೋ ಹಾಗೆ, ವೆಲನಾಡು ಚೋಳರಾಜನೆಂಬ ಸಣ್ಣ ಪತಂಗದ ಹುಳುವು ತನ್ನ ಸಕಲ ಬಾಂಧವರೊಡನೆ, ಅಸಂಖ್ಯಾತ ಶಿವಭಕ್ತರ ಕೋಪಾಗ್ನಿಯಿಂದ ಹುಟ್ಟುವ ಪ್ರಳಯಾಗ್ನಿಗೆ ಸಮಾನವಾದ ಮಹಾ ಜ್ವಾಲೆಯಲ್ಲಿ ಬಿದ್ದು ಬೇಗನೆ ಸುಟ್ಟು ಬೂದಿಯಾಗಿ ಹೋಗಲಿ,, ಎಂಬುದಾಗಿ ಶ್ರೀ ಪಂಡಿತಾರಾಧ್ಯಸ್ವಾಮಿಯು ದೊರೆಗೆ ಶಾಪವನ್ನು ಕೊಟ್ಟು ||೨೬|| ಬಳಿಕ ಶ್ರೀ ಲಿಂಗೋದ್ಭವಸ್ವಾಮಿಗೆ ಹಿಂದೆ ಕಿತ್ತಿದ್ದ ತನ್ನ ನಾಲ್ಕು ಕಣ್ಣುಗಳನ್ನೂ ನಿಶ್ಚಲಮನಸ್ಕನಾಗಿ ಸಮರ್ಪಿಸಿದನು ||೨೭|| ಪರಶಿವನಾದರೊ ಆ ನಾಲ್ಕು ಕಣ್ಣುಗಳಲ್ಲಿ ಮೂರನ್ನು ತನ್ನ ಮೂರು ಕಣ್ಣುಗಳಲ್ಲೂ, ವಿಷ್ಣುವಿನಿಂದ ಅರ್ಪಿಸಲ್ಪಟ್ಟು ತನ್ನ ಎಡಗಡೆಯ ಪಾದದಲ್ಲಿ ಒಪ್ಪುತ್ತಿರುವ ಕಣ್ಣಿನ ಜತೆಗೆ ಬಲಗಡೆಯ ಪಾದದಲ್ಲಿ ಪಂಡಿತಾರಾಧ್ಯನ

ಹಾಯ್ಯಕ್ಲೃಪ್ತಯೆ ||೨೮|| ದಕ್ಷಿಣೇಚರಣೇರಮ್ಯೇ ಧಾರಣಾವಸರೇಮುದಾ | ಪಂಡಿತೇಸ್ಸ್ರಸ್ಯಸದಯಾಂ ದೃಷ್ಟಿಂ ಸಜ್ಜನರಕ್ಷಿಣೀಂ ||೨೯|| ಐಶ್ವರ್ಯದೃಷ್ಟಿಂಸದ್ಭಕ್ತಿವಿಸ್ತಾರಕರಣೋದ್ಯತಾಂ | ಅತಿಕ್ರೋಧೇನಪಶ್ಯನ್ತೀ ಮುಗ್ರದೃಷ್ಟಿಂನ್ನೃಪಾಧಮಂ |೩೦|| ಭಕ್ತಿದೃಷ್ಟಿಂಚ ಶರಣಾನ್ವೀಕ್ಷಯನ್ತೀಮನುಕ್ಷಣಂ | ಚನ್ದ್ರಸೂರ್ಯಾಗ್ನಿನೇತ್ರೇಷು ದಕ್ಷಿಣಾಂಘ್ರಾಧರನ್ನಿವ ||೩೧|| ಅಂಗೀಚಕಾರಪರಯಾಪ್ರೀತ್ಯಾಪುರನಿಷೂದನಃ | ತತಶ್ಶ್ರೀಪಂಡಿತಾರಾಧ್ಯಸ್ಸಭಾರ್ಯಾಸುತಬಾನ್ಧವಃ ||೩೨|| ಸಂಪ್ರತಸ್ಥೇಽಮರಾರಾಮಂ ಶಿಷ್ಯೈರ್ಭಕ್ತೈಸ್ಸಹದ್ರುತಂ ||

ಇತಿ........ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಮಹಿಮಪ್ರಕರಣೇ ತತ್ಪಂಡಿತಾರಾಧ್ಯ ದೇವಕೃತ ವೆಲನಾಡ ಚೋಳನೃಪಶಾಪ ತದ್ದೇಶಪರಿತ್ಯಾಗಕಥನಂನಾಮ ಷಷ್ಠೋಽಧ್ಯಾಯಃ.

---

ನಾಲ್ಕನೆ ಮತ್ತೊಂದು ಕಣ್ಣನ್ನೂ ಸಂತೋಷದಿಂದ ಅಳವಡಿಸಿಕೊಳ್ಳುವಾಗ– ಸತ್ಪುರುಷರನ್ನು ಸಂರಕ್ಷಣೆ ಮಾಡುತ್ತಿದ್ದ ಪಂಡಿತಾರಾಧ್ಯನ ದಯಾದೃಷ್ಟಿಯನ್ನು ಶಿವನು ತನ್ನ ಎಡಗಡೆಯ ಚಂದ್ರನೇತ್ರದಲ್ಲೂ, ಸದ್ಭಕ್ತಿ ಪ್ರಸಾರ ಮಾಡುವಲ್ಲಿ ಉದ್ಯುಕ್ತವಾಗಿದ್ದ ಪಂಡಿತಾರಾಧ್ಯನ ಐಶ್ವರ್ಯ ದೃಷ್ಟಿಯನ್ನು ತನ್ನ ಬಲಗಡೆಯ ಸೂರ್ಯನೇತ್ರದಲ್ಲೂ, ನೀಚನಾದ ಚೋಳಭೂಪತಿಯನ್ನು ಅತ್ಯಂತ ಕೋಪದಿಂದ ನೋಡುತ್ತಿದ್ದ ಪಂಡಿತಾರಾಧ್ಯನ ಉಗ್ರದೃಷ್ಟಿಯನ್ನು ತನ್ನ ಹಣೆಯ ಅಗ್ನಿನೇತ್ರದಲ್ಲೂ, ಪ್ರತಿಕ್ಷಣದಲ್ಲೂ ಶಿವಶರಣರನ್ನು ಶ್ರದ್ಧೆಯಿಂದ ನೋಡುತ್ತಿದ್ದ ಪಂಡಿತಾರಾಧ್ಯನ ಭಕ್ತಿನೇತ್ರವನ್ನು ತನ್ನ ಬಲಗಡೆಯ ಪಾದದಲ್ಲೂ ಧರಿಸಿಕೊಳ್ಳುವವನಹಾಗೆ, ಪರಶಿವನು ಅತ್ಯಂತ ಪ್ರೀತಿಯಿಂದ ಆ ನಾಲ್ಕು ಕಣ್ಣುಗಳನ್ನೂ ತಾನು ಇಂಬಿಟ್ಟುಕೊಂಡನು ||೩೧|| ಬಳಕ ಶ್ರೀ ಪಂಡಿತಾರಾಧ್ಯನು ಪತ್ನೀ ಪುತ್ರ ಬಂಧುಜನ ಸಮೇತನಾಗಿ, ಶಿಷ್ಯಸಮೂಹದೊಡನೆಯೂ, ಭಕ್ತಜನರೊಡನೆಯೂ ಕೂಡಿ ಚೋಳನದೇಶವನ್ನು ಬಿಟ್ಟು ಬೇಗನೆ ಅಮರಾರಾಮ ಪಟ್ಟಣವನ್ನು ಕುರಿತು ತೆರಳಿದನು. ||೩೨||

ಎಂಬಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಸ್. ಆರ್. ಕರಿಬಸವಶಾಸ್ತ್ರಿ ರಚಿತವಾದ ''ಭಾವಮಂಜರಿ'' ಎಂಬ ಕನ್ನಡ ಟಿಪ್ಪಣದಲ್ಲಿ ಮಹಿಮಪ್ರಕರಣದೊಳಗೆ ಪಂಡಿತಾರಾಧ್ಯನು ವೆಲನಾಡು ಚೋಳನಿಗೆ ಶಾಪವನ್ನು ಕೊಟ್ಟು ಅವನ ದೇಶವನ್ನು ಬಿಟ್ಟು ಹೊರಟ ಕಥೆಯನ್ನು ನಿರೂಪಿಸುವ ೬ನೆ ಅಧ್ಯಾಯವು ಮುಗಿದುದು.

---

# ಅಥ ಸಪ್ತಮೋಽಧ್ಯಾಯಃ.

## ವೆಲ್ನಾಡುಚೋಳ ವಂಶಕ್ಷಯಕಥನಂ.

ತತೋ ದೃಷ್ಟ್ವಾ ಮಹೋತ್ಪಾತಾಃ ಪುರೇ ಚೋಳಮಹೀಪತೇಃ | ನಗರಂ ಶೂನ್ಯತಾಂ ಗನ್ತುಮುಪಕ್ರಾನ್ತಂ ನರಾಧಿಪಃ ||೧|| ವಿಶಿರಸ್ಕಾಂ ತನುಚ್ಛಾಯಾ ಮಪಶ್ಯತ್ತದನನ್ತರಂ | ಸ್ವಪ್ನೇ ವಿಲೋಕಯಾಮಾಸ ಕೃತಾನ್ತಂಚಾತಿಭೀಷಣಂ ||೨|| ಅಕುರ್ವನ್ನಿರ್ಘಮಾರಾವಂ ಸಾರಮೇಯಾ ದಿವಾನಿಶಂ | ದಿಶಸ್ತಮೋವೃತಾ ಜಾತಾ ಸ್ತಥಾ ವಾಲೇಷು ವಾಜಿನಾಂ ||೩|| ಪೇತು ಸ್ಸ್ಫುಲಿಂಗಾ ಧರಣೀ ರ್ದಹ್ಯಮಾನಾಽಭವತ್ತದಾ | ಜನಯನ್ತೋ ವ್ಯೋಮಪಾತಶಂಕಾಂ ವ್ಯಾಪ್ತಾ ದಿಕೋಂಽಬುದಾಃ ||೪|| ದಿವಸೇ ತಾರಕಾ ದೃಷ್ಟಾಃ ಪೂರ್ಣೋ ಧೂಮಸ್ಸಮಂತತಃ | ಕ್ರಿಮಿರಾಶಿ ರಭೂದನ್ನಂ ಭೂಕಂಪ ಸ್ಸಮಜಾಯತ ||೫|| ಕಾಕಜಂಬುಕಘೂಕಾಶ್ಚ ರಾತ್ರೌ ಘೋಷಂ ಪ್ರಚಕ್ರಿರೇ | ರಜೋಭಿ ರಾವೃತೋ ವಾಯು ರ್ವವೌ ಪಶುಕದಂಬಕಂ ||೬|| ಉನ್ನಮಯ್ಯ ಮುಖಾನ್ಯುಚ್ಚೈ ರ್ಧ್ವಾನಂ ಚಕ್ರೇ ಸಮಂತತಃ | ಚಂದ್ರಾರ್ಕಪರಿವೇಷೌಚ ಸಮುದ್ಭೂತೌ ಮುಹುರ್ಮುಹುಃ ||೭|| ಅಕಸ್ಮಾ ನ್ಮಂತ್ರಿಪುತ್ರಾಪ್ತಭಟವೈರಂ ಮಹೀ

---

# ೭ನೆ ಅಧ್ಯಾಯವು.

## ಪಂಡಿತಾರಾಧ್ಯ ಶಾಪದಿಂದ ವೆಲ್ನಾಡಚೋಳನ ವಂಶಕ್ಷಯವಾದ ಕಥೆ.

ಬಳಿಕ ಚೋಳರಾಜನ ಪಟ್ಟಣದಲ್ಲಿ ದೊಡ್ಡ ಉತ್ಪಾತಗಳು ಕಾಣಿಸಿಕೊಂಡುವು. ಪಟ್ಟಣವು ಬರಿದಾಗಲಾರಂಭಿಸಿತು. ದೊರೆಗೆ ತನ್ನ ನೆಳಲು ರುಂಡವಿಲ್ಲದೆ ಕಾಣಿಸಿಕೊಂಡಿತು. ತನ್ನ ಸ್ವಪ್ನದಲ್ಲಿ ಭಯಂಕರನಾದ ಯಮನನ್ನು ಕಂಡನು. ||೨|| ಹಗಲೂ ರಾತ್ರಿಯೂ ನಾಯಿಗಳು ಗೋಳಿಟ್ಟುವು. ದಿಕ್ಕುಗಳು ಕತ್ತಲೆಗವಿದುವು.ಕುದುರೆಗಳ ಬಾಲಗಳಲ್ಲಿ ಬೆಂಕಿಕಿಡಿಗಳು ಉದುರಿದುವು. ಭೂಮಿಯು ಉರಿದುಹೋಗುವಂತಾಯಿತು.ಮೋಡಗಳು ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿಕೊಂಡು ಆಕಾಶವೇ ಕಳಚಿ ಬೀಳುವುದೋ ಎಂಬ ಶಂಕೆಯನ್ನು ಹುಟ್ಟಿಸಿದುವು. ಎಲ್ಲ ಕಡೆಯೂ ಹೊಗೆ ತುಂಬಿತು. ಹಗಲು ನಕ್ಷತ್ರಗಳು ಕಾಣಿಸಿಕೊಂಡುವು. ತಿನ್ನುವ ಅನ್ನವು ಹುಳುಗಳಾದುವು. ಭೂಕಂಪನವಾಯಿತು. ||೫|| ಕಾಗೆ ನರಿ ಗೂಬೆಗಳೆಲ್ಲಾ ರಾತ್ರಿಹೊತ್ತು ಕೂಗಲುಪಕ್ರಮಿಸಿದುವು. ಗಾಳಿಯು ದೂಳಿ ಬೆರೆದು ಬೀಸಿತು. ದನಕರುಗಳು ತಮ್ಮ ಮುಸುಡಿಗಳನ್ನು ಮೇಲಕ್ಕೆತ್ತಿ ಗಟ್ಟಿಯಾಗಿ ಅರಚಿಕೊಂಡುವು. ಬಾರಿಬಾರಿಗೂ ಚಂದ್ರ ಸೂರ್ಯರಿಗೆ ಗುಡಿ ಕಟ್ಟಿತು. ||೭|| ದೊರೆಗೆ ಅಕಸ್ಮಾತ್ತಾಗಿ ಮಂತ್ರಿಯೊಡನೆಯೂ, ಮಕ್ಕಳೊಡನೆಯೂ, ಮಿತ್ರರೊಡನೆಯೂ, ಭೃತ್ಯರೊಡನೆಯೂ ದ್ವೇಷವು ಪ್ರಾಪ್ತವಾಯಿತು. ಪಟ್ಟಣದ ಎಲ್ಲ ಕಡೆ

ಪತೇಃ | ಅಭೂ ತ್ರ್ಯವಿಷ್ಟಾ ಸಗರಂ ಮಹಾಮಾರೀ ಸಮಂತತಃ ||೮|| ಪುಸರ ನ್ಯೇ ಮಹೋತ್ಪಾತಾ ಸ್ಸಮುದ್ಭೂತಾ ಸ್ಸಹಸ್ರಶಃ | ತತಃ ಪುರಜನಾ ಸ್ಸರ್ವೇ ಭೂಮೇ ರಾಪತ್ಸಮಾಗತಾ ||೯|| ಕಿಂವಾ ಮಾಹೇಶ್ವರಕ್ಷೋಭೋ ವೃಥಾ ಯಾತಿ ಮಹೀತಲೇ | ಮೋಘೋ ಭವೇತ್ಪಂಡಿತೇನ್ದ್ರಶಾಪಃ ಕಿಮತಿದಾರು ಣಃ ||೧೦|| ಹ್ಯಸ್ತಃ ಪೂರ್ವದಿನೇಽವಾದೀ ನ್ಮಲ್ಲಿಕಾರ್ಜುನದೇಶಿಕಃ | ಉತ್ಪಾ ತಾ ಹ್ಯಸ್ಸಮುದ್ಭೂತಾಃ ಗೋತ್ರದ್ವೇಷೋಽದ್ಯ ಸಂಗತಃ ||೧೧|| ಇತಃಪರಂ ಭವೇತ್ಕಾವಾ ಹಾನಿ ಶ್ಶೋಲಮಹೀಪತೇಃ | ಅಚಿರಾ ದ್ಭಾವಿಸದ್ಭಕ್ತವಿರೋ ಧಸ್ಯ ಫಲಂ ಧ್ರುವಂ ||೧೨|| ಅವಶ್ಯಂ ಕಲಹೋ ಭಾವೀ ಪ್ರಜಾನಾಂ ಪ್ರಳ ಯೋಪಿವಾ | ಅಸ್ಮಾಕ ಮೇತನ್ನಗರವಾಸೋ ದುರ್ನೀತಿ ರಗ್ರತಃ ||೧೩|| ಇ ತ್ಯಾಲೋಚ್ಯಾನ್ತಿಕಗ್ರಾಮಾ ನ್ಯಯುಃ ಕೇಚಿತ್ತಥಾ ಪರೇ | ಸ್ವೇಷ್ಟಪ್ರದೇಶಾ ನುದ್ದಿಶ್ಯ ನಿರ್ಜಗ್ಮುಃ ಪರಿಶಂಕಿತಾಃ || ೧೪ || ಕದಾಚಿದಥ ಭೂಪಾಲೇ ನಿದ್ರಾ ಮುದ್ರಿತಲೋಚನೇ | ಭಸ್ಮಾವಲಿಪ್ತಸರ್ವಾಂಗಂ ಕಪಾಲಾವಲಿಮಂಡಿತಂ ||೧೫|| ಆಲಂಬಿತಜಟಾಜಾಲಂ ಘನಕಂಕಾಲಧಾರಿಣಂ | ಕಟೀತಟನಿಬದ್ಧೋರುಘಂಟಿ ಕಾವಿಕಟಧ್ವನೌ ||೧೬|| ಭರಿತೇ ದಿಕ್ಷು ಕೋಪಾಗ್ನಿ ಜ್ವಾಲಾಭೀಲವಿಲೋಚ

---

ಯಲ್ಲೂ ಮಹಾ ಮಾರೀರೋಗವು ವ್ಯಾಪಿಸಿತು ||೮|| ಹೀಗೆಯೇ ಇನ್ನೂ ಬೇರೆಬೇರೆ ತರಹ ಅನೇಕ ಹೇಷ್ಯಗಳು ಉಂಟಾದುವು. ಆಗ ಪುರಜನರೆಲ್ಲರೂ— "ನಮ್ಮ ದೇಶಕ್ಕೆ ವಿಪತ್ತು ಬಂ ದಿತು ! ಭೂಮಿಯಲ್ಲಿ ಮಾಹೇಶ್ವರರಿಗೆ ಉಂಟುಮಾಡಿದ ಭಂಗವು ತಕ್ಕ ಫಲವನ್ನು ಕೊಡದೆ ಹೋದೀತೆ? ಅತ್ಯಂತ ಭಯಂಕರವಾದ ಪಂಡಿತಾರಾಧ್ಯ ಶಾಪವು ವ್ಯರ್ಥವಾದೀತೆ? ||೧೦|| ಮೊನ್ನೆಯ ದಿನ ಪಂಡಿತಾಧ್ಯ ಗುರೂತ್ತಮನು ಶಾಪ ವಚನವನ್ನು ನುಡಿದನು. ನಿನ್ನೆಯದಿನ ಉತ್ಪಾತಗಳು ಕಾಣಿಸಿಕೊಂಡುವು. ಈದಿನ ದೊರೆಗೆ ತನ್ನ ಆಪ್ತಬಂಧುವರ್ಗದೊಡನೆ ದ್ವೇಷವು ಹುಟ್ಟಿತು ||೧೧|| ಇದರ ಮೇಲೆ ದೊರೆಗೆ ಇನ್ನು ಯಾವ ಹಾನಿಯು ಪಟ್ಟುವುದಕ್ಕಿದೆಯೋ! ಸದ್ಭಕ್ತರಲ್ಲಿ ದ್ವೇಷವನ್ನು ಕಟ್ಟಿಕೊಂಡುದಕ್ಕೆ ಫಲವು ಬೇಗನೆ ಆಗತಕ್ಕುದೇ ನಿಜ. ||೧೨|| ಪರಸ್ಪರ ಕಲಹವೂ, ಪ್ರಜಾನಾಶವೂ ಕೂಡ ಸಂಭವಿಸತಕ್ಕುವೇ. ಅದುಕಾರಣ ಮುಂದೆ ಈ ನಗರದಲ್ಲಿರುವುದು ನ್ಯಾಯವಲ್ಲ" ಎಂಬುದಾಗಿ ಆಲೋಚಿಸಿಕೊಂಡು, ಕೆಲವರು ಸಮೀಪದ ಲ್ಲಿದ್ದ ಗ್ರಾಮಗಳಿಗೆ ಹೊರಟುಹೋದರು. ಇನ್ನು ಕೆಲವರು ಭಯಪಟ್ಟು ತಮಗೆ ಇಷ್ಟವಾದ ಸ್ಥಲಗಳಿಗೆ ಹೊರಟುಹೋದರು. ||೧೪|| ಬಳಿಕ ಒಂದಾನೊಂದುದಿನ ದೊರೆಯು ನಿದ್ರೆಮಾ ಡುತ್ತಿದ್ದಾಗ ಸ್ವಪ್ನದಲ್ಲಿ ಒಬ್ಬಾನೊಬ್ಬ ಕಾಪಾಲಿ ಯೋಗಿಯು ದೇಹದಲ್ಲೆಲ್ಲಾ ಭಸ್ಮವನ್ನು ಹೂಳಿಸಿಕೊಂಡು, ರುಂಡಮಾಲೆಯನ್ನು ಧರಿಸಿ, ನಿಡುಜಡೆಗಳನ್ನು ಬಿಟ್ಟು, ಮೂಳೆಗಳ ಮಾ ಲೆಯನ್ನು ಧರಿಸಿಕೊಂಡು, ನಡುವಿನಲ್ಲಿ ಕಟ್ಟಿಕೊಂಡಿರುವ ಘಂಟೆಗಳ ಧ್ವನಿಯು ದಿಕ್ಕುಗಳನ್ನೆ

ಸಂ | ಉರ ಸ್ಸ್ವಮಂಘ್ರಿಣಾಕ್ರಮ್ಯ ತ್ರಿಶೂಲಾಗ್ರೇಣ ಭೀಕರಂ ||೧೭|| ವಿಧ್ವಸ್ತಂ ಸಹಸಾ ಸ್ವಪ್ನೇ ದೃಷ್ಟ್ವಾ ಕಂಜನ ತಾಪಸಂ | ಹಾಹಾರವಾಕುಲೇ ಜಾತೇ ಸಮುದ್ಬುಧ್ಯ ತದಂಗನಾ ||೧೮|| ಭ್ರಾನ್ತಾ ದಿಶಸ್ಸಮುದ್ವೀಕ್ಷ್ಯ ವಿಭೀತಾ ಕಂಪಿತಾಽಭವತ್ | ತಸ್ಯೈ ನೃಪೇ ಸ್ವಪ್ನವೃತ್ತಂ ಕಥಯತ್ಯೇವ ತತ್ಕ್ಷಣೇ || ಸತ್ಯಂ ಜಾತಮಿವ ಸ್ವಪ್ನವೃತ್ತಂ ಸ್ವಪ್ನೇ ತ್ರಿಶೂಲಿನಃ | ತ್ರಿಶೂಲದರ್ಶನಾದೇವ ನಿಖಾತಂ ತದುರಸ್ಸ್ಥಲಂ ||೨೦|| ಇತೀವ ನೃಪತೇ ರ್ಜಾತ ಸ್ತ್ರ್ಯಗ್ರೋ ವಕ್ಷಸಿ ದುರ್ವ್ರಣಃ| ನೃಪೋ ವ್ರಣಂ ತಮುದ್ವೀಕ್ಷ್ಯ ಪಾಪೀ ಶಂಕಾಕುಲೋಽಭವತ್|| ಅಸ್ಯದುಷ್ಕೀರ್ತಿಕಾನ್ತಾಯಾ ವಕ್ಷೋಜತ್ರಿತಯಂ ಯಥಾ | ಕೋಪಗ್ರಂಥಿಮದಗ್ರಂಥಿದುಷ್ಕೃತಗ್ರಂಥಯೋ ಯಥಾ ||೨೨|| ವಕ್ಷಸಿ ಕ್ಷಿತಿಪಾಲಸ್ಯ ವವೃಧೇ ತ್ರಿಮುಖೋ ವ್ರಣಃ | ಬೌದ್ಧಾ ಜೈನಾ ಮಂತ್ರಸಿದ್ಧಾಃ ಪಂಡಿತಾ ವೈದ್ಯಪುಂಗವಾಃ ||೨೩|| ಸ್ವಸ್ವಮಂತ್ರೌಷಧೈ ಶ್ಶಾನ್ತಿ ಮದೃಷ್ಟ್ವಾ ನಿರ್ಯಯು ಸ್ತದಾ | ಅಸಾಧ್ಯೋಽಯಂ ವ್ರಣೋ ನೂನಂ * ವೈದ್ಯಾದೀನಾಮಿತಿಸ್ಫುಟಂ ||೨೪|| ನಿಶ್ಚಿತ್ಯಾಪ್ತತಮಾ ರಾಜಬಾಂಧವಾ ಸ್ತಮಥಾಬ್ರುವನ್ | ರಾಜನ್ ವ್ರಣೋಽಯಂ

---

ಲ್ಲಾ ವ್ಯಾಪಿಸುತ್ತಿರಲಾಗಿ, ಕಣ್ಣುಗಳಲ್ಲಿ ಕಿಡಿಗಳನ್ನು ಸೂಸುತ್ತ ಬಂದು, ತನ್ನ (ದೊರೆಯ) ಎದೆಯಮೇಲೇರಿ ತ್ರಿಶೂಲದ ತುದಿಯಿಂದ ಭಯಂಕರವಾಗಿ ಇರಿಯುತ್ತಿರುವುದನ್ನು ಕಂಡು, ಥಟ್ಟನೆ ಬೆದರಿ ಕೂಗಿಕೊಂಡನು. ಆ ಕೂಗಿಗೆ ದೊರೆಯ ಹೆಂಡತಿಯು ಎಚ್ಚೆತ್ತು ||೧೮|| ಎಲ್ಲ ಕಡೆಗೂ ನೋಡಿ, ಬೆರಗಾಗಿ ಭಯಪಟ್ಟು ಗಡಗಡನೆ ನಡುಗಿದಳು. ಚೋಳರಾಜನು ತನ್ನ ಸ್ವಪ್ನದ ವೃತ್ತಾಂತವನ್ನೆಲ್ಲಾ ಅವಳಿಗೆ ಹೇಳುತ್ತಿರುವಷ್ಟರಲ್ಲಿಯೇ ಸ್ವಪ್ನದಲ್ಲಿ ಕಂಡುದೆಲ್ಲಾ ನಿಜವೇ ಆಯಿತೋ ಎಂಬಂತೆಯೂ, ಸ್ವಪ್ನದಲ್ಲಿ ಈಶ್ವರನ ತ್ರಿಶೂಲವನ್ನು ಕಂಡುದರಿಂದ, ತನ್ನ ಎದೆಯಮೇಲೆ ಆ ತ್ರಿಶೂಲವು ನಿಜವಾಗಿ ನೆಡಲ್ಪಟ್ಟಿತೋ ಎಂಬಂತೆಯೂ ||೨೦|| ದೊರೆಯ ಎದೆಯಮೇಲೆ ಮೂರುಮೂತಿಗಳುಳ್ಳ ಭೀಕರವಾದ ಕೆಟ್ಟವ್ರಣವು ಮೂಡಿತು. ಪಾಪಿಯಾದ ಚೋಳರಾಜನು ಆ ವ್ರಣವನ್ನು ನೋಡಿ ದಿಗಿಲುಬಿದ್ದನು ||೨೧|| ಈ ವೆಲ್ಲಾದುಚೋಳನ ಅಪಕೀರ್ತಿಯೆಂಬ ಕಾಂತೆಗೆ ವಿಲಕ್ಷಣವಾಗಿ ಮೂಡಿರುವ ಮೂರು ಮೊಲೆಗಳೋ ಎಂಬಂತೆಯೂ ಅವನ ಕೋಪದ ಗಂಟೂ, ಗರ್ವದ ಗಂಟೂ, ಪಾಪದ ಗಂಟೂ ಸಹ ಹೀಗೆ ಮೂರು ಗ್ರಂಥಿಗಳಾಗಿ ಮೂಡಿಮವೋ ಎಂಬಂತೆಯೂ, ದೊರೆಯೆದೆಯಮೇಲೆ ಮೂರು ಮೂತಿಯುಳ್ಳ ದುರ್ವ್ರಣವು ಕಾಣಿಸಿಕೊಂಡು ಹಬ್ಬಿತು. ಮಂತ್ರತಂತ್ರಗಳನ್ನು ಬಲ್ಲ ಬೌದ್ಧರೂ ಜೈನರುಗಳೂ, ವೈದ್ಯ

---

* ಈ ಗುರ್ತಿನಿಂದಾಚೆಗೆ ಅಧ್ಯಾಯದ ಕಡೆಯವರೆಗೂ ಮೂಲಪ್ರತಿಯಲ್ಲಿ ಪಾಠವಾಗಿದ್ದುದರಿಂದ, ಪೂರ್ವಾಪರಾಭಿಪ್ರಾಯಕ್ಕೆ ಸರಿಯಾಗಿ ಕನ್ನಡದ ಪದ್ಯಗ್ರಂಥದ ಆಧಾರದಮೇಲೆ ಈ ಶ್ಲೋಕಗಳನ್ನು ನೂತನವಾಗಿ ರಚಿಸಿ ಸೇರಿಸಿದೆ.

ಭಿಷಜಾಮಸಾಧ್ಯ ಇತಿ ನಿಶ್ಚಿತಃ ||೨೬|| ವರಂಹಿ ದುರ್ಜನಸ್ನೇಹಾ ದ್ವಿರೋಧ ಸ್ಸಾಧುಭಿಸ್ಸಹ | ಇತಿ ಸತ್ಯಾಪಿ ಲೋಕೋಕ್ತಿರ್ವಿರೋಧಃ ಪ್ರಬಲೋಹ್ಯಸೌ || ಶಿವಸ್ಯ ವೈಭವಂ ಸಾಕ್ಷಾದ್ವಿಜ್ಞಾತವಾನಪಿ ದುರ್ಮತೇ | ಅಕಾರ್ಯಂ ಶಿವಭಕ್ತೇಷು ವಿರೋಧಂ ಕೃತವಾನಸಿ ||೨೭|| ಇತಃಪರಂವಾ ತ್ವಂರಾಜನ್ ಕುಬುದ್ಧಿಂ ತಾಂ ಪರಿತ್ಯಜ | ಪಂಡಿತಾರಾಧ್ಯಪಾದಾಬ್ಜಯುಗಳಂ ಶರಣಂ ವ್ರಜ ||೨೮|| ಪುರಾ ಸ್ಮದ್ವಂಶಸಂಜಾತಾ ರಾಜಾನಸ್ಸಕಲಾಅಪಿ | ಶಿವಪಾದಾಬ್ಜಸದ್ಭಕ್ತಿಭರಿತಾ ಪ್ರಥಿತಾ ಭುವಿ ||೨೯|| ತ್ವಮೇಕಸ್ತಾದೃಶೇ ವಂಶೇ ವೇದಮಾರ್ಗವಿರೋಧಿನಾಂ | ಶಿವಭಕ್ತಿವಿಹೀನಾನಾಂ ಬೌದ್ಧಾನಾಂ ಮತಮಾಶ್ರಿತಃ ||೩೦|| ಶಿವಭಕ್ತಾನ್ವಿನಿಂದ್ಯಾದ್ಯ ದ್ವೇಷಂಪ್ರಾಪ್ತವತಾ ತ್ವಯಾ | ಸದೃಶೀ ದುರವಸ್ಥೇಯಂ ನಿತರಾ ಮನುಭೂಯತೇ ||೩೧|| ಇತ್ಯಾಪ್ತೈರ್ಬಾಂಧವೈಃ ಪ್ರೋಕ್ತೋ ರಾಜಾ ನಿರ್ವಿಣ್ಣಮಾನಸಃ | ಆಪ್ತಾ ನಾನಾಯ್ಯ ಸಚಿವಾನ್ ಸದ್ಯೈನ್ಯಮಿದಮಬ್ರವೀತ್ ||೩೨|| ಸರ್ವೇಯೂಯೆ ಮಿತೋ ಗತ್ವಾ ಪಂಡಿತೇಶ್ವರಸನ್ನಿಧಿಂ | ಸಾಷ್ಟಾಂಗನತಿವಿಜ್ಞಪ್ತಿಂ ನಿವೇದಯತ ಮೇ ದ್ರುತಂ ||೩೩|| ಆನೀತಶ್ಚೇತ್ಪಂಡಿತೇಶೋ ಜೀವೇಯಂಹಿ ನಚಾನ್ಯಥಾ | ಇತಃಪರ ಮಹಂ ತಸ್ಯ ಶಿಷ್ಯಏವ ನಸಂಶಯಃ ||೩೪|| ಮದೀಯಂ ಸರ್ವಮೇವೇದಂ ರಾಜ್ಯಂ ತಸ್ಮೈ ದದಾಮ್ಯಹಂ | ಶಿವಂ ನಿರ್ವ್ಯಾಜಯಾ ಭಕ್ತ್ಯಾ ಪೂಜಯಾಮಿ ನಿರಂತರಂ ||೩೫|| ಏತತ್ಸರ್ವಂ ಸಶಪಥಂ ಪ್ರತಿಜಾನಾಮ್ಯಹಂ ಗುರೋ | ಏವಂ ಮದೀಯಾಂ ವಿಜ್ಞಪ್ತಿಂ ನಿವೇದ್ಯಾನಯತಾಚಿರಾ

---

ಶ್ರೇಷ್ಠರಾದ ಪಂಡಿತರುಗಳೂ ಬಂದು ನೋಡಿ ತಾವು ತಾವು ತಿಳಿದಿದ್ದ ಮಂತ್ರೌಷಧಾದಿಗಳನ್ನೆಲ್ಲಾ ಪ್ರಯೋಗಿಸಿ, ಗುಣಕಾಣದೆ ಹೊರಟುಹೋದರು. ಆಗ ದೊರೆಯ ಬಳಿಯಣ ಆಪ್ತಸ್ವಜನರು ರಾಜನನ್ನು ಕುರಿತು—"ಈ ವ್ರಣವು ನಿಜವಾಗಿಯೂ ವೈದ್ಯರುಗಳಿಗೆಲ್ಲಾ ಅಸಾಧ್ಯವೆಂದು ಸಿದ್ಧವಾಯಿತು. ದುರ್ಜನರ ಸ್ನೇಹಕ್ಕಿಂತಲೂ ಸಜ್ಜನರ ಹಗೆತನವೇ ಲೇಸೆಂಬ ಲೋಕೋಕ್ತಿಯಿರುವುದು. ಆದರೆ ನೀನು ಮಹಾತ್ಮರಿಗೆ ಮಹಾಪರಾಧವನ್ನೆಸಗಿದೆ. ಶಿವಮಹಿಮೆಯನ್ನು ಪ್ರತ್ಯಕ್ಷವಾಗಿ ತಿಳಿದೂ ಶಿವಭಕ್ತರೊಡನೆ ವಿರೋಧವನ್ನು ಮಾಡಿಕೊಂಡೆ. ನಿನ್ನ ಕುಬುದ್ಧಿಯನ್ನು ಬಿಟ್ಟು ಇನ್ನು ಮೇಲಾದರೂ ಪಂಡಿತಾರಾಧ್ಯನ ಪಾದಕಮಲವನ್ನು ಮರೆಹುಗು. ಹಿಂದೆ ನಮ್ಮ ವಂಶದಲ್ಲಿ ಹುಟ್ಟಿದ್ದ ರಾಜರೆಲ್ಲಾ ಪರಮಶಿವಭಕ್ತರು. ನೀನೊಬ್ಬನುಮಾತ್ರ ಅಜ್ಞಾನದಿಂದ ವೇದವಿರುದ್ಧವೂ, ಶಿವಭಕ್ತಿದೂರವೂ ಆದ ಬೌದ್ಧಮತವನ್ನು ಅಂಗೀಕರಿಸಿ, ಶಿವಭಕ್ತರನ್ನು ನಿಂದಿಸಿ, ಹಗೆತನ ಮಾಡಿಕೊಂಡುದಕ್ಕೆ ಇಂಥ ಅವಸ್ಥೆಯು ನಿನಗೆ ಪ್ರಾಪ್ತವಾಯಿತು" ಎಂದು ಹೇಳಲಾಗಿ, ದೊರೆಯು ಅದನ್ನು ಕೇಳಿ, ತನ್ನ ನಂಬುಗೆಯ ಮಂತ್ರಿಗಳನ್ನು ಕರೆಯಿಸಿ, "ನೀವೆಲ್ಲರೂ ಈಗಲೇ ಹೋಗಿ ಆ ಪಂಡಿತಾರಾಧ್ಯರನ್ನು ಕರೆದುಕೊಂಡು ಬಂದರೆ ನಾನು ಭಕ್ತಿಯಿಂದ ಅವರ

ತ್ ‖೩೬‖ ಇತಿ ವೆಲ್ನಾಡುಚೋಳೇನ ಪ್ರಹಾರ್ಷಿ ಮನುಪಿಷ್ಟುನಾ | ಸಂಚೋದಿ ತಾ ಮಂತ್ರಿಣಸ್ತೇ ಪಂಡಿತೇಶಾಂತಿಕಂ ಯಯುಃ ‖೩೭‖ ಭಕ್ತಿಪೂರ್ವಂ ವಿನೀ ತಾಸ್ತೇ ಸಾಷ್ಟಾಂಗಂ ಪ್ರಣಿಪತ್ಯ ತಂ | ನಿಬದ್ಧಾಂಜಲಯ ಸ್ಸರ್ವಂ ರಾಜವಾ ಕ್ಯಂ ನ್ಯವೇದಯರ್ ‖೩೮‖ ಭೋಃಪಂಡಿತಾರಾಧ್ಯಗುರೋ ಪ್ರಣತಾರ್ತಿವಿನಾ ಶಕ | ಶ್ರೂಯತಾಂ ವಾಕ್ಯ ಮಸ್ಮಾಕಂ ಕರುಣಾವರುಣಾಲಯ ‖೩೯‖ ಪಾ ಪಾತ್ಮನಾ ಶಿವದ್ರೋಹಕಾರಿಣಾ ಮೂಢಚೇತಸಾ | ವೆಲ್ನಾಡುಚೋಳರಾಜೇನ ಕಾರ್ಯಾಕಾರ್ಯಮಜಾನತಾ ‖೪೦‖ ಕೃತಾಃ ಪರಶ್ಶತಾಃ ಕ್ರೂರಾ ಅಪರಾಧಾ ವಿಶೇಷತಃ | ಶರಣಾಗತಸಂತ್ರಾಣಬಿರುದಾಂಕ ದಯಾನಿಧೇ ‖೪೧‖ ಲೋಕವಿ ಖ್ಯಾತಸತ್ಕೀರ್ತೇ ಶುದ್ಧಚಾರಿತ್ರಶೋಭಿತ | ತಸ್ಯಾಪರಾಧಾ ನಖಿಲಾನ್ ಕ್ಷಮ ಸ್ವ ದಯಯಾ ಗುರೋ ‖೪೨‖ ತ್ವಮೇವ ಗತಿರೇತಸ್ಯ ತ್ವಮೇವಕುಲದೈವತಂ| ತ್ವಮೇವ ಶರಣಂ ತಸ್ಯ ಗತಿರ್ನಾನ್ಯಾ ತ್ವಯಾವಿನಾ ‖೪೩‖ ಸ್ವರಾಜ್ಯಂ ಸಕ ಲಂ ತುಭ್ಯಂ ಪ್ರದಾತುಂ ತ್ವದ್ದಯೇಪ್ಸಯಾ | ಆಕಾಂಕ್ಷತೇ ತಸ್ಯ ವಾಂಛಾಂ ಸಫಲೀಕುರು ಸದ್ಗುರೋ ‖೪೪‖ ಏನಂ ಮೃತ್ಯುಮುಖಾತ್ತ್ರಾತು ಮನುಗೃಹ್ಣಾ ತು ತಂ ಭವಾನ್ | ಶರೀರತ್ಯಾಗಪರ್ಯಂತಂ ತ್ವಚ್ಛಿಷ್ಯತ್ವ ಮಪೇಕ್ಷತೇ ‖೪೫‖ ವೆಲ್ನಾಡುಚೋಳಾದ್ರೋಗಾರ್ತಾತ್ತ್ರಾತ್ವಮಾನೇತು ಮಿಹಾಗತಾನ್ | ಯಾಚ ಮಾನಾ ನಿಮಾ ನಸ್ಮಾನ್ ಕೃತಾರ್ಥಾನ್ ಕುರು ಸತ್ವರಂ ‖೪೬‖ ಅಸ್ಮಾಕಂ ಪ್ರಾ ರ್ಥನಾ ಮೇನಾ ಮಂಗೀಕೃತ್ಯ ದಯಾನಿಧೇ | ಪಾದಪದ್ಮಪರಾಗೇಣ ಪವಿತ್ರೀ ಕುರು ತದ್ಗೃಹಂ ‖೪೭‖ ಶಿರೋನ್ಯಸ್ತಾಂಜಲಿಪುಟೈಃ ಕೃತಸಾಷ್ಟಾಂಗವಂದ

---

ಶಿಷ್ಯನಾಗುತ್ತೇನೆ. ನನ್ನ ರಾಜ್ಯವನ್ನೆಲ್ಲಾ ಅವರಿಗೆ ಸಮರ್ಪಿಸುತ್ತೇನೆ. ಮತ್ತು ಇತಃಪರಃ ಶಿವ ಭಕ್ತನಾಗಿ ಶಿವಾರಾಧನೆಯನ್ನು ಮಾಡುತ್ತೇನೆ. ಇದು ಸತ್ಯ" ಎಂದು ಹೇಳಿ ಕಳುಹಿಸಿಕೊ ಟ್ಟನು. ಅವರೆಲ್ಲರೂ ಪಂಡಿತಾರಾಧ್ಯರಿದ್ದ ಬಳಿಗೆ ಬೇಗನೆ ಹೋಗಿ ಭಕ್ತಿಯಿಂದ ಅವರ ಪಾದ ಕ್ಕೆ ನಮಸ್ಕರಿಸಿ ಎಲೈ ಶರಣಾಗತಾರ್ತಿಹರನೆ! ಶಿವದ್ರೋಹಿಯಾದ ವೆಲ್ನಾಡ ಚೋಳರಾಜನು ತಮಗೆ ಶತಾಪರಾಧವನ್ನು ಮಾಡಿದನು. ಅವನು ಪಾಪಿಷ್ಠನು, ಮರುಳನು, ಧೂರ್ತನು, ಅಜ್ಞ ನು. ಶರಣಾಗತ ಪರಿಪಾಲಕ ಬಿರುದನೂ, ಕೃಪಾಶರಧಿಯೂ, ನಿರ್ಮಲಚಿತ್ತನೂ, ವಿಖ್ಯಾತ ಯಶಸ್ಕನೂ ಆದ ನೀನು ಅವನ ತಪ್ಪನ್ನು ಕ್ಷಮಿಸಿ, ಅವನನ್ನು ಮೃತ್ಯುಮುಖದಿಂದ ಉಳುಹಿ ಕಾಪಾಡಬೇಕು. ಈಗ ಅವನು ನಿಮ್ಮ ಶಿಷ್ಯನಾಗಲಿರುವನು. ತನ್ನ ರಾಜ್ಯವನ್ನು ನಿಮಗೆ ಸಮ ರ್ಪಿಸಬೇಕೆಂದು ಸಂಕಲ್ಪಿಸಿರುವನು. ನಿಮ್ಮನ್ನು ಕರೆತರುವುದಕ್ಕಾಗಿಯೇ ನಮ್ಮನ್ನು ಇಲ್ಲಿಗೆ ಕಳುಹಿಸಿರುವನು. ನಮ್ಮ ಬಿನ್ನಹವನ್ನು ಲಾಲಿಸಿ ಕೃಪೆಯಿಟ್ಟು ರಾಜನ ಬಳಿಗೆ ದಯಮಾಡಿಸ ಬೇಕು" ಎಂದು ವಿಜ್ಞಾಪಿಸಿ ಮತ್ತೆ ಅಸ್ತಮಿಸಿದರು. ಪಂಡಿತಾರಾಧ್ಯನು ಅವರ ಮಾತನ್ನು ಕೇಳಿ

ನ್ಯೈಃ । ಮಂತ್ರಿಭಿ ಸ್ತೈಸ್ಸ್ವವಿನಯಂ ವಿಜ್ಞಪ್ತಃ ಪಂಡಿತೇಶ್ವರಃ ॥೪೭॥ ಕರ್ಣಾ ಪಿಧಾಯ ಪಾಣಿಭ್ಯಾಂ ಶಂಕರಂ ಹೃದಿ ಸಂಸ್ಮರನ್ । ಶಂಭೋ ಶಿವಮಹಾದೇವ ಹರ ಚಂದ್ರಾರ್ಧಶೇಖರ ॥೪೮॥ ಮಹಾಪಾತಕಿನ ಶ್ಚೋಳಹತಕಸ್ಯಾಸ್ಯ ಮಂತ್ರಿಣಾಂ । ವಚನಂ ಕಿಮುಪಾದೇಯಂ ಶ್ರೋತವ್ಯಂವಾ ಕಿಮೀದೃಶಂ ॥೪೯॥ ಮಹಾಪಾತಕಿಸಂಸರ್ಗಾತ್ಪಾಪಿನಾ ಮಿಹ ಮಂತ್ರಿಣಾಂ । ವದನಾ ನ್ಯಪಿವಾಃ ಸ್ಮಾಭಿ ರ್ದ್ರಷ್ಟವ್ಯಾನಿ ನಜಾತ್ವಪಿ ॥೫೦॥ ಹಾ ಹಂತ ಮತ್ಪ್ರಾಣನಾಥ ಚನ್ನ ಮಲ್ಲೇಶ್ವರಪ್ರಭೋ । ರಾಜಾಧಿರಾಜಾಯೇತಿತ್ವಾಂ ಸಾಕ್ಷಾದ್ವೇದೋಪಿ ಶಂಸತಿ ॥೫೧॥ ತ್ವಮೇವಹಿಮಹಾರಾಜ ಸ್ತ್ವಮೇವಜಗದೀಶ್ವರಃ । ತ್ವಮೇವಶೌರಿ ರಾಜೋಸ್ಯಿ ದೇವರಾಜಾರ್ಚಿತೋಪ್ಯಸಿ ॥೫೨॥ ತವಾಜ್ಞಯಾವಿನಾ ದೇವರಾಜರಾಜಸಖ ಪ್ರಭೋ । ಯತ್ಕಿಂಚಿದಪಿವಾ ದಾತುಂ ರಾಜಾನಃ ಕಿನ್ನುಶಕ್ನುಯುಃ ॥೫೩॥ ತ್ವಚ್ಛಾಸನವಿರುದ್ಧಾನಿ ಕೃತ್ಯಾನ್ಯತ್ರ ಚರಂತಿಯೇ । ತಾದೃಗ್ವಿಧಾನರಾಃ ಪ್ರಾಯೋ ರಾಜಾನಸ್ಸ್ಯುಃ ಕಥಂಭುವಿ ॥೫೪॥ ಅಯಿಶಂಕರ ಲೋಕೇಽಸ್ಮಿನ್ ತ್ವದ್ಭಕ್ತಾಃ ಪಾಮರಾಇವ । ದುರಾಶಾಯಾಃ ಪರಾಧೀನಾ ನಭವೇಯುಃ ಕದಾಪಿಚ ॥೫೫॥ ಅಕಾಲೇ ಕೋಕಿಲಾ ಸ್ಸ್ವೀಯಾನ್ ಪಂಚಮಾ ನುಚ್ಚರಂತಿಕಿಂ । ಪಿಪಾಸಾರ್ತಾ ಶ್ಚಾತಕಾಃಕಿಂ ಪಿಬಂತ್ಯಂಬು ಮಹೀಗತಂ ॥೫೬॥ ಗಜಶಾಬಃ ಕ್ಷುಧಾರ್ತೋಪಿ ಕೋಲೀಸ್ತನ್ಯಂ ಪಿಬೇಚ್ಚ ಕಿಂ । ತ್ವದ್ಭಕ್ತಾಃ ಕುಕ್ಷಿಪೂರ್ತ್ಯರ್ಥಂ ದೀನತಾ ಮಾಶ್ರಯಂತಿಕಿಂ ॥೫೭॥ ಏವಂ ಪರಾಙ್ಮುಖೀಭೂಯ

---

ಕಿವಿಮುಚ್ಚಿ, ಶಿವಶಿವಾ! ಚಂದ್ರಾರ್ಧಶೇಖರಾ ! ಸರ್ವಜ್ಞಮೂರ್ತಿಯೆ ! ಶಿವದ್ರೋಹಿ ಚೋಳನ ಕಡೆಯ ಈ ಜನರ ಮಾತನ್ನು ಲಾಲಿಸಬಹುದೆ? ಆ ಪಾಪಿಯ ಸಂಸರ್ಗದಿಂದ ತಾವೂ ಪಾಪಿಗಳಾಗಿರುವ ಇವರ ಮುಖವೀಕ್ಷಣೆ ಮಾಡಬಹುದೆ? ಮನಸ್ಸಿನಲ್ಲಿ ಇವರ ಸ್ಮರಣೆಯನ್ನಾದರೂ ಮಾಡಬಹುದೆ? ಎಲೈ ನನ್ನ ಪ್ರಾಣನಾಥನಾದ ಚೆನ್ನಮಲ್ಲೇಶ್ವರನೆ! ವೇದವು "ಮಹಾರಾಜಾಯ" ಎಂದು ನಿನ್ನನ್ನು ಹೊಗಳುತ್ತಿರುವಾಗ, ನೀನು ರಾಜರಾಜಸಖನೂ, ಶೌರಿರಾಜನೂ, ದೇವರಾಜವಂದಿತನೂ, ರಾಜಶೇಖರನೂ, ದೇವಕುಲ ರಾಜರಾಜೇಶ್ವರನೂ ಆಗಿರುವಾಗ, ನಿನ್ನ ಆಜ್ಞೆಯ ಹೊರತು ಏನನ್ನಾದರೂ ಕೊಡಲು ಇತರ ರಾಜರಿಗೆ ಶಕ್ಯವೆ? ನಿನ್ನಾಜ್ಞೆಗೆ ವಿರುದ್ಧವಾಗಿ ನಡೆವವನು ರಾಜನಾಗಿ ಉಳಿಯುವುದುಕೂಡ ಶಕ್ಯವೆ? ಎಲೈ ಶಂಕರನೆ! ಭೂಮಿಯಲ್ಲಿ ನಿನ್ನ ಸೇವಕರು ಇತರ ಸಾಮಾನ್ಯ ಮನುಜರಂತೆ ದುರಾಶೆಗೆ ಅಧೀನರಾಗತಕ್ಕವರೆ? ಕೋಗಿಲೆಯು ಅಕಾಲದಲ್ಲಿ ತನ್ನ ಪಂಚಮಸ್ವರವನ್ನು ಬೀರುವುದೆ? ಚಾತಕವು ಎಷ್ಟೇ ಬಾಯಾರಿದ್ದರೂ ಭೂಜಲವನ್ನು ಹೀರುವುದೆ? ಆನೆ ಮರಿಯು ಹಸಿದಿದ್ದರೂ ಹಂದಿ ಮೊಲೆಯನ್ನು ಉಣ್ಣುವುದೆ ಪುರಹರನೆ! ನಿನ್ನ ಕಿಂಕರರು ಉದರ ಪೋಷಣಾರ್ಥವಾಗಿ ದೈ

ಪಂಡಿತೇಶೋಽತಿನಿಷ್ಠುರಂ | ಅನ್ಯಾಪದೇಶತೋ ವಾಕ್ಯಂ ತಾನ್ ಪ್ರತ್ಯೂಚೇ ಗತಸ್ಪೃಹಃ ||೫೮|| ಮಂತ್ರಿಣಸ್ತೇ ನಿರಾನಂದಾಸ್ತಚ್ಛ್ರುತ್ವಾ ಪರುಷಂ ವಚಃ| ರಾಜಸನ್ನಿಧಿಮೇವಾಶು ಸಮಾಗಚ್ಛನ್ ಯಥಾಗತಂ ||೫೯|| ರಾಜದೇಹವ್ರಣಸ್ತ್ರಾವ ಸ್ತ್ಸರಂಧ್ರಃ ಕ್ರಿಮಿದೂಷಿತಃ| ದುರ್ಗಂಧಶ್ಶೋಣಿತಸ್ರಾವೀ ದುರ್ದರ್ಶೋ ಘೋರತಾಮಗಾತ್ ||೬೦|| ರಾಜದೇಹಸ್ಯ ದುರ್ಗಂಧಂ ಮಾನವಾ ಸ್ಸೋಢುಮಕ್ಷಮಾಃ| ಕೇಚಿನ್ನಾಸಾಂ ಪಿದಧಿರೇ ಕೇಚಿದ್ವಮನ ಮಾಚರನ್ ||೬೧||ದಿನಕ್ರಮಾತ್ಪ್ರವೃದ್ಧೇನ ರಾಜಾ ರೋಗೇಣ ಪೀಡಿತಃ| ಕೀನಾಶಪುರವಾಸ್ತವ್ಯಕುಟುಂಬಿತ್ವಮಶಿಶ್ರಿಯತ್ ||೬೨|| ತಸ್ಯಾನುಬಂಧಿನಸ್ಸರ್ವೇ ರಾಜ್ಯಹೇತೋಃ ಪರಸ್ಪರಂ | ಯುದ್ಧಂಪ್ರಾರಭ್ಯ ತೇಽನ್ಯೋನ್ಯಂ ಹನ್ಯಮಾನಾ ಲಯಂಗತಾಃ || ವೆಲ್ನಾಡು ಚೋಳರಾಜಸ್ಯ ಕುಲಂ ಸರ್ವಮಪಿ ಕ್ಷಣಾತ್ | ಪಂಡಿತಾರಾಧ್ಯಶಾಪಾಗ್ನಿಸ್ಸಮೂಲ ಮದಹದ್ದ್ರುತಂ || ೬೪ || ವ್ರಜನ್ನೇವಾಧ್ವಮಧ್ಯೇಽಸೌ ಮಹಾತ್ಮಾ ಪಂಡಿತೇಶ್ವರಃ | ಚೋಳರಾಜಪುರೋದಂತಂ ಸರ್ವಮಪ್ಯಶ್ರುಣೋಜ್ಜನಾತ್ ||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಮಹಿಮ ಪ್ರಕರಣೇ ತತ್ಪಂಡಿತಾರಾಧ್ಯಶಾಪಸಂಪ್ರಾಪ್ತ ವೆಲ್ನಾಡಚೋಳವಂಶ ಕ್ಷಯಕಥನಂನಾಮ ಸಪ್ತಮೋಽಧ್ಯಾಯಃ.

---

ನ್ನಪಡುತ್ತಾರೆಯೆ? ಎಂದು ಈಪ್ರಕಾರವಾಗಿ ಅನ್ಯಾಪದೇಶದಿಂದಲೇ ಆ ರಾಜ ಸಂಬಂಧಿಗಳಿಗೆ ವಿಮುಖತೆಯ ಉತ್ತರವನ್ನು ನಿಷ್ಠುರವಾಗಿ ನುಡಿಯಲು, ಮಂತ್ರಿಗಳು ಇದೆಲ್ಲವನ್ನೂ ಕೇಳಿ ಮುಖನಡಗಿ, ಸತ್ಕರ್ಮದೂರರಾದ ಪಾಪಿಷ್ಠರಮೇಲೆ ಶಿವಭಕ್ತ ಕೃಪೆಯಾಗುವುದುಂಟೆ? ಎಂದು ಕೊಳ್ಳುತ್ತ, ತಮ್ಮ ದೊರೆಯ ಬಳಿಗೆ ಹೋದರು. ಅಷ್ಟರಲ್ಲಿ ರಾಜನ ದೇಹದ ವ್ರಣವು ದಿನ ದಿನಕ್ಕೆ ಪ್ರಬಲವಾಗಿ ಹಬ್ಬಿ ಎಲ್ಲೆಲ್ಲೂ ತೂತುಬಿದ್ದು ಹುಳು ತುಂಬಿ ರಕ್ತವೂ ಕೀವೂ ಸುರಿಯುತ್ತ ಘೋರತಮವಾಗಿದ್ದಿತು. ದೊರೆಯು ಸದಾ ಅದರ ಕೀವು ರಕ್ತದ ಗುಂಡಿಯಲ್ಲೂ ಹುಳುಗಳ ರಾಶಿಯಲ್ಲೂ ಬಿದ್ದು ಹೊರಳಾಡುತ್ತಲಿದ್ದನು. ಅಲ್ಲಿಯ ದುರ್ಗಂಧವು ನೆರೆದ ಜನರಿಗೆಲ್ಲಾ ಓಕರಿಕೆಯನ್ನುಂಟುಮಾಡುತ್ತಿದ್ದಿತು. ಕಡೆಗೆ ಚೋಳನು ಅದರಲ್ಲೇ ಪ್ರಾಣವನ್ನೀಗಿದನು. ಬಳಿಕ ಅವನ ಅನುಬಂಧಿಗಳೆಲ್ಲಾ ರಾಜ್ಯವು ತನಗೆ ನನಗೆಂದು ಪರಸ್ಪರ ಕಾದಾಡಿ ಎಲ್ಲರೂ ಮಡಿದರು. ಆ ಚೋಳನ ಕುಲವು ನಿಸ್ಸಂತಾನವಾಗಿಹೋಯಿತು. ಅವನ ಪಟ್ಟಣವೂ ದೇಶವೂ ಸಹ ಪಂಡಿತಾರಾಧ್ಯ ಶಾಪಾಗ್ನಿಯಿಂದ ದಗ್ಧವಾಗಿಹೋದುವು. ಶ್ರೀಪಂಡಿತಾರಾಧ್ಯನು ಮಾರ್ಗದಲ್ಲಿ ಹೋಗುತ್ತಿರುವಾಗಲೇ ಈ ಸುದ್ದಿಯನ್ನೆಲ್ಲಾ ಜನರಿಂದ ಕೇಳಿದನು.

ಎಂಬಲ್ಲಿಗೆ ಮಹಿಮಪ್ರಕರಣದೊಳಗೆ ಪಂಡಿತಾರಾಧ್ಯರ ಶಾಪದಿಂದ ವೆಲ್ನಾಡಚೋಳನ ವಂಶಕ್ಷಯವಾದುದನ್ನು ನಿರೂಪಿಸುವ ೭ನೆ ಅಧ್ಯಾಯವು ಮುಗಿದುದು.

## ಅಥಾಷ್ಟಮೋಽಧ್ಯಾಯಃ.

### ಸಹಸ್ರಗಣನಾಮ ಸಂಕೀರ್ತನಕಥನಂ.

ಅಥಗಚ್ಛನ್ಸ ತಿರಯಂ ಮಲ್ಲಿಕಾರ್ಜುನಪಂಡಿತಃ | ಸಮಯಿತ್ವೇನ ಬೌದ್ಧಸ್ಯ ಸಮಂಗೀಕೃತಸಂಭವಃ ||೧|| ಅಪರಾಧಸ್ಸ್ವಹಸ್ತೇನ ಸಮಂಗೀಕೃತಸಂಭವಃ | ಅಪರಾಧೋ ಮಹಾದೇವ ದೂಷಣಶ್ರುತಿ ಸಂಭವಃ ||೨|| ಅಪರಾಧಶ್ಶಿವಗಣನಿಂದಾ ಶ್ರವಣ ಸಂಭವಃ | ಅಪರಾಧೋಽನ್ಯಸಮಯಾ ವಿನಾಶನಸಮುದ್ಭವಃ ||೩|| ಅಪರಾಧಃ ಪಾಪಿಚೋಳ ಸಂಭಾಷಣ ಸಮುತ್ಥಿತಃ | ಅಪರಾಧೋ ನೃಪಂ ವೀಕ್ಷ್ಯ ಸ್ವಯಂ ಸಹನ ಸಂಭವಃ ||೪|| ಅಪರಾಧೋಽದೀಕ್ಷಿತಾನಾಂ ಸಂಸ್ಪರ್ಶನ ಸಮುದ್ಭವಃ | ಅಪರಾಧ ಸ್ಸಂಪ್ರಯಾತಿ ನಾನ್ಯಥೇತಿ ವಿಚಾರಯನ್ | ಸಹಸ್ರಧಾ ಶಿವಗಣನಾಮಸಂಕೀರ್ತನಂ ಮುದಾ | ಅಕರೋದ್ಭಕ್ತಿತೋ ಹೃದ್ಯಮಯಂ ತತ್ಕೀರ್ತನಕ್ರಮಃ ||೬||

---

## ೮ನೇ ಅಧ್ಯಾಯವು.

### ಪಂಡಿತಾರಾಧ್ಯರು ಸಹಸ್ರಗಣನಾಮ ಸಂಕೀರ್ತನೆ ಮಾಡಿದ ಕಥೆ.

ಬಳಿಕ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನು ಬೇಗಬೇಗನೆ ಹೋಗುತ್ತ "ನಾನು ಆ ಬೌದ್ಧನನ್ನು ಒಂದು ಮತಕ್ಕೆ ಸೇರಿದವನೆಂದು ಅಂಗೀಕರಿಸಿ ಅವನೊಡನೆ ವಾದ ಮಾಡಿದುದರಿಂದ ಉಂಟಾದ ಅಪರಾಧವೂ, ಅವನನ್ನು ನನ್ನ ಕೈಯಿಂದಲೇ ಕೊಲ್ಲದೆ ಬಿಟ್ಟುದರಿಂದ ಉಂಟಾದ ಅಪರಾಧವೂ, ಶಿವದೂಷಣೆಯನ್ನು ನಾನು ಕಿವಿಯಿಂದ ಕೇಳಿದ ಕಾರಣದಿಂದ ಉಂಟಾದ ತಪ್ಪೂ, ಶಿವಶರಣರ ನಿಂದೆಯನ್ನು ನಾನು ಕೇಳಿದುದರಿಂದ ಉಂಟಾದ ದೋಷವೂ, ಪರಸಮಯದವರನ್ನು ನಾಶಗೊಳಿಸದೆ ಬಿಟ್ಟುದರಿಂದ ಉಂಟಾದ ಅಪರಾಧವೂ, ಪಾಪಿ ವೆಲ್ನಾಡಚೋಳನೊಡನೆ ಮಾತನಾಡಿದುದರಿಂದ ಉಂಟಾದ ದೋಷವೂ, ಆ ದೊರೆಯನ್ನು ನೋಡಿಕೊಂಡು ಸೈರಿಸಿದ ನನ್ನ ದೋಷವೂ, ಶಿವದೀಕ್ಷಾ ಸಂಸ್ಕೃತರಲ್ಲದ ಭವಿಗಳನ್ನು ಸೋಂಕಿದುದರಿಂದ ಉಂಟಾದ ಅಪರಾಧವೂ ಸಹ ಬೇರೆ ಯಾವ ಉಪಾಯದಿಂದಲೂ ತೊಲಗಿಹೋಗದು. ಸಹಸ್ರ ಶಿವಗಣನಾಮ ಕೀರ್ತನವನ್ನು ಮಾಡುವುದೊಂದೇ ಆ ದೋಷ ಪರಿಹಾರಕ್ಕೆ ಉಪಾಯವು ಎಂದು ಆಲೋಚಿಸಿಕೊಂಡು, ಸಂತೋಷದಿಂದಲೂ ಭಕ್ತಿಯಿಂದಲೂ ಮನೋಹರವಾಗಿ ಗಣಸಂಕೀರ್ತನವನ್ನು ಮಾಡಿದನು. ಅದರ ಕ್ರಮವು ಹೇಗೆಂದರೆ—||೬|| (ಈ ಮುಂದಣ ಶ್ಲೋಕಗಳೆಲ್ಲಾ ಕೇವಲ ಶಿವಗಣ ಸಂದೋಹನಾಮಮಯವಾಗಿರುವುದರಿಂದ ತಾತ್ಪರ್ಯವನ್ನು ಬರೆಯಬೇಕಾದ ಅವಶ್ಯಕತೆಯಿಲ್ಲವೆಂದು ಬಿಟ್ಟಿದೆ)

ಶ್ರೀನಂದೀಶಶ್ಶಿವಕರ ಆನಂದೋನಂದಿಕೇಶ್ವರಃ | ನಂದಿನಾಥೋಽಕ್ಷಯೋವೀರಭದ್ರೋವಿಜಯಭದ್ರಕಃ ||೧|| ಭದ್ರಾಕ್ಷೋವೀರಕೋಭದ್ರೋಮಹಾಕಾಳಸ್ತ್ರಿಯಕ್ಷರಃ | ಏಕಾಕ್ಷರೋದ್ವ್ಯಕ್ಷರಷ್ಷಡಕ್ಷರೋಽಷ್ಟಾಕ್ಷರಸಂಜ್ಞಕಃ|| ಪಂಚಾಕ್ಷರೋಗ್ರಾಕ್ಷಸಂಜ್ಞಾವನಲಾಕ್ಷಸಮಾಹ್ವಯಃ | ಧೂಮಾಕ್ಷೋವಿಕಟಾಕ್ಷಶ್ಚ ವಿಶ್ವವಿಶ್ವಾಕ್ಷಸಂಜ್ಞಕೌ ||೩|| ವಿಮಲಾಕ್ಷೋಽಭ್ರವರ್ಣಶ್ಚ ವಿಕಟಾಂಗೋಜಯಸ್ತಥಾ | ವಿಜಯೋಗಗನಾಂಗಶ್ಚ ಸೂರ್ಯವರ್ಣೋಮಹಾಜ್ವರಃ ||೪|| ಜ್ವರೋಮಹಾಭೈರವಶ್ಚ ಶ್ರೀಷ್ಮೋನಿಷ್ಕಂಪಸಂಜ್ಞಕಃ | ಸೋಮವರ್ಣೋನಿಷ್ಕಳಶ್ಚ ನಿತ್ಯಸೀಶದನಿಸ್ವನೌ ||೫|| ನಿಶ್ಶಂಕಃಪುಷ್ಕಲಃ ಕಾಲರೂಪೋನೀರೂಪಸಂಜ್ಞಕಃ | ವಿರೂಪಾಕ್ಷೋವಿಶ್ವರೂಪಶ್ಶಾಂತರೂಪಶ್ಚಸುಂದರಃ ||೬|| ಉಗ್ರರೂಪಃಕೋಕಿಲಶ್ಚ ಕಿಂಕಿಣೀಕುಂದಕಸ್ತಥಾ | ಕುಮುದಃಕಾಕಪಾದಶ್ಚ ಕಟಕಾಪಾದಸಂಜ್ಞಕೌ ||೭|| ಪಿಂಡಕಶ್ಚಾಹಿಕಟಕಃ ಪಿಂಗಲೋಽನಕ್ಷರಸ್ತಥಾ | ಮಧುಪಿಂಗಲಸಂಜ್ಞಶ್ಚಮಧುಪಃಪಿಂಗಲಾಂಬಕಃ ||೮|| ವಿಷ್ಟಂಭೋಲೋಕವಿಜಯಶ್ಶಿಷ್ಟಶ್ರೀಕಂಠಸಂಜ್ಞಕಃ | ಸದ್ಯೋಜಾತೋನಿಜಬಲಸ್ಸರ್ವಭೂತವಿಜೃಂಭಣಃ ||೯|| ಸೂರ್ಯಪಾತನನೀಲೌಚಚಂಡೀಶಸ್ಸೋಮಪಾತನಃ | ಅಂಗಾರಭಕ್ಷಣೋವಿಂಧ್ಯಪಾತನಸ್ಸರ್ವಪಾತನಃ ||೧೦|| ಸರ್ವದಾಹಸ್ಸುರಗಿರಿಪಾತನಸ್ಸರ್ವಕಂಪನಃ | ಚಂಡಕೀರ್ತಿರ್ದಂಡಪಾಣಿ ರೀಶಾನಶ್ಚಂಡಘರ್ಘರೌ ||೧೧|| ಮಹಾಕಾಯೋಹರಿಹರಃಕಪಾಲಧರನಂದಿನೌ | ಮಹಾಕಾಲೋಭೃಂಗಿರಿಟಿಃ ಪುಂಡರೀಕಶ್ಚಗೋಪತಿಃ ||೧೨|| ದೀರ್ಘೋಹ್ರಸ್ವಸ್ಸ್ಥೂಲಸೂಕ್ಷ್ಮೌಲಂಬಕರ್ಣೋವಿಕರ್ಷಣಃ | ಸಹನೇಶೋಗುಹೋರೌದ್ರಃ ಕೂಷ್ಮಾಂಡೋಜಟಿಸ್ತಥಾ ||೧೩|| ಶಿಖಂಡಿರುಂಡಾಭರಣೌ ಭಿಂಡ್ಯಂಡಾಭರಣೌತಥಾ | ಘಂಟಾಕರ್ಣೋಮುಂಡಧರ ಶ್ಶಂಖಕರ್ಣೋದ್ವಿಕರ್ಣಕಃ ||೧೪|| ಗಜಕರ್ಣೋವಿಕರ್ಣಸ್ತ್ರಿಕರ್ಣೋಗೋಕರ್ಣಸಂಜ್ಞಕಃ | ಸಹಸ್ರಕರ್ಣೋವಾತಾಘಕರ್ಣಸ್ಸಂಕರ್ಷಣಸ್ತಥಾ ||೧೫|| ಪರ್ವತಾಘರಣೋದರ್ಪಸ್ಸರ್ವಾತ್ಮಾಸರ್ವಸಂಹರಃ | ವಿಪುಲೋತ್ಕರ್ಷಣಾವುಷ್ಟ್ರಮುಖಾಹಿಮುಖಗೋಮುಖಾಃ ||೧೬|| ಕಠೋರವಚನಸ್ಸಿಂಹಮುಖಾಶ್ವಮುಖಷಣ್ಮುಖಾಃ | ಸರ್ವಜ್ಞೋದ್ವಿಮುಖೋಮೇಷಮುಖಃ ಪಂಚಮುಖಸ್ತಥಾ ||೧೭|| ಸಹಸ್ರಮುಖ ಶಾರ್ದೂಲಮುಖಾಮುಖಚತುರ್ಮುಖಾಃ | ತ್ರಿಮುಖಾಷ್ಟಮುಖೌದಕ್ಷಭಾಸ್ಕರೋ ಬ್ರಹ್ಮಭಕ್ಷಣಃ ||೧೮|| ಭದ್ರಕರ್ಣಃಕರಿಮುಖೋ ವಿಮುಖೋವಿಷಭಕ್ಷಣಃ | ಪೂರ್ಣಭದ್ರೋನರಮು

ಖೋ ಮಹಾಭದ್ರೋ ಗುಹೇಶ್ವರಃ ॥೧೯॥ ಅಂತಕಾಂತಕಭುಗ್ನವಜ್ರದಂತಾಸ್ಖ
ಲಿತಭಾಸ್ಕರಾಃ । ಪುಷ್ಪದಂತಶ್ಚ ಶರಭಮುಖಃ ಕಪಿಮುಖೋಽಶನಿಃ ॥೨೦॥ ಶ್ರೀ
ಪಂಚಾಕ್ಷೋ ನವಮುಖಶ್ಚಂದ್ರಗಂಗಾಂಬುಶೇಖರಃ । ದಿಗಂಬರೋ ದಶಮು
ಖೋ ವರಾಹಮುಖದರ್ದುರೌ ॥೨೧॥ ರೇಣುಕೋ ದಾರುಕಶ್ಶತಸಹಸ್ರಾಕ್ಷ
ತ್ರಿಯಂಬಕಃ । ಅಸಿತಗ್ರೀವಡಮರುಹಸ್ತೌ ಶ್ರೀಕಾಲಮರ್ದನಃ ॥೨೨॥ ಅರ್ಧ
ನಾರೀಶ್ವರಃ ಕ್ಷೇತ್ರಪಾಲಶ್ಶ್ರೀದಕ್ಷಮರ್ದನಃ । ವಿಯೋಕ್ತಾ ಸಾಂಬರಶ್ಶ್ರೀಮ
ದ್ಧಟಾರ್ಧಃ ಫಣಿಭೂಷಣಃ ॥ ೨೩ ॥ ಸುಹೋತಾ ವೃಷಭಶ್ಶ್ರೀಮತ್ಕರಾಳೋ
ಹಾಟಕೇಶ್ವರಃ । ಶ್ರೀಮದ್ದೇಹಾರ್ಧವಕ್ತ್ರಾರ್ಧ ನಾಸಾರ್ಧಮಣಿಭೂಷಣಾಃ ॥
ವಿಪ್ರಮಾಲೀ ವಷಟ್ಕಾರಃ ಕಪಾಲೀ ಕಾಲಶಂಕರೌ । ವಾಮದೇವಶ್ಚೋರ್ಧ್ವವಾ
ಹವರಾಹೌ ಮೇಘವಾಹನಃ ॥೨೫॥ ಶ್ರೀಕಂಕಾಲಧರೋ ವಜ್ರಕಾಯಸ್ತ್ರಿಭುವ
ನಾಂತಕಃ । ಧೂಮಕೇತುರ್ವ್ಯಾಘ್ರವಕ್ತ್ರಸ್ಸುಷೇಣೌಂಕಾರಬಭ್ರವಃ ॥೨೬॥
ಶೂಲಾಯುಧಶ್ಶ್ರೀಸುಮನಾ ಧೂಮಾಂಗಸ್ಸುಗತಿರ್ಭವಃ । ಕೋಲಾಹಲೋ ವ
ಜ್ರಪಾಣಿಸ್ಸುಪಾಣಿರ್ದಮನಶ್ಶಿವಃ ॥೨೭॥ ಉತ್ತುಂಗಶ್ಶ್ವೇತಸರ್ವಾಂಗೋ ಮ
ಹಾಬಾಹುರ್ಮಹಾವ್ರತಃ । ಶ್ರೀಸುದರ್ಶನಪಾಣಿರ್ಝೀಂಕಾರೋಽಪ್ರತಿಮನಿ
ರ್ಮಲೌ ॥೨೮॥ ಗುರುರ್ಲಘುರ್ಮಹಾಕೇಶಸ್ಸುಕೇಶಸ್ಸೋಮಕಂಪನಃ । ಕಾ
ಮಾಂಗದಹನೋ ಭರ್ಗಃ ಪ್ರಕುಂಡೋ ಭಾನುಕಂಪನಃ ॥೨೯॥ ಕುಂಡೋದರೋ
ವಿಷಬಲಶ್ಚಂಡೋದರಶತೋದರೌ । ಪಿನಾಕಪಾಣಿರಸಿತಕಾಯಸ್ಸಂತಾನಕೋ
ಣತೌ ॥೩೦॥ ಮೃತ್ಯುಂಜಯೋ ನಾಗದಂತಸ್ಸೋಮದಂತಸ್ಸುರಾರ್ಚಿತಃ । ಶ್ರೀ
ಪ್ರಪಂಚಾಂತಕೋ ಭೀಮೋ ದೈತ್ಯಾಂತಕಮಹೋದರೌ ॥ ೩೧ ॥ ಮಹೇಂದ್ರ
ಶ್ಚೋಭಯಶಿಖಾ ಶ್ರೀಧರಸ್ಸೂರ್ಯಪೇಷಣಃ । ಬ್ರಹ್ಮಾಂಡಪೇಷಣಸ್ಸೋಮ
ಪೇಷಣೋ ಘೋರಶೂಲಿನೌ ॥೩೨॥ ಅತಿಕಾಯಾಭ್ರಕಾಯಪ್ರಚಂಡಸಂವರ್ತ
ಕಾಸ್ತಥಾ । ಪ್ರಕಂಪನೋಽಂಭೋದನಾದೋ ನಿಕುಂಭಃ ಕುಲಿಶೋದರಃ ॥೩೩॥
ಕುಂಭೋದರೋ ಹರಿಜಟಾಕೇಸರಾಂದೋಲಕಾಂಗದೌ । ಅಟ್ಟಹಾಸಸ್ಸ್ವಯಂ
ಜ್ಯೋತಿರಂಗೋ ಲಾಲಾಸುರಾಂತಕಃ ॥ ೩೪ ॥ ವೃಷಾಂಕಃ ಕಂಕಟೋ ಭಸ್ಮೇಶ್ವ
ರೋ ಹಾಲಾಹಲೋ ಹರಃ । ನಕ್ಷತ್ರಕೃಂತನೋ ಮೇಘೋ ರುದ್ರಸೂತ್ರನಿಪೀಡ
ನೌ ॥೩೫॥ ಅತಿವಾಸೋ ಗುಹಾವಾಸಃ ಕಪರ್ದೀ ಸೂರ್ಯಖೇಟಕಃ । ಇಂದು
ಖೇಟಸ್ತತ್ಪುರುಷಸ್ಸ್ಥಾಣುರ್ದಿಗ್ವ್ಯಾಹನಾಶನಃ ॥೩೬॥ ಸಾಗರಧ್ವಾನಸಂಹಾರ
ಕಾಲದಿಕ್ಪಾಲಕಾರಯಃ । ಸಾಗರಾಪೋಶನೋ ವಿದ್ಯುತ್ಪ್ರಭಾವೋ ಹ್ರಸ್ವಕಂಧ

ರಃ ||೩೭|| ದಿಗ್ವಾರಣಾಪಹಾರಿಮಹಾರಥಲಿಂಗಾಕ್ಷದುಷ್ಕರಾಃ | ಮಹಾಮಾಯಶ್ಚಶಿಥರೋ ದ್ವಿಪೇಸಿರ್ದಳನಃಪೃಥುಃ ||೩೮|| ಖಟ್ವಾಂಗಸಾರ್ಙ್ಗರುಡಪಕ್ಷಚ್ಛೇದೋಽಸಿತಾಂಬರಃ | ಅಷ್ಟನಾಗಾಂಗುಲೀಯಸ್ಸಕೇಶಾಸಂಗಾದ್ರಿಕುಂಡಲಾಃ ||೩೯|| ಭಗದತ್ತಃಪಶುಪತಿ ರ್ವ್ಯಾಘ್ರಚರ್ಮೋತ್ತರೀಯಕಃ| ಕಾಲಾಪಹರಣೋವಿಷ್ಣುಕಂಕಾಳಾಂಕೋಽಗ್ನಿಕುಂಡಲಃ ||೪೦|| ಕಾಷ್ಠಕೂಟಾಸಂದಗಿರಿಕಂದುಕಾಟನದುರ್ಧರಾಃ | ಏಕಪಾದಕ್ಷಿತಿವಿಯತ್ತಾಳನಂದೋಗ್ರಕುಂಡಲಾಃ ||ಭೀಮಕಾಯೋವಿಧಿಶಿರಶ್ಛೇದ್ಯುದ್ಧತವರಪ್ರದಾಃ | ವಿಷ್ಣುನೇತ್ರಾದಾನಕುಂಡಕರ್ಣದೀರ್ಘವಿಲೋಚನಾಃ ||೪೨|| ಚಕ್ರಾಪಹೋವಿಧಿತಿರಸ್ಕರಣೋಲಂಬನಾಸಿಕಃ | ಶ್ರೀಬಡಬಾಗ್ನಿತಿಲಕ ವರ್ತುಲಾಕ್ಷೋರ್ಧ್ವಬಾಹವಃ ||೪೩|| ಶ್ರೀಕಾಲರುದ್ರಬಡಬಾನಲಾನನಸುಬಾಹವಃ | ಅಜಾಂಡಬಾಹುಪ್ರಳಯಾಗ್ನಿನೇತ್ರೌದೀರ್ಘದಂಷ್ಟ್ರಕಃ || ೪೪ || ಸೋಮದತ್ತಃ ಕುಲಗಿರಿಶಾತನಸ್ಸುಚರಿತ್ರಕಃ | ಕುಠಾರದಂತೋವಿಲಯಾಗ್ನಿಖೇಲನಸುಜಂಘಕೌ ||೪೫|| ಕೂರ್ಮಾಹಿನಟನಾಭೀಲಾಭ್ರತಾಲಲಲಿತಾಂಗಕಾಃ | ವರಾಹದಂಷ್ಟ್ರಾಂಕಮುಖಾಕ್ಷಪಾದಬಹುವರ್ಣಕಾಃ ||೪೬|| ಶ್ರೀಬಾದರಾಯಣಭುಜೋತ್ಪಾಟನಶ್ಚಂಡಘರ್ಘರಃ | ಮಾತಂಗಃಕ್ಷೀರಶರಧಿಪಾನಶ್ರೀಲಂಬಜಿಹ್ವಕಃ ||೪೭|| ಯಜ್ಞಚರ್ಮಾಸನಸ್ಸಿಂಹಚರ್ಮವಾಸಾಸ್ಸುಪೋಷಣಃ | ತ್ರ್ಯಕ್ಷಶ್ರೀಭಗವೋಽಕಾಯೋವಹ್ನಿಜಿಹ್ವಾನಿಕೃಂತನಃ ||೪೮|| ವಿಷ್ವಕ್ಸೇನಹರಃಪಾಂಡುರಂಗಸ್ತ್ರಿಜಟಿಧೂರ್ಜಟೀ | ಸೋಮೋಹರಿರಥಾರೂಢಶ್ಶ್ರೀನಾಕಿಪಶಿರೋಹರಃ || ೪೯ || ಶ್ರೀಲಂಬಕರ್ಣೇಭಚರ್ಮಚೇಲೌಶ್ರೀಬಹುವಕ್ತ್ರಕಃ | ಚಾರುದಂತಸ್ತ್ರಮತಿಃಕಾಲಕಂಠೋಕ್ಷವಾಹನಾ ||೫೦|| ಸ್ವಚ್ಛಂದಕರ್ಣಸೇನೂರು ತಾಲುಜಿಹ್ವೋಗ್ರಜಿಹ್ವಕಾಃ | ಲೋಹಜಂಘಶ್ರೀಮಹೋಕ್ಷಪಿನಾಕೋಬಹುಘೋಣಕಃ ||೫೧|| ಬಹುಜಂಘೋರ್ಧ್ವಕೇಶಶ್ರೀಪಾತಾಲತಲವಾಸಿನಃ | ಬಹುಕರ್ಣೋಮಹಾಬಾಹುಬಹುನೇತ್ರೋರ್ಧ್ವಬಾಹವಃ || ೫೨ || ಶ್ರೀಸಹಸ್ರೋವರಬಹುಶಾಲುಜಿಹ್ವಮಹಾಲಯಾಃ | ಮಹಾಭೀಲೋವಿಶ್ವಮುಖಸ್ಸುಮುಖಸ್ಸ್ಥೂಲವಿಗ್ರಹಃ ||೫೩|| ಪ್ರಚಂಡಬಲದೀರ್ಘೋಷ್ಠೌ ಲಂಬಾಕ್ಷೋಧೂಮವಿಗ್ರಹಃ | ಮಯೂರಕಂಠೋಬಿಂಬೋಷ್ಠಮಹಾಸೇನೋರುಬಾಹವಃ || ೫೪ || ಶ್ರೀಮೇಘಮುಖಲಂಬಾಕ್ಷೌಶೂಲಾಕ್ಷೋಲಂಬಕಂಧರಃ | ರೌದ್ರಾಕ್ಷಶ್ಯಾಮಶ್ವೇತಮುಖಾ ನಂದಶಂಭೂರುಜಿಹ್ವಕಾಃ ||೫೫|| ಊರುಬಾಹುಮುಖೋ ಜಾನುಮುಖಶ್ರೀಚತುರ್ಕರ್ಣಕಃ |

ಸಹಸ್ರಬಾಹುಸ್ಸೋಮಾಕ್ಷ ಮಹಾಕೇಶದ್ವಿಬಾಹವಃ ||೫೬|| ಲಂಬಾಸನೋ ಬಹುಮುಖ ಶ್ರೀಪ್ರಲಂಬತ್ರಿಬಾಹವಃ | ವಿಕಟೋಗಗನಃಪಾದಸುಮುಖಕುಕ್ಷಿ ಮುಖಾವಪಿ ||೫೭|| ಸಿಂಹಗ್ರೀವೋದೀರ್ಘಬಾಹು ರ್ವಿದ್ಯುಜ್ಜಿಹ್ವಸ್ತ್ರಿಜಿಹ್ವಕಃ | ಸಹಸ್ರಜಿಹ್ವವರ್ಣಾಕ್ಷ ಶ್ರೀಸುಕೇಶದ್ವಿಜಿಹ್ವಕಾಃ ||೫೮|| ಶ್ರೀಧರಾರಾಧ್ಯರಕ್ತಾಕ್ಷ ನೀಲಾಂಬರಸಮಾಹ್ವಯಾಃ | ಪೀತಾಂಬರಃಕ್ರತುಹರೋಽಗ್ನಿಕೇಶೋದ್ವಿಭುಜಸ್ತಥಾ ||೫೯|| ಲಂಬೋದರೋಲಂಬಹನುರ್ಭೀಮಾಂಗಃಪ್ರಬಲಸ್ತಥಾ | ಮಹಾಜಿಹ್ವೋಮಹಾದಂಷ್ಟ್ರ ಶ್ರೀಜಿಹ್ವೋದರನಾಮಕಃ ||೬೦|| ಸೂರ್ಯಾಕ್ಷರೋಮಾಂಗಕಂಬುಗ್ರೀವಾದಶಭುಜಸ್ತಥಾ | ಊರುಪಾದೋಲಂಬತನುಃ ಪಾದಬಾಹುರಿತೀರಿತಃ ||೬೧|| ಪ್ರಮಥಾನಾಂಪ್ರಸಿದ್ಧಾನಾಂಜಯಸ್ತ್ರೈಲೋಕ್ಯಪಾವನಃ | ಅಥ ರುದ್ರಗಣಸಂಕೀರ್ತನಂ—ಭುವನೇಶ್ವರಸರ್ವಜ್ಞವಿಭೂತಿಭವಶಾಶ್ವತಾಃ ||೬೨|| ಮೇಘನಾದೋಭೂತಿಕರಃ ಪಿನಾಕೀಭೂತಪಾವನಃ | ಅಜಶ್ಚಕ್ರಧರಶ್ಶ್ವೇತಃಕಪಾಲೀವೇದಪಾರಗಃ ||೬೩|| ಮಹಾಬಲೋದಂತದಂಷ್ಟ್ರಸ್ತ್ರಿಕಲೋಮೇಘವಾಹನಃ | ಊರ್ಧ್ವದೇಹಃಕ್ರೂರದಂಷ್ಟ್ರೋ ಧನಂಜಯಕಪರ್ದಿನೌ ||೬೪|| ನೀಲರುದ್ರಃಕಾಲಕಾಲರುದ್ರವಿಶ್ವೇಶಬಭ್ರವಃ | ಸರ್ವೇಶದಹನೌಸ್ಥೂಲ ರುದ್ರಭದ್ರಾನಿಲಾಶನಾಃ ||೬೫|| ದೀರ್ಘಹಸ್ತಸ್ಸುಖಕರ ಸ್ಸುನಾದಹರಪಿಂಗಳಾಃ | ಜಲಭರ್ಗಮಹೇಶತ್ರಿ ದಂಷ್ಟ್ರಾಸ್ಸರ್ವಮನೋನ್ಮನಾಃ|| ಅಘೋರಃಪೂರಕಜ್ಯೋತಿರೌದ್ರೋವಿಷಧರೋಗುಹಃ | ಕ್ರೋಧೇಶೋವಟರುದ್ರಶ್ಚ ಜ್ವಲನಾಕ್ಷೋವಿವಾಹನಃ ||೬೭|| ಧೂಮ್ರವರ್ಣಸ್ಸರ್ವಭೂತದಮನಶ್ಚರಸ್ತಥಾ | ವಿದ್ಯಾಧರೇಶೋರ ದ್ರಾಗ್ನಿಸ್ಸುಕೇಶಶ್ಚಗಣಪ್ರಿಯಃ ||೬೮ ಮೃತ್ಯುಂಜಯೋಮಹಾನಾಟ್ಯರುದ್ರಶ್ಚಬಡಬಾಮುಖಃ | ಲಘುರೂಪಧರೋಮೃತ್ಯುಂಜಯರುದ್ರೋಭಯಾನಕಃ ||೬೯|| ಈಶಾಕ್ಷರುದ್ರಃಪ್ರಳಯಾಗ್ನಿರುದ್ರಃ ಕಾಲಲೋಹಿತಃ | ಹರರುದ್ರೋಽರ್ಧನಾರೀಶರುದ್ರಸ್ತ್ರಿದಶವಂದಿತಃ ||೭೦|| ಶೀಘ್ರಾವಿಕರಣೌವಿಶ್ವಾಧಿಕರುದ್ರೋವಿಚಕ್ಷಣಃ | ವಿಜ್ಞಾನರುದ್ರಶ್ಶರಭ ರುದ್ರಶ್ಶೂಲಧರೋವಿಭುಃ ||೭೧|| ಮಹೋಗ್ರರುದ್ರಶ್ಶಬರರುದ್ರೋಧಾತಾಹುತಾಶನಃ | ಆದಿರುದ್ರೋಮಹಾಕಾಲರುದ್ರಭೀಮಭವೋದ್ಭವಾಃ ||೭೨|| ಸಂಹಾರರುದ್ರೈಕಪಾ ರುದ್ರಾರ್ತಿಕ್ಷರಪಾವಕಾಃ | ಮಹಾವೃಷಭರುದ್ರಶ್ಚ ವಾಯುವೇಗಸ್ಸುದುಂಬರಃ ||೭೩|| ಕಿರಾತರುದ್ರೋಜಯವಿಜಯರುದ್ರಃಪರಾಪರಃ | ಕರಾತ್ತಜಟಾಧರಸನಾತನರುದ್ರಾಕ್ಷಯಾಂತಕಃ || ೭೪ || ಶ್ರೀಮಹಾಶಿವರುದ್ರೋಗೌ

ಸ್ಥಾಣುಸಂಹಾರಘಾತುಕೌ | ವೀರಾಖ್ಯೋರುದ್ರಃ ಕರ್ಮಾಖ್ಯೋರುದ್ರೋ ಮೃತ್ಯುಹ
ರೋ ಮೃಡಃ ||೭೫|| ಏಕರುದ್ರಃ ಕಾಲಮೇಘೋ ನಿವೃತ್ತಿಃ ಪಾಶಹಸ್ತಕಃ | ಮಾ
ತಂಗಕ್ಷಯರುದ್ರೌ ಚ ವಿಟರುದ್ರಃ ಪ್ರಮರ್ದಕಃ ||೭೬|| ಬುದ್ಧೋ ವಿಧೃತಾಕ್ಷೋ
ಮಾಶೋ ವಿಯೋಕ್ತಾ ಪ್ರಬಲೋಽವ್ಯಯಃ | ಹಿತಪ್ರಮಥನಾ ಜ್ಯೇಷ್ಠೋ ವಿರೂ
ಪಾಕ್ಷಶ್ಚ ಗೋಪತಿಃ ||೭೭|| ಶ್ರೀನಿಧೀಶೋ ಮಹಾತೇಜಾ ವಿದ್ವೇಷಾನಂತಸಂಭ
ವಃ | ಗಣಾಧ್ಯಕ್ಷಾಂತರಿಕ್ಷಾಂಗ ಶ್ರೀಮತ್ಪಂಚಶಿಖೇಶ್ವರಾಃ ||೭೮|| ಸಾಮ್ಯ
ದೇಹೋರ್ಧ್ವಕೇಶಾತಿಭವೇಶಗಗನೇಶ್ವರಾಃ | ಶ್ರೀವಜ್ರದಂತೋಜ್ವಲನ ಪ್ರಕಾ
ಶಸಹನೇಶ್ವರೌ || ೭೯ || ಸರ್ವಾತ್ಮಾ ಸಿತವರ್ಣಶ್ಚ ಗ್ರಸನಃ ಪಿಂಗಲೇಕ್ಷಣಃ |
ಅಸಾಧ್ಯಶ್ಚ ಶ್ರೀಷ್ಮಗೌರೀಶ ಪರಮಾತ್ಮಸಮಾಹ್ವಯಾಃ ||೮೦|| ಪರಂಧಾತಾ ಪ್ರ
ಭುಸ್ವಾಮಿ ಶ್ರೀಮದ್ರತ್ನಧರಸ್ತಥಾ | ವಾಮದೇವೋ ದುಃಖಕರಃ ಫಣೀಂದ್ರಸ್ಸೂ
ಕ್ಷ್ಮಸಂಜ್ಞಕಃ ||೮೧|| ಬಲವಿಕರಣರುದ್ರೋಽನೇಕವೀರಸ್ತ್ರಿನೇತ್ರೋ ಹರಹರಿ
ಹರಕಾಲಾಮಾರಹಂತ್ರೈಕವೀರಃ | ಕಲವಿಕರಣರುದ್ರೋ ಯಾಮ್ಯಭಸ್ಮಾಂತಕ
ಶ್ಚ ತೀಕ್ಷ್ಣಾವೃಷಭಗಣೇಂದ್ರಾಕ್ಷೀತ್ಯಯಂ ರುದ್ರವರ್ಗಃ ||೮೨|| ಅಥ ಯೋಗಾ
ಚಾರ್ಯಗಣಸಂಕೀರ್ತನಂ—ಶ್ರೀಮದ್ದಮನಗೋಕರ್ಣಮುಖೌ ಲೋಕಾಕ್ಷಿದಾ
ರುಕೌ | ಜಟಾಮಾಲೀ ವೇದಶಿಖೀ ಸರ್ವೇಶ್ವರಶಿಖಂಡಿನೌ ||೮೩|| ಸೇಸೋಽಡಿಂ
ಡಿದಧೀವಾಹೌ ಚಾರುಹಾಸಸ್ಸುಧಾರಕಃ | ಯುವಾಲೋಕೋ ಗುಹಾವಾ
ಸೋ ಲಕುಲೀಶ್ವರಶೂಲಿನೌ ||೮೪|| ಉಗ್ರಾತ್ರಿಲಾಂಗುಲಿಮಹಾಕಾಯಕಂಕ
ಸಹಿಷ್ಣವಃ | ಜೇಗೀಷವ್ಯಶ್ಶ್ರೀವೃಷಭಮಹಾಕಾಯಶ್ಚ ಗೌತಮಃ ||೮೫|| ಸು
ಹೋತ್ರಮುಂಡಿನೌ ಜೇತಿ ಯೋಗಾಚಾರ್ಯಾಃ ಪ್ರಕೀರ್ತಿತಾಃ | ಅಷ್ಟಾವಿಂಶತಿ
ಸಂಖ್ಯಾತಾ ಭುವನತ್ರಯವಂದಿತಾಃ ||೮೬|| ಧರ್ಮಾಚಾರ್ಯಾ ಇತಿ ಖ್ಯಾತಾಸ್ತೇ
ಷಾಂ ಶಿಷ್ಯಾ ಮಹೀತಲೇ | ಅಭವನ್ ದ್ವಾದಶಾಧಿಕ್ಯ ಶತಸಂಖ್ಯಾ ಗುಣೋನ್ನತಾಃ||
ಅಥ ತ್ರಿಷಷ್ಟಿಗಣಸಂಕೀರ್ತನಂ— ಸದ್ಭಕ್ತಿವಿಖ್ಯಾತತಿರುನೀಲಕಂಠಶ್ಚ ಕೋಲ್ಪು
ಲಿಃ | ಚೋಲಶ್ಚ ಚೇರಮತಿರುನೀಲನಕ್ಕಾ ಚವೇಲ್ಪಘಃ ||೮೮|| ತಿರುನಾಲ್ಪೋವ
ಶ್ಚ ತಿರುಮೂಲದೇವಶ್ಚ ಸಂಬ್ಯಣಃ | ಚೆಲಂದಿರಾಮ ನಕಂಟಾರೋ ಮಂಗಾಯಕ್ಕಾ
ಕಚಂಗಲಾ ||೮೯|| ಚೇಲಾಲಃ ಕಾರಿಕಾಲ್ಲಂಬಾ ವೀರಸೇರ್ಮಡಿಭೂಪತಿಃ | ವಾ
ಗೀಶನಯಿನಾರ್ಯಾಖ್ಯೋ ರಿತ್ತಾರಡಿಜಡೆಯಾರಯಃ ||೯೦|| ಅಂಗಸಂಗಾನಾಯಿ
ನಾರಿ ಕ್ಷಂಡೇಶಃ ಪೂಸಲಸ್ತಥಾ | ಶ್ರೀಪಿಳ್ಳೈಸೈನಾರಿಶ್ಚ ಕೃಣಾದಿನಾಥಶ್ಚ ಜಿರುತ್ತೊ
ಣಃ ||೯೧|| ಕಲಿಕಂಬಃ ಪಿಟ್ಟೆಸಂಗರೋ ಹಿಣಿವೋರ್ನೆಯಾಧಿಪಃ | ಸೋಮಾಸಿ

ಮಾರೋಮುಖಃ ಕಲಿಕಾಮೋಽರಿವಾಲಯಃ ||೯೨|| ಸಾಂಖ್ಯತೊಂಡೋ ರುದ್ರಪಶುಪತಿಶ್ಚಿರುಪುಲಿಸ್ತಥಾ | ಕಣ್ಣಪ್ಪಸ್ತ್ಯಾಪಸೋದೀಪಕಲಿಯಾರರಿರಚ್ಯು ತಃ ||೯೩|| ಶ್ರೀವೀರಚೋಳಸ್ತಿರ್ಕುರ್ಪಿತೊಂಡಶ್ಚನ್ನಯನಾಮಕಃ | ನಮಿನಂ ದೀಕಲಿಗಣನಾಥೋಽಯಲರುದಂಗುಲಿಃ ||೯೪|| ಇರಿವೊತ್ತಶ್ಚಪರಮನಾಚಿರೇ ಕಾಲಿಗುಗ್ಗುಲೌ| ಕಲಯೋಽಮರಸೀತಿಶ್ರೀ ಸೇದಿರಾಜಾಣುಮೂರ್ತಯಃ || ಕಲಿಯಂಬಃಕಡವಲಸಂಬೀಡುಗುಡಿಮಾರಜೌ | ಶ್ರೀಮನ್ನಮಿತ್ತಂಡಿಕರವೂರ ಚೋಳಮಹೀಭುಜೌ ||೯ || ಶ್ರೀಮಚ್ಚಿರುತ್ತೊಂಡ ನಿಡುಮಾರದೇವಸಮಾಹ್ವ ಯೌ | ಮಿರುಮಿಂಡೇಽಭಕ್ತೌ ಚ ಶ್ರೀಕುಲಚ್ಚರಿಯಸ್ತಥಾ ||೯೭|| ಏತೇತ್ರಿಷಷ್ಟಿ ಸಂಖ್ಯಾಕಾ ಶಿವಸದ್ಭಕ್ತಪುಂಗವಾಃ | ಅಥ ಷೋಡಶಗಣಸಂಕೀರ್ತನಂ—ಹೊ ನ್ನಯ್ಯಃಕಿನ್ನರಿಬ್ರಹ್ಮಾ ಕೇತಾಂಬಾಪಾಂಡ್ಯನಾಯಕಃ ||೯೮|| ಶ್ರೀಗುಡ್ಡವ್ವಾ ಸ್ಸೇನನಾಥೋ ದೇವಬಾಚಯ್ಯಬಿಜ್ಜಯೌ | ನಾಗಯ್ಯಶ್ರೀಚಿಕ್ಕಲಿಗಿನಾಗ ಯ್ಯಃಪುಷ್ಪಬಾಚಯಃ ||೯೯|| ಶ್ರೀಬಾಚಲಾಂಬಾಚಪಡಿಹಾರಿಸೋಮಣ್ಣಬೀ ರಯೌ | ಉಘೇಸನಾಗಯ್ಯಹಂಪಯ್ಯೌ ಕಾಲಲಾಂಬಾಚೇತಿಷೋಡಶ ||೧೦೦|| ಅಥ ದಶಗಣಸಂಕೀರ್ತನಂ—ಶ್ರೀವೀರಘಂಟಾಮೈಲೀಚ ದೋರಿದೇವಯ್ಯಸಂಗ ಯೌ | ಬೊಪ್ಪದೇವೀಕಾಮದೇವೀಚೋಳಾಂಬಾಮಾಯಿದೇವಯಃ ||೧೦೧|| ಅನ್ನಮಾಂಬಾದಶಗಣಸ್ಸಿಂಗಯೋಽಬಿಜ್ಜಯೋಽದಶ | ಅಥ ತ್ರಯೋದಶಗಣಸಂ ಕೀರ್ತನಂ—ಶ್ರೀಮದ್ಬಸವರಾಜಾರ್ಯಃ ಪ್ರಭಾತಗಣಸಿಂಗಯಃ ||೧೦೨|| ಬೊ ಮ್ಮಸೆಟ್ಟಿರ್ಮೇಳ್ಗೆಸಿಜ ಸಂಗಾಂಬಾಪುಷ್ಪಬಾಚಯಃ | ಪಡಿಯಾರಾಖ್ಯಬಸವ ಣಾರ್ಯಸ್ಸಾತ್ವಿಕಸಂಗಯಃ ||೧೦೩|| ಶ್ರೀಕಾಮಲಾಖ್ಯದೇವೀಚ ಬೊಪ್ಪಿದೇ ವೀಚದೇವಯಃ |.ಕನ್ನಮಾಂಬಾದೇವರಸಾ ನ್ವೋಹಿಲಶ್ಚತ್ರಯೋದಶ ||೧೦೪|| ಪರವಾದಿಘಸೋಽಚ್ಚಂಡ ಮರುಚ್ಚಿ ಶ್ರೀಪತಿಪಂಡಿತಃ | ಸಿಂಧುಬಲ್ಲಾಳಬಳ್ಳೇಶಮ ಲ್ಲಯೌಚಟ್ಟಿನಾರಯಃ ||೧೦೫|| ಶ್ರೀಮದ್ರೂಪದಮಾಚಯ್ಯಾಲ್ಲಯ್ಯಧೂರ್ಜ ಟಿಕೇಶಿನಃ | ಶ್ರೀಮಾದಿರಾಜಯ್ಯಮಡಿವಾಳಮಾಚಯ್ಯಕಕ್ಕಯಾಃ ||೧೦೬|| ಬಾಚರಾಜೋಽಬಡವರಬ್ರಹ್ಮಯ್ಯೋಽಬಿಬ್ಬಬಾಚಯಃ | ಕಿನ್ನರಬ್ರಹ್ಮಯಃಕೇತಿ ರಾಜಃಕನ್ನದಬೊಮ್ಮಯಃ ||೧೦೭|| ಶೂಲದಬ್ರಹ್ಮಯಃಕಾಚಿರಾಜೋಽವೋಳಿ ಗೆಮಾರಯಃ | ಕಲಕೇತಬ್ರಹ್ಮಹೊನ್ನಬ್ರಹ್ಮಯೌ ವೀರನಾಚಯಃ ||೧೦೮|| ಉ ತ್ತಮಾಂಗದಕೇಶೀಚ ಶ್ರೀಮತ್ಸುರಗಿಚೌಡ... | ಶ್ವಪಚಯ್ಯಸ್ತೆಲುಂಗೇಶೋ ಮುಸಣಯ್ಯೋಽಹಲಾಯುಧಃ ||೧೦೯|| ತೆಲುಂಗಜೊಮ್ಮಯೋಽಮಾರಗೌಡೋ

ಮುಷ್ಟಿಯಚೌಡಯಃ | ಕಾಲಾಗ್ನಿರುದ್ರೋ ಹೊನ್ನಯ್ಯೋ ಗಂಡಗತ್ತರಿನಾಚ
ಯಃ ||೧೧೦|| ಮಹಾಕಾಲಯ್ಯ ಉದರರಾಮಯ್ಯೋ ಮೊಲ್ಲೆಬೊಪ್ಪಯಃ |
ಪೂತಿದೇವಸ್ಸವರದನಾಚಯ್ಯೋ ದಾಸಕೇಶಯಃ ||೧೧೧|| ಮಧುವಯ್ಯೋ ಹಡ
ಪದರೇಚಯ್ಯೋ ಗೊಲ್ಲಮಲ್ಲಯಃ | ವೆಲ್ಲಗೊಂಡಮಹಾದೇವೋದ್ಭಟೌ ಕದಿರರೇ
ಮಯಃ ||೧೧೨|| ಅಮಾತ್ಯಮಲ್ಲಯ್ಯ ನಿಜಲಿಂಗಚಿಕ್ಕಯ್ಯಭೋಗಯಾಃ | ನಿರ್ಲ
ಜ್ಜಶಾಂತೋ ಗಜ್ಜೇಶಮಸಣಯ್ಯೋ ಒಣ್ಣಬೊಮ್ಮಯಃ ||೧೧೩|| ನಿತ್ಯಸೇಮದ
ವೌಲಿಷ್ಟ ನಿಜಭಾವೋ ಒಜ್ಜದಾಸಯಃ | ಗೌಳಭಟ್ಟಾರಕಃ ಪಂಚಾಗ್ನಿಸೂರ್ಯಶ್ಚಾ
ಕಿದೇವಯಃ ||೧೧೪|| ದಸರಯ್ಯೋ ಹೊರಟದಬಂಕಯ್ಯೋ ವೀರಕಲ್ಲಯಃ | ಶ್ರೀ
ಮದ್ದೇವರದಾಸೀಜ ಹಾಟಕೇಶ್ವರಮಲ್ಲಯಃ ||೧೧೫|| ಗೋವಿಂದಭಟ್ಟಾರಕ
ಶ್ಚ ನಿಂಬಾಣದಗಣೇಶ್ವರಃ | ಪಿಟ್ಟವ್ವಾ ಚಿಂಕರಮುಗಿದೇವಸ್ಸಂಕದಬಂಕಯಃ ||
ದಾರಯೋ ಒಮುಗಿದೇವಃ ಕೆಂಬಾವಿಭೋಗಯ್ಯನಾಚಯೌ | ವೀರಮಾಚಯ್ಯ
ಸನ್ಯಾಸಿಮಂಚಯ್ಯೋ ರಗರಾಯಣಾಃ ||೧೧೭|| ವೀರನಾಗಯ್ಯಮಲಯರಾ
ಜೌ ಶಂಕರದಾಸಯಃ | ಶ್ರೀಸೂರಸಾನಿರಮರಗುಂಡಮಲ್ಲಯ್ಯದೇಶಿಕಃ ||೧೧೮||
ಬಾಹೂರಬ್ರಹ್ಮಯೊ ವೀರಬ್ರಹ್ಮಯ್ಯೋ ವೆಂಗಿಸಂಗಯ | ವೀರಕೇದಾರಬಾಚ
ಯ್ಯೋ ಮುದ್ದಯ್ಯಶ್ಚಿಕ್ಕಸೋಮಯಃ ||೧೧೯|| ಮೂರುಜಾವದದೇವಯ್ಯೋ
ಮೃತನಾಥಾಪ್ಪಯಸ್ತಥಾ | ಶಿವನಾಗಯ್ಯ ಬೆಲ್ದೇವೀವೇಮಸಾರಾಧ್ಯಪುಂಗ
ವಾಃ ||೧೨೦|| ವಿಜಯಾಪುರಸೋಮಯ್ಯೋ ರೇವಣಾರ್ಯಶ್ಚ ಹಂಪಯಃ | ಶ್ರೀವೀ
ರಚಾಕಿರಾಜಯ್ಯಶ್ಚಿಪ್ಪಸೂರಪ್ಪಯಸ್ತಥಾ ||೧೨೧|| ಸಿದ್ಧಬುದ್ಧಯ್ಯಸಕಲಿದೇ
ವೌ ಮಾದರದೂಡಯಃ | ಶಿವರಾತ್ರ್ಯಪ್ಪಯೋ ಗೊಗ್ಗೋ ದೋರ್ತ್ಯಕ್ಕಯ್ಯಶ್ಚ
ವೀರಯಃ ||೧೨೨|| ಶೂಲಾಯುಧಯ್ಯ ಇಡುಬನಾಥತಿಪ್ಪಯ್ಯಮಾರಯಾಃ |
ಇಂಡೇಶಾಂತಯ್ಯ ಸಾಹಿತ್ಯಬ್ರಹ್ಮಜೇಟಲವೇಮಯಾಃ ||೧೨೩|| ಬಾಲಬ್ರಹ್ಮ
ಯ್ಯಕೋವೂರಬ್ರಹ್ಮಯಚೌಮುಂಡಬೊಮ್ಮಯಃ | ಬಲದೇವಸ್ಸಗರದಬ್ರಹ್ಮಯ್ಯೋ
ಬುಡ್ಡಬೊಮ್ಮಯಃ ||೧೨೪|| ಕೆಲವೂರಬ್ರಹ್ಮ ಶೂಲಬ್ರಹ್ಮ ರಕ್ಕಸಬೊಮ್ಮಯಾಃ |
ಭಾಸುದೇವಃ ಕಲ್ಲಿನಾಥಘೀವೋ ವಿರುಪಕಲ್ಲಯಃ ||೧೨೫|| ವೀರಸಂಗಯ್ಯೋ ರು
ಲಿಂಗಪೆದ್ದಯಚೌ ಸಿದ್ಧರಾಮಯಃ | ಮೇಧಾವಿರುದ್ರಃ ಪರಮಹಂಸೋ ನಿರ್ವಿಷ
ಸಂಗಯಃ ||೧೨೬|| ರಾಜಮಲ್ಲಯ್ಯಃ ಕುಮಾರಪಾಲಘೂರ್ಜರಭೂಪತಿಃ | ಶ್ರೀ
ಮತ್ಪೆದ್ದಿಗದೇವೌ ಹಿಲಯ್ಯ ರೇಮಮದೇವಯಾಃ ||೧೨೭|| ಜೂಟೂರಮಲ್ಲಯೋ
ವೀರಶಿವಯ್ಯೋ ಗಂಗಮಲ್ಲಯಃ | ಮಂಡಸಂಗಯ್ಯರಾಜಾರ್ಘದೇವೌ ಶಿವಕು

ಮಾರಕಃ ||೧೨೮|| ಶ್ರೀಮನ್ಮೈದುನರಾಮಯ್ಯಸ್ಸಿಂಗಬೊಪ್ಪಯ್ಯಸೆಟ್ಟಯೌ |
ರಾಮೇಶಷಣ್ಮುಂಗರಾಯೌ ಶ್ರೀಮತ್ತಾಳ್ವರ್ತಿಬೊಲ್ಲಯಃ ||೧೨೯|| ಶಿವದೇ
ವೋಽಮೃಗತಿಲಕವ್ವಾ ಕೊಟ್ಟಾರಬಾಚಯಃ | ಶ್ರೀಚಕ್ರವರ್ತಿಚಾಳುಕ್ಯ ಭೀಮೋ
ಭಾಸ್ಕರದೇವಯಃ || ೩೦|| ಕುರ್ಕುಂಟದೇವೇಲೆಹಾಳಬ್ರಹ್ಮಯೌ ರಾಮದೇವ
ಯಃ | ಶ್ರೀಕಾಳಿಮರಸಃಪಾದಾಳಕ್ಕಾಚೈಳೇಶಕೇತಯಃ ||೧೩೧|| ಶ್ರೀಕೋಟಿ
ಮಲ್ಲಯ್ಯಗಣದಾಸಿವೀರಯ್ಯದೇವಯಾಃ | ಆದಯ್ಯೋಽವೀರಬಲ್ಲಾಳ ಶ್ರೀಖರೇ
ಶ್ವರಮಲ್ಲಯಃ ||೧೩೨|| ಪಲ್ಲೇಶಸೋಮಯಶ್ಚನ್ನಬಸವೋಽಲ್ಲಮದೇವಯಃ |
ಶ್ರೀಮತ್ಸದ್ಯೋಜಾತದೇವಾರ್ಯಮರಾಜಾತ್ಮದೇವಯಾಃ ||೧೩೩|| ಏಕಾಂತ
ಮಲ್ಲಯಶ್ಶಂಗುಬೊಲ್ಲಯ್ಯೋಮೂಗಸಂಗಯಃ | ಪ್ರಸಾದಿಬಂಕಯ್ಯಗುರುಭಕ್ತ
ಯ್ಯಶಿವಮುದ್ದಯಾಃ||೧೩೪||ವಿರಾಳದೇವಯ್ಯಜಗದೇವಯ್ಯಾಣತಿಚಂದಯಾಃ|
ಭಾಸುದೇವಶ್ಚಿಕ್ಕರಾಜಮಲ್ಲವತ್ಸೇಶಸೋಮಯಾಃ ||೧೩೫|| ಶ್ರೀಸಿರ್ಧನಯ್ಯ
ದ್ರೋಣೇಶಮಲ್ಲಯಾಚಾರ್ಯಭೀಮಯಾಃ | ಪ್ರಸಾದಿದಾಸಯ್ಯಕೆರೆಯೂರದಾಸ
ಯಶಿವ್ವಯಾಃ ||೧೩೬|| ಗೋಯಿದೇವೋಮಹಬಲದೇವಸ್ಸಂಕದಸೋಮಯಃ|
ದಂಡಿಪ್ರಸನ್ನಬಸವೋಧವಳೇಶ್ವರನಾಮಯಃ || ೩೭|| ವರಗುಂಡಚಕ್ರವರ್ತೀ
ಜತ್ತರಟದಸೋಮಗೊಂಡೆಸೋಮಣ್ಣೌ | ಬಿಸಿಗೆಲಸದದೇವಣ್ಣೊ ನಿಲವಿಗೆಬೈಚ
ಯ್ಯಗೊಸೆಯಮಾರಯ್ಯೌ ||೧೩೮|| ಬೈತಲೆಯಮಾಯಿದೇವೊ ವೆರಲದಮಾರ
ಯ್ಯರುದ್ರಿಯಣ್ಣಯ್ಯೌ | ಸೆಟ್ಟಣ್ಣಸೆಟ್ಟಿಯಯ್ಯೋ ಬೆಟ್ಟದದೇವರಸವೀರಪೊಲ್ಲ
ಯ್ಯೌ || ೧೩೯ || ವಸಿಪುರಶಂಕರದೇವೋ ಬಲಗರಮಾಚಯ್ಯವೆಡ್ಡಸೋಮ
ಯ್ಯೌ | ಆಯ್ದಕ್ಕಿಯಮಾರಣ್ಣೋ ಜೋದುಳಮಾಯಣ್ಣಲೆಂಕಮಂಚಣ್ಣೌ ||
ಸರಪೂರಬಂಕಿದೇವೋಧರ್ಮಯ್ಯೋಹಸಿಯಮಸ್ತಕದಮಾಚಃ | ಪಡಿಯಾರಿಪುತ್ರ
ಣಾರ್ಯ ಶ್ರೀಹಾವಿನಹಾಳಕಲ್ಲಿದೇವಾರ್ಯಃ ||೧೪೧|| ಪಲ್ಲವರಾಯೋ ಗೊಲ್ಲಳ
ರಾಯೋ ಗಂಗಾಪುರದಬಸವಣ್ಣಃ| ಇಂಗುಳಿಗೆಯಮೈಚವ್ವಾ ಶಂಕರಸೆಟ್ಟ್ಯವಗಡ
ಧಬಸವಯ್ಯೌ ||೧೪೨|| ಶ್ರೀಮತ್ಕಂಗಳಬಸವಶ್ಶಿವರಾತ್ರಿಯಸಂಕಣಶ್ಶಿಗುರಿಚೆಂ
ದಃ | ಪ್ರಖ್ಯಾತಾನಿಮಿಷಯ್ಯಶ್ಶ್ವೇತಯ್ಯೋವೀರಗುಡ್ಡವ್ವಾ ||೧೪೩|| ಧವಲ
ಶ್ಚಾಕಲದೇವೀರೇಕವ್ವಾಪಿಚತಥೈವಕಮಳವ್ವಾ | ವೀರರೇಮವ್ವೊಡುತಡಿಮಹಾ
ದೇವ್ಯಾವಪಿತಥೈವಕಮಲವ್ವಾ ||೧೪೪|| ಬೊಂತಾದೇವ್ಯಾದವ್ವಾರೇಬ್ಯವ್ವಾ
ಚಾಪಿಬಿಜ್ಜಮಹದೇವೀ | ಸತ್ಯಕ್ಕಾಚಾಮವ್ವಾ ವೈಜವ್ವಾಪ್ಯರಸವಾಜನಿಂಬ್ಯ
ವ್ವಾ ||೧೪೫|| ಕೊಡಗೂಸುಶ್ಚಾಪಿತಥಾ ಹೊಟ್ಟಲಕೆರೆವೀರಚೋಳವ್ವಾ |

ಏವಂಸಹಸ್ರನಾಮಾನಿ ಗಣಾನಾಂಬುಧಪುಂಗವೈಃ ||೧೪೭||ಆದೃತಾನಿಭ ವಂತ್ಯತ್ರಪಾವನಾನಿಜಗತ್ತ್ರಯೇ | ಗಣಸಾಹಸ್ರನಾಮಾಖ್ಯೇಸ್ತವೇಽಸ್ಮಿನ್ಪಠಿತೇ ಶ್ರುತೇ ||೧೪೮|| ಲಿಖಿತೇಭಕ್ತಿವಿಸ್ಫೂರ್ತಿರ್ಲಭ್ಯತೇ ಶುಭಮೇಧತೇ | ದುರಿತಾನಿಪ್ರ ಣಶ್ಯಂತಿಸಿದ್ಧ್ಯಂತ್ಯಾಶುಮನೋರಥಾಃ ||೧೪೯||ಮಹಾಪ್ರಸಾದಸಂಪತ್ತಿರ್ಜಾ ಯತೇಗಿರಿಜಾಪತೇಃ | ಘನದುಷ್ಕರ್ಮದುಸ್ಸ್ವಪ್ನದುಶ್ಶಕುನಕುಲಾನ್ಯಪಿ || ಸರ್ವಗ್ರಹಾದಿದೋಷಾಶ್ಚ ಜ್ವಲನಾಹಿಜಲೋದ್ಭವಂ | ಮೃಗವೃಶ್ಚಿಕಚೋರಾ ಪಮೃತ್ಯುರೋಗವಿಷೋತ್ಥಿತಂ ||೧೫೦|| ವಿಪಕ್ಷರಕ್ಷಃಪವನಭೂತೋಲ್ಕಾಪ ವಿಭೂಪಜಂ | ದಾರಿದ್ರ್ಯಜಂಭಯಮಪಿಪ್ರವಿನಶ್ಯತಿತತ್ಕ್ಷಣಾತ್ ||೧೫೧|| ಯೇಧನಾರ್ಥಂಪಠಂತ್ಯೇನಂಸ್ತವಂತೈರ್ಲಭ್ಯತೇಧನಂ | ಪಠಂತ್ಯೇನಂಸ್ತವಂ ಪುಣ್ಯಂಭಕ್ತ್ಯಾಯೇಪುತ್ರಕಾಂಕ್ಷಿಣಃ ||೧೫೨|| ತೇಷಾಂಸತ್ಪುತ್ರಜನನೀವಿ ಭೂತಿರುಪಜಾಯತೇ | ಶತ್ರುಕ್ಷಯಾರ್ಥಂಯೇಭಕ್ತ್ಯಾಪಠಂತ್ಯೇನಂಸ್ತವಂಜ ನಾಃ ||೧೫೩|| ತೇಷಾಂಶತ್ರುಕ್ಷಯಕರೀಶಕ್ತಿಸ್ಸಂಜಾಯತೇಕ್ಷಣಾತ್ | ಭು ಕ್ತ್ಯರ್ಥಂಯೇಪಠಂತ್ಯೇತತ್ಸ್ತವಂಭೋಗಸಂಪದಃ || ೧೫೪|| ಲಭ್ಯಂತೇಽಭೀ ಪ್ಸಿತತಮಾಸ್ತೈರತ್ರೈವಮಹೀತಲೇ | ಮುಕ್ತೀಚ್ಛಯಾಸಂಪಠಿತೇಸತ್ಯೇತಸ್ಮಿಂ ಸ್ತವೋತ್ತಮೇ ||೧೫೫|| ಅಚಿರಾದೇವಸಿದ್ಧ್ಯಂತಿತ್ರಿವಿಧಾಮುಕ್ತಯಃಕ್ರಮಾ ತ್| ಭಕ್ತೀಚ್ಛಯಾಽಸ್ಮಿನ್ಪಠಿತೇಭಕ್ತಿಸ್ಸಿದ್ಧ್ಯತ್ಯನುತ್ತಮಾ | ಆಯಾತಿದಿಕ್ಷುಭರಿ ತಾ ಕೀರ್ತಿಶ್ರೀರಪಿಮಂಗಲಾ ||೧೫೬||

ಇತ್ಯಸಂಖ್ಯಾತ ಮಹಾಮಾಹೇಶ್ವರದಿವ್ಯ ಶ್ರೀಪಾದಪದ್ಮನಿರಂತರಭಾವನಾ
ಪರಿರಂಜಿತಹೃದಯ ಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲಭಸ್ಮೀ
ಕೃತಾಖಿಲಭವಬೀಜಸ್ಯ ಶ್ರೀವೀರಶೈವಮತಾಚಾರ್ಯ ಗುರುರಾಜಸ್ಯ
ಕೃತೌ. ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯ
ಚರಿತ್ರೇ ಮಹಿಮಪ್ರಕರಣೇ ಸಹಸ್ರಗಣನಾಮ ಸಂಕೀರ್ತನ
ಕಥನಂ ನಾಮಾಷ್ಟಮೋಽಧ್ಯಾಯಃ.

---

ಈ ಪ್ರಕಾರವಾದ ಗಣಸಹಸ್ರನಾಮಗಳು ವಿದ್ವದ್ವರ್ಯರಿಂದ ಪ್ರೀತಿಸಲ್ಪಟ್ಟುವಾಗಿಯೂ ಲೋಕಪಾವನಕರಗಳಾಗಿಯೂ ಇರುವುವು. ಈ ಸಹಸ್ರನಾಮ ಸ್ತೋತ್ರವನ್ನು ಓದಿದರೂ ಕೇಳಿದರೂ ಬರೆದರೂ ಸಹ ಶಿವಭಕ್ತಿಯು ವೃದ್ಧಿಗೊಳ್ಳುತ್ತದೆ. ಶುಭವುಂಟಾಗುತ್ತದೆ. ಪಾಪವು ಅಳಿದುಹೋಗುತ್ತದೆ. ಸಕಲೇಷ್ಟಾರ್ಥಗಳೂ ಬೇಗನೆ ಸಿದ್ಧಿಸುತ್ತವೆ. ಶಿವಾನುಗ್ರಹ ಸಂಪತ್ತಿಯು ಉಂಟಾಗುತ್ತದೆ. ಮಹಾ ದುಷ್ಕರ್ಮದಿಂದಲೂ, ದುಸ್ವಪ್ನದಿಂದಲೂ, ದುಶ್ಶಕುನದಿಂದಲೂ, ದೊರಕೊಳ್ಳುವ ದುಷ್ಫಲಗಳೂ, ಸಕಲ ಗ್ರಹಭಯಗಳೂ ನಾಶವಾಗುತ್ತವೆ. ಬೆಂಕಿ, ನೀರು, ಸರ್ಪ—ಇವುಗಳಿಂದಲೂ, ಕ್ರೂರಮೃಗಗಳು, ಚೇಳುಗಳು, ಕಳ್ಳರು, ಅಪಮೃತ್ಯು, ರೋಗ, ವಿಷ—ಇವುಗಳಿಂದಲೂ, ಶತ್ರುಗಳು, ರಾಕ್ಷಸರು, ಬಿರುಗಾಳಿ, ಪೀಡೆ, ಧೂಮಕೇತು, ಸಿಡಿಲು, ದೊರೆ, ಬಡತನ—ಇವರುಗಳಿಂದಲೂ ಸಹ ಉಂಟಾಗುವ ಭಯವೆಲ್ಲಾ ತತ್ಕ್ಷಣವೇ ನಾಶವಾಗುತ್ತವೆ. ಯಾರು ದ್ರವ್ಯವನ್ನು ಕೋರಿ ಈ ಗಣಸಹಸ್ರನಾಮ ಸ್ತೋತ್ರವನ್ನು ಓದುವರೋ ಅವರಿಗೆ ದ್ರವ್ಯಲಾಭವಾಗುತ್ತದೆ. ಯಾರು ಪುತ್ರಾಪೇಕ್ಷೆಯಿಂದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುತ್ತಾರೋ ಅವರಿಗೆ ಸತ್ಪುತ್ರ ಸಂಪತ್ತು ಲಭಿಸುತ್ತದೆ. ಯಾರು ಶತ್ರುನಾಶಾರ್ಥವಾಗಿ ಈ ಸ್ತೋತ್ರವನ್ನು ಭಕ್ತಿಯಿಂದ ಓದುತ್ತಾರೋ ಅವರಿಗೆ ಶತ್ರುವಿನಾಶ ಮಾಡುವ ಶಕ್ತಿಯು ಉಂಟಾಗುತ್ತದೆ. ಯಾರು ಸೌಖ್ಯಾರ್ಥವಾಗಿ ಈ ಸ್ತೋತ್ರವನ್ನು ಪಠಿಸುವರೋ ಅವರಿಗೆ ಈ ಭೂತಲದಲ್ಲೇ ಸಕಲೇಷ್ಟಾರ್ಥ ಭೋಗಗಳೂ ಲಭಿಸುತ್ತವೆ. ಮೋಕ್ಷವನ್ನಪೇಕ್ಷಿಸಿ ಯಾರು ಇದನ್ನು ಪಠನಮಾಡುತ್ತಾರೋ ಅವರಿಗೆ ಶೀಘ್ರವಾಗಿ ತ್ರಿವಿಧ ಮುಕ್ತಿಗಳೂ ಲಭಿಸುತ್ತವೆ. ಭಕ್ತಿಯನ್ನು ಕೋರಿ ಯಾರು ಇದನ್ನು ಪಠಿಸುವರೋ ಅವರಿಗೆ ಅತ್ಯುತ್ತಮ ಶಿವಭಕ್ತಿಯು ದೊರೆಕೊಳ್ಳುತ್ತದೆ. ಮತ್ತು ದಿಗಂತ ವಿಶ್ರಾಂತಕೀರ್ತಿಯೂ, ಸೌಮಂಗಲ್ಯ ಸಂಪತ್ತಿಯೂ ಲಭಿಸುತ್ತವೆ.

ಎಂಬಲ್ಲಿಗೆ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರದ ಮಹಿಮಪ್ರಕರಣದೊಳಗೆ
ಪಂಡಿತಾರಾಧ್ಯರು ಸಹಸ್ರ ಶಿವಗಣನಾಮ ಸಂಕೀರ್ತನವನ್ನು ಮಾಡಿದುದನ್ನು
ನಿರೂಪಿಸುವ ಅನೆ ಅಧ್ಯಾಯವು ಸಂಪೂರ್ಣವು.

---

# ಅಥ ನವಮೋಽಧ್ಯಾಯಃ.

## (ಪಂಡಿತಾರಾಧ್ಯದೇವಸ್ಯೋರ್ಧ್ವನೇತ್ರಲಾಭಕಥನಂ)

ಅಥ ಶ್ರೀಪಂಡಿತಾರಾಧ್ಯೋ ಭಕ್ತೇಷು ಪರಿಶಂಸಿಷು | ಗಣಸಾಹಸ್ರನಾಮಾಖ್ಯಸ್ತವಂ ಪಂಚಾಕ್ಷರೀಮಿವ ||೧|| ಪಠನ್ನಕ್ಷೋರಜನನೀ ಜಠರಪ್ರಾಪ್ತಿಕರ್ಮಹೃತ್ | ಅಮರಾರಾಮನಗರಂ ಗತ್ವಾ ಭಕ್ತಗಣಾನ್ವಿತಃ ||೨|| ಅಮರಾರಾಮನಗರೀ ನಿವಾಸ ಮಮರೇಶ್ವರಂ | ವಾಸವಾಧೀಶಮಮರೇಶಾಷ್ಟಕೇನಾತಿಭಕ್ತಿತಃ || ೩ || ಸ್ತುತ್ವಾಭಕ್ತಗಣಾನ್ಸರ್ವಾನ್ನಿವೇಶ್ಯಾಂತರ್ನದಿಸ್ವಯಂ | ಏತನ್ನದ್ಯಾದಕ್ಷಿಣಸ್ಯಾಂ ಭೂಮಿಸ್ತಚ್ಚೋಲಭೂಪತೇಃ ||೪|| ಉತ್ತರಾತುನೃಪಸ್ಯಾಸ್ಯ ಭೂಮಿರ್ನನು ಗಣೇಶ್ವರಾಃ | ವೆಲ್ನಾಡಮಂಡಲಂ ತಸ್ಮಾದತಿಕ್ರಮ್ಯ ಗತಾವಯಂ ||೫|| ಇತಃಪರಮಹಂ ನೇತ್ರೇ ಪ್ರಾಪ್ಸ್ಯಾಮಿ ಕ್ಷಣಮಾತ್ರತಃ | ತಥಾವಿಧೈವಪೂರ್ವೋಕ್ತಾ ಪ್ರತಿಜ್ಞಾಽಸ್ಮಾಭಿರುನ್ನತಾ ||೬|| ಯಾವದ್ಗಚ್ಛೇದ್ಯಮಪುರಂ ಸಚೋಳಧರಣೀಪತಿಃ | ನಪ್ರಾಪ್ಸ್ಯಾವೋ ದೃಶೌತಾವದಿತ್ಯುಕ್ತಂ ಸೋಽಪಿಭೂಪತಿಃ ||೭|| ಅಧುನಾಪ್ರೇತರಾಜಸ್ಯ ನಗ

---

# ೯ ನೆಯ ಅಧ್ಯಾಯವು.

## ಪಂಡಿತಾರಾಧ್ಯರು ಊರ್ಧ್ವನೇತ್ರಗಳನ್ನು ಪಡೆದ ಕಥೆ.

ಬಳಿಕ ಜನ್ಮಭಯವಿದೂರನಾದ ಶ್ರೀ ಪಂಡಿತಾರಾಧ್ಯನು ಸಕಲ ಭಕ್ತರೂ ತನ್ನನ್ನು ಸ್ತೋತ್ರಮಾಡುತ್ತಿರಲಾಗಿ, ಗಣಸಹಸ್ರನಾಮಸ್ತೋತ್ರವನ್ನು ಪಂಚಾಕ್ಷರೀ ಮಂತ್ರದಂತೆ ಪಠನೆಮಾಡುತ್ತ, ಶಿವಗಣಸ್ತೋಮದೊಡನೆ ಕೂಡಿ ಅಮರಾರಾಮವೆಂಬ ಪಟ್ಟಣಕ್ಕೆ ಹೋಗಿ, ||೨|| ಅಲ್ಲಿರುವ ಅಮರೇಶ್ವರನಾಮಕನಾದ ಲಿಂಗಮೂರ್ತಿಯನ್ನು ಕುರಿತು ಅಮರೇಶಾಷ್ಟಕವೆಂಬುದನ್ನು ಮಾಡಿ ಭಕ್ತಿಯಿಂದ ಸ್ತುತಿಸಿ, ಅಲ್ಲಿರುವ ಹೊಳೆಯೊಳಕ್ಕೆ ತಾನು ಇಳಿದು, ಗಣಂಗಳನ್ನೂ ಇಳಿಯಿಸಿ, ಎಲೈ ಗಣಾಧೀಶ್ವರರೇ! ಈ ಹೊಳೆಯಿಂದ ಟೆಂಕಲಿನಲ್ಲಿರುವ ಭೂಮಿಯೆಲ್ಲಾ ಆ ವೆಲ್ನಾಡಚೋಳನದು ||೪|| ಬಡಗಲಿನಲ್ಲಿರುವ ಭೂಮಿಯು ಆ ಧೊರೆಯದಲ್ಲವಷ್ಟೆ. ಅದುಕಾರಣ ನಾವು ವೆಲ್ನಾಡ ದೇಶವನ್ನು ದಾಂಟಿ ಬಂದಿರುವೆವು ||೫|| ಇನ್ನು ಮೇಲೆ ನಾನು ಕ್ಷಣಮಾತ್ರದಲ್ಲಿ ಕಣ್ಣುಗಳನ್ನು ಪಡೆದುಕೊಳ್ಳುತ್ತೇನೆ. ನಾವು ಹಿಂದೆ ಹಾಗೆಯೇ ಆಣೆಯಿಟ್ಟುಕೊಂಡಿದ್ದುದು ||೬|| ಆ ಚೋಳರಾಜನು ಯಮಪುರಕ್ಕೆ ಹೋಗುವವರೆಗೂ ನಾವು ಕಣ್ಣುಗಳನ್ನು ಪಡೆದುಕೊಳ್ಳುವುದಿಲ್ಲವೆಂದು ಶಪಥಮಾಡಿದ್ದೆವು. ಆ ದೊರೆಯಾದರೋ ||೭|| ಈಗ ಯಮಪುರಿಗೆ ಹೋಗಲು ಅರ್ಹನಾಗಿದ್ದಾನೆ ಎಂಬುದಾಗಿ ಹೇಳಿದಕಾರಣದಿ

ರೀಂಗಸ್ತುಮರ್ಹತಿ | ಇತ್ಯಾಲಪಸ್ಸಮಸ್ತೇಭ್ಯೋಭಕ್ತೇಭ್ಯೋ ಭೂತಿವೀಟಿ
ಕಾಃ ||೮|| ದಾತುಮುದ್ಯೋಗಸಮಯೇ ಪ್ರತಿಹಾರಿಣಿತಂಪ್ರಭುಂ | ಪ್ರಾ
ಪ್ತಂದೃಷ್ಟ್ವಾಸ್ಯಯಮಪುರಂ ಸಮಾಗತ್ಯಾಥಸತ್ವರಂ ||೯|| ವಿಜ್ಞಾಪಯತಿಭ
ಕ್ತೇಭ್ಯ ಸ್ಸನ್ತೋಷಾಕ್ರಾನ್ತಮಾನಸಃ | ಶಾಪಾನುಗ್ರಹಸಂಪನ್ನಕೀರ್ತಿ ಸ್ಸ
ನ್ನುತವರ್ತನಃ ||೧೦|| ಕ್ಷತಾಸತಾರ್ತಿರ್ವ್ರತಿನಾಂ ಚಕ್ರವರ್ತೀಗುಣೋನ್ನತಃ |
ಸರ್ವಲೋಕಾರಾಧ್ಯಮೂರ್ತಿ ರ್ಭಕ್ತೇಭ್ಯಃ ಪ್ರಣತೋಭುವಿ ||೧೧|| ಸ್ಮೃ
ತಪ್ರಮಥರುದ್ರಶ್ರೀಭಕ್ತಪಾದಸರೋರುಹಃ | ಪ್ರಸಾದಪುಷ್ಪವಸ್ತ್ರಾಣಿ ನಿಹಿ
ತಾನ್ಯಕ್ಷಿರಂಧ್ರಯೋಃ ||೧೨|| ಅಪಾಸ್ಯೈಷೀತ್ಕ್ಷಣೇ ತಸ್ಮಿನ್ಕೃಪಯಾಗಿರಿಜಾ
ಪತೇಃ | ವಿವೃತೇಕೋಶಗೇಹೇಽಸ್ತಃ ಪದ್ಮರಾಗಾವಿವೋಜ್ವಲೌ ||೧೩|| ಸ್ವ
ಕ್ಕುರ್ವತೀರವೇಃ ಕಾನ್ತಿಂ ತರುಣದ್ಯುತಿಮಂಡಲೈಃ | ಊರ್ಧ್ವೇವಿಲೋಚನೇ
ಜಾತೇ ಪಂಡಿತಾರಾಧ್ಯಸದ್ಗುರೋಃ ||೧೪|| ಪಂಡಿತೇಂದ್ರಸ್ಯತೇನೇತ್ರೇ ಪದ್ಮ
ರಾಗಮಣೀಕಿಮು | ಕಿಂಪುಂಡರೀಕೇಸಂಪೂರ್ಣಸುಧಾಕರಕಲೇಕಿಮು ||೧೫||
ಕಿಂಮುಕ್ತಿಗೋಳಕೇ ಭವ್ಯಪ್ರಮೋದಸ್ಯಾಂಕುರಾಕಿಮು | ಕಿಂಮಹದ್ಭಾಗ್ಯ
ವೃಕ್ಷಸ್ಯ ಫಲೇಕಿಂಭಕ್ತಿದರ್ಪಣೇ ||೧೬|| ವಿಮಲಾಮೃತಪಿಣ್ಡೌಕಿಂ ಕೃಪಾ

---

ಸಕಲ ಭಕ್ತರಿಗೂ ವಿಭೂತಿ ವೀಳಯವನ್ನು ಕೊಡುವುದಕ್ಕೆ ಉಜ್ಜುಗಿಸುವಷ್ಟರಲ್ಲಿ, ದೊರೆಯು
ಯಮಪುರಿಗೆ ಹೋದುದನ್ನು ಕಂಡ ಕಂಚುಕಿಯೊಬ್ಬನು ಓಡಿಬಂದು ಸಂಗತಿಯನ್ನು ಭಕ್ತ
ಮಂಡಲಿಗೆ ಬಿನ್ನಯಿಸಲಾಗಿ, ಸಂತೋಷಚಿತ್ತನೂ, ಶಾಪಾನುಗ್ರಹ ಸಾಮರ್ಥ್ಯದಿಂದ
ಉಜ್ವಲಕೀರ್ತಿಯುಕ್ತನೂ, ಶ್ಲಾಘ್ಯವಾದ ನಡತೆಯುಳ್ಳವನೂ ||೧೦|| ಶರಣಾಗತರ ಮನಃ
ಕ್ಲೇಶಗಳನ್ನು ನಾಶಮಾಡಿದವನೂ, ಶಿವಾಚಾರ ಸಂಪನ್ನರಲ್ಲಿ ಚಕ್ರವರ್ತಿಯೂ, ಸದ್ಗುಣಾ
ಢ್ಯನೂ, ಜಗತ್ಪೂಜ್ಯನೂ ಆದ ಪಂಡಿತಾರಾಧ್ಯನು ಭಕ್ತವೃಂದಕ್ಕೆ ಮಣಿದು ||೧೧|| ಪ್ರಮ
ಥಗಣ ರುದ್ರಗಣ ಭಕ್ತಗಣರುಗಳ ಪಾದಕಮಲಗಳನ್ನು ಧ್ಯಾನಿಸಿ, ತನ್ನ ಕಣ್ಣುಗಳ ಗುಳಿಯ
ಮೇಲೆ ಮುಚ್ಚಿದ್ದ ಶಿವಪ್ರಸಾದ ಕುಸುಮಗಳನ್ನೂ ವಸ್ತ್ರವನ್ನೂ ||೧೨|| ತೆಗೆದುಬಿಟ್ಟನು.
ಆ ಕೂಡಲೇ ಪರಮೇಶ್ವರನ ಕೃಪೆಯಿಂದ, ಶಿವನ ಬೊಕ್ಕಸದ ಬಾಗಿಲನ್ನು ತೆರೆಯಲಾಗಿ ಒಳಗೆ
ಹೊಳೆಯುತ್ತಿರುವ ಎರಡು ಪದ್ಮರಾಗಮಣಿಗಳೋ ಎಂಬಂತೆ ಹೊಳೆಯುತ್ತಲೂ ||೧೩||
ತಮ್ಮ ಪ್ರಭೆಯಿಂದ ಸೂರ್ಯನ ತೇಜಸ್ಸನ್ನು ಕೂಡ ತಿರಸ್ಕರಿಸುತ್ತಲೂ ಇರುವ ಎರಡು ಕಣ್ಣು
ಗಳು ಪಂಡಿತಾರಾಧ್ಯನಿಗೆ ಮೂಡಿದುವು ||೧೪|| ಆ ಕಣ್ಣುಗಳನ್ನು ನೋಡಿದ ಜನರು ಇವೇ
ನು ಪದ್ಮರಾಗ ರತ್ನಗಳೋ! ಅಥವಾ ಬಿಳಿದಾವರೆಗಳೋ! ಪೂರ್ಣಚಂದ್ರಮನ ಕಳೆಗಳೋ!
||೧೫|| ಮೋಕ್ಷದ ಗುಡ್ಡೆಗಳೋ! ಪರಮಾನಂದದ ಮೊಳಕೆಗಳೋ! ಮಹಾದೃಷ್ಟವೃಕ್ಷದ
ಹಣ್ಣುಗಳೋ! ಶಿವಭಕ್ತಿಯ ಕನ್ನಡಿಗಳೋ! ||೧೬|| ಅಮೃತದ ಉಂಡೆಗಳೋ! ಕರುಣಾ

ಯಾಃ ಕಿಂಕರಣ್ಯಕೇ | ಗಣಾಸ್ಥಾನಪ್ರದೀಪಾಃ ಕಿಂ ಬಾಲಾರ್ಕಶಕಲೇ ಕಿಮು
||೧೭|| ನಿರ್ಮಲಜ್ಞಾನಬೀಜೇ ಕಿಮಿತಿ ಸಂಶಯಿತೇ ಜನೇ | ಕಿಂಚೈತನ್ನೇತ್ರಚಾ
ರುತ್ವಂ ಭಕ್ತಿಸ್ತ್ರೀನೇತ್ರಚಾರುತಾ ||೧೮|| ಏತನ್ನೇತ್ರಪ್ರಭಾ ವೀರಭಕ್ತಿಚಿನ್ತಾ
ಮಣಿಪ್ರಭಾ | ಏತದ್ದೃಶೋರ್ದೃಷ್ಟಯಶ್ಶ್ರೀಗುರೋರ್ಜ್ಞಾನಾಕ್ಷಿದೃಷ್ಟಯಃ
||೧೯|| ಏತಲ್ಲೋಚನರಾಗಂ ಸ್ವಹೃದೀಶಾಂಘ್ರ್ಯಬ್ಜರಕ್ತಿಮಾ | ಪ್ರಾಣೇಶಾಂ
ಘ್ರಿನಖಾದರ್ಶ ಧಾವಲ್ಯಮನಯೋರ್ದೃಶೋಃ ||೨೦|| ಧಾವಲ್ಯಮಿತಿಶಂಸತ್ಸು
ಜನೇಷ್ವತಿಮನೋಹರೇ | ಮಹಿತೇ ಕಾನ್ತಿಭರಿತೇ ರೇಜಾತೇ ತದ್ವಿಲೋಚನೇ
||೨೧|| ನಿರೀಕ್ಷ್ಯ ಲೋಚನೇ ತಸ್ಯ ಗುರುಮೂರ್ತೇಶ್ಶಿವಾಕೃತೇಃ | ಪೌರೇಷು
ಮುನಿವೃಂದೇಷು ಸ್ತುವತ್ಸ್ವದ್ಭುತಮಿತ್ಯಥ ||೨೨|| ಸಮಸ್ತಭಕ್ತಸಂದೋಹೇ
ಸನ್ತೋಷಭರಿತೇ ಸತಿ | ಪರಾಪರಸ್ಸ್ವಯಂಜ್ಯೋತಿಸ್ಸ್ವರೂಪಸ್ಯ ಮಹೇಶಿತುಃ
||೨೩|| ಏಕಸನ್ನೇತ್ರಸಂಜಾತ ನೇತ್ರಪೋತಾವಿವಸ್ಥಿತೇ | ಸ್ವೋರ್ಧ್ವನೇತ್ರೇ ಸ
ಮುನ್ಮೀಲ್ಯ ದಿವ್ಯತೇಜೋವಿರಾಜಿತೇ ||೨೪|| ಗಣಾನ್ವಿಲೋಕಯಂಸ್ತ್ವೇಷಾಂ
ಕೃಪಾಮೃತಪಯೋನಿಧೌ | ಉವಾಸೋನ್ಮಜ್ಜಯನ್ಪ್ರೀತ್ಯಾ ಮಲ್ಲಿಕಾರ್ಜುನ
ಪಂಡಿತಃ ||೨೫||

---

ರಸವನ್ನು ತುಂಬಿದ ಭರಣಿಗಳೋ! ಶಿವಗಣರ ಆಸ್ಥಾನ ಮಂಟಪದಲ್ಲಿರುವ ದೀವಿಗೆಗಳೋ! ಬಾಲಸೂರ್ಯನ ತುಣುಕುಗಳೋ! ||೧೭|| ನಿರ್ಮಲ ಶಿವಜ್ಞಾನದ ಬಿತ್ತುಗಳೋ! ಎಂಬುದಾಗಿ ಸಂಶಯಪಡುತ್ತಿರಲಾಗಿ, ಮತ್ತೂ ಈ ಕಣ್ಣುಗಳ ಸೌಂದರ್ಯವು ಭಕ್ತ್ಯಂಗನೆಯ ಕಣ್ಣುಗಳ ಸೌಂದರ್ಯವೋ! ||೧೮|| ಈ ಕಣ್ಣುಗಳ ಕಾಂತಿಯು ವೀರಭಕ್ತಿಯೆಂಬ ಚಿಂತಾರತ್ನದ ಕಾಂತಿಯೋ! ಈ ಕಣ್ಣುಗಳ ನೋಟವು ಶ್ರೀಗುರುವಿನ ಜ್ಞಾನಲೋಚನದ ನೋಟವೋ! ||೧೯|| ಈ ಕಣ್ಣುಗಳ ಕೆಂಪು ತನ್ನ ಹೃದಯ ಕಮಲದಲ್ಲಿ ವಾಸವಾಗಿರುವ ಪರಮೇಶ್ವರನ ಪಾದ ಕಮಲದ ಕೆಂಬಣ್ಣವೋ! ಈ ಕಣ್ಣುಗಳ ಬಿಳುಪು ಹೃದಯೇಶನಾದ ಪರಶಿವನ ಪಾದನಖದ ಬಿಳುಪೋ! ||೨೦|| ಎಂಬುದಾಗಿ ಅಲ್ಲಿದ್ದ ಜನರು ಹೊಗಳುತ್ತಿರಲಾಗಿ, ಪಂಡಿತಾರಾಧ್ಯನ ಮನೋಹರಗಳಾದ ಆ ಕಣ್ಣುಗಳು ಕಾಂತಿಪೂರ್ಣವಾಗಿ ಒಪ್ಪಿದುವು ||೨೧|| ಶಿವಸ್ವರೂಪನಾದ ಆ ಪಂಡಿತಾರಾಧ್ಯ ಗುರುಮೂರ್ತಿಯ ಕಣ್ಣುಗಳನ್ನು ನೋಡಿ ಪಟ್ಟಣದಲ್ಲಿದ್ದ ಮುನಿಸ್ತೋಮವೆಲ್ಲವೂ ಆಶ್ಚರ್ಯ ಆಶ್ಚರ್ಯವೆಂದು ಹೊಗಳುತ್ತಿರಲಾಗಿ ||೨೨|| ಸಕಲ ಭಕ್ತವೃಂದವೂ ಸಂತೋಷಭರಿತವಾಗಲು, ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನು, ಪರಾಪರ ಪರಂಜ್ಯೋತಿಸ್ವರೂಪನಾದ ಪರಶಿವನ ಕಣ್ಣುಗಳಿಂದ ಹುಟ್ಟಿದ ಮರಿಗಳಂತಿರುವ ತನ್ನ ಊರ್ಧ್ವನಯನಗಳನ್ನು ಚೆನ್ನಾಗಿ ತೆರೆದು, ಶಿವಗಣಂಗಳನ್ನೆಲ್ಲಾ ದರ್ಶನಮಾಡಿದವನಾಗಿ, ಅವರ ದಯಾಮೃತ ಸಮುದ್ರದಲ್ಲಿ ಸಂತೋಷದಿಂದ ಮುಳುಗಾಡುತ್ತಲಿದ್ದನು ||೨೩||

ಇತಿ.......ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಮಹಿಮಪ್ರಕರಣೇ ತತ್ಪಂಡಿತಾರಾಧ್ಯದೇವಸ್ಯಾಮರಾರಾಮನಗರ ಗಮನೋರ್ಧ್ವನೇತ್ರಲಾಭಕಥನಂನಾಮ ನವಮೋಽಧ್ಯಾಯಃ.

## ಅಥ ದಶಮೋಽಧ್ಯಾಯಃ.

### ವಿಷ್ಣ್ವಾದಿಭಕ್ತ ನೇತ್ರಲಾಭಕಥನಂ.

ಅಥ ಶ್ರೀಪಂಡಿತಾರಾಧ್ಯದೇವಸ್ಯಾಮಿತತೇಜಸಃ | ತದೂರ್ಧ್ವನೇತ್ರೇವೀಕ್ಷ್ಯೈವಂತುಷ್ಟುವುರ್ಭಕ್ತಪುಙ್ಗವಾಃ ||೧|| ವಿಚಿತ್ರಮೇತಚ್ಚರಿತಂ ನಕಿಂಸಮ್ಯಗ್ವಿಚಾರಿತೇ | ಪುರಾಹರಾಲ್ಲಬ್ಧವಂತೋ ಭಕ್ತಾ ನಾಕ್ಷೀಣಿಸನ್ತಿಕಿಂ ||೨|| ಜಲಂಧರೇಣದೈತ್ಯೇನ ಪುರಾಕಮಲಲೋಚನಃ | ಯೋದ್ಧುಂಗತ್ವಾಽಕರೋದ್ಯುದ್ಧಂ ಸತುತಸ್ಯಬಲಕ್ಷಯಮ್ ||೩|| ಕೃತ್ವಾನಿಬಧ್ಯಗಗನೇಚಿಕ್ಷೇಪಾಕ್ಷೀಣಸಾಹಸಃ| ತಸ್ಮಿನ್ ಷೋಡಶಸಾಹಸ್ರಸಮಾಃ ಕ್ರೋಶತ್ಯಥಾಂಬರೇ ||೪|| ತಚ್ಛ್ರುತ್ವಾಗಿರಿಜೇಶಾಯ ವೃಷಭೇಂದ್ರೋವ್ಯಜಿಜ್ಞಪತ್| ಶಿವೋಪಿದೈತ್ಯನಿಕಟಂ ಪ್ರಾಪ್ಯಶಸ್ತ್ರಂ

---

ಎಂಬಲ್ಲಿಗೆ ಶ್ರೀ ಪಂಡಿತಾರಾಧ್ಯರು ಊರ್ಧ್ವನೇತ್ರಗಳನ್ನು ಪಡೆದುಕೊಂಡ ಕಥೆಯನ್ನು ನಿರೂಪಿಸುವ ೯ನೆಯ ಅಧ್ಯಾಯವು ಮುಗಿದುದು.

## ೧೦ ನೆಯ ಅಧ್ಯಾಯವು.

### (ಶಿವನಿಂದ ನೇತ್ರವನ್ನು ಪಡೆದ ಭಕ್ತರುಗಳ ಕಥೆ)

ಬಳಿಕ ಭಕ್ತಶ್ರೇಷ್ಠರುಗಳು ಅತಿಶಯ ಪ್ರಭಾವಶಾಲಿಯಾದ ಆ ಪಂಡಿತಾರಾಧ್ಯನ ಊರ್ಧ್ವನೇತ್ರಗಳನ್ನು ನೋಡಿ ಸಂತೋಷಪಟ್ಟವರಾಗಿ ||೧|| ವಿಚಾರಮಾಡಿ ನೋಡಿದರೆ ಈ ಚರಿತ್ರವು ಆಶ್ಚರ್ಯಕರವಾದುದಲ್ಲವೆ? ಪೂರ್ವದಲ್ಲಿ ಪರಶಿವನಿಂದ ಕಣ್ಣುಗಳನ್ನು ಪಡೆದುಕೊಂಡ ಭಕ್ತರಿರಲಿಲ್ಲವೆ? || ೨ || ಯಾರೆಂದರೆ—ವಿಷ್ಣುವು ಜಲಂಧರಾಸುರನಮೇಲೆ ಯುದ್ಧಕ್ಕೆ ಹೋದನು. ಅತ್ಯಂತ ಸಾಹಸಿಯಾದ ಆ ದೈತ್ಯನಾದರೊ ವಿಷ್ಣುವನ್ನು ಸೋಲಿಸಿ ||೩|| ಕೈಕಾಲುಗಳನ್ನು ಕಟ್ಟಿ ಅಂತರಿಕ್ಷಕ್ಕೆ ಎಸೆದುಬಿಟ್ಟನು. ವಿಷ್ಣುವು ೧೬ ಸಾವಿರ ವರ್ಷಗಳವರೆಗೆ ಅಂತರಿಕ್ಷದಲ್ಲಿ ಗೋಳಿಡುತ್ತಿರಲಾಗಿ ||೪|| ಅದನ್ನು ವೃಷಭೇಶ್ವರನು ಕೇಳಿ ಪರಶಿವನಿಗೆ ಬಿನ್ನಯಿಸಿದನು. ಆತನು ಅಸುರನ ಬಳಿಗೆ ಹೋಗಿ, ಎಲೆ ಜಲಂಧರನೆ! ಶಸ್ತ್ರವನ್ನು ತೆಗೆದುಕೋ,

ಜಲಂಧರ ||೫|| ಗೃಹಾಣಯುದ್ಧ್ಯಸ್ವಮಯೇತ್ಯವದತ್ತಂ ನಿಶಾಚರಂ | ಶಿವೂ ಯುಧೇನಭವತಾ ಯೋದ್ಧುಂಮೇವೃದ್ಧ ತಾಪಸ ||೬|| ಇತ್ಯುಕ್ತಸ್ತೇನಸಶಿವಶ್ಶ ಸ್ತ್ರಹೀನೇನ ಸಂಗರಃ | ಸಾಯುಧಸ್ಯನಹಿನ್ಯಾಯ್ಯ ಇತ್ಯಾಲಸ್ಯಪಯೋನಿಧೌ ||೭|| ಸ್ವವಾಮಚರಣಾಙ್ಗುಷ್ಠಂ ಭ್ರಮಯಾಮಾಸವೇಗತಃ | ತಸ್ಮಿನ್ ಜಲಾವ ರ್ತಪೂರೇ ಸ್ಯಕ್ಕುರ್ವತ್ಕೋಟಿಭಾಸ್ಕರೇ ||೮|| ಚಕ್ರಾಕಾರತ್ವಮಾಪನ್ನೇ ಸಮಾ ಹೃತ್ಯಾಸುರಾಧಿಪಂ | ಚಕ್ರಾಯುಧಂಗೃಹಾಣೈತ ದಿತ್ಯುಕ್ತೇಶಂಭುನಾಽಸುರಃ ||೯|| ಮಮಾರ್ಹಮಾಯುಧಮಿತಿಕರಾಭ್ಯಾಂ ಪರಿಗೃಹ್ಯತತ್ | ಆತ್ಮಾನಮಾ ವೃತಂ ಚಕ್ರಮಾಕಂಠಾಂತಂ ಪ್ರಯತ್ನತಃ ||೧೦|| ಬಲಾದುದ್ಧೃತವಾಂಸ್ತಚ್ಚ ಚಿ ಚ್ಛೇದಾಸುರಕಂಧರಾಂ | ತತೋಜನಾರ್ದನೋಭಕ್ತ್ಯಾ ಸಮುಪಾಸ್ಯಮಹೇ ಶ್ವರಂ ||೧೧|| ಜಲನ್ಧರಾನ್ಧಕಮದ ಸಿಂಧೂರಾಸುರವೈರಿಣಂ | ದೈತ್ಯಾಪಹ ರಣಾಯಾಶು ತಚ್ಚಕ್ರಮುಪಲಬ್ಧವಾನ್ ||೧೨|| ಬಲೇನತಸ್ಯಚಕ್ರಸ್ಯ ಬಹೂನ್ನಿ ರ್ಜಿತ್ಯರಾಕ್ಷಸಾನ್| ಶಿವಾನುಮತ್ಯಾವಿಚರನ್ ಸವಿಷ್ಣುರ್ಭುವನಾನ್ತರೇ ||೧೩|| ಕದಾಚಿನ್ಮುಕ್ತವಾಂಶ್ಚಕ್ರಂ ದಧೀಚಾವತಿಕೋಪತಃ | ತಚ್ಚಕ್ರಮಭವತ್ತೂರ್ಣಂ

---

ನನ್ನೊಡನೆ ಯುದ್ಧಕ್ಕೆ ಬಾ, ಎಂದು ಕರೆದನು. ಅಸುರನಾದರೊ—ಎಲೆ ಮುದಿತಾಪಸನೆ! ನಿನ್ನೊಡನೆ ಕಾಳಗಮಾಡುವುದಕ್ಕೆ ನನಗೆ ಆಯುಧವಾಗಬೇಕೆ? ||೬|| ಎನ್ನಲಾಗಿ, ಪರಶಿ ವನು—ಹಾಗಾದರೆ ನಿರಾಯುಧನಾದವನೊಡನೆ ಸಾಯುಧನಾದವನು ಯುದ್ಧಮಾಡುವುದು ನ್ಯಾಯವಲ್ಲ ಎಂದು ಹೇಳಿ, ಸಮುದ್ರದಲ್ಲಿ ತನ್ನ ಎಡಗಾಲಿನ ಹೆಬ್ಬೆರಲನ್ನು ವೇಗವಾಗಿ ಸುತ್ತಿಸಿದನು. ಆ ತಿರುಗುವಿಕೆಯಿಂದ ಉಂಟಾದ ಸುಳಿಯ ರೇಖೆಯು ಕೋಟಿಸೂರ್ಯಪ್ರಭೆಯ ನ್ನು ತಿರಸ್ಕರಿಸುವ ಚಕ್ರಾಕಾರವನ್ನು ಪಡೆದುಕೊಳ್ಳಲಾಗಿ, ಆಗ ಶಂಕರನು ಅಸುರನನ್ನು ಕರೆದು, ಇದೋ ಈ ಚಕ್ರಾಯುಧವನ್ನು ತೆಗೆದುಕೊ ಎಂದು ಹೇಳಲಾಗಿ ||೯|| ಆತನು ಇದು ನನಗೆ ಯೋಗ್ಯವಾದ ಆಯುಧವೆಂದು ಹೇಳುತ್ತ, ಎರಡು ಕೈಗಳಿಂದಲೂ ಅದನ್ನು ಹಿಡಿದು, ಬಲು ತೂಕವಾಗಿದ್ದುದರಿಂದ ಪ್ರಯತ್ನಪಟ್ಟು ಮುಕ್ಕರಿದು ತಲೆಯನ್ನು ಕೊಟ್ಟು ಕೊರಲಿನ ಪರ್ಯಂತಕ್ಕೆ ಸಾಹಸದಿಂದ ಎತ್ತಿದನು. ಆ ಚಕ್ರವು ದೈತ್ಯನ ಕೊರಲನ್ನು ಕತ್ತರಿಸಿಬಿಟ್ಟಿತು. ಬಳಿ ಕ ವಿಷ್ಣುವು ಜಲಂಧರಾಸುರ ಅಂಧಕಾಸುರ ಗಜಾಸುರರುಗಳನ್ನು ಧ್ವಂಸಮಾಡಿದ ಪರಶಿವನನ್ನು ಭಕ್ತಿಯಿಂದ ಧ್ಯಾನಿಸಿ, ಅವನನುಗ್ರಹದಿಂದ ಅದೇ ಚಕ್ರವನ್ನು ದೈತ್ಯವಿನಾಶಕ್ಕೋಸ್ಕರವೆಂದು ತಾನು ಪಡೆದುಕೊಂಡನು. ||೧೨|| ಬಳಿಕ ಹರಿಯು ಆ ಚಕ್ರದ ಬಲದಿಂದ ಅನೇಕ ರಾಕ್ಷಸ ರನ್ನು ಕೊಂದು, ಶಿವನ ಅನುಮತಿಯಪ್ರಕಾರ ಲೋಕಾಂತರಗಳಲ್ಲಿ ಸಂಚರಿಸುತ್ತಿದ್ದು ಒಂ ದಾನೊಂದು ಕಾಲದಲ್ಲಿ ಅತ್ಯಂತ ಕೋಪದಿಂದ ದಧೀಚಿ ಮಹರ್ಷಿಯ ಮೇಲೆ ಆ ಚಕ್ರವನ್ನು

ಶತಧಾಶಕಲೀಕೃತಂ ||೧೪|| ವಿಜೃಂಭಿತೇಷುದೈತ್ಯೇಷು ತತೋವಿಷ್ಣುರ್ಮಹೇಶ್ವರಂ | ಸಂಪೂಜ್ಯಪೂರ್ವವಚ್ಚಕ್ರಂ ಪ್ರಾಪ್ಸ್ಯಾಮ್ಯತ್ಯತಿಭಕ್ತಿತಃ ||೧೫|| ಸ್ವಯಂನಿತ್ಯಮುಪಾದಾಯ ಕಮಲಾನಾಂ ಸಹಸ್ರಕಂ| ಷಡಕ್ಷರೀಭಾವನಯಾಶಿವನಾಮ್ನಾಂಸಹಸ್ರಕೇ ||೧೬|| ಏಕೈಕಂ ಪಂಚಾಕ್ಷರೇಣ ಸಂಪ್ರೀತ್ಯೈಕೈಕಮಂಬುಜಂ | ಭಕ್ತ್ಯಾಸಮರ್ಪ್ಯದೇವಾಯ ಶಿವಾಯಪರಮಾತ್ಮನೇ ||೧೭|| ಲಸತ್ಪುರಾಣವಚಸಿ ಯದಾಸ್ಯಾತ್ತದಸಂಭವಃ | ನೇತ್ರಮುತ್ಪಾಟ್ಯೇತಿಪರಿಶ್ರುತೇ ಸಹರೀಕದಾ ||೧೮|| ನ್ಯೂನೇಸತ್ಯೇಕಕಮಲೇ ಕಮಲಾನಾಂ ಸಹಸ್ರಕೇ| ಸಮರ್ಪ್ಯನೇತ್ರಂ ಗೌರೀಶಾಲ್ಲೇಭೇ ತಚ್ಚಕ್ರಮಕ್ಷಿಚ ||೧೯|| ಹರಿಸ್ಸಮರ್ಪಕೋದಾತಾಹರಃ ಕಿಲಕಿಮದ್ಭುತಂ | ದ್ವಿವಾರಂಘೋರತಪಸಾ ಸಮುಪಾಸ್ಯಹರಿಶ್ಶಿವಂ ||೨೦|| ಆಮ್ನಾಯೇವಿಶ್ವತಶ್ಚಕ್ಷುರ್ವಿಶ್ವತೋಽಕ್ಷಿಶಿರೋಮುಖಂ | ಇತಿಚೋಕ್ತೇಸಮಸ್ತಾಂಗ ಸಮಂಗೀಕೃತಲೋಚನಾತ್ ||೨೧|| ಲೇಭೇಶ್ರೀಮನ್ಮಹಾದೇವಾ ದೇಕಮೇವವಿಲೋಚನಂ | ನಪ್ರಾಪನಿಖಿಲಾಂಗೇಷು ನೇತ್ರಾಣಿತ್ರೀಣ್ಯ

---

ಪ್ರಯೋಗಿಸಿದನು. ಕೂಡಲೇ ಆಚಕ್ರವು ನೂರಾರು ತುಣುಕುಗಳಾಗಿ ಭಗ್ನವಾಯಿತು||೧೪|| ವಿಷ್ಣುವಿನ ಚಕ್ರವು ಹಾಳಾಯಿತೆಂದು ತಿಳಿದ ಕೂಡಲೇ ದೈತ್ಯರುಗಳ ಹಾವಳಿ ಹೆಚ್ಚಿತು. ಆಗ ಹರಿಯು ಮತ್ತೆ ಶಿವನನ್ನು ಪೂಜಿಸಿ ಚಕ್ರಾಯುಧವನ್ನು ಪಡೆದುಕೊಳ್ಳುತ್ತೇನೆಂದು ಯೋಚಿಸಿ, ಅತ್ಯಂತ ಭಕ್ತಿಯಿಂದ ||೧೫|| ಪ್ರತಿದಿನವೂ ಸಾವಿರ ಕಮಲಗಳನ್ನು ಎತ್ತಿಕೊಂಡು ಬಂದು, ಶಿವಸಹಸ್ರನಾಮದಲ್ಲಿ ಪ್ರತಿನಾಮವನ್ನೂ ಷಡಕ್ಷರ ಮಂತ್ರಭಾವನೆಯಿಂದ ಪಂಚಾಕ್ಷರಸಮೇತವಾಗಿ ಉಚ್ಚರಿಸುತ್ತ ನಾಮಕ್ಕೆ ಒಂದೊಂದು ಕಮಲದಂತೆ ಭಕ್ತಿಯಿಂದ ಪರಮಾತ್ಮನಾದ ಶಂಕರನಿಗೆ ಸಮರ್ಪಿಸಿ ||೧೬|| ಪುರಾಣದಲ್ಲಿ "ಹರಿಯು ಸಹಸ್ರ ಕಮಲಗಳಲ್ಲಿ ಒಂದು ಕಮಲ ಕಡಿಮೆಯಾಗಲಾಗಿ ತನ್ನ ಕಣ್ಣನ್ನು ಕಿತ್ತು ಶಿವನಿಗೆ ಸಮರ್ಪಿಸಿದನು" ಎಂದು ಹೇಳಲ್ಪಟ್ಟಿರುವಂತೆ, ಆ ಸಹಸ್ರ ಕಮಲಗಳಲ್ಲಿ ಒಂದು ಕಡಿಮೆಯಾಗಿರಲಾಗಿ, ತನ್ನ ಕಣ್ಣನ್ನೇ ಸಮರ್ಪಿಸಿ, ಆ ಕಣ್ಣನ್ನೂ ಚಕ್ರವನ್ನೂ ಕೂಡ ಪಡೆದುಕೊಂಡನು. ||೧೯|| ಮಹಾಕವಿ ಕಾಳಿದಾಸನು ಈ ವಿಷ್ಣು ಚರಿತ್ರವನ್ನು ಕೇಳಿ, ವಿಷ್ಣುವು ಸಮರ್ಪಿಸತಕ್ಕವನೂ, ಶಿವನು ಕೊಡತಕ್ಕವನೂ ಅಲ್ಲವೆ? ಏನಾಶ್ಚರ್ಯ! ಹರಿಯು ಶಿವನನ್ನು ಕುರಿತು ಎರಡಾವೃತ್ತಿ ತಪಸ್ಸನ್ನು ಮಾಡಿ ||೨೦|| ವೇದದಲ್ಲಿ ಶಿವನನ್ನು ಕುರಿತು ಎಲ್ಲಾ ಕಡೆಯೂ ಕಣ್ಣುಳ್ಳವನು, ಎಲ್ಲಾ ಕಡೆಯೂ ಶಿರಸ್ಸುಳ್ಳವನು, ಎಲ್ಲಾ ಕಡೆಯೂ ಮುಖವುಳ್ಳವನು ಎಂಬುದಾಗಿ ಹೇಳಲ್ಪಟ್ಟಿರುವ ಪ್ರಕಾರ ಸರ್ವಾಂಗದಲ್ಲೂ ಕಣ್ಣುಗಳುಳ್ಳ ಆ ಪರಮೇಶ್ವರನಿಂದ ಹರಿಯು ಒಂದೇ ಕಣ್ಣನ್ನು ಪಡೆದುಕೊಂಡನೇಹೊರತು ಎಲ್ಲಾ ಶರೀರದಲ್ಲೂ ಕಣ್ಣುಗಳನ್ನು ಪಡೆದುಕೊಳ್ಳಲಿಲ್ಲ. ಅಥವಾ ಮೂರು

ಘಾಪಿವಾ ||೨೬|| ಸನೇತ್ರಲಾಭಃ ಕಿಂಲಾಭಃ ಪ್ರತ್ಯಕ್ಷೇಪರಮೇಶ್ವರೇ | ಸವಿಹಾ ಚೇಸಂಸತದಿತಿ ಸಮರ್ಪ್ಯನಿಜಲೋಚನೇ ||೨೩|| ಕಾಳಿದಾಸೋನೇತ್ರಕಾಶಿ ಮು ಪಾಲಭತಶಂಕರಾತ್ | ಕಥ್ಯತೇತತ್ಕಥೇದಾನೀಂ ಪರಮಾಶ್ಚರ್ಯಕಾರಿಣೀ ||೨೪|| ಭಟ್ಟಭಲ್ಲಟಮಾಘಸ್ತ್ವ ಭೋಜಭಾರವಿಭಿಕ್ಷವಃ | ಪುಳಿಂದಭಟ್ಟಿಗೋಪಾಲಿ ವೀರ ಕರ್ಪೂರಭಾನವಃ ||೨೫|| ಕ್ಷೇಮಿವಿದ್ಯಾಧರಕ್ಷೀರ ಕೌಮಾರಭವಭೂತಯಃ | ಶ್ರೀರುದ್ರಭಟ್ಟಭರತ ಶಂಕರಶ್ಶಕಟಾಯನಃ ||೨೬|| ಉತ್ಪ್ರೇಕ್ಷಾವಲ್ಲಭೋಮಾ ಘಃ ಕವಿರಾಜಶ್ಚಪಾಣಿನಿಃ | ಜಯಕೀರ್ತಿರ್ವರರುಚಿ ರ್ಭಾಸ್ಕರಶ್ಚೇತಿವಿಶ್ರುತಾಃ ||೨೭|| ಕವಯಸ್ಸಂತಿಚೈತೇಷಾಂ ಕವಿತಾತತ್ವಕೋವಿದಾಃ | ಮಯೂರಶ್ರೀಕಾ ಳಿದಾಸಬಾಣಾಃ ಪಾಲಿತಶಾಬ್ದಿಕಾಃ ||೨೮|| ಅನ್ಯೋನ್ಯಕವಿತಾಧಿಕ್ಯಂ ನಿತ ರಾಂಸೋಢುಮಕ್ಷಮಾಃ | ಬಭೂವುರ್ಮತ್ಸರಗ್ರಸ್ತಮಾನಸಾ ಜಯಕಾಂಕ್ಷ ಯಾ ||೨೯|| ಪಶ್ಯತ್ಸುಜನಸಂಘೇಷು ಬುಧೇಷುಚಸಮಂತತಃ | ಮಯೂರೇ ಸೂರ್ಯಶತಕಂ ಕೃತಪತ್ಯಾದಿತೋರವಿಃ ||೩೦|| ಆಗತ್ಯತ್ವತ್ಪೂರ್ವಜನ್ಮಕರ್ಮ ಣಾ ಸಮುಪಾರ್ಜಿತಃ | ಕುಷ್ಠರೋಗೊ ಮಹಾದೇವಂ ವಿನಾನ್ಯೇನನ ನಶ್ಯತಿ ||೩೧|| ತಥಾಪಿಕಿಂಚಿನ್ಮದ್ದೀಪ್ತಿಂ ದಾಸ್ಯಾಮಿತವಸಾಂಪ್ರತಂ | ತವಬಾಹ್ಯಗ

---

ಕಣ್ಣುಗಳನ್ನಾದರೂ ಪಡೆದುಕೊಳ್ಳಲಿಲ್ಲ||೨೨|| ಪರಮೇಶ್ವರನು ಪ್ರತ್ಯಕ್ಷನಾಗಿರಲಾಗಿ ಹಾಗೆ ಒಂದು ಕಣ್ಣನ್ನು ಪಡೆದುಕೊಳ್ಳುವುದು ಎಂಥ ಲಾಭ? ಅದು ಉತ್ತಮವಲ್ಲ, ಎಂದು ಹೇಳಿ, ತನ್ನ ಕಣ್ಣುಗಳನ್ನು ಶಿವನಿಗೆ ಸಮರ್ಪಿಸಿ, ಬಳಿಕ ಕಣ್ಣುಗಳ ರಾಶಿಯನ್ನೇ ಶಿವನಿಂದ ಪಡೆದು ಕೊಂಡನು. ಅತ್ಯಾಶ್ಚರ್ಯಕರವಾದ ಆ ಕಥೆಯು ಹೇಗೆಂದರೆ— ||೨೪|| ಭಟ್ಟ, ಭಲ್ಲಟ, ಮಾಘಟ್ಟ, ಭೋಜ, ಭಾರವಿ, ಭಿಕ್ಷು, ಪುಳಿಂದ, ಭಟ್ಟ, ಗೋಪಾಲಿ, ವೀರಕರ್ಪೂರ, ಭಾನು, ಕ್ಷೇಮಿ, ವಿದ್ಯಾಧರ, ಕ್ಷೀರ, ಕೌಮಾರ, ಭವಭೂತಿ, ರುದ್ರಭಟ್ಟ, ಭರತ, ಶಂಕರ, ಶಕಟಾಯನ, ಉತ್ಪ್ರೇಕ್ಷಾಲಂಕಾರಸ್ವಾಮಿಯಾದ ಮಾಘ, ಕವಿಶ್ರೇಷ್ಠನಾದ ಪಾಣಿನಿ, ಜ ಯಕೀರ್ತಿ, ವರರುಚಿ, ಭಾಸ್ಕರ, ಎಂಬ ಪ್ರಸಿದ್ಧರಾದ ಈ ಕವಿಗಳೊಳಗೆ ಕವಿತಾ ತತ್ವದಲ್ಲಿ ಅತ್ಯಂತ ಕುಶಲರಾದವರುಗಳು ಮಯೂರ, ಕಾಳಿದಾಸ, ಬಾಣ ಎಂಬೀ ಮೂವರು ಸಾರಸ್ವ ತರಕ್ಷಣಧುರೀಯರಾಗಿದ್ದರು. ಇವರುಗಳು ಒಬ್ಬರ ಕವಿತೆಯನ್ನು ಒಬ್ಬರು ನೋಡಿ ಪರಕವಿ ತಾಧಿಕ್ಯವನ್ನು ಸೈರಿಸಲಾರದೆ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಮತ್ಸರವುಳ್ಳವರಾಗಿದ್ದರು ||೨೯|| ಹೀಗಿರುವಲ್ಲಿ ಸಕಲಜನರೂ ವಿದ್ವಾಂಸರೂ ಸಹ ನೋಡುತ್ತಿರುವಂತೆಯೇ ಮಯೂ ರಕವಿಯು ಮೊಟ್ಟಮೊದಲು ಸೂರ್ಯಶತಕವನ್ನು ರಚಿಸಿ ಹೇಳಲಾಗಿ, ||೩೦|| ಸೂರ್ಯನು ಪ್ರ ತ್ಯಕ್ಷನಾಗಿ ಬಂದು, ಮಯೂರನನ್ನು ಕುರಿತು—"ನಿನ್ನ ಈ ಕುಷ್ಠರೋಗವು ಪೂರ್ವಜನ್ಮಕರ್ಮ ಫಲವಾಗಿರುವುದು. ಇದು ಶಿವನ ಹೊರತು ಇತರರಿಂದ ಪರಿಹರವಾಗತಕ್ಕುದಲ್ಲ ||೩೧|| ಆ

ತಂಕುಷ್ಠಂ ನಾತಾವಚ್ಛಾದಯಿಷ್ಯತಿ ||೩೨|| ಅಸ್ತ್ರೇಣಶಿವಂಯಾತಿ ಕುಷ್ಠಂ ನಾಸ್ತ್ಯರ್ಗತಂತವ | ತ್ವದಸ್ತ್ರಃಕುಷ್ಠನಾಶಾಯ ಕೀರ್ತಯಸ್ವಮಹೇಶ್ವರಂ ||೩೩|| ಪುರಾಣವಾಕ್ಯೇಮಾರ್ತಾಂಡ ಭಾನೋಃಕುಷ್ಠಮಿತೀರಿತೇ | ಮಮಾಪ್ಯಯಂ ಪೂರ್ವಮಾಸೀ ದ್ರೋಗಶ್ಶಿವಸಮರ್ಚನಾತ್ ||೩೪|| ಸಂಪ್ರಯಾತ ಇತಿಪ್ರಾಹಮಯೂರಂ ಕರುಣಾನ್ವಿತಃ | ಸ್ತುತ್ವಾಮಯೂರಸ್ತೋತ್ರೇಣ ಮಯೂರಶ್ಯಂಕರಂತತಃ ||೩೫|| ಅಶಕ್ಯಂಭಾನುನಾಹರ್ತುಂ ಸ್ವಾಸ್ತ್ರಃಕುಷ್ಠಂವ್ಯನಾಶಯತ್| ಭಕ್ತಿಕ್ರಿಯಾಧುರೀಣೋಽಥ ಭಟ್ಟಬಾಣೋನಿರೀಕ್ಷ್ಯತತ್ ||೩೬|| ಕಿಮೇತಚ್ಚಿತ್ರಮಿತ್ಯುಕ್ತ್ವಾಖಂಡಯಿತ್ವಾಽತ್ಮನಃಕರೌ | ಆಲೋಕಯತ್ಸುಸರ್ವೇಷು ಭೂಜನೇಷುಸವಿಸ್ಮಯಂ ||೩೭|| ಸಂಸ್ತುವನ್ಬಾಣಗದ್ಯಾಸ್ತೇ ಭಕ್ತ್ಯಾಶಿವಕರೇತಿಸಃ | ಅವಾಪಹಸ್ತಯುಗಳ ಮನಿವಾರಿತವೈಭವಃ ||೩೮|| ಕಾಳಿದಾಸೋಽಥಕಿಮಿದಮಾಶ್ಚರ್ಯಮಿತಿಲೋಚನೇ | ಉತ್ಪಾಟ್ಯಶಂಭುಪಾದಾಬ್ಜಯುಗಳಾಯಸಮರ್ಪ್ಯಚ ||೩೯|| ಸದ್ಭಕ್ತಿತಃ ಕಾಳಿದಾಸಗದ್ಯಮುಕ್ತ್ವಾಮಹೇಶ್ವರಂ | ಮಹಾವದಾ

---

ದಳೂ ನನ್ನ ಕಾಂತಿಯನ್ನು ಸ್ವಲ್ಪ ನಿನಗೆ ಕೊಡುತ್ತೇನೆ. ಅದು ನಿನ್ನ ದೇಹದ ಹೊರಗೆ ಕೋಶತಕ್ಕ ಕುಷ್ಠವನ್ನು ಮಾತ್ರ ಮರೆಮಾಡುತ್ತದೆ ||೩೨|| ನಿನ್ನ ದೇಹದೊಳಗಿರುವ ಕುಷ್ಠರೋಗವು ಶಿವನ ಹೊರತು ಇತರರಿಂದ ಹರಿಯುವುದಿಲ್ಲ. ಅದರ ಪರಿಹಾರಕ್ಕಾಗಿ ನೀನು ಈಶ್ವರನನ್ನು ಕುರಿತು ಸ್ತೋತ್ರಮಾಡು ||೩೩|| ಪುರಾಣದಲ್ಲಿ "ಮಾರ್ತಾಂಡಭಾನೋಃಕುಷ್ಠಂ" (ಮಾರ್ತಾಂಡನಾಮಕನಾದ ಸೂರ್ಯನಿಗೆ ಕುಷ್ಠವಿದ್ದಿತು) ಎಂಬುದಾಗಿ ಹೇಳಲ್ಪಟ್ಟಿರುವಪ್ರಕಾರ ಪೂರ್ವದಲ್ಲಿ ನನಗೂ ಕುಷ್ಠರೋಗವಿದ್ದಿತು. ಅದು ಶಿವಾರಾಧನೆಯ ದೆಸೆಯಿಂದ ಕಳೆದುಹೋಯಿತು" ಎಂಬುದಾಗಿ ರವಿಯು ದಯಾನ್ವಿತನಾಗಿ ಮಯೂರ ಕವಿಗೆ ಹೇಳಿದನು. ಆಗ ಮಯೂರಕವಿಯು ಮಯೂರಸ್ತೋತ್ರವನ್ನು ರಚಿಸಿ, ಅದರಿಂದ ಶಿವನನ್ನು ಸ್ತೋತ್ರಮಾಡಿ, ||೩೫|| ಸೂರ್ಯನಿಂದ ಪರಿಹರಿಸಲಸಾಧ್ಯವಾಗಿದ್ದ ತನ್ನ ದೇಹದೊಳಗಣ ಕುಷ್ಠವನ್ನು ಹೋಗಲಾಡಿಸಿಕೊಂಡನು. ಬಳಿಕ ಅದನ್ನು ಭಕ್ತ್ಯಾಚರಣಧುರೀಣನಾದ ಭಟ್ಟಬಾಣ ಕವಿಯು ನೋಡಿ, ||೩೬|| ಇದೇನಾಶ್ಚರ್ಯ? ಎಂದು ಹೇಳಿ, ಸಕಲ ಭೂಜನರೂ ಆಶ್ಚರ್ಯಪಟ್ಟು ನೋಡುತ್ತಿರುವಂತೆಯೇ ತನ್ನ ಎರಡು ಕೈಗಳನ್ನೂ ಕತ್ತರಿಸಿ ಶಿವನ ಮುಂದಿಟ್ಟು, ಬಾಣಗದ್ಯವೆಂಬುದನ್ನು ರಚಿಸಿ, ಭಕ್ತಿಯಿಂದ ಶಿವನನ್ನು ಸ್ತುತಿಸಿ, ಕಡೆಯಲ್ಲಿ "ಮಂಗಳಕರನೆ" ಎಂದು ಸ್ತೋತ್ರಮಾಡುವನಿತರಲ್ಲಿ ಎರಡು ಕೈಗಳನ್ನೂ ಮರಳಿ ಶಿವನಿಂದ ಪಡೆದನು. ||೩೮|| ಬಳಿಕ ಕಾಳಿದಾಸಕವಿಯು ಇದನ್ನು ಕೇಳಿ ಇದೇನಾಶ್ಚರ್ಯವೆಂದು ಹೇಳಿ, ತನ್ನ ಕಣ್ಣುಗಳನ್ನು ಕಿತ್ತು ಶಿವನ ಪಾದಕಮಲಕ್ಕೆ ಸಮರ್ಪಿಸಿ ||೩೯|| ಕಾಳಿದಾಸಗದ್ಯವೆಂಬುದನ್ನು ರಚಿಸಿ, ಸದ್ಭಕ್ತಿಯಿಂದ ಹೇಳಿ, ಅತ್ಯುದಾರಿಯಾದ ಎಲೈ ಪರಮೇಶ್ವರನೆ! ನಾನು ನಿನಗೆ ಸಮರ್ಪಿಸಿದ ಎರ

ಸ್ವಭವತೇ ದತ್ತಯೋರೇವನೇತ್ರಯೋಃ ||೪೦|| ಪ್ರದಾಸಂಗ್ರಹಣಂಚಾತ್ರಕಿಮ ದ್ಭುತಮಿತೀರಯನ್ | ಮಹೇಶ್ವರಾನ್ನೇತ್ರರಾಶಿಮವಾಪಮಹಿಮೋನ್ನತಃ||೪೧|| ಯಾವನ್ತಸ್ಸನ್ತಿ ಜಗತಿ ನಗರಗ್ರಾಮನೀವೃತಃ | ತತ್ರತ್ಯಾಸ್ತ್ಯೂನನಯನಾಜಾತ್ಯಂ ಧಾಸ್ತೇತ್ರರೋಗಿಣಃ ||೪೨|| ಸರ್ವೇಸಮಾಗಚ್ಛತೇತಿ ತಸ್ಮಿನ್ನುದ್ಘೋಷಣಾಂ ತತಃ | ದೂತೈಃಕಾರಯತಿಕ್ಷಿಪ್ರಂ ತದಾಸರ್ವೇಸಮಾಯಯುಃ ||೪೩|| ಜಾ ತ್ಯಂಧಾಸ್ತ್ಯೂನನಯನಾಃ ಪಟಲಾವೃತಲೋಚನಾಃ | ವಲೀಕರಕ್ಲಿನ್ನನೇತ್ರಕಾ ಚನೇತ್ರಾಡಯೋಽಂಧಕಾಃ ||೪೪|| ಅನನ್ತರಂಗುಣಾವಾಸಃ ಕಾಳಿದಾಸೋ ಮಹಾಯಶಾಃ| ಶಿವಲಬ್ಧಾನ್ನೇತ್ರರಾಶೇರ್ಧೃತ್ವಾಽಕ್ಷಿಯುಗಳಂಸ್ವಯಂ ||೪೫|| ತೇಭ್ಯೋಽಂಧಕೇಭ್ಯಃಪ್ರತ್ಯೇಕಂ ದತ್ವಾಕ್ಷಿಯುಗಳಂಮುದಾ | ಸ್ತುವತ್ಸ್ವದ್ಭು ತಯುಕ್ತೇಷು ಭೂಜನೇಷು ಸಮಂತತಃ ||೪೬|| ವಿಸ್ಮಯಾಕ್ರಾನ್ತಚಿತ್ತೇಷು ಸದ್ಯಸ್ಸ್ವಾಕ್ಷಿಸಮಾಗಮಾತ್ | ಜಾತ್ಯಂಧಕೇಷುಸರ್ವೇಷು ವಿತನ್ವತ್ಸುನಮ ಸ್ಕೃತಿಂ ||೪೭|| ಕೃತ್ರಿಮಾಂಧೇಷು ಸಾಮೀಪ್ಯಗಮನಾತ್ತನ್ಮಹಾತ್ಮನಃ | ವಿನಷ್ಟನೇತ್ರರೋಗೇಷು ಭೂತ್ವಾಕುರ್ವತ್ಸುಚಾನತಿಂ ||೪೮|| ಸರ್ವಾನ್ಪ್ರತೋ

---

ಕು ನೇತ್ರಗಳನ್ನೇ ಮತ್ತೆ ನೀನು ಕೊಟ್ಟರೂ, ಅದನ್ನು ನಾನು ಪಡೆದುಕೊಂಡರೂ ಅದರಲ್ಲಿ ಆಶ್ಚರ್ಯವೇನು? ಎಂದು ಹೇಳಿ, ಶಿವನಿಂದ ನೇತ್ರಗಳ ರಾಶಿಯನ್ನೇ ಪಡೆದುಕೊಂ ಡನು. ||೪೧|| "ಲೋಕದಲ್ಲಿರುವ ದೇಶಗಳು ಪಟ್ಟಣಗಳು ಹಳ್ಳಿಗಳು ಮೊದಲಾದುವುಗಳಲ್ಲಿ ಹುಟ್ಟುಕುರುದರು, ಕಣ್ಣು ಕಳೆದುಕೊಂಡವರು, ಕಣ್ಣಿನ ರೋಗಿಗಳು ಎಷ್ಟುಜನರಿರುವರೋ ಅವರೆಲ್ಲರೂ ಬನ್ನಿರಿ" ಎಂಬುದಾಗಿ ಆಳುಗಳಿಂದ ಸಾರಿಸಲಾಗಿ, ಅಂಥವರುಗಳೆಲ್ಲರೂ ಎಂದರೆ ಹುಟ್ಟುಕುರುಡರು, ಒಂದುಕಣ್ಣು ಹೋದವರು, ಪರೆಗಣ್ಣಿನವರು, ಹೂಗಣ್ಣಿನವರು, ಸೋರು ಗಣ್ಣಿನವರು, ಗಾಜುಗಣ್ಣಿನವರು ಮೊದಲಾದವರೆಲ್ಲಾ ಬಂದರು. ||೪೦|| ಅನಂತರ ಸದ್ಗು ಣಾಢ್ಯನೂ ಯಶಸ್ವಿಯೂ ಆದ ಕಾಳಿದಾಸನು ಶಿವನಿಂದ ಪಡೆದುಕೊಂಡ ಆಕಣ್ಣುಗಳ ರಾಶಿ ಯಲ್ಲಿ ಎರಡು ಕಣ್ಣುಗಳನ್ನು ಮಾತ್ರ ತಾನು ಧರಿಸಿಕೊಂಡು ||೪೫|| ಉಳಿದ ಕಣ್ಣುಗಳನ್ನೆ ಲ್ಲಾ ಬಂದಿದ್ದ ಕುರುಡರಿಗೆ ತಲೆಗೆ ಎರಡೆರಡರಂತೆ ಸಂತೋಷದಿಂದ ಕೊಟ್ಟು, ಭೂಜನರೆಲ್ಲರೂ ಅದನ್ನು ನೋಡಿ ಆಶ್ಚರ್ಯಪಟ್ಟು ಹೊಗಳುತ್ತಿರಲು, ||೪೬|| ಹುಟ್ಟುಕುರುಡರೆಲ್ಲರೂ ಥಟ್ಟನೆ ಕಣ್ಣುಗಳನ್ನು ಪಡೆದುಕೊಂಡಕಾರಣದಿಂದ ಅತ್ಯಾಶ್ಚರ್ಯಗೊಂಡು ತನಗೆ ನಮಸ್ಕರಿಸುತ್ತಿರ ಲಾಗಿ ||೪೭|| ಎಡಂತರದಲ್ಲಿ ಕಣ್ಣು ಕಳೆದುಕೊಂಡಿದ್ದವರು ಆ ಮಹಾತ್ಮನ ಬಳಿಗೆ ಬಂದ ಕಾರಣದಿಂದ ತಮ್ಮ ನೇತ್ರದೋಷವನ್ನು ಪರಿಹರಿಸಿಕೊಂಡು ಅಡ್ಡಬೀಳುತ್ತಿರಲಾಗಿ ||೪೮|| ಅಂತಪ್ಪ ಕುರುಡರನ್ನೆಲ್ಲಾ ಕಾಳಿದಾಸನು ತನ್ನ ನೇತ್ರದಾನ ವೈಭವದಿಂದ ಸಂತೋಷ

ಷಯಾಮಾಸ ತಾನಂಧಾನ್ನಿಜವೈಭವಾತ್ | ಇತ್ಥಮಂಧಕವರ್ಗಾಯ ಕಾಳಿ
ದಾಸೇಗುಣೋನ್ನತೇ ||೪೯|| ತಮಶೇಷಂನೇತ್ರರಾಶಿಂ ಪ್ರದತ್ತವತಿಸತ್ವರಂ |
ಶಿವಂಸ್ತುತ್ವಾಕಾಳಿದಾಸಃ ಕೃಪಯಾಂಧಕಸಂಹತೌ ||೫೦|| ಅಪಾಪನಯನಾ
ನೀತಿ ಜನೇಷುಪರಿಶಂಸಿಷು | ಮಧ್ಯೇತೇಷಾಮನ್ಧಕಾನಾಂ ಕಶ್ಚಿತ್ಸದ್ಭಕ್ತಿಭೂ
ಷಣಃ ||೫೧|| ಅಂಬಿಕಾನಾಮಧೇಯತ್ವಾದಂಬ್ಯಣ್ಣ ಇತಿಚಾಂಧಕಃ | ಸಂಪ್ರಾ
ರ್ಥ್ಯೈನಂಪರಿಪ್ರಾಪ್ತಿ ದೃಗ್ಶೋಕಃ ಕಷ್ಟಾನ್ನಕಿಂಭುವಿ ||೫೨|| ತದ್ವಿದ್ಯಾಯಾಃಕಿ
ಮಸ್ಯಾನಾಮಮ ಭಕ್ತಿರ್ವಿಚಾರಿತೇ | ಕಿಂವಿದ್ಯತೇಸ್ತುತಿರ್ನಿಂದಾ ದೇವದೇವ
ಸ್ಯಶೂಲಿನಃ ||೫೩|| ಕಿನ್ತುಭಕ್ತಿರತಿರ್ಮುಖ್ಯಾ ಮಾನಸೀಭುವಿವಿಶ್ರುತಾ | ಸಂ
ಸ್ತುತ್ಯಪ್ರಾಪನೇತ್ರಾಣಿ ಕಾಳಿದಾಸೋ ಮಹೇಶ್ವರಂ ||೫೪|| ಅಹಂಪ್ರಕಾರಾ
ನ್ತರೇಣ ಪ್ರಾಪ್ಸ್ಯಾಮಿನಯನದ್ವಯಂ | ಭಾವುಕೋಮೇ ಮಹಾದೇವೋದೇ
ವೀಜ್ಯೇಷ್ಠಾಽಹಮೀಶಿತುಃ ||೫೫|| ದೇವರಸ್ಯಾಂಮದೀಯಾನುರಕ್ತಿಮೇವಹಿ
ಕಾರಣಂ| ವಿಧಾಯ ಶ್ರೀಮಹಾದೇವಸಮೀಪೇಹಾಸ್ಯಭಾಷಣೈಃ ||೫೬|| ನರ್ಮ
ವಾಗ್ಭಿರ್ಮರ್ಮಶಂಸಿವಚನೈಶ್ಚತುರೋಕ್ತಿಭಿಃ | ನಿರ್ಮಾಯತುಷ್ಟಿಂ ಪ್ರಾಪ್ಸ್ಯಾ
ಮಿನಯನೇ ಪರಮೇಶ್ವರಾತ್ ||೫೭|| ಇತಿನಿಶ್ಚಿತ್ಯಮನಸಿ ಚತುರತ್ವೇಜಕಾ

---

ಪಡಿಸಿದನು. ಹೀಗೆ ಕಾಳಿದಾಸನು ಕುರುಡರಿಗೆಲ್ಲಾ ನೇತ್ರರಾಶಿಯನ್ನು ಕೊಡಲಾಗಿ, ಅದನ್ನು ಭೋಜನರು ನೋಡಿ, ‘‘ಕಾಳಿದಾಸನು ಶಿವಸ್ತೋತ್ರವನ್ನು ಮಾಡಿ ದಯೆಯಿಂದ ಕುರುಡರಿಗೆಲ್ಲಾ ಕಣ್ಣುಗಳನ್ನುಂಟುಮಾಡಿದನು.’’ ಎಂದು ಹೊಗಳುತ್ತಿರಲಾಗಿ, ಆ ಕುರುಡರೊಳಗೆ ಪಾರ್ವತಿಯ (ಅಂಬಾ) ಹೆಸರನ್ನು ಧರಿಸಿರುದರಿಂದ ಅಂಬ್ಯಣ್ಣನೆಂದು ಕರೆಯಲ್ಪಡುತ್ತಿದ್ದ ಒಬ್ಬಾನೊಬ್ಬ ಸದ್ಭಕ್ತನು— ‘‘ಈ ಕಾಳಿದಾಸನನ್ನು ಬೇಡಿಕೊಂಡು ಕಣ್ಣುಗಳನ್ನು ಪಡೆದುಕೊಳ್ಳುವುದು ಕಷ್ಟವಲ್ಲವೆ? ||೫೨|| ವಿಚಾರಮಾಡಿ ನೋಡಿದರೆ ಆ ಕಾಳಿದಾಸನಲ್ಲಿರುವ ವಿದ್ಯೆಗಿಂತಲೂ ನನ್ನಲ್ಲಿರುವ ಶಿವಭಕ್ತಿಯು ಕಡಮೆಯಾದುದೆ ? ಶಿವನ ಹತ್ತಿರ ಇದು ಸ್ತುತಿ ಇದು ನಿಂದೆ ಎಂಬ ಭೇದವುಂಟೆ? ||೫೩|| ಮನಃಪೂರ್ವಕವಾದ ಭಕ್ತಿಯೇ ಆತನ ಬಳಿಯಲ್ಲಿ ಅತ್ಯಂತ ಮುಖ್ಯವಾದುದು. ಕಾಳಿದಾಸನು ಈಶ್ವರನನ್ನು ಸ್ತೋತ್ರಮಾಡಿ ಕಣ್ಣುಗಳನ್ನು ಪಡೆದನು. ||೫೪|| ನಾನಾದರೊ ಬೇರೆ ತೆರದಿಂದ ಎರಡು ಕಣ್ಣುಗಳನ್ನೂ ಪಡೆದುಕೊಳ್ಳುವೆನು. ನನಗೆ ಪರಶಿವನು ಭಾವನು, ಪಾರ್ವತಿಯು ನನಗೆ ಅಕ್ಕನು, ನಾನು ಶಂಕರನಿಗೆ ಮೈದುನನು. ಅವನಲ್ಲಿ ನನಗಿರುವ ಅನುರಾಗವನ್ನೇ ಕಾರಣವನ್ನಾಗಿ ಮಾಡಿಕೊಂಡು, ಹಾಸ್ಯವಚನಗಳಿಂದಲೂ, ಸರಸದ ಮಾತುಗಳಿಂದಲೂ, ಗುಟ್ಟುಮಾತುಗಳಿಂದಲೂ, ಜಾಣ್ಮಾತುಗಳಿಂದಲೂ ಶಿವನನ್ನು ಸಂತೋಷಪಡಿಸಿ, ಎರಡು ಕಣ್ಣುಗಳನ್ನೂ ಪಡೆದುಕೊಳ್ಳುವೆನು’’. ||೫೭||

ಸತಿ | ಸಮಾಹಿತಃಕೊಟ್ಟಿದೊನೆ ಶಂಕರೇಶ್ವರಸನ್ನಿಧೌ ॥೫೨॥ ಪಶ್ಚಾದ್ಭಾಗೇ ಸಮಾಸೀನಶ್ಶೀಘ್ರಂ ಪದ್ಯಸಹಸ್ರಕಂ | ಸಹಾಸ್ಯಮಕರೋದ್ದೇವೋಽಪ್ಯಥಸ್ಮಿತಮುಖಾಂಬುಜಃ ॥೫೯॥ ಆಯಾಹಿಪುರತೋಽಂಬ್ಯಣ್ಣಮಸ್ಮನೋಹರದೇವರ | ಪರಿತ್ಯಜಾಸದಾಲಾಪಂ ತುಭ್ಯಂದಾಸ್ಯಾಮಿಲೋಚನೇ ॥೬೦॥ ಸನ್ತುಷ್ಟೋಽಸ್ಮಿತವೇದಾನೀ ಮಿತ್ಯವೋಚತ್ಕೃಪಾನಿಧಿಃ | ಯುಷ್ಮಿರಂಧ್ರಗೃಹೀತಾಹಂ ಕಥಂ ಯಾಸ್ಯಾಮಿತೇಽಂತಿಕಂ ॥೬೧॥ ಪರಿಹಾಸಂವದಸ್ಯೇವ ದೇವಭಾವುಕಮಾಂ ಪ್ರತಿ | ಅಹಮಂಧಸ್ತ್ವಮಂಧೋವಾ ವದಪ್ರಮಥನಾಯಕ ॥೬೨॥ ಯುಷ್ಮಿಪ್ರದಾತಾಮಾಮತ್ರ ಸಂಸ್ಥಾಪ್ಯಭವನಂಗತಃ | ನಶಕ್ತೋಽಂಧೋಽಹಮಾಗನ್ತುಮಾಹೂತೋಪ್ಯಂಬಯೇತಿವಾ ॥೬೩॥ ಉತಾಂಬೇತಿಸಮಾಹೂತ ಸ್ತ್ವಯಮೇವ ಮಹೇಶ್ವರ | ತ್ವಮೇವಮೇಪುರೋಭಾಗಃ ಪಶ್ಚಾದ್ಭಾಗಸ್ತ್ವಮೇವಚ ॥೬೪॥ ಏತದ್ದಿಶಾತದ್ದಿಶೇತಿನಜಾನೇ ತ್ವದ್ದಿಶಂವಿನಾ | ಕಾಂಚಿದ್ದಿಶಂಮಮಾಪ್ಯಸ್ಯ ಜಗತೋದಿಕ್ತ್ವಮೇವಹಿ ॥೬೫॥ ಸರ್ವತೋದಿಕ್ತ್ವತೇದಿಕ್ಕಾ ಪಶ್ಚಾದ್ದಿಕ್ಕಾಪುರಸ್ತತಃ | ತ್ವಮೇವಾಭಿಮುಖೋಭೂತ್ವಾ ಪ್ರಯಚ್ಛಮಮಲೋಚನೇ

---

ಎಂಬುದಾಗಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಕೊಟ್ಟಿದೊನೆ ಎಂಬ ಗ್ರಾಮದಲ್ಲಿರುವ ಶಿವದೇವಾಲಯದ ಹಿಂಗಡೆಯಲ್ಲಿ ಏಕಾಗ್ರಮನಸ್ಸಿನಿಂದ ಕುಳಿತು, ಒಳ್ಳೆಯ ಜಾಣ್ಮೆಯು ತೋರುತ್ತಿರುವ ೧ ಸಾವಿರ ಪದ್ಯಗಳನ್ನು ಶೀಘ್ರವಾಗಿ ರಚಿಸಿ ಹೇಳಿ, ಶಿವನನ್ನು ಪರಿಹಾಸ್ಯಮಾಡಿದನು. ಅದನ್ನೆಲ್ಲಾ ಕೇಳಿ ದಯಾನಿಧಿಯಾದ ಶಂಕರನು ನಕ್ಕು ॥೫೯॥ "ನನ್ನ ಪ್ರೀತಿಯ ಮೈದುನನಾದ ಎಲೈ ಅಂಬ್ಯಣ್ಣನೆ! ಈ ಹಾಸ್ಯದ ಮಾತುಗಳನ್ನು ಬಿಟ್ಟು ಮುಂದಕ್ಕೆ ಬಾ, ಕಣ್ಣುಗಳನ್ನು ಕೊಡುತ್ತೇನೆ ॥೬೦॥ ಈಗ ನಿನ್ನ ವಿಷಯದಲ್ಲಿ ಪ್ರೀತಿಯುಳ್ಳವನಾಗಿದ್ದೇನೆ, ಎಂಬುದಾಗಿ ಹೇಳಿದನು. ಅಂಬ್ಯಣ್ಣನಾದರೊ—ಎಲೆ ಭಾವನೆ! ನಾನು ಕುರುಡನ ಕೈದೊಣ್ಣೆಯಾಗಿದ್ದೇನೆ. ಇಂಥ ಅಸ್ವತಂತ್ರನಾದ ನಾನು ನಿನ್ನ ಬಳಿಗೆ ಹೇಗೆ ಬರಲಿ? ॥೬೧॥ ನನ್ನನ್ನು ಕುರಿತು ನೀನೇ ಹಾಸ್ಯದ ಮಾತನ್ನಾಡುತ್ತೀಯಲ್ಲಾ! ನಾನು ಕುರುಡನೋ? ನೀನು ಕುರುಡನೋ? ಎಂಬುದನ್ನು ಎಲೈ ಪ್ರಮಥಾಧಿಪತಿಯೆ! ನೀನೇ ಹೇಳು ॥೬೨॥ ದೊಣ್ಣೆಯನ್ನು ಕೊಡತಕ್ಕವನು ನನ್ನನ್ನು ಇಲ್ಲಿ ಕುಳ್ಳಿರಿಸಿ ತಾನು ದೇವಾಲಯಕ್ಕೆ ಹೋಗಿರುವನು. ಅಂಬಯು ಎಂತಲೋ, ಅಂಬ ಎಂತಲೋ ನೀನು ಕರೆದರೂ ನಾನು ಹೇಗೆ ನಿನ್ನ ಬಳಿಗೆ ಬರಲಿ? ನನಗೆ ಮುಂಭಾಗವೂ ಹಿಂಭಾಗವೂ ನೀನೇ ಆಗಿದ್ದೀಯೆ ॥೬೪॥ ನಿನ್ನ ದಿಕ್ಕು ಹೊರತು ಈದಿಕ್ಕು ಆದಿಕ್ಕು ಎಂಬುದಾವುದನ್ನೂ ನಾನು ಕಾಣೆ. ನನಗೂ ಈ ಜಗತ್ತಿಗೂ ಕೂಡ ನೀನೇ ದಿಕ್ಕಲ್ಲವೆ? ॥೬೫॥ ನೀನು ಸರ್ವತೋಮುಖನಾಗಿರುವುದರಿಂದ ನಿನಗೆ ಮುಂಗಡೆಯಾವುದು? ಹಿಂಗಡೆಯಾವುದು?

॥೬೬॥ ಸನ್ತುಷ್ಟೋಽಸಿ ಯದೀಶಾನೇತ್ಯವದಚ್ಛಿವಮಂಬ್ಯಣಃ । ಬ್ರಹ್ಮವಿಷ್ಣ್ವರ್ಕಗಣಪ ಮಾತೃಕಾಭೈರವಾದಿಭಿಃ ॥೬೭॥ ಪರಿವಾರಾಮರಗಣೈಃ ಕಾರ್ತಿಕೇಯೇನನಂದಿನಾ । ಅಧಿಷ್ಠಿತೇನ ಸಮುಖಮಂಟಪೇನಾಲಯೇನಸಃ ॥೬೮॥ ಸಾಕಂನಿವೃತ್ತ್ಯಾಭಿಮುಖೋಽಭವದೀಶಸ್ಸ್ಮಿತಾನನಃ । ಆಯಾತೇಶಂಭುನಾಸಾರ್ಧಮಂಬ್ಯಣ್ಣಸ್ಯವಿಲೋಚನೇ ॥೬೯॥ ಪರಿವೃತ್ತೇಶಿವಾಗಾರೇ ಪರಿವೃತ್ತಾತ್ಕನೀನಿಕಾ । ಅಭೂತಾಮುಸ್ಮಖೇನೇತ್ರೇ ಮಹಾದೇವೇಸಮುಸ್ಮುಖೇ ॥೭೦॥ ವಿವಂಜನೇಷುಪಶ್ಯತ್ಸು ನೇತ್ರೇಲೇಭೇಂಽಬ್ಯಣಶ್ಶಿವಾತ್ ।

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಮಹಿಮಪ್ರಕರಣೇ ವಿಷ್ಣುಕಾಳಿದಾಸಾಂಬ್ಯಣಾನಾಂ ನೇತ್ರಲಾಭಕಥನಂನಾಮ ದಶಮೋಽಧ್ಯಾಯಃ.

---

ಆದುಕಾರಣ ನನ್ನ ವಿಷಯದಲ್ಲಿ ನೀನು ಸಂತುಷ್ಟನಾಗಿದ್ದರೆ ನೀನೇ ನನ್ನಿದಿರಿಗೆ ಬಂದು ಕಣ್ಣುಗಳನ್ನು ಕೊಡು ॥೬೬॥ ಎಂಬುದಾಗಿ ಅಂಬ್ಯಣ್ಣನು ಹೇಳಲಾಗಿ, ಶಿವನು, ಬ್ರಹ್ಮ ವಿಷ್ಣು ಸೂರ್ಯ ಗಣಪತಿಗಳು, ಸಪ್ತಮಾತೃಕೆಯರು, ಅಷ್ಟಭೈರವರು ಮೊದಲಾದ ಪರಿವಾರದೊಡನೆ ಕೂಡಿ, ವೃಷಭೇಶ್ವರನನ್ನು ಹತ್ತಿ, ಷಣ್ಮುಖನಸಂಗಡ ದೇವಾಲಯದ ಮಂಟಪದಿಂದ ಹೊರಟು, ಮುಗುಳ್ನಗೆ ನಗುತ್ತ ಅಂಬ್ಯಣ್ಣನ ಇದಿರಿಗೆ ಬಂದನು. ಶಿವನು ಹೀಗೆ ದಯಮಾಡಿಸಲು, ಆತನ ಜತೆಯಲ್ಲೇ ಅಂಬ್ಯಣ್ಣನ ಕಣ್ಣುಗಳೂ ಬಂದುವು. ॥೬೯॥ ಆ ಶಿವದೇವಾಲಯವು ಕೂಡ ಅಂಬ್ಯಣ್ಣನ ಇದಿರಿಗೆ ತಿರುಗಿಕೊಳ್ಳಲಾಗಿ, ಇವನ ಕಣ್ಣುಗುಡ್ಡೆಯೂ ಅತ್ತ ತಿರುಗಿತು. ಶಿವನು ತನ್ನ ಮುಂಗಡೆಗೆ ಬರಲಾಗಿ ಈತನ ಕಣ್ಣುಗಳೂ ಶಂಕರನ ಕಡೆಗೆ ತಿರುಗಿಕೊಂಡುವು. ॥೭೦॥ ನೆರೆದಿದ್ದ ಜನರೆಲ್ಲರೂ ನೋಡುತ್ತಿರುವಂತೆಯೇ ಅಂಬ್ಯಣ್ಣನು ಹೀಗೆ ಶಿವನಿಂದ ನೇತ್ರಗಳನ್ನು ಪಡೆದುಕೊಂಡನು.

ಎಂಬಲ್ಲಿಗೆ ಪಂಡಿತಾರಾಧ್ಯಚರಿತ್ರದ ಮಹಿಮಪ್ರಕರಣದೊಳಗೆ ವಿಷ್ಣುಕಾಳಿದಾಸಾಂಬ್ಯಣಾದಿಗಳ ನೇತ್ರಲಾಭವನ್ನು ನಿರೂಪಿಸುವ ೧೦ನೆಅಧ್ಯಾಯವು ಮುಗಿದುದು.

---

## ಅಥ ಏಕಾದಶೋಽಧ್ಯಾಯಃ.

### (ಇರಿತ್ತಾಂಡಾರ್ಯಾದಿ ಭಕ್ತಕಥನಂ)

ಅಪಿಚೇರಿತ್ತಾಂಡನಾಮಾಕಶ್ಚಿತ್ಸದ್ಭಕ್ತಪುಂಗವಃ | ಅದಾಪಯಿತ್ವಾಂಧಕೇಭ್ಯೋ ನೇತ್ರಾಣಿಪ್ರಾಪನಸ್ಸ್ವಯಂ ||೧|| ಕಾಳಿದಾಸೋನೇತ್ರಯುಗಂ ಕಿಲ ಶಂಭೋರ್ಜಗತ್ಪತೇಃ | ಅಹಂನೇತ್ರಾಣಿಜೈನಾನಾಂ ಮುಮುಕ್ಲೇಶವಿಧಾಯಿನಾಂ ||೨|| ಅವಿನಾಶ್ಯಾಕ್ಷಿಯುಗಳಂ ನಪ್ರಾಪ್ಸ್ಯಾಮೀತ್ಯುದೀರಯನ್ | ಶಾಪೇನಕೃತ್ವಾತಾನಂಧಾನ್ ಪ್ರಾಪನೇತ್ರೇಶಿವಾಜ್ಞಯಾ ||೩|| ಕಿಂಚಾನ್ಯಶ್ಶಿವನಾಗಾರ್ಯ ಇತಿಭಕ್ತೋಮಹೇಶಿತುಃ | ಸಮರ್ಪ್ಯನೇತ್ರಯುಗಳಂ ತ್ರಿಸಂಧ್ಯಂ ಪುನರೀಶ್ವರಾತ್ ||೪|| ಲಭಮಾನೋವಸನ್ನಿತ್ಯಂ ಭಕ್ತಿನಿಷ್ಠಾಸಮನ್ವಿತಃ | ಏಕದಾಶಂಕರಸ್ತುಷ್ಟೋ ನೇತ್ರಾಭ್ಯಾಂಪೂಜನಂಮಮ ||೫|| ನತ್ಯಜೇಶ್ಚೇದೇತದಾದಿ ಪ್ರತಿಸೋಮದಿನಂದೃಶೌ | ಸಮರ್ಪಯೇತ್ಯವಾದೀತ್ತಂ ಕೃಪಯಾಪರಮೇಶ್ವರಃ ||೬|| ತಥೇತಿಶಿವನಾಗಾರ್ಯಃ ಪ್ರತಿಸೋಮದಿನಂಶಿವಂ | ಪೂಜಯ

---

## ೧೧ನೆ ಅಧ್ಯಾಯವು.

### (ಇರಿತ್ತಾಂಡಾರ್ಯಾದಿಭಕ್ತರ ನೇತ್ರಲಾಭದ ಕಥೆ)

ಭಕ್ತಶ್ರೇಷ್ಠನಾದ ಮತ್ತೊಬ್ಬ ಇರಿತ್ತಾಂಡಾರಿಯೆಂಬುವನು ಕಾಳಿದಾಸನ ಚರಿತ್ರಯನ್ನು ಕೇಳಿ, ''ಆತನು ಹುಟ್ಟುಕುರುಡಂಗೆ ಕಣ್ಣುಗಳನ್ನು ಪರಮೇಶ್ವರನಿಂದ ಕೊಡಿಸದೆ ತಾನೇ ಕಣ್ಣುಗಳನ್ನು ಪಡೆದುಕೊಳ್ಳಲಿಲ್ಲವಷ್ಟೆ. ನಾನಾದರೊ ನನಗೆ ಕೋಟಳೆಯನ್ನುಂಟುಮಾಡಿದ ಜೈನರುಗಳ ಕಣ್ಣುಗಳನ್ನು ಇಂಗಿಸದೆ ನನ್ನ ಕಣ್ಣುಗಳನ್ನು ಪಡೆಯುಕೊಳ್ಳುವುದಿಲ್ಲ''ವೆಂದು ಶಪಥಮಾಡಿ, ಶಾಪಕೊಟ್ಟು ಜೈನರನ್ನು ಕುರುಡರನ್ನಾಗಿ ಮಾಡಿ, ಶಿವನ ಕೃಪೆಯಿಂದ ತನ್ನ ಕಣ್ಣುಗಳನ್ನು ಪಡೆದನು. ||೩|| ಮತ್ತು ಸದ್ಭಕ್ತಿಸಂಪನ್ನನಾದ ಶಿವನಾಗಯ್ಯನೆಂಬೊಬ್ಬ ಭಕ್ತನು ಪರಮೇಶ್ವರನಿಗೆ ತನ್ನ ಎರಡು ಕಣ್ಣುಗಳನ್ನೂ ಪ್ರತಿದಿನದ ಮೂರು ಸಂಧ್ಯಾಕಾಲಗಳಲ್ಲೂ ಸಮರ್ಪಿಸಿ ಮರಳಿ ಪಡೆದುಕೊಳ್ಳುತ್ತಿದ್ದನು. ಒಂದಾನೊಂದುಕಾಲದಲ್ಲಿ ಶಿವನು ಆತನ ಪೂಜೆಯಿಂದ ಸಂತೃಪ್ತನಾಗಿ, ಎಲೆ ಭಕ್ತನೆ! ಇನ್ನುಮುಂದೆ ಪ್ರತಿದಿನವೂ ನನಗೆ ನೀನು ನೇತ್ರಪೂಜೆ ಮಾಡುವುದನ್ನು ಬಿಟ್ಟುಬಿಡದಿದ್ದರೆ, ಇದು ನೊದಲು ಪ್ರತಿ ಸೋಮವಾರದಲ್ಲಿ ಮಾತ್ರ ನನಗೆ ನೇತ್ರಸಮರ್ಪಣೆಯ ಪೂಜೆಯನ್ನು ಮಾಡು ಎಂಬುದಾಗಿ ಪರಶಿವನು ದಯೆಯಿಂದ ಹೇಳಿದನು. ||೬|| ಶಿವನಾಗಯ್ಯನು ಹಾಗೆಯೇ ಆಗಲೆಂದು ಒಪ್ಪಿ, ಪ್ರತಿ ಸೋಮವಾರವೂ ತನ್ನ ನೇತ್ರಗ

ನ್ನಿ ಜನೇತ್ರಾಭ್ಯಾಂ ಲಭಮಾನೋಽವಸಜ್ಜತೇ||೭|| ಕಿಂಚಕಣ್ಣಪ್ಪವಿಭವಂ ವೇತ್ತಿ
ಶಂಕರಏವತಂ | ಪ್ರದಾನಮಕ್ಷ್ಣೋರಾದಾನಮಪಿ ನಾನ್ಯೋಽಜಗತ್ತ್ರಯೇ ||೮||
ಶಿವಾರ್ಥಂಪ್ರದದೌನೇತ್ರಯುಗಳಂ ಕಣ್ಣಪಃಪುರಾ | ಭಕ್ತ್ಯರ್ಥಮೇವಪ್ರದದೌ
ನಶಿವೋಽಪಿವಿಲೋಚನೇ ||೯|| ಪ್ರದಾನಂಶಂಕರಾಯೈವ ಪುನರ್ಲಬ್ಧಂನನೇತ್ರ
ಯೋಃ | ಶಿವಪ್ರೀತ್ಯರ್ಥಮೇವೈತದಾದಾನಂ ನಾಕ್ಷಿಕಾಂಕ್ಷಯಾ ||೧೦||
ಕಣ್ಣಪ್ಪದೇವಏವೈಕೋ ನೇತ್ರದಾತಾಶಿವಾಯಹಿ | ತಸ್ಮಾನ್ನೇತ್ರಾರ್ಥಿನಸ್ಸರ್ವೇ
ದಾತಾರೋನೈವಶಂಭವೇ ||೧೧|| ತತ್ಕಣ್ಣಪ್ಪಸ್ಯ ನಯನಪ್ರದಾನಂಶೋಭತೇತ
ರಾಂ| ಕಿಂಚೋದಯಾಭಿಷೇಕಸ್ಯ ಸಮಯೋಽಯಂಮಹೇಶಿತುಃ ||೧೨|| ಇತ್ಯ
ನಾಲೋಚ್ಯಮುದತೋ ನಿದ್ರಿತೇದ್ರೋಹಿಣೀಯುವಾಂ | ಇತಿಕೋಪಾತ್ಸಮು
ತ್ಪಾಟ್ಯ ನೇತ್ರೇತಾಭ್ಯಾಂಮಹೇಶ್ವರಂ ||೧೩|| ಪೂಜಯಿತ್ವಾವೆಲ್ಲಕೊಂಡ ಮ

---

ಳನ್ನು ಕಳೆದರ್ಪಿಸಿ ಮತ್ತೆ ಪಡೆಯುತ್ತಿದ್ದನು. ||೭|| ಮತ್ತೂ ಕಣ್ಣಪ್ಪ ಎಂಬ ಭಕ್ತೋತ್ತ
ಮನ ಭಕ್ತಿ ವೈಭವವನ್ನೂ, ಅವನು ಶಿವನಿಗೆ ತನ್ನ ಕಣ್ಣುಗಳನ್ನು ತೆಗೆದು ಅರ್ಪಿಸಿದುದನ್ನೂ,
ಶಿವನೇ ಬಲ್ಲನಲ್ಲದೆ, ತ್ರಿಲೋಕದಲ್ಲಿ ಮತ್ತಾರೂ ಕಾಣರು. || ೮ || ಪೂರ್ವದಲ್ಲಿ ಆ
ಕಣ್ಣಪ್ಪನು ಪರಶಿವನಿಗೆ ತನ್ನ ಎರಡು ಕಣ್ಣುಗಳನ್ನೂ ತೆಗೆದರ್ಪಿಸಿದನು. ಹಾಗೆ ಅವನು ನಯನ
ಸಮರ್ಪಣೆ ಮಾಡಿದುದು, ಶಿವನಿಗೆ ಒಳ್ಳೆಯ ಕಣ್ಣುಂಟಾಗಲಿ ಎಂಬುದಾಗಿ ಶಿವನಲ್ಲಿರುವ ತನ್ನ
ಭಕ್ತಿಯಿಂದಲೇ ಹೊರತು, ತನ್ನ ಕಣ್ಣುಗಳನ್ನು ಮರಳಿ ಪಡೆದುಕೊಳ್ಳಬೇಕೆಂಬ ಅಪೇಕ್ಷೆಯಿಂ
ದೇನೂಅಲ್ಲ. ಶಿವನು ಅವನಿಗೆ ಮರಳಿ ಕಣ್ಣುಗಳನ್ನು ಅನುಗ್ರಹಿಸಿದುದುಕೂಡ ಕಣ್ಣಪ್ಪನು ತನ್ನ
ಮೇಲಿಟ್ಟಿದ್ದ ಅಸಾಧಾರಣವಾದ ಭಕ್ತಿಗಾಗಿಯೇ, ||೯|| ಆ ಕಣ್ಣಪ್ಪನು ಮರಳಿ ಕಣ್ಣನ್ನು
ಪಡೆದುಕೊಳ್ಳಬೇಕೆಂಬ ಅಪೇಕ್ಷೆಯಿಂದಲ್ಲದೆ ಶಿವಪ್ರೀತಿಗಾಗಿಯೇ ತನ್ನ ಕಣ್ಣುಗಳನ್ನು ಹೇಗೆ
ಸಮರ್ಪಿಸಿದನೋ, ಹಾಗೆಯೇ ಆ ಶಿವನ ಪ್ರೀತಿಗೋಸ್ಕರವೇ ಅವನು ಕೊಟ್ಟ ಕಣ್ಣುಗಳನ್ನು
ಕಣ್ಣಪ್ಪನು ಪಡೆದುಕೊಂಡುದೂ ಆಗಿರುತ್ತದೆಯೇ ಹೊರತು ತನ್ನ ಕಣ್ಣುಗಳನ್ನು ಮರಳಿ ಪಡೆ
ದುಕೊಳ್ಳಬೇಕೆಂಬ ಅಪೇಕ್ಷೆಯಿಂದೇನೂ ಅಲ್ಲ ||೧೦|| ಹೀಗೆ ಸ್ವಾರ್ಥನಿಸ್ಪೃಹತೆಯಿಂದ
ಕಣ್ಣನ್ನರ್ಪಿಸಿದನಾದಕಾರಣ ಕಣ್ಣಪ್ಪದೇವನೊಬ್ಬನೇ ಶಿವನಿಗೆ ಕಣ್ಣನ್ನರ್ಪಿಸಿದವನೆನಿಸಿಕೊಳ್ಳು
ತ್ತಾನಲ್ಲದೆ ಕಣ್ಣನ್ನು ಅಪೇಕ್ಷಿಸಿಕೊಂಡು ಅದನ್ನರ್ಪಿಸಿದವರೆಲ್ಲರೂ ಶಿವನಿಗೆ ಕಣ್ಣನ್ನು ಅರ್ಪಿ
ಸಿದವರಾಗುವುದಿಲ್ಲ ||೧೧|| ಆದುದರಿಂದ ಆ ಕಣ್ಣಪ್ಪದೇವನ ನೇತ್ರದಾನವು ಪ್ರಪಂಚದಲ್ಲಿ
ಅತ್ಯಂತ ಪ್ರಖ್ಯಾತವಾಗಿರುವುದು. ಇದಲ್ಲದೆ ಸದ್ಭಕ್ತನಾದ ವೆಲ್ಲಕೊಂಡದ ಮಹಾದೇವ
ಯ್ಯನು— ಎಲೈ ಕಣ್ಣುಗಳೇ! ಪ್ರಾತಃಕಾಲದ ಶಿವಾಭಿಷೇಕಸಮಯವಾಯಿತೆಂಬುದನ್ನು
ಆಲೋಚಿಸದೆ ಮುದದಿಂದ ನೀವು ನಿದ್ರೆಮಾಡುತ್ತಿದ್ದೀರಿ. ಅದುಕಾರಣ ನೀವು ಶಿವದ್ರೋಹಿಗಳು
ಎಂಬುದಾಗಿ ಕೋಪದಿಂದ ತನ್ನ ಕಣ್ಣುಗಳನ್ನು ಕಿತ್ತು, ಅವುಗಳಿಂದ ಈಶ್ವರನನ್ನು ಪೂಜಿಸಿ

ಹಾದೇವಸ್ಯವಿಸ್ಮಯಂ | ಅಪ್ರಮತ್ತಾಕ್ಷಿಣೀಲೇಭೇಸಕಿಂ ಸದ್ಭಕ್ತಿಭೂಷಣಃ ||೧೪|| ಕಿಂಚಕಂಗಳದೇವಯ್ಯನಾಮಾ ಸದ್ಭಕ್ತಪುಂಗವಃ | ಶ್ರೀಪರ್ವತಂಪರಿಷದಾಸಹ ಸಂಪ್ರಾಪ್ಯಲೋಚನೇ ||೧೫|| ಉತ್ಪಾಟ್ಯತಾಭ್ಯಾಂಗೌರೀಶಂ ಪೂಜಯಿತ್ವಾಽತಿಭಕ್ತಿತಃ | ಪುನಸ್ಸಂಪ್ರಾಪ್ಯನಯನೇ ಮುದಾಸ್ವಪುರಮಾಯಯೌ||೧೬|| ಏತಾವತ್ಸ್ವಲ್ಪಕಾಲೇನ ಕಥಂಜಾತೇವಿಲೋಚನೇ | ಕಥಂಶಿವಾತ್ಸ್ವಯಂಲೇಭೇ ನೇತ್ರೇಸರ್ವಂಹಿಕೈತವಂ ||೧೭|| ಇತಿನಿಂದತ್ಸುದುಷ್ಟೇಷು ತದಾಕಂಗಳದೇವಯಃ | ಮಾರ್ಜಾಲಮೇಕಮಾನಾಯ್ಯ ತೈರೇವಸದಸಿಸ್ಫುಟಂ ||೧೮|| ಉತ್ಪಾಟ್ಯ ತದ್ಬಿಡಾಲಸ್ಯ ನೇತ್ರೇತೈರೇವತತ್ಕ್ಷಣೇ | ಸಂಸ್ಮೃತ್ಯಸಕಲಾನ್ಭಕ್ತಾನ್ಮಹಾದೇವದಯಾನಿಧೇ ||೧೯|| ಸದಾಸ್ಯನಿಯದಿಕ್ಷಿಪ್ರಮೇತಸ್ಯಾದ್ಯವಿಲೋಚನೇ | ತವಾಸಂಖ್ಯಾತಭಕ್ತಾನಾಮಾಜ್ಞೇತ್ಯುಕ್ತ್ವಾಽತಿಹರ್ಷತಃ ||೨೦|| ಜನೇಷುವಿಸ್ಮಯಾಕ್ರಾಂತೇಷ್ವಸೌ ಕಂಗಳದೇವಯಃ | ತನ್ಮಾರ್ಜಾಲಸ್ಯನಯನೇ ಪ್ರದದಾಮಹಿಮೋನ್ನತಃ ||೨೧|| ಕಿಂಚಾರ್ಪಯಿತ್ವಾನಯನೇ ಭೂಯಃಪ್ರಾಪ್ತೇಽಕಿಮುದ್ಭುತಂ | ದೃಶಮರ್ಪ್ಯದೃಶೋರಾಪ್ತಿಃ ಕ್ಷಿತ್ರಂಕಿಂಬಹುಜಲ್ಪಿತೈಃ ||೨೨|| ಮು

---

ಜಗತ್ತೆಲ್ಲಾ ಆಶ್ಚರ್ಯಪಡುವಂತೆ ಜಾಗರೂಕವಾಗಿರತಕ್ಕ ನಯನಗಳನ್ನು ಪಡೆದುಕೊಂಡನಲ್ಲವೆ? ||೧೪|| ಮತ್ತೂ ಕಂಗಳದೇವಯ್ಯನೆಂಬ ಸದ್ಭಕ್ತಶ್ರೇಷ್ಠನು ಪರಿಸೆಯ ಜತೆಗೆ ಶ್ರೀ ಶೈಲಕ್ಕೆ ಹೋಗಿ ತನ್ನ ನೇತ್ರಗಳನ್ನು ಕಳೆದು ಅವುಗಳಿಂದ ಮಲ್ಲಿಕಾರ್ಜುನೇಶ್ವರನನ್ನು ಅತಿ ಭಕ್ತಿಯೊಡನೆ ಪೂಜಿಸಿ, ಮರಳಿ ಲೋಚನಗಳನ್ನು ಪಡೆದು ತನ್ನ ಊರಿಗೆ ಬಂದನು. ||೧೬|| ಅದನ್ನು ಕೆಲ ದುಷ್ಟರು ಕೇಳಿ, ''ಇಷ್ಟು ಸ್ವಲ್ಪಕಾಲದೊಳಗೆ ಇವನಿಗೆ ನಯನಗಳು ಹೇಗೆ ಬಂದುವು? ಶಿವನಿಂದ ಇವನು ಕಣ್ಣುಗಳನ್ನು ಪಡೆದುಕೊಂಡುದು ಹೇಗೆ? ಇದೆಲ್ಲಾ ಕಪಟ ||೧೭|| ಎಂದು ನಿಂದಿಸಲಾಗಿ, ಆಗ ಕಂಗಳದೇವಯ್ಯನು ಸಭೆಗೆ ಒಂದು ಬೆಕ್ಕನ್ನು ತರಿಸಿ, ಆ ದೂಷಕರಿಂದಲೇ ಆ ಬೆಕ್ಕಿನ ಕಣ್ಣುಗಳನ್ನು ಕೀಳಿಸಿ, ಆ ಕೂಡಲೇ ಸಕಲ ಭಕ್ತೋತ್ತಮರನ್ನು ಧ್ಯಾನಿಸಿ, ಎಲೈ ಕೃಪಾನಿಧಿಯಾದ ಪರಮೇಶ್ವರನೆ! ಈ ಬೆಕ್ಕಿಗೆ ಬೇಗನೆ ನೀನು ಕಣ್ಣುಗಳನ್ನು ಕೊಡದಿದ್ದರೆ ನಿನ್ನ ಅಗಣಿತ ಭಕ್ತಗಣದ ಮೇಲಣ ಆಣೆ'' ಎಂಬುದಾಗಿ ಸಂತೋಷದಿಂದ ಹೇಳಿ ||೨೦|| ನೋಡುತ್ತಿದ್ದ ಸಕಲ ಜನರೂ ಆಶ್ಚರ್ಯಪಡುವಂತೆ ಆ ಬೆಕ್ಕಿಗೆ ತನ್ನ ಭಕ್ತಿಮಹತ್ತ್ವದಿಂದ ಕಂಗಳದೇವಯ್ಯನು ನಯನಗಳನ್ನು ಕೊಟ್ಟನು. ||೨೧|| ಮತ್ತೂ ಪೂರ್ವದಲ್ಲಿ ಮುಕ್ಕಂಟಿಕಾಲಿವಟ್ಟಿಯೆಂಬ ಶರಣನು—''ಶಿವನಿಗೆ ಕಣ್ಣುಗಳನ್ನು ಕಳೆದು ಅರ್ಪಿಸಿ ಮರಳಿ ಪಡೆದುಕೊಳ್ಳುವುದು ಆಶ್ಚರ್ಯವೆ?'' ಮತ್ತು ಒಂದುಕಣ್ಣನ್ನು ಅರ್ಪಿಸಿ ಎರಡು ಕಣ್ಣನ್ನು ಪಡೆದುಕೊಳ್ಳುವುದೊಂದಾಶ್ಚರ್ಯವೆ? ಹೆಚ್ಚು ಮಾತಿನಿಂದೇನು? ||೨೨|| ಎಂದು ಹೇಳಿ, ತನ್ನ ಪೂರ್ವಜನ್ಮ ಸುಕೃತ ವಿಶೇಷದಿಂದ ಮೂರು ಕಣ್ಣುಗಳನ್ನು ಪಡೆದು ಅನರಿಂದ ಲೋಕವಿಖ್ಯಾತ ಕೀ

ಕ್ಕಂಟಿಕಾಲಿವೆಟ್ಟ್ಯಾಖ್ಯೋ ಪುರಾಕಶ್ಚಿದ್ಗಣೋತ್ತಮಃ | ಪೂರ್ವಜನ್ಮಕೃತಾ
ತ್ಪುಣ್ಯಾ ನ್ನೇತ್ರತ್ರಯಯುತೋಭುವಿ ||೨೩|| ನಿಯಮ್ಯಲೋಕಾನುತ್ತುಂಗ ಕೀ
ರ್ತಿವ್ಯಾಪ್ತದಿಗನ್ತರಃ | ಸಾಕ್ಷಾತ್ತ್ರಿಲೋಚನಇತಿ ಪ್ರಖ್ಯಾತಮಹಿಮಾಽವಸತ್
||೨೪|| ತತ್ಕಾಲೇಕಶ್ಚನಕರಿಕಾಲಚೋಳ ಇತಿಶ್ರುತಃ | ಗಣನಾಥೋವೀರಭಕ್ತಿ
ಕ್ರಿಯಾಶಾಲೀಗುಣೋನ್ನತಃ ||೨೫|| ಅಸ್ಮಾದ್ಧಿಕನಕಂವರ್ಷಂ ವವರ್ಷೇತಿಪರಿ
ಶ್ರುತಾತ್ | ರುದ್ರಭಾಷ್ಯಸ್ಥವಚನಾತ್ಸರ್ವ ವಿದ್ವದ್ಭಿರಾದೃತಾತ್ ||೨೬|| ಸ್ವ
ರ್ಣವೃಷ್ಟಿಂ ವರ್ಷಿತವಾನ್ಶಂಭುರಾಸಪ್ತವಾಸರಂ | ಯಾನ್ತೀಮಭ್ರಂಕಷ
ಸ್ಫೀತ್ಯಾರ್ಕಾವೇರೀಂ ಬನ್ಧಯನ್ನಸೌ ||೨೭|| ತದ್ಬನ್ಧಸಂಕಾರಯಿತುಂ ಸರ್ವ
ದೇಶಸ್ಥಭೂಭುಜಾಂ | ಹೃತಿಕಾಲೇಕಾಲಿವೆಟ್ಟಿನೃಪಂಚಾಹ್ವಾಪಯತ್ತತಃ ||೨೮||
ಕರೋತಿಕಿಂದ್ವಿನೇತ್ರಸ್ಯ ಸೇವಾಂಭೂವೌತ್ರಿನೇತ್ರಕಃ | ನಾಗಚ್ಛಾಮೀತಿತೇ
ನೋಕ್ತೇ ಸಚೋಲಧರಣೀಪತಿಃ ||೨೯|| ಅಸ್ಮೈತನ್ನಯನಂಕೋವಾ ಪ್ರಾದಾ
ದಿತಿತದಾಕೃತಿಂ | ಲೇಖಯಿತ್ವಾಽಗ್ರತೋವಾಮಪಾದಾಙ್ಗುಷ್ಠೇನ ತಾದೃಶಂ
||೩೦|| ಪೀಡಯಾಮಾಸತದ್ಭಾಲನೇತ್ರಂಚಸ್ಫುಟಿತಂತದಾ | ತತೋವಿಗತಗ
ರ್ವಸ್ಸನ್ಕಾಲವೆಟ್ಟಿರ್ಭಯಾನ್ವಿತಃ ||೩೧|| ಭಕ್ತ್ಯಾಪ್ರಣಮ್ಯ ಸಕರಿಕಾಲಚೋ

---

ರ್ತಿವಂತನಾಗಿ, ಪ್ರತ್ಯಕ್ಷನಾದ ಮುಕ್ಕಣ್ಣನೇ ಇವನೆಂಧು ಪ್ರಸಿದ್ಧವಾದ ಮಹತ್ತ್ವವುಳ್ಳವನಾಗಿ
ಭೂಮಿಯನ್ನಾಳಿಕೊಂಡಿದ್ದನು ||೨೪|| ಆ ಕಾಲದಲ್ಲಿ ಕರಿಕಾಲಚೋಳನೆಂದು ಪ್ರಖ್ಯಾತ
ನಾದ ಶರಣನು ವೀರಭಕ್ತ್ಯಾಚರಣಸಂಪನ್ನನಾಗಿರುತ್ತ ||೨೫|| ರುದ್ರಭಾಷ್ಯದಲ್ಲಿ "ಅವ
ನಿಗೆ ಶಿವನು ಚಿನ್ನದ ಮಳೆಯನ್ನು ಕರೆದನು" ಎಂಬುದಾಗಿ ಹೇಳಲ್ಪಟ್ಟಿರುವ ಪ್ರಸಿದ್ಧ ವಚನದ
ಪ್ರಕಾರ ||೨೬|| ಏಳುಪಾರಗಳತನಕ ಪರಶಿವನು ಅವನಿಗೆ ಚಿನ್ನದ ಮಳೆಯನ್ನು ಸುರಿಸಿದ್ದನು.
ಈ ಕರಿಕಾಲಚೋಳಭೂಪತಿಯು ಆಕಾಶವನ್ನು ಮುಟ್ಟುವುದೋ ಎಂಬಂತೆ ಉಕ್ಕಿ ಹರಿಯು
ತ್ತಿರುವ ಕಾವೇರೀನದಿಗೆ ಕಟ್ಟೆಯನ್ನು ಕಟ್ಟಿಸಬೇಕೆಂದು ಯೋಚಿಸಿ, ಅದಕ್ಕಾಗಿ ಎಲ್ಲಾ
ದೇಶಗಳ ರಾಜರುಗಳನ್ನೂ ಕರೆಯಿಸುವಾಗ್ಗೆ ಕಾಲಿವೆಟ್ಟಿ ರಾಜನನ್ನೂ ಕರೆಯಿಸಿದನು ||೨೮||
ಆತನಾದರೋ—"ಭೂಮಿಯಲ್ಲಿ ಮುಕ್ಕಣ್ಣನಾದವನು ಇಕ್ಕಣ್ಣನ ಸೇವೆಯನ್ನು ಮಾಡುವನೆ?
ಅದುಕಾರಣ ನಾನು ಬರುವುದಿಲ್ಲ" ಎಂದು ಹೇಳಲಾಗಿ, ಇದನ್ನು ಕರಿಕಾಲಚೋಳರಾಜನು
ಕೇಳಿ ||೨೯|| ಈ ಕಾಲವೆಟ್ಟಿಗೆ ಮುಕ್ಕಣ್ಣನ್ನು ಕೊಟ್ಟವರಾರು? ಎಂದು ಹೇಳಿ, ಅವನ
ಆಕಾರವನ್ನು ಚಿತ್ರದಲ್ಲಿ ಬರೆಯಿಸಿ, ತನ್ನ ಎಡಗಾಲಿನ ಹೆಬ್ಬೆಟ್ಟಿನ ತುದಿಯಿಂದ ಆ ಚಿತ್ರದಲ್ಲಿ
ರುವ ಹಣೆಗಣ್ಣನ್ನು ತಿವಿದನು. ಆ ಕೂಡಲೇ ಕಾಳವೆಟ್ಟಿಗಿದ್ದ ಹಣೆಗಣ್ಣು ಅಲ್ಲಿಯೇ ಒಡೆದು
ಹೋಯಿತು. ಆಗ ಆತನು ಗರ್ವಹೀನನಾಗಿ ಭಯಗೊಂಡು ||೩೧|| ಕರಿಕಾಲಚೋಳಭೂ
ಪನ ಬಳಿಗೆ ಬಂದು ಭಕ್ತಿಯಿಂದ ನಮಸ್ಕರಿಸಿ, ಅವನ ದಯೆಯಿಂದ ಮತ್ತೆ ಮೂರನೆ ಕಣ್ಣನ್ನು

ಲಮಹೀಭೃತೇ | ಲೇಭೇತೃತೀಯನಯನಂ ಕೃಪಯಾತಸ್ಯಭೂಪತೇಃ ||೩೨||
ತತ್ಕಾಲವೆಟ್ಟಿಮಾಹಾತ್ಮ್ಯಂ ಕಿಯದಿತ್ಯವಧೀರಯನ್ | ಅನಿರಸ್ತಪ್ರತಾಪಾಢ್ಯಸ್ಸ
ಮುದ್ಯದ್ಭಕ್ತಿವಿಕ್ರಮಃ ||೩೩|| ಧೀಮಾಂಚ್ಛಂಕರದಾಸಯ್ಯನಾಮಾ ಭಕ್ತೋ
ಮಹಾಯಶಾಃ| ಲಬ್ಧ್ವಾತ್ರಿಲೋಚನಾನ್ನೇತ್ರತ್ರಿತಯಂ ಪರಮಾದ್ಭುತಂ ||೩೪||
ಸರ್ವಾನ್ಯದರ್ಶನಸ್ಥಾನಾಂ ಗರ್ವಂನಿರ್ವಾಪಯನ್ಸ್ವರಂ | ಕುಟಿಲಾನ್ಯಮತೈಸ್ಸೇ
ವಾಂ ಕಾರಯನ್ನವಸದ್ಭುವಿ ||೩೫|| ಅನ್ಯದೈವತದರ್ಪೋಪಶಮನಾಯ ಮಹೇ
ಶ್ವರಾತ್ | ಶ್ರೀಮಚ್ಛಂಕರದಾಸೇನ ಸಂಪ್ರಾಪ್ತೇಲೋಚನತ್ರಯೇ ||೩೬|| ಏಕ
ಮೇವೋರ್ಧ್ವನಯನಮಿತಿಖ್ಯಾತಂ ಮಹೀತಳೇ | ಶಿವಾತ್ಪರಿಪ್ರಾಪ್ತದೃಶಾಂ ಸದ್ಭ
ಕ್ತಾನಾಂ ಕೃಪಾವಶಾತ್ ||೩೭|| ಪಂಡಿತಸ್ತುತಿಪಾತ್ರಸ್ಯ ದಂಡಿತಾಶುಭಸಂ
ತತೇಃ | ಪಂಡಿತಾರಾಧ್ಯದಿಗ್ಭದ್ರ ಗಜಸ್ಯೇಶಾನುಕಂಪಯಾ ||೩೮|| ಊರ್ಧ್ವನೇ
ತ್ರದ್ವಯಂ ಲೋಕಪ್ರಖ್ಯಾತಂ ಸುತರಾಂಬಭೌ |

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಮಹಿಮಪ್ರಕರಣೇ ಇರಿತ್ತಾಂಡಾರ್ಯಾದಿ ಭಕ್ತಗಣ ನೇತ್ರ
ಲಾಭಕಥನಂ ನಾಮೈಕಾದಶೋಽಧ್ಯಾಯಃ.

---

ಪಡೆದುಕೊಂಡನು. ||೩೨|| ನಿರರ್ಗಳ ಪ್ರತಾಪಸಂಪನ್ನನೂ, ವೀರಭಕ್ತಿವಿಖ್ಯಾತನೂ ಆದ ಶಂಕರದಾಸಯ್ಯನೆಂಬ ಭಕ್ತೋತ್ತಮನು ಆ ಕಾಲವೆಟ್ಟಿಯ ಮಹಿಮೆಯನ್ನು ಕೇಳಿ, "ಅದೆಷ್ಟರದು?" ಎಂದು ಹೀಯಾಳಿಸಿ, ಪರಮೇಶ್ವರನಿಂದ ಆಶ್ಚರ್ಯಕರವಾಗುವಹಾಗೆ ಮುಕ್ಕಣ್ಣುಗಳನ್ನು ಪಡೆದು, ಶಿವೇತರ ಮತದವರ ಗರ್ವವನ್ನೆಲ್ಲಾ ತೊಡೆದುಬಿಟ್ಟು, ಅವರೆಲ್ಲರಿಂದಲೂ ಊಳಿಗೆವನ್ನು ಮಾಡಿಸಿಕೊಳ್ಳುತ್ತಿದ್ದನು. ||೩೫|| ಹೀಗೆ ಶಂಕರದಾಸಾರ್ಯನು ಶಿವೇತರ ದೇವತೆಗಳ ಗರ್ವವನ್ನ ಇಗಿಸುವುದಕ್ಕಾಗಿ ಪರಶಿವನಿಂದ ಮುಕ್ಕಣ್ಣನ್ನು ಪಡೆದುಕೊಂಡಿರಲಾಗಿ ||೩೬|| ಆ ಕಣ್ಣುಗಳಲ್ಲಿ ಊರ್ಧ್ವನಯನವಾಗಿದ್ದುದು ಒಂದೇ ಎಂಬುದು ಲೋಕಪ್ರಸಿದ್ಧವು. ಈಗಳಾದರೊ ಶಿವನಿಂದ ಕಣ್ಣುಗಳನ್ನು ಪಡೆದುಕೊಂಡಿದ್ದ ಆ ಪುರಾತನ ಶರಣರ ಕೃಪಾಬಲದಿಂದ ||೩೭|| ವಿದ್ವಜ್ಜನಪರಿಸ್ತುತನೂ, ಅಮಂಗಲವಿನಾಶಕನೂ, ದಿಗ್ಗಜರಾಜನಂತಿರುವವನೂ ಆದ ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗೆ ಪರಶಿವನ ಕೃಪೆಯಿಂದ ಜಗದ್ವಿಖ್ಯಾತವಾಗುವಂತೆ ಎರಡು ಊರ್ಧ್ವನೇತ್ರಗಳು ಮೂಡಿ ಪ್ರಕಾಶಿಸಿದುವು ||೩೮||

ಎಂಬಲ್ಲಿಗೆ ೧೧ನೆ ಅಧ್ಯಾಯವು ಮುಗಿದುದು.

## ಅಥ ದ್ವಾದಶೋಽಧ್ಯಾಯಃ.

### (ಸೌಂದರನಂಬ್ಯಣ್ಣ ಜನ್ಮಾದಿಚರಿತ್ರ ಕಥನಂ)

ಕಿಂಚತಾದೃಙ್ಮಹಾತ್ಮಾಪಿ ಸಂಬ್ಯಣ್ಣೋ ಲೋಕವಿಶ್ರುತಃ । ನೇತ್ರಪ್ರಾಪ್ತಿಕ್ಷಣೇ ಶಂಭೋಃ ಕಿಮವಾಪೋರ್ಧ್ವಲೋಚನಂ ॥೧॥ ತನ್ನಂಬ್ಯಣ್ಣಸ್ಯ ಮಾಹಾತ್ಮ್ಯಂ ಶಿವಸ್ಯಾಪ್ಯಗೋಚರಂ । ಕಾವೇರೀಯಾಮ್ಯದಿಗ್ಭಾಗೇ ವಿದ್ಯತೇ ಸುಮನೋಹರಃ ॥೨॥ ಆವಲೂರಿತ್ಯಗ್ರಹಾರಃ ಪ್ರಖ್ಯಾತೋ ಧರಣೀತಲೇ । ಯಾಯಾವರಾರ್ಥಂ ತಂ ಗ್ರಾಮಂ ಜಗ್ಮತುರ್ಜಂಗಮಾವುಭೌ ॥೩॥ ಸಂಬ್ಯಣ್ಣೋಕ್ತಾನಿ ಗೀತಾನಿ ಗಾಯನ್ತೌ ಲಲಿತಸ್ವರಂ । ಶಿವಸದ್ಭಕ್ತಿನಿರತಾ ಕಾನ್ತಾಜನಶಿರೋಮಣಿಃ ॥೪॥ ಶಿವದ್ವಿಜಾಂಗನಾ ಪಿರ್ಯಸಂಗಾ ಗುಣಗಣೋನ್ನತಾ । ಯಾಯಾವರಪ್ರದಾನಾರ್ಥಮಾಗತಾ ಭಕ್ತಿಪೂರ್ವಕಂ ॥೫॥ ಆಕರ್ಣ್ಯ ತಾನಿ ಗೀತಾನಿ ತೌ ಪಪ್ರಚ್ಛೇತಿ ಜಂಗಮೌ । ಗೀತಾನ್ಯೇತಾನಿ ಕೇನೋಕ್ತಾನ್ಯೇಷಾಮರ್ಥಶ್ಚ ಕಃ ಪುನಃ ॥೬॥ ಗಾನೇ ಕೃತೇ ಶ್ರುತೇ ವಾ ಕಿಂ ವದತಂ ಫಲಮುದ್ಯಮೇ । ಇತಿ ಪೃಷ್ಟೌ ಜಂಗಮೌ ತೌ ತಸ್ಯೈ ಸಕಲಮೂಚತುಃ ॥೭॥ ಗೀತಾನ್ಯೇತಾನ್ಯಭೀ

---

## ೧೨ನೆ ಅಧ್ಯಾಯವು.

### ಸೌಂದರನಂಬ್ಯಣ್ಣನ ಜನ್ಮಾದಿಚರಿತ್ರೆ.

ಸೌಂದರನಂಬ್ಯಣ್ಣನು ಲೋಕಪ್ರಸಿದ್ಧನಾದವನಷ್ಟೆ. ಆತನು ಕೂಡ ತನ್ನ ಕಣ್ಣು ಮೂಡಿದಾಗಳೇ ಶಿವನಿಂದ ಊರ್ಧ್ವನೇತ್ರವನ್ನು ಪಡೆದುಕೊಂಡನೆ? ಇಲ್ಲ ॥೧॥ ಆತನ ಮಹಿಮೆಯು ಶಿವನಿಗೂ ಅಗೋಚರವಾದುದು. ಹೇಗೆಂದರೆ—ಕಾವೇರಿಯ ದಕ್ಷಿಣದಿಕ್ಕಿನಲ್ಲಿ ಮನೋಹರವಾದ ಆವಲೂರೆಂಬ ಅಗ್ರಹಾರವು ಭೂತಲ ಪ್ರಸಿದ್ಧವಾಗಿರುವುದು. ॥೨॥ ಆ ಗ್ರಾಮಕ್ಕೆ ಭಿಕ್ಷಾರ್ಥವಾಗಿ ಇಬ್ಬರು ಜಂಗಮರು ಬಂದರು. ॥೩॥ ಅವರು ಸೌಂದರನಂಬ್ಯಣ್ಣನು ಹಾಡಿದ್ದ ತಿರುಪಾಡುಗಳನ್ನು ಒಳ್ಳೆ ಮಧುರ ಕಂಠಸ್ವರದಿಂದ ಹಾಡುತ್ತಿದ್ದರು. ಆ ಊರಿನಲ್ಲಿ ಭಕ್ತಿತತ್ಪರಳೂ, ಸ್ತ್ರೀಜನ ಶಿರೋರತ್ನಳೂ ಆಗಿದ್ದ ‘‘ಪಿರಿಯನಂಗೆ’’ ಎಂಬ ಹೆಸರಿನ ಶಿವದ್ವಿಜಸ್ತ್ರೀಯು ಆ ಜಂಗಮದ್ವಯಕ್ಕೆ ಭಕ್ತಿಯಿಂದ ಭಿಕ್ಷೆಯನ್ನು ನೀಡುವುದಕ್ಕಾಗಿ ಬಂದು, ಅವರು ಹೇಳುತ್ತಿದ್ದ ಹಾಡುಗಳನ್ನು ಕೇಳಿ, ಇವನ್ನು ಹೇಳಿದವರಾರು? ಈ ಪದಗಳಿಗೆ ಅರ್ಥವೇನು? ॥೬॥ ಇಂಥ ಗಾನಗಳನ್ನು ಮಾಡಿದರೆ ಫಲವೇನು? ಕೇಳಿದರೆ ಫಲವೇನು? ಅದನ್ನು ಹೇಳಿರಿ ಎಂದು ಪ್ರಶ್ನೆಮಾಡಲಾಗಿ, ಆ ಜಂಗಮರು ಹೇಳಿದರೇನೆಂದರೆ— ॥೭॥ ಈ ತಿರುಪಾಡುಗಳು ಮನುಷ್ಯರಿಗೆ ಸಕಲೇಷ್ಟಾರ್ಥಗಳನ್ನೂ ಕೊಡುವುವು. ಮತ್ತು ಇಹಲೋಕ ಪರಲೋಕ ಫಲಗಳೆ

ಷ್ಟಾರ್ಥಕರಾಣಿಸ್ಮರತಾಂನೃಣಾಂ | ಐಹಿಕಾಮುಷ್ಮಿಕಫಲಪ್ರಾಪಕಾಣಿ ವಿಶೇಷತಃ ||೮|| ಅಕ್ಷೀಣಸೌಖ್ಯಸಂಪ್ರಾಪ್ತಿ ದಕ್ಷಮೋಕ್ಷೈಕಹೇತವಃ | ಏತೈಶ್ಚ ಪ್ರತಿಪದ್ಯೈರ್ಗೀತೈಃ ಕೃತ್ಯೈರ್ದ್ರಾವಿಡಭಾಷಯಾ ||೯|| ಸ್ತುತವಾನ್ಪರಮೇಶಾನಂ ಧನ್ಯಃಕಇತಿಚೇಚ್ಛೃಣು | ಶಂಬರಾರಾತಿಸದ್ಭಕ್ತೋ ನಂಬ್ಯಣ್ಣ ಇತಿವಿಶ್ರುತಃ ||೧೦|| ಅಸ್ತ್ಯಸಾಧಾರಣಸ್ತಸ್ಯ ಚರಿತ್ರಂಲೋಕವಿಶ್ರುತಂ | ಗೌರೀವಿವಾಹಗಮನ ಕಾಲೇಽತ್ಯಂತ ಮನೋಹರಂ ||೧೧|| ಶೃಂಗಾರಮಾತ್ಮನಃಕೃತ್ವಾ ಪ್ರಹರ್ಷಪರಿಪೂರಿತಃ | ದದರ್ಶದರ್ಪಣಂಸೂಕ್ಷ್ಮಂತದಾಮುಗ್ಧೇಂದುಶೇಖರಃ ||೧೨|| ನಿರಸ್ತಕೋಟಿಮಾರ್ತಾಂಡತೇಜಸ್ತಸ್ಯ ವಪುಶ್ಶುಭಂ | ತದ್ದರ್ಪಣಾಂತರೇವ್ಯಕ್ತಂ ತದಾನೀಂಪ್ರತಿಬಿಂಬಿತಂ ||೧೩|| ದೃಷ್ಟ್ವಾತ್ತದೀಯಸೌಂದರ್ಯಂ ವಿಸ್ಮಿತಃ ಪರಮೇಶ್ವರಃ | ಮೋನೇಽಹಂಸುಂದರಇತಿ ಮನಸಾಪರಿಹರ್ಷಿತಃ ||೧೪|| ಮುಕುರೇಸ್ಫುರಿತಾವ್ಯಕ್ತಿ ರ್ಮೂರ್ತಿರ್ಮಾಸ್ಮಾದ್ವಿನಿರ್ಗತಾ | ಸಾತತಃಪರಮೇಶಾಯ ಸಾಷ್ಟಾಂಗಂ ಪ್ರಣತಾಽಭವತ್ ||೧೫|| ತಾಮುತ್ಥಾಪ್ಯಸಮಾಲಿಂಗ್ಯ ಮನ್ದಸ್ಮಿತಮುಖಾಂಬುಜಃ | ಮಾಮಕೀಸುಂದರಸ್ಫೂರ್ತಿ ರೇವ ಮೂರ್ತಿರ್ಹಿತಾವಕೀ ||೧೬|| ಅತಸ್ತ್ವಂಸುಂದರೋನಾಮ್ನಾ ಭವೇತ್ಯಾದಿಶ್ಯಶಂಕರಃ | ಗಣ

---

ರಡನ್ನೂ ಉಂಟುಮಾಡುವುವು. ||೮|| ಅಲ್ಲದೆ ಎಂದಿಗೂ ಅಳಿವಿಲ್ಲದ ಮುಕ್ತಿ ಸೌಖ್ಯವನ್ನು ಉಂಟುಮಾಡುವುದಕ್ಕೆ ಸಾಧನಭೂತಗಳು. ಇವನ್ನು ತಮಿಳಿನಲ್ಲಿ ರಚಿಸಿ ಪರಶಿವನನ್ನು ಕುರಿತು ಸ್ತೋತ್ರಮಾಡಿದ ಧನ್ಯನು ಯಾವನೆನ್ನುತ್ತೀಯೋ? ಕೇಳು—ನಂಬ್ಯಣ್ಣನೆಂಬ ಲೋಕಪ್ರಸಿದ್ಧ ಶಿವಭಕ್ತನೊಬ್ಬನಿದ್ದನು. ||೧೦|| ಅವನ ಚರಿತ್ರವು ಲೋಕಪ್ರಸಿದ್ಧವಾದುದು. ಹೇಗೆಂದರೆ— ಪರಶಿವನು ಪಾರ್ವತಿಯನ್ನು ಮದುವೆಯಾಗುವುದಕ್ಕೆ ಮದವಣಿಗನಾಗಿ ಹೋಗುವ ಕಾಲದಲ್ಲಿ ಅತ್ಯಂತ ಮನೋಹರವಾಗಿರುವಹಾಗೆ ತನ್ನನ್ನು ಅಲಂಕರಿಸಿಕೊಂಡು ಪರಮ ಸಂತೋಷದಿಂದ ಕನ್ನಡಿಯಲ್ಲಿ ತನ್ನ ರೂಪವನ್ನು ನೋಡಿಕೊಂಡನು. ||೧೨|| ಅದರಲ್ಲಿ ತನ್ನ ಶರೀರವು ಕೋಟಿಸೂರ್ಯರ ಪ್ರಭೆಯನ್ನು ತಿರಸ್ಕರಿಸುತ್ತಿರುವ ಕಾಂತಿಯುಳ್ಳುದಾಗಿ ಪ್ರತಿಬಿಂಬಿಸಿ ತೋರಿತು. ||೧೩|| ಆ ಸೌಂದರ್ಯವನ್ನು ಪರಶಿವನು ನೋಡಿ ಆಶ್ಚರ್ಯಪಟ್ಟವನಾಗಿ, ಸಂತೋಷದಿಂದ ತನ್ನ ಮನಸ್ಸಿನೊಳಗೆ ನಾನೇ ಸುಂದರನೆಂದು ತಿಳಿದುಕೊಂಡನು ||೧೪|| ಆಗ ಕನ್ನಡಿಯಲ್ಲಿ ಗೋಚರಿಸಿದ ಪರಶಿವನ ಸುಂದರಮೂರ್ತಿಯೇ ಒಂದು ರೂಪವನ್ನು ತಾಳಿ ಹೊರಕ್ಕೆ ಬಂದು ಪರಮೇಶ್ವರನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿತು. ||೧೫|| ಶಿವನು ಮುಗುಳ್ನಗೆ ನಗುತ್ತ ಆ ವ್ಯಕ್ತಿಯನ್ನು ಹಿಡಿದೆತ್ತಿ, ಎಲೈ! ನನ್ನ ಸೌಂದರ್ಯದ ತೋರಿಕೆಯೇ ನಿನ್ನ ದೇಹವಾಗಿರುವುದನ್ನು. ಅದುಕಾರಣ ನೀನು „ಸುಂದರ" ಎಂಬ ಹೆಸರುಳ್ಳವನಾಗಿರು ಎಂಬುದಾಗಿ ಅಪ್ಪಣೆಮಾಡಿ, ಆ ಸುಂದರನಿಗೆ ಶಿವಗಣ ಪದವಿಯನ್ನು ಕೊಟ್ಟನು ||೧೬|| ಬಳಿಕ ಪರಶಿವನು ಪಾರ್ವತಿಯನ್ನು

ತ್ವಂಪ್ರದದೌತಸ್ಮೈ ಸುಂದರಾಯಕೃಪಾನಿಧಿಃ ||೧೭|| ತತಃಪ್ರವರ್ತಿತೋದ್ವಾ
ಹಃ ಕ್ಷಿತಿಭೃತ್ಕನ್ಯಯಾಸಹ | ಉವಾಸೋಽನ್ಯೋನ್ಯಸಂಪ್ರೀತಿ ಕ್ರೀಡಾನಿರ್ಭ
ರಮಾನಸಃ ||೧೮|| ಕದಾಚಿಚ್ಛಂಭವೇ ಪುಷ್ಪಾಣ್ಯಾಹರ್ತುಂಸುಂದರೋಗತಃ |
ಗೌರ್ಯೈಪುಷ್ಪಾಪಹೃತಯೇ ಪ್ರಾಗೇವೋದ್ಯಾನಮಾಗತಾಂ || ೧೯ || ಪ್ರೇ
ಮ್ಣಾನಿರೀಕ್ಷ್ಯಕನಕಲತಾಂ ಕಾನ್ತಿಮತೀಮಪಿ | ಪರಸ್ಪರಾನುರಾಗಾನುರೂಪ
ಮನ್ಮಥಕೇಳಿಭಿಃ ||೨೦|| ತಾಭ್ಯಾಂಸಮನ್ವಿತಃ ಕಿಂಚಿದ್ವಿಲಂಬ್ಯಸಮುಪಾಗತಃ|
ಅಥಕಾಮಸುಖಾಪೇಕ್ಷಾ ಸಮಂಚಿತಮುಖಾಂಬುಜಾನ್ ||೨೧|| ಉಮಾಶಿವ
ಶ್ಚವೀಕ್ಷ್ಯತ್ರೀನ್ಯೂಯಂ ಸಂಭವತಕ್ಷಿತೌ | ಭವೇತಮಸ್ಯವನಿತೇಯುವಾಂದ್ವೇ
ಅಪಿಸಾದರಂ ||೨೨|| ಆತೃಪ್ತಿಕಾಮಸೌಖ್ಯಾಬ್ಧೌ ಭುವಿಕ್ರೀಡತಗಚ್ಛತ | ಇ
ತ್ಯೂಚತುಸ್ತತಸ್ತೇಽಗಜೇಶೌ ಸತ್ವಾಯಯುರ್ಭುವಂ ||೨೩|| ತಿರುವಾರೂರು
ರಿತ್ಯುರ್ವ್ಯಾಂ ಪುರೇದ್ರಮಿಡಮಂಡಲೇ | ಶಿವದ್ವಿಜಾತ್ಪುಣ್ಯಮೂರ್ತೇರ್ಜಡೆ
ಯಾರಿಸಮಾಹ್ವಯಾತ್ ||೨೪|| ಉದಭೂಗ್ಭಾಗ್ಯಯೋಗೇನ ಸುಂದರೋನಂ
ಬ್ಯಣಾಹ್ವಯಾ | ಸಾಪಂಚಮೇಷುಕನಕಲತಾಪಿ ಸಮಜಾಯತ ||೨೫|| ಕಾ

---

ಮದುವೆಮಾಡಿಕೊಂಡು ಅನ್ಯೋನ್ಯಾನುರಾಗದಿಂದ ವಿಲಾಸಪಟ್ಟುಕೊಂಡಿದ್ದನು. ||೧೮|| ಈ
ಸುಂದರನು ಪರಶಿವನ ಹೂವಿನ ಊಳಿಗದವನಾಗಿದ್ದುಕೊಂಡು, ಒಂದುದಿವಸ ಹೂವನ್ನೆತ್ತುವು
ದಕ್ಕಾಗಿ ಉದ್ಯಾನಕ್ಕೆ ಹೋದನು. ಪಾರ್ವತಿಗೆ ಹೂವನ್ನೆತ್ತಿ ತರುವುದಕ್ಕಾಗಿ ಇವನಿಗಿಂತ
ಮುಂಚೆಯೇ ಆ ಉದ್ಯಾನಕ್ಕೆ ಕನಕಲತೆ ಕಾಂತಿಮತಿಯರೆಂಬ ಇಬ್ಬರು ಪಾರ್ವತೀ ಸಖಿಯರು
ಹೋಗಿರಲು, ಸುಂದರನು ಅವರನ್ನು ಪ್ರೇಮದಿಂದ ನೋಡಿದನು. ಅವರೂ ಇವನನ್ನು ಹಾಗೆ
ಯೇ ನೋಡಲಾಗಿ ಪರಸ್ಪರಾನುರಾಗಹುಟ್ಟಲು, ಅವರೊಡನೆ ಸುಂದರನು ರತಿಕ್ರೀಡೆಯನ್ನು
ಅನುಭವಿಸಿ, ||೨೦|| ಅದರಿಂದ ಸ್ವಲ್ಪ ತಡಮಾಡಿಕೊಂಡು ಶಿವನಬಳಿಗೆ ಅವರಿಬ್ಬರೊಡನೆ ಬಂ
ದನು. ಕಾಮಸುಖದ ಅಪೇಕ್ಷೆಯ ಚಿಹ್ನೆಯಿಂದ ಕೂಡಿರುವ ಮುಖಕಮಲಗಳುಳ್ಳ ಆ ಮೂ
ವರನ್ನೂ ಪಾರ್ವತೀ ಪರಮೇಶ್ವರರು ನೋಡಿ, “ನೀವುಗಳು ಭೂಮಿಯಲ್ಲಿ ಜನ್ಮವನ್ನೆತ್ತಿರಿ.
ಈ ಸುಂದರನಿಗೆ ನೀವಿಬ್ಬರೂ ಪತ್ನಿಯರಾಗಿ ಸೇರಿ ತೃಪ್ತಿಯಾಗುವವರೆಗೂ ಕಾಮಸೌಖ್ಯಸಮು
ದ್ರದಲ್ಲಿ ವಿಹರಿಸಿಕೊಂಡು ಬನ್ನಿರಿ, ಹೋಗಿರಿ” ಎಂಬುದಾಗಿ ಅಪ್ಪಣೆ ಕೊಡಿಸಲು, ಆ ಮೂವ
ರೂ ಅಪ್ಪಣೆಯೆಂದು ಹೇಳಿ ಪಾರ್ವತೀ ಪರಮೇಶ್ವರರಿಗೆ ನಮಸ್ಕರಿಸಿ, ಭೂಮಿಗೆ ಬಂದರು.
||೨೩|| ಆತನು ಭೂತಲದಲ್ಲಿ ದ್ರವಿಡದೇಶಕ್ಕೆ ಸೇರಿದ ತಿರುವಾರೂರು ಎಂಬ ಸ್ಥಳದಲ್ಲಿದ್ದ ಜಡೆ
ಯಾರಿಯೆಂಬ ಶಿವದ್ವಿಜನಿಗೆ ಅವನ ಸುಕೃತಯೋಗದಿಂದ ಮಗನಾಗಿ ಸುಂದರನಂಬ್ಯಣ್ಣನೆಂಬ
ಹೆಸರಿನಿಂದ ಹುಟ್ಟಿದನು. ಆ ಕನಕಲತೆಯು ಅದೇ ಊರಿನಲ್ಲಿದ್ದ ಪಂಚಮಜಾತಿಯವರ ಹೊ
ಟ್ಟೆಯಲ್ಲಿ “ಪರವುನಾಚಿ” ಯೆಂಬ ಹೆಸರಿನಿಂದ ಹುಟ್ಟಿದಳು. ಕಾಂತಿಮತಿಯು ಮಂಗಳೂ

ನ್ನಿಮತ್ಯಪಿಸಂಜಾತಾ ಮಬ್ಗಳೂರುಪುರೇಶುಭೇ ||೨೬|| ಸುಲೋಚನಾಶೂದ್ರ ಜಾತಾ ವಜ್ಗಸಂಗೇತಿನಾಮತಃ | ಜಿಡೆಯಾರಿರ್ಮಹಾದೇವಮೂರ್ತಿಂ ನಂಬ್ಯ ಣಮಾದರಾತ್ ||೨೭|| ಅಥಾಗಮೋಕ್ತವಿಧಿನಾ ಚಕ್ರೇಶಾಂಭವದೀಕ್ಷಿತಂ | ದಿನೇದಿನೇಸಂಬ್ಯಣಸ್ಯ ವರ್ಧಮಾನಸ್ಯವತ್ಸರೇ ||೨೮|| ಪ್ರಾಪ್ತೇಗರ್ಭಾಷ್ಟಮೇ ಶಂಭುರೂಪಿಣಃ ಕರ್ಮಬುದ್ಧಿಮಾನ್ | ತಸ್ಯೋಪನಯನಂಕರ್ತುಂ ಜಿಡೆಯಾರಿಃ ಪ್ರಚಕ್ರಮೇ ||೨೯|| ಯಾತೇರುದ್ರ ಇತಿಖ್ಯಾತ ಶ್ರೀರುದ್ರೋಕ್ತೇರುದಂಚಿತೇ | ಭಾಷ್ಯೇಜರದ್ವಿಪ್ರತನು ರಿತಿವಾಕ್ಯಾತ್ಪರಿಶ್ರುತಾತ್ ||೩೦|| ಹರೋಜರಾಕ್ರಾಸ್ತ ಭಾವಂ ಧೃತ್ವಾಕೃತಕಭೂಸುರಃ | ಭೂತ್ವಾತದಾಸಮಾಗತ್ಯಕಿಂಬಾಲೋಽಯಂ ಭವತ್ಸುತಃ ||೩೧|| ಏಷಭೃತ್ಯೋಮಮಕಥಂ ಯುಷ್ಮಾಭಿರುಪನೀಯತೇ | ಅಸ್ಮ ದ್ದಾಸೀತನೂಜೋಽಯ ಮಿತಿಜಗ್ರಾಹತತ್ಕರಂ ||೩೨|| ಪುಣ್ಯಾಹವಾಚನಂಕ ರ್ತು ಮಾಗತಾಸ್ಸರ್ವಭೂಸುರಾಃ | ತಪ್ಪಾಂಧವಾಕ್ಷಕಿಮಯಂ ವೃದ್ಧತ್ವಾದ್ ಭ್ರಾಂತಿಮಾಶ್ರಿತಃ ||೩೩|| ಸಮುನ್ಮತ್ತೋಽಥವಾದೈತ್ಯಃ ಕಿಮಯಂತಸ್ಕರಃಕಿ ಮು | ಲೋಕೇಕಿಮೇವಮಸ್ತೀತಿ ತ್ಯಾಜಯಿತ್ವಾಶಿಶೋಃಕರಂ ||೩೪|| ಗಚ್ಛೇತಿ ವಿಪ್ರಂಸಜ್ಗೃಹ್ಯ ಚಿಕ್ಷಿಪುಸ್ತಂಸನಿಷ್ಠುರಂ | ಕ್ಷಿಪ್ತೇಽಥತೈರಶಕ್ತಸ್ಸನ್ ಸ್ಥಾತುಂ

---

ರೆಂಬ ಪಟ್ಟಣದಲ್ಲಿ ಶೂದ್ರಜಾತಿಯಲ್ಲಿ "ಅಂಗಸಂಗೆ" ಎಂಬ ಹೆಸರಿನಿಂದ ಹುಟ್ಟಿದಳು ||೨೬|| ಜಿಡೆಯಾರಿಯು ಶಿವರೂಪದಿಂದಿದ್ದ ಆ ಮಗನನ್ನು ಆಗಮೋಕ್ತ ವಿಧಿಪ್ರಕಾರ ಶಿವದೀಕ್ಷಾಸಂಪ ನ್ನನನ್ನಾಗಿ ಮಾಡಿದನು. ದಿನದಿನಕ್ಕೆ ಅಭಿವೃದ್ಧಿಗೊಂಡು ಬಂದ ನಂಬ್ಯಣ್ಣನಿಗೆ ೮ನೆ ವರ್ಷವು ಪ್ರಾಪ್ತವಾಗಲು, ಕರ್ಮಾಚರಣೆಯಲ್ಲೇ ಬದ್ಧಬುದ್ಧಿಯಾಗಿದ್ದ ಆ ಜಿಡೆಯಾರಿಯು ಆ ಮಗನಿಗೆ ಉಪನಯನವನ್ನು ಮಾಡುವುದಕ್ಕೆ ಪ್ರಯತ್ನಿಸಿದನು. ||೨೯|| ಶ್ರೀರುದ್ರದಲ್ಲಿ "ಯಾತೇರುದ್ರ ಶಿವಾತನೂಃ" ಎಂದು ಹೇಳಲ್ಪಟ್ಟಿರುವ ವಚನಪ್ರಕಾರವೂ, ಮುಪ್ಪಾದ ಬ್ರಾಹ್ಮಣ ಶರೀರವು ಳ್ಳವನು ಎಂಬುದಾಗಿ ಭಾಷ್ಯದಲ್ಲಿ ಪ್ರಸಿದ್ಧವಚನವಿರುವಪ್ರಕಾರವೂ, ಶಿವನು ಮುಪ್ಪಡಸಿದ ಕಪಟ ಬ್ರಾಹ್ಮಣವೇಷಧಾರಿಯಾಗಿ ಜಿಡೆಯಾರಿಯ ಬಳಿಗೆ ಬಂದು, "ಈ ಹುಡುಗನು ನಿನ್ನ ಮಗನೋ? ||೩೧|| ಇವನು ನನ್ನ ಬಂಟನು. ಇವನಿಗೆ ನೀವು ಹೇಗೆ ಉಪನಯನವನ್ನು ಮಾ ಡುತ್ತೀರಿ? ಇವನು ನನ್ನ ಗಾಡಿಯ ಮಗನು" ಎಂದು ಹೇಳಿ, ಆ ಹುಡುಗನ ಕೈಯನ್ನು ಹಿಡಿದುಕೊಂಡನು. ||೩೨|| ಅಲ್ಲಿಗೆ ಸ್ವಸ್ತಿವಾಚನಮಾಡುವುದಕ್ಕಾಗಿ ಬಂದಿದ್ದ ಸಕಲ ಬ್ರಾ ಹ್ಮಣರೂ ನಂಟರೂ ಕೂಡ—"ಇವನೇನು ಮುಪ್ಪಿನಿಂದ ಮರುಳಾದವನೊ? ||೩೩|| ಅಥವಾ ಹುಚ್ಚನೊ? ಇಲ್ಲವೆ ರಾಕ್ಷಸನೊ? ಕಳ್ಳನೊ? ಲೋಕದಲ್ಲಿ ಹೀಗೆಲ್ಲಾದರೂ ಉಂಟೆ? ಎಂದು ಹೇಳುತ್ತ ಹುಡುಗನ ಕೈಯನ್ನು ಬಿಡಿಸಿ ||೩೪|| ಹೋಗು ಎಂದು ಗದರಿಸಿ ಹಿಡಿದು ಗಟ್ಟಿಯಾಗಿ ನೂಕಿಬಿಟ್ಟರು. ಆ ಮುದಿಬ್ರಾಹ್ಮಣನಾದರೊ ನೂಕಿಸಿಕೊಂಡ ಪೆಟ್ಟಿಗೆ ನಿಂತುಕೊ

ಭೂಮಿತಲೇಪತನ್ || ಭಗ್ನಾಂಶ್ಚಕಾರಸಂಪೂರ್ಣಕಲಶಾನ್ವೇದಿಕಾಸ್ಥಿತಾನ್ | ಉತ್ಥಾಯತೂಷ್ಣೀಂತಂ ಭೂಯೋಗೃಹೀತುಂಸಮುಪಾಗತಃ ||೩೬|| ಪುನರ್ನಿರಸ್ತೋವಿಪ್ರೈಸ್ತೈರ್ಘಟೇ ಚಷಕಭಾಜನೇ | ನಿಪತ್ಯತತ್‍ಸ್ಥಂಸಲಿಲಂ ವ್ಯಕಿರದ್ಭುವಿಸಂಭ್ರಮಾತ್ ||೩೭|| ಪುನರ್ಗೃಹೀತುಮಾಯಾತೋ ವಿಪ್ರೈಸ್ಸಙ್ಗೃಹ್ಯಕಂಧರಾಂ | ಕೋಪಾತ್ಪ್ರಣುನ್ನಸ್ತತ್ಕಾಯಮಾನಸ್ತಂಭಾನಪಾತಯತ್. ||೩೮|| ತತ್ಕಾಯಮಾನೇಹೋಮಾಗ್ನೌಪತಿತೇಸತಿ ತತ್‍ಕ್ಷಣಾತ್ | ಪರಿತೋಜ್ವಲತಿಜ್ವಾಲಾಮಾಲಾಭೀಲೇ ಹುತಾಶನೇ ||೩೯|| ನಿಪತ್ಯವಹ್ನೌತ್ವರಿತಂ ನಿರ್ಜಗ್ಮುಃಕೇಚನದ್ವಿಜಾಃ | ಗೃಹಾನಾರುಹ್ಯವೇಗೇನ ಪ್ರಯಯುಃಕೇಚನದ್ವಿಜಾಃ ||೪೦ ಸಂಪ್ರವಿಶ್ಯಕ್ಷುದ್ರಮಾರ್ಗಾದ್ಧಾವನಂ ಚಕ್ರಿರೇಪರೇ | ನಿಪಾತ್ಯಕಾಯಮಾನಂತದ್ಯಯುಃ ಕೇಚಿತ್ಸಸಂಭ್ರಮಂ ||೪೧ ಅಮ್ರಿಯನ್ತಪರೇವಹ್ನೌ ತ್ವರಿತಂ ಗಂತುಮಕ್ಷಮಾಃ | ಗತಾಭಿತ್ತೀಃ ಪಾತಯಿತ್ವಾಕೇಚಿದಗ್ನಿಪ್ರಪೀಡಿತಾಃ ||೪೨|| ಏವಂಪರಸ್ಪರಂ ಸರ್ವೇಭಯಾಕ್ರಾನ್ತಾವಿನಿರ್ಯಯುಃ | ಜೆಡೆಯಾರೌಯಾತಿ ಸತಿದೋರ್ಭ್ಯಾಮಾದಾಯನಂಬ್ಯಣಂ ||೪೩|| ಗೃಹೀತ್ವಾಪುತ್ರಸ್ತ ಇತಿ ಮಮದಾ

---

ಳ್ಳಲಾರದೆ ಭೂಮಿಯಮೇಲೆ ಬಿದ್ದು ||೩೫|| ಜಗತಿಯ ಮೇಲೆ ಪುಣ್ಯಾಹಕ್ಕಾಗಿ ತುಂಬಿಟ್ಟಿದ್ದ ಕಲಶಗಳನ್ನು ಒಡೆದುಬಿಟ್ಟನು. ಪುನಃ ಮೇಲಕ್ಕೆದ್ದು ಆ ಹುಡುಗನನ್ನು ಹಿಡಿದುಕೊಳ್ಳುವುದಕ್ಕೆ ಬಂದನು. ||೩೬|| ಬ್ರಾಹ್ಮಣರಿಂದ ಮರಳಿ ನೂಕಲ್ಪಟ್ಟವನಾಗಿ ಅಲ್ಲಿದ್ದ ಜಲ ಕುಂಭ ಪಾನಪಾತ್ರೆಗಳ ಮೇಲೆ ಬಿದ್ದು ಅವುಗಳಲ್ಲಿದ್ದ ನೀರನ್ನು ಭೂಮಿಯ ಮೇಲೆ ಉರುಳಿಸಿ ಚೆಲ್ಲಿಬಿಟ್ಟನು. ||೩೭|| ಬಳಿಕ ಮತ್ತೆ ನಂಬ್ಯಣ್ಣನನ್ನು ಹಿಡಿದುಕೊಳ್ಳಲಿಕ್ಕೆ ಬಂದು, ಬ್ರಾಹ್ಮಣರಿಂದ ಕುತ್ತಿಗೆ ಹಿಡಿದು ಕೋಪದಿಂದ ದಬ್ಬಿಸಿಕೊಂಡವನಾಗಿ ಚಪ್ಪರದ ಮೇಲೆ ಬಿದ್ದು ಅವುಗಳ ಕಂಬಗಳನ್ನು ಕೆಡಹಿಬಿಟ್ಟನು. ||೩೮|| ಆ ಚಪ್ಪರವು ಹೋಮಕುಂಡದ ಬೆಂಕಿಯಲ್ಲಿ ಬೀಳಲಾಗಿ ಕೂಡಲೆ ಬೆಂಕಿಯು ಉರಿಹೆಚ್ಚಿ ಧಗಧಗನೆ ಹೊತ್ತಿಕೊಳ್ಳಲು ||೩೯|| ಅಲ್ಲಿದ್ದ ಕೆಲವು ದ್ವಿಜರು ಬೆಂಕಿಯಲ್ಲಿ ಬಿದ್ದು ಬೆದರಿ ಓಡಿಹೋದರು. ಕೆಲಮಂದಿ ದ್ವಿಜರು ಮನೆಯನ್ನು ಹತ್ತಿ ಧುಮಿಕಿ ಓಡಿಹೋದರು. ||೪೦|| ಕೆಲರು ದಿಡ್ಡಿಯಲ್ಲಿ ನುಗ್ಗಿ ಓಡಿದರು. ಇನ್ನು ಕೆಲರು ದಸಬಡಿಸಿ ಚಪ್ಪರವನ್ನೇ ಕೆಡಹಿಬಿಟ್ಟು ಓಡಿದರು. ||೪೧|| ಬೇಗನೆ ಓಡಿಹೋಗಲಾರದ ಕೆಲವರು ಬೆಂಕಿಯಲ್ಲಿ ಸಿಕ್ಕಿ ಸತ್ತರು. ಕೆಲವರು ಬೆಂಕಿಯ ಬೇಗೆಯಿಂದ ತಪ್ತರಾಗಿ ಗೋಡೆಗಳನ್ನು ಕೆಡಹಿ ಓಡಿಹೋದರು. ||೪೨|| ಹೀಗೆ ಸರ್ವರೂ ಭಯಪಟ್ಟು ಓಡಿದರು. ಜೆಡೆಯಾರಿಯು ಸುಂದರನಂಬ್ಯಣ್ಣನನ್ನು ತೋಳುಗಳಿಂದ ತಬ್ಬಿಕೊಂಡು ಹೋಗುತ್ತಿರಲಾಗಿ ||೪೩|| "ಈ ಕಪಟಿಯಾದ ದ್ರಾವಿಡನು ನನ್ನ ದಾಸೀಪುತ್ರನನ್ನು ತನ್ನ ಮಗನೆಂದು ಹೇಳಿಕೊಂಡು,

ನೀಸುತಂ ಬಲಾತ್। ಗಚ್ಛತ್ಯಯಂ ಪ್ರಕುಟಿಲೋದ್ರಮಿಡೋನಸುಪಶ್ಯತ ||೪೪||
ಸರ್ವೇಪೌರಾಇತಿವದನ್ಸ್ಥಿತ್ವಾವೀಥೀಷುಸರ್ವತಃ । ಬಲಾದಾಗತ್ಯಜಗ್ರಾಹ
ಜೆಡೆಯಾರಿಂಸಭೂಸುರಃ ||೪೫|| ವಿಚಿತ್ರಮಿತ್ಯಥ ಕರಿಕಾಲಚೋಲಮಹೀಪತಿಃ।
ಸಮಾಕರ್ಣ್ಯೋಪನಯನೇಸವಿಘ್ನಂ ವೃದ್ಧದ್ವಿಜನ್ಮನಃ ||೪೬|| ಕಲಹಂಚಮಹೋ
ದಗ್ರಂ ಗೃಹಾಣಾಂದಹನಕ್ರಮಂ । ತದಾಸಭ್ಯೈಸ್ಸಹಾಸ್ಥಾನೀಂ ವಿಚಾರಯಿತು
ಮಾಗತಃ ||೪೭|| ಉಭಾವಾಕಾರಯಾಮಾಸ ತಾವನ್ಯೋನ್ಯಂವಿವಾದಿನೌ ।
ಕಕ್ಷೇಸುತಂಸಮಾರೋಪ್ಯ ಜೆಡೆಯಾರಿಸ್ಸಮುದ್ಗತಃ ನಿರೀಕ್ಷ್ಯವ್ಯಾಕುಲೀಭೂ
ತೇ ತದಾಸ್ಥಾನೇಸಮಂತತಃ ||೪೮|| ವಿಪ್ರೋಪಿಖಂಜಯಸ್ಪದಮೇಕಂ ಪ್ರೋಧ್ಧೃ
ತ್ಯಪಾಣಿಮಪರೇಣ । ಲೇಖ್ಯಂಧೃತ್ವಾಯಾತಃಶ್ರುತೇಃ ಪ್ರದರ್ಶಿತಕಪಟಲೇಖ್ಯ
ಇತಿ ||೪೯|| ತಸ್ಮಿನ್ಪೃಚ್ಛತಿಭೂಪಾಲೇತಂ ವೃತ್ತಾಂತಂಜನೈಸ್ಸಹ ||೫೦|| ನೃಪ
ಸ್ಯಪುರತೋಲೇಖ್ಯಂ ನಿಧಾಯೋತ್ಯಾಹಭೂಸುರಃ । ಮದ್ಭೃತ್ಯೋಽಯಂಶಿಶುರಿ
ಮಂಮಹ್ಯಂ ವಿಕ್ರೀತವಾನಯಂ ||೫೧|| ಜೆಡೆಯಾರಿಸ್ಸ್ವಪದರ್ಥಂ ಪುರೈವಧರ

---

ಬಲಾತ್ಕಾರದಿಂದ ಕರೆದುಕೊಂಡು ಹೋಗುತ್ತಿದ್ದಾನೆ. ಊರಿನವರೆಲ್ಲಾ ನೋಡಿರಿ" ಎಂದು ಆ ವೃದ್ಧವಿಪ್ರನು ಬೀದಿಬೀದಿಗಳಲ್ಲೆಲ್ಲಾ ಗಟ್ಟಿಯಾಗಿ ಕೂಗಿಕೊಂಡು ಬಂದು ಆ ಜೆಡೆಯಾರಿಯನ್ನು ಬಿಗಿಯಾಗಿ ಹಿಡಿದುಕೊಂಡನು. ||೪೫|| ದೊರೆಯಾದ ಕರಿಕಾಲಚೋಳನು ಜೆಡೆಯಾರಿಯ ಮನೆಯಲ್ಲಿ ಉಪನಯನ ಕರ್ಮಕ್ಕೆ ವಿಘ್ನ ಬಂದುದನ್ನೂ, ಮುದಿ ಹಾರ್ವನು ಭಯಂಕರವಾಗಿ ಜಗಳಮಾಡಿದುದನ್ನೂ, ಮನೆಗಳನ್ನು ಸುಟ್ಟುದನ್ನೂ ಕೇಳಿ, ಇದು ಆಶ್ಚರ್ಯವೆಂದು ಹೇಳುತ್ತ, ವಿಚಾರಣೆ ಮಾಡುವುದಕ್ಕಾಗಿ ತನ್ನಮಂತ್ರಾಲೋಚನ ಸಭಿಕರೊಡನೆ ಕೂಡಿ ಆಸ್ಥಾನಮಂಟಪಕ್ಕೆ ಬಂದನು. ||೪೭|| ಪರಸ್ಪರ ಜಗಳವಾಡುತ್ತಿದ್ದ ಜೆಡೆಯಾರಿಯನ್ನೂ ವೃದ್ಧವಿಪ್ರನನ್ನೂ ಸಹ ಕರೆಯಿಸಿದನು. ಕಂಕುಳಲ್ಲಿ ಮಗನನ್ನೆತ್ತಿಕೊಂಡು ಜೆಡೆಯಾರಿಯು ಬಂದನು. ||೪೮|| ಕಪಟವಿಪ್ರನಾದರೋ ತನ್ನನ್ನು ನೋಡಿ ಸಭೆಯವರೆಲ್ಲರೂ ವ್ಯಾಕುಲಪಡುತ್ತಿರಲಾಗಿ ಕುಂಟುತ್ತ ಒಂದು ಕೈಯನ್ನು ಮೇಲಕ್ಕೆತ್ತಿ, ಮತ್ತೊಂದು ಕೈಯಲ್ಲಿ "ಕಪಟ ಲೇಖ್ಯವನ್ನು ತೋರಿಸಿದನು" ಎಂಬುದಾಗಿ ವೇದದಲ್ಲಿ ಹೇಳಲ್ಪಟ್ಟಿರುವ ಪ್ರಕಾರಕ್ಕೆ ಪತ್ರವೊಂದನ್ನು ಹಿಡಿದುಕೊಂಡು ಸಭೆಗೆ ಬಂದನು. ದೊರೆಯು ಸಭಿಕರೊಡನೆ ಕೂಡಿ ವಿಪ್ರನನ್ನು ಕುರಿತು ಸುದ್ದಿಯೇನೆಂದು ಕೇಳಲಾಗಿ ||೫೦|| ವಿಪ್ರನು ತನ್ನ ಕೈಯಲ್ಲಿದ್ದ ಪತ್ರವನ್ನು ದೊರೆಯ ಮುಂದಿಟ್ಟು ಹೀಗೆ ಹೇಳಿದನು:—"ಎಲೈ ಭೂಪತಿಯೇ! ಈ ಮಗುವು ನನ್ನ ಭೃತ್ಯನು. ಇವನನ್ನು ಈ ಜೆಡೆಯಾರಿಯು ತನ್ನ ಯಾವುದೋ ಕಷ್ಟಕ್ಕಾಗಿ ಇದಕ್ಕೆ ಮೊದಲೇ ನನಗೆ ಮಾರಿಬಿಟ್ಟಿರುವನು. ಈ ಬಾಲಕನು ನನ್ನನ್ನು ಬಿಟ್ಟುಬಿಟ್ಟು ಬಂದು ಇಂದಿಗೆ ೮ ವರ್ಷಗಳಾದುವು.

ಣೀಪತೇ | ಮಾಂವಿಹಾಯಾಗತಸ್ಯಾಸ್ಯ ಜಾತಾಅಷ್ಟೌಸಮಾಶ್ಶಿಶೋಃ ||೫೨|| ಅಯಂಕಿಲಾತ್ಮಸಸ್ನೂಸುರಹಂ ಯತ್ನೇನಭೂಯಸಾ | ಪ್ರತಿಗ್ರಾಮಂಸಮನ್ವಿಷ್ಯ ಕಥಂಚಿದ್ದೃಷ್ಟವಾನಿಹ ||೫೩|| ಅಲಂವಚೋಭಿರ್ಬಹುಭಿ ಶ್ಶೃಣ್ವಂತುಸಕಲಾಜನಾಃ| ಇದಂಲೇಖ್ಯಂಪಾಠಯತ ಸ್ವಹಸ್ತಲಿಖಿತಂನಚೇತ್||೫೪|| ಭೃತ್ಯೋಮಮಾಯಂ ಸಭವೇದ್ಬಾಹ್ಯೋಽಹಂಸ್ಯಾಂದ್ವಿಜನ್ಮನಾಂ | ತಥೇತಿವಾಚಯಿತ್ವಾಽಥ ಲೇಖ್ಯಂ ಸಭ್ಯಾಶ್ಚಭೂಪತಿಃ ||೫೫|| ತತ್ರವಿಪ್ರಸ್ಯನಂಬ್ಯಣ್ಣೋ ದಾಸಸ್ಸ್ಯಾದಿತಿಭಾಷಣೇ| ಸ್ವಹಸ್ತಲಿಖಿತೇಸಾಕ್ಷಿ ದೇವತಾಂಕೇನಮಂಡಲೇ ||೫೬|| ಪಂಚಾರೂಢ್ಯಾಸ್ಸ್ಫುಟತರಂ ಹಸ್ತಾಮಲಕವತ್ಸ್ಥಿತೇ | ಇದಂಯಥಾರ್ಥಮೇವೇತಿ ಪ್ರಜಾನಾಂಚೇತಸಿಸ್ಥಿತೇ ||೫೭|| ಅಸ್ಮಾಕಮಸ್ಮಿನ್ವಿಷಯೇ ಕಿಂವಕ್ತುಂಶಕ್ಯತೇವಚಃ | ವಿಪ್ರತ್ವಮೇವಜಾನಾಸಿ ತ್ವದೀಯೋಽಯಂಹಿಬಾಲಕಃ ||೫೮|| ರಕ್ಷಪ್ರಹರವಾಸ್ವೈರಮೇನಂ ಸ್ಥಾಪಯವಾಶಿಶುಂ | ಅಂಗೀಕುರುತ್ವಮೇವೇತಿ ಭೂಸುರಂತೇಬಭಾಷಿರೇ ||೫೯|| ಜೇಡೆಯಾರಿರಪಿ ಸ್ವೀಯಕಕ್ಷ್ಯಾರೂಢಂಕುಮಾರಕಂ | ದತ್ವಾಽತಿದುಃಖಿತೋಭೂತ್ವಾ ವಿಭ್ರಾನ್ತೋಽಸ್ಯಪತದ್ಭುವಿ ||೬೦|| ಸಭೃತ್ಯತ್ವೇನಜಗ್ರಾ

---

||೫೨|| ಇವನೇ ನನ್ನ ಮಗನು. ನಾನು ಬಹು ಪ್ರಯಾಸಪಟ್ಟು ಇವನನ್ನು ಪ್ರತಿ ಗ್ರಾಮದಲ್ಲೂ ಹುಡುಕುತ್ತ ಬಂದು ಇಲ್ಲಿ ಕಂಡೆನು. ||೫೩|| ಹೆಚ್ಚು ಮಾತೇಕೆ? ಸಭೆಯಲ್ಲಿರುವ ಸಕಲ ಜನರೂ ಕೇಳಿರಿ. ಈ ಪತ್ರವನ್ನು ಓದಿರಿ. ಇದು ಈ ಜೇಡೆಯಾರಿಯು ತನ್ನ ಕೈಯಿಂದಲೇ ಬರೆದ ಪತ್ರವಲ್ಲದಿದ್ದರೆ ||೫೪|| ಈ ಹುಡುಗನು ನನಗೆ ಭೃತ್ಯನಲ್ಲ. ನಾನು ವಿಪ್ರಕುಲಕ್ಕೇ ಹೊರಗಾಗತಕ್ಕವನು,, ಎಂದು ಹೇಳಿದನು. ಅದರಮೇಲೆ ಹಾಗೆಯೇ ಆಗಲೆಂದು ಸಭಿಕರೂ ದೊರೆಯೂ ಸಹ ಒಪ್ಪಿ ಪತ್ರವನ್ನು ಓದಿಸಿ ||೫೫|| ಅದರಲ್ಲಿ—ಆ ವಿಪ್ರನಿಗೆ ನಂಬ್ಯಣ್ಣನು ಭೃತ್ಯನೆಂಬ ಮಾತೂ, ಅದಕ್ಕೆ ಜೇಡೆಯಾರಿಯ ಸ್ವತಃ ಕೈಬರಹವೂ, ಸಾಕ್ಷಿಗಳೂ, ದೇವರ ಗುರುತೂ, ಮತ್ತೂ ಸ್ಥಾನನಿರ್ದೇಶವೂ ಸಹ ಪಂಚಾಯಿತರು ಒಪ್ಪುವ ರೂಢಿಪ್ರಕಾರ ಅಂಗೈಯೊಳಗಣ ನಲ್ಲಿಯ ಕಾಯಂತೆ ಸ್ಫುಟವಾಗಿರಲಾಗಿ, ಇದು ನಿಜವಾದುದೇ ಸರಿಯೆಂದು ಎಲ್ಲರ ಮನಸ್ಸಿಗೂ ತೋರಲಾಗಿ ||೫೭|| ''ಎಲೈ ವಿಪ್ರನೆ! ಈ ವಿಷಯದಲ್ಲಿ ನಾವು ಏನನ್ನು ಹೇಳಲಿಕ್ಕಾದೀತು? ಎಲ್ಲವನ್ನೂ ನೀನೇ ಬಲ್ಲೆ. ಈ ಹುಡುಗನು ನಿನ್ನವನೇ ಸರಿ ||೫೮|| ಇವನನ್ನು ನಿನ್ನ ಮನಸ್ಸಿಗೆ ಬಂದಂತೆ ರಕ್ಷಿಸು, ಅಥವಾ ಶಿಕ್ಷಿಸು, ಇನ್ನೇನಾದರೂ ಮಾಡಿಕೊ, ಹುಡುಗನನ್ನು ನೀನೇ ಕರೆದುಕೊ,, ಎಂದು ಹೇಳಿಬಿಟ್ಟರು. ||೫೯|| ಜೇಡೆಯಾರಿಯಾದರೊ ತನ್ನ ಕಂಕುಳಲ್ಲಿದ್ದ ಮಗನನ್ನು ಆ ವಿಪ್ರನಿಗೆ ಒಪ್ಪಿಸಿಬಿಟ್ಟು, ಅತ್ಯಂತವಾಗಿ ದುಃಖಿಸಿ, ಮತಿಗೆಟ್ಟು ಭೂಮಿಯಮೇಲೆ ಧೊಪ್ಪನೆ ಬಿದ್ದನು. ||೬೦|| ''ಅವನನ್ನು ಭೃತ್ಯರೂಪದಿಂದ ಶಿವನು ಪರಿಗ್ರಹಿಸಿ

ಹೇತ್ಯಸ್ಮಾಜ್ಜಗತಿವಿಶ್ರುತಾತ್ | ಶ್ರೀರುದ್ರಭಾಷ್ಯವಚನಾನ್ಮಹೇಶಃ ಕರುಣಾನಿಧಿಃ ||೬೧|| ಪ್ರೀತ್ಯಾಸ್ವಭೃತ್ಯಂ ಸಂಬ್ಯಣ್ಣಂ ವಿಧಾಯತದನನ್ತರಂ | ಆನೀಯ ತಿರುವಾರೂರುಗ್ರಾಮಂ ಪ್ರೋವಾಚಸಂಬ್ಯಣಂ ||೬೩|| ಅಹಂಪಿತಾತನೂಜಸ್ತ್ವಂ ತಿರುವಾರೂರುವಾಸಿನಃ | ಶಂಕರಸ್ಯಾಲಯೋನಿತ್ಯ ಮಾವಾಸಸ್ಥಾನಮಾವಯೋಃ ||೬೪|| ಅಹಂವಲ್ಮೀಕನಾಥಸ್ಯ ಸದನೇಸತತಂಜಪನ್ | ತಿಷ್ಠಾಮಿತೇಽಸ್ತಿಕಾರ್ಯಂಚೇತ್ತ್ವಮಯ್ಯೇತ್ಯಾಹ್ವಯಾದರಾತ್ ||೬೫|| ಫಲಾನ್ಯಭೀಷ್ಟಾನ್ನಪಾನ ಭಕ್ಷ್ಯಭೋಜ್ಯಾನಿಭೂರಿಶಃ | ಸುಗಂಧದ್ರವ್ಯವಸ್ತ್ರಾಲಂಕೃತಿ ಪ್ರಭೃತಿಕಾನಿಚ ||೬೬|| ಯಾನಿಶೈಶವಯೋಗ್ಯಾನಿ ಸನ್ತಿವಸ್ತೂನಿತಾನಿಮಾಂ | ಅಲಮುಚ್ಚಾಢ್ಯಯಾಚಸ್ವ ಪ್ರದಾಸ್ಯಾಮ್ಯಹಮಾತ್ಮಜ ||೬೬|| ಲಿಂಗಾರ್ಪಿತಾನಿಕೃತ್ವಾತ್ವಂ ಸ್ವೀಕುರುಷ್ವನಿರಂತರಂ | ಏತದಾರಭ್ಯೇಶರೂಪ ಜಂಗಮಾನಾಂ ವಶೋಭವ ||೬೭|| ಪಟ್ಟಕೂರ್ಪಾಸಕಂರಮ್ಯಂ ಪಟ್ಟಪ್ರಚ್ಛೋಲಿಕಾಂಶುಭಾಂ | ಪಟ್ಟೋಷ್ಣೀಷಂವಿಲಸಿತಂ ಷೋಡಶಾಭರಣಾನಿಚ ||೬೮|| ಗಂಧಮಾಲ್ಯಾದಿಕಾನದ್ಯ ಗೃಹಾಣೇಮಾನಿಪುತ್ರಕ | ಯಥೇಚ್ಛಂವಿಹರೇತ್ಯಸ್ಮೈ ಸಂದಿದೇಶಾದರಾನ್ವಿತಃ ||೬೯|| ಸಂಬ್ಯಣ್ಣೋಽಥ ಸುಖಕ್ರೀಡಾಸಮುಲ್ಲಸಿತಮಾನಸಃ | ಕುಟೀಂ

---

ದನು'' ಎಂಬುದಾಗಿ ಪ್ರಸಿದ್ಧವಾದ ರುದ್ರಭಾಷ್ಯವಚನವಿರುವ ಪ್ರಕಾರಕ್ಕೆ ದಯಾನಿಧಿಯಾದ ಪರಶಿವನು ಆ ಬಳಿಕ ನಂಬ್ಯಣ್ಣನನ್ನು ಪ್ರೀತಿಯಿಂದ ತನ್ನ ಭೃತ್ಯನನ್ನಾಗಿ ಮಾಡಿಕೊಂಡು, ತಿರುವಾರೂರು ಗ್ರಾಮಕ್ಕೆ ಕರೆತಂದು, ಅವನಿಗೆ ಹೇಳಿದನೇನೆಂದರೆ—||೬೩|| ''ನಾನು ತಂದೆಯು, ನೀನು ಮಗನು. ಈ ತಿರುವಾರೂರಿನಲ್ಲಿರುವ ಶಿವದೇವಾಲಯವು ಯಾವಾಗಲೂ ನಮ್ಮಿಬ್ಬರಿಗೂ ವಾಸಸ್ಥಲವು. ||೬೪|| ನಾನು ಯಾವಾಗಲೂ ಇಲ್ಲಿಯ ವಲ್ಮೀಕೇಶ್ವರ ದೇವಾಲಯದಲ್ಲಿ ಜಪ ಮಾಡುತ್ತಿರುವೆನು. ಎಲೆ ಪುತ್ರನೆ! ನಿನಗೆ ನನ್ನಿಂದ ಆಗತಕ್ಕ ಕೆಲಸವೇನಾದರೂ ಇದ್ದರೆ ನೀನು ಬಂದು ಪ್ರೀತಿಯಿಂದ ಅಯ್ಯಾ, ಎಂದು ನನ್ನನ್ನು ಕರೆ. ||೬೫|| ನಿನಗೆ ಬೇಕಾದ ಅನ್ನಪಾನ ಭಕ್ಷ್ಯಭೋಜ್ಯಗಳನ್ನೇ ಆಗಲಿ, ಸುಗಂಧ ವಸ್ತ್ರಾಭರಣಾದಿಗಳನ್ನೇ ಆಗಲಿ, ಹುಡುಗತನಕ್ಕೆ ಬೇಕಾದ ಇನ್ನಾವ ಪದಾರ್ಥಗಳನ್ನೇ ಆಗಲಿ ಮುಚ್ಚುಮರೆಯಿಲ್ಲದೆ ಬೇಡು. ನಾನು ಕೊಡುತ್ತೇನೆ. ||೬೬|| ಅವುಗಳನ್ನು ನೀನು ಲಿಂಗಾರ್ಪಿತಮಾಡಿ ಸದಾ ಸ್ವೀಕರಿಸು. ಇಲ್ಲಿಂದ ಮುಂದೆ ನೀನು ಶಿವಸ್ವರೂಪರಾದ ಜಂಗಮರ ಅಧೀನನಾಗು ||೬೭|| ಎಲೆ ಮಗನೆ! ಇಗೋ ಈ ಮನೋಹರವಾದ ಪಟ್ಟೆಯ ಕುಬುಸವನ್ನೂ, ಪಟ್ಟೆಯ ಚಲ್ಲಣವನ್ನೂ, ಪಟ್ಟೆಯ ತಲೆಪಾಗನ್ನೂ ತೆಗೆದುಕೊ. ನಿನ್ನ ಇಷ್ಟಬಂದಂತೆ ವಿಹರಿಸಿಕೊಂಡಿರು'' ಎಂದು ಪ್ರೀತಿಯಿಂದ ಅಪ್ಪಣೆ ಮಾಡಿದನು. ||೬೯|| ಬಳಿಕ ಸಂಬ್ಯಣ್ಣನು ಸುಖವಾಗಿ ವಿಹರಿಸಿಕೊಂಡಿರುವುದಕ್ಕೆ ಮನಸ್ಸು

ವಿಧಾಯಪರ್ಣಶಾಲಾದ್ಯೈಃಸ್ತತ್ರ ಸಂಸ್ಥಾಪ್ಯಶಂಕರಂ ||೭೦|| ಗಾಯತೀಶಸ್ಯನಿಕಟೇ ಗೀತಾನಿದ್ರಾವಿಡಾಸ್ಯಸೌ | ದದಾತಿ ಶಿವಭಕ್ತಾನಾಂ ಬಾಲೇಭ್ಯೋಭಕ್ಷ್ಯ ಸಂಚಯಂ ||೭೧|| ಪ್ರಯಚ್ಛತಿಮಹಾಭಕ್ತ್ಯಾ ಜಂಗಮಾನಾಂ ಮನೋರಥಾನ್ | ಯದ್ಯದಿಷ್ಟಂಭವೇದ್ವಸ್ತು ಯದಾತತ್ತಸ್ಮಹೇಶ್ವರಂ ||೭೨|| ಅಯ್ಯೇತ್ಯಾಹೂಯಸಂಪ್ರಾರ್ಥ್ಯ ಭುಂಜಾನೋಸ್ಯವಸತ್ಸುಖಂ | ಏವಂದಿನೇಷುಗಚ್ಛತ್ಸು ಸಂಬ್ಯಣ್ಣಂವೀಕ್ಷ್ಯಶಂಕರಃ ||೭೩|| ಪೂರ್ವಂವಲ್ಮೀಕನಾಥೋಽಹ ಮಾಗತೋ ವಿಪ್ರರೂಪತಃ | ಪ್ರೇಮ್ಣಾಗೃಹೀತವಾನಸ್ಮಿ ಭವನ್ತಂನಸುಪುತ್ರಕ ||೭೪|| ಪ್ರೀತ್ಯಾನವೀನಯಾರೀತ್ಯಾ ಗೀತೈರ್ದ್ರವಿಡಭಾಷಯಾ|ಕೃತ್ವೈರ್ಗಾನಂಕುರುಷ್ವಾದ್ಯ ತ್ವಂ ಸಮುದ್ದಿಶ್ಯಮಾಮಿತಿ ||೭೫|| ಹೇಮತಾಲೌ ಗಾನವಿದ್ಯಾಪ್ರೌಢಿಂಚಾಸ್ಮೈ ದದೌತದಾ | ಸಗನ್ಧರ್ವಾನಶ್ವತರಕಂಬಳಾನ್ನಾರದಂಮುನಿಂ ||೭೬|| ತುಂಬುರುಂ ಚಾಧರೀಕೃತ್ಯ ಗಾನಂಕೃತ್ವಾಸದಾಶಿವಂ | ವಿಧಾಯಪರಮಪ್ರೀತಂಲಭಮಾನಸ್ಸ ವಾಪ್ಸಿತಾರ್ಥ ||೭೭|| ಅರ್ಥಾನ್ಸಮಸ್ತಾನ್ಸೌಖ್ಯೇನ ಪ್ರಾವರ್ತತಸನಂಬ್ಯಣಃ | ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಮಹಿಮ ಪ್ರಕರಣೇ ನಂಬ್ಯಣ್ಣೋತ್ಪತ್ತಿ ತದೀಶ್ವರಭೃತ್ಯತ್ವಸ್ವೀಕರಣ ಹೇಮತಾಲ ಗಾನವಿದ್ಯಾಲಾಭಕಥನಂನಾಮ ದ್ವಾದಶೋಽಧ್ಯಾಯಃ.

---

ಕೊಟ್ಟು, ಒಂದು ಪರ್ಣಶಾಲೆಯನ್ನು ಕಟ್ಟಿಸಿ, ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ||೭೦|| ಆ ಶಂಕರನ ಬಳಿಯಲ್ಲಿ ದ್ರವಿಡಭಾಷೆಯಿಂದ ತಿರುಪಾಡುಗಳನ್ನು ರಚಿಸಿ ಹಾಡುತ್ತಿದ್ದನು. ಶಿವಭಕ್ತರ ಮಕ್ಕಳುಗಳಿಗೆ ನಾನಾ ಭಕ್ಷ್ಯಭೋಜ್ಯಗಳನ್ನು ಕೊಡುತ್ತಿದ್ದನು. ||೭೧|| ಜಂಗಮರಿಗೆ ಬೇಡಿದುದನ್ನು ಭಕ್ತಿಯಿಂದ ದಾನ ಮಾಡುತ್ತಿದ್ದನು. ಯಾವಾಗ ಏನುಬೇಕಾದರೂ ಶಿವನನ್ನು ಅಯ್ಯಾ! ಎಂದು ಕರೆದು, ಬೇಡಿ ಪಡೆದುಕೊಂಡು ಉಂಡು ಸುಖವಾಗಿದ್ದನು. ಹೀಗೆ ಕೆಲದಿನಗಳು ಕಳೆಯಲಾಗಿ, ಶಿವನು ನಂಬ್ಯಣ್ಣನನ್ನು ನೋಡಿ ||೭೩|| ''ಎಲೆ ಮಗನೆ! ಪೂರ್ವದಲ್ಲಿ ವಲ್ಮೀಕೇಶ್ವರನಾದ ನಾನೇ ವಿಪ್ರವೇಷದಿಂದ ಬಂದು ನಿನ್ನನ್ನು ಪ್ರೀತಿಯಿಂದ ಕರತಂದೆನಲ್ಲವೆ? ||೭೪|| ಈಗ ನೀನು ನನ್ನಮೇಲೆ ಪ್ರೀತಿಯಿಂದ ಹೊಸತೆರನಾಗಿ ದ್ರವಿಡಭಾಷೆಯಿಂದ ತಿರುಪಾಡುಗಳನ್ನು ರಚಿಸಿ ಹಾಡು,, ಎಂದು ಹೇಳಿ, ಚಿನ್ನದ ತಾಳಗಳನ್ನೂ, ಆತ್ಮವಿದ್ಯಾ ಪ್ರಾವೀಣ್ಯವನ್ನೂ ಕೂಡ ನಂಬ್ಯಣ್ಣನಿಗೆ ಆಗ ಅನುಗ್ರಹಿಸಿದನು. ಆ ನಂಬ್ಯಣ್ಣನಾದರೊ ಗಂಧರ್ವರಾದ ಕಂಬಲಾಶ್ವತರರುಗಳನ್ನೂ, ನಾರದ ತುಂಬುರರನ್ನೂ ಕೂಡ ಮೀರಿ ಗಾನಮಾಡಿ, ಪರಶಿವನನ್ನು ಮೆಚ್ಚಿಸಿ, ಬೇಕಾದಿಷ್ಟಾರ್ಥಗಳನ್ನೆಲ್ಲಾ ಪಡೆದುಕೊಂಡು ಸುಖವಾಗಿದ್ದನು.||೭೭||

ಎಂಬಲ್ಲಿಗೆ ಸುಂದರನಂಬ್ಯಣ್ಣ ಜನ್ಮಚರಿತ್ರಾದಿಗಳನ್ನು ನಿರೂಪಿಸುವ ೧೨ನೆ ಅಧ್ಯಾಯವು ಮುಗಿದುದು.

## ಅಥ ತ್ರಯೋದಶೋಽಧ್ಯಾಯಃ.

(ಪರಮನಾಚ್ಯಾಂಗಸಂಗಾ ವಿವಾಹಕಥನಂ)

ಅಥ ಶ್ರೀವಲ್ಮೀಕನಾಥಮಹಾಯಾಂತೀನಾಮುಪಾಸಿತುಂ | ಮಧ್ಯೇಪಂಕೇರುಹಾಕ್ಷೀಣಾಂ ವರ್ತಿನೀ ವನಿತಾಮಣಿಃ ||೧|| ಹಾವಭಾವವಿಲಾಸೋರು ವಿಭ್ರಮೈಸ್ಸಮುದಂಚಿತಾ | ಪಂಚೇಷುತಿಲಕಂ ಭಕ್ತಿರತಾರೂಪಕಲಾನ್ವಿತಾ||೨|| ರಮ್ಯಾಪರಮನಾಚಿಕ್ಷ್ಯಾ ಸಂಬ್ಯಣ್ಣೋಪಿಯುತಾವುಭೌ | ಹರಂಸೇವಿತುಮಾಗಚ್ಛದ್ವಾರಸ್ತ್ರೀಭಿಸ್ಸಹಾದೃತೌ ||೩|| ಆಗಚ್ಛನ್ತೌ ಜಗಚ್ಛನ್ತೌ ಸ್ಥಿತಾವನುದಿನಂಮುದಾ | ಸ್ವಶೈಶವೋಚಿತಲಸತ್ಕ್ರಿಯಾಸುಸಹವರ್ತಿನೌ ||೪|| ಉಭೌಬಾಲ್ಯಂ ಸಮಾರಭ್ಯವರ್ಧಿತೌಚಸಮಂಸುಖಂ | ಅಥಕಾಮಶ್ಯನೈಸ್ತಸ್ಯಾಂ ಸಂಬ್ಯಣ್ಣೇಚಾಕರೋತ್ಪದಂ ||೫|| ಪರಸ್ಪರಾನುರಾಗಾತಿಶಯಸಂಕಲಿತೌ ತತಃ | ಸಾಂದ್ರೇನವನವಸ್ನೇಹೇ ಗಳಿತೇಽಪತ್ರಪಾಭರೇ || ೬ || ರತ್ಯಾಕಾಂಕ್ಷಾವಲೋಕನೇಷು ವ್ಯಾಪೃತೇಷುಸಮಂತತಃ | ಪ್ರೇಮಸ್ವಾಬಧ್ಯಮಾನೇಷು ವರ್ಧಿತಾಸೂಚಿತೋ

---

## ೧೩ನೆ ಅಧ್ಯಾಯವು.

(ಸಂಬ್ಯಣ್ಣನ ವಿವಾಹ.)

ಬಳಿಕ ಶ್ರೀ ವಲ್ಮೀಕೇಶ್ವರನ ಸೇವೆಗೋಸ್ಕರ ದೇವಾಲಯಕ್ಕೆ ಬರುತ್ತಿದ್ದ ನಾರಿಯರ ಮಧ್ಯದಲ್ಲಿ ಹಾವಭಾವ ವಿಲಾಸ ವಿಭ್ರಮಗಳಿಂದ ಕೂಡಿ ಮನ್ಮಥನ ಹಣೆಬಟ್ಟಿನಂತೆ ಮೋಹಕಳಾಗಿಯೂ, ರೂಪವತಿಯಾಗಿಯೂ, ತೇಜೋವತಿಯಾಗಿಯೂ, ಭಕ್ತಿಸಂಪನ್ನಳಾಗಿಯೂ ಅತಏವ ಮನೋಹರಳಾಗಿಯೂ ಇದ್ದ ಪರಮನಾಚಿಯೆಂಬುವವಳು ಒಬ್ಬಳಾಗಿದ್ದಳು. ಆಕೆಯೂ ಈ ಸಂಬ್ಯಣ್ಣನೂ ಸಹ ಜತೆಗೂಡಿ, ವಲ್ಮೀಕನಾಥನನ್ನು ಸೇವಿಸುವುದಕ್ಕಾಗಿ ಬರುತ್ತಿದ್ದ ವಾರಾಂಗನೆಯರಿಂದ ಮುದ್ದಾಡಲ್ಪಡುತ್ತಿದ್ದವರಾಗಿ, ಪ್ರತಿದಿನವೂ ಇಬ್ಬರೂ ಸಂತೋಷದಿಂದ ಸಂಗಡ ಹೋಗಿ ಬರುತ್ತ, ತಮ್ಮ ಸಣ್ಣ ವಯಸ್ಸಿಗೆ ತಕ್ಕ ಆಟಪಾಟಗಳನ್ನಾಡಿಕೊಂಡು ಇಬ್ಬರೂ ಚಿಕ್ಕಂದಿನಿಂದಲೂ ಸಮಸುಖರಾಗಿ ಬೆಳೆದರು. ||೪|| ಬಾಲ್ಯವು ಕಳೆದು ಯೌವನೋದಯವಾದ ಕೂಡಲೇ ಮನ್ಮಥನು ಅವರಿಬ್ಬರಲ್ಲೂ ಕಾಲಿಟ್ಟನು. ||೫|| ಕೂಡಲೇ ಅವರೀರ್ವರಲ್ಲೂ ಒಬ್ಬರಮೇಲೊಬ್ಬರಿಗೆ ಅನುರಾಗವು ಹೆಚ್ಚಲಾಗಿ, ಹೊಸಹೊಸದಾಗಿ ಸ್ನೇಹರಸವು ಗಾಢವಾಗಲು, ನಾಚಿಕೆಯು ಜಾರಿಹೋಗಲು, ಸುರತಾಪೇಕ್ಷೆಯನ್ನು ಸೂಚಿಸುವ ನೋಟಗಳು ಬೀರುತ್ತಿರಲು, ಪರಸ್ಪರ ಪ್ರೇಮಪಾಶಗಳು ಬಿಗಿಯುಕೊಳ್ಳಲು, ಅದಕ್ಕೆ ತಕ್ಕ ಮಾತುಕತೆ

ಕ್ತಿಷು ||೭|| ಪರಸ್ಪರಂ ಹೃದಯಯೋಸ್ಸಂತರಾಂಗ್ರಧ್ಯಮಾನಯೋಃ | ದರಹಾಸದ್ಯುತಿಜಯೇ ಭ್ರಮಮಾಣೇ ಪುರೋಭುವಿ ||೮|| ಸಂಪೂರ್ಣತ್ಸುವಿಲಾಸೇಷು ಗುಂಭಿತೇ ಪುಲಕೋಚ್ಚಯೇ| ಸಂತಾಪೇಸತಿಸಾಟೋಪೇ ಸೋಷ್ಣೇನಿಶ್ವಾಸಸಂಚಯೇ ||೯|| ಅಧರೇ ಶುಷ್ಯತಿಮುಹುರೌತ್ಸುಕ್ಯೇತ್ವರಯತ್ಯಲಂ | ಸಂಕೇತಂಕುರ್ವತಿ ಸಮಯೌವನೇಸಮುದಂಚಿತೇ||೧೦|| ರಾಗಾಧಿಕತಯಾಮತ್ಯೋಃ ಪರಿದ್ರಾವಿತಯೋಃಪರಂ | ರತಿಜಿಹ್ವೇಷ್ವಭಿಮುಖಂ ಸಮಾಯಾತೇಷುಸತ್ವರಂ ||೧೧|| ಸ್ಫುರತ್ಕಾಮಕಲಾಪಸ್ಯಸಮಯೇ ಸಮುಪಾಗತೇ | ರತಿಸೌಖ್ಯೋತ್ಪತ್ತಿಕಾಲೇ ಪ್ರತ್ಯಾಸಕ್ತಿಮುಪಾಗತೇ ||೧೨|| ಏವಂಪ್ರಸೂನಬಾಣಸ್ಯವಶಂ ಪ್ರಾಪ್ಯಾಥಸಂಬ್ಯಣಃ | ಗಾನೇನಶಂಕರಂಪ್ರೀತಂ ವಿಧಾಯಾಯ್ಯಾಯ್ಯಶಂಕರ ||೧೩|| ಕಾನ್ತಾಂಲಲಾಮಪರಮನಾಚಿಂ ಮೇ ರಮಣೀಂಕುರು | ಇತಿವ್ಯಜಿಜ್ಞಪದ್ಭಕ್ತವತ್ಸಲಸ್ಯಾಗಜಾಪತೇಃ ||೧೪|| ಪೂರ್ವಾಂದ್ವಿಜಾಕೃತಿಂಧೃತ್ವಾ ತತಶ್ರೀಗಿರಿಜಾಪತಿಃ | ಸ್ವಯಮಾಗತ್ಯಪರಮನಾಚಿಪಿತ್ರೋರ್ಗೃಹಂಪ್ರತಿ ||೧೫|| ನಿರೀಕ್ಷ್ಯತೌಮಮಸುತೋ ಸಂಬ್ಯಣ್ಣಸ್ಸುಮನೋಹರಃ | ತಸ್ಮೈಪ್ರಯಚ್ಛತಾಂಪುತ್ರೀಂಯುವಯೋರಿತ್ಯಭಾಷತ ||೧೬|| ತ್ರಿಕಾಲಂಸೇವಮಾನಾನಾಂ

---

ಗಳು ಹೆಚ್ಚಲು, ||೭|| ಇಬ್ಬರ ಮನಸ್ಸೂ ಅಗಲದಂತೆ ಕಟ್ಟುವಡೆಯಲು, ಮುಗುಳ್ನಗೆಯ ಕಾಂತಿಯು ಮುಂಗಡೆ ಹರಿದಾಡುತ್ತಿರಲು, ||೮|| ಯೌವನ ವಿಲಾಸಗಳು ಅಭಿವೃದ್ಧಿಗೊಳ್ಳುತ್ತಿರಲು, ರೋಮಗಳು ಒಬ್ಬುಳಿಯಾಗೇಳುತ್ತಿರಲು, ಮದನತಾಪವು ಅಧಿಕವಾಗಲು, ನಿಟ್ಟುಸುರು ಬಿಸಿಯಾಗಲು ||೯|| ಬಾರಿಬಾರಿಗೆ ತುಟಿಯು ಒಣಗುತ್ತಿರಲು, ಕುತೂಹಲವು ಕ್ಷಣಕ್ಷಣಕ್ಕೆ ಹೆಚ್ಚುತ್ತಿರಲು, ಕೊಬ್ಬಿದ ಈರ್ವರ ಸಮಯೌವನವೂ ಒಂದನ್ನೊಂದು ಸಂಕೇತಿಸಿಕೊಂಡು ಬಳೆಯುತ್ತಿರಲು ||೧೦|| ಪ್ರೇಮಾತಿಶಯದಿಂದ ಇಬ್ಬರ ಬುದ್ಧಿಗಳೂ ಹರಿದಾಡುತ್ತಿರಲು, ಇಬ್ಬರಲ್ಲೂ ಕಾಮಕೇಳೀಕಾಂಕ್ಷೆಯು ಗುರುತುಗಳು ಹೆಚ್ಚಿ ಹೊರಸೂಸುತ್ತಿರಲು, ||೧೧|| ಸುವ್ಯಕ್ತವಾದ ಮದನಕಲಾ ಪ್ರವಾಹಕ್ಕೆ ಉಕ್ಕೇರುವ ಕಾಲವು ಬಂದಿರಲು, ರತಿಸೌಖ್ಯಾವಿರ್ಭಾವಸಮಯವು ಅತ್ಯಾಸಕ್ತಿಗೊಂಡಿರಲು ||೧೨|| ನಂಬ್ಯಣ್ಣನು ಹೀಗೆ ಮದನನ ಬಾಣದೇಟಿಗೆ ಗುರಿಯಾದವನಾಗಿ, ಶಿವನನ್ನು ಗಾನರಸದಿಂದ ಮೆಚ್ಚಿಸಿ, ಅಯ್ಯಾ! ಅಯ್ಯಾ! ಶಂಕರನೆ! ||೧೩|| ರಮಣೀಮಣಿಯಾಗಿರುವ ಪರಮನಾಚಿಯನ್ನು ನನಗೆ ಕಾಂತೆಯನ್ನಾಗಿ ಮಾಡಿಕೊಡು, ಎಂಬುದಾಗಿ ಭಕ್ತವತ್ಸಲನಾದ ಪರಶಿವನಿಗೆ ಬಿನ್ನೈಸಿಕೊಂಡನು. ||೧೪|| ಆಗ ಶಂಕರನು ಮೊದಲಂತೆಯೇ ವಿಪ್ರವೇಷವನ್ನು ಧರಿಸಿಕೊಂಡು, ಪರಮನಾಚಿಯ ತಾಯ್ತಂದೆಗಳ ಮನೆಗೆ ಹೋಗಿ ||೧೫|| ಅವರಿಬ್ಬರನ್ನೂ ಕುರಿತು—ನನ್ನ ಮಗನಾದ ನಂಬ್ಯಣ್ಣನು ಬಹು ಸುಂದರನು; ನಿಮ್ಮ ಮಗಳನ್ನು ಅವನಿಗೆ ಕೊಡಿರಿ ಎಂದು ಹೇಳಿದನು. ||೧೬||

ಕಾಮಿನೀನಾಂಮಹೇಶ್ವರಂ | ಸತತಂಪತ್ಯುರೇಕಸ್ಯವರಣಂ ಯುಜ್ಯತೇಕಿಮು ||೧೭|| ತ್ವಯಾವಕ್ತುಂಕಿಮುಚಿತಂ ಸಂಬ್ಯಣ್ಣಸ್ಯಮಹೀತಲೇ | ಕಾಮಾಸ್ತ ಕಸ್ಯ ಖಾವೇಶ್ಮ ಕಿಂಮತ್ಪುತ್ರ ಇತಿತ್ವಯಿ ||೧೮|| ಪದತ್ಯತ್ರನಜಾನೀಮೋವಯಂ ಕಿಂ ಚಿದಪಿಪ್ರಭೋ| ನಾಪೇಕ್ಷತೇವಾಸವಾದೀನ್ಬಾಲೇಯಂ ಸಂಬ್ಯಣಂಕಥಂ ||೧೯|| ಅಪೇಕ್ಷತೇಸಜಾನಾತಿ ಕಿಂತ್ವದ್ದಾಸೀಕ್ರಮಂಭವಾನ್ | ಸಾಕ್ಷಾದ್ದೇವಾಂಗ ನೈವೇಯಂ ಪದ್ಮಿನೀಜಾತಿರುತ್ತಮಾ || ೨೦ || ಕಾನ್ತಾಲಲಾಮಸೌಭಾಗ್ಯವ ತ್ಯೇತಸ್ಯಾ ಮಹೀತಲೇ | ಸದೃಶಾಸ್ಸನ್ತಿಕಿಂ ನಾರ್ಯ್ಯಾಸ್ತಾಮುಪಾಶ್ರಿತ್ಯಬಾಂಧ ವಾಃ ||೨೧|| ಶತಸಾಹಸ್ರ ಸಂಖ್ಯಾಕಾಸ್ತಿಷ್ಠಾಮೋಜೀವಿತುಂವಯಂ | ಏವಂ ವಿಧಾಮತ್ತನುಜಾಯದೀಷ್ಟಾತ್ವತ್ಸುತೇನನಃ || ೨೨ || ನಿತ್ಯಂಸಹಸ್ರಂ ನಿಷ್ಕಾ ಣಾಂದಾಪಯೇತಿತಮೂಚತುಃ | ಪಿತರೌತತ್ರ ಪರಮನಾಜೇಭೂದೇವರೂಪಿ ಣಂ ||೨೩|| ತಥೇತಿ ಶ್ರೀಮಹಾದೇವಃ ಪ್ರತಿಶ್ರುತ್ಯಾಽತ್ಮಸಂಭವಂ | ವಿಟಾಧಿ ರಾಜಪದವೀಪಟ್ಟಬದ್ಧಂ ವಿಧಾಯಚ ||೨೪|| ತಸ್ಮೈಪ್ರತಿದಿನಂ ನಿಷ್ಕಸಹಸ್ರಂ ವರ್ತನಂದದನ್ | ದೂತ್ಯಂ ಸಮಾಚರಸ್ತಸ್ಯಾಸ್ಸದನಂಪ್ರತಿಸಂಬ್ಯಣೇ ||೨೫||

---

ಅವರುಗಳಾದರೊ—ಸ್ವಾಮಿಾ! ಪರಶಿವನನ್ನು ತ್ರಿಕಾಲವೂ ಸೇವಿಸಿಕೊಂಡಿರುವ ವಾರಸ್ತ್ರೀಯರು ಒಬ್ಬನೇ ಒಬ್ಬನನ್ನು ಯಾವಾಗಲೂ ಪತಿಯಾಗಿ ವರಿಸುವುದಕ್ಕಾದೀತೆ? ||೧೭|| ಆ ಮಾತನ್ನು ನೀನು ಆಡಬಹುದೆ? ಅವನಿಗೆ ಶಿವನೇ ಸ್ನೇಹಿತನೊ? ಅವನ ಮನೆಯಾವುದು? ನೀನು ನನ್ನ ಮಗ ಎಂಬು ಅವನ ವಿಷಯದಲ್ಲಿ ಅಷ್ಟುದೊಡ್ಡದಾಗಿ ಹೇಳಿಕೊಳ್ಳುತ್ತೀಯೆ. ಈ ಸಂಬಂಧವಾಗಿ ನಾವು ಏನನ್ನೂ ಸ್ವಲ್ಪವೂ ಕಾಣೆವು. ಈ ನಮ್ಮ ಮಗಳು ದೇವೇಂದ್ರ ಮೊದಲಾದವರನ್ನೂ ಕೂಡ ಅಪೇಕ್ಷಿಸುವವಳಲ್ಲ. ಹೀಗಿರುವಲ್ಲಿ ನಂಬ್ಯಣ್ಣನನ್ನು ಹೇಗೆ ..ಮುಸುವಳು? ನಿಮ್ಮ ಈ ದೇವ ದಾಸಿಯರ ಪದ್ಧತಿಯನ್ನು ನೀವು ಕಾಣಿರಾ? ಈಕೆಯಾದ.. ಸಾಕ್ಷಾದ್ದೇವತಾಸ್ತ್ರೀಯೇ. ಅದರಲ್ಲೂ ಉತ್ತಮವಾದ ಪದ್ಮಿನೀಜಾತಿಯವಳು ||೨೦|| ಮತ್ತೂ ಸ್ತ್ರೀಮಂಡಲಿಗೆಲ್ಲಕ್ಕೂ ಭೂಷಣಪ್ರಾಯಳಾದ ಸೌಭಾಗ್ಯವತಿಯು. ಈಕೆಗೆ ಸಮಾನರಾದ ಸ್ತ್ರೀಯರಾರಾದರೂ ಭೂತ ಲದಲ್ಲಿಹ್ದಾರೆಯೆ? ಸಾವಿರಾರು ಮಂದಿ ಬಂಧುಬಳಗದ ನಾವುಗಳು ಅವಳನ್ನಾಶ್ರಯಿಸಿಕೊಂ ಡು ಬದುಕಬೇಕೆಂದಿದ್ದೇವೆ. ಇಂತಪ್ಪ ನಮ್ಮ ಮಗಳ ಮೇಲೆ ಅಪೇಕ್ಷೆಯಿದ್ದರೆ ನಿನ್ನ ಮಗನಿಂದ ನಮಗೆ ||೨೨|| ಪ್ರತಿದಿನವೂ ಸಾವಿರ ಹೊನ್ನುಗಳನ್ನು ಕೊಡಿಸು ಎಂಬುದಾಗಿ ವಿಪ್ರವೇಷದ ಪರಶಿವನಿಗೆ ಹೇಳಿದರು. ||೨೩|| ಶಂಕರನು ಹಾಗೇ ಆಗಲೆಂದು ವಚನವಿತ್ತು ಬಂದು, ತನ್ನ ಮಗನಾದ ನಂಬ್ಯಣ್ಣನಿಗೆ ವಿಟಶೇಖರ ಪಟ್ಟವನ್ನು ಕಟ್ಟಿ ||೨೪|| ಪ್ರತಿದಿನವೂ ಅವನಿಗೆ ಸಾ ವಿರ ಹೊನ್ನುಗಳನ್ನು ವರ್ತನೆಯಾಗಿ ಕೊಡುತ್ತ, ಆ ಪರಮನಾಚಿಯ ಬಳಿಗೆ ಹೋಗಿ ಕುಂಟಣಿ ಗತನವನ್ನು ಮಾಡುತ್ತ, ಅವಳ ಮನೆಗೆ ನಂಬ್ಯಣ್ಣನು ಹೋಗುವಾಗ್ಗೆ ಅವನೊಡನೆಯೇ ಸೇವಿ

ಗಚ್ಛತ್ಯುಪಾಸ್ಯತಮನುಗಚ್ಛನ್ನಿಷ್ಟಾರ್ಥಸಂಹತಿಂ | ವಿತರನ್ನಯದ್ರೂಢಿಂ ವಿಟತ್ವಂತಸ್ಯಸಾದರಂ ||೨೬|| ದ್ವಯೋರ್ವಿದೂಷಕ ಇವ ಪ್ರೇಮೋತ್ಪಾದಯತೀಶ್ವರೇ | ಸರಸಾಲಾಪಕಥಕೇ ಸತಿನಾಗರಿಕೋಪಮಂ || ೨೭ || ಪೀಠಮರ್ದಇವಾದಿಷ್ಟಸರ್ವಕರ್ಮಾಣಿಕುರ್ವತಿ | ನಿತ್ಯಂ ನಿಷ್ಕಸಹಸ್ರಂ ತತ್ಪಾಮಿನ್ಯೈ ನಂಬ್ಯಣೋದದನ್ || ೨೮ || ಉವಾಸ ವಿಹರನ್ಕಾಮಸುಖಾಂಭೋಧೌತಯಾ ಸಹ | ರತಿಕೇಳೀಸುಖಾಕ್ರಾಂತಮಾನಸೇ ಜಾತುನಂಬ್ಯಣೇ ||೨೯|| ವಿನ್ಯಸ್ತಪಾಣೌ ಪರಮನಾಚಿಸ್ತನತಟೇಸತಿ | ಪ್ರಾಗ್ಗಾಢಾಲಿಂಗನಾಭ್ಯಂತರ್ಗತಾಗ್ರೇ ಽತಸ್ಸಮಸ್ಥಲೇ ||೩೦|| ತಿಥಿಸಂಯುಕ್ತಾಷ್ಟಮಕಲಾದೀಪ್ತರೂಪೇಮನೋಹರೇ | ಪೃಥೂನ್ನತೇ ಕುಚಯುಗೇ ಸುಸ್ನಿಗ್ಧೇಪರಿರಂಜತಿ ||೩೧|| ಅಭಿಷಿಕ್ತಸಮಾಲಿಪ್ತ ಗಂಧಪುಷ್ಪಾರ್ಚನಾವತಃ | ಲಿಂಗಸ್ಯಸ್ಪರ್ಶನಸುಖೇ ಪರಿಸ್ಫುರತಿಮಾನಸೇ ||೩೨|| ಅನಾಹೃತ್ಯಕರಂ ಸ್ವೇಷ್ಟಲಿಂಗಭಾವನಯಾಮುಕುಃ | ಹಾಲಿಂಗೇತಿಸ್ತುತಿಂಜ

---

ಸಿಕೊಂಡು ತಾನೂ ಹೋಗುತ್ತ, ಅವನ ಇಷ್ಟಾರ್ಥವನ್ನು ಪರಿಪೂರಣಮಾಡಿ, ಹೀಗೆ ಪ್ರೀತಿಯಿಂದ ಆ ಸುಂದರ ನಂಬ್ಯಣ್ಣನಿಗೆ ವಿಟತನವನ್ನು ಕಲಿಸಿಕೊಟ್ಟನು. ||೨೬|| ಮತ್ತೂ ಆ ಪರಮನಾಚಿ ನಂಬ್ಯಣ್ಣ—ಇವರೀರ್ವರ ಮಧ್ಯದಲ್ಲೂ ಪರಶಿವನು ಸರಸದ ಮಾತುಗಳನ್ನಾಡುತ್ತ ಇಬ್ಬರಲ್ಲೂ ಪರಸ್ಪರ ಪ್ರೇಮವನ್ನು ಹೆಚ್ಚಿಸಿ, ತಾನು ನಾಗರಿಕನಂತೆ ನಡೆದುಕೊಂಡನು ||೨೭|| ಅವರುಗಳು ಹೇಳಿದ ಕೆಲಸಗಳನ್ನೆಲ್ಲಾ ಮಾಡಿಕೊಟ್ಟು ಪೀಠಮರ್ದಕನಾಗಿದ್ದನು. ಇದರಿಂದ ನಂಬ್ಯಣ್ಣನು ಆ ಪರಮನಾಚಿಗೆ ಪ್ರತಿದಿನವೂ ಸಾವಿರ ಹೊನ್ನುಗಳನ್ನು ಕೊಟ್ಟುಕೊಂಡು, ||೨೮|| ಅವಳೊಡನೆ ಸುರತಸುಖ ಸಮುದ್ರದಲ್ಲಿ ವಿಹರಿಸುತ್ತಲಿದ್ದನು. ಒಂದುದಿವಸ ನಂಬ್ಯಣ್ಣನು ಸಮರತಿಕ್ರೀಡಾಸೌಖ್ಯದಲ್ಲಿ ಮುಳುಗಿದ ಚಿತ್ತವುಳ್ಳವನಾಗಿ ಮೈಮರೆದು ||೨೯|| ಪರಮನಾಚಿಯ ಮೊಲೆಯಮೇಲೆ ಕೈಯನ್ನಿಟ್ಟುಕೊಂಡಿರುವಾಗ, ತಾನು ಮೊದಲು ಬಲವಾಗಿ ಗಾಢಾಲಿಂಗನೆ ಮಾಡಿಕೊಂಡಿದ್ದ ಕಾರಣದಿಂದ ಮೊಲೆ ತೊಟ್ಟು ಒಳಕ್ಕೆ ಅದಿಮಿಹೋಗಿ, ಮೊಲೆಯ ಮೇಲ್ಮೈಯು ಸಮವಾಟ್ಟವಾಗಿರಲು. ಅದರ ಮೇಲೆ ನಂಬ್ಯಣ್ಣನ ಹಸ್ತವು ಇಡಲ್ಪಟ್ಟಿರುವಾಗ ಕಾಂತಿಪೂರ್ಣನಾದ ಚಂದ್ರನ ಅಷ್ಟಮಿಯ ಕಲೆಯೋಪಾದಿಯಲ್ಲಿರಲು, ವಿಶಾಲವಾಗಿಯೂ ಉಬ್ಬಿಯೂ ಒಂದಕ್ಕೊಂದು ಒತ್ತಿಕೊಂಡೂ ಇರುವ ಆಕೆಯ ಸ್ತನಯುಗ್ಮವನ್ನು ಪಿಡಿದಿರುವಾಗ ||೩೧|| ನಂಬ್ಯಣ್ಣನ ಮನಸ್ಸಿಗೆ ಅಭಿಷೇಕಮಾಡಿ ಗಂಧ ಪುಷ್ಪಾದಿಗಳನ್ನು ಧರಿಸಿರುವ ಶಿವಲಿಂಗವನ್ನು ಮುಟ್ಟುತ್ತಿರುವಾಗ ಉಂಟಾಗುವಂಥ ಸೌಖ್ಯವು ತೋರುತ್ತಿದ್ದಿತು. ||೩೨|| ಆದ್ದರಿಂದ ನಂಬ್ಯಣ್ಣನು ಕೈಯನ್ನು ಎಳೆದುಕೊಳ್ಳದೆ, ಆ ಮೊಲೆಯಲ್ಲಿ ತನ್ನ ಇಷ್ಟಲಿಂಗವೆಂಬ ಭಾವನೆಯೇ ಬಲಿದಿರಲು ಬಾರಿಬಾರಿಗೂ ಹಾ ಲಿಂಗವೇ ಎಂದು ಕಣ್ಣನ್ನು ಮುಚ್ಚಿಕೊಂಡು

ಕ್ರೇ ಸಮಿಾಲಿತವಿಲೋಚನಃ ||೩೩|| ತಂಸಮುದ್ವೀಕ್ಷ್ಯ ಪರಮನಾಚಿರಿತ್ಯಬ್ರ
ವೀದ್ಗಿರಂ | ಇಯಮಶ್ರಾನ್ತ ಲಿಂಗಾವಧಾನಸೌಖ್ಯೋದ್ಧತಿಃಕಿಮು ||೩೪||
ಉತ್ಶೋಚಿತಕ್ರಿಯಾಲಾಪ ಕಲಿತಾರ್ಪಣಸಂಭ್ರಮಃ| ಕಾಮುಕತ್ವಪ್ರಲಾಪೋವಾ
ಸ್ಮರಣಾಭಿರತಿಃಕಿಮು ||೩೫|| ಕಥಂಸ್ತನೋಲಿಂಗಮಿತಿ ಶಬ್ದೋಽಯಂಸಮು
ದೀರಿತಃ | ಸ್ತನೋಲಿಂಗಂಯದಿ ಭವೇತ್ತ್ವಮತ್ರೈವಸ್ಥಿತೋಽಸ್ಯತಃ ||೩೬||
ಅಗತ್ವಾಯಾಚಯಸ್ವೇಶಂ ಕುಚಾಕಾರೇಣಸಂಸ್ಥಿತಂ | ವರ್ತನಂ ನಿಷ್ಕಸಾಹ
ಸ್ರಂ ತವನಿತ್ಯಂ ಪ್ರಕಲ್ಪಿತಂ ||೩೭|| ತಥೇತಿ ನಂಬ್ಯಣಶ್ಶಂಭು ಮಯ್ಯಾಯ್ಯೇ
ತಿಸಮಾಹ್ವಯನ್ | ಸ್ವೀಕುರ್ವನ್ನಿಷ್ಕಸಾಹಸ್ರಂ ಶಂಕರಾತ್ಪ್ರತಿವಾಸರಂ ||೩೮||
ಉವಾಸಸುಖಮನ್ಯೋಽನ್ಯಸಂಪ್ರೀತ್ಯಾ ಸಹಿತಸ್ತಯಾ | ತಾವತಾತೃಪ್ತಿಮಪ್ರಾ
ಪ್ಯ ಭೂಯೋಽಪ್ಯಥಸನಂಬ್ಯಣಃ ||೩೯|| ಮಂಗಲೂರಾಹ್ವಯಗ್ರಾಮಂ ಗತ್ವಾ
ತತ್ರಮಹಾಯಶಾಃ | ವನಿತಾಮಂಗಸಂಗಾಖ್ಯಾಂ ವಿವಾಹ್ಯೇಶಕೃಪಾವಶಾ
ತ್ ||೪೦|| ಪೂರ್ವವತ್ಕಾಮಸೌಖ್ಯಾಬ್ಧಿ ಕ್ರೀಡಾನಿರ್ಭರಮಾನಸಃ | ಗಣಿಕಾ
ವಿಟಸಂದೋಹೇ ಭಜಮಾನೇನಿರಂತರಂ ||೪೧|| ಸಾಕ್ಷಾನ್ಮಹಾದೇವಮೂರ್ತಿ
ರವಸದ್ಘನವೈಭವಃ | ತನ್ನಂಬ್ಯಣ್ಣಸ್ಯಮಹಿಮಾ ಶಕ್ಯೋವರ್ಣಯಿತುಂಕಥಂ

---

ಸ್ತೋತ್ರಮಾಡುತ್ತಿದ್ದನು. ||೩೩|| ಇಂತಪ್ಪ ನಂಬ್ಯಣ್ಣನನ್ನು ಪರಮನಾಚಿಯು ನೋಡಿ—ಇದೇ
ನು ಈತನ ಸಂತತ ಲಿಂಗಾನುಸಂಧಾನಸೌಖ್ಯದ ಪರಾಕಾಷ್ಠದಶೆಯೊ! ||೩೪|| ಅಥವಾ
ಅನುಸಂಧಾನಕ್ರಮದಿಂದ ವಾಕ್ಕಾಯಕ್ರಿಯಾಪೂರ್ವಕವಾಗಿ ಮಾಡಲ್ಪಡುವ ಲಿಂಗಾರ್ಪಣ ವೈಭ
ವವೊ! ಇಲ್ಲವೆ ಅತಿ ಕಾಮುಕತ್ವದ ಮಾತುಗಳೊ! ಅಥವಾ ಕನಸಿನ ಕನವರಿಕೆಯೊ! ||೩೫||
ಎಂದು ಹೇಳಿದವಳಾಗಿ, ಕಡೆಗೆ ಪ್ರಿಯನೆ! ಈ ಮೊಲೆಯನ್ನು ಲಿಂಗವೆಂಬುದಾಗಿ ನೀನು ಹೇಗೆ
ಕರೆದೆ? ನಿನಗೆ ಇವೇ ಲಿಂಗವಾಗಿದ್ದರೆ ನೀನು ಹೊರಕ್ಕೆಲ್ಲಿಗೂ ಹೋಗದೆ ಇಲ್ಲಿಯೇ ಇದ್ದು
ಕೊಂಡು ||೩೬|| ಸ್ತನಾಕಾರದ ಶಂಕರನನ್ನು ಕುರಿತು ಪ್ರತಿದಿನದ ವರ್ತನೆಯ ಸಾವಿರದ
ಹೊನ್ನುಗಳನ್ನು ಕೇಳು ||೩೭|| ಎಂದಳು. ಆ ಮಾತಿಗೆ ನಂಬ್ಯಣ್ಣನು ಹಾಗೆಯೇ ಆಗಲೆಂ
ದು ಒಪ್ಪಿ, ಅಲ್ಲೇ ಶಿವನನ್ನು ಅಯ್ಯಾ! ಅಮ್ಮಾ! ಎಂದು ಕೂಗಿ, ಆ ಸ್ತನಲಿಂಗರೂಪ ಶಂಕರ
ನಿಂದ ಪ್ರತಿದಿನವೂ ಸಾವಿರ ಹೊನ್ನುಗಳನ್ನು ಪಡೆಯುತ್ತ, ಆ ಪರಮನಾಚಿಯೊಡನೆ ಕೂಡಿ
ಪರಸ್ಪರ ಸಂಪ್ರೀತಿಯಿಂದ ಸುಖವಾಗಿದ್ದನು. ಬಳಿಕ ನಂಬ್ಯಣ್ಣನು ಅಷ್ಟರಿಂದಲೇ ತೃಪ್ತಿಪಡದೆ
ಮಂಗಲೂರು ಎಂಬ ಗ್ರಾಮಕ್ಕೆ ಹೋಗಿ, ಅಲ್ಲಿದ್ದ ಅಂಗಸಂಗೆಯೆಂಬ ನಾರಿಯನ್ನು ಶಿವನ
ಕೃಪೆಯಿಂದ ಮದುವೆಮಾಡಿಕೊಂಡು, ||೪೦|| ಮೊದಲಹಾಗೆಯೇ ಕಾಮಸುಖ ಸಮುದ್ರ
ದಲ್ಲಿ ಮುಳುಗಿದ ಮನಸ್ಸುಳ್ಳವನಾಗಿ, ವಾರಾಂಗನೆಯರೂ, ವಿಟಸಮೂಹವೂ ತನ್ನನ್ನು
ಯಾವಾಗಲೂ ಓಲೈಸುತ್ತಿರಲು, ಅಗಣಿತ ವೈಭವಸಂಪನ್ನನಾಗಿ ಪ್ರತ್ಯಕ್ಷ ಪರಶಿವಸ್ವರೂಪನಾಗಿ

||೪೨|| ತತ್ಪೂರ್ವವೇಶ್ಯಾ ಪರಮಸಾಚಿಗೇಹಾಂಗಣಸ್ಯಯಃ | ವಿದ್ಯತೇ ಮಹಿಮಾಸೋಪಿವಕ್ತುಂ ಪರಮಗೋಚರಃ ||೪೩||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಮಹಿಮಪ್ರಕರಣೇ ಸಂಬ್ಯಣ್ಣ ಪರಮಸಾಚ್ಯಂಗಸಂಗಾವಿವಾಹ ಕಥನಂನಾಮ ತ್ರಯೋದಶೋಽಧ್ಯಾಯಃ.

## ಅಥ ಚತುರ್ದಶೋಽಧ್ಯಾಯಃ.

(ಪರಮಸಾಚಿಗೇಹಾಂಗಣಮಹತ್ತ್ವವೈಭವಕಥನಂ.)

ಅಥ ಚೋಳಸ್ಯಪೇಜಾತು ಗತಾಯಾಂಮೃತಿಮಾತ್ಮನಃ | ವನಿತಾಯಾಂ ತದಸ್ಥೀನಿಗಯಾಂ ಪ್ರೇಷಯಿತುಂತದಾ ||೧|| ಉದ್ಯುಕ್ತೇತದ್ಗುರುಶ್ಯಂಭು ಸದ್ಭಕ್ತಿಮಹಿಮೋನ್ನತಃ| ಓರುಮುಕ್ಕಾಲ್ವಾರಿನಾಮಾ ತಮುದ್ವೀಕ್ಷ್ಯೈವಮಬ್ರವೀತ್ ||೨|| ಗಯಾಮಾಹಾತ್ಮ್ಯಮುರ್ವೀಶ ಶೃಣುಕಶ್ಚಿನ್ಮಹಾಸುರಃ | ಅತಿಘೋರಂತಪಸ್ತಪ್ತ್ವಾ ಕೃತ್ವಾಪ್ರತ್ಯಕ್ಷಮೀಶ್ವರಂ ||೩|| ಸಾಷ್ಟಾಂಗಂಪ್ರಣಿಪತ್ಯೇಶ

---

ಇರುತಿದ್ದನು. ಆ ಸಂಬ್ಯಣ್ಣನ ಮಹಿಮೆಯನ್ನು ಇಷ್ಟೆಂದು ಹೇಳುವುದಕ್ಕೆ ಆದೀತೆ? ||೪೨|| ಅವನ ಮೊದಲ ಸೂಳೆಯಾದ ಪರಮಸಾಚಿಯ ಮನೆಯಲ್ಲಿ ಅವನು ವಾಸಮಾಡಿದುದರಿಂದ ಆ ಮನೆಗೆ ಯಾವಮಹತ್ತ್ವವುಂಟಾಗಿದ್ದಿತೋ ಅದನ್ನು ಕೂಡ ಹೇಳುವುದಕ್ಕೆ ಅಸಾಧ್ಯವು.||೪೩||

ಎಂಬಲ್ಲಿಗೆ ಪಂಡಿತಾರಾಧ್ಯಚರಿತ್ರದ ಮಹಿಮಪ್ರಕರಣದಲ್ಲಿ ೧೩ನೆ ಅಧ್ಯಾಯವು ಮುಗಿದುದು.

## ೧೪ನೆ ಅಧ್ಯಾಯವು.

(ಪರಮಸಾಚಿಗೃಹಮಹತ್ತ್ವ ವರ್ಣನವು)

ಉತ್ತುಂಗ ಚೋಳನೆಂಬ ರಾಜನ ಪತ್ನಿಯು ಮೃತಳಾಗಲಾಗಿ, ಅವಳ ಮೂಳೆಗಳನ್ನು ಗಯಾಕ್ಷೇತ್ರಕ್ಕೆ ಕಳುಹಿಸುವುದಕ್ಕೆ ರಾಜನು ಉಜ್ಜುಗಿಸಿದನು. ||೧|| ಆ ದೊರೆಯ ಗುರುವಾದ ಓರುಮುಕ್ಕಾಲ್ವಾರಿಯೆಂಬ ಶಿವಭಕ್ತನು ದೊರೆಯನ್ನು ಕುರಿತು ||೨|| ಎಲೈ ಪ್ರಭುವೇ! ಆ ಗಯಾಕ್ಷೇತ್ರದ ಮಹಿಮೆಯನ್ನು ಕೇಳು:—ಒಬ್ಬಾನೊಬ್ಬ ರಾಕ್ಷಸನು ಅತಿ ಘೋರತಪಸ್ಸನ್ನು ಮಾಡಿ ಈಶ್ವರನನ್ನು ಪ್ರತ್ಯಕ್ಷಗೊಳಿಸಿಕೊಂಡು ||೩|| ಸಾಷ್ಟಾಂಗ

ಶಿಲಾರೂಪೇಮಯಿಸ್ಥಿತೇ |ಕುರು ತ್ವದ್ವಾಮಪಾದೇನ ಮತ್ಪೃಷ್ಠಂಪರಿಚಿಹ್ನಿತಂ ||೪|| ತದ್ರುದ್ರಪಾದೇಯೇಭಕ್ತ್ಯಾಪಿತೄನುದ್ದಿಶ್ಯಮಾನವಾಃ | ದಾಸ್ಯಂತಿಪಿಣ್ಡಾ ನ್ತೇಷಾಂಪಿತರ ಸ್ಸ್ವಸ್ವಪಾಣಿಭಿಃ ||೫|| ಯಥಾಗೃಹೀತ್ವಾಗಚ್ಛನ್ತಿ ಪಿತೃಲೋಕಂತಥಾಕುರು | ಇತ್ಯವೋಚದಥೇಶೋಽಪಿಪ್ರದದೌ ತಸ್ಮ ನೋರಥಂ ||೬|| ಕಿಂಚಿತ್ರಮೇಕಮೇವೇಶಪದಂತಸ್ಮಿನ್ಗಯಾಸುರೇ | ತಿರುವಾರೂರುನಗರೇರಮಣ್ಯಾನಂಬ್ಯಣಸ್ಯತು ||೭|| ಕಾನ್ತಾಲಲಾಮಪರಮನಾಚೇರ್ವೇಶ್ಮಾಂಗಣಸ್ಥಲೇ | ವಲ್ಮೀಕೇಶ ಸ್ತ್ರಿವಸ್ತ್ರಿಂಶ ದ್ವತ್ಸರಾತ್ಪ್ರತಿವಾಸರಂ ||೮|| ದೂತ್ಯಂಕುರ್ವನ್ನಂಬ್ಯಣಸ್ಯಪ್ರೀತ್ಯಾಚಕ್ರೇಗತಾಗತಂ | ತಚ್ಛಂಭೋಃ ಕೋಟಿಸಂಖ್ಯಾಕೇಸತಿಪಾದಕದಂಬಕೇ ||೯|| ಕಿಮಸ್ತಿ ಪ್ರೇಷಣಂಕರ್ತುಂ ತವಯುಕ್ತಂ ಗಯಾಂಪ್ರತಿ | ಇತ್ಯುಕ್ತ್ವಾ ಸತದೋತ್ತುಂಗ ಚೋಳಭೂಮೀಶ್ವರಂಗುರುಃ||೧೦|| ಶಲ್ಯಾನಾಂಪ್ರೇಷಣೋದ್ಯೋಗಂತಂನಿವಾರ್ಯಗಯಾಂಪ್ರತಿ | ತಸ್ಮಿನ್ಪರಮನಾಚೇಃ ಪ್ರಶಸ್ತವೇಶ್ಮಾಂಗಣಸ್ಥಲೇ ||೧೧|| ಪಿಣ್ಡಪ್ರದಾನಂ ವಿಧಿವತ್ಕಾರಯಾಮಾಸ ತತ್ವವಿತ್ | ಗಣಶಸ್ತೇಸಮಾಗತ್ಯ ಸರ್ವೇತತ್ಪಿತರ ಸ್ತದಾ ||೧೨|| ಸ್ವಸ್ವಹಸ್ತೈರ್ಗೃಹೀತ್ವಾತತ್ಪಿಣ್ಡಾನ್ಸಸ್ತು

---

ನಮಸ್ಕಾರಮಾಡಿ, ಶಿವನೆ! ನಾನು ಶಿಲಾರೂಪಿಯೂಗುವೆನು, ನಿನ್ನ ಎಡಗಡೆಯ ಪಾದದಿಂದ ನನ್ನ ಬೆನ್ನನ್ನು ಮೆಟ್ಟಿ ಗುರುತನ್ನು ಮಾಡು ||೪|| ಅಲ್ಲಿ ಚಿಹ್ನಿತವಾದ ರುದ್ರಪಾದದಲ್ಲಿ ಯಾವ ಮನುಜರು ಭಕ್ತಿಯಿಂದ ತಂತಮ್ಮ ಪಿತೃಗಳನ್ನುದ್ದೇಶಿಸಿ ಪಿಂಡಗಳನ್ನು ಕೊಡುತ್ತಾರೋ ಅವರ ಪಿತೃಗಳು ಬಂದು ತಂತಮ್ಮ ಕೈಗಳಿಂದಲೇ ಆ ಪಿಂಡಗಳನ್ನು ಪರಿಗ್ರಹಿಸಿಕೊಂಡು ಪಿತೃಲೋಕಕ್ಕೆ ಹೋಗುವಂತೆ ಅನುಗ್ರಹಿಸು, ಎಂದು ಬೇಡಿಕೊಳ್ಳಲಾಗಿ, ಶಿವನು ಹಾಗೆಯೇ ಆಗಲೆಂದು ಅವನ ಇಷ್ಟಾರ್ಥವನ್ನು ನೆರವೇರಿಸಿಕೊಟ್ಟನು. ||೬|| ಹೀಗಿರುವುದರಿಂದ ಅಲ್ಲಿರುವ ಆಶ್ಚರ್ಯವೇನು? ಆ ಗಯಾಸುರನ ಮೇಲಿರುವುದು ರುದ್ರನ ಒಂದೇಪಾದವಾಗಿರುತ್ತದೆ. ತಿರುವಾರೂರು ಪಟ್ಟಣದಲ್ಲಾದರೊ ನಂಬ್ಯಣ್ಣನ ಕಾಂತೆಯಾದ ನಾರೀಮಣಿ ಪರಮನಾಚಿಯ ಮನೆಯಂಗಳದಲ್ಲಿ ವಲ್ಮೀಕನಾಥನಾದ ಶಿವನು ೩೦ ವರ್ಷಗಳಾರಭ್ಯ ಪ್ರತಿದಿನವೂ ನಂಬ್ಯಣ್ಣನಿಗೆ ಕುಂಟಣಿಗತನವನ್ನು ಮಾಡುತ್ತ ತಿರುಗಾಡಿರುವನು. ಅಲ್ಲಿ ಆ ಪರಶಿವನ ಕೋಟ್ಯಂತರ ಹಜ್ಜೆಗಳಿರುವುವು. ||೯|| ಅಂಥ ಪುಣ್ಯಸ್ಥಲವನ್ನು ಬಿಟ್ಟು ಶಿವನ ಒಂದೇ ಹಜ್ಜೆಯಿರುವ ಗಯೆಗೆ ನೀನು ಮೂಳೆಗಳನ್ನು ಕಳುಹಿಸಿಕೊಡುವುದು ಉಚಿತವೆ? ಎಂಬುದಾಗಿ ಚೋಳರಾಜನಿಗೆ ಆ ಗುರುವು ಹೇಳಿ ||೧೦|| ಗಯೆಗೆ ಮೂಳೆಗಳನ್ನು ಕಳುಹಿಸಿಕೊಡಬೇಕೆಂದಿದ್ದ ಅವನ ಪ್ರಯತ್ನವನ್ನು ನಿಲ್ಲಿಸಿಬಿಟ್ಟು, ಆ ಪರಮನಾಚಿ ಸೂಳೆಯ ಅಂಗಳದಲ್ಲಿ ಪಿಂಡಪ್ರದಾನವನ್ನು ವಿಧಿವತ್ತಾಗಿ ಮಾಡಿಸಿದನು. ಆಗ ಅವನ ಪಿತೃದೇವತೆಗಳು ಜನರೆಲ್ಲಾ ನೋಡುವಂತೆಯೇ ಗುಂಪುಗುಂಪಾಗಿ ಬಂದು, ತಂತಮ್ಮ ಕೈಗಳಿಂದಲೇ ಪಿಂಡಗಳನ್ನೀಸಿಕೊಂಡು, ಸೇವಿಸಿ ತೃಪ್ತಿಪಟ್ಟು,

ಷ್ವಮಾನಸಾಃ । ಜನೇಷು ಪ್ರೇಕ್ಷಮಾಣೇಷು ರುದ್ರಲೋಕಂಪ್ರಪೇದಿರೇ ||೧೩|| ಪ್ರಶಶಂಸು ರ್ಜನಾಸ್ಸರ್ವೇ ಕುಲಕೋಟಿಂ ಸಮುದ್ಧರೇತ್ । ಇತ್ಯುಕ್ತಿಸ್ಸಹಜಾಜಾತಾ ಮಹೇಶಸ್ಯೇತಿ ಸಂಪ್ರತಿ ||೧೪|| ಉತ್ತುಂಗಚೋಲನೃಪತಿಸ್ತಂಪ್ರಣಮ್ಯ ಗುರೂತ್ತಮಂ । ಇತಿಸಂಕೀರ್ತಯಾಮಾಸ ಭಕ್ತಿಪ್ರವಣಮಾನಸಃ ||೧೫|| ಸರ್ವಜ್ಞಮುದ್ಗುರೋಸಾಕ್ಷಾತ್ತಿರುಚಿಟ್ಟಂಬಳೇಶ್ವರ । ವಿಚಾರಿತೇತವಮಹಾಮಹಿಮ್ನ್ಯೈ ಕೃತಿಕ್ಕಿಮದ್ಭುತಂ||೧೬||ಏಕಸ್ಮಿನ್ನ್ನಕೇಗೇಹಂ ಪ್ರವಿಶ್ಯಪ್ರತಿವಾಸರಂ । ಪರಿಸ್ಪೃಶತಿಭಾಂಡಾನಿ ನಿವಾರಯಿತು ಮಕ್ಷಮೇ ||೧೭|| ಕೃತ್ವಾತಸ್ಯ ತ್ರಿಶೂಲಾಂಕಂ ಭಾಲೇಮುಕ್ತವತಿ ತ್ವಯಿ । ಯಥೇಷ್ಟವೃತ್ತ್ಯಾಸದನೇಚರಂತಂ ಶುನಕಂ ದ್ವಿಜಾಃ ||೧೮|| ನಿರೀಕ್ಷ್ಯಶುನಕೋಚ್ಛಿಷ್ಟಸೇವಿನೀ ಭಕ್ತಿರಸ್ತಿಕಿಂ ವಯಂಕುತ್ರಾಪ್ಯಶ್ರುಣುಮ ನಭೂಮಾವಿತ್ಯನಿಂದಯನ್ ||೧೯|| ಕಿಮೇಷಶುನಕೋಭೂಮೌ ಶ್ವಾನಮೇತಂ ವದಸ್ತಿಯೇ । ತಏವಶುನಕಾವಿದ್ಧ ನಕಿಂಶೂಲಸ್ಯವೈಭವಂ||೨೦|| ಅಗ್ನಿನಾ ಪಚ್ಯಮಾನಾದಿತ್ಯೇತಚ್ಛೃತಿಗಿರಾಪುನಃ । ತ್ರಿಶೂಲನಿಹತಸ್ಯೇತಿ ಧಾವತೀತಿಜವಾಕ್ಯತಃ ||೨೧|| ತ್ರಿಶೂಲಧಾರಣಫಲಂಸಮುನ್ನ

---

ರುದ್ರಲೋಕಕ್ಕೆ ಹೋದರು. ||೧೩|| ಊರಜನರೆಲ್ಲರೂ ಇವನಿಗೀಗೆ ಕುಲಕೋಟಿಸಮುದ್ಧಾರಕನೆಂಬ ಹೆಸರು ಸಾರ್ಥಕವಾಯಿತು ಎಂದು ದೊರೆಯನ್ನು ಕೊಂಡಾಡಿದ್ದರು. ||೧೪|| ಆ ಉತ್ತುಂಗ ಚೋಳರಾಜನಾದರೊ ಭಕ್ತಿತತ್ಪರಮನಸ್ಕನಾಗಿ ಆ ಗುರೂತ್ತಮನಿಗೆ ನಮಸ್ಕರಿಸಿ, ಸರ್ವಜ್ಞನೂ ಪ್ರತ್ಯಕ್ಷ ಚಿಟ್ಟಂಬಳೇಶ್ವರನೂ ಆದ ಎಲೈ ಮುದ್ಗುರುವೆ! ವಿಚಾರಮಾಡಿ ನೋಡಿದರೆ ನಿನ್ನ ಮಹಿಮೆಯಲ್ಲಿ ಇದಾವ ಮಹಾದ್ಭುತಕಾರ್ಯ? ||೧೬|| ಪೂರ್ವದಲ್ಲಿ ಒಂದಾನೊಂದು ನಾಯಿಯು ಪ್ರತಿದಿನವೂ ಮನೆಗೆ ನುಗ್ಗಿ ಮಡಕೆಗಳನ್ನು ಸೋಂಕಿ ಹೋಗುತ್ತಿರಲಾಗಿ, ಅದನ್ನು ನೀನು ತಡೆಯಲಾರದೆ, ಅದರ ಹಣೆಗೆ ತ್ರಿಶೂಲವನ್ನು ಕಾಸಿ ಮುದ್ರೆಯೊತ್ತಿಬಿಟ್ಟುಬಿಟ್ಟೆ. ಅದು ಸ್ವಚ್ಛಂದವಾಗಿ ಮನೆಯಲ್ಲೆಲ್ಲಾ ನುಗ್ಗಿಕೊಂಡಿದ್ದುದನ್ನು ವಿಪ್ರರು ನೋಡಿ ||೧೮|| ಲೋಕದಲ್ಲಿ ನಾಯಿಯೆಂಜಲನ್ನು ತಿನ್ನುವ ಭಕ್ತಿಯೂ ಉಂಟೆ? ನಾವೆಲ್ಲೂ ಇದನ್ನು ಕೇಳಲಿಲ್ಲ ಎಂಬುದಾಗಿ ದೂಷಿಸಿದರು. ||೧೯|| ಅದನ್ನು ನೀನು ಕೇಳಿ—ಭೂಮಿಯಲ್ಲಿ ಇದು ನಾಯೆ? ಇದನ್ನು ನಾಯೆಂದು ಯಾರು ಹೇಳುತ್ತಾರೋ ಅವರೇ ನಾಯಿಗಳು. ತ್ರಿಶೂಲದ ಮಹಿಮೆಯನ್ನು ಕೇಳಿಲ್ಲವೆ? ||೨೦|| "ಅಗ್ನಿನಾಪಚ್ಯಮಾನಾತ್" (ಬೆಂಕಿಯಿಂದ ಸುಡಿಸಿಕೊಳ್ಳುವುದಕ್ಕಿಂತಲೂ) ಎಂಬುದಾಗಿರುವ ವೇದವಚನದಪ್ರಕಾರವೂ, "ತ್ರಿಶೂಲನಿಹತಸ್ಯದ್ರಾವತಿ" (ತ್ರಿಶೂಲದಿಂದ ಒತ್ತಲ್ಪಟ್ಟವನ ಪಾಪವೆಲ್ಲವೂ ಪಲಾಯನಗೊಳ್ಳುವುದು) ಎಂಬ ಪ್ರಮಾಣವಚನದಪ್ರಕಾರವೂ, ಈ ತ್ರಿಶೂಲಧಾರಣದ ಫಲವು ಮಹತ್ತರವಾಗಿರುವುದು ಎಂದು ಹೇಳಿ, ಆನಾಯು ಮುಖದಿಂದಲೇ ನೀನು ವೇದಗಳನ್ನು ವಿಪ್ರವರ್ಯರೆಲ್ಲರೂ ಕೇಳಿ ನಿನಗೆ ನಮಸ್ಕ

ತ್ರಮಿತೀರಯನ್|ನಾಪಾಠಯಃಕಿಮಾಚಾರ್ಯ ಸಾರಮೇಯೇನತಚ್ಛ್ರುತೀಃ||೨೨||
ಸಮುತ್ಸ್ವವಿಪ್ರವರ್ಯೇಷು ಶೃಣ್ವತ್ಸುಸಕಲೇಷ್ವಪಿ | ಪುರಾಹಾವಿನಹಾಳಾಖ್ಯಪು
ರೇಶ್ರೀಕಲ್ಲಿದೇವಯಃ ||೨೩|| ಸಾರಮೇಯೇನಚತುರೋ ವೇದಾನ್ಸಮ್ಯಗಪಾ
ಠಯತ್ | ಪೂರ್ವಂಮಹಾಕಾಲದೇವ ಶ್ಶುನಾವೇದಮಪಾಠಯತ್ ||೨೪||
ಅಹೋಭಕ್ತಶಿವೈವೇಹ ಶುನಾದ್ಯಶ್ರುತಿಪಾಠನಂ | ಮಸ್ತಕನ್ಯಸ್ತಹಸ್ತೇಷು ಭಕ್ತೇ
ಷ್ವೇವಂಪ್ರಶಂಸಿಷು ||೨೫|| ಕಿಂಚಾತ್ಯುಗ್ರೋದ್ವಿಜಃ ಕಶ್ಚಿದ್ಬ್ರಹ್ಮಹತ್ಯಾಸ
ಹಸ್ರಶಃ | ಅಕರೋತ್ತಸ್ಯಭೂದೇವಾ ನಿಷ್ಕೃತಿಂಕರ್ತುಮಕ್ಷಮಾಃ ||೨೬||
ಅತಿಷ್ಠನ್ಸಕಲಾನ್ವೇದಾ ನ್ವಿಮೃಶಂತಃಪರಸ್ಪರಂ | ತ್ವಮಾಗತ್ಯ ತದಾವಿಪ್ರಾ ನಿ
ತ್ಯವಾದೀಗುರೂತ್ತಮ ||೨೭|| ಕಿಂವಿಚಾರೇಣಭವತಾಂ ಬ್ರಹ್ಮಹತ್ಯಾವಿನಿಷ್ಕೃ
ತಿಂ | ಬೋಧಯಂತ್ಯೋನಸಶ್ರುತಾಃ ಕಿಮಿಮಾಶ್ಶ್ರುತ್ಯಾದಿಸೂಕ್ತಯಃ ||೨೮||
ನಮಶ್ಶಿವಾಯಚಶಿವತರಾಯೇತಿಚಭಾಷಿತೇ | ಶತರುದ್ರೀಯಸ್ಯಮಧ್ಯೇಶ್ರೂಯ
ಮಾಣೇಪರಿಸ್ಫುಟಂ ||೨೯|| ನಾರಾಯಣೋಪನಿಷದಿ ವಿರಜಾವಸರೇಪುನಃ |
ನಮಶ್ಶಿವಾಯಸ್ವಾಹೇತಿ ಮನ್ತ್ರೇಽಸ್ಮಿನ್ಪಠಿತೇಸತಿ ||೩೦|| ಪ್ರವ್ಯಕ್ತಂಶತರುದ್ರೀ
ಯ ಮಧ್ಯಗೇತಿವಚಸ್ಯಪಿ| ತಥೋನ್ನಮಶ್ಶಿವಾಯೇತಿವಚನೇಽಸ್ಮಿನ್ನವಸ್ಥಿತೇ||೩೧

---

ರಿಸುತ್ತಿರಲಾಗಿ ಹೇಳಿಸಲಿಲ್ಲವೆ? ||೨೨|| ಪೂರ್ವದಲ್ಲಿ ಹಾವಿನಹಾಳೆಂಬ ಪಟ್ಟಣದಲ್ಲಿದ್ದ ಕಲ್ಲಿ
ದೇವಯ್ಯನು ವೇದದಿಂದ ನಾಲ್ಕುವೇದಗಳನ್ನೂ ಚೆನ್ನಾಗಿ ಹೇಳಿಸಿದನು. ಮತ್ತು ಪೂರ್ವದಲ್ಲಿ
ಮಹಾ ಕಾಳಯ್ಯನು ಕೂಡ ತನ್ನ ನಾಯಿಂದ ವೇದವನ್ನು ಹೇಳಿಸಿದ್ದನು. ||೨೪|| ಈಗ
ನಿನ್ನ ನಾಯಿಂದಲೇ ವೇದವನ್ನು ಹೇಳಿಸಿದೆ ಎಂಬುದಾಗಿ ಶಿವಭಕ್ತರುಗಳು ಮಂಡೆಯಮೇಲೆ
ಕೈಜೋಡಿಸಿಕೊಂಡು ಹೊಗಳುತ್ತಿರಲು, ಹೀಗೆ ನಿನ್ನ ಮಹತ್ತ್ವವನ್ನು ಮೆರೆಯಿಸಿದೆ ||೨೫||
ಮತ್ತೂ ಕ್ರೂರನಾದ ಒಬ್ಬ ದ್ವಿಜನು ಅನೇಕ ಬ್ರಹ್ಮಹತ್ಯೆಗಳನ್ನು ಮಾಡಿರಲಾಗಿ, ಬ್ರಾಹ್ಮಣ
ರುಗಳು ಸಕಲ ವೇದಗಳನ್ನು ವಿಮರ್ಶಿಸಿ ನೋಡಿದರೂ ಅವನಿಗೆ ಪ್ರಾಯಶ್ಚಿತ್ತವನ್ನು ಮಾಡ
ಲಾರದೆ ಹೋದರು. ಎಲೈ ಗುರೋತ್ತಮನೆ! ಆಗ ನೀನು ಬಂದು, ಬ್ರಾಹ್ಮಣರನ್ನು ಕುರಿತು
ಯಾತಕ್ಕೆ ಯೋಚನೆಮಾಡುತ್ತೀರಿ? ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವನ್ನು ಹೇಳುತ್ತಿರುವ ಈ ಶ್ರು
ತಿವಚನಗಳನ್ನು ಕೇಳಿಲ್ಲವೆ? ||೨೮|| ಅವು ಯಾವುವೆಂದರೆ ‟ನಮಶ್ಶಿವಾಯಚ ಶಿವತರಾಯಚ”
ಎಂಬುದಾಗಿ ಶತರುದ್ರೀಯದ ಮಧ್ಯದಲ್ಲಿ ಹೇಳಲ್ಪಟ್ಟಿರುವ ವಚನವೂ, ನಾರಾಯಣೋಪನಿಷ
ತ್ತಿನಲ್ಲಿ ವಿರಜಾಹೋಮಸಮಯದೊಳಗೆ ‟ನಮಶ್ಶಿವಾಯಸ್ವಾಹಾ” ಎಂಬುದಾಗಿ ಹೇಳಲ್ಪ
ಟ್ಟಿರುವ ವಚನವೂ ||೩೦|| ಮತ್ತು ಅದೇ ಶತರುದ್ರೀಯಮಧ್ಯದಲ್ಲೇ ‟ಓಂ ನಮಶ್ಶಿವಾಯ”
ಎಂಬ ವಚನವೂ ಕೂಡ ಸುಸ್ಪಷ್ಟವಾಗಿ ಇರುತ್ತಿರಲು, ‟ಈ ಮಂತ್ರಕ್ಕೆ ಸದೃಶವಾದ ಮಂ
ತ್ರವು ಬೇರೊಂದಿಲ್ಲವೆಂಬುದಾಗಿಯೂ, ಚಂಡಾಲನೇ ಆಗಲಿ ಈ ಮಂತ್ರವನ್ನು ಸ್ಮರಿಸಿದರೂ

ಅನೇನಸದೃಶಂಜಪ್ಯಂ ನಾಸ್ತಿನಾಸ್ತೀತಿಭಾಷಿತೇ| ಅಂತ್ಯಜೋವಾಗ್ರಜೋವಾಪಿ ವಚನೇನಸಮುದಂಚತಿ ||೩೨|| ಯೇಸ್ಮರಂತೀತಿವಚಸಿ ಜಪತೋವಾಪ್ನುಯಾಚ್ಛಿವಂ | ಇತಿಸೂಕ್ತೇಚಪತಿತೋವೇತಿವಾಕ್ಯೇಚಸುಸ್ಥಿತೇ ||೩೩|| ಸಕೃದುಕ್ತೋಪಿನಾಲಂಕಿಂ ಮೂಲಪಂಚಾಕ್ಷರೀಮನುಃ | ಬ್ರಹ್ಮಹತ್ಯಾರ್ಬುದಂದಗ್ಧುಂ ಶಕ್ತಿರೇತಾದೃಶೀಮನೋಃ ||೩೪ ||ಕಿಂವಿದ್ಯತೇಪರಸ್ಯೇತಿ ತ್ವಯಾಸಮ್ಯಗುದೀರಿತೆ| ಕೃಚ್ಛ್ರಚಾಂದ್ರಾಯಣಾದೀನಿವ್ರತಚರ್ಯಾವಿಧೀನಪಿ || ೩೫ || ಭೂಪ್ರದಕ್ಷಿಣಭೈಕ್ಷಾನ್ನ ಕಪಾಲಧರಣಾನಿಚ | ಸರ್ವಸ್ವಧನದಾನಾದಿಕ್ರಿಯಾಸ್ಸಂತ್ಯಜ್ಯಕಾಕೃತಿಃ ||೩೬|| ನಿಷ್ಕೃತಿಂಬ್ರಹ್ಮಹತ್ಯಾಯವಿಧಾತುಂಶಕ್ನುಯಾತ್ಕ್ಷಿತೌ | ಏತದೇವಬ್ರಹ್ಮಹತ್ಯಾಪ್ರಾಯಶ್ಚಿತ್ತಂಭವೇದ್ಯದಿ ||೩೭|| ಆದೌವೇದಾಗಮೋದ್ದಿಷ್ಟಕೃತ್ಯಾನಿವಿವಿಧಾನ್ಯಪಿ | ಸಹಸ್ರನ್ಯಾಯವಿಧಯೋ ಭಾಟ್ಟಶಾಸ್ತ್ರಪ್ರಕೀರ್ತಿತಾಃ ಅಷ್ಟಾದಶಸ್ಮೃತಿಪ್ರೋಕ್ತಾ ಕ್ರಿಯಾಃಕಿಂವಿತಥಾಃಕ್ಷಿತೌ | ಕುಡ್ಯೃಷ್ಟಾವಾತಥಾಸ್ಯುಶ್ಚೇದ್ಬ್ರಹ್ಮಹತ್ಯಾಮಹೀತಲೇ ||೩೯|| ಕತಿಕರ್ತುಂನಶಕ್ಯಂತೇ ತಾವತಾನಿಷ್ಕೃತಿರ್ಯದಿ | ವಕ್ತುಂನಸಮಶ್ಶಿವಾಯೇತಿ ಕತಿವಾರಂನಶಕ್ಯತೇ ||೪೦|| ಅಸ

---

ಜಪಿಸಿದರೂ ಶಿವಸಾಮೀಪ್ಯವನ್ನು ಪಡೆಯುತ್ತಾನೆಂಬುದಾಗಿಯೂ, ಪತಿತನಾಗಿದ್ದರೂ ಒಂದಾವೃತ್ತಿ ಈ ಮೂಲಪಂಚಾಕ್ಷರವನ್ನುಚ್ಚರಿಸಿದರೆ ದಶಸಹಸ್ರ ಬ್ರಹ್ಮಹತ್ಯೆಯಿಂದ ಮುಕ್ತನಾಗುತ್ತಾನೆಂದು ಉಪಬೃಹ್ಮಣವಚನಗಳು ಇರುತ್ತಿರಲಾಗಿಯೂ, ಇಂಥ ಮಹಾಮಂತ್ರವನ್ನು ಒಂದಾವೃತ್ತಿ ಉಚ್ಚರಿಸಿದರೂ ಬ್ರಹ್ಮಹತ್ಯಾದೋಷ ಸಹಸ್ರವನ್ನು ನಾಶಮಾಡಲಿಕ್ಕೆ ಇದು ಸಾಕಲ್ಲವೆ? ಈ ಮಂತ್ರಕ್ಕಿರುವ ಶಕ್ತಿಯು ಇತರ ಮಂತ್ರಗಳಿಗಿರುವುದೆ?,, ಎಂಬುದಾಗಿ ನೀನು ಚೆನ್ನಾಗಿ ತಿಳಿಯ ಹೇಳಲಾಗಿ, ಅವರುಗಳು ನಿನ್ನನ್ನು ಕುರಿತು—ಏನು ಹೇಳಿದೆ? ಲೋಕದಲ್ಲಿ ಬ್ರಹ್ಮಹತ್ಯೆಯ ಪ್ರಾಯಶ್ಚಿತ್ತಕ್ಕೆ ಕೃಛ್ರಚಾಂದ್ರಾಯಣಾದಿ ವ್ರತಾಚರಣೆ, ಭೂಪ್ರದಕ್ಷಿಣೆ, ಭಿಕ್ಷಾನ್ನ ಕಪಾಲ ಧಾರಣೆ, ಸಕಲ ಧನಧಾನ್ಯಾದಿಗಳ ದಾನ—ಇತ್ಯಾದಿ ಕರ್ಮಗಳನ್ನು ಆಚರಿಸುವುದನ್ನು ಬಿಟ್ಟು, ಬೇರೆ ಪ್ರಾಯಶ್ಚಿತ್ತವನ್ನು ವಿಧಿಸಲು ಯಾವ ಶಾಸ್ತ್ರವು ಸಮರ್ಥವಾದೀತು? ನೀನು ಹೇಳಿದ ಈ ಮಂತ್ರವೊಂದೇ ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವಾಗಿದ್ದಪಕ್ಷದಲ್ಲಿ ||೩೮|| ಪ್ರಾಯಶ್ಚಿತ್ತಾರ್ಥಕಾಗಿ ವೇದಾಗಮಾದಿಗಳಲ್ಲಿ ಹೇಳಲ್ಪಟ್ಟಿರುವ ನಾನಾವಿಧ ಕರ್ಮಾಚರಣೆಗಳೂ, ಭಾಟ್ಟಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ನಾನಾವಿಧ ನ್ಯಾಯಕ್ರಮಗಳೂ, ೧೮ ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ಕರ್ಮಕಲಾಪಗಳೂ ಸಹ ವ್ಯರ್ಥವೇನೆಯೊ? ಅವೆಲ್ಲಾ ಅಪ್ರಮಾಣಗಳೊ? ಹಾಗಾದರೆ ಭೂಮಿಯಲ್ಲಿ ಅಷ್ಟು ಸುಲಭವಾಗಿ ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳಬಹುದಾಗಿದ್ದಪಕ್ಷದಲ್ಲಿ ಎಷ್ಟು ಮಂದಿಗಳು ಬ್ರಹ್ಮಹತ್ಯೆಯನ್ನು ನಡೆಯಿಸಲಾರರು? ‘‘ನಮಶ್ಶಿವಾಯ,, ಎಂದು ಎಷ್ಟುಸಲ ಉಚ್ಚರಿಸಿ ಬಿಡಲಾರರು? ||೪೦|| ಎತ್ತೀನಿತು ಎಂದರೆ ಕೊಟ್ಟಿಗೆಯಲ್ಲಿ ಕಟ್ಟು ಎಂದು ಅಸಂ

ರ್ಹ್ಯಾಕ್ ಸುಷುವೇವತ್ಸ ಮಿತ್ಯುಕ್ತೇಽಂತರ್ನಿಬಧ್ಯತಾಂ| ಇತ್ಯಸಂಬಂಧವಕ್ತಾರೋ ವಿದ್ಯನ್ತೇಕಿಮುಭೂತಲೇ ||೪೧|| ನಕುತ್ರಾಪಿಶ್ರುತಮಿದಂ ಕುದೃಷ್ಟಂನಾತ್ರಸಂಶಯಃ | ಅಪ್ರಸಿದ್ಧವಿಧೀನೇತಾನುಕ್ತ್ವಾಲಂ ವಿಧಿಪೂರ್ವಕಾಃ ||೪೨|| ವಿಧಯಸ್ಸನ್ತಿಚೇದ್ಬ್ರೂಹಿ ನೋಚೇತ್ತೂಷ್ಣೀಂ ಶೃಣುಸ್ಫುಟಂ | ಇತಿತೈರ್ಭೂಸುರೈಸ್ಸರ್ವೈ ಸ್ಸಾವಜ್ಞಮುದಿತೇ ಸತಿ ||೪೩|| ದಧೀಚಿಶಾಪನಿಹತಾಸ್ತಮಸ್ಸಂವೃತಮಾನಸಾಃ | ಘನಗೌತಮಶಾಪೋಪಹತಾಮಲಿನಬುದ್ಧಯಃ ||೪೪|| ಸಂಭಾಷಣೇಕ್ಷಣಾನರ್ಹಾ ಭೃಗುಶಾಪಪರಿಚ್ಯುತಾಃ | ವ್ಯಾಸಶಾಪಪರಿಭ್ರಷ್ಟಾ ಯೂಯಂಪಾತಕರೂಪಿಣಃ||೪೫|| ಯುಷ್ಮಭ್ಯಂ ಶಂಭುಸಾಮರ್ಥ್ಯಮಯಮರ್ಥೋ ನರೋಚತೇ | ಇತಿ ವಾಕ್ಯಾದ್ರೋಚತೇಕಿಂಕಥಂಚಿದಪಿ ಭೂಸುರಾಃ ||೪೬|| ವಿಧಿಪೌತ್ರಂ ದಶಮುಖಂ ಹತ್ವಾರಾಮೋಜಗದ್ವಿಭುಃ | ವಿಧೇರಭಾವಾತ್ಕಿಂಸಮ್ಯಕ್ ಪ್ರತಿಷ್ಠಾಪ್ಯ ಮಹೇಶ್ವರಂ ||೪೭|| ಧನ್ಯಪಂಚಾಕ್ಷರೀಮಂತ್ರಜಪಂಕೃತ್ವಾಽತಿಭಕ್ತಿತಃ | ತಾಂಬ್ರಹ್ಮಹತ್ಯಾಂತ್ವರಿತಂ ಸಂಜಹಾರಪುರಾಭುವಿ||೪೮|| ಪಂಚಾಕ್ಷರೀಮನ್ತ್ರಸಿದ್ಧ್ಯಾ ಬ್ರಹ್ಮಹತ್ಯಾವಿವರ್ಜಿತಃ | ಶಂಭುನಾಽರ್ಯಮರಾ

---

ಬಂಧ ಪ್ರಲಾಪವನ್ನು ಮಾತಡಕ್ಕವರೂ ಭೂಮಿಯಲ್ಲಿದ್ದಾರೆಯೆ? ||೪೧|| ಇದನ್ನು ನಾವೆಲ್ಲೂ ಕೇಳಿಲ್ಲ. ಇದು ದುಷ್ಟವಾಣವೆಂಬುದರಲ್ಲಿ ಸಂಶಯವೇ ಇಲ್ಲ. ಅಪ್ರಸಿದ್ಧವಾದ ಇಂಥ ವಿಧಿಗಳನ್ನು ಹೇಳುವುದು ಸಾಕು.' ಶಾಸ್ತ್ರಸಂಮತ ವಿಧಿಗಳೇನಾದರೂ ಬ್ರಹ್ಮಹತ್ಯಾ ಪ್ರಾಯಶ್ಚಿತ್ತಕ್ಕೆ ಇರುವುದಾದರೆ ಅವನ್ನು ಹೇಳು, ಇಲ್ಲದಿದ್ದರೆ ಸುಮ್ಮನೆ ಕುಳಿತು ಕೇಳು,, ಎಂಬುದಾಗಿ ಆ ವಿಪ್ರರೆಲ್ಲರೂ ತಿರಸ್ಕಾರಪೂರ್ವಕವಾಗಿ ನುಡಿದರು. ||೪೨|| ಆಗ ನೀನು ಅವರನ್ನು ಕುರಿತು—ನೀವುಗಳು ದಧೀಚಿ ಮಹರ್ಷಿಯ ಶಾಪಕ್ಕೆ ಗುರಿಯಾದವರು. ಅದುಕಾರಣ ತಾಮಸಚಿತ್ತರು, ಗೌತಮರ್ಷಿಯ ಶಾಪಕ್ಕೆ ಈಡಾದವರಾದುದರಿಂದ ಪಾಪಬುದ್ಧಿಯುಳ್ಳವರುಗಳು, ಭೃಗುಮಹರ್ಷಿಯ ಶಾಪದಿಂದಲೂ ವ್ಯಾಸಮಹರ್ಷಿಯ ಶಾಪದಿಂದಲೂ ಕೂಡ ನೀವು ಭ್ರಷ್ಟರೂ ಪಾಪಸ್ವರೂಪಿಗಳೂ ಆಗಿದ್ದೀರಿ. ಅದುಕಾರಣ ನೋಡುವುದಕ್ಕೂ ಮಾತನಾಡುವುದಕ್ಕೂ ಕೂಡ ನೀವು ಅನರ್ಹರು. ||೪೩|| ''ಈ ಅರ್ಥವು ಇವರಿಗೆ ರುಚಿಸುವುದಿಲ್ಲ,,ವೆಂಬ ಪೌರಾಣೋಕ್ತಿಯಪ್ರಕಾರ, ನಿಮಗೆ ಶಿವನ ಸಾಮರ್ಥ್ಯವು ರುಚಿಸುವುದೆ? ||೪೬|| ಲೋಕದೊಡೆಯನಾಗಿದ್ದ ರಾಮನು ಪೂರ್ವದಲ್ಲಿ ಬ್ರಹ್ಮನ ಮೊಮ್ಮಗನಾದ ರಾವಣನನ್ನು ಕೊಂದು, ಶಿವಲಿಂಗ ಪ್ರತಿಷ್ಠೆಯನ್ನು ಮಾಡಿ, ಭಕ್ತಿಯಿಂದ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಿ, ಆ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿಕೊಂಡುದು ಪ್ರಾಯಶ್ಚಿತ್ತ ವಿಧಿಯಿಲ್ಲದುದರಿಂದಲೊ? || ಅರ್ಯಮರಾಜನು ಹಾರ್ವನನ್ನು ಕೊಂದ ಪಾಪವನ್ನು ಪಂಚಾಕ್ಷರೀ ಮಂತ್ರಸಿದ್ಧಿಯಿಂದ ಕಳೆದು

ಜೋಪಿ ನೈಕೀಭೂತೋಭವತ್ಕಿಮು ||೪೯|| ಹತ್ಯಾಮವಾಪಕಿಂವಿಪ್ರಂ ಹತ್ವಾ ಸ್ವಪಿತರಂಕ್ರುಧಾ | ಪಂಚಾಕ್ಷರೀಸ್ಮರಣತೋ ಭಕ್ತ್ಯಾ ಚಣ್ಡೇಶ್ವರಃಪುರಾ ||೫೦|| ಪಂಚಾಕ್ಷರೀಜಪಾತ್ತಸ್ಮಾದ್ವಿಧಯಸ್ಸಂತಿಕಿಂಪರೇ | ಶ್ರುತಿವಾಕ್ಯಾದೇಕಮೇವಾದ್ವಿತೀಯಮಿತಿವಿಶ್ರುತಾತ್ ||೫೧|| ಅಪರಾನ್ನದ್ವಿತೀಯಾಯತಸ್ಥೇ ಇತ್ಯಪಿಕೀರ್ತಿತಾತ್ | ಅತ್ಯಂತವಿಸ್ತೃತತರಾನ್ನದ್ವಿತೀಯೋಽಸ್ತಿಕುತ್ರಚಿತ್ ||೫೨|| ಇತಿವಾಕ್ಯಾತ್ಪುನರಪಿ ಯಏಕೋರುದ್ರಉಚ್ಯತೆ | ಇತ್ಯುಕ್ತೇರಪಿಚಾನೂನಾಲ್ಲಯನಾಲ್ಲಿಂಗಮುಚ್ಯತೇ ||೫೩|| ಇತಿವಾಕ್ಯಾತ್ಸರ್ವಲೋಕಾಲೀಯನ್ತೇ ಶಂಕರೇಯಥಾ | ಸಾಂಗಾವೇದಾಶ್ಚ ಶಾಸ್ತ್ರಾಣಿ ಸಂಸ್ಥಿತಾನೀತಿಭಾಷಣಾತ್ ||೫೪|| ಪಂಚಾಕ್ಷರೇಸ್ಥಿತಾ ಇತ್ಯಾಗಮವಾಕ್ಯಾತ್ಸಮುನ್ನತಾತ್ | ಸಪ್ತಕೋಟಿ ಮಹಾಮಂತ್ರಾ ಉಪಮಂತ್ರಾಹ್ಯನೇಕಧಾ ||೫೫|| ಪಂಚಾಕ್ಷರೇ ಪ್ರಲೀಯನ್ತೇ ಪುನಸ್ತಸ್ಮಾದ್ವಿನಿರ್ಗತಾಃ | ಇತ್ಯೇತದ್ವಚನಾದಾದಿ ಪುರಾಣಪರಿಕೀರ್ತನಾತ್ ||೫೬|| ಯಥಾ ಶಿವಸ್ತಥೇತ್ಯೇತದ್ವಚನಾತ್ಸಮುದಂಚಿತಾತ್ | ಶಾಸ್ತ್ರಾಣಿ ಶ್ರುತಯಶ್ಶಬ್ದಪ್ರಪಂಚೋ ಮಂತ್ರರಾಶಯಃ ||೫೭|| ಸಂಹಾರಸ

---

ಕೊಂಡು ಶಿವನೊಡನೆ ಐಕ್ಯಗೊಳ್ಳಲಿಲ್ಲವೆ? ||೪೯|| ಪೂರ್ವದಲ್ಲಿ ಚಂಡೇಶ್ವರನು ತನ್ನ ತಂದೆಯಾದ ಬ್ರಾಹ್ಮಣನನ್ನು ಕೋಪದಿಂದ ಕೊಂದರೂ ಭಕ್ತಿಯಿಂದ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿದ್ದಕಾರಣ ಬ್ರಹ್ಮಹತ್ಯಾದೋಷವು ಅವನನ್ನು ಅಂಟಿತೆ? ||೫೦|| ಅದುಕಾರಣ ಪಂಚಾಕ್ಷರೀಮಂತ್ರ ಜಪಕ್ಕಿಂತಲೂ ಬೇರೆ ಪ್ರಾಯಶ್ಚಿತ್ತ ವಿಧಿಗಳುಂಟೆ? "ಏಕಮೇವಾದ್ವಿತೀಯಂ ಬ್ರಹ್ಮ" "ಪ್ರತ್ಯಂಜನಸ್ತಿಷ್ಠತಿಸಂಯುಗಸ್ಯಾಂತಕಾಲೇ, ಏಕಏವರುದ್ರೋ ನದ್ವಿತೀಯಾಯತಸ್ಥೇ" "ನದ್ವಿತೀಯೋಽಸ್ತಿಕುತ್ರಚಿತ್" "ಯಏಕೋರುದ್ರ ಉಚ್ಯತಇತಿ" ಯದೇಕಮವ್ಯಕ್ತಮನಂತರೂಪಮಿತಿ ತದಾದಿಮಧ್ಯಾಂತ ವಿಹೀನಮೇಕಮಿತಿ ಶಿವಏಕೋಧ್ಯೇಯಃ" ಇತ್ಯಾದಿ ವೇದವಚನಗಳೆಲ್ಲವೂ ಶಿವನ ವಿಶ್ವಾಧಿಕತ್ವ, ಸರ್ವೋಪಾಸ್ಯತ್ವ, ಅದ್ವಿತೀಯ ಪರಬ್ರಹ್ಮತ್ವಗಳನ್ನು ವರ್ಣಿಸುತ್ತಿರುವುದರಿಂದಲೂ, ಜಗತ್ತೆಲ್ಲವೂ ಇದರಲ್ಲಿ ಲೀನವಾಗುವುದಾದಕಾರಣ ಇದಕ್ಕೆ ಲಿಂಗವೆಂದು ಹೆಸರುಂಟಾಗಿರುವುದೆಂಬ ಆಗಮವಚನವಿರುವುದರಿಂದಲೂ, ಸಕಲ ಲೋಕಗಳೂ ಪರಶಿವನಲ್ಲಿ ಹೇಗೆ ಲೀನವಾಗಿವೆಯೋ ಹಾಗೆ ಸಕಲ ವೇದಶಾಸ್ತ್ರಗಳೂ ಪಂಚಾಕ್ಷರೀ ಮಂತ್ರದಲ್ಲಿ ಲೀನವಾಗಿರುವುವು ಎಂಬ ಆಗಮವಚನವಿರುವುದರಿಂದಲೂ, "ಸಪ್ತಕೋಟಿ ಮಹಾಮಂತ್ರಗಳೂ ಉಪಮಂತ್ರಗಳೂ ಸಹ ಪಂಚಾಕ್ಷರೀ ಮಂತ್ರದಲ್ಲೇ ಲೀನವಾಗಿ, ಅಲ್ಲಿಂದಲೇ ಹೊರಕ್ಕೆ ಹೊರಡುತ್ತವೆ" ಎಂಬುದಾಗಿ ಆದಿಪುರಾಣವಚನವಿರುವುದರಿಂದಲೂ, "ಯಥಾ ಶಿವಸ್ತಥಾ ವೇದಃ" ಎಂಬ ಪ್ರಮಾಣಪ್ರಕಾರ ಶಿವನಿಗೂ ವೇದಗಳಿಗೂ ಭೇದವಿಲ್ಲದಿರುವುದರಿಂದಲೂ, ಶಾಸ್ತ್ರ, ವೇದ, ಮಂತ್ರ ಮೊದಲಾದ ಶಬ್ದಪ್ರಪಂಚವೆಲ್ಲವೂ ಮಹಾ ಪ್ರಳಯದಲ್ಲಿ ಶಿವಾಭಿನ್ನವಾಗಿರುವ ಪಂ

ಮಯೇ ಜಾತೇ ತಥಾ ಪಂಚಾಕ್ಷರೀಮನೌ | ಪ್ರಲೀಯಂತೇ ಸಂಭವನ್ತಿತಸ್ಮಾದೇತಸ್ಯವೈಭವಂ ||೫೮|| ಶಕ್ಯತೇತತ್ಕಥಂಸ್ತೋತು ಮವಾಙ್ಮನಸಗೋಚರಂ | ತಾದೃಕ್ ಪಂಚಾಕ್ಷರೀ ದಿವ್ಯಮಾಹಾತ್ಮ್ಯಂ ಜ್ಞಾತುಮಕ್ಷಮೈಃ ||೫೯|| ಭ್ರಾನ್ತೈರ್ಭವದ್ಭಿರುದಿತಂ ವಚಏವಹಿದುರ್ಮತಂ | ಏತತ್ಕದೃಷ್ಟಂವಚ ಇತ್ಯಾಖ್ಯಾತುಂಶಕ್ಯತೇಕಥಂ ||೬೦|| ಬ್ರಹ್ಮಹತ್ಯಾಂಷಕೃತ್ವೇತಿ ವಚನೇಸಂಸ್ಥಿತೇಸತಿ | ಮುಚ್ಯತೇಸರ್ವಪಾಪೈರಿತ್ಯುಕ್ತೇಚತದನನ್ತರಂ ||೬೧|| ವೇದಾನ್ತೇವಾಪಾತಕೋಪಪಾತಕೇಭ್ಯ ಇತಿಸ್ಥಿತೇ | ತತ್ರೈವಪೂತೋ ಭವತೀತ್ಯೇತದ್ವಾಕ್ಯೇಸಮಾರಿತೇ ||೬೨|| ಭಸಿತೋದ್ಧೂಳನಾದೇವ ಬ್ರಹ್ಮಹತ್ಯಾಶತೇ ಕ್ಷತೇ| ಕಿಮೇವಂವಿಧಯಾ ದಿವ್ಯಪಂಚಾಕ್ಷರ್ಯಾ ಮಹೀತಲೇ ||೬೩|| ಇತಿಬುದ್ಧ್ಯಾಕಿಮೇತಸ್ಯಾಃ ಕುದೃಷ್ಟತ್ವಸ್ಯಭಾಷಣಂ | ಏನಾಂಸಿತರತೀತ್ಯುಕ್ತೇಽಥ ರುದ್ರೀಭವತೀತಿಚ ||೬೪|| ರುದ್ರಾಕ್ಷಧಾರಣಾದೇವ ಬ್ರಹ್ಮಹತ್ಯಾಚಯೇಕೃತೇ | ಕಿಮೇವಂವಿಧಯಾ ದಿವ್ಯಪಂಚಾಕ್ಷರ್ಯಾ ಮಹೀತಲೆ ||೬೫|| ಇತಿಬುದ್ಧ್ಯಾಕಿಮೇತಸ್ಯಾಃ

---

ಚಾಕ್ಷರೀ ಮಂತ್ರದಲ್ಲಿ ಲೀನವಾಗಿ, ಮರಳಿ ಉದಯಕಾಲದಲ್ಲಿ ಎಲ್ಲವೂ ಅದರಿಂದಲೇ ಉತ್ಪನ್ನವಾಗುವುವೆಂದು ಹೇಳಲ್ಪಟ್ಟಿರುವುದರಿಂದಲೂ, ಈ ಪಂಚಾಕ್ಷರ ಮಂತ್ರದ ವಾಙ್ಮನಸ್ಸುಗಳಿಗೆ ಅಗೋಚರವಾದ ಮಹಿಮೆಯನ್ನು ವರ್ಣಿಸುವುದಕ್ಕೂ ಸ್ತುತಿಸುವುದಕ್ಕೂ ಹೇಗೆ ಶಕ್ಯವಾದೀತು? ಅಂಥ ಪಂಚಾಕ್ಷರೀ ಮಂತ್ರದ ದಿವ್ಯ ಮಹಿಮೆಯನ್ನು ತಿಳಿಯುವುದಕ್ಕೆ ಅಸಮರ್ಥರೂ ಭ್ರಾಂತಿವಿಶಿಷ್ಟರೂ ಆದ ನಿಮ್ಮಿಂದ ಹೇಳಲ್ಪಟ್ಟ ಮಾತು ದುಷ್ಪ್ರಮಾಣವೇ ಹೊರತು, ನಾನು ಹೇಳಿದ ಈ ಮಾತು ಅಪ್ರಮಾಣವಾದೀತೆ? ||೬೦|| ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಭಸಿತೋದ್ಧೂಳನ ಭಸ್ಮಧಾರಣಮಾತ್ರದಿಂದ ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾನೆಂಬ ವಾಕ್ಯವಿರುವುದರಿಂದಲೂ, ||೬೧|| ಮಹಾ ಪಾತಕಗಳಿಂದಲೂ ಉಪಪಾತಕಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆಂದು ಬೃಹಜ್ಜಾಬಾಲೋಪನಿಷದ್ವಚನವಿರುವುದರಿಂದಲೂ ಸಹ ||೬೨|| ಭಸಿತೋದ್ಧೂಲನಮಾತ್ರದಿಂದಲೇ ಎಷ್ಟೋ ಬ್ರಹ್ಮಹತ್ಯಾದೋಷಗಳು ನಾಶವಾಗುತ್ತಲಿರುವಲ್ಲಿ, ಈ ಮಹಾ ಪಂಚಾಕ್ಷರೀ ಮಂತ್ರದಿಂದ ಆಗಬೇಕಾದುದೇನು ಎಂಬುದಾಗಿ ಯೋಚಿಸಿ, ನೀವು ಈ ಪಂಚಾಕ್ಷರೀ ಮಂತ್ರವಿಧಿಯನ್ನು ದುಷ್ಪ್ರಮಾಣವನ್ನಾಗಿ ಹೇಳಿದಿರೋ? ಅಥವಾ ರುದ್ರಾಕ್ಷವನ್ನು ಧರಿಸಿಕೊಂಡ ಮಾತ್ರದಿಂದಲೇ ಪಾಪಗಳನ್ನೆಲ್ಲಾ ದಾಂಟಿ ರುದ್ರಸ್ವರೂಪನಾಗುತ್ತಾನೆ, ಬ್ರಹ್ಮಹತ್ಯಾದೋಷಗಳನ್ನು ಕಳೆದುಕೊಳ್ಳುತ್ತಾನೆ ಎಂದು ಉಪನಿಷತ್ಪ್ರಮಾಣವಿರುವಲ್ಲಿ ಈ ಪಂಚಾಕ್ಷರಿಯೇತಕ್ಕೆ ಎಂಬುದಾಗಿ ತಿಳಿದು ಇದಕ್ಕೆ ಅಪ್ರಾಮಾಣ್ಯವನ್ನು ಹೇಳಿದಿರೊ? ||೬೫|| ಶಿವನಿರ್ಮಾಲ್ಯವನ್ನು ಧರಿಸಿಕೊಳ್ಳುವುದರಿಂದ ಸಕಲ ಪಾಪಗಳೂ ಬ್ರಹ್ಮಹತ್ಯಾದೋಷವೂ ಕೂಡ ನಾಶವಾಗುತ್ತದೆಂದು ಪ್ರಮಾಣವಿರುವುದರಿಂದ, ಶಿವನಿರ್ಮಾಲ್ಯಸೇವನೆ

ಕುದೃಷ್ಟತ್ವಸ್ಯ ಭಾಷಣಂ | ಪಾತಕಾಪಹಮಿತ್ಯುಕ್ತಂ ಬ್ರಹ್ಮಹತ್ಯಾಂವ್ಯಪೋಹತಿ ||೧೬|| ಇತ್ಯಾದಿಷ್ಟೇಜ ನಿರ್ಮಾಲ್ಯಧಾರಣಾದೇವ ಸರ್ವಶಃ| ಯಾಂತೀಷುವಿಲಯಂ ಬ್ರಹ್ಮಹತ್ಯಾಸುಕ್ಷಣಮಾತ್ರತಃ ||೧೭|| ಕಿಮೇವಂ ವಿಧಯಾದಿವ್ಯ ಪಂಚಾಕ್ಷರ್ಯಾ ಮಹೀತಲೇ | ಇತಿಬುದ್ಧ್ಯಾಕಿಮೇತಸ್ಯಾಃ ಕುದೃಷ್ಟತ್ವಸ್ಯ ಭಾಷಣಂ ||೧೮|| ವ್ಯಂಹೋವ್ಯವಿಮಾವೇತಿಪೂತಾತೇ ಭವನ್ತೀತಿಚೋದಿತೇ | ಮಹೇಶ್ವರಪ್ರಸಾದೋಪಭೋಗಾದೇವಹಿ ಸರ್ವಶಃ ||೧೯|| ಯಾಂತೀಷುವಿಲಯಂ ಬ್ರಹ್ಮಹತ್ಯಾಸುಕ್ಷಣಮಾತ್ರತಃ | ಕಿಮೇವಂವಿಧಯಾ ದಿವ್ಯಪಂಚಾಕ್ಷರ್ಯಾ ಮಹೀತಲೆ || ೨೦ || ಇತಿಬುದ್ಧ್ಯಾಕಿಮೇತಸ್ಯಾಃ ಕುದೃಷ್ಟತ್ವಸ್ಯಭಾಷಣಂ | ತೇಪಿಪೂತಾಭವಂತೀತಿ ಮತ್ಪಾದಾಂಬುನಿಷೇವಣಂ ||೨೧|| ಇತ್ಯುಕ್ತೇಸತಿಪಾದಾಂಬುಸೇವನಾದೇವ ಸರ್ವತಿಶಃ| ಯಾಂತೀಷುವಿಲಯಂ ಬ್ರಹ್ಮಹತ್ಯಾಸುಕ್ಷಣಮಾತ್ರತಃ ||೨೨|| ಕಿಮೇವಂವಿಧಯಾ ದಿವ್ಯಪಂಚಾಕ್ಷರ್ಯಾ ಮಹೀತಲೇ | ಇತಿಬುದ್ಧ್ಯಾಕಿಮೇತಸ್ಯಾಃ ಕುದೃಷ್ಟತ್ವಸ್ಯಭಾಷಣಂ ||೨೩|| ಅಪಾಪಕಾಶಿನೀಚೇತಿ ವಚನಾಚ್ಛ್ರುತಿಮಧ್ಯಗಾತ್| ಬ್ರಹ್ಮಹತ್ಯಾಯುತಾನೀತಿ ಶಿವಭಕ್ತಸ್ಯದರ್ಶನಂ ||೨೪|| ಇತ್ಯುಕ್ತೇಶ್ಶಿವಭಕ್ತಸ್ಯ ದರ್ಶನಾದೇವಸರ್ವಶಃ | ಯಾಂತೀಷುವಿಲಯಂ ಬ್ರಹ್ಮಹತ್ಯಾಸುಕ್ಷಣಮಾತ್ರತಃ ||೨೫|| ಕಿಮೇವಂ ವಿಧಯಾ

---

ಯಿಂದಲೇ ಎಷ್ಟು ಬ್ರಹ್ಮಹತ್ಯಾದೋಷಗಳಿದ್ದರೂ ಕ್ಷಣಕಾಲದಲ್ಲಿ ವಿನಾಶವಾಗುತ್ತಿರುವಾಗ ಈ ಪಂಚಾಕ್ಷರೀ ಮಂತ್ರದಿಂದ ಆಗಬೇಕಾದುದೇನು? ಎಂಬುದಾಗಿ ಯೋಚಿಸಿ, ಇದನ್ನು ದುಷ್ಪ್ರಮಾಣವೆಂದು ಹೇಳಿದಿರೊ? ||೧೮|| ಶಿವಪ್ರಸಾದ ಸೇವನೆಯಿಂದಲೇ ಸಕಲ ಪಾಪಗಳನ್ನೂ ಕಳೆದುಕೊಂಡು ಪರಿಶುದ್ಧರಾಗುತ್ತಾರೆ; ಕ್ಷಣಕಾಲದಲ್ಲಿ ಬ್ರಹ್ಮಹತ್ಯಾದೋಷಗಳೆಲ್ಲಾ ನಾಶವಾಗುತ್ತವೆ ಎಂದು ಶೃತಿಪ್ರಮಾಣವಿರುವುದರಿಂದ, ಈ ಪಂಚಾಕ್ಷರೀಮಂತ್ರದಿಂದಿನ್ನೇನು ಎಂಬುದಾಗಿ ಭಾವಿಸಿ, ನೀವು ಇದಕ್ಕೆ ದುಷ್ಪ್ರಮಾಣತ್ವವನ್ನು ಹೇಳಿದಿರೊ? ||೨೦|| ನನ್ನ ಪಾದೋದಕವನ್ನು ಸೇವಿಸಿದರೆ ಪರಿಶುದ್ಧರಾಗುತ್ತಾರೆ ಎಂಬುದಾಗಿಯೂ, ಪಾದೋದಕ ಸೇವನೆಯಿಂದ ಬ್ರಹ್ಮಹತ್ಯಾದೋಷಗಳೆಲ್ಲವೂ ಕ್ಷಣಕಾಲದೊಳಗೆ ನಾಶವಾಗಿ ಹೋಗುತ್ತವೆ ಎಂಬುದಾಗಿಯೂ ಶಿವವಚನ ಪ್ರಮಾಣವಿರುವುದರಿಂದ; ಆ ಪಾದೋದಕ ಸೇವನೆಯನ್ನು ಬಿಟ್ಟು ಈ ಪಂಚಾಕ್ಷರೀ ಮಂತ್ರವನ್ನು ಕಟ್ಟಿಕೊಂಡೇನು ಎಂಬುದಾಗಿ ತಿಳಿದು ಇದಕ್ಕೆ ನೀವು ಅಪ್ರಾಮಾಣ್ಯವನ್ನು ಹೇಳಿದಿರೊ? ||೨೧|| ರುದ್ರೈಕಾದಶಿನಿಯಲ್ಲಿ "ಅಪಾಪಕಾಶಿನೀ" ಎಂಬ ವಚನದಿಂದ ಶಿವಭಕ್ತರು ಪಾಪರಹಿತರೆಂದು ಹೇಳಲ್ಪಟ್ಟು, ಅಂಥ ಶಿವಭಕ್ತರ ದರ್ಶನವು ದಶಸಹಸ್ರ ಬ್ರಹ್ಮಹತ್ಯಾದೋಷಗಳನ್ನು ಕ್ಷಣಮಾತ್ರದಲ್ಲಿ ಪರಿಹರಿಸುವುದೆಂದು ಹೇಳಿರುವಕಾರಣ, ಅಂಥ ಶಿವಭಕ್ತರ ದರ್ಶನವೇ

ದಿವ್ಯಪಂಚಾಕ್ಷರ್ಯಾ ಮಹೀತಲೆ । ಇತಿ ಬುದ್ಧ್ವಾ ಕಿಮೇತಸ್ಯಾಃ ಕುದೃಷ್ಟತ್ವ ಸ್ಯಭಾಷಣಂ ॥ ೭೬ ॥ ಏತೇಘ್ನಂತೀತಿಚಾದಿಷ್ಟೇ ತ್ರಿಸುವರ್ಣೇವಿಶೇಷತಃ । ಸೋಮಃಪವಿತ್ರಮಿತ್ಯೇತದ್ವಚನೇ ಸಮುದೀರಿತೇ । ಉಮಯಾಸಹಿತೋ ದೇವಸ್ಸೋಮ ಇತ್ಯುದಿತೋಯತಃ ॥೭೭॥ ಸೋಮಶಬ್ದಸ್ಯೋಕ್ತಿಮಾತ್ರಾದ್ಬ್ರಹ್ಮಹತ್ಯಾಚಯೇಹತೇ । ಕಿಮೇವಂವಿಧಯಾ ದಿವ್ಯಪಂಚಾಕ್ಷರ್ಯಾ ಮಹೀತಲೆ ॥೭೮॥ ಇತಿಬುದ್ಧ್ವಾ ಕಿಮೇತಸ್ಯಾಃ ಕುದೃಷ್ಟತ್ವಸ್ಯಭಾಷಣಂ । ಯಶ್ಶಿವೇತಿಸ್ಮರೇತ್ಸಶ್ಶಿ ದಿತಿವಾಕ್ಯೇಸ್ಥಿತೇಸತಿ ॥೭೯॥ ತಥೈವ ಶಿವಮೇವಾನುಚಿಂತಯೇದಿತಿ ಭಾಷಿತೇ । ವಿದ್ಯಮಾನೇಸ್ಫುಟತರಂ ಶಿವಇತ್ಯಕ್ಷರದ್ವಯಂ ॥೮೦॥ ಇತ್ಯುಕ್ತೇ ದ್ವ್ಯಕ್ಷರಂ ನಾಮೇತ್ಯುದಿತೇವಚನೇಪುನಃ । ಶಿವೇತಿವಾಚಾ ವದೇದಿತ್ಯನೂನೇ ವಚಸಿಸ್ಥಿತೇ ॥೮೧॥ ಇತ್ಯಾದಿಸೂಕ್ತಿಸಂದೋಹೇ ಸುವ್ಯಕ್ತಂಪ್ರವಿಚಾರಿತೇ। ಬ್ರಹ್ಮಹತ್ಯಾಪನುತ್ಯರ್ಥಂ ಶಿವಸಂಸ್ಮರಣೇನಕಿಂ ॥೮೨॥ ಪಕ್ಷಿಸಂಹೃತಯೇಪಾಶುಪತಾಸ್ತ್ರಂಪ್ರೇರ್ಯತೇಕಿಮು । ಮಹೇಶಪೂಜಯಾ ಯಾವತ್ಪ್ರಣಶ್ಯೇತ್ಕಲುಷಂ ಭುವಿ ॥೮೩॥ ವಿಧಾತುಂಪಾತಕಂ ತಾವನ್ನಶಕ್ನೋತ್ಯೇವಮಾನುಷಃ । ನಾಸ್ತಿ

---

ಬ್ರಹ್ಮಹತ್ಯೆಯನ್ನು ಪರಿಹರಿಸಬಲ್ಲುದಾಗಿರುವಲ್ಲಿ ಈ ಮಂತ್ರವನ್ನು ಜಪಿಸುವುದೇಕೆಂದು ಯೋಚಿಸಿ, ಇದನ್ನು ಅಪ್ರಮಾಣವನ್ನಾಗಿ ಹೇಳಿದಿರೊ? ॥೭೬॥ "ಸೋಮ" ಎಂಬ ಪದದಲ್ಲಿರುವ ಸ-ಉ-ಮ ಎಂಬ ಅಕ್ಷರತ್ರಯವು ಪಾಪವಿನಾಶಕವಾದುದು; ಅದುಕಾರಣ ಸೋಮಶಬ್ದವು ಪವಿತ್ರವಾದುದು ಎಂಬುದಾಗಿರುವ ಪ್ರಮಾಣವಚನದಿಂದಲೂ, ಉಮಾಸಮೇತನಾದ ಪರಶಿವನು ಸೋಮನೆಂದು ಕರೆಯಲ್ಪಡುತ್ತ, ಅಂಥ ಸೋಮಶಬ್ದವನ್ನು ಬಾಯಿಂದ ಉಚ್ಚರಿಸಿದ ಮಾತ್ರದಿಂದಲೇ ಬ್ರಹ್ಮಹತ್ಯಾ ಸಮೂಹವೆಲ್ಲವೂ ನಾಶವಾಗುವುದೆಂದು ಹೇಳಲ್ಪಟ್ಟಿರುವುದರಿಂದಲೂ, ಅಂತಹುದನ್ನು ಬಿಟ್ಟು ಈ ಪಂಚಾಕ್ಷರೀ ಮಂತ್ರದಿಂದೇನು? ಎಂಬುದಾಗಿ ಯೋಚಿಸಿ, ಇದಕ್ಕೆ ದುಷ್ಪ್ರಾಮಾಣ್ಯವನ್ನು ಹೇಳಿದಿರೊ? ॥೭೮॥ ಶಿವ ಎಂಬುದಾಗಿ ಯಾವನು ಸ್ಮರಿಸುತ್ತಾನೋ ಅವನು ಸಕಲ ಪಾಪನಿರ್ಮುಕ್ತನಾಗುತ್ತಾನೆ. ಶಿವನನ್ನು ಯಾವಾಗಲೂ ಸ್ಮರಿಸಬೇಕು. ಶಿವ ಎಂಬೆರಡಕ್ಷರಗಳನ್ನು ಜಪಿಸಿದವನು ಮುಕ್ತನಾಗುತ್ತಾನೆ. ಇತ್ಯಾದಿ ವಚನಗಳೆಲ್ಲಾ ಸ್ಫುಟವಾಗಿರುವಲ್ಲಿ, ಭಸ್ಮಧಾರಣಾದಿ ಕರ್ಮಗಳಿಂದಲೇ ನಾಶವಾಗಿ ಹೋಗತಕ್ಕ ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳುವುದಕ್ಕೆ ಶಿವಸ್ಮರಣೆಯಂಥ ದೊಡ್ಡ ಕರ್ಮವು ಆಗಬೇಕೆ? ॥೮೨॥ ಪಕ್ಕಿಯನ್ನು ಕೊಲ್ಲುವುದಕ್ಕೆ ಪಾಶುಪತಾಸ್ತ್ರವನ್ನು ಪ್ರಯೋಗಿಸುವರೆ? ಭೂಮಿಯಲ್ಲಿ ಶಿವಪೂಜೆಯಿಂದ ಎಷ್ಟು ಪಾಪಗಳು ನಾಶಗೊಳ್ಳುತ್ತವೋ ಅಷ್ಟು ಪಾಪಗಳನ್ನು ಮಾಡುವುದಕ್ಕೆ ಮನುಷ್ಯಮಾತ್ರನಿಂದಾಗುವುದೇ ಇಲ್ಲ ॥೮೩॥ ಶಿವಾರ್ಚನೆಯಿಂದ ಎಷ್ಟು ಪಾತಕಗಳು ನಾಶವಾಗು

ತಾವಚ್ಛೇ ಕಲುಷಂ ಯಾವದ್ಯಾತಿ ಶಿವಾರ್ಚನಾತ್ ||೮೪|| ಅನಷ್ಟಃಪಾಪಸಂ ದೋಹಃ ಪಂಚಾಕ್ಷರ್ಯಾಽಸ್ತಿಕಿಂಭುವಿ | ಏಕಾವಿಭೂತೀರುದ್ರಾಕ್ಷ ಏಕಏಕಂಪ ದೋದಕಂ || ೮೫ || ಪ್ರಸಾದಏಕೋನಿರ್ಮಾಲ್ಯಮೇಕಂ ಸದ್ಭಕ್ತದರ್ಶನಂ | ಏಕಂ ಸೋಮೇತಿಪಠನಮೇಕಮೇವನಿರಂತರಂ ||೮೬|| ಸರ್ವಾಘತ್ಯಾಘ್ನಸಂ ಸಾರಾನ್ ದಗ್ಧುಂದುಃಖೌಘಮಪ್ಯಲಂ | ವಚಾಂಸ್ಯೇತಾನಿಯುಷ್ಮಾಕಂ ಪ್ರ ಮಾಣಾನಿನವಾಕಿಮು ||೮೭|| ಪ್ರವೃತ್ತಿರ್ವಚನಾತ್ತದ್ವನ್ನಿವೃತ್ತಿರ್ವಚನಾದಿತಿ| ವಾಕ್ಯಾದ್ಧರ್ಮಾಧರ್ಮಜಾಲ ನಿರ್ಣಯೋಕ್ತಾನಿಸರ್ವಶಃ ||೮೮|| ವಾಕ್ಯಾನಿ ಶಿವಮಾಹಾತ್ಮ್ಯನಿರ್ಣಯೋಕ್ತಾನಿಚ ಸ್ಫುಟಂ | ಭವತ್ಯಾಮ್ನಾಯಮೂಲಾ ನಿ ತಸ್ಮಿನ್ನೇಭವತಾಂಸಸು ||೮೯|| ಧರ್ಮಾಧರ್ಮಾಭಿಧಾಯೀನಿ ಸಂಮತಾನಿ ಕಥಂನುವಾ | ಶಿವಮಾಹಾತ್ಮ್ಯಶಂಸೀನಿ ಸಂಮತಾನಿನವಾಕಥಂ || ೯೦ || ಅನಾರ್ಷೇಯಾಣಿಕಿಂವಾಽಪೋ ಕಿಮಿದಾನೀಂತನಾನಿವಾ | ಪ್ರಕ್ಷಿಪ್ತವಾಕ್ಯಾ ನ್ಯಥವಾ ಸ್ವಮತಾಭಿಮತಾನಿವಾ ||೯೧|| ಕಿಮುಸ್ತುತಿಪರಾಣ್ಯಾಹೋ ಫಲಶ್ರು ತಿಪರಾಣಿವಾ | ಸಂವಾದೀನಿನವಾಶ್ರೌತ ಸೂತ್ರಸ್ಮೃತಿಗಣಸ್ಯಕಿಂ ||೯೨|| ನಿಷಿ

---

ವುಪೋ ಅಷ್ಟು ಪಾಪಗಳು ಲೋಕದಲ್ಲಿಲ್ಲವೇ ಇಲ್ಲ. ||೮೪|| ಭೂಮಿಯಲ್ಲಿ ಪಂಚಾಕ್ಷರೀ ಮಂತ್ರಶಕ್ತಿಯಿಂದ ನಷ್ಟವಾಗದೆ ಇರತಕ್ಕ ಪಾಪಸಮೂಹವುಂಟೆ? ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ, ನಿರ್ಮಾಲ್ಯ, ಭಕ್ತದರ್ಶನ, ಸೋಮಶಬ್ದ ಪಠನ— ಇವುಗಳಲ್ಲೊಂದೊಂದೇ ಸಕಲ ಹತ್ಯಾದೋಷಗಳನ್ನೂ ನಾಶಪಡಿಸಿ, ಜನನ ಮರಣಾತ್ಮಕ ಸಂಸಾರವನ್ನೂ ಅದರ ದುಃಖವನ್ನೂ ಸಹ ಧ್ವಂಸಗೊಳಿಸುವುದಕ್ಕೆ ಸಾಕಾಗಿರುವುವು. ||೮೬|| ಎಂಬ ಈ ವಚನಗಳೆಲ್ಲಾ ನಿಮಗೆ ಪ್ರಮಾಣಭೂತಗಳಹುವೊ? ಅಲ್ಲವೊ? ||೮೭|| ವಚನದಿಂದಲೇ ಪ್ರವೃತ್ತಿ, ವಚನದಿಂದಲೇ ನಿವೃತ್ತಿ ಎಂಬ ಉಕ್ತಿಯ ಪ್ರಕಾರ, ಇದು ಧರ್ಮ ಇದು ಅಧರ್ಮ ಎಂಬುದನ್ನು ನಿರ್ಣಯಿಸಿ ಹೇಳತಕ್ಕ ಎಲ್ಲಾ ವಚನಗಳೂ, ಮತ್ತೂ ಶಿವನ ಮಹಿಮೆಯನ್ನು ಸಿದ್ಧಾಂತಿಸಿ ಹೇಳತಕ್ಕ ವಚನಗಳೂ ಕೂಡ ವೇದಮೂಲಕಗಳೇ ಆಗಿರುವುವು. ಹೀಗಿರುವಲ್ಲಿ ಅಂಥ ವೇದಮೂಲಕ ಪ್ರಮಾಣ ವಚನಗಳೊಳಗೆ ಧರ್ಮಾಧರ್ಮ ವಿನಿರ್ಣಯವನ್ನು ಮಾಡಿ ಹೇಳತಕ್ಕ ವಚನಗಳು ಮಾತ್ರ ನಿಮಗೆ ಸಂಮತಗಳಾಗಿ, ಶಿವಮಹಿಮೆಯನ್ನು ಹೇಳತಕ್ಕ ವಚನಗಳು ಮಾತ್ರ ಹೇಗೆ ಅಸಂಮತಿಗಳಾಗುವುವು? ||೯೦|| ಇವೇನು ಆರ್ಷೇಯಗಳಲ್ಲವೊ? ಈಚಿನವೊ? ಅಥವಾ ಹೊಸದಾಗಿ ಸೇರಿಸಿದ ವಚನಗಳೊ? ಇಲ್ಲವೆ ಸ್ವಮತಸ್ಥರಿಗೆ ಮಾತ್ರ ಒಪ್ಪಿಗೆಯಾದ ವಚನಗಳೊ? ||೯೧|| ಮತ್ತು ಇವೇನು ಕೇವಲ ಸ್ತೋತ್ರಪರಗಳೊ? ಅಥವಾ ಫಲಶ್ರುತಿಯಂತೆ ಹೊಗಳಿಕೆಯಾಗಿರತಕ್ಕುವೊ? ಇವು ಶ್ರೌತಸೂತ್ರಗಳ ಮತ್ತು ಧರ್ಮಶಾಸ್ತ್ರಗಳ ಅರ್ಥವನ್ನೇ ಹೇಳತಕ್ಕುವಲ್ಲವೊ? ಈ ವಚನಗಳು ನಿಮಗೆ ಹೇಗೆ ನಿಷಿದ್ಧಗಳಾದುವು? ಭೂಮಿಯಲ್ಲಿ ಧರ್ಮಾಧರ್ಮವನ್ನು

ದ್ಧಾನಿಕಥಂ ಜಾತಾನ್ಯೇತಾನಿವಚನಾನಿವಃ | ಕ್ಷಿತೌವಿಹಾಯವಚನ ಪ್ರಮಾ
ಣಂ ಪರಮೋನ್ನತಂ ॥೯೩॥ ನಾನ್ಯದಸ್ತಿಪರಂಮಾನಂ ಧರ್ಮಾಧರ್ಮವಿನಿರ್ಣ
ಯೇ | ತದ್ವತ್ಪ್ರಮಾಣಂ ವಚನಂ ಸ್ಯಾಚ್ಛಿವಾಧಿಕ್ಯನಿರ್ಣಯೆ ॥೯೪॥ ಪ್ರತ್ಯಕ್ಷ
ಮಪಿಸದ್ಭಕ್ತಿ ಮಹಿಮ್ನಾಸಂಪ್ರದರ್ಶ್ಯವಃ | ಮಹಿಮಾನಂ ಸ್ಥಾಪಯಾಮಿ ಪಂ
ಚಾಕ್ಷರ್ಯಾಸ್ಸಮುನ್ನತಂ ॥೯೫॥ ಯಥಾಜನಾನಾಂ ಸರ್ವೇಷಾಂ ಸ್ಯಾದ್ದೃ
ಷ್ಟಪ್ರತ್ಯಯೋಭುವಿ | ಇತ್ಯಾಲಸ್ಯ ಬ್ರಹ್ಮಹತ್ಯಾಕಾರಿಣಾತೇನಸತ್ವರಂ ॥೯೬॥
ಉಪೋಷಿತಾಯೈಪ್ರಾಗೇವ ಸಮ್ಯಕ್ಕಪಿಲಧೇನವೇ| ತೃಣಪೂಲೇಸುಲಲಿತೇ ದಾಪಿತೆ
ಸತಿಸಾದರಂ ॥೯೭॥ ನಾಜಿಘ್ನಸ್ನಾಸ್ಪೃಶದಪಿ ಸಾಧೇನುಸ್ತೃಣಪೂಲಕಂ | ತಂ
ತತ್ರೈವವಿನಿಕ್ಷಿಪ್ಯತ್ವಂ ಪಾಪಾಧಿಕಭಕ್ತಿತಃ ॥೯೮॥ ನಮಶ್ಶಿವಾಯೇತಿವದನ್ಕೃ
ತ್ವಾ ಶಂಭುಂಪ್ರದಕ್ಷಿಣಂ | ಅನಂತರಂ ಸಂಪ್ರಯಚ್ಛಧೇನವೇತೃಣಪೂಲಕಂ ॥
ಏವಮುಕ್ತಸ್ಸೋಽಥ ನಮಶ್ಶಿವಾಯೇತಿಮುಹುರ್ವದನ್ | ಪ್ರದದೌತೃಣಪೂಲಂ
ತದ್ಧೇನವೇಸುಸಮಾಹಿತಃ ॥೧೦೦॥ ಆಗತ್ಯಾಭಿಮುಖಂಸಾಪಿ ಗೃಹೀತ್ವಾಽಭಕ್ಷ
ಯತ್ತೃಣಂ | ಮಸ್ತಕನ್ಯಸ್ತಹಸ್ತೇಷು ವಿಪ್ರೇಷುಪ್ರಣತೇಷ್ವಥ ॥೧೦೧॥ ಸದ್ದೃ
ಷ್ಟಪ್ರತ್ಯಯಂ ಶಂಭೋರ್ಮಹಿಮ್ನಸ್ಸ್ಫುಟತಾಂಗತೇ | ಸ್ತುತಿಂ ಮಹಾಸ್ತೋತ್ರ

---

ನಿರ್ಣಯಿಸುವುದಕ್ಕೆ ಉತ್ಕೃಷ್ಟವಾದ ಶಾಸ್ತ್ರವಚನ ಪ್ರಮಾಣದ ಹೊರತು ಬೇರೆ ಪ್ರಮಾಣವಿಲ್ಲ.
ಅದರಂತೆಯೇ ಶಿವಾಧಿಕ್ಯವನ್ನು ನಿರ್ಣಯಿಸುವಲ್ಲಿಯೂ ಶಾಸ್ತ್ರವಚನವೇ ಪ್ರಮಾಣವು. ॥೯೪॥
ಆದರಮೇಲೆ ನಿಮಗೋಸ್ಕರ ಭಕ್ತಿಮಹತ್ತ್ವದಿಂದ ಪ್ರತ್ಯಕ್ಷವಾಗಿಯೂ ಶಿವಾಧಿಕ್ಯವನ್ನು
ತೋರಿಸಿ, ಉತ್ಕೃಷ್ಟವಾದ ಪಂಚಾಕ್ಷರೀ ಮಂತ್ರ ಮಹಿಮೆಯನ್ನು ಸಕಲ ಜನರಿಗೂ ಪ್ರತ್ಯ
ಕ್ಷಪ್ರಮಾಣವಾಗುವಂತೆಯೇ ನಿದರ್ಶನಮಾಡಿಕೊಟ್ಟು ಸ್ಥಾಪಿಸುವೆನು ॥೯೫॥ ಎಂಬುದಾಗಿ
ನೀನು ಹೇಳಿ, ಮೊದಲೇ ಬಹಳವಾಗಿ ಹಸಿವುಗೊಂಡಿದ್ದ ಒಂದಾನೊಂದು ಕಪಿಲೆ ಗೋವಿಗೆ
ಬ್ರಹ್ಮಹತ್ಯೆಯನ್ನು ಮಾಡಿದ್ದ ಆ ಬ್ರಾಹ್ಮಣನ ಕೈಯಿಂದ ಸೊಗಸಾದ ಹುಲ್ಲಿನ ಕಂತೆಯನ್ನು
ಕೊಡಿಸಲಾಗಿ ॥೯೭॥ ಅದನ್ನು ಆ ಹಸುವು ಮೂಸಿಯೂ ನೋಡಲಿಲ್ಲ ಸೋಂಕಲೂಇಲ್ಲ.
ಪಾಪ! ಆಗ ನೀನು ಆ ಬ್ರಾಹ್ಮಣನನ್ನು ಕುರಿತು—“ಆ ಹುಲ್ಲಿನ ಕಂತೆಯನ್ನು ಅಲ್ಲೇ ಇಟ್ಟು
ಅತ್ಯಂತ ಭಕ್ತಿಯಿಂದ ನಮಶ್ಶಿವಾಯ ಎಂದುಚ್ಚರಿಸಿ, ಶಿವನಿಗೆ ಪ್ರದಕ್ಷಿಣೆ ಮಾಡಿ ಬಳಿಕ ಹಸು
ವಿಗೆ ಹುಲ್ಲು ಕಂತೆಯನ್ನು ಕೊಡು” ಎಂದು ಅಪ್ಪಣೆ ಮಾಡಲಾಗಿ, ಆತನು ಹಾಗೆಯೇ ಹಲ
ವುಸಲ ಏಕಾಗ್ರಚಿತ್ತನಾಗಿ ಪಂಚಾಕ್ಷರೀ ಮಂತ್ರವನ್ನುಚ್ಚರಿಸಿ ಹಸುವಿಗೆ ಹುಲ್ಲು ಕಂತೆಯನ್ನು
ಕೊಟ್ಟನು. ॥೧೦೦॥ ಅದು ಇದಿರಿಗೆ ಬಂದು ಕಚ್ಚಿ ಹುಲ್ಲನ್ನು ತಿಂದಿತು. ಆಗ ಅಲ್ಲಿದ್ದ
ಬ್ರಾಹ್ಮಣರೆಲ್ಲರೂ ತಲೆಗಳ ಮೇಲೆ ಕೈಜೋಡಿಸಿಕೊಂಡು ಬಂದು ನಿನಗೆ ನಮಸ್ಕರಿಸಿದರು. ಶಿವ
ಮಹಿಮೆಯು ಹೀಗೆ ಪ್ರತ್ಯಕ್ಷಪ್ರಮಾಣವಾಗಿ ವ್ಯಕ್ತವಾಗಲಾಗಿ ಆಗ ನೀನು ವೇದಸಂಮತವಾಗಿ

ಸಾವಿನ್ನಾಮಕಾರ್ಷೀಶ್ಶ್ರುತಿಸಂಮತಾಂ ||೧೦೩|| ಶಾವಕೋಮಹಿಮಾಸ್ತೋತುಂ ಗೋಚರಸ್ಸ್ಯಾತ್ಕಥಂಗುರೋ | ಇತಿ ಚೋಲಮಹೀಪಾಲೇ ಭಕ್ತಿತಸ್ತಂ ಪ್ರಶಂಸತಿ ||೧೦೪|| ಓರುಮುಕ್ಕಾಲ್ವಾರಿದೇವಂ ನಂಬ್ಯಣಸ್ಯಪರಸ್ತ್ರಿಯಃ | ಕಾನ್ತಾಲಲಾಮ ಪರಮನಾಚೇರ್ವೇಶ್ಮಾಂಗಣಸ್ಯತತ್ ||೧೦೫|| ಮಾಹಾತ್ಮ್ಯಂ ದೃಷ್ಟಮಕರೋತ್ಸರ್ವೇಷಾಂ ಭುವನೇನೃಣಾಂ | ತಸ್ಮಾತ್ತದೇವ ಶ್ರೀಶೈಲೋಗಯಾವಾರಾಣಸೀಸ್ಥಲಂ || ೧೦೬ || ಅವಿಮುಕ್ತಕ್ಷೇತ್ರಮಪಿ ಕೇದಾರ ಇತಿಜಂಗಮಾ | ಶ್ರೀನಂಬ್ಯಣ್ಣಸ್ಯಮಾಹಾತ್ಮ್ಯಂ ಸರ್ವಲೋಕೈಕವಿಶ್ರುತಂ || ಮಹಿಮಾನಂಚ ಪರಮನಾಚಿಗೇಹಾಂಗಣಸ್ಯಚ | ಶಿವದ್ವಿಜಸ್ಯಕಾನ್ತಾಯೈಸಮಬ್ರೂತಾಂ ಪರಿಸ್ಫುಟಂ ||೧೦೭||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಮಹಿಮಪ್ರಕರಣೇ ಓರಿಮುಕ್ಕಾಲ್ವಾರಿ ದೇಶಿಕಮಾಹಾತ್ಮ್ಯಸ್ತು
ತಿಪುರಸ್ಸರಂ ಪರಮನಾಚಿಗೇಹಾಂಗಣವೈಭವಕಥನಂ
ನಾಮ ಚತುರ್ದಶೋಽಧ್ಯಾಯಃ.

---

ರುವ ಮಹಾಸ್ತೋತ್ರವೆಂಬ ಹೆಸರಿನ ಸ್ತುತಿಪದ್ಯಗಳನ್ನು ರಚಿಸಿ ಹೇಳಿದೆ.||೧೦೩|| ಆದುದರಿಂದ ಭೋಗುರುವೆ! ನಿನ್ನ ಮಹಿಮೆಯನ್ನು ಇಷ್ಟೆಂದು ಹೇಳಲಳವೆ? ಎಂಬುದಾಗಿ ಉತ್ತುಂಗ ಚೋಳ ರಾಜನು ತನ್ನ ಗುರುವಾದ ಆ ಓರುಮುಕ್ಕಾಲ್ವಾರಿದೇವನನ್ನು ಹೊಗಳುತ್ತಿರಲಾಗಿ ||೧೦೪|| ಆತನು ನಂಬ್ಯಣ್ಣನ ಕಾಂತೆಯಾದ ಪರಮನಾಚಿ ಸೂಳೆಯ ಮನೆಯಂಗಳದ ಮಹಿಮೆಯನ್ನು ಲೋಕದ ಜನರೆಲ್ಲರಿಗೂ ಪ್ರತ್ಯಕ್ಷವಾಗುವಂತೆ ಮಾಡಿದನು. ||೧೦೫|| ಆದುದರಿಂದ ಆ ಅಂಗಳವೇ ಶ್ರೀಶೈಲ ಗಯಾ ಕಾಶೀಕೇದಾರಕ್ಷೇತ್ರಗಳಾಗಿರುವುದು. ಎಂಬುದಾಗಿ ಆ ಯಾಚ್ನಾರ್ಥಿಗಳಾದ ಜಂಗಮರು ಪಿರ್ಯನಂಗೆಯೊಡನೆ ನಂಬ್ಯಣ್ಣನ ಲೋಕೋತ್ತರ ಮಹಿಮೆಯನ್ನೂ ||೧೦೬|| ಪರಮನಾಚಿಯ ಮನೆಯಂಗಳದ ಮಹತ್ತ್ವವನ್ನೂ ಸ್ಪಷ್ಟವಾಗಿ ವಿವರಿಸಿ ಹೇಳಿದರು. ||೧೦೭||

ಎಂಬಿಲ್ಲಿಗೆ ಶ್ರೀಗುರುರಾಜ ಕವಿಕೃತ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ
ಎಸ್. ಆರ್ ಕರಿಬಸವಶಾಸ್ತ್ರಿ ರಚಿತವಾದ ಭಾವಮಂಜರಿಯೆಂಬ ಕನ್ನಡ
ಟಿಪ್ಪಣದಲ್ಲಿ ಓರಿಮುಕ್ಕಾಲ್ವಾರಿ ಗುರುಮಹತ್ತ್ವವನ್ನೂ ಪರಮನಾಚಿ
ಯ ಮನೆಯಂಗಳದ ವೈಭವವನ್ನೂ ನಿರೂಪಿಸುವ
೧೪ನೆ ಅಧ್ಯಾಯವು ಮುಗಿದುದು.

# ಅಥ ಪಂಚದಶೋಽಧ್ಯಾಯಃ.

## (ನಂಬ್ಯಣ್ಣ ಮಹತ್ತ್ವಕಥನಂ)

ಅಥ ಸಂಬ್ಯಣ್ಣಮಾಹಾತ್ಮ್ಯಂ ಶ್ರುತ್ವಾಸಾದ್ವಿಜಭಾಮಿನೀ | ಯದಿಪುತ್ರಾಸ್ಸಂಭವೇಯುರ್ಮಮ ಜಂಗಮಪುಂಗವಾ || ೧ || ತೇಯಾವಂತೋಪಿಸಂಬ್ಯಣ್ಣನಾಮ ಶೇಷಾಂಕರೋಮ್ಯಹಂ | ಪಾರ್ವತೀನಾಥಪಾದಾಭ್ಯಾಂ ಸಪಇತ್ಯವದನ್ಮುದಾ ||೨|| ಜಂಗಮಾವಪಿ ಸಂಬ್ಯಣ್ಣಕೃಪಯಾ ತೇತನೂಭವಾಃ | ಭವಿಷ್ಯಂತೀತಿತದ್ಭಾಲೇ ವಿಭೂತಿತಿಲಕಂತದಾ | ವಿಧಾಯಕೃತ್ವಾಶೀರ್ವಾದಂ ರಮಣ್ಯೈ ತಾವಗಚ್ಛತಾಂ| ಗರ್ಭೋಽಭವತ್ತದ್ರಮಣ್ಯಾ ಸ್ತದಾತದ್ಯಾತುರಸ್ಯಥ ||೪|| ಸಂಪ್ರಾಪ್ತೇ ನವಮೇಮಾಸೇ ಕಾಮಿನ್ಯೋರುಭಯೋರಪಿ | ಮನೋಹರಾಕೃತಿಯುತಾ ವಜಾಯೇತಾಂತನೂಭವಾ ||೫|| ಸುತಂಜಕಾರಪಿರಿಯನಂಗಾಶ್ರೀಸಂಬ್ಯಣಾಹ್ವಯಂ | ಸ್ವಕಾಂತಪಿತೃನಾಮಾನ ಮಪರಾತುಸ್ವನನ್ದನಂ ||೬|| ದಿನೇದಿನೇತಯೋಸ್ಸೂನ್ವೋಃ ವರ್ಧಮಾನಾಂಗಯೋಸ್ಸತೋಃ | ರಮಣ್ಯೌ ಜಾತುಶೇಪುತ್ರೌ ಸಂಪ್ರೀತ್ಯಾಽಽರೋಪ್ಯಕಕ್ಷಯೋಃ ||೭|| ಜಲಾದಾನಾಯ

---

# ೧೫ನೆ ಅಧ್ಯಾಯವು.

## (ನಂಬ್ಯಣ್ಣನ ಮಹತ್ತ್ವವು)

ಹೀಗೆ ಹೇಳಿದ ನಂಬ್ಯಣ್ಣನ ಮಹಿಮೆಯನ್ನು ಶಿವದ್ವಿಜಸ್ತ್ರೀಯಾದ ಆ ಪಿರಿಯನಂಗೆಯು ಕೇಳಿ, ಎಲೈ ಜಂಗಮಶ್ರೇಷ್ಠರೆ! ನನಗೆ ಎಷ್ಟು ಮಕ್ಕಳಾದರೂ ಅವರಿಗೆಲ್ಲಾ ನಂಬ್ಯಣ್ಣನ ಹೆಸರನ್ನೇ ಕರೆಯುತ್ತೇನೆ. ಇದಕ್ಕೆ ಶಿವಪಾದದಾಣೆ ಎಂಬುದಾಗಿ ಸಂತೋಷದಿಂದ ಹೇಳಿದಳು ||೨|| ನಿನಗೆ ನಂಬ್ಯಣ್ಣನ ದಯದಿಂದ ಮಕ್ಕಳುಗಳಾಗುತ್ತಾರೆಂದು ಜಂಗಮರು ಹೇಳಿ, ಅವಳ ಹಣೆಯಲ್ಲಿ ವಿಭೂತಿಯ ಬಟ್ಟನ್ನಿಟ್ಟು ||೩|| ಆಶೀರ್ವಾದಮಾಡಿ ಹೊರಟುಹೋದರು. ಬಳಿಕ ಆ ಪಿರಿಯನಂಗೆಗೂ ಅವಳ ಓರೆಗಿತ್ತಿಗೂ ಸಹ ಬಸುರುಂಟಾಯಿತು. ||೪|| ನವಮಾಸವು ತುಂಬಲಾಗಿ ಇಬ್ಬರಿಗೂ ಸುಂದರಾಕಾರರಾದ ಗಂಡುಮಕ್ಕಳಿಬ್ಬರು ಹುಟ್ಟಿದರು. ||೫|| ಪಿರಿಯನಂಗೆಯು ತನ್ನ ಮಗನಿಗೆ ನಂಬ್ಯಣ್ಣನೆಂದು ಹೆಸರು ಕರೆಸಿದಳು. ಅವಳ ಓರೆಗಿತ್ತಿಯಾದರೊ ತನ್ನ ಮಗನಿಗೆ ತನ್ನ ಗಂಡನ ತಂದೆಯ ಹೆಸರನ್ನು ಕರೆಸಿದಳು. ||೬|| ಅವರಿಬ್ಬರ ಮಕ್ಕಳೂ ದಿನದಿನಕ್ಕೆ ಬಳೆಯುತ್ತಿರಲಾಗಿ, ಒಂದಾನೊಂದುದಿವಸ ಅವರಿಬ್ಬರೂ ತಂತಮ್ಮ ಮಕ್ಕಳನ್ನು ಕಾಂಕುಳಲ್ಲಿ ಪ್ರೀತಿಯಿಂದ ಎತ್ತಿಕೊಂಡು ||೭|| ನೀರನ್ನು ತರುವುದಕ್ಕೋಸ್ಕರ ಕಾವೇರೀನದಿಗೆ ಹೋಗಿ, ಅದರ ದಡದಮೇಲೆ ಮಕ್ಕಳನ್ನು ಕುಳ್ಳಿರಿಸಿ, ನೀರು ಮುಟ್ಟು

ಕಾವೇರೀಂ ಗತ್ವಾತಸ್ಯಾಸ್ತಟೇಸುತೌ| ನಿಧಾಯಾಗಚ್ಛತಾಂಕರ್ತುಂ ಜಲಸ್ಪರ್ಶಂ ತತಃಪರಂ ||೮|| ಸ್ವಾನುಜೇನಸಹ ಕ್ರೀಡಾತಟಾಕಂ ತತ್ರ ಕುರ್ವತಃ | ವಿಧಾಯನಂಬ್ಯಣೇಃ ತಸ್ಮಿನ್ವಿಹರತ್ಯತಿವೇಗತಃ ||೯|| ನಕ್ರಃ ಕಶ್ಚಿತ್ಸಮಾಗತ್ಯತಂ ಗೃಹೀತ್ವಾಽವಿಶಜ್ಜಲಂ| ತಟಸ್ಥಿತೇಽಥರುದತಿಬಾಲಕೇ ಸಂಭ್ರಮಾನ್ವಿತಾ ||೧೦|| ಆಕರ್ಣ್ಯಾಗತ್ಯನಕ್ರೇಣ ಗೃಹೀತೇ ನಂಬ್ಯಣೇಃಪ್ರಸೂಃ | ಉದ್ವೀಕ್ಷ್ಯ ಹಂತಹಾಪುತ್ರೇತ್ಯಾಲಪನ್ತೀಸಮಾಕುಲಾ ||೧೧|| ವದನ್ತೀನನುದೇವೇತಿ ತಾಡಯನ್ತೀನಿಜೋದರಂ | ವಿಲುಠನ್ತೀಕ್ಷಿತಿತಲೇ ವಿಲಪನ್ತೀತನೂಭವಂ ||೧೨|| ಕುದನ್ತೀಮುಕ್ತಕಂಠಂ ಸಾ ಕಾವೇರ್ಯಾಮೇವಶೋಕತಃ| ಗಚ್ಛನ್ತೀಪತಿತುಂತತ್ರಸ್ಯವಸದ್ಭ್ರಾನ್ತಮಾನಸಾ||೧೩|| ಪತಿಶ್ಚಬಾನ್ಧವಾಸ್ಸರ್ವೇ ಸಮಾಗತ್ಯಾಥತಚ್ಛಿಶೋಃ| ಶೈವೋಕ್ತವಿಧಿವತ್ಕರ್ಮ ಚಕ್ರಿರೇಪಾರಲೌಕಿಕಮ್ ||೧೪|| ಅಕ್ಷಿಪಕ್ಷ್ಮವ್ಯಪಘಿತೇತ್ವಯಿಸಂಸ್ಥಾತುಮಕ್ಷಮಾ | ಜನನೀಸಾಕಥಮಹಂ ಸ್ಥಾಸ್ಯಾಮಿತ್ವಾಂವಿನಾಸುತಂ ||೧೫|| ಕಸ್ಮಾತ್ತ್ವಯ್ಯವರೂಢೇಽಪಂ ಮುಂಚನ್ತೀಜೀವಿತಂಪ್ರಸೂಃ ತ್ವಾಂವಿಹಾಯಯಾತ್ರಯಾಸ್ಯಾಮಿ ಕಥಂಕಾರಂಕುಮಾರಕ ||೧೬|| ವಿಹಾಯಪಾ

---

ವುದಕ್ಕಾಗಿ ಹೋದರು. ||೮|| ಆ ನಂಬ್ಯಣ್ಣನು ತನ್ನ ತಮ್ಮನೊಡನೆ ಕೂಡಿ ಮುದದಿಂದ ಆಟದ ಕೊಳವೊಂದನ್ನು ರಚಿಸಿ ಆಡುತ್ತಿರಲಾಗಿ, ಒಂದಾನೊಂದು ಮೊಸಳೆಯು ಅತಿ ವೇಗದಿಂದ ಬಂದು, ಆ ಬಾಲಕ (ನಂಬ್ಯಣ್ಣ) ನನ್ನು ಕಚ್ಚಿಕೊಂಡು ನೀರಿಗೆ ಮುಳುಗಿತು. ತಮ್ಮನಾದ ಮತ್ತೊಬ್ಬ ಹುಡುಗನು ಏರಿಯಮೇಲೆ ನಿಂತು ಅಳುತ್ತಿರಲಾಗಿ, ಸದ್ದನ್ನು ಕೇಳಿ ತಾಯಿಯು ದಡಬಡನೆ ಓಡಿಬಂದು ನಂಬ್ಯಣ್ಣನನ್ನು ಮೊಸಳೆಯು ಎತ್ತಿಕೊಂಡು ಹೋಗಿದ್ದುದನ್ನು ಕಂಡು, ಅಯ್ಯೋ ಮಗನೇ! ಎಂದು ಗೋಳಿಟ್ಟಳು. ||೧೧|| ಅಯ್ಯೋ ಸ್ವಾಮಿ ಎಂದು ಒರಲಿದಳು. ಎದೆಯನ್ನು ಬಡಿದುಕೊಂಡಳು. ನೆಲದಮೇಲೆ ಬಿದ್ದು ಹೊರಳಾಡಿದಳು. ಮಗನ ಲೀಲೆಗಳನ್ನೆಲ್ಲಾ ವರ್ಣಿಸಿಕೊಂಡು ||೧೨|| ಗಟ್ಟಿಯಾಗಿ ಅತ್ತಳು. ಸಹಿಸಲಾರದ ದುಃಖದಿಂದ ಬುದ್ಧಿಗೆಟ್ಟು ಹೊಳೆಯಲ್ಲೇ ದುಮಿಕುವುದಕ್ಕೆ ಸಿದ್ಧಳಾಗಿ ನಿಂತಳು. ||೧೩|| ಅಷ್ಟರಲ್ಲಿ ಆಕೆಯ ಗಂಡನೂ ನೆಂಟರುಗಳೂ ಬಂದು ಆ ಮಗುವಿಗೆ ಮಾಡಬೇಕಾದ ಅಪರಕರ್ಮವನ್ನೆಲ್ಲಾ ಶಿವಾಗಮೋಕ್ತವಿಧಿಗನುಸಾರವಾಗಿ ನೆರವೇರಿಸಿದರು. ||೧೪|| ತಾಯಾದರೋ ಮಗನನ್ನು ನೆನೆದುಕೊಂಡು—ನೀನು ಕಣ್ಣುರೆಪ್ಪೆ ಮರೆಯಾದರೆ ತಾಳಿಕೊಂಡಿರಲಾರದೆ ಇದ್ದ ನಾನು ಅಂತಪ್ಪ ಮಗನಾದ ನಿನ್ನನ್ನು ಬಿಟ್ಟು ಹೇಗಿರಲಿ? ||೧೫|| ಎಲೆ ಮಗನೆ, ನೀನು ಕಾಂಕುಳಿಂದ ಕೆಳಕ್ಕೆ ಇಳಿದುಬಿಟ್ಟರೆ ಪ್ರಾಣವನ್ನು ಬಿಡುತ್ತಿದ್ದ ನಾನು ನಿನ್ನನ್ನು ಬಿಟ್ಟು ಈಗ ಹೇಗಿರಲಿ? ||೧೬|| ಕಂದನೆ! ನನ್ನ ಮಗ್ಗುಲನ್ನು ಬಿಟ್ಟು ಹಾಸುಗೆಯಿಂದ ನೀನು ಎತ್ತಲಾದರೂ ಹೋ

ಶ್ಚಂಶಯ್ಯಾತೋ ಮಮಾನ್ಯತ್ರಗತೇತ್ವಯಿ | ಭೀತಾಪ್ರಸೂರಹಂ ತ್ಯಕ್ತ್ವಾತ್ವ
ತ್ತ್ವಾಂತಿಷ್ಠಾಮಿಕಥಂಸುತ ||೧೭|| ಭವನಾತ್ತ್ವಯಿನಿರ್ಯಾತೇ ದುಃಖಿತಾಜನನೀ
ಸುತ | ಸಕ್ರಾಯತ್ತ್ವಾಂಸಮರ್ಪ್ಯಾಹಂ ಕಥಂಶಕ್ನೋಮಿಜೀವಿತುಂ ||೧೮||
ಭಾವಯಂತೀಸ್ವೇದಮೇವ ರುಧಿರಂತೇಜನನ್ಯಹಂ | ತನೂಜಶಕ್ನೋಮಿಕಥಂ
ತ್ವಾಂವಿಮುಚ್ಯಾದ್ಯಜೀವಿತುಂ ||೧೯|| ಬಹುನಾಕಿಂಪಂಚಿತಾಸ್ಮಿ ತಿಷ್ಠಾಮಿ
ತ್ವಾಂವಿನಾಕಥಂ | ಏವಂಬಹುವಿಧಂಶೋಕಾ ತ್ಪ್ರಲಪಂತೀತನೂಭವಂ ||೨೦||
ಯಾತೃಪುತ್ರಸ್ಯ ರೂಪೇಣ ಸಂಸ್ಥಾನೇನಚಸರ್ವಶಃ | ಆತ್ಮಪುತ್ರಸಮೋಯ
ಸ್ಮಾ ದತಸ್ತದ್ವಚನಾನಿಸಾ || ೨೧ || ಆಕರ್ಣ್ಯಸ್ವಸುತಾಲಾಪಂ ಸದ್ಯಸ್ಸ್ಮರತಿ
ದುಃಖಿತಾ | ಯದಾಯದಾಙ್ಗನಾ ಯಾತೃನಂದನಂಸಾನಿರೀಕ್ಷತೆ ||೨೨|| ತದಾ
ತದಾತ್ಮಪುತ್ರಸ್ಯ ಸಂಸ್ಮರತ್ಯಾಕೃತಿಂಶುಭಾಂ | ಆರೋಪ್ಯಾಂಕಂ ಯದಾಯಾ
ತಾತನಯಂ ಪರಿಚುಂಬತಿ || ೨೩ || ತದಾಸ್ಮರತಿದುಃಖಾರ್ತಾ ಸ್ವಪುತ್ರಮುಖ
ಚುಂಬನಂ | ಏವಂಪ್ರದಹ್ಯಮಾನಾಸಾ ಪುತ್ರಶೋಕಾಗ್ನಿನಾಽನಿಶಂ ||೨೪||
ಸ್ಮಾರಂಸ್ಮಾರಂಸುತಂದೀನಾ ರುದಂತೀವಿಹ್ವಲಾಽವಸತ್| ಅಥ ಗರ್ಭಾಷ್ಟಮೇ
ವರ್ಷೇ ಪ್ರಾಪ್ತೇಯಾತೃತನೂಭವೇ ||೨೫|| ಉಪನೀತೇನಮಸ್ಕಾರಂ ವಿಧಾಯಾ

---

ಗಿದ್ದರೆ ಬೆದರಿ ಬೀಳುತ್ತಿದ್ದ ನಾನು ಈಗ ನಿನ್ನನ್ನು ತೊರೆದು ಹೇಗಿರಲಿ? ||೧೭|| ಪುತ್ರನೆ! ಮನೆಯಿಂದ ನೀನು ಹೊರಕ್ಕೆ ಹೋದರೆ ಎಷ್ಟೋ ದುಃಖಪಡುತ್ತಿದ್ದ ನಾನು ಈಗ ನಿನ್ನನ್ನು ವೊಸಳೆಗೆ ಒಪ್ಪಿಸಿಬಿಟ್ಟು ಹೇಗೆ ಬದುಕಿಕೊಂಡಿರಲಿ? ||೧೮|| ಮಗನೆ! ನಿನ್ನ ಮೈಯಲ್ಲಿ ಬೆಮರು ಬಂದರೆ ಅವನ್ನೇ ರಕ್ತ ಬಂದಂತೆ ಭಾವಿಸುತ್ತಿದ್ದ ನಾನು ಈಗ ನಿನ್ನನ್ನು ಬಿಟ್ಟು ಹೇಗೆ ಬಾಳಲಿ? ||೧೯|| ಹೆಚ್ಚು ಹಂಬಲಿಸಿ ಪ್ರಯೋಜನವೇನು? ಅಯ್ಯೋ ಮಗನೆ! ನನ್ನನ್ನು ವಂಚಿಸಿಬಿಟ್ಟೆ! ನಿನ್ನನ್ನು ಬಿಡು ನಾನು ಹೇಗಿರಲಿ? ಎಂಬುದಾಗಿ ಹಲವು ಬಗೆಯಿಂದ ಮಗನನ್ನು ಕುರಿತು ಗೋಳಿಡುತ್ತಿದ್ದಳು. ||೨೦|| ತನ್ನ ಓರೆಗಿತ್ತಿಯ ಮಗನು ರೂಪವಯೋಧರ್ಮಗಳಲ್ಲೆಲ್ಲಾ ತನ್ನ ಮಗನಂತೆಯೇ ಇದ್ದುದರಿಂದ, ಆ ಹುಡುಗನು ಆಡುವ ಮಾತುಗಳನ್ನು ಕೇಳಿದಾಗಲೆಲ್ಲಾ ತನ್ನ ಮಗನು ಆಡುತ್ತಿದ್ದ ಮಾತುಗಳನ್ನು ಸ್ಮರಿಸಿಕೊಂಡು ಅಳುತ್ತಿದ್ದಳು. ತನ್ನ ಓರೆಗಿತ್ತಿಯ ಮಗನನ್ನು ನೋಡಿದಾಗಳೆಲ್ಲಾ ತನ್ನ ಮಗನ ಆಕಾರವನ್ನು ನೆನೆಸಿಕೊಳ್ಳುತ್ತಿದ್ದಳು. ಓರೆಗಿತ್ತಿಯು ತನ್ನ ಮಗನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮುತ್ತುಕೊಡುತ್ತಿದ್ದರೆ ||೨೩|| ಆಗ ತನ್ನ ಮಗನಿಗೆ ಹಿಂದೆ ತಾನು ಮುತ್ತುಕೊಡುತ್ತಿದ್ದುದನ್ನು ಸ್ಮರಿಸಿಕೊಂಡು ವ್ಯಸನಪಡುತ್ತಿದ್ದಳು. ಹೀಗೆ ಆಕೆಯು ಸರ್ವದಾ ಪುತ್ರಶೋಕದಿಂದಲೇ ಬೆಂದು ಬೆಂಡಾಗುತ್ತಿದ್ದಳು. ||೨೪|| ಅಡಿಗಡಿಗೆ ಮಗನನ್ನು ನೆನೆನೆನೆದು ಅಪ್ಪ ಬೆಪ್ಪಾಗಿ ಹೋಗಿದ್ದಳು. ಬಳಿಕ ಕೆಲಕಾಲದಮೇಲೆ ತನ್ನ ಓರೆಗಿತ್ತಿಯ ಮಗನಿಗೆ ಎಂಟನೆ ವರ್ಷವು ಪ್ರಾಪ್ತವಾಗಲು, ಉಪನಯ

ಸ್ಯೈ ಯಥಾವಿಧಿ । ಸ್ವರ್ಣಭಿಕ್ಷಾಂಯಾಚಮಾನೇ ವಿಧಾಯಾಶಿಷಮಂಗಸಾ ||೨೬|| ಭಿಕ್ಷಾಪ್ರದಾನಸಮಯೇ ದುಃಖಾಶ್ರೂಣಿಕಟಾಕ್ಷಯೋಃ । ಉದಿತೇ ಸತಿಸಂಸ್ತಂಭ್ಯ ಮಯಾಽತ್ರರುದಿತೇಸತಿ ೨೭|| ನಿಂದಂತೀತಿಸಮಾದಾಯ ಘಟಂ ದಾಸೀಸಮನ್ವಿತಾ । ಸಲಿಲಾಹರಣವ್ಯಾಜಾತ್ಕಾವೇರೀಂ ಜಗಮತ್ತದಾ ||೨೮|| ಯತ್ರಪುತ್ರೋಮೃತಸ್ತತ್ರ ಮಾರ್ಗಮಾಣಾಸ್ವನಂದನಂ । ಆಹೂಯನಾಮ್ನಾ ತನುಜಂ ಪ್ರಲಪಂತೀಮುಹುರ್ಮುಹುಃ || ೨೯ || ಹಾನಂಬೇನನುಸಂಬ್ಯಣ್ಣ ಹಾ ಹಾನಂಬ್ಯಣ್ಣನಂಬ್ಯಣ । ಮನ್ನಂಬೇಮಮನಂಬ್ಯಣ್ಣ ತ್ವಾಂವಿಶ್ವಾಸ್ಯಹತಾಸ್ಮ್ಯಹಂ ||೩೦|| ಏವಂರುದಂತೀಸದಯ ಮತಿಷ್ಠತ್ಸಾನದೀತಟೇ । ತತ್ಪೂರ್ವಮೇವ ಸುಗುಣವಿಸ್ಫೂರ್ತಿಃ ಪಾಪವರ್ಜಿತಃ ||೩೧|| ವಿನಾಶಿತಭವಸ್ಫೂರ್ತಿ ಶ್ರೀಮಮೂರ್ತಿರ್ಮಹಾಮತಿಃ । ಪ್ರಸಿದ್ಧಕೀರ್ತಿರ್ವಿಧ್ವಸ್ತನತಾರ್ತಿರ್ಜಗತೀಪತಿಃ ||೩೨|| ಕಮಸೀಯಾಶೇಷ ಜಗದ್ದೀಪವರ್ತಿರ್ಮಹೋನ್ನತಿಃ। ಚೇರಮಾಖ್ಯಶ್ಚಕ್ರವರ್ತೀ ಶಿವಭಕ್ತಿಪರಾಯಣಃ ||೩೩|| ನಂಬ್ಯಣ್ಣಂ ಮಹಿತೋದಾರ ಯಶೋವ್ಯಾಪ್ತ ದಿಗಂತರಂ । ವಿಹಿತೇಶಾನಕರುಣಾ ಸುಧಾಸಿಂಧುನಿಮಜ್ಜನಂ ||೩೪|| ಸದ್ಯಃಪ್ರ

---

ನವನ್ನು ಹೊಂದಿದ ಆತನು ಈಕೆಯ ಬಳಿಗೆ ಬಂದು ನಮಸ್ಕರಿಸಿ, "ಭವತೀ ಭಿಕ್ಷಾಂದೇಹಿ" ಎಂದು ಯಾಚ್ಞೆಮಾಡಲಾಗಿ, ಈಕೆಯು ಆ ಬಾಲನಿಗೆ ಆಶೀರ್ವಾದಮಾಡಿ ಭಿಕ್ಷೆಯನ್ನು ನೀಡುವಾಗ್ಗೆ ಕಡೆಗಣ್ಣುಗಳಲ್ಲಿ ಕಣ್ಣೀರು ತುಂಬಲು, ಅದನ್ನು ಹಾಗೆಯೇ ತಡೆದುಕೊಂಡು, ನಾನು ಈಗ ಅತ್ತರೆ ||೨೭|| ಜನರು ನಿಂದಿಸುವರೆಂದು ಯೋಚಿಸಿ, ಕೊಡವನ್ನು ತೆಗೆದುಕೊಂಡು, ದಾಸಿಯೊಡಗೂಡಿ ನೀರನ್ನು ತರುವ ನೆಪದಿಂದ ಕಾವೇರೀನದಿಗೆ ಹೊರಟುಹೋದಳು. ||೨೮|| ಆ ಹೊಳೆಯೊಳಗೆ ಹಿಂದೆ ತನ್ನ ಮಗನು ಯಾವ ಸ್ಥಲದಲ್ಲಿ ಮೃತನಾಗಿದ್ದನೋ ಅಲ್ಲಿ ತನ್ನ ಮಗನನ್ನು ಹುಡುಕುತ್ತ, ಅವನ ಹೆಸರನ್ನು ಹಿಡಿದು ಕೂಗಿ ಬಾರಿಬಾರಿಗೂ ಪ್ರಲಾಪಮಾಡುತ್ತಾ ಇದ್ದಳು. ||೨೯|| ಹಾ! ನಂಬೀ! ಎಲೆ ನಂಬ್ಯಣ್ಣ! ಅಯ್ಯಾ! ನಂಬಿ ತಂದೆ! ಅಯ್ಯೋ ನನ್ನ ನಂಬಿಯೆ! ನಿನ್ನನ್ನು ನಂಬಿ ನಾನು ಕೆಟ್ಟೆ ||೩೦|| ಎಂಬುದಾಗಿ ಹೇಳಿಕೊಂಡು ನೋಡಿದವರಿಗೆಲ್ಲಾ ದಯೆಹುಟ್ಟುವಂತೆ ಹೊಳೆಯ ದಡದಲ್ಲಿ ಗೋಳಾಡುತ್ತಿದ್ದಳು. ||೩೦||ಇದಕ್ಕೆ ಮುಂಚೆಯೇ ಸದ್ಗುಣಾಢ್ಯನೂ, ಪಾಪರಹಿತನೂ, ಸಂಸಾರಬಂಧವನ್ನು ನಾಶಗೊಳಿಸಿದವನೂ, ಮಂಗಳಾಕಾರನೂ, ಮೇಧಾವಿಯೂ, ಪ್ರಖ್ಯಾತ ಕೀರ್ತಿಶಾಲಿಯೂ, ಶರಣಾಗತರ ಮನೋರೋಗವನ್ನು ಪರಿಹರಿಸಿದವನೂ, ಭೂಪತಿಯೂ, ||೩೨|| ಸಕಲ ಜಗತ್ತನ್ನೂ ತನ್ನ ಪ್ರಭಾವದಿಂದ ಬೆಳಗುವಲ್ಲಿ ದೀಪದ ಬತ್ತಿಯೋಪಾದಿಯಲ್ಲಿರತಕ್ಕವನೂ, ಮಹೋತ್ಕರ್ಷಸಂಪನ್ನನೂ, ಶಿವಭಕ್ತಿತತ್ಪರನೂ ಆದ ಚೇರಮನೆಂಬ ಚಕ್ರವರ್ತಿಯು ||೩೩|| ದಿಗಂತವ್ಯಾಪ್ತ ಮಹಾಕೀರ್ತಿಯೂ, ಶಿವಕೃಪಾಮೃತ ಸಮುದ್ರದಲ್ಲಿ ಮುಳುಗಿದವನೂ ||೩೪||

ಸಾದವಿಲಸದ್ಭಕ್ತಿಮಾಹಾತ್ಮ್ಯಸಂಯುತಂ । ಹೃದ್ಯಾನವದ್ಯಲಲಿತ ಚರಿತ್ರೇಣ ವಿರಾಜಿತಂ ॥ ೩೫ ॥ ದೃಷ್ಟಪ್ರತ್ಯಯವಿಖ್ಯಾತಾತುಲಸಾಮರ್ಥ್ಯಸಂಯುತಂ । ರತಿನಾಥಕಲಾದಕ್ಷಂ ಕಲೌ ಪ್ರತ್ಯಕ್ಷಶಂಕರಂ ॥ ೩೬ ॥ ನಿತ್ಯೇಶಾನಂದನಿಸ್ಸೀಮ ಸೌಖ್ಯಾತಿಶಯಭಾಸುರಂ। ಗಾನವಿದ್ಯಾಚಣಂ ಸಾಕ್ಷಾದ್ವಿಟವೇಷಮಹೇಶ್ವರಂ ॥ ೩೭ ॥ ಏಕ್ತ್ರೇಶಸಖಸನ್ಮಿತ್ರಂ ವೀರಸದ್ಭಕ್ತಿಸತ್ತಮಂ । ಸರ್ವಪ್ರಸಾದ ಸರ್ವಾಂಗಂ ವಿಸ್ಮಯಾಭಿಷ್ಟುತವ್ರತಂ ॥ ೩೮ ॥ ಭಾಸ್ವರಂ ಶಿವಮಾರ್ಗಾರ್ಯಂ ಸ್ಮಿತಾಸನವಿಕಸ್ವರಂ । ಸಂಪಾಲಿತಸ್ವಸಮಯಪ್ರತಾಪ ಸಮುದಂಚಿತಂ ॥ ೩೯ ॥ ಶ್ರೀಲಿಂಗಾಂಚತ್ಪರಿಕರಂ ಪ್ರೀತ್ಯಾ ಸಂದ್ರಷ್ಟುಮಾಯಯೌ । ಪ್ರತ್ಯುದ್ಯಯೌ ನಂಬ್ಯಣ್ಣೋಪಿ ತಂ ತುಷ್ಟೇ ಭಕ್ತಸಂಘಕೇ ॥ ೪೦ ॥ ಅನ್ಯೋನ್ಯದರ್ಶನಾನ್ಯೋನ್ಯ ವಂದನಾಲಿಂಗನಾದಿಭಿಃ । ಉದ್ಯದ್ವಿನಯಸತ್ಕಾರಪೂರ್ವಕಂ ತಂ ಗಣೋತ್ತಮಂ ॥ ಚೇರಮೇಂದ್ರಂ ಗೃಹಂ ನೀತ್ವಾ ಭಕ್ತಸಂಘಸಮನ್ವಿತಃ । ಕಾರಯಾಮಾಸ ನಂಬ್ಯಣ್ಣಶ್ಶಿವಲಿಂಗಾರ್ಚನಂ ಮುದಾ ॥ ೪೧ ॥ ತದಾನೀಂ ಶೀಲಸಂಪನ್ನ ಶ್ಚೇರಮೇಂ

---

ಥಟ್ಟನೆ ಶಿವಾನುಗ್ರಹವನ್ನು ಪಡೆದ ಶಿವಭಕ್ತಿಮಹತ್ತ್ವದಿಂದ ಕೂಡಿದವನೂ, ಮನೋಹರವಾದ ನಿರ್ದುಷ್ಟ ಚರಿತ್ರದಿಂದೊಪ್ಪುವವನೂ ॥೩೫॥ ಪ್ರತ್ಯಕ್ಷಪ್ರಮಾಣದಿಂದ ಲೋಕವಿಖ್ಯಾತವಾದ ಅಸಾಧಾರಣ ಸಾಮರ್ಥ್ಯದಿಂದ ಕೂಡಿದವನೂ, ಮದನಕಲಾಕುಶಲನೂ, ಕಲಿಗಾಲದ ಪ್ರತ್ಯಕ್ಷಶಂಕರನೂ ॥೩೬॥ ಸದಾ ಶಿವಾನಂದ ಸೌಖ್ಯಾಧಿಕ್ಯದಿಂದ ಮೆರೆಯುತ್ತಿರುವವನೂ, ಸಂಗೀತ ವಿದ್ಯಾಪ್ರವೀಣನೂ, ವಿಟವೇಷವನ್ನು ಧರಿಸಿದ ಪ್ರತ್ಯಕ್ಷ ಪರಶಿವನೂ ॥೩೭॥ ಪರಶಿವನ ಕೇವಲ ಮಿತ್ರನೂ, ಶಿವೇತರ ದೇವತೆಗಳಿಗೆರಗದ ಮಹಾ ಸದ್ಭಕ್ತಿವ್ರತವುಳ್ಳ ಸಜ್ಜನರಲ್ಲಿ ಶ್ರೇಷ್ಠನೂ, ತನ್ನ ದೇಹವೆಲ್ಲಾ ಸಕಲ ಶಿವಪ್ರಸಾದ ರೂಪವಾಗಿರತಕ್ಕವನೂ, ಲೋಕದ ಜನರಿಂದೆಲ್ಲಾ ಆಶ್ಚರ್ಯಪೂರ್ವಕವಾಗಿ ಹೊಗಳಲ್ಪಟ್ಟ ತನ್ನ ಶಿವವ್ರತವುಳ್ಳವನೂ ॥೩೮॥ ಶಿವೈಕಮಾರ್ಗಾನುಯಾಯಿಗಳಾದ ಜನರಲ್ಲಿ ಪೂಜ್ಯನಾದವನೂ, ಮುಗುಳ್ನಗೆಯಿಂದ ಕೂಡಿದ ಮುಖಮಂಡಲದಿಂದ ವಿರಾಜಿಸುವವನೂ, ತನ್ನ ಶಿವಮತದ ಪ್ರಭಾವವನ್ನು ರಕ್ಷಣೆಮಾಡಿದವನಾದಕಾರಣ ಸರ್ವೋತ್ಕೃಷ್ಟನಾಗಿರುವವನೂ ॥೩೯॥ ಶಿವಲಿಂಗಾಂಕನದಿಂದ ಕೂಡಿದ ಸಕಲ ಸಾಮಗ್ರಿಗಳುಳ್ಳವನೂ ಆದ ನಂಬ್ಯಣ್ಣನನ್ನು ದರ್ಶನಮಾಡುವುದಕ್ಕಾಗಿ ಆದರದಿಂದ ಬಂದನು. ಇದನ್ನು ಕೇಳಿ ನಂಬ್ಯಣ್ಣನೂ ಕೂಡ ತನ್ನ ಬಳಿಯಲ್ಲಿದ್ದ ಭಕ್ತಸ್ತೋಮವೆಲ್ಲವೂ ಸಂತೋಷಪಡುತ್ತಿರಲಾಗಿ, ಆ ಚೇರಮನನ್ನು ಪ್ರೀತಿಯಿಂದ ಇದಿರ್ಗೊಂಡನು. ॥೪೦॥ ಇಬ್ಬರೂ ಒಬ್ಬರಿಗೊಬ್ಬರು ಸಂದರ್ಶನ ನಮಸ್ಕಾರಾಲಿಂಗನ ಮೊದಲಾದುವುಗಳಿಂದ ಸತ್ಕರಿಸಿದರು. ಬಳಿಕ ನಂಬ್ಯಣ್ಣನು ಭಕ್ತಸಮೂಹದೊಡನೆ ಕೂಡಿ ಅತ್ಯಂತ ವಿನಯದಿಂದ ಶಿವಗಣೋತ್ತಮನಾದ ಆ ಚೇರಮರಾಜನನ್ನು ತನ್ನ ಮನೆಗೆ ಕರೆದುಕೊಂಡು ಬಂದು, ಸಂತೋಷದಿಂದ ಆತನಿಗೆ ಲಿಂಗಾರ್ಚನೆಯನ್ನು ಮಾಡಿಸಿದನು. ॥೪೧

ಪ್ರೋಽವದದ್ಗಿರಂ | ಮಲ್ಲಿಂಗಪಾತ್ರೇ ನ ಪರಿವೇಷಯಾಮಃ ಪಯೋವಯಂ||
ಯತೋಗೃಹೀತಮಸ್ಮಾಭಿರ್ವ್ರತಮೇಕಂ ಪುರಾತತಃ | ಶ್ರುತ್ವಾವಚಸ್ತನ್ನಂಬ್ಯ
ಣ್ಣೋ ಕಿಂವ್ರತಂತತ್ತಥಾವಿಧಂ ||೪೪|| ಇತಿವಿಜ್ಞಾಪಯತ್ಯಸ್ಮೈ ಸಮುತ್ಥಾಯ
ಮಹೀಭೃತೇ| ವ್ಯಾಘ್ರಪಾದಮುನೀಂದ್ರಸ್ಯ ಪುರೋಭಾಗೇಮಹೋತ್ಸವಾತ್||
ತಾಂಡವಂಕುರ್ವತಶ್ಶಂಭೋಃ ಪಾಂಡುರಾಂಗಸ್ಯದಕ್ಷಿಣಂ | ಯಾವತ್ಪದಂನಪ
ಶ್ಯಾಮಃ ಕ್ಷೀರಸ್ಯಪರಿವೇಷಣಂ ||೪೬|| ತಾವನ್ನಕುರ್ಮೋದೇವಾಯ ವಯ
ಮಿತ್ಯಾಹಚೇರಮಃ | ತಥೇತಿನಂಬ್ಯಣಸ್ತಾಲೌ ಸಮಾದಾಯೋತ್ಕ್ಷಿಪತ್ಕರಂ
||೪೭|| ಶಿವಂದ್ರಮಿಡಗೀತೇನ ಸಂಸ್ತುತ್ಯವರಭಕ್ತಿತಃ | ದಯಾನಿಧೇಮಹಾದೇವ
ನಿತ್ಯಂ ಚೇರಮಸನ್ನಿಧೌ ||೪೮|| ಏಕೈಕಶಸ್ತಾಂಡವಂ ತ್ವಂ ಕೃತ್ವಾದರ್ಶಯಭವ
ತ್ಪದಂ | ರಕ್ಷಮನ್ನಾಥಗಿರಿಶ ಪಾರ್ವತೀನಾಥಶಂಕರ ||೪೯|| ಇತ್ಯುಕ್ತ್ವಾ
ಪ್ರಣತಿಂಚಕ್ರೇ ಸಾಷ್ಟಾಂಗಂ ಚೇರಮಾನ್ವಿತಃ | ಶಿವೋಪಿಲಿಙ್ಗಪೂಜಾಂತೇ
ಸ್ಥಿತ್ವಾತಾಂಡವಲೀಲಯಾ ||೫೦|| ಚೇರಮೇಂದ್ರೇ ವಿರಚಿತಲಸನ್ಮುರಜವಾದ
ನೇ | ಆರೂಢವಾದ್ಯಚೂಡಾದಿ ಶಬ್ದಸಂದರ್ಭನಿರ್ಭರಂ ||೫೧|| ಮಾಣಿಕ್ಯಘಂ

---

ಒಂದಾನೊಂದು ವ್ರತಸಂಪನ್ನನಾಗಿದ್ದ ಚೇರಮರಾಜನು ಆಗ ಹೀಗೆ ಹೇಳಿದನು. ಏನೆಂದರೆ—
"ನಾನೊಂದು ವ್ರತವನ್ನು ಪೂರ್ವದಿಂದ ಹಿಡಿದಿದ್ದೇನೆ, ಆದರಿಂದ ಲಿಂಗಪಾತ್ರದಲ್ಲಿ ಪ್ರಸಾದ
ಸೇವನೆಗೆ ಹಾಲನ್ನು ನಾನು ನೀಡಿಸಿಕೊಳ್ಳುವುದಿಲ್ಲ", ಈ ಮಾತನ್ನು ಕೇಳಿ ನಂಬ್ಯಣ್ಣನು—
ಅಂಥ ವ್ರತವಾವುದು? ಎಂದನು. ||೪೪|| ಆಗ ಚೇರಮರಾಜನು ಎದ್ದು ಹೀಗೆ ಬಿನ್ನಯಿಸಿ
ದನು—"ಪೂರ್ವದಲ್ಲಿ ಪರಶಿವನು ವ್ಯಾಘ್ರಪಾದಮಹರ್ಷಿಯ ಮುಂಗಡೆಯಲ್ಲಿ ಅತ್ಯುತ್ಸಾಹ
ದಿಂದ ನಾಟ್ಯವಾಡುವಾಗ ಮೇಲಕ್ಕೆತ್ತಿದ್ದ ಬಲಪಾದವಾವುದುಂಟೋ ಆ ಪಾದವನ್ನು ನಾನು
ಕಣ್ಣಾರೆ ದರ್ಶನಮಾಡುವವರೆಗೆ ಶಿವನಿಗೆ ಹಾಲನ್ನು ನಿವೇದಿಸಿ ಸೇವಿಸುವುದಿಲ್ಲವೆಂದು ವ್ರತ
ಹಿಡಿದಿರುವೆನು" ಎಂದನು. ಆಗ ನಂಬ್ಯಣ್ಣನು—ಇಷ್ಟೇನೆಯೆ? ಇದೇನಸಾಧ್ಯ? ಎಂದು
ಹೇಳಿ, ತಾಳಗಳನ್ನು ತೆಗೆದುಕೊಂಡು ಕೈಯನ್ನು ಮೇಲಕ್ಕೆತ್ತಿ ||೪೭|| ಅತಿ ಭಕ್ತಿಯಿಂದ
ದ್ರಾವಿಡಭಾಷಾಗೀತದಿಂದ ಶಿವನ ಕೀರ್ತನವನ್ನು ಮಾಡಿ, "ಕೃಪಾನಿಧಿಯಾದ ಎಲೈ ಮಹಾ
ದೇವನೆ! ಪಾರ್ವತೀಪತಿಯೆ! ನನ್ನೊಡೆಯನೆ! ನೀನು 'ಪ್ರತಿದಿನವೂ ಚೇರಮರಾಜನ ಬಳಿಯಲ್ಲಿ
ಒಂದೊಂದುಸಲ ನರ್ತನವನ್ನು ಮಾಡಿ ನಿನ್ನ ಚರಣವನ್ನು ಅವನಿಗೆ ಸಂದರ್ಶನ ಮಾಡಿಸಿ, ಕಾ
ಪಾಡು ||೪೯|| ಎಂದು ಹೇಳಿ, ಚೇರಮನಸಹಿತ ಶಂಕರನಿಗೆ ಸಾಷ್ಟಾಂಗ ನಮಸ್ಕಾರ
ಮಾಡಿದನು. ಪರಶಿವನಾದರೊ ಅವರ ಲಿಂಗಪೂಜೆಯೆಲ್ಲಾ ಮುಗಿದಬಳಿಕ ತಾಂಡವಲೀಲೆಯ ವೇ
ಷದಿಂದ ಇದಿರಿಗೆ ನಿಂತುಕೊಂಡು, ||೫೦|| ಚೇರಮನು ಮದ್ದಳೆಯನ್ನು ಬಾರಿಸುತ್ತಿರಲು,
ಶಿಷ್ಣದ ಗಂಟೆಗಳು ಗಲಗಲನೆ ಶಬ್ದಮಾಡುತ್ತಿರಲು; ನಾನಾ ವಾದ್ಯಗಳ ಮತ್ತು ಬಾಹುಭೂಷಣ

ಟಿಕಾಜಾಲೇ ಪರಿಸ್ಫುರತಿಭಾಸ್ವರೇ | ಸ್ವಕೀಯಮರುಣಂಪಾದಂ ದಕ್ಷಿಣಂ ಸಮು
ದರ್ಶಯತ್ ||೫೧|| ನಂಬ್ಯಣ್ಣೋ ಭಕ್ತಸಂದೋಹ ಶ್ಚೇರಮೇಂದ್ರಶ್ಚ ಹರ್ಷತಃ|
ಪ್ರಣಮಂತ್ಯೋವಿಧಿಂಚಾಶು ತದ್ವ್ರತೋದ್ಯಾಪನಂತದಾ ||೫೨|| ಲಿಂಗಾರ್ಚ
ನಾಂತತಃಕೃತ್ವಾ ಪ್ರಸಾದಮುಪಯುಜ್ಯಚ | ಸುಖಂಮಹೇಶಸದ್ಭಕ್ತಿ ತತ್ವಗೋ
ಷ್ಠೀಪ್ರಸಂಗತಃ ||೫೩|| ದಿನಾನಿಕತಿಚಿತ್ತತ್ರ ನ್ಯವಸತ್ಸ್ವರವೋತ್ಸುಕಃ || ಚೇರ
ಮೇಂದ್ರೇ ತತಸ್ಸ್ವೀಯಪುರಂಗಂತುಂಸಮುದ್ಯತೇ ||೫೪|| ವಾಹನಸ್ವರ್ಣಭೂ
ಷಾದಿ ಮುಖ್ಯವಸ್ತುಕದಂಬಕೈಃ | ಚೇರಮೇಂದ್ರಂಪೂಜಯಿತ್ವಾ ನಂಬ್ಯಣ್ಣೋ
ಭಕ್ತಿಸಂಯುತಃ ||೫೫|| ತತ್ಪ್ರೇಷಣಾಯಸದ್ಭಕ್ತ್ಯೈ ಸ್ಸಹಾಗತ್ಯಗುಣೋನ್ನತಃ |
ಆವಲೂರುಪುರೇತಸ್ಮಿನ್ಕಾವೇರೀತೀರಶೋಭಿನಃ ||೫೬|| ಶಿವಾಲಯಸ್ಯೋಪ
ಕಂಠೇ ಸೇವ್ಯಮಾನೋಽವಸಜ್ಜನೈಃ | ತತ್ಸಮೀಪೇರುದಂತ್ಯಾಸ್ತ ದ್ವನಿತಾಯಾ
ಸ್ಸಮುನ್ನತಂ ||೫೭|| ಆಕರ್ಣ್ಯಾರ್ತರವಂ ಹಾಹಾಕಾರಘೋರಂಸನಂಬ್ಯಣಃ|
ಕಿಮೇತದೇಕಾವನಿತಾ ತತ್ರನಂಬ್ಯಣ್ಣನಂಬ್ಯಣ ||೫೮|| ಹಾಹತಾಸ್ಮೀತಿವದತಿ
ವಿಚಾರಯತಸತ್ವರಂ | ಇತಿಸಂಪ್ರೇಷಯಾಮಾಸ ದೂತಾನ್ಕರುಣಯಾನ್ವಿತಃ ||
ತೇಽಪಿಗತ್ವಾಕಾಮಿನಿತ್ವಂ ಕಿಮತ್ರಪರಿಶೋಚಸಿ | ಕೋಗ್ರಾಮಸ್ತವಕಿಂ ನಾಮ

---

ಗಳ ಶಬ್ದಗಳ ಗತಿಗೆ ತಕ್ಕಂತೆ ಕುಣಿಯುತ್ತ ತನ್ನ ಕೆಂಪಾದಪಾದವನ್ನು ತೋರಿಸಿದನು. ||೫೧||
ಅದನ್ನು ಸಂದರ್ಶಿಸಿ ನಂಬ್ಯಣ್ಣನೂ ಭಕ್ತಸ್ತೋಮವೂ ಚೇರಮರಾಜನೂ ಸಹ ಅತ್ಯಂತ ಸಂ
ತೋಷದಿಂದ ನಮಸ್ಕರಿಸಿದರು. ಚೇರಮನು ಅಲ್ಲಿಗೆ ತನ್ನ ವ್ರತಕ್ಕೆ ಉದ್ಯಾಪನವನ್ನು ಮಾಡಿ,
||೫೨|| ಬಳಿಕ ಲಿಂಗಾರ್ಚನೆಯನ್ನು ಮಾಡಿ, ಶಿವಪ್ರಸಾದವನ್ನು ಸಲಿಸಿ, ಭಕ್ತಿಸಲ್ಲಾಪಗಳಿಂ
ದಲೂ, ಶಿವತತ್ವಗೋಷ್ಠೀ ಪ್ರಸಂಗದಿಂದಲೂ ಸುಖವಾಗಿ ನಂಬ್ಯಣ್ಣನ ಮನೆಯಲ್ಲಿ ಹೀಗೆ
ಕೆಲದಿನಗಳವರೆಗೆ ಇದ್ದು, ಅನಂತರ ತನ್ನೂರಿಗೆ ಹೊರಡುವುದಕ್ಕೆ ಉಜ್ಜುಗಿಸಲಾಗಿ ||೫೩||
ನಂಬ್ಯಣ್ಣನು ಭಕ್ತಿಯಿಂದ ಆತನಿಗೆ ವಾಹನಗಳು ಸುವರ್ಣದ ತೊಡವುಗಳು ಮೊದಲಾದುವುಗಳ
ನ್ನು ಕೊಟ್ಟು ಸನ್ಮಾನಿಸಿ, ಅವನನ್ನು ಸಾಗಗಳುಹಿಸುವುದಕ್ಕಾಗಿ ಭಕ್ತಕದಂಬದೊಡನೆ ಕೂಡಿ
ಆವಲೂರು ಪಟ್ಟಣದ ಬಳಿಗೆ ಬಂದು, ಅಲ್ಲಿರುವ ಕಾವೇರೀನದಿಯ ದಡದಮೇಲೆ ಇದ್ದ ಶಿವಾ
ಲಯದ ನೆರೆಯಲ್ಲಿ ಇಳಿದು, ತನ್ನ ಪರಿಜನರಿಂದ ಸೇವಿಸಿಕೊಳ್ಳುತ್ತಿದ್ದನು. ಆಗ ಅದರ ಸಮೀಪ
ದಲ್ಲಿಯೇ ಪೂರ್ವೋಕ್ತರೀತಿಯಿಂದ "ಅಯ್ಯೋ, ಹಾ ನಂಬ್ಯಣ್ಣ" ಎಂದು ಮೊದಲಾಗಿ ಆರ್ತ
ಧ್ವನಿಯಿಂದ ಅಳುತ್ತಿರುವ ಸ್ತ್ರೀರೋದನವನ್ನು ನಂಬ್ಯಣ್ಣನು ಕೇಳಿ ದಯೆಗೊಂಡು, ||೫೯||
ಇದೇನು? ಒಬ್ಬ ಹೆಂಗುಸು "ನಂಬ್ಯಣ್ಣ ನಂಬ್ಯಣ್ಣ! ಅಯ್ಯೋ ಕೆಟ್ಟೆ" ಎಂದು ಗೋಳಿಡು
ತ್ತಿದ್ದಾಳೆ; ಬೇಗನೆ ಹೋಗಿ ಅದೇನು ವಿಚಾರಿಸಿಕೊಂಡು ಬನ್ನಿರಿ ಎಂದು ಆಳುಗಳನ್ನು ಕಳು
ಹಿಸಿದನು. ||೬೦|| ಅವರುಗಳು ಆಕೆಯ ಬಳಿಗೆ ಹೋಗಿ—ಎಲೈ ಸ್ತ್ರೀಯೆ! ನೀನು ಇಲ್ಲಿ ಏತ

ಕುತಸ್ತ್ವಂ ಸಮುಪಾಗತಾ ||೬೧|| ಇತಿತಾಮಂಗನಾಂಪ್ರೋಚುಸ್ಸಕೋಪಂ ಸಾಪ್ಯಭಾಷತ | ಯೂಯಂಗಚ್ಛತಯುಷ್ಮಾಕಂ ಪಥಾಕಿಂಮದ್ವಿಚಾರತಃ ||೬೨ ಕಾರಣಂವಿದ್ಯತೇಽಸ್ಮಾಕಂ ಭವತಾಂಕಿಮುಕಿಂಚನ | ಅಹಂಯೋಷಿದ್ಬ್ರಾಹ್ಮಣೀಚ ತಥಾಪ್ಯೇಕಾಂತತೋಮಯಿ ||೬೩|| ಸ್ಥಿತಾಯಾಮತ್ರಯುಷ್ಮಾಕಮಾಗಸ್ತಂ ಕಿಮುಯುಜ್ಯತೇ | ಇತ್ಯುಕ್ತಾಸ್ತೇತಯಾದೂತಾ ಪ್ರಾಹುಸ್ತಾಮಂಗನಾಂಪುನಃ || ೬೪ || ಉಚ್ಚೈರುದನ್ತೀ ಬಹುಧಾ ಪ್ರಲಪನ್ತೀಸುದುಃಖಿತಾ | ನಂಬೇನಂಬ್ಯಣನಂಬ್ಯಣ್ಣೇತ್ಯಾಹ್ವಾನಂ ಕಿಂಕರೋಷಿಚ ||೬೫|| ನಂಬ್ಯಣ್ಣಸ್ಯಕಥಂಮಾತಾತ್ವಂತೇ ನಂಬಿಃಕಥಂಸುತಃ | ಕ್ವನಂಬ್ಯಣ್ಣಃ ಕ್ವಭವತೀ ಯಥಾರ್ಥಂಕಥಯಸ್ವನಃ ||೬೬|| ಇತ್ಯುಕ್ತಾತೈರವೋಚತ್ತಾನ್ ದೂತಾನ್ಪ್ರತ್ಯೇವಮಂಗನಾ | ನಂಬ್ಯಣ್ಣ ಇತಿಸದ್ಭಕ್ತಃ ಕಶ್ಚಿದಸ್ತಿಸಸಂತತಂ ||೬೭|| ಸ್ವಸ್ಯದೂತ್ಯೇ ಪ್ರೇರಯತಿ ಕಿಲಶ್ರೀಗಿರಿಜಾಪತಿಂ | ಗೃಹ್ಣಾತಿಕಿಲತಚ್ಛಂಭೋರ್ನಿತ್ಯಂ ನಿಷ್ಕಸಹಸ್ರಕಂ ||೬೮|| ಇತಿವಾಕ್ಯಂ ಸಮಾಕರ್ಣ್ಯಕಯೋಶ್ಚಿಜ್ಜಂಗಮೇಂದ್ರಯೋಃ| ಭ್ರಾನ್ತಿತೋಽಕರವಂ ಪುತ್ರಮೇಕಂತದಭಿಧಾಂಕಿತಂ || ೬೯ || ತಥಾವಿಧಂಮಮಾತ್ಯಂತವತ್ಸಲಂ ಲಲಿತಂಸುತಂ | ಕ್ರೀಡಾತಟಾಕಂ ನಿರ್ಮಾಯವಿಹರನ್ತಂಸ

---

ಕ್ಕೆ ಹೀಗೆ ಅಳುತ್ತೀಯೆ? ನಿನ್ನ ಊರಾವುದು? ನಿನ್ನ ಹೆಸರೇನು? ಇಲ್ಲಿಗೇತಕ್ಕೆ ಬಂದೆ? ಎಂಬುದಾಗಿ ಆಕೆಯನ್ನು ಕೇಳಿದರು. ಅವಳು ಸಿಟ್ಟುಗೊಂಡು—ನನ್ನ ವಿಚಾರದಿಂದ ನಿಮಗೇನು? ನಿಮ್ಮ ದಾರಿಯನ್ನು ಹಿಡಿದು ನೀವು ಹೋಗಿರಿ ||೬೨|| ನನ್ನ ವಿಚಾರವನ್ನೆಲ್ಲಾ ನಿಮಗೆ ಹೇಳುವುದಕ್ಕೆ ಕಾರಣವೇನಾದರೂ ಇದೆಯೆ? ನಾನು ಬ್ರಾಹ್ಮಣಸ್ತ್ರೀ, ಅಲ್ಲದೆ ನಾನು ಏಕಾಕಿನಿಯಾಗಿದ್ದೇನೆ. ||೬೩|| ಹೀಗಿರುವಾಗ ಇಲ್ಲಿಗೆ ನೀವುಗಳು ಬರಬಹುದೆ? ಎಂದು ಗದರಿಸಲು, ಆಕೆಯನ್ನು ಕುರಿತು ಆಳುಗಳು ಮರಳಿ—||೬೪|| "ಅಮ್ಮಾ! ನೀನು ನಂಬೀ! ನಂಬ್ಯಣ್ಣ! ಎಂದು ಆ ಹೆಸರನ್ನು ಹಿಡಿದು ಏಕೆ ಕೂಗುತ್ತೀಯೆ? ಅತ್ಯಂತ ದುಃಖಪಟ್ಟು ಬಹುವಿಧದಿಂದ ಅದೇಕೆ ಪ್ರಲಾಪಿಸುತ್ತಿದ್ದೀಯೆ? ಆ ನಂಬ್ಯಣ್ಣನಿಗೆ ನೀನು ಹೇಗೆ ತಾಯಿ? ಆತನು ನಿನಗೆ ಹೇಗೆ ಮಗನಾದನು? ನಂಬ್ಯಣ್ಣನೆಲ್ಲಿ? ನೀನೆಲ್ಲಿ? ಆ ಯಥಾರ್ಥ ಸಂಗತಿಯನ್ನೆಲ್ಲಾ ನಮಗೆ ಹೇಳು ||೬೬|| ಎಂಬುದಾಗಿ ಕೇಳಲು, ಆಕೆಯು ದೂತರನ್ನು ಕುರಿತು ಹೀಗೆ ಹೇಳಿದಳು—"ನಂಬ್ಯಣ್ಣನೆಂಬ ಒಬ್ಬ ಸದ್ಭಕ್ತನಿದ್ದಾನೆ. ಆತನು ಯಾವಾಗಲೂ ಪರಶಿವನನ್ನು ತನ್ನ ಕುಂಟಿನಿಗತನದಲ್ಲಿ ನಿಯೋಜಿಸಿಕೊಂಡು ಆ ಶಿವನಿಂದ ಪ್ರತಿದಿನವೂ ಸಾವಿರ ಹೊನ್ನನ್ನು ಪಡೆದುಕೊಳ್ಳುತ್ತಿದ್ದಾನೆ. ||೬೮|| ಹೀಗೆಂಬ ಸುದ್ದಿಯನ್ನು ನಾನು ಯಾರೋ ಇಬ್ಬರು ಜಂಗಮರ ಮುಖದಿಂದ ಕೇಳಿ, ನನ್ನ ಒಬ್ಬನೇ ಒಬ್ಬ ಮಗನಿಗೆ ಭ್ರಾಂತಿಯಿಂದ ಆ ನಂಬ್ಯಣ್ಣನ ಹೆಸರನ್ನು ಕರೆದೆನು. ||೬೯|| ಅಂತಪ್ಪ ನನ್ನ ಅತ್ಯಂತ ಪ್ರೀತಿಪಾತ್ರನಾದ ಮಗನು ಇಲ್ಲಿ ಆಟಕ್ಕಾಗಿ

ಸತ್ವರಂ ||೭೦|| ಆಗತ್ಯ ಜಗ್ರುಹೇ ಕಶ್ಚಿನ್ಮಕರೋಽತ್ಯಂತಭೀಷಣಃ | ಪದಪ್ರಕ್ಷೇಪಣಾಪಸ್ಥಾಕಾಲೇಽಸ್ಯಮಮದುಸ್ಸಹಂ ||೭೧|| ಅಭೂದ್ದುಃಖಮಿದಾನೀಂತುವ್ಯತೀತಾಃ ಪಂಚವತ್ಸರಾಃ| ದೂತ್ಯಂಕಾರಯಿತಾ ಭಕ್ತೋದೂತ್ಯಂ ಕುರ್ವನ್ಮಹೇಶ್ವರಃ ||೭೨|| ಗೃಹೀತಾವರ್ತನಧನಂ ನಿತ್ಯಂಗ್ರಾಹಯಿತಾಶಿವಃ | ಅಭೂತಾಂಪುತ್ರಿಯಸುತಂ ಪರಿರಕ್ಷಿತುಮಕ್ಷಮೌ || ೭೩ || ಸ್ವನಾಮಧೇಯಇತ್ಯೇಷ ಸಂಬ್ಯಣ್ಣೋನ ಯಥೋಚಿತಂ | ಸ್ವನಾಮಧೇಯವಾನ್ನಂಬಿರ್ನಪಾಲ್ಯಃ ಕೃಪಯಾಕಿಮು ||೭೪|| ಸ್ವನಂಬಿನಾಮಧೇಯೋಽಯಮಿತಿ ಶ್ರೀಶಂಭುನಾಪಿಚ | ನಪಾಲನೀಯಃ ಪುತ್ರಃಕಿಂ ಸ್ವಸಂಬ್ಯಣಸಮಾಹ್ವಯಃ ||೭೫|| ಕಿಂಜಲ್ಪಿತೈರ್ಬಹುವಿಧೈ ಸ್ತತ್ತಿಷ್ಠತು ಸಂಪ್ರತಿ | ಶೃಣುತಾಹಂಪ್ರವಕ್ಷ್ಯಾಮಿ ಕಾರಣಂರೋದನಸ್ಯಮೇ ||೭೬|| ಮದ್ಯಾತೃನನ್ದನಸ್ಯಾಸ್ಮಿನ್ನ್ರೀತ್ಯೋಪನಯಸಂದಿನೇ | ಕ್ರಿಯತೇಽಸ್ಯಚಮತ್ಸೂನೋ ಸ್ಸಮಮೇವವಯಸ್ತತಃ ||೭೭|| ಯದ್ಯಸ್ಯಾಸ್ಯಸ್ಮಮಸುತ ಸ್ತಸ್ಯೋಪನಯನಂಮುದಾ | ಅಕರಿಷ್ಯಮಹಂತದ್ವದಿತಿದುಃಖೇ ಸಮಾಗತೇ ||೭೮|| ರೋದಿತುಂತತ್ರನೋಯುಕ್ತ ಮಿತ್ಯೇಕಾಸ್ತ್ರಸ್ಥಲಂಗತಾ | ತಿಷ್ಠಾ

---

ಒಂದು ಕೊಳವನ್ನು ಬರೆದುಕೊಂಡು ಕ್ರೀಡಿಸುತ್ತಿರಲಾಗಿ, ಒಂದು ಭಯಂಕರವಾದ ಮೊಸಳೆಯು ಬೇಗನೆ ಬಂದು, ತಪ್ಪು ಹಜ್ಜೆಯನ್ನು ಇಡುತ್ತಿದ್ದ ವಯಸ್ಸಿನಲ್ಲಿ ಆ ನನ್ನ ಮಗನನ್ನು ಹಿಡಿದುಕೊಂಡು ಹೋಯಿತು. ಅದರಿಂದ ನನಗೆ ದುರ್ಭರವಾದ ದುಃಖವು ಪ್ರಾಪ್ತವಾಯಿತು ||೭೧|| ಅದು ನಡೆದು ಇಲ್ಲಿಗೆ ೫ ವರ್ಷಗಳು ಕಳೆದುಹೋಯಿತು. ಶಿವನಿಂದ ಕುಂಟಣಿಗತನವನ್ನು ಮಾಡಿಸಿಕೊಳ್ಳುವ ಆ ಪರಮಭಕ್ತನೂ, ಕುಂಟಣಿಗತನವನ್ನು ಮಾಡುವ ಶಿವನೂ, ವರ್ತನೆಯಾಗಿ ಪ್ರತಿದಿನವೂ ಹೊನ್ನನ್ನು ಪಡೆಯುವ ಭಕ್ತನೂ, ಅದನ್ನು ತೆಗೆದುಕೊಳ್ಳುವಹಾಗೆ ಮಾಡುವ ಶಿವನೂ ಸಹ ನನ್ನ ಪ್ರೀತಿಪುತ್ರನನ್ನು ಕಾಪಾಡಲಾರದೆ ಹೋಗಿರುವರು. ||೭೩|| ಆ ಹುಡುಗನು ತನ್ನ ಹೆಸರನ್ನು ಹೊತ್ತವನೆಂಬ ಅಭಿಮಾನದಿಂದಲಾದರೂ ಈ ನಂಬ್ಯಣ್ಣನು ದಯೆಯಿಂದ ನನ್ನ ಮಗನನ್ನು ಕಾಪಾಡಬಾರದೆ? ||೭೪|| ಶಿವನಾದರೂ ಸಹ ಆ ಮಗನು ತನ್ನ ಪ್ರಿಯ ಸಖನಾದ ನಂಬ್ಯಣ್ಣನ ಹೆಸರನ್ನು ತಳೆದವನೆಂಬ ಕಾರಣದಿಂದಲಾದರೂ ಸಲಹಬಾರದೆ? ||೭೫|| ಹೆಚ್ಚು ಮಾತಾಡಿ ಪ್ರಯೋಜನವೇನು? ಅದು ಹಾಗಿರಲಿ; ಈಗ ನನ್ನ ಅಳುವಿಕೆಗೆ ಕಾರಣವೇನೆನ್ನುತ್ತೀರೊ? ಅದನ್ನು ಹೇಳುತ್ತೇನೆ ಕೇಳಿರಿ—||೭೬|| ನನ್ನ ಓರಗಿತ್ತಿಯ ಮಗನಿಗೆ ಈ ದಿವಸ ಸಂತೋಷದಿಂದ ಉಪನಯನವನ್ನು ಮಾಡುತ್ತಿದ್ದಾರೆ. ಇವನಿಗೂ ನನ್ನ ಮಗನಿಗೂ ಒಂದೇ ವಯಸ್ಸು. ನನ್ನ ಮಗನೂ ಬದುಕಿದ್ದರೆ ಅವನಿಗೂ ಅದರಂತೆಯೇ ನಾನು ಸಂತೋಷದಿಂದ ಉಪನಯನವನ್ನು ಮಾಡುತ್ತಿದ್ದೆನಲ್ಲಾ ಎಂಬುದಾಗಿ ನನಗೆ ದುಃಖವುಂಟಾಗಲಾಗಿ, ಅಲ್ಲಿ ಅಳುವುದು ಸರಿಯಲ್ಲವೆಂದು ಯೋಚಿಸಿ, ಯಾರೂ ಇಲ್ಲದ ಈ ಸ್ಥಲಕ್ಕೆ ಬಂದೆನು.

ವ್ಯಹಂರುದಂತ್ಯತ್ರ ಮದೀಯತನಯಂಪ್ರತಿ ||೭೯|| ಇತ್ಯೇತತ್ಸರ್ವವೃತ್ತಾಂತ
ಮಾಕರ್ಣ್ಯಾಕಥಯಂಸ್ತತಃ | ಕ್ಷಿಪ್ರಂದೂತಾಸ್ಸಮಾಗತ್ಯ ಸಂಬ್ಯಣ್ಣಾಯಕೃಪಾ
ಳವೇ ||೮೦|| ಸಂಬ್ಯಣ್ಣಸ್ತತ್ಸಮಾಕರ್ಣ್ಯ ಹಸಂಸ್ತೌದಂಪತೀತದಾ | ಆಕಾರ
ಯಾಮಾಸತೂರ್ಣಂ ತಾವುಭೌಸಮುಗಚ್ಛತಾಂ ||೮೧|| ಅಲಿಕೇತವವಿಪ್ರೇಂದ್ರ
ತಿಷ್ಠಂತಿ ಹರಿತೋಽಕ್ಷತಾಃ | ಹರಿದ್ರಾಕಲಿತಂ ಯಜ್ಞಸೂತ್ರಂಶ್ಮಶ್ರುಕುಲಂತ
ಥಾ ||೮೨|| ಕಿಂಶೋಭನಂತವಗೃಹೇ ವಾಸರೇಽಸ್ಮಿನ್ನಿವೇದಯ | ಕೇನಾಮಧೇ
ಯೇ ಯುವಯೋರ್ವಿದ್ಯಂತೇತನಯಾಃಕತಿ ||೮೩|| ಕಿಮರ್ಥಮಸ್ಮಿನ್ದಿವಸೇ ಪತ್ನಿ
ತಾತವರೋದಿತಾ | ಇತಿಪಪ್ರಚ್ಛತಂ ವಿಪ್ರಮವಾದೀತ್ಸೋಽಪಿ ಭೂಸುರಃ ||೮೪||
ಅಸ್ಮಿನ್ದಿನೇ ಮದನುಜಪುತ್ರೋಪನಯನಂವಿಭೋ | ಚಿರಾತ್ಸಂತಾನಮಪ್ರಾಪ್ಯ
ಮದ್ಭಾರ್ಯಾಸ್ಯವಸತ್ಪುರಾ ||೮೫|| ಏಕದಾಜಂಗಮೌಕೌಚಿ ದ್ಗೃಹಮಾಗತ್ಯ
ಸಾದರಂ | ಆಖ್ಯಾಯನಂಬಿರಿತ್ಯೇಕಂ ಮನುಜಂಪೃಥಿವೀತಲೇ ||೮೬|| ಮದ್ಭಾ
ರ್ಯಾಯಾಸ್ಸಮುತ್ಪಾದ್ಯ ಭಕ್ತಿಂತಸ್ಮಿಂಸ್ತವಾತ್ಮಜಃ | ಸಂಭವಿಷ್ಯತಿ ತನ್ನಂಬಿ
ನಾಮಾನಂಕುರುಭಾಮಿನಿ ||೮೭|| ಏವಮಾದಿಶ್ಯಕಾನ್ತಾಯಾ ಸ್ತೌತದಾಪರಿ

---

ನನ್ನಮಗನಿಗಾಗಿ ಇಲ್ಲಿ ಅಳುತ್ತಲಿರುವೆನು. ||೭೯|| ಎಂಬುದಾಗಿ ಹೇಳಿದ ಈ ಯಾವದ್ವೃ
ತ್ತಾಂತವನ್ನೂ ದೂತರು ಕೇಳಿಕೊಂಡು, ಬೇಗನೆಬಂದು ದಯಾಶಾಲಿಯಾದ ನಂಬ್ಯಣ್ಣನಿಗೆ ಹೇಳಿ
ದರು. ||೮೦|| ಆತನು ಅದನ್ನು ಕೇಳಿ ನಕ್ಕು, ಮಗನನ್ನು ಕಳೆದುಕೊಂಡಿದ್ದ ಆ ದಂಪತಿಗಳನ್ನು
ಬೇಗನೆ ಕರೆಯ ಕಳುಹಿಸಿದನು. ಅವರಿಬ್ಬರೂ ಬಂದರು. ||೮೧|| ಆಗ ನಂಬ್ಯಣ್ಣನು ಅವರ
ನ್ನು ಕುರಿತು—ಎಲೈ ಬ್ರಾಹ್ಮಣಶ್ರೇಷ್ಠನೆ! ನಿನ್ನ ಹಣೆಯಲ್ಲಿ ಹಸರು ಅಕ್ಷತೆಗಳಿವೆ. ನಿನ್ನ ಜನ್ನಿ
ವಾರವೂ ಮೀಸೆ ಗಡ್ಡವೂ ಅರಿಸಿನದಿಂದ ವ್ಯಾಪ್ತವಾಗಿವೆ. ||೮೨|| ಈದಿನ ನಿನ್ನ ಮನೆಯಲ್ಲಿ
ನಾವದರೂ ಶುಭಕರ್ಮವೊ? ಹೇಳು. ನಿಮ್ಮಿಬ್ಬರ ಹೆಸರೇನು? ನಿಮಗೆ ಎಷ್ಟುಮಂದಿ ಮಕ್ಕಳು?
||೮೩|| ಈದಿನ ನಿನ್ನ ಹೆಂಡತಿಯು ಏತಕ್ಕೆ ಅಳುತ್ತಿದ್ದಳು? ಎಂಬುದಾಗಿ ಕೇಳಿದನು. ಅದಕ್ಕೆ
ಆ ಬ್ರಾಹ್ಮಣನು— ||೮೪|| ಸ್ವಾಮಿ! ಈದಿನ ನನ್ನ ತಮ್ಮನ ಮಗನ ಉಪನಯನ. ಹಿಂದೆ
ನನ್ನ ಹೆಂಡತಿಯು ಬಹುಕಾಲ ಮಕ್ಕಳಿಲ್ಲದೆ ಇದ್ದಳು. ||೮೫|| ಒಂದಾನೊಂದುಕಾಲದಲ್ಲಿ
ಯಾರೋ ಇಬ್ಬರು ಜಂಗಮರು ಮನೆಗೆ ಬಂದು, ಭೂತಲದಲ್ಲಿ ನಂಬಿಯೆಂಬ ಮಹಿಮನೊಬ್ಬ
ನಿರುವನೆಂದು ಅವನ ಮಹತ್ತ್ವವನ್ನು ವರ್ಣಿಸಿ, ಆತನಲ್ಲಿ ನನ್ನ ಹೆಂಡತಿಗೆ ಭಕ್ತಿ ಹುಟ್ಟುವಂತೆ
ಮಾಡಿ, 'ನಿನಗೆ ಮಗನು ಹುಟ್ಟುತ್ತಾನೆ, ಅವನಿಗೆ ನಂಬಿಯೆಂದು ಹೆಸರನ್ನು ಕರೆ' ಎಂದು
ಉಪದೇಶಿಸಿ, ಅವರುಗಳು ಹೊರಟುಹೋದರು. ||೮೬|| ಆ ನಂಬಿಯ ಹೆಸರನ್ನೇ ಮಗನಿಗೆ
ಕಟ್ಟುತ್ತೇನೆಂದು ಈಕೆ ಹರಸಿಕೊಂಡುದರಿಂದಲೊ! ಅಥವಾ ದೈವಾಧೀನದಿಂದಲೋ ಕಾಣೆ

ಜಗ್ಮತುಃ | ತಸ್ನಾಮಾನಂಕರಿಷ್ಯೇಽಹಂ ಸುತಮಿತ್ಯುಕ್ತಿತಃಕಿಮು || ೮೮ ||
ಉತದ್ದೈವಾಧೀನತೋವಾನಜಾನೇಽಜನಿ ನಂದನಃ | ಸಾಪಿತಸ್ಯಂಬಿನಾಮಾನ
ಮಕರೋತ್ತ್ರಸುಜಂತದಾ ||೮೯ ಕ್ರೀಡಾತಟಾಕಂ ಕಾವೇರ್ಯಾಂಕೃತ್ವಾಕ್ರೀಡ
ತಿತಸ್ಮಿನ್ ತೇ | ಆಗತ್ಯಮಕರಃ ಕಶ್ಚಿದ್ಗೃಹೀತ್ವಾತಮಭಕ್ಷಯತ್ ||೯೦|| ಪುನ
ರ್ನಸನ್ತೀತನಯಾ ಭ್ರಮೇಣಮಮಭಾಮಿನೀ | ಮುಧಾಮನುಷ್ಯನಾಮಾನ
ಮಕರೋತ್ಸ್ಮಸುಜೋಭುವಿ ||೯೧|| ಪರಿತ್ರಾತುಂಪೋಷಯಿತುಮಪಿ ಶಕ್ತೋಭ
ವೇತ್ಕಿಮು | ದೂತ್ಯಂಕರೋತಿಯಸ್ಯೇಶಃ ಕಿಲಪ್ರತಿದಿನಂಪುನಃ ||೯೨|| ದದಾ
ತಿವರ್ತನಂಯಸ್ಮೈ ಕಿಲನಿಷ್ಕಸಹಸ್ರಕಂ | ತಥಾವಿಧೋ ನಂಬ್ಯಣಸ್ಸಶಂಕರಶ್ಚತ
ಥಾವಿಧಃ ||೯೩|| ಉಭೌನಂಬ್ಯಣನಾಮಾನಮಭೂತಾಂ ತ್ರಾತುಮಕ್ಷಮೌ |
ನಕ್ರಾಯಾರ್ಪಿತವತ್ಯಸ್ಮಿ ಚಿರಾಲ್ಲಬ್ಧಂತನೂಭವಂ ||೯೪|| ನೋಚೇದಿದಾನೀಂ
ತಸ್ಯೋಪನಯನಂ ನಕರೋಮಿಕಿಂ | ಇತ್ಯೇತಸ್ಯಾಸ್ತದಾರಭ್ಯ ದುಃಖಂಶಾಮ್ಯ
ತಿನಾಸ್ವಹಂ || ೯೫ || ತತ್ತಿಷ್ಠತುವಯಂಯಾಮೋ ವಿದ್ಯತೇನಃ ಪ್ರಯೋಜ
ನಂ | ಶಿವದ್ವಿಜೋಽಹಂಸ್ವಾಧ್ಯಾಯಪರಶ್ಚೇಯಂ ಪತಿವ್ರತಾ ||೯೬|| ಮದ್ಭಾ
ರ್ಯಾಭಕ್ತಿನಿರತಾ ದಾಸಯೋಗ್ಯಸ್ತವಾಸ್ಮ್ಯತಃ | ಉಮಾಮಹೇಶ್ವರಪ್ರೀತ್ಯೈ

---

ಮಗನೇನೋ ಹುಟ್ಟಿದನು. ಹೆಂಡತಿಯು ಮಗನಿಗೆ ನಂಬಿಯೆಂಬ ಹೆಸರನ್ನೇ ಕರೆದಳು. ||೮೯
ಆ ಮಗನು ಕಾವೇರೀ ತೀರಕ್ಕೆ ಬಂದು ಆಟಕ್ಕಾಗಿ ಒಂದು ಕೊಳವನ್ನು ಮಾಡಿಕೊಂಡು ಆಡು
ತ್ತಿರಲು, ಒಂದು ಮೊಸಳೆಯು ಬಂದು ಅವನನ್ನು ಹಿಡಿದು ನುಂಗಿಬಿಟ್ಟಿತು. ||೯೦|| ನಮಗೆ
ಬೇರೆ ಮಕ್ಕಳಿಲ್ಲ. ನನ್ನ ಹೆಂಡತಿಯು ಬುದ್ಧಿಗೆಟ್ಟು ಇದ್ದೊಬ್ಬ ಮಗನಿಗೆ ಮನುಷ್ಯಮಾತ್ರನ
ಹೆಸರನ್ನು ಕರೆದುಬಿಟ್ಟಳು. ಭೂಮಿಯಲ್ಲಿ ಮನುಷ್ಯನಾದವನು ಒಬ್ಬರನ್ನು ಬದುಕಿಸುವುದ
ಕ್ಕೂ ಸಾಕುವುದಕ್ಕೂ ಶಕ್ತನಾದಾನೆ? ಶಿವನು ಪ್ರತಿದಿನವೂ ಯಾವನಿಗೋ ಕುಂಟಣಿಗತನವನ್ನು
ಮಾಡುತ್ತಿರುವನಷ್ಟೆ ||೯೨|| ಪ್ರತಿದಿನವೂ ವರ್ತನೆಯಾಗಿ ಸಾವಿರ ಹೊನ್ನನ್ನು ಯಾವನಿಗೋ
ಕೊಡುತ್ತಿರುವನಷ್ಟೆ. ಅಂಥ ಶಿವಪ್ರೀತಿಪಾತ್ರನಾದ ನಂಬ್ಯಣ್ಣನೂ, ನಂಬ್ಯಣ್ಣನಮೇಲೆ ಅಷ್ಟು
ಪ್ರೀತಿಯಿಟ್ಟಿರುವ ಶಿವನೂ ಸಹ ಅದೇ ನಂಬ್ಯಣ್ಣನ ಹೆಸರನ್ನು ತಳೆದಿದ್ದ ಬಾಲಕನನ್ನು ಕಾಪಾ
ಡಲಾರದೆ ಹೋದರು! "ಬಹುಕಾಲಕ್ಕೆ ಪಡೆದಿದ್ದ ಮಗನನ್ನು ಮೊಸಳೆಗೆ ಒಪ್ಪಿಸಿಬಿಟ್ಟೆ. ಇಲ್ಲದೆ
ಇದ್ದರೆ ಈಗ ಅವನಿಗೆ ನಾನೂ ಉಪನಯನವನ್ನು ಮಾಡದೆ ಇರುತ್ತಿದ್ದೆನೆ?" ಎಂಬುದಾಗಿ ಈಕೆ
ಯು ದುಃಖಿಸುತ್ತಿದ್ದಳು. ಈಕೆಗೆ ಆ ಮಗನು ಹೋದಾರಭ್ಯ ಉಂಟಾದ ದುಃಖವು ಇನ್ನೂ
ಶಾಂತವಾಗಿಲ್ಲ. ಪ್ರತಿದಿನವೂ ರೋದಿಸುತ್ತಿದ್ದಾಳೆ. ||೯೫|| ಅದು ಹಾಗಿರಲಿ ನಾವು ಹೋ
ಗುತ್ತೇವೆ. ಅಲ್ಲಿ ನಮಗೆ ಪ್ರಯೋಜನವಿದೆ. ನಾನು ಶಿವದ್ವಿಜ. ಅದರಮೇಲೆ ಅಧ್ಯಯನ ಸಂ
ಪನ್ನ. ನನ್ನ ಪತ್ನಿಯಾದ ಈಕೆಯು ಪತಿವ್ರತೆಯು, ಮತ್ತೂ ಭಕ್ತಿಸಂಪನ್ನಳು. ಅದುಕಾರಣ

ಯದ್ದತ್ತಂತದಿಹಾಕ್ಷಯಂ ||೯೭|| ಪುರಾಣವಿಶ್ರುತಾದಸ್ಮದ್ದಾನಮಣ್ವಪಿ ಚಾಕ್ಷಯಂ | ಇತಿವಾಕ್ಯಾದವಿರತಂ ಸ್ವಸ್ತಿತುಭ್ಯಂ ಭವೇದಿತಿ || ೯೮ || ಏವಂಪ್ರಯುಜ್ಯಮಾನಾಶೀರ್ವಚನಂ ತಂ ಶಿವದ್ವಿಜಂ | ನಿರೀಕ್ಷ್ಯನಂಬ್ಯಣಃ ಕಿಂಚಿತ್ಸ್ಮಿತಭಾಸಿಮುಖಾಂಬುಜಃ ||೯೯|| ಸಾಕ್ಷಾನ್ಮಹಾದೇವಮೂರ್ತಿ ರಿತ್ಯುವಾಚ ಕೃಪಾನಿಧಿಃ | ತ್ವದುಕ್ತರೀತ್ಯಾವಿಪ್ರೇಂದ್ರ ವಿಚಾರೇಣಾತ್ರಕಿಂತವ ||೧೦೦|| ನಂಬೀರಕ್ಷತುವಾಮಾವಾ ಕೃಪಯಾತವಪುತ್ರಕಂ | ನನಂಬಿರೇವ ಗೌರೀಶನಂಬಿಸ್ತಥ್ಯಂ ಭವೇದ್ಯದಿ ||೧೦೧|| ತನ್ನಂಬ್ಯಣಸ್ಯಚ ಪತಿರ್ಮಹಾದೇವೋ ಭವೇದ್ಯದಿ| ತದ್ಭೂತ್ಯಂ ಗಿರಿಜಾನಾಥಃ ಕರೋತೀತಿಧ್ರುವಂಯದಿ ||೧೦೨| ತಸ್ಮೈಶಿವೋವರ್ತನಧನಂ ದದಾತೀತಿಸ್ಫುಟಂಯದಿ | ತನಯೋಽಪಿ ನಜೀವನ್ಸ್ಯಾದ್ಭವತಸ್ಸಂಭ್ರಮೇಣಕಿಮ್ || ೧೦೩ || ನಂಬ್ಯಣ್ಣ ಶ್ರೀಮಹಾದೇವಸ್ಸದ್ಭಕ್ತೇರಪಿವೈಭವಂ | ಸರ್ವಂಯಥಾರ್ಥಂಜಾತಂ ಚೇದ್ಯದ್ಯಾಯಾತಶ್ಚನಂದನಃ ||೧೦೪|| ಕಿಂಕರಿಷ್ಯಸಿ ಸಂಪ್ರೀತ್ಯಾತಸ್ಯೋಪನಯನಂದ್ವಿಜ | ನಂಬ್ಯಣ್ಣೇನೈವಮುದಿತೋ ಜಗಾದನಶಿವದ್ವಿಜಃ ||೧೦೫|| ಸಮಾಗಚ್ಛನ್ತಿಕಿಂಭೂಯಃ ಕುತ್ರವಾಮೃತಮಾ

---

ನಾನು ನಿನಗೆ ದಾನಪಾತ್ರನಾಗಿರುವೆನು. ಉಮಾಮಹೇಶ್ವರ ಪ್ರೀತಿಗಾಗಿ ನಮ್ಮಂಥವರಿಗೆ ಈಗ ಏನು ದಾನ ಮಾಡಿದರೂ ಅದು ಅಕ್ಷಯವಾಗುವುದು. ||೯೭|| ನಮ್ಮಂಥವರಿಗೆ ಸ್ವಲ್ಪ ದಾನ ಮಾಡಿದರೂ ಅದು ಅಕ್ಷಯಫಲಪ್ರದವಾಗುವುದೆಂದು ಪುರಾಣವಾಕ್ಯವಿರುವುದರಿಂದ ಏನಾದರೂ ದಾನಮಾಡು. ನಿನಗೆ ಮಂಗಳವಾಗುವುದು ||೯೮|| ಎಂಬುದಾಗಿ ಆಶೀರ್ವಾದಮಾಡಿದ ಆ ಶಿವದ್ವಿಜನನ್ನು ಪ್ರತ್ಯಕ್ಷ ಪರಶಿವಸ್ವರೂಪನೂ ದಯಾನಿಧಿಯೂ ಆದ ನಂಬ್ಯಣ್ಣನು ನೋಡಿ ಮುಗುಳ್ನಗೆ ನಕ್ಕು, ಎಲೈ ಬ್ರಾಹ್ಮಣಶ್ರೇಷ್ಠನೆ! ನೀನು ಹೇಳಿದಂತೆಯೇ ||೯೯|| ನಿನ್ನ ಮಗನನ್ನು ಕೃಪೆಯಿಂದ ನಂಬ್ಯಣ್ಣನೇ ಬೇಕಿದ್ದರೆ ಬದುಕಿಸಲಿ ಅಥವಾ ಬಿಡಲಿ ಆ ವಿಚಾರವನ್ನು ಕಟ್ಟಿಕೊಂಡು ನಿನಗೇನು? |೧೦೦| ಆ ನಂಬ್ಯಣ್ಣನೇ ಪರಶಿವನ ನಂಬಿಯಾಗಿರುವುದು ನಿಜವಾಗಿದ್ದರೆ || ಆ ನಂಬ್ಯಣ್ಣನಿಗೆ ಪರಶಿವನೇ ಸ್ವಾಮಿಯಾಗಿರುವುದು ನಿಜವಾದರೆ, ಆ ನಂಬಿಯ ಕುಂಟಣಿಗತನವನ್ನು ಪರಶಿವನು ಮಾಡುತ್ತಿರುವನೆಂಬುದು ನಿಜವಾಗಿದ್ದರೆ ||೧೦೨|| ಅವನಿಗೆ ಶಂಕರನು ಪ್ರತಿದಿನವೂ ವರ್ತನೆಯಾಗಿ ಹಣವನ್ನು ಕೊಡುತ್ತಿರುವನೆಂಬುದು ದಿಟವಾದರೆ, ನಿನ್ನ ಮಗನು ಬದುಕಲಿ. ಹೆಚ್ಚು ಬಡಿವಾರದಿಂದೇನು? ||೧೦೩|| ನಂಬ್ಯಣ್ಣನೂ ಶ್ರೀಪರಶಿವನೂ ಶಿವಭಕ್ತಿಯ ವೈಭವವೂ ಇವೆಲ್ಲವೂ ಸತ್ಯವಾಗಿದ್ದು, ನಿನ್ನ ಮಗನೂ ಎದ್ದು ಬಂದಲ್ಲಿ ||೧೦೪|| ಅವನಿಗೆ ನೀನು ಸಂತೋಷದಿಂದ ಉಪನಯನವನ್ನು ಮಾಡುವೆಯಾ?,, ಎಂದು ನಂಬ್ಯಣ್ಣನು ನುಡಿಯಲಾಗಿ, ಆ ಶಿವದ್ವಿಜನು ||೧೦೫|| ಸ್ವಾಮಿ! ಭೂಮಿಯಲ್ಲಿ ಸತ್ತ ಮನುಷ್ಯರು ಮರಳಿ

ಸವಾಃ | ಪ್ರವಕ್ತುಮೇವಮುಚಿತಂ ಕಿಮುಸತ್ವಂ ಮಹಾತ್ಮನಾ ||೧೦೬|| ಭಾಗ್ಯವಾಂಛ್ರೀಮಹಾದೇವ ಸದ್ಭಕ್ತಸ್ತ್ವಂ ನಿರೀಕ್ಷ್ಯಮಾಂ | ಕಿಂವಿಡಂಬಯಿತುಂ ಧರ್ಮಸ್ತ್ವಪಾಶ್ಮಾನಪ್ರಣಾಸ್ಸ್ವನಃ ||೧೦೭|| ಕ್ರೋಧಯನ್ನಿವಯಷ್ಟ್ಯಾತ್ವಂ ಸ್ಮಾರಯಸ್ಯಾತ್ಮಜಂಮೃತಂ | ವಂಚಯತ್ವಂ ನಮಾಮೇವಂ ಕಿಮುದಾನಮಿದಂಮಮ ||೧೦೮|| ಏತದರ್ಥಂಕಿಮಸ್ಮಾಂಸ್ತ್ವಂ ಸಮಾಕಾರಿತವಾನಸಿ | ದೀನಾನ್ಮತ್ವಾಕಿಮಸ್ಮಾಂಸ್ತ್ವಂ ಕುರುಷೇಧೈರ್ಯವಿಚ್ಯುತಿಂ ||೧೦೯|| ಉಪಾಸ್ಯಶಂಕರಂಪೂರ್ವಂ ಭುಂಕ್ಷೇತ್ವಂ ಸುಖಮೈಹಿಕಂ | ಅಸ್ಮಾನೇವಮುದೀರ್ಯೈವ ಕಿಮುಮುಕ್ತಿಮವಾಪ್ಸ್ಯಸಿ ||೧೧೦|| ಬಹುನಾಕಿಮುಗಚ್ಛಾಮಃ ಪ್ರದತ್ತಮಯುತಂತ್ವಯಾ | ಇತ್ಯುಕ್ತ್ವಾಗಚ್ಛತಿಸತಿ ಸ್ತ್ರಿಯಾಸಾಕಂಮಹೀಸುರೇ ||೧೧೧|| ನಂಬ್ಯಣ್ಣಃಪ್ರಾಹವಿಪ್ರಂತಂ ಪ್ರಯಾಂತಂಕಾಂತಯಾಸಹ | ಆಗಚ್ಛಾಗಚ್ಛವಿಪ್ರೇಂದ್ರ ಕಿಮರ್ಥಂಸನುಗಚ್ಛಸಿ ||೧೧೨|| ಭವತ್ತನೂಜಸ್ಯನಾಮ ಸ್ವೀಕರ್ತಾನಂಬ್ಯಣ್ಣೋಽಸ್ಮ್ಯಹಂ | ಮೂರ್ತ್ಯೇಸಂಪ್ರೇಷಿತಶಿವಃ ಪೃಥಿವ್ಯಾಂ ನಂಬ್ಯಣ್ಣೋಸ್ಮ್ಯಹಂ ||೧೧೩|| ನಕ್ರಭಕ್ಷಿತಪುತ್ರಸ್ಯೋಜ್ಜೀವಕೋನಂಬ್ಯಣ್ಣೋಽಸ್ಮ್ಯಹಂ | ಅಭಕ್ಷಯದ್ಯತ್ರನಕ್ರಸ್ತ್ವತ್ಸುತಂತನ್ನದೀತಟಂ ||೧೧೪|| ಏನಾಂಸಂಪ್ರೇಷಯಾ

---

ಎದ್ದುಬರುವುದು ಎಲ್ಲಾದರೂ ಉಂಟೆ? ನೀವು ದೊಡ್ಡವರಾಗಿ ಹೀಗೆ ಸುಳ್ಳುಮಾತನ್ನಾಡಬಹುದೆ? ||೧೦೬|| ಭಾಗ್ಯಶಾಲಿಯೂ ಶಿವಸದ್ಭಕ್ತನೂ ಆಗಿರುವ ನೀನು ನನ್ನನ್ನು ನೋಡಿ ಅಣಕವಾಡುವುದು ಧರ್ಮವೆ? ಕಲ್ಲಿನ ಗಾಯಗೊಂಡಿರುವವರನ್ನು ದೊಣ್ಣೆಯಿಂದ ಬಡಿಯುವಂತೆ ನೀನು ಈ ಮಾತುಗಳಿಂದ ಸತ್ತ ಮಗನನ್ನು ನೆನೆಯಿಸುತ್ತೀಯೆ. ಹೀಗೆ ನನ್ನನ್ನು ನೀನು ವಂಚಿಸಬೇಡ. ನೀನು ನನಗೆ ಕೊಡುವ ದಾನವು ಇದೇನೆಯೊ? ||೧೦೮|| ಇದಕ್ಕೋಸುಗವೇ ನೀನು ನಮ್ಮನ್ನು ಕರೆಯಿಸಿದುದು?- ನೀನು ನಮ್ಮನ್ನು ಬಡವರೆಂದು ತಿಳಿದು ಹೀಗೆ ನಮ್ಮ ಧೈರ್ಯವನ್ನು ಕೆಡಿಸುತ್ತಿರುವೆಯೊ? ||೧೦೯|| ಪೂರ್ವದಲ್ಲಿ ನೀನು ಚೆನ್ನಾಗಿ ಶಿವಪೂಜೆ ಮಾಡಿ ಈಗ ಸುಖವನ್ನು ಅನುಭವಿಸುತ್ತಿದ್ದೀಯೆ. ನಮ್ಮನ್ನು ಕುರಿತು ಹೀಗೆ ಪರಿಹಾಸ ವಚನಗಳನ್ನಾಡಿಯೇ ಮೋಕ್ಷವನ್ನು ಪಡೆಯುತ್ತೀಯೇನು? ||೧೧೦|| ಹೆಚ್ಚು ಮಾತನಾಡಿ ಫಲವೇನು? ನಾವು ಹೋಗುತ್ತೇವೆ. ನೀನು ನಮಗೆ ಹತ್ತು ಸಾವಿರವನ್ನು ಕೊಟ್ಟೆ! ಎಂದು ಹೇಳಿಬಿಟ್ಟು, ತನ್ನ ಪತ್ನಿಯೊಡನೆ ಕೂಡಿ ಬ್ರಾಹ್ಮಣನು ಹೋಗುತ್ತಿರಲಾಗಿ ||೧೧೧|| ನಂಬ್ಯಣ್ಣನು ಪತ್ನೀಸಮೇತನಾಗಿ ಹೋಗುತ್ತಿರುವ ಆ ಬ್ರಾಹ್ಮಣನನ್ನು ಕುರಿತು—ಎಲೈ ಬ್ರಾಹ್ಮಣಶ್ರೇಷ್ಠನೆ! ಏತಕ್ಕೆ ಹೋಗುತ್ತೀಯೆ? ಬಾ, ಬಾ ||೧೧೨|| ನಿನ್ನ ಮಗನ ಹೆಸರನ್ನು ಹೊಂದಿರುವ ನಂಬ್ಯಣ್ಣನೇ ನಾನು. ಮೊಸಳೆ ನುಂಗಿದ ಮಗನನ್ನು ಬದುಕಿಸುವ ನಂಬ್ಯಣ್ಣನೂ ನಾನೇ. ಮೊಸಳೆಯು ಯಾವಲ್ಲಿ ನಿನ್ನ ಮಗನನ್ನು ನುಂಗಿತೋ ಆ ನದೀತೀರಕ್ಕೆ ಈಗಲೇ ಈ ನಿನ್ನ ಪತ್ನಿಯನ್ನು ಕಳುಹಿಸಿಕೊ

ದ್ಯೈಲವತ್ಪದ್ಮಾಕರ್ಯಾಂ ಧರಣೀಸುರ | ಪ್ರಾಗ್ಭಕ್ಷಿತಭವತ್ಸೂನು ರಾಗತ್ಯಮಕರ ಸ್ಸ್ವಯಂ || ೧೧೩ || ಉದ್ಗೀರ್ಯತನಯಂತೂರ್ಣ ಮಧುನೈವಪ್ರಯಾಸ್ಯತಿ | ಅಭಿಜಿತ್ಸಮಯೇಸೂನೋ ರದ್ಯೋಪನಯಸಂಕುರು || ೧೧೪ || ಇತ್ಯುಕ್ತ್ವಾ ನಂಬ್ಯಣಸ್ತಸ್ಮೈ ದ್ವಿಜಾಯಾದಾದ್ಧನಂಬಹು | ಅಥರೋಮಾಂಚಿತತನುಃ ಪ್ರಮೋದಾಶ್ರುಪರಿಪ್ಲುತಃ ||೧೧೫|| ಪ್ರಣಮ್ಯತಸ್ಮೈಸಾಷ್ಟಾಂಗಂ ಸಂಭ್ರಮೇಣ ಸಮುತ್ಥಿತಃ | ಸ್ಪೃಶನ್ನಿವಾಭ್ರಮುನ್ನತ್ಯಾ ಪ್ರಹರ್ಷೋತ್ಕರ್ಷನಿರ್ಭರಃ ||೧೧೬|| ಪುತ್ರೋಪನಯನೋದ್ಯುಕ್ತಃ ಪ್ರಯಯೌಭವನಂದ್ವಿಜಃ | ಪುತ್ರಸಂದರ್ಶನಾಕಾಂಕ್ಷಾಯುತಾ ಕಾಂತಾಪಿತತ್ಕ್ಷಣೇ ||೧೧೭|| ಜಗಾಮತನ್ನದೀತೀರಂ ಯತ್ರನಕ್ರೋನಿಗಿಲತ್ಸುತಂ | ಅಥಾಸಂಖ್ಯಾತಭಕ್ತೇಭ್ಯಃ ಪ್ರಣಿಪತ್ಯಸನಂಬ್ಯಣಃ || ಉತ್ತಂಸಿತದ್ವಿತೀಯೇಶ ವೀರಮೇಂದ್ರಪದಾಂಬುಜಃ | ತದಾಜ್ಞಯಾಲಿಂಗಮೂರ್ತಿಂ ಮುದ್ದಿಶ್ಯಾಹೂಯಭಕ್ತಿತಃ ||೧೨೧|| ಸಂತಾಡ್ಯತಾಲೌ ಲಲಿತಸಪ್ತಸ್ವರಮನೋಹರಂ | ಸ್ತುತ್ವಾದ್ರಮಿಡಭಾಷೋಕ್ತ ಗೀತೇನಪರಮೇಶ್ವರಂ ||೧೨೨|| ವಿಧಾಯಪ್ರತ್ಯಕ್ಷಂಸುಪ್ರಸನ್ನಂ ಕ್ರೂರನಕ್ರೇಣಭಕ್ಷಿತಂ | ದ್ವಿಜಸ್ಯತನಯಂದೇಹಿ ಮ

---

ದು. ಮೊದಲು ನಿನ್ನ ಮಗನನ್ನು ನುಂಗಿದ ಮೊಸಳೆಯೇ ಈಗ ತಾನಾಗಿ ಬೇಗನೆ ಬಂದು ||೧೧೩|| ಮಗನನ್ನು ಕಕ್ಕಿ ಹೋಗುತ್ತದೆ. ಈಗಣ ಮಧ್ಯಾಹ್ನಕಾಲಕ್ಕೆ ಸರಿಯಾಗಿ ನಿನ್ನ ಮಗನಿಗೆ ಉಪನಯನವನ್ನು ಮಾಡು ||೧೧೪|| ಎಂಬುದಾಗಿ ನಂಬ್ಯಣ್ಣನು ಹೇಳಿ, ಆ ಬ್ರಾಹ್ಮಣನಿಗೆ ಬಹಳ ದ್ರವ್ಯವನ್ನು ಕೊಟ್ಟನು. ಆ ಬ್ರಾಹ್ಮಣನಾದರೊ ಪುಳಕಾಂಕಿತಗಾತ್ರನಾಗಿ ಸಂತೋಷಬಾಷ್ಪದಿಂದ ತುಂಬಿದವನಾಗಿ ||೧೧೫|| ಸಡಗರದಿಂದ ಆ ನಂಬ್ಯಣ್ಣನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಆನಂದದಿಂದ ಅಂತರಿಕ್ಷವನ್ನು ಮುಟ್ಟುವನೋ ಎಂಬಷ್ಟು ಉಬ್ಬಿದವನಾಗಿ ||೧೧೬|| ಮಗನ ಉಪನಯನವನ್ನು ಮಾಡಲುದ್ಯುಕ್ತನಾಗಿ ಮನೆಗೆ ಹೊರಟನು. ಅವನ ಪತ್ನಿಯಾದರೊ ಮಗನನ್ನು ನೋಡಬೇಕೆಂಬ ಕುತೂಹಲದಿಂದ ಆ ಕೂಡಲೇ||೧೧೭ ತನ್ನ ಮಗನನ್ನು ಮೊಸಳೆ ನುಂಗಿದ್ದ ಹೊಳೆ ದಡದ ಬಳಿಗೆ ಹೋದಳು. ಬಳಿಕ ಆ ಸೌಂದರ ನಂಬ್ಯಣ್ಣನು ಅಸಂಖ್ಯಾತ ಭಕ್ತಗಣಕ್ಕೆ ನಮಸ್ಕರಿಸಿ ||೧೨೦|| ದ್ವಿತೀಯಶಂಭುವಾಗಿರುವ ವೀರಮರಾಜನ ಪಾದಕಮಲವನ್ನು ತನ್ನ ಶಿರಸ್ಸಿನ ಮೇಲೆ ಹೊತ್ತು, ಆತನ ಅಪ್ಪಣೆಯಿಂದ ಲಿಂಗಮೂರ್ತಿಯನ್ನು ಕುರಿತು—ಅಯ್ಯಾ! ಎಂದು ಸಂಬೋಧಿಸಿ, ಭಕ್ತಿಯಿಂದ ಕರೆದು||೧೨೧|| ತಾಳಗಳನ್ನು ಕುಟ್ಟುತ್ತ, ಷಡ್ಜಋಷಭಾದಿ ಸಪ್ತಸ್ವರಗಳಿಂದ ಮನೋಹರವಾಗಿ ದ್ರಾವಿಡಭಾಷಾಗೀತಗಳಿಂದ ಪರಶಿವನನ್ನು ಸ್ತುತಿಸಿ ||೧೨೨|| ಆ ಪರಶಿವನನ್ನು ಪ್ರತ್ಯಕ್ಷಗೊಳಿಸಿಕೊಂಡು ಕರುಣಾನಿಧಿಯಾದ ಎಲೈ ಮಹಾದೇವನೆ! ಮೊಸಳೆ ನುಂಗಿರುವ ಮಗನನ್ನು ಬ್ರಾಹ್ಮಣನಿಗೆ ದಾನ

ಹೇಶಕರುಣಾನಿಧೇ ||೧೨೩|| ಇತಿವಿಜ್ಞಾಪಯಾಮಾಸ ಶಿವಾಯಮಹಿಮೋನ್ನ
ತೇ| ಅನನ್ತರಂ ಮಹಾದೇವಸ್ಸಸ್ಮಾರಸಮವರ್ತಿನಂ ||೧೨೪|| ಸಮಾಗತ್ಯನಮಂ
ತಂತಂ ಯಮಮಿತ್ಯಬ್ರವೀಚ್ಛಿವಃ | ಸನುಕೇನಾಶನಕ್ರೇಣ ಭಕ್ಷಿತೋದ್ವಿಜನಂ
ದನಃ ||೧೨೫|| ಕಸ್ಮಿಂಸ್ತಿಷ್ಠತಿಲೋಕೇತ್ವಂ ತಂ ಸಮಾನಯಸತ್ವರಂ | ಏವ
ಮುಕ್ತೋಮಹೇಶೇನ ಚಿತ್ರಗುಪ್ತಃ ಕೃತಾಂಜಲಿಃ ||೧೨೬|| ತ್ವದೀಯಭೃತ್ಯನಂ
ಬ್ಯಣ್ಣ ನಾಮಾಯಂತನಯೋಯತಃ | ನಿತ್ಯಸಾಯುಜ್ಯಪದವೀಂ ತತಃಪ್ರಾಪ್ಯಾ
ವತಿಷ್ಠತೇ ||೧೨೭|| ಅನ್ಯತ್ರಲೋಕೇನಾಸ್ತೀತಿ ಮಹೇಶಾಯವ್ಯಜಿಜ್ಞಪತ್ |
ಅಥಬ್ರಹ್ಮಾಣಮೀಶಾನೋ ಸ್ಮೃತವತ್ಯಬ್ಜಸಂಭವಃ ||೧೨೮|| ಆಗತ್ಯಶಂಭವೇಭ
ಕ್ತ್ಯಾ ಪ್ರಣಿಪತ್ಯಸಸಂಭ್ರಮಂ | ದ್ವಿವರ್ಷಮಾತ್ರೇವಯಸಿ ಜೀರ್ಣಂಗ್ರಾಹೋ
ದರೇಶಿಶುಂ ||೧೨೯|| ಕೃತ್ವಾಗರ್ಭಾಷ್ಟಮವಯಃಪ್ರಾಪ್ತಂ ನಕ್ರೋದರೇವ್ಯ
ಧಾತ್ | ಕಾವೇರೀಸಲಿಲಾನ್ತಸ್ಥ ಮಕರೋದರವಾಸಿನಿ ||೧೩೦|| ತಸ್ಮಿಂಸ್ತನೂ
ಜೇಕೀನಾಶೋ ಗತ್ವಾತ್ವದುದರಸ್ಥಿತಂ| ಪ್ರಯಚ್ಛನಂದನಂ ನಕ್ರೇತ್ಯಾಹ ನಕ್ರೋ
ಪಿತತ್ಕ್ಷಣಾತ್ ||೧೩೧|| ಸಮಾಗಚ್ಛತ್ಯಭಿಮುಖಂ ಮಧ್ಯೇಜಲಮನನ್ತರಂ |
ವಿವೃತೇತಸ್ಯವದನಗಹ್ವರೇ ಸಕುಮಾರಕಃ ||೧೩೨|| ಅಲಕ್ಷ್ಯತಜನೈಸ್ತೂರ್ಣ

---

ಮಾಡು ||೧೨೩|| ಎಂಬುದಾಗಿ ಬಿನ್ನಯಿಸಿಕೊಂಡನು. ಆಗ ಪರಶಿವನು ಯಮನನ್ನು ನೆನೆ
ದನು. ||೧೨೪|| ಕೂಡಲೇ ಬಂದು ನಮಸ್ಕರಿಸುತ್ತಿರುವ ಅಂತಕನನ್ನು ಕುರಿತು ಪರಶಿವನು–
ಎಲೈ ಕಾಲನೆ! ಬ್ರಾಹ್ಮಣಪುತ್ರನು ಮೊಸಳೆಯಿಂದ ನುಂಗಲ್ಪಟ್ಟನಷ್ಟೆ ||೧೨೫|| ಅವನು ಯಾ
ವಲೋಕದಲ್ಲಿದ್ದಾನೆ? ಅವನನ್ನು ನೀನು ಬೇಗನೆ ಕರೆದುಕೊಂಡು ಬಾ, ಎಂದು ಅಜ್ಞಾಪಿಸ
ಲಾಗಿ, ಯಮನು ಕೈಮುಗಿದು–"ಮಹಾಸ್ವಾಮಿ! ಈ ಬ್ರಾಹ್ಮಣಪುತ್ರನು ನಿನ್ನ ಪರಮಭೃ
ತ್ಯನಾದ ನಂಬ್ಯಣ್ಣನ ಹೆಸರನ್ನು ತಳೆದಿದ್ದವನಾದಕಾರಣ ಈಗ ಶಾಶ್ವತ ಶಿವಸಾಯುಜ್ಯ ಪದವಿ
ಯನ್ನು ಪಡೆದಿರುತ್ತಾನೆ. ||೧೨೭|| ಬೇರೆ ಮತ್ತಾವಲೋಕದಲ್ಲೂ ಅವನಿರುವುದಿಲ್ಲ" ಎಂದು
ಪರಶಿವನಿಗೆ ವಿಜ್ಞಾಪಿಸಿದನು. ಆಗ ಶಂಕರನು ಚತುರ್ಮುಖ ಬ್ರಹ್ಮನನ್ನು ಸ್ಮರಿಸಲಾಗಿ ಆತನು
ಬಂದು ಸಡಗರದಿಂದ ಶಿವನಿಗೆ ನಮಸ್ಕರಿಸಿ, ತನ್ನ ೨ನೆ ವಯಸ್ಸಿನಲ್ಲಿ ಮೊಸಳೆಯ ಹೊಟ್ಟೆಯಲ್ಲಿ
ಜೀರ್ಣಿಸಿ ಹೋಗಿದ್ದ ಶಿಶುವನ್ನು ಶಂಕರನಪ್ಪಣೆಯಮೇರೆಗೆ ೮ನೆ ವಯಸ್ಸಿನವನನ್ನಾಗಿ ಮಾಡಿ,
ಮೊಸಳೆಯ ಹೊಟ್ಟೆಯಲ್ಲಿಟ್ಟನು. ಆ ಬ್ರಾಹ್ಮಣಪುತ್ರನು ಹೀಗೆ ಕಾವೇರಿಯ ಮಡುವಿನಲ್ಲಿದ್ದ
ಮೊಸಳೆಯ ಹೊಟ್ಟೆಯಲ್ಲಿ ಬ್ರಹ್ಮನಿಂದ ಇಡಲ್ಪಟ್ಟವನಾಗಿರಲು, ಆಗ ಯಮನು ಹೋಗಿ–
"ಎಲೆ ಮೊಸಳೆಯೆ! ನಿನ್ನ ಹೊಟ್ಟೆಯಲ್ಲಿರುವ ಹುಡುಗನನ್ನು ಹೊರಕ್ಕೆ ಬಿಡು" ಎಂದು
ಆಜ್ಞಾಪಿಸಲು, ಮೊಸಳೆಯು ತತ್‌ಕ್ಷಣದಲ್ಲೇ ||೧೩೧|| ದಡದಲ್ಲಿ ನಿಂತಿರುವ ಜನರಿಗೆ ಅಭಿ
ಮುಖವಾಗಿ ನೀರಿನ ಮಧ್ಯದಿಂದ ಬರುತ್ತಿರಲಾಗಿ, ಅದರ ಬಾಯಿ ಅಗಲಿಸಿಕೊಳ್ಳಲಾಗಿ, ನಿಂತಿ

ಮುಯಮಾಗತಆಗತಃ । ಇತ್ಯುಚ್ಯಮಾನೇಸುವ್ಯಕ್ತಂ ಶದಾಸೀನ್ಮತಿವಿಸ್ಮಯಾತ್ ||೧೩೩|| ವರ್ಷಂಗರ್ಭಾನ್ವಸಂಪ್ರಾಪ್ತಂ ದೋಃಭ್ಯಾಂಮಾದಾಯತಂಸುತಂ । ಸ್ಥಾಪಯಾಮಾಸತಟಿನೀತೀರೇ ದಕ್ಷಿಣದಿಕ್ಪತಿಃ ||೧೩೪|| ತದಾವಲೂರುನಗರಸ್ಥಿತೇಷು ಸಕಲೇಷ್ವಪಿ । ಆಬಾಲವೃದ್ಧಂಪಶ್ಯತ್ಸು ಸರಿತಃಪಾರ್ಶ್ವಸ್ತದಾ ||
ನಾತಿದೂರೇಸುತಂದೃಷ್ಟ್ವಾ ಸಾಮಾತಾಹರ್ಷಿತಾಸತೀ । ಅಪ್ಯಾಗತೋಽಸಿ ನಂಬ್ಯಣ್ಣ ಮದೀಯಪ್ರಿಯನಂದನ ||೧೩೬|| ತಾತಮೇಬಾಲಕಶಿಶೋ ಸಮಾಗಚ್ಛೇತಿಭಾಷಿಣೀ । ಆದಾಯದೋರ್ಭ್ಯಾಂ ಮಾಲಿಂಗ್ಯ ಸಂಸ್ಪೃಶಂತೀಕರೇಣತಂ ||೧೩೭|| ಸ್ರುತಾಭಿಸ್ತನ್ಯಧಾರಾಭಿಃ ಪ್ರಮೋದಾಶ್ರುಭಿರುದ್ಗತೈಃ । ಅಭಿಷಿಕ್ತಂಸ್ವತನಯಂ ಪ್ರಕುರ್ವಂತೀವ್ಯತಿಷ್ಠತ ||೧೩೮|| ಜನಕೋಽಪಿಸಮಾಗತ್ಯ ಸುತಮಾಲಿಂಗ್ಯಸಾದರಂ । ಜನೇಷುಸ್ತೂಯಮಾನೇಷು ಸುತೇನಸಹಭಾರ್ಯಯಾ||
ನನಾಮನಂಬ್ಯಣ್ಣಪಾದೌ ಚೇರಮೇಂದ್ರಂಚಭಕ್ತಿತಃ । ಸುವ್ಯಕ್ತವಚನಾದ್ಗ್ರಾಹೋದರಜೀರ್ಣಮಿತಿಶ್ರುತಾತ್ ||೧೪೦|| ಪುನರಪ್ಯಂತಕಮುಖಾದಿತಿಚಾನೀತವಾನಿತಿ । ವಾಕ್ಯಾನ್ನಕ್ರೋದರೇ ಜೀರ್ಣಂಕಂಚಿದ್ವಿಪ್ರತನೂಭವಂ ||೧೪೧||

---

ಷ್ಟ ಜನರಿಗೆ ಒಳಗಿದ್ದ ಮಗನು ಕಾಣಿಸಿದನು. ಆಗ ಇದೋ ಬಂದ, ಇದೋ ಬಂದನೆಂದು ಅವರೆಲ್ಲರೂ ಆಶ್ಚರ್ಯಗೊಂಡು ಕೂಗುತ್ತಿರಲಾಗಿ, ಹೊರಕ್ಕೆ ಬಂದ ೮ ವರ್ಷ ವಯಸ್ಸಿನ ಆ ವಿಪ್ರಸುತನನ್ನು ಯಮನು ಎರಡು ತೋಳುಗಳಿಂದಲೂ ಎತ್ತಿಕೊಂಡು ಹೊಳೆಯ ದಡದ ಮೇಲೆ ಕುಳ್ಳಿರಿಸಿದನು. ||೧೩೪|| ಆಗ ಆ ಅವಲೂರು ಪಟ್ಟಣದ ಆಬಾಲವೃದ್ಧ ಜನರೆಲ್ಲರೂ ಹೊಳೆಯ ಸುತ್ತಲೂ ನಿಂತು ನೋಡುತ್ತಿರಲಾಗಿ, ||೧೩೬|| ಆ ಪುತ್ರನ ತಾಯಿಯು ತನ್ನ ಸಮೀಪದಲ್ಲೇ ಮಗನನ್ನು ನೋಡಿ, ಅಪರಿಮಿತಾನಂದಗೊಂಡು, ನನ್ನ ಪ್ರಿಯ ಪುತ್ರನಾದ ನಂಬ್ಯಣ್ಣನೆ! ಬಂದೆಯಾ? ಅಪ್ಪಾ! ಮಗನೆ! ಮಗುವೆ! ಬಾ; ಎಂದು ಹೇಳಿ, ಎರಡು ತೋಳುಗಳಿಂದಲೂ ಎತ್ತಿ ತಬ್ಬಿ ಅವನ ಅಂಗವನ್ನೆಲ್ಲಾ ಸವರಿ, ||೧೩೭|| ಚಿಮ್ಮುವ ಮೊಲೆಹಾಲಿನ ಧಾರೆಗಳಿಂದಲೂ, ದಳದಳನೆ ಉಕ್ಕಿ ಸುರಿಯುತ್ತಿರುವ ಸಂತೋಷಬಾಷ್ಪಗಳಿಂದಲೂ ತನ್ನ ಮಗನನ್ನು ಅಭಿಷೇಕಿಸುತ್ತಿದ್ದಳು. ||೧೩೮|| ಈ ಸುದ್ದಿಯನ್ನು ಕೇಳಿ ತಂದೆಯು ಬಂದು ಮಗನನ್ನು ಪ್ರೀತಿಯಿಂದ ತಬ್ಬಿಕೊಂಡು, ಸಕಲ ಜನರೂ ಕೊಂಡಾಡುತ್ತಿರಲಾಗಿ, ತನ್ನ ಮಗನೊಡನೆಯೂ ಪತ್ನಿಯೊಡನೆಯೂ ಕೂಡಿ, ಸುಂದರನಂಬ್ಯಣ್ಣನ ಪಾದಗಳಿಗೂ ಚೇರಮರಾಜನ ಪಾದಗಳಿಗೂ ಭಕ್ತಿಯಿಂದ ನಮಸ್ಕರಿಸಿದನು. ಆಗ ಚೇರಮೇಂದ್ರನೇ ಮೊದಲಾದ ಭಕ್ತನಿಕುರುಂಬವು ನಂಬ್ಯಣ್ಣನನ್ನು ಪ್ರಶಂಸಿಸುತ್ತ, ವೇದದಲ್ಲಿ "ಗ್ರಾಹೋದರಜೀರ್ಣಂ" ಎಂಬ ವಚನದಿಂದಲೂ, "ಅಂತಕಮುಖಾದಾನೀತವಾನ್" ಎಂಬ ವಚನದಿಂದಲೂ ಹೇಳಲ್ಪಟ್ಟಿರುವಂತೆ, ಈ ನಂಬ್ಯಣ್ಣನು ಮೊಸಳೆಯ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗಿದ್ದ ಬ್ರಾಹ್ಮಣ ಕುಮಾರನನ್ನು

ಆನಿನಾಯಾನ್ತಕಮುಖಾ ನ್ನಂಬ್ಯಣ್ಣೋಭಕ್ತಿತತ್ಪರಃ | ಕೃಷ್ಣೋಽಪ್ಯಾರುಹ್ಯಗ
ರುಡಂ ಸುಭಟೈರ್ವೈಷ್ಣವೋತ್ತಮೈಃ ||೧೪೩|| ಸುದರ್ಶನೇನಮಹತಾ ಸೇವ್ಯ
ಮಾನಸ್ಸಸಂಭ್ರಮಂ | ಸ್ವಾರ್ಚಾಂಬುಜಗ್ರಾಹಿಣ ಮಿತ್ಯುಕ್ತಿತಸ್ಸ್ವಾರ್ಚನಾ
ಕೃತೇ ||೧೪೪|| ಆನಯಂತಂಪಂಕಜಾನಿ ಗಜೇಂದ್ರಂಮಕರೇಬಲಾತ್ | ಗೃಹೀ
ತಮತ್ರಸಂಯೋಧ್ಯ ತಂಮೋಚಯಿತುಮಕ್ಷಮಃ ||೧೪೫|| ಏತನ್ನಂಬ್ಯಣ್ಣ ಮ
ಹಿಮಾವರ್ಣ್ಯತೇಸಕಥಂತ್ವಿತಿ | ಯಮಂಸಂಪ್ರೇಷ್ಯವಿಪ್ರಸ್ಯ ಸುತಮುಜ್ಜೀವ್ಯತ
ತ್ಕ್ಷಣಾತ್ ||೧೪೬|| ಪುತ್ರವಂತಂದ್ವಿಜಂಕೃತ್ವಾ ದುಃಖಂತತ್ಕಾಮಿನೀಗತಂ|
ಪರಿಕ್ಷೀಣಂವಿಧಾಯಾಶು ತಸ್ಯೈದತ್ತವತಸ್ಸುತಂ ||೧೪೭|| ವಿಲೋಕ್ಯನಂಬ್ಯ
ಣಸ್ಯಾಸ್ಯ ಮಹಿಮಾನಂಪ್ರಹರ್ಷತಃ | ಭಕ್ತಿವಿಕ್ರಮ ನಿರ್ವಕ್ರಪರಾಕ್ರಮಲಸ
ತ್ಕ್ರಮಃ ||೧೪೮|| ಚೇರಮಾಖ್ಯಶ್ಚಕ್ರವರ್ತೀ ಸದ್ಭಕ್ತಾಅಪಿನಂಬ್ಯಣಂ | ಶಶಂ
ಸುರ್ಮಸ್ತಕನ್ಯಸ್ತಹಸ್ತಾಸ್ಸರ್ವೇಽಪಿ ಮಾನವಾಃ ||೧೪೯|| ಅಕುರ್ವನ್ನಧಿಕಪ್ರೀತಿ
ಯುಕ್ತಾ ಜಯಜಯಧ್ವನಿಂ | ಆನಂದರೂಪ ಭವನಪ್ರದೀಪಾನಘನಂಬ್ಯಣ ||
ಧರ್ಮಲೇಖ್ಯಾನಿತೇಜಾತಾ ವಯಂಕಿಂ ಬಹುಜಲ್ಪನೈಃ | ಗತಿರ್ಮತಿಸ್ಸಮಸ್ತಂ

---

ಯಮನ ಮುಖದಿಂದ ಬರಮಾಡಿದನು. ಪೂರ್ವದಲ್ಲಿ ವಿಷ್ಣುವು ತನ್ನ ಪೂಜೆಗೋಸುಗವಾಗಿ
ಒಂದು ಆನೆಯು ಕಮಲಗಳನ್ನು ಕಿತ್ತುಕೊಂಡು ಹೋಗುವುದಕ್ಕಾಗಿ ನೀರಿಗೆ ಇಳಿಯಲಾಗಿ,
ಅಲ್ಲಿದ್ದ ಒಂದುಮೊಸಳೆಯು ಆನೆಯನ್ನು ಬಲವಾಗಿ ಹಿಡಿದುಕೊಂಡು ಸೆಳೆಯಲು, ಆಗ ವಿಷ್ಣುವು
ಗರುಡನನ್ನೇರಿ ಚಕ್ರವನ್ನು ಪಿಡಿದು, ವೈಷ್ಣವ ಶ್ರೇಷ್ಠರಾದ ಭಟರಿಂದ ಸೇವಿಸಿಕೊಳ್ಳುತ್ತ, ಸಡಗರ
ದಿಂದ ಅಲ್ಲಿಗೆ ಹೋಗಿ, ಯುದ್ಧವನ್ನು ಮಾಡದೆ ಆನೆಯನ್ನು ಬಿಡಿಸಲಾರದೆ ಹೋದನು ||೧೪೫||
ಈ ನಂಬ್ಯಣ್ಣನಾದರೊ ಯಮನನ್ನು ಕಳುಹಿಸಿ, ಬ್ರಾಹ್ಮಣ ಕುಮಾರನನ್ನು ಕೂಡಲೇ ಬದು
ಕಿಸಿ, ಬ್ರಾಹ್ಮಣನನ್ನು ಪುತ್ರವಂತನನ್ನಾಗಿ ಮಾಡಿ, ಅವನ ಪತ್ನಿಯ ದುಃಖವನ್ನು ಹೋಗಲಾ
ಡಿಸಿ, ಅವಳಿಗೆ ಮಗನನ್ನು ಕೊಟ್ಟನು. ಅದುಕಾರಣ ಈ ನಂಬ್ಯಣ್ಣನ ಮಹಿಮೆಯನ್ನು ಅಷ್ಟಿ
ಷ್ಟೆಂದು ವರ್ಣಿಸಲಾದೀತೆ? ಎಂಬುದಾಗಿ ಭಕ್ತಿಶೌರ್ಯದಿಂದಲೂ ಋಜುವಾದ ಬಾಹುಪರಾ
ಕ್ರಮದಿಂದಲೂ ಕೂಡಿದ ಆಚರಣೆಯುಳ್ಳವನಾದ ಚೇರಮ ಸಾರ್ವಭೌಮನೂ ಅಲ್ಲಿದ್ದ ಭಕ್ತ
ಜನರೂ ಆ ಸೌಂದರನಂಬ್ಯಣ್ಣನ ಪ್ರಭಾವವನ್ನು ಪ್ರತ್ಯಕ್ಷವಾಗಿ ನೋಡಿ ಅತ್ಯಂತ ಸಂತೋಷ
ದಿಂದ ಕೊಂಡಾಡಿದರು. ಉಳಿದ ಜನರೆಲ್ಲರೂ ತಲೆಯಮೇಲೆ ಕೈಗಳನ್ನು ಜೋಡಿಸಿ ||೧೪೯||
ಅತ್ಯಂತ ಪ್ರೀತಿಯಿಂದ ಜಯ ಜಯ ಘೋಷವನ್ನು ಮಾಡಿದರು. ಆ ಶಿವದ್ವಿಜನಾದರೊ ನಂಬ್ಯ
ಣ್ಣನನ್ನು ಕುರಿತು—ಶಿವಾನಂದಸ್ವರೂಪ ಮಂದಿರಕ್ಕೆ ದೀಪಪ್ರಾಯನೂ, ಪಾಪರಹಿತನೂ,
ಮಹಿಮೋನ್ನತನೂ ಆದ ಎಲೈ ನಂಬ್ಯಣ್ಣನೆ! ಹೆಚ್ಚುಮಾತಿನಿಂದೇನು? ನಾವು ನಿನಗೆ ಧರ್ಮದಶಾಸ

ಜ ತ್ವಮೇವಮಹಿಮೋನ್ನತ ||೧೫೦|| ಅಕರೋಃ ಪುತ್ರದಾನಂ ಮೇ ದಾನಂ ತ್ವಂ ಯಾಚಿತೋ ಮಯಾ | ತ್ವನ್ನಾಮಧೇಯಂ ಸಂಬ್ಯಣ್ಣಂ ಪರಿಪಾಲಯ ಸಾದರಂ || ಕರುಣಾಪೂರ್ಣಜಲಧೇ ದಾನಶೌಂಡ ಮಹಾಮತೇ | ಇತಿ ಸಂಸ್ತುತ್ಯ ಸಂಬ್ಯಣ್ಣಂ ಸಂಪ್ರೀತ್ಯಾ ಸ ಶಿವದ್ವಿಜಃ ||೧೫೧|| ದ್ವಿಜಸ್ಯ ಕಿಂ ದ್ವಿಜತ್ವೇನೇತ್ಯುಕ್ತೇ ಪ್ರಮುದಿತೈರ್ಜನೈಃ | ಸಂಚೀರಸುಜನ್ಮಾನಂ ಸಂಪ್ರಾಪ್ಯ ತಸ್ಯೋಪನಯನಂ ವ್ಯಧಾತ್ || ಸಂಬ್ಯಣ್ಣಸ್ಯೈಷ ಮಹಿಮಾ ಸಾಕ್ಷಾದ್ರುದ್ರಸ್ಯ ಭೂತಲೇ | ವಕ್ತುಂ ನ ಶಕ್ಯೋ ಮನುಜೈ ರವಾಙ್ಮಾನಸಗೋಚರಃ ||೧೫೨|| ಪಂಡಿತಾರಾಧ್ಯ ಮಹಿಮಾತಸ್ಮಾದಪ್ಯಧಿಕೋಽಮಲಃ | ಇತಿ ಸಂಕೀರ್ತಯಾಮಾಸು ಸ್ಸರ್ವೇ ಭಕ್ತಗಣಾಸ್ತದಾ ||೧೫೩||

ಇತಿ......ಮಹಿಮಪ್ರಕರಣೇ ಸಂಬ್ಯಣ್ಣೇನ ದ್ವಿಜಾಯ ಸತ್ಯಭಕ್ತ್ಯಾ ಕೃತ ಪುತ್ರಪ್ರದಾನಕಥನಂ ನಾಮ ಪಂಚದಶೋಽಧ್ಯಾಯಃ.

---

ನಪತ್ರವಾದೆವು. ನಮಗೆ ಗತಿಯೂ ಮತಿಯೂ ಎಲ್ಲವೂ ನೀನೇ ||೧೫೦|| ನಾನು ನಿನ್ನಲ್ಲಿ ಸಾಮಾನ್ಯ ದಾನವನ್ನು ಕೇಳಿದೆ. ನೀನಾದರೊ ಪುತ್ರದಾನವನ್ನೇ ಮಾಡಿದೆ. ಕರುಣಾಸಮುದ್ರನೂ ಮಹಾದಾನಿಯೂ, ಅತ್ಯಂತ ಮೇಧಾವಿಯೂ ಆದ ಎಲೈ ಸಂಬ್ಯಣ್ಣನೆ! ನಿನ್ನ ಹೆಸರನ್ನು ಹೊತ್ತಿರುವ ಈ ಸಂಬ್ಯಣ್ಣನನ್ನು ಪ್ರೀತಿಯಿಂದ ಸಲಹು'' ಎಂಬುದಾಗಿ ಸ್ತೋತ್ರಮಾಡಿ, ಅವನಪ್ಪಣೆಯನ್ನು ಪಡೆದು, ದ್ವಿಜನಾದವನಿಗೆ (ಎರಡುಸಲ ಹುಟ್ಟಿದವನಿಗೆ) ಮತ್ತೆ ದ್ವಿಜಸಂಸ್ಕಾರದಿಂದ ಫಲವೇನೆಂಬುದಾಗಿ ಸಂತುಷ್ಟರಾದ ಜನರು ಆಡುತ್ತಿರಲಾಗಿ, ತನ್ನ ಮಗನಿಗೆ ಉಪನಯನಕರ್ಮವನ್ನು ಮಾಡಿದನು. ||೧೫೧|| ಪ್ರತ್ಯಕ್ಷ ಭೂರುದ್ರನಾದ ಸಂಬ್ಯಣ್ಣನ ವಾಙ್ಮನಸ್ಸಕ್ಕತೀತವಾದ ಮಹಿಮೆಯನ್ನು ವರ್ಣಿಸುವುದಕ್ಕೆ ಮನುಜರಿಗೆ ಅಶಕ್ಯವು. ||೧೫೨|| ಈ ಮಲ್ಲಿಕಾರ್ಜುನ ಪಂಡಿತಾರಾಧ್ಯನ ನಿರ್ಮಲ ಮಹಿಮೆಯಾದರೊ ಆ ಸಂಬ್ಯಣ್ಣನ ಮಹಿಮೆಗಿಂತಲೂ ಅತಿಶಯವಾದುದು, ಎಂದು ಅಲ್ಲಿದ್ದ ಭಕ್ತಗಣಗಳೆಲ್ಲರೂ ಆಗ ಹೊಗಳಿದರು. ||೧೫೩||

ಎಂಬಲ್ಲಿಗೆ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಣ್. ಆರ್. ಕಂಬಸವಶಾಸ್ತ್ರಿಕೃತವಾದ ''ಭಾವಮಂಜರಿ'' ಎಂಬ ಕನ್ನಡ ಟಿಪ್ಪಣದಲ್ಲಿ ಮಹಿಮ ಪ್ರಕರಣದೊಳಗೆ ಸಂಬ್ಯಣ್ಣನು ಶಿವದ್ವಿಜನಿಗೆ ನೊಸಳೆ ಸುಂಗಿದ್ದ ಮಗನನ್ನು ದಾನಮಾಡಿದ ಕಥೆಯನ್ನು ವರ್ಣಿಸುವ ೧೫ನೆ ಅಧ್ಯಾಯವು ಮುಗಿದುದು.

---

## ಅಥ ಷೋಡಶೋಽಧ್ಯಾಯಃ.

### (ಧವಳೇಶಚರಿತ್ರಕಥನಂ.)

ಅಥ ಶ್ರೀಪಂಡಿತಾರಾಧ್ಯದೇವಸ್ಸದ್ಭಕ್ತಿಸಂಯುತಃ | ಗಣಪರ್ವಂವಿಧಿ ರ್ವೋಯ ವಸ್ತ್ರಭೂಷಣಸಂಚಯೈಃ || || ಸಂಪೂಜ್ಯದತ್ವಾಕರ್ಪೂರವೀಟಿಕಾ ಸ್ಸುಮನೋಹರಾಃ | ಗಾಯನ್ನಾನಂದಗೀತಾನಿ ಸದ್ಭಕ್ತ್ಯಾಸಮುದಗ್ರಯಾ || ಶ್ರೀಶಿವಾನಂದಲೀಲಾಭಿಃ ಪ್ರನೃತ್ಯನ್ನಧಿಕೋಜ್ವಲಃ | ಮುಹುಶ್ಶಂಕರಗೀತಾನಿ ಗಾಯಂಶ್ಚರಣಸಂಸದಿ || ೨ || ವರಶಂಕರಲೀಲಾಭಿರ್ನೃತ್ಯಂಸ್ತಾಲಲಯಾನು ಗಂ | ಮಹಾಪರಶಿವಾನಂದ ಭರಿತಸ್ಸನ್ನಿರಂತರಂ ||೩|| ಮಹೇಶ್ವರಗಣೈಸ್ಸಾಕ ಮುವಾಸಸುಖಲೀಲಯಾ | ಅರ್ಥಯಿತ್ವಾಽಥ ಕರ್ನಾಟಭಾಷಾಂಪ್ರಾಗ್ಬಸವಾ ಸ್ತಿಕಂ ||೪|| ಸಂಪ್ರೇಷಿತಸ್ಸಮಾಗತ್ಯ ಸದ್ಭಕ್ತೈಸ್ಸಹಜಂಗಮಃ | ಪಂಡಿತೇಂ ದ್ರಾಯ ಬಸವಮಾಹಾತ್ಮ್ಯಂ ಕೀರ್ತಯಂಸ್ತದಾ ||೫|| ಅರ್ಪಯಾಮಾಸ ಬಸ ವಪ್ರೇಷಿತಾಂ ಭೂತಿಮುತ್ತಮಾಂ | ತತೋಬಸವಹಸ್ತಾಬ್ಜಾಗತ ಭೂತಿಪ್ರಧಾ ರಣಾತ್ ||೬|| ಪ್ರಾಪ್ತಕರ್ನಾಟಭಾಷೋಕ್ತಗೀತೈಃ ಪ್ರಾಣೇಶ್ವರಂತದಾ |

---

## ೧೬ನೆ ಅಧ್ಯಾಯವು.

### (ಧವಳೇಶ ಚರಿತ್ರವು.)

ಬಳಿಕ ಶ್ರೀಮತ್ಪಂಡಿತಾರಾಧ್ಯಸ್ವಾಮಿಯು ಭಕ್ತಿಯಿಂದ ಕೂಡಿದವನಾಗಿ ಶಿವಗಣಪರ್ವ ವನ್ನು ಮಾಡಿ, ವಸ್ತ್ರಾಭರಣಾದಿಗಳನ್ನಿತ್ತು ಶಿವಗಣರನ್ನು ಪೂಜಿಸಿ, ಮನೋಹರವಾದ ಸಕ ರ್ಪೂರ ತಾಂಬೂಲವನ್ನು ಕೊಟ್ಟು, ಸದ್ಭಕ್ತಿಯಿಂದ ಕೂಡಿದ ಆನಂದ ಗೀತೆಗಳನ್ನು ಹಾಡಿ, ಬ್ರಹ್ಮಾನಂದದಿಂದ ಉಂಟಾದ ಉಲ್ಲಾಸದಿಂದ ಕುಣಿಯುತ್ತ, ಆ ಗಣಸಭೆಯಲ್ಲಿ ಶಿವಕೀರ್ತನ ಗಳನ್ನು ಹಾಡುತ್ತ, ತಾಳದ ಗತಿಗನುಸಾರವಾಗಿ ಶಿವಲೀಲೆಯಿಂದ ನರ್ತನಮಾಡುತ್ತ, ಯಾವಾ ಗಲೂ ಮಹಾ ಶಿವಾನಂದ ಪರಿಪೂರ್ಣನಾಗಿ ಶಿವಗಣಗಳೊಡನೆ ಕೂಡಿ ಸುಖವಾಗಿದ್ದನು ||೩|| ಬಳಿಕ ತಾನು ಕರ್ನಾಟ ಭಾಷೆಯನ್ನು ಬಯಸಿ, ಕಲ್ಯಾಣದ ಬಸವೇಶ್ವರನ ಬಳಿಗೆ ಕಳುಹಿಸಿ ಕೊಟ್ಟಿದ್ದ ಜಂಗಮನು ಭಕ್ತರೊಡನೆ ಕೂಡಿ ಬಂದು, ಬಸವೇಶನ ಮಹತ್ವಗಳನ್ನೆಲ್ಲಾ ಪಂಡಿ ತಾಚಾರ್ಯನಿಗೆ ಹೇಳಿ ||೫|| ಆ ಬಸವೇಶನು ಕಳುಹಿಸಿಕೊಟ್ಟಿದ್ದ ವಿಭೂತಿಯನ್ನು ಒಪ್ಪಿಸಿದ ನು. ಆ ಭಸ್ಮವನ್ನು ಪಂಡಿತಾರಾಧ್ಯಸ್ವಾಮಿಯು ಧರಿಸಿಕೊಂಡುದರಿಂದ ತನಗೆ ಕರ್ನಾಟ ಭಾ ಷೆಯ ಜ್ಞಾನವುಂಟಾಗಲು, ಬಳಿಕ ಆ ಭಾಷೆಯಿಂದಲೇ ತನ್ನ ಪ್ರಾಣೇಶನಾದ ಇಷ್ಟ ಲಿಂಗದ ಸ್ತೋತ್ರಗಳನ್ನು ಗೀತಗಳ ರೂಪವಾಗಿ ರಚಿಸಿ ಹಾಡಿ, ಅತ್ಯುತ್ಕೃಷ್ಟವಾದ ಬಸವೇಶ

ಗಾಯಂಚ್ಛ್ರೀಬಸವೇಶಸ್ಯ ಮಹಿಮಾನಂ ಮಹೋನ್ನತಂ ॥ ೮ ॥ ಶೃಣ್ವನ್ನನುಸ್ಮರನ್ಧ್ಯಾಯಃ ಪ್ರಣಮನ್ಬಸವೇಶ್ವರಂ । ಬಸವಶ್ರವಣಾಯಾತ ಮಹಾಸೌಖ್ಯೋ ಜಕಾಸತಿ ॥೯॥ ತದ್ದರ್ಶನೋತ್ಸುಕಮನಾ ಮಲ್ಲಿಕಾರ್ಜುನಪಂಡಿತಃ । ಪಾಪಕ್ಷಯಕರಂ ಸ್ವೀಯಂ ಬಸವೇತ್ಯಕ್ಷರತ್ರಯಂ ॥೧೦॥ ಪಠತಾಂ ರಕ್ಷಣಾಸಕ್ತಂ ಪ್ರತ್ಯಕ್ಷತ್ರ್ಯಕ್ಷಮಕ್ಷರಂ । ತ್ರ್ಯಕ್ಷಪ್ರಸಾದಪಕ್ವಾಕ್ಷಮಕ್ಷೀಣಕರುಣೇಕ್ಷಣಂ ॥ ಶಿಕ್ಷಿತಪ್ರತಿಪಕ್ಷೌಘಂ ಭವಪಾಶವಿಮೋಕ್ಷಕಂ । ಸಾಕ್ಷಾನ್ಮಹೋಕ್ಷಂ ಫಾಲಾಕ್ಷದತ್ತಫಾಲಾಕ್ಷಮುನ್ನತಂ ॥೧೨॥ ಸಂರಕ್ಷಿತಸ್ವಸಮಯಪಕ್ಷಂ ಸೇವ್ಯಂ ಮುಮುಕ್ಷುಭಿಃ । ದಕ್ಷಾಧ್ವರಕ್ಷಯಕರ ಸದೃಕ್ಷಗಣಸಂಯುತಂ ॥ ೧೩ ॥ ಪರೋಕ್ಷಂ ದುರ್ಜನಾನಾಂ ಸತ್ಕ್ರಿಯಾದಕ್ಷಂ ವಿಚಕ್ಷಣಂ । ರಕ್ಷಾರುದ್ರಾಕ್ಷನಿಹಿತಪಕ್ಷಮಕ್ಷೀಣವೈಭವಂ ॥ ೧೪ ॥ ಬಸವೇಶಂ ಗಣಾಧ್ಯಕ್ಷಂ ವೀಕ್ಷ್ಯೇಽಹಮಿತಿ ಸಾದರಂ । ಪ್ರತಸ್ಥೇ ಸಹಸದ್ಭಕ್ತೈಃ ಕಲ್ಯಾಣಕಟಕಂ ಪ್ರತಿ ॥೧೫॥ ಪ್ರತ್ಯುದ್ಯಾತಃ ಪ್ರತಿಗ್ರಾಮಂ ಶಿವಸದ್ಭಕ್ತಪುಂಗವೈಃ । ಸಮಾಯಯೌ ವಿರುಗುಡುಮುಲು

---

ಮಹತ್ತ್ವವನ್ನು ॥೮॥ ಕೇಳುತ್ತಲೂ, ಅಡಿಗಡಿಗೆ ಸ್ಮರಿಸಿಕೊಳ್ಳುತ್ತಲೂ, ಬಸವೇಶನನ್ನು ಮಣಿಯುತ್ತಲೂ, ಬಸವ ನಾಮಸ್ಮರಣದಿಂದ ಉಂಟಾದ ಸೌಖ್ಯಾತಿಶಯವು ಹೆಚ್ಚಾಗಲಾಗಿ ॥೯॥ ಪಂಡಿತಾರಾಧ್ಯನು ಆ ಬಸವೇಶನ ದರ್ಶನವನ್ನು ಮಾಡಿಕೊಂಡು ಬರಬೇಕೆಂದು ಸಂಕಲ್ಪಿಸಿದವನಾಗಿ, ತನ್ನ ಹೆಸರಾದ "ಬಸವ" ಎಂಬ ಪಾಪಧ್ವಂಸಕಗಳಾದ ಮೂರು ಅಕ್ಷರಗಳನ್ನು ಪಠಿಸುವವರನ್ನು ಕಾಪಾಡುವುದರಲ್ಲಿ ಆಸಕ್ತನೂ, ಪ್ರತ್ಯಕ್ಷ ಪರಶಿವನೂ, ನಾಶರಹಿತನೂ, ಶಿವಪ್ರಸಾದ ಸೇವನತತ್ಪರಗಳಾದ ಇಂದ್ರಿಯಗಳುಳ್ಳವನೂ, ಅತ್ಯಧಿಕ ದಯಾರಸಭರಿತ ಕಟಾಕ್ಷನೂ, ॥೧೧॥ ಶತ್ರುಪಕ್ಷವನ್ನು ಜಯಿಸಿದವನೂ, ಭಯಪಾಶವನ್ನು ತೊಲಗಿಸುವವನೂ, ಪ್ರತ್ಯಕ್ಷ ಮಹಾ ವೃಷಭಮೂರ್ತಿಯೂ, ಶಿವನಿಂದ ಅನುಗ್ರಹೀತವಾದ ಕಣ್ಣುಗಳುಳ್ಳವನೂ, ತನ್ನ ಮತದ ಬಲವನ್ನು ರಕ್ಷಣೆಮಾಡಿದವನೂ, ಮೋಕ್ಷಾಪೇಕ್ಷಿಗಳಿಂದ ಸೇವಿಸಲ್ಪಡತಕ್ಕವನೂ, ದಕ್ಷಯಜ್ಞವಿನಾಶಕನಾದ ವೀರಭದ್ರನಿಗೆ ಸಮಾನರಾದ ಶಿವಗಣಗಳಿಂದ ಕೂಡಿದವನೂ, ॥೧೩॥ ದುರ್ಜನರಿಗೆ ಶತ್ರುವೂ, ಸದಾಚಾರ ನಿರೂಪಣಸಮರ್ಥನೂ, ಮಹಾ ಕುಶಲನೂ, ವಿಭೂತಿ ರುದ್ರಾಕ್ಷಗಳಲ್ಲಿ ಆಸಕ್ತಿಯುಳ್ಳವನೂ, ಅತಿಶಯ ವೈಭವ ಸಂಪನ್ನನೂ ॥ ಶಿವಗಣಾಧ್ಯಕ್ಷನೂ ಆದ ಬಸವೇಶನನ್ನು ತಾನು ನೋಡಬೇಕೆಂಬ ಕುತೂಹಲದಿಂದ ಕೂಡಿ, ಪಂಡಿತಾರಾಧ್ಯನು ಅನೇಕ ಭಕ್ತಜನರೊಡಗೂಡಿ ಕಲ್ಯಾಣಪಟ್ಟಣವನ್ನು ಕುರಿತು ಪ್ರಯಾಣ ಮಾಡಿದನು ॥೧೫॥ ದಾರಿಯಲ್ಲಿ ಪ್ರತಿಗ್ರಾಮದಲ್ಲೂ ಶಿವಭಕ್ತಶ್ರೇಷ್ಠರುಗಳಿಂದ ಇದಿರುಗೊಳ್ಳಲ್ಪಡುತ್ತ ಸಂತೋಷಗೊಂಡವನಾಗಿ ಇರುಗುಡುಮುಲು (ಶಿರುಗುಡುಮುಲು) ಎಂಬ

ಗ್ರಾಮಂಪ್ರಹರ್ಷಿತಃ ||೧೬|| ತತ್ರಪ್ರೀತ್ಯಾ ವೀರಚಾಕಿರಾಜಸ್ಯಪರಮೋನ್ನ ತಾಂ | ಶ್ರೀಸಾರಂಗೇಶ್ವರೇಭಕ್ತಿಂ ಸೀಮಾಲಂಘನಸದ್ವ್ರತೇ ||೧೭|| ಆಸಕ್ತಿಂ ತ್ರಿಷುಕಾಲೇಷುಯುಕ್ತಿಂ ಲಿಂಗಾರ್ಚನಾವಿಧೇಃ | ಪರಿಚರ್ಯಾಸುರಕ್ತಿಂಚ ಜಂಗ ಮಾನಾಂ ನಿರಂತರಂ ||೧೮|| ಶಿವಸದ್ಭಕ್ತಿಗೋಷ್ಠೀಷು ಯಥಾರ್ಥೋಕ್ತಿಂ ಸಮಂಚಿತಾಂ | ಧೂತವರ್ಣಾಶ್ರಮವ್ಯಕ್ತಿಂ ಪ್ರಯುಕ್ತಿಂ ಶ್ರುತಿಪದ್ಧತೇಃ ||೧೯ ಸಂಸ್ತುವನ್ಪರಮಪ್ರೀತ್ಯಾ ಮಲ್ಲಿಕಾರ್ಜುನಪಂಡಿತಃ | ನಿಜಾಗ್ರಶಿಷ್ಯದೋನಯ್ಯ ಸ್ಯಾಗ್ರಜಸ್ಯಮಹಾತ್ಮನಃ ||೨೦|| ಶ್ರೀವೀರಚಾಕಿರಾಜಸ್ಯ ಸದ್ಭಕ್ತಿಸಮುದಂ ಚಿತಾಂ | ಸ್ವೀಕುರ್ವನ್ಪ್ರಣಿಪತ್ತಿಂತಾಂ ಪಾನುಗಲ್ಲುಪುರೀಂಯಯೌ ||೨೧|| ಸ್ವ ಶಿಷ್ಯಸ್ತತ್ರಭಂಡಾರಿ ಗೋವಿಂದಪ್ರೆಗಡಾಹ್ವಯಃ | ಮಾಹೇಶ್ವರೈಶ್ಚ ತತ್ರತ್ಯೈ ಸ್ಸಂಯುಕ್ತಸ್ಸಂಭ್ರಮಾನ್ವಿತಃ ||೨೨|| ಆಸೇಚನಂಕಾರಯಿತ್ವಾ ಪುರವೀಥೀರ ಥಾಂಬುಭಿಃ | ವಿರಚಯ್ಯಪ್ರಯತ್ನೇನ ರಂಗವಲ್ಲೀರ್ವಿಚಿತ್ರಿತಾಃ ||೨೩|| ಪಟ ವೇಶ್ಮಾತಪತ್ರೋಕ್ಷಪತಾಕಾ ವಾತಪೂರಣೈಃ | ಪ್ರವಾಲಮುಕ್ತಾಮಾಣಿಕ್ಯ ಮುಕುರಾದಿ ವಿಭೂಷಿತೈಃ ||೨೪|| ಪಾರ್ಶ್ವಯೋಸ್ಸಮಲಂಕೃತ್ಯ ಮಾರ್ಗಂ ಮಕರತೋರಣೈಃ | ಸಮುದ್ಯದ್ವಾದ್ಯನಿಸ್ವಾನೇ ಬಧಿರೀಕೃತದಿಙ್ಮುಖೇ ||೨೫||

---

ಗ್ರಾಮಕ್ಕೆ ಬಂದನು. ||೧೬|| ಅಲ್ಲಿರುವ ವೀರಚಾಕಿರಾಜನೆಂಬುವವನು ಸಾರಂಗೇಶ್ವರನಲ್ಲಿ ಇಟ್ಟಿರುವ ಉತ್ಕೃಷ್ಟ ಭಕ್ತಿಯನ್ನೂ, ತನ್ನ ಲಿಂಗಾಂಕಿತ ಭೂಪ್ರದೇಶದ ಎಲ್ಲೆಯನ್ನು ಬಿಟ್ಟು ಹೊರಕ್ಕೆ ಹೋಗದೆ ಇರುವ ಆತನ ದೃಢವ್ರತನಿಷ್ಠೆಯನ್ನೂ, ಆತನ ತ್ರಿಕಾಲಲಿಂಗಪೂಜಾ ಯೋಗವನ್ನೂ, ಸದಾ ಜಂಗಮಾರಾಧನ ಪ್ರೇಮವನ್ನೂ ||೧೮|| ಶಿವಾನುಭವಗೋಷ್ಠಿಗಳ ಲ್ಲಿ ಆತನ ಪ್ರಸಂಗಾವಧಾನವನ್ನೂ, ಪ್ರಾಕೃತ ವರ್ಣಾಶ್ರಮ ವ್ಯವಹಾರವನ್ನು ದೂರೀಕರಿಸಿ ವೈದಿಕಧರ್ಮಾಚರಣಪಕ್ಷಪರನಾಗಿರುವುದನ್ನೂ ಸಹ ಮಲ್ಲಿಕಾರ್ಜುನ ಪಂಡಿತಾರಾಧ್ಯನು ನೋಡಿ ಸಂತೋಷದಿಂದ ಹೊಗಳಿದವನಾಗಿ, ತನ್ನ ಹಿರಿಯ ಶಿಷ್ಯನಾದ ದೋನಮಾರ್ಯನ ಅಣ್ಣನಾದ ಆ ವೀರಚಾಕಿರಾಜನು ಮಾಡಿದ ಭಕ್ತಿಭರಿತ ಪೂಜೆಯನ್ನು ಸ್ವೀಕರಿಸಿ, ಪಾನುಗಲ್ಲೆಂಬ ಪಟ್ಟಣಕ್ಕೆ ಹೊರಟನು. ||೨೧|| ಅಲ್ಲಿದ್ದ ಭಂಡಾರಿ ಗೋವಿಂದ ಪ್ರೆಗಡ ಎಂಬ ಪಂಡಿತಾರಾಧ್ಯಶಿಷ್ಯನು ಇವರ ಆಗಮನ ವಾರ್ತೆಯನ್ನು ಕೇಳಿ, ಅಲ್ಲಿಯ ಇತರ ಮಾಹೇಶ್ವರರೊಡನೆ ಕೂಡಿ ಸಡಗರದಿಂದ ||೨೨|| ಊರ ಬೀದಿಗಳನ್ನೆಲ್ಲಾ ಸಾರಣೆಕಾರಣೆಗಳನ್ನು ಮಾಡಿಸಿ ||೨೩|| ಗುಡಾರಗಳ ನ್ನು ಹೂಡಿಸಿ, ಛತ್ರ ನಂದಿಧ್ವಜ ಚಾಮರಗಳಿಂದಲೂ, ಹವಳ ಮುತ್ತು ರತ್ನಗಳ ಕುಚ್ಚುಗ ಳಿಂದಲೂ, ಕನ್ನಡಿಗಳಿಂದಲೂ, ಬೀದಿಯ ಎರಡು ಪಕ್ಕಗಳನ್ನೂ ಅಲಂಕರಿಸಿ, ಅಲ್ಲಲ್ಲಿಗೆ ಮ ಕರತೋರಣಗಳನ್ನು ಕಟ್ಟಿಸಿ, ನಾನಾ ವಾದ್ಯಧ್ವನಿಗಳು ದಶದಿಕ್ಕುಗಳನ್ನೂ ಕಿವುಡುಮಾಡುತ್ತಿ ರಲಾಗಿ ||೨೫|| ನಾನಾತರಹ ಹಾಡುಗಾರಿಕೆಗಳೂ, ವೇಶ್ಯಾನೃತ್ಯಾದಿ ನರ್ತನಗಳೂ ಅಲ್ಲಲ್ಲಿಗೆ

ಶುದ್ಧಸಾಲಗಗೀತಾಂಚತೂರ್ಸಲಾದಿಸ್ವತಿಶೋಭಿಮ | ದೇಶ್ಯಾದಿನೃತ್ತೇಲಲಿತೇ ತತ್ರತತ್ರಸಮುಂಚತಿ ||೨೬|| ಸಸಂಭ್ರಮಂಪುರಜನೈಃಕೃತೇ ಜಯಜಯಧ್ವನೌ | ಗುರುಪಾದಾಂಬುಜಾಲೋಕ ಪ್ರಣಾಮಾಂತೇಪ್ರಹರ್ಷಿತಃ ||೨೭|| ತತ್ರತತ್ರಸ ಮಸ್ ನಾಂಗಂದಿವ್ಯಭೂಷಾಂಬರಾವಲೀಃ | ಸ್ವರ್ಣಪಾತ್ರಾಣಿ ವಿವಿಧಫಲಪು ಷ್ಪಕದಂಬಕಂ ||೨೮|| ಸುಗನ್ಧದ್ರವ್ಯನಿಕರಂ ಸಾರಕರ್ಪೂರವೀಟಿಕಾಃ | ಭಕ್ತ್ಯಾ ಸಮರ್ಪ್ಯಭೂಯೋಪಿ ಸಾಷ್ಟಾಂಗಂಪ್ರಣಿಪತ್ಯಸಃ ||೨೯|| ಆನಂದಬಾಷ್ಪಧಾ ರಾಭಿಃ ಕ್ಷಾಳಯಿತ್ವಾಗುರೋಃಪದೇ | ಸ್ವಕೀಯಹೃತ್ಪ್ರಸೂನೇನ ಪೂಜಯಿತ್ವಾ ಚಭಕ್ತಿತಃ ||೩೦|| ಸ್ವಭಕ್ತಿವಾಸನಾಧೂಪಂ ಸ್ತುತಿವಾಙ್ಮಣಿದೀಪಿಕಾಃ | ಪ್ರೀ ತ್ಯಾರ್ಪಯಿತ್ವಾಥಮನೋ ನೈವೇದ್ಯಮುಪಕಲ್ಪ್ಯಚ ||೩೧|| ಸ್ನೇಹಯಾನು ರಾಗತಾಂಬೂಲಪ್ರದಾನಸಮನಂತರಂ | ಮಾಣಿಕ್ಯಹೇಮರಚಿತಪುಷ್ಪೈಃ ಪು ಷ್ಪಾಂಜಲಿತ್ರಯಂ ||೩೨|| ಸಮರ್ಪ್ಯಸ್ವಾಂಗಚೇಷ್ಟಾಭಿಃ ಕೃತ್ವಾಗುರುಪದಾ ರ್ಚನಂ | ಶರೀರಮರ್ಥಂಪ್ರಾಣಾಂಶ್ಚ ಸದ್ಗುರುಭ್ಯೋನಿವೇದಯೇತ್ ||೩೩|| ಇತ್ಯುಕ್ತೇಃಪ್ರಾಣದೇಹಾರ್ಥಾ ನ್ಸಮರ್ಪ್ಯಗುರವೇಽನಮತ್ | ಅನ್ಯೋನ್ಯದ ರ್ಶನಾನ್ಯೋನ್ಯ ಸನ್ನುತಾನ್ಯೋನ್ಯವಂದನೈಃ ||೩೪|| ತುಷ್ಟೈಸ್ಸದ್ಭಕ್ತನಿವಹೈ

---

ನಡೆಯುತ್ತಿರಲಾಗಿ ||೨೬|| ಊರಜನರು ಸಂಭ್ರಮದಿಂದ ಜಯಜಯಎನ್ನುತ್ತಿರಲು, ಗೋವಿಂ ದಪ್ರೆಗಡನು ಶ್ರೀಪಂಡಿತಾರಾಧ್ಯ ಗುರುವಿನ ಪಾದಕಮಲ ದರ್ಶನವನ್ನು ಮಾಡಿದ ಕೂಡಲೇ ನಮಸ್ಕಾರಮಾಡಿ, ಪರಮಾನಂದಗೊಂಡು, ಅಲ್ಲಿಗೆಲ್ಲಿಗೆ ಸಾಷ್ಟಾಂಗವಾಗಿ ಮಣಿಯುತ್ತ, ದಿವ್ಯ ವಸ್ತ್ರಾಭರಣಗಳನ್ನೂ, ಬಂಗಾರದ ಪಾತ್ರಗಳನ್ನೂ, ನಾನಾ ಫಲಪುಷ್ಪಗಳನ್ನೂ ||೨೮|| ಪರಿಮಳ ದ್ರವ್ಯಗಳನ್ನೂ, ಸಕರ್ಪೂರ ತಾಂಬೂಲಗಳನ್ನೂ ಸಹ ಭಕ್ತಿಯಿಂದ ಒಪ್ಪಿಸಿ, ಮತ್ತೆ ಮತ್ತೆ ಅಡ್ಡಬಿದ್ದು ||೨೯|| ಶ್ರೀಗುರುಪಾದಗಳನ್ನು ತನ್ನ ಕಣ್ಣಿಂದ ಧಾರೆಯಾಗಿ ಸುರಿಯು ತ್ತಿರುವ ಆನಂದ ಜಲದಿಂದ ಪ್ರಕ್ಷಾಳನೆ ಮಾಡಿ, ತನ್ನ ಹೃದಯ ಕಮಲದಿಂದ ಭಕ್ತಿಪೂರ್ವಕ ವಾಗಿ ಪೂಜಿಸಿ ||೩೦|| ಭಕ್ತಿಲೀಲೆಯೆಂಬ ಧೂಪವನ್ನೂ, ಸ್ತೋತ್ರವಚನಗಳೆಂಬ ರತ್ನದೀಪಾ ರತಿಗಳನ್ನೂ ಪ್ರೀತಿಯಿಂದ ಸಮರ್ಪಿಸಿ, ಬಳಿಕ ಮನಸ್ಸಮರ್ಪಣೆಯೆಂಬ ನೈವೇದ್ಯವಂ ಮಾಡಿ ||೩೧|| ಪ್ರೇಮವೆಂಬ ತಾಂಬೂಲಹನ್ನೊಪ್ಪಿಸಿ, ರನ್ನಚಿನ್ನದಿಂದ ಮಾಡಿದ ಹೂವುಗಳಿಂದ ಮೂ ರುಸಲ ಪುಷ್ಪಾಂಜಲಿ ಮಾಡಿ ||೩೨|| ಹೀಗೆ ತನ್ನಲ್ಲಿ ಉಂಟಾದ ಸಾತ್ವಿಕಗಳಾದ ಅಂಗವಿಕಾ ರಗಳಿಂದಲೇ ಶ್ರೀಗುರು ಪಾದಾರ್ಚನೆಯನ್ನು ಮಾಡಿ, ಉತ್ತಮ ಗುರುಗಳಿಗೆ ತನ್ನ ತನು ಧನ ಪ್ರಾಣಗಳನ್ನು ಸಮರ್ಪಿಸಬೇಕೆಂದು ಹೇಳಿರುವ ಶಿವಾಗಮೋಕ್ತಿಗನುಸಾರವಾಗಿ ಆ ಪಂಡಿತಾ ರಾಧ್ಯ ಗುರುವಿಗೆ ತನ್ನ ತನು ಧನ ಪ್ರಾಣಗಳನ್ನು ಸಮರ್ಪಿಸಿ ನಮಸ್ಕರಿಸಿದನು. ಬಳಿಕ ಅಲ್ಲಿ ದ್ದ ಮಹಾ ಶಿವಭಕ್ತರೆಲ್ಲರೂ ತಮ್ಮೂರಿಗೆ ಹೊಸದಾಗಿ ಬಂದ ಪಂಡಿತಾರಾಧ್ಯರ ಪರಿವಾರದ

ಮಲ್ಲಿಕಾರ್ಜುನದೇಶಿಕಃ | ಆನೀಯಮಾನಸ್ಸಂಪ್ರೀತ್ಯಾ ತತ್ಪುರೀಂಸಮುಪಾಗಮತ್ ||೩೫|| ತದಾಪುಣ್ಯಾಂಗನಾಃ ಪುಣ್ಯಾಪುರುಷಾಶ್ಚ ಸಮಂತತಃ | ಶಿವಸದ್ಭಕ್ತ್ಯೈಕಗುಣ್ಯಾಂ ಶರಣ್ಯಾಂ ಭುವನೇಸತಾಂ ||೩೬|| ಸಮೃದ್ಧತರಕಾರುಣ್ಯಾಂ ವರೇಣ್ಯಾಂ ಬುಧಸಂಹತೌ | ವೀರಾಗ್ರಗಣ್ಯಾಂ ಸುಗುಣಮಣಿಪಣ್ಯಾಮುದಂಚಿತಂ|| ದೂರನಿರ್ಧೂತಕಾರ್ಪಣ್ಯಮಾದಿಗಣ್ಯಂ ಮಹಾತ್ಮನಾಂ | ಅಗಣ್ಯಪುಣ್ಯಾಂರಚಿತನತಪುಣ್ಯಾಂ ಗಣೋತ್ತಮಂ ||೩೮|| ವೀಕ್ಷ್ಯಶ್ರೀಪಂಡಿತಾರಾಧ್ಯಂ ಜಗದಾರಾಧ್ಯಮುನ್ನತಂ | ಸ್ವಮಸ್ತಕನ್ಯಸ್ತಹಸ್ತಾ ಶ್ಯಶಂಸುರತಿಭಕ್ತಿತಃ ||೩೯|| ತತ್ಪುರೀನರನಾಥಶ್ಚ ನನಾಮಾತ್ಯಂತಹರ್ಷತಃ | ಗಚ್ಛತಃಪೃಷ್ಠತೋ ಗಚ್ಛೇದ್ಗುರೋಶ್ಛಾಯಾಂನಲಂಘಯೇತ್ ||೪೦|| ಇತಿವಾಕ್ಯಾತ್ತತೋಗಚ್ಛೇ ನ್ನಮಸ್ಕೃತ್ಯೇತಿಕೀರ್ತನಾತ್ | ಉದೀರಣಾನ್ನಿಜಗುರುಮೂರ್ತಿ ಮಿತ್ಯತಿಭಾಸುರಾತ್ || ವಿಶುದ್ಧಗುರುಸದ್ಭಕ್ತಿ ಸಂಪದಾಪರಿಜೃಂಭಿತಃ | ಗೋವಿಂದಪ್ರೆಗಡಸ್ತಸ್ಯ ಛಾಯಾಂಪಾದೇನಕುತ್ರಚಿತ್ ||೪೧|| ಅನಾಕ್ರಮ್ಯಾಲಂಘಯಿತ್ವಾ ಪದಾಸ್ಯಪಿತಥಾಪುನಃ | ಅಲಂಘಯಿತ್ವಾಽನಾಕ್ರಮ್ಯ ಪ್ರಣಾಮಂಸ್ತತ್ರತತ್ರಚ ||೪೨|| ನೀತ್ವಾಶ್ರೀಪಂಡಿತಾರಾಧ್ಯ ಮಾತ್ಮೀಯಭವನಾಂತರಂ | ಕೃತ್ವಾಸಿಂಹಾಸನಾಸೀ

---

ಭಕ್ತರನ್ನು ಸಂದರ್ಶಿಸಿ, ಪರಸ್ಪರ ಅಡ್ಡಬಿದ್ದು ಒಬ್ಬರನ್ನೊಬ್ಬರು ಕೊಂಡಾಡುತ್ತ ಸಂತೋಷಪಟ್ಟುಕೊಂಡು, ಪ್ರೀತಿಯಿಂದ ಶ್ರೀಮಲ್ಲಿಕಾರ್ಜುನ ಪಂಡಿತರನ್ನು ಊರಿಗೆ ಕರೆದುಕೊಂಡು ಹೋದರು. ||೩೫|| ಆಗ ಊರಿನಲ್ಲಿದ್ದ ಹೆಣ್ಣು ಗಂಡೆಲ್ಲವೂ, ಶಿವಭಕ್ತಿಗೆ ಮಾತ್ರ ಸಿಲುಕತಕ್ಕವನೂ, ಸಜ್ಜನ ರಕ್ಷಕನೂ, ಮಹಾ ಕರುಣಾಶಾಲಿಯೂ, ವಿದ್ವದ್ವರೇಣ್ಯನೂ, ವೀರಶೈವಾಗ್ರೇಸರನೂ, ಸದ್ಗುಣಮಣಿ ಪರಿಪೂರ್ಣನೂ, ದೀನತ್ವವನ್ನು ಅತ್ಯಂತವಾಗಿ ದೂರೀಕರಿಸಿದವನೂ, ಮಹಾತ್ಮರಲ್ಲಿ ಅಗ್ರಗಣ್ಯನೂ, ಮಹಾ ಪರಿಶುದ್ಧನೂ, ತನ್ನನ್ನು ನಮಸ್ಕರಿಸಿದವರಿಗೆ ಪುಣ್ಯಪ್ರದನೂ, ಶಿವಗಣಶ್ರೇಷ್ಠನೂ ||೩೮|| ಆದ ಶ್ರೀ ಜಗದ್ಗುರು ಪಂಡಿತಾರಾಧ್ಯನನ್ನು ನೋಡಿ, ತಂತಮ್ಮ ತಲೆಗಳ ಮೇಲೆ ಕೈ ಜೋಡಿಸಿಕೊಂಡು ಅತ್ಯಂತ ಭಕ್ತಿಯಿಂದ ಸ್ತೋತ್ರಮಾಡಿದರು. ||೩೯|| ಆ ಪುರಿನ ದೊರೆಯೂ ಕೂಡ ಅತಿ ಸಂತೋಷದಿಂದ ಗುರುವಿಗೆ ನಮಸ್ಕರಿಸಿದನು. ‘‘ಗುರುವು ಹೋಗುತ್ತಿದ್ದರೆ ಆತನ ಹಿಂಗಡೆಯಲ್ಲಿ ಭಕ್ತನು ಹೋಗಬೇಕು. ಗುರುವಿನ ನೆಳಲನ್ನು ಭಕ್ತನು ಯಾವಾಗಲೂ ದಾಟಬಾರದು. ಗುರುವನ್ನು ಕಂಡರೆ ನಮಸ್ಕರಿಸಿಯೇ ಮುಂದಕ್ಕೆ ಹೋಗಬೇಕು’’ ಎಂಬುದಾಗಿ ಶಿವಶಾಸ್ತ್ರವಚನವಿರುವುದರಿಂದ ||೪೧|| ಗುರುಪಾದಭಕ್ತಿಸಂಪದ್ಭರಿತನಾಗಿರುವ ಗೋವಿಂದ ಪ್ರೆಗಡಯ್ಯನು ತನ್ನ ಕಾಲಿನಿಂದ ಗುರುವಿನ ಪಾದಛಾಯೆಯನ್ನು ಎಲ್ಲೂ ತುಳಿಯದೆ ದಾಟದೆ, ಶ್ರೀಗುರು ಪಾದವನ್ನೂ ಕೂಡ ದಾಂಟದೆ, ಅಲ್ಲಲ್ಲಿಗೆ ನಮಸ್ಕರಿಸುತ್ತ, ಶ್ರೀ ಪಂಡಿತಾರಾಧ್ಯನನ್ನು ತನ್ನ ಮನೆಯೊಳಕ್ಕೆ ಕರೆದುಕೊಂಡುಹೋಗಿ

ಸಂ ಕ್ಷಾಳಯಿತ್ವಾಪದಾಂಬುಜೇ ||೪೪|| ಪಾದಾಂಬುಸೇವನಂಕೃತ್ವಾ ಗಂಧಪು
ಷ್ಪಾಕ್ಷತಾಂಭುಭಾನ್ | ಧೂಪದೀಪೌಚಾರ್ಪಯಿತ್ವಾ ಮಹತೀಂಭಕ್ತಿಮಾಶ್ರಿ
ತಃ ||೪೫|| ಸ್ವಗೃಹಂಸ್ವಧನಂಚೈವೇತ್ಯೇತದ್ವಾಕ್ಯಾನುಸಾರತಃ | ಸ್ವಗೃಹೇ
ಸಂಸ್ಥಿತಂ ಸರ್ವಂಧನಂಧಾನ್ಯಂಗವಾಂಕುಲಂ ||೪೬|| ವಾಹನಾನಿಮಹಾಚೀನ
ಪ್ರಮುಖಾಂಬರಸಂಚಯಂ | ಅನರ್ಘ್ಯರತ್ನಖಚಿತ ಭೂಷಣಾನಿಮನೋಹರಂ ||
ಸುಗಂಧದ್ರವ್ಯಸಂಘಾದಿ ಸರ್ವಸ್ವಂಸಮುಪಾರ್ಜಿತಂ | ಸಮರ್ಪ್ಯವಿಧಿವತ್ತಸ್ಯ
ಪ್ರಸಾಂದಾಂಬುನಿಧೌಗುರೋಃ ||೪೭|| ಮಜ್ಜನ್ನುವಾಸ ಭಜನಪ್ರೀತಿನಿರ್ಭರ
ಮಾನಸಃ | ನಿತ್ಯಂಸದ್ಭಕ್ತಗೇಹೇಷು ಪೂಜಾಸುವಿವಿಧಾಸ್ವಪಿ ||೪೮|| ವಿಭೂತಿ
ವೀಟಿಕಾಸೂದ್ಯತ್ ಪ್ರಾಕ್ತನಾನಾಂಚ ಪರ್ವಸು| ಯಾತ್ರಾಸೂದಂಚಿತಗಣಾಡಂ
ಬರೇಷುನಿರಂತರಂ ||೫೦|| ವೀರದೀಕ್ಷಾಸೂತ್ಸವೇಷು ನರ್ತನೇಷುಚತುರ್ಷ್ವತಃ|
ಏವಮಾದಿಷುಸರ್ವೇಷು ಸಂತತಂಪರಿಶೋಭಿಷು ||೫೧|| ಸಮುನ್ನತ ಮಹಾ
ದೇವ ತತ್ವಗೋಷ್ಠೀಪ್ರಸಂಗತಃ | ಭಕ್ತ್ಯೈಸ್ಸಮೇತಸ್ಸದ್ಭಕ್ತಿ ಸುಧಾಸಿಂಧೌಮಹ
ತ್ತರೇ ||೫೨|| ಅತಿಷ್ಠದ್ವಿಹರನ್ನಿತ್ಯಾ ಮಲ್ಲಿಕಾರ್ಜುನದೇಶಿಕಃ | ಸ್ವಭಾವ
ಸಿದ್ಧಲಿಂಗೈಕ ನಿಷ್ಠಾವೃತ್ತ್ಯಾಮಹೋನ್ನತೇ ||೫೩|| ತಸ್ಮಿನ್ಪುರೇವರ್ತಮಾನೇ

---

ಸಿಂಹಾಸನದ ಮೇಲೆ ಕುಳ್ಳಿರಿಸಿ ಪಾದಕಮಲಗಳನ್ನು ತೊಳೆದು ||೪೪|| ತೀರ್ಥಸೇವನೆಯನ್ನು ಮಾಡಿ ಮಹಾ ಭಕ್ತಿಪೂರ್ವಕವಾಗಿ ಗಂಧ ಪುಷ್ಪ ಧೂಪದೀಪಾದಿಗಳಿಂದ ಪಾದವನ್ನರ್ಚಿಸಿ, ತನ್ನ ಮನೆಯನ್ನೂ ಧನಕನಕವನ್ನೂ ಶ್ರೀಗುರುವಿಗೆ ಸೂರೆಕೊಡಬೇಕೆಂಬ ಶಿವಾಗಮೋಕ್ತಿಯಂತೆ ತನ್ನ ಮನೆಯಲ್ಲಿದ್ದ ಸಕಲ ಧನಧಾನ್ಯಗಳನ್ನೂ ಪಶುಗಳನ್ನೂ ವಾಹನಗಳನ್ನೂ ಪಟ್ಟೆವಸ್ತ್ರ ರತ್ನಾಭರಣಗಳನ್ನೂ ಪರಿಮಳಾದಿಯಾದ ತನ್ನ ಯಾವದಾರ್ಜಿತ ದ್ರವ್ಯಗಳನ್ನೂ ಗುರುಪಾದಕ್ಕೆ ವಿಧಿವತ್ತಾಗಿ ಸಮರ್ಪಿಸಿ, ಆ ಶ್ರೀ ಗುರುವಿನ ಅನುಗ್ರಹವೆಂಬ ಮಹಾ ಸಮುದ್ರದಲ್ಲಿ ಮುಳುಗಿ, ಆ ಗುರುಪಾದಸೇವೆಯಲ್ಲಿ ಅಚಂಚಲವಾಗಿ ತೊಡಗಿದ ಮನಸ್ಸುಳ್ಳವನಾಗಿ ಇರುತ್ತಿದ್ದನು.||೪೭|| ಶ್ರೀ ಪಂಡಿತಾಚಾರ್ಯನಾದರೂ ಪ್ರತಿದಿನವೂ ಭಕ್ತರುಗಳ ಮನೆಯಲ್ಲಿ ನಾನಾವಿಧದ ಅರ್ಚನೆಗಳೂ, ವಿಭೂತಿ ವೀಳಯದ ಸಮರ್ಪಣಪೂರ್ವಕವಾದ ಬಿನ್ನಹಗಳೂ, ಪುರಾತನ ಶರಣರ ಹೆಸರಿನ ಮೇಲಣ ಪರ್ವಗಳೂ, ಶಿವಯಾತ್ರೆಗಳೂ, ಗಣಾರಾಧನೆಗಳೂ, ವೀರಶೈವದೀಕ್ಷೆಗಳೂ, ಶಿವೋತ್ಸವಗಳೂ, ಭೃಂಗಿನರ್ತನಗಳೂ ಇವೇ ಮೊದಲಾದ ಮಹೋತ್ಸವಗಳು ಬಿಡುವಿಲ್ಲದೆ ನಡೆಯುತ್ತಿರಲಾಗಿ ಅವುಗಳಲ್ಲೆಲ್ಲಾ ಸೇರಿದ ಭಕ್ತವೃಂದದೊಡನೆ ಶಿವಾನುಭವ ಪ್ರಸಂಗವನ್ನು ಮಾಡುತ್ತ, ಮಹಾ ಶಿವಭಕ್ತಿ ಸುಧಾಸಾಗರದಲ್ಲಿ ಕ್ರೀಡಿಸುತ್ತ ಸಂತೋಷದಿಂದಿದ್ದನು. ||೫೨|| ಆ ಊರಿನಲ್ಲಿ ಧನಳೇಶ್ವರನಾಮಯನೆಂಬ ಭಕ್ತನೊಬ್ಬನು ಶಿವಲಿಂಗ ನಿಷ್ಠೆಯಲ್ಲದೆ ಬೇರೊಂದು ವ್ರತವನ್ನಾಚರಿಸದ ದೃಢಶೀಲನಾಗಿರುತ್ತಿರುವಲ್ಲಿ ಅವನ ಜತೆಯಲ್ಲಿ ದೊರೆಯ ಬಳಿಯಣ ಊಳಿ

ಧವಳೇಶ್ವರನಾಮಯೇ | ಅಸಹ್ಯಭಾವತಃಪ್ರೇಕ್ಷ್ಯ ಜಾತುಸ್ವಸಹಚಾರಿಣಃ ||
ಸಮುಪೇತ್ಯೋದಯಮಹೀಪಾಲಮೇವಂ ವಚೋಽಬ್ರುವನ್ | ಅದ್ಯಃಕಿಂಕರವ
ರ್ಗಸ್ಯ ಭವತೋಧರಣೀಪತೇ ||೫೫|| ನಾಮಯೋಽಯಮಿದಾನೀಂತ್ವಾ ಮ
ನಾದೃತ್ಯಪ್ರವರ್ತತೇ| ಪ್ರತಿಗೃಹ್ಯಾರ್ಪಿತಾಂಬೂಲಂ ಭವತಾಪರಿಚರ್ವಿತಂ ||೫೬||
ಭಕ್ತೋಽಹಮಿತಿಸಂಜಲ್ಪನ್ ಸದ್ಯಏವಪ್ರಮುಂಚತಿ| ನಾಗಚ್ಛತಿಸಮಾಹೂತೋ
ಸತ್ವಾಮಾಶ್ರಿತ್ಯಸೇವತೇ ||೫೭|| ಪಂಡಿತೇಂದ್ರಸ್ಯನಿಕಟೇ ಶಿವಭಕ್ತಸಮೀಪತಃ |
ಸದಾತಿಷ್ಠತಿಪಶ್ಯಾದ್ಯ ಯದಿನಪ್ರತ್ಯಯಸ್ತವ ||೫೮|| ಅಥರಾಜಾಸಮಾಹೂಯ
ಸಃ ಮಾಗಚ್ಛೇತಇತ್ಯಮುಂ | ಪ್ರದದೌತತ್ಕರತಲೇ ತಾಂಬೂಲಂಸ್ವೇನಭಕ್ಷಿತಂ|
ಸಮೀಪಮೇವನೃಪತೇ ಸ್ತತ್ತಾಂಬೂಲಂವಿಸೃಜ್ಯಸಃ | ಭಸ್ಮಾವಲಿಪ್ತಹಸ್ತಸ್ಸ ಸ್ಗು
ರುಸ್ಮರಣಪೂರ್ವಕಂ ||೬೦|| ಉವಾಚೈವಂವಚೋಧೀಮಾನ್ನಿರೀಕ್ಷ್ಯನೃಪತಿಂ
ವಿಭೀಃ | ಪರಾಮೃಷ್ಟೇಸೇವಕಾನಾಂ ಧರ್ಮೇಯುಕ್ತಂಭವೇತ್‌ಕ್ಷಿತೌ ||೬೧||
ಗೃಹೀತುಮೇವಹಸ್ತೇನ ತಾಂಬೂಲಂ ಭಕ್ಷಿತಂತ್ವಯಾ | ವಿಚಾರಿತೇ ಭಕ್ತಿಧ
ರ್ಮೇ ಪ್ರಸಾದೇತರವಸ್ತುನೇ ||೬೨|| ಸಂಪ್ರಸಾರಯಿತುಂಹಸ್ತಂ ಯುಜ್ಯತೇಕಿ
ಮುಭೂಪತೇ | ನೈತದರ್ಪಯಿತುಂಯುಕ್ತಂ ತಾಂಬೂಲಂ ಭಕ್ಷಿತಂತ್ವಯಾ ||

---

ಗದಲ್ಲಿದ್ದ ಕೆಲವರು ಅದನ್ನು ನೋಡಿ ಸೈರಿಸಲಾರದೆ ||೫೫|| ಉದಯಮಹೀಪಾಲನೆಂಬ ಆ ಊರ ರಾಜನ ಬಳಿಗೆ ಬಂದು, ಪ್ರಭುವೇ ತಮ್ಮ ಊಳಿಗದವರಲ್ಲಿ ಹಿರಿಯನಾದ ಧವಳೇಶ್ವರ ನಾಮಯ್ಯನೆಂಬುವನು ಈಗ ನಿಮ್ಮನ್ನು ಸ್ವಲ್ಪವೂ ಲಕ್ಷ್ಯಮಾಡದೆ ಇದ್ದಾನೆ. ನೀವು ಅಗಿದ ತಾಂಬೂಲವನ್ನು ತನ್ನ ಕೈಗೆ ಈಸಿಕೊಂಡು, ತಾನು ಭಕ್ತನೆಂಬ ಹಮ್ಮಿನಿಂದ ಅದನ್ನು ಕೂಡಲೇ ಇಟ್ಟುಬಿಡುತ್ತಾನೆ, ಕರೆದರೂ ಬರುವುದಿಲ್ಲ. ನಿಮ್ಮನ್ನು ಓಲೈಸಿ ಸೇವಿಸುವುದಿಲ್ಲ ||೫೬|| ಯಾವಾಗಲೂ ಪಂಡಿತಾಚಾರ್ಯನ ಬಳಿಯಲ್ಲೂ ಶಿವಭಕ್ತರ ಸಮೀಪದಲ್ಲೂ ಇರುತ್ತಾನೆ. ನಮ್ಮ ಮಾತಿನಲ್ಲಿ ನಂಬುಗೆಯಿಲ್ಲದಿದ್ದರೆ ಈಗಳೇ ಹೋಗಿ ತಾವು ಪರಾಮರಿಸಬಹುದು ||೫೮|| ಎಂಬುವಾಗಿ ಹೇಳಿದರು. ಬಳಿಕ ದೊರೆಯು ಧವಳೇಶ್ವರನಾಮಯ್ಯನನ್ನು ಕರೆಯಿಸಿ, "ಎಲೋ ನಾಮಾ ಇಲ್ಲಿ ಬಾ" ಎಂದು ಕರೆದು, ತಾನು ಅಗಿದಿದ್ದ ತಾಂಬೂಲವನ್ನು ಅವನ ಕೈಗೆ ಕೊಟ್ಟನು. ||೫೯|| ಮತಿಶಾಲಿಯಾದ ಆ ನಾಮಯ್ಯನಾದರೂ ಆ ತಾಂಬೂಲವನ್ನು ದೊರೆಯ ಬಳಿಯಲ್ಲೇ ಬಿಸುಟು, ಗುರುಸ್ಮರಣಪೂರ್ವಕವಾಗಿ ಕೈಗೆ ಭಸ್ಮವನ್ನು ತೊಡೆದುಕೊಂಡು ||೬೦|| ಭಯವಿಲ್ಲದೆ ದೊರೆಯನ್ನು ನೋಡುತ್ತ ಹೀಗೆ ಹೇಳಿದನು—ಲೋಕದಲ್ಲಿ ಸೇವಕ ಧರ್ಮವನ್ನು ವಿಚಾರಮಾಡಿ ನೋಡಿದರೆ ನೀನು ಅಗಿದು ಕೊಟ್ಟ ತಾಂಬೂಲವನ್ನು ಅವರು ಕೈಯಿಂದ ಈಸಿಕೊಳ್ಳುವುದು ಮಾತ್ರ ಉಚಿತವು. ಆದರೆ ಭಕ್ತಿಧರ್ಮವನ್ನು ವಿಚಾರಮಾಡಿ ನೋಡಿದರೆ ಪ್ರಸಾದವಲ್ಲದ ವಸ್ತುವಿಗಾಗಿ ಕೈಯನ್ನು ಚಾಚಬಹುದೆ? ನೀನು ಅಗಿದು ಕೊಟ್ಟ ಈ ತಾಂಬೂಲವ

ಶಿವಾಯಾನರ್ಪಿತಂವಸ್ತು ನೋಪಯೋಕ್ತುಂಚಯುಜ್ಯತೇ | ಕೃತಾಯಾ ಏವ ಭುಕ್ತ್ಯರ್ಥಂ ಸೇವಾಯಾಭವಸಿಪ್ರಭುಃ ||೬೪|| ಮುಕ್ತ್ಯರ್ಥಾಯಾಸ್ತುಸೇವಾಯಾಃ ಕಿಮಸ್ತಿವಿಭುತಾತವ | ಸ್ವಾರ್ಥಜಂಗಮಪೂಜಾರ್ಥ ಮರ್ಥಸ್ತಸ್ಮೈಧಸಾಯತೇ ||೬೫|| ಸೇವಾತದರ್ಥಂದೇಹಸ್ಯ ವಿಕ್ರಯಃಕಥಿತಸ್ತತಃ | ವ್ಯಕ್ರೀಣಂ ಮಚ್ಛರೀರಂ ಕಿಮಾಚಾರನಿಯತಿಂನೃಪ ||೬೬|| ತತೋನೃಪತಿರಿತ್ಯಾಹ ಮದಮಾರುತಯೋಗತಃ | ಸಮ್ಯಕ್ಪ್ರಜ್ವಲಿತೇ ತೀವ್ರೇ ಮನಸಿಕ್ರೋಧಪಾವಕೇ || ಕಿಮಾತ್ಥರೇರೇನಾಮ್ನೈತತ್ತಾಂಬೂಲಂ ವ್ಯಸೃಜದ್ಭವಾನ್| ಭಕ್ತೋಽಹಮಿತಿಮತ್ವಾಕಿಂ ತ್ವತ್ತೋಹೀನಾಃಕಿಮುಕ್ಷಿತೌ ||೬೮|| ಭಕ್ತಾವಸುಮತೀಶಾನಾಂ ಕಿಂಕರೀಭೂಯಸಂಸ್ಥಿತಾಃ | ಪರಿಚರ್ವಿತತಾಂಬೂಲ ಭಕ್ಷಕಾಸ್ಸ್ವಸಮರ್ಪಕಾಃ || ವಿಶ್ವಸ್ತಮಂತ್ರಪದವೀ ಮಧಿರೂಢಾ ನಿರಂತರಂ | ಅಲಂಬಹುವಿಧಾಲಾಪೈಃ ಕಿಂನಾವರ್ತಂತಭೂತಲೇ ||೭೦|| ಭವದ್ಬಸವರಾಜಾದ್ಯಾ ಸ್ಸೇವಾಧರ್ಮಮುಪಾಶ್ರಿತಾಃ | ತೇಭ್ಯೋಽನಿಯಮವಾನ್ಭಕ್ತಃ ಕಥಂಕಾರಂಭವಾನಿಹ ||೭೧|| ರೇರೇ ಕಿಂಕರನಾಮತ್ವಂ ಭಕ್ತಿಗರ್ವಂಪರಿತ್ಯಜ | ಏಕವಾರಂಸಹೇಽಸಹ್ಯ ಮಪರಾಧ

---

ನ್ನು ಶಿವನಿಗೆ ಸಮರ್ಪಣೆಮಾಡಲಾಗುವುದಿಲ್ಲ. ||೬೩|| ಶಿವನಿಗೆ ಅರ್ಪಿಸದೆ ಇರುವ ವಸ್ತುವನ್ನು ಭಕ್ತರು ಸೇವಿಸಲೂ ಆಗುವುದಿಲ್ಲ. ಹೊಟ್ಟೆಯ ಪಾಡಿಗಾಗಿ ಮಾಡುವ ಸೇವೆಗೆ ನೀನು ಪ್ರಭುವಲ್ಲದೆ, ಮೋಕ್ಷಾರ್ಥವಾಗಿ ಮಾಡುವ ಸೇವೆಗೆ ನಿನ್ನ ಒಡೆತನವೇನಾದರೂ ಉಂಟೆ? ಜಂಗಮರ ಪೂಜೆಗಾಗಿ ನನಗೆ ಹಣವು ಬೇಕು. ಆ ಹಣಕ್ಕೋಸುಗ ನಿನ್ನ ಸೇವೆ. ಆ ಸೇವೆಗಾಗಿ ದೇಹವನ್ನು ಮಾರಿಕೊಂಡಿದ್ದೇನೆ. ಅಷ್ಟೇ ಹೊರತು ನನ್ನ ಆಚಾರದ ಕಟ್ಟನ್ನು ನಿನಗೆ ಮಾರಿಕೊಂಡಿದ್ದೇನೆಂದೆ? ||೬೬|| ಎಂಬುದಾಗಿ ಹೇಳಲು, ಅದನ್ನು ಕೇಳಿದ ದೊರೆಯ ಮನಸ್ಸಿನಲ್ಲಿ ಕೋಪಾಗ್ನಿಯು ಆತನ ಗರ್ವವೆಂಬ ಗಾಳಿಯ ಸಂಯೋಗದಿಂದ ಬಹಳ ಕೆರಳಲಾಗಿ ||೬೭|| ನಾಮಯ್ಯನನ್ನು ಕುರಿತು—ಎಲಾ ನಾಮ! ಏನು ಹೇಳಿದೆ? ನಾನು ಭಕ್ತನೆಂಬ ಹೆಮ್ಮೆಯಿಂದ ನೀನು ನನ್ನ ತಂಬುಲವನ್ನು ಬಿಸುಡಿಬಿಟ್ಟೆಯೊ? ಭೂಮಿಯಲ್ಲಿ ಪ್ರಭುಗಳ ಹತ್ತಿರ ಸೇವಕರಾಗಿದ್ದುಕೊಂಡು, ಅವರಗಿದ ತಾಂಬೂಲವನ್ನು ಪರಿಗ್ರಹಿಸಿ ತಿನ್ನುತ್ತ ಆ ಪ್ರಭುಗಳಿಗೆ ಆತ್ಮಾರ್ಪಣೆಯನ್ನು ಮಾಡಿಕೊಂಡು, ಅವರ ನಂಬುಗೆಗೊಳಗಾದ ಮಂತ್ರಿ ಪದವಿಯನ್ನು ಹೊಂದಿ ಬಾಳುತ್ತಿರುವ ಭಕ್ತರೆಲ್ಲರೂ ನಿನಗಿಂತಲೂ ಹೀನರೊ? ಸಾಕು, ಬಲುಮಾತೇಕೆ? ಭೂಮಿಯಲ್ಲಿ ನಿಮ್ಮ ಬಸವರಾಜನೇ ಮೊದಲಾದವರು ಸೇವಾಧರ್ಮವನ್ನವಲಂಬಿಸಿಕೊಂಡಿರಲಿಲ್ಲವೆ? ನೀನು ಅವರುಗಳಿಗಿಂತಲೂ ಹೆಚ್ಚಿನ ಆಚಾರವುಳ್ಳ ಭಕ್ತನೊ? ||೭೧|| ಎಲಾ ಲೆಂಕನಾದ ನಾಮನೆ, ನೀನು ಭಕ್ತಿಯ ಹೆಮ್ಮೆಯನ್ನು ಬಿಟ್ಟುಬಿಡು. ಸೈರಿಸಲಾಗದ ನಿನ್ನ ತಪ್ಪನ್ನು ಇದೊಂದುಸಲಕ್ಕೆ

ಮಿಮಂತವ ‖ ೭೨ ‖ ಇತ್ಯಾಲಮಿತಾಗಚ್ಛ ತಾಂಬೂಲಂಚರ್ವಿತಂಮಯಾ ।
ಗೃಹಾಣೇದಂನಚೇದಸ್ಮದ್ದೇಹಂ ಮಹ್ಯಂಸಮರ್ಪಯ ‖೭೩‖ ಇತ್ಯುಕ್ತಸ್ತಮು
ವಾಚೈವಂ ಧವಳೇಶ್ವರನಾಮಯಃ । ಸೇವಾಕಾರಣತೋಭೂಪ ಮಾಮೇವಂ
ಭಾಷಸೇಯದಿ ‖೭೪‖ ಸುತರಾಂವದತಾನ್ಭಕ್ತಾನ್ ನಸನ್ಯಶರಣಾಂಸ್ತವ । ಪ್ರವ
ಕ್ತುಮೇವಮುಚಿತಂ ಕಿಮುನಿರ್ಧೂತಪಾತಕಾನ್ ‖೭೫‖ ಭವಿನಃಕಿಮುಸೇವ
ನ್ತೇ ಶಿವಭಕ್ತಾಮಹೀತಲೇ ! ಯದ್ಯಸೇವನ್ತಲೋಕಾನಾ ಮೇತೇಕಿಂಗೃಹಕಿಂ
ಕರಾಃ ‖೭೬‖ ಅತ್ಯಂತಮೋಹಿತಾನ್ಸನ್ತೋ ಗುರುಲಿಙ್ಗಪ್ರಸಾದಿನಃ । ಕಿಂಭ
ಕ್ಷಿತಾನಿತಾಂಬೂಲಾನ್ಯಶ್ನಂತಿಹಿ ದುರಾತ್ಮಭಿಃ ‖ ೭೭ ‖ ಇಷ್ಟಲಿಙ್ಗಪ್ರಸಾದೇ
ಚ್ಛಾನುಭೂತಿ ಸಮುದಂಚಿತಾಃ । ಕಿಂಕಷ್ಟಮಾನವೋಚ್ಛಿಷ್ಟಾ ಸ್ಯದಂತಿವಿಗತತ್ರ
ಪಾಃ ‖೭೮‖ ಭವ್ಯಸಂಗತಲಿಂಗೈಕ ಪ್ರಸಾದಸುಖಭಾಗಿನಃ । ಅಧಮಾನಾಂ
ಮನುಷ್ಯಾಣಾಮುಚ್ಛಿಷ್ಟಂ ಭಕ್ಷಯಂತಿಕಿಂ ‖೭೯‖ ಅಸೇವತೇತಿವದಸಿ ಭವಿ
ನಂಬಸವೇಶ್ವರಃ । ಮಹಿಮಾನಂನಜಾನಾಸಿ ಬಸವೇಶಸ್ಯವಿಶ್ರುತಂ ‖೮೦‖ ಸ್ವಭ
ಕ್ತಿವರ್ಧನಾರ್ಥಾಯ ಸಮುದ್ದಿಶ್ಯಮಹೀತಲಂ । ಪ್ರೇಷಣಾವಸರೇ ಶ್ರೀಮದ್ವೃ
ಷನಸ್ಯಮಹೇಶ್ವರಃ ‖೮೧‖ ತುಲಾಯಾಂಭೂಷಣಾದೀನಾಂ ವಿನಾಗುಂಜಾದಿ

---

ಕ್ಷಮಿಸುತ್ತೇನೆ. ‖೭೨‖ ಭಯಪಡಬೇಡ, ಇತ್ತಬಾ; ನಾನು ಅಗಿದಿರುವ ಈ ತಂಬುಲವನ್ನು
ಸೇವಿಸು. ಇಲ್ಲದಿದ್ದ ಪಕ್ಷದಲ್ಲಿ ನಮ್ಮದಾಗಿರುವ ನಿನ್ನ ಶರೀರವನ್ನು ನನಗೆ ಒಪ್ಪಿಸಿಬಿಡು ‖೭೩
ಹೀಗೆ ಹೇಳಿದ ರಾಜನನ್ನು ಕುರಿತು ಧವಳೇಶ್ವರನಾಮಯ್ಯನು—ಎಲೆ ದೊರೆಯೆ, ನಿನ್ನಲ್ಲಿ
ನಾನು ಆಳಾಗಿರುತ್ತೇನೆಂಬ ಕಾರಣದಿಂದ ನನ್ನನ್ನು ಕುರಿತು ನೀನು ಹೀಗೆ ಹೇಳುತ್ತೀಯಾದರೆ,
ಶಿವನನ್ನು ಹೊರತು ಇತರರನ್ನು ಮರೆಹೊಗದೆಯೂ, ಪಾಪರಹಿತರಾಗಿಯೂ ಇರುವ ಆ ಭಕ್ತರ
ನ್ನು ಕುರಿತು ಹೀಗೆ ಆಡುವುದು ನಿನಗೆ ಉಚಿತವೆ? ‖೭೫‖ ಭೂತಲದಲ್ಲಿ ಭಕ್ತರು ಭವಿಗಳ
ನ್ನು ಸೇವಿಸುವರೆ? ಒಂದುವೇಳೆ ಸೇವಿಸಿದರೂ ಅವರು ಲೌಕಿಕರಾದ ಜನರ ಮನೆಯಾಳುಗಳೆ?
ಗುರುಲಿಂಗಪ್ರಸಾದಿಗಳಾದ ಸತ್ಪುರುಷರು ಅಜ್ಞತೆಯಿಂದ ದುರ್ಜನರು ಅಗಿದುಕೊಟ್ಟ ತಂಬು
ಲವನ್ನು ತಿನ್ನುವುದುಂಟೆ? ‖೭೭‖ ಇಷ್ಟಲಿಂಗಪ್ರಸಾದೋಪಭೋಗಿಗಳಾದ ಭಕ್ತರು ನಾಚು
ಗೆಯಿಲ್ಲದೆ ಕೆಟ್ಟ ಭವಿಮನುಜರ ಎಂಜಲನ್ನು ತಿನ್ನುವುದುಂಟೆ? ‖೭೮‖ ಮಂಗಳಕರವಾದ
ಜಂಗಮ ಪ್ರಸಾದ ಸೇವನ ಸೌಖ್ಯವನ್ನನುಭವಿಸುತ್ತಿರುವ ಭಕ್ತರು ನೀಚಮನುಷ್ಯರ ಎಂಜಲನ್ನು
ತಿನ್ನುತ್ತಾರೆಯೆ? ‖೭೯‖ ಬಸವೇಶನು ಭವಿಯನ್ನು ಸೇವಿಸಿದನೆಂದು ನೀನು ಹೇಳುತ್ತೀಯೆ,
ಬಸವೇಶನ ಲೋಕಪ್ರಸಿದ್ಧವಾದ ಮಹಿಮೆಯನ್ನು ನೀನು ಕಾಣೆ ‖೮೦‖ ಶಿವನು ತನ್ನ ಭಕ್ತಿ
ಯನ್ನು ಭೂತಲದಲ್ಲಿ ಅಭಿವೃದ್ಧಿಗೊಳಿಸುವುದಕ್ಕಾಗಿ ಶ್ರೀ ವೃಷಭೇಶ್ವರನನ್ನು ಕಳುಹಿಸಿಕೊಡು
ವಾಗ್ಗೆ—ತಕ್ಕಡಿಯಲ್ಲಿ ಗುಲಗಂಜಿ ಮೊದಲಾದ ಕಟ್ಟಲೆಗಳನ್ನು ಹಾಕಿ ತೂಗದಿದ್ದರೆ ಆಭರಣಾ

ಕಂಭುವಿ । ನಹಿವಿಜ್ಞಾಯತೇವರ್ಣಂ ವಿಹಾಯನಿಕಷೋಪಲಂ ||೮೬|| ಶುದ್ಧ ಹೇಮ್ನೋನ್ತರಂ ಕಿಂಚಿತ್ಸಮ್ಯಗ್ ಜ್ಞಾತುಂನಶಕ್ಯತೇ| ಶೋಣಪಾಷಾಣಸಂದೋಹ ಶ್ಯಾಣಂಮುಕ್ತ್ವಾನಶೋಭತೇ ||೮೩|| ಛಾಯಾತಪೇನ ಮಲಿನವಾಸಸಾಧೌತಮಂಬರಂ | ಅಸಿತೇನಸಿತೋವರ್ಣೋ ದುಃಖಸಂಯೋಗತಸ್ಸುಖಂ || ೮೪ || ಭೀರುಣಾಶೂರಪುರುಷಸ್ಸ್ವೈರಿಣ್ಯಾ ಸತ್ಪತಿವ್ರತಾ | ಅಸಜ್ಜನೇನಸುಜನಶ್ಶೀತೇನೋಷ್ಣಗುಣಃಪುನಃ ||೮೫|| ಪುಣ್ಯಂಪಾತಕಸಂಘೇನ ತಿಕ್ತೇನಮಧುರೋರಸಃ | ಪಾರಮಾರ್ಥಿಕಸಂಸಿದ್ಧಿಃ ಪ್ರಪಂಚೇನಸಮುನ್ನತಾ || ೮೬ || ತಮಸಾ ಜ್ಯೋತಿ ರನೃತವಾಚಾ ಸೂನೃತಭಾಷಣಂ | ಸದ್ಭಕ್ತೋಭವಿನಾಭಾತಿ ಸತತಂ ಭೂತಲೇಯಥಾ ||೮೭|| ಬಸವೇಶಸ್ಯಮಹಿಮಾ ದೂಷಕೇನವಿನಾತಥಾ | ನಭವೇದ್ವಿಶ್ರುತಸ್ಸಮ್ಯಗಿತಿ ನಿಶ್ಚಿತ್ಯಮಾನಸೇ ||೮೮|| ಪ್ರೇಷಯಾಮಾಸ ಸದ್ಭಕ್ತಿಪ್ರತಿಪಕ್ಷಂಮಹಾಸುರಂ | ಕಂಟಕಾಸುರನಾಮಾನಂ ಸಜಾತೋಬಿಜ್ಜಲಾಹ್ವಯಾ || ವಿಖ್ಯಾತಭಲ್ಲಹಕುಲೇ ಪಟ್ಟಬದ್ಧೋಽತಿಹರ್ಷತಃ | ಸ್ವಯಮಾಗತ್ಯವಿಖ್ಯಾತಂ ಸ್ಥಾನಂಕಪ್ಪಡಿಸಂಗಮಂ ||೯೦|| ಆನೀಯಬಸವೇಶಾನಂ ಭಾಣ್ಡಾಗಾರಾಧಿಪಾಲತಾಂ | ದತ್ವಾಽಖಿಲನಿಯೋಗಸ್ಯ ಕರ್ತಾರಮಕರೋನ್ನೃಪಃ ||೯೧|| ಬಸವೇಶೋಪಿಸದ್ಭಕ್ತ್ಯಾ ಕುರ್ವನ್ ಜಂಗಮಪೂಜನಂ | ನೃಪಸ್ಯರಾಜ್ಯಮಖಿಲಂ ಪಾ

---

ದಿಗಳ ತೂಕವು ಹೇಗೆ ಗೊತ್ತಾಗುವುದಿಲ್ಲವೋ, ಒರೆಗಲ್ಲಿಲ್ಲದಿದ್ದರೆ ಅಪರಂಜಿಯ ಬಣ್ಣವನ್ನು ಚೆನ್ನಾಗಿ ತಿಳಿಯಲು ಹೇಗೆ ಆಗುವುದಿಲ್ಲವೋ, ಸಾಣೆಕಲ್ಲಿಲ್ಲದಿದ್ದರೆ ರತ್ನಗಳು ಹೇಗೆ ಹೊಳೆಯುವುದಿಲ್ಲವೋ ||೮೩|| ಭೂಮಿಯಲ್ಲಿ ಬಿಸಿಲಿಂದ ನೆಳಲೂ, ಕೊಳೆಬಟ್ಟೆಯಿಂದ ಮಡಿಯೂ, ಕಪ್ಪಿನಿಂದ ಬಿಳಿಯಬಣ್ಣವೂ, ದುಃಖಾನುಭವದಿಂದ ಸುಖವೂ, ಅಂಜುಬುರುಕನಿಂದ ಶೂರನೂ, ಜಾರೆಯಿಂದ ಪತಿವ್ರತೆಯೂ, ದುರ್ಜನನಿಂದ ಸತ್ಪುರುಷನೂ, ಶೀತದಿಂದ ಉಷ್ಣವೂ, ಪಾಪದಿಂದ ಪುಣ್ಯವೂ, ಕಹಿಯಿಂದ ಸಿಹಿಯೂ, ಪ್ರಾಪಂಚಿಕ ವಿಷಯದಿಂದ ಪರಮಾರ್ಥಸಿದ್ಧಿಯೂ, ಕತ್ತಲಿನಿಂದ ಬೆಳಕೂ, ಸುಳ್ಳಿನಿಂದ ನಿಜವೂ, ಭವಿಯಿಂದ ಭಕ್ತನೂ ಹೇಗೆ ಪ್ರಕಾಶಕ್ಕೆ ಬರುವರೋ ಹಾಗೆ ||೮೭|| ದೂಷಕನಿಲ್ಲದಿದ್ದರೆ ಬಸವೇಶನ ಮಹತ್ತ್ವವು ಭೂಮಿಯಲ್ಲಿ ಪ್ರಕಟವಾಗುವುದಿಲ್ಲವೆಂದು ಶಿವನು ಮನಸ್ಸಿನಲ್ಲಿ ಯೋಚಿಸಿಕೊಂಡು, ಶಿವಭಕ್ತಿಗೆ ವಿರೋಧಿಯಾದ ಕಂಟಕಾಸುರನೆಂಬುವನನ್ನು ಭೂಮಿಗೆ ಕಳುಹಿಸಿಕೊಟ್ಟನು. ಅವನೇ ಬಿಜ್ಜಳನೆಂಬ ಹೆಸರಿನಿಂದ ಭಲ್ಲಹ (ಚಾಳುಕ್ಯ) ಕುಲದಲ್ಲಿ ಹುಟ್ಟಿ ಪಟ್ಟವನ್ನು ಕಟ್ಟಿಕೊಂಡನು. ಆ ಬಿಜ್ಜಳನೃಪನು ಪ್ರಸಿದ್ಧವಾದ ಕಪ್ಪಡಿಯ ಸಂಗಮಕ್ಕೆ ಬಂದು ||೯೦|| ಅಲ್ಲಿದ್ದ ಬಸವೇಶನನ್ನು ಕರೆದುಕೊಂಡು ಹೋಗಿ ತನ್ನ ಬೊಕ್ಕಸದ ಅಧಿಪತ್ಯವನ್ನು ಆತನಿಗೆ ಕೊಟ್ಟು, ಸಕಲ ವಿಧದ ಆಜ್ಞೆಗಳನ್ನು ಕೊಡುವುದಕ್ಕೂ ಆತನನ್ನು ಮುಖ್ಯಕರ್ತೃವನ್ನಾಗಿ ಮಾಡಿದನು. ||೯೧|| ಬಸವೇಶನು ಕೂಡ

ಲಯನ್ನವಸತ್ಸುಧೀಃ ||೯೩|| ಸ್ವಾಮಿತಿಸಭಯಾದ್ಬ್ರೂತೇ ಕದಾಚಿದಪಿಬಿಜ್ಜ ಲಂ | ನದೇವಾಜ್ಞಾಪಯೇತ್ಯಾದಿವಚನಂ ಜಾತುಭಾಷತೇ ||೯೪|| ಹಸ್ತೇನಾ ಪಿನಮಸ್ಕಾರಂ ನಕರೋತಿಕದಾಚನ | ಅಧಸ್ತಾದಾಸನಸ್ಯಾಸೌ ನತಿಷ್ಠತಿಮಹೀ ಪತೇಃ ||೯೫|| ಯಥಾಬ್ರವೀತಿ ಸದ್ಭಕ್ತಾನಾರ್ಯದೇವೇತಿಭಾಷಣೈಃ | ತಥಾಬ್ರ ವೀತಿವಿನಯಾ ದ್ರಾಜಾನಂನಕದಾಚನ ||೯೬|| ಕಸ್ಮೈಚಿತ್ಪ್ರದದೌ ಕಾಮಿಜಂಗ ಮಾಯನೃಪಾಗ್ರತಃ | ಪ್ರೀತ್ಯಾಕೋಶಗೃಹಂಸರ್ವಂ ಪುನಸ್ತಸ್ಯಮಹೀಪತೇಃ|| ವನಿತಾಂ ಜಂಗಮಸ್ಯಾದಾದ್ವಾಹನಂಚಾನಿವಾರಿತಃ | ಸನ್ತಿಸೇವಕಧರ್ಮಾಃ ಕಿಮಿದೃಶಾಃ ಪೃಥಿವೀತಲೇ ||೯೭|| ಯದಾಯದಾಗೃಹೀತ್ವಾಸ್ಮಿನ್ನಪರಾಧಾ ನನೇಕಶಃ | ಸಮುದ್ಯುಕ್ತೋದಂಡಯಿತುಂ ಬಿಜ್ಜಲೋ ಬಸವೇಶ್ವರಃ ||೯೮|| ಪ್ರತಿ ಷ್ಠಾಪಯತೀಶಸ್ಯ ಮಹಿಮಾನಂತದಾತದಾ | ಜಾತುಕುರ್ವತಿನಿರ್ಬಂಧ ಮಲ್ಲ ಯ್ಯಮಧುವಯ್ಯಯೋಃ ||೯೯|| ಮಮಾರ್ಜಭಾಗ್ಯಮಖಿಲಂ ಬಿಜ್ಜಲಸ್ಯ ಮ ಹೀಪತೇಃ | ಶ್ರಿಯಂಪ್ರತಾಪಮಾಯುಶ್ಚ ತಚ್ಚಾಲುಕ್ಯಕುಲಂಮಹತ್ ||೧೦೦|| ಸರ್ವಂ ಮಹೇಶಗಣನಾಪತ್ರಿಕಾಜಯಸಂಸ್ಥಿತಂ | ಸ್ತುವತ್ಸುಜನಸಂಘೇಷು

---

ಭಕ್ತಿಯಿಂದ ಜಂಗಮಪೂಜೆಯನ್ನು ಮಾಡಿಕೊಂಡು, ದೊರೆಯ ಸಕಲ ರಾಜ್ಯವನ್ನೂ ಪಾಲಿಸಿ ಕೊಂಡು ಇರುತ್ತಿದ್ದನು. ||೯೩|| ಆತನು ದೊರೆಯನ್ನು ಕುರಿತು ಭಯದಿಂದ "ಸ್ವಾಮಿ" ಎಂದು ಯಾವಾಗಲೂ ಸಂಬೋಧಿಸಿದುದಿಲ್ಲ. "ಪ್ರಭುವೇ! ಅಪ್ಪಣೆಯಾಗಬೇಕು" ಎಂದು ಒಂದುಸಲವೂ ಬೇಡಿಕೊಂಡುದಿಲ್ಲ. ||೯೪|| ದೊರೆಗೆ ಕೈಯೆತ್ತಿ ಒಂದುಸಲವೂ ನಮಸ್ಕರಿಸಿಲು ದಿಲ್ಲ. ದೊರೆಯ ಪೀಠದ ಕೆಳಗಡೆಯಲ್ಲಿ ಯಾವಾಗಲೂ ನಿಂತುಕೊಂಡುದಿಲ್ಲ ||೯೫|| ಉತ್ತ ಮಭಕ್ತನನ್ನು ಕುರಿತು ಪೂಜ್ಯನೆ! ಸ್ವಾಮಿಯೆ! ಎಂದು ನಮ್ರವಚನದಿಂದ ಕರೆಯುತ್ತಿದ್ದಂತೆ ದೊರೆಯನ್ನು ವಿನಯದಿಂದ ಯಾವಾಗಲೂ ಕರೆದವನಲ್ಲ. ||೯೬|| ಒಂದುಸಲ ಬಸವೇಶನು ಓಬ್ಬ ವಿಟಜಂಗಮನಿಗೆ ದೊರೆಯಿದಿರಿಗೇ ಅವನ ಬೊಕ್ಕಸವನ್ನೆಲ್ಲಾ ಕೊಟ್ಟುಬಿಟ್ಟನು. ಹಾಗೆ ಯೇ ಪತ್ನಿಯನ್ನೂ ತನ್ನ ವಾಹನವನ್ನೂ ಸಹ ತಡೆಯಿಲ್ಲದೆ ಕೊಟ್ಟುಬಿಟ್ಟನು. ಭೂಮಿ ಯಲ್ಲಿ ಈ ತೆರದ ಊಳಿಗತನಗಳಿರುವುದುಂಟೆ? ||೯೭|| ಬಸವೇಶನು ಮಾಡಿದ ಕಾರ್ಯಗಳಲ್ಲಿ ತಪ್ಪನ್ನು ಕಂಡುಹಿಡಿದು ಬಿಜ್ಜಳನು ಆತನನ್ನು ದಂಡಿಸುವುದಕ್ಕಾಗಿ ಯಾವಯಾವಾಗ ಪ್ರಯತ್ನಿ ಸಿದರೂ ಆಗಾಗಲೆಲ್ಲಾ ಬಸವೇಶನು ಶಿವಮಹತ್ತ್ವವನ್ನು ಪ್ರತಿಷ್ಠಾಪನೆ ಮಾಡುತ್ತ ಬಂದನು. ಒಂದುಸಲ ಬಿಜ್ಜಳನು ಅಲ್ಲಯ್ಯ ಮಧುವಯ್ಯಗಳೆಂಬಿಬ್ಬರನ್ನು ಶಿಕ್ಷಿಸಲಾಗಿ, ಆ ಬಿಜ್ಜಳರಾಜನ ಸಕಲ ಸಂಪತ್ತನ್ನೂ, ಪರಾಕ್ರಮವನ್ನೂ, ಆಯುಷ್ಯವನ್ನೂ ತೊಡೆದುಬಿಟ್ಟನು. ಭೂಜನರೆಲ್ಲ ರೂ ಇದು ಆಶ್ಚರ್ಯ ಆಶ್ಚರ್ಯವೆಂದು ಕೊಂಡಾಡುತ್ತಿರಲು, ಆ ಬಿಜ್ಜಳನ ದೊಡ್ಡ ಚಾಲುಕ್ಯ

ಚಿತ್ರಂಚಿತ್ರಮಿತಿಕ್ಷಿತೌ ||೧೦೧|| ಕಲ್ಯಾಣಕಟಕಂಶೂನ್ಯಂ ಭವತ್ವಿತಿ ಮಹತ್ವತಃ | ಶಶಾಪಕುಪಿತೋಽಭೂತ್ವಾ ಬಸವಾಮಾತ್ಯಶೇಖರಃ ||೧೦೨|| ಸದ್ಭಕ್ತೌ ಮೊಲ್ಲೆಬೊಮ್ಮಯ್ಯಜಗದೇವೌ ತತಃಪರಂ | ವ್ಯಾಪಾದಯಾಮಾಸತುಸ್ತಂ ಬಿಜ್ಜಲಂ ಭಕ್ತದೂಷಕಂ ||೧೦೩|| ಹರಭಕ್ತೋಽಹಡಪದರೇಚಯ್ಯೋ ನಾಮಕಶ್ಚನ | ತಾಂಬೂಲವಾಹಕೋಽಭೂವೌ ವಿದ್ಯತೇವೇಂಗಿಭೂಪತೇಃ ||೧೦೪|| ತಸ್ಮಿನ್ವೇಂಗೀಶ್ವರೇಜಾತು ಪ್ರಮೋದಾತ್ಕಾಂತಯಾಸಹ | ಪ್ರಿಯಾಲಾಪಲಸದ್ಗೋಷ್ಠೀ ಪ್ರಸಂಗೇಸಸ್ಥಿತೇಸತಿ ||೧೦೫|| ಮಾರ್ಜಯಿತ್ವಾ ಲಿಂಗಮುದ್ರಾಂ ಕಸ್ಮಿಂಶ್ಚಿದಪಿನೋಽಹತಃ | ವೃಷೇಣಕರ್ಷತಿಕ್ಷೇತ್ರಂ ಜ್ಞಾತ್ವಾತಂಪಾಪಕಾರಿಣಂ ||೧೦೬|| ಜಘ್ನುರ್ಭಕ್ತಾ ಇತಿತದಾ ಯಾಮಿಕೇಷುವದತ್ಸ್ವಥ | ತಚ್ಛ್ರುತ್ವಾರಾಜಮಹಿಷೀ ತಮಿತ್ಯಾಹಮಹೀಪತಿಂ ||೧೦೭|| ಸನ್ವೃಷಃಕೀದೃಶೋರಾಜನ್ ಲಿಙ್ಗಮುದ್ರಾಚಕೀದೃಶೀ | ತನ್ಮುದ್ರಾಮಾರ್ಜಕವಧಃ ಕಸ್ಮಾತ್ತನ್ಮಾರ್ಜನಂಕಥಂ || ೧೦೮ || ಏವಂವದಂತೀಂವನಿತಾ ಮನ್ತ್ರಗೃಹನಿವಾಸಿನೀಂ | ವಿಲೋಕ್ಯಪ್ರಹಸಂಸ್ತಸ್ಯೈ ತತ್ಪ್ರದರ್ಶಯಿತುಂನೃಪಃ ||೧೦೯|| ವೃಷಭಸ್ಯಾಕೃತಿಂಸಮ್ಯ ಗಾಲಿಖ್ಯಫಲಕೇತಥಾ| ಊರೂದೇಶೇತದ್ವೃಷಸ್ಯ ಲಿಙ್ಗಮುದ್ರಾಂವಿ

---

ನಂಶವೆಲ್ಲಾ ಶಿವನ ಲೆಕ್ಕದ ಬುಕ್ಕಿನಲ್ಲಿ ಸಂದುಹೋಗುವಂತೆ ಮಾಡಿಬಿಟ್ಟನು. ||೧೦೧|| ಆ ಬಸವ ಮಂತ್ರಿಯು ಬಹಳ ಕೋಪಗೊಂಡು, ಈ ಕಲ್ಯಾಣಪಟ್ಟಣವೆಲ್ಲವೂ ಬಂದಾಗಿ ಹೋಗಲೆಂದು ಶಪಿಸಿಬಿಟ್ಟನು. ||೧೦೨|| ಆ ಬಳಿಕ ಭಕ್ತೋತ್ತಮರಾದ ಜಗದೇವ ಮೊಲ್ಲೆಬೊಮ್ಮಯ್ಯಗಳೆಂಬಿಬ್ಬರು ಭಕ್ತನಿಂದಕನಾದ ಆ ಬಿಜ್ಜಳನನ್ನು ಕೊಂದುಬಿಟ್ಟರು. ||೧೦೩||

ಹಡಪದರೇಚಯ್ಯನೆಂಬ ಶಿವಭಕ್ತನೊಬ್ಬನು ವೆಂಗಿದೇಶದ ದೊರೆಯ ಬಳಿಯಲ್ಲಿ ಎಲೆಯ ಸಂಬಳಗೆಯನ್ನು ಹೊತ್ತುಕೊಂಡಿರುವ ಊಳಿಗದಲ್ಲಿದ್ದನು. ಆ ದೊರೆಯು ಒಂದಾನೊಂದುದಿವಸ ಸಂತೋಷದಿಂದ ತನ್ನ ಪತ್ನಿಯೊಡನೆ ಸರಸಸಲ್ಲಾಪಗಳನ್ನು ಮಾಡುತ್ತಿರುವ ವೇಳೆಯಲ್ಲಿ ತಳಾರರುಬಂದು—"ಮಹಾಪ್ರಭೂ! ಯಾವನೋ ಒಬ್ಬನು ಲಿಂಗಮುದ್ರೆಯನ್ನು ಅಳಿಸಿಬಿಟ್ಟು ಬಸವನಿಂದ ಭೂಮಿಯನ್ನು ಉಳುತ್ತಿರಲಾಗಿ, ಆ ಪಾಪಿಯನ್ನು ಭಕ್ತರು ಕಂಡು ಹೊಡೆದು ಕೊಂದುಬಿಟ್ಟರು" ಎಂದು ಹೇಳಲಾಗಿ! ಅದನ್ನು ಪಟ್ಟದ ರಾಣಿಯು ಕೇಳಿ, ಪತಿಯನ್ನು ಕುರಿತು- ||೧೦೭|| ಪ್ರಭುವೇ! ಆ ಬಸವನು ಹೇಗಿರುವುದು? ಅದಕ್ಕೆ ಹಾಕಿರುವ ಲಿಂಗಮುದ್ರೆ ಎಂತಹದು? ಆ ಮುದ್ರೆಯನ್ನು ಕೆಡಿಸಿದವನನ್ನು ಕೊಂದುದೇಕೆ? ಆ ಮುದ್ರೆಯನ್ನು ಅಳಿಸಿದುದು ಹೇಗೆ? ಎನ್ನಲಾಗಿ, ದೊರೆಯು ನಕ್ಕು, ಆಕೆಗೆ ಅವನ್ನೆಲ್ಲಾ ತೋರಿಸುವುದಕ್ಕಾಗಿ ಹಲಗೆಯ ಮೇಲೆ ಬಸವನಾಕಾರವನ್ನು ಚೆನ್ನಾಗಿ ಬರೆದು, ಅದರ ತೊಡೆಯ ಸ್ಥಳದಲ್ಲಿ ಲಿಂಗಮುದ್ರೆಯ

ಲಿಖ್ಯಚ ||೧೧೦|| ಮುದ್ರಾಂಮುಮಾರ್ಜ್ಯವಮಿತಿ ಕಂಠಿನ್ಯಾತಾಂಮುಮಾರ್ಜಸಃ| ದೃಷ್ಟ್ವಾಪ್ರತತೋ ಹಡಪದರೇಚಯ ಸ್ಸ್ವಕರೇಸ್ಥಿತಾಮ್ || ೧೧೧ || ಆದಾಯ ಕ್ಷುರಿಕಾಂತಸ್ಯಾಂ ವಿಭ್ರಾಂತಾಯಾಂ ನರಾಧಿಪಂ | ತಏವಂಚಘ್ನುರಿತ್ಯೇನಂ ಜಘಾನಘನಸಾಹಸಃ ||೧೧೨|| ಸೇವಂತಾಂನಾಮತೇಭಕ್ತಾ ನೃಪಾನ್ಸೇವಕ ಧರ್ಮತಃ | ಪ್ರಾಣಾನ್ವಾಪ್ರವಿಮುಂಚನ್ತಿ ಮುಂಚಂತಿಕಿಮುಸತ್ಪಥಂ ||೧೧೩|| ಅಸೇವನ್ತನಕಿಂ ಶಂಭುಸದ್ಭಕ್ತಾ ಭವಿನಃಪುರಾ | ಇತ್ಯುದಾಹರ್ತುಮುಚಿತಂ ಕಿ ಮುಸದ್ಭಕ್ತವರ್ತನಂ ||೧೧೪|| ಅಸೇವತನಕಿಂಪೂರ್ವಂ ಭವಿನಂ ಬಸವೇಶ್ವರಃ | ಇತಿಮರ್ತ್ಯೈಸ್ಸೇವಮಾನೈ ರ್ಭವಿನೋಬಸವೇಶವತ್ ||೧೧೫|| ನಸಂಧೇಯಂ ಪ್ರಾಣಪದಂ ಸಮ್ಯಗ್ಜಂಗಮಏವಕಿಂ | ಅಸೇವತನಕಿಂಪೂರ್ವಂ ಭವಿನಂ ಬಸವೇ ಶ್ವರಃ ||೧೧೬|| ಇತಿಮರ್ತ್ಯೈಸ್ಸೇವಮಾನೈ ರ್ಭವಿನೋಬಸವೇಶವತ್ | ಕಾ ರ್ಯಾಣಿಬಾಣಲಿಂಗಾನಿ ನವಾರ್ತಾಕಫಲಾನಿಕಿಂ || ೧೧೭ || ಅಸೇವತನಕಿಂಪೂ ರ್ವಂ ಭವಿನಂ ಬಸವೇಶ್ವರಃ | ಇತಿಮರ್ತ್ಯೈಸ್ಸೇವಮಾನೈ ರ್ಭವಿನೋಬಸವೇಶ ವತ್ ||೧೧೮|| ಸಮಾಗತ್ಯಾನ್ಯರೂಪೇಣ ಯಾಚಮಾನಾಯಶಂಭವೇ | ನಕಿಂ ಪ್ರದೇಯಂ ಸದ್ಭಕ್ತಿಮಾಹಾತ್ಮ್ಯಾದಳಿಕೇಕ್ಷಣಂ ||೧೧೯|| ಅಸೇವತನಕಿಂಪೂ ರ್ವಂ ಭವಿನಂ ಬಸವೇಶ್ವರಃ | ಇತಿಮರ್ತ್ಯೈಸ್ಸೇವಮಾನೈ ರ್ಭವಿನೋಬಸವೇ

---

ನ್ನು ಬರೆದು, ||೧೧೦|| ಈ ಲಿಂಗಮುದ್ರೆಯನ್ನು ಕರ್ಷಕನು ಹೀಗೆ ಅಳಿಸಿಬಿಟ್ಟನು ಎಂದು ಹೇಳುತ್ತ, ತನ್ನ ಕೈಯಲ್ಲಿದ್ದ ಬರೆಯುವ ಕಂಠಿಯಿಂದ ಆ ಮುದ್ರೆಯನ್ನು ತೊಡೆದುಬಿಟ್ಟನು. ಇದನ್ನು ಬಳಿಯಲ್ಲಿದ್ದ ಸಾಹಸವಂತ ಹಡಪದ ರೇಚಯ್ಯನು ಕಂಡು, ತನ್ನ ಕೈಯಲ್ಲಿದ್ದ ಚೂ ರಿಯನ್ನು ತೆಗೆದು, ''ಆ ಮುದ್ರೆಯನ್ನಳಿಸಿದ ಕರ್ಷಕನನ್ನು ಭಕ್ತರು ಹೀಗೆ ಕೊಂದರು'' ಎಂದು ಹೇಳುತ್ತ, ದೊರೆಯ ಹೆಂಡತಿಯು ನೋಡಿ ಬೆರಗಾಗುವಹಾಗೆ ನೃಪತಿಯನ್ನು ಇರಿದು ಕೊಂದುಬಿಟ್ಟನು. ||೧೧೨|| ಅದುಕಾರಣ, ಎಲೈ ಉದಯಭೂಪಾಲನೆ, ಆ ಶಿವಭಕ್ತರು ದೊ ರೆಗಳನ್ನು ಸೇವಕ ಧರ್ಮದಿಂದ ಸೇವಿಸಿದರೆ ಸೇವಿಸಿಕೊಳ್ಳಲಿ, ಅವರು ಪ್ರಾಣವನ್ನಾದರೂ ಬಿಡುವ ರೇ ಹೊರತು ತಮ್ಮ ಆಚಾರ ಸನ್ಮಾರ್ಗವನ್ನು ಬಿಟ್ಟಾರೆ? ||೧೧೩|| ಹೀಗಿರುವಲ್ಲಿ ಅದನ್ನೆಲ್ಲಾ ಪರ್ಯಾಲೋಚಿಸದೆ, ಪೂರ್ವದಲ್ಲಿ ಶಿವಭಕ್ತರು ಭವಿಗಳನ್ನು ಸೇವಿಸಲಿಲ್ಲವೆ? ಎಂಬುದಾಗಿ ನೀನು ಸದ್ಭಕ್ತರ ನಡತೆಯನ್ನು ಉದಾಹರಿಸುವುದು ಉಚಿತವೆ? ||೧೧೪|| ಪೂರ್ವದಲ್ಲಿ ಬಸವೇಶ್ವರನು ಭವಿಸೇವೆಯನ್ನು ಮಾಡಲಿಲ್ಲವೆ ಎಂದು ಹೇಳಿಕೊಂಡು ಈಗ ಭವಿಗಳನ್ನು ಸೇವಿಸತಕ್ಕ ಮನು ಜರು, ಆ ಬಸವೇಶನಂತೆ ಜಂಗಮದಲ್ಲೇ ತಮ್ಮ ಪ್ರಾಣವನ್ನು ಏಕೆ ಅನುಸಂಧಾನ ಮಾಡಬಾ ರದು? ಬದನೆಕಾಯಿಗಳನ್ನು ಬಾಣಲಿಂಗಗಳನ್ನಾಗಿ ಏಕೆ ಮಾಡಬಾರದು? ವೇಷಾಂತರದಿಂದ ಬಂದು ಬೇಡಿದ ಶಿವನಿಗೆ ತಮ್ಮ ಭಕ್ತಿಮಹತ್ತ್ವದಿಂದ ಹಣೆಗಣ್ಣನ್ನೇಕೆ ಕೊಡಬಾರದು? ||

ಶವತ್ ||೧೨೦|| ಕಾನ್ತಾಂಬರಾರ್ಥಿನೇ ಕಾಮಿಜಂಗಮಾಯ ತದಂಬರಂ | ಸ ಪ್ರದೇಯಂಕಿಮಾಕೃಷ್ಯ ಭೂಯೋಭೂಯೋಽಭಿವರ್ಧನಂ ||೧೨೧|| ಅಸೇವತನ ಕಿಂಪೂರ್ವಂಭವಿನಂ ಬಸವೇಶ್ವರಃ | ಇತಿಮರ್ತ್ಯೈಸ್ಸೇವಮಾಸ್ಯೈರ್ಭವಿನೋ ಬಸವೇಶವತ್ ||೧೨೨|| ಪಂಕೇಪತಂತೀ ಬಸವೇತ್ಯಾಹ್ವಯಂತ್ಯತಿದೂರತಃ | ಅಪಾತಯಿತ್ವಾಗ್ರಾಹ್ಯಾಕಿಂ ಕಾಲವ್ವಾನಸಸತ್ವರಂ ||೧೨೩|| ಅಸೇವತನಕಿಂ ಪೂರ್ವಂ ಭವಿನಂ ಬಸವೇಶ್ವರಃ | ಇತಿಮರ್ತ್ಯೈಸ್ಸೇವಮಾಸ್ಯೈರ್ಭವಿನೋ ಬಸವೇಶ್ವರಃ ||೧೨೪|| ನಪ್ರವಾಹ್ಯಾಸುಧಾಧಾರಾ ಕಿಮುಸದ್ಭಕ್ತದೇಹತಃ | ಅಸೇವತನಕಿಂಪೂರ್ವಂ ಭವಿನಂ ಬಸವೇಶ್ವರಃ || ೧೨೫|| ಇತಿಮರ್ತ್ಯೈಸ್ಸೇವಮಾಸ್ಯೈರ್ಭವಿನೋ ಬಸವೇಶವತ್ | ವಿತೀರ್ಯಸಕಲಂ ಕಾಮಿಜಂಗಮೇಭ್ಯೋಮಹೀಪತೇಃ ||೧೨೬|| ಭಾಂಡಾಗಾರಧನಂಭೂಯಃ ಪ್ರಾಪ್ತವ್ಯಂನಕಿಮಾಶ್ವರಾತ್ | ಅಸೇವತನಕಿಂಪೂರ್ವಂ ಭವಿನಂ ಬಸವೇಶ್ವರಃ ||೧೨೭|| ಇತಿಮರ್ತ್ಯೈಸ್ಸೇವಮಾಸ್ಯೈರ್ಭವಿನೋ ಬಸವೇಶ್ವರಃ | ಹಾಲಾಹಲಂನಕಿಂಪೇಯಂ ಸಮರ್ಪ್ಯಮದನಾರಯೇ ||೧೨೮|| ತೆಲುಂಗುಜೊಮ್ಮಯಃಕಿಂಚ ಮೃಗಯಾರಾಗವಾನಿತಿ| ಮೃಗಯಾಭಿರತೈರ್ಮರ್ತ್ಯೈಸ್ತಥೈವಸ್ವಹತಾಮೃಗಾಃ ||೧೨೯|| ಪ್ರೇಷಣೀಯಾನಕಿಂದೇಹೈಸ್ಸಾಕಂಶಿವಪುರಂಕ್ಷಣಾತ್ | ಕೃತ್ವಾದಿವ್ಯವಿಮಾನೇಷು ಸಮಾರೂಢಾನ್ದಿನೇದಿನೇ ||೧೩೦|| ಅಕರೋತ್ಕಣ್ಣಪ್ಪೋಹಿಂಸಾ ಮಿತಿಹಿಂಸಾ

---

ತನ್ನ ಹೆಂಡತಿಯ ಸೀರೆಯನ್ನು ಬೇಡಿದ ವಿಟಜಂಗಮನಿಗೆ ಬಸವೇಶನು ಅದನ್ನು ಸೆಳೆಸೆಳೆದುಕೊಟ್ಟಂತೆಯೂ, ಮರಳಿ ಮರಳಿ ಅದು ಬೆಳೆಯುತ್ತಲೇ ಇದ್ದಂತೆಯೂ ಏಕೆ ಮಾಡಬಾರದು? ಕೆಸರಿನಲ್ಲಿ ಜಾರಿ ಬೀಳುವಾಗ ಬಸವಾ ಎಂದು ದೂರದಲ್ಲಿ ಕೂಗಿಕೊಂಡ ಗೊಲ್ಲಿತಿ ಕಾಳವ್ವೆಯನ್ನು ಕೂಡಲೇ ಬಸವೇಶನು ಹೋಗಿ ಹಿಡಿದುಕೊಂಡಂತೆ ಇವರೇಕೆ ಮಾಡಬಾರದು? ||೧೨೩|| ಆ ಬಸವೇಶನು ಶಿವನಾಗಯ್ಯನ ದೇಹದಿಂದ ಹಾಲನ್ನು ಕರೆದು ತೋರಿಸಿದಂತೆ ಇವರೇಕೆ ಮಾಡಬಾರದು? ಬಸವೇಶನು ಬಿಜ್ಜಳನ ಭಾಂಡಾಗಾರದಲ್ಲಿದ್ದ ಧನಕನಕಾದಿಗಳನ್ನೆಲ್ಲಾ ಜಂಗಮರಿಗೆ ಕೊಟ್ಟು, ಮರಳಿ ಅವನ್ನು ಪರಶಿವನಿಂದ ಪಡೆದು ಬಿಜ್ಜಳನಿಗೆ ಕೊಟ್ಟಂತೆ ಇವರೇಕೆ ಮಾಡಬಾರದು? ಬಸವೇಶನು ಮಹಾವಿಷವನ್ನು ಶಿವನಿಗೆ ಸಮರ್ಪಿಸಿ ತಾನು ಆ ಪ್ರಸಾದವನ್ನು ಸವಿದಂತೆ ಇವರು ಏಕೆ ಮಾಡಬಾರದು? ತೆಲುಂಗು ಜೊಮ್ಮಯ್ಯನು ಬೇಟೆಯಾಡಿಕೊಂಡಿದ್ದನೆಂದು ಹೇಳಿಕೊಂಡು ಅವನ ಉದಾಹರಣೆಯಿಂದ ತಾವೂ ಬೇಟೆಯಾಡುವುದಕ್ಕೆ ಹೊರಗುವ ಈಗಣ ಮನುಜರು ಆ ಜೊಮ್ಮಯ್ಯನಂತೆ ತಾವೂ ಕೊಂದ ಮೃಗಗಳನ್ನು ಕಾಯಸಮೇತ ವಿಮಾನಗಳಲ್ಲಿ ಕುಳ್ಳಿರಿಸಿ ಕೈಲಾಸಕ್ಕೆ ಏಕೆ ಕಳುಹಿಸಬಾರದು? ||೧೩೦|| ಬೇಡರ ಕಣ್ಣಪ್ಪನು ಬೇಂಟೆಯಾಡಿ ಮೃಗಪಕ್ಷಿಗಳನ್ನು ಕೊಲ್ಲುತ್ತಿದ್ದನೆಂಬ ಉದಾಹರಣೆಯನ್ನು ತೋರಿಸಿಕೊಂಡು ಪ್ರಾಣಿವಧೆಗೆ

ಪರ್ಯೈರ್ನರೈಃ | ತದ್ವದೀಶಾಯನಿರ್ವ್ಯಾಜಂ ನದೇಯಂಕಿಂವಿಲೋಚನಂ ||೧೩೧|| ಯುಜ್ಯಂತೇತಚ್ಚರಿತ್ರಾಣಿ ತೇಷಾಮೇವಮಹೀತಲೇ | ಚರಿತುಂಶಕ್ಯತೇಽಸ್ಮಾಭಿರ್ದುಷ್ಪ್ರಾಂತೀಕೃತ್ಯತಾನ್ಕಥಂ ||೧೩೨|| ಇತಃಪರಂಜಲ್ಪಿತೈಃಕಿಂ ತ್ವದಧೀನಮಿದಂನೃಪ | ಶರೀರಮರ್ಪಯಿಷ್ಯಾಮಿ ತುಭ್ಯಮೇವಗೃಹಾಣತತ್ ||೧೩೩|| ಇತ್ಯುಕ್ತ್ವಾನೃಪಹಸ್ತಸ್ಥಾ ಮಾದಾಯಕ್ಷುರಿಕಾಂತದಾ | ಸತ್ವರಂಗೋಪುರದ್ವಾರ ಪ್ರಾಸಾದಮಧಿರುಹ್ಯಸಃ ||೧೩೪|| ಸ್ಮೃತಪ್ರಮಥಸದ್ಭಕ್ತ ಪುರಾತನಪದಾಂಬುಜಃ | ಮುಸಲೇನಾವಶಿಷ್ಟೇನ ಪುರಾಸನ್ಮುನಿಶಾಪತಃ ||೧೩೫|| ಯಥಾವಿನಷ್ಟಾನಿರ್ಮೂಲಂ ಯಾದವೋಭೂತಲೇತಥಾ | ಕುಲಮೇತಸ್ಯನಿರ್ಮೂಲಂ ಭೂಯಾತ್‌ಕ್ಷುರಿಕಯಾಽನಯಾ ||೧೩೬|| ಇತ್ಯುಕ್ತ್ವಾಮಂತ್ರಿತಂ ಭಸ್ಮಕ್ಷುರಿಕಾಯಾಂವಿಕೀರ್ಯಸಃ | ಕೃತ್ವಾಲಿಂಗಾರ್ಪಿತಂಭಕ್ತ್ಯಾ ತತ್ಸರುಂಪರಿಗೃಹ್ಯಚ|| ಕಂಪಯಿತ್ವಾಸಂಪ್ರಸಾರ್ಯ ಸವ್ಯಗಾಮೃಜ್ಯಪಾರ್ಶ್ವಯೋಃ | ಗೃಹೀತ್ವಾವಾಮಹಸ್ತೇನ ಶಿಖಾಂದಕ್ಷಿಣಹಸ್ತಗಾಂ ||೧೩೮|| ನಿವೇಶ್ಯಕ್ಷುರಿಕಾಂಕಂಠೇ ಚಿಚ್ಛೇದಾಥಕರಾಂಬುಜಾತ್ | ಪ್ರಲಂಬಮಾನೇಶಿರಸಿ ದೃಷ್ಟ್ವಸ್ಸನ್‌ಸಾದ್ಭುತಂಜನೈಃ ||

---

ಕೊಡಗುವ ಮನುಷ್ಯರು ಆ ಕಣ್ಣಪ್ಪನಂತೆ ಶಿವನಿಗೆ ನಿಷ್ಕಪಟವಾಗಿ ತಮ್ಮ ಕಣ್ಣುಗಳನ್ನು ಕಳೆದು ಏಕೆ ಸಮರ್ಪಿಸಬಾರದು? ||೧೩೧|| ಭೂತಲದಲ್ಲಿ ಆ ಮಹಚ್ಚರಿತ್ರಗಳು ಆ ಮಹಿಮರಿಗೆ ಮಾತ್ರ ಸಲ್ಲತಕ್ಕುವೇ ಹೊರತು ಅವರು ಹಾಗೆ ಮಾಡಿದರೆಂದು ಹೇಳಿಕೊಂಡು ಅವರಂತೆ ನಾವೂ ಆಚರಿಸುವುದಕ್ಕಾದೀತೆ? ||೧೩೨|| ಪ್ರಭುವೆ! ಇನ್ನು ಹೆಚ್ಚುಮಾತಿನಿಂದ ಫಲವೇನು? ಈ ದೇಹವು ನಿನ್ನಧೀನವು; ಆದುಕಾರಣ ಇದನ್ನು ನಿನಗೇ ಒಪ್ಪಿಸಿಬಿಡುತ್ತೇನೆ ತೆಗೆದುಕೊ ಎಂದು ಹೇಳಿ, ಆಗ ದೊರೆಯ ಕೈಯಲ್ಲಿದ್ದ ಕತ್ತಿಯನ್ನು ಧವಳೇಶನಾಮಯ್ಯನು ಸರಕ್ಕನೆ ಸೆಳೆದುಕೊಂಡು, ಹೆಬ್ಬಾಗಿಲ ಮೇಲಿದ್ದ ಮಾಡವನ್ನೇರಿ, ಪುರಾತನ ಶಿವಶರಣ ಪಾದಾಂಬುಜಗಳನ್ನು ಧ್ಯಾನಿಸಿ, ''ಪೂರ್ವದಲ್ಲಿ ದೂರ್ವಾಸಮಹರ್ಷಿಯ ಶಾಪದಿಂದ ಯಾದವಕುಲವೆಲ್ಲವೂ ಹಾಸ್ಯಕ್ಕಾಗಿ ಅವರು ರಚಿಸಿಕೊಂಡಿದ್ದ ಒನಕೆಯ ತುಂಡಿನಿಂದಲೇ ಹೇಗೆ ನಿರ್ಮೂಲವಾಯಿತೋ ಹಾಗೆ ಈ ಕತ್ತಿಯಿಂದ ಈ ಉದಯ ಭೂಪಾಲನ ಕುಲವೂ ನಾಶವಾಗಿ ಹೋಗಲಿ'' ಎಂದು ಹೇಳಿ ||೧೩೬|| ಅಭಿಮಂತ್ರಿಸಿದ ಭಸ್ಮವನ್ನು ಆ ಕತ್ತಿಯಮೇಲೆ ಉದುರಿಸಿ, ಅದನ್ನು ತನ್ನ ಇಷ್ಟಲಿಂಗಕ್ಕೆ ಸಮರ್ಪಿಸಿ, ಆ ಆಯುಧವನ್ನು ಬಲಗೈಯಲ್ಲಿ ಹಿಡಿದು ಝಳಪಿಸಿ, ಅತ್ತಿತ್ತ ಪಟಾವರಸೆಯನ್ನು ತಿರುಗಿಸಿ, ಎಡಗೈಯಿಂದ ತನ್ನ ಜುಟ್ಟನ್ನು ಹಿಡಿದು, ಬಲಗೈಯ ಕತ್ತಿಯನ್ನು ತನ್ನ ಕೊರಲಿಗೆ ಸೇರಿಸಿ ಕತ್ತರಿಸಿಬಿಟ್ಟನು. ಬಳಿಕ ಆ ರುಂಡವು ಅವನ ಕರಕಮಲದಿಂದ ಕೆಳಗೆ ಜೋಲಾಡುತ್ತಿರಲು, ಜನರೆಲ್ಲರೂ ಆಶ್ಚರ್ಯಪಟ್ಟು ತನ್ನನ್ನು ನೋಡುತ್ತಿರಲು, ಆ ಸಾಮಯ್ಯನೆಂಬ ಗಣಾಧೀಶನು ''ಧವಳೇಶಾ!'' ಎಂದು ಬಾರಿಬಾರಿಗೂ ಗಟ್ಟಿಯಾಗಿ ಕೂಗುತ್ತಾ, ಪೂರ್ವದಲ್ಲಿ

ಆಲಪನ್ ಧವಳೇಶೇತಿ ಮುಹುರುಚ್ಚೈರ್ಗಣೋತ್ತಮಃ । ರಜತಾದ್ರಿಂಯಯೌ ಘಂಟಾಂ ವಾದಯನ್ನೋಹಿಲೋಯಥಾ ||೧೪೦|| ವೃತ್ತಾಂತಮೇತದ್ವಿಜ್ಞಾಯ ಮಲ್ಲಿಕಾರ್ಜುನಪಂಡಿತಃ | ಶಾಪೋದಕಂಸಮಾದಾಯ ಕರಾಭ್ಯಾಂ ದೂಷಕಾಂತಕಃ ||೧೪೧|| ಮಹೇಶಗಣಕೋಪೋತ್ಥೇ ನಾಮಯಕ್ರೋಧಸಂಭವೇ | ಏಕೀಭೂಯಜ್ವಲತ್ಯಗ್ನಾ ವುದಯಾವನಿವಲ್ಲಭಃ ||೧೪೨|| ಪುತ್ರಪೌತ್ರಕಳತ್ರಾಪ್ತ ಬಂಧುಭಿಸ್ಸಹಸತ್ವರಂ | ಹಸ್ತ್ಯಶ್ವರಥಪಾದಾತಿ ಸಹಿತಸ್ಸಂಪ್ರಣಶ್ಯತು || ಇತ್ಯುಕ್ತ್ವಾ ಶಾಪಸಲಿಲಂ ಮುಮೋಚಮಹಿಮಾಕರಃ | ವೀಕ್ಷಮಾಣೇಷು ಸರ್ವೇಷು ಜನೇಷುಭಯವಿಸ್ಮಯಂ ||೧೪೪|| ಇತಃಪರಂಪಾನುಗಲ್ಲುಪುರೇವಸ್ತುಮಸಾಂಪ್ರತಂ | ಶಿವಭಕ್ತೈರಿತಿಕ್ಷಿಪ್ರಂ ಪ್ರಸ್ಥಿತೇಪಂಡಿತೇಶ್ವರೇ ||೧೪೫|| ಸವಿಸ್ಮಿತಂ ಪುಷ್ಪಿತೋಽಭೂಚ್ಛಿಲಾಪುನ್ನಾಗಭೂರುಹಃ | ಕುಕ್ಕೂಕೂ ಇತಿನಿಸ್ವಾನಮಕರೋದಶ್ಮಕುಕ್ಕುಟಃ ||೧೪೬|| ಭೂಯೋಪಿತಸ್ಮಿಂಸ್ಸಂಭೂತಾ ಮಹೋತ್ಪಾತಾಃಪುರೇತದಾ | ಪರ್ಯಾಕುಲಾಬುಧಾಆಸನ್ಪುರಂ ಶೂನ್ಯಂಭವೇದಿತಿ || ಶಾಪಾಗ್ನಿನಾಽತಿದೀಪ್ತೇನ ತೇನೋದಯಮಹೀಪತಿಃ | ಸಪ್ಲೋಽಭವತ್ತತಸ್ತಸ್ಯ ಪುತ್ರಪೌತ್ರಾದಿಬಾಂಧವಾಃ ||೧೪೭|| ಸೇಶುರನ್ಯೋಽನ್ಯಜಾಯಾಽಭಿರತ್ಯಾಸಂ

---

ಓಹಿಲಯ್ಯನು ಗಂಟೆಯನ್ನು ಬಾರಿಸಿಕೊಂಡು ಕೈಲಾಸಕ್ಕೆ ಹೇಗೆ ಹೋದನೋ ಹಾಗೆ ಈತನೂ ಕೈಲಾಸಕ್ಕೆ ಪ್ರಯಾಣಮಾಡಿದನು. ||೧೪೦|| ನಿಂದಕರಿಗೆಲ್ಲಾ ಯಮಸ್ವರೂಪನಾದ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನು ಈ ಸುದ್ದಿಯನ್ನು ಕೇಳಿ, ಕೈಗಳಲ್ಲಿ ಶಾಪೋದಕವನ್ನು ಗ್ರಹಿಸಿ, ಶಿವಗಣರ ಆಗ್ರಹದಿಂದ ಹುಟ್ಟಿದ ಮತ್ತು ನಾಮಯ್ಯನ ಕೋಪದಿಂದ ಹುಟ್ಟಿದ ಅಗ್ನಿಯು ಉಗ್ರವಾಗಿ ಉರಿಯುತ್ತಿರಲು, ‚‚ಈ ಉದಯ ಭೂಪನು ತನ್ನ ಮಕ್ಕಳು ಮಮ್ಮಕ್ಕಳು ಆಪ್ತಬಾಂಧವ ವರ್ಗದವರು- ಇವರೆಲ್ಲರಿಂದಲೂ ಚತುರಂಗಬಲದಿಂದಲೂ ಸಹ ಕೂಡಿ ಬೇಗನೆ ಹಾಳಾಗಿಹೋಗಲಿ‘‘ ||೧೪೩|| ಎಂದು ಉದ್ಘೋಷಿಸಿ, ಸಕಲ ಜನರೂ ಸಭಯಾಶ್ಚರ್ಯಮಾನಸರಾಗಿ ನೋಡುತ್ತಿರಲು ಶಾಪೋದಕವನ್ನು ಬಿಟ್ಟನು. ||೧೪೪|| ಬಳಿಕ ಇನ್ನು ಮೇಲೆ ಶಿವಭಕ್ತರುಗಳು ಈ ಪಾನುಗಲ್ಲು ಪಟ್ಟಣದಲ್ಲಿ ಇರತಕ್ಕುದು ಉಚಿತವಲ್ಲವೆಂದು ಹೇಳಿ ಥಟ್ಟನೆ ಮುಂದಕ್ಕೆ ಪ್ರಯಾಣಮಾಡಲು, ||೧೪೫|| ಆತ್ಯಾಶ್ಚರ್ಯಕರವಾಗಿ ಆ ಪೂರಿನಲ್ಲಿದ್ದ ಕಲ್ಲಿನ ಸುರಹೊನ್ನೆಮರವು ಹೂ ಬಿಟ್ಟಿತು. ಕಲ್ಲು ಕೋಳಿಯು ಕು ಕೂ ಕೂ ಎಂದು ಕೂಗಿತು. ಅಲ್ಲದೆ ಇನ್ನೂ ಎಷ್ಟೋ ಉತ್ಪಾತಗಳು ಜರುಗಿದುವು. ಇನ್ನು ಈ ಪೂರು ಹಾಳಾಗುವುದೆಂದು ಅಲ್ಲಿದ್ದ ಧೀಮಂತರುಗಳು ಚಿಂತಾಕುಲರಾದರು. ||೧೪೬|| ಉಜ್ವಲವಾದ ಭಕ್ತಶಾಪಾಗ್ನಿಯಿಂದ ಉದಯಭೂಪಾಲನು ಸುಟ್ಟು ಮೃತನಾದನು. ಬಳಿಕ ಅವನ ಪುತ್ರಪೌತ್ರಬಾಂಧವಾದಿಗಳೆಲ್ಲರೂ

ಶೋಽರಯಸ್ಸ್ವಯಂ | ತಮಿಸ್ರಕಾಯವಾನೇಷು ತಯಾಕ್ಷುರಿಕಯಾಕ್ಷತಾಃ||
ಏವಂಸಿರ್ಮೂಲ ಮಭವತ್ಸಂತಾನಂತಸ್ಯಭೂಪತೇಃ |

ಇತಿ....ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಮಹಿಮಪ್ರಕರಣೇ ಧವಲೇಶಸಾಮಯ್ಯ ಚರಿತ್ರಕಥನಂನಾಮ
ಷೋಡಶೋಽಧ್ಯಾಯಃ.

---

## ಅಥ ಸಪ್ತದಶೋಽಧ್ಯಾಯಃ.

### (ಬಸವೇಶ್ವರಂಪ್ರತಿ ಪಂಡಿತಾರಾಧ್ಯಪ್ರಲಾಪಕಥನಂ)

ಅಥಾನ್ಯವಾದಿಸಂಹಾರ ಪಂಡಿತಃ ಪಂಡಿತೇಶ್ವರಃ | ಸಂಪ್ರತಸ್ಥೇವಸಿಪು ರಂಪ್ರತಿ ಭಕ್ತಜನೈಸ್ಸಹ ||೧|| ಹರಮೂರ್ತಿರ್ವಸಿಪುರ ಶಂಕರಯ್ಯೋಗಣೋತ್ತಮಃ | ಆಗತ್ಯಾಭಿಮುಖಂಭಕ್ತಿಮಾಹಾತ್ಮ್ಯೇ ಸಮುದಂಚತಿ ||೨|| ಸದ್ಭಕ್ತವೃಂದಸಹಿತಃ ಪೌರೇಷ್ವಧಿಕಹರ್ಷತಃ | ಪಶ್ಯತ್ಸುಪಂಡಿತಾರಾಧ್ಯ ಮನಯತ್ಸ್ವಪುರೀಂಪ್ರತಿ ||೩|| ತಸ್ಮಿನ್ವಸಿಪುರೇ ಪಂಡಿತಾರಾಧ್ಯೇ ಪ್ರೀತಿಪೂರ್ವಕಂ | ಶಂ

---

ಒಬ್ಬರಹೆಂಡಿರನ್ನೊಬ್ಬರು ಮೋಹಿಸಿ ಪರಸ್ಪರ ವೈರಗೊಂಡು ಕತ್ತಲೆಯ ಹಂದರಗಳಲ್ಲಿ ಕಾದಾಡಿ, ಅದೇ ಕತ್ತಿಯಿಂದ ಹೊಡೆದಾಡಿ ಸತ್ತರು. ಹೀಗೆ ಆ ರಾಜನ ವಂಶವೆಲ್ಲಾ ನಿರ್ಮೂಲವಾಯಿತು. ||೧೪೯||

ಎಂಬಲ್ಲಿಗೆ ಪಂಡಿತಾರಾಧ್ಯಚರಿತ್ರದ ಮಹಿಮಪ್ರಕರಣದಲ್ಲಿ ೧೬ನೆ ಅಧ್ಯಾಯವು ಮುಗಿದುದು.

---

## ೧೭ನೆ ಅಧ್ಯಾಯವು.

### ಬಸವೇಶ್ವರನ ಲಿಂಗೈಕ್ಯವನ್ನು ಕೇಳಿ ಪಂಡಿತಾರಾಧ್ಯರು ಪ್ರಲಾಪಿಸಿದ ಕಥೆ.

ಬಳಿಕ ಪರವಾದಿ ವಿಧ್ವಂಸನ ಪಂಡಿತನಾದ ಪಂಡಿತಸ್ವಾಮಿಯು ಭಕ್ತಜನರೊಡನೆ ಕೂಡಿ ವಸಿಪುರವನ್ನು ಕುರಿತು ಹೊರಟನು. ||೧|| ಆ ಪುರಿನಲ್ಲಿ ಪರಶಿವಸ್ವರೂಪನಾಗಿದ್ದ ಶಂಕರಯ್ಯನೆಂಬ ಭಕ್ತೋತ್ತಮನು ಅತ್ಯಂತ ಭಕ್ತಿವಿಶೇಷದಿಂದ ಅನೇಕ ಭಕ್ತಮಂಡಲಿಯೊಡನೆ ಕೂಡಿ ಬಂದು ಇದಿರ್ಗೊಂಡು, ಪಟ್ಟಣದ ಜನರೆಲ್ಲರೂ ನೋಡಿ ಸಂತೋಷಪಡುತ್ತಿರಲಾಗಿ, ಪಂಡಿತಾರಾಧ್ಯನನ್ನು ಊರಿಗೆ ಕರೆದುಕೊಂಡು ಹೋದನು. ||೨|| ಆವಸಿಪುರದಲ್ಲಿ ಪಂಡಿತಾರಾಧ್ಯನು ಶಂಕರಯ್ಯನೇ ಮೊದಲಾದ ಭಕ್ತಗಣದೊಡನೆ ಶಿವಾನುಭವ ಪ್ರಸಂಗವನ್ನು ಮಾಡಿಕೊಂಡು

ಕರಯ್ಯಪ್ರಭೃತಿಭಿ ಶ್ಶಿವಭಕ್ತಗಣೈಸ್ಸಹ || ೪ || ದಿನಾನಿನೀತ್ವಾಕತಿಚಿಚ್ಛಿವತತ್ವ ಪ್ರಸಂಗತಃ | ವರಕಲ್ಯಾಣನಗರಂ ಪ್ರತಿಗನ್ತುಂಸಮುದ್ಯತೇ ||೫|| ಸದ್ಭಕ್ತಃಕಶ್ಚಿದಾಗತ್ಯ ಗಿರಮಿತ್ಯವದತ್ತದಾ | ಕಲ್ಯಾಣೇ ಶಿವಸದ್ಭಕ್ತಿರ್ವಿಹತಾಪಂಡಿತೇಶ್ವರ ||೬|| ಜಘ್ನತುರ್ಬಿಜ್ಜಲಂ ಮೊಲ್ಲೆಬೊಮ್ಮಯ್ಯ ಜಗದೇವಯೌ | ಬಸವಾಮಾತ್ಯವರ್ಯೋಽಪಿ ಗತ್ವಾಕಪ್ಪಡಿಸಂಗಮಂ || ೭ || ಸದೇಹಸ್ಸಂಗಮೇಶಸ್ಯ ಗರ್ಭಂಪ್ರಾವಿಶದದ್ಭುತಂ | ದಿನಾಷ್ಟಕಮಭೂದೇತ ದನ್ನಸ್ಸತ್ಯಂಗಣೋತ್ತಮ || ತಚ್ಛ್ರುತ್ವಾಸಂಭ್ರಮಾಕ್ರಾನ್ತೋ ಮಲ್ಲಿಕಾರ್ಜುನಪಂಡಿತಃ | ಇತಿಶ್ರೀಬಸವಾಮಾತ್ಯಂ ವಿಲಲಾಪಾತಿದುಃಖಿತಃ ||೯|| ಬಸವಾಮಾತ್ಯಬಸವ ಕುಮಾರಬಸವೇಶ್ವರ | ಪ್ರಭೋಬಸವಲಿಂಗಶ್ರೀ ಭಂಡಾರಿಬಸವೇಶ್ವರ ||೧೦|| ಮತ್ಸ್ವಾಮಿಸ್ಸಂಗನಬಸವಣ್ಣ ಸಾಧುಜನಪ್ರಿಯ | ಸಂವಿತ್ಪ್ರದೀಪ ಶಮಿತಪುಷ್ಪಚಾಪನಿರಂಕುಶ || ಸತ್ಯಪ್ರಲಾಪವಿನುತ ಭೂಪಸಜ್ಜನವಂದಿತ | ವಿಶುದ್ಧಚರಲಿಂಗ ಸ್ವರೂಪಪಾಪವಿವರ್ಜಿತ ||೧೨|| ಶಸ್ತ್ರಪ್ರತಾಪಜಗತಾ ಮಗ್ರಗಣ್ಯಸಮುನ್ನತ | ಸದ್ಭಕ್ತಿಗಣ್ಯನಿಖಿಲಶರಣ್ಯ ಕರುಣಾನಿಧೇ ||೧೩|| ದೂರನಿರ್ಧೂತಕಾರ್ಪಣ್ಯ ಜ್ಞಾತಷಾಡ್ಗುಣ್ಯಲಕ್ಷಣ | ಗುಣಾಂಚತ್ಪುಣ್ಯಶರಣವರೇಣ್ಯ ಮಹಿಮಾಕರ ||೧೪|| ಘನಶಾ

---

ಕೆಲದಿನಗಳಿದ್ದು, ಬಳಿಕ ಕಲ್ಯಾಣಪಟ್ಟಣವನ್ನು ಕುರಿತು ಪ್ರಯಾಣಮಾಡುವುದಕ್ಕೆ ಉಜ್ಜುಗಿಸಿದನು. ||೫|| ಅಷ್ಟರಲ್ಲಿ ಒಬ್ಬಾನೊಬ್ಬ ಭಕ್ತನು ಬಂದು—“ಗಣಶ್ರೇಷ್ಠನಾದ ಪಂಡಿತಾರಾಧ್ಯಸ್ವಾಮಿಯೆ! ಕಲ್ಯಾಣಪಟ್ಟಣದಲ್ಲಿ ಶಿವಭಕ್ತಿಯು ಕೆಟ್ಟಿತು. ಮೊಲ್ಲೆಬೊಮ್ಮಯ್ಯ ಜಗದೇವಯ್ಯಗಳೆಂಬುವರು ಬಿಜ್ಜಳನನ್ನು ಕೊಂದರು. ಬಸವಮಂತ್ರಿಯು ಕಪ್ಪಡಿಯ ಸಂಗಮನಾಥನಲ್ಲಿಗೆ ಹೋಗಿ, ಕಾಯಸಮೇತ ಸಂಗಮೇಶ್ವರನ ಉದರವನ್ನು ಆಶ್ಚರ್ಯಕರವಾಗಿ ಹೊಕ್ಕನು. ಇಂದಿಗೆ ೮ ದಿನಗಳಾದುವು. ಇದು ಸತ್ಯವು. ಎಂದು ಹೇಳಲಾಗಿ, ||೮|| ಆ ಮಾತನ್ನು ಪಂಡಿತಾರಾಧ್ಯನು ಕೇಳಿ ಚಕಿತನಾಗಿ, ಅತ್ಯಂತ ದುಃಖದಿಂದ ಆ ಬಸವೇಶನನ್ನು ಕುರಿತು ಹೀಗೆ ಹಂಬಲಿಸಿದನು ||೯|| ಎಲೈ ಬಸವಮಂತ್ರಿಯೆ, ಬಸವಕುಮಾರನೆ, ಬಸವೇಶ್ವರನೆ, ಪ್ರಭೋ ಬಸವಲಿಂಗನೆ, ಬಂಡಾರಿ ಬಸವೇಶ್ವರನೆ, ವನ್ನ ಸ್ವಾಮಿ ಸಂಗನ ಬಸವಣ್ಣನೆ, ಸಜ್ಜನಪ್ರಿಯನೆ, ಜ್ಞಾನಜ್ಯೋತಿಯೆ, ಮದನವಿಧ್ವಂಸಿಯೆ, ಸ್ವತಂತ್ರನೆ, ಸತ್ಯವಚನನೆ, ರಾಜಸಂಸ್ತುತ್ಯನೆ, ಪಾಪರಹಿತನೆ, ||೧೨|| ಮಹಾ ಪರಾಕ್ರಮಶಾಲಿಯೆ, ಲೋಕಾಗ್ರೇಸರನೆ, ಸದ್ಭಕ್ತಿಗೆ ಸಿಲುಕತಕ್ಕವನೆ, ಸರ್ವರಕ್ಷಕನೆ, ದಯಾನಿಧಿಯೆ, ಹೀನತ್ವವನ್ನು ದೂರೀಕರಿಸಿದವನೆ, ಸತ್ಯ ಜ್ಞಾನ ಧರ್ಮ ದಯಾ ಶಮದಮೆಗಳೆಂಬ ಷಡ್ಗುಣಗಳಿಂದ ಮಂಡಿತನೆ, ನಿಖಿಲ ಸದ್ಗುಣಗಳಿಗೆ ಪಸರನಾದವನೆ, ಶಿವಶರಣಶ್ರೇಷ್ಠನೆ, ಮಹತ್ವಾಶ್ರಯನೆ ||೧೪|| ಪುಣ್ಯಸಾಂದ್ರನೆ, ಮುಪ್ಪಿಲ್ಲದವನೆ, ನಾದಬ್ರಹ್ಮಾನಂದನಿಮಗ್ನನೆ, ಸುಂದರಾಕಾರನೆ, ಸ್ಮರಿಸಿದ ತತ್‌ಕ್ಷಣವೇ ಪ್ರಸನ್ನನಾಗತಕ್ಕವನೆ, ಭವಿಗಳಲ್ಲದ

ಶ್ವೇತಸತ್ಪುಣ್ಯ ನಿತ್ಯಂ ತಾರುಣ್ಯಸಂಯುತ | ಮನೋಜ್ಞನಾದಮಹಿತಪ್ರಮೋದ ಲಲಿತಾಕೃತೇ ||೧೫|| ಸದ್ಯಃಪ್ರಸಾದ ಶೈವೈಕವಿನೋದ ಭುವನೋತ್ತಮ| ಸಮಿದ್ಧವೇದವಿನುತ ಜಂಗಮಾಹ್ಲಾದಭಾಸುರ ||೧೬|| ಶರ್ವಾವಿಭೇದ ಶಮಿತವಿಷಾದಪ್ರಮಥಾಧಿಪ | ಸಂಯಮಾಧಾರ ಸಂಹಾರದೂರ ಕಾರಣವಿಗ್ರಹ ||೧೭|| ಉಚಿತಾಚಾರ ಲಲಿತಶರೀರ ಹರಸನ್ನಿಭ | ದಯಾಪ್ರಚಾರ ಸದಸದ್ವಿಚಾರಹತದುರ್ಜನ ||೧೮|| ಲೋಕೈಕವೀರ ಗೌರೀಶಕುಮಾರಭವಮೋಚನ | ಕೃಪಾವರಣ ಸದ್ಭಕ್ತಿಶರಣಾತ್ಯಂತನಿರ್ಮಲ || ೧೯ || ಜನ್ಮಪ್ರಹರಣಾಂಭೋಜಚರಣ ಸ್ಥಿರಮಾನಸ | ಶಾಸ್ತಿಸ್ಥಲೀವಿಹರಣ ಯಮಾದ್ಯಾಭರಣಪ್ರಭೋ ||೨೦|| ಶೈವವಿಸ್ಫುರಣ ಸ್ವೀಯಸಮಯೋದ್ಧರಣಾನಘ | ಸತ್ಪಥಾಚಾರ್ಯೋಪಚಿತಶೌರ್ಯ ಭಕ್ತಿಮತಾಂವರ ||೨೧|| ಸಾತ್ವಿಕಸ್ಥೈರ್ಯ ಸಂಗೀತಧುರ್ಯಸರ್ವಕಳಾಧರ | ಸಮಿದ್ಧಧೈರ್ಯ ಸಹಜಗಾಂಭೀರ್ಯಾದಾರ್ಯಭಾಸ್ವರ ||೨೨|| ಶ್ರಿತಶಾಂಭವಸಚ್ಚರ್ಯ ಕೃತಿವರ್ಯಶಿವಪ್ರಿಯ | ಸದ್ಧರ್ಮಗಾತ್ರ ಸೌಮ್ಯೋರುಚರಿತ್ರಸಮುದಂಚಿತ ||೨೩|| ಕರುಣಾಮಾತ್ರ ಷಡ್ವರ್ಗಜೈತ್ರ ಸರ್ವಜ್ಞಶೇಖರ | ಸಾಧಿತಾಮಿತ್ರವಿನುತಿಪಾತ್ರ ಭಕ್ತಿವಿವರ್ಧನ ||೨೪|| ಜಂಗಮಕ್ಷೇತ್ರ ಸತತಪವಿತ್ರಶಿವತತ್ಪರ | ಸದ್ವ್ರತೋ

---

ಭಕ್ತರೊಡನೆ ಮಾತ್ರವೇ ವಿನೋದಪಡತಕ್ಕವನೆ, ಲೋಕಶ್ರೇಷ್ಠನೆ, ಸಮೃದ್ಧಗಳಾದ ವೇದವಚನಗಳಿಂದ ಸ್ತೋತ್ರಮಾಡಿಸಿಕೊಂಡವನೆ, ಜಂಗಮರನ್ನು ಸಂತೋಷಪಡಿಸುವಲ್ಲಿ ಪ್ರೀತಿಯುಳ್ಳವನೆ, ||೧೬|| ಶಿವನಿಗೆ ಅಭಿನ್ನನಾದವನೆ, ದುಃಖಧ್ವಂಸಿಯೆ, ಪ್ರಮಥಸ್ವಾಮಿಯೆ, ಅಹಿಂಸಾಸ್ತೇಯಾದಿ ಗುಣಗಳಿಗೆ ಆಶ್ರಯನೆ, ಸಹ್ಮರಣಕಾರ್ಯಕ್ಕೆ ದೂರನಾದವನೆ, ಭಕ್ತಿರಕ್ಷಣಕಾರಣದಿಂದ ನರದೇಹವನ್ನು ಧರಿಸಿ ಭೂಮಿಗವತರಿಸಿದವನೆ ||೧೭|| ಶಿವಾಗಮೋಚಿತ ಸದಾಚಾರಸಂಪನ್ನನೆ, ಸುಂದರಕಾಯನೆ, ಶಿವಸಮಾನನೆ, ಕಾರುಣ್ಯಪ್ರಸಾರಕನೆ, ಜಡಾಜಡ ವಿಚಾರಸಂಪನ್ನನೆ, ದುರ್ಜನ ವಿನಾಶಕನೆ ||೧೮|| ಜಗದೇಕವೀರನೆ, ಶಿವಕುಮಾರನೆ, ಸಂಸಾರವಿಮೋಚಕನೆ, ಶಿವಭಕ್ತಿ ಸಂರಕ್ಷಕನೆ, ಅತ್ಯಂತ ನಿರ್ಮಲನೆ, ಜನ್ಮನಿವಾರಕನೆ, ತಾವರೆಯಂತಿರುವ ಪಾದಗಳುಳ್ಳವನೆ, ನಿಶ್ಚಲಮನಸ್ಕನೆ, ಶಾಂತಿವಿಹಾರಿಯೆ, ಸತ್ಕರ್ಮಾಭರಣನೆ ||೨೦|| ಶಿವಧರ್ಮಸ್ಫುರಣರೂಪನೆ, ತನ್ನ ಶಿವಮತವನ್ನುದ್ಧರಿಸಿದವನೆ, ನಿರ್ದುಷ್ಟನೆ, ಉತ್ತಮ ಶಿವಮತಾಚಾರ್ಯನೆ, ಶೌರ್ಯಸಂಪೂರ್ಣನೆ, ಸದ್ಭಕ್ತಶ್ರೇಷ್ಠನೆ, ಅಚಲವಾದ ಸಾತ್ವಿಕ ವರ್ತನವುಳ್ಳವನೆ, ಗಾನಲೋಲನೆ, ಸಕಲ ವಿದ್ಯಾವಿಶಾರದನೆ, ಧೈರ್ಯಸಮಗ್ರನೆ, ಸ್ವಭಾವಸಿದ್ಧಗಳಾದ ಗಾಂಭೀರ್ಯಾದಾರ್ಯಗುಣಗಳುಳ್ಳವನೆ ||೨೨|| ಶಿವಧರ್ಮಾಚರಣವನ್ನಾಶ್ರಯಿಸಿದವನೆ, ಕುಶಲಶೇಖರನೆ, ಶಿವಪ್ರೀತಿಪಾತ್ರನೆ, ಶಿವಧರ್ಮಶರೀರಿಯೆ, ಸಚ್ಚರಿತ್ರನೆ, ಅರಿಷಡ್ವರ್ಗಗಳನ್ನು ಜಯಿಸಿದವನೆ, ಸರ್ವಜ್ಞವರೇಣ್ಯನೆ, ಶತ್ರುಗಳಿಂದಲೂ ಕೂಡ ಹೊಗಳಿಸಿಕೊಂಡವನೆ, ಶಿವಭಕ್ತಿಯನ್ನು ಹೆಚ್ಚಿಸಿದವನೆ, ಚಲಿ

ಶೃಂಗಕರುಣಾಪಾಂಗಾಗಮವಿಶಾರದ ||೨೫|| ಸಂಹೃತಾನಂಗ ಸತತಾಭಂಗ ಸದ್ಭಕ್ತಪುಂಗವ| ಶ್ರೌತಪ್ರಸಂಗ ಸಂಗೀತರಂಗ ಸಾಂದ್ರಮಹೋದಯ ||೨೬|| ಸಾಕ್ಷಾಚ್ಛಿವಾಂಗ ವಿಲಸದ್ಗುರುಲಿಂಗಗಣಪ್ರಿಯ | ಮನ್ಮನೋಹರಮತ್ತಾತ ಮದ್ಭ್ರಾತರ್ಮದಧೀಶ್ವರ || ೨೭ || ಅವಿಶಃಕಿಂಹಾ ಮಹೇಶಗರ್ಭಂಹಿತ್ವಾತ್ವ ಮೇವಮಾಂ | ಶ್ರೀಸಂಗಮೇಶ ಗಿರಿಜಾಪ್ರಾಣನಾಥಮಹೇಶ್ವರ ||೨೮|| ಹರಿ ಬ್ರಹ್ಮಾದ್ಯವಿಜ್ಞಾತಪ್ರಮಾಣ ತ್ರಿಪುರಾಂತಕ | ಭಕ್ತಿಮಾಣಿಕ್ಯಕಷಣಶಾಣ ಶು ಭ್ರಾಂಶುಶೇಖರ ||೨೯|| ಸಮುಂಚಿತಾಖಿಲಕಲಾಪ್ರವೀಣ ಪರಮೇಶ್ವರ | ಹಿರ ಣ್ಯಗರ್ಭಕಂಕಾಲವೀಣಾಸಮವಿಲೋಚನ || ೩೦ || ತ್ವದ್ಭಕ್ತಿಸ್ಥಾಪಕಾನೇಕ ಪುರಾಣ ದುರಿತಾಂತಕ | ಸುಮೇರುದ್ರೋಣ ವೃಷಭವಿಷಾಣೇಕ್ಷಣತತ್ಪರ || ವಿಷಕಂಠಪ್ರಭಾಕ್ಷೀಣಗೇಯನಿರ್ಮಾಣ ಶಂಕರ | ಅಜಾಂಡವಿಲಸದ್ಗರ್ಭ ಕೋ ಣಲೋಕತ್ರಯಾವನ || ೩೨ || ವಿಖ್ಯಾತಭೋಗಯ್ಯಸಹಪ್ರಯಾಣ ಕ್ರತುನಾ ಶಕ | ದತ್ತಹಸ್ತಾಂಬುಜಯುಗಭಟ್ಟಬಾಣ ಪರಾತ್ಪರ || ೩೩ || ದಯಾಮೃತರ ಸೋಪೇತನಿರ್ವಾಣ ಭವಮೋಚಕ | ಕೃತ್ತಿವಾಣೀಘೋಣ ದತ್ತಜೋಳಸ್ತ್ರೀ

---

ಸುವ ಶಿವಕ್ಷೇತ್ರಸ್ವರೂಪನೆ, ನಿತ್ಯಶುದ್ಧನೆ, ಶಿವಾಸಕ್ತನೆ, ಉತ್ತಮವ್ರತಸಂಪನ್ನನೆ, ಉತ್ಕೃಷ್ಟ ದಯಾರಸಭರಿತ ಕಟಾಕ್ಷನೆ, ಶಿವಾಗಮಕೋವಿದನೆ, ||೨೫|| ಯಾವಾಗ್ಗೂ ನಾಶಗೊಳ್ಳದ ವನೆ, ಸದ್ಭಕ್ತಶ್ರೇಷ್ಠನೆ, ವೈದಿಕಪ್ರಸಂಗವುಳ್ಳವನೆ, ಗಾನವಿದ್ಯಾರಂಗಸ್ಥಲನೆ, ಮಹಾವಿಭಾವ ವುಳ್ಳವನೆ, ಗುರುಲಿಂಗಜಂಗಮಪ್ರಿಯನೆ, ನನ್ನ ಸುಂದರನೆ, ನನ್ನ ತಂದೆಯೆ, ನನ್ನಣ್ಣನೆ, ನನ್ನೊ ಡೆಯನೆ, ||೨೭|| ಹಾ! ಬಸವೇಶನೆ, ನನ್ನನ್ನು ಬಿಟ್ಟು ನೀನೊಬ್ಬನೇ ಶಿವನ ಗರ್ಭವನ್ನು ಹೊಕ್ಕೆಯಾ? ಪಾರ್ವತೀಪತಿಯಾದ ಎಲೈ ಸಂಗಮನಾಥಸ್ವಾಮಿಯೆ, ವಿಷ್ಣುಬ್ರಹ್ಮರಿಗೂ ಅರಿ ಯಬಾರದ ಆದ್ಯಂತ ಪ್ರಮಾಣಗಳುಳ್ಳ ಎಲೈ ತ್ರಿಪುರಾಂತಕ ಮಹಾದೇವನೆ, ಭಕ್ತಿಯೆಂಬ ರತ್ನವನ್ನು ತಿಕ್ಕಲು ಸಾಣೆಯ ಕಲ್ಲಿನಂತಿರುವವನೆ, ಚಂದ್ರಶೇಖರನೆ, ||೨೯|| ಸಕಲ ವಿದ್ಯಾ ನಿಧಿಯಾದ ಪರಮೇಶ್ವರನೆ, ಬ್ರಹ್ಮನ ಬೆನ್ನುಮೂಳೆಯನ್ನು ವೀಣಾದಂಡವನ್ನಾಗಿ ಮಾಡಿ ಹಿಡಿದ ವನೆ, ಮುಕ್ಕಣ್ಣನೆ, ನಿನ್ನ ಭಕ್ತಿಯನ್ನು ಲೋಕದಲ್ಲಿ ಸ್ಥಾಪಿಸಲು ಸಾಧಕಗಳಾಗಿರುವ ಅನೇಕ ಪುರಾಣಗಳುಳ್ಳವನೆ, ಪಾಪಧ್ವಂಸಿಯೆ, ಮೇರುಚಾಪನೆ, ವೃಷಭೇಶ್ವರನ ಕೊಂಬುಗಳ ಮಧ್ಯ ದಿಂದ ಸಂದರ್ಶನ ಮಾಡಿಸಿಕೊಳ್ಳುವಲ್ಲಿ ಪ್ರೀತನಾದವನೆ, ವಿಷಕಂಠನೆ, ನಾಶವಿಲ್ಲದ ಸಂಗೀತ ಶಾಸ್ತ್ರವನ್ನು ನಿರ್ಮಾಣಮಾಡಿದವನೆ, ಬ್ರಹ್ಮಾಂಡವೆನಿಸಿಕೊಂಡಿರುವ ತ್ರಿಲೋಕವನ್ನೂ ತನ್ನ ಹೊಟ್ಟೆಯ ಮೂಲೆಯಲ್ಲಿಟ್ಟುಕೊಂಡು ಸಂರಕ್ಷಿಸುತ್ತಿರುವವನೆ, ಕೆಂಬಾವಿಭೋಗಯ್ಯನೊಡನೆ ಪ್ರಯಾಣಮಾಡಿ ಹೋದವನೆ, ದಕ್ಷಯಜ್ಞವಿನಾಶಕನೆ, ಭಟ್ಟಬಾಣನಿಗೆ ಕೈಗಳನ್ನು ಅನುಗ್ರ ಹಿಸಿದವನೆ, ಎಲ್ಲಕ್ಕೂ ಮಿಗಿಲಾದವನೆ, ||೩೩|| ಕರುಣಾರಸಾಮೃತ ಪರಿಪೂರ್ಣನೆ, ಭಕ್ತರ ಜನ್ಮ

ಘೋಣ ಭಾಸ್ವರ ||೩೪|| ಪರಿಚ್ಛಿನ್ನಮರುನ್ಮಾತೃಘ್ರಾಣ ಪನ್ನಗಭೂಷಣ | ಶರಣತ್ರಾಣ ಸಹಜಕಲ್ಯಾಣವೃಷಭಧ್ವಜ ||೩೫|| ಸಾನ್ನಿಧ್ಯಸಂಹೃಷ್ಟಬಾಣ ಶಮಿತಾಸಮಬಾಣಕ| ಪದ್ಮಾಕ್ಷಬಾಣ ಜ್ವಲನಕೃಪಾಣ ಸುಖದಾಯಕ ||೩೬|| ಪೂರ್ವಗೀರ್ವಾಣಗೀರ್ವಾಣ ಶೋಣಪಾಷಾಣವಮೌಳಿಭಿಃ | ತೇಜೋಧುರೀಣ ಚರಣ ನಿರ್ವಾಣಕರುಣಾಕರ ||೩೭|| ಮಹೇಶ್ವರಗಣಪ್ರಾಣ ಪುತ್ರಾಣ್ಯಾಲಂ ಘ್ಯಶಾಸನ | ಸೌಖ್ಯಪಾರೀಣಹಸ್ತಾಬ್ಜಗೃಹೀತೈಣ ಗಣೇಶ್ವರ ||೩೮|| ಶ್ರೀಮಹಾಲಿಂಗತನುಜಂ ಪುಣ್ಯಭಾಜಂ ನಿರಂತರಂ | ತತ್ವೈಕಬೀಜಂ ಶರಣಕಲ್ಪಭೂಜಂ ಮಹೋಜ್ವಲಂ ||೩೯|| ನಿರಸ್ತಭೋಜಂ ವಿಜಿತಮನೋಜಂ ದಿವ್ಯತೇಜಸಂ | ಶಿವಭಕ್ತಸಮಾಜಂ ಸದ್ಗುಣಸೈಜಂ ಯಶಸ್ವಿನಂ ||೪೦|| ಧರ್ಮಾಧಿರಾಜಂ ವಿನುತಕೇಶಿರಾಜಮಹರ್ನಿಶಂ | ಪ್ರಣಮಚ್ಚಿನ್ನಬಸವರಾಜಂ ಭ್ರಾಜಿತವೈಭವಂ ||೪೧|| ವಿನಿರ್ಗತಭವವ್ಯಾಜಂ ಭಕ್ತಿರಾಜಂ ಮಹೋನ್ನತಂ | ನಿರಸ್ತಚಾಲುಕ್ಯರಾಜಂ ಪೂರ್ವಗೋರಾಜಮುತ್ತಮಂ ||೪೨|| ಕರುಣಾಪೂರ್ಣನಯನಸರೋಜಂ ಸಜ್ಜನಪ್ರಿಯಂ | ರಾಜಾಧಿರಾಜಂ ವಿನುತಸುರರಾಜಂ ಮಹೋದಯಂ ||೪೩|| ಆತ್ಮಾಪ್ತಮಾದಿರಾಜಂ ಮದ್ರಾಜಂ ಭ್ರಾಜಿಷ್ಣುಮವ್ಯಯಂ |

---

ಮರಣಗಳನ್ನು ತಪ್ಪಿಸತಕ್ಕವನೆ, ಸರಸ್ವತಿಯ ಮೂಗನ್ನು ಕತ್ತರಿಸಿದವನೆ, ನರಸಿಹ್ಮಚೋಳನ ಪತ್ನಿಗೆ ಮೂಗನ್ನು ದಯಪಾಲಿಸಿದವನೆ, ದೇವಮಾತೆಯ ಮೂಗನ್ನು ಕತ್ತರಿಸಿದವನೆ, ಸರ್ಪಾಭರಣನೆ, ಶಿವಶರಣ ಸಂರಕ್ಷಕನೆ, ಮಂಗಳಮಯನೆ, ವೃಷಭಧ್ವಜನೆ, ||೩೫|| ಸಾಮೀಪ್ಯಪದವಿಯನ್ನಿತ್ತು ಬಾಣಕವಿಯನ್ನು ಸಂತೋಷಪಡಿಸಿದವನೆ, ಮದನಧ್ವಂಸಕನೆ, ವಿಷ್ಣುವೇ ಬಾಣವಾಗುಳ್ಳವನೆ, ಅಗ್ನಿಯೇ ಕತ್ತಿಯಾಗುಳ್ಳವನೆ, ಸಕಲ ಸೌಖ್ಯಪ್ರದನೆ, ದೇವಾಸುರ ಮಣಿಮಯ ಕಿರೀಟ ರತ್ನತೇಜಃಪುಂಜವಿರಾಜಿತ ಪಾದಕಮಲನೆ, ಮೋಕ್ಷವನ್ನು ಕರುಣಿಸತಕ್ಕವನೆ, ಶಿವಗಣಂಗಳೇ ತನ್ನ ಪ್ರಾಣವಾಗುಳ್ಳವನೆ, ನನಗೆ ಪ್ರಾಣನಾದವನೆ, ಯಾರಿಂದಲೂ ಮೀರಲಾಗದ ಆಜ್ಞೆಯುಳ್ಳವನೆ, ಸೌಖ್ಯದ ಪರಮಾವಧಿಯನ್ನೈದಿದವನೆ, ಕರಕಮಲದಲ್ಲಿ ಜಿಂಕೆಯನ್ನು ಧರಿಸಿದವನೆ, ಶಿವಗಣಾಧೀಶನೆ ||೩೮|| ಶ್ರೀ ಮಹಾಲಿಂಗ ಪುತ್ರನೂ, ಸುಕೃತಿಯೂ, ಶಿವತತ್ತ್ವಮೂಲವೂ, ಶಿವಶರಣರಿಗೆ ಕಲ್ಪವೃಕ್ಷವೂ, ಪ್ರಕಾಶಮಾನನೂ, ವಿತರಣದಲ್ಲಿ ಭೋಜನನ್ನು ಕೂಡ ತಿರಸ್ಕರಿಸಿದವನೂ, ಕಾಮವನ್ನು ಜೈಸಿದವನೂ, ಮಹಾ ದಿವ್ಯ ತೇಜಸ್ವಿಯೂ, ಶಿವಭಕ್ತಸ್ತೋಮದಿಂದ ಕೂಡಿದವನೂ, ಸಹಜ ಸದ್ಗುಣಾಢ್ಯನೂ, ಯಶೋವಂತನೂ, ಸದ್ಧರ್ಮಾಧೀಶ್ವರನೂ, ಕೇಶಿರಾಜನಿಂದ ಸ್ತೋತ್ರಮಾಡಿಸಿಕೊಂಡವನೂ, ಚಿನ್ನಬಸವೇಶನಿಗೆ ವಂದ್ಯನೂ, ಮಹಾವೈಭವಸಂಪನ್ನನೂ, ಸಂಸಾರದೂರನೂ, ಶಿವಭಕ್ತಿಗೊಡೆಯನೂ, ಮಹೋತ್ಕೃಷ್ಟನೂ, ಚಾಲುಕ್ಯವಂಶದ ಬಿಜ್ಜಳರಾಜನನ್ನು ಭಂಜಿಸಿದವನೂ, ಪೂರ್ವಯುಗದಲ್ಲಿ ವೃಷಭಾವತಾರ

ಶ್ರೀಮದ್ಬಸವರಾಜಂ ಕಿಂ ತ್ವದ್ಗರ್ಭೇಸನ್ಯವೇಶಯಃ ||೪೪|| ಹಾಸಂಗಮೇಶದೇವೇಶ ತ್ವದೀಯಇತಿಸಾದರಂ | ತ್ವಯ್ಯೇವಾಯೋಜಯಸ್ತಂಕಿಂ ಬಸವಾಮಾತ್ಯಶೇಖರಂ ||೪೫|| ಪ್ರಸಿದ್ಧಕೀರ್ತಿಂಪ್ರಮಥಾವತಾರಂ ಭಕ್ತಿಭೂಷಣಂ | ವೀರಭದ್ರಾಕೃತಿಂ ನ್ಯಾಯಾದನಪೇತಂ ಮಹಾಮತಿಂ ||೪೬|| ಯಥಾಮಾರ್ಗಪ್ರಸಾದಾವತಾರಂ ನಿರ್ಮಲರೂಪಿಣಂ | ಸ್ತುತಭಕ್ತ್ಯರ್ಥಮಹಿಮಾವತಾರಂ ಧರಣೀತಲೇ ||೪೭|| ಸತ್ಯಶಾಂಭವಧರ್ಮಾವತಾರಂ ನಿರ್ಮಲಭಾಸುರಂ | ಪ್ರಸಿದ್ಧಸದ್ವೀರಭಕ್ತಿಸ್ಥಲಾಚಾರ ಮಚಂಚಲಂ ||೪೮|| ಜಂಗಮವ್ಯೂಹಸುಪಥ ಪ್ರಕಾರಮತಿಶೋಭನಂ | ಸನ್ತತಾಭ್ಯುದಯೋಪೇತಪ್ರಚಾರಂ ಪರಮೋನ್ನತಂ || ಚಿತ್ರಂಶಿವಪಥಾಚಾರ ಮಮೇಯನಿಜವೈಭವಂ | ಲಿಂಗಸಾಮ್ರಾಜ್ಯಪದವೀಪಟ್ಟಬದ್ಧಂ ಮಹೇಶ್ವರ ||೫೦|| ಸದ್ಭಕ್ತಿಪಟ್ಟಬದ್ಧಂಕ ಮಕರೋಸ್ತ್ವಮಿತಃಪರಂ | ಅಶೇಷಮುಕ್ತಿಸಾಮ್ರಾಜ್ಯ ಪರಿಸ್ಫುರಿತವೈಭವ ||೫೧|| ಅಶೇಷಭಕ್ತರಾಜ್ಯಾಂಗಃ ಕೋವಾಭೂಮಾವಿತಃಪರಂ | ಸದ್ಭಕ್ತದೇಹ ಸ್ವಧ್ಭಕ್ತಪ್ರಾಣೇಚಕ ಇತಃಪ

---

ನೂ, ದಯಾಪರಿಪೂರ್ಣ ಕಟಾಕ್ಷನೂ, ಸತ್ಪುರುಷಸತ್ತಮನೂ, ಸಾರ್ವಭೌಮನೂ, ದೇವತಾಪ್ರಭುವೂ, ಮಾದಿರಾಜನಿಗೆ ಆಪ್ತನೂ, ನನ್ನ ದೊರೆಯೂ, ಸುಪ್ರಕಾಶನೂ, ನಾಶರಹಿತನೂ, ಆದ ಶ್ರೀ ಬಸವೇಶ್ವರನನ್ನು ನಿನ್ನ ಗರ್ಭದಲ್ಲಿ ಇರಿಸಿಕೊಂಡು ಬಿಟ್ಟೆಯಾ? ||೪೪|| ಹಾ! ದೇವಾಧಿದೇವನಾದ ಸಂಗಮೇಶನೆ! ವಿಖ್ಯಾತ ಕೀರ್ತಿವಂತನೂ, ಲೋಕೋದ್ಧಾರಾರ್ಥವಾಗಿ ಅವತಾರವನ್ನು ಮಾಡಿದ ಮಹಾ ಪ್ರಮಥನೂ, ಶಿವಭಕ್ತಾಭರಣನೂ, ವೀರರಸದಿಂದ ತುಂಬಿದ ಮಂಗಳಾಕಾರನೂ, ನ್ಯಾಯಮಾರ್ಗವನ್ನು ತಪ್ಪದವನೂ, ಮಹಾಬುದ್ಧಿಶಾಲಿಯೂ, ಭೂಮಿಯಲ್ಲಿ ಶಿವಾಗಮೋಕ್ತ ಸನ್ಮಾರ್ಗಾನುಗ್ರಹಾರ್ಥವಾಗಿ ಅವತಾರಮಾಡಿದವನೂ, ನಿರ್ಮಲಾಕಾರನೂ, ಶಿವಭಕ್ತಿ ಸಮುದ್ಧಾರಾರ್ಥವಾಗಿ ಪವಾಡಗಳನ್ನು ನಡೆಯಿಸಿದವನೂ, ಶಿವಧರ್ಮವೇ ನರರೂಪಾಗಿ ಅವತರಿಸಿದವನೂ, ಸ್ವಚ್ಛವಾಗಿ ಪ್ರಕಾಶಿಸುವವನೂ, ವೇದಾಗಮ ಪ್ರಸಿದ್ಧ ವೀರಶೈವ ಭಕ್ತಿಸ್ಥಲಾಚರಣೆಯುಳ್ಳವನೂ, ಸ್ಥಿರಚಿತ್ತನೂ, ಜಂಗಮಸ್ತೋಮವು ಬೆಸಸಿದ ಸನ್ಮಾರ್ಗದಲ್ಲಿ ನಡೆವವನೂ, ಅತ್ಯಂತ ಮಂಗಳನೂ, ನಿರಂತರಾಭಿವೃದ್ಧಿಗೊಂಡ ಭಕ್ತಿಪ್ರಚಾರವುಳ್ಳವನೂ, ಆಶ್ಚರ್ಯಕರನೂ, ಶಿವಾಚಾರಸಂಪನ್ನನೂ, ಅಗಣ್ಯವೈಭವೋಪೇತನೂ, ಶಿವಲಿಂಗಾನಂದ ಸಾಮ್ರಾಜ್ಯಪದವಿಯ ಪಟ್ಟವನ್ನು ಕಟ್ಟಿಸಿಕೊಂಡವನೂ ಆದ ಆ ಬಸವ ಮಂತ್ರೀಶನನ್ನು ಎಲೈ ಮಹೇಶ್ವರನೆ! ನಿನ್ನವನೆಂದು ಪ್ರೀತಿಯಿಂದ ನಿನ್ನೊಳಗೆ ಐಕ್ಯಮಾಡಿಕೊಂಡೆಯಾ? ||೫೦|| ಇನ್ನು ಮೇಲಣ ಶಿವಭಕ್ತಿ ಸಾಮ್ರಾಜ್ಯದ ಪಟ್ಟವನ್ನು ಯಾರಿಗೆ ಕಟ್ಟಿದೆ? ಸಾಲೋಕ್ಯಾದಿ ಮುಕ್ತಿಪದವಿಗಳಿಗೊಡೆಯನಾದ ಎಲೈ ಶಂಕರನೆ! ಇನ್ನು ಮುಂದೆ ಭೂಮಿಯಲ್ಲಿ ಸಕಲ ಶಿವಭಕ್ತರನ್ನು ರಾಜ್ಯಾಂಗವಾಗಿ ತಿಳಿದು ಸಲಹತಕ್ಕವನಾರು? ಭಕ್ತರೇ ತನ್ನ ದೇಹವಾಗಿಯೂ ಪ್ರಾ

ರಂ ||೫೨|| ತ್ವದರ್ಚನಾಫಲಂದಾತುಂ ಪ್ರತಿಭೂಃಕ ಇತಃಪರಂ | ತ್ವದ್ಗಣಾ
ಸ್ಥಾನರಂಗಸ್ಯ ಜ್ಯೋತಿಃಕಸ್ಸ್ಯಾದಿತಃಪರಂ ||೫೩|| ಹರತ್ವತ್ಪ್ರಿಯಭಕ್ತಾನಾಂ
ಕೋಹಸ್ತಸ್ಥಿತದರ್ಪಣಂ | ಪ್ರಾಣೇಶ ತವಭಕ್ತಾನಾಂ ಪ್ರಾಣಃಕೋವಾಮ
ಹೀತಲೇ ||೫೪|| ವೀರಮಾಹೇಶ್ವರಾಚಾರವೃತ್ತೇಃಕಾದಿಗಿತಃಪರಂ | ಶ್ರೀವೀ
ರಶೈವಸಮಯಂ ಕಃ ಖ್ಯಾಪಯಿತುಮೀಶ್ವರಃ ||೫೫|| ಶ್ರೀವೀರಶೈವಧರ್ಮಸ್ಯ
ಸರಣಿಂಪರಮೇಶ್ವರ | ಅವಿಚ್ಛಿನ್ನಾಂಸ್ಥಾಪಯಿತುಂ ಕೋವಾಶಕ್ತೋಮಹೀತ
ಲೇ ||೫೬|| ವೀರಮಾಹೇಶ್ವರೋದಾರಮಹಿಮಾನಂ ಸಮುನ್ನತಂ | ಕೋವಾ
ಪ್ರತಿಷ್ಠಾಪಯಿತುಂ ಕ್ಷಮತೇಭುವಿಶಂಕರ || ೫೭ || ಕೋವಾನಾಶಯಿತುಂಶ
ಕ್ತೋ ವೀರಮಾಹೇಶ್ವರಾಹಿತಾನ್ | ವೀರಮಾಹೇಶ್ವರಾನ್ಪ್ರೀತ್ಯಾ ಕಸ್ಸಂಮಾ
ನಯಿತುಂಕ್ಷಮಃ ೫೮|| ಕೋಜಂಗಮೇಚ್ಛಾನುವರ್ತೀ ಜಂಗಮೇಚ್ಛಾಪ್ರದ
ರ್ಶಕಃ | ಆಲೋಕ್ಯಜಂಗಮಾನ್ಸಾಕ್ಷಾನ್ಮಹೇಶ ಇತಿಭಾವತಃ || ೫೯ || ಕೋ
ವಾತ್ರವೇತ್ತಾ ಸದ್ಭಕ್ತೋವಿದ್ಯತೇ ಪರಮೇಶ್ವರ | ಶ್ರೀಜಂಗಮಃ ಪ್ರಾಣಲಿಂಗ
ಮಿತ್ಯನೂನಪ್ರತಿಜ್ಞಯಾ ||೬೦|| ವರ್ತಮಾನೋ ಭಕ್ತವರ್ಯಃ ಕೋವಾತೇಚಂ
ದ್ರಶೇಖರ | ಯಾಚ್ಞಾಂವಿನಾಜಂಗಮೇಷ್ಟಪ್ರದಾತಾ ಭುವಿಕಶ್ಶಿವ || ೬೧ ||
ಕೋವಾನಿರ್ವಂಚಕಸ್ಥಿತ್ಯಾ ಸರ್ವಾರ್ಥೈರ್ಭಕ್ತಪುಂಗವಾನ್ | ಕ್ಷಮೋಭವೇ

---

ಣವಾಗಿಯೂ ತಿಳಿದು ಆಚರಿಸತಕ್ಕವನಾರು? ||೫೨|| ಇನ್ನು ಮೇಲೆ ನಿನ್ನ ಪೂಜೆಗೆ ತಕ್ಕ ಫಲ
ವನ್ನು ಕೊಡಲು ಭೂಜನರಿಗೆ ಹೊಣೆಯಾರು? ನಿನ್ನ ಗಣಂಗಳ ಆಸ್ಥಾನಮಂಟಪವನ್ನು ಬೆಳ
ಗುವ ಜ್ಯೋತಿಯಾರು? ಶಿವನೆ! ಇನ್ನು ಮೇಲೆ ನಿನ್ನ ಪ್ರಿಯಭಕ್ತರ ಕೈಕನ್ನಡಿಯಾಗಿರತಕ್ಕವ
ನಾರು? ಎಲೈ ಪ್ರಾಣೇಶನೆ! ಭೂತಲದಲ್ಲಿ ಇನ್ನು ಮೇಲೆ ಶಿವಭಕ್ತರಿಗೆ ಪ್ರಾಣವಾಗಿರತಕ್ಕವ
ನಾರು? ||೫೪|| ಇನ್ನು ಮೇಲೆ ವೀರಮಾಹೇಶ್ವರರ ಆಚಾರಕ್ಕೆ ದಿಕ್ಕಾವುದು? ಶಿವಮತವನ್ನು
ಪ್ರಸಿದ್ಧಿಪಡಿಸಲು ಸಮರ್ಥನಾರು? ಇನ್ನು ಭೂತಲದಲ್ಲಿ ವೀರಶೈವ ಧರ್ಮಪಂಥವನ್ನು ಅಖಂಡವ
ನ್ನಾಗಿ ಸ್ಥಾಪಿಸುವುದಕ್ಕೆ ಶಕ್ತನಾರು? ||೫೬|| ಶಿವನೆ! ಇನ್ನು ಭೂಮಿಯಲ್ಲಿ ಉತ್ಕೃಷ್ಟ
ವೀರಮಾಹೇಶ್ವರರ ಮಹತ್ತ್ವವನ್ನು ಪ್ರತಿಷ್ಠಾಪನೆ ಮಾಡಲು ದಕ್ಷನಾರು? ವೀರಮಾಹೇಶ್ವರರ
ಶತೃಗಳನ್ನು ಧ್ವಂಸಮಾಡುವುದಕ್ಕೆ ಶಕ್ತನಾರು? ವೀರಶೈವರನ್ನು ಪ್ರೀತಿಯಿಂದ ಸನ್ಮಾನಮಾಡ
ಬಲ್ಲವರಾರು? ಜಂಗಮರ ಇಷ್ಟದಂತೆ ನಡೆದು ಅವರು ಕೇಳಿದುದನ್ನು ಕೊಡತಕ್ಕವನಾರು?
ಜಂಗಮರನ್ನು ಕಂಡಕೂಡಲೇ ಸಾಕ್ಷಾತ್ಪರಮೇಶ್ವರನೆಂಬ ಭಾವದಿಂದ ತಿಳಿದು ಆಚರಿಸುವ
ಭಕ್ತನಾರಿರುವನು? ಎಲೈ ಚಂದ್ರಶೇಖರನೆ! ಜಂಗಮವೇ ತನ್ನ ಪ್ರಾಣಲಿಂಗವೆಂದು ಶಪಥಗೊಂ
ಡು ಅದರಂತೆ ನಡೆದು ತೋರುವ ಭಕ್ತಶ್ರೇಷ್ಠನಾರು? ಎಲೈ ಪರಶಿವನೆ, ಇನ್ನು ಭೂಮಿಯಲ್ಲಿ
ಪರರನ್ನು ಬೇಡಗೊಡದಂತೆ ಜಂಗಮರಿಗೆ ಇಷ್ಟಾರ್ಥಗಳನ್ನು ಕೊಡತಕ್ಕವನಾರು? ಎಲೈ ಶಂಕ

ಸ್ಮಹೇಶಾನ ಕರ್ತುಂಸಂತುಷ್ಟಮಾನಸಾನ್ ||೬೨|| ಮಹೇಶಕೋವಾಭೂಮೌ
ಶ್ವಃಕಥಮದ್ಯಕಥಂತ್ವಿತಿ | ಅವಿಚಾರ್ಯ ಸಮುದ್ಧಾಮವೃತ್ತ್ಯಾತಿಷ್ಠತಿಲಿಂಗವಾ
ನ್ ||೬೩|| ದೃಷ್ಟ್ವಾವ್ಯೋಮಾಪಿನಿಪುಣಂ ಮೂರ್ತಿಂಕರ್ತುಂಕ್ಷಮಶ್ಚಕಃ |
ಸ್ಪೃಷ್ಟ್ವಾರಜೋಪಿಕನಕಂ ಕರ್ತುಂಕೋವಾಕ್ಷಮೋಭುವಿ ||೬೪|| ಸದ್ಭಕ್ತಚಿ
ತ್ತಿತಾಭೀಷ್ಟಪ್ರದಾತಾ ಕಸ್ತ್ರಿಯಂಬಕ | ಕೋವಾತರ್ಕಾನಿಕುರುತೇ ಬಾಣ
ಲಿಂಗಾನಿದರ್ಶನಾತ್ ||೬೫|| ಲಿಂಗಜಂಗಮಸದ್ಭಕ್ತಿಂ ಸತಾಂವಕ್ತುಂಕಈಶ್ವ
ರಃ | ಕಶ್ಶಿವಾಯಸಮರ್ಪ್ಯೋಗ್ರಂ ವಿಷಮತ್ತಿಮಹೀತಳೇ ||೬೬|| ನಾಮೋ
ಚ್ಚಾರಣಮಾತ್ರೇಣ ಸ್ಮೃತಾಭೀಷ್ಟಫಲಾನಿಕಃ | ಪ್ರದಾತುಂಕುಶಲೋಭೂಮೌ
ಭಕ್ತಾವ್ರಾತಾಯಶಂಕರ ||೬೭|| ಸದ್ಭಕ್ತಿನಿಷ್ಠಯಾನಿತ್ಯಂ ಶಿವರಾತ್ರಿವ್ರತಂಮಹ
ತ್ | ಕರ್ತುಂಸಮರ್ಥೋ ಭುವನೇಕೋವಾ ಗೌರೀಮನೋಹರ ||೬೮|| ಜಾ
ತಿಭೇದಂಜಂಗಮೇಷು ಸ್ವಪ್ನೇಪಿಶ್ರೀಸದಾಶಿವ | ಅಜಾನನ್ಕೋಹಿಸದ್ಭಕ್ತ ಸ್ಸತತಂ
ಧರಣೀತಲೇ || ೬೯ || ಛಿನ್ನೇಪಿಮಸ್ತಕೇ ಶಂಭುಸದ್ಭಕ್ತೇಭ್ಯೋ ನಿರಂತರಂ |
ವಕ್ತುಂನಮೋನಮಇತಿಚಾವಿಸ್ಮರ್ತಾ ಭುವಿಹಕಃ ||೭೦|| ಸ್ವಗೃಹೀತವ್ರತಂ
ಪ್ರಾಣಸಂಕಟೇಽಪಿ ವ್ಯವಸ್ಥಿತೇ | ಅಮೋಕ್ತಾಶಿವಸದ್ಭಕ್ತಃ ಕೋವಾಚಂದ್ರಕ
ಲಾಧರ ||೭೧|| ಮಾಹಾತ್ಮ್ಯಂತಸ್ಯಚರಿತಂ ಸಮುದಂಚಿತವೈಭವಂ | ವಿದ್ಯತೇ

---

ರನೆ, ಇನ್ನು ಮೇಲೆ ಭೂತಲದಲ್ಲಿ ಭಕ್ತಶ್ರೇಷ್ಠರಿಗೆ ವಂಚನೆಯಿಲ್ಲದೆ ಸಕಲಾರ್ಥವನ್ನೂ ಕೊಟ್ಟು
ಸಂತೋಷಪಡಿಸಲು ಸಮರ್ಥನಾರು? ||೬೩|| ನಾಳೆಗೆ ಹೇಗೆ? ಇಂದಿಗೆ ಹೇಗೆ? ಎಂಬ ಯೋ
ಚನೆಯಿಲ್ಲದೆ ಮಹಾ ವೈಭವದಿಂದ ಬಾಳತಕ್ಕ ಲಿಂಗವಂತನಾರು? ||೬೪|| ಆಕಾಶವನ್ನು
ನೋಡಿ ಅದನ್ನು ರೂಪುಗೊಂಡ ಮೂರ್ತಿಯನ್ನಾಗಿ ಮಾಡಲಿಕ್ಕೂ, ಧೂಳಿಯನ್ನು ಕೈಯಲ್ಲಿ
ಮುಟ್ಟಿ ಚಿನ್ನವನ್ನಾಗಿ ಮಾಡಲಿಕ್ಕೂ ಸಮರ್ಥನಾರು? ||೬೫|| ಎಲೈ ಶಿವನೆ! ಇನ್ನು ಭೂಮಿ
ಯಲ್ಲಿ ಭಕ್ತರಿಗೆ ಬಯಸಿದುದನ್ನು ಕೊಡತಕ್ಕವನಾರು? ನೋಡಿದ ಮಾತ್ರದಿಂದ ಬದನೆಕಾಯಿ
ಗಳನ್ನು ಬಾಣಲಿಂಗಗಳನ್ನಾಗಿ ಮಾಡುವವನಾರು? ಸಜ್ಜನರಿಗೆ ಲಿಂಗಜಂಗಮರ ಸದ್ಭಕ್ತಿರೀತಿ
ಯನ್ನು ಉಪದೇಶಿಸತಕ್ಕ ಸಮರ್ಥನಾರು? ಭೂತಲದಲ್ಲಿ ಶಿವನಿಗೆ ಮಹಾ ಘೋರವಿಷವನ್ನ
ರ್ಪಿಸಿ ತತ್ಪ್ರಸಾದವನ್ನು ಸೇವಿಸುವವನಾರು ? || ೬೬ || ತನ್ನ ನಾಮವನ್ನು ಉಚ್ಚರಿಸಿದ
ಮಾತ್ರದಿಂದ ಭಕ್ತರಿಗೆ ನೆನೆದ ಇಷ್ಟಾರ್ಥವನ್ನೆಲ್ಲಾ ಕೊಡತಕ್ಕ ನಿಪುಣನಾರು? ||೬೭|| ಪ್ರತಿ
ದಿನವೂ ಮಹಾ ಭಕ್ತಿಯಿಂದ ಶಿವರಾತ್ರಿ ವ್ರತವನ್ನು ಆಚರಿಸಲು ಶಕ್ತನಾರು? ||೬೮|| ಜಂಗ
ಮರೊಳಗೆ ಜಾತಿಭೇದವನ್ನು ಸ್ವಪ್ನದಲ್ಲೂ ಅರಸದೆ ಸೇವಿಸುವ ಸದ್ಭಕ್ತನಾರು? ತಲೆಯನ್ನು
ಕತ್ತರಿಸಿದರೂ ಶಿವಭಕ್ತರಿಗೆ ನಮೋನಮಃ ಎಂದುಚ್ಚರಿಸುವುದನ್ನು ಮರೆಯದವನಾರು? ತಾನು
ಹಿಡಿದ ವ್ರತವನ್ನು ಪ್ರಾಣಸಂಕಟ ಸಮಯದಲ್ಲೂ ಬಿಡದಿರುವ ಸದ್ಭಕ್ತನಾರು? ||೭೧|| ಎಲೈ

ಗಿರಿಜಾನಾಥ ಕಿಮಲ್ಪಾನಾಂಮಹೀತಲೇ ||೭೩|| ಶ್ರೀಮತ್ಪ್ರಮಥವರ್ಗಸ್ಯ ಪ್ರಾ
ಣಸ್ತ್ವಂ ಪರಮೇಶ್ವರ | ಬಸವೇಂದ್ರಸ್ಯತುಪ್ರಾಣಾಃ ಪ್ರಮಥಾಏವಕೇವಲಂ ||
ತಸ್ಯಾಖಿಲೇನ್ದ್ರಿಯವ್ರಾತಂ ಪ್ರಸಾದೇಂದ್ರಿಯಬೃಂದಕಂ | ಅಶೇಷಾಂಗಕಲಾಸ್ತ
ಸ್ಯ ಪ್ರಸಾದಾಂಗಕಲಾಃಪುನಃ ||೭೪|| ಇಷ್ಟಲಿಂಗಸ್ಯಕಿರಣಾಃ ಕರಣಾನ್ಯಖಿ
ಲಾನ್ಯಪಿ | ವಿಮುಕ್ತಿಕಾಂತಾಜನನಸದನೇ ಚರಣಾಂಬುಜೇ ||೭೫|| ಭಕ್ತಿಬೀ
ಜಾನಿ ಬಸವಾಧಿಪತೇರಖಿಲಾಗುಣಾಃ | ಚಿತ್ರಾಣಿತಚ್ಚರಿತ್ರಾಣಿ ಗುರೂಣಾಂಗು
ರವೋಭುವಿ ||೭೬|| ಅಂಗುಲ್ಯಸ್ಸ್ಪರ್ಶವೇಧಿನ್ಯಃ ಕಟಾಕ್ಷಾಃ ಕಾಮಧೇನವಃ|
ಚಿನ್ತಾಮಣೀನಾಂಖನಯ ಸ್ಸಂಕಲ್ಪಾಸ್ತಸ್ಯಸಂತತಂ ||೭೭|| ಉಕ್ತಯಸ್ತಸ್ಯಮ
ಧುರಾಃ ಪರತತ್ವಲತಾಮತಾಃ | ಮಹತ್ತಸ್ಯಾಯುಧಂ ಲಿಂಗಪಸಾಯಿತಸಮಾ
ಹ್ವಯಂ || ೭೮ || ಪ್ರವರ್ಷಿಣೀಮೌಕ್ತಿಕಾನಾಂ ದಿವ್ಯಶುಕ್ತಿರ್ಮಹೀತಲೇ |
ಅರ್ಥಪ್ರದಾಯಿನೀರಾಜ್ಞೋ ಶೈವಲಕ್ಷ್ಮೀಸ್ಸಮುನ್ನತಾ || ೭೯ || ಉಗ್ರಂವಿಷಂ
ಸುಧಾಕುರ್ವನ್ಮಹನೀಯೌಷಧಂಮತಂ | ವಿತೀರ್ಣಭಾಲನಯನಂ ಮಹಾದೇ
ವಾಯದೈವತಂ ||೮೦|| ಕಾಂತಾಯೈಪೇಟಿಕಾ ತೂರ್ಣ ಮಕ್ಷಯಾಂಬರದಾ

---

ಪರಶಿವನೆ! ಆ ಬಸವೇಶನಲ್ಲಿದ್ದಂಥ ಮಹಿಮೆಯೂ, ಚರಿತ್ರವೂ, ಮಹಾ ವೈಭವವೂ, ಭೂತ
ಲದ ಇತರ ಅಲ್ಪಜನರಿಗೆ ಇರುವುದುಂಟೆ? ಎಲೈ ಶಿವನೆ! ನೀನು ಪ್ರಮಥಗಣಕ್ಕೆ ಪ್ರಾಣನಾಗಿ
ದ್ದೀಯೆ. ಬಸವೇಶನಿಗಾದರೋ ಆ ಪ್ರಮಥರೇ ಪ್ರಾಣವು. ಆ ಬಸವೇಶನ ಕರ್ಮೇಂದ್ರಿಯಗಳೆ
ಲ್ಲವೂ ಗುರು ಲಿಂಗ ಜಂಗಮ ಪ್ರಸಾದ ರೂಪೇಂದ್ರಿಯಗಳು. ಅವನ ಅಂಗಕ್ರಿಯೆಗಳೆಲ್ಲವೂ
ಶಿವಪ್ರಸಾದ ದೇಹಕರ್ಮಗಳು. ||೭೪|| ಅವನ ಸಕಲ ಜ್ಞಾನೇಂದ್ರಿಯಗಳೂ ಇಷ್ಟಲಿಂಗದ ಪ್ರ
ಭೆಗಳು. ಅವನ ಪಾದಕಮಲಗಳು ಮುಕ್ತ್ಯಂಗನೆಯ ತವರ್ಮನೆಯು. ||೭೫|| ಬಸವೇಶ್ವರನ
ಸಕಲ ಗುಣಗಳೂ ಶಿವಭಕ್ತಿಯ ಬೀಜಗಳು. ಅವನ ಆಶ್ಚರ್ಯಕರಗಳಾದ ಚರಿತ್ರಗಳು ಭೂಮಿಯ
ಲ್ಲಿರುವ ಎಲ್ಲ ಗುರುಗಳಿಗೂ ಗುರುಗಳು (ಉಪದೇಶಪ್ರದಗಳು) ||೭೬|| ಅವನ ಬೆರಲುಗಳು
ಪರುಸದ ಮಣಿಗಳು, ಅವನ ಕಡೆಗಣ್ಣೋಟಗಳು ಕಾಮಧೇನುಗಳು, ಅವನ ಮನಸ್ಸಂಕಲ್ಪ
ಗಳು ಚಿಂತಾರತ್ನದ ಗಣಿಗಳು ||೭೭|| ಅವನ ಇಂಪಾದ ನುಡಿಗಳು ಪರತತ್ತ್ವದ ಬಳ್ಳಿಗಳು.
ಲಿಂಗಪಸಾಯಿತವೆಂಬ ಹೆಸರುಳ್ಳುದೇ (ಲಿಂಗಪ್ರಸಾದಸಿದ್ಧಿ) ಅವನ ಕೈಯಲ್ಲಿರುವ ಮಹಾ
ಯುಧವು, ಆ ಆಯುಧವೆಂತಹದೆಂದರೆ—ಮುತ್ತುಗಳನ್ನು ಸುರಿಯುವ ಮುತ್ತಿನ ಚಿಪ್ಪಾಗಿ
ಯೂ, ದೊರೆಯಾದ ಬಿಜ್ಜಳನಿಗೆ ಬೇಕಾದಷ್ಟು ದ್ರವ್ಯವನ್ನೀಯುವ ಲಕ್ಷ್ಮಿಯಾಗಿಯೂ, ಭೀಕರ
ವಿಷವನ್ನು ಅಮೃತವನ್ನಾಗಿ ಮಾಡುವ ಮಹೌಷಧವಾಗಿಯೂ, ಪರಶಿವನಿಗೆ ಹಣೆಗಣ್ಣನ್ನು
ಕೊಟ್ಟ ದೈವವಾಗಿಯೂ, ||೮೦|| ಪತ್ನಿಗೆ ಕೊನೆಯಿಲ್ಲದ ಸೀರೆಯನ್ನು ಕೊಟ್ಟ ಪೆಟ್ಟಿಗೆಯಾ
ಗಿಯೂ, ಶಿವನಾಗಯ್ಯನ ಕೈಯಿಂದ ಹಾಲನ್ನು ಕರೆದ ಹಸುವಾಗಿಯೂ, ಕಳ್ಳರಿಗೆ ಶಿವಭಕ್ತಿ

ಯಿನೀ | ಶಿವನಾಗಾರ್ಯಹಸ್ತಾಭ್ಯಾಂ ಕ್ಷೀರದಾಸುರಭಿರ್ವರಾ || ೮೧ || ಭಕ್ತಿಪ್ರದರ್ಶಕಾಚಾರ್ಯಶ್ಚೋರಾಣಾಂ ಪರಮೋತ್ತಮಃ | ಪಂಕೇಪತಂತೀಂ ಕಾಳವ್ಯಾಂಕ್ಷಿಪ್ರಂ ಪಾಣಿಗೃಹೀತವಾನ್ ||೮೨|| ಪರಿಶ್ಲಾಘ್ಯತರಂಕೀಲಂ ಜಂಗಮಪ್ರಾಣಸಂಗತೇಃ| ಪರಿಶಪ್ತವತೀಜಿಹ್ವಾ ಬಿಜ್ಜಲಂ ಧರಣೀಪತಿಂ ||೮೩|| ತಸ್ಮಾತ್ತದೇವೇಪ್ಸಿತಾರ್ಥದಾಯಿಸಾ ಕಲ್ಪಮಹೀರುಹಃ | ಸಂಸ್ತೋತುಂ ಬಸವೇಂದ್ರಸ್ಯ ಮೂರ್ತಿಂಚ ಘನವೈಭವಂ ||೮೪|| ಕೇಷಾಂವಾಶಕ್ಯತೇವೇತ್ತಿ ಬಸವೇಶ್ವರಏವಸಃ | ಬಸವಾಕ್ಷರಪಾತಸ್ಯ ಫಲಮಾಹಾತ್ಮ್ಯಮದ್ಭುತಂ ||೮೫|| ಬೇತ್ಯುಕ್ತೇ ಲಿಂಗಸಂಬಂಧಸೌಖ್ಯಂ ಸಕೃದಪಿಸ್ಫುಟಂ | ಸೇತ್ಯುಕ್ತೇ ಸದ್ಗುರುಕೃಪಾಸಮುನ್ನತಿರನುತ್ತಮಾ || ೮೬ || ವೇತ್ಯುಕ್ತೇಚಪ್ರಸಾದಸ್ಯ ಮಹಸಂಪ್ರಾಪ್ಯತೇನರೈಃ | ಸದ್ಭಕ್ತಿತಃಕದಾಚಿದ್ವಾ ಬಸವೇತ್ಯುಚ್ಯತೇಯದಿ || ೮೭ || ತ್ರಿಸ್ಥಲೋದ್ಯದ್ಭಕ್ತಿಯುಕ್ತಿ ರ್ಭವತ್ಯೇವಸಮಂಚಿತಾ | ಹರಕೇವಲಭಕ್ತಃಕಿಂ ಬಸವಾಮಾತ್ಯಶೇಖರಃ ||೮೮|| ತವಪುತ್ರೋಭವಿಷ್ಯಾಮಿತ್ಯುಕ್ತಿತಃ ಪರಮೇಶ್ವರ | ದ್ವಿತೀಯಶಂಭುನಾಮಾಭೂಸ್ತ್ವಂ ಶಿಲಾದಮುನೇಸ್ಸುತಃ ||೮೯|| ಶಿವಭಕ್ತಿಹಿತಾರ್ಥಾಯತ್ವ

---

ಮಾರ್ಗವನ್ನು ತೋರಿಸಿಕೊಟ್ಟ ಪರಮಾಚಾರ್ಯನಾಗಿಯೂ, ಕೆಸರಿನಲ್ಲಿ ಜಾರಿ ಬೀಳುತ್ತಿದ್ದ ಗೊಲ್ಲಿತಿಯನ್ನು ಬೇಗನೆ ಹಿಡಿದ ಹಸ್ತಲಾಘವಪ್ರದನಾಗಿಯೂ, ತನ್ನ ಪ್ರಾಣಕ್ಕೂ ಜಂಗಮರಿಗೂ ಎಡೆವಿಡದೆ ಬಂಧಿಸಿರುವ ಕೀಲಾಗಿಯೂ, ಬಿಜ್ಜಳರಾಜನನ್ನು ಶಪಿಸಿದ ನಾಲಗೆಯಾಗಿಯೂ ಇದ್ದಿತು. ಅದುಕಾರಣ ಆ ಆಯುಧವೇ ಬೇಕಾದ ಇಷ್ಟಾರ್ಥವನ್ನು ಕೊಡುವ ಕಲ್ಪವೃಕ್ಷವು. ಆ ಬಸವೇಶ್ವರ ಮೂರ್ತಿಯನ್ನೂ ಆತನ ಮಹಾವೈಭವವನ್ನೂ ಇಷ್ಟೇ ಸರಿಯೆಂದು ಸ್ತೋತ್ರಮಾಡುವುದಕ್ಕೆ ಯಾರಿಗಾದರೂ ಶಕ್ಯವೆ? ಅದರ ಇಯತ್ತೆಯನ್ನು ಆ ಬಸವೇಶ್ವರನೇ ಬಲ್ಲನು. ಬಸವ ಎಂಬ ಮೂರಕ್ಷರಗಳ ಪಠನದ ಫಲಮಹತ್ವವು ಅತ್ಯಾಶ್ಚರ್ಯಕರವು. ||೮೫|| ಹೇಗೆಂದರೆ—ಒಂದಾವೃತ್ತಿಯಾದರೂ ಮನುಜರು ''ಬ'' ಎಂಬಕ್ಷರವನ್ನು ನುಡಿದ ಮಾತ್ರದಿಂದ ಲಿಂಗಾಂಗ ಸಮರಸ ಸೌಖ್ಯವನ್ನೂ, ''ಸ'' ಎಂಬಕ್ಷರವನ್ನುಚ್ಚರಿಸುವುದರಿಂದ ಗುರುಕಾರುಣ್ಯಸಂಪತ್ತಿಯನ್ನೂ, ''ವ'' ಎಂಬ ಅಕ್ಷರದ ಪಠನ ಮಾತ್ರದಿಂದ ಶಿವಾನುಗ್ರಹವನ್ನೂ ಪಡೆಯುತ್ತಾರೆ. ಸದ್ಭಕ್ತಿಯಿಂದ ಯಾವಾಗಲಾದರೂ ''ಬಸವ'' ಎಂದು ಉಚ್ಚರಿಸಿದುದೇ ಆದರೆ ಗುರುಲಿಂಗ ಜಂಗಮಸದ್ಭಕ್ತಿ ಪ್ರಾಪ್ತಿಯಾಗುವುದು. ಎಲೈ ಶಂಕರನೆ! ಬಸವಮಂತ್ರೀಶ್ವರನೇನು ಸಾಮಾನ್ಯ ಭಕ್ತನೆ? ||೮೮|| ಎಲೈ ಶಿವನೆ! ''ನಿನಗೆ ನಾನು ಮಗನಾಗಿ ಹುಟ್ಟುತ್ತೇನೆ'' ಎಂದು ನೀನೇ ಶಿಲಾದರ್ಷಿಗೆ ಅಪ್ಪಣೆಕೊಟ್ಟ ವಚನದಂತೆ ಶಿಲಾದರ್ಷಿಗೆ ಮಗನಾಗಿ ಅವತರಿಸಿ ದ್ವಿತೀಯ ಶಂಭುವೆಂಬ ಹೆಸರಾಂತೆ. ಭಕ್ತಿಸಮುದ್ಧಾರಕನ್ನಾಗಿ ಈಗ ನೀನೇ ಭೂತಲದಲ್ಲಿ ಬಸವನೆಂಬ ಹೆಸರಾಂಟು ಅವತರಿಸಿದ್ದೀಯೆ. ಅದುಕಾರಣ ಶಿವನೆಂದರೆ ಬಸವ, ಬಸವನೆಂದರೆ ಶಿವನಾ

ಮುಘೂರ್ಜಸವಾಭಿಧಃ | ತ್ವಮೇವಹರಇತ್ಯುಕ್ತೋ ಬಸವಕ್ಷೀತಿಭೂತಲೇ ||೯೦
ಕೋವಾತ್ರಸಂಶಯ ಶ್ರೀಮನ್ಮಹಾದೇವಕೃಪಾನಿಧೇ | ವೃಷೇಂದ್ರಮೂರ್ತಿಂ
ಬಸವಲಿಂಗಂ ವಿಶ್ವೇಶ ಶಂಕರ ||೯೧|| ವಿಶ್ವನಂದಿತಸತ್ಕೀರ್ತಿವಿಸ್ಫೂರ್ತಿಂ ಪರ
ಮೋನ್ನತಂ | ತ್ವದ್ದಿವ್ಯಲಿಂಗಗರ್ಭಾಬ್ಧಿತರಂಗ ಗತವಿಗ್ರಹಂ ||೯೨|| ಕೃತ್ವಾಕ್ಯೈ
ರಪ್ಯವಿಜ್ಞಾತಂ ಕಥಂತಂ ತ್ವಯ್ಯಯೋಜಯಃ | ಶ್ರೀಮನ್ಮಹಾದೇವ ಮಡಿವಾ
ಳಮಾಚಯ್ಯಮುನ್ನತಂ ||೯೩|| ಅಕರೋಃಕಿಂವ್ಯವಹಿತಂ ಶಿವಸದ್ಭಕ್ತಿವಿಶ್ರುತಂ|
ಪ್ರಾಹಿಣೋಃಕಿಂ ಬಡವರ ಬ್ರಹ್ಮಯ್ಯಂ ಶಂಕರಾನ್ಯತಃ ||೯೪|| ಅತನೋ
ರ್ಮಾದಿರಾಜಾರ್ಯಂ ವಿಭ್ರಾಂತಂ ಕಿಮುಸನ್ನುತಂ | ಆದಯ್ಯಂ ಮಲ್ಲಯ್ಯಮಪಿ
ತ್ವಂ ಕಿಮಾಶಮುಮೋಷಿಥ ||೯೫|| ಅವಂಚಯಃ ಕಿಮುಸ್ವೈರಂ ಕಿನ್ನರಬ್ರಹ್ಮ
ಯಂಶಿವ | ಕನ್ನದಬ್ರಹ್ಮಯಂ ತೂರ್ಣ ಮಕರೋಃಕಿಮಲಕ್ಷಿತಂ ||೯೬|| ಗತ
ಸ್ಮೃತಿಂಕಿಮತನೋಃ ಶಿವ ಕೂಲದಬೊಮ್ಮಯಂ | ಕಿಮವಿಜ್ಞಾತವೃತ್ತಾಂತಂ
ವ್ಯಧಾ ಮೋಳಿಗೆಮಾರಯಂ ||೯೭|| ಅಕಾರಿಕಿಮುನಿರ್ಬುದ್ಧಿ ಸ್ತ್ವಯಾತೆಲುಗ
ಜೊಮ್ಮಯಃ | ಕಲಕೇತಬ್ರಹ್ಮಯಂತ್ವಂ ಮಹೇಶಕಿಮಮೂಢಯಃ ||೯೮||
ಕಿಂಕಕ್ಕಯ್ಯಂಕಲ್ಲಯಂಚ ವ್ಯಾಜವ್ಯಾಮೋಹಿತಂವ್ಯಧಾಃ| ಕಿಂಚಿಕ್ಕಯ್ಯಂ ಲಿಂ
ಗಯಂ ತ್ವಮತನೋಃಶ್ಛದ್ಮನಾವೃತಂ ||೯೯|| ಗಜ್ಜೇಶಮಸಣಯ್ಯಂತ್ವಂ ಕಿಂಕ

---

ಗದ್ವೀಯೆ ||೯೦|| ದಯಾನಿಧಿಯಾದ ಮಹಾದೇವನೆ! ಈ ವಿಷಯದಲ್ಲಿ ಸಂಶಯವುಂಟೆ? ಜಗ
ತ್ತನ್ನೆಲ್ಲಾ ಸಂತೋಷಪಡಿಸಿದ ಮಹಾ ಕೀರ್ತಿಯುಳ್ಳ ಶಿವಾಭಿನ್ನನಾದ ಆ ವೃಷಭೇಂದ್ರನನ್ನು
ನಿನ್ನ ಲಿಂಗಮೂರ್ತಿಯ ಗರ್ಭಸುಧಾಂಬುಧಿಯ ತೆರೆಯಲ್ಲಿ ಹುಗಿಸಿ, ಯಾರಿಗೂ ಕಾಣದಂತೆ
ನಿನ್ನಲ್ಲಿ ಹೇಗೆ ಐಕ್ಯಮಾಡಿಕೊಂಡೆ? ||೯೨|| ನೀನು ಐಕ್ಯಮಾಡಿಕೊಳ್ಳುವಾಗ ಪ್ರಮಥ
ರಾರೂ ಕಾಣಲಿಲ್ಲವೆ? ಶಿವಭಕ್ತಿಯಲ್ಲಿ ಸುಪ್ರಸಿದ್ಧನಾದ ಮಡಿವಳ ಮಾಚಯ್ಯನನ್ನು ಆ
ಬಸವೇಶನಿಂದ ಅಗಲಿಸಿಬಿಟ್ಟೆಯಾ? ಆ ಕಾಲದಲ್ಲಿ ಬಡವರ ಬ್ರಹ್ಮಯ್ಯನನ್ನು ಬೇರೆಕಡೆಗೆ ಕಳು
ಹಿಸಿಬಿಟ್ಟಿದ್ದೆಯಾ? ||೯೪|| ಮಾದಿರಾಜನಿಗೆ ಮರವೆಯನ್ನುಂಟುಮಾಡಿದ್ದೆಯಾ? ಆದಯ್ಯನ
ನ್ನೂ ಮಲ್ಲಯ್ಯನನ್ನೂ ನೀನು ಕದ್ದುಬಿಟ್ಟೆಯಾ? ||೯೫|| ಕಿನ್ನರ ಬ್ರಹ್ಮಯ್ಯನನ್ನು ಮೋಸ
ಗೊಳಿಸಿದೆಯಾ? ಕನ್ನದ ಬ್ರಹ್ಮಯ್ಯನನ್ನು ಕಣ್ಣಿಗೆ ಕಾಣಿಸದಂತೆ ಮರೆಮಾಡಿದೆಯಾ? ಕೂಲದ
ಬೊಮ್ಮಯ್ಯನನ್ನು ಸ್ಮೃತಿಪಥವನ್ನು ಹೊಂದಿಸಿಬಿಟ್ಟೆಯಾ? ಮೋಳಿಗೆ ಮಾರಯ್ಯನ ಸುದ್ದಿಯೇ
ಇಲ್ಲದಂತೆ ಮಾಡಿದೆಯಾ? ತೆಲುಗುಜೊಮ್ಮಯ್ಯನನ್ನು ಬುದ್ಧಿಗೆಡಿಸಿದೆಯಾ? ಕಲಕೇತ ಬ್ರಹ್ಮಯ್ಯ
ನನ್ನು ಮೂಢನನ್ನಾಗಿ ಮಾಡಿದೆಯಾ? ಕಕ್ಕಯ್ಯನನ್ನೂ ಕಲ್ಲಯ್ಯನನ್ನೂ ಸಹ ಯಾವುದೋ
ನೆಪದಿಂದ ಮಂಕುಗೊಳಿಸಿಬಿಟ್ಟೆಯಾ? ಚಿಕ್ಕಯ್ಯನನ್ನೂ ಲಿಂಗಯ್ಯನನ್ನೂ ಠಕ್ಕಿಸಿಬಿಟ್ಟೆಯಾ?
ಗಜ್ಜೇಶಮಸಣಯ್ಯನನ್ನು ಹೇಗೋ ಬೆರಗುಮಾಡಿಬಿಟ್ಟೆಯಾ? ಗುರುಭಕ್ತಾರ್ಯನನ್ನು ಸುಳಿವಿಲ್ಲ

ಥಂಚಿದಸಾತ್ವಯಃ | ಅನಾಕಲಿತವೃತ್ತಂತ್ವಂ ಗುರುಜ್ಞಕ್ತಂಚಕರ್ಥಕಿಂ ||೧೦೦
ಉತವ್ಯರಚಯಸ್ಸವ್ಯ ಗಜ್ಜದಾಸಯ್ಯಮಾಕುಲಂ | ಽಕ್ಷಿಪ್ತಚಿತ್ತಂಚಕೃತೇಕಿ
ಮು ಸೊಡ್ಡಲಬಾಚಯಂ ||೧೦೧|| ವೆಡ್ಡುನಾಗಯ್ಯಮತ್ಯಽತ ವಿಮೂಢಮಕ
ನೋಽಕಿಮು | ಪ್ರಾಲೋಭಯೋದರಗಣಸಿಂಗಯ್ಯಂ ಕಿಮು ಶಂಕರ ||೧೦೨||
ವೃಥಾಽಕಿಂಧ್ವಸ್ತಮನಸಂ ಶಂಭೋಮುಸುಟೆಚೌಡಯಂ | ಅನ್ಯವ್ಯಾಸಕ್ತಮಕ
ರೋಸ್ತ್ವಂ ಕಿಂಸುರಗಿಚೌಡಯಂ ||೧೦೩|| ಅನಾಕರ್ಣಿತವಂತಂಕಿಂ ವೃಥಾ
ಸ್ತ್ವಂ ನಾಚಿದೇವಯಂ | ಕಾರ್ಯಾಂತರೇವಿಭೋ ಚೆನ್ನಬಸವಂ ಕಿಮಯೋಜ
ಯಃ ||೧೦೪|| ಏಕಾಂತರಾಮಯಂಸಮ್ಯಕ್ ಪ್ರಮತ್ತಮಕರೋಃಕಿಮು | ಪ
ದ್ಯತಿಷ್ಠಸ್ಸಪಶ್ಯನ್ವಾ ಯದ್ಯಶೃಣ್ವನ್ಮಹೇಶ್ವರ ||೧೦೫|| ತೇಭಕ್ತತಿಲಕಂಧೀಽ
ಬಸವಾಮಾತ್ಯಶೇಖರಂ | ಗಿಲತಿತ್ವಯಿತಿಷ್ಠಂತಿ ತೂಷ್ಣೀಂಕಿಂ ಸಂಗಮೇಶ್ವರ |
ಪಾಯಯನ್ತೀಂ ಪ್ರಸ್ಥಮಾತ್ರಂ ಪಯಸ್ತ್ವಂ ಪರಿಹರ್ಷಿತಃ | ಬಾಲಿಕಾರ್ಥಕ
ಡಗೂಸುಂತಾಮಗಿಲಸ್ತ್ವಂ ಯಥಾಪುರಾ ||೧೦೬|| ಪ್ರಚ್ಛಾದ್ಯಘಟಮಧ್ಯೆ
ತ್ವಾಂ ಸೇವಮಾನಾಂ ಮಹೇಶ್ವರ | ಕೊಲ್ಲಪ್ವಾಂಪರಿತುಷ್ಟಸ್ತ್ವಾಮಗಿಲಸ್ತ್ವಂ
ಯಥಾಪುರಾ ||೧೦೭|| ಪ್ರತಿಷ್ಠಾಪಿತವಂತಂಶ್ರೀಶಿವಾಧಿಕ್ಯಂ ಮಹೀತಲೇ |
ಸಂತುಷ್ಟಸ್ತಂಬಾಚರಸ ಮಗಿಲಸ್ತ್ವಂಯಥಾಪುರಾ ||೧೦೮|| ದುಷ್ಟಾನಾಂಜೈ
ನಬೌದ್ಧಾನಾಂ ಪ್ರಹರ್ತಾರಂಮಹೇಶ್ವರ| ಶ್ರೀಪಿಲ್ಲೆನಯಿನಾರಿಂತ ಮಗಿಲಸ್ತ್ವಂ

---

ದಂತೆ ಮಾಡಿಬಿಟ್ಟೆಯಾ? ||೧೦೦|| ಅಜ್ಜದಾಸಯ್ಯನನ್ನು ವ್ಯಾಕುಲಚಿತ್ತನನ್ನು ಮಾಡಿದೆಯಾ? ಸೊಡ್ಡಲಬಾಚಯ್ಯನನ್ನು ಚಪಲಚಿತ್ತನನ್ನು ಮಾಡಿದೆಯಾ? ವೆಡ್ಡುನಾಗಯ್ಯನನ್ನು ದಡ್ಡನನ್ನಾಗಿ ಮಾಡಿದೆಯಾ? ಉದರಗಣಸಿಂಗಯ್ಯನನ್ನು ವಂಚಿಸಿಬಿಟ್ಟೆಯಾ? ಮುಸುಟೆಚೌಡಯ್ಯನಿಗೆ ನೋವಿಕಾರಗೊಳಿಸಿದೆಯಾ? ಸುರಗಿಚೌಡಯ್ಯನನ್ನು ಬೇರೊಬ್ಬನಲ್ಲಿ ಆಸಕ್ತಚಿತ್ತನನ್ನಾಗಿ ಮಾಡಿದೆಯಾ? ||೧೦೩|| ನಾಚಿದೇವಯ್ಯನನ್ನು ಕೇಳಬಾರದಿದ್ದವನನ್ನಾಗಿ ಮಾಡಿದೆಯಾ? ಎ ಸ್ವಾಮಿ, ಚೆನ್ನಬಸವನನ್ನು ಬೇರೆ ಕೆಲಸದಲ್ಲಿ ನಿಯಮಿಸಿಬಿಟ್ಟಿದ್ದೆಯಾ? ಏಕಾಂತರಾಮಯ್ಯ ನನ್ನು ಮತ್ತುಗೊಳಿಸಿಬಿಟ್ಟಿದ್ದೆಯಾ? ಎಲೈ ಸಂಗಮೇಶ್ವರನೆ! ನೀನು ಭಕ್ತೋತ್ತಮನಾದ ಬಸವೇಶನನ್ನು ನುಂಗುವಾಗ ಈ ಮೇಲೆ ಹೇಳಿದ ಭಕ್ತೋತ್ತಮರೆಲ್ಲಾ ಹತ್ತಿರ ಇದ್ದರೆ ಇಲ್ಲವೆ ನೋಡುತ್ತಾ ಇದ್ದರೆ ಅಥವಾ ಸುದ್ದಿಯನ್ನು ಕೇಳಿದ್ದರೆ ಸುಮ್ಮನೆ ಇರುತ್ತಿದ್ದರೆ? ||೧೦೫|| ಬಳ್ಳದ ಹಾಲನ್ನು ಕುಡಿಸುತ್ತಿದ್ದ ಕೊಡಗೂಸನ್ನು ನೀನು ಪೂರ್ವದಲ್ಲಿ ಸಂತೋಷದಿಂದ ಹೇಗೆ ನುಂಗಿಕೊಂಡೆಯೋ, ಕೊಡದ ನಡುವೆ ನಿನ್ನನ್ನಿರಿಸಿ ಪ್ರತಿದಿನವೂ ಸೇವಿಸುತ್ತಿದ್ದ ಕೊಲ್ಲಪ್ವೆಯನ್ನು ನೀನು ಪೂರ್ವದಲ್ಲಿ ಹೇಗೆ ನುಂಗಿದೆಯೋ, ||೧೦೭|| ಭೂತಲದಲ್ಲಿ ಶಿವಾಧಿಕ್ಯವನ್ನು ಸ್ಥಾಪಿಸಿತ ಬಬ್ಬಬಾಚರಸನನ್ನು ನೀನು ಪೂರ್ವದಲ್ಲಿ ಹೇಗೆ ನುಂಗಿಕೊಂಡೆಯೋ, ಕೆಟ್ಟ ಜೈನ

ಯಥಾಪುರಾ ||೧೧೦|| ಉಚ್ಚಾರಿತಾನ್ಯನಾಮಾನಂ ಹತವಂತಮುಮಾಪತೇ| ಸಂಪ್ರೀತ್ಯಾಽರ್ಯಮರಾಜಂತಮಗಿಲಸ್ತ್ವಂ ಯಥಾಪುರಾ ||೧೧೧|| ಭವದ್ದರ್ಶನ ಸಂಜಾತ ಪರಮಾನಂದನಿರ್ಭರಂ | ಸನ್ತುಷ್ಟಸ್ತಿರುನಾಲ್ವೋವ ಮಗಿಲಸ್ತ್ವಂ ಯಥಾಪುರಾ ||೧೧೨|| ಸಮಿದ್ಧದೃಷ್ಟಸದ್ಭಕ್ತಿಮನಸಂ ಪ್ರೀತಮಾನಸಃ | ತಂ ವಾಗೀಶ್ವರನಾಮಾನ ಮಗಿಲಸ್ತ್ವಂ ಯಥಾಪುರಾ ||೧೧೩|| ಸದ್ಯ ಗಾನಕೃತಂ ಪ್ರೀತೋ ಗಿರಿಜಾಪ್ರಾಣನಾಯಕ | ಸಿದ್ಧಬುದ್ಧಯ್ಯನಾಮಾನಮಗಿಲಸ್ತ್ವಂ ಯಥಾಪುರಾ ||೧೧೪|| ತಥಾನಿರ್ವಂಚಕಸ್ಥಿತ್ಯಾ ಸಂಪ್ರೀತೋ ಬಸವೇಶ್ವರಂ| ಅಗಿಲಃಕಿಮಿದಾಸೀಂತ್ವಂ ಹರೋಗ್ರವಿಷಕಂಧರ ||೧೧೫|| ಶ್ರೀಮಚ್ಛಂಕರದಾಸಯ್ಯೋ ದಾಸಯ್ಯೋ ದಾಸಕೇಶವಃ| ಉತ್ತುಂಗಚೋಲನೃಪತಿ ಶ್ರೀಮದ್ಧೂರ್ಜಟಿಕೇಶಯಃ ||೧೧೬|| ನಿಧನಯ್ಯೋ ಮೊಲ್ಲೆಬೊಮ್ಮ ಜಗದೇವೌಚ ದಾಸಯಃ | ಮಧುವಯ್ಯೋದ್ಭಟೌ ವೀರಬ್ರಹ್ಮಯೋ ವೀರಶಂಕರಃ ||೧೧೭|| ಶ್ರೀಮನ್ನೇಮದಮ್ಮೈಲೀಚ ಭೋಗಯ್ಯೋಹಿಲದೋರಯಾಃ | ದಸರಯ್ಯೋಪಿ ಮಲಯರಾಜಶ್ಶಿವಕುಮಾರಕಃ ||೧೧೮|| ಬಲ್ಲಾಳದೇವೋ ಗೋವಿಂದಭಟ್ಟಾರಕ ಹಲಾಯುಧೌ | ಕುಮಾರಪಾಲೋಪಪದಗುರ್ಜರೋ ನರನಾಯಕಃ ||೧೧೯|| ಇತ್ಯಾದಯೋ ಮಹಾಭಕ್ತಾ ಜಠರೇತೇ ಪುರಾತನಾಃ | ವರ್ತಂತೇ ಪರಿಪೂ

---

ಬೌದ್ಧರನ್ನು ಧ್ವಂಸಗೊಳಿಸಿದ ಪಿಳ್ಳನೈನಾರನನ್ನು ನೀನು ಹೇಗೆ ನುಂಗಿದೆಯೋ, ||೧೧೦|| ಶಿವೇತರ ದೇವತಾನಾಮವನ್ನುಚ್ಚರಿಸಿದ ಭಿಕ್ಷುಕನನ್ನು ಕೊಂದ ಅರ್ಯಮರಾಜನನ್ನು ನೀನು [illegible]ರ್ವದಲ್ಲಿ ಹೇಗೆ ನುಂಗಿದೆಯೋ, ನಿನ್ನ ದರ್ಶನ ಮಾಡಿದುದರಿಂದ ಪರಮಾನಂದಗೊಂಡ ತಿರು[illegible]ನಾಲ್ವೋವರನ್ನು ನೀನು ಹೇಗೆ ನುಂಗಿದೆಯೋ, ಪ್ರತ್ಯಕ್ಷಪ್ರಮಾಣವಾದ ಶಿವಭಕ್ತಿಯಲ್ಲಿ ದೃಢ[illegible]ನಾಗಿದ್ದ ವಾಗೀಶನಯ್ನಾರನ್ನು ನೀನು ಹೇಗೆ ನುಂಗಿದೆಯೋ, ಒಳ್ಳೆಯ ಗಾನವನ್ನು ಹಾ[illegible] ಸಿದ್ಧಬುದ್ಧಯ್ಯನನ್ನು ಪ್ರೀತಿಸಿ ನೀನು ಹೇಗೆ ನುಂಗಿಕೊಂಡೆಯೋ, ಹಾಗೆ ಈಗ ಬಸವೇ[illegible] ನಿರ್ವಂಚಕ ಭಕ್ತಿಗೆ ಮೆಚ್ಚಿ ನೀವು ಅವನನ್ನು ನುಂಗಿಕೊಂಡೆಯಾ? ||೧೧೫|| ಶ್ರೀ ಶಂಕರ[illegible]ಸಯ್ಯ, ಜೇಡರದಾಸಯ್ಯ, ದಾಸಕೇಶವಯ್ಯ, ಉತ್ತುಂಗ ಚೋಳರಾಜ, ಧೂರ್ಜಟಿಕೇಶ[illegible]ಯ್ಯ, ನಿಧನಯ್ಯ, ಮೊಲ್ಲಿಬೊಮ್ಮಯ್ಯ, ಜಗದೇವಯ್ಯ, ದಾಸಯ್ಯ, ಮಧುವಯ್ಯ, ಉದ್ಭಟ[illegible]ಯ್ಯ, ವೀರಬ್ರಹ್ಮಯ್ಯ, ವೀರಶಂಕರಯ್ಯ, ನೇಮದಮ್ಮೈಲಯ್ಯ, ಭೋಗಯ್ಯ, ಓಹಿಲಯ್ಯ, [illegible]ರಯ್ಯ, ದಸರಯ್ಯ, ಮಲಯರಾಜ, ಶಿವಕುಮಾರಯ್ಯ, ಬಲ್ಲಾಳದೇವಯ್ಯ, ಗೋವಿಂದಭ[illegible]ಟ್ಟಾರಕ, ಹಲಾಯುಧಯ್ಯ, ಕುಮಾರಪಾಲಗುರ್ಜರರಾಜ—ಇತ್ಯಾದಿ ಪುರಾತನ ಮಹಾ ಭಕ್ತ[illegible]ಗಳೆಲ್ಲಾ ನಿನ್ನ ಹೊಟ್ಟೆಯಲ್ಲಿ ಇಡಿಕಿರಿದಿದ್ದಾರೆ. ಇನ್ನೂ ನಿನ್ನ ಹೊಟ್ಟೆಗೆ ಸಾಲದೆ? ಭಕ್ತೋ[illegible]ಮನಾದ ಬಸವೇಶನನ್ನು ಏತಕ್ಕೆ ನುಂಗಿದೆ? ಹೇಳು. ಎಲೈ ಕಂಕಾಳಧರನೆ! ಸಿರಿಯಾಳನ

ರ್ತೃತೇ ನಾಲಂಕಿಂ ಬಸವೇಶ್ವರಂ||೧೨೦|| ಭಕ್ತಾಗ್ರಗಣ್ಯಮಗಿಲಃ ಕಿಮರ್ಥಂ ಪದಶಂಕರ | ಉದ್ಯುಕ್ತವತ್ಯಾಸ್ಸಾಕಾಂಕ್ಷಂ ಜಿಹ್ವಾಯಾಶ್ಶಿಶುಚರ್ವಣೇ || ಅತೃಪ್ತ್ಯಾಕಿನ್ನು ಕಂಕಾಲಮೂರ್ತೇ ವಿಷಮಲೋಚನ | ಆಸ್ಯಸ್ಯಕಿಮುಕಂಡೂತ್ಯಾ ಪುರಾತನ್ಮೃಗಭಕ್ಷಣಾತ್ ||೧೨೨|| ಭೋಗವತ್ಸಲ ಗೋವತ್ಸ ಭಕ್ಷಣೇನೋದ್ಭವಸ್ಯತೇ | ಕಂಠತಿಕ್ತಸ್ಯಾಪನುತ್ತ್ಯೈಕಿಮು ತ್ರಿಪುರಸಂಹರ ||೧೨೩|| ಲೋಕಾನಾಂಚರ್ವಣಾದ್ದಂತಮಾಲಿಸ್ಯಹೃತಯೇ ಕಿಮು | ರಕ್ಷೋವೃತ್ತ್ಯಾ ಕಾಲರುದ್ರ ಬಸವೇಶಮಭಕ್ಷಯಃ ||೧೨೪|| ಮಹೇಶ್ವರೈಸಂಬಸವಂ ಸಮಾಪಯಿತುಮಸ್ಮರಃ | ಸಂರಕ್ಷಿತಶಿವಾಚಾರಂ ಕರುಣಾಪೂರ್ಣಮಾನಸಂ ||೧೨೫|| ಲಿಂಗಜಂಗಮಸದ್ಭಕ್ತಿ ಸಂಯುಕ್ತಂ ಧರಣೀತಲೇ | ಅದೀಪಂಮಂದಿರಂ ವಿದ್ಯಾಪ್ರೌಢಿಸಂವರ್ಜಿತಾಸಭಾ ||೧೨೬|| ಪ್ರಸೂನಂ ಗಂಧರಹಿತಂ ಮಾತಂಗೋದಾನವರ್ಜಿತಃ| ಸನ್ಮಾನರಹಿತಾ ಕಾನ್ತಾ ದೇಹಃ ಪ್ರಾಣವಿವರ್ಜಿತಃ ||೧೨೭|| ಪರಿವ್ರಾಟ್ ಛಾನ್ತಿರಹಿತ ಸ್ತಪೋಭಜನವರ್ಜಿತಂ | ಮಾಣಿಕ್ಯಂಕಾಂತಿನಿರ್ಮುಕ್ತಂ ಸತ್ಯೇನರಹಿತೋಜಪಃ ||೧೨೮|| ಶಶಿನಾರಹಿತಾರಾತ್ರಿ ರ್ದಿವಸಸ್ಸೂರ್ಯವರ್ಜಿತಃ | ಬಸವೇಶೇನರಹಿತೋ ಭಕ್ತಸಂಘೋಪಿಶಂಕರ ||೧೨೯|| ಕಿಂಶೋಭತೇದಿ

---

ಶಿಶುವನ್ನು ತಿನ್ನಬೇಕೆಂದು ಬಯಸಿ ಉಜ್ಜುಗಿಸಿದ್ದ ನಿನ್ನ ನಾಲಗೆಗೆ ತೃಪ್ತಿಯಾಗದೆ ಇದ್ದುದರಿಂದ ಈ ಬಸವೇಶನನ್ನು ನುಂಗಿದೆಯೊ? ಕಣ್ಣಪ್ಪನು ಅರ್ಪಿಸಿದ ಮೃಗಮಾಂಸವನ್ನು ಭಕ್ಷಣೆ ಮಾಡಿದ ಬಾಯತೀಂಟೆಯು ತೀರದಿದ್ದುದರಿಂದ ಈ ಬಸವೇಶನನ್ನು ನುಂಗಿದೆಯೊ? ಕೆಂಬಾವಿ ಭೋಗಯ್ಯನು ಒಪ್ಪಿಸಿದ ಎಳಗರುವಿನ ಭಕ್ಷಣದಿಂದ ಗಂಟಲಿನಲ್ಲಿ ಉಂಟಾಗಿದ್ದ ಕಾರನನ್ನು ಹೋಗಲಾಡಿಸಿಕೊಳ್ಳಲಿಕ್ಕಾಗಿ ಬಸವೇಶನನ್ನು ನುಂಗಿದೆಯೊ? ||೧೨೩|| ಲೋಕಗಳನ್ನೆಲ್ಲಾ ಅಗಿದು ನುಂಗಿದುದರಿಂದ ಹಲ್ಲುಗಳಮೇಲೆ ಕಟ್ಟದ್ದ ಕೊಳೆಯನ್ನು ಕಳೆದುಕೊಳ್ಳುವುದಕ್ಕಾಗಿ ಈಗ ರಾಕ್ಷಸರ ನಡತೆಯಿಂದ ಬಸವೇಶನನ್ನು ಅಗಿದು ತಿಂದೆಯೊ? ||೧೨೪|| ಎಲೈ ಮಹೇಶನೆ! ಶಿವಾಚಾರಸಂರಕ್ಷಕನೂ, ದಯಾರ್ದ್ರಚಿತ್ತನೂ, ಲಿಂಗಜಂಗಮ ಭಕ್ತಿಸಂಪನ್ನನೂ ಆದ ಬಸವೇಶವನ್ನು ಮುಗಿಸಿಬಿಡಲು ನೀನು ಯೋಚಿಸಬೇಡ. ಏಕೆಂದರೆ—ಭೂಮಿಯಲ್ಲಿ ಬಸವೇಶನಿಲ್ಲದ ಭಕ್ತಸಂದೋಹವು ದೀಪವಿಲ್ಲದ ಮನೆಯಂತೆಯೂ, ವಿದ್ಯಾಪಾಂಡಿತ್ಯವಿಲ್ಲದ ಸಭೆಯಂತೆಯೂ, ಪರಿಮಳವಿಲ್ಲದ ಹೂವಿನಂತೆಯೂ, ಮದೋದಕವಿಲ್ಲದ ಆನೆಯಂತೆಯೂ, ಮಾನಹೀನೆಯಾದ ನಾರಿಯಂತೆಯೂ, ಪ್ರಾಣವಿಲ್ಲದ ಶರೀರದಂತೆಯೂ, ಶಾಂತಿಯಿಲ್ಲದ ಸನ್ಯಾಸಿಯಂತೆಯೂ, ಧ್ಯಾನವಿಲ್ಲದ ತಪಸ್ಸಿನಂತೆಯೂ, ಹೊಳಪಿಲ್ಲದ ರತ್ನದಂತೆಯೂ, ನೈಜವಿಲ್ಲದ ಜಪದಂತೆಯೂ, ಚಂದ್ರನಿಲ್ಲದ ರಾತ್ರಿಯಂತೆಯೂ, ರವಿಯಿಲ್ಲದ ಹಗಲಿನಂತೆಯೂ ಇದ್ದೀತೇ ಹೊರತು ಪ್ರಕಾಶಿಸುವುದುಂಟೆ? ||೧೨೯|| ಕರುಣಾಕಟಾಕ್ಷನೂ, ದಿವ್ಯಲಿಂಗಮೂರ್ತಿಯೂ, ಪಾ

ವ್ಯಲಿಂಗ ಕೃಪಾಪಾಂಗಮಹೇಶ್ವರ | ದತ್ತಶೈಲಸುತಾರ್ಧಾಂಗ ನಿವೀತಿತಭುಜಂಗಮ ||೧೩೦|| ಗತಾಭಿಷಂಗ ಭಕ್ತಾತ್ಮಪದ್ಮಭೃಂಗ ನಿರಾಮಯ | ಸಂಹೃತಾನಂಗ ವಿಲಸದ್ಗುಣೋತ್ತುಂಗ ಮಹೋನ್ನತ ||೧೩೧|| ವೇದಾನ್ತಶೃಂಗ ಪ್ರಮಥಾಂಶರಂಗಾಭಂಗವೈಭವ | ಗಂಗಾನಿವಾಸೋತ್ತಮಾಂಗ ಕೀರ್ತಿರಂಗ ತ್ರಿಯಂಬಕ ||೧೩೨|| ದೇವಕಪ್ಪಡಿಸಂಗ ಶ್ರೀಮಹಾಲಿಂಗಕೃಪಾನಿಧೇ | ಸಂಪ್ರದರ್ಶಯ ಪುಣ್ಯಾವತಾರಂ ಶ್ರೀಬಸವೇಶ್ವರಂ ||೧೩೩|| ಸುಜನವ್ರಾತಮಂದಾರಂ ವಿಸ್ತಾರಂ ಗುಣಸಂಹೃತೇಃ | ರುಚಿರಾಕಾರಮಾಮ್ನಾಯಮತಾಚಾರಂ ಯಶೋಧಿಕಂ ||೧೩೪|| ಕೃತಪಾಪಪ್ರಹಾರಂ ಸತ್ಪ್ರಚಾರಂ ಸತ್ಯಭಾಷಿಣಂ | ಭಕ್ತೇಷ್ಟಲಿಂಗಗರ್ಭೇಷು ಮೂರ್ತಿಂ ಶ್ರೀಬಸವೇಶಿತುಃ ||೧೩೫|| ತ್ವಂನಪ್ರಕಾಶಯಸಿಚೇತ್ಪರಿಭ್ರಷ್ಟಾನಕಿಂಭುವಿ | ದೃಷ್ಟಯೋಽನರ್ಪಿತಸ್ತ್ರೇಯಾಭಿರತ್ಯಾ ಪರಮೇಶ್ವರ ||೧೩೬|| ಭಕ್ತಜಿಹ್ವಾಸು ಬಸವಾಕ್ಷರಾಣಿ ಗಿರಿಜಾಪತೆ | ತ್ವಂನಾಂಕಯಸಿಚೇದ್ವ್ಯಕ್ತಂ ಬಹುಲಾಘಕದಂಬಕೈಃ ||೧೩೭|| ನಸ್ಯುಃಪರ್ಯಾಕುಲಾಜಿಹ್ವಾಃ ಕಿಮನರ್ಪಿತಸೇವಯಾ | ಭಕ್ತಚೇತಸ್ಸು ಬಸವಾಕ್ಷರಾಣಿ ಗಿರಿಜಾಪತೇ||೧೩೮|| ತ್ವಂನಾಂಕಯಸಿಚೇದ್ವ್ಯಕ್ತಂ ವಿಷಯಭ್ರಾನ್ತಿಜಾಲಕೈಃ | ನಸ್ಯುರ್ಹತಾಸಿಚಿತ್ತಾನಿ ಕಿಮನರ್ಪಿತರಾಗತಃ ||೧೩೯|| ಭಕ್ತವಾಕ್ಯೇಷು ಬಸವಾಕ್ಷರಾಣಿ ಗಿರಿ

---

ರ್ವತಿಗೆ ಅರ್ಧದೇಹವನ್ನು ತೆತ್ತವನೂ, ಸರ್ಪೋಪವೀತನೂ, ನಿರ್ಮಾಯರಾದ ಭಕ್ತಜನರ ಹೃದಯಕಮಲದಲ್ಲಿ ಭೃಂಗದಂತೆ ವಿಹರಿಸುವವನೂ, ಭವರಹಿತನೂ, ಮದನವಿನಾಶಕನೂ, ಉಪನಿಷತ್ತಿಗೆ ಶಿಖರಪ್ರಾಯನೂ, ಪ್ರಮಥಪ್ರಿಯನೂ, ಅಖಂಡವೈಭವವುಳ್ಳವನೂ, ಗಂಗಾಧರನೂ, ಕೀರ್ತಿಶಾಲಿಯೂ, ಮುಕ್ಕಣ್ಣನೂ ಆದ ಎಲೈ ಕಪ್ಪಡಿ ಸಂಗಮನಾಥ ಲಿಂಗಮೂರ್ತಿಯೆ, ಪರಿಶುದ್ಧಾವತಾರನೂ, ಸಜ್ಜನರಿಗೆ ಕಲ್ಪವೃಕ್ಷನೂ, ಸದ್ಗುಣಭರಿತನೂ, ಮಹಾ ಯಶಸ್ವಿಯೂ, ||೧೩೪|| ಪಾಪವಿನಾಶಕನೂ, ಸನ್ಮಾರ್ಗಪ್ರಸಾರಕನೂ, ಸತ್ಯವಚಸ್ಕನೂ ಆದ ಶ್ರೀ ಬಸವೇಶ್ವರನನ್ನು ನನಗೆ ದರ್ಶನಮಾಡಿಸು. ಭೂಮಿಯಲ್ಲಿ ಭಕ್ತರ ಇಷ್ಟಲಿಂಗಗಳ ಮಧ್ಯದಲ್ಲಿ ನೀನು ಬಸವೇಶ್ವರ ಮೂರ್ತಿಯನ್ನು ತೋರ್ಪಡಿಸದೆ ಇದ್ದರೆ ಅವರುಗಳ ಕಣ್ಣುಗಳು ಶಿವಾರ್ಪಿತಗಳಲ್ಲದ ಪದಾರ್ಥಗಳಲ್ಲಿ ಕಳ್ಳತನದಿಂದ ಆಸೆಪಟ್ಟು ಕೆಟ್ಟುಹೋಗುವುವಲ್ಲವೆ? ||೧೩೬|| ಭಕ್ತರ ನಾಲಗೆಗಳಲ್ಲಿ ನೀನು ಬಸವ ಎಂಬಕ್ಷರಗಳನ್ನು ಇರಿಸದೆಹೋದರೆ, ಅವುಗಳು ಶಿವಾನರ್ಪಿತ ವಸ್ತುಗಳನ್ನು ಸವಿದು ಪಾಪಸಂಕಿಲಗಳಾಗದೆ ಹೋಗುವುವೆ? ಎಲೈ ಗಿರಿಜಾರಮಣನೆ! ಭಕ್ತರ ಮನಸ್ಸುಗಳಲ್ಲಿ ನೀನು ಬಸವ ಎಂಬಕ್ಷರಗಳನ್ನು ನೆಲೆಗೊಳಿಸದಿದ್ದರೆ ಅವುಗಳು ದುಷ್ಟವಿಷಯಗಳಿಂದ ವಿಮೋಹಿತಗಳಾಗಿ ಶಿವಾನರ್ಪಿತ ವಸ್ತುಗಳಲ್ಲಿ ಆಸೆಗೊಂಡು ಕೆಟ್ಟುಹೋಗುವುವಲ್ಲವೆ? ||೧೩೯|| ಭಕ್ತರ ನುಡಿಗಳಲ್ಲಿ ನೀನು ಬಸವ ಎಂಬಕ್ಷರಗಳನ್ನು ಸಂಗಳಿಸದಿದ್ದರೆ

ಜಾಪತೇ | ತ್ವಂಸಾಂಕಯಸಿಚೇದ್ವ್ಯಕ್ತ' ಮನಿಬದ್ಧಪ್ರಜಲ್ಪನೈಃ ||೧೪೦|| ನಸ್ಯು ರ್ಜತಾನಿವಾಕ್ಯಾನಿ ಕಿಮನರ್ಪಿತಲೋಭತಃ | ತಸ್ಮಾದ್ಬಸವಲಿಂಗಸ್ಯ ದಿವ್ಯರೂಪಂಮಹೇಶ್ವರ ||೧೪೧|| ಸದ್ಭಕ್ತಾನಾಮಿಂದ್ರಿಯೇಷು ಕೃಪಯಾಚಿಹ್ನಿತಂಕುರು | ಪ್ರಲಾಪನ್ನಿತಿಶೋಕಾಗ್ನೌ ಮಗ್ನಸ್ಸಸ್ಪಂಡಿತೇಶ್ವರಃ ||೧೪೨|| ಭಕ್ತಸಂದೋಹಸಹಿತಃ ಕುರ್ವನ್ಲಿಂಗಾರ್ಚನಾಂತತಃ | ಮಂಗಳಾರಾತ್ರಿಕಾಸ್ಸಮ್ಯಗರ್ಪಯನ್ ಘನಭಕ್ತಿತಃ ||೧೪೩|| ಬಸವೇಶ್ವರರೂಪೇ ತಲ್ಲಿಂಗಗರ್ಭೇಚಕಾಸತಿ| ಆನಂದಬಾಷ್ಪನಯನೋ ರೋಮಾಂಚಾಂಚಿತವಿಗ್ರಹಃ ||೧೪೪|| ಬಹುಳಾನಂದಸಂಭ್ರಾಂತಸ್ತದಾ ಗದ್ಗದಕಂಧರಃ | ಉದ್ಧೃತ್ಯಹಸ್ತಂಪ್ರಣಮನ್ವೀಕ್ಷ್ಯ ಕುರ್ವನ್ನಭಿಷ್ಟುತಿಂ ||೧೪೫|| ಮೂರ್ತಿರೇಷಾಽಸ್ಮದೀಯೇಷ್ಟಲಿಂಗಸ್ಯೈವ ಸಮಂಚಿತಾ | ಮಹಾಮೂರ್ತಿರ್ವೃಷಾಧೀಶ ವರಮೂರ್ತಿಃ ಪರಿಸ್ಫುಟಂ ||೧೪೬ ಮೂರ್ತಿರೇಷಾಽಸ್ಮದೀಯೇಷ್ಟಲಿಂಗಸ್ಯ ವಿಲಸದ್ದ್ಯುತಿಃ | ಶ್ರೀವೀರಭದ್ರಮಹಿತ ದಿವ್ಯಮೂರ್ತಿಃ ಪರಿಸ್ಫುಟಂ ||೧೪೭|| ಮೂರ್ತಿರೇಷಾಽಸ್ಮದೀಶಸ್ಯ ಲೀಲಯಾ ಸುಮನೋಹರಾ | ಭವಂತೀ ಪ್ರಮಥಾಧೀಶ ದಿವ್ಯಮೂರ್ತಿಃ ಪರಿಸ್ಫುಟಂ || ಮೂರ್ತಿರೇಷಾಽಸ್ಮದೀಶಾಂಗಧಾಮಭೂತಾ ಸಮುನ್ನತಾ | ಘನಪ್ರಸಾದವಿಸ್ಫೂರ್ತೇ ರ್ದಿವ್ಯಮೂರ್ತಿಃ ಪರಿಸ್ಫುಟಂ ||೧೪೯|| ಮೂರ್ತಿರೇಷಾಽಸ್ಮದೀಶೇನ

---

ಅವುಗಳು ಅಸಂಬದ್ಧ ಪ್ರಲಾಪಗಳಾಗಿ ಶಿವಾನರ್ಪಿತ ವಸ್ತುಕಾಂಕ್ಷೆಯಿಂದ ಹಾಳಾಗಿಹೋಗುವುವಲ್ಲವೆ? ಅದುಕಾರಣ, ಎಲೈ ಮಹೇಶ್ವರನೆ, ಶ್ರೀ ಬಸವಲಿಂಗನ ದಿವ್ಯಾಕಾರವನ್ನು ಸದ್ಭಕ್ತರುಗಳ ಇಂದ್ರಿಯಂಗಳಲ್ಲಿ ಮುದ್ರಿತಗೊಳಿಸು, ಎಂಬುದಾಗಿ ಶ್ರೀ ಪಂಡಿತಾರಾಧ್ಯನು ಶೋಕಾಗ್ನಿಯಲ್ಲಿ ಮುಳುಗಿ ಪ್ರಲಾಪಿಸಿದವನಾಗಿ ||೧೪೨|| ಬಳಿಕ ಭಕ್ತಸಮೂಹದೊಡನೆ ಕೂಡಿ ಇಷ್ಟಲಿಂಗಾರ್ಚನೆಯನ್ನು ಮಾಡಿ, ಅತ್ಯಂತ ಭಕ್ತಿಯಿಂದ ಮಂಗಳಾರತಿಗಳನ್ನು ಚೆನ್ನಾಗಿ ಬೆಳಗಿದನು. ಆಗ ಆತನ ಇಷ್ಟಲಿಂಗದ ಮಧ್ಯದಲ್ಲಿ ಬಸವೇಶ್ವರನ ರೂಪು ಪ್ರಕಾಶಿಸಿತು. ಅದನ್ನು ನೋಡಿ ಪಂಡಿತಾರಾಧ್ಯನು ಸಂತೋಷಾಶ್ರುವಿನಿಂದ ತುಂಬಿದ ಕಣ್ಣುಗಳುಳ್ಳವನಾಗಿ, ರೋಮಾಂಚಗಳಿಂದ ತುಂಬಿದ ದೇಹವುಳ್ಳವನಾಗಿ ||೧೪೪|| ಅತ್ಯಂತಾನಂದದಿಂದ ಮೈಮರೆದವನಾಗಿ, ಗದ್ಗದ ಕಂಠಸ್ವರವುಳ್ಳವನಾಗಿ, ಕೈಯನ್ನೆತ್ತಿ ನಮಸ್ಕರಿಸಿ, ನಾನಾವಿಧವಾಗಿ ಸ್ತೋತ್ರಮಾಡಿ, ಈ ವೃಷಭೇಂದ್ರ ಮೂರ್ತಿಯು ನನ್ನ ಉಪಾಸ್ಯವಾದ ಇಷ್ಟಲಿಂಗ ಮಹಾಮೂರ್ತಿಯೇ ಆಗಿರುವುದು. ಈ ವೃಷಭೇಶ್ವರ ಮೂರ್ತಿಯೇ ನನ್ನ ಇಷ್ಟಲಿಂಗದ ಪ್ರಭೆಯು. ಈ ಮೂರ್ತಿಯು ಸುವ್ಯಕ್ತವಾದ ಶ್ರೀ ವೀರಭದ್ರನ ದಿವ್ಯಮೂರ್ತಿಯು. ಈ ಮೂರ್ತಿಯು ನನ್ನ ಪರಮೇಶನು ವಿಲಾಸದಿಂದ ಅಂಗೀಕರಿಸಿದ ಪ್ರಮಥಾಧಿಪತಿಯ ದಿವ್ಯಮೂರ್ತಿಯು. ಈ ಮೂರ್ತಿಯು ನನ್ನ ಶಂಕರನ ದಿವ್ಯ ಶರೀರ ತೇಜೋಮಯವಾದ ಶ್ರೀಘನಪ್ರಸಾದಿ ಬಸವೇಶನ ದಿವ್ಯ

ಶಾಮಯಿತ್ವೋರರೀಕೃತಾ | ಶ್ರೀಮಜ್ಜಂಗಮಲಿಂಗಾಖ್ಯದಿವ್ಯಮೂರ್ತಿಃ ಪರಿ
ಸ್ಫುಟಂ ||೧೫೦|| ಮೂರ್ತಿರೇಷಾಸ್ಮದೀಶಸ್ಯ ಗರ್ಭೇನಿಯಮತಸ್ಸದಾ | ದೇ
ದೀಪ್ಯಮಾನಾವಯವಾ ಲಿಂಗಮೂರ್ತಿಃ ಪರಿಸ್ಫುಟಂ ||೧೫೧|| ಮೂರ್ತಿರೇ
ಷಾಸ್ಮದೀಶಸ್ಯಾನನ್ಯಸಾಧಾರಣಾ ಶುಭಾ | ಜಗತ್ಪ್ರವಿಶ್ರುತ ಗುರುಲಿಂಗಮೂ
ರ್ತಿಃ ಪರಿಸ್ಫುಟಂ ||೧೫೨|| ಮೂರ್ತಿರೇಷಾಽಸ್ಮದೀಶೇನ ಬಸವೇಶ್ವರಸಂಜ್ಞ
ಯಾ | ಸಮಂಗೀಕೃತನಂದೀಶೆ ದಿವ್ಯಮೂರ್ತಿಃ ಪರಿಸ್ಫುಟಂ ||೧೫೩|| ಏತನ್ಮೂ
ರ್ತೇರ್ಭಾವನಯಾ ಭವರೋಗಭಯಾದಯಃ | ಭವೇಯುರ್ವಿಹತಾಸ್ಸರ್ವೇ ಸದ್ಯ
ಏವನಸಂಶಯಃ || ೧೫೪ || ಐಹಿಕಾಮುಷ್ಮಿಕಂ ಸೌಖ್ಯಮೇತದಂಗೀಕೃತೇರ್ಭ
ವೇತ್ | ಏತನ್ಮೂರ್ತಿಸ್ತವೇನಾಶು ಭಕ್ತಿಭಾವಾವಲೋಕನಂ ||೧೫೫|| ಸಿದ್ಧ್ಯ
ತೀತಿವದನ್ಭಕ್ತ್ಯಾ ಸ್ತುವನ್ಬಸವವೈಭವಂ | ಶಂಕರಯ್ಯೇಣ ಸದ್ಭಕ್ತಗಣೈಸ್ಸಹಪ
ರಸ್ಪರಂ ||೧೫೬|| ಅದ್ಭುತಾಕ್ರಾಂತಚಿತ್ತಸ್ಸಂ ಸ್ತಸ್ಥೌ ಶ್ರೀಪಂಡಿತೇಶ್ವರಃ |
ಇತ್ಯಸಂಖ್ಯಾತ ಮಹಾಮಾಹೇಶ್ವರ ದಿವ್ಯ ಶ್ರೀಪಾದಪದ್ಮನಿರಂತರ ಭಾವನಾ
ಪರಿರಂಜಿತ ಹೃದಯಸರೋಜಸ್ಯ ಭವ್ಯ ಪಶುಪಾಶಪತಿಜ್ಞಾನಾನಲ ಭಸ್ಮೀ
ಕೃತಾಖಿಲ ಭವಬೀಜಸ್ಯ ವೀರಶೈವಮತಾಚಾರ್ಯ ಗುರುರಾಜಸ್ಯ

---

ಮೂರ್ತಿಯು. ನಿಜವಾಗಿ ಈ ಮೂರ್ತಿಯು ನನ್ನ ಮಹೇಶ್ವರನಿಂದ ಬಯಸಿ ಅಂಗೀಕರಿಸಲ್ಪಟ್ಟ
ಜಂಗಮ ಲಿಂಗಮೂರ್ತಿಯಾಗಿರುವುದು. ||೧೫೦|| ಈ ಮೂರ್ತಿಯು ನನ್ನ ಈಶ್ವರನ ಗರ್ಭದ
ಲ್ಲಿ ಸದಾ ಹೊಳೆಯುತ್ತಿರುವ ದೇಹವುಳ್ಳ ಲಿಂಗಮೂರ್ತಿಯು. ಈ ಮೂರ್ತಿಯು ನನ್ನ ಶಿವನ
ಅನಿತರ ಸಾಧಾರಣ ಜಗತ್ಪ್ರಸಿದ್ಧ ಮಂಗಳಕರ ಗುರುಮೂರ್ತಿಯು. ನನ್ನ ಇಷ್ಟಲಿಂಗಕ್ಕೆ ಅನನ್ಯ
ವಾಗಿರುವ ಈ ಮೂರ್ತಿಯು, ನನ್ನ ಶಂಭುವು ಬಸವೇಶನೆಂಬ ಹೆಸರಿನಿಂದ ಅಂತಿರುವ ನಂದೀ
ಶ್ವರ ದಿವ್ಯಮೂರ್ತಿಯಾಗಿರುವುದು. ||೧೫೩|| ಈ ಮೂರ್ತಿಯನ್ನು ಧ್ಯಾನಿಸುವುದರಿಂದ ಭವ
ರೋಗ ಭೀತಿ ಮೊದಲಾದುವುಗಳೆಲ್ಲಾ ತತ್‌ಕ್ಷಣದಲ್ಲಿ ನಾಶವಾಗುವುವೆಂಬುದರಲ್ಲಿ ಸಂಶಯ
ವಿಲ್ಲ. ||೧೫೪|| ಈ ಮೂರ್ತಿಯ ಧಾರಣದಿಂದ ಇಹಪರ ಸೌಖ್ಯಗಳೆರಡೂ ಸಿದ್ಧಿಸುವುವು. ಈ
ಮೂರ್ತಿಯನ್ನು ಸ್ತುತಿಸುವುದರಿಂದ ಶಿವಭಕ್ತಿ ಭಾವಿನೀ ಸಂದರ್ಶನವು ಥಟ್ಟನೆ ಲಭಿಸುವುದು.
ಎಂಬುದಾಗಿ ಶ್ರೀಪಂಡಿತಾರಾಧ್ಯನು ಶಂಕರಯ್ಯನೆಂಬ ಶಿಷ್ಯನೊಡನೆಯೂ, ಸಕಲ ಸದ್ಭಕ್ತರೊ
ಡನೆಯೂ ಶ್ರೀಬಸವೇಶನ ವೈಭವವನ್ನು ಹೇಳಿಕೊಂಡು ಸ್ತುತಿಸಿ, ಶ್ರೀಬಸವೇಶ್ವರನ ದರ್ಶನ
ಪ್ರಾಪ್ತಿಯಿಂದ ಆಶ್ಚರ್ಯಚಿತ್ತನಾಗಿರುತ್ತಿದ್ದನು. ||೧೫೬||
ಎಂಬಲ್ಲಿಗೆ ಅಗಣಿತ ಮಹಾಮಾಹೇಶ್ವರರ ದಿವ್ಯ ಶ್ರೀಪಾದಕಮಲಗಳನ್ನು ಸದಾ ಧ್ಯಾನಮಾಡುವು
ದರಿಂದ ಅರಲಿದ ಹೃದಯ ಕಮಲವುಳ್ಳವನೂ, ಮಂಗಳಪ್ರದವಾದ ಪಶುಪಾಶಪತಿಜ್ಞಾ
ನವೆಂಬ ಬೆಂಕಿಯಿಂದ ಭವಬೀಜವನ್ನು ಸುಟ್ಟು ಭಸ್ಮಗೊಳಿಸಿದವನೂ ಆದ ವೀರ

ಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿ
ತಾರಾಧ್ಯಚರಿತ್ರೇ ಮಹಿಮಪ್ರಕರಣೇ ತತ್ಪಂಡಿತಾ
ರಾಧ್ಯಸ್ಯ ಬಸವೇಶ್ವರಂ ಪ್ರತಿ ಪ್ರಲಾಪಕಥನಂ
ನಾಮ ಸಪ್ತದಶೋಽಧ್ಯಾಯಃ.

—:o:—

ಪೂರ್ವಂಪಾಲ್ಕುರ್ಕಿಸೋಮಾಖ್ಯ ವರಗುರುಣಾ ನಿರ್ಮಿತೇ
ಭಾಷಯಾಂಧ್ರ್ಯಾ ಪಶ್ಚಾಚ್ಛ್ರೀವೀರಶೈವಾಶ್ರಮಗುರು ಗುರು
ರಾಡ್ ದೇಶಿಕೇಂದ್ರೇಣ ವಾಣ್ಯಾ| ಗೈರ್ವಾಣ್ಯಾಸಂಪ್ರಣೀತೇ
ನಿಖಿಲಜನಗುರೋಃ ಪಂಡಿತೇಂದ್ರಸ್ಯ ಭವ್ಯೇ ಚಾರಿತ್ರೇಽಸ್ಮಿನ್ಮ
ಹಿಮ್ನಃ ಪ್ರಕರಣ ಮಗಮ ಚ್ಛ್ರವ್ಯಮುರ್ವ್ಯಾಂ ತುರೀಯಂ ||

ಮಹಿಮಪ್ರಕರಣಂ ಸಮಾಪ್ತಂ.

---

ಶೈವ ಮತಾಚಾರ್ಯ ಶ್ರೀಗುರುರಾಜ ಕವಿಯಿಂದ ಕೃತವಾದ ಮಲ್ಲಿಕಾ
ರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎಚ್. ಆರ್. ಕರಿಬಸವಶಾಸ್ತ್ರಿ
ರಚಿತವಾದ "ಭಾವಮಂಜರಿ" ಎಂಬ ಕನ್ನಡ ಟಿಪ್ಪಣಿ
ಯಲ್ಲಿ ಶ್ರೀಪಂಡಿತಾರಾಧ್ಯನು ಬಸವೇಶ್ವರನನ್ನು
ಕುರಿತು ಪ್ರಲಾಪ ಮಾಡುವುದನ್ನು ವರ್ಣಿ
ಸುವ ೧೭ನೆ ಅಧ್ಯಾಯದೊಡನೆ
ಮಹಿಮಪ್ರಕರಣವು ಸಮಾಪ್ತವು.
ಮಂಗಳಂ.

ಓಂ ಶಿವಾಯನಮಃ

# ಅಥ ಪರ್ವತಪ್ರಕರಣ ಪ್ರಾರಂಭಃ.

## (ಪಂಡಿತಾರಾಧ್ಯ ಶ್ರೀ ಶೈಲದರ್ಶನಕಥನಂ.)

ಅಥಪ್ರಖ್ಯಾತಯಶಸಾ ಶಂಕರಾರ್ಯೇಣಧೀಮತಾ | ಲಬ್ಧಾನುಜ್ಞೋ ಪಂಡಿತೇಂದ್ರೋಸದ್ಭಕ್ತೈಸ್ಸಹಗಚ್ಛತಿ ||೧|| ಉಲ್ಲಾಸಹೇತುರ್ನಿಬಿಡಸ್ಸಾಂದ್ರಸ್ಸಂಚ್ಛಿ‍ಶ್ರೀ ಗಿರೀಶ್ವರಃ | ಸಿಂಧುಶ್ಚ ನೀಲಜಲದಃ ಪುರಜಿತ್ಕಂಠಕಾಲಿಮಾ ||೨|| ಉದ್ಗಚ್ಛಂತ ಇವಾಕಾಶೇ ಮಿಲಿತ್ವಾಸಮದೃಶ್ಯತ | ಪಂಕವಿಚ್ಛೇದಕಾನಂತ ಮಾಹಾತ್ಮ್ಯವಿಮಲೋದಕಃ || ೩ || ಅಸಂತೋತ್ತುಂಗಶೃಂಗೌಘಸಮುನ್ನತತರಂಗಕಃ | ಶೈಲಾಗ್ರಭಾಸಿನೀಹಾರ ಪುಂಜಫೇನಸಮುತ್ಕರಃ || ೪ || ವಿಹರತ್ಪ್ರಮಥಾನೀಕ ವಿಮಾನಜಯನೌಕುಲಃ | ತದ್ವಿಮಾನಧ್ವಜಲಸತ್ಕೂಪದಂಡಕದಂಬಕಃ ||೫|| ನಾನಾದಿಶಾಸ್ಥಾನಸಂಘ ಸಮಂಜದ್ದ್ವೀಪಸಂಘಕಃ | ತದೀಯಪಾರ್ಶ್ವತಟಿನೀ

---

ಶ್ರೀ ಸಾಂಬಸದಾಶಿವಾಯನಮಃ.

# ಪರ್ವತಪ್ರಕರಣವು.

## ಪಂಡಿತಾರಾಧ್ಯರಿಗೆ ಶ್ರೀಶೈಲದರ್ಶನವಾದ ಕಥೆಯು.

ಬಳಿಕ ಶ್ರೀಪಂಡಿತಾರಾಧ್ಯನು ಕೀರ್ತಿಸಂಪನ್ನನಾದ ಶಂಕರಾರ್ಯನ ಅನುಮತಿಯನ್ನು ಪಡೆದುಕೊಂಡು ಭಕ್ತರೊಡನೆ ಕೂಡಿ ಮುಂದಕ್ಕೆ ಪ್ರಯಾಣಮಾಡಿ ಹೋಗುತ್ತಿರಲಾಗಿ, ||೧|| ಸಮುದ್ರವೂ, ಕಾರ್ಮುಗಿಲೂ, ಶಿವನ ಕಂಠದ ಕಪ್ಪು ಸಹ ಒಬ್ಬುಳಿಯಾಗಿ ಆಕಾಶಕ್ಕೆ ಹೋಗುತ್ತಿರುವುವೋ ಎಂಬಂತೆ ಕಣ್ಗೆ ದಟ್ಟವಾಗಿ ಹಬ್ಬಿರುವ ಮನೋಲ್ಲಾಸಕರವಾದ ಶ್ರೀ ಪರ್ವತವು ಕಾಣಿಸಿತು. ಅದು ಪಾಪವಿನಾಶವನ್ನು ಮಾಡುವ ಅತ್ಯಂತ ಮಹಿಮೆಯುಳ್ಳ ನಿರ್ಮಲತೀರ್ಥಗಳೆಂಬ ನೀರುಳ್ಳುದಾಗಿಯೂ ||೩|| ಎತ್ತರಗಳಾದ ಕೋಡುಗಲ್ಲುಗಳೆಂಬ ದೊಡ್ಡದೊಡ್ಡ ತೆರೆಗಳುಳ್ಳುದಾಗಿಯೂ, ತುದಿಯಲ್ಲಿ ಕವಿದಿರುವ ಮಂಜುಗಡ್ಡೆಗಳೆಂಬ ನೊರೆಗಳುಳ್ಳುದಾಗಿಯೂ, ||೪|| ವಿಹರಿಸುತ್ತಿರುವ ಪ್ರಮಥರ ವಿಮಾನಗಳೆಂಬ ಹಡಗುಗಳುಳ್ಳುದಾಗಿಯೂ, ಆ ವಿಮಾನಗಳಮೇಲೆ ಎತ್ತಿ ನಿಲ್ಲಿಸಿರುವ ಧ್ವಜಸ್ತಂಭಗಳೆಂಬ ಹಡಗಿನ ಕೋವುಗಂಬಗಳುಳ್ಳುದಾಗಿಯೂ, ಪರ್ವತದ ನಾನಾ ದಿಕ್ಕುಗಳಲ್ಲಿರುವ ಆಸ್ಥಾನ ಮಂಟಪ ಸಮುದಾಯಗಳೆಂಬ ದ್ವೀಪಗಳುಳ್ಳುದಾಗಿಯೂ, ಆ ಆಸ್ಥಾನ ಮಂಟಪಗಳ ಪಕ್ಕಗಳಲ್ಲಿ ಹರಿಯುತ್ತಿರುವ ನದಿಗಳೆಂಬ ದ್ವೀಪವಾ

ಸಂದೋಹದ್ವೀಪವರ್ತ್ಮಕಃ ||೬|| ಶೈವಪಾಶುಪತಾದ್ಯುದ್ಯನ್ಮನಿರತ್ನವಿರಾಜಿತಃ | ವೀರಮಾಹೇಶ್ವರಾನರ್ಘಸ್ಫುರನ್ನಾಯಕರತ್ನಕಃ ||೭|| ಅನ್ತರ್ಮಹೀಸ್ಥಶೈಲೌಘ ಮೈನಾಕಾದಿ ಮಹೀಧರಃ | ಸಂಸ್ಪೃಷ್ಟಮನುಜಗ್ರಾಹಿ ಶಿಲಾಯಸ್ಕಾಂತ ಭೂಧರಃ || ೮ || ತ್ರಿಂಶದ್ಯೋಜನವಿಸ್ತಾರಾತಿರಕ್ತಕ್ಷಿತಿಕೂಲಕಃ | ಬಭೌ ಶ್ರೀಪರ್ವತಾಂಭೋಧಿರಗ್ರೇಲೋಕೈಕಪಾವನಃ || ೯ || ಕಿಂಚಹೃಷ್ಯನ್ನೀಲಕಂಠೋ ಮುಮುಕ್ಷುಚಯಚಾತಕಃ | ಸಮಾಹಿತಫಲಾಯಾತ ಪರಿಷತ್ಕರ್ಷಕವ್ರಜಃ ||೧೦|| ವರಸತ್ಪಥ ಸೋಪಾನಾಂಚಿತಾಭ್ರಂಕಷವರ್ತನಃ | ವೃಕ್ಷಕಾಷ್ಠತೃಣಜ್ಯೋತಿಸ್ಸಂಘವಿದ್ಯುಲ್ಲತಾವ್ರಜಃ ||೧೧|| ಪತನ್ನಿರ್ಝರನಾದೋದ್ಯತ್ ಪ್ರತಿಧ್ವಾನೋರುಗರ್ಜಿತಃ | ಸ್ವದೃಕ್ಕೃಪಾರಸ ಸ್ವರ್ಗಮೋಕ್ಷಾದೀಷ್ಟಾರ್ಥವೃಷ್ಟಿಕಃ || ೧೨ || ಶ್ರೀಪರ್ವತಮಹಾನೀಲಜೀಮೂತೋಽರಾಜತೋನ್ನತಃ | ಧರಾಪೀಠಸ್ಯ ಗಗನಲಿಂಗಸ್ಯಾಶಾಂಬರಸ್ಯಚ ||೧೩|| ಸನ್ಮೇಘಮೇಖಲ

---

ರ್ಗಗಳುಳ್ಳುದಾಗಿಯೂ ||೬|| ಶೈವ ಪಾಶುಪತಾದಿ ನಾನಾಮತಗಳ ಋಷಿಗಳೆಂಬ ರತ್ನಗಳಿಂದ ಒಪ್ಪುತ್ತಿರುವುದಾಗಿಯೂ, ವೀರಮಾಹೇಶ್ವರರೆಂಬ ಅತ್ಯುತ್ಕೃಷ್ಟಗಳಾದ ನಾಯಕರತ್ನಗಳುಳ್ಳುದಾಗಿಯೂ, ||೭|| ಒಳಸುತ್ತಿನಲ್ಲಿ ಸೇರಿಕೊಂಡಿರುವ ಸಣ್ಣ ಸಣ್ಣ ಬೆಟ್ಟಗಳೆಂಬ ಮೈನಾಕಾದಿ ಪರ್ವತಗಳುಳ್ಳುದಾಗಿಯೂ, ಮುಟ್ಟಿದ ಮನುಷ್ಯರನ್ನು ಹಿಡಿದುಕೊಳ್ಳುವ ಶಕ್ತಿಯುಳ್ಳ ಕಲ್ಲುಗಳೆಂಬ ಸೂಜಿಗಲ್ಲಿನ ಬೆಟ್ಟಗಳುಳ್ಳುದಾಗಿಯೂ, ಮೂವತ್ತು ಯೋಜನದ ವಿಸ್ತಾರವಾದ ಅತ್ಯಂತ ಕೆಂಪಾದ ಸಮಾಪಭೂಮಿಯೆಂಬ ದಡವುಳ್ಳುದಾಗಿಯೂ ಇದ್ದ ಕಾರಣ, ಜಗದೇಕಪವಿತ್ರವಾದ ಆ ಪರ್ವತವು ಮಹಾ ಸಮುದ್ರದಂತೆ ಕಾಣಿಸುತ್ತಿದ್ದಿತು. ||೯|| ಮತ್ತು ಆ ಪರ್ವತವು ದೊಡ್ಡ ಕಾರ್ಮೋಡದಂತೆ ಕಾಣಿಸುತ್ತಿದ್ದಿತೆಂಬುದನ್ನು ಕವಿಯು ಶಬ್ದಶ್ಲೇಷೆಯಿಂದಲೂ ರೂಪಕದಿಂದಲೂ ವರ್ಣಿಸಿರುವನು. ಹೇಗೆಂದರೆ—ಮೋಡವು ನವಿಲನ್ನು ಸಂತೋಷಪಡಿಸತಕ್ಕುದು, ಗಿರಿಯು ಶಿವನನ್ನು ಸಂತೋಷಪಡಿಸತಕ್ಕುದು. ಮೋಡವನ್ನು ಚಾತಕಗಳು ಹಾರೈಸಿಕೊಂಡಿರುವವು. ಈ ಗಿರಿಯನ್ನು ಮೋಕ್ಷಾಪೇಕ್ಷಿಗಳಾದ ಮುನಿಗಳು ಆಶ್ರಯಿಸಿಕೊಂಡಿರುವರು. ಮತ್ತೂ ಈ ಗಿರಿಯೆಂಬ ಮೋಡವು ಇಷ್ಟಾರ್ಥಫಲಪ್ರಾಪ್ತಿಗಾಗಿ ಬಂದು ಕೂಡಿರುವ ಭಕ್ತಸ್ತೋಮವೆಂಬ ಬೇಸಾಯಗಾರರ ಸಮೂಹವುಳ್ಳುದಾಗಿರುವುದು. ಮೋಡವು ಅಂತರಿಕ್ಷದಲ್ಲಿ ಸಂಚರಿಸುತ್ತಿರುವುದು. ಈ ಗಿರಿಯೂಕೂಡ ಆಕಾಶವನ್ನು ಸೋಂಕುತ್ತಿರುವ ಮೆಟ್ಟಲುಗಳ ಮಾರ್ಗವುಳ್ಳುದಾಗಿರುವುದು. ಮತ್ತು ಈ ಶ್ರೀಗಿರಿಯೆಂಬ ಮೇಘವು ಹೊಳೆಯುವ ಜ್ಯೋತಿರ್ಲತೆ, ಜ್ಯೋತಿರ್ವೃಕ್ಷ, ಜ್ಯೋತಿಸ್ತೃಣಗಳೆಂಬ ಮಿಂಚುಗಳುಳ್ಳುದಾಗಿರುವುದು. ಹರಿದು ಬೀಳುತ್ತಿರುವ ಗಿರಿನದಿಗಳ ಶಬ್ದಪ್ರತಿಶಬ್ದಗಳೆಂಬ ಗುಡುಗಿನ ದನಿಗಳುಳ್ಳುದಾಗಿರುವುದು. ತನ್ನ ಕಟಾಕ್ಷ ಕರುಣಾರಸದಿಂದ ಸ್ವರ್ಗ ಮೋಕ್ಷ ಮೊದಲಾದುವುಗಳೆಂಬ ಮಳೆಯನ್ನು ಸುರಿಸತಕ್ಕುದಾಗಿರುವುದು. ||೧೨|| ಮತ್ತು ಈ ಶ್ರೀಗಿರಿಯೆಂಬ ಮಹಾ ಲಿಂಗಮೂರ್ತಿಗೆ ಭೂಮಿಯೇ ಪೀಠವಾಗಿಯೂ, ಆಕಾಶವೇ

ಸ್ತ್ಯಾರ್ಕ್ಷ ಪುಷ್ಪಪ್ರಕರಶೋಭಿನಃ | ಸರ್ವತತ್ತ್ವೋರ್ಧ್ವಚಿಚ್ಛಕ್ತಿ ಜಟಾಜೂಟವಿಭಾಸಿನಃ ||೧೪|| ಅರ್ಕೇಂದುದೀಪಸ್ಯ ಸೂಕ್ಷ್ಮತತ್ತ್ವರೂಪಸ್ಯಶೂಲಿನಃ | ಗ್ರೀವಾಸಂಸಕ್ತಗರಳ ನೀಲಿಮ್ನಾವಮನೋಹರೇ ||೧೫|| ನೀಲವರ್ಣೇ ಶ್ರೀಗಿರೀಂದ್ರೇ ತದಾನೇತ್ರೋತ್ಸವೇಸತಿ | ಹರ್ಷಾಶ್ರುಪೂರಿತಾಪಾಂಗಸ್ಸಸ್ಮಿತಾಸ್ಯಸರೋರುಹಃ || ೧೬ || ರೋಮಾಂಚಾಂಚಿತಕಾಯೋಽವಿಚ್ಛಿನ್ನಗದ್ಗದಕಂಧರಃ | ಸಮುದ್ಭೂತೋಲ್ಲಸದ್ಭಾವ ಸ್ವರನೇತ್ರಾಂಗವಿಕ್ರಿಯಃ ||೧೭|| ಪಂಡಿತೇಂದ್ರಃಪರವಶೋ ಮುದಾಶ್ರೀಪರ್ವತಂಮುಹುಃ | ಪಶ್ಯನ್ನಮನ್ವೇಲ್ಲಟೂರುಂ ಯಯೌಕತಿಪಯೈರ್ದಿನೈಃ ||೧೮|| ಭೂಯೋಪಿಭಕ್ತ್ಯಾಪ್ರಣಮಂಚ್ಛ್ರೀಗಿರಿಂ ಪಂಡಿತೇಶ್ವರಃ | ದೃಷ್ಟ್ವಾದೃಷ್ಟ್ವಾಜಗಾದೈವಂ ಪ್ರಮೋದಪರಿಪೂರಿತಃ ||೧೯|| ಅಗಸ್ತ್ಯಪಾದಾಭಿಹತ್ಯಾ ಪರಿಕ್ಷೀಣಸ್ಯಸತ್ವರಂ| ಕಿಯನ್ಮಹತ್ತ್ವಂವಿಂಧ್ಯಾದ್ರೇರಸ್ಮಿನ್ವಿಶ್ವಂಭರಾತಲೇ ||೨೦|| ಸಮುದ್ಧೃತಸ್ಯ ಕಮಲಾನಾಥೇನಾಯತ್ನತಃಪುರಾ| ಕಿಯತೀಮಂದರಕ್ಷ್ಮೋಣೀಧರೇಂದ್ರಸ್ಯ ಸಮಗ್ರತಾ || ೨೧ || ದಶವಕ್ತ್ರೇಣಹಸ್ತಾಭ್ಯಾಂ ಚಲಿತಸ್ಯಸಸತ್ವರಂ | ಕಿಯದ್ಗಾಂಭೀರ್ಯಮಪಸೌ ಕಲಧೌತಮಹೀಭೃತಃ ||೨೨|| ಕ್ಷೀಣಂಕೃತವತಸ್ಸ್ವೀಯಪರ್ವತತ್ವಂ ಪರಿಶ್ರುತಂ | ಸುಮೇರೋಃಕಿಯತೀ ಶಕ್ತಿರ್ವಿಜಿತಕಾರ್ಮುಕರೂಪಿಣಃ ||೨೩|| ಪುರುಹೂತಾದ್ಭಯಂ

---

ಗೋಳಕವಾಗಿಯೂ, ದಿಕ್ಕುಗಳೇ ವಸ್ತ್ರವಾಗಿಯೂ, ಮೇಘಸಂಗ್ತಿಗಳೇ ಒಡ್ಯಾಣವಾಗಿಯೂ, ನಕ್ಷತ್ರಗಳೇ ಹೂವಾಗಿಯೂ, ಸಕಲ ತತ್ವಾತೀತವಾದ ಪರಶಕ್ತಿಯೇ ಜಡೆಮುಡಿಯಾಗಿಯೂ ||೧೪||ಸೂರ್ಯಚಂದ್ರರೇ ತೂಗುದೀವಿಗೆಗಳಾಗಿಯೂ ತನ್ನ ಕಪ್ಪುಬಣ್ಣವೇ ಶಿವನ ಕೊರಲಿನ ವಿಷದ ಕಪ್ಪಾಗಿಯೂ ತೋರುತ್ತಿರಲು, ಇಂತಪ್ಪ ಶ್ರೀಶೈಲವನ್ನು ನೋಡಿ ಪಂಡಿತಾರಾಧ್ಯನು ಪರಮಾನಂದದಿಂದ ಉಕ್ಕಿ ಬಂದ ಕಣ್ಣೀರಿನಿಂದ ತುಂಬಿದ ನಯನಗಳುಳ್ಳವನಾಗಿ, ವಿಕಸಿತ ವದನಾರವಿಂದನಾಗಿ, ||೧೬|| ರೋಮಾಂಚ ಕಂಚುಕಿತಾಂಗನಾಗಿ, ಗದ್ಗದ ಸ್ವರವುಳ್ಳವನಾಗಿ, ಹೀಗೆ ಉಂಟಾದ ನಾನಾ ಸಾತ್ವಿಕಾಂಗಚೇಷ್ಟೆಗಳುಳ್ಳವನಾಗಿ, ಪರವಶನಾಗಿ, ಅಡಿಗಡಿಗೆ ಶ್ರೀಗಿರಿಯನ್ನು ನೋಡಿ ಅಡ್ಡಬೀಳುತ್ತ, ಕೆಲದಿನಗಳಲ್ಲಿ ವೆಲ್ಲಟೂರು ಎಂಬ ಪಟ್ಟಣಕ್ಕೆ ಹೋದನು.||೧೮|| ಬಳಿಕ ಪಂಡಿತೇಂದ್ರನು ಮತ್ತೆ ಶ್ರೀಗಿರೀಂದ್ರನನ್ನು ನಮಸ್ಕರಿಸಿ, ನೋಡಿನೋಡಿ ಸಂತೋಷಗೊಂಡು ಹೀಗೆ ಹೇಳಿದನು—ಈ ಶ್ರೀಶೈಲದಮುಂದೆ ಭೂಮಿಯಲ್ಲಿ ಅಗಸ್ತ್ಯನ ಕಾಲಿನ ತುಳಿತದಿಂದ ಬಗ್ಗಿಹೋದ ವಿಂಧ್ಯಪರ್ವತದ ಮಹಿಮೆ ಯೆಷ್ಟರದು? ಲೀಲಾಜಾಲವಾಗಿ ಕೃಷ್ಣನು ಬೆರಳಿನ ತುದಿಯಲ್ಲೆತ್ತಿಬಿಟ್ಟ ಮಂದರಪರ್ವತದ ಘನತೆ ಯೆಷ್ಟರದು? ರಾವಣನು ಎತ್ತಿ ಅಲುಗಿಸಿಬಿಟ್ಟ ಕೈಲಾಸಪರ್ವತದ ದೊಡ್ಡತನವೆಷ್ಟರದು? ಸಣ್ಣ ಬಿಲ್ಲಿನ ಆಕಾರವನ್ನು ಧರಿಸಿದುದರಿಂದ ಪ್ರಸಿದ್ಧವಾದ ತನ್ನ ಪರ್ವತತ್ವವನ್ನು ಕ್ಷೀಣಗೊಳಿಸಿಕೊಂಡ ಮೇರುಪರ್ವತದ ಶಕ್ತಿಯೆಷ್ಟರದು? ||೨೩|| ಇಂದ್ರ

ಪ್ರಾಪ್ಯ ಪರಿಮಗ್ನಸ್ಯವಾರಿಧೌ | ಕಿಯನ್ಮೈನಾಕಶೈಲಸ್ಯ ವೈಭವಂ ಧರಣೀತಲೇ ||೨೪|| ಪ್ರಕ್ಷೀಣನಿಜಸಾರಸ್ಯ ಜಾಹ್ನವೀಜಲವೇಗತಃ | ಜಗತ್ಯಾಂಕಿಯತೀಶೋಭಾ ಮಾಲ್ಯವತ್ಕುಲಭೂಭೃತಃ ||೨೫|| ಕ್ಷೀಯಮಾಣಸ್ಯಸುತರಾಂ ಮಾರ್ತಾಂಡಕಿರಣೋಷ್ಣತಃ | ಕಿಯತ್ತಸ್ಯಮಹೀಯಸ್ತ್ವಂ ಹಿಮವದ್ಧರಣೀಭೃತಃ ||೨೬|| ಸೂರ್ಯೋದಯಕ್ಷಣಂಹಿತ್ವಾ ನಿತ್ಯಂಶೋಭಾಮಗಚ್ಛತಃ | ಕಿಯತ್ಸೌಂದರ್ಯಮುದಯಶೈಲಸ್ಯ ಧರಣೀತಲೇ ||೨೭|| ನಿಜೋದರಂಪ್ರವಿಷ್ಟಸ್ಯ ಮಿತ್ರಸ್ಯ ಘನತೇಜಸಾಂ | ಸಂಹರ್ತುಃಕಿಯದಾಧಿಕ್ಯಮಸ್ತಶೈಲಸ್ಯ ಸಂತತಂ || ವಿನಾಚಂದನಮುತ್ಕೃಷ್ಟವಸ್ತುಹೀನಸ್ಯ ಸರ್ವದಾ | ಮಲಯಕ್ಷ್ಮಾಧರೇಂದ್ರಸ್ಯ ಮಹತ್ತ್ವಮವನೌ ಕಿಯತ್ ||೨೯|| ಕದಾಚಿದಪ್ಯನೂಢೋರ್ವೀಧರೇಂದ್ರತನಯಾಪತೇಃ | ಕಿಯದ್ಗುರುತ್ವಮವನೌ ಮಾನಸೋತ್ತರ ಭೂಭೃತಃ ||೩೦|| ಹಿತ್ವಾತ್ಮಾನಂ ಮಹೇಶಾನೇ ಗತೇಸತ್ಯನ್ಯಪರ್ವತಂ | ತೂಷ್ಣೀಂಸ್ಥಿತಸ್ಯೇಂದ್ರಕೀಲನಗಸ್ಯ ಮಹಿಮಾಕಿಯಾನ್ ||೩೧|| ಅನೇಕಶೋಣಪಾಷಾಣ ಬಹುವರ್ಣಲಸತ್ಕ್ರಮಾನ್ | ರೋಹಣಾದ್ರೇರ್ನಾಟಯತಃ ಪ್ರಹರ್ಷೋಭುವನೇಕಿಯಾನ್|| ರಾಮಚಾಪೇನಭಗ್ನಸ್ಯ ಗಂಧಮಾದನಭೂಭೃತಃ | ಪರಿಖ್ಯಾತಿರ್ಗಣಾಯಿತುಂಕಿಯತೀ ವಸುಧಾತಲೇ ||೩೩|| ಸದಾಭೂಭಾರಕತ್ವೇನ ಸಂಸ್ಥಿತಾನಾಮಹರ್ನಿ

---

ಸಿಂದ ಭಯಪಟ್ಟು ಸಮುದ್ರದಲ್ಲಿ ಮುಳುಗಿಕೊಂಡ ಮೈನಾಕಪರ್ವತದ ಸತ್ವವೆಷ್ಟರದು?||೨೪|| ಗಂಗಾಪ್ರವಾಹ ವೇಗದಿಂದ ತನ್ನ ಸಾರವನ್ನು ಕಳೆದುಕೊಂಡ ಮಾಲ್ಯವತ್ಪರ್ವತದ ತೇಜಸ್ಸೆಷ್ಟರದು? ||೨೫|| ಸೂರ್ಯಕಿರಣ ತಾಪಕ್ಕೆ ಕರಗಿಹೋಗುವ ಹಿಮವತ್ಪರ್ವತದ ಅಗ್ಗಳಿಕೆ ಯೆಷ್ಟರದು? ||೨೬|| ಸೂರ್ಯೋದಯಕಾಲವನ್ನು ಬಿಟ್ಟರೆ ಉಳಿದಾಗಳೆಲ್ಲಾ ಕಾಂತಿಹೀನವಾಗಿರುವ ಉದಯಾಚಲದ ಸೌಂದರ್ಯವೆಷ್ಟರದು? ||೨೭|| ತನ್ನ ಗರ್ಭವನ್ನು ಮರೆಹೊಕ್ಕ ಮಿತ್ರನ (ಸೂರ್ಯನ) ತೇಜಸ್ಸನ್ನು ಕೆಡಿಸುವ ಅಸ್ತಗಿರಿಯ ಆಧಿಕ್ಯವೆಷ್ಟರದು? ||೨೮|| ಶ್ರೀಗಂಧವೊಂದುಹೊರತು ಮತ್ತಾವ ಶ್ರೇಷ್ಠವಸ್ತುವನ್ನೂ ಹೊಂದಿರದ ಮಲಯಗಿರಿಯ ಮಹಿಮೆ ಯೆಷ್ಟರದು? ||೨೯|| ಯಾವಾಗಳೂ ಮದುವೆಯಾಗದಿರುವ ಗಿರಿರಾಜನ ಹೊಟ್ಟೆಯಲ್ಲಿ ಹುಟ್ಟಿದ ಮಗಳ ಗಂಡನಾದ-ಮಾನಸಸರೋವರದ ಬಡಗಲಲ್ಲಿರುವ-ಕೈಲಾಸಗಿರಿಯ ಗೌರವವೆಷ್ಟರದು? ಶಿವನು ತನ್ನನ್ನು ಬಿಟ್ಟು ಅನ್ಯವಾದ ಕೈಲಾಸಪರ್ವತಕ್ಕೆ ಹೋದರೂ ನೋಡಿಕೊಂಡು ಸುಮ್ಮನಿದ್ದ ಇಂದ್ರಕೀಲಪರ್ವತದ ಮಹತ್ವವೆಷ್ಟರದು?||೩೧|| ಕೆಂಗಲ್ಲು ಮೊದಲಾದ ಹಲವು ತೆರದ ಶಿಲೆಗಳ ಬಣ್ಣಗಳ ಬೆಡಗನ್ನು ತೋರಿಸಿಕೊಂಡಿರುವ ರೋಹಣಪರ್ವತದ ಉಬ್ಬಾಟವೆಷ್ಟರದು? ||೩೨|| ರಾಮನ ಧನುಸ್ಸಿನೇಟಿನಿಂದ ನುಗ್ಗಾದ ಗಂಧಮಾದನಪರ್ವತದ ಪ್ರಖ್ಯಾತಿ ಯೆಷ್ಟರದು?|| ಯಾವಾಗಲೂ ಭೂಭಾರಗ

ಶಂ | ಮಹಾಕುಲಗಿರೀಂದ್ರಾಣಾಂ ಪ್ರಸಿದ್ಧಿಃ ಕಿಯತೀ ಭುವಿ ||೩೪|| ವಾನರೋ ದ್ಧೃತಸಂಭಗ್ನಪ್ರಭ್ರಷ್ಟಾನಾಂ ಮಹೀಭೃತಾಂ | ಅಥವಾಸಾಮಶೇಷಾಣಾಂ ಪ್ರಾಭವೋಭೂತಲೇ ಕಿಯಾನ್ ||೩೫|| ಪುರೇದಾನೀಂ ಸದಾಜಾತು ಚಿದ್ವಾಭಂ ಗಮನಾಶ್ರಿತಃ | ಅಯಂ ಶ್ರೀಪರ್ವತಾಧೀಶಃ ಪುಣ್ಯರಾಶಿರನುತ್ತಮಃ ||೩೬|| ಸಂ ಸ್ತೂಯತೇ ಭವ್ಯಭಕ್ತ್ಯಾ ಕೃತಕೃತ್ಯೈರ್ಮಹಾತ್ಮಭಿಃ | ಅಸ್ತ್ಯೇಕ ಏವ ಮಹಿ ಮಾಪ್ರತಿಶೈಲಂ ಮಹೀತಲೇ||೩೭|| ತೇಷ್ವೇತಾದೃಶಮಾಹಾತ್ಮ್ಯಂ ವಿದ್ಯತೇ ಕಿಂ ಸಮುನ್ನತಂ | ಸರ್ವಕಾಮಾರ್ಥ್ಯಾರ್ಥಸಂಸಿದ್ಧಿರ್ಮನುಜಾನಾಮಯತ್ನತಃ ||೩೮|| ಅಪವರ್ಗಸುಖಾವಾಪ್ತಿರಪ್ಯಸ್ಮಾದೇವ ಜಾಯತೇ | ಶ್ರೀಪರ್ವತಾತ್ಸ್ಪರ್ಶವೇಧಿ ಭೂತಾತ್ಕಲ್ಪತರೋಸ್ಸತಃ ||೩೯|| ಭೂತಲೇ ಕಾಮಧುಗ್ರೂಪಾನ್ನಾನ್ಯಸ್ಮಾದ್ಧ ರಣೀಧರಾತ್ | ಶ್ರೀಪರ್ವತಾಖ್ಯಮುನಿಪ ತಪಃಫಲಲಸತ್ತನುಂ ||೪೦|| ಶ್ರೀಮ ಲ್ಲಿಕಾರ್ಜುನ ಸಮುತ್ತುಂಗಸ್ಥಾನಮುಖಾಂಬುಜಾಂ | ಧರ್ಮಾರ್ಥಕಾಮಮೋ ಕ್ಷಾಖ್ಯ ದಿವ್ಯಶ್ರೀಪಾದಪಂಕಜಾಂ ||೪೧|| ಉತ್ತುಂಗಶೃಂಗಸಚ್ಛೃಂಗಾಂನೀ ಪವೃಕ್ಷ ವಿಲೋಚನಾಂ | ಗುಹೌಘನಾಸಾಕುಹರಾಂ ಬಹುಭೂಜತನೂರು ಹಾಂ ||೪೨|| ಪುನೀತಪರಿಷದ್ವತ್ಸಾಂ ಶ್ರುತಿಸ್ಮೃತಿ ವರಶ್ರುತಿಂ | ಗುಹಾಮಾ

---

ಳಾಗಿ ನಿಂತಿರುವ ಮಹಾ ಸಪ್ತಕುಲಾಚಲಗಳ ಪ್ರಸಿದ್ಧಿ ಯೆಷ್ಟರದು? ||೩೪|| ಸೇತುಬಂಧನ ಕಾಲದಲ್ಲಿ ಕಪಿಗಳಿಂದ ಕಿತ್ತು ಒಡೆಯಿಸಿಕೊಂಡು ಉರುಳಿದ ಸಣ್ಣ ಪುಟ್ಟ ಬೆಟ್ಟಗಳ ನೆಗಳ್ತೆ ಯೆಷ್ಟರದು? ||೩೫|| ಭೂತಭವಿಷ್ಯದ್ವರ್ತಮಾನಕಾಲತ್ರಯಗಳಲ್ಲಿ ಯಾವಾಗಲೂ ಯಾವ ತೆರದ ಭಂಗವನ್ನೂ ಈ ಶ್ರೀ ಶೈಲವು ಪಡೆದುದಲ್ಲ. ಇದು ನಿರತಿಶಯವಾದ ಪುಣ್ಯರಾಶಿ ಯಾಗಿರುವುದು. ||೩೬|| ಆ ಕಾರಣದಿಂದಲೇ ಮಹಾತ್ಮರುಗಳು ಭಕ್ತಿಯಿಂದ ಈ ಪರ್ವ ತವನ್ನು ಸ್ತೋತ್ರಮಾಡುತ್ತಾರೆ. ಲೋಕದಲ್ಲಿರುವ ಪ್ರತಿಯೊಂದು ಪರ್ವತದಲ್ಲೂ ಒಂದೊಂ ದು ತೆರದ ಮಹಿಮೆಯಿರುವುದುಂಟು. ಆದರೆ ಈ ಶ್ರೀ ಶೈಲಕ್ಕಿರುವಷ್ಟು ಮಾಹಾತ್ಮ್ಯವು ಮತ್ತಾವ ಗಿರಿಗಾದರೂ ಇದ್ದೀತೆ? ಪರುಸಮಣಿಯವಿಕಾರವೂ, ಕಲ್ಪವೃಕ್ಷಮಯವೂ, ಕಾಮ ಧೇನುಸ್ವರೂಪವೂ ಆದ ಈ ಗಿರಿಯ ದೆಸೆಯಿಂದಲೇ ಮನುಜರಿಗೆ ಸಕಲೇಷ್ಟಾರ್ಥಗಳೂ ಮುಕ್ತಿಸುಖವೂ ಕೂಡ ಸುಲಭವಾಗಿ ದೊರೆಯುತ್ತವೆ. ||೩೮|| ಇತರ ಪರ್ವತಗಳಿಂದ ಇಂಥ ಫಲವು ಲಭಿಸುವಹಾಗಿಲ್ಲ. ||೪೦|| ಈ ಶ್ರೀಗಿರಿಯೆಂಬ ಕಾಮಧೇನುವಿಗೆ ಗಿರಿ ಯೆಂಬ ಋಷೀಶ್ವರನ ತಪಃಫಲವೆಂಬ ದೇಹವೂ, ಶ್ರೀಮಲ್ಲಿಕಾರ್ಜುನ ದೇವಾಲಯವೆಂಬ ಮುಖಕಮಲವೂ, ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪಾದಗಳೂ, ಎತ್ತರವಾದ ಕೋಡುಗಲ್ಲುಗಳೆಂಬ ಕೊಂಬುಗಳೂ, ಕರಿಯ ಅಶೋಕವೃಕ್ಷಗಳೆಂಬ ಕಣ್ಣುಗಳೂ, ಗವಿಗ ಳೆಂಬ ಮೂಗಿನ ಒಳ್ಳೆಗಳೂ, ವೃಕ್ಷಗಳೆಂಬ ರೋಮಗಳೂ, ಪವಿತ್ರಜನರ ಸಭೆಯೆಂಬ ಕರು

ರುತನಿಶ್ವಾಸಾಂ ಪ್ರಮಥಾಧಿಪಪಾಲಕಾಂ ||೪೩|| ವರೇಣ್ಯಾಸತ್ಪುಣ್ಯದುಗ್ಧಾಂ ಸುಮಹತ್ಕೀರ್ತಿವಾಲಧಿಂ | ಚತುರ್ದ್ವಾರಸ್ಥಮಹಿತ ದಿವ್ಯಲಿಂಗವರಸ್ತನೀಂ || ಲಸಂತೀಂ ಶ್ರೀನಗಾಧೀಶಕಾಮಧೇನುಮೃತೇ ನೃಣಾಂ | ಅಭೀಪ್ಸಿತಾರ್ಥನಿವಹಾಃ ಕ್ವವಾಸನ್ತಿಮಹೀತಲೇ || ೪೫ || ಪರ್ವತರ್ಷಿತಪಃಪ್ರೀತೇಶಪ್ರಸಾದಾಲವಾಲಕಂ | ತಸ್ಮನಿಪ್ರಾಕ್ ಪುಣ್ಯದೇಹಾತಿಸ್ಥಿರಸ್ಥೂಲಮೂಲಕಂ || ೪೬ || ತತ್ಪರ್ವತಮುನೀಂದ್ರಾದ್ರಿಭಾಗಸ್ಕಂಧವಿರಾಜಿತಂ | ಚತುರ್ದಿಗುಲ್ಲಸಚ್ಛೈಲನಿವಹೋನ್ನತವೇದಿಕಂ ||೪೭|| ಅಶ್ವಮೇಧಾದ್ಯದ್ರಿವೃಂದ ಶುಂಭಚ್ಛಾಖಾಕದಂಬಕಂ | ಪಾತಾಲಗಂಗಾದಿ ಸರಿದ್ವಲ್ಲರೀಪರಿವೇಲ್ಲಿತಂ ||೪೮|| ಕಾಂತ್ಯುಜ್ವಲನ್ಮರಕತಶಿಲಾ ಹರಿತಪರ್ಣಕಂ | ಪ್ರವಾಳಪದ್ಮರಾಗಾದಿ ರತ್ನಪಲ್ಲವರಂಜಿತಂ || ವಜ್ರಮುಕ್ತಾ ಚಂದ್ರಕಾನ್ತಾವ್ರಜಪುಷ್ಪಸಮುತ್ಕರಂ | ಕಾಮ್ಯಾರ್ಥಿಸಾಧಕವ್ಯೂಹ ದ್ವಿರೇಫನಿವಹಾಂಚಿತಂ ||೫೦|| ಶ್ರೀಸ್ವಯಂಭೂಲಿಂಗಸಿದ್ಧಲಿಂಗ ದಿವ್ಯಫಲಾನ್ವಿತಂ | ತಪಸ್ವಿಮುನಿಸಂದೋಹ ತತ್ಫಲಾಸ್ವಾದಿಕೀರಕಂ ||೫೧|| ಸಮುಲ್ಲಸಂತಂ ಶ್ರೀಶೈಲಕಲ್ಪವೃಕ್ಷಮೃತೇನೃಣಾಂ | ಅಭೀಪ್ಸಿತಾರ್ಥನಿವಹಾಃ ಕ್ವವಾಸನ್ತಿಮಹೀತಲೇ ||೫೨|| ತಾರಾದಿಲೋಹಜಾಲಸ್ಯ ತತ್ತದ್ವರ್ಣಕದಂಬಕಂ |

---

ವೂ, ವೇದಶಾಸ್ತ್ರಗಳೆಂಬ ಕಿವಿಗಳೂ, ಗವಿಗಳಿಂದ ಹೊರಹೊರಡುವ ಗಾಳಿಯೆಂಬ ಉಸುರೂ, ಪರಶಿವನೆಂಬ ಗೋಪಾಲಕನೂ, ಪುಣ್ಯವೆಂಬ ಹಾಲೂ, ಕೀರ್ತಿಯೆಂಬ ಬಾಲವೂ, ನಾಲ್ಕು ತಲೆಬಾಗಿಲುಗಳಲ್ಲಿರುವ ದಿವ್ಯಲಿಂಗಗಳೆಂಬ ಮೊಲೆಗಳೂ, ಒಪ್ಪುತ್ತಿರುವುವು. ಇಂತಪ್ಪ ಶ್ರೀಗಿರಿಯೆಂಬ ಕಾಮಧೇನುವನ್ನು ಬಿಟ್ಟರೆ ಲೋಕದ ಮನುಜರಿಗೆ ಇಷ್ಟಾರ್ಥಗಳೆಲ್ಲಿ ದೊರೆಯುವುವು? ||೪೫|| ಈ ಶ್ರೀಗಿರಿಯೆಂಬ ಕಲ್ಪವೃಕ್ಷಕ್ಕೆ ಶ್ರೀಗಿರಿಯೆಂಬ ಮುನಿಪತಿಯ ತಪಸ್ಸಿಗೆ ಮೆಚ್ಚಿದ ಶಿವನ ಅನುಗ್ರಹವೆಂಬ ಪಾತೆಯೂ, ಶ್ರೀಶೈಲಮುನಿಪತಿಯ ಪೂರ್ವ ಪುಣ್ಯ ಶರೀರನೆಂಬ ಬುಡವೂ, ಆ ಶ್ರೀಗಿರಿಯ ಇಂದ್ರದಿಕ್ಕಿನಲ್ಲಿರುವ ಪರ್ವತಭಾಗವೆಂಬ ಸ್ಕಂಧ (ಬುಡದಮೇಲೆ ಕವಲೊಡೆಯುವ ಸ್ಥಲ)ವೂ, ನಾಲ್ಕು ದಿಕ್ಕುಗಳಲ್ಲೂ ಹಬ್ಬಿರುವ ಪರ್ವತಶ್ರೇಣಿಯೆಂಬ ಜಗತಿಯೂ, ಅಶ್ವಮೇಧವೆಂಬುದೇ ಮೊದಲಾದ ನಾನಾ ಪರ್ವತಸ್ತೋಮವೆಂಬ ಕೊಂಬೆಗಳೂ, ಪಾತಾಳಗಂಗೆಯೇ ಮೊದಲಾದ ಗಿರಿನದಿಗಳೆಂಬ ಬಳ್ಳಿಗಳ ಸುತ್ತುವಿಕೆಯೂ, ಮರಕತ ರತ್ನಗಳೆಂಬ ಹಸುರೆಲೆಗಳೂ, ಹವಳ ಕೆಂಪು ಮೊದಲಾದ ಮಣಿಸ್ತೋಮಗಳೆಂಬ ಚಿಗುರುಗಳೂ, ವಜ್ರ ಮುತ್ತು ಚಂದ್ರಕಾಂತಶಿಲೆ—ಇವುಗಳೆಂಬ ಹೂವುಗಳೂ, ಯೋಗಸಾಧಕರೆಂಬ ತುಂಬಿಗಳೂ ||೫೦|| ಸ್ವಯಂಭುಲಿಂಗ ಸಿದ್ಧಲಿಂಗ ಮೊದಲಾದ ಶಿವಲಿಂಗಮೂರ್ತಿಗಳೆಂಬ ಹಣ್ಣುಗಳೂ, ಈ ಪೂರ್ವೋಕ್ತಫಲಗಳನ್ನು ಸೇವಿಸುತ್ತಿರುವ ತಪಸ್ವಿಗಳೆಂಬ ಗಿಣಿಗಳೂ ಒಪ್ಪಿರಲು, ಇಂತಪ್ಪ ಶ್ರೀಶೈಲವೆಂಬ ಕಲ್ಪವೃಕ್ಷವನ್ನು ಬಿಟ್ಟರೆ ಮನುಜರಿಗೆ ಇಷ್ಟಾರ್ಥಗಳು ಎಲ್ಲಿ ದೊರೆಯುವುವು? ||೫೨|| ಲೋ

ನಿವಾರ್ಯಸ್ಸ್ವರ್ಣತಾಂಕರ್ತುಂ ಶಕ್ಯತೇಸ್ಪರ್ಶವೇಧಿನಾ ||೫೩|| ನೇತರೇಣಾಶ್ಮನಾ ಸ್ವರ್ಣಂ ಭವತೀತಿಹಿವಾಕ್ಯತಃ | ತದ್ವದೇವಾಂತ್ಯಜಾಸ್ಸ್ಪೃಷ್ಟ್ವೇತ್ಯಾಗಮಾದತಿವಿಶ್ರುತಾತ್ ||೫೪|| ಸ್ನಾತ್ವಾತ್ಮಾನಂ ಬ್ರಾಹ್ಮಣಾದೀನಾಂ ಸ್ಪೃಶತಾಂ ಪಾಪಸಂಚಯಂ | ಸಂಹೃತ್ಯಪಾವನೀಕರ್ತುಂ ಶ್ರೀನಗಸ್ಯೈವಶಕ್ಯತೇ ||೫೫|| ಋತೇಭವನವಿಖ್ಯಾತಾಚ್ಛ್ರೀನಗಾತ್ ಸ್ಪರ್ಶವೇಧಿನಃ | ಅಭೀಪ್ಸಿತಾರ್ಥನಿವಹಾಃ ಕ್ವವಾಸನ್ತಿಮಹೀತಲೇ ||೫೬|| ಭುವಿಸ್ಥಿತೇಷುಸರ್ವೇಷು ಪರ್ವತೇಷು ನಗಾಧಿಪಃ | ಅಯಮೇಕೋಗಿರಿರಿತಿ ಪ್ರವಕ್ತುಮುಚಿತಂಕಿಮು ||೫೭|| ಸಂಚಯೋ ಲಿಂಗಮೂರ್ತೀನಾಂ ಲೀಲಾನಾಮಮಿತಂಬಲಂ | ಸಾರೋಮಹಿಮ್ನಾಮಾವಾಸೋ ಮಂಗಳಾನಾಂ ಸಮುನ್ನತಃ ||೫೮|| ಆದಿಸ್ಸತ್ಪರಮಾರ್ಥಸ್ಯವೇದಿಃ ಪ್ರಮಥಸಂಹತೇಃ | ಸಮೂಹಸ್ಸುರಭೂಜಾನಾಂ ಸುರಭೀಣಾಂಕದಂಬಕಂ ||೫೯|| ಚಿಂತಾಮಣೀನಾಮುಚ್ಛ್ರಾಯ ಶ್ರಿಯೋಜನ್ಮನಿಕೇತನಂ | ಆಸ್ವಾದಸ್ಸಂಪ್ರಹರ್ಷಸ್ಯ ಸತ್ವಸ್ಯಮಹಿತಾಕೃತಿಃ ||೬೦|| ಸಾಕ್ಷಾತ್ಕಾಶೀಸ್ಪರ್ಶವೇಧಿರಾಶಿಸ್ಸಂಗೀತಮಂಜರೀ | ಶರಣಾನಾಂಲಸದ್ವೃತ್ತಿ ರ್ಜಂಗಮಾನಾಂ ಮಹೋತ್ಸವಃ ||೬೧|| ವಿಮಲತ್ವಸ್ಯವೈಚಿತ್ರೀಕೃತಿ ಸ್ತತ್ವಸ್ಯಸನ್ನಿಧಿಃ | ಸೀಮಾನಿರುದ್ಧೇಂ

---

ಕದಲ್ಲಿ ಪರುಸದಕಲ್ಲು ಬೆಳ್ಳಿ ಮೊದಲಾದ ಲೋಹಗಳನ್ನು ಚಿನ್ನವನ್ನಾಗಿ ಮಾಡಬಲ್ಲುದೇ ಹೊರತು ಉಳಿದ ಕಲ್ಲುಗಳಿಂದ ಅಂಥ ಕೆಲಸವಾಗುವುದಿಲ್ಲವೆಂಬ ವಚನವಿರುವಂತೆ, ಆಗಮದಲ್ಲಿ ಅಂತ್ಯಜರ ಸ್ಪರ್ಶವನ್ನು ಮಾಡಿದರೂ ಶ್ರೀಶೈಲಸಂದರ್ಶನದಿಂದ ಶುದ್ಧಿಯುಂಟಾಗುವುದೆಂದು ಹೇಳಲ್ಪಟ್ಟಿರುವಕಾರಣ, ಬ್ರಾಹ್ಮಣಾದಿ ಉತ್ತಮ ವರ್ಣಗಳವರಿಗೆ ಸಂಘಟಿಸಿದ ಪಾಪವನ್ನು ಪರಿಹರಿಸಿ ಶುದ್ಧಿಗೊಳಿಸುವುದಕ್ಕೆ ಈ ಶ್ರೀಗಿರಿಯೇ ಸಮರ್ಥವು. ಇಂತಪ್ಪ ಲೋಕವಿಖ್ಯಾತ ಶ್ರೀಶೈಲವೆಂಬ ಪರುಸ ಮಣಿಯನ್ನು ಬಿಟ್ಟು ಮನುಜರಿಗೆ ಇಷ್ಟಾರ್ಥವೆಲ್ಲಿ ದೊರೆಯುವುದು? ||೫೬|| ಭೂಮಿಯಲ್ಲಿ ಎಷ್ಟೋಪರ್ವತಗಳಿರುವಾಗ್ಗೆ ಇದೊಂದನ್ನೇ ಪರ್ವತಶ್ರೇಷ್ಠವಾದ ಶ್ರೀಗಿರಿಯೆಂದು ಹೇಳುವುದು ಉಚಿತವೆ? ಎಂದರೆ—ಉಚಿತವೇ ಸರಿಯೆಂದು ಹೇಳಬೇಕಾಗುವುದು. ಏಕೆಂದರೆ—ಈ ಶ್ರೀಗಿರಿಯು ಶಿವಲಿಂಗಮೂರ್ತಿಗಳ ಬಳಗವು. ಶಿವನ ನಾನಾ ಲೀಲೆಗಳ ಅಪಾರ ಸಾಮರ್ಥ್ಯವು, ಶಿವನ ಮಹಿಮೆಯ ಸಾರವು, ಶುಭದ ಆಶ್ರಯವು, ಪರಮಾರ್ಥದ ಮೂಲವು, ಪ್ರಮಥರ ಜಗತಿಯು, ಕಲ್ಪವೃಕ್ಷಗಳ ಒಟ್ಟಿಲು, ಕಾಮಧೇನುಗಳ ತಿಂತಿಣಿಯು, ಚಿಂತಾಮಣಿಗಳ ಗಣಿಯು, ಲಕ್ಷ್ಮಿಯ ತವರ್ಮನೆ, ಪರಮಾನಂದದ ಸವಿ, ಸತ್ವದ ಆಕಾರ ||೬೦|| ಪ್ರತ್ಯಕ್ಷ ಕಾಶೀಕ್ಷೇತ್ರ, ಪರುಸದ ಮಣಿಯ ಗುಡ್ಡೆ, ಸಂಗೀತದ ಗುಚ್ಛ, ಶಿವಶರಣರ ಸಚ್ಛೀಲವು, ಜಂಗಮರ ಉತ್ಸವವು, ನೈರ್ಮಲ್ಯದ ವೈಚಿತ್ರ್ಯವು, ಪರತತ್ತ್ವದ ಸಾಮೀಪ್ಯವು, ಜಿತೇಂದ್ರಿಯರ ಸೀಮೆಯು, ದಾನಿಗಳ ಪ್ರೇಮವು, ಧನ್ಯತ್ವದ ಸತ್ವವು, ಸಕಲ

ದ್ರಿಯಾಣಾಂ ಲಲಿತಂ ಪ್ರೇಮದಾಸಿನಾಂ ||೬೨|| ವರಶಕ್ತಿರ್ಧರ್ಮಸ್ಯತಾಯಾ
ಮುಕ್ತಿರ್ದರ್ಶನಸಂಹತೇಃ | ಪರಿತ್ರಾಣಂಪ್ರಸಾದಸ್ಯ ಸಂಶ್ರಯಶ್ಶಿವಯೋಗಿ
ನಾಂ ||೬೩|| ನಿತ್ಯತ್ವಸ್ಯಘನೀಭಾವ ಸ್ಸ್ವರ್ಗಸ್ಯಾವಧಿರುತ್ತಮಃ | ನಿಯತ್ತಾ
ಮೋಕ್ಷಸೌಖ್ಯಸ್ಯ ಶುಭಾದೃಷ್ಟಿರಪಾಪಿನಾಂ ||೬೪|| ಉಪಾಯಸ್ಸಿದ್ಧಸಂಘಾ
ನಾಂ ಧ್ರುವಕೀರ್ತೇರ್ವಿವರ್ಧನಂ | ನದೀಪ್ರವಿಷ್ಟಸದನಂ ಪರ್ವತಾನಾಂ
ಯೋಮಹಾನ್ ||೬೫|| ನಿತ್ಯಾನಾಂಹೃದಯಾರಾಗಃ ಪ್ರಥಿಮಾನಿರ್ಮಲಾ
ತ್ಮನಾಂ | ತಪಸಾಂಸೂತ್ರ ವಿಾಶಸ್ಯ ಸ್ನೇಹಸ್ತೀರ್ಥಚಯಾಕರಃ ||೬೬||
ಕಾಲೋಜಪಸಮಾಧೀನಾಂ ಶೋಭಾಸದ್ಭಕ್ತಸಂಹತೇಃ | ಏಕಮತ್ಯಂಸಮು
ಯಿನಾಂ ವಿರಕ್ತಾನಾಂಸುಖಾಲಯಂ ||೬೭|| ಭವ್ಯೋಮುಕ್ತಿಮತಾಂಮಾರ್ಗ
ಸ್ತರಣಿರ್ಭವವಾರಿಧೇಃ | ಪದವೀನಾಂ ಸಮಸ್ತಾನಾಮಾಧಾರೋ ಲೋಕವಿ
ಶ್ರುತಃ ||೬೮|| ಶಿಖರಂ ಶಿವಸದ್ಭಕ್ತೇರೇಷ ಶ್ರೀಪರ್ವತೋತ್ತಮಃ | ಏವಂ
ವಿಧಶ್ರೀನಾಗೇನ ಕಿಮನ್ಯೇಸದೃಶಾನಗಾಃ ||೬೯|| ಏತಸ್ಮಿನ್ನಿರ್ಝರಾಶ್ಶಂಭು
ಮೌಲಿಗಂಗಾಂಬುಬಿಂದವಃ | ಅತ್ರತ್ಯಕ್ಷುದ್ರಗಿರಯಃ ಕೈಲಾಸಾದಿಮಹಾನ
ಗಾಃ ||೭೦|| ಅತ್ರತ್ಯಗಾವೋಽಭೀಷ್ಟಾರ್ಥದಾಯಿನ್ಯ ಸ್ಸುರಧೇನವಃ | ಅತ್ರ
ತ್ಯವತ್ಸಾ ಗೋಮಾತೃವ್ರಜಾಶ್ಶಂಭ್ವಗ್ರತಸ್ಸ್ಥಿತಾಃ ||೭೧|| ಬ್ರಹ್ಮಾಂಡಧಾರ
ಶತರುದ್ರಾ ಅತ್ರತ್ಯಬಾಲಕಾಃ | ಅತ್ರಗುಲ್ಮಾಃ ಕಾಯಸಿದ್ಧಿಕರಾದಿವ್ಯೌಷಧಿಸ

---

ಧರ್ಮಗಳಿಗೂ ಮುಕ್ತಿಸ್ಥಾನವು, ಶಿವಾನುಗ್ರಹದ ರಕ್ಷಣಸ್ಥಾನವು, ಶಿವಯೋಗಿಗಳ ಬೀಡು
ಶಾಶ್ವತಪದವಿಯ ಗಟ್ಟಿಯು, ಸ್ವರ್ಗಸುಖದ ಪರಾಕಾಷ್ಠದಶೆಯು, ಮುಕ್ತಿಸುಖದ ಪರಿಮಿತಿ
ಯು, ಸುಕೃತಿಗಳಿಗೆ ಒಳ್ಳೆಯ ನೋಟವು. ಯೋಗಸಿದ್ಧರಿಗೆ ಉಪಾಯವು, ಶಾಶ್ವತಕೀರ್ತಿಯ
ಅಭಿವೃದ್ಧಿಯು, ನದಿಗಳಿಗೆ ಹುಗುವ ಮನೆಯು, ಬೆಟ್ಟಗಳ ದೊಡ್ಡ ಪಸರವು, ನಿತ್ಯರ ಚಿತ್ತಾ
ನುರಾಗವು, ನಿರ್ಮಲಾತ್ಮರ ಘನತೆಯು, ತಪಸ್ಸುಗಳ ಸೂತ್ರವು, ಶಿವನ ಮೈತ್ರಿಯು, ತೀರ್ಥಗಳ
ಆಗರವು ||೬೬|| ಜಪಸಮಾಧಿಗಳಿಗೆ ಸಮಯವು, ಭಕ್ತಸ್ತೋಮದ ಪ್ರಭೆಯು, ಸಕಲ ಮತಸ್ಥ
ಒಬ್ಬುಳಿಯು, ವಿರಕ್ತರ ಸೌಖ್ಯಾಶ್ರಯವು, ಜೀವನ್ಮುಕ್ತರಿಗೆ ಸನ್ಮಾರ್ಗವು, ಭವಸಮುದ್ರಕ್ಕೆ
ಹಡಗು, ಸಾಲೋಕ್ಯಾದಿಪದವಿಗಳಿಗೆಲ್ಲಾ ಆಶ್ರಯವು. ಶಿವಭಕ್ತಿಯ ಗೋಪುರವು. ಹೀಗಿರುವ
ಶ್ರೀ ಪರ್ವತಕ್ಕೆ ಉಳಿದ ಬೆಟ್ಟಗಳೆಲ್ಲಾ ಸಮನಾಗುವುವೆ? ||೬೯|| ಈ ಪರ್ವತದಲ್ಲಿರುವ ಗಿರಿ
ನದಿಗಳು ಶಿವನ ಮುಡಿಯಲ್ಲಿರುವ ಗಂಗೆಯ ಜಲಬಿಂದುಗಳು. ಇಲ್ಲಿರುವ ಸಣ್ಣ ಬೆಟ್ಟಗಳು
ಕೈಲಾಸಾದಿ ಮಹಾಪರ್ವತಗಳು. ಇಲ್ಲಿರುವ ಹಸುಗಳು ಇಷ್ಟಾರ್ಥವನ್ನು ಕೊಡುವ ಕಾಮ
ಧೇನುಗಳು. ಇಲ್ಲಿರುವ ಕರುಗಳು ಶಿವನ ಮುಂಗಡೆಯಲ್ಲಿರುವ ಗೋವುಗಳು. ಇಲ್ಲಿಯ ಮ
ದುಗರು ಜಗದ್ಧಾರಕರಾದ ಶತರುದ್ರರು. ಇಲ್ಲಿರುವ ಗಿಡುಗಳು ನಾನಾ ದೇಹಸಿದ್ಧಿಗಳನ್ನು

ಜಾಃ ||೭೨|| ಇಹಶೋಣಶಿಲಾಸ್ಸೂಕ್ಷ್ಮಾ ಶ್ಶೇಷಭೋಗಮಣಿವ್ರಜಾಃ |
ಏತದುತ್ಸ್ನಾರಸರಸಾಯನಧಾರಾ ಹ್ಯಭೀಷ್ಟದಾಃ ||೭೩|| ಮಂದಾರತಮುಖ್ಯತ
ರವೋ ಹ್ಯತ್ರತ್ಯಾ ಧರಣೀರುಹಃ | ಪಟೀರಕರ್ಪೂರಕುಜಾ ಅತ್ರನೀರಸಶಾಖಿ
ನಃ ||೭೪|| ಏತದೀಯಾನ್ತರ್ದೃಷದಶ್ಚಿಂತಾಮಣಿಖನಿವ್ರಜಾಃ | ಅತ್ರತ್ಯಪಲ್ವ
ಲವ್ಯೂಹಾ ಗಂಗಾಮುಖ್ಯನದೀಚಯಾಃ ||೭೫|| ಇಹೋಷರಜಲಾಧಾರಾಃ
ಕ್ಷೀರಾಬ್ಧಿಜನಸಾಲಯಾಃ | ಅತ್ರತ್ಯಗಂಡಶೈಲಾಭೂಧಾರಿಣಃ ಕುಲಪರ್ವತಾಃ||
ಅತ್ರತ್ಯಾನಾಂ ಪುಳಿಂದಾನಾಂ ಮಂದಿರಾಣ್ಯತಿಪಾವನಂ | ವಿಷ್ಣುಪ್ರಮುಖದೇ
ವಾನಾಮಪಿ ಮುಕ್ತಿಸ್ಥಲಂಮಹತ್ ||೭೭|| ಅತ್ರತ್ಯಾಶ್ಶ್ವಪಚಾನೇಕಾ ಶ್ಚತು
ರ್ವೇದಿಭ್ಯ ಉತ್ತಮಾಃ | ಅತ್ರತ್ಯಪಶುಸಂದೋಹಪಾಲಕಾಅಪಿ ಸರ್ವಶಃ ||೭೮
ಸಮಂಚಿತಾಶ್ಯ್ರತವ್ಯಾಖ್ಯಾ ಚಾತುರ್ಯ ಚತುರಾನನಾಃ | ಅತ್ರತ್ಯಪನ್ನಗಾಸ್ಸ
ರ್ವೇತಕ್ಷಕಾದಿಭುಜಂಗಮಾಃ ||೭೯|| ಅತ್ರತ್ಯಬಾಲಕಾಸ್ಸರ್ವೇ ಪುಷ್ಪಸಂಚ
ಯಲಾವಕಾಃ | ಅಮರೇಂದ್ರಾಯ ದೇವೇಂದ್ರಪದವೀಂ ದಾತುಮೀಶ್ವರಾಃ ||
ಮೌಂಜೀಬನ್ಧಕೃತೋ ಧಾತುರತ್ರತ್ಯದ್ವಿಜಪುತ್ರಕಾಃ | ಕಿಂವಚೋಭಿರ್ಬಹುತ
ರೈರತ್ರಾಂತಿಮ ಗೃಹಸ್ಥಿತಃ ||೮೧|| ಪ್ರಮಥಸ್ಸ್ಥಿತಿಕರ್ತಾರಂ ಕೃತವಾನ್ಕಮ
ಲಾಪತಿಂ | ಹರಿಪುತ್ರಂನಿಹತವಾನತ್ರೈಕೋ ಬಾಲತಾಪಸಃ ||೮೨|| ಏಕೋ೭

---

ಕೊಡುವ ದಿವ್ಯಮೂಲಿಕೆಗಳು. ||೭೨|| ಇಲ್ಲಿಯ ಸಣ್ಣ ಕಲ್ಲುಗಳು ಆದಿಶೇಷನ ಹೆಡೆಯ ರತ್ನ
ಗಳು. ಇಲ್ಲಿಯ ಜರಿಗಳ ನೀರುಗಳು ಇಷ್ಟಾರ್ಥಗಳನ್ನು ಕೊಡುವ ಅಮೃತಧಾರೆಗಳು. ಇಲ್ಲಿ
ಯ ಮರಗಳು ಕಲ್ಪವೃಕ್ಷಗಳು. ಇಲ್ಲಿಯ ಒಣಮರಗಳು ಶ್ರೀಗಂಧದ ಮತ್ತು ಕರ್ಪೂರದ ಮ
ರಗಳು. ಇಲ್ಲಿಯ ಭೂಗರ್ಭದ ಕಲ್ಲುಗಳು ಚಿಂತಾಮಣಿಯ ಗಣಿಗಳು. ಇಲ್ಲಿಯ ಕುಂಟೆಗಳು
ಗಂಗಾದಿ ಪುಣ್ಯನದಿಗಳು. ಇಲ್ಲಿಯ ಚೌಳುಭೂಮಿಯ ಕಟ್ಟೆಗಳು ಕ್ಷೀರಸಮುದ್ರದ ಜನಕಗ
ಳು. ಇಲ್ಲಿರುವ ಬಂಡೆಗಳು ಕುಲಾಚಲಗಳು. ಇಲ್ಲಿರುವ ಬೇಡರ ದೊಡ್ಡಿಗಳು ವಿಷ್ಣ್ವಾದಿಗ
ಳಿಗೂ ಮುಕ್ತಿಯನ್ನು ಕೊಡುವ ಪವಿತ್ರಸ್ಥಲವು. ಇಲ್ಲಿರುವ ಶ್ವಪಚರೂ ಕೂಡ ಚತುರ್ವೇದಿ
ಗಳಿಗಿಂತಲೂ ಉತ್ತಮರು. ಇಲ್ಲಿರುವ ಗೊಲ್ಲರು ಚತುಶ್ಶಾಸ್ತ್ರ ವ್ಯಾಖ್ಯಾನ ನಿಪುಣರು.
ಇಲ್ಲಿರುವ ಹಾವುಗಳೆಲ್ಲಾ ತಕ್ಷಕ ಮೊದಲಾದ ಸರ್ಪರಾಜಗಳು. ಇಲ್ಲಿಯ ಹೂವನ್ನೆ
ತ್ತುವ ಬಾಲಕರು ಇಂದ್ರನಿಗೂ ಕೂಡ ದೇವೇಂದ್ರ ಪದವಿಯನ್ನು ಕೊಡಲು ಸಮರ್ಥರು.
||೮೦|| ಇಲ್ಲಿಯ ಬ್ರಾಹ್ಮಣ ವಟುಗಳು ಬ್ರಹ್ಮನಿಗೂ ಉಪನಯನವನ್ನು ಮಾಡಬಲ್ಲವರು.
ಹೆಚ್ಚು ಮಾತಿನಿಂದೇನು? ಇಲ್ಲಿಯ ಕಡೆ ಮನೆಯಲ್ಲಿ ವಾಸವಾಗಿರುವ ಒಬ್ಬ ಪ್ರಮಥನು ವಿಷ್ಣು
ವನ್ನು ಪರಿಪಾಲನಕರ್ತೃವನ್ನಾಗಿ ಮಾಡಿದವನು. ಇಲ್ಲಿಯ ಒಬ್ಬ ಬಾಲತಪಸ್ವಿಯು ವಿಷ್ಣು
ವಿನ ಮಗನಾದ ಮದನನನ್ನು ಕೊಂದವನು. ಇಲ್ಲಿಯ ಒಬ್ಬ ವೀರಗಣನು ದಕ್ಷಯಜ್ಞವನ್ನು

ತ್ರತ್ಯೋ ವೀರಗಣೋ ದಕ್ಷಯಜ್ಞವಿನಾಶಕಃ | ಹನ್ತಾ ವ್ಯಾಘ್ರಾಸುರಾದೀನಾ ಮತ್ರೈಕೋ ಗಣಬಾಲಕಃ ||೮೩|| ಏತದೀಯೋತ್ತರದ್ವಾರಪ್ರಭುಃ ಪ್ರಮಥ ಪುಂಗವಾನ್ | ಸಂಪ್ರೇಷ್ಯಸಕಲಾನ್ಲೋಕಾನ್ ಹೃತವಾನ್ ಘನತೇಜಸಾ || ಏತಸ್ಯಪ್ರಾಗ್ದ್ವಾರಪಾಲ ಸ್ತ್ರಿಪುರಾಣಾಂಪ್ರದಾಹಕಃ | ಏತದ್ದಕ್ಷಿಣದಿಗ್ದ್ವಾರಪತಿ ರ್ಜ್ಯೋತಿಸ್ಸ್ವರೂಪವಾನ್ ||೮೫|| ಜನಕೋಬ್ರಹ್ಮಣಾಮಸ್ಯ ಪಶ್ಚಿಮ ದ್ವಾರನಾಯಕಃ | ಲಿಂಗಾನಾಂಚಕ್ರವರ್ತ್ಯೈತನ್ನಿವಾಸೀ ಮಲ್ಲಿಕಾರ್ಜುನಃ || ಅತ್ರಸ್ಥಿತಾಸ್ಸ್ವರಮೇಯಾ ಮಾರ್ಜಾಲಮೃಗಪಕ್ಷಿಣಃ | ಕ್ರಿಮಿಕೀಟಭುಜಂಗಾ ದ್ಯಾವರ್ತಂತೇತ್ರಸಗೇಥವಾ ||೮೭|| ಕೈಲಾಸೇವಾನಚಾನ್ಯತ್ರ ನಿವಸನ್ತೀತಿಭಾಷಿತೇ | ಶ್ರೀಶೈಲಮಹಿಮಾವಕ್ತುಂ ಶಕ್ಯತೇ ಬ್ರಹ್ಮಣಾಪಿಕಿಂ ||೮೮|| ನ ಭೂತಾ ನಭವಿಷ್ಯಂತೀತ್ಯೇತತ್ಪೌರಾಣವಾಕ್ಯತಃ | ಅನೇನಪರ್ವತೇಂದ್ರೇಣ ಸದೃಶಾಃಕಿಮುಭೂಧರಾಃ ||೮೯|| ಧೃತವಸ್ತ್ರೋವಸುಮತೀಂ ಭಕ್ತ್ಯಾಧೃತವ ತಾಶಿವಂ | ಕಿಮುಶ್ರೀಪರ್ವತೇಂದ್ರೇಣ ಸದೃಶಾಸ್ಸರ್ವಭೂಧರಾಃ ||೯೦|| ಇತಿ ಕೀರ್ತಯತೋಭಕ್ತ್ಯಾ ಹೃಷ್ಯತಃಪಂಡಿತೇಶಿತುಃ | ಅಶೇಷಶ್ರೀಗಿರಿರ್ದೃಷ್ಟೋ ಸ್ತದಾ ಲಿಂಗಾಕೃತಿರ್ಬಭೌ || ೯೧ || ಅಯಂಗಿರಿಶ್ಶಿಲಾರೂಪಂ ದೃಶ್ಯತೇಹ್ಯಕೃ

---

ನಾಶಮಾಡಿದವನು. ಇಲ್ಲಿಯ ಒಬ್ಬ ಗಣಬಾಲಕನು ವ್ಯಾಘ್ರಾಸುರ ಮೊದಲಾದವರನ್ನು ಕೊಂದವನು. ಇಲ್ಲಿಯ ಉತ್ತರನುಹಾದ್ವಾರಪಾಲಕನು ಪ್ರಮಥರನ್ನು ಕಳುಹಿಸಿಕೊಟ್ಟು ತನ್ನ ಪರಾಕ್ರಮದಿಂದ ಸಕಲ ಲೋಕಗಳನ್ನೂ ಸಂಹರಿಸಿದವನು. ಇಲ್ಲಿಯ ಮೂಡಲ ಬಾಗಿಲನ್ನು ಕಾಯುವವನು ತ್ರಿಪುರವನ್ನು ಸುಡತಕ್ಕವನು. ಇಲ್ಲಿಯ ದಕ್ಷಿಣದ್ವಾರಪಾಲಕನು ಪರಂಜ್ಯೋತಿಸ್ಸ್ವರೂಪನು. ||೮೫|| ಇಲ್ಲಿಯ ಪಶ್ಚಿಮದ್ವಾರಪಾಲಕನು ಬ್ರಹ್ಮನನ್ನೂ ಹುಟ್ಟಿಸಿದವನು. ಈ ಪರ್ವತನಿವಾಸಿಯಾದ ಮಲ್ಲಿಕಾರ್ಜುನಸ್ವಾಮಿಯು ಭೂಮಿಯ ಸಕಲ ಲಿಂಗಗಳಿಗೂ ಸಾರ್ವಭೌಮನು. ||೮೬|| ಇಲ್ಲಿರುವ ನಾಯಿ ನರಿ ಬೆಕ್ಕು ಮೃಗ ಪಕ್ಷಿ ಕ್ರಿಮಿಕೀಟಾದಿಗಳೆಲ್ಲಾ ಕೈಲಾಸದಲ್ಲಿ ಅಥವಾ ಇಲ್ಲಿ ಇರುವುವೇ ಹೊರತು ಇನ್ನೆಲ್ಲೂ ಇರತಕ್ಕವುಗಳಲ್ಲವೆನ್ನುವಾಗ ಇನ್ನಿದರ ಮಹಿಮೆಯನ್ನು ವರ್ಣಿಸುವುದಕ್ಕೆ ಬ್ರಹ್ಮನಿಗಾದರೂ ಶಕ್ಯವೆ? ಇದಕ್ಕೆ ಸಮನಾದ ಪರ್ವತವು ಹಿಂದೆಯೂ ಇರಲಿಲ್ಲ ಮುಂದೆಯೂ ಇರುವುದಿಲ್ಲ ಎಂದು ಹೇಳಿರುವ ಪುರಾಣವಚನದಂತೆ ಈಶ್ರೀಗಿರಿಗೆ ಇತರ ಪರ್ವತಗಳೆಲ್ಲಾ ಸಮನಾಗುವುವೆ? ಭಕ್ತಿಯಿಂದ ಪರಶಿವನನ್ನು ತನ್ನಲ್ಲಿ ಧರಿಸಿಕೊಂಡಿರುವ ಈ ಶ್ರೀಶೈಲಕ್ಕೆ ಭೂಮಿಯನ್ನು ಹೊತ್ತುಕೊಂಡಿರುವ ಉಳಿದ ಬೆಟ್ಟಗಳೆಲ್ಲಾ ಸಮಾನವಾದಾವೆ? ||೯೦|| ಎಂಬುದಾಗಿ ಭಕ್ತಿಯಿಂದ ಹೊಗಳಿ ಆನಂದಿಸುತ್ತಿದ್ದ ಪಂಡಿತಾರಾಧ್ಯನ ಕಣ್ಣಿಗೆ ಶ್ರೀಶೈಲವು ಆಗ ಲಿಂಗಾಕಾರವಾಗಿ ಕಾಣಿಸಿಕೊಂಡಿತು. ಈ ಗಿರಿಯು ಪಾಪಾತ್ಮರಿಗೆ ಕಲ್ಲಿನ ಮಯವಾಗಿ ಕಾಣಿಸಿಕೊಳ್ಳುವುದೆಂಬ ಪುರಾಣೋಕ್ತಿಯು ಹೇಗೆ ಸುಳ್ಳಾ

ತಾತ್ಮಭಿಃ | ಇತಿಪೌರಾಣವಚನಂ ಮಿಥ್ಯಾಭೂತಂಕಥಂಭವೇತ್ ||೯೨|| ತಥಾ ಹಿಸ್ಥೂಲರೂಪೇಣ ಭಾತಿಲಿಂಗಂಫಲಾರ್ಥಿನಾಂ | ಯೋಗಸೌಖ್ಯಾರ್ಥಿನಾಂ ಸೂಕ್ಷ್ಮರೂಪೇಣ ಪರಿದೃಶ್ಯತೇ ||೯೩|| ದೃಶ್ಯತೇ ಪರಮಾಕೃತ್ಯಾ ಸದಾಭಕ್ತಿ ಸುಖಾರ್ಥಿನಾಂ | ಅಸ್ಮಿನ್ನರ್ಥೇ ವಾಯವೀಯಸಂಹಿತಾಪಠಿತಂಯತಃ ||೯೪|| ತದೀಯಂ ತ್ರಿವಿಧಂರೂಪಂ ಸ್ಥೂಲಂ ಸೂಕ್ಷ್ಮಂ ತತಃಪರಂ | ಅಸ್ಮದಾದ್ಯೈಮ ರೈರ್ದೃಶ್ಯಂ ಸ್ಥೂಲಂ ಸೂಕ್ಷ್ಮಂಚಯೋಗಿಭಿಃ ||೯೫|| ತತಃಪರಂಚಯನ್ನಿತ್ಯಂ ಜ್ಞಾನಮಾನಂದಮವ್ಯಯಂ | ತನ್ನಿಷ್ಠೈಸ್ತತ್ಪರೈರ್ಭಕ್ತೈರ್ದೃಶ್ಯತೇನಾನ್ಯಥಾ ಕ್ವಚಿತ್ ||೯೬|| ಇತಿವಾಕ್ಯಂತತೋ ಭಕ್ತಿಭಾವೈಕನಿಯತಾತ್ಮನಾಂ | ದೃಶಾಂ ಲಿಂಗಸ್ವರೂಪೇಣ ಭಾನಂ ತಥ್ಯಂಭವೇನ್ನಕಿಂ ||೯೭|| ಬಸವಾಮಾತ್ಯವರ್ಯಸ್ಯ ಭಕ್ತಿದೃಷ್ಟೇರ್ನಿರಂತರಂ | ಜಂಗಮೋಲಿಂಗರೂಪೇಣವ್ಯರಾಜತ ಯಥಾಭುವಿ || ಪ್ರಸಿದ್ಧನಿಜಸದ್ಭಕ್ತಿಭಾವಿತಃ ಪರ್ವತೇಶ್ವರಃ | ಸಿದ್ಧರಾಮಯದೇವಸ್ಯ ಶುದ್ಧ ಲಿಂಗಮಭೂದ್ಯಥಾ ||೯೯|| ಪ್ರಾಣೇಶಃ ಪಿಲ್ಲೆನೈನಾರೇರ್ಲಿಂಗರೂಪಮಭೂದ್ಯ ಥಾ | ಕೊಟ್ಟಾರಬಾಚಿರಾಜಸ್ಯ ಶ್ರೀಸೌರಾಷ್ಟ್ರಪುರಾಧಿಪಃ ||೧೦೦|| ಪ್ರಸ ನ್ನೋಲಿಂಗರೂಪೇಣ ಸೋಮೇಶಸ್ಸಮಭೂದ್ಯಥಾ | ಗುಡ್ಡವ್ವಾಯಾಃ ಪುನ ಸ್ಸೋಮನಾಥೋ ಲಿಂಗಮಭೂದ್ಯಥಾ ||೧೦೧|| ಪೋರಂಡ್ಲಸೂರಮಾಂಬಾ

---

ದೀತು? ಕಾಮ್ಯಾರ್ಥಿಗಳಿಗೆ ಸ್ಥೂಲ ರೂಪದಿಂದ ಲಿಂಗಾಕಾರವಾಗಿಯೂ, ಶಿವಯೋಗಿಗಳಿಗೆ ಸೂಕ್ಷ್ಮರೂಪವಾಗಿಯೂ, ಭಕ್ತಿಸೌಖ್ಯಾಪೇಕ್ಷಿಗಳಿಗೆ ಪರಬ್ರಹ್ಮಸ್ವರೂಪವಾಗಿಯೂ ಕಾಣಿಸಿ ಕೊಳ್ಳುವುದು. ಸ್ಕಂದಪುರಾಣದ ವಾಯವೀಯ ಸಂಹಿತೆಯಲ್ಲಿ ಶ್ರೀಶೈಲಕ್ಕೆ ಸ್ಥೂಲ ಸೂಕ್ಷ್ಮ ಪರಮಗಳೆಂಬ ತ್ರಿವಿಧಸ್ವರೂಪವಿರುವುದೆಂದೂ, ದೇವತೆಗಳಿಗೆ ಕಾಣಿಸಿಕೊಳ್ಳುವುದು ಸ್ಥೂಲರೂ ಪವೆಂದೂ, ಯೋಗಿಗಳಿಗೆ ಕಾಣಿಸಿಕೊಳ್ಳುವುದು ಸೂಕ್ಷ್ಮರೂಪವೆಂದೂ, ತದೇಕಶ್ರದ್ಧೆಯುಳ್ಳ ಭಕ್ತೋತ್ತಮರಿಗೆ ಕಾಣಿಸಿಕೊಳ್ಳುವುದು ನಿತ್ಯಜ್ಞಾನಾನಂದಮಯವಾದ ಪರಬ್ರಹ್ಮಸ್ವರೂಪ ವೆಂದೂ ಹೇಳಲ್ಪಟ್ಟಿರುವಕಾರಣ, ಭಕ್ತಿಭಾವಭರಿತರ ಕಣ್ಣಿಗೆ ಪರಬ್ರಹ್ಮಲಿಂಗಸ್ವರೂಪವಾಗಿ ಕಾಣಿಸಿಕೊಳ್ಳುವುದು ಯಥಾರ್ಥವಾಗದೆ ಇದ್ದೀತೆ? ||೯೭|| ಬಸವಮಂತ್ರಿಯ ಭಕ್ತಿದೃಷ್ಟಿಗೆ ಜಂಗಮವು ಲಿಂಗರೂಪವಾಗಿ ಕಂಡಂತೆಯೂ, ಸೊನ್ನಲಿಗೆ ಸಿದ್ಧರಾಮಯ್ಯನ ನಿಜಭಕ್ತಿಭಾವ ದಿಂದ ಪರ್ವತನಾಥ ಶ್ರೀಮಲ್ಲಿಕಾರ್ಜುನಸ್ವಾಮಿಯು ಲಿಂಗರೂಪವನ್ನು ಧರಿಸಿ ಬಂದಂತೆಯೂ, ಪಿಳ್ಳೆನೈರಾರರಿಗೆ ಪರಶಿವನು ಲಿಂಗರೂಪನಾಗಿ ಬಂದು ಅನುಗ್ರಹಿಸಿದಂತೆಯೂ, ಕೊಟ್ಟಾರದ ಬಾಚರಸನಿಗೆ ಸೌರಾಷ್ಟ್ರಸೋಮೇಶ್ವರನು ಧಾನ್ಯದ ಕಣಜದಲ್ಲಿ ಲಿಂಗರೂಪನಾಗಿ ಬಂದು ದರ್ಶನ ಕೊಟ್ಟಂತೆಯೂ, ಮಾಡರ ಗುಡ್ಡವ್ವೆಗೆ ಅದೇ ಸೋಮೇಶ್ವರನು ಲಿಂಗರೂಪದಿಂದನು ಗ್ರಹಿಸಿದಂತೆಯೂ, ||೧೦೧|| ಪೋರಂಡ್ಲಗ್ರಾಮದ ಸೂರಾಂಬೆಗೆ ಶಿವನು ಲಿಂಗರೂಪದಿಂದ

ಯಾಶ್ಯಂಭುರ್ಲಿಂಗಮಭೂದ್ಯಥಾ | ಭೂತ್ವಾಲಿಂಗಂ ವೀರಭದ್ರಶಿರಸೀಶೋ ಬಭೌಯಥಾ ||೧೦೩|| ಲಿಂಗಂಭೂತ್ವಾ ಶಿವೋಽತಿಷ್ಠದ್ಯಥಾಪರ್ವತಮೂರ್ಧನಿ| ಸ್ತುವಂತಃ ಪಂಡಿತೇಂದ್ರಸ್ಯ ಸ್ತುತ್ಯಾ ಶ್ರೀಮಲ್ಲಿಕಾರ್ಜುನಃ ||೧೦೪|| ತಥೈವಪರಿತುಷ್ಟಸ್ಸನ್ನಾವಿರ್ಭೂತಇವಸ್ಫುಟಂ | ಬಭಾಸೇಲಿಂಗರೂಪೇಣ ಶ್ರೀನಗಃಪರಮೋಜ್ವಲಃ ||೧೦೫|| ನಿಮಗ್ನದೃಷ್ಟಿಷು ಪುರೋಭವತ್ಸುಸ್ನಾನವಾರಿಷು | ಭವತ್ಸುಚಂದನೌಘೇಷು ಪರಿಲಿಪ್ತಾಸುದೃಷ್ಟಿಷು ||೧೦೬|| ಲಸತ್ಪ್ರಸೂನಜಾಲೇಷು ಸನ್ಯುಜ್ಝಿತದೃಷ್ಟಿಷು | ಭವತ್ಸುಧೂಪಧೂಮೇಷು ಪರಿಚ್ಛಾದಕದೃಷ್ಟಿಷು || ನೀರಾಜನಾಸುಪರಿತಸ್ಸಮಾಸನ್ನಾಸುದೃಷ್ಟಿಷು | ಮಹಾನೈವೇದ್ಯಜಾಲೇಷುವಿಶ್ರೀಭೂತಾಸುದೃಷ್ಟಿಷು ||೧೦೭|| ಕರ್ಪೂರವೀಟಿಕಾಜಾಲೇಷ್ವನುರಕ್ತಾಸುದೃಷ್ಟಿಷು | ಪ್ರಸಿದ್ಧಪುಷ್ಪಾಂಜಲೀಷು ಸಮುಲ್ಲಸಿತದೃಷ್ಟಿಷು ||೧೦೮|| ಏವಂಶ್ರೀಶೈಲಲಿಂಗಾಯ ಮಲ್ಲಿಕಾರ್ಜುನದೇಶಿಕಃ | ನಿರೀಕ್ಷಣಾವಧಾನೇನ ಪೂಜಾಮಕೃತಸಾದರಂ ||೧೦೯|| ಶ್ರೀಪರ್ವತಶಿಲಾಸ್ಸರ್ವಾಲಿಂಗರೂಪಾ ಇತಿಸ್ತುತೇಃ | ಪ್ರಾಮಾಣ್ಯಾಯುಕ್ತಿತೌಯದ್ಧಿ ಮನಸಾಧ್ಯಾಯತೀತಿಚ ||೧೧೦|| ತದ್ವಾಚಾವದತೀತ್ಯಸ್ಮಾತ್ಪರಂ ತತ್ಕರ್ಮಣೇತ್ಯಥ | ಕರೋತೀತಿಪ್ರವಿದಿತಂ ಶ್ರುತಿವಾಕ್ಯಂ

---

ಗೋಚರಿಸಿದಂತೆಯೂ, ವೀರಭದ್ರನ ಶಿರಸ್ಸಿನಲ್ಲಿ ಶಿವನು ಲಿಂಗಾಕಾರನಾಗಿ ಪ್ರಕಾಶಿಸಿದಂತೆಯೂ, ಶ್ರೀಶೈಲದ ನೆತ್ತಿಯಮೇಲೆ ಪರಶಿವನು ಲಿಂಗರೂಪದಿಂದಿರುವಂತೆಯೂ, ಶ್ರೀಮಲ್ಲಿಕಾರ್ಜುನಸ್ವಾಮಿಯು ಪಂಡಿತಾರಾಧ್ಯನ ಸ್ತುತಿಗೆ ಮೆಚ್ಚಿ ಸಂತೋಷಪಟ್ಟು ಆವಿರ್ಭವಿಸಿದಂತೆ ಶ್ರೀಶೈಲವು ಲಿಂಗರೂಪದಿಂದ ಪ್ರಕಾಶಿಸಿತು ||೧೦೪|| ಆ ಲಿಂಗರೂಪ ಶರೀರದಲ್ಲೇ ಮುಳುಗಿದ ಪಂಡಿತಾರಾಧ್ಯನ ನೋಟಗಳೇ ಅಭಿಷೇಕಜಲವಾಗಲು, ಆ ಪರ್ವತದ ಸುತ್ತಲೂ ಪಸರಿಸಿದ ಪಂಡಿತಾರಾಧ್ಯನ ನೋಟಗಳೇ ಗಂಧಾನುಲೇಪನವಾಗಲು, ಆ ಗಿರಿಯಲ್ಲಿ ಚೆನ್ನಾಗಿ ನಟ್ಟ ನೋಟಗಳೇ ಹೂವುಗಳಾಗಲು, ಆ ಗಿರಿಯನ್ನೆಲ್ಲಾ ಆವರಿಸಿದ ನೋಟಗಳೇ ಧೂಪದ ಹೊಗೆಯಾಗಲು, ||೧೦೬|| ಗಿರಿಯ ಬಳಸೂ ಸುತ್ತಿದ ನೋಟಗಳೇ ದೀಪದಾರತಿಯಾಗಲು, ಆ ಗಿರಿಯಲ್ಲಿ ಒಡವೆರೆವ ದೃಷ್ಟಿಗಳೇ ಮಹಾ ನೈವೇದ್ಯವಾಗಲು, ||೧೦೭|| ಆ ಗಿರಿಯಲ್ಲಿ ಅನುರಕ್ತವಾದ ನೋಟಗಳೇ ಸಕರ್ಪೂರ ತಾಂಬೂಲವಾಗಲು, ಆ ಗಿರಿಯ ಮೇಲೆ ಉಲ್ಲಾಸದಿಂದ ಕುಣಿದಾಡಿದ ನೋಟಗಳೇ ಪುಷ್ಪಾಂಜಲಿಗಳಾಗಲು, ಹೀಗೆ ಪಂಡಿತಾರಾಧ್ಯನು ಶ್ರೀಗಿರಿಯೆಂಬ ಲಿಂಗಕ್ಕೆ ತನ್ನ ಈಕ್ಷಣಾವಧಾನದಿಂದಲೇ ಅರ್ಚನೆಮಾಡಿದನು. ||೧೦೯|| ಶ್ರೀಗಿರಿಯ ಕಲ್ಲುಗಳೆಲ್ಲವೂ ಲಿಂಗರೂಪಗಳೇ ಆಗಿರುವುವೆಂಬ ವಚನವು ಪ್ರಮಾಣೀಭೂತವೆಂಬುದನ್ನು ತೋರಿಸುವುದಕ್ಕಾಗಿಯೂ, ಸತ್ಪುರುಷರು ಮನಸ್ಸಿನಲ್ಲಿ ಯೋಚಿಸಿದುದನ್ನೇ ಬಾಯಿಂದಲೂ ಹೇಳಿ ಕರ್ಮದಲ್ಲೂ ಮಾಡಿ ತೋರಿಸುವರೆಂಬ ಶಾಸ್ತ್ರವಚನವನ್ನೂ ಮಹಾತ್ಮರು ಮನಸ್ಸಿನಲ್ಲೂ ವಾ

ಬುಧಾದೃತಂ ||೧೧೧|| ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ | ಇತಿ ಪೌರಾಣವಚನಂ ಯಥಾರ್ಥಂಸ್ಯಾದ್ಯಥಾತಥಾ ||೧೧೨|| ಶೈವಶಿಷ್ಟಶ್ಶುದ್ಧಚೇತಾ ಮಲ್ಲಿಕಾರ್ಜುನಪಂಡಿತಃ | ಅಶೇಷಂ ಶ್ರೀಗಿರಿಂಲಿಂಗಮಿತಿಸ್ಮೃತ್ವಾಸದಾಹೃದಿ ||೧೧೩|| ಸ್ಮೃತೇರನುಗುಣಂಸ್ತುತ್ವಾ ವಚಸಾವಚನಾನುಗಂ | ವಿಧಾಯಭಜನಂಪ್ರೀತ್ಯಾ ಭಜನಾನುಗುಣಂಕ್ರಮಾತ್ ||೧೧೪|| ಸದ್ಭಕ್ತೇರಗಮತ್ಪಾರ ಮಿತ್ಯೇತಸ್ಯಪ್ರಹರ್ಷಿತಾಃ | ಸದ್ಭಕ್ತಾವಿಲಸತ್ಕೀರ್ತಿಂ ಶಶಂಸುಃ ಪಂಡಿತೇಶ್ವರಂ ||೧೧೫||

ಇತಿ....ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಪರ್ವತಪ್ರಕರಣೇ ತತ್ಪಂಡಿತಾರಾಧ್ಯದೇವಸ್ಯ ಶ್ರೀಪರ್ವತ
ದರ್ಶನ ತನ್ಮಾಹಾತ್ಮ್ಯಸ್ತುತಿಕಥನಂ ನಾಮ
ಪ್ರಥಮೋಽಧ್ಯಾಯಃ.

---

ಕ್ಕಿನಲ್ಲೂ ಕರ್ಮದಲ್ಲೂ ಒಂದೇತೆರನಾಗಿರುವರೆಂಬ ಪುರಾಣೋಕ್ತಿಯನ್ನೂ ಸಹ ಯಥಾರ್ಥಗೊಳಿಸುವುದಕ್ಕಾಗಿಯೂ ಸಹ ಶೈವೋತ್ತಮನೂ ನಿರ್ಮಲಮನಸ್ಕನೂ ಆದ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನು ಆ ಶ್ರೀಶೈಲವನ್ನೆಲ್ಲಾ ಶಿವಲಿಂಗವನ್ನಾಗಿ ಹೃದಯದಲ್ಲಿ ಸ್ಮರಿಸಿ, ಆ ಭಾವನೆಯಂತೆಯೇ ವಾಕ್ಕಿನಲ್ಲೂ ಸ್ತುತಿಸಿ, ಆ ವಾಕ್ಕಿಗೆ ಅನುಗುಣವಾಗಿ ಪ್ರೀತಿಯಿಂದ ಪೂಜಿಸಿ, ಆ ಪೂಜನೆಗನುಗುಣವಾಗಿ ಕ್ರಮಶಃ ಭಕ್ತಿಯ ತುದಿಯನ್ನಡರಿದನು. ಎಂಬುದಾಗಿ ಒಡನೆ ಬರುತ್ತಿದ್ದ ಭಕ್ತರು ಸಂತೋಷಪಟ್ಟು ಆ ಪಂಡಿತಾರಾಧ್ಯನನ್ನು ಸ್ತೋತ್ರಮಾಡಿದರು. ||೧೧೫||

ಎಂಬಲ್ಲಿಗೆ ಶ್ರೀಗುರುರಾಜ ಕವಿಕೃತ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ
ಎಚ್. ಆರ್. ಕರಿಬಸವಶಾಸ್ತ್ರಿಕೃತವಾದ "ಭಾವಮಂಜರಿ" ಎಂಬ ಕನ್ನಡ
ಟಿಪ್ಪಣದಲ್ಲಿ ಪರ್ವತಪ್ರಕರಣದೊಳಗೆ ಶ್ರೀ ಪಂಡಿತಾರಾಧ್ಯರು ಶ್ರೀಶೈಲ
ದರ್ಶನವನ್ನು ಮಾಡಿ ಅದರ ಮಹಿಮೆಯನ್ನು ವರ್ಣಿಸಿದ ಕಥೆ
ಯನ್ನು ನಿರೂಪಿಸುವ ಮೊದಲನೆ ಅಧ್ಯಾಯವು
ಮುಗಿದುದು.

---

# ಅಥ ದ್ವಿತೀಯೋಽಧ್ಯಾಯಃ

(ಶ್ರೀಪರ್ವತೋತ್ಪತ್ತಿ ಸಂಕೀರ್ತನಕಥನಂ)

ತತಶ್ಶ್ರೀಪಂಡಿತಾರಾಧ್ಯೋ ವಿಸ್ಮಯಾಕ್ರಾಂತಮಾನಸಃ | ಸ್ತುವನ್ ಭಕ್ತಿಸಂಯುಕ್ತಃ ಪ್ರಣಮನ್ಸ್ವರಯಾಮುದಾ ||೧|| ಪಶ್ಯನ್ನಭಿಮುಖೋ ಭೂತ್ವಾ ಸಾದರಂ ಪರ್ವತೋತ್ತಮಂ | ವಿಧೂತಾಘಂದೋನಮಾರ್ಯಂ ನಿರೀಕ್ಷ್ಯ ಕರುಣಾದೃಶಾ ||೨|| ವ್ರಜಶ್ರೀಶೈಲಮೇನಂತ್ವಂ ಶ್ರೀಶೈಲೇಶಪದಾಂಬುಜೇ | ಭಜ ಸ್ವಭಕ್ತವರ್ಗಸ್ಯಪರ್ವಾಣಿ ಕುರುಭಕ್ತಿತಃ ||೩|| ಶಿವರಾತ್ರಿವ್ರತಂಚಾಸ್ಮಿನ್ನದ್ರಾವೇವ ಸಮಾಚರ | ಪ್ರದಕ್ಷಿಣೀಕೃತ್ಯಸಮ್ಯಗಿಮಂ ಶ್ರೀಪರ್ವತೋತ್ತಮಂ ||೪|| ತ್ವಂಮದೀಯಂವಿಧಾನೇನ ಪರಿಪೂರ್ಣಂಕುರುವ್ರತಂ | ಇತಿಸ್ವಶಿಷ್ಯಮವದತ್ಸ ಕೃಪಾಪಾತ್ರಮಾದರಾತ್ ||೫|| ಸಾಷ್ಟಾಂಗಂ ಪ್ರಣಿಪತ್ಯಾಶು ದೋನಮಾರ್ಯೋಽಥಸದ್ಗುರುಂ | ಮಸ್ತಕಸ್ಯಸ್ತಹಸ್ತಸ್ಸನ್ನಿತ್ಯುವಾಚಸಭಕ್ತಿತಃ ||೬|| ಸರ್ವಜ್ಞಪಂಡಿತಾರಾಧ್ಯಪುರಾಽಯಂ ಶ್ರೀಗಿರಿರ್ಮಹಾನ್ | ಋಷಿರ್ವಾ ಪ್ರಮಥೋವಾಽಭೂತ್ಕಥಮಸ್ಯನಗಾಕೃತಿಃ ||೭|| ಪ್ರಬಭೂವಕಥಂಗಂಗಾ ತಸ್ಮಿನ್ ಛ್ರೀಪರ್ವತಸ್ಥಲೇ | ನಾಮಶ್ರೀಪರ್ವತಇತಿ ಕಥಂ ಲೋಕೇಪ್ರವಿಶ್ರುತಂ ||೮||

---

## ೨ನೆ ಅಧ್ಯಾಯವು.

(ದೋನಮಾರ್ಯನಿಗೆ ಶ್ರೀಶೈಲದ ಉತ್ಪತ್ತಿಯನ್ನು ಹೇಳಿದ ಕಥೆ)

ಅನಂತರ ಶ್ರೀಪಂಡಿತಾರಾಧ್ಯನು ಅಚ್ಚರಿಗೊಂಡು ಭಕ್ತಿಯಿಂದ ಶ್ರೀಗಿರಿಯನ್ನು ಸ್ತುತಿಸಿ ಸಂತೋಷದಿಂದ ನಮಿಸಿ, ಇದಿರಿಗೆ ನಿಂತು ಪ್ರೀತಿಯಿಂದ ನೋಡಿ, ಬಳಿಕ ತನ್ನ ಪ್ರಿಯ ಶಿಷ್ಯನಾದ ದೋನಮಾರ್ಯನನ್ನು ದಯಾಪೂರ್ಣದೃಷ್ಟಿಯಿಂದ ನೋಡಿ, "ಶ್ರೀಗಿರಿಗೆ ನಡೆ, ಅಲ್ಲಿರುವ ಮಲ್ಲಿಕಾರ್ಜುನೇಶ್ವರನ ಪಾದವನ್ನು ಸೇವಿಸು. ಭಕ್ತಸಮೂಹಕ್ಕೆ ಭಕ್ತಿಯಿಂದ ಪರ್ವವನ್ನು ಮಾಡು ||೩|| ಈ ಗಿರಿಯಲ್ಲೇ ಶಿವರಾತ್ರಿ ವ್ರತವನ್ನು ಆಚರಿಸು. ಈ ಪರ್ವತವನ್ನು ವಿಧಿಪ್ರಕಾರ ಚೆನ್ನಾಗಿ ಪ್ರದಕ್ಷಿಣೆಮಾಡಿ ನನ್ನ ವ್ರತವನ್ನು ನೆರವೇರಿಸು" ಎಂದು ಅಪ್ಪಣೆಮಾಡಿದನು. ಆ ದೋನಮಾರ್ಯನು ಕೂಡಲೇ ಗುರುಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ, ಮುಂಡಯಲ್ಲಿ ಕೈ ಜೋಡಿಸಿ ನಿಂತು ಭಕ್ತಿಯಿಂದ ಹೀಗೆ ಬಿನ್ನೈಸಿಕೊಂಡನು— "ಭೋ ಸರ್ವಜ್ಞಪಂಡಿತಮೂರ್ತಿಯೆ! ಈ ಮಹಾ ಶ್ರೀಶೈಲವು ಪೂರ್ವದಲ್ಲಿ ಋಷಿಯಾಗಿದ್ದಿತೆ? ಅಥವಾ ಪ್ರಮಥನಾಗಿದ್ದಿತೆ? ಇದಕ್ಕೆ ಪರ್ವತಾಕಾರವು ಬರಲಿಕ್ಕೆ ಕಾರಣವೇನು? ಇದರಲ್ಲಿ ಗಂಗೆಯು ಆವಿರ್ಭವಿಸುವುದಕ್ಕೆ ಕಾರಣವೇನು? ಇದಕ್ಕೆ ಶ್ರೀಗಿರಿಯೆಂಬ ಪ್ರಸಿದ್ಧನಾಮ ವುಂಟಾದುದು ಹೇಗೆ? ||೮|| ಇದ

ಗಿರೀಣಾಂ ಸಾರ್ವಭೌಮತ್ವಂ ನಿತ್ಯತ್ವಂಚಾಗಮತ್ಕಥಂ | ಕಥಂಸರ್ವಮುಮು ಕ್ಷೂಣಾಂ ಶಿಖರಸ್ಯೈವದರ್ಶನಾತ್ ||೯|| ದದಾತಿಮುಕ್ತಿಂ ಮಹಿತಾಮಯಂ ಶ್ರೀಪರ್ವತೋತ್ತಮಃ | ಶ್ರೀಸದಾಶಿವಸಂಯುಕ್ತಪಂಚಾಸ್ಯತ್ವಂ ಕಥಂಗಿರೇಃ || ಅಶೇಷಶೈಲತೀರ್ಥಾನಾಂ ಸದಾಸ್ಥಾನಮಭೂತ್ಕಥಂ | ಏನಂಸಿಂಹಾಸನಂಕೃತ್ವಾ ಸ್ವವಸತ್ಕಥಮೀಶ್ವರಃ ||೧೧|| ಸುರಾದ್ರಿಪ್ರಮುಖಾನೇಕ ಪರ್ವತೇಷು ಮಹೀತಲೇ | ತಿಷ್ಠತ್ಸ್ವೇಷಗಣೇಂದ್ರಾಣಾಂ ಕ್ರೀಡಾಗಿರಿರಭೂತ್ಕಥಂ ||೧೨|| ಸಮಂತತೋ ರಸರಸಾಯನಾಮೃತ ಸರೋವರಾಃ | ಅಶಿಶ್ರಯನ್ಕಥಂ ನಿತ್ಯಮೇನಂ ಶ್ರೀಪರ್ವತೋತ್ತಮಂ ||೧೩|| ಸುರದೋಗ್ಧ್ರೀ ಸುರಮಣಿ ಸುರಭೂರುಹಸಂಹತೇಃ | ಸುರಸಿದ್ಧಸಮೂಹಾನಾ ಮಾಕರೋಽಯಮಭೂತ್ಕಥಂ || ಚತುರ್ದಿಕ್ಷು ಚತುರ್ದ್ವಾರೈಸ್ಸತ್ಯಾಭಿಃ ಕೋಣದೇಶತಃ | ತತೋದ್ವಿಗುಣ ಸಂಖ್ಯಾಭಿರ್ಗವಾಕ್ಷೈ ರ್ದ್ವಿಗುಣೈಸ್ತತಃ ||೧೪|| ದ್ವಿಗುಣೈರ್ಭವ್ಯಮಕುಟ ತೋರಣೈಸ್ತೇಭ್ಯಉಚ್ಚಕೈಃ | ನಗೈರ್ಬಿಲೈಸ್ತೀರ್ಥಸಂಘೈಃ ಕುಂಡೈಸ್ಸ್ಥಾನೈರ್ಮಹತ್ತರೈಃ ||೧೫|| ಜ್ಯೋತಿರ್ಲಿಂಗೈರ್ದಿವ್ಯಲಿಂಗೈರ್ಭಾತ್ಯಯಂಕಿಂಸುಕಾರಣಂ | ಕಿಂಚಾಸ್ಮಿನ್ ಕ್ಷಿತಿಭೃತ್ಪೀಠೇ ಮಣಿಲಿಂಗಕದಂಬಕಂ ||೧೬|| ರತ್ನ

---

ಕ್ಕೆ ಪರ್ವತಚಕ್ರವರ್ತಿತ್ವವೂ ಶಾಶ್ವತತ್ವವೂ ಬಂದುದು ಹೇಗೆ? ಇದರ ಶಿಖರದರ್ಶನಮಾತ್ರದಿಂದಲೇ ಮುಮುಕ್ಷುಗಳಿಗೆ ಇದು ಮೋಕ್ಷವನ್ನು ಹೇಗೆ ಕೊಡುವುದು? ಶಿವನಿಗಿರುವ ಪಂಚಮುಖವು ಇದಕ್ಕೆ ಹೇಗೆ ಉಂಟಾಯಿತು? ಸಕಲ ತೀರ್ಥಗಳಿಗೂ ಇದು ಆವಾಸವೆಂತಾಯಿತು? ಶಿವನು ಇದನ್ನು ತನ್ನ ಸಿಂಹಾಸನವನ್ನಾಗಿ ಹೇಗೆ ಮಾಡಿಕೊಂಡನು? ||೧೧|| ಮೇರು ಮೊದಲಾದ ಅನೇಕ ಪರ್ವತಗಳಿರುವಾಗ್ಗೆ ಈ ಶ್ರೀಗಿರಿಯು ಗಣಾಧೀಶ್ವರರಿಗೆ ಕ್ರೀಡಾಪರ್ವತವು ಹೇಗಾಯಿತು? ಅನೇಕ ತರದ ರಸರಸಾಯನಾಮೃತಸರೋವರಗಳೆಲ್ಲಾ ಈ ಗಿರಿಯನ್ನಾಶ್ರಯಿಸಲು ಕಾರಣವೇನು? ಕಾಮಧೇನು ಕಲ್ಪವೃಕ್ಷ ಚಿಂತಾಮಣಿಗಳಿಗೂ ದೇವತೆಗಳಿಗೂ ಸಿದ್ಧರಿಗೂ ಇದು ಆಶ್ರಯವಾದುದು ಹೇಗೆ? ||೧೪|| ನಾಲ್ಕುದಿಕ್ಕುಗಳಲ್ಲೂ ನಾಲ್ಕು ಮಹಾದ್ವಾರಗಳೂ, ವಿದಿಕ್ಕುಗಳಲ್ಲಿ ಎಂಟು ದಿಡ್ಡಿಬಾಗಿಲುಗಳೂ, ೧೬ ಕಿಟಕಿಗಳೂ, ೩೬ ಮಕುಟ ತೋರಣಗಳೂ, ಅವಕ್ಕಿಂತ ಉನ್ನತಗಳಾದ ಕೋಡುಗಳೂ, ಅನೇಕ ಗುಹೆಗಳೂ, ತೀರ್ಥಗಳೂ, ಶೀತೋಷ್ಣಾದಿ ಜಲಕುಂಡಗಳೂ, ಮಹಿಮಸ್ಥಲಗಳೂ, ಜ್ಯೋತಿರ್ಲಿಂಗಗಳೂ, ದಿವ್ಯಲಿಂಗಗಳೂ, ಈ ಪರ್ವತದಲ್ಲಿ ಇರುವುದಕ್ಕೆ ಕಾರಣವೇನು? ಈ ಗಿರಿಯ ಪೀಠಪ್ರದೇಶದಲ್ಲಿ ಮಣಿಮಯ ಲಿಂಗಗಳೂ, ಸುವರ್ಣರಜತಲಿಂಗಗಳೂ, ತಾಮ್ರದ ಕಂಚಿನ ಕಬ್ಬಿನದ ಲಿಂಗಗಳೂ, ಚಂದ್ರಕಾಂತ ಸೂರ್ಯಕಾಂತ ಅಯಸ್ಕಾಂತ ಶಿಲಾಲಿಂಗಗಳೂ, ಸ್ವಯಂಭುಲಿಂಗಗಳೂ, ಅಮೃತಲಿಂಗಗಳೂ, ಹೀಗೆ ಕೋಟ್ಯಂತರ ಲಿಂಗಗಳು ಗಿರಿಯ ಎಲ್ಲಕಡೆಯಲ್ಲೂ ನೆಲಸಿರುವುದ

ಲಿಂಗಾನಿ ಕನಕಮಯಲಿಂಗವ್ರಜೋ ಮಹಾನ್ | ಲಸದ್ರಜತಲಿಂಗಾನಿ ತಾಮ್ರ
ಲಿಂಗಸಮುಚ್ಚಯಃ ||೧೮|| ಮಹಾನ್ತಿ ಕಾಂಸ್ಯಲಿಂಗಾನಿ ಲೋಹಲಿಂಗಕುಲಂ
ಪುನಃ | ಶಶಿಕಾನ್ತಾರ್ಕಕಾನ್ತಾಯಸ್ಕಾಂತಲಿಂಗಸಮುತ್ಕರಃ ||೧೯|| ಸ್ವಯಂ
ಭೂಲಿಂಗನಿಕರಸ್ಸ್ಥಾಲಿಂಗಾನ್ಯನೇಕಶಃ | ಏತಾನಿಕೋಟಿಸಂಖ್ಯಾನಿ ವಸು
ತ್ಯೇವಸಮಂತತಃ ||೨೦|| ಕಿಂತ್ವಪೃಶ್ಯಾನಿಸತತಂ ಮನುಜೈರಕೃತಾತ್ಮಭಿಃ |
ಕಿಂಚದೇವಾಸುರಮುನಿ ಸಿದ್ಧಸಾಧ್ಯಕದಂಬಕೈಃ ||೨೧|| ಮನುಷ್ಯೋರಗಗಂ
ಧರ್ವ ಗರುಡಪ್ರವರಾದಿಭಿಃ | ಪ್ರತಿಷ್ಠಿತಾನ್ಯಭೀಷ್ಟಾರ್ಥಫಲದಾನಿ ನಿರಂತರಂ ||
ಲಸತ್ಪ್ರತಿಷ್ಠಾಲಿಂಗಾನಿ ಕೋಟಿಸಂಖ್ಯಾನಿಸಂತಿಹಿ | ಏತತ್ಸಾನ್ನಿಧ್ಯಸೌಭಾಗ್ಯ
ಮವಾಪ ಶ್ರೀಗಿರಿಃಕಥಂ ||೨೩|| ಶಕ್ರಚಕ್ರಧರಾಜಾದಿಸುತ ವಿಕ್ರಮಶಾಲಿನಃ |
ಮಹತ್ಸ್ವಯಂಭೂಲಿಂಗಸ್ಯ ಲಿಂಗಾನಾಂ ಚಕ್ರವರ್ತಿನಃ ||೨೪|| ಶ್ರೀಮಲ್ಲಿಕಾ
ರ್ಜುನಇತಿ ನಾಮಾನ್ವರ್ಥಮಭೂತ್ಕಥಂ | ಕಸ್ಮಿನ್ದೇಶೇಗಿರೇರಸ್ಯವರ್ತತೇಕೋ
ಮಹೀಧರಃ ||೨೫|| ಕಿಂತೀರ್ಥಂ ಕುತ್ರವಾಕಸ್ಯಾಂದಿಶಿಕಾತಟಿನೀಪುನಃ | ಕಿಂ
ಸ್ಥಾನಂ ಕುತ್ರಚಾಪೂಜಾಕಸ್ಯ ಲಿಂಗಸ್ಯ ಕಿಂಫಲಂ ||೨೬|| ಕಿಂಪುಣ್ಯಂಕಶ್ಚ
ವಾಲೋಕಃ ಕೋಭೋಗಃ ಕಿಂಪದಂತಥಾ| ಕೋಮೋಕ್ಷಃ ಕಿಂಸುಖಂಸರ್ವಂ
ಮಾಹಾತ್ಮ್ಯಂ ಶ್ರೀಗಿರೇರ್ಮಮ ||೨೭|| ನಿರೂಪಯೇತಿಸಾಷ್ಟಾಂಗಂ ಪ್ರಣ
ನಾಮಗುರೂತ್ತಮಂ | ಅಥಾನತಬುಧೋಲೋಕ ಗುರುರಾನಂದನಿರ್ಭರಃ ||

---

ಕ್ಕೆ ಕಾರಣವೇನು? ಮತ್ತು ಇಲ್ಲಿ ಪಾಪಾತ್ಮರ ಕಣ್ಣಿಗೆ ಕಾಣಿಸದಿರುವ ಲಿಂಗಗಳೂ, ದೇವದೈತ್ಯ
ಮುನಿ ಸಿದ್ಧಸಾಧ್ಯಾದಿಗಳಿಂದಲೂ ಗರುಡ ಗಂಧರ್ವ ಕಿನ್ನರ ಕಿಂಪುರುಷಾದಿಗಳಿಂದಲೂ ಮಾನ
ವರಿಂದಲೂ ಪ್ರತಿಷ್ಠಾಪಿಸಲ್ಪಟ್ಟ ಇಷ್ಟಾರ್ಥಪ್ರದಗಳಾಗಿರುವ ಲಿಂಗಗಳೂ ಕೋಟಿಗಟ್ಟಲೆಯಾಗಿ
ರುವುವಷ್ಟೆ. ಇವೆಲ್ಲವುಗಳ ಸಾಮೀಪ್ಯ ಸಂಪತ್ತನ್ನು ಶ್ರೀಗಿರಿಯು ಪಡೆದುದು ಹೇಗೆ? ಹರಿಬ್ರ
ಹ್ಮೇಂದ್ರಾದಿಗಳಿಂದ ಸ್ತುತಿಸಲ್ಪಡುತ್ತ ಸಕಲ ಲಿಂಗ ಸಾರ್ವಭೌಮನಾಗಿ ಈ ಗಿರಿಯ ಮೇಲಿ
ರುವ ಮಹಾಸ್ವಯಂಭುಲಿಂಗಕ್ಕೆ ಮಲ್ಲಿಕಾರ್ಜುನನೆಂಬ ಹೆಸರು ಸಾರ್ಥಕವಾಗಿರುವುದು
ಹೇಗೆ? ಈ ಗಿರಿಯ ಯಾವ ಯಾವ ದಿಕ್ಕಿನಲ್ಲಿ ಇನ್ನು ಯಾವ ಯಾವ ಪರ್ವತಗಳಿವೆ? ಯಾವ
ದಿಕ್ಕಿನಲ್ಲಿ ಯಾವತೀರ್ಥ ಯಾವ ನದಿಗಳಿವೆ? ಯಾವಕಡೆ ಯಾವ ಮಹಿಮಸ್ಥಲಗಳಿವೆ? ಯಾವ
ಲಿಂಗಕ್ಕೆ ಯಾವ ತೆರದ ಪೂಜೆಯಾಗಬೇಕು? ಅವುಗಳ ಸೇವನೆಯಿಂದ ಉಂಟಾಗತಕ್ಕ ಫಲವೇ
ನು? ಪುಣ್ಯವೇನು? ಲಭಿಸುವ ಲೋಕವಾವುದು? ಪದವಿಯಾವುದು? ಸೌಖ್ಯವೇನು? ಮೋಕ್ಷ
ವೇನು? ಈ ಶ್ರೀಗಿರಿಯ ಮಹತ್ತ್ವವನ್ನೆಲ್ಲಾ ಸಾಂಗವಾಗಿ ನನಗೆ ಅಪ್ಪಣೆಕೊಡಿಸಬೇಕು"
ಎಂಬುದಾಗಿ ಬಿನ್ನಯಿಸಿ ಅಡ್ಡಬಿದ್ದನು. ವಿದ್ವದ್ವಂದ್ಯನಾದ ಶ್ರೀ ಪಂಡಿತಾರಾಧ್ಯರು ಸಂತೋ
ಷಪಟ್ಟು ||೨೮|| ಆ ಮೌನಮಾರ್ಯನನ್ನು ಕರುಣಾಕಟಾಕ್ಷದಿಂದ ನೋಡಿ ಹೀಗೆ ಉಸುರಿ

ದೋನಮಾರ್ಯಂ ಕೃಪಾದೃಷ್ಟ್ಯಾವೀಕ್ಷ್ಯೈವಂ ಜಗದೇವಜಃ| ಶೇಷೇಣ ಬ್ರಹ್ಮ
ಣಾವಾಪಿ ವಾಣ್ಯಾವ್ಯಾಸಮಹರ್ಷಿಣಾ ||೨೯|| ಅನಂತಾವೈ ಇತಿಗಿರಾ ಬಹು
ಭಿರ್ವೇದರಾಶಿಭಿಃ | ವೇದಾಂತೈಸ್ಸೂತಮುನಿನಾ ಶ್ರೀಶೈಲಮಹಿಮಾಽಧಿಕಃ ||
ವಕ್ತುಂನಶಕ್ಯೋ ಬಹುನಾಕಿಂತತ್ಪಿತ್ರಾ ಮಹಾತ್ಮನಾ | ಶಿಲಾದೇನಾಪಿಮಹಿ
ಮಾ ಶ್ರೀಶೈಲಸ್ಯಮಹತ್ತರಃ ||೩೧|| ನವಕ್ತುಂಶಕ್ಯತೇ ನೀಲಗಳಏವಹಿವೇತ್ತಿ
ತಂ | ಪುರಾಶ್ರೀಗಿರಿಮಾಹಾತ್ಮ್ಯಮಶೃಣೋತ್ಪಾರ್ವತೀಹರಾತ್ ||೩೨|| ಸಾ
ಗೌರೀಸುಕುಮಾರಾಯ ತತ್ಸರ್ವಮಗದತ್ತದಾ | ತಸ್ಮಾದಶೃಣ್ವನ್ನಮರಾ ಮು
ನಯಸ್ತದ್ವಿಶೇಷತಃ ||೩೩|| ಪುರಾಣೋಕ್ತ್ಯಾ ತತ್ಪುರಾಣಸಾರಸ್ಯಾಹಂ ಪ್ರ
ಯತ್ನತಃ | ನಹಿವರ್ಣಯಿತುಂಶಕ್ಯೋಽಪ್ಯರ್ಬುದಾಂಶಮಪಿ ಸ್ಫುಟಂ ||೩೪||
ತಥಾಪ್ಯಹಂಪ್ರವಕ್ಷ್ಯಾಮಿ ತನ್ಮಹತ್ತ್ವಂ ಯಥಾಮತಿ | ಆಕರ್ಣಯಕೃತಾರ್ಥ
ತ್ವಬುದ್ಧ್ಯಾ ತ್ವಂ ಬುದ್ಧಿಮದ್ವರ || ೩೫ || ಸಮುದ್ರವೇಲ್ಲಿತಮಹೀಮಂಡಲೇ
ತನ್ಮಹಾದ್ಭುತಂ | ಆದೇರಪ್ಯಾದಿಮಯುಗೇ ಶಿಲಾದಸ್ತಪಸಾಶಿವಂ ||೩೬|| ಪ್ರ
ತೋಷ್ಯಪುತ್ರತ್ರಿತಯಮಾವಾಪ್ತಿಕಾಲೇ ಮಹೇಶ್ವರಾತ್ | ಏವಂಬಭಾಷೇವಚನಂ
ಸದ್ಭಕ್ತಿಸ್ಥಿರಮಾನಸಃ ||೩೭|| ಶಿವ ತ್ವಯಾ ದೀಯಮಾನಪುತ್ರೇಷ್ವೇಕೋಽಪಿ
ವಾತ್ರಿಷು | ಅದ್ವೈತಬುದ್ಧಿಸ್ಸತತಂ ಭವತ್ವದ್ಭಕ್ತಿವರ್ಜಿತಃ ||೩೮|| ಜಾಯತೇ

---

ತನು:—“ಈ ಶ್ರೀಗಿರಿಯ ಅತಿಶಯವಾದ ಮಹತ್ತ್ವವನ್ನು ವರ್ಣಿಸುವುದಕ್ಕೆ ಆದಿಶೇಷ ಬ್ರಹ್ಮ ಸರಸ್ವತಿಗಳಿಗೂ ವ್ಯಾಸಮಹರ್ಷಿಗೂ ಶ್ರುತ್ಯುಪನಿಷತ್ತುಗಳಿಗೂ ಸೂತಮುನಿಗೂ ಕೂಡ ಅಶಕ್ಯವು. ಹೆಚ್ಚು ಮಾತಿನಿಂದೇನು? ಈ ಶ್ರೀಗಿರಿಯ ತಂದೆಯಾದ ಶಿಲಾದಮುನಿಗೂ ಕೂಡ ಇದರ ಮಹತ್ತ್ವವನ್ನು ವರ್ಣಿಸಲಸದಳವು. ಸರ್ವಜ್ಞನಾದ ಪರಶಿವಮೂರ್ತಿಯೊಬ್ಬನೇ ಅದನ್ನು ಬಲ್ಲವನು. ||೩೧|| ಪೂರ್ವದಲ್ಲಿ ಈ ಶ್ರೀಗಿರಿಯ ಮಹಿಮೆಯನ್ನು ಶಿವನಿಂದ ಪಾರ್ವತಿಯು ತಿಳಿದುಕೊಂಡಳು. ಆಕೆಯು ಷಣ್ಮುಖನಿಗೆ ಅದನ್ನೆಲ್ಲಾ ಹೇಳಿದಳು. ಅವನಿಂದ ದೇವತೆಗಳು ತಿಳಿದರು. ಅವರಿಂದ ಮುನಿಗಳು ತಿಳಿದರು. ಆ ಮುನಿಗಳಿಂದ ಪುರಾಣ ರೂಪವಾಗಿ ಹೇಳಲ್ಪಟ್ಟಿತು. ಆ ಪುರಾಣದಲ್ಲಿ ಉಕ್ತವಾಗಿರುವ ಮಹತ್ತ್ವ ಸಾರದ ಅರ್ಬುದದಲ್ಲಿ ಒಂದಂಶವನ್ನು ಹೇಳುವುದಕ್ಕೂ ನಾನು ಶಕ್ತನಲ್ಲ. ಆದರೂಕೂಡ ನನ್ನ ತಿಳುವಳಿಕೆಯಿದ್ದಷ್ಟು ಹೇಳುತ್ತೇನೆ. ಎಲೈ ಮತಿವಂತನೆ! ಅದರ ಶ್ರವಣದಿಂದ ನಾನು ಧನ್ಯನಾಗುತ್ತೇನೆಂಬ ಭಾವನೆಯಿಂದ ನೀನು ಕೇಳು” ಎಂಬುದಾಗಿ ಪಂಡಿತಾರಾಧ್ಯನು ದೋನಮಾರ್ಯನನ್ನು ಕುರಿತು ಅಪ್ಪಣೆಕೊಡಿಸಿ, ಶ್ರೀಶೈಲದ ಲೋಕಾದ್ಭುತ ಮಹಿಮೆಯನ್ನು ಹೀಗೆ ಹೇಳಲುಪಕ್ರಮಿಸಿದನು—“ಜಗತ್ಸೃಷ್ಟಿಯಾಗುವುದಕ್ಕೆ ಮೊದಲನೆಯ ಆದಿಯುಗದಲ್ಲಿ ಶಿಲಾದಮಹರ್ಷಿಯು ತಪಸ್ಸಿನಿಂದ ಪರಶಿವನನ್ನು ಮೆಚ್ಚಿಸಿಕೊಂಡು ಮೂರು ಮಂದಿ ಮಕ್ಕಳನ್ನು ಪಡೆದುಕೊಳ್ಳುವಾಗ್ಗೆ ಭಕ್ತಿಯಿಂದ ಹೀಗೆ

ಯದಿ ತಂ ಹಸ್ಮಿ ನಿಷೇಧತಿ ಭವತ್ಯಪಿ । ಏವಂ ಚೇದ್ದೇಹಿ ಮೇ ಪುತ್ರಾಂ ಚ್ಛಂಕ ತ್ಯಾಲಪನ್ನಥ ||೭೯|| ನಿತ್ಯಂ ನಿರ್ಮಲದೇಹಂ ಶ್ರೀವೃಷಾಧೀಶಂ ಮಹಾಮ ದ್ವಿತೀಯಶಂಭುಂ ಸರ್ವಜ್ಞಂ ಸತ್ಯಕೀರ್ತಿಮಯೋನಿಜಂ ||೮೦|| ಆದ್ಯಸ್ತ ಶೈವಧರ್ಮಶಾಸ್ತ್ರಾಚಾರ್ಯತಮಂ ಪರಂ। ಧರ್ಮಾವತಾರಂ ಪ್ರಮಥಗಣಶ್ರೇಷ್ಠ ಸಮುನ್ನತಂ ||೮೧|| ನಂದಿಕೇಶಂ ಸ್ವಾಗ್ರಸುತಂ ಪ್ರಾಪ ಗೌರೀಮನೋಹರಾ ತ್ । ಸನಂದಿಕೇಶ್ವರೋಽತ್ಯಂತ ವೀರಘೋರತಪೋಬಲಾತ್ ||೮೨|| ಸಮ ಪಾಸ್ಯ ಮಹಾದೇವಂ ಪರಿತುಷ್ಟಂ ವಿಧಾಯ ಚ । ದ್ವಿತೀಯಶಂಭುರಿತ್ಯಾಖ್ಯಾಂ ವಾಹನತ್ವಂ ಸಮುಂಚಿತಂ ||೮೩|| ಸರ್ವಜ್ಞತ್ವಂ ಮಹೋತ್ತುಂಗವೃಷಭಾ ಶತಾಮಪಿ । ಸಮುಲ್ಲಸಚ್ಛೈವಧರ್ಮಶಾಸ್ತ್ರಗೋಪ್ತ್ಯಾಗವಾವಲೇಃ ||೮೪|| ರಚನಾಕೌಶಲಂ ಭವ್ಯಪ್ರಮಥಾಧೀಶತಾಮಪಿ । ಲಿಂಗನಿಷ್ಠಾಧೀನವೀರಭಕ್ತಿ ಮಾರ್ಗೋಪದೇಷ್ಟೃತಾಂ ||೮೫|| ಪ್ರಾಪ್ಯ ಧರ್ಮಾವತಾರಸ್ಸನ್ ಖ್ಯಾತೋಽ ಭೂದ್ಭುವನೇಽನಘಃ । ಶಿಲಾದಸ್ಸ ಪುನಃ ಪ್ರಾಪ ದ್ವಿತೀಯಸುತಮುನ್ನತಂ ||೮೬|| ಅಗಣ್ಯಪುಣ್ಯಂ ಸುಜನಶರಣ್ಯಮಮಿತೌಜಸಂ । ಜಗದ್ವರೇಣ್ಯಮಾಶಾಂತವ್ಯಾ ಪ್ತಕೀರ್ತಿಂ ಕಲೌ ಯುಗೇ ||೮೭|| ಶಿವಮೂರ್ತಿಂ ಪರಿಧ್ವಸ್ತನತಾರ್ತಿಂ ಭಂಗವ

---

ಬಿನ್ನೈಸಿಕೊಂಡನು— "ಎಲೈ ಪರಶಿವನೆ! ನೀನು ಅನುಗ್ರಹಿಸುವ ಮೂವರು ಮಕ್ಕಳಲ್ಲಿ ಯಾವ ನೊಬ್ಬನಾದರೂ ನಿನ್ನ ಪದಭಕ್ತಿಯನ್ನು ಬಿಟ್ಟು ಅದ್ವೈತಬುದ್ಧಿಸಂಪನ್ನನಾಗಿದ್ದುದೆ: ಆದರೆ ನೀನು ಅಡ್ಡಿ ಮಾಡಿದರೂ ಅವನನ್ನು ನಾನು ಸಹ್ಮಿಸದೆ ಬಿಡುವನಲ್ಲ. ಹೀಗಾದರೆ ನನಗೆ ನೀನು ಪುತ್ರವರವನ್ನು ಕೊಡು" ಎಂದು ಬಿನ್ನಯಿಸಿಕೊಂಡು, ಅದರ ಮೇಲೆ ಶಿವಾನುಗ್ರಹದಿಂದ ನಿತ್ಯ ನೂ ನಿರ್ಮಲಗಾತ್ರನೂ, ಮೇಧಾವಿಯೂ, ದ್ವಿತೀಯಶಂಭುವೂ, ಸರ್ವಜ್ಞನೂ, ಕೀರ್ತಿಶಾಲಿಯೂ, ಅಯೋನಿಜನೂ, ಪ್ರಮಥಸ್ತುತ್ಯನೂ, ಶಿವಶಾಸ್ತ್ರೋಪದೇಶಕಾಚಾರ್ಯನೂ, ಧರ್ಮಸ್ವರೂಪನೂ, ಗಣಶ್ರೇಷ್ಠನೂ ಆದ ನಂದಿಕೇಶ್ವರನನ್ನು ತನ್ನ ಹಿರಿಯ ಮಗನನ್ನಾಗಿ ಪಡೆದನು. ||೮೨|| ಆ ನಂದೀಶ್ವರನು ಅತ್ಯುಗ್ರ ತಪಸ್ಸನ್ನು ಮಾಡಿ ಪರಶಿವನನ್ನು ಸಂತೋಷಪಡಿಸಿ, ದ್ವಿತೀಯಶಂಭು ವೆಂಬ ಹೆಸರನ್ನೂ, ಶಿವನಿಗೆ ವಾಹನವಾಗಿರುವಿಕೆಯನ್ನೂ, ಗೋಪ್ಯಾರ್ಥವುಳ್ಳ ಶಿವಧರ್ಮಶಾಸ್ತ್ರ ದ ರಚನಪಾಂಡಿತ್ಯವನ್ನೂ, ಪ್ರಮಥಪತಿತ್ವವನ್ನೂ, ಲಿಂಗನಿಷ್ಠೆಯಿಂದ ಕೂಡಿದ ವೀರಶೈವ ಭಕ್ತಿಮಾರ್ಗದ ಉಪದೇಶಕತ್ವವನ್ನೂ ಸಹ ಪಡೆದು, ಶಿವಧರ್ಮಾವತಾರನೆಂಬ ಪ್ರಖ್ಯಾತಿಯನ್ನು ಪಡೆದುಕೊಂಡನು. ||೮೫|| ಬಳಿಕ ಶಿಲಾದಮಹರ್ಷಿಯು ಅತ್ಯಂತ ಪುಣ್ಯನೂ, ಸತ್ಪುರುಷ ರಕ್ಷಕನೂ, ಅಪಾರ ತೇಜೋಭರಿತನೂ, ಲೋಕಶ್ರೇಷ್ಠನೂ, ಸಕಲ ದಿಗ್ಭಿತ್ತಿ ಯಶಸ್ಕನೂ, ಶಿವಸ್ವರೂಪನೂ, ಶರಣಾಗತ ದುಃಖನಿವಾರಕನೂ, ನಾಶರಹಿತನೂ, ಶಿರಸ್ಸಿನಲ್ಲಿ ಲಿಂಗವನ್ನು ಧರಿಸಿದವನೂ, ದಿವ್ಯದೇಹಿಯೂ, ಕರುಣಾಕಟಾಕ್ಷಯುಕ್ತನೂ, ಶುಭಚರಿತ್ರನೂ, ಎಲ್ಲರ

ರ್ಜಿತಂ | ಲಿಂಗೋತ್ತಮಾಂಗಂ ದಿವ್ಯಾಂಗಂ ದಯಾಪಾಂಗಂ ಗುಣೋನ್ನತಂ||
ಸರ್ವಮಂಗಳಚಾರಿತ್ರ ಮಾದ್ಯ ಮಾದ್ಯತಮಸ್ತುತಂ | ಗತಾವಿದ್ಯಂ ವೇದವೇದ್ಯ
ಸುಭೇದ್ಯಂ ಹೃದ್ಯದರ್ಶನಂ ||೪೯|| ಮಹಾಪಾತಕಸಂಘೋಪಪಾತಕಾಪಹ
ವರ್ತನಂ | ಅಕ್ಷೀಣಕರುಣಾಪೂರ್ಣಕಟಾಕ್ಷ ಶುಭವೀಕ್ಷಣೈಃ ||೫೦|| ರಕ್ಷಿ
ತಾಶೇಷಮಹಿತಮುಮುಕ್ಷುಜನ ಮಕ್ಷರಂ | ಸರ್ವಜ್ಞಂ ಸನ್ಮುನೀಂದ್ರಾಣಾಂ
ಸಾರ್ವಭೌಮಮಚಂಚಲಂ ||೫೧|| ಧ್ವಸ್ತಾಘಪರ್ವತಂಭವ್ಯಂ ಶ್ರೀಪರ್ವತಮು
ನೀಶ್ವರಂ | ಸಪರ್ವತಮುನಿಶ್ರೀಮಾಂಸ್ತಪಶ್ಚರ್ಯಾಸಮುದ್ಯತಃ ||೫೨|| ಶಿವ
ಸಾದಾಬ್ಜಸದ್ಭಕ್ತ್ಯಾ ಮಹೇಶಕರುಣಾಬಲಾತ್ | ಪುರಾತನಮುನೀಂದ್ರಾ
ಣಾಂ ಸಂಸ್ಮೃತ್ಯತಪಸಾಂಕ್ರಮಂ || ೫೩ || ಅಜಾದಿಜೀವಾಜೀವನ್ತಿಪರ್ಣಾ
ಹಾರಾನಕಿಂಭುವಿ | ಕೇಚಿಚ್ಛಿಲಾಶನಾಸ್ಸಂತಃ ಪಾರಾವತಮುಖಾಃಖಗಾಃ ||
ಅಪರೇಪವನಾಹಾರಾಸ್ಸರ್ಪಾದ್ಯಾ ಜೀವರಾಶಯಃ | ಅನ್ಯೇಪಿಪೀಲಿಕಾಮು
ಖ್ಯಾಜಂತವಃ ಕಣಭಕ್ಷಿಣಃ ||೫೫|| ಕೇಚಿಜ್ಜಲಚರೋರ್ವೀಜಸಸ್ಯಾದ್ಯಾ ಜೀ
ವರಾಶಯಃ | ಸತತಂಸಲಿಲಾಹಾರಾ ಸ್ಸಂತ್ಯಸ್ಮಿನ್ಧರಣೀತಲೇ ||೫೬|| ಇತಿಪ
ರ್ಣಾದಾನಿಲಾದ ಶಿಲಾದಕಣಭುಜ್ಮುಖ್ಯೈಃ | ಮುನಿಭಿಶ್ಚರಿತಂಘೋರಂ ಪ್ರಹಸ್ಯ
ಮಹಿತ್ವಂತಪಃ ||೫೭|| ಶುಭೋದ್ಯುಕ್ತ್ಯಾ ನಿರಾಹಾರ ಪ್ರಯುಕ್ತ್ಯಾ ಸಮುದ

---

ಮೊದಲಿಗನೂ, ಪ್ರಮಥ ಸಂಸ್ತುತನೂ, ಮಾಯಾದೂರನೂ, ವೇದಗೋಚರನೂ, ಮನೋಹ
ರವಾದ ನೋಟವುಳ್ಳವನೂ, ಪಂಚಮಹಾಪಾತಕಗಳನ್ನೂ ಉಪಪಾತಕಗಳನ್ನೂ ನಿರ್ಮೂಲನಮಾ
ಡತಕ್ಕವನೂ, ತನ್ನ ದಯಾ ಕಟಾಕ್ಷವೀಕ್ಷಣದಿಂದ ಮುನಿಜನರನ್ನು ಸಂರಕ್ಷಿಸುವವನೂ, ಸರ್ವ
ಜ್ಞನೂ, ಸಕಲ ಮುನಿಜನ ಸಾರ್ವಭೌಮನೂ, ಧೀರನೂ, ಪಾಪವೆಂಬ ಬೆಟ್ಟವನ್ನು ಧ್ವಂಸಮಾ
ಡಿದವನೂ ಆದ ಶ್ರೀ ಶೈಲಮುನೀಂದ್ರನನ್ನು ತನೆಯ ಮಗನನ್ನಾಗಿ ಪಡೆದನು ||೫೧||
ಆ ಪರ್ವತ ಮುನಿಪತಿಯು ಶಿವಭಕ್ತಿಯಿಂದ ಕೂಡಿ ಮಹಾತಪಸ್ಸನ್ನು ಮಾಡುವುದಕ್ಕೆ ಉಜ್ಜು
ಗಿಸಿ, ಪೂರ್ವದ ಮಹಾ ಮುನಿಶ್ರೇಷ್ಠರುಗಳು ಮಾಡಿದ ತಪೋವಿಧಾನವನ್ನೆಲ್ಲಾ ಯೋಚಿಸಿ,
ಪರ್ಣಾಹಾರ ಮಾಡುವುದೇನು ದೊಡ್ಡದೆ? ಆಡು ಮೊದಲಾದುವುಗಳೆಲ್ಲಾ ಎಲೆಗಳನ್ನು ತಿಂದು
ಜೀವಿಸುವುದಿಲ್ಲವೆ? ಕಲ್ಲನ್ನು ತಿಂದುಕೊಂಡಿರುವುದೇನು ದೊಡ್ಡದೆ? ಪಾರಿವಾಳ ಮೊದಲಾದ
ಹಕ್ಕಿಗಳು ಕಲ್ಲನ್ನು ನುಂಗುವುದಿಲ್ಲವೆ? ವಾಯ್ವಾಹಾರಮಾಡಿಕೊಂಡಿರುವುದೇನು ಘನವೆ?
ಸರ್ಪಾದಿ ಜೀವರಾಶಿಗಳು ವಾತಾಶನಗಳಾಗಿಲ್ಲವೆ? ಧಾನ್ಯ ಕಣವನ್ನು ತಿಂದು ಜೀವಿಸುವುದು
ಅದ್ಭುತವೆ? ಇರುವೆ ಮೊದಲಾದ ಜಂತುಗಳು ಅದರಿಂದಲೇ ಜೀವಿಸುವುದಿಲ್ಲವೆ? ಜಲಾಹಾರ
ಮೊಂದು ಘನತರವೆ? ಅನೇಕ ಜಲಚರ ಪ್ರಾಣಿಗಳೂ ತರುಲತಾದಿಗಳೂ ನೀರನ್ನು ಕುಡಿದು
ಬಾಳುವುದಿಲ್ಲವೆ? ಎಂಬುದಾಗಿ ಪರ್ಣಾಹಾರ ವಾಯ್ವಾಹಾರಾದಿಗಳಿಂದ ಘೋರ ತಪಸ್ಸು

ಗ್ರಯಾ । ಮಹತ್ಪಂಚಾಗ್ನಿಮಧ್ಯಾಗಿತಪಶ್ಶಕ್ತ್ಯಾ ನಿರಂತರಂ ॥೫೮॥ ದೇಹೇಂದ್ರಿಯಾದಿವಿಷಯವಿರಕ್ತ್ಯಾ ಪರಿಪೂತಯಾ । ವ್ರತಸ್ವಚಾರತಾಸಕ್ತ್ಯಾ ಸದ್ಭಕ್ತ್ಯಾ ಪರಮೇಶ್ವರೇ ॥೫೯॥ ಅತಿಘೋರಂ ತಪಃ ಕುರ್ವನ್ ಜಗತ್ಖ್ಯಾತಂ ಮಹತ್ತರಂ । ವದತ್ಸು ಪ್ರಮಥೇಂದ್ರೇಷು ಚಿತ್ರಂ ಚಿತ್ರಮಿತಿ ಸ್ಫುಟಂ ॥೬೦॥ ಆಶ್ಚರ್ಯಮಾಶ್ಚರ್ಯಮಿತಿ ದೇವೇಷು ಪರಿಶಂಸಿಷು । ವಿಸ್ಮಯೋ ವಿಸ್ಮಯ ಇತಿ ಸ್ತುವತ್ಸು ದನುಜೇಷ್ವಪಿ ॥೬೧॥ ಅಹೋ ಮಹಾದ್ಭುತಮಿತಿ ಸಂಸ್ತುವತ್ಸು ತಪಸ್ವಿಷು । ಸನಕಾದಿಷ್ವನುಪಮಮಿದಮಿತ್ಯುಕ್ತವತ್ಸ್ವಪಿ ॥ ೬೨ ॥ ನ ಪಶ್ಯಾಮೋ ವಯಂ ಘೋರಂ ಕುತ್ರಾಪ್ಯೇವಂವಿಧಂ ತಪಃ । ಇತಿ ಸ್ತುವತ್ಸು ಮರ್ತ್ಯೇಷು ತಪೋನಿಷ್ಠಾ ಸಮನ್ವಿತಃ ॥೬೩॥ ಅನೇಕದಿವ್ಯವರ್ಷಾಣಾಂ ಕೋಟೀಸ್ಸನ್ಯುಗವರ್ತತ । ಅಕಂಪತ ಮಹೀ ಕೃತ್ಸ್ನಾ ಚುಕ್ಷುಭುರ್ಜಲರಾಶಯಃ ॥೬೪॥ ಜಲಶಾಯೀ ವಿಭೀತೋಽಭೂಚ್ಛಶಾಮ ಬಡಬಾನಲಃ । ಯಯುರ್ದಿಕ್ಪತಯೋಽನ್ಯತ್ರ ನಿಪೇತುಸ್ತಾರಕಾದಿವಃ ॥ ೬೫ ॥ ಶಿರಾಂಸಿ ವಾಸುಕೇರ್ನಮ್ರಾಣ್ಯಾಸಂ ದಿಕ್ಕುಂಜರಾಃ ಕ್ಷತಾಃ । ಪಪಾತ ಭೂತಳೇ ವ್ಯೋಮ ದೇವಾ ಗ್ಲಾನಿಂ ಸಮಾಯಯುಃ ॥೬೬॥ ವಿದೀರ್ಣೋಽಭೂದಜಾಂಡೌಘೋ ಭಾಸ್ಕರೋ ಮಲಿನೋಽಭವತ್ । ಸ್ಥಲ

---

ಮಾಡಿದ ಋಷಿಗಳ ಚರ್ಯವನ್ನೆಲ್ಲಾ ಅಪಹಾಸ್ಯಮಾಡಿ, ತಾನು ಯಾವುದೊಂದು ಆಹಾರವನ್ನೂ ಸ್ವೀಕರಿಸದೆಯೇ ಮಹಾಪಂಚಾಗ್ನಿಮಧ್ಯದಲ್ಲಿ ಕುಳಿತು ದೇಹೇಂದ್ರಿಯ ವಿಷಯುಗಳವಳಿದು, ಮಹಾ ಪರಶಿವಸದ್ಭಕ್ತಿಸಾಂದ್ರನಾಗಿ, ಲೋಕವಿಖ್ಯಾತವಾದ ಅತ್ಯಂತ ಘೋರತಪಸ್ಸನ್ನು ಮಾಡಿದನು. ಅದನ್ನು ಕಂಡು ಪ್ರಮಥವರ್ಯರು ಇದು ಅದ್ಭುತವೆನ್ನುತ್ತಿರಲು, ದೇವತೆಗಳು ಇದು ಆಶ್ಚರ್ಯ ಆಶ್ಚರ್ಯವೆಂದು ಹೊಗಳುತ್ತಿರಲು, ರಾಕ್ಷಸರೂ ಕೂಡ ಇದು ಅಂದೆಂದು ಕೊಂಡಾಡುತ್ತಿರಲು, ॥೬೧॥ ತಪಸ್ವಿಗಳು ಇದು ಅತ್ಯಾಶ್ಚರ್ಯವೆಂದು ಸ್ತುತಿಸುತ್ತಿರಲು, ಸನಕಸನಂದನಾದಿ ಸಪ್ತರ್ಷಿಗಳು ಇದು ಅಸದೃಶವೆಂದು ಉಗ್ಗಡಿಸುತ್ತಿರಲು, ಇಂಥ ಘೋರತಪಸ್ಸನ್ನು ನಾವು ಎಲ್ಲೂ ನೋಡಲಿಲ್ಲವೆಂದು ಮನುಜರು ಸ್ತೋತ್ರಮಾಡುತ್ತಿರಲು, ಶ್ರೀಶೈಲ ಮುನಿಪತಿಯು ಅತ್ಯಂತ ನಿಷ್ಠೆಯಿಂದ ಅನೇಕ ದಿವ್ಯಕೋಟಿವರ್ಷಗಳವರೆಗೆ ಘೋರತಪಸ್ಸನ್ನು ಮಾಡಿದನು. ಆ ತಪೋಜ್ವಾಲೆಯಿಂದ ಭೂಮಿಯೆಲ್ಲಾ ನಡುಗಿತು. ಸಮುದ್ರಗಳು ಕುಳ್ಳಾಡುವು. ॥೬೪॥ ಸಮುದ್ರಶಾಯಿಯಾದ ವಿಷ್ಣುವು ದಿಗಿಲುಬಿದ್ದನು. ಬಡಬಾಗ್ನಿಯು ತಣ್ಣಗಾಯಿತು. ದಿಕ್ಪಾಲಕರು ದಿಕ್ಕುಗೆಟ್ಟೋಡಿದರು. ನಕ್ಷತ್ರಗಳುರುಳಿದುವು. ಶೇಷನ ತಲೆಗಳು ಬಗ್ಗಿದುವು. ದಿಗ್ಗಜಗಳು ಕುಗ್ಗಿದುವು. ಆಗಸವು ಕಳಚಿಬಿದ್ದಿತು. ದೇವತೆಗಳು ಬಳಲಿದರು. ॥೬೬॥ ಬ್ರಹ್ಮಾಂಡವು ಸಿಡಿದಿತು, ಸೂರ್ಯನು ನಿಸ್ತೇಜನಾದನು. ಅದಿಕೂರ್ಮನು ಜಾಂದನು.

ಸಂಪ್ರಾಪಕಮತೋ ವಿಶೀರ್ಣಾಃ ಕುಲಭೂಭೃತಾಃ ॥೬೭॥ ವ್ಯತ್ಯಸ್ತಾಃ ಕಕು
ಭೋ ವೇಧಾ ಧ್ವಸ್ತೋ ನೇಮುಃ ಪುರಾತನಾಃ । ತತಶ್ಶ್ರೀಪರ್ವತತಪೋನಿಯ
ತೇಃ ಪರಮೇಶ್ವರಃ ॥೬೮॥ ಪ್ರತ್ಯಕ್ಷಸ್ಸನ್ಪುರಸ್ಸ್ಥಿತ್ವಾ ಜಗಾದೈವಂ ಕೃಪಾನಿ
ಧಿಃ । ಜಾಗ್ರದುಗ್ರಸಮಗ್ರೋದ್ಯತ್ತಪೋನಿಗ್ರಹವಿಗ್ರಹ ॥೬೯॥ ಕುರ್ವೇ ಕು
ರ್ವೇ ಪುನಃ ಕುರ್ವೇ ಭವತೋಽನುಗ್ರಹಂ ಮುನೇ । ಭಾವಯೇ ಭಾವಯೇ ಭೂ
ಯೋ ಭಾವಯೇ ತ್ವಾಂ ಕೃಪಾದೃಶಾ ॥೭೦॥ ಅಹಂ ತುಷ್ಟೋಽಸ್ಮಿ ತುಷ್ಟೋಽ
ಸ್ಮಿ ತುಷ್ಟೋಽಸ್ಮಿ ತವ ಸಾಂಪ್ರತಂ । ತುಭ್ಯಂ ದಾಸ್ಯಾಮಿ ದಾಸ್ಯಾಮಿ ದಾಸ್ಯಾ
ಮಿ ವರಮೀಪ್ಸಿತಂ ॥೭೧॥ ಕಿಂ ವಚೋಭಿರ್ಬಹುವಿಧೈಸ್ತ್ರಿವಾರಂ ಪ್ರೋಚ್ಯತೇ
ಮಯಾ । ಭಕ್ತಿಪಾಲನಧೌರೇಯ ಶ್ರೀಪರ್ವತಮುನೀಶ್ವರ ॥೭೨॥ ಅದ್ಯ ಯಾಚ
ಸ್ವ ಯಾಚಸ್ವ ಯಾಚಸ್ವ ತ್ವಂ ಹೃದಿ ಸ್ಥಿತಂ । ಇತ್ಯುಕ್ತಸ್ಸೋಽಪಿ ಸಾಷ್ಟಾಂಗಂ ಬಹು
ಶಃ ಪ್ರಣಮನ್ಮುದಾ ॥೭೩॥ ಭಕ್ತ್ಯಾ ಕೃತಾಂಜಲಿಃ ಪಶ್ಯನ್ನಂತಸ್ಥಂ ಪುರತಶ್ಶಿವಂ ।
ರೋಮಾಂಚೈರಂಚಿತೇ ಕಾಯೇ ಕಂಠತೋ ಗದ್ಗದಸ್ವರೈಃ ॥೭೪॥ ಕುಂಠಿತೇ
ಸ್ತುತಿಸಂದೋಹೇ ಮುಖೇ ಹರ್ಷಾಶ್ರುವೃಷ್ಟಿಭಿಃ । ಸಂಸಿಕ್ತೇ ರಾಗಯುತಯೋ
ರ್ದೃಶೋರೂರ್ವೋಸ್ಸಕಂಪಯೋಃ ॥೭೫॥ ವೀಕ್ಷಿತುಂ ಸಂತತಮನ್ಯೋನ್ಯಂ

---

ಕುಲಪರ್ವತಗಳು ಅಲ್ಲಾಡಿಹೋದುವು. ॥೬೭॥ ದಿಕ್ಕುಗಳು ವ್ಯತ್ಯಸ್ತವಾದುವು. ಬ್ರಹ್ಮನು
ಜಾರಿಬಿದ್ದನು. ಪುರಾತನರು ಅಡ್ಡಬಿದ್ದರು. ಆಗ ಕರುಣಾಳುವಾದ ಶಂಕರನು ಶ್ರೀ ಪರ್ವತ
ಮುನಿಯ ತಪೋಬಲಕ್ಕೆ ಮೆಚ್ಚಿ ಪ್ರತ್ಯಕ್ಷನಾಗಿ—ಮಹಾ ಜಾಗರೂಕವಾದ ಘೋರತಪಸ್ಸನ್ನಾ
ಚರಿಸಿ ಅದರ ತಾಪವನ್ನೆಲ್ಲಾ ತಾಳಿಕೊಂಡು ನಿಂತ ಶರೀರವುಳ್ಳ ಎಲೈ ಪರ್ವತಮುನಿಯೆ! ನಿನ್ನ
ತಪಸ್ಸಿನಿಂದ ನಾನು ಸಂತೋಷಪಟ್ಟೆ, ಸಂತೋಷಪಟ್ಟೆ, ಸಂತೋಷಪಟ್ಟೆ. ನಿನ್ನನ್ನು ಕರುಣಾ
ದೃಷ್ಟಿಯಿಂದ ನೋಡುವೆನು ನೋಡುವೆನು ನೋಡುವೆನು. ನಿನಗೆ ಅನುಗ್ರಹವನ್ನು ಮಾಡು
ತ್ತೇನೆ ಮಾಡುತ್ತೇನೆ ಮಾಡುತ್ತೇನೆ. ನಿನಗೆ ಇಷ್ಟಾರ್ಥ ವರವನ್ನು ಕೊಡುತ್ತೇನೆ ಕೊಡುತ್ತೇನೆ
ಕೊಡುತ್ತೇನೆ. ಎಲೈ ಭಕ್ತಿಧುರಂಧರನೆ! ಹೆಚ್ಚು ಮಾತೇಕೆ? ಇದೋ ಮೂರುಸಲ ಹೇಳು
ತ್ತೇನೆ. ನಿನ್ನ ಮನಸ್ಸಿನಲ್ಲಿರುವುದನ್ನು ಬೇಡು ಬೇಡು ಬೇಡು ಎಂದು ಅಪ್ಪಣೆಕೊಡಿಸಲು,
ಪರ್ವತಮುನಿಯು ಅತ್ಯಂತಸಂತೋಷದಿಂದ ಪರಶಿವನ ಅಡಿದಾವರೆಗಳಿಗೆ ಸಾಷ್ಟಾಂಗವಾಗಿ ಹಲ
ವುಸಾರಿ ಅಡ್ಡಬಿದ್ದು ॥೭೩॥ ಭಕ್ತಿಯಿಂದ ಕೈಮುಗಿದು ನಿಂತು, ತನ್ನ ಹೃದಯದಲ್ಲಿದ್ದ
ಉಮಾಸಹಾಯನನ್ನೇ ಇದಿರಿಗೆ ಕಂಡಕಾರಣ, ಆನಂದದಿಂದ ದೇಹದಲ್ಲೆಲ್ಲಾ ರೋಮಾಂಚವುಂ
ಟಾಗಲು, ಕಂಠದಲ್ಲಿ ಗದ್ಗದಸ್ವರವುಂಟಾದುದರಿಂದ ಸ್ತೋತ್ರಮಾಡಲಿಕ್ಕೆ ತಡೆಯಾಗಲು, ಸುರಿ
ಯುತ್ತಿರುವ ಸಂತೋಷಾಶ್ರುವಿಂದ ಮುಖವೆಲ್ಲಾ ನನೆಯಲು, ಕೆಂಪೇರಿದ ಕಣ್ಣುಗಳು ತಾವು
ನೋಡಲು ಪರಶಿವ ಸಂದರ್ಶನವನ್ನು ಮಾಡಬೇಕೆಂದೂ, ನಡುಗುತ್ತಿರುವ ತೊಡೆಗಳು ತಾವು

ಸಂಜಾತೇ ಸತಿ ಮತ್ಸರೇ | ತಾಸ್ವಂಗವಿಕ್ರಿಯಾಸೂದ್ಯದ್ಭೂಷಣೇಷ್ವಾತ್ಮ ನೋಽಭೃಶಂ ||೭೬|| ಆನಂದಭರಿತೋಽಭೂತ್ಸಾತುಷ್ಟಾವ ಪರಮೇಶ್ವರಂ | ಸದ್ಭಕ್ತಮಾನಸಾಂಭೋಜಶಯ್ಯ ಭರ್ಗ ಪರಾಪರ ||೭೭|| ಸರ್ಗಸ್ಥಿತ್ಯಂತಕರಣ ಗುಣಾಂಕವರದಾಯಕ | ಭಕ್ತವರ್ಗಪರಿತ್ರಾಣಪ್ರವೀಣಾವ್ಯಯ ನಿರ್ಮಲ ||೭೮|| ದಯಾರಸಾಸ್ಪದಲಸನ್ನೇತ್ರಕೋಣ ವೃಷಧ್ವಜ | ನಿರಂತರತ್ರಿಲೋಕೈಕ ನಮಸ್ಯಗಿರಿಜಾಪತೇ ||೭೯|| ಹರಿಬ್ರಹ್ಮಮುಖಾನಂತಸುರೋಪಾಸ್ಯ ತ್ರಿಲೋಚನ| ಗಣಸಂಘಾಭಿಲಷಿತಪ್ರದಾನವ್ಯಸನ ಪ್ರಭೋ ||೮೦|| ನತಮರ್ತ್ಯಾಘಕಲುಷಗ್ರಸನ ಪ್ರಮಥಾಧಿಪ | ಶ್ರುತ್ಯಂತವೇದ್ಯ ಶುಭದ ಸರ್ವಜ್ಞಾವಿಕಲಾಭವ ||೮೧|| ಘೋರಸಂಸಾರರುಗ್ವೈದ್ಯ ನತಾಘವನಪಾವಕ | ವಿಶ್ವರಕ್ಷಾರಂಭ ಗೌರೀಪರಿರಂಭಕೃತಾದರ ||೮೨|| ಗಂಗಾರಂಗತ್ತರಂಗಾಂಚನ್ಮಂಗಳೋತ್ತುಂಗಮಸ್ತಕ| ಸಂಗೀತಲೋಲ ಸಂಸಾರಸಾಗರೋತ್ತಾರಣಕ್ಷಮ || ೮೩ || ಕರುಣಾಕರಕಾಲಾರೇಕಪರ್ದಿನ್ನಾಮಿತಾರ್ಥದ | ವಿಜ್ಞಾಪಯಾಮಿ ದೇವೇಶ ಭಕ್ತವತ್ಸಲ ಶಂಕರ ||೮೪|| ಪರಾಪಘಾರಯ ಮಹಾದೇವ ತ್ರಿಪುರಮರ್ದಕ | ಶ್ರೀಪರ್ವತಾಷ್ಟ

---

ಮೊದಲು ಅಷ್ಟಭೋಳಪೀಠಕೆಂದೂ ಒಂದಕ್ಕೊಂದು ಸ್ಪರ್ಧಿಸುತ್ತಿರಲು, ಆ ಪರ್ವತಮುನಿಯಲ್ಲಿ ಪೂರ್ವೋಕ್ತರೀತಿಯಿಂದ ತೋರಿದ ಅಂಗವಿಕಾರಗಳೆಲ್ಲವೂ ಅವನಿಗೆ ಭೂಷಣವಾಗಿರಲಾಗಿ, ಅತ್ಯಂತ ಸಂತೋಷಪಟ್ಟು, ಪರಮೇಶ್ವರನನ್ನು ಕುರಿತು ಹೀಗೆ ಸ್ತೋತ್ರಮಾಡಿದನು. ||೭೭|| ಭಕ್ತಜನಮನಃಕಮಲನಿವಾಸಿಯಾದ ಪರಾತ್ಪರನಾದ ಸೃಷ್ಟಿ ಸ್ಥಿತಿ ಸಂಹಾರ ಕಾರಕ ಸತ್ವರಜಸ್ತಮೋಗುಣಲಕ್ಷಿತನಾದ, ಇಷ್ಟವರಪ್ರದನಾದ ಶಂಕರನೆ! ಭಕ್ತವೃಂದರಕ್ಷಣಕುಶಲನಾದ ಅಚ್ಯುತನಾದ ಮಲರಹಿತನಾದ ಕರುಣಾರಸಾಶ್ರಯಕಟಾಕ್ಷನಾದ ಎಲೈ ವೃಷಭವಾಹನನೆ! ಜಗತ್ತ್ರಯವಂದಿತನಾದ ಪಾರ್ವತೀಪತಿಯಾದ ಹರಿಬ್ರಹ್ಮಾದಿ ದೇವತಾವೃಂದ ಸೇವಿತನಾದ ಮುಕ್ಕಣ್ಣನೆ! ಶಿವಗಣೇಷ್ಟಾರ್ಥಪ್ರದನಾದ ಆನತಜನಪಾಪವಿನಾಶಕನಾದ ಪ್ರಮಥಾಧಿಪತಿಯೆ! ಉಪನಿಷದ್ವೇದ್ಯನಾದ ಮಂಗಳಪ್ರದನಾದ ಸರ್ವಜ್ಞನಾದ ಅಪರಿಚ್ಛಿನ್ನನಾದ ಜನನಮರಣಾತ್ಮಕ ಘೋರ ಸಂಸಾರ ರೋಗಕ್ಕೆ ವೈದ್ಯನಾದ ಆನತರ ದುಷ್ಕೃತಾರಣ್ಯಕ್ಕೆ ಕಾಳ್ಗಿಚ್ಚಾದ ಅಭವನೆ! ಲೋಕಸಂರಕ್ಷಣೋದ್ಯೋಗಿಯಾದ ಗಿರಿಜಾಸಮಾಲಿಂಗನಾಸಕ್ತನಾದ ಗಂಗಾಧರನೆ! ಸಂಗೀತಪ್ರಿಯನಾದ ಭಕ್ತಜನರನ್ನು ಭವಸಮುದ್ರದಿಂದ ದಾಂಟಿಸುವವನಾದ ಯಮರಿಪುವಾದ ಇಷ್ಟಾರ್ಥಪ್ರದನಾದ ಜಟಾಜೂಟವಿಭ್ರಾಜಿತನಾದ ಕರುಣಾಕರನೆ! ದೇವೋತ್ತಮನಾದ, ತ್ರಿಪುರಾಂತಕನಾದ ಶಂಕರನೆ! ಮಹಾದೇವನೆ! ಹರನೆ! ಭಕ್ತವತ್ಸಲನೆ! ಈ ನನ್ನ ವಿಜ್ಞಾಪನೆಯನ್ನು ಲಾಲಿಸು. ಈ ಪೂರ್ವೋಕ್ತವಾದ ಶ್ರೀ ಪರ್ವತಾಷ್ಟಕಸ್ತೋತ್ರದಿಂದ ಯಾರು

ಕಸ್ತುತ್ವಾಽನಯಾತ್ವಾಂ ಸಂಸ್ತುವಂತಿಯೇ || ೮೫ || ತೇಷಾಂಸಿದ್ಧ್ಯಂತ್ವಭೀಷ್ಟಾರ್ಥಾಃ ಪರಿಗೃಹ್ಯತ್ವಮೇವತಾನ್ | ತೇಭ್ಯಃಪ್ರಯಚ್ಛಸಕಲಾನ್ಭೋಗಾನ್ಪ್ರಿಯತಮಾನಿತಿ ||೮೬|| ಜಿತಾಭಿಷಂಗಕರುಣಾಪಾಂಗ ತ್ವಾಂ ಪ್ರಾರ್ಥಯೇಶಿವ | ಮಮಪರ್ವತಇತ್ಯಾಖ್ಯಾ ಯಥಾರ್ಥಾಸ್ಯಾದ್ಯಥಾತಥಾ || ೮೭ || ವಸಾಮಿ ಪರ್ವತಾಕಾರಂ ಧೃತ್ವಾಽಹಂ ಮಮಮಸ್ತಕೇ | ವಸ ದಿವ್ಯೋರುಲಿಂಗಾಂಗ ಮಹೇಶತ್ವಂ ದಯಾನಿಧೇ ||೮೮|| ಹರಿಬ್ರಹ್ಮಾದಿದೇವೇಷು ಸೇವಮಾನೇಷು ಸಾದರಂ | ಮೇರಾವಿವತ್ವನ್ನಿವಾಸವಿಧಾಂ ಸಪ್ರಾರ್ಥಯೇಶಿವ ||೮೯|| ಗಣೇಷು ಸೇವಮಾನೇಷು ಲೀಲಯಾ ಪರಮೇಶ್ವರ | ಕೈಲಾಸಇವತೇವಾಸವಿಧಾಂ ಸಪ್ರಾರ್ಥಯೇಶಿವ ||೯೦|| ಸೇವಮಾನೇಷು ದಿವಿಜವೃಂದೇಷು ಪರಮೇಶ್ವರ | ತವಮಂದರವದ್ವಾಸವಿಧಾಂ ಸಪ್ರಾರ್ಥಯೇಶಿವ ||೯೧|| ಶ್ರುತಿಮೂರ್ಧಸ್ವಿವೇಶಾನ ಸೂಕ್ಷ್ಮರೂಪಾಂಪ್ರಹರ್ಷಿತಃ | ಸದಾಭವದವಸ್ಥಾನವಿಧಾಂ ಸಪ್ರಾರ್ಥಯೇಶಿವ ||೯೨|| ತ್ರಿಯಂಬಕಾದಿಗಿರಿಷು ಯಥಾತ್ವಂ ವಸಸೀಶ್ವರ | ತಥೈವತವಸಂಸ್ಥಾನವಿಧಾಂ ಸಪ್ರಾರ್ಥಯೇಶಿವ || ೯೩ || ಶಿವಲೋಕಾದಿಲೋಕೇಷು ಯಥಾತ್ವಂವಸಸಿಪ್ರಭೋ | ತಥಾಭವದವಸ್ಥಾನವಿಧಾಂ ಸಪ್ರಾರ್ಥಯೇಶಿವ || ಅಣೋರಣೀಯಾನಿತ್ಯುಕ್ತ್ಯಾ ಯಥಾಜೀವೇಷುತಿಷ್ಠಸಿ | ತಥಾಭವದವಸ್ಥಾನ

---

ನಿನ್ನನ್ನು ಸ್ತೋತ್ರಮಾಡುತ್ತಾರೋ ||೮೫|| ಅವರಿಗೆ ಸಕಲೇಷ್ಟಾರ್ಥಗಳೂ ಲಭಿಸಲಿ. ಆ ಇಷ್ಟಾರ್ಥಗಳನ್ನೆಲ್ಲಾ ನೀನೇ ಪರಿಗ್ರಹಿಸಿ, ಅವರುಗಳಿಗೆ ಸಕಲ ಭೋಗಭಾಗ್ಯಗಳನ್ನೂ ಅನುಗ್ರಹಿಸು ||೮೬|| ಎಂದು ಪ್ರಾರ್ಥಿಸಿದುದಲ್ಲದೆ, ಪುನಃ—ಎಲೈ ಮಾಯಾಪಾಶ ವಿಭೇದಕನಾದ ದಯಾಳು ಪರಶಿವನೆ! ನಿನ್ನನ್ನು ಕುರಿತು ಇನ್ನೊಂದು ಪ್ರಾರ್ಥನೆಯನ್ನು ಮಾಡುತ್ತೇನೆ, ಏನೆಂದರೆ—ನನಗೆ ''ಪರ್ವತ'' ಎಂಬ ಹೆಸರಿರುವುದಷ್ಟೆ. ಆ ಹೆಸರು ಸಾರ್ಥಕವಾಗುವಂತೆ ನಾನು ಬೆಟ್ಟದಾಕಾರವನ್ನೇ ಧರಿಸಿರುವೆನು. ಉರುಲಿಂಗಾಕಾರನಾದ ಎಲೈ ಶಂಭುವೆ! ನೀನು ನನ್ನ ತಲೆಯಮೇಲೆ ವಾಸವಾಗಿರು ||೮೮|| ಆದರೆ ಮೇರುಪರ್ವತದಮೇಲೆ ನೀನು ಸಕಲ ದೇವತೆಗಳಿಂದ ಸೇವಿಸಿಕೊಳ್ಳುತ್ತ ವಾಸವಾಗಿರುವ ರೀತಿಯನ್ನೂ, ನೀನು ಕೈಲಾಸಪರ್ವತದಮೇಲೆ ಶಿವಗಣಂಗಳಿಂದ ಓಲಗಿಸಿಕೊಂಡು ವಾಸಿಸುವ ರೀತಿಯನ್ನೂ ||೯೦|| ಮಂದರಗಿರಿಯಮೇಲೆ ದೇವತೆಗಳಿಂದ ಸೇವಿಸಿಕೊಂಡು ನೆಲಸಿರುವ ಬಗೆಯನ್ನೂ, ಉಪನಿಷತ್ತುಗಳಲ್ಲಿ ಸೂಕ್ಷ್ಮರೂಪಿನಿಂದ ನೀನು ವಿಹರಿಸಿಕೊಂಡಿರುವ ವಿಧಾನವನ್ನೂ ||೯೨|| ತ್ರಿಯಂಬಕಾದಿ ಪರ್ವತಗಳಲ್ಲಿ ನೀನು ವಾಸಮಾಡಿಕೊಂಡಿರುವ ತರನನ್ನೂ, ಶಿವಲೋಕಾದಿಗಳಲ್ಲಿ ನೀನು ವಾಸಮಾಡಿಕೊಂಡಿರುವ ಪಾಂಗನ್ನೂ, ಅಣುವಿಗೆ ಅಣುವಾಗಿ ನೀನು ಸಕಲ ಜೀವಕೋಟಿಯಲ್ಲಿಯೂ ವ್ಯಾಪಿಸಿರುವ

ವಿಧಾಂ ನಪ್ರಾರ್ಥಯೇಶಿವ ||೯೫|| ಯೋಗಿನಾಂಸನಕಾದೀನಾಂ ಯಥಾಚೇತ ಸ್ಸುತಿಷ್ಠಸಿ | ತಥಾಭವದವಸ್ಥಾನವಿಧಾಂ ನಪ್ರಾರ್ಥಯೇಶಿವ ||೯೬|| ಕಿಂಚಾ ಪ್ಯಲ್ಪಸಜ್ಜೈವನಿಷ್ಠಾನಿಯಮಶಾಲಿನಾಂ | ಮುನೀನಾಂ ಗೌತಮಾದೀನಾಂ ಸಜ್ಜಿಕಾಸು ನಿರಂತರಂ || ೯೭ || ವರಪಾಶುಪತೋದಾರ ಪ್ರತಚರ್ಯಾವತಾಂ ಪುನಃ | ಅಗಸ್ತ್ಯಾದಿಮಹರ್ಷೀಣಾಂ ಸಜ್ಜಿಕಾಸುಚಸಂತತಂ ||೯೮|| ವಸಿಷ್ಠಾ ದಿಮುನೀಂದ್ರಾಣಾಂ ಮಹತಾಂ ಶಿವಯೋಗಿನಾಂ | ಸವಿಶೇಷಂಧಾರ್ಯಮಾಣ ಸಜ್ಜಿಕಾಸುನಿರಂತರಂ ||೯೯|| ತ್ವದೀಯಸಮಯಸ್ಥಾನಾಂ ವ್ಯಾಸಾದೀನಾಂ ಮಹಾತ್ಮನಾಂ | ವಿಭೂತಿಶಾಸನವತಾಂ ಸಜ್ಜಿಕಾಸುನಿರಂತರಂ ||೧೦೦|| ತ್ವಾಂಸಮರ್ಚಯತಾಂ ನಿತ್ಯಂ ಸಮುನ್ನತಫಲೇಚ್ಛಯಾ | ಶೌರಿಪದ್ಮಭವಾದೀ ನಾಂ ಸಜ್ಜಿಕಾಸುನಿರಂತರಂ || ೧೦೧ || ಇಂದ್ರಾಗ್ನಿಯಮಮೈತೇಯ ಪ್ರಚೇ ತೋವಮಾತರಿಶ್ವನಾಂ | ಕುಬೇರೈಶಾನಯೋರ್ಧನ್ಯಸಜ್ಜಿಕಾಸು ನಿರಂತರಂ|| ಮುಮುಕ್ಷೂಣಾಂಕಕ್ಷಭಾಗೇಧಾರ್ಯಮಾಣಾಸುಸಂತತಂ | ಸಜ್ಜಿಕಾಸು ಯಥಾ ಪ್ರೀತ್ಯಾತ್ವಂತಿಷ್ಠಸಿ ಮಹೇಶ್ವರ ||೧೦೩|| ತಥಾಭವದವಸ್ಥಾನವಿಧಾಂ ನಪ್ರಾ ರ್ಥಯೇಶಿವ | ಮಮೋತ್ತಮಾಂಗೇದೇವೇಶ ಸತತಂವಸಶಂಕರ ||೧೦೪|| ಮ ಸ್ಮಸ್ತಕಲಸತ್ಪೀಠೇ ಧೃತಲಿಂಗಾಂಗಸಂಗತಿಃ | ಶ್ರೀಸ್ವಯಂಭೂಲಿಂಗಮೂರ್ತ್ಯಾ ಸ್ಥಿತ್ವಾ ಮೇ ಪರಮೇಶ್ವರ || ೧೦೫ || ಮಹಾಪ್ರಸಾದಃಕರ್ತವ್ಯಸ್ತ್ವಮಿಸ್ಸಿ

---

ರೀತಿಯನ್ನೂ ||೯೫|| ಸನಕಾದಿ ಮಹರ್ಷಿಗಳ ಹೃದಯದಲ್ಲಿ ನೀನು ವಾಸವಾಗಿರುವ ಬಗೆಯನ್ನೂ ನಾನು ಬೇಡುವುದಿಲ್ಲ. ಮತ್ತು ಸ್ವಲ್ಪವೂ ಕುಂದದಂತ ಶಿವಮತನಿಷ್ಠೆಯನ್ನು ಹಿಡಿದು ಆಚರಿಸುವ ಗೌತಮಾದಿ ಮುನಿಗಳ ಕರಡಿಗೆಗಳಲ್ಲಿ ನೀನು ಯಾವಾಗಲೂ ನೆಲಸಿ ರುವ ರೀತಿಯನ್ನೂ, ಮಹಾ ಪಾಶುಪತವ್ರತಧುರೀಣರಾದ ಅಗಸ್ತ್ಯಾದಿ ಮಹರ್ಷಿಗಳ ಕರಡಿ ಗೆಗಳಲ್ಲಿ ನೀನು ಸದಾ ವಾಸವಾಗಿರುವ ರೀತಿಯನ್ನೂ, ಮಹಾ ಶಿವಯೋಗಿಗಳಾದ ವಸಿಷ್ಠಾದಿ ಋಷಿಶ್ರೇಷ್ಠರು ಧರಿಸಿರುವ ಕರಡಿಗೆಗಳಲ್ಲಿ ನೀನು ಯಾವಾಗಲೂ ಇರುತ್ತಿರುವ ವಿಧಾನವನ್ನೂ, ನಿನ್ನ ಮತಸ್ಥರೂ ಭಸ್ಮನಿಷ್ಠಾಸಮನ್ವಿತರೂ ಆದ ವ್ಯಾಸಾದಿ ಮಹಾತ್ಮರ ಕರಡಿಗೆಗಳಲ್ಲಿ ನೀನು ನಿತ್ಯವೂ ವಾಸವಾಗಿರುವ ರೀತಿಯನ್ನೂ ನಾನು ಬೇಡುವುದಿಲ್ಲ. ||೧೦೦|| ಫಲಾಕಾಂಕ್ಷೆ ಯಿಂದ ಸದಾ ನಿನ್ನನ್ನು ಪೂಜಿಸುವ ವಿಷ್ಣುಬ್ರಹ್ಮಾದಿಗಳ ಕರಡಿಗೆಗಳಲ್ಲಿಯೂ, ಇಂದ್ರಾದಿ ದಿಕ್ಪಾಲಕರ ಕರಡಿಗೆಗಳಲ್ಲಿಯೂ, ಮೋಕ್ಷಾಪೇಕ್ಷಿಗಳಾದ ಭಕ್ತರು ತಮ್ಮ ಕಕ್ಷಗಳಲ್ಲಿ ಕಟ್ಟಿರುವ ಕರಡಿಗೆಗಳಲ್ಲಿಯೂ ನೀನು ಸದಾ ಹೇಗೆ ಇರುತ್ತಿರುವೆಯೋ ಅಂಥ ಇರುವಿಕೆಯನ್ನು ನಾನು ಬೇಡುವುದಿಲ್ಲ. ನನ್ನ ಶಿರಸ್ಸಿನಲ್ಲಿ ನೀನು ಸದಾ ಹೇಗೆ ಇರಬೇಕೆಂದರೆ—ನನ್ನ ಶಿರಸ್ಸೆಂಬ ಪೀಠದಲ್ಲಿ ನೀನು ಲಿಂಗಾಂಗಸಂಗವೆನಿಸಿ ಸ್ವಯಂಭುಲಿಂಗಮೂರ್ತಿಯಾಗಿ ಇದ್ದುಕೊಂಡು

ಜ್ಞಾಪನಾಂಶೃಣು | ಅವಿನಾಭಾವಸಂಬಂಧಂ ತ್ವಯಾಯಾಚೇಽಹಮೀಶ್ವರ ||
ಸರ್ವತಃಪಾಣಿಪಾದಂ ತಮಿತಿ ವೇದೈರ್ನಿರಂತರಂ | ನಿರೂಪಿತತ್ವಾತ್ತ್ವದ್ದಿವ್ಯ
ಲಿಂಗಾಂಗಸ್ಯ ಮಹೇಶ್ವರ ||೧೦೭|| ಧರಣ್ಯಾಂವಿಶ್ರುತತರಾದ್ಯಥಾರಾಜಾ ತ
ಥಾಪ್ರಜಾಃ | ಇತಿನ್ಯಾಯಾನ್ಮಯಿಶಿವ ನಗಾಕಾರತ್ವಮಾಶ್ರಿತೇ ||೧೦೮|| ಮ
ದ್ದೇಹಂ ಸಕಲಂ ಮೂರ್ಧ್ನಾ ಧರ್ತುಂತ್ವಾಂ ಪರಮೇಶ್ವರ| ಸರ್ವಂಮದಂಗಂನೇ
ತ್ರಾಣಿ ಭವಂತಂದ್ರಷ್ಟುಮೀಶ್ವರ ||೧೦೯|| ಸರ್ವಂಮದಂಗಂಶ್ರೋತ್ರಾಣಿತ್ವಾಂ
ಶ್ರೋತುಂ ಕರುಣಾಕರ | ಸರ್ವಂಮದಂಗಂರಸನಾಸ್ತ್ವಾಂಸ್ತೋತುಂ ಪಾರ್ವ
ತೀಪತೇ ||೧೧೦|| ಮದ್ದೇಹಂಸಕಲಂಪಾಣೀಂ ಸ್ತ್ವಾಮರ್ಚಯಿತುಮೀಶ್ವರ |
ಸರ್ವಂಮದಂಗಂಚಿತ್ತಾನಿ ಕೃತ್ವಾತ್ವಾಂಸ್ಮರ್ತುಮೀಶ್ವರ || ೧೧೧ || ತ್ವದ್ದಾ
ಸೋಽಹಮಿತಿಪ್ರಜ್ಞಾಂ ದತ್ವಾಚಾದ್ವೈತವಾರಿಧೌ | ಅಮಜ್ಜಯಿತ್ವಾಸದ್ಭಕ್ತಿಂ
ದೇಹಿಮೇ ಪರಮೇಶ್ವರ ||೧೧೨|| ರಕ್ಷಶಿಕ್ಷಯ ತೇಭೃತ್ಯೋ ಯಥಾಸ್ಯಾಂಪ
ಶ್ಯಮಾಂತಥಾ | ಕಿಂಚಕೈಲಾಸಮೈನಾಕ ಶುಕ್ತಿಮನ್ನೀಲಪರ್ವತಾಃ ||೧೧೩||
ಗೌರೀತುಷಾರಮಾಣಿಕ್ಯ ಮಾಹೇಂದ್ರಶ್ವೇತಪರ್ವತಾಃ | ಸಾರಂಗಸಹ್ಯಕಲ್ಯಾ
ಣ ಸೈಂಧವೋತ್ತರಕಿಂಶುಕಾಃ ||೧೧೪|| ವಿಶಾಲೋದಯ ವಜ್ರಾಪ್ರವಾಲ್ಯ
ವದ್ಗಂಧಮಾದನಾಃ | ಹಿಮವದ್ವರ್ಧಮಾನಾಸ್ತ ಸೋಮಸೈಮಿಶಹಾರಿತಾಃ ||

---

ನನ್ನನ್ನು ಅನುಗ್ರಹಿಸಬೇಕು. ಎಲೈ ಪರಮೇಶ್ವರನೆ! ವೇದಗಳು ನಿನ್ನನ್ನು ಎಲ್ಲ ಕಡೆಯೂ ಕರ ಚರಣಗಳುಳ್ಳವನು ಎಂದು ಹೇಳುತ್ತಿರುವುದರಿಂದ ನಿನ್ನ ದಿವ್ಯಲಿಂಗಾಂಗದ ಅವಿನಾಭಾವ (ಎಡೆ ಬಿಡದ) ಸಂಬಂಧವನ್ನು ನಾನು ಬೇಡುವೆನು- ಅದನ್ನು ದಯಪಾಲಿಸಬೇಕು ಇದೇ ನನ್ನ ವಿಜ್ಞಾಪನೆಯು. ||೧೦೭|| ದೊರೆಯಂತೆ ಪ್ರಜೆಗಳು ಎಂಬ ಲೋಕಪ್ರಸಿದ್ಧವಾಗಿರುವ ನೀತಿ ಯಂತೆ ನೀನು ಸರ್ವತ್ರ ಪಾಣಿಪಾದ ನೇತ್ರಾದಿಗಳುಳ್ಳವನಾದ ಬಳಿಕ ಪರ್ವತಾಕಾರನಾದ ನಾನೂಕೂಡ ಸರ್ವತಃ ಪಾಣಿಪಾದಾದಿಗಳುಳ್ಳವನಾಗತಕ್ಕದು ನ್ಯಾಯವೇ ಆಗಿರುವುದು. ಆದುದರಿಂದ ನಿನ್ನನ್ನು ಮಸ್ತಕದಲ್ಲಿ ಧರಿಸಿಕೊಳ್ಳಲಿಕ್ಕಾಗಿ ನನ್ನ ದೇಹವೆಲ್ಲವೂ ತಲೆಗಳಾಗಿ ಯೂ, ನಿನ್ನನ್ನು ನೋಡುವುದಕ್ಕೆ ನನ್ನ ಶರೀರವೆಲ್ಲವೂ ಕಣ್ಣುಗಳಾಗಿಯೂ. ನಿನ್ನ ನಾಮಶ್ರವ ಣಕ್ಕೆ ನನ್ನ ಕಾಯವೆಲ್ಲವೂ ಕರ್ಣಗಳಾಗಿಯೂ, ನಿನ್ನ ಸ್ತೋತ್ರಮಾಡಲಿಕ್ಕೆ ನನ್ನ ತನುವೆಲ್ಲ ವೂ ನಾಲಗೆಗಳಾಗಿಯೂ ||೧೧೦|| ನಿನ್ನನ್ನು ಪೂಜಿಸಲಿಕ್ಕೆ ನನ್ನ ದೇಹವೆಲ್ಲವೂ ಕೈಗಳಾಗಿ ಯೂ, ನಿನ್ನನ್ನು ಸ್ಮರಿಸುವುದಕ್ಕೆ ನನ್ನ ಗಾತ್ರವೆಲ್ಲವೂ ಚಿತ್ತಗಳಾಗಿಯೂ ಇರುವಂತೆ ಮಾಡಿ, ನಿನಗೆ ನಾನು ಭೃತ್ಯನೆಂಬ ಭಾವನೆಯನ್ನು ಕೊಟ್ಟು, ಅದ್ವೈತವೆಂಬ ಅಖಂಡ ಸಮುದ್ರದಲ್ಲಿ ನನ್ನನ್ನುಮುಳುಗಿಸಡೆ ಸದಾ ನಿನ್ನ ಭಕ್ತಿಯನ್ನು ಅನುಗ್ರಹಿಸು ||೧೧೨|| ನನ್ನನ್ನು ನಿನ್ನ ಆಳಿ ನಂತೆ ಕಂಡು ಕಾಪಾಡು, ಬೇಕಾದ ಶಿಕ್ಷೆಯನ್ನು ಮಾಡು. ಮತ್ತು ಕೈಲಾಸ, ಮೈನಾಕ,

ವಿದ್ಯುತ್ಪ್ರವಾಳಕುಸುಮ ಸುವೇಲವೃಷಕುಂಜರಾಃ । ಹೇಮಕೂಟಕ್ರೌಂಚ ಚಿತ್ರ ಕೂಟರೋಹಣಮಾನಸಾಃ ॥೧೧೭॥ ಸೀಮೇಂದ್ರಕೀಲ ನಿಷಧವೈರೋಚನ ಮಹೀಧರಾಃ । ಋಷ್ಯಮೂಕಾದ್ರಿ ವಕುಲಪೂರ್ವಸಂಧ್ಯಾಮಹೀಧರಾಃ ತಾಮ್ರಮೇಚಕಶೃಂಗಾದ್ರಿಗೋವರ್ಧನ ಮಹೀಭೃತಃ । ಮಲಯಾಚಲವಿಂಧ್ಯಾದ್ರಿ ಪಾರಿಯಾತ್ರಧರಾಧರಾಃ ॥ ೧೧೮ ॥ ಕೇಸರಾಚಲರೌಪ್ಯಾದ್ರಿ ಶತಮೇರು ಮಹೀಧರಾಃ । ಇತ್ಯಾದಯೋ ಮಹಾಶೈಲಾಸ್ತ್ರಿಷುಲೋಕೇಷು ವಿಶ್ರುತಾಃ ತಥಾಭಾಗೀರಥೀಗಂಗಾ ತುಂಗಭದ್ರಾ ಸರಸ್ವತೀ । ಪಾತಾಳಗಂಗಾವಿರಜಾಕೌಶಿಕೀವರುಣಾಚರಾ ॥೧೨೦॥ ಅಸಿಸೌಗಂಧಿಕಾನಂದಾ ಗಾಂಧಾರೀವಂಜರಾಮರೀ । ವೇಣೀಭೀಮರಥೀ ಶ್ವೇತಪ್ರಸೂತಾಶೋಣಪುಷ್ಕರಾ ॥೧೨೧॥ ಕಾವೇರೀನರ್ಮದಾ ಸೋಮಪ್ರಭಾಸಾತಮಸಾನದೀ । ವಿಪಾಶಾಯಮುನಾಶುಕ್ರಪ್ರಭಾಸಾಸರಯೂರಪಿ ॥೧೨೨॥ ಪ್ರಯಾಗಾಗೋಮತೀ ಕೃಷ್ಣಾವೇಣೀಗುಧವತೀನದೀ । ಮಂದಾಕಿನೀ ತಾಮ್ರಪರ್ಣೀ ವಿಮಲಾಽಭ್ರಾಚವಿಶ್ರುತಾ ಮಹಾಭಾಗಾವೈತರಣೀ ಚಂದ್ರಭಾಗಾತರಂಗಿಣೀ । ವಿಚಿತ್ರಾವಿಜಯೋತ್ಸಾಹಾ ವಿಮಲಾವೇತ್ರವತ್ಯಪಿ ॥೧೨೪॥ ತಥಾವೇದವತೀ ಪಂಚನದೀವೇಗವತೀನದೀ । ಮಲಪ್ರಹಾರೀಗಾಯತ್ರೀ ಗೌತಮೀಗಂಡಕೀನದೀ ॥೧೨೫॥ ಇತ್ಯಾದಿಕಾಮಹಾನದ್ಯ ಸ್ತೀರ್ಥಾನಿಚ ಮಹೇಶ್ವರ । ಮೂರ್ತಿಂಸ್ವೀಕೃತ್ಯತಿಷ್ಠಂತು ಮಯ್ಯೇವೈಷವರೋಮಮ ॥ ೧೨೬ ॥ ಕಿಂಚವಿಪ್ರಾಃಕ್ಷತ್ರಿಯಾಶ್ಚ ವೈಶ್ಯಾಶ್ಶೂದ್ರಾ ಮಹೀತಲೇ । ಅಕುಲೀನಾಃ ಕುಲೀನಾವಾ ಮದ್ಗಿರಿಂಸಂಸ್ಪೃಶಂತಿಚೇತ್ ॥೧೨೭॥ ತತ್ಪೂರ್ವಜನ್ಮದುಷ್ಕರ್ಮಾಣ್ಯಘಕೋಟೀರನೇಕಶಃ । ವಿನಾಶ್ಯತೇಷಾಮಿಷ್ಟಾರ್ಥಸಿದ್ಧಿಂಕುರು ಸದಾಶಿವ ॥೧೨೮॥ ಏಷಏವವರೋನಾಸ್ಯೋ

---

ಶುಕ್ತಿಮಾನ್, ನೀಲ................ಶತಮೇರು ಮೊದಲಾದ ಲೋಕಪ್ರಸಿದ್ಧ ಸಕಲ ಪರ್ವತಗಳೂ, ||೧೧೯|| ಗಂಗೆ, ತುಂಗಭದ್ರೆ, ಸರಸ್ವತಿ, ಪಾತಾಳಗಂಗೆ.........................ಗಂಡಕೆ ಮೊದಲಾದ ಮಹಾನದಿಗಳೂ ಸಕಲ ತೀರ್ಥಗಳೂ ಸೇತು ಸಾಕಾರವಾಗಿ ನನ್ನಲ್ಲೇ ಬಂದು ವಾಸವಾಗಿರುವಂತೆ ಅನುಗ್ರಹಿಸು. ಮತ್ತು ಬ್ರಹ್ಮ ಕ್ಷತ್ರಿಯಾದಿ ಚತುರ್ವರ್ಣಗಳವರೂ ಜಾತಿವಂತರೂ ಜಾತಿಹೀನರೂ ಇವರಾರೇಆಗಲಿ ಬಂದು ಈ ಪರ್ವತವನ್ನು ಸ್ಪರ್ಶಮಾಡಿದರೆ ಆದರೆ ಅವರ ಪೂರ್ವಜನ್ಮ ದುಷ್ಕೃತಗಳನ್ನೂ ಅನಂತಕೋಟಿ ಪಾಪಗಳನ್ನೂ ಸಹ ನಾಶಗೊಳಿಸಿ ಇಷ್ಟಾರ್ಥಸಿದ್ಧಿಯನ್ನುಂಟುಮಾಡು. ಎಲೈ ಸದಾಶಿವನೆ! ಇದು ಹೊರತು ನಾನು ಇನ್ನಾವ ವರವನ್ನೂ ಬೇಡುವುದಿಲ್ಲ" ಎಂದು ಬಿನ್ನಯಿಸಿ, ಶಿವನಿಂದ "ಕೊಟ್ಟೆ ಕೊಟ್ಟೆ ಕೊಟ್ಟೆ" ನೆಂಬ

ಪರಂಯಾಚೇಽಹಮಿಶ್ವರ| ಇತಿತ್ರಿವಾಚಿಕಂಲಬ್ಧ್ವಾಪರ್ವತೋವರಮೀಶ್ವರಾತ್ ||೧೨೯|| ಅನಘಃ ಪರ್ವತಾಕಾರಂ ಪ್ರಪೇದೇಸಮುನಿಸ್ತದಾ | ತಚ್ಛೈಲೋತ್ತುಂಗ ಶೃಂಗೋತ್ತಮಾಂಗಪೀಠೇ ಸಶಂಕರಃ ||೧೩೦|| ಶ್ರೀಸ್ವಯಂಭೂಲಿಂಗಮೂರ್ತಿ ಮಂಗೀಕೃತ್ಯಾವಸತ್ತದಾ | ಶ್ರೀಶೈಲಧರ್ಮ್ಯಹರ್ಮ್ಯಾಗ್ರಮಾಣಿಕ್ಯಕಲಶೋಯಥಾ ||೧೩೧|| ತದ್ದಿವ್ಯಲಿಂಗಂಮಹಿತಂ ಬಭೌತಚ್ಛೃಂಗಮಧ್ಯತಃ | ಶಿವದುಂದುಭಯೋ ನೇದುಃ ಪುಷ್ಪವೃಷ್ಟಿಃ ಪಪಾತಚ ||೧೩೨|| ತತಸ್ಸಾಕಂಮಹೇಶೇನ ಧೃತ್ವಾಮೂರ್ತಿಂತತಸ್ತತಃ | ಪುಣ್ಯತೀರ್ಥಾನಿಸರ್ವಾಣಿ ಪುಣ್ಯಾಯತನಸಂಚಯಃ ||೧೩೩|| ಪುಣ್ಯಾನದ್ಯಃ ಪುಣ್ಯಲೋಕಾಃ ಪುಣ್ಯಸ್ಥಾನಾನಿಸರ್ವಶಃ | ಪುಣ್ಯಮಾರ್ಗಾಃ ಪುಣ್ಯಶೈಲಾಸ್ಸರ್ವಪುಣ್ಯಸರಾಂಸಿಚ ||೧೩೪|| ಪುಣ್ಯಾಷಧಾನಿ ಪುಣ್ಯಾನಿ ಕಾನನಾನಿ ಸಮಂತತಃ | ಪುರಾಣಿಪುಣ್ಯಪೂರ್ಣಾನಿ ವಿತತಾಃ ಪುಣ್ಯಭೂಮಯಃ ||೧೩೫|| ಅಖಿಲಾನಿಚಪುಣ್ಯಾನಿ ಪುಣ್ಯರೂಪಸ್ಯತದ್ಗಿರೇಃ | ಅತಿಷ್ಠಸ್ಪುಣ್ಯಶೃಂಗೇಷು ಸಂಘೀಭೂಯ ನಿರಂತರಂ ||೧೩೬||

ಇತಿ ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ತತ್ಪಂಡಿತಾರಾಧ್ಯದೇವೇನ ದೋಸಮಾರ್ಯಾಯ ಶ್ರೀಪರ್ವತೋತ್ಪತ್ತಿ ಸಂಕೀರ್ತನಕಥನಂ ನಾಮ ದ್ವಿತೀಯೋಽಧ್ಯಾಯಃ.

---

ಮೂರುಸೂಳು ವರವನ್ನು ಪಡೆದು, ಆಗ ಪರ್ವತಮುನಿಯು ಬೆಟ್ಟದ ಆಕಾರವನ್ನು ತಳೆದನು- ||೧೩೦||ಆ ಪರಶಿವನು ಕೂಡ ಸ್ವಯಂಭೂಲಿಂಗ (ಒಡೆದು ಮೂಡಿದ ಲಿಂಗ)ದ ಆಕಾರವನ್ನು ಧರಿಸಿ, ಆ ಪರ್ವತದ ಎತ್ತರವಾದ ಶಿಖರವೆಂಬ ಮಸ್ತಕಪೀಠದಲ್ಲಿ ನೆಲಸಿದನು. ಆ ದಿವ್ಯಲಿಂಗವು ಶ್ರೀ ಶೈಲವೆಂಬ ಮಹಾ ಸುವರ್ಣಪ್ರಾಸಾದದ ತುದಿಯಮೇಲೆ ಇಟ್ಟ ರತ್ನಕಲಶದಂತೆ ಗಿರಿಯ ಶೃಂಗಾಗ್ರದಲ್ಲಿ ವಿರಾಜಿಸಿತು. ಆಗ ದೇವದುಂದುಭಿಗಳು ಮೊಳಗಿದುವು. ಹೂವಿನ ಮಳೆಯು ಸುರಿದಿತು. ||೧೩೨|| ಆಪೊಡನೆಯೇ ಸಕಲ ಪುಣ್ಯತೀರ್ಥಗಳೂ ಸರ್ವ ಮಹಿಮಸ್ಥಲಗಳೂ, ಎಲ್ಲಾ ಪುಣ್ಯನದಿಗಳೂ, ಅಖಿಲ ಪುಣ್ಯಲೋಕಗಳೂ, ನಿಖಿಲ ಪುಣ್ಯಪಥಗಳೂ, ಸಮಸ್ತ ಪುಣ್ಯಗಿರಿಗಳೂ, ಅಶೇಷ ಪುಣ್ಯಸರಸ್ಸುಗಳೂ, ಅಖಂಡ ಮೂಲಿಕೆಗಳೂ, ವನಗಳೂ, ಪುಣ್ಯನಗರಗಳೂ, ಪುಣ್ಯಭೂಮಿಗಳೂ, ಸರ್ವ ಪುಣ್ಯಗಳೂ ಸಹ ಪುಣ್ಯರೂಪವಾದ ಆ ಶ್ರೀಶೈಲದ ಪುಣ್ಯಶಿಖರಗಳಲ್ಲಿ ಗುಂಪುಗುಂಪಾಗಿ ಬಂದು ಸದಾ ನೆಲಸಿದುವು ||೧೩೬||

ಎಂಬಲ್ಲಿಗೆ ಶ್ರೀ ಪರ್ವತೋತ್ಪತ್ತಿ ಮೊದಲಾದುವನ್ನು ವರ್ಣಿಸುವ
೨ನೆ ಅಧ್ಯಾಯವು ಮುಗಿದುದು.

# ಅಥ ತೃತೀಯೋಽಧ್ಯಾಯಃ.

## (ಗೌತಮಾದಿ ಮುನಿಕೃತ ಶ್ರೀಗಿರಿಪ್ರಶಂಸಾ)

ಅಥಾಸ್ಮಾಕಂಗಿರಿರಯಂ ಕ್ರೀಡಾಸ್ಥಾನಂ ಮನೋಹರಂ | ಇತಿಪ್ರಮಥಸಂದೋಹಃ ಪ್ರಮೋದಂ ಪರಮಂಯಯೌ ||೧|| ಅಯಮೇವಹಿಕೈಲಾಸಃ ಪ್ರತ್ಯಕ್ಷಸ್ಸುಮಹಾನಿತಿ | ಶ್ರೀಮಹಾರುದ್ರಸಂದೋಹ ಸ್ಸಮಗಾತ್ತೋಷಮುನ್ನತಂ ||೨|| ಇದಮೇವಸ್ಥಲಂಕರ್ತುಂ ಮಹಾದೇವಾರ್ಚನಾಮಿತಿ | ಹೃಷ್ಟಂ ಬಭೂವನಿತರಾಂ ದೇವತಾನಾಂಕದಂಬಕಂ ||೩|| ಪ್ರಾಪ್ತಾಽಸ್ಮಾಭಿಶ್ಶಂಭುಸೇವಾ ಪರ್ವತಸ್ಯ ಕೃಪಾವಶಾತ್ | ಇತಿವಿಷ್ಣುಪ್ರಭೃತಯಸ್ಸ್ತುತಿಂ ಚಕ್ರುರ್ದಿವೌಕಸಃ ||೪|| ಅಪಿಚಾಸುರಭಕ್ತ್ಯೈಶಂಸೇವಿತುಂ ಸುತರಾಮಿದಂ | ಸ್ಥಲಮಿತ್ಯನ್ನತಾನಂದ ಮಗಮದ್ದನುಜವ್ರಜಃ ||೫|| ಅಪಶ್ಯಾಮತ್ರಿಪಥಗಾ ಸಂಗಮಂಚೇವಿತಾವಯಂ | ಇತಿಮಾನುಷಸಂದೋಹಃ ಪರಿತುಷ್ಟಾವಸಾದರಂ || ನಿತ್ಯಂ ಜಪತಪೋಧ್ಯಾನ ಸತ್ಕ್ರಿಯಾಃ ಕರ್ತುಮುತ್ತಮಂ | ಇದಮೇವಸ್ಥಲಮಿತಿ ಮುನಿವೃಂದಮಗಾನ್ಮುದಂ ||೭|| ಅಭೀಪ್ಸಿತಾಸ್ಸಿದ್ಧಯೋಽತ್ರ ಸಿದ್ಧ್ಯಂತೀತಿ ನಿರಂತರಂ | ಸಿದ್ಧಸಾಧ್ಯಾದಿನಿವಹಸ್ಸಂಮುದಂ ಸಮಶಿಶ್ರಿಯತ್ ||೮|| ಗಂಧರ್ವಗರುಡವ್ರಾತಸ್ತಥಾ ಕಿಂಪುರುಷವ್ರಜಃ | ಸೌಖ್ಯಪ್ರದೋಽಯಂ ಗಿರಿ

---

# ೩ನೆ ಅಧ್ಯಾಯವು.

## ಗೌತಮಾದಿ ಮಹರ್ಷಿಗಳು ಶ್ರೀ ಶೈಲಮಹತ್ತ್ವಪ್ರಶಂಸೆ ಮಾಡಿದ ಕಥೆ.

ಬಳಿಕ ಆ ಶ್ರೀಗಿರಿಯನ್ನು ಇದು ನಮಗೆ ಮನೋಹರವಾದ ವಿಹಾರಸ್ಥಾನವೆಂದು ಪ್ರಮಥರು ಯೋಚಿಸಿ ಅತ್ಯಂತ ಸಂತೋಷಪಟ್ಟರು. ಇದು ನಮಗೆ ಪ್ರತ್ಯಕ್ಷ ಕೈಲಾಸವೆಂದು ರುದ್ರಗಣವು ಆನಂದಿಸಿತು. ಶಿವಾರ್ಚನೆಗೆ ಇದು ಅತ್ಯನುಕೂಲ ಸ್ಥಲವೆಂದು ದೇವತೆಗಳು ನಿಶ್ಚಯ ಮಾಡಿದರು, ಈ ಪರ್ವತಮುನಿಯ ದಯೆಯಿಂದ ನಮಗೆ ಶಿವಸೇವೆಯು ಸುಲಭವಾಗಿ ಲಭಿಸಿತೆಂದು ವಿಷ್ಣ್ವಾದಿ ದೇವತೆಗಳು ಹೊಗಳಿದರು. ||೪|| ಅತಿಶಯ ಭಕ್ತಿಯಿಂದ ಶಂಕರನನ್ನು ಭಜಿಸುವುದಕ್ಕೆ ಇದು ಯೋಗ್ಯಸ್ಥಲವೆಂದು ರಾಕ್ಷಸರು ಹರ್ಷಗೊಂಡರು. ನಾವು ತ್ರಿವೇಣೀ ಸಂಗಮವನ್ನು ಈ ಗಿರಿಯಲ್ಲೇ ನೋಡಬಹುದಾಯಿತೆಂದು ಮನುಜರುಗಳು ಆನಂದಿಸಿದರು. ||೬|| ಜಪತಪೋಧ್ಯಾನಕರ್ಮಾಚರಣೆಗಳಿಗೆ ಇದೇ ಉತ್ತಮಸ್ಥಲವೆಂದು ಮುನಿಸ್ತೋಮವು ಪ್ರಮೋದಗೊಂಡಿತು. ಇಷ್ಟಾರ್ಥಸಿದ್ಧಿಗಳೆಲ್ಲಾ ಇಲ್ಲಿ ಕೈಗೂಡುವುವೆಂದು ಸಿದ್ಧಸಾಧ್ಯಾದಿಗಳೆಲ್ಲರೂ ಸಂಮೋದಗೊಂಡರು. ಗರುಡ ಗಂಧರ್ವಾದಿಗಳೆಲ್ಲರೂ ಇದೇ ಸೌಖ್ಯಪ್ರದಸ್ಥಾನವೆಂದು

ತ್ಯಾನಂದಂಪ್ರಾಪನಿರ್ಭರಂ ॥೯॥ ಲಸದ್ಗಿರಿಜಲಾರಣ್ಯಕ್ರೀಡಾನಾಮುಚಿತಂ ಸ್ಥಲಂ । ಇದಮೇವೇತಿತುಷ್ಟಾಃಭೂತ್ಸುಮನೋಗಣಿಕಾವಲಿಃ ॥೧೦॥ ಏತದ್ದರ್ಶನಮಾತ್ರೇಣ ಮುಕ್ತಿಸ್ಸ್ಯಾತ್ಸುತರಾಮಿತಿ । ಮುಮುಕ್ಷುಜನಸಂದೋಹಃ ಪರಾಂಪ್ರೀತಿಮುಪಾಗಮತ್ ॥೧೧॥ ಅದ್ಭುತಾದ್ರಿರಯಂಲಬ್ಧ ಇತಿಭಕ್ತಕದಂಬಕಂ । ಜಗಾಮಮೋದಮತುಲಂ ಸ್ವಕೀಯೇಮಾನಸೇತದಾ ॥೧೨॥ ದಧೀಚಿ ಗೌತಮಭೃಗು ಶಿಲಾದಾತ್ರಿ ಮುನೀಶ್ವರಾಃ । ಕಣ್ವೋಪಮನ್ಯುಪ್ರಮುಖಾಸ್ತದಾಸಂತುಷ್ಟಮಾನಸಾಃ ॥೧೩॥ ದೇವದೇವಮಹಾದೇವ ದಿವ್ಯಲಿಂಗಾಂಗಶಂಕರ । ಪ್ರಮಥತ್ವಮದಾಶ್ಯರ್ವ ಪ್ರಮಥೇಭ್ಯಸ್ಸಮುನ್ನತಂ ॥೧೪॥ ಶ್ರೀರುದ್ರೇಭ್ಯೋರುದ್ರಪದಂ ಬ್ರಹ್ಮತ್ವಂ ಬ್ರಹ್ಮಣೇಪುನಃ । ನಾರಾಯಣಾಯ ವಿಷ್ಣುತ್ವಮಮಿತಂ ಗಿರಿಜಾಪತೇ ॥೧೫॥ ಇಂದ್ರಾಗ್ನಿಕಾಲನಿಋತಿ ವರುಣೇಭ್ಯಸ್ತಥಾ ಪುನಃ । ಮರುದ್ಯಕ್ಷೇಶ್ವರೇಶೇಭ್ಯೋ ದೇವದೈತ್ಯಕುಲಾಯಜ ॥೧೬॥ ಗನ್ಧರ್ವಸಿದ್ಧಗರುಡ ಸಾಧ್ಯಾದಿಭ್ಯೋ ಮಹೇಶ್ವರ । ದತ್ತಾಸ್ತ್ವಯಾಧಿಕಾರಾಣಾಮಷ್ಟಾವಿಂಶತಿಕೋಟಯಃ ॥೧೭॥ ಕಿಂತ್ವೇನಂಪರ್ವತಮುನಿಂ ತ್ವತ್ಕೃಪಾಮೃತವಾರಿಧೌ । ಮಜ್ಜಯಿತ್ವಾಮುನೇರಸ್ಯ ಶಿರಃಪೀಠೇವಿರಾಜಿತೇ ॥೧೮॥ ಲಿಂಗಸಾನ್ನಿಧ್ಯಾಸುರಕ್ತ್ಯಾ ಸಹಿತಸ್ತ್ವಂ ನಿರಂತರಂ । ಪ್ರತ್ಯಕ್ಷಲಿಂಗರೂಪೇಣವಸಸಿ ಶ್ರೀಮಹೇಶ್ವರ ॥೧೯॥ ಏತಾದೃಶೋವರಃಕಸ್ಮೈ ಪುರಾದತ್ತಸ್ತ್ವಯಾಶಿವ ।

---

ಪ್ರೀತಿಗೊಂಡರು. ಗಿರಿಕ್ರೀಡೆ ವನಕ್ರೀಡೆ ಜಲಕ್ರೀಡೆ ಇವುಗಳಿಗೆಲ್ಲಾ ಇದು ಯೋಗ್ಯಸ್ಥಲವೆಂದು ದೇವವಾರಾಂಗನೆಯರು ಸಂತುಷ್ಟಿಗೊಂಡರು. ॥೧೧॥ ದರ್ಶನಮಾತ್ರದಿಂದ ಇದು ಮುಕ್ತಿಯನ್ನೀಯುವುದೆಂದು ತಪಸ್ವಿಗಳು ಪ್ರಮುದವನ್ನಾಂತರು. ಆಶ್ಚರ್ಯಕರ ಮಹತ್ತ್ವವುಳ್ಳ ಗಿರಿಯು ತಮಗೆ ದೊರೆಯಿತೆಂದು ಭಕ್ತರು ಸಂಮುದವನ್ನು ತಳೆದರು. ದಧೀಚಿ ಗೌತಮಾದಿ ಮಹರ್ಷಿಗಳೆಲ್ಲರೂ ಶ್ರೀ ಪರ್ವತವನ್ನು ನೋಡಿ ಆನಂದಿಸಿ, ಶಂಕರನನ್ನು ಕುರಿತು—ಲಿಂಗಾಂಗಿಯಾದ ಎಲೈ ಸ್ವಾಮಿ! ನೀವು ಪ್ರಮಥರುಗಳಿಗೆ ಪ್ರಮಥ ಪದವಿಯನ್ನೂ, ರುದ್ರರುಗಳಿಗೆ ರುದ್ರಪದವಿಯನ್ನೂ, ಬ್ರಹ್ಮನಿಗೆ ಬ್ರಹ್ಮತ್ವವನ್ನೂ, ನಾರಾಯಣನಿಗೆ ವಿಷ್ಣುಪದವಿಯನ್ನೂ, ಇಂದ್ರಾದಿಗಳಿಗೆ ದಿಕ್ಪಾಲಕ ಪದವಿಯನ್ನೂ, ಯಕ್ಷರಕ್ಷೋ ಗರುಡ ಗಂಧರ್ವದನುಜಾದಿಗಳಿಗೆ ೨೮ ಕೋಟಿ ಅಧಿಕಾರ ಪದವಿಗಳನ್ನೂ ಕೊಟ್ಟಿರುವೆ, ಆದರೆ ಈ ಪರ್ವತ ಮುನಿಯನ್ನು ನೀನು ದಯಾರಸ ಸಮುದ್ರದಲ್ಲಿ ಮುಳುಗಿಸಿ, ಪ್ರೀತಿಯಿಂದ ಇವನ ಮಸ್ತಕವೆಂಬ ಪೀಠದಮೇಲೆ ಪ್ರತ್ಯಕ್ಷ ಲಿಂಗರೂಪದಿಂದ ಸದಾ ವಾಸಮಾಡುತ್ತೀಯೆ. ಇಂಥ ವರವನ್ನು ನೀನು ಪೂರ್ವದಲ್ಲಿ ಯಾರಿಗೆ ಕೊಟ್ಟಿದ್ದೀಯೆ? ॥೧೯॥ ದೃಢಭಕ್ತಿಯಿಂದ ತನ್ನ ತಲೆಯಮೇಲೆ ಶಿವಲಿಂಗವನ್ನು ಧರಿಸಿರುವ

ಉತ್ತಮಾಂಗೇ ದಿವ್ಯಲಿಂಗಂ ದಧಾನಘನಭಕ್ತಿತಃ ||೨೦|| ಶ್ರೀವೀರಭದ್ರಏವೈಕ
ಸ್ಸಏವಾಸ್ಯ ಸಮೋಮತಃ | ತದ್ವೀರಭದ್ರೋತ್ತಮಾಂಗ ಲಿಂಗಸಂಬಂಧಲಕ್ಷ
ಣೇ ||೨೧|| ವಿಚಾರಿತೇ ದಿವ್ಯಲಿಂಗಂ ವಿದ್ಯತೇ ಮೂರ್ಧ್ನಿಕೇವಲಂ | ನಾಸ್ಯತ
ಸ್ತದ್ವೀರಭದ್ರಮಹಿಮಾ ಭೂತಲೇಕಿಯಾನ್ ||೨೨|| ಶರೀರಂ ಪರ್ವತಸ್ಯೇದಂ
ಪರ್ವತಾಗ್ರಮಿದಂಮಹತ್| ಇದಂಲಿಂಗ ಮಿದಂಪೀಠಮಿತಿ ಭೇದೋನವಿದ್ಯತೇ||
ಶ್ರೀಪರ್ವತಃ ಪರ್ವತಸ್ಯಮುನೇಃ ಕಾಯಸ್ಸಏವಹಿ | ಪರ್ವತಾಗ್ರಂತದೇವೇಶ
ಪೀಠಂ ಲಿಂಗಸ್ಯಯೋನಿತತ್ || ೨೪ || ತಲ್ಲಿಂಗಮೇವ ಸನ್ಮೋಕ್ಷಫಲದಾತೃ ಶ
ತೋಭುವಿ | ಪರಮರ್ಷಿಃ ಪರ್ವತೇಂದ್ರಃ ಪರ್ವತಃ ಪರ್ವತೋತ್ತಮಃ ||೨೫||
ತಪೋಧನಃ ಪರ್ವತೇಂದ್ರಶ್ಶಿವಪೀಠಂಹಿಪರ್ವತಃ | ತಲ್ಲಿಂಗಂ ಪರ್ವತಾಧೀಶಃ
ಪರ್ವತಃ ಪ್ರಮಥಾಧಿಪಃ ||೨೬|| ಪರ್ವತೋಮೋಕ್ಷದಃ ಪುಂಸಾಂ ಭುವಿದರ್ಶ
ನಮಾತ್ರತಃ | ಏಷಶ್ರೀಪರ್ವತಾಧೀಶೋ ಮಹಾಮಾಹೇಶ್ವರಸ್ಸ್ಮೃತಃ ||
ಜಗತ್ಪಾವನಮೂರ್ತಿ ಶ್ರೀಪರ್ವತಾಧೀಶ್ವರೋಹ್ಯಯಂ | ಶಿಖರಂ ಶಿವಸದ್ಭ
ಕ್ತೇರಯಂ ಶ್ರೀಪರ್ವತೇಶ್ವರಃ ||೨೮|| ವಿವೇಕಿನಾಂ ಸಮಸ್ತಾನಾಂ ಮಧ್ಯೇ
ಸಮ್ಯಗ್ವಿಚಾರಿತೇ | ಏವಂವರಂಲಬ್ಧವಂತೋ ಧೀಮಂತಸ್ಸಂತಿಕಿಂಪುರಾ ||೨೯
ಕಿಂಚಸರ್ವೇ ಮಹಾದೇವಂ ಸ್ವಸ್ವಶಕ್ತ್ಯನುಸಾರತಃ | ಸಂಪೂಜಕಾಃ ಪೂಜಯಿ
ತ್ವಾಧ್ಯಾತ್ವಾಯೋಗೀಶ್ವರಾಸ್ಸದಾ ||೩೦|| ನಿಸ್ಪೃಹಾನಿಯತಾಭೂತ್ವಾ ಕಾ

---

ವೀರಭದ್ರೇಶನೊಬ್ಬನು ಮಾತ್ರ ಈ ಪರ್ವತ ಮುನಿಗೆ ಸಮಾನನು. ವಿಚಾರಮಾಡಿ ನೋಡಿದರೆ ಆ ವೀರಭದ್ರೇಶನ ಶಿರಸ್ಸಿನಲ್ಲಿ ದಿವ್ಯ ಲಿಂಗಧಾರಣವಿರುವುದರ ಹೊರತು ಮತ್ತಾವ ವಿಶೇಷ ಮಹಿಮೆಯು ಅವನಲ್ಲಿರುವುದು? ||೨೨|| ಈ ಶ್ರೀಶೈಲದಲ್ಲಾದರೊ ಇದು ಬೆಟ್ಟ, ಇದು ಶಿಖರ, ಇದು ಲಿಂಗ, ಇದು ಪೀಠ, ಎಂಬ ಭೇದವೇ ಇರುವುದಿಲ್ಲ. ಈ ಪರ್ವತ ಮುನಿಗೆ ಗಿರಿಯೇ ದೇಹವು. ಅದೇ ಶಿಖರವು. ಅದೇ ಲಿಂಗದ ಉತ್ಪತ್ತಿಸ್ಥಾನವು. ಆ ಪರ್ವತ ರೂಪ ಲಿಂಗವೇ ಮೋಕ್ಷಪ್ರದವು. ||೨೪|| ಅದುಕಾರಣ ಈ ಪರ್ವತವೇ ಪರಮರ್ಷಿಯು, ಇದೇ ಗಿರಿಶ್ರೇಷ್ಠವು, ಇದೇ ಮಹಾ ತಪಸ್ವಿಯು, ಇದೇ ಶಿವಪೀಠವು, ಈ ಪರ್ವತವೇ ಶಿವಲಿಂಗವು, ಈ ಗಿರಿಯೇ ಪ್ರಮಥಶ್ರೇಷ್ಠನು, ಈ ಶೈಲವೇ ದರ್ಶನಮಾತ್ರದಿಂದ ಮಾನವರಿಗೆ ಮುಕ್ತಿಪ್ರದವು. ಇದೇ ಪರಮ ಮಾಹೇಶ್ವರನು, ಇದೇ ಲೋಕಪಾವನಮೂರ್ತಿಯು, ಈ ಶೈಲವೇ ಶಿವಭಕ್ತಿಯ ಶಿಖರವು ||೨೮|| ವಿಚಾರಮಾಡಿ ನೋಡಿದರೆ ಭೂತಲದ ವಿವೇಕಿಗಳ ಮಧ್ಯದಲ್ಲಿ ಈ ಪರ್ವತ ಮುನಿಯಂತೆ ಲೋಕೋತ್ತರ ವರವನ್ನು ಪಡೆದ ಮತಿವಂತರು ಯಾರಾದರೂ ಪೂರ್ವದಲ್ಲುಂಟೆ? ಮತ್ತು ಪೂರ್ವದಲ್ಲಿ ಸರ್ವರೂ ತಂತಮ್ಮ ಶಕ್ತಿಗನುಸಾರವಾಗಿ ಶಿವನನ್ನು ಆರಾಧಿಸಿ ಎಂದರೆ ಅರ್ಚಕರು ಆರಾಧಿಸಿ, ಯೋಗೀಶ್ವರರು ಧ್ಯಾನಿಸಿ, ನಿಷ್ಕಾಮಿಗಳು ದೃಢವ್ರತರಾಗಿ, ಕಾಮು

ಮಯಿತ್ವಾತುಕಾಮುಕಾಃ | ಕೀರ್ತಯಿತ್ವಾಕೃತಧಿಯೋಽನುವೃತ್ಯವ್ರತಿನೋ ಜನಾಃ ||೩೧|| ಪ್ರಮಥಾಶ್ಶರಣಾಭಕ್ತಾಃ ಕೃತ್ವಾಭಜನಮುತ್ತಮಂ | ಭಾವಕಾಭಾವನಾಂಕೃತ್ವಾಚರ್ಚಾಂಕೃತ್ವಾ ಮುನೀಶ್ವರಾಃ ||೩೨|| ದತ್ವಾಽತ್ಮನಸ್ತಥಾಧನ್ಯಾವಿತೀರ್ಯ ವಿಬುಧಾಧನಂ| ಸ್ವಸ್ವಾಭೀಷ್ಟತಮಾನರ್ಥಾ ನಾಲಭಂತಕಿಮುಕ್ಷಿತಾ ||೩೩|| ಪುರೇದಾನೀಮಗ್ರತೋವಾ ಭವತಃ ಪರಮೇಶ್ವರ | ಅಲಭಂತ ಲಭಂತೇಕೇ ಲಪ್ಸ್ಯಂತೇ ವರಮೀದೃಶಂ ||೩೪||,ಕಿಂಚದತ್ವಾಸ್ವಕಂನೇತ್ರಂ ತುಭ್ಯಂ ಭಕ್ತ್ಯಾಮಹೇಶ್ವರ | ಅವಾಪಚಕ್ರಂ ದನುಜಹನನಾಯಜನಾರ್ದನಃ || ಹರತುಭ್ಯಂಶಿರೋದತ್ವಾ ಪರಶುಂ ಪ್ರಾಪ ಸತ್ವರಂ | ಭುವಿಭಾರ್ಗವರಾಮೋಪಿ ಪ್ರಹರ್ತುಂ ಧರಣೀಪತೀನ್ ||೩೫|| ಸ್ವಶಿರಾಂಸಿಮಹಾದೇವ ತುಭ್ಯಂ ದತ್ವಾಽತಿಭಕ್ತಿತಃ | ಚಂದ್ರಹಾಸಂ ಸುರಾನೀಕಹರಣಾಯಾಪರಾವಣಃ ||೩೬|| ತಪಸಾತೋಷಯಿತ್ವಾತ್ವಾಂ ಮಹೇಶಾನ ಧನಂಜಯಃ | ಅವಾಪಬಾಂಧವಾನ್ ಹಂತುಮಸ್ತ್ರಂ ಪಾಶುಪತಂಮಹತ್ ||೩೭|| ದತ್ವಾಽಯಂಪರ್ವತೋಲೋಕಹಿತಾಯಾತ್ಮಾನಮಾಶತೇ | ಪ್ರಾಪಸ್ವದರ್ಶನಾದೇವಸರ್ವೇಷಾಂ ಮುಕ್ತಿದಂಪದಂ ||೩೮|| ತ್ವಾಮುಪಾಸ್ಯತವಾರ್ಧಾಂಗಂ ತಪಸಾಪ್ರಾಪಪಾರ್ವತೀ | ಪರ್ವ

---

ಕರು ಇಷ್ಟಾರ್ಥವನ್ನು ಬೇಡಿ, ಧೀಮಂತರು ಕೀರ್ತನೆ ಮಾಡಿ, ವ್ರತತತ್ಪರರು ಆಯಾ ವ್ರತವನ್ನನುಸರಿಸಿ, ಪ್ರಮಥರೂ ಶರಣರೂ ಭಕ್ತರೂ ಭಜನೆಯನ್ನು ಮಾಡಿ. ಧ್ಯಾನತತ್ಪರರು ನಿಧ್ಯಾಸಮಾಡಿ, ಮುನಿಗಳು ಅನುಭವ ಪ್ರಸಂಗವನ್ನು ಮಾಡಿ, ಕೃತಾರ್ಥರು ಆತ್ಮಾರ್ಪಣೆ ಮಾಡಿ, ಪ್ರಾಜ್ಞರು ಧನವನ್ನರ್ಪಿಸಿ, ತಂತಮ್ಮ ಇಷ್ಟಾರ್ಥಗಳನ್ನು ಪಡೆದುಕೊಂಡರಲ್ಲವೆ? ಆದರೆ ಎಲೈ ಪರಶಿವನೆ! ಹಿಂದಾಗಲೀ ಈಗಾಗಲೀ ಮುಂದಾಗಲೀ ನಿನ್ನಿಂದ ಇಂತಪ್ಪ ವರವನ್ನು ಪಡೆದವರೂ ಪಡೆಯುತ್ತಿರುವವರೂ ಪಡೆವವರೂ ಯಾರಿರುವರು? ||೩೪|| ಮತ್ತು ವಿಷ್ಣುವು ಭಕ್ತಿಯಿಂದ ನಿನಗೆ ತನ್ನ ನೇತ್ರವನ್ನು ಸಮರ್ಪಿಸಿ, ರಾಕ್ಷಸವಧೆಗೋಸುಗ ಚಕ್ರಾಯುಧವನ್ನು ಪಡೆದುಕೊಂಡನು. ರಾವಣನು ತನ್ನ ತಲೆಗಳನ್ನು ತರಿದು ನಿನಗೆ ಸಮರ್ಪಿಸಿ ದೇವತೆಗಳ ಭಂಜನಕ್ಕಾಗಿ ನಿನ್ನಿಂದ ಕತ್ತಿಯನ್ನು ಪಡೆದುಕೊಂಡನು. ||೩೭|| ಅರ್ಜುನನು ನಿನ್ನನ್ನು ತಪಸ್ಸಿನಿಂದ ಮೆಚ್ಚಿಸಿ, ತನ್ನ ಬಾಂಧವರ ವಧೆಗಾಗಿ ಮಹಾ ಪಾಶುಪತಾಸ್ತ್ರವನ್ನು ಪಡೆದುಕೊಂಡನು. ಹೀಗೆ ಅವರೆಲ್ಲಾ ಆತ್ಮಲಾಭಾರ್ಥವಾಗಿ ಭಕ್ತಿಯನ್ನಾಚರಿಸಿ ಅರ್ಪಣೆಮಾಡಿದರು. ಈ ಪರ್ವತಮುನಿಯಾದರೊ ತನ್ನನ್ನೇ ಲೋಕಹಿತಾರ್ಥವಾಗಿ ನಿನಗೆ ಸಮರ್ಪಿಸಿ, ತನ್ನ ದರ್ಶನಮಾತ್ರದಿಂದ ಸಕಲರಿಗೂ ಮುಕ್ತಿಯುಂಟಾಗತಕ್ಕ ಪದವಿಯನ್ನು ನಿನ್ನಿಂದ ಪಡೆದುಕೊಂಡನು-||೩೯|| ಪಾರ್ವತಿಯು ನಿನ್ನನ್ನು ಕುರಿತು ತಪಸ್ಸುಮಾಡಿ ನಿನ್ನ ಅರ್ಧಾಂಗವನ್ನು ಪಡೆದುಕೊಂಡಳು. ಈ ಪರ್ವತನಾದರೊ ಭಕ್ತಿಯಿಂದ ನಿನ್ನ ಅತ್ಯಂತ ಲಿಂಗಾಂಗವನ್ನೇ ಪಡೆದುಕೊಂಡ

ತಸ್ತುತವಾಶೇಷಂ ಲಿಂಗಾಂಗಂ ಪ್ರಾಪಭಕ್ತಿತಃ ||೪೦|| ಸನತ್ಕುಮಾರ ಷ್ಟೋSಭೂದ್ಬ್ರಹ್ಮಜೋSದ್ವೈತಬುದ್ಧಿತಃ | ಶಿಲಾದಜಃ ಪರ್ವತಸ್ತು ಭಕ್ತ್ಯಾ ಪರಮಯಾSನ್ವಿತಃ ||೪೧|| ಶಿವಾಗಮೇ ಭಕ್ತಕಾಯೋ ಮಮ ಕಾಯ ಇತೀರಣಾ ತ್ | ಸಲಿಂಗಸಿಂಹಾಸನಂತೇ ಬಭೂವ ಪರಮೇಶ್ವರ ||೪೨|| ತಸ್ಮಾತ್ತ್ವತ್ಕೃಪಾ ಸಂಪತ್ಪ್ರಾಪ್ಯತೇ ಚೇತ್ಸದಾಶಿವ | ವಿದ್ಯತೇ ದುರ್ಲಭಂ ವಸ್ತು ಕಿಂವಾ ವಿಶ್ವಂಭರಾ ತಲೇ ||೪೩|| ಹಿತ್ವಾ ತಪಾಂಸ್ಯನ್ಯದೇವಸೇವಾಜಪಪರಾಯಣಾಃ | ಕೇಚಿಜ್ಜ ಡಧಿಯೋ ನಾಶಮಗಮನ್ಪರಿಮೋಹಿತಾಃ ||೪೪|| ಧಾರ್ಮಿಕಾಃ ಕೇಚಿದವನಾ ತಪಶ್ಚರಣವಾಂಛಯಾ | ಕಾನ್ತಾಕಟಾಕ್ಷಬಾಣೌಘೈರಭವನ್ನಿಹತಾಃ ಪರಂ || ತಪಾಂಸಿ ಕೇಚಿದದ್ವೈತಬುದ್ಧ್ಯಾ ಹಿತ್ವಾSಪರಾಧಿನಃ | ಭೂತ್ವಾ ಜಡಾಃ ಪರಿಭ್ರ ಷ್ಟಾ ಬಭೂವುರ್ಧರಣೀತಲೇ ||೪೬|| ಅನಿಚ್ಛಂತಸ್ತ್ವಾಂ ಮಹೇಶ ತಪಃ ಕೃತ್ವಾ ಪಿದಾರುಣಂ | ಅಧಮಾಃ ಕೇಚನ ಜನಾಃ ಪ್ರನಷ್ಟಮತಯೋSಭವನ್ ||೪೭|| ಸರ್ವೈರ್ವಿಕಲ್ಪೈಃ ಪ್ರತ್ಯೂಹೈರ್ದುರಾಶಾನಿಕರೈರ್ಘನೈಃ | ಅಕಾರ್ಯೈರ್ವಿಷ ಯೈರ್ಗರ್ವೈರಪಾಯೈಃ ಕಾಮಸಂಚಯೈಃ ||೪೮|| ಅನಿರೋಧಂ ತಪಃ ಪೂರ್ತಿಂ ಕೃತ್ವಾ ತಾತ್ಪರ್ಯಬುದ್ಧಿತಃ | ವಿಶೇಷಸಂತೋಷಯುಕ್ತ್ಯಾ ಭಕ್ತ್ಯಾ ತೇ ಪಾದಪ ದ್ಮಯೋಃ ||೪೯|| ನಿಷ್ಠಯಾ ಪರಿಶೀಲ್ಯೇಶ ಸಂಸೇವ್ಯ ತ್ವಾಂ ವಿಶೇಷತಃ | ತೋ ಷಯಿತ್ವಾ ಪರ್ವತೋSಯಂ ತ್ವಾಮೇವಾಪ ಮಹಾಮತಿಃ ||೫೦|| ಶ್ರೀಪರ್ವ ತಮುನಿಂ ಪುಣ್ಯಂ ಲಬ್ಧವಾನೀದೃಶಂ ಸುತಂ | ಮಹೀತಲೇ ನ ಧನ್ಯಃ ಕಿಂ ಶಿಲಾದ

---

ನು. ||೪೦|| ಬ್ರಹ್ಮಪುತ್ರನಾದ ಸನತ್ಕುಮಾರನು ಅದ್ವೈತಬುದ್ಧಿಯಿಂದ ಕೆಟ್ಟವನಾದನು. ಈ ಪರ್ವತನು ಪರಮ ಭಕ್ತಿಭಾವನೆಯಿಂದ ಕೂಡಿ, ಶಿವಾಗಮದಲ್ಲಿ ಭಕ್ತನ ದೇಹವೇ ನನ್ನ ದೇಹ ವೆಂದು ನೀನು ಅಪ್ಪಣೆಮಾಡಿರುವ ಮೇರೆಗೆ ಲಿಂಗರೂಪನಾದ ನಿನಗೆ ಸಿಂಹಾಸನವಾದನು. ಅದು ಕಾರಣ, ಎಲೈ ಶಂಕರನೆ! ನಿನ್ನ ಕೃಪೆಯೊಂದುಂಟಾದರೆ ದುರ್ಲಭವಾದ ವಸ್ತುವಾವುದಾದರೂ ಇರುವುದೆ? ||೪೩|| ಕೆಲ ಮೂಢಮತಿಗಳು ಅಜ್ಞಾನದಿಂದ ನಿನ್ನ ತಪಸ್ಸನ್ನು ಬಿಟ್ಟು ಅನ್ಯ ದೈವಸೇವಾಜಪತತ್ಪರರಾಗಿ ಕೆಟ್ಟುಹೋದರು. ಕೆಲ ಧಾರ್ಮಿಕರು ತಪಸ್ಸುಮಾಡುವುದಕ್ಕೆ ಹೋಗಿ ಮಧ್ಯೆ ಅಂಗನೆಯರ ಕಟಾಕ್ಷಬಾಣಘಾತಕ್ಕೆ ಗುರಿಯಾಗಿ ಹೋದರು. ||೪೫|| ಕೆಲ ಮೂಢರು ಅದ್ವೈತಬುದ್ಧಿಯಿಂದ ತಪಃಪರಿತ್ಯಾಗಮಾಡಿ ಅಪರಾಧಿಗಳಾಗಿ ಭ್ರಷ್ಟರಾದರು. ಕೆಲ ನೀಚರು ನಿನ್ನನ್ನು ಅಪೇಕ್ಷಿಸದೆ ಘೋರ ತಪಸ್ಸನ್ನು ಮಾಡಿ ಬುದ್ಧಿಹೀನರಾದರು. ||೪೭|| ಮತಿವಂತನಾದ ಈ ಪರ್ವತಮುನಿಪತಿಯಾದರೊ ವಿಕಲ್ಪ ವಿಘ್ನ ದುರಾಶೆ ವಿಷಯಜಾಲ ಅಹಂ ಕಾರ ಅಪಾಯ ಕಾಮ ಇವುಗಳೊಂದರ ತಡೆಯೂ ಇಲ್ಲದಂತೆ ನಿನ್ನಲ್ಲಿ ಪರ್ಯಾಪ್ತವಾದ ಬುದ್ಧಿಯಿಂದಲೂ ಸಂತೋಷದಿಂದಲೂ ನಿನ್ನ ಪಾದಭಕ್ತಿಯಿಂದಲೂ, ದೃಢನಿಷ್ಠೆಯಿಂದಲೂ

ಮುನಿಪುಂಗವಃ ||೫೧|| ಸುತೋಯದಿ ಪ್ರಾಪ್ಯತೇಚೇನ್ನಪ್ರಾಪ್ತವ್ಯಃಕಿಮಾದ್ಯ ಶಃ | ತಪಸಾಯಾಚಮಾನಾನಾಂ ತಸ್ಯಾನ್ಪರಮೇಶ್ವರಂ ||೫೨|| ಇತಃಪರಂ ಸುತಾವಾಪ್ತಿರ್ಲಜ್ಜಾಯೈನಭವೇತ್ಕಿಮು | ಆರಾಧ್ಯತ್ವಾಂ ಮಹಾದೇವ ತಪೋ ನಿಷ್ಠಾಸಮನ್ವಿತಃ ||೫೩|| ಶುಕ್ರಂನಾಮಸುತಂಪ್ರಾಪ ಭೃಗುನಾಮಾ ಮುನೀ ಶ್ವರಃ | ಮೇಘರೂಪೇಣಶಾರ್ಙ್ಗೀತ್ವಾಂ ಧೃತ್ವಾ ಸಂಸೇವ್ಯಭಕ್ತಿತಃ ||೫೪|| ಅವಾಪಸಾಂಬನಾಮಾನಂಸುತಂ ಚಂದ್ರಾರ್ಧಶೇಖರ | ಅತಿಘೋರಂತಪಸ್ತ ಪ್ತ್ವಾತ್ವತ್ತಃ ಪ್ರಾಪಾಬ್ಜಸಂಭವಃ || ೫೫ || ಕಂದರ್ಪದರ್ಪಹರಣ ತನೂಭವ ಮಧೋಕ್ಷಜಂ | ತ್ವಾಮುಪಾಸ್ಯಹರಿರ್ಲೇಭೇ ತಪಸಾಽಜಂ ತನೂಭವಂ ||೫೬ ತಪಾಂಸಿಚಕ್ರಿರೇತೇಕಿಂ ಕಿಮರ್ಥಂ ಪ್ರಾಪುರಾತ್ಮಜಾನ್ | ತೇಸರ್ವೇಪಿಸುತಾ ಸಕ್ತಾಸ್ಸಕ್ತಾಏವ ಕಿಮುತ್ವಯಿ ||೫೭|| ಭೂಭಾರಹರಣಾಯತ್ವಮುತ ಶ್ರೀಪ ರ್ವತಾಖ್ಯಯಾ | ಜಾತೋಽಸಿಕಿಂ ಮಹೇಶಾನ ಸಮುಲ್ಲಸಿತವೈಭವ ||೫೮|| ಅನ್ಯಥಾಪಂಚವಕ್ತ್ರಾಂಕೋಬಭೌ ಶ್ರೀಪರ್ವತಃಕಥಂ | ಕಥಂಚದರ್ಶನಾನ್ಮುಕ್ತಿ ಶ್ರ್ಯೀಶೈಲಾಧಿಪತೇರ್ಭವೇತ್ ||೫೯|| ಶ್ರೀಶಿಲಾದಮುನಿಃಪ್ರಾಪತ್ವಾಮುಪಾಸ್ಯ ಮಹೇಶ್ವರ | ಸರ್ವಲೋಕಹಿತಂ ಭವ್ಯಸುತಂ ಶ್ರೀಪರ್ವತೋತ್ತಮಂ ||೬೦||

---

ವಿಶೇಷವಾಗಿ ಸೇವಿಸಿ ನಿನ್ನನ್ನು ಮೆಚ್ಚಿಸಿಕೊಂಡು ನಿನ್ನನ್ನೇ ಪಡೆದುಕೊಂಡನು. ||೫೦|| ಇಂತಪ್ಪ ಪುಣ್ಯಶಾಲಿ ಪುತ್ರನನ್ನು ಪಡೆದ ಶಿಲಾದ ಮುನಿಯು ಭೂಮಿಯಲ್ಲಿ ಧನ್ಯನಲ್ಲವೆ? ಮಕ್ಕಳನ್ನು ಪಡೆದರೆ ಇಂಥವನನ್ನಲ್ಲವೆ ಪಡೆಯಬೇಕು!? ಇನ್ನುಮುಂದೆ ಯಾರಾದರೂ ತಪಸ್ಸನ್ನು ಮಾಡಿ ಶಿವನಿಂದ ಮಕ್ಕಳ ವರವನ್ನು ಪಡೆಯುವುದೆಂದರೆ ನಾಚುಗೆಯ ಮಾತಲ್ಲವೇ! ಎಲೈ ಪರಶಿವನೆ! ಭೃಗುಮುನಿಪತಿಯು ತಪಸ್ಸಿನಿಂದ ನಿನ್ನನ್ನಾರಾಧಿಸಿ ಶುಕ್ರನೆಂಬ ಮಗನನ್ನು ಪಡೆದನು. ವಿಷ್ಣುವು ಮೇಘರೂಪದಿಂದ ನಿನ್ನನ್ನು ಹೊತ್ತು ಸೇವಿಸಿ ಸಾಂಬನೆಂಬ ಮಗನನ್ನು ಪಡೆದನು. ಬ್ರಹ್ಮನು ಘೋರತಪಸ್ಸನ್ನು ಮಾಡಿ ಮದನಗರ್ವಹರನಾದ ಅಧೋಕ್ಷಜನಾದ ಕಾಲಾಗ್ನಿ ರುದ್ರನೆಂಬ ಪುತ್ರನನ್ನು ಪಡೆದನು. ಹರಿಯು ನಿನ್ನನ್ನು ಭಜಿಸಿ ಬ್ರಹ್ಮನನ್ನು ತನ್ನ ಮಗನನ್ನಾಗಿ ಪಡೆದನು. ಅವರೆಲ್ಲಾ ಏತಕ್ಕೆ ತಪಸ್ಸುಮಾಡಿದರು? ಏತಕ್ಕೆ ಮಕ್ಕಳನ್ನು ಹಡೆದರು? ತಮಗೆ ಮಕ್ಕಳಾಗಬೇಕೆಂಬುದಕ್ಕಾಗಿಯೇ ಹೊರತು ನಿನ್ನಲ್ಲಿ ಆಸಕ್ತಿಯುಳ್ಳವರಾಗಿ ತಪಸ್ಸನ್ನು ಮಾಡಿದವರಲ್ಲ ||೫೭|| ಎಲೈ ಮಹೇಶ್ವರನೆ! ಭೂಭಾರವನ್ನು ಹರಿಸುವುದಕ್ಕಾಗಿ ನೀನೇ ಶ್ರೀಗಿರಿಯೆಂಬ ಹೆಸರಿನಿಂದ ಹುಟ್ಟಿರುವೆಯೋ ಏನೊ! ಹಾಗಲ್ಲದಿದ್ದರೆ ಈ ಶ್ರೀಪರ್ವತಕ್ಕೆ ೫ ಮುಖಗಳು ಎಲ್ಲಿರುತ್ತಿದ್ದುವು? ಈ ಶ್ರೀಶೈಲದ ದರ್ಶನದಿಂದಲೇ ಮಾನವರಿಗೆ ಮುಕ್ತಿಯು ಹೇಗೆ ದೊರೆಯುವುದು? ||೫೯|| ಎಲೈ ಶಂಕರನೆ! ಶಿಲಾದರ್ಷಿಯು ನಿನ್ನನ್ನು ಉಪಾಸನೆಮಾಡಿ ಸರ್ವಲೋಕಹಿತಕರನಾದ ಈ ಮಹಾ ಪುತ್ರನನ್ನು ಪಡೆದನು. ||೬೦|| ಸಕಲ ತೀರ್ಥಗಳೊಳಗೂ

ತಜ್ಜಗಂತಿಸ್ಸ್ವಯಂ ಶಶ್ವತ್ಪಾವನೀಕರ್ತುಮುದ್ಯತಂ | ಇದಮೇವೋನ್ನತಂ ಪುಣ್ಯ ತೀರ್ಥಂ ತೀರ್ಥಜಯೇಷ್ವಿತಿ ||೬೧|| ಇದಮೇವಮಹತ್ಪುಣ್ಯ ಮಮೇಯಘನ ವೈಭವಂ | ಅವಿಮುಕ್ತಕ್ಷೇತ್ರವರಂ ಪುಣ್ಯಕ್ಷೇತ್ರತತಿಷ್ವಪಿ ||೬೨|| ಇದಮೇವಾದಿಮಂಸ್ಥಾನಂ ಮೂಲಸ್ಥಾನಜಯೇಷ್ವಿತಿ | ದಿವ್ಯಸಿಂಹಾಸನವರಮಿದಮೇವ ಮಹಾದ್ಭುತಂ ||೬೩|| ನಗಾತ್ಮಜಾಪತೇಃ ಪೂರ್ವಭವ್ಯಸಿಂಹಾಸನೇಷ್ವಿತಿ | ಸ್ತೂಯಮಾನಸ್ಯನಿಖಿಲೈಃ ಪರ್ವತಸ್ಯ ತಪೋಬಲಂ ||೬೪|| ಕಥಂವರ್ಣಯಿತುಂ ಶಕ್ಯಂ ಶ್ರುತಿವಾಕ್ಯಜಯೈರಪಿ | ಲೋಕತ್ರಯೇ ಭೂತಭಾವಿ ವರ್ತಮಾನೇಷು ಜತ್ರಿಷು || ೬೫ || ಕಾಲೇಷ್ವೇತದ್ಗಿರೀಂದ್ರೇಣ ಲೋಕಪಾವನಮೂರ್ತಿನಾ | ಸದೃಶಾಸ್ತೀರ್ಥನಿಜಯಾವಿದ್ಯಂತೇ ಭೂಧರಾಶ್ಚಕಿಂ ||೬೬|| ಅತಿಕ್ಲೇಶೇನಕೇದಾರೇ ಮಹಾಶೀತಂಹಿಮೋದಕಂ | ಅಪೀತ್ವಾವಿದ್ಯತೇನ್ಯಾಣಾಂ ನಮೋಕ್ಷೋ ಧರಣೀತಲೇ ||೬೭|| ನಮುಕ್ತಿರನಪೇಕ್ಷಾತೋ ವಾರಾಣಸ್ಯಾಂಮೃತಿಂವಿನಾ| ನಪಾತವ್ಯಂ ಹಿಮಜಲಂ ನಪ್ರಾಪ್ತವ್ಯಾಮೃತಿಃಪುನಃ ||೬೮|| ದರ್ಶನಾದೇವನಸ್ಮುಕ್ತಿಸ್ಸಿಧ್ಯತಿ ಶ್ರೀಗಿರೇರ್ನೃಣಾಂ | ಕಾಶ್ಯಾಂ ಬ್ರಾಹ್ಮಣಲಕ್ಷಾಯ ಪ್ರದತ್ತಾನ್ನಸ್ಯಯತ್ಫಲಂ ||೬೯|| ದ್ವಿಲಕ್ಷದ್ವಿಜವರ್ಯೇಭ್ಯೋಗಯಾಯಾಂ ಪ್ರೀತಿಪೂರ್ವಕಂ | ಸಂಪ್ರದತ್ತಸ್ಯಸುತರಾ ಮಿಷ್ಟಾನ್ನಸ್ಯಜಯತ್ಫಲಂ ||೭೦|| ತ್ರಿಲಕ್ಷವಿಪ್ರವರ್ಯೇಭ್ಯಃ ಕೇದಾರೇಽತ್ಯಂತಪಾವನೇ | ಸದ್ಭಕ್ತಿಪೂರ್ವಕಂಸಮ್ಯಕ್ ಪ್ರದತ್ತಾನ್ನಸ್ಯಯತ್ಫಲಂ ||೭೧|| ಅನ್ಯೇಷು ತೀರ್ಥಸಾರ್ಥೇಷು ಪ್ರತ್ಯೇಕಮತಿಭಕ್ತಿತಃ|

---

ಜಗತ್ಪಾವನಕರವಾದ ತೀರ್ಥವು ಇದೇನೆಯೇ. ಸರ್ವಪುಣ್ಯಕ್ಷೇತ್ರಗಳಲ್ಲೂ ಅತ್ಯುತ್ತಮವಾದ ಅಪರಿಮಿತವೈಭವವುಳ್ಳ ಅವಿಮುಕ್ತಕ್ಷೇತ್ರವು ಇದೇನೆಯೆ. ನಿಖಿಲ ಮೂಲಸ್ಥಾನಗಳಿಗೂ ಮೊದಲನೆಯಸ್ಥಾನವು ಇದೇನೆಯೇ, ಪರಶಿವನ ಪೂರ್ವದ ನಾನಾ ಯುಗಗಳ ಅನಂತ ಸಿಹ್ಮಾಸನಗಳೊಳಲೆಲ್ಲಾ ಅದ್ಭುತವಾದ ದಿವ್ಯಸಿಹ್ಮಾಸನವು ಇದೇನೆಯೇ. ಎಂಬುದಾಗಿ ಲೋಕದವರೆಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿರುವ ಈ ಶ್ರೀಶೈಲದ ತಪೋಬಲವನ್ನು ಹೊಗಳುವುದಕ್ಕೆ ವೇದಗಳಿಗೂಕೂಡ ಶಕ್ಯವೆ? ಭೂತಭವಿಷ್ಯದ್ವರ್ತಮಾನಕಾಲತ್ರಯದಲ್ಲೂ ಜಗತ್ಪಾವನವಾದ ಈ ಶ್ರೀಗಿರಿಗೆ ಸಮನಾದ ತೀರ್ಥಗಳೂ, ಪರ್ವತಗಳೂ ಸಹ ಇರುವುದುಂಟೆ ? ||೬೬|| ಹಿಮವತ್ಕೇದಾರದಲ್ಲಿ ಅತ್ಯಂತ ಶೀತವಾದ ಜಲವನ್ನು ಬಹು ಕಷ್ಟದಿಂದ ಪಾನಮಾಡದಿದ್ದರೆ ಅವರಿಗೆ ಮೋಕ್ಷವಿಲ್ಲ. ಕಾಶಿಯಲ್ಲಿ ನಿಷ್ಕಾಮವಾಗಿ ಮೃತಿಹೊಂದದಿದ್ದವರಿಗೆ ಮುಕ್ತಿಯಿಲ್ಲ. ಈ ಶ್ರೀಶೈಲದಲ್ಲಾದರೊ ಶೀತದ ನೀರನ್ನು ಕುಡಿಯಬೇಕಾದುದೂ ಇಲ್ಲ; ಸಾಯಬೇಕಾದುದೂ ಇಲ್ಲ. ದರ್ಶನಮಾತ್ರದಿಂದಲೇ ಮನುಜರಿಗೆ ಮೋಕ್ಷಸಿದ್ಧಿಯುಂಟಾಗುತ್ತದೆ. ಕಾಶಿಯಲ್ಲಿ ಲಕ್ಷಮಂದಿ ಬ್ರಾಹ್ಮಣರಿಗೆ ಅನ್ನದಾನ ಮಾಡುವುದರಿಂದಲೂ, ಗಯಾಕ್ಷೇತ್ರದಲ್ಲಿ ೨ ಲಕ್ಷ ಮಂದಿ ವಿಪ್ರರಿ

ಕೋಟಿಸಂಖ್ಯಾಕವಿಪ್ರೇಭ್ಯಃ ಪ್ರದತ್ತಾನ್ನಸ್ಯಯತ್ಫಲಂ ||೭೨|| ತಚ್ಛೈಲೇಗಿರೌ ಶಮಿಾಪತ್ರ ಪ್ರಮಾಣಾನ್ನಸ್ಯಸಾದರಂ | ಏಕಸ್ಮೈಸಂಪ್ರದತ್ತಸ್ಯ ಫಲೇನಸದೃಶಂ ನಹಿ ||೭೩|| ತತ್ಕಥಂ ಪರ್ವತೇಂದ್ರಸ್ಯ ಮಹಿಮಾಪರಿಕೀರ್ತ್ಯತೇ | ಪ್ರಸನ್ನ ಮೂರ್ತೇ ಸರ್ವಜ್ಞ ಸಚ್ಚಿದಾನಂದವಿಗ್ರಹ ||೭೪|| ಪ್ರಖ್ಯಾತವಾಕ್ಯೇಚಕಿತಮ ಭಿಧತ್ತ ಇತಿಸ್ಥಿತೇ | ಸ್ಥಿತೇ ಪುರಾಣವಚನೇ ಯೇನಮೇತನ್ನಿಬೋಧತ ||೭೫|| ಇತಿವೇದೇಪ್ಯತ್ಯತಿಷ್ಠದ್ದಶಾಂಗುಲಮಿತಿಸ್ಥಿತೇ | ಸಂಸ್ಥಿತೇ ವಚನೇಕಿಂಚಶ್ರೂಯತೇ ನಚದೃಶ್ಯತೇ ||೭೬|| ಇತಿವೈಕುಂಠಕಮಲಭವಯೋರಪ್ಯಗೋಚರಾ| ಭವತ್ತನುಃಪರ್ವತರ್ಷಿಕಾರಣಾತ್ಸಮುದೃಶ್ಯತ ||೭೭|| ಕರಸ್ಥಿತಾಮಲಕವದ್ದೇವ ದೇವೇಶಶಂಕರ | ಅಸಾಧಾರಣಕಾರುಣ್ಯವಾರ್ಧೇ ಗೌರೀಮನೋಹರ ||೭೮|| ಕಥಂವರ್ಣಯಿತುಂಶಕ್ಯಃ ಪ್ರಸಾದಾತಿಶಯಸ್ತವ | ಇತಿಸಮ್ಯಗ್ರುದ್ರಸೂಕ್ತೈ ರಾಶೀರ್ವಾದೈಶ್ಚ್ಯತಿಸ್ಥಿತೈಃ ||೭೯|| ಶಶಂಸುಃ ಪರ್ವತಾಧೀಶಂ ಸಂಘೀಭೂಯಮುನೀಶ್ವರಾಃ ||

---

ಷ್ಠರಿಗೆ ಇಷ್ಟಾನ್ನದಾನ ಮಾಡುವುದರಿಂದಲೂ, ಕೇದಾರ ಕ್ಷೇತ್ರದಲ್ಲಿ ೩ ಲಕ್ಷ ದ್ವಿಜವರ್ಯರಿಗೆ ಭಕ್ತಿಪೂರ್ವಕವಾಗಿ ಮೃಷ್ಟಾನ್ನದಾನ ಮಾಡುವುದರಿಂದಲೂ, ಇನ್ನೂ ನಾನಾ ಪವಿತ್ರ ತೀರ್ಥ ಕ್ಷೇತ್ರಗಳಲ್ಲಿ ಕೋಟ್ಯಂತರ ಬ್ರಾಹ್ಮಣರಿಗೆ ಅನ್ನದಾನ ಮಾಡುವುದರಿಂದಲೂ ಯಾವ ಯಾವ ಫಲವುಂಟಾಗುವುದೋ ಅವು, ಈ ಶ್ರೀಶೈಲದಲ್ಲಿ ಒಂದು ಬನ್ನಿಯೆಲೆಯಷ್ಟು ಅನ್ನದಗುಳನ್ನು ಒಬ್ಬಾನೊಬ್ಬನಿಗೆ ದಾನಮಾಡುವುದರಿಂದ ಉಂಟಾಗುವ ಫಲಕ್ಕೆ ಸಮನಾಗುವುದಿಲ್ಲ ||೭೩|| ಎನ್ನುವಾಗ್ಗೆ ಈ ಪರ್ವತರಾಜನ ಮಹಿಮೆಯನ್ನು ಹೊಗಳುವುದಕ್ಕೆ ಸಾಧ್ಯವೆ? ಸಚ್ಚಿದಾನಂದ ಸ್ವರೂಪನಾದ ಎಲೈ ಸರ್ವಜ್ಞಮೂರ್ತಿಯೆ! ವೇದದಲ್ಲಿ ‹‹ಚಕಿತಮಭಿಧತ್ತೇ›› (ಆ ಪರಬ್ರಹ್ಮನ ಸ್ವರೂಪವನ್ನು ಅರಿಯುವುದಕ್ಕೆ ವೇದವೂ ಭಯಪಡುತ್ತದೆ) ಎಂಬುದಾಗಿಯೂ, ‹‹ಅತ್ಯತಿಷ್ಠದ್ದಶಾಂಗುಲಂ›› (ದಶೇಂದ್ರಿಯಗಳಿಗೂ ಗೋಚರಿಸದೆ ಮಾರಿರತಕ್ಕವನು) ಎಂಬುದಾಗಿಯೂ, ಪುರಾಣದಲ್ಲಿ ‹‹ಯೇನಮೇತನ್ನಿಬೋಧತ›› ಶ್ರೂಯತೇನಚದೃಶ್ಯತೇ›› (ಅವನ ಸ್ವರೂಪವನ್ನರಿಯುವುದು ಅಸಾಧ್ಯವು. ಅದನ್ನು ಇಂತಹುದೆಂದು ಕಿವಿಯಿಂದ ಕೇಳಲೂ ಆಗುವುದಿಲ್ಲ, ಕಣ್ಣಿನಿಂದ ನೋಡಲೂ ಆಗುವುದಿಲ್ಲ)ವೆಂದು ಹೇಳಲ್ಪಟ್ಟಿರುವ ಪ್ರಕಾರವೂ, ವಿಷ್ಣುಬ್ರಹ್ಮರುಗಳಿಗೂ ಕೂಡ ಗೋಚರಿಸದೆಹೋದ ನಿನ್ನ ಶರೀರವು ಈಗ ನಮಗೆ ಈ ಪರ್ವತಮುನಿಯ ಮೂಲಕದಿಂದ ಅಂಗೈಯೊಳಗಣ ನೆಲ್ಲಿಯ ಕಾಯಂತೆ ಸ್ಫುಟವಾಗಿ ಕಾಣಿಸಿತು. ಅನುಪಮದಯಾನಿಧಿಯಾದ ಎಲೈ ಪಾರ್ವತೀರಮಣನೆ! ನಿನ್ನ ಅನುಗ್ರಹಮಹತ್ತ್ವವು ಎಂತಹುದು! ಅದನ್ನು ವರ್ಣಿಸುವುದು ಸಾಧ್ಯವೆ? ಎಂಬುದಾಗಿ ಆ ಭೃಗು ಗೌತಮಾದಿ ಮುನಿಪತಿಗಳೆಲ್ಲಾ ಹೇಳಿ, ಶ್ರೀರುದ್ರಸೂಕ್ತಗಳಿಂದಲೂ ವೇದಮಂತ್ರಾಶೀರ್ವಾದಗಳಿಂದಲೂ ಅವರೆಲ್ಲರೂ ಪರ್ವತಮುನೀಂದ್ರನನ್ನು ಕೊಂಡಾಡಿದರು. ||೭೯||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ತತ್ಪರ್ವತಮುನೇಃ ಪರಮೇಶ್ವರಲಬ್ಧ ವರಪ್ರಸಾದ ವಿಶೇಷಸ್ಯ ಗೌತಮ ದಧೀಚ್ಯಾದಿ ಮುನಿಜನಕೃತ ಪ್ರಶಂಸಾಕಥನಂನಾಮ ತೃತೀಯೋಽಧ್ಯಾಯಃ.

---

## ಅಥ ಚತುರ್ಥೋಽಧ್ಯಾಯಃ.

### (ಶ್ರೀಗಿರೀಶಪದಿವ್ಯಸ್ಥಾನಕಥನಂ)

ಅಥಶ್ರೀಗಿರಿವಿಸ್ತಾರಮಾಕರ್ಣಯ ಗುಣೋನ್ನತ | ದೋನಮಾರ್ಯ ಪ್ರವಕ್ಷ್ಯಾಮಿ ಸಂಕ್ಷೇಪೇಣ ಯಥಾಮತಿ ||೧|| ಶ್ರೀಮಲ್ಲಿಕಾರ್ಜುನವಿಭೋರ್ಭಾತಿ ದಕ್ಷಿಣಪಾರ್ಶ್ವತಃ | ಕುಂಡತೀರ್ಥಂ ಕೋಟಿಸಂಖ್ಯಚಂಡಪಾತಕನಾಶನಂ|| ಮಂದಾಕಿನ್ಯಾದಯಸ್ತಿಸ್ರೋವರ್ತಂತೇ ತತ್ರಸಿಂಧವಃ | ತದೇವತಲ್ಲಿಂಗಮೂಲಮಾವೃತ್ಯೋತ್ತರ ಭಾಗತಃ || ೩ || ಉದಭೂನ್ಮಲ್ಲಿಕಾಕುಂಡನಾಮ್ನಾ ಲೋ

---

ಎಂಬಲ್ಲಿಗೆ ಪರ್ವತಪ್ರಕರಣದಲ್ಲಿ ಗೌತಮಾದಿ ಮಹರ್ಷಿಗಳು ಪರ್ವತಮುನೀಂದ್ರನನ್ನು ಸ್ತೋತ್ರಮಾಡಿದುದನ್ನು ನಿರೂಪಿಸುವ ೩ನೆ ಅಧ್ಯಾಯವು ಮುಗಿದುದು.

---

## ೪ನೆ ಅಧ್ಯಾಯವು.

### ಪಂಡಿತಾರಾಧ್ಯರು ದೋನಮಾರ್ಯನಿಗೆ ಶ್ರೀಶೈಲದ ದಿವ್ಯಸ್ಥಾನಗಳನ್ನು ವಿವರಿಸಿದ ಕಥೆ.

ಬಳಿಕ ಶ್ರೀ ಪಂಡಿತಾರಾಧ್ಯರು ಎಲೈ ಗುಣಾಢ್ಯನಾದ ದೋನಮಾರ್ಯನೆ! ಶ್ರೀಶೈಲದ ವಿಸ್ತಾರವನ್ನು ಕುರಿತು ಸಂಕ್ಷೇಪವಾಗಿ ತಿಳಿದಷ್ಟು ಹೇಳುತ್ತೇನೆ ಕೇಳು ಎಂದು ಉಪಕ್ರಮಿಸಿ ದರದೆಂತೆನೆ:—ಅಲ್ಲಿಯ ಶ್ರೀಮಲ್ಲಿಕಾರ್ಜುನಸ್ವಾಮಿಯ ತೆಂಕಣ ಪಕ್ಕದಲ್ಲಿ ಕೋಟ್ಯಂತರ ಮಹಾಪಾತಕ ವಿನಾಶಿಯಾದ ಕುಂಡತೀರ್ಥವಿರುವುದು ||೨|| ಅಲ್ಲಿಯೇ ಮಂದಾಕಿನಿ ಮೊದಲಾದ ಮೂರು ನದಿಗಳಿರುವುವು. ಆ ತೀರ್ಥವೇ ಆ ಮಲ್ಲಿಕಾರ್ಜುನ ಲಿಂಗವನ್ನು ಬಳಸಿಕೊಂಡು ಬಡಗಲಕಡೆಗೆ ಹೋಗಿ ಅಲ್ಲಿ ಜಗತ್ಪಾವನವಾದ ಮಲ್ಲಿಕಾಕುಂಡವೆಂಬ ಹೆಸರಿನಿಂದ ಉದಯಿಸಿರುವುದು. ಆ ಸ್ಥಲದಲ್ಲಿ ಭಾಗೀರಥಿ ಮೊದಲಾದ ಮೂರುನದಿಗಳು ಹರಿಯುತ್ತಿರುವವ

ಕೈಕಪಾವನಂ | ಭಾಗೀರಥ್ಯಾದಯಸ್ತತ್ರ ತಿಸ್ರೋನದ್ಯೋವಸಂತಿಹಿ || ೪ || ಭವಭೀಮೇಶಾನಪಶುಪತಿ ಶರ್ವೋಗ್ರನಾಮಭಿಃ | ಲಿಂಗೈರ್ಮಹಾದೇವರುದ್ರ ನಾಮಲಿಂಗದ್ವಯೇನಚ ||೫|| ಪರಿಶ್ರುತಂ ಮೋಕ್ಷಕರಂ ಪಶ್ಯತಾಂ ಸರ್ವದಾ ನೃಣಾಂ | ಚಕಾಸ್ತಿ ಪುರತೋದಿವ್ಯಸ್ಥಾನಂ ಮೋಕ್ಷೇಶ್ವರಾಭಿಧಂ ||೬|| ಏನಾ ಶಯನಸ್ಥೂಲಸೂಕ್ಷ್ಮಯಾತನಾ ದೇಹನಾಮಕಂ | ಪುರತ್ರಯಂ ಮನುಷ್ಯಾ ಣಾಂ ತ್ರಿಪುರಾಂತಕಸಂಜ್ಞಯಾ ||೭|| ಭಾತಿತಚ್ಛಿಖರಾಲೋಕನಾರ್ಥೀದೇವ ಸ್ಸದಾಶಿವಃ | ಪಾತಕೋತ್ಪಾಟನಮಹಾಮಹಿಮ್ನಾ ಹಾಟಕೇಶ್ವರಃ ||೮|| ರಾ ಜತೇ ದಕ್ಷಿಣೇ-ತಸ್ಮಾತ್ಪರಂ ಪಾಪವಿನಾಶನಂ | ಅಶೇಷಪಾಪನಿಚಯ ಧ್ವಂಸ ನಾದಾಭ್ರಾಜತೇತರಾಂ ||೯|| ಘಂಟಾಸಿದ್ಧೇಶ್ವರಂ ಸಾರಂಗೇಶ್ವರಂ ಕಿನ್ನರೇಶ್ವ ರಂ | ವಾರಾಹೇಶ್ವರಮಿತ್ಯಾಖ್ಯಾಕಲಿತಾನಿ ನಿರಂತರಂ || ೧೦ || ಸ್ಥಾನಾನಿಪ ಶ್ಚಿಮೇಸನ್ತಿ ಶುದ್ಧಿದಾನಿಸದಾನೃಣಾಂ | ಉದೀಚ್ಯಾಂಶೋಭತೇ ದಿವ್ಯಸ್ಥಾನಂ ಮಾಹೇಶ್ವರಂವೃತಂ ||೧೧|| ತೇಷುಸ್ಥಾನೇಷುವಿಖ್ಯಾತ ದಿವ್ಯಲಿಂಗೋಪಕಂ ಠತಃ | ಪ್ರತೀಚ್ಯಾಂಪಾವನಕರಂ ಬ್ರಹ್ಮಾದಿತ್ರಿದಶಾರ್ಚಿತಂ ||೧೨|| ತತ್ಸದ್ಯೋ ಜಾತವದನಂಭಾತಿ ಬ್ರಹ್ಮೇಶ್ವರಾಖ್ಯಯಾ | ಉದೀಚ್ಯಾಂವಾಮದೇವಾಸ್ಯಂ

---

||೪|| ಅವುಗಳ ಮುಂದೆ ಭವ, ಭೀಮ, ಈಶಾನ, ಪಶುಪತಿ, ಶರ್ವ, ಉಗ್ರ, ಮಹಾದೇವ, ರು ದ್ರ ಎಂಬ ಹೆಸರಿನ ಲಿಂಗಗಳಿಂದ ಕೂಡಿ, ದರ್ಶನಮಾತ್ರದಿಂದ ಮನುಷ್ಯರಿಗೆ ಮುಕ್ತಿದಾಯಕ ವಾದ ಮೋಕ್ಷೇಶ್ವರ ಎಂಬ ಹೆಸರಿನ ದಿವ್ಯಸ್ಥಲವಿರುವುದು ||೬|| ಮಲ್ಲಿಕಾರ್ಜುನಸ್ವಾಮಿಯ ಪೂರ್ವಭಾಗದಲ್ಲಿ ಮನುಜರ ಸ್ಥೂಲದೇಹ ಸೂಕ್ಷ್ಮದೇಹ ಯಾತನಾದೇಹವೆಂಬ ಮೂರು ಪುರ ಗಳನ್ನೂ ನಾಶಮಾಡುವ ಕಾರಣದಿಂದ ತ್ರಿಪುರಾಂತಕನೆಂಬ ಹೆಸರುಳ್ಳ ಲಿಂಗದಿಂದಲೂ, ಪಾತ ಕಗಳನ್ನು ಮೂಲೋತ್ಪಾಟನೆ ಮಾಡುವ ಮಹಾ ಮಹತ್ತ್ವವುಳ್ಳ ಕಾರಣದಿಂದ ಹಾಟಕೇಶ್ವರ ನೆಂಬ ಹೆಸರುಳ್ಳ ಲಿಂಗದಿಂದಲೂ ಕೂಡಿದ, ಸಕಲ ಪಾಪನನ್ನೂ ಧ್ವಂಸಮಾಡುವ ಕಾರಣದಿಂದ ಪಾಪವಿನಾಶಕವೆಂಬ ಹೆಸರುಳ್ಳ ದಿವ್ಯಸ್ಥಲವಿರುವುದು. ||೯|| ಆ ಮಲ್ಲಿಕಾರ್ಜುನಸ್ವಾಮಿಯ ಪಶ್ಚಿಮಭಾಗದಲ್ಲಿ ಘಂಟಾಸಿದ್ಧೇಶ್ವರ, ಸಾರಂಗೇಶ್ವರ, ಕಿನ್ನರೇಶ್ವರ, ವಾರಾಹೇಶ್ವರ ಎಂಬ ಹೆಸರಿನ ಮಹಾ ಸ್ಥಲಗಳು ಮನುಷ್ಯರಿಗೆ ಸದಾ ಪರಿಶುದ್ಧಿಪ್ರದಗಳಾಗಿರುವುವು. ಆ ಮಲ್ಲಿಕಾ ರ್ಜುನಸ್ವಾಮಿಯ ಉತ್ತರಭಾಗದಲ್ಲಿ ಮಾಹೇಶ್ವರನಾಮಕಲಿಂಗದಿಂದ ಕೂಡಿದ ದಿವ್ಯಸ್ಥಲವಿರು ವುದು. ಮತ್ತು ಈ ಚತುರ್ದಿಕ್ಕಿನ ದಿವ್ಯಸ್ಥಲಗಳಲ್ಲಿ ಪ್ರಸಿದ್ಧಗಳಾದ ಮೇಲೆ ಕಂಡ ಲಿಂಗಮೂ ರ್ತಿಗಳ ಸಮೀಪದಲ್ಲೇ ಶ್ರೀಶೈಲಲಿಂಗಮೂರ್ತಿಯ ಸದ್ಯೋಜಾತ ಮುಖವು ಪಶ್ಚಿಮದಿಕ್ಕಿನಲ್ಲಿ ಬ್ರಹ್ಮಾದಿ ದೇವತಾಪೂಜಿತವಾಗಿ ಲೋಕಪಾವನಕರವಾಗಿ ಬ್ರಹ್ಮೇಶ್ವರನೆಂಬ ಹೆಸರಿನಿಂದ ಪ್ರ ಕಾಶಿಸುವುದು. ಉತ್ತರದಿಕ್ಕಿನಲ್ಲಿ ವಾಮದೇವಮುಖವು ಮಾಹೇಶ್ವರನೆಂಬ ಹೆಸರಿನಿಂದ ಒಪ್ಪು

ಭಾತಿಮಹೇಶ್ವರಾಖ್ಯಯಾ ||೧೩|| ಅವಾಚ್ಯಾಂಭಾತ್ಯಘೋರಾಖ್ಯಂ ಜ್ಯೋ
ತಿಸ್ಸಿದ್ಧವಟಾಖ್ಯಯಾ | ತ್ರಿಪುರಾಂತಕನಾಮ್ನಾಸ್ತೇಪ್ರಾಚ್ಯಾಂ ತತ್ಪುರುಷಾ
ಸಂ ||೧೪|| ಈಶಾನಾಖ್ಯಂವಿಭಾತ್ಯೂರ್ಧ್ವಂ ಮಲ್ಲಿಕಾರ್ಜುನಸಂಜ್ಞಯಾ | ತಸ್ಯ
ಲ್ಲಿಕಾರ್ಜುನಾಖ್ಯಾಯಾಃ ಕಾರಣಂಶೃಣುಶೂಲಿನಃ || ಅನೇಕಯುಗಸಂದೋ
ಹಾದರ್ವಾಗೇವಮಹೇಶ್ವರಃ | ಪಾರ್ವತ್ಯೈಶ್ರೀಗಿರೀಂದ್ರಸ್ಯ ಮಾಹಾತ್ಮ್ಯ
ಕಥನಕ್ಷಣೇ || ೧೬ || ಪ್ರಾಗನೇಕಾರ್ಬುದಯುಗಜಯಾದೇವಪ್ರವಿಶ್ರುತಾ
ಶ್ರೀಮಲ್ಲಿಕಾರ್ಜುನಾಖ್ಯೇತಿ ಕಥಯಾಮಾಸಹರ್ಷತಃ ||೧೭|| ಕಸ್ಮಿಂಶ್ಚಿದಾ
ದಿಮಯುಗೇ ಚಂದ್ರಗುಪ್ತಾಹ್ವಯೋನೃಪಃ | ಅಸ್ತಿಚಂದ್ರಾನ್ವಯೇಜಾತಃ
ವಭಕ್ತಿಪರಾಯಣಃ ||೧೮|| ಕನ್ಯಾಸರಸಜ್ಯೈತನ್ಯಾಽಭವತ್ತಸ್ಯಮಹೀಪತೇಃ
ಅಗಣ್ಯಪುಣ್ಯವಿಭವಾ ಚಂದ್ರವತ್ಯಾಖ್ಯಯಾಂಚಿತಾ ||೧೯|| ಶ್ರೀಮಲ್ಲಿಕಾರ್ಜು
ನಂದೇವಂ ಸಾಸಖೀಭಿಸ್ಸಮನ್ವಿತಾ | ಅವರ್ತತಪ್ರತಿದಿನಂ ಸೇವಮಾನಾ
ತಿಭಕ್ತಿತಃ ||೨೦|| ಸಾಜಾತು ಶಂಭೋಃಪುರತೋಗಾನಂಚಕ್ರೇಽತಿಹರ್ಷತಃ
ಪ್ರಸನ್ನನಾದಂ ಮಧುರ ಮಾರ್ದವಾಲಾಪಲಾಲಿತಂ ||೨೧|| ಶ್ರುತಿಸಂದೋಹ
ಲಿತ ಸಪ್ತಸ್ವರಮನೋಹರಂ | ಪ್ರನೃತ್ತಿತಾದ್ರಿಶಿಖರಂ ಪ್ರಕಂಪಿತದಿಶಾತಟ

---

ತ್ತಿರುವುದು. ದಕ್ಷಿಣದಿಕ್ಕಿನಲ್ಲಿ ಅಘೋರಮುಖವು ಸಿದ್ಧವಟೇಶ್ವರನೆಂಬ ಹೆಸರಿನಿಂದ ವಿರಾಜಿಸು
ವುದು. ಪೂರ್ವದಿಕ್ಕಿನಲ್ಲಿ ತತ್ಪುರುಷಮುಖವು ತ್ರಿಪುರಾಂತಕೇಶ್ವರನೆಂಬ ಹೆಸರಿನಿಂದ ಮೆರೆಯು
ವುದು. ||೧೪|| ಊರ್ಧ್ವದಿಕ್ಕಿನಲ್ಲಿ ಈಶಾನಮುಖವು ಮಲ್ಲಿಕಾರ್ಜುನೇಶ್ವರನೆಂಬ ಹೆಸರಿನಿಂದ
ಪ್ರಕಾಶಿಸುವುದು. ಇನ್ನು ಈ ಗಿರಿಯಲ್ಲಿರುವ ಮಹಾ ಲಿಂಗಮೂರ್ತಿಗೆ ಮಲ್ಲಿಕಾರ್ಜುನನೆಂಬ
ಹೆಸರು ಬರುವುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು—ಅನೇಕ ಯುಗಾಂತರಗಳ ಹಿಂದೆ ಪ
ಶಿವನು ಪಾರ್ವತಿಗೆ ಶ್ರೀಗಿರಿಯ ಮಹತ್ತ್ವವನ್ನು ನಿರೂಪಣೆ ಮಾಡುವಾಗ್ಗೆ ಅದಕ್ಕೆ ಎಷ್ಟೋ
ಅರ್ಬುದ ಯುಗಗಳಿಗೆ ಮುಂಚೆಯೇ ಮಲ್ಲಿಕಾರ್ಜುನನೆಂಬ ಹೆಸರು ತನಗೆ ಪ್ರಸಿದ್ಧವಾಗಿ
ತೆಂಬು ಹೇಳಿರುವನು. ಒಂದಾನೊಂದು ಪೂರ್ವಯುಗದಲ್ಲಿ ಚಂದ್ರವಂಶದಲ್ಲಿ ಹುಟ್ಟಿದ ಚಂದ್ರ
ಗುಪ್ತನೆಂಬ ರಾಜನು ಶಿವಭಕ್ತಿತತ್ಪರನಾಗಿದ್ದನು. ||೧೮|| ಆ ದೊರೆಗೆ ಪುಣ್ಯವತಿಯಾದ ಚಂ
ದ್ರವತಿಯೆಂಬ ಮಗಳಿದ್ದಳು. ಅವಳು ಪ್ರತಿದಿನವೂ ತನ್ನ ಸಖಿಯರೊಡನೆ ಕೂಡಿ ಭಕ್ತಿಯಿಂದ
ಶ್ರೀಗಿರಿ ಮಲ್ಲಿಕಾರ್ಜುನದೇವನನ್ನು ಸೇವಿಸಿಕೊಂಡು ಹೋಗುತ್ತಿದ್ದಳು. ಅವಳು ಒಂದಾ
ನೊಂದುದಿವಸ ಶಿವನ ಮುಂಗಡೆಯಲ್ಲಿ ಅತಿ ಸಂತೋಷದಿಂದ ಮೃದುಮಧುರವಾದ ಆಲಾಪ
ದಿಂದಲೂ, ಶ್ರುತಿವೆರೆದ ಸಪ್ತಸ್ವರಗಳಿಂದಲೂ ಕೂಡಿದ ಅತಿ ಮನೋಹರ ಗಾನವನ್ನು ಮಾ
ಡಳು. ||೨೧|| ಆ ಗಾನ ಶ್ರವಣಾನಂದದಿಂದ ಗಿರಿ ಶಿಖರಗಳೆಲ್ಲಾ ಕುಣಿದಾಡಿದುವು. ದಿಕ್ತ
ಗಳು ಒಲೆದಾಡಿದುವು. ಆಕಾಶವು ಅದಿರಿತು. ದೇವಗಂಗೆಯು ಉಬ್ಬಿದಳು. ಪಾತಾಲಗಂಗೆ

||೨೨|| ಚಲಿತಾಕಾಶಮತ್ಯಂತ ಪ್ರಮೋದಿತಸುರಾಪಗಂ | ಆಕಾಶನೀತಪಾ
ತಾಲಗಂಗೋತ್ತುಂಗತರಂಗಕಂ || ೨೩ || ಸ್ರುತವನ್ನಿರ್ಜರಸಂದೋಹಂ ದ್ರವಿ
ತಾಶ್ಮ ಸಮುಚ್ಚಯಂ | ಆಶುಪಲ್ಲವಿತಸ್ಥಾಣು ಪ್ರಮತ್ತಮೃಗಮಂಡಲಂ ||೨೪||
ಹ್ರೀನಮುದ್ಗಾಯಕಕುಲಂ ಕಂಪಿತಾನನಕಿನ್ನರಂ | ಪಾರ್ವತ್ಯಾಂಜಾತಹರ್ಷಾ
ಯಾಂ ತದ್ಗಾನಾಂಭೋನಿಧೌ ಶಿವಃ ||೨೫|| ಮಗ್ನೋಭೂತ್ವಾಜಗಾದೈನಾಂ
ಸೋಮಸ್ಸಂತುಷ್ಟಮಾನಸಃ | ಪ್ರೀತೋಽಸ್ಮಿ ಮೃಗಶಾಬಾಕ್ಷಿ ತವಾಭೀಷ್ಟತ
ಮಂವರಂ || ೨೬ || ವರಯಸ್ವಾವಿಲಂಬೇನದಾಸ್ಯಾಮಿಸುತರಾಮಿತಿ | ಅಥ
ಸಾಪ್ರಾರ್ಥಯಾಮಾಸ ತದಾಚಂದ್ರವತೀಶಿವಂ ||೨೭|| ಪರ್ವತೋತ್ತುಂಗಶೃಂ
ಗಸ್ಥ ದಿವ್ಯಲಿಂಗಾಂಗಭಾಸುರ | ಮಯಾಸಮರ್ಪಿತಾಂಮೌಳೌ ಮಲ್ಲಿಕಾಮಾ
ಲಿಕಾಂತವ ||೨೮|| ತ್ವಂ ಮೌಳೌ ಸತತಂ ಧರ್ತುಂ ಕರುಣಾಂ ಮಯಿಕುರ್ವಿ
ತಿ | ಶೀಘ್ರಂತಾಂ ಮಲ್ಲಿಕಾಮಾಲಾಂ ಭವ್ಯತೇಜೋವಿರಾಜಿತಾಂ ||೨೯|| ಸ್ವ
ವೇಶಯದುಮಾನಾಥೋ ಜಾಹ್ನವೀಚಂದ್ರಮಧ್ಯತಃ | ಗಂಗಾತರಂಗಿಣೀ ರಂಗ
ತ್ತರಂಗೋತ್ತುಂಗಫೇನವತ್ ||೩೦|| ಬಭೌಸಾ ಮಲ್ಲಿಕಾಮಾಲಾ ಯತಸ್ತ
ತ್ರಾರ್ಜುನಚ್ಛವಿಃ | ಮಲ್ಲಿಕಾರ್ಜುನನಾಮಾಸ್ಯ ಪ್ರಖ್ಯಾತ ಮಭವತ್ತತಃ ||೩೧||

---

ಯ ತೆರೆಗಳು ಆಕಾಶದತನಕ ಚಿಮ್ಮಿದುವು. ದೇವತೆಗಳು ಹೊಗಳಿದರು. ಕಲ್ಲುಗಳು ಕರಗಿದುವು. ಮೋಟುಮರಗಳು ಚಿಗುರಿದುವು. ಮೃಗಸ್ತೋಮವು ಉಲ್ಲಾಸಗೊಂಡಿತು. ತುಂಬುರ ನಾರದಾದಿಗಾಯಕರು ನಾಚುಗೆಯಿಂದ ತಲೆವಾಗಿಸಿದರು. ಕಿನ್ನರರ ಮುಖಗಳು ನಡುಗಿದುವು. ಪಾರ್ವತಿಗೆ ಅತ್ಯಾನಂದವಾಯಿತು. ಶಿವನು ಆ ಗಾನರಸ ಸಮುದ್ರದಲ್ಲಿ ಮುಳುಗಿ ||೨೫|| ಸಂತೋಷದಿಂದ ಆ ಭಕ್ತೆಯನ್ನು ಕುರಿತು—"ಎಲೆ ಏಣಾಕ್ಷಿಯೆ! ನಿನ್ನ ಗಾನಕ್ಕೆ ಮೆಚ್ಚಿದೆನು. ಬೇಕಾದ ವರವನ್ನು ಬೇಡು ತಡವಿಲ್ಲದೆ ಕೊಡುವೆನು" ಎನ್ನಲಾಗಿ, ಆಕೆಯು ಸ್ವಾಮಿಯನ್ನು ಕುರಿತು—ಈ ಗಿರಿಯ ಉನ್ನತ ಶಿಖರದಲ್ಲಿ ಲಿಂಗದೇಹಿಯಾಗಿ ನೆಲಸಿರುವ ಎಲೈ ದೇವನೆ! ನಿನಗೆ ನಾನು ಸಮರ್ಪಿಸಿದ ಮಲ್ಲಿಗೆ ಹೂವಿನ ಸರವನ್ನು ನೀನು ಸರ್ವದಾ ಮಂಡೆಯಲ್ಲಿ ಧರಿಸಿಕೊಂಡಿರುವಂಥ ವರವನ್ನು ನನಗೆ ದಯೆಪಾಲಿಸು ಎಂದು ಬೇಡಲಾಗಿ, ಶಂಕರನು ಆಗಲೆಂದು ಒಪ್ಪಿ, ಆ ಕೂಡಲೇ ಮಹಾ ಶುಭ್ರಕಾಂತಿಯಿಂದೊಪ್ಪುತ್ತಿರುವ ಮಲ್ಲಿಕಾಮಾಲೆಯನ್ನು ತನ್ನ ಮಂಡೆಯಲ್ಲಿ ಗಂಗೆಗೂ ಚಂದ್ರನಿಗೂ ಮಧ್ಯದಲ್ಲಿ ಆ ಗಂಗಾಪ್ರವಾಹದ ತೆರೆಯಲ್ಲಿ ಹುಟ್ಟಿರುವ ನೊರೆಯೋ ಎಂಬಂತೆ ಇಟ್ಟುಕೊಂಡನು. ||೩೦|| ಆ ಬಿಳಿಯ ಮಾಲಿಕೆಯ ಕಾಂತಿಯು ಲಿಂಗಮೂರ್ತಿಯಮೇಲೆ ಸದಾ ಮುಸುಕಿದ್ದುದರಿಂದ ಈ ಸ್ವಾಮಿಗೆ ಮಲ್ಲಿಕಾರ್ಜುನನೆಂಬ ಹೆಸರು ಪ್ರಖ್ಯಾತವಾಯಿತು. ||೩೧|| ಇದರಂತೆಯೇ ಈ ಪರ್ವತದಲ್ಲಿರುವ ಇತರ ಲಿಂಗಗಳಿಗೆಲ್ಲಾ ಬೇರೆ ಬೇರೆ ಹೆಸರುಗಳುಂಟಾಗಿರುವುದಕ್ಕೂ ತಕ್ಕ ಕಾರಣಗಳುಂಟು.

ಅನ್ಯೇಷಾಮಪಿಲಿಂಗಾನಾಂ ಪ್ರತ್ಯೇಕಂ ಕಾರಣಾಂತರೈಃ | ಅರ್ಪಪ್ರಕ್ತಿ
ಕನಾಮಾನಿ ಪರ್ವತೇಽಸ್ಮಿನ್ಸ್ಮಹೋನ್ನತೇ ||೩೨|| ಏತನ್ನಗೇ ಸಂಸ್ಥಿತಾನಾ
ಲಿಂಗಾನಾಂ ಪರಿಪೂಜನಾತ್ | ಫಲಂ ಕಿಮಿತಿಚೇದ್ವತ್ಸ ಶೃಣುವಕ್ಷ್ಯಾಮಿ
ತ್ವತಃ || ೩೩ || ಅಶೇಷಲಿಂಗವಾಸಸ್ಯ ಶ್ರೀಗಿರೇರಸ್ಯ ಸಂತತಂ | ಸ್ಮೃತಿ ಸಂ
ರ್ಶನ ಸ್ಪರ್ಶ ಮಾತ್ರಾದೇವಾಪ್ಯತೇನೃಭಿಃ ||೩೪|| ಸ್ವರ್ಗ ಮೋಕ್ಷಸುಖಂ ಪೂ
ಜಾಫಲಂ ತದ್ವರ್ಣ್ಯತೇ ಕಥಂ | ಪುರಾಣೇಹಿ ಪುನರ್ಜನ್ಮ ನವಿದ್ಯತ ಇತೀರಣಾ
ತ್ ||೩೫|| ಏವಂ ಶ್ರೀಪಂಡಿತೇಂದ್ರೇಣ ಕಥಿತಂ ಪರಮೋನ್ನತಂ | ಶ್ರುತ್ವಾ
ಶ್ರೀಗಿರಿಮಾಹಾತ್ಮ್ಯಂದೋನಮಾರ್ಯೋಽತಿಹರ್ಷಿತಃ ||೩೬|| ವಕ್ತಾತ್ವಂದೇ
ಸರ್ವಜ್ಞಶ್ರಾವ್ಯಂಶ್ರೀಗಿರಿವೈಭವಂ | ಕಿಲತೃಪ್ತಿರ್ವಿದ್ಯತೇಕಿಂ ಶ್ರೀಗುರೋಃಶ್ರೋ
ತ್ರಯೋರ್ಮಮ || ೩೭ || ಪ್ರಸನ್ನಾತ್ಮನ್ಕೃಪಾಮೂರ್ತೇ ನಿಯೋಗೇ ಪ್ರ
ಯುಜ್ಯಮಾಂ | ಮಹಾಪ್ರಸಾದಃ ಕರ್ತವ್ಯಃ ಕ್ಷಿಪ್ರಂ ಶ್ರೀಪಂಡಿತೋತ್ತಮ
||೩೮|| ಭವತ್ಕೃತಶ್ರೀಗಿರೀಂದ್ರವರ್ಣನಾಖ್ಯಕೃತೌ ಪುರಾ | ಶಿಲಾಸ್ಸರ್ವಾ
ಲಿಂಗರೂಪಾ ಇತಿವ್ಯಕ್ತಮುದೀರಿತಂ ||೩೯|| ಯುಷ್ಮದ್ದೃಷ್ಟೇರ್ಲಿಂಗಪೀಠ
ಭೂತ್ವಾ ಶ್ರೀಪರ್ವತಸ್ತಥಾ | ಶ್ರೀಮನ್ಮಹಾದೇವಮೂರ್ತೇ ಸಕಲ ಸ್ಸಮಧ್ಯ
ಶ್ಯತ ||೪೦|| ನಜಾನೇಽನ್ಯದಹಂ ಯುಷ್ಮತ್ಪಾದಾಬ್ಜಯುಗಳಾದೃತೇ | ಶಿ

---

||೩೨|| ಇನ್ನು ಈ ಗಿರಿಯಲ್ಲಿರುವ ಲಿಂಗಗಳನ್ನೆಲ್ಲಾ ಪೂಜಿಸುವುದರಿಂದ ಉಂಟಾಗುವ ಫ
ವೇನೆಂದು ಕೇಳುವೆಯಾದರೆ ಹೇಳುತ್ತೇನೆ ಕೇಳು—ಸಕಲ ಲಿಂಗನಿವಾಸಸ್ಥಲವಾದ ಈ ಶ್ರೀಕ್ಷೇ
ವನ್ನು ನೆನೆಯುವ ನೋಡುವ ಮುಟ್ಟುವ ಮಾತ್ರದಿಂದಲೇ ಮನುಷ್ಯರಿಗೆ ಸ್ವರ್ಗಸುಖ ಮೋಕ್ಷ
ಸುಖಗಳೆಲ್ಲಾ ಉಂಟಾಗುತ್ತವೆಯೆನ್ನುವಾಗ, ಪುನರ್ಜನ್ಮವೇ ಉಂಟಾಗುವುದಿಲ್ಲವೆಂದು ಪುರಾ
ಣದಲ್ಲೇ ಹೇಳಲ್ಪಟ್ಟಿರುವಾಗ, ಇನ್ನು ಇಲ್ಲಿರುವ ಲಿಂಗಗಳ ಪೂಜೆಯಿಂದುಂಟಾಗುವ ಫಲ
ಮಹತ್ತ್ವವನ್ನು ಹೇಳುವುದಕ್ಕೆ ಸಾಧ್ಯವೆ? ||೩೫|| ಎಂಬುದಾಗಿ ಶ್ರೀ ಪಂಡಿತಾರಾಧ್ಯರು
ಹೇಳಿದ ಶ್ರೀ ಶೈಲಮಹಿಮೆಯನ್ನು ದೋನಮಾರ್ಯನು ಕೇಳಿ, ಅತಿ ಸಂತೋಷಪಟ್ಟು, ಎಲೈ
ಸರ್ವಜ್ಞ ಗುರುಸ್ವಾಮಿಯೆ! ಕೇಳಲರ್ಹವಾದ ಶ್ರೀ ಶೈಲಮಹಿಮೆಯನ್ನು ತಾವು ಅಪ್ಪಣೆಕೊ
ಸಿದಿರಿ. ನನ್ನ ಕಿವಿಗೆ ತೃಪ್ತಿಯಾದೀತೆ? ಶ್ರೀ ಪರ್ವತದ ಸೇವೆಯನ್ನು ಮಾಡಲಿಕ್ಕೆ ನನಗೆ ಅಪ್ಪ
ಣೆಯನ್ನು ಅನುಗ್ರಹಿಸಬೇಕು. ತಾವು ಪೂರ್ವದಲ್ಲಿ ರಚಿಸಿರುವ "ಶ್ರೀ ಗಿರೀಂದ್ರವರ್ಣನ"
ಎಂಬ ಹೆಸರಿನ ಗ್ರಂಥದಲ್ಲಿ ಈ ಗಿರಿಯ ಶಿಲೆಗಳೆಲ್ಲವೂ ಲಿಂಗರೂಪಗಳೆಂದು ಹೇಳಿರುವಿರಿ.
||೩೯|| ಅದರಂತೆಯೇ ತಮ್ಮ ದೃಷ್ಟಿಗೆ ಶ್ರೀ ಶೈಲವೆಲ್ಲವೂ ಲಿಂಗವಾಗಿಯೂ ಪೀಠವಾ
ಗಿಯೂ ಗೋಚರಿಸಿತು. ನಾನಾದರೊ ತಮ್ಮ ಪಾದಯುಗ್ಮದ ಹೊರತು ಮತ್ತೊಂದನ್ನು
ಕಾಣೆ. ತಮ್ಮ ಅಪ್ಪಣೆಯನ್ನು ಭಕ್ತಿಯಿಂದ ಶಿರಸಾವಹಿಸಿ ತೆರಳುತ್ತೇನೆ. ತಮ್ಮ ಅನುಗ್ರಹವನ್ನು

ಸಾಭವದೀಯಾಜ್ಞಾಂ ಧೃತ್ವಾಗಚ್ಛಾಮಿಭಕ್ತಿತಃ ||೪೮|| ಭವದೀಯಪ್ರಸಾದಂ ಮೇದತ್ವಾಪರಕ್ಷೇತ್ಯುದೀರಯನ್ | ಸಾಷ್ಟಾಂಗಂ ಪ್ರಣಿಪತ್ಯಾಸ್ಮೈ ಯಯೌ ಶ್ರೀಪರ್ವತಂಪ್ರತಿಂ ||೪೯||

ಇತಿ ಪರ್ವತಪ್ರಕರಣೇ ತತ್ಪಂಡಿತಾರಾಧ್ಯವರ್ಯೇಣ ಶ್ರೀಗಿರೇರಶೇಷ
ದಿವ್ಯಸ್ಥಾನಕಥನಪುರಸ್ಸರಂ ಶ್ರೀಗಿರಿಂಪ್ರತಿ ದೋನಮಾರ್ಯಪ್ರೇ
ಷಣಕಥನಂನಾಮ ಚತುರ್ಥೋಽಧ್ಯಾಯಃ.

---

## ಅಥ ಪಂಚಮೋಽಧ್ಯಾಯಃ.

### ದೋನಮಾರ್ಯಸ್ಯ ಮಾಹೇಶ್ವರಾಚಲಪ್ರಾಪ್ತಿಕಥನಂ.

ತತಶ್ಶ್ರೀಪರ್ವತಂದ್ರಷ್ಟುಂ ಗಣಶಸ್ಸರ್ವತೋದಿಶಂ | ಸಂಪ್ರಸೂತಾ ಇವಕ್ಷೋಣ್ಯಾ ಸವಿಸ್ಮಯಮನೇಕಧಾ ||೧|| ಸಂಪೂರ್ಯ ಪದವೀ ಸೇತುಕಾನನಾನಿಸಮಂತತಃ | ಸಮಾಯಾನ್ತೀಃಪರಿಷದಃ ಪಶ್ಯತಃ ಪುರುಷಾನ್ಮುದಾ || ವೀಕ್ಷ್ಯರೋಮಾಂಚಿತಾಂಗಸ್ಸನ್ ದೋನಮಾರ್ಯಸ್ತೈಸ್ಸಹ | ಸಂಪ್ರತಸ್ಥೇಸ್ವಯಂ ಹರ್ಷಾಚ್ಛ್ರೀಶೈಲಂ ಸಮುದೀಕ್ಷಿತುಂ ||೨|| ಸಂಪ್ರಯಾಂತೋಜನಾಸ್ಸ

---

ಕೊಟ್ಟು ಕಾಪಾಡಬೇಕು,, ಎಂದು ಪ್ರಾರ್ಥಿಸಿ ಸಾಷ್ಟಾಂಗ ನಮಸ್ಕಾರಮಾಡಿ ಶ್ರೀಶೈಲವನ್ನು ಕುರಿತು ಹೊರಟನು. ||೪೯||

ಎಂಬಲ್ಲಿಗೆ ಪರ್ವತಪ್ರಕರಣದೊಳಗೆ ೪ನೆ ಅಧ್ಯಾಯವು ಮುಗಿದುದು.

---

## ೫ನೆ ಅಧ್ಯಾಯವು.

### ದೋನಮಾರ್ಯನು ಮಾಹೇಶ್ವರ ಪರ್ವತಕ್ಕೆ ತಲುಪಿದ ಕಥೆ

ಭೂಮಿಯೇ ಹೆತ್ತುಬಿಟ್ಟತೋ ಎಂಬಂತೆ ಪರಿಸೆಗಳು ಮಾರ್ಗಗಳಲ್ಲೂ ಸೇತುಗಳಲ್ಲೂ ಅರಣ್ಯಗಳಲ್ಲೂ ತುಂಬಿ ಗುಂಪುಗುಂಪಾಗಿ ಶ್ರೀಶೈಲದರ್ಶನಕ್ಕಾಗಿ ದಿಕ್ಕುದಿಕ್ಕುಗಳಿಂದೆಲ್ಲಾ ಬರುತ್ತಿರಲು, ಅವರನ್ನು ಕಂಡು ಸಂತೋಷಪಡುತ್ತಿರುವ ಸತ್ಪುರುಷರನ್ನು ದೋನಮಾರ್ಯನು ನೋಡಿ ಆನಂದದಿಂದ ರೋಮಾಂಚಗೊಂಡು ಆ ಜನರೊಡನೆ ತಾನೂ ಕೂಡಿ ಶ್ರೀಗಿರಿದರ್ಶನಕ್ಕಾಗಿ ಹೊರಟನು. ||೨|| ಮಾಹೇಶ್ವರ ಪರ್ವತ ದ್ವಾರಕ್ಕೆ ಹೋಗುವ ದಾರಿಯನ್ನು ಹಿಡಿದು ಹೋಗುತ್ತಿದ್ದ ಪರಿಸೆಗಳೊಡನೆ ದೋನಮಾರ್ಯನೇ ಮೊದಲಾದ ಜನರು ಹೋಗುತ್ತಿರುವಲ್ಲಿ

ರ್ವೇತಸ್ಯಾಂ ಪರಿಷದಿಸ್ಥಿತಾಃ । ಮಾಹೇಶ್ವರದ್ವಾರಮಾರ್ಗೇಷ್ವಗ್ರೇಪಶ್ಚಾ
ಚ್ಚಮಧ್ಯತಃ ॥೪॥ ಮಾಸಂಮರ್ದಂ ಪ್ರಕುರುತ ಪಶ್ಚಾದೇವ ನತಿಷ್ಠತ ।
ಶ್ಯಾಲಪಂತಃ ಕಿಂ ಶೀಘ್ರಗಮನೇನೇತಿವಾದಿನಃ ॥೫॥ ಪುರೋಯಾಶೇತಿ
ಸಾ ವದಂತಃ ಕೇಚನಾಪರೇ। ಅಗತ್ವಾಕಿಂಕರಿಷ್ಯಾಮ ಇತಿತಾನ್ಪ್ರತಿವಾದಿನ
ಮಾರ್ಗಂದತ್ವಾಽಪಸರತೇತ್ಯಾಚಕ್ಷಾಣಾಶ್ಚ ಕೇಚನ । ಪಥಾಪರೇಣಗಚ್ಛಧ್ವ
ತಿಕೇಚನವಾದಿನಃ ॥೭॥ ತ್ವರಿತಂ ಮಾಗಚ್ಛತೇತಿ ಪ್ರಲಪಂತಸ್ತಥಾಪರೇ । ಅ
ಕಿಯದ್ದೂರಮಿತಿಪೃಚ್ಛಂತಃ ಪರ್ವತೋಽಹ್ಯಯಂ ॥೮॥ ಇತಿಬ್ರುವಾಣಾಸ್ಸ
ಸಾ ಗತಾಸ್ಮ ಇತಿವಾದಿನಃ । ಕದಾಪೂರ್ಣಂಗಮಿಷ್ಯಾಮೋವದಸ್ತ ಇತಿಕೇಚ
ಕಿಯದ್ಗತಂ ಭವದ್ಭಿಸ್ತತ್ತೂಷ್ಣೀಂಯಾತೇತಿವಾದಿನಃ । ಗಚ್ಛಾಮ ಏವದಶಭಿ
ವಸೈರಿತಿಭಾಷಿತಂ ॥೧೦॥ ಮಾಕುರುಧ್ವಮಿತಿ ಮಿತಿವಿಜ್ಞಾನಂ ದಿವಸೇಷು
ಕೋದೋಷಇತಿಜಲ್ಪಂತಃ ಪ್ರತಿರೋಧೋಽಸ್ತಿನಃಕಿಮು ॥೧೧॥ ನನುಗ
ಕಿಮಸ್ಮಾಕಂ ಮಾರ್ಗೋಽಯಮಿತಿಭಾಷಿಣಃ । ಕಿಮೇತದ್ಗ್ರಾಮಭಕ್ತಾನಾ
ಗೃಹಾನ್ಸ್ವೇತ್ಸೀತಿಭಾಷಿಣಃ ॥೧೨॥ ಗತೇಽಬ್ದೇಽಸ್ಮಾಭಿರುಷಿತಂ ಪೂರ್ವ
ಮಿತಿಶಂಸಿನಃ । ಯಾಮಮಾತ್ರಂಕಥಮಪಿ ಸಮಾಯಾತೇತಿವಾದಿನಃ ॥೧
ಅಭುಕ್ತ್ವೈವ ವಯಂ ಶಕ್ತಾ ನಗಂತುಮಿತಿಭಾಷಿಣಃ । ಕಿಂಕರಿಷ್ಯಥತಿಂಗಾ

---

ಮುಂದೆಯೂ ಹಿಂದೆಯೂ ಮಧ್ಯದಲ್ಲಿಯೂ ತುಂಬಿರುವ ಪರಿಷೆಯ ಜನರಲ್ಲಿ ಕೆಲಕೆಲವರು
ಒತ್ತರಿಸಬೇಡಿ, ಹಿಂದೆಯೇ ನಿಂತುಕೊಳ್ಳಬೇಡಿ, ಬೇಗನೆ ಓಡಿಹೋಗುವುದೇಕೆ? ಎನ್ನು
ಮುಂದಕ್ಕೆ ಸರಿಯಿರಿಯೆಂದು ಕೆಲರು ಹೇಳಿದರೆ, ನಡೆಯದೆ ಏನುಮಾಡೇವು ಎಂದು ಆ
ದಿನವರು ಉತ್ತರವನ್ನು ಹೇಳುತ್ತಲೂ, ದಾರಿಕೊಟ್ಟು ನಡೆಯಿರಿ, ಬೇರೆ ದಾರಿಯಲ್ಲಿ
೧೨,ಅವಸರ ಮಾಡಬೇಡಿರಿ, ಯೆಂದು ಕೆಲಕೆಲರೂ, ಈ ಗಿರಿಯು ಎಷ್ಟುದೂರವಿದೆಯೆಂದು
ವರೂ, ಇನ್ನೇನು ಬೇಗನೆ ಹೋಗಿ ಮುಟ್ಟುತ್ತೇವೆಯೆಂದು ಕೆಲವರೂ, ಯಾವಾಗ ತುದಿ
ಟ್ಟುವೆವೆಂದು ಕೆಲರೂ, ನೀವು ಎಷ್ಟುದೂರ ಬಂದಿದ್ದೀರಿ? ಸುಮ್ಮನೆ ನಡೆಯಿರಿ ಎಂದು
ರೂ, ಇನ್ನು ೧೦ ದಿನಗಳಲ್ಲಿ ತುದಿ ಮುಟ್ಟುತ್ತೇವೆಂದು ಕೆಲರು ಹೇಳಿದರೆ; ಮತ್ತೆ ಕೆಲರು
ಲೆಕ್ಕವನ್ನು ಮಾಡಬಾರದು ಎನ್ನಲಾಗಿ, ಇನ್ನು ಕೆಲರು ಮಾಡಿದರೇನು? ಎನ್ನು
ನಮಗೆ ತಡೆಯುಂಟೆ? ಎಂದು ಕೆಲವರೂ. ನಮಗೆ ಈ ದಾರಿಯೊಂದು ಲೆಕ್ಕವೇ ಎಂದು
ವರೂ ಆಡಿಕೊಳ್ಳುತ್ತಿದ್ದರು. ॥೧೧॥ ಈ ಹಳ್ಳಿಯಲ್ಲಿರುವ ಭಕ್ತರ ಮನೆಯನ್ನು
ಯಾ? ಎಂದು ಕೆಲರು ಕೇಳಲು, ಕಳೆದ ವರ್ಷ ನಾವು ಈ ಊರಿನಲ್ಲಿ ತಂಗಿದ್ದೆವು
ಕೆಲರು ಉತ್ತರಕೊಡುತ್ತಿದ್ದರು. ಇನ್ನೊಂದು ಜಾವದ ಹೊತ್ತು ಹೇಗಾದರೂ ಬನ್ನಿರಿ
ಕೆಲರೂ, ಊಟಮಾಡದೆ ಮುಂದಕ್ಕೆ ನಡೆಯುವುದು ಸಮ್ಮಂದಾಗದೆಂದು ಕೆಲವರೂ

ಸರಮುಕ್ತೇತಿವಾದಿನಃ ||೧೪|| ಉಚಿತೋ ಜಂಗಮಸ್ಯೈಷಕಾರ್ಯಏವೇತಿಭಾ
ಷಿಣಃ | ಅಮುಕ್ತ್ವೈವೀವಧಧರಾನ್ವ್ರಜತೇತಿಚಶಂಸಿನಃ ||೧೫|| ಮುಕ್ತ್ವಾವ
ವೈವಧಿಕಾನ್ಮಾರ್ಗೇನಸಾಧುರಿತಿಭಾಷಿಣಃ | ತ್ಯಕ್ತ್ವಾವಮುಗ್ಧಗಿರಶ್ಶೀಘ್ರಂ
ಪುರೋಯಾತೇತಿಭಾಷಿಣಃ ||೧೬|| ಯುಕ್ತಂಕಿಂ ನಿಷ್ಠುರಂಯೂಯಂ ಕಥಾ
ಲೀತ್ಯಾಪಿಗಚ್ಛತ | ಶನೈಶ್ಶನೈರೇವವಯಂಗಚ್ಛಾಮ ಇತಿ ವಾದಿನಃ ||೧೭|| ಪರಿ
ಷತ್ಸನ್ನಿವಿಷ್ಟೇಯಂ ಸಮೀಚೀನಸ್ಥಲೇಽಖಿಲಾ| ಪಲ್ವಲಾಸಿಹ್ರದಾಸ್ಸಂತಿಕಿಂಕ್ಷು
ದ್ರಾಶ್ಚ ಜಲಾಶಯಾಃ ||೧೮|| ಕತಿಚಿದ್ವಾಪ್ರಸೂನಾನಿ ಯೂಯಮಾನಯತೇ
ತಿಚ | ವಿದ್ಯಂತೇ ಕತಿಚಿತ್ಪುಷ್ಪಾಣ್ಯತ್ರೇತಿಪರಿಶಂಸಿನಃ ||೧೯|| ಕಥಂವಾಪಥಿ
ಧೂಪಾಗ್ನಿರಾಯಾತೀತಿಚಭಾಷಿಣಃ | ಬಹವಸ್ತತಸದ್ಭಕ್ತಾಸ್ಸಂತ್ಯೇವೇತಿಚಭಾ
ಷಿಣಃ ||೨೦|| ಏತಸ್ಮಿನ್ಸಮಯೇ ಭಕ್ತೋಲಭ್ಯತೇವೇತಿಭಾಷಿಣಃ | ನೋಚೇ
ನ್ಮಹಾದೇವಏವ ಜಾನಾತೀತಿಚವಾದಿನಃ ||೨೧|| ಯುಜ್ಯತೇಕಿನ್ನುಪಾಥೇಯ
ಮಿತಿಕೇಚಸಭಾಷಿಣಃ | ಮಾರ್ಗೇಪಾಥೇಯಮೇವೇತಿ ಜಲ್ಪಂತಸ್ತತ್ರಕೇಚನ ||
ಕಿನುಭೂಚ್ಛಿವಪೂಜಾಶ್ಚ ಯುಷ್ಮಾಕಮಿತಿವಾದಿನಃ | ವೇತ್ತಿಶಂಕರಏವಾಸ್ಮ
ದ್ಭೋಜನಂ ಚೇತಿಶಂಸಿನಃ ||೨೩|| ಸಹಿವರ್ತಯಿತುಂಶಕ್ಯಾನಿಯಮಾ ಇತಿವಾ
ದಿನಃ | ಬಸವೇವಿದ್ಯಮಾನೇ ಕಿಮಶಕ್ಯಮಿತಿವಾದಿನಃ ||೨೪|| ಅನೀತ್ವಾಕಾಲ

---

ಚೆಸಿಯು ಹೊತ್ತಾಯಿತು ಏನುಮಾಡುತ್ತೀರಿ? ಎಂದು ಕೆಲವರೂ, ಜಂಗಮರು ತಮ್ಮ ನಿತ್ಯಾ
ರ್ಚನ ಕಾರ್ಯವನ್ನು ತಪ್ಪದೆ ಮಾಡಿಯೇ ತೀರಬೇಕೆಂದು ಕೆಲವರೂ, ಕಾವಡಿ ಹೊತ್ತಿರುವವರ
ನ್ನು ಬಿಟ್ಟುಹೋಗಬೇಡಿರೆಂದೂ, ಅವರನ್ನು ಬಿಟ್ಟುಹೋಗತಕ್ಕದು ಉಚಿತವಲ್ಲವೆಂದೂ ಕೆಲ
ವರೂ, ಈ ದಡ್ಡ ಶರಟಿಗಳನ್ನು ಬಿಟ್ಟು ಸುಮ್ಮನೆ ನಡೆಯಿರೆಂದು ಕೆಲವರೂ, ||೧೬|| ಹೀಗೆ
ನೀವು ಕಠಿನವಾಗಿ ಮಾತನಾಡುವುದು ಸರಿಯೆ? ಎಂದು ಕೆಲರೂ, ನೀವು ಹೇಗಾದರೂ ಹೋ
ಗಿರಿ ನಾವು ಮೆಲ್ಲಗೆ ಹೋಗುತ್ತೇವೆ ಎಂದು ಕೆಲವರೂ, ಎಲ್ಲ ಪರಿಸೆಯೂ ಒಳ್ಳೇಸ್ಥಲಕ್ಕೆ ಬಂದು
ನಿಂತಿತು, ಇಲ್ಲಿ ಕುಂಟೆಗಳೂ ಹಳ್ಳಗಳೂ ಕಟ್ಟೆಗಳೂ ಇವೆಯೊ? ಎಂದು ಕೆಲರೂ,
ಇದೋ ಇಲ್ಲಿ ಕೆಲ ಹೂವುಗಳು ಇವೆ, ಎತ್ತಿಕೊಂಡು ಬನ್ನಿರೆಂದು ಕೆಲರೂ, ಮಾರ್ಗದಲ್ಲಿ ಧೂ
ಪದ ಬೆಂಕಿಗೆ ಹೇಗೆ? ಎಂದು ಕೆಲರೂ, ಎಷ್ಟೋಜನ ಭಕ್ತರು ಇದ್ದೇ ಇದ್ದಾರೆಂದು ಕೆಲರೂ,
ಈಗ ಭಕ್ತರು ದೊರೆದಾರೇ? ಎಂದು ಕೆಲರೂ,, ದೊರೆಯದೆ ಇದ್ದರೆ ಶಿವನೇ ಅರಿತುಕೊಳ್ಳುತ್ತಾ
ನೆಂದು ಕೆಲರೂ ||೨೧|| ಬುತ್ತಿಯನ್ನುಪಯೋಗಿಸುವಿರಾ? ಎಂದು ಕೆಲವರೂ, ದಾರಿಯಲ್ಲಿ
ಬುತ್ತಿಯೇ ಗತಿಯೆಂದು ಇನ್ನುಕೆಲರೂ, ನಿಮ್ಮ ಶಿವಪೂಜೆಗಳಾದುವೆ? ಎಂದು ಕೆಲರೂ,
ನಮ್ಮ ಊಟವನ್ನು ಶಿವನೇ ಬಲ್ಲನೆಂದು ಕೆಲವರೂ, ಇಲ್ಲಿ ನಿಯಮಗಳನ್ನೆಲ್ಲಾ ನಡೆಯಿಸುವು
ದು ಅಸಾಧ್ಯವೆಂದು ಕೆಲರೂ, ಬಸವಯ್ಯನಿರುವಾಗ ಅಸಾಧ್ಯವಾವುದು? ಎಂದು ಕೆಲರೂ,

ಮತ್ರೈವಗಚ್ಛತೇತಿಜಭಾಷಿಣಃ | ಸಂಪ್ರಸ್ಥಿತಾಕಿಂ ಪರಿಷದಿತಿ ಕೇಚಿತ್ಪ್ರವಾದಿನಃ ||೨೫|| ಸಂಮರ್ದೇಸಪ್ರಯಾತುಂ ಕಿಮಿತಿಕೇಚನಭಾಷಿಣಃ | ಸಂಮರ್ದೇಸವಿನಾಗಂತುಂ ಶಕ್ಯನೋವೇತಿಶಂಸಿನಃ ||೨೬|| ದೃಶ್ಯತೇಪಶ್ಯಥಕಿಮು ಮಾಹೇಶ್ವರಗಿರಿಂಪುರಃ | ಸೋಽಯಂ ಮಾಹೇಶ್ವರಾವಾಸಸ್ತದೂರ್ಧ್ವಮಿತಿವಾದಿನಃ ||೨೭|| ಬಹವಸ್ಸ್ವರ್ಣಕಲಶಾ ಭಾಂತೀತಿಪರಿಶಂಸಿನಃ | ಕಿಂದರಿದ್ರೋಽರ್ಥೇಶವಂದ್ಯ ಶ್ಶಿವೋಽಯಮಿತಿಭಾಷಿಣಃ ||೨೮|| ಸರ್ವೇಜಯೇತಿವದತ ಸ್ವತರಾಮಿತಿಭಾಷಿಣಃ | ಉಘೇ ಜಯಜಯೇತ್ಯುಚ್ಚೈಃ ಪ್ರವದಂತಸ್ತಥಾಪರೇ || ಏವಂಪರಸ್ಪರಾಲಾಪೈಸ್ಸೋಲ್ಲಾಸಂ ಪರಿಜೃಂಭಿತಾಃ | ಶನೈಶ್ಶನೈರಥಪ್ರಾಪು ಶ್ಶ್ರೀಮಹೇಶ್ವರಪರ್ವತಂ ||೩೦|| ಶ್ರೀಶೈಲೋತ್ತರಶೃಂಗೌಘೈಃ ಪರಿತಃ ಪರಿಶೋಭಿತಂ | ವಿಚಿತ್ರದೇವಭವನಸಮೂಹೇನ ವಿರಾಜಿತಂ ||೩೧|| ಪರ್ಯಂತಸರ್ವತಾಕಾರ ಪಮ್ಯ್ಕ್ರಜಾಲೈರಲಂಕೃತಂ | ಮುಕ್ತಿನಿಶ್ರೇಣಿಕಾಕಾರೈಸ್ಸೋಪಾನನಿಕರೈರ್ಯುತಂ ||೩೨|| ವ್ಯೋಮಸ್ಥಮುಕ್ತಿಕಾಂತಾಭಿ ಶ್ಶ್ರೀಶೈಲಸ್ಯನಿರಂತರಂ| ಸದ್ಭಕ್ತಿತೋಽವಿಜ್ಯಮಾನೈರ್ಲಲಿತೈಶ್ಚಾಮರೈರಿವ || ೩೩ || ಅಭ್ರಂಕಷವೃಷೇಶಾಂಕ ಪತಾಕೈರುಪಶೋಭಿತಂ | ಪರೀತಂವ್ಯಾಸಹಸ್ರಾಂಕ ಕಲಿತೈರ್ವಾತಪೂ

---

ಇಲ್ಲೀ ಕಾಲವನ್ನು ಕಳೆಯದೆ ನಡೆಯಿರಿ ಎಂದು ಕೆಲರೂ, ಪರಿಷೆಯೆಲ್ಲಾ ಹೊರಟಿತೆ? ಎಂದು ಕೆಲವರೂ ||೨೫|| ಈ ಗುಂಪಿನಲ್ಲೀ ತಿಕ್ಕಾಡಿಸಿಕೊಂಡು ಹೋಗಬೇಕೆ? ಎಂದು ಕೆಲರೂ, ಇಕ್ಕಟ್ಟಿಲ್ಲದೇನೆಯೇ ನಾವು ಹೋಗಬಹುದೆಂದು ಕೆಲರೂ, ಅದೋ ಮುಂದೆ ಕಾಣಿಸುವ ಮಾಹೇಶ್ವರ ಪರ್ವತವನ್ನು ನೋಡಿದಿರಾ? ಎಂದು ಕೆಲರೂ, ಅದೋ ಅದರಮೇಲೆ ಕಾಣುವುದೇ ಶ್ರೀ ಮಲ್ಲಿಕಾರ್ಜುನ ದೇವಾಲಯವೆಂದು ಕೆಲವರೂ ಹೇಳುತ್ತಿದ್ದರು. ||೨೭|| ಅದೋ ದೇವಾಲಯದ ಅನೇಕಸುವರ್ಣ ಕಲಶಗಳು ಕಾಣಿಸುತ್ತಿವೆಯೆಂದು ಕೆಲರುಹೇಳಲು, ಕುಬೇರನಿಂದ ಸೇವೆ ತೆಗೆದುಕೊಳ್ಳುತ್ತಿರುವ ಪರಶಿವನು ಏನು ದರಿದ್ರನೆ? ಎಂದು ಇತರರು ಹೇಳುತ್ತಿದ್ದರು. ಎಲ್ಲರೂ ಜಯಜಯ ಎಂದು ಹೇಳಿರಿ ಎಂದು ಕೆಲರು ನುಡಿಯುತ್ತಿದ್ದರು. ಆಗ ಉಳಿದವರೆಲ್ಲರೂ ಉಘೇ ಜಯಜಯಾ ಎಂದು ಗಟ್ಟಿಯಾಗಿ ಘೋಷವನ್ನು ಮಾಡುತ್ತಿದ್ದರು. ||೨೯|| ಹೀಗೆ ಯಾತ್ರಿಕರೆಲ್ಲರೂ ಉಲ್ಲಾಸದಿಂದ ಪರಸ್ಪರ ಮಾತನಾಡಿಕೊಂಡು ಮೆಲ್ಲಮೆಲ್ಲನೆ ಸಾಗುತ್ತ ಶ್ರೀ ಮಾಹೇಶ್ವರ ಪರ್ವತವನ್ನು ಸೇರಿದರು. ||೩೦|| ಆ ಗಿರಿಯು ಮೇಲಿರುವ ಮಾಹೇಶ್ವರ ಪುರವೆಂಬ ಊರು ಶ್ರೀಶೈಲದ ಉತ್ತರದಿಕ್ಕಿನ ಶಿಖರಗಳಿಂದ ಸುತ್ತುವರಿಯಲ್ಪಟ್ಟು. ಚಿತ್ರತರವಾದ ದೇವಾಲಯಸ್ತೋಮದಿಂದ ಕೂಡಿ, ಬಳಿಯಲ್ಲಿರುವ ಸಣ್ಣಸಣ್ಣ ಗುಡ್ಡಗಳಂತೆ ತೋರುವ ಉಪ್ಪರಿಗೆಗಳಿಂದ ಅಲಂಕೃತವಾಗಿ, ಮುಕ್ತಿಪದವಿಯನ್ನ ಪಡುವುದಕ್ಕೆ ಹಾಕಿರುವ ಏಣಿಯಂತಿರುವ ಸೋಪಾನಗಳಿಂದ ವಿರಾಜಿತವಾಗಿ, ಆಕಾಶದಲ್ಲಿರುವ ಮುಕ್ತಿಕಾಂತೆಯು ಶ್ರೀ

ರಣ್ಯೈಃ ||೩೪|| ವಿಯತ್ಕಾಂತಾಶರೀರಸ್ಥ ವಿಭೂಷಣಕುಲೈರಿವ | ವಿರಾಜಿತಂಪ
ರಿವ್ಯಾಪ್ತಕಾಂತಿಭಿರ್ಮಣಿತೋರಣೈಃ ||೩೫|| ಜಟಾರುದ್ರಾಕ್ಷಭಸಿತ ಭೂಷಿ
ತೈರ್ಜಂಗಮೈರ್ವೃತಂ | ಪ್ರಮಥಪ್ರಸ್ಫುರದ್ದಿವ್ಯ ವಿಮಾನನಿಕರೈರಿವ ||೩೬||
ವಿರಾಜಿತಂ ಸಮುತ್ತುಂಗೈರ್ಭಕ್ತಾನಾಂಭವನೋಜ್ಜ್ವಯೈಃ | ಸಮುದ್ರಘೋಷ
ಸದೃಶ ತೂರ್ಯಧ್ವನಿವಿಜೃಂಭಿತಃ ||೩೭|| ದದೃಶುರ್ನಗರಂ ಸರ್ವೇ ಸ್ಥಿತಂ ತತ್ರಮ
ನೋಹರಂ | ಪುರಂಮಾಹೇಶ್ವರಾಖ್ಯಂ ತತ್ಪರಿತಸ್ಸಮುದಂಚಿತಾಃ ||೩೮|| ಪಿ
ಕಾಲಿಶುಕಸಂರಾವವಿರಾಜಿತವನಾವಲೀಃ | ಸಮಾಯಾಂತ್ಯೈ ಪರಿಷದೇ ರುದ್ರ
ಪಾದಾಂಬು ಸಾದರಂ ||೩೯|| ಆಹೃತ್ಯೈವಸ್ಥಿತಾರ್ಕುಂಭೈರ್ನಾರಿಕೇಳಾನ್ಫ
ಲಾನ್ವಿತಾನ್ | ಶೈಲಸಂದರ್ಶನಫಲಂ ವಯಂದಾತುಂಕ್ಷಮಾ ಇತಿ ||೪೦|| ವದಂ
ತೀರಿವಸಂಪೂರ್ಣಫಲಾಃ ಕದಳಿಕಾಸ್ಥಲೀಃ | ಶ್ರೀಶೈಲಾಲೋಕನಾಯಾತಮನು
ಜಾನಾಂ ನಿರೀಕ್ಷಣೇ ||೪೧|| ಆಸೀತೋಪಾಯನಪ್ರಾಪ್ತಾನಿವ ಚೂತಾನ್ಫಲಾ
ನ್ವಿತಾನ್ | ವಿಧಾಯಶೀತಲಚ್ಛಾಯಾಂತಸ್ಯಾಃ ಪರಿಷದೋಮುದಾ ||೪೨||
ಸೇವಾಂಕರ್ತುಂ ಸಮಾಯಾತಾನಿವ ಚಿಂಚಾಮಹೀರುಹಾನ್ | ವಸಂತೇನ
ಶ್ರೀಗಿರೀಂದ್ರಂಪರಿತಃ ಪರಿನಿರ್ಮಿತಾಃ ||೪೩|| ಫಲಾವಲೀರಿವಾತ್ಯಂತದರ್ಶನೀ

---

ಗಿಂಗೆ ಬೀಸುತ್ತಿರುವ ಚಾಮರಗಳಂತಿರುವ ಉನ್ನತಗಳಾದ ನಂದಿಧ್ವಜಗಳಿಂದ ಒಪ್ಪಿ,
ವ್ಯಾಸನ ತೋಳಿನ ಗುದ್ದುಳ್ಳ ಚಿಜ್ಜಣಿಗೆಗಳಿಂದ ವಿರಾಜಿತವಾಗಿ, ಆಕಾಶವೆಂಬ ಕಾಂತೆ
ಯ ದೇಹದಲ್ಲಿ ಧರಿಸಿರುವ ಆಭರಣಗಳಂತೆ ರಂಜಿಸುವ ರನ್ನದ ತೋರಣಗಳಿಂದ
ರಮಣೀಯವಾಗಿ || ೩೫ || ಭಸಿತ ರುದ್ರಾಕ್ಷ ಜಟಾದಿಗಳಿಂದಲಂಕೃತರಾದ ಜಂಗಮ
ರುಗಳಿಂದ ತುಂಬಿ, ಪ್ರಮಥರುಗಳು ಏರಿರುವ ಆಕಾಶ ವಿಮಾನಗಳಂತೆ ತೋರುತ್ತಿರುವ
ಎತ್ತರವಾದ ಭಕ್ತರ ಮನೆಗಳಿಂದ ರಂಜಿಸಿ, ಕಡಲಿನ ಘೋಷದಂತಿರುವ ವಾದ್ಯಧ್ವನಿಗಳಿಂದ
ಕೂಡಿ ಒಪ್ಪುತ್ತಿರುವ ಮಾಹೇಶ್ವರ ಪುರವನ್ನು ಪರಿಷೆಯ ಜನರೆಲ್ಲರೂ ಕಂಡರು. ||೩೮|| ಆ
ಪುರದ ಸುತ್ತಲೂ ಗಿಳಿ ಕೋಗಿಲೆಗಳೇ ಮೊದಲಾದ ಪಕ್ಷಿಗಳ ಮಂಜುಳಧ್ವನಿಗಳಿಂದ ಮನೋ
ಜ್ಞಗಳಾದ ಉಪವನ ಪಂಕ್ತಿಗಳು ಒಪ್ಪಿದ್ದುವು. ಆ ವನಗಳಲ್ಲಿ–ಬರುವ ಪರಿಸೆಗೋಸ್ಕರ ರುದ್ರ
ಪಾದೋದಕವನ್ನು ಕುಂಭಗಳಲ್ಲಿ ತುಂಬಿಕೊಂಡು ಬಂದು ನಿಂತಿರುವುವೋ ಎಂಬಂತೆ ಫಲಭರಿ
ತಗಳಾಗಿರುವ ತೆಂಗಿನ ಮರಗಳೂ, ಶ್ರೀಗಿರಿ ಸಂದರ್ಶನದಿಂದುಂಟಾಗುವ ಫಲವನ್ನು ನಾವೇ
ಕೊಡಲು ಸಮರ್ಥರಾಗಿದ್ದೇವೆಂದು ಹೇಳುತ್ತಿರುವುವೋ ಎಂಬಂತೆ ಗೊನೆ ತುಂಬಿ ಫಲಗಳನ್ನು
ಬಿಟ್ಟಿರುವ ಬಾಳೆ ಮರಗಳೂ, ಶ್ರೀಗಿರಿಯ ಯಾತ್ರೆಗಾಗಿ ಬಂದ ಮನುಜರನ್ನು ಇದಿರ್ಗೊಳ್ಳಲಿ
ಕ್ಕಾಗಿ ವನಲಕ್ಷ್ಮಿಯು ಅಣಿಮಾಡಿಕೊಂಡಿರುವ ಹಣ್ಣಿನ ಬಾಗಿನಗಳಂತಿರುವ ಮಾವಿನ ಮರಗ
ಳೂ, ಪರಿಸೆಗೆ ನೆಳಲನ್ನು ಮಾಡಿ ಸೇವಿಸುವುದಕ್ಕಾಗಿ ಬಂದು ನಿಂತಿರುವಂತಿರುವ ಹುಣಿಸೆ ಮರ

ಯುತರಾಕೃತೀಃ । ಜಂಭದ್ರಾಕ್ಷಾಮಾತುಲುಂಗ ನಾದೇಯೀಫಲಮಂಜರೀಃ ॥ ಮಲ್ಲಿಕಾರ್ಜುನಯಾಭಾಸಾ ಮನ್ನಾಮ್ನಾಸಮುದಂಚತಿ । ಭೂಮಾವಿತೀವ ಕಾಜಂತೀಃ ಪುಷ್ಪಿತಾಮಲ್ಲಿಕಾಲತಾಃ ॥೪೫॥ ಗಿರಿಜಾದರಹಾಸಾನುಕಾರಿಣೀಃ ಕುಂದವಲ್ಲರೀಃ । ಭವಾರ್ಪಿತಾ ಭವಾಂಭೋಧಿತರಣೀಸ್ತರಣೀಲತಾಃ ॥ ಅಕುಲಾನಪಿಗೌರೀಶಪೂಜನಾತ್ಕುಸುಮೈಸ್ಸ್ವಕೈಃ । ಪ್ರಕುರ್ವತೋ ದೇವಕುಲಾನ್ಬಕುಲಾನ್ಕುಸುಮಾಂಚಿತಾನ್ ॥೪೭॥ ಮದಾಶ್ರಯೋಗಿರಿರಯಂ ಭವನಾಗಸ್ಯಕೇಸರೀ । ಇತೀವಸ್ತವನಾಲ್ಲಬ್ಧಸಮಾಖ್ಯಾನ್ನಾಗಕೇಸರಾನ್ ॥೪೮॥ ಸರ್ವೇನಾಗಾಃಸ್ತ್ರಿಯಶ್ಶೈಲಏಷಏವಹಿ ಪುನ್ನಗಃ । ಇತೀವಸ್ತವನಾಲ್ಲಬ್ಧನಾಮ್ನಃ ಪುನ್ನಾಗಭೂರುಹಾನ್ ॥೪೯॥ ಕೋವಾಽಸ್ಮತ್ಕುಸುಮೈರೀಶಂ ಸಂಪೂಜ್ಯವರದಾತ್ತತಃ । ಲಪ್ಸ್ಯತೇಽಭೀಪ್ಸಿತಾನರ್ಥಾನ್ಪಶ್ಯಾಮ ಇತಿ ಸಾದರಂ ॥ ಪಶ್ಯಂತಇವಸೋನ್ನಿದ್ರಕುಸುಮಾಃ ಪುಷ್ಪವಾಟಿಕಾಃ । ಪಶ್ಯಂತಸ್ಸಂಸ್ತುವಂತ

---

ಗಳೂ, ವಸಂತನು ಶ್ರೀಗಿರಿಯ ಸುತ್ತಲೂ ನಾನಾತರದ ಫಲಾವಳಿಗಳನ್ನು ಕಟ್ಟಿ ಅಲಂಕರಿಸಿರುವಂತೆ ಒಪ್ಪಿರುವ ನಿಂಬೆ ಮಾದಲ ನೆಲನೇರಿಲು ದ್ರಾಕ್ಷಿಗಳ ಹಣ್ಣುಗೊಂಚಲುಗಳೂ ॥೪೪॥ ಶ್ರೀಗಿರಿಯ ಮಲ್ಲಿಕಾರ್ಜುನಸ್ವಾಮಿಯು ಮಲ್ಲಿಗೆ ಹೂವಿನ ಬಿಳಿಯ ಕಾಂತಿಯಿಂದ ಚಿಕ್ಕ ನನ್ನ ಹೆಸರಿನಿಂದ ವಿರಾಜಿಸುತ್ತಿದ್ದಾನೆಂದು ಹೆಮ್ಮೆಗೊಂಡಂತೆ ಹೂಬಿಟ್ಟಿರುವ ಮಲ್ಲಿಗೆ ಬಳ್ಳಿಗಳೂ, ಪಾರ್ವತೀದೇವಿಯ ಮುಗುಳ್ನಗೆಯನ್ನು ಅನುಕರಿಸುತ್ತಿರುವ ಮೊಲ್ಲೆಯ ಗಿಡುಗಳೂ, ನನ್ನ ಹೂವನ್ನು ಶಿವನಿಗೆ ಅರ್ಪಿಸಿದರೆ ಅದು ಭವಸಮುದ್ರವನ್ನು ದಾಂಟಿಸುವ ಹಡಗಾಗುವದೆಂದು ಹೇಳುವಂತೆ ವಾಸನೆಬೀರುತ್ತಿರುವ ಗೋರಂಟೆಯ ಮೆಳೆಗಳೂ ॥೪೬॥ ತನ್ನ ಹೂವುಗಳಿಂದ ಶಿವಾರ್ಚನೆಯನ್ನು ಮಾಡಿದ ಕುಲಹೀನರನ್ನೂ ಕೂಡ ದೇವಕುಲೋತ್ಪನ್ನರನ್ನಾಗಿ ಮಾಡುವ ಬಕುಳದ ಮರಗಳೂ ॥೪೭॥ ನನಗೆ ಈ ಪರ್ವತವು ಆವಾಸಸ್ಥಾನವಾದಕಾರಣ ಇದು ಭವನಾಗಕ್ಕೆ ಕೇಸರಿ (ಪಾಪವೆಂಬ ಆನೆಗೆ ಸಿಹ್ಮ) ವಾಯಿತು ಎಂದು ಸ್ತೋತ್ರಮಾಡಿದುದರಿಂದ ತಾನು ಈ ಹೆಸರನ್ನು ಪಡೆದುಕೊಂಡಿತೋ ಎಂಬಂತಿರುವ ನಾಗಕೇಸರದ (ನಾಗಸಂಪಗೆಯ) ಗಿಡಗಳೂ, ಸಕಲ ಪರ್ವತಗಳೂ ಹೆಣ್ಣುಗಳು ಈ ಶ್ರೀಗಿರಿಯೊಂದೇ ಗಂಡುಬಿಟ್ಟವೆಂಬುದಾಗಿ ಸ್ತೋತ್ರಮಾಡಿದಕಾರಣದಿಂದಲೇ ತಾನು ಈ ಹೆಸರನ್ನು ಪಡೆದುಕೊಂಡಿತೋ ಎಂಬಂತೆ ಒಪ್ಪುತ್ತಿರುವ ಪುನ್ನಾಗ (ಸುರಹೊನ್ನೆ) ತರುಗಳೂ, ಮನೋಹರವಾಗಿದ್ದುವು. ॥೪೯॥ ನಮ್ಮ ಹೂವುಗಳಿಂದ ಯಾವ ಪುಣ್ಯಾತ್ಮರು ವರಪ್ರದನಾದ ಶ್ರೀಮಲ್ಲಿಕಾರ್ಜುನಸ್ವಾಮಿಯನ್ನು ಅರ್ಚಿಸಿ ಇಷ್ಟಾರ್ಥವನ್ನು ಪಡೆಯುತ್ತಾರೋ ನೋಡೋಣವೆಂದು ಕಣ್ಣನ್ನು ತೆರೆದುಕೊಂಡು ಕುಳಿತಿರುವಂತೆ ಅರಲಿದ ಹೂವುಗಳಿಂದ ತುಂಬಿರುವ ಪೂದೋಟಗಳು ಒಪ್ಪಿದ್ದುವು. ॥೫೦॥

ಶ್ಚ ಸಮಾಸಾದ್ಯಾಥತತ್ಪುರಂ ||೫೪|| ತೇಸಂಘೀಭೂಯವೀಧೀಷುಹೃಷ್ಯಂತಃ
ಪರಿಜೃಂಭಿತಾಃ | ಸ್ವಸ್ವದೇಶೀಯಗೀತಾನಿ ಗಾಯಂತೋ ಲೀಲಯಾಂಚಿತಾಃ ||
ನೃತ್ಯಂತಃ ಪರಿವಲ್ಗಂತಃ ಪರ್ಯಟಂತ ಇತಸ್ತತಃ | ಪರಸ್ಪರಂ ಪ್ರರುಂಧಂತೋದ್ಧ
ಸ್ಯಂತೋಽತಿತರಾಂತಥಾ ||೫೫|| ನಿವಸಂತಸ್ತತ್ರತತ್ರ ಪ್ರಣಮಂತೋಮುಹು
ರ್ಮುಹುಃ | ಆಸ್ಫೋಟಯಂತಸ್ಸ್ವಕರಾನ್ ಧ್ವನಂತಸ್ಸಂಭ್ರಮಾನ್ವಿತಾಃ ||
ಆಗತ್ಯತಂ ಮಹೇಶಾದ್ರಿ ಮಾರೋಹಂತೇತಿ ಸಂಕುಲಂ | ದಿಕ್ಷ್ವುದೀಚ್ಯಾಮಶೇ
ಷಾಯಾಂಗತಾಯಾ ಮಥ ವರ್ತ್ಮತಾಂ ||೫೬|| ಶೃಂಗಸಾನುದ್ರುಮೋರ್ಧ್ವಾ
ಯ ಶೈಲಾನಿಮ್ನೋನ್ನತಸ್ಥಲೀಃ | ಸಂಪೂರ್ಯತೇನುಸ್ತಂ ಚಿತ್ರಪಟಚ್ಛನ್ನಮಿವಾ
ಚಲಂ ||೫೭|| ತಿರಸ್ಕೃತಾಮರಗಿರಿ ಶ್ರೀಗಿರಿಃ ಪರಿಷಜ್ಜನೈಃ | ವ್ಯಾಪ್ತೋಽ
ಭವನ್ನರಗಿರಿ ಶ್ಚಿತ್ರಮಿತ್ಯುದಿತೇಸತಿ ||೫೮|| ಆರೋಹತಃ ಕ್ಷೀಣಸತ್ವಾ ಸ್ಸ್ವಂ
ಪಯಂತಃಕರಾನಥಃ | ಗಚ್ಛಂತಶ್ಚ ಪರಿಶ್ರಾಂತಾಃ ಕಂಪಮಾನಾಃ ಪದೇಪದೇ ||
ನಿಪತಂತಶ್ಚ ಕೃಚ್ಛ್ರೇಣ ತಿಷ್ಠಂತೋಽನ್ಯೋನ್ಯಮಂಘ್ರಿಭಿಃ | ಸ್ಪೃಶಂತೋಽಶ್ಯಂ
ತಸಂಮರ್ದಾತ್ತ್ವರಮಾಣಾಸ್ತಥಾಪರೇ ||೫೯|| ಈಷದೀಷತ್ಪ್ರಧಾವಂತಸ್ಸಂ
ಘೃಷ್ಯಂತಃ ಪರಸ್ಪರಂ | ಘೂರ್ಣಿತೇಷು ದಿಗಂತೇಷು ಘನೈರ್ಜಯಜಯಾರ
ವೈಃ ||೬೦|| ಸದ್ಗತೇರಾಶ್ರಯಂಶೈಲ ಮಾರುಹ್ಯ ಪರಿಷಜ್ಜನಾಃ | ನಿಜಧಾರಾ

---

ಇಂಥ ಉಪವನಗಳನ್ನು ಪರಿಸೆಯ ಜನರೆಲ್ಲರೂ ನೋಡುತ್ತ ಹೊಗಳುತ್ತ ಪುರಪ್ರವೇಶಮಾಡಿ, ಗುಂಪುಗುಂಪಾಗಿ ಬೀದಿಗಳಲ್ಲಿ ಸಂಚರಿಸುತ್ತ ಆನಂದಪಡುತ್ತ, ತಂತಮ್ಮ ದೇಶಗಳ ಹಾಡುಗಳನ್ನು ಹೇಳಿಕೊಂಡು ವಿಲಾಸದಿಂದ ಕೂಗುತ್ತ, ತಿರುಗುತ್ತ, ಕುಣಿಯುತ್ತ, ತೂಗಾಡುತ್ತ, ಹಿಗ್ಗುತ್ತ, ಉಬ್ಬುತ್ತ, ಒಬ್ಬರಿಗೊಬ್ಬರು ಡಿಕ್ಕಿ ಹೊಡೆಯುತ್ತ, ಅಲ್ಲಲ್ಲಿಗೆ ನಿಂತು ಅಡ್ಡಬೀಳುತ್ತ ಕೈಚಪ್ಪಾಳೆ ಹೊಡೆಯುತ್ತ, ಸಡಗರದಿಂದ ಬಂದು ಎಲ್ಲರೂ ಆ ಮಾಹೇಶ್ವರ ಪರ್ವತವನ್ನು ಏರಿ ದಟ್ಟವಾಗಿ ಸೇರಿಕೊಂಡರು. ಆ ಉತ್ತರದಿಕ್ಕೆಲ್ಲವೂ ಪರಿಸೆಯ ತುಳಿತದಿಂದ ಒಂದು ದೊಡ್ಡದಾರಿಯಂತಾಯಿತು. ಆ ಬೆಟ್ಟದ ಕೋಡುಗಲ್ಲುಗಳು ತಪ್ಪಲುಗಳು ಮರಗಳು ಮೇಲೆ ಕೆಳಗೆ ಇದ್ದ ಬಂಡೆಗಳು ಹಳ್ಳತಿಟ್ಟುಗಳು ಇವುಗಳಲ್ಲೆಲ್ಲಾ ಯಾತ್ರಿಕರು ತುಂಬಿಕೊಂಡು ಆ ಬೆಟ್ಟವನ್ನೆಲ್ಲಾ ಚಿತ್ರವರ್ಣದ ಬಟ್ಟೆಯಿಂದ ಹೊದ್ದಿಸಿದಂತೆ ಮಾಡಿಬಿಟ್ಟರು. ಮೇರುಪರ್ವತವನ್ನು ಕೂಡ ತಿರಸ್ಕರಿಸಿದ ಈ ಶ್ರೀಗಿರಿಯು ಈಗ ಪರಿಸೆಯ ಜನರಿಂದ ತುಂಬಿ ನರಗಿರಿ (ಮನುಷ್ಯಮಯವಾದ ಬೆಟ್ಟ)ವಾಯಿತು ಇದು ಆಶ್ಚರ್ಯ ಎಂದು ಹೇಳಿಸಿಕೊಂಡಿತು. ||೫೮|| ಆ ಗಿರಿಯನ್ನೇರುವಾಗ ದುರ್ಬಲರಾದವರು ಕೈಗಳನ್ನು ಊರಿಕೊಂಡು ಸಾಗುತ್ತಲೂ, ಬಳಲಿ ನಡುಗುತ್ತಲೂ, ಅಲ್ಲಲ್ಲಿಗೆ ಬೀಳುತ್ತಲೂ, ಶ್ರಮದಿಂದ ಅಲ್ಲಲ್ಲಿಗೆ ಕುಳಿತುಕೊಳ್ಳುತ್ತಲೂ, ಇಕ್ಕಟ್ಟಿನಿಂದ ಒಬ್ಬರಕಾಲ

ಪ್ರವಾಹೋದ್ಯಜ್ಝಾತ್ಕಾರ ಶ್ರವಣಕ್ಷಣಾತ್ ||೬೧|| ಧ್ವಂಸಿತಾಶೇಷಪಾಪಾಸು ರುದ್ರಧಾರಾಪ್ಸುಸಾದರಂ | ಸ್ನಾತ್ವಾಮಹೇಶ್ವರಂ ದೇವಮಭಜಂತಾತಿಭಕ್ತಿತಃ || ೬೨ || ಪಂಡಿತಾರಾಧ್ಯಚರಣಪುಂಡರೀಕಾಂಕಮಾನಸಃ | ತದಾ ಸ ದೋನಮಾರ್ಯೋಪಿ ಸತ್ಕ್ರಿಯಾಸ್ಸಮಯೋಚಿತಾಃ ||೬೩|| ಸಮಾಪ್ಯಶೀಘ್ರಂ ಸದ್ಭಕ್ತ್ಯಾಸ್ತುವನ್ದೇವಂ ಮಹೇಶ್ವರಂ | ಸದ್ಭಕ್ತಜನವೃಂದಸ್ಯ ಕೃತ್ವಾಪರ್ವಮಹೋತ್ಸವಾನ್ ||೬೪|| ಪ್ರೀತ್ಯಾಗುರ್ವರ್ಪಣಂಕೃತ್ವಾ ಸವಿಶೇಷಮನಂತರಂ| ಕ್ಷೋಣ್ಯಾಮಾಸಪ್ತಪಾತಾಳಂ ರೂಢಮೂಲಾನಿಚೋರ್ಧ್ವತಃ ||೬೫|| ಅತೀತ್ಯತಾರಕಾವರ್ತ್ಮಸ್ಥಿತಾನಿ ಶಿಖರಾಣ್ಯಪಿ | ಪನಸಾಮ್ರಮುಖಾನೇಕ ತರುಗುಲ್ಮಲತಾಚಯಾನ್ ||೬೬|| ತತ್ರಸ್ಥಿತಾನ್ವಿನಾಕಾಕ್ಯೈಃ ಪಕ್ಷಿವ್ಯೂಹಾನನೇಕಶಃ | ತತ್ಪರ್ವತಾಸ್ಥಾಯಿಧಾರಾ ರುದ್ರಧಾರಾತ್ಮಿಕಾಸ್ಸ್ಮೃತಾಃ || ೬೭ || ಧಾರಾಸ್ತಾಸ್ಸಕಲಾದಿವ್ಯಂ ಮಾಹೇಶ್ವರಬಿಲಂತಥಾ | ಸಿದ್ಧೇಶ್ವರ ಕುಬೇರೇಶ್ವರಾದಿಲಿಂಗಾನ್ಯನೇಕಶಃ ||೬೮|| ವಿಲೋಕ್ಯವಿಸ್ಮಯಾಕ್ರಾನ್ತೋ ಭೂತ್ವಾತತ್ಪರ್ವತಾಗ್ರತಃ | ಸಂಸ್ಥಿತಾಯಾಶ್ಶಿವಪುರೋಮಾಹಾತ್ಮ್ಯಂ ಪರಮೋನ್ನತಂ ||೬೯||

---

ನ್ನೊಬ್ಬರು ನೋಂಕುತ್ತಲೂ, ಸ್ವಲ್ಪ ಬಲಾಢ್ಯರಾದವರು ಅವಸರದಿಂದ ಓಡುತ್ತಲೂ, ಒಬ್ಬರಿಗೊಬ್ಬರು ಒತ್ತರಿಸಿಕೊಂಡು ಹೋಗುತ್ತಲೂ, ಉಘೇ! ಜಯಜಯಾ! ಎಂಬ ಘೋಷಗಳಿಂದ ದಿಕ್ಕುಗಳನ್ನೆಲ್ಲಾ ಮೊಳಗಿಸುತ್ತಲೂ, ಹೀಗೆ ಪರಿಸೆಯ ಜನರೆಲ್ಲರೂ ಸದ್ಗತಿಗೆ ಆಶ್ರಯವಾದ ಆ ಮಾಹೇಶ್ವರ ಗಿರಿಯನ್ನೇರಿ, ಅಲ್ಲಿ ತನ್ನ ಪ್ರವಾಹದ ಹರಿಯುವಿಕೆಯ ಸದ್ದನ್ನು ಕೇಳಿದ ಮಾತ್ರದಿಂದಲೇ ಜನರ ಪಾಪವನ್ನೆಲ್ಲಾ ಕೆಡಿಸುವ ರುದ್ರಧಾರಾನದಿಯ ತೀರ್ಥದಲ್ಲಿ ಸರ್ವರೂ ಸ್ನಾನಮಾಡಿ, ಅತಿ ಭಕ್ತಿಯಿಂದ ಶಿವಾರಾಧನೆಯನ್ನು ಮಾಡಿದರು. ||೬೨|| ಪಂಡಿತಾರಾಧ್ಯರ ಶಿಷ್ಯನಾದ ದೋನಮಾರ್ಯನುಕೂಡ ತನ್ನ ನಿತ್ಯಕ್ರಿಯೆಗಳನ್ನು ಸಮಯೋಚಿತವಾಗಿ ಬೇಗನೆ ಮುಗಿಸಿ, ಭಕ್ತಿಯಿಂದ ಪರಶಿವನನ್ನು ಸ್ತೋತ್ರಮಾಡಿ, ಭಕ್ತಸಮೂಹಕ್ಕೆ ಪರ್ವವನ್ನು ಮಾಡಿ, ಗುರು ಪಾದಕ್ಕೆ ಸಕಲವನ್ನೂ ಸಮರ್ಪಿಸಿ, ಬಳಿಕ ಕೆಳಗಣ ಪಾತಾಳದವರೆಗಣ ಏಳುಲೋಕಗಳವರೆಗೂ ಬೇರುಬಿಟ್ಟು ಮೇಲೆ ನಕ್ಷತ್ರಮಾರ್ಗದವರೆಗೂ ವ್ಯಾಪಿಸಿ ಇರುತ್ತಿರುವ ಪರ್ವತ ಶಿಖರಗಳನ್ನೂ, ಹಲಸು ಮಾವು ಮೊದಲಾದ ನಾನಾ ಫಲವೃಕ್ಷ ಸಂದೋಹವನ್ನೂ ||೬೬|| ಆ ಮರಗಳಮೇಲೆ ಕಾಗೆಗಳ ಹೊರತಾಗಿ ಇರುತ್ತಿರುವ ನಾನಾಜಾತಿ ಪಕ್ಷಿಗಳನ್ನೂ, ಆ ಗಿರಿಯಲ್ಲಿರುವ ಆಸ್ಥಾಯಿಧಾರೆ ರುದ್ರಧಾರೆ ಎಂಬುದು ಮೊದಲಾದ ಜಲಧಾರೆಗಳನ್ನೂ, ಮಾಹೇಶ್ವರ ಗುಹೆ ಮೊದಲಾದ ಅನಂತ ದಿವ್ಯ ಗುಹೆಗಳನ್ನೂ, ಸಿದ್ಧೇಶ್ವರಲಿಂಗ ಕುಬೇರೇಶ್ವರಲಿಂಗ ಮೊದಲಾದ ಅನೇಕಲಿಂಗಗಳನ್ನೂ ನೋಡಿ ಆಶ್ಚರ್ಯಪಟ್ಟು, ಆ ಗಿರಿಯ ತುದಿಯಲ್ಲಿರುವ ಪಟ್ಟಣದ ಮಹಾ

ತದ್ದ್ವಾರಮಹಿಮಾನಂಚ ತೀರ್ಥಮಾಹಾತ್ಮ್ಯವಿಸ್ತೃತಿಂ | ಆಕರ್ಣ್ಯಪರಿತುಷ್ಟಾತ್ಮಾ ದೋನಮಾರ್ಯೋಬಭೂವಸಃ ||೭೦||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ದೋನಮಾರ್ಯಸ್ಯ ಪರಿಷದಾಸಹ ಮಾಹೇಶ್ವರಾಚಲಪ್ರಾಪ್ತಿಕಥನಂನಾಮ ಪಂಚಮೋಽಧ್ಯಾಯಃ.

---

## ಅಥ ಷಷ್ಠೋಽಧ್ಯಾಯಃ.

### ಚತುರ್ಮುಖ ಬಸವೇಶ್ವರ ದರ್ಶನಕಥನಂ.

ತತಶ್ಶ್ರೀಮದ್ದೋನಮಾರ್ಯಃ ಪ್ರತಸ್ಥೇಶ್ರೀಗಿರಿಂಪ್ರತಿ | ಪರಿಷತ್ಸಾಪಿಕುರ್ವಂತೀತತೋಜಯಜಯಧ್ವನಿಂ ||೧|| ಸಂಹೃಷ್ಟಚಿತ್ತಾಶನಕೈರ್ಗಚ್ಛಂತೀಗಿರಿಮಧ್ಯಮಂ| ಆರೋಹಂತೀಕಲ್ಪವೃಕ್ಷಂ ಕಲ್ಪವಲ್ಲೀವತದ್ಗಿರೇಃ ||೨|| ಸಮಾಸಾದ್ಯಾಂತರಂತತ್ರ ಸಂಸ್ಥಿತೇಸುಮನೋಹರೇ | ಸ್ವರ್ಗಾಪವರ್ಗಸರಣೀ ಇವನಿಶ್ರೇಣಿಕೇತದಾ ||೩|| ಅತೀತ್ಯಾರುಹ್ಯಶೈಲಾಗ್ರಂ ಶೀಘ್ರಂಯಾನ್ತೀಪ್ರಯತ್ನತಃ | ತತ್ಪೂರ್ವಭಾಗತಃ ಪಂಚಕ್ರೋಶಮಾತ್ರೇಽಧ್ವನಿಸ್ಥಿತಾತ್ ||೪|| ಪ್ರವಿಶ್ರುತಾ

---

ಮಹಿಮೆಯನ್ನೂ ಅದರ ದ್ವಾರದ ಮಹತ್ತ್ವವನ್ನೂ ತೀರ್ಥಮಹಿಮೆಯನ್ನೂ ಕೇಳಿ ದೋನಮಾರ್ಯನು ಅತ್ಯಂತ ಸಂತೋಷಪಟ್ಟನು. ||೭೦||

ಎಂಬಲ್ಲಿಗೆ ಪರ್ವತಪ್ರಕರಣದೊಳಗೆ ೫ನೆ ಅಧ್ಯಾಯವು ಮುಗಿದುದು.

---

## ೬ನೆ ಅಧ್ಯಾಯವು.

### ಚತುರ್ಮುಖ ಬಸವೇಶ್ವರ ದರ್ಶನದ ಕಥೆ.

ಬಳಿಕ ದೋನಮಾರ್ಯನು ಅಲ್ಲಿಂದ ಶ್ರೀಗಿರಿಗೆ ಹೊರಟನು. ಪರಿಸೆಯೂಕೂಡ ಜಯಜಯ ಧ್ವನಿಮಾಡುತ್ತ ಆನಂದದಿಂದ ನಡುಬೆಟ್ಟಕ್ಕೆ ಮೆಲ್ಲಮೆಲ್ಲನೆ ಸಾಗುತ್ತ, ಕಲ್ಪವೃಕ್ಷವನ್ನು ಏರುವ ಕಲ್ಪಲತೆಯಂತೆ ಆ ಶ್ರೀಗಿರಿಯ ಮಧ್ಯಭಾಗವನ್ನು ಸೇರಿ, ಅಲ್ಲಿ ಸ್ವರ್ಗಮೋಕ್ಷಗಳೆರಡಕ್ಕೂ ಹಾಕಿರುವ ಮಾರ್ಗಗಳಂತಿರುವ ನಿಚ್ಚಣಿಗೆಗಳೆರಡನ್ನು ಹತ್ತಿ ದಾಟಿ ತುದಿಬೆಟ್ಟಕ್ಕೆ ಕ್ರಮದಿಂದ ಏರುತ್ತ, ಅದರ ಮೂಡಲ ಕಡೆಯಲ್ಲಿ ೫ ಗಾವುದ ದೂರದೊಳಗೆ ಇರುವ ಪ್ರಸಿದ್ಧವಾದ ಮುನಿಪುರದಿಂದ ಪಡುವಲಕಡೆಯಲ್ಲಿ ಬಿಲಪರ್ವತ ಪ್ರದೇಶದಲ್ಲಿ ನೆಲಸಿರುವ ಸಾ

ನ್ಮನಿಪುರಾತ್ಪ್ರತೀಚೀಭಾಗತಃಸ್ಥಿತಂ | ಬಿಲಕಲ್ಪೋದಿತಚತುರ್ಮುಖಶ್ರೀಬಸವೇಶ್ವರಂ ||೫|| ಅಪಶ್ಯತ್ತಸ್ಯದೇವಸ್ಯ ಮಾಹಾತ್ಮ್ಯಮಿದಮುಚ್ಯತೇ | ಜಗತ್ಸೃಷ್ಟೌಮಹೇಶೋಽಭೂದುದ್ಯುಕ್ತೋಲೀಲಯಾಪುರಾ ||೬|| ತದಾಸಕಲಸೃಷ್ಟ್ಯಾದೌ ವೃಷಸರ್ಗೇಮಹೇಶ್ವರಃ | ಉವಾಚವಚನಂದೇವೋ ನಿರೀಕ್ಷ್ಯವೃಷಭೇಶ್ವರಂ ||೭|| ಗೋಮಾತೃಪಂಚಕೇದೇವಸಂಘಾಯ ಸುರಭಿಂವರಾಂ| ಸಂಸ್ಥಾಪ್ಯಸಾದರಂನಂದಾಂ ಭದ್ರಾಂಸುಮನಸಂತಥಾ ||೮|| ಸುಶೀಲಾಂಚಸಮಾದಾಯ ಗಚ್ಛಭೂಮಿಂವೃಷೇಶ್ವರ | ಪಶೂನಾಂಸಮುದಾಯಸ್ಯಕರ್ತುಮುತ್ಪತ್ತಿಮಂಜಸಾ ||೯|| ಶ್ರೀಶೈಲಸ್ಯೋತ್ತರೇಶೃಂಗೇ ರಹಸ್ಯೇತಿಷ್ಠರಾಜಿತೇ| ತಥೇತ್ಯಾಗತ್ಯವೃಷಭಸ್ಸಸಹಸ್ರಧನುರ್ಮಿತೇ ||೧೦|| ಅಧೋಭಾಗೇಭೂತಲಸ್ಯ ವೃಷಭಾಖ್ಯಂಪುರಂಮುದಾ | ನಿರ್ಮಾಯ ತತ್ರಚ ಚತುರ್ಮುಖಶ್ರೀವೃಷಭೇಶ್ವರಂ ||೧೧|| ಪ್ರತಿಷ್ಠಾಪ್ಯಮಹಾದೇವಂ ಸೇವಮಾನೋಽತಿಭಕ್ತಿತಃ | ಚತುರ್ಭಾಶ್ಚತಸ್ರೋ ಗೋಮಾತೃಸ್ತದ್ದೇವಾಸ್ಯಚತುಷ್ಟಯಾತ್ ||೧೨|| ಲೋಕಪೂಜ್ಯಾಶ್ಚತುರ್ದಿಕ್ಷ್ವ ವರಯಾಮಾಸ ಸಾದರಂ | ತಾಭ್ಯಃಪಶೂನಾಂ ನಿವಹಂ ಲೇಭೇಲೋಕಹಿತೇಚ್ಛಯಾ ||೧೩|| ತೇಷಾಂವಿನಿರ್ಗಮಾರ್ಥಾಯ ಪಶೂನಾಂಬಿಲಪರ್ವತೇ | ಬಿಲಂಚಕ್ರೇತೇಪಿ ಕನ್ಯಾಸಿದ್ಧನಾಥಸ್ಯಶೂಲಿನಃ ||೧೪|| ಭವನಸ್ಯೋ

---

ಲ್ಕುಮುಖಗಳ ಬಸವೇಶ್ವರನನ್ನು ಕಂಡಿತು. ||೫|| ಆ ಚತುರ್ಮುಖ ಬಸವೇಶನ ಮಹಿಮೆಯು ಹೇಗೆಂದರೆ—ಪೂರ್ವದಲ್ಲಿ ಪರಶಿವನು ಜಗತ್ಸೃಷ್ಟಿಮಾಡುವ ಲೀಲೆಗೆ ಉಜ್ಜುಗಿಸಿದಾಗ ಎಲ್ಲದರ ಸೃಷ್ಟಿಗೂ ಮೊದಲು ಬಸವಗಳ ಸೃಷ್ಟಿಯನ್ನು ಮಾಡಲು ಪ್ರಯತ್ನಿಸಿ, ತನ್ನ ವಾಹನವಾದ ವೃಷಭೇಶ್ವರನನ್ನು ಕುರಿತು—ಎಲೈ ವೃಷೇಶ್ವರನೆ! ನಂದೆ ಮೊದಲಾದ ೫ ಕಾಮಧೇನುಗಳಲ್ಲಿ ಸುರಭಿಯೆಂಬುದನ್ನು ದೇವತೆಗಳಿಗೋಸ್ಕರ ಇಲ್ಲೇ ಬಿಟ್ಟು, ನಂದೆ ಭದ್ರೆ ಸುಮನಸೆ ಸುಶೀಲೆ ಎಂಬ ನಾಲ್ಕು ಗೋಮಾತೆಗಳನ್ನು ಭೂಮಿಗೆ ತೆಗೆದುಕೊಂಡು ಹೋಗು. ಪಶುಕುಲದ ಉತ್ಪತ್ತಿಯನ್ನು ಮಾಡಿಕೊಂಡಿರುವುದಕ್ಕಾಗಿ ಶ್ರೀಶೈಲದ ರಹಸ್ಯವಾಗಿರುವ ಉತ್ತರ ಶೃಂಗದಲ್ಲಿ ನೀನು ವಾಸಮಾಡಿಕೊಂಡಿರು ಎಂಬುದಾಗಿ ಅಪ್ಪಣೆ ಕೊಡಿಸಲು, ವೃಷಭೇಶನು ಹಾಗೇ ಆಗಲೆಂದು ಹೊರಟು, ಭೂತಲದ ಕೆಳಗಡೆ ಸಾವಿರಬಿಲ್ಲಿನುಗೆಯುಳತೆಯ ದೂರದಲ್ಲಿ ವೃಷಭಪುರವೆಂಬುದನ್ನು ನಿರ್ಮಿಸಿ, ಅಲ್ಲಿ ಚತುರ್ಮುಖ ವೃಷಭೇಶ್ವರನನ್ನು ಪ್ರತಿಷ್ಠಾಪಿಸಿ ||೧೧|| ಅತಿ ಭಕ್ತಿಯಿಂದ ಪರಶಿವನನ್ನು ಸೇವಿಸುತ್ತ, ಆ ಚತುರ್ಮುಖ ಬಸವೇಶ್ವರನ ನಾಲ್ಕುದಿಕ್ಕಿನ ನಾಲ್ಕು ಮುಖಗಳಿಂದಲೂ ಜಗತ್ಪೂಜ್ಯಗಳಾದ ನಾಲ್ಕು ಗೋಮಾತೆಗಳನ್ನು ಬೇಡಿ ಪಡೆದು, ಆ ಗೋವುಗಳ ದೆಸೆಯಿಂದ ಲೋಕಹಿತಕ್ಕಾಗಿ ಅನಂತಪಶುಗಳ ಸಮೂಹವನ್ನು ಪಡೆದನು. ||೧೩|| ಆ ಪಶುಗಳು ಹೊರಕ್ಕೆ ಹೋಗುವುದಕ್ಕಾಗಿ ಬಿಲಪರ್ವತದಲ್ಲಿ ಒಂದು ಬಿಲ (ದ್ವಾರ) ವನ್ನು ಮಾಡಿದನು.

ತ್ತರೇಭಾಗೇ ನಿರ್ಯಯುಃ ಪಶವಸ್ತತಃ | ಪಶೂನಾಂಸಮಜೇ ತಸ್ಮಿನ್ನಾಗತ್ಯಮು
ನಿಕನ್ಯಕಾಃ ||೧೫|| ಸಂಪ್ರೀತ್ಯಾಹೋಮಧೇನ್ವರ್ಥಂ ನಿನಿನ್ಯುಃಕತಿಚಿತ್ಪಶೂನ್ |
ಅವಶಿಷ್ಟಾಃಪಶುವ್ರಾತೋ ಧರಣ್ಯಾಂಸಮತಿಷ್ಠತ ||೧೬|| ವೃಷಭೇಶೇನತತ್ಸ
ರ್ಗೇ ರಚಿತೇಸತಿಭೂತಲೇ | ವೃಷಸರ್ಗ ಇತಿಖ್ಯಾತ ಸ್ಸೋಽಭವದ್ವೇದವಿಶ್ರುತಃ
||೧೭|| ಚತುರ್ಮುಖವೃಷೇಶಸ್ಯ ಬಭೂವಾಸ್ಯಚತುಷ್ಟಯಂ | ಧರ್ಮಾರ್ಥ
ಕಾಮಮೋಕ್ಷಾಣಾಂ ಕಾರಣಂವೇದವಿಶ್ರುತಂ ||೧೮|| ತಸ್ಮಾತ್ಸರ್ವೇಮುನಿವ
ರಾ ಸ್ತದಾದಿವೃಷಭೇಶ್ವರಂ | ಪರಪಾತಾಳವೃಷಭಪುರಾಧೀಶಂಮಹೇಶ್ವರಂ
||೧೯|| ಚತುರ್ಮುಖವೃಷಾಧೀಶಂ ಶ್ರೀಪರ್ವತನಿವಾಸಿನಂ | ಅರ್ಚಯಂತಿತ
ಥಾಕನ್ಯಾಸಿದ್ಧನಾಥಂ ಜಗತ್ಪತಿಂ ||೨೦|| ಉಭಯೋಸ್ಸ್ಥಾನಯೋರ್ನಿತ್ಯಂ ತ್ರಿ
ಸಂಧ್ಯಮತಿಭಕ್ತಿತಃ | ಕಿಂಚ ತದ್ವೃಷಭಾಧೀಶಲಿಂಗಂ ಚಾನುದಿನಂಮುದಾ ||
ಜಗನ್ನಾಥಮಮುಂ ಕನ್ಯಾಸಿದ್ಧನಾಥಂ ತ್ರಿಕಾಲತಃ | ನೀರಾಜನಾಭಿಸ್ಸೇವಂ
ತೇ ಮುನಿಕನ್ಯಾಕೃತವ್ರತಾಃ ||೨೨|| ತದಾಪ್ರಭೃತಿತತ್ಕನ್ಯಾಬಿಲಮಾಸೀಚ್ಛಿವ
ಸ್ಯಚ | ಅಣಿಮಾದ್ಯಷ್ಟಸಿದ್ಧೀನಾಂ ನಿವಾಸೋಲೋಕಸನ್ನುತಃ ||೨೩|| ಕನ್ಯಾ
ಸಿದ್ಧೇಶ್ವರಇತಿ ಪ್ರಖ್ಯಾತೋಽಭೂದ್ಧರಾತಲೇ | ಪ್ರಭೂತಕೀರ್ತಿಸ್ತಲ್ಲಿಂಗಮೂ

---

ಆ ಪಶುಗಳು ಬಿಲದಿಂದ ಹೊರಕ್ಕೆ ಹೊರಟು ಸಿದ್ಧನಾಥ ದೇವಾಲಯದ ಬಡಗಲಕಡೆಗೆ ಹೋ
ದುವು. ಅಲ್ಲಿದ್ದ ಮುನಿಕನ್ಯಕೆಯರುಗಳು ಬಂದು ಆ ಗೋವುಗಳ ಮಂದೆಯಲ್ಲಿ ಕೆಲವನ್ನು
ತಮ್ಮ ಹೋಮಕಾರ್ಯಕ್ಕುಪಯೋಗಿಸಿಕೊಳ್ಳುವುದಕ್ಕಾಗಿ ಅಟ್ಟಿಕೊಂಡು ಹೋದರು. ಉಳಿದ
ಹಸುಗಳು ಭೂಮಿಯಲ್ಲಿ ನಿಂತುವು. ||೧೬|| ಭೂಮಿಯಲ್ಲಿ ಹೀಗೆ ವೃಷಭೇಶ್ವರನಿಂದ ಗೋ
ಜಾತಿಯ ಸೃಷ್ಟಿಯಾಗಲಾಗಿ, ಅದೇ ವೃಷಸರ್ಗವೆಂದು ವೇದದಲ್ಲಿ ಪ್ರಸಿದ್ಧವಾಯಿತು. ಚತು
ರ್ಮುಖ ಬಸವೇಶ್ವರನ ನಾಲ್ಕು ಮುಖಗಳೂ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ
ಪುರುಷಾರ್ಥಗಳಿಗೂ ಕಾರಣವೆಂದು ವೇದಪ್ರಸಿದ್ಧವಾಯಿತು. ||೧೮|| ಅದು ಮೊದಲ್ಗೊಂಡು
ಸಕಲ ಮುನಿಪತಿಗಳೂ ಆ ಆದಿವೃಷಭೇಶನನ್ನೂ, ಪಾತಾಳದಲ್ಲಿರುವ ವೃಷಭ ಪುರಾಧಿಪತಿ
ಯಾದ ಮಹೇಶ್ವರನನ್ನೂ, ಶ್ರೀಗಿರಿಯಲ್ಲಿರುವ ಚತುರ್ಮುಖ ಬಸವೇಶ್ವರನನ್ನೂ, ಆ ಮುನಿಕ
ನ್ಯೆಯರು ಜಗದೀಶನಾದ ಸಿದ್ಧನಾಥನನ್ನೂ, ಪ್ರತಿದಿನವೂ ಸಕಲೋಪಚಾರಗಳಿಂದ ತ್ರಿಸಂಧ್ಯೆ
ಯಲ್ಲೂ ಪೂಜಿಸುತ್ತಾರೆ. ಆ ಕನ್ಯೆಯರು ಹೀಗೆ ಪ್ರತಿದಿನವೂ ಅಲ್ಲಿಗೆ ಬಂದು ಸೇವಿಸುತ್ತಿದ್ದು
ದರಿಂದ ಅದಕ್ಕೆ ಕನ್ಯಾಬಿಲವೆಂದು ಹೆಸರಾಯಿತು. ಅಲ್ಲಿರುವ ಸಿದ್ಧನಾಥನು ಅಣಿಮಾದ್ಯಷ್ಟಸಿ
ದ್ಧಿಗಳಿಗಾಶ್ರಯನೆಂದು ಪ್ರಖ್ಯಾತನಾಗಿರುವುದಲ್ಲದೆ, ಕನ್ಯಾಸಿದ್ಧನೆಂಬ ಹೆಸರುಕೂಡ ಆತನಿಗೆ
ಪ್ರಖ್ಯಾತವಾಯಿತು. ಇಂಥ ವಿಖ್ಯಾತಿಯನ್ನು ಪಡೆದ ಆ ಸಿದ್ಧನಾಥಲಿಂಗದ ದಕ್ಷಿಣಭಾಗದಲ್ಲಿ
ಮಂದಾಕಿನೀನದಿಯು ದಿಗಂತ ವಿಖ್ಯಾತೆಯಾಗಿಯೂ, ಸುಕೃತಪರಿಪಾಕೆಯಾಗಿಯೂ, ಡಾಕಿನೀ

ರ್ತೇ ದಕ್ಷಿಣಪಾರ್ಶ್ವತಃ ||೨೪|| ದಿಕ್ತಟಶ್ಲೋಕಿನೀ ಪುಣ್ಯಪಾಕಿನೀ ಧ್ವ
ಡಾಕಿನೀ | ಅಮೃತಾಸೇಕಿನೀಪ್ರೀತ್ಯಾ ವಿಹರಚ್ಚಕ್ರವಾಕಿನೀ ||೨೫|| ಮಂದಾ
ಕಿನೀಪರಂರೇಜೇ ಸಿತಫೇನಪತಾಕಿನೀ | ಅತಃಪ್ರಖ್ಯಾತಮಭವ ದ್ಬಿಲಕಲ್ಪೋ
ತಂಪರಂ ||೨೬|| ಸಮಸ್ತದೇವತಾವಂದ್ಯಂ ಲಿಂಗಂ ಶ್ರೀವೃಷಭೇಶ್ವರಂ | ಚ
ರ್ಮುಖವೃಷೇಶಸ್ಯ ತಸ್ಯನಾಮ್ನಾ ಽಭವದ್ಭುವಿ ||೨೭|| ಚತುರ್ಮುಖ ಶ್ರೀಬ
ವಲಿಂಗಮೇತಜ್ಜಗನ್ನುತಂ | ತಸ್ಯಪ್ರಸಿದ್ಧವೃಷಭಪುರಸ್ಯ ಮಹಿತಾಖ್ಯಯಾ
ಇದಂಬಭೂವ ಬಸವಪುರಂ ಭುವನವಿಶ್ರುತಂ | ಚತುರ್ಮುಖ ಶ್ರೀಬಸವಲಿಂ
ಸ್ಯೈತಸ್ಯಸೇವಯಾ || ೨೯ || ಚತುರ್ಮುಖವೃಷೇಶಸ್ಯ ಸೇವಯಾತಸ್ಯಯತ್ಫ
ಲಂ | ತತ್ಫಲಂ ಭುಕ್ತಿಮುಕ್ತೀಚಪ್ರಾಪ್ಯಂತೇನಾತ್ರಸಂಶಯಃ ||೩೦|| ತಸ್ಯಶ್ರೀ
ಬಸವೇಶಸ್ಯ ನಿರೀಕ್ಷ್ಯಾಲಯಮಗ್ರತಃ | ಚತುರ್ಮುಖಂ ಶ್ರೀಬಸವಲಿಂಗ
ಷ್ಟಾರ್ಥದಂನೃಣಾಂ ||೩೧|| ಅರ್ಚಯಾಮಾಸ ಸದ್ಭಕ್ತ್ಯಾ ದೋನಮಾರ್ಯೋ
ಮಹಾಮತಿಃ | ಸ್ವಯಂಚ ನಿತ್ಯಲಿಂಗಾರ್ಚಾಂ ವಿಧಾಯ ತದನಂತರಂ ||೩೨
ಪಂಡಿತೇಂದ್ರಾರ್ಥ ಮೇಕಸ್ಮೋದ್ಗಣಪರ್ವಾನ್ಸುರಾಗತಃ | ಜನಾಶ್ಚತತ್ಪರಿಷ
ಸ್ಸಂಪ್ರದಾಯೈ ಸ್ಸಮನ್ವಿತಾಃ ||೩೩|| ಸ್ವಸ್ವದೇಶೀಯಗೀತಾನಿ ಗಾಯಂತೋ
ಹರ್ಷಸಂಯುತಾಃ | ಕರಾಸ್ಫೋಟಂಪ್ರಕುರ್ವಂತೋ ಗೃಹ್ಣಂತಸ್ಸ್ವಸುಹೃತ್

---

ಭಯನಿವಾರಕೆಯಾಗಿಯೂ, ಅಮೃತಸೇಚನೆಯನ್ನು ಮಾಡತಕ್ಕುದಾಗಿಯೂ, ಕ್ರೀಡಿಸುತ್ತಿರುವ ಚಕ್ರವಾಕಪಕ್ಷಿಗಳುಳ್ಳುದಾಗಿಯೂ, ಧ್ವಜಪಟದಂತೆ ಮೆರೆಯುತ್ತಿರುವ ಬಿಳಿಯ ನೊರೆಯುಳ್ಳುದಾಗಿಯೂ ರಂಜಿಸುತ್ತಿರುವುದು. ಈ ನದಿಯ ದೆಸೆಯಿಂದ ಆ ಬಿಲಕಲ್ಪದಲ್ಲಿರುವ ಶ್ರೀವೃಷಭ ಲಿಂಗವು ಸಕಲ ದೇವತಾವಂದ್ಯವೆನಿಸಿಕೊಂಡು ಪ್ರಖ್ಯಾತನಾಯಿತು. ಮತ್ತು ಆ ಚತುರ್ಮುಖ ಬಸವೇಶ್ವರನ ಹೆಸರಿನಿಂದ ಅಲ್ಲಿರುವ ಲಿಂಗವು ಚತುರ್ಮುಖ ಬಸವಲಿಂಗವೆಂದಾಯಿತು. ಆ ವೃಷಭೇಶ್ವರನ ಹೆಸರಿನ ಸಂಬಂಧದಿಂದ ಅಲ್ಲಿರುವ ಪಟ್ಟಣಕ್ಕೆ ಬಸವಪುರವೆಂಬ ನಾಮವು ವಿಖ್ಯಾತವಾಯಿತು. ಚತುರ್ಮುಖ ವೃಷಭೇಶ್ವರನ ಸೇವೆಯಿಂದ ಯಾವ ಫಲವುಂಟಾಗುವುದೋ ಅಂತಹ ಫಲವು ಈ ಚತುರ್ಮುಖ ಬಸವಲಿಂಗದ ಸೇವೆಯಿಂದಲೂ ಉಂಟಾಗುವುದು. ಮತ್ತು ಇಹಭೋಗವೂ ಮುಕ್ತಿಯೂಕೂಡ ಲಭಿಸುವುವು. ಅದಕ್ಕೆ ಸಂಶಯವಿಲ್ಲ. ||೩೦|| ಇಂತಪ್ಪ ಶ್ರೀ ಚತುರ್ಮುಖ ಬಸವೇಶ ದೇವಾಲಯವನ್ನು ದೋನಮಾರ್ಯನು ಮುಂಗಡೆಯಲ್ಲೇ ಕಂಡು, ಆ ಸ್ವಾಮಿಯನ್ನೂ ಮತ್ತು ಚತುರ್ಮುಖ ಬಸವಲಿಂಗಮೂರ್ತಿಯನ್ನೂ ಕೂಡ ಭಕ್ತಿಯಿಂದ ಪೂಜಿಸಿದನು. ಬಳಿಕ ತನ್ನ ನಿತ್ಯಲಿಂಗಾರ್ಚನ ಕರ್ಮವನ್ನು ಕೂಡ ಮಾಡಿ, ಅಲ್ಲಿಯೂ ಗುರುಪಂಡಿತಾರಾಧ್ಯನ ಹೆಸರಿನಮೇಲೆ ಪ್ರೀತಿಯಿಂದ ಗಣಪರ್ವವನ್ನು ಮಾಡಿದನು. ಪರಿಸೆಯ ಜನರು ತಂತಮ್ಮ ದೇಶದ ಹಾಡುಗಳನ್ನು ಸಂತೋಷದಿಂದ ಪಾಡುತ್ತ, ಕೈತಾಳವನ್ನು ಹಾಕುತ್ತ, ಮಿತ್ರರ ಕೈಗಳನ್ನು

ರಾನ್ ‖ ೩೪ ‖ ಪರ್ಶೇಣವರ್ಧಮಾನಾಶ್ಚ ಶಸ್ವಂತೋಽಧ್ಯಾನಮುಚ್ಚಕೈಃ | ಶ್ರಾವಯಂತಃಪ್ರಬಂಧಾದೀನ್ನುದಂತಃಕ್ಲೇಶಸಂಹತಿಂ ‖ ೩೫ ‖ ಸಂಯೋಜಯಂತೋಽವಾದ್ಯಾನಿ ಪಠಂತಃ ಪದ್ಯವೃಂದಕಂ | ತಾಲಾನ್ ಧೃತ್ವಾಧ್ಯಾನಯಂತಃ ಕುರ್ವಂತೋಽನರ್ತನಂಪರೇ ‖೩೬‖ ಗತಿಭೇದಾನ್ನಾಟಯಂತಃಕುರ್ವಂತಃ ಕೇಜನಭ್ರಮಿಂ | ಸಮುಭಂಗ್ಯಾಜತಿಷ್ಠಂತಶ್ಶ್ರುತಿಭಿಃ ಪರಿಹರ್ಷಿತಾಃ ‖೩೭‖ ಆಲಪ್ತಿಷು ಸಮಾಸಕ್ತಾ ನಿರಸಂತಸ್ತಮಃಪರೇ| ಪ್ರೋತ್ಸಾರಯಂತೋಽಜಡತಾಂ ನುಜ್ಜಂತೋಽಭಕ್ತಿವಾರಿಧೌ ‖ ೩೮ ‖ ಬಸವೇಶಾರ್ಪಣಮಿತಿ ಪ್ರವದಂತಶ್ಚಕೇಚನ | ಸ್ತುವಂತಃ ಪ್ರಮಥಾನಾದ್ಯಾನ್ಸಮಾಗತ್ಯೈವಮುತ್ಸವಾತ್ ‖೩೯‖ ಅಲಭಂತೇಪ್ಸಿತಾಂಸಿದ್ಧಿಂ ನಿರೀಕ್ಷ್ಯ ಬಸವೇಶ್ವರಂ ‖

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ದೋನಪೂರ್ವ್ಯಸ್ಯಪರಿಷದಾಸಹ ಚತುರ್ಮುಖ ಬಸವೇಶ್ವರದರ್ಶನಕಥನಂನಾಮ ಷಷ್ಠೋಽಧ್ಯಾಯಃ.

---

ಹಿಡಿದುಕೊಂಡು ನಲಿಯುತ್ತ, ಉಬ್ಬಿ ಕೇಕೆಹಾಕುತ್ತ, ಗದ್ಯ ಪದ್ಯ ಪ್ರಬಂಧಗಳನ್ನು ಹೇಳಿ ಕೇಳಿಸುತ್ತ, ತಮ್ಮ ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳುತ್ತ, ವಾದ್ಯಗಳನ್ನು ಶ್ರುತಿಗೂಡಿಸಿ ಹಾಡುತ್ತ, ತಾಳಗಳನ್ನು ಹಿಡಿದು ಬಾಜಿಸುತ್ತ, ಕುಣಿಯುತ್ತ, ಗತಿಗಮಕಗಳನ್ನನುಸರಿಸಿ ಕುಣಿಸುತ್ತ, ಗಿರ್ರನೆ ತಿರುಗುತ್ತ, ಗಾನಶ್ರುತಿಯನ್ನು ಕೇಳಿ ನಿಬ್ಬೆರಗಾಗಿ ನಿಲ್ಲುತ್ತ ‖೩೭‖ ರಾಗಾಲಾಪನೆಗಳಲ್ಲಿ ಆಸಕ್ತರಾಗುತ್ತ, ತಾಮಸಗುಣವನ್ನು ವರ್ಜಿಸುತ್ತ, ಅಜ್ಞತೆಯನ್ನು ದೂರೀಕರಿಸುತ್ತ, ಭಕ್ತಿರಸ ಸಮುದ್ರದಲ್ಲಿ ಮುಳುಗುತ್ತ, ಸರ್ವವೂ ಬಸವಾರ್ಪಿತವಾಗಲೆಂದು ಹೇಳುತ್ತ, ಪ್ರಮಥರನ್ನು ಸ್ತುತಿಸುತ್ತ, ಹೀಗೆ ಉತ್ಸವದಿಂದ ಬಂದು ಶ್ರೀ ಚತುರ್ಮುಖ ಬಸವೇಶ್ವರನನ್ನು ನೋಡಿ ಅವರೆಲ್ಲರೂ ಇಷ್ಟಸಿದ್ಧಿಯನ್ನು ಪಡೆದರು. ‖೩೯‖

ಎಂಬಲ್ಲಿಗೆ ಪರ್ವತಪ್ರಕರಣದೊಳಗೆ ೬ನೆ ಅಧ್ಯಾಯವು ಮುಗಿದುದು.

## ಅಥ ಸಪ್ತಮೋಽಧ್ಯಾಯಃ.

### ಶ್ರೀಪರ್ವತಂಪ್ರತಿ ನಾನಾವಿಧ ಜಂಗಮಾಭಿಗಮನಕಥನಂ.

ದೋನಮಾರ್ಯಸ್ತತೋಭಕ್ತ್ಯಾ ಸ್ತುತ್ವಂಶ್ರೀಬಸವೇಶ್ವರಂ | ಮಲ್ಲಿಕಾರ್ಜುನದೇವಸ್ಯ ಸಂಪ್ರತಸ್ಥೇಪುರಂಪ್ರತಿ ||೧|| ಗಾಯಂತೀಪರಿನೃತ್ಯಂತೀ ಪರಿಷತ್ಸಾಪಿಪೂರ್ವವತ್ | ಪುರಃಪಶ್ಚಾದವಿಚ್ಛಿನ್ನ ಸಮುದ್ರಘನಘೋಷಣಾ ||೨|| ಭಾಗೀರಥೀವ ಬಹುಳನದೀಸಂಗಮವರ್ಧಿತಾ | ಪಾದಾಭಿಹತಿಭಿರ್ಭೂಮೌ ವರ್ಧಿತಾಯಾಂ ಪ್ರಹರ್ಷತಃ ||೩|| ಪ್ರಚೆಲಚ್ಚರಣವ್ರಾತಸಂಭ್ರಮೇ ಸಮುದಂಚಿತೇ | ಶುಷ್ಕದ್ರುಮಲತಾಗುಲ್ಮಚಯೇ ಪಲ್ಲವಿತೇಸತಿ ||೪|| ಪರ್ಯಂತಸ್ಥಿತಪಾಷಾಣನಿಕರೇ ದ್ರಾವಿತೇಸತಿ | ಜನಕೋಲಾಹಲಧ್ವಾನೈ ರ್ಗಿರೌವೃದ್ಧಿಮುಪಾಗತೇ ||೫|| ಆವೃತ್ಯೋಪರಿಸಂಸರ್ಪನ್ಮೇಘಜಾಲೇ ವಿರಾಜಿತೇ | ಅವಕಾಶೇಭವದ್ವ್ಯೋಮ್ನಿ ಸಾದ್ರ್ರತ್ವಂ ಸಮುಪಾಗತೇ ||೬|| ಸ್ವಸಮಾಗಮನಾನಂದರೋಮಾಂಚಿತತನಾವಿವ | ಸಂಸ್ಥಿತೇ ಶ್ರೀಗಿರೌಯಾಂತ್ಯಾಂ ಪರಿಷದ್ಯತಿಹರ್ಷತಃ ||೭|| ಕೇಚಿದಾಕ್ರಮ್ಯಪಾದಾಭ್ಯಾ ಮುಪಾನದ್ಯುಗಮುಚ್ಚಕೈಃ | ತಪನೀ

---

## ೭ನೆ ಅಧ್ಯಾಯವು.

### ಶ್ರೀಗಿರಿಗೆ ಮುಕ್ತಾಟವರ್ಧನಾದಿ ನಾನಾವಿಧ ಜಂಗಮರು ನಡೆತಂದ ಕಥೆ.

ಬಳಿಕ ದೋನಮಾರ್ಯನು ಭಕ್ತಿಯಿಂದ ಶ್ರೀ ಚತುರ್ಮುಖ ಬಸವೇಶ್ವರನನ್ನು ಸ್ತುತಿಸಿ, ಮಲ್ಲಿಕಾರ್ಜುನೇಶ್ವರ ಪುರವನ್ನು ಕುರಿತು ಹೊರಟನು. ||೧|| ಆ ಪರಿಸೆಯೂಕೂಡ ಪೂರ್ವದಂತೆಯೇ ಹಾಡಿಕೊಂಡು ಕುಣಿದುಕೊಂಡು ಸಮುದ್ರದಂತೆ ಮೊರೆಯುತ್ತ, ಬಹು ನದಿಗಳ ಸಂಗಮದಿಂದ ವೃದ್ಧಿಹೊಂದುತ್ತ ಹೋಗುವ ಭಾಗೀರಥಿಯ ಪ್ರವಾಹದಂತೆ ಸಾಗುತ್ತ, ದೋನಮಾರ್ಯನ ಹಿಂದೆಯೂ ಮುಂದೆಯೂ ನಡೆಯುತ್ತಿದ್ದಿತು. ಆ ಪರಿಸೆಯ ಪಾದಗಳ ತುಳಿತದಿಂದ ಭೂಮಿಯು ಹರ್ಷಗೊಂಡು ಉಬ್ಬೇರಲು, ಅವರ ಚರಣಸಂಚಾರ ಸಂಭ್ರಮದಿಂದ ಒಣಗಿದ ಮರ ಗಿಡು ಬಳ್ಳಿಗಳೆಲ್ಲಾ ಚಿಗುರೇರಲು, ಪರಿಸರದ ಬಂಡೆಗಳೆಲ್ಲಾ ಕರಗುತ್ತಿರಲು, ಜನರ ಕೋಲಾಹಲಧ್ವನಿಯಿಂದ ಆ ಗಿರಿಯು ಬೆಳೆಯಲು, ಆ ಬೆಟ್ಟದಮೇಲೆ ಮೋಡಗಳು ಕವಿದು ಚಲಿಸುತ್ತಿರಲು, ಮೇಘಾಚ್ಛಾದನೆಯಿಲ್ಲದೆ ತೆರವಾಗಿರುವ ಆಕಾಶಭಾಗವು ಹಿಮಶೀಕರದಿಂದ ನಾಂದುಹೋಗಿರಲು, ಗಿರಿಯಮೇಲೆ ಪರಿಸೆಯು ತುಂಬಿ ಸಂತೋಷದಿಂದ ಹೋಗುತ್ತಿರುವಾಗ್ಗೆ, ತನ್ನನ್ನು ಒಡಬೆರಸುವುದಕ್ಕೆ ಅಷ್ಟು ಪರಿಸೆಯು ಬಂದುದನ್ನು ಕಂಡು ಗಿರಿಯು ಆನಂದಪಟ್ಟು ರೋಮಾಂಚಿತ ಶರೀರಿಯಾಯಿತೋ ಎಂಬಂತೆ ತೋರುತ್ತಿರಲು, ||೭|| ಆ ಪರಿಸೆಯ ಭಕ್ತರಲ್ಲಿ ಕೆಲ

ಯಾಲಂಕೃತಾಗ್ರೇ ಪಾದುಕೇತ್ಸಪರೇ ಪುನಃ ||೮|| ಗಜದಂತಕೃತೇ ಕೇಚಿದಿತರೇ
ಲೋಹಕಲ್ಪಿತೇ | ಅನ್ಯೇ ತಾಮ್ರೇಣ ರಚಿತೇ ಪರೇ ದಾರುವಿನಿರ್ಮಿತೇ ||೯||
ಸ್ವಪಾದನಖಸಂದೋಹೇ ಸತಿ ಶಿಷ್ಯಾವಲಿದರ್ಪಣೇ | ಕಿಂಚಚಂದನಕಾಷಾಯಾನ್
ಕಷಾಯೇಣೇಷದಂಚಿತಾನ್ || ೧೦ || ಕಾಷಾಯರಂಜಿತಾನನ್ಯೇ ನೀಲಾಂಚ
ಲಸಮನ್ವಿತಾನ್ | ತರಂಗಿತಾನ್ಪಟಾನ್ಧೃತ್ವಾ ಕಚ್ಛಾಬಾಹ್ಯಪರೀತರೇ ||
ಸೂಕ್ಷ್ಮಾನಾಪ್ರಪದೀನಾಂಶ್ಚ ಕೂರ್ಪಾಸದ್ವಿಗುಣಾನ್ಪರೇ | ಪಟ್ಟಗುಚ್ಛಾನ್ಪಟ್ಟ
ವೇಣೀಃ ಪಟ್ಟಸೂತ್ರಜಯಾಂಸ್ತಥಾ || ೧೨ || ಪಟ್ಟವಾಸಾಂಸಿ ಲಲಿತವೇಷ್ಟ
ನಾನಿ ಸಮಂತತಃ | ತ್ರಿವಲ್ಯಾಕಾರತಶ್ಚಾರು ತುಂದಿಲಾಕಾರತೋಪಿ ಚ ||೧೩||
ಬದ್ಧ್ವಾ ಕಟಿತಟೇ ಕೇಚಿ ದ್ವಿಧಾಯಾಧೋವಿಲಂಬಿತಂ | ಧೃತಕೂರ್ಪಾಸಕಸ್ಯೋ
ರ್ಧ್ವಂ ಧೃತ್ವಾಸ್ಫಟಿಕಮಾಲಿಕಾಃ ||೧೪|| ಉಪವೀತಾಕಾರತೋಪಿ ಬಾಹ್ವೋ
ರುರಸಿ ಹಸ್ತಯೋಃ | ಧೃತ್ವಾರುದ್ರಾಕ್ಷನಿಚಯಾಂ ಸ್ಥಾನೇಷ್ವನ್ಯೇಷು ಭಕ್ತಿತಃ ||
ಕಾಷಾಯರೂಷಿತಪಟಾನ್ಮಂಜಿಷ್ಠಾರಂಜಿತಾನ್ಪಟಾನ್ | ಕೌಸುಂಭಾನಿ ಚ ವಾ
ಸಾಂಸಿ ಲಲಿತಾನ್ರತ್ನಕಂಬಳಾನ್ ||೧೬|| ಸುಚೇಲಕಾನ್ನಿಶಾತಾಂಶ್ಚ ದುಕೂ
ಲಾನ್ಯಪಿ ಕೇಚನ | ಅಚ್ಛಸ್ಫಟಿಕರುದ್ರಾಕ್ಷವಲಯೈಃ ಕಲಶೈಶ್ಶುಭೈಃ ||೧೭|| ಊ

---

ವರು ಸಾಧಾರಣವಾದ ಹಾವುಗೆಗಳನ್ನು ಮೆಟ್ಟಿದ್ದರು. ಕೆಲರು ಚಿನ್ನದ ಕೆಲಸವನ್ನು ಮಾಡಿದ ಹಾವುಗೆಗಳನ್ನು ಮೆಟ್ಟಿದ್ದರು. ||೮|| ಕೆಲರು ಆನೆ ದಂತದ ಹಾವುಗೆಗಳನ್ನೂ, ಕೆಲರು ಕಬ್ಬಿನದ ಹಾವುಗೆಗಳನ್ನೂ, ಕೆಲರು ತಾಮ್ರದ ಹಾವುಗೆಗಳನ್ನೂ, ಕೆಲರು ಮರದ ಹಾವುಗೆಗಳನ್ನೂ ಮೆಟ್ಟಿದ್ದರು. ಕೆಲರು ತಮ್ಮ ಪಾದನಖಗಳು ತಮ್ಮ ಶಿಷ್ಯಮಂಡಲಿಗೆ ದರ್ಪಣವಾಗಿರುತ್ತಿರಲು (ಎಂದರೆ ಶಿಷ್ಯಜನರಿಂದ ನಮಸ್ಕರಿಸಿಕೊಳ್ಳುತ್ತ), ಕೆಲಕೆಲರು ಎಳಗಾವಿ ಗುಳಗಾವಿ ಕೆಂಪುಗಾವಿ ಬಣ್ಣದ ಕರಿಯಂಚಿನ ಪಂಚೆಗಳನ್ನು ಧರಿಸಿಯೂ, ಇನ್ನು ಕೆಲರು ಕಚ್ಚೆಗಳಮೇಲೆ ನರಿಕುಚ್ಚುಗಳನ್ನು ಸಿಕ್ಕಿಸಿಕೊಂಡೂ, ಕೆಲರು ತೊಟ್ಟಿರುವ ಅಂಗಿಗೆ ದ್ವಿಗುಣವಾಗಿ ಕಾಲತುದಿವರೆಗೆ ಸೋಂಕುತ್ತಿರುವ ಕಪನಿಗಳನ್ನು ತೊಟ್ಟು, ಕೆಲರು ರೇಶಿಮೆಯ ಕುಚ್ಚುಗಳು, ರೇಶಿಮೆಯ ಜಡೆಗಳು, ರೇಶಿಮೆಯ ಗೊಂಡೆಗಳು, ರೇಶಿಮೆಯ ಹೊದಿಕೆಗಳು, ರೇಶಿಮೆಯ ತಲೆಪಾಗುಗಳು ಇವನ್ನೆಲ್ಲಾ ಧರಿಸಿಯೂ, ಕೆಲರು ಅಂಗಿಗಳಮೇಲೆ ನಡುವಿಗೆ ಪಂಚೆಯನ್ನು ಮೂರುಸುತ್ತಾಗಿಯೂ, ದೊಂದೆಯಾಗಿಯೂ, ಇಳಿಬಿದ್ದ ಕುಚ್ಚಿರುವಂತೆಯೂ ಸುತ್ತಿದ್ದರು. ಕೆಲರು ಅಂಗಿಗಳಮೇಲೆ ಸ್ಫಟಿಕಮಣಿ ಮಾಲಿಕೆಯನ್ನು ಧರಿಸಿದ್ದರು. ||೧೪|| ಇನ್ನು ಕೆಲರು ರುದ್ರಾಕ್ಷಿ ಮಾಲೆಗಳನ್ನು ಉಪವೀತಾಕಾರವಾಗಿಯೂ, ತೋಳುಗಳು ಮುಂಗೈಗಳು ಎದೆಗಳು ಮೊದಲಾದ ಸ್ಥಳಗಳಲ್ಲಿಯೂ ಧರಿಸಿದ್ದರು. ಕೆಲರು ಕಾವಿಯ ಕೆಂಪುಪಂಚೆಗಳನ್ನೂ, ಕೆಲರು ಹಳದಿಬಣ್ಣದ ಪಂಚೆಗಳನ್ನೂ, ಕೆಲರು ಕುಸುಂಬ ಬಣ್ಣದ ಪಂಚೆಗಳನ್ನೂ, ಕೆಲರು ರತ್ನಗಂಬಳಿಗಳನ್ನೂ,

ಘ್ರಾರ್ಸ್ಯನಂದಿಭಿಃಕಾಂಸ್ಯದರ್ಪಣೈಃ ಪಾರ್ಶ್ವಯೋರ್ದ್ವಯೋಃ | ತಥೈವಚಂ
ದ್ರಸೂರ್ಯಾಭ್ಯಾಂ ಶೋಭಿತಾನಿ ವಿಶೇಷತಃ ||೧೮|| ಮಕುಟಾನಿಶ್ವೇತವಸ್ತ್ರೈಃ
ಕೃತಾನಿವ್ಯಾಘ್ರಕೃತ್ತಿಭಿಃ | ರಚಿತಾನಿ ಕಿರೀಟಾನಿ ಕಂಬಳೈರ್ನಿರ್ಮಿತಾನಿ ಚ||
ರುದ್ರಾಕ್ಷಮಕುಟಾನ್ಯನ್ಯೇ ಸದ್ರತ್ನಮಕುಟಾನಿಚ | ಕಾಂಸ್ಯತಾಮ್ರಕಿರೀಟಾನಿ
ಶಿರಸ್ತ್ರಾಣ್ಯನ್ನತಾನಿಚ || ೨೦ || ಧಮ್ಮಿಲ್ಲೋರುಶಿರಸ್ತ್ರಾಣಿ ವರ್ತುಲಾನ್ಯಪಿ
ಮೂರ್ಧಸು | ಸುವರ್ಣಖಚಿತೇ ಕೇಚಿಚ್ಛುದ್ಧಸ್ಫಟಿಕಕುಂಡಲೇ ||೨೧|| ರುದ್ರಾ
ಕ್ಷಕುಂಡಲೇ ಹೈಮಕುಂಡಲೇ ರತ್ನಕುಂಡಲೇ | ಕುಂಡಲೇ ತಾಮ್ರರಚಿತೇ
ತಥಾರಾಜತಕುಂಡಲೇ ||೨೨|| ಫಣೀಂದ್ರಕುಂಡಲೇ ನಂದಿಕುಂಡಲೇ ಸ್ವಸ್ವಕ
ರ್ಣಯೋಃ| ಗೌರೀವೇತ್ರಾನ್ಸೂಕ್ಷ್ಮವೇತ್ರಾನ್ ಗ್ರಂಥಿವೇತ್ರಾಂಸ್ತಥಾಪರಃ||
ವೇತ್ರಾನ್ಸ್ವಲಯಿತಾನ್ಸ್ವಕ್ರಾನ್ ಬಹುವರ್ಣಾನಥಾಪರೇ | ಖಾದಿರಾನ್ಯೋಗದಂ
ಡಾಂಶ್ಚ ಚನ್ದನೇನವಿನಿರ್ಮಿತಾನ್ ||೨೪|| ರುಜೂಂಸ್ತ್ವಕ್ಸಾರದಂಡಾಂಶ್ಚತ್ವ
ಕ್ಪುಷ್ಟಪರಿಶೋಭಿತಾನ್ | ದಂಡಾನಯೋವಲಯಿತಾ ನ್ಲಲಿತಾನಗ್ರಯೋರ್ದ್ವ
ಯೋಃ ||೨೫|| ದಂಡಾನಯಶ್ಶಲಾಕಾಗ್ರಾ ನಯೋದಂಡಾನನೇಕಶಃ | ಧೃ

---

ಕೆಲರು ಶುಭ್ರವಾದ ಬಿಳಿಯ ಪಂಚೆಗಳನ್ನೂ ಹೊಡೆದಿದ್ದರು. ಕೆಲರು ತಮ್ಮ ತಲೆಯಮೇಲೆ ಸ್ಫಟಿಕದ ಮತ್ತೂ ರುದ್ರಾಕ್ಷಿಯ ಮಣಿಗಳನ್ನು ಸೇರಿಸಿ ಮಾಡಿದ ಮಾಲಿಕೆಯನ್ನು ಕಲಶಕ್ಕೆ ಸುತ್ತಿ ಮೇಲಕ್ಕೆತ್ತಿದ ಮುಖವುಳ್ಳ ನಂದೀಶ ವಿಗ್ರಹಗಳನ್ನೂ ಕಂಚಿನ ಕನ್ನಡಿಗಳನ್ನೂ ಕಟ್ಟಿ, ಎರಡು ಪಕ್ಕಗಳಲ್ಲೂ ಸೂರ್ಯಚಂದ್ರಾಕೃತಿಗಳನ್ನಲಂಕರಿಸಿ ಶುಭ್ರವಸ್ತ್ರಗಳಿಂದ ಮಾಡಿದ ಕಿರೀಟಗಳನ್ನು ಧರಿಸಿದ್ದರು. ಕೆಲರು ಹುಲಿತೊವಲಿಂದ ಮಾಡಿದ ಕಿರೀಟಗಳನ್ನೂ, ಕೆಲರು ಕಂಬಳಿಯ ಕಿರೀಟಗಳನ್ನೂ, ಕೆಲರು ರುದ್ರಾಕ್ಷಿ ಕಿರೀಟಗಳನ್ನೂ, ಕೆಲರು ರತ್ನಖಚಿತ ಕಿರೀಟಗಳನ್ನೂ, ಕೆಲರು ಕಂಚಿನ ತಾಮ್ರದ ಕಿರೀಟಗಳನ್ನೂ, ಕೆಲರು ದೊಡ್ಡ ರುಮಾಲುಗಳನ್ನೂ ಧರಿಸಿದ್ದರು. ಕೆಲರು ತಲೆಗೂದಲನ್ನೇ ಕಿರೀಟರೂಪವಾಗಿ ಎತ್ತಿ ಕಟ್ಟಿದ್ದರು. ಕೆಲರು ಚಿನ್ನದ ಕುಂಡಲಗಳನ್ನೂ, ಕೆಲರು ಸ್ಫಟಿಕದ ಕಡಕುಗಳನ್ನೂ, ಕೆಲರು ರುದ್ರಾಕ್ಷಿಯ ಹತ್ತಿಕಡಕುಗಳನ್ನೂ, ಕೆಲರು ಕುಂದಣದಿಂದ ಕೆತ್ತಿದ ರತ್ನದ ಕುಂಡಲಗಳನ್ನೂ, ಕೆಲರು ಬೆಳ್ಳಿಯ ತಾಮ್ರದ ಕುಂಡಲಗಳನ್ನೂ, ಕೆಲರು ಸರ್ಪಾಕಾರದ ನಂದಿಯಾಕಾರದ ಕರ್ಣಕುಂಡಲಗಳನ್ನೂ, ತಂತಮ್ಮ ಕಿವಿಗಳಿಗೆ ಧರಿಸಿದ್ದರು. ಕೆಲಕೆಲವರು ಗೌರಿಬೆತ್ತ, ಸಣ್ಣಬೆತ್ತ, ಗಂಟಿನಬೆತ್ತ, ನುಲಿಗೆಯಬೆತ್ತ, ಡೊಂಕುಬೆತ್ತ, ಚಿತ್ರವರ್ಣದ ಬೆತ್ತ ಮೊದಲಾದ ನಾನಾಪ್ರಕಾರದ ಬೆತ್ತಗಳನ್ನೂ, ಕೆಲಕಲರು ಕರೀಕಗ್ಗಲಿಯ ಯೋಗದಂಡಗಳನ್ನೂ, ಶ್ರೀಗಂಧದ ದೊಣ್ಣೆಗಳನ್ನೂ, ನೇರವಾಗಿರುವ ಬಿದಿರು ದೊಣ್ಣೆಗಳನ್ನೂ, ದಪ್ಪದೊಣ್ಣೆಗಳನ್ನೂ. ಬುಡದಲ್ಲೂ ತುದಿಯಲ್ಲೂ ಕಬ್ಬಿಣದ ಕಟ್ಟುಹಾಕಿರುವ ದೊಣ್ಣೆಗಳನ್ನೂ ||೨೫|| ತುದಿಗೆ ಕಬ್ಬಿಣದ ಮೊಳೆಗಳನ್ನು ಜಂಟಿಸಿರುವ ದೊಣ್ಣೆಗಳನ್ನೂ,

ತ್ವಾನಿಜಕರೈರನ್ಯೇ ಸುವರ್ಣಕಲಶೈಶ್ಶುಭೈಃ ‖೨೭‖ ಪಟ್ಟಗುಚ್ಛೈಸ್ಸ್ವರ್ಣರೇ ಖಾಪ್ರಜ್ಯೈ ರಾಲೇಖ್ಯಸಂಘಕೈಃ । ಕಲಿತಾನ್ಯಾತಪತ್ರಾಣಿ ಧವಳಾನಿ ಸಮಂ ತತಃ ‖೨೮‖ ಬರ್ಹಿಬರ್ಹಾತಪತ್ರಾಣಿ ಮುಕ್ತಾಛತ್ರಾಣಿಕೇಚನ । ಆತಪತ್ರಾಣಿಬಿರುದೈರಂಕಿತಾನಿ ಪ್ರಹರ್ಷತಃ ‖೨೯‖ ಗೃಹೀತ್ವಾನಿಜಶಿಷ್ಯೇಷು ಸಮಾಗಚ್ಛತ್ಸುಪಾರ್ಶ್ವಯೋಃ । ನಂದಿಭಿಃ ಕಮಲೈಶ್ಚಿತ್ರೈರ್ನವ್ಯಬಂಧೈರನೇಕಧಾ ‖ ಸ್ವರ್ಣರಜತರೇಖಾಭಿಶ್ಶೋಭಿತೈ ಸ್ಸಂಪುಟೈರ್ಯುತಾನ್ । ಸಜ್ಜಿಕಾಪ್ರಕರಾನ್ಸ್ವಸ್ವಾಭೀಪ್ಸಿತಾನಂಗಸಂಗಿನಃ ‖೩೦‖ ಸಮಂಚಿತಾಸ್ಕರತಲ ಸಜ್ಜಿಕಾಪ್ರಕರಾನಪಿ । ಸುವರ್ಣರೌಪ್ಯವಲಯೈಃ ಪಟ್ಟಗುಚ್ಛಸಮನ್ವಿತೈಃ ‖೩೧‖ ಶಿವಸೂತ್ರೈರ್ವಿಲಸಿತಾನ್ನಾಭೌವಕ್ತ್ರೇ ಕರಸ್ಥಲೇ । ಕಕ್ಷೇವಕ್ಷಸ್ಥಲೇಧೃತ್ವಾ ಲಿಂಗಸಂಬಂಧಸಿದ್ಧಿತಾಃ ‖೩೨‖ ತ್ರಿಜಗತ್ಪಾವನೋದ್ಯುಕ್ತಾ ಶ್ಶುಭಯುಕ್ತಾ ನಿರಂತರಂ । ಸದ್ಭಕ್ತಿಮಂತೋ ಮುಕುಟವರ್ಧನಾ ಜಂಗಮೋತ್ತಮಾಃ ‖೩೩‖ ನಿರೀಕ್ಷ್ಯ ಪರಿಷತ್ಕೋಟೌ ಸಮತ್ಯಾಂ ಪ್ರಯಯುರ್ಮುದಾ । ಗ್ರೈವೇಯಕೋರ್ಮಿಕಾನಂದಿಕುಂಡಲೈ ಸ್ತಾಮ್ರನಿರ್ಮಿತೈಃ ‖೩೪‖ ಪ್ರಾಲಂಬೈಸ್ತಾಮ್ರರಚಿತೈರ್ಯಜ್ಞಸೂತ್ರೈಶ್ಚಲಂಬನೈಃ । ತಾಮ್ರಕೀರ್ತಿಮುಖೈ ಸ್ತಾಮ್ರಪದಕೈ ಸ್ತಾಮ್ರಕಂಕ

---

ನಾನಾತರದ ಕಬ್ಬಿಣದ ಸಲಾಕಿಯ ದೊಣ್ಣೆಗಳನ್ನೂ ಕೈಗಳಲ್ಲಿ ಹಿಡಿದುಕೊಂಡು ಹೋಗುತ್ತಿದ್ದರು. ಕೆಲಕೆಲರು ಚಿನ್ನದ ಕಲಶಗಳನ್ನು ಹಾಕಿ ಪಟ್ಟೆಯ ಜಾಲರಿಯನ್ನು ಕಟ್ಟಿ ಜರತಾರಿಯ ಕಸೂತಿ ಚಿತ್ರಗೆಲಸಗಳಿಂದ ಕೂಡಿದ ಕೊಡೆಗಳನ್ನೂ, ಬಿಳಿಕೊಡೆಗಳನ್ನೂ, ನವಿಲುಗರಿಯ ಕೊಡೆಗಳನ್ನೂ, ಮುತ್ತಿನ ಕೊಡೆಗಳನ್ನೂ ಧರಿಸಿದ್ದರು. ಕೆಲರು ಬಿರುದಾಂಕಿತಗಳಾದ ಶ್ವೇತಛತ್ರಗಳನ್ನು ಉಭಯಪಾರ್ಶ್ವಗಳಲ್ಲೂ ತಮ್ಮ ಶಿಷ್ಯರು ಹಿಡಿದುಕೊಂಡು ಬರುತ್ತಿರಲು ಸಂತೋಷದಿಂದ ನಡೆಯುತ್ತಿದ್ದರು. ಚಿನ್ನದಿಂದ ನಂದೀಶಾಕಾರದ ಕಮಲಾಕಾರದ ನಾನಾ ಚಿತ್ರಗೆಲಸಗಳನ್ನು ಮಾಡಿರುವ ಮೊಗಸುಗಳುಳ್ಳ ಕರಡಿಗೆಗಳನ್ನು ಧರಿಸಿರುವವರೂ, ಕರತಲವನ್ನೇ ಸಜ್ಜಿಕೆಯನ್ನಾಗಿ ಮಾಡಿಕೊಂಡು ಅದರಲ್ಲಿ ಇಷ್ಟಲಿಂಗವನ್ನು ಧರಿಸಿದವರೂ, ಚಿನ್ನದ ಬೆಳ್ಳಿಯ ಉಂಗುರಗಳನ್ನೂ ಪಟ್ಟೆಯ ಗೊಂಡೆಗಳನ್ನೂ ಹಾಕಿ ಅಲಂಕರಿಸಿದ ಶಿವದಾರಗಳಿಂದ ಕಟ್ಟಿದ ಕರಡಿಗೆಗಳನ್ನು ಹೊಕ್ಕುಳಮೇಲೆ ಹೊಟ್ಟೆ ಎದೆ ಕಂಠ ಕಂಕುಳು ಮೊದಲಾದ ಸ್ಥಲಗಳಲ್ಲಿ ಧರಿಸಿದವರೂ, ಸತತ ಮಂಗಳಮಯರಾಗಿ ಲೋಕಪಾವನಾರ್ಥವಾಗಿ ಸಂಚರಿಸತಕ್ಕವರೂ, ಶಿವಭಕ್ತಿಧುರಂಧರರೂ, ಆದ ಮುಕುಟವರ್ಧನಜಂಗಮರು ತಮಗೆ ಪರಿಸೆಯ ಜನರೆಲ್ಲಾ ಅಡಿಗಡಿಗೆ ಅಡ್ಡಬೀಳುತ್ತಿರಲು, ಅವರನ್ನು ಕರುಣಾಕಟಾಕ್ಷದಿಂದ ನೋಡುತ್ತ, ಆನಂದದಿಂದ ಸಾಗುತ್ತಿದ್ದರು. ‖೩೩‖ಮತ್ತೂ ತಾಮ್ರದಿಂದ ಮಾಡಿದ ಕಂಠಹಾರ ಉಂಗುರ ಕುಂಡಲ ಕಂಠೀಸರ ಉಪವೀತ ಸಿಂಹಮುಖ ಪದಕಗಳನ್ನೂ, ತಾಮ್ರದ ಕಟಕಗಳನ್ನೂ, ನಂದಿಯಾಕಾರದ ತಾಮ್ರದ ಕಡಕು

ಣ್ಯೈಃ ||೩೫|| ಸಂದಿಭಿಶ್ಛಿನ್ನಿತೈಃ ಸ್ತಾಮ್ರಕಟಕೈಃ ಸ್ತಾಮ್ರಭಿರ್ಷಷ್ಟೈಃ | ಓಡ್ಡಿಯಾ ಣೈಸ್ತಾಮ್ರಕೃತೈಃ ಕಟಿಸೂತ್ರೈಸ್ಸಮಂಚಿತೈಃ ||೩೬|| ಸವೀಸ್ಸೈರ್ಧೌತಕೌಪೀ ನನಿಕರೈಃ ಪರಿಶೋಭಿತಾಃ | ಆಗುಲ್ಫಾಂತೋಪಲಿಪ್ತಾಯಾ ಭೂತೇರಧಶತಶ್ಚ್ಯ ಜ್ಜೈಃ ||೩೭|| ಸತ್ಕಾಂತಿಭಿರ್ಲಕ್ಷ್ಯಮಾಣಾಶ್ಚಲದ್ಭಿಶ್ಚರಣಾಂಬುಜೈಃ | ನಖ ಶೋಭಾಸು ನಯನಕಾನ್ತಿಷ್ವಾನನದೀಪ್ತಿಷು ||೩೮|| ಭಸ್ಮೋದ್ಧೂಳಿತಸರ್ವಾಂಗ ಪ್ರಭಾಸುಚಸಮಂತತಃ | ಲಸದ್ದಶನಶೋಭಾಸು ಪ್ರವ್ಯಾಪ್ತಾಸುದಿಶೋದಶ || ಪಟ್ಟಗುಚ್ಛಕಸಂಯುಕ್ತಸೂಕ್ಷ್ಮಛತ್ರೈಶ್ಚ ಚಾಮರೈಃ | ಉಪಾನ್ತಕಲಶೋ ಪೇತ ಯೋಗದಂಡಕದಂಬಕೈಃ ||೪೦|| ವ್ಯಾಘ್ರಾಜಿನಾಸನೈರ್ಭವ್ಯೈಃ ಕಲ ಶೈಃಕಂಬಳಾಸನೈಃ | ಕರಸ್ಥಲಾನಾಮುಪರಿವೇಷ್ಟಿತೈಶ್ಚಿತ್ರವಸ್ತ್ರಕೈಃ ||೪೧|| ಉಲ್ಲಾಸೈರ್ಮಂದಗಮನೈರ್ಲಲಿತೈರ್ಮೃದುಭಾಷಣೈಃ | ವಿರಕ್ತಿಭಾವೈರಾರಾ ಧ್ಯಸಂಪದ್ಭಿಃ ಪ್ರಭುಶಕ್ತಿಭಿಃ ||೪೨|| ಸಚ್ಛಾಸನಮಹಿಮ್ನೋಪರಾಜಿತೈರ್ಲಾಂ ಛನೋಚ್ಚಯೈಃ | ಪಾವನೈರ್ಭಕ್ತಿಶೃಂಗಾರೈರ್ಲಸದ್ಭಿಃ ಪರಿರಂಜಿತಾಃ ||೪೩|| ಪ್ರತ್ಯೇಕಂ ಸಂಘಸಂಯುಕ್ತಾಸ್ತ್ರಿಜಗತ್ಪೂಜ್ಯವೈಭವಾಃ | ಅಗಚ್ಛನ್ನತಿಹರ್ಷೇ ಣ ಸದ್ಭಕ್ತ್ಯೋಭಯಜಂಗಮಾಃ ||೪೪|| ಉದ್ಧೃತ್ಯಚರಣಾನ್ಗಂತುಮಶಕ್ತ್ಯಾ ಕರ್ಷಣಾದ್ಭುವಿ | ಶೀರ್ಣಾರ್ಧೈಶ್ಚರಣತ್ರಾಣೈರ್ಬಹುಸ್ಯೂತಪಟಚ್ಚರೈಃ ||

---

ಗಳನ್ನೂ, ತಾಮ್ರದ ಭಿಕ್ಷಾಪಾತ್ರೆಯನ್ನೂ, ತಾಮ್ರದ ನಡುಕಟ್ಟು ಉಡಿದಾರಗಳನ್ನೂ, ಬಿಳಿ ಯ ಕೌಪೀನಗಳನ್ನೂ ಧರಿಸಿ, ಕಾಲು ಹರಡಿನವರೆಗೆ ಅಂಗಕ್ಕೆಲ್ಲಾ ಭಸ್ಮೋದ್ಧೂಳನವನ್ನು ಮಾಡಿ, ಹರಡಿನ ಕೆಳಗಣ ಹಜ್ಜೆಗಳು ಕೆಂದಾವರೆಗಳಂತೆ ಮಿನುಗುತ್ತಿರಲು, ಉಗುರುಗಳ ಕಾಂ ತಿಯೂ, ನೇತ್ರಗಳ ಪ್ರಭೆಯೂ, ಮುಖದ ತೇಜಸ್ಸೂ, ಭಸ್ಮೋದ್ಧೂಳಿತ ಶರೀರದ ಶೋಭೆ ಯೂ, ಶುಭ್ರದಂತಗಳ ಪ್ರಕಾಶವೂ ಸಹ ಒಟ್ಟಿಗೆ ಎಲ್ಲದಿಕ್ಕುಗಳನ್ನೂ ಬೆಳಗುತ್ತಿರಲು, ಪಟ್ಟೆ ಯ ಕುಚ್ಚುಗಳನ್ನು ಕಟ್ಟಿರುವ ಸಣ್ಣ ಕೊಡೆಗಳಿಂದಲೂ, ಚಾಮರಗಳಿಂದಲೂ, ಕಲಶಗಳನ್ನು ಹಾಕಿದ ಯೋಗದಂಡಗಳಿಂದಲೂ, ಹುಲಿದೊವಲಿನ ಹಾಸುಗೆ, ಕಂಬಳಿಯ ಹಾಸುಗೆಗಳಿಂದಲೂ, ಕೈಗಳಮೇಲೆ ಸುತ್ತಿಕೊಂಡಿರುವ ಚಿತ್ರವಸ್ತ್ರಗಳಿಂದಲೂ ಕೂಡಿ, ಉಲ್ಲಾಸದಿಂದ ಮೆಲ್ಲಗೆ ನಡೆ ಯುತ್ತ, ಮನೋಹರವಾಗಿ ಮೆಲ್ನುಡಿಗಳನ್ನು ನುಡಿಯುತ್ತ, ವಿರಕ್ತಿಭಾವ, ಪೂಜ್ಯತಾಸಂಪತ್ತಿ, ಸ್ವಾಮಿಶಕ್ತಿ, ಶಿಕ್ಷಣಾಧಿಕಾರಮಹಿಮೆ ಇವುಗಳನ್ನೆಲ್ಲಾ ವ್ಯಕ್ತಗೊಳಿಸುವ ಲಾಂಛನಗಳಿಂದ ಕೂಡಿ, ಪರಿಶುದ್ಧ ಭಕ್ತಿಲಕ್ಷಿತ ಶೃಂಗಾರವುಳ್ಳವರಾಗಿ, ಲೋಕಾರಾಧ್ಯ ವೈಭವಯುಕ್ತರಾಗಿ ತಂತಮ್ಮ ಗುಂಪಿನಿಂದ ಕೂಡಿರುವ ಉಭಯಜಂಗಮರೂ, ಅತಿಸಂತೋಷದಿಂದ ಹೋಗುತ್ತಿದ್ದ ರು. ||೪೪|| ಮತ್ತೆ ಕೆಲಕೆಲ ಮುದಿ ಜಂಗಮರು ಅಶಕ್ತಿಯಿಂದ ನಡೆಯಲಾರದೆ ಕಾಲೆಳೆದು ಕೊಂಡು ಹೋಗುತ್ತಲೂ, ಸಾಕಾಗಿ ಕಾಲುಗಳನ್ನು ಮೇಲಕ್ಕೆತ್ತಿ ನಿಂತುಕೊಳ್ಳುತ್ತಲೂ, ಹರಿ

ವಿಶೀರ್ಣಕಂಬಳೈ ರ್ಜೀರ್ಣಕೌಪೀನನಿಕರೈರಪಿ | ಅತಿನಮ್ರೈಃಪೃಷ್ಠಭಾಗೈಃ ಕಂಪಮಾನೈಶ್ಚಮಸ್ತಕೈಃ ||೪೬|| ಪೃಷ್ಠಲಗ್ನೋದರೈರ್ದಂತೈ ರ್ಭಂಗುರೈರ್ಮಲಿನೀಕೃತೈಃ | ಲೋಚನೈರವಟುಪ್ರಾಪ್ತೈರುಕ್ತಸ್ಥಾನೇಷುನಿರ್ಮಿತೈಃ ||೪೭|| ಶುಭ್ರತ್ರಿಪುಂಡ್ರೈರ್ಭಸಿತೋದ್ಧೂಲನಸ್ಯೋಪರಿ ಸ್ಫುಟೈಃ | ಅಬದ್ಧಾಧ್ವಕ್ಷೇಪಣಾದ್ಬಾಹ್ವೋರ್ಲಂಬಮಾನೈರ್ಜಟಾವ್ರಜೈಃ || ೪೮ || ಭುಜವಿನ್ಯಸ್ತಮಹಿತಯೋಗಪಟ್ಟೈರ್ಮನೋಹರೈಃ | ವಿಭೂತಿಪಾತ್ರಸಂದೋಹೈರಭೀಷ್ಟೈಸ್ಸಜ್ಜಿಕಾವ್ರಜೈಃ || ೪೯ || ಅತ್ಯಂತಕೃಶದೇಹೇಷು ಕಂಪಮಾನೇಷು ವಾಯುನಾ | ಆಲಂಬಿತಾಭಿರ್ಯತ್ನೇನ ಯಷ್ಟಿಭಿಃಪರಿಲಕ್ಷಿತಾಃ ||೫೦|| ಜಗತಃಪಾವನಾರ್ಥಾಯ ಜನಿತ್ವಾಽತಿಥಿರೂಪತಃ | ಅಸ್ಮಿಂಚ್ಛ್ರೀಪರ್ವತೇರಮ್ಯೇ ಸರ್ವತೀರ್ಥೈಸ್ಸಮಾಗತಃ || ೫೧ || ಇತಿವಾಕ್ಯಂಸಹಜತಾಂ ನಯಂತಸ್ತೀರ್ಥಸಂಚಯಾಃ | ಸಂಚರಂತಇವಾಗಚ್ಛಂ ಸ್ತತ್ರವೃದ್ಧತಪೋಧನಾಃ ||೫೨|| ಶ್ರೀಗಂಧದಾರುಖಂಡಾನಿ ರಮ್ಯಾಚ್ಛಾದನಸಂಗ್ರಹಂ | ಸಮಾಚೀನೈಃಪೂಗಭಾಗೈ ಶ್ಚೂರ್ಣಪಾತ್ರೈರ್ವಿರಾಜಿತೈಃ ||೫೩|| ಕಸ್ತೂರೀಮುಖ್ಯವಿವಿಧ ಸುಗಂಧದ್ರವ್ಯಮಿಶ್ರಿತೈಃ |

---

ದುಹೋಗಿರುವ ಕೆರಗಳನ್ನು ದರಬರನೆ ಎಳೆದುಕೊಂಡು ಹೋಗುತ್ತಲೂ, ಹಲವು ತೇಪೆಗಳನ್ನು ಹಾಕಿರುವ ಹೊದಿಕೆಗಳನ್ನು ಧರಿಸಿಯೂ, ಜೂಲು ಕಂಬಳಿಗಳನ್ನೂ ಹರಕು ಕೌಪೀನಗಳನ್ನೂ ಧರಿಸಿಯೂ, ಬಗ್ಗಿದ ನಡುವಿನಿಂದಲೂ, ನಡುಗುವ ತಲೆಗಳಿಂದಲೂ, ಬೆನ್ನಿಗೆ ಹತ್ತಿಹೋಗಿರುವ ಹೊಟ್ಟೆಯಿಂದಲೂ, ಹಲ್ಲು ದುರಿಹೋಗಿರುವ ಬೋಡುಬಾಯಿಗಳಿಂದಲೂ, ಗುಳಿಬಿದ್ದು ಮಂಜು ಸುತ್ತಿರುವ ಕಣ್ಣುಗಳಿಂದಲೂ, ಭಸ್ಮೋದ್ಧೂಳನದಮೇಲೆ ಆಯಾ ವಿಧ್ಯುಕ್ತಸ್ಥಾನಗಳಲ್ಲಿ ಸ್ಫುಟವಾಗಿ ಧರಿಸಿರುವ ಶುಭ್ರ ತ್ರಿಪುಂಡ್ರಗಳಿಂದಲೂ, ಕಟ್ಟದೆ ಬಿಟ್ಟಿರುವುದರಿಂದ ತೋಳುಗಳ ಮೇಲೆ ಜೋಲಾಡುತ್ತಿರುವ ಜಡೆಗಳಿಂದಲೂ, ||೪೮|| ಭುಜಗಳಮೇಲೆ ಇಟ್ಟುಕೊಂಡಿರುವ ಯೋಗದಂಡಗಳಿಂದಲೂ, ಭಸ್ಮಘುಂಟಿಕೆಗಳಿಂದಲೂ, ಅವರವರ ಇಷ್ಟಕ್ಕೆ ಅನುಸಾರವಾಗಿ ಧರಿಸಿದ ನಾನಾತರದ ಕರಡಿಗೆಗಳಿಂದಲೂ ಕೂಡಿ, ಬಹು ಕೃಶವಾಗಿರುವ ದೇಹಗಳು ಗಾಳಿಯ ಬಡಿತದಿಂದ ನಡುಗುತ್ತಿರಲು, ಕೈದೊಣ್ಣೆಗಳ ಆಧಾರದಿಂದ ಶ್ರಮಪಟ್ಟು ತಾಳಿಕೊಳ್ಳುತ್ತ, "ಶಿವನು ಲೋಕಪಾವನಾರ್ಥವಾಗಿ ಜಂಗಮರೂಪದಿಂದ ಹುಟ್ಟಿ ಶ್ರೀಶೈಲದಲ್ಲಿ ಸಕಲ ತೀರ್ಥಗಳೊಡನೆ ಕೂಡಿ ಬಂದಿರುವನು" ಎಂಬುದಾಗಿರುವ ವಚನವನ್ನು ಯಥಾರ್ಥಗೊಳಿಸುವುದಕ್ಕಾಗಿ ತೀರ್ಥಗಳೆಲ್ಲಾ ಹೀಗೆ ಸಂಚರಿಸುತ್ತಿರುವುವೋ ಎಂಬಂತೆ ತೋರುತ್ತ ನಡೆಯುತ್ತಿದ್ದರು ||೫೨|| ಮತ್ತು ಇನ್ನು ಕೆಲವಿಟಜಂಗಮರು ತಮ್ಮ ಮಗ್ಗುಲಲ್ಲಿ ಶಿಷ್ಯರುಗಳು ಶ್ರೀಗಂಧದ ಕೊರಡುಗಳನ್ನೂ, ಬಟ್ಟೆಗಳ ಗಂಟನ್ನೂ, ಕತ್ತರಿಸಿದಡಕೆ ಸುಣ್ಣದ ಡಬ್ಬಿ ಕಸ್ತೂರಿ ಮೊದಲಾದ

ಘುಟಿಕಾನಿಚಯೈಃ ಪೂರ್ಣಕರಂಡೈಃ ಪೂರಿತಾಂಘುಭಾನ್ ||೫೪|| ತಾಂಬೂ
ಲೀದಳಸಂಯುಕ್ತಪುಟಿಕಾಪರಿಪೂರಿತಾನ್ | ಧೃತ್ವಾ ಸ್ವಾಂಸೇಷು ತಾಂಬೂಲ
ಪ್ರಸೇವಾಸನಯಾಚಿಷು ||೫೫|| ದದತ್ಸು ವಲಿತಾಸ್ವರ್ಣಖಂಡಾಂಶ್ಛಾತ್ರೇ
ಷ್ವಸುಕ್ಷಣಂ | ಅಂತೇಮಧ್ಯೇಚವಲಯೈಃ ಕಾಸಕೈಃ ಕೀಲಕೈರ್ಯುತಾಃ ||೫೬||
ರುದ್ರಾಕ್ಷಮಾಲಿಕಾಃ ಕಂಠೇ ವಹಂತೋಧವಳಾಂಬರಾಃ | ಹರಿದ್ರಾವಿಲಸತ್ಕಾ
ಯಾ ಧಮ್ಮಿಲ್ಲಪರಿಶೋಭಿತಾಃ ||೫೭|| ಪಾದಾಕ್ರಾಂತಸ್ವನಚ್ಚರ್ಮ ಪಾದು
ಕಾ ಮಂಜುನಿಸ್ವನಾಃ | ವಿಲಾಸಗಮನೋಪೇತಾ ಸ್ತಿಲಕೈರಂಚಿತಾಲಿಕಾಃ ||
ಏಕಮುಕ್ತಾಪ್ರೋತಹೇಮಸೂತ್ರರಾಜಿತಕಂಧರಾಃ | ಸ್ಥೂಲಮುಕ್ತಾಫಲೋ
ಪೇತವಿಲಸತ್ಕರ್ಣಭೂಷಣಾಃ ||೫೯|| ಅಗೋಪಯಂತೋ ಭಕ್ತೇಭ್ಯೋ ದಂ
ತಕ್ಷತನಖವ್ರಣಾನ್ | ಏಹಿರೇಭಕ್ತವೇಶ್ಯಾಯೈ ಧನಂದೇಹೀತಿವಾದಿನಃ ||
ಬಸವಸ್ಯಕೃಪಾತೇಽಸ್ತುರೇರೇ ಭಕ್ತೇತಿವಾದಿನಃ | ಕಲೌಬಸವಏವತ್ವ ಮಿತಿಭ
ಕ್ತಾನ್ಪ್ರಶಂಸಿನಃ ||೬೦|| ಗೃಹ್ಣಂತಃಕ್ಷಿಪ್ತನಿಕ್ಷೇಪಾ ಇವಭಕ್ತಪ್ರಜಾದ್ಧನಂ |
ಆಯಾಂತೀರ್ವಾರವನಿತಾಃ ಕಟಾಕ್ಷೈರ್ವೀಕ್ಷ್ಯಸಸ್ಪೃಹಂ ||೬೧|| ತಾಭಿಃಕೇ
ಳೀಂಪ್ರಕುರ್ವಂತಃಕ್ಷಿಪಂತಃ ಪುಷ್ಪಮಂಜರೀಃ | ಆಹ್ವಯಂತಸ್ತಾಸ್ಸಮೀಪಂ

---

ಗಂಧದ್ರವ್ಯಗಳನ್ನು ಸೇರಿಸಿ ಮಾಡಿದ ಮುಖವಾಸನೆಯ ಗುಳಿಗೆಗಳು—ಇವುಗಳಿಂದ ತುಂಬಿದ ಭರಣಿಗಳನ್ನೂ, ವೀಳೆಯದೆಲೆಯ ಸಂಬಳಿಗೆಗಳನ್ನೂ ಇಟ್ಟಿರುವ ಬಿದಿರುತಟ್ಟೆಗಳನ್ನು ಹೆಗಲ ಮೇಲೆ ಹೊತ್ತು, ಅಡಿಗಡಿಗೆ ಎಲೆಗಳನ್ನು ಮಡಿಸಿಕೊಡುತ್ತಿರಲು, ತುದಿಯಲ್ಲಿ ಚಿನ್ನದ ಸರಿಗೆ ಗೊಂಡೆಗಳನ್ನೂ, ಮಧ್ಯಗಳಲ್ಲಿ ಭಂಗಾರದ ಕುಸುರಿಗಳನ್ನೂ ಹಾಕಿ ಪೋಣಿಸಿರುವ ರುದ್ರಾಕ್ಷಿ ಮಾಲಿಕೆಗಳನ್ನು ಕೊರಲಲ್ಲಿ ಧರಿಸಿ, ಬಿಳಿಯ ಜೋತ್ರಗಳನ್ನು ಹೊದೆದು, ಕಸ್ತೂರಿರಸವನ್ನು ಮೈಗೆ ತೊಡೆದು, ತಲೆಗಂಟನ್ನು ಹಾಕಿ, ಗಿರಿಕಿಯ ಮೆಟ್ಟುಗಳನ್ನು ಮೆಟ್ಟಿ, ಜಗ್ಗಿ ಹಾಕಿ ನಡೆಯುತ್ತ, ಹಣೆಗೆ ಬಟ್ಟನ್ನಿಟ್ಟು, ಚಿನ್ನದ ತಂತಿಯಲ್ಲಿ ಪೋಣಿಸಿದ ಒಂದೇ ಸರದ ಮುತ್ತಿನ ಹಾರವನ್ನು ಕಂಠದಲ್ಲಿ ಧರಿಸಿ, ಆಣಿಮುತ್ತಿನ ಕಡಕನ್ನು ಕಿವಿಗಳಲ್ಲಿಕ್ಕಿ, ತಮ್ಮ ಮುಖದಮೇಲಿರುವ ದಂತಕ್ಷತ ನಖಕ್ಷತಗಳ ಕಲೆಯನ್ನು ಭಕ್ತರಿಗೆ ತೋರಿಸದೆ ಮುಚ್ಚಿಕೊಳ್ಳುತ್ತ, "ಎಲೊ ಭಕ್ತಾ ಬಾರೋ ಸೂಳೆಗೆ ಹಣವನ್ನು ಕೊಡೊ" ಎನ್ನುತ್ತಲೂ, "ಎಲೋ ಭಕ್ತಾ! ನಿನ್ನ ಮೇಲೆ ಬಸವೇಶನ ಕೃಪೆಯುಂಟಾಗಲಿ" ಎನ್ನುತ್ತಲೂ, "ಎಲೋ! ಕಲಿಯುಗದಲ್ಲಿ ನೀನೇ ಬಸವನು" ಎನ್ನುತ್ತಲೂ ಭಕ್ತರನ್ನು ಹೊಗಳಿ, ಇಟ್ಟ ನಿಧಿಯಿಂದ ತೆಗೆದುಕೊಳ್ಳುವಂತೆ ಆ ಭಕ್ತಸ್ತೋಮದಿಂದ ದುಡ್ಡನ್ನು ಪಡೆಯುತ್ತ, ಸೂಳೆಯರು ಬರುತ್ತಿದ್ದರೆ ಅವರನ್ನು ಕಡೆಗಣ್ಣಿ

ಪರಿಹಾಸವಿಧಾಯಿನಃ || ೬೩ || ಪೃಚ್ಛಂತಸ್ಸಮಯಂತಾಭಿರ್ಗಚ್ಛನ್ತಸ್ಸಹಲೀಲ ಯಾ | ತಾಂಬೂಲಾನಿಪ್ರಯಚ್ಛಂತೋ ವಿಟವೇಷಸಮುಜ್ಜ್ವಲಾಃ ||೬೪|| ಹ್ರೀ ಬೇರನಿಚಯೈರ್ಮಾಲ್ಯೈರ್ಭೂಷಣೈರುನ್ನತೈರ್ನಖೈಃ | ವಿಚಿತ್ರವರ್ಣವಸ್ತ್ರಾಂ ತರ್ಧೃತಲಿಂಗೈರ್ದರಸ್ಮಿತೈಃ || ೬೫ || ಶರೀರದೃಷ್ಟಿದಂತಾಲಿ ಕಾಂತಿಭಿಷ್ಟೋಪ ಶೋಭಿತಾಃ | ಧಿಕ್ಕುರ್ವಂತೋಽನ್ಯಮನುಜಾ ನಸಾಮಾನ್ಯನೃಪಾಇವ ||೬೬|| ಚರಂತಉದ್ದಾಮವೃತ್ತ್ಯಾ ಮದಾಂಧಾಸ್ಸಿಂಧುರಾಇವ | ವೀಕ್ಷ್ಯೇತರಂಪ ದಾಭೂಮಿಂ ಖನಂತೋವೃಷಭಾಇವ || ೬೭ || ನಿರೀಕ್ಷ್ಯಕಾಮುಕಾನನ್ಯಾ ನ್ಕುರ್ವಂತೋಮತ್ಸರಂಭೃಶಂ | ಕಸ್ತೂರೀಮೃಗವನ್ನ್ಯಾಣಾಂ ಕುರ್ವಂತೋದೇ ಹವಾಸನಾಂ ||೬೮|| ಮಹೇಶಭೋಗಾವತಾರಾಇವ ದ್ರವಿಣಹೃತ್ತನೂಃ | ಹರಂತೋಭಕ್ತವರ್ಗಸ್ಯ ಭೂತ್ವಾಪ್ರಾಣೇಶ್ವರಾಸ್ಸದಾ ||೬೯|| ನಿರಂತರಮಹೇ ಶಾವಧಾನತಾತ್ಪರ್ಯಶಾಲಿನಾ | ತತ್ಪ್ರಸಾದಪ್ರತಾನೋಪಭೋಗೇನ ಸಮುದಂ ಚಿತಾಃ ||೭೦|| ಶಸ್ಯೈಶ್ಯಸ್ಯೈಃ ಕೋಟಿಸಂಖ್ಯಾಃ ಪ್ರಯಯುರ್ವಿಟಜಂಗಮಾಃ ||

---

ನಿಂದ ನೋಡಿ ಹೂವುಗಳನ್ನು ಅವರಮೇಲೆಸೆದು ಸರಸವಾಡುತ್ತ, ಅವರನ್ನು ಸಮೀಪಕ್ಕೆ ಕರೆದು ಹಾಸ್ಯಮಾಡುತ್ತಲೂ, ಅವರ ಸಮಯವನ್ನು ಕೇಳಿಕೊಂಡು ಸಂಗಡವೇ ವಿಲಾಸದಿಂದ ಹೋಗುತ್ತಲೂ, ಅವರಿಗೆ ತಾಂಬೂಲವನ್ನು ಕೊಡುತ್ತಲೂ, ವಿಟವೇಷದಿಂಹೊಪ್ಪಿಯೂ ಇರುತ್ತ, ||೬೪|| ಮುಡಿವಾಳ ಮೊದಲಾದುವುಗಳನ್ನು ಹಾಕಿ ಕಟ್ಟಿದ ಹೂವಿನ ಸರವನ್ನು ಮುಡಿದು, ರತ್ನಾಭರಣಗಳನ್ನು ತೊಟ್ಟು, ನಖಕ್ಷತಗಳಿಗಾಗಿ ಉಗುರುಗಳನ್ನು ಬೆಳೆಯಿಸಿಕೊಂಡು, ನಾನಾ ಬಣ್ಣದ ವಸ್ತ್ರಗಳಲ್ಲಿ ಇಷ್ಟಲಿಂಗಗಳನ್ನು ಧರಿಸಿ, ಮುಗುಳ್ನಗೆ ನಗುತ್ತ, ದೇಹ ಕಾಂತಿ ನೇತ್ರಕಾಂತಿ ದಂತಕಾಂತಿಗಳಿಂದ ಪ್ರಕಾಶಮಾನರಾಗಿ, ಅಸಾಧಾರಣ ರಾಜರಂತೆ ಇತರ ಮನುಷ್ಯರನ್ನೆಲ್ಲಾ ಧಿಕ್ಕರಿಸುತ್ತ, ಮದಗಜಗಳಂತೆ ಜಗ್ಗಿ ನಡೆಯುತ್ತ, ಬೇರೊಂದು ಗೂಳಿಯನ್ನು ಕಂಡರೆ ಪಾದದಿಂದ ಭೂಮಿಯನ್ನು ಕೆರೆಯುವ ಬಸವಗಳಂತೆ ಇತರ ವಿಟರನ್ನು ನೋಡಿದರೆ ಮಚ್ಚರಿಸುತ್ತ, ಕಸ್ತೂರೀ ಮೃಗಗಳಂತೆ ತಮ್ಮನ್ನು ಸೋಂಕಿ ಹೋದವರ ದೇಹದಲ್ಲೆಲ್ಲಾ ಪರಿಮಳವನ್ನಂಟಿಸುತ್ತ ||೬೮|| ಇರುವ ವಿಟಜಂಗಮರು, ಪರಶಿವನ ಸೌಖ್ಯವೇ ಹೀಗೆ ಮೂರ್ತೀಭವಿಸಿರುವುವೆಂಬಂತೆ ತೋರುತ್ತ, ಭಕ್ತಸ್ತೋಮದ ತನುಮನೋಧನಗಳನ್ನು ಸೂರೆಗೊಳ್ಳುತ್ತ, ಅವರ ಪ್ರಾಣೇಶ್ವರರುಗಳಾಗಿ ಸದಾ ಪ್ರತಿಯೊಂದಿಂದ್ರಿಯ ಮುಖದಿಂದಲೂ ಉಂಟಾದ ಸುಖಾನುಭವನ್ನೆಲ್ಲಾ ಶಿವಾರ್ಪಿತ ಪ್ರಸಾದರೂಪವಾಗಿ ಅನುಭವಿಸುವ ಅನುಸಂಧಾನದಿಂದ ಕೂಡಿದವರಾಗಿ ಅನೇಕ ಕೋಟಿಸಂಖ್ಯಾಕರಾಗಿ ಶ್ರೀಗಿರಿಗೆ ಹೋಗುತ್ತಿದ್ದರು. ||೭೦||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಪರ್ವತಪ್ರಕರಣೇ ಮಕುಟವರ್ಧನಜಂಗಮೋಭಯಜಂಗಮ
ವೃದ್ಧಜಂಗಮ ವಿಟಜಂಗಮಾನಾಂ ತತ್ಪರ್ವತಂಪ್ರತ್ಯಭಿ
ಗಮನಕಥನಂನಾಮ ಸಪ್ತಮೋಽಧ್ಯಾಯಃ.

---

## ಅಥಾಷ್ಟಮೋಽಧ್ಯಾಯಃ

### ವ್ರತಿಜನ ವಿರಕ್ತಜಂಗಮಾದೀನಾಂ ಶ್ರೀಪರ್ವತಯಾತ್ರಾಕಥನಂ.

ತತಃಪಟ್ಟಪರಿಪ್ರೋತಾಃ ಪಾದ್ಯೈರಾಕ್ರಮ್ಯಪಾದುಕಾಃ | ವಿಧಾಯಪ
ಚನೇನಾವಕುಂಠನಂ ಪುರತಸ್ತತಃ ||೧|| ಜನಾನಾಂವ್ಯಪಥಿಂಕೃತ್ವಾ ಮುಕ್ತ್ವಾ
ಽಧ್ವಾನಂಜದೂರತಃ | ಪುರೋಯಾಯಿಷುಭಕ್ತೇಷು ಪಶ್ಯಂತಸ್ತತ್ಪದೋತ್ಕ
ರಂ ||೨|| ಅಭಕ್ತಾಲೋಕನಾಚ್ಚೈವ ಪದಾರ್ಥಾಂಶ್ಚ ವಿವರ್ಜಯೇತ್ | ಇತಿ
ವಾಕ್ಯಾದ್ಭಾಂಡಚಯಂ ಬಹುರೇಖಾವಿವರ್ಜಿತಂ || ೩ || ನಿಕ್ಷಿಪ್ಯಕಾಚೇಸದ್ವ
ಸ್ತ್ರವೃತೇ ಸಜ್ಜೀಕೃತಾಶ್ಯುಭಾಃ | ಧೃತ್ವಾವಿಹಂಗಿಕಾಃ ಪ್ರೇಷ್ಯನಿವಹೇಸಹಗಚ್ಛ

---

ಎಂಬಲ್ಲಿಗೆ ಪರ್ವತಪ್ರಕರಣದಲ್ಲಿ ಶ್ರೀ ಶೈಲಕ್ಕೆ ಮಕುಟವರ್ಧನಜಂಗಮರೂ ವೃದ್ಧಜಂಗಮರೂ
ಹೋಗುತ್ತಿದ್ದುದನ್ನು ವರ್ಣಿಸುವ ೭ನೆ ಅಧ್ಯಾಯವು ಮುಗಿದುದು.

---

## ೮ನೆ ಅಧ್ಯಾಯವು.

### ಶ್ರೀಗಿರಿಗೆ ಶೀಲಸಂಪನ್ನರೂ ವಿರಕ್ತಜಂಗಮಾದಿಗಳೂ ಬಂದ ಕಥೆ

ಇನ್ನು ಕೆಲ ಶ್ರೀಮಂತ ಭಕ್ತರುಗಳು ಹೋಗುತ್ತಿದ್ದರು. ಅವರ ಪರಿ ಹೇಗೆಂದರೆ—ನೂ
ಲಿನ ಪಟ್ಟೆಗಳನ್ನು ಪೋಣಿಸಿ ಕಟ್ಟಿದ ಮರದ ಕಾಲ್ಗೊರಡುಗಳನ್ನು ಮೆಟ್ಟಿ, ಮೇಲ್ಮುಸುಕ
ನ್ನು ಹೊದೆದು, ಭವಿಜನರು ಸೋಂಕದಂತೆ ಸುತ್ತಲೂ ಭಕ್ತಜನರ ಗುಂಪು ಗೇರೈಸಿ ಬರುವಂತೆ
ಮಾಡಿಕೊಂಡು, ಮಾರ್ಗದಲ್ಲಿ ಜನಸಂಮರ್ದವನ್ನು ಬಿಟ್ಟು ದೂರದಲ್ಲಿ ಹೋಗುತ್ತಿರಲು, ಅವರ
ಸೇವಕರುಗಳು ಮುಂದೆ ಹೋಗುತ್ತಿರುವ ಭಕ್ತರ ಪಾದವನ್ನೇ ನೋಡಿಕೊಂಡು "ಭವಿಗಳು
ನೋಡಿದ ಪದಾರ್ಥಗಳನ್ನು ಬಿಟ್ಟುಬಿಡಬೇಕು" ಎಂದು ಶಿವಾಗಮವಚನವಿರುವುದರಿಂದ, ಗೆ
ರುಗಳನ್ನು ಎಳೆಯದೆ ಇರುವ ನುಣುಪಾಗಿರುವ ಭಾಂಡಗಳನ್ನು ಕಾವಡಿಯ ನಿಲುವುಗಳಲ್ಲಿ
ಸೇರಿಸಿ, ಮೇಲೆ ಬಟ್ಟೆಯನ್ನು ಹೊದ್ದಿಸಿ, ಕಾವಡಿಯ ಅಡ್ಡಮರವನ್ನು ಹೆಗಲಮೇಲೆ ಹೊತ್ತು

ತಿ ॥೪॥ ಸಸ್ಯಕ್ಷಲಕನಿರ್ವ್ಯಸ್ತ ಪದಾರ್ಥಸ್ಯೂತಸಂಚಯೈಃ । ನೀರಾಜನಾ
ರಂಗವಲ್ಲೀಶಿಕ್ಷ ಗುಗ್ಗುಲುಭಸ್ಮನಾಂ ॥೫॥ ಲಸತ್ಪಸೇವೈಸ್ಸಲಿಲಶೋಧನಾ
ರ್ಥಾಂಶುಕವ್ರಜೈಃ । ವಂಶಪಾತ್ರಕುಲೈರ್ಥನ್ಯೈ ರಾದ್ರ್ರತಾವಮಾರ್ಜಕಾಂ
ಶುಕೈಃ ॥೬॥ ಅಯೋಮಯಶಲಾಕಾಭಿ ರ್ಧಮನೀನಿಕರೈರಪಿ । ಭಾಂಡಾಧಾ
ರೈರ್ವೈಣವಾದ್ಯೈ ಶ್ಶಿಕ್ಯೈಃ ಕಾಂಡಪಟ್ಯೈಸ್ತಥಾ ॥೭॥ ವಿತಾನವಸ್ತ್ರನಿಕರೈರ್ನಖ
ರಂಜನಿಕಾದಿಭಿಃ । ಸಾವಧಾನಂ ಸಂಚಿತೋಪಕರಣೈಃ ಪರಿಪೂರಿತಾಃ ॥೮॥
ಗೋಣೀರ್ವಹತ್ಸುಗಚ್ಛತ್ಸು ಬಲೀವರ್ದೇಷುಚಾಗ್ರತಃ । ಸಂವಹಂತೋಯೋ
ಗದಂಡಾ ನಯೋವಲಯವರ್ಜಿತಾನ್ ॥೯॥ ಸತ್ಯಭಾಷಾ ಭಕ್ತಿಭಾಷ್ಯಾ ವ್ರತ
ವೇಷ ವಿಭೂಷಣಾಃ । ಪ್ರಾಣೇಶ್ವರಂ ಪ್ರಪಶ್ಯಂತಿ ನಪಶ್ಯಂತಿ ಜಗತ್ಸದಾ ॥
ಆತ್ಮೇಶ್ವರಂ ಚಿನ್ತಯನ್ತಿ ಚಿನ್ತಯನ್ತೀಹನೇತರತ್ । ವಿನಾಪಂಚಾಕ್ಷರೀಮಂ
ತ್ರ ಮಿತರನ್ನಸ್ಮರಂತಿಹ ॥೧೦॥ ಮಹೇಶ್ವರಂಸಂಸ್ಮರಂತಿ ಸಂಸ್ಮರಂತಿ ನಚೇತ
ರಂ । ಪ್ರೀಣಂತಿಭಕ್ತ್ಯಾ ಸತತಂ ನಪ್ರೀಣಂತ್ಯನ್ಯವಸ್ತುನಾ ॥೧೧॥ ವದಂತಿಸ
ತ್ಯಂವಚನಂ ನಹ್ಯಸತ್ಯಂಕದಾಚನ । ಬಿಭ್ಯತೀಶ್ವರಭಕ್ತೇಭ್ಯೋ ನೇತರೇಭ್ಯೋ
ಜಗತ್ತ್ರಯೇ ॥೧೨॥ ಯಾಚಂತೇ ಶಿವಸದ್ಭಕ್ತಾನ್ನ ಜಾತುಭವಿನೋಜನಾನ್ ।
ಆಚಾರಏವವರ್ತಂತೇ ನಹ್ಯನಾಚಾರವರ್ತ್ಮನಿ ॥೧೩॥ ಪ್ರಸಾದಂಭುಂಜತೇಶಂ

---

ಒಡನೆ ಬರುತ್ತಿರಲು ॥೪॥ ನಾನಾ ಧಾನ್ಯಾದಿಗಳನ್ನು ತುಂಬಿದ ಚೀಲಗಳು, ಆರತಿಯ ತಟ್ಟೆಗ
ಳು, ರಂಗವಲ್ಲಿಯ ಪುಡಿ, ಗುಗ್ಗುಳ, ಭಸ್ಮ ಇವುಗಳನ್ನು ತುಂಬಿದ ಬಿದಿರ ಬಬ್ಬಲುಗಳು, ನೀ
ರನ್ನು ಶೋಧಿಸುವ ನೀರನ್ನೊತ್ತುವ ಬಟ್ಟೆಗಳು, ಬಿದಿರ ಕುಕ್ಕೆಗಳು, ಕಬ್ಬಿಣದ ಸಲಾಕಿಗಳು,
ಊದುಗೊಳವೆಗಳು, ಬಿದಿರಿನ ಸಿಂಬಿಗಳು, ಕರೆ ಹಚ್ಚಡಗಳು, ಮೇಲ್ಕಟ್ಟುಗಳು, ಚೂರಿಗಳು—
ಈ ಸಾಮಗ್ರಿಗಳನ್ನೆಲ್ಲಾ ತುಂಬಿದ ಗೋಣಿಗಳನ್ನು ಹೊತ್ತ ಬಸವಗಳು ಮುಂಗಡೆಯಲ್ಲಿ ಹೋ
ಗುತ್ತಿರಲು, ॥೮॥ ಕಬ್ಬಿಣದ ಕಟ್ಟುಗಳನ್ನು ಹಾಕದಿರುವ ಯೋಗದಂಡಗಳನ್ನು ಹೆಗಲಮೇ
ಲಿಟ್ಟು, ಸತ್ಯವಚನ ಶಿವಭಕ್ತಿಗಳೇ ತಮ್ಮ ವ್ರತವಾಗಿಯೂ ವೇಷವಾಗಿಯೂ ಅಲಂಕಾರವಾಗಿ
ಯೂ ಇರುತ್ತ, ಸದಾ ಪ್ರಾಣಲಿಂಗದ ಹೊರತು ಇನ್ನಾವ ಜಗತ್ತನ್ನೂ ನೋಡದವರು, ಪ್ರಾ
ಣೇಶ್ವರನಾದ ಮಹೇಶನ ಹೊರತು ಮತ್ತಾವ ವಸ್ತುವನ್ನೂ ನೆನೆಯದವರು, ಪಂಚಾಕ್ಷರೀ
ಮಂತ್ರದ ಹೊರತು ಇನ್ನಾವ ಮಂತ್ರವನ್ನೂ ಸ್ಮರಿಸದವರು, ಶಿವನ ಹೊರತು ಅನ್ಯದೈವವನ್ನು
ಧ್ಯಾನಿಸದವರು, ಭಕ್ತಿಯ ಹೊರತು ಇನ್ನಾವುದರಿಂದಲೂ ಆನಂದಿಸದವರು ॥೧೦॥ ಸತ್ಯದ
ಹೊರತು ಅನೃತವನ್ನಾಡದವರು, ಭಕ್ತರ ಹೊರತು ಇತರರಿಗೆ ಹೆದರದವರು, ಭಕ್ತರ ಹೊರತು
ಇತರ ಭವಿಗಳನ್ನು ಬೇಡದವರು, ಶಿವಾಚಾರದ ಹೊರತು ಇತರ ದುರಾಚಾರ ಮಾರ್ಗದಲ್ಲಿ ನಡೆ
ಯದವರು, ಶಿವಪ್ರಸಾದದ ಹೊರತು ಅನರ್ಪಿತವಾದ ಪದಾರ್ಥವನ್ನು ಯಾವಾಗಲೂ ಸೇವಿಸದ

ಭೋರ್ನಕದಾಚಿದನರ್ಪಿತಂ| ಶೃಣ್ವಂತಿ ಕೀರ್ತಿಂ ಭಕ್ತಾನಾ ಮನ್ಯೇಷಾಂ ನಕ
ದಾಚನ ||೧೫|| ಇತಿಸ್ತುವತ್ಸು ಸರ್ವೇಷು ಸಜ್ಜನೇಷು ಸಮಂತತಃ | ಆವ್ನಾ
ಯಸಂಮತಾಚಾರಸಂಪತ್ತ್ಯಾ ಭುವಿಸಂತತಂ ||೧೬|| ಶಿವಭಕ್ತ್ಯಾ ದಾಸಭಾವ
ನಿಯತ್ಯಾ ಪರಿರಂಜಿತಾಃ | ಶಿವಭಕ್ತಾಶ್ಶೀಲವಂತಃ ಪ್ರಯಯುಃ ಪರಿಹರ್ಷಿತಾಃ||
ಸಮಸ್ತಾಂಗೇಷು ಪರಮಶಾಂತತ್ವಭಸಿತಂಮುದಾ | ಆಲಿಪ್ಯಬದ್ಧ್ವಾ ಶಬ್ದಾದಿ
ರೋಧಕೌಪೀನಸಂಹತಿಂ ||೧೮|| ಪಂಚಾಕ್ಷರೀಂ ಪರಹಿತಾಲಾಪಾಕ್ಷರಜಯಾ
ತ್ಮಿಕಾಂ | ಪ್ರಜಪಂತಃಪ್ರಯತ್ನೇನ ಮಹಾಪ್ರೀತಿಸಮನ್ವಿತಾಃ || ೧೯ || ಅನ್ತ
ರ್ಮುಖೇನ್ದ್ರಿಯಗ್ರಾಮ ಯೋಗದಂಡಾನ್ಸಮಂಚಿತಾನ್ | ನಿತ್ಯಂಮನಸ್ಸಮಾ
ಧಾಯ ನಿಯತಿಂ ಯೋಗಪಟ್ಟಿಕಾಂ ||೨೦|| ಲಸತ್ಪರಮಸಂತುಷ್ಟ ಚಾರಿತ್ರಶಿ
ರವೇಷ್ಟನಂ | ಪರಸ್ವಸಮಯೋತ್ಸಾಹಕಥಾಕರ್ಪಾಸಕಂ ಪುನಃ ||೨೧|| ಧೃ
ತ್ವಾಽಶಿನೀರಸಾಂಭಿಕ್ಷಾಂ ಹರಾಯಾಕಾಮಿತಾಮೃತಂ| ಅರ್ಪಯಿತ್ವೋಪಭುಂ
ಜಾನಾಸ್ಸ್ವಯಂಚಾಧಿಕಭಕ್ತಿತಃ ||೨೨|| ಯಮಾದಿಕವ್ರತಾರೂಢ ಲಸಚ್ಛಮದ
ಮಾನ್ವಿತಾಃ | ಅಚಂಚಲಪರಾನಂದಾ ಮಹಿತಾಚಾರವರ್ತನಾಃ ||೨೩|| ಸಂ
ತುಷ್ಟೈಸ್ಸಜ್ಜನವ್ರಾತೈಸ್ಸಾಶ್ಚರ್ಯಂ ಪರಿಕೀರ್ತಿತಾಃ | ತನುಧರ್ಮಾನ್ಸಮುಚ್ಛೇ

---

ವರು, ಭಕ್ತರ ಕೀರ್ತಿಯ ಹೊರತು ಇತರರ ಕೀರ್ತಿಯನ್ನು ಎಂದಿಗೂ ಕೇಳದವರು. ||೧೫||
ಎಂಬುದಾಗಿ ತಮ್ಮನ್ನು ಸಕಲ ಸಜ್ಜನರೂ ಹೊಗಳುತ್ತಿರಲು, ವೇದಸಂಮತವಾದ ಸದಾಚಾರ
ಸಂಪತ್ತಿನಿಂದ ಕೂಡಿ, ದಾಸೋಹಂಭಾವದಿಂದ ಶಿವಭಕ್ತಿವ್ರತವನ್ನಾಚರಿಸುತ್ತಿರುವ ಶೀಲವಂತ
ರಾದ ಭಕ್ತೋತ್ತಮರು ಸಂತೋಷದಿಂದ ಹೋಗುತ್ತಿದ್ದರು. ||೧೬|| ಮತ್ತು ವಿರಕ್ತಜಂಗಮರ
ಗುಂಪು ಬೇರೆ ಹೋಗುತ್ತಿದ್ದಿತು. ಅವರ ರೀತಿ ಹೇಗಿದ್ದಿತೆಂದರೆ— ಶಾಂತಿಯೆಂಬ ಭಸ್ಮವನ್ನು
ಸರ್ವಾಂಗದಲ್ಲೂ ಲೇಪಿಸಿಕೊಂಡು, ಶಬ್ದಾದಿ ವಿಷಯ ನಿರೋಧವೆಂಬ ಕೌಪೀನವನ್ನು ಕಟ್ಟಿ,
ಅನ್ಯರಿಗೆ ಹಿತಕರವಾದ ಮಾತುಗಳನ್ನಾಡುವುದೆಂಬ ಪಂಚಾಕ್ಷರ ಮಂತ್ರವನ್ನು ಪ್ರೀತಿಯಿಂದ
ಜಪಿಸುತ್ತ, ಅಂತರ್ಮುಖಗಳಾದ ಇಂದ್ರಿಯವ್ಯಾಪಾರಗಳೆಂಬ ಯೋಗದಂಡಗಳನ್ನೂ, ಅಚಂ
ಚಲ ಚಿತ್ತೈಕಾಗ್ರತೆಯೆಂಬ ಯೋಗವಟ್ಟೆಯನ್ನೂ, ಸದಾ ಸಂತುಷ್ಟವಾದ ನಡತೆಯಿಂದಿರುವಿಕೆ
ಯೆಂಬ ಶಿರೋವೇಷ್ಟನವನ್ನೂ, ತಂತಮ್ಮ ಸಮಯಕ್ಕೆ ಸಂಬಂಧಪಟ್ಟ ಕಥೆಯ ಶ್ರವಣವೆಂಬ
ಅಂಗಿಯನ್ನೂ ಧರಿಸಿ ||೨೧|| ನಿರಾಶೆಯೆಂಬ ಭಿಕ್ಷೆಯನ್ನಾಚರಿಸಿ, ನಿಷ್ಕಾಮವೆಂಬ ಅಮೃತ
ವನ್ನು ಪರಶಿವನಿಗೆ ಅರ್ಪಿಸಿ, ತತ್ಪ್ರಸಾದವನ್ನು ಭಕ್ತಿಯಿಂದ ತಾವು ಸೇವಿಸುತ್ತ, ಯಮನಿಯ
ಮ ಶಾಂತಿದಾಂತಿಗಳಿಂದ ಕೂಡಿ, ನಿಶ್ಚಲ ಪರಮಾನಂದ ಮಗ್ನರಾಗಿ, ಸದಾಚಾರ ಧುರೀಣ
ರಾಗಿ, ತಮ್ಮ ವರ್ತನೆಗಳನ್ನು ನೋಡಿ ಸಂತೋಷಪಟ್ಟ ಸಜ್ಜನರಿಂದ ಹೊಗಳಿಸಿಕೊಳ್ಳುತ್ತ,
ದೇಹಗುಣವನ್ನು ತ್ಯರಿಸಲಿಕ್ಕೂ, ತಪಸ್ಸನ್ನು ವೃದ್ಧಿಗೊಳಿಸಲಿಕ್ಕೂ, ಮನಸ್ಸನ್ನು ವಿಮಲಗೊಳಿಸ

ತ್ತ್ರಂ ಪರಿವರ್ಧಯಿತುಂತಪಃ ||೨೪|| ಮನಾಂಸಿವಿಮಲೀಕರ್ತುಂ ಸಂಹರ್ತುಂ ಮದಸಂಹತಿಂ | ಕೋಪಂಶಮಯಿತುಂತೂರ್ಣಂ ಪಾಪಂನಾಶಯಿತುಂಪುನಃ || ಮನೋರಥಾನ್ನಿರಸಿತುಂ ಭಕ್ತಿಂಸ್ಥಾಪಯಿತುಂಪರಾಂ | ದಾತುಂಮುಕ್ತಿಂಚಪ ಠಮಾಂ ಸಮರ್ಥಂ ಕಾರಣಂಮಹತ್ ||೨೬|| ಲಿಂಗಾರ್ಚನಾನುಷಕ್ತಿಂ ಸಜ್ಜಂ ಗಮಾಸಕ್ತಿಮುತ್ತಮಾಂ | ಅತ್ಯಂತಹೇಯಸಂಸಾರಾನನುರಕ್ತಿಂಚ ಸಂತತಂ || ಲಿಂಗಾನರ್ಪಿತವಸ್ತ್ವೇಷುವಿರಕ್ತಿಂ ಪ್ರಾಣರೂಪತಾಂ | ಕುರ್ವತಸ್ಸ್ವಸ್ಯಮು ದ್ವೀಕ್ಷ್ಯಭಕ್ತೇಷು ಪರಿಶಂಸಿಷು || ೨೮ || ವಿರಕ್ತಜಂಗಮವ್ರಾತಾ ಜಗ್ಮುರಾ ಸಂದನಿರ್ಭರಾಃ | ಹಲತೋರಣಮತ್ಸ್ಯಾಬ್ಜ ಕಲಶಚ್ಛತ್ರಚಿಹ್ನಿತಾಃ ||೨೯|| ಪಾ ದಾಃ ಕರಾ ನೇತ್ರಪದ್ಮರುಚಶ್ಚಾರುತರಾಭುಜಾಃ|ಪ್ರಿಯಾನ್ವಿತಮಿತಾಲಾಪಾಲಸ ದುನ್ನತನಾಸಿಕಾಃ || ೩೦ || ಸಸ್ಮಿತಾನನಪದ್ಮಾನಿ ವಿಶಾಲೋರಸ್ಥಲಾನ್ಯಪಿ | ಶ್ರೀಕಾರಶೋಭಿನೌಕರ್ಣೌ ಸರಸಾಂಗಕಲಾಶ್ಯಭಾಃ ||೩೧|| ಆಜಾನುಬಾಹ ವಃ ಪೀನಾನಿತಂಬಾಸ್ಸತತಂಭುವಿ | ಕೃತಿನಾಂಭೂಮಿಪಾಲಾನಾಂ ಪ್ರಶಸ್ತಶಿವ ಯೋಗಿನಾಂ ||೩೨|| ಸದ್ಭಕ್ತಾನಾಂಚಶೋಭಂತೇ ತೈರೇತೈಶ್ಶುಭಲಕ್ಷಣೈಃ | ಪರಿಲಕ್ಷಿತದಿವ್ಯಾಂಗಾ ಮಲಿನಾಮುಕುರಾಇವ || ೩೩ || ಬಲಾಹಕಪರಿಚ್ಛನ್ನ ಮೃಗಲಾಂಛನಬಿಂಬವತ್ | ಪ್ರದಗ್ಧಾಅಪ್ಯನುನ್ಮತ್ತರೂಪಾರಜ್ಜುಚಯಾಇವ || ಲಕ್ಷ್ಯಮಾಣಾನಪಿಜನೈಸ್ಸ್ವಭಾವಗುಣವರ್ಜಿತಾನ್ | ಧೃತ್ವಾದೇಹಾನ್ಸ್ವರ್ಜ

---

ಲಿಕ್ಕೂ, ಮದವನ್ನಳಿಸಲಿಕ್ಕೂ, ಕೋಪವನ್ನು ಅಣಗಿಸಲಿಕ್ಕೂ. ಪಾಪವನ್ನು ಹಿಂಸಲಿಕ್ಕೂ, ಕಾಮುವನ್ನು ದೂರೀಕರಿಸಲಿಕ್ಕೂ, ಶಿವಭಕ್ತಿಯನ್ನು ನೆಲೆಗೊಳಿಸಲಿಕ್ಕೂ, ಮುಕ್ತಿಯನ್ನೀಯುವ ದಕ್ಕೂ ಯಾವುದು ಅತ್ಯಂತ ಸಮರ್ಥವಾದ ಕಾರಣವಾಗಿರುವುದೋ ಅಂಥ ಶಿವಾರ್ಚನಾಸಕ್ತಿ ಯನ್ನೂ, ಜಂಗಮಭಕ್ತಿಯನ್ನೂ, ಸಂಸಾರದಲ್ಲಿ ಹೇಯತೆಯನ್ನೂ, ಶಿವಾನರ್ಪಿತವಸ್ತುಗಳಲ್ಲಿ ವೈರಾಗ್ಯವನ್ನೂ ಸಹ ತನ್ನ ಪ್ರಾಣವನ್ನಾಗಿ ತಿಳಿದು ಆಚರಿಸುತ್ತಿರುವ ವಿರಕ್ತ ಜಂಗಮರ ಸಮೂಹವು, ತನ್ನನ್ನು ಭಕ್ತಸಮೂಹವು ನೋಡಿ ಹೊಗಳುತ್ತಿರಲಾಗಿ ಸಂತೋಷದಿಂದ ಸಾ ಗುತ್ತಿದ್ದಿತು. ||೨೮|| ಇನ್ನು ಶಿವಯೋಗಿಗಳ ಸಮೂಹವು ಹೇಗೆ ಹೋಗುತ್ತಿದ್ದಿತೆಂದರೆ— ತಮ್ಮ ಹಸ್ತಪಾದಗಳಲ್ಲಿ ನೇಗಿಲು ತೋರಣ ಮೀನು ಕಮಲ ಕಲಶ ಕೊಡೆ ಇವುಗಳ ರೇಖೆಗ ಳೂ, ಕಮಲದಳದಂತಿರುವ ಕಣ್ಣುಗಳೂ, ಮನೋಹರಗಳಾದ ಭುಜಗಳೂ, ಹಿತಮಿತಾಲಾಪ ಗಳೂ, ಎಸಳಾದ ಮೂಗೂ, ಮುಗುಳ್ನಗೆಯಿಂದ ಕೂಡಿದ ಮುಖವೂ, ಅಗಲವಾದ ಎದೆಯೂ, ಶ್ರೀಕಾರದಂತೆ ತೋರುತ್ತಿರುವ ಕಿವಿಗಳೂ, ಮಿರುಗುವ ದೇಹಕಾಂತಿಯೂ, ಮೊಣಕಾಲಿನವ ರೆಗೆ ಉದ್ದವಾದ ತೋಳುಗಳೂ, ದಪ್ಪವಾದ ಕಟಿಪಶ್ಚಾದ್ಭಾಗಗಳೂ— ಈ ಶುಭ ಲಕ್ಷಣಗಳು ಭೂಮಿಯಲ್ಲಿ ವಿದ್ವಾಂಸರು, ರಾಜರು, ಮಹಾ ಶಿವಯೋಗಿಗಳು, ಭಕ್ತೋತ್ತಮರು— ಇಂಥವ

ಯಿತ್ವಾಕಂಥಾಃ ಖಂಡಶಶಾವೃತಾಃ ॥ ೩೫ ॥ ಪ್ರೀತ್ಯಾ ಸಮಂಗೀಕೃತಾಂಖಡ ಖಂಡಿತದಿಗಂಬರಾಃ । ಪ್ರಾದೇಶಿಕತ್ವಮುಸ್ಮೃಜ್ಯ ನಿತ್ಯೇಕಗ್ರಾಮವಾಸಿನಃ ॥ ಭಿಕ್ಷಾಸ್ತ್ತುಯಾಚಿತಾಸ್ತ್ಯಕ್ತ್ವಾ ನಿರಾಕುಲಿತಮಾನಸಾಃ । ಅಯಾಚಿತಾಕಾನು ಕೃತಾಹಾರಾಸ್ಸಂತೋಽನಿರಂತರಂ ॥೩೭॥ ಮುಕ್ತ್ವಾ ಬಹುಜನೋಪಾಸ್ಯ ಪ್ರಪಂಚಂ ಸಮುದಂಚಿತಂ । ಸಮುನ್ನತಗಣೋಪಾಸ್ಯಭಾವೇ ಸಪರಿಶೋಭಿತಾಃ ॥ ಸಂತ್ಯಜ್ಯ ಬಹುಲೋಕಾಂತಗೋಷ್ಠೀರಾನಂದನಿರ್ಭರಾಃ । ಅಂಗೀಕೃತಸದೇಕಾಂತಗೋಷ್ಠೀವಿಲಸಿತಾ ಸ್ಸದಾ ॥೩೯॥ ವಪನಾನಿಶಿಖಾಸ್ತ್ಯಕ್ತ್ವಾ ಮುಕ್ತಕೇಶಶಿರೋಧರಾಃ । ಅಕಾಮ್ಯಕಾಮ್ಯನಿಕರೈರ್ವಿಮುಕ್ತತ್ವಾನ್ನಿರಂತರಂ ॥೪೦॥ ಸಮೃದ್ಧತರವೈರಾಗ್ಯಸಂಸಾರಾಭ್ಯಾಂ ವಿವರ್ಜಿತಾಃ । ಶಶ್ವದ್ವಿಧಿನಿಷೇಧಾಂಕ ಕ್ರಿಯಾಣಾಂ ಪರಿವರ್ಜನಾತ್ ॥೪೧॥ ಅಭ್ಯಸ್ತೋಭಯಕರ್ಮೌಘ ಪರಿತ್ಯಾಗ ವಿರಾಜಿತಾಃ । ದೃಷ್ಟಾದೃಷ್ಟಫಲಾಕಾಂಕ್ಷಾನಿರ್ಮುಕ್ತತ್ವಾದಹರ್ನಿಶಂ ॥೪೨॥ ಸ್ವರ್ಗಾದ್ಯಶೇಷಮಹಿತ ಲೋಕಾತೀತಾಃ ಪರಿಸ್ಫುಟಂ । ಹಠಯೋಗಲಸದ್ರಾಜ

---

ರುಗಳಲ್ಲಿ ಒಪ್ಪುತ್ತಿರುವುವೆಂದು ಹೇಳಲ್ಪಟ್ಟಿರುವಪ್ರಕಾರ, ಈ ಶಿವಯೋಗಿಗಳಲ್ಲಿ ಅಂಥ ಲಕ್ಷಣಗಳೆಲ್ಲಾ ಕೂಡಿದ್ದುವು. ಆದರೂ ಧೂಳಿತುಂಬಿ ಮಸಕಾದ ಕನ್ನಡಿಗಳಂತೆಯೂ, ಮೋಡ ಮುಚ್ಚಿದ ಚಂದ್ರಮಂಡಲದಂತೆಯೂ ಅವರುಗಳು ಒಪ್ಪಿದ್ದರು. ಸುಟ್ಟಿದ್ದರೂ ತನ್ನ ಆಕಾರವನ್ನು ಬಿಡದಿರುವ ಹಗ್ಗಗಳಂತೆ, ಜನರ ಕಣ್ಣಿಗೆ ಆಕಾರವು ಕಾಣಿಸುತ್ತಿದ್ದರೂ ಸ್ವಭಾವಗುಣಗಳೊಂದೂ ಇಲ್ಲದಿರುವ ದೇಹಗಳನ್ನು ಇವರುಗಳು ಧರಿಸಿದ್ದರು. ನೂರಾರು ಹರಕುಗಳುಳ್ಳ ಕಂತೆಯನ್ನು ಹೊದೆಯುವ ಹಂಬಲನ್ನೇ ಬಿಟ್ಟು ಅಖಂಡ ದಿಗಂಬರರಾಗಿದ್ದರು. ನಿಯತವಾಗಿ ಒಂದು ಸ್ಥಲದಲ್ಲಿರುವುದನ್ನು ಬಿಟ್ಟು ದಿನಕ್ಕೊಂದು ಗ್ರಾಮದಲ್ಲಿ ವಾಸಿಸುವವರಾಗಿದ್ದರು. ॥೩೬॥ ಭಿಕ್ಷೆ ಬೇಡಿ ತರುವ ಚಿಂತೆಯನ್ನೇ ಬಿಟ್ಟು, ಬಯಸದೆ ಬೇಡದೆ ಬಂದ ಆಹಾರವನ್ನು ಸೇವಿಸುವವರಾಗಿದ್ದರು.॥೩೭॥ ಪ್ರಾಪಂಚಿಕ ವ್ಯವಹಾರವನ್ನು ಬಿಟ್ಟು, ಉನ್ನತ ಶಿವಗಣದ ನಡೆಯನ್ನು ಹಿಡಿದಿದ್ದರು. ಲೌಕಿಕರ ಬಹಿರಂಗ ಗೋಷ್ಠಿಗಳನ್ನು ಬಿಟ್ಟು ಸದಾನಂದಭರಿತರಾಗಿ ಏಕಾಂತಗೋಷ್ಠಿಯಲ್ಲಿ ತತ್ಪರರಾಗಿದ್ದರು. ಒಟ್ಟಿಗೆ ಬೋಳಿಸುವುದು ಜುಟ್ಟನ್ನು ಮಾತ್ರ ಬಿಡಿಸುವುದು ಎಂಬ ಸಂಕಲ್ಪಗಳಿಲ್ಲದೆ ಕೇಶಗಳನ್ನೆಲ್ಲಾ ಒಟ್ಟಿಗೆ ಬೆಳೆಯಿಸಿಕೊಂಡಿದ್ದರು. ಕಾಮ್ಯಾಕಾಮ್ಯಗಳೆರಡರ ಸಂಬಂಧವೂ ಇಲ್ಲದವರಾಗಿದ್ದ ಕಾರಣ ಸಂಸಾರ ವೈರಾಗ್ಯವೆಂಬ ಇವೆರಡೂ ಇಲ್ಲದವರಾಗಿದ್ದರು. ॥ ೪೦ ॥ ವಿಧಿನಿಷೇಧಗಳೊಳಪಟ್ಟ ಕರ್ಮಗಳೊಂದರ ಸಂಬಂಧವೂ ಇಲ್ಲದವರಾದಕಾರಣ, ಆ ಕರ್ಮಫಲ ಬಂಧಕ್ಕೇ ದೂರರಾಗಿದ್ದರು. ಪ್ರತ್ಯಕ್ಷ ಪರೋಕ್ಷ ಫಲಗಳೆರಡರ ಆಸೆಯೂ ಅವರಿಗಿರಲಿಲ್ಲವಾದಕಾರಣ ಸ್ವರ್ಗವೇ ಮೊದಲಾದ ಪರಲೋಕ ಪದವಿಗಳೆಲ್ಲವನ್ನೂ ಮೀರಿದವರಾಗಿದ್ದರು ಹಠಯೋಗ, ರಾಜಯೋಗವೆಂಬುದೇ ಮೊದಲಾದ ಭ್ರಾಂತಿ ಬದ್ಧ ಪಕು

ಯೋಗಾದಿಭ್ರಾಂತಿಜಾಲಕೈಃ ||೪೩|| ಸಮಿದ್ಧಪಶುಯೋಗಾಖ್ಯಬಂಧಸ್ಯ ಪರಿವರ್ಜನಾತ್ | ಪರಮಾನಂದಜನಕ ಶಿವಯೋಗಪರಾಯಣಾಃ ||೪೪|| ಆತ್ಮಾ ಸಮಿತರಂ ನಿಂದಾಸ್ತುತೀ ನಗರಕಾನನೇ | ಮಾನಾಪಮಾನೇ ಶೀತೋಷ್ಣೇ ಮಿತ್ರಾಮಿತ್ರೌ ವಿಷಾಮೃತೇ ||೪೫|| ಮಾತೃಸ್ತ್ರೀವನಿತೇ ರಾಗವಿರಾಗೌ ಮಂಚಭೂತಲೇ | ಸುಖದುಃಖೇ ಹೇಮಲೋಷ್ಟೇ ವಿಭಾವ್ಯ ಸಮಮಾತ್ಮನಿ ||೪೬|| ನಿರ್ದ್ವಂದ್ವಸ್ಥಿತಿಸಂಸಾರರಾಹಿತ್ಯಸಮುಪಾಗತಾತ್ | ಶಿವಯೋಗಸುಖಾವೇಶಾತ್ಸರ್ವಾಂಗೇ ಲಿಂಗಸಂಯುತೇ ||೪೭|| ತಲ್ಲಿಂಗಯೋಗಾತ್ಪ್ರಾಣೇಷು ಲಿಂಗಯುಕ್ತೇಷ್ವನಂತರಂ | ತತ್ಪ್ರಾಣಲಿಂಗಸಂಸಕ್ತ್ಯಾ ಲಿಂಗಯುಕ್ತೇ ಮನಸ್ಯಥ ||೪೮|| ತನ್ಮನೋಲಿಂಗಸಕ್ತ್ಯಾಸ್ಯ ದೃಷ್ಟಯೋ ಲಿಂಗಸಂಯುತಾಃ | ತದ್ದೃಷ್ಟಿಷು ಸಲಿಂಗಾಸು ಮನಸ್ಸರ್ವೇನ್ದ್ರಿಯಾಣಿ ಚ ||೪೯|| ಭವಂತಿ ಲಿಂಗಲೀಲಾನಿ ಪ್ರಸರಂ ತಿನ ಚಾನ್ಯತಃ | ಸರ್ವೇಂದ್ರಿಯಾಣಾಂ ನಯನಂ ಪ್ರಧಾನಮಿತಿ ಯುಕ್ತಿತಃ ||೫೦ ಪ್ರಾಣಲಿಂಗೇ ದೇಹಧರ್ಮಾ ಲೀನಾಸ್ಸ್ಯುಸ್ತೇಽಖಿಲಾಸ್ತತಃ | ತನುಧರ್ಮನಿರಾಸಸ್ಯ ಹೇತವೋ ಲಿಂಗದೃಷ್ಟಯಃ ||೫೧|| ಲಭ್ಯತೇ ಶಿವಸದ್ಭಕ್ತಿಸ್ತನುಧರ್ಮನಿರಾ

---

ಯೋಗಗಳ ಬಂಧವನ್ನು ಬಿಟ್ಟು ಅವೆಲ್ಲಕ್ಕೂ ಮಿಾರಿದ ಶಿವಯೋಗದಲ್ಲಿ ತತ್ಪರರಾಗಿದ್ದರು. ಕಾನು ಅನ್ಯ, ಸ್ತುತಿ ನಿಂದೆ, ಊರು ಕಾಡು, ಮಾನ ಅವಮಾನ, ಶೀತ ಉಷ್ಣ, ಮಿತ್ರ ಶತ್ರು, ವಿಷ ಅಮೃತ, ತಾಯಿ ಪರಸ್ತ್ರೀ, ಪ್ರೀತಿ ಮಚ್ಚರ, ಮಂಚ ಭೂಮಿ, ಸುಖ ದುಃಖ, ಚಿನ್ನ ಮಣ್ಣು, ಎಂಬ ದ್ವಂದ್ವಜ್ಞಾನವೇ ಇಲ್ಲದೆ ಸಮವಾಗಿಯೇ ಭಾವಿಸಿದವರಾದಕಾರಣ, ಭೇದಮಯವಾದ ಸಂಸಾರವನ್ನು ಳಿದು, ಶಿವಯೋಗಾನಂದ ನಿರ್ಭರತೆಯಿಂದ ಸರ್ವಾಂಗಲಿಂಗಿಗಳಾಗಿದ್ದರು. ಹೀಗೆ ಸರ್ವಾಂಗಲಿಂಗಸಾಹಿತ್ಯ ಸಂಪನ್ನರಾಗಿದ್ದಕಾರಣ, ಅವರ ಪ್ರಾಣಗಳೆಲ್ಲಾ ಲಿಂಗ ಸಂಬಂಧಗಳಾಗಿದ್ದುವು. ಪ್ರಾಣಗಳು ಲಿಂಗಸಂಬಂಧವಾಗಲಾಗಿ ತತ್ಪ್ರಾಣಲಿಂಗ ಸಂಬಂಧದಿಂದ ಮನಸ್ಸೂ ಕೂಡ ಲಿಂಗಸಂಬಂಧಗೊಂಡಿದ್ದುವು. ಆ ಮನಕ್ಕೆ ಸಂದಿಸಿದ ನೋಟಗಳೂ ಲಿಂಗಸಂಬಂಧಗೊಂಡು ಅದರಲ್ಲಿ ಅಡಗಿರುವುವು. ಹೀಗೆ ಪ್ರಾಣ ಮನೋ ದೃಷ್ಟಿಗಳೆಲ್ಲಾ ಲಿಂಗಲೀನಗಳಾದಬಳಿಕ, ಸಕಲೇಂದ್ರಿಯಗಳೂ ಲಿಂಗಲೀನವೇ ಆಗಿದ್ದುವು. ಹೇಗೆಂದರೆ—ಇಂದ್ರಿಯಗಳಲ್ಲಿ ನೇತ್ರೇಂದ್ರಿಯವು ಪ್ರಧಾನವಾದುದು. ಮತ್ತು ಮನಸ್ಸು ಕೂಡ ಆರನೆ ಇಂದ್ರಿಯವೆನಿಸಿಕೊಂಡು ಸಕಲೇಂದ್ರಿಯಗಳಿಗೂ ರಾಜನಾಗಿರುವುದು. ಈ ಕಾರಣದಿಂದ ಲಿಂಗದಲ್ಲಿ ಅಂಥ ಮನೋನೇತ್ರಗಳು ಲೀನವಾದಬಳಿಕ ಅವರ ಉಳಿದ ಇಂದ್ರಿಯಗಳಿಗೆಲ್ಲಾ ಅನ್ಯತ್ರ ಸಂಚಾರವೇ ಇರುವುದಿಲ್ಲ. ಇತೀನ ಆ ಶಿವಯೋಗಿಗಳ ದೇಹಧರ್ಮಗಳೆಲ್ಲವೂ ಪ್ರಾಣಲಿಂಗದಲ್ಲೇ ಲೀನವಾಗಿರುವುವು. ||೫೦|| ಮುಖ್ಯವಾಗಿ ಜನರು ಲಿಂಗದಲ್ಲಿ ದೃಷ್ಟಿಯು ನಟ್ಟರೆ ಅದು ದೇಹಧರ್ಮ ನಿರಸನಕ್ಕೆ ಹೇತುವಾಗುವುದು. ದೇಹಧರ್ಮವಳಿದರೆ ಶಿವಸದ್ಭಕ್ತಿಯು ಲಭಿಸುವುದು. ಆ ಭಕ್ತಿ

ಸತಃ | ತಯಾಭಕ್ತ್ಯಾ ಶಿವಕೃಪಾಜಾಯತೇ ಸಮುದಂಚಿತಾ ||೫೨|| ತಥಾವಿ ಧಾನಾಂ ಲಿಂಗೈಕದೃಷ್ಟೀನಾಂ ಸತತಂತತಃ | ಕರಸ್ಥಲೋಲ್ಲಸತ್ಸಿಂಹಾಸನಮೇ ವಹಿಕಾರಣಂ ||೫೩|| ತತ್ಕರಸ್ಥಲಲಿಂಗಸ್ಯ ನಿರಂತರನಿರೀಕ್ಷಣಾತ್ | ಮಾಂ ಸದೃಷ್ಟ್ಯಾ ಬಹಿರ್ದೃಶ್ಯಪ್ರಪಂಚಂ ಜ್ಞಾನದೃಷ್ಟಿತಃ ||೫೪|| ನಿರೀಕ್ಷ್ಯಮಾಣ ಮಾತ್ಮಾನಂ ವಿಸ್ಮೃತ್ಯೈತಾನವಸ್ಥಿತಾನ್ | ಆಲೋಕ್ಯಬುಧಸಂಘೇಷು ಮು ದಾಪ್ರಣತಿಪೂರ್ವಕಂ || ೫೫ || ದೇಹಪ್ರಾಣೇಂದ್ರಿಯಪ್ರಾತದೃಷ್ಟೀನಾಂ ಪರ ಮೇಶ್ವರೇ | ಸ್ವಾತ್ಮನ್ಯಪಿ ಮಹೇಶಸ್ಯಯೋಜನಂ ಜಗತೀತಲೇ ||೫೬|| ಯು ಜಧಾತುವಿಚಾರೇಣ ಶಿವಯೋಗಸ್ಸ್ಮೃತಸ್ತತಃ| ಶಿವಯೋಗರತಾಏವ ಶಿವಶಾಸ ನಸಂಶ್ರಿತಾಃ ||೫೭|| ಶಿವತತ್ತ್ವವಿದಶ್ಶೈವಮಂತ್ರಸಿದ್ಧಾಶ್ಚ ಭೂತಲೇ | ಶಿವ ಜ್ಞಾನಯುಜಸ್ಸಮ್ಯಕ್ ಶಿವಧರ್ಮಪರಾಯಣಾಃ || ೫೮ || ಶಿವಭಕ್ತಿಯುತಾ ಶ್ಶಂಭುಪದಧ್ಯಾನವಿಶಾರದಾಃ | ಶಿವಪ್ರಸಾದಿನಶ್ಶಂಭುಪದಾಸಕ್ತಾಭವಂತಿಹಿ || ಅದ್ವೈತಬುದ್ಧಯೋ ಭಾವಶೂನ್ಯಾ ಸ್ಸೇವಾವಿವರ್ಜಿತಾಃ | ಅಶಿವಾಸ್ಸದ್ವಿಧಿಭ್ರ ಷ್ಟಾ ಸ್ತಥೈವಪಶುಯೋಗಿನಃ || ೬೦ || ಭವನ್ತಿಭೂತಲೇನಿತ್ಯಂ ಶಿವಯೋಗರ

---

ಯಿಂದ ಶಿವಕೃಪೆಯುಂಟಾಗುವುದು. ಅದುಕಾರಣ ಲಿಂಗನಿಹಿತದೃಷ್ಟಿಯು ಮುಮುಕ್ಷುವಿಗೆ ಅತ್ಯಂತ ಮುಖ್ಯವೆನಿಸಿಕೊಂಡಿರುವುದು. ಅಂಥ ಲಿಂಗನಿರೀಕ್ಷಣೆಗೆ ಕರತಲವೆಂಬ ಉತ್ತಮ ಸಿಂಹಾಸನವು ಮುಖ್ಯ ಸಾಧನವಾಗಿರುವುದು. ಆ ಕರಪೀಠದಲ್ಲಿ ಲಿಂಗವನ್ನಿಟ್ಟು ಸದಾ ನಿರೀ ಕ್ಷಣೆ ಮಾಡುತ್ತಿರುವುದರಿಂದ, ಅವರ ಮಾಂಸದೃಷ್ಟಿಗೆ ಈ ದೃಶ್ಯಪ್ರಪಂಚವೂ, ಜ್ಞಾನದೃಷ್ಟಿಗೆ ಆತ್ಮನೂಕೂಡ ತೋರದೆ, ಒಳಗು ಹೊರಗೆಂಬ ಭೇದವಿಲ್ಲದೆ, ಲಿಂಗವೇ ಗೋಚರಿಸುತ್ತಿರುವುದು. ಇಂತಪ್ಪ ಲಿಂಗಾನುಸಂಧಾನವುಳ್ಳ ಶಿವಯೋಗಿಗಳು ಶ್ರೀಶೈಲಕ್ಕೆ ಹೋಗುತ್ತಿರುವುದನ್ನು ಅಲ್ಲಿ ಯೇ ಹೋಗುತ್ತಿದ್ದ ವಿದ್ವಜ್ಜನರು ನೋಡಿ ಸಂತೋಷದಿಂದ ನಮಸ್ಕರಿಸಿ ||೫೫|| ಹೀಗೆ ಹೇಳಿ ಕೊಳ್ಳುತ್ತಿದ್ದರು:—''ಯುಜಿರ್ ಯೋಗೇ'' ಎಂಬ ಧಾತ್ವರ್ಥದಪ್ರಕಾರ ಯೋಗಶಬ್ದಕ್ಕೆ ಸಂ ಬಂಧವೆಂದರ್ಥ. ಶಿವಯೋಗನೆಂದರೆ ತಮ್ಮ ದೇಹೇಂದ್ರಿಯಗಳನ್ನೆಲ್ಲಾ ಶಿವನಲ್ಲೂ ಆ ಶಿವನನ್ನು ತಮ್ಮ ಆತ್ಮನಲ್ಲೂ ಸಂಯೋಜಿಸುವುದೆಂದರ್ಥ. ಅಂಥ ಶಿವಯೋಗವುಳ್ಳವರೆಂದರೆ ಇವರೇ;ಸಂ. ಇವರೇ ಶಿವಾಜ್ಞೆಯಂತೆ ನಡೆಯತಕ್ಕವರು. ಇವರೇ ಶಿವತತ್ತ್ವವನ್ನರಿತವರೂ, ಶಿವಮಂತ್ರಸಿದ್ಧ ರೂ, ಶಿವಜ್ಞಾನಿಗಳೂ, ಶಿವಧರ್ಮಪರಾಯಣರೂ, ಶಿವಭಕ್ತಿಸಂಪನ್ನರೂ, ಶಿವಧ್ಯಾನಕುಶಲ ರೂ, ಶಿವಪ್ರಸಾದಿಗಳೂ, ಶಿವಪಾದನಿಷ್ಠರೂ ಆಗಿರುತ್ತಾರೆ ||೫೯|| ಭೂಮಿಯಲ್ಲಿ ಅದ್ವೈ ತಭಾವನೆಯಿಂದ ಕೂಡಿ ಭಕ್ತಿಭಾವನೆಯಿಲ್ಲದೆ ಶಿವೋಪಾಸನೆಯನ್ನು ಬಿಟ್ಟು, ಶಿವೋಕ್ತಶಾಸ ನದಿಂದ ಭ್ರಷ್ಟರಾಗಿ ಹಠಾದಿ ಪಶುಯೋಗಗಳನ್ನು ಮಾಡಿಕೊಂಡಿರುವ ಅಮಂಗಳರಾದ ದು ರ್ಭ್ರಾಂತರೆಲ್ಲಾ ಶಿವಯೋಗಿಗಳಾದಾರೆ?||೬೦|| ವಿಚಾರಮಾಡಿನೋಡಿದರೆ ಸಂಯೋಗ ವಿಯೋ

ತಾಃಕಿಮು । ವಿಚಾರ್ಯಮಾಣೇ ಸಂಯೋಗವಿಯೋಗವಚನದ್ವಯೇ ॥೬೧॥ ಯೋಗಃಕಿಮುಭಯೋಶ್ಶೈಷೋ ದ್ವೌನಸ್ತ ಇತಿವಾಕಿಮು । ಉತೈಕಮೇವೇ ತಿವಚಸ್ತತ್ರೈಕಂ ನೇತಿವಾಕಿಮು ॥೬೨॥ ಸಿದ್ಧಾಂತಪಕ್ಷನಿರ್ಣೀತ ಶಿವಯೋಗಸ್ಸಮುನ್ನತಃ । ಅನ್ಯೇಷಾಂಸಿದ್ಧ್ಯತಿಕಥಂ ತಮಸ್ಸಂವೃತಚೇತಸಾಂ ॥೬೩॥ ಶಿವಯೋಗ್ಯಹಮೇವೇತಿ ಶಿವವಾಕ್ಯಸ್ಯಸಂಭವಾತ್ । ಏತದ್ರೂಪಾಣ್ಯುಪಾದಾಯ ಶಿವಏವಕಿಮಾಗತಃ ॥೬೪॥ ಅಥವಾಽನಿಮಿಷಯ್ಯ ಶ್ರೀಗಿರಿಮೇವಮುಪಾಗತಃ । ಪ್ರಭುದೇವಃಕಿಮಾಯಾತೋ ರೂಪೈರೇತೈಸ್ಸಮನ್ವಿತಃ ॥೬೫॥ ಉತಾಜಗಮದೇವ ಶ್ರೀಗಿರಿಮೇವಮುಪಸ್ಥಿತಃ । ಆಹೋಸ್ವಿತ್ಸಿದ್ಧರಾಮಃಕಿಮೇತದ್ರೂಪೈರುಪಾಗತಃ ॥೬೬॥ ಭೃಂಗೀಶ್ವರಸ್ಸಮಾಯಾತಃ ಕಿಮೇತತ್ಸರ್ವರೂಪಭಾಕ್ । ಉಪಮನ್ಯುವಶಿಷ್ಠಾತ್ರಿ ಗೌತಮಾಗಸ್ತ್ಯಕಶ್ಯಪಾಃ ॥೬೭॥ ಸವಿತ್ರಪಾಣಿ ಕಪಿಲ ವಾಮದೇವ ಶುಕಾದಯಃ । ಕಿಂಮುದಾ ವೀಕ್ಷಿತುಂ ಭಕ್ತಾ ಶ್ರೀಗಿರಿಂ ಸಮುಪಾಗತಾಃ ॥೬೮॥ ಏತನ್ಮಹಾದ್ಭುತಮಿತಿ ಸ್ತುತಿಂ ಕುರ್ವತ್ಸು ಸಾದರಂ । ಸ್ವವೀಕ್ಷಣಾಭಾಷಣಾಭ್ಯಾಂ ದರ್ಶನಾಚ್ಛಿವಯೋಗಿನಾಂ ॥೬೯॥

---

ಗವೆಂಬ ಇವೆರಡರಲ್ಲಿ ಸಂಯೋಗ (ಕೂಡುವುದು) ವೆಂಬುದು ಸಿದ್ಧಿಸಬೇಕಾದರೆ ಎರಡು ವಸ್ತುಗಳಿರಬೇಕಾಗುತ್ತದೆ. ಅದುಕಾರಣ ಯೋಗ ವೆಂಬುದು ಎರಡು ವಸ್ತುಗಳಿರುವುವೆಂಬುದನ್ನು ಸೂಚಿಸುವುದೊ? ಅಥವಾ ಎರಡು ವಸ್ತುಗಳಿಲ್ಲವೆಂಬ ಅದ್ವೈತವನ್ನು ಬೋಧಿಸುವುದೊ? ಅಥವಾ ಒಂದೇವಸ್ತುವಿರುವುದೆಂದು ಬೋಧಿಸುವುದೊ? ಇಲ್ಲವೆ ಆವೊಂದು ವಸ್ತುವೂ ಇಲ್ಲವೇಇಲ್ಲವೆಂದು ಸೂಚಿಸುವುದೊ? ॥೬೨॥ ಈ ದುರ್ಭ್ರಾಂತಿ ವಾದಗಳನ್ನೆಲ್ಲಾ ಕಡಿದುತ್ತರಿಸಿ ಉತ್ತಮ ಸಿದ್ಧಾಂತಪಕ್ಷದಿಂದ ನಿರ್ಣಯಗೊಂಡಿರುವ ಯಾವ ಶಿವಯೋಗವುಂಟೋ ಅದೇ ಸರ್ವೋತ್ಕೃಷ್ಟವಾದುದು. ಅದು ತಾಮಸಾತ್ಮರಾದ ಇತರರಿಗೆ ಹೇಗೆ ಸಿದ್ಧಿಸೀತು? ॥೬೩॥ ನಾನು ಶಿವಯೋಗಿಯೆಂದು ಪರಮೇಶ್ವರನೇ ಶಿವಾಗಮದಲ್ಲಿ ಹೇಳಿಕೊಂಡಿರುವುದರಿಂದ, ಅದನ್ನು ಪ್ರತ್ಯಕ್ಷಗೊಳಿಸುವುದಕ್ಕಾಗಿ ಈಗ ಈ ಮಹಾಶಿವಯೋಗಿಗಳ ಆಕಾರವಾಗಿ ತಾನೇ ದಯಮಾಡಿಸಿರುವನೋ! ಅಥವಾ ಅಲ್ಲಮಪ್ರಭುವೇ ಇವರುಗಳ ರೂಪಿನಿಂದ ಬಂದಿರುವನೋ! ಇಲ್ಲವೆ ಅಜಗಮಯ್ಯನೇ ಈ ಶಿವಯೋಗಿಗಳ ಆಕಾರದಿಂದ ಬಂದನೋ! ಓಹೋ ಸೊನ್ನಲಾಪುರದ ಸಿದ್ಧರಾಮದೇವನೇ ಈ ರೂಪಗಳಿಂದ ಬಂದಿರುವನೋ! ಭೃಂಗೀಶ್ವರನೇ ಇವರೆಲ್ಲರ ರೂಪಗಳನ್ನು ಧರಿಸಿ ಬಂದಿರುವನೋ! ಉಪಮನ್ಯು ವಸಿಷ್ಠ ಗೌತಮ ಅಗಸ್ತ್ಯ ಮೊದಲಾದ ಭಕ್ತರುಗಳು ಈ ಗಿರಿಯ ಸಂದರ್ಶನಕ್ಕಾಗಿ ಸಂತೋಷದಿಂದ ಬಂದಿರುವರೋ! ॥೬೮॥ ಇದು ಪರಮಾಶ್ಚರ್ಯ! ಎಂದು ಆ ಶಿವಯೋಗಿಗಳ ಸ್ತೋತ್ರವನ್ನು ಮಾಡುತ್ತಿರಲಾಗಿ, ತನ್ನನ್ನು ದರ್ಶನ ಸ್ತೋತ್ರ ತೀರ್ಥಾಭಿಷೇಕಗಳಿಂದ ಸೇವಿಸುವುದಕ್ಕಿಂತಲೂ ಶಿವಯೋಗಿಗಳ ದರ್ಶನದಿಂದ ಮನುಜರಿಗೆ

ಸರ್ವತೀರ್ಥಾಭಿಷೇಕೇಭ್ಯ ಇತ್ಯಾದ್ಯುಕ್ತೇಸ್ಸದಃಸ್ಪೃಣಾಂ | ಗಂಗಾದಿಸರ್ವತೀರ್ಥೌಘಸ್ನಾನಜಂ ಸುಕೃತಂ ಮಹತ್ ||೭೦|| ಪ್ರಕುರ್ವಂತಸ್ಸಮುಲ್ಲಾಸಾದಾಯಯುಶ್ಶಿವಯೋಗಿನಃ | ಕುಟಿಲಾಂಭುಃಗೀಂ ವಾಮಪಾರ್ಷ್ಣಿನಾಽಽಪೀಡ್ಯ ಯತ್ನತಃ ||೭೧|| ಸಂಪೂರ್ಯತಸ್ಯಾವದನಂ ವಾಯುನಾಂತರಚಾರಿಣಾ | ಉಪರ್ಯುಪರಿವಿಷ್ಟ ಸಮ್ಯಕ್ಪಂಕಜಸಂಹತಿಂ ||೭೨|| ವಿಧಾಯೋರ್ಧ್ವಮುಖಾಂ ಸಮ್ಯಕ್ ಪ್ರವಾಳಕುಸುಮಾವಲೇಃ | ಅಗ್ರಾಣಿಮುದ್ರಯಿತ್ವಾಽಥ ಬದ್ಧ್ವಾ ಶಶಿದಿವಾಕರೌ ||೭೩|| ಸಮಾಸಾದ್ಯೋರ್ಧ್ವಭವನಂ ಪೃಷ್ಠವಂಶಾಗತಾಧ್ವನಾ | ಚಂದ್ರಿಕಾಸದೃಶಂವೀಕ್ಷ್ಯ ಪ್ರಕಾಶಂತದನಂತರಂ | ಸಮಾರುಹ್ಯವ್ಯೋಮತತ್ರ ವಿಚಾರ್ಯಮಧುರಸ್ವನಂ || ೭೪ || ಚರಮದ್ವಾರಸಂದೋಹಕ್ಷಮಾಭ್ಯಾಸವರಕ್ರಮೈಃ | ಆಕುಂಚನಾನಿಲಾಪೂರ್ತ್ಯಾಶುಷ್ಕಪರ್ಣನಿಭೈರ್ಘನಂ ||೭೫|| ಅತ್ಯಂತಲಘುಭಿರ್ದೇಹೈ ರಸ್ಪೃಷ್ಟ್ವಾಸನ್ನಿವೇಶನಾತ್||೭೬||ಅಲಕ್ಷ್ಯಪದವಿನ್ಯಾಸರಾಜಿಭಿಃ ಪರಿಶೋಭಿತಾಃ ||೭೭|| ದೀಪಪ್ರಭಾಯಾಸ್ಸಂಗತ್ಯಾ ನಿರುದ್ಧೈಶ್ಚ

---

ವಿಶೇಷ ಫಲವುಂಟಾಗುವುದೆಂದು ಪರಶಿವನು ಅಪ್ಪಣೆಕೊಟ್ಟಿರುವಂತೆ, ತಮ್ಮ ದರ್ಶನವನ್ನು ಮಾಡಿದವರಿಗೆಲ್ಲಾ ಗಂಗಾದಿ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವನ್ನು ಉಂಟುಮಾಡುತ್ತ ಶಿವಯೋಗಿಗಳು ಉಲ್ಲಾಸದಿಂದ ಶ್ರೀಗಿರಿಗೆ ಬಂದರು. || ೭೦ || ಬಳಿಕ ಅಭ್ಯಾಸಯೋಗಿಗಳ ಗುಂಪೂ ಸಹ ಬರುತ್ತಿದ್ದಿತು:—ಅವರುಗಳು ಎಡ ಹಿಮ್ಮಡದಿಂದ ಗುದಸ್ಥಾನವನ್ನೊತ್ತಿ, ನಾಭಿಕಂದವನ್ನು ಬಳಸಿ ಆಕಂದದ ಅಧೋದ್ವಾರದಲ್ಲಿ ತನ್ನ ಹೆಡೆಯನ್ನಿಟ್ಟು ಬಂಧಿಸಿ ಸುಪ್ತಸರ್ಪಾಕಾರದಲ್ಲಿರುವ ಮೂಲಕುಂಡಲಿಯನ್ನು ಶ್ವಾಸಧಾರಣದಿಂದ ಎಚ್ಚರಿಸಿ, ಒಳಗೆ ಚಲಿಸಾಡುವ ವಾಯುವಿಂದ ಅದರ ಬಾಯನ್ನು ತುಂಬಿ, ಊರ್ಧ್ವಮುಖವಾದ ಆ ವಾಯುವಿನಿಂದ ಹೃತ್ಕಂಠತಾಲ್ವಾದಿಸ್ಥಾನಗಳಲ್ಲಿ ತಲೆಬಗ್ಗಿ ನಿಂತಿರುವ ಕಮಲದಮೊಗ್ಗೆಗಳನ್ನು ಅರಳಿಸಿ, ಮೇಲ್ಮೊಗಗೊಳಿಸಿ, ಹವಳದ ಬಳ್ಳಿಯ ಪುಷ್ಪಗಳ ತುದಿಗಳನ್ನು (ಬಿಂದು)ಸಂಕೋಚಗೊಳಿಸಿ, ಬಳಿಕ ಇಡಾಪಿಂಗಳೆಗಳೆರಡನ್ನೂ ಒಟ್ಟುಗೂಡಿಸಿ, ಸುಷುಮ್ನೆಯಮಾರ್ಗವಾಗಿ ವಾಯುವನ್ನು ಪಶ್ಚಿಮಮಾರ್ಗದಿಂದ ಮೇಲಕ್ಕೇರಿಸಿ, ಕುಂಭಕವನ್ನು ಮಾಡಿ, ಅಲ್ಲಿ ಬೆಳ್ದಿಂಗಳಿಗೆ ಸಮನಾದ ದಿವ್ಯಪ್ರಕಾಶವನ್ನವಲೋಕಿಸಿ, ಬಳಿಕ ಬಿಂದ್ವಾಕಾಶವನ್ನಡರಿ ಅಲ್ಲಿಯ ನಿಶ್ಶಬ್ದಾತ್ಮಕ ಪರನಾದಸುಖವನ್ನನುಭವಿಸುವುದಕ್ಕಾಗಿ ಮೂಲ ಉಡ್ಡಿಯಾಣ ಜಾಲಂಧರಾದಿ ಬಂಧಗಳು ರೇಚಕಪೂರಕಾದಿವಾಯುನಿರೋಧಪೂರಣಕ್ರಿಯೆಗಳು, ಖೇಚರ್ಯಾದಿ ಮುದ್ರೆಗಳು, ಸ್ವಸ್ತಿಕಾದ್ಯಾಸನಗಳು ಇವುಗಳೆಲ್ಲದರ ಕ್ರಮಾಭ್ಯಾಸದಿಂದ ಆ ಹಠಯೋಗಿಗಳ ದೇಹಗಳು ತರಗೆಲೆಗೆ ಸಮನಾಗಿ ಹಗುರಗಳಾಗಿರುವುದರಿಂದ ಭೂಮಿಗೆ ಸೋಂಕದೆ ನಿಲ್ಲಲು ಸಮರ್ಥಗಳಾಗಿರುತ್ತಿರಲು, ಭೂಮಿಯಲ್ಲಿ ಸೋಂಕದಂತೆ ಪಾದಗಳನ್ನಿಟ್ಟುಕೊಂಡು ನಡೆಯುತ್ತಿದ್ದರು. ದೀಪದ ಕಾಂತಿಯಿಂದ ತಡವರಿಸಿ

ಲಭ್ಯೈರಿವ | ದೃಗ್ಗೋಲಕಾಂತರ್ಗ್ರಥಿತ ಜ್ಞಾನದೀಪಪ್ರಭಾಗತೈಃ ||೭೮|| ನಿವೃತ್ತಬಾಹ್ಯಾವಲೋಕೈ ರವಲೋಕೈಸ್ತಥಾಪುನಃ| ಭುಕ್ತ್ಯಾಶಯಾಜಾಲಜಾಲೇಲಗ್ನೈರ್ಮತ್ಸ್ಯಕುಲೈರಿವ | ಜಿಹ್ವಾಭಿಃ ಖೇಚರೀಮುದ್ರಾಮೃತಭುಕ್ತಿಪರಾಯಣೈಃ ||೭೯|| ನಾದಾಮೃತಂ ಸಮಾಕರ್ಣ್ಯ ಪ್ರಮತ್ತೈರುರಗೈರಿವ | ರಚಿತಾನಾಹತಾನೇಕನಾದಮಗ್ನೈ ಶ್ಶ್ರುತಿವ್ರಜೈಃ ||೮೦|| ಚಂಪಕಪ್ರಸವಾಮೋದಮೂರ್ಛಿತೈ ರ್ಭ್ರಮರೈರಿವ | ನಾಸಾಭಿರಂತರ್ಯೋಗಸ್ಯ ವಾಸನಾಯತ್ತವೃತ್ತಿಭಿಃ ||೮೧|| ಕರಿಣೀವರಸಂಯೋಗಸೌಖ್ಯಮಗ್ನೈ ರ್ಗಜೈರಿವ | ಸಪ್ರಾಣಾಪಾನಸಂಯೋಗಸುಖಾಸಕ್ತೈ ಸ್ತ್ವಗಿಂದ್ರಿಯೈಃ ||೮೨|| ಸಮ್ಯಕ್ಸಮಂಚಿತಾಸ್ಸಂತೆ ಶ್ಶಿವಧ್ಯಾನಪರಾಯಣಾಃ | ಭುಜಂಗಭೃಂಗಮಾತಂಗ ಪತಂಗಶಫರಾಭುವಿ ||೮೩|| ಯಥೈಕೈಕೇಂದ್ರಿಯಹತಾಸ್ತಥಾ ಸರ್ವೇಂದ್ರಿಯೈರಪಿ | ಅಶ್ರಾಂತಮವಿನಶ್ಯಂತೋ ನಿರಸ್ತವಿಷಯಭ್ರಮಾಃ ||೮೪|| ಶಿವಾಂಘ್ರಿಪದ್ಮೇಸಂಸ್ಥಾಪ್ಯ ವಿಷಯೇಂದ್ರಿಯಸಂಹತಿಂ | ವಿಧಾಯಾಂತರ್ಬಹಿರ್ಯೋಗಕ್ರಿಯಾಭಿ ರ್ವಶ

---

ಹೋದ ಪತಂಗಗಳಂತೆ ಅವರ ಅಂತಜ್ಞಾನದೃಷ್ಟಿಯ ಪ್ರಭಾತಿಶಯದಿಂದ ಹೊರಗಣ ನೋಟವು ಉಡುಗಿಹೋಗಿದ್ದಿತು. ತಿಂಡಿಯಾಸೆಗೆ ಬಲೆಯಲ್ಲಿ ಬಿದ್ದು ಸಿಕ್ಕಿಕೊಂಡ ಮೀನುಗಳಂತೆ ಖೇಚರೀ ಮುದ್ರಾಧಾರಣೆಯಿಂದ ಘಂಟಿಕಾಧಾರದಲ್ಲಿ ನಾಲಗೆಗಳ ತುದಿಯನ್ನು ಸಂಧಿಸುವುದರಿಂದ ಸ್ರವಿಸುವ ಅಮೃತಧಾರೆಯನ್ನು ಸೇವಿಸುವುದರಲ್ಲಿ ಅವರ ನಾಲಗೆಗಳು ತತ್ಪರಗಳಾಗಿದ್ದುವು. ಗಾನಾಮೃತವನ್ನು ಸವಿದು ಮಂಕುಹಿಡಿದ ಹಾವುಗಳಂತೆ ತಾನೇತಾನಾಗಿ ಘೋಷಿಸುವ ಅನಾಹತ ದಿವ್ಯನಾದವನ್ನು ಕೇಳುವಲ್ಲಿ ಅವರ ಕಿವಿಗಳು ಮಗ್ನಗಳಾಗಿದ್ದುವು. ಸಂಪಗೆ ಹೂವಿನ ಪರಿಮಳದಿಂದ ಮೂರ್ಛೆಗೊಂಡ ಭ್ರಮರಗಳಂತೆ ಅಂತರ್ಯೋಗವಾಸನೆಯಲ್ಲಿ ಅವರ ಮೂಗುಗಳು ಮಗ್ನವಾಗಿದ್ದುವು. ||೮೧|| ಹೆಣ್ಣಾನೆಯ ಸಂಗಸೌಖ್ಯದಲ್ಲಿ ಮುಳುಗಿದ ಮದಗಜಗಳಂತೆ, ಪರಸ್ಪರಾಕರ್ಷಕಗಳಾಗಿರುವ ಪ್ರಾಣವಾಯು ಅಪಾನವಾಯುಗಳೆರಡನ್ನೂ ಸಂಯೋಗಗೊಳಿಸುವುದರಿಂದ ಉಂಟಾದ ಪರಮ ಸೌಖ್ಯದಲ್ಲಿ ಅವರ ತ್ವಗಿಂದ್ರಿಯಗಳು ತಗುಲಿಕೊಂಡಿದ್ದುವು. ಈ ಮೇಲೆ ಹೇಳಿದ ಪತಂಗಾದಿ ಮಾತಂಗಪರ್ಯಂತ ಪ್ರಾಣಿಗಳು ಒಂದೊಂದು ವಿಷಯಗಳಲ್ಲಿ ತಮ್ಮ ಒಂದೊಂದು ಇಂದ್ರಿಯಗಳನ್ನು ಸಂಲಗ್ನ ಮಾಡಿಕೊಂಡಿರುವಂತೆ, ಈ ಯೋಗಿಗಳ ಸಕಲೇಂದ್ರಿಯಗಳೂ ಯೋಗಾನಂದನಿಮಗ್ನಗಳಾಗಿರುವಕಾರಣ ಅವಿನಾಶಿಗಳಾಗಿಯೂ, ಇತರ ವಿಷಯಭ್ರಾಂತಿರಹಿತಗಳಾಗಿಯೂ ಇದ್ದುವು. ಆ ಯೋಗಿಗಳು ತಮ್ಮ ಸಕಲೇಂದ್ರಿಯಗಳನ್ನೂ ಶಿವಪಾದಾಬ್ಜದಲ್ಲಿ ನೆಲೆಗೊಳಿಸಿ, ತಮ್ಮ ಅಂತರ್ಯೋಗ ಬಹಿರ್ಯೋಗ ಸಾಧನಗಳೆರಡರಿಂದಲೂ ಪರಶಿವನ ಅನುಗ್ರಹಕ್ಕೆ ಪಾತ್ರರಾಗಿ, ಆ ಸ್ವಾಮಿಯ ಕಾರುಣ್ಯದಿಂದ ಸರ್ವಜ್ಞತ್ವಸ

ದಂಶಿವಂ ||೮೫|| ಲಬ್ಧ್ವಾಸರ್ವಜ್ಞತಾಸಿದ್ಧಿಂ ಮಹೇಶಕರುಣಾಬಲಾತ್ | ತ್ರಿಲೋಕೇಯಾನಿಚಿಹ್ನಾನಿ ತಾನಿಚಿಹ್ನಾನಿದೇಹತಃ ||೮೬|| ಇತ್ಯುಕ್ತೇಸ್ಸನ್ತಿಚಿಹ್ನಾನಿ ಬ್ರಹ್ಮಾಂಡೇಯಾನಿತಾನ್ಯಪಿ | ಪಿಂಡಸ್ಥಿತಾನಿದೃಶ್ಯಂತೇ ಸೂಕ್ಷ್ಮರೂಪಾಣ್ಯಶೇಷತಃ ||೮೭|| ಉರ್ವೀಜಲಾಗ್ನಿಪವನವ್ಯೋಮ ಭೂತಸಮುಚ್ಚಯಃ| ಅಶೇಷಪರ್ವತನದೀದ್ವೀಪಾಂಬುಧಿಕದಂಬಕಂ ||೮೮|| ತಾರಕಾಗ್ರಹನಕ್ಷತ್ರಭುವನಾದೀನಿಸಂತತಂ | ಪ್ರವ್ಯಕ್ತಮಾತ್ಮಭವನೇ ಲಕ್ಷ್ಯಂತೇಖಲುಸರ್ವಶಃ || ಇಡಾನಾಡ್ಯಾಂತತ್ರಚಂದ್ರಸ್ಸವ್ಯಭಾಗೇಽಪತಿಷ್ಠತೇ | ಸ್ವಕೀಯಷೋಡಶಕಲಾ ಪರಿಪೂರಿತವಿಗ್ರಹಃ ||೯೦|| ಪಿಂಗಳಾಯಾಂರವಿರ್ಜ್ಞೇಯಸ್ಸದ್ವಾದಶಕಲಃಪುನಃ | ಚರಂತಿಪಂಚಭೂತಾನಿ ರವೀಂದುಗಮನಕ್ರಮಾತ್ ||೯೦|| ತತ್ರೋರ್ಧ್ವಮನಲಃಪ್ರಾಚೀ ಪ್ರತೀಚೀದಿಗಧೋಜಲಂ | ತನ್ನಾಡ್ಯೋರುತ್ತರೋಭಾಗಃ ಪೃಥಿವೀದಕ್ಷಿಣೋಮರುತ್ ||೯೨|| ತನ್ಮಧ್ಯಂವಿಯದಿತ್ಯೇವಂ ವರ್ತತೇ ಭೂತಪಂಚಕಂ | ಸ್ಯುಃಪ್ರಾಣಾಶ್ಶ್ವಾಸಷಷ್ಟಿಸ್ತುಷಟ್ಕಂತೇಷಾಂಹಿನಾಡಿಕಾ|| ಏಕೈಕಭೂತಕಾಲಸ್ಸ್ಯಾದೇಕೈಕಘಟಿಕಾಕ್ರಮಾತ್ | ಏಕೈಕನಾಡ್ಯಾಂಘಟಿಕಾಪಂಚಕಂ ಪರಿವರ್ತತೇ ||೯೪|| ಘಟಿಕಾಪಂಚಕಂಲಗ್ನಂ ತಾನಿದ್ವಾದಶವಾ

---

ದ್ಧಿಯನ್ನು ಪಡೆದುಕೊಂಡಿದ್ದರು. ||೮೫|| ಮೂರುಲೋಕದಲ್ಲೂ ಹೊರಗೆ ಯಾವ ಚಿಹ್ನೆಗಳು ಇರುವುವೋ ಅವೆಲ್ಲಾ ದೇಹದಲ್ಲೇ ಇರುವುವೆಂದು ಹೇಳಲ್ಪಟ್ಟಿರುವ ಶಿವಾಗಮವಚನಪ್ರಕಾರ ಅಜಾಂಡದಲ್ಲಿ ಸ್ಥೂಲವಾಗಿರುವ ವಸ್ತುಗಳೆಲ್ಲಾ ಪಿಂಡಾಂಡದಲ್ಲಿ ಸೂಕ್ಷ್ಮರೂಪಗಳಾಗಿರುವವು. ಬ್ರಹ್ಮಾಂಡದ ಪೃಥಿವ್ಯಾದಿ ಭೂತಗಳೂ ಗಿರಿ ನದೀ ಸಮುದ್ರಾದಿಗಳೂ ಗ್ರಹನಕ್ಷತ್ರಾದಿಗಳೂ ಈ ಪಿಂಡಾಂಡದಲ್ಲೂ ಗೋಚರಿಸುವುವು. ಹೇಗೆಂದರೆ—ಎಡಗಡೆಯ ಇಡಾನಾಡಿಯಲ್ಲಿ ಚಂದ್ರನು ತನ್ನ ೧೬ ಕಲೆಗಳಿಂದ ಕೂಡಿ ನೆಲಸಿರುವನು. ||೯೦|| ಬಲಗಡೆಯ ಪಿಂಗಳಾನಾಡಿಯಲ್ಲಿ ಸೂರ್ಯನು ತನ್ನ ೧೨ ಕಲೆಗಳಿಂದ ಕೂಡಿ ನೆಲಸಿರುವನು. ದೇಹದೊಳಗೆ ಈ ಚಂದ್ರ ಸೂರ್ಯನಾಡಿಗಳಗಮನಾಗಮನಕ್ರಮವನ್ನನುಸರಿಸಿ ಪಂಚಭೂತಗಳಿರುವ ಕ್ರಮವು ಹೇಗೆಂದರೆ—ಇವೆಲ್ಲಕ್ಕೂ ಮೇಲ್ಗಡೆ ಪೂರ್ವದಲ್ಲಿ ಅಗ್ನಿಯೂ, ಕೆಳಗಡೆ ಪಶ್ಚಿಮದಲ್ಲಿ ಜಲವೂ, ನಾಡಿಗಳ ಉತ್ತರದಿಕ್ಕಿನಲ್ಲಿ ಪೃಥಿವಿಯೂ, ನಾಡಿಗಳ ದಕ್ಷಿಣದಲ್ಲಿ ವಾಯುವೂ, ಎಲ್ಲಕ್ಕೂ ಮಧ್ಯದಲ್ಲಿ ಆಕಾಶವೂ ಇರುತ್ತಿರುವುವು. ಅರುವತ್ತು ಶ್ವಾಸಗತಿಗಳಾದರೆ ಒಂದು ಪ್ರಾಣವಾಗುವುದು. ಆ ಪ್ರಾಣಗಳು ಆರಾದರೆ ಒಂದು ನಾಡಿಯಾಗುವುದು. ಒಂದೊಂದು ಭೂತಕಾಲವು ಒಂದೊಂದು ಗಳಿಗೆಯೆನಿಸಿಕೊಳ್ಳುವುದು. ಅಂಥ ಗಳಿಗೆಗಳು ಐದೈದು ಒಂದೊಂದು ನಾಡಿಯಲ್ಲಿರುವುವು. ಅಂಥ ಗಳಿಗೆಗಳು ಐದಾದರೆ ಒಂದು ಲಗ್ನವಾಗುವುದು. ಆ ಲಗ್ನಗಳು ಹನ್ನೆರಡಾದರೆ ಒಂದುದಿನವು

ಸತಃ | ಸಂಮಿಶ್ರಿತಾನಿ ಷಟ್ಛತ್ಯಾ ಸಹಸ್ರಾಣ್ಯೇಕವಿಂಶತಿಃ ||೯೫|| ಏಕಸ್ಮಿ
ನ್ಸಂಪ್ರವರ್ತಂತೇ ಸ್ವರಾಣಾಂದಿವಸೇಸದಾ | ಸಂವತ್ಸರಸ್ಯಘಟಿಕಾ ಸ್ತಏವಸಂ
ಕೀರ್ತಿತಾಃ ||೯೬|| ಷಷ್ಟಿಸಂಖ್ಯಾವಿಭಕ್ತಾಸು ತದ್ಘಟೀಷು ಸಮಾಗತಾಶ್ |
ಲಬ್ಧಾಯಾಂತಿದಿವಸಾಸ್ತೇಷು ದ್ವಾದಶಭಿಃ ಪುನಃ ||೯೭|| ಭಕ್ತೇಷುಮಾ
ಸಾಸ್ತನ್ಮಾಸಾದ್ಧ್ರುವಸಂಖ್ಯಾನುರೋಧತಃ | ತಿಥಿವಾಸರನಕ್ಷತ್ರಯೋಗೈಶ್ಚ
ಕರಣೈರಪಿ ||೯೮|| ಗ್ರಹಾದಿಭಿರ್ವರ್ತಮಾನಾ ಕಾಲಚಕ್ರಸ್ಯಪದ್ಧತಿಃ | ಸ್ವರಚ
ಕ್ರಗತಿಶ್ಚೈವಮಾವರ್ತತೇ ಭುವನೇಸಮಂ ||೯೯|| ಇನೇಂದುಪಕ್ಷೈಃ ಪ್ರಥಿತ್ಯೈರಿ
ನೇಂದುತಿಥಿಭಿಸ್ತಥಾ | ಇನೇಂದುಪ್ರಹರೈಸ್ತದ್ವ ದಿನೇಂದುಘಟಿಕಾಚಯೈಃ ||
ಗ್ರಹೈರಿನೇಂದುಸಂಬದ್ಧೈ ರ್ವಿಷಾಮೃತಸಮೈರಪಿ | ಸ್ವರಾಣಾಂ ಸಂಗಮೈ
ರ್ಹಾನಿವೃದ್ಧೀ ಜಯಪರಾಜಯೌ ||೧೦೧|| ನ್ಯೂನಾಧಿಕತ್ವೇಮಾನಾವಮಾ
ನೌ ಘನರುಜಾರುಜೇ | ಲಾಭಾಲಾಭೌ ಲಸತ್ಕಾಲವಿಜ್ಞಾನಂಕಾಲವಂಚನಾಃ||
ಹೃತ್ಪದ್ಮಾಷ್ಟದಳೋನ್ಮೀಲಜ್ಜೀವಹಂಸಸ್ಯ ಸಾದರಂ | ಅನುಸಂಧಾನಕಲಿತ
ಫಲಾನ್ಯಪಿಯಥಾತಥಾ ||೧೦೩|| ದ್ರಷ್ಟುಂಸಮರ್ಥಯಾ ಸ್ವಾನುಭವಸಿದ್ಧ್ಯಾಪಿ
ನಿಜಾತ್ಮನಿ | ಆತ್ಮಸಿದ್ಧ್ಯಾಚ ವಲಿಭಿಃ ಪಲಿತೈರಪಿವರ್ಜಿತೈಃ ||೧೦೪|| ಅಂಗೈ

---

ಹೀಗೆ ೧ ದಿನಕ್ಕೆ ೨೧೬೦೦ ಶ್ವಾಸಗತಿ (ಸ್ವರ) ಗಳು ಜರುಗುವುವು. ||೯೫|| ೧ ವರ್ಷದ
ಗಳಿಗೆಗಳಾದರೂ ಅಷ್ಟೇ (೨೧೬೦೦) ಆಗುವುವು. ಆ ಗಳಿಗೆಗಳನ್ನು ೬೦ರಿಂದ ಭಾಗಿಸಿದರೆ
ಬರುವ ಲಬ್ಧವೇ (೩೬೦) ವರ್ಷದ ದಿವಸಗಳು. ಆ ದಿವಸಗಳನ್ನು ಹನ್ನೆರಡರಿಂದ ಭಾಗಿಸಿದರೆ
ಬರುವ ಲಬ್ಧವು (೩೦) ಮಾಸದ ದಿನಗಳಾಗುವುವು. ಆ ವರ್ಷದ ದಿನಸಂಖ್ಯೆಯನ್ನು ಮಾಸದಿವ
ಸಂಖ್ಯೆಯಿದ ಭಾಗಿಸಿದರೆ ಬರುವ ಲಬ್ಧವೇ (೧೨) ವರ್ಷದ ತಿಂಗಳುಗಳಾಗುವುವು. ಆ ತಿಂಗ
ಳುಗಳ ಧ್ರುವಸಂಖ್ಯಾಸಂಬಂಧದಿಂದಲೂ ತಿಥಿ ವಾರ ನಕ್ಷತ್ರ ಯೋಗ ಕರಣಗಳಿಂದಲೂ ಗ್ರಹಾ
ದಿಗಳಿಂದಲೂ ಕೂಡಿ ನಡೆಯುತ್ತಿರುವುದೇ ಕಾಲಚಕ್ರಗತಿಯಾಗಿರುವುದು. ||೯೮|| ಆ ಕಾಲ
ಚಕ್ರಗತಿಯಂತೆಯೇ ಸ್ವರಚಕ್ರಗತಿಯೂ ವರ್ತಿಸುವುದು. ಹೇಗೆಂದರೆ—ಸೂರ್ಯಸಂಬಂಧಗಳಾದ
ಚಂದ್ರಸಂಬಂಧಗಳಾದ ಪಕ್ಷಗಳು, ತಿಥಿಗಳು, ಜಾವಗಳು, ಗಳಿಗೆಗಳು, ಗ್ರಹಣಗಳು, ವಿಷಗಳಿ
ಗೆಗಳು, ಅಮೃತಗಳಿಗೆಗಳು, ಇವುಗಳಲ್ಲೆಲ್ಲಾ ಆಯಾ ಸ್ವರಗಳು ಸಂಬಂಧಿಸಿ ನಡೆಯುವ ಗತಿ
ಯಿಂದಲೂ, ಅವುಗಳ ಕಾಲಕ್ಲೃಪ್ತಿಯ ಹೆಚ್ಚುಕಡಿಮೆಯಿಂದಲೂ ಜಯಾಪಜಯಗಳು, ಮಾನಾ
ವಮಾನಗಳು, ರೋಗಾರೋಗಗಳು, ಲಾಭಾಲಾಭಗಳು ಸೂಚಿತವಾಗುವುವು. ||೧೦೨||
ಮತ್ತು ಹೃದಯಕಮಲದಲ್ಲಿ ವಿಹರಿಸುತ್ತಿರುವ ಜೀವನೆಂಬ ಹಂಸನು ಆ ಕಮಲದ ೮ ದಳಗಳ
ಲ್ಲಿ ಒಂದೊಂದು ದಳಕ್ಕೆ ಅಭಿಮುಖನಾದರೆ ಪುಣ್ಯಬುದ್ಧಿ ಪಾಪಬುದ್ಧಿ ಮೊದಲಾದ ಗುಣಗ
ಳುಂಟಾಗುವುವು. ಅಂತಹ ಸ್ವರಾನುಸಂಧಾನ ಜೀವಗತಿವಿಶೇಷ ತತ್ತತ್ಫಲಸೂಚನೆಗಳನ್ನೆಲ್ಲಾ

ಶ್ಚರುಚಿರಾಕಾರೈ ಸ್ಸೌಕುಮಾರ್ಯೈರ್ಯಮಾದಿಭಿಃ | ಅಣಿಮಾದಿಭಿರಷ್ಟಾಭಿ ಸ್ಸಿ
ದ್ಧಿಭಿಶ್ಚ ನಿರಂತರಂ ||೧೦೬|| ದಶಭಿಃಪ್ರತ್ಯಯೈರ್ಭವ್ಯೈ ಸ್ಸತರಾಂ ಪರಿಶೋಭಿ
ತಾಃ | ಚತುಷ್ಪದಾನಿಗೀತಾನಿ ಗಾಯಂತೋ ಯೋಗಭಾಷಯಾ ||೧೦೭||
ವರ್ಜಯಿತ್ವಾಜನಾನ್ದೂರಾ ಜ್ಜಗ್ಮುರಭ್ಯಾಸಯೋಗಿನಃ ||

ಇತಿ ಶ್ರೀ ಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಪರ್ವತಪ್ರಕರಣೇ ವ್ರತಿಜನ ವಿರಕ್ತಜಂಗಮ ಶಿವಯೋಗ್ಯಭ್ಯಾಸ
ಯೋಗಿನಾಂ ತಚ್ಛ್ರೀಪರ್ವತಯಾತ್ರಾಕಥನಂನಾಮ
ಅಷ್ಟಮೋಽಧ್ಯಾಯಃ.

---

## ಅಥ ನವಮೋಽಧ್ಯಾಯಃ.

### ಪುಣ್ಯಾಂಗನಾಜನಾದೀನಾಂ ಶ್ರೀಶೈಲಂಪ್ರತ್ಯಾಗಮನಕಥನಂ.

ದೃಢಂಬದ್ಧ್ವಾಽಂಬರಂಸ್ವಲ್ಪತರಂಗೈಃ ಪುರತೋಽಂಚಿತಂ|ಉಪಾನದ್ಯು
ಗಳಂ ಯಾತ್ರಾಯೋಗ್ಯಮಾಕ್ರಮ್ಯಸಾದರಂ ||೧|| ಅಂಗೇಕೂರ್ಪಾಸಕಂಧೃ

---

ತಮ್ಮ ಅನುಭವಸಿದ್ಧಿಯಿಂದ ಅರಿತುಕೊಳ್ಳಬಲ್ಲವರಾಗಿಯೂ, ಯೋಗಸಿದ್ಧಿಯಿಂದ ತಮ್ಮ ದೇಹದಲ್ಲಿ ಸುಕ್ಕು ನರೆ ಮೊದಲಾದ ಮುಪ್ಪಿನ ಲಕ್ಷಣಗಳೊಂದೂ ಇಲ್ಲದವರಾಗಿಯೂ, ಮನೋಹರಾಕಾರರಾಗಿಯೂ, ಯಮನಿಯಮಾದಿ ಅಷ್ಟಾಂಗಯೋಗಸಾಧನದಿಂದ ಲಭಿಸಿರುವ ಅಣಿಮಾದ್ಯಷ್ಟಸಿದ್ಧಿಗಳನ್ನೂ, ಮೃತ್ಯುಜಯ ಪರಕಾಯಪ್ರವೇಶ ಮೊದಲಾದ ದಶಪ್ರತ್ಯಯಗಳನ್ನೂ ಪಡೆದುಕೊಂಡಿರುವವರಾಗಿಯೂ ಇರುವ ಅಭ್ಯಾಸಯೋಗಿಗಳು, ಯೋಗಶಾಸ್ತ್ರಸಂಬಂಧಗಳಾದ ಘಟ್ಟುಗಳುಳ್ಳ ಚೌಪದಗಳನ್ನು ಹಾಡಿಕೊಂಡು, ಲೌಕಿಕ ಜನರ ಸಂಗವನ್ನು ಬಿಟ್ಟು ದೂರದಲ್ಲಿ ಹೋಗುತ್ತಿದ್ದರು. ||೧೦೬||

ಎಂಬಲ್ಲಿಗೆ ವ್ರತಿಜನರೂ ವಿರಕ್ತಜಂಗಮರೂ ಶಿವಯೋಗಿಗಳೂ ಅಭ್ಯಾಸಯೋಗಿಗಳೂ ಶ್ರೀಶೈಲಕ್ಕೆ ಹೋಗುತ್ತಿದ್ದುದನ್ನು ವರ್ಣಿಸುವ ೮ನೆ ಅಧ್ಯಾಯವು ಮುಗಿದುದು.

---

## ೯ನೆ ಅಧ್ಯಾಯವು.

### ಪುಣ್ಯಾಂಗನಾದಿಜನರು ಶ್ರೀಶೈಲಯಾತ್ರೆಗೆ ಹೋಗುತ್ತಿದ್ದುದರ ವರ್ಣನೆ.

ಇನ್ನು ಆ ಪರಿಸೆಯಲ್ಲಿ ಕೂಡಿ ಹೋಗುತ್ತಿದ್ದ ಕುಲಾಂಗನೆಯರ ವರ್ಣನೆ ಹೇಗೆಂದರೆ— ಸ್ವಲ್ಪವೇ ನಿರಿಗಳುಳ್ಳ ಸೀರೆಯನ್ನುಟ್ಟು ಅದನ್ನು ಬಿಗಿದು ಕಟ್ಟಿ, ಪ್ರಯಾಣಕ್ಕೆ ಅನುಕೂಲವಾ

ಶ್ವಾ ಮೃದುಕಿಂಚಿತ್ಪರಿಶ್ಲಥಂ | ವಿಧಾಯಮೃದುಭಿರ್ನವ್ಯೈ ರಂಶುಕೈರವಕುಂಠನಂ ||೨|| ಅವಿಶ್ಲಥಂವಲ್ಲರೀಭಿ ರಾಬದ್ಧ್ಯ ಚಸಮಂತತಃ | ಮಾಭೂತ್ತಿರೋಹಿತಾಸ್ವೀಯತನುಚ್ಛಾಯೇತಿಬುದ್ಧಿತಃ ||೩|| ನಿಜಾಂಗೇಷುಪರಿತ್ಯಜ್ಯ ಭೂಷಣಾಶ್ಯಖಿಲಾನ್ಯಪಿ | ಧೃತ್ವಾಮಂಗಳಸೂತ್ರಾಣಿ ಕೇವಲಂ ಕಂಠಭಾಗತಃ ||೪|| ಪರಿಶ್ರಾಂತಾಅಪಿ ಸ್ವೀಯಪತೀನಾಮಗ್ರತೋಭೃಶಂ | ಮುಹುರ್ಮುಹುರ್ಬಲಂಮಾರ್ಗೇದರ್ಶಯಂತ್ಯಸ್ತತಸ್ತತಃ ||೫|| ದರ್ಶಯಂತ್ಯಃಪರಿಶ್ರಾಂತಾಇವ ಕಾಶ್ಚಿನ್ಮನೋಹರಾನ್ | ಅಶ್ರಾಂತಾಅಪಿ ತನ್ಮಾರ್ಗೇ ಪತೀನಾಂ ನಿಜವಿಭ್ರಮಾನ್ ||೬|| ಸಮುನ್ನತಸ್ಥಲಾನ್ಯಾತ್ಮ ಪತಿಹಸ್ತಾನ್ಸ್ವಕೈರ್ದೃಢಂ | ಶನೈಸ್ಸಮಾಲಂಬ್ಯ ಕರೈ ರಾರೋಹಂತ್ಯಶ್ಚ ಕಾಶ್ಚನ ||೭|| ಸಮಾದಾಯಸ್ವೇದಬಿಂದೂನ್ಸ್ವಿಕ್ಷಿಪಂತ್ಯೋನಖಾಂಚಲೈಃ | ಚಂದನಕ್ಷ್ಮಾರುಹಚಲನಚತುರೈರ್ಮಂದವಾಯುಭಿಃ || ಪ್ರಹೃಷ್ಯಂತ್ಯೋ ಮಧುಕರವ್ರಾತಪಕ್ಷತಿತಾಡನಾತ್ | ಕಿರತ್ಪ್ರಸೂನಸಂದೋಹೇ ಕುರ್ವಂತ್ಯೋ ನಿಜಮಸ್ತಕಾನ್ ||೯|| ಸಾಂದ್ರಚೂತವಟಚ್ಛಾಯಾಸ್ಥಲೀಷು ಸ್ಥಾತುಮುತ್ಸುಕಾಃ | ಪ್ರಸರತ್ಪುಷ್ಪನಿಕರಸೌರಭ್ಯಪರಿಹರ್ಷಿತಾಃ ||೧೦|| ಅತ್ಯಂತಶೋಷಮಾಯಾತಾನ್ನಿಜಬಿಂಬಾಧರಾನ್ಪಥಿ | ಸಂಸೇಚಯಂತ್ಯಸ್ತಾಂಬೂಲರಸೇನಚ ಮುಹುರ್ಮುಹುಃ || ೧೧ || ಸಸ್ವಾನನಸರೋಜಾನಿ ಘಟಂತೇ

---

ಗಿರುವ ಕೆರವನ್ನು ಮೆಟ್ಟಿ, ಮೃದುವಾದ ರವಕೆಯನ್ನು ಸ್ವಲ್ಪ ಸಡಿಲವಾಗಿ ತೊಟ್ಟು, ತಮ್ಮ ದೇಹದ ಕಾಂತಿಯು ಬಿಸಿಲಿನ ಜಳದಿಂದ ಕುಂದಬಾರದೆಂದು ದುಪ್ಪಟದ ಮೇಲ್ಮುಸುಕನ್ನು ಹಾಕಿಕೊಂಡು, ಅದು ಜಾರಿಹೋಗದಂತೆ ಸುತ್ತಲೂ ಕುಚ್ಚಿನ ಕಸೆಗಳಿಂದ ಕಟ್ಟಿ ||೩|| ಕಂಠದಲ್ಲಿ ತಾಲಿಯೊಂದರ ಹೊರತು ಉಳಿದ ದೇಹದ ಆಭರಣಗಳನ್ನೆಲ್ಲಾ ತೆಗೆದುಬಿಟ್ಟು, ನಡೆನಡೆದು ತಾವು ಬಳಲಿದ್ದರೂ ತಮ್ಮ ಗಂಡಂದಿರಿದಿರಿಗೆ ಮಾರ್ಗದಲ್ಲಿ ಬಿರಿಸಾಗಿ ನಡೆದು ತಮ್ಮ ಶಕ್ತಿಯನ್ನು ತೋರ್ಪಡಿಸುತ್ತ ಕೆಲವರು ಕುಲಸ್ತ್ರೀಯರು ಹೋಗುತ್ತಿದ್ದರು. ಇನ್ನು ಕೆಲವರು ಬಳಲದೆಇದ್ದರೂ ತಮ್ಮ ಗಂಡಂದಿರಿದಿರಿಗೆ ತಾವು ಬಳಲಿದವರಂತೆ ಹಾವಭಾವಗಳನ್ನು ತೋರ್ಪಡಿಸುತ್ತಿದ್ದರು. ಇನ್ನು ಕೆಲರು ತಮ್ಮ ಗಂಡಂದಿರ ಕೈಗಳಮೇಲೆ ತಮ್ಮ ಕೈಗಳನ್ನಿಟ್ಟು ಬಲವಾಗಿ ಹಿಡಿದುಕೊಂಡು ಡಿಣ್ಣೆಯಾಗಿರುವ ಸ್ಥಲಗಳನ್ನು ಮೆಲ್ಲನೆ ಹತ್ತುತ್ತಿದ್ದರು. ||೭|| ಇನ್ನು ಕೆಲರು ತಮ್ಮ ದೇಹದ ಬೆಮರನ್ನು ಬಳಿದು ಉಗುರುಕೊನೆಗಳಿಂದ ಚಿಮ್ಮುತ್ತಲೂ, ಶ್ರೀಗಂಧದ ಮರಗಳಮೇಲೆ ಬೀಸಿ ಅಲ್ಲಾಡಿಸಿಬಿಟ್ಟು ಬಂದ ಸುಳಿಗಾಳಿಯು ತಮ್ಮ ಮೇಲೆ ಬೀಸಿದರೆ ಅದರಿಂದ ಆನಂದಪಡುತ್ತಲೂ, ತುಂಬಿಗಳ ಗರಿಗಳೇಟಿನಿಂದ ಉದುರಿ ಬಿದ್ದಿರುವ ಹೂವುಗಳಮೇಲೆ ತಮ್ಮ ಮಂಡೆಗಳನ್ನಿಟ್ಟು, ದಟ್ಟವಾಗಿರುವ ಮಾವಿನ ಮರಗಳ ನೆಳಲಿನಲ್ಲಿ ಕುಳಿತುಕೊಳ್ಳಲಿಕ್ಕೆ ಕುತೂಹಲಪಡುತ್ತಲೂ, ಹೂವುಗಳಿಂದ ಸುರಿಯುತ್ತಿರುವ ಪರಾಗದ ಪರಿಮಳದಿಂದ ಆನಂದಿ

ಮ್ಲಾನತಾಂ ಯಥಾ | ವ್ಯವಧಾನಂ ತಥಾ ಸಮ್ಯಕ್ಕುರ್ವಂತ್ಯಃ ಪಲ್ಲವೈರ್ನವೈಃ ||
ಮಾಭೂವನ್ನಮುಪಾಲಕ್ಷ್ಯರಕ್ತಾಸ್ಸ್ವೀಯಕರಾ ಇತಿ | ಸ್ವಕಟೀತಟವಿನ್ಯಸ್ತ
ಹಸ್ತಾಸ್ಸತ್ಯಸ್ತತಸ್ತತಃ ||೧೩|| ಅನ್ಯೋನ್ಯಮೂರುಯುಗಳಂ ಸಂಘರ್ಷಂ ಮಾ
ವ್ರಜೇದಿತಿ | ಶನೈಶ್ಶನೈಸ್ಸಮಾಯಾಂತ್ಯೋ ರಾಜಹಂಸಾ ಇವಾಧ್ವನಿ ||೧೪||
ಶ್ರಮೋಪಶಾಂತ್ಯೈ ಹೃದಯೇ ವದಂತ್ಯೋ ಮಲ್ಲಯೇತಿ ಚ | ನಿದಾಘತಾಪಶಾಂ
ತ್ಯರ್ಥಂ ವದಂತ್ಯಶ್ಶ್ರೀನಗೇತ್ಯಚ ||೧೫|| ಏವಂ ಸ್ವಕೀಯಪುರುಷೈಸ್ಸಾಕಂ
ಪುಣ್ಯಾಂಗನಾ ಯಯುಃ | ಬುಜುಸೀಮಂತರೇಖಾಭಿರ್ಹ್ರಸ್ವೈರಪಿಶಿರೋರು
ಹೈಃ ||೧೬|| ಆಗುಲ್ಫಲಂಬಿಭಿಶ್ಚೇಲೈರ್ವರ್ತುಲೈಸ್ತಿಲಕಪ್ರಜೈಃ | ಆರಕೂಟಕೃ
ತೈಃ ಕಂಠಸೂತ್ರೈರಾಯಸಲಂಬನೈಃ ||೧೭|| ಪಾದಾಂಗುಲೀಯೈಸ್ತ್ರಪುಣಾ
ನಿರ್ಮಿತೈಃ ಕೇಶದಾಮಭಿಃ | ನಾನಾವರ್ಣೈಃ ಕಂಚುಕಾಖ್ಯೈಃ ಕಟಕೈಃ ಕಾಚನಿ
ರ್ಮಿತೈಃ ||೧೮|| ಕರ್ಣಸ್ಥೈಶ್ಶಂಖಮಣಿಭಿರ್ಹಾರೈರ್ನಾನಾಮಣಿವ್ರಜೈಃ |
ಸವಿಲಾಸೈಸ್ಸಾಂಜನೈಶ್ಚ ಕುಟಿಲೈರವಲೋಕನೈಃ ||೧೯|| ನಾಸಿಕಾಮಣಿಭಿಸ್ಸ್ವ
ಚ್ಛಸ್ಫಟಿಕೋಪಲನಿರ್ಮಿತೈಃ | ವಿರಾಜಿತಾಸು ಸ್ವಕರೈರ್ಗೃಹೀತ್ವಾ ಶುಕಶಾರಿ

---

ಸುತ್ತಲೂ, ಬಹಳ ಒಣಗಿಹೋದ ತಮ್ಮ ತೊಂಡೆವಣ್ಣುಟಿಗಳನ್ನು ಬಾರಿಬಾರಿಗೂ ತಾಂಬೂಲ ವನ್ನಗಿದ ರಸದಿಂದೊರಸಿ ಆರ್ದ್ರಗೊಳಿಸುತ್ತಲೂ, ತಮ್ಮ ಮುಖಕಮಲಗಳು ಬಿಸಿಲತಾಪದಿಂದ ಬಾಡಿಹೋಗದಂತೆ ಹೊಸಹೊಸ ಚಿಗುರುಗಳಿಂದ ಮುಖಕ್ಕೆ ಮರೆಮಾಡಿಕೊಳ್ಳುತ್ತಲೂ ||೧೩|| ತಮ್ಮ ಕೈಗಳ ಕೆಂಬಣ್ಣವು ಅಳಿಸಿಹೋಗಬಾರದೆಂದು ಅವುಗಳನ್ನು ಸೊಂಟದಮೇಲಿಟ್ಟುಕೊಂಡು ಹೋಗುತ್ತಲೂ, ತೊಡೆಗಳು ಒಂದಕ್ಕೊಂದು ಮಸೆಯಬಾರದೆಂದು ರಾಜಹಂಸಪಕ್ಷಿಗಳಂತೆ ಮೆಲ್ಲನೆ ನಡೆಯುತ್ತಲೂ, ದಣಿವನ್ನಾರಿಸಿಕೊಳ್ಳುವುದಕ್ಕಾಗಿ ಮನಸ್ಸಿನಲ್ಲಿ ಮಲ್ಲಿಕಾರ್ಜುನ ನಾಮಸ್ಮರಣೆ ಮಾಡುತ್ತಲೂ, ಬಿಸಿಲ ಬೇಗೆಯ ಶಾಂತಿಗಾಗಿ ಮನದಲ್ಲಿ ಶ್ರೀಶೈಲಸ್ಮರಣೆಯನ್ನು ಮಾಡುತ್ತಲೂ, ಹೀಗೆ ತಂತಮ್ಮ ಗಂಡಂದಿರೊಡನೆ ಕೂಡಿಕೊಂಡು ಕುಲಾಂಗನೆಯರು ಪ್ರಯಾಣಮಾಡುತ್ತಿದ್ದರು. ||೧೫|| ಮತ್ತು ಕಾಪಾಲಿಕ ಯೋಗಿಗಳು ತಂತಮ್ಮ ಸ್ತ್ರೀಯರೊಡನೆ ಕೂಡಿ ಹೇಗೆ ಹೋಗುತ್ತಿದ್ದರೆಂದರೆ—ತಲೆಕೂದಲುಗಳು ತುಂಡಾಗಿದ್ದರೂ ಬೈತಲೆಯನ್ನು ಉದ್ದವಾಗಿ ತೆಗೆದು, ಕಣಕಾಲವರೆಗೂ ಇಳಿಯ ಬಿದ್ದಿರುವ ಲಂಗಗಳನ್ನುಟ್ಟು, ಹಣೆಗೆ ಗುಂಡಾದ ತಿಲಕವನ್ನಿಟ್ಟು, ತಾಮ್ರದ ತಾಲಿಯನ್ನು ಕಟ್ಟಿ, ಕಬ್ಬಿಣದ ಕಾಲುಂಗರಗಳನ್ನಿಟ್ಟು, ಸೀಸದ ಚೌಲಿಕುಪ್ಪಿಗೆಗಳನ್ನು ಧರಿಸಿ, ಹಲವು ಬಣ್ಣದ ರವಕೆಗಳನ್ನು ತೊಟ್ಟು, ಗಾಜಿನ ಬಳೆಗಳನ್ನೂ, ಶಂಖದ ಮಣಿಯ ಓಲೆಗಳನ್ನೂ, ಕರಿಮಣಿ ಬಿಳಿಮಣಿ ನೀಲಮಣಿ ಮೊದಲಾದುವುಗಳ ಹಾರಗಳನ್ನೂ ಧರಿಸಿಕೊಂಡು, ಕಾಡಿಗೆಯನ್ನಿಟ್ಟಿರುವ ಡೊಂಕುಕಣ್ಣುಗಳಿಂದ ಚಪಲವಾಗಿ ನೋಡುತ್ತ, ಪಟಿಕದ ಮೂಗುಬಟ್ಟನ್ನಿಟ್ಟುಕೊಂಡು, ಕೈಗಳಮೇಲೆ ಗಿಳಿಗಳ

ಕಾಃ ‖೨೦‖ ರುರುಗಡ್ಡರಭಲ್ಲೂಕ ಕಪಿಗೋಮಾಯುಬರ್ಕರಾನ್ । ಮೃಗ ಮೂಷಕಚಿಕ್ರೋಡ ನಕುಲಾಸ್ಬರ್ಹಿಣವ್ರಜಾನ್ ‖೨೧‖ ಚಟಕಾಸ್ಕುಕ್ಕುಟಚ ಯಾ ನ್ನಿಜಕಾನ್ತಾಸುಸಾದರಂ । ಸಮಾಯಾಂತೀಷುಶಸಕ್ತೈಃ ಪಶ್ಚಾದ್ಭಾಗೇ ಷುಲೀಲಯಾ ‖ ೨೨ ‖ ನಾನಾವರ್ಣೈರ್ಜೀರ್ಣವಸ್ತ್ರೈಃ ಕೃತೈರ್ಮರ್ಧ್ಯೇನರಂ ಧೃಕೈಃ । ಕಂಥಾಚಯೈಃ ಕಂಠಲಗ್ನೈ ಸ್ಸ್ವರೂಪೈರ್ವಿಷಮೈರಪಿ ‖೨೩‖ ವಿಕೀ ರ್ಣಹ್ರಸ್ವಕೇಶೈಶ್ಚ ಸಾಂಜನೈಃ ಪಿಂಗಳಾಕ್ಷಿಭಿಃ । ಇಷ್ಟಿಕಾತಿಲಕವ್ಯೂಹೈರಲಾ ಬೂಕೃತಖರ್ಪರೈಃ ‖೨೪‖ ಕರ್ಣನ್ಯಸ್ತೈ ರ್ಶೃಂಗಚಯೈ ರ್ಧೃತಮತ್ಸ್ಯಾಸ್ಥಿಜಾ ಲಕೈಃ । ಕಕ್ಷಸ್ಥಿತೈಶ್ಚರ್ಮಭಸ್ತ್ರೀಚಯೈ ಶ್ಚಕ್ರೈರಯೋಮಯೈಃ ‖೨೫‖ ವಿಕ ಟೋರಸ್ಥಲೈಸ್ಸ್ಥೂಲಕುಕ್ಷಿಭಿಃ ಪೀವರೋರುಭಿಃ । ಉಚ್ಛೂನವಕ್ತ್ರೈರ್ವಿರಲೈಃ ಪಿಂಗಳಶ್ಮಶ್ರುಜಾಲಕೈಃ ‖೨೬‖ ಅತ್ಯಂತವಿಕೃತೈರ್ವೇಷೈ ರ್ವಿರಸೈರ್ವಚನೋ ತ್ಕರೈಃ । ಶರೀರೈರ್ಮೇಚಕಚ್ಛಾಯೈ ರ್ವಿಲಾಸಗಮನೈರಪಿ ‖೨೭‖ ಆಯೋಂ ಗುಲೀಯಕೈ ರ್ದೀರ್ಘಕೌಪೀನೈರೋಡ್ಡಿಯಾಣಕೈಃ । ಆಯಸೈಸ್ಸೂಕ್ಷ್ಮವಲ ಯೈ ರ್ದಾಮಭಿರ್ವಿವಿಧೈರಪಿ ‖೨೮‖ ವಸ್ತ್ರಖಂಡೋಲ್ಲಸದ್ಗುಚ್ಛೈ ರ್ದಂಡೈರಾ ತಪವಾರಣೈಃ । ವಸ್ತ್ರಖಂಡೋಪರಚಿತಪಟ್ಟೈ ರ್ಮುದ್ರಾಪ್ರಸೇವಕೈಃ ‖೨೯‖

---

ನ್ನೂ ಗೊರವಂಕಗಳನ್ನೂ ಕುಳ್ಳಿರಿಸಿಕೊಂಡು, ಹುಲ್ಲೆ, ಆಡು, ಕರಡಿ, ಕಪಿ, ನರಿ, ಹೋರಿ, ಜಿಂಕೆ, ಇಲಿ, ಉಡ, ಕೀರ, ನವಿಲು, ಗುಬ್ಬಚ್ಚಿ, ಕೋಳಿ—ಇವುಗಳನ್ನೆಲ್ಲಾ ಹಿಡಿದುಕೊಂಡು ಹಿಂಗೆಡೆಯಲ್ಲಿ ಮೆಲ್ಲಮೆಲ್ಲನೆ ಬರುತ್ತಿರಲು, ಅವರ ಗಂಡಂದಿರಾದ ಕಾಪಾಲಿಕರು, ಹರಿದು ತೂತುಬಿದ್ದಿರುವ ನಾನಾ ಬಣ್ಣದ ಬಟ್ಟೆಯ ಹೊದಿಕೆಯನ್ನು ಕೊರಲಿಗೆ ಸುತ್ತಿಕೊಂಡು, ವಿಕೃತಾಕಾರಗಳಾಗಿ ಕೆದರಿದ ಮೋಟು ಕೂದಲುಗಳುಳ್ಳವರಾಗಿ, ಕಾಡಿಗೆ ಬಳಿದ ಕೆಂಗಣ್ಣುಗಳುಳ್ಳವರಾಗಿ, ಹಣೆಗಳಲ್ಲಿ ಇಟ್ಟಿಗೆ ಕೆಮ್ಮಣ್ಣಿನ ಬಟ್ಟುಗಳನ್ನಿಟ್ಟವರಾಗಿ, ಸೋರೆಯ ಬುರುಡೆಯಪಾತ್ರೆಯನ್ನು ಹಿಡಿದು, ಕಿವಿಗಳಿಗೆ ಕೊಂಬಿನ ಕಡಕುಗಳನ್ನಿಟ್ಟು, ಮೀನು ಮೂಳೆಗಳ ಸರಗಳನ್ನು ಹಾಕಿಕೊಂಡು, ಕಂಕುಳಲ್ಲಿ ಚಕ್ಕಳದ ಚೀಲವನ್ನೂ ಕಬ್ಬಿಣದ ಚಕ್ರಗಳನ್ನೂ ತಗುಲಿಹಾಕಿಕೊಂಡು ‖೨೫‖ ಆಗಲವಾದ ಎದೆಯನ್ನೂ, ದೊಳ್ಳು ಹೊಟ್ಟೆಯನ್ನೂ, ದಪ್ಪ ತೊಡೆಗಳ್ನೂ, ಉಬ್ಬಿದ ಮುಖಗಳನ್ನೂ, ಹಕ್ಕಲಾದ ಮೀಸೆಗಳನ್ನೂ, ಕರಿಯ ಮೈಯನ್ನೂ, ಅತ್ಯಂತ ವಿಕಾರವೇಷವನ್ನೂ ಹೊಂದಿ, ಒರಟುಮಾತುಗಳನ್ನಾಡುತ್ತ, ಜೋಕಿನಿಂದ ನಡೆಯುತ್ತ, ಕಬ್ಬಿನದ ಉಂಗುರುಗಳನ್ನಿಟ್ಟು, ಉದ್ದನಾದ ಕೌಪೀನವನ್ನು ಕಟ್ಟಿ, ಕಬ್ಬಿಣದ ನಡುವಿನ ಪಟ್ಟಿಯನ್ನೂ, ಕಬ್ಬಿಣದ ಕೈಬಳೆಗಳನ್ನೂ ತೊಟ್ಟು, ನಾನಾತರದ ಮಾಲೆಗಳನ್ನು ಕೊರಲಿಗೆ ಹಾಕಿಕೊಂಡು, ಬಟ್ಟೆಯ ಚೂರುಗಳ ಗೊಂಡೆಯನ್ನು ಕಟ್ಟಿದ ದೊಣ್ಣೆಗಳನ್ನೂ, ಕೊಡೆಗಳನ್ನೂ, ಚಿಂದಿಗಳನ್ನು ಸೇರಿಸಿ ಹೊಲಿದ ಕವಿದಿಯನ್ನೂ, ಮುದ್ರೆಯುಂಗುರಗಳನ್ನೂ ಧರಿಸಿ, ಬಿದಿರಕಟ್ಟೆಯನ್ನೂ, ಹಗ್ಗ

ರಜ್ಜುಭಿರ್ಘನಸಾರಾಜನಿಚಯೈಃ ಪರಿಶೋಭಿತಾಃ । ಶಿವಭಕ್ತೈಃಕ್ಷೀಲವದ್ಭಿಃ
ಕೃತಸತ್ರೇಷುಸತ್ವರಂ ॥ ೩೦ ॥ ನಿರೋಧಯಿಷ್ಯೇತ್ಯಾಭವಿನಇತಿ ಕಂಠೇಷುತತ್ಕ್ಷ
ಣಾತ್ । ಭುಕ್ತ್ಯೈ ವಹಂತೋಲಿಂಗಾನಿ ಸೇವ್ಯಮಾನಾಸ್ಸ್ವಯೋಗಿಭಿಃ ॥೩೧
ಕಾಪಾಲಿಕವ್ರತಧರಾ ಯೋಗಿನಃ ಪ್ರಯಯುರ್ಮುದಾ । ಅಂಗುಲೀವರ್ಜಿತೈಃ
ಪಾದೈರಧಿಕಾಂಗುಲಿಭಿಃಪದೈಃ ॥೩೨॥ ಅರ್ಧಪಾದೈಶ್ಚ ಸಂಯುಕ್ತಾಃ ಕೇಚಿದ್ವ
ಕ್ರಪಾದಾಸ್ತಥಾ । ಚರ್ಮಪಾದಾ ಶ್ಶುಷ್ಕಪಾದಾಃ ಕಠಿನಗ್ರಂಥಿಜಾನುಕಾಃ ॥
ಕುಬ್ಜಪಾದಾ ಶ್ಶೈಕಪಾದಾಸ್ತಿರ್ಯಗ್ಗತಪದಾಸ್ತಥಾ । ದಾರುಹಸ್ತಾಧಾರಚರಾಃ
ಕೇಚಿದ್ವಕ್ರಿತಬಾಹವಃ ॥೩೪॥ ಚರ್ಮಹಸ್ತಾಶ್ಶೈಕಹಸ್ತಾಃ ಖರ್ವಹಸ್ತಾಸ್ತ
ಥಾಪರೇ । ಪೃಷ್ಠಭಾಗೈಶ್ಚ ವಿಕಟೈ ರ್ವಿಕಟೋರಸ್ಥಲೈರ್ಯುತಾಃ ॥೩೫॥ ಪಶ್ಚಾ
ನ್ನಪ್ರಭುಜಾಃ ಕೇಚಿದಂಸಲಗ್ನಗಳಾಃಪರೇ । ವಕ್ರಕಂಠಾದೀರ್ಘಪೃಷ್ಠಾಃ ಖ
ಲ್ವಾಟಾವಿಕಟಾನನಾಃ ॥೩೬॥ ಋತೇಽಧಃಕಾಯಮೂರ್ಧ್ವಾಂಗೇ ವರಸೌಂದ
ರ್ಯಸಂಯುತಾಃ । ಜನಾನಾಂಸ್ವಾನಿಸಂದರ್ಶ್ಯ ಜೀವಜ್ಜಾಯಾತ್ಮಜಾದಯಃ ॥
ರುದ್ರಾಕ್ಷಮಾಲಾಭರಣಾ ಭಸ್ಮೋದ್ಧೂಳಿತವಿಗ್ರಹಾಃ । ಜಟಾಧರಾಲಿಂಗಯು

---

ಗಳನ್ನೂ, ಬಾಣಗಳ ಹೊರೆಯನ್ನೂ ಹೊತ್ತು, ಮಾರ್ಗದಲ್ಲಿ ಅಲ್ಲಲ್ಲಿಗೆ ಶಿವಭಕ್ತರುಗಳು ಕಟ್ಟಿ
ಸಿರುವ ಅನ್ನಸತ್ರಗಳಿಗೆ ಊಟಕ್ಕಾಗಿ ನುಗ್ಗಿದರೆ ಭವಿಗಳೆಂದು ತಮ್ಮನ್ನೆಲ್ಲಾದರೂ ತಡೆದುಬಿ
ಟ್ಟಾರೆಂಬ ಭೀತಿಯಿಂದ ಕೊರಲಿಗೆ ಲಿಂಗಗಳನ್ನು ಬೇಗನೆ ಕಟ್ಟಿಕೊಂಡು, ತಮ್ಮಂಥ ಜೋಗಿಗ
ಳಿಂದ ಸೇವಿಸಿಕೊಳ್ಳುತ್ತ, ಕಾಪಾಲಿಕಮತದ ಜೋಗಿಗಳು ಸಂತೋಷದಿಂದ ಪ್ರಯಾಣಮಾಡುತ್ತಿ
ದ್ದರು.॥೩೨॥ಇವರಲ್ಲದೆ ನಾನಾತೆರದಲ್ಲಿ ಅಂಗಹೀನರಾದ ಯಾಚಕರು ಎಂದರೆ-ಬೆರಳುಗಳಿಲ್ಲದ
ಕಾಲಿನವರು, ಹೆಚ್ಚು ಬೆರಲುಗಳುಳ್ಳ ಕಾಲಿನವರು, ಅರಗಾಲಿನವರು, ಡೊಂಕುಗಾಲಿನವರು,
ಮೂಳೆಯಿಲ್ಲದೆ ನೇತಾಡುವ ತೊವಲು ಪಾದದವರು. ಬತ್ತಿಹೋಗಿರುವ ಕಾಲಿನವರು, ಗಂಟು
ಕಟ್ಟಿದ ಮಂಡಿಯವರು, ಗೂನುಗಾಲಿನವರು, ಒಂಟಗಾಲಿನವರು, ಅಡ್ಡಗಾಲಿನವರು, ಕಾಂಕ
ಳಿಗೆ ಊರುಗೋಲುಗಳನ್ನು ಸಿಕ್ಕಿಸಿಕೊಂಡು ನಡೆಯುವವರು, ಡೊಂಕು ತೋಳಿನವರು ॥೩೪
ತೆರುಳಿಲ್ಲದೆ ಬತ್ತಿದ ತೊವಲುಗೈಯವರು, ಒಕ್ಕೈಯವರು, ಗುಜ್ಜುಗೈಯವರು, ಗೂನುಬೆನ್ನಿನ
ವರು, ಉಬ್ಬೇರಿದ ಎದೆಯವರು, ಹಿಂದಕ್ಕೆ ಬಾಗಿದ ಭುಜವುಳ್ಳವರು, ಒಳಕ್ಕೆ ಹೂತುಕೊಂಡ
ಕತ್ತುಳ್ಳವರು, ಓರೆಗೊರಲಿನವರು, ಸಿಗುರಿದ ಬೆನ್ನಿನವರು, ಬೊಕ್ಕತಲೆಯವರು, ವಿಕಾರ ಮು
ಖದವರು, ಕೀಳಾಯದಲ್ಲಿ ಅವಲಕ್ಷಣವಾಗಿ ಮೇಲಾಯದಲ್ಲಿ ಸೌಂದರ್ಯವುಳ್ಳವರು, ತಮ್ಮ
ವಿಕಲಾಂಗವನ್ನು ಜನರಿಗೆ ತೋರಿಸಿಕೊಂಡು ಯಾಚಿಸಿದ ಹಣದಿಂದ ಹೆಂಡಿರು ಮಕ್ಕಳನ್ನು
ಸಲಹಿಕೊಂಡಿರುವವರು ಇವರೆಲ್ಲಾ ಪರಿಸೆಯ ಜತೆಗೆ ಹೋಗುತ್ತಿದ್ದರು.॥೩೭॥ಮತ್ತು ಭಸ್ಮೋ
ದ್ಧೂಳನವನ್ನು ಮಾಡಿಕೊಂಡು, ರುದ್ರಾಕ್ಷಿಯ ಸರಗಳನ್ನು ಧರಿಸಿ, ಜಡೆಗಳನ್ನು ಕಟ್ಟಿ, ಲಿಂಗದ

ಕ್ತ್ರಾ ಸ್ಸಜ್ಜಿಕಾಭಾಸಿಕಂಧರಾಃ ||೩೮|| ಮಹಿಷಾನ್ಪೀವರತಸೂನ್ ಹ್ರಸ್ವಾನನ ಜುಹೋಪಿಜ | ಆರುಹ್ಯಾತ್ಯಂತದೈನ್ಯೇನ ಲಕ್ಷಿತಾಃ ಪಶ್ಯತಾಂನೃಣಾಂ ||೩೯|| ಉತ್ಪಾದಯಂತ ಕರುಣಾಂ ಕುರ್ವಂತಃ ಪಾವನಂಜಗತ್ | ಅಹರೇವಂಸಮಾಗತ್ಯ ಯುತಾಸ್ಸಾಯಂಪರಸ್ಪರಂ ||೪೦|| ಆಸಾದ್ಯತತ್ಪರಿಷದ ಸ್ಸನ್ನಿವೇಶಂ ಶನೈಶ್ಶನೈಃ | ಪುರಃಪಶ್ಚಾದಾತ್ಮವರ್ಗ್ಯೈ ರ್ದಾನಮೇವಹಿಸಂಗ್ರಹಃ ||೪೧|| ಇತ್ಯುಚ್ಚೈಕೈರುಚ್ಯಮಾನೇ ಸ್ವಯಂಚ ತದನಂತರಂ| ನಸುಯೇಕೇಚಿ ದತ್ರಾಸ್ಮದ್ವಿಧಾನ್ದೀನಾಸ್ಕೃಪಾದೃಶಾ ||೪೨|| ದೃಷ್ಟ್ವಾ ವಾಸಸ್ಸ್ವರ್ಣಕನ್ಯಾಕ್ಷೇತ್ರಾನ್ನಮಹಿಷೋಚ್ಚಯಾನ್ | ಬಲೀವರ್ದಾಂಶ್ಚದದತಾ ಬಸವೇಶೇನಭೂತಲೇ ||೪೩|| ಸದೃಶಾಃಕಿಮುಸದ್ಭಕ್ತಾ ವಿದ್ಯತೇಮಲ್ಲಿಕಾರ್ಜುನ | ಇತಿ ಸಮ್ಯಕ್ಪ್ರಶಂಸಂತೋ ಧಾರ್ಮಿಕಾನಖಿಲಾಂಸ್ತತಃ ||೪೪|| ಆತ್ಮೀಯವರ್ಗ್ಯೈಸ್ಸುತರಾಂ ದಾನಮೇವಹಿಸಂಗ್ರಹಃ | ಇತ್ಯುಚ್ಚಕೈರುಚ್ಯಮಾನೇ ಸ್ವಯಂಚತದನಂತರಂ ||೪೫|| ನಸುಯೇಕೇಚಿ ದತ್ರಾಸ್ಮದ್ವಿಧಾನ್ದೀನಾಸ್ಕೃಪಾದೃಶಾ | ದೃಷ್ಟ್ವೇಪ್ಸಿತದಾನಾನಿ ಕುರ್ವತಾಪ್ರೀತಿಪೂರ್ವಕಂ ||೪೬|| ಭಕ್ತೇನಸಿರಿಯಾಳೇನ ವೀರಚೋಳನುಪೇಭೃತಾ | ಏಣಾಧಿನಾಥೇನ ಕರಿಕಾಲಚೋಳಾವನೀಭುಜಾ ||೪೭|| ಚೇರಮೇಂದ್ರೇಣಾರ್ಯಮೇಣ ಸಿಂಧುವಲ್ಲಹಭೂಭೃತಾ | ಶ್ರೀಸಿದ್ಧರಾಮೇಣಕರ

---

ಕರಡಿಗೆಗಳನ್ನು ಕೊರಲಲ್ಲಿ ಧರಿಸಿಕೊಂಡು, ದೊಡ್ಡದೊಡ್ಡ ಕೋಣಗಳನ್ನೂ ಕುಂದು ಹೋರಿಗಳನ್ನೂ ಏರಿ, ನೋಡಿದ ಜನರಲ್ಲಿ ಕರುಣವನ್ನು ಹುಟ್ಟಿಸುತ್ತ, ಜಗತ್ತನ್ನು ಪಾವನಗೊಳಿಸುತ್ತ, ಹಗಲು ಹೀಗೆ ಸಂಚರಿಸಿಕೊಂಡು, ಸಾಯಂಕಾಲದ ಹೊತ್ತಿಗೆ ತಮ್ಮವರೆಲ್ಲರೂ ಒತ್ತಟ್ಟಿಗೆ ಕೂಡಿಕೊಂಡು, ಪರಿಷೆಯ ಹತ್ತಿರಕ್ಕೆ ಹೋಗಿ, ಮುಂಗಡೆಯೂ ಹಿಂದೆಯೂ ಇರುವ ತಮ್ಮವರೆಲ್ಲರೂ "ದಾನಮಾಡಿ ಧರ್ಮಾತ್ಮರೇ" ಎಂದು ಗಟ್ಟಿಯಾಗಿ ಕೂಗಿ ನಿಲ್ಲಿಸಿದಬಳಿಕ, ಅದರಂತೆ ತಾವೂ ಕೂಗುತ್ತ, ಆಮೇಲೆ-"ನಮ್ಮಂಥ ಕುಂಟ ಕುರುಡರಮೇಲೆ ದಯೆಯಿಟ್ಟು ಹೊನ್ನು ಹೆಣ್ಣು ಮಣ್ಣು ಅನ್ನ ಕೋಣ ಹೋರಿ ಮೊದಲಾದುವುಗಳನ್ನು ದಾನಮಾಡುತ್ತಿದ್ದ ಬಸವೇಶನಿಗೆ ಸಮಾನರಾದ ಸದ್ಭಕ್ತರು ಇಲ್ಲಿ ಯಾರಾದರೂ ಇದ್ದಾರೆಯೆ? ಮಲ್ಲಿಕಾರ್ಜುನಾ" ಎಂದು ದಾನಧರ್ಮಪರಾಯಣರಾದ ಸದ್ಭಕ್ತರ ಪ್ರಶಂಸೆಯನ್ನು ಮಾಡಿ ಕೂಗಿ ನಿಲ್ಲಿಸಿದಕೂಡಲೇ ಉಳಿದ ತಮ್ಮವರೆಲ್ಲಾ ಮತ್ತೆ "ದಾನಮಾಡಿ ಧರ್ಮಾತ್ಮರೇ" ಎಂದು ಗಟ್ಟಿಯಾಗಿ ಕೂಗಿ ನಿಲ್ಲಿಸಲು, ಮತ್ತೆ ತಾವೂ ಅದರಂತೆಯೇ ಕೂಗಿ ||೪೫|| ಬಳಿಕ–"ನಮ್ಮಂಥ ಬಡವರನ್ನು ಕರುಣಾದೃಷ್ಟಿಯಿಂದ ನೋಡಿ ಪ್ರೀತಿಯಿಂದ ಬೇಡಿದುದನ್ನು ಕೊಡುತ್ತಿದ್ದ ಸಿರಿಯಾಳಸೆಟ್ಟಿ, ವೀರಚೋಳರಾಜ, ಏಣಾಧಿನಾಥ, ಕರಿಕಾಲ ಚೋಳರಾಜ, ಚೇರಮರಾಜ, ಆರ್ಯಮರಾಜ, ಸಿಂಧುಬಲ್ಲಾಳರಾಜ, ಸಿದ್ಧರಾಮಯ್ಯ, ಕರಯೂರು ಚೋಳರಾಜ, ಸವರದನಾಚಯ್ಯ, ಶಿವಲಿಂಗಯ್ಯ, ಸಾಮವೇದಿ,

ಯೂರಜೋಲನೃಪೇಣಚ ॥ ೪೮ ॥ ಮಹಾತ್ಮನಾ ಸಮರದನಾಚಯ್ಯೇನೋನ್ನತೇನಚ । ಶಿವಲಿಂಗಾರ್ಯದೇವೇನ ಸಾಧುನಾಸಾಮವೇದಿನಾ ॥೪೯॥ ಶಾಲ್ಕಿಕಶ್ರೀಬಂಕಯೇನ ಕ್ಷುರಿಕಾಚೌಂಡಯೇನಚ । ಶ್ರೀಮಚ್ಛಂಕರದಾಸೇನ ಲಿಂಕಮಂಚಣಸೂರಿಣಾ ॥೫೦ ॥ ಬಾಹೂರಬ್ರಹ್ಮಣಾ ಬಾಚಿರಾಜೇನ ಮಹಿತಾತ್ಮನಾ । ಶ್ರೀಮತ್ತೆಲುಗಜೊಮ್ಮಯ್ಯದೇವೇನ ಗುಣಶಾಲಿನಾ ॥ ೫೧ ॥ ಶ್ರೀಮದ್ದೇವರದಾಸಾರ್ಯದೇವೇನಚ ಶಿವಾತ್ಮನಾ । ಸದೃಶಾಃಕಿಮು ಸದ್ಭಕ್ತಾ ವಿದ್ಯಂತೇ ಮಲ್ಲಿಕಾರ್ಜುನ ॥೫೨॥ ಭೋಭೋಸದ್ಧಾರ್ಮಿಕಾಸ್ತೂರ್ಣ ಮಾಹೂಯಾಸ್ಮಾನ್ಕೃಪಾನ್ವಿತಾಃ । ಬತೇತಿಬ್ರೂತಸನ್ಸಂತಿ ನಸಂಚಾಲಯಿತುಂಕರಾಃ ॥೫೩॥ ನಗಂತುಂಸಂತಿಚರಣಾಃ ಪಙ್ಗವಶ್ಚಾಂಧಕಾವಯಮ್ । ಅಭ್ಯಾಗತಾಶ್ಚರಕ್ಷಾನೋ ವಿಧಾತುಮುಚಿತಾಹಿವಃ ॥೫೪॥ ಬಸವಾಧೀಶಕರುಣಾ ಭವತಾಮಸ್ತುವಿಸ್ತೃತಾ । ಯುಷ್ಮಾಕಂ ಶ್ರೀಗಿರೀಶಸ್ಯ ಕೃಪಾಭೂಯಾನ್ಮಹೀತಲೇ ॥೫೫॥ ಇತ್ಯುಚ್ಚೈರುಪಗಾಯಂತಃ ಪುರಃಪಶ್ಚಾದವಸ್ಥಿತೈಃ । ಆತ್ಮೀಯವರ್ಗೈರ್ಭೂರ್ಯೋಪಿ ದಾನಮೇವಹಿಸಂಗ್ರಹಃ ॥೫೬॥ ಇತ್ಯುಚ್ಯಮಾನೇ ಶಂಸಾತೋಧಾರ್ಮಿಕಾನಿತರಾನ್ಸ್ವಹೂನ್ । ಸಾಮ್ಯಂ ಸಂದರ್ಶ್ಯಸದ್ಭಕ್ತ್ಯಾ ಯಾಚಮಾನಾನಿರಂತರಂ ॥೫೭॥ ಸಮಾಯಾಂತೀಂಪರಿಷದಂ ಕುರ್ವಂತಃ ಪಾವನಾತ್ಮಿಕಾಂ। ಬಹವಃಪಂಗವೋಽಗಚ್ಛನ್ ಘನಸಂತೋಷನಿರ್ಭರಾಃ ॥೫೮॥ ಆರಭ್ಯಸತತಂ

---

ಸುಂಕದ ಬಂಕಯ್ಯ, ಸುರಗಿ ಚಾಂಡಯ್ಯ, ಶಂಕರದಾಸಯ್ಯ, ಶಿವಲಿಂಕಮಂಚಣಪಂಡಿತ, ಬಾಹೂರು ಬ್ರಹ್ಮಯ್ಯ, ಬಾಚಿರಾಜಯ್ಯ, ತೆಲುಗು ಜೊಮ್ಮಯ್ಯ, ದೇವರದಾಸಯ್ಯ, ಇವರುಗಳಿಗೆ ಸಮಾನರಾದ ಸದ್ಭಕ್ತರು ಇಲ್ಲಿ ಯಾರಾದರೂ ಇದ್ದಾರೆಯೆ ಮಲ್ಲಿಕಾರ್ಜುನಾ! ಎಲೈ ಧರ್ಮಾತ್ಮರೆ! ಕೃಪೆಯಿಟ್ಟು ನಮ್ಮನ್ನು ಕರೆಯಿರಿ. ಕೈಯಿಲ್ಲ ಕಾಲಿಲ್ಲ ನಮಗೆ, ಕುಂಟರೂ ಕುರುಡರೂ ನಾವು, ಮಾರ್ಗಸ್ಥರಾದ ನಮ್ಮನ್ನು ನೀವೇ ಕಾಪಾಡಬೇಕು. ನಿಮ್ಮ ಮೇಲೆ ಬಸವೇಶನ ಕೃಪೆಯು ಸಂಪೂರ್ಣವಾಗಾಗಲಿ. ನಿಮಗೆ ಶ್ರೀಗಿರಿ ಮಲ್ಲೇಶನ ಕೃಪೆಯಾಗಲಿ,, ಎಂದು ಗಟ್ಟಿಯಾಗಿ ಹಾಡುತ್ತಲೂ, ಹಿಂಗಡೆ ಮುಂಗಡೆಯಲ್ಲಿದ್ದ ತಮ್ಮವರು ಮತ್ತೆ ,,ದಾನಮಾಡಿ ಧರ್ಮಮಾಡಿ ಧರ್ಮಾತ್ಮರಿರಾ,, ಎಂದು ಮತ್ತೆ ಗಟ್ಟಿಯಾಗಿ ಕೂಗುತ್ತಿದ್ದರು. ಬಳಿಕ ಮಧ್ಯದಲ್ಲಿದ್ದ ಕುಂಗಳರು ಪುನಃ ದಾನಶೂರರಾದ ಧಾರ್ಮಿಕ ಭಕ್ತರ ಹೆಸರುಗಳನ್ನು ಎತ್ತಿ ತರತರವಾಗಿ ಹೊಗಳಿ ದಾನಮಾಡುವುದಕ್ಕೆ ಭಕ್ತರನ್ನು ಪ್ರೋತ್ಸಾಹಪಡಿಸುತ್ತ ಅವರುಗಳಿಗೆ ಕರುಣವುಂಟಾಗುವಹಾಗೆ ದೀನಸ್ವರದಿಂದ ಪಾಡುತ್ತ, ಹೀಗೆ ಬೇಡಿ, ಅವರು ಕೊಟ್ಟುದನ್ನು ಈಸಿಕೊಂಡು, ಆ ಪಂಸೆಯನ್ನೆಲ್ಲಾ ಪುನೀತವನ್ನಾಗಿ ಮಾಡುತ್ತ, ಬಹು ಸಂತೋಷದಿಂದ ಹಲವರು ಅಂಗಹೀನರು ಹೋಗುತ್ತಿದ್ದರು. ॥೫೮॥ ಮತ್ತೆ ಕೆಲ ಪರಿಸೆಯ ಜನರು ತಮ್ಮನ್ನು ನೋಡಿದವರೆಲ್ಲರೂ ಹೊಗಳುತ್ತಿ

ಸ್ವಸ್ವಗ್ರಾಮನಿಷ್ಕ್ರಮಣಾತ್ಸದಾ | ಮಲ್ಲಿಕಾರ್ಜುನದೇವಸ್ಯ ದರ್ಶನಾವಧಿ ಭಕ್ತಿತಃ ||೫೯|| ಸ್ತುತಿಂಕುರ್ವತ್ಸುಸೇವೀಕ್ಷ್ಯವೀಕ್ಷಕೇಷು ಸಮಂತತಃ | ಪದೇ ಪದೇಽಶ್ವಮೇಧಸ್ಯಫಲದಾ ಶ್ರೀಗಿರೇರಿಯಂ ||೬೦|| ಯಾತ್ರಾಽಂಘ್ರಿಸಪ್ತಕಮಿತೈ ರಂಗೈರ್ಮಾತುಂಹಿತತ್ಫಲಂ | ಮಾನದಂಡೈರಿವಾಷ್ಟಾಂಗಂ ಪ್ರಣಮಸ್ತಕ್ಷಕೇಜನ ||೬೧|| ಪೃಷ್ಠತೋಭೋಗಿದೇವಸ್ಯ ಶಂಭುರೇವಂಯಯಾವಿತಿ | ದರ್ಶಯಂತ ಇವ ಸ್ವಾಂಗೈಃ ಕುರ್ವಂತೋಽನ್ಯೇಪ್ರದಕ್ಷಿಣಂ ||೬೨|| ಶ್ರೀಪರ್ವತೋನಿರಾಹಾರೋ ಭೂತ್ವಾಽಗಾಚ್ಛಂಕರಂಪುರಾ | ಇತಿನಿತ್ಯೋಪವಾಸೇನ ಸಂಪ್ರಯಾಂತಸ್ತಥಾಪರೇ ||೬೩|| ಛತ್ರಾಣ್ಯುಪಾನಸ್ನಿಚಯಂ ಚಾಮರಾಣ್ಯಜಿನಾನಿಚ | ವ್ಯಾತಕೌಪೀನನಿಚಯಂ ಕೂರ್ಪಾಸಕಕದಂಬಕಂ ||೬೪|| ವರ್ತುಲಾನಿ ಶಿರಸ್ತ್ರಾಣಿ ವಸ್ತ್ರಖಣ್ಡಾನ್ಕಮಂಡಲೂನ್ | ಉಪವೇಶಾಚ್ಛಾದನಾರ್ಥಾನ್ಕಂಬಳಾನ್ಪುಸ್ತಕವ್ರಜಾನ್ ||೬೫|| ಯೋಗದಂಡಾಲಾಬುವೀಣಾ ಕರಭಸ್ತ್ರೀಕದಂಬಕಂ | ತಾಂಬೂಲಸ್ಯೂತನಿವಹಂ ಕುತಪಾನ್ಯೋಗಪಟ್ಟಿಕಾಃ ||೬೬|| ನೀರಾಜನಾರ್ಥಫಲಕಾಃ ಪೀತವ್ಯಜನಸಂಹತಿಂ | ಗಂಧಶಾಣಶಿಲಾವೇಣು ಪಾತ್ರಾಣಿಜಪತದ್ಗ್ರಹಾನ್ ||೬೭|| ದೀಪಸ್ತಂಭಾಸ್ರಂಗವಲ್ಲೀಫಲಕಾ ನ್ಭಸ್ಮಸಂಹ

---

ಲಾಗಿ, ಈ ಶ್ರೀಗಿರಿಯ ಯಾತ್ರೆಯು ಅಶ್ವಮೇಧಯಾಗಫಲವನ್ನು ಕೊಡುವುದೆಂದು ಪ್ರಸಿದ್ಧವಾಗಿರುವುದರಿಂದ, ಆ ಯಾತ್ರಾಫಲವನ್ನು ಏಳು ಹಜ್ಜೆಯ ಅಳತೆಯುಳ್ಳ ತಮ್ಮ ದೇಹಗಳೆಂದ ಗಜಗಡ್ಡಿಯಿಂದ ಅಳತೆ ಹಾಕುವಂತೆ ಅಳೆಯುತ್ತಿರುವರೋ ಎಂಬಂತೆ, ತಂತಮ್ಮ ಊರುಗಳನ್ನು ಬಿಟ್ಟುದು ಮೊದಲು ಮಲ್ಲಿಕಾರ್ಜುನ ದರ್ಶನವಾಗುವವರೆಗೂ ಭಕ್ತಿಯಿಂದ ಹಜ್ಜೆಹಜ್ಜೆಗೆ ಅಡ್ಡಬೀಳುತ್ತ ಹೋಗುತ್ತಿದ್ದರು. ||೬೧|| ಇನ್ನು ಕೆಲವರು ಹಿಂದೆ ಪರಶಿವನು ಕೆಂಬಾವಿ ಭೋಗಯ್ಯನ ಹಿಂದೆ ಹೀಗೆಯೇ ಉರುಳುರುಳಿಕೊಂಡು ಹೋದನೆಂಬುದನ್ನು ತೋರಿಸುತ್ತಿರುವರೋ ಎಂಬಂತೆ ದಿಂಡುರುಳುಸೇವೆಯನ್ನು ಮಾಡಿಕೊಂಡು ಹೋಗುತ್ತಿದ್ದರು. ||೬೨|| ಶ್ರೀ ಪರ್ವತಮುನಿಯು ಪೂರ್ವದಲ್ಲಿ ನಿರಾಹಾರಿಯಾಗಿಯೇ ತಪಸ್ಸನ್ನಾಚರಿಸಿ ಶಿವಪ್ರಸನ್ನತೆಯನ್ನು ಪಡೆದನೆಂದು ಸ್ಮರಿಸಿಕೊಂಡು, ತಾವೂ ನಿತ್ಯೋಪವಾಸದಿಂದ ಪ್ರಯಾಣಮಾಡುತ್ತಿದ್ದರು. ||೬೩|| ಇನ್ನು ಕೆಲ ಭಕ್ತರುಗಳು ಕೊಡೆಗಳು, ಕೆರಗಳು, ಚಾಮರಗಳು, ಹುಲ್ಲಿಯ ಚರ್ಮಗಳು, ಕೌಪೀನಗಳು, ಕವಚಗಳು, ತಲಿಪಾಗುಗಳು, ಕರವಸ್ತ್ರಗಳು, ಜಲಪಾತ್ರಗಳು, ಹಾಸುವ ಹೊದೆಯುವ ಕಂಬಳಿಗಳು, ಪುಸ್ತಕಗಳು, ಯೋಗ ದಂಡಗಳು, ಸೋರೆ ಬುರುಡೆಯ ವೀಣೆಗಳು, ಕೈಚೀಲಗಳು, ತಾಂಬೂಲದ ಸಂಬಳಿಗೆಗಳು, ಸಿದ್ದಿಗೆ ಬುರುಡೆಗಳು, ಯೋಗಪಟ್ಟಿಗಳು, ಆರತಿ ತಟ್ಟೆಗಳು, ಮಣೆಗಳು, ಬೀಸಣಿಗೆಗಳು, ಗಂಧದ ಕಲ್ಲು, ಬಿದಿರು ಪುಟ್ಟಿ, ಪೀಕದಾನಿ ||೬೭||

ತಿಂ | ರುದ್ರಾಕ್ಷಾನ್ ಸ್ಫಾಟಿಕಮಣೀಂ ಸಜ್ಜಿಕಾನಿಕರೇ ತಥಾ ||೬೮|| ಶಿವಸೂ
ತ್ರಾಣಿವಸ್ತ್ರಾಣಿ ಲಿಂಗೋಪಕರಣಾನಿಚ | ಗಂಧದಾರೂಣಿ ಲಲಿತಗಂಧಪಾತ್ರಕ
ದಂಬಕಂ ||೬೯|| ನಾನಾಸುಗಂಧವಸ್ತೂನಿ ಕರಂಡಾನಿ ತಥೈವಚ | ಪದಾರ್ಥಾ
ನುಚಿತಾನ್ಸರ್ವಾನ್ ಗೋಣೀಷು ವಿವಿಧೇಷ್ವಪಿ ||೭೦|| ಅಭಿಪೂರ್ಯಸಮಾಸೀಯ
ಪದಾರ್ಥಾನ್ಯಾಚಿತಾನ್ಸ್ವಯಂ | ಯಾಚ್ಞಾಕ್ಷಣೇ ಯಾಚಕೇಭ್ಯಃ ಪ್ರಯಚ್ಛಂ
ತೋಽತಿಹರ್ಷತಃ ||೭೧|| ವಿತರಂತೋಽನ್ನಪಾನಾನಿ ಶ್ರಾಂತೇಭ್ಯ ಶ್ಶ್ರಾಂತಿ
ಕಾಲತಃ | ಸತ್ರಶಾಲಾಃಪ್ರಪಾಃ ಕೂಪಾ ಸುದಪಾನಾನ್ಯನೇಕಶಃ ||೭೨|| ತತ
ಸ್ತತಃಕಾರಯಮಾನಾ ನ್ಯಾವೃತೀಸ್ಸದನಾನ್ಯಪಿ | ಕಾರಯಂತಸ್ಸ್ವಪುರುಷೈ
ರ್ಮಾರ್ಗೇಭಕ್ತಾಃ ಪ್ರಯತ್ನತಃ || ೭೩ || ಉಪಾಸನಂಜಂಗಮಾನಾಂ ಪ್ರಕು
ರ್ವಂತಶ್ಚಕೇಚನ | ಜಲಂಜಲಂಜಲಮಿತಿ ಪ್ರಯಚ್ಛಸ್ತೋಽಜಲಂಪರೇ ||೭೪||
ಕೇಚಿತ್ಪುಷ್ಪಾಣಿಪುಷ್ಪಾಣೀತ್ಯುಚ್ಚಾರ್ಯ ಕುಸುಮಪ್ರದಾಃ | ಕೇಚಿದ್ಭಕ್ಷ್ಯಾಣಿ
ಭಕ್ಷ್ಯಾಣೀತ್ಯುಕ್ತ್ವಾ ಭಕ್ಷ್ಯಪ್ರದಾಯಕಾಃ ||೭೫|| ವೀಟಿಕಾವೀಟಿಕಾಶ್ಚೇತಿ
ಯಚ್ಛಂತೋವೀಟಿಕಾಃಪರೇ | ಅಶಕ್ತಾನ್ಗಮನೇಕೇಚಿನ್ನಯಂತಶ್ಚ ಶನೈಶ್ಶನೈಃ||

---

ದೀಪದಕಂಬ, ರಂಗವಲ್ಲಿಯನ್ನಿಡುವ ಪಟ್ಟಿ, ಬಸ್ಮದ ಗಟ್ಟಿ, ರುದ್ರಾಕ್ಷಮಾಲೆ, ಸ್ಫಟಿಕದ
ಸರ, ಕರಡಿಗೆಗಳು, ಶಿವದಾರ, ಲಿಂಗವಸ್ತ್ರ, ಶಿವಲಿಂಗದ ಕಂಕೆಯ ಸಾಮಗ್ರಿಗಳು, ಶ್ರೀಗಂಧದ
ಕೊರಡು, ಗಂಧದ ಬಟ್ಟಲುಗಳು, ಕಸ್ತೂರಿ ಕೇಸರಿ ಮೊದಲಾದ ಸುಗಂಧದ್ರವ್ಯಗಳು, ಬರಣಿ
ಗಳು ಇತ್ಯಾದಿ ಸಾಮಗ್ರಿಗಳನ್ನೆಲ್ಲಾ ಬೇರೆಬೇರೆ ಗೋಣಿಚೀಲಗಳಲ್ಲಿ ತುಂಬಿ ||೭೦|| ಯಾತ್ರಿ
ಕರಲ್ಲಿ ಯಾರು ಯಾರು ಯಾವ ಪದಾರ್ಥಗಳನ್ನು ಕೇಳಿದರೂ ಕೂಡಲೇ ಸಂತೋಷದಿಂದ ತೆಗೆ
ತೆಗೆದು ಕೊಡುತ್ತ, ಬಳಲಿದವರಿಗೆ ಕೂಡಕೂಡಲೇ ಅನ್ನಪಾನಾದಿಗಳನ್ನು ನೀಡುತ್ತ, ಅಲ್ಲ
ಲ್ಲಿಗೆ ಮಾರ್ಗದಲ್ಲಿ ಅನ್ನಸತ್ರಗಳನ್ನೂ, ಅರವಟ್ಟಿಗೆಗಳನ್ನೂ, ಕೊಳಗಳನ್ನೂ, ಬಾವಿಗಳನ್ನೂ,
ಚಪ್ಪರಗಳನ್ನೂ, ರೊಪ್ಪಗಳನ್ನೂ, ಮನೆಗಳನ್ನೂ ಕಟ್ಟಿಸಿ, ತಂತಮ್ಮ ಸೇವಕ ಜನರಿಂದ ಯಾತ್ರಿ
ಕಜಂಗಮರನ್ನು ಬಲವಂತದಿಂದ ಕರೆಯಿಸಿ, ಬೇಕಾದ ಸೇವೆಯನ್ನು ಮಾಡುತ್ತಿದ್ದರು. ಇನ್ನು
ಕೆಲರು ದಾರಿಯಲ್ಲಿ ನಿಂತು, ನೀರು ನೀರು ನೀರು ಎಂದು ಕೂಗುತ್ತ ಬೇಕಾದವರಿಗೆ ಕೊಡು
ತ್ತಿದ್ದರು. ||೭೪|| ಕೆಲವರು ಹೂವು ಹೂವು ಎಂದು ಕೂಗುತ್ತ ಬೇಕಿದ್ದವರಿಗೆ ಅವನ್ನು ಕೊ
ಡುತ್ತಿದ್ದರು. ಮತ್ತೆಕೆಲರು ತಿಂಡಿ ತಿಂಡಿ ಎಂದು ಕೂಗುತ್ತ ತಿನ್ನುವ ಸಾಮಗ್ರಿಗಳನ್ನು ಕೊ
ಡುತ್ತಿದ್ದರು. ಇನ್ನುಕೆಲರು ತಾಂಬೂಲ ತಾಂಬೂಲವೆಂದು ಕೂಗಿ ಬೇಕಿದ್ದವರಿಗೆ ವೀಳೆಯವ
ನ್ನು ಕೊಡುತ್ತಿದ್ದರು. ಕೆಲವರು ನಡೆಯಲಾರದ ಅಶಕ್ತರಿಗೆ ಹಸ್ತಾವಲಂಬನೆಯನ್ನು ಕೊಟ್ಟು
ಮೆಲ್ಲನೆ ಸಾಗಿಸುತ್ತಿದ್ದರು. ||೭೬|| ಕೆಲ ಭಕ್ತರೂ ಜಂಗಮರೂ ಗುಂಪುಕೂಡಿಕೊಂಡು ಛತ್ರಿ

ಕೇಚಿದ್ಭಕ್ತಾ ಜಂಗಮಾಶ್ಚ ಸಂಘೀಭೂಯಪರಸ್ಪರಂ | ನಮಂತಸ್ಸಂಸ್ತುವಂತಶ್ಚ ಯಯುರೇವಂ ಪ್ರಹರ್ಷಿತಾಃ ||೭೭||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ಪುಣ್ಯಾಂಗನಾಜನ ಕಾಪಾಲಿಕಜನ ಪಂಗುಜನ ಧಾರ್ಮಿಕಜನಾನಾಂ ತಚ್ಛ್ರೀಪರ್ವತಂಪ್ರತ್ಯಾಗಮನ ಕಥನಂನಾಮ ನವಮೋಽಧ್ಯಾಯಃ.

---

## ಅಥ ದಶಮೋಽಧ್ಯಾಯಃ.

### (ಪರಿಷದೋ ಮಧ್ಯಾಹ್ನಭೋಜನ ಸಂಧ್ಯಾನಿವೇಶನಕಥನಂ)

ತತೋಮಧ್ಯಾಹ್ನಸಮಯೇ ಕ್ಷುಧಿತಾಃ ಪರಿಷಜ್ಜನಾಃ | ಛಾಯಾಸು ಭೂರುಹಾಂ ಕುಂಜನಿವಹೇಷು ಗುಹಾಸ್ವಪಿ ||೧|| ಮಹೀಧರಪ್ರದೇಶೇಷು ಗಂಡಶೈಲಸಮಾಪತಃ | ನಾನಾವಿಧೇಷುಕೋಣೇಷು ಜಲೇಷ್ವಪಿಯಥಾರುಚಿ || ನಿವಿಶ್ಯನಿರ್ಝರೌಘೇಭ್ಯೋವಾಪೀಭ್ಯಃ ಕೂಪಸಂಘತಃ | ಪದ್ಮಾಕರೇಭ್ಯೋನಿಪತದ್ಧಾರಾಭ್ಯೋಹ್ರದಸಂಹತೇಃ ||೩|| ಪಲ್ವಲೇಭ್ಯೋನದೀಭ್ಯಶ್ಚ ಗರ್ತಾದಿ

---

ಯಿಂದ ಪರಸ್ಪರ ನಮಸ್ಕರಿಸುತ್ತ ಸ್ತುತಿಸುತ್ತ ಹೀಗೆ ಪರಿಸೆಯ ಜನರೆಲ್ಲರೂ ಸಂತೋಷದಿಂದ ಸಾಗುತ್ತಿದ್ದರು. ||೭೭||

ಎಂಬಲ್ಲಿಗೆ ೯ನೆ ಅಧ್ಯಾಯವು ಮುಗಿದುದು.

---

## ೧೦ನೆ ಅಧ್ಯಾಯವು.

### ಶ್ರೀಶೈಲದ ಪರಿಸೆಯು ಮಧ್ಯಾಹ್ನ ಭೋಜನವನ್ನು ಮಾಡಿ ಸಾಯಂಕಾಲವಲ್ಲಿ ತಂಗಿದುದರ ವರ್ಣನೆಯು.

ಬಳಿಕ ಮಧ್ಯಾಹ್ನದಹೊತ್ತಿಗೆ ಪರಿಸೆಯ ಜನರು ಹಸಿದವರಾಗಿ ಮರಗಳ ನೆಳಲಿನಲ್ಲಿಯೂ, ಪೊದರಿಗೆಳಲ್ಲಿಯೂ, ಗವಿಗಳಲ್ಲಿಯೂ, ಬೆಟ್ಟಗಳ ಇರುಬಿನಲ್ಲಿಯೂ, ಬಂಡೆಗಳ ಮಗ್ಗುಲಲ್ಲಿಯೂ ಮೂಲೆಗಳಲ್ಲಿಯೂ, ದರಿಗಳಲ್ಲಿಯೂ ಇಳಿದು, ಬೆಟ್ಟದ ಜರಿಗಳು, ಇಳಿಯುವ ಬಾವಿಗಳು, ಸೇದುವ ಬಾವಿಗಳು, ಕೊಳಗಳು, ದುಮಿಕುವ ಜಲಧಾರೆಗಳು, ಹಳ್ಳಗಳು, ಕುಂಟೆಗಳು, ಹೊಳೆಗಳು, ಮಡುಗಳು ಮೊದಲಾದ ಜಲಾಶ್ರಯುಗಳಿಗೆ ಓಡಿಹೋಗಿ, ಬಾಯಿಯದೊನ್ನೆ, ಅಪಕೆಪಟ್ಟೆ

ಭ್ಯೋಽತಿರಂಹಸಾ | ಪತ್ರಸಂಪುಟಜಾಲೇಷು ಪೂಗಪಟ್ಟಪುಟೇಷುಚ ||೪||
ಚರ್ಮಭಸ್ತ್ರೀತಾಮ್ರಕುಂಭಕಂಸೋಽಶಾಕಲಶೇಷ್ವಪಿ | ವಿಹಂಗಿಕಾಸುಕರಕ
ಕಮಂಡಲುಕದಂಬಕೇ ||೫|| ಆಪೂರ್ಯ ಜಲಮಾನೀಯ ದೇವಗಂಡಲಿಪತ್ರಕಂ |
ಬಿಲ್ವಪತ್ರಂರುದ್ರಜಟಾ ಮರಣ್ಯದಮನಂತಥಾ || ೬ || ಜಂಬೂಪತ್ರಂ ಮರುವ
ಕಂ ಶಮೀಪತ್ರಂಚಕಾಂಚನಂ | ಕಪಿತ್ಥಪತ್ರಂ ನಿರ್ಗುಂಡಿಪತ್ರಂ ಕಿಂಪಾಕಪತ್ರ
ಕಂ ||೭|| ನವ್ಯಶೇಫಾಲಿಕಾಪತ್ರ ಮಪಾಮಾರ್ಗಸ್ಯಪತ್ರಕಂ | ಕರ್ಣಿಕಾಶೋ
ಕಬಹುಳಕೇತಕೀಕುಸುಮಾನ್ಯಪಿ || ೮ || ಮಲ್ಲಿಕಾಯೂಥಿಕಾದ್ರೋಣಕುಮಾ
ರೀಪುಷ್ಪಸಂಹತಿಂ | ಆರಗ್ವಧಾರ್ಕಪುನ್ನಾಗಮಾಲತೀ ಕಮಲಾನಿಚ ||೯|| ವರ
ಕಿಂಶುಕಪುಷ್ಪಾಣಿ ನೀಲೋತ್ಪಲಸಿತೋತ್ಪಲೇ | ಕುರಂಟಕಪ್ರಸೂನಾನಿ ಲಸತ್ಕ
ರವಕಾನಿಚ || ೧೦ || ಧುತ್ತೂರಲೋಧ್ರಬೃಹತೀ ಕ್ಷುದ್ರಾಪ್ರಸವಸಂಹತಿಂ |
ಶಮೀಕಪಿತ್ಥಪುಷ್ಪಾದೀನ್ಯುಪಾದಾಯಾತಿಭಕ್ತಿತಃ || ೧೧ || ಚೂತಖರ್ಜೂರಕ
ರ್ಕಂಧೂ ಜಂಬೂಫಲಕದಂಬಕಂ | ನಾದೇಯೀತಾಲಹಿಂತಾಲ ಶಿಂಶಪಾಫಲ
ಸಂಹತಿಂ ||೧೨|| ಬಿಲ್ವೋದುಂಬರನಾರಂಗ ದಾಡಿಮೀಫಲಸಂಹತಿಂ | ಕಪಿತ್ಥ
ಕದಳೀನಿಂಬಜಂಬೀರ ಫಲಜಾಲಕಂ || ೧೩ || ಪ್ಲಕ್ಷದ್ರಾಕ್ಷಾಮಾತುಲುಂಗವ
ನೋರ್ವಾರುಫಲಾನ್ಯಪಿ | ಪನಸಾದೀನಿ ವಿವಿಧಫಲಜಾಲಾನಿಯತ್ನತಃ ||೧೪||
ಪುನಃಕಪಿತ್ಥಚೂತಾದಿಶಲಾಟೂನ್ಪಲ್ಲವೋತ್ಕರಂ | ಮಧೂಕಕುಸುಮಾನೀಕಂ
ಮಧುಚಾನೀಯಸತ್ವರಂ ||೧೫|| ಸ್ವಸ್ವಾವಾಸಾನ್ಸಮಾಸಾದ್ಯ ವಿಧಾಯೇಶ್ವರ

---

ದೊನ್ನೆ, ತೊವಲಿನ ಚೀಲ, ತಾಮ್ರದ ತಂಬಿಗೆ, ಕಂಚಿನ ಕಲಶ, ಕುಡಿಯುವ ಬಟ್ಟಲು, ಕಮಂಡಲು, ಕಾವಡಿ ಮೊದಲಾದುವುಗಳಲ್ಲೆಲ್ಲಾ ನೀರನ್ನು ತುಂಬಿಕೊಂಡು ಬಂದು ||೫|| ಬಳಿಕ ಬಿಳೀಗರಿಕೆ, ಬಿಲ್ವಪತ್ರೆ, ರುದ್ರಜಡೆ, ಕಾಡುದವನ, ನೇರಿಲು, ಮರುಗ, ಬನ್ನಿ, ನಾಗಕೇಸರ, ಬೇಲ, ಬಿಳಲಕ್ಕಿ, ವಿಷಮುಷ್ಟಿ, ಕರೀಲಕ್ಕಿ, ಉತ್ತರಾಣಿ ಇವುಗಳ ಪತ್ರಗಳನ್ನೂ, ದೊಡ್ಡ ಗೋರಂಟೆ, ಅಸುಗೆ, ತಾಳೆ, ಮಲ್ಲಿಗೆ, ಕಾಡುಮಲ್ಲಿಗೆ, ತುಂಬೆ, ಹೆಜ್ಜಾಜಿ, ಕಕ್ಕೆ, ಯಕ್ಕ, ಸುರಹೊನ್ನೆ, ಕಿರಿಜಾಜಿ, ತಾವರೆ, ಮುತ್ತುಗ, ಕನ್ನೈದಿಲು, ಬಿಳಿನೈದಿಲು, ಚಿಕ್ಕಗೋರಂಟೆ, ಕೆಂಪುಗೋರಂಟೆ, ಉಮ್ಮತ್ತಿ, ಕಡಹ, ಹೆಗ್ಗುಳ್ಳ, ಕಿರುಗುಳ್ಳ, ಬನ್ನಿ, ಬೇಲ ಇವೇ ಮೊದಲಾದ ಬಗೆಬಗೆ ಜಾತಿಯ ಹೂವುಗಳನ್ನೂ ಭಕ್ತಿಯಿಂದ ಎತ್ತಿಕೊಂಡು ||೧೧|| ಅನಂತರ ಮಾವು, ಖರ್ಜೂರ, ಎಲಚಿ, ಅರನೇರಿಲು, ನಾಯಿನೇರಿಲು, ತಾಳೆ, ಕರಿತಾಳೆ, ಅಗ್ಗು, ಬಿಲ್ವ, ಅತ್ತಿ, ಕಿತ್ತಲೆ, ದಾಳಿಂಬೆ, ಬೇಲ, ಬಾಳೆ, ಬೇವು, ನಿಂಬೆ, ಅರಳಿ, ದ್ರಾಕ್ಷಿ, ಮಾದಲ, ಕಾಡುಸವತೆ, ಹಲಸು ಇತ್ಯಾದಿ ಫಲಾವಳಿಗಳನ್ನೂ, ಬೇಲದಕಾಯಿ ಮಾವಿನಕಾಯಿ ಮೊದ

ಪೂಜನಂ | ಫಲಾನಿಭಕ್ಷ್ಯನಿವಹಂ ಪಾಥೇಯಾನ್ನಾನಿಸಾದರಂ || ೧೬ || ಭು ಕ್ತ್ವಾತದನುತಾಂಬೂಲಮಾದಾಯ ತದನಂತರಂ | ಅತಿಹರ್ಷೇಣಗಾಯಂತಃ ಪೂರ್ವವತ್ಪರಿಹರ್ಷಿತಾಃ ||೧೭|| ದ್ರವಂತಃಪರಿವಲ್ಗಂತ ಸ್ಸ್ವಕೀಯೈಸ್ಸಹಸಂಗ ತಾಃ | ಯಾಂತಶ್ಚ ನೈಸ್ಥಲಾನ್ಯುಚ್ಚೈ ರಾರೋಹಂತೇತಿಯತ್ನತಃ ||೧೮|| ನಿ ಮ್ನಾನಿಚಾವರೋಹಂತೋ ಭೂಧರೋರ್ಧ್ವಸ್ಥಲೇಷುಚ | ಚರಂತೋವಿಷಮ ಸ್ಥಾನಾ ನ್ಯಾವಿಶಂತಸ್ತತಸ್ತತಃ ||೧೯|| ವ್ರಜಂತಶ್ಶೈಲಶೃಂಗಾಣಿ ಕ್ರಾಮಂತ ಸ್ಸಾನುಸಂಹತಿಂ | ಗರ್ತಸ್ಥಲೇಷುತ್ವರಿತಂ ಗಚ್ಛಂತೋದೃಷದೋಗಿರೇಃ ||೨೦|| ಮಹೀರುಹಾಂಶ್ಚಗೃಹ್ಣಂತಃ ಪ್ರಯಾಂತೋಽತಿಪ್ರಯತ್ನತಃ | ಪಜಾತ್ಯೈಕಾರ ಜುಷ ಶ್ಶೈಲಾನ್ಸಂಘೀಭೂಯಸ್ಥಿತಾನಪಿ || ೨೧ || ಪರಸ್ಪರಂ ಸಮಾಶ್ಲಿಷ್ಟಾಂ ಶ್ಚಕ್ರಾಕಾರೇಣಸಂಸ್ಥಿತಾನ್ | ಅಜಾಂಡಕೋಟಯೋಽನೇಕ ಜಂಗಮಸ್ಥಾವ ರಾಲಯಾಃ ||೨೨|| ಅದ್ರಿರೂಪಂಸಮಾಸಾದ್ಯ ವರ್ತಮಾನಾಇವಸ್ಥಿತಾನ್ | ಪಶ್ಚಾದ್ಭಾಗೇ ಪುರೋಭಾಗೇ ಪಾರ್ಶ್ವಯೋರುಭಯೋರಪಿ || ೨೩ || ಮಧ್ಯ ತಃಪರಿತಃ ಪೂರ್ಣಾನಸಂಖ್ಯಾನತಿವಿಸ್ಮಯಾತ್ | ಪಶ್ಯಂತಶ್ಚಪ್ರಹೃಷ್ಯಂತಃಕು ರ್ವಂತಃ ಪ್ರಣತಿಂ ಯಯುಃ ||೨೪|| ಮಹೇಶಪಂಚಮಶಿರೋಜಟಾಜೂಟಸ್ಯ

---

ಲಾಡುವುಗಳನ್ನೂ, ಅವುಗಳ ಚಿಗುರುಗಳನ್ನೂ, ಜೇನುತುಪ್ಪವನ್ನೂ, ಇಷ್ಟೆಯ ಹೂವನ್ನೂ ಸಹ ತೆಗೆದುಕೊಂಡು, ತಾವಿಳಿದಿರುವ ಸ್ಥಲಗಳಿಗೆ ಬಂದು, ಶಿವಾರ್ಚನೆಯನ್ನು ಮಾಡಿ, ಹಣ್ಣು ಗಳನ್ನೂ ತಿಂಡಿಯ ಸಾಮುಗ್ರಿಗಳನ್ನೂ ಬುತ್ತಿಯನ್ನೂ ಊಟಮಾಡಿ, ತಾಂಬೂಲವನ್ನು ಸವಿ ದು, ಪರಿಸೆಯೆಲ್ಲವೂ ಯಥಾಪ್ರಕಾರ ಪ್ರಯಾಣಗೊಂಡು ಅತ್ಯಾನಂದದಿಂದ ಮೊದಲಿನಂತೆ ಯೇ ಹಾಡುತ್ತಲೂ ||೧೭|| ಓಡಾಡುತ್ತಲೂ, ತಂತಮ್ಮ ಜನರೊಡನೆ ಕೂಡಿ ಬಳಸಾಡುತ್ತ ಲೂ, ಕಡಿದಾದ ದಿಣ್ಣೆಗಳನ್ನು ಹತ್ತಿರಿ ಎಂದು ಹೇಳಿಕೊಂಡು ಸಾಹಸದಿಂದ ಏರುತ್ತಲೂ, ಇಳಿಜಾರಿನ ಸ್ಥಳಗಳಲ್ಲಿ ಇಳಿಯುತ್ತಲೂ, ಬೆಟ್ಟದ ತುದಿಗಳಲ್ಲಿ ತಿರುಗುತ್ತಲೂ, ಅಪಾಯಕರ ಸ್ಥಲಗಳಿಗೆಲ್ಲಾ ನುಗ್ಗುತ್ತಲೂ, ಕೋಡುಗಲ್ಲುಗಳಿಗೆ ಹತ್ತುತ್ತಲೂ, ತಪ್ಪಲುಗಳನ್ನು ಸೇರು ತ್ತಲೂ, ಬಂಡೆಗಳ ಮೇಲಿಂದ ಹಳ್ಳಗಳಿಗೆ ಜಾರುತ್ತಲೂ, ||೨೦|| ಮರಗಳ ಕೊಂಬೆಗಳನ್ನು ಹಿಡಿದು ಅತಿಸಾಹಸದಿಂದ ಕಡಿದಾದ ಸ್ಥಲಗಳಲ್ಲಿ ನಡೆಯುತ್ತಲೂ, ಸಾಲಾಗಿಯೂ, ಗುಂಪಾ ಗಿಯೂ, ಒಂದಕ್ಕೊಂದು ಸೇರಿಯೂ, ಗುಂಡಾಗಿಯೂ, ಚರಾಚರಾಶ್ರಯಗಳಾದ ಅನೇಕ ಕೋ ಟ್ಯಂತರ ಬ್ರಹ್ಮಾಂಡಗಳೇ ಈ ಗಿರಿಯ ರೂಪವನ್ನು ಧರಿಸಿ ಬಂದಿವೆಯೋ ಎಂಬಂತೆ ತೋರಿಯೂ, ಹಿಂದೆಯೂ ಮುಂದೆಯೂ ಪಕ್ಕಗಳಲ್ಲಿಯೂ ಮಧ್ಯದಲ್ಲೂ ಗಣನಾತೀತವಾಗಿ ತುಂಬಿಯೂ, ಇರುವ ಬೆಟ್ಟಗಳ ಗುಂಪನ್ನು ಅತ್ಯಾಶ್ಚರ್ಯದಿಂದ ನೋಡುತ್ತಲೂ, ಸಂತೋಷದಿಂದ ನಮಸ್ಕರಿಸು ತ್ತಲೂ ಸಾಗಿದರು. ||೨೪|| ಆಗ ಮುಂಗಡೆಯಲ್ಲಿ ಪರಶಿವನ ಐನೆಯ ಊರ್ಧ್ವ ಶಿರಸ್ಸಿನ ಜಡೆ

ಮಧ್ಯತಃ | ಸ್ಥಿತಗಂಗಾತರಂಗೋಪಕಂಠಸಂಗತಿಶೋಭಿನೀ || ೨೫ || ಚಂದ್ರ
ಲೇಖೇವದದೃಶೇ ಪುರೋಗಂಗಾತರಂಗಿಣೀ | ಹೃದ್ಭಂಗಹೃದ್ಯನಕ್ಷತ್ರ ಕನಕಾ
ದ್ಯದ್ರಿಮಧ್ಯಗಾ ||೨೬|| ರೇಜೇಪುನಶ್ಚಂದ್ರವತ್ಯಾ ಮಲ್ಲಿಕಾರ್ಜುನಮಸ್ತಕೇ|
ನಿಹಿತಾಧವಳಛಾಯಾ ಮಲ್ಲಿಕಾಮಾಲಿಕೇವಸಾ || ೨೭ || ತಾಂನಿರೀಕ್ಷ್ಯ ಮ
ಹಾಭಕ್ತ್ಯಾ ತೇಸರ್ವೇಪರಿಷಜ್ಜನಾಃ | ಪ್ರಣಮ್ಯಾರುಹ್ಯ ಹೃದಯಭಂಗಶೈಲಂ
ಪ್ರಯತ್ನತಃ ||೨೮|| ಸ್ಥಿತ್ವಾತದಗ್ರೇವೀಕ್ಷ್ಯಾಥೋಭಾಗಂ ಭೀರುಜನವ್ರಜೇ|
ಆವಿಷ್ಟೋರಗಲೋಕಾಯಾ ಸ್ಸಂಸ್ಥಿತೇಸ್ತಸ್ಯಭೂಭೃತಃ ||೨೯|| ಕಂಪನಾನ್ಯೇ
ಮಹಾಘೋಷಂ ಪ್ರಕುರ್ವಂತೋವಿಜೃಂಭಿತಾಃ | ಸಂಬಧ್ನಂತಶ್ಶಿಖಾಃಕಚ್ಛಾ
ಪೃಥವಸ್ತ್ರನಿಬಂಧನಾಃ||೩೦|| ಸಜ್ಜೀಕೃತ್ಯಸ್ವಸ್ವಭಾರಾನ್ ಕ್ಷಿಪಂತೋಂಘ್ರೀನ್
ಛನೈಶ್ಶನೈಃ | ಯಾಂತೋಪಸೃತ್ಯ ಸಂಮರ್ದಾತ್ಪ್ರಕುರ್ವಂತೋಜಯಧ್ವನಿಂ||
ಆರೋಹಂತೋಗಂಡಶೈಲಾನ್ ಪ್ರಸ್ಖಲಂತಶ್ಚಕೇಚನ | ಪಪನ್ಯಾಸಾನ್ಪ್ರಕುರ್ವಂ
ತೋ ವಿಮೃಶ್ಯವಿಷಮಸ್ಥಲೇ || ೩೨ || ಗೃಹ್ಣಂತಃಪತತೋವೃದ್ಧಾನ್ ಸನ್ನಿಕೃ
ಷ್ಟಾಃ ಪ್ರಯತ್ನತಃ | ಊರೂನ್ಯಸ್ತಕರಾ ಸ್ಸ್ವವ್ಯಕ್ತಕಂಪಮಾನಪದಾಃಪರೇ|
ಸಮೃದ್ಧಜನಸಂಮರ್ದೇ ಪ್ರಕ್ಷಿಪಂತಃಪರಸ್ಪರಂ | ತತ್ರತತ್ರಾಪಿತಿಷ್ಠಂತೋಽವ

---

ಮುಡಿಯ ಮಧ್ಯದಲ್ಲಿರುವ ಗಂಗೆಯ ತೆರೆಯ ಬಳಿಯಲ್ಲಿ ಶೋಭಿಸುತ್ತಿರುವ ಚಂದ್ರರೇಖೆಯೋ
ಪಾದಿಯಲ್ಲಿ ಗಂಗಾನದಿಯು ಹೃದ್ಭಂಗಾದ್ರಿ ನಕ್ಷತ್ರಾದ್ರಿ ಕನಕಾದ್ರಿಗಳ ಮಧ್ಯದಲ್ಲಿ ಹ
ಯುತ್ತ ಕಾಣಿಸಿತು. ಆ ಗಂಗಾನದಿಯು ಚಂದ್ರವತಿಯೆಂಬ ಉಪನದಿಯೊಡನೆ ಸಂಗಮವಾಗಿ
ರುತ್ತ, ಗಂಗಾಧರನ ಮಸ್ತಕದಲ್ಲಿ ಮುಡಿದಿರುವ ಮಲ್ಲಿಗೆಯ ದಂಡೆಯಂತೆ ರಾಜಿಸುತ್ತಿದ್ದಿತು.
||೨೭|| ಅದನ್ನು ಪರಿಸೆಯ ಜನರೆಲ್ಲರೂ ನೋಡಿ ಅತ್ಯಂತ ಭಕ್ತಿಯಿಂದ ನಮಸ್ಕರಿಸಿ, ಹೃದಯ
ಭಂಗನಾಮಕವಾದ ಬೆಟ್ಟವನ್ನು ಸಾಹಸದಿಂದ ಹತ್ತುವಾಗ್ಗೆ, ಅವರಲ್ಲಿ ಅಂಜುಪುರುಕರು ಪಾ
ತಾಳದವರೆಗೆ ವ್ಯಾಪಿಸಿರುವ ಆ ಪರ್ವತದ ಕೆಳಗಡೆಯನ್ನು ಬಗ್ಗಿ ನೋಡಿ ಗಡಗಡನೆ ನಡುಗುತ್ತಿರ
ಲು, ಕೆಲರು ಧೈರ್ಯಶಾಲಿಗಳು ಉತ್ಸಾಹಗೊಂಡು ಉಘೇ ಎಂದು ಕೂಗಿ ಜುಟ್ಟನ್ನೂ ಕಚ್ಚೆ
ಯನ್ನೂ ಹೊದಿಕೆಯನ್ನೂ ಬಲವಾಗಿ ಸುತ್ತಿಕಟ್ಟಿ ||೩೦|| ತಮ್ಮ ಗಂಟುಮೂಟೆಗಳನ್ನು
ಸಂವರಿಸಿಕೊಂಡು, ಹಜ್ಜೆಗಳನ್ನು ಮೆಲ್ಲಮೆಲ್ಲನೆ ಇಡುತ್ತ, ಜನರ ಸಂದಣಿಯು ಹೆಚ್ಚಾಗಿದ್ದು
ದರಿಂದ ಒಬ್ಬರಹಿಂದೊಬ್ಬರು ಹೋಗುತ್ತ, ಅಲ್ಲಲ್ಲಿಗೆ ಉಘೇ ಶಬ್ದವನ್ನು ಮಾಡುತ್ತ ||೩೧||
ದೊಡ್ಡ ಬಂಡೆಗಳನ್ನೇರುತ್ತ, ಕೆಲರು ಜಾರಿಬೀಳುತ್ತ, ಅಪಾಯದ ಸ್ಥಳಗಳನ್ನು ನೋಡಿ ಕಾಲಿ
ಡುತ್ತ, ಬೀಳುತ್ತಿದ್ದ ಮುದಿಕರನ್ನು ಬಳಿಯಲ್ಲಿದ್ದವರು ಹಿಡಿದುಕೊಳ್ಳುತ್ತ, ಕೆಲರು ತೊಡೆಗ
ಳಮೇಲೆ ಕೈಗಳನ್ನಿಟ್ಟುಕೊಂಡು ಬೆವರಿ ನಡುಗುತ್ತಿರುವ ಕಾಲ್ಗಳುಳ್ಳವರಾಗಿ ನಡೆಯುತ್ತ,
ಜನದ ದಟ್ಟಣೆಯಿಂದ ಒಬ್ಬರಿಗೊಬ್ಬರು ತಿಕ್ಕಾಡುತ್ತ, ಅಲ್ಲಲ್ಲಿಗೆ ನಿಂತುಕೊಂಡು ಕಲ್ಲುಗ

ಲಂಬಂತ ಶೈಲಾಪರೇ ||೩೪|| ಹೃದ್ಭಂಗಪರ್ವತನುವಶೇರು ರೇವಂ ಶನೈಶ್ಶನೈಃ| ತ್ರಿಯಂಬಕಾಚಲಸ್ಯಾಗ್ರಾ ದಾಯಾಂತೀ ಧರಣೀತಲಂ ||೩೫|| ಗೌತಮೀವಾ ದಿಮಧ್ಯಾಂತವ್ಯಾಪ್ತಾ ಹೃದ್ಭಂಗಭೂಭೃತಃ | ಪರಿಷತ್ಸಾಸಮಾಗತ್ಯ ತಸ್ಮಹೀ ಧ್ರಸಮೀಪತಃ ||೩೬|| ಗಂಗಾಪ್ರವಾಹೋಪಕಂಠದೇಶೇ ಸಂಪ್ರೀತಿತಸ್ತದಾ | ಪೂಗಪುನ್ನಾಗಪನಸ ಚೂತಚಂಪಕಶಾಖಿನಾಂ || ೩೭ || ಜಂಬೂಜಂಬೀರಬದ ರೀ ಕದಂಬಾಶ್ವತ್ಥಭೂರುಹಾಂ | ಸಾಲಚಂದನಸಂತಾನ ವಟಪ್ಲಕ್ಷಮಹೀರು ಹಾಂ ||೩೮|| ಲವಂಗತಾಲಹಿಂತಾಲ ಘನಸಾರಕುಜಾವಲೇಃ | ಶಮೀಕುಟಜ ಸಾರಂಗ ಗುಗ್ಗುಲುದ್ರುಮಸಂಹತೇಃ ||೩೯|| ಬಕುಲಾಶೋಕಮಂದಾರ ಕರ್ಣಿ ಕಾರಾವನೀರುಹಾಂ | ಮಾಧವೀಮಲ್ಲಿಕಾಜಾತಿವಾಟೀನಾಂಚ ಸಮೀಪತಃ || ಕಮಲೋತ್ಪಲಕಲ್ಹಾರ ಸರಸಾಮುಪಕಂಠತಃ | ಕುಟೀವ್ರಜಪಟಾಗಾರ ಕಾಯ ಮಾನಾದಿಕಾನಿಜ ||೪೦|| ಕೃತ್ವಾಯಥಾಸ್ವಸ್ವಸಂಘಂ ನಿವಿಶ್ಯಗುರುಹರ್ಷತಃ| ಸ್ನಾತ್ವಾಕನಕಗಂಗಾಯಾ ಸ್ಸಂಗಮೇತದನಂತರಂ ||೪೧|| ಸಂಕ್ಷಾಳಿತಾತ್ಮೀ ಯಜನ್ಮಸಹಸ್ರಾಘೌಘಮರ್ದನಾ | ಇಷ್ಟಾನ್ನಪಾನಸಂತೃಪ್ತಾ ನ್ಯವಸತ್ಪ್ರಮ ದಾಂಚಿತಾ ||೪೨|| ಅಥದೋನಮರಾಜಾಪಿ ಸದ್ಭಕ್ತಗಣಸಂಯುತಃ | ನಿತ್ಯಲಿಂ ಗಾರ್ಚನಂಕೃತ್ವಾ ಸಂಧ್ಯಾಯಾಂಚಮಹಾನಿಶಿ || ೪೩ || ಇಷ್ಟಲಿಂಗಪ್ರಸಾ

---

ಳನ್ನು ಒರಗಿಕೊಳ್ಳುತ್ತ, ಮೆಲ್ಲನೆ ಆ ಬೆಟ್ಟದಿಂದ ಪರಿಸೆಯು ದಟ್ಟನಾಗಿ ಇಳಿಯುತ್ತಿರಲು, ತ್ರಿಯಂಬಕಗಿರಿಯ ತುದಿಯಿಂದ ಭೂತಲಕ್ಕೆ ಇಳಿಯುತ್ತಿರುವ ಗೌತಮೀನದಿಯಂತೆ ತೋರು ತ್ತಿದ್ದಿತು. ಹೀಗೆ ಇಳಿದುಬಂದ ಪರಿಸೆಯು ಆ ಬೆಟ್ಟದ ಬಳಿಯಲ್ಲಿ ಹರಿಯುತ್ತಿರುವ ಗಂಗಾಪ್ರ ವಾಹದ ಸಮೀಪದಲ್ಲಿಯೇ ಇದ್ದ ಅಡಕೆ, ಸುರಹೊನ್ನೆ, ಹಲಸು, ಮಾವು, ಸಂಪಗೆ, ನೇರಿಲು, ನಿಂಬೆ, ಎಲಚಿ, ಈಚಿಲು, ಅರಳಿ, ಜಾಲ, ಶ್ರೀಗಂಧ, ಪಿಪ್ಪಲ, ಲವಂಗ, ತಾಳೆ, ಕಂತಾಳೆ, ಕರ್ಪೂರ, ಬನ್ನಿ, ಕಾಡುಮಲ್ಲಿಗೆ, ಕಿತ್ತಳೆ, ಗುಗ್ಗುಲ, ಬಕುಳ, ಅಸುಗೆ, ದೇವದಾರು, ಕಕ್ಕೆ, ಮೊದಲಾದ ಬಗೆಬಗೆಯ ಮರಗಳ ಬಳಿಯಲ್ಲಿಯೂ ಬಿಳಿಜಾಜಿ ಕಂಜಾಜಿ ಮಲ್ಲಿಗೆ ಇತ್ಯಾದಿ ಲತೆ ಗಳ ಬಳಿಯಲ್ಲಿಯೂ, ತಾವರೆ ಕನ್ನೈದಿಲು ಸುಗಂಧದ ನೈದಿಲುಗಳುಳ್ಳ ಸರೋವರಗಳ ಬಳಿಯ ಲ್ಲಿಯೂ, ಗುಡಿಸಲುಗಳನ್ನೂ ಗುಡಾರಗಳನ್ನೂ ಚಪ್ಪರಗಳನ್ನೂ ತಂತಮ್ಮ ಗುಂಪಿಗೆ ತಕ್ಕಂತೆ ಹಾಕಿ, ಸಂತೋಷದಿಂದ ಅವುಗಳಲ್ಲಿ ತಂಗಿ, ಅಲ್ಲಿಯ ಸ್ವರ್ಣಗಂಗಾನದೀ ಸಂಗಮಸ್ಥಲದಲ್ಲಿ ಸ್ನಾನಮಾಡಿ, ತಮ್ಮ ಸಾವಿರಾರು ಜನ್ಮಗಳ ಪಾಪವನ್ನೆಲ್ಲಾ ತೊಳೆದುಕೊಂಡು, ಅನ್ನಪಾನಾದಿ ಗಳಿಂದ ತೃಪ್ತರಾಗಿ, ಸಂತೋಷದಿಂದ ಇದ್ದರು. ||೪೨|| ದೋನಮಾರ್ಯನುಕೂಡ ಶಿವಗಣಸ ಮೇತನಾಗಿ ಆದಿನ ಸಾಯಂಕಾಲವೂ ಅರ್ಧರಾತ್ರಿಯಲ್ಲೂ ಇಷ್ಟಲಿಂಗಾರ್ಚನರೂಪ ನಿತ್ಯವ್ರತ ವನ್ನಾಚರಿಸಿ, ಇಷ್ಟಲಿಂಗ ಪ್ರಸಾದವನ್ನು ಸವಿದನು. ಆಗ ಪರಿಸೆಯಲ್ಲಿ ಕೆಲವರು ಬಸವೇಶನು

ಮಧ್ಯತಃ | ಸ್ಥಿತಗಂಗಾತರಂಗೋಪಕಂಠಸಂಗತಿಶೋಭಿನೀ ‖ ೨೫ ‖ ಚಂದ್ರ
ಲೇಖೇವದದೃಶೇ ಪುರೋಗಂಗಾತರಂಗಿಣೀ | ಹೃದ್ಭಂಗಹೃದ್ಯನಕ್ಷತ್ರ ಕನಕಾ
ದ್ಯದ್ರಿಮಧ್ಯಗಾ ‖೨೬‖ ರೇಜೇಪುನಶ್ಚಂದ್ರವತ್ಯಾ ಮಲ್ಲಿಕಾರ್ಜುನಮಸ್ತಕೇ|
ನಿಹಿತಾಧವಳಛಾಯಾ ಮಲ್ಲಿಕಾಮಾಲಿಕೇವಸಾ ‖ ೨೭ ‖ ತಾಂನಿರೀಕ್ಷ್ಯ ಪ
ಹಾಭಕ್ತ್ಯಾ ತೇಸರ್ವೇಪರಿಷಜ್ಜನಾಃ | ಪ್ರಣಮ್ಯಾರುಹ್ಯ ಹೃದಯಭಂಗಶೈಲಂ
ಪ್ರಯತ್ನತಃ ‖೨೮‖ ಸ್ಥಿತ್ವಾತದಗ್ರೇವೀಕ್ಷ್ಯಾಧೋಭಾಗಂ ಧೀರುಜನವ್ರಜೇ|
ಆವಿಷ್ಟೋರಗಲೋಕಾಯಾ ಸ್ಸಂಸ್ಥಿತೇಸ್ತಸ್ಯಭೂಭೃತಃ ‖೨೯‖ ಕಂಪಮಾನೇ
ಮಹಾಘೋಷಂ ಪ್ರಕುರ್ವಂತೋವಿಜೃಂಭಿತಾಃ | ಸಂಬಧ್ನಂತಶ್ಶಿಖಾಃಕಚ್ಛಾ
ದೃಢವಸ್ತ್ರನಿಬಂಧನಾಃ‖೩೦‖ ಸಜ್ಜೀಕೃತ್ಯಸ್ವಸ್ವಭಾರಾನ್ ಕ್ಷಿಪಂತೋಂಘ್ರೀ
ಛನೈಶ್ಶನೈಃ | ಯಾಂತೋಪಸೃತ್ಯ ಸಂಮರ್ದಾತ್ಪ್ರಕುರ್ವಂತೋಜಯಧ್ವನಿಂ|
ಆರೋಹಂತೋಗಂಡಶೈಲಾನ್ ಪ್ರಸ್ಖಲಂತಶ್ಚಕೇಚನ | ಪಥನ್ಯಾಸಾನ್ಪ್ರಕುರ್ವಂ
ತೋ ವಿಮೃಶ್ಯವಿಷಮಸ್ಥಲೇ ‖ ೩೨ ‖ ಗೃಹ್ಣಂತಃಪತತೋವೃದ್ಧಾನ್ ಸನ್ನಿಕೃ
ಷ್ಟಾಃ ಪ್ರಯತ್ನತಃ | ಊರೂನ್ಯಸ್ತಕರಾ ಸ್ಸ್ವದ್ಯತ್ಕಂಪಮಾನಪದಾಃಪರೇ ‖
ಸಮೃದ್ಧಜನಸಂಮರ್ದೇ ಪ್ರಕ್ಷಿಪಂತಃಪರಸ್ಪರಂ | ತತ್ರತತ್ರಾಪಿತಿಷ್ಠಂತೋಽನ

---

ಮುಡಿಯ ಮಧ್ಯದಲ್ಲಿರುವ ಗಂಗೆಯ ತೆರೆಯ ಬಳಿಯಲ್ಲಿ ಶೋಭಿಸುತ್ತಿರುವ ಚಂದ್ರರೇಖೆಯೋ
ಪಾದಿಯಲ್ಲಿ ಗಂಗಾನದಿಯು ಹೃದ್ಭಂಗಾದ್ರಿ ನಕ್ಷತ್ರಾದ್ರಿ ಕನಕಾದ್ರಿಗಳ ಮಧ್ಯದಲ್ಲಿ ಹ
ಯುತ್ತ ಕಾಣಿಸಿತು. ಆ ಗಂಗಾನದಿಯು ಚಂದ್ರವತಿಯೆಂಬ ಉಪನದಿಯೊಡನೆ ಸಂಗಮವಾಗಿ
ರುತ್ತ, ಗಂಗಾಧರನ ಮಸ್ತಕದಲ್ಲಿ ಮುಡಿದಿರುವ ಮಲ್ಲಿಗೆಯ ದಂಡೆಯಂತೆ ರಾಜಿಸುತ್ತಿದ್ದಿತು.
‖೨೭‖ ಅದನ್ನು ಪರಿಸೆಯ ಜನರೆಲ್ಲರೂ ನೋಡಿ ಅತ್ಯಂತ ಭಕ್ತಿಯಿಂದ ನಮಸ್ಕರಿಸಿ, ಹೃದಯ
ಭಂಗನಾಮಕವಾದ ಬೆಟ್ಟವನ್ನು ಸಾಹಸದಿಂದ ಹತ್ತುವಾಗ್ಗೆ, ಅವರಲ್ಲಿ ಅಂಜುಪುರುಕರು ಪಾ
ತಾಳದವರೆಗೆ ವ್ಯಾಪಿಸಿರುವ ಆ ಪರ್ವತದ ಕೆಳಗಡೆಯನ್ನು ಬಗ್ಗಿ ನೋಡಿ ಗಡಗಡನೆ ನಡುಗುತ್ತಿರ
ಲು, ಕೆಲರು ಧೈರ್ಯಶಾಲಿಗಳು ಉತ್ಸಾಹಗೊಂಡು ಉಘೇ ಎಂದು ಕೂಗಿ ಜುಟ್ಟನ್ನೂ ಕಚ್ಚೆ
ಯನ್ನೂ ಹೊದಿಕೆಯನ್ನೂ ಬಲವಾಗಿ ಸುತ್ತಿಕಟ್ಟಿ ‖೩೦‖ ತಮ್ಮ ಗಂಟುಮೂಟೆಗಳನ್ನು
ಸಂವರಿಸಿಕೊಂಡು, ಹಜ್ಜೆಗಳನ್ನು ಮೆಲ್ಲಮೆಲ್ಲನೆ ಇಡುತ್ತ, ಜನರ ಸಂದಣಿಯು ಹೆಚ್ಚಾಗಿದ್ದು
ದರಿಂದ ಒಬ್ಬರಹಿಂದೊಬ್ಬರು ಹೋಗುತ್ತ, ಅಲ್ಲಲ್ಲಿಗೆ ಉಘೇ ಶಬ್ದವನ್ನು ಮಾಡುತ್ತ ‖೩೧‖
ದೊಡ್ಡ ಬಂಡೆಗಳನ್ನೇರುತ್ತ, ಕೆಲರು ಜಾರಿಬೀಳುತ್ತ, ಅಪಾಯದ ಸ್ಥಳಗಳನ್ನು ನೋಡಿ ಕಾಲಿ
ಡುತ್ತ, ಬೀಳುತ್ತಿದ್ದ ಮುದಿಕರನ್ನು ಬಳಿಯಲ್ಲಿದ್ದವರು ಹಿಡಿದುಕೊಳ್ಳುತ್ತ, ಕೆಲರು ತೊಡೆಗ
ಳಮೇಲೆ ಕೈಗಳನ್ನಿಟ್ಟುಕೊಂಡು ಬೆವರಿ ನಡುಗುತ್ತಿರುವ ಕಾಲ್ಗಳುಳ್ಳವರಾಗಿ ನಡೆಯುತ್ತ,
ಜನದ ದಟ್ಟಣೆಯಿಂದ ಒಬ್ಬರಿಗೊಬ್ಬರು ತಿಕ್ಕಾಡುತ್ತ, ಅಲ್ಲಲ್ಲಿಗೆ ನಿಂತುಕೊಂಡು ಕಲ್ಲುಗ

ಲಂಬಂತ ಶ್ಶೈಲಾಪರೇ ||೩೪|| ಹೃದ್ಭಂಗಪರ್ವತನುವಕೇರು ರೇವಂ ಶನೈಶ್ಶನೈಃ|
ತ್ರಿಯಂಬಕಾಚಲಸ್ಯಾಗ್ರಾ ದಾಯಾಂತೀ ಧರಣೀತಲಂ ||೩೫|| ಗೌತಮೀವಾ
ದಿಮಧ್ಯಾಂತವ್ಯಾಪ್ತಾ ಹೃದ್ಭಂಗಭೂಭೃತಃ | ಪರಿಷತ್ಸಾಸಮಾಗತ್ಯ ತಸ್ಮಹೀ
ಧ್ರಸಮೀಪತಃ ||೩೬|| ಗಂಗಾಪ್ರವಾಹೋಪಕಂಠದೇಶೇ ಸಂಪ್ರೀತಿತಸ್ತದಾ |
ಪೂಗಪುನ್ನಾಗಪನಸ ಚೂತಚಂಪಕಶಾಖಿನಾಂ || ೩೭ || ಜಂಬೂಜಂಬೀರಬದ
ರೀ ಕದಂಬಾಶ್ವತ್ಥಭೂರುಹಾಂ | ಸಾಲಚಂದನಸಂತಾನ ವಟಪ್ಲಕ್ಷಮಹೀರು
ಹಾಂ ||೩೮|| ಲವಂಗತಾಲಹಿಂತಾಲ ಘನಸಾರಕುಜಾವಲೇಃ | ಶಮೀಕುಟಜ
ಸಾರಂಗ ಗುಗ್ಗುಲುದ್ರುಮಸಂಹತೇಃ ||೩೯|| ಬಕುಲಾಶೋಕಮಂದಾರ ಕರ್ಣಿ
ಕಾರಾವನೀರುಹಾಂ | ಮಾಧವೀಮಲ್ಲಿಕಾಜಾತಿವಾಟೀನಾಂಚ ಸಮೀಪತಃ ||
ಕಮಲೋತ್ಪಲಕಲ್ಹಾರ ಸರಸಾಮುಪಕಂಠತಃ | ಕುಟೀವ್ರಜಪಟಾಗಾರ ಕಾಯ
ಮಾನಾದಿಕಾನಿಚ ||೪೦|| ಕೃತ್ವಾಯಥಾಸ್ವಸ್ವಸಂಘಂ ನಿವಿಶ್ಯಗುರುಹರ್ಷತಃ|
ಸ್ನಾತ್ವಾಕನಕಗಂಗಾಯಾ ಸ್ಸಂಗಮೇತದನಂತರಂ ||೪೧|| ಸಂಕ್ಷಾಳಿತಾತ್ಮೀ
ಯಜನ್ಮಸಹಸ್ರಾಘೌಘಮರ್ದನಾ | ಇಷ್ಟಾನ್ನಪಾನಸಂತೃಪ್ತಾ ಸ್ಯವಸತ್ಪ್ರಮ
ದಾಂಚಿತಾ ||೪೨|| ಅಥದೋನಮರಾಜಾಪಿ ಸದ್ಭಕ್ತಗಣಸಂಯುತಃ | ನಿತ್ಯಲಿಂ
ಗಾರ್ಚನಂಕೃತ್ವಾ ಸಂಧ್ಯಾಯಾಂಚಮಹಾನಿಶಿ || ೪೪ || ಇಷ್ಟಲಿಂಗಪ್ರಸಾ

---

ಳನ್ನು ಒರಗಿಕೊಳ್ಳುತ್ತ, ಮೆಲ್ಲನೆ ಆ ಬೆಟ್ಟದಿಂದ ಪರಿಸೆಯು ದಟ್ಟವಾಗಿ ಇಳಿಯುತ್ತಿರಲು, ತ್ರಿಯಂಬಕಗಿರಿಯ ತುದಿಯಿಂದ ಭೂತಲಕ್ಕೆ ಇಳಿಯುತ್ತಿರುವ ಗೌತಮೀನದಿಯಂತೆ ತೋರುತ್ತಿದ್ದಿತು. ಹೀಗೆ ಇಳಿದುಬಂಡ ಪರಿಸೆಯು ಆ ಬೆಟ್ಟದ ಬಳಿಯಲ್ಲಿ ಹರಿಯುತ್ತಿರುವ ಗಂಗಾಪ್ರವಾಹದ ಸಮೀಪದಲ್ಲಿಯೇ ಇದ್ದ ಅಡಕೆ, ಸುರಹೊನ್ನೆ, ಹಲಸು, ಮಾವು, ಸಂಪಗೆ, ನೇರಿಲು, ನಿಂಬೆ, ಎಲಚಿ, ಈಚಿಲು, ಅರಳಿ, ಜಾಲ, ಶ್ರೀಗಂಧ, ಪಿಪ್ಪಲ, ಲವಂಗ, ತಾಳೆ, ಕರಿತಾಳೆ, ಕರ್ಪೂರ, ಬನ್ನಿ, ಕಾಡುಮಲ್ಲಿಗೆ. ಕಿತ್ತಳೆ, ಗುಗ್ಗುಲ, ಬಕುಳ, ಅಸುಗೆ, ದೇವದಾರು, ಕೆಕ್ಕೆ, ಮೊದಲಾದ ಬಗೆಬಗೆಯ ಮರಗಳ ಬಳಿಯಲ್ಲಿಯೂ ಬಿಳಿಜಾಜಿ ಕರಿಜಾಜಿ ಮಲ್ಲಿಗೆ ಇತ್ಯಾದಿ ಲತೆಗಳ ಬಳಿಯಲ್ಲಿಯೂ, ತಾವರೆ ಕನ್ನೈದಿಲು ಸುಗಂಧದ ನೈದಿಲುಗಳುಳ್ಳ ಸರೋವರಗಳ ಬಳಿಯಲ್ಲಿಯೂ, ಗುಡಿಸಲುಗಳನ್ನೂ ಗುಡಾರಗಳನ್ನೂ ಚಪ್ಪರಗಳನ್ನೂ ತಂತಮ್ಮ ಗುಂಪಿಗೆ ತಕ್ಕಂತೆ ಹಾಕಿ, ಸಂತೋಷದಿಂದ ಅವುಗಳಲ್ಲಿ ತಂಗಿ, ಅಲ್ಲಿಯ ಸ್ವರ್ಣಗಂಗಾನದೀ ಸಂಗಮಸ್ಥಲದಲ್ಲಿ ಸ್ನಾನಮಾಡಿ, ತಮ್ಮ ಸಾವಿರಾರು ಜನ್ಮಗಳ ಪಾಪವನ್ನೆಲ್ಲಾ ತೊಳೆದುಕೊಂಡು, ಅನ್ನಪಾನಾದಿಗಳಿಂದ ತೃಪ್ತರಾಗಿ, ಸಂತೋಷದಿಂದ ಇದ್ದರು. ||೪೩|| ದೋನಮಾರ್ಯನುಕೂಡ ಶಿವಗಣಸಮೇತನಾಗಿ ಆದಿನ ಸಾಯಂಕಾಲವೂ ಅರ್ಧರಾತ್ರಿಯಲ್ಲೂ ಇಷ್ಟಲಿಂಗಾರ್ಚನರೂಪ ನಿತ್ಯವ್ರತವನ್ನಾಚರಿಸಿ, ಇಷ್ಟಲಿಂಗ ಪ್ರಸಾದವನ್ನು ಸವಿದನು. ಆಗ ಪರಿಸೆಯಲ್ಲಿ ಕೆಲವರು ಬಸವೇಶನು

ದೋಪಭೋಗಾವಾಪ್ತಸುಖೋಽವಸತ್ | ತದಾ ಶಶಂಸುರ್ಗೀತಾನಿ ಬಸವೇ
ಶಸ್ಯಕೇಚನ ||೪೫|| ಇತರೇತತ್ರ ಬಸವಪುರಾಣಮುಪಠನ್ಮುದಾ | ಭರತೋ
ಕ್ತೇನಮಾರ್ಗೇಣ ಜಗುರ್ಗೀತಾನಿಕೇಚನ ||೪೬|| ದೇಶೀಯಗೀತಾನುಕೂಲ
ಚಕ್ರಿರೇನರ್ತನಂಪರೇ | ಇತರೇ ಲಲಿತಾಲಾಪಾನ್ವಿತೇನುರತಿಹರ್ಷತಃ ||೪೭||
ಸ್ವನದ್ಗಿರಿವ್ರಜಂಕೇಚಿ ಚ್ಚಕ್ರುರ್ಜಯಜಯಧ್ವನಿಂ | ನಿದ್ರಾಮವಾಪುರಿತರೇ ಸ್ವ
ಕೀಯಶ್ರಮಶಾಂತಯೇ ||೪೮|| ಉತ್ಥಾಯಸಂಭ್ರಮಂದ್ರಷ್ಟುಂ ಯಯುಃಪರಿ
ಷದೋಽಪರೇ | ಇತರೇಕೀರ್ತಯಾಮಾಸುರ್ಮಹೀಧರಕದಂಬಕಂ ||೪೯|| ಬಟ
ಚುತ್ವಂಕಥಯಂತಿಸ್ಮ ಕೇಚಿನ್ಮಾರ್ಗಸ್ಯ ಪೃಚ್ಛತಾಂ | ಅವದನ್ಕೇಚಿದನ್ಯೋನ್ಯಂ
ಸ್ವಕೀಯಾಗಮನಕ್ರಮಾನ್ ||೫೦|| ವರ್ಣಯಾಮಾಸುರಪರೇ ಭೀಕರಾರಣ್ಯ
ಸಂಸ್ಥಿತಿಂ | ಶ್ರೀಪರ್ವತಪುರಾಣಾದೀನ್ಯಾಚಖ್ಯುಃ ಕೇಚಿದಾದರಾತ್ ||೫೧||
ಅಶ್ರುಣ್ವನ್ನಪಿ ಸದ್ಭಕ್ತ್ಯಾ ತಾನಿಸರ್ವಾಣಿಕೇಚನ | ಏವಂವಿಧಾನಿತೀರ್ಥಾನಿ
ನಜಾನೀಮೋವಯಂಪುರಾ ||೫೨|| ಇದಮಾಶ್ಚರ್ಯಮಿತ್ಯೂಚು ರಪರೇಪರಿಹ
ರ್ಷಿತಾಃ | ಕಿಮುಚ್ಯತೇಽಯಮೇವ ಶ್ರೀಪರ್ವತೋ ಬಹುರೂಪಧೃತ್ ||೫೩||
ಜಲಾಶಯತ್ವಂಸಂಪ್ರಾಪ್ಯ ದತ್ತೇಪರಿಷದೇಜಲಂ | ಲಿಂಗತ್ವಮೇತ್ಯನಿಯಮಾ
ನ್ಕಾರಯತ್ಯನಯಾಬಹೂನ್ ||೫೪|| ಫಲಿತದ್ರುಮತಾಂಗತ್ವಾ ಫಲಾನಿದಿಶ

---

ರಚಿಸಿರುವ ಗೀತಗಳನ್ನು ಹಾಡಿದರು. ಕೆಲರು ಬಸವಪುರಾಣವನ್ನೋದಿದರು ಕೆಲರು ಭರತಶಾ
ಸ್ತ್ರೋಕ್ತಮಾರ್ಗದಿಂದ ಗೀತಗಳನ್ನು ಹಾಡಿದರು. ಕೆಲರು ದೇಶೀಯಗಾನಕ್ಕೆ ಅನುಗುಣವಾಗಿ
ಕುಣಿದರು. ಇನ್ನು ಕೆಲರು ಸಂತೋಷದಿಂದ ಜಾಣ್ನುಡಿಗಳನ್ನಾಡುತ್ತಿದ್ದರು ||೪೭|| ಕೆಲರು
ಬೆಟ್ಟವು ಪ್ರತಿಧ್ವನಿ ಕೊಡುವಂತೆ ಜಯಜಯಕಾರವನ್ನು ಮಾಡಿದರು. ಕೆಲರು ಮಾರ್ಗಾಯಾಸ
ನಿವಾರಣೆಗಾಗಿ ನಿದ್ರಿಸಿದರು. ಕೆಲರು ಎದ್ದು ಪರಿಸೆಯ ಸಡಗರವನ್ನು ನೋಡುವುದಕ್ಕೆ ಹೊರ
ಟರು. ಕೆಲರು ಕಾಣುವ ಬೆಟ್ಟಸಾಲನ್ನು ನೋಡಿ ಕೊಂಡಾಡಿದರು. ಕೆಲರು ಕೇಳುವವರಿಗೆ
ನೇರವಾದ ಗಿರಿಮಾರ್ಗವನ್ನು ಹೇಳುತ್ತಿದ್ದರು. ಕೆಲರು ತಾವು ಬಂದ ದಾರಿಯ ಕ್ರಮವನ್ನು
ಮಾತನಾಡಿಕೊಳ್ಳುತ್ತಿದ್ದರು. ||೫೦|| ಕೆಲರು ಘೋರಾರಣ್ಯದ ವಿವರವನ್ನು ವರ್ಣಿಸುತ್ತಿದ್ದರು.
ಕೆಲರು ಶ್ರೀಶೈಲಸ್ಥಲಪುರಾಣವನ್ನು ತಾವು ಕೇಳದೆ ಇದ್ದರೂ ಭಕ್ತಿಯಿಂದ ಹೇಳುತ್ತಿದ್ದರು.
ನಾವು ಪೂರ್ವದಲ್ಲಿ ಎಲ್ಲೂ ಇಂಥ ತೀರ್ಥಗಳನ್ನು ನೋಡಿ ತಿಳಿದುದಿಲ್ಲ ಇದು ಆಶ್ಚರ್ಯ ಎಂದು
ಕೆಲರು ಹೇಳುತ್ತಿದ್ದರು. ಇನ್ನು ಕೆಲರು—ಇನ್ನೆಷ್ಟು ಹೇಳುವುದು? ಈ ಶ್ರೀಶೈಲವೇ ಪರಿಸೆಯ
ಮೇಲೆ ಕರುಣವಿಟ್ಟು ಬಹುರೂಪವನ್ನು ಧರಿಸಿರುವುದು. ಹೇಗೆಂದರೆ—ಈ ಗಿರಿಯೇ ಬಾವಿ ಕೊಳ
ಮೊದಲಾದುವುಗಳ ರೂಪವನ್ನು ಧರಿಸಿ, ಪರಿಸೆಗೆಲ್ಲಾ ನೀರನ್ನು ಕೊಡುವುದು. ಲಿಂಗನಾಗಿ ಪರಿ
ಸೆಯು ನಿತ್ಯವ್ರತಗಳನ್ನು ನೆರವೇರಗೊಳಿಸುವುದು. ||೫೪|| ಹಣ್ಣು ಬಿಟ್ಟಿರುವ ಮರಗಳಾಗಿ ಪರಿ

ಸ್ವಯಂ | ಜಲದತ್ವಂಸಮಾಸಾದ್ಯ ಸಾಂದ್ರಛಾಯಾಂಕರೋತಿಚ ||೫೫|| ಧೃತ್ವಾಪುಷ್ಪಿತವೀರುತ್ತ್ವಂ ಕುರುತೇ ಪುಷ್ಪವಾಸನಾಂ | ಮಂದಾನಿಲತ್ವಮಾಸಾದ್ಯಮುಹುಶ್ಶಮಯತಿ ಶ್ರಮಂ ||೫೬|| ನೇತಾಭೂತ್ವಾಪರಿಷದಂ ಸಮ್ಯಜ್ಞಯತಿವರ್ತ್ಮನಿ | ಕಾನನತ್ವಂ ಸಮಾಸಾದ್ಯ ನಿವಾಸಾನ್ಪಥಿಯಚ್ಛತಿ ||೫೭|| ಭೂತ್ವಾಪೌರಾಣಿಕೋ ವಕ್ತಿ ಶ್ರೀಗಿರೀಶ್ವರವೈಭವಂ | ಯಾಮಿಕತ್ವಂ ಸಮಾಸಾದ್ಯ ರಕ್ಷಣಂಕುರುತೇಸದಾ ||೫೮|| ಅನೇಕಮೃಗರೂಪೇಣ ಕರೋತಿಶ್ರಮವಿಸ್ಮೃತಿಂ | ವಿಚಿತ್ರಪಕ್ಷಿರೂಪೇಣ ತನೋತಿಹೃದಿಕೌತುಕಂ ||೫೯|| ಅವಾಪ್ಯಾತಿಥಿರೂಪತ್ವಂ ಸ್ವೀಕರೋತಿಚಪೂಜನಂ | ವಿಶಿಷ್ಟಮುನಿರೂಪೇಣ ಕರೋತ್ಯಾಶಿಷಮುತ್ತಮಾಂ ||೬೦|| ನಮಸ್ಕೃತೀಃಕಾರಯತಿ ವ್ರತಿರೂಪೇಣಸಾದರಂ | ಪ್ರದರ್ಶಯತಿಸದ್ಭಕ್ತಿಂ ವರಜಂಗಮರೂಪತಃ ||೬೧|| ಹಿತಾನಿಬೋಧಯತ್ಯಾಪ್ತರೂಪಂಪ್ರಾಪ್ಯ ಮುಹುರ್ಮುಹುಃ | ಘೋಷರೂಪಾತ್ತತ್ರತತ್ರ ಕರೋತ್ಯಾಶಾಭಿಪೂರಣಂ || ೬೨ || ಅನಂತತೀರ್ಥರೂಪೇಣ ಪಾವನೀಕುರುತೇಜನಾನ್ | ದದಾತಿಮುಕ್ತಿಮತುಲಾಂ ನದೀರೂಪಮುಪಾಶ್ರಿತಃ ||೬೩|| ಬುದ್ಧ್ಯಾಯತಸ್ಯಾಂ ಪರಿಷದಿ ಕರುಣಾರಸಪೂರ್ಣಯಾ | ಸೋಚೇದ್ದುರ್ಗಮಮಾರ್ಗಾದ್ರಿ ಗುಹಾರ

---

ಸೆಗೆ ಬೇಕಾದಷ್ಟು ಹಣ್ಣುಗಳನ್ನು ಕೊಡುವುದು. ಮೇಘಗಳಾಗಿ ನೆಳಲನ್ನು ಮಾಡುವುದು. ಹೂವು ತುಂಬಿದ ಬಳ್ಳಿಗಳಾಗಿ ಪರಿಮಳವನ್ನೊದಗಿಸುವುದು. ತಂಗಾಳಿಯಾಗಿ ಬೀಸಿ ಶ್ರಮವನ್ನು ಪರಿಹರಿಸುವುದು. ||೫೬|| ಮುಂದಾಳಾಗಿ ನಡೆದು ಪರಿಸೆಯನ್ನು ಸರಿಯಾದ ಮಾರ್ಗದಲ್ಲಿ ಕರೆದುಕೊಂಡು ಹೋಗುವುದು. ಕಾಡಾಗಿ ಮಾರ್ಗದಲ್ಲಿ ಪರಿಸೆಗೆ ತಂಗುದಾಣವಾಗಿರುವುದು. ಪೌರಾಣಿಕನಾಗಿ ಶ್ರೀಮಲ್ಲಿಕಾರ್ಜುನ ಮಹತ್ತ್ವವನ್ನು ಬೋಧಿಸುವುದು. ತಳಾರನಾಗಿ ಕಾವಲು ಕಾಯುವುದು. ನಾನಾ ಮೃಗರೂಪವನ್ನು ಧರಿಸಿ ಪರಿಸೆಗೆ ಆಯಾಸವನ್ನು ಪರಿಹರಿಸುವುದು. ನಾನಾ ಪಕ್ಷಿರೂಪಾಗಿ ಕೂಗಿ ಆಶ್ಚರ್ಯವನ್ನುಂಟುಮಾಡುವುದು. ಅತಿಥಿ ರೂಪವನ್ನು ಧರಿಸಿ ಬಂದು ಭಕ್ತರ ಪೂಜೆಯನ್ನು ಸ್ವೀಕರಿಸುವುದು. ಶ್ರೇಷ್ಠ ಮುನಿಪತಿಯಾಗಿ ಬಂದು ಆಶೀರ್ವಾದವನ್ನು ಮಾಡುವುದು. ವ್ರತಸಂಪನ್ನನಾದ ಭಕ್ತನಂತೆ ಬಂದು ಪ್ರೀತಿಯಿಂದ ನಮಸ್ಕರಿಸುವುದು. ಜಂಗಮರೂಪಾಗಿ ಬಂದು ಭಕ್ತಿಮಾರ್ಗವನ್ನು ತೋರಿಸಿಕೊಡುವುದು. ಮಿತ್ರನಂತೆ ಬಂದು ಬಾರಿಬಾರಿಗೂ ಹಿತೋಪದೇಶ ಮಾಡುತ್ತಿರುವುದು. ಅಲ್ಲಲ್ಲಿಗೆ ಗೊಲ್ಲರ ಹಳ್ಳಿಗಳ ರೂಪಾಗಿ ನಿಂತು ಪರಿಸೆಗೆ ಬೇಕಾದುದನ್ನು ಒದಗಿಸುವುದು. ||೬೨|| ತೀರ್ಥರೂಪದಿಂದ ನಿಂತು ಜನರನ್ನು ಪವಿತ್ರಗೊಳಿಸುವುದು. ನದೀರೂಪದಿಂದ ಮುಕ್ತಿಯನ್ನು ಕೊಡುವುದು. ಹಾಗೆ ಶ್ರೀಶೈಲವು ಮಾಡದೆ ಇದ್ದ ಪಕ್ಷದಲ್ಲಿ, ಹೋಗಲಸಾಧ್ಯವಾಗಿರುವ ದಾರಿಗಳಿಂದಲೂ, ಬೆಟ್ಟಗಳ ಗುಹೆಗಳಿಂದಲೂ, ಘೋರಾರಣ್ಯಗಳಿಂದಲೂ, ರಾಕ್ಷಸರಿಂದಲೂ,

ಣ್ಯಮಹಾಸುರೈಃ ||೬೪|| ಚೋರದುಷ್ಟಮೃಗಾನೀಕೈ ಸ್ಸರ್ಪಾದಿಕ್ರೂರಜಂತುಭಿಃ | ಶ್ರೀಶೈಲೇಷ್ವನಿರ್ಜನಸ್ಥಾನೇ ಷ್ವೇಸಂದ್ರಷ್ಟುಂಮಹಾಗಿರಿಂ ||೬೫|| ಕಥಂವಾಶಕ್ಯತಇತಿ ಶಶಂಸುರಪರೇಮುದಾ | ಏವಂವದತ್ಸು ಪರಿಷಜ್ಜನೇಷ್ವಾಸೀದ್ದಿನೋದಯಃ ||೬೬||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ಮಧ್ಯಾಹ್ನಸಮಯ ಭೋಜನಕಥನಪುರಸ್ಸರಂ ಸಂಧ್ಯಾಯಾಂ ಪರಿಷದೋ ನಿವೇಶಕಥನಂನಾಮ ದಶಮೋಽಧ್ಯಾಯಃ.

---

## ಅಥ ಏಕಾದಶೋಽಧ್ಯಾಯಃ.

### (ಗೌಳಮಾಳವಾದಿದೇಶಪರಿಷದಾಗಮನಕಥನಂ)

ಪ್ರಭಾತೇ ದೋನಮಾರ್ಯೋಽಥ ಸದ್ಭಕ್ತಜನಸಂಯುತಃ | ಗಂಗಾಪ್ರವಾಹಕಲಿತಪ್ರತ್ಯಂತಕ್ಷ್ಮಾಭೃತಾಂ ಚಯೈಃ ||೧|| ಅಭ್ರಂಕಷಾಗ್ರಶಿಖರನಿಕರೈರುಪಶೋಭಿತಂ | ಸಮಾರುರೋಹ ಸಕ್ಷತ್ರಪರ್ವತಂ ಪರಯಾಮುದಾ ||೨|| ಸಮುಲ್ಲಸತ್ಸುರನದೀಸಂಗಮಾಕಾಂಕ್ಷಯಾ ದ್ರುತಂ | ಪ್ರಯಾಂತೀಸಾಸಿಂಧುರಿ

---

ಕಳ್ಳರು ಕಾಕರುಗಳಿಂದಲೂ, ಮೃಗಸರ್ಪಾದಿ ಕ್ರೂರಜಂತುಗಳಿಂದಲೂ ತುಂಬಿರುವ ಈ ಶ್ರೀಗಿರಿಯ ದರ್ಶನಮಾಡುವುದಕ್ಕೆ ಹೇಗೆ ಶಕ್ಯವಾದೀತು? ಎಂಬುದಾಗಿ ಇನ್ನು ಕೆಲರು ಕೊಂಡಾಡುತ್ತಿದ್ದರು. ಹೀಗೆ ಪರಿಸೆಯೆಲ್ಲವೂ ನಾನಾವಿಧದಿಂದ ಮಾತನಾಡಿಕೊಳ್ಳುತ್ತಿರುವಲ್ಲಿ ಬೆಳಗಾಯಿತು. ||೬೬||

ಎಂಬಲ್ಲಿಗೆ ಪರ್ವತಪ್ರಕರಣದೊಳಗೆ ೧೦ನೆ ಅಧ್ಯಾಯವು ಮುಗಿದುದು.

---

## ೧೧ನೆ ಅಧ್ಯಾಯವು.

### ಗೌಳಮಾಳವಾದಿ ದೇಶಗಳಿಂದ ಪರಿಸೆಯು ಬಂದುದರ ವರ್ಣನೆ.

ಬಳಿಕ ದೋನಮಾರ್ಯನು ಪ್ರಾತಃಕಾಲದಲ್ಲಿ ಭಕ್ತಜನರೊಡನೆ ಕೂಡಿ, ಗಂಗಾಪ್ರವಾಹದಲ್ಲಿ ಸೇರಿಕೊಂಡಿರುವ ಸಣ್ಣ ಗುಡ್ಡಗಳಿಂದಲೂ, ಮೇಘಮಂಡಲದವರೆಗೆ ವ್ಯಾಪಿಸಿರುವ ಕೋಡುಗಲ್ಲುಗಳಿಂದಲೂ ಕೂಡಿರುವ ಸಕ್ಷತ್ರಗಿರಿಯನ್ನು ಸಂತೋಷದಿಂದ ಹತ್ತಿದನು. ||೨||

ವ ಪ್ರತಸ್ಥೇ ಪರಿಷತ್ತತಃ ||೩|| ಕಿಂಚಿದ್ದೂರಂಪ್ರದ್ರವಂತ ಸ್ಸಂಭ್ರಮಾತ್ತತ್ರಕೇ
ಚನ | ಉಘೇ ಜಯಜಯೇತ್ಯುಚ್ಚೈಃ ಪ್ರವದಂತಸ್ತಥಾಪರೇ ||೪|| ನಿವಸಂತ
ಸ್ತತ್ರತತ್ರ ಕುರ್ವಂತೋಧ್ವನಿಮುಚ್ಚಕೈಃ | ಪದಪಜ್ತೀಃಪ್ರಾಕ್ತನಾನಾಂ ತನ್ಮಾ
ರ್ಗೇ ತೀರ್ಥವಾಸಿನಾಂ ||೫|| ಕೃತ್ವಾಪಸೋಪಾನನಿಕರಂ ಕ್ಷಿಪಂತೋಂಘ್ರೀ
ನಥಾಪರೇ | ಕುರ್ವಂತೋಘನಸಂಮರ್ದಂ ತಿಷ್ಠಂತಃಕೇಚನಶ್ರಮಾತ್ ||೬||
ಸ್ವಕರಾನೂರುಭಾಗೇಷು ಸ್ಥಾಪಯಂತಶ್ಚಕೇಚನ | ಅವನಮ್ರಾಃಪತಂತಶ್ಚ ಗ
ಚ್ಛಂತಃ ಪಾಣಿಭಿಃಪದೈಃ ||೭|| ಅವಲಂಬ್ಯಾನ್ಯೋನ್ಯಹಸ್ತಾ ನ್ಕೇಚಿದ್ಯಾಂತಃ
ಪ್ರಯತ್ನತಃ | ಆಕರ್ಷಯಾಕರ್ಷಯಾಸ್ಮಾಂ ಚ್ಛ್ರೀಗಿರೀಶೇತಿವಾದಿನಃ ||೮||
ಆಕರ್ಷಯಾಕರ್ಷಯ ಶ್ರೀಶೈಲಾಧೀಶೇತಿಭಾಷಿಣಃ | ಆಕರ್ಷಯಾಕರ್ಷಯಾ
ಸ್ಮಾ ನ್ಮಲ್ಲಯೇತಿಚವಾದಿನಃ ||೯|| ಆಕರ್ಷಯಾಕರ್ಷಯೇತಿ ಕೃತ್ವಾಗೀತಾನಿ
ಕೇಚನ | ಗಾಯಂತಃಪರಯಾಭಕ್ತ್ಯಾ ಮಹಾಸಂತೋಷಪೂರಿತಾಃ ||೧೦||
ದೇಶೀಯಗೀತಾನುಕೂಲಂ ಪ್ರನೃತ್ಯಂತಸ್ತಥಾಪರೇ | ನಕ್ಷತ್ರಪರ್ವತಸ್ಯಾಗ್ರಂ
ಶನೈರಾರುರುಹುಸ್ತತಃ ||೧೧|| ಉತ್ಸವಾಮೃತಸಂಪೂರ್ಣ ಪರಿಷದ್ಭಾಂಡಸಂಚ
ಯಾನ್ | ಆಚಕರ್ಷ ಸ್ವಕರುಣಾರಜ್ಜುಭಿರ್ಮಲ್ಲಿಕಾರ್ಜುನಃ ||೧೨|| ಅನ್ಯಥಾ

---

ದೇವಗಂಗೆಯೊಡನೆ ಬೆರೆಯಬೇಕೆಂಬ ಕುತೂಹಲದಿಂದ ಓಡುತ್ತಿರುವ ಸಿಂಧುನದಿಯಂತೆ ಪರಿಸೆ
ಯು ಕೂಡ ಆ ಗಿರಿಗೆ ಪ್ರಯಾಣಮಾಡಿತು. ಅದರಲ್ಲಿ ಕೆಲರು ಸ್ವಲ್ಪದೂರ ಓಡುವರು. ಕೆಲರು
ಉಘೇ ಜಯಜಯಾ ಎಂದು ಘೋಷಿಸುವರು. ||೪|| ಕೆಲರು ಅಲ್ಲಲ್ಲಿಗೆ ನಿಂತು ಗಟ್ಟಿಯಾಗಿ
ಕೂಗಿ ತಮ್ಮವರನ್ನು ಕರೆಯುವರು. ಕೆಲವರು ಆ ದಾರಿಯಲ್ಲಿ ಹೋಗಿ ತೀರ್ಥಯಾತ್ರೆಮಾಡಿದ
ಹಳಬರು ಸಮೆಯಿಸಿರುವ ದಾರಿಯನ್ನೇ ಹಿಡಿದು ಅಲ್ಲಿಯೇ ಹಜ್ಜೆಯನ್ನಿಟ್ಟು ನಡೆಯುತ್ತಿದ್ದರು.
ಕೆಲರು ಒರಸೊರಸಾಡುತ್ತಲೂ, ಕೆಲರು ಆಯಾಸಪಟ್ಟು ನಿಂತೂ, ಕೆಲರು ತೊಡೆಗಳಮೇಲೆ
ಕೈಗಳನ್ನೂರಿಕೊಂಡೂ, ಕೆಲರು ನಡುವಿನ ಬಾಧೆಯಿಂದ ಹಿಂದಕ್ಕೆ ಸೆದೆದುಕೊಂಡೂ, ಕೆಲರು
ಜಾರಿಬಿದ್ದೂ, ಕೆಲರು ಕಾಲುಗಳನ್ನೂ ಕೈಗಳನ್ನೂ ಸಹ ಊರಿಕೊಂಡೂ ||೭|| ಕೆಲರು ಪರ
ಸ್ಪರ ಕೈಗಳನ್ನು ಹಿಡಿದುಕೊಂಡೂ, ಕೆಲರು ಶ್ರೀಶೈಲಪತಿಯೆ! ನಮ್ಮನ್ನು ಸೇದಿಕೋ ಎಂದು
ಹೇಳಿಕೊಳ್ಳುತ್ತಲೂ, ಕೆಲರು ಮಲ್ಲಯ್ಯಾ ನಮ್ಮನ್ನೆಳೆದುಕೊ ಎಳೆದುಕೋ ಎಂದು ಹೇಳು
ತ್ತಲೂ, ಕೆಲರು ನಮ್ಮನ್ನು ಸೆಳೆದುಕೋ ಎಂಬ ಪಲ್ಲವಿಯ ಗೀತಗಳನ್ನು ಅತ್ಯಂತ ಭಕ್ತಿಯಿಂದ
ಹಾಡುತ್ತಲೂ, ಕೆಲರು ಹಾಡುಗಾರಿಕೆಯ ಗತ್ತಿಗೆ ಸರಿಯಾಗಿ ಕುಣಿಯುತ್ತಲೂ, ಹೀಗೆ ಸರ್ವ
ರೂ ನಕ್ಷತ್ರಗಿರಿಯ ತುದಿಯನ್ನು ಮೆಲ್ಲಗೆ ಏರಿದರು. ||೧೧|| ಕ್ಷೇತ್ರಯಾತ್ರೋತ್ಸವವೆಂಬ
ಅಮೃತದಿಂದ ತುಂಬಿದ ಪರಿಸೆಯೆಂಬ ಕೊಡಗಳನ್ನು ಶ್ರೀಮಲ್ಲಿಕಾರ್ಜುನನು ತನ್ನ ಕಾರುಣ್ಯ
ವೆಂಬ ಹಗ್ಗದಿಂದ ಕಟ್ಟಿ ಸೆಳೆದುಕೊಂಡನು. ||೧೨|| ಹಾಗೆ ಶಿವಕಾರುಣ್ಯವಿಲ್ಲದಿದ್ದರೆ ಅತ್ಯಂತ

ಶಂಕರಕೃಪಾಂ ವಿನಾ ಪರಮದುರ್ಗಮಂ । ತಂಗಿರಿಂಯೋಜನೋತ್ಸೇಧ ಮಾ
ರೋಹೇಯುಃಕಥಂಜನಾಃ ॥೧೩॥ ಅನಂತರಂ ತತ್ರಕಿಂಚಿದ್ವಿಲಂಬ್ಯ ಪರಿಷಜ್ಜ
ನಾಃ । ಶ್ರಾಂತಿಂನೀತ್ವಾಪುನರಪಿ ಸಂಘೀಭೂಯಪರಸ್ಪರಂ ॥೧೪॥ ತತ್ಪ
ತಾಗ್ರಮಖಿಲಂ ಯಥಾಘಂಟಾಪಥೋಭವೇತ್ । ತಥಾವ್ಯಾಪ್ತಾಃ ಪ್ರತಿಕ್ಷು
ಭ್ಯತತ್ಪರ್ವಶಗುಹಾಂತರಂ ॥ ೧೫ ॥ ಪಾಲಯಾಸ್ಮಾ ನ್ಪರ್ವತೇಶೇತ್ಯಾಲಪಂತ
ಸ್ತಥಾಪರೇ । ಮುಹುರ್ಮುಹುಃಪ್ರಕುರ್ವಂತಃ ಪ್ರಣಾಮಂಪರಿಜೃಂಭಿತಾಃ ॥
ತರುಚ್ಛಾಯಾಸುತಿಷ್ಠಂತೋ ಭಕ್ಷಯಂತಃಫಲಾನಿಚ । ಕ್ಲಿಶ್ಯಂತೋದೃಷದಾಂ
ಜಾಲೈಃ ಪಶ್ಯಂತಶ್ಶೈಲಸಂಹತಿಂ ॥ ೧೭ ॥ ಪುಷ್ಯಂತಃಪುಣ್ಯನಿಚಯರ್ಾ ಹೃ
ಷ್ಯಂತೋಹೃದಯೇಸದಾ । ಖಂಡಯಂತಃಪಾಪಜಾಲಂ ದಂಡಯಂತೋಯ
ಮಂಪುನಃ ॥೧೮॥ ತ್ಯಜನ್ತೋಭವದುಃಖಾನಿ ಯಜಂತೋದೇಶಿಕಾವಲೀಃ।
ಗಚ್ಛಂತೋಲೀಲಯಾಸ್ವೈರಂ ಪೃಚ್ಛಂತೋಗಿರಿವೈಭವಂ ॥ ೧೯ ॥ ಪಾಲಯಂ
ತೋವ್ರತಿಜನಾಂ ಶ್ಚಾಲಯಂತಸ್ಸ್ವಕಾನ್ಕರಾನ್ । ಸರಂತೋವೃಕ್ಷವಾಟೀಷು
ಸ್ಮರಂತೋ ಬಸವೇಶ್ವರಂ ॥೨೦॥ ಪತಿತ್ವೋತ್ಥಾಯಗಚ್ಛಂತೋ ಸಂಘೃಷ್ಯಂ
ತಃಪರಸ್ಪರಂ । ಧ್ವನಂತಸ್ತತ್ರತತ್ರೋಚ್ಚೈ ರ್ಗೃಹ್ಣಂತೋ ವೃಕ್ಷಜಾಲಕಂ ॥೨೧॥
ಕೃತ್ವಾಡೋಲಾಂ ವೃಕ್ಷಶಾಖಾಃ ಕ್ರೀಡಂತಸ್ತತ್ರಕೇಚನ । ಕೇಚಿಚ್ಛೀತಪರಿತ್ರ
ಸ್ತಾ ಜುಷಂತಶ್ಚಾತಪಂಪರೇ ॥೨೨॥ ಮಹೀಧರಾಣಾಂಕೂಟೇಷು ತತ್ರತತ್ರಿ

---

ದುರ್ಗಮವೂ ಯೋಜನದೆತ್ತರವೂ ಆದ ಆ ಬೆಟ್ಟವನ್ನು ಜನರು ಹೇಗೆ ಹತ್ತುವರು? ಬಳಿಕ ಸಿ
ಸೆಯ ಜನರು ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು, ಮತ್ತೆ ಗುಂಪುಕೂಡಿ ಆ ಬೆಟ್ಟದಮೇಲ್ಗಡೆಯನ್ನೆ
ಲ್ಲಾ ತುಳಿದಾಡಿ ರಾಜಬೀದಿಗಳಂತೆ ಮಾಡಿಬಿಟ್ಟು, ಆ ಬೆಟ್ಟದ ಗವಿಗಳನ್ನು ಕಿಕ್ಕಿರಿದು ತುಂಬಿ
ಕೊಂಡರು. ಕೆಲರು ಗಿರಿಮಲ್ಲೇಶನೇ ಕಾಪಾಡು ಎಂದುಕೊಂಡರು. ಕೆಲರು ಉಬ್ಬಿ ಬಾರಿಬಾ
ರಿಗೂ ನಮಸ್ಕರಿಸಿದರು. ಕೆಲರು ಮರಗಳ ನೆಳಲಿನಲ್ಲಿ ಕುಳಿತು ಹಣ್ಣುಗಳನ್ನು ತಿಂದು, ಕಲ್ಲನ್ನು
ತುಳಿದು ನಡೆದುದರಿಂದ ಆಯಾಸಗೊಂಡು, ಬೆಟ್ಟಸಾಲನ್ನೆಲ್ಲಾ ನೋಡುತ್ತ, ಪುಣ್ಯವನ್ನು
ಹೆಚ್ಚಿಸಿಕೊಳ್ಳುತ್ತ, ಮನಸ್ಸಿನಲ್ಲಿ ಆನಂದಿಸುತ್ತ, ಪಾಪವನ್ನು ಕಳೆದುಕೊಳ್ಳುತ್ತ, ಅಂತಕನನ್ನು
ದಂಡಿಸುತ್ತ, ಸಂಸಾರ ದುಃಖವನ್ನು ಅಳಿಯುತ್ತ, ಗುರೂತ್ತಮರನ್ನು ಪೂಜಿಸುತ್ತ, ವಿಲಾಸದಿಂದ
ತಿರುಗಾಡುತ್ತ, ಶ್ರೀಗಿರಿಯ ಪ್ರಭಾವವನ್ನು ಕೇಳುತ್ತ, ದಾನಮಾಡಿ ಭಕ್ತಜನರನ್ನು ಕಾಪಾ
ಡುತ್ತ, ತರುವನಗಳಲ್ಲಿ ಸಂಚರಿಸುತ್ತ, ಬಸವೇಶ್ವರನನ್ನು ಸ್ಮರಿಸುತ್ತ ॥೨೦॥ ಜಾರಿಬಿದ್ದು
ಎದ್ದು ಮರಳಿ ನಡೆಯುತ್ತ, ಒಬ್ಬರಿಗೊಬ್ಬರು ದಟ್ಟಣೆಯಿಂದ ತಿಕ್ಕಾಡುತ್ತ, ಅಲ್ಲಲ್ಲಿಗೆ ಜಯ
ಜಯ ಧ್ವನಿಮಾಡುತ್ತ, ಮರಗಳ ಬೀಳಿಲನ್ನು ಹಿಡಿದುಕೊಂಡೇರಿ, ಕೊಂಬೆಗಳನ್ನೇ ಉಯ್ಯಾಲೆ
ಯಂತೆ ಮಾಡಿಕೊಂಡು ತೂಗಾಡುತ್ತ, ಕೆಲರು ಚಳಿಯಿಂದ ನಡುಗುತ್ತ, ಬಿಸಿಲಿಗೆ ಮಯ್ಯೊ

ರೋಹಿತಾಃ | ವಿಶಂತಃಕುಂಜನಿವಹಾ ನಾಹ್ವಯಂತಸ್ಸ್ವಕಾನ್ಜನಾನ್ ||೨೩||
ಸಮುಪಾಲಭಮಾನಾ ಸ್ಸ್ವಸ್ವಪರೇ ಗಸ್ತುಮಕ್ಷಮಾಃ | ನಿರಸಂತಶ್ಚ ಸಂಮರ್ದಂ ಸಮುನ್ನಿಷ್ಯಾತಿಥೀನ್ಸ್ಮುದಾ || ೨೪ || ಪ್ರಣಮಂತಸ್ಸೇವಮಾನಾ ಭಕ್ತಿಶ್ರದ್ಧಾ ಸಮನ್ವಿತಾಃ | ಜಲಮಾಕಾಂಕ್ಷಮಾಣಾಶ್ಚ ಶೃಣ್ವಂತಃಕಾನನಧ್ವನಿಂ || ಗೃಹ್ಣಂತೋವೀಟಿಕಾಸ್ತಾಲ್ಪೈರ್ಗಾಯಂತ ಶ್ರೀಗಿರೀಶ್ವರಂ | ನೃತ್ಯಂತಃಪ್ರೀತಿದಾನಾನಿ ಪ್ರಕುರ್ವಂತೋ ಮುಹುರ್ಮುಹುಃ || ೨೬ || ಉಘೇ ಜಯಜಯೇತ್ಯುಚ್ಚೈರ್ವದತೇತಿಜ ಭಾಷಿಣಃ | ಉಘೇ ಜಯಜಯೇತ್ಯುಚ್ಚೈಃ ಪ್ರವದಸ್ತಸ್ಸ್ವಯಂಮುದಾ ||೨೭|| ಸಮಸ್ತದೇಶಪರಿಷಜ್ಜನಾ ಗೀರ್ವಾಣಭಾಷಯಾ | ಆಗಚ್ಛಕಾನ್ತೇಪರಿಷದ್ಯಾತಿ ಯಾಮಸ್ಸಸತ್ವರಂ ||೨೮|| ಘರ್ಮಕ್ಲಾಂತಾಽಸ್ಮಿಹಾನಾಥ ಪುರಮೇತದ್ವರಾನನೇ | ನಿಧೇಹಿದೃಷ್ಟಿಮೇತಸ್ಮಿನ್ಪುರೇ ಸಂಮೋದಧಾಯಿನಿ ||೨೯|| ಶೈಲಮಾರ್ಗೇಽತಿವಿಷಮೇ ಪರಿಶ್ರಾಂತಾಸಿಕಿಂಸಖಿ | ಶ್ರಾಂತಿರ್ವಿನಿರ್ಗತಾನಾಥ ಪುರಸಂವೀಕ್ಷಣೇನ ಮೇ ||೩೦|| ಪಿಬಸ್ವಾದೂದಕಂಬಾಲೇ ಪಿಪಾಸಾವಿನಿವಾರಕಂ | ಉತ್ತಂಸಯಾಂಜಲಿಂವೀಕ್ಷ್ಯ ಪುರಂಕಮಲಲೋಚನೇ ||೩೧|| ಉದರ್ಕಫಲಸಂಸಿದ್ಧಿರುಪಕಂಠಂ ಸಮೇಷ್ಯತಿ | ಅನಾಥನಾಥ

---

ಡ್ಡಿ ಕಾಸುತ್ತ, ಅಲ್ಲಲ್ಲಿ ಬೆಟ್ಟಗಳು ಕೂಡಿದ್ದ ಕಡೆಯಲ್ಲಿ ಮುಂದಕ್ಕೆ ಸಾಗಲಾರದೆ ಹಿಂದಿರುಗುತ್ತ, ಪೊದರುಗಳನ್ನು ನುಗ್ಗುತ್ತ, ತಂತಮ್ಮ ಜನರ ಹೆಸರು ಹಿಡಿದು ಕೂಗುತ್ತ, ||೨೩|| ಕೆಲರು ದುಡ್ಡು ಸಿಕ್ಕದ ಕಾರಣದಿಂದ ಮುಂದಕ್ಕೆ ಹೋಗಲಾರದೆ, ಕೆಲರು ಜನಸಂದಣಿಯನ್ನು ಬಿಡಿಸಿಕೊಂಡು, ಅತಿಥಿಗಳನ್ನು ತಡಕಿಕೊಂಡು ಹೋಗಿ ನಮಸ್ಕರಿಸುತ್ತ, ಭಕ್ತಿಯಿಂದ ಸೇವಿಸುತ್ತ, ಕೆಲರು ದಾಹವೇರಿ ನೀರನ್ನು ಅಪೇಕ್ಷಿಸುತ್ತ, ಅರಣ್ಯದ ಘೀಂಕಾರವನ್ನು ಆಲಿಸುತ್ತ, ಕರತಲದಿಂದ ತಾಂಬೂಲವನ್ನು ತೆಗೆದುಕೊಳ್ಳುತ್ತ, ಶ್ರೀಶೈಲಪತಿಯನ್ನು ಕುರಿತು ಹಾಡುತ್ತ ಕುಣಿಯುತ್ತ, ಬಾರಿಬಾರಿಗೆ ಪ್ರೀತಿಯಿಂದ ದಾನಮಾಡುತ್ತ, ಉಘೇ ಎನ್ನಿರಿ ಜಯಜಯ ಎನ್ನಿರಿ ಎಂಬುದಾಗಿ ಇತರರನ್ನು ಪ್ರೋತ್ಸಾಹಿಸುತ್ತ, ತಾವೂ ಹಾಗೆ ಕೂಗುತ್ತ ಹೋಗುತ್ತಿದ್ದರು. ಮತ್ತು ಎಲ್ಲಾ ದೇಶಗಳ ಪರಿಸೆಯ ಜನರೂ ಸಂಸ್ಕೃತಭಾಷೆಯಿಂದ ತಂತಮ್ಮ ಪತ್ನಿಯರೊಡನೆ ಹೀಗೆ ಸಂಭಾಷಣೆ ಮಾಡುತ್ತಿದ್ದರು: ಪತಿ—ಎಲೆ ಕಾಂತೆ! ಪರಿಸೆಯು ಹೊರಟುಹೋಗುತ್ತಿದೆ ಬೇಗನೆ ಹೋಗೋಣ ಬಾ. ಪತ್ನಿ—ಸ್ವಾಮಿ ದೇಹವೆಲ್ಲಾ ಬೆಮರಿ ಬಳಲಿಹೋಗಿದ್ದೇನೆ. ಪತಿ—ಸುಮುಖೀ ಇದೋ ಊರು ಇಲ್ಲೇ ಕಾಣಿಸುತ್ತಿರುವುದು ನೋಡು. ಎಲೆ ಸಖೀ ಕಷ್ಟಕರವಾದ ಬೆಟ್ಟದ ದಾರಿಯಲ್ಲಿ ನಡೆದು ಬಳಲಿದೆಯೊ? ಪತ್ನಿ—ಸ್ವಾಮಿ ಊರನ್ನು ನೋಡಿದುದರಿಂದ ನನ್ನ ಆಯಾಸವೆಲ್ಲಾ ಕಳೆದುಹೋಯಿತು. ||೩೦|| ಪತಿ—ಎಲೆ ಕಾಮಿನಿ! ನೀರಡಿಕೆಯನ್ನು ಪರಿಹರಿಸುವ ಸವಿನೀರನ್ನು ಕುಡಿ. ಎಲೆ ಸಾರಸನೇತ್ರೆ! ಪಟ್ಟಣ

ಗಿರಿಜಾನಾಥಂ ಪ್ರಮಥನಾಯಕಂ ||೩೨|| ಭಜಸ್ವ ಹೃದಯೇ ಮಲ್ಲಿನಾಥ ಮಂಭೋರುಹಾಸನೇ | ಏವಂವದನ್ತ ಶ್ಚಾನ್ಯೋನ್ಯಂ ಸರಸಾಲಾಪಭಾಸುರಂ || ಶ್ರೀಶೈಲಚೂಡಾರತ್ನಾಯ ಭವಸಂಹಾರಕಾರಿಣೇ | ದುಷ್ಕರ್ಮಜಾಲನಾಶಾಯ ಶ್ರೀಕಂಠಾಯ ಕೃಪಾವತೇ || ೩೪ || ಅಂಬಕತ್ರಯದೀಪ್ತಾಯ ಸಾಂಬಾಯ ಪರಮೇಷ್ಠಿನೇ | ಆದ್ಯಾಯಾದ್ಯಂತಹೀನಾಯ ಶಿವಾಯಪರಮಾತ್ಮನೇ || ಆಯುರಾರೋಗ್ಯದಾಯ ಶ್ರೀಮಹಾದೇವಾಯಶಂಭವೇ | ಮಲ್ಲಿಕಾರ್ಜುನದೇವಾಯ ನಮಶ್ಶ್ರೀಶೈಲವಾಸಿನೇ || ೩೬ || ಏಕಸನ್ಮಲ್ಲಿಕಾಮಾಲಾಪರಿಭೂಷಿತಮಸ್ತಕ | ಕರ್ಪೂರಮಲ್ಲಿಕಾಮಾಲಾಮಂದಾರಸಮವಿಗ್ರಹ ||೩೭|| ಮಲ್ಲಿಕಾರ್ಜುನಕೀರ್ತ್ಯೌಘ ವಿಭೂಷಿತದಿಗನ್ತರ | ಮಲ್ಲಿಕಾರ್ಜುನ ಮಾಂಪಾಹಿ ಕಲ್ಯಾಣಾಚಲಕಾರ್ಮುಕ || ೩೮ || ಇತಿಸ್ತುವಂತೋಗಾಯನ್ತಃ ಪ್ರಹರ್ಷೇಣಸಮನ್ವಿತಾಃ | ಗೌಳಮಾಳವಕಾಶ್ಮೀರ ಸಿಂಧುಮಾಗಧದೇಶತಃ || ೩೯ || ಪಾಂಡ್ಯಘೂರ್ಜರಕಾಂಭೋಜ ಬಂಗಾಳೇಭ್ಯೋಽತಿಭಕ್ತಿತಃ | ಕಳಿಂಗಸೂಕ್ಷ್ಮಸೌರಾಷ್ಟ್ರಲಾಟ ಬರ್ಬರದೇಶತಃ ||೪೦|| ತುರುಷ್ಕಾ ತ್ಕೊಂಕಣಾ ತ್ಸೂರಸೇನಾಚ್ಚ ಕರಹಾಟತಃ | ಸಿಂಹಳೀಕಾದಿದೇಶೇಭ್ಯ ಆಯಾತಾಃ ಪರಿಷಜ್ಜನಾಃ ||೪೧|| ಸ್ವ

---

ವನ್ನು ನೋಡಿ ಕೈಮುಗಿ. ಉತ್ತರೋತ್ತರ ಸದ್ಗತಿಯು ಸಮೀಪಿಸುತ್ತಿದೆ. ಎಲೆ ಕಮಲಮುಖೀ ಅನಾಥನಾಥನೂ, ಪಾರ್ವತೀಪತಿಯೂ, ಪ್ರಮಥಾಧಿಪತಿಯೂ ಆದ ಶ್ರೀಮಲ್ಲಿಕಾರ್ಜುನನನ್ನು ಹೃದಯದಲ್ಲಿ ಧ್ಯಾನಿಸು. ಎಂಬುದಾಗಿ ಪರಸ್ಪರ ಸರಸದ ಸಂಭಾಷಣೆಗಳನ್ನು ಮಾಡುತ್ತಿದ್ದರು. ಮತ್ತು ಶ್ರೀಗಿರಿಯ ಚೂಡಾರತ್ನಪ್ರಾಯನೂ, ಸಂಸಾರವಿನಾಶಕನೂ, ಪಾಪಧ್ವಂಸಕನೂ, ವಿಷಕಂಠನೂ, ದಯಾನಿಧಿಯೂ, ಮುಕ್ಕಣ್ಣನೂ, ಉಮಾಸಮೇತನೂ, ಉತ್ಕೃಷ್ಟಪದವಿಯಲ್ಲಿರುವವನೂ, ಸರ್ವಕ್ಕೂ ಮೊದಲಿಗನೂ, ಕೊನೆಮೊದಲಿಲ್ಲದವನೂ, ಮಂಗಳಮಯನೂ, ಪರಬ್ರಹ್ಮನೂ, ಆಯುರಾರೋಗ್ಯಪ್ರದನೂ, ಸಕಲ ದೈವಕ್ಕೂ ಉತ್ಕೃಷ್ಟನೂ, ಸುಖಪ್ರದನೂ, ಶ್ರೀಗಿರಿನಿವಾಸಿಯೂ ಆದ ಎಲೈ ಮಲ್ಲಿಕಾರ್ಜುನೇಶ್ವರನೇ! ನಿನಗೆ ನಮಸ್ಕಾರವು. ||೩೬|| ಮಲ್ಲಿಗೆಯ ಹೂದಂಡೆಯಿಂದಲಂಕೃತವಾದ ಮಂಡೆಯುಳ್ಳವನೆ! ಪಚ್ಚಕರ್ಪೂರ, ಮಲ್ಲಿಗೆಹೂವು, ಮಂದಾರಪುಷ್ಪ ಇವುಗಳಂತೆ ಶುಭ್ರವರ್ಣವಾದ ಶರೀರವುಳ್ಳವನೆ! ಮಲ್ಲಿಗೆಯ ಹೂವಿನಂತೆ ವಿಶದವಾದ ತನ್ನ ಕೀರ್ತಿಯಿಂದ ದಿಗಂತಗಳನ್ನೆಲ್ಲಾ ತುಂಬಿಸಿರುವವನೆ! ಮೇರುಪರ್ವತವೇ ಧನುಸ್ಸಾಗುಳ್ಳ ಎಲೈ ಮಲ್ಲಿಕಾರ್ಜುನಸ್ವಾಮಿಯೆ! ನನ್ನನ್ನು ಕಾಪಾಡು" ಎಂದು ಸ್ತೋತ್ರಮಾಡಿ ಸಂತೋಷದಿಂದ ಪಾಡುತ್ತಲಿದ್ದರು. ಗೌಡ, ಮಾಳವ, ಕಾಶ್ಮೀರ,...... ........ಸಿಂಹಳಾದಿ ದೇಶಗಳಿಂದ ಬಂದಿದ್ದ ಪರಿಸೆಯ ಜನರೆಲ್ಲರೂ ತಂತಮ್ಮ ದೇಶಭಾಷೆಗಳಿಂದ ಪರಸ್ಪರವಾಗಿ ಮಾತನಾಡಿಕೊಳ್ಳುತ್ತ, ಶ್ರೀಗಿರಿಯನ್ನು ನೋಡಿ ಸಂತೋಷದಿಂದ ಅಡ್ಡಬೀಳು,

ಸ್ವಭಾಷಾಂಚಿತಾಲಾಪೈ ಸ್ಸಲ್ಲಪಂತಃಪರಸ್ಪರಂ | ಕುರ್ವಂತಃಪ್ರಣತಿಂವೀಕ್ಷ್ಯ ಶ್ರೀಗಿರಿಂಪರಯಾಮುದಾ ||೪೭|| ಅತಿಪ್ರಬಂಧತಾಲಾನುಗತಿ ಶ್ರುತಿಪುರೋಗಮೈಃ | ಸ್ವದೇಶಪರದೇಶೀಯಮಾರ್ಗೈರ್ವಿಹಿತಸಂಭ್ರಮಾಃ ||೪೩|| ತತ್ತದ್ದೇಶೀಯಪರಿಷನ್ಮುಖ್ಯಾಶ್ಚಾನಂದನಿರ್ಭರಾಃ | ಗಾಯಂತಃಪರಿನೃತ್ಯಂತ ಸ್ಸ್ತುವಂತಶ್ಚಸಮಾಯಯುಃ ||೪೪||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ತಚ್ಛ್ರೀಪರ್ವತಂಪ್ರತಿ ಗೌಳಮಾಳವಾದಿ ಸಮಸ್ತದೇಶ ಪರಿಷದಾಗಮನಕಥನಂ ನಾಮೈಕಾದಶೋಽಧ್ಯಾಯಃ.

---

## ಅಥ ದ್ವಾದಶೋಽಧ್ಯಾಯಃ.

### (ದೋನಮಾರ್ಯಸ್ಯ ಮಲ್ಲಿಕಾರ್ಜುನದರ್ಶನಂ.)

ಅಥ ಲೋಕೈಕನಾಥಸ್ಯ ಕಾಲಕಾಲಸ್ಯಶೂಲಿನಃ | ಶ್ರೀಮಲ್ಲಿಕಾರ್ಜುನ ವಿಭೋರ್ದದೃಶೇತೈರ್ಮಹತ್ಪುರಂ ||೧|| ಕಥಂತದೀಯಮಹಿಮಾ ವರ್ಣ್ಯತೇ ಪರಮಾದ್ಭುತಃ | ಅವಲೋಕನಮೇವಾಸ್ಯ ಗಿರೇರ್ಮುಕ್ತಿಪ್ರದಂಕಿಲ ||೨||

---

ಕ್ಕಿಲಿದ್ದರು. ಆಯಾ ದೇಶಗಳ ಪರಿಸೆಯ ಮುಖಂಡರುಗಳು ತಾಳ ಶ್ರುತಿಗಳ ಮೇಳಗಳಿಂದ ನಾನಾವಿಧವಾದ ಕಥಾಕಲ್ಪನೆಗಳುಳ್ಳ ಹಾಡುಗಳನ್ನು ದೇಶೀಯ ವಿದೇಶೀಯ ರಾಗರಚನೆಗೆ ಒಡನೆ ಕೂಡಿ ಸಂತೋಷದಿಂದ ಹಾಡುತ್ತಲೂ, ಕುಣಿಯುತ್ತಲೂ, ಹೊಗಳುತ್ತಲೂ ಶ್ರೀಗಿರಿಗೆ ನಡೆತಂದರು. ||೪೪||

ಎಂಬಲ್ಲಿಗೆ ಪರ್ವತಪ್ರಕರಣದೊಳಗೆ ೧೧ನೆ ಅಧ್ಯಾಯವು ಮುಗಿದುದು.

---

## ೧೨ನೆ ಅಧ್ಯಾಯವು.

### ದೋನಮಾರ್ಯನು ಮಲ್ಲಿಕಾರ್ಜುನ ದರ್ಶನವನ್ನು ಮಾಡಿದ ಕಥೆ

ಬಳಿಕ ಜಗದೇಕಸ್ವಾಮಿಯಾದ ಶ್ರೀಮಲ್ಲಿಕಾರ್ಜುನೇಶ್ವರನ ಮಹಾಪಟ್ಟಣವು ಪರಿಸೆಯ ಜನರಿಗೆ ಕಾಣಿಸಿತು. ಅತ್ಯಾಶ್ಚರ್ಯಕರವಾದ ಆ ಪುರಮಹತ್ತ್ವವನ್ನು ವರ್ಣಿಸಲು ಸಾಧ್ಯವೆ? ಈ ಶ್ರೀಶೈಲದ ದರ್ಶನವೇ ಮೋಕ್ಷಪ್ರದವಾಗಿರುವಲ್ಲಿ ಇನ್ನು ಅದರಮೇಲೆ ಶ್ರೀಗಿರೀಶನು ಸಾಕ್ಷಾ

ತತ್ಪುರೀದರ್ಶನಫಲಂ ಶಕ್ಯತೇಕಿಮು ಶಂಸಿತುಂ | ತಚ್ಛೈಲನಿರ್ಜರಾಏವ ದಿವಿಷ
ತ್ಸಿಂಧವಃಕಿಲ ||೩|| ನದೀನದಾಸ್ತತ್ಪುರಸ್ಯ ಶಕ್ಯಂತೇಕಿಮುಶಂಸಿತುಂ | ತತ್ಪ
ರ್ವತಸ್ಥಿತಾವೃಕ್ಷಾ ಸ್ಸರ್ವೇಕಲ್ಪದ್ರುಮಾಃಕಿಲ ||೪|| ತತ್ಪುರೋಪವನಾಭೋಗ
ಸೌಭಾಗ್ಯಂಕಿಮುವರ್ಣ್ಯತೇ | ಗೋಷ್ಠಂತತ್ಪರ್ವತಃ ಕಾಮಧೇನೂನಾಂಕಿಲಸ
ರ್ವದಾ ||೫|| ಪಶೂನಾಂನಿಚಯಸ್ತಸ್ಯ ಪುರಸ್ಯಕಿಮುವರ್ಣ್ಯತೇ | ಲಿಂಗರೂ
ಪಃಕಿಲಾಶೇಷ ಸ್ಸಮಹಾಧರಣೀಧರಃ ||೬|| ತತ್ಪುರೀಲಿಂಗಮಹಿಮಾ ಶಕ್ಯತೇ
ಕಿಮುಶಂಸಿತುಂ | ಕಿರಾತಾಸ್ತದ್ಗಿರಿಚರಾಃಕಿಲ ಮುಕ್ತಿಪುರೀಶ್ವರಾಃ ||೭||
ತತ್ಪುರೀಭಕ್ತನಿವಹಾಂ ಛಕ್ಯತೇಕಿಮುಶಂಸಿತುಂ | ಏತಸ್ಮಿನ್ಪರ್ವತೇಸರ್ವೇ ಚಂ
ಡಾಲಾಸ್ತ್ರಿದಶಾಃಕಿಲ ||೮|| ಕಥಂವರ್ಣಯಿತುಂ ಶಕ್ಯಾ ಸ್ತತ್ಪುರೀಬ್ರಾಹ್ಮಣೋ
ತ್ತಮಾಃ | ಸಮಸ್ತಜೀವನಿವಹಾ ಸ್ತದ್ಗಿರೌದೇವತಾಃಕಿಲ ||೯|| ಶಂಸಿತುಂಕಿ
ಮುಶಕ್ಯಂತೇ ತತ್ಪುರೀಜೀವರಾಶಯಃ | ತಥಾಪ್ಯಹಂವರ್ಣಯಾಮಿ ನಗರಂತ
ದ್ಯಥಾಮತಿ ||೧೦|| ಕವಿಸ್ತಾತಕಸಂದೋಹವಾಕ್ಪಾವನಕರಂ ಪರಂ | ಭಸ್ಮೀ
ಕೃತಕಘೋರಭವಂ ದುಷ್ಕರ್ಮೌಘವಿಭೇದಕಂ ||೧೧|| ಮಂದಿರಂಪ್ರಮಥೇಂದ್ರಾ
ಣಾಂ ಸದ್ಭಕ್ತಚಯಭಾಸ್ವರಂ | ಶ್ರೀಲಿಂಗಮೋದುರಂಭವ್ಯಂ ಲಕ್ಷ್ಮೀಕರಮನ

---

ತ್ತಾಗಿ ನೆಲಸಿರುವ ಪಟ್ಟಣದ ಸಂದರ್ಶನವನ್ನು ಮಾಡುವುದರಿಂದ ಉಂಟಾಗುವ ಫಲವನ್ನು ಇಷ್ಟಿಷ್ಟೆಂದು ಹೊಗಳಲು ಶಕ್ಯವಾದೀತೆ? ಆ ಬೆಟ್ಟದ ಮೇಲಿರುವ ಜರಿಗಳೆಲ್ಲಾ ದೇವಗಂಗೆಗಳಾಗಿರುವಲ್ಲಿ ಆ ಪಟ್ಟಣದಲ್ಲಿರುವ ಹೊಳೆಗಳ ಆಧಿಕ್ಯವನ್ನು ಹೇಳಲು ಸಾಧ್ಯವೆ? ಆ ಬೆಟ್ಟದಲ್ಲಿರುವ ಮರಗಳೆಲ್ಲಾ ಕಲ್ಪವೃಕ್ಷಗಳಾಗಿರುವಲ್ಲಿ ಆ ಪಟ್ಟಣದ ಮುಂದಣ ಉಪವನದ ಭೋಗಭಾಗ್ಯಾತಿಶಯವನ್ನು ಹೇಳುವುದೇನು? ಆ ಬೆಟ್ಟವೇ ಕಾಮಧೇನುಗಳ ಕೊಟ್ಟಿಗೆಯಾಗಿರುವಾಗ ಆ ನಗರದಲ್ಲಿರುವ ಗೋವುಗಳ ವೈಭವವನ್ನು ವರ್ಣಿಸುವುದೇನು! ಆ ಬೆಟ್ಟವೇ ಲಿಂಗಸ್ವರೂಪವಾಗಿರುವಲ್ಲಿ ಆ ಪುರದಲ್ಲಿರುವ ಮಲ್ಲಿಕಾರ್ಜುನ ಲಿಂಗದ ಮಹತ್ತ್ವವನ್ನಿಷ್ಟೆಂದು ಹೇಳಲಾದೀತೆ? ಆ ಗಿರಿಯಲ್ಲಿರುವ ಬೇಡರೆಲ್ಲಾ ಮೋಕ್ಷನಗರಾಧಿಪತಿಗಳಾಗಿರುವಾಗ ಆ ಪಟ್ಟಣದಲ್ಲಿರುವ ಭಕ್ತರ ಪ್ರಭಾವವನ್ನು ವರ್ಣಿಸಲು ಸಾಧ್ಯವೆ? ಆ ಬೆಟ್ಟದಲ್ಲಿರುವ ಚಂಡಾಲರೆಲ್ಲರೂ ದೇವತೆಗಳಾಗಿರುವಾಗ ಆ ಪಟ್ಟಣದಲ್ಲಿರುವ ಬ್ರಾಹ್ಮಣಶ್ರೇಷ್ಠರ ಅಗ್ಗಳತೆಯನ್ನು ಹೇಗೆ ವರ್ಣಿಸಲಾದೀತು? ಆ ಗಿರಿಯಲ್ಲಿರುವ ಸಕಲ ಪ್ರಾಣಿಗಳೂ ದೇವತೆಗಳೇ ಆಗಿರುವಾಗ ಆ ಪುರಿಯಲ್ಲಿರುವ ಪ್ರಾಣಿಗಳ ಆಧಿಕ್ಯವನ್ನು ಇಷ್ಟೆಂದು ಹೊಗಳಲಾದೀತೆ? ಆದಾಗ್ಯೂ ಆ ಪಟ್ಟಣವನ್ನು ನನಗೆ ತಿಳಿದಮಟ್ಟಿಗೆ ವರ್ಣನೆಮಾಡುತ್ತೇನೆ ಕೇಳು ಎಂಬುದಾಗಿ ಸೂರಾಮಾತ್ಯನನ್ನು ಕುರಿತು ಸೋಮನಾರಾಧ್ಯರು ಹೇಳುತ್ತಾರೆ. ||೧೦|| ಆ ಪಟ್ಟಣವು ಕವಿಗಳ ಸ್ತುತಿಪಾಠಕರ ವಾಕ್ಕನ್ನೆಲ್ಲಾ ಅತ್ಯಂತ ಪವಿತ್ರಗೊಳಿಸತಕ್ಕುದು. ಘೋರಸಂಸಾರವನ್ನೂ ಪಾಪರಾ

ಶ್ವರಂ ||೧೨|| ಶುಭೋತ್ಕರಂ ಸೌಖ್ಯಕರಂ ಕೈಲಾಸೋಽಭಿನವಶ್ಶುಭಃ | ಮಹಾದೇವೋಪರಿತನಂ ಶಿರಏತನ್ಮಹಾಪುರಂ || ೧೩ || ಶ್ರೀಮಲ್ಲಿಕಾರ್ಜುನಸ್ವಾಮೀ ತಚ್ಛಿರೋರತ್ನಮುತ್ತಮಂ | ಏತತ್ಪುರೀದಿವ್ಯಲಿಂಗಜಾಲಕಂ ಪರಮೋಜ್ವಲಂ ||೧೪|| ತಸ್ಯಶ್ರೀಶೈಲನಾಥಸ್ಯ ನೇತ್ರಾದೀಂದ್ರಿಯಸಂಹತಿಃ | ವಿಮುಕ್ತಿದಂ ತಚ್ಛಿಖರಂ ಜಟಾಜೂಟೋಮಹೇಶಿತುಃ ||೧೫|| ಮಲ್ಲಿಕಾಕುಂಡಯಾಮ್ಯಸ್ಥಕುಂಡಯೋರ್ಜಲಸಂಹತಿಃ | ಶಿರಸ್ಸ್ಥಿತಾ ಮಹೇಶಸ್ಯ ಮಲ್ಲಿಕಾಮಾಲಿಕೈವಸಾ ||೧೬|| ಪುರಸ್ಯತಸ್ಯಪ್ರಾಕಾರ ಶ್ಶಂಭೋರ್ಮಧ್ಯಸ್ಥಮೇಖಲಾ | ಚತುರ್ದ್ವಾರಾವಸ್ಥಿತಾನಿ ವರಹರ್ಮ್ಯಾಣಿ ತತ್ಪುರಃ ||೧೭|| ಘನನಾಯಕರತ್ನಾನಿ ಭೂಷಣೇಷು ಮಹೇಶಿತುಃ | ದಿವ್ಯಾಂಬರಾಣಿ ಶಂಭೋ ಸ್ತತ್ಪುರಸ್ಥಾಸ್ತಟಿನೀಚಯಾಃ ||೧೮|| ಶಿವಾಂಘ್ರ್ಯರ್ಪಿತಪುಷ್ಪಾಣಿ ತತ್ಪುರೋದ್ಯಾನರಾಜಯಃ | ಶಂಭೋರ್ಮೂರ್ಧಾದ್ಯವಯವಾ ಸ್ತತ್ಪುರೀ ಭಕ್ತಪುಂಗವಾಃ ||೧೯|| ಹರಾಪರಾವತಾರಾಹಿ ಜಂಗಮಾಸ್ತತ್ಪುರೀಸ್ಥಿತಾಃ | ಪ್ರಮಥಾನಾಂಚಾಮರಾಣಿ ತತ್ಪುರೀಕೇತನಾಳಯಃ ||೨೦|| ಏವಂಸಾಕ್ಷಾದ್ರುದ್ರರೂಪಂ ತತ್ಪುರಂಶೋಭತೇತ

---

ಯನ್ನೂ ಸುಟ್ಟು ಬೂದಿಮಾಡತಕ್ಕುದು. ಅದು ಪ್ರಮುಖ ಶ್ರೇಷ್ಠರ ವಾಸಸ್ಥಲವು. ಸದ್ಭಕ್ತರ ಇಕ್ಕೆಯು. ಶಿವಲಿಂಗಸ್ತೋಮ ವಿರಾಜಿತವು. ಸಂಪತ್ಕರವು. ಶಾಶ್ವತವು. ಮಂಗಳವನ್ನೂ ಸ್ಥಿರಸೌಖ್ಯವನ್ನೂ ಕೊಡತಕ್ಕುದು. ಅದೇ ಅಭಿನವ ಕೈಲಾಸವು. ಆ ಪುರವು ಪರಶಿವನ ಶಿರಸ್ಸೇ ಆಗಿರುವುದು. ||೧೩|| ಅಲ್ಲಿರುವ ಮಲ್ಲಿಕಾರ್ಜುನಸ್ವಾಮಿಯು ಆ ಶಿರಸ್ಸಿನಲ್ಲಿ ಹೊಳೆಯುವ ರತ್ನವು. ಆ ಪಟ್ಟಣದಲ್ಲಿರುವ ಸಕಲ ದಿವ್ಯಲಿಂಗಗಳೂ ಶ್ರೀಮಲ್ಲಿಕಾರ್ಜುನನ ಚಕ್ಷುರಾದೀಂದ್ರಿಯಗಳಾಗಿರುವುವು. ಮೋಕ್ಷಪ್ರದವಾಗಿರುವ ಆ ಪುರದ ಗೋಪುರ ಶಿಖರವು ಶಿವನ ಜಡೆಮುಡಿಯು. ||೧೫|| ಮಲ್ಲಿಕಾಕುಂಡ ದಕ್ಷಿಣಕುಂಡಗಳಲ್ಲಿರುವ ನೀರು ಶಿವನ ಮಂಡೆಯಲ್ಲಿರುವ ಮಲ್ಲಿಗೆಯ ದಂಡೆಯೇ ಆಗಿರುವುದು. ಆ ಪುರದ ಸುತ್ತುಗೋಡೆಯು ಶಿವನ ನಡುವಿನ ಪಟ್ಟಿಯೇ. ಆ ಪಟ್ಟಣದ ನಾಲ್ಕು ಕಲಿಬಾಗಿಲುಗಳಲ್ಲಿರುವ ಉಪ್ಪರಿಗೆಗಳು ಪರಶಿವನ ಆಭರಣಗಳಲ್ಲಿರುವ ನಾಯಕರತ್ನಗಳಾಗಿರುವುವು. ಆ ನಗರದಲ್ಲಿರುವ ಹೊಳೆಗಳು ಶಿವನ ಹೊದಿಕೆಯ ದಿವ್ಯಾಂಬರಗಳು. ಆ ಪಟ್ಟಣದ ಉಪವನಗಳು ಶಿವನ ಪಾದದಲ್ಲಿ ಸಮರ್ಪಿಸಿದ ಪ್ರಸಾದ ಕುಸುಮಗಳು. ಆ ಪುರಿಯಲ್ಲಿರುವ ಭಕ್ತಶ್ರೇಷ್ಠರುಗಳೆಲ್ಲಾ ಶಿವನ ಮಂಡೆಯೇ ಮೊದಲಾದ ಅವಯವಗಳು. ||೧೯|| ಆ ಪಟ್ಟಣದಲ್ಲಿರುವ ಜಂಗಮರುಗಳು ಶಿವನ ಬೇರೊಂದವತಾರವೇ ಆಗಿರುವರು. ಆ ಪುರದಲ್ಲಿ ನಿಲ್ಲಿಸಿರುವ ಧ್ವಜಸ್ತಂಭಗಳು ಪ್ರಮಥರುಗಳ ಚಾಮರಗಳು. ಹೀಗೆ ಆ ಪಟ್ಟಣವು ಪ್ರತ್ಯಕ್ಷ ಶಿವಸ್ವರೂಪವಾಗಿಯೇ ಪ್ರಕಾಶಿಸುತ್ತಿರುವುದರಿಂದ ಅತ್ಯುತ್ಕೃಷ್ಟ

ರಾಂ | ಕಥಂವರ್ಣಯಿತುಂಶಕ್ಯಂ ನಗರಂ ತಸ್ಮಹೋನ್ನತಂ || ೨೧ || ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ | ಯಥಾತಥಾಭೂಮಿತಲೇ ತತ್ಪುರಂ ತತ್ಪುರೋಪಮಂ ||೨೨|| ಕಿಂಚತಸ್ಯ ಪುರಸ್ಯಾಸ್ತಿ ಸದೃಶಂನೇತರದ್ಭುವಿ | ಶಿವ ಏವೋಪಮಾ ಸಾಕ್ಷಾತ್ತತ್ಪುರಾಧಿಪತೇಸ್ಸ್ವಯಂ ||೨೩|| ಶ್ರೀಮಲ್ಲಿಕಾರ್ಜುನ ವಿಭೋಸ್ತಾಂ ನಿರೀಕ್ಷ್ಯ ಪುರೀಂ ಶುಭಾಂ | ಉಘೇ ಜಯಜಯೇತ್ಯುಚ್ಚೈರ್ವ ದನ್ತೀಪರಿಜೃಂಭಿತಾ ||೨೪|| ಸಾ ಸಂಭ್ರಮೇಣ ಪರಿಷತ್ಪ್ರವಿವೇಶ ಸಮುತ್ಸುಕಾ| ಅನ್ಯೋನ್ಯಂ ಜನಸಂಘೇಷು ಸಂಘರ್ಷಮುಪಯಾಯಿಷು ||೨೫|| ಅನ್ಯೋ ನ್ಯಂಗ್ರಥ್ಯಮಾನೇಷು ಪತಾಕಾನಿವಹೇಷುಚ | ಅನ್ಯೋನ್ಯವಷಾತಪತ್ರೇಷು ಸಮಾಶ್ಲಿಷ್ಟೇಷುಸರ್ವತಃ ||೨೬|| ಚೈಲೇಷುಕಾಯಮಾನೇಷು ಜೀಮೂತಪಟ ಲೇಷುಚ | ದೃಶ್ಯಮಾನೇಷು ಬಹುಷು ಗಗನೇ ಸರ್ವತೋದಿಶಂ ||೨೭|| ರುಚಿ ರಾಲಾಪನಾದೇಷು ಮಿಶ್ರಿತೇಷು ಪರಸ್ಪರಂ | ಮಾರ್ದಂಗಿಕೇಷುಚಾನ್ಯೋ ನ್ಯಂ ವಿತನ್ವತ್ಸುಚ ಮತ್ಸರಂ ||೨೮|| ಕುರ್ವಂತೀಷು ಶ್ರುತಿಂಭವ್ಯಾಂ ವನಿತಾಸು ಪರಸ್ಪರಂ | ಪರಸ್ಪರಂ ತಾಳಧಾರೇಷ್ವಾಮೋದಮುಪಯಾಯಿಷು ||೨೯|| ತಾ ಳಸಂಘೇಷು ಪರಿತಸ್ಸಂಕೀರ್ಣೇಷು ಪರಸ್ಪರಂ | ಅನ್ಯೋನ್ಯಮಾಪೂರ್ಣಿತೇಷು

---

ವಾದ ಆ ಪುರವನ್ನು ಹೇಗೆ ವರ್ಣಿಸಲಾದೀತು? ||೨೧|| ಆಕಾಶಕ್ಕೆ ಆಕಾಶವನ್ನೇ ಸಮು ದ್ರಕ್ಕೆ ಸಮುದ್ರವನ್ನೇ ಸಾಮ್ಯವನ್ನಾಗಿ ಹೇಳಬೇಕಲ್ಲದೆ ಮತ್ತೊಂದನ್ನು ಹೇಳಲು ಹೇಗೆ ಸಾಧ್ಯವಲ್ಲವೋ ಹಾಗೆ ಈ ಗಿರಿಯಮೇಲಣ ಮಲ್ಲಿಕಾರ್ಜುನಪುರಕ್ಕೆ ಆ ಪುರವೇ ಸಾಮ್ಯ ವಲ್ಲದೆ ಮತ್ತೊಂದಿಲ್ಲ. ||೨೨|| ಮತ್ತೂ ಭೂಮಿಯಲ್ಲಿ ಅದಕ್ಕೆ ಸಮನಾದ ಪಟ್ಟಣವು ಮತ್ತೊಂದಿಲ್ಲ. ಆ ನಗರಾಧಿಪತಿಗೆ ಪರಶಿವನೇ ಉಪಮಾನವು. ಇಂತಪ್ಪ ಮಲ್ಲಿಕಾರ್ಜುನಪುರ ವನ್ನು ಪರಿಷೆಯು ನೋಡಿ, ಉಬ್ಬಿ ಉಘೇ ಜಯ ಜಯ ಎಂದು ಮಹಾ ಘೋಷವನ್ನು ಮಾಡು ತ್ತ, ಕುತೂಹಲದಿಂದ ಪುರಪ್ರವೇಶ ಮಾಡಿತು. ಹಾಗೆ ರಭಸದಿಂದ ಸರ್ವರೂ ನುಗ್ಗುವಾಗ್ಗೆ ಒಬ್ಬರಿಗೊಬ್ಬರು ತಳ್ಳಾಡುತ್ತಲಿದ್ದರು. ಹಿಡಿದಿದ್ದ ಬಾವುಟಗಳು ಒಂದಕ್ಕೊಂದು ತಗುಲಿಕೊ ಳ್ಳುತ್ತಿದ್ದುವು. ಕೊಡೆಗಳು ಒಂದಕ್ಕೊಂದು ಸಿಕ್ಕಿಕೊಳ್ಳುತ್ತಿದ್ದುವು. ಆಕಾಶದಲ್ಲಿ ಅವರ ಬಳೇವುಗಳೂ ನಡೆಚಪ್ಪರಗಳೂ ಮತ್ತೂ ಮೋಡಗಳೂ ಸಹ ಅನೇಕಾನೇಕವಾಗಿ ಎಲ್ಲಕಡೆ ಯೂ ಪಸರಿಸಿಕೊಂಡಿದ್ದುವು. ||೨೭|| ಒಬ್ಬರಿಗೊಬ್ಬರು ಆನಂದದಿಂದ ಮಾಡುತ್ತಿದ್ದ ಸಂಭಾ ಷಣೆಯ ಸದ್ದು ಕಲಕಲವಾಗಿದ್ದಿತು. ಮದ್ದಲೆ ಬಾಜಿಸುವವರು ಒಬ್ಬರಿಗೊಬ್ಬರು ಸ್ಪರ್ಧಿಸಿ ನು ಡಿಸುತ್ತಿದ್ದರು ಹೆಂಗುಸರು ಒಬ್ಬರಿಗೊಬ್ಬರು ದನಿಗೂಡಿಸಿ ಹಾಡುತ್ತಿದ್ದರು. ತಾಳಗಳನ್ನು ಹಿಡಿದಿರುವವರು ಆನಂದಗೊಂಡು ಎಲ್ಲರೂ ಗುಂಪುಕೂಡಿ ಒಂದೇ ಲಯದಿಂದ ಬಾಜಿಸುತ್ತಿ

ಕಾಹಲೀನಿವಹೇಷ್ವಪಿ ||೩೦|| ಅನ್ಯೋನ್ಯಂನಟವೃಂದೇಷು ಸ್ತುತಿಂಕುರ್ವತ್ಸು ಸಾದರಂ | ವಾದ್ಯವೃಂದೇಷ್ವತಿಕ್ರಾಂತಮರ್ಯಾದೇಷು ಪರಸ್ಪರಂ || ೩೧ || ಅನ್ಯೋನ್ಯಂಪದ್ಯಜಾಲೇಷು ಗದ್ಯತಾಮುಪಯಾಯಿಷು | ವ್ಯತೀತೇಷುಕ್ರಮ ಪಥ ಮಾಲಾಪೇಷುಪರಸ್ಪರಂ ||೩೨|| ರಸಿಕಾನಾಂಸಮೂಹೇಷು ಪ್ರಹೃಷ್ಟೇ ಷ್ವಿತರೇತರಂ | ಧೂರ್ತಜಾಲೇಷುಚಾನ್ಯೋನ್ಯಂ ಕಥಯತ್ಸುನಿಜಕ್ರಮಾನ್ || ವಿಟೇಷುಮಾರ್ಗಮಾಣೇಷು ಕಾಮಿನೀರಿತರೇತರಂ | ಕಾಮಿನೀಜನಸಂದೋ ಹೇ ಧೂರ್ತತ್ವಂಸಂಪ್ರಕುರ್ವತಿ ||೩೪|| ದಾನಿಸಂಘೇಷುಚಾನ್ಯೋನ್ಯಂ ದದ ತ್ಸುಗುರುಹರ್ಷತಃ | ಪರಿಭ್ರಮತ್ಸುಚಾನ್ಯೋನ್ಯಂ ದೀನಸಂಘೇಷುಸರ್ವತಃ || ಚರತ್ಸುಪರಿತಃಪ್ರೀತ್ಯಾ ವೀಕ್ಷಕೇಷು ಪರಸ್ಪರಂ | ಗಣಶಃಪುರತೋಯಾಯಿ ಷ್ವನ್ಯೋನ್ಯಂಭಾರವಾಹಿಷು ||೩೬|| ವೈತಾಳಿಕಸಮೂಹೇಷು ಕೀರ್ತಯತ್ಸು ಸಮಂತತಃ | ವಿಹಂಗಿಕಾನಾಂಸಂದೋಹೇ ಸಾಂದ್ರೀಭೂತೇಪರಸ್ಪರಂ ||೩೭|| ಪರಿಹಾಸಕವೃಂದೇಷು ಸಂಚರತ್ಸುಸಮಂತತಃ | ಅನ್ಯೋನ್ಯಮಾಂದೋಲಿಕಾ ಸು ಘಟಮಾನಾಸು ಸರ್ವತಃ ||೩೮|| ಗೋಪಾಲಕೇಷು ಪರಿತ ಸ್ಸಂಘೀಭೂ ಯೋಪಯಾಯಿಷು | ಅನ್ಯೋನ್ಯಂಸನ್ನಿಕೃಷ್ಟೇಷು ನಾಯಕೇಷು ಸಮಂತತಃ|| ಗಾಯಕಪ್ರಕರೇಽನ್ಯೋನ್ಯಂ ಪರಿಗಾಯತಿಸಾದರಂ | ಅತಿಹೃಷ್ಟೇಷುಮಲ್ಲೇ

---

ದ್ದರು. ಕೊಂಬಿನವರೆಲ್ಲಾ ಒಟ್ಟಿಗೆ ಊದಿದರು. ||೩೦|| ಕುಣಿತಗಾರರು ಸ್ತೋತ್ರಮಾಡಿದರು. ಹಲವುತರದ ವಾದ್ಯಗಳೆಲ್ಲಾ ಒಟ್ಟಿಗೆ ಮಿತಿಮೀರಿ ಭೋರ್ಗರೆದುವು. ಹಾಡುವ ಉಲ್ಲಾಸದಿಂದ ಪದ್ಯಗಳೆಲ್ಲಾ ಗದ್ಯಗಳೇ ಆಗಿಹೋದುವು. ಮಾತುಗಳು ಕಟ್ಟು ಮೀರಿದುವು. ರಸಿಕರ ಗುಂಪು ಆನಂದ ನಿರ್ಭರವಾಯಿತು. ಮೋಸಗಾರರು ತಂತಮ್ಮ ಜಾಣ್ಮೆಯ ರೀತಿಗಳನ್ನು ಒಬ್ಬರಿಗೊ ಬ್ಬರು ಹೇಳಿಕೊಳ್ಳುತ್ತಿದ್ದರು. ವಿಟರುಗಳು ಕಾಮಿನೀ ಜನರನ್ನು ತಡಕುತ್ತಿದ್ದರು. ಕಾಮಿನಿ ಯರು ವಂಚಕತ್ವವನ್ನು ತೋರಿಸುತ್ತಿದ್ದರು. ದಾನಿಗಳು ಬೇಕಾದ ದಾನವನ್ನು ಹರ್ಷದಿಂದ ಮಾಡುತ್ತಿದ್ದರು. ಯಾಚಕರು ಎಲ್ಲಾ ಕಡೆಯೂ ಅಲೆದಾಡುತ್ತಿದ್ದರು. ನೋಟಗಾರರು ಸುತ್ತ ಲೂ ಈ ಸಂಭ್ರಮವನ್ನೆಲ್ಲಾ ನೋಡುತ್ತಿದ್ದರು. ಗಂಟು ಮೂಟೆಗಳನ್ನು ಹೊತ್ತಿರುವವರು ಒಬ್ಬರಿಗೊಬ್ಬರು ಸೇರಿಕೊಂಡು ಮುಂಗಡೆಯಲ್ಲಿ ಹೋಗುತ್ತಿದ್ದರು. ಪರಾಕನ್ನು ಹೇಳುವ ವರು ಎತ್ತೆತ್ತಲೂ ಸ್ತುತಿಪಾಠಗಳನ್ನು ಹಾಡುತ್ತಿದ್ದರು. ಕಾವಡಿಗಳನ್ನು ಹೊತ್ತವರು ಒಟ್ಟು ಗೂಡಿದರು. ||೩೭|| ಹಾಸ್ಯಗಾರರು ಎತ್ತೆತ್ತಲೂ ಸುಳಿದಾಡುತ್ತಿದ್ದರು. ಅಂದಳಗಳು ಒಂದ ಕ್ಕೊಂದು ಸೇರಿಕೊಂಡುವು. ಗೊಲ್ಲರೆಲ್ಲಾ ಒಟ್ಟುಗೂಡಿ ನುಗ್ಗಿದರು. ಆಯಾಗುಂಪಿನ ಮುಂ ದಾಳುಗಳು ಪರಸ್ಪರ ಕಲೆತರು. ಸಂಗೀತಗಾರರು ಜತೆಗೂಡಿ ಹಾಡಲುಪಕ್ರಮಿಸಿದರು. ಜಟ್ಟಿ ಗಳು ಆನಂದದಿಂದ ಒಬ್ಬರಿಗೊಬ್ಬರು ಜೋಡಾದರು. ಆಳುಗಳು ಗುಂಪಾಗಿ ತಂತಮ್ಮ ಊಳಿ

ಷು ಸಂಬದ್ಧೇಷು ಪರಸ್ಪರಂ ||೪೧|| ಅನ್ಯೋನ್ಯಂಸೇವಕವ್ಯೂಹೇ ಸೇವಮಾ
ನೇ ಸಮಾಹಿತೇ | ಭಾವಕಪ್ರಕರೇಽನ್ಯೋನ್ಯಂ ಮಾರ್ಗಂದತ್ವಾಪ್ರಯಾಯಿಷು||
ಸಮಾಲಿಂಗತ್ಸುಸಂಪ್ರೀತ್ಯಾ ಬಾಂಧವೇಷು ಪರಸ್ಪರಂ | ಪುರತೋಽಂಧಕವ
ರ್ಗೇಷು ಪ್ರಯಾಯಿಷು ಪರಸ್ಪರಂ ||೪೨|| ಸುತರಾಂಶೋಭಮಾನಾಸು ಪಣ್ಯ
ವೀಥೀಷು ಪಾರ್ಶ್ವತಃ | ತತ್ರಾಕಾಶನದೀತೋಯಂ ಮೃದುರತ್ನಕದಂಬಕಂ ||
ಕಾಮಧೇನೂರ್ಯೌವನಾನಿ ಮೃಗಾಂಕತಿಲಕಾನ್ಯಪಿ | ತಾರಾಹಾರಾನ್ಕಲ್ಪವೃ
ಕ್ಷಾನ್ನವಲಾವಣ್ಯಸಂಹತಿಂ ||೪೪|| ಅಜರಾಮರಣತ್ವಂಚ ಪುರುಹೂತಸ್ಯವಾ
ರಣಂ | ಕಾಮರೂಪಾಣಿ ಹರ್ಯಕ್ಷಸಟಾವಿದ್ಯುಲ್ಲತಾಚಯಂ ||೪೫|| ರಸಕೂಪ
ಸಮೂಹಂಚ ರವಿಸ್ಯಂದನಘೋಟಕಾನ್ | ಅಭ್ರಾರೋಹಣನಿಶ್ರೇಣೀರ್ದೀ
ರ್ಘಾಯುರತಿದುರ್ಲಭಂ ||೪೬|| ಜ್ಯೋತ್ಸ್ನಾಗಂಧಾನ್ಕಿನ್ನರತ್ವಂ ಜಂಗಮಾ
ಸ್ಥರಣೀಧರಾನ್ | ಸ್ವರ್ಗಾಂಗನಾಸ್ಸಿಂಹಶಾಬಾನ್ಬಹುಲಾಸ್ಸಿದ್ಧಮೂಲಿಕಾಃ||
ದಿವ್ಯದೇಹಾನ್ಪಂಡಿತತ್ವಂ ಭವರೋಗಸ್ಯಭೇಷಜಂ | ವರಗಂಧರ್ವಗಾನಾನಿ
ದಿವಿಜಾಧೀಶತಾಮಪಿ ||೪೮|| ಪ್ರಾಲೇಯಪಿಣ್ಡಾನ್ ಶ್ರೀಗಂಧಪುಷ್ಪಾಣೀಕ್ಷು
ಫಲಾನಿಚ | ಶಲಲೀಲೋಚನಂ ಸದ್ಯಃಪ್ರಸೂತದ್ವೀಪಿನೀಪಯಃ||೪೯|| ಅಷ್ಟಾಂ
ಗಯೋಗಾನಣಿಮಾದ್ಯಷ್ಟಸಿದ್ಧೀರ್ಮಹತ್ತರಾಃ | ಸುಗಂಧಿಕಾಂಚನಂದೃಷ್ಟಾ
ದೃಷ್ಟಸೌಖ್ಯಕದಂಬಕಂ ||೫೦|| ಅವಸ್ಥಿತೇಷು ವಿಕ್ರೇತುಂಕ್ರೇತುಂ ದಕ್ಷೇಷುಸ

---

ಗವನ್ನು ಮಾಡಿದರು. ಮಹನೀಯರು ಒಬ್ಬರಿಗೊಬ್ಬರು ದಾರಿಯನ್ನು ಕೊಟ್ಟು ಹೋಗುತ್ತಿ
ದ್ದರು. ||೪೧|| ನಂತರು ಒಬ್ಬರಿಗೊಬ್ಬರು ತಬ್ಬಿಕೊಳ್ಳುತ್ತಿದ್ದರು. ಕುರುಡರು ಒಬ್ಬರಿಗೊ
ಬ್ಬರು ಜತೆಯಾಗಿ ಹೋಗುತ್ತಿದ್ದರು. ಮುಂಗಡೆಯಲ್ಲಿ ಪಟ್ಟಣದ ಅಂಗಡಿ ಬೀದಿಗಳು ಮನೋ
ಹರವಾಗಿದ್ದುವು. ಅವುಗಳ ಪಕ್ಕದಲ್ಲಿ—ಆಕಾಶಗಂಗಾಜಲ, ಶ್ರೇಷ್ಠಗಳಾದ ರತ್ನಗಳು,
ಕಾಮಧೇನುಗಳು; ಯೌವನಗಳು, ಚಂದ್ರತಿಲಕಗಳು, ನಕ್ಷತ್ರಹಾರಗಳು, ಕಲ್ಪವೃಕ್ಷಗಳು,
ಲಾವಣ್ಯಸ್ತೋಮ, ಮುಪ್ಪು ಮರಣಗಳಿಲ್ಲದಿರುವಿಕೆ, ಐರಾವತ, ಇಷ್ಟರೂಪಪ್ರಾಪ್ತಿ, ಸಿಂಹ
ದ ಕೇಸರಗಳು, ಮಿಂಚುಗಳು, ಸಿದ್ಧರಸದ ಬಾವಿಗಳು, ಸೂರ್ಯನ ರಥದ ಕುದುರೆಗಳು, ಅಂತ
ರಿಕ್ಷಕ್ಕೆ ಏರಬಹುದಾದ ಏಣಿಗಳು, ದೀರ್ಘಾಯುಸ್ಸು, ಬೆಳ್ದಿಂಗಳ ಗಂಧ, ಕಿನ್ನರತನ, ತಿರು
ಗಾಡುವ ಮರಗಳು, ದೇವತಾಸ್ತ್ರೀಯರು, ಸಿಂಹದ ಮರಿಗಳು, ನಾನಾ ಸಿದ್ಧಿಗಳನ್ನು ಕೊಡ
ಬಲ್ಲ ಮೂಲಿಕೆಗಳು ||೪೭|| ದಿವ್ಯಶರೀರ, ವಿದ್ವತ್ತು, ಭವರೋಗದ ಔಷಧ, ಗಂಧರ್ವಗಾನ,
ದೇವಾಧಿಪತಿತ್ವ, ಹಿಮದಗಡ್ಡೆ, ಶ್ರೀಗಂಧದ ಹೂವು, ಕಬ್ಬಿನ ಹಣ್ಣು, ಮುಳ್ಳುಹಂದಿಯ
ಕಣ್ಣು, ಆಗತಾನೇ ಈದ ಹುಲಿಯ ಹಾಲು, ಯಮನಿಯಮಾದಿ ಯೋಗಗಳು, ಅಣಿಮಾದಿ
ಸಿದ್ಧಿಗಳು, ಸುವಾಸನೆಯುಳ್ಳ ಚಿನ್ನ, ಕಂಡ ಕಾಣದ ಸೌಖ್ಯಗಳು ||೫೦|| ಇಂಥ ದುರ್ಲ

ರ್ವತಃ | ವಿಲೋಕಯಂತೀ ವಿಪಣೀಸ್ತಾಃ ಪ್ರಹರ್ಷಸಮನ್ವಿತಾಃ ||೫೧|| ಪತಾಕಾಛತ್ರವಿಚರತ್ಕಾಯಮಾನಪ್ರಚಾಂಚಿತೈಃ | ಚತುರ್ದ್ವಾರಸಮಾಗಚ್ಛಜ್ಜನೈಸ್ಸಾಪರಿಷದ್ವೃತಾ ||೫೨|| ರೋದಸ್ಯೋಃ ಕಾನನೇ ಸರ್ವದಿಕ್ಷು ಪ್ರಾಕಾರರಾಜಿಷು | ಗೋಪುರದ್ವಾರಮಾರ್ಗೇಷು ಮಲ್ಲಿಕಾರ್ಜುನಮಂದಿರೇ ||೫೩|| ನಿಕೇತನೇಷು ಮಾರ್ಗೇಷು ಮಂಟಪೇಷು ನದೀಷು ಚ| ಕುಂಡೇಷು ಭೂರುಹಾಂ ಚಾಲೇಷ್ವಭಿಪೂರ್ಣ್ಯ ಸಮಂತತಃ ||೫೪|| ಅವಕಾಶಃ ಪುರೇ ಯಾವಾನ್ವಿದ್ಯತೇ ಯತ್ರ ಯತ್ರ ಚ | ಸಾಂದ್ರೀಭೂಯಾಧಿಕತರಂ ತತ್ರ ತತ್ರ ನ್ಯವೀವಿಶತ್ ||೫೫|| ಅಥ ಶ್ರೀಪಂಡಿತಾರಾಧ್ಯಪಾದಪಂಕಜಷಟ್ಪದಃ| ದೋನಮಾರ್ಯ ಶ್ಶಿವಂ ಗೌರೀಪತಿಂ ಪ್ರಮಥನಾಯಕಂ ||೫೬|| ದಯಾಸಿಂಧುಂ ಶ್ರೀಗಿರೀಂದ್ರನಿಲಯಂ ಮಲ್ಲಿಕಾರ್ಜುನಂ | ದೃಷ್ಟ್ವಾ ಪ್ರಣಮ್ಯ ಸಾಷ್ಟಾಂಗಂ ಸ್ತುತಿಂ ಚಕ್ರೇ ಪ್ರಮೋದತಃ ||೫೭|| ವ್ಯಧಾಚ್ಚ ನಿತ್ಯಲಿಂಗಾರ್ಚಾಂ ಜಂಗಮಾನಾಂಚ ಪೂಜನಂ ||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ದೋನಮಾರ್ಯಸ್ಯ ಮಲ್ಲಿಕಾರ್ಜುನ ಸಂದರ್ಶನ ಕಥನಂನಾಮ ದ್ವಾದಶೋಽಧ್ಯಾಯಃ.

---

ಭಗಳಾದ ವಸ್ತುಗಳನ್ನೆಲ್ಲಾ ಮಾರಲೂ ಕೊಳ್ಳಲೂ ಸಮರ್ಥರಾದ ಜನರು ಆ ಬೀದಿಗಳಲ್ಲಿ ಇರುತ್ತಿರಲಾಗಿ, ಆ ಅಂಗಡಿಗಳನ್ನೆಲ್ಲಾ ಪರಿಸೆಯ ಜನರು ನೋಡಿ ಅತ್ಯಾನಂದಪಟ್ಟರು. ❤ ಜನರು ಧ್ವಜಪತಾಕೆಗಳನ್ನೂ, ಛತ್ರಗಳನ್ನೂ, ನಡೆಚಪ್ಪರಗಳನ್ನೂ ಹಿಡಿದುಕೊಂಡು, ಪುರದ ನಾಲ್ಕುಬಾಗಿಲುಗಳಿಂದಲೂ ಒಳಕ್ಕೆ ನುಗ್ಗಿ, ಭೂಮ್ಯಾಕಾಶಗಳಲ್ಲೂ, ಅರಣ್ಯದಲ್ಲೂ, ಸಕಲ ದಿಕ್ಕುಗಳಲ್ಲೂ, ಆವರಣಗಳಲ್ಲೂ, ಗೋಪುರದ ಬಾಗಿಲುಗಳಲ್ಲೂ, ಹಾದಿಗಳಲ್ಲೂ, ಮಲ್ಲಿಕಾರ್ಜುನ ದೇವಾಲಯದಲ್ಲೂ, ಮನೆಗಳಲ್ಲೂ, ಮಂಟಪಗಳಲ್ಲೂ, ಹೊಳೆ ದಡಗಳಲ್ಲೂ, ಕಟ್ಟೆಗಳ ಅಂಚಿನಲ್ಲೂ, ಮರಗಳಡಿಯಲ್ಲೂ ಸಹ ಎತ್ತೆತ್ತಲೂ ತುಂಬಿಹೋದರು. ಆ ಪಟ್ಟಣದಲ್ಲಿ ಎಷ್ಟು ಅವಕಾಶವಿದ್ದಿತೋ ಅಲ್ಲೆಲ್ಲಾ ಸ್ವಲ್ಪವೂ ಬಿಡುವಿಲ್ಲದಂತೆ ದಟ್ಟವಾಗಿ ಇಳಿದುಬಿಟ್ಟರು. ||೫೫|| ಬಳಿಕ ಶ್ರೀಪಂಡಿತಾರಾಧ್ಯ ಪಾದಕಮಲ ಭೃಂಗಾಯಮಾನನಾದ ದೋನಮಾರ್ಯನು ದೇವಾಲಯಕ್ಕೆ ಹೋಗಿ, ಗೌರೀಪತಿಯೂ, ಪ್ರಮಥಾಧಿಪತಿಯೂ, ದಯಾಸಾಗರನೂ, ಶ್ರೀಗಿರಿನಿವಾಸನೂ ಆದ ಮಲ್ಲಿಕಾರ್ಜುನಸ್ವಾಮಿಯನ್ನು ದರ್ಶನಮಾಡಿ, ಸಾಷ್ಟಾಂಗವಾಗಿ ನಮಸ್ಕರಿಸಿ, ಅತ್ಯಾನಂದದಿಂದ ಸ್ತೋತ್ರಮಾಡಿದನು. ಮತ್ತು ನಿತ್ಯಲಿಂಗಾರ್ಚನೆಯನ್ನೂ, ಬಳಿಕ ಜಂಗಮಾರ್ಚನೆಯನ್ನೂ ಸಹ ಮಾಡಿದನು. ||೫೭||

ಎಂಬಲ್ಲಿಗೆ ಪರ್ವತಪ್ರಕರಣದಲ್ಲಿ ೧೨ನೆ ಅಧ್ಯಾಯವು ಮುಗಿದುದು.

## ಅಥ ತ್ರಯೋದಶೋಽಧ್ಯಾಯಃ.

### ಪರಿಷದ ಶ್ರೀಮಲ್ಲಿಕಾರ್ಜುನದರ್ಶನಾದಿಕಥನಂ.

ಅನಂತರಂ ಸಮಾಯಾತಾ ಸ್ತೇ ಸರ್ವೇ ಪರಿಷಜ್ಜನಾಃ | ಪತ್ರಮಾತ್ರೇಣ ಜಾಯಂತೇ ಪೂಜನಾಜ್ಜಗದೀಶಿತುಃ ||೧|| ಅನೇಕಾನಿ ಮನೋಽಭೀಷ್ಟಫಲಾನಿ ಧರಣೀತಲೇ | ಫಲಂಪುನರ್ಮಹೇಶಾಯ ಸಮರ್ಪ್ಯಾವಾಪ್ನುಯಾನ್ನರಃ ||೨|| ಮನಸಾಭೀಪ್ಸಿತತಮಾಃ ಫಲಕೋಟೀರನೇಕಶಃ | ಮಣಿರತ್ನಮುಖಾನೇಕವಸ್ತುಜಾಲೇ ಸಮರ್ಪಿತೇ ||೩|| ಕಿಂಪುನಸ್ತನ್ಮಹಚ್ಚಿತ್ರಮಿತಿಬುದ್ಧ್ಯಾಸಮಾಹಿತಾಃ| ಪತ್ರಪುಷ್ಪಫಲವ್ರಾತಾದ್ಯುಪಾಯನಕದಂಬಕಂ ||೪|| ಹಸ್ತೈರಾದಾಯ ಸನ್ನದ್ಧಾ ಸ್ಸಂಘೀಭೂಯಸಸಂಭ್ರಮಂ | ಗೃಹೀತ್ವಾದೃಢಮನ್ಯೋನ್ಯಂ ಹಸ್ತಾನಾಗತ್ಯಸರ್ವಶಃ ||೫|| ಪರಿಕ್ಷುಬ್ಧಾಂಬುಧಿಘನನಿಧ್ವಾನಸದೃಶಧ್ವನಿ | ಸಂಪ್ರದಾಯೈಸ್ಸ್ತುತಿರವೈ ರ್ಗೀತನರ್ತನವಿಭ್ರಮೈಃ ||೬|| ಶ್ರೀನಗೋತ್ತುಂಗನಿಲಯಂ ರುದ್ರಂ ಶ್ರೀಮಲ್ಲಿಕಾರ್ಜುನಂ| ದ್ರಷ್ಟುಂಸಮುತ್ಸುಕಾಸ್ಸಂತ ಸ್ತತ್ಪೌರಜನಸಂಯುತಾಃ ||೭|| ಯಾಂತೋಽಬಲಾತ್ಸಮುತ್ತೀರ್ಯ ತತ್ಸಂಘಜಲಧಿಂಪರೇ | ನಿರೀ

---

## ೧೩ನೆ ಅಧ್ಯಾಯವು.

### ಪರಿಸೆಯ ಜನರು ಶ್ರೀಮಲ್ಲಿಕಾರ್ಜುನನ ದರ್ಶನವನ್ನು ಮಾಡಿದ ಕಥೆ.

ಬಳಿಕ ಹೀಗೆ ಬಂದ ಪರಿಸೆಯ ಜನರೆಲ್ಲರೂ, ಪರಶಿವನನ್ನು ಒಂದು ಪತ್ರಮಾತ್ರದಿಂದ ಪೂಜಿಸಿದರೂ ಅನೇಕ ಇಷ್ಟಾರ್ಥಗಳು ಲಭಿಸುವುವೆಂದೂ, ಶಿವನಿಗೆ ಒಂದು ಹಣ್ಣನ್ನು ಸಮರ್ಪಿಸಿದ ಮನುಷ್ಯನು ಬಯಸಿದ ಕೋಟ್ಯಂತರ ಫಲಗಳನ್ನೆಲ್ಲಾ ಪಡೆಯುವನೆಂದೂ, ಹೇಳಲ್ಪಡುತ್ತಿರುವಾಗ, ನಾನಾ ರತ್ನಗಳೇ ಮೊದಲಾದ ವಸ್ತುಗಳನ್ನು ಶಿವನಿಗೆ ಸಮರ್ಪಿಸಿದರೆ ದೊರೆಯುವ ಫಲದ ಆಶ್ಚರ್ಯವನ್ನು ಹೇಳುವುದೇನು? ಎಂದು ಯೋಚಿಸಿಕೊಂಡು, ಪತ್ರಪುಷ್ಪಫಲಾದಿಗಳಿಂದ ತುಂಬಿದ ಬಾಗಿನಗಳನ್ನು ಕೈಗಳಮೇಲೆ ಹೊತ್ತುಕೊಂಡು, ಸನ್ನದ್ಧರಾಗಿ ಗುಂಪುಕಟ್ಟಿಕೊಂಡು, ಸಡಗರದಿಂದ ಒಬ್ಬರೊಬ್ಬರ ಕೈಗಳನ್ನು ಹಿಡಿದುಕೊಂಡು, ಗಾಳಿಯ ಬಡಿತದಿಂದ ಉಲ್ಲೋಲಕಲ್ಲೋಲಗಳನ್ನು ಹೊಂದಿರುವ ಸಮುದ್ರವು ಮೊರೆಯುವಂತೆ ಕಲಕಲಮಾಡುತ್ತ, ತಂತಮ್ಮ ದೇಶೀಯ ಗೀತಗಳನ್ನು ಹಾಡುತ್ತ, ಕುಣಿಯುತ್ತ, ಗಿರಿಶಿಖರದಮೇಲಿರುವ ಶ್ರೀಮಲ್ಲಿಕಾರ್ಜುನಸ್ವಾಮಿಯ ದರ್ಶನವನ್ನು ಮಾಡುವುದಕ್ಕಾಗಿ ಆ ಊರಿನ ಜನರೊಡನೆ ಕೂಡಿ ಸಡಗರದಿಂದ ದೇವಾಲಯಕ್ಕೆ ಹೊರಟರು. ||೭|| ಕೆಲರು ಬಲಾಢ್ಯರಾದವರು ಗುಂಪನ್ನು ಓರೆಮಾಡಿಬಿಟ್ಟು ಮುಂಬರಿದು ಹೋಗಿ ದೇವರ ದರ್ಶನವನ್ನು ಮಾಡಿಕೊಂಡು ಹಿಂದಿರುಗಿ ಬರು

ಕ್ಷೈಕಶ್ರೀಮಹಾದೇವಂ ಸಮಾಯಾಂತಶ್ಚ ಕೇಚನ ‖೮‖ ಅಪರೇ ತತ್ಸಂಘಮಧ್ಯೇ
ತಿಷ್ಠಂತೋಗಂತುಮಕ್ಷಮಾಃ | ಸಂಮರ್ದಮಸಹಾಃ ಕಿಂಚಿನ್ನಿವೃತ್ತಾಸ್ತತ್ರ
ಕೇಚನ ‖೯‖ ಬಲಾನ್ನಿರಸ್ಯಸಂಮರ್ದಂ ಸಂಪ್ರಯಾಂತಸ್ತಥಾಪರೇ | ಅಭ್ರಂ
ಶಯಿತ್ವಾಪತ್ರಾಣಿ ಕುಸುಮಾದೀನಿಯತ್ನತಃ ‖ ೧೦ ‖ ಹಸ್ತಾನುದ್ಧೃತ್ಯಸಂಮ
ರ್ದೇ ಗಚ್ಛಂತಸ್ತತ್ರಕೇಚನ | ಉಪರ್ಯೇವಮನುಷ್ಯಾಣಾಂ ಯಾಂತಃಕೇಚನಸಂ
ಭ್ರಮಾತ್ ‖೧೧‖ ಜನಾಂಘ್ರಿಭಾಗೇಸಂವಿಶ್ಯ ಗಚ್ಛಂತಸ್ತತ್ರಕೇಚನ | ಸಂಜಾ
ತೇಽತ್ಯಂತಸಂಮರ್ದೇ ಪತಂತೋಭುವಿಕೇಚನ ‖೧೨‖ ಪರಿಷತ್ವಾಪಚಾಲಾನಿ
ನಿರಸಂತಇವಾಪರೇ | ವಿಕ್ಷಿಪಂತೋಽತಿಯತ್ನೇನ ಸಂಮರ್ದಂಕುರ್ವತೋಜ
ನಾನ್ ‖೧೩‖ ಪ್ರಹಾರಾನ್ಪುಷ್ಪಮಾಲ್ಯಾನಿ ಭಾವಯಂತಶ್ಚ ಕೇಚನ | ಅಪೇ
ಕ್ಷಮಾಣಾಸ್ಸಂಮರ್ದವಿರಳತ್ವಂ ನಿರೀಕ್ಷ್ಯ ಚ ‖ ೧೪ ‖ ತಿಷ್ಠಂತೋ ಮಂಟಪ
ದ್ವಾರಪ್ರದೇಶಾನಪರೇ ಚಿರಂ | ಪ್ರವಿಶ್ಯತ್ವರಯಾಕೇಚಿತ್ತಸ್ಮಿನ್ಪ್ರಾಸಾದಮಂಟ
ಪೇ ‖೧೫‖ ತತ್ಸಂಮರ್ದಪರಿಭ್ರಾಂತಾ ಸ್ತದಾನೀಂಗಂತುಮಕ್ಷಮಾಃ | ನಿಶೇಷು
ಕಿಂ ಕಿಂಸುಶುಕನಾಸಾಯಾಮೇವ ಸಂಸ್ಥಿತಾಃ ‖೧೬‖ ನಿವರ್ತೇಮಹಿವೇತ್ಯನ್ಯೇ
ಚಿನ್ತಯಂತೋಽತಿಸಂಭ್ರಮಾತ್ | ಅವಕಾಶಂಸಮನ್ವಿಷ್ಯ ಯಾಂತೋಗರ್ಭಗೃ

---

ತ್ತಿದ್ದರು. ಇನ್ನು ಕೆಲರು ಗುಂಪಿನ ಮಧ್ಯದಲ್ಲಿ ಸಿಕ್ಕಿ ಮುಂದಕ್ಕೆ ಸಾಗಲಾರದೆ, ಜನರ ಒತ್ತರಿ
ಸುವಿಕೆಯನ್ನು ತಡೆಯಲಾರದೆ ಹಿಂದಕ್ಕೆ ಸರಿಯುತ್ತಿದ್ದರು. ‖೯‖ ಕೆಲರು ಬಲಾತ್ಕಾರವಾಗಿ
ದಬ್ಬಿಕೊಂಡು ನುಗ್ಗುತ್ತಿದ್ದರು. ಕೆಲರು ಪೂಜೆಗೋಸುಗ ತಂದಿರುವ ಪತ್ರಪುಷ್ಪಗಳನ್ನು ಕೆಡಿಸ
ದಂತೆ ಕೈಗಳಲ್ಲಿ ಮೇಲಕ್ಕೆತ್ತಿ ಹಿಡಿದುಕೊಂಡು ಹೋಗುತ್ತಿದ್ದರು. ಕೆಲರು ಸಡಗರದಿಂದ ಗುಂ
ಪಿನ ಜನರ ಮೇಲೇರಿಯೇ ಹೋಗುತ್ತಿದ್ದರು. ‖೧೧‖ ಕೆಲರು ಜನರ ಕಾಲ್ಗಳ ಸಂದಿನಲ್ಲಿ
ನುಗ್ಗಿಹೋಗುತ್ತಿದ್ದರು. ಕೆಲರು ಜನರ ನೂಕಾಟವನ್ನು ತಾಳಲಾರದೆ ಕೆಳಕ್ಕೆ ಬಿದ್ದುಬಿಡುತ್ತಿ
ದ್ದರು. ಕೆಲರು ಪರಿಷೆಯ ಪಾಪಸಮೂಹವನ್ನು ಕೊಡಹುವರೋ ಎಂಬಂತೆ ಗುಂಪನ್ನು ಬಲಾ
ತ್ಕಾರದಿಂದ ಹೊಡೆದು ಚದರಿಸುತ್ತಿದ್ದರು. ‖೧೩‖ ಕೆಲರು ಆ ಏಟುಗಳನ್ನು ಹೂವಿನ ಮಾ
ಲೆಗಳಿಗೆ ಸಮನಾಗಿ ತಿಳಿದುಕೊಳ್ಳುತ್ತಿದ್ದರು. ಕೆಲರು ಜನರ ನೂಕಾಟ ತಳ್ಳಾಟಗಳೆಲ್ಲಾ ಕಡ
ಮೆಯಾಗಲೆಂದು ಮಂಟಪದ ಬಾಗಿಲ ಮಗ್ಗುಲಲ್ಲಿ ಕಾಯ್ದುಕೊಂಡು ಎಷ್ಟೋಹೊತ್ತು
ನಿಂತಿರುತ್ತಿದ್ದರು. ಕೆಲರು ಆ ಮಂಟಪದಲ್ಲಿ ನಿಂತುಕೊಳ್ಳುವುದಕ್ಕೋಸುಗ ಅವಸರದಿಂದ
ಬಂದು ಅಷ್ಟರೊಳಗಾಗಿ ಒಳಗೆ ಕಿಕ್ಕಿರಿದು ತುಂಬಿರುವ ಜನರನ್ನು ನೋಡಿ ಬೆರಗಾಗಿ, ಒಳಕ್ಕೆ
ನುಗ್ಗಲಾರದೆ, ನಾವೇನು ಒಳಕ್ಕೆ ಹೋಗೋಣವೊ? ಅಥವಾ ಹೊಸ್ತಿಲಮೇಲೆಯೇ ನಿಂತಿರೋ
ಣವೊ? ಇಲ್ಲವೆ ಹಿಂದಕ್ಕೆ ಹೊರಟುಹೋಗೋಣವೊ? ಎಂದು ಯೋಚಿಸುತ್ತಿದ್ದರು. ಇನ್ನು
ಕೆಲರು ಸ್ವಲ್ಪ ಬಿಡುವಾದುದನ್ನು ನೋಡಿಕೊಂಡು ಗರ್ಭಗುಡಿಯೊಳಕ್ಕೆ ನುಗ್ಗುತ್ತಿದ್ದರು.

ಹಂಪರೇ ||೧೭|| ಸ್ಖಲಂತೋಽಪಸರಂತಶ್ಚ ನಿರಸಂತೋ ಜನಾನ್ಬಲಾತ್ | ಕೇಚಿತ್ಪತಂತಸ್ತಲ್ಲಿಂಗೇಸ್ಪೃಶಂತೋ ಮಲ್ಲಿಕಾರ್ಜುನಂ ||೧೮|| ಅತ್ಯಂತಭಕ್ತಿಸಂಪೂರ್ಣಾ ಮಲ್ಲಯೇತಿಚವಾದಿನಃ | ಘಟ್ಟಯಂತಸ್ಸ್ವಶೀರ್ಷಾಣಿ ತಲ್ಲಿಂಗೇನಾಪರೇ ಮುದಾ ||೧೯|| ಸಂಮರ್ದೇ ಮೃತಿರಪ್ಯತ್ರ ಸಂಭವೇಚ್ಚೇದ್ಭವತ್ವಿತಿ | ಕರೈರ್ಗೃಹೀತ್ವಾ ತಲ್ಲಿಂಗಂ ತಿಷ್ಠಂತಸ್ತತ್ರ ಕೇಚನ ||೨೦|| ಸ್ಪರ್ಶವೇಧಿಮಯಸ್ಯಾಸ್ಯಲಿಂಗಸ್ಯ ಸ್ಪರ್ಶನಾದ್ವಯಂ | ಲಪ್ಸ್ಯಾಮಹೇ ಸುವರ್ಣತ್ವಮಿತಿ ಬುದ್ಧ್ಯಾಽತಿಭಕ್ತಿತಃ ||೨೧|| ಸ್ಪೃಷ್ಟ್ವಾ ಮಹೇಶ್ವರಂ ಕೇಚಿದ್ಗಚ್ಛಂತಃ ಪರಯಾ ಮುದಾ | ಅಪಶ್ಯಾಮ ವಯಂ ಸಮ್ಯಗಸ್ಪೃಶಾಮ ಮಹೇಶ್ವರಂ ||೨೨|| ಜೀವಿತಾಸ್ಮ ಇತಿಪ್ರೀತ್ಯಾ ಸಂಪ್ರಯಾಂತಶ್ಚ ಕೇಚನ | ಅಸ್ಮದ್ವ್ರತಾನಿ ಪೂರ್ಣಾನಿ ದೃಷ್ಟ್ವಾ ಶ್ರೀಮಲ್ಲಿಕಾರ್ಜುನಃ ||೨೩|| ಏವಂ ವದಂತಸ್ಸಂಪ್ರೀತ್ಯಾ ಪ್ರತಿಯಾಂತಸ್ತಥಾಪರೇ | ಮಲ್ಲಿಕಾರ್ಜುನ ಪಾಹಿ ತ್ವಂ ನಾಮ್ನಾ ಮಾಮಸ್ಮನ್ಮಲ್ಲಿಕಾರ್ಜುನಃ ||೨೪|| ಏವಮುಕ್ತ್ವಾ ನಮಸ್ಕೃತ್ಯ ಗಚ್ಛಂತಸ್ತತ್ರ ಕೇಚನ | ಸಂಕಲ್ಪಿತಸ್ವರ್ಣಪುಷ್ಪಾಣ್ಯಂಗೀಕುರು ಮಹೇಶ್ವರ ||೨೫|| ಏವಮಾಭಾಷ್ಯ ಸದ್ಭಕ್ತ್ಯಾ ಸಮಾಯಾಂತಸ್ತಥಾಪರೇ | ಸಂಕಲ್ಪಿತಾನಿ ಸರ್ವಾಣಿ ಮಯಾದತ್ತಾನಿ ಶಂಕರ || ೨೬ || ಏವಮುಕ್ತ್ವಾ ಸಮಾ

---

ಅಲ್ಲಿ ಕಾಲುಜಾರುವವರು ಕೆಲರು. ಹಿಂದೆಗೆದು ಹೋಗುವವರು ಕೆಲರು, ಜನರನ್ನು ಒತ್ತರಿಸಿ ತಳ್ಳುವವರು ಕೆಲರು, ಲಿಂಗದಮೇಲೆ ಬೀಳುವವರು ಕೆಲರು, ಶ್ರೀಮಲ್ಲಿಕಾರ್ಜುನ ಲಿಂಗವನ್ನು ಮುಟ್ಟುವವರು ಕೆಲರು, ||೧೮|| ಅತಿ ಭಕ್ತಿಯಿಂದ ಮಲ್ಲಯ್ಯಾ, ಮಲ್ಲಯ್ಯಾ, ಎಂದು ಕೂಗುವವರು ಕೆಲರು, ಆ ಮಲ್ಲಿಕಾರ್ಜುನ ಲಿಂಗಕ್ಕೆ ತಮ್ಮ ತಲೆಗಳನ್ನು ಸಂತೋಷದಿಂದ ಡಿಕ್ಕಿ ಹೊಡೆಯುವವರು ಕೆಲರು. ಈ ಗುಂಪಿನ ತುಳಿದಾಟದಲ್ಲಿ ನಮ್ಮ ಪ್ರಾಣಗಳು ಹೋದರೂ ಹೋಗಲಿ ಎಂದುಕೊಂಡು ಎರಡು ಕೈಗಳಿಂದಲೂ ಲಿಂಗವನ್ನು ತಬ್ಬಿ ಕುಳಿತವರು ಕೆಲರು. ||೨೦|| ಈ ಲಿಂಗವು ಸ್ಪರ್ಶಶಿಲಾಮಯವಾಗಿರುವುದರಿಂದ ಇದನ್ನು ನಾವು ಮುಟ್ಟಿದರೆ ನಾವು ಭಂಗಾರವಾಗುವೆವು ಎಂದು ನಂಬಿ, ಅತ್ಯಂತ ಭಕ್ತಿಯಿಂದ ಲಿಂಗವನ್ನು ಮುಟ್ಟಿ ಹೋಗುತ್ತಲಿರುವವರು ಕೆಲರು. ನಾವು ಚೆನ್ನಾಗಿ ಲಿಂಗದರ್ಶನವನ್ನು ಮಾಡಿದೆವು, ಸ್ಪರ್ಶನವನ್ನೂ ಮಾಡಿದೆವು, ಬದುಕಿಬಂದೆವು, ಎಂದುಕೊಂಡು ಹರ್ಷದಿಂದ ಹಿಂದಿರಿಗಿ ಹೋಗುತ್ತಿದ್ದವರು ಕೆಲರು. ಮಲ್ಲಿಕಾರ್ಜುನ ಸ್ವಾಮಿಯನ್ನು ನಾವು ನೋಡಿದೆವು, ನಮ್ಮ ವ್ರತಗಳು ನೆರವೇರಿದುವೆ ಎನ್ನುತ್ತ ಹಿಂದಿರಿಗಿ ಬರುತ್ತಿದ್ದವರು ಕೆಲರು. ''ಎಲೈ ಮಲ್ಲಿಕಾರ್ಜುನಸ್ವಾಮಿಯೆ! ಈ ನನ್ನ ಕುಮಾರನಾದ ಮಲ್ಲಿಕಾರ್ಜುನನು ನಿನ್ನ ಹೆಸರನ್ನು ಹೊತ್ತವನು. ಅದುಕಾರಣ ಇವನನ್ನು ರಕ್ಷಿಸು'' ಎಂದು ಬಿನ್ನೈಸಿ ನಮಸ್ಕರಿಸಿ ತೆರಳುತ್ತಿದ್ದವರು ಕೆಲರು. ಎಲೈ ಶಿವನೆ! ನಾವು ಹರಕೊಂಡಿದ್ದ ಕಾಣಿಕೆಯನ್ನು ಒಪ್ಪಿಸಿಕೊ ಎಂದು ಭಕ್ತಿಯಿಂದ ಅರಿಕೆಮಾಡಿ ಸಮರ್ಪಿಸಿ ಹೋ

ಯಾಂತ ಶ್ಯಂಭುಂದ್ರಷ್ಟುಂತದಾಲಯಂ | ಗಚ್ಛಂತಃಪ್ರವಿಶಂತಶ್ಚ ನಿರ್ಗಚ್ಛಂತಸ್ತ
ದಾಲಯಾತ್ ||೨೭|| ದುಷ್ಕರ್ಮಣೋಽದೃಷ್ಟವತ್ತ್ವಾ ಕರ್ಮದೃಷ್ಟ್ಯಾ ನಯು
ಜ್ಯತೇ | ಕರ್ಮದೂರಂ ಪರಿದ್ರಷ್ಟುಂ ಏತ್ಯುತ್ಪಾಟ್ಯವಿಲೋಚನೇ || ೨೮ ||
ಅವಾಪ್ಯಾನ್ಯೇ ನಯನೇ ಪಶ್ಯಂತಃ ಕೇಚಿದೀಶ್ವರಂ | ಸಮನೇತ್ರಾ ಗಿರಿಸು
ತಾ ತದ್ಭರ್ತಾಪಿಪಿನಾಕಿನಾ ||೨೯|| ಭವಿತವ್ಯಂ ಸಮಾಕ್ಷೇಣೇ ತ್ಯಧ್ಯವಸ್ಯೇವ
ಶಂಕರೇ | ಏಕೈಕಮಾಕ್ಷಣಂ ದತ್ವಾ ಗಚ್ಛಂತಶ್ಚ ತಥಾಪರೇ || ೩೦ || ಅ
ಸ್ಮಾದುದಹರನ್ನೇತ್ರೇತ್ಯಾದಿವಾಕ್ಯಾತ್ಪರಿಸ್ಫುಟಾತ್ | ಹರಾವರ್ಚಿತವತ್ವಾ
ತ್ಮನೇತ್ರೇಣೈಕೇನ ಭಕ್ತಿತಃ ||೩೧|| ಚಕ್ರಂ ತನ್ನಯನಂ ಚೇತಿ ದ್ವಯಂ ಪ್ರಾ
ದಾಚ್ಛಿವೋ ಯಥಾ | ದತ್ತೇ ನೇತ್ರದ್ವಯೇ ಭುಕ್ತಿಮುಕ್ತೀತೇ ಅಪಿ ಲೋಚ
ನೇ ||೩೨|| ದದಾತಿಚತ್ವಾರಿ ಶಿವಸ್ತಥೇತ್ಯಾತ್ಮವಿಲೋಚನೇ | ಸದ್ಭಕ್ತ್ಯಾ ಸಂಪ್ರ
ಯಚ್ಛಂತ ಶ್ಶಿವಾಯ ಪರಮಾತ್ಮನೇ || ೩೩ || ಬ್ರಹ್ಮೇಂದ್ರಸ್ಕಂದಶೇಷಾಹಿ
ರಾವಣಾನಾಮಧೀಶಿತುಃ | ಕಿಮಲಂತ್ರೀಣಿನೇತ್ರಾಣಿ ದೇಹೇ ಸರ್ವತಏವಹಿ

---

ಗುತ್ತಿದ್ದವರು ಕೆಲರು. ಶಂಕರನೆ! ನಾವು ಒಪ್ಪಿಸಬೇಕೆಂದಿದ್ದುದನ್ನೆಲ್ಲಾ ಅರ್ಪಿಸಿಬಿಟ್ಟದ್ದೇವೆ
ಎಂದು ಹೇಳಿಬಿಟ್ಟು ಬರುತ್ತಿದ್ದವರು ಕೆಲರು. ಹೀಗೆ ಸ್ವಾಮಿಯನ್ನು ದರ್ಶನಮಾಡುವುದ
ಕ್ಕಾಗಿ ದೇವಾಲಯದೊಳಕ್ಕೆ ಅನೇಕಾನೇಕರು ಹೋಗುತ್ತಲೂ ಬರುತ್ತಲೂ ಇದ್ದರು. ||೨೭||
ಕೆಲ ಭಕ್ತರುಗಳು ಸ್ವಾಮಿಯ ಎದಿರಿಗೆ ನಿಂತುಕೊಂಡು, ಕರ್ಮದೂರನಾದ ಈ ಪರಶಿವನನ್ನು ಈ
ನಮ್ಮ ದುಷ್ಕರ್ಮ ಫಲೋಪೇತವಾದ ಕರ್ಮದೃಷ್ಟಿಯಿಂದ ನೋಡುವುದು ಸರಿಯಲ್ಲವೆಂದು ಯೋಚಿ
ಸಿ, ಕಣ್ಣುಗಳನ್ನು ಕಳೆದು, ಅರ್ಪಿಸಿ, ಶಿವಾನುಗ್ರಹದಿಂದ ಬೇರೆ ಕಣ್ಣುಗಳನ್ನು ಪಡೆದು, ಶಿವ
ಲಿಂಗದರ್ಶನವನ್ನು ಮಾಡುತ್ತಿದ್ದರು. ಇನ್ನು ಕೆಲವರು ಪಾರ್ವತಿಯು ಸಮನೇತ್ರ (೨ ಕಣ್ಣು)
ಗಳುಳ್ಳವಳು. ಆಕೆಯ ಪತಿಯಾದ ಶಿವನಿಗೂಕೂಡ ಸಮನೇತ್ರ (ಜೋಡಿಕಣ್ಣು) ಗಳೇ ಇರಬೇ
ಕಾದುದು ಉಚಿತವೆಂದು ಯೋಚಿಸಿಕೊಂಡಂತೆ ಅವನ ವಿಷಮನೇತ್ರ (ಮುಕ್ಕಣ್ಣು) ಗಳ ಜತೆಗೆ
ತಮ್ಮಗಳ ಒಂದೊಂದು ಕಣ್ಣನ್ನು ಕಳೆದು ಅರ್ಪಿಸಿ ನಾಲ್ಗಣ್ಣುಳ್ಳವನನ್ನಾಗಿ ಮಾಡಿ ಹೋಗು
ತ್ತಿದ್ದರು. ||೩೦|| ‘‘ಅಸ್ಮಾದುದಹರನ್ನೇತ್ರಾತ್’’ ಎಂದಾರಂಭವಾಗಿರುವ ಪುರಾಣವಚನಗ
ಳಲ್ಲಿ ಹೇಳಲ್ಪಟ್ಟಿರುವಂತೆ ವಿಷ್ಣುವು ಭಕ್ತಿಯಿಂದ ತನ್ನ ಒಂದು ಕಣ್ಣನ್ನು ತೆಗೆದು ಶಿವನನ್ನು
ಪೂಜಿಸಲಾಗಿ, ಶಂಕರನು ಆತನಿಗೆ ಒಂದಕ್ಕೆರಡಾಗಿ ಚಕ್ರಾಯುಧವನ್ನೂ ಆ ಕಣ್ಣನ್ನೂ ಹೇಗೆ
ಕೊಟ್ಟನೋ ಹಾಗೆ, ನಾವು ಈಗ ನಮ್ಮಗಳ ಎರಡೆರಡು ಕಣ್ಣುಗಳನ್ನು ಕಳೆದು ಸಮರ್ಪಿಸಿದರೆ
ಅವೆರಡೆರಡು ಕಣ್ಣುಗಳ ಜತೆಗೆ ಭುಕ್ತಿ ಮುಕ್ತಿಯೆಂಬ ಮತ್ತೆರಡೆರಡನ್ನು ಸೇರಿಸಿ, ಹೀಗೆ ಎರ
ಡಕ್ಕೆ ನಾಲ್ಕನ್ನು ಅನುಗ್ರಹಿಸುವನು ಎಂದು ಆಲೋಚಿಸಿಕೊಂಡಂತೆ ತಮ್ಮ ಎರಡೆರಡು ಕಣ್ಣು
ಗಳನ್ನು ಕಳೆದು ಭಕ್ತಿಯಿಂದ ಪರಶಿವನಿಗೆ ಸಮರ್ಪಿಸುತ್ತಿದ್ದರು. ||೩೩|| ಇನ್ನು ಕೆಲ ಸಾಹಸಿ

114

||೩೪|| ಭವಿತವ್ಯಂ ನೇತ್ರಜಯ್ಯೈರಿತಿ ಮತ್ವೇವ ಸಾದರಂ| ಶಿವಸ್ಯೋಪರಿಸದ್ವೀರಗಣೈಃ ಸ್ಸಾಹಸಿಕೋತ್ತಮೈಃ ||೩೫|| ಪ್ರವೃಷ್ಟಾಯಾಂ ನೇತ್ರವೃಷ್ಟೌ ಸುಸ್ತುವಂತಸ್ತಥಾಪರೇ | ಪ್ರದತ್ತಾಂ ಪ್ರತಿಯಾಚಂತೇ ಕಿಮುಪಾಯನಸಂಹತಿಂ|| ತಥೈವಭಕ್ತ್ಯಾ ದತ್ತಾನಿ ಲೋಚನಾನ್ಯಪಿ ಶಂಭವೇ | ಯಾಚಂತೇಕಿಮಿತಿಪ್ರೋಕ್ತ್ಯಾ ತೂಷ್ಣೀಂಯಾಂತಶ್ಚ ಕೇಚನ ||೩೭|| ಜಿಹ್ವಾಭಿ ರನ್ಯಸ್ತವನಪ್ರಾಪ್ತದೋಷಾಭಿರಾದರಾತ್| ದೋಷಾಯ ಕೀರ್ತನಂ ಶಂಭೋ ರಿತೀವರಸನಾಸ್ಸ್ವಕಾಃ|| ಛಿತ್ವಾಲಬ್ಧ್ವಾನೂತ್ನಜಿಹ್ವಾ ಸ್ಸಂಸ್ತುವಂತಸ್ತಥಾಪರೇ | ಉದ್ಧೃತೈರನ್ಯಪುರ್ತ್ಯೇಭ್ಯಃ ಕರೈರುದರಪೂರ್ತಯೇ ||೩೯|| ನಯುಕ್ತಮಂಜಲೀಬಂಧಂ ಮಹಾದೇವಾಯಶಂಭವೇ| ಇತೀವಹಸ್ತಾನ್ವಿಚ್ಛಿದ್ಯ ನಮಂತೋನೂತನೈಃಕರೈಃ|| ನಜಾನಾತಿಸ್ತನಾಸ್ವಾದಂ ಸ್ವಪ್ನೇಪಿಪರಮೇಶ್ವರಃ | ಇತೀವಸ್ತನಸಂದೋಹಂ ಯಚ್ಛಂತ್ಯಃ ಕಾಶ್ಚನಸ್ತ್ರಿಯಃ ||೪೧|| ದಶಾಸ್ಯಸ್ಕಂದಶೇಷಾಹಿಸ್ವಾಮಿನಃ ಸಂ

---

ವಂತರಾದ ವೀರಗಣಶ್ರೇಷ್ಠರು—ಬ್ರಹ್ಮನಿಗೆ ೮ ಕಣ್ಣು, ಇಂದ್ರನಿಗೆ ಸಾವಿರಕಣ್ಣು, ಷಣ್ಮುಖನಿಗೆ ೧೨ ಕಣ್ಣು, ಆದಿಶೇಷನಿಗೆ ೨೦೦೦ ಕಣ್ಣು, ರಾವಣನಿಗೆ ೨೦ ಕಣ್ಣು ಇರುವುವು. ಇವರುಗಳಿಗೆಲ್ಲಾ ಸ್ವಾಮಿಯಾದ ಶಂಕರನಿಗೆ ಮೂರೇಕಣ್ಣುಗಳಿರುವುದು ಸಾಕೆ? ಅವನ ಸರ್ವಾಂಗದಲ್ಲೂ ಅನಂತನೇತ್ರಗಳಿರಬೇಕು ಎಂದು ಯೋಚಿಸಿಕೊಂಡರೋ ಏನೋ ಎಂಬಂತೆ ಭಕ್ತಿಯಿಂದ ತಂತಮ್ಮ ನೇತ್ರಗಳನ್ನೆಲ್ಲಾ ಕಳೆದು ಸ್ವಾಮಿಯಮೇಲೆ ಕಣ್ಣುಗಳ ಮಳೆಯೇ ಸುರಿದಂತೆ ಸೂಸಿಬಿಡಲಾಗಿ, ಅದನ್ನು ಕಂಡು ಇನ್ನು ಕೆಲರು ಆನಂದದಿಂದ ಕೊಂಡಾಡುತ್ತಿದ್ದರು. ಇನ್ನು ಕೆಲರು—ಬಾಗಿನವನ್ನಿತ್ತವರು ಮರಳಿ ಅದನ್ನು ಈಸಿಕೊಳ್ಳುವುದುಂಟೆ? ಶಿವನಿಗೆ ಭಕ್ತಿಯಿಂದ ಕಣ್ಣುಗಳನ್ನು ಸಮರ್ಪಿಸಿಬಿಟ್ಟಬಳಿಕ ಪುನಃ ಬೇಡಿ ಅವನಿಂದ ಪಡೆದುಕೊಳ್ಳಬಹುದೇ ಅದು ಸರಿಯಲ್ಲ, ಎಂದುಕೊಂಡು ಸುಮ್ಮನೆ ಹೋಗಿಬಿಡುತ್ತಿದ್ದರು. ||೩೭|| ಇನ್ನು ಕೆಲವರು—ಇತರರನ್ನು ಹೊಗಳಿ ಮಲಿನಗಳಾಗಿರುವ ಈ ನಾಲಗೆಗಳಿಂದ ಶಿವನನ್ನು ಸ್ತುತಿಸುವದು ಪಾಪಕರವೆಂದು ಯೋಚಿಸಿಕೊಂಡರೋ ಎಂಬಂತೆ ತಮ್ಮ ನಾಲಗೆಗಳನ್ನು ಕತ್ತರಿಸಿ ಶಿವನಿಗೆ ಅರ್ಪಿಸಿ, ಬೇರೆ ಹೊಸ ನಾಲಗೆಗಳನ್ನು ಶಿವಾನುಗ್ರಹದಿಂದ ಪಡೆದು ಶಿವಸ್ತುತಿಯನ್ನು ಮಾಡುತ್ತಿದ್ದರು. ಮತ್ತೆ ಕೆಲವರು—ಹೊಟ್ಟೆಯನ್ನು ಹೊರೆದುಕೊಳ್ಳಲಿಕ್ಕಾಗಿ ಅನ್ಯಮನುಷ್ಯರಿಗೆ ಮುಗಿದ ಕೈಗಳನ್ನೇ ಶಿವನಿಗೆ ಜೋಡಿಸುವುದು ಉಚಿತವಲ್ಲವೆಂದು ಯೋಚಿಸಿದರೋ ಎಂಬಂತೆ ತಮ್ಮ ಕೈಗಳನ್ನು ಕತ್ತರಿಸಿ ಅರ್ಪಿಸಿ, ಹೊಸ ಕೈಗಳನ್ನು ಪಡೆದು, ಅವುಗಳಿಂದ ಪರಶಿವನನ್ನು ನಮಸ್ಕರಿಸುತ್ತಿದ್ದರು. ||೪೦|| ಪರಶಿವನು ಸ್ವಪ್ನದಲ್ಲೂ ಕೂಡ ಸ್ತನ್ಯದ ರುಚಿಯನ್ನು ಕಂಡವನಲ್ಲವೆಂದು ಯೋಚಿಸಿಕೊಂಡರೋ ಏನೋ ಅವನಿಗೆ ಕೆಲಸ್ತ್ರೀಯರು ತಮ್ಮ ಮೊಲೆಗಳನ್ನು ಕುಯ್ದು ಅರ್ಪಿಸುತ್ತಿದ್ದರು. ರಾವಣನೂ, ಷಣ್ಮುಖನೂ, ಆದಿಶೇಷನೂ ಹೆಚ್ಚು ತಲೆಗಳನ್ನು

ಚಮಸ್ತಕಾಃ । ಪರ್ಯಾಪ್ತಾಃಕಿಮಿತೀವಾಸ್ಮೈ ಯಚ್ಛಸ್ತೋೀಮಸ್ತಕಾನ್ಪರೇ ॥ ಚಿರಂಧೃತ್ವಾಕರ್ಮದೇಹಾಂಛಿವಸ್ಯಕರುಣಾಂವಿನಾ । ಸ್ಥಿತಿರೇವಾಪರಾಧೋಽ ಸಾವಿತಿಮತ್ವೇವಬುದ್ಧಿತಃ ॥ ೪೩ ॥ ಯಚ್ಛಂಸ್ತುಸ್ತುಚ್ಛಸಂಸಾರವಿರಕ್ತ್ಯಾ ಸ್ವತ ನೂಃಪರೇ । ತೋಷಯಿತ್ವಾಶಿವಂ ಧೂಪದೀಪಪಾತ್ರೀಕೃತೈಃಕರೈಃ ॥ ೪೪ ॥ ಪ್ರೀತ್ಯಾಭೂಯಸ್ಸಮುದ್ದಿಶ್ಯ ಶ್ರೀಶೈಲಮಪಿಭಕ್ತಿತಃ । ಪ್ರಕುರ್ವಂತೋ ಧೂಪ ದೀಪಪಾತ್ರಾಣಿ ನಿಜಮಸ್ತಕಾನ್ ॥೪೫॥ ವೃತ್ರಾನುಜಾಇವ ಲಸದ್ಧೂಪದೀ ಪಾನ್ಸ್ವಮಸ್ತಕೈಃ । ಧಾರಯಂತೋವೀಕ್ಷಕೇಷು ಸಂಸ್ತುವತ್ಸುಸಮಂತತಃ ॥ ಪ್ರನೃತ್ಯಂತಶ್ಚ ಗಾಯಂತಃ ಕೇಚಿತ್ಸಂತೋಷನಿರ್ಭರಾಃ । ಕಿಂಚವೀರರಸೋದ ಗ್ರವೇಷಾ ಸ್ಸ್ವೀಯಾಂಗನಾಯುತಾಃ ॥೪೭॥ ವಾಮಾಂಘ್ರಿಷುಸಮುದ್ದಂಡ ಹಂಸಕಾನ್ವೀರಮುದ್ರಿಕಾಃ । ದೇವತಾನಾಂಸಾಲಭಂಜೀ ರಥೋಮುಖವಿಲಂಬಿ ನೀಃ ॥೪೮॥ ಶೃಂಖಲಾಶ್ಚ ಮಹೋದಗ್ರಾ ಧೃತ್ವಾಭೀಲಮುಖಾಂಬುಜಾಃ । ಧವಳೋದ್ಯತ್ಕರ್ಣಪತ್ರಾ ದೀರ್ಘಸೀಮಂತಶೋಭಿನಃ ॥೪೯॥ ವಿಚಿತ್ರಬದ್ಧಚೂ ಲೀಕಾ ಸ್ಸಮಾಲೇಪಿತಚಂದನಾಃ । ವಪನೇನಾಂಚಿತಮುಖಾಃ ಕುಟಿಲಶ್ಮಶ್ರು ಜಾಲಕಾಃ ॥೫೦॥ ಪರಿಸ್ಫುರನ್ನೇತ್ರರುಚೋ ವಿಕಸದ್ದಂತಕಾಂತಯಃ । ಶಿರೋಂ

---

ಹೊಂದಿರುವಲ್ಲಿ ಅವರಿಗೆಲ್ಲಾ ಒಡೆಯನಾದ ಈ ನಮ್ಮ ಸ್ವಾಮಿಗೆ ಐದೇ ತಲೆಗಳು ಸಾಕೆ? ಎಂದು ಯೋಚಿಸಿಕೊಂಡೋ ಏನೋ ಎಂಬಂತೆ ಕೆಲವರು ತಮ್ಮ ತಲೆಗಳನ್ನು ಕತ್ತರಿಸಿ ಅರ್ಪಿಸು ತ್ತಿದ್ದರು. ॥೪೩॥ ಶಿವನ ದಯೆಯನ್ನು ಪಡೆಯದೆ ಬಹುಕಾಲ ಈ ಕರ್ಮದೇಹಗಳನ್ನು ಧರಿಸಿ ಕೊಂಡಿರುವುದೇ ತಪ್ಪೆಂದು ಸಂಸಾರದ ಮೇಲಣ ವೈರಾಗ್ಯದಿಂದಲೋ ಏನೋ ಎಂಬಂತೆ ಕೆಲ ವರು ತಮ್ಮ ದೇಹಗಳನ್ನೇ ಅರ್ಪಿಸುತ್ತಿದ್ದರು. ಇನ್ನು ಕೆಲರು ಭಕ್ತಿಯಿಂದ ತಮ್ಮ ಕರತಲಗಳ ನ್ನೇ ಧೂಪ ದೀಪಗಳ ತಟ್ಟೆಗಳನ್ನಾಗಿ ಮಾಡಿಕೊಂಡು ಶಿವನಿಗೂ ಶ್ರೀಶೈಲಕ್ಕೂ ಧೂಪದೀಪಗ ಳನ್ನು ಭಕ್ತಿಯಿಂದ ಅರ್ಪಿಸಿ ಸಂತೋಷಪಡಿಸಿ, ತಮ್ಮ ತಲೆಗಳನ್ನೇ ಧೂಪದೀಪದ ಆರತಿ ತಟ್ಟೆ ಗಳನ್ನು ಮಾಡಿಕೊಂಡು ಬೆಳಗುತ್ತಿದ್ದರು. ಕೆಲವರು ವೃತ್ರಾಸುರನ ತಮ್ಮಂದಿರಂತೆ ತಮ್ಮ ತಲೆಗಳಮೇಲೆ ಧೂಪದೀಪಗಳನ್ನು ಹೊತ್ತು ನೋಡುವವರೆಲ್ಲರೂ ಹೊಗಳುತ್ತಿರಲಾಗಿ ಸಂತೋ ಷದಿಂದ ಕುಣಿಯುತ್ತಲೂ ಹಾಡುತ್ತಲೂ ಇದ್ದರು. ಮತ್ತೆ ಕೆಲವರು ವೀರವೇಷಧಾರಿಗಳು ಎಡ ಗಾಲಿಗೆ ಬಿರುದಿನ ಪೆಂಡೆಯಗಳನ್ನೂ, ಅಕ್ಷರ ಕೆತ್ತಿದ ವೀರಮುದ್ರಿಕೆಗಳನ್ನೂ, ಕೆಳಮುಖ ಮಾಡಿ ಜೋಲು ಬಿಟ್ಟಿರುವ ಪರದೈವರೂಪದ ಗೊಂಬೆಗಳನ್ನೂ, ಸರಪಳಿಗಳನ್ನೂ, ಬೆಳ್ಳಗಿರುವ ವಜ್ರಗಳ ಕಡಕುಗಳನ್ನೂ ಧರಿಸಿ, ಮಿರುಗುವ ಅಗಲವಾದ ಮುಖಗಳುಳ್ಳವರಾಗಿ, ಉದ್ದನಾದ ಬೈತಲೆಯನ್ನು ತೆಗೆದುಕೊಂಡು, ವಿಚಿತ್ರವಾಗಿ ತಲೆ ತುರುಬನ್ನು ಕಟ್ಟಿ, ಮೈಗೆ ಶ್ರೀಗಂಧವ ನ್ನು ಲೇಪಿಸಿ, ಮುಖಕ್ಷೌರವನ್ನು ಮಾಡಿಸಿ, ಕೋರೆ ಮೀಸೆಗಳನ್ನು ತಿದ್ದಿ ॥೫೦॥ ಹೊಳ

ಸಬಾಹುರಸನಾಕಂಠೇ ವಕ್ಷಸಿ ಕರ್ಣಯೋಃ ||೫೧|| ಕಪೋಲಕರಶಾಖೋರು ಕುಕ್ಷಿಪಕ್ಷ್ಮಸ್ಥಲೇಷುಚ | ನಿಖಾತದೀಪನಾರಾಚಸಂದೋಹಪರಿಶೋಭಿತಾಃ|| ನೀರಾಜಯಿತುಮಾಯಾತಾ ದೀಪವೃಕ್ಷಾ ಇವಾಚಲಂ | ನೀರಾಜನಾಂಪ್ರಕುರ್ವಂತ ಸ್ಸನೃತ್ಯಂ ತತ್ರಕೇಚನ ||೫೩|| ಏಕೈಕಂದುರ್ಘಟಂಕರ್ಮ ಪ್ರಕುರ್ವಂತ ಸ್ತಥಾಪರೇ | ಏಕಾಂತೇ ದುಷ್ಕರಂಕರ್ಮ ಕುರ್ವಂತೋ ಹಾಟಕೇಶ್ವರೇ || ಶ್ರೀಮಲ್ಲಿಕಾರ್ಜುನಪುರೇ ಚೇರುರೇವಂಸಮಂತತಃ | ತತ್ರಪಾತಾಳಗಂಗಾಯಾ ಮಾಹಾತ್ಮ್ಯಂ ಸಮುದಂಚಿತಂ ||೫೫|| ಖ್ಯಾತತ್ರಿಪಥಗಂಗಾಭಿರ್ಯುಕ್ತಾಯಾ ಶೋಭತೇತರಾಂ | ಶಿವಾಂಘ್ರಿಜಾತಾ ಪಾತಾಳೇ ಭಾತಿ ಭೋಗಾವತೀನದೀ|| ಭವಾಂಗಭಸ್ಮಜನಿತಾ ಭುವಿ ಭಾಗೀರಥೀತಥಾ | ದಿವಿಮಂದಾಕಿನೀ ಶಂಭೋರ್ಜಟಾಜೂಟಸಮುದ್ಭವಾ || ೫೬ || ಯತಃಪಾತಾಳಗಂಗೇಯಂ ತತ್ಸಮಷ್ಟಿರಭೂತ್ತತಃ | ಸರ್ವತೀರ್ಥಸ್ನಾನಫಲಪ್ರದಾ ಶ್ರೀಪರ್ವತಸ್ಥಲೇ ||೫೭|| ದರ್ಶನಸ್ಪರ್ಶನಸ್ನಾನಪಾನಾದಿಭ್ಯೋ ನೃಣಾಂಸದಾ| ಲಸಚ್ಚತುರ್ವಿಧಪದಪ್ರದಕಲ್ಲೋಲದೋರ್ಲತಾ ||೫೮|| ಆವರ್ತನಾಭಿಃ ಪುಲಿನಜಘನಾಽನಿಮಿಷೇಕ್ಷಣಾ| ಕಮ

---

ಪಾದ ಕಣ್ಗಳೂ ದಂತಪಂಗ್ತಿಗಳೂ ಉಳ್ಳವರಾಗಿ, ತಲೆ ಭುಜ ತೋಳು ನಾಲಗೆ ಕತ್ತು ಎದೆ ಕಿವಿ ಕೆನ್ನೆ ಬೆರಲು ತೊಡೆ ಹೊಟ್ಟೆ ಕಣ್ಣುರಪ್ಪೆ ಈ ಸ್ಥಲಗಳಲ್ಲೆಲ್ಲಾ ಸರಲುಗಳನ್ನು ಚುಚ್ಚಿಕೊಂಡು, ತಂತಮ್ಮ ಹೆಂಡಿರುಗಳೊಡನೆ ಕೂಡಿ, ಗಿರೀಶ್ವರನಿಗೆ ಆರತಿಯನ್ನೆತ್ತುವುದಕ್ಕಾಗಿ ಬಂದಿರುವ ದೀಪತರುಗಳೋ ಎಂಬಂತೆ ಕುಣಿಯುತ್ತ, ಕೈಗಳಲ್ಲಿ ಹಿಡಿದಿರುವ ಪಂಜನಿಂದ ಆರತಿಯನ್ನೆತ್ತುತ್ತಲಿದ್ದರು. ||೫೩|| ಕೆಲವರು ಆ ಹಾಟಕೇಶ್ವರವೆಂಬ ಸ್ಥಲದಲ್ಲಿ ಒಂದೊಂದು ಅಘಟನ ಕಾರ್ಯಗಳನ್ನೂ, ಮಾಡಲಸಾಧ್ಯವಾದ ಕರ್ಮಗಳನ್ನೂ ಏಕಾಂತದಲ್ಲಿ ಮಾಡುತ್ತಲಿದ್ದರು. ಹೀಗೆ ಪರಿಸೆಯ ಜನರೆಲ್ಲರೂ ಆ ಮಲ್ಲಿಕಾರ್ಜುನ ಸೇವೆಯನ್ನು ಮಾಡಿ, ಪುರದ ಎಲ್ಲಾ ಕಡೆಯೂ ಸಂಚರಿಸುತ್ತಿದ್ದರು. ಆ ಪುರದಲ್ಲಿರುವ ಪಾತಾಳಗಂಗೆಯ ಮಹಿಮೆಯು ಅಗಾಧವಾದುದು. ಈ ಪಾತಾಳಗಂಗೆಯು ಮೂರು ತೆರದ ಗಂಗೆಗಳಿಂದ ಕೂಡಿರುವುದು. ಆ ಮೂರು ಗಂಗೆಗಳಾವುವೆಂದರೆ— ಪರಶಿವನ ಪಾದಕಮಲದಿಂದುದ್ಭವಿಸಿದ ಗಂಗೆಯು ಭೋಗಾವತೀ ನದಿಯೆನಿಸಿಕೊಂಡು ಪಾತಾಳದಲ್ಲಿ ವಿರಾಜಿಸುವುದು. ಶಿವನ ದೇಹಭಸ್ಮದಿಂದ ಜನಿಸಿದ ಗಂಗೆಯು ಭಾಗೀರಥಿಯೆನಿಸಿಕೊಂಡು ಭೂತಲದಲ್ಲಿ ಒಪ್ಪುತ್ತಿರುವುದು. ಶಿವನ ಜಟಾಪಟಲದಿಂದುದಿಸಿದ ಗಂಗೆಯು ಮಂದಾಕಿನಿಯೆನಿಸಿಕೊಂಡು ಆಕಾಶದಲ್ಲಿ ರಾಜಿಸುವುದು. ||೫೬|| ಈ ಪಾತಾಳಗಂಗೆಯು ಅವೆಲ್ಲರ ಕೂಟವಾಗಿರುವುದು. ಅದುಕಾರಣವೇ ಇದು ಸರ್ವತೀರ್ಥಸ್ನಾನಫಲವನ್ನು ಕೊಡತಕ್ಕುದಾಗಿ ಶ್ರೀಗಿರಿಯಲ್ಲಿರುವುದು. ಈ ಗಂಗಾದೇವಿಯು ತನ್ನ ದರ್ಶನ ಸ್ಪರ್ಶನ ಸ್ನಾನಪಾನಾದಿಗಳಿಂದ ಮಾನವರಿಗೆ ಧರ್ಮಾರ್ಥ ಕಾಮ ಮೋಕ್ಷಗಳನ್ನು ಕೊಡುವ

ಲಾಸ್ಯಾ ಫೇನಹಾರಾ ರಥಾಂಗಸ್ತನಶೋಭಿತಾ ||೬೦|| ಸಮುಲ್ಲಸತ್ಪ್ರವಾಹಾಂಗಾ ರಾಜಹಂಸಗತಾಂಚಿತಾ | ಕ್ರೌಂಚಸಾರಸಕಾರಂಡ ಚಕ್ರಾದಿಜಲಪಕ್ಷಿಣಾಂ | ವಿರಾವವಾದ್ಯನಿವಹೇ ಸಮುಲ್ಲಸತಿಸರ್ವತಃ ||೬೧|| ಮಧುಪಾರಾವಗಾನೇಚ ಯಾಂತೀಂಪರಿಷದಂಮುದಾ | ವಿಲೋಕ್ಯಪ್ರನಟದ್ಬಾಹುರಿವವೀಚೀಸಮುನ್ನತಾ ||೬೨|| ತದಾನೀಂತತ್ಪರಿಷದಾ ದದೃಶೇಸಾ ಮಹಾನದೀ | ತತ್ರಾವತೀರ್ಯಪರಿಷಜ್ಜನಾ ಸ್ನಾತ್ವಾಯಥಾವಿಧಿ || ೬೩ || ಯಥಾಸಂಭವಮಾರಭ್ಯದಾನಧರ್ಮಾನನಂತರಂ | ಕೃತಶ್ರೀರುದ್ರಪಾದಾಭಿವಂದನಾಃ ಪುಣ್ಯಸಂಗತಾಃ|| ಪತತೋನ್ಯಾನ್ಕರ್ಮಹರೇ ವಿಧ್ವಸ್ತಕಲುಷವ್ರಜಾನ್ | ನಿರೀಕ್ಷ್ಯಭವನಿರ್ಮುಕ್ತಾ ಸದ್ಭುತಾಕ್ರಾಂತಚೇತಸಃ ||೬೪|| ಉದ್ದಿಶ್ಯಗಚ್ಛತಃ ಕರ್ಮಹರೇಶಂ ಪುಣ್ಯಸಂಯುತಾನ್ | ವೀಕ್ಷ್ಯಸ್ತುವಂತಃ ಕಲುಷವನೋತ್ಪಾಟನದಕ್ಷಿಣಂ ||೬೫|| ಪಶ್ಯಂತಃಪರಯಾಭಕ್ತ್ಯಾ ಲಿಂಗಂ ಪಾಪವಿನಾಶನಂ | ದೃಷ್ಟ್ವಾನ್ಯಾನಿಚಲಿಂಗಾನಿ ಪಾಪಹಾರೀಣಿಸಾದರಂ ||೬೬|| ಅತ್ಯಂತಾಶ್ಚರ್ಯಭರಿತಾಃ ಪ್ರೋಚುರೇವಂಪರಸ್ಪರಂ | ಏತಚ್ಚಿತ್ರಂಶಿವಶಿವ ಶ್ರೀಶೈಲಂಪ್ರತಿಸರ್ವತಃ || ೬೭ || ಸಮಾ

---

ತೆರೆಗಳೆಂಬ ಬಾಹುಗಳುಳ್ಳುದಾಗಿಯೂ, ಸುಳಿಯೆಂಬ ಹೊಕ್ಕುಳಿಂದಲೂ, ಮಳಲುಗುಡ್ಡೆಯೆಂಬ ಕಟಿಪುರೋಭಾಗದಿಂದಲೂ, ಮೀನುಗಳೆಂಬ ಕಣ್ಣುಗಳಿಂದಲೂ, ತಾವರೆಗಳೆಂಬ ಮುಖದಿಂದಲೂ, ನೊರೆಗಳ ಸಾಲೆಂಬ ಮುಕ್ತಾಹಾರದಿಂದಲೂ, ಚಕ್ರವಾಕಪಕ್ಷಿಗಳೆಂಬ ಸ್ತನಗಳಿಂದಲೂ, ಪ್ರವಾಹವೆಂಬ ದೇಹದಿಂದಲೂ, ರಾಜಹಂಸಗಮನವೆಂಬ ಪದಚಲನದಿಂದಲೂ ಕೂಡಿದವಳಾಗಿ, ಕೊಕ್ಕರೆ ನೀರ್ಕೋಳಿ ಚಕ್ರವಾಕ ಮೊದಲಾದ ನೀರುಹಕ್ಕಿಗಳ ಕಲಕಲವೆಂಬ ವಾದ್ಯಧ್ವನಿಗಳೂ, ಭ್ರಮರಗಳ ಝೇಂಕಾರವೆಂಬ ಗಾನಧ್ವನಿಯೂ ಕೂಡ ತನ್ನ ಸುತ್ತಲೂ ವಿಜೃಂಭಿಸಿರಲಾಗಿ, ತನ್ನ ಮುಂದೆ ಹೋಗುತ್ತಿರುವ ಪರಿಸೆಯನ್ನು ನೋಡಿ ಸಂತೋಷದಿಂದ ಬೀಸಿ ಕರೆಯುತ್ತಿರುವ ತೋಳುಗಳಂತೆ ತನ್ನ ತೆರೆಗಳು ಒಪ್ಪಿರಲಾಗಿ, ಆ ಮಹಾನದಿಯನ್ನು ಪರಿಸೆಯ ಜನರು ಕಂಡು ಒಳಕ್ಕಿಳಿದು ಪದ್ಧತಿಯಂತೆ ಸ್ನಾನಮಾಡಿ ||೬೩|| ಯಥೋಚಿತದಾನಧರ್ಮಗಳನ್ನು ಮಾಡಿ, ಅಲ್ಲಿದ್ದ ರುದ್ರಪಾದಕ್ಕೆ ನಮಸ್ಕರಿಸಿ, ಪುನೀತರಾದರು. ||೬೪|| ಮತ್ತು ಅಲ್ಲಿದ್ದ ಕರ್ಮಹರವೆಂಬ ದಿವ್ಯಸ್ಥಲದಲ್ಲಿ ಬಿದ್ದು, ಪಾಪವನ್ನು ಕಳೆದುಕೊಳ್ಳುತ್ತಿರುವ ಜನರನ್ನು ನೋಡಿ ಆಶ್ಚರ್ಯಪಡುತ್ತಿದ್ದರು. ಪಾಪನಿರ್ಮೂಲಕವಾದ ಆ ಕರ್ಮಹರೇಶ್ವರದಲ್ಲಿ ಪತನಮಾಡುವುದಕ್ಕಾಗಿ ಹೋಗುತ್ತಿರುವ ಜನರನ್ನು ನೋಡಿ ಸ್ತೋತ್ರಮಾಡುತ್ತಿದ್ದರು. ||೬೫|| ಬಳಿಕ ಪಾಪವಿನಾಶಕ ಲಿಂಗವನ್ನು ಅತ್ಯಂತ ಭಕ್ತಿಯಿಂದ ನೋಡಿ, ಅಲ್ಲಿದ್ದ ಇನ್ನೂ ನಾನಾನಾಮಧೇಯದ ಪಾಪನಿವಾರಕ ಲಿಂಗಗಳನ್ನೆಲ್ಲಾ ಸಂದರ್ಶನಮಾಡಿ. ಅತ್ಯಾಶ್ಚರ್ಯಪಟ್ಟು, ತಮ್ಮತಮ್ಮಲ್ಲೀ ಅವರುಗಳು ಹೀಗೆ ಮಾತನಾಡಿಕೊಂಡರು:—ಶಿವಶಿವಾ! ಇದಾಶ್ಚರ್ಯ! ಈ ಶ್ರೀಶೈಲ

ಯಾಂತ್ಯಾಃ ಪರಿಷದಃ ಕೇನೇಯತ್ತಾಪ್ರಕಲ್ಪ್ಯತೇ | ಪತೇದೇಕಃಕರ್ಮಹರೇ ಸ್ಥಲಕ್ಷ್ಯೇಪಾಪನುತ್ತಯೇ ||೭೯|| ವ್ಯೋಮ್ನಿಧಾನುಷ್ಕಮುಕ್ತಾದಿಮಧ್ಯಾಂತ ಶರಸಂಹತೇಃ | ತುಲಾಮುಪೇತ್ಯಪತಿತಾಃ ಪತಂತಃ ಪತನೋನ್ಮುಖಾಃ ||೮೦|| ಲಕ್ಷ್ಯಂತೇಬಹುಶೋಮರ್ತ್ಯಾ ಸ್ಸತತಂಪ್ರತಿವಾಸರಂ | ಅನ್ಯತೀರ್ಥೇಷುಮಿ ಳಿತ ಜನಸಂಘೋ ಮಹೀತಳೇ ||೮೧|| ಉಪಾಗಚ್ಛತಿಸಾದೃಶ್ಯ ಮೇತತ್ಪರಿಷ ದಾಕಥಂ | ಸಂಪ್ರಯಾಂತೀಂ ಪರಿಷದಂ ಶ್ರೀಕಾಶೀನಗರಂಪ್ರತಿ ||೮೨|| ಶ್ರೀ ದ್ರಾಕ್ಷಾರಾಮಭೀಮೇಶವಿವಾಹಂ ಘನವೈಭವಂ | ಪ್ರವಿಲೋಕಯಿತುಂಪ್ರೀ ತ್ಯಾ ಯಾಂತೀಂಪರಿಷದಂಪುನಃ ||೮೩|| ಗುಡಪೂಡಿಪುರೀಸೋಮೇಶ್ವರಸ್ಯಾ ಧಿಕವೈಭವಂ | ವಿವಾಹಮಾಲೋಕಯಿತುಂ ಯಾಂತೀಂಪರಿಷದಂತಥಾ ||೮೪|| ಸಮಾಲೋಕಯಿತುಂವ್ಯಾಘ್ರಪುರೇ ಪರಿಣಯೋತ್ಸವಂ | ಅಭಿಯಾಂತೀಂ ಪರಿ ಷದ ಮತಿಸಂಮರ್ದಶಾಲಿನೀಂ ||೮೫|| ಪ್ರೀತ್ಯಾ ಸೊನ್ನಲಿಗೆಗ್ರಾಮಕ್ಷೇತ್ರಪೂ ಜೋರುವೈಭವಂ | ಆಲೋಕನಾಯಾಗಚ್ಛಂತೀಂ ಪುರಾ ಪರಿಷದಂಶುಭಂ || ಸೌರಾಷ್ಟ್ರಸೋಮನಾಥಸ್ಯ ವಾಸೋಧಾರಣವೈಭವಂ | ಪ್ರವಿಲೋಕಯಿತುಂ ರಾಗಾದ್ಯಾಂತೀಂ ಪರಿಷದಂತಥಾ ||೮೬|| ಸ್ನಾತುಂ ಗೋದಾವರೀನದ್ಯಾಂ ಸಿಂಹಸಂಸ್ಥೇ ಬೃಹಸ್ಪತೌ | ಸಂಸರ್ಪತೀಂ ಪರಿಷದಂ ವಿನಿರ್ಮುಕ್ತಾಘಜಾಲ

---

ವನ್ನು ಕುರಿತು ಸರ್ವದಿಕ್ಕುಗಳಿಂದಲೂ ಬರುತ್ತಿರುವ ಈ ಪರಿಸೆಯ ಲೆಕ್ಕವನ್ನು ಇಷ್ಟೆಂದು ಹೇಳಲು ಯಾರಿಂದಾದೀತು? ಈ ಪರಿಸೆಯಲ್ಲಿ ಎಷ್ಟೋಜನಕ್ಕೊಬ್ಬನು ತನ್ನ ಪಾಪವನ್ನು ಕಳೆದು ಕೊಳ್ಳಲಿಕ್ಕಾಗಿ ಈ ಕರ್ಮಹರ ಕ್ಷೇತ್ರದಲ್ಲಿ ಬಂದು ಬೀಳತಕ್ಕವನಿರುವನು. ಹೀಗಿರುವಲ್ಲಿ ಧನುರ್ಧಾರಿಯು ಆಕಾಶದಕಡೆಗೆ ಪುಂಖಾನುಪುಂಖವಾಗಿ ಪ್ರಯೋಗಿಸುತ್ತಿರುವ ಬಾಣಜಾಲಕ್ಕೆ ಸಮನಾಗಿ ಈ ದಿವ್ಯಸ್ಥಳದಲ್ಲಿ ಪ್ರತಿದಿವಸವೂ ಅನೇಕ ಜನರು ಬಂದು ಬಿದ್ದೂ ಬೀಳುತ್ತಲೂ ಬೀಳುವವರಾಗಿಯೂ ಇದ್ದಾರೆ. ಹೀಗಿರುವಾಗ ಅದ್ಭುತವಾದ ಪರಿಸೆಯ ಆಳತೆಯನ್ನು ಯಾರಿಂದ ಕಟ್ಟಲಾದೀತು? ಭೂತಳದಲ್ಲಿರುವ ಇತರ ತೀರ್ಥಕ್ಷೇತ್ರಗಳಿಗೆ ಕೂಡುವ ಪರಿಸೆಯು ಇಲ್ಲಿಯ ಪರಿಸೆಗೆ ಹೇಗೆ ಸಮನಾದೀತು? ||೮೧|| ಶ್ರೀ ಕಾಶೀಕ್ಷೇತ್ರಕ್ಕೆ ಹೋಗುವ ಪರಿಸೆಯನ್ನೂ, ದ್ರಾಕ್ಷಾರಾಮಕ್ಷೇತ್ರದಲ್ಲಿ ಭೀಮೇಶ್ವರ ಕಲ್ಯಾಣವನ್ನು ನೋಡಲಿಕ್ಕಾಗಿ ಪ್ರೀತಿಯಿಂದ ಹೋಗುವ ಪರಿಸೆಯನ್ನೂ ||೮೩|| ಗುಡಿಪೂಡಿ ಪಟ್ಟಣದ ಸೋಮೇಶ್ವರನ ಕಲ್ಯಾಣವನ್ನು ನೋಡಲಿಕ್ಕೆ ಹೋಗುವ ಪರಿಸೆಯನ್ನೂ, ಹುಲಿಯೂರು ಸೋಮೇಶ್ವರನ ವಿವಾಹ ಮಹೋತ್ಸವವನ್ನು ನೋಡಲು ಹೋಗುವ ದಟ್ಟವಾದ ಪರಿಸೆಯನ್ನೂ, ಸೊನ್ನಲಿಗೆ ಸಿದ್ಧರಾಮೇಶ್ವರಜಾತ್ರೆಗೆ ಹೋಗುವ ಪರಿಸೆಯನ್ನೂ, ಸೌರಾಷ್ಟ್ರದ ಸೋಮೇಶ್ವರನಿಗೆ ವಸ್ತ್ರವನ್ನು ಧರಿಸುವ ಮಹೋತ್ಸವವನ್ನು ನೋಡಲಿಕ್ಕೆ ಹೋಗುವ ಪರಿಸೆಯನ್ನೂ, ||೮೬|| ಗುರುಸಿಂ

ಕಾಂ ||೭೮|| ನಿವೃತ್ತಿಸಂಗಮೇಸ್ನಾತುಂ ಭಾಸ್ಕರಗ್ರಹಣಾದಿಷು | ಪುಣ್ಯಕಾಲೇಷುಸಂಪ್ರೇತ್ಯಾ ಯಾಂತೀಂಪರಿಷದಂಪುನಃ ||೭೯|| ಪೂರ್ಣಿಮಾಯಾಂಚ ಕಾರ್ತಿಕ್ಯಾಂ ಪ್ರಖ್ಯಾತಂ ತ್ರಿಪುರಾಂತಕಂ | ಸಮಾಗತಾಂ ಪರಿಷದಮನುರಾಗಸಮೇಧಿತಾಂ ||೮೦|| ರಾಮೇಶ್ವರಂ ಸಮುದ್ದಿಶ್ಯ ಯಾಂತೀಂ ಪರಿಷದಂ ತಥಾ | ಅದ್ರಾಕ್ಷ್ಮನೈಕ್ಷಿತೈತಸ್ಯಾ ಸ್ಸದೃಶೀಪರಿಷತ್ಕ್ವಚಿತ್ ||೮೧|| ಅಸ್ತ್ಯನ್ಯತ್ಪರಮಂಚಿತ್ರಂ ಜಾನಾತಿಶಿವಏವತತ್ | ಪರಿಷತ್ಸಮುಪಾಗತ್ಯ ಸಮಾವಿಶತಿ ಯಾವತೀ ||೮೨|| ತಾವದ್ವಿಸ್ತೃತಿಮಾಯಾತಿ ಪುರಮೇತನ್ಮಹೇಶಿತುಃ | ಯಾವಚ್ಚ ಜಲಮಾದತ್ತೇ ಪರಿಷತ್ಸಂಭ್ರಮಾನ್ವಿತಾ ||೮೩|| ತಾವತ್ಸಲಿಲಸಂಪೂರ್ಣಾಸ್ತಟಿನ್ಯ ಶ್ರೀಗಿರಾವಿಹ | ಆಗತ್ಯವಿಶತಿಸ್ವೈರಂ ಯಾವತೀಪರಿಷನ್ಮುದಾ || ತಾವದ್ವಿಸ್ತೃತಿಮಾಯಾತಿ ಮಲ್ಲಿಕಾರ್ಜುನಮಂದಿರಂ | ಸಮುಪಾಗತ್ಯಪರಿಷದಾಲೋಕಯತಿಯಾವತೀ ||೮೫|| ಲಿಂಗಮೂರ್ತಿರಪಿಸ್ವೈರಂ ತಾವದ್ವೈಪುಲ್ಯಮೃಚ್ಛತಿ | ಘನನೇಪಾಲಕೇದಾರ ಸಂತೇರೀತೀರಭುಕ್ತಯಃ || ೮೬ || ಕಂನೋಜದೇಶ ಕಾಶ್ಮೀರದೇಶಾ ವಪಿಚ ಕೊಂಕಣಃ | ಸಪಾದಲಕ್ಷಸಂಖ್ಯಾಕಭಟೈಃ ಪ್ರತ್ಯೇಕಮನ್ವಿತಾಃ || ೮೭ || ಅಷ್ಟಲಕ್ಷಭಟೋಪೇತೋ ಜಾಲಾಂಧರ ಉದೀರಿತಃ | ಭೋಟಸ್ಯಾತ್ಸುಭಟೈ ಸ್ಸಪ್ತಲಕ್ಷಸಂಖ್ಯೈಸ್ಸಮನ್ವಿತಃ ||೮೮||

---

ಯೋಗಸಲ್ಲಿ ನಡೆಯುವ ಗೋದಾವರೀ ಪುಷ್ಕರಯಾತ್ರೆಗೆ ಸ್ನಾನಕ್ಕಾಗಿ ಹೋಗುವ ಪರಿಷೆಯನ್ನೂ, ಸೂರ್ಯಗ್ರಹಣಾದಿ ಪುಣ್ಯಕಾಲಗಳಲ್ಲಿ ನಿವೃತ್ತಿ ಸಂಗಮಕ್ಷೇತ್ರದಲ್ಲಿ ಸ್ನಾನಮಾಡಲಿಕ್ಕೆ ಹೋಗತಕ್ಕ ಪರಿಸೆಯನ್ನೂ, ಕಾರ್ತಿಕಶುದ್ಧ ಪೂರ್ಣಿಮೆಯಲ್ಲಿ ತ್ರಿಪುರಾಂತಕೇಶ್ವರ ದರ್ಶನಕ್ಕೆ ಭಕ್ತಿಯಿಂದ ಹೋಗತಕ್ಕ ಪರಿಸೆಯನ್ನೂ, ||೮೦|| ರಾಮೇಶ್ವರ ಯಾತ್ರೆಗೆ ಹೋಗತಕ್ಕ ಪರಿಷೆಯನ್ನೂ ಸಹ ಈ ಶ್ರೀಗಿರಿಯ ಪರಿಸೆಯೊಡನೆ ಹೋಲಿಸಲಾದೀತೆ? ಈ ಪರಿಸೆಗೆ ಸಮನಾದುದನ್ನು ನಾವೆಲ್ಲೂ ಕಂಡುದಿಲ್ಲ. ಕಾಣುವುದೂ ಇಲ್ಲ.||೮೧|| ಇಲ್ಲಿ ಮತ್ತೊಂದು ಪರಮಾಶ್ಚರ್ಯಕರವಾದ ವಿಷಯವಿರುವುದು. ಅದನ್ನು ಶಿವನೇಬಲ್ಲ. ಅದೇನೆಂದರೆ—ಎಷ್ಟು ಪರಿಸೆಯು ಬಂದು ಇಳಿದರೂ ಈ ಮಲ್ಲಿಕಾರ್ಜುನ ಪಟ್ಟಣವು ಅಷ್ಟೂ ವಿಸ್ತಾರವಾಗುತ್ತ ಹೋಗುತ್ತದೆ. ಪರಿಸೆಯು ಎಷ್ಟು ನೀರನ್ನು ಬಳಸಿದರೂ ಅಷ್ಟೂ ನೀರು ಇಲ್ಲಿಯ ಹೊಳೆಗಳಲ್ಲಿ ತುಂಬಿರುತ್ತದೆ. ಎಷ್ಟು ಪರಿಸೆಯು ಬಂದುಹೊಕ್ಕರೂ, ಮಲ್ಲಿಕಾರ್ಜುನ ದೇವಾಲಯವು ಅಷ್ಟೂ ವಿಶಾಲವಾಗುತ್ತದೆ. ಎಷ್ಟು ಪರಿಸೆಯುಬಂದು ಬಂದು ನೋಡಿದರೂ ಲಿಂಗಮೂರ್ತಿಯು ಅಷ್ಟೂ ವಿಸ್ತಾರವಾಗುತ್ತದೆ. ||೮೫|| ನೇಪಾಳ, ಕೇದಾರ, ಸಾಂತ್ವೇರಿ, ತೀರಭುಕ್ತಿ, ಕಂನೋಜ, ಕಾಶ್ಮೀರ, ಕೊಂಕಣ ಈ ದೇಶಗಳೆಲ್ಲಾ ಪ್ರತಿಯೊಂದೂ ಒಂದೂಕಾಲುಲಕ್ಷ ಸೈನಿಕರನ್ನು ಹೊಂದಿರುತ್ತವೆ. ||೮೭|| ಜಾಲಂಧರದೇಶವು ೮ ಲಕ್ಷ ಸೈನ್ಯದಿಂದಲೂ, ಬಂಗಾಳವು ೧೪ ಲಕ್ಷ ಸೈನಿಕರಿಂದಲೂ, ದ್ರಾಳವವು

ಬಂಗಾಳಸ್ತು ಭಟೈರ್ಯುಕ್ತಸ್ಸ್ಯಾಚ್ಚತುರ್ದಶಲಕ್ಷಕೈಃ | ಮಾಳವಸ್ತು ಭವೇಧಷ್ಟಾದಶಲಕ್ಷಭಟೈರ್ಯುತಃ ||೮೯|| ದೇಶಸ್ಸ್ಯಾದ್ಘೂರ್ಜರಸ್ಸಪ್ತಲಕ್ಷಸಂಖ್ಯಭಟೈರ್ಯುತಃ | ಆಂಧ್ರದೇಶಸ್ತು ವಿಖ್ಯಾತೋ ನವಲಕ್ಷಭಟೈರ್ಯುತಃ ||೯೦|| ಭಟೈರೇತದ್ದ್ವಿತ್ರಿಗುಣಸಂಖ್ಯಾಕೈಸ್ಸಂಮಿತಾಃ ಪರೇ | ದೇಶಾಸ್ಸಂತಿಕಿಮಸ್ಮಾಕಂ ತತ್ರತ್ಯಭಟಸಂಖ್ಯಯಾ ||೯೧|| ಆಕೇದಾರಂದಿಶಿಪ್ರಾಚ್ಯಾ ಮಾದ್ವಾರಾವತಿಪಶ್ಚಿಮೇ | ಆವಾಲುಕಾನದಿ ಪುನರುತ್ತರಸ್ಯಾಂ ತಥಾದಿಶಿ ||೯೨|| ಆಗಂಧಮಾದನಂ ಯಾಮ್ಯಭಾಗೇ ಕಿಂಚಮಹೀತಳೇ | ಅನನ್ತಶ್ಚೋತ್ತರಃಪಂಥಾ ಇತಿಲೋಕಪ್ರಸಿದ್ಧಿತಃ ||೯೩|| ಅನಂತತ್ವಾದುತ್ತರಸ್ಯ ಹಿಮವತ್ಪರ್ವತಾವಧಿ | ಯೇಯೇದೇಶಾಸ್ತು ತಿಷ್ಠಂತಿ ತೇಷುತೇಷುನಿವಾಸಿನಃ ||೯೪|| ಮೋಕ್ಷಾರ್ಥಿನೋಜನಾಸ್ಸರ್ವೇ ಯತೋಽಯಂಭುವಿಪರ್ವತಃ | ಕೈಲಾಸೋದಕ್ಷಿಣಇತಿ ಸತತಂಸಂಪ್ರಶಸ್ಯತೇ ||೯೫|| ತದೇನಂ ಶ್ರೀಗಿರಿಂದ್ರಷ್ಟುಂ ಯದಾಗಚ್ಛನ್ತಿಹರ್ಷತಃ | ಯದಾಪೌರಜನಾಏವ ನಿವಸನ್ತಿಚಕೇವಲಂ ||೯೬|| ಉಭಯತ್ರೈಕರೂಪೇಣ ನಗರಂಸಂಪ್ರವರ್ತತೇ | ಕೀದೃಗ್ವಿಧೋವಾ ಶ್ರೀಶೈಲಮಹಿಮಾ ಪರಮೋಸ್ತತಃ || ಕಥಂವಯಂಗಮಿಷ್ಯಾಮ ಇತಿಶಂಸಂತಏವಹಿ | ಸಮಾಗತಾಸ್ತ್ರ ಸಕಲಂ ಕುಲಮ

---

೧೮ ಲಕ್ಷ ಭಟರಿಂದಲೂ, ಘೂರ್ಜರದೇಶವು ೭ ಲಕ್ಷ ಸೈನ್ಯದಿಂದಲೂ, ಆಂಧ್ರದೇಶವು ೯ ಲಕ್ಷ ಸೈನ್ಯದಿಂದಲೂ ಕೂಡಿರುವುವು. ಇದಕ್ಕೆ ಎರಡು ಮೂರು ಭಾಗದಷ್ಟು ಹೆಚ್ಚಾದ ಸೈನಿಕರಿಂದ ಕೂಡಿದ ದೇಶಗಳೂ ಕೆಲವಿರುವುವು. ಆದರೆ ಅಲ್ಲಿರುವ ಆ ಸೈನಿಕರನ್ನು ಕಟ್ಟಿಕೊಂಡು ನಮಗೇನು? ||೯೧|| ಭೂತಲದೊಳಗೆ ಮೂಡಲಲ್ಲಿ ಕೇದಾರವೇ ಕೊನೆಯಾಗಿಯೂ, ಪಡವಲಲ್ಲಿ ದ್ವಾರಾವತಿಯೇ ಕೊನೆಯಾಗಿಯೂ, ಬಡಗಲಲ್ಲಿ ವಾಲುಕಾನದಿಯೇ ಕಡೆಯಾಗಿಯೂ, ಟೆಂಕಲಲ್ಲಿ ಗಂಧಮಾದನಪರ್ವತವೇ ಕಡೆಯಾಗಿಯೂ ಮತ್ತು ಉತ್ತರದಿಙ್ಮಾರ್ಗವು ಕೊನೆಯಿಲ್ಲದಷ್ಟು ಇರುವುದು ಎಂದು ಲೋಕಪ್ರಸಿದ್ಧಿಗೊಂಡಿರುವಕಾರಣ, ಆ ಬಡಗಲ ದಿಗ್ಭಾಗವು ಅನಂತವಾಗಿರುವುದರಿಂದ ಹಿಮವತ್ಪರ್ವತದವರೆಗಣ ಭೂಭಾಗದಲ್ಲಿ ಯಾವ ಯಾವ ದೇಶಗಳಿರುವುವೋ ಅಲ್ಲೆಲ್ಲಾ ವಾಸವಾಗಿರುವ ಮೋಕ್ಷಾರ್ಥಿ ಜನರೆಲ್ಲರೂ ಈ ಗಿರಿಯು ದಕ್ಷಿಣ ಕೈಲಾಸವೆಂದು ಹೆಸರುಗೊಂಡಿರುವಕಾರಣ, ||೯೫|| ಈ ಶ್ರೀಶೈಲವನ್ನು ದರ್ಶನಮಾಡುವುದಕ್ಕಾಗಿ ಬರುತ್ತಿರುವರು. ಹಾಗೆ ಸಂತೋಷದಿಂದ ಬರತಕ್ಕ ಹೊರಗಣಜನರಿಗೂ ಮತ್ತು ಸದಾ ಆ ಪಟ್ಟಣದಲ್ಲೇ ವಾಸಮಾಡಿಕೊಂಡಿರುವ ಜನರಿಗೂ ಸಹ ಆ ಪುರಿಯು ಒಂದೇವಿಧವಾಗಿರುವುದು. ಶ್ರೀಶೈಲದ ಮಹಿಮೆಯು ಎಂತಹದೋ ಕಾಣೆವು! ಇಲ್ಲಿಗೆ ಬಂದವರೆಲ್ಲರೂ ಹಿಂದಿರುಗಿ ನಾವು ಹೇಗೆ ಹೋಗೋಣವೆಂದು ಚಿಂತಿಸತಕ್ಕವರೇ ಆಗಿರುತ್ತಾರೆ. ಬಿಟ್ಟು ಹೋಗಲು ಯಾರಿಗೂ ಮನಸ್ಸು ಬರುವುದಿಲ್ಲ. “ನಾವು ಇಲ್ಲಿಗೆ ಬಂದೆವು. ನಮ್ಮ ವಂಶವೆಲ್ಲಾ

ಸ್ಮಾಕಮುದ್ಧೃತಂ ||೯೮|| ಜೀವಿತಾಸ್ಮ ಶ್ರೀಗಿರೀಶ ಮಪಶ್ಯಾಮಚಿರಾದ್ವಯಂ| ಅಶೇಷೋಪದ್ರವಾಸ್ತೀರ್ಣಾ ಸ್ಸಫಲಂ ಜನ್ಮಚಾಭವತ್ ||೯೯|| ನಿರಸ್ತಮೇವ ದುಷ್ಕರ್ಮಕದಂಬಕಮಪಿ ಕ್ಷಣಾತ್ | ಮಲ್ಲಿಕಾರ್ಜುನದೇವಸ್ಯ ನಾಮ್ನಾ ಪುತ್ರಾಶ್ಚ ಸಂಜ್ಞಿತಾಃ ||೧೦೦|| ಸಂಕಲ್ಪಿತಾನಿಗ್ರಾಮೇಷು ಪರಿಪೂರ್ಣಾನ್ಯಶೇಷತಃ | ಮಾತರಃಪಿತರಃಕಾನ್ತಾಸ್ಸುತಾಃ ಕ್ಷೇತ್ರಾಣಿ ಭೂಮಯಃ ||೧೦೧|| ಪ್ರಭುತ್ವಂಚ ಧನಂಗ್ರಾಮಾ ಯೋಗಸೌಖ್ಯಾನಿಸಂಪದಃ | ಬಲಾನಿರಾಜ್ಯಂವಂಶಾಶ್ಚ ಯೌವನಾನಿ ಪರಾಕ್ರಮಾಃ ||೧೦೨|| ಶಾರದಾಭ್ರಾಣಿತಟಿನೀತರಂಗಾ ಜಲಬುದ್ಬುದಾಃ | ನಿರಾವರಣದೇಶಸ್ಥದೀಪಿಕಾ ಮೃಗತೃಷ್ಣಿಕಾಃ || ೧೦೩ || ಮಹೇಂದ್ರಚಾಪಾ ಮಾತಂಗಕರ್ಣಾ ಸೌದಾಮಿನೀಲತಾಃ | ಪಿಪೀಲಿಕಾನಾಮಥ್ವಾಸೋ ಮ್ರಿಯಮಾಣಸ್ಯವೈಭವಂ ||೧೦೪|| ಕರಕಾನೀರಲಿಪಯ ಸ್ತಸ್ಮಾದೇತೇಷುಮೋಹತಃ | ಭಂಗುರೇಷುಕಿಮಾಸಕ್ತೋ ಭವತಿಜ್ಞಾನವಾನಿತಿ ||೧೦೫|| ಸಾಜಲ್ಪಂತ ಸ್ಸಮುದ್ಭೂತವೈರಾಗ್ಯಾಃ ಕ್ಷೇತ್ರಗೌರವಾತ್ | ಆಗಚ್ಛಂತಶ್ಚಗಚ್ಛಂತಃ ಪಶ್ಯನ್ತಸ್ತೇತದಾಽವಸನ್ ||೧೦೬||

---

ಉದ್ಧಾರವಾಯಿತು. ನಾವು ಬದುಕಿದೆವು ಬಹುಕಾಲಕ್ಕೆ ನಾವು ಶ್ರೀಶೈಲದರ್ಶನ ಮಾಡಿದೆವು. ನಮ್ಮ ಸಕಲ ಕಷ್ಟಗಳೂ ನೀಗಿದುವು. ನಮ್ಮ ಜನ್ಮವು ಸಾರ್ಥಕವಾಯಿತು ||೯೯|| ನಮ್ಮ ದುಷ್ಕರ್ಮಗಳೆಲ್ಲ ಕ್ಷಣಮಾತ್ರದಲ್ಲಿ ಬಯಲಾದುವು. ನಮ್ಮ ಮಕ್ಕಳುಗಳಿಗೆಲ್ಲಾ ಮಲ್ಲಿಕಾರ್ಜುನನ ಹೆಸರನ್ನು ಕರೆದುದಾಯಿತು. ||೧೦೦|| ನಮ್ಮ ಗ್ರಾಮಗಳಲ್ಲಿ ಹರಸಿಕೊಂಡು ಉದ್ದೇಶಿಸಿದ್ದ ಕಾರ್ಯಗಳೆಲ್ಲಾ ಕೈಗೂಡಿದುವು. ನಮ್ಮ ತಾಯ್ತಂದೆಗಳೂ, ಹೆಂಡಿರುಮಕ್ಕಳೂ, ಹೊಲಗದ್ದೆಗಳೂ. ಒಡೆತನವೂ, ಧನಕನಕಸಂಪತ್ತೂ, ಯೋಗಸೌಖ್ಯಗಳೂ, ಬಲವೂ, ರಾಜ್ಯವೂ, ವಂಶವೂ, ಯೌವನವೂ, ಪರಾಕ್ರಮವೂ ಇವೆಲ್ಲವೂ ಶರತ್ಕಾಲದ ಮೋಡಕ್ಕೂ, ಹೊಳೆಯ ತೆರೆಗಳಿಗೂ, ನೀರಗುಳ್ಳೆಗಳಿಗೂ, ತೆರೆಮರೆಯಿಲ್ಲದ ಬಯಲಿನಲ್ಲಿಟ್ಟ ದೀಪಕ್ಕೂ, ನೀರ್ಗುದುರೆಗೂ, ಇಂದ್ರಧನುಸ್ಸಿಗೂ, ಆನೆ ಕಿವಿಗೂ, ಮಿಂಚುಗಳಿಗೂ, ಇರುವೆಯ ಪಂಗ್ತಿಗೂ, ಸಾಯಲಾಗಿರುವವನ ವೈಭವಕ್ಕೂ, ಆಲಿಕಲ್ಲಿಗೂ, ನೀರಿನ ಮೇಲಣ ಬರೆವಣಿಗೆಗೂ ಸಮನಾಗಿ ಅಸ್ಥಿರವಾದುವುಗಳು. ಜ್ಞಾನಿಯಾದವನು ಈ ಕ್ಷಣಿಕ ವಸ್ತುಗಳಲ್ಲಿ ಅಜ್ಞಾನದಿಂದ ಆಸಕ್ತನಾದಾನೆ? ||೧೦೫|| ಎಂಬುದಾಗಿ ಪರಿಸೆಯ ಜನರೆಲ್ಲರೂ ಆ ಕ್ಷೇತ್ರ ಮಹಿಮೆಯಿಂದ ವೈರಾಗ್ಯ ಹುಟ್ಟಿದವರಾಗಿ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತ, ದೇವಾಲಯಕ್ಕೆ ಹೋಗುತ್ತಲೂ ಬರುತ್ತಲೂ ದೇವತಾದರ್ಶನವನ್ನು ಮಾಡುತ್ತಲೂ ಅಲ್ಲಿ ವಾಸಮಾಡಿಕೊಂಡಿದ್ದರು. ||೧೦೬||

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ
ಪರ್ವತಪ್ರಕರಣೇ ಪರಿಷದ ಶ್ರೀಮಲ್ಲಿಕಾರ್ಜುನದರ್ಶನ ಪೂಜನ
ಪಾತಾಳಗಂಗಾಸ್ನಾನಕರ್ಮ ಮಹೇಶ್ವರಾದಿ
ನಾನಾದಿವ್ಯಸ್ಥಾನಸಂದರ್ಶನಕಥನಂ ನಾಮ
ತ್ರಯೋದಶೋಽಧ್ಯಾಯಃ

---

## ಅಥ ಚತುರ್ದಶೋಽಧ್ಯಾಯಃ.

### (ಶಿವರಾತ್ರಿ ಜಾಗರಣಕಥನಂ)

ತತೋ ಜಾಗರಣಂ ಭಕ್ತೈಸ್ಸಹ ಕರ್ತುಂ ಸಮುದ್ಯತಃ। ಪಂಡಿತಾರಾಧ್ಯ ಶಿಷ್ಯೋ ಶ್ರೀದೋನಮಾರ್ಯೋಽತಿಭಕ್ತಿತಃ ॥ ॥ ಪ್ರಾಸಾದಗೋಪುರಪ್ರಾಂತ ವಪ್ರಾಭ್ಯಂತರಭಾಗತಃ । ಆಗಮೋಕ್ತೇನವಿಧಿನಾ ವಿಧಾಯಪಟಮಂಟಪಂ ॥ ಶುಂಭತ್ಕ್ರಮುಕಸಂದರ್ಭೈ ರಂಭಾಸ್ತಂಭಕದಂಬಕೈಃ । ಮುಕುರೈರಂಚಿತದ್ವಾರ ತತಿಭಿ ಶ್ಚಿತ್ರಪಂಗ್ತಿಭಿಃ ॥ ೩ ॥ ವಿತಾನಸ್ತಂಭಸಂಬದ್ಧ ವಿಚಿತ್ರೋಪಲರಾಜಿಭಿಃ । ಉಪಪದ್ಮೈ ರುಪಫಲಪ್ರಕರೈಸ್ಸುಮನೋಹರೈಃ ॥ ೪ ॥ ಉಪರತ್ನೈಸ್ಸ್ಫುರದುಪ ಪುಷ್ಪೈಃ ಕುಟ್ಟಿಮಭೂಮಿಭಿಃ । ಅಂಬುಜೋತ್ಪಲಸಂದೋಹ ತೋರಣಪ್ರಣ

---

ಎಂಬಲ್ಲಿಗೆ ಪರ್ವತಪ್ರಕರಣದಲ್ಲಿ ೧೩ನೆ ಅಧ್ಯಾಯವು ಮುಗಿದುದು.

---

## ೧೪ನೆ ಅಧ್ಯಾಯವು.

### ಶಿವರಾತ್ರಿಯಲ್ಲಿ ಪರಿಸುಖ ಜಾಗರಣೆ ಮಾಡಿದ ಕಥೆ

ಬಳಿಕ ಶ್ರೀಪಂಡಿತಾರಾಧ್ಯರ ಶಿಷ್ಯನಾದ ಡೋನಮಾರ್ಯನು ಭಕ್ತಜನರೊಡನೆ ಕೂಡಿ, ಶಿವರಾತ್ರಿಯ ಜಾಗರಣವನ್ನು ಮಾಡಲಿಕ್ಕೆ ಭಕ್ತಿಯಿಂದ ಪ್ರಯತ್ನಿಸಿದವನಾಗಿ, ದೇವಾಲಯದ ಸುತ್ತಣ ಕೋಟೆಯ ಕೆಳಗಣ ದಿಣ್ಣೆಯಿಂದ ಹಿಡಿದು ಗೋಪುರದವರೆಗಣ ಭಾಗದಲ್ಲೆಲ್ಲಾ ಬಟ್ಟೆಯ ಮೇಲ್ಕಟ್ಟು ಕಟ್ಟಿದ ಮಂಟಪವನ್ನು ಆಗಮೋಕ್ತವಿಧಿಗನುಸಾರವಾಗಿ ಹಾಕಿಸಿ, ಹೊಂಬಾಳೆಗಳನ್ನೂ ಬಾಳೆಕಂಬಗಳನ್ನೂ ಕಟ್ಟಿ, ಬಾಗಿಲುಗಳನ್ನು ಕನ್ನಡಿಗಳಿಂದಲೂ ಚಿತ್ರಪಟಗಳ ಸಾಲುಗಳಿಂದಲೂ ಶೃಂಗರಿಸಿ, ಮೇಲುಕಟ್ಟುಗಳಿಗೆ ನಾನಾಬಣ್ಣದ ಮಣಿಗಳ ಕುಚ್ಚುಗಳನ್ನು ಕಟ್ಟಿ, ತಾವರೆಗಳಂತೆಯೂ, ಹಣ್ಣುಗಳಂತೆಯೂ, ಚಿನ್ನದ ಕುಚ್ಚುಗಳಂತೆಯೂ, ಹೂವುಗಳಂತೆಯೂ ರಚಿಸಿದ

ಯೈರಪಿ ||೫|| ಉಪಸಾಗರಫೇನೌಘ ತರಂಗಪ್ರಕರೈರಪಿ | ರತ್ನಕಂದುಕಸಂದೋಹೈ ಸ್ಸುವರ್ಣಸ್ತಬಕೈಸ್ತಥಾ || ೬ || ಭರ್ಮಾಂಬುರಂಜಿತಲಸದ್ವಸ್ತ್ರಪಕ್ಷಿಮಧುವ್ರತೈಃ || ೭ || ಪಕ್ವಾನ್ನೈಶ್ಚ ಪತಾಕಾಭಿ ರ್ದ್ರಾಕ್ಷಾದಿಫಲಗುಚ್ಛಕೈಃ | ವಿಚಿತ್ರವಿದ್ರುಮಲತಾನಿವಹೈರಪಿ ಸರ್ವತಃ ||೮|| ಕರ್ಣಿಕಾರಾಶೋಕರಕ್ತಕರವೀರಾರುಣಾಂಬುಜೈಃ | ಚಂಪಕಾದಿಲಸನ್ಮಾಲ್ಯೈ ರುದಂಚದ್ಘಂಟಿಕಾವ್ರಜೈಃ|| ಅಕಾರಯದ್ಭೂಷಿತಂ ತ ಮನರ್ಘ್ಯಗುಣವಾರಿಧಿಃ | ಲೋಕೇಜನ್ಯೈರ್ದಿವಾಹಂತಿ ಬಹಿಸ್ತಮ ಇತೀರಣಾತ್ || ೧೮ || ಬಾಹ್ಯಾಂತಮೋಪಿ ಮತ್ಕಿರಣೈ ರ್ದಿವೈವಹಿವಿನಶ್ಯತಿ | ಭಕ್ತಾವಲೋಕನಾದತ್ರ ಬಹಿರಂತರ್ದಿವಾನಿಶಂ ||೧೯|| ಇತ್ಯುಕ್ತೇರ್ನಶ್ಯತಿತಮೋ ಬಹಿರಭ್ಯಂತರಸ್ಥಿತಂ | ಇತಃಪರಂ ಜೀವಿತಂ ಮೇ ಕಿಮರ್ಥಮಿತಿಲಜ್ಜಯಾ ||೧೨|| ವಾರಿಧೌ ನಿಪಪಾತೇವ ಯುಗಾವಸ್ತಂ ತತೋರವಿಃ| ದಿವಾಕರಿಸ್ಯಾಸ್ತಮಯಂ ವರ್ಣಯಿತ್ವಾತತಃಪರಂ || ೩|| ಕ್ರಮಾದ್ವಿಭಾವರೀ ಸಮ್ಯಗ್ವರ್ಣನೀಯಾಕವೀಶ್ವರೈಃ | ಅಹಮೇನಾಂಕಥಂಕಾರಂ ವರ್ಣಯಾಮಿ ನಿಶೀಥಿ

---

ಬಣ್ಣದ ಸಾಮಾನುಗಳ ಕುಚ್ಚುಗಳಿಂದಲೂ, ಮನೋಹರವಾದ ನೆಲಗಟ್ಟುಗಳಿಂದಲೂ, ತಾವರೆನೈದಿಲುಗಳ ತೋರಣಗಳಿಂದಲೂ ||೫|| ಸಮುದ್ರದ ಬಳಿಯಳ ನೊರೆಯೋಪಾದಿಯಲ್ಲಿ ಕಾಣುವ ಬುರುಜುಗಳಿಂದಲೂ, ರತ್ನಮಯವಾದ ಚಂಡುಗಳಿಂದಲೂ, ಜರಿಯ ಜಾಲರಿಗಳಿಂದಲೂ, ಭಂಗಾರದ ಮುಲಾವು ಕಟ್ಟದ ಬಟ್ಟೆಯ ಹಕ್ಕಿಗಳಿಂದಲೂ, ತುಂಬಿಗಳಿಂದಲೂ ನಾನಾ ಪಕ್ವಾನ್ನ ಭಕ್ಷ್ಯಗಳಿಂದಲೂ, ಕಜ್ಜಾಯಗಳಿಂದಲೂ, ನಾನಾ ತರದ ಬಾವುಟಗಳಿಂದಲೂ, ದ್ರಾಕ್ಷಾದಿ ಫಲಗಳ ಗೊನೆಗಳಿಂದಲೂ, ಹವಳದ ಸರಗಳಿಂದಲೂ, ಬೆಟ್ಟತಾವರೆ ಅಸುಗೆ ಕೆಂಪುಕಣಗಿಲೆ ಕೆಂದಾವರೆ ಸಂಪಗೆ ಇತ್ಯಾದಿ ಪುಷ್ಪಗಳ ಮಾಲಿಕೆಗಳಿಂದಲೂ, ಕಿರಿಗಂಟೆಗಳ ಸಾಲುಗಳಿಂದಲೂ ಸಹ ಆ ಮಂಟಪವನ್ನಲಂಕಾರ ಮಾಡಿಸಿದನು. ||೯|| "ಲೋಕದಲ್ಲಿ ಹೊರಗೆ ಕಾಣಿಸುವ ಕತ್ತಲನ್ನು ಸೂರ್ಯನು ಹಗಲುಹೊತ್ತು ನಿವಾರಣೆ ಮಾಡುತ್ತಾನೆಂದು ಜನರು ಹೇಳಿಕೊಳ್ಳುತ್ತಿರುವಂತೆ, ನನ್ನ ಕಿರಣಗಳಿಂದ ಹೊರಗಣ ಕತ್ತಲು ಹಗಲಿನಲ್ಲಿ ಮಾತ್ರವೇ ಅಳಿದುಹೋಗುತ್ತದೆ. ಇಲ್ಲಾದರೊ ಭಕ್ತರ ದರ್ಶನದಿಂದ ಒಳ ಹೊರಗಣ ಕತ್ತಲೆರಡೂ ಹಗಲೂ ರಾತ್ರಿಗಳಲ್ಲೂ ನಾಶವಾಗುತ್ತವೆಂಬ ವಚನಪ್ರಕಾರ, ಒಳಗಣ ಅಜ್ಞಾನವೆಂಬ ಕತ್ತಲೂ, ಹೊರಗಣ ಪ್ರಕಾಶಾಭಾವರೂಪವಾದ ಕತ್ತಲೂ ಸಹ ನಾಶವಾಗುತ್ತವೆ. ಹೀಗಿರುವಾಗ ಇನ್ನು ಮೇಲೆ ನಾನು ಬದುಕಿರುವುದೇಕೆ?" ಎಂದು ಯೋಚಿಸಿ, ನಾಚುಗೆಗೊಂಡು ಸಮುದ್ರದಲ್ಲಿ ಮುಳುಗಿಬಿಟ್ಟನೋ ಎಂಬಂತೆ-ಸೂರ್ಯನು ಅಸ್ತಂಗತನಾದನು. ||೧೨|| ಎಲೈ ಸೂರಾಮಾತ್ಯನೆ! ಕವಿವರ್ಯರು ಸೂರ್ಯನ ಅಸ್ತಮಯವನ್ನು ವರ್ಣಿಸಿದಬಳಿಕ ರಾತ್ರಿಯನ್ನು ವರ್ಣಿಸುವ ಪದ್ಧತಿಯುಂಟಷ್ಟೆ. ನಾನು ಇಲ್ಲಿಯ ರಾತ್ರಿಯನ್ನು ಹೇಗೆಂದು ವರ್ಣಿಸಲಿ? ಉಳಿದ ಕಡೆಗಳಲ್ಲಿ ಶಂಖ

ನೀಂ ||೧೪|| ಶಂಖಭೇರೀಮೃದಂಗಾದಿ ಬಹುವಾದಿತ್ರಘೋಷಣಂ | ಘಂಟಿ ಕಾಕಾಂಸ್ಯತಾಲಾದಿರವೋ ಜಯಜಯಧ್ವನಿಃ ||೧೫|| ವರ್ಣ್ಯತೇಯದಿಸಂಧ್ಯಾಯಾ ಮಿದಂ ನ್ನೈವಾತ್ರಯುಜ್ಯತೇ | ಏತಸ್ಮಿನ್ವಾದ್ಯನಿನದೋ ಘನಗರ್ಜಿತಸನ್ನಿಭಃ ||೧೬|| ಉದಗ್ರಶಿಖರವ್ರಾತಂ ಮುಖರೀಕುರುತೇಸದಾ | ವರ್ಣ್ಯತೇಯದಿ ವಾವ್ಯಾಪ್ತಂ ತಮಿಸ್ರಂತಚ್ಚನೋಚಿತಂ ||೧೭|| ಪ್ರಾಸಾದಗೋಪುರೋತ್ತುಂಗ ಸುವರ್ಣಕಲಶೈಶ್ಚಭ್ರೈಃ | ಧ್ವಜದಂಡಾಲಿಖಚಿತ ವರಮಾಣಿಕ್ಯಕಾಂತಿಭಿಃ ||೧೮|| ಪರಿಸ್ಫುರದ್ದೀಪಮಾಲಾದೀಧಿತೀನಾಂ ಚಯೈರಪಿ | ಅಹಾನೀವನಿಶೀಥಿನ್ಯೋ ವಿಭಾಂತ್ಯಸ್ಮಿನ್ಪುರೇಸದಾ ||೧೯|| ಅತೋನಾಸ್ತ್ಯೇವತಿಮಿರಂ ದಿವಸೇಽಸ್ಮಿಂಸ್ತುಕಿಂಪುನಃ | ವರ್ಣ್ಯತಾಮಿತಿಚೇಜ್ಜಾರಚೋರಾಸಸ್ಮಿನ್ಮಹೀಧರೇ ||೨೦|| ಮಹಾತ್ಮಾನಸ್ಸ್ಥಿತಾಸ್ಸರ್ವೇ ನಿರ್ಧೂತಾಖಿಲಕಲ್ಮಷಾಃ | ವರ್ಣ್ಯತಾಮಸ್ತಾರಕೌಘ ಮಿತಿಚೇದ್ಗಗನಸ್ಥಲೇ ||೨೧|| ಏತತ್ಪುರೀಧೂಪಧೂಮ ನೀಲಾಭ್ರಪಟಲಾವೃತಃ | ನಲಕ್ಷ್ಯತೇಪರಿದ್ರಷ್ಟುಂ ತಾರಕಾನಿವಹಸ್ಸದಾ ||೨೨|| ಪಂಕಜೋತ್ಪಲಸಂದೋಹ ಪ್ರವಿಕಾಸನಿಮೀಲನೇ | ಯದಿವರ್ಣಯಿತುಂ ಬುದ್ಧಿಸ್ತರ್ಚ್ಛೈ

---

ನಗಾರಿ ಮದ್ದಲೆ ಮೊದಲಾದ ವಾದ್ಯಗಳ ಸದ್ದೂ, ಗಂಟೆಗಳ ತಾಳಗಳ ಧ್ವನಿಯೂ, ಜಯ ಜಯ ಎಂಬ ಘೋಷವೂ, ಸಾಯಂಕಾಲಗಳಲ್ಲಿ ಮಾತ್ರ ನಡೆಯುವುವು. ಹಾಗೆ ಇಲ್ಲೂ ನಡೆಯುವುವೆಂದು ವರ್ಣನೆ ಮಾಡೋಣವೆಂದರೆ ಅದು ಇಲ್ಲಿಗೆ ಹೊಂದುವುದಿಲ್ಲ. ಏಕೆಂದರೆ—ಈ ಗಿರಿ ಶಿಖರದ ಮೇಲೆ ಗುಡುಗಿನ ದನಿಗೆ ಸದೃಶವಾದ ವಾದ್ಯಧ್ವನಿಯು ಕಾಲಸಿಯುಮವಿಲ್ಲದೆ ಯಾವಾಗಲೂ ಗಿರಿಶಿಖರಗಳನ್ನೆಲ್ಲಾ ಪ್ರತಿಧ್ವನಿಗುಟ್ಟಿಸುತ್ತಿರುವುದು. ರಾತ್ರಿಯಲ್ಲಿ ಕವಿದಿರುವ ಕತ್ತಲನ್ನು ವರ್ಣಿಸೋಣವೆಂದರೆ—ಅದೂಕೂಡ ಉಚಿತವಾಗುವುದಿಲ್ಲ. ಏಕೆಂದರೆ ದೇವಾಲಯದ ಗೋಪುರಗಳ ಮೇಲಿರುವ ಉನ್ನತಗಳಾದ ಸುವರ್ಣ ಕಲಶಗಳ ಕಾಂತಿಯಿಂದಲೂ, ಧ್ವಜಸ್ತಂಭದಮೇಲೆ ಕೆತ್ತಿರುವ ರತ್ನಗಳ ಪ್ರಭೆಯಿಂದಲೂ, ಸದಾ ಉರಿಯುತ್ತಿರುವ ದೀಪಾವಳಿಗಳ ಬೆಳಕಿನಿಂದಲೂ, ಈ ಪಟ್ಟಣದಲ್ಲಿ ರಾತ್ರಿಗಳು ಕೂಡ ಸದಾ ಹಗಲೇ ಆಗಿರುವುವು. ||೧೯|| ಅದುಕಾರಣ ಈ ಪಟ್ಟಣದಲ್ಲಿ ಕತ್ತಲೇ ಇಲ್ಲ. ಯಾವಾಗಲೂ ಹಗಲೇ ಆಗಿರುವ ಈ ಗಿರಿಯಲ್ಲಿ ಇನ್ನು ಜಾರ ಚೋರರ ವರ್ಣನೆಯನ್ನು ಮಾಡುವುದೆಲ್ಲಿ ಬಂದಿತು? ಅದರಮೇಲೆ ಇಲ್ಲಿರುವ ಮನುಜರೆಲ್ಲರೂ ಪಾಪನಿರ್ಮುಕ್ತರಾದ ಮಹಿಮರೇ ಆಗಿರುತ್ತಾರೆ. ಇಲ್ಲಿಯ ಆಕಾಶಸ್ಥಲದಲ್ಲಿರುವ ನಕ್ಷತ್ರಗಳ ಸಮೂಹವನ್ನು ವರ್ಣಿಸೋಣವೆಂದರೆ—||೨೧|| ಈ ಪಟ್ಟಣದ ಧೂಪದ ಹೊಗೆಯೆಂಬ ಕಾರ್ಮೋಡದಿಂದ ಆಕಾಶವು ಸದಾ ಮುಚ್ಚಿಹೋಗಿ ನಕ್ಷತ್ರಗಳು ಕಾಣಿಸುವುದೇ ಇಲ್ಲ. ||೨೨||ಹಗಲು ರಾತ್ರಿಗಳಲ್ಲಿ ತಾವರೆಗಳಿಗೂ ನೈದಿಲುಗಳಿಗೂ ಉಂಟಾಗುವ ವಿಕಸನ ಮುಕುಳನಗಳನ್ನು ವರ್ಣಿಸೋಣವೆಂದರೆ— ಈ ಪರ್ವತದ ಕೋಡುಗಲ್ಲುಗಳು ಆಕಾಶಕ್ಕೆ ಸೊಂಕುತ್ತಿರುವ

ಲಾಪ್ರಂಕಷೋನ್ನತೇಃ ||೨೩|| ಉದಯಾಸ್ತಮಯಜ್ಞಾನಾಭಾವಾ ದತ್ರಾರ್ಕ ಚಂದ್ರಯೋಃ | ತದ್ವರ್ಣನಂಸ್ನೈವಯುಕ್ತ ಮತ್ರ ಪದ್ಮೋತ್ಪಲಾವಲೇಃ ||೨೪|| ವಿಚಿತ್ರಂಖಲುಮಾಹಾತ್ಮ್ಯಂ ಶಿವರಾತ್ರೇರ್ಮಹೀತಲೇ | ವ್ಯಾಧಃಕಶ್ಚಿನ್ಮಹಾಟ ವ್ಯಾಂ ವೀಕ್ಷ್ಯೈಕಂ ಮೃಗಮಂಜಸಾ||೨೫|| ನಿಶಿತಾಗ್ರಂಬಾಣಮೇಕಂಸಂಧಾಯ ನಿಜಕಾರ್ಮುಕೇ | ವಿಮೋಚ ಸತುನಿರ್ಭಿದ್ಯ ತನ್ಮೃಗಸ್ಯತನುಂ ಶರಃ || ನಿಮ್ನಸ್ಥಲೇಪ್ರಸುಪ್ತಸ್ಯ ದ್ವೀಪಿನೋಮಸ್ತಕೇಽಪತತ್ | ಅನಂತರಂಸಮುತ್ಥಾಯ ಶಾರ್ದೂಲೋಪಿಸಸಂಭ್ರಮಂ ||೨೭|| ವೇಗಾದಧಾವತ್ತಂವ್ಯಾಧಂ ಸೋಪ್ಯಾಶು ಭಯವಿಹ್ವಲಃ | ಆರುರೋಹಸಮೀಪಸ್ಥಂ ಕಿಂಚಿದ್ಬಿಲ್ವಮಹೀರುಹಂ || ರಕ್ತಧಾರಾಸಮಾಧಸ್ನಮಸ್ತಕೋಽತ್ಯಂತಖೇದಿತಃ | ವೀಕ್ಷ್ಯ ತದ್ಭೂರುಹಾರೂಢಂ ಲುಬ್ಧಕಂ ಸಮುಪಾಗತಃ ||೨೯|| ಘನಕೋಪಾನಲಜ್ವಾಲಾಭೀಲಲೋಲವಿಲೋಚನಃ | ವಿನಿರ್ಯನ್ನಾಸಿಕಾಧೂಮಪಟಲಸ್ತಂಮಹೀರುಹಂ ||೩೦|| ವಿಲೋಕಯನ್ಸಮಾರೋಢುಂ ತಚ್ಛಾಖಾಶ್ಚಲಯನ್ಮುಹುಃ | ದಷ್ಟ್ವಾದಷ್ಟ್ವಾತ ವೃಕ್ಷಶಾಖಾ ಭಂಜಯನ್ನಧಿಕಂಶ್ವಸನ್ ||೩೧|| ಜೃಂಭಾವಿವೃತವಕ್ತ್ರಸ್ಸನ್ನಧಸ್ತಾದ್ಧರಣೀರುಹಂ| ತಾಡಯನ್ನಿಜವಾಲೇನ ಭೀಕರಂ ಸಮಧಿಷ್ಠಿತ ||೩೨|| ತಂಸಮು

---

ಷ್ಟ ಉನ್ನತಗಳಾಗಿರುವುದರಿಂದ ತಾವರೆ ನೈದಿಲುಗಳಿಗೆ ಸೂರ್ಯ ಚಂದ್ರರ ಉದಯಾಸ್ತಮಯುಗಳೇ ಗೊತ್ತಾಗುವುದಿಲ್ಲ. ಆದುಕಾರಣ ಅವುಗಳ ವಿಕಸನ ಮುಕುಳನಗಳನ್ನು ವರ್ಣಿಸುವುದು ಯುಕ್ತವಲ್ಲ. ||೨೪|| ಭೂತಲದಲ್ಲಿ ಶಿವರಾತ್ರಿಯ ಮಹಿಮೆಯು ಅದ್ಭುತವಾದುದಷ್ಟೆ. ಹೇಗೆಂದರೆ—ಒಂದು ದೊಡ್ಡ ಕಾಡಿನಲ್ಲಿ ಒಬ್ಬಾನೊಬ್ಬ ಬೇಡನು ಒಂದು ಮೃಗವನ್ನು ಕಂಡು ಬೇಗನೆ ಬಿಲ್ಲಿಗೆ ಬಾಣವನ್ನು ಹೂಡಿ ಪ್ರಯೋಗಿಸಿದನು. ಅದು ಆ ಮೃಗದ ದೇಹವನ್ನು ಭೇದಿಸಿಕೊಂಡು ಆಚೆಗೆ ತೂರಿಹೋಗಿ, ಹಳ್ಳದಲ್ಲಿ ಮಲಗಿದ್ದ ಒಂದು ಹುಲಿಯ ತಲೆಗೆ ನಾಟಿತು. ಕೂಡಲೇ ಆಹುಲಿಯು ಕೊಸರಿಕೊಂಡೆದ್ದು ಭರ್ರನೆ ಬೇಡನ ಮೇಲೇರಿ ಬಂದಿತು. ಅವನು ಭಯಪಟ್ಟು ಥಟ್ಟನೆ ಸಮೀಪದಲ್ಲಿದ್ದ ಒಂದು ಬಿಲ್ವವೃಕ್ಷವನ್ನೇರಿಕೊಂಡನು. ||೨೮|| ಬಾಣದೇಟಿನಿಂದ ನೊಂದು ರಕ್ತಸ್ರವಣದಿಂದ ತೊಯ್ದಿರುವ ತಲೆಯುಳ್ಳುದಾಗಿರುವ ಆ ಹುಲಿಯು, ಮರವನ್ನೇರಿಕೊಂಡಿರುವ ಬೇಡನನ್ನು ಕಂಡು, ಮರದ ಬಳಿಗೆ ಬಂದು, ಕೋಪದಿಂದ ಕಿಡಿಗೆದರುತ್ತಿರುವ ಕಣ್ಣುಗಳುಳ್ಳುದಾಗಿ, ಮೂಗಿನಿಂದ ಉಸುರಿನ ಹೊಗೆಯನ್ನು ದುಮಿಕಿಸುತ್ತ, ಆ ಮರವನ್ನು ನೋಡಿ, ಮೇಲಕ್ಕೆ ಹತ್ತುವುದಕ್ಕಾಗಿ ಕೊಂಬೆಗಳನ್ನು ಪದೇಪದೇ ಅಲ್ಲಾಡಿಸುತ್ತ, ಮರದ ಕೊನೆಗಳನ್ನು ಕಡಿಕಡಿದು ಹಾಕುತ್ತ, ಬಿರಿಸಾಗಿ ಉಸುರನ್ನು ಬಿಡುತ್ತ, ಆ! ಎಂದು ಬಾಯನ್ನು ತೆರೆದುಕೊಂಡು ತನ್ನ ಬಾಲದಿಂದ ಮರದ ಬುಡವನ್ನು ಬಡಿಯುತ್ತ, ಭಯಂಕರವಾಗಿ ನಿಂತುಕೊಂಡಿದ್ದಿತು. ||೩೨|| ಆ ಬೇಡನಾದರೊ ಹುಲಿಯನ್ನು ನೋಡಿ ಭಯಗೊಂ

ದ್ವೀಕ್ಷ್ಯಸವ್ಯಾಧೋ ವ್ಯಾಘ್ರೇಣ ಧರಣೀರುಹಃ । ನಾರೋಢುಂಶಕ್ಯತೇಭೂ
ನಾ ವಿತ್ಯನಾಲೋಚ್ಯ ಸಂಭ್ರಮಾತ್ ॥೩೩॥ ಆತ್ಮೀಯಬಾಣಪಾತೋಪತಾ
ಪೇನಾಯಂ ಮಹಾಮೃಗಃ। ಮಾಂನಮುಂಚತಿ ವೃಕ್ಷಾಗ್ರಮವಶ್ಯಂ ಸಮುಪೇ
ಷ್ಯತಿ ॥೩೪॥ ಹನಿಷ್ಯತೀತಿ ನಿಶ್ಚಿತ್ಯಾವಸತ್ಪ್ರಾಣಭಯಾತುರಃ । ತದಾ ಬಿಲ್ವದ್ರು
ಮಸ್ಕಂಧೇ ಶಿವಮೂರ್ತಿತ್ವಮಾಗತೇ ॥ ೩೫ ॥ ಹಂತಿಶಾರ್ದೂಲಇತ್ಯುದ್ಯದ್ಧ
ಬಾಷ್ಪೇಮಜ್ಜನವಾರಿಣಿ । ಸ್ವದೃಷ್ಟ್ಯಾವರಣೇಲೂನೇ ಪತ್ರಸಂಘೇನಿಪಾತಿತೇ ॥
ನಿರಂತರಂ ಮಹಾದೇವಪೂಜನತ್ವಮುಪಾಗತೇ । ಅಥೋಭ್ರಮತಿಶಾರ್ದೂಲೇ
ಸ್ವಸ್ಯಾಪಿ ಭ್ರಮಣೇತತಃ ॥ ೩೭ ॥ ಸವ್ಯಾಪಸವ್ಯಕಲಿತಪ್ರದಕ್ಷಿಣಜಯೇಸತಿ ।
ಯತಸ್ತಸ್ಯಾಂನಿಶೀಥಿನ್ಯಾಂ ನಾಹಾರಸ್ತಸ್ಯವಿದ್ಯತೇ ॥ ೩೮ ॥ ತತಸ್ತಸ್ಯೋಪ
ವಾಸಿತ್ವೇ ಸಂಪ್ರಾಪ್ತೇಚ ಯಥಾವಿಧಿ । ತದ್ವ್ಯಾಘ್ರಾಲೋಕನವಶಾ ನ್ನೇತ್ರ
ಯೋರನಿಮೀಲನೇ ॥೩೯॥ ಸತಿಜಾಗರಣೇ ವೃಕ್ಷಸ್ಯಾಧೋ ವ್ಯಾಘ್ರೇ ತರುಸ್ಥಿ
ತಂ । ಅನಿಹತ್ಯಗಮಿಷ್ಯಾಮಿ ನೈನಮಿತ್ಯುಪತಿಷ್ಠತಿ ॥ ೪೦ ॥ ಶಿವರಾತ್ರಿವ್ರತಂ
ಜಾತಂ ವ್ಯಾಧಸ್ಯೈವ ಮಕಾಮತಃ। ದೇವೋಗೌರೀಪತಿರ್ವ್ಯಾಧಂ ಶರೀರೇಣ
ಸಹಾನಯತ್ ॥೪ ॥ ಕೈಲಾಸಭೂಧರಂ ದಿವ್ಯಂ ತದಾನೀಂ ಪ್ರೀತಮಾನಸಃ।

---

ಡು, ಮರವನ್ನು ಹತ್ತುವುದಕ್ಕೆ ಹುಲಿಗೆ ಶಕ್ಯವಲ್ಲವೆಂಬುದನ್ನು ಯೋಚಿಸಿಕೊಳ್ಳದೆ, "ಈ ದೊಡ್ಡಮೃಗವು ನನ್ನ ಬಾಣದೇಟಿನಿಂದ ನೊಂದಿರುವಕಾರಣ ನನ್ನನ್ನು ಬೇರೆ ಬಿಡುವುದಿಲ್ಲ. ಇದು ಮರದ ಮೇಲಕ್ಕೆ ಹತ್ತಿ ಬರುತ್ತದೆ, ನನ್ನನ್ನು ಕೊಂದುಬಿಡುತ್ತದೆ," ಎಂಬುದಾಗಿ ನಿಶ್ಚಯಿಸಿಕೊಂಡು, ಪ್ರಾಣಭಯದಿಂದ ವ್ಯಾಕುಲಗೊಂಡವನಾಗಿದ್ದನು. ಆಗ ಬಿಲ್ವವೃಕ್ಷದ ಶಾಖೆಯ ಕೊಂಬೆಯೇ ಅವನಿಗೆ ಲಿಂಗಮೂರ್ತಿಯಾಯಿತು. ಹುಲಿಯು ಕೊಂದುಬಿಡುವುದೆಂಬ ಭಯದಿಂದ ಮರದಮೇಲೆ ಸುರಿಯುತ್ತಿದ್ದ ಅವನ ಕಣ್ಣೀರೇ ಅಭಿಷೇಕಜಲವಾಯಿತು. ಕಣ್ಣಿಗೆ ಹುಲಿಯು ಕಾಣಿಸದಂತೆ ಮರೆಯಾಗಿದ್ದ ಕೊಂಬೆಗಳ ಪತ್ರಗಳನ್ನು ಕಿತ್ತು ಕಿತ್ತು ಬಿಸುಡುತ್ತಿದ್ದುದರಿಂದ ಅದೇ ಪೂಜೆಯಾಯಿತು. ಹುಲಿಯು ಮರದ ಸುತ್ತಲೂ ತಿರುತಿರುಗಿದಂತೆ ಅದನ್ನನುಸರಿಸಿ ಇವನ ದೃಷ್ಟಿಯೂ ಸುತ್ತುತ್ತಿರಲು ಅದೇ ಪ್ರದಕ್ಷಿಣವಾಯಿತು. ಆ ರಾತ್ರಿಯಲ್ಲಿ ಆಹಾರವೇ ಇಲ್ಲದಿದ್ದುದರಿಂದ ಉಪವಾಸಾಚರಣೆಯಾಯಿತು. ಕಣ್ಣನ್ನು ಮುಚ್ಚದೆ ಹುಲಿಯನ್ನೇ ನೋಡಿಕೊಂಡಿದ್ದುದರಿಂದ ಜಾಗರಣೆಯಾಯಿತು. ಮೇಲೆ ಕುಳಿತಿರುವ ಇವನನ್ನು ಕೊಲ್ಲದೆ ನಾನು ಹೋಗುವುದಿಲ್ಲವೆಂದು ಹುಲಿಯು ಮರದ ಕೆಳಗೆ ಕಾಯ್ದು ಕುಳಿತಿದ್ದುದರಿಂದ ಬೇಡನಿಗೆ ಉದ್ದೇಶವಿಲ್ಲದೆಯೇ ಶಿವರಾತ್ರಿ ವ್ರತಾಚರಣೆಯು ಸಾಗಿದಂತಾಯಿತು. ಆಗ ಪರಮೇಶ್ವರನು ಸಂತೋಷಪಟ್ಟು, ಆ ಬೇಡನನ್ನು ದೇಹ ಬೆರಸಿ ಕೈಲಾಸಕ್ಕೆ ಕರೆದುಕೊಂಡು ಹೋದನು.

ಶಿವರಾತ್ರಿರಿಯಂ ತಸ್ಮಾದಿತರಾಭಿಶ್ಚ ರಾತ್ರಿಭಿಃ ||೪೩|| ಸಾಧಾರಣೇತಿ ಕಥಿತುಂ ಯುಜ್ಯತೇ ಕಿಂ ವಿವೇಕಿಭಿಃ| ಶಿವಏವಹಿ ಜಾನಾತಿ ತನ್ಮಾಹಾತ್ಮ್ಯಂ ನಚೇತರಃ|| ಅಥೈಷಸಂಧ್ಯಾಸಮಯೇ ದೋಃನಪಾರ್ಯೋವಿಶುದ್ಧಧೀಃ | ನಿತ್ಯಲಿಂಗಾರ್ಚನಾದೀನಿ ಸತ್ಕರ್ಮಾಣಿವಿಧಾಯಚ ||೪೪|| ಶ್ರೀಮಲ್ಲಿಕಾರ್ಜುನಂ ಲಿಂಗಚಕ್ರವರ್ತಿ ಸಮಾದರಾತ್ | ಸಂಧ್ಯಾಜೀಮೂತಸದ್ವರ್ಣಜೂಟಂ ಸಂಧ್ಯೋಚಿತಾರ್ಚನೈಃ|| ಸಮ್ಯಕ್ಸಂತುಷ್ಟಹೃದಯಂ ವಿಧಾಯ ತದನಂತರಂ | ತನ್ಮಂಟಪಾನ್ತರೇ ದೇವಾಗಾರೇಷು ನಗರಾಂತರೇ || ೪೫ || ಉದ್ಯಾನಾನ್ತರದೇಶೇಷು ಸದ್ಭಕ್ತಭವನೇಷುಚ | ಸರಸ್ತೀರೇಷ್ವಾಪಗಾನಾಂ ಪ್ರದೇಶೇಷೂಪಶೋಭಿಷು ||೪೬|| ಸಮುಚಿತತರಾನೇಕಗೋಪುರೋಪರಿಭೂಮಿಷು | ಶಿಖರೇಶ್ವರಶೃಂಗಾದಿ ನಾನಾಶೃಂಗಚಯೇಷುಚ ||೪೭|| ಶ್ರೀಸಾರಂಗೇಶ್ವರೇ ಕಿನ್ನರೇಶ್ವರೇ ಹಾಟಕೇಶ್ವರೇ| ಸಿದ್ಧೇಶ್ವರೇ ಪಾಪಸಂಘಹರಣೇ ಪಾಪನಾಶನೇ ||೪೮|| ವಾಲೇಶ್ವರಪ್ರಭೃತಿಷು ಶಿವಸ್ಥಾನೇಷು ಸರ್ವತಃ | ಅತ್ಯಂತಭಕ್ತಿಸಂಯುಕ್ತಃ ಕಾರಯಿತ್ವಾಽಸುಲೇಪನಂ ||೪೯|| ರಚಯಿತ್ವಾರಂಗವಲ್ಲೀ ರ್ನಾನಾವರ್ಣಮನೋಹರಾಃ | ಲಿಂಗಾರ್ಚನಾವೇದಿಕಾಶ್ಚ ನವಭಾಂಡಾನ್ಯನೇಕಶಃ ||೫೦|| ಪತದ್ಗ್ರಹಾಂಶ್ಚ ಕರಕಾನರ್ಘ್ಯಪಾತ್ರಾದಿಪಾತ್ರಕಾಃ | ಘಂಟಿಕಾಹೇಮರಜತಕಾಂಸ್ಯಪಾತ್ರಾಣಿ ವೀಟಿ

---

ಈ ಕಾರಣದಿಂದಲೇ ಆ ದಿವಸವು ಶಿವರಾತ್ರಿಯೆನಿಸಿಕೊಂಡಿತು. ||೪೩|| ಇದನ್ನು ಉಳಿದ ರಾತ್ರಿಗಳೊಡನೆ ಸಮನನ್ನಾಗಿ ವಿವೇಕಿಗಳು ಹೇಳಲಾದೀತೆ? ಆ ಶಿವರಾತ್ರಿ ಮಹಿಮೆಯನ್ನು ಶಿವನೇ ಬಲ್ಲನಲ್ಲದೆ ಇತರರು ಅರಿಯರು. ||೪೪|| ಇಂಥ ಶಿವರಾತ್ರಿಯ ದಿನದ ಸಂಧ್ಯಾ ಸಮಯದಲ್ಲಿ ದೋಃನಪಾರ್ಯನು ನಿರ್ಮಲಮನಸ್ಕನಾಗಿ, ತನ್ನ ನಿತ್ಯಲಿಂಗ ಪೂಜಾದಿ ಕರ್ಮಗಳನ್ನು ಮಾಡಿಕೊಂಡು, ಸಂಜೆ ಮೋಡದ ಬಣ್ಣವುಳ್ಳ ಜಟಾಪಟಲವನ್ನು ಧರಿಸಿದವನೂ, ಸಕಲ ಲಿಂಗಮೂರ್ತಿ ಸಾರ್ವಭೌಮನೂ ಆಗಿರುವ ಮಲ್ಲಿಕಾರ್ಜುನ ಸ್ವಾಮಿಯನ್ನು ಸಂಧ್ಯಾಕಾಲ ಪೂಜಾವಿಧಾನದಿಂದರ್ಚಿಸಿ ||೪೫|| ಸಂತೋಷಪಡಿಸಿ, ಬಳಿಕ ಆ ಮಂಟಪದೊಳಗೂ ದೇವಾಲಯಗಳಲ್ಲೂ, ಊರಿನೊಳಗೂ, ಉಪವನಗಳಲ್ಲೂ, ಭಕ್ತರ ಮನೆಗಳಲ್ಲೂ, ಕೊಳಗಳ ದಡಗಳಮೇಲೂ, ಹೊಳೆಗಳ ತೀರಗಳಲ್ಲೂ, ಗೋಪುರಗಳಮೇಲೂ, ಶಿಖರೇಶ್ವರ ಮೊದಲಾದ ಹಲವು ಕೋಡುಗಲ್ಲುಗಳಮೇಲೂ, ಸಾರಂಗೇಶ್ವರ, ಕಿನ್ನರೇಶ್ವರ, ಹಾಟಕೇಶ್ವರ, ಸಿದ್ಧೇಶ್ವರ, ಪಾಪಹಾರೇಶ್ವರ, ವಾಲೇಶ್ವರ ಮೊದಲಾದ ಶಿವಸ್ಥಲಗಳಲ್ಲೆಲ್ಲಾ ಭಕ್ತಿಯಿಂದ ಸಾರಣೆಮಾಡಿಸಿ ||೫೦|| ನಾನಾ ಬಣ್ಣದ ರಂಗವಲ್ಲಿಯನ್ನು ಇಡಿಸಿ, ಶಿವಲಿಂಗಾರ್ಚನೆಯ ಜಗತಿಗಳನ್ನೂ, ಹೊಸಭಾಂಡಗಳನ್ನೂ, ಕಾಳಂಜಿಗಳನ್ನೂ, ಪಂಚಪಾತ್ರಗಳನ್ನೂ, ಅರ್ಘ್ಯದ ಬಟ್ಟಲುಗಳನ್ನೂ. ಗಂಟೆಗಳನ್ನೂ, ಚಿನ್ನ ಬೆಳ್ಳಿ ಕಂಚುಗಳ ಬಟ್ಟಲುಗಳನ್ನೂ, ವೀಳಯಗಳನ್ನೂ, ನಾನಾ ಭಕ್ಷ್ಯಗಳ

ಕಾಃ ||೫೩|| ವಿವಿಧಾನ್ಯಪಿಭಕ್ಷ್ಯಾಣಿ ಸುಗಂಧದ್ರವ್ಯಜಾಲಕಂ | ಅಖಂಡಬಿಲ್ವಪತ್ರಾಣಿ ಪುಷ್ಪಮಾಲ್ಯತಿಲಾಕ್ಷತಾನ್ ||೫೪|| ದಶಾಂಗಮುಹಿಷಾಕ್ಷ್ಯಾದಿಸರ್ವಧೂಪಕದಂಬಕಂ | ಆನಂದವರ್ತ್ಯಾದಿವರ್ತೀ ರಂಗವಸ್ತ್ರಾಣ್ಯನೇಕಶಃ ||೫೫|| ದಾಸತ್ವಬುದ್ಧ್ಯಾ ಸದ್ಭಕ್ತನಿವಹಾಯ ಸಮರ್ಪ್ಯಚ | ಇಷ್ಟಾನಿಯಾನಿವಸ್ತೂನಿ ಯೇಭ್ಯಸ್ತಾನ್ಯಪಿಸರ್ವಶಃ ||೫೬|| ತೇಭ್ಯೋ ದತ್ವೈವಮಕರೋ ಚ್ಛಿವರಾತ್ರಿಮಹೋತ್ಸವಂ | ಅಥ ಭಕ್ತವರಾಃಕೇಚಿದ್ವಿಲಸದ್ಭಕ್ತಿಸಂಯುತಾಃ ||೫೭|| ಕರ್ಪೂರಗಂಧಕಸ್ತೂರೀ ಯಕ್ಷಕರ್ದಮಮಿಶ್ರಿತಂ | ಶಿವಸ್ಯ ಪೂಜಾಸ್ಥಾನೇಷು ಪ್ರಕುರ್ವಂತೋವಿಲೇಪನಂ ||೫೮|| ಕಲಿಕಾಶ್ಚಿತ್ರಪತ್ರಾಣಿ ಮುಕುಲಾನ್ಬಂಧಸಂಹತೀಃ | ಮುಕ್ತಾಘರಂಗವಲ್ಲೀಭಿಃ ಕುರ್ವಂತಃಕಮಲಾನಿಚ ||೫೯|| ಪಂಚವರ್ಣರಂಗವಲ್ಲೀ ರಚಯಂತಸ್ತಥಾಪರೇ | ನಿರಂತರಪತದ್ಧಾರಂ ಸಹಸ್ರಕಲಶೋದಕೈಃ ||೬೦|| ಅಭಿಷೇಕಂಪ್ರಕುರ್ವಂತೋ ಮಹೇಶಸ್ಯಾಪರೇಪುನಃ | ಅಷ್ಟಪುಷ್ಪಾರ್ಚನಾಃ ಕೇಚಿತ್ಸಜ್ಜೀಕರ್ತುಂಸಮುತ್ಸುಕಾಃ ||೬೦|| ಸಮ್ಯಕ್ಸಮರ್ಪ್ಯಧೂಪಾಳಿಂ ಸ್ಮೃತ್ವಾಭಕ್ತಗಣಾನ್ಪರೇ | ಕುರ್ವಂತೋಭಕ್ತಸಂಘಾಯ ಕರ್ಪೈರ್ನೀರಾಜನಾಃಪರೇ ||೬೧|| ಪಂಚಭಕ್ಷ್ಯಾಣ್ಯರ್ಪಯಂತ ಸ್ಸದ್ಭಕ್ತಹಿತಕಾಮ್ಯಯಾ | ಕರ್ಪೂರಯುತತಾಂಬೂಲಾನ್ಯರ್ಪಯಂತಶ್ಚ ಕೇಜನ ||೬೨||

---

ನ್ನೂ, ಪರಿಮಳ ವಸ್ತುಗಳನ್ನೂ, ಬಿಲ್ವಪತ್ರ ಪುಷ್ಪ ತಿಲಾಕ್ಷತೆಗಳನ್ನೂ, ದಶಾಂಗ ಧೂಪಗಳನ್ನೂ, ಬತ್ತಿಯಾರತಿಗಳನ್ನೂ, ಅಂಗವಸ್ತ್ರಗಳನ್ನೂ, ಅನೇಕಾನೇಕವಾಗಿ ಭಕ್ತಶ್ರೇಷ್ಠರ ಗುಂಪಿಗೆ ದಾಸೋಹಂಭಾವದಿಂದ ಸಮರ್ಪಿಸಿ, ಇದರಮೇಲೆ ಯಾರಾರಿಗೆ ಯಾವಯಾವ ಪದಾರ್ಥಗಳು ಬೇಕಾಗಿದ್ದವೋ ಅವನ್ನೆಲ್ಲಾ ವಿಚಾರಿಸಿ ಕೊಟ್ಟು, ಹೀಗೆ ಶಿವರಾತ್ರಿ ವ್ರತಮಹೋತ್ಸವವನ್ನು ನೆರವೇರಿಸಿದನು. ಬಳಿಕ ಭಕ್ತಶ್ರೇಷ್ಠರು ಕೆಲವರು ಶಿವಪೂಜಾಲಯಗಳಲ್ಲಿ ಪಚ್ಚೆಕರ್ಪೂರ ಶ್ರೀಗಂಧ ಕಸ್ತೂರಿ ಮೊದಲಾದುವುಗಳನ್ನೆಲ್ಲಾ ಸೇರಿಸಿ ಅರೆದು ಸಾರಿಸಿ, ಮುತ್ತಿನ ರಂಗವಲ್ಲಿಗಳಿಂದ ನಾನಾ ಚಿತ್ರಬಂಧಗಳನ್ನೂ, ಮೊಗ್ಗೆ ಹೂವು ಪತ್ರ ಓಃಚು ತಾವರೆ ಮೊದಲಾದುವುಗಳನ್ನೂ, ಪಂಚವರ್ಣದ ವಿಚಿತ್ರ ರಂಗವಲ್ಲಿಗಳನ್ನೂ ರಚಿಸುತ್ತಿದ್ದರು. ಇನ್ನು ಕೆಲರು ಸಹಸ್ರಕುಂಭೋದಕದಿಂದ ಧಾರಾಪಾತ್ರಗಳ ಮೂಲಕ ಪರಶಿವನಿಗೆ ಅಖಂಡಾಭಿಷೇಕವನ್ನು ಮಾಡುತ್ತಿದ್ದರು. ಕೆಲರು ೮ ತೆರದ ಪುಷ್ಪಗಳಿಂದರ್ಚಿಸಲಿಕ್ಕೆ ಅಣಿಮಾಡಿಕೊಳ್ಳಲು ತವಕಪಡುತ್ತಿದ್ದರು. ||೬೦|| ಮತ್ತೆ ಕೆಲರು ಭಕ್ತಗಣರನ್ನು ಧ್ಯಾನಿಸುತ್ತ ಧೂಪವನ್ನು ಹಾಕುತ್ತಿದ್ದರು. ಇನ್ನು ಕೆಲರು ಭಕ್ತವೃಂದಕ್ಕೆ ತಮ್ಮ ಕೈಗಳಿಂದಲೇ ಕರ್ಪೂರ ದೀಪವನ್ನು ಬೆಳಗುತ್ತಿದ್ದರು. ಇನ್ನು ಕೆಲರು ಭಕ್ತರಿಗೆ ಪಂಚಭಕ್ಷ್ಯಗಳನ್ನು ಅರ್ಪಣೆಮಾಡುತ್ತಿದ್ದರು. ಕೆಲರು ಸಕರ್ಪೂರ ತಾಂಬೂಲವನ್ನು ಕೊಡುತ್ತಿದ್ದರು. ಕೆಲರು ವಿಧಿವತ್ತಾಗಿ ರಾತ್ರಿಯ ನಾಲ್ಕು ಯಾಮಗಳಲ್ಲೂ

ಕುರ್ವಂತ್ಯೋವಿಧಿವತ್ಕೇಚಿತ್ಪೂಜಾಂ ಯಾಮಚತುಷ್ಟಯೇ । ಕುರ್ವಂತಃ ಪೂಜನಾಂ ಯಾಮೇಷ್ವಷ್ಟಸ್ವೇಕೇ ದಿವಾನಿಶಂ ॥೬೩॥ ಘಟೀಷಷ್ಠ್ಯಾಂ ಪ್ರಕುರ್ವಂತೋ ಘಟಿಕಾವಸರಾನ್ಪರೇ । ಪ್ರಕಲ್ಪ್ಯಾಷ್ಟೋತ್ತರಶತಾವಸರಾನ್ಕೇಚನಾಪರೇ ॥೬೪॥ ಅಷ್ಟೋತ್ತರಸಹಸ್ರಾವಸರಾನ್ನಿಷ್ಠಾಸಮನ್ವಿತಾಃ । ಏಕಾಗ್ರಮನಸಾ ಕೇಚಿತ್ಕುರ್ವಂತ ಶ್ಶಿವಪೂಜನಾಂ ॥೬೫॥ ಕ್ರಿಯಮಾಣಾರ್ಚನಾಚಾಪಸಾರ್ಯಮಾಣಾರ್ಚನಾ ಪುನಃ । ವಿಧಾತುಮರ್ಚನಾ ಚಾಪಸಾರ್ಯಮಾಣಾರ್ಚನಾಪುನಃ । ವಿಧಾತುಮರ್ಚನಾಂ ಸಜ್ಜೀಕ್ರಿಯಮಾಣಾ ಯಥಾಭವೇತ್ ॥೬೬॥ ಅವಿಚ್ಛಿನ್ನಂಪ್ರಕುರ್ವಂತ ಇತರೇ ಶಂಕರಾರ್ಚನಾಃ । ಪ್ರಕುರ್ವಂತಷ್ಷೋಡಶೋಪಚಾರೈಃ ಕೇಚಿಚ್ಛಿವಾರ್ಚನಂ ॥೬೭॥ ಋಗ್ವೇದಸ್ಯಾದಿಮೈಸ್ಸೂಕ್ತೈ ಬ್ರಾಹ್ಮಣಸ್ಯಾಂತಿಮೈರಪಿ । ರುದ್ರಸಂಸ್ತವಸೂಕ್ತೈಶ್ಚ ಸಂಸ್ತವಂ ತಸ್ತಥಾಪರೇ ॥೬೮॥ ಸರುದ್ರನ್ಯಾಸಮೇಕಾದಶಾನುವಾಕವಿಧಾನತಃ । ಶಕ್ತಿಚ್ಛಂದೋದೈವತರ್ಷಿ ಬೀಜಾಕ್ಷರಸಮನ್ವಿತಾನ್ ॥೬೯॥ ತತ್ರಚ್ಛಾಂತಿಸಮಾಯುಕ್ತಾಂ ಚ್ಛತರುದ್ರಸಮನ್ವಿತಾನ್ । ಲಸತ್ಪುರುಷಸೂಕ್ತೇನ ಯಜುಸ್ಸೂಕ್ತೈಶ್ಚಸಂಯುತಃ ॥೭೦॥ ಪಠಂತಸ್ಸಂಸ್ತುತಿಂ ಭವ್ಯಾಂ ಪ್ರಕುರ್ವಂತಸ್ತಥಾಪ

---

ಪೂಜೆಯನ್ನು ನಡೆಯಿಸುತ್ತಿದ್ದರು. ಕೆಲರು ಆ ದಿವಸ ಹಗಲು ೪ ಯಾಮಗಳಲ್ಲೂ ರಾತ್ರಿ ೪ ಯಾಮಗಳಲ್ಲೂ ಸಾಂಗ ಶಿವಪೂಜೆಗಳನ್ನು ನಡೆಯಿಸುತ್ತಿದ್ದರು. ಕೆಲರು ಆ ಒಂದುದಿವಸದಲ್ಲೇ ಆರಾರು ಗಳಿಗೆಗೆ ಒಂದೊಂದುಸಲದಂತೆ ವಿಭಾಗಿಸಿಕೊಂಡು ಪೂಜಿಸುತ್ತಿದ್ದರು. ಕೆಲವರು ೧೦೮ ಸಲವಾಗಿ ವಿಭಾಗಿಸಿಕೊಂಡು ಪೂಜಿಸುತ್ತಿದ್ದರು. ಮತ್ತೆ ಕೆಲರು ೧೦೦೮ ಸಲ ಶಿವಪೂಜೆಯನ್ನು ಏಕಾಗ್ರ ಮನಸ್ಸಿನಿಂದ ಮಾಡುತ್ತಿದ್ದರು. ॥೬೫॥ ಇನ್ನು ಕೆಲಕೆಲರು ಆಗತಾನೇ ಪೂಜೆಮಾಡುತ್ತಲೂ, ಪೂಜೆ ಮುಗಿದ ಸಾಮಗ್ರಿಗಳನ್ನೆಲ್ಲಾ ಸರಿಸುತ್ತಲೂ, ಮುಂದಣ ಪೂಜೆಗೆ ಅಣಿಮಾಡಿಕೊಳ್ಳುತ್ತಲೂ ಇದ್ದರು. ಕೆಲರು ಅಖಂಡವಾಗಿ ಪೂಜೆಯನ್ನು ಸಾಗಿಸುತ್ತಿದ್ದರು. ಕೆಲರು ಷೋಡಶೋಪಚಾರಗಳಿಂದ ಶಿವಪೂಜೆಯನ್ನು ಮಾಡುತ್ತಿದ್ದರು. ॥೬೭॥ ಕೆಲರು ಋಗ್ವೇದದ ಮೊದಲ ಸೂಕ್ತಗಳಿಂದಲೂ, ಬ್ರಾಹ್ಮಣದ ಕಡೆಯ ಸೂಕ್ತಗಳಿಂದಲೂ, ರುದ್ರಸ್ತವ ಸೂಕ್ತಗಳಿಂದಲೂ, ಶಿವಸ್ತೋತ್ರ ಮಾಡುತ್ತಿದ್ದರು. ಕೆಲವರು ಏಕಾದಶಾನುವಾಕವಿಧಾನದಿಂದ ರುದ್ರನ್ಯಾಸವನ್ನು ಮಾಡುತ್ತಲೂ, ಋಷಿ ಛಂದಸ್ಸು ದೇವತೆ ಬೀಜ ಕೀಲಕ ಮೊದಲಾದುವುಗಳೊಡನೆ ಕೂಡಿ ಆಯಾ ಶಾಂತಿಸಮೇತವಾಗಿ ಶತರುದ್ರ ಜಪಾಭಿಷೇಕಗಳನ್ನು ಮಾಡುತ್ತಲೂ ಇದ್ದರು. ಕೆಲರು ಪುರುಷಸೂಕ್ತಗಳಿಂದಲೂ, ಯಜುಸ್ಸೂಕ್ತಗಳಿಂದಲೂ ಕೂಡಿ ಶಿವಸ್ತುತಿಯನ್ನು ಮಾಡುತ್ತಿದ್ದರು. ಕೆಲವರು ಭಕ್ತಿಧುರೀಣರು ಋಗಾದಿ ಚತುರ್ವೇದಗಳಲ್ಲೂ ಇರುವ ರುದ್ರ

ರೇ | ವೇದಸಾಮರಹಸ್ಯಾದಿ ನವಸಾಮಸು ಸಂಸ್ಥಿತಾನ್ ||೬೧|| ರುದ್ರಸೂಕ್ತಜಯಾನ್ಕೇಚಿತ್ಪಠಂತೋ ಭಕ್ತಿತತ್ಪರಾಃ | ಅನ್ಯೇಽಥರ್ವಶಿಖಾದೀನಿ ರುದ್ರಸಂಸ್ತವನಾನ್ಯಪಿ ||೬೨|| ಪಠಂತಃ ಪರಯಾಭಕ್ತ್ಯಾ ಕೀರ್ತಯಂತೋ ಮಹೇಶ್ವರಂ | ಬಾಣಗದ್ಯಂ ಪಂಚಗದ್ಯಾಕ್ಷರಗದ್ಯಾದಿಕಾನಿಚ ||೬೩|| ಶಾರಭಂ ರುದ್ರಕವಚಂ ನೀಲಕಂಠಸ್ತವಂತಥಾ | ವ್ಯಾಸಾಷ್ಟಕಂ ಧನ್ಯಗಣಾಡಂಬರಂಚ ಹಲಾಯುಧಂ || ೬೪ || ಭೃಂಗಿಸ್ತವಂ ಮಲ್ಲಣಂಚ ಮಾಯೂರಂಸ್ತವಮುತ್ತಮಂ | ಸ್ತವಂಮಲಯರಾಜೀಯಂ ಮಹಿಮಸ್ತವಮುತ್ತಮಂ ||೬೫|| ಶ್ರುತಿಮೂಲಂ ಮಹಾಸ್ತೋತ್ರಂ ಶತಕಂ ಮೌನಿದಂಡಕಂ | ಶ್ರೀಗೀತಸೂಕ್ತಾನಿ ಶಿವತತ್ವಸಾರ ಮನಾಮಯಂ ||೬೬|| ಶ್ರೀಮಹಾನಾಟಕ ಮುದಾಹರಣಂ ಮುಕ್ತಿಕಾವಲೀಃ | ಹರಸಾಹಸ್ರನಾಮಾನಿ ಶ್ರೀರುದ್ರಮಹಿಮಸ್ತುತಿಂ || ೬೭ || ಹರಲೀಲಾಸ್ತುತಿಂ ದೀಪಕಲಿಕಾಂ ಸಮುದಂಚಿತಾಂ | ಪುರಾತನೋಪರಚಿತಾಷ್ಟಕಾನಿ ವಿವಿಧಾನಿಚ ||೬೮|| ಪಠಂತೋಭಕ್ತಿಸಂಯುಕ್ತಾ ಸ್ಸ್ತುವಂತಃ ಪರಮೇಶ್ವರಂ | ತ್ರಿಷಷ್ಟಿಭಕ್ತಚಾರಿತ್ರಂ ದಾಸಯ್ಯಚರಿತಂತಥಾ || ೬೯ || ಸದ್ಭಕ್ತಿಯುಕ್ತ್ಯಾ ಬಸವಪುರಾಣಂ ಮಧುರಶ್ರುತಿಂ | ಪಠಂತಃಪರಯಾಪ್ರೀತ್ಯಾ ಬಹುರಾಗವಿಚಿತ್ರಿತಂ || ೭೦ || ಬಸವೇಶೋಪರಚಿತಗೀತಾ ನ್ಯಾದ್ಯೈಸ್ತಥಾಪರೈಃ | ವಿನಿರ್ಮಿತಾನಿ ಗೀತಾನಿ ಗಾಯಂತಃ ಕೇಚಿದುಚ್ಚಕೈಃ ||೭೧|| ಸ್ತುವಂತೋವಾ

---

ಸೂಕ್ತಗಳನ್ನು ಹೇಳಿಕೊಂಡು ಶಿವಕೀರ್ತನೆಯನ್ನು ಮಾಡುತ್ತಿದ್ದರು. ಕೆಲವರು ಬಾಣಗದ್ಯ, ಪಂಚಗದ್ಯ, ಅಕ್ಷರಾಂಕಗದ್ಯ, ಶರಭೋಪನಿಷತ್ತು, ರುದ್ರಕವಚ, ನೀಲಕಂಠಸ್ತೋತ್ರ, ವ್ಯಾಸಾಷ್ಟಕ, ಗಣಾಡಂಬರಸ್ತವ, ಹಲಾಯುಧಸ್ತೋತ್ರ, ಭೃಂಗಿಸ್ತೋತ್ರ, ಮಲ್ಲಣಸ್ತೋತ್ರ, ಮಯೂರಸ್ತೋತ್ರ, ಮಲಯರಾಜಸ್ತೋತ್ರ, ಮಹಿಮ್ನಸ್ತೋತ್ರ, ಶ್ರುತಿಮೂಲಸ್ತೋತ್ರ, ಮೌನಿದಂಡಕ, ಶತಕ, ಶ್ರೀಗೀತಸೂಕ್ತ, ಶಿವತತ್ವಸಾರ, ಅನಾಮಯಸ್ತೋತ್ರ, ಮಹಾನಾಟಕವೃತ್ತ, ಉದಾಹರಣಗದ್ಯ, ಮುಕ್ತಿಕಾವಲಿ, ಶಿವಸಹಸ್ರನಾಮಗಳು, ರುದ್ರಮಹಿಮಸ್ತೋತ್ರ, ಹರಲೀಲಾಸ್ತುತಿ, ದೀಪಕಲಿಕಾಸ್ತುತಿ, ಇವುಮೊದಲಾದ ಪುರಾತನರು ರಚಿಸಿದ ನಾನಾವಿಧಾಷ್ಟಕಗಳನ್ನು ಭಕ್ತಿಯಿಂದ ಹೇಳಿಕೊಂಡು ಪರಶಿವನನ್ನು ಸ್ತುತಿಸುತ್ತಿದ್ದರು. ||೬೮|| ಕೆಲರು ೬೩ಪುರಾತನರ ಚರಿತ್ರಗಳನ್ನೂ, ಶಂಕರದಾಸಯ್ಯನ ಚರಿತ್ರವನ್ನೂ, ಬಸವಪುರಾಣವನ್ನೂ, ಮನೋಹರವಾದ ಕಂಠಸ್ವರದಿಂದ ಓದುತ್ತಿದ್ದರು. ಕೆಲವರು ಬಸವೇಶರಚಿತ ಗೀತಗಳನ್ನೂ, ಪುರಾತನ ಭಕ್ತರನೇಕರು ಮಾಡಿರುವ ಗೀತಗಳನ್ನೂ, ನಾನಾ ರಾಗಗಳಿಂದ ಕೂಡಿಸಿ ಅತ್ಯಂತ ಪ್ರೀತಿಯಿಂದ ಗಟ್ಟಿಯಾಗಿ ಹಾಡುತ್ತಿದ್ದರು. ||೭೧|| ಕೆಲವರು ಪದಗಳನ್ನು ಹಾಡುವ ಶ್ರಮವ

ಗ್ಘಿರೇವಾನ್ಯೇ ಪಾಶಗಾನಾಕೃತಶ್ರಮಾಃ | ತದಾಲಾಪೇಷ್ವಪಿ ಮನಸ್ಯನಾಲೀ ಢೇಮುಹುರ್ಮುಹುಃ ||೮೬|| ಮಲ್ಲಯ್ಯ ಮಲ್ಲಯೇತ್ಯುಚ್ಚೈ ರ್ವದಂತಸ್ತತ್ರ ಕೇ ಚನ | ಉಘೇ ಜಯಜಯೇತ್ಯುಚ್ಚೈ ಸ್ಸಂವದಂತಸ್ತಥಾಪರೇ ||೮೩|| ಆಲೋ ಕಶಬ್ದಮಪರೇ ವದಂತಃ ಪ್ರತಿಹಾರಿವತ್ | ಪಶ್ಯನ್ತೋನಿಸ್ಪನಾಸ್ತೂಷ್ಣೀಂ ಕೇ ಚಿದ್ಗದ್ಗದಕಂಧರಾಃ ||೮೪|| ವಿಸಿಸ್ತ್ರತಾನಂದಜಾಪ್ಪಾಃ ಪ್ರನೃತ್ಯಂತಸ್ತಥಾಪ ರೇ | ವಲ್ಗನಶ್ರಾಂತಚರಣಾಃ ಪತಂತೋಭುವಿಕೇಚನ ||೮೫|| ಪತಂತೋನರ್ತ ನಸುಖಾ ದ್ವಿಸ್ಮೃತಾಂಗಾಸ್ತಥಾಪರೇ | ಕರಾಸ್ಫೋಟಂ ಪ್ರಕುರ್ವತ್ಸು ಕೇಷು ಚಿತ್ಪರಿತೋಷತಃ ||೮೬|| ಸಮುತ್ಥಾಯಪ್ರನೃತ್ಯಂತೋ ಭಕ್ತ್ಯಾವೇಶಾದ್ಯಥಾ ರುಚಿ | ಕೈಶ್ಚಿದ್ದ್ರಾಮಿಡಗೀತೇಷು ಗೀಯಮಾನೇಷುಸಾದರಂ ||೮೭|| ಪ್ರನೃ ತ್ಯಂತೋವಿಕಾರೇಣ ಕೇಚಿದಾನಂದನಿರ್ಭರಾಃ | ಸ್ವಸ್ವದೇಶೀಯಗೀತೇಷು ಗೀಯಮಾನೇಷುಹರ್ಷತಃ ||೮೮|| ಸ್ವಸ್ವದೇಶೀಯಮಾರ್ಗೇಣ ಪ್ರನೃತ್ಯಂತ ಸ್ತಥಾಪರೇ | ಭ್ರಮರೀಮುಖ್ಯಗತಿಭಿಃ ಪ್ರನೃತ್ಯಂತಶ್ಚ ಕೇಚನ ||೮೯|| ಪುರಾ ತನಪ್ರಮಥಸಚ್ಚರಿತ್ರಾಣ್ಯಪರೇ ಪುನಃ | ನಾಟಯಂತೋ ಬಹುವಿಧಂ ನಾನಾ ರಸಮನೋಹರಂ ||೯೦|| ವರಾಂಗರಸಸಂಪೋಹ ಕಲಾಲಂಕಾರಭಾಸುರಂ |

---

ನ್ನೇ ಬಿಟ್ಟು ಬರಿಯ ಮಾತುಗಳಿಂದಲೇ ಸ್ತುತಿಸುತ್ತಿದ್ದರು. ಕೆಲರು ಹಲವು ತೆರದ ಅಂಥ ಮಾ ತುಗಳನ್ನಾಡಿಕೊಂಡು ಸ್ತುತಿಸುವುದರಲ್ಲಿ ಮನಸ್ಸಿಲ್ಲದೆ, ಮಲ್ಲಯ್ಯಾ ಮಲ್ಲಯ್ಯಾ ಎಂದು ಗಟ್ಟಿಯಾಗಿ ಉಚ್ಚರಿಸುತ್ತಲೇ ಸ್ತುತಿಸುತ್ತಿದ್ದರು. ಕೆಲರು ಉಘೇ ಜಯಜಯಾ ಎಂದು ಉದ್ಘೋಷಿಸುತ್ತಿದ್ದರು. ||೮೩|| ಕೆಲವರು ಕಂಚುಕಿಗಳಂತೆ ಪರಾಕುಗಳನ್ನು ಹೇಳುತ್ತಿದ್ದ ರು. ಕೆಲರು ಚಾಂಗು ಭಲರೇ! ಎಂದು ಮೊದಲಾಗಿ ಉಗ್ಗಡಿಸುತ್ತಿದ್ದರು. ಕೆಲರು ಗದ್ಗದ ಕಂ ಠವುಳ್ಳವರಾಗಿ ಕಣ್ಣುಗಳಿಂದ ಆನಂದ ಬಾಷ್ಪಗಳನ್ನು ಸುರಿಸುತ್ತ, ಕುಣಿಯುತ್ತ, ಸುತ್ತಾದು ತ್ತ, ಕಾಲುಗಳು ಸೋತಾಗ ಭೂಮಿಯಮೇಲೆ ಬೀಳುತ್ತ ಇದ್ದರು. ಕೆಲರು ಸಂತೋಷದಿಂದ ಕೈಚಪ್ಪಾಳೆಗಳನ್ನು ಕುಟ್ಟುತ್ತಿದ್ದರು. ಕೆಲರು ಹಾಡುತ್ತ ಕುಳಿತಿದ್ದು ಭಕ್ತ್ಯಾವೇಶಬಂದಕೂ ಡಲೇ ಎದ್ದು ಕುಣಿಯುಲಿಕ್ಕೆ ಆರಂಭಿಸುತ್ತಿದ್ದರು. ಕೆಲರು ಪ್ರೀತಿಯಿಂದ ದ್ರಾವಿಡ ಗೀತಗಳ ನ್ನು ಹಾಡುತ್ತಿದ್ದರೆ ಅದನ್ನು ಕೇಳಿ ಕೆಲವರು ಆನಂದದಿಂದ ವಿಕಾರವಾಗಿ ಕುಣಿಯುತ್ತಿದ್ದರು. ಕೆಲವರು ತಂತಮ್ಮ ದೇಶದ ಗೀತಗಳನ್ನು ಹಾಡಿಕೊಂಡು ತಮ್ಮ ದೇಶದ ಕುಣಿತಗಳನ್ನು ಕುಣಿ ಯುತ್ತಿದ್ದರು. ಕೆಲರು ಗರ್‍ರನೆ ತಿರುಗುವುದು ಬಾಗುವುದು ಮೊದಲಾದ ರೀತಿಗಳ ನರ್ತನವ ನ್ನು ಮಾಡುತ್ತಿದ್ದರು. ಕೆಲವರು ಪುರಾತನ ಪ್ರಮಥರ ಚರಿತ್ರಗಳನ್ನೆ ನಾನಾ ರಸೋಪೇತ ವಾಗಿ ಅಭಿನಯಿಸಿ ಆಡಿ ತೋರಿಸುತ್ತಿದ್ದರು. ||೯೦|| ಕೆಲರು ನಾನಾ ರಸಭಾವಾಲಂಕಾ

ಬಹುರೂಪಜಷಾಸ್ಕೇಚಿ ನ್ನಾಟಯಂತೋಮುದಾನ್ವಿತಾಃ ||೧ || ವಲ್ಗಸ್ಥೈ ರ್ಹಸ್ತಸಂದೋಹೈ ರ್ವಿಚಿತ್ರೈರುಪಶೋಭಿತಾಃ | ಪ್ರದರ್ಶಯಂತೋದೇಶೀಯ ನೃತ್ಯಂಕೇಜನದುಷ್ಕರಂ ||೧೨|| ಸುರಸ್ತ್ರಿಯ ಇವವ್ಯೋಮ್ನಿ ನೃತ್ಯಂತೋ ದಾರುಷೂಚ್ಚಕೈಃ | ಪರೇರಜ್ಜುಷುನೃತ್ಯಂತೋ ಗಗನೇ ಪಕ್ಷಿಣೋಯಥಾ ||೧೩|| ಸಾಲಭಂಜೀಭಿರಪರೇ ಭಾರತಾದಿಕಥಾಚಯಾನ್ | ನಾಟಯಂತಶ್ಚಿತ್ರತರಾ ಪ್ರತಿಸೀರಾಂತರೇಮುದಾ ||೧೪|| ಸ್ತಂಭಸೂತ್ರೇ ಬಹುಚಿತ್ರಸಾಲಭಂಜೀರಥಾಪರೇ | ತದಾ ಜಾಗರಣಂ ಸಮ್ಯಕ್ಚಕ್ರುಸ್ಸರ್ವೇಸಮುತ್ಸುಕಾಃ ||೧೫|| ಏವಂಜಾಗರಣಂ ತೇಷು ಕುರ್ವಾಣೇಷ್ವತಿಹರ್ಷತಃ | ತತ್ರಕಿನ್ನರಗಂಧರ್ವಯಕ್ಷವಿದ್ಯಾಧರಾದಯಃ ||೧೬|| ಅಕ್ರೀಡನ್ನತಿಹರ್ಷೇಣ ಗತ್ವಾಪ್ರಚ್ಛನ್ನವೇಷತಃ |

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ಪರಿಷದೋ ದೋಸಮಾರ್ಯಸ್ಯಚ ಶಿವರಾತ್ರಿ ಜಾಗರಣಕಥನಂನಾಮ ಚತುರ್ದಶೋಽಧ್ಯಾಯಃ.

---

ರಾದಿ ಶೋಭಿತವಾಗಿರುವಂತೆ ನಾನಾ ವೇಷಗಳನ್ನು ಧರಿಸಿ ತೋರಿಸುತ್ತಿದ್ದರು. ಕೆಲಕೆಲರು ಹಸ್ತಪಾದಾದಿಗಳ ತಿರುಗಿಸುವ ಚಮತ್ಕಾರಗಳಿಂದ ಕೂಡಿ ಅಸಾಧ್ಯವಾದ ದೇಶೀಯ ನರ್ತನಗಳನ್ನು ಮಾಡುತ್ತಿದ್ದರು. ಕೆಲರು ದೇವತಾಸ್ತ್ರೀಯರಂತೆ ಆಕಾಶವಲ್ಲಿ ಅಷ್ಟ ಮರಗಳ ಮೇಲೆ ನಿಂತು ಕುಣಿಯುತ್ತಿದ್ದರು. ಕೆಲರು ಅಂತರಿಕ್ಷದಲ್ಲಿ ಹಕ್ಕಿಗಳಹಾಗೆ ಹಗ್ಗಗಳ ಮೇಲೆ ಕುಣಿದಾಡುತ್ತಿದ್ದರು. ಕೆಲರು ಬೊಂಬೆಗಳ ಮೂಲಕ ಭಾರತದ ಕಥೆ ಮೊದಲಾದುವುಗಳನ್ನು ತೆರೆಗಳೊಳಗೆ ಆಶ್ಚರ್ಯಕರವಾಗಿ ಆಡಿಸುತ್ತಿದ್ದರು. || ೧೪ || ಇನ್ನು ಕೆಲರು ಕಂಬಕ್ಕೆ ಸೂತ್ರದ ಬೊಂಬೆಗಳನ್ನು ಕಟ್ಟಿ ಕುಣಿಸುತ್ತಿದ್ದರು. ಆಗ ಪರಿಸೆಯ ಸಕಲಜನರೂ ಉತ್ಸಾಹದಿಂದ ಇವುಗಳನ್ನೆಲ್ಲಾ ಕೇಳುತ್ತ ನೋಡುತ್ತ ಚೆನ್ನಾಗಿ ಜಾಗರಣವನ್ನು ಮಾಡಿದರು. ||೧೫|| ಹೀಗೆ ಆ ಗಿರಿಯಲ್ಲಿ ಸಕಲರೂ ಸಂತೋಷದಿಂದ ಜಾಗರಣೆ ಮಾಡುತ್ತಿರಲು, ಕಿನ್ನರ ಗಂಧರ್ವಾದಿ ದೇವತೆಗಳು ತಂತಮ್ಮ ವೇಷಗಳನ್ನು ಮರೆಯಿಸಿಕೊಂಡು ಬಂದು, ಅವರೂ ಸಂತೋಷದಿಂದ ವಿಹರಿಸಿದರು. ||೧೬||

ಎಂಬಿಲ್ಲಿಗೆ ಪರ್ವತಪ್ರಕರಣದಲ್ಲಿ ೧೪ನೆ ಅಧ್ಯಾಯವು ಮುಗಿದುದು.

---

## ಅಥ ಷೋಡಶೋಽಧ್ಯಾಯಃ.

### ಪ್ರಮಥಾದಿ ಸಕಲಭಕ್ತಜನಾನಾಂ ಶ್ರೀಮಲ್ಲಿಕಾರ್ಜುನೋಪಾಸನಕಥನಂ.

ಅಥ ಭೃಂಗೀಶ್ವರಸ್ತತ್ರ ಸೇವಾಂಕರ್ತುಂಮಹೋತ್ಸುಕಃ | ಶೀರ್ಷೋರಃಕರ್ಣದೋಃಕಂಠೇ ಶಿಖಾಯಾಂ ಪಾದಯೋರಪಿ || || ಧೃತ್ವಾವರಾಟಿಕಾಮಾಲಾಃ ಕಲಶಾಂಸ್ತ್ವಾಮರಾಣಿಚ | ಬಹುವರ್ಣೈರ್ವಿರಚನೈರುಪರ್ಯಾಲಿಪ್ತಭಸ್ಮನಃ ||೨|| ರಣನ್ನೂಪುರಯುಕ್ತೇನ ಕಿಂಕಿಣೀನಾಂ ಕದಂಬಕೈಃ | ಆಬದ್ಧರತ್ನಸ್ವರ್ಣಾಂಬುಚಿತ್ರಿತಾರ್ಧೋರುಕೇನಚ ||೩|| ಉಪಾಕ್ಷಿಭ್ಯಾಂ ಪುಷ್ಪಮಾಲ್ಯೈರ್ದಂತಕಾಂತಿಭಿರಂಚಿತಃ | ಅತ್ಯದ್ಭುತೋತ್ಸವಾಕ್ರಾಂತಃ ಪ್ರವಿಶ್ಯಾಸ್ಥಾನಮಂಟಪಂ ||೪|| ನಿರೀಕ್ಷ್ಯ ಜನಸಂಘೇಷು ಪರಿತೋಷಂ ಪ್ರಯಾಯಿಷು | ಅನುಕೂಲಾನೇಕವಾದ್ಯಪರಿಮೇಲನಭಾಸ್ವರಂ ||೫|| ನಿರ್ಗತ್ಯಾರಭಟೀವೃತ್ತ್ಯಾ ಶನೈರ್ಯವನಿಕಾಂತರಾತ್ | ಅಕೃತೇನರ್ತನೇಪ್ಯಗ್ರೇಽಭಿನಯೇ ಸಮುದಂಚತಿ ||೬|| ಅದೃಷ್ಟಾಪ್ಯಪಿಪ್ರಸನ್ನೇಷು ಜನಸಂಘೇಷುವಿಸ್ಮಯಂ | ಸಮುನ್ನಮ

---

## ೧೬ನೆ ಅಧ್ಯಾಯವು.

### ಪ್ರಮಥಾದಿಗಳೂ ಸಕಲ ಭಕ್ತಜನ ಶ್ರೇಣಿಗಳೂ ಶ್ರೀಗಿರಿ ಮಲ್ಲಿಕಾರ್ಜುನ ಸೇವೆಯನ್ನು ಮಾಡಿದುದರ ವರ್ಣನೆ.

ಬಳಿಕ ಆ ಶ್ರೀಗಿರಿಯಲ್ಲಿ ಭೃಂಗೀಶ್ವರನು ಮಲ್ಲಿಕಾರ್ಜುನೇಶ್ವರನ ಸೇವೆಯನ್ನು ಮಾಡುವುದಕ್ಕಾಗಿ ತಲೆ ಎದೆ ಕಿವಿ ತೋಳು ಕೊರಲು ಜುಟ್ಟು ಕಾಲು ಈ ಸ್ಥಲಗಳಲ್ಲೆಲ್ಲಾ ಕವಡೆಯ ಸರಗಳನ್ನೂ ಕುಪ್ಪಿಗೆಗಳನ್ನೂ ಚಾಮರಗಳನ್ನೂ ಅಲ್ಲಲ್ಲಿಗೆ ಧರಿಸಿಕೊಂಡು, ಮೈಗೆಲ್ಲಾ ಭಸ್ಮವನ್ನು ತೊಡೆದು, ಅದರಮೇಲೆ ನಾನಾ ಬಣ್ಣದ ರಂಗುಗಳನ್ನು ವಿಚಿತ್ರತರವಾಗಿ ಬಳಿದುಕೊಂಡು, ಕಾಲುಗಳಿಗೆ ಧ್ವನಿಮಾಡುತ್ತಿರುವ ಗಗ್ಗರಗಳನ್ನೂ ಗೆಜ್ಜೆಗಳನ್ನೂ ಕಟ್ಟಿ, ಜರತಾರಿಯ ಕೆಲಸದಮೇಲೆ ರತ್ನಗಳನ್ನು ಕೆತ್ತಿರುವ ಚಲ್ಲಣವನ್ನು ತೊಟ್ಟು ||೩|| ಕನ್ನಡಕವನ್ನು ಹಾಕಿಕೊಂಡು, ಹೂವಿನ ಮಾಲೆಗಳನ್ನು ಕೊರಳಲ್ಲಿ ಧರಿಸಿ, ಬಿಳಿಪಾದ ಹಲ್ಲುಗಳ ಕಾಂತಿಯನ್ನು ಹೊರಸೂಸುತ್ತ, ಆಶ್ಚರ್ಯಕರವಾದ ಉಲ್ಲಾಸದಿಂದ ಸಭಾಮಂಟಪಕ್ಕೆ ಬಂದು, ಅಲ್ಲಿರುವ ಜನರೆಲ್ಲಾ ತನ್ನನ್ನು ನೋಡಿ ಆನಂದಿಸುತ್ತಿರಲು. ತನ್ನ ನರ್ತನಕ್ಕೆ ಅನುಕೂಲವಾಗಿ ಹಿಮ್ಮೇಳದವರು ವಾದ್ಯಗಳನ್ನು ಶ್ರುತಿಗೂಡಿಸಿಕೊಳ್ಳಲು, ತೆರೆಯೊಳಗಿಂದ ಆರಭಟೀವೃತ್ತಿಯನ್ನು (ರಸಾವಸ್ಥಾಸೂಚಕವಾದ ಅರ್ಥ ವ್ಯಾಪಾರ ಭೇದವನ್ನು) ಅನುಸರಿಸಿ ಮೆಲ್ಲನೆ ಹೊ

ಷ್ಪುನಸ್ತಿಷ್ಠಂ ಸ್ತ್ರಿಭಂಗ್ಯಾಕಾರತೋ ಮುದಾ ॥ ೭ ॥ ಪಶ್ಯನ್ಸಮಾಲೋಕ್ಯ
ಸಭಾಂ ದರಹಾಸಮುಖೋಭವನ್ | ಅಂಗಸ್ಪಂದೇಸ್ತೈವಗತೀ ಭ್ರೂಯುಗೇನ್ಸ್ವೈ
ವನರ್ತನಂ ॥ ೮ ॥ ಕಟಾಕ್ಷದೃಷ್ಟ್ಯೈವಲಯಾಂಶ್ಚಿತ್ತೋಲ್ಲಾಸೇನರಂಜನಂ |
ಪ್ರದರ್ಶಯನ್ನಂಗುಲೀಶ್ಚ ಸ್ಫೋಟಯನ್ ಕಂಪಯಂಶ್ಛಿರಃ ॥೯॥ ವಹಣಿಂಚಾ
ಲಿಸುಗತೀ ವಲಿಂ ಪದಗತಿಂಪುನಃ | ಧಾಳಂ ಬಹುಗತಿಂ ಲಾಗುಪಂಚರಿಭ್ರಮರೀ
ರಪಿ ॥೧೦॥ ಪ್ರದರ್ಶಯಂಸ್ತನುಗತಿಸ್ಸ್ವರಾಣಾಮಪಿ ವಂಚನಾಃ | ತಾಲವಾ
ದ್ಯಸ್ಫುರದ್ಭಾವಾಲಂಕಾರಘಟನಾಸ್ತತಃ ॥ ೧೧ ॥ ಪಾದಾಭ್ಯಾಂ ಶಬ್ದಶೃಂಗಾರ
ಮನುಕುರ್ವನ್ಮನೋಹರಂ | ಚಲಯನ್ನೂಪುರಯುಗ ಮೋಹೋ ಇತಿ ಮುಹು
ರ್ವದನ್ ॥೧೨॥ ಪ್ರಗಾಯನ್ಗತಿಸಂಗೋಹಂ ಮಿಳಿತ್ವಾಶ್ರುತಿಸಂಹತಿಂ | ಸಂ
ದಿಹಾನಶ್ಚ ಚರಣೌ ಸ್ಥಾಪಿತುಂ ಧರಣೀತಲೇ ॥ ೧೩ ॥ ಮುಹುಸ್ಸಮಾನಮುಸ್ಪ
ಶ್ಯಾದುಪನೇತ್ರೇ ಪ್ರದರ್ಶಯನ್ | ಉಲ್ಲಾಸಯುಗ್ದಾಂತಪಙ್ಕ್ತಿಂ ಧ್ವನಂಸ್ತಿಷ್ಠನ್ಸ
ವಿಭ್ರಮಂ ॥೧೪॥ ಸ್ರಂಸಮಾನಪದೋ ದೀರ್ಘಪದಂಗಚ್ಛನ್ಜನಾವಲೇಃ | ಮ

---

ರಟು, ಇನ್ನೂ ನಾಟ್ಯವನ್ನು ಮಾಡದಿದ್ದರೂ ಮುಂಗಡೆಯಲ್ಲಿ ಅಭಿನಯವು ನಡೆದಂತೆ ಕಾಣು
ತ್ತಿರಲು, ನಾಟ್ಯವನ್ನು ಇನ್ನೂ ನೋಡದೆ ಇದ್ದರೂ ಜನರು ಆಶ್ಚರ್ಯಗೊಳ್ಳುತ್ತಿರಲು, ಸಂತೋ
ಷದಿಂದ ಹಾರಿ, ಮುಂದಕ್ಕೆ ಬಂದು, ತ್ರಿಭಂಗಿ (ಮೂರುತೆರನಾಗಿ ಉರುಗಿದ ಶರೀರದಿಂದ)
ನಿಂತು, ಮುಗುಳ್ನಗೆಗೂಡಿ ಸಭೆಯನ್ನೆಲ್ಲಾ ನೋಡಿ, ನಿಂತ ಕಡೆಯಲ್ಲೇ ಅವಯವಗಳನ್ನು
ಕುಲಿಕಿಸುವುದರಿಂದ ತಾಳಗತಿಗಳನ್ನೂ, ಹುಬ್ಬನ್ನು ಕುಣಿಸುವುದರಿಂದಲೇ ನರ್ತನವನ್ನೂ, ಕಡೆ
ಗಣ್ಣನೋಟದ ಚಲನೆಯಿಂದಲೇ ತಾಳಲಯಗಳನ್ನೂ, ಮನೋಲ್ಲಾಸದಿಂದಲೇ ರಂಜನೆಯನ್ನೂ
ಉಂಟುಮಾಡುತ್ತ, ಬೆರಳುಗಳನ್ನು ಚಟಚಟವಾಗಿ ಮುರಿಸುತ್ತ, ಮಂಡೆಯನ್ನು ಒಲೆಯುತ್ತ,
ವಹಣಿ, ಚಾಲಿ, ವಲಿ, ಎಂಬುದೇ ಮೊದಲಾದ ಭೇದಗಳ ಪದಗತಿಗಳನ್ನಿಡುತ್ತ, ಧಾಳ, ಬಹುಗತಿ,
ಲಾಗು, ಪಂಚರಿ, ಭ್ರಮರಿ ಎಂಬ ವಿವಿಧವಾದ ಕುಣಿತದ ರೀತಿಗಳನ್ನು ತೋರಿಸುತ್ತ, ॥೧೦॥
ದೇಹಗತಿಯ ಮತ್ತೂ ಷಡ್ಜಾದಿ ಸ್ವರಗಳ ವಂಚನಾಕ್ರಮಗಳನ್ನು ತೋರಿಸಿ, ತಾಳಗಳಿಗೂ
ವಾದ್ಯಧ್ವನಿಗೂ ಮುಖರಸಕ್ಕೂ ಮತ್ತೂ ಆಲಂಕಾರಕ್ಕೂ ಸಾಮರಸ್ಯವನ್ನುಂಟುಮಾಡಿ, ಹಜ್ಜೆ
ಯಿಡುವುದರಿಂದ ತಾಳಾದಿ ವಾದ್ಯಧ್ವನಿಗಳ ಸೊಂಪನ್ನು ಮನೋಹರವಾಗಿ ಅನುಸರಿಸಿ ಕುಣಿಯು
ತ್ತ, ಬಾರಿಬಾರಿಗೂ ಓಹೋ ಎಂದು ಘೋಷಮಾಡುತ್ತ, ಪಾದಗಳ ಗೆಗ್ಗರಗಳನ್ನು ಕುಲುಕಿ
ಗಲಗಲನೆ ಶಬ್ದಮಾಡಿಸುತ್ತ, ॥೧೨॥ ಶ್ರುತಿಯನ್ನೂ ಪದಗತಿಯನ್ನೂ ಕೂಡಿಸಿ ಬಾಯಿಂದ ಹಾ
ಡುತ್ತ, ಭೂಮಿಯಮೇಲೆ ಪಾದವನ್ನಿಡಲು ಸಂಶಯಪಟ್ಟವನಂತೆ ಪದಗತಿಯನ್ನಿಡುತ್ತ, ಬಾರಿ
ಬಾರಿಗೆ ಹಿಂಗಡೆಗೆ ಬಾಗಿಕೊಳ್ಳುತ್ತ, ಓರೆಗಣ್ಣಿನ ನೋಟಗಳನ್ನು ತೋರಿಸುತ್ತ, ಹಲ್ಲುಗಳನ್ನು
ಕಟಕಟನೆ ಸದ್ದುಮಾಡಿಸುತ್ತ, ಸಡಗರಗೊಂಡು ನಿಲ್ಲುತ್ತ, ಜಾರಿದಂತೆ ಹಜ್ಜೆಗಳನ್ನು ಉದ್ದ

ನಾಂಸ್ತ್ಯಾವರ್ಜಯನ್ವಕ್ತ್ರಂ ತಿರ್ಯಕ್ಕುರ್ವನ್ಪುನಃಪುನಃ || ೧೫ || ಶಂಕಾಂಪ್ರದರ್ಶಯಂಸ್ತೋತೃಷ್ಣೀಂತರ್ಜಯನ್ ಜನಸಂಹತಿಂ | ಸ್ವಕಕ್ಷಾವಾದಯಂಚ್ಛಂಭುಂ ಗಾಯನ್ನಲ್ಲಗ್ನಸತ್ವರಂ || ೧೬ || ಸಜ್ಜೀಕುರ್ವನ್ಸ್ವವೈಷಥ್ಯಂ ಸಮಂತಾದವಲೋಕಯನ್ | ಮುಷ್ಟಿವಮಾರಚ ಯನ್ಸಮ್ಯಗುರಸ್ಸಂಚಲಯನ್ಮುಹುಃ ||೧೭|| ಆಸ್ಫಾಲಯನ್ಭುಜೌ ಪಶ್ಚಾದಾಗಂ ಯತ್ನೇನವಕ್ರಯನ್ | ಪರಸ್ಪರಂ ಸಂಘಟಯನ್ನೂರುಜಂಘೇ ಸಸಂಭ್ರಮಂ || ೧೮ || ಶಿಖಾಂಸಂಚಲಯನ್ನೋಷ್ಠೌವಕ್ರಯನ್ಕಂಧರಾಮಪಿ | ಪ್ರದರ್ಶ್ಯವಿಕೃತಂಸ್ವಾಂಗಾನ್ಯಖಿಲಾಂಶ್ಚ ವಿಡಂಬಯನ್ || ವರಾಟಕಸ್ರಗ್ಭಿರೇವ ತಾಲಮಾನಂ ಪ್ರದರ್ಶಯನ್ | ಭ್ರುವೌಸಂಚಲಯನ್ಗಂಡಸ್ಥಲೇ ಕುರ್ವನ್ಸಮುನ್ನತೇ ||೧೯|| ತಿಷ್ಠನ್ನಾಲೀಢಚರಣೋ ಮುಹುರ್ಝಡಿತಿಲಂಘಯನ್ | ತ್ರಿಧಾಕುಟಿಲತಾಂಗಸ್ಸನ್ಕಂಪಮಾನೋ ವಿಶಂಕಿತಃ ||೨೦|| ಸಂಸ್ತುವನ್ಸ್ವಯಮಾತ್ಮಾನ ಮನ್ಯಸ್ಯಾಸ್ಫಾಲಯನ್ಕರಂ | ಹಸನ್ವಿಜೃಂಭಿತೋಭೂತ್ವಾ ಪರಿಹಾಸವಚೋವದನ್ ||೨೧|| ಕುರ್ವನ್ಕರತಲಾಸ್ಫೋಟಂ ತತ್ರತ್ಯಾನ್ಸಮಧಿಕ್ಷಿಪನ್ | ಇತಸ್ತತಸ್ತದಾಸ್ಥಾನೇ ಪ್ರಧಾವನ್ಲೀಲಯಾನ್ವಿತಃ ||೨೨|| ಸಂ

---

ಧ್ದನಾಗಿ ಹಾಕಿಕೊಂಡು ನಡೆಯುತ್ತ, ನೋಡತಕ್ಕ ಜನರ ಮನಸ್ಸನ್ನೆಲ್ಲಾ ಸೆಳೆದುಕೊಂಡು, ತನ್ನ ಮುಸುಡಿಯನ್ನು ಪದೇಪದೇ ಉರುಗಿಸುತ್ತ, ||೧೫|| ಥಟ್ಟನೆ ದಿಗಿಲುಬಿದ್ದವನಂತೆ ತೋರ್ಪಡುತ್ತ, ಜನರನ್ನು ಹೆದರಿಸುತ್ತ, ತನ್ನ ಕಂಕುಳುಗಳಲ್ಲಿ ಕುಲುಕಿ ಸದ್ದುಮಾಡಿಸುತ್ತ, ಶಿವನನ್ನು ಕುರಿತು ಬಾಯಲ್ಲಿ ಹಾಡುತ್ತ, ಗಿರ್ರನೆ ತಿರುಗುತ್ತ, ತನ್ನ ವೇಷವನ್ನು ಸರಿಮಾಡಿಕೊಳ್ಳುತ್ತ, ಸುತ್ತಲೂ ನೋಡುತ್ತ, ಮುಷ್ಟಿಗಳನ್ನು ಹಿಡಿಯುತ್ತ, ಎದೆಯನ್ನು ಬಾರಿಬಾರಿಗೆ ಕುಣಿಸುತ್ತ, ತೋಳುಗಳನ್ನು ತಟ್ಟುತ್ತ, ಕುಂಡಿಗಳನ್ನು ಉರುಗಿಸುತ್ತ, ತೊಡೆಗಳನ್ನೂ ಮಂಡಿಗಳನ್ನೂ ಒಂದಕ್ಕೊಂದಕ್ಕೆ ಕೂಡಿಸುತ್ತ, ಜುಟ್ಟನ್ನು ಕುಣಿಸುತ್ತ, ತುಟಿಗಳನ್ನೂ ಕೊರಳನ್ನೂ ಉರುಗಿಸುತ್ತ, ತನ್ನ ಸರ್ವಾವಯವಗಳನ್ನೂ ವಿಕಾರವಾಗುವಂತೆ ಮಾಡಿ ತೋರಿಸುತ್ತ, ಜನರನ್ನೆಲ್ಲಾ ಅಣಕಿಸುತ್ತ ||೧೯|| ಕವಡೆಗಳ ಸರಗಳನ್ನು ಕುಲುಕುವುದರಿಂದಲೇ ತಾಳ ಪ್ರಮಾಣವನ್ನು ತೋರಿಸುತ್ತ, ಹುಬ್ಬುಗಳನ್ನು ಕುಣಿಸುತ್ತ, ಕಪೋಲಗಳನ್ನುಬ್ಬಿಸುತ್ತ, ಕಾಲುಗಳನ್ನು ಕಿಸಿದುಕೊಂಡು ನಿಂತಿದ್ದು ಥಟ್ಟನೆ ಹಾರುತ್ತ, ದೇಹವನ್ನು ಮೂರು ಪ್ರಕಾರವಾಗಿ ವಕ್ರಮಾಡುತ್ತ, ಬಲು ಭಯಗೊಂಡವನಂತೆ ನಡುಗುತ್ತ, ತನ್ನನ್ನು ತಾನೇ ಹೊಗಳಿಕೊಳ್ಳುತ್ತ, ಮತ್ತೊಬ್ಬನ ಕೈಯಲ್ಲಿ ತನ್ನ ಕೈಯನ್ನು ಹಾಕಿ ಚಪ್ಪಾಳೆಗುಟ್ಟುತ್ತ, ಕೇಕೆಹಾಕಿ ನಗುತ್ತ, ಹಾಸ್ಯದ ಮಾತುಗಳನ್ನಾಡುತ್ತ, ಕೈಗಳನ್ನು ಚಪ್ಪಟೆ ಹೊಡೆದು ಕುಳಿತಿದ್ದವರನ್ನು ಬೆದರಿಸುತ್ತ, ಆ ಸಭಾಸ್ಥಲದಲ್ಲೆಲ್ಲಾ ಅತ್ತಿತ್ತ ವಿಲಾಸದಿಂದ ಓಡಾಡುತ್ತ, ||೨೧|| ಮಂಡಗಾಲನ್ನೂರಿ ತಿರುಗಾಡುತ್ತ, ಎಳೆವನಂತೆ ತನೆಯುತ್ತ, ಅಂಬೆಗಾಲೂರಿ ಭೂಮಿ

ಚರನ್ ದಾರುಪಾದಾಭ್ಯಾಂ ಪಂಗುವತ್ಪ್ರಚಲನ್ನಪಿ | ಗಚ್ಛನ್ಧರಿತ್ರ್ಯಾಂ ಜಾನುಭ್ಯಾಂ ಸಮುತ್ಥಾಯ ಸಸತ್ವರಂ ||೨೪|| ಆಸೀನಏವ ಪ್ರಚಲನ್ಕುರ್ವನ್ಸ್ದುಷ್ಕರವಲ್ಗನಂ | ಗಚ್ಛನ್ನೇಕಪದೇನೈವ ವಕ್ಷಸಾಚಾತಿಚಿತ್ರಿತಂ ||೨೫|| ಪಾದೇನಾಕ್ರಮ್ಯಗಗನಂ ತಿಷ್ಠನ್ನಪಿ ಸಸತ್ವರಂ | ಭುವಿಪಾದಾಂಗುಷ್ಠಮೇವ ಸನ್ನಿವೇಶ್ಯಪರಿಭ್ರಮನ್ ||೨೬|| ಸಂಸ್ಥಾಪ್ಯಹಸ್ತಮವನೌ ಚಕ್ರವಚ್ಚಪರಿಭ್ರಮನ್ | ಅಧೋನ್ಯಸ್ತಶಿರೋಭೂತ್ವಾ ಭ್ರಮಿಂಕುರ್ವನ್ನನೇಕಧಾ ||೨೭|| ನೃತ್ಯನ್ಮಯೂರವದ್ಭೃಂಗಇವೋಪರಿ ಪರಿಭ್ರಮನ್ | ಸಶಂಕೋಮತ್ಸ್ಯವಜ್ಜಲ್ಪಂ ಶುಕವತ್ಕಲಹಂಸವತ್ ||೨೮|| ಗಚ್ಛನ್ವದನ್ಕೋಕಿಲವನ್ಮೃಗೀವ ಪ್ರವಿಲೋಕಯನ್ | ಸಲೀಲಂಗಜವದ್ಗಚ್ಛನ್ ಸ್ಕೃಷ್ಣಸಾರಇವೋತ್ಪತನ್ || ೨೯ || ಧ್ವನನ್ ಶಾರ್ದೂಲವದ್ಗೃಹ್ಣನ್ ಕೇಸರೀವ ಪುನರ್ದೃಢಂ | ಭಟವದ್ದರ್ಶಯಂಚ್ಛಸ್ತ್ರಗ್ರಹಣಾಭಿನಯಂ ಮುಹುಃ ||೩೦|| ಕಪಿವದ್ವಿಕೃತಾಂಗಾನಿ ದರ್ಶಯನ್ಸಮುದಂಚಿತಂ | ಗಚ್ಛನ್ಖಗಇವ ವ್ಯೋಮ್ನಿ ಸರ್ಪವತ್ಕುಟಿಲೋಭವನ್ ||೩೧|| ಪ್ರದರ್ಶಯಂಸ್ತದಾಸ್ಥಾನೇ ವಾರಕಾಂತೇವ ವಿಭ್ರಮಾನ್ | ಭಾವಾನ್ವೇಷೀವಿಟಇವ ಪ್ರಹಸಂಚ್ಛಿವಯೋಗಿವತ್ || ೩೨ || ಕವೀನ್ದ್ರವನ್ನವರಸಗ್ರಾಹಕಸ್ಸನ್ನನುಕ್ಷಣಂ | ಹೃಷ್ಯ

---

ಯಮೇಲೆ ನಡೆಯುತ್ತ, ಥಟ್ಟನೆದ್ದು ಕುಳಿತುಕೊಂಡು ಹಾಗೆಯೇ ನಡೆಯುತ್ತ, ಕುಳಿತಿದ್ದಂತೆಯೇ ರಭಸದಿಂದ ಗರ್ರನೆ ತಿರುಗುತ್ತ, ಒಂಟಿಗಾಲಿನಿಂದಲೇ ನಡೆಯುತ್ತ, ಎದೆಯನ್ನು ನೆಲದ ಮೇಲೂರಿ ಕಾಲುಗಳನ್ನು ಅಂತರಿಕ್ಷಕ್ಕೆತ್ತಿ ನಿಲ್ಲುತ್ತ, ಭೂಮಿಯಮೇಲೆ ಕಾಲುಗಳ ಹೆಬ್ಬೆರಲನ್ನು ಮಾತ್ರ ಊರಿ ಗರ್ರನೆ ತಿರುಗುತ್ತ, ಭೂಮಿಯಮೇಲೆ ಕೈಯಿಟ್ಟು ದೇಹವನ್ನು ಮೇಲಕ್ಕೆ ಹಾರಿಸಿ ನಿಂತು ಚಕ್ರದಂತೆ ತಿರುಗುತ್ತ, ತಲೆಯನ್ನು ನೆಲದಮೇಲೂರಿ ಕಾಲುಗಳನ್ನು ಮೇಲಕ್ಕೆತ್ತಿ ನಾನಾಪ್ರಕಾರವಾಗಿ ತಿರುಗುತ್ತ ||೨೭|| ನವಿಲಿನಂತೆ ಕುಣಿಯುತ್ತ, ಭ್ರಮರದಂತೆ ಮೇಲ್ಮೇಲೆ ಸುತ್ತಾಡುತ್ತ, ಮೀನಿನಂತೆ ಹರಿದಾಡುತ್ತ, ಗಿಳಿಯಂತೆ ಮಾತನಾಡುತ್ತ, ಹಂಸಪಕ್ಷಿಯಂತೆ ನಡೆಯುತ್ತ, ಕೋಗಿಲೆಯಂತೆ ನುಡಿಯುತ್ತ, ಹೆಣ್ಣೆರಳೆಯಂತೆ ಚಪಲವಾಗಿ ನೋಡುತ್ತ, ಆನೆಯಂತೆ ತೂಗಾಡಿಕೊಂಡು ಹೋಗುತ್ತ, ಹುಲ್ಲೆಯಂತೆ ಹಾರುತ್ತ ||೨೯|| ಹುಲಿಯಂತೆ ಗರ್ಜಿಸುತ್ತ, ಸಿಹ್ಮದಂತೆ ಮುಷ್ಟಿಗಳನ್ನು ಬಿಗಿಯಾಗಿ ಹಿಡಿದು ತೋರಿಸುತ್ತ, ಯುದ್ಧಭಟನಂತೆ ಶಸ್ತ್ರವನ್ನು ಗ್ರಹಿಸಿದ ಅಭಿನಯವನ್ನು ತೋರಿಸುತ್ತ, ಕೋತಿಯಹಾಗೆ ಅಂಗವಿಕಾರವನ್ನು ಮಾಡುತ್ತ, ಹಕ್ಕಿಯಂತೆ ಆಗಸದಲ್ಲಿ ಹಾರುತ್ತ, ಹಾವಿನಂತೆ ಡೊಂಕಾಗಿ ಹರಿಯುತ್ತ, ಸೂಳೆಯಂತೆ ಒಯ್ಯಾರವನ್ನು ತೋರಿಸುತ್ತ, ವಿಟನಂತೆ ಹುಬ್ಬು ಹಾರಿಸುವವನ್ನೇ ನೋಡುತ್ತ, ಶಿವಯೋಗಿಯಂತೆ ಮುಗುಳ್ನಗೆ ನಗುತ್ತ, ಕವಿಶ್ರೇಷ್ಠನಹಾಗೆ ಶೃಂಗಾರಾದಿ

ನ್ನೃಪಇವಾಶಶತ್ರು ರಧೂಮಾಗ್ನಿರಿವಸ್ಫುರನ್ ||೩೩|| ಸರ್ಪನ್ನನಾವೃತಂತೇಜ ಇವಾಸ್ಥಾನೇಚ ಸರ್ವತಃ | ಚಕಾಸಂ ಥಂಕರಇವ ಮಾಯಾವಿರಹಿತೋಭುವಿ || ಪುರಸಂಹರಣಂ ಮಾರಹರಣಂ ಜಗದೀಶಿತುಃ | ಅರ್ಧದೇಹಪ್ರದಾನಂಚ ಗಿರಿಜಾಯೈಮನೋಹರಂ ||೩೫|| ಸೇವಮಾನೇಷುಯತಿಷು ಸಂಸ್ಥಿತಿಂ ಸಮುದಂಚಿತಾಂ | ಗಜಾಸುರಸ್ಯಹನನ ಮಂಧಕಾಸುರಸಂಹೃತಿಂ ||೩೬ ನೇತ್ರದಾನಂ ರಮೇಶಾಯ ಕ್ರತುಸಂಹರಣಕ್ರಮಂ | ವಿರಿಂಚಿಮಸ್ತಕಭೇದಕ್ರಮಂ ಗರಳಭಕ್ಷಣಂ ||೩೭|| ಪುನರ್ಮಹೇಶಚರಿತಾನ್ಯನೇಕಾನಿ ಸವಿಸ್ತೃತಿ | ನಟನ್ನತ್ಯಂತಲಲಿತಂ ಮಧ್ಯೇಽಗಾನ್ಮರ್ತ್ಯಭೃಂಗಿನಾಂ ||೩೮|| ಬ್ರಹ್ಮವೀಣಾಽಕಾಶವೀಣಾ ಗೌರೀವೀಣಾಽತಿಶೋಭನಾ | ಸಾರಂಗವೀಣಾ ಕೈಲಾಸವೀಣಾ ಲೋಕೇಷು ವಿಶ್ರುತಾ || ೩೯ || ಪಿನಾಕವೀಣಾ ಸ್ವಯಂಭೂವೀಣಾ ಕಾಶ್ಯಪನಾಮಕಾ | ವೀಣಾಕಿನ್ನರವೀಣಾಚ ವೀಣಾಽರಾವಣಸಂಜ್ಞಿಕಾ ||೪೦|| ಸ್ವರವೀಣಾ ಬಾಣವೀಣಾಽಂಬುಜವೀಣಾ ಮನೋಹರಾ| ಕುಮಾರವೀಣಾ ಸದ್ವೀಣಾ ಗಣನಾಥಸಮಾಹ್ವಯಾ || ೪೧ || ಕೂರ್ಮವೀಣಾ ಭೋಜವೀಣೇತ್ಯಾದ್ಯಾ ವೀಣಾಸ್ಸಮಂಚಿತಾಃ | ಮೃದುಮಾಧುರ್ಯಲಲಿತಾ ಚಿತ್ರಾದ್ಯೈಸ್ಸುಮನೋಹರಂ || ನಾದಯಿತ್ವಾ ವೈಣಿಕಾನಾಂ ವಸುಧಾತಲವಾಸಿನಾಂ| ಮಧ್ಯೇಸೇವಾಂ ಮಹೇ

---

ನವರಸಗಳನ್ನು ಗ್ರಹಿಸುತ್ತ, ನಿಶ್ಶತ್ರುವಾದ ದೊರೆಯಂತೆ ಆನಂದಪಡುತ್ತ, ಹೊಗೆಯಿಲ್ಲದ ತನಿಗೆಂಡದಂತೆ ಹೊಳೆಯುತ್ತ ||೩೩|| ಮುಚ್ಚುಮರೆಯಿಲ್ಲದ ಬೆಳಕಿನಂತೆ ಹರಡುತ್ತ, ಅವಿದ್ಯಾದೂರನಾದ ಪರಶಿವನಂತೆ ಪ್ರಕಾಶಿಸುತ್ತ ಆ ಸಭೆಯಲ್ಲೆಲ್ಲಾ ಮೆರೆದಿದ್ದನು ||೩೪|| ಮತ್ತು ಪರಶಿವನ ತ್ರಿಪುರಹರಲೀಲೆ, ಕಾಮಹರಲೀಲೆ, ಅರ್ಧನಾರೀಶ್ವರಲೀಲೆ, ಗಿರಿಜಾಕಲ್ಯಾಣಲೀಲೆ, ಸುಖಾವಹಮೂರ್ತಿಲೀಲೆ, ಗಜಾಸುರಮರ್ದನಲೀಲೆ, ಅಂಧಕಾಸುರ ಸಹ್ಮಾರಲೀಲೆ, ವಿಷ್ಣುನೇತ್ರಪ್ರದಾನಲೀಲೆ, ದಕ್ಷಯಜ್ಞವಿನಾಶಕಲೀಲೆ, ಬ್ರಹ್ಮಶಿರಶ್ಛೇದನಲೀಲೆ, ವಿಷಧರಲೀಲೆ ಮೊದಲಾದ ಅನೇಕ ಶಿವಲೀಲಾಚರಿತ್ರಗಳನ್ನು ವಿಸ್ತಾರವಾಗಿ ಅಭಿನಯಿಸಿ ತೋರಿಸಿ ಕುಣಿದು, ಭೂತಲದ ಭೃಂಗಿವೇಷದ ಮನುಜರ ಮಧ್ಯದಲ್ಲಿ ಅಡಗಿಕೊಂಡನು. ||೩೮|| ಬಳಿಕ ಕಿನ್ನರರುಗಳು ಭೂತಲದ ವೈಣಿಕರಾದ ಮಾನವರೊಡನೆ ಕೂಡಿಕೊಂಡು ಬ್ರಹ್ಮವೀಣೆ, ಆಕಾಶವೀಣೆ, ಗೌರೀವೀಣೆ, ಸಾರಂಗವೀಣೆ, ಕೈಲಾಸವೀಣೆ, ಪಿನಾಕವೀಣೆ, ಸ್ವಯಂಭೂವೀಣೆ, ಕಾಶ್ಯಪವೀಣೆ, ಕಿನ್ನರವೀಣೆ, ರಾವಣವೀಣೆ, ಸ್ವರವೀಣೆ, ಬಾಣವೀಣೆ, ಕಮಲವೀಣೆ, ಕುಮಾರವೀಣೆ, ಗಣನಾಥವೀಣೆ, ಕೂರ್ಮವೀಣೆ, ಭೋಜವೀಣೆ—ಇವೇ ಮೊದಲಾದ ನಾನಾ ತರದ ಚಿತ್ರಗೆಲಸ ಮಾಡಿರುವ ಮೃದು ಮಧುರ ಸ್ವರಗಳುಳ್ಳ ವೀಣೆಗಳನ್ನು ಮನೋಹರವಾಗಿ ನುಡಿಸಿ, ಪರಮೇ

 

ಶಸ್ಯ ಚಕ್ರಿರೇ ಕಿನ್ನರೋತ್ತಮಾಃ ||೪೩|| ಅಥಾದೌ ಠವಣಾಂಗಾನಿ ದರ್ಶಯಿ
ತ್ವಾ ಶಿವಾಗ್ರತಃ | ಪ್ರೀತಿದಾನಾನಿ ಪರಿತಃ ಪ್ರಾಪ್ನುವಂತೌ ಶಿವಾತ್ತತಃ ||೪೪||
ಶ್ರೀನಂದಿಕೇಶಭರತೌ ಗತ್ವಾ ಪ್ರಚ್ಛನ್ನವೇಷತಃ | ಮಾರ್ದಂಗಿಕಾನಾಂ ಮತ್ಯಾ
ನಾಂ ಮಧ್ಯೇ ಭಕ್ತಿಪುರಸ್ಸರಂ||೪೫|| ಸಮಹಸ್ತಪ್ರಭೃತಿಭಿ ರ್ವಾದ್ಯಹಸ್ತೈಶ್ಚ
ಮತ್ಕೃತಿಂ | ದರ್ಶಯಿತ್ವಾ ಮಹೇಶಾನ ಮಸೇವಾತಾಂ ಜಗತ್ಪತಿಂ||೪೬|| ಅಥ
ಚಾಷ್ಟೋತ್ತರಶತೈ ಸ್ತಾಲೈ ಶ್ಚಂಚತ್ಪುಟಾದಿಭಿಃ | ಅಷ್ಟಾದಶೈರ್ವಾಸನಾದ್ಯೈ
ರ್ಜಾತಿವಾಸಾದಿಭಿಶ್ಶುಭೈಃ || ೪೭ || ಆಲಾಪಹೇಲಣವ್ಯಾಪ್ತಿ ಚಾಲನಾನುಜ
ಯಾದಿಭಿಃ | ಗತಿಭಿರ್ದ್ವಾವಿಂಶತಿಭಿ ಸ್ಸವಿಭಾಚೀನಾಭಿರುಚ್ಚಕೈಃ ||೪೮|| ಅಕ್ಷ
ರಾಣಾಂ ಸರಿಗಮಪಧನೀತಿ ಪ್ರವರ್ತಿನಾಂ | ಸಪ್ತಾನಾಮಾರೋಹಣಾಚ್ಚ ತ
ದ್ವದೇವಾವರೋಹಣಾತ್ ||೪೯|| ವ್ಯಸ್ತಾವ್ಯಸ್ತೈ ಶ್ಚಕ್ರವಾಳಸಂಪತ್ತ್ಯಾಲಾ
ಪಸಪ್ತಕೈಃ | ಸಂಜಾತೈಕೋನಪಂಚಾಶತ್ಸಂಖ್ಯೈ ರತ್ಯಂತಭಾಸುರೈಃ ||೫೦||
ಹಂಸನಾದ್ಯೈಶ್ಚಾಪಿ ತದ್ವತ್ಸಕಲಾದಿಕನಾಮಭಿಃ | ಷಡ್ಜಾದಿಕಸ್ವರಾಣಾಂ ದ್ವಾ
ವಿಂಶಭಿಶ್ಶ್ರುತಿಭಿಸ್ತಥಾ||೫೧|| ದ್ವಾವಿಂಶತಿವಿಧೈ ರ್ದೀರ್ಘಲಾಲಿತೋಲ್ಲಸಿತಾ
ದಿಭಿಃ | ಗಮಕೈಶ್ಶ್ರುತಿಸಂಭೂತೈ ಶ್ಶ್ರೋತ್ರೃಣಾಂ ಹೃದಯಂಗಮೈಃ ||೫೨||
ಕ್ರಿಯಾಂಗೋಪಾಂಗಭಾಷಾಂಗ ರಾಗಾಂಗೇಭ್ಯಸ್ತಥಾ ಪುನಃ | ಷಡ್ಜಾದಿಗ್ರಾ

---

ಶ್ವರ ಸೇವೆಯನ್ನು ಮಾಡಿದರು. ||೪೩|| ಬಳಿಕ ಭರತಶಾಸ್ತ್ರ ಪ್ರವರ್ತಕರಾದ ನಂದಿಕೇಶ್ವರ
ನೂ ಭರತೇಶ್ವರನೂ ವೇಷವನ್ನು ಮರೆಯಿಸಿಕೊಂಡು ಮದ್ದಳೆ ಬಾರಿಸುವವರ ಮಧ್ಯದೊಳಗೆ
ಸೇರಿ, ಭಕ್ತಿಯಿಂದ ಶಿವನ ಮುಂಗಡೆಯಲ್ಲಿ ಮದ್ದಲೆಯನ್ನು ಧರಿಸಿ, ಹಲವು ತರದ ಠವಣೆಗಳನ್ನು
ಹಾಕಿ, ಮೇಳನಗೊಳಿಸಿ, ಬಳಿಕ ಸಮಹಸ್ತ ವಿಷಮಹಸ್ತಾದಿಗಳಿಂದ ಪಟ್ಟಾವುಜಾದಿ ಭೇದಗ
ಳನ್ನು ಅತಿ ಚಮತ್ಕಾರವಾಗಿ ಬಾಜಿಸಿ ತೋರಿಸಿ, ಸುತ್ತಲೂ ಕುಳಿತಿರುವ ಜನರಿಂದ ಬಹು
ಮಾನ ದ್ರವ್ಯಗಳನ್ನು ಪಡೆದು, ಹೀಗೆ ಶಂಕರನ ಸೇವೆಯನ್ನು ಮಾಡಿದರು. ||೪೬|| ಬಳಿಕ
ಧ್ರುವಾದಿ ಮುಖ್ಯ ಸಪ್ತತಾಳಗಳ ಭೇದಗಳೆನಿಸಿದ ಚಂಚತ್ಪುಟ ಮೊದಲಾದ ನೂರೆಂಟು ತಾ
ಳಗಳಿಂದಲೂ, ಹದಿನೆಂಟಂಗುಲ ಮೊದಲ್ಗೊಂಡು ೧ ಅಂಗುಲದ ವರೆಗಣ ಕಾಲಪರಿಮಿತಿಯ
ನ್ನನುಸರಿಸುವ ಕ್ರಮವುಳ್ಳ ಜಾತಿವಾಸ ಮೊದಲಾದ ಹದಿನೆಂಟು ತರದ ವಾಸಗಳ ನಾದಗಳಿಂ
ದಲೂ, ಆಲಾಪ, ಹೇಲಣ, ವ್ಯಾಪ್ತಿ, ಚಾಲನ, ಅನುಜಯ ಮೊದಲಾದ ೨೨ ಗತಿಭೇದಗಳಿಂ
ದಲೂ, ಸರಿಗಮಪಧನಿ ಎಂಬ ಸಪ್ತಸ್ವರಗಳ ಆರೋಹಣ ಅವರೋಹಣ ಕ್ರಮಗಳ ಭೇದದಿಂ
ದುಂಟಾಗಿರುವ ವ್ಯಸ್ತ, ಅವ್ಯಸ್ತ, ಚಕ್ರವಾಳಸಂಪತ್ತಿ ಮೊದಲಾದ ೭ ತರದ ಆಲಾಪನೆಗಳಿಂ
ದಲೂ, ೪೯ ತರದ ಹಂಸನಾದಗಳಿಂದಲೂ, ಷಡ್ಜಾದಿ ಸಪ್ತಸ್ವರಗಳಿಂದ ಹುಟ್ಟಿದ ಸಕಲೆ,
ನಿಷ್ಕಲೆ, ಗಹ್ವರಿ ಮೊದಲಾದ ೨೨ ತರದ ಶ್ರುತಿಗಳಿಂದಲೂ, ದೀರ್ಘಲಲಿತ, ಉಲ್ಲಸಿತ ಎಂಬ

ಮಸಂದೋಹಾಜ್ಞಾತರಾಗೇಷು ಮಧ್ಯತಃ ||೫೩|| ಗಣ್ಯಮಾನ್ಯೈಃ ಶ್ರುತಿಚಯ
ಗಮಕಸ್ವರಸಂಭವೈಃ | ಶ್ರೀರಾಗಲಲಿತಾಂದೋಳಿ ಚಿತ್ರಾಂಗೀತ್ಯಾದಿಭಿರ್ವರೈಃ ||
ರಾಗೈ ರಷ್ಟೋತ್ತರಶತಸಂಖ್ಯೈಃ ಸ್ತ್ರೀಪುನ್ನಪುಂಸಕೈಃ | ತಥೈವಾತ್ಯಂತಲಲಿತೈ
ಷ್ಷಾಡವಾದಿಪ್ರಭೇದಕೈಃ ||೫೫|| ಮಿಶ್ರಬಂಬಾಳನಾರಾಟ ಖಾವುಲೋದ್ಯಶ್ಚ
ಮಾಧ್ವಯೇ | ಭವ್ಯೇಧ್ವನಿಚತುಷ್ಕೇಽತಿಹೃದ್ಯಯೋಃ ಶ್ರೇಷ್ಠಯೋಸ್ಸತೋಃ ||
ಧ್ವನ್ಯೋಃ ಖಾವುಲನಾರಾಟ ನಾಮ್ನೋಸ್ಸಂಯೋಗತಸ್ತದಾ | ಸಂಶೋಭಮಾ
ನೇ ಶಾರೀರಚತುಷ್ಕೇಽತ್ಯಂತಭಾಸುರೇ ||೫೭|| ಪೌಶಲಾಖ್ಯೇನ ವಿಖ್ಯಾತಶಾ
ರೀರೇಣಚಶೋಭಿನಾ | ದುಹಾಯ್ಯಾದ್ಯೈಃ ಪಾಚಕಸ್ಯ ಭೇದೈರ್ದ್ವಾದಶಭಿಸ್ತ
ಥಾ ||೫೮|| ಜಯಸ್ಯಪಂಚಭಿರ್ಭೇದೈ ಷ್ಷಟ್‌ಸ್ವಾದಾದಿಭಿರುಚ್ಚಕೈಃ | ದೇಹಾ
ವಲ್ಯಾದಿಭಿ ರನುಜಯಸ್ಯಚ ಭಿದಾತ್ರಯೈಃ ||೫೯|| ಭ್ರಮರೀಭಿರ್ದ್ವಾದಶಭಿಸ್ತ
ಥಾ ನಾಭಿಗತಾದಿಭಿಃ | ದೇಹವಕ್ಷೋನಾಭಿಕಂಠೋದರಾಖ್ಯಸ್ಥಾನಪಂಚಕಾ
ತ್ || ೬೦ || ಸಂಜಾತೈಃ ಕಂಟಿಕಾಹಾಣೀ ಸರ್ವಾಂಗೀಬೊಕ್ಕಟಾದಿಭಿಃ |

---

ವೇ ಮೊದಲಾದ ಕೇಳತಕ್ಕವಂಗೆ ಇಂಪಾದ ೨೨ ತೆರದ ಶ್ರುತಿಗಮಕ, ದೇಶೀಗಮಕಗಳಿಂದ
ಊ ಕೂಡಿ, ಅಂಗವಿಭೇದಗಳಾದ ಕ್ರಿಯಾಂಗದಿಂದ ನೀಲೋತ್ಪಲಿನಿ ಮೊದಲಾದ ೨೨ ರಾಗ
ಗಳೂ, ಉಪಾಂಗದಿಂದ ಸಿಂಧುವರಾಳಿ ಮೊದಲಾದ ೪ ರಾಗಗಳೂ, ಭಾಷಾಂಗದಿಂದ ಕಾ
ಶಿಕಿ ಮೊದಲಾದ ೩೪ ರಾಗಗಳೂ, ರಾಗಾಂಗದಿಂದ ಮಧುಮಾಧವಿ ಮೊದಲಾದ ೨೦ ರಾಗೆ
ಗಳೂ ಹುಟ್ಟಿರುತ್ತಿರಲು, ಷಡ್ಜಗ್ರಾಮ, ಮಧ್ಯಗ್ರಾಮ, ಗಾಂಧಾರಗ್ರಾಮವೆಂಬ ತ್ರಿವಿಧ
ಗ್ರಾಮಗಳಿಂದ ಹುಟ್ಟಿದ ೧೫ ರಾಗಗಳಲ್ಲೂ ಅನೇಕ ಉಪರಾಗಗಳು ಹುಟ್ಟಿರುತ್ತಿರಲು,
ಅವುಗಳಲ್ಲೆಲ್ಲಾ ಮುಖ್ಯವಾಗಿರುವ ೨೭ ತೆರದ ಶ್ರುತಿಗಮಕದಿಂದಲೂ, ೭ ತೆರದ ದೇಶೀಗಮ
ಕದಿಂದಲೂ ಕೂಡಿರುವ—ಶ್ರೀರಾಗ, ಲಲಿತ ಮೊದಲಾದ ೩೬ ರಾಗಗಳೊಳಗೆ ೨೮ ಸ್ತ್ರೀರಾಗೆ
ಗಳು, ೭ ಪುಂರಾಗಗಳು, ೧ ನಪುಂಸಕರಾಗವು ಇರುತ್ತ, ಆ ಪ್ರತಿಯೊಂದು ಮುಖ್ಯ ರಾಗೆ
ಕ್ಕೂ ನೂರು ಮೂರರಂತೆ ೧೦೮ ದಾಸೀರಾಗಗಳೂ, ಶುದ್ಧ ಭಿನ್ನಾದಿ ಜಾತಿ ವಿಭಾಗಪ್ರ
ಕಾರ ಷಾಡವ, ಪಂಚಗುಪ್ತ ಮೊದಲಾದ ೩೬ ರಾಗವಿಭೇದಗಳೂ ಸಹ, ಮಿಶ್ರ, ಬಂಬಾಳ,
ನಾರಾಟ, ಖಾವುಲ ಎಂಬ ನಾಲ್ಕು ತೆರದ ಧ್ವನಿಗಳೊಳಗೆ ಶ್ರೇಷ್ಠಗಳಾದ ಖಾವುಳ, ನಾರಾಟ
ವೆಂಬ ೨ ತೆರದ ಸುಸ್ವರಗಳೊಡನೆ ಕೂಡಿಸಿ, ನಾಲ್ಕು ತೆರದ ಶಾರೀರಗಳಲ್ಲಿ ಪೌಶಲವೆಂಬ
ವಿಖ್ಯಾತ ಶಾರೀರವನ್ನು ಹೊಂದಿಸಿ, ದುಹಾಯ್ಯ ಮೊದಲಾದ ೧೨ ತೆರದ ಪಾಚಕ ಭೇದಗೆ
ಳಿಂದಲೂ, ೫ ತೆರದ ಜಯಗಳಿಂದಲೂ, ದೇಹಾವಲಿ ಮೊದಲಾದ ಮೂರು ತೆರದ ಅನುಜಯ
ಗಳಿಂದಲೂ, ೬ ತೆರನಾದ ಸ್ವಾದಗಳಿಂದಲೂ, ನಾಭಿಗತವೆಂಬುದೇ ಮೊದಲಾದ ೧೨ ತೆರದ
ಭ್ರಮರಿಗಳಿಂದಲೂ, ದೇಹ, ಎದೆ, ಹೊಕ್ಕುಳು, ಕೊರಲು, ಹೊಟ್ಟೆ ಎಂಬ ೫ ಸ್ಥಲಗಳಲ್ಲಿ ಹು

ರವ್ಯೈಶ್ಚ ವಹಣೀಭೇದೈ ಸ್ತಥೈಕಾದಶಸಂಖ್ಯಕೈಃ ||೬೧|| ಶುದ್ಧೈರ್ಲಲಿತಗಾ ಥಾದ್ಯೈರ್ದ್ವಾತ್ರಿಂಶತ್ ಸ್ಥಾಯಿಭೇದಕೈಃ | ಸಾಲಗಸ್ಥಾಯಿಸಃ ಪಂಚದಶಭೇದೈಃ ಪರಿಶ್ರುತೈಃ ||೬೨|| ಆಲಪ್ತಿಭಿಸ್ಸಪ್ತಭಿಶ್ಚ ನಾಗಾವತ್ಯಾದಿಭಿಸ್ತಥಾ | ಅನಿಬದ್ಧನಿಬದ್ಧೋಕ್ತ್ಯಾ ರಂಜಿತಾಭಿರ್ವಿಶೇಷತಃ ||೬೩|| ವೈದರ್ಭಗೌಳಪಾಂಚಾಳಸಮಾಖ್ಯಾಭಿಶ್ಚ ರೀತಿಭಿಃ | ಸಪ್ರಮಾಣೈ ರ್ಮಂದ್ರಮಧ್ಯತಾರೈ ಗ್ರಾರ್ಮತ್ರಯಾಶ್ರಯೈಃ ||೬೪|| ಸುತರಾಂ ಪರಿಪುಷ್ಟಾಸು ಧಾತ್ವಂಗತತಿಷು ಸ್ಫುಟಂ| ದಶಪ್ರಾಣೇಷೂಲ್ಲಸತ್ಸು ಸ್ಫುರತೋರ್ದೇಶಿಮಾರ್ಗಯೋಃ ||೬೫|| ವರ್ಣನಾರಸಭಾವಾಲಂಕಾರೇಷ್ವಪಿಚ ಶೋಭಿಷು | ಭ್ರಾಜಮಾನಾಸು ಮಾಧುರ್ಯಮಾರ್ದವೋದಂಚಿತೋಕ್ತಿಷು ||೬೬|| ಗಾಯತ್ಸುಸಚಮತ್ಕಾರಂ ದೇಶೇಷ್ವಷ್ಟಾದಶಸ್ವಲಂ| ಖ್ಯಾತೇಷು ಗಾಯಕೌಘೇಷು ಗುಪ್ತವೇಷಾಃ ಪ್ರಮೋದತಃ ||೬೭|| ಗಾನಂ ಚಕ್ರುಃ ಕಂಬಲಾಶ್ವತರ ತುಂಬುರುನಾರದಾಃ|ಕಿಂಚ ಗೀತಾಂಗರೇಖಾ ಚ ರಂಗಶೋಭಾ ತಥಾಪುನಃ||೬೮|| ಮುಖರಾಗಾಂಗರಾಗೌಚ ತತಂಚ ವಿತತಂತಥಾ| ಆವರ್ತನಂ ಗ್ರಹಗತಿ ರ್ಲವಣಿರ್ದೇಶಿಕಾತರೇ ||೬೯|| ಗತಿರಾಸಗತಿಸ್ತದ್ವತ್ಕಲಾಸೋ ಭ್ರಮರೀಸ್ತಥಾ | ಉಲ್ಲಾಸಶ್ಚಾವಧಾನಂಚ ವಿಭ್ರಮಸೌಷ್ಠ

---

ಟ್ಟವ ಕಂಟಿಕೆ, ಹಾಣಿ, ಸರ್ವಾಂಗಿ ಮೊದಲಾದ ೧೧ ತೆರವಾದ ವಹಣಿಗಳಿಂದಲೂ ||೬೧|| ಲಲಿತ, ಗಾಥ ಮೊದಲಾದ ೩೨ ಸ್ಥಾಯಿಭೇದಗಳಿಂದಲೂ, ೧೫ ತೆರನಾದ ಸಾಲಗಸ್ಥಾಯಿಗಳಿಂದಲೂ, ನಾಗಾವತಿ, ಭದ್ರವತಿ ಮೊದಲಾದ ೭ ತೆರದ ಆಲಾಪಗಳಿಂದಲೂ ಕೂಡಿ, ಸಾಹಿತ್ಯಬದ್ಧಸ್ವರಗಳಿಂದಲೂ, ಕೇವಲ ಸಾಹಿತ್ಯದಿಂದಲೂ ರಂಜನೆಗೊಳಿಸಿ ||೬೩|| ವೈದರ್ಭಿ, ಗೌಡಿ, ಪಾಂಚಾಳಿ ಎಂಬ ರೀತಿತ್ರಯದಿಂದ ಕೂಡಿ, ಮಂದ್ರ, ಮಧ್ಯಮ, ಉಚ್ಚವೆಂಬ ಸ್ವರತ್ರಯ ಪ್ರಮಾಣವನ್ನನುಸರಿಸಿ, ಷಡ್ಜಗ್ರಾಮ, ಮಧ್ಯಮಗ್ರಾಮ, ಗಾಂಧಾರಗ್ರಾಮವೆಂಬ ಗ್ರಾಮತ್ರಯಗಳನ್ನಾಶ್ರಯಿಸಿ, ಧಾತ್ವಂಗಗಳೂ, ದಶಪ್ರಾಣಗಳೂ, ದೇಶೀಮಾರ್ಗಗಳೂ, ವರ್ಣನಾರಸಭಾವಾಲಂಕಾರಗಳೂ, ಮೃದುಮಧುರವಚನಗಳೂ ಸ್ಫುಟನಾಗಿ ಒಪ್ಪಿರುವಂತೆ ೧೮ ದೇಶಗಳಲ್ಲೂ ವಿಖ್ಯಾತರಾಗಿರುವ ಗಾಯಕರಿಂದ ಹಾಡಲ್ಪಡುತ್ತಿರಲು, ಅವರ ಮಧ್ಯದಲ್ಲಿ ಕಂಬಲಾಶ್ವತರರೂ ತುಂಬುರುನಾರದರೂ ಗುಪ್ತವೇಷದಿಂದ ಸೇರಿಕೊಂಡು ಸಂತೋಷದಿಂದ ಗಾನಮಾಡಿದರು. ||೬೭||.

ಮತ್ತು ರಂಭಾದ್ಯಪ್ಸರಸ್ತ್ರೀಯರು ಗೂಢವೇಷದಿಂದ ಮರ್ತ್ಯಲೋಕದ ನರ್ತಕಿಯರ ಗುಂಪಿನಲ್ಲಿ ಸೇರಿಕೊಂಡು, ಗಾನಕಲೆಯೂ, ನಾಟ್ಯಭೇದವೂ, ನರ್ತನರಂಗಸ್ಥಲದ ಶೋಭೆಯೂ, ಮುಖಕಾಂತಿ ದೇಹಕಾಂತಿಗಳೂ, ವೀಣಾದಿ ತಂತ್ರೀವಾದ್ಯಗಳೂ ಸಮಯಸನ್ನಿವೇಶಗಳಿಗೆ ಸರಿಯಾಗಿ ಮೇಳಗೊಂಡಿರಲು, ಆವರ್ತನ, ಗ್ರಹಗತಿ, ಲವಣಿ, ದೇಶಿ, ....ಲಲಿ ಇತ್ಯಾದಿ

ವಂಲಲಿಃ ||೭೦|| ಇತ್ಯಾದಿಕೇಷು ಸರ್ವೇಷು ಚಮತ್ಕಾರಂ ವ್ರಜತ್ಸ್ವಲಂ | ಕ್ರಮಾಚ್ಚತುರ್ವಿಧೈರ್ಭ್ರವ್ಯತ್ಯೈ ರ್ವದನವಿಭ್ರಮೈಃ ||೭೧|| ಸಪ್ತಪ್ರಕಾರೈಶ್ಚ ತಥಾ ಮಹಿತೈರ್ಭ್ರೂಲತಾಟನೈಃ | ಷಟ್ತ್ರಿಂಶತಿವಿಧೈಶ್ಚಕ್ಷುರ್ವಿಲಾಸೈಸ್ಸುಮನೋಹರೈಃ ||೭೨|| ಹೃದ್ಯೇನ ಷಟ್ಪ್ರಕಾರೇಣ ನಾಸಾಯಾಃ ಕುಂಚಿತೇನಚ | ಕರ್ಣಾವಧಾನೇನ ದಶವಿಧೇನಾದ್ಭುತದಾಯಿನಾ ||೭೩|| ನವಪ್ರಕಾರೇಣ ಗಲೋಲ್ಲಾಸೇನಾತ್ಯಂತಶೋಭಿನಾ | ವಕ್ಷೋವಿಲಾಸೇನ ಪುನಸ್ತ್ರಿವಿಧೇನ ಮಹೀಯಸಾ ||೭೪|| ಪದದ್ವಯಸ್ಯಚೋರ್ವೋಶ್ಚ ಪಂಚಕೇನ ವಿಭಾಸಿನಾ | ಸಮಭಂಗ್ಯಾತ್ರಿಭಂಗ್ಯಾಚ ಸುಗತ್ಯಾಸಮುದಂಚಿತೈಃ ||೭೫|| ಅಂಗಹಾರೈರ್ವಿಂಶತಿಭಿರ್ದ್ವಾವಿಂಶತಿಭಿರುತ್ತಮೈಃ | ತಾನಕೈರಪಿ ಷಟ್ತ್ರಿಂಶದ್ದೃಷ್ಟಿಭೇದೈಶ್ಚ ಸಂಸ್ತುತೈಃ ||೭೬|| ಹಸ್ತೈಶ್ಚತುಷ್ಷಷ್ಟಿಸಂಖ್ಯೈ ರ್ಭ್ರಮರೀಸಪ್ತಕೇನಚ | ಪುನರ್ದ್ವಾವಿಂಶತಿಮಿತಚಾರಿಭಿಃ ಕರಣೈರಪಿ ||೭೭|| ಅಷ್ಟೋತ್ತರಶತೈಸ್ತದ್ವದಲಂಕಾರಶತೇನಚ | ತ್ರಯೋದಶಶಿರೋಭೇದೈ ರ್ದ್ವಾತ್ರಿಂಶದ್ದಂಡಸೈರಪಿ ||೭೮|| ಹಂಸಮಾತಂಗವೃಷಭ ಮೇಷಮರ್ಕಟಭೋಗಿನಾಂ | ಕೇಕೀಕಾಕಾದಿಕಾನಾಂಚ ಗತಿಭಿಸ್ಸುಮನೋಹರಂ ||೭೯|| ರಂಭಾದ್ಯಪ್ಸರಸಾಂ ಸಂಘಃ ಕುಂಭಿನೀನರ್ತಕೀವ್ರಜೇ | ನನರ್ತ ಗುಪ್ತವೇಷಸ್ಸನ್ ಪರಮಪ್ರೇಮಪೂರ್ವಕಂ ||೮೦|| ಉಪ

---

ನಾಟ್ಯಚತುರ್ದಶಾಂಗಗಳೆಲ್ಲಾ ಚಮತ್ಕಾರಕವಾಗಿರಲು, ೪ ತೆರನಾದ ಮುಖವಿಲಾಸಗಳಿಂದಲೂ, ೭ ತೆರನಾದ ಹುಬ್ಬು ಹಾರಿಸುವಿಕೆಗಳಿಂದಲೂ, ೩೬ ವಿಧಗಳಾದ ಕಣ್ಣು ಕುಣಿಸುವಿಕೆಯಿಂದಲೂ, ೬ ಪ್ರಕಾರಗಳಾದ ಮೂಗು ತಿರುಗಿಸುವಿಕೆಗಳಿಂದಲೂಕೂಡಿ, ೧೦ ವಿಧಗಳಾದ ಕಿವಿಗಳಿಂದ ತೋರ್ಪಡಿಸುವ ಅವಧಾನಗಳೂ, ಗೆದ್ದದಿಂದ ತೋರ್ಪಡಿಸುವ ೯ ತೆರದ ಉಲ್ಲಾಸಗಳಿಂದಲೂ, ಎದೆಯಿಂದ ತೋರಿಸುವ ೩ ಪ್ರಕಾರವಾದ ವಿಭ್ರಮಗಳಿಂದಲೂ, ಕಾಲುಗಳಿಂದಲೂ ತೊಡೆಗಳಿಂದಲೂ ತೋರಿಸುವ ೫ ತೆರನಾದ ವಿಲಾಸಗಳಿಂದಲೂ, ಸಮಭಂಗಿಯಾಗಿಯೂ ತ್ರಿಭಂಗಿಯಾಗಿಯೂ ಸಾಧಾರಣ ಗತಿಯಿಂದಲೂ ತೋರಿಸುವ ೨೦ ತೆರದ ಅಂಗಹಾರಗಳಿಂದಲೂ, ೨೨ ಪ್ರಕಾರಗಳಾದ ತಾನಗಳಿಂದಲೂ, ೩೬ ವಿಧಗಳಾದ ನೋಟಗಳಿಂದಲೂ, ೬೪ ತೆರನಾದ ಪತಾಕಾದಿ ಹಸ್ತಗಳಿಂದಲೂ, ೭ ತೆರದ ಭ್ರಮರಿಗಳಿಂದಲೂ, ೨೨ ತೆರನಾದ ಚಾರಿಗಳಿಂದಲೂ, ೧೦೮ ಪ್ರಕಾರಗಳಾದ ಪಾದಕ್ರಮಣಗಳಿಂದಲೂ, ೧೦೦ ವಿಧಗಳಾದ ಅಲಂಕಾರಗಳಿಂದಲೂ, ೧೩ ಪ್ರಕಾರವಾದ ಶಿರಃಕ್ಷೇಪಗಳಿಂದಲೂ, ೩೨ ತೆರದ ದಂಡೆಗಳಿಂದಲೂ, ಹಂಸ, ಗಜ, ಬಸವ, ಆಡು, ಕೋತಿ, ಸರ್ಪ, ನವಿಲು, ಕಾಗೆ ಇವು ಮೊದಲಾದವುಗಳ ಗಮನದಂತಹ ಗತಿಗಳಿಂದಲೂ ಸಹ ಅತ್ಯಂತ ಭಕ್ತಿಯಿಂದ ಕುಣಿದರು. ||೮೦||

ಮನ್ಯುದಧೀಚ್ಯಾದ್ಯಾ ಮುನಯ ಶ್ಯಂಸಿತವ್ರತಾಃ | ಆಗತ್ಯಾಚಾರ್ಯರೂಪೇಣ ಸೇವಾಂಚಕ್ರುರ್ಮಹೇಶಿತುಃ ||೮೧|| ತಾಪಸಾನಾಂತಥಾಽನ್ಯೇಷಾಂ ಮಧ್ಯೇ ಭೃಗ್ವಾದಯೋಽಪಿಚ | ಪ್ರಮಥಾ ಸ್ತತ್ಪುರೀವೀರಭಕ್ತಸಂಘೇಷ್ವವಸ್ಥಿತಾಃ || ಅಕುರ್ವಂತಾರ್ಚನಾಂ ಶಂಭೋಸ್ತದಾನೀಂ ಹೃಷ್ಟಮಾನಸಾಃ| ಅಸೇವಾತಾಂ ಬ್ರಹ್ಮವಿಷ್ಣೂ ಪೂಜಕೇಷು ತಪಸ್ವಿಷು ||೮೨|| ಗಜಾನನಸ್ಕಂದಮುಖ್ಯಾ ಧನಾಧೀಶಕುಲಸ್ಥಿತಾಃ| ಭೇಜಿರೇ ಪಾರ್ಶ್ವಯೋಸ್ತತ್ರ ಮಹೇಶಮತಿಭಕ್ತಿತಃ ||೮೪|| ಚಂಡಾಂಶುಶೀತಕಿರಣಜ್ವಲನಾ ಸ್ತಾರಕಾಳಯಃ | ಅಸ್ಫುರನ್ನಮಿತಾಖಂಡ ದೀಪಸಂದೋಹಮಧ್ಯತಃ ||೮೫|| ದ್ವಾಸ್ಥೇಷು ಭೇಜೇನಂದೀಶೋ ಮಹಾಕಾಲಶ್ಚಭಕ್ತಿತಃ | ಮುಕ್ತಾಛತ್ರಂ ಗೃಹೀತ್ವೇಂದ್ರ ಶ್ಛತ್ರಧಾರಿಷ್ವಸೇವತ ||೮೬|| ಮಧ್ಯೇಪಾಚಕಸಂಘಸ್ಯ ಮಹಾನಸನಿವಾಸಿನಃ | ಅನಲಶ್ಶಾಕಪಾಕಾದೀನಕರೋದಾದರಾನ್ವಿತಃ ||೮೭|| ತದಾಯಾಮಿಕಸಂದೋಹಮಧ್ಯೇ ದಂಡಧರೋ ಮುದಾ | ಪ್ರವದನ್ಜಾಗೃತೇತ್ಯುಚ್ಚೈ ರಸೇವತ ಸಮಾಹಿತಃ ||೮೮|| ಚಕಾರಾದಿಷ್ಟಕರ್ಮಾಣಿ ನಿಋ್ರುತಿಃಪ್ರತಿಹಾರಿಷು | ಸಂಮಾರ್ಜನಂಮರುಚ್ಚಕ್ರೇ ಸಂಮಾರ್ಜಕಜನಾಂತರೇ ||೮೯|| ಅತ್ಯಂತಭಕ್ತಿಸಂಯುಕ್ತ ಸ್ತದಾನೀಂಯಾದಸಾಂ

---

ಉಪಮನ್ಯು, ದಧೀಚಿ, ಭೃಗು ಮೊದಲಾದ ಮಹಾವ್ರತಸಂಪನ್ನ ಮುನಿಗಳು ಆಚಾರ್ಯವೇಷಗಳನ್ನು ಧರಿಸಿ ಬಂದು ಅಲ್ಲಿಯ ತಪಸ್ವಿಗಳೇ ಮೊದಲಾದವರ ಮಧ್ಯದಲ್ಲಿ ಸೇರಿ ಈಶ್ವರ ಸೇವೆಯನ್ನು ಮಾಡಿದರು. ಪ್ರಮಥರುಗಳು ಆ ಮಲ್ಲಿಕಾರ್ಜುನಪುರದ ವೀರಶೈವಭಕ್ತ ಸಮುದಾಯದಲ್ಲಿ ಸೇರಿ ಸಂತೋಷದಿಂದ ಶಿವಾರ್ಚನೆಯನ್ನು ಮಾಡಿದರು. ಬ್ರಹ್ಮ ವಿಷ್ಣುಗಳು ಅಲ್ಲಿಯ ಅರ್ಚಕರಾದ ತಪಸ್ವಿಗಳೊಡನೆ ಸೇರಿಕೊಂಡು ಶಿವಸೇವೆಯನ್ನು ಮಾಡಿದರು ||೮೨|| ಗಣಪತಿ ಷಣ್ಮುಖ ಮೊದಲಾದವರು ಧನಿಕರ ಗುಂಪಿನಲ್ಲಿ ಸೇರಿ ಮಲ್ಲಿಕಾರ್ಜುನನ ಪಕ್ಕಗಳಲ್ಲಿ ನಿಂತು ಸೇವೆ ಮಾಡಿದರು. ಸೂರ್ಯ ಚಂದ್ರಾಗ್ನಿ ನಕ್ಷತ್ರಗಳು ಆ ದೇವಾಲಯದ ದೀಪ ಪಂಕ್ತಿಗಳ ಮಧ್ಯದಲ್ಲಿ ಸೇರಿ ಪ್ರಕಾಶಿಸುತ್ತ ಶಿವಸೇವೆಯನ್ನು ಮಾಡಿದರು. ||೮೫|| ನಂದಿ ಮಹಾಕಾಲರುಗಳು ಆ ದೇವಾಲಯದ ದ್ವಾರಪಾಲಕರಲ್ಲಿ ಸೇರಿ ಭಕ್ತಿಯಿಂದ ಸೇವಿಸಿದರು. ಇಂದ್ರನು ದೇವಾಲಯದ ಛತ್ರಧಾರಿಗಳಲ್ಲಿ ಸೇರಿಕೊಂಡು ಮುತ್ತಿನ ಕೊಡೆಯನ್ನು ಹಿಡಿದು ಸೇವಿಸಿದನು. ಅಗ್ನಿಯು ದೇವಾಲಯದ ಪರಿಚಾರಕರ ಗುಂಪಿನಲ್ಲಿ ಸೇರಿ ಆದರದಿಂದ ಶಾಕಪಾಕಾದಿ ನೈವೇದ್ಯಗಳನ್ನು ಅಣಿಮಾಡಿದನು. ಯಮನು ದೇವಾಲಯದ ವೇತ್ರಧಾರಿಗಳ ಗುಂಪಿನಲ್ಲಿ ಸೇರಿ ಸಭೆಯಲ್ಲಿ ಗಟ್ಟಿಯಾಗಿ ಕೂಗಿ ಎಚ್ಚರವನ್ನು ಹೇಳುವ ಊಳಿಗವನ್ನು ಮಾಡಿದನು. ನಿಋ್ರುತಿಯು ಕಂಚುಕಿಗಳಲ್ಲಿ ಸೇರಿ ಅಪ್ಪಣೆಯಾದ ಕೆಲಸವನ್ನು ನಡೆಸಿದನು. ವಾಯುವು ಕಸಗುಡಿಸುವವರಲ್ಲಿ ಸೇರಿಕೊಂಡು ಸಂಮಾರ್ಜನ ಕರ್ಮವನ್ನು ಮಾಡಿದನು. ||೮೯|| ವರುಣನು ಸಾಂಸು

ಪತಿಃ | ಚಕ್ರೇಽನುಲೇಪನಂ ಸಮ್ಯಗನುಲೇಪನಕಾರಿಷು || ೯೦ || ಯಕ್ಷೇಶ್ವರೋ ರಂಗವಲ್ಲೀಂ ರಂಗವಲ್ಲೀಪ್ರಕುರ್ವತಾಂ| ಮಧ್ಯೇಚಕಾರ ವಿವಿಧೈರತ್ನೈ ರ್ರತಿಮುದಾನ್ವಿತಃ || ೯೧ || ಈಶಾನಸ್ತಾಂಡವಂ ನೃತ್ಯತಾಂ ತಪಸಾಂತಸ್ಥಿತೋಽಕರೋತ್ | ಕವೀನಾಂ ಮಧ್ಯತೋಽಕುರ್ವಂ ಶ್ಚಂಡಕೀರ್ತ್ಯಾದಯಸ್ಸ್ತುತಿಂ || ಬಾಣಾದಿದೈತ್ಯಾಃ ಕ್ಷೋಣೀಶನಿವಹಸ್ಥಾಸ್ಸಿಷೇವಿರೇ | ಅಪರೇ ಯಕ್ಷಗಂಧರ್ವಸಿದ್ಧಸಾಧ್ಯಾದಯೋ ಮುದಾ ||೯೩|| ಅಕುರ್ವಂತಾಪದಿಷ್ಟಾನಿ ಕರ್ಮಾಣಿ ಪ್ರಾಕೃತನಾಇವ | ತದ್ಗಿರೀಂದ್ರಸಮುತ್ತುಂಗ ಶೃಂಗಾಂತರನಿವಾಸಿನಃ ||೮೪|| ಸಿಷೇವಿರೇ ಪಾರ್ವತೀಶಂ ಮೇರುಮುಖ್ಯಾ ಮಹೀಧರಾಃ | ತಚ್ಛೈಲತರುಮಧ್ಯಸ್ಥಾಃ ಕಲ್ಪವೃಕ್ಷಾಸ್ಸಿಷೇವಿರೇ ||೯೫|| ತತ್ಪುರೀಧೇನುಭಿಸ್ಸಾಕಂ ಭೇಜಿರೇ ಸುರಧೇನವಃ | ಚಿಸ್ತಾಮಣ್ಯಾದಿಮಣಯ ಸ್ತತ್ಪುರೀತೋರಣವ್ರಜೇ ||೯೬|| ಖ್ಯಾತಪಾತಾಳಗಂಗಾಯಾಂ ನದ್ಯೋ ಭಾಗೀರಥೀಮುಖಾಃ| ಸಪ್ತದ್ವೀಪಾಂಬುಧಿವ್ರಾತಾಃ ಪುರವೀಧೀಷುಸಂಸ್ಥಿತಾಃ || ೯೭ || ಪುರಪ್ರಾಕಾರರೂಪೇಣ ಷಟ್ತ್ರಿಂಶತ್ತತ್ವಸಂಹತಿಃ | ಚರಾಚರಾಣಿವಸ್ತೂನಿ ಪ್ರಶಸ್ತಾನಿ ಜಗತ್ರಯೇ ||

---

ವರ ಮಧ್ಯದಲ್ಲಿ ಸೇರಿ ಸಾರಣೆಯ ಕೆಲಸವನ್ನು ಅತ್ಯಂತ ಭಕ್ತಿಯಿಂದ ಮಾಡಿದನು. ಕುಬೇರನು ರಂಗವಲ್ಲಿಯಿಡುವ ಜನರ ಗುಂಪಿನಲ್ಲಿ ಸೇರಿ ನಾನಾ ರತ್ನಗಳಿಂದ ರಂಗವಲ್ಲಿಯನ್ನು ಬಿಟ್ಟನು. ಈಶಾನನು ಕುಣಿಯುವ ತಪಸ್ವಿಗಳೊಡನೆ ಸೇರಿ ನರ್ತನಮಾಡಿದನು. ಚಂಡಕೀರ್ತಿ ಮೊದಲಾದವರುಗಳು ಕವಿಗಳ ಮಧ್ಯದಲ್ಲಿ ಸೇರಿ ಸ್ತುತಿಪಾಠಗಳನ್ನುದ್ಘೋಷಿಸಿದರು. ||೯೩|| ಬಾಣಾಸುರನೇ ಮೊದಲಾದ ದೈತ್ಯರಾಜರುಗಳು ಶ್ರೀಗಿರಿಗೆ ಬಂದಿರುವ ರಾಜಾಧಿರಾಜರ ಗುಂಪಿನಲ್ಲಿ ಸೇರಿ ಈಶ್ವರ ಸೇವೆಯನ್ನು ಮಾಡಿದರು. ಇನ್ನುಳಿದ ಯಕ್ಷ ಗಂಧರ್ವ ಸಿದ್ಧ ಸಾಧ್ಯಾದಿ ದೇವತಾ ಭೇದಗಳವರೆಲ್ಲಾ ಅಲ್ಲಿಯ ಹಳಬರಾದ ಊಳಿಗದವರಂತೆ ಬೆಸಸಿದ ಕೆಲಸಗಳನ್ನು ಮಾಡಿಕೊಂಡಿದ್ದರು. ಮೇರುಗಿರಿ ಮೊದಲಾದ ಪರ್ವತಗಳು ಆ ಶ್ರೀಶೈಲದ ಶಿಖರಗಳ ಮಧ್ಯದಲ್ಲಿ ಸೇರಿ ವಾಸಮಾಡಿಕೊಂಡು ಈಶ್ವರನನ್ನು ಸೇವಿಸಿದುವು. ಕಲ್ಪವೃಕ್ಷಗಳು ಆ ಶ್ರೀಗಿರಿಯಲ್ಲಿರುವ ಮರಗಳ ಗುಂಪಿನಲ್ಲಿಯೂ, ಕಾಮಧೇನುಗಳು ಆ ಗಿರಿಯ ಪಶುಗಳಲ್ಲಿಯೂ, ಚಿಂತಾಮಣಿ ಮೊದಲಾದುವುಗಳು ಆ ಗಿರಿಯ ತೋರಣಗಳ ಪಂಗ್ತಿಯಲ್ಲಿಯೂ, ಭಾಗೀರಥಿ ಮೊದಲಾದ ನದಿಗಳು ಅಲ್ಲಿಯ ಪಾತಾಳಗಂಗೆಯಲ್ಲಿಯೂ, ಸಪ್ತದ್ವೀಪಗಳೂ ಸಪ್ತಸಮುದ್ರಗಳೂ ಸಹ ಅಲ್ಲಿಯ ಪಟ್ಟಣದ ಬೀದಿಗಳಲ್ಲಿಯೂ, ೩೬ ತತ್ವಗಳು ಪಟ್ಟಣದ ಪ್ರಾಕಾರರೂಪವಾಗಿಯೂ, ಮೂರು ಲೋಕಗಳಲ್ಲಿರುವ ಚರಾಚರಾತ್ಮಕ ಸಕಲ ಶ್ರೇಷ್ಠವಸ್ತುಗಳೂ ಆ ಶ್ರೀಗಿರಿಯಲ್ಲಿರುವ ಚರಾಚರ ವಸ್ತುಗಳಲ್ಲಿಯೂ ಸೇರಿ, ಸಕಲ ಲೋಕೈಕಸ್ವಾಮಿ

ಚರಾಚರನಿವಿಷ್ಟಾನಿ ಶ್ರೀಶೈಲಸ್ಯ ಸಮಂತತಃ | ತ್ರಿಲೋಕ್ಯೈಕಪತಿಂ ದೇವಂ ಗಾರೀಶಂ ಮಲ್ಲಿಕಾರ್ಜುನಂ ||೯೯|| ಅಸೇವಂತ ಲಸದ್ಭಕ್ತಿ ಜನಿತಾನಂದಪೂರಿತಾಃ|

ಇತಿ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರೇ ಪರ್ವತಪ್ರಕರಣೇ ತತ್ರ ಶಿವರಾತ್ರಿ ಜಾಗರಣೇ ಸಮಸ್ತ ಪ್ರಮಥ ರುದ್ರ ಸುರಾಸುರ ಮನುಮುನ್ಯಾದಿ ಸಚರಾಚರಾಣಾಂ ಶ್ರೀಮಲ್ಲಿಕಾರ್ಜುನ ದೇವಸ್ಯೋಪಾಸನಾದಿಕಥ ನಂನಾಮ ಪಂಚದಶೋಽಧ್ಯಾಯಃ.

---

## ಅಥ ಷೋಡಶೋಽಧ್ಯಾಯಃ.

### ದೋನವಾರ್ಯಾಯ ಸ್ವಪ್ನೇ ಶ್ರೀಗಿರಿವೈಭವ ನಿರೂಪಣಕಥನಂ.

ಅನಂತರಂ ಸಮುದಿತಶ್ಚಕಾಸೇ ಪದ್ಮಿನೀಪತಿಃ | ಮಂದರಾದ್ರಿಗುಹಾಂ ತಸ್ಥಸುಕೇಶಾಯ ಮಹಾತ್ಮನೇ || ೧ || ಕೃತಾಪರಾಧಕುಪಿತೇ ಸಮಾಲೋಕ ಯತೀಶ್ವರೇ | ನಿಪತ್ಯ ಪಾತಪತಿತಮಿವ ತಾಲಫಲಂ ಮಹತ್ ||೨|| ಆಶ್ಚರ್ಯಮಿತಿ

---

ಯಾದ ಶ್ರೀಮಲ್ಲಿಕಾರ್ಜುನನನ್ನು ಅತಿಶಯ ಭಕ್ತಿ ಸಂಜನಿತ ಪರಮಾನಂದಪೂರಿತಗಳಾಗಿ ಹೀಗೆ ಸೇವಿಸಿದರು. ||೯೯||

ಎಂಬಲ್ಲಿಗೆ ಶ್ರೀಶೈಲದಲ್ಲಿ ಸಕಲ ಮನು ಮುನಿ ಮಾನವಾದಿಗಳೆಲ್ಲರೂ ಶಿವರಾತ್ರಿ ಜಾಗರಣವನ್ನು ಮಾಡಿ ಮಲ್ಲಿಕಾರ್ಜುನಸ್ವಾಮಿಯನ್ನು ಸೇವಿಸಿದುದನ್ನು ವರ್ಣಿಸುವ ೧೫ನೆ ಅಧ್ಯಾಯವು ಮುಗಿದುದು.

---

## ೧೬ನೆ ಅಧ್ಯಾಯವು.

### ಮಲ್ಲಿಕಾರ್ಜುನಸ್ವಾಮಿಯು ದೋನವಾರ್ಯನ ಸ್ವಪ್ನದಲ್ಲಿ ಶ್ರೀಗಿರಿ ವೈಭವವನ್ನು ನಿರೂಪಿಸಿದ ಕಥೆ.

ಬಳಿಕ ಬೆಳಗಾಗುತ್ತಲೂ ಸೂರ್ಯನು, ಮಂದರಪರ್ವತದ ಗವಿಯಲ್ಲಿ ವಾಸವಾಗಿದ್ದ ಸುಕೇಶಗಣನಾಥನನ್ನು ತನ್ನ ಬಿಸಿಲ ಬೇಗೆಯಿಂದ ಪರಿತಾಪಗೊಳಿಸಲಾಗಿ, ಆಗ ಗಣನಾಥನು ಮೊರೆಯಿಟ್ಟುಕೊಳ್ಳಲು, ಪರಶಿವನು ಆಗ್ರಹಗೊಂಡು ಬರಲಾಗಿ, ಗಾಳಿಯೇಟಿಗೆ ಬಿದ್ದ ತಾಳೆ ಹಣ್ಣಿನಂತೆ ಸೂರ್ಯನು ಆಕಾಶದಿಂದ ನೆಲಕ್ಕೆ ಬಿದ್ದು, ಜನರೆಲ್ಲರೂ ಆಶ್ಚರ್ಯಪಟ್ಟು ನೋಡುತ್ತಿ

ಪಶ್ಯತ್ಸು ಜನಸಂಘೇಷು ಸರ್ವತಃ| ಲುಠನ್ವಾರಾಣಸೀಂಗತ್ವಾ ಪರಮೇಶಿತುರಾ ಜ್ಞಯಾ ||೩|| ಪ್ರತಿಷ್ಠಾಪ್ಯಮುದಾಲಿಂಗಂ ಶ್ರೀಬಾಲಾರ್ಕೇಶ್ವರಾಹ್ವಯಂ | ಸಂಸೇವ್ಯಸ್ವೀಯಭಾಸುತ್ವಂ ಪ್ರಾಪ್ಯಾಯಾತಇವಕ್ಷಣಾತ್ ||೪|| ಅಥಾಮಂ ದತರಾಸಂದಯುತಾಸ್ತೇ ಪರಿಷಜ್ಜನಾಃ | ಮಲ್ಲಿಕಾರ್ಜುನದೇವಸ್ಯ ಪುರತೋಽ ಸ್ಮಾಭಿ ರಾದರಾತ್ ||೫|| ಅಹರ್ನಿಶಂ ಕೃತೇ ಸಮ್ಯಕ್ ಛಿವರಾತ್ರಿಮಹೋತ್ಸವೇ | ಭವರಾತ್ರಿರಿವಾಸ್ಮಾಕಂ ನಿರ್ಯಾತಾಽದ್ಯ ನಿಶೀಥಿನೀ ||೬|| ಉತ್ತಿಷ್ಠತಾಗ ಚ್ಛತೇತಿ ವದಂತ ಸ್ಸಂಭ್ರಮಾನ್ವಿತಾಃ | ಪಾತಾಳಗಂಗಾಸ್ನಾನಾಯ ಪ್ರಯಯು ಸ್ತತ್ರ ಕೇಚನ ||೭|| ಪರೇ ಸಮಾಲೋಕಯಿತು ಮಗಚ್ಛಂಛಿಖರೇಶ್ವರಂ | ಕೇಚಿತ್ಸ್ವಕೀಯನಗರಾಂಶ್ಚಾಪರೇ ಕಾಶಿಕಾಪುರಂ ||೮|| ಯಯುಃ ಪ್ರದಕ್ಷಿಣೀಕರ್ತುಂ ಶ್ರೀಗಿರಿಂ ತತ್ರ ಕೇಚನ | ವಸಂತೋತ್ಸವ ಮಾಲೋಕ್ಯ ಯಾಮ ಇತ್ಯವಸನ್ಪರೇ ||೯|| ಆಪಂಚರಾತ್ರಂ ಸ್ಥಾತವ್ಯ ಮಿತ್ಯತಿಷ್ಠನ್ಪರೇ ಜನಾಃ | ಕೇಚಿತ್ತತ್ಪುರಏವೋದ್ಯದ್ವಿರಕ್ತ್ಯಾ ನ್ಯವಸನ್ಮುದಾ ||೧೦|| ಅಥ ಶ್ರೀದೋನಮಾರ್ಯೋಽಪಿ ತಸ್ಮಿನ್ ಚ್ಛ್ರೀಪರ್ವತೋತ್ತಮೇ | ಸ್ಥಾತುಂ ಭಕ್ತ್ಯಾ ಪಂಚರಾತ್ರಂ ನಿಶ್ಚಿತ್ಯ ಮನಸಿ ಸ್ವಯಂ ||೧೧|| ಭಾಸ್ಕರೋದಯವೇಳಾಯಾಂ ದೇವಂ ಶ್ರೀಮ

---

ರಲು, ಕಾಶೀಕ್ಷೇತ್ರಕ್ಕೆ ಉರುಳಿಕೊಂಡೇ ಹೋಗಿ, ಶಿವನಪ್ಪಣೆಯ ಮೇರೆಗೆ ಆ ಕ್ಷೇತ್ರದಲ್ಲಿ ಬಾಲಾರ್ಕೇಶ್ವರನೆಂಬ ಲಿಂಗವನ್ನು ಸೇವಿಸಿ, ಮರಳಿ ತನ್ನ ಸೂರ್ಯತ್ವವನ್ನು ಪಡೆದುಕೊಂಡು ಆಗತಾನೇ ಬಂದನೋ ಎಂಬಂತೆ ಉದಯಗೊಂಡು ಪ್ರಕಾಶಿಸಿದನು. ||೪|| ಬಳಿಕ ಪರಿಷೆಯ ಜನರು ಅತ್ಯಂತ ಸಂತೋಷಗೊಂಡು, "ಈ ಮಲ್ಲಿಕಾರ್ಜುನಸ್ವಾಮಿಯ ಮುಂಗಡೆಯಲ್ಲೇ ನಾವು ಪ್ರೀತಿಯಿಂದ ಹಗಲೂ ರಾತ್ರಿಯೂ ಶಿವರಾತ್ರಿ ಮಹೋತ್ಸವವನ್ನು ಚೆನ್ನಾಗಿ ಆಚರಿಸಿದಕಾರಣ, ನಮ್ಮ ಭವವೆಂಬ ರಾತ್ರಿಯು ಕಳೆದುಹೋದಂತೆಯೇ ಈ ರಾತ್ರಿಯೂ ಕಳೆದು ಹೋಯಿತು. ಏಳಿರಿ, ಬನ್ನಿರಿ" ಎಂದು ಸಡಗರದಿಂದ ಹೇಳುತ್ತ, ಕೆಲವರು ಪಾತಾಳಗಂಗೆಯಲ್ಲಿ ಸ್ನಾನಮಾಡುವುದಕ್ಕಾಗಿ ಹೊರಟರು. ||೭|| ಇನ್ನು ಕೆಲವರು ಶಿಖರೇಶ್ವರ ದರ್ಶನಕ್ಕಾಗಿ ಹೊರಟರು. ಕೆಲವರು ತಂತಮ್ಮ ಊರುಗಳಿಗೂ, ಕೆಲರು ಕಾಶೀಕ್ಷೇತ್ರಕ್ಕೂ, ಕೆಲರು ಶ್ರೀಗಿರಿ ಪ್ರದಕ್ಷಿಣೆಗೂ ಹೊರಟರು. ಇನ್ನು ಕೆಲರು ನಾವು ವಸಂತೋತ್ಸವವನ್ನು ನೋಡಿಕೊಂಡು ಹೋಗುತ್ತೇವೆಂದು ಹೇಳಿಕೊಂಡು ಅಲ್ಲೇ ಇದ್ದರು. ಇನ್ನು ಕೆಲರು ಕ್ಷೇತ್ರಗಳಿಗೆ ಬಂದರೆ ೫ ರಾತ್ರಿಗಳು ವಾಸಮಾಡಬೇಕು ಎಂದು ಹೇಳಿಕೊಂಡು ನಿಂತರು. ಮತ್ತೆ ಕೆಲರು ಸಂಸಾರವಿರಕ್ತಿಗೊಂಡು ಸಂತೋಷದಿಂದ ಆ ಪಟ್ಟಣದಲ್ಲೇ ನೆಲೆಯಾಗಿ ನಿಂತುಕೊಂಡರು. ||೧೦|| ಬಳಿಕ ಶ್ರೀ ದೋನಮಾರ್ಯನುಕೂಡ ಶ್ರೀಶೈಲದಲ್ಲಿ ೫ ರಾತ್ರಿಗಳು ಇರಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಸೂರ್ಯೋದಯಕಾಲಕ್ಕೆ ಭಕ್ತಿಯಿಂದ ಶ್ರೀಮಲ್ಲಿಕಾರ್ಜುನಸ್ವಾಮಿಯನ್ನು ಸಹ

ಲ್ಲಿಕಾರ್ಜುನಂ | ಅಭಿಷಿಚ್ಯ ವಿಧಾನೇನ ಸಹಸ್ರಕಲಶೋದಕೈಃ ||೧೩|| ಪಂಚಾ
ಮೃತೇನ ಸ್ನಪನಕಾಲೇ ಭಕ್ತಿಸಮನ್ವಿತಃ | ಸಮರ್ಪ್ಯ ಧೂಪದೀಪಾದೀನ್ ಪ್ರಣ
ಮ್ಯ ಪರಯಾ ಮುದಾ ||೧೪|| ಉಷ್ಣೋದಕೈ ರ್ಗಂಧತೋಯೈ ರಭಿಷಿಚ್ಯ
ಯಥಾಕ್ರಮಂ | ವಸ್ತ್ರೇಣಾರ್ದ್ರತ್ವಮುನ್ಮೃಜ್ಯ ಸೂಕ್ಷ್ಮವಾಸೋವಿಭೂಷ
ಣೈಃ ||೧೫|| ಗನ್ಧಪುಷ್ಪಾಕ್ಷತೈ ಸ್ಸಮ್ಯಗರ್ಚಯಿತ್ವಾ ಮಹೇಶ್ವರಂ | ಸಮರ್ಪ್ಯ
ಧೂಪದೀಪಾದೀನ್ ಪಂಚಭಕ್ಷ್ಯಾದಿಭಿರ್ಯುತಾನ್ ||೧೬|| ಉಪಹಾರಂ ತತೋ
ದತ್ವಾ ತಥಾ ಭಕ್ತಪ್ರಜಾಯಚ | ಸದ್ಭಕ್ತ್ಯೇಷ್ಟಾನ್ನಪಾನಾದೀ ನ್ಸಮರ್ಪ್ಯ
ತದನಂತರಂ ||೧೭|| ಕರ್ಪೂರವೀಟಿಕಾ ದತ್ವಾ ಕೃತಪುಷ್ಪಾಂಜಲಿಸ್ತತಃ | ಸಮ್ಯ
ಕ್ಪ್ರದಕ್ಷಿಣಂ ಕೃತ್ವಾ ಬಹುವಾರಂ ವಿಧಾನತಃ ||೧೮|| ಸ್ತುತ್ವಾ ಸ್ಬಹುಪ್ರಕಾರೇಣ
ನಿಮೀಲ್ಯ ನಯನದ್ವಯಂ | ಸ್ವಪ್ನವದ್ವೃದ್ಧಮುನಿವೇಷೇಣ ಸಮುಪಾಗತಂ ||
ಸ್ವಕೀಯಭಕ್ತಿಸಂತುಷ್ಟಂ ಮಲ್ಲಿಕಾರ್ಜುನ ಮೀಶ್ವರಂ | ದದರ್ಶ ಪರಮಪ್ರೀ
ತ್ಯಾ ದೋನಮಾರ್ಯಶ್ಶುಭೋದಯಃ || ೧೯ || ಭಕ್ತಿಪೂರ್ವಂ ಪ್ರಣಮ್ಯೈನಂ
ಪ್ರೋವಾಚಾಸೀನಮಾದರಾತ್ | ಕುತಸ್ಸಮಾಗತಾ ಯೂಯಂ ಕೋಗ್ರಾ
ಮೋ ಭವತಾ ಮಿಹ ||೨೦|| ಸಮಾಗತ್ಯ ಕಿಯಾನ್ಕಾಲೋ ಜಾತೋ ಮೇಕ
ಥ್ಯತಾಮಿತಿ | ಏವಮುಕ್ತೋ ದೋನಮಾರ್ಯ ಮವದತ್ತಾಪಸಸ್ತತಃ || ೨೧ ||
ದೋನಮಾರ್ಯಾ ಭವಂತಃ ಕಿಂ ಭಕ್ತಲೋಕೈಕದೇಶಿಕಾಃ | ಕಿಂಸ್ನೇಮಿನಃ ಪಂ

---

ಸ್ರಕುಂಭಜಲದಿಂದಲೂ ಪಂಚಾಮೃತದಿಂದಲೂ ವಿಧ್ಯುಕ್ತಪ್ರಕಾರ ಅಭಿಷೇಕಮಾಡುವ ಕಾಲ
ದಲ್ಲಿ ಧೂಪದೀಪಾದಿಗಳನ್ನರ್ಪಿಸಿ, ನಮಸ್ಕರಿಸಿ, ಮರಳಿ ಬಿಸಿನೀರಿನಿಂದಲೂ ಸುವಾಸಿತ ಜಲ
ದಿಂದಲೂ ವಿಧ್ಯುಕ್ತಕ್ರಮದಿಂದ ಅಭಿಷೇಕಮಾಡಿ, ವಸ್ತ್ರದಿಂದ ಒರಸಿ, ವಸ್ತ್ರಾಭರಣ ಗಂಧಾ
ಕ್ಷತ ಪುಷ್ಪಾದಿಗಳಿಂದ ಚೆನ್ನಾಗಿ ಪರಮೇಶ್ವರನನ್ನು ಪೂಜಿಸಿ, ಧೂಪದೀಪಾದಿಗಳನ್ನು ಸಮ
ರ್ಪಿಸಿ, ಪಂಚಭಕ್ಷ್ಯಗಳಿಂದ ಕೂಡಿದ ನೈವೇದ್ಯವನ್ನು ಅರ್ಪಣಮಾಡಿ, ಅದರಂತೆಯೇ ಭಕ್ತಗ
ಣಕ್ಕೂ ಅವರವರಿಗಿಷ್ಟವಾದ ಅನ್ನಪಾನಾದಿಗಳನ್ನು ಭಕ್ತಿಯಿಂದ ನೀಡಿ ತೃಪ್ತಿಪಡಿಸಿ, ಸಕ
ರ್ಪೂರ ತಾಂಬೂಲವನ್ನು ಕೊಟ್ಟು, ಪುಷ್ಪಾಂಜಲಿಗರೆದು, ಹಲವುಸಲ ಪ್ರದಕ್ಷಿಣೆಮಾಡಿ ||೧೮
ಬಹುವಿಧದಿಂದ ಸ್ತುತಿಸಿ, ಕಣ್ಣುಗಳನ್ನು ಮುಚ್ಚಿಕೊಂಡನು. ಆಗ ಸ್ವಪ್ನದಲ್ಲಿ ಬಂದಂತೆ
ವೃದ್ಧತಾಪಸವೇಷದಿಂದ ತನ್ನ ಭಕ್ತಿಗೆ ಮೆಚ್ಚಿ ಶ್ರೀಮಲ್ಲಿಕಾರ್ಜುನೇಶ್ವರನು ಬರಲು, ದೋನ
ಮಾರ್ಯನು ಪರಮ ಪ್ರೀತಿಯಿಂದ ಸಂದರ್ಶನಮಾಡಿ, ಕುಳ್ಳಿರಿಸಿ, ಭಕ್ತಿಯಿಂದ ಸಾಷ್ಟಾಂಗವಾಗಿ
ಮಣಿದು, ''ತಾವು ಎಲ್ಲಿಂದ ದಯಮಾಡಿಸಿದಿರಿ? ತಮ್ಮ ಊರಾವುದು? ಇಲ್ಲಿಗೆ ಬಂದು
ಎಷ್ಟುಕಾಲವಾಯಿತು?'' ಎಂದು ಬೆಸಗೊಳ್ಳಲು, ಆಗ ತಪಸ್ವಿಯು ದೋನಮಾರ್ಯನನ್ನು ಕು
ರಿತು—ನೀವೇನೆಯೊ ದೋನಮಾರ್ಯರು? ಭಕ್ತಪ್ರಪಂಚಕ್ಕೆಲ್ಲಾ ಗುರುವರ್ಯರಾಗಿರುವ ಸಂಧಿ

ಡಿತೇಂದ್ರಾಃ ಪುರಾ ತೇಪಿ ವಯಂ ಪರಂ ||೨೨|| ಸಖಾಯಃ ಪಂಡಿತಾರಾಧ್ಯಾ ಸ್ತೇಽಸ್ಮಾಸು ಪ್ರೀತಿಸಂಯುತಾಃ | ಅಸ್ಮಾಕ ಮಾಸೀತ್ಸರ್ವಜ್ಞಮಲ್ಲಿಕಾರ್ಜು ನನಾಮಹಿ || ೨೩ || ತಿಷ್ಠಾಮಃ ಪ್ರೀತಿಸಂಯುಕ್ತಾ ಶ್ರೀಶೈಲೇ ಸರ್ವದಾ ವಯಂ | ನಾನಾಗಿರಿ ಗುಹಾರಣ್ಯ ಬಿಲಸಂಘಪ್ರಚಾರಿಣಃ || ೨೪ || ಆಗತಾಸ್ಮ ಪರಿದ್ರಷ್ಟುಂ ಶಿವರಾತ್ರಿಮಹೋತ್ಸವಂ | ಇತ್ಯುಕ್ತೋ ದೋನಮಾರ್ಯೋಽಥ ಘಟಿತಾಂಜಲಿ ರಬ್ರವೀತ್ ||೨೫|| ಸರ್ವಜ್ಞಮೂರ್ತೇ ಕಿಂಸಂತಿ ಚಿತ್ರಾಣಿ ಶ್ರೀ ಗಿರಾವಿಹ | ಶ್ರುತಾನಿವಾಽಥ ದೃಷ್ಟಾನಿ ವಕ್ತು ಮರ್ಹಸ್ಯಶೇಷತಃ || ೨೬ || ಇತ್ಯುಕ್ತವಂತಂ ಸಂಪ್ರೀತ್ಯಾ ದೋನಮಾರ್ಯಂ ಸತಾಪಸಃ | ಸಮಾಗಚ್ಛೇತಿ ಸಹಸಾ ನೀತ್ವಾ ಬಿಲ್ವವನಂ ಮಹತ್ ||೨೭|| ತತ್ರತ್ಯ ಶೈಲಶೃಂಗಸ್ಥ ಮೇಕಂ ದೀಪಮಹೀರುಹಂ | ಆರೋಪ್ಯ ಕೃಪಯಾ ತಸ್ಯ ಮೂರ್ಧ್ನಿ ಹಸ್ತಂ ನ್ಯವೇಶ ಯತ್ ||೨೮|| ಶ್ರೀಗಿರಿಸ್ಸಕಲೋದೃಷ್ಟ ಸ್ತೇನ ಹಸ್ತಸ್ಥಬಿಲ್ವವತ್ | ವಿಸ್ಮಯಾ ವಿಷ್ಟಚಿತ್ತಸ್ಸನ್ ದೋನಮಾರ್ಯೋ ನಯಾನ್ವಿತಃ ||೨೯|| ಪ್ರಣಮ್ಯ ಪರಯಾ ಭಕ್ತ್ಯಾ ಜಗಾದ ಮುನಿಪುಂಗವಂ | ತತ್ರತತ್ಸ್ಥಾನಮಗತ್ವೈವ ಭವತಃ ಕೃಪ ಯಾ ವಿಭೋ ||೩೦|| ಶ್ರೀಪರ್ವತೋಽಯಂ ಸಕಲೋ ಮಯಾದೃಷ್ಟ ಇತಿ ಸ್ಫು

---

ಕಾಚಾರ್ಯರು ಕುಶಲಿಗಳಾಗಿದ್ದಾರೆಯೆ? ಪೂರ್ವದಲ್ಲಿ ಅವರೂ ನಾವೂ ಪರಮ ಸ್ನೇಹಿತರು. ಅವರು ನಮ್ಮಲ್ಲಿ ಬಹಳ ಪ್ರೀತಿಯನ್ನಿಟ್ಟಿದ್ದವರು. ನಮಗೆ ಸರ್ವಜ್ಞಮಲ್ಲಿಕಾರ್ಜುನ ದೇವ ನೆಂದು ಹೆಸರು. ||೨೩|| ನಾವು ಯಾವಾಗಲೂ ಪ್ರೀತಿಯಿಂದ ಈ ಶ್ರೀಶೈಲದಲ್ಲೇ ಇರುವೆವು. ಇಲ್ಲಿಯ ಬೆಟ್ಟಗಳ ಗವಿಗಳ ಕಾಡುಗಳ ದರಿಗಳ ಪ್ರದೇಶಗಳಲ್ಲಿ ಸಂಚರಿಸಿಕೊಂಡು ಶಿವರಾತ್ರಿ ಮಹೋತ್ಸವವನ್ನು ನೋಡುವುದಕ್ಕಾಗಿ ಹೀಗೆ ಬಂದೆವು.'' ಎಂದು ಹೇಳಲಾಗಿ, ದೋನಮಾ ರ್ಯನು ಕೈಮುಗಿದುಕೊಂಡು—ಎಲೈ ಸರ್ವಜ್ಞ ಮಲ್ಲಿಕಾರ್ಜುನಮೂರ್ತಿಯೆ, ಈ ಶ್ರೀಶೈಲದಲ್ಲಿ ಕಂಡ ಅಥವಾ ಕೇಳಿದ ಆಶ್ಚರ್ಯಕರವಾದ ವಿಷಯಗಳೇನಾದರೂ ಉಂಟೆ? ಅದನ್ನೆಲ್ಲಾ ಕೃಪೆ ಯಿಟ್ಟು ಅಪ್ಪಣೆಕೊಡಿಸಿರಿ'' ಎಂದು ಬಿನ್ನೈಸಲು, ಆ ತಪಸ್ವಿಯು ಪ್ರೀತಿಯಿಂದ ದೋನಮಾ ರ್ಯನನ್ನು ಬಾರೆಂದು ಕರೆದುಕೊಂಡು, ಮಹಾ ಬಿಲ್ವವೃಕ್ಷವನಕ್ಕೆ ಹೋಗಿ ||೨೭|| ಅಲ್ಲಿಯ ಗಿರಿಶಿಖರದ ಮೇಲಿದ್ದ ಒಂದಾನೊಂದು ದೀಪವೃಕ್ಷವನ್ನು ಹತ್ತಿಸಿ, ದಯೆಯಿಂದ ಆತನ ನಂಡೆಯಮೇಲೆ ತನ್ನ ಕೈಯನ್ನಿಟ್ಟನು. ||೨೮|| ಅದರಿಂದ ದೋನಮಾರ್ಯನಿಗೆ ಶ್ರೀಗಿರಿಯು ಅಂಗೈಯ್ಯೊಳಗಣ ಬಿಲ್ವಫಲದಂತೆ ಆದ್ಯಂತವಾಗಿ ಕಾಣಿಸಿತು. ಆತನು ನೋಡಿ ಅತ್ಯಾಶ್ಚರ್ಯಪ ಟ್ಟು, ವಿಧೇಯತೆಯಿಂದ ತಪಸ್ವಿಯನ್ನು ನಮಸ್ಕರಿಸಿ—''ಸ್ವಾಮಿ! ತಮ್ಮ ದಯೆಯಿಂದ ಆಯಾ ಬಳಿಗೆ ಹೋಗದೆ ಇದ್ದರೂ ಇದ್ದಲ್ಲಿಯೇ ಈ ಗಿರಿಯ ಆದ್ಯಂತ ಸ್ಥಳಗಳೆಲ್ಲಾ ನನಗೆ ಚೆನ್ನಾಗಿ ಕಾಣಿಸಿದುವು,'' ಎಂದು ಬಿನ್ನೈಸಲಾಗಿ, ತಪಸ್ವಿಯು ಮರಳಿ ದೋನಮಾರ್ಯನನ್ನು ಕುರಿತು

ಟಂ | ದೋನಮಾರ್ಯಂ ಪುನಃ ಪ್ರಾಹ ತಾಪಸಃ ಕೃಪಯಾನ್ವಿತಃ ||೩೧|| ಶ್ರೀ ಮಲ್ಲಿಕಾರ್ಜುನಪುರಂ ಪಶ್ಯೇತತ್ಪರಮೋನ್ನತಂ | ಪ್ರಾಕಾರಾ ಸ್ಸ್ವರ್ಣಕಲಶಾ ನ್ಗೋಪುರಾಣ್ಯುನ್ನತಾನಿಜ ||೩೨|| ಮಲ್ಲಿಕಾರ್ಜುನದೇವಸ್ಯ ಪ್ರಾಸಾದಮಂಟ ಪಂ ಶುಭಂ | ತತ್ಕ್ಷೇತ್ರವಾಸಿನಃ ಪಶ್ಯ ಸದ್ಭಕ್ತಾಂಶ್ಚ ಮಹಾತ್ಮನಃ ||೩೩|| ವೀರಸದ್ಭಕ್ತಕೋಟೀನಾ ಮಾಶ್ರಯಂ ಹಾಟಕೇಶ್ವರಂ | ಆಲೋಕಯೇದಂ ತ ತ್ರಸ್ಥಂ ವೀರಶಂಕರ ಮುತ್ತಮಂ ||೩೪|| ಶ್ರೀವೀರಭದ್ರದೇವಯ್ಯಂ ಶಿವರಾ ತ್ರ್ಯಪ್ಪಿದೇವಯಂ | ಶ್ರೀವೀರಭೋಗಿದೇವಯ್ಯಂ ವೀರದೇವಯ್ಯ ಮುತ್ತಮಂ|| ತಥಾಚಾಕಲದೇವೀಂಚ ಪ್ರಭಾತಯ್ಯಂ ಗಣಾಗ್ರಣಿಂ | ಇತ್ಯಾದಿಕಾ ನ್ವೀರ ಭಕ್ತಿಸ್ಥಾಪಕಾ ನವಲೋಕಯ ||೩೬|| ಪಶ್ಯೈತನ್ಮುಕ್ತಿಶಿಖರಂ ಶ್ರೀಗಿರೌ ಶಿಖ ರೇಶ್ವರಂ | ಪಶ್ಯೇಷ್ಟಕಾಮೇಶ ಮಿದ ಮಿಷ್ಟಸಿದ್ಧಿಸಮಾಶ್ರಯಂ ||೩೭|| ಯ ತ್ಸ್ಮೈತುಕಾ ದೀಶ್ವರಸ್ಯ ಭಜನಾತ್ಸಪ್ತವಾಸರಂ | ದದಾತಿ ಕಾಮಿತಾ ನರ್ಥಾ ನ್ಸಕಲಾ ನ್ನಹಿಸಂಶಯಃ ||೩೮|| ಏತದಾಲೋಕಯ ಶುಭಂಕರಂ ಕರ್ಮಹರೇ ಶ್ವರಂ | ಮಹೇಶೋಪಿ ನವೇತ್ತ್ಯಸ್ಯ ಮಹಿಮಾನಂ ಮಹೋನ್ನತಂ ||೩೯|| ಅತ್ರ ಕಸ್ಮಿಂಶ್ಚಿದುರಗೇ ಮೃತೇ ಕ್ರಿಮಿವೃತೇ ಸ್ಥಿತೇ | ಉತ್ಪಪಾತ ತಮಾದಾಯ ಗೃಧ್ರಏಕೋ ದ್ರುತಂ ನಭಃ ||೪೦|| ವಾತೋಪಹತ್ಯಾ ಪತಿತೌ ತದ್ದೇಹಸ್ಥಾ

---

ಕೃಪೆಯಿಂದ ||೩೧||– "ಅಯ್ಯಾ ಉತ್ಕೃಷ್ಟವಾಗಿರುವ ಈ ಮಲ್ಲಿಕಾರ್ಜುನ ನಗರವನ್ನು ನೋಡು, ಅದರ ಪೌಳಿಗೋಡೆಗಳನ್ನೂ ಮೇಲಿರುವ ಚಿನ್ನದ ಕಲಶಗಳನ್ನೂ, ಪುರದ ಉನ್ನತ ಗಳಾದ ಹೆಬ್ಬಾಗಿಲುಗಳನ್ನೂ, ಮಲ್ಲಿಕಾರ್ಜುನ ದೇವಾಲಯದ ಉಪ್ಪರಿಗೆ ಮಂಟಪವನ್ನೂ, ಆ ಕ್ಷೇತ್ರದಲ್ಲಿರುವ ಮಹಾ ಮಹಿಮರಾದ ಸದ್ಭಕ್ತರನ್ನೂ ನೋಡು. ||೩೩|| ಮತ್ತು ಕೋ ಟ್ಯಂತರ ವೀರಶೈವಭಕ್ತರು ಇಳಿದುಕೊಂಡಿರುವ ಹಾಟಕೇಶ್ವರಸ್ಥಾನವನ್ನು ನೋಡು. ಅಲ್ಲಿ ರುವ ವೀರಶಂಕರ ದೇವನನ್ನೂ, ವೀರಭದ್ರ ದೇವಯ್ಯನನ್ನೂ, ಶಿವರಾತ್ರಿಯ ಅಪ್ಪಿದೇವಯ್ಯನ ನ್ನೂ, ಭೋಗಿದೇವಯ್ಯನನ್ನೂ, ವೀರದೇವಯ್ಯನನ್ನೂ, ಚಾಕಲದೇವಿಯನ್ನೂ, ಪ್ರಭಾತಯ್ಯನ ನ್ನೂ, ಇವರೇ ಮೊದಲಾದ ವೀರಭಕ್ತಿ ಸ್ಥಾಪಕರಾದ ಅನೇಕಗಣ ಶ್ರೇಷ್ಠರುಗಳನ್ನೂ ನೋಡು. ||೩೬|| ಇದೋ ಇತ್ತಕಡೆಯಲ್ಲಿರುವ ಮುಕ್ತಿಶಿಖರವನ್ನೂ ಶಿಖರೇಶ್ವರಸ್ಥಾನವನ್ನೂ ನೋಡು. ೭ ದಿನಗಳು ಅವಿಚ್ಛಿನ್ನವಾಗಿ ಕುಳಿತು ಸೇವಿಸಿದುದೇ ಆದರೆ ಆಶ್ಚರ್ಯಕರವಾಗುವಂತೆ ಸಕಲ ಕಾ ಮಿತಾರ್ಥಗಳನ್ನೂ ನಿಸ್ಸಂಶಯವಾಗಿ ಕೊಡುವ ಇಷ್ಟಕಾಮೇಶ್ವರವನ್ನು ನೋಡು. ಇದೋ ಇಲ್ಲಿರುವ ಮಂಗಳಪ್ರದವಾದ ಕರ್ಮಹರೇಶ್ವರಸ್ಥಲವನ್ನು ನೋಡು. ಇದರ ಅತಿಶಯ ಮಹ ತ್ತ್ವವನ್ನು ಪರಶಿವನೂ ಕೂಡ ಅರಿಯನು. ||೩೯|| ಇಲ್ಲಿ ಹಿಂದೆ ಒಂದು ಹಾವು ಸತ್ತು ಹುಳು ತುಂಬಿ ಬಿದ್ದಿದ್ದಿತು. ಒಂದು ಹದ್ದು ಬಂದು ಅದನ್ನು ಎತ್ತಿಕೊಂಡು ಆಗಸಕ್ಕೆ ಹಾ

ವುಭೌ ಕ್ರಿಮೀ | ಪತಿತ್ವಾ ಸಲಿಲೇ ಸದ್ಯೋ ಮೃತೌ ಕರ್ಮಹರೇಶ್ವರೇ ||೪೧|| ಅಭೂತಾಂ ತತ್ಪುಣ್ಯವಶಾ ದ್ಭುವಿ ಬಲ್ಲಹವಂಶಜೌ | ತಾವುಭೌ ದಂಪತೀ ಭೂತ್ವಾ ಪೂರ್ವಕರ್ಮಹರೇಶ್ವರೇ ||೪೨|| ಸರೋಜಲೇ ವಾತಹತ್ಯಾ ಪತಿತ್ವಾ ಮರಣಕ್ರಮಂ | ಪಟುತತ್ಪುಣ್ಯವಶತೋ ಬಲ್ಲಹಸ್ಯ ಕುಲೇ ಜನಿಂ ||೪೩|| ಜಾತಿಸ್ಮರತ್ವಸಂಧಾನಾ ದ್ವಿದಿತ್ವಾ ತಾವುಭೌ ಜವಾತ್ | ಅವಾಪತು ಶ್ರೀಗಿರೀಂದ್ರಂ ನಿಯೋಗ್ಯೈ ಸ್ವಕಲ್ಯೈಸ್ಸಹ ||೪೪|| ಬಲ್ಲಹೋ ಭಕ್ತಿಸಂಯುಕ್ತೋ ದೃಷ್ಟ್ವಾ ಶ್ರೀಮಲ್ಲಿಕಾರ್ಜುನಂ | ದಿವ್ಯಪ್ರಭಾಚಯೈ ರ್ದೀಪ್ತಂ ಪ್ರಾಸಾದಂ ವರಮಂಟಪಂ|| ಮಹಾನಸಂ ಕಾರಯಿತ್ವಾ ಮಹತ್ಕೋಶಗೃಹಂ ತಥಾ | ತತ್ರ ಮುಕ್ತಾಮರಕತಪದ್ಮರಾಗಾದಿಭಿ ರ್ವರೈಃ ||೪೬|| ರತ್ನರಾಶಿಭಿ ರಾಪೂರ್ಯ ಸಮಂತಾ ದ್ಭಕ್ತಿಪೂರ್ವಕಂ | ಪೂರ್ಣಂ ಷೋಡಶವರ್ಣೇನ ಸ್ವಕೋಶಾಂತಸ್ಥಿತಂ ಧನಂ ||೪೭|| ಸಹಸ್ರಾರ್ಬುದಸಂಖ್ಯಾತಂ ನಿವೇಶ್ಯ ತದನಂತರಂ | ದಿವ್ಯಾಂಬರಚಯಂ ದಿವ್ಯಂ ಸುಗಂಧದ್ರವ್ಯಸಂಹತಿಂ ||೪೮|| ದಿವ್ಯಾಭರಣಸಂದೋಹಂ ಸ್ವರ್ಣೋಪಕರಣಾನಿಚ | ಸ್ವರ್ಣಪುಷ್ಪಾಣಿಚ ಸ್ವರ್ಣಭಾಂಡಾನಿ ವಿವಿಧಾನ್ಯಪಿ ||೪೯|| ವಾದ್ಯಾನಿ ಮೌಕ್ತಿಕಚ್ಛತ್ರಸ್ವರ್ಣಚಾಮರಸಂಹತಿಂ | ಸಮುಪ್ಯಾಂದೋಳಿಕಾಂ ವಾಜಿರಥ

---

ರಿಹೋಯಿತು. ಆಗ ಆ ಹಾವಿನಲ್ಲಿದ್ದ ೨ ಹುಳುಗಳು ಗಾಳಿಯ ಬಡಿತದಿಂದ ಕಳಚಿ ಈ ಕರ್ಮಹರೇಶ್ವರ ತೀರ್ಥ ಜಲದಲ್ಲಿ ಬಿದ್ದು ಥಟ್ಟನೆ ಸತ್ತವು. ||೪೧|| ಆ ಪುಣ್ಯಬಲದಿಂದ ಹುಳುಗಳೆರಡೂ ಭೂತಲದಲ್ಲಿ ಬಲ್ಲಹ ರಾಜಕುಲದಲ್ಲಿ ಹುಟ್ಟಿದುದಲ್ಲದೆ ತಮ್ಮ ಪೂರ್ವಜನ್ಮಜ್ಞಾನವನ್ನೂ ಕೂಡ ಪಡೆದಿದ್ದುವು. ಅದುಕಾರಣ ಹಿಂದಣ ಜನ್ಮದಲ್ಲಿ ತಾವು ಹುಳುಗಳಾಗಿದ್ದುದೂ, ಕರ್ಮಹರೇಶ್ವರ ಸರಸ್ಸಿನ ತೀರ್ಥದಲ್ಲಿ ಬಿದ್ದುದೂ, ಅದರ ಮಹತ್ವದಿಂದ ತಮಗೆ ಈಗ ರಾಜವಂಶದಲ್ಲಿ ಜನನವಾಗಿರುವುದೂಕೂಡ ತಿಳಿದು ಬರಲಾಗಿ, ಕೂಡಲೇ ಅವರಿಬ್ಬರೂ ತಮ್ಮ ಪರಿವಾರದೊಡನೆ ಶ್ರೀಶೈಲಕ್ಕೆ ಹೋದರು. ಪತಿಯಾದ ಬಲ್ಲಹರಾಜನು ಭಕ್ತಿಯಿಂದ ಶ್ರೀಮಲ್ಲಿಕಾರ್ಜುನ ದರ್ಶನವನ್ನು ಮಾಡಿ, ಥಳಥಳಿಸುವಂತೆ ದೇವಾಲಯವನ್ನೂ, ಹೊರಮಂಟಪವನ್ನೂ, ಅಡುಗೆ ಮನೆಯನ್ನೂ, ಉಗ್ರಾಣವನ್ನೂ ಕಟ್ಟಿಸಿ, ಅಲ್ಲಿ ಮುತ್ತು ಕೆಂಪು ಮರಕತ ಮೊದಲಾದ ನಾನಾ ರತ್ನಗಳ ರಾಶಿಯನ್ನು ತುಂಬಿಸಿ, ತನ್ನ ಬೊಕ್ಕಸದಲ್ಲಿದ್ದ ಹದಿನಾರು ಬಣ್ಣದ ಸಾವಿರಾರು ಅರ್ಬುದಗಟ್ಟಲೆಯ ಭಂಗಾರದ ನಾಣ್ಯಗಳನ್ನೆಲ್ಲಾ ತಂದು ತುಂಬಿಸಿ, ಅದರಮೇಲೆ ದಿವ್ಯ ಪಟ್ಟಪೀತಾಂಬರಗಳನ್ನೂ, ಕಸ್ತೂರಿ ಕುಂಕುಮ ಕೇಸರ ಮೊದಲಾದ ಗಂಧದ್ರವ್ಯಗಳನ್ನೂ, ನಾನಾ ರತ್ನಾಭರಣಗಳನ್ನೂ, ಭಂಗಾರದ ಪಾತ್ರೋಪಕರಣಗಳನ್ನೂ, ಚಿನ್ನದ ಹೂವುಗಳನ್ನೂ, ಸುವರ್ಣದ ಅಡುಗೆಯ ಪಾತ್ರೆಗಳನ್ನೂ, ನಾನಾ ವಾದ್ಯೋಪಕರಣಗಳನ್ನೂ, ಮುತ್ತಿನ ಕೊಡೆಗಳನ್ನೂ, ಭಂಗಾರದ ಹಿಡಿಯ ಚಾಮರಗಳನ್ನೂ, ಪಲ್ಲಕ್ಕಿ ಕುದುರೆ ಆನೆ ರಥ

ನಾಗವ್ರಜಾನಪಿ ||೩೧೦|| ಬಹುಗೋಮಹಿಷವ್ರಾತಾ ಸ್ವಿದುಷೋ ಮಂತ್ರಿಣ ಸ್ತಥಾ | ಭೃತ್ಯಾಂಶ್ಚ ಗಣಕಾ ನ್ಕೋಶಾಧ್ಯಕ್ಷಾ ನ್ಕಂಚುಕಿನಸ್ತಥಾ ||೩೧೧|| ಧಾನ್ಯಾಗಾರಾಧಿಪಾ ನ್ಪಾಚಕೌಘಯಾಮಿಕಸಂಹತಿಂ | ಪುರೋಹಿತಾನ್ ಹಿತಾ ನಾಪ್ತಾನ್ ಸೇನಾಧ್ಯಕ್ಷಾಂಶ್ಚ ಕಿಂಕರಾನ್ ||೩೧೨|| ಪೌರಾಣಿಕಾಂ ಸ್ತಾರ್ಕಿಕಾಂಶ್ಚ ಗಾಯಕಾ ನ್ನರ್ತಕಾ ನ್ಕವೀನ್ | ಪಂಡಿತಾ ನ್ಪಾಠಕಾ ನ್ದ್ವಾಸ್ಥಾ ನ್ನರ್ತಕೀನಾಂ ಕದಂಬಕಂ || ೩೧೩ || ಇತ್ಯಾದಿಕಂ ನಿಯೋಗಂ ಸ್ವಂ ದ್ವಿಸಪ್ತತಿಮಿತಂ ಮುದಾ | ದ್ವಿಸಪ್ತತಿನಿಯೋಗಾರ್ಥ ಮಾಶಾಯ ವಿನಿವೇದ್ಯ ಚ ||೩೧೪|| ಬಹುಭಿರ್ವಚನೈಃ ಕಿಂವಾ ಮುಕ್ತ್ವಾತ್ಮಾನಂ ಸತೀಮಪಿ | ಅನ್ಯ ನ್ನ್ಯವೇದಯದ್ರಾಜ್ಯಂ ಸಕಲಂ ಶಂಭವೇ ಸ್ವಕಂ ||೩೧೫|| ಏವಂ ಸಮರ್ಪ್ಯ ದೇವಾಯ ಸ್ವಸತೀಮುಖ ಮೈಕ್ಷತ | ಸಾಪಿ ತದ್ವನ್ಮಠಂ ಸಮ್ಯಗ್ರಚಯಿತ್ವೈಕ ಮುತ್ಸುಕಾ ||೩೧೬|| ಸ್ವಭಾಂಡಾಗಾರ ಮಖಿಲಂ ಸದ್ವಸ್ತೂನಾಂ ಕದಂಬಕಂ | ಅನರ್ಘ್ಯರತ್ನಸಂದೋಹಂ ಭೂಷಣಾನ್ಯಖಿಲಾನಿಚ || ೩೧೭ || ತತ್ರಾಪೂರ್ಯ ನಿಯೋಗಂ ಸ್ವಂ ಚಾರ್ಪಯಾಮಾಸ ಭಕ್ತಿತಃ | ತತ ಸ್ಸಬಲ್ಲಹ ಶ್ಶಂಭುಂ ನಮಸ್ಕೃತ್ವಾತಿಭಕ್ತಿಮಾನ್ ||೩೧೮|| ಏಕಂ ವಾಸೋ ವನಿತಯಾಸಹ ಧೃತ್ವೇದ

---

ಮೊದಲಾದ ವಾಹನಗಳನ್ನೂ, ಅನೇಕಾನೇಕ ಗೋವುಗಳನ್ನೂ, ಕೋಣಗಳನ್ನೂ, ವಿದ್ವಾಂಸರು, ಮಂತ್ರಿಗಳು, ಊಳಿಗದವರು, ಲೆಕ್ಕ ಬರೆಯುವವರು, ಬೊಕ್ಕಸದ ಅಧಿಕಾರಿಗಳು, ಓಲಿಕಾರರು, ಉಗ್ರಾಣದ ಗುರುಕಾರರು, ಪರಿಚಾರಕರು, ತಳಾರರು, ಪುರೋಹಿತರು, ಆಪ್ತಾಲೋಚಕರು, ಸೇನಾಪತಿಗಳು, ಆಳುಗಳು, ಪೌರಾಣಿಕರು, ನೈಯಾಯಿಕರು, ಸಂಗೀತಗಾರರು, ನಾಟ್ಯಗಾರರು, ಕವಿಗಳು, ಶಾಸ್ತ್ರಪಂಡಿತರು, ಬೋಧಕರು, ದ್ವಾರಪಾಲಕರು, ನಾಟ್ಯಗಾತಿಯರು, ಇವರೇ ಮೊದಲಾದ ಔಪಚಾರಿಕ ಜನರನ್ನೆಲ್ಲಾ ಬಿಟಮಾಡಿ, ಸ್ವಾಮಿ ಸೇವೆಗೆ ಸಮರ್ಪಿಸಿ, ತನ್ನ ೭೨ ಬಗೆಯ ಊಳಿಗದವರನ್ನೂ ಶ್ರೀಮಲ್ಲಿಕಾರ್ಜುನಸ್ವಾಮಿಯ ಊಳಿಗಕ್ಕೆ ನಿಯಮಿಸಿ, ಕಡೆಗೆ ತನ್ನನ್ನೂ ತನ್ನ ಪತ್ನಿಯನ್ನೂ ತನ್ನ ಸಕಲ ರಾಜ್ಯವನ್ನೂ ಸಹ ಶಿವನಿಗೆ ಸಮರ್ಪಿಸಿಬಿಟ್ಟು, ಬಳಿಕ ತನ್ನ ಪತ್ನಿಯ ಮುಖವನ್ನು ನೋಡಿದನು. ಆಕೆಯೂಕೂಡ ಸಂತೋಷದಿಂದ ಹಾಗೆಯೇ ಒಂದುಮಠವನ್ನು ಚೆನ್ನಾಗಿ ಕಟ್ಟಿಸಿ, ತನ್ನ ಬೊಕ್ಕಸದಲ್ಲಿದ್ದ ಸಕಲ ವಸ್ತುಗಳನ್ನೂ ಅಮೌಲ್ಯಗಳಾದ ಸಕಲ ರತ್ನಾಭರಣಗಳನ್ನೂ ತರಿಸಿ ಆ ಮಠಕ್ಕೆ ತುಂಬಿಸಿ, ತಾನೂಕೂಡ ಅಲ್ಲಿಗೆ ತಕ್ಕ ಊಳಿಗದವರನ್ನು ಏರ್ಪಡಿಸಿ, ಭಕ್ತಿಯಿಂದ ಸರ್ವವನ್ನೂ ಶಿವಾರ್ಪಿತಮಾಡಿದಳು. ಬಳಿಕ ಆ ಬಲ್ಲಹಭೂಪಾಲನು ಅತಿ ಭಕ್ತಿಯಿಂದ ಶಿವನನ್ನು ನಮಸ್ಕರಿಸಿ ||೩೧೮|| ಹೆಂಡತಿಯೊಡನೆ ಕೂಡಿ, ಹೊದೆದಿರುವ ಒಂದು ಬಟ್ಟೆಯ ಹೊರತು ಮತ್ತೇನೂ

ಮುಬ್ರವೀತ್ | ಘೋರದುರ್ವಾರಸಂಸಾರವಾರಿಧೇಃ ಪಾರ ವಿಾಕ್ಷ್ವರ ||೨೯|| ಪ್ರಾಪಯಾಖಿಲದುಷ್ಕರ್ಮಪಾಶಬಂಧಾ ಸ್ವಿಮೋಚಯ | ಮಹೇಶ್ವರೈವ ವಾ ವಾಭ್ಯಾಂ ಸೇವಾಂ ಕಾರಯ ಸರ್ವದಾ ||೬೦|| ಅಯಂ ಮದೀಯ ಇತಿ ವಾಂ ಮಾವಿಸ್ಮರ ಸದಾಶಿವ | ಬಹುನಾ ಕಿಂ ಮದೀಯೇಚ್ಛಾ ಮಖಿಲಾಂ ಕುರು ಶಂ ಕರ ||೬೧|| ಶ್ರೀಶೈಲನಾಥ ಕರುಣಾಕರ ಶ್ರೀಮಲ್ಲಿಕಾರ್ಜುನ | ಏವಮುಕ್ತ್ವಾ ಸತೀಯುಕ್ತಃ ಪ್ರಣಿಪತ್ಯ ಮಹೀಪತಿಃ ||೬೨|| ಸಮಾರೂಢಗಜೇನೈವಸಹ ಕರ್ಮ ಹರೇಶ್ವರೇ | ನಿಪತ್ಯ ವಿಶದೀಶಸ್ಯ ಗರ್ಭ ಮತ್ಯದ್ಭುತಂ ತದಾ ||೬೩|| ಪುರಾ ಸಪರ್ಯಾಸಮಯೇ ಬಲ್ಲಹೇನ ಮಹೀಶಿತುಃ | ಅಭಿಷಿಕ್ತಂ ಕ್ಷೀರ ಮಸ್ಯಾಂ ಸರ ಸ್ಯಾ ಮುದಭೂದ್ಯತಃ ||೬೪|| ಪಾಲುಟ್ಲಿತಿ ಪರಿಖ್ಯಾತ ಮಭೂ ತ್ತತ್ತೀರ್ಥ ಮು ತ್ತಮಂ | ಬಹವೋಽತ್ರ ನಿಪತ್ಯಾಶು ಪ್ರಾಪು ರಿಷ್ಟಾರ್ಥಸಂಹತಿಂ ||೬೫|| ಆ ಲೋಕಯೇತಶ್ಶೃಂಗೇಷು ತ್ರಿಷು ತ್ರೀ ನವನೀರುಹಾನ್ | ಸಿದ್ಧ್ಯೇ ದಾಕಾ ರತ್ರಿತಯ ಮಿಮಾ ನ್ಯೋವೀಕ್ಷತೇ ತರೂನ್ ||೬೬|| ಏಕಸ್ಯ ಮೂಲ ಮೇಕ ಸ್ಯ ಮಧ್ಯ ಮೇಕಸ್ಯ ಚಾಗ್ರಿಮಂ | ಭಾಗಂ ಸ್ಪೃಷ್ಟ್ವಾ ಸ್ವರ್ಗಮರ್ತ್ಯಪಾತಾ ಳಚರಿತಂ ಸದಾ ||೬೭|| ಅತಿಸ್ಫುಟತರಂ ಸದ್ಯ ಸ್ಸರ್ವಂ ಪಶ್ಯತಿ ಮಾನವಃ |

---

ಇಲ್ಲದವನಾಗಿ, ಪರಶಿವನನ್ನು ಕುರಿತು ಕೈಜೋಡಿಸಿ– "ಎಲೈ ಶಂಕರನೆ! ಭೀಕರ ಸಂಸಾರ ಸಾಗರದಿಂದ ನಮ್ಮನ್ನುದ್ಧರಿಸು. ನಮ್ಮ ಸಕಲ ದುಷ್ಕರ್ಮಪಾಶಬಂಧನಗಳನ್ನೂ ಬಿಡಿಸು, ಯಾವಾಗಲೂ ನಮ್ಮಿಂದ ಹೀಗೆಯೇ ನಿನ್ನ ಸೇವೆಯು ಸಾಗುವಂತೆ ಅನುಗ್ರಹಿಸು. ಇವನು ನಮ್ಮವನು ಎಂದು ನಮ್ಮನ್ನು ಉಪೇಕ್ಷೆಯಿಂದ ಎಂದಿಗೂ ಮರೆಯದಿರು. ಎಲೈ ದಯಾನಿಧಿ ಯಾದ ಶ್ರೀಗಿರಿ ಮಲ್ಲಿಕಾರ್ಜುನಮೂರ್ತಿಯೆ, ಸರ್ವಜ್ಞ ಮಹಾಪಾವನಲ್ಲಿ ಹೆಚ್ಚು ಬಿನ್ನೈಸಿ ಕೊಳ್ಳುವುದೇನಿದೆ? ನಮ್ಮ ಸಕಲೇಷ್ಟಾರ್ಥಗಳನ್ನೂ ಪರಿಪೂರ್ಣಮಾಡು" ಎಂಬುದಾಗಿ ಆ ನರಪತಿಯು ಸತೀಸಮೇತನಾಗಿ ಬಿನ್ನಯಿಸಿ ನಮಸ್ಕರಿಸಿ ||೬೨|| ಆಗ ಅವರಿಬ್ಬರೂ ಆನೆಯ ನ್ನು ಏರಿಕೊಂಡೇ ಅದರ ಸಮೇತ ಆಶ್ಚರ್ಯಕರವಾಗಿ ಕರ್ಮಹರೇಶ್ವರ ಸರಸ್ಸಿನಲ್ಲಿ ಬಿದ್ದು ಮು ಳುಗಿ ಈಶ್ವರಗರ್ಭವನ್ನು ಹೊಕ್ಕರು. ||೬೩|| ಪೂರ್ವದಲ್ಲಿ ಹೀಗೆ ಆ ಬಲ್ಲಹರಾಜನು ಪೂಜೆ ಮಾಡುವಾಗ್ಗೆ ಅಭಿಷೇಕ ಮಾಡಿದ ಹಾಲು ಹರಿದುಬಂದು ಈ ಸರೋವರದಲ್ಲಿ ತುಂಬಿ ಉಕ್ಕೇ ರಲಾಗಿ, ಈ ತೀರ್ಥಕ್ಕೆ ಅಂದಿನಿಂದ "ಪಾಲುಟ್ಲುತೀರ್ಥ"ವೆಂಬ ಪ್ರಸಿದ್ಧಿಯುಂಟಾಯಿತು. ಇದರಲ್ಲಿ ಬಹುಜನರು ಬಿದ್ದು ಮುಳುಗಿ ತಂತಮ್ಮ ಇಷ್ಟಾರ್ಥಗಳನ್ನು ಶೀಘ್ರವಾಗಿ ಪಡೆದು ಕೊಂಡಿರುವರು. ||೬೪|| ಇತ್ತಕಡೆಗೆ ನೋಡು, ಇಲ್ಲಿರುವ ಮೂರು ಕೋಡುಗಲ್ಲುಗಳಮೇಲೆ ಮೂರು ಮರಗಳಿರುವುವು. ಇವುಗಳನ್ನು ನೋಡಿದವನಿಗೆ ಮೂರು ತೆರದ ಆಕಾರಗಳುಂಟಾಗು ವುವು. ಆ ಮರಗಳಲ್ಲಿ ಒಂದರ ಬುಡವನ್ನೂ, ಒಂದರ ಮಧ್ಯಭಾಗವನ್ನೂ, ಒಂದರ ತುದಿಯ

ಏಕಸ್ಯ ಮೂಲ ಮೇಕಸ್ಯ ಪುಷ್ಪ ಮೇಕಸ್ಯಚ ಛದಾಂ ||೨೮|| ಧೃತ್ವಾಽಜವಿಷ್ಣುರುದ್ರಾಣಾಂ ಸಮೀಪೇ ಪರಿವರ್ತತೇ | ಶಲಾಟು ಮೇಕಭೂಜಸ್ಯ ಫಲ ಮೇಕಮಹೀರುಹಃ ||೨೯|| ಬೀಜ ಮೇಕಸ್ಯ ವೃಕ್ಷಸ್ಯ ಭಕ್ಷಯಿತ್ವಾಽತ್ರಮಾನವಃ | ಉತ್ಪತ್ತಿಸ್ಥಿತಿನಾಶೈಶ್ಚ ಮುಕ್ತ ಶ್ಶಿವಪುರಂ ವ್ರಜೇತ್ ||೩೦|| ಯೋವಾ ಕಾಲತ್ರಯೇ ವೃಕ್ಷಾ ನ್ನಿಮಾ ನಾಹಾರವರ್ಜಿತಃ | ಭಜತೇ ಭಕ್ತಿಸಂಯುಕ್ತ ಸ್ತ್ರೀಣಿ ತ್ರೀಣಿ ದಿನಾನ್ಯಸೌ ||೩೧|| ನರ ಸ್ಸಾಲೋಕ್ಯಸಾಮೀಪ್ಯಸಾರೂಪ್ಯಾಣಿ ಸಮಾಪ್ನುಯಾತ್ | ಏತೇ ಕಥಂ ದೃಷ್ಟಿಪಥಂ ವೃಕ್ಷಾ ಯಾಂತೀತಿ ಚೇ ಚ್ಛೃಣು ||೩೨|| ಶ್ರೀಮಲ್ಲಿಕಾರ್ಜುನಂ ದೇವಂ ಪಾಲುಟ್ಲುಸ್ಥಾನವಾಸಿನಂ | ಸಾರ್ಧಖಾರೀಪ್ರಮಾಣೇನ ಪ್ರತ್ಯೇಕ ಮತಿಭಕ್ತಿತಃ ||೩೩|| ಘೃತೇನ ದಧ್ನಾ ಕ್ಷೀರೇಣ ಸಹಸ್ರಕಲಶೋದಕೈಃ | ಅಭಿಷಿಚ್ಯಾಥ ಸಾಹಸ್ರಸಂಖ್ಯಾಕೈಃ ಪಂಕಜೈ ಸ್ತಥಾ ||೩೪|| ಕರ್ಣಿಕಾರೈ ರುತ್ಪಲೈಶ್ಚ ಸಮಭ್ಯರ್ಚ್ಯ ಮಹೇಶ್ವರಂ| ಸಹಸ್ರಪಲಮಾನೇನ ವರಗುಗ್ಗುಲುನಾ ತತಃ ||೩೫|| ಧೂಪಂ ದತ್ವಾ ಸಹಸ್ರೇಣ ಮಿತಾ ನೀರಾಜನಾಅಪಿ | ಪಂಚಭಕ್ಷ್ಯೈಶ್ಚ ಪಾಯಸೇನ ಷಡ್ರಸಾನ್ನೈಶ್ಚ ಸಮನ್ವಿತಂ ||೩೬|| ದತ್ವೋಪಹಾರಂ ಸದ್ಭಕ್ತ್ಯಾ ಮೂಲಪಂಚಾಕ್ಷರೀಂ ಜಪೇ

---

ನ್ನೂ ಸ್ಪರ್ಶಿಸಿದರೆ ಕೂಡಲೇ ಸ್ವರ್ಗ ಮರ್ತ್ಯ ಪಾತಾಳವೆಂಬ ಮೂರು ಲೋಕಗಳಲ್ಲಿ ನಡೆಯುವ ಕೆಲಸವೆಲ್ಲಾ ಸ್ಪಷ್ಟವಾಗಿ ಕಾಣಬರುವುವು. ಮತ್ತು ಒಂದರ ಬುಡವನ್ನೂ, ಒಂದರ ಹೂವನ್ನೂ, ಒಂದರ ಎಲೆಯನ್ನೂ ಹಿಡಿದುಕೊಂಡವನು ಬ್ರಹ್ಮ ವಿಷ್ಣು ರುದ್ರರ ಸಾಮೀಪ್ಯವನ್ನು ಪಡೆಯುವನು. ಮತ್ತು ಒಂದು ಮರದ ಕಾಯನ್ನೂ, ಒಂದು ಮರದ ಹಣ್ಣನ್ನೂ, ಒಂದು ಮರದ ಬೀಜವನ್ನೂ ತಿಂದ ಮನುಷ್ಯನು ಸೃಷ್ಟಿ ಸ್ಥಿತಿ ಲಯಗಳಿಂದ ಬಿಡುಗಡೆ ಹೊಂದಿ ಕೈಲಾಸವನ್ನು ಹೊಂದುವನು. ||೩೦|| ಯಾವನೊಬ್ಬನು ಉಪವಾಸವಿದ್ದು ಮೂರು ಮೂರು ದಿನಗಳವರೆಗೆ ತ್ರಿಕಾಲಗಳಲ್ಲೂ ಭಕ್ತಿಯಿಂದ ಈ ಮೂರು ಮರಗಳನ್ನೂ ಸೇವಿಸುವನೋ ಅವನು ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಪದವಿಗಳನ್ನು ಪಡೆಯುವನು. ಈ ಮರಗಳು ಹೇಗೆ ಕಣ್ಣಿಗೆ ಕಾಣಿಸುವುವು ಎಂದರೆ ಹೇಳುತ್ತೇನೆ ಕೇಳು— ಈ ಪಾಲುಟ್ಲು ತೀರ್ಥಸ್ಥಲದಲ್ಲಿರುವ ಶ್ರೀ ಮಲ್ಲಿಕಾರ್ಜುನ ಲಿಂಗವನ್ನು ೧|| ಕಂಡಗ ತುಪ್ಪ, ೧|| ಕಂಡಗ ಮೊಸರು, ೧|| ಕಂಡಗ ಹಾಲು, ಸಾವಿರ ಕೊಡಗಳ ಜಲ— ಇವುಗಳಿಂದ ಅಭಿಷೇಕಮಾಡಿ, ಸಾವಿರ ತಾವರೆಗಳಿಂದಲೂ, ಸಾವಿರ ಬೆಟ್ಟದಾವರೆ ಹೂವುಗಳಿಂದಲೂ, ಸಾವಿರ ನೈದಿಲುಗಳಿಂದಲೂ ಪೂಜಿಸಿ, ಸಾವಿರ ಪಲಗಳ (೧ ಪಲಕ್ಕೆ ೧೦ ಹಣ ತೂಕ) ತೂಕದ ಗುಗ್ಗುಲದಿಂದ ಧೂಪವನ್ನು ಹಾಕಿ ಸಮರ್ಪಿಸಿ, ಸಾವಿರ ದೀಪಾರತಿಗಳನ್ನು ಬೆಳಗಿ, ೫ ತೆರದ ಭಕ್ಷ್ಯಗಳಿಂದಲೂ, ಷಡ್ರುಚಿಸಮೇತಗಳಾದ ಅನ್ನಗಳಿಂದಲೂ ಕೂಡಿದ ನೈವೇದ್ಯವನ್ನು ಸಮರ್ಪಿಸಿ, ಮೂರುಸಾವಿರ ಮೂ

ತ್ರ | ಸಹಸ್ರತ್ರಿತಯಂ ಧೀಮಾಂ ಸ್ತಸ್ಯ ದೇವ ಸ್ತ್ರಿಭಿ ರ್ದಿನೈಃ ||೭೭|| ದಿವ್ಯದೃಷ್ಟಿಂ ಘನತರಜ್ಞಾನಂ ದದ್ಯಾ ನ್ಮಹೇಶ್ವರಃ | ವೃಕ್ಷತ್ರಯಂ ತದಪ್ಯಾಶು ದೃಶ್ಯತೇ ತೇನ ಭಾಸುರಂ ||೭೮|| ಅನೇಕಾನಿ ವಿಚಿತ್ರಾಣಿ ಸಂತ್ಯಸ್ಮಿ ನ್ವಿಟಪಿತ್ರಯೇ| ಏಕದ್ಬಿಲ್ವವನಂ ಚಾಸ್ಮಿ ನ್ಪಂಚಯೋಜನವಿಸ್ತೃತೇ ||೭೯|| ಸಂತಿ ಪ್ರತ್ಯಂಗುಲ ಮಿತಭುವಿ ದಿವ್ಯಮಹೀರುಹಾಃ | ದಿವ್ಯೌಷಧಿಸ್ವರೂಪಾಸ್ತೇ ನಾನಾಶ್ಚರ್ಯಮನೋಹರಾಃ ||೮೦|| ಚತುರಂಗುಲಮಾನಾಯಾಂ ಭುವಿ ಸಂತಿ ನವಾ ಲತಾಃ | ನಾನಾಸಾಧಕಸಂದೋಹಸಮುಪಾಸ್ಯಾ ಸ್ಸಮುಜ್ವಲಾಃ ||೮೧|| ಪ್ರತಿಪ್ರಾದೇಶಮಾತ್ರೇಽತ್ರ ಸ್ಥಲೇ ಚಿತ್ರಾಣಿ ಸಂತಿಹಿ | ದುರ್ಜ್ಞೇಯಾನಿ ಮನುಷ್ಯೈಸ್ತೈರನೇಕಾನಿ ಸಮಂತತಃ ||೮೨|| ಸಂತಿಪ್ರತಿವಿತಸ್ತ್ಯಸ್ಮಿನ್ ಸ್ಥಲೇ ಶಂಕರಮೂರ್ತಯಃ | ಅಭೀಷ್ಟಫಲದಾಸ್ಸೈಕತತ್ಪರಾಃ ಪಾತಕಾಪಹಾಃ ||೮೩|| ಪ್ರತ್ಯರತ್ನಿಮಿತೇ ದೇಶೇ ವಸಂತಿ ಮುನಿಪಲ್ಲಯಃ | ಶ್ರುತಿಸ್ಮೃತಿಚಯೋದಗ್ರಾ ಸ್ತಾಸ್ಸಮುನ್ನತಕೀರ್ತಯಃ ||೮೪|| ಪ್ರತಿಹಸ್ತಮಿತೇ ದೇಶೇ ನಿವಸಂತ್ಯತ್ರ ನಿರ್ಜರಾಃ | ಅನೇಕದಿವ್ಯವನಿತಾಜನಸಂದೋಹಶಾಲಿನಃ ||೮೫|| ಪ್ರತಿವ್ಯಾಮಮಿತೇ ದೇಶೇ ಸಂತ್ಯೇತಸ್ಮಿ ನ್ಮಹೀಧರಾಃ | ದಿವ್ಯರತ್ನಾಕರಾಕೀರ್ಣಾ ಮಹಾದ್ಭುತಸಮನ್ವಿ

---

ಲಪಂಚಾಕ್ಷರೀ ಜಪವನ್ನು ಮಾಡಬೇಕು. ಹೀಗೆ ಮಾಡಿದವನಿಗೆ ಮಲ್ಲಿಕಾರ್ಜುನಸ್ವಾಮಿಯು ಮೂರು ದಿನಗಳಲ್ಲಿ ದಿವ್ಯದೃಷ್ಟಿಯನ್ನೂ, ಉತ್ಕೃಷ್ಟ ಶಿವಜ್ಞಾನವನ್ನೂ ಅನುಗ್ರಹಿಸುವನು. ಆ ದಿವ್ಯ ದೃಷ್ಟಿ ಬಲದಿಂದ ಆ ಕೂಡಲೇ ಅವನಿಗೆ ಈ ಮೂರು ಮರಗಳೂ ಸೊಗಸಾಗಿ ಕಾಣಿಸುವುವು. ||೭೮|| ಈ ಮೂರು ಮರಗಳಲ್ಲಿ ಅನೇಕ ವಿಚಿತ್ರ ವಿಷಯಗಳಿವೆ. ಈ ಬಿಲ್ವವನವು ಕೂಡ ಅತ್ಯದ್ಭುತವಾದುದು. ೫ ಯೋಜನದಗಲವಿರುವ ,ಈ ವನದಲ್ಲಿ ಪ್ರತಿಯೊಂದಂಗುಲದಗಲದ ಭೂಮಿಯೊಳಗೂ ದಿವ್ಯ ವೃಕ್ಷಗಳಿರುವುವು. ಅವೆಲ್ಲವೂ ನಾನಾಶ್ಚರ್ಯಕರಗಳಾದ ದಿವ್ಯಮೂಲಿಕಾಸ್ವರೂಪಗಳಾಗಿರುವುವು. ||೮೦|| ನಾಲ್ಕು ನಾಲ್ಕಂಗುಲದ ದೂರಕ್ಕೆ ಹೊಸಹೊಸ ಬಳ್ಳಿಗಳಿರುವುವು. ಅವು ನಾನಾ ಇಷ್ಟಾರ್ಥ ಸಾಧಕರುಗಳಿಂದ ಉಪಾಸನೆ ಮಾಡಲರ್ಹವಾದುವುಗಳು. ಮತ್ತು ಪ್ರತಿ ಚೋಟುದ್ದದ ದೂರಕ್ಕೂ ಮನುಷ್ಯರಿಂದ ತಿಳಿಯುವುದಕ್ಕೆ ಅಸಾಧ್ಯಗಳಾದ ಅನೇಕ ವಿಚಿತ್ರ ವಿಷಯಗಳಿರುವುವು. ಮತ್ತು ಪ್ರತಿಯೊಂದು ಗೇಣು ದೂರಕ್ಕೂ ಪಾಪವಿನಾಶಕಗಳೂ ಇಷ್ಟಾರ್ಥಪ್ರದಗಳೂ ಆದ ಶಿವಲಿಂಗಮೂರ್ತಿಗಳಿರುವುವು. ||೮೩ ಪ್ರತಿಯೊಂದು ಗುದ್ದು ಮೊಳದ ದೂರಕ್ಕೂ ವೇದಶಾಸ್ತ್ರಘೋಷಸಂಪನ್ನರುಗಳೂ, ಕೀರ್ತಿಸಂಪನ್ನರುಗಳೂ ಆದ ಮುನಿಗಳ ಹಳ್ಳಿಗಳಿರುವುವು. ಪ್ರತಿ ಮೊಳದ ದೂರದಲ್ಲೂ ದಿವ್ಯಾಂಗನಾಸಮೇತರಾದ ದೇವತೆಗಳು ವಾಸಮಾಡಿಕೊಂಡಿರುವರು ||೮೫|| ಪ್ರತಿಯೊಂದು ಮಾರಿನ ದೂರದಲ್ಲೂ ಮಹಾಶ್ಚರ್ಯಸಂಪನ್ನಗಳೂ, ದಿವ್ಯಸಮುದ್ರಸಮೇತಗಳೂ ಆದ ಪರ್ವತಗಳಿರುವುವು. ಪ್ರತಿಯೊಂ

ತಾಃ ||೮೬|| ವಿದ್ಯಂತೇಽತ್ರ ಪ್ರತಿಕ್ರೋಶಂ ಕೂಟಾನಿ ವಿವಿಧಾನಿಚ | ಅನೇಕ
ಸಿದ್ಧಯೋಗೀಂದ್ರಸೇವಿತಾನಿ ನಿರಂತರಂ ||೮೭|| ತತ್ರತತ್ರಚ ವಿದ್ಯಂತೇ ಪ್ರಾ
ಸಾದಾ ಸ್ಸುಮನೋಹರಾಃ | ಸಂತತಪ್ರಮಥಾಧೀಶಸಂದೋಹಪರಿಸೇವಿತಾಃ||
ಪ್ರತಿಗವ್ಯೂತಿ ವಿದ್ಯಂತೇ ಭವನಾನ್ಯತ್ರ ಸರ್ವತಃ | ವಿರಕ್ತಜನಸಂದೋಹಸಂಶ್ರಿ
ತಾನಿ ನಿರಂತರಂ ||೮೯|| ಪ್ರತಿಯೋಜನ ಮಥ್ವಾನೋ ವಿದ್ಯಂತೇಽತ್ರ ಸಮಂ
ಚಿತಾಃ | ಸಮಸ್ತಸಾಧಕವ್ಯೂಹ ಕಾಮಿತಾರ್ಥಪ್ರದಾಯಿನಃ ||೯೦|| ಅನ್ಯದ
ದ್ಭುತ ಮಸ್ತ್ಯತ್ರ ಛಾಯಾಛತ್ರಮಿತಿ ಶ್ರುತಂ | ಅಧೋಮಹೀರುಹೋ ನಾಸ್ತಿ
ನಾಸ್ತ್ಯೂರ್ಧ್ವಮಪಿ ವಾರಿದಃ ||೯೧|| ಛಾಯಾ ಕಾಪಿ ಸಮಾಯಾತಿ ಸಾ ಯ
ಸ್ಮಿನ್ನಾಪತೇ ನ್ನರೇ | ಸಸ್ವಾಭಿಮತಸರ್ವಾರ್ಥಭೋಗಯುಕ್ತೋ ಭವೇನ್ನರಃ||
ಪಶ್ಯೇಮಂ ವೃಕ್ಷ ಮೇತಸ್ಯ ಛಾಯಾಽಧಸ್ತಾ ನ್ನವಿದ್ಯತೇ | ಏತಸ್ಯಾದೃಶ್ಯಕ
ರಣೀಂ ಮೂಲಂ ವಿದ್ಧಿ ಮಹಾಮತೇ ||೯೩||ಸ ಮೋಹಿನೀಗಜಇತಿ ಪರಿಖ್ಯಾತ
ಶ್ಶಿಲಾಗಜಃ | ತಂ ಸಮಾರೋಹತಿ ಯದಾ ಸಮುಪಾಗತ್ಯ ಸಾಧಕೇ ||೯೪||
ಕ್ರುದ್ಧ ಸ್ಸಮುತ್ಪತತ್ಯುಚ್ಚೈ ರ್ವಲ್ಗತಿ ಪ್ರಚಲತ್ಯಪಿ|ದೇಹಂ ಪರಿಕ್ಲೇಶಯತಿಕುರು

---

ದು ಹರದಾರಿ ದೂರಕ್ಕೂ ಸಿದ್ಧರೂ, ಯೋಗೀಶ್ವರರೂ, ಸೇವಿಸಲ್ಪಡುತ್ತಿರುವ ನಾನಾ ಕೂಡು
ದಾಣಗಳಿರುವುವು. ಮತ್ತು ಅಲ್ಲಲ್ಲಿಗೆ ಪ್ರಮಥ ಶ್ರೇಷ್ಠರುಗಳಿಂದ ತುಂಬಿರುವ ಮನೋಹರಗ
ಳಾದ ಉಪ್ಪರಿಗೆಗಳಿರುವುವು. ||೮೮|| ಪ್ರತಿಯೆರಡು ಹರದಾರಿಯ ದೂರಕ್ಕೂ ವಿರಕ್ತಮಂಡ
ಲಿಯಿಂದ ಯಾವಾಗಲೂ ತುಂಬಿರುವ ಮನೆಗಳು ಇರುತ್ತಿರುವುವು. ಮತ್ತು ಪ್ರತಿಯೊಂದು
ಗಾವುದದ ದೂರಕ್ಕೂ ಅನೇಕ ಸಾಧಕಜನಸಮೂಹಕ್ಕೆ ಇಷ್ಟಾರ್ಥಗಳನ್ನು ಕೊಡುವ ಮಾರ್ಗ
ಗಳಿರುವುವು. ||೯೦|| ಇವಲ್ಲದೆ ಇಲ್ಲಿ ಮತ್ತೊಂದು ಆಶ್ಚರ್ಯಕರವಾದ ಛಾಯಾಛತ್ರವೆಂಬ
ಸ್ಥಲವಿದೆ. ಅಲ್ಲಿ ಕೆಳಗೆ ಭೂಮಿಯಮೇಲೆ ಮರವಿಲ್ಲ. ಮೇಲೆ ಆಕಾಶದಲ್ಲಿ ಮೋಡವೂ ಇಲ್ಲ.
ಆದರೂ ಯಾವುದೋ ಒಂದು ನೆಳಲು ಅಲ್ಲಿ ಬೀಳುತ್ತಿರುವುದು. ಆ ನೆಳಲು ಯಾವ ಮನು
ಷ್ಯನ ಮೇಲೆ ಬೀಳುವುದೋ ಅವನಿಗೆ ಸಕಲೇಷ್ಟಾರ್ಥ ಭೋಗಗಳೂ ಲಭಿಸುವುವು. ||೯೨||
ಇದೋ ಈ ಮರವನ್ನು ನೋಡು. ಇದರ ನೆಳಲು ಕೆಳಗೆ ಬೀಳುವುದೇ ಇಲ್ಲ. ಇದರ ಬೇರು
ಅದೃಶ್ಯಕರಣಿ (ಕಣ್ಣಿಗೆ ಕಾಣಿಸದಂತೆ ಮಾಡುವ ಬೇರು) ಯೆಂದು ತಿಳಿ. ಅಮೋ ಅಲ್ಲಿರುವ
ಕಲ್ಲಿನ ಆನೆಯನ್ನು ನೋಡು, ಅದೇ ಮೋಹಿನೀಗಜವೆಂದು ಪ್ರಸಿದ್ಧವಾದುದು. ಇಷ್ಟಾ
ರ್ಥಸಾಧನಾಪೇಕ್ಷಿಯಾದಾತನು ಯಾವಾಗ ಬಂದು ಅದನ್ನು ಹತ್ತುವನೋ ಆ ಕೂಡಲೇ ಅದು
ಆಗ್ರಹಗೊಂಡು ಮೇಲಕ್ಕೆ ನೆಗೆಯುವುದು, ಕುಗ್ಗುವುದು, ಝಾಡಿಸುವುದು, ಮೇಲೆ ಕುಳಿತಿ
ರುವ ಸಾಧಕನು ಕೆಳಕ್ಕೆ ಬಿದ್ದು ಹೋಗುವಂತೆ ಮಾಡುವುದಕ್ಕಾಗಿ ಬಹಳ ಕ್ಲೇಶಪಡಿಸುವುದು,

ತೇಽತಿತರಾಂ ಭಯಂ||೯೫||ಪತತ್ಯುರ್ವ್ಯಾಂ ಲಂಘಯತಿ ಪರಿಭ್ರಮತಿಚಕ್ರವತ್|
ಏವಂ ಕೃತೇಽಪಿ ನಿರ್ಮುಕ್ತಭಯಚಿತ್ತೋ ನಿರಾಕುಲಃ ||೯೬||ಅಕಂಪಿತಸ್ಥಿರಮನಾ
ಸ್ತಮನಾದೃತ್ಯ ಯೋ ವಸೇತ್ | ಸರ್ವಸಿದ್ಧೀ ರ್ದದಾತ್ಯಸ್ಮೈ ಸಂತುಷ್ಟೋ
ಮೋಹಿನೀಗಜಃ ||೯೭|| ಪಶ್ಯೈತದ್ವನಮಧ್ಯಸ್ಥಕುಧರಾಗ್ರನಿವಾಸಿನಂ | ಬಿಲ್ವ
ವೃಕ್ಷ ಮಧಸ್ತಸ್ಯ ಬಿಲ್ವೇಶ್ವರಶಿವಾಲಯಃ ||೯೮|| ಅಸ್ತಿ ತಂ ಸಾಧಕ ಸ್ಸಪ್ತರಾ
ತ್ರಂ ನಿಷ್ಠಾಸಮನ್ವಿತಃ | ಸಮುಪಾಸ್ಯ ಶಿವಂ ತಸ್ಯ ದೀಪತೈಲಕೃತಾಂಜನಂ ||
ಸಮ್ಯಗ್ಧೃತ್ವಾ ನಯನಯೋ ರ್ದಿವ್ಯದೃಷ್ಟಿ ಮವಾಪ್ನುಯಾತ್ | ಏಕ ಸ್ತದಾ
ಲಯ ಸ್ಸ್ವಲ್ಪೋ ಮಹಾದೇವಪುರಾಂತಿಕೇ ||೧೦೦|| ದೃಶ್ಯತೇ ಕ್ಷೇತ್ರಪಾಲ
ಸ್ಯ ವಿಗ್ರಹ ಸ್ತತ್ರ ತಿಷ್ಠತಿ | ಆಗತೇ ಸಾಧಕೇ ತತ್ರ ಭೈರವೋಽಪಿ ಸಚಾಲಯಃ||
ವರ್ಧತೇಽತಿತರಾಂ ಕ್ಷೇತ್ರಪಾಲೋಽಥ ಕ್ರೋಧಜೃಂಭಿತಃ | ಏನಿರ್ಗ್ರನ್ನಾಸಿ
ಕಾರಂಧ್ರಧೂಮಜ್ವಾಲಸಮಾಕುಲಃ || ೧೦೨ || ಉದ್ವಮನ್ಮುಖತೋಽಂಗಾ
ರಾನ್ ಸ್ಫುಲಿಂಗಾಕೀರ್ಣಲೋಚನಃ | ಘಂಟಾಕಿಂಕಿಣಿಕಾನಾದಪ್ರವಿಘೂರ್ಣಿ
ತದಿಕ್ತಟಃ ||೧೦೩|| ಹುಂಕಾರೈ ಸ್ತರ್ಜಯ ನ್ಮಾಮಾಗಚ್ಛೇತಿ ಪ್ರವದನ್ಮುಹುಃ|

---

ಅತ್ಯಂತ ಭಯವನ್ನುಂಟುಮಾಡುವುದು ||೯೫|| ನೆಲದಮೇಲೆ ಬೀಳುವುದು, ಹಾರುವುದು, ಗರ್‍ರನೆ ಚಕ್ರದಂತೆ ಸುತ್ತುವುದು. ಇಷ್ಟು ಮಾಡಿದರೂ ಮೇಲಿರುವ ಸಾಧಕನು ನಿರ್ಭಯನಾಗಿ ಸ್ಥಿರಮನಸ್ಕನಾಗಿ, ಅದರ ಅವಾಂತರಗಳೊಂದನ್ನೂ ಲಕ್ಷಿಸದೆ ಕುಳಿತಿದ್ದದೇ ಆದರೆ ಆಗ ಆ ಮೋಹಿನೀಗಜವು ಸಂತೋಷಪಟ್ಟು, ಈ ಸಾಧಕನಿಗೆ ಸಕಲ ಸಿದ್ಧಿಗಳನ್ನೂ ಕೊಡುವುದು ||೯೭ ಇದೋ ಈ ಬಿಲ್ವವನದ ಮಧ್ಯದಲ್ಲಿರುವ ಬೆಟ್ಟದ ತುದಿಯಲ್ಲಿ ಬಿಲ್ವವೃಕ್ಷವಿರುವುದನ್ನು ನೋಡು. ಅದರ ಕೆಳಗೆ ಬಿಲ್ವೇಶ್ವರ ದೇವಾಲಯವಿರುವುದು. ಸಾಧಕನು ಅಲ್ಲಿ ೭ ರಾತ್ರಿಗಳಿದ್ದು ಅತ್ಯಂತ ನಿಷ್ಠೆಯಿಂದ ಆ ಬಿಲ್ವೇಶ್ವರನನ್ನು ಪೂಜಿಸಿ, ಅಲ್ಲಿಯ ದೀಪದೆಣ್ಣೆಯ ಕಾಡಿಗೆಯನ್ನು ಚೆನ್ನಾಗಿ ಕಣ್ಣಿಗೆ ಇಟ್ಟುಕೊಂಡುದೇ ಆದರೆ ಅವನಿಗೆ ದಿವ್ಯದೃಷ್ಟಿಯು ಪ್ರಾಪ್ತವಾಗುವುದು. ಅದೋ ಆ ಮಹಾದೇವಪುರದ ಬಳಿಯಲ್ಲಿ ಒಂದು ಚಿಕ್ಕ ದೇವಾಲಯವು ಕಾಣುತ್ತಿದೆ ನೋಡು. ಅದರಲ್ಲಿ ಕ್ಷೇತ್ರಪಾಲಕನೆಂಬ ಭೈರವಮೂರ್ತಿಯು ಇರುವುದು. ಅಲ್ಲಿಗೆ ಸಾಧಕನಾದವನು ಬಂದುದೇ ಆದರೆ ಆ ಭೈರವನೂ ಅವನ ಆಲಯವೂ ಕೂಡ ಬಹಳ ದೊಡ್ಡದಾಗಿ ಬೆಳೆಯುವುವು. ಬಳಿಕ ಆ ಕ್ಷೇತ್ರಪಾಲಕನು ಕೋಪದಿಂದ ಉದ್ದೀಪಿತನಾಗಿ ಮೂಗಿನ ರಂಧ್ರಗಳಿಂದ ಕೋಪಾಗ್ನಿಯ ಹೊಗೆಯನ್ನು ಸುರಿಸುತ್ತ, ಬಾಯಿಂದ ಕೆಂಡಗಳನ್ನು ಕಕ್ಕುತ್ತ, ಕಣ್ಣುಗಳಿಂದ ಕಿಡಿಗಳನ್ನು ಹಾರಿಸುತ್ತ, ತನ್ನ ದೇಹದಲ್ಲಿ ಧರಿಸಿರುವ ಗಂಟೆಗಳ ಗೆಜ್ಜೆಗಳ ಧ್ವನಿಯಿಂದ ದಿಗಂತಗಳನ್ನೆಲ್ಲಾ ಪ್ರತಿಧ್ವನಿಗೊಳಿಸುತ್ತ, ಹೂಂಕರಿಸಿ ಭಯಪಡಿಸುತ್ತ, ಹೋಗಬೇಡ ಹೋಗಬೇಡ ಎಂದು ಬಾರಿಬಾರಿಗೆ ಹೇಳುತ್ತ, ಗಟ್ಟಿಯಾಗಿ ಕೂಗಿ ಭಯಪಡಿಸುತ್ತಿರಲು,

ಅಟ್ಟಹಾಸರವೋದಗ್ರ ಸ್ಸಂತ್ರಾಸಯತಿ ನಿಷ್ಠುರಂ ||೧೦೪|| ತದ್ಭೈರವಸಮು
ದ್ದಂಡಜೃಂಭಣಸ್ಯ ಸಸಾಧಕಃ| ಹಸನ್ನಭೀ ರ್ಜೃಂಭಮಾಣ ಸ್ಸ್ಥಿರಧೀಃ ಪ್ರತಿ
ತರ್ಜಯನ್ ||೧೦೫|| ಧ್ವನಿಂ ಕುರ್ವಂ ಸ್ತಿಷ್ಠತಿಷ್ಠ ಕಿಮರ್ಥಂ ತವ ಸಂಭ್ರ
ಮಃ | ಗೃಹೀತೋಽಸಿ ಮಯೇತ್ಯುಚ್ಚೈ ರ್ವದನ್ನಾಗತ್ಯ ತಚ್ಛಿರಃ ||೧೦೬||
ಆಹನ್ಯಾ ದಂಘ್ರಿಣಾ ತೂರ್ಣಂ ಯಥಾ ಭಗ್ನಂ ಭವೇದ್ಬಲಾತ್ | ಹಸನ್ನಿಪ
ತ್ಯ ತನ್ಮೂರ್ಧಾ ವದತ್ಯಥ ಸವಿಸ್ಮಯಂ ||೧೦೭|| ಸಾಧುಸಾಧು ಸಮುದ್ದಂಡ
ಮಹಾಬಿರುದಸಾಹಸ | ಸತ್ವಸ್ಯ ನಿರ್ಭಯತ್ವಸ್ಯ ಶೌರ್ಯಸ್ಯ ನಿತರಾಂ ತವ ||
ತುಷ್ಟೋಽಸ್ಮಿ ಮುಕ್ತಂ ಯತ್ಕಂಠಕೀಲ ಮದ್ಯ ಮಮಾಽದರಾತ್ | ಬಿಲಂ
ಪ್ರವಿಷ್ಟಏವ ತ್ವಂ ದತ್ತೋ ಮಾರ್ಗೋ ಮಯಾಽಧುನಾ ||೧೦೯|| ಜಿತೇ ಮ
ಯಿ ನಕುತ್ರಾಪಿ ನಿರೋಧೋ ವಿದ್ಯತೇ ತವ | ಮದ್ಗಲದ್ವಾರಸಂಲಕ್ಷ್ಯಬಿಲಂ
ಪ್ರವಿಶ ಸತ್ವರಂ ||೧೧೦|| ಇತ್ಯುಕ್ತೇ ಬಿಲನಿಮ್ನತ್ವಂ ಕಿಯದ್ವೇತ್ಯವಿಚಾರ್ಯಚ |
ನಿವೇಶ್ಯ ತಟಯೋ ರ್ಹಸ್ತೌ ಪಶ್ಯಾಮಿ ತ್ಯವಿಮೃಶ್ಯಚ ||೧೧೧|| ಅಸನ್ನಿ
ಷ್ಯ ಸೋಪಾನಮಾರ್ಗಂ ನಿಶ್ಚಲಮಾನಸಃ | ಪತಿತೋಽಸ್ಮಿ ನ್ನಪಾಯಃ ಕಿಂ ಭ
ವೇದಿತ್ಯನವೇಕ್ಷ್ಯಚ ||೧೧೨|| ಭೈರವಸ್ಯಾಸ್ಯ ಶಿರಸಾ ಹೀನಸ್ಯ ಗಳಮಧ್ಯತಃ|

---

||೧೦೪|| ಸಾಧಕನು ಆ ಭೈರವನ ಕೋಪಾಟೋಪಕ್ಕೆ ಹೆದರದೆ, ಸ್ಥಿರಚಿತ್ತದಿಂದ ಅದನ್ನು ಪರಿಹಾಸಮಾಡಿ ನಕ್ಕು, ಕಲಿತನದಿಂದ ಅದನ್ನು ಪ್ರತಿಭಟಿಸಿ ಗದರಿಸಿ—ನಿಲ್ಲು ನಿಲ್ಲು, ನಿನಗೇಕೆ ಇಷ್ಟುಹೆಮ್ಮೆ? ನನ್ನ ಕೈಗೆ ನೀನು ಸಿಕ್ಕಿದೆ, ಎಂದು ಗಟ್ಟಿಯಾಗಿ ಕೂಗಿ ಹೇಳುತ್ತ, ರಭಸದಿಂದ ಬಂದು ಅದರ ತಲೆಯನ್ನು ಮುರಿದು ಹೋಗುವಂತೆ ಕಾಲಿನಿಂದ ಝಾಡಿಸಿ ಬಲವಾಗಿ ಒದೆಯಬೇಕು. ಆಗ ಅದರ ತಲೆಯು ನಗುತ್ತ ಕೆಳಕ್ಕೆ ಬಿದ್ದು ಆಶ್ಚರ್ಯಕರವಾಗಿ ಹೀಗೆ ಹೇಳುತ್ತದೆ— "ಪ್ರಚಂಡ ಸಾಹಸ ಬಿರುದಾಂಕನಾದ ಎಲೈ ಸಾಧಕನೆ, ಭಲಾ ಭಲಾ! ನೀನು ನನ್ನ ಕೊರಲ ಕೀಲನ್ನು ಕಳಚಿ ಬೀಳಿಸಿದೆಯಾದಕಾರಣ ನೀನು ಮಹಾ ಸಾಹಸಿಯು. ನಿನ್ನ ಬಲಕ್ಕೂ ಧೈರ್ಯಕ್ಕೂ ಪರಾಕ್ರಮಕ್ಕೂ ನಾನು ಬಹಳ ಮೆಚ್ಚಿದೆ. ಅದುಕಾರಣ ನಾನು ಈ ದರಿಗೆ ಹೋಗುವುದಕ್ಕೆ ನಿನಗೆ ಮಾರ್ಗವನ್ನು ಪ್ರೀತಿಯಿಂದ ಕೊಟ್ಟಿರುವೆನು. ಇದನ್ನು ನೀನು ಪ್ರವೇಶಿಸಿದವನೇ ಮುಂದಕ್ಕೆ ಹೋಗು. ಬಾಗುಲಲ್ಲಿರುವ ನಾನು ನಿನಗೆ ಸೋತುಹೋಗಿರುವಬಳಿಕ ಮುಂದೆ ನಿನಗೆ ಎಲ್ಲೂ ತಡೆಯಿರುವುದಿಲ್ಲ. ಇದೋ ಈ ನನ್ನ ಕೊರಲಿನ ಬಾಯಿಯಲ್ಲಿ ಕಾಣುವ ರಂಧ್ರವನ್ನು ಬೇಗನೆ ಪ್ರವೇಶಿಸು||೧೧೦|| ಎಂಬುದಾಗಿ ಆ ಕ್ಷೇತ್ರಪಾಲಕನ ರುಂಡವು ಹೇಳಲು, ಸಾಧಕನು ಆ ಬಿಲದ ಆಳವು ಎಷ್ಟಿರುವುದೆಂಬುದನ್ನು ಕೇಳದೆ, ಆ ಬಿಲದ ಎರಡು ದಡಗಳಲ್ಲೂ ತನ್ನ ಎರಡು ಕೈಗಳನ್ನು ಇಟ್ಟು ಆಳವನ್ನು ಕಾಣೋಣವೆಂದು ಬಗ್ಗಿಯೂ ನೋಡದೆ, ಅದರೊಳಗೆ ಇಳಿಯುವ ಹಂತಗಳೇನಾದರೂ ಇವೆಯೋ ಎಂದು ತಡಕದೆ, ಇದರೊಳಗೆ ಬಿದ್ದರೆ ಯಾವ

ಶತಪೌರುಷಮಾನೇನ ಮಿತನಿಮ್ನತ್ವಸಂಯುತೇ ||೧೧೩|| ತಾವತ್ಪ್ರಮಾಣವಿಸ್ತಾರೇ ನಿಪತ್ಯ ಗತಭೀರ್ಬಿಲೇ | ದಕ್ಷಿಣಾಭಿಮುಖೋ ಭೂತ್ವಾ ಗಚ್ಛೇತ್ತಸ್ಮಿನ್ಬಿಲಾಂತರೇ ||೧೧೪|| ಅಥ ತಿರ್ಯಗ್ಬಿಲಸ್ಯಾಸ್ಯ ಕವಾಟಮಿವ ಭೈರವಃ | ಕುಟಿಲಂ ತಾಪಸಾಕಾರಂ ಧೃತ್ವಾಽತಿತ್ವರಯಾಽನ್ವಿತಃ ||೧೧೫|| ಪ್ರಾಗೇವ ಸ ಸಮಾಗತ್ಯ ತಸ್ಮಿನ್ಮಾರ್ಗೇಽವತಿಷ್ಠತೇ | ನಿರೀಕ್ಷ್ಯ ಸಾಧಕೋಽಪ್ಯೇನಂ ವದೇದೇವಮತಂದ್ರಿತಃ ||೧೧೬|| ಇತೋ ವಾಽಽಯಾಹಿ ಸಹಸಾ ತತೋ ವಾ ಗಚ್ಛ ತಾಪಸ | ಉತ್ತಿಷ್ಠೋತ್ತಿಷ್ಠ ಪಂಥಾನಂ ಗಚ್ಛತೋ ಯಚ್ಛ ಮೇ ದ್ರುತಂ ||೧೧೭|| ಇತ್ಯುಕ್ತಸ್ಸವದತ್ಯೇವಂ ಕಿಮರ್ಥಂ ಭವತಸ್ತ್ವರಾ | ಸಾಧಕತ್ವಂ ದರ್ಶಯಸಿ ತವ ತ್ವಂ ಸುತರಾಮಿಹ ||೧೧೮|| ಅಕೃತ್ವೈವಂ ಸಬಿರುದಂ ಲಕ್ಷ್ಯತೇ ತಾವಕಂ ಕಿಮು | ಜಿಹ್ವಾಯಾ ದುರ್ಲಭಾ ಕಿಂ ತೇ ಶರಣಾರ್ಥೀತಿ ವಾಗ್ಬತ ||೧೧೯|| ನ ಗಚ್ಛತಸ್ತವ ಕಿಮು ಹಸ್ತೌ ವಾ ಮಸ್ತಕಾಂತಿಕಂ | ಭಕ್ತೇ ದಾರಿದ್ರ್ಯಮಾಯಾತಂ ಕಿಮಿದಾನೀಂ ತವಾನಘ ||೧೨೦|| ತಪಸ್ವಿನೋ ವಯಂ ವೃದ್ಧಾ ಬಹುಕಾಲೋಪವಾಸಿನಃ | ವಿಧಾಯ ಬಾಧಾಮಸ್ಮಾಕಂ ಭವತಾ ತದನಂತರಂ||

---

ಅಪಾಯವಾದೀತೋ ಎಂದು ಶಂಕಿಸದೆ, ಸಾಧಕನು ನಿಶ್ಚಲಚಿತ್ತದಿಂದ ಆ ಭೈರವನ ಶಿರೋಹೀನವಾದ ಕುತ್ತಿಗೆಯ ಮಧ್ಯದಲ್ಲಿ ನುಗ್ಗಿ, ನೂರು ಆಳು ಪ್ರಮಾಣದ ಅಗಲವೂ, ಅಷ್ಟೇ ಆಳವೂ ಉಳ್ಳ ಬಿಲದಲ್ಲಿ ನಿರ್ಭಯವಾಗಿ ಬಿದ್ದು, ಟೆಂಕಲ ಕಡೆಗೆ ತಿರುಗಿ ಹೋಗಬೇಕು. ಆ ಬಿಲದೊಳಗೆ ||೧೧೪|| ತಿರುಗಿದರೆ ಅಲ್ಲಿ ಕಾಣುವ ಮತ್ತೊಂದು ಬಿಲಕ್ಕೆ ಹಾಕಿರುವ ಕದದಂತೆ ಅದೇ ಭೈರವನು ಮತ್ತೊಂದು ತಪಸ್ವಿಯಾಕಾರದ ಕಪಟವೇಷವನ್ನು ಧರಿಸಿಕೊಂಡು ಇವನಿಗೆ ಮುಂಚೆಯೇ ಅಲ್ಲಿಗೆ ಹೋಗಿ ಮಾರ್ಗದಲ್ಲಿ ಅಡ್ಡಲಾಗಿ ಕುಳಿತಿರುವನು. ಆಗ ಸಾಧಕನು ಆ ಕಪಟತಾಪಸನನ್ನು ನೋಡಿ. ಕಲಿತನದಿಂದ ಹೀಗೆ ಹೇಳಬೇಕು—||೧೧೬||"ಎಲೈ ತಪಸ್ವಿಯೆ! ಇತ್ತಲಾದರೂ ಬಾ, ಇಲ್ಲವೆ ಅತ್ತಲಾದರೂ ಹೋಗು, ಏಳು ಏಳು, ದಾರಿಗನಾದ ನನಗೆ ಬೇಗನೆ ಮಾರ್ಗವನ್ನು ಬಿಡು,, ಎಂದು ಹೇಳಿದರೆ, ಆಗ ಕಪಟಿಯು—"ನಿನಗೇಕೆ ಇಷ್ಟು ಅವಸರ? ನಿನ್ನ ಸಾಧಕತ್ವದ ಹೆಮ್ಮೆಯನ್ನು ಇಲ್ಲಿ ತೋರಿಸುತ್ತೀಯೊ? ಹೀಗೆ ಉದ್ಧತತನವನ್ನು ತೋರಿಸದೆ ಇದ್ದರೆ ನಿನ್ನ ಬಿರುದು ಕಾಣುವುದಿಲ್ಲವೆಂತಲೊ? ಶರಣಾರ್ಥಿ ಎಂದು ಹೇಳುವುದಕ್ಕೆ ನಿನ್ನ ನಾಲಗೆಗೆ ವಾಗ್ದಾರಿದ್ರ್ಯವೆ? ||೧೧೯|| ಮುಗಿಯುವುದಕ್ಕೆ ತಲೆಯಮೇಲಕ್ಕೆ ಹೋಗಲಾರದೆ ನಿನ್ನ ಕೈಗಳು ಸೆಳೆದುಹೋಗಿರುವುವೆ? ಈಗ ನಿನ್ನ ಭಕ್ತಿಗೆ ದಾರಿದ್ರ್ಯವು ಬಂದಿರುವುದೆ? ||೧೨೦|| ನಾವು ವೃದ್ಧತಪಸ್ವಿಗಳು, ಬಹುಕಾಲದಿಂದ ಉಪವಾಸವಾಗಿರತಕ್ಕವರು. ಇಂಥ ನಮಗೆ ಹಿಂಸೆಯನ್ನು ಕೊಟ್ಟು, ನೀನು ಈಶ್ವರತ್ವವನ್ನು ಸಂಪಾದಿಸಬೇಕೆ? ಇಷ್ಟು ಮಾಡುವುದರಿಂದಲೇ ನಿನಗೆ ಇಷ್ಟಾರ್ಥಸಿದ್ಧಿಯಾಗುವುದೆ? ನೀನು ಸ್ವಲ್ಪವೂ ತಿಳಿದವನಲ್ಲ. ಹೆಚ್ಚು ಮಾ

ಪ್ರಾಪ್ಯಂಕಿಮು ಸಮೀಚೀನಂ ದೇವತ್ವಮಪಿ ಭಾಸುರಂ | ಏತಾವತ್ಯೈವೇಪ್ಸಿತಾರ್ಥಸಿದ್ಧಿಃಕಿಂ ಲಭತೇ ತ್ವಯಾ ||೧೨೨|| ನಕಿಂಚಿದಪಿ ಜಾನಾಸಿ ಬಹುಭಿಃಕಿಂ ಪ್ರಜಲ್ಪಿತೈಃ | ವದಾಮ್ಯೇಕಂ ಮದ್ವಚನಂ ಸಮಾಹಿತಮನಾ ಶ್ರುಣು || ಇತಃಪರಂ ಮನಸ್ಸಮ್ಯ ಗ್ಯಥಾಪೂರ್ವಂ ನತಿಷ್ಠತಿ | ಆಲೋಕಯೈಷಶಾರ್ದೂಲಃ ಪುರತೋಽತ್ರೈವವರ್ತತೇ ||೧೨೪|| ಪಶ್ಚಾತ್ಸುಮಹದ್ಬಿಲಮಿದಂ ಶತಪೂರುಷಮಾನಕಂ | ಪುರತೋ ಗಹ್ವರಃ ಪಶ್ಚಾತ್ಕೂಪ ಇತ್ಯುಕ್ತಿವತ್ತವ ||೧೨೫|| ಕಾರ್ಯಂಹಿ ದುಷ್ಕರತಮ ಮತ್ರೇದಾನೀ ಮುಪಸ್ಥಿತಂ | ಗಮಿಷ್ಯಾ ಮ್ಯವತೀರ್ಯೇತಿ ಯದಿಸ್ಮರಸಿ ಕಿಂಚನ ||೧೨೬|| ಅತ್ರಾವತರಿತುಂ ನಾಹಂ ಸ್ಥಲಮಾಲೋಕಯಾಮ್ಯಧಃ | ಶತಪೂರುಷಮಾನೇನ ಮಿತ ಮೇತದ್ಬಿಲಂ ಪುನಃ ||೧೨೭|| ಕಥಮುತ್ಪತಿತುಂ ಶಕ್ಯಂ ತರವಃ ಪುರತೋ ನಹಿ | ನಸೋಪಾನಾನಿ ನಿಮ್ನತ್ವಂ ಯಾವನ್ಮಾನಂ ಬಿಲಸ್ಯಹಿ ||೧೨೮|| ತಾವಾನೇವಚ ವಿಸ್ತಾರೋ ಗಂತುಂಪಶ್ಚಾನ್ನಶಕ್ಯತೇ | ನಪುರಸ್ತಾದಪಿ ತತೋ ಭವತಾ ಗಮ್ಯತೇ ಕಥಂ ||೧೨೯|| ಪೂಜ್ಯಮಾನೇನ ಲಿಂಗೇನ ತ್ವಯಾ ದುಷ್ಪ್ರಾಪ್ಯ ಮಸ್ತಿ ಯತ್ | ತತ್ಪ್ರದಾತುಂ ಕ್ಷಮಮಿದಂ ಬಿಲಂಕಿಂ ಬ್ರೂಹಿ ಸಾಧಕ||೧೩೦|| ಬಿಲಾನಿ ಕಾನಿ ಸಂವಿಶ್ಯ ಲೋಕೇ ಶಂಕರಕಿಂಕರಾಃ | ಪ್ರಾಪು ರ್ದೃಷ್ಟಾದೃಷ್ಟಫಲಸಂಸಿದ್ಧಿ ಮಮಿತೌಜ

---

ತನಾಡಿ ಫಲವೇನು? ನಾನು ಒಂದು ಮಾತನ್ನಾಡುತ್ತೇನೆ ಚಿತ್ತವಿಟ್ಟು ಕೇಳು—ಇನ್ನುಮುಂದೆ ನಿನ್ನ ಚಿತ್ತವು ಇದುವರೆಗಿದ್ದಂತೆ ಸ್ಥಿರವಾಗಿರಲಾರದು. ಇದೋ ನೋಡು ಹುಲಿಯು ಈ ಮುಂಗಡೆಯೇ ಇದೆ. ಹಿಂಭಾಗದಲ್ಲಿ ನೂರು ಆಳುದ್ದದ ಮಹಾ ಕಮರಿಯಿದೆ. "ಮುಂದೆ ಹಳ್ಳ ಹಿಂದೆ ಬಾವಿ" ಎಂಬ ಮಾತಿನಂತೆ ಈಗ ನಿನ್ನ ಕೆಲಸವು ಬಹಳ ಸಂಕಟಕರವಾಗಿರುವುದು. "ಇದೇನೋ ಸ್ವಲ್ಪ ಆಳವುಳ್ಳದು, ನಾನು ಇಳಿದು ಹೋಗುತ್ತೇನೆ" ಎಂದು ಮನಸ್ಸಿನಲ್ಲಿ ನೀನು ಸ್ವಲ್ಪ ಆಲೋಚಿಸುವೆಯಾದರೆ, ಇಲ್ಲಿ ಕೆಳಗೆ ಇಳಿಯುವುದಕ್ಕೆ ಎಲ್ಲಿ ಸ್ಥಲವಿದೆಯೋ ಅದನ್ನು ನಾನೇ ಕಾಣೆನು. ಈ ಬಿಲವು ೧೦೦ ಆಳುದ್ದವೂ ಅಷ್ಟೇ ಅಗಲವೂ ಉಳ್ಳುದಾಗಿರುವುದು. ಇದನ್ನು ದಾಟುವುದಕ್ಕೆ ತಾನೇ ಹೇಗೆ ಶಕ್ಯವು? ಮುಂಗಡೆಯಲ್ಲಿ ಮರಗಳೂ ಇಲ್ಲ. ಕೆಳಗಡೆ ಹಂತಗಳೂ ಇಲ್ಲ. ಇದರ ಆಳವೆಷ್ಟಿದೆಯೋ ಅಗಲವೂ ಅಷ್ಟೇ ಇದೆ. ಅದುಕಾರಣ ನೀನು ಇದನ್ನು ಬಿಟ್ಟು ಹಿಂದಕ್ಕೆ ಹೋಗುವುದಕ್ಕೆ ಆಗುವುದಿಲ್ಲ. ಮುಂದಕ್ಕೆ ಹೋಗಲು ತಾನೇ ನಿನ್ನಿಂದ ಹೇಗಾದೀತು? ಎಲೆ ಸಾಧಕನೆ! ನೀನು ಪೂಜಿಸುವ ಲಿಂಗದಿಂದ ಪಡೆದುಕೊಳ್ಳಲಾಗದಿರುವ ಫಲವನ್ನು ಕೊಡಲು ಈ ಬಿಲವು ಸಮರ್ಥವಾದೀತೇನು? ಹೇಳು ||೧೩೦|| ಲೋಕದಲ್ಲಿ ಮಹಾಜ್ಞಾನಿಗಳಾದ ಶಿವಭಕ್ತರು ಯಾವ ಬಿಲಗಳನ್ನು ಪ್ರವೇಶಿಸಿ ಕಂಡ ಕಾಣದ ಫಲ

ಸಃ ॥೧೩೧॥ ಖ್ಯಾತಂ ಪರ್ವತಕಲ್ಪಂ ತ್ವಂ ಗೃಹೀತ್ವಾ ಕಿಮು ಗರ್ವತಃ। ಉಪ
ಭೋಗಾರ್ಹವಯಸಿ ಪುತ್ರ ಕಿಂಭೋಕ್ತು ಮಾಗತಃ ॥೧೩೨॥ ಆಗತೋಽ
ಸ್ಯವಿಚಾರ್ಯ ತ್ವಂ ಮರ್ತುಮೇವಹಿ ಕೇವಲಂ ।ಶ್ರೀಗಿರಾ ವೇತದೇವೈಕಂ ಬಿಲಂ
ಸಿದ್ಧಿಪ್ರದಂ ಕಿಮು॥೧೩೩॥ ಚತುರ್ದ್ವಾರಬಿಲಂ ಪಾಪಬಿಲಂ ವೃಷಭಸಂಜ್ಞಿಕಂ ।
ಬಿಲಂ ಶ್ರೀಖೇಚರಬಿಲ ಮಿತ್ಯಾದೀನಿ ಮಹಾಂತಿ ಚ ॥೧೩೪॥ ಚಿತ್ರಾಣಿ ವಿಂಶ
ತಿಸಹಸ್ರೋತ್ತರಾ ಣ್ಯತ್ರ ಪರ್ವತೇ । ಸಂತಿ ಸಪ್ತಶತೀಕೋಟಿಬಿಲಾ ನೀಷ್ಟಪ್ರ
ದಾನಿಹಿ ॥೧೩೫॥ ಸಹಸ್ರಕೋಟಿಸ್ಥಾನಾನಿ ಸಂತಿ ಭುಕ್ತಿಪ್ರದಾನ್ಯಪಿ । ಮು
ಕ್ತಿಪ್ರದಾನಿ ಸ್ಥಾನಾನಿ ಶತಕೋಟಿಮಿತಾನಿಚ॥೧೩೬॥ ಏಕೈಕಕಾರ್ಯದಸ್ಥಾನಾ
ನ್ಯಸಂಖ್ಯಾನಿ ವಸಂತಿಹಿ । ಕತಿಚಿತ್ತೇಷು ವಕ್ಷ್ಯಾಮಿ ಬಿಲಾನಿ ತವ ತತ್ವತಃ॥
ಯದಿ ತ್ವಂ ಗಂತು ಮುದ್ಯುಕ್ತೋ ಗಚ್ಛಸ್ಯೇವ ಕ್ಷಣಂ ಶ್ರುಣು । ಕದಾ
ಚಿದಟವೀಮಧ್ಯೇ ವರ್ತಮಾನೇ ಮುದಾ ಮಯಿ ॥೧೩೮॥ ತತ್ರತ್ಯ ಸರಸೀ
ಮಧ್ಯಾ ದುತ್ತೀರ್ಯಾಥ ಕುತಶ್ಚನ । ಶ್ರೀಮಲ್ಲಿಕಾರ್ಜುನಪುರಂಪ್ರತಿ ಗಂತುಂ
ಸಮುದ್ಯತಂ ॥೧೩೯॥ ದಿವ್ಯಭೂಷಾಂಬರಧರಂ ಸ್ಫುರಂತಂ ದಿವ್ಯತೇಜಸಾ ।
ಅಸಿತೈ ರ್ಮಲ್ಲಿಕಾಮಾಲ್ಯೈಃ ಪರಿಶೋಭಿತವಕ್ಷಸಂ ॥೧೪೦॥ ಹಸ್ತದ್ವಯೇ ಸು
ವರ್ಣಾಬ್ಜಧರಂ ಸೌಮ್ಯತರಾಕೃತಿಂ । ನಿರೀಕ್ಷ್ಯ ಕಂಚಿತ್ಪುರುಷಂ ಸ್ವಪತಂ ಸ್ತ

---

ಗಳ ಸಿದ್ಧಿಯನ್ನು ಪಡೆದಿರುವರು? ಎಲೆ ಮಗನೆ! ನೀನು ಸುಖಪಡತಕ್ಕ ಈ ವಯಸ್ಸಿನಲ್ಲಿ ಗಿರಿಕ
ಲ್ಪಾಚರಣೆಯನ್ನು ಹಿಡಿದು, ಅದರ ಅಹಂಕಾರದಿಂದ ಏನನ್ನುಣ್ಣುವುದಕ್ಕೆ ಇಲ್ಲಿಗೆ ಬಂದೆ?
ವಿಚಾರಮಾಡದೆ ಸುಮ್ಮನೆ ಇಲ್ಲಿಗೆ ನೀನು ಸಾಯುವುದಕ್ಕೇ ಬಂದಂತಾಯಿತು. ಈ ಶ್ರೀಶೈಲ
ದಲ್ಲಿ ಸಿದ್ಧಿಯನ್ನು ಕೊಡತಕ್ಕ ಬಿಲವು ಇದೊಂದೇನೆಯೇ ಇರುವುದು? ॥೧೩೩॥ ಚತುರ್ದ್ವಾ
ರಬಿಲ, ಪಾಪಬಿಲ, ವೃಷಭಬಿಲ, ಖೇಚರಬಿಲ ಎಂಬುದು ಮೊದಲಾದ ಅತ್ಯಾಶ್ಚರ್ಯಕರಗಳಾದ
ದೊಡ್ಡ ದೊಡ್ಡ ಬಿಲಗಳು ೨೦ ಸಾವಿರದ ಮೇಲೆಯೇ ಇರುವುವು. ಅಲ್ಲದೆ ಇನ್ನೂ ಇಷ್ಟಾರ್ಥ
ಪ್ರದಗಳಾದ ಬಿಲಗಳು ೭ ಕೋಟಿ ಇರುವುವು. ಭೋಗಪ್ರದಗಳಾದ ಬಿಲಸ್ಥಲಗಳು ಸಾವಿರ
ಕೋಟಿ ಇರುವುವು. ಮೋಕ್ಷಪ್ರದಗಳಾದ ಸ್ಥಲಗಳು ೧೦೦ ಕೋಟಿ ಇರುವುವು. ಪ್ರತ್ಯಪ್ರತ್ಯೇಕ
ಫಲಪ್ರದಗಳಾದ ಸ್ಥಲಗಳು ಲೆಕ್ಕವಿಲ್ಲದಷ್ಟಿರುವುವು. ಅವುಗಳಲ್ಲಿ ಕೆಲ ಬಿಲಗಳ ಸ್ವರೂಪವನ್ನು
ನಿನಗೆ ವಿವರಿಸಿ ಹೇಳುತ್ತೇನೆ. ಬಳಿಕ ನೀನು ಹೋಗಬೇಕೆನ್ನುವೆಯಾದರೆ ಒಂದು ಕ್ಷಣದಲ್ಲೇ ಹೋ
ಗಬಹುದು. ಅದೇನೆಂದರೆ ಕೇಳು—ನಾನು ಒಂದಾನೊಂದು ಕಾಡಿನ ಮಧ್ಯದಲ್ಲಿ ಸಂತೋಷ
ದಿಂದ ಇರುತ್ತಿರುವಲ್ಲಿ ಅಲ್ಲಿದ್ದ ಒಂದಾನೊಂದು ಕೊಳದ ಮಧ್ಯದಿಂದ ಒಬ್ಬಾನೊಬ್ಬ ಪುರುಷನು
ಮಹಾತೇಜಶ್ಶಾಲಿಯಾಗಿ ದಿವ್ಯವಸ್ತ್ರಾಭರಣಗಳನ್ನು ಧರಿಸಿ, ಎದೆಯ ಮೇಲೆ ಕರಿ ಮಲ್ಲಿಗೆಯ
ಮಾಲೆಗಳನ್ನು ಧರಿಸಿ, ಎರಡು ಕೈಗಳಲ್ಲೂ ಪೊಂದಾವರೆಗಳನ್ನು ಹಿಡಿದು, ಸುಂದರಾಕಾರನಾಗಿ

ಸ್ಯಪಾದಯೋಃ ||೧೪೧|| ವನಾಂತರಸರೋಮಧ್ಯಾ ತ್ಕಿಮುತ್ಪತಸಕಾರಣಂ| ನರಃ ಕಿಂ ಕಿನ್ನರಃಕಿಂ ತ್ವಂ ಪ್ರಚ್ಛನ್ನಹರಏವವಾ ||೧೪೨|| ಪ್ರಮಥೋವಾ ಥವಾ ಭಕ್ತಃ ಕಿಮುಪಾತಾಳವಾಸ್ಯಥಾ | ವಜ್ರೀವಾ ದಾನವೇಶೋವಾ ಕಿಂ ಶಶೀ ಕಿಮುಭಾಸ್ಕರಃ ||೧೪೩|| ಸ್ಮರೋಽನ್ಯೋ ನಿರ್ಜರೋವಾಽಥ ಕುತೋ ಲೋಕಾ ತ್ಸಮಾಗತಃ | ಇತೋ ಗಚ್ಛಸಿ ಕಿಂಲೋಕ ಮಿತಿ ಪೃಷ್ಟ ಸ್ಸಚಾಬ್ರವೀತ್ ||೧೪೪|| ವಕ್ಷ್ಯಾಮಿ ತಾಪಸಶ್ರೇಷ್ಠ ಶೃಣುಮದ್ಗಮನಕ್ರಮಂ | ಕರವೀರೋನಾಮ ಕಶ್ಚಿ ದ್ದಾನವ ಶ್ಶ್ರೀಗಿರಾವಿಹ ||೧೪೫|| ಕರವೀರೇಶ್ವರಂ ನಾಮ ಲಿಂಗಂ ಸಂಸ್ಥಾಪ್ಯ ಯತ್ನತಃ | ಚಕಾರೋಗ್ರಂ ತಪ ಸ್ತಸ್ಮೈ ತುಷ್ಟಃ ಪ್ರಮಥನಾಯಕಃ ||೧೪೬||ಸಾಕ್ಷಾತ್ಸಮಾಗತ್ಯ ವರಂ ವರಯೇತ್ಯವದತ್ತದಾ| ಸಚಾಬ್ರವೀ ದ್ವರಂ ನಾನ್ಯಂ ಯಾಚೇಽಹಂ ಪರಮೇಶ್ವರ ||೧೪೭|| ಸಮಸ್ತಾಂಗಾನಿ ಮೇ ಧಾತೂನ್ ಸ್ಥೂಲಸೂಕ್ಷ್ಮದ್ರುಮಾ ಸ್ಮದಾ | ಕೃತ್ವಾ ತಜ್ಜಾತಪುಷ್ಪಾಘಾನ್ ಸದಾ ತ್ವಂ ಧಾರಯ ಪ್ರಭೋ ||೧೪೮|| ತತ್ರ ಕಿಂಚಿದ್ದಲೇನ ತ್ವಾಂ ಯಃ ಪೂಜಯತಿ ಮಾನವಃ | ತಸ್ಮೈ ದೇವೇಂದ್ರಪದವೀಂ ಪ್ರಯಚ್ಛ ಪರಮೇಶ್ವರ ||೧೪೯|| ಅಷ್ಟೈಕೇನ ಪ್ರಸೂನೇನ ಯೋ ನರಸ್ತ್ವಾಂ ಪ್ರಪೂ

---

ಎದ್ದು, ಶ್ರೀಮಲ್ಲಿಕಾರ್ಜುನ ಪಟ್ಟಣದ ಕಡೆಗೆ ಹೊರಡಲುದ್ಯುಕ್ತನಾಗಲು, ಅವನ ಪಾದಕ್ಕೆ ನಾನು ಅಡ್ಡಬಿದ್ದವನಾಗಿ ||೧೪೧|| ನೀನು ಈ ನಡುಗಾಡಿನ ಸರೋವರದಿಂದ ಉದ್ಭವಿಸಿದುದಕ್ಕೆ ಕಾರಣವೇನು? ನೀನು ಮನುಷ್ಯನೊ? ಕಿನ್ನರನೊ? ಅಥವಾ ವೇಷಾಂತರದಿಂದ ಬಂದಿರುವ ಶಿವನೊ? ಪ್ರಮಥನೊ? ಭಕ್ತನೊ? ಪಾತಾಳವಾಸಿಯೊ? ಇಂದ್ರನೊ? ರಾಕ್ಷಸೇಶ್ವರನೊ? ಚಂದ್ರನೊ? ಸೂರ್ಯನೊ? ಮನ್ಮಥನೊ? ಅಥವಾ ದೇವತೆಯೊ? ನೀನು ಯಾವಲೋಕದಿಂದ ಬಂದೆ? ಇಲ್ಲಿಂದ ಮತ್ತಾವಲೋಕಕ್ಕೆ ಹೋಗುವೆ? ಎಂದು ಆತನನ್ನು ಕೇಳಲಾಗಿ, ಅವನು ||೧೪೪|| ನನ್ನನ್ನು ಕುರಿತು—ಎಲೈ ತಪಸ್ವಿ ಪುಂಗವನೆ! ನನ್ನ ಸಂಚಾರ ಕ್ರಮವನ್ನು ಹೇಳುತ್ತೇನೆ ಕೇಳು. ಕರವೀರನೆಂಬ ಒಬ್ಬ ರಾಕ್ಷಸನು ಈ ಶ್ರೀಶೈಲದಲ್ಲಿ ಕರವೀರೇಶ್ವರನೆಂಬ ಹೆಸರಿನ ಲಿಂಗವನ್ನು ಪ್ರತಿಷ್ಠಾಪಿಸಿ, ಉಗ್ರತಪಸ್ಸನ್ನು ಮಾಡಿದನು. ಅದಕ್ಕೆ ಪರಶಿವನು ಮೆಚ್ಚಿ, ||೧೪೬|| ಪ್ರತ್ಯಕ್ಷನಾಗಿ ಬಂದು, ಯಾವ ವರವು ಬೇಕೋ ಬೇಡು ಎಂದು ಹೇಳಲು, ಆ ದಾನವನು—ಸ್ವಾಮಿ ಶಂಕರನೆ! ನಾನು ಇನ್ನಾವ ವರವನ್ನೂ ಬೇಡುವುದಿಲ್ಲ, ನನ್ನ ಸಕಲ ದೇಹವನ್ನೂ, ಅದರೊಳಗಣ ಧಾತುಗಳನ್ನೂ, ಸಣ್ಣ ದೊಡ್ಡ ಬಿಟ್ಟದಾವರೆ ಮರಗಳನ್ನಾಗಿ ಮಾಡಿ, ಅವುಗಳಲ್ಲಿ ಹುಟ್ಟಿದ ಹೂವುಗಳನ್ನು ಯಾವಾಗಲೂ ನೀನು ಧರಿಸು. ಅದರ ಒಂದೆಸಳಿನಿಂದ ಯಾವ ಮನುಷ್ಯನು ನಿನ್ನನ್ನು ಪೂಜಿಸಿದರೂ ಅವನಿಗೆ ನೀನು ದೇವೇಂದ್ರ ಪದವಿಯನ್ನು ಕೊಡು. ಯಾವ ಮನುಷ್ಯನು ಅದರ ಒಂದು ಹೂವಿನಿಂದ ನಿನ್ನನ್ನು ಪೂಜಿಸುವನೋ ಅವನಿಗೆ

ಜಯೇತ್ | ಮುಕ್ತಿಂ ತಸ್ಮೈ ಪ್ರದೇಹೀಶ ಪುನರ್ಜನ್ಮವಿವರ್ಜಿತಾಂ ||೧೫೦||
ಇತರಂವಾ ಸಿಯುಂಗ್ತೇಯಃ ಪುಷ್ಪೇಣೈಕೇನ ತೇಽರ್ಚನೇ|ಗಜದಾನಸಹಸ್ರಸ್ಯ
ವಾಜಪೇಯಶತಸ್ಯಚ ||೧೫೧|| ಕೋಟಿಕನ್ಯಾಪ್ರದಾನಸ್ಯ ತಸ್ಮೈ ಯಚ್ಛ ಫ
ಲಂ ಶಿವ | ಅಹ ಮಲ್ಪಾ ಸ್ವರಾ ನ್ದೇವ ನೇಚ್ಛಾಮಿ ಪರಮೇಶ್ವರ ||೧೫೨||
ಇತ್ಯುಕ್ತ ಸ್ಸಮಹಾದೇವೋ ದದೌ ತಸ್ಮೈ ತಥಾ ವರಂ| ಕರವೀರವನಂ ಹ್ಯೇತ
ತ್ತದಾ ಪ್ರಭೃತಿ ವಿಶ್ರುತಂ ||೧೫೩|| ನಲಕ್ಷ್ಯತೇ ವನಮಿದಂ ಕದಾಚಿ ದಕೃತಾ
ತ್ಮಭಿಃ | ಸ್ಫುಟಂ ಪ್ರದೃಶ್ಯತೇ ನಿತ್ಯಂ ವನಮೇತನ್ಮಹಾತ್ಮಭಿಃ ||೧೫೪|| ಪ್ರಾ
ಗ್ಜನ್ಮಪುಣ್ಯವಶತ ಸ್ತ್ವಯೈತದ್ದದೃಶೇ ವನಂ | ಸ್ಪೃಷ್ಟಾ ದಿವ್ಯಾಂಜನಲತಾ ತ್ವ
ಯಾ ಕಾಚಿನ್ಮಹೀತಲೇ ||೧೫೫|| ಯತಃ ಪಶ್ಯಸಿ ಮಾಮತ್ರ ಸಂಸ್ಥಿತಂ ಪು
ಣ್ಯಲಕ್ಷಣ | ಅತ್ರೈವ ತಿಷ್ಠ ಮಾನ್ಯತ್ರ ಗತೇತ್ವಯಿ ನಲಕ್ಷ್ಯತೇ ||೧೫೬||
ಮದಾಕೃತಿ ರಥೈತಸ್ಯ ಮಾಹಾತ್ಮ್ಯಂ ಸರಸಶ್ಶೃಣು | ಮಂದಾಕಿನ್ಯಾ ಸ್ಸರ
ಇದ ಮಂಶಃ ಖಲು ತಪೋಧನ ||೧೫೭|| ಅಂಗಂ ಭೋಗಾವತೀನದ್ಯಾ ಭಾ
ಗೀರಥ್ಯಾಶ್ಚ ಬುದ್ಬುದಃ | ಕುಂಡತೀರ್ಥಸ್ಯಾಲವಾಲೋ ಗೋದಾವರ್ಯಾಶ್ಚ

---

ಪುನರಾವೃತ್ತಿರಹಿತವಾದ ಮುಕ್ತಿಯನ್ನು ಕೊಡು. ||೧೫೦|| ನಿನ್ನ ಪೂಜೆ ಮಾಡುವಾಗ್ಗೆ ಈ ಗಿಡದ ಒಂದು ಹೂವಿನೊಡನೆ ಇತರ ಪುಷ್ಪವನ್ನೂ ಸೇರಿಸಿ ಯಾವನು ಪೂಜಿಸುವನೋ ಅವನಿಗೆ ಸಾವಿರ ಗಜದಾನವನ್ನೂ, ನೂರು ವಾಜಪೇಯಯಾಗಗಳನ್ನೂ, ಕೋಟಿ ಕನ್ಯಾದಾನವನ್ನೂ ಮಾಡುವುದರಿಂದ ಉಂಟಾಗುವಷ್ಟು ಫಲವನ್ನು ಕೊಡು. ಎಲೈ ಸ್ವಾಮಿಯೆ, ನಾನು ಮತ್ತಾವ ತುಚ್ಛಫಲವನ್ನೂ ಅಪೇಕ್ಷಿಸುವುದಿಲ್ಲ. ಎಂದು ಬಿನ್ನೈಸಲು, ಪರಶಿವನು ಅವನಿಷ್ಟದಂತೆಯೇ ವರವನ್ನು ಕೊಟ್ಟನು. ಅದು ಮೊದಲ್ಗೊಂಡು ಇದು "ಕರವೀರವನ" ವೆಂದು ಪ್ರಸಿದ್ಧವಾಯಿತು. ||೧೫೩|| ಈ ವನವು ಪಾಪಾತ್ಮರ ಕಣ್ಣಿಗೆ ಯಾವಾಗಲೂ ಕಾಣುವುದಿಲ್ಲ. ಮಹಾತ್ಮರಿಗೆ ಯಾವಾಗಲೂ ಚೆನ್ನಾಗಿ ಕಾಣಿಸುವುದು. ಪೂರ್ವಜನ್ಮ ಪುಣ್ಯವಶದಿಂದ ನಿನಗೆ ಈ ವನವು ಕಾಣಿಸುತ್ತದೆ. ಇಲ್ಲಿರುವ ನಾನು ನಿನ್ನ ಕಣ್ಣಿಗೆ ಕಾಣಿಸಿರುವುದನ್ನು ನೋಡಿದರೆ ಭೂಮಿಯಲ್ಲಿ ನೀನು ಯಾವುದೋ ಒಂದು ದಿವ್ಯಾಂಜನದ ಬಳ್ಳಿಯನ್ನು ಮುಟ್ಟಿ ಬಂದಿರಬೇಕೆಂದು ಕಾಣುತ್ತದೆ. ಎಲೈ ಪುಣ್ಯಶಾಲಿಯೇ ನೀನು ಇಲ್ಲೇ ಇರು. ಎಲ್ಲೂ ಹೋಗಬೇಡ. ಹಾಗೇನಾದರೂ ಹೋದರೆ ನನ್ನ ಆಕಾರವು ನಿನಗೆ ಕಾಣಿಸುವುದಿಲ್ಲ. ಇನ್ನು ಈ ಸರೋವರದ ಮಹಿಮೆಯನ್ನು ಹೇಳುತ್ತೇನೆ ಕೇಳು—ಎಲೈ ತಪಸ್ವಿಯೆ, ಇದು ದೇವಗಂಗೆಯ ಒಂದು ಭಾಗವಾಗಿರುವುದು. ||೧೫೭|| ಮತ್ತು ಭೋಗಾವತೀನದಿಯ ಒಂದು ಅಂಗವಾಗಿಯೂ, ಭಾಗೀರಥೀನದಿಯ ನೊರೆಯಾಗಿಯೂ, ಕುಂಡತೀರ್ಥದ ಪಾತೆಯಾಗಿಯೂ, ಗೋದಾವರೀ ನದಿಯ ಪ್ರವಾಹಮಾರ್ಗವಾಗಿಯೂ, ಮಲ್ಲಿಕಾಕುಂಡದ ಹಾರಿಯಾಗಿಯೂ, ಸಮುದ್ರಗಳ ಉತ್ಪತ್ತಿ ಕಾರಣವಾಗಿ

ಪದ್ಧತಿಃ ||೧೫೮|| ಮಲ್ಲಿಕಾಕುಂಡಸರಣಿ ರ್ಬೀಜ ಮರ್ಣವಸಂತತೇಃ | ಶ್ರೀ
ಮಹಾದೇವಮೌಳಿಸ್ಥಗಂಗೈವೇದಂ ನಸಂಶಯಃ ||೧೫೯|| ಏತತ್ಸರೋಗತೈಃ
ಪದ್ಮೈ ರರ್ಚಯಿತ್ವಾ ಮಹೇಶ್ವರಂ | ಅವಾಪ ದೇವಕೀದೇವೀ ತನಯಂ ಗ
ರುಡಧ್ವಜಂ ||೧೬೦|| ಏತತ್ಪದ್ಮೈ ರರ್ಚಯಿತ್ವಾ ಮಹೇಶ ಮತಿಭಕ್ತಿತಃ | ಲೇ
ಭೇ ಜನಾರ್ದನ ಶ್ಚಕ್ರಂ ಪರೈ ರ್ದುರ್ಜಯ ಮಕ್ಷಿ ಚ ||೧೬೧|| ಏತತ್ಸರೋಮ
ಧ್ಯಪದ್ಮೇ ಕಸ್ಮಿಂಶ್ಚಿ ದುದಭೂ ದಜಃ | ಏತತ್ಸರೋಜೇ ಹಸ್ತಾಭ್ಯಾಂ ಧತ್ತೇ
ಲೀಲಾರ್ಥ ಮದ್ರಿಜಾ ||೧೬೨|| ಏತತ್ಸರಃಪದ್ಮ ಮೇತ್ಯ ರವಿ ಸ್ತೇಜೋಽಧಿ
ಕೋಽಭವತ್ | ಏತತ್ಪದ್ಮೈ ರರ್ಚಯಿತ್ವಾ ಮಹೇಶ ಮತಿಭಕ್ತಿತಃ ||೧೬೩||
ಭೃಗುಪತ್ನೀ ದೈತ್ಯಗುರುಂ ಚಂದ್ರ ಮತ್ರಿಮುನಿಃ ಪುನಃ | ಕುಂತೀಚ
ಪಾಂಡವಾ ನ್ರಾಮಂ ಕೌಸಲ್ಯಾಽವಾಪನಂದನಂ ||೧೬೪|| ಏತತ್ಪದ್ಮಾನಿಗಾ
ಯಂತಿ ಕಾಮಿನ್ಯ ಶ್ಶೋಭನಕ್ಷಣೇ | ಏತತ್ಪದ್ಮಾನಿ ಸೌವರ್ಣಾ ನ್ಯಾಲ
ಕ್ಷ್ಯಂತೇ ಮಹಾತ್ಮಭಿಃ ||೧೬೫|| ಭೂತ್ವಾ ಕೇವಲಪದ್ಮಾನಿ ಲಕ್ಷ್ಯಂತೇ
ಹ್ಯಕೃತಾತ್ಮಭಿಃ | ದಿವ್ಯತೀರ್ಥಾ ನ್ಯೇತದೀಯಜಲಾನಿ ಸುಕೃತಾತ್ಮಭಿಃ||೧೬೬||
ಪಾಪಿಭಿಃ ಕೇವಲಾಂಬೂನಿ ಲಕ್ಷ್ಯಂತೇ ಭುವಿ ಸರ್ವದಾ | ನಾಸ್ತ್ಯನ್ಯತ್ಕಾರಣಂ
ಜನ್ಮ ನ್ಯೇತಜ್ಜಲಚರಾವಲೇಃ ||೧೬೭|| ಮತ್ಸ್ಯಕೂರ್ಮಾದಯೋ ವಿಷ್ಣೋ

---

ಯೂ ಇರುವುದು. ಇದು ಸಾಕ್ಷಾತ್ಪರಶಿವನ ಜಟಾಜೂಟದಲ್ಲಿರುವ ಗಂಗೆಯೇ ಆಗಿರುತ್ತದೆ
ಅದಕ್ಕೆ ಸಂಶಯವಿಲ್ಲ. ||೧೫೯|| ದೇವಕಿಯು ಈ ಸರೋವರದಲ್ಲಿರುವ ಕಮಲಗಳಿಂದ ಪರ
ಶಿವನನ್ನು ಪೂಜಿಸಿ, ವಿಷ್ಣುವನ್ನು ತನ್ನ ಮಗನನ್ನಾಗಿ ಪಡೆದಳು. ವಿಷ್ಣುವು ಇದರ ಕಮಲಗ
ಳಿಂದ ಪರಶಿವನನ್ನು ಅತಿ ಭಕ್ತಿಪೂರ್ವಕವಾಗಿ ಪೂಜಿಸಿ, ಶತ್ರುಗಳಿಗೆ ದುರ್ಜಯವಾಗಿರತಕ್ಕ
ಚಕ್ರಾಯುಧವನ್ನೂ ತನ್ನ ಕಣ್ಣನ್ನೂ ಸಹ ಪಡೆದುಕೊಂಡನು. ಈ ಸರೋವರದ ಕಮಲಗಳ
ಲ್ಲೊಂದರಿಂದ ಬ್ರಹ್ಮನು ಹುಟ್ಟಿದನು. ಇದರ ತಾವರೆಗಳಲ್ಲೆರಡನ್ನು ಪಾರ್ವತಿಯು ತನ್ನ
ಕೈಗಳಲ್ಲಿ ಹಿಡಿದುಕೊಂಡಿರುವಳು. ಸೂರ್ಯನು ಈ ಸರೋವರದ ಕಮಲವನ್ನು ಧರಿಸಿ ಅಧಿಕ
ತೇಜಸ್ವಿಯಾದನು. ಇದರ ಕಮಲಗಳಿಂದ ಶಿವನನ್ನು ಪೂಜಿಸಿ, ಭೃಗುಋಷಿಪತ್ನಿಯು ದೈತ್ಯಗು
ರುವಾದ ಶುಕ್ರಾಚಾರ್ಯನನ್ನೂ, ಅತ್ರಿಮುನಿಯು ಚಂದ್ರನನ್ನೂ, ಕುಂತೀದೇವಿಯು ಪಾಂಡ
ವರನ್ನೂ, ಕೌಸಲ್ಯಾದೇವಿಯು ರಾಮನನ್ನೂ ಹಡೆದರು. ||೧೬೪|| ಮುತ್ತೈದೆಯರು ಶೋ
ಭನಗಳನ್ನು ಹೇಳುವಾಗ ಈ ಸರೋವರದ ತಾವರೆಗಳನ್ನು ಕುರಿತು ಪಾಡುವರು. ಇದರ ತಾ
ವರೆಗಳು ಮಹಾತ್ಮರ ಕಣ್ಣಿಗೆ ಭಂಗಾರದ ತಾವರೆಗಳಾಗಿ ಕಾಣಿಸುವುವು. ಪಾಪಿಷ್ಠರಿಗೆ ಸಾ
ಧಾರಣ ಕಮಲಗಳಾಗಿ ತೋರುವುವು. ಇದರ ಜಲವು ಪುಣ್ಯಶಾಲಿಗಳಿಗೆ ದಿವ್ಯತೀರ್ಥವಾಗಿಯೂ,
ಪಾಪಾತ್ಮರಿಗೆ ಸಾಧಾರಣವಾದ ನೀರಾಗಿಯೂ ತೋರುವುದು. ಈ ಸರಸ್ಸಿನ ಜಲಚರ ಪ್ರಾ

ರವತಾರಾ ನಿರಂತರಂ| ಅತ್ರತ್ಯಜಲಜಂತೂನಾಂ ಸಂತಾನಾಜ್ಜಗತೀತಲೇ||೧೬೮ ಸುವರ್ಣಪಂಕಜವತ ಸ್ಸರಸೋಽಸ್ಯ ಮಹತ್ವತಃ | ಅತ್ಯಂತಶೋಭಮಾನಂ ಮಚ್ಚಾರಿತ್ರಂ ಕಥಯಾಮಿತೇ ||೧೬೯|| ಅಹಮಸ್ಮಿ ಮಹೋದಗ್ರೇ ಸಂಭೂತ ಶ್ಯಾಂಕರೀಪುರೇ | ಪುರಸ್ಯೈತನ್ನಾಮ ಕಥ ಮಾಯಾತ ಮಿತಿಚೇಚ್ಛೃಣು || ಕರ್ತುಂ ಬಾಲ್ಯೋಚಿತಕ್ರೀಡಾ ಮುದ್ಯುಕ್ತಾ ಪಾರ್ವತೀ ಪುರಾ | ಅಬ್ರವೀ ತ್ಸ್ವಸಖೀರೇವ ಮತ್ಯಂತಪರಿಮೋದಿತಾ ||೧೭೧|| ರಾಜಕೀರಲಸದ್ವಾಣಿ ರಾಜ ಕೀರಂ ಸಮಾನಯ | ಕೋಕಿಲಂ ಕೋಕಿಲಾಲಾಪೇ ಹಂಸೌಘಂ ಹಂಸಗಾ ಮಿನಿ ||೧೭೨|| ಬರ್ಹಿಬರ್ಹಸುಕೇಶಿ ತ್ವಂ ಬರ್ಹಿಣವ್ರಜ ಮಾನಯ | ಸಾಲಭಂ ಜೀ ಸ್ತರುಮಯೀ ರುಚಿರಾ ರತ್ನಪುತ್ರಿಕಾಃ ||೧೭೩|| ಸುವರ್ಣಪುತ್ರಿಕಾ-ಮು ಕ್ತಾಪುತ್ರಿಕಾ ಮಣಿಪುತ್ರಿಕಾಃ | ಗಜದಂತಮಯೀಶ್ಚತ್ವ ಮಾನಯಾಂಭೋರು ಹಾನನೇ ||೧೭೪|| ಏವಂ ವದನ್ತೀ ವಿಬುಧಕನ್ಯಾಭಿ ರ್ಹಿಮವದ್ಗಿರೇಃ | ಕನ್ಯಾ ಭಿಃ ಪ್ರಮಥೇಂದ್ರಾಣಾಂ ಕನ್ಯಕಾಭಿ ಸ್ಸಮಂತತಃ ||೧೭೫|| ರುದ್ರಕನ್ಯಾಗಣೈ ರ್ನಾಗಕನ್ಯಾಭಿ ಸ್ಸೇವಿತಾಸತೀ | ಭಾಗೀರಥೀತೀರದೇಶೇ ಬಾಲ್ಯಕ್ರೀಡಾಗ್ಯ ಹೈ ರ್ನವೈಃ ||೧೭೬|| ಪುರಮೇಕಂ ವಿನಿರ್ಮಾಯ ಸೈಕತಂ ತಸ್ಯ ಮಧ್ಯತಃ | ಸ್ವಯಂ ವಿಧಾಯ ಪ್ರಾಸಾದಂ ತನ್ಮಧ್ಯೇ ಲಿಂಗಮುತ್ತಮಂ ||೧೭೭|| ಪ್ರತಿಷ್ಠಾ

---

ಣಗಳಿಗೆ ಪುನರ್ಜನ್ಮ ಕಾರಣವೇ ಇಲ್ಲ. ಭೂಮಿಯಲ್ಲಿ ವಿಷ್ಣುವಿನ ಅವತಾರಗಳೆನಿಸಿಕೊಂಡ ಮತ್ಸ್ಯ ಕೂರ್ಮಾದಿ ಪ್ರಾಣಿಗಳೆಲ್ಲಾ ಇಲ್ಲಿಯ ಜಲಚರಗಳ ಸಂತಾನದಿಂದಲೇ ಆದುವು ಗಳು. ||೧೬೮|| ಹೊನ್ನಿನ ಕಮಲಗಳನ್ನು ಹೊಂದಿರುವ ಈ ಸರೋವರದ ಪ್ರಭಾವದಿಂದ ಅತ್ಯಂತ ಶೋಭಾಯಮಾನವಾಗಿರುವ ನನ್ನ ಚರಿತ್ರವನ್ನು ನಿನಗೆ ಹೇಳುತ್ತೇನೆ ಕೇಳು—ನಾನು ಶಾಂಕರೀಪುರವೆಂಬಲ್ಲಿ ಹುಟ್ಟಿದವನು. ಅದಕ್ಕೆ ಆ ಹೆಸರು ಏತಕ್ಕೆ ಬಂದಿತೆಂದರೆ—ಪೂರ್ವದಲ್ಲಿ ಪಾರ್ವತಿಯು ಬಾಲ್ಯದಲ್ಲಿರುವಾಗ್ಗೆ ಮಕ್ಕಳಾಟಿಕೆಯನ್ನು ಆಡುತ್ತ, ಸಂತೋಷದಿಂದ ತನ್ನ ಒಡನಾಡಿಯ ಸಖಿಯರಾದ ದೇವತಾ ಕನ್ಯೆಯರನ್ನು ಕುರಿತು— "ಎಲೆ ಅರಗಿಳಿ ನುಡಿಯವಳೆ! ಒಂದು ಅರಗಿಳಿಯನ್ನು ಹಿಡಿದುಕೊಂಡುಬಾ, ಎಲೆ ಕೋಗಿಲೆ ನುಡಿಯುವಳೆ! ಒಂದು ಕೋ ಗಿಲೆಯನ್ನು ಹಿಡಿದುಕೊಂಡು ಬಾ, ಎಲೆ ಹಂಸಗಾಮಿನಿಯೆ! ಒಂದು ಹಂಸಪಕ್ಷಿಯನ್ನು ಹಿಡಿದು ತಾ, ಎಲೆ ನವಿಲದೊಂದೆಯಂತಹ ಕೇಶಪಾಶವುಳ್ಳವಳೆ! ನವಿಲುಗಳ ಗುಂಪನ್ನು ಹಿಡಿ ದುಕೊಂಡು ಬಾ. ಎಲೆ ಕಮಲಮುಖಿಯೆ! ಮರದ ಬೊಂಬೆಗಳನ್ನೂ, ರನ್ನದ ಪುತ್ತಳಿಗಳನ್ನೂ, ಹೊನ್ನಿನ ಪ್ರತಿಮೆಗಳನ್ನೂ, ಮುತ್ತಿನ ಬೊಂಬೆಗಳನ್ನೂ, ಜಂತದ ಬೊಂಬೆಗಳನ್ನೂ ತೆಗೆದು ಕೊಂಡು ಬಾ, ಎಂದು ಹೇಳುತ್ತ, ಪ್ರಮಥ ಕನ್ಯೆಯರು, ರುದ್ರಕನ್ಯೆಯರು, ನಾಗಕನ್ಯೆಯ ರು ಮೊದಲಾದವರಿಂದೆಲ್ಲಾ ಸೇವಿಸಿಕೊಳ್ಳುತ್ತ, ಭಾಗೀರಥೀ ನದೀತೀರದಲ್ಲಿ ಆಟಕ್ಕಾಗಿ

ಪ್ಯ ಸಹ ಸ್ತ್ರೀಭಿಸ್ಸೇವಮಾನಾಽತಿಭಕ್ತಿತಃ | ಕಂಚಿತ್ಕಾಲ ಮುಷಿತ್ವಾಥ ಪ್ರಯಯೌ ಸಾ ನಗಾತ್ಮಜಾ ||೧೭೮|| ತಥೈವ ಸೈಕತಮಯಂ ತತ್ರೈವ ಸ್ಯನಸತ್ಪುರಂ | ತತೋ ಗೌರೀ ತಪಃ ಕೃತ್ವಾ ಸಂಪ್ರಾಪ್ಯ ಪತಿ ಮೀಶ್ವರಂ || ೭೯|| ಅವಿನಾಭಾವಸಂಬಂಧಾ ನ್ಮಹೇಶೇನ ಸಮನ್ವಿತಾ | ಕದಾಚಿ ದಸ್ಮರತ್ಕ್ರೀಡಾನಿರ್ಮಿತಂ ತತ್ಪುರಂ ಪುರಾ ||೧೮೦|| ವಿದಿತ್ವಾ ತನ್ಮಹಾದೇವೋ ಬಭಾಷೇ ಗಿರಿಜಾಮಥ | ಭವತ್ಯಾ ಗಿರಿಸಂಭೂತೇ ಸ್ಮೃತಂ ತತ್ಸೈಕತಂ ಪುರಂ ||೮|| ಯಥಾರ್ಥನಗರಂ ಭೂಯಾ ತ್ಸಮೃದ್ಧ ಮವನಾವಿತಿ | ಸ್ಮೃತವತ್ಯಾಂಚ ಶಂಕರ್ಯಾಂ ಶಂಕರಾ ದುದಭೂತ್ಪುರಂ ||೧೮೨|| ತಚ್ಛಾಂಕರೀಪುರ ಮಭೂ ತ್ಸರ್ವಲೋಕೇಷು ವಿಶ್ರುತಂ | ತಚ್ಛಾಂಕರೀಪುರೇ ವಾಸೋ ಮಮ ಸೋಽಹಂ ಕದಾಚನ || ಉಪೇತ್ಯ ಶ್ರೀಗಿರಿಂ ತತ್ರ ಪಾತಕಧ್ವಂಸಿನಂ ಪರಂ | ಸಮೂರ್ಜಿತಯಶೋಜಾಲಂ ಮಲ್ಲಿಕಾರ್ಜುನ ಮೀಶ್ವರಂ ||೧೮೪|| ಉಪಾಸ್ಯ ತತ್ಕ್ರಿಯಾಸಿಷ್ಠಾಯುಕ್ತೋ ನಿತ್ಯ ಮತಂದ್ರಿತಃ | ನಾನಾಪ್ರಸೂನೈ ಸ್ತಂ ಭಕ್ತ್ಯಾ ಪೂಜಯನ್ನವಸಂ

---

ಮಳಲಿನಿಂದ ಸಣ್ಣ ಸಣ್ಣ ಮನೆಗಳಿಂದ ಕೂಡಿದ ಒಂದು ಪಟ್ಟಣವನ್ನು ರಚಿಸಿ, ಆದರ ಮಧ್ಯದಲ್ಲಿ ತಾನೇ ಒಂದು ದೇವಸ್ಥಾನವನ್ನು ಕಟ್ಟಿ, ಆದರಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿ, ತನ್ನ ಜತೆಗಾತಿಯರೊಡನೆ ಕೂಡಿ ಭಕ್ತಿಯಿಂದ ಪೂಜಿಸುತ್ತ, ಕೆಲಕಾಲವಿದ್ದು, ಬಳಿಕ ಹೊರಟುಹೋದಳು. ||೧೭೮|| ಮಳಲಿನಿಂದ ಕಟ್ಟಿದ್ದ ಆ ಊರು ಅಲ್ಲೇ ಇದ್ದಿತು. ಕೆಲಕಾಲಾನಂತರ ಪಾರ್ವತಿಯು ತಪಸ್ಸನ್ನು ಮಾಡಿ, ಶಿವನನ್ನು ಮೆಚ್ಚಿಸಿ, ಅವನನ್ನೇ ಪತಿಯನ್ನಾಗಿ ಮಾಡಿಕೊಂಡು, ಶಂಕರನೊಡನೆ ಎಡೆಬಿಡದ ಸಂಬಂಧವುಳ್ಳವಳಾದಳು. ಒಂದಾನೊಂದುವೇಳೆ ಪರಶಿವನೊಡನೆ ಕೂಡಿಯೇ ತನ್ನ ಬಾಲ್ಯದಲ್ಲಿ ಆಟಕ್ಕಾಗಿ ನಿರ್ಮಿಸಿದ್ದ ಮಳಲ ಪಟ್ಟಣವನ್ನು ನೆನೆದುಕೊಂಡಳು. ಅವಿನಾಭಾವಸಂಬಂಧಿಯಾದ ಪರಶಿವನಿಗೂ ಅದು ಅರುಹಾಗಲು, ಪತ್ನಿಯನ್ನು ಕುರಿತು-ಎಲೈ ಗಿರಿಜೆಯೆ! ನೀನು ಆ ಮಳಲಿನ ಪಟ್ಟಣವನ್ನು ಸ್ಮರಿಸಿಕೊಂಡೆಯಾದಕಾರಣ ಆ ಪುರವು ಭೂಮಿಯಲ್ಲಿ ಸಕಲ ಸಂಪತ್ಸಮೃದ್ಧವಾದ ನಿಜವಾದ ಪಟ್ಟಣವಾಗಲಿ ಎಂದು ಅನುಗ್ರಹಿಸಿದನು. ಹೀಗೆ ಪಾರ್ವತಿಯು ನೆನೆದಕೂಡಲೇ ಶಿವಾನುಗ್ರಹದಿಂದ ಆ ಪಟ್ಟಣವು ದಿವ್ಯನಗರವಾಗಿ ಆವಿರ್ಭವಿಸಿತು. ||೧೮೩|| ಅದುಕಾರಣದಿಂದ ಆ ನಗರವು ತದಾರಭ್ಯ "ಶಾಂಕರೀಪುರ"ವೆಂಬ ಹೆಸರಿನಿಂದ ಸಕಲ ಲೋಕಪ್ರಸಿದ್ಧವಾಯಿತು. ಆ ಪಟ್ಟಣದ ವಾಸಸ್ಥನೇ ನಾನು. ಅಂತಪ್ಪ ನಾನು ಒಂದಾನೊಂದುಸಲ ಶ್ರೀಶೈಲಕ್ಕೆ ಬಂದು, ಪಾಪವಿನಾಶಕನೂ, ವಿಖ್ಯಾತ ಯಶಸ್ಕನೂ ಆದ ಶ್ರೀಮಲ್ಲಿಕಾರ್ಜುನೇಶ್ವರನನ್ನು ಭಜಿಸುತ್ತ, ತದರ್ಚನ ನಿಷ್ಠೆಯಿಂದ ಸದಾ ಜಾಗರೂಕನಾಗಿದ್ದುಕೊಂಡು, ನಾನಾವಿಧ ಪುಷ್ಪಗಳಿಂದ ಆ ಪರಶಿವನನ್ನು ಸದಾ ಪೂಜಿಸಿಕೊಂಡಿದ್ದೆನು,

ಸದಾ ||೧೮೫|| ಮಾಂ ಕೀರ್ತಯನ್ತ್ಸು ಮರ್ತ್ಯೇಷು ಪುಷ್ಪದನ್ತ ಇತಿ ಸ್ಫುಟಂ | ಜಾತು ಸಂದಿಷ್ಟಮಾರ್ಗಸ್ಸನ್ ಪುಷ್ಪಾಹಾರಕಬಾಲಕೈಃ ||೧೮೬|| ಆಸಾದ್ಯೇಮಾಂ ಪುಷ್ಪವಾಟೀಂ ಪೂಜಾರ್ಥಂ ಪುರವೈರಿಣಃ | ಕರವೀರಮಹೀಜಸ್ಯ ಶಾಖಾಗ್ರಕುಸುಮವ್ರಜಂ ||೧೮೭|| ಅಪಚೇತುಂ ಸಮಾರುಹ್ಯ ಸಮುದ್ಯದ್ಗೀತರಂಜಿತಂ | ಜನಾಕೀರ್ಣರವಂ ಪಂಚಮಹಾವಾದ್ಯಧ್ವನಿಂ ತಥಾ ||೧೮೮|| ಶ್ರುತ್ವಾ ಸಂಭ್ರಾಂತಚಿತ್ತಸ್ಸನ್ | ನ್ಯಪಸಂ ತತ್ಸರೋಜಲೇ | ಪತಿತಂ ಮಾಂ ಗೃಹೀತ್ವಾಽಥ ತತ್ರ ನಾಗಾಂಗನಾಸ್ತದಾ ||೧೮೯|| ತ್ವಂ ಪೂರ್ವಜನ್ಮನಿ ಪ್ರೀತ್ಯಾ ಭೋಗನಾಥಸ್ಯ ನಿತ್ಯಶಃ | ಪೂಜಾಂ ಕುರ್ವನ್ಸ್ಥಿತಃ ಪದ್ಮೈ ರೇಕದಾ ಭ್ರಮರಾನ್ವಿತಂ ||೧೯೦|| ಏಕಂ ಪದ್ಮ ಮಭೂತ್ತತ್ರ ವಸುಧಾಯಾಂ ತದಾಗಸಾ | ಜಾತೋಽಸ್ಯದ್ಯ ಕೃಪಾಂ ಚಕ್ರೇ ಶಿವಸ್ತ್ವಯಿ ಕೃಪಾನಿಧಿಃ ||೧೯೧|| ಪೂರ್ವಂ ತದೀಯಪುಷ್ಪೋಪಹಾರಕೋಽಸಿ ಯತಸ್ತತಃ | ಸಮಾಗಚ್ಛೇತಿ ಪಾತಾಳಂ ಮಾಂ ಸಮಾನಿನ್ಯು ರಂಜಸಾ ||೧೯೨|| ಭೋಗಾವತೀನದೀಮಧ್ಯವಿಲಸತ್ಪುಲಿನಸ್ಥಲಂ | ತದಾ ಜಾತಿಸ್ಮರತ್ವಂಚ ದಿವ್ಯದೇಹೋಽಪ್ಯಭೂನ್ಮಮ ||೧೯೩|| ತದ್ದಿವ್ಯಸ್ತ್ರೀವಚ ಸ್ಸತ್ಯಂ ಜ್ಞಾತ್ವಾಽಹಂ ಭಕ್ತಿಸಂಯುತಃ | ಭೋಗಿರಾಡರ್ಚಿತಪ

---

||೧೮೫|| ನನ್ನನ್ನು ಜನರು ಪುಷ್ಪದಂತ ಎಂದು ಕರೆಯುತ್ತಿದ್ದರು. ಒಂದಾನೊಂದುದಿನ ನಾನು ಹೂವನ್ನೆತ್ತುವ ಬಾಲಕರಿಂದ ದಾರಿಯನ್ನು ತೋರಿಸಿಕೊಂಡು ಈ ಹೂದೋಟಕ್ಕೆ ಬಂದು, ಶಿವನ ಪೂಜೆಗೋಸುಗ ಈ ಬಿಟ್ಟದಾವರೆ ಮರದ ಕೊಂಬೆಗಳ ತುದಿಯಲ್ಲಿರುವ ಹೂವುಗಳನ್ನು ಕುಯ್ಯುವುದಕ್ಕಾಗಿ ಮರವನ್ನೇರಿ, ಬಹುಜನರು ಕೂಡಿ ಹಾಡುತ್ತಿರುವ ಧ್ವನಿಯನ್ನೂ, ಪಂಚಮಹಾವಾದ್ಯಗಳ ಧ್ವನಿಯನ್ನೂ ಕೇಳಿ, ಬೆರಗಾಗಿ ಈ ಕೊಳದ ನೀರಿಗೆ ಬಿದ್ದೆನು. ಆಗ ಅಲ್ಲಿದ್ದ ನಾಗಕನ್ಯಕೆಯರು ನನ್ನನ್ನು ಹಿಡಿದುಕೊಂಡು, ||೧೮೯|| "ನೀನು ಪೂರ್ವಜನ್ಮದಲ್ಲಿ ಭಕ್ತಿಯಿಂದ ಪ್ರತಿದಿನವೂ ಭೋಗನಾಥೇಶ್ವರನನ್ನು ಕಮಲಗಳಿಂದ ಪೂಜಿಸುತ್ತಿದ್ದೆ. ಒಂದಾನೊಂದುದಿನ ಅವುಗಳಲ್ಲೊಂದು ಕಮಲದಲ್ಲಿ ತುಂಬಿಯು ಸೇರಿಕೊಂಡಿದ್ದಿತು. ಅದನ್ನು ನೋಡದೆ ಹಾಗೆಯೇ ನೀನು ಪೂಜಿಸಿಬಿಟ್ಟೆ. ಆ ಅಪರಾಧದಿಂದ ಭೂಮಿಯಲ್ಲಿ ನೀನು ಹುಟ್ಟಿದ್ದೀಯೆ. ಈಗ ಶಿವನು ನಿನ್ನ ಮೇಲೆ ಕೃಪೆ ಮಾಡಿದನು ಪೂರ್ವಜನ್ಮದಲ್ಲಿ ನೀನು ಶಿವನಿಗೋಸುಗ ಹೂವುಗಳನ್ನು ಎತ್ತಿ ತಂದು ಪೂಜಿಸುತ್ತಿದ್ದ ಪುಣ್ಯಶಾಲಿಯಾಗಿರುವ ಕಾರಣ ಇಲ್ಲಿ ಬಾ" ಎಂದು ಹೇಳಿ ಆ ನಾಗಕನ್ಯೆಯರು ನನ್ನನ್ನು ಬೇಗನೆ ಪಾತಾಳಕ್ಕೆ ಭೋಗಾವತೀನದೀ ಮಧ್ಯದಲ್ಲಿರುವ ಮಳಲಿನ ಪ್ರದೇಶಕ್ಕೆ ಕರೆದುಕೊಂಡು ಹೋದರು. ಆಗ ನನಗೆ ಪೂರ್ವಜನ್ಮಸ್ಮರಣೆಯೂ ದಿವ್ಯ ಶರೀರವೂ ಕೂಡ ಪ್ರಾಪ್ತವಾದುವು. ||೧೯೩|| ಅದರಮೇಲೆ ಆ ನಾಗಾಂಗನೆಯರ ಮಾತನ್ನೆಲ್ಲಾ ನಿಜವೆಂದು ನಾನು ತಿಳಿದು, ಆದಿಶೇಷ ಸಂಪೂಜಿತನಾದ ಅಲ್ಲಿಯ ಭೋಗೆ...

ದಂ ಭೋಗನಾಥ ಮಪೂಪುಜಂ ||೧೯೪|| ಮಾಣಿಕ್ಯಕಲಶಾನೇಕಮಯೂಖೈ ರ್ವಿಜಿತಾರುಣೈಃ | ಸ್ಫುರತ್ಸು ಸಪ್ತಭುವನೇ ಷ್ವಧೋಧಸ್ಸಂಸ್ಥಿತೇಷ್ವಪಿ ||೧೯೫|| ಲಲಿತೈ ರಷ್ಟಭಿರ್ದ್ವಾರೈ ರ್ಮಂಟಪೈ ಸ್ಸಮುದಂಚಿತೈಃ | ಸಮುಲ್ಲಸದ್ವೇದಿಕಾಭಿ ರ್ಗೋಪುರೈ ಸ್ತೋರಣೈರಪಿ ||೧೯೬|| ಶೋಭಿತೇ ಸರ್ವತೋಭದ್ರಾಹ್ವಯೇ ಹರ್ಮ್ಯೇ ಮನೋಹರೇ | ಅಷ್ಟದಿಕ್ಪಾಲಕೈ ರಷ್ಟಮೂರ್ತಿಭಿ ಶ್ಚಾಷ್ಟದಿಗ್ಗಜೈಃ|| ಅಷ್ಟನಾಗಗಣೈ ರ್ಬ್ರಹ್ಮವಿಷ್ಣ್ವಾದಿವಿಬುಧೈರಪಿ | ಗರುಡಾಸುರಗಂಧರ್ವನಿವಹೈ ರುಪಸೇವಿತಃ ||೧೯೮|| ರಂಭಾದಿಕಾಪ್ಸರಸ್ತ್ರೀಷು ಸೇವಮಾನಾಸು ಪಾರ್ಶ್ವಯೋಃ | ಉಪಮನ್ಯುವಸಿಷ್ಠಾಕ್ಷಪಾದಶ್ವೇತದಧೀಚಿಭಿಃ ||೧೯೯|| ಕಶ್ಯಪಾತ್ರಿಪ್ರಭೃತಿಭಿ ಸ್ತೂಯಮಾನೋ ನಿರಂತರಂ | ಅಗಣ್ಯಪುಣ್ಯನಿಲಯೋ ಭೋಗನಾಥೋ ನಿರೀಕ್ಷ್ಯ ಮಾಂ ||೨೦೦|| ಚಕಾರ ಕರುಣಾಂ ಸೋಽಹಂ ಭೋಗನಾಥ ಮನನ್ಯಧೀಃ | ಸಂಸೇವಮಾನ ಸ್ಸತತ ಮತ್ರಚಾಗತ್ಯ ಭಕ್ತಿತಃ ||೨೦೧|| ಶ್ರೀಮಲ್ಲಿಕಾರ್ಜುನಂ ದೇವಂ ಭಜೇ ನಿತ್ಯ ಮತಂದ್ರಿತಃ | ಇತ್ಯುಕ್ತ್ವಾ ಸಯಯೌ ಶಂಭೋ ರ್ನಗರಂಪ್ರತಿ ತತ್‌ಕ್ಷಣಾತ್ ||೨೦೨|| ಕಿಂಚಾಹಂ ಜಾತು ಪೂಜಾಯೈ ಪುಷ್ಪಾರ್ಥಂ ವನಮಾಗತಃ | ಅಪಶ್ಯ ಮೇಕಂವೃಷಭಂ ದಿವ್ಯದೇಹಸ

---

ನಾಥೇಶ್ವರನನ್ನು ಭಕ್ತಿಯಿಂದ ಪೂಜಿಸಿದೆನು. ಸಪ್ತಲೋಕಗಳ ಕೆಳಗೆ ಅರುಣನ ಕೆಂಪನ್ನು ಜಯಿಸಿರುವ ಮಾಣಿಕ್ಯ, ರತ್ನ ಕಲಶಗಳ ಕಾಂತಿಯಿಂದ ಕೂಡಿದ—ಎಂಟುದಿಕ್ಕಿನ ಬಾಗಿಲುಗಳಿಂದಲೂ, ಎಂಟು ಮಂಟಪಗಳಿಂದಲೂ, ಉಜ್ವಲವಾದ ಜಗತಿಗಳಿಂದಲೂ, ಗೋಪುರಗಳಿಂದಲೂ, ತೋರಣಗಳಿಂದಲೂ ಪ್ರಕಾಶಿಸುತ್ತಿರುವ—ಸರ್ವತೋಭದ್ರ ಎಂಬ ಹೆಸರುಳ್ಳ ಮನೋಹರವಾದ ಉಪ್ಪರಿಗೆಯಲ್ಲಿ, ಅಷ್ಟದಿಕ್ಪಾಲಕರಿಂದಲೂ, ಅಷ್ಟಮೂರ್ತಿಗಳಿಂದಲೂ, ಅಷ್ಟದಿಗ್ಗಜಗಳಿಂದಲೂ, ಅಷ್ಟಸರ್ಪಗಣದಿಂದಲೂ, ಬ್ರಹ್ಮವಿಷ್ಣ್ವಾದಿದೇವಾಧಿಪತಿಗಳಿಂದಲೂ, ಗರುಡ ಗಂಧರ್ವಾದಿ ದೇವತೆಗಳಿಂದಲೂ, ರಾಕ್ಷಸರಿಂದಲೂ ಸೇವೆಗೊಳ್ಳುತ್ತ, ಪಕ್ಕಗಳಲ್ಲಿ ರಂಭಾದ್ಯಪ್ಸರಸ್ತ್ರೀಯರಿಂದ ಉಪಚರಿಸಿಕೊಳ್ಳುತ್ತ, ಉಪಮನ್ಯು, ವಸಿಷ್ಠ, ಗೌತಮ, ಶ್ವೇತ, ದಧೀಚಿ, ಕಶ್ಯಪ, ಅತ್ರಿ ಮೊದಲಾದ ಮಹರ್ಷಿಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತ, ಸಕಲ ಸುಕೃತಾಶ್ರಯನಾಗಿ ಮಂಡಿಸಿದ್ದ ಭೋಗನಾಥೇಶ್ವರನು ನನ್ನನ್ನು ನೋಡಿ ||೨೦೦|| ದಯೆಯನ್ನು ಬೀರಿದನು. ಅಂತಪ್ಪ ನಾನು ಹಾಗೆ ಭೋಗನಾಥನನ್ನು ನಿಶ್ಚಲಚಿತ್ತದಿಂದ ಪಾತಾಳದಲ್ಲಿ ಪ್ರತಿದಿನವೂ ಸೇವಿಸಿ, ಇಲ್ಲಿಗೂ ಬಂದು, ಪ್ರತಿದಿನವೂ ಶ್ರೀಮಲ್ಲಿಕಾರ್ಜುನ ಸ್ವಾಮಿಯನ್ನು ಸೇವಿಸುತ್ತಿರುವೆನು,, ಎಂದು ಹೇಳಿ, ಆತನು ಮಲ್ಲಿಕಾರ್ಜುನ ಪುರವನ್ನು ಕುರಿತು ಕೂಡಲೇ ಹೊರಟು ಹೋದನು. ||೨೦೨||

ಮುಜ್ವಲಂ ||೨೦೩|| ಶಿವೇನ ಸ್ವೀಯವೃಷಭಸಖ್ಯಾರ್ಥಮಿವ ಕಲ್ಪಿತಂ | ಸಮಸ್ತ
ಭುವನಖ್ಯಾತಸೌಂದರ್ಯಪರಿರಂಜಿತಂ ||೨೦೪|| ತಮೇಕ ಸ್ತತ್ರ ಸದ್ಭಕ್ತೋ ನಮ
ಸ್ಕೃತ್ಯಾತಿಭಕ್ತಿತಃ | ಪ್ರದಕ್ಷಿಣೀಕೃತ್ಯ ಪುನರ್ನನಾಮ ವಿನಯಾನ್ವಿತಃ ||
ಇತಶ್ಚಾಭಿಮುಖೇ ತಸ್ಮಿನ್ನಿವೇಶ ವೃಷಭೋ ಬಿಲಂ | ಕಿಮೇತದಿತಿ ಗತ್ವಾಽಹಂ
ತಂ ಪ್ರಣಮ್ಯಾಬ್ರವಂ ಮುದಾ ||೨೦೫|| ಕೋ ಯೂಯಂ ನಗರಂ ಕಿಂವಃ ಕು
ತ್ರತ್ಯೋ ವೃಷಭೋಪ್ಯಯಂ | ಕಿಮುದ್ದಿಶ್ಯ ಪ್ರಣಮಥ ಕುತೋ ಗಚ್ಛತ ತತ್ವ
ತಃ ||೨೦೬|| ಕಾಽತ್ರಸಿದ್ಧಿರ್ಭವೇದೇತತ್ಕೃಪಯಾ ಮಮ ಶಂಸತ | ಇತ್ಯು
ಕ್ತಃ ಕಥಯಾಮಾಸ ಸ ಸಂಪ್ರೀತಿಸಮನ್ವಿತಃ ||೨೦೮|| ಆಕರ್ಣಯಾದಿವೃಷ
ಭೋಽಹ್ಯಯಂ ದಿಷ್ಟ್ಯಾತ್ಮನಾಂ ಸದಾ | ಭಾತ್ಯನ್ಯಥಾ ಸದ್ವಿತೀಯಶಂಭುಃ ಶ್ರೀ
ಭೂಧರಾಗ್ರಜಃ ||೨೦೯|| ಧರ್ಮಾವತಾರೋ ದುಷ್ಕರ್ಮಜನದೂರೋಽಘವ
ರ್ಜಿತಃ | ಚತುರ್ಯುಗೇಷು ಚರತಿ ಕ್ರಮಾದ್ಧರ್ಮಶ್ಚತುಷ್ಪದಃ ||೨೧೦|| ತತ್ತದ್ಯು
ಗಾನಾಂ ವಿಜ್ಞಾಯ ತಾರತಮ್ಯಂ ನಿರಂತರಂ | ಜಗದ್ಧಿತಾರ್ಥಧರ್ಮೋಽಸಾ

---

ಮತ್ತು ನಾನು ಒಂದು ದಿವಸ ಶಿವಪೂಜಾರ್ಥವಾಗಿ ಹೂವನ್ನು ತರುವುದಕ್ಕೋಸುಗ ವನಕ್ಕೆ ಬಂದೆನು. ಅಲ್ಲಿ ಶಿವನು ತನ್ನ ವಾಹನವಾದ ಬಸವನ ಸ್ನೇಹಾರ್ಥವಾಗಿ ಮತ್ತೊಂದು ಬಸವನನ್ನು ನಿರ್ಮಿಸಿರುವನೋ ಎಂಬಂತೆ ಮಹಾ ದಿವ್ಯದೇಹದಿಂದ ಶೋಭಿಸುತ್ತಲೂ, ಲೋಕಪ್ರಸಿದ್ಧ ಸೌಂದರ್ಯವಿಶಿಷ್ಟವಾಗಿಯೂ ಇರುವ ಒಂದು ವೃಷಭವನ್ನು ಕಂಡೆನು. ||೨೦೪|| ಅಲ್ಲಿದ್ದ ಒಬ್ಬ ಭಕ್ತನು ಭಕ್ತಿಯಿಂದ ಆ ಬಸವನಿಗೆ ನಮಸ್ಕರಿಸಿ, ಪ್ರದಕ್ಷಿಣಮಾಡಿ, ಮರಳಿ ವಿನಯದಿಂದ ಅಡ್ಡಬಿದ್ದನು. ಬಳಿಕ ಬಸವನು ಇತ್ತಕಡೆ ಇದಿರಾಗಿರುವ ಆ ಬಿಲಕ್ಕೆ ಹೋಗಿಬಿಟ್ಟಿತು. ನಾನು ಇದೇನೆಂದು ಆತನ ಬಳಿಗೆ ಹೋಗಿ ಮಣಿದು ಸಂತೋಷದಿಂದ– "ಸ್ವಾಮಿ, ತಾವು ಯಾರು? ತಮ್ಮ ಊರಾವುದು? ಈ ಬಸವನು ಎಲ್ಲಿಯದು? ಏತಕ್ಕಾಗಿ ನೀವು ಅದಕ್ಕೆ ನಮಸ್ಕರಿಸಿದಿರಿ? ಎಲ್ಲಿಗೆ ಹೋಗುತ್ತೀರಿ? ಇಲ್ಲಿ ಲಭಿಸತಕ್ಕ ಸಿದ್ಧಿಯಾವುದು? ಇದನ್ನೆಲ್ಲಾ ನನ್ನ ಮೇಲೆ ದಯೆಯಿಟ್ಟು ಅಪ್ಪಣೆ ಕೊಡಿಸಿರಿ" ಎಂಬುದಾಗಿ ಅರಿಕೆಮಾಡಲು, ಆ ಭಕ್ತೋತ್ತಮನು ಸಂತೋಷಗೊಂಡು– "ಅಯ್ಯಾ! ಹೇಳುತ್ತೇನೆ ಕೇಳು– ಈ ಬಸವನು ಯಾವಾಗಲೂ ಭಾಗ್ಯವಂತರಿಗೆ ಗೋಚರಿಸುವನು. ಈತನು ಶ್ರೀಶೈಲದ ಅಣ್ಣನೂ, ಧರ್ಮಸ್ವರೂಪನೂ, ಪಾಪಿಷ್ಠರಿಗೆ ದೂರನೂ, ನಿಷ್ಕಲ್ಮಷನೂ ಆದ ದ್ವಿತೀಯಶಂಭುವು. ಧರ್ಮವು ಕೃತಯುಗದಲ್ಲಿ ೪ ಪಾದಗಳುಳ್ಳುದಾಗಿಯೂ, ತ್ರೇತಾಯುಗದಲ್ಲಿ ಮೂರುಪಾದಗಳುಳ್ಳುದಾಗಿಯೂ, ದ್ವಾಪರದಲ್ಲಿ ಎರಡುಪಾದಗಳುಳ್ಳುದಾಗಿಯೂ. ಕಲಿಯುಗದಲ್ಲಿ ಒಂದುಪಾದವುಳ್ಳುದಾಗಿಯೂ ಚರಿಸುತ್ತಿರುವುದು ||೨೧೦|| ಈ ಬಸವೇಶನು ಆಯಾ ಯುಗ ತಾರತಮ್ಯವನ್ನು ತಿಳಿದುಕೊಂಡು ಲೋಕಹಿತಾರ್ಥವಾಗಿ ಈ ರೂಪದಿಂದಿರುವನು. ಯಾರು ೭ ರಾತ್ರಿಗಳವರೆಗೆ ಉಪವಾಸವ್ರತ

ಸುರಖಗಮಹೋಲ್ಕಾ ಜಲಭೋಗಿನಾಂ ||೨೨೧|| ಅನಲಾತಪಶುಗ್ವಜ್ರಸವಿಷಾರಪರಿಪಂಥಿನಾಂ | ಸೇನಾಸಿನೃಪಮೃತ್ಯೂನಾಂ ಸಂಸ್ತಂಭನಕಲಾಸ್ತಥಾ ||೨೨೨||
ಬಹೂನಿ ದಿವ್ಯೌಷಧಾನಿ ತಥಾಮಂತ್ರಾಂಶ್ಚ ಗಾರುಡಾನ್ | ಪರಕಾಯಪ್ರವೇಶಾದಿದೃಷ್ಟಸಿದ್ಧೀ ಸ್ತಥೇತರಾಃ ||೨೨೩|| ಅದೃಷ್ಟಸಿದ್ಧೀಸ್ಸುತರಾ ಮದೃಷ್ಟಾರ್ಥಾರ್ಥಿನಾಮಪಿ | ದದಾತಿ ಶಂಕರಸ್ತೇಷು ಸ್ಮೃತಸ್ವಸ್ವಪುರೇಷ್ವಥ ||೨೨೪||
ಬಿಲಾದ್ಬಹಿಸ್ತಾಸ್ಸಂಸ್ಥಾಪ್ಯ ಸಏವ ವೃಷಭಃ ಕ್ಷಣಾತ್ | ಪುನರ್ಬಿಲಂ ಪ್ರವಿಶತಿ ಗತ್ವಾಽಹಂಚ ತಥಾ ಬಿಲಂ ||೨೨೫|| ಆಗತೋಽಸ್ಮೀಪ್ಸಿತಾ ಸರ್ಥಾ ನ್ಲಬ್ಧ್ವೇತ್ಯುಕ್ತ್ವಾ ಸನಿರ್ಯಯೌ| ಪುನಃ ಕದಾಚಿದ್ಗತ್ವಾಽಹಂ ಪ್ರದೇಶಂ ಜನವರ್ಜಿತಂ|| ಗೃಹ್ಣಸ್ಫಲಾನಿ ವಿಪಿನೇ ಕಂಚಿತ್ತಾಲಮಹೀರುಹಂ| ಆರಭ್ಯ ಭುವ ಮಾವ್ಯೋಮ ಗತ್ವಾಽಥ ಶನಕೈರಧಃ ||೨೨೬|| ದಿನಮಾರಭ್ಯ ಭೂಯೋಪಿ ಸನಾಯಾಂತಮುದೀಕ್ಷ್ಯ ಚ | ತತ್ರೈವ ದತ್ತದೃಷ್ಟಿಸ್ಸ ನ್ನತಿಷ್ಠಂ ವಿಸ್ಮಯಾನ್ವಿತಃ ||೨೨೭||

---

ಸ್ಪರ್ಶನೆಗೊಳಿಸಿದಕೂಡಲೇ ಕತ್ತರಿಸಿಹೋಗಿದ್ದುದನ್ನು ಜಂಟಿಸಿಬಿಡುವ, ಮತ್ತು ತಗುಲಿಸಿದಕೂಡಲೇ ಅದೃಶ್ಯಗೊಳಿಸುವ ಮೂಲಿಕೆಗಳನ್ನೂ ||೨೨೦|| ತಾಮ್ರ ಮೊದಲಾದ ಧಾತುಗಳನ್ನು ಭಂಗಾರವನ್ನಾಗಿಸುವ ವಾದ, ಹಣೆಗೆ ಇಟ್ಟುಕೊಂಡಕೂಡಲೇ ಯಾರಿಗೂ ಕಾಣಿಸದಂತೆ ಮಾಡುವ ಅದೃಶ್ಯಾಂಜನ, ಪಾದರಸ ಬಂಧನ ಮಾರಣಾದಿಗಳು, ಆಕಾಶಗಮನಾದಿ ಸಿದ್ಧಿಗಳನ್ನುಂಟುಮಾಡುವ ರಾಸಾಯನಿಕ ಕ್ರಿಯೆಗಳು—ಇತ್ಯಾದಿ ಕಲೆಗಳನ್ನೂ, ಕ್ರೂರ ಮೃಗಗಳು, ಕಳ್ಳರು, ರಾಕ್ಷಸರು, ಹಕ್ಕಿಗಳು, ಬಾಲಚುಕ್ಕಿ, ನೀರು, ಹಾವು, ಬೆಂಕಿ, ಬಿಸಿಲು, ರೋಗ, ಸಿಡಿಲು, ಬಿರುಗಾಳಿ, ಶತ್ರು, ಸೈನ್ಯ, ಕತ್ತಿ, ರಾಜ, ಮೃತ್ಯು ಇವರುಗಳ ಶಕ್ತಿಯೊಂದೂ ನಡೆಯದಂತೆ ತಡೆದುಬಿಡುವ ವಿದ್ಯೆಗಳನ್ನೂ ||೨೨೨|| ನಾನಾ ದಿವ್ಯೌಷಧಗಳನ್ನೂ, ಗಾರುಡ ಮಂತ್ರಗಳನ್ನೂ, ಪರಕಾಯ ಪ್ರವೇಶವೇ ಮೊದಲಾದ ದೃಷ್ಟಫಲಸಿದ್ಧಿಗಳನ್ನೂ, ಭಾಗ್ಯಾರ್ಥಿಗಳು ಅಪೇಕ್ಷಿಸುವ ಅದೃಷ್ಟ ಫಲಸಿದ್ಧಿಗಳನ್ನೂ ಕೂಡ ಕೊಡುವನು. ಬಳಿಕ ಆ ಭಕ್ತರುಗಳು ತಂತಮ್ಮ ಊರುಗಳನ್ನು ಸ್ಮರಿಸಿಕೊಂಡುದೇ ಆದರೆ ಅವರನ್ನು ಆ ಬಸವೇಶನು ಕ್ಷಣಮಾತ್ರದಲ್ಲಿ ಬಿಲದ ಹೊರಕ್ಕೆ ತಂದು ಕುಳ್ಳಿರಿಸಿ ತಾನು ಮರಳಿ ಬಿಲದೊಳಕ್ಕೆ ಹೊರಟುಹೋಗುವನು. ನಾನೂಕೂಡ ಹಾಗೆ ಉಪವಾಸವ್ರತವನ್ನಾಚರಿಸಿ ಬಸವೇಶನ ಬಾಲವನ್ನು ಹಿಡಿದುಕೊಂಡು ಬಿಲದೊಳಕ್ಕೆ ಹೋಗಿದ್ದು, ಅಲ್ಲಿರುವ ಶಿವನಿಂದ ಇಷ್ಟಾರ್ಥಗಳನ್ನು ಪಡೆದು ಬಂದೆನು" ಎಂದು ಹೇಳಿಬಿಟ್ಟು ಆತನು ಹೊರಟುಹೋದನು. ||೨೨೫||

ಮತ್ತು ನಾನು ಇನ್ನೊಂದುಸಲ ನಿರ್ಜನವಾದೊಂದು ಸ್ಥಲಕ್ಕೆ ಹೋಗಿ ಅಲ್ಲಿ ಹಣ್ಣುಗಳನ್ನು ಕಿತ್ತುಕೊಂಡು ಬರುತ್ತ ಒಂದಾನೊಂದು ತಾಳೆ ಮರವನ್ನು ಕಂಡೆನು. ಅದು ಭೂಮಿಯಿಂದ ಆಕಾಶದವರೆಗೆ ಬೆಳೆದು ಹೋಗಿ ಅಲ್ಲಿಂದ ಮೆಲ್ಲಗೆ ಭೂಮಿಗೆ ಬಗ್ಗಿ ಇಳಿದು ಬರುತ್ತಿ

121

ವೇತದ್ರೂಪೇಣ ತಿಷ್ಠತಿ ||೨೧೧|| ಆಸಪ್ತರಾತ್ರಂ ಯೇಕೇಚಿದ್ಗೃಹೀತಾಸಶನ ವ್ರತಾಃ | ವಸೇಯುಃ ತಸ್ಮಿನ್ಸತತಂ ಬಿಲದ್ವಾರೇ ಸ್ಥಿರವ್ರತಾಃ ||೨೧೨|| ಕೃಪಯಾ ವೃಷಭಾಧೀಶ ಸ್ತಾನ್ನೃತ್ಯಾಯಾತಿ ತೋಷಿತಃ | ಆಗತೇ ತೈರ್ಗೃಹೀತವ್ಯೋ ವಾಲಿಧಿ ರ್ವೃಷಭೇಶಿತುಃ ||೨೧೩|| ತಸ್ಮಿನ್ಗೃಹೀತೇ ವೃಷಭ ಸ್ಸಪುನರ್ಬಿಲಮುತ್ತಮಂ | ಗತ್ವಾ ಶ್ರೀವೃಷಭಾಧೀಶಪುರಂ ಮಾನಸವೇಗತಃ ||೨೧೪|| ನೀತ್ವಾ ತಾಂಸ್ತತ್ಪುರಾಭ್ಯಾಶಂ ಶೀಘ್ರಮನ್ತರ್ಹಿತೋಭವೇತ್ | ತತ್ಪುರಾಂತಸ್ಥವೃಷಭ ತೀರ್ಥೇ ಸ್ನಾತೇಷು ತೇಷ್ವಥ ||೨೧೫|| ಅರ್ಚಯಿತ್ವಾ ವೃಷೇಶಾನಂ ಪ್ರಣಮತ್ಸ್ವತಿಭಕ್ತಿತಃ | ವೃಷಭೇಶೋಪಿ ಸಂಪ್ರೀತ ಸ್ತೇಷಾಂ ಪ್ರತ್ಯಕ್ಷತಾಂ ಗತಃ || ದದ್ಯಾದ್ದೃಷ್ಟಾದೃಷ್ಟಫಲಸಂಸಿದ್ಧಿಂ ಲೋಕವಿಶ್ರುತಾಂ | ತೇಷಾಂ ಮೋಕ್ಷಾರ್ಥಿನಃ ಕೇಚಿತ್ಸಂತಿಚೇತ್ತಾಸ್ಕೃಪಾನ್ವಿತಃ ||೨೧೭|| ಶ್ರೀನಂದಿಕೇಶ್ವರಪುರಂ ನಯತ್ಯದ್ಭುತಸೌಖ್ಯದಂ | ಕಿಂಚಾನೇಕಮಣೀನ್ದಿವ್ಯಮಂತ್ರಾನ್ದಿವ್ಯಾಂಗನಾವಲೀಃ ||೨೧೮|| ಉಪಭೋಗಸುಖಂ ಕಾಮರೂಪಾಣಿ ಸುರಭೂರುಹಾನ್ | ಸರ್ವಲೋಕಾಭಿಗಮನಸಾಮರ್ಥ್ಯಂ ಸಮುದಂಚಿತಂ ||೨೧೯|| ಸಂಜೀವಕರಣೀಂ ಶಲ್ಯಕರಣೀ ಮತಿದುರ್ಲಭಾಂ | ತಥಾ ಸಂಧಾನಕರಣೀ ಮದೃಶ್ಯಕರಣೀಮಪಿ ||೨೨೦|| ಧಾತುವಾದಾಂಜನರಸರಸಾಯನಕಲಾಅಪಿ | ಮೃಗಚೋರಾ

---

ದಿಂದ ಈ ಬಿಲದ ಬಾಗಿಲಲ್ಲಿ ಯಾವಾಗಲೂ ವಾಸಮಾಡಿಕೊಂಡಿರುವರೋ ಅವರ ಮೇಲೆ ದಯೆಯಿಂದ ಈ ಬಸವೇಶನು ಬಿಲದಿಂದ ಹೊರಕ್ಕೆ ಸಂತೋಷಗೊಂಡು ಬರುವನು. ಅವನು ಬಂದ ಕೂಡಲೇ ಆತನ ಬಾಲವನ್ನು ಹಿಡಿದುಕೊಳ್ಳಬೇಕು. ಆಗ ಬಸವನು ಮನೋವೇಗದಿಂದ ಬಸವೇಶಪುರದ ಬಳಿಗೆ ಆತನನ್ನು ಕರೆದುಕೊಂಡು ಹೋಗಿ ಬಿಟ್ಟು, ತಾನು ಅಂತರ್ಧಾನಗೊಳ್ಳುವನು. ಹೀಗೆ ಬಸವೇಶನ ಬಾಲವನ್ನು ಹಿಡಿದುಕೊಂಡು ಆ ಪಟ್ಟಣಕ್ಕೆ ಹೋದವರುಗಳು ಆ ಪುರದಲ್ಲಿರುವ ವೃಷಭತೀರ್ಥದಲ್ಲಿ ಸ್ನಾನಮಾಡಿ ||೨೧೫|| ಅಲ್ಲಿರುವ ಬಸವೇಶ್ವರನನ್ನು ಪೂಜಿಸಿ ಅತ್ಯಂತ ಭಕ್ತಿಯಿಂದ ನಮಸ್ಕರಿಸಿದರೆ, ಆಗ ಬಸವೇಶನು ಮೆಚ್ಚಿ ಅವರಿಗೆ ಪ್ರತ್ಯಕ್ಷನಾಗಿ, ಜಗತ್ಪ್ರಸಿದ್ಧಗಳಾದ ದೃಷ್ಟಾದೃಷ್ಟ ಫಲಸಿದ್ಧಿಗಳನ್ನೆಲ್ಲಾ ಅವರಿಗೆ ಕೊಡುವನು. ಆ ಭಕ್ತರಲ್ಲಿ ಕಾಮ್ಯಫಲಾಪೇಕ್ಷೆಯಿಲ್ಲದೆ ಮೋಕ್ಷಾಭಿಲಾಷಿಗಳಾದವರು ಯಾರಾದರೂ ಇದ್ದರೆ ದಯೆಯಿಂದ ಅವರನ್ನು ಅತ್ಯಾಶ್ಚರ್ಯಕರ ಸೌಖ್ಯಪ್ರದನಾದ ನಂದಿಕೇಶ್ವರ ನಗರಕ್ಕೆ ಕರೆದುಕೊಂಡು ಹೋಗುವನು. ಅಲ್ಲಿರುವ ಶಂಕರನು ಆ ಭಕ್ತರುಗಳಿಗೆ ಅನೇಕ ರತ್ನಗಳನ್ನೂ, ದಿವ್ಯಮಂತ್ರಗಳನ್ನೂ, ದೇವಾಂಗನಾಸಂಗಸೌಖ್ಯವನ್ನೂ ಇಚ್ಛೈಸಿದ ರೂಪುಗಳ ಸಿದ್ಧಿಯನ್ನೂ, ಕಲ್ಪವೃಕ್ಷಗಳನ್ನೂ, ಸಕಲ ಲೋಕಗಳಿಗೂ ಹೋಗುವ ಸಾಮರ್ಥ್ಯವನ್ನೂ, ಸೋಕಿದ ಕೂಡಲೇ ಸತ್ತವರನ್ನು ಬದುಕಿಸುವ, ಮುಟ್ಟಿದ ಕೂಡಲೇ ಆಯುಧಗಳಿಂದ ಭೇದಿಸಿದಂತೆ ಕತ್ತರಿಸಿಹಾಕುವ,

ಸುರಖಗಮಹೋಲ್ಕಾಜಲಭೋಗಿನಾಂ ||೨೨೧|| ಅನಲಾತಪರುಗ್ವಜ್ರಸವಿಷಾರಪರಿಪಂಥಿನಾಂ | ಸೇನಾಸಿಸ್ಯಪಮೃತ್ಯೂನಾಂ ಸಂಸ್ತಂಭನಕಲಾಸ್ತಥಾ ||೨೨೨|| ಬಹೂನಿ ದಿವ್ಯೌಷಧಾನಿ ತಥಾಮಂತ್ರಾಂಶ್ಚ ಗಾರುಡಾನ್ | ಪರಕಾಯಪ್ರವೇಶಾದಿದೃಷ್ಟಸಿದ್ಧೀಸ್ತಥೇತರಾಃ ||೨೨೩|| ಅದೃಷ್ಟಸಿದ್ಧೀಸ್ಸುತರಾಮದೃಷ್ಟಾರ್ಥಾರ್ಥಿನಾಮಪಿ | ದದಾತಿ ಶಂಕರಸ್ತೇಷು ಸ್ಮೃತಸ್ಸ್ವಸ್ವಪುರೇಷ್ವಥ ||೨೨೪|| ಬಿಲಾದ್ಬಹಿಸ್ತಾನ್ಸಂಸ್ಥಾಪ್ಯ ಸಏವ ವೃಷಭಃ ಕ್ಷಣಾತ್ | ಪುನರ್ಬಿಲಂ ಪ್ರವಿಶತಿ ಗತ್ವಾಽಹಂಚ ತಥಾ ಬಿಲಂ ||೨೨೫|| ಆಗತೋಽಸ್ಮೀಪ್ಸಿತಾ ನರ್ಥಾನ್ಲಬ್ಧ್ವೇತ್ಯುಕ್ತ್ವಾ ಸನಿರ್ಯಯೌ| ಪುನಃ ಕದಾಚಿದ್ಗತ್ವಾಽಹಂ ಪ್ರದೇಶಂ ಜನವರ್ಜಿತಂ|| ಗೃಹ್ಣನ್ಫಲಾನಿ ವಿಪಿನೇ ಕಂಚಿತ್ತಾಲಮಹೀರುಹಂ| ಆರಭ್ಯ ಭುವ ಮಾವ್ಯೋಮ ಗತ್ವಾಽಥ ಶನಕೈರಧಃ ||೨೨೬|| ದಿನಮಾರಭ್ಯ ಭೂಯೋಪಿ ನಮಾಯಾಂತ ಮುದೀಕ್ಷ್ಯಚ | ತತ್ರೈವ ದತ್ತದೃಷ್ಟಿಸ್ಸ ನ್ನತಿಷ್ಠಂ ವಿಸ್ಮಯಾನ್ವಿತಃ ||೨೨೭||

---

ಸ್ಪರ್ಶನೆಗೊಳಿಸಿದಕೂಡಲೇ ಕತ್ತರಿಸಿಹೋಗಿದ್ದುದನ್ನು ಜಂಟಿಸಿಬಿಡುವ, ಮತ್ತು ತಗುಲಿಸಿದಕೂಡಲೇ ಅದೃಶ್ಯಗೊಳಿಸುವ ಮೂಲಿಕೆಗಳನ್ನೂ ||೨೨೦|| ತಾಮ್ರ ಮೊದಲಾದ ಧಾತುಗಳನ್ನು ಭಂಗಾರವನ್ನಾಗಿಸುವ ವಾದ, ಪಣೆಗೆ ಇಟ್ಟುಕೊಂಡಕೂಡಲೇ ಯಾರಿಗೂ ಕಾಣಿಸದಂತೆ ಮಾಡುವ ಅದೃಶ್ಯಾಂಜನ, ಪಾದರಸ ಬಂಧನ ಮಾರಣಾದಿಗಳು, ಆಕಾಶಗಮನಾದಿ ಸಿದ್ಧಿಗಳನ್ನುಂಟುಮಾಡುವ ರಾಸಾಯನಿಕ ಕ್ರಿಯೆಗಳು—ಇತ್ಯಾದಿ ಕಲೆಗಳನ್ನೂ, ಕ್ರೂರಮೃಗಗಳು, ಕಳ್ಳರು, ರಾಕ್ಷಸರು, ಹಕ್ಕಿಗಳು, ಬಾಲಚುಕ್ಕಿ, ನೀರು, ಹಾವು, ಬೆಂಕಿ, ಬಿಸಿಲು, ರೋಗ, ಸಿಡಿಲು, ಬಿರುಗಾಳಿ, ಶತ್ರು, ಸೈನ್ಯ, ಕತ್ತಿ, ರಾಜ, ಮೃತ್ಯು ಇವರುಗಳ ಶಕ್ತಿಯೊಂದೂ ನಡೆಯದಂತೆ ತಡೆದುಬಿಡುವ ವಿದ್ಯೆಗಳನ್ನೂ ||೨೨೨|| ನಾನಾ ದಿವ್ಯೌಷಧಗಳನ್ನೂ, ಗಾರುಡ ಮಂತ್ರಗಳನ್ನೂ, ಪರಕಾಯ ಪ್ರವೇಶವೇ ಮೊದಲಾದ ದೃಷ್ಟಫಲಸಿದ್ಧಿಗಳನ್ನೂ, ಭಾಗ್ಯಾರ್ಥಿಗಳು ಅಪೇಕ್ಷಿಸುವ ಅದೃಷ್ಟಫಲಸಿದ್ಧಿಗಳನ್ನೂ ಕೂಡ ಕೊಡುವನು. ಬಳಿಕ ಆ ಭಕ್ತರುಗಳು ತಂತಮ್ಮ ಊರುಗಳನ್ನು ಸ್ಮರಿಸಿಕೊಂಡುದೇ ಆದರೆ ಅವರನ್ನು ಆ ಬಸವೇಶನು ಕ್ಷಣಮಾತ್ರದಲ್ಲಿ ಬಿಲದ ಹೊರಕ್ಕೆ ತಂದು ಕುಳ್ಳಿರಿಸಿ ತಾನು ಮರಳಿ ಬಿಲದೊಳಕ್ಕೆ ಹೊರಟುಹೋಗುವನು. ನಾನೂಕೂಡ ಹಾಗೆ ಉಪವಾಸವ್ರತವನ್ನಾಚರಿಸಿ ಬಸವೇಶನ ಬಾಲವನ್ನು ಹಿಡಿದುಕೊಂಡು ಬಿಲದೊಳಕ್ಕೆ ಹೋಗಿದ್ದು, ಅಲ್ಲಿರುವ ಶಿವನಿಂದ ಇಷ್ಟಾರ್ಥಗಳನ್ನು ಪಡೆದು ಬಂದೆನು'' ಎಂದು ಹೇಳಿಬಿಟ್ಟು ಆತನು ಹೊರಟುಹೋದನು. ||೨೨೫||

ಮತ್ತು ನಾನು ಇನ್ನೊಂದುಸಲ ನಿರ್ಜನವಾದೊಂದು ಸ್ಥಳಕ್ಕೆ ಹೋಗಿ ಅಲ್ಲಿ ಹಣ್ಣುಗಳನ್ನು ಕಿತ್ತುಕೊಂಡು ಬರುತ್ತ ಒಂದಾನೊಂದು ತಾಳೆ ಮರವನ್ನು ಕಂಡೆನು. ಅದು ಭೂಮಿಯಿಂದ ಆಕಾಶದವರೆಗೆ ಬೆಳೆದು ಹೋಗಿ ಅಲ್ಲಿಂದ ಮೆಲ್ಲಗೆ ಭೂಮಿಗೆ ಬಗ್ಗಿ ಇಳಿದು ಬರುತ್ತಿ

ತದ್ವೃಕ್ಷಾಗ್ರೇಽಥ ದದೃಶೇಮಯಾ ಪರಿಣತೇಽಹನಿ | ಆರೂಢವೃಕ್ಷ ಆಯಾತ ಸ್ಸೇವಿತುಂ ಮಲ್ಲಿಕಾರ್ಜುನಂ ||೨೨೯|| ಶತರುದ್ರ ಇವೋದಗ್ರಕಾಂತಿ ರೇಕ ಸ್ತಪೋಧನಃ | ಅಸ್ತಂಗತೇ ಸವಿತರಿ ಮಮಜ್ಜ ಭುವಿ ಭೂರುಹಃ ||೨೩೦|| ತಪಸ್ವ್ಯೇಕ ಏವಾವಶಿಷ್ಟೋಽಭೂ ತ್ತಮಾಸಾದ್ಯ ತಪೋಧನಂ | ಅಬ್ರವಂ ತಾಲವೃಕ್ಷೋಽಯ ಮಗಮುದ್ಗಗನಂ ಕಥಂ ||೨೩೧|| ಕಥಂ ಧರಾತಲೇ ಮಗ್ನ ಸ್ತ್ವಂ ತದಗ್ರೇಽವಸಃ ಕಥಂ | ಕಸ್ತತ್ರಾದರ್ಶಿ ಭವತಾ ಸಿದ್ಧಿಃ ಕಾ ತತ್ರ ಲಭ್ಯತೇ || ಅಭೂತ್ಕಥಂ ಪರಿಚಯ ಸ್ತವಚಾಸ್ಯ ಮಹೀರುಹಃ | ಇತ್ಯುಕ್ತಃ ಪ್ರತ್ಯುವಾಚೈವಂ ಮಾಂ ತದಾ ಸತಪೋಧನಃ ||೨೩೨|| ವರ್ತೇಽಹಂ ಸರ್ವದೈವಾತ್ರ ಶ್ರೀಗಿರೇರ್ವನಭೂಮಿಷು | ಅಸ್ಮಿನ್ದಿನೇ ಸಮಾಸಾದ್ಯ ವಿಜನತ್ವಾ ದಿಮಾಂ ಸ್ಥಲೀಂ|| ವಿಚಾರ್ಯ ಕರ್ತುಂ ದೇವಸ್ಯ ಪೂಜಾ ಮೌದಯಕಾಲಿಕೀಂ | ಕುರ್ವನ್ನತಿಷ್ಠ ಮತ್ರೈವ ಶಿವಾಜ್ಞಾವಶಕೋ ಮುದಾ ||೨೩೪|| ತಾಲಾಗ್ರಪರ್ಣಾನ್ಯುದಿತಾನ್ಯುದಿತಾ ಸ್ವಿನಕಾಂತಿಷು | ತತಃ ಪ್ರಥಮಪರ್ಣಾನಿ ಪ್ರಥಮಾರ್ಕಮರೀಚಿಷು || ಶಾಖಾಶ್ಚಾಸ್ಯಾಯಯು ರ್ದೈರ್ಘ್ಯಂ ಸಾಕಂ ಭಾಸ್ಕರರಶ್ಮಿಭಿಃ | ಉದಿತೇ ಭಾ

---

ದ್ದಿತು. ನಾನು ಅದನ್ನು ಕಂಡು ಆಶ್ಚರ್ಯಪಟ್ಟು ಅದರಲ್ಲೇ ದೃಷ್ಟಿಯನ್ನಿಟ್ಟುಕೊಂಡಿದ್ದೆನು. ಆಗ ಸಾಯಂಕಾಲದ ಹೊತ್ತಿಗೆ ಆ ಮರದಮೇಲೆ ಹತ್ತಿಕೊಂಡಿದ್ದವನೊಬ್ಬನು ಶ್ರೀಮಲ್ಲಿಕಾರ್ಜುನನ್ನು ಸೇವಿಸುವುದಕ್ಕಾಗಿ ಇಳಿದುಬಂದನು. ||೨೨೯|| ಆ ತಪಸ್ವಿಯು ಶತರುದ್ರನಂತೆ ಮಹಾ ತೇಜಸ್ವಿಯಾಗಿದ್ದನು. ಸೂರ್ಯನು ಅಸ್ತಂಗತನಾಗಲಾಗಿ ಆ ತಾಳೆಮರವೂ ಭೂಮಿಯಲ್ಲಿ ಮುಳುಗಿಕೊಂಡಿತು. ತಪಸ್ವಿಯೊಬ್ಬನೇ ಉಳಿದುಕೊಂಡನು. ಆಗ ನಾನು ಆ ತಪಸ್ವಿಯ ಬಳಿಗೆ ಹೋಗಿ, ಎಲೈ ಮಹನೀಯನೆ! ಈ ತಾಳೆ ಮರವು ಆಕಾಶಕ್ಕೆ ಹೇಗೆ ಹೋಯಿತು? ಭೂಮಿಯಲ್ಲಿ ಹೇಗೆ ಮುಳುಗಿತು? ನೀನು ಅದರ ತುದಿಯಲ್ಲಿ ಹೇಗಿದ್ದೆ? ನೀನು ಅದರಮೇಲೆ ಯಾರನ್ನು ಕಂಡೆ? ಅಲ್ಲಿ ಲಭಿಸುವ ಸಿದ್ಧಿ ಯಾವುದು? ನಿನಗೆ ಈ ಮರದ ಪರಿಚಯವಾದುದು ಹೇಗೆ?,, ಎಂದು ಕೇಳಲು, ಆ ತಪಸ್ವಿಯು ನನ್ನನ್ನು ಕುರಿತು—||೨೩೨|| "ಅಯ್ಯಾ ನಾನು ಸದಾ ಈ ಶ್ರೀಶೈಲದ ಅರಣ್ಯಗಳಲ್ಲಿರುವೆನು. ಈ ದಿವಸ ಈ ಪ್ರದೇಶವು ನಿರ್ಜನವಾಗಿದ್ದುದರಿಂದ ಪ್ರಾತಃಕಾಲದ ಶಿವಪೂಜೆಯನ್ನು ಮಾಡಬೇಕೆಂದು ಯೋಚಿಸಿಕೊಂಡು ಇಲ್ಲಿಗೆ ಬಂದು ಶಿವಾರ್ಚನೆಯನ್ನು ನೆರವೇರಿಸಿ, ಶಿವನಪ್ಪಣೆಯಮೇರೆಗೆ ಸಂತೋಷದಿಂದ ಇಲ್ಲೇ ಇದ್ದೆನು. ಅಷ್ಟರಲ್ಲಿ ಅರುಣೋದಯವಾಗಲು, ಈ ತಾಳೆ ಮರದ ತುದಿಯೆಲೆಗಳು ಮೂಡಿದುವು. ಬಳಿಕ ಸೂರ್ಯನ ಮುಂಗಡೆಯ ಕಿರಣಗಳು ಕಾಣಿಸಿಕೊಂಡಕೂಡಲೇ ಈ ಮರದ ತುದಿಯ ಎಲೆಗಳೂ ಒಡೆದುವು. ಸೂರ್ಯನ ಕಿರಣಗಳು ಪ್ರಸರಿಸುತ್ತ ಬಂದಂತೆ ಈ ಮರದ ಕೊಂಬೆಗಳೂ ಉದ್ದವಾಗುತ್ತ ಬಂದುವು. ಸೂರ್ಯನು ಚೆನ್ನಾಗಿ ಉದಿಸಲಾಗಿ ಈ ಮರವೂ ಭೂಮಿಯಿಂದೀಚೆಗೆ ಎದ್ದು

ಸ್ಕರೇ ವೃಕ್ಷೋಽಪ್ಯಯಂ ಸಮುದಿತೋಽಭವತ್ ||೨೩೭|| ಆರೋಹತಿ ಸಥ ಸ್ಸೂರ್ಯೋ ವೃಕ್ಷೋಽಪಿ ವವೃಧೇ ಶನೈಃ | ಮಹೇಶಪೂಜಾಕಾಲತ್ವಾ ದಪಶ್ಯ ನ್ನಾಹ ಮನ್ಯತಃ ||೨೩೮|| ಮಧ್ಯೇ ತಾಲಾಗ್ರಪರ್ಣಾನಾಂ ಕರ್ಣಿಕೇವಾಂಬು ಜೇಽವಸಂ | ಮಾರ್ತಾಂಡರಥವೇಗೇನ ಯಯಾ ವೂರ್ಧ್ವಂ ಮಹೀರುಹಃ || ರವಿರ್ಮಧ್ಯಾಹ್ನವೇಳಾಯಾಂ ತಾಳೇ ಸ್ವಾಂತಿಕ ಮಾಗತೇ | ಶಿವಲಾಂಛನ ಯುಕ್ತಂ ಮಾಂ ನಿರೀಕ್ಷ್ಯ ಪ್ರೀತಿಸಂಯುತಃ ||೨೪೦|| ಸಮಯೋಚಿತಸತ್ಕಾರ ಪರಿತುಷ್ಟಂ ವಿಧಾಯಚ| ಯಾಚಸ್ವಾಭೀಪ್ಸಿತತಮಂ ತವೇತಿ ಜಗದೇ ವಚಃ || ಸರ್ವಪರ್ವತಸಂದೋಹಸಾರ್ವಭೌಮೇ ನಿರಂತರಂ | ಶ್ರೀಗಿರೌ ಮೇಕಿಲಾವಾಸಃ ಕಿಂಚ ಶ್ರೀಮಲ್ಲಿಕಾರ್ಜುನಃ ||೨೪೨|| ಹರಿವೇಧೋಯುಷ್ಮದಾದಿಗೀರ್ವಾಣಪರಿಸೇವಿತಃ | ಮುಕ್ತಿಪ್ರದಶ್ಚ ಭುವನಸಸ್ತುತಃ ಕರುಣಾನಿಧಿಃ ||೨೪೩|| ಶ್ರೀಪರ್ವತಪ್ರಾಣನಾಥಃ ಪ್ರಮಥಾಧೀಶ್ವರೋ ಮಮ | ಪ್ರಾಣೇಶ ಸ್ತಸ್ಯ ದೇವಸ್ಯ ತ್ವಾಂ ದಕ್ಷಿಣವಿಲೋಚನಂ ||೨೪೪|| ಅದ್ರಾಕ್ಷಮಾತೃಪ್ತಿದೃಶೋ ರಸ್ಮಾತ್ಕೋಽನ್ಯೋ ವರೋ ಮಮ| ನಯಾಚೇಽಹಂ ವರಮತೋ ಭವಂತಂ ಲೋಕಲೋಚನ ||೨೪೫|| ಕಿಂಕಾರಣ ಮಯಂ ಭೂಮೌ ರುದಿಯಾಯ .ಮಹೀರು

---

ಹಿಂತಿತು. ||೨೩೭|| ದಿನಕರನು ಆಕಾಶಕ್ಕೆ ಏರುತ್ತ ಹೋದಂತೆ ಈ ಮರವೂ ಮೆಲ್ಲನೆ ಬೆಳೆಬೆಳೆಯುತ್ತ ಹೋಯಿತು. ಅಷ್ಟರಲ್ಲಿ ಶಿವಪೂಜಾಸಮಯವಾಗಲು ನಾನು ಅರ್ಚನೆಯ ಕಾರ್ಯದ ಹೊರತು ಇನ್ನಾವ ಕಡೆಗೂ ದೃಷ್ಟಿಯನ್ನಿಡದೆ ಹೋದೆನು. ಆಗ ನಾನು ತಾವರೆಯ ಮಧ್ಯದಲ್ಲಿರುವ ಕರ್ಣಿಕೆಯಂತೆ ಈ ತಾಳಿ ಮರದ ತುದಿಯ ಸುಳಿಗಳ ಮಧ್ಯದಲ್ಲಿ ಕುಳಿತುಬಿಟ್ಟಿದ್ದೆನು. ಈ ಮರವಾದರೋ ಸೂರ್ಯನ ತೇರು ಓಡುವಷ್ಟು ರಭಸದಿಂದ ಮೇಲ್ಗಡೆಗೆ ಏರಿತು. ||೨೩೯|| ಮಧ್ಯಾಹ್ನದ ಹೊತ್ತಿಗೆ ಮರವು ಸೂರ್ಯನ ಹತ್ತಿರಕ್ಕೆ ಹೋಗಲಾಗಿ, ಆ ಸೂರ್ಯನು ಶಿವಲಾಂಛನಗಳಿಂದ ಕೂಡಿರುವ ನನ್ನನ್ನು ನೋಡಿ ಪ್ರೀತಿಪಟ್ಟು, ಉಚಿತವಾದ ಸತ್ಕಾರಗಳನ್ನು ಮಾಡಿ ಸಂತೋಷಗೊಳಿಸಿ, ನಿನಗೆ ಬೇಕಾದ ವರವನ್ನು ಬೇಡು ಎಂದು ನುಡಿದನು. ||೨೪೧|| ನಾನಾದರೊ—ಅಯ್ಯಾ, ಸಕಲ ಪರ್ವತ ಸಾರ್ವಭೌಮನಾದ ಶ್ರೀಶೈಲದಲ್ಲಿ ಸದಾ ನಾನು ವಾಸಮಾಡಿಕೊಂಡಿರುವೆನು. ವಿಷ್ಣು ಬ್ರಹ್ಮರು ಮತ್ತು ನೀನೇ ಮೊದಲಾದ ಸಕಲ ದೇವತೆಗಳಿಂದಲೂ ಸೇವಿಸಿಕೊಳ್ಳುವವನೂ, ಮೋಕ್ಷಪ್ರದನೂ, ಲೋಕಸ್ತುತ್ಯನೂ, ದಯಾನಿಧಿಯೂ, ಶ್ರೀಗಿರಿಯ ಪ್ರಾಣದೊಡೆಯನೂ, ಪ್ರಮಥಾಧಿಪತಿಯೂ ಆದ ಪರಶಿವನೇ ನನ್ನ ಪ್ರಾಣನಾಥನು. ಆ ಸ್ವಾಮಿಗೆ ನೀನು ಬಲಗಣ್ಣಾಗಿದ್ದೀಯೆ ಅಂಥ ನಿನ್ನನ್ನು ಈಗ ಕಣ್ಣುಗಳಿಗೆ ತೃಪ್ತಿಯಾಗುವವರೆಗೂ ನೋಡಿದೆನು. ಇನ್ನು ಇದಕ್ಕಿಂತಲೂ ಬೇರೆ ವರವೇನುಬೇಕು? ಅದುಕಾರಣ ಎಲೈ ಜಗಚ್ಚಕ್ಷುವೆ, ನಾನು ಯಾವ ವರವನ್ನೂ ಬೇಡುವುದಿಲ್ಲ. ||೨೪೫|| ಈ ಮರವು ಯಾವ ಕಾರಣ

ಹಃ | ಕ್ಷಣೇಕ್ಷಣೇ ಸಂಪ್ರವೃದ್ಧಿಶಕ್ತಿಶ್ಚಾಸ್ಯಾಗತಾ ಕಥಂ ||೨೪೬|| ಕಿಮರ್ಥ-ಮೇಷ ಮನುಜಂ ಧತ್ತೇ ತಾಳಮಹೀರುಹಃ | ಇತಃಪರಂ ಯಾಸ್ಯತಿಕ್ವ ತತ್ಸರ್ವಂ ವದ ಮೇ ಪ್ರಭೋ ||೨೪೭|| ಇತ್ಯುಕ್ತಃ ಕಥಯಾಮಾಸ ಮಹ್ಯಮೇವಂ ದಿನಾಧಿಪಃ | ಕರ್ತುಂ ಕೃತಾರ್ಥಾನ್ಮನುಜಾನ್ ಪುಣ್ಯಭಾಜೋ ನಿರಂತರಂ|| ಸಸರ್ಜ ಶ್ರೀಗಿರೀಂದ್ರೋಽಯಂ ಸ್ವಮೌಳೌ ಕರುಣಾನ್ವಿತಃ | ಸೂರ್ಯೇಶ್ವರಂ ಸೂರ್ಯವನಂ ಸೂರ್ಯಕುಂಡಂಚ ವಿಶ್ರುತಂ ||೨೪೮|| ಸೂರ್ಯಾಚಲಂ ಸೂರ್ಯತಾಲ ಮೈಹಿಕಾಮುಷ್ಮಿಕಾರ್ಥದಂ | ಸ್ನಾನಂ ಕೃತ್ವಾ ಸೂರ್ಯಕುಂಡೇ ಸೂರ್ಯೇಶಂ ಸಮುಪಾಸ್ಯಚ ||೨೪೯|| ಅವಾಪ್ನುಯಾತ್ಸೂರ್ಯಪದಂ ಸೂರ್ಯಾಕ್ಷಕೃಪಯಾ ನರಃ | ಪುರಾ ಸೂರ್ಯೇಶ್ವರಂ ಲಿಂಗಂ ಪೂಜಯಿತ್ವಾಽತಿಭಕ್ತಿತಃ ||೨೫೦|| ಅವಾಪು ರ್ದ್ವಾದಶಾದಿತ್ಯಾ ಸ್ಸ್ವಕೀಯಾಃ ಪದವೀ ರಿಹ | ಭವೇತ್ಸಮುದಿತ ಸ್ತಾಲೋ ಭೂಮೌ ಸಮುದಿತೇ ಮಯಿ ||೨೫೧|| ಸಂಪ್ರಯಾತಿ ತಥಾಚಾಸ್ತಂ ಪುನ ರಸ್ತಂಗತೇ ಮಯಿ | ಮಹೇಶಕೃಪಯಾ ತಾಳಮಾರುಹ್ಯಾಯಾತಿ ಯೋನರಃ ||೨೫೨|| ದದಾಮ್ಯಭೀಪ್ಸಿತಂ ಸರ್ವಂ ತಸ್ಯಾಹಂ ಪರಿತೋಷಿತಃ | ಏವಮಸ್ಮಿನ್ ಶ್ರೀಗಿರೀಂದ್ರೇ ಚಂದ್ರತಾಲೋಽಪಿ ವಿದ್ಯತೇ ||೨೫೩|| ಗಚ್ಛಂ

---

ದಿಂದ ಭೂಮಿಯಿಂದ ಮೇಲಕ್ಕೆದ್ದಿತು? ||೨೪೬|| ಕ್ಷಣಕ್ಷಣಕ್ಕೆ ಬೆಳೆಯುವ ಶಕ್ತಿಯು ಇದಕ್ಕೆ ಹೇಗೆ ಬಂದಿತು? ಇದು ಮನುಷ್ಯನನ್ನು ಹೊತ್ತುಕೊಳ್ಳುವುದಕ್ಕೆ ಕಾರಣವೇನು? ಇನ್ನು ಮುಂದೆ ಇದು ಎಲ್ಲಿಗೆ ಹೋಗುತ್ತದೆ? ಅದನ್ನೆಲ್ಲಾ ನನಗೆ ಅಪ್ಪಣೆಕೊಡಿಸು'' ಎಂದು ಕೇಳಲಾಗಿ, ಸೂರ್ಯನು ನನ್ನನ್ನು ಕುರಿತು ಪ್ರತ್ಯುತ್ತರವಾಗಿ—''ಅಯ್ಯಾ! ಈ ಶ್ರೀಶೈಲವು ಪುಣ್ಯಾತ್ಮರಾದ ಮನುಜರನ್ನು ಕೃತಾರ್ಥರನ್ನಾಗಿ ಮಾಡುವುದಕ್ಕಾಗಿ ದಯೆಯಿಂದ ತನ್ನ ಶಿಖರದ ಮೇಲೆ ಐಹಿಕ ಪಾರತ್ರಿಕ ಫಲಪ್ರದಗಳಾದ ಸೂರ್ಯೇಶ್ವರ ಲಿಂಗವನ್ನೂ, ಸೂರ್ಯವನವನ್ನೂ, ಸೂರ್ಯಕುಂಡವನ್ನೂ, ಸೂರ್ಯಾಚಲವನ್ನೂ, ಸೂರ್ಯತಾಳವೃಕ್ಷವನ್ನೂ ನಿರ್ಮಿಸಿದನು. ಮಾನವನು ಆ ಸೂರ್ಯಕುಂಡದಲ್ಲಿ ಸ್ನಾನಮಾಡಿ, ಅಲ್ಲಿರುವ ಸೂರ್ಯೇಶ್ವರನನ್ನು ಸೇವಿಸಿದರೆ ||೨೫೦|| ಶಿವಕೃಪೆಯಿಂದ ಸೂರ್ಯಪದವಿಯನ್ನು ಪಡೆಯುವನು. ಪೂರ್ವದಲ್ಲಿ ದ್ವಾದಶಾದಿತ್ಯರು ಇಲ್ಲೇ ಭಕ್ತಿಯಿಂದ ಸೂರ್ಯೇಶ್ವರ ಲಿಂಗವನ್ನು ಆರಾಧಿಸಿ, ತಂತಮ್ಮ ಪದವಿಗಳನ್ನು ಪಡೆದುಕೊಂಡರು. ನಾನು ಭೂಮಿಯಲ್ಲಿ ಉದಿಸಿದಕೂಡಲೇ ಈ ತಾಳೆ ಮರವೂ ಹುಟ್ಟುವುದು. ನಾನು ಅಸ್ತಂಗತನಾದರೆ ಇದೂ ಅಸ್ತಗೊಳ್ಳುವುದು. ಈ ತಾಳೆ ಮರವನ್ನು ಶಿವನ ದಯೆಯಿಂದ ಯಾವ ಮನುಷ್ಯನು ಏರಿ ಬರುವನೋ ಅವನಿಗೆ ಸಕಲೇಷ್ಟಾರ್ಥಗಳನ್ನೂ ನಾನು ಸಂತೋಷದಿಂದ ಕೊಡುವೆನು. ||೨೫೩|| ಹೀಗೆಯೇ ಈ ಶ್ರೀಶೈಲದಲ್ಲಿ ಚಂದ್ರತಾಳೆಮರವೂ ಇದೆ. ||೨೫೪|| ಅದನ್ನು ಏರಿ ಹೀಗೆಯೇ ನಿನ್ನಂತೆ ಯಾರು ಚಂದ್ರನ ಬಳಿಗೆ ಹೋಗುವರೋ ಅವ

ತ್ರೈವಂ ತಮಾರುಹ್ಯ ಯೇ ಜನಾಶ್ಶಶಲಾಂಛನಃ । ದದಾತಿ ವಾಂಛಿತಾನರ್ಥಾಂ
ಸ್ತೇಭ್ಯಸ್ಸಂಪ್ರೀತಮಾನಸಃ ‖೨೫೫‖ ನಕ್ಷತ್ರತಾಳಸಂದೋಹಾ ಶ್ಚರಂತ್ಯೇವ
ಮನೇಕಶಃ । ವಿಚಿತ್ರಾಣಿ ಬಹೂನ್ಯಸ್ಮಿನ್ ಶ್ರೀಗಿರೀಂದ್ರೇ ವಸಂತಿಹಿ ‖೨೫೬‖
ನಯಾಚಸೇ ವರಂ ಕಿಂಚಿದಪಿ ತ್ವಂ ಸುಕೃತಾಶ್ರಯ । ಕೋಽದೋಷ ಸ್ಸಂಗೃಹಾ
ಣೇಮಾ ನ್ಪದ್ಮರಾಗಮಣೀಂ ಚ್ಛುಭಾನ್ ‖೫೭‖ ಸಂಪೂಜಯ ಶ್ರೀಗಿರೀಶ
ಮೇತೈರಿತ್ಯಾದರಾನ್ವಿತಃ । ಮಾ ಮಾಭಾಷ್ಯ ದಿನಾಧೀಶೋ ಜಗಾಮ ತದ
ನಂತರಂ ‖೨೫೮‖ ಏಷ ಭೂಜೋಽಪಿ ಶನಕೈಸ್ಸಮಗತ್ವಾ ವಿಶನ್ಮಹೀಂ । ಸಚಂ
ದ್ರಸೂರ್ಯತಾಳಾದಿಮಾಹಾತ್ಮ್ಯಂ ವಿಸ್ಮಯಪ್ರದಂ ‖೨೫೯‖ ಏವಂ ಪ್ರಕಥಯಾ
ಮಾಸ ಮಹ್ಯಂ ಪ್ರೀತಿಸಮನ್ವಿತಃ । ಪುನಃ ಕದಾಚಿದ್ವಿಪಿನೇ ವರ್ತಮಾನೇ
ಮುದಾ ಮಯಿ ‖೨೬೦‖ ಉರಸ್ಸಕ್ತಾರ್ಭಕಶವಃ ಕಶ್ಚಿತ್ಸಂತ್ರಾಸವಿಹ್ವಲಃ ।
ಪುರಸ್ತಾತ್ಸಂಪಪಾತಾಗ್ರೇ ಸಹಸಾ ಮಮ ಭೂತಲೇ ‖೨೬೧‖ ವೀಕ್ಷ್ಯೈವಂ
ತಂ ವಿಭೀತಾತ್ಮಂ ತ್ವಮದ್ಯ ಪತಿತಃ ಕುತಃ । ಅಯಂ ಪಾಪಾರ್ಭಕಶವ ಸ್ತ್ವ
ದ್ವಕ್ಷಃ ಕಥಮಾಶ್ರಿತಃ ‖೨೬೨‖ ಇತ್ಯಬ್ರವಂ ಪ್ರತ್ಯುವಾಚ ಸಚೇದಂ ಪ್ರವಿ
ಲೋಕ್ಯ ಮಾಂ । ಪುರಾ ದಧಾವಂ ಪೂಜಾರ್ಥ ಮಾಹರ್ತುಂ ಕುಸುಮಾನ್ಯ
ಹಂ ‖೨೬೩‖ ಪ್ರಕ್ಷುಬ್ಧತುಂಡೋ ಭೂತ್ವಾಽಥ ಸಮಾಸಾದ್ಯ ಜಲಾಶಯಂ ।

---

ರಿಗೆ ಚಂದ್ರನು ಸಕಲೇಷ್ಟಾರ್ಥಗಳನ್ನೂ ಕೊಡುವನು. ಹೀಗೆಯೇ ನಕ್ಷತ್ರತಾಳವೃಕ್ಷಗಳೂ ಈ ಗಿರಿಯಲ್ಲಿ ಅನೇಕವಾಗಿ ಸಂಚರಿಸುತ್ತಿವೆ. ಹೀಗೆಯೇ ಅನೇಕಾಶ್ಚರ್ಯ ವಿಷಯಗಳು ಈ ಶ್ರೀಶೈಲದಲ್ಲಿ ಇರುತ್ತವೆ. ಎಲೈ ಪುಣ್ಯಾತ್ಮನೆ! ನೀನು ಲೇಶಮಾತ್ರವೂ ವರವನ್ನು ಯಾಚಿಸುವು ದಿಲ್ಲವಲ್ಲ? ಬೇಡಿದರೆ ದೋಷವೇನು? ಹೋಗಲಿ; ಈ ಪದ್ಮರಾಗಮಣಿಗಳನ್ನಾದರೂ ತೆಗೆದು ಕೊ. ಇವುಗಳಿಂದ ಶ್ರೀಗಿರಿಮಲ್ಲಿಕಾರ್ಜುನನನ್ನು ಭಕ್ತಿಯಿಂದ ಪೂಜಿಸು,, ಎಂಬುದಾಗಿ ಹೇಳಿ ಸೂರ್ಯನು ಹೊರಟುಹೋದನು. ‖೨೫೮‖ ಬಳಿಕ ಈ ತಾಳೆ ಮರವೂ ಮೆಲ್ಲಗೆ ಸೂರ್ಯನ ಗತಿಗೆ ಸಮನಾಗಿ ಇಳಿದು ಭೂಮಿಯಲ್ಲಿ ಮುಳುಗಿಕೊಂಡಿತು. ಚಂದ್ರತಾಳ ಸೂರ್ಯತಾಳ ಮೊದಲಾದ ಮರಗಳ ಮಹಿಮೆಯೂ ಹೀಗೆಯೇ ಆಶ್ಚರ್ಯಕರವಾದುದು,, ಎಂದು ಆ ತಪಸ್ವಿಯು ನನ್ನ ಮೇಲೆ ಪ್ರೀತಿಯಿಂದ ಹೇಳಿದನು.

ನಾನು ಹೀಗೆಯೇ ಅರಣ್ಯದಲ್ಲಿರುವಾಗ ಒಂದಾನೊಂದುದಿವಸ ಒಬ್ಬಾನೊಬ್ಬನು ಭಯದಿಂದ ನಡುಗುತ್ತ, ಎದೆಗೆ ಒಂದು ಸತ್ತ ಮಗುವನ್ನು ಅವಚಿಕೊಂಡು ಓಡಿಬಂದು ನನ್ನ ಮುಂಗಡೆ ಭೂಮಿಯಮೇಲೆ ಬಿದ್ದನು. ‖೨೬೧‖ ಅವನನ್ನು ನಾನು ನೋಡಿ, ಅಯ್ಯಾ! ಇದೇಕೆ ಹೀಗೆ ಬಿದ್ದೆ? ಅಯ್ಯೋ! ಈ ಮಗುವಿನ ಹೆಣವು ನಿನ್ನ ಎದೆಯಲ್ಲಿ ಏತಕ್ಕೆ ಇರುವುದು? ಎಂದು ಕೇಳಲಾಗಿ, ಅವನು ನನ್ನನ್ನು ನೋಡಿ—ಅಯ್ಯಾ! ಪೂರ್ವದಲ್ಲಿ ನಾನು ಶಿವ

ಸಿಧಾಯ ಪುಷ್ಪಪುಟಿಕಾಂ ತತ್ರ ದೂರಮುಪಾಗತಃ ||೨೬೪|| ಅತಿಷ್ಠಂ ಕುತ್ರ ಚಿತ್‌ಸ್ಥಾನೇ ಕರ್ತುಂ ಮಲವಿಸರ್ಜನಂ | ಮಲಂ ವಿಮೋಕ್ತು ಮತ್ರತ್ವಂ ತಿಷ್ಠ ಸ್ಯಸ್ಮದ್ಗೃಹಾಂಗಣೇ ||೨೬೫|| ಮುಕ್ತಶಂಕಃ ಕಿಮುಚಿತಂ ತವ ಭ್ರಾಂತೋಽಸಿಚಾಥವಾ | ಇತಿವಾಕ್ಯಂ ಸಮಾಕರ್ಣ್ಯ ಸಮುತ್ಥಾಯಾಪ ಮಂಜಸಾ || ಇತಸ್ತತಸ್ಸಮಾಲೋಕ್ಯ ನಕಿಂಚಿದ್ದನವೇಕ್ಷ್ಯ ಚ | ಕಥಂಕಾರಂ ಸಮುದಭೂದಯಂ ಶಬ್ದೋಽತ್ರ ಸಂಪ್ರತಿ ||೨೬೬|| ನಾಸ್ತಿ ಗ್ರಾಮೋ ಗೃಹಂಚೇತಿ ವಿಚಿಂತ್ಯಾತ್ಯಂತವಿಸ್ಮೃತಃ | ಅಭಿಜ್ಞಾನಾಯ ಸಂಸ್ಥಾಪ್ಯ ತತ್ರೈಕಾಂ ದೃಷದಂ ತತಃ ||೨೬೮|| ನಾತಿದೂರೇ ತದಾಽತಿಷ್ಠಂ ವಾಕ್ತಥೈವೋದಭೂತ್ಪುನಃ | ಕಿಮೇತದಿತಿ ಸಂಸ್ಥಾಪ್ಯ ಪೂರ್ವವತ್ತತ್ರಚೋಪಲಂ ||೨೬೯|| ಸ್ಥಿತ್ವಾ ತತೋ ಯತ್ರಯತ್ರ ಸಹಸಾ ವಾರಿತೋಽಭವಂ | ವಿಧಾಯ ತತ್ರತತ್ರಾಂಕಂ ಗತ್ವಾ ದೂರ ಮನಂತರಂ ||೨೭೦|| ವಿಸೃಷ್ಟಮಲಮೂತ್ರಸ್ಸಂ ಚ್ಛೌಚ ಮಾಚಮನಂ ಪುನಃ | ಸ್ನಾನಂ ಶಿವಾರ್ಚನಂ ಕೃತ್ವಾ ತತಃ ಪತ್ರಪುಟಂ ಕರೇ ||೨೭೧|| ಧೃತ್ವಾ ಪೂರ್ವಂ ಚಿಹ್ನಿತಾನಿ ಸ್ಥಾನಾನ್ಯಾಸಾದ್ಯಚ ಕ್ರಮಾತ್ | ಭಿಕ್ಷಾ ಮಯಾಚೇ ಸಂಪ್ರೀತ್ಯಾ ಸಮಾಗತ್ಯ ವರಾಂಗನಾಃ ||೨೭೨|| ಅಪ್ರದರ್ಶ್ಯ ಸ್ವಕಾ

---

ಪೂಜೆಗಾಗಿ ಹೂವನ್ನೆತ್ತಿ ತರುವುದಕ್ಕಾಗಿ ಓಡಿಬರುತ್ತಿರುವಾಗ್ಗೆ ಹೊಟ್ಟೆ ನೋವುಂಟಾಗಲು ಕೊಳದ ಬಳಿಗೆ ಹೋಗಿ, ಹೂವಿನ ಬುಟ್ಟಿಯನ್ನು ಅಲ್ಲಿಟ್ಟು, ದೂರವಾಗಿ ಹೋಗಿ ||೨೬೪|| ಒಂದಾನೊಂದುಸ್ಥಳದಲ್ಲಿ ಮಲವಿಸರ್ಜನೆಗಾಗಿ ಕುಳಿತುಕೊಂಡೆನು. ಆಗ–"ಎಲೋ ನೀನು ಭಯವಿಲ್ಲದೆ ಈ ನಮ್ಮ ಮನೆಯಂಗಳದಲ್ಲಿ ಮಲವಿಸರ್ಜನೆ ಮಾಡಲು ಕುಳಿತುಕೊಳ್ಳಬಹುದೆ? ನೀನೇನು ಹುಚ್ಚನೊ?,, ಎಂದು ಯಾರೋ ಕೂಗಿ ಹೇಳಿದಂತಾಯಿತು. ಅದನ್ನು ನಾನು ಕೇಳಿ ಝುಗ್ಗನೆ ಎದ್ದು ಇತ್ತತ್ತ ನೋಡಿ ಯಾರನ್ನೂ ಕಾಣದೆ, ಈ ಶಬ್ದವು ಈ ಸ್ಥಳದಲ್ಲಿ ಎಲ್ಲಿಂದಬಂದಿತು? ಇಲ್ಲಿ ಯಾರೂ ಇಲ್ಲ. ಮನೆಯೂ ಇಲ್ಲವಲ್ಲಾ! ಎಂದು ಯೋಚಿಸಿಕೊಂಡು ಅತ್ಯಾಶ್ಚರ್ಯಪಟ್ಟು, ಆ ಸ್ಥಳದಲ್ಲಿ ಗುರ್ತಿಗಾಗಿ ಒಂದು ಕಲ್ಲನ್ನಿಟ್ಟು ||೨೬೮|| ಬಳಿಕ ಸಮೀಪದಲ್ಲೇ ಒಂದುಕಡೆ ಕುಳಿತೆನು. ಅಲ್ಲೂ ಹಾಗೆಯೇ ಮಾತು ಕೇಳಬಂದಿತು. ಇದೇನೆಂದು ಮತ್ತೆ ಆಶ್ಚರ್ಯಪಟ್ಟು, ಮೊದಲಂತೆಯೇ ಅಲ್ಲೂ ಗುರ್ತಿಗೆ ಒಂದು ಕಲ್ಲನ್ನಿಟ್ಟು ಮತ್ತೊಂದುಕಡೆ ಕುಳಿತೆನು. ಅಲ್ಲೂ ಹಾಗೆಯೇ ಆಯಿತು. ಹೀಗೆಯೇ ಧ್ವನಿ ಕೇಳಬಂದು ನನ್ನ ಮಲವಿಸರ್ಜನೆಗೆ ವಿಘ್ನವುಂಟಾದ ಕಡೆಗಳಲ್ಲೆಲ್ಲಾ ಗುರ್ತಿನ ಕಲ್ಲುಗಳನ್ನಿಟ್ಟು, ಬಳಿಕ ಎಷ್ಟೋದೂರಹೋಗಿ, ಅಲ್ಲಿ ಮಲಮೂತ್ರ ವಿಸರ್ಜನೆಯನ್ನು ಮಾಡಿ, ಶೌಚಾಚಮನಗಳನ್ನು ತೀರಿಸಿಕೊಂಡು, ಸ್ನಾನಮಾಡಿ, ಶಿವಾರ್ಚನೆಯನ್ನೆಸಗಿ, ಹೂವಿನ ಕರಡಿಗೆಯನ್ನು ಕೈಗೆ ತೆಗೆದುಕೊಂಡು, ಮೊದಲು ಕಲ್ಲಿನ ಗುರ್ತು ಮಾಡಿದ್ದ ಸ್ಥಳಗಳಿಗೆಲ್ಲಾ ಒಂದಾಗುತ್ತಲೂ ಒಂದರಬಳಿಗೆ ಹೋಗಿ

ಸ್ನೇಹಾ ಸ್ಮತ್ಪ್ರಾಂ ಭಿಕ್ಷಾ ಮದುಸ್ತದಾ | ಪಾವನಾ ಮತಸುಸ್ವಾದದಿವ್ಯಾನ್ನ ಸಮುದಂಚಿತಾಂ ||೨೭೩|| ತದೀಶಾಯ ಸಮರ್ಪ್ಯಾನ್ನಮಭುಂಜೇ ಪರಿಮೋದಿತಃ | ತದ್ದಿವ್ಯಾನ್ನೋಪಭೋಗಸ್ಯ ಮಾಹಾತ್ಮ್ಯಾದಥ ತತ್‌ಕ್ಷಣೇ ||೨೭೪|| ಜಾತೇ ಕರ್ಮಕ್ಷಯೇ ದೃಷ್ಟಂತತ್ರತ್ಯಂ ಪಟ್ಟಣಂಮಯಾ | ತತ್ರ ಕಾಕನ್ಯಕಾಽಗತ್ಯ ನವಲಾವಣ್ಯರಾಜಿತಾ || ೨೭೫ || ಸ್ವಗೃಹಂ ಮಾಂ ಸಮಾನೀಯ ಹರ್ಮ್ಯೇಽಧಿಕಮನೋಹರೇ | ನಿವರ್ತಿತವರಾಭ್ಯಂಗಂ ನವದಿವ್ಯಾಂಬರೋಜ್ವಲಂ ||೨೭೬|| ಷೋಡಶಾಭರಣೋಪೇತಂ ಗಂಧಮಾಲ್ಯಾದಿಶೋಭಿತಂ | ವಿಧಾಯಾಮಿತದಿವ್ಯಾನ್ನಪಾನಾದ್ಯೈರಪಿ ತರ್ಪಿತಂ | ಅನೇಕಸುರತಾಭೋಗಸಮುಂಚಿತಸುಖಾಂಬುಧೌ| ಕುರ್ವಂತೀ ಮಗ್ನ ಮನಿಶ ಮವಸತ್ಕಮಲಾನನಾ ||೨೭೭|| ಏವಂ ನಿರುಪಮಾನಂದಭರೇಣ ವಸತೋ ಮಮ | ಅನೇಕದಿವ್ಯವರ್ಷಾಣಾಂ ಕೋಟಯ ಸ್ತತ್ರ ನಿರ್ಗತಾಃ || ೨೭೮ || ತತಸ್ತಸ್ಯಾಸ್ಸ್ತ್ರಿಯೋ ಗರ್ಭೇ ಜಾತೇಽಹಂ ಮಾನಸೇಽಸ್ಮರಂ | ಅಗನ್ಮಮದ್ವಶ ಮಿಯಂ ವನಿತಾ ಸುತರಾಮಿತಿ|| ತದೈವ ಸಾ ಪರಿಜ್ಞಾಯ ವಿದಾರ್ಯ ಜಠರಂ ಸ್ವಕಂ | ಗರ್ಭಸ್ಥಿತಾರ್ಭಕಂ ತೂರ್ಣಂ ರೇ ಗಚ್ಛೇತಿ ಮಯೋಪರಿ ||೨೭೯|| ಸಮುತ್ಕ್ಷಿಪ ದಹಂಚಾತ್ರ ಕ್ಷಣೇನ

---

ಪ್ರೀತಿಯಿಂದ ಭಿಕ್ಷೆಯನ್ನು ಬೇಡಿದೆನು. ಆಗ ದಿವ್ಯಸ್ತ್ರೀಯರು ತಮ್ಮ ಶರೀರವನ್ನು ಕಾಣಿಸಿಕೊಳ್ಳದೆ ಬಂದು, ಬಲು ರುಚಿಯುಳ್ಳ ದಿವ್ಯಾನ್ನದಿಂದ ಕೂಡಿದ ಪರಿಶುದ್ಧವಾದ ಭಿಕ್ಷೆಯನ್ನು ನನಗೆ ಕೊಟ್ಟರು. ||೨೭೩|| ಆ ಅನ್ನವನ್ನು ನಾನು ಪರಶಿವನಿಗೆ ನಿವೇದಿಸಿ ಸಂತೋಷದಿಂದ ಊಟಮಾಡಿದೆನು. ಬಳಿಕ ಅದನ್ನು ಬುಂಜಿಸಿದ ಮಹತ್ತ್ವದಿಂದ ಆ ಕೂಡಲೇ ನನ್ನ ಪೂರ್ವಕರ್ಮ ಶೇಷವೆಲ್ಲವೂ ಅಳಿದುಹೋಗಲಾಗಿ, ಅಲ್ಲಿದ್ದ ಪಟ್ಟಣವು ನನಗೆ ಕಾಣಿಸಿತು. ಅಲ್ಲಿದ್ದ ಅತ್ಯಂತ ಲಾವಣ್ಯವತಿಯಾದ ಒಬ್ಬ ಕನ್ಯಕೆಯು ಬಂದು, ತನ್ನ ಮನೆಗೆ ನನ್ನನ್ನು ಕರೆದುಕೊಂಡುಹೋಗಿ, ಅತ್ಯಂತ ಮನೋಹರವಾದ ಉಪ್ಪರಿಗೆಯಲ್ಲಿ ನನಗೆ ಅಭ್ಯಂಗ ಸ್ನಾನವನ್ನು ಮಾಡಿಸಿ, ದಿವ್ಯಾಂಬರಾಭರಣಗಳನ್ನು ಧರಿಸಿ, ಗಂಧವನ್ನು ತೊಡಿಸಿ, ಹೂಮಾಲೆಯನ್ನು ಹಾಕಿ, ಅಪರಿಮಿತ ದಿವ್ಯಾನ್ನಪಾನಾದಿಗಳನ್ನು ನೀಡಿ ತೃಪ್ತಿಪಡಿಸಿ, ಅಂತರ್ಬಾಹ್ಯಸುರತಗಳನ್ನು ನಡಿಸಿ, ಸದಾ ಆ ರತಿಕ್ರೀಡಾಸೌಖ್ಯ ಸಮುದ್ರದಲ್ಲಿ ನನ್ನನ್ನು ಮುಳುಗಿಸಿದ್ದಳು. ||೨೭೭|| ಹೀಗೆ ಅಸದೃಶ ಪರಮಾನಂದ ಪರಿಪೂರ್ಣನಾಗಿದ್ದ ನನಗೆ ಅನೇಕ ಕೋಟಿ ದಿವ್ಯವರ್ಷಗಳು ಅಲ್ಲೇ ಕಳೆದುವು. ಬಳಿಕ ಆ ಕಾಮಿನಿಗೆ ಗರ್ಭವಾಯಿತು. ಆಗ ಇನ್ನು ಈಕೆಯು ಸಂಪೂರ್ಣವಾಗಿ ನನ್ನ ವಶಳಾದಳೆಂದು ಮನಸ್ಸಿನಲ್ಲಿ ಯೋಚಿಸಿಕೊಂಡೆನು. ||೨೮೦|| ಆ ಕೂಡಲೇ ಆಕೆಯು ಇದನ್ನರಿತುಕೊಂಡು, ತನ್ನ ಹೊಟ್ಟೆಯನ್ನು ಸೀಳಿ, "ಎಲೋ ಹೋಗು" ಎಂದು ಹೇಳಿ, ತನ್ನ ಗರ್ಭದಲ್ಲಿದ್ದ ಶಿಶುವನ್ನು ತೆಗೆದು ನನ್ನ ಮೇಲೆ ಬಿಸುಡಿಬಿಟ್ಟಳು. ನಾನು ಆ ಕ್ಷಣವೇ ಈ

ನ್ಯಪತಂ ಭುವಿ । ಸಯಯೌ ಕಥಯಿತ್ವೈವಂ ಶ್ರುತಂ ತತ್ಸಕಲಂ ಮಯಾ ॥೨೮೨॥ ಪ್ರಚರನ್ನಧಿಕಪ್ರೀತ್ಯಾ ಭೂಯೋಽಹಂ ವಿಪಿನಾಂತರೇ । ಏಕಂ ಬಿಲಾದ್ವಿನಿರ್ಗತ ಮಪಶ್ಯಂ ಗಿರಿಕಂದರೇ ॥೨೮೩॥ ಕುತ್ರ ಸ್ಥಿತ್ವಾಽಗಚ್ಛಸಿ ತ್ವಮಿತಿ ಪೃಷ್ಟೋ ಮಯಾಽಽಹ ಸಃ । ಏತತ್ಪಾಪಬಿಲಂ ಸಪ್ತದಿನಾನಿ ದ್ವಾರತೋಽಸ್ಯ ಯಃ ॥೨೮೪॥ ವಸೇದಥ ವಿನಿರ್ಗತ್ಯ ಕಾಂತಾ ಕಾಚಿದ್ಬಿಲಾಂತರಾತ್ । ಗೃಹಾಣೇಮಂ ಶಿಶುಮಿತಿ ಸ್ವಕಕ್ಷಸ್ಥಂ ಶಿಶುಂ ತದಾ ॥೨೮೫॥ ಸಮರ್ಪ್ಯ ತತ್ಕರೇ ಯಾತಿ ಸಚ ಬಾಲೋಽಧಿಕಂ ರುದನ್ । ತಂ ದಶನ್ ದಶನೈಸ್ತೀವ್ರಂ ನಖೈರಂಗಂ ವಿದಾರಯನ್ ॥೨೮೬॥ ಉತ್ಕೃತ್ಯ ಚರ್ಮಮಾಂಸಂಚ ಭಕ್ಷಯತ್ಯತಿನಿಷ್ಠುರಂ । ಮುಕ್ತ್ವಾಽಸ್ಥೀನಿ ತದಾ ತೇನ ಶರೀರೇ ಭಕ್ಷಿತೇಽಖಿಲೇ ॥೨೮೭॥ ಕ್ಲೇಶಾದಘಟಯನ್ ಸ್ವೀಯದಂತಪಙ್ಕ್ತೀ ಪರಸ್ಪರಂ । ಅಕ್ಷುಬ್ಧಚಿತ್ತಸ್ಸ್ವಕರಮಕೃತ್ವಾ ವ್ಯವಧಿಂ ಮುಹುಃ ॥೨೮೮॥ ಅವಿಭ್ರಾಂತೋ ಗತಭಯೋ ನಿಷ್ಕಂಪಸ್ಥಿರಧೀರ್ಭವನ್ । ಯೋ ವಸೇನ್ಮುದಿತಾ ತಸ್ಮೈ ಸಾ ಕಾಂತಾಽಽಗತ್ಯ ತಂ ಶಿಶುಂ ॥೨೮೯॥ ಗೃಹೀತ್ವಾ ತತ್ಕ್ಷಣೇ ದದ್ಯಾದ್ದಿವ್ಯದೇಹಂ ಸಮುಜ್ವಲಂ ।

---

ಭೂಮಿಯಮೇಲೆ ಹೀಗೆ ಬಿದ್ದುಬಿಟ್ಟೆನು'' ಎಂಬುದಾಗಿ ಆತನು ಹೇಳಿ ಹೊರಟುಹೋದನು. ಹೀಗೆ ಆತನ ಸಕಲ ವೃತ್ತಾಂತವನ್ನೂ ನಾನು ಕೇಳಿ ತಿಳಿದೆನು. ॥೨೮೨॥

ಮರಳಿ ನಾನು ಆ ಅರಣ್ಯಮಧ್ಯದಲ್ಲಿ ಸಂತೋಷದಿಂದ ಸಂಚರಿಸುತ್ತಿರುವಾಗ್ಗೆ ಬೆಟ್ಟದ ಗುಹೆಯಲ್ಲಿ ಭರ್‍ರನೆ ಹೊರಕ್ಕೆ ಬಂದ ಒಬ್ಬಾನೊಬ್ಬನನ್ನು ಕಂಡು, ಇದೆಲ್ಲಿಂದ ನೀನು ಬಂದೆ? ಎಂದು ನಾನು ಕೇಳಲಾಗಿ, ಆತನು ನನ್ನನ್ನು ಕುರಿತು—ಇದು ಪಾಪಗುಹೆಯು. ಇದರ ಬಾಗಿಲಲ್ಲಿ ಯಾವನಾದರೂ ೭ ದಿನಗಳವರೆಗೂ ವಾಸಮಾಡಿಕೊಂಡಿದ್ದರೆ ಒಬ್ಬಾಳೊಬ್ಬ ನಾರಿಯು ಒಳಗಣಿಂದ ಹೊರಕ್ಕೆ ಬಂದು, ಈ ಮಗುವನ್ನು ತೆಗೆದುಕೊ ಎಂದು ಹೇಳಿ ತನ್ನ ಕಂಕುಳಲ್ಲಿದ್ದ ಶಿಶುವನ್ನು ಅವನ ಕೈಗೆ ಕೊಟ್ಟು ಹೊರಟುಹೋಗುತ್ತಾಳೆ. ಬಳಿಕ ಆ ಬಾಲಕನು ಬಹಳವಾಗಿ ಅಳುತ್ತ, ತನ್ನ ಹಲ್ಲುಗಳಿಂದ ಆತನನ್ನು ಕಚ್ಚುತ್ತ, ಉಗುರುಗಳಿಂದ ಆತನ ದೇಹವನ್ನೆಲ್ಲಾ ತೀಕ್ಷ್ಣವಾಗಿ ಪರಚಿ ಸೀಳುತ್ತ ॥೨೮೬॥ ತೊವಲನ್ನೂ ಮಾಂಸವನ್ನೂ ಅತಿ ಕ್ರೂರವಾಗಿ ಕಿತ್ತು ತೆಗೆದು ತಿನ್ನುವುದು. ಹೀಗೆ ಅವನ ಮೂಳೆಗಳನ್ನು ಮಾತ್ರ ಬಿಟ್ಟು ದೇಹವನ್ನೆಲ್ಲಾ ತಿಂದುಬಿಟ್ಟರೂ ಆತನು ತನ್ನ ಹಲ್ಲುಗಳ ಪರಸೆಗಳೆರಡನ್ನೂ ಒಂದಕ್ಕೊಂದು ತಗುಲಿಸದೆ (ಬಾಯನ್ನಲುಗಿಸದೆ), ಮನಸ್ಸಿನಲ್ಲಿ ವ್ಯಾಕುಲಪಡದೆ, ಕೈಗಳನ್ನು ಅಡ್ಡಲಾಗಿ ಚಾಚಿ ಪದೇ ಪದೇ ತಡೆಯದೆ, ಬೆರಗಾಗದೆ ನಿರ್ಭಯನಾಗಿ ಅಚಲ ಧೈರ್ಯದಿಂದ ಇದ್ದುದೇ ಆದರೆ ಆವನನ್ನು ಆ ಕಾಂತೆಯು ಮೆಚ್ಚಿಕೊಂಡು ಬಂದು ಆ ಶಿಶುವನ್ನು ತಾನು ಎತ್ತಿಕೊಂಡು, ಆ ಕ್ಷಣವೇ ಅವನಿಗೆ ಪ್ರಕಾಶಮಾನವಾದ ದಿವ್ಯ ಶರೀರವನ್ನು ಕೊಡುವಳು. ಆ ಮಗುವುಕೂಡ

ಭೂಯೋಽಪಿ ಸಶಿಶು ಸ್ತಸ್ಮೈ ದತ್ತೇ ಸಿದ್ಧಿ ಮಭೀಪ್ಸಿತಾಂ ||೨೯೦|| ಇತ್ಯೇತದ್ಬಿಲ
ಕಲ್ಪೋಕ್ತರೀತ್ಯಾ ನಿಶ್ಚಲಮಾನಸಃ | ದತ್ವಾ ಶರೀರಮಿಷ್ಟಾರ್ಥಂ ಲಬ್ಧ್ವಾ ತ
ಸ್ಮಾತ್ ಪ್ರಹರ್ಷತಃ ||೨೯೧|| ಗಚ್ಛಾಮ್ಯದ್ಯಾಹ ಮಿತ್ಯುಕ್ತ್ವಾ ಸತತೋ ಯೋ
ಗಪಾದುಕೇ | ಸಮಾಕ್ರಮಿತು ಮುದ್ಯುಕ್ತ ಸ್ತಂ ನಿರೀಕ್ಷ್ಯಾಹ ಮಬ್ರವಂ ||
ಆಕ್ರಮ್ಯ ಪಾದುಕೇ ಗಂತುಂ ಶಕ್ಯತೇ ಕಿಂ ನಗಸ್ಥಲೇ | ಇತ್ಯುಕ್ತಃ ಪ್ರತ್ಯುವಾ
ಚೇದಂ ನೇಮೇ ಕೇವಲಪಾದುಕೇ ||೨೯೩|| ಕಿಂತು ಲಬ್ಧೇ ಮಯಾ ಯೋಗ
ಪಾದುಕೇ ಯತ್ನಪೂರ್ವಕಂ | ತತ್ಕ್ರಮಂ ಸಂಪ್ರವಕ್ಷ್ಯೇಽಹಂ ಸಮಾಹಿತಮ
ನಾಃ ಶೃಣು ||೨೯೪|| ಆಕ್ರಮ್ಯ ನಿಜಪಾದಾಭ್ಯಾಂ ಶೂಲಕೀಲಿತಪಾದುಕೇ |
ಭಕ್ತ್ಯಾಽಷ್ಟೋತ್ತರಸಾಹಸ್ರಕೃತ್ವಃ ಕೃತ್ವಾ ಪ್ರದಕ್ಷಿಣಂ ||೨೯೫|| ಶ್ರೀಪಾ
ದುಕಾಸಿದ್ಧನಾಥ ಮೇತಚ್ಛೈಲಾಗ್ರವಾಸಿನಂ | ಪ್ರಣಮ್ಯ ಕಲ್ಪೋಕ್ತರೀತ್ಯಾ
ಗಚ್ಛತೋ ಮಮ ವರ್ತ್ಮನಿ ||೨೯೬|| ಕಸ್ಮಿಂಶ್ಚಿತ್ಪರ್ವತಾಕೃತ್ಯಾ ತಿಷ್ಠತ್ಯುಗ್ರಮ
ಹೋರಗೇ|ಗಚ್ಛಂ ಸ್ತದಾಸ್ಯಂ ಬಿಲಮಿತ್ಯಹೇಃ ಕುಕ್ಷಿಂ ನಿರೀಕ್ಷ್ಯತತ ||೨೯೭||
ಸರ್ವಜ್ಞಭೋಜ ಮುದ್ಧತ್ಯಾ ಹಂತುಮಾಗಚ್ಛತೋ ದ್ರುತಂ |·ಹರ್ತಾರಂ ಪನ್ನ
ಗಪತೇರಾಪನ್ನಜನರಕ್ಷಕಂ ||೨೯೮|| ಅನ್ಯಥಾ ಽರಣಂ ನಾಸ್ತಿ ತ್ವಮೇವ ಶ

---

ಅವನಿಗೆ ಬೇಕಾದ ಸಿದ್ಧಿಗಳನ್ನು ಕೊಡುವದು. ||೨೯೦|| ಈ ಪ್ರಕಾರವಾಗಿ ಮಾಡಬೇಕೆಂದು
ಈ ಬಿಲಕಲ್ಪದಲ್ಲಿ ಹೇಳಲ್ಪಟ್ಟಿರುವ ರೀತಿಯಂತೆಯೇ ನಾನು ಸರ್ವವನ್ನೂ ಅಚಂಚಲ ಮನಸ್ಕ
ನಾಗಿ ಆಚರಿಸಿ, ನನ್ನ ದೇಹವನ್ನು ಆ ಶಿಶುವಿಗೆ ಅರ್ಪಿಸಿ, ಆ ಕಾಂತೆಯಿಂದ ನನ್ನ ಇಷ್ಟಾ
ರ್ಥವನ್ನು ಪಡೆದು ಸಂತೋಷದಿಂದ ಈಗ ಹೋಗುತ್ತೇನೆ" ಎಂಬುದಾಗಿ ಹೇಳಿ, ಆತನು ಯೋ
ಗಪಾವುಗೆಗಳನ್ನು ಮೆಟ್ಟಕೊಳ್ಳಲು ಉಜ್ಜುಗಿಸಿದನು. ಆಗ ಅವನನ್ನು ನೋಡಿ ನಾನು—
ಅಯ್ಯಾ! ಹಾವುಗೆಗಳನ್ನು ಮೆಟ್ಟಿಕೊಂಡು ಬೆಟ್ಟದಮೇಲೆ ನಡೆಯುವುದಕ್ಕೆ ಆದೀತೆ? ಎಂದು
ಕೇಳಲು, ಆತನು—"ಇವು ಸಾಮಾನ್ಯವಾದ ಹಾವುಗೆಗಳಲ್ಲ, ಪ್ರಯತ್ನಪಟ್ಟು ನಾನು ಪಡೆದು
ಕೊಂಡ ಯೋಗ ಪಾದುಕೆಗಳಾಗಿರುತ್ತವೆ. ಇವು ನನಗೆ ದೊರೆತ ರೀತಿಯನ್ನು ಹೇಳುತ್ತೇನೆ
ಅವಧಾನವಿಟ್ಟು ಕೇಳು ||೨೯೪|| ನಾನು ಮುಳ್ಳು ಹಾವುಗೆಗಳನ್ನು ಮೆಟ್ಟಿ, ಈ ಶ್ರೀಶೈ
ಲದ ಮೇಲಿರುವ ಪಾದುಕಾಸಿದ್ಧನಾಥೇಶ್ವರನನ್ನು ಭಕ್ತಿಯಿಂದ ಕಲ್ಪೋಕ್ತ ರೀತಿಯಾಗಿ ಸಾ
ವಿರದೆಂಟುಸಲ ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿ, ಮಾರ್ಗವನ್ನು ಹಿಡಿದು ಹೋಗುತ್ತ,
||೨೯೬|| ಮಧ್ಯದಲ್ಲಿ ಒಂದು ದೊಡ್ಡ ಸರ್ಪವು ಪರ್ವತಾಕಾರವಾಗಿ ಬಿದ್ದಿರಲು, ಅದರ ಬಾಯ
ನ್ನು ಗಿರಿಬಿಲವೆಂದು ತಿಳಿದು ಒಳಹೊಕ್ಕು ಹೋಗುತ್ತ, ಅಲ್ಲಿಯ ಒಳಗಣ ಸ್ಥಿತಿಯನ್ನು ನೋಡಿ
ಇದು ಸರ್ಪದ ಹೊಟ್ಟೆಯೆಂದು ತಿಳಿದು, ಆಗ ಸರ್ವಜ್ಞಭೋಜನನ್ನು ಕೊಲ್ಲುವುದಕ್ಕಾಗಿ
ಗರ್ವದಿಂದ ಬರುತ್ತಿದ್ದ ಸರ್ಪರಾಜನನ್ನು ಕೊಂದ—ಆಪನ್ನಜನ ಸಂರಕ್ಷಕನಾದ—ಪರಶಿವನನ್ನು

ರಣಂ ಮಮ | ತಸ್ಮಾತ್ತ್ವಂ ಕಾರುಣ್ಯಭಾವೇನ ರಕ್ಷ ರಕ್ಷ ಮಹೇಶ್ವರ ||೯೯|| ಇತೀಮಂ ಮಂತ್ರಮಪಠಂ ತದಾನೀಂ ಶತ್ರುಭಾವತಃ | ದ್ವಿಧಾಭಗ್ನೋಽಭವತ್ಸರ್ಪೋ ರಟನ್ನತ್ಯಂತಭೀಷಣಂ ||೧೦೦|| ಸರ್ಪೋಽನ್ಯಸ್ತದ್ಧ್ವನಿಂ ಶ್ರುತ್ವಾ ಸಮಾಗತ್ಯಾತಿವೇಗತಃ | ತತ್ಸರ್ಪಕಾಯಭಾಗೌ ದ್ವೌ ಘಟಯಿತ್ವಾ ಪರಸ್ಪರಂ ||೧೦೧|| ಸ್ಪರ್ಶಯಿತ್ವಾ ಚ ಸಂಧಾನಕರಣ್ಯಾ ತಂ ಮಹೋರಗಂ | ಉಜ್ಜೀವ್ಯ ತತ್ರ ಸಂಧಾನಕರಣೀಂ ಪ್ರವಿಸೃಜ್ಯ ತಾಂ ||೧೦೨|| ಯಯೌ ಸಂಧಾನಕರಣೀಂ ತಾಮಹಂ ಚಾಗ್ರಹಂ ಮುದಾ | ಪುನಶ್ಚಾಹಂ ತೃಷಾರ್ತಸ್ಸನ್ಗತ್ವಾ ಕಂಚಿತ್ಸರೋವರಂ ||೧೦೩|| ಪಯಸ್ಸ್ಪರ್ಶನಮಾತ್ರಾನ್ಮೇ ಛಿನ್ನೇ ನಿಪತಿತೇ ಕರೇ | ಕೃತ್ವಾ ಸಂಧಾನಕರಣೀಸ್ಪರ್ಶಸಂಘಟಿತಂ ಚ ತಂ ||೧೦೪|| ಅಸ್ಪೃಶ್ಯಾಥ ಸಲಿಲಂ ಜ್ಞಾತ್ವಾ ತತ್ಕರ್ತರೀಜಲಂ | ಸಂಗೃಹ್ಯ ವಂಶಪಾತ್ರೇಣ ಗಚ್ಛನ್ಗಜಕದಂಬಕಂ ||೧೦೫|| ಪ್ರಧಾವದತಿವೇಗೇನ ಪರಿತೋಽಭಿಮುಖಂ ಮಮ | ನಿರೀಕ್ಷ್ಯ ವ್ಯಕಿರಂ ತೂರ್ಣಂ ತೇಷಾಮುಪರಿ ತಜ್ಜಲಂ ||೧೦೬|| ಛಿನ್ನಾಂಗಾಃ ಕುಂಜರಾಸ್ಸರ್ವೇ ತೇ ನಿವೃತ್ಯ ಪ್ರದುದ್ರುವುಃ | ಸ್ಪೃಷ್ಟಗ್ರಾಹಿ

---

ಕುರಿತು—"ಶಿವನೆ! ನನಗೆ ಇನ್ನಾರೂ ಸಂರಕ್ಷಕರಿಲ್ಲ, ನೀನೇ ರಕ್ಷಕ. ಅದುಕಾರಣ ಕಾಪಾಡು ಕಾಪಾಡು" ಎಂದು ಈ ಮಂತ್ರವನ್ನು ಪಠಿಸಿದೆನು. ಆದರ ಮಹತ್ತ್ವದಿಂದ ಕೂಡಲೇ ಸರ್ಪವು ಅತಿ ಭಯಂಕರವಾಗಿ ಅರಚಿಕೊಂಡು ಎರಡು ತುಂಡಾಗಿ ಹೋಯಿತು. ||೧೦೦|| ಆ ಶಬ್ದವನ್ನು ಕೇಳಿ ಇನ್ನೊಂದು ಸರ್ಪವು ಬೇಗನೆ ಬಂದು ಆ ಮೊದಲ ಸರ್ಪದ ದೇಹದ ಎರಡು ತುಂಡುಗಳನ್ನೂ ಒಂದಕ್ಕೊಂದು ಕೂಡಿಸಿ, ಸಂಧಾನಕರಣಿಯನ್ನು ತಂದು ಅವಕ್ಕೆ ಸೋಂಕಿಸಿ ಆ ಸರ್ಪವನ್ನು ಬದುಕಿಸಿ, ಆ ಸಂಧಾನಕರಣಿಯನ್ನು ಅಲ್ಲೇ ಬಿಟ್ಟುಹೋಯಿತು. ||೧೦೨|| ನಾನು ಅದನ್ನು ತೆಗೆದುಕೊಂಡೆನು. ಮತ್ತೆ ನಾನು ನೀರಡಿಕೆಯಿಂದ ಒಂದು ಕೊಳಕ್ಕೆ ಹೋಗಿ, ಆದರ ನೀರನ್ನು ಮುಟ್ಟಿದ ಮಾತ್ರಕ್ಕೇ ನನ್ನ ಕೈಗಳು ಕತ್ತರಿಸಿ ಬಿದ್ದುಹೋಗಲಾಗಿ, ಅವಕ್ಕೆ ನನ್ನಲ್ಲಿದ್ದ ಸಂಧಾನಕರಣಿಯನ್ನು ಸೋಂಕಿಸಿ ಒಂದಕ್ಕೊಂದು ಯಥಾಪೂರ್ವವಾಗಿ ಕೂಡಿಕೊಳ್ಳುವಂತೆ ಮಾಡಿ, ಬಳಿಕ ಆ ನೀರನ್ನು ಮುಟ್ಟದೆ, ಇದು ಕರ್ತರೀಜಲ (ಮುಟ್ಟಿದ ಪ್ರಾಣಿಗಳನ್ನು ಕತ್ತರಿಸಿ ಹಾಕುವ ನೀರು) ಎಂದು ತಿಳಿದು, ಅದನ್ನು ಒಂದು ಬಿದಿರ ಅಂಡೆಯಲ್ಲಿ ತುಂಬಿಕೊಂಡು ಹೋಗುತ್ತಲಿರುವಾಗ, ನನಗಿದಿರಾಗಿ ಬಹು ವೇಗದಿಂದ ಓಡಿಬರುತ್ತಿರುವ ಒಂದು ಆನೆ ಹಿಂಡನ್ನು ಕಂಡು, ಅವುಗಳ ಮೇಲೆ ಅಂಡೆಯ ನೀರನ್ನು ಎರಚಿದೆನು. ||೧೦೬|| ಅವುಗಳೆಲ್ಲಾ ಅಂಗಭೇದಗೊಂಡು ಹಿಂದಿರುಗಿ ಓಡಿದುವು. ಆಗ ಈ ಆನೆಗಳಲ್ಲಿ ಕೆಲವು ಅಲ್ಲಿದ್ದ ಮುಟ್ಟಿದವರನ್ನು ಹಿಡಿದುಕೊಳ್ಳುವ ಶಿಲೆಗಳನ್ನು ಸೋಂಕಿದುದರಿಂದ ಅಲ್ಲೇ

ಲತಾಸ್ಪರ್ಶಾದ್ಬದ್ಧಾಃ ಕೇಚಿನ್ಮತಂಗಜಾಃ ||೩೦೭|| ತತ್ರೈಕಃ ಕುಂಜರೋಽ ಸ್ಪೃಷ್ಟ ಸ್ತಚ್ಛಿಲಾಭಿ ಸ್ಸ್ವಯಂ ಪುನಃ | ಶಿಲೋದಕಂ ಸಮಾನೀಯ ಶುಂಡಾ ದಂಡೇನ ವೇಗತಃ ||೩೦೮|| ಅಂಗೇಷು ತಚ್ಛಿಲಾಬದ್ಧೇಷ್ವಕಿರತ್ತೇ ತದೈವಹಿ | ನಿವೃತ್ತಬಂಧನಾಸ್ಸಂತೋ ನಿರ್ಯಯು ರ್ಮದವಾರಣಾಃ ||೩೦೯|| ಶಿಲೋದಕ ಮಹಂ ತಚ್ಚ ಸಂಗೃಹ್ಯ ಪುರತಶ್ಶನೈಃ | ಗಚ್ಛನ್ಸ್ಪೃಷ್ಟಗ್ರಾಹಿಶಿಲಾನಿಬದ್ಧ ಸ್ತ ಚ್ಛಿಲಾಂಬುನಾ ||೩೧೦|| ಪ್ರೋಕ್ಷಿತ ಸ್ತಚ್ಛಿಲಾಮುಕ್ತಸ್ಸನ್ನಗಚ್ಛ ಮಥಾಗ್ರತಃ | ಕಂಚಿದ್ದ್ರುಮಂ ಸಮಾಚ್ಛಾದ್ಯ ಭುವ ಮಾಕಾಶಾನಭಸ್ಥಲೀಂ ||೩೧೧|| ತಿಷ್ಠಂ ತಂ ಯೋಜನೋತ್ಸೇಧಂ ವೀಕ್ಷ್ಯಾಹಂ ಯೋಜನಾಯತಂ | ಇದಮೇವಹಿ ವರ್ತ್ಮೇತಿ ತಮಾರುಹ್ಯಾಭವಂ ಕಪಿಃ ||೩೧೨|| ಪ್ರತಿಶಾಖಾ ಲಂಘಯಂ ಸ್ತ ದ್ದ್ರುಮೇ ಗಚ್ಛನ್ಸಸತ್ವರಂ | ಕ್ಷುಧಿತಸ್ಸಂ ಸ್ತತಸ್ತಸ್ಯ ಫಲಮೇಕ ಮಭಕ್ಷಯ ನ್ ||೩೧೩|| ಅವಾಪ್ಯ ಶುಕತಾಂ ಗಚ್ಛಂ ಚ್ಛಾಭ್ರಾಂತೋಭೂತ್ವಾಽಥ ಕುತ್ರಚಿ ತ್ | ಪ್ರಸೂನೈ ಶ್ಶಯನಂ ಕೃತ್ವಾ ತಚ್ಛಾಖಾಯಾಂ ನಿಸಿದ್ರಿತಃ ||೩೧೪|| ಭೂ ತ್ವಾ ಮಧುಕರಃ ಪುಷ್ಪಮೋದಾತ್ಪರವಶೋ ಭವನ್ | ಗಚ್ಛಂ ಸ್ತದ್ಭೂರುಹ ಶಾಖಾಸ್ಸಮತೀತ್ಯ ತತೋಂಬರೇ ||೩೧೫|| ಸಂಚರನ್ಸಮುದೀಕ್ಷ್ಯೈಕಂ

---

ಕಟ್ಟಿಹಾಕಲ್ಪಟ್ಟುವು. ಆ ಸ್ಪೃಷ್ಟಗ್ರಾಹ ಶಿಲೆಗಳನ್ನು ಸೋಂಕದೆ ಇದ್ದ ಒಂದು ಆನೆಯು ಬೇಗನೆ ಓಡಿಹೋಗಿ, ತನ್ನ ಸುಂಡಿಲಿನಲ್ಲಿ ಶಿಲೋದಕವೆಂಬುದನ್ನು ತುಂಬಿ ತಂದು, ಆ ಕಟ್ಟುವಡೆದಿರುವ ಆನೆಗಳ ಮೇಲೆ ಎರಚಿತು. ಆ ಕೂಡಲೇ ಆ ಮದಗಜಗಳೆಲ್ಲವೂ ಕಟ್ಟು ಕಳಚಿದುವಾಗಿ ಓಡಿಹೋದುವು. ||೩೦೯|| ನಾನು ಆ ಶಿಲೋದಕವನ್ನು ಕೂಡ ಸಂಗ್ರಹಿಸಿ ಮುಂದೆ ಮೆಲ್ಲನೆ ಹೋಗುತ್ತಿರುವಾಗ್ಗೆ, ಅಲ್ಲಿದ್ದ ಒಂದು ಸ್ಪೃಷ್ಟಗ್ರಾಹಿಶಿಲೆಗೆ ಸೋಂಕಿದ ಕಾರಣ ಕಟ್ಟಿಹಾಕಲ್ಪಟ್ಟೆನು. ಕೂಡಲೇ ನನ್ನಲ್ಲಿದ್ದ ಶಿಲೋದಕದಿಂದ ಪ್ರೋಕ್ಷಿಸಿ, ಬಂಧನವನ್ನು ತಪ್ಪಿಸಿಕೊಂಡು ಮುಂದಕ್ಕೆ ಹೊರಟೆನು. ಅಲ್ಲಿ ಒಂದುಯೋಜನದಡ್ಡಗಲಕ್ಕೂ ಉದ್ದಕ್ಕೂ ಭೂಮ್ಯಾಕಾಶಗಳನ್ನೂ ದಿಕ್ಕುಗಳನ್ನೂ ಆವರಿಸಿಕೊಂಡಿದ್ದ ಒಂದಾನೊಂದು ಮಹಾ ವೃಕ್ಷವ ನ್ನು ನೋಡಿ, ಇದೇ ಮಾರ್ಗವೆಂದು ತಿಳಿದು ಅದರ ಮೇಲಕ್ಕೆ ಹತ್ತಿ, ಕೂಡಲೇ ಕಪಿಯಾದೆನು. ||೩೧೨|| ಆ ಮರದಲ್ಲಿ ಕೊಂಬೆಯಿಂದ ಕೊಂಬೆಗೆ ಹಾರುತ್ತ, ಬೇಗಬೇಗನೆ ಓಡುತ್ತ, ಹೊ ಟ್ಟೆ ಹಸಿವಿನಿಂದ ಆ ಮರದಲ್ಲಿದ್ದ ಒಂದು ಹಣ್ಣನ್ನು ತಿಂದೆನು. ಆ ಕೂಡಲೇ ಗಿಳಿಯಾಗಿ ಹಾ ರಾಡುತ್ತ ಬಳಲಿ ಆ ಮರದಲ್ಲಿ ಒಂದುಕಡೆ ಕೊಂಬೆಯಮೇಲೆ ಹೂವಿನ ಹಾಸುಗೆಯನ್ನು ಮಾಡಿಕೊಂಡು ಮಲಗಿ ನಿದ್ರಿಸಿದೆನು. ||೩೧೪|| ಆ ಉತ್ತರಕ್ಷಣದಲ್ಲೇ ತುಂಬಿಯಾಗಿ, ಪುಷ್ಪ ಮಕರಂದವನ್ನು ಸವಿದು, ಪರವಶನಾಗಿ, ಬಳಿಕ ಆ ಮರವನ್ನು ಬಿಟ್ಟು ಆಕಾಶದಲ್ಲಿ ಹಾರಿ ಕೊಂಡು ಹೋಗುತ್ತ, ಒಂದಾನೊಂದು ಬೆಟ್ಟದಲ್ಲಿ ಒಬ್ಬ ತಪಸ್ವಿಯನ್ನು ಕಂಡು, ಅವನ ಪಾ

ತಾಪಸಂ ಕುತ್ರಚಿದ್ಗಿರೌ | ತತ್ಪಾದಯೋ ರಕರವಂ ಪ್ರಣಾಮ ಮತಿಭಕ್ತಿತಃ ||
ದಿವ್ಯಾಂ ತನುಂ ಸ ಪ್ರದಾಯ ಮಹ್ಯ ಮತ್ಯಾದರಾನ್ವಿತಃ | ತತ್ ಖೇಚರೀಬಿ
ಲಂ ತತ್ರ ಜ್ವಾಲಾಕೃತ್ಯಾಽಪತಿಷ್ಠತೇ||೩೧೭|| ಪಾದುಕಾಯುಗಳಂ ಪದ್ಭ್ಯಾಂ
ಭೀತಿಂ ಮುಕ್ತ್ವಾಧಿತಿಷ್ಠ ತತ್ | ತದ್ಯೋಗಪಾದುಕಾಯುಗ್ಮಂ ಭವಿಷ್ಯತಿ
ತವೇತಿ ಸಃ ||೩೧೮|| ತಪೋನಿಧಿಃ ಕರುಣಯಾ ತದಾ ಮಹ್ಯ ಮುಪಾದಿಶತ್ |
ಕೃಪಯಾ ತಸ್ಯ ಗತ್ವಾಽಹಂ ತತ್ರ ಜ್ವಾಲಾಕೃತೀ ಉಭೇ ||೩೧೯|| ನಿರೀಕ್ಷ್ಯ
ತೇ ತದಾ ಪದ್ಭ್ಯಾ ಮಧ್ಯತಿಷ್ಠಂ ವಿಮುಕ್ತಭೀಃ | ತತ್ಕ್ಷಣಾದೇವ ತೇ ಸದ್ಯೋ
ಗಭೂತಾಂ ಯೋಗಪಾದುಕೇ ||೩೨೦|| ಏವಂ ಮಯಾ ಪರಿಪ್ರಾಪ್ತೇ ವಿದ್ಧಿ
ಮೇ ಯೋಗಪಾದುಕೇ | ಏತೇ ಲಬ್ಧವತೋ ಜಾತಂ ಸಹಸ್ರಂ ಶರದಾಂ ಮ
ಮ ||೩೨೧|| ಶ್ರೀಪರ್ವತೇಶಕೃಪಯಾ ಸಂಪ್ರಾಪ್ತಾಸ್ಸರ್ವಸಿದ್ಧಯಃ | ಏತೇ
ಪದ್ಭ್ಯಾಂ ಸಮಾಕ್ರಮ್ಯ ಖೇಚರಸ್ಸನ್ ಕ್ಷಣಾದಹಂ ||೩೨೨|| ಯಸ್ಮಿನ್ ಲೋ
ಕೇ ಜಿಗಮಿಷಾ ತಂಗಚ್ಛಾಮ್ಯನಿವಾರಿತಃ | ಗತ್ವಾ ಭೋಗಾವತೀಂ ಸ್ವರ್ಣಕ
ಮಲಾನ್ಯಹಿಲೋಕತಃ ||೩೨೩|| ಭಾಗೀರಥೀಂ ಪ್ರಾಪ್ಯ ತಸ್ಯಾಸ್ತಟೇ ಪುಷ್ಪಾ

---

ದಗಳಿಗೆ ಅತಿ ಭಕ್ತಿಯಿಂದ ನಮಸ್ಕರಿಸಿದೆನು. ||೩೧೬|| ಅವನು ಪ್ರೀತಿಯಿಟ್ಟು ದಿವ್ಯದೇಹ
ವನ್ನು ನನಗೆ ಅನುಗ್ರಹಿಸಿದನು. ಮತ್ತು ಅಲ್ಲಿ ಖೇಚರೀಬಿಲವೆಂಬುದೊಂದು ಬೆಂಕಿಯ ಜ್ವಾ
ಲೆಯ ಆಕಾರವಾಗಿ ಇರುವುದೆಂದೂ, ಭಯವಿಲ್ಲದೆ ಅದನ್ನು ಹಾವುಗೆಗಳನ್ನು ಮೆಡುವಂತೆ
ಕಾಲುಗಳಿಂದ ಮೆಟ್ಟಿದರೆ ಅದು ನಿನಗೆ ಯೋಗಪಾವುಗೆಗಳಾಗಿ ಪರಿಣಮಿಸುವುದೆಂದೂ, ಆ ತಪ
ಸ್ವಿಯು ನನಗೆ ದಯೆಯಿಂದ ಅಪ್ಪಣೆಕೊಡಿಸಿದನು. ಆತನ ಕರುಣದಿಂದ ನಾನು ಅಲ್ಲಿಗೆ ಹೋಗಿ
ಜ್ವಾಲಾಕಾರದಿಂದಿರುವ ಅವೆರಡನ್ನೂ ನೋಡಿ, ನಿರ್ಭಯನಾಗಿ ಅವುಗಳನ್ನು ಕಾಲುಗಳಿಂದ
ಮೆಟ್ಟಿ ನಿಂತೆನು. ಆ ಕ್ಷಣದಲ್ಲೇ ಅವು ಒಳ್ಳೆ ಯೋಗಪಾದುಕೆಗಳಾದುವು. ||೩೨೦|| ಹೀಗೆ
ನಾನು ಸಾಹಸಪಟ್ಟು ದೊರಕಿಸಿದ ಯೋಗಪಾವುಗೆಗಳೇ ಇವಾಗಿರುತ್ತವೆಂದು ತಿಳಿ. ಇವನ್ನು
ನಾನು ಪಡೆದು ಸಾವಿರ ವರ್ಷಗಳಾದುವು. ಶ್ರೀಗಿರೀಶನ ಕೃಪೆಯಿಂದ ನನಗೆ ಸಕಲ ಸಿದ್ಧಿಗ
ಳೂ ಲಭಿಸಿರುವುವು. ಈ ಹಾವುಗೆಗಳನ್ನು ಮೆಟ್ಟಿ ನಾನು ಯಾವ ಲೋಕಕ್ಕೆ ಹೋಗಬೇಕೆಂದು
ಮನಸ್ಸಿನಲ್ಲಿ ಅಪೇಕ್ಷಿಸಿಕೊಂಡರೂ ಆ ಕ್ಷಣವೇ ಆಕಾಶ ಸಂಚಾರಿಯಾಗಿ ಕ್ಷಣಮಾತ್ರದಲ್ಲಿ
ನಿರಾತಂಕವಾಗಿ ಹೋಗಿ ಸೇರುವೆನು. ಇಲ್ಲಿಂದ ಪಾತಾಳಲೋಕದಲ್ಲಿರುವ ಭೋಗಾವತೀ
ನದಿಗೆ ಹೋಗಿ, ಅಲ್ಲಿರುವ ಸುವರ್ಣ ಕಮಲಗಳನ್ನು ತೆಗೆದುಕೊಂಡು, ಅಲ್ಲಿಂದ ಭೂಲೋ
ಕಕ್ಕೆ ಬಂದು, ಇಲ್ಲಿರುವ ಭಾಗೀರಥೀ ನದಿಯ ಜಲವನ್ನೂ, ಅದರ ದಡದ ಮೇಲಿರುವ ಹೂ
ವುಗಳನ್ನೂ ತೆಗೆದುಕೊಂಡು, ಬಳಿಕ ಆಕಾಶದಲ್ಲಿರುವ ದೇವಗಂಗಾನದಿಗೆ ಹೋಗಿ, ಅದರಲ್ಲಿ

ಣಿ ತಜ್ಜಲಂ | ಅರುಣಾಬ್ಜಾನಿ ಭವ್ಯಾಂಬು ಗತ್ವಾ ಮಂಪಾಕಿನೀಮಪಿ ॥೩೨೪ ಸಮಾನೀಯಾರ್ಜಯಾಮ್ಯಾಶಂ ಸದ್ಭಕ್ತ್ಯಾ ಮಲ್ಲಿಕಾರ್ಜುನಂ | ಇತಿ ಮೇ ಕಥಯಿತ್ವಾ ಸಪ್ರಯಯಾವೇಪ್ಸಿತಂ ಸ್ಥಲಂ ॥೩೨೫॥ ತೇನೈವಂ ತಾಪಸೇನೋಕ್ತೇ ಹಸನ್ಪ್ರಾಯಾಚ್ಚ ಸಾಧಕಃ | ವಾಗೀಶೇನಾಪಿ ಸುವಚಾ ವಿಶೇಷಾಶ್ರೀಗಿರೇಃ ಕಿಮು ॥೩೨೬॥ ಯಾವಂತಶ್ಶ್ರೀಗಿರೌ ವೃಕ್ಷಾ ಯಾವಂತ ಶ್ಶೋಪಲಾಸ್ತಥಾ | ವಿದ್ಯಂತೇಕಿಲ ತಾವಂತಿ ವಿಚಿತ್ರಾಣಿ ಸಮಂಕತಃ ॥೩೨೭॥ ತಾನಿ ದ್ರಷ್ಟುಂ ಸಾಧಯಿತುಂ ವಕ್ತುಂ ಶಕ್ಯಾನಿಕಿಂ ಜನೈಃ | ಯಾಸ್ಯಾಮ್ಯಹಂ ಕಿಂಬಹುನಾ ತ್ವಮಾಗಚ್ಛಾಸ್ತಿ ಚೇದ್ಬಲಂ ॥೩೨೮॥ ಅಶಕ್ತಶ್ಚೇತ್ತಿಷ್ಠ ಗಂತುಂ ತಾವನ್ಮಾರ್ಗಂ ಪ್ರಯಚ್ಛ ಮೇ | ನಾಂಗೀಕರೋಮ್ಯುಪಾಧ್ಯಾಯಶಿಷ್ಯನ್ಯಾಯಮಿತಃಪರಂ ॥೩೨೯॥ ವಚಾಂಸಿ ಸಂತ್ಯಜೇಮಾನಿ ಜಡಾನಿ ತವ ತಾಪಸ | ಶಾರ್ದೂಲಮಪಿ ಗೃಹ್ಣಾಮಿ ಮುಕ್ತಭೀತಿರ್ದೃಢವ್ರತಃ ॥೩೩೦॥ ನಕೇನಾಪ್ಯವರುದ್ಧಸ್ಸಂ ಸ್ತಿಷ್ಠಾಮ್ಯೇತದ್ಬಿಲಂ ಬಲಾತ್ | ವಿಶಾಮ್ಯೇವಾಧುನಾ ವಿಘ್ನೈ ರನೇಕೈರ್ವಾರಿತೋಽಪಿಸನ್ ॥೩೩೧॥ ದದಾಮಿ ಮಾಮಪಿ ಸ್ವೈರಂ ಲಭೇಯ ವಿಜ

---

ರುವ ಕೆಂದಾವರೆಗಳನ್ನೂ, ಜಲವನ್ನೂ ತೆಗೆದುಕೊಂಡು ಬಂದು ॥೩೨೪॥ ಭಕ್ತಿಯಿಂದ ಮಲ್ಲಿಕಾರ್ಜುನೇಶ್ವರನನ್ನು ಪೂಜಿಸುವೆನು" ಎಂಬುದಾಗಿ ಆತನು ನನಗೆ ಹೇಳಿಬಿಟ್ಟು ತನ್ನಿಷ್ಟವಿದ್ದ ಕಡೆಗೆ ಹೊರಟುಹೋದನು. ॥೩೨೫॥

ಎಂಬುದಾಗಿ ಈ ವೃತ್ತಾಂತವನ್ನೆಲ್ಲಾ ಆ ವೃದ್ಧತಪಸ್ವಿಯಾಕಾರದ ಕ್ಷೇತ್ರಪಾಲಕನು (ಭೈರವನು) ಹೇಳಿದರೆ, ಸಾಧಕನು ಅದನ್ನೆಲ್ಲಾ ಕೇಳಿ ನಕ್ಕು, ಎಲೈ ತಪಸ್ವಿಯೆ! ಈ ಶ್ರೀಗಿರಿಯಲ್ಲಿರುವ ವಿಶೇಷಗಳನ್ನೆಲ್ಲಾ ವರ್ಣಿಸುವುದಕ್ಕೆ ಬ್ರಹ್ಮನಿಗೂ ಕೂಡ ಸಾಧ್ಯವೆ? ಈ ಶ್ರೀಶೈಲದಲ್ಲೆಲ್ಲಾ ಎಷ್ಟು ಮರಗಳೂ, ಎಷ್ಟು ಕಲ್ಲುಗಳೂ ಇವೆಯೋ ಅಷ್ಟು ವಿಚಿತ್ರ ವಿಷಯಗಳಿರುವುವು. ॥೩೨೬॥ ಅವನ್ನೆಲ್ಲಾ ನೋಡುವುದಕ್ಕೂ, ಸಾಧಿಸುವುದಕ್ಕೂ, ವರ್ಣಿಸುವುದಕ್ಕೂ ಸಹ ಭೂಜನರಿಗೆ ಶಕ್ಯವೆ? ಹೆಚ್ಚು ಮಾತೇಕೆ? ನಾನು ಮುಂದಕ್ಕೆ ಹೋಗುತ್ತೇನೆ. ನಿನಗೆ ಸಾಮರ್ಥ್ಯವಿದ್ದರೆ ಬಾ, ಇಲ್ಲದಿದ್ದರೆ ಸುಮ್ಮನಿರು. ನನಗೆ ಮುಂದಕ್ಕೆ ಹೋಗುವುದಕ್ಕೆ ದಾರಿಬಿಡು, ಇನ್ನು ಮುಂದೆ ನಿನ್ನಲ್ಲಿ ನಾನು ಉಪಾಧ್ಯಾಯ ಶಿಷ್ಯಭಾವವನ್ನು ತಾಳುವುದಿಲ್ಲ. ॥೩೨೯॥ ಎಲೆ ತಪಸ್ವಿಯೆ! ನಿನ್ನ ಈ ಮೂಢವಚನಗಳನ್ನೆಲ್ಲಾ ಬಿಡು. ದೃಢವ್ರತಸಂಪನ್ನನಾಗಿರುವ ನಾನು ನಿರ್ಭಯವಾಗಿ ಹುಲಿಯನ್ನಾದರೂ ಹಿಡಿಯುವೆನು. ಯಾವನು ಬಂದು ತಡೆದರೂ ನಾನು ನಿಲ್ಲುವವನಲ್ಲ. ಈ ಬಿಲವನ್ನು ಬಲಾತ್ಕಾರದಿಂದ ಈಗಲೇ ಎಷ್ಟು ವಿಘ್ನಬಂದರೂ ಲಕ್ಷಿಸದೆ ನುಗ್ಗಿ ನುಗ್ಗುವೆನು. ॥೩೩೧॥ ನನ್ನನ್ನೇ ಬೇಕಾದರೂ ಅದಕ್ಕಾಗಿ ಅರ್ಪಿಸಿ

ಯಂ ಪರಂ | ತವ ವೇಷಂ ನಿರೀಕ್ಷ್ಯೈವ ಮಯೇದಾನೀಂ ವಿಲಂಬಿತಂ ||
ನಿವಾರಿತುಂ ಮಾಂ ಶ್ರೀಶೈಲನಾಯಕೋಽಪಿ ಕ್ಷಮೋ ನಹಿ | ಕಿಂ ಪುನಸ್ತ್ವಂ ತಾ
ಪಸೇಂದ್ರ ಪಶ್ಯ ಮೇ ಪೌರುಷಂ ಮಹತ್ ||೩೩೩|| ಪ್ರವಿಶ ತ್ವಂ ಬಿಲಂ ತೂ
ರ್ಣಂ ವಿಜಯಸ್ವಾನಿವಾರಿತಃ | ಗಚ್ಛಾಥಯಾಹಿ ಪುನಶ್ಶೀಘ್ರಂ ವಯಂ ತವ ವ
ಶಂಗತಾಃ ||೩೩೪|| ಇತ್ಯಾಶಿಷಂ ಪ್ರಯುಜ್ಯ ತ್ವಂ ಪ್ರೇಷಯೈತಾವದೇವ ಮೇ|
ಅಹಂ ತಪೋಧನಾಗತ್ಯ ನತಿಷ್ಠಾಮ್ಯೇವ ಹಿ ಧ್ರುವಂ ||೩೩೫|| ಕಿಮಪೀತಃಪ
ರಂ ವಾಕ್ಯಂ ಮಾಂ ವಕ್ಷ್ಯಸಿ ಯದೀಶಿತುಃ | ಶ್ರೀಮಲ್ಲಿಕಾರ್ಜುನಸ್ಯಾಜ್ಞೇ
ತ್ಯುಕ್ತವತ್ಯಥ ಸಾಧಕೇ ||೩೩೬|| ಮದೀಯೈಃ ಕಪಟೈರ್ವಾಕ್ಯೈರ್ವಂಚನಾ
ಜಾಲಕೈರಪಿ | ತರ್ಜನ್ಯೈಶ್ಚಾತ್ಯನಿಚಯೈರ್ನಾಯಮತ್ರ ವಶಂಗತಃ ||೩೩೭||
ಏನಂ ನಿವಾರಿತುಂ ಶಕ್ಯಮತ್ರ ನೇತಃಪರಂ ಸ್ಫುಟಂ | ಇತಿ ನಿಶ್ಚಿತ್ಯ ತತ್ರೈವ
ತಪಸ್ವ್ಯಂತರ್ಹಿತೋ ಭವೇತ್ ||೩೩೮|| ಅಥೈನಂ ಕುಟಿಲಂ ಜ್ಞಾತ್ವಾ ಸಾಧ
ಕೇಽಪಿ ತಪಸ್ವಿನಂ | ಗುಹಾಪೂರ್ವಂ ಯಾತಿ ಸತಿ ಸ ಏವ ಕ್ಷೇತ್ರಪಾಲಕಃ ||
ನೇಷಾದಗಣಯನ್ಗಚ್ಛತ್ಯೇಷ ಮಾಂ ಸಾಧಕೋತ್ತಮಃ | ಇತಿ ಕೋಪಾದ್ಬಿಲ
ದ್ವಾರೇ ಮಹಿತಾರ್ಗಳವತ್ಸ್ಥಿತಃ ||೩೪೦|| ವ್ಯಾಘ್ರರೂಪಂ ಸಮಾಸ್ಥಾಯ

---

ಹಿಡುವೆನು. ಉತ್ಕೃಷ್ಟವಾದ ವಿಜಯವನ್ನು ಪಡೆಯುವೆನು. ನಿನ್ನ ವೇಷವನ್ನು ನೋಡಿ ನಾನು
ಇದುವರೆಗೆ ಹೀಗೆ ತಡಮಾಡಿದೆನು. ಈಗ ನನ್ನನ್ನು ಶ್ರೀಗಿರಿನಾಥನಾದ ಮಲ್ಲಿಕಾರ್ಜುನಮೂ
ರ್ತಿಯೂ ತಡೆಯಲಾರನು. ನೀನೆಷ್ಟರವನು? ಎಲೈ ತಪಸ್ವಿಯೆ! ನನ್ನ ಪೌರುಷಾಧಿಕ್ಯವನ್ನು
ನೋಡು ||೩೩೩|| "ನೀನು ತಡೆಯಿಲ್ಲದೆ ಬೇಗನೆ ಬಿಲವನ್ನು ಪ್ರವೇಶಿಸಿ ಹೋಗಿ, ಜಯ
ಶಾಲಿಯಾಗಿ ಬೇಗನೆ ಹಿಂತಿರಿಗಿ ಬಾ, ನಾವು ನಿನ್ನ ವಶವಾದೆವು.'' ಎಂಬುದಾಗಿ ನೀನು ನನಗೆ
ಆಶೀರ್ವಾದವನ್ನು ಮಾಡಿ ಇಷ್ಟರಲ್ಲೇ ಕಳುಹಿಸಿಕೊಡು. ಎಲೈ ತಪಸ್ವಿಯೆ, ನಾನು ಈ ಬಿಲ
ವನ್ನು ನುಗ್ಗಿಹೆ ಎಂದಿಗೂ ನಿಲ್ಲುವನಲ್ಲ ಇದು ಖಂಡಿತ. ||೩೩೫|| ಇದರಮೇಲೂ ನೀನು
ನನಗೆ ಯಾವ ಮಾತನ್ನಾದರೂ ಆಡಿದರೆ ಶ್ರೀಮಲ್ಲಿಕಾರ್ಜುನಸ್ವಾಮಿಯಾಣೆ ಎಂಬುದಾಗಿ
ಸಾಧಕನು ಹೇಳಲು, ಆ ಕಪಟ ತಪಸ್ವಿಯು ಆಗ—ಈತನು ಇದುವರೆಗೆ ನಾನಾಡಿದ ಕಪಟ
ವಚನಗಳಿಂದಲೂ, ತೋರಿಸಿದ ಬೆದರಿಕೆಗಳಿಂದಲೂ ಮಾಡಿದ ಧೂರ್ತತ್ವದಿಂದಲೂ ಸಹ ವಶನಾಗ
ಲಿಲ್ಲ. ಇನ್ನು ನಾನು ಈತನನ್ನು ತಡೆಯುವುದು ಅಸಾಧ್ಯವೇಸರಿ ಎಂಬುದಾಗಿ ನಿರ್ಧರಿಸಿ
ಕೊಂಡು ಅಲ್ಲೇ ಅಂತರ್ಧಾನಗೊಳ್ಳುವನು. ||೩೩೮|| ಆಗ ಸಾಧಕನು ಆ ತಪಸ್ವಿಯನ್ನು
ಕಪಟಿಯೆಂದು ತಿಳಿದುಕೊಂಡು ಮೊದಲಹಾಗೆಯೇ ಮುಂದಕ್ಕೆ ಹೋಗುತ್ತಿರಲು, ಅದೇ ಕ್ಷೇ
ತ್ರಪಾಲಕನೇ—ಈ ಸಾಧಕನು ನನ್ನನ್ನು ಲಕ್ಷ್ಯಮಾಡದೆ ಸರಸರನೆ ಹೋಗುತ್ತಿದ್ದಾನಲ್ಲಾ
ಎಂಬ ಆಗ್ರಹದಿಂದ ಆ ಗುಹೆಯ ಬಾಗಿಲಲ್ಲಿ ಅಗಳಿಹಾಕಿದಂತೆ ಹುಲಿಯ ಆಕಾರವನ್ನು ಧರಿಸಿ

ಜೃಂಭಮಾಣೋಽತಿಭೀಷಣಃ । ನಿಧ್ವಸ ನ್ವಿಕೃತಂಗಚ್ಛ ನ್ನಾಸಿಕಾಂ ಚಲಯ ನ್ನಪಿ ॥೩೪೧॥ ರಚಿತಭ್ರುಕುಟಿ ರ್ಜೃಂಭಾಗುಂಫಿತಾಸ್ಯ ಸ್ಸಮುನ್ನಮನ್ । ಮುಷ್ಟಿಕಾನಿಚಯಂ ಗೃಹ್ಣ ನ್ನವನಮ್ರೋ ಭವನ್ಭುವಿ ॥೩೪೨॥ ಸಂಚರನ್ನಗ್ರಪಾದಾಭ್ಯಾಂ ಸಂಸ್ಪೃಶ ನ್ಧರಣೀಂ ಶನೈಃ । ತಾಡ ಯನ್ನವನೌ ವಾಲಂ ಮುಹುರ್ವಕ್ತ್ರಂ ಸಮಾಲಿಹನ್ ॥೩೪೩॥ ಕೃತಾಂಗಭಂಗಕ ಶ್ಮಶ್ರು ಪಕ್ರಯಂ ಶ್ಚಾಲಯಂ ಶ್ಚ ಪ್ರುತೀ । ಉದ್ವ್ಯಂಚಾನೋ ಮುಹುರ್ದೃಷ್ಟಿಂ ಪಶ್ಯ ನ್ನಾಘೂರ್ಣಿತೇಕ್ಷಣಃ ॥೩೪೪॥ ಕೃಷ್ಣರಕ್ತಶ್ವೇತವರ್ಣಶಿಖಿಜ್ವಾಲಾಕದಂಬಕೈಃ । ಕೃತರಾಶಿರಿವೋದಗ್ರತ್ರಿವರ್ಣನಿಜವಿಗ್ರಹಃ ॥೩೪೫॥ ಮದಂ ಗಜಾನಾಂ ಸಿಂಹಾನಾಂ ಕೋಪಂ ದಾನವಸಂಹತೇಃ । ಕ್ರೌರ್ಯಂ ಕೃಶಾನೋ ರೌಷ್ಣ್ಯಂಚ ಸರ್ಪವೃಶ್ಚಿಕಜಂ ವಿಷಂ ॥೩೪೬॥ ತೀವ್ರತಾಂ ಮಾರುತಸ್ಯಾಪಿ ರಾಶೀಕೃತ್ಯೇವ ನಿರ್ಮಿತಃ । ಸಮಾಯಾತಿ ಸಮುದ್ದಂಡಂ ಸಾಧಕಾಭಿಮುಖಂ ತದಾ ॥೩೪೭॥ ವ್ಯಾಘ್ರಾಸುರಸ್ಯ ಮರಣಂ ಪುರಾ ಮಿಥ್ಯಾ ಭವೇ ದುತ । ಹತಶ್ಚೇದೀಶ್ವರೇಣಾಸ್ಮಿ ನ್ಬಿಲೇ ತಿಷ್ಠತ್ಯಯಂ ಕಥಂ ॥೩೪೮॥ ಅಂತರ್ಹಿತೋಽತ್ರವಸತಿ ಕಿಮಾಶೇನ ಪರಾಜಿತಃ । ಪೂರ್ವಂ ತಪಸ್ವಿನೋದ್ದಿಷ್ಟ ಸ್ವವ್ಯಾಘ್ರೋಽಯಂ ಭವೇತ್ಕಿಮು ॥

---

ಅತ್ಯಂತ ಭಯಂಕರವಾಗಿ ವಿಜೃಂಭಿಸುತ್ತ, ಮೂಗನ್ನು ಅರಲಿಸಿ ವಿಕಾರವಾಗಿ ಆರ್ಭಟಿಸುತ್ತ, ಅತ್ತಿತ್ತ ಚಲಿಸಾಡುತ್ತ, ಹುಬ್ಬು ಗಂಟಿಕ್ಕಿ, ಆಕಳಿಸುತ್ತ, ನೆಗೆಯುತ್ತ, ನೊಣಗಳನ್ನು ಹಿಡಿಯುತ್ತ, ಭೂಮಿಗೆ ಬಗ್ಗಿ ತುದಿಗಾಲಿನಿಂದ ಮೆಲ್ಲಗೆ ನಡೆಯುತ್ತ, ಭೂಮಿಗೆ ಬಾಲವನ್ನು ಬಡಿಯುತ್ತ, ಬಾರಿಬಾರಿಗೆ ನಾಲಗೆಯಿಂದ ಬಾಯನ್ನು ನೆಕ್ಕಿಕೊಳ್ಳುತ್ತ, ॥೩೪೩॥ ಮೈ ಮುರಿಯುತ್ತ, ಮೀಸೆಗಳನ್ನು ಅಲುಗಿಸುತ್ತ, ಕಿವಿಗಳನ್ನು ಒದರಿಕೊಳ್ಳುತ್ತ, ಬಾರಿಬಾರಿಗೆ ಅತ್ತಿತ್ತ ನೋಡಲು ಉಜ್ಜುಗಿಸುತ್ತ, ದುರುದುರನೆ ದಿಟ್ಟಿಸುತ್ತ, ಕಪ್ಪು ಕೆಂಪು ಬಿಳಿಪು ಬಣ್ಣಗಳ ಅಗ್ನಿಜ್ವಾಲೆಗಳೇ ಗುಂಪುಕೂಡಿ ಈ ಆಕಾರದಿಂದ ಬಂದಿರುವುವೋ ಎಂಬಂತೆ ಮೂರು ಬಣ್ಣಗಳಿಂದ ಕೂಡಿದ ದೇಹವುಳ್ಳುದಾಗಿ, ಆನೆಗಳ ಮದವೂ, ಸಿಂಹಗಳ ಕೋಪವೂ, ರಾಕ್ಷಸರ ಕ್ರೂರತ್ವವೂ, ಬೆಂಕಿಯ ಉಷ್ಣವೂ, ಹಾವು ಚೇಳುಗಳ ವಿಷವೂ, ಗಾಳಿಯ ಬಿರುಸೂ ಇವುಗಳನ್ನೆಲ್ಲಾ ಒಟ್ಟುಗೂಡಿಸಿ, ಈ ಪ್ರಾಣಿಯು ನಿರ್ಮಿಸಲ್ಪಟ್ಟಿದೆಯೋ ಎಂಬಂತೆ ತೋರುತ್ತ, ಅತ್ಯಂತ ಗರ್ವದಿಂದ ಈ ಸಾಧಕನಿಗೆ ಇದಿರಾಗಿ ಬರುವುದು. ॥೩೪೭॥ ಆಗ ಸಾಧಕನು—"ವ್ಯಾಘ್ರಾಸುರನು ಪೂರ್ವದಲ್ಲಿ ಮೃತನಾಗಿ ಹೋದುದು ಸುಳ್ಳೊ? ಈಶ್ವರನಿಂದ ಅವನು ಕೊಲ್ಲಲ್ಪಟ್ಟಿದ್ದರೆ ಈ ಗುಹೆಯಲ್ಲಿ ಇದು ಹೇಗೆ ಬಂದಿರುತ್ತಿದ್ದಿತು? ಆ ವ್ಯಾಘ್ರನು ಶಿವನಿಗೆ ಸೋತು ಇಲ್ಲಿಗೆ ಬಂದು ತಲೆ ಮರಸಿಕೊಂಡೇನಾದರೂ ಇದೆಯೊ? ಮೊದಲು ಆ ತಪಸ್ವಿಯು ನನ್ನೊಡನೆ ಹೇಳಿದ ಹುಲಿಯು ಇದೇನೆಯೊ? ನನ್ನಿದಿರಿಗೆ ಇದು ನಿಂತುಕೊಳ್ಳಬಲ್ಲುದೆ? ಆ ಕಪಟ ತಪಸ್ವಿ

ಸ್ಥಾತುಂ ಮದಗ್ರೇ ಶಕ್ತೋಽಸೌ ಕಿಂ ಸತಾಪಸವದ್ದ್ರುತಂ | ಮಾರ್ಗಂ ದತ್ವಾ ನಚೇದ್ಯಾತಿ ಹತಏವಾಧುನಾ ಮಯಾ ||೩೫೦|| ಪಲಾಯಮಾನಂ ಕುತ್ರಾಪಿ ನೈನಂ ಮೋಕ್ಷ್ಯಾಮಿ ಸರ್ವಥಾ | ಖಂಡಯಾಮ್ಯೇನ ಮದ್ಯೈವ ಸಮುದ್ದಂಡಪರಾಕ್ರಮಃ ||೩೫೧|| ಪ್ರದರ್ಶಯತಿ ಗರ್ವಂ ಮೇ ಪುರತಸ್ತಂ ಸಹೇ ಕಿಮು | ಇತ್ಯಾಲಪಂಸ್ತದಭ್ಯಾಶಂ ಯಾತಿ ಯಾವನ್ನ ಸಾಧಕಃ ||೩೫೨|| ಸತಾವದೇವ ಸಹಸಾ ಶಾರ್ದೂಲೋಽತಿಭಯಂಕರಃ | ಪತಚ್ಛೈಲಇವೋದಗ್ರಃ ಪ್ರಳಯಾಗ್ನಿರಿವೋಚ್ಛಿಖಃ ||೩೫೩|| ಮಹೋಲ್ಕೇವಾಶನಿರಿವ ಘನಗರ್ಜಿತನಿಷ್ಠುರಃ | ಸಾಧಕಸ್ಯೋಪರಿ ಪತೇತ್ಕ್ರೂರೋ ಮೃತ್ಯುರಿವ ಕ್ಷಣಾತ್||೩೫೪|| ಅಚಂಚಲೋ ಮುಕ್ತಭೀತಿ ರವಿಭ್ರಾಂತೋಽತಿಧೈರ್ಯವಾನ್ | ಏಕೇನ ಬಾಹುನಾ ತಸ್ಯ ದಂಷ್ಟ್ರಾಂ ಶ್ಮಶ್ರು ಪರೇಣಚ ||೩೫೫|| ಗೃಹೀತ್ವಾ ಚರಣಾಭ್ಯಾಂ ತಚ್ಚರಣಾನನುಬದ್ಧ್ಯಚ | ಭುವ್ಯುತ್ತಾನಂ ನಿಪತ್ಯೈನಂ ಧ್ವನಿಂ ಕುರ್ಯಾಚ್ಚ ಸಾಧಕಃ || ಅಥ ವ್ಯಾಘ್ರೋಽಪಿ ಸಹಸಾ ತತ್ರೈವಾಂತರ್ಹಿತೋ ಭವೇತ್ | ಸ್ವದೃಷ್ಟಸ್ವಪ್ನವೃತ್ತಾಂತಇವ ವಿಸ್ಮಿತಮಾನಸೇ ||೩೫೬|| ಸಾಧಕೇ ಗಚ್ಛತಿ ತತಃ ಪೂರ್ವಮೇವಹಿ ಭೈರವಃ | ಅಹೋ ಕೇನಾಪ್ಯುಪಾಯೇನ ಜೇತುಮೇನಂ ನಶಕ್ಯತೇ ||

---

ಯಂತೆ ಇದೂ ಕೂಡ ಬೇಗನೆ ದಾರಿ ಬಿಟ್ಟು ಹೋದರೆ ಸರಿ. ಇಲ್ಲದಿದ್ದರೆ ಈಗಲೇ ನನ್ನಿಂದ ಸತ್ತುದೇ ಸರಿ. ಇದು ಎಲ್ಲಿಗೆ ಓಡಿಹೋದರೂ ನಾನು ಸರ್ವಥಾ ಬಿಡುವುದಿಲ್ಲ. ಮಹಾ ಪರಾಕ್ರಮಶಾಲಿಯಾದ ನಾನು ಈಗಲೇ ಇದನ್ನು ಕತ್ತರಿಸಿ ಹಾಕುತ್ತೇನೆ. ನನ್ನದಿಂಗೆ ಇದು ಅಹಂಕಾರವನ್ನು ಮೆರೆಯಿಸುತ್ತಿದೆ. ನಾನು ಸಹಿಸುವೆನೆ?,, ಎಂಬುದಾಗಿ ಹೇಳಿಕೊಂಡು ಸಾಧಕನು ಅದರ ಬಳಿಗೆ ಇನ್ನೂ ಹೋಗಿ ಮುಟ್ಟದಿರುವಷ್ಟರಲ್ಲಿಯೇ ||೩೫೨|| ಆ ಭೀಕರವಾದ ಹುಲಿಯು ಬೀಳುತ್ತಿರುವ ದೊಡ್ಡ ಬೆಟ್ಟದಂತೆಯೂ, ಮಹಾಜ್ವಾಲಾಭೀಲವಾದ ಪ್ರಳಯ ಕಾಲಾಗ್ನಿಯಂತೆಯೂ, ಮಹಾ ಧೂಮಕೇತುವಿನಂತೆಯೂ, ಗುಡುಗಿನ ಅಬ್ಬರದಿಂದ ಕೂಡಿದ ಸಿಡಿಲಿನಂತೆಯೂ, ಭೀಕರ ಮೃತ್ಯುವಿನಂತೆಯೂ, ಸಾಧಕನ ಮೇಲೇರಿ ಬಂದು ಬೀಳುವುದು. ||೩೫೪|| ಆಗ ಸಾಧಕನು ಭಯಪಡದೆ, ಬುದ್ಧಿಗೆಡದೆ, ದೃಢಚಿತ್ತನಾಗಿ, ಅತ್ಯಂತ ಧೈರ್ಯಸಂಪನ್ನನಾಗಿ, ತನ್ನ ಒಂದು ತೋಳಿನಿಂದ ಅದರ ಕೋರೆದಾಡೆಗಳನ್ನೂ, ಮತ್ತೊಂದು ಕೈಯಿಂದ ಅದರ ಮೀಸೆಗಳನ್ನೂ ಹಿಡಿದು, ತನ್ನೆರಡು ಕಾಲುಗಳಿಂದಲೂ ಅದರ ಹಿಂಗಾಲೆರಡನ್ನೂ ಮೆಟ್ಟಿ ಎಕ್ಕೇರಿಹಾಕಿ ಸಿಕ್ಕಿಸಿಕೊಂಡು, ಭೂಮಿಯಮೇಲೆ ಅದನ್ನು ಅಂಗತಂಗನಾಗಿ ಬೀಳಿಸಿ ಸಾಧಕನು ಜಯಘೋಷವನ್ನು ಮಾಡಬೇಕು. ಆ ಕೂಡಲೇ ಹುಲಿಯು ಅಲ್ಲೇ ಅಂತರ್ಧಾನಗೊಳ್ಳುವದು. ಆಗ ಸಾಧಕನು ಇದನ್ನೆಲ್ಲಾ ಸ್ವಪ್ನದಲ್ಲಿ ಅನುಭವಿಸಿದಂತೆ ಕಂಡು, ಆಶ್ಚರ್ಯಗೊಂಡು ಮುಂದಕ್ಕೆ ಹೋಗುತ್ತಿರಲು, ಭೈರವನು ಅಬ್ಬಬ್ಬಾ! ಯಾವ ಉಪಾಯದಿಂದಲೂ

ಇತಿ ತದ್ಬಿಲಮತ್ಯಂತಹ್ರಸ್ವಂ ಕೃತ್ವಾಽತಿದುರ್ಗಮಂ । ತದನ್ತೇ ಜ್ವಲನೋ ಭೂತ್ವಾ ಪ್ರಜ್ವಲ ನ್ನವತಿಷ್ಠತೇ ॥೧೫೯॥ ಅನಂತರಂ ಸಾಧಕೋಽಪಿ ಹ್ರಸ್ವೀಭೂತೇ ಬಿಲೇ ತದಾ । ಅವನಮ್ರ ಶ್ಶನೈ ರ್ಗಚ್ಛ ನ್ಗತೋಽಪಿ ಸ್ವಲ್ಪವರ್ತ್ಮನಿ ॥೧೬೦॥ ಗಚ್ಛನ್ನಾನೀಸಪವಾಥ ತತೋಽಪಿ ಸ್ವಲ್ಪವರ್ತ್ಮನಿ । ಜಾನುಭ್ಯಾಂ ಸಹಸಾ ಗಚ್ಛಂಸ್ತತೋಽಪಿ ಸ್ವಲ್ಪವರ್ತ್ಮನಿ ॥೧೬೧॥ ಪತಿತ್ವಾ ದಂಡವದ್ಗಚ್ಛ ನ್ನುರಸಾ ಪುರತಸ್ತತಃ । ದಾವಾನಲಾರ್ಚಿರ್ನಿಚಯಂ ಪ್ರಳಯಾಗ್ನಿಶಿಖಾಕುಲಂ ॥೧೬೨॥ ಮಹೇಶಾಲಿಕನೇತ್ರಾಂತಜ್ವಾಲಾಜಾಲಂಚ ನಿಷ್ಠುರಂ । ಮಿಳಿತ್ವಾಽಶ್ಮಪ್ರಸೇವಾಂತರ್ನಿಕ್ಷಿಪ್ತಮಿವ ಭೀಷಣಂ ॥೧೬೩॥ ಆಪೂರ್ಯ ಬಿಲಮಾಯಾಂತಮಾಭಿಮುಖ್ಯೇನ ಚೋದ್ಧತಂ । ಉದ್ಯದ್ಭುಗುಭುಗುಧ್ವಾನೈ ರಾಭೀಲಜ್ವಾಲಜಾಲಕೈಃ ॥ ಸಪ್ತವಾರಿಧಿನಿರ್ಘೋಷಸದೃಶಾರಾವಭೈರವಂ । ಘೋರಾನಲಂ ಸಮುದ್ವೀಕ್ಷ್ಯ ನಿರ್ಭೀಸ್ತತ್ರ ಸಮುತ್ಪತೇತ್ ॥೧೬೪॥ ತದಗ್ನಿವೇಷಧಾರೀ ಸಂಪರಿತುಷ್ಟೋಽಥ ಭೈರವಃ । ತುಷ್ಟೋಽಸ್ಮಿ ತೇ ವಾಂಛಿತಾರ್ಥಾ ನ್ಪ್ರಯಚ್ಛಾಮೀತಿ ಭಾಷತೇ ॥ ಪ್ರದೇಯಂ ಕಿಂ ತ್ವಯಾ ಮೇಽಸ್ತಿ ತ್ವತ್ತಃ ಪ್ರಾಪ್ಯಂಚ ಕಿಂ ಮಯಾ । ಮ

---

ಇವನನ್ನು ಜಯಿಸಲಾಗುವುದಿಲ್ಲವಲ್ಲಾ! ಎಂದು ಯೋಚಿಸಿಕೊಂಡು, ಮೊದಲಿನಂತೆಯೇ ಮತ್ತೊಂದು ಉಪಾಯವನ್ನು ಹುಡುಕಿ ॥೧೫೮॥ ಆ ಗುಹೆಯನ್ನು ನುಗ್ಗುವುದಕ್ಕೆ ಅಸಾಧ್ಯವಾಗುವಷ್ಟು ಕಿರಿದಾಗಿ ಮಾಡಿ, ಅದರ ಕೊನೆಯಲ್ಲಿ ಒಳಗಡೆ ತಾನು ಬೆಂಕಿಯಾಗಿ ಉರಿಯುತ್ತಾ ನಿಂತುಕೊಳ್ಳುವನು. ಸಾಧಕನು ಆ ಗುಹೆಯು ಮುಂದೆ ಕಿರಿದಾಗಿರುವುದನ್ನು ನೋಡಿ ಬಗ್ಗಿಕೊಂಡು ಮೆಲ್ಲನೆ ಸ್ವಲ್ಪದೂರ ನಡೆದು, ಅದಕ್ಕಿಂತಲೂ ಕಿರಿದಾಗಿದ್ದ ಸ್ಥಲದಲ್ಲಿ ಕುಳಿತುಕೊಂಡೇ ನಡೆದು, ಅದಕ್ಕಿಂತಲೂ ಕಿರಿದಾಗಿದ್ದ ಸ್ಥಲದಲ್ಲಿ ಅಂಬೆಗಾಲಿಕ್ಕಿ ಸಾಗಿ, ಅದಕ್ಕಿಂತಲೂ ಬಲು ಕಿರಿದಾಗಿದ್ದ ಸ್ಥಲದಲ್ಲಿ ದಂಡಾಕಾರವಾಗಿ ಮಲಗಿಕೊಂಡು ಎದೆಯಿಂದ ತೆವಳಿ, ಕಡೆಗೆ ಮುಂಗಡೆಯಲ್ಲಿ ಕಾಳ್ಕಿಚ್ಚಿನ ರಾಶಿಯೂ, ಪ್ರಳಯಾಗ್ನಿಯ ದಳ್ಳುರಿಯ ಸ್ತೋಮವೂ, ಪರಶಿವ ಫಾಲನೇತ್ರಾಗ್ನಿ ಜ್ವಾಲೆಯೂ ಒಟ್ಟುಗೂಡಿ ಈ ಕಲ್ಲಿನ ಗುಳಿಯೊಳಗೆ ಇಡಲ್ಪಟ್ಟಿರುವುದೋ ಎಂಬಂತೆ ಅತ್ಯಂತ ಭಯಂಕರವಾಗಿ, ತನ್ನ ಉರಿಯು ಗವಿಯನ್ನೆಲ್ಲಾ ತುಂಬಿ, ಇದಿರಿಗೆ ಭುಗುಭುಗು ಎಂದು ಶಬ್ದಮಾಡುತ್ತಿರುವ ದಳ್ಳುರಿಗಳನ್ನು ಚಾಚಿಕೊಂಡು, ಸಪ್ತಸಮುದ್ರಗಳ ಮೊರೆತಕ್ಕೆ ಸಮಾನವಾದ ಭೀಕರ ಧ್ವನಿಯಿಂದ ಬರುತ್ತಿರುವ ಭೀಕರಾಗ್ನಿಯನ್ನು ಸಾಧಕನು ನೋಡಿ, ಹೆದರದೆ ಅದರಲ್ಲಿ ಬಿದ್ದುಬಿಡಬೇಕು. ಆಗ ಅಗ್ನಿವೇಷಧಾರಿಯಾಗಿದ್ದ ಭೈರವನು ಸಾಧಕನ ಧೈರ್ಯ ಸ್ಥೈರ್ಯ ಸಾಹಸಗಳಿಗೆ ಮೆಚ್ಚಿ ಸಂತೋಷಪಟ್ಟು, "ಅಯ್ಯಾ, ನಿನಗೆ ನಾನು ಮೆಚ್ಚಿದೆನು. ನಿನಗೆ ಬೇಕಾದ ವರವನ್ನು ಕೊಡುವೆನು" ಎಂದು ಹೇಳುವನು ॥೧೬೬॥ ಸಾಧಕನಾದರೋ—"ಅಯ್ಯಾ! ನನಗೆ ನೀನು ಕೊಡುವುದೇನು? ನಿನ್ನಿಂದ ನಾನು ಪಡೆಯುವುದೇ

ತ್ಸ್ವಾಮಿನಿ ಸ್ಥಿತೇ ಶಂಭೌ ಕಿಮರ್ಥಂ ತ್ವದಧೀನತಾ ||೩೬೭|| ಯಾಚೇಹಂ ಯದಿ ಸಾರೂಪ್ಯಂ ವಿಕೃತೋಗ್ರಾ ತವಾಕೃತಿಃ | ಸಾಮೀಪ್ಯಮಪಿ ತೇ ರಕ್ತಸು ರಾಮಾಂಸಾದಿಭಿ ಸ್ತತಂ ||೩೬೮|| ಸಾಲೋಕ್ಯಂ ಯದಿ ತೇಲೋಕೋ ಭೂತ ವೇತಾಳಸಂಕುಲಃ | ತ್ವತ್ತೋ ಲಭ್ಯೋ ಮಯಾ ಭೋಗಃ ಕೋಽಸ್ತಿ ತ್ವಂ ಕಾರ್ಯನಾಶಕಃ ||೩೬೯|| ವಿಹಾಯ ಕಪಟಂ ಮೇ ತ್ವಂ ಗತಿಂ ಮಾವಿಹತಾಂ ಕುರು | ತಿಷ್ಠ ತ್ವಮಿತ್ಯಾಲಪಂ ಸ್ತನ್ಮಾಯಾ ಮಗಣಯ ಸ್ಜವಾತ್ ||೩೭೦|| ಗಚ್ಛೇತ್ಸಸಾಧಕ ಸ್ಸ್ವೈರಂ ಯಥಾಪೂರ್ವಂ ನಿರರ್ಗಳಃ | ಆಘೂರ್ಣಮಾನಸ ಪ್ತಾಂಬುನಿಧಿಭೀಷಣನಿಸ್ವನಂ ||೩೭೧|| ಪೂರ್ವ ಮಾಯಾಶಪಾತಾಳಗಂಗಾ ದ್ವಾರಇವ ಸ್ಥಿತೇ | ಬಿಲೇಽಭಿಮುಖ ಮಾಯಾಂತಂ ಪ್ರವಾಹಂ ವೀಕ್ಷ್ಯ ವಾ ರಿಣಃ ||೩೭೨|| ಪತೇಚ್ಚ ನಿರ್ಭಯೋ ಭೂತ್ವಾ ತತ್ರವಾಹೋರ್ಮಿಮಧ್ಯತಃ | ಅಥೈತಸ್ಮಿನ್ನಿಪತ್ಯೇವ ಮುನ್ಮಗ್ನೇಸತಿ ತತ್ಕ್ಷಣೇ ||೩೭೩|| ಭವೇದ್ದಿವ್ಯಾಂಗ ಮಸ್ಯಾಂಗಂ ಪರಿಸ್ಫುರಿತದಿಕ್ತಟಂ | ಅತ್ಯಂತಮುದಿತೋಭೂತ್ವಾ ಸ್ವಾಂಗಂ ವೀಕ್ಷ್ಯ ತಥಾವಿಧಂ ||೩೭೪|| ಗಚ್ಛನ್ ಸದ್ರತ್ನಖಚಿತಸ್ವರ್ಣದೇವಾಲಯಾಂತಿಕೇ | ಹರ್ಮ್ಯಸ್ಥಲೇ ಸ್ವರ್ಣಮಯೀಂ ವೀಕ್ಷ್ಯ ಭೇರೀ ಮನಂತರಂ ||೩೭೫||

---

ನಿದೆ? ನನಗೆ ಸ್ವಾಮಿಯಾಗಿ ಪರಮೇಶ್ವರನು ಇರುತ್ತಿರಲಾಗಿ, ನಿನಗೆ ನಾನು ಆಡಿಯಾಳಾಗಿ ಬೇಡಬೇಕಾದುದೇನು? ನಿನ್ನನ್ನು ನಾನು ಸಾರೂಪ್ಯವನ್ನು ಬೇಡೋಣವೆ ಎಂದರೆ ನಿನ್ನ ಆಕೃತಿಯು ಅತ್ಯಂತ ವಿಕಾರವೂ ಭೀಕರವೂ ಆಗಿರುವುದು. ಸಾಮೀಪ್ಯವನ್ನು ಬೇಡೋಣವೆ ಎಂದರೆ ನಿನ್ನ ಬಳಿಯು ರಕ್ತ ಮಾಂಸಾದಿಗಳಿಂದ ತುಂಬಿರುವುದು. ಸಾಲೋಕ್ಯವನ್ನು ಬೇಡೋಡವೆ ಎಂದರೆ ನಿನ್ನ ಲೋಕವು ಭೂತ ಬೇತಾಳ ಮೊದಲಾದುವುಗಳ ಇಕ್ಕೆಯು. ಅದುಕಾರಣ ನಿನ್ನಿಂದ ನನಗೆ ದೊರೆಯಬೇಕಾದ ಭಾಗ್ಯವಾವುದಿದೆ? ನೀನು ಕಾರ್ಯವಿಘಾತಕನು. ||೩೬೯|| ನಿನ್ನ ಕಾಪಟ್ಯವನ್ನು ಬಿಟ್ಟು, ನನ್ನ ದಾರಿಯನ್ನು ಅಡ್ಡಿಯಿಲ್ಲದಂತೆ ಮಾಡು. ನೀನು ಇಲ್ಲೀಇರು. ಎಂದು ಹೇಳಿಬಿಟ್ಟು, ಆ ಭೈರವನ ಮಾಯೆಯನ್ನು ಲೆಕ್ಕಿಸದೆ, ಸಾಧಕನು ಬೇಗಬೇಗನೆ ಮುಂದಕ್ಕೆ ತಡೆಯಿಲ್ಲದೆ ಸಾಗುತ್ತ, ಮತ್ತೆ ಮುಂಗಡೆಯಲ್ಲಿ ಪೂರ್ವದಲ್ಲಿ ಸಿಕ್ಕಿದ್ದ ಪಾತಾಳ ಗಂಗೆಯ ಬಾಗಿಲಂತೆ ಇರುತ್ತಿದ್ದ ಗುಹೆಯ ಬಾಗಿಲಿಂದ ಸಪ್ತಸಮುದ್ರಗಳ ಮಹಾಘೋಷದಂತೆ ಮೊರೆದುಕೊಂಡು ಬರುತ್ತಿರುವ ಜಲಪ್ರವಾಹವನ್ನು ಕಂಡು, ಅದರ ತೆರೆಗಳ ಮಧ್ಯದಲ್ಲಿ ನಿರ್ಭಯದಿಂದ ಸಾಧಕನು ಬಿದ್ದುಬಿಡಬೇಕು. ಹಾಗೆ ಬಿದ್ದು ಮುಳುಗಿ ಎದ್ದಕೂಡಲೇ ಈ ಸಾಧಕನ ದೇಹವು ದಿವ್ಯ ತೇಜೋಮಯ ಶರೀರವಾಗಿ ದಿಕ್ತಟವನ್ನೆಲ್ಲಾ ಬೆಳಗುತ್ತಿರುವುದು. ಆಗ ಸಾಧಕನು ಅಂತಪ್ಪ ತನ್ನ ದೇಹವನ್ನು ನೋಡಿಕೊಂಡು ಸಂತೋಷಪಟ್ಟು, ||೩೭೪|| ಮುಂದಕ್ಕೆ ನಡೆದು, ಅಲ್ಲಿರುವ ರತ್ನಖಚಿತವಾದ ಸುವರ್ಣ ದೇವಾಲಯದ ಮುಂದಣ ಉಪ್ಪರಿ

ಉಪಾಸ್ಯ ತದ್ದಿವ್ಯಲಿಂಗಂ ತಾಂ ಭೇರೀಂ ವಾದಯೇನ್ಮುದಾ | ದಿವ್ಯಾಂಗನಾ
ಸ್ಸಮಾಗತ್ಯ ತತ ಸ್ತಂ ಸಾಧಕೋತ್ತಮಂ ||೩೭೬|| ಐರಾವತಸಮಾರೂಢಂ
ಕೃತ್ವಾಽಸೀಯಾಮರಾವತೀಂ | ಏಷಕಲ್ಪದ್ರುಮಃ ಕಾಮಧೇನು ರೇಷಾಽಮೃ
ತಂತ್ವಿದಂ ||೩೭೭|| ದೇವೇಂದ್ರಲಕ್ಷ್ಮೀ ರಣಿಮಾದ್ಯಷ್ಟಸಿದ್ಧಿಯುತಾತ್ವಸೌ |
ಏತಾ ರಂಭಾದ್ಯಪ್ಸರಸೋಽ ಜರಾಮರಣತಾ ತ್ವಿಯಂ ||೩೭೮|| ಏತೇಷು ಯ
ದಭೀಷ್ಟಂ ತೇ ತದ್ವೃಣೀಷ್ವೇತಿ ಸಾಧಕಂ | ಸಂಪ್ರಾರ್ಥಯಂತೇ ತಂ ಸಮ್ಯ
ಗಸುರಾಗಪುರಸ್ಸರಂ ||೩೭೯|| ಪರಿತುಷ್ಟ ಸ್ಸಾಧಕೋಪಿ ಭೋಗಾನಿಷ್ಟತಮಾಂ
ಛುಭಾನ್ | ದೇವೇಂದ್ರತ್ವಾದಿಕಾನ್ ದಿವ್ಯವರ್ಷಕೋಟೀ ರನೇಕಶಃ ||೩೮೦||
ಭುಕ್ತ್ವಾ ಯಥೇಷ್ಟಂ ತದನು ಶಿವಲೋಕ ಮವಾಪ್ನುಯಾತ್ | ಏವಂವಿಧಾ
ನ್ಯನೇಕಾನಿ ಬಿಲಾನ್ಯತ್ರ ವಸಂತಿಹಿ ||೩೮೧|| ಕಿಂವರ್ಣ್ಯತೇ ಶ್ರೀಗಿರೀಂದ್ರಮ
ಹಿಮಾ ಪರಮೋನ್ನತಃ | ನಶಕ್ಯೋಽನ್ಯೈರ್ವರ್ಣಯಿತುಂ ಶಿವಏವಹಿ ವೇತ್ತಿ
ತಂ ||೩೮೨|| ವಿಲೋಕಯೇತ ಶ್ರೀಶೈಲಸ್ಯೋತ್ತರದ್ವಾರವೈಭವಂ | ಏತತ್ತ
ದ್ವಾರವಾಸ್ತವ್ಯಂ ಪಶ್ಯ ಲಿಂಗಂ ಮಹೇಶ್ವರಂ ||೩೮೩|| ಗುಪ್ತಮಾಹೇಶ್ವರಂ
ಸಂಧ್ಯಾಸಮಾಧಿಂ ಚರುಕೇಶ್ವರಂ | ಕಾಲಹ್ರದೇಶ್ವರಂ ಪಾಪವಿನಾಶಂ ಗರುಡೇ

---

ಗೆಯಮೇಲೆ ಭಂಗಾರದ ನಗಾರಿ ಯಿರುವುದನ್ನು ಕಂಡು, ಬಳಿಕ ದೇವಾಲಯದ ಲಿಂಗವನ್ನು
ಸೇವಿಸಿ, ಆ ಹೊನ್ನಿನ ನಗಾರಿಯನ್ನು ಸಂತೋಷದಿಂದ ಬಾರಿಸಬೇಕು. ಆಗ ದಿವ್ಯಾಂಗನೆಯ
ರು ಬಂದು ಆ ಸಾಧಕಶ್ರೇಷ್ಠನನ್ನು ಎತ್ತಿ ಐರಾವತದಮೇಲೆ ಕುಳ್ಳಿರಿಸಿಕೊಂಡು, ಅಮರಾ
ವತೀ ಪಟ್ಟಣಕ್ಕೆ ಕರೆದೊಯ್ದು, ಇದೋ ನೋಡು ಇದೇ ಕಲ್ಪವೃಕ್ಷವು, ಇವೇ ಕಾಮಧೇ
ನುವು, ಇದು ಅಮೃತವು, ಇದು ಇಂದ್ರನ ಅಣಿಮಾದ್ಯಷ್ಟಸಿದ್ಧಿಸಂಪತ್ತು, ಇವರು ರಂಭಾದ್ಯ
ಪ್ಸರಸ್ತ್ರೀಯರು, ಇದು ಮುಪ್ಪು ಮರಣಗಳಿಲ್ಲದಿರುವಿಕೆ, ಇವುಗಳಲ್ಲಿ ನಿನಗೆ ಯಾವುದು ಬೇ
ಕೋ ಅದನ್ನು ಕೇಳಿಕೊ ಎಂದು ಅವರುಗಳು ಸಾಧಕನಿಗೆ ಅವನ್ನೆಲ್ಲಾ ತೋರಿಸಿ ಪ್ರೀತಿ
ಯಿಂದ ಕೇಳುವರು. ||೩೭೯|| ಸಾಧಕನು ಸಂತೋಷಪಟ್ಟು ತನಗೆ ಬೇಕಾದ ಇಂದ್ರಪದವಿ
ಯೇ ಮೊದಲಾದುವುಗಳ ಭೋಗಭಾಗ್ಯವನ್ನೆಲ್ಲಾ ಅನೇಕ ದಿವ್ಯ ಕೋಟಿ ವರ್ಷಗಳ ವರೆಗೆ ಯ
ಥೇಚ್ಛವಾಗಿ ಅನುಭವಿಸಿ, ಬಳಕ ಶಿವಲೋಕವನ್ನು ಹೊಂದುವನು ಈ ತೆರನಾದ ಮಹತ್ತ್ವ
ವುಳ್ಳ ಗವಿಗಳು ಈ ಶ್ರೀಶೈಲದಲ್ಲಿ ಅನೇಕವಾಗಿರುವುವು. ||೩೮೧|| ಈ ಗಿರಿಯ ಮಹಾ ಮಹಿ
ಮೆಯನ್ನು ವರ್ಣಿಸಲಾದೀತೆ? ಶಿವನೊಬ್ಬನು ಅದನ್ನು ಬಲ್ಲನೇ ಹೊರತು ಇತರರಿಂದ ಅದನ್ನು
ತಿಳಿದು ವರ್ಣಿಸಲು ಅಳವಲ್ಲ. ಎಲೆ ದೋಣಮಾರ್ಯನೆ! ಇತ್ತಕಡೆಯಲ್ಲಿರುವ ಶ್ರೀಶೈಲದ ಬಡ
ಗಲ ಬಾಗಿಲ ವೈಭವವನ್ನು ನೋಡು. ಆ ಬಾಗಿಲಲ್ಲಿರುವ ಮಹೇಶ್ವರ ಲಿಂಗವನ್ನು ನೋಡು.
ಮತ್ತು ಆ ಬಳಿಯಲ್ಲೇ ಇರುವ ಗುಪ್ತಮಾಹೇಶ್ವರ, ಸಂಧ್ಯಾಸಮಾಧಿ, ಚರುಕೇಶ್ವರ, ಕಾಲ

ಶ್ವರಂ ||೩೮೪|| ದೇವಹ್ರದೇಶ್ವರಂ ಸಿದ್ಧೇಶ್ವರಂ ನೀಲಹ್ರದೇಶ್ವರಂ | ಗಣೇಶ್ವ ರಂಚೇತಿ ತೀರ್ಥಾನ್ಯೇಕಾದಶ ಮಹಾಮತೇ ||೩೮೫|| ಆದಾ ವಸಂಸೇವ್ಯ ಚ ತುರ್ಮುಖ ಶ್ರೀಬಸವೇಶ್ವರಂ| ಏತದೇಕಾದಶಸ್ಥಾನಲಿಂಗಸಂದರ್ಶನಾರ್ಚನಾಃ|| ನಮಸ್ಕಾರಾಃ ಕೃತಾ ಸ್ಸರ್ವೇ ಭವೇಯು ರ್ನಿಷ್ಫಲಾ ಭುವಿ | ನಂದೀಶಸೇವಾ ಹೀನೇಶಸೇವಾ ವ್ಯರ್ಥಾ ಯಥಾ ತಥಾ ||೩೮೬|| ಶ್ರೀಕನ್ಯಾಸಿದ್ಧನಾಥಸ್ಯ ಪ್ರಾಸಾದಾತ್ಪೂರ್ವಭಾಗತಃ | ಸ್ವಯಂಭೂಲಿಂಗದೇವಸ್ಯ ಪುರೀಂ ಪಶ್ಯಾಮ ರಾವತೀಂ ||೩೮೮|| ಮಂದಾಕಿನೀನದೀತೀರೇ ಪಶ್ಯೇಂದ್ರೇಶಂ ಸುರಾರ್ಚಿತಂ | ತತ್ಪ್ರಾಗ್ಭಾಗೇ ಪಶ್ಯ ಗುಪ್ತಮಾಹೇಶ್ವರ ಮನುತ್ತಮಂ ||೩೮೯|| ಲಿಂಗಸ್ಯ ತಸ್ಯ ಮಾಹಾತ್ಮ್ಯ ಮವಾಙ್ಮಾನಸಗೋಚರಂ | ತತಃ ಪ್ರಾಗ್ಭಾಗತಃ ಪಶ್ಯ ಲಿಂಗ ಮೇಲೇಶ್ವರಾಭಿಧಂ ||೩೯೦|| ಲಿಂಗಾನಿ ಪರ್ವತಾಸ್ಕುಂಡಾ ನ್ಯನೇಕಾನಿ ಸಮಂ ತತಃ | ಅಭೀಪ್ಸಿತಸ್ವರ್ಗಮೋಕ್ಷದಾನದಕ್ಷಾಣಿಚ ಕ್ಷಿತೌ ||೩೯೧|| ಉಮಾಮ ಹೇಶ್ವಂ ರಾಮೇಶ್ವರಂ ಶ್ರೀಸಂಗಮೇಶ್ವರಂ | ತಿಲೇಶ್ವರಂ ಸಿದ್ಧಮುಕ್ತೇಶ್ವರಂ ಜ್ವರಹರೇಶ್ವರಂ ||೩೯೨|| ಶ್ರೀಮೂಲಸ್ಥಾನ ಮಚಲೇಶ್ವರಂ ಶ್ರೀಗೌತಮೇಶ್ವ ರಂ | ಶಿಲಾಚಲಂ ವೇದಶೈಲಂ ಶ್ವೇತಾದ್ರಿಂ ಲಿಂಗಪರ್ವತಂ ||೩೯೩|| ಕನ್ಯಾಗಿ

---

ಹ್ರದೇಶ್ವರ, ಪಾಪವಿನಾಶಕ, ಗರುಡೇಶ್ವರ, ದೇವಹ್ರದೇಶ್ವರ, ಸಿದ್ಧೇಶ್ವರ, ನೀಲಹ್ರದೇಶ್ವರ, ಗಣೇಶ್ವರ ಎಂಬ ಇವೆಲ್ಲಾ ಸೇರಿ ೧೧ ಮಹಾಸ್ಥಲಗಳಿರುವುವು. ಮೊದಲು ಅಲ್ಲಿರುವ ಚತು ರ್ಮುಖ ಬಸವೇಶ್ವರನನ್ನು ಸೇವಿಸದೆ ಈ ಮೇಲೆಹೇಳಿದ ಏಕಾದಶಸ್ಥಲಲಿಂಗಗಳ ಸಂದರ್ಶನವನ್ನೂ ಪೂಜನವನ್ನೂ ನಮಸ್ಕಾರವನ್ನೂ ಮಾಡಿದರೆ, ನಂದೀಶ್ವರನ ಸೇವೆ ಮಾಡದೆ ಈಶ್ವರ ಸೇವೆ ಮಾ ಡಿದರೆ ಅದು ಹೇಗೆ ವ್ಯರ್ಥವಾಗುವುದೋ ಹಾಗೆ ಅವೆಲ್ಲಾ ನಿಷ್ಫಲವಾಗುವುವು. ||೩೮೬|| ಮತ್ತು ಶ್ರೀ ಕನ್ಯಾಸಿದ್ಧನಾಥೇಶ್ವರ ದೇವಾಲಯದ ಪೂರ್ವಭಾಗದಲ್ಲಿರುವ ಸ್ವಯಂಭೂಲಿಂಗ ದೇವನ ಅಮರಾವತೀ ಪಟ್ಟಣವನ್ನು ನೋಡು. ಮಂದಾಕಿನೀ ನದಿಯ ದಡದ ಮೇಲೆ ಇಂದ್ರೇ ಶಲಿಂಗವಿದೆ ಅದನ್ನು ನೋಡು. ಅದರ ಮೂಡಣ ಭಾಗದಲ್ಲಿ ಗುಪ್ತಮಾಹೇಶ್ವರಲಿಂಗವಿದೆ. ಆ ಲಿಂಗದ ಮಹಿಮೆಯು ವಾಙ್ಮನಸ್ಸುಗಳಿಗೆ ನಿಲುಕದುದು. ಅದರ ಪೂರ್ವಕ್ಕೆ ಏಲೇಶ್ವರಲಿಂಗವಿದೆ ನೋಡು. ||೩೯೦|| ಅದರ ಸುತ್ತಲೂ ಅನೇಕ ಲಿಂಗಗಳೂ ಬೆಟ್ಟಗಳೂ ಜಲಕುಂಡಗಳೂ ಅನೇಕವಾಗಿರುವುವು. ಅವೆಲ್ಲವೂ ಬೇಡಿದ ಜನರಿಗೆ ಸ್ವರ್ಗ ಮೋಕ್ಷ ಫಲಗಳನ್ನು ಕೊಡತಕ್ಕು ವುಗಳು. ಆ ಲಿಂಗಗಳೂ ಪರ್ವತಗಳೂ ಕುಂಡಗಳೂ ಯಾವುಯಾವುವೆಂದರೆ—ಉಮಾಮಹೇಶ್ವ ರ, ರಾಮೇಶ್ವರ, ಸಂಗಮೇಶ್ವರ, ತಿಲೇಶ್ವರ, ಸಿದ್ಧಮುಕ್ತೇಶ್ವರ, ಜ್ವರಹರೇಶ್ವರ, ಮೂಲ ಸ್ಥಾನೇಶ್ವರ, ಅಚಲೇಶ್ವರ, ಗೌತಮೇಶ್ವರ ಎಂಬವು ಲಿಂಗಗಳು. ಶಿಲಾಚಲ, ವೇದಶೈಲ ಶ್ವೇತಾದ್ರಿ, ಲಿಂಗಪರ್ವತ, ಕನ್ಯಾಗಿರಿ, ನೀಲಶೈಲ, ಅಶ್ವಮೇಧಗಿರಿ, ಶಿಲೋಚ್ಚಯ, ಉಮಾಪ

೧೦ ನೀಲಶೈಲ ಮಶ್ವಮೇಧಶಿಲೋಚ್ಚಯಂ | ಉಮಾಮಹೇಧರಂ ಲೋಕೇ ವಿಖ್ಯಾತಂ ಕನಕಾಚಲಂ ||೩೯೪|| ಕುಂಡಾನಾಂ ಶೇಖರೀಭೂತಂ ರಾಮಕುಂಡಂ ಮನೋಹರಂ| ಭೀಮಕುಂಡಂ ವೇದಕುಂಡಂ ಶಿಲಾಕುಂಡ ಮನುತ್ತಮಂ|| ಪ್ರಯಾಗಕುಂಡಂ ಶ್ರೀನೀಲಕುಂಡಂ ಪಾತಕನಾಶನಂ | ಪಿಶಾಚಕುಂಡಂ ಶ್ರೀಗೌರೀಕುಂಡಂ ಪುಣ್ಯವಿವರ್ಧನಂ ||೩೯೭|| ರಸಕುಂಡಂಚೇತಿ ಗಂಗಾಪಾರ್ಶ್ವಯೋ ರುಭಯೋರಪಿ | ಏತಾನಿ ಪುಣ್ಯತೀರ್ಥಾನಿ ನವ ಖ್ಯಾತಾನಿ ಭೂತಲೇ|| ತತ್ಪ್ರಾಗ್ಭಾಗೇ ಜನಸ್ತುತ್ಯಂ ಮಾತಂಗೇಶ್ವರನಾಮಕಂ | ಶತಕೋಟ್ಯಾಹ್ವಯಂ ತೀರ್ಥಂ ತತ್ಪ್ರಾಗ್ಭಾಗೇಽವಲೋಕಯ ||೩೯೮|| ಏತಸ್ಯಾಸ್ತೀರ್ಥಸಮಿತೇರ್ಭಾತಿ ದಕ್ಷಿಣಭಾಗತಃ | ಅನಂತಮಹಿಮಾವಾಸಂ ಪಶ್ಯೈತತ್ತ್ರಿಪುರಾಂತಕಂ || ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಂ ವಕ್ಷ್ಯೇ ಸಂಕ್ಷೇಪತ ಶ್ಶೃಣು| ಕೃತವಂತೌ ಪುರಾ ಕೌಚಿ ದ್ಗೋಹತ್ಯಾ ಮಂತ್ಯಜಾವುಭೌ ||೪೦೦|| ರಾಜಾ ವಿಜ್ಞಾಯ ತಾಂ ಹತ್ಯಾಂ ಗೃಹೀತೌ ಸಹಸಾ ತತಃ | ಕುಮಾರಾಖ್ಯಗಿರೀಂದ್ರಸ್ಯ ಪರಿತಃ ಕ್ರೂರವೃತ್ತಿತಃ ||೪೦೧|| ಆಕೃಷ್ಯಮಾಣೌ ಸಂಬದ್ಧ್ಯ ಬಲೀವರ್ದೈ ಸ್ಸಸತ್ವರಂ| ಪ್ರಾಣಾನ್ವಿಮುಚ್ಯ ಸಂಜಾತೌ ತದ್ರಾಜ್ಞ ಸ್ತನಯಾವುಭೌ ||೪೦೨|| ಪರಿಖ್ಯಾತೌ ಕ್ಷಿತೌ ಜಜ್ಜು ಜಗದೇವಸಮಾಹ್ವಯೌ | ಜಾತಿಸ್ಮರತ್ವಸಂಪ್ರಾಪ್ತೇ ಜ್ಞಾ

---

ರ್ವತ, ಕನಕಾಚಲ—ಇವೆಲ್ಲಾ ಅಲ್ಲಿರುವ ಬೆಟ್ಟಗಳು. ಕುಂಡಗಳಲ್ಲೆಲ್ಲಾ ಉತ್ಕೃಷ್ಟವಾಗಿರುವ ರಾಮಕುಂಡ, ಭೀಮಕುಂಡ, ವೇದಕುಂಡ, ಶಿಲಾಕುಂಡ, ಪ್ರಯಾಗಕುಂಡ, ನೀಲಕುಂಡ, ಪಾತಕನಾಶಕವಾದ ಪಿಶಾಚಕುಂಡ, ಗೌರೀಕುಂಡ, ಪುಣ್ಯವರ್ಧನಕುಂಡ, ರಸಕುಂಡ ಎಂಬಿವುಗಳೆಲ್ಲಾ ಅಲ್ಲಿಯ ಗಂಗಾನದಿಯ ಎರಡು ದಡಗಳಮೇಲೂ ಇರುವ ೯ ಪುಣ್ಯತೀರ್ಥಗಳು. ಇವೆಲ್ಲಾ ಭೂತಲದಲ್ಲಿ ಪ್ರಸಿದ್ಧವಾದುವುಗಳು. ||೩೯೭|| ಅದಕ್ಕೆ ಪೂರ್ವಭಾಗದಲ್ಲಿ ಮಾತಂಗೇಶ್ವರನೆಂಬ ಲಿಂಗವಿರುವುದು. ಅದರ ಮುಂದಣ ಕಡೆಯಲ್ಲಿ ಶತಕೋಟಿ ತೀರ್ಥವಿರುವುದು ನೋಡು. ಇವೆಲ್ಲ ತೀರ್ಥಗಳ ದಕ್ಷಿಣಭಾಗದಲ್ಲಿ ಅಪರಿಮಿತ ಮಹಿಮಾಶ್ರಯನಾದ ತ್ರಿಪುರಾಂತಕ ಲಿಂಗವಿರುವುದು ನೋಡು. ಈ ಕ್ಷೇತ್ರದ ಮಹಿಮೆಯನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು—ಪೂರ್ವದಲ್ಲಿ ಇಬ್ಬರು ಅಂತ್ಯಜರು ಗೋವಧೆಯನ್ನು ಮಾಡಿದರು. ದೊರೆಯು ಅದನ್ನು ತಿಳಿದು, ಅವರನ್ನು ಹಿಡಿತರಿಸಿ ಬಸವಗಳ ಕಾಲಿಗೆ ಕಟ್ಟಿಸಿ ಇಲ್ಲಿಯ ಕುಮಾರಗಿರಿಯ ಸುತ್ತಲೂ ದರದರನೆ ಎಳೆಯಿಸಿ ಕ್ರೂರನಾಗಿ ಕೊಲ್ಲಿಸಿಬಿಟ್ಟನು. ಅವರುಗಳು ಆ ಕೂಡಲೇ ಸತ್ತು ಅದೇ ದೊರೆಯ ಮಕ್ಕಳಾಗಿ ಹುಟ್ಟಿದರು. ಒಬ್ಬನ ಹೆಸರು ಜಜ್ಜು, ಮತ್ತೊಬ್ಬನ ಹೆಸರು ಜಗದೇವ ಎಂಬುದಾಗಿ. ಅವರಿಬ್ಬರೂ ಪ್ರವರ್ಧಮಾನರಾಗಿ ಲೋಕವಿಖ್ಯಾತರಾದರು. ಅವರಿಗೆ ಪೂರ್ವಜನ್ಮ ಸ್ಮರಣೆಯುಂಟಾಗಲು, ಹಿಂದಣ ಚಂಡಾಲ ಜನ್ಮದಲ್ಲಿ ತಾವುಗಳು ಗೋ

ತ್ವಾ ಪ್ರಾಗ್ಜನ್ಮಚೇಷ್ಟಿತಂ ||೪೦೪|| ನೃಪನೃತ್ಯೇಷ್ವಾಗತೇಷು ಗೃಹೀತುಂ ಪೂರ್ವಜನ್ಮನಿ | ಭೀತ್ಯಾ ವಿದ್ರಾವ್ಯ ಗುಪ್ತಾನಿ ಸ್ವಶಸ್ತ್ರಾಣಿ ಪ್ರದರ್ಶ್ಯಚ ||೪೦೫|| ಅಥ ಪಶ್ಯತ್ಸು ಸರ್ವೇಷು ಭೂತ್ವಾ ತತ್ಕ್ಷೇತ್ರವಾಸಿನೌ | ತ್ಯಕ್ತ್ವಾ ಸ್ವರಾಜ್ಯವಿಭವ ಮಶೇಷಂ ಭಕ್ತಿತತ್ಪರೌ ||೪೦೬|| ಅಪ್ರಯತ್ನಪರಿಪ್ರಾಪ್ತ ದುಭಯೋಃ ಪೂರ್ವಜನ್ಮನಿ | ಕುಮಾರಶೈಲಮಹಿತಪ್ರದಕ್ಷಿಣಶುಭೋದಯಾತ್ || ಅಲಭ್ಯಂ ಗಿರಿಜಾನಾಥಸಾರೂಪ್ಯಂ ಸಮವಾಪತುಃ | ತತ್ಕುಮಾರಮಹೀಧ್ರೇಂದ್ರಮಾಹಾತ್ಮ್ಯಂ ವರ್ಣ್ಯತೇ ಕಥಂ ||೪೦೭|| ಭುವನೇ ವಿಶ್ರುತತರಾ ತ್ಪುರಾರಿಧ್ವಜದರ್ಶನಂ | ಇತಿವಾಕ್ಯಾ ದೇತದೀಯಧ್ವಜದರ್ಶನಸಂಭವಂ ||೪೦೮|| ಫಲಂ ವರ್ಣಯಿತುಂ ನೈವಶಕ್ಯಂಕಿಲ ಸುರಾದಿಭಿಃ | ತ್ರಿಪುರಾಂತಕದೇವಸ್ಯ ಕುಮಾರಕ್ಷಿತಿಭೃತ್ಪತೇಃ ||೪೦೯|| ದರ್ಶನಸ್ಪರ್ಶನಾರ್ಚನಾನಾಂ ಕಥಂವಾ ವರ್ಣ್ಯತೇ ಫಲಂ | ತತ್ರ ಸೇವಾಮಹತ್ವಸ್ಯ ಸಾಕ್ಷಿಣೌ ಶಶಮೂಷಕೌ ||೪೧೦|| ಭಾಂತಿ ಗಂಧವತೀತೀರೇ ಸಂಸ್ಥಿತಾಃ ಪಾತಕಾಪಹಾಃ | ಅಭೀಪ್ಸಿತಪ್ರದಾ ನಿತ್ಯಂ ಸ್ವ

---

ವಧೆ ಮಾಡಿದ್ದುದೂ, ಆಗ ರಾಜನ ಭೃತ್ಯರು ತಮ್ಮನ್ನು ಹಿಡಿದುಕೊಳ್ಳಲು ಬಂದಾಗ್ಗೆ ಭಯದಿಂದ ತಾವುಗಳು ಓಡಿಹೋಗಿ ತಮ್ಮ ಆಯುಧಗಳನ್ನು ಮರೆಮಾಡಿ ಇಟ್ಟಿದ್ದುದೂ ಸಹ ಅವರ ಸ್ಮರಣೆಗೆ ಬಂದಿತು. ಈಗ ತಾವು ಪ್ರತ್ಯಕ್ಷವಾಗಿ ಆ ಸ್ಥಲಕ್ಕೆ ಹೋಗಿ ಆ ಶಸ್ತ್ರಗಳನ್ನು ನೋಡಿ, ಊರ ಜನರೆಲ್ಲಾ ತಮ್ಮನ್ನು ನೋಡುತ್ತಿರುವಂತೆಯೇ ತಮ್ಮ ರಾಜ್ಯ ಸಂಪತ್ತನ್ನೆಲ್ಲಾ ತ್ಯಜಿಸಿ, ಭಕ್ತಿಸಂಪನ್ನರಾಗಿ ಈ ಕುಮಾರಗಿರಿ ಕ್ಷೇತ್ರವಾಸವನ್ನು ಮಾಡಿಕೊಂಡಿದ್ದರು. ||೪೦೬|| ಪೂರ್ವಜನ್ಮದಲ್ಲಿ ಅವರುಗಳಿಗೆ ಸ್ವಪ್ರಯತ್ನವಿಲ್ಲದೆಯೇ ಕುಮಾರಗಿರಿಯ ಪ್ರದಕ್ಷಿಣೆಯು (ಬಸವನ ಕಾಲಿಗೆ ಕಟ್ಟಿಸಿ ಗಿರಿಯ ಸುತ್ತಲೂ ಎಳೆಯಿಸಿದುದು) ಪ್ರಾಪ್ತವಾಗಿದ್ದ ಮಾತ್ರಕ್ಕೇ ಅದರ ಪುಣ್ಯಪ್ರಭಾವದಿಂದ ರಾಜಪುತ್ರತ್ವ ಪ್ರಾಪ್ತಿಯಾಗಿದ್ದುದಲ್ಲದೆ, ಈ ಜನ್ಮದಲ್ಲಿ ಆ ಗಿರಿ ಕ್ಷೇತ್ರನಿವಾಸಮಾಡಿದುದರಿಂದ ಶಿವಸಾಮೀಪ್ಯವು ಸಿದ್ಧಿಸಿತು. ಅದುಕಾರಣ ಆ ಕುಮಾರ ಗಿರಿಯ ಮಹತ್ತ್ವವನ್ನು ಇಷ್ಟೇ ಸರಿಯೆಂದು ಹೇಗೆ ವರ್ಣಿಸಲಾದೀತು? ||೪೦೭|| ಶಿವಧ್ವಜ ಸಂದರ್ಶನವು ಮಹಾ ಮುಕ್ತಿಪ್ರದವೆಂದು ಆಗಮ ವಚನವಿರುವಪ್ರಕಾರ. ಈ ತ್ರಿಪುರಾಂತಕ ದೇವಾಲಯ ಧ್ವಜದ ಸಂದರ್ಶನದಿಂದ ಉಂಟಾಗುವ ಫಲವನ್ನು ವರ್ಣಿಸಲಿಕ್ಕೆ ದೇವತೆಗಳಿಗೂ ಶಕ್ಯವಲ್ಲವೆನ್ನುವಾಗ, ಈ ಕುಮಾರ ಪರ್ವತಕ್ಕೆ ಸ್ವಾಮಿಯಾದ ತ್ರಿಪುರಾಂತಕೇಶ್ವರನ ದರ್ಶನ ಸ್ಪರ್ಶನ ಪೂಜನಾದಿಗಳನ್ನು ಮಾಡುವುದರಿಂದ ಉಂಟಾಗುವ ಫಲವನ್ನು ಎಷ್ಟೆಂದು ಹೇಳಬಹುದು! ಆತನ ಸೇವೆಯ ಪ್ರಭಾವವನ್ನು ನಿರೂಪಿಸುವುದಕ್ಕೆ ಒಂದು ಮೊಲವೂ ಒಂದು ಇಲಿಯೂ ಸಾಕ್ಷಿಗಳು. ||೪೧೦|| ಮತ್ತು ಗಂಧವತೀ ನದಿಯ ದಡದ ಮೇಲೆ ಪಾಪವಿನಾಶಕಗಳೂ ಸದಾ ಇಷ್ಟಾರ್ಥಪ್ರದಗಳೂ ಆದ ಸ್ವಯಂಭೂ ಲಿಂಗಮೂರ್ತಿಗಳು ಇರುವುವು ನೋಡು. ಆ ಲಿಂಗಮೂರ್ತಿಗೆ

ಯಂಭೂಲಿಂಗಮೂರ್ತಯಃ ||೪೧೧|| ಪಶ್ಯಾದಿಮಮಿದಂ ತಾಸಾಂ ವಿಶ್ರುತಂ ತ್ರಿಪುರಾಂತಕಂ | ತತೋ ಗೌರೀಶ್ವರಂ ಸೋಮೇಶ್ವರಂ ಪಾಪವಿನಾಶನಂ || ಶ್ರೀಕೇದಾರೇಶ್ವರಂ ಖಡ್ಗೇಶ್ವರಂ ಶ್ರೀಕಪಿಲೇಶ್ವರಂ | ಶ್ರೀವಿಮುಕ್ತೇಶ್ವರಂ ಗೌರೀಶ್ವರಂ ಶ್ರೀಮಲ್ಲಿಕಾರ್ಜುನಂ ||೪೧೩|| ಶ್ರೀಕನ್ಯಾಸಿದ್ಧನಾಥಾಖ್ಯಲಿಂಗಂ ತಜ್ಞೋತ್ತರೇಶ್ವರಂ | ಪಶ್ಯೇತದ್ದ್ವಾದಶಸ್ಥಾನಲಿಂಗಮಾಹಾತ್ಮ್ಯಮದ್ಭುತಂ || ತ್ರಿಪುರಾಂತಕದೇವಸ್ಯ ತಸ್ಯ ದಕ್ಷಿಣಭಾಗತಃ | ಖ್ಯಾತಸಿದ್ಧವಟಸ್ಥಾನಮಾರ್ಗಸ್ಯೋಭಯಪಾರ್ಶ್ವಯೋಃ ||೪೧೪|| ಪಶ್ಯ ವೃದ್ಧಗಿರಿಂ ಭವ್ಯಂ ರಸಸಿದ್ಧೇಶ್ವರಂ ತಥಾ | ಗೋಶೃಂಗಂ ರುದ್ರಕೋಟಿಂಚ ಪಶ್ಚಿಮಾಶಾಮುಖಂ ಪುನಃ || ಪಶ್ಯಾಮೃತೇಶ್ವರಂ ಭವ್ಯಂ ಭ್ರಮರೇಶ್ವರಸಂಜ್ಞಿತಂ | ಆಲೋಕಯೇದಂ ಪ್ರಥಮಂ ಮಲ್ಲಿಕಾರ್ಜುನಮುತ್ತಮಂ ||೪೧೭|| ಶ್ರುತಂ ಧರಣ್ಯಾಂ ಸುರಭೇಶ್ವರಂ ಪಾಪವಿನಾಶನಂ | ಬ್ರಹ್ಮೇಶ್ವರಂ ಜಗದ್ವಂದ್ಯಂ ಮುಕ್ತೇಶ್ವರಮನುತ್ತಮಂ || ಶ್ರೀಮತ್ಕಾಲೇಶ್ವರಂ ಭೀಮೇಶ್ವರಂ ಭುವನವಿಶ್ರುತಂ | ಅತಿಪ್ರಸಿದ್ಧಂ ಪಟಹಕರ್ಣೇಶ್ವರಸಮಾಹ್ವಯಂ ||೪೧೯|| ಕುಂಭಕರ್ಣೇಶ್ವರಂ ಚೈಕಶಿಲಾಂ ಕನಕಭೂಧರಂ | ಶ್ರೀಜಾನುಪರ್ವಲಿಂಗಂ ಶ್ರೀಸ್ಕಂದಸೋಮೇಶ್ವರಂ ಪುನಃ ||೪೨೦|| ರುದ್ರಾಕ್ಷಪರ್ವತಂ ಲಿಂಗಪರ್ವತಂ ಭೂತಿಪರ್ವತಂ | ಘುಟಿಕಾಸಿದ್ಧನಾಥಾಖ್ಯಂ ಲಿಂಗಂ ಶ್ರೀಕಮಲೇಶ್ವರಂ ||೪೨೧|| ವಿಭೀಷಣೇಶ್ವರಂ ಸಾಲಂಕೇಶ್ವರಂ

---

ಯೊಳಗೆಲ್ಲಾ ಈ ತ್ರಿಪುರಾಂತಕ ಲಿಂಗವು ಮೊದಲನೆಯದೂ ಸುಪ್ರಸಿದ್ಧವೂ ಆಗಿರುವುದು. ಆಬಳಿಕ ಗೌರೀಶ್ವರ, ಸೋಮೇಶ್ವರ, ಪಾಪವಿನಾಶೇಶ್ವರ, ಕೇದಾರೇಶ್ವರ, ಖಡ್ಗೇಶ್ವರ, ಕಪಿಲೇಶ್ವರ, ವಿಮುಕ್ತೇಶ್ವರ, ಗೌರೀಶ್ವರ, ಮಲ್ಲಿಕಾರ್ಜುನೇಶ್ವರ, ಕನ್ಯಾಸಿದ್ಧನಾಥೇಶ್ವರ, ಉತ್ತರೇಶ್ವರ ಎಂಬ ೧೨ ಈಶ್ವರಸ್ಥಾನಗಳಿರುವುವು. ಇವುಗಳ ಮಹಿಮೆಯು ಅದ್ಭುತವಾದುದು. ಆ ತ್ರಿಪುರಾಂತಕೇಶ್ವರನ ದಕ್ಷಿಣಭಾಗದಲ್ಲಿ ಪ್ರಸಿದ್ಧವಾದ ಸಿದ್ಧವಟಸ್ಥಾನ ಮಾರ್ಗವಿರುವುದು. ಅದರ ಎರಡು ಪಕ್ಕಗಳಲ್ಲೂ ನೋಡು. ಅಲ್ಲಿ ವೃದ್ಧಗಿರಿಯೂ, ರಸಸಿದ್ಧೇಶ್ವರನೂ ಇರುವರು. ಮತ್ತು ಗೋಶೃಂಗೇಶ್ವರ, ರುದ್ರಕೋಟೀಶ್ವರ, ಪಶ್ಚಿಮದಿಙ್ಮುಖೇಶ್ವರ, ಅಮೃತೇಶ್ವರ, ಭ್ರಮರೇಶ್ವರ, ಪ್ರಥಮ ಮಲ್ಲಿಕಾರ್ಜುನೇಶ್ವರ, ಸುರಭೇಶ್ವರ, ಬ್ರಹ್ಮೇಶ್ವರ, ಮುಕ್ತೇಶ್ವರ, ಕಾಲೇಶ್ವರ, ಭೀಮೇಶ್ವರ, ಪಟಹಕರ್ಣೇಶ್ವರ, ಕುಂಭಕರ್ಣೇಶ್ವರ—ಎಂಬ ಈ ಲಿಂಗಗಳನ್ನೆಲ್ಲಾ ನೋಡು. ಮತ್ತು ಏಕಶಿಲಾಗಿರಿಯನ್ನೂ, ಕನಕಗಿರಿಯನ್ನೂ, ಅಲ್ಲಿರುವ ಜಾನುಪರ್ವಲಿಂಗವನ್ನೂ, ಸ್ಕಂದಸೋಮೇಶ್ವರ ಲಿಂಗವನ್ನೂ ನೋಡು. ರುದ್ರಾಕ್ಷಗಿರಿ, ಲಿಂಗಪರ್ವತ, ಭಸ್ಮಪರ್ವತಗಳನ್ನೂ, ಘುಟಿಕಾ ಸಿದ್ಧನಾಥಲಿಂಗವನ್ನೂ, ಕಮಲೇಶ್ವರ ಲಿಂಗವನ್ನೂ ||೪೨೧||

ಲೋಕವಿಶ್ರುತಂ | ಕುಮಾರಕುಂಡಂ ಶ್ರೀಮತ್ಸ್ಯಕುಂಡಂ ಭೀಮೇಶ್ವರಂತಥಾ || ವಿಭೀಷಣಾಹ್ವಯಂ ಕುಂಡಂ ಕುಂಡಂ ರಾವಣಸಂಜ್ಞಕಂ | ಗುಪ್ತಕುಂಡಂಚ ಸಾಲಂಕಂ ಪಶ್ಯ ಶ್ರೀಮತ್ಸ್ಯಕೇಶ್ವರಂ ||೬೨೩|| ಶ್ರೀಶೈಲದಕ್ಷಿಣದ್ವಾರಪತಿಂ ಯಾಮ್ಯೋದಯಾಚಲೇ | ಜ್ಯೋತಿಸ್ಸಿದ್ಧವಟಾಧೀಶಂ ಸಿದ್ಧನಾಥ ಮುಮಾಪ ತಿಂ ||೬೨೪|| ಪಿನಾಕಿನೀನದೀತೀರವಾಸಿನಂ ವರದಾಯಕಂ | ದರ್ಶನಾನ್ಮುಕ್ತಿ ದಂ ನಿತ್ಯಪುಣ್ಯಂ ಏಶ್ವೈಕಸನ್ನುತಂ ||೬೨೫|| ದೇವವೇಶ್ಯಾಭುಜಂಗಂ ಚಿ ದ್ರೂಪಂ ದೇವಶಿಖಾಮಣಿಂ | ದೇವಾಧಿನಾಯಕಂ ಪಶ್ಯ ವಟೇಶಂ ವೃಷಭ ಧ್ವಜಂ ||೬೨೬|| ವಟಮೂಲನಿಜಾವಾಸಂ ಸಮಸ್ತಜನರಕ್ಷಕಂ | ತಚ್ಛಮೂಲ ಸ್ಥಾನಭೂತ ಮಾದೌ ಸಿದ್ಧೇಶ್ವರಂ ತತಃ ||೬೨೭|| ಇಷ್ಟಸಿದ್ಧೇಶ್ವರಂ ಬ್ರಹ್ಮೇ ಶ್ವರಂ ಶ್ರೀವರುಣೇಶ್ವರಂ | ಇಷ್ಟಕಾಮೇಶ್ವರಂ ಭವ್ಯಮುದಯೇಶ್ವರ ಮುತ್ತ ಮಂ ||೬೨೮|| ಯಮೇಶ್ವರಂ ತಥಾ ಸಿದ್ಧೇಶ್ವರ ಮೇತದ್ವಿಲೋಕಯ | ಇಂದ್ರ ಪೂಜಿತ ಮಿಂದ್ರೇಶಂ ಪಶ್ಯ ಪುಷ್ಪಗಿರೀಶ್ವರಂ ||೬೨೯|| ರಾಮೇಶ್ವರ ಮಿಮಂ ಪಶ್ಯ ಸುರಮರ್ತ್ಯಾಳಿಸನ್ನುತಂ | ಶ್ರೀಮತ್ಪರಶುರಾಮೇಶಂ ಪಶ್ಯ ಶ್ರೀತ್ರಿಪುರಾಂ ತಕಂ ||೬೩೦|| ಬಾಲಕರ್ಣೇಶ್ವರಂ ಪಶ್ಯ ಶಂಕರಂ ಮಲ್ಲಿಕಾರ್ಜುನಂ | ಕುಂ ಡೀಪ್ರಭಾಹ್ವಯೇತೀರ್ಥೇ ಪಶ್ಯ ಶ್ರೀಕುಕ್ಕುಟೇಶ್ವರಂ ||೬೩೧|| ಲಸನ್ಮನುಜರೂ

---

ವಿಭೀಷಣೇಶ್ವರ, ಸಾಲಂಕೇಶ್ವರ ಲಿಂಗಗಳನ್ನೂ, ಕುಮಾರಕುಂಡ, ಮತ್ಸ್ಯಕುಂಡ, ಭೀಮೇ ಶ್ವರಕುಂಡ, ವಿಭೀಷಣಕುಂಡ, ರಾವಣಕುಂಡ, ಗುಪ್ತಕುಂಡ, ಸಾಲಂಕಕುಂಡ ಈ ಹೆಸರಿನ ತೀರ್ಥಗಳನ್ನೂ, ಅಲ್ಲಿರುವ ಮತ್ಸ್ಯಕೇಶ್ವರನನ್ನೂ ನೋಡು. ಯಾಮ್ಯೋದಯ ಗಿರಿಯಮೇಲೆ ಶ್ರೀ ಶೈಲದ ದಕ್ಷಿಣ ದ್ವಾರಕ್ಕೆ ಅಧಿಪತಿಯಾಗಿರುವ ಜ್ಯೋತಿಸ್ಸಿದ್ಧವಟಾಧೀಶ್ವರನನ್ನು ನೋಡು ||೬೨೪|| ಮತ್ತು ಪಿನಾಕಿನೀ ನದೀತೀರದಲ್ಲಿ ವಟವೃಕ್ಷದಡಿಯಲ್ಲಿ ನೆಲಸಿರುವ ಲೋಕೈಕ ವಂದ್ಯನೂ ದರ್ಶನಮಾತ್ರದಿಂದ ಮೋಕ್ಷಪ್ರದನೂ, ದೇವಾಂಗನಾವಿಟನೂ, ಜ್ಞಾನರೂಪನೂ, ದೇವತಾಸಾರ್ವಭೌಮನೂ, ಸಕಲ ಲೋಕರಕ್ಷಕನೂ ಆದ ವಟೇಶ್ವರನನ್ನು ನೋಡು. ಆ ಬಳಿಕ ಎಲ್ಲಕ್ಕೂ ಮೂಲಸ್ಥಾನವಾದ ಸಿದ್ಧೇಶ್ವರ ಸ್ಥಾನವನ್ನು ನೋಡು. ಅಲ್ಲಿ ಇಷ್ಟಸಿದ್ಧೇ ಶ್ವರ, ಬ್ರಹ್ಮೇಶ್ವರ, ವರುಣೇಶ್ವರ, ಇಷ್ಟಕಾಮೇಶ್ವರ, ಉದಯೇಶ್ವರ, ಯಮೇಶ್ವರ, ಸಿದ್ಧೇ ಶ್ವರನೆಂಬ ಲಿಂಗಗಳೂ ಇರುವುವು ನೋಡು. ಮತ್ತು ಪುಷ್ಪಗಿರಿಗೆ ಅಧಿಪತಿಯಾದ ಇಂದ್ರಪೂಜಿ ತನಾದ ಇಂದ್ರೇಶ ಲಿಂಗವನ್ನು ನೋಡು. ದಿವಿಜಮನುಜ ಸನ್ನುತನಾದ ರಾಮೇಶ್ವರ ಲಿಂಗ ವನ್ನು ನೋಡು. ಪರಶುರಾಮೇಶ, ತ್ರಿಪುರಾಂತಕೇಶ, ಬಾಲಕರ್ಣೇಶ, ಶಂಕರಮಲ್ಲಿಕಾ ರ್ಜುನೇಶ್ವರರೆಂಬ ಲಿಂಗಗಳನ್ನೂ, ಕುಂಡೀಪ್ರಭಾ ಎಂಬ ತೀರ್ಥದಲ್ಲಿರುವ ಕುಕ್ಕುಟೇಶ್ವರನ ನ್ನೂ ||೬೩೧|| ಬ್ರಹ್ಮೇಶ್ವರ, ವಿಮಲೇಶ್ವರ ಲಿಂಗಗಳನ್ನೂ ನೋಡು, ಅರ್ಧ ಮನುಷ್ಯಾಕಾರ

ಪಾರ್ಥ ಮೃಗರೂಪಾರ್ಧವಿಗ್ರಹಃ ||೪೩೨|| ನಾರಸಿಂಹೋ ಹಿರಣ್ಯಾಕ್ಷಂ ಹಂತುಂ ಸಂಸ್ಥಾಪ್ಯ ಶಂಕರಂ | ಸಮಾವಾಹ್ಯ ತದಾದೀಶಂ ಸದ್ಭಕ್ತ್ಯಾ ಸೇವತೇಽನಿಶಂ ||೪೩೩|| ನರಸಿಹ್ಮೇಶ್ವರಂ ಪಶ್ಯ ತಂ ತ್ರಿಲೋಕೈಕವಿಶ್ರುತಂ | ಇತಸ್ಸಿದ್ಧೇಶ್ವರಂ ಪಶ್ಯ ದಾನವೇಂದ್ರಾದಿಕಾನಪಿ ||೪೩೪|| ತತ್ಪಶ್ಚಿಮೇಽಥ ಪ್ರಥಮನಂದಿನಂ ಕೃಷ್ಣನಂದಿನಂ | ಆಕಾಶನಂದಿನಂ ಬ್ರಹ್ಮನಂದಿನಂ ಸೋಮನಂದಿನಂ ||೪೩೫|| ಶ್ರೀಮಹಾನಂದಿ ಗರುಡನಂದಿ ಭೈರವನಂದಿನಃ | ಅಭೀಷ್ಟದಂ ಭಗವತೀನಂದಿನಂ ಭೀಮನಂದಿನಂ ||೪೩೬|| ಶ್ರೀನಾಗನಂದಿನಂ ಭವ್ಯಂ ಶ್ರೀವಿನಾಯಕನಂದಿನಂ | ಶ್ರೀಕಾಮನಂದಿನಂ ಶ್ವೇತನಂದಿನಂ ಶಿವನಂದಿನಂ ||೪೩೭|| ಶ್ರೀಗೌರೀನಂದಿನಂ ಚೈಕನಂದಿನಂ ಚೇಂದ್ರನಂದಿನಂ | ಜಗನ್ನುತಂ ಚಾವಿಮುಕ್ತನಂದಿನಂ ಪ್ರವಿಲೋಕಯ ||೪೩೮|| ಏತೇಽಭೀಷ್ಟಾರ್ಥಫಲದಾ ನಂದಿಮಂಡಲಸಂಸ್ಥಿತಾಃ | ದೂರ್ವಾಸಸ್ತೀರ್ಥ ಮಾಕ್ಷಸ್ವ ತ್ವಂತದುತ್ತರಭಾಗತಃ ||೪೩೯|| ತೀರ್ಥಾನೀಂದ್ರೇಶ್ವರಾದೀನಿ ತಸ್ಯಚೋತ್ತರಭಾಗತಃ | ತತ್ರೈವ ತ್ವಂ ಪಶ್ಯ ಬಲಭದ್ರರಾಮೇಶ್ವರಂ ಮಹತ್ ||೪೪೦|| ಲಾಂಗೂಲತೀರ್ಥಂ ಪಶ್ಯೈತದ್ಭುವನತ್ರಯವಿಶ್ರುತಂ | ಕೂರ್ಮೇಣ ಸ್ಥಾಪಿತಂ ಕೂರ್ಮಮಲ್ಲಿಕಾರ್ಜುನ ಮುತ್ತಮಂ ||೪೪೧|| ಆಶ್ಚರ್ಯಕಾರಿಣಃ ಪಾಪಹಾರಿಣ ಶ್ರೀನಗೇಶಿತುಃ | ಪಶ್ಚಿಮ

---

ಅರ್ಧ ಸಿಹ್ಮಾಕಾರನಾದುದರಿಂದ ನರಸಿಹ್ಮನೆನಿಸಿಕೊಂಡ ಹರಿಯು ಹಿರಣ್ಯಾಕ್ಷದೈತ್ಯನ ಸಹ್ಮಾರಕ್ಕಾಗಿ ಇಲ್ಲಿ ನರಸಿಹ್ಮೇಶ್ವರನೆಂಬ ಲಿಂಗವನ್ನು ಸ್ಥಾಪಿಸಿ ಆವಾಹಿಸಿ, ಅಂದಿನಿಂದ ಪೂಜಿಸುತ್ತಿರುವನು. ಆ ಲೋಕಪ್ರಸಿದ್ಧವಾದ ಲಿಂಗವನ್ನು ನೋಡು. ಇತ್ತಕಡೆ ಇರುವ ಸಿದ್ಧೇಶ್ವರ ದಾನವೇಂದ್ರೇಶ್ವರ ಮೊದಲಾದ ಲಿಂಗಗಳನ್ನೆಲ್ಲಾ ನೋಡು. ಅವುಗಳ ಪಶ್ಚಿಮದಲ್ಲಿರುವ ಪ್ರಥಮನಂದಿ, ಕೃಷ್ಣನಂದಿ, ಆಕಾಶನಂದಿ, ಬ್ರಹ್ಮನಂದಿ, ಸೋಮನಂದಿ, ಮಹಾನಂದಿ, ಗರುಡನಂದಿ, ಭೈರವನಂದಿ, ಭಗವತೀನಂದಿ, ಭೀಮನಂದಿ, ನಾಗನಂದಿ, ವಿನಾಯಕನಂದಿ, ಕಾಮನಂದಿ, ಶ್ವೇತನಂದಿ, ಶಿವನಂದಿ, ಗೌರೀನಂದಿ, ಏಕನಂದಿ, ಇಂದ್ರನಂದಿ, ಅವಿಮುಕ್ತನಂದಿ, ಈ ನಂದೀಶ್ವರ ಮೂರ್ತಿಗಳೆಲ್ಲಾ ನಂದಿಮಂಡಲವೆಂಬ ಕಡೆಯಲ್ಲಿವೆ. ಇವೆಲ್ಲಾ ಸಕಲೇಷ್ಟಾರ್ಥಗಳನ್ನೂ ಕೊಡತಕ್ಕುವುಗಳು; ನೋಡು. ಆ ಸ್ಥಲದಿಂದುತ್ತರಕ್ಕೆ ದೂರ್ವಾಸ ತೀರ್ಥವಿದೆ ನೋಡು. ಅದರ ಉತ್ತರಕ್ಕೆ ಇಂದ್ರೇಶ್ವರಾದಿ ತೀರ್ಥಗಳಿವೆ. ಅಲ್ಲಿಯೇ ಬಲಭದ್ರ ರಾಮೇಶ್ವರನೆಂಬ ಮಹಾ ಲಿಂಗವಿದೆ ನೋಡು. ||೪೪೦|| ಇದೋ ನೋಡು ಇದು ಲಾಂಗೂಲತೀರ್ಥವು. ಲೋಕತ್ರಯಪ್ರಸಿದ್ಧವಾದುದು. ಅದರ ಬಳಿಯಲ್ಲಿಯೇ ಆದಿಕೂರ್ಮನಿಂದ ಸ್ಥಾಪಿತವಾದ ಕೂರ್ಮ ಮಲ್ಲಿಕಾರ್ಜುನ ಲಿಂಗವಿರುವುದು ನೋಡು.

ದ್ವಾರವಿಭವಂ ಪಶ್ಯೇತತ್ಪರಪೋಽನ್ನತಂ ||೪೪೨|| ತುಂಗಭದ್ರಾತರಂಗಿಣ್ಯಾ ಸ್ತುಂಗಭದ್ರಾಂಚಿತಾಕೃತೇಃ | ತೀರೇ ಮೋಕ್ಷಪ್ರದಾಂ ದೇವದ್ರೋಣೀಂ ತ ಸ್ಯಾಶ್ಚ ಪಶ್ಚಿಮೇ ||೪೪೩|| ತ್ವಂ ಪಶ್ಯ ದ್ವಾದಶಬ್ರಹ್ಮೇಶ್ವರಾಣಿ ತದನಂತರಂ | ವೇದನಾದಾವತೀಮಧ್ಯಸ್ಥಿತಸ್ಥಾನಕದಂಬಕೇ||೪೪೪||ಪಶ್ಯತೀರ್ಥಾದಿಮಂ ಛಾ ಯಾಮಲ್ಲಿಕಾರ್ಜುನಮುತ್ತಮಂ| ಮೋಕ್ಷೇಶ್ವರಂಚ ಗಣಿಕಾಸಿದ್ಧನಾಥಂ ಸಮು ನ್ನತಂ ||೪೪೫|| ಶ್ರೀಭುಜಂಗೇಶ್ವರಂ ಬ್ರಹ್ಮೇಶ್ವರಂ ಶ್ರೀನಾರದೇಶ್ವರಂ | ರಾಜ ರಾಜೇಶ್ವರಂ ಚಾಗ್ನೀಶ್ವರಂ ಭೋಗೀಶ್ವರಂ ಪುನಃ ||೪೪೬|| ಸೋಮೇಶ್ವರಂ ತ್ರಿಲೋಕೈಕಖ್ಯಾತಂ ಕಲಕಲೇಶ್ವರಂ | ಭವ್ಯಾನ್ಯೇಕಾದಶೈತಾನಿ ತೀರ್ಥಾನಿ ಪ್ರವಿಲೋಕಯ ||೪೪೭|| ರುದ್ರಪಾದಾದಿತೀರ್ಥಾನಾಂ ಮೂಲಸ್ಥಾನಂ ಸಮು ಜ್ವಲಂ | ಬ್ರಹ್ಮೇಶ್ವರಂ ತತಃ ಪಶ್ಯ ಬಲಭದ್ರೇಶ್ವರಂ ಪರಂ ||೪೪೮|| ಕಮಲೇ ಶ್ವರ ಮುತ್ತುಂಗಂ ಶ್ರೀಮತ್ಪಾಪವಿನಾಶನಂ | ಶ್ರೀಪ್ರಯಾಗೇಶ್ವರಂ ಚಾಗ ಸ್ತ್ಯೇಶ್ವರಂ ಪಾತಕಾಪಹಂ ||೪೪೯|| ಸಪ್ತಕೋಟೀಶ್ವರಂ ನಾಗೇಶ್ವರಂ ಶ್ರೀ ಕುಕ್ಕುಟೇಶ್ವರಂ | ಅಶ್ವಮೇಧೇಶ್ವರಂ ರಾಮೇಶ್ವರಂ ಶ್ರೀಲಕುಲೇಶ್ವರಂ ||೪೫೦ ಧರ್ಮೇಶ್ವರಂಚ ಧವಳೇಶ್ವರಂ ಶ್ರೀಲಕ್ಷ್ಮಣೇಶ್ವರಂ | ಇಂದ್ರೇಶ್ವರಂಚ ವಿಮ ಲೇಶ್ವರಂ ಶ್ರೀಮದ್ಗಣೇಶ್ವರಂ ||೪೫೧|| ಲಕ್ಷ್ಮೀಶ್ವರಂಚ ವರುಣೇಶ್ವರಂ ವ್ಯಾಸೇ ಶ್ವರಂ ಪುನಃ | ಖ್ಯಾತ ಮೇಲೇಶ್ವರಂ ಚೋತ್ತರೇಶ್ವರಂ ಚಾನಲೇಶ್ವರಂ || ಪಂಚಲಿಂಗಾನಿ ವರುಣಮೋಚನೇಶ್ವರ ಮುತ್ತಮಂ | ಶ್ರೀಸಂಗಮೇಶ್ವರದ್ವಂ

---

ಲೋಕಾದ್ಭುತವೂ ಪಾಪನಾಶಕವೂ ಆದ ಈ ಶ್ರೀಗಿರಿಯ ಪಶ್ಚಿಮದ ಬಾಗಿಲ ಮಹಾ ವೈಭವವನ್ನು ಇನ್ನು ಅವಲೋಕಿಸು. ಅತ್ಯಂತ ಮಂಗಳಾಕಾರವಾದ ತುಂಗಭದ್ರಾನದಿಯ ತೀರದಲ್ಲಿ ಮುಕ್ತಿಪ್ರದನಾದ ದೇವದ್ರೋಣೀ ತೀರ್ಥವಿರುವುದು. ಅದರ ಪಶ್ಚಿಮದಲ್ಲಿ ದ್ವಾದಶ ಬ್ರಹ್ಮೇಶ್ವರಸ್ಥಲಗಳಿರುವುವು ನೋಡು. ಅಲ್ಲಿಂದ ವೇದನಾದಾವತೀಯೆಂಬ ನದಿಯ ಮಧ್ಯದಲ್ಲಿ ಕುವ ಸ್ಥಲದಲ್ಲಿ ಅಗ್ರೇಸರನಾದ ಛಾಯಾಮಲ್ಲಿಕಾರ್ಜುನಸ್ಥಾನವೂ ಮತ್ತು ಮೋಕ್ಷೇಶ್ವರ, ಗಣಿಕಾಸಿದ್ಧನಾಥ, ಭುಜಂಗೇಶ, ಬ್ರಹ್ಮೇಶ್ವರ, ನಾರದೇಶ್ವರ, ರಾಜರಾಜೇಶ್ವರ. ಅಗ್ನೀಶ್ವರ, ಭೋಗೀಶ್ವರ, ಸೋಮೇಶ್ವರ, ಕಲಕಲೇಶ್ವರ ಎಂಬಿವೂ ಸೇರಿ ೧೧ ತೀರ್ಥಸ್ಥಲಗಳಿವೆ ನೋಡು. ಅದರ ಮಗ್ಗುಲಲ್ಲಿ ರುದ್ರಪಾದಾದಿ ತೀರ್ಥಸ್ಥಲಗಳಿಗೆಲ್ಲಾ ಮೂಲವಾದ ಬ್ರಹ್ಮೇ ಶ್ವರನಿರುವನು ನೋಡು. ಮತ್ತು ಬಲಭದ್ರೇಶ್ವರ, ಕಮಲೇಶ್ವರ, ಪ್ರಯಾಗೇಶ್ವರ, ಅಗಸ್ತ್ಯೇ ಶ್ವರ, ಸಪ್ತಕೋಟೀಶ್ವರ, ನಾಗೇಶ್ವರ, ಕುಕ್ಕುಟೇಶ್ವರ, ಅಶ್ವಮೇಧೇಶ್ವರ, ರಾಮೇಶ್ವರ, ಲಕುಲೀಶ್ವರ, ಧರ್ಮೇಶ್ವರ, ಧವಳೇಶ್ವರ, ಲಕ್ಷ್ಮಣೇಶ್ವರ, ಇಂದ್ರೇಶ್ವರ, ವಿಮಲೇಶ್ವರ, ಗಣೇ

ದ್ವಂ ಸಪ್ತಲಿಂಗಾವಲಿಂ ಪುನಃ ||೪೫೩|| ಸಕಲೇಶ್ವರ ಮಾಕ್ಷಸ್ವ ತತಶ್ಚ ಕಮ ಲೇಶ್ವರಂ | ಶ್ರೀಸ್ವರ್ಗದ್ವಾರಸೀಮ್ನ್ಯೇತದ್ಬ್ರಹ್ಮೇಶ್ವರ ಮನುತ್ತಮಂ ||೪೫೪|| ತ್ರಿಪುರಾಂತಕಮುಖ್ಯಾನಿ ತೀರ್ಥಾನಿ ವಿವಿಧಾನಿಚ | ಭಸ್ಮೇಶ್ವರಂ ತಚ್ಚ ಗಜ ಮಲ್ಲಿಕಾರ್ಜುನಮುತ್ತಮಂ || ೪೫೫ || ಹೇಮಕುಂಡಂಚ ಪರಶುರಾಮೇಶ್ವರ ಮುದಂಚಿತಂ | ಶ್ರೀಮಲಕ್ಷ್ಮಯಕುಂಡಂಚ ರಸಕುಂಡಂ ಮನೋಹರಂ ||೪೫೬|| ಸಿದ್ಧೇಶ್ವರಂ ತ್ರಿಲೋಕೈಕವಿಖ್ಯಾತ ಮವಲೋಕಯ | ಕತಿಚಿದ್ದರ್ಶಿತಾನ್ಯೇತ ತ್ಪುರೇ ಲಿಂಗಾನಿ ತೇ ಮಯಾ ||೪೫೭|| ಶೇಷೇಣಾಪಿ ಪ್ರವಕ್ತುಂ ನಶಕ್ಯಂತೇ ತಾನ್ಯಶೇಷತಃ| ಏತಾವಂತ್ಯತ್ರ ಲಿಂಗಾನೀತ್ಯುಕ್ತೇ ದೋಷೋಹಿ ಜಾಯತೇ|| ಪೂರ್ವಂ ಯುಗೇಷು ಯಾವತ್ಸು ಯಾವಂತೋ ವಿಷ್ಣವಃ ಪುನಃ | ಪುರಂದ ರಾಶ್ಚ ಯಾವಂತೋ ಯಾವಂತ ಶ್ಚತುರಾನನಾಃ ||೪೫೯|| ಯಾವಂತೋ ಮು ನಿಸಂದೋಹಾ ಯಾವಂತಶ್ಚ ದಿವೌಕಸಃ | ಯಾವಂತೋ ದಾನವಾ ಸ್ಸಂತಃ ವಸವಸ್ಸ್ವಸ್ವನಾಮತಃ ||೪೬೦|| ಪ್ರತ್ಯೇಕ ಮತ್ರ ಲಿಂಗಾನಿ ಪ್ರತಿಷ್ಠಾಪ್ಯಾತಿಭ ಕ್ತಿತಃ | ಪ್ರಾಪುಸ್ಸಮಾಹಿತಾ ನರ್ಥಾ ನತಸ್ತದ್ಭುವನತ್ರಯೇ ||೪೬೧|| ಲಿಂಗಾ ನಾಂ ಪರ್ವತೋ ಲಿಂಗಭಾಂಡಾಗಾರ ಮುದಂಚಿತಂ | ಲಿಂಗಾನಾಂ ಮಂದಿ

---

ಶ್ವರ, ಲಕ್ಷ್ಮೀಶ್ವರ, ವರುಣೇಶ್ವರ, ವ್ಯಾಸೇಶ್ವರ, ವಿಲೀಶ್ವರ, ಉತ್ತರೇಶ್ವರ, ಅನಲೀಶ್ವರ ಎಂಬ ಈ ಲಿಂಗಮೂರ್ತಿಗಳನ್ನೂ, ಪಂಚಲಿಂಗಮೂರ್ತಿಗಳನ್ನೂ, ವರುಣಮೋಚನೇಶ್ವರ, ಸಂಗಮೇಶ್ವ ರವೆಂಬ ಲಿಂಗದ್ವಯವನ್ನೂ, ಸಪ್ತಲಿಂಗಮೂರ್ತಿಗಳನ್ನೂ, ಸಕಲೀಶ್ವರ, ಕಮಲೇಶ್ವರ ಎಂಬ ಲಿಂಗಗಳನ್ನೂ, ಸ್ವರ್ಗದ್ವಾರವೆಂಬ ಬಳಿಯಲ್ಲಿರುವ ಬ್ರಹ್ಮೇಶ್ವರನನ್ನೂ ನೋಡು. ||೪೫೪|| ಮತ್ತು ಅಲ್ಲಿರುವ ತ್ರಿಪುರಾಂತಕವೆಂಬುದೇ ಮೊದಲಾದ ನಾನಾ ತೀರ್ಥಗಳನ್ನೂ, ಭಸ್ಮೇಶ್ವರ, ಗಜಮಲ್ಲಿಕಾರ್ಜುನೇಶ್ವರರುಗಳನ್ನೂ ನೋಡು. ಅಲ್ಲಿಂದ ಹೇಮಕುಂಡ, ಪರಶುರಾಮಕುಂಡ, ಮಲಕ್ಷಯಕುಂಡ, ರಸಕುಂಡ ಇವುಗಳನ್ನೆಲ್ಲಾ ನೋಡು. ಅಲ್ಲೇ ಇರುವ ತ್ರಿಲೋಕವಿಖ್ಯಾ ತನಾದ ಸಿದ್ಧೇಶ್ವರ ಲಿಂಗವನ್ನು ನೋಡು. ಎಲೈ ದೋನಮಾರ್ಯನೆ! ಈ ಪಟ್ಟಣದಲ್ಲಿರುವ ಎಲ್ಲೋ ಕೆಲವು ಲಿಂಗಗಳನ್ನು ನಿನಗೆ ಈಗ ತೋರಿಸಿದೆನು. ||೪೫೭||. ಇಲ್ಲಿರುವ ಲಿಂಗಗಳನ್ನೆ ಲ್ಲಾ ಆದ್ಯಂತವಾಗಿ ವಿವರಿಸಿ ಹೇಳುವುದಕ್ಕೆ ಆದಿಶೇಷನಿಂದಲೂ ಆಗುವುದಿಲ್ಲ. ಮತ್ತು ಇಲ್ಲಿ ರುವ ಲಿಂಗಗಳು ಇಷ್ಟೇ ಎಂದು ಲೆಕ್ಕಮಾಡಿದರೆ ದೋಷವು ಸಂಘಟಿಸುತ್ತದೆ. ಪೂರ್ವದಲ್ಲಿ ಎಷ್ಟು ಯುಗಗಳಾಗಿರುವುವೋ ಆ ಯುಗಗಳಲ್ಲೆಲ್ಲಾ ಎಷ್ಟುಮಂದಿ ವಿಷ್ಣುಗಳೂ, ಇಂದ್ರರೂ, ಬ್ರಹ್ಮರೂ, ಮುನಿಗಳೂ, ದೇವತೆಗಳೂ, ರಾಕ್ಷಸರೂ, ವಸುಗಳೂ ಆಗಿಹೋಗಿರುವರೋ ಅವ ರುಗಳೆಲ್ಲಾ ತಂತಮ್ಮ ಹೆಸರಿನಿಂದ ಬೇರೆಬೇರೆ ಲಿಂಗಗಳನ್ನು ಭಕ್ತಿಯಿಂದ ಇಲ್ಲಿ ಪ್ರತಿಷ್ಠಾಪಿಸಿ ಇಷ್ಟಾರ್ಥಗಳನ್ನು ಪಡೆದಿರುವರು. ಆದುಕಾರಣ ಈ ಶ್ರೀಪರ್ವತವು ಮೂರುಲೋಕಗಳಲ್ಲೂ

ರಂ ಲಿಂಗನಗರಂ ಲಿಂಗವಾರಿಧಿಃ ||೪೬೨|| ಲಿಂಗಾನಾಂ ಮಂಜರೀ ಲಿಂಗರಾಶಿ ರ್ಲಿಂಗಸುರದ್ರುಮಃ | ಶ್ರೀಲಿಂಗಸುರಭಿಶ್ಚೇತಿ ಕೀರ್ತ್ಯತೇ ಸತತಂ ಬುಧೈಃ || ಏವಂವಿಧಶ್ರೀಗಿರೀಂದ್ರ ಪಶ್ಚಿಮದ್ವಾರಸಂಸ್ಥಿತಾತ್ | ತೀರ್ಥೋಚ್ಚಯಾ ತ್ಪೂರ್ವಭಾಗೇ ಭುವನತ್ರಯವಿಶ್ರುತಂ ||೪೬೪|| ಭಾಸತೇ ಕೂಡಲಪದಪೂರ್ವಂ ಶ್ರೀ ಸಂಗಮೇಶ್ವರಂ | ತುಂಗಭದ್ರಾಕೃಷ್ಣವೇಣ್ಯೋಸ್ಸಂಗಮಂ ತ್ವಂ ವಿಲೋಕಯ|| ತತ್ಪೂರ್ವಭಾಗತಃ ಪಶ್ಯ ಮಹಾಮಹಿಮರಂಜಿತಂ | ನಿವೃತ್ತಿನಾಮತೀರ್ಥೇಂದ್ರವಾಸಿನಂ ಸಂಗಮೇಶ್ವರಂ ||೪೬೬|| ತತ್ಪೂರ್ವಭಾಗತೋ ಯಜ್ಞೇಶ್ವರಂ ತ್ವಂ ಪ್ರವಿಲೋಕಯ | ದಕ್ಷಪ್ರಜಾಪತಿಮಹಾಕ್ರತುಸಂಹರಣಸ್ಥಲೇ ||೪೬೭|| ಅಮರೇಶಂ ಪರ್ವತಾಗ್ರೇ ಸಿದ್ಧನಾಥಂ ವಿಲೋಕಯ | ತ್ವಮಗಸ್ತ್ಯೇಶ್ವರಂ ಪಶ್ಯ ತತ್ಪ್ರವಾಹೋತ್ತರೇ ತಟೇ ||೪೬೮|| ತದಗಸ್ತ್ಯೇಶ್ವರಾ ತ್ಪ್ರಾಚ್ಯಾಂ ಪಶ್ಯ ಸೋಮೇಶ್ವರಂ ಪರಂ | ಪಶ್ಯ ಸೋಮಶಿಲಾಂ ಭವ್ಯಾಂ ತ್ವಮುಮಾಧರಣೀಧರಂ ||೪೬೯|| ತತ ಸ್ಸೋಮಶಿಲಾದೀನಿ ತೀರ್ಥಾನಿ ವಿವಿಧಾನ್ಯಪಿ | ಮಹೇಶ್ವರಾಂತಾನಿ ತಾನಿ ಪಶ್ಯೇತ್ಯಾದರಪೂರ್ವಕಂ ||೪೭೦|| ತ್ರಿಂಶದ್ಯೋಜನವಿಸ್ತೀರ್ಣಭೂಮೌ ಸಂದರ್ಶ್ಯ ತಾನ್ಯಸೌ | ತ್ರಿಲೋಕಸ್ಥಾನಿ ಲಿಂಗಾನಿ ತೀರ್ಥಾನಿ

---

ಲಿಂಗಪರ್ವತ, ಲಿಂಗಭಾಂಡಾಗಾರ, ಲಿಂಗಭವನ, ಲಿಂಗಪಟ್ಟಣ, ಲಿಂಗಸಮುದ್ರ, ಲಿಂಗಮಂಜರಿ, ಲಿಂಗರಾಶಿ, ಲಿಂಗ ಕಲ್ಪವೃಕ್ಷ, ಲಿಂಗ ಕಾಮಧೇನು ಎಂಬುದಾಗಿ ವಿದ್ವಜ್ಜನರಿಂದ ಸದಾ ಹೊಗಳಲ್ಪಡುತ್ತಿದೆ. ||೪೬೩||

ಈ ಪ್ರಕಾರವಾದ ಶ್ರೀಶೈಲದ ಪಶ್ಚಿಮ ದ್ವಾರದಲ್ಲಿರುವ ತೀರ್ಥಗಳ ಪೂರ್ವಭಾಗದಲ್ಲಿ ಲೋಕಪ್ರಸಿದ್ಧವಾದ ಕೂಡಲ ಸಂಗಮೇಶ್ವರ ಕ್ಷೇತ್ರವಿರುವುದು. ಅದೇ ತುಂಗಭದ್ರೆಯೂ ಕೃಷ್ಣಾನದಿಯೂ ಸಂಗಮವಾಗಿರುವ ಸ್ಥಲವು. ಅದನ್ನು ನೋಡು. ಅದರ ಪೂರ್ವಭಾಗದಲ್ಲಿ ಮಹಾ ಮಹತ್ವವುಳ್ಳ ನಿವೃತ್ತಿನಾಮಕವಾದ ತೀರ್ಥವಿರುವುದು. ಅಲ್ಲಿ ವಾಸಿಸುವ ಸಂಗಮೇಶ್ವರನನ್ನು ನೋಡು. ಅದಕ್ಕೆ ಪೂರ್ವದಲ್ಲಿ ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿದ ಸ್ಥಲವಿದೆ. ಅಲ್ಲಿರುವ ಯಜ್ಞೇಶ್ವರನನ್ನು ನೋಡು. ಅಲ್ಲಿಯ ಪರ್ವತದ ತುದಿಯಲ್ಲಿರುವ ಸಿದ್ಧನಾಥನಾದ ಅಮರೇಶ್ವರನನ್ನೂ, ಆ ನದೀಪ್ರವಾಹದ ಬಡಗಲ ದಡದ ಮೇಲಿರುವ ಅಗಸ್ತ್ಯೇಶ್ವರನನ್ನೂ, ಆ ಲಿಂಗದ ಪೂರ್ವಕ್ಕಿರುವ ಸೋಮೇಶ್ವರಲಿಂಗವನ್ನೂ ನೋಡು.. ಮತ್ತು ಅಲ್ಲಿಯೇ ಕಾಣಿಸುವ ಚಂದ್ರಕಾಂತಶಿಲಾಗಿರಿಯನ್ನೂ, ಉಮಾಪರ್ವತವನ್ನೂ, ಸೋಮಶಿಲೆಯೆಂಬುದೇ ಮೊದಲಾಗಿ ಮಹೇಶ್ವರ ತೀರ್ಥವೆಂಬುದೇ ಕೊನೆಯಾಗಿರುವ ನಾನಾವಿಧ ತೀರ್ಥಗಳನ್ನೆಲ್ಲಾ ನೋಡು. ||೪೭೦|| ಎಂಬುದಾಗಿ ಶ್ರೀ ಮಲ್ಲಿಕಾರ್ಜುನಸ್ವಾಮಿಯು ದ್ರೋಣಾಚಾರ್ಯನಿಗೆ ಆದರಪೂರ್ವಕವಾಗಿ ೩೦ ಯೋಜನ ವಿಸ್ತೀರ್ಣವಾಗಿರುವ ಆ ಶ್ರೀ ಗಿರಿಯಲ್ಲಿ ತ್ರಿಲೋಕದ ನಾನಾ

ವಿವಿಧಾನಿಜ ||೪೭೧|| ಪ್ರದಕ್ಷಿಣಕ್ರಮೋಕ್ತಾನಿ ಶ್ರೀಗಿರೀಂದ್ರಸ್ಯ ಸರ್ವಶಃ | ತೀರ್ಥಾನಿ ಲಿಂಗಮೂರ್ತೀ ಶ್ರೀಗಿರಿಂ ಸರ್ವಂ ವಿಲೋಕಯ ||೪೭೨|| ತಥಾ ತ್ವಂ ಕಥಯ ಪ್ರೀತ್ಯಾ ಪಂಡಿತೇಂದ್ರಾಯ ಧೀಮತೇ | ಆತೃಪ್ತಿ ನೇತ್ರಯೋ ಸ್ಸಮ್ಯ ಗಪಶ್ಯ ಶ್ರೀಗಿರಿಂ ಯತಃ ||೪೭೩|| ಪರಿಪ್ರಾಪ್ತಂ ಶ್ರೀಗಿರೀಂದ್ರಪ್ರದ ಕ್ಷಿಣಾಫಲಂ ತ್ವಯಾ | ಪ್ರದಕ್ಷಿಣೈ ರಸಂಖ್ಯಾತಕೋಟಿಭಿ ಶ್ರೀನಗಸ್ಯ ಯತ್|| ಫಲಂ ಸಂಪ್ರಾಪ್ಯತೇ ಭವ್ಯಂ ತತ್ಸಮಸ್ತಂ ಕೃಪಾನ್ವಿತಃ | ಶ್ರೀಪರ್ವತೇಶ್ವರಃ ಪ್ರಾದಾ ತ್ವರಂ ಸಂತುಷ್ಟಮಾನಸಃ ||೪೭೪||ಇತಿ ತ್ವಂ ಪಂಡಿತೇಂದ್ರಾಯ ಕಥ ಯಸ್ವಾತಿಭಕ್ತಿತಃ | ಇತ್ಯುಕ್ತ್ವಾ ತತ್ರ ಸರ್ವಜ್ಞೋ ಪಪದೋ ಮಲ್ಲಿಕಾರ್ಜು ನಃ ||೪೭೫|| ದೋನಮಾರ್ಯಾಯ ಕೃಪಯಾ ತದೈವಾಂತರಧೀಯತ | ದೋನ ಮಾರ್ಯೋಽಥ ಹರ್ಷಾಶ್ರುಸಿಕ್ತವಕ್ಷಸ್ಥಲೋಽಭವತ್ ||೪೭೬|| ಸರ್ವಜ್ಞೋ ಪಪದೋ ಮಲ್ಲಿಕಾರ್ಜುನ ಶ್ರೀಗಿರೀಶ್ವರಃ | ಕೃಪಯೋಪಾದಿಶ ನ್ಮಹ್ಯಂ ಸರ್ವಂ ಶ್ರೀಗಿರಿವೈಭವಂ ||೪೭೭|| ಇತಿಬ್ರುವ ನ್ಪರ್ವತೇಶಂ ಮಲ್ಲಿಕಾರ್ಜುನ ಮೀಶ್ವರಂ | ಯಥಾಕಾಂಕ್ಷಂ ವರ್ಣಯಿತ್ವಾ ಸಮುದ್ಯದ್ಭಕ್ತಿವೈಭವಃ ||೪೭೮|| ಕೃಪಾಮಹಿಮ್ನಾ ಭವ್ಯೇನ ಮದ್ಗುರೋ ರದ್ಯ ಭೂಯಸಾ | ತ್ವತ್ಪಾದಾಂ ಭೋಜಯುಗಳ ಮಪಶ್ಯಂ ಭಕ್ತವತ್ಸಲ | ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ

---

ತೀರ್ಥಗಳೆಲ್ಲಾ ಇರುವುದನ್ನೂ, ನಾನಾ ಲಿಂಗಮೂರ್ತಿಗಳಿರುವಿಕೆಯನ್ನೂ, ಆ ಪರ್ವತದ ಅದ್ಭುತಸ್ವರೂಪವನ್ನೂ ತೋರಿಸಿ ||೪೭೨|| ನೀನು ಈಗ ನೋಡಿದುದನ್ನೆಲ್ಲಾ ಹಾಗೆಯೇ ಪಂಡಿತಾರಾಧ್ಯನಿಗೆ ತಿಳಿಯಿಸು. ಮತ್ತು "ನೀನು ಈ ಶ್ರೀ ಶೈಲವನ್ನೆಲ್ಲಾ ಕಣ್ಣುಗಳಿಗೆ ತೃಪ್ತಿಯಾಗುವವರೆಗೂ ಚೆನ್ನಾಗಿ ನೋಡಿದೆಯಾದಕಾರಣ, ಈ ಗಿರಿಯನ್ನು ಪ್ರದಕ್ಷಿಣ ಮಾಡಿದ ಫಲವು ನಿನಗೆ ಲಭಿಸಿತು. ಶ್ರೀಗಿರಿಯನ್ನು ಅಸಂಖ್ಯಾತಕೋಟಿ ಬಾರಿ ಪ್ರದಕ್ಷಿಣೆ ಮಾಡಿದರೆ ಎಷ್ಟು ಫಲವುಂಟಾಗುವುದೋ ಅಷ್ಟನ್ನೆಲ್ಲಾ ಶ್ರೀ ಮಲ್ಲಿಕಾರ್ಜುನಸ್ವಾಮಿಯು ದಯೆಯಿಂದ ನಿನಗೆ ಅನುಗ್ರಹಿಸಿದನು." ||೪೭೪|| ಎಂಬುದಾಗಿ ನೀನು ಪಂಡಿತಾರಾಧ್ಯನೊಡನೆ ಭಕ್ತಿಯಿಂದ ಬಿನ್ನಯಿಸು" ಎಂಬುದಾಗಿ ಆ ಸರ್ವಜ್ಞ ಮಲ್ಲಿಕಾರ್ಜುನಸ್ವಾಮಿಯು ಸಂತೋಷದಿಂದ ದೋನಮಾರ್ಯನಿಗೆ ಅಪ್ಪಣೆಕೊಡಿಸಿ ಆ ಕೂಡಲೇ ಅಂತರ್ಧಾನಗೊಂಡನು. ಬಳಿಕ ದೋನಮಾರ್ಯನು ಕಣ್ಣಿಂದ ಸುರಿದ ಆನಂದಬಾಷ್ಪದಿಂದ ತನ್ನ ಎದೆಯನ್ನೆಲ್ಲಾ ತೊಯ್ಯಿಸಿಕೊಂಡವನಾದನು. ||೪೭೬|| ಮತ್ತು "ಶ್ರೀ ಶೈಲಾಧಿಪತಿಯಾದ ಸರ್ವಜ್ಞ ಮಲ್ಲಿಕಾರ್ಜುನಸ್ವಾಮಿಯು ನನ್ನ ಮೇಲೆ ಕೃಪೆಯಿಟ್ಟು ಶ್ರೀ ಶೈಲದ ಮಹತ್ತ್ವವನ್ನೆಲ್ಲಾ ನಿರೂಪಿಸಿದನು" ಎಂದು ತನ್ನೊಳಗೆ ತಾನು ಹೇಳಿಕೊಂಡು, ಆ ಸ್ವಾಮಿಯನ್ನು ಅನಂತವಿಧವಾಗಿ ಭಕ್ತಿಯಿಂದ ತನ್ನ ಇಷ್ಟಬಂದಂತೆ ವರ್ಣಿಸುತ್ತ, "ಎಲೈ ಭಕ್ತವತ್ಸಲ ಸ್ವಾಮಿಯೇ! ನನ್ನ ಗುರುವಿನ ಮಹಾ ಕೃಪೆಯಿಂದ ಈಗ

ಜೀವಿತೋಽಸ್ಮಿ ಮಹೀತಲೇ । ದಿಗ್ದ್ವಾರೈಶ್ಚ ವಿದಿಗ್ದ್ವಾರೈ ಸ್ತನ್ಮಾರ್ಗೈ ರಖಿಲೈರಪಿ ॥೪೮೧॥ ದಿಗ್ವಿದಿಙ್ಮಧ್ಯಮದ್ವಾರೈ ಸ್ತನ್ಮಾರ್ಗೈಶ್ಚ ತದಂತರೈಃ । ಗಿರಿಸ್ಥಲಜಲಾರಣ್ಯದುರ್ಗೈ ಸ್ಸಾಕಮನೇಕಶಃ ॥೪೮೨॥ ಶ್ರೀಪರ್ವತಸ್ಥಿತಾಸ್ಸರ್ವಾ ಲಿಂಗಕೋಟೀ ರ್ವ್ಯಲೋಕಯಂ ।ಯಾಥಾರ್ಥ್ಯರುಚಿರಸ್ಸ್ವಪ್ನ ಸ್ಸಂಜಾತೋಽಯಂ ಮಮಾಧುನಾ ॥೪೮೩॥ ಪ್ರಾಪ್ತಂಹಿ ಸರ್ವಂ ಶ್ರೀಶೈಲಪ್ರದಕ್ಷಿಣಫಲಂ ಮಯಾ । ತತ್ಕೃತಾರ್ಥೋಽಹಮೇವಾತ್ರ ಭುವೀತಿ ಪ್ರವದನ್ಮುದಾ ॥೪೮೪॥ ಸಾಷ್ಟಾಂಗಂ ಪ್ರಣಿಪತ್ಯೋರ್ವ್ಯಾಂ ಸ್ವಪ್ನಮೇವ ಸ್ಮರನ್ಮುಹುಃ । ಅವರುಹ್ಯ ಶ್ರೀಗಿರೀಂದ್ರಾ ದ್ವೆಲ್ಲಟೂರು ಮುಪಾಗಮತ್ ॥೪೮೫॥

ಇತ್ಯಸಂಖ್ಯಾತಮಹಾಮಾಹೇಶ್ವರದಿವ್ಯಶ್ರೀಪಾದಪದ್ಮನಿರಂತರಭಾವನಾಪರಿ
ರಂಜಿತಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲಭಸ್ಮೀಕೃತಾ
ಖಿಲಭವಬೀಜಸ್ಯ ಶ್ರೀವೀರಶೈವಮತಾಚಾರ್ಯಗುರುರಾಜಸ್ಯಕೃತೌ
ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾಧ್ಯ
ಚರಿತ್ರೇ ಪರ್ವತಪ್ರಕರಣೇ ದೋನಮಾರ್ಯಾಯ
ಸರ್ವಜ್ಞಮಲ್ಲಿಕಾರ್ಜುನದೇವೇನ ಸ್ವಪ್ನೇ

---

ನಿನ್ನ ಪಾದಕಮಲ ದರ್ಶನವನ್ನು ಮಾಡಿದೆ. ನಾನು ಈಗ ಭೂಮಿಯಲ್ಲಿ ಧನ್ಯನಾದೆ, ಕೃತಾರ್ಥನಾದೆ, ಈಗ ನಾನು ಬದುಕಿದೆ. ಶ್ರೀಗಿರಿಯ ದಿಕ್ಕು ವಿದಿಕ್ಕುಗಳ ದ್ವಾರಗಳು ಅವರ ನಾನಾ ಮಾರ್ಗಗಳು ದಿಗ್ವಿದಿಕ್ಕುಗಳ ಮಧ್ಯದಲ್ಲಿರುವ ದ್ವಾರಗಳು, ಅವುಗಳ ಒಳದಾರಿಗಳು, ಗಿರಿ ನದೀ ಜಲಾರಣ್ಯ ಪ್ರದೇಶಗಳು ಇವುಗಳೆಲ್ಲವನ್ನೂ ಮತ್ತು ಶ್ರೀ ಪರ್ವತದ ಎಲ್ಲಾ ಕಡೆಯಲ್ಲೂ ಇರುವ ಕೋಟ್ಯಂತರ ಲಿಂಗಗಳನ್ನೂ ಸಹ ನಾನು ದರ್ಶನಮಾಡಿದೆನು. ನನಗೆ ಶ್ರೀ ಶೈಲ ಪ್ರದಕ್ಷಿಣೆಯ ಫಲವು ಲಭಿಸಿರುವುದಾದಕಾರಣ ನನಗೆ ಲಭಿಸಿದ ಈ ಸ್ವಪ್ನವು ಸ್ವಪ್ನವಾಗಿರದೆ ನಿಜವಾಗಿ ಸಂಭವಿಸಿದ ಸ್ಥಿತಿಯೇ ಆಗಿರುವುದು. ಅದುಕಾರಣ, ಈ ಭೂತಲದಲ್ಲಿ ನಾನೇ ಧನ್ಯನು,, ಎಂಬುದಾಗಿ ಸಂತೋಷದಿಂದ ಹೇಳಿ, ಶ್ರೀಗಿರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ, ಬಾರಿಬಾರಿಗೂ ತನ್ನ ಸ್ವಪ್ನವನ್ನು ಸ್ಮರಿಸಿಕೊಳ್ಳುತ್ತ, ಶ್ರೀ ಶೈಲದಿಂದ ಇಳಿದು, ತನ್ನ ಗುರು ಪಂಡಿತಾರಾಧ್ಯರಿರುವ ವೆಲ್ಲಟೂರು ಪುರಕ್ಕೆ ಬಂದನು. ॥೪೮೫॥

ಎಂಬಲ್ಲಿಗೆ ಶ್ರೀಗುರುರಾಜ ಕವಿಕೃತ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಕ್ಕೆ
ಎನ್. ಆರ್. ಕರಿಬಸವಶಾಸ್ತ್ರಿಕೃತವಾದ "ಭಾವಮಂಜರಿ,, ಎಂಬ ಕನ್ನಡ
ಟಿಪ್ಪಣದಲ್ಲಿ ಪರ್ವತಪ್ರಕರಣದೊಳಗೆ ಶ್ರೀ ಮಲ್ಲಿಕಾರ್ಜುನಸ್ವಾಮಿಯು
ದೋನಮಾರ್ಯನಿಗೆ ಸ್ವಪ್ನದಲ್ಲಿ ಶ್ರೀ ಶೈಲದ ವೈಭವವನ್ನು

ಶ್ರೀಗಿರಿವೈಭವನಿರೂಪಣಕಥನಂನಾಮ
ಷೋಡಶೋಽಧ್ಯಾಯಃ.

---

## ಅಥ ಸಪ್ತದಶೋಽಧ್ಯಾಯಃ.

### (ಶ್ರೀಪಂಡಿತಾರಾಧ್ಯ ಶಿವೈಕ್ಯಕಥನಂ)

ಅನಂತರಂ ಶುದ್ಧಚಿತ್ತೋ ದೋನಮಾರ್ಯಃ ಪ್ರಮೋದವಾನ್ | ಶ್ರೀಗುರುಂ ಪಂಡಿತಾರಾಧ್ಯಂ ಸ್ತುತ್ವಾ ನತ್ವಾಚ ಭಕ್ತಿತಃ ||೧|| ಕಥಯಾಮಾಸ ವೃತ್ತಾಂತ ಮಶೇಷಂ ಶುಭ ಮಾತ್ಮನಃ | ಆಕರ್ಣ್ಯ ಪಂಡಿತಾರಾಧ್ಯೋ ದೋನಮಾರ್ಯಸ್ಯ ಭಾಷಿತಂ ||೨|| ಪ್ರಮೋದಪೂರ್ಣಹೃದಯೋ ಬಭಾಷೇ ಭಾರತೀಮಿಮಾಂ | ಅಹಮೇವ ಕೃತಾರ್ಥೋಽಸ್ಯಾಂ ಭುವಿ ಶ್ರೀಪರ್ವತೇಶ್ವರಃ ||೩|| ಮಾಮಸ್ಮರ ಚ್ಛಿಷ್ಯವರ್ಯೇ ವಿದ್ಯಮಾನೇ ಭವಾದೃಶೇ | ಇತಿ ಸ್ವಕರುಣಾಪಾಂಗವೀಕ್ಷಣಾಮೃತವಾರಿಧೌ ||೪|| ನಿಮಜ್ಜ್ಯ ದೋನಮಾರ್ಯಂ ತಂ ಸದ್ಭಕ್ತಿವಿನಯಾನ್ವಿತಂ | ಸಮಾರೂಢುಂ ಲಿಂಗಮಯಂ ಶ್ರೀಶೈಲಂ ನಹಿ ಯುಜ್ಯತೇ ||೫|| ಅಗತ್ವಾ ತದ್ಗಿರಿವರ ಮಪಿ ಸ್ಥಾತು ಮಸಾಂಪ್ರತಂ | ಆರೋಹಣೇ ಕೃತೇಽಙ್ಘ್ರಿ

---

ನಿರೂಪಿಸಿದ ಕಥೆಯನ್ನು ವರ್ಣಿಸುವ ೧೬ನೆ
ಅಧ್ಯಾಯವು ಮುಗಿದುದು.

---

## ೧೭ನೆ ಅಧ್ಯಾಯವು

### ಪಂಡಿತಾರಾಧ್ಯರು ಶಿವೈಕ್ಯರಾದ ಕಥೆ.

ಬಳಿಕ ನಿರ್ಮಲಮನಸ್ಕನಾದ ದೋನಮಾರ್ಯನು ಸಂತೋಷಗೊಂಡು ಶ್ರೀ ಪಂಡಿತಾರಾಧ್ಯರ ಬಳಿಗೆ ಹೋಗಿ ಭಕ್ತಿಯಿಂದ ನಮಸ್ಕರಿಸಿ ಕೊಂಡಾಡಿ, ತಾನು ಶ್ರೀ ಶೈಲಕ್ಕೆ ಹೊರಟಾಗಿನಿಂದ ನಡೆದ ಯಾವದ್ವೃತ್ತಾಂತವನ್ನೂ ತನಗೆ ಉಂಟಾದ ಶ್ರೇಯಸ್ಸನ್ನೂ ಅರಿಕೆಮಾಡಿದನು. ಅದನ್ನೆಲ್ಲಾ ಪಂಡಿತಾರಾಧ್ಯಸ್ವಾಮಿಯು ಕೇಳಿ, ಆನಂದ ವಿಕಸಿತ ಹೃದಯನಾಗಿ, ಅಯ್ಯಾ! ನಿನ್ನಂಥ ಸಚ್ಛಿಷ್ಯನಿದ್ದುದರಿಂದಲೇ ಶ್ರೀಗಿರಿ ಮಲ್ಲಿಕಾರ್ಜುನಸ್ವಾಮಿಯು ನನ್ನನ್ನು ಸ್ಮರಿಸಿದನು. ನಾನೇ ಭೂತಲದಲ್ಲಿ ಧನ್ಯನು! ಎಂದು ಹೇಳಿ, ತನ್ನ ಕರುಣಾಕಟಾಕ್ಷವೀಕ್ಷಣಾಮೃತ ಸಮುದ್ರದಲ್ಲಿ ಸದ್ಭಕ್ತಿವಿನಮ್ರನಾಗಿರುವ ದೋನಮಾರ್ಯನನ್ನು ಮುಳುಗಿಸಿ,—ಶ್ರೀಗಿರಿ

ಭ್ಯಾಂ ಸಂಸ್ಪರ್ಶೋ ಜಾಯತೇ ಯತಃ ||೬|| ನಚಾವಯವಿನಾ ಗಂತುಂ ಯು ಜ್ಯತೇ ಶ್ರೀನಗೋತ್ತಮಂ | ವಿನಾಪ್ಯವಯವೈರ್ಗಂತುಂ ಸುತರಾಂ ನೈವಶಕ್ಯ ತೇ ||೭|| ತತ್ಕಥಂವಾ ಶಿವಶಿವ ವಾಂಛಿತಂ ಮಮ ಸಂಭವೇತ್ | ಮನಃಪ್ರಾಣ ಶರೀರಾಣಿ ಸಂಯೋಜ್ಯ ಪರಯಾ ಮುದಾ ||೮|| ಶ್ರೀಮಲ್ಲಿಕಾರ್ಜುನಂ ದೇವಂ ಸಾಮರಸ್ಯಂ ಕಥಂ ಭವೇತ್ | ಇತಿ ಸ್ವಾಂತೇ ಸಂವಿಚಾರ್ಯ ನಿಶ್ಚಿತ್ಯ ತದನಂತ ರಂ ||೯|| ತ್ವತ್ಸೇವಾಯಾಮೇವ ತನು ರುಪಕ್ಷೀಣಾಽಭವಚ್ಛಿವ | ತ್ವದ್ಧ್ಯಾವನಾ ಮಗ್ನಮಭೂ ನ್ಮಾನಸಂಚ ಮಹೇಶ್ವರ ||೧೦|| ಸ್ಥಾನಂ ಕಿಮನ್ಯತ್ಪ್ರಾಣಾನಾಂ ತ್ವತ್ಪಾದಾಬ್ಜಯುಗಂ ವಿನಾ | ಊರ್ಜಿತಾನಂದಯುಕ್ತಾನಾಂ ಮಲ್ಲಿಕಾರ್ಜುನ ಪಂಡಿತಃ ||೧೧|| ಇತಿನಾಮ್ನಾ ಶ್ರೀನಗೇಽತ್ರ ಸದಾ ಪ್ರಮಥಸಂಹತೌ | ಅಹಂ ತ್ವದಾಜ್ಞಯಾ ಸ್ಥಾತುಂ ವಾಂಛಾಮ್ಯೇತತ್ಕುರುಷ್ವ ಮೇ ||೧೨|| ದೇವ ಸಂ ಸಾರದುಃಖಾಬ್ಧಿಪರಿಮುಕ್ತಂ ವಿಧಾಯ ಮಾಂ | ಸರ್ವಪ್ರಮಥಸಂದೋಹಪರಿ ಚ್ಛನ್ನಪುರಸ್ಸರಂ ||೧೩|| ಮದೀಯವಿವ ನಾನ್ಯೋಸಾ ವಿತ್ಯುಕ್ತ್ವಾ ಕರುಣಾ ನ್ವಿತಃ | ಗಣಮಧ್ಯೇ ಸ್ಥಾಪಯೇಶ ಹರ ಮುಗ್ಧೇಂದುಶೇಖರ ||೧೪|| ಬಾಲ್ಯ ಪ್ರಭೃತ್ಯಹಂ ಕ್ಷುದ್ರದೇವಾ ನ್ಸ್ವಪ್ನೇಪಿ ವೇದ್ಮಿ ಕಂ | ಭವಂತಂ ಶರಣಂ ಪ್ರಾ ಪ್ಯ ಭವಭೀತ್ಯಾ ಪುರೈವಹಿ ||೧೫|| ಸಕಲತ್ರಾತ್ಮಜಸ್ತುಭ್ಯಂ ದತ್ತದಾಸತ್ವಪತ್ರಿ

---

ಯು ಲಿಂಗಮಯವಾಗಿರುವುದರಿಂದ ಅದನ್ನು ಮೆಟ್ಟಿ ಹೋದರೆ ಕಾಲಿನಿಂದ ಸೋಂಕಿದಂತೆ ಆಗುವುದಾದಕಾರಣ, ಅದನ್ನೇರುವುದು ಉಚಿತವಲ್ಲ. ಮಹೋತ್ಕೃಷ್ಟವಾದ ಆ ಶ್ರೀಗಿರಿಗೆ ಹೋಗದೆ ಇರತಕ್ಕುದೂ ಸರಿಯಲ್ಲ. ದೇಹವನ್ನು ಧರಿಸಿರತಕ್ಕವನು ಅದರಮೇಲೆ ನಡೆದುಹೋ ಗುವುದು ಯುಕ್ತವಲ್ಲ. ಅವಯವಗಳಿಲ್ಲದೆ ನಡೆದುಹೋಗುವುದೂ ಸಾಧ್ಯವಲ್ಲ. ||೭|| ಹೀಗಿ ರುವಲ್ಲಿ ಶಿವಶಿವಾ! ನನ್ನ ಇಷ್ಟಾರ್ಥವು ಹೇಗೆ ನೆರವೇರಬೇಕು? ಅತ್ಯಂತ ಸಂತೋಷದಿಂದ ನನ್ನ ದೇಹ ಪ್ರಾಣ ಮನಸ್ಸುಗಳನ್ನೆಲ್ಲಾ ಏಕೀಕರಿಸಿ, ಆ ಮಲ್ಲಿಕಾರ್ಜುನ ಮೂರ್ತಿಯಲ್ಲಿ ಬೆರೆಯಿಸುವುದು ಹೇಗೆ? ಎಂದು ತನ್ನ ಮನಸ್ಸಿನಲ್ಲೇ ಪಂಡಿತಾರಾಧ್ಯನು ವಿಚಾರಮಾಡಿ, ಕಡೆಗೆ ಏನೋ ಒಂದನ್ನು ನಿಶ್ಚಯಿಸಿಕೊಂಡು, ಬಳಿಕ—"ಎಲೈ ಶಿವನೆ! ನಿನ್ನ ಸೇವೆಯಲ್ಲೇ ನನ್ನದೇಹವು ಸವೆದುಹೋಯಿತು. ನನ್ನ ಮನಸ್ಸು ನಿನ್ನ ಧ್ಯಾನದಲ್ಲೇ ಲೀನವಾಯಿತು. ಪರಮಾನಂದ ಪೂ ರ್ಣಗಳಾಗಿರುವ ಈ ಪ್ರಾಣಗಳಿಗೆ ನಿನ್ನ ಪಾದಕಮಲಗಳ ಹೊರತು ಇನ್ನಾವ ಸ್ಥಾನವು ಆಶ್ರಯ ವಾಗಿದ್ದೀತು? ಆದುಕಾರಣ, ಎಲೈ ಸ್ವಾಮಿಯೆ! ನಾನು ಈ ಶ್ರೀಗಿರಿಯಲ್ಲಿಯೇ ನಿನ್ನಾಜ್ಞೆ ಯಿಂದ ಪ್ರಮಥಸಮೂಹ ಮಧ್ಯದಲ್ಲಿ ಮಲ್ಲಿಕಾರ್ಜುನಪಂಡಿತನೆಂಬ ಹೆಸರಿನಿಂದ ಸದಾ ಇರುವು ದಕ್ಕೆ ಅಪೇಕ್ಷಿಸುತ್ತೇನೆ. ಈ ವರವನ್ನು ನನಗೆ ಅನುಗ್ರಹಿಸು. ಎಲೈ ಚಂದ್ರಶೇಖರ ಸ್ವಾಮಿಯೆ! ನನ್ನನ್ನು ಈ ಘೋರ ಸಂಸಾರ ದುಃಖಸಮುದ್ರದಿಂದ ಉದ್ಧರಿಸಿ, ನನಗೆ ನಿನ್ನ ಸಭೆಯಲ್ಲಿರುವ

ಕಃ | ಅಭೂವಂ ಗೃಹದಾಸೋಽಹಂ ತತ್ಸರ್ವೇಶ ಸವೇತ್ಸಿ ಕಿಂ ||೧೬|| ನೈತ
ಸ್ಮಹೋಗ್ರಸಂಸಾರದುಃಖಂ ಸೋಢು ಮಹಂಕ್ಷಮಃ | ಮದಾಗಮನಕಾ
ರ್ಯಾಣಿ ವಿಹಿತಾನಿ ತ್ವದಾಜ್ಞಯಾ ||೧೭|| ಭಕ್ತಿ ಸ್ಸ್ಥಿರೀಕೃತಾ ಭೂಮೌ ಭವತ
ಶ್ಶ್ರೀಗಿರೀಶ್ವರ | ಬಸವೇಶೋಪಿ ತೇ ಗರ್ಭ ಮವಿಶದ್ಭಕ್ತಿವರ್ಧನಃ ||೧೮||
ತಿಷ್ಠಾಮ್ಯಹಂಕಥಂ ತೇನ ಶೂನ್ಯೇಽಸ್ಮಿನ್ಧರಣೀತಲೇ | ಸಮಾಲಂಬನಭೂ
ತಃಕೋ ಭಕ್ತೇರುರ್ವ್ಯಾ ಮಿತಃಪರಂ ||೧೯|| ಮತ್ವಾ ಭವಾನಿತಿ ಸ್ವಾಂತೇ
ಜಂಗಮಾ ಸಖಿಲಾನ್ಪೃಥಂ | ತದಭೀಷ್ಟಾನಿ ಸರ್ವಾಣಿ ದತ್ವಾ ವಸ್ತೂನಿ ಸಾದ
ರಂ ||೨೦|| ಅವಿಶ್ವಾಸವತಾಂ ದೃಷ್ಟಪ್ರತ್ಯಯಾನ್ ಸಂಪ್ರದರ್ಶ್ಯಚ | ನಾಶಂ
ನೀತ್ವಾ ಬಿಜ್ಜಲಸ್ಯ ಗರ್ವಂ ಪ್ರೋತ್ಸಾರ್ಯ ಸಂಶಯಂ ||೨೧|| ನಿರಸ್ಯ ತಾರ್ಕಿಕಾ
ನ್ವೀರಭಕ್ತಿಮಾರ್ಗಸ್ಸವೈದಿಕಃ | ಧರಿತ್ರ್ಯಾಂ ಜಂಗಮೋ ಲಿಂಗಂ ಪ್ರಸಾದೋ
ಭೋಗಮೋಕ್ಷದಃ ||೨೨|| ಶಿವಏವಹಿ ಸರ್ವೇಷಾಂ ನಾಯಕೋ ಜಗತಾಮಿ
ತಿ | ಯಥಾ ಧರಣ್ಯಾಂ ಮನ್ಯಂತೇ ಜನಾವಿಶ್ವಾಸಪೂರ್ವಕಂ ||೨೩|| ತಥಾ

---

ಸಕಲ ಪ್ರಮಥರ ಪರಿಚಯವನ್ನು ಮಾಡಿಕೊಟ್ಟು,' ನನ್ನ ಮೇಲೆ ಕರುಣದಿಂದ ಇವನು ನನ್ನವನೇ
ಎಂದು ನೀನು ಅವರೊಡನೆ ಹೇಳಿ, ಆ ಶಿವಗಣರ ಮಧ್ಯದಲ್ಲಿ ನನ್ನನ್ನು ಕರೆದು ಕುಳ್ಳಿರಿಸು.
||೧೫|| ನಾನು ಬಾಲ್ಯದಿಂದಲೂ ನಿನ್ನ ಹೊರತು ಮತ್ತಾವ ನೀಚದೈವಗಳನ್ನೂ ಸ್ವಪ್ನದಲ್ಲೂ
ಕಂಡವನಲ್ಲ. ಸಂಸಾರಭೀತಿಯಿಂದ ಮೊದಲೇ ನಿನ್ನನ್ನು ಮರೆಹೊಕ್ಕು ನಾನೂ ನನ್ನ ಹೆಂಡತಿ
ಮಕ್ಕಳುಗಳು ಸಹ ನಿನಗೆ ದಾಸರಾಗಿ ಸೇರಿ, ಆ ಅರ್ಥಕ್ಕೆ ಪತ್ರವನ್ನು ಬರೆದು ಒಪ್ಪಿಸಿಬಿಟ್ಟಿ
ರುವೆನು. ಅದುಕಾರಣ ನಾನು ನಿನ್ನ ಮನೆಯ ಜೀತಗಾರನಾಗಿರುವೆನು. ಅದನ್ನೆಲ್ಲಾ ಸರ್ವ
ಜ್ಞನಾದ ನೀನು ಅರಿಯೆಯಾ? ||೧೬|| ಈ ಮಹಾ ಘೋರ ಸಂಸಾರ ದುಃಖವನ್ನು ನಾನು
ಸೈರಿಸಲಾರೆನು. ನಿನ್ನಪ್ಪಣೆ ಮೇರೆಗೆ ಭೂಮಿಗೆ ನಾನು ಬಂದ ಕೆಲಸಗಳು ನೆರವೇರಿದುವು.
ಎಲೈ ಶ್ರೀಗಿರಿನಾಥನೆ! ಭೂತಲದಲ್ಲಿ ನಿನ್ನ ಭಕ್ತಿಯು ಸ್ಥಿರಗೊಳಿಸಲ್ಪಟ್ಟಿತು. ಭಕ್ತಿವರ್ಧಕ
ನಾದ ಬಸವೇಶ್ವರನು ಕೂಡ ನಿನ್ನ ಗರ್ಭವನ್ನು ಹೊಕ್ಕನು. ಅವನಿಲ್ಲದ ಈ ಭೂತಲದಲ್ಲಿ
ನಾನು ಹೇಗಿರಲಿ? ಇನ್ನುಮೇಲೆ ಭೂಮಿಯಲ್ಲಿ ಶಿವಭಕ್ತಿಗೆ ಆಶ್ರಯರಾರು? ನೀನೇ ಆಶ್ರಯ
ನೆಂದು ಆ ಬಸವೇಶ್ವರನು ನಿರ್ಧರಿಸಿಕೊಂಡು, ಸಕಲ ಜಂಗಮರಿಗೂ ಬೇಡಿದ ಪದಾರ್ಥಗಳನ್ನಿ
ತ್ತು, ||೨೦|| ಶಿವಭಕ್ತಿಯಲ್ಲಿ ನಂಬುಗೆ ಯಿಲ್ಲದಿದ್ದವರಿಗೆಲ್ಲಾ ಪ್ರತ್ಯಕ್ಷೋದಾಹರಣೆಗಳನ್ನು
ತೋರಿಸಿ, ಬಿಜ್ಜಳನ ಗರ್ವವನ್ನು ಅಳಿಸಿ, ಅವನ ಸಂಶಯವನ್ನು ತೊಲಗಿಸಿ, ವೇದೋಕ್ತಾಚಾ
ರಸಂಪನ್ನ ವೀರಭಕ್ತಿ ಮಾರ್ಗಗಾಮಿಯಾದ ಆ ಬಸವೇಶನು ಪರವಾದಿಗಳನ್ನು ಜಯಿಸಿ,
"ಭೂತಲದಲ್ಲಿ ಜಂಗಮವೇ ಲಿಂಗವು. ಪ್ರಸಾದವೇ ಭುಕ್ತಿಮುಕ್ತಿಪ್ರದವು. ಶಿವನೇ ಸಕಲ ಜಗ
ತ್ತುಗಳಿಗೂ ಪತಿಯು" ಎಂದು ಭೂತಲದಲ್ಲಿ ಸಕಲ ಜನರೂ ತಿಳಿದು ನಂಬಲು ಸಾಧಕವಾಗು
ವಂತೆ ಎಲ್ಲರೂ ನೋಡುತ್ತಿರುವಹಾಗೆಯೇ ವಿಷವನ್ನು ಅಮೃತವನ್ನಾಗಿ ಮಾಡಿ ಕುಡಿದು,

ಪಶ್ಯತ್ಸು ಸರ್ವೇಷು ವಿಧಾಯ ಗರಳಂ ಸುಧಾಂ| ನಿಪೀಯಾಸದೃಶಾ ಭಕ್ತಾ ಇತಿ
ವಿಸ್ತಾರ್ಯ ಸರ್ವತಃ ||೨೪|| ಭಂಜಯಿತ್ವಾಽನ್ಯಸಮಯಾನ್ಪ್ರಾಪ್ಯ ಕೀರ್ತಿಂ ಸಮು
ಚ್ಛ್ರಯಾಂ | ಜಗತ್ಪವಿತ್ರಿತಂ ಕೃತ್ವಾ ಸ್ಥಾಪಯಿತ್ವಾ ಭವನ್ಮತಂ ||೨೫|| ವಿಸೃಜ್ಯ
ಘೋರಸಂಸಾರಂ ಭವಂತಂ ಪರಿತೋಷ್ಯ ಚ | ಭಕ್ತಿಂ ಪ್ರಮಥವರ್ಯಾಣಾಂ ಗಣ
ನಾಪತ್ರಿಕಾಚಯೇ ||೨೬|| ಲೇಖಯಿತ್ವಾ ತ್ವದೀಯಾಜ್ಞಾಂ ಪರಿಪಾಲ್ಯ ಯ
ಥೋಚಿತಂ | ಬಸವೇಶೋ ವಿಲೀನೋಽಭೂ ತ್ವಯ್ಯೇವ ಶ್ರೀಮಹೇಶ್ವರ ||೨೭
ತದಂಘ್ರಿಪದ್ಮಯುಗಳಂ ಸಂಸ್ಥಾಪ್ಯ ನಿಜಮಸ್ತಕೇ | ಸ್ಥಾತುಂ ಸಂಪ್ರಾರ್ಥಯೇ
ದೇವ ಶರಣಾಗತವತ್ಸಲ ||೨೮|| ಯಾಚೇ ತ್ವಾಂ ಗಂತು ಮನಿಶಂ ವದಂ ಛಿವಶಿ
ವೇತಿ ಚ | ಕ್ರೂರಂ ವ್ಯಾಘ್ರಮಿವಾಯಾಂತಂ ಭವಂ ಪ್ರೋತ್ಸಾರ್ಯ ಸತ್ವರಂ ||
ಛಿತ್ವಾ ಭವಲತಾಂ ನಿರ್ಭೀ ರೇಹಿ ಮಾಮಿತ್ಯುದೀರ್ಯ ಚ | ಸ್ಥಿತಮಾವೃತ್ಯ ಮ
ತ್ಕಂಠಂ ಜನ್ಮೋಗ್ರಾಹಿಂ ವಿದಾರ್ಯ ಚ ||೩೦|| ಸ್ಪರ್ಶೇಕ್ಷಣಶ್ರುತಿಸಮಾಘ್ರಾಣ
ನಾಸ್ವಾದನೇಚ್ಛಯಾ | ಪ್ರಧಾವಚ್ಚಿತ್ತ ಮನಿಶಂ ತ್ವಾಂ ಪ್ರಾಪಯ ಸಸತ್ವರಂ||
ಕ್ಷಾಳನೇನಾಛಾದನೇನ ಭೋಜನೇನೈವ ಚಾನ್ವಹಂ | ದೇಹಾರ್ಥಮೇವ ಕಾ
ಲೋಽಗಾತ್ ಕ್ಷಮಿತ್ವಾ ತನ್ಮಮಾಖಿಲಂ ||೩೧|| ನಿರೀಕ್ಷ್ಯಾಗ್ನೌ ನಿಪತತ

---

ಲೋಕದಲ್ಲಿ ಶಿವಭಕ್ತರು ಎಣೆಯಿಲ್ಲದವರು ಎಂಬ ಖ್ಯಾತಿಯನ್ನು ಸರ್ವತ್ರ ಹರಡಿ, ||೨೪||
ಪರಸಮಯದವರನ್ನು ಭಂಜಿಸಿ, ಉನ್ನತ ಕೀರ್ತಿಯನ್ನು ಪಡೆದು, ನಿನ್ನ ಮತವನ್ನು ಸುಪ್ರತಿ
ಷ್ಠೆಗೊಳಿಸಿ, ಜಗತ್ತನ್ನು ಪಾವನವನ್ನಾಗಿ ಮಾಡಿ, ಘೋರ ಸಂಸಾರವನ್ನು ತ್ಯಜಿಸಿ, ನಿನ್ನನ್ನು
ಸಂತೋಷಪಡಿಸಿ, ಪ್ರಮಥ ಶ್ರೇಷ್ಠರ ಭಕ್ತಿ ಮಹತ್ತ್ವವನ್ನೆಲ್ಲಾ ಲೆಕ್ಕದ ಕಡಿತದಲ್ಲಿ ಬರೆಯಿಸಿ,
ನಿನ್ನಪ್ಪಣೆಯನ್ನು ಯಥೋಚಿತವಾಗಿ ನೆರವೇರಿಸಿ, ನಿನ್ನಲ್ಲೇ ಆ ಬಸವೇಶ್ವರನು ಐಕ್ಯನಾದನು.
||೨೭|| ಶರಣಾಗತ ಪರಿಪಾಲಕನಾದ ಎಲೈ ಮಹೇಶ್ವರನೆ! ನಾನು ಆ ಬಸವೇಶನ ಪಾದಕ
ಮಲ ಯುಗ್ಮವನ್ನು ತಲೆಯಮೇಲೆ ಹೊತ್ತುಕೊಂಡಿರಬೇಕೆಂದು ಅಪೇಕ್ಷಿಸುತ್ತಿದ್ದೇನೆ. ಶಿವ
ಶಿವಾ ಎಂದು ಸದಾ ಉಚ್ಚರಿಸುತ್ತ ನಿನ್ನಲ್ಲಿ ಐಕ್ಯವಾಗಬೇಕೆಂದು ಪ್ರಾರ್ಥಿಸುತ್ತೇನೆ.
ಎಲೈ ಸ್ವಾಮಿಯೆ! ಕ್ರೂರವಾದ ಹುಲಿಯಂತೆ ಅಟ್ಟಿಕೊಂಡು ಬರುತ್ತಿರುವ ಜನನ ಮರಣಾ
ತ್ಮಕ ಸಂಸಾರವನ್ನು ಬೇಗನೆ ಕಡೆ ತೊಲಗಿಸಿ, ಭವಪಾಶವೆಂಬ ಬಳ್ಳಿಯನ್ನು ಕಡಿದಿಕ್ಕಿ, "ಮಗನೇ
ಭಯಪಡದೆ ಬಾ" ಎಂದು ನನ್ನನ್ನು ಕರೆದು, ನನ್ನ ಕೊರಳಿಗೆ ಸುತ್ತಿಕೊಂಡಿರುವ ಜನ್ಮಪರಂ
ಪರೆಯೆಂಬ ಕ್ರೂರ ಸರ್ಪವನ್ನು ಸೀಳಿ ಹಾಕಿ, ಮುಟ್ಟುವುದು ನೋಡುವುದೇ ಮೊದಲಾದ
ಇಂದ್ರಿಯ ಕ್ರಿಯೆಗಳ ಕಡೆಗೆ ಸದಾ ಓಡುಹೋಗುತ್ತಿರುವ ನನ್ನ ಚಿತ್ತವನ್ನು ನಿನ್ನಲ್ಲಿ ಕಟ್ಟಿ
ರಿಸು. ಎಲೈ ಕೃಪಾನಿಧಿಯೆ! ತೊಳೆದುಕೊಳ್ಳುವುದು ಹೊದ್ದಿಸುವುದು ಊಟಮಾಡುವುದು
ಎಂಬುದೇ ಮೊದಲಾದ ಈ ದೇಹರಕ್ಷಣೆಯ ಕಾರ್ಯದಲ್ಲೇ ನನ್ನ ಕಾಲವೆಲ್ಲಾ ಕಳೆದುಹೋಯಿ
ತು. ಆ ನನ್ನ ಅಪರಾಧವನ್ನೆಲ್ಲಾ ಕ್ಷಮಿಸಿ, ಬೆಂಕಿಯಲ್ಲಿ ಬೀಳುತ್ತಿರುವ ಪತಂಗದಂತೆ ಸದಾ

ಶ್ಮಲಭಸ್ಯೇವ ಸಂತತಂ | ವಿಷಯಾಗ್ನೌ ಪ್ರಪತನಂ ವಾರಯಿತ್ವಾಚ ಮಾಮ
ಕಂ ||೩೩|| ವಿಮುಚ್ಯ ಸ್ವಲ್ಪಕಾರ್ಯಾಣಿ ತ್ವಂ ಸಮಾಯಾಹಿ ಪುತ್ರಕ | ಸಮೀ
ಚೀನೋ ಹ್ಯಯಂ ಮಾರ್ಗ ಇತ್ಯುಕ್ತ್ವಾ ಕರುಣಾನ್ವಿತಃ ||೩೪|| ಗರ್ಭಂ ಪ್ರ
ವೇಶಯ ತವ ಮಾಂ ಮಹಂ ಭವತಃ ಪುರೇ | ವಸಾಮಿ ಶ್ರೀಗಿರೌ ನಿತ್ಯಂ ವದಂ
ಚ್ಛಿವನಮೋಽಸ್ತ್ವಿತಿ ||೩೫|| ಏವಂ ವಿರಚ್ಯ ಗೀತಾನಿ ತಸ್ಮಿನ್ಕರ್ನಾಟಗೋಲ
ಯಾ | ಗಾಯತ್ಯಧಿಕಸದ್ಭಕ್ತ್ಯಾ ಪಂಡಿತಾರಾಧ್ಯಶೇಖರೇ ||೩೬|| ತಚ್ಛ್ರುತ್ವಾ
ದೃಬ್ಜೃಂಭನಃಪೂರ್ಣಲಿಂಗಂ ತತ್ಪರ್ವತಾಕೃತಿ | ಮಹಾದೇವ ಸ್ಸ್ವಕಾರುಣ್ಯಕಟಾ
ಕ್ಷಾಸ್ತ್ರರವರ್ತಿನಂ ||೩೭|| ಅಕರೋದಾತ್ಮಗರ್ಭಸ್ಥಂ ಮಲ್ಲಿಕಾರ್ಜುನಪಂಡಿತಂ|
ತದೈವ ಪಂಡಿತಾರಾಧ್ಯಸಂತತಿ ರ್ಭಕ್ತಿಸಂಯುತಾ ||೩೮|| ತತ್ಕುಲಾಂಗನಯಾ
ಲಿಂಗಗರ್ಭಂ ಪ್ರಾವಿಶದುತ್ಸುಕಾ | ಶಿವಾಜ್ಞಾಪತ್ರಪದ್ಧತ್ಯಾ ಘನಸಂಪ್ರೀತಿಪೂ
ರ್ವಕಂ ||೩೯|| ಮಹೇಶಭಕ್ತಸಂದೋಹಪ್ರಾರ್ಥನಾತೋಽವಶೇಷಿತಂ | ಜಗತ್ಪ
ವಿತ್ರಚರಿತಂ ಕೇದಾರಾರ್ಯಂ ಮಹೋನ್ನತಂ||೪೦|| ಶ್ರೀಪಂಡಿತಾರಾಧ್ಯಪೂರ್ವತ
ನಯಂ ಧ್ವಸ್ತಪಾತಕಂ | ಅಶೇಷಜಗದಾರಾಧ್ಯಪಟ್ಟಬದ್ಧಂ ವಿಧಾಯಚ ||೪೧||
ಪಂಡಿತಾರಾಧ್ಯಹಸ್ತಾಗ್ರಸಂಭವಂ ಲೋಕವಿಶ್ರುತಂ | ದೋನಮಾರ್ಯಂಚ

---

ಸ್ರಕ್ಚಂದನವನಿತಾದಿ ವಿಷಯಾಗ್ನಿಯಲ್ಲಿ ನಾನು ಬೀಳುತ್ತಿರುವುದನ್ನು ತಪ್ಪಿಸಿ, ||೩೩|| "ಎಲೆ
ಮಗನೆ! ಈ ತುಚ್ಛವಾದ ಕೆಲಸಗಳನ್ನೆಲ್ಲಾ ಬಿಟ್ಟು ಬಾ; ಇದೋ ಇದು ಉತ್ತಮ ಮಾರ್ಗ,
ಇದರಲ್ಲಿ ನಡೆ" ಎಂದು ನನಗೆ ಕೃಪೆಯಿಂದ ಬೋಧಿಸಿ, ನನ್ನನ್ನು ನಿನ್ನ ಗರ್ಭಕ್ಕೆ ಹುಗಿಸಿ
ಕೊ. ನಿನ್ನ ಪಟ್ಟಣವಾದ ಶ್ರೀಶೈಲದಲ್ಲಿ "ಶಿವನೇ ನಿಮಗೆ ನಮಸ್ಕಾರ" ಎಂದು ಸದಾ ಹೇ
ಳುತ್ತ ವಾಸವಾಗಿರುತ್ತೇನೆ. ||೩೫|| ಎಂಬ ಅರ್ಥವುಳ್ಳ ಗೀತಗಳನ್ನು ಪಂಡಿತಾರಾಧ್ಯನು
ಕನ್ನಡ ಬಾಸೆಯಿಂದ ರಚಿಸಿ ಅತ್ಯಂತ ಭಕ್ತಿಯಿಂದ ಹಾಡಲು, ಆ ಗುರುವರನ ಕಣ್ಣು ಮನಗ
ಳೆಲ್ಲಾ ಶ್ರೀ ಪರ್ವತಾಕೃತಿ ಮಹಾಲಿಂಗವಾಗಿ ತುಂಬಿಕೊಂಡಿದ್ದ ಪರಶಿವನು ಆ ಗೀತಗಳ
ನ್ನು ಕೇಳಿ, ಮಲ್ಲಿಕಾರ್ಜುನ ಪಂಡಿತಾರಾಧ್ಯನಮೇಲೆ ತನ್ನ ಕರುಣಾಕಟಾಕ್ಷಾಮೃತವನ್ನು
ಸುರಿಸಿ, ತನ್ನ ಗರ್ಭದಲ್ಲಿ ಅತನನ್ನು ಹುಗಿಸಿಕೊಂಡನು. ಭಕ್ತಿಸಂಪನ್ನನಾದ ಪಂಡಿತಾರಾಧ್ಯ
ಪುತ್ರನೂ ಅವರ ಧರ್ಮಪತ್ನಿಯೂ ಸಹ ಆ ಕೂಡಲೇ ಅತ್ಯುತ್ಸಾಹದಿಂದ ಶಿವಲಿಂಗ ಗರ್ಭದಲ್ಲಿ
ಹೊಕ್ಕು ಐಕ್ಯರಾದರು. ಬಳಿಕ ಆ ಆಚಾರ್ಯಪಟ್ಟವು ಹಾಗೆಯೇ ನಡೆದು ಬರಬೇಕೆಂದು ಶಿವಾ
ಜ್ಞಾಪತ್ರಿಕೆಯಿಂದ ಸಿದ್ಧವಾಗಿ ಬಂದಿದ್ದ ಪದ್ಧತಿಯ ಪ್ರಕಾರವೂ, ಮಹಾ ಭಕ್ತಜನ ಸಂದೋ
ಹದ ಪ್ರಾರ್ಥನೆಯ ಪ್ರಕಾರವೂ ಸಹ, ಪಂಡಿತಾರಾಧ್ಯರ ವಂಶದಲ್ಲಿ ಉಳಿದಿದ್ದವನೂ, ಅವರ
ಮೊದಲ ಮಗನೂ, ಜಗತ್ಪವಿತ್ರಚರಿತ್ರನೂ, ನಿರಸ್ತಪಾಪನೂಆದ ಕೇದಾರಾರ್ಯನಿಗೆ ಜಗದ್ಗುರುತ್ವ
ಪಟ್ಟವು ಕಟ್ಟಲ್ಪಟ್ಟಿತು. ಪಂಡಿತಾರಾಧ್ಯರ ಕರಕಂಜಸಂಜಾತನಾದ ದೋನಮಾರ್ಯನಿಗೂ ಕೂಡ

ಸದ್ಭಕ್ತಾಶ್ಯಶಂಸುಃ ಪರಿಮೋದಿತಾಃ ||೪೩|| ಅನರ್ಗಳಮಹಾಭಕ್ತಿರಾಜ್ಯಂ ಕುರ್ವನ್ಸ ಚಾವಸತ್ | ಕೇದಾರಾರ್ಯಸ್ಯ ಭುವನಖ್ಯಾತಸ್ಯ ಮಹಿತೌಜಸಃ ||೪೪|| ಆತ್ಮೀಯಸಂತತಿಶ್ಶೈವಸಂತತಿಶ್ಚ ಸಮಂಜಗತ್ | ಭುವನಾರಾಧ್ಯವಿಲಸತ್ತೇಜಸಾಸಮುದಂಚಿತಾ ||೪೫|| ಅಪುನಾ ದತಸೂದಾರಯಶೋವಿಸರಭಾಸುರಾ | ಭಾಗೀರಥೀವ ಲಲಿತಾ ಭುವನತ್ರಯಪಾವನೀ ||೪೬|| ಕೇದಾರಾರ್ಯಗುರೋಃ ಪುತ್ರಾಶ್ಚತ್ವಾರೋಽಮಿತತೇಜಸಃ | ಶ್ರೀಮನ್ಮಪಂಡಿತಃ ಖ್ಯಾತನ್ಯಕ್ತೋ ಭೀಮನಪಂಡಿತಃ ||೪೭|| ಮಹಾದೇವಶ್ಚಿನ್ನವಿಭು ರಿತ್ಯಾಖ್ಯಾಭಿ ರುದಂಚಿತಾಃ | ಆಚಾರ್ಯತ್ವಪದೋಸ್ನಿದ್ರಪಾರಂಪರ್ಯಕ್ರಮಾನ್ವಿತಾಃ ||೪೮|| ಪಾದಾ ಇವ ವೃಷೇಶಸ್ಯ ಪುರುಷಾರ್ಥಾ ಇವಾಂಚಿತಾಃ | ಚತಸ್ರೋ ಮುಕ್ತಯ ಇವ ಚತ್ವಾರಸ್ಸಾಗರಾ ಇವ ||೪೯|| ಶ್ರೀಪರ್ವತಚತುರ್ದ್ವಾರಾಣೀವ ರೇಜುಸ್ಸಮುನ್ನತಾಃ | ಸಮುದಂಚಿತತಚ್ಛೈವಸಂತಾನವಿಮಲಾಂಬುಧೌ ||೫೦|| ಅನರ್ಘ್ಯನಾಯಕಮಣಿರಿವ ಲೋಕಗುರು ರ್ಮಹಾನ್ | ಪ್ರಸಿದ್ಧಾಖ್ಯೋ ಯೆಮ್ಮಟೂರಸೋಮನಾಥೋ ಮಹಾಮತಿಃ ||೫೧|| ಸದ್ವೀರಭಕ್ತಿಭೂಮಾಭಿರಾಮವಿಸ್ಫುರಣೋ ಬಭೌ|

---

ಪಟ್ಟವು ಕಟ್ಟಲ್ಪಟ್ಟಿತು. ಭಕ್ತರು ಸಂತೋಷದಿಂದ ಕೊಂಡಾಡಿದರು. ||೪೩|| ಆ ಕೇದಾರಾರ್ಯನಾದರೊ ಮಹಾ ಶಿವಭಕ್ತಿಸಾಮ್ರಾಜ್ಯವನ್ನಾಳಿಕೊಂಡು ಇದ್ದನು. ಲೋಕವಿಖ್ಯಾತನಾದ ಆ ಕೇದಾರಾರ್ಯನ ಸಂತತಿಯೂ ದೋನಮಾರ್ಯನ ಸಂತತಿಯೂ ಸಹ ಒಂದೇಸಮನಾಗಿ ಏಳ್ಗೆಗೊಂಡು ಜಗದ್ಗುರುತ್ವ ತೇಜೋ ವೈಭವದಿಂದ ಕೂಡಿ ಅತ್ಯುತ್ಕೃಷ್ಟ ಮಹಾ ಕೀರ್ತಿವಿರಾಜಿತವಾಗಿ, ಮೂರುಲೋಕಗಳನ್ನೂ ಪಾವನಗೊಳಿಸುವ ಭಾಗೀರಥೀ ನದಿಯಂತೆ ಮೆರೆದು ಜಗತ್ತನ್ನು ಪವಿತ್ರಗೊಳಿಸಿತು. ||೪೬|| ಆ ಕೇದಾರ್ಯ ಗುರುವಿಗೆ ಅಧಿಕ ತೇಜಶ್ಶಾಲಿಗಳಾದ ನಾಲ್ಕುಮಂದಿ ಪುತ್ರರಿದ್ದರು. ಮನ್ಮಪಂಡಿತ, ಭೀಮನಪಂಡಿತ, ಮಹಾದೇವಾರ್ಯ, ಚಿನ್ನವಿಭು ಎಂಬ ಹೆಸರುಳ್ಳ ಆ ನಾಲ್ವರೂ ಆಚಾರ್ಯ ಸಂಪ್ರದಾಯ ಕ್ರಮಾನುಗತರಾಗಿ ವೃಷಭೇಶ್ವರನ ನಾಲ್ಕುಪಾದಗಳಂತೆಯೂ, ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳಂತೆಯೂ, ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಚತುರ್ವಿಧ ಮೋಕ್ಷಗಳಂತೆಯೂ, ನಾಲ್ಕು ದಿಕ್ಕಿನ ನಾಲ್ಕು ಸಮುದ್ರಗಳಂತೆಯೂ, ಶ್ರೀಶೈಲದ ನಾಲ್ಕುದಿಕ್ಕಿನ ನಾಲ್ಕು ಮಹಾ ದ್ವಾರಗಳಂತೆಯೂ ಉತ್ಕೃಷ್ಟರಾಗಿ ಒಪ್ಪಿದ್ದರು. ಆ ಪಂಡಿತಾರಾಧ್ಯಸ್ವಾಮಿಗೆ ಸಂಬಂಧಪಟ್ಟ ಶೈವಸಂತತಿಯೆಂಬ ಸಮುದ್ರದಲ್ಲಾದರೊ ||೪೯|| ಅಮೌಲ್ಯನಾಯಕರತ್ನದಂತೆ ಪ್ರಸಿದ್ಧನಾದ ಯೆಮ್ಮಟೂರು ಸೋಮನಾಥನೆಂಬ ಜಗದ್ಗುರುವು ಅವತರಿಸಿ ವೀರಶೈವ ಭಕ್ತ್ಯತಿಶಯಪ್ರಭಾವದಿಂದ ವಿರಾಜಿಸಿದನು. ಆ ಸೋಮನಾಥನಿಗೆ ಸೂರೇಶ್ವರ, ವಿಶ್ವನಾಥಪ್ಪಯ್ಯ, ಸಿಂಗಣಮಾಚಯ್ಯ ಎಂಬ ಮೂರುಮಂದಿ ಮಕ್ಕಳು ಜನಿಸಿ ಭೂಮಿಯಲ್ಲಿ ಶಿವಭಕ್ತಿಯನ್ನು ಅಭಿವೃದ್ಧಿಗೊಳಿಸುವವರಾಗಿ, ಮಹಾ ತೇಜಶ್ಶಾಲಿಗಳಾಗಿ, ಯಶೋವಂತರಾಗಿ ಬಾಳಿದರು. ಪರಂಪರಾಗತ

ಶ್ರೀಮತ್ಪತ್ರಾಶ್ರಿವಸದ್ಭಕ್ತಿವರ್ಧನಾಶಾಮಹಿತೌಜಸಃ ॥೫೧॥ ಸೂರೇಶ್ವರಾಭಿಧೋ ವಿಶ್ವನಾಥಪ್ಪಯ್ಯಸಮಾಹ್ವಯಃ। ಭವ್ಯಸಿಂಗಣಮಾಚಾರ್ಯ ಇತಿ ಸಸ್ಸ್ನತಕೀರ್ತಯಃ॥ ದೇಶಿಕೇಂದ್ರತ್ವಪದವೀಪಾರಂಪರ್ಯವಿರಾಜಿತಾಃ। ಸಮುಲ್ಲಸತ್ತ್ರಿಪಥಗಾಪ್ರವಾಹಾ ಇವ ಪಾವನಾಃ॥೫೨॥ತ್ರಯೋವೇದಾ ಇವೋದಂಚತ್ತ್ರೇತಾಗ್ನಯ ಇವಾಬಭುಃ।

ಇತ್ಯಸಂಖ್ಯಾತಮಹಾಮಾಹೇಶ್ವರದಿವ್ಯಶ್ರೀಪಾದಪದ್ಮನಿರಂತರಭಾವನಾಪ
ರಿರಂಜಿತಹೃದಯಸರೋಜಸ್ಯ ಭವ್ಯಪಶುಪಾಶಪತಿಜ್ಞಾನಾನಲಭಸ್ಮೀ
ಕೃತಾಖಿಲಭವಬೀಜಸ್ಯ ಶ್ರೀವೀರಶೈವಮತಾಚಾರ್ಯಗುರುರಾಜಸ್ಯ
ಕೃತೌ ಶ್ರೀಮಲ್ಲೋಕಾರಾಧ್ಯ ಮಲ್ಲಿಕಾರ್ಜುನಪಂಡಿತಾರಾ
ಧ್ಯಚರಿತ್ರೇ ಪರ್ವತಪ್ರಕರಣೇ ತತ್ಪಂಡಿತಾರಾಧ್ಯದೇವಸ್ಯ
ಶಿವೈಕ್ಯಕಥನಂನಾಮ ಸಪ್ತದಶೋಽಧ್ಯಾಯಃ.

ಪೂರ್ವಂಪಾಲ್ಕುರ್ಕಿಸೋಮಾಭಿಧವರಗುರುಣಾ ನಿರ್ಮಿತೇ ಭಾಷಯಾಽ
ನ್ಧ್ರ್ಯಾ ಪಶ್ಚಾಚ್ಛ್ರೀವೀರಶೈವಾಸಮಗುರುಗುರುರಾಡ್‌ದೇಶಿಕೇನ್ದ್ರೇ

---

ವಾದ ಗುರುಪಟ್ಟವನ್ನು ಪಡೆದು ಆ ಮೂವರೂ ಗಂಗೆಯ ಪವಿತ್ರವಾದ ಭೋಗಾವತಿ ಭಾಗೀರಥಿ ಮಂದಾಕಿನಿ ಎಂಬ ಹೆಸರಿನ ಮೂರು ಪ್ರವಾಹಗಳಂತೆಯೂ, ಋಕ್ಕು ಯಜುಸ್ಸು ಸಾಮವೆಂಬ ಮೂರು ವೇದಗಳಂತೆಯೂ. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯವೆಂಬ ಅಗ್ನಿತ್ರಯದಂತೆಯೂ ಪ್ರಕಾಶಿಸಿದರು. ಎಂದು ಶ್ರೀಪಂಡಿತಾರಾಧ್ಯ ಚರಿತ್ರವನ್ನು ಶ್ರೀಪಾಲ್ಕುರಿಕೆ ಸೋಮಾರ್ಯರು ಸೂರಾಮಾತ್ಯನಿಗೆ ನಿರೂಪಿಸಿದರು.

ಎಂಬಲ್ಲಿಗೆ ಅಗಣಿತ ವೀರಮಾಹೇಶ್ವರರ ದಿವ್ಯ ಶ್ರೀಪಾದಕಮಲವನ್ನು ಸದಾ ಧ್ಯಾನಮಾ
ಡುವುದರಿಂದ ವಿಕಸಿತವಾದ ಹೃದಯಕಮಲವುಳ್ಳವನೂ, ಮಂಗಳಪ್ರದವಾದ ಪಶುಪಾ
ಶ ಪತಿ ಜ್ಞಾನವೆಂಬ ಅಗ್ನಿಯಿಂದ ಭವಬೀಜವನ್ನು ಸುಟ್ಟು ಭಸ್ಮಗೊಳಿಸಿದವನೂ
ಆದ, ವೀರಶೈವ ಮತಾಚಾರ್ಯ ಗುರುರಾಜನ ಕೃತಿಯಾದ ಶ್ರೀಲೋಕಾರಾಧ್ಯ
ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಕ್ಕೆ ಎನ್. ಆರ್. ಕರಿಬಸವಶಾಸ್ತ್ರಿ
ರಚಿತವಾದ "ಭಾವಮಂಜರಿ" ಎಂಬ ಕನ್ನಡ ಟಿಪ್ಪಣದಲ್ಲಿ ಪರ್ವತ
ಪ್ರಕರಣದೊಳಗೆ ಶ್ರೀ ಪಂಡಿತಾರಾಧ್ಯರ ಶಿವೈಕ್ಯವನ್ನು ವರ್ಣಿಸುವ
೧೭ನೆ ಅಧ್ಯಾಯವು ಮುಗಿದುದು.

ಈ ಗ್ರಂಥದ ೪ನೆ ಮಹಿಮಪ್ರಕರಣದಲ್ಲಿ ಈ ಕಾವ್ಯದೊಳಗೆಲ್ಲಾ ಸಾರಭೂತವಾಗಿರುವ ಗಣಸಹಸ್ರನಾಮಸ್ತೋತ್ರವು ಹೇಳಲ್ಪಟ್ಟಿರುವುದು. ಭೂತಲದಲ್ಲಿ ಅದನ್ನು ಓದಿದ ಮನುಜರಿಗೆ ಇಹಲೋಕ ಪರಲೋಕಗಳ ಸಕಲೇಷ್ಟಾರ್ಥ ಸೌಖ್ಯಗಳೂ ಅನೇಕವಾಗಿ ಲಭಿಸುವುವು. ನೂತನ ಶಿವಶರಣರುಗಳ ಪುರಾತನ ಶಿವಗಣರುಗಳ ಮತ್ತೂ ರುದ್ರಗಣ ಪ್ರಮಥಗಣರುಗಳ ಅನೇಕ ಚರಿತ್ರ ವರ್ಣನೆಗಳಿಂದ ಕೂಡಿರುವ ಈ ಪಂಡಿತಾರಾಧ್ಯ ಚರಿತ್ರವನ್ನು ಆದ್ಯಂತವಾಗಿ ಓದಿದರೂ ಕೇಳಿದರೂ ಬರೆದರೂ ಅರ್ಥವನ್ನು ಚೆನ್ನಾಗಿ ಗ್ರಹಣಮಾಡಿದರೂ ಅಥವಾ, ಈ ಗ್ರಂಥವನ್ನು ಸಂ

ಣವಾಣಸ್ಯ || ಗೈರ್ವಾಣ್ಯಾ ಸಂಪ್ರೋಕ್ತೇ [illegible]

ಪಂಡಿತೇಂದ್ರಸ್ಯ ಭವ್ಯೇ ಚಾರಿತ್ರೇ [illegible]

ಪ್ರಕರಣ ಮನಘಂ ಪಂಚಮಂ ಪರ್ವತಾಖ್ಯಂ

ಕೃತೇ ಯಸ್ಯಾ ಸ್ಸಾರಭೂತೇ ತುರ್ಯಪ್ರಕರಣಸ್ಥಿತೇ |
ಗಣಸಾಹಸ್ರನಾಮಾಂಕಸ್ತವೇ ಸಂಪಠಿತೇ ಸತಿ ||

ತತ್ಫಲಾಂಶೇನ ಜಾಯಂತೇಽಭೀಷ್ಟಸೌಖ್ಯಾನ್ಯನೇಕಶಃ |
ಐಹಿಕಾಮುಷ್ಮಿಕಾದೀನಿ ಮರ್ತ್ಯಾನಾಂ ಭುವನೇಕಿಲ ||

ನೂತನಪ್ರೋಕ್ತನಗಣರುದ್ರಪ್ರಮಥವರ್ಣನೈಃ |
ಕಲಿತೇ ಪಂಡಿತಾರಾಧ್ಯಚರಿತ್ರೇ ಪಠಿತೇಽಖಿಲೇ ||

ಸಂಶ್ರುತೇ ಲಿಖಿತೇ ಸಮ್ಯಕ್ ಸಂಗೃಹೀತೇಪಿವಾ ಜನೈಃ |
ಪ್ರಾಪ್ಸ್ಯಂತೇಽಭೀಪ್ಸಿತಾನೀತಿ ಕಿಂಚಿತ್ರಂ ಧರಣೀತಲೇ ||

ತಸ್ಮಾ ದೇತತ್ಸ್ಮೃತಿಂ ಯೇವಾ ಪಠಂತಿ ವಿಲಿಖಂತಿಚ |
ಶೃಣ್ವಂತಿವಾಽನುಮನ್ಯಂತೇ ತೇಷ್ವಶ್ರೀಮಲ್ಲಿಕಾರ್ಜುನಃ ||

ದದಾತ್ಯನೇಕಸೌಖ್ಯಾನಿ ಮನಸಾ ಪ್ರಾರ್ಥಿತಾನ್ಯಪಿ |

ಇತಿ ಶ್ರೀಮನ್ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತ್ರಂ ಸಂಪೂರ್ಣಮ್.

ಭದ್ರಂ—ಶಿವಂ—ಮಂಗಳಂ.

---

ಗ್ರಹಮಾಡಿಟ್ಟರೂ, ಅಂಥವರಿಗೆಲ್ಲಾ ಸಕಲೇಷ್ಟಾರ್ಥಗಳೂ ಲಭಿಸುವುವೆಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ಅದುಕಾರಣ ಈ ಕಾವ್ಯವನ್ನು ಭೂಮಿಯಲ್ಲಿ ಯಾರು ಓದುತ್ತಾರೋ ಯಾರು ಬರೆಯುತ್ತಾರೋ, ಯಾರು ಓದಿಸಿ ಕೇಳುತ್ತಾರೊ, ಯಾರು ಅರ್ಥವನ್ನು ತಿಳಿದುಕೊಳ್ಳುತ್ತಾರೋ ಅವರಿಗೆಲ್ಲಾ ಅವರವರ ಮನಸ್ಸಿನಲ್ಲಿ ಕೋರಿಕೊಂಡ ಸಕಲ ಸೌಖ್ಯಗಳನ್ನೂ ಶ್ರೀ ಶ್ರೀಶೈಲ ಮಲ್ಲಿಕಾರ್ಜುನಸ್ವಾಮಿಯು ಅನುಗ್ರಹಿಸುತ್ತಾನೆ.

ವಾ|| ಷ|| ಪರಮತರ ವೀರಮಾಹೇಶ್ವರ ಸುಹಾಶೀಲ |
ನಿರತನೆಂದೆನಿಪಗ್ಗಳಿಕೆಯಾಂತು ಮೆರೆದ ಪಾ |
ಲ್ಕುರಿಕೆ ಸೋಮಂ ಪಂಡಿತಾರಾಧ್ಯಚರಿತವಂ ಪೇಳ್ದನಾದಿಯೊಳಾಂಧ್ರದಿಂ ||
ಗುರುರಾಜ ಕವಿರಾಜ ಸದನೆ ಗೀರ್ವಾಣ ಬಂ |
ಧುರವಾಣಿಯಿಂದುಸಿರ್ದ ನಂತದಕೆ ಕನ್ನಡಿಗ |
ರಿವಂತೆ ಗುರುಬಸವಶಾಸ್ತ್ರಿ ಟಿಪ್ಪಣಿಮೊಸಗಿ ಪರಸಿದಂ ಶಿವನ ಕೃಪೆಯಿಂ ||

ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರವು ಸಂಪೂರ್ಣವು.